1560

ಸತ್ಯಂ ಶಿವಂ ಸುಂದರಮ್

॥ ಶ್ರೀರಾಮ ॥

## ಮಹಾಕವಿ ಶ್ರೀ ತುಲಸೀದಾಸ ವಿರಚಿತ

# ಶ್ರೀರಾಮಚರಿತ ಮಾನಸ

## (ಕನ್ನಡಾನುವಾದ)

**श्रीरामचरितमानस ( कन्नड़ )**

**(ಹಿಂದೀ ಟೀಕಾ ಶ್ರೀಹನುಮಾನ್ ಪ್ರಸಾದ್ ಪೋದ್ದಾರ್)**

**ಕನ್ನಡಾನುವಾದ :**

**ಕೀರ್ತನಾಚಾರ್ಯ ಶ್ರೀ ಲಕ್ಷ್ಮಣದಾಸ ವೇಲಣಕರ್**

॥ ಶ್ರೀಹರಿಃ ॥

# ನಮ್ರ ನಿವೇದನೆ

'ಶ್ರೀರಾಮಚರಿತಮಾನಸಕ್ಕೆ ಕೇವಲ ಹಿಂದೀಸಾಹಿತ್ಯದಲ್ಲೇ ಅಲ್ಲ, ವಿಶ್ವಸಾಹಿತ್ಯದಲ್ಲಿಯೂ ಅತ್ಯುನ್ನತ ಸ್ಥಾನವಿದೆ. ಇದಕ್ಕೆ ಸರಿಗಟ್ಟುವ ಸರ್ವಾಂಗಸುಂದರ, ಉತ್ತಮ ಕಾವ್ಯ ಲಕ್ಷಣಗಳಿಂದ ಕೂಡಿದ, ಸಾಹಿತ್ಯದ ಎಲ್ಲ ರಸಗಳನ್ನು ಆಸ್ವಾದಿಸುವಂತಹ, ಕಾವ್ಯಕಲೆಯ ದೃಷ್ಟಿಯಿಂದ ಅತ್ಯುಚ್ಚ ದರ್ಜೆಯ ಬೇರೊಂದು ಗ್ರಂಥವು ಇರಲಾರದೆಂದೇ ಅನಿಸುತ್ತದೆ. ಇದರಲ್ಲಿ ಆದರ್ಶ ಗಾರ್ಹಸ್ಥ್ಯಜೀವನ, ಆದರ್ಶ ರಾಜಧರ್ಮ, ಆದರ್ಶ ಕೌಟುಂಬಿಕ ಜೀವನ, ಆದರ್ಶ ಪತಿವ್ರತಾಧರ್ಮ, ಆದರ್ಶ ಸಹೋದರಪ್ರೇಮ, ಜೊತೆಗೆ ಭಕ್ತಿ, ಜ್ಞಾನ, ತ್ಯಾಗ, ವೈರಾಗ್ಯ ಹಾಗೂ ಸದಾಚಾರದ ಶಿಕ್ಷಣ ಕೊಡುವಂತಹ, ಸ್ತ್ರೀ-ಪುರುಷರು, ಬಾಲಕ-ವೃದ್ಧರು, ಯುವಕರು ಹೀಗೆ ಎಲ್ಲರಿಗೂ ಒಂದೇ ರೀತಿಯ ಉಪಯೋಗಿಯಾದ ಸಗುಣ-ಸಾಕಾರ ಭಗವಂತನ ಆದರ್ಶಮಾನವ ಲೀಲೆ ಹಾಗೂ ಅವನ ಗುಣ, ಪ್ರಭಾವ, ರಹಸ್ಯ, ಪ್ರೇಮದ ಗಹನ ತತ್ತ್ವಗಳನ್ನು ಅತ್ಯಂತ ರೋಚಕ, ಓಜಸ್ವಿಯಾದ ಶಬ್ದಗಳಿಂದ ವ್ಯಕ್ತಗೊಳಿಸುವಂತಹ ಯಾವುದೇ ಗ್ರಂಥವು ಹಿಂದೀ ಭಾಷೆಯಲ್ಲೇ ಅಲ್ಲ ಪ್ರಪಂಚದ ಯಾವುದೇ ಭಾಷೆಯಲ್ಲಿ ಇಂದಿನವರೆಗೆ ರಚಿತವಾಗಿಲ್ಲ. ಆದುದರಿಂದ ಬಡವರು-ಶ್ರೀಮಂತರು, ಶಿಕ್ಷಿತರು-ಅಶಿಕ್ಷಿತರು, ಗೃಹಸ್ಥರು-ಸಂನ್ಯಾಸಿಗಳು, ಸ್ತ್ರೀ-ಪುರುಷರು, ಬಾಲಕರು-ವೃದ್ಧರು ಹೀಗೆ ಎಲ್ಲರೂ ಈ ಗ್ರಂಥರತ್ನವನ್ನು ಮನೋಯೋಗದಿಂದ ಓದುತ್ತಾರೆ.

ಇಷ್ಟೇ ಅಲ್ಲದೆ ಶ್ರೀರಾಮಚರಿತಮಾನಸದ ಪ್ರತಿಯೊಂದು ಪದ್ಯಗಳು ದಿವ್ಯಮಂತ್ರಸದೃಶವು. ಸರ್ವಮಂಗಳಕರವೂ, ಆಶೀರ್ವಾದಾತ್ಮಕವೂ ಆಗಿವೆ. ಇದನ್ನು ಶ್ರದ್ಧೆಯಿಂದ ಪಠಿಸುವವರಿಗೆ ಲೌಕಿಕ, ಪಾರಮಾರ್ಥಿಕ, ಕಾರ್ಯಗಳೆಲ್ಲವೂ ಕೈಗೂಡುವುವು. ಇದರಲ್ಲಿನ ಉಪದೇಶಗಳನ್ನು ಓದಿ, ಮನನಮಾಡಿ, ಅವುಗಳನ್ನು ಆಚರಣೆಯಲ್ಲಿ ತರುವುದರಿಂದ, ಇದರಲ್ಲಿನ ಭಗವಲ್ಲೀಲೆಗಲನ್ನು ಚಿಂತಿಸುವುದರಿಂದ, ಕೀರ್ತಿಸುವುದರಿಂದ ಅವರು ಭಗವದನುಗ್ರಹಕ್ಕೆ ಪಾತ್ರರಾಗುವುದಲ್ಲದೆ, ಅವರಿಗೆ ಪರಮ ಪುರುಷಾರ್ಥವಾದ ಮೋಕ್ಷವೂ ಕೂಡ ಲಭಿಸುವುದು. ಶ್ರೀಸೀತಾರಾಮರ ಕೃಪೆಗೆ ಪಾತ್ರರಾದ, ಮಹಾಭಕ್ತರೂ ಆದ ಶ್ರೀಗೋಸ್ವಾಮಿ ತುಲಸೀದಾಸರು ಭಗವಂತನ ದಿವ್ಯಲೀಲೆಗಳನ್ನು ಅನುಭವಿಸುತ್ತಾ ಇದನ್ನು ವರ್ಣಿಸಿರುವರು. ಇದು ಪರಮೇಶ್ವರನ ಆಜ್ಞಾನುಸಾರವೇ ಬರೆದ ಪವಿತ್ರಗ್ರಂಥವು. ಇದರ ಮೇಲೆ ಪರಶಿವನು **'ಸತ್ಯಂ, ಶಿವಂ, ಸುಂದರಮ್'** ಎಂಬ ತನ್ನ ಹಸ್ತಾಕ್ಷರವನ್ನು ಮಾಡಿರುವನು. ಆದರಿಂದ ಇದರ ಮಹಿಮೆಯು ಅಲೌಕಿಕವಾಗಿದೆ. ಇಂತಹ ದಿವ್ಯ ಗ್ರಂಥದ ಶ್ರವಣ ಅಧ್ಯಯನ, ಪಾರಾಯಣ, ಮನನ-ಅನುಶೀಲನ, ಪ್ರಚಾರ ಜಗತ್ತಿಗೆ ಶ್ರೇಯಸ್ಕರವಾದುದು. ಎಲ್ಲೆಡೆ ಮಾರಣಕಾಂಡವೇ ನಡೆಯುವ ಇಂದಿನ ಕಲಿಕಾಲದಲ್ಲಿ ಪ್ರಪಂಚದ ಜನರು ಸುಖ-ಶಾಂತಿಗಳನ್ನು ಹೊಂದಲು, ಪರಸ್ಪರ ಪ್ರೇಮಾನುರಾಗದಿಂದ ತಮ್ಮ ಜೀವನವನ್ನು ನಡೆಸಲು, ಭಗವದನುಗ್ರಹವನ್ನು ಪಡೆಯಲು ಶ್ರೀರಾಮಚರಿತಮಾನಸದ ಪಾರಾಯಣ ಅನುಶೀಲನವು ಅತ್ಯಾವಶ್ಯಕವಾಗಿದೆ.

ಶ್ರೀಭಗವದ್ಗೀತೆಯಂತೆ ಶ್ರೀರಾಮಚರಿತಮಾನಸವನ್ನು ಪ್ರಚಾರಗೊಳಿಸುವ ದೃಷ್ಟಿಯಿಂದ ಇದನ್ನು ಹಿಂದಿ, ಇಂಗ್ಲೀಷು ಹಾಗೂ ಭಾರತೀಯ ಅನೇಕ ಭಾಷೆಗಳಲ್ಲಿ ಅನುವಾದ, ವ್ಯಾಖ್ಯಾನಗಳೊಂದಿಗೆ ಗೀತಾಪ್ರೆಸ್ಸು ಪ್ರಕಟಿಸಿ ಅಲ್ಪಬೆಲೆಯಲ್ಲಿ ಕೈಗೆಟಕುವಂತೆ ವಿತರಿಸುತ್ತಿದೆ. ಇಂದಿನವರೆಗೆ ಹಿಂದಿಯಲ್ಲಿ ಅನೇಕ ಸಂಸ್ಕರಣಗಳನ್ನು, ಲಕ್ಷಾವಧಿ ಸಂಖ್ಯೆಯಲ್ಲಿ ಜನರಿಗೆ ದೊರೆಯುವಂತೆ ಶ್ರೀರಾಮನ ಕೈಂಕರ್ಯವನ್ನು ನಡೆಸುತ್ತಿದೆ. ಪ್ರಸ್ತುತ ಕನ್ನಡನಾಡಿನ ಜನರ ಅಭಿಲಾಷೆಯನ್ನು ಗಮನಿಸಿ, ಈ ಕನ್ನಡಾನುವಾದವನ್ನು ಪ್ರಕಟಿಸುತ್ತಿದ್ದೇವೆ. ಹಿಂದೀ ವ್ಯಾಖ್ಯಾನಕಾರರಾದ ಶ್ರೀಹನುಮಾನ್ ಪ್ರಸಾದ ಪೋದ್ದಾರರ ಟೀಕೆಯೇ ಈ ಅನುವಾದಕ್ಕೆ ಆಧಾರವು. ಭಗವದನುಗ್ರಹದಿಂದ ಲಭಿಸಿದ ಈ ಸಂಪತ್ತನ್ನು ವಿನಮ್ರಭಾವದಿಂದ ಭಗವಂತನ ಸೇವೆಯಾಗಿ ಅರ್ಪಿಸುತ್ತಿದ್ದೇವೆ. ಈ ಕನ್ನಡಾನುವಾದವನ್ನು ಚೆಲುವಾದ ಕನ್ನುಡಿಯಲ್ಲಿ ಅನುವಾದಿಸಿಕೊಟ್ಟ ಕೀರ್ತನಾಚಾರ್ಯ ಶ್ರೀಲಕ್ಷ್ಮಣದಾಸ ವೇಲಣಕರ್‌ರವರಿಗೆ ನಮ್ಮ ಕೃತಜ್ಞತೆಗಳು. ಕನ್ನಡ ಓದುಗರು ಇದನ್ನು ಆದರಿಸಿ, ಪ್ರೋತ್ಸಾಹಿಸಿ, ಹೆಚ್ಚಿನ ಪ್ರಯೋಜನ ಪಡೆಯುವರೆಂದು ಆಶಿಸುತ್ತೇವೆ.

**— ಪ್ರಕಾಶಕರು**

# ವಿಷಯಾನುಕ್ರಮಣಿಕೆ



# ಪಿಬರೇ ರಾಮರಸಮ್

**ಶ್ಲೋಕ –**

ವೈದೇಹೀಸಹಿತಂ ಸುರದ್ರುಮತಲೇ ಹೈಮೇ ಮಹಾಮಂಟಪೇ
ಮಧ್ಯೇ ಪುಷ್ಪಕಮಾಸನೇ ಮಣಿಮಯೇ ವೀರಾಸನೇ ಸಂಸ್ಥಿತಮ್ ।
ಅಗ್ರೇ ವಾಚಯತಿ ಪ್ರಭಂಜನಸುತೇ ತತ್ತ್ವಂ ಮುನಿಭ್ಯಃ ಪರಂ
ವ್ಯಾಖ್ಯಾತಂ ಭರತಾದಿಭಿಃ ಪರಿವೃತಂ ರಾಮಂ ಭಜೇ ಶ್ಯಾಮಲಮ್ ॥ ೧ ॥

**ಗೀತ –** ಪಿಬರೇ ರಾಮರಸಂ ರಸನೇ । ಪಿಬರೇ ರಾಮರಸಂ ॥ ಪಿಬರೇ ॥
ದೂರೀಕೃತಪಾತಕಸಂಸರ್ಗಂ । ಪೂರಿತನಾನಾವಿಧಫಲವರ್ಗಮ್ ॥ ಪಿಬರೇ ॥
ಜನನಮರಣಭಯಶೋಕವಿದೂರಂ । ಸಕಲಶಾಸ್ತ್ರನಿಗಮಾಗಮಸಾರಮ್ ॥ ಪಿಬರೇ ॥
ಪರಿಪಾಲಿತಸರಸಿಜಬ್ರಹ್ಮಾಂಡಂ । ಪರಮಪವಿತ್ರೀಕೃತಪಾಷಂಡಮ್ ॥ ಪಿಬರೇ ॥
ಶುದ್ಧಪರಮಹಂಸಆಶ್ರಯಗೀತಂ । ಶುಕಶೌನಕಕೌಶಿಕಮುಖಪೀತಮ್ ॥ ಪಿಬರೇ ॥

॥ ಶ್ರೀರಾಮ ಜಯರಾಮ ಜಯ ಜಯ ರಾಮ ॥

॥ ಶ್ರೀಹರಿಃ ॥

# ಗೋಸ್ವಾಮಿ ಶ್ರೀತುಲಸೀದಾಸರ ಸಂಕ್ಷಿಪ್ತ ಜೀವನಚರಿತ್ರೆ

ಪ್ರಸಿದ್ಧಪುಣ್ಯಕ್ಷೇತ್ರವಾದ ಪ್ರಯಾಗಕ್ಕೆ ಸಮೀಪದಲ್ಲಿರುವ 'ಬಾಂದಾ' ಜಿಲ್ಲೆಯಲ್ಲಿ ರಾಜಾಪುರ ಎಂಬ ಗ್ರಾಮ. ಅಲ್ಲಿ ಆತ್ಮಾರಾಮ ದುಬೆ ಹೆಸರಿನ ಪ್ರಸಿದ್ಧವಾದ ಸರಯೂಪಾರೀಣ ಬ್ರಾಹ್ಮಣನು ವಾಸಿಸುತ್ತಿದ್ದನು. ಶ್ರೀಮತಿ ಹುಲಸೀದೇವಿಯೇ ಆತನ ಧರ್ಮಪತ್ನಿಯು. ಕ್ರಿ.ಶ. 1497 ವಿಕ್ರಮಶಕ ೧೫೫೪ರ ಶ್ರಾವಣ ಶುದ್ಧ ಸಪ್ತಮಿಯ ದಿನ ಅಭುಕ್ತಮೂಲಾನಕ್ಷತ್ರದಲ್ಲಿ ಆ ಪುಣ್ಯದಂಪತಿಗಳಲ್ಲಿ ಹುಟ್ಟಿದ ಮುದ್ದಿನಮಗನೇ ಗೋಸ್ವಾಮಿ ತುಲಸೀದಾಸರು. ಅವರು ೧೨ ತಿಂಗಳು ಗರ್ಭದಲ್ಲಿದ್ದು ಹುಟ್ಟುವಾಗಲೇ ಅವರ ಬಾಯಿಯಲ್ಲಿ ೩೨ ಹಲ್ಲುಗಳಿದ್ದವು. ಅವರು ಹುಟ್ಟಿದಾಕ್ಷಣ ಇತರ ಮಕ್ಕಳು ಅಳುವಂತೆ ಅಳದೆ ಅವರ ಬಾಯಿಯಿಂದ 'ರಾಮ-ರಾಮ' ಎಂಬ ರಾಮನಾಮವೇ ಹೊರಟಿತು. ಆ ಮಗುವು ನೋಡಲು ಐದುವರ್ಷದ ಮಗುವಿನಂತಿತ್ತು. ಇಂತಹ ಅದ್ಭುತ ಲಕ್ಷಣಗಳಿಂದ ಕೂಡಿದ ಮಗುವನ್ನು ಕಂಡು ಅವನ ತಂದೆಯು ಇದು ಅಮಂಗಳವೆಂದು ಶಂಕಿಸಿ ಭಯಗೊಂಡನು. ಬಾಲಕನ ವಿಷಯದಲ್ಲಿ ಆತ್ಮಾರಾಮನು ಅನೇಕ ವಿಧದ ಊಹೆಗಳನ್ನು ಮಾಡತೊಡಗಿದನು. ತಾಯಿಯಾದ ಹುಲಸೀದೇವಿಯು ಮಗುವನ್ನು ನೋಡಿ ಚಿಂತಿತಳಾದಳು. ಅಶುಭದ ಆಶಂಕೆಯಿಂದ ಅವಳು ದಶಮಿಯ ರಾತ್ರಿಯಲ್ಲಿ ಚುನಿಯಾ ಎಂಬ ದಾಸಿಯ ಕೈಯಲ್ಲಿ ಮಗುವನ್ನಿತ್ತು ತನ್ನ ತವರಿಗೆ ಕೊಟ್ಟು ಕಳುಹಿದಳು. ಮರುದಿನವೇ ಅವಳು ಈ ಅಸಾರವಾದ ಲೋಕವನ್ನೇ ತ್ಯಜಿಸಿದಳು. ಆ ದಾಸಿಯು ಮಗುವನ್ನು ತುಂಬಾ ಪ್ರೇಮ-ವಾತ್ಸಲ್ಯಗಳಿಂದ ಸಾಕಿದಳು. ತುಳಸೀದಾಸರಿಗೆ ಅಂದಾಜು ಐದುವರೆ ವರ್ಷಗಳಾಗುತ್ತಲೇ ಆ ಚುನಿಯಾ ಕೂಡ ಕಾಲವಶಳಾದಳು. ಈಗ ಬಾಲಕ ಅನಾಥನಾಗಿ ಮನೆ-ಮನೆ ಅಲೆಯುತ್ತಿದ್ದನು. ಜಗಜ್ಜನನಿಯಾದ ಪಾರ್ವತಿದೇವಿಗೆ ಈ ಅಮಾಯಕ ಬಾಲಕನ ಮೇಲೆ ದಯೆ ಉಂಟಾಗಿ, ಅವಳು ಬ್ರಾಹ್ಮಣಿಯಾಗಿ ಪ್ರತಿದಿನವೂ ಬಾಲಕನ ಬಳಿಗೆ ಬಂದು ತನ್ನ ಕೈಯಿಂದಲೇ ಉಣ್ಣಿಸುತ್ತಿದ್ದಳು.

ಇತ್ತ ಶಿವನ ಪ್ರೇರಣೆಯಿಂದ ರಾಮಶೈಲನಿವಾಸೀ ಶ್ರೀಅನಂತಾನಂದಜಿಯವರ ಪ್ರಿಯಶಿಷ್ಯರಾದ ಶ್ರೀನರಹರ್ಯಾನಂದಜಿಯವರು ಈ ಬಾಲಕನನ್ನು ಗುರುತಿಸಿದರು. ಅವನಿಗೆ 'ರಾಮಬೋಲಾ' ಎಂದು ನಾಮಕರಣಮಾಡಿ ತನ್ನೊಂದಿಗೆ ಅಯೋಧ್ಯೆಗೆ ಕರಕೊಂಡು ಹೋದರು. ವಿಕ್ರಮಶಕ ೧೫೬೧ (ಕ್ರಿ.ಶ. 1504) ಮಾಘ ಶುದ್ಧ ಪಂಚಮಿ ಶುಕ್ರವಾರದಂದು ಅವರು ಬಾಲಕನ ಉಪನಯನ ಮಾಡಿದರು. ಯಾರೂ ಕಲಿಸದೆಯೇ ಬಾಲಕ ರಾಮಬೋಲಾನು ಗಾಯತ್ರೀಮಂತ್ರವನ್ನು ಉಚ್ಚರಿಸಿದನು. ಇದನ್ನು ನೋಡಿ ಎಲ್ಲರೂ ಆಶ್ಚರ್ಯಚಕಿತರಾದರು. ಇದಾದ ಬಳಿಕ ಶ್ರೀನರಹರ್ಯಾನಂದಜಿಯವರು ವೈಷ್ಣವರ ಪಂಚಸಂಸ್ಕಾರಗಳನ್ನು ಮಾಡಿ, ರಾಮಬೋಲಾನಿಗೆ ಶ್ರೀರಾಮಮಂತ್ರದ ದೀಕ್ಷೆಯನ್ನಿತ್ತರು. ಒಮ್ಮೆ ಗುರುಮುಖದಿಂದ ಕೇಳಿದ್ದೆಲ್ಲವೂ ಆಗಲೇ ಬಾಲಕನಿಗೆ ಕಂಠಸ್ಥವಾಗುತ್ತಿತ್ತು. ಅವನ ಬುದ್ಧಿಯು ತುಂಬಾ ಪ್ರಖರವಾಗಿತ್ತು. ಆ ಗುರು-ಶಿಷ್ಯರಿಬ್ಬರೂ ಕೆಲವು ಕಾಲ ಅಲ್ಲಿದ್ದು, ಬಳಿಕ ವರಾಹಕ್ಷೇತ್ರಕ್ಕೆ (ಸೋರೋ) ಪಾದಬೆಳೆಸಿದರು. ಅಲ್ಲಿ ಶ್ರೀನರಹರಿಸ್ವಾಮಿಗಳು ತುಲಸೀದಾಸನಿಗೆ ಶ್ರೀರಾಮಚರಿತಮಾನಸವನ್ನು ಉಪದೇಶಿಸಿದರು. ಕೊಂಚದಿನಗಳಾದ ಬಳಿಕ ಅವರು ಕಾಶೀಕ್ಷೇತ್ರಕ್ಕೆ ಬಂದರು. ಅಲ್ಲಿ ಶ್ರೀಶೇಷಸನಾತನಸ್ವಾಮಿಗಳ ಬಳಿಯಿದ್ದು ತುಲಸೀದಾಸರು ಹದಿನೈದು ವರ್ಷಗಳ ಕಾಲ ವೇದ-ವೇದಾಂಗಗಳನ್ನು ಅಧ್ಯಯನ ಮಾಡಿದರು. ಕಾಲಕಳೆದಂತೆ ಅವರಲ್ಲಿ ಸಾಂಸಾರಿಕವಾಸನೆ ಜಾಗ್ರತವಾಯಿತು. ವಿದ್ಯಾಗುರುಗಳ ಅಪ್ಪಣೆಯನ್ನು ಪಡೆದು, ಮರಳಿ ತಮ್ಮ ಜನ್ಮಸ್ಥಾನಕ್ಕೆ ಬಂದರು. ಅಲ್ಲಿ ತಮ್ಮ ಪರಿವಾರವೆಲ್ಲ ನಷ್ಟವಾಗಿರುವುದನ್ನು ಕಂಡು, ಅವರು ವಿಧಿವತ್ತಾಗಿ ತಂದೆ-ತಾಯಿ ಮೊದಲಾದವರ ಶ್ರಾದ್ಧಾದಿಗಳನ್ನು ನೆರವೇರಿಸಿದನು. ಅವರು ಅಲ್ಲೇ ಇದ್ದು ಜನರಿಗೆ ಭಗವಾನ್ ಶ್ರೀರಾಮನ ಕಥೆಯನ್ನು ಬೋಧಿಸುತ್ತಿದ್ದರು.

ವಿಕ್ರಮಶಕ ೧೫೮೩ (ಕ್ರಿ.ಶ. 1526) ಜ್ಯೇಷ್ಠ ಶುದ್ಧ ೧೩ ಗುರುವಾರದಂದು ಭಾರದ್ವಾಜಗೋತ್ರಜಳಾದ 'ರತ್ನಾವಳಿ' ಎಂಬ ಸುಂದರಕನ್ಯೆಯೊಂದಿಗೆ ಅವರ ವಿವಾಹವು ನಡೆಯಿತು. ಆ ನವದಂಪತಿಗಳು ಸುಖ-ಸಂತೋಷದಿಂದ ತಮ್ಮ ಜೀವನವನ್ನು ಸಾಗಿಸುತ್ತಿದ್ದರು. ಒಮ್ಮೆ ರತ್ನಾವಳಿಯು ತನ್ನ ಗಂಡನ ಬಳಿ ತಿಳಿಸಿಹೋಗುವಷ್ಟು ವ್ಯವಧಾನವಿಲ್ಲದೆ ಅವಸರವಾಗಿ ತವರು ಮನೆಗೆ ತೆರಳಿದಳು. ತುಲಸೀದಾಸರು ಮನೆಗೆ ಬಂದು ನೋಡುತ್ತಲೇ ಪತ್ನಿಯು ಇಲ್ಲದಿರುವುದನ್ನು, ತವರುಮನೆಗೆ ಹೋಗಿರುವುದನ್ನು ಅರಿತು, ಕೂಡಲೇ ಅವರು ಆಕೆಯ ತವರಿಗೆ ತೆರಳಿದರು. ಒಂದು ದಿನವು ತನ್ನನ್ನು ಬಿಟ್ಟಿರಲಾರದಷ್ಟು ತನ್ನ ಮೇಲೆ ಇಟ್ಟಿರುವ ಮಮತೆಯನ್ನು ನೋಡಿ ರತ್ನಾವಳಿಯು ಗಂಡನನ್ನು ಧಿಕ್ಕರಿಸುತ್ತಾ – **'ಅಸ್ತಿ ಚರ್ಮಮಯ ದೇಹ ಮಮ ತಾಮಜೈಸೀ ಪ್ರೀತಿ। ತೈಸೀ ಜೋ ಶ್ರೀರಾಮ ಮಹ ಹೋತಿ ನ ತೌ ಭವಭೀತಿ॥'** (ಅಸ್ತಿ, ಚರ್ಮಮಯವಾದ ನನ್ನ ಈ ದೇಹದಲ್ಲಿಟ್ಟ ಪ್ರೀತಿಯಲ್ಲಿ ಒಂದಂಶ ಪ್ರೀತಿಯನ್ನು ಶ್ರೀರಾಮಚರಣದಲ್ಲಿ ಇಟ್ಟಿದ್ದರೆ ಭವಸಾಗರದಿಂದ ಪಾರಾಗಿ ಹೋಗುತ್ತಿದ್ದೀರಲ್ಲ!) ಪತ್ನಿಯ ಮಾತುಗಳು ತುಲಸೀದಾಸರ ಮನಸ್ಸಿಗೆ ನಾಟಿದುವು. ಅವಳ ಮರ್ಮಾಘಾತವಾದ ಮಾತಿನಿಂದ ಮಮತೆಯಿಂದ ಮುಚ್ಚಿದ್ದ ಅವರ ಕಣ್ಣು ತೆರೆಯಿತು. ಕೂಡಲೇ ಮನೆಯನ್ನು ತೊರೆದು ಪ್ರಯಾಗಕ್ಕೆ ಹೊರಟುಹೋದರು. ಪತ್ನಿಯ ಉಪದೇಶದಿಂದಲೇ ನಾನು ಹೀಗಾದೆ

ಎಂದು ಅವರು ಹೇಳಿಕೊಂಡಿರುವರು. **''ಕಟೇ ಏಕ ರಘುನಾಥ ಸಂಗ, ಬಾಂಧೀ ಜಟಾ ಸಿರಕೇಸ। ಹಮತೋ ಚಾಖಾ ಪ್ರೇಮರಸ ಪತಿನಿಕೇ ಉಪದೇಶ॥'** ತೀರ್ಥರಾಜ ಪ್ರಯಾಗದಲ್ಲಿ ಅವರು ಗೃಹಸ್ಥವೇಶವನ್ನು ತ್ಯಜಿಸಿ, ಸಾಧುವೇಷವನ್ನು ತೊಟ್ಟುಕೊಂಡರು. ಬಳಿಕ ತೀರ್ಥಾಟನೆ ಮಾಡುತ್ತಾ ಕಾಶಿಗೆ ಬಂದರು. ಆಗಲೇ ಅವರಿಗೆ ಮಾನಸಸರೋವರದಲ್ಲಿ 'ಕಾಕಭುಶುಂಡಿ'ಯವರ ದರ್ಶನವಾಯಿತು.

ಕಾಶಿಯಲ್ಲಿ ತುಲಸೀದಾರರು ರಾಮಕಥಾ ಪ್ರವಚನ ಮಾಡತೊಡಗಿದರು. ಪ್ರತಿದಿನವು ಅವರು ಸಂಧ್ಯಾವಂದನೆ ಮುಗಿಸಿ, ಆ ನೀರನ್ನು ಒಂದು ಅರಳೀ ಮರದ ಬುಡದಲ್ಲಿ ಎಸೆಯುತ್ತಿದ್ದರು. ಆ ಮರದಲ್ಲಿದ್ದ ಬ್ರಹ್ಮರಾಕ್ಷಸನೊಬ್ಬನು ಆ ಸಂಧ್ಯಾವಂದನೆಯ ನೀರಿನಿಂದಾಗಿ ಶಾಪವಿಮುಕ್ತನಾಗಿ, ತುಲಸೀದಾಸರಿಗೆ ಕಾಣಿಸಿಕೊಂಡು ಹೇಳಿದನು – ಓ ಮಹಾತ್ಮಾ! ನೀವು ಎರೆದ ತೀರ್ಥದಿಂದಾಗಿ ನಾನು ಶಾಪಮುಕ್ತನಾದೆ. ನಾನು ನಿಮಗೇನಾದರೂ ಸಹಾಯಮಾಡುವೆನು, ತಿಳಿಸಿರಿ. ತುಳಸೀದಾಸರೆಂದರು – ನನಗೆ ಶ್ರೀರಾಮನ ದರ್ಶನವಾಗುವಂತಹ ಉಪಾಯವನ್ನು ತಿಳಿಸು. ಆಗ ಬ್ರಹ್ಮರಾಕ್ಷಸನು – ಅಂತಹ ಶಕ್ತಿ ನನಗಿಲ್ಲ, ಆದರೆ ರಾಮದರ್ಶನ ಮಾಡಿಸುವಂತಹ ದಾಸಶಿರೋಮಣಿ ಹನುಮಂತನಿಗೆ ನೀನು ಶರಣಾಗು. ಗುರುವಿನ ಮೂಲಕವೇ ಹರಿಯನ್ನು ಕಾಣಬೇಕು. 'ಅವನು ಎಲ್ಲಿ ದೊರಕುವನು?' ಎಂದು ತುಳಸೀದಾಸರು ಕೇಳಿದಾಗ, ಬ್ರಹ್ಮರಾಕ್ಷಸನೆಂದ – **''ಯತ್ರ ಯತ್ರ ರಘುನಾಥ ಕೀರ್ತನಂ ತತ್ರ ತತ್ರ ಕೃತಮಸ್ತಕಾಂಜಲಿಮ್। ಬಾಷ್ಪವಾರಿ ಪರಿಪೂರ್ಣಲೋಚನಂ ಮಾರುತಿಂ ನಮತ ರಾಕ್ಷಸಾಂತಕಮ್॥''**

ಶ್ರೀರಾಮನ ಕಥೆ ನಡೆಯುವಲ್ಲಿ ತಪ್ಪದೇ ಆಂಜನೇಯಸ್ವಾಮಿಯು ಬಂದೇ ಬರುವನು. ತುಳಸೀದಾಸರ ಶ್ರೀರಾಮಕಥೆಯನ್ನು ಕೇಳಲು ಓರ್ವ ವೃದ್ಧಬ್ರಾಹ್ಮಣನು ಎಲ್ಲರಿಂದ ಮೊದಲು ಬಂದು ಕುಳಿತು ಪ್ರೇಮಾಶ್ರುಗಳ ಸುರಿಸುತ್ತಾ ಕಥಾಶ್ರವಣಮಾಡುತ್ತಿದ್ದನು. ಎಲ್ಲರೂ ಹೋದಮೇಲೆ ಎದ್ದು ಕಣ್ಮರೆಯಾಗುತ್ತಿದ್ದನು. ಇದನ್ನು ಗಮನಿಸಿದ ತುಳಸೀದಾಸರು ಇವನೇ ಮಾರುತಿಯಾಗಿರಬಹುದೆಂದು ಬಗೆದು ಒಂದು ದಿನ ಅವನ ಕಾಲಿಗೆ ಬಿದ್ದು ಸ್ವಾಮಿ ! ನೀವು ಯಾರು? ತಾವು ಸಾಕ್ಷಾತ್ ಆಂಜನೇಯಸ್ವಾಮಿಯೆಂದೇ ನನ್ನ ಭಾವನೆ. ಆಗ ಮಾರುತಿಯು ತುಳಸೀದಾಸರ ಭಕ್ತಿಗೆ ಒಲಿದು ನಿಜದರ್ಶವಿತ್ತನು. ತುಳಸೀದಾಸರು ಅವನ ಚರಣಗಳಲ್ಲಿ ಹೊರಳಾಡಿ, 'ಸದ್ಗುರುವೇ! ನನಗೆ ಶ್ರೀರಾಮನ ದರ್ಶನ ಮಾಡಿಸು' ಎಂದು ಕಳಕಳಿಯಿಂದ ಬೇಡಿಕೊಂಡರು. ಆಗ ಹನುಮಂತನು – 'ನೀನು ಚಿತ್ರಕೂಟಕ್ಕೆ ಹೋಗು, ಅಲ್ಲಿ ಶ್ರೀರಾಮಪ್ರಭುವಿನ ದರ್ಶನ ನಿನಗಾಗುವುದು' ಎಂದು ಹೇಳಿ ಅಂತರ್ಧಾನನಾದನು. ತುಳಸೀದಾಸರು ಮಾರುತಿಯ ಅಪ್ಪಣೆಯಂತೆ ಚಿತ್ರಕೂಟಕ್ಕೆ ಬಂದು ರಾಮಘಾಟಿನಲ್ಲಿ ವಾಸಿಸತೊಡಗಿದರು. ಒಂದು ದಿನ ಅವರು ಕಾಮದಗಿರಿಗೆ ಪ್ರದಕ್ಷಿಣೆಮಾಡುತ್ತಿರುವಾಗ ರಾಜಕುಮಾರರಿಬ್ಬರೂ ಕುದುರೆಯ ಮೇಲೆ ಹತ್ತಿ, ಧನುರ್ಬಾಣಗಳನ್ನು ಧರಿಸಿಕೊಂಡು ಬರುತ್ತಿರುವುದನ್ನು ಕಂಡರು. ಅವರನ್ನು ನೋಡಿ ತುಳಸೀದಾಸರು ಮುಗ್ಧರಾದರು. ಆದರೆ ಶ್ರೀರಾಮ-ಲಕ್ಷ್ಮಣರೇ ಈ ರೂಪದಲ್ಲಿ ಬಂದಿರುವರೆಂದು ಗುರುತಿಸದೇ ಹೋದರು. ಸ್ವಪ್ನದಲ್ಲಿ ಆಂಜನೇಯನು ನಡೆದ ಘಟನೆ ತಿಳಿಸಿದಾಗ, ಪಶ್ಚಾತ್ತಾಪಪಡುತ್ತಾ 'ಸ್ವಾಮಿ! ಅಲ್ಪಮತಿಯಾದ ನಾನು ಪ್ರಭುವನ್ನು ಗುರುತಿಸದೆ ಹೋದೆನಲ್ಲ! ಇನ್ನೊಮ್ಮೆ ಅವನಿಗೆ ದರ್ಶನಕೊಡಲು ಹೇಳು' ಎಂದು ಆಂಜನೇಯನಲ್ಲಿ ಬೇಡಿಕೊಂಡರು. 'ನಾಳೆ ನಿನಗೆ ದರ್ಶನವಾಗುವುದು' ಎಂದು ಮಾರುತಿಯು ಆಶ್ವಾಸನೆ ನೀಡಿದನು.

ವಿಕ್ರಮಶಕ ೧೬೦೭ರ ಮೌನೀ ಅಮಾವಾಸ್ಯೆ (ಪುಷ್ಯ ಅಮಾವಾಸ್ಯೆ) ಬುಧವಾರದಂದು ಶ್ರೀರಾಮಚಂದ್ರನು ಪುನಃ ಅವರ ಮುಂದೆ ಪ್ರಕಟನಾದನು. ಬಾಲಕರೂಪದಲ್ಲಿದ್ದ ಶ್ರೀರಾಮನು ತುಳಸೀದಾಸರಲ್ಲಿ – 'ಬಾಬಾ! ನನಗೆ ಚಂದನವನ್ನು ಕೊಡು' ಎಂದು ಕೇಳಿದನು. ಈಗ ತುಳಸೀದಾಸರು ಮೋಸಹೋಗಬಾರದೆಂದು ಎಣಿಸಿ ಹನುಮಂತನು ಗಿಳಿಯರೂಪದಿಂದ ಈ ದೋಹಾವನ್ನು ನುಡಿದನು –

**ಚಿತ್ರಕೂಟ ಕೇ ಘಾಟಪರ ಭಈ ಸಂತನ ಕೀ ಭೀರ। ತುಲಸೀದಾಸ ಚಂದನ ಘಿಸೇ ತಿಲಕ ದೇತ ರಘುಬೀರ॥** (ಅಂದರೆ, ಚಿತ್ರಕೂಟದ ರಾಮಘಾಟಿನಲ್ಲಿ ಸಜ್ಜನರ ಸಮೂಹವು ನೆರೆದಿದೆ. ತುಲಸೀದಾಸರು ಚಂದನವನ್ನು ಕೊಡುತ್ತಿರುವರು, ರಘುವೀರನು ತಿಲಕವನ್ನು ತಿದ್ದಿಕೊಳ್ಳುವನು.) ನೀನು ಕೊಟ್ಟ ಚಂದನವನ್ನು ಹಚ್ಚಿಕೊಳ್ಳುವವನು ಸಾಕ್ಷಾತ್ ಶ್ರೀರಾಮಚಂದ್ರನೇ.

ತುಳಸೀದಾಸರಿಗೆ ಅದ್ಭುತವಾದ ರಾಮನ ತೇಜಸ್ಸನ್ನು ನೋಡಿ ದೇಹಭಾನ ಮರೆತುಹೋಯಿತು. ಭಗವಂತನು ತನ್ನ ಕೈಯಿಂದಲೇ ಚಂದನವನ್ನೆತ್ತಿಕೊಂಡು ತುಲಸೀದಾಸರ ಹಣೆಯ ಮೇಲೆ ತಿಲಕವನ್ನಿಟ್ಟನು. ಹಾಗೂ ಅಂತರ್ಧಾನನಾದನು.

ವಿಕ್ರಮಶಕ ೧೬೨೮ರಲ್ಲಿ ಆಂಜನೇಯನ ಅಪ್ಪಣೆಯಂತೆ ತುಲಸೀದಾಸರು ಅಯೋಧ್ಯೆಗೆ ಹೊರಟರು. ಆಗ ಪ್ರಯಾಗದಲ್ಲಿ ಮಾಘಮೇಳ ನಡೆಯುತ್ತಿತ್ತು. ಅಲ್ಲಿ ಕೆಲವು ದಿನಗಳವರೆಗೆ ನಿಂತರು. ಆರು ಪರ್ವದಿನಗಳ ಬಳಿಕ ಒಂದು ವಟವೃಕ್ಷದ ಬುಡದಲ್ಲಿ ಅವರಿಗೆ ಮಹರ್ಷಿಗಳಾದ ಭರದ್ವಾಜರ ಮತ್ತು ಯಾಜ್ಞವಲ್ಕ್ಯರ ದರ್ಶನವಾಯಿತು. ಆಗ ಅಲ್ಲಿ ಅವರು ಮೊದಲು ವರಾಹಕ್ಷೇತ್ರದಲ್ಲಿ ಗುರುಗಳಿಂದ ಕೇಳಿದ ಶ್ರೀರಾಮಕಥೆಯೇ ನಡೆಯುತ್ತಿತ್ತು. ಅದನ್ನು ಕೇಳಿ ಅವರು ಅಲ್ಲಿಂದ ಕಾಶಿಗೆ ಬಂದರು. ಅಲ್ಲಿ ಪ್ರಹ್ಲಾದಘಾಟಿನಲ್ಲಿ ಓರ್ವ ಬ್ರಾಹ್ಮಣನ ಮನೆಯಲ್ಲಿ ವಾಸಿಸಿದರು. ಅಲ್ಲಿ ಅವರಲ್ಲಿದ್ದ ಕವಿತಾಶಕ್ತಿಯು ಜಾಗ್ರತವಾಯಿತು. ಅವರು ಸಂಸ್ಕೃತದಲ್ಲಿ ಶ್ಲೋಕಗಳನ್ನು ರಚಿಸತೊಡಗಿದರು. ಆದರೆ ಹಗಲಿನಲ್ಲಿ ಬರೆದ ಶ್ಲೋಕಗಳೆಲ್ಲವೂ ರಾತ್ರಿಯಲ್ಲಿ ಕಣ್ಮರೆಯಾಗುತ್ತಿದ್ದವು. ಹೀಗೆ ಪ್ರತಿದಿನವೂ ನಡೆಯುತ್ತಿತ್ತು. ಎಂಟನೆಯ ದಿನ ತುಲಸೀದಾಸರಿಗೆ ಒಂದು ಕನಸು ಬಿತ್ತು. ಆ ಸ್ವಪ್ನದಲ್ಲಿ – 'ನೀನು ಲೋಕಭಾಷೆಯಲ್ಲಿ ಕಾವ್ಯವನ್ನು ರಚಿಸು' ಎಂದು ಅವರಿಗೆ ಪರಮೇಶ್ವರನು ಆದೇಶಿಸಿದನು. ಅವರ ನಿದ್ದೆ ಹಾರಿಹೋಗಿ, ಎದ್ದು

ಕುಳಿತರು. ಆಗಲೇ ಅವರಿಗೆ ಭಗವಾನ್ ಶಿವನು ಮತ್ತು ಪಾರ್ವತಿಯರು ಪ್ರತ್ಯಕ್ಷವಾಗಿ ದರ್ಶನವಿತ್ತರು. ತುಲಸೀದಾಸರು ಆನಂದತುಂದಿಲರಾಗಿ ಸಾಷ್ಟಾಂಗನಮಸ್ಕಾರ ಮಾಡಿದರು. ಪರಮೇಶ್ವರನೆಂದ– 'ನೀನು ಅಯೋಧ್ಯೆಗೆ ಹೋಗಿ ಅಲ್ಲಿರು. ವ್ಯವಹಾರ (ಅವಧಿ) ಭಾಷೆಯಲ್ಲಿ ರಾಮಕಾವ್ಯವನ್ನು ರಚಿಸು. ನನ್ನ ಆಶೀರ್ವಾದದಿಂದ ನಿನ್ನ ಕವಿತೆಯು ಸಾಮವೇದದಂತೆ ಫಲವನ್ನು ಕೊಡುವುದು. ಇದನ್ನು ಸಾಮವೇದದಂತೆ ಜನರು ಹಾಡಿಕೊಳ್ಳುವರು' ಎಂದು ಆಶೀರ್ವದಿಸಿ ಗೌರೀಶಂಕರರು ಅಂತರ್ಧಾನರಾದರು. ಅವರ ಆಜ್ಞೆಯನ್ನು ಶಿರಸಾವಹಿಸಿ ತುಲಸೀದಾಸರು ಕಾಶಿಯಿಂದ ಅಯೋಧ್ಯೆಗೆ ಆಗಮಿಸಿದರು.

ತ್ರೇತಾಯುಗದಲ್ಲಿ ಶ್ರೀರಾಮಜನ್ಮದಿನೋತ್ಸವದಂದು ಇದ್ದ ಯೋಗವೇ ವಿಕ್ರಮಶಕ ೧೬೩೧ರ ಚೈತ್ರಶುದ್ಧ ನವಮಿಯಂದು ಕೂಡಿಬಂದಿತ್ತು. ಅಂದು ಪ್ರಾತಃಕಾರವೇ ಶ್ರೀತುಲಸೀದಾಸರು 'ಶ್ರೀರಾಮಚರಿತಮಾನಸ'ವನ್ನು ರಚಿಸಲು ಪ್ರಾರಂಭಿಸಿದರು. ಎರಡು ವರ್ಷ ಏಳು ತಿಂಗಳು ಇಪ್ಪತ್ತಾರು ದಿನಗಳಲ್ಲಿ ಗ್ರಂಥವು ಪೂರ್ಣಗೊಂಡಿತು. ವಿಕ್ರಮಶಕ ೧೬೩೩ರ ಮಾರ್ಗಶಿರ ಶುಕ್ಲಪಕ್ಷದ ಶ್ರೀಸೀತಾರಾಮರ ವಿವಾಹಮಹೋತ್ಸವದಂದು ಏಳೂ ಕಾಂಡಗಳು ಸಂಪೂರ್ಣವಾದುವು.

ಇದಾದ ಬಳಿಕ ತುಲಸೀದಾಸರು ಭಗವದಾಜ್ಞೆಯಂತೆ ಕಾಶಿಗೆ ಹೊರಟುಹೋದರು. ಅಲ್ಲಿ ಅವರು ಭಗವಾನ್ ವಿಶ್ವನಾಥನಿಗೆ, ಮಾತಾ ಅನ್ನಪೂರ್ಣೇಶ್ವರಿ ಇವರಿಗೆ ಶ್ರೀರಾಮಚರಿತಮಾನಸವನ್ನು ನಿವೇದಿಸಿಕೊಂಡರು. ಆ ರಾತ್ರಿಯಲ್ಲಿ ಪುಸ್ತಕವನ್ನು ವಿಶ್ವನಾಥನ ಮಂದಿರದಲ್ಲಿ ಇಡಲಾಯಿತು. ಪ್ರಾತಃಕಾಲ ಬಾಗಿಲು ತೆಗೆದು ನೋಡಿದಾಗ ಪುಸ್ತಕದ ಮೇಲೆ **'ಸತ್ಯಂ ಶಿವಂ ಸುಂದರಮ್'** ಎಂದು ಬರೆದು, ಕೆಳಗೆ ಭಗವಾನ್ ವಿಶ್ವನಾಥನ ಹಸ್ತಾಕ್ಷರವಿತ್ತು. ಆಗ ಅಲ್ಲಿ ನೆರೆದಿದ್ದ ಜನರೆಲ್ಲರೂ **'ಸತ್ಯಂ ಶಿವಂ ಸುಂದರಮ್'** ಎಂಬ ಧ್ವನಿಯನ್ನು ಕೇಳಿದರು.

ಈ ವಿಷಯವನ್ನು ಕೇಳಿದ ಅಲ್ಲಿಯ ಪಂಡಿತರ ಮನಸ್ಸಿನಲ್ಲಿ ಈರ್ಷ್ಯೆ ಉಂಟಾಯಿತು. ಅವರೆಲ್ಲರೂ ಗುಂಪುಕಟ್ಟಿಕೊಂಡು ತುಲಸೀದಾಸರನ್ನು ನಿಂದಿಸತೊಡಗಿದರು. ಆ ಗ್ರಂಥವನ್ನೂ ಕೂಡ ನಾಶಗೊಳಿಸಲು ಪ್ರಯತ್ನಿಸತೊಡಗಿದರು. ಅವರು ಆ ಗ್ರಂಥವನ್ನು ಕದ್ದು ತರಲು ಇಬ್ಬರು ಕಳ್ಳರನ್ನು ಕಳಿಸಿದರು. ಅವರು ಹೋಗಿ ನೋಡಿದರೆ ತುಲಸೀದಾಸರ ಕುಟೀರದ ಸಮೀಪದಲ್ಲಿ ಇಬ್ಬರು ವೀರರು ಧನುರ್ಬಾಣಗಳನ್ನು ಧರಿಸಿ ಕಾವಲು ಕಾಯುತ್ತಿದ್ದರು. ಅವರಲ್ಲಿ ಒಬ್ಬನು ಸುಂದರ ಶ್ಯಾಮಲಾಂಗನೂ, ಮತ್ತೊಬ್ಬನು ಗೌರಾಂಗನೂ ಆಗಿದ್ದರು. ಅವರ ದರ್ಶನದಿಂದ ಕಳ್ಳರ ಬುದ್ಧಿ ಶುದ್ಧವಾಗಿ, ಕಳ್ಳತನಕ್ಕೆ ಮಂಗಳಹಾಡಿ, ಭಗವದ್ಭಜನೆ ಮಾಡತೊಡಗಿದರು. ತನಗಾಗಿ ಭಗವಂತನು ಕಷ್ಟಪಟ್ಟನಲ್ಲ! ಎಂದು ಅರಿತ ತುಳಸೀದಾಸರು ಕುಟೀರದಲ್ಲಿದ್ದ ಎಲ್ಲ ವಸ್ತುಗಳನ್ನು ದಾನಮಾಡಿಬಿಟ್ಟರು. ಗ್ರಂಥವನ್ನು ಮಾತ್ರ ತನ್ನ ಮಿತ್ರನಾದ ತೋಡರಮಲ್ ಇವನ ಬಳಿ ಇರಿಸಿದರು. ಬಳಿಕ ಅವರು ಇನ್ನೊಂದು ಪ್ರತಿಯನ್ನು ಬರೆದು ತೆಗೆದರು. ಅದರ ಆಧಾರದಿಂದಲೇ ಬೇರೆ ಪ್ರತಿಗಳು ಸಿದ್ಧವಾಗತೊಡಗಿದವು. ಈ ಗ್ರಂಥವು ಕ್ರಮ-ಕ್ರಮವಾಗಿ ಪ್ರಸಿದ್ಧಿಹೊಂದಿತು.

ಇತ್ತ ಪಂಡಿತರು ಏನೂ ತೋಚದೆ ಆ ಪುಸ್ತಕವನ್ನು ಪರಿಶೀಲನೆಗಾಗಿ ಶ್ರೀಮಧುಸೂದನಸರಸ್ವತಿಸ್ವಾಮಿಗಳಲ್ಲಿ ಪ್ರಾರ್ಥಿಸಿದರು. ಶ್ರೀಮಧುಸೂದನಸರಸ್ವತಿಯವರು ಆ ಗ್ರಂಥವನ್ನು ಸಮಗ್ರವಾಗಿ ಪರಿಶೀಲಿಸಿ, ಹೆಚ್ಚಾದ ಸಂತೋಷದಿಂದ ತಮ್ಮ ಸಮ್ಮತಿಯನ್ನು ಈ ರೀತಿಯಾಗಿ ಬರೆದುಕೊಟ್ಟರು.

**ಆನಂದಕಾನನೇಹ್ಯಸ್ಮಿನ್ ಜಂಗಮಸ್ತುಲಸೀತರುಃ। ಕವಿತಾಮಂಜರೀ ಭಾತಿ ರಾಮಭ್ರಮರಭೂಷಿತಾ॥** 'ಈ ಕಾಶಿಯೆಂಬ ಆನಂದವನದಲ್ಲಿ ತುಲಸೀದಾಸರೆಂಬ ಸಂಚರಿಸುತ್ತಿರುವ ತುಲಸೀಗಿಡವಾಗಿದೆ. ಅದರ ಕವಿತಾರೂಪೀ ಮಂಜರಿಯು ತುಂಬಾ ಸುಂದರವಾಗಿದೆ. ಅದರ ಮೇಲೆ ಶ್ರೀರಾಮನೆಂಬ ಭ್ರಮರವು ಸದಾಕಾಲ ಪರಿಭ್ರಮಿಸುತ್ತಿದೆ.'

ಪಂಡಿತರಿಗೆ ಇದರಿಂದಲೂ ಸಂತೋಷವಾಗಲಿಲ್ಲ. ಅವರ ಈರ್ಷ್ಯೆ ಇನ್ನೂ ಹೆಚ್ಚಿತು. ಈ ಗ್ರಂಥದ ಪ್ರಮಾಣಕ್ಕಾಗಿ ಅವರು ಮತ್ತೊಂದು ಉಪಾಯವನ್ನು ಯೋಚಿಸಿದರು. ಅವರು ವಿಶ್ವೇಶ್ವರನ ಎದುರು ಒಂದು ಪೀಠದಲ್ಲಿ ವೇದ-ಶಾಸ್ತ್ರಪುರಾಣಗ್ರಂಥಗಳ ಕೆಳಗೆ ರಾಮಚರಿತಮಾನಸವನ್ನು ಇಡಲಾಯಿತು. ಬಳಿಕ ಮಂದಿರ ಬೀಗಮುದ್ರೆಗಳಿಂದ ಮುಚ್ಚಿದರು. ಪ್ರಾತಃಕಾಲದಲ್ಲಿ ಮಂದಿರವನ್ನು ತೆರೆದು ನೋಡಿದಾಗ ಕೆಳಭಾಗದಲ್ಲಿದ್ದ ರಾಮಚರಿತಮಾನಸವು ವೇದಶಾಸ್ತ್ರಪುರಾಣಗ್ರಂಥಗಳ ಮೇಲ್ಗಡೆ ಇರುವುದನ್ನು ಅವರೆಲ್ಲರೂ ನೋಡಿದರು. ಆಗ ಪಂಡಿತರೆಲ್ಲ ನಾಚಿಕೊಂಡು, ತುಲಸೀದಾಸರಲ್ಲಿ ಕ್ಷಮೆಯನ್ನು ಯಾಚಿಸಿ, ಭಕ್ತಿಯಿಂದ ಅವರ ಚರಣೋದಕವನ್ನು ಸ್ವೀಕರಿಸಿದರು.

ತುಲಸೀದಾಸರು ಈಗ ಅಸೀಘಾಟಿನಲ್ಲಿ ಇರತೊಡಗಿದರು. ಒಂದು ದಿನ ರಾತ್ರಿ ಕಲಿಪುರುಷನು ಅವರ ಬಳಿಗೆ ಬಂದು, ಅವರನ್ನು ಬಾಧಿಸತೊಡಗಿದನು. ಗೋಸ್ವಾಮಿಯವರು ಹನುಮಂತನನ್ನು ಧ್ಯಾನಿಸಿದರು. ಮಾರುತಿಯು ಅವರಿಗೆ ವಿನಯಪದಗಳನ್ನು ಬರೆಯಲು ಆಜ್ಞಾಪಿಸಿದನು. ತುಲಸೀದಾಸರು 'ವಿನಯಪತ್ರಿಕೆ'ಯನ್ನು ಬರೆದು ಭಗವಂತನಿಗೆ ಅರ್ಪಿಸಿದರು. ಶ್ರೀರಾಮನು ಅದರ ಮೇಲೆ ತನ್ನ ಹಸ್ತಾಕ್ಷರವನ್ನು ಮಾಡಿ ಅವರನ್ನು ನಿರ್ಭಯನನ್ನಾಗಿಸಿದನು. ಆಗ ಕಲಿಪುರುಷನ ಭಯವು ತೊಲಗಿಹೋಯಿತು.

ವಿಕ್ರಮಶಕ ೧೬೮೦ರ ಶ್ರಾವಣ ಕೃಷ್ಣ ತದಿಗೆ ಶನಿವಾರದಂದು ಅಸೀಘಾಟಿನಲ್ಲಿ ಗೋಸ್ವಾಮಿಯವರು ರಾಮನಾಮ ಸ್ಮರಿಸುತ್ತಾ ತನ್ನ ತನುವನ್ನು ತ್ಯಜಿಸಿ, ಶ್ರೀರಾಮಪದವನ್ನು ಸೇರಿದರು.

—❋—❋—❋—

## ನವಾಹ್ನಪಾರಾಯಣದ ವಿಶ್ರಾಮ ಸ್ಥಳಗಳು



## ಮಾಸಪಾರಾಯಣದ ವಿಶ್ರಾಮ ಸ್ಥಳಗಳು

# ಶ್ರೀರಾಮಶಲಾಕಾ ಪ್ರಶ್ನಾವಳಿ

ಶ್ರೀರಾಮಚರಿತಮಾನಸದ ಮೇಲೆ ಪ್ರೇಮಾನುರಾಗವುಳ್ಳ ಮಹಾನುಭಾವರಿಗೆ ಶ್ರೀರಾಮಶಲಾಕಾ ಪ್ರಶ್ನಾವಳಿಯ ಕುರಿತು ವಿಶೇಷ ಪರಿಚಯವನ್ನೀಯುವ ಆವಶ್ಯಕತೆ ಕಂಡುಬರುವುದಿಲ್ಲ. ಅದರ ಮಹತ್ವ ಮತ್ತು ಉಪಯೋಗ ಪ್ರಾಯಶಃ ಎಲ್ಲ ಮಾನಸಪ್ರೇಮಿಗಳು ಪರಿಚಿತರೇ ಆಗಿದ್ದಾರೆ. ಆದರೂ ಕೆಳಗೆ ಅದರ ಸ್ವರೂಪವನ್ನು ಮಾತ್ರ ಅಂಕಿತಗೊಳಿಸಿ, ಅದರಿಂದ ಪ್ರಶ್ನೋತ್ತರ ತೆಗೆಯುವ ವಿಧಿ ಹಾಗೂ ಅದರ ಉತ್ತರ-ಫಲಗಳ ಉಲ್ಲೇಖವನ್ನು ಮಾಡಲಾಗಿದೆ. 'ಶ್ರೀರಾಮಶಲಾಕಾಪ್ರಶ್ನಾವಳಿ'ಯ ಸ್ವರೂಪ ಇಂತಿದೆ –

| ಸು | ಪ್ರ | ಉ | ಬಿ | ಹೊ | ಮು | ಗ | ಬ | ಸು | ನು | ಬಿ | ಘ | ಧಿ | ಇ | ದ |
|---|---|---|---|---|---|---|---|---|---|---|---|---|---|---|
| ರ | ರು | ಫ | ಸಿ | ಸಿ | ರೇ° | ಬಸ | ಹೈ | ಮಂ | ಲ | ನ | ಲ | ಯ | ನ | ಅಂ |
| ಸುಜ | ಸೊ | ಗ | ಸು | ಕು | ಮ | ಸ | ಗ | ತ | ನ | ಈ | ಲ | ಧಾ | ಬೇ | ನೋ |
| ತ್ಯ | ರ | ನ | ಕು | ಜೋ | ಮ | ರಿ | ರ | ರ | ಅ | ಕೀ | ಹೋ | ಸಂ | ರಾ | ಯ |
| ಪು | ಸು | ಥ | ಸೀ | ಜೆ | ಇ | ಗ | ಮ* | ಸಂ | ಕ | ರೇ | ಹೋ | ಸ | ಸ | ನಿ |
| ತ | ರ | ತ | ರ | ಸ | ಇ | ಹ | ಬ | ಬ | ಪ | ಚಿ | ಸ | ಯ | ಸ | ತು |
| ಮ | ಕಾ | ಾ | ರ | ರ | ಮಾ | ಮಿ | ಮೀ | ಮ್ಹಾ | ಾ | ಜಾ | ಹೂ | ಹೀ° | ಾ | ಜೂ |
| ತಾ | ರಾ | ರೇ | ರೀ | ಹೃ | ಕಾ | ಫ | ಖಾ | ಜಿ | ಈ | ರ | ರಾ | ಹೂ | ದ | ಲ |
| ನಿ | ಕೋ | ಮಿ | ಗೋ | ನ | ಮ | ಜ | ಯ | ನೇ | ಮನಿ | ಕ | ಜ | ಪ | ಸ | ಲ |
| ಹಿ | ರಾ | ಮ | ಸ | ರಿ | ಗ | ದ | ನ | ಷ | ಮ | ಖಿ | ಜಿ | ಮನಿ | ತ | ಜಂ |
| ಸಿಂ | ಮು | ನ | ನ | ಕೌ | ಮಿ | ಜ | ರ | ಗ | ಧು | ಖ | ಸು | ಕಾ | ಸ | ರ |
| ಗು | ಕ | ಮ | ಅ | ಧ | ನಿ | ಮ | ಲ | ಾ | ನ | ಬ | ತೀ | ನ | ರಿ | ಭ |
| ನಾ | ಪು | ವ | ಅ | ಧಾ | ರ | ಲ | ಕಾ | ಏ | ತು | ರ | ನ | ನು | ಬ | ಥ |
| ಸಿ | ಹ | ಸು | ಮ್ಹು | ರಾ | ರ | ಸ | ಹಿಂ | ರ | ತ | ನ | ಷ | ಾ | ಜಾ | ಾ |
| ರ | ಸಾ | ಾ | ಲಾ | ಧೀ | ಾ | ರೀ | ಜಾ | ಹೂ | ಹೀ° | ಷಾ | ಜೂ | ಈ | ರಾ | ರೇ |

ಈ ರಾಮಶಲಾಕಾ ಪ್ರಶ್ನಾವಳಿಯ ಮೂಲಕ ತಮಗೆ ಇಷ್ಟವಾದ ಪ್ರಶ್ನೆಗೆ ಉತ್ತರವನ್ನು ಬಯಸುವವರು ಮೊಟ್ಟಮೊದಲಿಗೆ ಶ್ರೀರಾಮಚಂದ್ರನನ್ನು ಧ್ಯಾನಿಸಬೇಕು. ಬಳಿಕ ಶ್ರದ್ಧಾವಿಶ್ವಾಸಗಳಿಂದ ತಮಗೆ ಇಷ್ಟವಾದ ಪ್ರಶ್ನೆಯನ್ನು ಮನಸ್ಸಿನಲ್ಲಿ ಅಂದುಕೊಂಡು, ಪ್ರಶ್ನಾವಳಿಯ ಚಕ್ರದಲ್ಲಿನ ಯಾವುದಾದರೊಂದು ಕೋಷ್ಠಕದ ಅಕ್ಷರವನ್ನು ಬೆರಳಿನಿಂದಲೋ, ಒಂದು ಕಡ್ಡಿಯಿಂದಲೋ ಗುರುತಿಸಿ, ಅದನ್ನು ಬೇರೊಂದು ಕಾಗದದಲ್ಲಿ ಬರೆದುಕೊಂಡಿರಬೇಕು. ಆ ಅಕ್ಷರದ ಕೋಟೆಯಲ್ಲಿನ ಚಕ್ರವು ಕೆಡದಂತೆ

ಗುರ್ತುಮಾಡಿಸಬೇಕು. ಈಗ ಬರೆದುಕೊಂಡಿದ್ದ ಅಕ್ಷರದಿಂದ ಮುಂದಿನ ಕೋಷ್ಟಗಳನ್ನು ಎಣಿಸುತ್ತಾ ಒಂಭತ್ತನೇ ಕೋಷ್ಟಕದಲ್ಲಿ ಇರುವ ಅಕ್ಷರವನ್ನು ಬರೆದುಕೊಳ್ಳಬೇಕು. ಹೀಗೆ ಪ್ರತಿ ಒಂಭತ್ತನೇ ಅಕ್ಷರಗಳನ್ನು ಬರೆಯುತ್ತಾ ಹೋಗಬೇಕು. ಮೊದಲನೇ ಅಕ್ಷರವು ಬರುವವರೆಗೆ ಎಣಿಸುತ್ತಾ ಹೋಗಬೇಕು. ಮೊದಲನೇ ಅಕ್ಷರವು ಬಂದಾಗ ಒಂದು ಚೌಪಾಈ (ಚೌಪದಿ) ಪೂರ್ಣಗೊಳ್ಳುವುದು. ಅದು ಪ್ರಶ್ನೆಯ ಉತ್ತರವಾಗಿರುತ್ತದೆ. ಕೆಲವು ಕೋಷ್ಟಕದಲ್ಲಿ ಕೇವಲ 'ಆ' ಮಾತ್ರೆಯನ್ನು 'ಾ' ಎಂದೂ, ಕೆಲಕೆಲವುಗಳಲ್ಲಿ ಎರಡೆರಡು ಅಕ್ಷರಗಳೂ ಇವೆ. ಆದ್ದರಿಂದ ಎಣಿಸುವಾಗ ಆ ಕೋಷ್ಟಕವನ್ನು ಬಿಡಬಾರದು. ಎರಡು ಅಕ್ಷರವಿರುವ ಕೋಷ್ಟಕವನ್ನು ಎರಡು ಬಾರಿ ಎಣಿಸಬಾರದು. ಎಲ್ಲಿ 'ಾ' ಮಾತ್ರೆ ಬಂದಲ್ಲಿ ಹಿಂದಿನ ಅಕ್ಷರಕ್ಕೆ ಜೋಡಿಸಬೇಕು. ಎರಡು ಅಕ್ಷರಗಳಿದ್ದಾಗ ಎರಡನ್ನೂ ಬರೆದಿಡಬೇಕು. ಇದರ ಕಡೆಗೆ ಗಮನವಿರಬೇಕು.

ಉದಾಹರಣೆಗಾಗಿ – ಈ ರಾಮಶಲಾಕಾ ಪ್ರಶ್ನಾವಳಿಯಿಂದ ಯಾವುದೇ ಪ್ರಶ್ನೆಯ ಉತ್ತರದಲ್ಲಿ ಒಂದು ಚೌಪಾಈ ಹೊರಡುತ್ತದೆ. ಯಾರೋ ವ್ಯಕ್ತಿಯು ಭಗವಾನ್ ಶ್ರೀರಾಮನನ್ನು ಸ್ಮರಿಸಿ, ತನ್ನ ಪ್ರಶ್ನೆಯನ್ನು ಚಿಂತಿಸಿ, ಪ್ರಶ್ನಾವಳಿಯ * ಈ ಗುರ್ತು ಇರುವ 'ಮ' ಕೋಷ್ಟಕದಲ್ಲಿ ಬೆರಳನ್ನೋ ಕಡ್ಡಿಯನ್ನು ಇಟ್ಟನು. ಮತ್ತೆ ಮೇಲೆ ತಿಳಿಸಿದ ಕ್ರಮದಲ್ಲಿ ಅಕ್ಷರಗಳನ್ನು ಎಣಿಸುತ್ತಾ ಹೋದರೆ, ಉತ್ತರರೂಪವಾಗಿ ಈ ಚೌಪಾಈ ಸಿದ್ಧವಾಗುತ್ತದೆ.

**ಹೋ ಇ ಹೈ ಸೋ ಈ ಸೋ ರಾ ಮ* ರ ಚಿ ರಾ ಖಾ । ಕೋ ಕ ರಿ ತ ರ ಕ ಬ ಢಾ ವ ಹಿಂ ಸಾ ಷಾ ॥**

ಈ ಚೌಪಾಈಯು ಬಾಲಕಾಂಡಾಂತರ್ಗತ ಶಿವ-ಪಾರ್ವತಿಯರ ಸಂವಾದದಲ್ಲಿದೆ. ಪ್ರಶ್ನಕರ್ತನಿಗೆ ಈ ಉತ್ತರಸ್ವರೂಪ ಚೌಪಾಈಯಿಂದ ಈ ಅಭಿಪ್ರಾಯವನ್ನು ತಿಳಿದುಕೊಳ್ಳಬೇಕು. 'ಕಾರ್ಯದಲ್ಲಿ ಸಂದೇಹವಿದೆ, ಆದ್ದರಿಂದ ಆದನ್ನು ಭಗವಂತನ ಮೇಲೆ ಬಿಟ್ಟು ಬಿಡುವುದು ಶ್ರೇಯಸ್ಕರ.'

ಈ ಚೌಪಾಈಯಲ್ಲದೆ ರಾಮಶಲಾಕಾ ಪ್ರಶ್ನಾವಳಿಯಿಂದ ಎಂಟು ಚೌಪಾಈಗಳು ಇನ್ನೂ ಆಗುತ್ತವೆ. ಅವೆಲ್ಲದರ ಸ್ಥಾನ ಮತ್ತು ಫಲದ ಉಲ್ಲೇಖ ಕೆಳಗೆ ಬರೆಯಲಾಗಿದೆ. ಒಟ್ಟಿಗೆ ಒಂಭತ್ತು ಚೌಪಾಈಗಳಿವೆ.

೧. **ಸುನು ಸಿಯ ಸತ್ಯ ಅಸೀಸ ಹಮಾರೀ । ಪೂಜಿಹಿ ಮನ ಕಾಮನಾ ತುಮ್ಹಾರೀ ॥**
**ಸ್ಥಾನ** – ಈ ಚೌಪಾಈ ಬಾಲಕಾಂಡದ ಶ್ರೀಸೀತೆಯ ಗೌರೀಪೂಜೆಯ ಪ್ರಸಂಗದಲ್ಲಿದೆ. ಗಿರಿಜೆಯು ಸೀತೆಗೆ ಆಶೀರ್ವದಿಸಿರುವಳು.
**ಫಲ** – ಪ್ರಶ್ನಕರ್ತನ ಪ್ರಶ್ನೆಯು ಉತ್ತಮವಾಗಿದೆ, ಕಾರ್ಯಸಿದ್ಧವಾದೀತು.

೨. **ಪ್ರಬಿಸಿ ನಗರ ಕೀಜೈ ಸಬ ಕಾಜಾ । ಹೃದಯ ರಾಕಿ ಕೋಸಲಪುರ ರಾಜಾ ॥**
**ಸ್ಥಾನ** – ಈ ಚೌಪಾಈ ಸುಂದರಕಾಂಡದಲ್ಲಿ ಹನುಮಂತನು ಲಂಕೆಯಲ್ಲಿ ಪ್ರವೇಶಿಸುವ ಸಂದರ್ಭದಲ್ಲಿದೆ.
**ಫಲ** – ಭಗವಂತನನ್ನು ಸ್ಮರಿಸಿ ಕಾರ್ಯಾರಂಭಮಾಡಿ, ಸಫಲತೆ ಸಿಗಬಹುದು.

೩. **ಉಘರೇಂ ಅಂತ ನ ಹೋಇ ನಿಬಾಹೂ । ಕಾಲನೇಮಿ ಜಿಮಿ ರಾವನ ರಾಹೂ ॥**
**ಸ್ಥಾನ** – ಈ ಚೌಪಾಈ ಬಾಲಕಾಂಡದ ಪ್ರಾರಂಭದಲ್ಲಿ ಸತ್ಸಂಗ ವರ್ಣನೆಯ ಪ್ರಸಂಗದಲ್ಲಿದೆ.
**ಫಲ** – ಈ ಕಾರ್ಯದಲ್ಲಿ ಒಳಿತಿಲ್ಲ. ಕಾರ್ಯಸಾಫಲ್ಯದಲ್ಲಿ ಸಂದೇಹವಿದೆ.

೪. **ಬಿಧಿ ಬಸ ಸುಜನ ಕುಸಂಗತ ಪರಹೀಂ । ಫನಿ ಮನಿ ಸಮ ನಿಜ ಗುನ ಅನುಸರಹೀಂ ॥**
**ಸ್ಥಾನ** – ಈ ಚೌಪಾಈ ಬಾಲಕಾಂಡದ ಪ್ರಾರಂಭದಲ್ಲೇ ಸತ್ಸಂಗ ವರ್ಣನೆಯ ಪ್ರಸಂಗದಲ್ಲಿದೆ.
**ಫಲ** – ದುಷ್ಟರ ಸಾಂಗತ್ಯವನ್ನು ಬಿಟ್ಟುಬಿಡು. ಕಾರ್ಯವು ಸಫಲವಾಗುವುದರಲ್ಲಿ ಸಂದೇಹವಿದೆ.

೫. **ಮುದ ಮಂಗಲಮಯ ಸಂತ ಸಮಾಜೂ । ಜಿಮಿ ಜಗ ಜಂಗಮ ತೀರಥ ರಾಜೂ ॥**
**ಸ್ಥಾನ** – ಈ ಚೌಪಾಈ ಬಾಲಕಾಂಡದಲ್ಲಿ ಸಂತಸಮಾಜರೂಪೀ ತೀರ್ಥದ ವರ್ಣನೆಯಲ್ಲಿದೆ.
**ಫಲ** – ಪ್ರಶ್ನೆ ಉತ್ತಮವಾಗಿದೆ. ಕಾರ್ಯ ಸಿದ್ಧವಾದೀತು.

೬. **ಗರಲ ಸುಧಾ ರಿಪು ಕರಯ ಮಿತಾಈ । ಗೋಪದ ಸಿಂಧು ಅನಲ ಸಿತಲಾಈ ॥**
**ಸ್ಥಾನ** – ಈ ಚೌಪಾಈ ಶ್ರೀಹನುಮಂತನು ಲಂಕೆಯನ್ನು ಪ್ರವೇಶಿಸುವ ಸಂದರ್ಭದಲ್ಲಿದೆ.
**ಫಲ** – ಪ್ರಶ್ನೆಯು ತುಂಬಾ ಚೆನ್ನಾಗಿದೆ. ಕಾರ್ಯ ಸಫಲವಾದೀತು.

೭. **ಬರುನ ಕುಬೇರ ಸುರೇಸ ಸಮೀರಾ । ರನ ಸನಮುಖ ಧರಿ ಕಾಹ ನ ಧೀರಾ ॥**
**ಸ್ಥಾನ –** ಈ ಚೌಪಾಈ ಲಂಕಾಕಾಂಡದಲ್ಲಿ ರಾವಣನ ಮೃತ್ಯುವಾಗಿ, ಮಂದೋದರಿಯ ವಿಲಾಪ ಪ್ರಸಂಗದಲ್ಲಿದೆ.
**ಫಲ –** ಕಾರ್ಯ ಪೂರ್ಣವಾಗುವುದರಲ್ಲಿ ಸಂದೇಹವಿದೆ.

೮. **ಸುಫಲ ಮನೋರಥ ಹೋಹುँ ತುಮ್ಹಾರೇ । ರಾಮ ಲಖನು ಸುನಿ ಭಏ ಸುಖಾರೇ ॥**
**ಸ್ಥಾನ –** ಈ ಚೌಪಾಈ ಬಾಲಕಾಂಡದಲ್ಲಿ ಪುಷ್ಪವಾಟಿಕೆಯಿಂದ ಪುಷ್ಪಗಳು ತಂದಾಗ ವಿಶ್ವಾಮಿತ್ರರ ಆಶೀರ್ವಾದವಾಗಿದೆ.
**ಫಲ –** ಪ್ರಶ್ನೆಯು ಬಹಳ ಉತ್ತಮವಾಗಿದೆ. ಕಾರ್ಯ ಸಿದ್ಧವಾಗುವುದು.

ಈ ವಿಧವಾಗಿ ರಾಮಶಲಾಕಾ ಪ್ರಶ್ನಾವಳಿಯಲ್ಲಿ ೯ ಚೌಪಾಈಗಳು ಆಗುವವು. ಅದರಲ್ಲಿ ಎಲ್ಲ ರೀತಿಯ ಪ್ರಶ್ನೆಗಳಿಗೆ ಉತ್ತರವು ಲಭಿಸುವುದು.

❋ ❋ ❋

# ಬ್ರಹ್ಮದೇವಕೃತ ಶ್ರೀರಾಮಸ್ತುತಿಃ

**ವಂದೇ ದೇವಂ ವಿಷ್ಣುಮಶೇಷಸ್ಥಿತಿಹೇತುಂ ತ್ವಾಮಧ್ಯಾತ್ಮಜ್ಞಾನಿಭಿರಂತರ್ಹೃದಿ ಭಾವ್ಯಮ್ ।**
**ಹೇಯಾಹೇಯದ್ವಂದ್ವವಿಹೀನಂ ಪರಮೇಕಂ ಸತ್ತಾಮಾತ್ರಂ ಸರ್ವಹೃದಿಸ್ಥಂ ದೃಶಿರೂಪಮ್ ॥ ೧ ॥**
**ಪ್ರಾಣಾಪಾನೌ ನಿಶ್ಚಯಬುದ್ಧ್ಯಾ ಹೃದಿ ರುದ್ಧ್ವಾ ಛಿತ್ತ್ವಾ ಸರ್ವಂ ಸಂಶಯಬಂಧಂ ವಿಷಯೌಘಾನ್ ।**
**ಪಶ್ಯನ್ತೀಶಂ ಯಂ ಗತಮೋಹಾ ಯತಯಸ್ತಂ ವಂದೇ ರಾಮಂ ರತ್ನಕಿರೀಟಂ ರವಿಭಾಸಮ್ ॥ ೨ ॥**
**ಮಾಯಾತೀತಂ ಮಾಧವಮಾದ್ಯಂ ಜಗದಾದಿಂ ಮಾನಾತೀತಂ ಮೋಹವಿನಾಶಂ ಮುನಿವಂದ್ಯಮ್ ।**
**ಯೋಗಿಧ್ಯೇಯಂ ಯೋಗವಿಧಾನಂ ಪರಿಪೂರ್ಣಂ ವಂದೇ ರಾಮಂ ರಂಜಿತಲೋಕಂ ರಮಣೀಯಮ್ ॥ ೩ ॥**
**ಭಾವಾಭಾವಪ್ರತ್ಯಯಹೀನಂ ಭವಮುಖ್ಯೈಃ ಯೋಗಾಸಕ್ತೈರರ್ಚಿತಪಾದಾಂಬುಜಯುಗ್ಮಮ್ ।**
**ನಿತ್ಯಂ ಶುದ್ಧಂ ಬುದ್ಧಮನಂತಂ ಪ್ರಣವಾಖ್ಯಂ ವಂದೇ ರಾಮಂ ವೀರಮಶೇಷಾಸುರದಾವಮ್ ॥ ೪ ॥**
**ತ್ವಂ ಮೇ ನಾಥೋ ನಾಥಿತಕಾರ್ಯಾಖಿಲಕಾರೀ ಮಾನಾತೀತೋ ಮಾಧವರೂಪೋಽಖಿಲಧಾರೀ ।**
**ಭಕ್ತ್ಯಾ ಗಮ್ಯೋ ಭಾವಿತರೂಪೋ ಭವಹಾರೀ ಯೋಗಾಭ್ಯಾಸೈರ್ಭಾವಿತಚೇತಃಸಹಚಾರೀ ॥ ೫ ॥**
**ತ್ವಾಮಾದ್ಯಂತಂ ಲೋಕತತೀನಾಂ ಪರಮೀಶಂ ಲೋಕಾನಾಂ ನೋ ಲೌಕಿಕಮಾನೈರಧಿಗಮ್ಯಮ್ ।**
**ಭಕ್ತಿಶ್ರದ್ಧಾಭಾವಸಮೇತೈರ್ಭಜನೀಯಂ ವಂದೇ ರಾಮಂ ಸುಂದರಮಿಂದೀವರನೀಲಮ್ ॥ ೬ ॥**
**ಕೋ ವಾ ಜ್ಞಾತುಂ ತ್ವಾಮತಿಮಾನಂ ಗತಮಾನಂ ಮಾಯಾಸಕ್ತೋ ಮಾಧವ ಶಕ್ತೋ ಮುನಿಮಾನ್ಯಮ್ ।**
**ವೃಂದಾರಣ್ಯೇ ವಂದಿತವೃಂದಾರಕವೃಂದಂ ವಂದೇ ರಾಮಂ ಭವಮುಖವಂದ್ಯಂ ಸುಖಕಂದಮ್ ॥ ೭ ॥**
**ನಾನಾಶಾಸ್ತ್ರೈರ್ವೇದಕದಂಬೈಃ ಪ್ರತಿಪಾದ್ಯಂ ನಿತ್ಯಾನಂದಂ ನಿರ್ವಿಷಯಜ್ಞಾನಮನಾದಿಮ್ ।**
**ಮತ್ಸೇವಾರ್ಥಂ ಮಾನುಷಭಾವಂ ಪ್ರತಿಪನ್ನಂ ವಂದೇ ರಾಮಂ ಮರಕತವರ್ಣಂ ಮಥುರೇಶಮ್ ॥ ೮ ॥**
**ಶ್ರದ್ಧಾಯುಕ್ತೋ ಯಃ ಪಠತೀಮಂ ಸ್ತವಮಾದ್ಯಂ ಬ್ರಾಹ್ಮಂ ಬ್ರಹ್ಮಜ್ಞಾನವಿಧಾನಂ ಭುವಿ ಮರ್ತ್ಯಃ ।**
**ರಾಮಂ ಶ್ಯಾಮಂ ಕಾಮಿತಕಾಮಪ್ರದಮೀಶಂ ಧ್ಯಾತ್ವಾ ಧ್ಯಾತಾ ಪಾತಕಜಾಲೈರ್ವಿಗತಃ ಸ್ಯಾತ್ ॥ ೯ ॥**

*॥ ಇತಿ ಶ್ರೀಮದಧ್ಯಾತ್ಮರಾಮಾಯಣೇ ಯುದ್ಧಕಾಂಡೇ ತ್ರಯೋದಶಸರ್ಗೇ*
*ಶ್ರೀಬ್ರಹ್ಮದೇವಕೃತಾ ಶ್ರೀರಾಮಸ್ತುತಿಃ ಸಂಪೂರ್ಣಮ್ ॥*

# ಶ್ರೀರಾಮಚರಿತಮಾನಸ ಪಾರಾಯಣ ವಿಧಿ

ಶ್ರೀರಾಮಚರಿತಮಾನಸವನ್ನು ವಿಧಿಪೂರ್ವಕ ಪಾರಾಯಣೆ ಮಾಡುವ ಮಹಾನುಭಾವರು ಪಾರಾಯಣದ ಪ್ರಾರಂಭದಲ್ಲಿ – ಗೋಸ್ವಾಮಿ ತುಳಸೀದಾಸರನ್ನು, ಶ್ರೀವಾಲ್ಮೀಕಿಯನ್ನು, ಪರಶಿವ ಮತ್ತು ಆಂಜನೇಯಸ್ವಾಮಿಯನ್ನು ಆವಾಹನೆಗೈದು ಪೂಜಿಸಿ, ಬಳಿಕ ಮೂರೂ ಸೋದರರೊಂದಿಗೆ ಶ್ರೀಸೀತಾರಾಮರನ್ನು ಆವಾಹನೆ, ಷೋಡಶೋಪಚಾರ ಪೂಜೆ, ಧ್ಯಾನ ಮಾಡಬೇಕು. ಅನಂತರ ಪಾರಾಯಣೆಯನ್ನು ಪ್ರಾರಂಭಿಸಬೇಕು. ಎಲ್ಲರ ಆವಾಹನೆ, ಪೂಜೆ, ಧ್ಯಾನ ಮಂತ್ರಗಳು ಕ್ರಮಶಃ ಕೆಳಗೆ ಕೊಡಲಾಗಿದೆ –

## ಆವಾಹನ ಮಂತ್ರಗಳು –

ತುಲಸೀಕ ನಮಸ್ತುಭ್ಯಂ ಇಹಾಗಚ್ಛ ಶುಚಿವ್ರತ । ನೈಋತ್ಯ ಉಪವಿಶ್ಯೇದಂ ಪೂಜನಂ ಪ್ರತಿಗೃಹ್ಯತಾಮ್ ॥ ೧ ॥

ಓಂ ತುಲಸೀದಾಸಾಯ ನಮಃ ॥

ಶ್ರೀವಾಲ್ಮೀಕ ನಮಸ್ತುಭ್ಯಂ ಇಹಾಗಚ್ಛ ಶುಭಪ್ರದ । ಉತ್ತರಪೂರ್ವಯೋರ್ಮಧ್ಯೇ ತಿಷ್ಠ ಗೃಹ್ಣೀಷ್ವ ಮೇಽರ್ಚನಮ್ ॥ ೨ ॥

ಓಂ ವಾಲ್ಮೀಕಾಯ ನಮಃ ॥

ಗೌರೀಪತೇ  ನಮಸ್ತುಭ್ಯಂ ಇಹಾಗಚ್ಛ ಮಹೇಶ್ವರ । ಪೂರ್ವದಕ್ಷಿಣಯೋರ್ಮಧ್ಯೇ ತಿಷ್ಠ ಪೂಜಾಂ ಗೃಹಾಣ ಮೇ ॥ ೩ ॥

ಓಂ ಗೌರೀಪತಯೇ ನಮಃ ॥

ಶ್ರೀಲಕ್ಷ್ಮಣ ನಮಸ್ತುಭ್ಯಂ ಇಹಾಗಚ್ಛ ಸಹಪ್ರಿಯಃ । ಯಾಮ್ಯಭಾಗೇ ಸಮಾತಿಷ್ಠ ಪೂಜನಂ ಸಂಗೃಹಾಣ ಮೇ ॥ ೪ ॥

ಓಂ ಶ್ರೀಸಪತ್ನೀಕಾಯ ಲಕ್ಷ್ಮಣಾಯ ನಮಃ ॥

ಶ್ರೀಶತ್ರುಘ್ನ ನಮಸ್ತುಭ್ಯಂ ಇಹಾಗಚ್ಛ ಸಹಪ್ರಿಯಃ । ಪೀಠಸ್ಯ ಪಶ್ಚಿಮೇ ಭಾಗೇ ಪೂಜನಂ ಸ್ವೀಕುರುಷ್ವಮೇ ॥ ೫ ॥

ಓಂ ಶ್ರೀಸಪತ್ನೀಕಾಯ ಶತ್ರುಘ್ನಾಯ ನಮಃ ॥

ಶ್ರೀಭರತ ನಮಸ್ತುಭ್ಯಂ ಇಹಾಗಚ್ಛ ಸಹಪ್ರಿಯಃ । ಪೀಠಕಸ್ಯೋತ್ತರೇ ಭಾಗೇ ತಿಷ್ಠ ಪೂಜಾಂ ಗೃಹಾಣ ಮೇ ॥ ೬ ॥

ಓಂ ಶ್ರೀಸಪತ್ನೀಕಾಯ ಭರತಾಯ ನಮಃ ॥

ಶ್ರೀಹನುಮನ್ ನಮಸ್ತುಭ್ಯಂ ಇಹಾಗಚ್ಛ ಕೃಪಾನಿಧೇ । ಪೂರ್ವಭಾಗೇ ಸಮಾತಿಷ್ಠ ಪೂಜನಂ ಸ್ವೀಕುರು ಪ್ರಭೋ ॥ ೭ ॥

ಓಂ ಶ್ರೀಹನುಮತೇ ನಮಃ ॥

ಅಥ ಪ್ರಧಾನಪೂಜಾ ಚ ಕರ್ತವ್ಯಾ ವಿಧಿಪೂರ್ವಕಮ್ । ಪುಷ್ಪಾಂಜಲಿಂ ಗೃಹೀತ್ವಾ ತು ಧ್ಯಾನಂ ಕುರ್ಯಾತ್ಪರಸ್ಯ ಚ ॥ ೮ ॥

ರಕ್ತಾಂಭೋಜದಲಾಭಿರಾಮನಯನಂ ಪೀತಾಂಬರಾಲಂಕೃತಂ
ಶ್ಯಾಮಾಗಂ ದ್ವಿಭುಜಂ ಪ್ರಸನ್ನವದನಂ ಶ್ರೀಸೀತಯಾ ಶೋಭಿತಮ್ ।
ಕಾರುಣ್ಯಾಮೃತಸಾಗರಂ ಪ್ರಿಯಗಣೈರ್ಭ್ರಾತ್ರಾದಿಭಿರ್ಭಾವಿತಂ
ವಂದೇ ವಿಷ್ಣುಶಿವಾದಿ ಸೇವ್ಯಮನಿಶಂ ಭಕ್ತೇಷ್ಟಸಿದ್ಧಿಪ್ರದಮ್ ॥ ೯ ॥

ಆಗಚ್ಛ ಜಾನಕೀನಾಥ ಜಾನಕ್ಯಾ ಸಹ ರಾಘವ । ಗೃಹಾಣ ಮಮ ಪೂಜಾಂ ಚ ವಾಯುಪುತ್ರಾದಿಭಿರ್ಯುತಃ ॥ ೧೦ ॥

ಇತ್ಯಾವಾಹನಂ ॥

ಸುವರ್ಣರಚಿತಂ ರಾಮ ದಿವ್ಯಾಸ್ತರಣ ಶೋಭಿತಮ್ । ಆಸನಂ ಹಿ ಮಯಾ ದತ್ತಂ ಗೃಹಾಣ ಮಣಿಚಿತ್ರಿತಮ್ ॥ ೧೧ ॥

ಇತಿ ಷೋಡಶೋಪಚಾರೈಃ ಪೂಜಯೇತ್ ॥

ಓಂ ಅಸ್ಯ ಶ್ರೀಮನ್ಮಾನಸರಾಮಾಯಣ ಶ್ರೀರಾಮಚರಿತಸ್ಯ ಶ್ರೀಶಿವಕಾಕಭುಶುಂಡಿ ಯಾಜ್ಞ್ಯವಲ್ಕ್ಯ ಗೋಸ್ವಾಮಿತುಲಸೀದಾಸಾ ಋಷಯಃ। ಶ್ರೀಸೀತಾರಾಮೋ ದೇವತಾ । ಶ್ರೀರಾಮನಾಮ ಬೀಜಮ್ । ಭವರೋಗಹರೀ ಭಕ್ತಿಃ ಶಕ್ತಿಃ । ಮಮ ನಿಯಂತ್ರಿತಾಶೇಷವಿಘ್ನತಯಾ ಶ್ರೀಸೀತಾರಾಮಪ್ರೀತಿಪೂರ್ವಕ ಸಕಲ ಮನೋರಥ ಸಿದ್ಧ್ಯರ್ಥಂ ಪಾಠೇ ವಿನಿಯೋಗಃ ॥

## ಅಥ ಆಚಮನಮ್

ಶ್ರೀಸೀತಾರಾಮಾಭ್ಯಾಂ ನಮಃ । ಶ್ರೀರಾಮಚಂದ್ರಾಯ ನಮಃ । ಶ್ರೀರಾಮಭದ್ರಾಯ ನಮಃ ॥
ಇತಿ ಮಂತ್ರತ್ರಿತಯೇನ ಆಚಮನಂ ಕುರ್ಯಾತ್ । ಶ್ರೀಯುಗಳ ಬೀಜಮಂತ್ರೇಣ ಪ್ರಾಣಾಯಾಮಂ ಕುರ್ಯಾತ್ ॥

## ಅಥ ಕರನ್ಯಾಸಃ

ಜಗಮಂಗಲ ಗುನ ಗ್ರಾಮ ರಾಮಕೇ । ದಾನಿ ಮುಕುತಿ ಧನ ಧರಮ ಧಾಮ ಕೇ ॥ ಅಂಗುಷ್ಠಾಭ್ಯಾಂ ನಮಃ ॥
ರಾಮ ರಾಮ ಕಹಿ ಜೇ ಜಮುಹಾಹೀಂ । ತಿನ್ಹಹಿ ನ ಪಾಪಪುಂಜ ಸಮುಹಾಹೀಂ ॥ ತರ್ಜನೀಭ್ಯಾಂ ನಮಃ ॥
ರಾಮ ಸಕಲ ನಾಮನ್ಹ ತೇ ಅಧಿಕಾ । ಹೊವು ನಾಥ ಅಘ ಖಗ ಗನ ಬಧಿಕಾ ॥ ಮಧ್ಯಮಾಭ್ಯಾಂ ನಮಃ ॥
ಉಮಾ ದಾರು ಜೋಷ್ಷಿತ ಕೀ ನಾಈಂ । ಸಬಹಿ ನಚಾವತ ರಾಮು ಗೋಸಾಈಂ ॥ ಅನಾಮಿಕಾಭ್ಯಾಂ ನಮಃ ॥
ಸನ್ಮುಖ ಹೋಇ ಜೀವ ಮೊಹಿ ಜಬಹೀಂ । ಜನ್ಮ ಕೋಟಿ ಅಘ ನಾಸಹಿಂ ತಬಹೀಂ ॥ ಕನಿಷ್ಠಿಕಾಭ್ಯಾಂ ನಮಃ ॥
ಮಾಮಭಿರಕ್ಷಯ ರಘುಕುಲ ನಾಯಕ । ಧೃತ ಬರ ಚಾಪ ರುಚಿರಕರ ಸಾಯಕ ॥ ಕರತಲಕರಪೃಷ್ಠಾಭ್ಯಾಂ ನಮಃ ॥

ಇತಿ ಕರನ್ಯಾಸಃ

## ಅಥ ಹೃದಯಾದಿನ್ಯಾಸಃ

ಜಗಮಂಗಲ ಗುನ ಗ್ರಾಮ ರಾಮಕೇ । ದಾನಿ ಮುಕುತಿ ಧನ ಧರಮ ಧಾಮ ಕೇ ॥ ಹೃದಯಾಯ ನಮಃ ॥
ರಾಮ ರಾಮ ಕಹಿ ಜೇ ಜಮುಹಾಹೀಂ । ತಿನ್ಹಹಿ ನ ಪಾಪಪುಂಜ ಸಮುಹಾಹೀಂ ॥ ಶಿರಸೇ ಸ್ವಾಹಾ ॥
ರಾಮ ಸಕಲ ನಾಮನ್ಹ ತೇ ಅಧಿಕಾ । ಹೊವು ನಾಥ ಅಘ ಖಗ ಗನ ಬಧಿಕಾ ॥ ಶಿಖಾಯೈ ವಷಟ್ ॥
ಉಮಾ ದಾರು ಜೋಷ್ಷಿತ ಕೀ ನಾಈಂ । ಸಬಹಿ ನಚಾವತ ರಾಮು ಗೋಸಾಈಂ ॥ ಕವಚಾಯ ಹುಮ್ ॥
ಸನ್ಮುಖ ಹೋಇ ಜೀವ ಮೊಹಿ ಜಬಹೀಂ । ಜನ್ಮ ಕೋಟಿ ಅಘ ನಾಸಹಿಂ ತಬಹೀಂ ॥ ನೇತ್ರಾಭ್ಯಾಂ ವೌಷಟ್ ॥
ಮಾಮಭಿರಕ್ಷಯ ರಘುಕುಲ ನಾಯಕ । ದೃತ ಬರ ಚಾಪ ರುಚಿರಕರ ಸಾಯಕ ॥ ಅಸ್ತ್ರಾಯ ಫಟ್ ॥

ಇತಿ ಹೃದಯಾದಿನ್ಯಾಸಃ ॥

## ಅಥ ಧ್ಯಾನಮ್

ಮಾಮವಲೋಕಯ ಪಂಕಜಲೋಚನ । ಕೃಪಾ ಬಿಲೋಕನಿ ಸೋಚ ಬಿಮೋಚನ ॥
ನೀಲ ತಾಮರಸ ಸ್ಯಾಮ ಕಾಮ ಅರಿ । ಹೃದಯಕಂಜ ಮಕರಂದ ಮಧುಪ ಹರಿ ॥
ಜಾತುಧಾನ ಬರೂಥ ಬಲ ಭಂಜನ । ಮುನಿ ಸಜ್ಜನ ರಂಜನ ಅಘ ಗಂಜನ ॥
ಭೂಸುರ ಸಸಿ ನವ ಬೃಂದ ಬಲಾಹಕ । ಅಸರನ ಸರನ ದೀನ ಜನ ಗಾಹಕ ॥
ಭುಜಬಲ ಬಿಪುಲ ಭಾರ ಮಹಿ ಖಂಡಿತ । ಖರ ದೂಷನ ಬಿರಾಧ ಬಧ ಪಂಡಿತ ॥
ರಾವನಾರಿ ಸುಖರೂಪ ಭೂಪಬರ । ಜಯ ದಸರಥ ಕುಲ ಕುಮುದ ಸುಧಾಕರ ॥
ಸುಜಸ ಪುರಾನ ಬಿದಿತ ನಿಗಮಾಗಮ । ಗಾವತ ಸುರ ಮುನಿ ಸಂತ ಸಮಾಗಮ ॥
ಕಾರುನೀಕ ಬ್ಯಲೀಕ ಮದ ಖಂಡನ । ಸಬ ಬಿಧಿ ಕುಸಲ ಕೋಸಲಾ ಮಂಡನ ॥
ಕಲಿ ಮಲ ಮಥನ ನಾಮ ಮಮತಾಹನ । ತುಲಸಿದಾಸಪ್ರಭು ಪಾಹಿ ಪ್ರನತ ಜನ ॥

❈ ❈ ❈

ಶ್ರೀಜಾನಕೀವಲ್ಲಭೋ ವಿಜಯತೇ

## ಶ್ರೀಜಾನಕೀಜೀವನಾಷ್ಟಕಮ್

ಆಲೋಕ್ಯ ಯಸ್ಯಾತಿಲಲಾಮಲೀಲಾಂ ಸದ್ಭಾಗ್ಯಭಾಜೌ ಪಿತರೌ ಕೃತಾರ್ಥೌ ।
ತಮರ್ಭಕಂ ದರ್ಪಕದರ್ಪಚೌರಂ ಶ್ರೀಜಾನಕೀಜೀವನಮಾನತೋಽಸ್ಮಿ ॥ ೧ ॥

ಶ್ರುತ್ವೈವ ಯೋ ಭೂಪತಿಮಾತ್ತವಾಚಂ ವನಂ ಗತಸ್ತೇನ ನ ನೋದಿತೋಽಪಿ ।
ತಂ ಲೀಲಯಾಹ್ಲಾದವಿಷಾದಶೂನ್ಯಂ ಶ್ರೀಜಾನಕೀಜೀವನಮಾನತೋಽಸ್ಮಿ ॥ ೨ ॥

ಜಟಾಯುಷೋ ದೀನದಶಾಂ ವಿಲೋಕ್ಯ ಪ್ರಿಯಾವಿಯೋಗಪ್ರಭವಂ ಚ ಶೋಕಮ್ ।
ಯೋ ವೈ ವಿಸಸ್ಮಾರ ತಮಾರ್ದ್ರಚಿತ್ತಂ ಶ್ರೀಜಾನಕೀಜೀವನಮಾನತೋಽಸ್ಮಿ ॥ ೩ ॥

ಯೋ ವಾಲಿನಾ ಧ್ವಸ್ತಬಲಂ ಸುಕಂಠಂ ನ್ಯಯೋಜಯದ್ರಾಜಪದೇ ಕಪೀನಾಮ್ ।
ತಂ ಸ್ವೀಯಸಂತಾಪಸುತಪ್ತಚಿತ್ತಂ ಶ್ರೀಜಾನಕೀಜೀವನಮಾನತೋಽಸ್ಮಿ ॥ ೪ ॥

ಯದ್ಧ್ಯಾನನಿರ್ಧೂತವಿಯೋಗವಹ್ನಿಃ ವಿದೇಹಬಾಲಾ ವಿಬುಧಾರಿವನ್ಯಾಮ್ ।
ಪ್ರಾಣಾಂದಧೇ ಪ್ರಾಣಮಯಂ ಪ್ರಭುಂ ತಂ ಶ್ರೀಜಾನಕೀಜೀವನಮಾನತೋಽಸ್ಮಿ ॥ ೫ ॥

ಯಸ್ಯಾತಿವೀರ್ಯಾಂಬುಧಿವೀಚಿರಾಜೌ ವಂಶ್ಯೈರಹೋ ವೈಶ್ರವಣೋ ವಿಲೀನಃ ।
ತಂ ವೈರಿವಿಧ್ವಂಸನಶೀಲಲೀಲಂ ಶ್ರೀಜಾನಕೀಜೀವನಮಾನತೋಽಸ್ಮಿ ॥ ೬ ॥

ಯದ್ರೂಪರಾಕೇಶಮಯೂಖಮಾಲಾನುರಂಜಿತಾ ರಾಜರಮಾಪಿ ರೇಜೇ ।
ತಂ ರಾಘವೇಂದ್ರ ವಿಬುಧೇಂದ್ರವಂದ್ಯಂ ಶ್ರೀಜಾನಕೀಜೀವನಮಾನತೋಽಸ್ಮಿ ॥ ೭ ॥

ಏವಂ ಕೃತಾ ಯೇನ ವಿಚಿತ್ರಲೀಲಾ ಮಾಯಾಮನುಷ್ಯೇಣ ನೃಪಚ್ಛಲೇನ ।
ತಂ ವೈ ಮರಾಲಂ ಮುನಿಮಾನಸಾನಾಂ ಶ್ರೀಜಾನಕೀ ಜೀವನಮಾನತೋಽಸ್ಮಿ ॥ ೮ ॥

## ಶ್ರೀರಾಮಸ್ತುತಿ

ಶ್ರೀರಾಮಚಂದ್ರ ಕೃಪಾಲು ಭಜು ಮನ ಹರಣ-ಭವ-ಭಯ ದಾರುಣಂ ।
ನವಕಂಜ-ಲೋಚನ ಕಂಜಮುಖ ಕರ-ಕಂಜ ಪದ-ಕಂಜಾರುಣಂ ॥ ೧ ॥

ಕಂದರ್ಪ ಅಗಣಿತ ಅಮಿತ ಛವಿ ನವ ನೀಲ ನೀರದ ಸುಂದರಂ ।
ಪಟ-ಪೀತ ಮಾನಹುँ ತಡಿತ ರುಚಿ ಶುಚಿ ನೌಮಿ ಜನಕಸುತಾವರಂ ॥ ೨ ॥

ಭಜು ದೀನಬಂಧು ದಿನೇಶ ದಾನವ-ದೈತ್ಯ-ವಂಶ ನಿಕಂದನಂ ।
ರಘುನಂದ ಆನಂದ-ಕಂದ ಕೋಸಲ ಚಂದ ದಸರಥ-ನಂದನಂ ॥ ೩ ॥

ಸಿರ ಮುಕುಟ ಕುಂಡಲ ತಿಲಕ ಚಾರು ಉದಾರ-ಅಂಗ ಬಿಭೂಷಣಂ ।
ಆಜಾನು-ಭುಜ ಶರ-ಚಾಪ-ಧರ ಸಂಗ್ರಾಮ-ಜಿತ ಖರದೂಷಣಂ ॥ ೪ ॥

ಇತಿ ವದತಿ ತುಲಸೀದಾಸ ಶಂಕರ-ಶೇಷ-ಮುನಿ-ಮನ-ರಂಜನಂ ।
ಮಮ ಹೃದಯ-ಕಂಜ ನಿವಾಸ ಕುರು, ಕಾಮಾದಿ-ಖಲ-ದಲ ಗಂಜನಂ ॥ ೫ ॥

* * *

ಸತ್ಯಂ ಶಿವಂ ಸುಂದರಮ್

ಶ್ರೀಗಣೇಶಾಯ ನಮಃ

ಶ್ರೀಜಾನಕೀವಲ್ಲಭೋ ವಿಜಯತೇ

## ಮಹಾಕವಿ ಶ್ರೀ ತುಲಸೀದಾಸ ವಿರಚಿತ

# ಶ್ರೀರಾಮಚರಿತಮಾನಸ

## ಪ್ರಥಮ ಸೋಪಾನ

## ಬಾಲಕಾಂಡ

## ಮಂಗಳಾಚರಣ

**ಶ್ಲೋಕ –ವರ್ಣಾನಾಮರ್ಥಸಂಘಾನಾಂ ರಸಾನಾಂ ಛಂದಸಾಮಪಿ ।**
**ಮಂಗಲಾನಾಂ ಚ ಕರ್ತಾರೌ ವಂದೇ ವಾಣೀವಿನಾಯಕೌ ॥ ೧ ॥**

ಸಮಸ್ತ ಅಕ್ಷರಗಳಿಗೆ, ಅರ್ಥಸಮೂಹಕ್ಕೆ, ನವರಸಗಳಿಗೆ, ವಿವಿಧ ಛಂದಸ್ಸುಗಳಿಗೆ ಇಡೀ ಜಗತ್ತಿಗೆ ಮಂಗಳಕರ್ತರಾದ ಶ್ರೀಸರಸ್ವತಿದೇವಿಗೆ ಮತ್ತು ಶ್ರೀವಿನಾಯಕನಿಗೆ ನಾನು ನಮಿಸುತ್ತೇನೆ. ॥ ೧ ॥

**ಭವಾನೀಶಂಕರೌ ವಂದೇ ಶ್ರದ್ಧಾವಿಶ್ವಾಸರೂಪಿಣೌ ।**
**ಯಾಭ್ಯಾಂ ವಿನಾ ನ ಪಶ್ಯಂತಿ ಸಿದ್ಧಾಃ ಸ್ವಾಂತಃಸ್ಥಮೀಶ್ವರಮ್ ॥ ೨ ॥**

ಯಾರ ಕೃಪೆಯಿಲ್ಲದೆ ಸಿದ್ಧಜನರು ತಮ್ಮ ಅಂತಃಕರಣದಲ್ಲಿರುವ ಪರಮಾತ್ಮನನ್ನು ಕಾಣಲಾರರೋ, ಅಂತಹ ಶ್ರದ್ಧೆ, ವಿಶ್ವಾಸರೂಪಿಗಳಾದ ಭವಾನೀಶಂಕರರಿಗೆ ನಾನು ವಂದಿಸುತ್ತೇನೆ. ॥ ೨ ॥

**ವಂದೇ ಬೋಧಮಯಂ ನಿತ್ಯಂ ಗುರುಂ ಶಂಕರರೂಪಿಣಮ್ ।**
**ಯಮಾಶ್ರಿತೋ ಹಿ ವಕ್ರೋಽಪಿ ಚಂದ್ರಃ ಸರ್ವತ್ರ ವಂದ್ಯತೇ ॥ ೩ ॥**

ಜ್ಞಾನಮಯನೂ, ನಿತ್ಯನೂ ಆದ ಶಂಕರರೂಪಿಯಾದ ಗುರುವಿಗೆ ವಂದನೆಗಳು. ಆತನನ್ನು ಆಶ್ರಯಿಸಿದ್ದರಿಂದ ವಕ್ರನಾದರೂ ಕೂಡ ಚಂದ್ರನು ಎಲ್ಲೆಡೆಯಲ್ಲಿ ವಂದ್ಯನಾಗಿದ್ದಾನೆ. ॥ ೩ ॥

**ಸೀತಾರಾಮಗುಣಗ್ರಾಮಪುಣ್ಯಾರಣ್ಯವಿಹಾರಿಣೌ ।**
**ವಂದೇ ವಿಶುದ್ಧವಿಜ್ಞಾನೌ ಕವೀಶ್ವರಕಪೀಶ್ವರೌ ॥ ೪ ॥**

ಶ್ರೀಸೀತಾರಾಮರ ಪವಿತ್ರಗುಣಗಳೆಂಬ ಪುಣ್ಯಾರಣ್ಯದಲ್ಲಿ ವಿಹರಿಸುತ್ತಿರುವ ವಿಶುದ್ಧ ವಿಜ್ಞಾನ ಸಂಪನ್ನರಾದ ಕವೀಶ್ವರ ವಾಲ್ಮೀಕಿ ಮತ್ತು ಕಪೀಶ್ವರ ಹನುಮಂತ ಇವರಿಗೆ ನಾನು ನಮಿಸುತ್ತೇನೆ. ॥ ೪ ॥

**ಉದ್ಭವಸ್ಥಿತಿಸಂಹಾರಕಾರಿಣೀಂ ಕ್ಲೇಶಹಾರಿಣೀಮ್ ।**
**ಸರ್ವಶ್ರೇಯಸ್ಕರೀಂ ಸೀತಾಂ ನತೋಽಹಂ ರಾಮವಲ್ಲಭಾಮ್ ॥ ೫ ॥**

ಸೃಷ್ಟಿ, ಸ್ಥಿತಿ ಮತ್ತು ಸಂಹಾರಕಾರಿಣಿಯೂ, ಕ್ಲೇಶಹಾರಿಣಿಯೂ ಹಾಗೂ ಎಲ್ಲ ಶ್ರೇಯಸ್ಸುಗಳನ್ನು ಉಂಟುಮಾಡುವವಳೂ ಆದ ಶ್ರೀರಾಮಚಂದ್ರನ ಪ್ರಿಯತಮೆಯಾದ ಸೀತಾಮಾತೆಗೆ ನಮಸ್ಕರಿಸುತ್ತೇನೆ. ॥ ೫ ॥

**ಯನ್ಮಾಯಾವಶವರ್ತಿ ವಿಶ್ವಮಖಿಲಂ ಬ್ರಹ್ಮಾದಿದೇವಾಸುರಾ**
**ಯತ್ ಸತ್ತ್ವಾದಮೃಷೈವ ಭಾತಿ ಸಕಲಂ ರಜ್ಜೌ ಯಥಾಹೇರ್ಭ್ರಮಃ ।**
**ಯತ್ಪಾದಪ್ಲವಮೇಕಮೇವ ಹಿ ಭವಾಂಭೋಧೇಸ್ತಿತೀರ್ಷಾವತಾಂ**
**ವಂದೇಽಹಂ ತಮಶೇಷಕಾರಣಪರಂ ರಾಮಾಖ್ಯಮೀಶಂ ಹರಿಮ್ ॥ ೬ ॥**

ಈ ಇಡೀ ಜಗತ್ತು, ಬ್ರಹ್ಮಾದಿದೇವತೆಗಳು, ರಾಕ್ಷಸರು ಯಾರ ಮಾಯೆಗೆ ಒಳಗಾಗಿದ್ದಾರೋ, ಯಾರ ಸತ್ತೆಯಿಂದ ಹಗ್ಗದಲ್ಲಿ ಹಾವಿನ ಭ್ರಮೆಯಂತೆ ಈ ದೃಶ್ಯಮಯ ಜಗತೆಲ್ಲವೂ ಸತ್ಯವೆಂದು ತೋರುತ್ತದೋ ಮತ್ತು ಭವಸಾಗರವನ್ನು ದಾಟಲು ಬಯಸುವವರಿಗೆ ಯಾರ ಏಕಮಾತ್ರ ಚರಣಗಳೇ ನಾವೆಯಂತಿದೆಯೋ ಆ ಎಲ್ಲ ಕಾರಣಗಳಿಗೂ ಪರಮ ಕಾರಣನಾದ ಪರಾತ್ಪರನಾದ ರಾಮಾಭಿಧಾನದಿಂದ ಸನ್ನುತನಾದ ಭಗವಾನ್ ಶ್ರೀಹರಿಯನ್ನು ನಾನು ವಂದಿಸುತ್ತೇನೆ. ॥ ೬॥

**ನಾನಾಪುರಾಣನಿಗಮಾಗಮಸಮ್ಮತಂ ಯದ್**
**ರಾಮಾಯಣೇ ನಿಗದಿತಂ ಕ್ವಚಿದನ್ಯತೋಽಪಿ ।**
**ಸ್ವಾಂತಃಸುಖಾಯ ತುಲಸೀ ರಘುನಾಥಗಾಥಾ-**
**ಭಾಷಾನಿಬಂಧಮತಿಮಂಜುಳಮಾತನೋತಿ ॥ ೭ ॥**

ನಾನಾವಿಧವಾದ ಪುರಾಣಗಳು, ವೇದಗಳು, ಆಗಮಗಳಿಗೆ ಸಮ್ಮತವಾದುದೂ, ಆದಿಕಾವ್ಯ ವಾಲ್ಮೀಕಿರಾಮಾಯಣದಲ್ಲಿ, ಅಧ್ಯಾತ್ಮರಾಮಾಯಣದಲ್ಲಿ ಹಾಗೂ ಬೇರೆಡೆಗಳಿಂದಲೂ ದೊರೆತ ಶ್ರೀರಘುನಾಥನ ಮಂಗಳಕಥೆಯನ್ನು ತುಲಸೀದಾಸರು ತನ್ನ ಅಂತಃಕರಣದ ಸುಖಕ್ಕಾಗಿ ಅತ್ಯಂತಮನೋಹರವಾದ ಜನಭಾಷೆಯಲ್ಲಿ ವಿಸ್ತಾರವಾಗಿ ಬಿತ್ತರಿಸುತ್ತಾರೆ. ॥ ೭ ॥

## ಪ್ರಾರ್ಥನೆ

**ಸೋರಠ –**

**ಜೋ ಸುಮಿರತ ಸಿಧಿ ಹೋಇ ಗನ ನಾಯಕ ಕರಿಬರ ಬದನ ।**
**ಕರಉ ಅನುಗ್ರಹ ಸೋಇ ಬುದ್ಧಿ ರಾಸಿ ಶುಭ ಗುನ ಸದನ ॥ ೧ ॥**

ಯಾರ ಸ್ಮರಣ ಮಾತ್ರದಿಂದ ಎಲ್ಲ ಕಾರ್ಯಗಳು ಸಿದ್ಧಿಸುವವೋ, ಗುಣಗಳಿಗೆ ಒಡೆಯನೂ, ಕರಿವರವದನನೂ, ಬುದ್ಧಿರಾಶಿಯೂ, ಶುಭಗುಣಸದನನೂ ಆದ ಗಜಾನನನು ನನ್ನನ್ನು ಅನುಗ್ರಹಿಸಲಿ. ॥ ೧ ॥

**ಮೂಕ ಹೋಇ ಬಾಚಾಲ ಪಂಗು ಚಢಇ ಗಿರಿಬರ ಗಹನ ।**
**ಜಾಸು ಕೃಪಾँ ಸೊ ದಯಾಲ ದ್ರವಉ ಸಕಲ ಕಲಿ ಮಲ ದಹನ ॥ ೨ ॥**

ಯಾರ ಕೃಪೆಯಿಂದ ಮೂಕನೂ ವಾಚಾಳಿಯಾಗುತ್ತಾನೋ, ಹೆಳವನೂ ದುರ್ಗಮ ಪರ್ವತವನ್ನು ಏರಬಲ್ಲವನಾಗುತ್ತಾನೋ ಅಂತಹ ಕಲಿಮಲದಹನನಾದ ಭಗವಂತನು ನಮಗೆ ದಯೆ ತೋರಲಿ. ॥ ೨ ॥

**ನೀಲ ಸರೋರುಹ ಸ್ಯಾಮ ತರುನ ಅರುನ ಬಾರಿಜ ನಯನ ।**
**ಕರಉ ಸೊ ಮಮ ಉರ ಧಾಮ ಸದಾ ಛೀರಸಾಗರ ಸಯನ ॥ ೩ ॥**

ನೀಲಸರೋರುಹ ಶ್ಯಾಮನೂ, ತರುಣ ಅರುಣ ಕಮಲ ನಯನನೂ, ಕ್ಷೀರಸಾಗರ ಶಾಯಿಯೂ ಆದ ಪ್ರಭು ನಾರಾಯಣನು ನನ್ನ ಹೃದಯದಲ್ಲಿ ನೆಲೆಸಲಿ. ॥ ೩ ॥

**ಕುಂದ ಇಂದು ಸಮ ದೇಹ ಉಮಾ ರಮನ ಕರುನಾ ಅಯನ ।**
**ಜಾಹಿ ದೀನ ಪರ ನೇಹ ಕರಉ ಕೃಪಾ ಮರ್ದನ ಮಯನ ॥ ೪ ॥**

ಕುಂದ ಕುಸುಮದಂತೆ, ಚಂದಿರನಂತೆ ಧವಳಾಂಗನೂ, ಉಮಾರಮಣನೂ, ಕರುಣಾಧಾಮನೂ, ದೀನ ಜನ ವತ್ಸಲನೂ, ಮದನಮರ್ದನನೂ ಆದ ಭಗವಾನ್ ಶಂಕರನು ನನ್ನನ್ನು ಅನುಗ್ರಹಿಸಲಿ. ॥ ೪ ॥

# ಗುರುಸ್ತುತಿ

**ಬಂದಉ್ ಗುರು ಪದ ಕಂಜ ಕೃಪಾ ಸಿಂಧು ನರರೂಪ ಹರಿ ।**
**ಮಹಾಮೋಹ ತಮ ಪುಂಜ ಜಾಸು ಬಚನ ರಬಿ ಕರ ನಿಕರ ॥೫॥**

ಯಾರು ಕೃಪಾಸಮುದ್ರನೋ, ನರರೂಪದಲ್ಲಿರುವ ಶ್ರೀಹರಿಯೋ, ಯಾರ ವಚನಗಳು ಮಹಾಮೋಹರೂಪೀ ಗಾಢಾಂಧಕಾರವನ್ನು ನಾಶಮಾಡಲು ಸೂರ್ಯಕಿರಣ ಸಮೂಹದಂತೆ ಇವೆಯೇ, ಅಂತಹ ಶ್ರೀಗುರು ಪದ ಪಂಕಜವನ್ನು ನಾನು ವಂದಿಸುತ್ತೇನೆ. ॥೫॥

**ಚೌಪಾಈ –**

**ಬಂದಉ್ ಗುರು ಪದ ಪದುಮ ಪರಾಗಾ । ಸುರುಚಿ ಸುಬಾಸ ಸರಸ ಅನುರಾಗಾ ॥**
**ಅಮಿಅ ಮೂರಿಮಯ ಚೂರನ ಚಾರೂ । ಸಮನ ಸಕಲ ಭವ ರುಜ ಪರಿವಾರೂ ॥೧॥**
**ಸುಕೃತಿ ಸಂಭು ತನ ಬಿಮಲ ಬಿಭೂತೀ । ಮಂಜುಲ ಮಂಗಲ ಮೋದ ಪ್ರಸೂತೀ ॥**
**ಜನ ಮನ ಮಂಜು ಮುಕುರ ಮಲ ಹರನೀ । ಕಿಯೇಂ ತಿಲಕ ಗುನ ಗನ ಬಸ ಕರನೀ ॥೨॥**
**ಶ್ರೀಗುರ ಪದ ನಖ ಮನಿ ಗನ ಜೋತೀ । ಸುಮಿರತ ದಿಬ್ಯ ದೃಷ್ಟಿ ಹಿಯ್ ಹೋತೀ ॥**
**ದಲನ ಮೋಹ ತಮ ಸೋ ಸಪ್ರಕಾಸೂ । ಬಡೇ ಭಾಗ ಉರ ಆವಇ ಜಾಸೂ ॥೩॥**
**ಉಘರಹಿಂ ಬಿಮಲ ಬಿಲೋಚನ ಹೀ ಕೇ । ಮಿಟಹಿಂ ದೋಷ ದುಖ ಭವ ರಜನೀ ಕೇ ॥**
**ಸೂಝಹಿಂ ರಾಮ ಚರಿತ ಮನಿ ಮಾನಿಕ । ಗುಪುತ ಪ್ರಗಟ ಜಹ್ ಜೋ ಜೆಹಿ ಖಾನಿಕ ॥೪॥**

ಸುಗಂಧಿತವಾದ, ಸುರುಚಿಪೂರ್ಣ ಹಾಗೂ ಅನುರಾಗರಸ ಭರಿತವಾದ ಗುರುವಿನ ಚರಣರಜಕ್ಕೆ ವಂದಿಸುತ್ತೇನೆ. ಆ ಚರಣ ಧೂಳಿಯು ಸಂಜೀವನೀ ಮೂಲಿಕೆಯ ಚೂರ್ಣವಾಗಿದ್ದು, ಭವರೋಗಗಳ ಎಲ್ಲ ಪರಿವಾರಗಳನ್ನು ನಾಶಮಾಡುವಂಥಹುದಾಗಿದೆ.
ಆ ರಜವು ಸುಕೃತಿರೂಪೀ ಶಿವನ ಶರೀರದ ಮೇಲೆ ಕಂಗೊಳಿಸುವ ನಿರ್ಮಲ ವಿಭೂತಿಯಾಗಿದೆ. ಅದು ಸುಂದರ, ಕಲ್ಯಾಣ-ಆನಂದಗಳ ಜನನಿಯಾಗಿದೆ. ಭಕ್ತರ ಮನವೆಂಬ ಕನ್ನಡಿಯ ಮೇಲೆ ಕವಿಯುವ ಕೊಳೆಯನ್ನು ತೊಳೆಯುವಂತಹುದು. ಅದನ್ನು ಹಣೆಗೆ ಹಚ್ಚಿಕೊಂಡರೆ ಸದ್ಗುಣಗಳ ಸಮೂಹವನ್ನೇ ವಶಪಡಿಸಿಕೊಂಡಂತೆ ಇದೆ.
ಶ್ರೀ ಗುರುವಿನ ಚರಣನಖ ಜ್ಯೋತಿಯು ಮಣಿಗಳ ಪ್ರಭೆಯಂತೆ ಇದೆ. ಅದನ್ನು ಸ್ಮರಿಸುತ್ತಲೇ ಹೃದಯದಲ್ಲಿ ದಿವ್ಯ ದೃಷ್ಟಿಮೂಡುತ್ತದೆ. ಆ ಪ್ರಕಾಶವು ಅಜ್ಞಾನವೆಂಬ ಕತ್ತಲೆಯನ್ನು ತೊಡೆದು ಹಾಕುತ್ತದೆ. ಅದು ಹೃದಯದಲ್ಲಿ ಮೂಡಿದವನೇ ನಿಜವಾದ ಧನ್ಯನು. ಅದು ಮೂಡುತ್ತಲೇ ಹೃದಯದ ನಿರ್ಮಲ ನೇತ್ರಗಳು ತೆರೆಯುತ್ತವೆ. ಸಂಸಾರವೆಂಬ ಕತ್ತಲೆಯ ದೋಷ-ದುಃಖಗಳು ಅಳಿದುಹೋಗುತ್ತದೆ. ಇದರಿಂದ ಶ್ರೀರಾಮಚಂದ್ರರೂಪೀಮಣಿ-ಮಾಣಿಕ್ಯಗಳು ಗುಪ್ತವಾಗಿರಲಿ, ಪ್ರಕಟವಾಗಿರಲಿ, ಎಲ್ಲಿ ಯಾವ ಗಣಿಗಳಲ್ಲಿ ಇವೆ ಯೆಂಬುದು ಬೆಳ್ಳಂಬೆಳಕಾಗಿ ಕಾಣುತ್ತವೆ. (ಚೌ-೧-೪)

**ದೋಹಾ –**

**ಜಥಾ ಸುಅಂಜನ ಅಂಜಿ ದೃಗ ಸಾಧಕ ಸಿದ್ಧ ಸುಜಾನ ।**
**ಕೌತುಕ ದೇಖತ ಸೈಲ ಬನ ಭೂತಲ ಭೂರಿ ನಿಧಾನ ॥೧॥**

ಸಿದ್ಧ ಅಂಜನವನ್ನು ಕಣ್ಣಿಗೆ ಹಚ್ಚಿಕೊಂಡು ಸಾಧಕರು, ಸಿದ್ಧರು, ಜ್ಞಾನಿಗಳು, ಕಾಡು,ಮೇಡು ಮತ್ತು ಪೊಡವಿಯ ಒಡಲಿನಲ್ಲಿರುವರತ್ನದ ಗಣಿಗಳನ್ನೆ ಕಾಣುತ್ತಾರೆ. (ದೊ/೧)

**ಚೌ – ಗುರು ಪದ ರಜ ಮೃದು ಮಂಜುಲ ಅಂಜನ । ನಯನ ಅಮಿಅ ದೃಗ ದೋಷ ಬಿಭಂಜನ ॥**
**ತೆಹಿಂ ಕರಿ ಬಿಮಲ ಬಿಬೇಕ ಬಿಲೋಚನ । ಬರನಉ್ ರಾಮ ಚರಿತ ಭವ ಮೋಚನ ॥೧॥**
**ಬಂದಉ್ ಪ್ರಥಮ ಮಹೀಸುರ ಚರನಾ । ಮೋಹ ಜನಿತ ಸಂಸಯ ಸಬ ಹರನಾ ॥**
**ಸುಜನ ಸಮಾಜ ಸಕಲ ಗುನ ಖಾನೀ । ಕರಉ್ ಪ್ರನಾಮ ಸಪ್ರೇಮ ಸುಬಾನೀ ॥೨॥**

ಶ್ರೀಗುರುಪದರಜವು ಕೋಮಲ ಮತ್ತು ಸುಂದರ ನಯನಾಮೃತ ಅಂಜನವಾಗಿದೆ. ಆದರಿಂದ ಕಣ್ಣುಗಳ ದೋಷಗಳು ದೂರವಾಗುತ್ತವೆ. ಆ ಅಂಜನದಿಂದ ವಿವೇಕವೆಂಬ ಕಣ್ಣುಗಳನ್ನು ನಿರ್ಮಲಗೊಳಿಸಿ, ನಾನು ಸಂಸಾರ ಬಂಧನದಿಂದ ಬಿಡುಗಡೆ ಹೊಂದುವ ಶ್ರೀರಾಮಚರಿತವನ್ನು ವರ್ಣಿಸುತ್ತೇನೆ.

ಮೊಟ್ಟಮೊದಲು ಭೂಸುರರಾದ ಬ್ರಾಹ್ಮಣರ ಚರಣಗಳಲ್ಲಿ ವಂದಿಸುತ್ತೇನೆ. ಅವರು ಅಜ್ಞಾನಜನ್ಯವಾದ ಸಂದೇಹಗಳನ್ನೆಲ್ಲ ಕಳೆಯುವಂತಹವರಾಗಿದ್ದಾರೆ. ಅನಂತರ ಸಕಲಗುಣಗಳ ಗಣಿಯಾದ ಸಂತರ ಸಮೂಹಕ್ಕೆ ಪ್ರೇಮದಿಂದ ಸುಂದರವಾಣಿಯಿಂದ ನಮಸ್ಕರಿಸುತ್ತೇನೆ. (ಚೌ/೧-೨)

## ಸಂತರ ಮಹಿಮೆ

**ಸಾಧು ಚರಿತ ಸುಭ ಚರಿತ ಕಪಾಸೂ । ನಿರಸ ಬಿಸದ ಗುನಮಯ ಫಲ ಜಾಸೂ ॥**
**ಜೋ ಸಹಿ ದುಖ ಪರಛಿದ್ರ ದುರಾವಾ । ಬಂದನೀಯ ಜೆಹಿಂ ಜಗ ಜಸ ಪಾವಾ ॥ ೩ ॥**
**ಮುದ ಮಂಗಲಮಯ ಸಂತ ಸಮಾಜೂ । ಜೋ ಜಗ ಜಂಗಮ ತೀರಥರಾಜೂ ॥**
**ರಾಮ ಭಕ್ತಿ ಜಹಂ ಸುರಸರಿ ಧಾರಾ । ಸರಸಇ ಬ್ರಹ್ಮ ಬಿಚಾರ ಪ್ರಚಾರಾ ॥ ೪ ॥**
**ಬಿಧಿ ನಿಷೇಧಮಯ ಕಲಿಮಲ ಹರನೀ । ಕರಮ ಕಥಾ ರಬಿನಂದನಿ ಬರನೀ ॥**
**ಹರಿ ಹರ ಕಥಾ ಬಿರಾಜತಿ ಬೇನೀ । ಸುನತ ಸಕಲ ಮುದ ಮಂಗಲ ದೇನೀ ॥ ೫ ॥**
**ಬಟು ಬಿಸ್ವಾಸ ಅಚಲ ನಿಜ ಧರಮಾ । ತೀರಥರಾಜ ಸಮಾಜ ಸುಕರಮಾ ॥**
**ಸಬಹಿ ಸುಲಭ ಸಬ ದಿನ ಸಬ ದೇಸಾ । ಸೇವತ ಸಾದರ ಸಮನ ಕಲೇಸಾ ॥ ೬ ॥**
**ಅಕಥ ಅಲೌಕಿಕ ತೀರಥರಾಊ । ದೇಇ ಸದ್ಯ ಫಲ ಪ್ರಗಟ ಪ್ರಭಾಊ ॥ ೭ ॥**

ಸಂತರ ಜೀವನವು ಹತ್ತಿಯಂತೆ ಬೆಳ್ಳಗೆ ಶುಭ್ರವಾಗಿದೆ. ಅದರ ಫಲವು ನೀರಸ, ವಿಶದ(ಸ್ವಚ್ಛ) ಹಾಗೂ ಗುಣಮಯ(ದಾರವುಳ್ಳದ್ದು)ವಾಗಿರುತ್ತದೆ. (ಸಂತರು ಅರಳೆಯಂತೆ ವಿಷಯಶುಷ್ಕರಾಗಿರುತ್ತಾರೆ. ಆದ್ದರಿಂದ ನೀರಸರು. ಹತ್ತಿಯು ಬೆಳ್ಳಗಿರುವಂತೆ ಸಂತರ ಹೃದಯವು ಅಜ್ಞಾನ ಮತ್ತು ಪಾಪವೆಂಬ ಅಂಧಕಾರದಿಂದ ರಹಿತವಾಗಿರುತ್ತದೆ. ಅದಕ್ಕಾಗಿ ಅದು ವಿಶದವಾಗಿದೆ. ಹತ್ತಿಯಲ್ಲಿ ಗುಣ(ತಂತು) ಇರುವಂತೆ ಸಂತರ ಬದುಕೂ ಸದ್ಗುಣಗಳ ಭಂಡಾರವಾಗಿದೆ. ಆದ್ದರಿಂದ ಅವರುಗುಣಮಯರಾಗಿದ್ದಾರೆ.) (ಹತ್ತಿಯದಾರವೂ ಸೂಜಿಯು ಮಾಡಿದ ಛಿದ್ರವನ್ನು ತನ್ನ ಶರೀರದಿಂದ ಮುಚ್ಚುತ್ತದೆ. ಅಥವಾ ಹತ್ತಿಯು ಬಿಡಿಸಿದಾಗ, ನೂಲುವಾಗ ಕಷ್ಟಗಳನ್ನು ಸಹಿಸಿಯೂ ವಸ್ತ್ರರೂಪದಿಂದ ಪರಿಣತವಾಗಿ ಬೇರೆಯವರ ಗೋಪನೀಯ ಸ್ಥಳವನ್ನು ಮುಚ್ಚುವಂತೆ) ಸಂತರು ಸ್ವತಃ ದುಃಖವನ್ನು ಸಹಿಸಿಕೊಂಡು ಬೇರೆಯವರ ಛಿದ್ರ(ದೋಷ)ಗಳನ್ನು ಮುಚ್ಚಿಬಿಡುತ್ತಾರೆ. ಅದರಿಂದ ಅವರು ಜಗತ್ತಿನಲ್ಲಿ ಯಶಸ್ಸನ್ನು ಪಡೆದಿದ್ದಾರೆ.

ಸಂತರ ಸಮಾಜವು ಆನಂದಮಯ ಹಾಗೂ ಕಲ್ಯಾಣಮಯವಾಗಿದೆ. ಅವರು ಜಗತ್ತಿನಲ್ಲಿ ನಡೆದಾಡುವ ತೀರ್ಥರಾಜರಾಗಿದ್ದಾರೆ. ಆ ಸಂತರೆಂಬ ಪ್ರಯಾಗದಲ್ಲಿ ರಾಮಭಕ್ತಿಯೆಂಬ ಗಂಗೆಯಧಾರೆ ಇದೆ. ಬ್ರಹ್ಮವಿಚಾರ ಪ್ರಚಾರವೆಂಬ ಸರಸ್ವತಿಯಿದೆ. ವಿಧಿ, ನಿಷೇಧಮಯವಾದ ಕರ್ಮಗಳ ಕಥೆಯೇ ಕಲಿಮಲಹಾರಿಯಾದ ರವಿತನಯೆ ಯಮುನೆಯಾಗಿದ್ದಾಳೆ. ಭಗವಾನ್ ವಿಷ್ಣು ಮತ್ತು ಶಂಕರರ ಕಥೆಗಳು ತ್ರಿವೇಣಿಯಂತೆ ಕಂಗೊಳಿಸುತ್ತವೆ. ಅವು ಶ್ರೋತೃಗಳಿಗೆ ಆನಂದವನ್ನು, ಶೇಯಸ್ಸನ್ನು ಕೊಡುವಂತಹುದಾಗಿದೆ. ಆ ಸಂತ ಸಮಾಜವೆಂಬ ಪ್ರಯಾಗದಲ್ಲಿ ಧರ್ಮದಲ್ಲಿರುವ ಅಚಲ ನಂಬಿಕೆಯೇ ಅಕ್ಷಯವಟ. ಶುಭಕರ್ಮಗಳೇ ಆ ತೀರ್ಥರಾಜನ ಪರಿವಾರ. ಅದು ಎಲ್ಲ ದೇಶ, ಎಲ್ಲ ಕಾಲಗಳಲ್ಲಿಯೂ, ಎಲ್ಲರಿಗೂ ಸಹಜವಾಗಿ ದೊರೆಯುವಂತಹುದು. ಆದರದಿಂದ ಅದನ್ನು ಸೇವಿಸಿದವರ ಕ್ಲೇಶಗಳನ್ನೆಲ್ಲ ತೊಡೆದುಹಾಕುವಂತಹುದು. ಆ ತೀರ್ಥರಾಜವು ಅಲೌಕಿಕ ಮತ್ತು ಬಣ್ಣಿಸಲಸದಳವಾಗಿದೆ ಹಾಗೂ ತತ್ಕ್ಷಣ ಫಲವನ್ನು ಕೊಡುವಂತಹುದಾಗಿದೆ. ಅದರ ಪ್ರಭಾವವು ಪ್ರತ್ಯಕ್ಷವಾಗಿದೆ. (ಚೌ/೩-೭)

**ದೋ – ಸುನಿ ಸಮುಝಹಿಂ ಜನ ಮುದಿತ ಮನ ಮಜ್ಜಹಿಂ ಅತಿ ಅನುರಾಗ ।**
**ಲಹಹಿಂ ಚಾರಿ ಫಲ ಅಛತ ತನು ಸಾಧು ಸಮಾಜ ಪ್ರಯಾಗ ॥ ೨ ॥**

ಈ ಸಂತ ಸಮಾಜವೆಂಬ ತೀರ್ಥರಾಜನ ಪ್ರಭಾವವನ್ನು ಹರ್ಷಚಿತ್ತರಾಗಿ ಕೇಳಿ ಅರ್ಥವಿಸುವವರು ಹಾಗೂ ಅತ್ಯಂತ ಪ್ರೇಮದಿಂದ ಅದರಲ್ಲಿ ಮುಳುಗು ಹಾಕುವವರು, ಈ ಶರೀರವು ಇರುವಾಗಲೇ ಧರ್ಮ, ಅರ್ಥ, ಕಾಮ,ಮೋಕ್ಷವೆಂಬ ಚತುರ್ವಿಧ ಪುರುಷಾರ್ಥಗಳನ್ನು ಪಡೆಯುತ್ತಾರೆ. (ದೋ/೨)

**ಚೌ – ಮಜ್ಜನ ಫಲ ಪೇಖಿಅ ತತಕಾಲಾ । ಕಾಕ ಹೋಹಿಂ ಪಿಕ ಬಕಉ ಮರಾಲಾ ॥**
**ಸುನಿ ಆಚರಜ ಕರೈ ಜನಿ ಕೋಈ । ಸತಸಂಗತಿ ಮಹಿಮಾ ನಹಿಂ ಗೋಈ ॥ ೧ ॥**

ಬಾಲಮೀಕ ನಾರದ ಘಟಜೋನೀ । ನಿಜ ನಿಜ ಮುಖನಿ ಕಹೀ ನಿಜ ಹೋನೀ ॥
ಜಲಚರ ಥಲಚರ ನಭಚರ ನಾನಾ । ಜೇ ಜಡ ಚೇತನ ಜೀವ ಜಹಾನಾ ॥ ೨ ॥
ಮತಿ ಕೀರತಿ ಗತಿ ಭೂತಿ ಭಲಾಈ । ಜಬ ಜೆಹಿಂ ಜತನ ಜಹಾಂ ಜೆಹಿಂ ಪಾಈ ॥
ಸೋ ಜಾನಬ ಸತ ಸಂಗ ಪ್ರಭಾಊ । ಲೋಕಹುಂ ಬೇದ ನ ಆನ ಉಪಾಊ ॥ ೩ ॥
ಬಿನು ಸತ ಸಂಗ ಬಿಬೇಕ ನ ಹೋಈ । ರಾಮ ಕೃಪಾ ಬಿನು ಸುಲಭ ನ ಸೋಈ ॥
ಸತಸಂಗತ ಮುದ ಮಂಗಲ ಮೂಲಾ । ಸೋಇ ಫಲ ಸಿಧಿ ಸಬ ಸಾಧನ ಫೂಲಾ ॥ ೪ ॥
ಸಠ ಸುಧರಹಿಂ ಸತಸಂಗತಿ ಪಾಈ । ಪಾರಸ ಪರಸ ಕುಧಾತ ಸುಹಾಈ ॥
ಬಿಧಿ ಬಸ ಸುಜನ ಕುಸಂಗತ ಪರಹೀಂ । ಫನಿ ಮನಿ ಸಮ ನಿಜ ಗುನ ಅನುಸರಹೀಂ ॥ ೫ ॥
ಬಿಧಿ ಹರಿ ಹರ ಕಬಿ ಕೋಬಿದ ಬಾನೀ । ಕಹತ ಸಾಧು ಮಹಿಮಾ ಸಕುಚಾನೀ ॥
ಸೋ ಮೋ ಸನ ಕಹಿ ಜಾತ ನ ಕೈಸೇಂ । ಸಾಕ ಬನಿಕ ಮನಿ ಗುನ ಗನ ಜೈಸೇಂ ॥ ೬ ॥

ಈ ಸಂತಸಮಾಜವೆಂಬ ತೀರ್ಥರಾಜದಲ್ಲಿ ಮಿಂದಕೂಡಲೇ ಇದರ ಫಲ ಕಂಡುಬರುತ್ತದೆ. ಕಾಗೆಯು ಕೋಗಿಲೆಯಾಗುತ್ತದೆ. ಕೊಕ್ಕರೆಯು ಹಂಸವಾಗಿತ್ತದೆ. ಇದನ್ನು ಕೇಳಿ ಯಾರೂ ಆಶ್ಚರ್ಯಚಕಿತರಾಗಬೇಕಿಲ್ಲ; ಏಕೆಂದರೆ, ಸತ್ಸಂಗದ ಮಹಿಮೆಯು ಸ್ಪಷ್ಟವಾಗಿದೆ. ವಾಲ್ಮೀಕಿಗಳು, ನಾರದರೂ, ಅಗಸ್ತ್ಯರೂ, ಮುಂತಾದವರು ತಮ್ಮ ಬಾಯಿಂದಲೇ ತಮ್ಮ ಜೀವನ ವೃತ್ತಾಂತವನ್ನು ಹೇಳಿಕೊಂಡಿದ್ದಾರೆ. ಜಲಚರ, ಸ್ಥಳಚರ, ನಭಚರವೇ ಮೊದಲಾದ ಈ ಜಗತ್ತಿನಲ್ಲಿರುವ ಜಡ-ಚೇತನ ಪದಾರ್ಥಗಳಲ್ಲಿ ಯಾರಾದರೂ, ಯಾವುದಾದರೂ ಸರಿ, ಎಲ್ಲಾದರೂ ಸರಿ, ಹೇಗಾದರೂ ಸರಿ, ಬುದ್ಧಿ, ಕೀರ್ತಿ, ಸದ್ಗತಿ, ಸಂಪತ್ತು ಹಾಗೂ ಶ್ರೇಯಸ್ಸನ್ನು ಪಡೆದಿರುವುದೇ ಆದರೆ, ಅವೆಲ್ಲವೂ ಸತ್ಸಂಗದ ಫಲವೆಂದೇ ತಿಳಿಯಬೇಕು. ಇವುಗಳನ್ನು ಪಡೆಯುವ ಬೇರೆ ಉಪಾಯವು ವೇದಗಳಲ್ಲಾಗಲೀ, ಶಾಸ್ತ್ರಗಳಲ್ಲಾಗಲೀ ಇಲ್ಲವೇ ಇಲ್ಲ.

ಸತ್ಸಂಗವಿಲ್ಲದೆ ವಿವೇಕ ಬರುವುದಿಲ್ಲ. ಶ್ರೀರಾಮನ ಕೃಪೆಯಿಲ್ಲದೆ ಆ ಸತ್ಸಂಗವು ಸುಲಭವಾಗಿ ದೊರಕದು. ಸತ್ಸಂಗವು ಆನಂದ ಮತ್ತು ಶ್ರೇಯೋಲಾಭಗಳಿಗೆ ಮೂಲವಾಗಿದೆ. ಸತ್ಸಂಗದ ಪ್ರಾಪ್ತಿಯೇ ಫಲವಾಗಿದೆ. ಉಳಿದ ಸಾಧನೆಗಳೆಲ್ಲ ಫಲಗಳಲ್ಲಿ ಮೊದಲು ಬಿಡುವ ಹೂವುಗಳಾಗಿವೆ. ದುಷ್ಟರೂ ಕೂಡ ಸತ್ಸಂಗದಿಂದ ಬದಲಾಗುತ್ತಾರೆ. ಪರಶು ಶಿಲೆಯಿಂದ ಕಬ್ಬಿಣವು ಚಿನ್ನವಾಗುವುದಿಲ್ಲವೇ? ಆದರೆ ದೈವಯೋಗದಿಂದ ಎಂದಾದರೂ ಸಂತ-ಸಜ್ಜನರು ಕುಸಂಗತಿಯಲ್ಲಿ ಬಿದ್ದರೂ ಅವರು ಅಲ್ಲಿಯೂ ಕೂಡ ಸರ್ಪದಮಣಿಯಂತೆ ತಮ್ಮ ಗುಣವನ್ನೇ ಮೆರೆಯುತ್ತಾರೆ.(ಅರ್ಥಾತ್- ಹಾವಿನ ಹೆಡೆಯಲ್ಲಿ ಇರುವ ಮಣಿಯು ಅದರ ವಿಷದ ಪ್ರಭಾವಕ್ಕೊಳಗಾಗದೆ, ತನ್ನ ಸಹಜ ಪ್ರಕಾಶವನ್ನು ಬಿಡುವುದಿಲ್ಲವೋ, ಹಾಗೆಯೇ ಸಂತ-ಸಜ್ಜನರು ದುಷ್ಟರ ಸಂಗದಲ್ಲಿದ್ದರೂ ಅವರ ಮೇಲೆ ದುಷ್ಟರ ಪ್ರಭಾವ ಬೀಳುವುದಿಲ್ಲ. ಅವರೇ ಬೇರೆಯವರಿಗೆ ಪ್ರಕಾಶವನ್ನು ನೀಡುತ್ತಿರುತ್ತಾರೆ.) ಬ್ರಹ್ಮಾ, ವಿಷ್ಣು, ಶಿವ ಇವರ ಹಾಗೂ ಕವಿಗಳ, ಕೋವಿದರ ವಾಣಿಯೂ ಕೂಡ ಸಂತ ಮಹಿಮೆಯನ್ನು ಬಣ್ಣಿಸಲು ಹಿಂಜರಿಯುತ್ತದೆ. ಹೀಗಿರುವಾಗ ಅದು ನನ್ನಿಂದ ಸಾಧ್ಯವಾದೀತೆ? ಕಾಯಿಪಲ್ಲೆಗಳನ್ನು ಮಾರುವವನು ರತ್ನಗಳ ಗುಣಗಳನ್ನು ವರ್ಣಿಸಬಲ್ಲನೇ? (ಚೌ/೧-೬)

**ದೋ – ಬಂದಉಂ ಸಂತ ಸಮಾನ ಚಿತ ಹಿತ ಅನಹಿತ ನಹಿಂ ಕೋಇ ।**
**ಅಂಜಲಿ ಗತ ಸುಭ ಸುಮನ ಜಿಮಿ ಸಮ ಸುಗಂಧ ಕರ ದೋಇ ॥ ೩ (ಕ) ॥**
**ಸಂತ ಸರಲ ಚಿತ ಜಗತ ಹಿತ ಜಾನಿ ಸುಭಾಉ ಸನೇಹು ।**
**ಬಾಲಬಿನಯ ಸುನಿ ಕರಿ ಕೃಪಾ ರಾಮ ಚರನ ರತಿ ದೇಹು ॥ ೩ (ಖ) ॥**

ಚಿತ್ತದಲ್ಲಿ ಸಮತ್ವವಿರುವವರೂ, ಶತ್ರು-ಮಿತ್ರರು ಯಾರೂ ಇಲ್ಲದವರೂ ಆದ ಸಂತರಿಗೆ ನಾನು ನಮಿಸುತ್ತೇನೆ. ಬೊಗಸೆಯಲ್ಲಿರುವ ಸುಂದರ-ಸುಗಂಧಿತ ಹೂವುಗಳು ಕೊಯ್ದ ಕೈ ಹಾಗೂ ಕಾಪಾಡಿದ ಕೈ ಎರಡನ್ನೂ ಸಮಾನರೀತಿಯಿಂದ ಸುಗಂಧಿತಗೊಳಿಸುವಂತೆ, ಸಂತರು ಶತ್ರು-ಮಿತ್ರರಿಬ್ಬರಿಗೂ ಸಮಾನವಾಗಿ ಶ್ರೇಯಸ್ಸನ್ನೇ ಬಯಸುತ್ತಾರೆ. ಸಂತರು ಸರಳಚಿತ್ತರೂ, ಜಗತ್ತಿನಹಿತೈಷಿಗಳೂ ಆಗಿದ್ದಾರೆ. ಅವರ ಈ ಸದ್ಭಾವವನ್ನು, ಸ್ನೇಹವನ್ನೂ ಮನಗಂಡು- ಎಲೈ ಸಜ್ಜನರೇ! ಶ್ರೀರಾಮಚರಣಕಮಲಗಳಲ್ಲಿ ಪ್ರೀತಿ ಉಂಟಾಗುವಂತೆ ಅನುಗ್ರಹಿಸಿರಿ ಎಂದು ಈ ಬಾಲಕನಾದ ತುಳಸೀದಾಸನು ಪ್ರಾರ್ಥಿಸಿಕೊಳ್ಳುವನು. (ದೋ/೩ ಕ, ಖ)

ಚೌ – ಬಹುರಿ ಬಂದಿ ಖಲ ಗನ ಸತಿಭಾಏಂ । ಜೆ ಬಿನು ಕಾಜ ದಾಹಿನೆಹು ಬಾಏಂ ॥
ಪರ ಹಿತ ಹಾನಿ ಲಾಭ ಜಿನ್ಹ ಕೇರೇಂ । ಉಜರೇಂ ಹರಷ ಬಿಷಾದ ಬಸೇರೇಂ ॥ ೧ ॥

ಹರಿ ಹರ ಜಸ ರಾಕೇಸ ರಾಹು ಸೇ । ಪರ ಅಕಾಜ ಭಟ ಸಹಸಬಾಹು ಸೇ ॥
ಜೇ ಪರ ದೋಷ ಲಖಹಿಂ ಸಹಸಾಖೀ । ಪರ ಹಿತ ಘೃತ ಜಿನ್ಹ ಕೇ ಮನ ಮಾಖೀ ॥ ೨ ॥
ತೇಜ ಕೃಸಾನು ರೋಷ ಮಹಿಷೇಸಾ । ಅಘ ಅವಗುಣ ಧನ ಧನೀ ಧನೇಸಾ ॥
ಉದಯ ಕೇತ ಸಮ ಹಿತ ಸಬಹೀ ಕೇ । ಕುಂಭಕರನ ಸಮ ಸೋವತ ನೀಕೇ ॥ ೩ ॥
ಪರ ಅಕಾಜು ಲಗಿ ತನು ಪರಿಹರಹೀಂ । ಜಿಮಿ ಹಿಮ ಉಪಲ ಕೃಷೀ ದಲಿ ಗರಹೀಂ ॥
ಬಂದಊಂ ಖಲ ಜಸ ಸೇಷ ಸರೋಷಾ । ಸಹಸ ಬದನ ಬರನಇ ಪರ ದೋಷಾ ॥ ೪ ॥
ಪುನಿ ಪ್ರನವಉಂ ಪೃಥುರಾಜ ಸಮಾನಾ । ಪರ ಅಘ ಸುನಇ ಸಹಸ ದಸ ಕಾನಾ ॥
ಬಹುರಿ ಸಕ್ರ ಸಮ ಬಿನವಉಂ ತೇಹೀ । ಸಂತತ ಸುರಾನೀಕ ಹಿತ ಜೇಹೀ ॥ ೫ ॥
ಬಚನ ಬಜ್ರ ಜೆಹಿ ಸದಾ ಪಿಆರಾ । ಸಹಸ ನಯನ ಪರ ದೋಷ ನಿಹಾರಾ ॥ ೬ ॥

ಈಗ ನಾನು ನಿರ್ಮಲ ಮನಸ್ಸಿನಿಂದ ದುಷ್ಟರನ್ನು ವಂದಿಸುತ್ತೇನೆ. ಇವರು ತಮಗೆ ಯಾವ ಪ್ರಯೋಜನವಿಲ್ಲದಿದ್ದರೂ, ತಮಗೆ ಹಿತವನ್ನು ಬಯಸುವವರಿಗೂ ಕೇಡು ಬಗೆಯುತ್ತಾರೆ. ಪರರ ಹಿತದ ಹಾನಿಯೇ ಅವರಿಗೆ ಲಾಭ. ಹೆರವರು ಹಾಳಾದರೆ ಅವರು ಸಂತೋಷಪಡುವರು. ಉನ್ನತಿ ಪಡೆದರೆ ದುಃಖಿಸುವರು. ಇವರು ಹರಿ-ಹರರ ಯಶಸ್ಸೆಂಬ ಪೂರ್ಣಚಂದ್ರನಿಗೆ ರಾಹುವಿನಂತಿದ್ದಾರೆ.(ಅರ್ಥಾತ್- ಭಗವಾನ್ ವಿಷ್ಣುವಿನ, ಶಂಕರನ, ಸತ್‌ಕೀರ್ತನೆ, ಸತ್ಕಥೆ ನಡೆಯುವಲ್ಲಿ ಇವರು ತೊಂದರೆ ಕೊಡುತ್ತಾರೆ.) ಇತರರಿಗೆ ಕೇಡು ಬಗೆಯುವುದರಲ್ಲಿ ಇವರು ಸಹಸ್ರಬಾಹುವಿಂತೆ ವೀರರು. ಬೇರೆಯವರ ದೋಷಗಳನ್ನು ಸಾವಿರ ಕಣ್ಣುಗಳಿಂದ ನೋಡುತ್ತಾರೆ. ಇತರರ ಹಿತವೆಂಬ ತುಪ್ಪಕ್ಕೆ ಇವರ ಮನಸ್ಸು ನೊಣದಂತೆ ಇದೆ. ಅಂದರೆ ನೊಣವು ತುಪ್ಪದಲ್ಲಿ ಬಿದ್ದು ತಾನು ಸತ್ತು, ತುಪ್ಪವನ್ನೂ ಹಾಳುಮಾಡುವಂತೆ, ದುಷ್ಟರು ತಮಗೆ ಕೇಡು ಬಂದರೂ ಚಿಂತೆಯಿಲ್ಲ, ಇತರರು ಮಾಡಿದುದನ್ನು ಕೆಡಿಸುತ್ತಾರೆ. ಇವರು ಇತರರನ್ನು ಉರಿಸುವ ತಾಪದಲ್ಲಿ ಅಗ್ನಿಯಂತೆ ತೀಕ್ಷ್ಣರು, ಕ್ರೋಧದಲ್ಲಿ ಯಮರಾಯನಿಗೆ ಸಮರು. ಪಾಪ-ದುರ್ಗುಣಗಳೆಂಬ ಧನದಲ್ಲಿ ಕುಬೇರನಂತೆ ಶ್ರೀಮಂತರು. ಇವರ ಏಳಿಗೆ, ಎಲ್ಲರ ಹಿತವನ್ನು ಹಾಳುಮಾಡುವ ಧೂಮಕೇತುವಿನಂತೆ. ಕುಂಭಕರ್ಣರಂತೆ ಇವರು ಮಲಗಿರುವುದೇ ಲೋಕಕ್ಕೆ ಒಳ್ಳೆಯದು. ಹೊಲದಲ್ಲಿ ಪೈರಿನ ಮೇಲೆ ಬಿದ್ದ ಆಲಿಕಲ್ಲು ಬೆಳೆಯನ್ನು ನಾಶಮಾಡಿ ತಾನೂ ಕರಗಿ ಹೋಗುವಂತೆ, ಇವರೂ ಇತರರಿಗೆ ತೊಂದರೆ ಕೊಡಲು ತಮ್ಮ ಶರೀರವನ್ನೇ ತ್ಯಾಗಮಾಡುತ್ತಾರೆ. ಸಾವಿರ ಬಾಯಿಗಳುಳ್ಳ ಆದಿಶೇಷನೆಂದು ಬಗೆದು ನಾನು ಅವರಿಗೆ ನಮಿಸುತ್ತೇನೆ; ಏಕೆಂದರೆ ಇವರು ಪರರ ದೋಷಗಳನ್ನು ಸಾವಿರ ಬಾಯಿತುಂಬಾ ರೋಷಾವೇಷದಿಂದ ವರ್ಣಿಸುತ್ತಾರೆ. ಭಗವಂತನ ಗುಣಶ್ರವಣ ಮಾಡಲು ಹತ್ತು ಸಾವಿರ ಕಿವಿಗಳು ಬೇಕೆಂದು ವರ ಬೇಡಿದ ಪೃಥುಚಕ್ರವರ್ತಿಯಂತೆ ಇವರನ್ನು ಭಾವಿಸಿ ನಾನು ಗೌರವಿಸುತ್ತೇನೆ. ಏಕೆಂದರೆ, ಇವರು ಹತ್ತುಸಾವಿರ ಕಿವಿಗಳಿಂದ ಇತರರ ಪಾಪಗಳನ್ನು ಕೇಳುತ್ತಿರುತ್ತಾರೆ. ಮತ್ತೆ ಇವರನ್ನು ಇಂದ್ರನಿಗೆ ಸಮಾನರೆಂದು ಬಗೆದು ವಂದಿಸುತ್ತೇನೆ. ದೇವೇಂದ್ರನಿಗೆ ಸುರಾನೀಕ ಎಂದರೆ, ದೇವಸೇನೆಯು ಪ್ರಿಯವಿರುವಂತೆ ಇವರಿಗೆ ಸುರಾ(ಮದ್ಯ)ಪಾನವು ಪ್ರಿಯ ಮತ್ತು ಹಿತಕಾರಿಯಾಗಿ ಕಾಣುತ್ತದೆ.ಇಂದ್ರನಿಗೆ ಕಠಿಣವಾದ ವಜ್ರಾಯುಧವು ಪ್ರಿಯವಿರುವಂತೆ ಇವರಿಗೆ ವಜ್ರಸಮಾನ ಕಟು ವಚನಗಳು ಯಾವಾಗಲೂ ಪ್ರಿಯವಾಗುತ್ತವೆ. ಇತರರ ದೋಷಗಳನ್ನು ನೋಡುವುದರಲ್ಲಿ ಇವರು ಸಹಸ್ರಾಕ್ಷರು. (ಚೌ/೧-೬)

**ದೋ – ಉದಾಸೀನ ಅರಿ ಮೀತ ಹಿತ ಸುನತ ಜರಹಿಂ ಖಲ ರೀತಿ ।**
**ಜಾನಿ ಪಾನಿ ಜುಗ ಜೋರಿ ಜನ ಬಿನತೀ ಕರಇ ಸಪ್ರೀತಿ ॥ ೪ ॥**

ದುಷ್ಟರು ತಮ್ಮ ಶತ್ರು, ಮಿತ್ರ, ಉದಾಸೀನ ಇವರಲ್ಲಿ ಯಾರ ಹಿತವನ್ನು ಸಹಿಸರು. ಕೇಳಿ ಉರಿದು ಬೀಳುತ್ತಾರೆ. ಇಂತಹ ಇವರ ರೀತಿಯನ್ನು ಅರಿತು ನಾನು ಪ್ರೇಮದಿಂದ, ವಿನಯದಿಂದ ಇವರನ್ನು ಕರಜೋಡಿಸಿ ವಿನಂತಿಸುತ್ತೇನೆ. (ದೊ/೪)

ಚೌ – ಮೈಂ ಅಪನೀ ದಿಸಿ ಕೀನ್ಹ ನಿಹೋರಾ । ತಿನ್ಹ ನಿಜ ಓರ ನ ಲಾಉಬ ಭೋರಾ ॥
ಬಾಯಸ ಪಲಿಅಹಿಂ ಅತಿ ಅನುರಾಗಾ । ಹೋಹಿಂ ನಿರಾಮಿಷ ಕಬಹುಂ ಕೀ ಕಾಗಾ ॥ ೧ ॥
ಬಂದಉಂ ಸಂತ ಅಸಜ್ಜನ ಚರನಾ । ದುಖಪ್ರದ ಉಭಯ ಬೀಚ ಕಛು ಬರನಾ ॥
ಬಿಛುರತ ಏಕ ಪ್ರಾನ ಹರಿ ಲೇಹೀಂ । ಮಿಲತ ಏಕ ದುಖ ದಾರುನ ದೇಹೀಂ ॥ ೨ ॥
ಉಪಜಹಿಂ ಏಕ ಸಂಗ ಜಗ ಮಾಹೀಂ । ಜಲಜ ಜೋಂಕ ಜಿಮಿ ಗುನ ಬಿಲಗಾಹೀಂ ॥
ಸುಧಾ ಸುರಾ ಸಮ ಸಾಧು ಅಸಾಧೂ । ಜನಕ ಏಕ ಜಗ ಜಲಧಿ ಅಗಾಧೂ ॥ ೩ ॥

**ಭಲ ಅನಭಲ ನಿಜ ನಿಜ ಕರತೂತೀ । ಲಹತ ಸುಜಸ ಅಪಲೋಕ ಬಿಭೂತೀ ॥**
**ಸುಧಾ ಸುಧಾಕರ ಸುರಸರಿ ಸಾಧೂ । ಗರಲ ಅನಲ ಕಲಿಮಲ ಸರಿ ಬ್ಯಾಧೂ ॥ ೪ ॥**
**ಗುನ ಅವಗುನ ಜಾನತ ಸಬ ಕೋಈ । ಜೋ ಜೆಹಿ ಭಾವ ನೀಕ ತೆಹಿ ಸೋಈ ॥ ೫ ॥**

ನಾನಾದರೋ ನನ್ನ ಪರವಾಗಿ ಬಿನ್ನಹ ಮಾಡಿಕೊಂಡಿದ್ದೇನೆ. ಆದರೆ ಅವರು ತಮ್ಮ ಚಾಳಿಯನ್ನು ಹೇಗೆ ಬಿಟ್ಟಾರು? ಕಾಗೆಯನ್ನು ತುಂಬಾ ಪ್ರೀತಿಯಿಂದ ಸಲಹಿದರೂ ಅದು ಮಾಂಸವನ್ನು ತೊರೆದೀತೆ? ಈಗ ನಾನು ಸಂತ ಹಾಗೂ ಅಸಂತ ಇಬ್ಬರಿಗೂ ನಮಸ್ಕರಿಸುತ್ತೇನೆ. ಇಬ್ಬರೂ ದುಃಖವನ್ನು ಉಂಟುಮಾಡುವವರು. ಆದರೆ ಅವರಲ್ಲಿ ಬಹಳಷ್ಟು ಅಂತರವಿದೆ. ಸಂತರು ಹೊರಟು ಹೋಗುವಾಗ ಪ್ರಾಣಗಳನ್ನೇ ಕಿತ್ತುಕೊಂಡು ಹೋಗುತ್ತಾರೆ. ಅಗಲಿಕೆಯ ದುಃಖವನ್ನು ಕೊಡುತ್ತಾರೆ. ಅಸಂತರು ಬರುವಾಗಲೇ ದುಃಖಕೊಡುತ್ತಾರೆ. ಎಂದರೆ ಸಂತರ ವಿಯೋಗ, ದುಷ್ಟರ ಸಂಯೋಗ ಎರಡೂ ಮರಣಾಂತಿಕವೇ. ಸಂತ-ಅಸಂತರಿಬ್ಬರೂ ಒಂದೇರೀತಿ ಒಟ್ಟಿಗೆ ಹುಟ್ಟುತ್ತಾರೆ. ಆದರೆ ಕೆಸರಿನಲ್ಲಿ ಕಮಲ ಮತ್ತು ಜಿಗಣೆ ಒತ್ತಟ್ಟಿಗೆ ಹುಟ್ಟಿದರೂ ಅವುಗಳ ಸ್ವಭಾವದಲ್ಲಿ ಅಂತರವಿರುತ್ತದೆ. ಕಮಲವೂ ದರ್ಶನೀಯವಾಗಿ ಆನಂದವೀಯುತ್ತದೆ. ಜಿಗಣೆ ರಕ್ತವನ್ನು ಹೀರಿ ದುಃಖಕೊಡುತ್ತದೆ. ಸಂತ-ಅಸಂತರ ಸ್ವಭಾವಗಳು ಬೇರೆ-ಬೇರೆಯಾಗಿವೆ. ಅಮೃತ ಮತ್ತು ಮದಿರೆ ಎರಡೂ ಸಮುದ್ರಮಂಥನದಿಂದಲೇ ಉದ್ಭವಿಸಿವೆ. ಆದರೆ ಸಂತರು ಆಮೃತದಂತೆ ಮೃತ್ಯುವಿನಿಂದ ಪಾರುಗೊಳಿ ಸುತ್ತಾರೆ.ಅಸಂತರು ಮದಿರೆಯಂತೆ ಮೋಹ, ಪ್ರಮಾದ, ಜಡತೆಯನ್ನು ಉಂಟುಮಾಡುತ್ತಾರೆ. ಇಬ್ಬರಿಗೂ ಜನ್ಮ ವೀಯುವ ಜಗತ್ತೆಂಬ ಅಗಾಧಸಮುದ್ರವೊಂದೇ. ಒಳ್ಳೆಯವರು, ಕೆಟ್ಟವರು ತಮ್ಮ-ತಮ್ಮ ಕರ್ಮಗಳನುಸಾರವಾಗಿ ಸತ್ಕೀರ್ತಿ ಹಾಗೂ ಅಪಕೀರ್ತಿಯನ್ನು ಗಳಿಸುತ್ತಾರೆ. ಸಾಧುಗಳ ಸ್ವಭಾವವು ಅಮೃತ, ಗಂಗಾನದಿ, ಚಂದ್ರ ಇವರಂತಿಗೆ. ದುಷ್ಟರ ಸ್ವಭಾವವು ವಿಷ, ಅಗ್ನಿ, ಕಲಿಪಾಪಗಳಿಂದೊಡಗೂಡಿದ ಕರ್ಮನಾಶನದಿಯಂತಿದೆ. ಇವರ ಗುಣಾವಗುಣ ಗಳು ಎಲ್ಲರಿಗೆ ತಿಳಿದೇ ಇದೆ. ಆದರೆ ಜನರು ತಮ್ಮ-ತಮ್ಮ ಅಭಿರುಚಿಯಂತೆ ಇವರನ್ನು ಆರಿಸಿಕೊಳ್ಳುತ್ತಾರೆ. (ಚೌ/೧-೫)

**ದೋ – ಭಲೋ ಭಲಾಇಹಿ ಪೈ ಲಹಇ ಲಹಇ ನಿಚಾಇಹಿ ನೀಚು ।**
**ಸುಧಾ ಸರಾಹಿಅ ಅಮರತಾ ಗರಲ ಸರಾಹಿಅ ಮೀಚು ॥ ೫ ॥**

ಸಜ್ಜನರು ಒಳ್ಳೆಯದನ್ನೇ ಆರಿಸಿಕೊಳ್ಳುತ್ತಾರೆ. ದುರ್ಜನರು ಕೆಟ್ಟದನ್ನೇ ಇಟ್ಟುಕೊಳ್ಳುತ್ತಾರೆ. ಅಮೃತವು ಅಮರತ್ವವನ್ನು ಕೊಡುವುದರಲ್ಲಿ ಪ್ರಸಿದ್ಧವಾದರೆ, ವಿಷವು ಕೊಲ್ಲುವುದರಲ್ಲಿ ಮಹತ್ವವಿರಿಸಿಕೊಳ್ಳುತ್ತದೆ. (ದೊ/೫)

**ಚೌ – ಖಲ ಅಘ ಅಗುನ ಸಾಧು ಗುನ ಗಾಹಾ । ಉಭಯ ಅಪಾರ ಉದಧಿ ಅವಗಾಹಾ ॥**
**ತೆಹಿ ತೇಂ ಕಛು ಗುನ ದೋಷ ಬಖಾನೇ । ಸಂಗ್ರಹ ತ್ಯಾಗ ನ ಬಿನು ಪಹಿಚಾನೇ ॥ ೧ ॥**
**ಭಲೆಉ ಪೋಚ ಸಬ ಬಿಧಿ ಉಪಜಾಏ । ಗನಿ ಗುನ ದೋಷ ಬೇದ ಬಿಲಗಾಏ ॥**
**ಕಹಹಿಂ ಬೇದ ಇತಿಹಾಸ ಪುರಾನಾ । ಬಿಧಿ ಪ್ರಪಂಚು ಗುನ ಅವಗುನ ಸಾನಾ ॥ ೨ ॥**
**ದುಖ ಸುಖ ಪಾಪ ಪುನ್ಯ ದಿನ ರಾತೀ । ಸಾಧು ಅಸಾಧು ಸುಜಾತಿ ಕುಜಾತೀ ॥**
**ದಾನವ ದೇವ ಊಂಚ ಅರು ನೀಚೂ । ಅಮಿಅ ಸುಜೀವನು ಮಾಹುರು ಮೀಚೂ ॥ ೩ ॥**
**ಮಾಯಾ ಬ್ರಹ್ಮ ಜೀವ ಜಗದೀಸಾ । ಲಚ್ಛಿ ಅಲಚ್ಛಿ ರಂಕ ಅವನೀಸಾ ॥**
**ಕಾಸೀ ಮಗ ಸುರಸರಿ ಕ್ರಮನಾಸಾ । ಮರು ಮಾರವ ಮಹಿದೇವ ಗವಾಸಾ ॥ ೪ ॥**
**ಸರಗ ನರಕ ಅನುರಾಗ ಬಿರಾಗಾ । ನಿಗಮಾಗಮ ಗುನ ದೋಷ ಬಿಭಾಗಾ ॥ ೫ ॥**

ದುರ್ಜನರ ಪಾಪಕೃತ್ಯಗಳು, ಅವಗುಣಗಳು, ಸಜ್ಜನರ ಸದ್ಗುಣಗಳು— ಇವೆರಡನ್ನು ತಿಳಿಸುವ ಕಥೆಗಳು ಅಪಾರವಾಗಿದ್ದು, ಆಳವರಿಯದ ಕಡಲಿನಂತಿವೆ. ಆದ್ದರಿಂದಲೇ ಸಜ್ಜನರ ಕೆಲವು ಗುಣಗಳನ್ನು, ದುರ್ಜನರ ಕೆಲವು ದೋಷಗಳನ್ನು ಇಲ್ಲಿ ವರ್ಣಿಸಿವೆ. ಏಕೆಂದರೆ, ಇವುಗಳ ಸ್ವಭಾವಜ್ಞಾನವಿಲ್ಲದೆ ಇವುಗಳನ್ನು ಸ್ವೀಕಾರ ಇಲ್ಲವೇ ತ್ಯಾಗ ಹೇಗೆಸಾಧ್ಯ? ಒಳ್ಳೆಯದು, ಕೆಟ್ಟದ್ದು ಇವೆರಡೂ ಬ್ರಹ್ಮಸೃಷ್ಟಿಯೇ. ಆದರೆ ಗುಣಯಾವುದು? ದೋಷಯಾವುದು? ಎಂಬುದನ್ನು ವಿವೇಚಿಸಿ ವೇದಗಳು ಇವನ್ನು ಬೇರೆ-ಬೇರೆಯಾಗಿ ವಿಂಗಡಿಸಿವೆ. ವೇದ,ಇತಿಹಾಸ, ಪುರಾಣಗಳ ಪ್ರಕಾರ ಈ ಸೃಷ್ಟಿಯು ಗುಣ ದೋಷಗಳಿಂದ ಸಮ್ಮಿಳಿತವಾಗಿದೆ. ಇಂತಹ ವೈರುಧ್ಯಗಳು ಸೃಷ್ಟಿಯಲ್ಲಿ ಅನಂತವಾಗಿವೆ. ಸುಖ-ದುಃಖ, ಪಾಪ-ಪುಣ್ಯ, ಹಗಲು-ಇರುಳು, ಸಾಧು-ಅಸಾಧು, ಸುಜಾತಿ-ಕುಜಾತಿ, ದೇವ-ದಾನವ, ಮೇಲು-ಕೀಳು, ಅಮೃತ-ವಿಷ, ಜೀವನ-ಮೃತ್ಯು, ಬ್ರಹ್ಮ-ಮಾಯೆ, ದೇವ-ಜೀವ, ಸಿರಿತನ-ಬಡತನ, ರಾಜ-ರಂಕ, ಕಾಶೀ-ಮಗಧ, ಗಂಗೆ-ಕರ್ಮನಾಶನದಿ, ಮಾರವಾಡ-ಮಾಳವ, ಬ್ರಾಹ್ಮಣ-ಕಟುಕ, ನಾಕ-ನರಕ, ವಿರಾಗ-ರಾಗ, ಮೊದಲಾದ ಈ ವೈವಿಧ್ಯಗಳು ಪ್ರಬಲವಾದ ನಿದರ್ಶನವು. ವೇದ ಶಾಸ್ತ್ರಗಳು ಇವುಗಳ ಗುಣ-ದೋಷಗಳನ್ನು ವಿಂಗಡಿಸಿ ವಿವರಿಸುತ್ತವೆ. (ಚೌ/೧-೫)

**ದೋ – ಜಡ ಚೇತನ ಗುನ ದೋಷಮಯ ಬಿಸ್ವ ಕೀನ್ಹ ಕರತಾರ ।**
**ಸಂತ ಹಂಸ ಗುನ ಗಹಹಿಂ ಪಯ ಪರಿಹರಿ ಬಾರಿ ಬಿಕಾರ ॥ ೬ ॥**

ವಿಧಾತನು ಈ ಜಡ-ಚೇತನ ವಿಶ್ವವನ್ನು ಗುಣದೋಷಮಯವಾಗಿ ಸೃಷ್ಟಿಸಿದ್ದಾನೆ. ಆದರೆ ಹಾಲು ನೀರು ಬೆರೆತಿರುವಾಗ ಹಂಸವು ಹಾಲನ್ನು ಮಾತ್ರ ಗ್ರಹಿಸಿ, ನೀರನ್ನು ತ್ಯಜಿಸುವಂತೆ ಸಂತರು-ಸಾಧುಗಳು ಗುಣಗಳೆಂಬ ಹಾಲನ್ನು ಗ್ರಹಿಸಿ, ದೋಷವೆಂಬ ನೀರನ್ನು ತ್ಯಜಿಸುತ್ತಾರೆ. (ದೋ/೬)

**ಚೌ – ಅಸ ಬಿಬೇಕ ಜಬ ದೇಇ ಬಿಧಾತಾ । ತಬ ತಜಿ ದೋಷ ಗುನಹಿಂ ಮನು ರಾತಾ ॥**
**ಕಾಲ ಸುಭಾಉ ಕರಮ ಬರಿಆಈಂ । ಭಲೆಉ ಪ್ರಕೃತಿ ಬಸ ಚುಕಇ ಭಲಾಈಂ ॥ ೧ ॥**
**ಸೋ ಸುಧಾರಿ ಹರಿಜನ ಜಿಮಿ ಲೇಹೀಂ । ದಲಿ ದುಖ ದೋಷ ಬಿಮಲ ಜಸು ದೇಹೀಂ ॥**
**ಖಲಉ ಕರಹಿಂ ಭಲ ಪಾಇ ಸುಸಂಗೂ । ಮಿಟಇ ನ ಮಲಿನ ಸುಭಾಉ ಅಭಂಗೂ ॥ ೨ ॥**
**ಲಖಿ ಸುಬೇಷ ಜಗ ಬಂಚಕ ಜೇಊ । ಬೇಷ ಪ್ರತಾಪ ಪೂಜಿಅಹಿಂ ತೇಊ ॥**
**ಉಘರಹಿಂ ಅಂತ ನ ಹೋಇ ನಿಬಾಹೂ । ಕಾಲನೇಮಿ ಜಿಮಿ ರಾವನ ರಾಹೂ ॥ ೩ ॥**
**ಕಿಏಹುಂ ಕುಬೇಷು ಸಾಧು ಸನಮಾನೂ । ಜಿಮಿ ಜಗ ಜಾಮವಂತ ಹನುಮಾನೂ ॥**
**ಹಾನಿ ಕುಸಂಗ ಸುಸಂಗತಿ ಲಾಹೂ । ಲೋಕಹುಂ ಬೇದ ಬಿದಿತ ಸಬ ಕಾಹೂ ॥ ೪ ॥**
**ಗಗನ ಚಢ಼ಇ ರಜ ಪವನ ಪ್ರಸಂಗಾ । ಕೀಚಹಿಂ ಮಿಲಇ ನೀಚ ಜಲ ಸಂಗಾ ॥**
**ಸಾಧು ಅಸಾಧು ಸದನ ಸುಕ ಸಾರೀಂ । ಸುಮಿರಹಿಂ ರಾಮ ದೇಹಿಂ ಗನಿ ಗಾರೀಂ ॥ ೫ ॥**
**ಧೂಮ ಕುಸಂಗತಿ ಕಾರಿಖ ಹೋಈ । ಲಿಖಿಅ ಪುರಾನ ಮಂಜು ಮಸಿ ಸೋಈ ॥**
**ಸೋಇ ಜಲ ಅನಲ ಅನಿಲ ಸಂಘಾತಾ । ಹೋಇ ಜಲದ ಜಗ ಜೀವನ ದಾತಾ ॥ ೬ ॥**

ಭಗವದನುಗ್ರಹದಿಂದ ಈ ತೆರನಾದ ನೀರ-ಕ್ಷೀರ ವಿವೇಕವನ್ನು ಪಡೆದವರು ದೋಷಗಳನ್ನು ತೊರೆದು, ಗುಣಗಳಲ್ಲಿ ಅನುರಕ್ತರಾಗುತ್ತಾರೆ. ಒಮ್ಮೊಮ್ಮೆ ಸಜ್ಜನರೂ ಕೂಡ ಮಾಯೆಯ ಬಲೆಗೆ ಬಿದ್ದು, ಕಾಲ,ಸ್ವಭಾವ, ಕರ್ಮಬಲದಿಂದ ಸನ್ಮಾರ್ಗದಿಂದ ದೂರವಾಗುತ್ತಾರೆ, ತಪ್ಪು ಮಾಡುತ್ತಾರೆ. ಭಗವದ್ಭಕ್ತರು ಈ ತಪ್ಪನ್ನು ತಿದ್ದುಕೊಂಡು, ದುಃಖ-ದೋಷಗಳನ್ನು ನಿವಾರಿಸಿಕೊಂಡು, ನಿರ್ಮಲ ಯಶಸ್ಸನ್ನು ಪಡೆದುಕೊಳ್ಳುವಂತೆ, ದುಷ್ಟರೂ ಕೂಡ ಒಮ್ಮೊಮ್ಮೆ ಉತ್ತಮ ಸತ್ಸಂಗದ ಪ್ರಭಾವದಿಂದ ಸತ್ಕರ್ಮಗಳನ್ನು ಆಚರಿಸುತ್ತಾರೆ. ಆದರೆ ಎಂದಿಗೂ ಭಂಗವಾಗದ ಅವರ ಮಲಿನ ಸ್ವಭಾವ ಮಾತ್ರ ತೊಲಗುವುದಿಲ್ಲ, ವೇಷಧಾರಿಗಳಾದ ವಂಚಕರನ್ನು ಅವರ ವೇಷನೋಡಿ ಮಾರುಹೋಗಿ ಜಗತ್ತು ಪೂಜಿಸುತ್ತದೆ. ಆದರೆ ಒಂದಲ್ಲ ಒಂದು ದಿನ ಅವರ ಬಣ್ಣ ಬಯಲಾಗುತ್ತದೆ. ಅವರ ಆಟ ಹೆಚ್ಚುದಿನ ನಡೆಯುವುದಿಲ್ಲ. ಕಾಲನೇಮಿ, ರಾವಣ, ರಾಹು ಮುಂತಾದವರ ವೃತ್ತಾಂತವೇ ಇದಕ್ಕೆ ಪ್ರಬಲನಿದರ್ಶನವು. ಸಾಮಾನ್ಯ ರೂಪವಿದ್ದು ಕೆಟ್ಟವೇಷ ತೊಟ್ಟಿದ್ದರೂ ಸಾಧುಗಳಿಗೆ ಗೌರವವೇ ದೊರೆಯುತ್ತದೆ. ಜಾಂಬವಂತ, ಹನುಮಂತರೇ ಇದಕ್ಕೆ ಉದಾಹರಣೆ. ದುಸ್ಸಂಗದಿಂದ ಪ್ರಮಾದ, ಸತ್ಸಂಗದಿಂದ ವರಪ್ರಸಾದ ಇದು ಲೋಕವಿದಿತವೂ, ವೇದಪ್ರಾಮಾಣಿಕವೂ ಆಗಿದೆ. ಗಾಳಿಯ ಸಂಗದಿಂದ ಧೂಳು ಹಾರಿ ಆಕಾಶವನ್ನು ಏರುತ್ತದೆ. ಆದರೆ ಅದೇ ಧೂಳು ಕೆಳಗೆ ಹರಿಯುವ ನೀರಿನ ಸಂಸರ್ಗದಿಂದ ಕೆಸರಾಗುತ್ತದೆ. ಸಾಧು ಸಜ್ಜನರ ಮನೆಯ ಗಿಳಿ, ಮೈನಾಹಕ್ಕಿಗಳು ರಾಮ-ರಾಮ ಎಂದು ಜಪಿಸುತ್ತವೆ. ದುರ್ಜನರ ಮನೆಯ ಪಕ್ಷಿಗಳು ಎಣಿಸಿ-ಎಣಿಸಿ ಬೈಗಳು ನುಡಿಯುತ್ತವೆ. ಕುಸಂಗದಿಂದ ಹೊಗೆಯು ಮಸಿ ಎನಿಸಿ ಕೊಳ್ಳುತ್ತದೆ. ಆದರೆ ಅದೇ ಹೊಗೆಯು ಸತ್ಸಂಗದಿಂದ ಸುಂದರ ಶಾಯಿಯಾಗಿ ಪುರಾಣ ಬರೆಯಲು ಸಹಕಾರಿಯಾಗುತ್ತದೆ.ಇದೇ ಹೊಗೆಯು ನೀರು,ಬೆಂಕಿ, ಗಾಳಿಯ ಸಂಗದಲ್ಲಿ ಮೋಡವಾಗಿ ಜಗತ್ತಿಗೆ ಜೀವದಾನ ನೀಡುತ್ತದೆ. (ಚೌ/೧-೬)

**ದೋ – ಗ್ರಹ ಭೇಷಜ ಜಲ ಪವನ ಪಟ ಪಾಇ ಕುಜೋಗ ಸುಜೋಗ ।**
**ಹೋಹಿಂ ಕುಬಸ್ತು ಸುಬಸ್ತು ಜಗ ಲಖಹಿಂ ಸುಲಚ್ಛನ ಲೋಗ ॥ ೭ (ಕ) ॥**
**ಸಮ ಪ್ರಕಾಸ ತಮ ಪಾಖ ದುಹುಂ ನಾಮ ಭೇದ ಬಿಧಿ ಕೀನ್ಹ ।**
**ಸಸಿ ಸೋಷಕ ಪೋಷಕ ಸಮುಝಿ ಜಗ ಜಸ ಅಪಜಸ ದೀನ್ಹ ॥ ೭ (ಖ) ॥**
**ಜಡ ಚೇತನ ಜಗ ಜೀವ ಜತ ಸಕಲ ರಾಮಮಯ ಜಾನಿ ।**
**ಬಂದಉಂ ಸಬ ಕೇ ಪದ ಕಮಲ ಸದಾ ಜೋರಿ ಜುಗ ಪಾನಿ ॥ ೭ (ಗ) ॥**

**ದೇವ ದನುಜ ನರ ನಾಗ ಖಗ ಪ್ರೇತ ಪಿತರ ಗಂಧರ್ಬ ।**
**ಬಂದಉಁ ಕಿನ್ನರ ರಜನಿಚರ ಕೃಪಾ ಕರಹು ಅಬ ಸರ್ಬ ॥ ೭ (ಘ) ॥**

ಗ್ರಹ, ಔಷಧಿ, ಜಲ, ವಾಯು, ವಸ್ತ್ರಇವೆಲ್ಲವೂ ಕುಸಂಗ ಹಾಗೂ ಸುಸಂಗವನ್ನು ಪಡೆದು ಜಗತ್ತಿನಲ್ಲಿ ಕೆಟ್ಟ-ಕುವಸ್ತುವಾಗಿಯೂ, ಇಲ್ಲವೇ ಒಳ್ಳೆಯ ಸುವಸ್ತುವಾಗಿ ಪರಿಣಮಿಸುತ್ತವೆ. ಚತುರಮತಿಗಳೂ, ವಿಚಾರಶೀಲರೂ ಈ ಲೋಕದ ಸತ್ಯವನ್ನು ಅರಿಯಬಲ್ಲರು. ತಿಂಗಳ ಎರಡೂ ಪಕ್ಷಗಳಲ್ಲಿ ಬೆಳಕು-ಕತ್ತಲೆಗಳು ಸಮಾನವಾಗಿರುತ್ತವೆ. ಆದರೆ ವಿಧಾತನು ಇವುಗಳ ಹೆಸರಿನಲ್ಲಿ ಭೇದಮಾಡಿದ್ದಾನೆ. ಒಂದನ್ನು ಶುಕ್ಲಪಕ್ಷವೆಂದು ಕರೆದರೆ, ಇನ್ನೊಂದನ್ನು ಕೃಷ್ಣಪಕ್ಷವೆಂದು ಹೇಳುವರು. ಜನರು- ಒಂದರಲ್ಲಿ ಚಂದ್ರನು ವರ್ಧಿಸುವುದರಿಂದ ಶುಕ್ಲಪಕ್ಷವೆಂದು ಹೊಗಳಿದರೆ, ಮತ್ತೊಂದರಲ್ಲಿ ಚಂದ್ರನು ಕ್ಷಯಿಸುವುದರಿಂದ ಕೃಷ್ಣಪಕ್ಷವೆಂದು ನಿಂದಿಸುತ್ತಾರೆ. ವಿಶ್ವದಲ್ಲಿರುವ ಎಲ್ಲ ಜಡ-ಚೇತನ ವಸ್ತುಗಳನ್ನು ಶ್ರೀರಾಮಮಯವೆಂದು ಭಾವಿಸಿ ಅವುಗಳ ಚರಣಕಮಲಗಳಲ್ಲಿ ಕೈಜೋಡಿಸಿ ವಂದಿಸುತ್ತೇನೆ. ದೇವತೆ, ದೈತ್ಯ, ಮನುಷ್ಯ,ನಾಗ, ಪಕ್ಷಿ, ಪ್ರೇತ, ಪಿತೃ, ಗಂಧರ್ವ, ಕಿನ್ನರ, ನಿಶಾಚರ ಮುಂತಾದವರೆಲ್ಲರಿಗೂ ನಾನು ಹಣೆ ಚಾಚುತ್ತೇನೆ. ಇವರೆಲ್ಲರೂ ನನ್ನ ಮೇಲೆ ಕೃಪೆದೋರಲೀ. (ದೋ/೭ ಕ, ಖ, ಗ, ಘ)

**ಚೌ – ಆಕರ ಚಾರಿ ಲಾಖ ಚೌರಾಸೀ । ಜಾತಿ ಜೀವ ಜಲ ಥಲ ನಭ ಬಾಸೀ ॥**
**ಸೀಯ ರಾಮಮಯ ಸಬ ಜಗ ಜಾನೀ । ಕರಉಁ ಪ್ರನಾಮ ಜೋರಿ ಜುಗ ಪಾನೀ ॥ ೧ ॥**
**ಜಾನಿ ಕೃಪಾಕರ ಕಿಂಕರ ಮೋಹೂ । ಸಬ ಮಿಲಿ ಕರಹು ಛಾಡಿ ಛಲ ಛೋಹೂ ॥**
**ನಿಜ ಬುಧಿ ಬಲ ಭರೋಸ ಮೊಹಿ ನಾಹೀಂ । ತಾತೇಂ ಬಿನಯ ಕರಉಁ ಸಬ ಪಾಹೀಂ ॥ ೨ ॥**
**ಕರನ ಚಹಉಁ ರಘುಪತಿ ಗುನ ಗಾಹಾ । ಲಘು ಮತಿ ಮೋರಿ ಚರಿತ ಅವಗಾಹಾ ॥**
**ಸೂಝ ನ ಏಕಉ ಅಂಗ ಉಪಾಊ । ಮನ ಮತಿ ರಂಕ ಮನೋರಥ ರಾಊ ॥ ೩ ॥**
**ಮತಿ ಅತಿ ನೀಚ ಊಁಚಿ ರುಚಿ ಆಛೀ । ಚಹಿಅ ಅಮಿಅ ಜಗ ಜುರಇ ನ ಛಾಛೀ ॥**
**ಛಮಿಹಹಿಂ ಸಜ್ಜನ ಮೋರಿ ಢಿಠಾಈ । ಸುನಿಹಹಿಂ ಬಾಲಬಚನ ಮನ ಲಾಈ ॥ ೪ ॥**
**ಜೌಂ ಬಾಲಕ ಕಹ ತೋತರಿ ಬಾತಾ । ಸುನಹಿಂ ಮುದಿತ ಮನ ಪಿತು ಅರು ಮಾತಾ ॥**
**ಹಁಸಿಹಹಿಂ ಕೂರ ಕುಟಿಲ ಕುಬಿಚಾರೀ । ಜೇ ಪರ ದೂಷನ ಭೂಷನಧಾರೀ ॥ ೫ ॥**
**ನಿಜ ಕಬಿತ್ತ ಕೆಹಿ ಲಾಗ ನ ನೀಕಾ । ಸರಸ ಹೋಉ ಅಥವಾ ಅತಿ ಫೀಕಾ ॥**
**ಜೇ ಪರ ಭನಿತಿ ಸುನತ ಹರಷಾಹೀಂ । ತೇ ಬರ ಪುರುಷ ಬಹುತ ಜಗ ನಾಹೀಂ ॥ ೬ ॥**
**ಜಗ ಬಹು ನರ ಸರ ಸರಿ ಸಮ ಭಾಈ । ಜೇ ನಿಜ ಬಾಢಿ ಬಢಹಿಂ ಜಲ ಪಾಈ ॥**
**ಸಜ್ಜನ ಸಕೃತ ಸಿಂಧು ಸಮ ಕೋಈ । ದೇಖಿ ಪೂರ ಬಿಧು ಬಾಢಇ ಜೋಈ ॥ ೭ ॥**

ಎಂಭತ್ತನಾಲ್ಕು ಲಕ್ಷಯೋನಿಗಳಲ್ಲಿ ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜ ಎಂಬ ನಾಲ್ಕು ವಿಧವಾದ ಜೀವಿಗಳು ಜಲ, ನೆಲ, ಆಗಸದಲ್ಲಿರುತ್ತವೆ. ಇವೆಲ್ಲವುಗಳಿಂದ ತುಂಬಿರುವ ಈ ಜಗತ್ತು ಸೀತಾರಾಮ ಮಯವೆಂದು ಭಾವಿಸಿ ಎರಡೂ ಕೈಗಳನ್ನು ಜೋಡಿಸಿ ಅಡ್ಡಬೀಳುತ್ತೇನೆ. ನನ್ನನ್ನು ನಿಮ್ಮ ದಾಸನೆಂದು ಬಗೆದು ಕರುಣೆಯ ಗಣಿಯಾದ ನೀವೆಲ್ಲರೂ, ಕಪಟರಹಿತರಾಗಿ ಒಟ್ಟಿಗೆ ಸೇರಿ ನನ್ನ ಮೇಲೆ ಕೃಪೆಗೈಯಿರಿ. ನನಗೆ ನನ್ನ ಬುದ್ಧಿಬಲದಮೇಲೆ ಭರವಸೆಯಿಲ್ಲ. ಆದ್ದರಿಂದ ಎಲ್ಲರಲ್ಲೂ ವಿನಂತಿ ಮಾಡಿಕೊಳ್ಳುತ್ತೇನೆ. ರಘುಕುಲತಿಲಕನಾದ ಶ್ರೀರಾಮನ ಗುಣಗಳನ್ನು ವರ್ಣಿಸಲು ಹೊರಟಿರುವೆನು. ಆದರೆ ನನ್ನ ಬುದ್ಧಿಯು ಸಣ್ಣದು. ಶ್ರೀರಾಮನ ಚರಿತ್ರವೋ ಅಗಾಧವಾದುದು. ನಾನು ಯಾವುದೇಕಾವ್ಯಾಂಗಗಳನ್ನು ಅರಿಯೆ. ನನ್ನ ಮನೋರಥವು ಮಾತ್ರ ರಾಜನಂತೆ ಎತ್ತರವಾಗಿದೆ. ಆದರೆ ನನ್ನ ಮನ, ಬುದ್ಧಿಗಳು ತಿರುಕನಂತೆ ಬಡವಾಗಿವೆ. ನನ್ನ ಕೋರಿಕೆಯಾದರೋ ಮಹತ್ತಾಗಿದೆ. ಆದರೆ ಬುದ್ಧಿಮಾತ್ರ ಅಲ್ಪವಾಗಿದೆ. ಅಮೃತಪಾನಮಾಡುವ ಬಯಕೆ, ಆದರೆ ಮಜ್ಜಿಗೆಯನ್ನಾದರೂ ಸಂಪಾದಿಸುವ ಶಕ್ತಿಯೂ ನನ್ನಲ್ಲಿ ಇಲ್ಲ. ಸಜ್ಜನರು ನನ್ನ ದಾರ್ಷ್ಟ್ಯವನ್ನು ಮನ್ನಿಸಿ ನನ್ನ ತೊದಲ್ನುಡಿಯನ್ನು ಪ್ರೇಮದಿಂದ ಲಾಲಿಸಲೀ. ಮಗುವು ತೊದಲು ಮತಾಡಿದಾಗ ಅದರ ತಂದೆ-ತಾಯಿಗಳು ಹಿಗ್ಗಿ ಅದನ್ನು ಆನಂದವಾಗಿ ಕೇಳುವುದಿಲ್ಲವೇ? ಆದರೆ ಕುಟಿಲರೂ, ಕುವಿಚಾರಿಗಳೂ ಆದ ಜನರು ಪರರ ದೋಷಗಳನ್ನು ಭೂಷಣಗಳಂತೆ ಧರಿಸುತ್ತಾರೆ. ಎಂದರೆ ಅವರಿಗೆ ಹೆರರ ದೋಷಗಳೇ ಪ್ರಿಯ. ಅವರು ಅದನ್ನು ಕಂಡು ನಕ್ಕುನಲಿಯುತ್ತಾರೆ. ರಸಸ್ಪಂದಿಯಾಗಿರಲೀ, ನೀರಸವಾಗಿರಲೀ ತಾನು ಬರೆದ ಕವಿತೆ ಯಾರಿಗೆ ತಾನೇ ಚೆನ್ನಾಗಿರುವುದಿಲ್ಲ? ಆದರೆ ಇತರರ ಕವಿತೆಯನ್ನು ಕೇಳಿ ತಲೆದೂಗುವ ಸಜ್ಜನರು ಪ್ರಪಂಚದಲ್ಲಿ ವಿರಳರಾಗಿದ್ದಾರೆ. ಮಳೆಯ ನೀರನ್ನು ಪಡೆದು ತಮ್ಮ ಪ್ರವಾಹದಿಂದಲೇ ಹೆಚ್ಚುವ ಕೆರೆ, ಹೊಳೆಗಳಂತೆ ಇರುವ ಜನರೇ ಈ ಪ್ರಪಂಚದಲ್ಲಿ ಹೆಚ್ಚಾಗಿದ್ದಾರೆ. ಎಂದರೆ ತಮ್ಮ ಏಳಿಗೆಯಿಂದ

ಮಾತ್ರ ಸಂತೋಷಪಡುವ ಜನರು ಇವರು. ಆದರೆ ಪೂರ್ಣಚಂದ್ರನನ್ನು ಕಂಡು ಹಿಗ್ಗಿ ಉಕ್ಕುವ ಸಮುದ್ರದಂತೆ ಇತರರ ಉತ್ಕರ್ಷವನ್ನು ನೋಡಿ ಹರ್ಷಿತರಾಗಿವ ಜನರು ತುಂಬಾ ವಿರಳ. (ಚೌ/೧-೭)

**ದೋ – ಭಾಗ ಛೋಟ ಅಭಿಲಾಷು ಬಡ ಕರಉँ ಏಕ ಬಿಸ್ವಾಸ ।**
**ಪೈಹಹिं ಸುಖ ಸುನಿ ಸುಜನ ಸಬ ಖಲ ಕರಿಹಹिं ಉಪಹಾಸ ॥ ೮ ॥**

ನನ್ನ ಭಾಗ್ಯವು ಚಿಕ್ಕದು, ಬಯಕೆ ಮಾತ್ರ ಹಿರಿದು. ಇದನ್ನು ಕೇಳಿ ಸಜ್ಜನರು ಸುಖವನ್ನು ಅನುಭವಿಸುವರು. ದುಷ್ಟರು ಅಪಹಾಸ್ಯ ಮಾಡುವರು. ಇಷ್ಟು ಮಾತ್ರ ನನಗೆ ನಂಬಿಕೆ ಇದೆ. (ದೋ/೮)

**ಚೌ – ಖಲ ಪರಿಹಾಸ ಹೋಇ ಹಿತ ಮೋರಾ । ಕಾಕ ಕಹಹिं ಕಲಕಂಠ ಕಠೋರಾ ॥**
**ಹಂಸಹಿ ಬಕ ದಾದುರ ಚಾತಕಹೀ । ಹँಸಹिं ಮಲಿನ ಖಲ ಬಿಮಲ ಬತಕಹೀ ॥ ೧ ॥**
**ಕಬಿತ ರಸಿಕ ನ ರಾಮ ಪದ ನೇಹೂ । ತಿನ್ಹ ಕಹँ ಸುಖದ ಹಾಸ ರಸ ಏಹೂ ॥**
**ಭಾಷಾ ಭನಿತಿ ಭೋರಿ ಮತಿ ಮೋರಿ । ಹँಸಿಬೇ ಜೋಗ ಹँಸೇँ ನಹಿ ಖೋರೀ ॥ ೨ ॥**
**ಪ್ರಭು ಪದ ಪ್ರೀತಿ ನ ಸಾಮುಝಿ ನೀಕೀ । ತಿನ್ಹಹಿ ಕಥಾ ಸುನಿ ಲಾಗಿಹಿ ಫೀಕೀ ॥**
**ಹರಿ ಹರ ಪದ ರತಿ ಮತಿ ನ ಕುತರಕೀ । ತಿನ್ಹ ಕಹँ ಮಧುರ ಕಥಾ ರಘುಬರ ಕೀ ॥ ೩ ॥**
**ರಾಮ ಭಗತಿ ಭೂಷಿತ ಜಿಯँ ಜಾನೀ । ಸುನಿಹಹिं ಸುಜನ ಸರಾಹಿ ಸುಬಾನೀ ॥**
**ಕಬಿ ನ ಹೋಉँ ನಹिं ಬಚನ ಪ್ರಬೀನು । ಸಕಲ ಕಲಾ ಸಬ ಬಿದ್ಯಾ ಹೀನೂ ॥ ೪ ॥**
**ಆಖರ ಅರಥ ಅಲಂಕೃತಿ ನಾನಾ । ಛಂದ ಪ್ರಬಂಧ ಅನೇಕ ಬಿಧಾನಾ ॥**
**ಭಾವ ಭೇದ ರಸ ಭೇದ ಅಪಾರಾ । ಕಬಿತ ದೋಷ ಗುನ ಬಿಬಿಧ ಪ್ರಕಾರಾ ॥ ೫ ॥**
**ಕಬಿತ ಬಿಬೇಕ ಏಕ ನಹिं ಮೋರೇँ । ಸತ್ಯ ಕಹಉँ ಲಿಖಿ ಕಾಗದ ಕೋರೇँ ॥ ೬ ॥**

ದುಷ್ಟರ ಪರಿಹಾಸದಿಂದ ನನಗೆನೋ ಒಳ್ಳೆಯದೇ ಆಗುತ್ತದೆ.ಕಲಕಂಠ ಕೋಗಿಲೆಯ ಸುಮಧುರ ದನಿಯನ್ನು ಕಾಗೆಗಳು ಕಠೋರ ಕರ್ಕಶವೆಂದೇ ಹೇಳುತ್ತವೆ. ಹಂಸವನ್ನು ಕಂಡು ಕೊಕ್ಕರೆ ನಗುತ್ತದೆ. ಚಾತಕ ಪಕ್ಷಿಯನ್ನು ನೋಡಿ ಕಪ್ಪೆಗಳು ನಗೆಯಾಡುತ್ತವೆ. ಇದೇ ರೀತಿ ಮಲಿನ ಮನರಾದ ಖಲರು ವಿಮಲ ವಾಣಿಯನ್ನು ಕೇಳಿ ನಗುತ್ತಾರೆ. ಕಾವ್ಯರಸಿಕರಲ್ಲದವರಿಗೆ, ರಾಮಚರಣಪ್ರೇಮಿಗಳಲ್ಲದವರಿಗೂ ಈ ಕವಿತೆಯು ಒಳ್ಳೆಯ ಹಾಸ್ಯರಸದ ಸವಿಯನ್ನು ನೀಡಬಲ್ಲದು. ಮೊದಲನೆಯದಾಗಿ ಇದು ಜನಭಾಷೆಯ ಕಾವ್ಯವು, ಎರಡನೆಯದಾಗಿ ನನ್ನ ಮತಿಯು ಹಸುಳೆಯದು. ಆದ್ದರಿಂದ ಇದು ನಗೆಪಾಟಲ್ಲದೆ ಮತ್ತೇನು? ಅವರು ನಕ್ಕರೆ ಅದರಲ್ಲಿ ತಪ್ಪೇನಿದೆ? ಶ್ರೀಹರಿಯ ಚರಣಗಳಲ್ಲಿ ಪ್ರೀತಿಯಿಲ್ಲದಿರುವ, ಒಳ್ಳೆಯ ತಿಳುವಳಿಕೆಯಿಲ್ಲದ ಜನರಿಗೆ ಈ ಕಥೆಯು ನಿಜವಾಗಿ ಸಪ್ಪೆ ಎನಿಸೀತು. ಮನಸ್ಸಿನಲ್ಲಿ ಹರಿ-ಹರರಪಾದಪದ್ಮಗಳಲ್ಲಿ ಭಕ್ತಿ ಇರುವವರಿಗೆ, ಬುದ್ಧಿಯಲ್ಲಿ ಕುತರ್ಕ ಇಲ್ಲದಿರುವವರಿಗೆ ಶ್ರೀರಘುನಾಥನ ಈ ಕಥೆಯು ಮಧುರವಾಗಿ ಕಂಡೀತು. ಸಜ್ಜನರು ರಾಮಭಕ್ತಿಯಿಂದ ಭೂಷಿತವಾಗಿದೆ ಎಂದು ಈ ಕಥೆಯನ್ನು ಒಳ್ಳೆಯ ಮಾತುಗಳಿಂದ ಹೊಗಳುತ್ತಲೇ ಆಲಿಸುವರು. ನಾನು ಕವಿಯೂ ಅಲ್ಲ. ವಚನರಚನ ಚತುರನೂ ಅಲ್ಲ. ಸಕಲ ಕಲೆ ಹಾಗೂ ವಿದ್ಯೆಗಳಿಂದ ರಹಿತನಾದವನು. ನಾನಾ ವಿಧವಾದ ಅಕ್ಷರ, ಅರ್ಥ, ಅಲಂಕಾರಗಳೂ, ಅನೇಕವಿಧವಾದ ಛಂದೋಬಂಧಗಳೂ, ಭಾವ-ರಸಗಳ ಅಪಾರ ಭೇದಗಳೂ, ಇವಲ್ಲದೆ ಕವಿತೆಯಲ್ಲಿ ವಿಧವಿಧವಾದ ಗುಣದೋಷಗಳಿರುತ್ತವೆ. ಇವುಗಳಲ್ಲಿ ಕಾವ್ಯಕ್ಕೆ ಸಂಬಂಧಿಸಿದ ಒಂದು ಗುಣವಾದರೂ ನನ್ನಲಿಲ್ಲ. ಇದನ್ನು ನಾನು ಪ್ರಮಾಣ ಪೂರ್ವಕವಾಗಿ ನಿಜವನ್ನೇ ಹೇಳುತ್ತೇನೆ. (ಚೌ/೧-೬)

**ದೋ – ಭನಿತಿ ಮೋರಿ ಸಬ ಗುನ ರಹಿತ ಬಿಸ್ವ ಬಿದಿತ ಗುನ ಏಕ ।**
**ಸೋ ಬಿಚಾರಿ ಸುನಿಹಹिं ಸುಮತಿ ಜಿನ್ಹ ಕೇँ ಬಿಮಲ ಬಿಬೇಕ ॥ ೯ ॥**

ನನ್ನ ಕವಿತೆಯು ಎಲ್ಲ ಸದ್ಗುಣಗಳಿಂದ ರಹಿತವಾಗಿದೆ. ಆದರೆ ಇದರಲ್ಲಿ ಜಗತ್ಪ್ರಸಿದ್ಧವಾದ ಶ್ರೀರಾಮಕಥೆ ಯೆಂಬ ಒಂದೇ ಸದ್ಗುಣವು ಇದೆ. ಇದನ್ನು ವಿಚಾರ ಮಾಡಿ ಸದ್ಬುದ್ಧಿಯುಳ್ಳವರು, ನಿರ್ಮಲ ವಿವೇಕವುಳ್ಳವರು ಅದನ್ನು ಆನಂದದಿಂದ ಕೇಳುತ್ತಾರೆ. (ದೋ/೯)

## ರಾಮಾಯಣ ಮಹತ್ವ

**ಚೌ – ಏಹಿ ಮಹँ ರಘುಪತಿ ನಾಮ ಉದಾರಾ । ಅತಿ ಪಾವನ ಪುರಾನ ಶ್ರುತಿ ಸಾರಾ ॥**
**ಮಂಗಲ ಭವನ ಅಮಂಗಲ ಹಾರೀ । ಉಮಾ ಸಹಿತ ಜೆಹಿ ಜಪತ ಪುರಾರೀ ॥ ೧ ॥**

**ಭನಿತಿ ಬಿಚಿತ್ರ ಸುಕಬಿ ಕೃತ ಜೋಊ । ರಾಮ ನಾಮ ಬಿನು ಸೋಹ ನ ಸೋಊ॥**
**ಬಿಧುಬದನೀ ಸಬ ಭಾಁತಿ ಸँವಾರೀ । ಸೋಹ ನ ಬಸನ ಬಿನಾ ಬರ ನಾರೀ ॥ ೨ ॥**
**ಸಬ ಗುನ ರಹಿತ ಕುಕಬಿ ಕೃತ ಬಾನೀ । ರಾಮ ನಾಮ ಜಸ ಅಂಕಿತ ಜಾನೀ ॥**
**ಸಾದರ ಕಹಹಿಂ ಸುನಹಿಂ ಬುಧ ತಾಹೀ । ಮಧುಕರ ಸರಿಸ ಸಂತ ಗುನಗ್ರಾಹೀ॥ ೩ ॥**
**ಜದಪಿ ಕಬಿತ ರಸ ಏಕಉ ನಾಹೀं । ರಾಮ ಪ್ರತಾಪ ಪ್ರಗಟ ಎಹಿ ಮಾಹೀं॥**
**ಸೋಇ ಭರೋಸ ಮೋರೇं ಮನ ಆವಾ । ಕೆಹಿं ನ ಸುಸಂಗ ಬಡಪ್ಪನು ಪಾವಾ ॥ ೪ ॥**
**ಧೂಮಉ ತಜಇ ಸಹಜ ಕರುಆಈ । ಅಗರು ಪ್ರಸಂಗ ಸುಗಂಧ ಬಸಾಈ॥**
**ಭನಿತಿ ಭದೇಸ ಬಸ್ತು ಭಲಿ ಬರನೀ । ರಾಮ ಕಥಾ ಜಗ ಮಂಗಲ ಕರನೀ ॥ ೫ ॥**

ಇದರಲ್ಲಿ ಸಾಂಬಶಿವನು ಯಾವಾಗಲೂ ಜಪಿಸುವ ಶ್ರೀರಾಮಚಂದ್ರನ ಪಾವನ ನಾಮವಿದೆ. ಇದು ಅತ್ಯಂತ ಪವಿತ್ರವಾದುದು, ವೇದಪುರಾಣಗಳ ಸಾರವೇ ಆಗಿದೆ. ಕಲ್ಯಾಣಗಳ ಭವನವಾಗಿದೆ. ಅಮಂಗಳವನ್ನು ದೂರಮಾಡುವುದಾಗಿದೆ. ಚಂದ್ರಮುಖಿಯೊಬ್ಬಳು ಅನೇಕಾಲಂಕಾರ ಭೂಷಿತಳಾಗಿದ್ದರೂ ವಸ್ತ್ರವಿಹೀನಳಾದರೆ ಶೋಭಿಸುವಳೇ? ಹಾಗೆಯೇ ಒಳ್ಳೆಯ ಕವಿಯೇ ಬರೆದಿರಬಹುದು, ಒಳ್ಳೆಯ ಕವಿತೆಯಿರಬಹುದು, ಆದರೂ ಆ ಕಾವ್ಯದಲ್ಲಿ ರಾಮನಾಮವಿಲ್ಲದಿದ್ದರೆ ಶೋಭಿಸದು. ಇದಕ್ಕೆ ಪ್ರತಿಯಾಗಿ ಅಲ್ಪಜ್ಞನಾದ ಕುಕವಿಯಿಂದ ರಚಿತವಾದ ಎಲ್ಲ ಗುಣಗಳಿಂದಲೂ ರಹಿತವಾದ ಕವಿತೆಯನ್ನು ಕೂಡ ರಾಮನಾಮ ವೈಭವದಿಂದ ಹಾಗೂ ಶ್ರೀರಾಮನ ಕೀರ್ತಿಯಿಂದ ಅಂಕಿತವಾಗಿದೆ ಎಂದು ಬುಧಜನರು ಆದರದಿಂದ ಕೇಳಿ, ಆನಂದಿತರಾಗುತ್ತಾರೆ. ಏಕೆಂದರೆ, ದುಂಬಿಯು ಪುಷ್ಪಪರಾಗವನ್ನು ಮಾತ್ರ ಹೀರುವಂತೆ ಸತ್ಪುರುಷರು ಮಧುಕರನಂತೆ ಗುಣಗ್ರಾಹಿಗಳಾಗುತ್ತಾರೆ. ನನ್ನ ಈ ಕವಿತೆಯಲ್ಲಿ ಕಾವ್ಯರಸಪೋಷಕವಾದ ಒಂದು ರಸವೂ ಇಲ್ಲ. ಆದರೂ ಇದರಲ್ಲಿ ಶ್ರೀರಾಮಚಂದ್ರನ ಪ್ರತಾಪವು, ಮಹಿಮೆಯು ಒಡಮೂಡಿದೆ. ನನಗಿರುವುದು ಇದೊಂದೇ ಭರವಸೆ. ಸತ್ಸಂಗತ್ಯದಿಂದ ಯಾರಿಗೆ ತಾನೇ ಹೆಗ್ಗಳಿಕೆ ದೊರೆಯದು? ಹೂವಿನಿಂದ ನಾರಿಗೂ ಸ್ವರ್ಗ ದೊರೆಯುವುದಿಲ್ಲವೇ? ಹೊಗೆಯು ಕೂಡ ಅಗರು ಚಂದನದ ಸಂಗದಿಂದ ಸುಗಂಧಿತವಾಗಿ ತನ್ನ ಹುಟ್ಟುಗುಣವಾದ ಕಟುತ್ವವನ್ನು ಕಳೆದುಕೊಳ್ಳುತ್ತದೆ. ನನ್ನ ಕವಿತೆ ಖಂಡಿತವಾಗಿ ಕುರೂಪಿಯಾಗಿದೆ. ಆದರೆ ಇದರಲ್ಲಿ ಲೋಕಕ್ಕೆ ಮಂಗಳವನ್ನುಂಟುಮಾಡುವ ರಾಮಕಥೆಯು ವರ್ಣಿತವಾಗಿದೆ. ಆದ್ದರಿಂದ ಶುಭಪ್ರದವಾದ ಕಥೆಯನ್ನು ಮಂದಿ ಮೆಚ್ಚಿಕೊಂಡಾರು. (ಚೌ/೧-೫)

**ಛಂದ – ಮಂಗಲ ಕರನಿ ಕಲಿಮಲ ಹರನಿ ತುಲಸೀ ಕಥಾ ರಘುನಾಥ ಕೀ ।**
**ಗತಿ ಕೂರ ಕಬಿತಾ ಸರಿತ ಕೀ ಜ್ಯೋं ಸರಿತ ಪಾವನ ಪಾಥ ಕೀ ॥**
**ಪ್ರಭು ಸುಜಸ ಸಂಗತಿ ಭನಿತಿ ಭಲಿ ಹೋಇಹಿ ಸುಜನ ಮನ ಭಾವನೀ ।**
**ಭವ ಅಂಗ ಭೂತಿ ಮಸಾನ ಕೀ ಸುಮಿರತ ಸುಹಾವನಿ ಪಾವನೀ ॥**

ತುಳಸೀದಾಸರು ಹೇಳುತ್ತಾರೆ—ಶ್ರೀರಘುನಾಥನ ಕಥೆಯು ಕಲಿಯುಗದ ಪಾಪಗಳನ್ನು ಕಳೆಯುವಂತಹುದು, ಮಂಗಳದಾಯಕವೂ ಆಗಿದೆ. ಶೋಭಾರಹಿತವಾದ ನನ್ನ ಈ ಕವಿತಾ ನದಿಯ ನಡಿಗೆ, ಪವಿತ್ರ ಜಲವುಳ್ಳ ಗಂಗಾನದಿಯ ನಡಿಗೆಯಂತೆ ವಕ್ರ. ಪ್ರಭು ಶ್ರೀರಾಮಚಂದ್ರನ ಸುಂದರ ಯಶಸ್ಸಿನ ಸಂಗದಿಂದ ಈ ಕಾವ್ಯವೂ ಸುಂದರವಾಗಿ ಸುಜನರ ಮನಸ್ಸನ್ನು ತಣಿಸುವುದು. ಸ್ಮಶಾನದ ಅಪವಿತ್ರವಾದ ಚಿತಾಭಸ್ಮವೂ ಕೂಡ ಶಿವನ ಅಂಗಸಂಗದಿಂದ ವಿಭೂತಿಯಾಗುತ್ತದೆ. ಅದನ್ನು ಸ್ಮರಿಸಿದರೆ ಸಾಕು ಪವಿತ್ರಗೊಳಿಸುತ್ತದೆ. (ಛಂದ)

**ದೋ – ಪ್ರಿಯ ಲಾಗಿಹಿ ಅತಿ ಸಬಹಿ ಮಮ ಭನಿತಿ ರಾಮ ಜಸ ಸಂಗ ।**
**ದಾರು ಬಿಚಾರು ಕಿ ಕರಇ ಕೋಉ ಬಂದಿಅ ಮಲಯ ಪ್ರಸಂಗ ॥ ೧೦ (ಕ)॥**
**ಸ್ಯಾಮ ಸುರಭಿ ಪಯ ಬಿಸದ ಅತಿ ಗುನದ ಕರಹಿं ಸಬ ಪಾನ ।**
**ಗಿರಾ ಗ್ರಾಮ್ಯ ಸಿಯ ರಾಮ ಜಸ ಗಾವಹಿं ಸುನಹಿं ಸುಜಾನ ॥ ೧೦ (ಖ)॥**

ಮಲಯಾಚಲದಲ್ಲಿ ಚಂದನವೃಕ್ಷಗಳ ಸಂಗದಿಂದ ಬಳಿಯಿರುವ ಎಲ್ಲ ವೃಕ್ಷಗಳೂ ಚಂದನವೇ ಆಗುತ್ತವೆ. ಎಲ್ಲರೂ ಅದನ್ನು ಆದರಿಸುವರು. ಹಾಗೆಯೇ ಶ್ರೀರಾಮನ ಯಶಸ್ಸಿನ ಸಂಗದಿಂದ ನನ್ನ ಕವಿತೆಯು ಎಲ್ಲರಿಗೆ ಅತ್ಯಂತ ಪ್ರಿಯವಾದೀತು. ಹಸು ಕಪ್ಪಾದರೂ ಅದರ ಹಾಲು ಬೆಳ್ಳಗಿದ್ದು ಪುಷ್ಟಿಕರವೇ ಆಗಿರುತ್ತದೆ. ಎಲ್ಲರೂ ಅದನ್ನು ಆನಂದವಾಗಿ ಕುಡಿಯುತ್ತಾರೆ. ಇದೇ ರೀತಿ ಗ್ರಾಮ್ಯಭಾಷೆಯಲ್ಲಿದ್ದರೂ ಸೀತಾರಾಮರ ಕೀರ್ತಿಯನ್ನು ಸುಜನರು ಆಸಕ್ತಿಯಿಂದ ಹಾಡುತ್ತಾರೆ, ಕೇಳುತ್ತಾರೆ. (ದೋ/೧೦ ಕ, ಖ)

ಚೌ – ಮನಿ ಮಾನಿಕ ಮುಕುತಾ ಛಬಿ ಜೈಸೀ । ಅಹಿ ಗಿರಿ ಗಜ ಸಿರ ಸೋಹ ನ ತೈಸೀ ॥
ನೃಪ ಕಿರೀಟ ತರುನೀ ತನು ಪಾಈ । ಲಹಹಿಂ ಸಕಲ ಸೋಭಾ ಅಧಿಕಾಈ ॥ ೧ ॥
ತೈಸೇಹಿಂ ಸುಕಬಿ ಕಬಿತ ಬುಧ ಕಹಹೀಂ । ಉಪಜಹಿಂ ಅನತ ಅನತ ಛಬಿ ಲಹಹೀಂ ॥
ಭಗತಿ ಹೇತು ಬಿಧಿ ಭವನ ಬಿಹಾಈ । ಸುಮಿರತ ಸಾರದ ಆವತಿ ಧಾಈ ॥ ೨ ॥
ರಾಮ ಚರಿತ ಸರ ಬಿನು ಅನ್ಹವಾಏಂ । ಸೋ ಶ್ರಮ ಜಾಇ ನ ಕೋಟಿ ಉಪಾಏಂ ॥
ಕಬಿ ಕೋಬಿದ ಅಸ ಹೃದಯಂ ಬಿಚಾರೀ । ಗಾವಹಿಂ ಹರಿ ಜಸ ಕಲಿ ಮಲ ಹಾರೀ ॥ ೩ ॥
ಕೀನ್ಹೇಂ ಪ್ರಾಕೃತ ಜನ ಗುನ ಗಾನಾ । ಸಿರ ಧುನಿ ಗಿರಾ ಲಗತ ಪಛಿತಾನಾ ॥
ಹೃದಯ ಸಿಂಧು ಮತಿ ಸೀಪ ಸಮಾನಾ । ಸ್ವಾತಿ ಸಾರದಾ ಕಹಹಿಂ ಸುಜಾನಾ ॥ ೪ ॥
ಜೌಂ ಬರಸಇ ಬರ ಬಾರಿ ಬಿಚಾರೂ । ಹೋಹಿಂ ಕಬಿತ ಮುಕುತಾಮನಿ ಚಾರೂ ॥ ೫ ॥

ಹಾವಿನ ಹೆಡೆಯಲ್ಲಿರುವ ಮಣಿಯು, ಪರ್ವತದಲ್ಲಿರುವ ಮಾಣಿಕ್ಯವೂ, ಆನೆಯ ಕುಂಭಸ್ಥಳದಲ್ಲಿರುವ ಮುತ್ತು, ಇವುಗಳು ಅಷ್ಟಾಗಿ ಶೋಭಿಸಲಾರವು. ಅವುಗಳೇ ಅರಸನ ಕಿರೀಟದಲ್ಲಿ ಹಾಗೂ ನವಯುವತಿಯ ಶರೀರದಲ್ಲಿದ್ದಾಗ ಇವು ಎಲ್ಲಿಲ್ಲದ ಕಾಂತಿಯನ್ನು ಪಡೆಯುತ್ತವೆ. ಅಂತೆಯೇ ಸುಕವಿಯ ಕವಿತೆ ಕೂಡ ಎಲ್ಲೋ ಹುಟ್ಟುತ್ತದೆ, ಎಲ್ಲೋ ಶೋಭಿಸುತ್ತದೆ ಎಂದು ವಿದ್ವಾಂಸರು ಹೇಳುತ್ತಾರೆ. ಕವಿವಾಣಿಯಿಂದ ಹೊರಹೊಮ್ಮಿದ ಕವಿತೆಯು, ಅದರ ವಿಮರ್ಶೆ, ವಿಚಾರ-ಪ್ರಚಾರ, ಅದರಲ್ಲಿ ಹೇಳಿದ ಆದರ್ಶಗಳ ಸ್ವೀಕಾರ ಹಾಗೂ ಅನುಸರಣ ಆಗುವಾಗಲೇ ಶೋಭಿಸುತ್ತದೆ.''ಕವಿಃ ಕರೋತಿ ಕಾವ್ಯಾನಿ ರಸಂ ಜಾನಾತಿ ಪಂಡಿತಃ'' ಎಂದು ಹೇಳಿಲ್ಲವೇ? ಕಾವ್ಯನಿರ್ಮಾಣಕ್ಕೆ ಹೊರಟಿರುವ ಕವಿಯು ವಾಣಿಯನ್ನು ಸ್ಮರಿಸಿದರೆ ಸಾಕು, ಆತನ ಭಕ್ತಿಗೆ ಒಲಿದು ಸರಸ್ವತಿಯು ಬ್ರಹ್ಮಲೋಕದಿಂದ ಓಡಿಬರುತ್ತಾಳೆ. ಈರೀತಿ ಓಡಿ ಬಂದುದರಿಂದ ಉಂಟಾದ ಸರಸ್ವತಿಯ ಬಳಲಿಕೆಯು ಶ್ರೀರಾಮಚರಿತ್ರವೆಂಬ ಸರೋವರದಲ್ಲಿ ಸ್ನಾನಮಾಡಿಸದಿದ್ದರೆ, ಬೇರೆ ಕೋಟಿ ಉಪಾಯಗಳನ್ನು ಮಾಡಿದರೂ ಹೋಗದು. ಈರೀತಿ ತಮ್ಮ ಹೃದಯದಲ್ಲಿ ವಿಚಾರಮಾಡಿ ಕವಿ ಹಾಗೂ ಪಂಡಿತರು ಕಲಿಮಲಹಾರಿಯಾದ ಶ್ರೀಹರಿಯ ಯಶಸ್ಸನ್ನು ಗಾನಮಾಡುತ್ತಾರೆ. ಪ್ರಾಕೃತಜನರ ಗುಣಗಾನ ಮಾಡುವುದರಿಂದ ಸರಸ್ವತಿದೇವಿಯು'ನಾನೇಕೆ ಇವರು ಕರೆದಾಗ ಬಂದೇನೋ?' ಎಂದು ತಲೆಚಚ್ಚಿಕೊಂಡು ಪಶ್ಚಾತ್ತಾಪಪಡುತ್ತಾಳೆ. ಕವಿಹೃದಯವೇ ಸಮುದ್ರ, ಬುದ್ಧಿಯೇ ಚಿಪ್ಪು, ಶಾರದೆಯೇ ಸ್ವಾತಿ ನಕ್ಷತ್ರದ ನೀರು ಎಂದು ಸುಜ್ಞಾನಿಗಳು ಹೇಳುತ್ತಾರೆ. ಇದರಲ್ಲಿ (ಬುದ್ಧಿಯೆಂಬ ಚಿಪ್ಪಿನಲ್ಲಿ) ಶ್ರೇಷ್ಠವಿಚಾರವೆಂಬ ಸ್ವಾತಿನಕ್ಷತ್ರದ ನೀರು ಮಳೆಯ ರೂಪದಲ್ಲಿ ಬಿದ್ದರೆ ಮುತ್ತಿನಂತಹ ಸುಂದರ ಕವಿತೆ ಮೂಡುತ್ತದೆ. (ಚೌ/೧-೫)

**ದೋ – ಜುಗುತಿ ಬೇಧಿ ಪುನಿ ಪೋಹಿ ಅಹಿಂ ರಾಮಚರಿತ ಬರ ತಾಗ ।**
**ಪಹಿರಹಿಂ ಸಜ್ಜನ ಬಿಮಲ ಉರ ಸೋಭಾ ಅತಿ ಅನುರಾಗ ॥ ೧೧ ॥**

ಈ ಕವಿತಾರೂಪಿಯಾದ ಮುಕ್ತಾಮಣಿಯನ್ನು ಯುಕ್ತಿಯಿಂದ ಭೇದಿಸಿ ರಾಮಚರಿತ್ರವೆಂಬ ಸುಂದರ ದಾರದಲ್ಲಿ ಪೋಣಿಸಿ ಸಜ್ಜನರು ತಮ್ಮ ನಿರ್ಮಲ ಹೃದಯದಲ್ಲಿ ಧರಿಸುತ್ತಾರೆ. ಅದರಿಂದ ಅತ್ಯಂತ ಅನುರಾಗವೆಂಬ ಶೋಭೆಮೂಡುತ್ತದೆ. ಅಂದರೆ ಅವರು ಆತ್ಯಂತಿಕ ಪ್ರೇಮವನ್ನು ಪಡೆಯುತ್ತಾರೆ.(ದೊ/೧೧)

ಚೌ – ಜೇ ಜನಮೇ ಕಲಿಕಾಲ ಕರಾಲಾ । ಕರತಬ ಬಾಯಸ ಬೇಷ ಮರಾಲಾ ॥
ಚಲತ ಕುಪಂಥ ಬೇದ ಮಗ ಛಾಂಡೇ । ಕಪಟ ಕಲೇವರ ಕಲಿ ಮಲ ಭಾಂಡೇ ॥ ೧ ॥
ಬಂಚಕ ಭಗತ ಕಹಾಇ ರಾಮ ಕೇ । ಕಿಂಕರ ಕಂಚನ ಕೋಹ ಕಾಮ ಕೇ ॥
ತಿನ್ಹ ಮಹಂ ಪ್ರಥಮ ರೇಖ ಜಗ ಮೋರೀ । ಧೀಂಗ ಧರಮಧ್ವಜ ಧಂಧಕ ಧೋರೀ ॥ ೨ ॥
ಜೌಂ ಅಪನೇ ಅವಗುನ ಸಬ ಕಹಊಂ । ಬಾಢಇ ಕಥಾ ಪಾರ ನಹಿಂ ಲಹಊಂ ॥
ತಾತೇ ಮೈ ಅತಿ ಅಲಪ ಬಖಾನೇ । ಥೋರೇ ಮಹುಂ ಜಾನಿಹಹಿಂ ಸಯಾನೇ ॥ ೩ ॥
ಸಮುಝಿ ಬಿಬಿಧಿ ಬಿಧಿ ಬಿನತೀ ಮೋರಿ । ಕೋಉ ನ ಕಥಾ ಸುನಿ ದೇಇಹಿ ಖೋರೀ ॥
ಏತೆಹು ಪರ ಕರಿಹಹಿಂ ಜೆ ಅಸಂಕಾ । ಮೊಹಿ ತೇ ಅಧಿಕ ತೆ ಜಡ಼ ಮತಿ ರಂಕಾ ॥ ೪ ॥
ಕಬಿ ನ ಹೋಉಂ ನಹಿಂ ಚತುರ ಕಹಾವಉಂ । ಮತಿ ಅನುರೂಪ ರಾಮ ಗುನ ಗಾವಉಂ ॥
ಕಹಂ ರಘುಪತಿ ಕೇ ಚರಿತ ಅಪಾರಾ । ಕಹಂ ಮತಿ ಮೋರಿ ನಿರತ ಸಂಸಾರಾ ॥ ೫ ॥

**ಜೆಹಿ಼ ಮಾರುತ ಗಿರಿ ಮೇರು ಉಡಾಹೀ಼ ।ಕಹಹು ತೂಲ ಕೆಹಿ ಲೇಖೇ ಮಾಹೀ಼ ॥**
**ಸಮುಝುತ ಅಮಿತ ರಾಮ ಪ್ರಭುತಾಈ ।ಕರತ ಕಥಾ ಮನ ಅತಿ ಕದರಾಈ ॥೬॥**

ಪಾಪಪಂಕವೆನಿಸಿದ ಈ ಕಲಿಕಾಲದಲ್ಲಿ ಹುಟ್ಟಿದವರು ಹಂಸದಂತೆ ವೇಷಧರಿಸಿ, ಕಾಗೆಗಳಂತೆ ವರ್ತಿಸುವರು. ವೈದಿಕ ವೇದಮಾರ್ಗವನ್ನು ತ್ಯಜಿಸಿ ಕುಮಾರ್ಗಗಾಮಿಗಳೂ, ಕಪಟ ಮೂರ್ತಿಗಳೂ, ಕಲಿಮಲಭಾಂಡವಾಗಿ ರುವವರೂ ಆಗಿರುತ್ತಾರೆ. ಶ್ರೀರಾಮಭಕ್ತರೆಂದು ಹೇಳಿಕೊಂಡು ಜನರನ್ನು ವಂಚಿಸುವವರೂ ಕಾಂಚನ, ಕಾಮ, ಕ್ರೋಧಗಳ ಕಿಂಕರರೂ, ಪಾಷಂಡರೂ, ಧರ್ಮಧ್ವಜಿಗಳೂ(ಧರ್ಮದ ಡಾಂಭಿಕತೆಯನ್ನು ಪ್ರದರ್ಶಿಸುವವರು.), ಕಪಟ ಕಾರ್ಯದ ಹೊರೆಯನ್ನು ಹೊರುವವರೂ ಆದ ಇಂತಹ ಜನರಲ್ಲಿ ನನ್ನದು ಪ್ರಥಮ ಸ್ಥಾನ; ನನ್ನ ಅವಗುಣಗಳಿಗೆ ಲೆಕ್ಕವೇ ಇಲ್ಲ. ಆ ಅವಗುಣಗಳನ್ನೆಲ್ಲ ಹೇಳುತ್ತಾ ಹೋದರೆ ಕಥೆ ಹಿಗ್ಗುತ್ತಾ ಹೋದೀತು. ಮತ್ತೆ ನಾನು ದಡಕಾಣಲಾರೆ. ಆದ್ದರಿಂದ ನಾನು ನನ್ನ ಅತ್ಯಲ್ಪ ಅವಗುಣಗಳನ್ನು ಬಣ್ಣಿಸಿದ್ದೇನೆ. ಇಷ್ಟಾಗಿ ಯಾರಾದರೂ ಶಂಕಿಸಿದರೆ ಅವರು ನನಗಿಂತ ಹೆಚ್ಚಿನ ಮೂರ್ಖರು, ತಿಳಿಗೇಡಿಗಳು. ನಾನು ಕವಿಯಲ್ಲ, ಚತುರನೆನಿಸಿ ಕೊಳ್ಳುವವನೂ ಅಲ್ಲ. ನನ್ನ ಮತಿಗೆ ಅನುಗುಣವಾಗಿ ಶ್ರೀರಾಮನ ಕಥಾವೈಭವವನ್ನು ಗುಣಗಾನ ಮಾಡುತ್ತೇನೆ. ಶ್ರೀರಘುಪತಿಯ ಅಪಾರ ಚರಿತ್ರವೆಲ್ಲಿ? ಸಂಸಾರದಲ್ಲಿ ಆಸಕ್ತನಾದ ನನ್ನ ಬುದ್ಧಿ ಎಲ್ಲಿ? ಸುಮೇರುದಂತಹ ಪರ್ವತವನ್ನು ಹಾರಿಸಿಕೊಂಡು ಹೋಗುವ ಗಾಳಿಯ ಮುಂದೆ ಹತ್ತಿಯದು ಒಂದು ಲೆಕ್ಕವೇ? ಶ್ರೀರಾಮನ ಅನಂತ ವೈಭವವನ್ನು ಮನಗಂಡು ಕಥಾರಚನೆ ಮಾಡುವಲ್ಲಿ ನನ್ನ ಮನಸ್ಸು ತುಂಬಾ ಹಿಂಜರಿಯುತ್ತದೆ. ತತ್ತರಿಸುತ್ತದೆ. (ಚೌ/೧-೬)

**ದೋ – ಸಾರದ ಸೇಸ ಮಹೇಸ ಬಿಧಿ ಆಗಮ ನಿಗಮ ಪುರಾನ ।**
**ನೇತಿ ನೇತಿ ಕಹಿ ಜಾಸು ಗುನ ಕರಹಿ಼ ನಿರಂತರ ಗಾನ ॥೧೨॥**

ವಾಗ್ದೇವಿಯೂ, ಆದಿಶೇಷನೂ, ಪರಮಶಿವನೂ, ಪರಮೇಷ್ಠಿಯೂ, ನಿಗಮಾಗಮಗಳೂ, ಪುರಾಣಗಳೂ ಶ್ರೀರಾಮಚಂದ್ರನ ಗುಣಗಳನ್ನು ನಿರಂತರ ಗಾನಮಾಡಿದರೂ ಪೂರ್ಣವಾಗಿ ವರ್ಣಿಸಲಾರರು. ಅವನ ಅನಂತಗುಣಗಳನ್ನು ವರ್ಣಿಸಲಾರದೆ ನೇತಿ-ನೇತಿ(ಇಷ್ಟೇ ಅಲ್ಲ, ಇಷ್ಟೇ ಅಲ್ಲ) ಎಂದು ಹೇಳಿಬಿಡುತ್ತಾರೆ. (ದೋ/೧೨)

**ಚೌ – ಸಬ ಜಾನತ ಪ್ರಭು ಪ್ರಭುತಾ ಸೋಈ ।ತದಪಿ ಕಹೇ಼ ಬಿನು ರಹಾ ನ ಕೋಈ ॥**
**ತಹಾ಼ ಬೇದ ಅಸ ಕಾರನ ರಾಖಾ ।ಭಜನ ಪ್ರಭಾಉ ಭಾ಼ತಿ ಬಹು ಭಾಷಾ ॥೧॥**
**ಏಕ ಅನೀಹ ಅರೂಪ ಅನಾಮಾ ।ಅಜ ಸಚ್ಚಿದಾನಂದ ಪರ ಧಾಮಾ ॥**
**ಬ್ಯಾಪಕ ಬಿಸ್ವರೂಪ ಭಗವಾನಾ ।ತೆಹಿ಼ ಧರಿ ದೇಹ ಚರಿತ ಕೃತ ನಾನಾ ॥೨॥**
**ಸೋ ಕೇವಲ ಭಗತನ ಹಿತ ಲಾಗೀ ।ಪರಮ ಕೃಪಾಲ ಪ್ರನತ ಅನುರಾಗೀ ॥**
**ಜೆಹಿ ಜನ ಪರ ಮಮತಾ ಅತಿ ಛೋಹೂ ।ಜೆಹಿ಼ ಕರುನಾ ಕರಿ ಕೀನ್ಹ ನ ಕೋಹೂ ॥೩॥**
**ಗಈ ಬಹೋರ ಗರೀಬ ನೆವಾಜೂ ।ಸರಲ ಸಬಲ ಸಾಹಿಬ ರಘುರಾಜೂ ॥**
**ಬುಧ ಬರನಹಿ಼ ಹರಿ ಜಸ ಅಸ ಜಾನೀ ।ಕರಹಿ಼ ಪುನೀತ ಸುಫಲ ನಿಜ ಬಾನೀ ॥೪॥**
**ತೆಹಿ಼ ಬಲ ಮೈ಼ ರಘುಪತಿ ಗುನ ಗಾಥಾ ।ಕಹಿಹಉ಼ ನಾಇ ರಾಮ ಪದ ಮಾಥಾ ॥**
**ಮುನಿನ್ಹ ಪ್ರಥಮ ಹರಿ ಕೀರತಿ ಗಾಈ ।ತೆಹಿ಼ ಮಗ ಚಲತ ಸುಗಮ ಮೊಹಿ ಭಾಈ ॥೫॥**

ಶ್ರೀರಾಮಚಂದ್ರನವೈಭವವು ಇಂತು ಅಕಥನೀಯ. ಮಾತಿಗೆ ಮೀರಿದ್ದು ಎಂದು ಎಲ್ಲರೂ ಬಲ್ಲರು. ಆದರೂ ಬಾಯಿಬಿಟ್ಟು ಹೇಳದೆ ಇರಲಾಗುವುದಿಲ್ಲ, ಭಜನೆಯ ಪ್ರಭಾವವು ಬಹುವಿಧವೆಂದು ವೇದಗಳು ಹೇಳಿವೆ. ಭಗವಂತನ ಮಹಿಮೆಯನ್ನು ಪೂರ್ಣವಾಗಿ ಯಾರೂ ವರ್ಣಿಸಲಾರರು. ಆದರೆ ಹಾಗೆಂದು ಸುಮ್ಮನೆ ಕೂರದೇ ಸಾಧ್ಯವಾದಷ್ಟು ಭಗವಂತನ ಗುಣಗಾನವನ್ನು ಮಾಡಬೇಕು. ಏಕೆಂದರೆ, ಭಗವಂತನ ಗುಣಗಾನ ಮಯವಾದ ಭಜನೆಯ ಪ್ರಭಾವವು ಅದ್ಭುತವಾಗಿದೆ. ಅದನ್ನು ಶಾಸ್ತ್ರಗಳಲ್ಲಿ ನಾನಾ ರೀತಿಯಲ್ಲಿ ವರ್ಣಿಸಲಾಗಿದೆ. ಕಿಂಚಿತ್ತಾದರೂ ಭಗವದ್ಭಜನೆ ಮನುಷ್ಯನನ್ನು ಭವಸಾಗರದಿಂದ ಪಾರುಮಾಡುತ್ತದೆ. ಅದ್ವಿತೀಯನೂ, ಇಚ್ಛಾರಹಿತನೂ, ನಿರಾಕಾರನೂ, ಅನಾಮನೂ, ಅಜನ್ಮನೂ, ಸಚ್ಚಿದಾನಂದಸ್ವರೂಪನೂ, ಪರಮಧಾಮನೂ, ಸರ್ವವ್ಯಾಪಕನೂ, ವಿಶ್ವರೂಪನೂ ಆದ ಭಗವಂತನು ದಿವ್ಯ ಶರೀರಗಳನ್ನು ಧರಿಸಿ ಅನೇಕ ಅವತಾರಗಳ ಮೂಲಕ ತನ್ನ ಲೀಲೆಗಳನ್ನು ಪ್ರಕಟಪಡಿಸಿದ್ದಾನೆ. ಈ ಲೀಲೆಗಳನ್ನು ಭಕ್ತರಿಗಾಗಿಯೇ ಮಾಡಿರುವನು. ಏಕೆಂದರೆ, ಭಗವಂತನು ಪರಮ ಕೃಪಾಳುವು. ಶರಣಾಗತರ ಮೇಲೆ ಆತನ ಪ್ರೇಮ ಅತಿಶಯ ವಾದುದು. ಭಕ್ತರ ಮೇಲೆ ಅವನ ಮಮತೆ, ಕೃಪೆ ಅತ್ಯಂತ ಮಿಗಿಲಾದುದು. ಒಮ್ಮೆ ಒಬ್ಬನ ಮೇಲೆ ಕೃಪೆ ಮಾಡಿದರೆ ಸಾಕು. ಅವನ ಮೇಲೆ ಎಂದಿಗೂ ಸಿಟ್ಟಾಗುವುದಿಲ್ಲ. ಈ ಪ್ರಭು ರಘುರಾಮನು ಭಕ್ತರು ಕಳಕೊಂಡ

ವಸ್ತುವನ್ನು ಮತ್ತೆ ದೊರಕಿಸಿ ಕೊಡುವ ದೀನಬಂಧುವು. ಅಂದರೆ ಭಕ್ತರ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಾನೆ. ಅವನ ಸ್ವಭಾವವು ಅತ್ಯಂತ ಸರಳ. ಆತನು ಸರ್ವಶಕ್ತ, ಎಲ್ಲದರ ಒಡೆಯ. ಇದನ್ನು ಅರಿತುಕೊಂಡೇ ಬಿದ್ಧಿವಂತರಾದ ಜನರು ಆ ಶ್ರೀಹರಿಯ ಯಶಸ್ಸನ್ನು ವರ್ಣಿಸಿ ತಮ್ಮ ವಾಣಿಯನ್ನು ಪವಿತ್ರ ಗೊಳಿಸಿ, ಮೋಕ್ಷ ಹಾಗೂ ದುರ್ಲಭವಾದ ಭಗವತ್ಪ್ರೇಮವನ್ನು ಕರುಣಿಸುವಂತಹುದನ್ನಾಗಿ ಮಾಡಿಕೊಳ್ಳುತ್ತಾರೆ. ಅದೇ ಆಧಾರದ ಮೇಲೆ ನಾನು ಭಗವಂತನ ಮಹಿಮೆಯನ್ನು ಯಥಾರ್ಥವಾಗಿ ವರ್ಣಿಸದಿದ್ದರೂ ಮಹಾನ್ ಫಲವನ್ನೀಯುವ ಭಜನವೆಂದೇ ತಿಳಿದು, ಭಗವತ್ಕೃಪೆಯ ಬಲದಿಂದಲೇ ಶ್ರೀರಾಮಚಂದ್ರನ ಚರಣಗಳಲ್ಲಿ ಮಣಿದು ರಘುನಾಥನ ಗಾಥೆಯನ್ನು ಹೇಳುತ್ತೇನೆ. ಇದಕ್ಕೆ ಮುನ್ನ ವಾಲ್ಮೀಕಿ, ವ್ಯಾಸರೇ ಮೊದಲಾದ ಮುನಿಗಳು ಹರಿಕಥೆಯನ್ನು ಹಾಡಿದ್ದಾರೆ. ಅಯ್ಯಾ! ಅದೇ ದಾರಿಯನ್ನು ಹಿಡಿಯುವುದು ನನಗೆ ಸುಲಭವಲ್ಲವೇ? ಆನೆ ಹೋದದ್ದೇ ದಾರಿ. (ಚೌ/೧-೫)

**ದೋ – ಅತಿ ಅಪಾರ ಜೇ ಸರಿತ ಬರ ಜೌ ನೃಪ ಸೇತು ಕರಾಹಿಂ ।**
**ಚಢ಼ಿಂ ಪಿಪೀಲಿಕಉ ಪರಮ ಲಘು ಬಿನು ಶ್ರಮ ಪಾರಹಿ ಜಾಹಿಂ ॥ ೧೩ ॥**

ದಾಟಲಾಗದ ಅತಿ ದೊಡ್ಡ ನದಿಯಿರಬಹುದು, ರಾಜನು ಅದರ ಮೇಲೆ ಸೆತುವೆ ಕಟ್ಟಿಸಿದರೆ ಸಣ್ಣ ಇರುವೆಗಳೂ ಕೂಡ ಅದರಮೇಲೆ ಕಷ್ಟವಿಲ್ಲದೆ ಹೊಳೆಯನ್ನು ದಾಟಬಲ್ಲವು. ಇದೇ ರೀತಿ ಮುನಿಗಳ ವರ್ಣನೆಯ ನೆರವಿನಿಂದ ನಾನೂ ಕೂಡ ಶ್ರೀರಾಮನ ಚರಿತ್ರವನ್ನು ಸಹಜವಾಗಿ ವರ್ಣಿಸಬಲ್ಲೆನು.(ದೋ/೧೩)

**ಚೌ – ಎಹಿ ಪ್ರಕಾರ ಬಲ ಮನಹಿ ದೆಖಾಈ । ಕರಿಹಉಂ ರಘುಪತಿ ಕಥಾ ಸುಹಾಈ ॥**
**ಬ್ಯಾಸ ಆದಿ ಕಬಿ ಪುಂಗವ ನಾನಾ । ಜಿನ್ಹ ಸಾದರ ಹರಿ ಸುಜಸ ಬಖಾನಾ ॥ ೧ ॥**
**ಚರನ ಕಮಲ ಬಂದಉಂ ತಿನ್ಹ ಕೇರೇ । ಪುರವಹುಂ ಸಕಲ ಮನೋರಥ ಮೇರೇ ॥**
**ಕಲಿ ಕೇ ಕಬಿನ್ಹ ಕರಉಂ ಪರನಾಮಾ । ಜಿನ್ಹ ಬರನೇ ರಘುಪತಿ ಗುನ ಗ್ರಾಮಾ ॥ ೨ ॥**
**ಜೇ ಪ್ರಾಕೃತ ಕಬಿ ಪರಮ ಸಯಾನೇ । ಭಾಷಾಂ ಜಿನ್ಹ ಹರಿ ಚರಿತ ಬಖಾನೇ ॥**
**ಭಏ ಜೆ ಅಹಹಿಂ ಜೆ ಹೋಇಹಹಿಂ ಆಗೇಂ । ಪ್ರನವಉಂ ಸಬಹಿ ಕಪಟ ಸಬ ತ್ಯಾಗೇಂ ॥ ೩ ॥**
**ಹೋಹು ಪ್ರಸನ್ನ ದೇಹು ಬರದಾನೂ । ಸಾಧು ಸಮಾಜ ಭನಿತಿ ಸನಮಾನೂ ॥**
**ಜೋ ಪ್ರಬಂಧ ಬುಧ ನಹಿಂ ಆದರಹೀಂ । ಸೋ ಶ್ರಮ ಬಾದಿ ಬಾಲ ಕಬಿ ಕರಹೀಂ ॥ ೪ ॥**
**ಕೀರತಿ ಭನಿತಿ ಭೂತಿ ಭಲಿ ಸೋಈ । ಸುರಸರಿ ಸಮ ಸಬ ಕಹಂ ಹಿತ ಹೋಈ ॥**
**ರಾಮ ಸುಕೀರತಿ ಭನಿತಿ ಭದೇಸಾ । ಅಸಮಂಜಸ ಅಸ ಮೋಹಿ ಅಂದೇಸಾ ॥ ೫ ॥**
**ತುಮ್ಹರೀ ಕೃಪಾಂ ಸುಲಭ ಸೋಉ ಮೋರೇ । ಸಿಅನಿ ಸುಹಾವನಿ ಟಾಟ ಪಟೋರೇ ॥ ೬ ॥**

ಈ ರೀತಿ ಮನಸ್ಸನ್ನು ಹುರಿದುಂಬಿಸಿಕೊಂಡು ನಾನು ರಘುಪತಿಯ ಮನೋಹರ ಕಥೆಯನ್ನು ಬಿತ್ತರಿಸುತ್ತೇನೆ. ವ್ಯಾಸರೇ ಮೊದಲಾದ ಹಲವಾರು ಕವಿಪುಂಗವರು ಆದರದಿಂದ ಶ್ರೀಹರಿಯ ಕೀರ್ತಿಯನ್ನು ಬಣ್ಣಿಸಿದ್ದಾರೆ. ನಾನು ಈ ಎಲ್ಲ ಶ್ರೇಷ್ಠಕವಿಗಳ ಚರಣಕಮಲಗಳಿಗೆ ಎರಗುತ್ತೇನೆ. ಅವರು ನನ್ನ ಎಲ್ಲ ಮನೋರಥಗಳನ್ನು ಈಡೇರಿಸಲಿ. ಶ್ರೀರಾಮನ ಗುಣಗ್ರಾಮವನ್ನು ಬಣ್ಣಿಸಿರುವ ಕಲಿಯುಗದ ಕವಿಗಳಿಗೂ ನಾನು ಪ್ರಣಾಮ ಮಾಡುತ್ತೇನೆ. ಜನಭಾಷೆಯಲ್ಲಿ (ಜಾನಪದದಲ್ಲಿ) ಶ್ರೀಹರಿಚರಿತವನ್ನು ವರ್ಣಿಸಿರುವ ಬುದ್ಧಿವಂತರಾದ ಪ್ರಾಕೃತ ಕವಿಗಳಿಗೂ ನಮಿಸುತ್ತೇನೆ. ಆಗಿಹೋದ ಕವಿಗಳಗೆ, ಹಳಬರಿಗೆ, ಹೊಸಬರಿಗೆ, ಇಂದು ಇರುವ ಕವಿಗಳಿಗೆ ಹಾಗೂ ಮುಂದೆ ಆಗಲಿರುವ ಕವಿಗಳಿಗೆ ಇವರೆಲ್ಲರಿಗೂ ನಾನು ನಿಃಸಂಕೋಚವಾಗಿ ಹಣೆ ಚಾಚುತ್ತೇನೆ. ನೀವೆಲ್ಲ ಪ್ರಸನ್ನರಾಗಿ ಸಾಧು ಸಮಾಜದಲ್ಲಿ ನನ್ನ ಕವಿತೆಗೆ ಮನ್ನಣೆ ದೊರೆಯುವಂತೆ ವರವನ್ನು ಕರುಣಿಸಿರಿ. ಏಕೆಂದರೆ, ಬುಧಜನರು ಆದರಿಸದ ಕವಿತೆಯನ್ನು ಬರೆಯುವ ವ್ಯರ್ಥಪ್ರಯಾಸವನ್ನು ಮೂರ್ಖ ಕವಿಗಳು ಮಾತ್ರಮಾಡುತ್ತಾರೆ. ಕೀರ್ತಿ, ಕವಿತೆ ಮತ್ತು ಐಶ್ವರ್ಯ ಇವುಗಳು ಗಂಗೆಯಂತೆ ಸರ್ವಹಿಕಾರಿಯಾಗಿದ್ದರೆ ಮಾತ್ರಚೆನ್ನು. ಶ್ರೀರಾಮಚಂದ್ರನ ಕೀರ್ತಿಯೋ ಅತ್ಯಂತ ಸುಂದರವಾದುದು. ನನ್ನ ಕವಿತೆಯೋ ಕುರೂಪಿ. ಇದೇ ಇಲ್ಲಿರುವ ಅಸಾಮಂಜಸ್ಯ, ಎಡವಟ್ಟು. ನನಗೆ ಇದರದೇ ಯೋಚನೆ. ಆದರೆ ಓ ಕವಿಚೇತನಗಳಿರಾ! ನಿಮ್ಮ ದಯೆಯಿಂದ ಇದೂ ಸರಿಹೋಗುತ್ತದೆ. ರೇಶ್ಮೆಯನೂಲಿನಿಂದ ಮಾಡಿದ ಕಸೂತಿಯು ಗೋಣಿತಾಟಿನಮೇಲಾದರೂ ಚೆಲುವಾಗಿಯೇ ಇರುತ್ತದಲ್ಲವೇ? (ಚೌ/೧-೬)

**ದೋ – ಸರಲ ಕಬಿತ ಕೀರತಿ ಬಿಮಲ ಸೋಇ ಆದರಹಿಂ ಸುಜಾನ ।**
**ಸಹಜ ಬಯರ ಬಿಸರಾಇ ರಿಪು ಜೋ ಸುನಿ ಕರಹಿಂ ಬಖಾನ ॥ ೧೪ (ಕ)॥**

**ಸೋ ನ ಹೋಇ ಬಿನು ಬಿಮಲ ಮತಿ ಮೊಹಿ ಮತಿ ಬಲ ಅತಿಥೋರ।**
**ಕರಹು ಕೃಪಾ ಹರಿ ಜಸ ಕಹಉ಼ँ ಪುನಿ ಪುನಿ ಕರಉ಼ँ ನಿಹೋರ ॥ ೧೪ (ಖ)॥**
**ಕಬಿ ಕೋಬಿದ ರಘುಬರ ಚರಿತ ಮಾನಸ ಮಂಜು ಮರಾಲ।**
**ಬಾಲ ಬಿನಯ ಸುನಿ ಸುರುಚಿ ಲಖಿ ಮೋ ಪರ ಹೋಹು ಕೃಪಾಲ ॥ ೧೪ (ಗ) ॥**

ಸರಳವಾಗಿದ್ದು, ನಿಷ್ಕಳಂಕವಾದ ಚರಿತ್ರದ ವರ್ಣನೆ ಇರುವ ಕವಿತೆಯನ್ನೇ ಚತುರ ಸಜ್ಜನರು ಮೆಚ್ಚಿಕೊಳ್ಳುತ್ತಾರೆ. ಶತ್ರುಗಳೂ ಕೂಡ ಸ್ವಾಭಾವಿಕ ವೈರವನ್ನು ಮರೆತು ಅದನ್ನು ಹೊಗಳುತ್ತಾರೆ. ಇಂತಹ ಕವಿತೆಯು ನಿರ್ಮಲ ಬುದ್ಧಿಯಿಲ್ಲದೆ ಮೂಡಲಾರದು. ನನ್ನ ಬುದ್ಧಿಬಲವೋ ಅತ್ಯಲ್ಪ. ಆದ್ದರಿಂದ ನಾನು ನಿಮ್ಮಲ್ಲಿ ಮತ್ತೆ-ಮತ್ತೆ ಬೇಡಿಕೊಳ್ಳುತ್ತೇನೆ. ಓ ಕವಿಗಳಿರಾ! ನಾನು ಶ್ರೀಹರಿಯ ಕೀರ್ತಿಯನ್ನು ವರ್ಣಿಸಲು ಸಮರ್ಥನಾಗುವಂತೆ ಕೃಪೆಮಾಡಿರಿ. ಕವಿಜನರೇ! ಪಂಡಿತೋತ್ತಮರೇ! ಶ್ರೀರಘುವರನ ಚರಿತವೆಂಬ ಮಾನಸ ಸರೋವರದ ಹಂಸಗಳಾದ ನೀವು ಈ ಹಸುಳೆಯ ಬಿನ್ನಪವನ್ನು ಲಾಲಿಸಿರಿ. ಇದರಲ್ಲಿ ಸುರುಚಿಯನ್ನು ಕಂಡು ನನ್ನ ಮೇಲೆ ಕೃಪೆದೋರಿರಿ. (ದೋ/೧೪ ಕ, ಖ, ಗ)

**ಸೋ – ಬಂದಉ಼ँ ಮುನಿ ಪದ ಕಂಜು ರಾಮಾಯನ ಜೆಹಿँ ನಿರಮಯಉ ।**
**ಸಖರ ಸುಕೋಮಲ ಮಂಜು ದೋಷ ರಹಿತ ದೂಷನ ಸಹಿತ ॥ ೧೪ (ಘ) ॥**
**ಬಂದಉ಼ँ ಚಾರಿಉ ಬೇದ ಭವ ಬಾರಿಧಿ ಬೋಹಿತ ಸರಿಸ ।**
**ಜಿನ್ಹಹಿ ನ ಸಪನೇಹುँ ಖೇದ ಬರನತ ರಘುಬರ ಬಿಸದ ಜಸು ॥ ೧೪ (ಙ) ॥**
**ಬಂದಉ಼ँ ಬಿಧಿ ಪದ ರೇನು ಭವ ಸಾಗರ ಜೆಹಿँ ಕೀನ್ಹ ಜಹँ ।**
**ಸಂತ ಸುಧಾ ಸಸಿ ಧೇನು ಪ್ರಗಟೇ ಖಲ ಬಿಷ ಬಾರುನೀ ॥ ೧೪ (ಚ) ॥**

ರಾಮಾಯಣವನ್ನು ಬರೆದ ವಾಲ್ಮೀಕಿಮುನಿಯ ಪಾದಪದ್ಮಗಳಿಗೆ ನಮೋ ನಮಃ. ಅವರ ಮಂಜುಲ ರಾಮಾಯಣವು ಖರ(ಒಬ್ಬರಾಕ್ಷಸ)ಸಹಿತವಾಗಿದ್ದರೂ (ಖರ ಅಂದರೆ ಕಠಿಣ) ಅತ್ಯಂತ ಕೋಮಲವಾಗಿದೆ; ಸುಂದರವಾಗಿದೆ. ಮತ್ತೆ ದೂಷಣ(ಒಬ್ಬ ರಾಕ್ಷಸ) ಸಹಿತವಾಗಿದ್ದರೂ (ದೂಷಣ ಅಂದರೆ ದೋಷ) ದೋಷರಹಿತವಾಗಿದೆ. ಸಂಸಾರಸಾಗರವನ್ನು ದಾಟಲು ಹಡಗಿನಂತಿರುವ ಹಾಗೂ ಶ್ರೀರಾಮನ ವಿಶದ ಯಶಸ್ಸನ್ನು ವರ್ಣಿಸುವಲ್ಲಿ ಕನಸಿನಲ್ಲೂ ಖೇದಪಡದ ನಾಲ್ಕು ವೇದಗಳಿಗೂ ನಮಿಸುತ್ತೇನೆ. ಬ್ರಹ್ಮನಿರ್ಮಿತ ಈ ಭವಸಾಗರದಿಂದ ಒಂದೆಡೆ ಸಂತರೆಂಬ ಅಮೃತ, ಚಂದ್ರ, ಕಾಮಧೇನು ಮೂಡಿದರೆ, ಮತ್ತೊಂದೆಡೆ ದುಷ್ಟಜನರೆಂಬ ವಿಷ, ಮದಿರೆಯೂ ಹುಟ್ಟಿಕೊಂಡಿದೆ. ಇಂತಹ ಸೃಷ್ಟಿಕರ್ತನಾದ ಬ್ರಹ್ಮದೇವರ ಚರಣ ರೇಣುವಿನಲ್ಲಿ ನಾನು ಮಣಿಯುತ್ತೇನೆ. (ಸೋ/೧೪ ಘ, ಙ, ಚ)

**ದೋ – ಬಿಬುಧ ಬಿಪ್ರ ಬುಧ ಗ್ರಹ ಚರನ ಬಂದಿ ಕಹಉ಼ँ ಕರ ಜೋರಿ ।**
**ಹೋಇ ಪ್ರಸನ್ನ ಪುರವಹು ಸಕಲ ಮಂಜು ಮನೋರಥ ಮೋರಿ ॥ ೧೪ (ಛ) ॥**

ದೇವತೆಗಳೂ, ಬ್ರಾಹ್ಮಣರೂ, ಪಂಡಿತರೂ, ನವಗ್ರಹಗಳೂ, ಇವರೆಲ್ಲರ ಚರಣಗಳಲ್ಲಿ ವಂದನೆ ಸಲ್ಲಿಸಿ ಕೈಜೋಡಿಸಿ- ''ನೀವು ಪ್ರಸನ್ನರಾಗಿ ನನ್ನ ಎಲ್ಲ ಮನೋರಥಗಳನ್ನು ಕೈಗೂಡಿಸಿಕೊಡಿ'' ಎಂದು ಬೇಡಿಕೊಳ್ಳುತ್ತೇನೆ. (ದೋ/೧೪ ಛ)

**ಚೌ – ಪುನಿ ಬಂದಉ಼ँ ಸಾರದ ಸುರಸರಿತಾ । ಜುಗಲ ಪುನೀತ ಮನೋಹರ ಚರಿತಾ ॥**
**ಮಜ್ಜನ ಪಾನ ಪಾಪ ಹರ ಏಕಾ । ಕಹತ ಸುನತ ಏಕ ಹರ ಅಬಿಬೇಕಾ ॥ ೧ ॥**
**ಗುರ ಪಿತು ಮಾತು ಮಹೇಸ ಭವಾನೀ । ಪ್ರನವಉ಼ँ ದೀನಬಂಧು ದಿನ ದಾನೀ ॥**
**ಸೇವಕ ಸ್ವಾಮಿ ಸಖಾ ಸಿಯ ಪೀ ಕೇ । ಹಿತ ನಿರುಪಧಿ ಸಬ ಬಿಧಿ ತುಲಸೀ ಕೇ ॥ ೨ ॥**
**ಕಲಿ ಬಿಲೋಕಿ ಜಗ ಹಿತ ಹರ ಗಿರಿಜಾ । ಸಾಬರ ಮಂತ್ರ ಜಾಲ ಜಿನ್ಹ ಸಿರಿಜಾ ॥**
**ಅನಮಿಲ ಆಖರ ಅರಥ ನ ಜಾಪೂ । ಪ್ರಗಟ ಪ್ರಭಾಉ ಮಹೇಸ ಪ್ರತಾಪೂ ॥ ೩ ॥**
**ಸೋ ಉಮೇಸ ಮೊಹಿ ಪರ ಅನುಕೂಲಾ । ಕರಿಹಿँ ಕಥಾ ಮುದ ಮಂಗಲ ಮೂಲಾ ॥**
**ಸುಮಿರಿ ಸಿವಾ ಸಿವ ಪಾಇ ಪಸಾಊ । ಬರನಉ಼ँ ರಾಮಚರಿತ ಚಿತ ಚಾಊ ॥ ೪ ॥**

**ಭನಿತಿ ಮೋರಿ ಸಿವ ಕೃಪಾँ ಬಿಭಾತೀ । ಸಸಿ ಸಮಾಜ ಮಿಲಿ ಮನಹುँ ಸುರಾತೀ ॥**
**ಜೇ ಏಹಿ ಕಥಹಿ ಸನೇಹ ಸಮೇತಾ । ಕಹಿಹಹಿँ ಸುನಿಹಹಿँ ಸಮುಝಿ ಸಚೇತಾ ॥ ೫ ॥**
**ಹೋಇಹಹಿँ ರಾಮ ಚರನ ಅನುರಾಗೀ । ಕಲಿ ಮಲ ರಹಿತ ಸುಮಂಗಲ ಭಾಗೀ ॥ ೬ ॥**

ಪುನಃ ನಾನು ಶಾರದೆ ಹಾಗೂ ದೇವನದಿ ಗಂಗೆಗೆ ನಮಿಸುತ್ತೇನೆ. ಇಬ್ಬರೂ ಪವಿತ್ರರೂ, ಮನೋಹರ ಚರಿತ್ರವುಳ್ಳವರೂ ಆಗಿದ್ದಾರೆ. ಗಂಗೆಯುಸ್ನಾನಪಾನಗಳಿಂದ ನಮ್ಮ ಪಾಪಗಳನ್ನು ಕಳೆಯುತ್ತಾಳೆ. ಸರಸ್ವತಿಯು ಗುಣಕೀರ್ತಿಸ್ತವನ, ಶ್ರವಣ ಮಾಡುವುದರಿಂದ ನಮ್ಮ ಅಜ್ಞಾನವನ್ನು ತೊಲಗಿಸುತ್ತಾಳೆ. ನನ್ನ ಗುರುಗಳೂ, ತಾಯಿ-ತಂದೆಗಳೂ ಆದ ದೀನಬಂಧುವೂ, ನಿತ್ಯದಾನಿಯೂ, ಸೀತಾರಾಮರ ಸೇವಕರೂ, ಸಖರೂ, ಜಗತ್ತಿನ ಸ್ವಾಮಿಯೂ, ಈ ತುಳಸಿದಾಸನ ಮೇಲೆ ನಿರುಪಾಧಿಕವಾಗಿ ಹಿತವನ್ನು ಕೋರುವಂತಹ, ಆದಿ ದಂಪತಿಗಳಾದ ಪಾರ್ವತೀ-ಪರಮೇಶ್ವರರಿಗೆ ನಾನು ಪ್ರಣಾಮ ಮಾಡುತ್ತೇನೆ. ಈ ಶಿವ-ಪಾರ್ವತಿಯರು ಕಲಿಯುಗವನ್ನು ಕಂಡು, ಜಗತ್‌ಕಲ್ಯಾಣಕ್ಕಾಗಿ ಶಾಬರ ಮಂತ್ರಸಮೂಹವನ್ನು ನಿರ್ಮಿಸಿದರು. ಈ ಮಂತ್ರಗಳ ಅಕ್ಷರಗಳು ಒಂದಕ್ಕೊಂದು ಸಾಮ್ಯವಿಲ್ಲದ್ದು. ಇವುಗಳ ಸರಯಾದ ಅರ್ಥ ಹೇಳಲೂ ಬರುವುದಿಲ್ಲ. ಜಪಕ್ಕೂ ಇದು ಬಾರದು. ಇಷ್ಟಾದರೂ ಶಿವಪ್ರಭಾವದಿಂದ ಈ ಮಂತ್ರಗಳ ಪ್ರಭಾವವು ನಿಚ್ಚಳವಾಗಿದೆ. ಇಂತಹ ಉಮಾರಮಣ ಶಂಕರನು ನನಗೆ ಒಲಿದು ಶ್ರೀರಾಮನ ಈ ಕಥೆಯನ್ನು ಮಂಗಳ ಮತ್ತು ಆನಂದದ ಮೂಲ(ಉನ್ನತವಾಗಿಸುವ) ವನ್ನಾಗಿ ಮಾಡುವನು. ಈ ಪ್ರಕಾರ ಶಿವ-ಶಿವೆಯರನ್ನು ನುತಿಸಿ, ಅವರ ಪ್ರಸಾದವನ್ನು ಪಡೆದು ನಾನು ಆಸಕ್ತ ಚಿತ್ತನಾಗಿ ಶ್ರೀರಾಮಚರಿತ್ರವನ್ನು ವರ್ಣಿಸುತ್ತೇನೆ. ಶಿವನ ಕೃಪೆಯಿಂದ ನನ್ನ ಕವಿತೆಯು ತಾರಾಗಣಗಳಿಂದ ಕೂಡಿದ ಚಂದ್ರನೊಡನೆ ರಾತ್ರಿಯು ಶೋಭಿಸುವಂತೆ ಶೋಭಿಸುತ್ತದೆ. ಈ ಕಥೆಯನ್ನು ಪ್ರೇಮಪೂರ್ವಕ ಹಾಗೂ ಸಾವಧಾನರಾಗಿ ಅರ್ಥಮಾಡಿಕೊಂಡು ಹೇಳುವರೋ, ಕೇಳುವರೋ ಅವರು ಕಲಿಮಲರಹಿತರಾಗಿ ಸನ್ಮಂಗಳಕ್ಕೆ ಪಾತ್ರರಾಗಿ ಶ್ರೀರಾಮಚರಣಾನುರಾಗಿಗಳಾಗುತ್ತಾರೆ. (ಚೌ/೧-೬)

**ದೋ – ಸಪನೆಹುँ ಸಾಚೆಹುँ ಮೋಹಿ ಪರ ಜೌँ ಹರ ಗೌರಿ ಪಸಾಉ ।**
**ತೌ ಫುರ ಹೋಉ ಜೊ ಕಹೆಉँ ಸಬ ಭಾಷಾ ಭನಿತಿ ಪ್ರಭಾಉ ॥ ೧೫ ॥**

ಹರಗೌರಿಯರು ಕನಸಿನಲ್ಲಾದರೂ ಸರಿ ನನಗೆ ಒಲಿದರೆ ನನ್ನ ಈ ಜನಭಾಷಾ ಕವಿತೆಯ ಪ್ರಭಾವದ ಬಗೆಗೆ ನಾನು ಹೇಳಿದ ಮಾತು ನಿಜವಾದೀತು. (ದೋ/೧೫)

**ಚೌ – ಬಂದಉँ ಅವಧ ಪುರೀ ಅತಿ ಪಾವನಿ । ಸರಜೂ ಸರಿ ಕಲಿ ಕಲುಷ ನಸಾವನಿ ॥**
**ಪ್ರನವउँ ಪುರ ನರ ನಾರಿ ಬಹೋರೀ । ಮಮತಾ ಜಿನ್ಹ ಪರ ಪ್ರಭುಹಿ ನ ಥೋರೀ ॥ ೧ ॥**
**ಸಿಯ ನಿಂದಕ ಅಘ ಓಘ ನಸಾಏ । ಲೋಕ ಬಿಸೋಕ ಬನಾಇ ಬಸಾಏ ॥**
**ಬಂದಉँ ಕೌಸಲ್ಯಾ ದಿಸಿ ಪ್ರಾಚೀ । ಕೀರತಿ ಜಾಸು ಸಕಲ ಜಗ ಮಾಚೀ ॥ ೨ ॥**
**ಪ್ರಗಟೇಉ ಜಹँ ರಘುಪತಿ ಸಸಿ ಚಾರೂ । ಬಿಸ್ವ ಸುಖದ ಖಲ ಕಮಲ ತುಸಾರೂ ॥**
**ದಸರಥ ರಾಉ ಸಹಿತ ಸಬ ರಾನೀ । ಸುಕೃತ ಸುಮಂಗಲ ಮೂರತಿ ಮಾನೀ ॥ ೩ ॥**
**ಕರಉँ ಪ್ರನಾಮ ಕರಮ ಮನ ಬಾನೀ । ಕರಹು ಕೃಪಾ ಸುತ ಸೇವಕ ಜಾನೀ ॥**
**ಜಿನ್ಹಹಿ ಬಿರಚಿ ಬಡ़ ಭಯಉ ಬಿಧಾತಾ । ಮಹಿಮಾ ಅವಧಿ ರಾಮ ಪಿತು ಮಾತಾ ॥ ೪ ॥**

ಅತ್ಯಂತ ಪವಿತ್ರವಾದ ಅಯೋಧ್ಯಾಪುರಿ ಹಾಗೂ ಕಲಿಕಲುಷವನ್ನು ನಾಶಮಾಡುವ ಸರಯೂ ನದಿ ಇವುಗಳಿಗೆ ನಾನು ಎರಗುತ್ತೇನೆ. ಮತ್ತೆ ಶ್ರೀರಾಮನ ಅಸೀಮ ಮಮತೆಗೆ ಪಾತ್ರರಾದ ಅಯೋಧ್ಯೆಯ ನರ-ನಾರಿಯರಿಗೆ ನಮಿಸುತ್ತೇನೆ. ಶ್ರೀರಾಮನು ತನ್ನ ಊರಿನಲ್ಲಿರುವ ಮಹಾಸಾಧ್ವಿಯಾದ ಸೀತೆಯನ್ನು ನಿಂದಿಸಿದ ಅಗಸ ಹಾಗೂ ಅವನ ಸಮರ್ಥಕರಾದ ಊರಜನರನ್ನು ಕೂಡ ಪಾಪಸಮೂಹದಿಂದ ಪಾರುಗೊಳಿಸಿ, ಶೋಕರಹಿತರನ್ನಾಗಿ ಮಾಡಿ ತನ್ನ ಧಾಮವಾದ ವೈಕುಂಠದಲ್ಲಿ ನೆಲೆಗೊಳಿಸಿದನು. ಜಗತ್ತಿನಲ್ಲೇ ತನ್ನ ಕೀರ್ತಿಯನ್ನು ದಿಗಂತ ವಿಶ್ರಾಂತಗೊಳಿಸಿರುವ ಕೌಸಲ್ಯಾರೂಪೀ ಮೂಡುದಿಕ್ಕಿಗೆ ಮಣಿಯುವೆ. ಈ ಕೌಸಲ್ಯೆಯೆಂಬ ಮಡಿಲಿನಲ್ಲಿ ವಿಶ್ವಕಕ್ಕೆ ಸುಖವನ್ನುಂಟುಮಾಡಲು, ದುಷ್ಟರೆಂಬ ಕಮಲಕ್ಕೆ ಹಿಮದಂತಿರುವ ಶ್ರೀರಾಮಚಂದ್ರನೆಂಬ ಚೆಲುವ ಚಂದ್ರಮನು ಮೂಡಿದನು. ಎಲ್ಲ ರಾಣಿಯರಿಂದ ಕೂಡಿದ ರಾಜಾದಶರಥನನ್ನು ಪುಣ್ಯಶಾಲಿ ಮತ್ತು ಸುಂದರ ಮಂಗಳಮೂರ್ತಿ ಎಂದು ಭಾವಿಸಿ ಅವನಿಗೆ ಮನಸಾ, ವಾಚಾ, ಕರ್ಮಣಾ ಪ್ರಣಾಮ ಮಾಡುತ್ತೇನೆ. ತಮ್ಮ ಮಗನ ಸೇವಕನೆಂದು ತಿಳಿದು ಅವರು ನನ್ನ ಮೇಲೆ ದಯೆಗೈಯಲಿ. ಇವರನ್ನು ಸೃಷ್ಟಿಸಿದ ವಿರಂಚಿಯೂ ಕೂಡ ಗೌರವವನ್ನು ಪಡೆದನು. ಶ್ರೀರಾಮಚಂದ್ರನ ತಾಯಿ-ತಂದೆಗಳಾದುದರಿಂದ ಇವರು ಮಹಿಮೆಯು ಅಸೀಮವಾದುದು. (ಚೌ/೧-೪)

**ಸೋ – ಬಂದಉಁ ಅವಧ ಭುಆಲ ಸತ್ಯ ಪ್ರೇಮ ಜೆಹಿ ರಾಮ ಪದ ।**
**ಬಿಛುರತ ದೀನದಯಾಲ ಪ್ರಿಯ ತನು ತೃನ ಇವ ಪರಿಹರೆಉ ॥ ೧೬ ॥**

ಶ್ರೀರಾಮಚಂದ್ರನ ಮೇಲೆ ಹೆಚ್ಚಿನ ಪ್ರೇಮವಿರಿಸಿದ,ಅವನ ವಿಯೋಗವನ್ನು ಸಹಿಸಲಾರದೆ ತನ್ನ ಪ್ರಿಯತನುವನ್ನು ತೃಣದಂತೆ ಗಣಿಸಿ ತೊರೆದು ಬಿಟ್ಟಿರುವ ಅಯೋಧ್ಯಾಪತಿಯಾದ ದಶರಥನಿಗೆ ವಂದಿಸುತ್ತೇನೆ. (ಸೋ/೧೬)

**ಚೌ – ಪ್ರನವಉಁ ಪರಿಜನ ಸಹಿತ ಬಿದೇಹೂ । ಜಾಹಿ ರಾಮ ಪದ ಗೂಢ ಸನೇಹೂ ॥**
**ಜೋಗ ಭೋಗ ಮಹಁ ರಾಖೆಉ ಗೋಈ । ರಾಮ ಬಿಲೋಕತ ಪ್ರಗಟೆಉ ಸೋಈ ॥ ೧ ॥**
**ಪ್ರನವಉಁ ಪ್ರಥಮ ಭರತ ಕೇ ಚರನಾ । ಜಾಸು ನೇಮ ಬ್ರತ ಜಾಇ ನ ಬರನಾ ॥**
**ರಾಮ ಚರನ ಪಂಕಜ ಮನ ಜಾಸೂ । ಲುಬುಧ ಮಧುಪ ಇವ ತಜಇ ನ ಪಾಸೂ ॥ ೨ ॥**
**ಬಂದಉಁ ಲಛಿಮನ ಪದ ಜಲಜಾತಾ । ಸೀತಲ ಸುಭಗ ಭಗತ ಸುಖ ದಾತಾ ॥**
**ರಘುಪತಿ ಕೀರತಿ ಬಿಮಲ ಪತಾಕಾ । ದಂಡ ಸಮಾನ ಭಯಉ ಜಸ ಜಾಕಾ ॥ ೩ ॥**
**ಸೇಷ ಸಹಸ್ರಸೀಸ ಜಗ ಕಾರನ । ಜೋ ಅವತರೆಉ ಭೂಮಿ ಭಯ ಟಾರನ ॥**
**ಸದಾ ಸೊ ಸಾನುಕೂಲ ರಹ ಮೋ ಪರ । ಕೃಪಾಸಿಂಧು ಸೌಮಿತ್ರಿ ಗುನಾಕರ ॥ ೪ ॥**
**ರಿಪುಸೂದನ ಪದ ಕಮಲ ನಮಾಮೀ । ಸೂರ ಸುಸೀಲ ಭರತ ಅನುಗಾಮೀ ॥**
**ಮಹಾಬೀರ ಬಿನವಉಁ ಹನುಮಾನಾ । ರಾಮ ಜಾಸು ಜಸ ಆಪ ಬಖಾನಾ ॥ ೫ ॥**

ನಾನು ಪರಿವಾರ ಸಹಿತ ವಿದೇಹಿಯಾದ ಶ್ರೀಜನಕನಿಗೂ ವಂದಿಸುತ್ತೇನೆ. ಈತನಿಗೆ ರಾಮಚರಣಗಳಲ್ಲಿ ಗೂಢ ಮತ್ತು ಗಾಢವಾದ ಪ್ರೇಮವಿತ್ತು. ಅದನ್ನು ಅವರು ಯೋಗ-ಭೋಗಗಳಲ್ಲಿ ಅಡಗಿಸಿಟ್ಟಿದ್ದರೂ, ಶ್ರೀರಾಮಚಂದ್ರನನ್ನು ನೋಡುತ್ತಲೇ ಅದು ಬಯಲಾಯಿತು. ಭರತನ ನಿಯಮಗಳು, ವ್ರತಗಳು ವರ್ಣನಾತೀತವಾದವುಗಳು. ಅವನ ಮನಸ್ಸು ಶ್ರೀರಾಮಚಂದ್ರನ ಚರಣಕಮಲಗಳಲ್ಲಿ ಭ್ರಮರದಂತೆ ನೆಲೆಸಿದ್ದು, ಅದು ಅಲ್ಲಿಂದ ಸರಿಯಲೇ ಒಲ್ಲದು. ಅಂತಹ ಶ್ರೀರಾಮನ ತಮ್ಮಂದಿರಲ್ಲಿಮೊಟ್ಟಮೊದಲಿಗೆ ಶ್ರೀಭರತನ ಚರಣಗಳಿಗೆ ನಮಿಸುತ್ತೇನೆ. ಇನ್ನು ಶ್ರೀಲಕ್ಷ್ಮಣನ ಪಾದಪದ್ಮಗಳಿಗೆ ವಂದನೆ. ಈತನು ಶೀತಲ, ಸುಂದರ ಭಕ್ತರಿಗೆ ಸುಖದಾಯಕನಾಗಿದ್ದಾನೆ. ಶ್ರೀರಘುನಾಥನ ಕೀರ್ತಿಯ ವಿಮಲ ಪತಾಕೆಯಲ್ಲಿ ಲಕ್ಷ್ಮಣನ ಯಶಸ್ಸು ಆ ಬಾವುಟವನ್ನು ಧರಿಸಿದ ದಂಡದಂತಿದೆ. ಭೂಮಿಯನ್ನು ಹೊತ್ತು ನಿಂತಿರುವ ಸಾವಿರ ಹೆಡೆಯುಳ್ಳ ಆದಿಶೇಷನೇ ಭೂಭಯವನ್ನು ನಿವಾರಣೆಗೈಯ್ಯಲು ಲಕ್ಷ್ಮಣನಾಗಿ ಅವತಾರ ತಳೆದಿದ್ದಾನೆ. ಈ ಗುಣಗಣಿ, ಕೃಪಾಸಿಂಧು, ಸುಮಿತ್ರಾನಂದನ ಲಕ್ಷ್ಮಣನು ಯಾವಾಗಲೂ ನನಗೆ ಒಲಿದಿರಲಿ. ರಿಪುಸೂದನನೂ, ಮಹಾವೀರನೂ, ಸುಶೀಲನೂ, ಸದಾಕಾಲ ಭರತನ ಅನುಗಾಮಿಯಾದ ಶ್ರೀಶತ್ರುಘ್ನನಿಗೆ ನಾನು ನಮಸ್ಕಾರ ಮಾಡುತ್ತೇನೆ. ಮಹಾವೀರನಾದ ಶ್ರೀಹನುಮಂತನಿಗೆ ನಮೋ ನಮೋ. ಈತನ ಕೀರ್ತಿಯನ್ನು ಸ್ವತಃ ಶ್ರೀರಾಮನೇ ಹೊಗಳಿದ್ದಾನೆ.(ಚೌ/೧-೫)

**ಸೋ – ಪ್ರನವಉಁ ಪವನಕುಮಾರ ಖಲ ಬನ ಪಾವಕ ಗ್ಯಾನಘನ ।**
**ಜಾಸು ಹೃದಯ ಆಗಾರ ಬಸಹಿಁ ರಾಮ ಸರ ಚಾಪ ಧರ ॥ ೧೭ ॥**

ಜ್ಞಾನಘನನಾದ, ದುಷ್ಟರಾದ ರಕ್ಕಸರ ವನವನ್ನು ಭಸ್ಮ ಮಾಡುವ ದಾವಾಗ್ನಿಯಂತಿರುವ, ತನ್ನ ಹೃದಯಮಂದಿರದಲ್ಲಿ ಬಾಣಕೋದಂಡಪಾಣಿಯಾದ ಶ್ರೀರಾಮನನ್ನು ಇರಿಸಿಕೊಂಡಿರುವ ಪವನ ಕುಮಾರ ಶ್ರೀಆಂಜನೇಯಸ್ವಾಮಿಗೆ ಪುನಃ ನಮೋ ನಮಃ. (ಸೊ/೧೭)

**ಚೌ – ಕಪಿಪತಿ ರೀಛ ನಿಸಾಚರ ರಾಜಾ । ಅಂಗದಾದಿ ಜೇ ಕೀಸ ಸಮಾಜಾ ॥**
**ಬಂದಉಁ ಸಬ ಕೇ ಚರನ ಸುಹಾಏ । ಅಧಮ ಸರೀರ ರಾಮ ಜಿನ್ಹ ಪಾಏ ॥ ೧ ॥**
**ರಘುಪತಿ ಚರನ ಉಪಾಸಕ ಜೇತೇ । ಖಗ ಮೃಗ ಸುರ ನರ ಅಸುರ ಸಮೇತೇ ॥**
**ಬಂದಉಁ ಪದ ಸರೋಜ ಸಬ ಕೇರೇ । ಜೇ ಬಿನು ಕಾಮ ರಾಮ ಕೇ ಚೇರೇ ॥ ೨ ॥**
**ಸುಕ ಸನಕಾದಿ ಭಗತ ಮುನಿ ನಾರದ । ಜೇ ಮುನಿಬರ ಬಿಗ್ಯಾನ ಬಿಸಾರದ ॥**
**ಪ್ರನವಉಁ ಸಬಹಿ ಧರನಿ ಧರಿ ಸೀಸಾ । ಕರಹು ಕೃಪಾ ಜನ ಜಾನಿ ಮುನೀಸಾ ॥ ೩ ॥**
**ಜನಕಸುತಾ ಜಗ ಜನನಿ ಜಾನಕೀ । ಅತಿಸಯ ಪ್ರಿಯ ಕರುನಾ ನಿಧಾನ ಕೀ ॥**
**ತಾಕೇ ಜುಗ ಪದ ಕಮಲ ಮನಾವಉಁ । ಜಾಸು ಕೃಪಾಁ ನಿರಮಲ ಮತಿ ಪಾವಉಁ ॥ ೪ ॥**

**ಪುನಿ ಮನ ಬಚನ ಕರ್ಮ ರಘುನಾಯಕ । ಚರನ ಕಮಲ ಬಂದಉಁ ಸಬ ಲಾಯಕ ॥**
**ರಾಜಿವನಯನ ಧರೇಂ ಧನು ಸಾಯಕ । ಭಗತ ಬಿಪತಿ ಭಂಜನ ಸುಖ ದಾಯಕ ॥ ೫ ॥**

ಕಪಿರಾಜ ಸುಗ್ರೀವನಿಗೆ, ಕರಡಿಗಳೊಡೆಯನಾದ ಜಾಂಬವಂತನಿಗೆ, ನಿಶಾಚರರಾಜನಾದ ವಿಭೀಷಣನಿಗೆ, ಯುವರಾಜ ಅಂಗದನೇ ಮೊದಲಾದ ಎಲ್ಲ ವಾನರ ಸಮುದಾಯಕ್ಕೆ, ಇವರ ಸುಂದರ ಚರಣಗಳಲ್ಲಿ ನಾನು ಹಣೆಚಾಚುತ್ತೇನೆ. ಇವರು ಅಧಮ ಶರೀರದಲ್ಲಿದ್ದರೂ ಶ್ರೀರಾಮಚಂದ್ರನನ್ನು ಪಡೆದುಕೊಂಡ ಮಹಾನು ಭಾವರು. ಶ್ರೀರಾಮನ ಪದಕಮಲಗಳನ್ನು ನಿಷ್ಕಾಮ ಭಕ್ತಿಯಿಂದ ಆರಾಧಿಸಿ, ಸೇವಿಸಿದ ಪಕ್ಷಿಗಳೂ, ಮೃಗಗಳೂ, ದೇವತೆಗಳೂ, ಮನುಷ್ಯರೂ,ಅಸುರರೂ ಇವರೆಲ್ಲರ ಚರಣಾರವಿಂದಗಳಲ್ಲಿ ನಾನು ನಮಸ್ಕರಿಸುತ್ತೇನೆ. ಭಕ್ತರೂ, ಪರಮಜ್ಞಾನಿಗಳೂ, ಶ್ರೇಷ್ಠಮುನಿಗಳೂ ಆದ ಶುಕ, ಸನಕ, ನಾರದರೇ ಮೊದಲಾದವರಿಗೆ ನೆಲಕ್ಕೆ ತಲೆಯಿಟ್ಟು ಪ್ರಣಾಮ ಮಾಡುತ್ತೇನೆ. ಓ ಮುನೀಶ್ವರರೇ! ನೀವೆಲ್ಲರೂ ನನ್ನನ್ನು ತಮ್ಮ ದಾಸನೆಂದು ಬಗೆದು ಕೃಪೆದೋರಿರಿ. ಜನಕರಾಜಕುಮಾರಿಯೂ, ಜಗಜ್ಜನನಿಯೂ, ಕರುಣಾನಿಧಾನ ಶ್ರೀರಾಮನ ಪ್ರಾಣಪ್ರಿಯಳೂ ಆದ ಜಾನಕಿಯ ಅಡಿದಾವರೆಗಳಲ್ಲಿ ನಾನು ಮಣಿಯುತ್ತೇನೆ. ಈಕೆಯ ಕೃಪೆಯಿಂದ ನನಗೆ ನಿರ್ಮಲ ಬುದ್ಧಿಯು ದೊರಕಲಿ. ಮತ್ತು ಕಮಲನಯನನೂ, ಧನುರ್ಬಾಣಗಳನ್ನು ಧರಿಸಿರುವವನೂ, ಭಕ್ತರ ವಿಪತ್ತನ್ನು ದೂರಗೊಳಿಸಿ ಸುಖ ನೀಡುವವನೂ ಆದ ಶ್ರೀರಘುನಾಯಕನ ಸರ್ವಸಮರ್ಥವಾದ ಚರಣಕಮಲಗಳಿಗೆ ನಾನು ಮನ,ವಚನ,ಕರ್ಮಗಳೆಂಬ ತ್ರಿಕರಣಪೂರ್ವಕವಾಗಿ ನಮಿಸುತ್ತೇನೆ. (ಚೌ/೧-೫)

**ದೋ – ಗಿರಾ ಅರಥ ಜಲ ಬೀಚಿ ಸಮ ಕಹಿ ಅತ ಭಿನ್ನ ನ ಭಿನ್ನ ।**
**ಬಂದಉಁ ಸೀತಾ ರಾಮ ಪದ ಜಿನ್ಹಹಿ ಪರಮ ಪ್ರಿಯ ಖಿನ್ನ ॥ ೧೮ ॥**

ವಾಣಿ ಮತ್ತು ಅದರ ಅರ್ಥ, ನೀರು ಮತ್ತು ಅದರ ಅಲೆ ನೋಡಲು, ಹೇಳಲು ಬೇರೆ-ಬೇರೆಯಾಗಿ ಕಂಡರೂ ನಿಜವಾಗಿ ಅಭಿನ್ನವೇ ಆಗಿದೆ. ಹಾಗೆಯೇ ಸೀತಾರಾಮರು ಭಿನ್ನ-ಭಿನ್ನ ರೂಪದಿಂದ ಕಂಡು ಬಂದರೂ ಅಭಿನ್ನರೇ. ದೀನದುಃಖಿತರ ಮೇಲೆ ದಯೆ ದೋರುವ ಆ ಪವಿತ್ರ ಆದಿದಂಪತಿಗಳ ಚರಣಗಳಿಗೆ ವಂದಿಸಿಕೊಳ್ಳುತ್ತೇನೆ. (ದೋ/೧೮)

# ಶ್ರೀರಾಮನಾಮದ ಮಹಿಮೆ

**ಚೌ – ಬಂದಉಁ ನಾಮ ರಾಮ ರಘುಬರ ಕೋ । ಹೇತು ಕೃಸಾನು ಭಾನು ಹಿಮಕರ ಕೋ ॥**
**ಬಿಧಿ ಹರಿ ಹರಮಯ ಬೇದ ಪ್ರಾನ ಸೋ । ಅಗುನ ಅನೂಪಮ ಗುನ ನಿಧಾನ ಸೋ ॥ ೧ ॥**
**ಮಹಾಮಂತ್ರ ಜೋಇ ಜಪತ ಮಹೇಸೂ । ಕಾಸೀಂ ಮುಕುತಿ ಹೇತು ಉಪದೇಸೂ ॥**
**ಮಹಿಮಾ ಜಾಸು ಜಾನ ಗನರಾಊ । ಪ್ರಥಮ ಪೂಜಿಅತ ನಾಮ ಪ್ರಭಾಊ ॥ ೨ ॥**
**ಜಾನ ಆದಿಕಬಿ ನಾಮ ಪ್ರತಾಪೂ । ಭಯಉ ಸುದ್ಧ ಕರಿ ಉಲಟಾ ಜಾಪೂ ॥**
**ಸಹಸ ನಾಮ ಸಮ ಸುನಿ ಸಿವ ಬಾನೀ । ಜಪಿ ಜೇಈಂ ಪಿಯ ಸಂಗ ಭವಾನೀ ॥ ೩ ॥**
**ಹರಷೇ ಹೇತು ಹೇರಿ ಹರ ಹೀ ಕೋ । ಕಿಯ ಭೂಷನ ತಿಯ ಭೂಷನ ತೀ ಕೋ ॥**
**ನಾಮ ಪ್ರಭಾಉ ಜಾನ ಸಿವ ನೀಕೋ । ಕಾಲಕೂಟ ಫಲು ದೀನ್ಹ ಅಮೀ ಕೋ ॥ ೪ ॥**

ಕೃಶಾನು(ಅಗ್ನಿ), ಭಾನು(ಸೂರ್ಯ), ಹಿಮಕರ(ಚಂದ್ರ) ಇವರಿಗೆ ಹೇತುವಾದ, ಅಂದರೆ 'ರ' 'ಆ' ಮತ್ತು 'ಮ' ಈ ಬೀಜಾಕ್ಷರವುಳ್ಳ ಶ್ರೀರಘುವರನ ನಾಮವಾದ 'ರಾಮನಾಮ'ಕ್ಕೆ ವಂದಿಸುತ್ತೇನೆ. ಈ ರಾಮನಾಮವು ಹರಿ,ಹರ, ಬ್ರಹ್ಮಮಯವಾಗಿದೆ. ಅದು ವೇದಗಳ ಪ್ರಾಣವಾಗಿದೆ. ನಿರ್ಗುಣ, ಉಪಮಾರಹಿತ ಹಾಗೂ ಸಕಲ ಗುಣಗಳ ನಿಧಿಯಾಗಿದೆ. ಶಿವನು ಈ ರಾಮನಾಮವೆಂಬ ಮಹಾಮಂತ್ರವನ್ನು ನಿರಂತರ ಜಪಿಸುತ್ತಾನೆ. ಮುಕ್ತಿ ಕ್ಷೇತ್ರವಾದ ಕಾಶಿಯಲ್ಲಿ ಮರಣಹೊಂದುವವರಿಗೆ ವಿಶ್ವೇಶ್ವರನು ಈ ಮಹಾಮಂತ್ರವನ್ನು ಉಪದೇಶಿಸುತ್ತಾನೆ ಹಾಗೂ ಅವರು ನೇರವಾಗಿ ಮುಕ್ತಿಗೆ ತೆರಳುತ್ತಾರೆ. ಇದರ ಮಹಿಮೆಯನ್ನು ಗಣೇಶನು ಬಲ್ಲನು. ಈ'ರಾಮ'ನಾಮದ ಪ್ರಭಾವದಿಂದಲೇ ಅವನು ಆದಿ ಪೂಜ್ಯನಾಗಿ ಪೂಜೆಗೊಳ್ಳುತ್ತಾನೆ.( ಗಣೇಶನು ತಂದೆ- ತಾಯಿಯರಾದ ಪಾರ್ವತಿ-ಪರಮೇಶ್ವರರಿಗೆ ಪ್ರದಕ್ಷಿಣೆಗೈದು ಭೂ ಪ್ರದಕ್ಷಿಣೆಯ ಫಲವನ್ನು ಹೊಂದಿದನು. 'ರಾ' ಇದು ತಂದೆಯ ಪ್ರತೀಕ, 'ಮ' ಇದು ತಾಯಿಯ ಪತೀಕ. ಆ 'ರಾಮ'ವೆಂಬ ಪವಿತ್ರವಾದ ಎರಡಕ್ಷರಗಳನ್ನು ಬರೆದು ಪ್ರದಕ್ಷಿಣೆ ಮಾಡಿದನು. ಆ ಪ್ರಭಾವದಿಂದಲೇ ಗಣಪತಿಯು ಮಹಾಮಹಿಮೋಪೇತನಾದನು.) ಆದಿಕವಿ ವಾಲ್ಮೀಕಿಯು ರಾಮನಾಮದ ಮಹಿಮೆಯನ್ನು ಬಲ್ಲನು. ಈತನು 'ರಾಮ' ಎಂಬುದನ್ನು ಹಿಂದು-ಮುಂದಾಗಿ ಮರಾ-ಮರಾ ಎಂದು ಜಪಿಸಿದರೂ ಪವಿತ್ರನಾದನು. ಒಂದು ರಾಮನಾಮವು ಸಹಸ್ರ ನಾಮಕ್ಕೆ ಸಮಾನವೆಂದು ತನ್ನ ವಲ್ಲಭನಾದ ಶಿವನಿಂದ ಕೇಳಿ

ಭವಾನಿಯು ತನ್ನ ಪತಿಯೊಡನೆ ಯಾವಾಗಲೂ ರಾಮನಾಮವನ್ನು ಜಪಿಸುತ್ತಿರುತ್ತಾಳೆ. ನಾಮದ ಮೇಲೆ ಇಷ್ಟೊಂದು ಪ್ರೀತಿಯಿರುವ ಉಮೆಯನ್ನು ಕಂಡ ಮಹೇಶ್ವರನು ಹಿಗ್ಗಿ ಪತಿವ್ರತಾಶಿರೋಮಣಿಯಾದ ಆಕೆಯನ್ನು ತನ್ನ ಭೂಷಣವನ್ನಾಗಿ ಮಾಡಿಕೊಂಡನು. ಅಂದರೆ ತನ್ನ ಅಂಗದಲ್ಲಿ ಧರಿಸಿ ಆಕೆಯನ್ನು ಅರ್ಧಾಂಗಿನಿಯಾಗಿಸಿಕೊಂಡು ಅರ್ಧನಾರೀಶ್ವರನಾದನು. ನಾಮದ ಮಹಿಮೆಯನ್ನು ಶಿವನು ಚೆನ್ನಾಗಿ ಬಲ್ಲನು. ಇದರ ಮಹಿಮಾವಿಶೇಷದಿಂದಲೇ ಕಾಲಕೂಟ ವಿಷವೂ ಅವನಿಗೆ ಅಮೃತವಾಗಿ ಪರಿಣಮಿಸಿತು. (ಚೌ/೧-೪)

**ದೋ – ಬರಷಾ ರಿತು ರಘುಪತಿ ಭಗತಿ ತುಲಸೀ ಸಾಲಿ ಸುದಾಸ ।**
**ರಾಮ ನಾಮ ಬರ ಬರನ ಜುಗ ಸಾವನ ಭಾದವ ಮಾಸ ॥ ೧೯ ॥**

ಶ್ರೀರಘುಪತಿಯ ಭಕ್ತಿಯೇ ಮಳೆಗಾಲ, ತುಳಸೀದಾಸರು ಹೇಳುವಂತೆ ಉತ್ತಮ ಭಕ್ತರು ಭತ್ತದಂತೆ. ರಾಮನಾಮದ ಎರಡು ಸುಂದರ ಅಕ್ಷರಗಳು ಶ್ರಾವಣ, ಭಾದ್ರಪದ ಮಾಸಗಳು. ಮಳೆಯಿಂದ ಪೈರು ಹುಲುಸಾಗಿ ಬೆಳೆಯುವಂತೆ ಭಕ್ತಿಯಿಂದಾಗಿ ರಾಮನಾಮವೆಂಬ ಭತ್ತದ ಪೈರು ಭಕ್ತರ ಹೃದುದಲ್ಲಿ ಹುಲುಸಾಗಿ ಬೆಳೆಯುತ್ತದೆ. (ದೋ/೧೯)

**ಚೌ – ಆಖರ ಮಧುರ ಮನೋಹರ ದೋಊ । ಬರನ ಬಿಲೋಚನ ಜನ ಜಿಯ ಜೋಊ॥**
**ಸುಮಿರತ ಸುಲಭ ಸುಖದ ಸಬ ಕಾಹೂ । ಲೋಕ ಲಾಹು ಪರಲೋಕ ನಿಬಾಹೂ ॥ ೧ ॥**
**ಕಹತ ಸುನತ ಸುಮಿರತ ಸುಠಿ ನೀಕೆ । ರಾಮ ಲಖನ ಸಮ ಪ್ರಿಯ ತುಲಸೀ ಕೇ ॥**
**ಬರನತ ಬರನ ಪ್ರೀತಿ ಬಿಲಗಾತೀ । ಬ್ರಹ್ಮ ಜೀವ ಸಮ ಸಹಜ ಸँಘಾತೀ ॥ ೨ ॥**
**ನರ ನಾರಾಯನ ಸರಿಸ ಸುಭ್ರಾತಾ । ಜಗ ಪಾಲಕ ಬಿಸೇಷಿ ಜನ ತ್ರಾತಾ ॥**
**ಭಗತಿ ಸುತಿಯ ಕಲ ಕರನ ಬಿಭೂಷನ । ಜಗ ಹಿತ ಹೇತು ಬಿಮಲ ಬಿಧು ಪೂಷನ ॥ ೩ ॥**
**ಸ್ವಾದ ತೋಷ ಸಮ ಸುಗತಿ ಸುಧಾ ಕೇ । ಕಮಠ ಸೇಷ ಸಮ ಧರ ಬಸುಧಾ ಕೇ ॥**
**ಜನ ಮನ ಮಂಜು ಕಂಜ ಮಧುಕರ ಸೇ । ಜೀಹ ಜಸೋ ಮತಿ ಹರಿ ಹಲಧರ ಸೇ ॥ ೪ ॥**

ರಾಮನಾಮದ 'ರಾ, ಮ' ಎಂಬ ಎರಡಕ್ಷರಗಳು ಮಧುರ, ಮನೋಹರ; ವರ್ಣಮಾಲೆಯೆಂಬ ಶರೀರಕ್ಕೆ ಎರಡು ಕಣ್ಣುಗಳಿದ್ದಂತೆ. ಭಕ್ತರಿಗಂತೂ ಇವು ಪ್ರಾಣಪ್ರದವು. ಸ್ಮರಿಸಲು ಎಲ್ಲರಿಗೂ ಸುಲಭ, ಸುಖಕಾರಿ. ಇವು ಇಹದಲ್ಲಿ ಲಾಭವನ್ನು, ಪರದಲ್ಲಿ ನಿರ್ವಾಹವನ್ನು, ಅಂದರೆ ಭಗವತ್ಸೇವೆಯನ್ನು ದೊರಕಿಸಿ ಕೊಡುತ್ತವೆ. ಇವು ಹೇಳಲು- ಕೇಳಲು ಬಲು ಸುಂದರ ಹಾಗೂ ಮಧುರವಾಗಿವೆ. ತುಲಸೀದಾಸನಿಗಂತೂ ಇವೆರಡು ಅಕ್ಷರಗಳು ರಾಮ-ಲಕ್ಷ್ಮಣರಂತೆ ಪ್ರಿಯವಾದುವು. ಇವುಗಳನ್ನು ('ರ' ಮತ್ತು'ಮ'ವನ್ನು) ವಿಂಗಡಿಸಿ ವರ್ಣನೆ ಮಾಡಿದರೆ ಪ್ರೀತಿಯು ಹಂಚಿಹೋಗುತ್ತದೆ. ಅರ್ಥಾತ್- ಬೀಜಮಂತ್ರದ ದೃಷ್ಟಿಯಿಂದ ಇವುಗಳ ಉಚ್ಚಾರಣೆ ಅರ್ಥ ಮತ್ತು ಫಲ ಇವುಗಳಲ್ಲಿ ಭಿನ್ನತೆ ಕಾಣುತ್ತದೆ. ಆದರೆ ಇವು ಜೀವಬ್ರಹ್ಮರಂತೆ ಸ್ವಭಾವತಃ ಜೊತೆ-ಜೊತೆಯಾಗಿಯೇ ಇರುವಂತಹವು. (ರ ಕಾರೋಬ್ರಹ್ಮವಾಚಕಃ ಮ ಕಾರೋಜೀವಸಂಜ್ಞಕಃ) ಜೀವೇಶ್ವರರಿಗೆ ಸಹಜವಾಗಿಯೇ ಅವಿನಾಭಾವ ಸಂಬಂಧವು ಇರುವುದು. ಇವೆರಡೂ ಅಕ್ಷರಗಳು ನರನಾರಾಯಣರಂತೆ ಸುಂದರ ಸಹೋದರರು. ಇವು ಜಗತ್ತಿನ ಪಾಲಕರು; ವಿಶೇಷವಾಗಿ ಭಕ್ತರ ರಕ್ಷಕರು. ಇವು ಭಕ್ತಿಯೆಂಬ ಚೆಲುವೆಯ ಕರ್ಣಾಭರಣಗಳು. ಜಗತ್ತಿನ ಹಿತದೃಷ್ಟಿಯಿಂದ ನಿರ್ಮಲ ಸೂರ್ಯಚಂದ್ರರಂತೆ. ಇವು ಮೋಕ್ಷವೆಂಬ ಅಮೃತದ ಸವಿ ಮತ್ತು ತೃಪ್ತಿಯಂತೆ. ಆಮೆ ಮತ್ತು ಆದಿಶೇಷರಂತೆ ಭೂಮಿಯನ್ನು ಹೊತ್ತು ನಿಂತಿವೆ. ಭಕ್ತರ ಮನಸ್ಸೆಂಬ ಚೆಲುವಾದ ತಾವರೆಯಲ್ಲಿ ವಿಹರಿಸುವ ದುಂಬಿಗಳಂತೆ. ನಾಲಿಗೆಯೆಂಬ ಯಶೋದೆಗೆ ಕೃಷ್ಣ-ಬಲರಾಮರಂತೆ ಆನಂದವನ್ನು ಉಂಟುಮಾಡುವವು. (ಚೌ/೧-೪)

**ದೋ – ಏಕು ಛತ್ರು ಏಕು ಮುಕುಟಮನಿ ಸಬ ಬರನನಿ ಪರ ಜೋಉ ।**
**ತುಲಸೀ ರಘುಬರ ನಾಮ ಕೇ ಬರನ ಬಿರಾಜತ ದೋಉ ॥ ೨೦ ॥**

ತುಳಸೀದಾಸರು ಹೇಳುತ್ತಾರೆ – ಶ್ರೀರಘುವರನ ನಾಮದ ಎರಡು ಅಕ್ಷರಗಳು ಅತ್ಯಂತ ಚೆಲುವಾಗಿ ವಿರಾಜಿಸುತ್ತವೆ. ಇವುಗಳಲ್ಲಿ ಒಂದು (ದೇವನಾಗರಿಯಲ್ಲಿ)'ರ' ಕಾರವು ಛತ್ರಿಯಹಾಗೆ. ಮತ್ತೊಂದು 'ಮ' ಕಾರವು ಮುಕುಟ ಮಣಿಯಂತೆ(ಅನುಸ್ವಾರ). ಎಲ್ಲ ಅಕ್ಷರಗಳ ಮೇಲೂ ವಿಜೃಂಭಿಸುತ್ತವೆ. (ದೋ/೨೦)

**ಚೌ – ಸಮುಝತ ಸರಿಸ ನಾಮ ಅರು ನಾಮೀ । ಪ್ರೀತಿ ಪರಸಪರ ಪ್ರಭು ಅನುಗಾಮೀ ॥**
**ನಾಮ ರೂಪ ದುಇ ಈಸ ಉಪಾಧೀ । ಅಕಥ ಅನಾದಿ ಸುಸಾಮುಝಿ ಸಾಧೀ ॥ ೧ ॥**
**ಕೋ ಬಡ಼ ಛೋಟ ಕಹತ ಅಪರಾಧೂ । ಸುನಿ ಗುನ ಭೇದು ಸಮುಝಿಹಹಿँ ಸಾಧೂ ॥**
**ದೆಖಿ ಅಹಿँ ರೂಪ ನಾಮ ಆಧೀನಾ । ರೂಪ ಗ್ಯಾನ ನಹಿँ ನಾಮ ಬಿಹೀನಾ ॥ ೨ ॥**

**ರೂಪ ಬಿಸೇಷ ನಾಮ ಬಿನು ಜಾನೇಂ । ಕರತಲ ಗತ ನ ಪರಹಿಂ ಪಹಿಚಾನೇಂ ॥**
**ಸುಮಿರಿಅ ನಾಮ ರೂಪ ಬಿನು ದೇಖೇಂ । ಆವತ ಹೃದಯಂ ಸನೇಹ ಬಿಸೇಷೇಂ ॥ ೩ ॥**
**ನಾಮ ರೂಪ ಗತಿ ಅಕಥ ಕಹಾನೀ । ಸಮುಝುತ ಸುಖದ ನ ಪರತಿ ಬಖಾನೀ ॥**
**ಅಗುನ ಸಗುನ ಬಿಚ ನಾಮ ಸುಸಾಖೀ । ಉಭಯ ಪ್ರಬೋಧಕ ಚತುರ ದುಭಾಷೀ ॥ ೪ ॥**

ಸರಿಯಾಗಿ ಅರ್ಥಮಾಡಿಕೊಳ್ಳುವುದರಲ್ಲಿ ನಾಮ ಮತ್ತು ನಾಮಿ ಎರಡೂ ಒಂದೇ ಸಮವಾಗಿವೆ. ಆದರೆ ಎರಡರಲ್ಲಿ ಪರಸ್ಪರ ಸ್ವಾಮಿಸೇವಕರಂತೆ ಪ್ರೀತಿಯಿದೆ. ನಾಮ ನಾಮಿಗಳ ಪೂರ್ಣವಾದ ಹೊಂದಾಣಿಕೆ ಇದ್ದರೂ ಒಡೆಯನ ಹಿಂದೆ ಆಳು ಹೋಗುವಂತೆ ನಾಮದ ಹಿಂದೆ ನಾಮಿ ಹೋಗುತ್ತಾನೆ. ಪ್ರಭು ರಾಮಚಂದ್ರನು ತನ್ನ ನಾಮವನ್ನೇ ಹಿಂಬಾಲಿಸುತ್ತಾನೆ. ಹೆಸರು ಹೇಳಿದ ಕೂಡಲೇ ಬಂದುಬಿಡುತ್ತಾನೆ. ನಾಮರೂಪಗಳೆರಡೂ ಭಗವಂತನ ಉಪಾಧಿಗಳು. ಇವೆರಡೂ ಅನಿರ್ವಚನೀಯ, ಅನಾದಿ. ಶುದ್ಧ ಭಕ್ತಿಯುಳ್ಳ ಬುದ್ಧಿಗೆ ಮಾತ್ರ ಇವುಗಳ ಸ್ವರೂಪ ಗೋಚರವಾಗುತ್ತದೆ. ಈ ನಾಮರೂಪಗಳಲ್ಲಿ ಇದು ದೊಡ್ಡದು ಇದು ಚಿಕ್ಕದು ಎಂದು ಹೇಳುವುದೇ ಒಂದು ಅಪರಾಧ. ಇವುಗಳ ಗುಣಗಳ ತಾರತಮ್ಯವನ್ನು ಅರಿತು ಸಾಧುಗಳು ತಾವೇ ಮನದಟ್ಟು ಮಾಡಿಕೊಳ್ಳುತ್ತಾರೆ. ರೂಪವು ನಾಮದ ಅಧೀನವೆಂದು ಕಂಡು ಬರುತ್ತದೆ. ನಾಮವಿಲ್ಲದೆ ರೂಪದ ಜ್ಞಾನವಾಗದು. ಹೆಸರು ತಿಳಿಯದಿರುವ ಒಂದು ರೂಪವಿಶೇಷವು ಅಂಗೈಯ್ಯಲ್ಲಿದ್ದರೂ ಅದರ ಗುರುತೇ ಹತ್ತದು. ರೂಪವನ್ನು ನೋಡದಿದ್ದರೂ ನಾಮಸ್ಮರಣೆ ಮಾಡಿದರೆ ವಿಶೇಷ ಪ್ರೇಮದೊಡನೆ ಆ ರೂಪವು ಹೃದಯದಲ್ಲಿ ಮೈದೋರುತ್ತದೆ. ನಾಮ ಮತ್ತು ರೂಪದ ಅನುಬಂಧ ರಹಸ್ಯವು ವರ್ಣನಾತೀತ, ಮಾತಿಗೆ ನಿಲುಕದಂತಹುದು. ಅದನ್ನು ಸುಲಭವಾಗಿ ಅರ್ಥೈಸಬಹುದು; ಆದರೆ ಮಾತಿನಿಂದ ವರ್ಣಿಸಲಸದಳವಾಗಿದೆ. ಭಗವಂತನ ನಿರ್ಗುಣ-ಸಗುಣಗಳ ನಡುವೆ ನಾಮವು ಸುಂದರ ಸಾಕ್ಷಿಯಾಗಿ ನಿಂತಿದೆ. ಅದು ಇವೆರಡರ ಯಥಾರ್ಥಜ್ಞಾನ ಮಾಡಿಸುವ ದುಭಾಷಿಯೂ ಹೌದು.(ಚೌ/೧-೪)

**ದೋ – ರಾಮ ನಾಮ ಮನಿದೀಪ ಧರು ಜೀಹ ದೇಹರೀಂ ದ್ವಾರ ।**
**ತುಲಸೀ ಭೀತರ ಬಾಹೆರಹುಂ ಜೌಂ ಚಾಹಸಿ ಉಜಿಆರ ॥ ೨೧ ॥**

ತುಳಸೀದಾಸರು ಹೇಳುತ್ತಾರೆ– ನಿಮ್ಮ ಒಳಗೂ ಹೊರಗೂ ಎರಡೂ ಕಡೆಗಳಲ್ಲಿಯೂ ಬೆಳಕು ಬೇಕಾದರೆ ಬಾಯಿಯೆಂಬ ಬಾಗಿಲಿನಲ್ಲಿ, ನಾಲಿಗೆಯೆಂಬ ಹೊಸ್ತಿಲಿನ ಮೇಲೆ ರಾಮನಾಮವೆಂಬ ಮಣಿದೀಪವನ್ನು ಇರಿಸಿರಿ. (ದೊ/೨೧)

**ಚೌ – ನಾಮ ಜೀಹಂ ಜಪಿ ಜಾಗಹಿಂ ಜೋಗೀ । ಬಿರತಿ ಬಿರಂಚಿ ಪ್ರಪಂಚ ಬಿಯೋಗೀ ॥**
**ಬ್ರಹ್ಮಸುಖಹಿ ಅನುಭವಹಿಂ ಅನೂಪಾಂ । ಅಕಥ ಅನಾಮಯ ನಾಮ ನ ರೂಪಾ ॥ ೧ ॥**
**ಜಾನಾ ಚಹಹಿಂ ಗೂಢ' ಗತಿ ಜೇಊ । ನಾಮ ಜೀಹಂ ಜಪಿ ಜಾನಹಿಂ ತೇಊ ॥**
**ಸಾಧಕ ನಾಮ ಜಪಹಿಂ ಲಯ ಲಾಏಂ । ಹೋಹಿಂ ಸಿದ್ಧ ಅನಿಮಾದಿಕ ಪಾಏಂ ॥ ೨ ॥**
**ಜಪಹಿಂ ನಾಮು ಜನ ಆರತ ಭಾರೀ । ಮಿಟಹಿಂ ಕುಸಂಕಟ ಹೋಹಿಂ ಸುಖಾರೀ ॥**
**ರಾಮ ಭಗತ ಜಗ ಚಾರಿ ಪ್ರಕಾರಾ । ಸುಕೃತೀ ಚಾರಿಉ ಅನಘ ಉದಾರಾ ॥ ೩ ॥**
**ಚಹೂ ಚತುರ ಕಹುಂ ನಾಮ ಅಧಾರಾ । ಗ್ಯಾನೀ ಪ್ರಭುಹಿ ಬಿಸೇಷಿ ಪಿಆರಾ ॥**
**ಚಹುಂ ಜುಗ ಚಹುಂ ಶ್ರುತಿ ನಾಮ ಪ್ರಭಾಊ । ಕಲಿ ಬಿಸೇಷಿ ನಹಿಂ ಆನ ಉಪಾಊ ॥ ೪ ॥**

ಬ್ರಹ್ಮನಿರ್ಮಿತವಾದ ಈ ದೃಶ್ಯಪ್ರಪಂಚಕ್ಕೆ ಹೊಂದದ ವಿರಕ್ತನೂ, ಜೀವನ್ಮುಕ್ತರೂ, ಯೋಗಿಗಳೂ ಈ ನಾಮವನ್ನೇ ನಾಲಿಗೆಯಿಂದ ಜಪಿಸುತ್ತಾ ತತ್ತ್ವಜ್ಞಾನವೆಂಬ ಬೆಳಕಿನಲ್ಲಿ ಎಚ್ಚರವಾಗಿರುತ್ತಾರೆ. ಅವರು ನಾಮ ರೂಪಗಳಿಂದ ರಹಿತವಾದ ಅನುಪಮ, ಅನಿರ್ವಚನೀಯ, ಅನಾಮಯ ಬ್ರಹ್ಮಾನಂದವನ್ನು ಅನುಭವಿಸುತ್ತಾರೆ. ಪರಮಾತ್ಮನಗೂಢ ರಹಸ್ಯವನ್ನು ಅರಿಯ ಬಯಸುವ ಜಿಜ್ಞಾಸುಗಳೂ ಕೂಡ ನಾಮವನ್ನು ನಾಲಿಗೆಯಿಂದ ಜಪಿಸಿ, ಅದನ್ನು ಅರಿಯುತ್ತಾರೆ. ಲೌಕಿಕ ಸಿದ್ಧಿಗಳನ್ನು ಪಡೆದು ಸಿದ್ಧರಾಗುತ್ತಾರೆ.ವಿಪತ್ತಿಗೆ ಹೆದರದ ಆರ್ತ ಭಕ್ತರು ನಾಮಜಪ ಮಾಡಿದರೆ, ಅವರ ಭಾರೀ ಕೆಟ್ಟ ಸಂಕಟಗಳಿದ್ದರೂ ಪಾರಾಗಿ, ಸುಖಿಗಳಾಗುತ್ತಾರೆ. ಜಗತ್ತಿನಲ್ಲಿ ನಾಲ್ಕು ವಿಧವಾದ ಭಕ್ತರಿದ್ದಾರೆ. (೧) ಅರ್ಥಾರ್ಥಿ- ಹಣವೇ ಮೊದಲಾದ ಐಹಿಕ ವಸ್ತುಗಳಿಗಾಗಿ ಭಕ್ತಿ ಮಾಡುವವರು. (೨) ಆರ್ತ- ಸಂಕಟ ನಿವಾರಣೆಗಾಗಿ ಭಜಿಸುವವರು. (೩)ಜಿಜ್ಞಾಸು- ದೇವರನ್ನು ತಿಳಿಯಲು ಭಜಿಸುವವರು. (೪) ಜ್ಞಾನೀ- ಭಗವಂತನನ್ನು ತಾತ್ತ್ವಿಕವಾಗಿ ತಿಳಿದುಕೊಂಡು ಸಹಜ ಪ್ರೇಮದಿಂದ ಭಜಿಸುವವರು. ಈ ನಾಲ್ವರೂ ಪುಣ್ಯಾತ್ಮರೂ, ಪಾಪರಹಿತರೂ, ಉದಾರರೂ ಆಗಿದ್ದಾರೆ. ಈ ನಾಲ್ಕು ಮಂದಿ ಚತುರ ಭಕ್ತರಿಗೂ ನಾಮವೇ ಆಧಾರ. ಇವರಲ್ಲಿ ಜ್ಞಾನೀಭಕ್ತನು ಪ್ರಭುವಿಗೆ ವಿಶೇಷ ಪ್ರಿಯನು. ಚತುರ್ಯುಗಗಳಲ್ಲಿ ಹಾಗೂ ಚತುರ್ವೇದಗಳಲ್ಲೇನೋ ನಾಮ ಮಹಿಮೆ ಇದ್ದೇ ಇದೆ. ಆದರೆ

ಕಲಿಯುಗದಲ್ಲಿ ಅದರ ಪ್ರಭಾವ ವಿಶೇಷವಾಗಿದೆ. ಕಲಿಯುಗದಲ್ಲಂತೂ ನಾಮಸ್ಮರಣೆಯನ್ನು ಬಿಟ್ಟರೆ ಬೇರೆ ಉಪಾಯವೇ ಇಲ್ಲ. (ಚೌ/೧-೪)

**ದೋ – ಸಕಲ ಕಾಮನಾ ಹೀನ ಜೇ ರಾಮ ಭಗತಿ ರಸ ಲೀನ।**
**ನಾಮ ಸುಪ್ರೇಮ ಪಿಯೂಷ ಹ್ರದ ತಿನ್ಹಹುँ ಕಿಏ ಮನ ಮೀನ ॥ ೨೨ ॥**

ಎಲ್ಲವಿಧವಾದ ಭೋಗ ಮತ್ತು ಮೋಕ್ಷದ ಕೂಡ ಕಾಮನೆಗಳಿಂದ ರಹಿತರಾದ,ಶ್ರೀರಾಮಭಕ್ತಿರಸದಲ್ಲಿ ಲೀನರಾದ, ಮಹಾನುಭಾವರೂ ಕೂಡ ನಾಮಪ್ರೇಮವೆಂಬ ಅಮೃತಸರೋವರದಲ್ಲಿ ತಮ್ಮ ಮನಸ್ಸನ್ನು ಮೀನಾಗಿಸಿ ಬಿಟ್ಟಿದ್ದಾರೆ. ಅಂದರೆ ಅವರು ನಾಮಾಮೃತವನ್ನು ನಿರಂತರ ಆಸ್ವಾದಿಸುತ್ತಾ, ಒಂದು ಕ್ಷಣವೂ ಅದರಿಂದ ಬೇರೆಯಾಗಲು ಬಯಸುವುದಿಲ್ಲ. (ದೊ/೨೨)

**ಚೌ – ಅಗುನ ಸಗುನ ದುಇ ಬ್ರಹ್ಮ ಸರೂಪಾ । ಅಕಥ ಅಗಾಧ ಅನಾದಿ ಅನೂಪಾ ॥**
**ಮೋರೇँ ಮತ ಬಡ ನಾಮು ದುಹೂ ತೇँ । ಕಿಏ ಜೆಹಿँ ಜುಗ ನಿಜ ಬಸ ನಿಜ ಬೂತೇँ ॥ ೧ ॥**
**ಪ್ರೌಢಿ ಸುಜನ ಜನಿ ಜಾನಹಿँ ಜನ ಕೀ । ಕಹಉँ ಪ್ರತೀತಿ ಪ್ರೀತಿ ರುಚಿ ಮನ ಕೀ॥**
**ಏಕು ದಾರುಗತ ದೇಖಿಅ ಏಕೂ । ಪಾವಕ ಸಮ ಜುಗ ಬ್ರಹ್ಮ ಬಿಬೇಕೂ ॥ ೨ ॥**
**ಉಭಯ ಅಗಮ ಜುಗ ಸುಗಮ ನಾಮ ತೇँ । ಕಹೆಉँ ನಾಮು ಬಡ ಬ್ರಹ್ಮ ರಾಮ ತೇँ॥**
**ಬ್ಯಾಪಕು ಏಕು ಬ್ರಹ್ಮ ಅಬಿನಾಸೀ । ಸತ ಚೇತನ ಘನ ಆನಂದ ರಾಸೀ ॥ ೩ ॥**
**ಅಸ ಪ್ರಭು ಹೃದಯँ ಅಛತ ಅಬಿಕಾರೀ । ಸಕಲ ಜೀವ ಜಗ ದೀನ ದುಖಾರೀ ॥**
**ನಾಮ ನಿರೂಪನ ನಾಮ ಜತನ ತೇँ । ಸೋಉ ಪ್ರಗಟತ ಜಿಮಿ ಮೋಲ ರತನ ತೇँ ॥ ೪ ॥**

ನಿರ್ಗುಣ ಮತ್ತು ಸಗುಣ ಈ ಎರಡು ಪರಬ್ರಹ್ಮನ ಸ್ವರೂಪಗಳು. ಇವೆರಡೂ ಅನಿರ್ವಚನೀಯ, ಅಗಾಧ, ಅನಾದಿ ಹಾಗೂ ನಿರುಪಮಾನವಾದುವು. ನನ್ನ ಅಭಿಪ್ರಾಯದಂತೆ ನಾಮವು ಇವೆರಡಕ್ಕಿಂತಲೂ ಹಿರಿದು. ಅದು ತನ್ನ ಶಕ್ತಿಯಿಂದ ಇವೆರಡನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡಿದೆ. ಸಜ್ಜನರು ಈ ಅಂಶವನ್ನು ಈ ದಾಸನ ದಾರ್ಷ್ಟ್ಯ ಇಲ್ಲವೇ ಬರಿಯ ಕಾವ್ಯೋಕ್ತಿ ಎಂದು ತಿಳಿಯಬಾರದು. ನಾನು ನನ್ನ ಮನಸ್ಸಿನ ನಂಬಿಕೆ, ಪ್ರೇಮ ಹಾಗೂ ಅಭಿರುಚಿಯ ಮಾತನ್ನು ಆಡುತ್ತಿದ್ದೇನೆ. ನಿರ್ಗುಣ-ಸಗುಣ ಈ ಎರಡೂ ವಿಧವಾದ ಪರಬ್ರಹ್ಮನ ಜ್ಞಾನವು ಅಗ್ನಿಯಂಥಹುದು. ನಿರ್ಗುಣವು ಕಾಷ್ಠದಲ್ಲಿ ಹುದುಗಿರುವ ಅಗ್ನಿಯಂತೆ ತೋರಿಕೆಗೆ ಬಾರದು. ಸಗುಣವು ಕಣ್ಣಿಗೆ ಕಾಣುವ ಬೆಂಕಿಯಂತೆ, ತತ್ತ್ವತಃ ಎರಡೂ ಒಂದೇ ಆಗಿದ್ದು ಕೇವಲ ಪ್ರಕಟ-ಅಪ್ರಕಟ ಭೇದದಿಂದ ಭಿನ್ನವಾಗಿ ಕಾಣುತ್ತದೆ. ಇದೇ ಪ್ರಕಾರ ನಿರ್ಗುಣ-ಸಗುಣ ತತ್ತ್ವತಃ ಒಂದೇ ಆಗಿದೆ. ಎರಡನ್ನೂ ಅರಿಯುವುದು ತುಂಬಾ ಕಷ್ಟ. ಆದರೆ ನಾಮದ ಮೂಲಕ ಇವೆರಡೂ ಸುಗಮವಾಗುತ್ತವೆ. ಆದ್ದರಿಂದಲೇ ನಾನು ನಾಮವನ್ನು ನಿರ್ಗುಣ ಬ್ರಹ್ಮ ಹಾಗೂ ಸಗುಣ ರಾಮನಿಗಿಂತ ದೊಡ್ಡದು ಎಂದೆ. ಪರಬ್ರಹ್ಮನು ಸರ್ವವ್ಯಾಪಕ, ಅದ್ವಿತೀಯ, ಅವಿನಾಶಿ, ಸಚ್ಚಿದಾನಂದಘನರಾಶಿ. ಇಂತಹ ಅವಿಕಾರೀ ಪ್ರಭುವು ಹೃದಯದಲ್ಲಿದ್ದರೂ ಜಗತ್ತಿನ ಎಲ್ಲ ಜೀವಿಗಳೂ ದೀನರಾಗಿದ್ದಾರೆ, ದುಃಖಿಗಳಾಗಿದ್ದಾರೆ. ನಾಮದ ಯಥಾರ್ಥ ಸ್ವರೂಪ, ಮಹಿಮೆ, ರಹಸ್ಯ ಹಾಗೂ ಪ್ರಭಾವವನ್ನು ಅರಿತು ಸಾಧನೆ ಮಾಡುವುದರಿಂದ, ರತ್ನವನ್ನು ಅರಿಯುವುದರಿಂದ ಅದರ ಬೆಲೆ ತಿಳಿಯುವಂತೆ ಪರಬ್ರಹ್ಮ ಸ್ವರೂಪವು ಪ್ರಕಟವಾಗುತ್ತದೆ. (ಚೌ/೧-೪)

**ದೋ – ನಿರಗುನ ತೇँ ಏಹಿ ಭಾँತಿ ಬಡ ನಾಮ ಪ್ರಭಾಉ ಅಪಾರ ।**
**ಕಹಉँ ನಾಮು ಬಡ ರಾಮ ತೇँ ನಿಜ ಬಿಚಾರ ಅನುಸಾರ ॥ ೨೩ ॥**

ಈ ರೀತಿ ನಿರ್ಗುಣಕ್ಕಿಂತಲೂ ನಾಮದ ಪ್ರಭಾವವು ಅತ್ಯಂತ ಹಿರಿದು. ಈಗ ನನ್ನ ವಿಚಾರದಂತೆ ಹೇಳುತ್ತೇನೆ – ನಾಮವು ಸಗುಣನಾದ ರಾಮನಿಗಿಂತಲೂ ದೊಡ್ಡದು. (ದೋ/೨೩)

**ಚೌ – ರಾಮ ಭಗತ ಹಿತ ನರ ತನು ಧಾರೀ । ಸಹಿ ಸಂಕಟ ಕಿಏ ಸಾಧು ಸುಖಾರೀ ॥**
**ನಾಮು ಸಪ್ರೇಮ ಜಪತ ಅನಯಾಸಾ । ಭಗತ ಹೋಹಿँ ಮುದ ಮಂಗಲ ಬಾಸಾ ॥ ೧ ॥**
**ರಾಮ ಏಕ ತಾಪಸ ತಿಯ ತಾರೀ । ನಾಮ ಕೋಟಿ ಖಲ ಕುಮತಿ ಸುಧಾರೀ ॥**
**ರಿಷಿ ಹಿತ ರಾಮ ಸುಕೇತುಸುತಾ ಕೀ । ಸಹಿತ ಸೇನ ಸುತ ಕೀನ್ಹಿ ಬಿಬಾಕೀ ॥ ೨ ॥**
**ಸಹಿತ ದೋಷ ದುಖ ದಾಸ ದುರಾಸಾ । ದಲಇ ನಾಮು ಜಿಮಿ ರಬಿ ನಿಸಿ ನಾಸಾ ॥**
**ಭಂಜೆಉ ರಾಮ ಆಪು ಭವ ಚಾಪೂ । ಭವ ಭಯ ಭಂಜನ ನಾಮ ಪ್ರತಾಪೂ ॥ ೩ ॥**

**ದಂಡಕ ಬನು ಪ್ರಭು ಕೀನ್ಹ ಸುಹಾವನ । ಜನ ಮನ ಅಮಿತ ನಾಮ ಕಿಏ ಪಾವನ ॥**
**ನಿಸಿಚರ ನಿಕರ ದಲೇ ರಘುನಂದನ । ನಾಮು ಸಕಲ ಕಲಿ ಕಲುಷ ನಿಕಂದನ ॥ ೪ ॥**

ಶ್ರೀರಾಮಚಂದ್ರನು ತನ್ನ ಭಕ್ತರ ಹಿತಕ್ಕಾಗಿ, ನರಶರೀರಧಾರಿಯಾಗಿ ಸ್ವತಃ ಕಷ್ಟಕೋಟಲೆಗಳನ್ನು ಸಹಿಸಿ, ಸಾಧುಗಳಿಗೆ ಸುಖವನ್ನುಂಟುಮಾಡಿದ. ಆದರೆ ಭಕ್ತರು ಪ್ರೇಮದಿಂದ ನಾಮವನ್ನು ಜಪಿಸುತ್ತಾ ಅನಾಯಾಸವಾಗಿ ಆನಂದ ಹಾಗೂ ಕಲ್ಯಾಣದ ನಿಲಯರಾಗಿ ಪರಿಣಮಿಸುತ್ತಾರೆ. ರಾಮನಾದರೋ ಓರ್ವ ತಾಪಸ ರಮಣಿ ಅಹಲ್ಯೆಯನ್ನು ಉದ್ಧರಿಸಿದ. ಆದರೆ ನಾಮವು ಕೋಟ್ಯಂತರ ದುಷ್ಟರ ಕೆಟ್ಟುಹೋದ ದುಷ್ಟಬುದ್ಧಿಯನ್ನು ನೇರ್ಪಡಿಸಿತು. ರಾಮನು ವಿಶ್ವಾಮಿತ್ರರ ಹಿತಕ್ಕಾಗಿ ಸುಕೇತು ಎಂಬ ಯಕ್ಷನ ಮಗಳಾದ ತಾಟಕಿಯನ್ನು ಅವಳ ಸೇನೆ ಹಾಗೂ ಪುತ್ರ ಸುಬಾಹು ಸಮೇತವಾಗಿ ನಾಶಮಾಡಿದನು. ಆದರೆ ನಾಮವು ತನ್ನ ಭಕ್ತರ ದೋಷ, ದುಃಖ, ದುರಾಶೆ ಮೊದಲಾದುವುಗಳನ್ನು ರವಿಯು ನಿಶಿಯನ್ನು ನಾಶಮಾಡುವಂತೆ ನಾಶಮಾಡುತ್ತದೆ. ಶ್ರೀರಾಮನು ಸ್ವತಃ ಶಿವಧನುಸ್ಸನ್ನು ಮುರಿದರೆ, ನಾಮದ ಪ್ರತಾಪವು ಎಲ್ಲ ವಿಧವಾದ ಭವಭಯಗಳನ್ನು ಭಂಜನಗೊಳಿಸುತ್ತದೆ. ಪ್ರಭು ಶ್ರೀರಾಮನು ಭಯಂಕರವಾದ ದಂಡಕಾರಣ್ಯವನ್ನು ಕಡಿದು, ಸವರಿ ಉಪವನವನ್ನಾಗಿ ಮಾಡಿದನು, ಪವಿತ್ರಗೊಳಿಸಿದನು. ಆದರೆ ಆತನ ನಾಮವು ಅಸಂಖ್ಯಾತ ಜನಮನವನ್ನು ಪಾವನಗೊಳಿಸಿತು. ರಘುನಂದನನು ನಿಶಾಚರರ ನಿಕರವನ್ನು ನಾಶಮಾಡಿದರೆ, ಆತನ ನಾಮವು ಕಲಿಯುಗದ ಎಲ್ಲ ವಿಧವಾದ ಕಲುಷವನ್ನು ತೊಡೆದುಹಾಕುವಂತಹುದು. (ಚೌ/೧-೪)

**ದೋ – ಸಬರೀ ಗೀಧ ಸುಸೇವಕನಿ ಸುಗತಿ ದೀನ್ಹಿ ರಘುನಾಥ ।**
**ನಾಮ ಉಧಾರೇ ಅಮಿತ ಖಲ ಬೇದ ಬಿದಿತ ಗುನ ಗಾಥ ॥ ೨೪ ॥**

ರಘುನಾಥನು ಶಬರಿ, ಜಟಾಯು ಮೊದಲಾದ ಉತ್ತಮ ಭಕ್ತರಿಗೆ ಮೋಕ್ಷವನ್ನಿತ್ತರೆ ಆತನ ನಾಮವು ಅಗಣಿತ ದುಷ್ಟರನ್ನು ಉದ್ಧಾರಮಾಡಿತು. ನಾಮದ ಗುಣಗಳ ಕಥೆ ವೇದವಿದಿತವಾದದ್ದು. (ದೋ/೨೪)

**ಚೌ – ರಾಮ ಸುಕಂಠ ಬಿಭೀಷನ ದೋಊ । ರಾಖೇ ಸರನ ಜಾನ ಸಬು ಕೋಊ ॥**
**ನಾಮ ಗರೀಬ ಅನೇಕ ನೆವಾಜೇ । ಲೋಕ ಬೇದ ಬರ ಬಿರಿದ ಬಿರಾಜೇ ॥ ೧ ॥**
**ರಾಮ ಭಾಲು ಕಪಿ ಕಟಕು ಬಟೋರಾ । ಸೇತು ಹೇತು ಶ್ರಮು ಕೀನ್ಹ ನ ಥೋರಾ ॥**
**ನಾಮು ಲೇತ ಭವಸಿಂಧು ಸುಖಾಹೀಂ । ಕರಹು ಬಿಚಾರು ಸುಜನ ಮನ ಮಾಹೀಂ ॥ ೨ ॥**
**ರಾಮ ಸಕುಲ ರನ ರಾವನು ಮಾರಾ । ಸೀಯ ಸಹಿತ ನಿಜ ಪುರ ಪಗು ಧಾರಾ ॥**
**ರಾಜಾ ರಾಮು ಅವಧ ರಜಧಾನೀ । ಗಾವತ ಗುನ ಸುರ ಮುನಿ ಬರ ಬಾನೀ ॥ ೩ ॥**
**ಸೇವಕ ಸುಮಿರತ ನಾಮು ಸಪ್ರೀತೀ । ಬಿನು ಶ್ರಮ ಪ್ರಬಲ ಮೋಹ ದಲು ಜೀತೀ ॥**
**ಫಿರತ ಸನೇಹಂ ಮಗನ ಸುಖ ಅಪನೇಂ । ನಾಮ ಪ್ರಸಾದ ಸೋಚ ನಹಿಂ ಸಪನೇಂ ॥ ೪ ॥**

ಶ್ರೀರಾಮನು ಸುಗ್ರೀವ ಮತ್ತು ವಿಭೀಷಣ ಇವರಿಬ್ಬರಿಗೆ ಶರಣುನೀಡಿದರೆ ಆತನ ನಾಮವು ಅಸಂಖ್ಯಾತ ದೀನಹೀನರಿಗೆ ಆಶ್ರಯವನ್ನು ನೀಡಿತು. ನಾಮದ ಈ ಸುಂದರ ಬಿರುದು ಲೋಕಗಳಲ್ಲಿ ಮತ್ತು ವೇದಗಳಲ್ಲಿ ವಿಶೇಷವಾಗಿ ವಿರಾಜಿಸುತ್ತಿದೆ. ಶ್ರೀರಾಮನು ಕರಡಿ ಹಾಗೂ ಕಪಿಸೇನೆಯನ್ನು ಸೇರಿಸಿ, ಸಮುದ್ರಕ್ಕೆ ಸೇತುವೆ ಕಟ್ಟಲು ಆತನೇನು ಕಡಿಮೆ ಹೆಣಗಲಿಲ್ಲ. ಆದರೆ ಅವನ ನಾಮವು ಹೇಳಿದರೆ ಸಾಕು ಭವಸಾಗರ ಒಣಗಿ ಹೋಗುತ್ತದೆ. ಓ ಸಜ್ಜನರೇ! ಇವರಿಬ್ಬರಲ್ಲಿ ಯಾರು ಶ್ರೇಷ್ಠರು ಎಂಬುದನ್ನು ಈಗ ನೀವೇ ವಿಚಾರಮಾಡಿ. ಶ್ರೀರಾಮನು ರಾವಣನನ್ನು ಅವನ ಕುಲಸಹಿತ ಯುದ್ಧದಲ್ಲಿ ಕೊಂದ. ಅನಂತರ ಅವನು ಸೀತಾಸಮೇತನಾಗಿ ಅಯೋಧ್ಯೆಗೆ ಮರಳಿದ. ರಾಮನು ರಾಜನಾದನು. ಅಯೋಧ್ಯೆ ಆತನ ರಾಜಧಾನಿಯಾಯಿತು. ಸುರಮುನಿಗಳು ಸುಂದರವಾಣಿಯಲ್ಲಿ ಆತನ ಗುಣಗಾನಮಾಡುತ್ತಾರೆ. ಆದರೆ ಭಕ್ತರು ಪ್ರೇಮದಿಂದ ನಾಮಸ್ಮರಣೆ ಮಾತ್ರದಿಂದಲೇ ಶ್ರಮಲೇಶವೂ ಇಲ್ಲದೆ ಮೋಹದ ಪ್ರಬಲ ಸೇನೆಯನ್ನು ಗೆದ್ದು, ಪ್ರೇಮಮಗ್ನರಾಗಿ ಸುಖದಲ್ಲಿ ಓಲಾಡುತ್ತಾರೆ. ನಾಮ ಪ್ರಸಾದದಿಂದ ಅವರನ್ನು ಯಾವ ಚಿಂತೆಯೂ ಕನಸಿನಲ್ಲಿಯೂ ಕೂಡ ಕಾಡದು. (ಚೌ/೧-೪)

**ದೋ – ಬ್ರಹ್ಮ ರಾಮ ತೇಂ ನಾಮು ಬಡ ಬರ ದಾಯಕ ಬರ ದಾನಿ ।**
**ರಾಮಚರಿತ ಸತ ಕೋಟಿ ಮಹಂ ಲಿಯ ಮಹೇಸ ಜಿಯಂ ಜಾನಿ ॥ ೨೫ ॥**

ಈ ರೀತಿ ನಾಮವು ನಿರ್ಗುಣಬ್ರಹ್ಮನಿಗಿಂತ ಹಾಗೂ ಸಗುಣರಾಮನಿಗಿಂತಲೂ ದೊಡ್ಡದು. ಇದು ವರದಾನಮಾಡುವವರಿಗೂ ವರ ಕೊಡುವಂತಹುದು. ಈ ರಹಸ್ಯವನ್ನು ಅರಿತೇ ಶಿವನು ಶತಕೋಟಿ ವಿಸ್ತಾರವಾದ ಶ್ರೀರಾಮಚರಿತ್ರಗಳಿಂದ ಸಾರರೂಪವಾಗಿ ಈ ರಾಮನಾಮವನ್ನು ಆರಿಸಿಕೊಂಡನು. (ದೋ/೨೫)

**ಮಾಸಪಾರಾಯಣದ ಮೊದಲನೆಯ ವಿಶ್ರಾಮ**

ಚೌ – ನಾಮ ಪ್ರಸಾದ ಸಂಭು ಅಬಿನಾಸೀ । ಸಾಜು ಅಮಂಗಲ ಮಂಗಲ ರಾಸೀ ॥
ಸುಕ ಸನಕಾದಿ ಸಿದ್ಧ ಮುನಿ ಜೋಗೀ । ನಾಮ ಪ್ರಸಾದ ಬ್ರಹ್ಮಸುಖ ಭೋಗಿ ॥ ೧ ॥
ನಾರದ ಜಾನೆಉ ನಾಮ ಪ್ರತಾಪೂ । ಜಗ ಪ್ರಿಯ ಹರಿ ಹರಿ ಹರ ಪ್ರಿಯ ಆಪೂ ॥
ನಾಮು ಜಪತ ಪ್ರಭು ಕೀನ್ಹ ಪ್ರಸಾದೂ । ಭಗತ ಸಿರೋಮನಿ ಭೇ ಪ್ರಹಲಾದೂ ॥ ೨ ॥
ಧ್ರುವ್ ಸಗಲಾನಿ ಜಪೆಉ ಹರಿ ನಾಊಁ । ಪಾಯಉ ಅಚಲ ಅನೂಪಮ ಠಾಊಁ ॥
ಸುಮಿರಿ ಪವನಸುತ ಪಾವನ ನಾಮೂ । ಅಪನೇ ಬಸ ಕರಿ ರಾಖೇ ರಾಮೂ ॥ ೩ ॥
ಅಪತು ಅಜಾಮಿಲು ಗಜು ಗನಿಕಾಊ । ಭಏ ಮುಕುತ ಹರಿ ನಾಮ ಪ್ರಭಾಊ ॥
ಕಹೌಁ ಕಹಾಁ ಲಗಿ ನಾಮ ಬಡಾಈ । ರಾಮು ನ ಸಕಹಿಁ ನಾಮ ಗುನ ಗಾಈ ॥ ೪ ॥

ನಾಮದ ಕೃಪೆಯಿಂದಲೇ ಶಿವನು ಅವಿನಾಶಿಯಾಗಿದ್ದಾನೆ. ಅಮಂಗಳಕರ ವೇಷಧಾರಿಯಾದರೂ ಮಂಗಳದ ರಾಶಿರಾಶಿಯಾಗಿದ್ದಾನೆ. ಶುಕಮುನಿ, ಸನಕಾದಿ ಸಿದ್ಧರು, ಮುನಿ-ಯೋಗಿಗಳು ರಾಮನಾಮ ಜಪದ ಪ್ರಭಾವದಿಂದಲೇ ಬ್ರಹ್ಮಾನಂದವನ್ನು ಭೋಗಿಸುತ್ತಿದ್ದಾರೆ. ಲೋಕಕ್ಕೆಲ್ಲ ಶ್ರೀಹರಿಯು ಪ್ರಿಯನು. ಆ ಹರಿಗೆ ಹರನು ಪ್ರಿಯನು. ರಾಮನಾಮದ ಮಹತ್ತ್ವ, ರಹಸ್ಯವನ್ನು ಅರಿತಿರುವ ನಾರದರು ಹರಿ-ಹರರೀರ್ವರಿಗೂ ಪ್ರಿಯರು. ನಾಮಜಪದಿಂದ ಪ್ರಭು ಒಲಿದುದರಿಂದ ಪ್ರಹ್ಲಾದನು ಭಕ್ತಶಿರೋಮಣಿಯಾಗಿ ಹೋದ. ಧ್ರುವನು ಸಾಪತ್ನಮಾತೆಯ ಮಾತಿನಿಂದ ದುಃಖಿತನಾಗಿ ಸಕಾಮಭಾವದಿಂದ ಹರಿನಾಮವನ್ನು ಜಪಿಸಿದನು. ಅದರ ಮಹಿಮೆಯಿಂದಲೇ ಶಾಶ್ವತವಾದ ಸರ್ವೋನ್ನತ ಧ್ರುವಲೋಕವನ್ನು ಪಡೆದುಕೊಂಡನು. ಪವಿತ್ರ ನಾಮವನ್ನು ಸ್ಮರಿಸಿಯೇ ಹನುಮಂತನು ಶ್ರೀರಾಮನನ್ನು ತನ್ನ ವಶದಲ್ಲಿಟ್ಟುಕೊಂಡಿದ್ದಾನೆ. ಪತಿತನಾದ ಅಜಾಮಿಳ, ಆರ್ತನಾದ ಗಜೇಂದ್ರ, ಗಿಳಿಗೆ ರಾಮನಾಮವನ್ನು ಕಲಿಸಿದ ಗಣಿಕೆ ಇವರೆಲ್ಲರೂ ಕೂಡ ಶ್ರೀಹರಿಯ ನಾಮಪ್ರಭಾವದಿಂದ ಮೋಕ್ಷವನ್ನು ಪಡೆದುಕೊಂಡರು. ನಾನು ನಾಮಮಹಿಮೆಯನ್ನು ಎಷ್ಟೊಂದು ವರ್ಣಿಸಲಿ? ಸ್ವತಃ ರಾಮನೂ ಕೂಡ ನಾಮದ ಗುಣಗಳನ್ನು ವರ್ಣಿಸಲಾರನು. (ಚೌ/೧-೪)

ದೋ – ನಾಮು ರಾಮ ಕೋ ಕಲಪತರು ಕಲಿ ಕಲ್ಯಾನ ನಿವಾಸು ।
ಜೋ ಸುಮಿರತ ಭಯೊ ಭಾಁಗ ತೇಁ ತುಲಸೀ ತುಲಸೀದಾಸು ॥ ೨೬ ॥

ಕಲಿಯುಗದಲ್ಲಿ ರಾಮನಾಮವು ಬಯಸಿದುದನ್ನು ಕೊಡುವಂತಹ ಕಲ್ಪವೃಕ್ಷವು. ಕಲ್ಯಾಣನಿಲಯ. ಇದರ ಸ್ಮರಣೆಯಿಂದ ಭಂಗಿಸೊಪ್ಪಿನಂತೆ ನಿಕೃಷ್ಟನಾದ ತುಲಸೀದಾಸನೂ ಕೂಡ ತುಲಸಿಯಂತೆ ಪವಿತ್ರನಾಗಿ ಹೋದನು. (ದೋ/೨೬)

ಚೌ – ಚಹುಁ ಜುಗ ತೀನಿ ಕಾಲ ತಿಹುಁ ಲೋಕಾ । ಭಏ ನಾಮ ಜಪಿ ಜೀವ ಬಿಸೋಕಾ ॥
ಬೇದ ಪುರಾನ ಸಂತ ಮತ ಏಹೂ । ಸಕಲ ಸುಕೃತ ಫಲ ರಾಮ ಸನೇಹೂ ॥ ೧ ॥
ಧ್ಯಾನು ಪ್ರಥಮ ಜುಗ ಮಖಬಿಧಿ ದೂಜೇಁ । ದ್ವಾಪರ ಪರಿತೋಷತ ಪ್ರಭು ಪೂಜೇಁ ॥
ಕಲಿ ಕೇವಲ ಮಲ ಮೂಲ ಮಲೀನಾ । ಪಾಪ ಪಯೋನಿಧಿ ಜನ ಮನ ಮೀನಾ ॥ ೨ ॥
ನಾಮ ಕಾಮತರು ಕಾಲ ಕರಾಲಾ । ಸುಮಿರತ ಸಮನ ಸಕಲ ಜಗ ಜಾಲಾ ॥
ರಾಮ ನಾಮ ಕಲಿ ಅಭಿಮತ ದಾತಾ । ಹಿತ ಪರಲೋಕ ಲೋಕ ಪಿತು ಮಾತಾ ॥ ೩ ॥
ನಹಿಁ ಕಲಿ ಕರಮ ನ ಭಗತಿ ಬಿಬೇಕೂ । ರಾಮ ನಾಮ ಅವಲಂಬನ ಏಕೂ ॥
ಕಾಲನೇಮಿ ಕಲಿ ಕಪಟ ನಿಧಾನೂ । ನಾಮ ಸುಮತಿ ಸಮರಥ ಹನುಮಾನೂ ॥ ೪ ॥

ಕಲಿಯುಗವೇ ಅಲ್ಲ, ನಾಲ್ಕೂ ಯುಗಗಳಲ್ಲಿ, ಮೂರೂ ಕಾಲಗಳಲ್ಲಿ ಹಾಗೂ ಮೂರು ಲೋಕಗಳಲ್ಲಿ ನಾಮವನ್ನು ಜಪಿಸಿ ಜೀವಿಗಳು ಶೋಕರಹಿತರಾದರು. ಸಮಸ್ತ ಪುಣ್ಯಗಳ ಫಲವು ಶ್ರೀರಾಮನಲ್ಲಿ ಅಥವಾ ರಾಮನಾಮದಲ್ಲಿ ಪ್ರೇಮವುಂಟಾಗುವುದೇ ಆಗಿದೆ ಎಂಬುದೇ ವೇದ, ಪುರಾಣ, ಸಂತರ ಅಭಿಪ್ರಾಯವಾಗಿದೆ. ಮೊದಲ ಕೃತಯುಗದಲ್ಲಿ ಧ್ಯಾನದಿಂದ, ತ್ರೇತಾಯುಗದಲ್ಲಿ ಯಜ್ಞದಿಂದ, ದ್ವಾಪರಯುಗದಲ್ಲಿ ಪೂಜೆಯಿಂದ ಭಗವಂತನು ಪ್ರಸನ್ನನಾಗುತ್ತಿದ್ದನು. ಈ ಕಲಿಯುಗವು ಕೇವಲ ಪಾಪಗಳಿಗೆ ಮೂಲವೂ, ಮಲಿನವೂ ಆಗಿದೆ. ಇದರಲ್ಲಿ ಮನುಷ್ಯರ ಮನಸ್ಸು, ಪಾಪರೂಪೀ ಸಮುದ್ರದಲ್ಲಿನ ಮೀನಿನಂತಿದೆ. ಅಂದರೆ ಪಾಪಗಳಿಂದ ಎಂದೂ ದೂರವಾಗುವುದಿಲ್ಲ. ಇದರಿಂದ ಧ್ಯಾನ, ಯಜ್ಞ, ಅರ್ಚನೆ ಇವುಗಳು ಮಾಡಲಾಗುವುದಿಲ್ಲ. ಇಂತಹ ಭಯಂಕರವಾದ ಕರಾಳ ಕಲಿಕಾಲದಲ್ಲಿ ರಾಮನಾಮವೇ ಕಲ್ಪವೃಕ್ಷ. ಇದನ್ನು ಸ್ಮರಿಸಿದರೆ ಸಾಕು, ಸಂಸಾರ ಮಾಯಾಮೋಹಗಳೆಲ್ಲ ಮಾಯವಾಗಿ ಹೋಗುತ್ತವೆ. ಕಲಿಯುಗದಲ್ಲಿ ರಾಮನಾಮವು ಮನೋವಾಂಛಿತ ಫಲವನ್ನು ನೀಡುವಂತಹುದು. ಇದು

ಪರಲೋಕದಲ್ಲಿ ಭಗವಂತನ ಪರಮಧಾಮವನ್ನು ಕರುಣಿಸುತ್ತದೆ. ಇಹಲೋಕದಲ್ಲಿ ತಂದೆ-ತಾಯಿಯಂತೆ ಪೋಷಿಸಿ, ರಕ್ಷಿಸುತ್ತದೆ. ಕಲಿಯುಗದಲ್ಲಿ ಈ ರಾಮನಾಮವಲ್ಲದೆ ಕರ್ಮ, ಭಕ್ತಿ, ಜ್ಞಾನ ಮುಂತಾದ ಯಾವುದೇ ಅವಲಂಬನೆ ಇಲ್ಲ. ಏಕಮಾತ್ರ ನಾಮ ಆಸರೆಯಾಗಿದೆ. ಕಪಟನಿಧಿಯಾದ ಕಲಿಯುಗವೆಂಬ ಕಾಲನೇಮಿಯನ್ನು ಕೊಲ್ಲಬೇಕಾದರೆ, ಪರಾಕ್ರಮಶಾಲಿಯೂ, ಜ್ಞಾನಿಯೂ ಆದ ಹನುಮಂತನೆಂಬ ಈ ರಾಮನಾಮವೇ ಆಗಬೇಕು. (ಚೌ/೧-೪)

**ದೋ – ರಾಮ ನಾಮ ನರಕೇಸರೀ ಕನಕಕಸಿಪು ಕಲಿಕಾಲ ।**
**ಜಾಪಕ ಜನ ಪ್ರಹಲಾದ ಜಿಮಿ ಪಾಲಿಹಿ ದಲಿ ಸುರಸಾಲ ॥ ೨೭ ॥**

ರಾಮನಾಮವು ನರಸಿಂಹದೇವರು. ಕಲಿಯುಗವು ಹಿರಣ್ಯಕಶಿಪು. ನಾಮಜಪ ಮಾಡುವವರು ಪ್ರಹ್ಲಾದನಿಗೆ ಸಮರು. ನರಸಿಂಹನು ಹಿರಣ್ಯಕಶಿಪುವನ್ನು ವಧಿಸಿ, ಪ್ರಹ್ಲಾದನನ್ನು ಕಾಪಾಡಿದಂತೆ, ರಾಮನಾಮವು ದೇವತೆಗಳ ಶತ್ರುವಾದ ಕಲಿದೈತ್ಯನನ್ನು ಕೊಂದು, ಜಪಿಸುವವರನ್ನು ರಕ್ಷಿಸುತ್ತದೆ. (ದೋ/೨೭)

**ಚೌ – ಭಾಯ್ ಕುಭಾಯ್ ಅನಖ ಆಲಸಹೂ । ನಾಮ ಜಪತ ಮಂಗಲ ದಿಸಿ ದಸಹೂ ॥**
**ಸುಮಿರಿ ಸೋ ನಾಮ ರಾಮ ಗುನ ಗಾಥಾ । ಕರಉ್ ನಾಇ ರಘುನಾಥಹಿ ಮಾಥಾ ॥ ೧ ॥**
**ಮೋರಿ ಸುಧಾರಿಹಿ ಸೋ ಸಬ ಭಾಂತೀ । ಜಾಸು ಕೃಪಾ ನಹಿಂ ಕೃಪಾಂ ಅಘಾತೀ ॥**
**ರಾಮ ಸುಸ್ವಾಮಿ ಕುಸೇವಕು ಮೋಸೋ । ನಿಜ ದಿಸಿ ದೇಖಿ ದಯಾನಿಧಿ ಪೋಸೋ ॥ ೨ ॥**
**ಲೋಕಹುಂ ಬೇದ ಸುಸಾಹಿಬ ರೀತೀ । ಬಿನಯ ಸುನತ ಪಹಿಚಾನತ ಪ್ರೀತೀ ॥**
**ಗನೀ ಗರೀಬ ಗ್ರಾಮನರ ನಾಗರ । ಪಂಡಿತ ಮೂಢ ಮಲೀನ ಉಜಾಗರ ॥ ೩ ॥**
**ಸುಕಬಿ ಕುಕಬಿ ನಿಜ ಮತಿ ಅನುಹಾರೀ । ನೃಪಹಿ ಸರಾಹತ ಸಬ ನರ ನಾರೀ ॥**
**ಸಾಧು ಸುಜಾನ ಸುಸೀಲ ನೃಪಾಲಾ । ಈಸ ಅಂಸ ಭವ ಪರಮ ಕೃಪಾಲಾ ॥ ೪ ॥**
**ಸುನಿ ಸನಮಾನಹಿಂ ಸಬಹಿ ಸುಬಾನೀ । ಭನಿತಿ ಭಗತಿ ನತಿ ಗತಿ ಪಹಿಚಾನೀ ॥**
**ಯಹ ಪ್ರಾಕೃತ ಮಹಿಪಾಲ ಸುಭಾಊ । ಜಾನ ಸಿರೋಮನಿ ಕೋಸಲರಾಊ ॥ ೫ ॥**
**ರೀಝುತ ರಾಮ ಸನೇಹ ನಿಸೋತೇಂ । ಕೋ ಜಗ ಮಂದ ಮಲಿನಮತಿ ಮೋತೇಂ ॥ ೬ ॥**

ಭಕ್ತಿ-ಪ್ರೇಮದಿಂದಾಗಲಿ, ವೈರಭಾವದಿಂದಾಗಲಿ, ಕೋಪದಿಂದಾಗಲಿ, ಆಲಸ್ಯದಿಂದಾಗಲಿ, ಯಾವ ರೀತಿಯಲ್ಲಾದರೂ ನಾಮಸ್ಮರಣೆಯನ್ನು ಮಾಡುವುದರಿಂದ ಅದರ ಪ್ರಭಾವದಿಂದ ಎಲ್ಲೆಡೆ ಶ್ರೇಯಸ್ಸೇ ಆಗುವುದು. ಇಂತಹ ಪರಮ ಕಲ್ಯಾಣಕಾರಿ ರಾಮನಾಮ ಸ್ಮರಣೆಮಾಡಿ, ಶ್ರೀರಘುನಾಥನಿಗೆ ತಲೆಬಾಗಿ ನಾನು ರಾಮನ ಗುಣಗಾಥೆಯನ್ನು ವರ್ಣಿಸುತ್ತೇನೆ. ಆ ಶ್ರೀರಾಮನು ನನ್ನನ್ನು ಎಲ್ಲ ರೀತಿಯಿಂದಲೂ ತಿದ್ದುವನು. ಅವನ ಕೃಪೆಯು ಕೃಪೆಮಾಡಿ-ಮಾಡಿ ತಣಿಯದು. ಇನ್ನು-ಇನ್ನು ಮಾಡಲೆಂದೇ ತವಕಿಸುತ್ತವೆ. ರಾಮನಿಗಿಂತ ಮಿಗಿಲಾದ ಪ್ರಭು ಎಲ್ಲಿ? ನನ್ನಂಥ ಕೀಳಾದ ಸೇವಕ ಎಲ್ಲಿ ? ಇಷ್ಟಿದ್ದರೂ ಆ ದಯಾನಿಧಿಯು ತನ್ನ ಕಡೆಗೆ ನೋಡಿಕೊಂಡು ನನ್ನನ್ನು ಕಾಪಾಡಿದ್ದಾನೆ. ವೇದ-ಶಾಸ್ತ್ರಗಳಲ್ಲಿ ಒಳ್ಳೆಯ ಧಣಿಯ ನಡವಳಿಕೆ ಈ ತೆರನಾಗಿ ಪ್ರಸಿದ್ಧವಾಗಿದೆ. ಬಿನ್ನಹವನ್ನು ಕೇಳಿದಕೊಡಲೇ ಅವನಿಗೆ ಆ ಪ್ರೀತಿಯು ಗೊತ್ತಾಗುತ್ತದೆ. ಬಡವ-ಬಲ್ಲಿದ, ಹಳ್ಳಿಗ-ಪಟ್ಟಣಿಗ, ಪಂಡಿತ-ಮೂರ್ಖ, ಕುಖ್ಯಾತ-ವಿಖ್ಯಾತ, ಸುಕವಿ-ಕುಕವಿ, ನರ-ನಾರೀ ಮೊದಲಾದ ಎಲ್ಲ ಜನರೂ ತಮ್ಮ-ತಮ್ಮ ಬುದ್ಧಿಗೆ ಅನುಸಾರವಾಗಿ ರಾಜನನ್ನು ಹೊಗಳುತ್ತಾರೆ. ಸಾಧುಗಳು, ಸುಜ್ಞಾನಿಗಳು, ಸುಶೀಲರು ಇವರೆಲ್ಲರ ಮಾತನ್ನು ಲಾಲಿಸಿ, ಈಶ್ವರಾಂಶದಿಂದ ಜನಿಸಿದ ಕೃಪಾಳು ರಾಜನು ಅವರ ವಾಣಿ, ಭಕ್ತಿ, ವಿನಯ ಮತ್ತು ನಡತೆಯನ್ನು ನೋಡಿ ಇನಿವಾತುಗಳಿಂದ ಎಲ್ಲರನ್ನು ಯಥೋಯೋಗ್ಯವಾಗಿ ಸನ್ಮಾನಿಸುತ್ತಾನೆ. ಇದು ಪ್ರಾಪಂಚಿಕ ರಾಜರ ನಡವಳಿಕೆಯಾಯಿತು. ಆದರೆ ಕೋಸಲನಾಥ ಶ್ರೀರಾಮಚಂದ್ರನ ರೀತಿಯೇ ಬೇರೆ. ಅವನು ಜ್ಞಾನಶಿರೋಮಣಿ; ವಿಶುದ್ಧ ಪ್ರೇಮಕ್ಕೆ ಒಲಿಯುತ್ತಾನೆ. ಆದರೆ ಜಗತ್ತಿನಲ್ಲಿ ನನಗಿಂತ ಮಿಗಿಲಾದ ಮೂರ್ಖರು ಹಾಗೂ ಮಲಿನಮತಿಗಳು ಬೇರೆ ಯಾರಾಗಿದ್ದಾರೆ? (ಚೌ/೧-೬)

**ದೋ – ಸಠ ಸೇವಕ ಕೀ ಪ್ರೀತಿ ರುಚಿ ರಖಿಹಹಿಂ ರಾಮ ಕೃಪಾಲು ।**
**ಉಪಲ ಕಿಏ ಜಲಜಾನ ಜೆಹಿಂ ಸಚಿವ ಸುಮತಿ ಕಪಿ ಭಾಲು ॥ ೨೮ (ಕ) ॥**
**ಹೌಂಹು ಕಹಾವತ ಸಬು ಕಹತ ರಾಮ ಸಹತ ಉಪಹಾಸ ।**
**ಸಾಹಿಬ ಸೀತಾನಾಥ ಸೋ ಸೇವಕ ತುಲಸೀದಾಸ ॥ ೨೮ (ಖ) ॥**

ಆದರೂ ಶ್ರೀರಾಮಚಂದ್ರನು ನನ್ನಂತಹ ಶಠ ಸೇವಕನ ಪ್ರೀತಿ ಹಾಗೂ ಅಭಿರುಚಿಯನ್ನು ಖಂಡಿತವಾಗಿ ಆದರಿಸುತ್ತಾನೆ. ಅವನು ಕಲ್ಲನ್ನೇ ದೋಣಿಯಾಗಿ ಮಾಡಿದನು. ಕರಡಿ-ಕೋತಿಗಳನ್ನು ಬುದ್ಧಿವಂತರಾದ ಮಂತ್ರಿಗಳನ್ನಾಗಿ ಮಾಡಿಕೊಂಡನು. ಎಲ್ಲರೂ ನನ್ನನ್ನು ಶ್ರೀರಾಮಸೇವಕ ಎಂದು ಕರೆಯುತ್ತಾರೆ. ನಾನೂ ಕೂಡ ನಾಚಿಕೆ, ಸಂಕೋಚವಿಲ್ಲದೆ ಹಾಗೇ ಕರೆಸಿಕೊಳ್ಳುತ್ತೇನೆ. ಹೇಳುವವರ ವಿರೋಧ ಮಾಡುವುದಿಲ್ಲ. ಸೀತಾನಾಥನಂತಹ ಪ್ರಭುವಿಗೆ ತುಳಸೀದಾಸನಂತಹ ಸೇವಕನಿದ್ದಾನೆ – ಎಂಬ ನಿಂದೆಯನ್ನು ಕೃಪಾಳುವಾದ ಶ್ರೀರಾಮನು ಸಹಿಸುತ್ತಾನೆ. (ದೋ/೨೮ ಕ, ಖ)

**ಚೌ – ಅತಿ ಬಡಿ ಮೋರಿ ಢಿಠಾಈ ಖೋರೀ । ಸುನಿ ಅಘ ನರಕಹುँ ನಾಕ ಸಕೋರೀ ॥**
**ಸಮುಝಿ ಸಹಮ ಮೋಹಿ ಅಪಡರ ಅಪನೇँ । ಸೋ ಸುಧಿ ರಾಮ ಕೀನ್ಹಿ ನಹಿँ ಸಪನೇँ ॥ ೧ ॥**
**ಸುನಿ ಅವಲೋಕಿ ಸುಚಿತ ಚಖ ಚಾಹೀ । ಭಗತಿ ಮೋರಿ ಮತಿ ಸ್ವಾಮಿ ಸರಾಹೀ ॥**
**ಕಹತ ನಸಾಇ ಹೋಇ ಹಿಯँ ನೀಕೀ । ರೀಝತ ರಾಮ ಜಾನಿ ಜನ ಜೀ ಕೀ ॥ ೨ ॥**
**ರಹತಿ ನ ಪ್ರಭು ಚಿತ ಚೂಕ ಕಿಏ ಕೀ । ಕರತ ಸುರತಿ ಸಯ ಬಾರ ಹಿಏ ಕೀ ॥**
**ಜೇಹಿँ ಅಘ ಬಧೆಉ ಬ್ಯಾಧ ಜಿಮಿ ಬಾಲೀ । ಫಿರಿ ಸುಕಂಠ ಸೋಇ ಕೀನ್ಹಿ ಕುಚಾಲೀ ॥ ೩ ॥**
**ಸೋಇ ಕರತೂತಿ ಬಿಭೀಷನ ಕೇರೀ । ಸಪನೇಹುँ ಸೋ ನ ರಾಮ ಹಿಯँ ಹೇರೀ ॥**
**ತೇ ಭರತಹಿ ಭೇँಟತ ಸನಮಾನೇ । ರಾಜಸಭಾँ ರಘುಬೀರ ಬಖಾನೇ ॥ ೪ ॥**

ಇದು ನನ್ನ ಅತ್ಯಂತ ದಾಷ್ಟ್ಯ ಹಾಗೂ ದೋಷವಾಗಿದೆ. ನನ್ನ ಪಾಪವನ್ನು ಕೇಳಿ ನರಕವೂ ಮೂಗುಮುರಿದೀತು. ಅಂದರೆ ನರಕದಲ್ಲೂ ನನಗೆ ಸ್ಥಳವಿಲ್ಲ. ಇದನ್ನು ಅರಿತೇ ನನ್ನ ಕಲ್ಪಿತ ಭಯಕ್ಕೆ ನಾನು ಹೆದರುತ್ತೇನೆ. ಆದರೆ ಪ್ರಭುರಾಮಚಂದ್ರನಾದರೋ ಕನಸಿನಲ್ಲೂ ನನ್ನ ಈ ದಾಷ್ಟ್ಯವನ್ನು ದೋಷವನ್ನು ಗಣಿಸಲಿಲ್ಲ. ಇದಕ್ಕೆ ಪ್ರತಿಯಾಗಿ ಅವನು ಇದನ್ನು ಕೇಳಿ, ಕಂಡು ಹಾಗೂ ತನ್ನ ಸುಚಿತ್ತವೆಂಬ ಚಕ್ಷುವಿನಿಂದ ಚೆನ್ನಾಗಿ ಪರೀಕ್ಷಿಸಿ, ನನ್ನ ಭಕ್ತಿ ಮತ್ತು ಬುದ್ಧಿಯನ್ನು ಹೊಗಳಿದ. ಮಾತಿನಲ್ಲಿ ಏನಾದರೂ ತಪ್ಪಿದ್ದರೂ ಚಿಂತೆಯಿಲ್ಲ. ಆದರೆ ಹೃದಯದಲ್ಲಿ ಮಾತ್ರ ಒಳ್ಳೆತನವಿರಬೇಕು. ಶ್ರೀರಾಮಚಂದ್ರನೂ ಕೂಡ ಭಕ್ತರ ಹೃದಯದ ಒಳ್ಳೆಯತನವನ್ನು ಕಂಡೇ ಒಲಿಯುತ್ತಾನೆ. ಪ್ರಭುರಾಮನ ಚಿತ್ತದಲ್ಲಿ ಭಕ್ತರ ಲೋಪ-ದೋಷಗಳು ನೆನಪಿರುವುದೇ ಇಲ್ಲ. ಅವನು ಅದನ್ನು ಮರೆತು ಬಿಡುತ್ತಾನೆ. ಆದರೆ ಅದೇ ಭಕ್ತನ ಹೃದಯದ ಒಳ್ಳೆಯ ಗುಣವನ್ನು, ಪ್ರಾಮಾಣಿಕತೆಯನ್ನು ನೂರಾರು ಬಾರಿ ನೆನೆಯುತ್ತಾನೆ. ಯಾವುದೋ ಪಾಪಕ್ಕಾಗಿ ರಾಮನು ವಾಲಿಯನ್ನು ಬೇಡನಂತೆ ಕೊಂದನು. ಮತ್ತೆ ಸುಗ್ರೀವನು ಅದೇ ಕುತಂತ್ರವನ್ನು ಮಾಡಿದನು. ಒಂದು ವಿಧದಿಂದ ವಿಭೀಷಣನೂ ಕೂಡ ತಪ್ಪು ಮಾಡಿದ. ಆದರೆ ಶ್ರೀರಾಮನು ಇದನ್ನು ಕನಸಿನಲ್ಲೂ ಎಣಿಸಲಿಲ್ಲ. ಭರತನ ಭೇಟಿಯ ಸಮಯದಲ್ಲಿ ಶ್ರೀರಘುವರನು ಅವರನ್ನು ಗೌರವಿಸಿದ. ರಾಜಸಭೆಯಲ್ಲೂ ಕೂಡ ಅವರ ಗುಣಗಾನ ಮಾಡಿದನು. (ಚೌ/೧-೪)

## ಶ್ರೀರಾಮಕಥಾ ವೈಭವ

**ದೋ – ಪ್ರಭು ತರು ತರ ಕಪಿ ಡಾರ ಪರ ತೇ ಕಿಏ ಆಪು ಸಮಾನ ।**
**ತುಲಸೀ ಕಹೂँ ನ ರಾಮ ಸೇ ಸಾಹಿಬ ಸೀಲನಿಧಾನ ॥ ೨೯ (ಕ) ॥**
**ರಾಮ ನಿಕಾಈँ ರಾವರೀ ಹೈ ಸಬಹೀ ಕೋ ನೀಕ ।**
**ಜೌँ ಯಹ ಸಾँಚೀ ಹೈ ಸದಾ ತೌ ನೀಕೋ ತುಲಸೀಕ ॥ ೨೯ (ಖ)॥**
**ಎಹಿ ಬಿಧಿ ನಿಜ ಗುನ ದೋಷ ಕಹಿ ಸಬಹಿ ಬಹುರಿ ಸಿರು ನಾಇ ।**
**ಬರನಉँ ರಘುಬರ ಬಿಸದ ಜಸು ಸುನಿ ಕಲಿ ಕಲುಷ ನಸಾಇ ॥ ೨೯ (ಗ) ॥**

ಶ್ರೀರಾಮಚಂದ್ರಪ್ರಭುವು ಮರದ ಕೆಳಗೆ ಕುಳಿತಿರುವಾಗ, ಕಪಿಗಳು ಕೊಂಬೆಯ ಮೇಲೆ ಇರುತ್ತಿದ್ದವು. ಮರ್ಯಾದಾ ಪುರುಷೋತ್ತಮನಾದ ಪರಮಾತ್ಮ ಶ್ರೀರಾಮನೆಲ್ಲಿ? ರೆಂಬೆಯಿಂದ ರೆಂಬೆಗೆ ನೆಗೆಯುವ ಮಂಗಗಳೆಲ್ಲಿ? ಆದರೆ ಅಂತಹ ಮಂಗಗಳನ್ನೂ ಅವನು ತನಗೆ ಸಮಾನರೆಂದು ಭಾವಿಸಿದ. ತುಲಸೀದಾಸರೆನ್ನುತ್ತಾರೆ – ಶ್ರೀರಾಮಚಂದ್ರನಿಗೆ ಸಮನಾದ ಇಂಥ ಪ್ರಭುವ ನಾ ಕಾಣೆನು. ಓ ರಾಮಾ! ನಿನ್ನ ದೃಷ್ಟಿಯಲ್ಲಿ ಉತ್ತಮರಾದವರು ಎಲ್ಲರ ದೃಷ್ಟಿಯಲ್ಲೂ ಉತ್ತಮರೆ. ನಿನ್ನ ಕಲ್ಯಾಣಮಯ ಸ್ವಭಾವವು ಎಲ್ಲರಿಗೂ ಮಂಗಳವನ್ನುಂಟುಮಾಡುವುದಾಗಿದೆ. ನಿನ್ನ ದೃಷ್ಟಿಯಲ್ಲಿ ಎಲ್ಲರೂ ಉತ್ತಮರೆ. ಈ ಮಾತು ನಿಜವಾದರೆ ತುಳಸೀದಾಸನಿಗೂ ಒಳಿತೇ ಆಗುವುದಿಲ್ಲವೇ? ಇಂತು ನನ್ನ ಗುಣದೋಷಗಳನ್ನು ಬಣ್ಣಿಸಿ ಮತ್ತೆ ಎಲ್ಲರಿಗೂ ನಮಿಸಿ,

ಶ್ರೀರಘುವರನ ಯಶಸ್ಸನ್ನು ವಿಶದವಾಗಿ ವರ್ಣಿಸುತ್ತೇನೆ. ಇದನ್ನು ಕೇಳುವುದರಿಂದ ಕಲಿಯುಗದ ಪಾಪಗಳೆಲ್ಲವೂ ನಶಿಸಿ ಹೋಗುತ್ತವೆ. (ದೋ/೨೯ ಕ, ಖ, ಗ)

**ಚೌ – ಜಾಗಬಲಿಕ ಜೋ ಕಥಾ ಸುಹಾಈ । ಭರದ್ವಾಜ ಮುನಿಬರಹಿ ಸುನಾಈ ॥**
**ಕಹಿಹಉ ಸೋಇ ಸಂಬಾದ ಬಖಾನೀ । ಸುನಹು ಸಕಲ ಸಜ್ಜನ ಸುಖು ಮಾನೀ ॥ ೧ ॥**
**ಸಂಭು ಕೀನ್ಹ ಯಹ ಚರಿತ ಸುಹಾವಾ । ಬಹುರಿ ಕೃಪಾ ಕರಿ ಉಮಹಿ ಸುನಾವಾ ॥**
**ಸೋಇ ಸಿವ ಕಾಗಭುಸುಂಡಿಹಿ ದೀನ್ಹಾ । ರಾಮ ಭಗತ ಅಧಿಕಾರೀ ಚೀನ್ಹಾ ॥ ೨ ॥**
**ತೇಹಿ ಸನ ಜಾಗಬಲಿಕ ಪುನಿ ಪಾವಾ । ತಿನ್ಹ ಪುನಿ ಭರದ್ವಾಜ ಪ್ರತಿ ಗಾವಾ ॥**
**ತೇ ಶ್ರೋತಾ ಬಕತಾ ಸಮಸೀಲಾ । ಸವಁದರಸೀ ಜಾನಹಿಂ ಹರಿಲೀಲಾ ॥ ೩ ॥**
**ಜಾನಹಿಂ ತೀನಿ ಕಾಲ ನಿಜ ಗ್ಯಾನಾ । ಕರತಲ ಗತ ಆಮಲಕ ಸಮಾನಾ ॥**
**ಔರಉ ಜೇ ಹರಿಭಗತ ಸುಜಾನಾ । ಕಹಹಿಂ ಸುನಹಿಂ ಸಮುಝಹಿಂ ಬಿಧಿ ನಾನಾ ॥ ೪ ॥**

ಯಾಜ್ಞವಲ್ಕ್ಯಮುನಿಗಳು ಮಹರ್ಷಿ ಭರದ್ವಾಜರಿಗೆ ಹೇಳಿದ ಮನೋಹರವಾದ ರಾಮಕಥೆಯ ಸಂವಾದವನ್ನು ವರ್ಣಿಸುತ್ತೇನೆ. ಎಲ್ಲ ಸಜ್ಜನರೂ ಸುಖವನ್ನು ಅನುಭವಿಸುತ್ತಾ ಅದನ್ನು ಆಲಿಸಿರಿ. ಮೊದಲಿಗೆ ಶಂಭುವು ಈ ಸುಂದರ ಚರಿತ್ರವನ್ನು ರಚಿಸಿದನು. ಅನಂತರ ಅವನು ಅದನ್ನು ಕೃಪೆಮಾಡಿ ಪಾರ್ವತಿಗೆ ಹೇಳಿದನು. ಇದೇ ರಾಮಚರಿತ್ರವನ್ನು ಶಿವನು ರಾಮಭಕ್ತನೂ, ಅಧಿಕಾರಿಯೂ ಎಂದು ಬಾವಿಸಿ ಕಾಕಭುಶುಂಡಿಗೆ ಹೇಳಿದನು. ಅದು ಕಾಕಭುಶುಂಡಿಯಿಂದ ಯಾಜ್ಞವಲ್ಕ್ಯರಿಗೆ ದೊರೆಯಿತು. ಅವರು ಅದನ್ನು ಭಾರದ್ವಾಜರಿಗೆ ಹಾಡಿ ಹೊಗಳಿ ತಿಳಿಸಿದರು. ಈ ಇಬ್ಬರೂ ವಕ್ತೃ ಶ್ರೋತೃಗಳು ಸಮಾನಶೀಲರೂ, ಸಮದರ್ಶಿಗಳೂ, ಹರಿಲೀಲೆಯನ್ನು ಬಲ್ಲವರಾಗಿದ್ದಾರೆ. ಇವರು ತಮ್ಮ ಜ್ಞಾನದಿಂದ ತ್ರಿಲೋಕದ ಎಲ್ಲ ವಿಷಯವನ್ನು ಕರತಲಾಮಲಕವನ್ನಾಗಿ ಮಾಡಿಕೊಂಡಿದ್ದಾರೆ. ಭಗವಂತನ ಲೀಲೆಗಳನ್ನು ಬಲ್ಲ ಹರಿಭಕ್ತರು ಈ ಹರಿ ಚರಿತವನ್ನು ನಾನಾ ರೀತಿಯಲ್ಲಿ ಹಾಡುತ್ತಾರೆ, ಕೇಳುತ್ತಾರೆ, ಅರಿಯುತ್ತಾರೆ. (ಚೌ/೧-೪)

**ದೋ – ಮೈಂ ಪುನಿ ನಿಜ ಗುರ ಸನ ಸುನೀ ಕಥಾ ಸೋ ಸೂಕರಖೇತ ।**
**ಸಮುಝೀ ನಹಿಂ ತಸಿ ಬಾಲಪನ ತಬ ಅತಿ ರಹೇಉಁ ಅಚೇತ ॥ ೩೦ (ಕ) ॥**
**ಶ್ರೋತಾ ಬಕತಾ ಗ್ಯಾನನಿಧಿ ಕಥಾ ರಾಮ ಕೈ ಗೂಢ ।**
**ಕಿಮಿ ಸಮುಝೌಂ ಮೈಂ ಜೀವ ಜಡ ಕಲಿ ಮಲ ಗ್ರಸಿತ ಬಿಮೂಢ ॥ ೩೦ (ಖ) ॥**

ಇದೇ ಕಥೆಯನ್ನು ನಾನು ಸೂಕರ ಕ್ಷೇತ್ರದಲ್ಲಿ ನನ್ನ ಗುರುವಿನಿಂದ ಕೇಳಿದೆ. ಆದರೆ ಆಗ ನಾನು ಹಸುಳೆಯಾದ್ದರಿಂದ ಸರಿಯಾಗಿ ಅರ್ಥಮಾಡಿಕೊಳ್ಳಲಿಲ್ಲ. ಶ್ರೀರಾಮನ ಕಥೆಯ ರಹಸ್ಯವನ್ನು ಜ್ಞಾನಿನಿಧಿಗಳಾದ ವಕ್ತೃ (ಹೇಳುವವ) ಶ್ರೋತೃ (ಕೇಳುವವ) ಇವರಿಬ್ಬರೇ ಬಲ್ಲರು. ಕಲಿಮಲಗ್ರಸ್ತನೂ, ಮಹಾಮೂಢನೂ, ಜಡನೂ ಆದ ನಾನು ಇದನ್ನು ಹೇಗೆ ಅರ್ಥ ಮಾಡಿಕೊಳ್ಳಬಲ್ಲೆ? (ದೋ/೩೦ ಕ, ಖ)

**ಚೌ – ತದಪಿ ಕಹೀ ಗುರ ಬಾರಹಿಂ ಬಾರಾ । ಸಮುಝಿ ಪರೀ ಕಛು ಮತಿ ಅನುಸಾರಾ ॥**
**ಭಾಷಾಬದ್ಧ ಕರಬಿ ಮೈಂ ಸೋಈ । ಮೋರೇಂ ಮನ ಪ್ರಬೋಧ ಜೆಹಿಂ ಹೋಈ ॥ ೧ ॥**
**ಜಸ ಕಛು ಬುಧಿ ಬಿಬೇಕ ಬಲ ಮೇರೇಂ । ತಸ ಕಹಿಹಉಁ ಹಿಯಁ ಹರಿ ಕೇ ಪ್ರೇರೇಂ ॥**
**ನಿಜ ಸಂದೇಹ ಮೋಹ ಭ್ರಮ ಹರನೀ । ಕರಉಁ ಕಥಾ ಭವ ಸರಿತಾ ತರನೀ ॥ ೨ ॥**
**ಬುಧ ಬಿಶ್ರಾಮ ಸಕಲ ಜನ ರಂಜನಿ । ರಾಮಕಥಾ ಕಲಿ ಕಲುಷ ಬಿಭಂಜನಿ ॥**
**ರಾಮಕಥಾ ಕಲಿ ಪನ್ನಗ ಭರನೀ । ಪುನಿ ಬಿಬೇಕ ಪಾವಕ ಕಹುಁ ಅರನೀ ॥ ೩ ॥**
**ರಾಮಕಥಾ ಕಲಿ ಕಾಮದ ಗಾಈ । ಸುಜನ ಸಜೀವನಿ ಮೂರಿ ಸುಹಾಈ ॥**
**ಸೋಇ ಬಸುಧಾತಲ ಸುಧಾ ತರಂಗಿನಿ । ಭಯ ಭಂಜನಿ ಭ್ರಮ ಭೇಕ ಭುಅಂಗಿನಿ ॥ ೪ ॥**
**ಅಸುರ ಸೇನ ಸಮ ನರಕ ನಿಕಂದಿನಿ । ಸಾಧು ಬಿಬುಧ ಕುಲ ಹಿತ ಗಿರಿನಂದಿನಿ ॥**
**ಸಂತ ಸಮಾಜ ಪಯೋಧಿ ರಮಾ ಸೀ । ಬಿಸ್ವಭಾರ ಭರ ಅಚಲ ಛಮಾ ಸೀ ॥ ೫ ॥**

**ಜಮ ಗನ ಮುಹ್ ಮಸಿ ಜಗ ಜಮುನಾ ಸೀ । ಜೀವನ ಮುಕುತಿ ಹೇತು ಜನು ಕಾಸೀ ॥**
**ರಾಮಹಿ ಪ್ರಿಯ ಪಾವನಿ ತುಲಸೀ ಸೀ । ತುಲಸಿದಾಸ ಹಿತ ಹಿಯ್ ಹುಲಸೀ ಸೀ ॥ ೬ ॥**
**ಸಿವಪ್ರಿಯ ಮೇಕಲ ಸೈಲ ಸುತಾ ಸೀ । ಸಕಲ ಸಿದ್ಧಿ ಸುಖ ಸಂಪತಿ ರಾಸೀ ॥**
**ಸದಗುನ ಸುರಗನ ಅಂಬ ಅದಿತಿ ಸೀ । ರಘುಬರ ಭಗತಿ ಪ್ರೇಮ ಪರಮಿತಿ ಸೀ ॥ ೭ ॥**

ಆದರೆ ಗುರುಗಳು ಪ್ರತಿದಿನವು ಮತ್ತೆ-ಮತ್ತೆ ಹೇಳಿದಾಗ ನನ್ನ ಬುದ್ಧಿಗನುಸಾರವಾಗಿ ಕೊಂಚ ತಿಳಿವಳಿಕೆಗೆ ಬಂತು. ಅದನ್ನೇ ನಾನು ಈಗ ಜನಭಾಷೆಯಲ್ಲಿ ಕವಿತಾಬದ್ಧವಾಗಿಸಿ ಮನಸ್ಸಿಗೆ ಸಂತೋಷಪಡುತ್ತೇನೆ. ನನ್ನಲ್ಲಿರುವಷ್ಟು ಬುದ್ಧಿ, ವಿವೇಕ ಹಾಗೂ ಬಲ ಇವುಗಳನುಸಾರ, ಹರಿಪ್ರೇರಣೆಯಂತೆ ಕಥೆಯನ್ನು ಹೇಳುತ್ತೇನೆ. ನಾನು ನನ್ನ ಸಂದೇಹ, ಮೋಹ ಭ್ರಮೆಯನ್ನು ನಾಶಮಾಡಲು, ಭವನದಿಯ ತರಣಿಯಂತಿರುವ ಕಥೆಯನ್ನು ರಚಿಸುತ್ತೇನೆ. ಶ್ರೀರಾಮನ ಕಥೆಯು ಬುದ್ಧರಿಗೆ ಆನಂದದಾಯಕ, ಸಕಲಜನರಂಜಿನಿ ಮತ್ತು ಕಲಿಕಲುಷ ಭಂಜನಿಯಾಗಿದೆ. ಅದು ಕಲಿಕಾಲವೆಂಬ ಹಾವಿಗೆ ನವಿಲಿನಂತಿದೆ. ವಿವೇಕವೆಂಬ ಅಗ್ನಿಯನ್ನು ಮೂಡಿಸುವ ಅರಣಿ (ಅಗ್ನಿಮಂಥನ ಮಾಡುವ ಮರ)ಯಾಗಿದೆ. ಅಂದರೆ ಈ ಕಥೆಯಿಂದ ಜ್ಞಾನ ಪ್ರಾಪ್ತಿಯಾಗುತ್ತದೆ. ಶ್ರೀರಾಮಕಥೆಯು ಕಲಿಯುಗದಲ್ಲಿ ಬೇಡಿದುದನ್ನು ನೀಡುವ ಕಾಮಧೇನು, ಸಜ್ಜನರಿಗಂತೂ ಅದು ಸಂಜೀವನಿ ಮೂಲಿಕೆ. ಅದು ಈ ವಸುಧೆಯಲ್ಲಿ ಸುಧಾತರಂಗಿಣಿ. ಜನನ-ಮರಣ ಭಯವನ್ನು ಅದು ನಾಶಮಾಡುವಂತಹದು. ಭ್ರಮೆಯೆಂಬ ಕಪ್ಪೆಗಳನ್ನು ತಿನ್ನುವ ಸರ್ಪಿಣಿಯಂತಿದೆ ಅದು. ಈ ರಾಮಕಥೆಯು ಅಸುರಸೇನೆಯಂತಿರುವ ನರಕಗಳನ್ನೇ ನಾಶಮಾಡುವಂತಹುದು. ಸಾಧುರೂಪೀ ದೇವತೆಗಳ ಗುಂಪಿಗೆ ಹಿತವನ್ನುಂಟುಮಾಡುವ ಗಿರಿನಂದಿನಿ ದುರ್ಗೆಯಂತಿದೆ. ಇದು ಸಂತ ಸಮಾಜವೆಂಬ ಕ್ಷೀರಸಾಗರಕನ್ಯೆ ಲಕ್ಷ್ಮೀಯಂತೆ, ಇಡೀ ಜಗತ್ತಿನ ಭಾರವನ್ನು ಸಹಿಸುವಲ್ಲಿ ಅಚಲ ಧರಿತ್ರಿಯಂತಿದೆ. ಯಮದೂತರ ಮುಖಕ್ಕೆ ಮಸಿ ಬಳಿಯಲು ಇದು ಜಗತ್ತಿನಿಲ್ಲಿ ಯಮುನಾನದಿಯಂತೆ ಇದೆ. ಜೀವರಿಗೆ ಮುಕ್ತಿ ನೀಡುವುದರಲ್ಲಂತೂ ಕಾಶೀಕ್ಷೇತ್ರವೇ ಸರಿ. ಇದು ಶ್ರೀರಾಮನಿಗೆ ಪವಿತ್ರ ತುಲಸಿಯಂತೆ ಪ್ರಿಯವಾದುದು ಹಾಗೂ ತುಳಸೀದಾಸನಿಗೆ ಹುಲಸೀ (ತುಳಸೀದಾಸರ ತಾಯಿ)ಯಂತೆ ಹೃದಯಪೂರ್ವಕವಾಗಿ ಹಿತವನ್ನುಂಟುಮಾಡುವುದು. ಈ ರಾಮಕಥೆಯು ಶಿವನಿಗೆ ನರ್ಮದೆಯಂತೆ ಪ್ರಿಯವಾದುದು. ಸಕಲ ವಿಧವಾದ ಸಿದ್ಧಿಗಳ, ಸುಖಸಂಪತ್ತುಗಳ ರಾಶಿ. ಸದ್ಗುಣಗಳೆಂಬ ದೇವತೆಗಳ ಉತ್ಪತ್ತಿ ಹಾಗೂ ಪಾಲನೆ, ಪೋಷಣೆಯಲ್ಲಿ ತಾಯಿ ಅದಿತಿಯಂತೆ; ರಘುವರನ ಭಕ್ತಿ ಹಾಗೂ ಪರಮಪ್ರೇಮಕ್ಕೆ ಚರಮಸೀಮೆಯಂತಿದೆ. (ಚೌ/೧-೭)

**ದೋ – ರಾಮಕಥಾ ಮಂದಾಕಿನೀ ಚಿತ್ರಕೂಟ ಚಿತ ಚಾರು ।**
**ತುಲಸೀ ಸುಭಗ ಸನೇಹ ಬನ ಸಿಯ ರಘುಬೀರ ಬಿಹಾರು ॥ ೩೧ ॥**

ತುಲಸೀದಾಸರ ಪ್ರಕಾರ ಶ್ರೀರಾಮಕಥೆಯು ಮಂದಾಕಿನಿ ನದಿ, ನಿರ್ಮಲವಾದ ಹೃದಯವೇ ಚಿತ್ರಕೂಟವು. ಗಾಢವಾದ ಪ್ರೇಮವೇ ಶ್ರೀಸೀತಾರಾಮರು ವಿಹರಿಸುವ ವನವಾಗಿದೆ. (ದೋ/೩೧)

**ಚೌ – ರಾಮಚರಿತ ಚಿಂತಾಮನಿ ಚಾರೂ । ಸಂತ ಸುಮತಿ ತಿಯ ಸುಭಗ ಸಿಂಗಾರೂ ॥**
**ಜಗ ಮಂಗಲ ಗುನಗ್ರಾಮ ರಾಮ ಕೇ । ದಾನಿ ಮುಕುತಿ ಧನ ಧರಮ ಧಾಮ ಕೇ ॥ ೧ ॥**
**ಸದಗುರ ಗ್ಯಾನ ಬಿರಾಗ ಜೋಗ ಕೇ । ಬಿಬುಧ ಬೈದ ಭವ ಭೀಮ ರೋಗ ಕೇ ॥**
**ಜನನಿ ಜನಕ ಸಿಯ ರಾಮ ಪ್ರೇಮ ಕೇ । ಬೀಜ ಸಕಲ ಬ್ರತ ಧರಮ ನೇಮ ಕೇ ॥ ೨ ॥**
**ಸಮನ ಪಾಪ ಸಂತಾಪ ಸೋಕ ಕೇ । ಪ್ರಿಯ ಪಾಲಕ ಪರಲೋಕ ಲೋಕ ಕೇ ॥**
**ಸಚಿವ ಸುಭಟ ಭೂಪತಿ ಬಿಚಾರ ಕೇ । ಕುಂಭಜ ಲೋಭ ಉದಧಿ ಅಪಾರ ಕೇ ॥ ೩ ॥**
**ಕಾಮ ಕೋಹ ಕಲಿಮಲ ಕರಿಗನ ಕೇ । ಕೇಹರಿ ಸಾವಕ ಜನ ಮನ ಬನ ಕೇ ॥**
**ಅತಿಥಿ ಪೂಜ್ಯ ಪ್ರಿಯತಮ ಪುರಾರಿ ಕೇ । ಕಾಮದ ಘನ ದಾರಿದ ದವಾರಿ ಕೇ ॥ ೪ ॥**
**ಮಂತ್ರ ಮಹಾಮನಿ ಬಿಷಯ ಬ್ಯಾಲ ಕೇ । ಮೇಟತ ಕಠಿನ ಕುಅಂಕ ಭಾಲ ಕೇ ॥**
**ಹರನ ಮೋಹ ತಮ ದಿನಕರ ಕರ ಸೇ । ಸೇವಕ ಸಾಲಿ ಪಾಲ ಜಲಧರ ಸೇ ॥ ೫ ॥**
**ಅಭಿಮತ ದಾನಿ ದೇವತರು ಬರ ಸೇ । ಸೇವತ ಸುಲಭ ಸುಖದ ಹರಿ ಹರ ಸೇ ॥**
**ಸುಕಬಿ ಸರದ ನಭ ಮನ ಉಡಗನ ಸೇ । ರಾಮಭಗತ ಜನ ಜೀವನ ಧನ ಸೇ ॥ ೬ ॥**
**ಸಕಲ ಸುಕೃತ ಫಲ ಭೂರಿ ಭೋಗ ಸೇ । ಜಗ ಹಿತ ನಿರುಪಧಿ ಸಾಧು ಲೋಗ ಸೇ ॥**
**ಸೇವಕ ಮನ ಮಾನಸ ಮರಾಲ ಸೇ । ಪಾವನ ಗಂಗ ತರಂಗ ಮಾಲ ಸೇ ॥ ೭ ॥**

ಶ್ರೀರಾಮಚಂದ್ರನ ಚರಿತವು ಚಾರು ಚಿಂತಾಮಣಿ; ಅದು ಸತ್ಪುರುಷರ ಸದ್ಬುದ್ಧಿರೂಪಿ ಸ್ತ್ರೀಗೆ ಸುಂದರವಾದ ಶೃಂಗಾರ. ಶ್ರೀರಾಮನ ಗುಣಸಮೂಹವು ಜಗತ್ತಿಗೆ ಮಂಗಳವನ್ನುಂಟುಮಾಡುತ್ತದೆ. ಅದು ಮುಕ್ತಿ, ಧನ, ಧರ್ಮ ಹಾಗೂ ಪರಮಧಾಮವನ್ನು ಕರುಣಿಸುವಂತಹುದು. ಜ್ಞಾನ, ವೈರಾಗ್ಯ ಹಾಗೂ ಯೋಗಕ್ಕೆ ಇದು ಸದ್ಗುರುವು. ಸಂಸಾರವೆಂಬ ಭಯಂಕರ ರೋಗಕ್ಕೆ ದೇವವೈದ್ಯರಾದ ಅಶ್ವಿನೀಕುಮಾರರು. ಸೀತಾರಾಮನ ಪ್ರೇಮವನ್ನುಂಟುಮಾಡುವುದರಲ್ಲಿ ತಂದೆ-ತಾಯಿಗಳಿದ್ದಂತೆ, ಸಕಲ ವ್ರತ, ಧರ್ಮ, ನೇಮಗಳಿಗೆ ಬೀಜರೂಪವಾದುದು. ಈ ರಾಮಕಥೆಯು ಪಾಪ, ಸಂತಾಪ, ಶೋಕ ಇವುಗಳನ್ನು ನಾಶಮಾಡುವ ಹಾಗೂ ಇಹಲೋಕ, ಪರಲೋಕಗಳಲ್ಲಿ ಪ್ರಿಯಪಾಲಕರು. ಜ್ಞಾನವೆಂಬ ಭೂಪತಿಗೆ ಶೂರ-ವೀರನಾದ ಮಂತ್ರಿಯು. ಲೋಭವೆಂಬ ಅಪಾರ ಸಮುದ್ರವನ್ನು ಒಣಗಿಸಲು ಅಗಸ್ತ್ಯಮುನಿಯಂತೆ ಇದೆ. ಭಕ್ತರ ಮನೋರೂಪೀ ಅಡವಿಯಲ್ಲಿ ನೆಲೆಸಿರುವ ಕಾಮ, ಕ್ರೋಧ ಹಾಗೂ ಕಲಿಮಲವೆಂಬ ಆನೆಗಳಿಗೆ ಸಿಂಹದ ಮರಿಗಳಿದ್ದಂತೆ. ಶಿವನಿಗೆ ಅದು ಪೂಜ್ಯ ಮತ್ತು ಪರಮ ಪ್ರಿಯ ಅತಿಥಿ; ದಾರಿದ್ರ್ಯವೆಂಬ ದಾವಾನಲವನ್ನು ನಂದಿಸುವುದರಲ್ಲಿ ಕಾಮನೆಗಳನ್ನು ಈಡೇರಿಸುವ ಮೇಘಗಳು. ವಿಷಯವೆಂಬ ಸರ್ಪದ ವಿಷವನ್ನಿಳಿಸುವ ಮಂತ್ರ ಹಾಗೂ ಮಹಾಮಣಿಯು. ಅಳಿಸಲು ಕಠಿಣವಾದ ಕೆಟ್ಟ ಹಣೆಯಬರಹವನ್ನು ತೊಡೆದು ಹಾಕುವಂತಹುದು. ಮೋಹರೂಪೀ ಕತ್ತಲೆಯನ್ನು ಕಳೆಯುವುದರಲ್ಲಿ ಸೂರ್ಯಕಿರಣದಂತೆ. ಸೇವಕರೆಂಬ ಭತ್ತದ ಪೈರನ್ನು ಪೋಷಿಸುವ ಮೇಘ-ಮಳೆಯಂತೆ. ಇದು ಬಯಸಿದ ವಸ್ತುಗಳನ್ನು ದಯಪಾಲಿಸುವ ದಿವ್ಯ ದೇವತರು. ಸೇವೆ ಮಾಡುವುದರಲ್ಲಿ ಹರಿ-ಹರರಂತೆ ಸುಲಭ ಹಾಗೂ ಸುಖಕರ; ಸುಕವಿಯೆಂಬ ಶರದ್‌ಋತುವಿನ ಮನವೆಂಬ ಆಕಾಶವನ್ನು ಬೆಳಗುವ ಉಡುಗಣದಂತೆ. ರಾಮಭಕ್ತರಿಗಂತೂ ಇದು ಜೀವನಧನವೇ ಆಗಿದೆ. ಸಕಲವಿಧವಾದ ಸುಕೃತಗಳ ಫಲರೂಪೀ ಮಹಾಭೋಗಗಳಂತೆ ಇದು ಜಗತ್ತಿಗೆ ನಿಶ್ಚಲವಾದ ಹಿತವನ್ನುಂಟುಮಾಡುವ ಸಾಧು ಸಂತರಂತೆ. ಸೇವಕರ ಮನಮಾನಸಕ್ಕೆ ಮರಾಳದಂತೆ. ಪವಿತ್ರ ಮಾಡುವುದರಲ್ಲಿ ಪಾವನ ಗಂಗಾತರಂಗಮಾಲೆಯಂತೆ ಇದೆ. (ಚೌ/೧-೭)

**ದೋ – ಕುಪಥ ಕುತರಕ ಕುಚಾಲಿ ಕಲಿ ಕಪಟ ದಂಭ ಪಾಷಂಡ ।**
**ದಹನ ರಾಮ ಗುನ ಗ್ರಾಮ ಜಿಮಿ ಇಂಧನ ಅನಲ ಪ್ರಚಂಡ ॥ ೩೨ (ಕ) ॥**
**ರಾಮಚರಿತ ರಾಕೇಸ ಕರ ಸರಿಸ ಸುಖದ ಸಬ ಕಾಹು ।**
**ಸಜ್ಜನ ಕುಮುದ ಚಕೋರ ಚಿತ ಹಿತ ಬಿಸೇಷಿ ಬಡ ಲಾಹು ॥ ೩೨ (ಖ) ॥**

ಶ್ರೀರಾಮನ ಗುಣಸಮೂಹವು ಕುಮಾರ್ಗ, ಕುತರ್ಕ, ಕೆಟ್ಟನಡತೆ ಮತ್ತು ಕಲಿಯುಗದ ಕಪಟ, ದಂಭ, ಪಾಷಂಡಿತನ ಮುಂತಾದುವುಗಳನ್ನು ಸುಡುವುದರಲ್ಲಿ ಪ್ರಚಂಡ ಅನಲದಂತಿದೆ. ಶ್ರೀರಾಮನ ಚರಿತ್ರವು ಪೂರ್ಣಚಂದ್ರನ ಕಿರಣಗಳಂತೆ ಎಲ್ಲರಿಗೂ ಸುಖವನ್ನು ಉಂಟುಮಾಡುವಂತಹುದು. ಅದರಲ್ಲೂ ಸಜ್ಜನರೆಂಬ ಕುಮುದಿನಿ ಹಾಗೂ ಚಕೋರಪಕ್ಷಿಯ ಚಿತ್ತಕ್ಕೆ ವಿಶೇಷ ಹಿತಕಾರಿ ಹಾಗೂ ಅತ್ಯಂತ ಲಾಭದಾಯಕವಾಗಿವೆ. (ದೋ/೩೨ ಕ, ಖ)

**ಚೌ – ಕೀನ್ಹಿ ಪ್ರಸ್ನ ಜೆಹಿ ಭಾಂತಿ ಭವಾನೀ । ಜೆಹಿ ಬಿಧಿ ಸಂಕರ ಕಹಾ ಬಖಾನೀ ॥**
**ಸೋ ಸಬ ಹೇತು ಕಹಬ ಮೈಂ ಗಾಈ । ಕಥಾಪ್ರಬಂಧ ಬಿಚಿತ್ರ ಬನಾಈ ॥ ೧ ॥**
**ಜೆಹಿಂ ಯಹ ಕಥಾ ಸುನೀ ನಹಿಂ ಹೋಈ । ಜನಿ ಆಚರಜು ಕರೈ ಸುನಿ ಸೋಈ ॥**
**ಕಥಾ ಅಲೌಕಿಕ ಸುನಹಿಂ ಜೆ ಗ್ಯಾನೀ । ನಹಿಂ ಆಚರಜು ಕರಹಿಂ ಅಸ ಜಾನೀ ॥ ೨ ॥**
**ರಾಮಕಥಾ ಕೈ ಮಿತಿ ಜಗ ನಾಹೀಂ । ಅಸಿ ಪ್ರತೀತಿ ತಿನ್ಹಕೇ ಮನ ಮಾಹೀಂ ॥**
**ನಾನಾ ಭಾಂತಿ ರಾಮ ಅವತಾರಾ । ರಾಮಾಯನ ಸತ ಕೋಟಿ ಅಪಾರಾ ॥ ೩ ॥**
**ಕಲಪಭೇದ ಹರಿಚರಿತ ಸುಹಾಏ । ಭಾಂತಿ ಅನೇಕ ಮುನೀಸನ್ಹ ಗಾಏ ॥**
**ಕರಿಅ ನ ಸಂಸಯ ಅಸ ಉರ ಆನೀ । ಸುನಿಅ ಕಥಾ ಸಾದರ ರತಿ ಮಾನೀ ॥ ೪ ॥**

ಪಾರ್ವತಿಯು ಶಿವನನ್ನು ಪ್ರಶ್ನಿಸಿದಾಗ, ಶಂಕರನು ಆಕೆಗೆ ವಿಸ್ತಾರವಾಗಿ ಉತ್ತರರೂಪದಲ್ಲಿ ಹೇಳಿದುದನ್ನೇ ನಾನು ಒಂದು ವಿಚಿತ್ರವಾದ ಕಥಾಪ್ರಬಂಧವನ್ನಾಗಿ ರಚಿಸಿ, ಹಾಡಿ ಹೇಳುತ್ತೇನೆ. ಈ ಕಥೆಯನ್ನು ಈ ಹಿಂದೆ ಕೇಳದವರು ಈಗ ಕೇಳಿ ಆಶ್ಚರ್ಯಪಡದಿರಲಿ. ಈ ಅಲೌಕಿಕ ಕಥೆಯನ್ನು ಜ್ಞಾನಿಗಳು ಕೇಳಿ 'ರಾಮನ ಕಥೆಗೆ ಮಿತಿಯೇ ಇಲ್ಲ, ಅದು ಅನಂತವಾಗಿದೆ' ಎಂದು ಅರಿತು ಆಶ್ಚರ್ಯಪಡುವುದಿಲ್ಲ. 'ಅನೇಕ ರೀತಿಯಲ್ಲಿ ಶ್ರೀರಾಮನ ಅವತಾರವಾಗಿದೆ, ರಾಮಾಯಣಗಳೂ ಶತಕೋಟಿಗಳಿವೆ' ಎಂದು ಅವರ ಮನಸ್ಸಿನಲ್ಲಿ ಇದರ ಬಗ್ಗೆ ನಂಬಿಕೆ ಇರುತ್ತದೆ. ಮಹಾಮುನಿಗಳು ಬೇರೆ-ಬೇರೆ ಕಲ್ಪಗಳಲ್ಲಿ ಶ್ರೀಹರಿಯ ಸುಂದರ ಚರಿತ್ರವನ್ನು ವಿಧ-ವಿಧವಾಗಿ ಹಾಡಿದ್ದಾರೆ ಎಂದು ಅರಿತು ಮನದಲ್ಲಿ ಸಂದೇಹಪಡಬೇಡಿ. ಪ್ರೇಮಾದರಗಳಿಂದ ಈ ಕಥೆಯನ್ನು ಆಲಿಸಿರಿ. (ಚೌ/೧-೪)

**ದೋ – ರಾಮ ಅನಂತ ಅನಂತ ಗುನ ಅಮಿತ ಕಥಾ ಬಿಸ್ತಾರ ।**
**ಸುನಿ ಆಚರಜು ನ ಮಾನಿಹಹಿಂ ಜಿನ್ಹ ಕೇಂ ಬಿಮಲ ಬಿಚಾರ ॥ ೩೩ ॥**

ಶ್ರೀರಾಮಚಂದ್ರನು ಅನಂತ, ಅವನ ಗುಣಗಳೂ ಅನಂತ, ಅವನ ಕಥಾವಿಸ್ತಾರವೋ ಅಪರಿಮಿತ, ಅಸೀಮ. ಆದ್ದರಿಂದ ನಿರ್ಮಲ ವಿಚಾರವುಳ್ಳವರು ಈ ಕಥೆಯನ್ನು ಕೇಳಿ ಹುಬ್ಬುಹಾರಿಸುವುದಿಲ್ಲ. (ದೋ/೩೩)

**ಚೌ – ಎಹಿ ಬಿಧಿ ಸಬ ಸಂಸಯ ಕರಿ ದೂರೀ । ಸಿರ ಧರಿ ಗುರ ಪದ ಪಂಕಜ ಧೂರಿ ॥**
**ಪುನಿ ಸಬಹೀ ಬಿನವಉಂ ಕರ ಜೋರೀ । ಕರತ ಕಥಾ ಜೆಹಿಂ ಲಾಗ ನ ಖೋರೀ ॥ ೧ ॥**
**ಸಾದರ ಸಿವಹಿ ನಾಇ ಅಬ ಮಾಥಾ । ಬರನಉಂ ಬಿಸದ ರಾಮ ಗುನ ಗಾಥಾ ॥**
**ಸಂಬತ ಸೋರಹ ಸೈ ಏಕತೀಸಾ । ಕರಉಂ ಕಥಾ ಹರಿ ಪದ ಧರಿ ಸೀಸಾ ॥ ೨ ॥**
**ನೌಮೀ ಭೌಮ ಬಾರ ಮಧು ಮಾಸಾ । ಅಬಧಪುರೀಂ ಯಹ ಚರಿತ ಪ್ರಕಾಸಾ ॥**
**ಜೆಹಿ ದಿನ ರಾಮ ಜನಮ ಶ್ರುತಿ ಗಾವಹಿಂ । ತೀರಥ ಸಕಲ ತಹಾಂ ಚಲಿ ಆವಹಿಂ ॥ ೩ ॥**
**ಅಸುರ ನಾಗ ಖಗ ನರ ಮುನಿ ದೇವಾ । ಆಇ ಕರಹಿಂ ರಘುನಾಯಕ ಸೇವಾ ॥**
**ಜನ್ಮ ಮಹೋತ್ಸವ ರಚಹಿಂ ಸುಜಾನಾ । ಕರಹಿಂ ರಾಮ ಕಲ ಕೀರತಿ ಗಾನಾ ॥ ೪ ॥**

ಈ ವಿಧವಾಗಿ ಎಲ್ಲ ಸಂದೇಹವನ್ನು ನಿವಾರಿಸಿ, ಶ್ರೀಗುರುವಿನ ಪದಪಂಕಜದ ಧೂಳನ್ನು ತಲೆಯ ಮೇಲೆ ಮುಡಿದುಕೊಂಡು, ಕಥಾರಚನೆಯಲ್ಲಿ ಯಾವ ದೋಷವೂ ತಲೆದೋರದಿರಲೆಂದು ಮತ್ತೊಮ್ಮೆ ಕೈಮುಗಿದು ಎಲ್ಲರಿಗೂ ನಮಿಸುತ್ತೇನೆ. ಈಗ ನಾನು ಮಹೇಶ್ವರನನ್ನು ಸಾದರದಿಂದ ಶಿರಬಾಗಿ, ಶ್ರೀರಾಮಚಂದ್ರನ ಗುಣಗಳ ನಿರ್ಮಲ ಕಥೆಯನ್ನು ಹೇಳುತ್ತೇನೆ. ಶ್ರೀಹರಿಯ ಚರಣಗಳಲ್ಲಿ ಶಿರವನ್ನಿಟ್ಟು ಸಂವತ್ ೧೬೩೧ರಲ್ಲಿ (ಕ್ರಿ.ಶ. ೧೫೭೪) ಈ ಪವಿತ್ರ ಕಥೆಯನ್ನು ಪ್ರಾರಂಭಿಸುತ್ತೇನೆ. ಚೈತ್ರ ಮಾಸದ ಶುದ್ಧ ನವಮಿ ಮಂಗಳವಾರ ಅಯೋಧ್ಯಾನಗರದಲ್ಲಿ ಈ ಕಥಾ ರಚನೆಯು ಮೊದಲುಗೊಂಡಿತು. ಶ್ರೀರಾಮಜನ್ಮದ ದಿನ ಎಲ್ಲ ತೀರ್ಥಗಳು ಅಯೋಧ್ಯೆಗೆ ಬರುತ್ತವೆ ಎಂದು ವೇದಗಳು ಹೇಳುತ್ತವೆ. ಅಂದು ಅಸುರ, ನಾಗ, ಖಗ, ನರ, ಮುನಿ, ದೇವತೆ ಇವರೆಲ್ಲರೂ ಅಯೋಧ್ಯೆಗೆ ಬಂದು ರಘುನಾಯಕನ ಸೇವೆ ಮಾಡುತ್ತಾರೆ. ಸುಜನರು ಅವನ ಜನ್ಮದಿನೋತ್ಸವವನ್ನು ಆನಂದದಿಂದ ಆಚರಿಸುತ್ತಾರೆ. ಶ್ರೀರಾಮನ ಸುಂದರ ಕೀರ್ತಿಯನ್ನು ಗಾಯನ ಮಾಡುತ್ತಾರೆ. (ಚೌ/೧-೪)

**ದೋ – ಮಜ್ಜಹಿಂ ಸಜ್ಜನ ವೃಂದ ಬಹು ಪಾವನ ಸರಜೂ ನೀರ ।**
**ಜಪಹಿ ರಾಮ ಧರಿ ಧ್ಯಾನ ಉರ ಸುಂದರ ಸ್ಯಾಮ ಸರೀರ ॥ ೩೪ ॥**

ಅಂದು ಸಜ್ಜನವೃಂದವು ಸರಯೂ ನದಿಯ ಪವಿತ್ರಜಲದಲ್ಲಿ ಮೀಯುತ್ತದೆ. ಹೃದಯದಲ್ಲಿ ಸುಂದರ ಶ್ಯಾಮಶರೀರ ಶ್ರೀರಘುನಾಥನನ್ನು ಧ್ಯಾನಿಸುತ್ತಾ, ಅವನ ನಾಮವನ್ನು ಕೊಂಡಾಡುತ್ತಾರೆ. (ದೋ/೩೪)

**ಚೌ – ದರಸ ಪರಸ ಮಜ್ಜನ ಅರು ಪಾನಾ । ಹರಇ ಪಾಪ ಕಹ ಬೇದ ಪುರಾನಾ ॥**
**ನದೀ ಪುನೀತ ಅಮಿತ ಮಹಿಮಾ ಅತಿ । ಕಹಿ ನ ಸಕಇ ಸಾರದಾ ಬಿಮಲಮತಿ ॥ ೧ ॥**
**ರಾಮ ಧಾಮದಾ ಪುರೀ ಸುಹಾವನಿ । ಲೋಕ ಸಮಸ್ತ ಬಿದಿತ ಅತಿ ಪಾವನಿ ॥**
**ಚಾರಿ ಖಾನಿ ಜಗ ಜೀವ ಅಪಾರಾ । ಅವಧ ತಜೇಂ ತನು ನಹಿಂ ಸಂಸರಾ ॥ ೨ ॥**
**ಸಬ ಬಿಧಿ ಪುರೀ ಮನೋಹರ ಜಾನೀ । ಸಕಲ ಸಿದ್ಧಿಪ್ರದ ಮಂಗಲ ಖಾನೀ ॥**
**ಬಿಮಲ ಕಥಾ ಕರ ಕೀನ್ಹ ಅರಂಭಾ । ಸುನತ ನಸಾಹಿಂ ಕಾಮ ಮದ ದಂಭಾ ॥ ೩ ॥**
**ರಾಮಚರಿತಮಾನಸ ಎಹಿ ನಾಮಾ । ಸುನತ ಶ್ರವನ ಪಾಇಅ ಬಿಶ್ರಾಮಾ ॥**
**ಮನ ಕರಿ ಬಿಷಯ ಅನಲ ಬನ ಜರಈ । ಹೋಇ ಸುಖೀ ಜೌಂ ಎಹಿಂ ಸರ ಪರಈ ॥ ೪ ॥**
**ರಾಮಚರಿತಮಾನಸ ಮುನಿ ಭಾವನ । ಬಿರಚೆಉ ಸಂಭು ಸುಹಾವನ ಪಾವನ ॥**
**ತ್ರಿಬಿಧ ದೋಷ ದುಖ ದಾರಿದ ದಾವನ । ಕಲಿ ಕುಚಾಲಿ ಕುಲಿ ಕಲುಷ ನಸಾವನ ॥ ೫ ॥**
**ರಚಿ ಮಹೇಸ ನಿಜ ಮಾನಸ ರಾಖಾ । ಪಾಇ ಸುಸಮಉ ಸಿವಾ ಸನ ಭಾಷಾ ॥**
**ತಾತೇಂ ರಾಮಚರಿತಮಾನಸ ಬರ । ಧರೆಉ ನಾಮ ಹಿಯಂ ಹೇರಿ ಹರಷಿ ಹರ ॥ ೬ ॥**
**ಕಹಉಂ ಕಥಾ ಸೋಇ ಸುಖದ ಸುಹಾಈ । ಸಾದರ ಸುನಹು ಸುಜನ ಮನ ಲಾಈ ॥ ೭ ॥**

ಸರಯೂ ನದಿಯ ದರ್ಶನ, ಸ್ಪರ್ಶನ, ಮಜ್ಜನ ಹಾಗೂ ಪಾನ ಪಾಪ ಪರಿಹಾರಿಯೆಂದು ವೇದ-ಪುರಾಣಗಳು ಉಗ್ಗಡಿಸುತ್ತವೆ. ಈ ನದಿಯು ಅತ್ಯಂತ ಪವಿತ್ರವಾದುದು. ಇದರ ಮಹಿಮೆ ಅನಂತ. ವಿಮಲಮತಿಯಾದ ಸರಸ್ವತಿಯೂ ಕೂಡ ಇದರ ಮಹಿಮೆಯನ್ನು ಬಣ್ಣಿಸಲಾರಳು. ಪರಮಶೋಭೆಗಳಿಗೆ ನಿಲಯವಾದ ಅಯೋಧ್ಯೆಯು ಶ್ರೀರಾಮನ ಪರಮಧಾಮವನ್ನು ಕರುಣಿಸುವಂತಹುದು. ಅದು ಸಮಸ್ತ ಲೋಕಗಳಲ್ಲಿ ಪ್ರಸಿದ್ಧ ಹಾಗೂ ಅತ್ಯಂತ ಪವಿತ್ರವಾದುದು. ಜಗತ್ತಿನಲ್ಲಿ ಅಂಡಜ, ಸ್ವೇದಜ, ಉದ್ಭಿಜ್ಜ, ಜರಾಯುಜ ಈ ರೀತಿ ನಾಲ್ಕು ಬಗೆಯ ಅನಂತ ಜೀವರಾಶಿಗಳಿವೆ. ಅವುಗಳಲ್ಲಿ ಯಾವುದೇ ಆಗಲಿ ಅಯೋಧ್ಯೆಯಲ್ಲಿ ಶರೀರತ್ಯಾಗ ಮಾಡಿದರೆ ಸಾಕು, ಅವುಗಳಿಗೆ ಪುನರ್ಜನ್ಮವಿಲ್ಲ. ಜನ್ಮ-ಮೃತ್ಯು ಚಕ್ರದಿಂದ ಬಿಡುಗಡೆಹೊಂದಿ ಭಗವಂತನ ಪರಮಧಾಮದಲ್ಲಿವಾಸಿಸುತ್ತಾರೆ. ಈ ಆಯೋಧ್ಯಾಪುರಿಯು ಎಲ್ಲ ರೀತಿಯಿಂದ ಮನೋಹರ, ಸಕಲಸಿದ್ಧಿಪ್ರದ, ಕಲ್ಯಾಣದ ಗಣಿ ಎಂದು ಭಾವಿಸಿ ನಾನು ಈ ನಿರ್ಮಲ ಕಥೆಯನ್ನು ಪ್ರಾರಂಭಿಸಿದೆ. ಇದನ್ನು ಆಲಿಸುವುದರಿಂದ ಕಾಮ, ಮದ, ಜಂಭಗಳು ಅಳಿದು ಹೋಗುತ್ತವೆ. ಇದರ ಹೆಸರು 'ರಾಮಚರಿತಮಾನಸ'. ಇದನ್ನು ಕಿವಿಯಾರೆ ಕೇಳಿದ ಕೂಡಲೇ ಶಾಂತಿ ದೊರೆಯುತ್ತದೆ. ದಾವಾನಲವೆಂಬ ವಿಷಯವಾಂಛೆಗಳಲ್ಲಿ ಮಲ-ಮಲನೆ ಮರುಗುವ ಮನಸ್ಸೆಂಬ ಆನೆಯು ಈ ರಾಮಚರಿತವೆಂಬ ಮಾನಸಸರೋವರದಲ್ಲಿ ಮುಳುಗಿದಾಗಲೇ ಪ್ರಶಾಂತಿಯನ್ನು ಪಡೆದುಕೊಂಡೀತು. ಈ ರಾಮಚರಿತಮಾನಸವು ಮುನಿಗಳಿಗೆ ಪ್ರಿಯವಾಗಿದೆ. ಇಂತಹ ಸುಂದರ, ಪವಿತ್ರ ಮಾನಸವನ್ನು ಶಿವನು ರಚಿಸಿದನು. ಇದು ತ್ರಿವಿಧದೋಷಗಳನ್ನು, ದುಃಖಗಳನ್ನು, ದಾರಿದ್ರ್ಯಗಳನ್ನು ಹಾಗೂ ಕಲಿಕಲ್ಮಷಗಳನ್ನೂ, ಎಲ್ಲ ಪಾಪಗಳನ್ನೂ ನಾಶಮಾಡುವಂತಹುದು. ಮಹಾದೇವ ಶ್ರೀ ಶಿವನು ಇದನ್ನು ರಚಿಸಿ ತನ್ನ ಮನದಲ್ಲೇ ಇರಿಸಿಕೊಂಡನು. ಸಕಾಲದಲ್ಲಿ ಅದನ್ನು ಪಾರ್ವತಿಗೆ ನಿರೂಪಿಸಿದನು. ಇದರಿಂದ ಶಿವನು ತನ್ನ ಹೃದಯದಲ್ಲಿ ಕಂಡು ಹರ್ಷಿತನಾಗಿ ಇದಕ್ಕೆ 'ರಾಮಚರಿತಮಾನಸ' ಎಂಬ ಚೆಲುವಾದ ಹೆಸರು ಕೊಟ್ಟನು. ನಾನು ಇದೇ ಸುಖದಾಯಕ ಕಥೆಯನ್ನು ಹೇಳುತ್ತೇನೆ. ಸಜ್ಜನರೇ, ಆದರದಿಂದ ದತ್ತಚಿತ್ತರಾಗಿ ಇದನ್ನು ಆಲಿಸಿರಿ. (ಚೌ/೧-೭)

**ದೋ – ಜಸ ಮಾನಸ ಜೆಹಿ ಬಿಧಿ ಭಯಉ ಜಗ ಪ್ರಚಾರ ಜೆಹಿ ಹೇತು ।**
**ಅಬ ಸೋಇ ಕಹಉँ ಪ್ರಸಂಗ ಸಬ ಸುಮಿರಿ ಉಮಾ ಬೃಷಕೇತು ॥ ೩೫ ॥**

ಈ ರಾಮಚರಿತಮಾನಸ ಎಂತಹುದು? ಹೇಗೆ ನಿರ್ಮಿತವಾಯಿತು? ಯಾವ ಕಾರಣದಿಂದ ಜಗತ್ತಿನಲ್ಲಿ ಇದರ ಪ್ರಚಾರವಾಯಿತು? ಇವೆಲ್ಲವನ್ನು ನಾನು ಉಮಾಮಹೇಶ್ವರರನ್ನು ಸ್ಮರಿಸಿ ಬಿನ್ನವಿಸಿಕೊಳ್ಳುತ್ತೇನೆ. (ದೋ/೩೫)

**ಚೌ – ಸಂಭು ಪ್ರಸಾದ ಸುಮತಿ ಹಿಯँ ಹುಲಸೀ । ರಾಮಚರಿತಮಾನಸ ಕಬಿ ತುಲಸೀ ॥**
**ಕರಇ ಮನೋಹರ ಮತಿ ಅನುಹಾರೀ । ಸುಜನ ಸುಚಿತ ಸುನಿ ಲೇಹು ಸುಧಾರೀ ॥ ೧ ॥**
**ಸುಮತಿ ಭೂಮಿ ಥಲ ಹೃದಯ ಅಗಾಧೂ । ಬೇದ ಪುರಾನ ಉದಧಿ ಘನ ಸಾಧೂ ॥**
**ಬರಷಹಿँ ರಾಮ ಸುಜಸ ಬರ ಬಾರೀ । ಮಧುರ ಮನೋಹರ ಮಂಗಲಕಾರೀ ॥ ೨ ॥**
**ಲೀಲಾ ಸಗುನ ಜೊ ಕಹಹಿँ ಬಖಾನೀ । ಸೋಇ ಸ್ವಚ್ಛತಾ ಕರಇ ಮಲ ಹಾನೀ ॥**
**ಪ್ರೇಮ ಭಗತಿ ಜೋ ಬರನಿ ನ ಜಾಈ । ಸೋಇ ಮಧುರತಾ ಸುಸೀತಲತಾಈ ॥ ೩ ॥**
**ಸೋ ಜಲ ಸುಕೃತ ಸಾಲಿ ಹಿತ ಹೋಈ । ರಾಮ ಭಗತ ಜನ ಜೀವನ ಸೋಈ ॥**
**ಮೇಧಾ ಮಹಿ ಗತ ಸೋ ಜಲ ಪಾವನ । ಸಕಿಲಿ ಶ್ರವನ ಮಗ ಚಲೆಉ ಸುಹಾವನ ॥ ೪ ॥**
**ಭರೆಉ ಸುಮಾನಸ ಸುಥಲ ಥಿರಾನಾ । ಸುಖದ ಸೀತ ರುಚಿ ಚಾರು ಚಿರಾನಾ ॥ ೫ ॥**

ಭಗವಾನ್ ಶ್ರೀ ಶಿವನ ಅನುಗ್ರಹದಿಂದ ನನ್ನಲ್ಲಿ ಸುಮತಿ ವಿಕಾಸವಾಯಿತು. ಅದರ ಪ್ರಭಾವದಿಂದ ಹೃದಯದಲ್ಲಿ ಮಧುರ ಭಾವಗಳು ಹುಟ್ಟಿಕೊಂಡವು. ಅದರಿಂದ ಈ ತುಲಸೀದಾಸನು ರಾಮಚರಿತಮಾನಸದ ಕವಿಯಾದ. ನನ್ನ ಬುದ್ಧಿಗನುಸಾರವಾಗಿ ಇದನ್ನು ಮನೋಹರವಾಗಿಯೇ ರಚಿಸುತ್ತೇನೆ. ಆದರೂ ಓ ಸಜ್ಜನರೇ! ಚೆಲುವಾದ ಮನಸ್ಸಿನಿಂದ ಇದನ್ನು ಕೇಳಿ ತಿದ್ದಿ ಆದರಿಸಿರಿ. ಸಾತ್ತ್ವಿಕ ಸುಂದರ ಬುದ್ಧಿಯೇ ಭೂಮಿ. ಹೃದಯವೇ ಅದರಲ್ಲಿನ ಆಳವಾದ ಸ್ಥಾನ. ವೇದ ಪುರಾಣಗಳೇ ಸಮುದ್ರಗಳು. ಸಾಧು ಸಂತರು ಮೇಘಗಳು. ಈ ಸಾಧುರೂಪೀ ಮೇಘಗಳು ಸ್ವಚ್ಛವೂ, ಮಧುರವೂ, ಮನೋಹರವೂ, ಶುಭಪ್ರದವೂ ಆದ ಶ್ರೀರಾಮಯಶೋವೈಭವವೆಂಬ ಜಲವನ್ನು ಮಳೆಗರೆಯುತ್ತವೆ. ಈ ಸಜ್ಜನರು ವರ್ಣಿಸಿದ ಸಗುಣಸ್ವರೂಪಿಯಾದ ಭಗವಂತನ ಎಲ್ಲ ಲೀಲೆಗಳೇ ಶ್ರೀರಾಮನ ಸುಯಶವೆಂಬ ಜಲದ ನೈರ್ಮಲ್ಯ. ಅದು ಕೊಳೆಯನ್ನು ಕಳೆಯುತ್ತದೆ. ವರ್ಣನೆಗೆ ಮೀರಿದ ಪ್ರೇಮತುಂಬಿದ ಭಕ್ತಿಯೇ ಆ ಜಲದ ಮಾಧುರ್ಯ ಮತ್ತು ತಂಪು. ಈ ರಾಮಸುಯಶಸ್ಸೆಂಬ ನೀರು ಸತ್ಕರ್ಮವೆಂಬ ಬತ್ತಕ್ಕೆ (ಪೈರಿಗೆ) ಹಿತಕರ. ಶ್ರೀರಾಮನ ಭಕ್ತರಿಗಂತೂ ಇದು ಜೀವನವೇ ಆಗಿದೆ. ಈ ಪವಿತ್ರ ಜಲವು ಬುದ್ಧಿಯೆಂಬ ನೆಲದ ಮೇಲೆ ಬಿತ್ತು. ಅಲ್ಲಿಂದೆದ್ದು ಅದು ಮನೋಹರವಾದ ಕರ್ಣಮಾರ್ಗದಿಂದ ಹೋಯಿತು ಹಾಗೂ ಮಾನಸ (ಹೃದಯ)ವೆಂಬ

ಶ್ರೇಷ್ಠಸ್ಥಾನದಲ್ಲಿ ತುಂಬಿಕೊಂಡು ಅಲ್ಲೇ ನಿಂತುಬಿಟ್ಟಿತು. ಅದೇ ಹಳೆಯದಾಗಿ, ಸುಂದರವಾಗಿ, ರುಚಿಯಾಗಿ, ತಂಪಾಗಿ, ಸುಖದಾಯಕವಾಗಿ ಪರಿಣಮಿಸಿತು. (ಚೌ/೧-೫)

**ದೋ – ಸುಠಿ ಸುಂದರ ಸಂಬಾದ ಬರ ಬಿರಚೇ ಬುದ್ಧಿ ಬಿಚಾರಿ ।**
**ತೆಇ ಎಹಿ ಪಾವನ ಸುಭಗ ಸರ ಘಾಟ ಮನೋಹರ ಚಾರಿ ॥ ೩೬ ॥**

ಬುದ್ಧಿಪೂರ್ವಕವಾಗಿ ವಿಚಾರಮಾಡಿ ರಚಿಸಿರುವ ಈ ಕಥೆಯಲ್ಲಿ ಭುಶುಂಡೀ-ಗರುಡ, ಶಿವ-ಪಾರ್ವತಿ, ಯಾಜ್ಞವಲ್ಕ್ಯ-ಭರದ್ವಾಜ, ತುಲಸೀದಾಸ-ಸಂತರು ಹೀಗೆ ನಾಲ್ಕು ತಂಡದ ಚೆಲುವಾದ ಉತ್ತಮ ಸಂವಾದಗಳೇ, ಈ ಪವಿತ್ರ ಸುಂದರ ಸರೋವರದ ನಾಲ್ಕು ಸ್ನಾನಘಟ್ಟಗಳು. (ದೋ/೩೬)

**ಚೌ – ಸಪ್ತ ಪ್ರಬಂಧ ಸುಭಗ ಸೋಪಾನಾ । ಗ್ಯಾನ ನಯನ ನಿರಖತ ಮನ ಮಾನಾ ॥**
**ರಘುಪತಿ ಮಹಿಮಾ ಅಗುನ ಅಬಾಧಾ । ಬರನಬ ಸೋಇ ಬರ ಬಾರಿ ಅಗಾಧಾ ॥ ೧ ॥**
**ರಾಮ ಸೀಯ ಜಸ ಸಲಿಲ ಸುಧಾಸಮ । ಉಪಮಾ ಬೀಚಿ ಬಿಲಾಸ ಮನೋರಮ ॥**
**ಪುರಇನಿ ಸಘನ ಚಾರು ಚೌಪಾಈ । ಜುಗುತಿ ಮಂಜು ಮನಿ ಸೀಪ ಸುಹಾಈ ॥ ೨ ॥**
**ಛಂದ ಸೋರಠಾ ಸುಂದರ ದೋಹಾ । ಸೋಇ ಬಹುರಂಗ ಕಮಲ ಕುಲ ಸೋಹಾ ॥**
**ಅರಥ ಅನೂಪ ಸುಭಾವ ಸುಭಾಸಾ । ಸೋಇ ಪರಾಗ ಮಕರಂದ ಸುಬಾಸಾ ॥ ೩ ॥**
**ಸುಕೃತ ಪುಂಜ ಮಂಜುಲ ಅಲಿ ಮಾಲಾ । ಗ್ಯಾನ ಬಿರಾಗ ಬಿಚಾರ ಮರಾಲಾ ॥**
**ಧುನಿ ಅವರೇಬ ಕಬಿತ ಗುನ ಜಾತೀ । ಮೀನ ಮನೋಹರ ತೇ ಬಹುಭಾಂತೀ ॥ ೪ ॥**
**ಅರಥ ಧರಮ ಕಾಮಾದಿಕ ಚಾರೀ । ಕಹಬ ಗ್ಯಾನ ಬಿಗ್ಯಾನ ಬಿಚಾರೀ ॥**
**ನವ ರಸ ಜಪ ತಪ ಜೋಗ ಬಿರಾಗಾ । ತೇ ಸಬ ಜಲ ಚರ ಚಾರು ತಡಾಗಾ ॥ ೫ ॥**
**ಸುಕೃತೀ ಸಾಧು ನಾಮ ಗುನ ಗಾನಾ । ತೇ ಬಿಚಿತ್ರ ಜಲ ಬಿಹಗ ಸಮಾನಾ ॥**
**ಸಂತಸಭಾ ಚಹುಂ ದಿಸಿ ಅವँರಾಈ । ಶ್ರದ್ಧಾ ರಿತು ಬಸಂತ ಸಮ ಗಾಈ ॥ ೬ ॥**
**ಭಗತಿ ನಿರೂಪನ ಬಿಬಿಧ ಬಿಧಾನಾ । ಛಮಾ ದಯಾ ದಮ ಲತಾ ಬಿತಾನಾ ॥**
**ಸಮ ಜಮ ನಿಯಮ ಫೂಲ ಫಲ ಗ್ಯಾನಾ । ಹರಿ ಪದ ರತಿ ರಸ ಬೇದ ಬಖಾನಾ ॥ ೭ ॥**
**ಔರಉ ಕಥಾ ಅನೇಕ ಪ್ರಸಂಗಾ । ತೆಇ ಸುಕ ಪಿಕ ಬಹುಬರನ ಬಿಹಂಗಾ ॥ ೮ ॥**

ಇದರಲ್ಲಿನ ಏಳು ಕಾಂಡಗಳೇ ಈ ಮಾನಸಸರೋವರದ ಚೆಲುವಾದ ಏಳು ಸೋಪಾನಗಳು ಇಲ್ಲವೇ ಏಳು ಮೆಟ್ಟಿಲುಗಳು. ಇವುಗಳನ್ನು ಜ್ಞಾನನೇತ್ರಗಳಿಂದ ನೋಡಿದ ಕೂಡಲೇ ಮನಸ್ಸು ಪ್ರಸನ್ನವಾಗುತ್ತದೆ. ಶ್ರೀರಘುಪತಿಯ ನಿರ್ಗುಣ (ಪ್ರಾಕೃತಿಕ ಗುಣಗಳಿಂದ ಅತೀತ) ಹಾಗೂ ಏಕರಸ ಮಹಿಮೆಗಳ ವರ್ಣನೆಯೇ ಈ ಸುಂದರ ಜಲದ ಅಗಾಧತೆ; ಆಳವರಿಯದ ಆಳ. ಇದರಲ್ಲಿ ವರ್ಣಿತವಾದ ಸೀತಾರಾಮರ ಯಶಸ್ಸೇ ಸುಧೆಗೆ ಸಮಾನವಾದ ಸಲಿಲ. ಇದರಲ್ಲಿ ಬಂದಿರುವ ಉಪಮೆಗಳು ಮನೋಹರ ವೀಚಿವಿಲಾಸ. ಸುಂದರ ಚೌಪಾಯಿಗಳೇ (ಚತುಷ್ಪದಿ) ಇದರಲ್ಲಿ ದಟ್ಟವಾಗಿ ಹಬ್ಬಿಕೊಂಡಿರುವ ತಾವರೆಗಳು. ಚೆಲುವಾದ ಕಾವ್ಯೋಕ್ತಿಗಳು ಸುಂದರವಾದ ಮುತ್ತುಗಳನ್ನು ಕೊಡುವ ಮುದ್ದಾದ ಕಪ್ಪೆಚಿಪ್ಪುಗಳು. ಛಂದ, ಸೋರಠಾ, ದೋಹಾ ಮೊದಲಾದ ಮನೋಹರ ಛಂದಸ್ಸುಗಳೇ ಬಹುವರ್ಣದ ಕಮಲಸಂದೋಹಗಳು. ಅನುಪಮ ಅರ್ಥ, ಉನ್ನತ ಭಾವಗಳು, ಸುಂದರ ಭಾಷೆ ಇವುಗಳೇ ಪರಾಗ, ಮಕರಂದ ಹಾಗೂ ಪರಿಮಳ. ಸುಕೃತ ಪುಂಜಗಳೇ ಮಂಜುಳ ತುಂಬಿಗಳ ಗುಂಪುಗಳು. ಜ್ಞಾನ, ವೈರಾಗ್ಯ ಹಾಗೂ ವಿಚಾರಗಳೇ ಇಲ್ಲಿಯ ಹಂಸಗಳು, ಕಾವ್ಯಧ್ವನಿ, ವಕ್ರೋಕ್ತಿ, ಗುಣ ಹಾಗೂ ಜಾತಿ ಇವು ಅನೇಕ ಜಾತಿಯ ಮೀನುಗಳು. ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳು, ಜ್ಞಾನ-ವಿಜ್ಞಾನ ವಿಚಾರಗಳು, ಕಾವ್ಯದಲ್ಲಿರುವ ನವರಸಗಳು, ಜಪ, ತಪ, ಯೋಗ, ವೈರಾಗ್ಯ ಇವುಗಳ ಪ್ರಸಂಗಗಳು ಇವೆಲ್ಲ ಈ ಸರೋವರದ ಚೆಲುವಾದ ಜಲಚರಗಳು. ಪುಣ್ಯಾತ್ಮರ, ಸಾಧು-ಸಂತರ, ಶ್ರೀರಾಮನ ಗುಣಗಾನವೇ ಈ ಸರೋವರದ ವಿಚಿತ್ರ ಜಲಪಕ್ಷಿಗಳು. ಸಂತರ ಸಭೆಯೇ ಈ ಕೊಳದ ಸುತ್ತಲೂ ಬೆಳೆದಿರುವ ಮಾವಿನತೋಪು. ಶ್ರದ್ಧೆಯೇ ವಸಂತಋತುವಿನಂತಿದೆ. ನಾನಾ ರೀತಿಯ ಭಕ್ತಿಯ ನಿರೂಪಣೆಯೇ, ಶಮೆ, ದಯೆ, ದಮ (ಇಂದ್ರಿಯನಿಗ್ರಹ) ಇವುಗಳೇ ಲತಾಮಂಟಪಗಳು. ಮನೋನಿಗ್ರಹ, ಯಮ, (ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ) ನಿಯಮ, (ಶೌಚ, ಸಂತೋಷ, ತಪ, ಸ್ವಾಧ್ಯಾಯ, ಈಶ್ವರ ಪ್ರಣಿಧಾನ). ಇವುಗಳು ಹೂವುಗಳು. ಜ್ಞಾನವೇ ಫಲ. ಶ್ರೀಹರಿಚರಣ ಪ್ರೇಮವೇ ಈ ಜ್ಞಾನಫಲದ ರಸ. ಹೀಗೆಂದು ವೇದಗಳೇ

ಸಾರುತ್ತವೆ. ಈ ರಾಮಚರಿತಮಾನಸದಲ್ಲಿರುವ ಇನ್ನು ಅನೇಕ ಪ್ರಸಂಗದ ಕಥೆಗಳೇ ಶುಕ, ಪಿಕವೇ ಮೊದಲಾದ ಬಣ್ಣ-ಬಣ್ಣದ ಪಕ್ಷಿಗಳು. (ಚೌ/೧-೮)

**ದೋ – ಪುಲಕ ಬಾಟಿಕಾ ಬಾಗ ಬನ ಸುಖ ಸುಬಿಹಂಗ ಬಿಹಾರು ।**
**ಮಾಲೀ ಸುಮನ ಸನೇಹ ಜಲ ಸೀಂಚತ ಲೋಚನ ಚಾರು ॥ ೩೭ ॥**

ಈ ಕಥಾಶ್ರವಣದಲ್ಲಿ ಉಂಟಾಗುವ ರೋಮಾಂಚವೇ ಸುಂದರ ಪುಷ್ಪವಾಟಿಕೆ, ಉದ್ಯಾನವನ. ಇದರಿಂದಾಗುವ ಸುಖವೇ ಪಕ್ಷಿಗಳ ವಿಹಾರ. ನಿರ್ಮಲ ಮನಸ್ಸೇ ತೋಟಗಾರ. ಇವನು ಪ್ರೇಮಜಲದಿಂದ, ಸುಂದರ ಕಣ್ಣುಗಳಿಂದ ಈ ಗಿಡಗಳಿಗೆ ನೀರೆರೆಯುತ್ತಾನೆ. (ದೋ/೩೭)

**ಚೌ – ಜೇ ಗಾವಹಿಂ ಯಹ ಚರಿತ ಸಂಭಾರೇ । ತೇಇ ಏಹಿ ತಾಲ ಚತುರ ರಖವಾರೇ ॥**
**ಸದಾ ಸುನಹಿಂ ಸಾದರ ನರ ನಾರೀ । ತೇಇ ಸುರಬರ ಮಾನಸ ಅಧಿಕಾರೀ ॥ ೧ ॥**
**ಅತಿ ಖಲ ಜೇ ವಿಷಈ ಬಗ ಕಾಗಾ । ಏಹಿಂ ಸರ ನಿಕಟ ನ ಜಾಹಿಂ ಅಭಾಗಾ ॥**
**ಸಂಬುಕ ಭೇಕ ಸೇವಾರ ಸಮಾನಾ । ಇಹಾಂ ನ ವಿಷಯ ಕಥಾ ರಸ ನಾನಾ ॥ ೨ ॥**
**ತೇಹಿ ಕಾರನ ಆವತ ಹಿಯಂ ಹಾರೇ । ಕಾಮೀ ಕಾಕ ಬಲಾಕ ಬಿಚಾರೇ ॥**
**ಆವತ ಏಹಿಂ ಸರ ಅತಿ ಕಠಿನಾಈ । ರಾಮ ಕೃಪಾ ಬಿನು ಆಇ ನ ಜಾಈ ॥ ೩ ॥**
**ಕಠಿನ ಕುಸಂಗ ಕುಪಂಥ ಕರಾಲಾ । ತಿನ್ಹ ಕೇ ಬಚನ ಬಾಘ ಹರಿ ಬ್ಯಾಲಾ ॥**
**ಗೃಹ ಕಾರಜ ನಾನಾ ಜಂಜಾಲಾ । ತೇ ಅತಿ ದುರ್ಗಮ ಸೈಲ ಬಿಸಾಲಾ ॥ ೪ ॥**
**ಬನ ಬಹು ಬಿಷಮ ಮೋಹ ಮದ ಮಾನಾ । ನದೀಂ ಕುತರ್ಕ ಭಯಂಕರ ನಾನಾ ॥ ೫ ॥**

ಈ ಚರಿತ್ರವನ್ನು ಎಚ್ಚರಿಕೆಯಿಂದ ಹಾಡುವ ಜನರೇ ಈ ಸರೋವರದ ದಕ್ಷ ಕಾವಲುಗಾರರು. ಪ್ರತಿದಿನವು ಆದರದಿಂದ ಆಲಿಸುವ ಸ್ತ್ರೀ, ಪುರುಷರೇ ಈ ಮಾನಸದ ಅಧಿಕಾರಿಗಳಾದ ಉತ್ತಮ ದೇವತೆಗಳು. ಅತ್ಯಂತ ದುಷ್ಟರೂ, ವಿಷಯ ಲೋಲುಪರು ಆದ ದೌರ್ಭಾಗ್ಯಶಾಲಿಗಳಾದ ಬಕಪಕ್ಷಿಗಳು, ಕಾಗೆಗಳು, ಇವರು ಈ ಸರೋವರದ ಸನಿಹದಲ್ಲಿ ಎಂದೂ ಸುಳಿಯುವುದಿಲ್ಲ. ಏಕೆಂದರೆ ಇದರಲ್ಲಿ ಶಂಖದ ಹುಳ, ಕಪ್ಪೆ ಮತ್ತು ಪಾಚಿಯಂತಹ ವಿಷಯರಸದ ನಾನಾ ಕಥೆಗಳು ಇಲ್ಲ. ಈ ಕಾರಣದಿಂದಲೇ ಕಾಗೆಗಳು, ಬಕಪಕ್ಷಿಗಳು, ಇವರಂತಿರುವ ವಿಷಯೀಜನರು ಇತ್ತ ಬರಲು ಹಿಂಜರಿಯುತ್ತಾರೆ, ಎದೆಗುಂದುತ್ತಾರೆ. ಏಕೆಂದರೆ ಈ ಸರೋವರದ ಹತ್ತಿರ ಬರಲು ತುಂಬಾ ಕಷ್ಟವಾಗಿದೆ. ಶ್ರೀರಾಮನ ಕೃಪೆಯಿಲ್ಲದೆ ಇತ್ತ ಬರಲಾಗುವುದಿಲ್ಲ. ಘೋರ ಕುಸಂಗವೇ ಭಯಂಕರವಾದ ಕೆಟ್ಟದಾರಿ. ಆ ಕುಸಂಗಿಗಳ ಮಾತುಗಳೇ ಹುಲಿ, ಸಿಂಹ, ಹಾವುಗಳೆಂಬ ಹಿಂಸ್ರ ಪ್ರಾಣಿಗಳು. ಮನೆವಾರ್ತೆ, ಗೃಹಕೃತ್ಯದ ಜಂಜಡಗಳೇ ಅತ್ಯಂತ ದುರ್ಗಮವಾದ ಬೆಟ್ಟಗಳು. ಮೋಹ, ಮದ ಹಾಗೂ ದುರಭಿಮಾನವೇ ಅತ್ಯಂತ ದುರ್ಗಮವಾದ ಕಾಡು, ನಾನಾ ವಿಧವಾದ ಕುತರ್ಕವೇ ಭಯಂಕರ ನದಿಗಳು. (ಚೌ/೧-೫)

**ದೋ – ಜೇ ಶ್ರದ್ಧಾ ಸಂಬಲ ರಹಿತ ನಹಿಂ ಸಂತನ್ಹ ಕರ ಸಾಥ ।**
**ತಿನ್ಹ ಕಹುಂ ಮಾನಸ ಅಗಮ ಅತಿ ಜಿನ್ಹಹಿ ನ ಪ್ರಿಯ ರಘುನಾಥ ॥ ೩೮ ॥**

ಶ್ರದ್ಧೆಯೆಂಬ ಪಾಥೇಯವಿಲ್ಲದವರ ಸಂತರ ಸಾಂಗತ್ಯವಿಲ್ಲದವರ, ಶ್ರೀರಾಮಚಂದ್ರನಲ್ಲಿ ಪ್ರೀತಿಯಿಲ್ಲದವರ ಪಾಲಿಗೆ ಈ ಮಾನಸಸರೋವರವು ಅತ್ಯಂತ ಅಗಮವಾದುದು. ಅಂದರೆ ಶ್ರದ್ಧೆ, ಸತ್ಸಂಗ, ಭಗವತ್ಪ್ರೇಮವಿಲ್ಲದವರು ಯಾರೂ ಇದನ್ನು ತಲುಪಲಾರರು. (ದೋ/೩೮)

**ಚೌ – ಜೌಂ ಕರಿ ಕಷ್ಟ ಜಾಇ ಪುನಿ ಕೋಈ । ಜಾತಹಿಂ ನೀದ ಜುಡಾಈ ಹೋಈ ॥**
**ಜಡತಾ ಜಾಡ ಬಿಷಮ ಉರ ಲಾಗಾ । ಗಏಹುಂ ನ ಮಜ್ಜನ ಪಾವ ಅಭಾಗಾ ॥ ೧ ॥**
**ಕರಿ ನ ಜಾಇ ಸರ ಮಜ್ಜನ ಪಾನಾ । ಫಿರಿ ಆವಇ ಸಮೇತ ಅಭಿಮಾನಾ ॥**
**ಜೌಂ ಬಹೋರಿ ಕೋಉ ಪೂಛನ ಆವಾ । ಸರ ನಿಂದಾ ಕರಿ ತಾಹಿ ಬುಝಾವಾ ॥ ೨ ॥**
**ಸಕಲ ಬಿಘ್ನ ಬ್ಯಾಪಹಿಂ ನಹಿಂ ತೇಹೀ । ರಾಮ ಸುಕೃಪಾಂ ಬಿಲೋಕಹಿಂ ಜೇಹೀ ॥**
**ಸೋಇ ಸಾದರ ಸರ ಮಜ್ಜನು ಕರಈ । ಮಹಾ ಘೋರ ತ್ರಯತಾಪ ನ ಜರಈ ॥ ೩ ॥**
**ತೇ ನರ ಯಹ ಸರ ತಜಹಿಂ ನ ಕಾಊ । ಜಿನ್ಹ ಕೇಂ ರಾಮ ಚರನ ಭಲ ಭಾಊ ॥**
**ಜೋ ನಹಾಇ ಚಹ ಏಹಿಂ ಸರ ಭಾಈ । ಸೋ ಸತಸಂಗ ಕರಉ ಮನ ಲಾಈ ॥ ೪ ॥**

**ಅಸ ಮಾನಸ ಮಾನಸ ಚಖ ಚಾಹೀ । ಭಇ ಕಬಿ ಬುದ್ಧಿ ಬಿಮಲ ಅವಗಾಹೀ ॥**
**ಭಯಉ ಹೃದಯ್ ಆನಂದ ಉಛಾಹೂ । ಉಮಗೆಉ ಪ್ರೇಮ ಪ್ರಮೋದ ಪ್ರಬಾಹೂ ॥ ೫ ॥**
**ಚಲೀ ಸುಭಗ ಕಬಿತಾ ಸರಿತಾ ಸೋ । ರಾಮ ಬಿಮಲ ಜಸ ಜಲ ಭರಿತಾ ಸೋ ॥**
**ಸರಜೂ ನಾಮ ಸುಮಂಗಲ ಮೂಲಾ । ಲೋಕ ಬೇದ ಮತ ಮಂಜುಲ ಕೂಲಾ ॥ ೬ ॥**
**ನದೀ ಪುನೀತ ಸುಮಾನಸ ನಂದಿನಿ । ಕಲಿಮಲ ತೃನ ತರು ಮೂಲ ನಿಕಂದಿನಿ ॥ ೭ ॥**

ಒಂದು ಪಕ್ಷ ಯಾರಾದರೂ ಇಷ್ಟೆಲ್ಲ ಕಷ್ಟ ಸಹಿಸಿ ಅಲ್ಲಿಯವರೆಗೆ ಹೋದರೂ ಕೂಡ ಅವರಿಗೆ ಅಲ್ಲಿ ನಿದ್ದೆಯೆಂಬ ಚಳಿಜ್ವರ ಬಂದುಬಿಡುತ್ತದೆ. ಎದೆಯಲ್ಲಿ ಜಡತೆಯೆಂಬ ಶೂಲೆ ಕಾಣಿಸಿಕೊಳ್ಳುತ್ತದೆ. ಈ ಕಾರಣದಿಂದ ಅಲ್ಲಿಗೆ ಹೋದರೂ ಕೂಡ ನಿರ್ಭಾಗ್ಯನಾದವನು ಸ್ನಾನ ಮಾಡಲಾರನು. ಅವನಿಗೆ ಈ ಸರೋವರದಲ್ಲಿ ಸ್ನಾನಪಾನಗಳಂತೂ ಇಲ್ಲವೇ ಇಲ್ಲ. ಅವನು ದುರಭಿಮಾನವನ್ನು ಹೊತ್ತು ಹಿಂದಿರುಗುತ್ತಾನೆ. ಯಾರಾದರೂ ಅವನನ್ನು ಸರೋವರದ ಬಗೆಗೆ ಕೇಳಿದರೆ, ತನ್ನ ಪಾಡನ್ನು ಹೇಳದೆ ಮಾನಸವನ್ನೇ ನಿಂದಿಸುತ್ತಾ ತನ್ನನ್ನು ಸಮರ್ಥಿಸಿಕೊಳ್ಳುತ್ತಾನೆ. ಆದರೆ ಶ್ರೀರಾಮನ ಕೃಪಾದೃಷ್ಟಿ ಇರುವವರನ್ನು ಈ ವಿಘ್ನಗಳು ಕಾಡಲಾರವು. ಅವರು ಈ ಮಾನಸಸರೋವರದಲ್ಲಿ ಆದರದಿಂದ ಸ್ನಾನ ಮಾಡುತ್ತಾರೆ. ಭಯಂಕರ ತಾಪತ್ರಯ (ಆಧ್ಯಾತ್ಮಿಕ, ಅಧಿದೈವಿಕ, ಅಧಿಭೌತಿಕ) ಗಳಿಂದ ಬೇಯಲಾರರು. ಶ್ರೀರಾಮನ ಚರಣಗಳಲ್ಲಿ ನಿರ್ಮಲ ಪ್ರೇಮವಿರುವವರು ಈ ಸರೋವರವನ್ನು ಎಂದಿಗೂ ತೊರೆಯಲಾರರು. ಓ ಸೋದರ! ಈ ಸರೋವರದಲ್ಲಿ ಮೀಯಲು ಬಯಸುವವರು ಮನಃಪೂರ್ವಕವಾಗಿ ಸತ್ಸಂಗ ಮಾಡಬೇಕು. ಇಂತಹ ಮಾನಸಸರೋವರವನ್ನು ಮನೋನೇತ್ರಗಳಿಂದ ನೋಡಿ, ಅದರಲ್ಲಿ ಮುಳುಗುಹಾಕಿ ಕವಿಯ (ತುಳಸೀದಾಸನ) ಬುದ್ಧಿ ಮಡಿಯಾಯಿತು; ಹೃದಯದಲ್ಲಿ ಆನಂದೋತ್ಸಾಹಗಳು ತುಂಬಿದವು. ಪ್ರೇಮಾನಂದಗಳ ಪ್ರವಾಹ ಉಕ್ಕಿ ಹರಿಯಿತು. ಆ ಸರಸ್ಸಿನಿಂದ ಶ್ರೀರಾಮನ ಯಶೋವೈಭವವೆಂಬ ಜಲವಿರುವ ಸುಂದರ ಕವಿತಾನದಿ ಹೊರಹೊಮ್ಮಿತು. ಈ ಕಾವ್ಯರೂಪೀ ನದಿಯ ಹೆಸರು ಸರಯೂ. ಇದು ಎಲ್ಲ ಮಂಗಳಗಳ ಮೂಲ. ಲೋಕಮತ ಹಾಗೂ ವೇದಮತ ಇವೆರಡು ಇದರ ಚೆಲುವಾದ ದಡಗಳು. ಈ ಮಾನಸಸರೋವರದ ಕನ್ಯೆ ಸರಯೂನದಿ ಅತ್ಯಂತ ಪವಿತ್ರವಾದುದು. ಕಲಿಯುಗದ ಪಾಪರೂಪವಾದ ತೃಣ-ತರುಗಳನ್ನು ಬೇರುಸಹಿತ ಕಿತ್ತೆಸೆಯುವಂತಹುದು. (ಚೌ/೧-೭)

**ದೋ – ಶ್ರೋತಾ ತ್ರಿವಿಧ ಸಮಾಜ ಪುರ ಗ್ರಾಮ ನಗರ ದುಹ್ ಕೂಲ ।**
**ಸಂತಸಭಾ ಅನುಪಮ ಅವಧ ಸಕಲ ಸುಮಂಗಲ ಮೂಲ ॥ ೩೯ ॥**

ಮೂರುವಿಧವಾದ ಶ್ರೋತೃಗಳ ಸಮಾಜವೇ ಈ ನದಿಯ ಎರಡೂ ದಡಗಳಲ್ಲಿ ನೆಲೆಸಿರುವ ಕೊಪ್ಪಲು, ಹಳ್ಳಿ ಮತ್ತು ಊರುಗಳು. ಅದರಲ್ಲಿ ವಾಸಿಸುವ ಸಾಧುಸಮಾಜವೇ ನಿರುಪಮವಾದ ಅಯೋಧ್ಯೆ. ಇದು ಸಕಲ ಸುಮಂಗಳ ಮೂಲ (ಬೇರು) ವಾಗಿದೆ. (ದೋ/೩೯)

**ಚೌ – ರಾಮಭಗತಿ ಸುರಸರಿತಹಿ ಜಾಈ । ಮಿಲೀ ಸುಕೀರತಿ ಸರಜು ಸುಹಾಈ ॥**
**ಸಾನುಜ ರಾಮ ಸಮರ ಜಸು ಪಾವನ । ಮಿಲೆಉ ಮಹಾನದು ಸೋನ ಸುಹಾವನ ॥ ೧ ॥**
**ಜುಗ ಬಿಚ ಭಗತಿ ದೇವಧುನಿ ಧಾರಾ । ಸೋಹತಿ ಸಹಿತ ಸುಬಿರತಿ ಬಿಚಾರಾ ॥**
**ತ್ರಿವಿಧ ತಾಪ ತ್ರಾಸಕ ತಿಮುಹಾನೀ । ರಾಮ ಸರೂಪ ಸಿಂಧು ಸಮುಹಾನೀ ॥ ೨ ॥**
**ಮಾನಸ ಮೂಲ ಮಿಲೀ ಸುರಸರಿಹೀ । ಸುನತ ಸುಜನ ಮನ ಪಾವನ ಕರಿಹೀ ॥**
**ಬಿಚ ಬಿಚ ಕಥಾ ಬಿಚಿತ್ರ ಬಿಭಾಗಾ । ಜನು ಸರಿ ತೀರ ತೀರ ಬನ ಬಾಗಾ ॥ ೩ ॥**
**ಉಮಾ ಮಹೇಸ ಬಿಬಾಹ ಬರಾತೀ । ತೇ ಜಲಚರ ಅಗನಿತ ಬಹುಭಾಂತೀ ॥**
**ರಘುಬರ ಜನಮ ಅನಂದ ಬಧಾಈ । ಭವ್ಁರ ತರಂಗ ಮನೋಹರತಾಈ ॥ ೪ ॥**

ಸುಂದರ ಕೀರ್ತಿರೂಪಿಣೀಯಾದ ಸರಯೂ ನದಿಯು ಶ್ರೀರಾಮಭಕ್ತಿ ಎಂಬ ಗಂಗೆಗೆ ಹೋಗಿ ಸೇರುವಳು. ಅನುಜನಾದ ಲಕ್ಷ್ಮಣನೊಡಗೂಡಿ ಶ್ರೀರಾಮನ ಯುದ್ಧದ ಪವಿತ್ರ ಯಶಸ್ಸೆಂಬ ಚೆಲುವಾದ ಮಹಾನದವು ಅಲ್ಲಿ ಬಂದು ಕೂಡಿಕೊಂಡಿತು. ಇವೆರಡರ ನಡುವೆ ಭಕ್ತಿರೂಪೀ ಗಂಗೆಯ ಪ್ರವಾಹ ಜ್ಞಾನ-ವೈರಾಗ್ಯಗಳೊಂದಿಗೆ ಶೋಭಿಸುತ್ತದೆ. ಹೀಗೆ ತ್ರಿವಿಧ ತಾಪಗಳನ್ನು ಹೊಡೆದೋಡಿಸುವ ಮೂರುನದಿ ಪ್ರವಾಹಗಳು ಶ್ರೀರಾಮಭಕ್ತಿರೂಪೀ ಸಮುದ್ರದ ಕಡೆಗೆ ಸಾಗುತ್ತಿವೆ. ಈ ಕೀರ್ತಿರೂಪಿಣಿಯಾದ ಸರಯೂ ನದಿಯ ಉಗಮ ಮಾನಸ (ಶ್ರೀರಾಮಚರಿತ) ಸರೋವರ. ಇದು ರಾಮಭಕ್ತಿರೂಪೀ ಗಂಗೆಗೆ ಹೋಗಿ ಸೇರಿದೆ. ಆದ್ದರಿಂದ ಇದನ್ನು ಕೇಳುವ ಸಜ್ಜನರ ಮನಸ್ಸನ್ನೂ ಪವಿತ್ರಗೊಳಿಸುತ್ತದೆ. ಇದರ ನಡು-ನಡುವೆ ಬರುವ ವಿವಿಧ

ಸುಂದರ ಕಥೆಗಳು ನದೀತೀರದ ಅಕ್ಕ-ಪಕ್ಕಗಳಲ್ಲಿರುವ ತೋಟಗಳು, ವನಗಳು. ಪಾರ್ವತೀ ಪರಮೇಶ್ವರ ವಿವಾಹ ಮಹೋತ್ಸವದ ದಿಬ್ಬಣವೇ ಈ ನದಿಯ ಅಸಂಖ್ಯ ಜಲಚರ ಜೀವಿಗಳು. ಶ್ರೀರಘುವರ ಜನ್ಮದಿನದ ಆನಂದಾಭಿನಂದನವೇ ಈ ನದಿಯ ಸುಳಿ ಹಾಗೂ ತರಂಗಗಳು ಮನೋಹರವಾಗಿದೆ. (ಚೌ/೧-೪)

**ದೋ – ಬಾಲಚರಿತ ಚಹು ಬಂಧು ಕೇ ಬನಜ ಬಿಪುಲ ಬಹುರಂಗ ।**
**ನೃಪ ರಾನೀ ಪರಿಜನ ಸುಕೃತ ಮಧುಕರ ಬಾರಿಬಿಹಂಗ ॥ ೪೦ ॥**

ನಾಲ್ಕು ಮಂದಿ ಅಣ್ಣತಮ್ಮಂದಿರ ಬಾಲಚರಿತ್ರವೇ ಇದರಲ್ಲಿ ಅರಳಿದ ಅನೇಕ ಬಣ್ಣ-ಬಣ್ಣದ ಕಮಲಗಳು. ನೃಪ ದಶರಥ, ಆತನ ರಾಣಿಯರು ಹಾಗೂ ಕುಟುಂಬದ ಜನರ ಸುಕೃತವೇ ಇದರ ತುಂಬಿಗಳು ಮತ್ತು ಜಲಪಕ್ಷಿಗಳು. (ದೋ/೪೦)

**ಚೌ – ಸೀಯ ಸ್ವಯಂಬರ ಕಥಾ ಸುಹಾಈ । ಸರಿತ ಸುಹಾವನಿ ಸೋ ಛಬಿ ಛಾಈ ॥**
**ನದೀ ನಾವ ಪಟು ಪ್ರಸ್ನ ಅನೇಕಾ । ಕೇವಟ ಕುಸಲ ಉತರ ಸಬಿಬೇಕಾ ॥ ೧ ॥**
**ಸುನಿ ಅನುಕಥನ ಪರಸ್ಪರ ಹೋಈ । ಪಥಿಕ ಸಮಾಜ ಸೊಹ ಸರಿ ಸೋಈ ॥**
**ಘೋರ ಧಾರ ಭೃಗುನಾಥ ರಿಸಾನೀ । ಘಾಟ ಸುಬದ್ಧ ರಾಮ ಬರ ಬಾನೀ ॥ ೨ ॥**
**ಸಾನುಜ ರಾಮ ಬಿಬಾಹ ಉಛಾಹೂ । ಸೋ ಸುಭ ಉಮಗ ಸುಖದ ಸಬ ಕಾಹೂ ॥**
**ಕಹತ ಸುನತ ಹರಷಹಿಂ ಪುಲಕಾಹೀಂ । ತೇ ಸುಕೃತೀ ಮನ ಮುದಿತ ನಹಾಹೀಂ ॥ ೩ ॥**
**ರಾಮ ತಿಲಕ ಹಿತ ಮಂಗಲ ಸಾಜಾ । ಪರಬ ಜೋಗ ಜನು ಜುರೇ ಸಮಾಜಾ ॥**
**ಕಾಈ ಕುಮತಿ ಕೇಕಈ ಕೇರೀ । ಪರೀ ಜಾಸು ಫಲ ಬಿಪತಿ ಘನೇರೀ ॥ ೪ ॥**

ಶ್ರೀ ಸೀತಾದೇವಿಯ ಸ್ವಯಂವರದ ಸುಂದರ ಕಥೆಯೇ ಈ ನದಿಯಲ್ಲಿ ಮನೋಹರವಾದ ಕಾಂತಿಯಾಗಿ ಹಬ್ಬಿದೆ. ವಿಚಾರಪೂರ್ಣವಾದ ಅನೇಕ ಚೆಲುವಾದ ಪ್ರಶ್ನೆಗಳೇ ಈ ನದಿಯ ನಾವೆಗಳು. ಇವುಗಳ ವಿವೇಕಯುಕ್ತವಾದ ಉತ್ತರಗಳೇ ಚತುರ ಅಂಬಿಗರು. ಈ ಕಥೆಯನ್ನು ಕೇಳಿದ ಮೇಲೆ ಉಂಟಾಗುವ ಪಾರಸ್ಪರಿಕ ಚರ್ಚೆಯೇ, ಈ ನದಿಯ ಆಸರೆಯಲ್ಲಿಸಾಗುವ ಯಾತ್ರಿಗಳ ಸಮೂಹಗಳು. ಅವರಿಂದಾಗಿ ಈ ನದಿಯ ಆಸರೆಯಲ್ಲಿ ಸಾಗುವ ಯಾತ್ರಿಗಳ ಸಮೂಹಗಳು. ಅವರಿಂದಾಗಿ ಈ ನದಿಯ ಶೋಭೆಯು ಇಮ್ಮಡಿಸಿದೆ. ಪರಶುರಾಮರ ಕೋಪವೇ ಇದರ ಭಯಾನಕವಾದ ಪ್ರವಾಹವು. ಶ್ರೀರಾಮಚಂದ್ರನ ವರವಾಣಿಯೇ ಚೆನ್ನಾಗಿ ನಿರ್ಮಿತಗೊಂಡ ಘಟ್ಟಗಳು. ತಮ್ಮಂದಿರೊಂದಿಗೆ ನಡೆಯುವ ಶ್ರೀರಾಮನ ವಿವಾಹಮಹೋತ್ಸವವೇ ಈ ಕಥಾನದಿಯ ಕಲ್ಯಾಣಕಾರಿಯಾದ ನೆರೆಯು. ಈ ನೆರೆಯು ಎಲ್ಲರಿಗೂ ಹರ್ಷವನ್ನುಂಟುಮಾಡುವಂತಹುದು. ಇದನ್ನು ಕೇಳಿ ಹರ್ಷಗೊಳ್ಳುವ, ಪುಲಕಿತರಾಗುವ ಜನರೇ ಈ ನದಿಯಲ್ಲಿ ಹರ್ಷದಿಂದ ಮೀಯುವ ಪುಣ್ಯಾತ್ಮರು. ಶ್ರೀರಾಮನ ಪಟ್ಟಾಭಿಷೇಕದ ವೇಳೆಯಲ್ಲಿ ನಿರ್ಮಿತವಾದ ಮಂಗಳಸಿದ್ಧತೆಗಳೇ, ಪರ್ವಕಾಲದಲ್ಲಿ ಈ ನದಿಯ ಬಳಿ ಸೇರುವ ಯಾತ್ರಿಕರ ಸಮೂಹ. ಕೈಕೆಯಿಯ ದುರ್ಬುದ್ಧಿಯೇ ಭಯಂಕರ ಕೇಡು ತಂದ ಈ ನದಿಯ ಪಾಚಿ. (ಚೌ/೧-೪)

**ದೋ– ಸಮನ ಅಮಿತ ಉತಪಾತ ಸಬ ಭರತಚರಿತ ಜಪಜಾಗ ।**
**ಕಲಿ ಅಘ ಖಲ ಅವಗುನ ಕಥನ ತೇ ಜಲಮಲ ಬಗ ಕಾಗ ॥ ೪೧ ॥**

ಅಮಿತವಾದ ಉತ್ಪಾತಗಳನ್ನು ಶಾಂತಗೊಳಿಸುವ ಭರತನ ಚಾರಿತ್ರ್ಯವೇ, ನದೀ ತೀರದಲ್ಲಿ ಆಚರಿಸುವ ಜಪ, ಯಜ್ಞಗಳು. ಕಲಿಯುಗದ ಪಾಪದ ಹಾಗೂ ದುಷ್ಟರ ಅವಗುಣಗಳ ವರ್ಣನೆಯೇ ಈ ಜಲದ ಕೆಸರು ಮತ್ತು ಕಾಕ, ಬಕಪಕ್ಷಿಗಳು. (ದೋ/೪೧)

**ಚೌ – ಕೀರತಿ ಸರಿತ ಛಹೂಂ ರಿತು ರೂರೀ । ಸಮಯ ಸುಹಾವನಿ ಪಾವನಿ ಭೂರೀ ॥**
**ಹಿಮ ಹಿಮಸೈಲಸುತಾ ಸಿವ ಬ್ಯಾಹೂ । ಸಿಸಿರ ಸುಖದ ಪ್ರಭು ಜನಮ ಉಛಾಹೂ ॥ ೧ ॥**
**ಬರನಬ ರಾಮ ಬಿಬಾಹ ಸಮಾಜೂ । ಸೋ ಮುದ ಮಂಗಲಮಯ ರಿತುರಾಜೂ ॥**
**ಗ್ರೀಷಮ ದುಸಹ ರಾಮ ಬನಗವನೂ । ಪಂಥಕಥಾ ಖರ ಆತಪ ಪವನೂ ॥ ೨ ॥**
**ಬರಷಾ ಘೋರ ನಿಸಾಚರ ರಾರೀ । ಸುರಕುಲ ಸಾಲಿ ಸುಮಂಗಲಕಾರೀ ॥**
**ರಾಮ ರಾಜ ಸುಖ ಬಿನಯ ಬಡಾಈ । ಬಿಸದ ಸುಖದ ಸೋಈ ಸರದ ಸುಹಾಈ ॥ ೩ ॥**
**ಸತೀ ಸಿರೋಮನಿ ಸಿಯ ಗುನಗಾಥಾ । ಸೋಇ ಗುನ ಅಮಲ ಅನೂಪಮ ಪಾಥಾ ॥**
**ಭರತ ಸುಭಾಉ ಸುಸೀತಲತಾಈ । ಸದಾ ಏಕರಸ ಬರನಿ ನ ಜಾಈ ॥ ೪ ॥**

ಶ್ರೀರಾಮನ ಯಶೋವೈಭವವೆಂಬ ಈ ನದಿಯು ಆರೂ ಋತುಗಳಲ್ಲಿಯೂ ಚೆಲುವಾಗಿರುತ್ತದೆ. ಎಲ್ಲ ಕಾಲದಲ್ಲೂ ಇದು ಪರಮ ಮನೋಹರ ಹಾಗೂ ಅತ್ಯಂತ ಪವಿತ್ರ. ಇದರಲ್ಲಿ ಶಿವ-ಪಾರ್ವತಿಯರ ವಿವಾಹ ಹೇಮಂತ ಋತು. ಪ್ರಭು ರಾಮಚಂದ್ರನ ಜನ್ಮೋತ್ಸವವೇ ಸುಖಕರವಾದ ಶಿಶಿರಋತು. ಶ್ರೀರಾಮನ ವಿವಾಹಮಹೋತ್ಸವದ ವರ್ಣನೆಯೇ ಮುದಮಂಗಳಮಯವಾದ ಋತುರಾಜ ವಸಂತ. ರಾಮನ ವನಗಮನವೇ ದುಸ್ಸಹ ಗ್ರೀಷ್ಮಋತು. ಅದರ ಮಾರ್ಗದ ಕಥೆಯೇ ಬಿರುಬಿಸಿಲು ಹಾಗೂ ಬಿಸಿಗಾಳಿ. ರಾಕ್ಷಸರೊಡನೆ ಗೈದ ಘೋರ ಯುದ್ಧವೇ ವರ್ಷಾಋತು. ಇದು ವೈರಿಗೆ ಮಳೆಯಂತೆ ದೇವತೆಗಳಿಗೆ ವರಪ್ರಸಾದವು. ಶ್ರೀರಾಮಚಂದ್ರನ ರಾಮರಾಜ್ಯದ ಸುಖ, ವಿನಮ್ರತೆ, ಹಿರಿಮೆ ಮೊದಲಾದವು ನಿರ್ಮಲ ಸುಖವನ್ನುಂಟುಮಾಡುವ ಶರದೃತು. ಸತೀ ಶಿರೋಮಣಿಯಾದ ಸೀತೆಯ ಗುಣಗಾಥೆಯೇ ಈ ಜಲದ ನಿರ್ಮಲತೆ ಹಾಗೂ ಅನುಪಮಗುಣವು. ಭರತನ ಪ್ರಶಾಂತ ಸ್ವಭಾವವೇ ಈ ನದಿಯ ಶೀತಲತೆ. ಈ ತಂಪು ಯಾವಾಗಲೂ ಒಂದೇ ರೀತಿಯಲ್ಲಿರುತ್ತದೆ, ಇದು ಅವರ್ಣನೀಯ. (ಚೌ/೧-೪)

**ದೋ – ಅವಲೋಕನಿ ಬೋಲನಿ ಮಿಲನಿ ಪ್ರೀತಿ ಪರಸಪರ ಹಾಸ ।**
**ಭಾಯಪ ಭಲಿ ಚಹು ಬಂಧು ಕೀ ಜಲ ಮಾಧುರೀ ಸುಬಾಸ ॥೪೨॥**

ನಾಲ್ವರು ಸೋದರರ ಪರಸ್ಪರ ನಡೆ, ನುಡಿ, ಪ್ರೀತಿ, ನಗೆ ಮತ್ತು ಭ್ರಾತೃಪ್ರೇಮದ ರೀತಿ ಇವುಗಳು ಈ ಜಲದ ಮಾಧುರ್ಯ ಹಾಗೂ ಸುವಾಸನೆ. (ದೋ/೪೨)

**ಚೌ – ಆರತಿ ಬಿನಯ ದೀನತಾ ಮೋರೀ । ಲಘುತಾ ಲಲಿತ ಸುಬಾರಿ ನ ಥೋರೀ ॥**
**ಅದಭುತ ಸಲಿಲ ಸುನತ ಗುನಕಾರೀ । ಆಸ ಪಿಆಸ ಮನೋಮಲ ಹಾರೀ ॥೧॥**
**ರಾಮ ಸುಪ್ರೇಮಹಿ ಪೋಷತ ಪಾನೀ । ಹರತ ಸಕಲ ಕಲಿ ಕಲುಷ ಗಲಾನೀ ॥**
**ಭವ ಶ್ರಮ ಸೋಷಕ ತೋಷಕ ತೋಷಾ । ಸಮನ ದುರಿತ ದುಖ ದಾರಿದ ದೋಷಾ ॥೨॥**
**ಕಾಮ ಕೋಹ ಮದ ಮೋಹ ನಸಾವನ । ಬಿಮಲ ಬಿಬೇಕ ಬಿರಾಗ ಬಢಾವನ ॥**
**ಸಾದರ ಮಜ್ಜನ ಪಾನ ಕಿಏ ತೇँ । ಮಿಟಹಿँ ಪಾಪ ಪರಿತಾಪ ಹಿಏ ತೇँ ॥೩॥**
**ಜಿನ್ಹ ಎಹಿँ ಬಾರಿ ನ ಮಾನಸ ಧೋಏ । ತೇ ಕಾಯರ ಕಲಿಕಾಲ ಬಿಗೋಏ ॥**
**ತೃಷಿತ ನಿರಖಿ ರಬಿ ಕರ ಭವ ಬಾರೀ । ಫಿರಿಹಹಿँ ಮೃಗ ಜಿಮಿ ಜೀವ ದುಖಾರೀ ॥೪॥**

ನನ್ನ ಆರ್ತಭಾವ, ವಿನಯ ಹಾಗೂ ದೈನ್ಯ ಇವೆಲ್ಲವೂ ನಿರ್ಮಲವಾದ ಈ ನದಿಯಲ್ಲಿರುವ ಲಘುತ್ವಗಳ ಚಿನ್ಹೆಗಳು. ಆದರೆ ಈ ಜಲವನ್ನು ಸೇರಿ ಅವು ಉತ್ತಮ ಗುಣಗಳೇ ಆದುವು. ಇದೇ ವೈಶಿಷ್ಟ್ಯವು. ಈ ಜಲವು ಅತ್ಯಂತ ಅದ್ಭುತ. ಇದರ ಹೆಸರು ಹೇಳಿದರೆ ಸಾಕು, ಅದು ತನ್ನ ಗುಣವನ್ನು ತೋರಿಸುತ್ತದೆ. ಆಶೆಯೆಂಬ ಬಾಯಾರಿಕೆ ಮತ್ತು ಮನದ ಕೊಳೆಯನ್ನು ಕಳೆಯುತ್ತದೆ. ಈ ಜಲವು ಶ್ರೀರಾಮನ ಸುಂದರ ಪ್ರೇಮವನ್ನು ಪುಷ್ಟಗೊಳಿಸುತ್ತದೆ. ಸಕಲವಿಧವಾದ ಕಲಿಮಲ ಹಾಗೂ ಮನಸ್ತಾಪವನ್ನು ಕಳೆಯುತ್ತದೆ. ಹುಟ್ಟು-ಸಾವು ಶ್ರಮವನ್ನು ಶೋಷಿಸಿ ಸಂತೋಷವನ್ನುಂಟುಮಾಡುತ್ತದೆ. ಪಾಪ, ತಾಪ, ದಾರಿದ್ರ್ಯವೇ ಮೊದಲಾದ ದೋಷಗಳನ್ನು ನಾಶಪಡಿಸುತ್ತದೆ. ಈ ಜಲವು ಕಾಮ, ಕ್ರೋಧ, ಮದ, ಮೋಹಗಳನ್ನು ತೊಡೆದುಹಾಕಿ ನಿರ್ಮಲವಾದ ಜ್ಞಾನವೈರಾಗ್ಯಗಳನ್ನು ವರ್ಧಿಸುತ್ತದೆ. ಇದರಲ್ಲಿ ಆದರದಿಂದ ಸ್ನಾನಮಾಡುವವರಿಗೆ, ಪಾನಮಾಡುವವರಿಗೆ ಹೃದಯದಲ್ಲಿರುವ ಎಲ್ಲ ವಿಧವಾದ ಪಾಪ, ತಾಪಗಳು ಪರಿಹಾರವಾಗುತ್ತವೆ. ಶ್ರೀರಾಮ ಸುಯಶವೆಂಬ ಈ ಜಲದಿಂದ ತಮ್ಮ ಹೃದಯವನ್ನು ತೊಳೆಯದವರು ಹೇಡಿಗಳು ಮತ್ತು ಕಲಿಕಾಲದ ಮೋಸಕ್ಕೆ ಒಳಗಾದವರು. ಬಾಯಾರಿದ ಜಿಂಕೆಯು ಬಿಸಿಲಿನಿಂದುಂಟಾದ ಮೃಗಜಲವನ್ನು ನಿಜವಾದ ನೀರೆಂದು ಭ್ರಮಿಸಿ ಓಡುತ್ತಾ ನೀರು ದೊರೆಯದೆ ಕ್ಲೇಶಪಡುವಂತೆ ಕಲಿಯಿಂದ ಮೋಸಹೋದ ಜೀವಿಗಳೂ ಕೂಡ ವಿಷಯಸುಖಗಳ ಬೆನ್ನುಹತ್ತಿ ದುಃಖಕ್ಕೆ ಗುರಿಯಾಗುತ್ತಾರೆ. (ಚೌ/೧-೪)

**ದೋ – ಮತಿ ಅನುಹಾರಿ ಸುಬಾರಿ ಗುನ ಗನ ಗನಿ ಮನ ಅನ್ಹವಾಇ ।**
**ಸುಮಿರಿ ಭವಾನೀ ಸಂಕರಹಿ ಕಹ ಕಬಿ ಕಥಾ ಸುಹಾಇ ॥೪೩ (ಕ)॥**
**ಅಬ ರಘುಪತಿ ಪದ ಪಂಕರುಹ ಹಿಯँ ಧರಿ ಪಾಇ ಪ್ರಸಾದ ।**
**ಕಹಉँ ಜುಗಲ ಮುನಿಬರ್ಜ ಕರ ಮಿಲನ ಸುಭಗ ಸಂವಾದ ॥೪೩ (ಖ)॥**

ತನ್ನ ಬುದ್ಧಿಗೆ ಅನುಸಾರವಾಗಿ ಈ ಉತ್ತಮ ಜಲದ ಗುಣಗಣಗಳನ್ನು ಕುರಿತು ವಿಚಾರಮಾಡಿ, ಅದರಲ್ಲಿ ಮನಸ್ಸನ್ನು ಮೀಯಿಸಿ, ಶುದ್ಧಗೊಳಿಸಿ ಶ್ರೀ ಭವಾನೀಶಂಕರರನ್ನು ಸ್ಮರಿಸಿ ಕವಿ ತುಲಸೀದಾಸನು ಮನೋಜ್ಞವಾದ ಕಥೆಯನ್ನು ಹೇಳುತ್ತಾನೆ. ಈಗ ನಾನು

ರಘುಪತಿಯ ಪದಪಂಕಜಗಳನ್ನು ಹೃದಯದಲ್ಲಿ ತಳೆದು ಅವುಗಳ ಪ್ರಸಾದವನ್ನು ಪಡೆದು, ಇಬ್ಬರು ಶ್ರೇಷ್ಠ ಮುನಿವರರ ಮಿಲನ ಹಾಗೂ ಅವರ ಸುಂದರ ಸಂವಾದವನ್ನು ವರ್ಣಿಸುತ್ತೇನೆ. (ದೋ/೪೩ ಕ, ಖ)

## ಯಾಜ್ಞವಲ್ಕ್ಯ – ಭರದ್ವಾಜರ ಸಂವಾದ

**ಚೌ – ಭರದ್ವಾಜ ಮುನಿ ಬಸಹಿಂ ಪ್ರಯಾಗಾ । ತಿನ್ಹಹಿ ರಾಮ ಪದ ಅತಿ ಅನುರಾಗಾ ॥**
**ತಾಪಸ ಸಮ ದಮ ದಯಾ ನಿಧಾನಾ । ಪರಮಾರಥ ಪಥ ಪರಮ ಸುಜಾನಾ ॥೧॥**
**ಮಾಘ ಮಕರಗತ ರಬಿ ಜಬ ಹೋಈ । ತೀರಥಪತಿಹಿಂ ಆವ ಸಬ ಕೋಈ ॥**
**ದೇವ ದನುಜ ಕಿನ್ನರ ನರ ಶ್ರೇನೀ । ಸಾದರ ಮಜ್ಜಹಿಂ ಸಕಲ ತ್ರಿಬೇನೀ ॥೨॥**
**ಪೂಜಹಿಂ ಮಾಧವ ಪದ ಜಲಜಾತಾ । ಪರಸಿ ಅಖಯ ಬಟು ಹರಷಹಿಂ ಗಾತಾ ॥**
**ಭರದ್ವಾಜ ಆಶ್ರಮ ಅತಿ ಪಾವನ । ಪರಮ ರಮ್ಯ ಮುನಿಬರ ಮನ ಭಾವನ ॥೩॥**
**ತಹಾಂ ಹೋಇ ಮುನಿ ರಿಷಯ ಸಮಾಜಾ । ಜಾಹಿಂ ಜೆ ಮಜ್ಜನ ತೀರಥರಾಜಾ ॥**
**ಮಜ್ಜಹಿಂ ಪ್ರಾತ ಸಮೇತ ಉಛಾಹಾ । ಕಹಹಿಂ ಪರಸಪರ ಹರಿ ಗುನ ಗಾಹಾ ॥೪॥**

ಭರದ್ವಾಜ ಮುನಿಗಳು ಪ್ರಯಾಗದಲ್ಲಿ ವಾಸಿಸುತ್ತಾರೆ. ಅವರಿಗೆ ಶ್ರೀರಾಮಚರಣಗಳಲ್ಲಿ ಅತ್ಯಂತ ಅನುರಾಗ. ಅವರು ತಾಪಸರು, ಶಮೆ, ದಮೆ, ದಯೆಯ ನಿಧಿಗಳು. ಪರಮಾರ್ಥ ಪಥದಲ್ಲಿ ಪರಮ ನಿಷ್ಣಾತರು. ಮಾಘಮಾಸದಲ್ಲಿ ಸೂರ್ಯನು ಮಕರರಾಶಿಯನ್ನು ಪ್ರವೇಶಿಸಿದಾಗ ಎಲ್ಲ ಜನರೂ ತೀರ್ಥರಾಜ ಪ್ರಯಾಗಕ್ಕೆ ಬರುವರು. ದೇವತೆಗಳು, ದಾನವರು, ಕಿನ್ನರರು, ಮನುಷ್ಯರು ಹೀಗೆ ಎಲ್ಲರೂ ಆದರದಿಂದ ಗಂಗಾ, ಯಮುನಾ, ಸರಸ್ವತೀ ನದಿಗಳ ಸಂಗಮ ತ್ರಿವೇಣಿಯಲ್ಲಿ ಸ್ನಾನಮಾಡುವರು. ಅವರು ಪ್ರಯಾಗ ತೀರ್ಥರಾಜ ಸ್ವಾಮಿಯಾದ ವೇಣೀಮಾಧವನ ಚರಣಕಮಲಗಳನ್ನು ಪೂಜಿಸುವರು. ಅಕ್ಷಯವಟವನ್ನು ಸ್ಪರ್ಶಿಸಿ ಪುಳಕಿತಗಾತ್ರರಾಗುವರು. ಭರದ್ವಾಜರ ಆಶ್ರಮವು ಅತಿ ಪವಿತ್ರ ಹಾಗೂ ರಮಣೀಯವಾಗಿದೆ. ಮುನೀಶ್ವರರಿಗೆ ಮನೋಜ್ಞವಾಗಿದೆ. ತೀರ್ಥರಾಜ ಪ್ರಯಾಗಕ್ಕೆ ಸ್ನಾನಕ್ಕೆ ಬರುವ ಋಷಿ, ಮುನಿಗಳ ಸಮಾಜ ಭರದ್ವಾಜಮುನಿಯ ಆಶ್ರಮದಲ್ಲಿ ಸೇರುತ್ತದೆ. ಪ್ರಾತಃಕಾಲದಲ್ಲಿ ಎಲ್ಲರೂ ಉತ್ಸಾಹದಿಂದ ಸ್ನಾನ-ಸಂಧ್ಯಾದಿಗಳನ್ನು ಪೂರೈಸಿ, ಪರಸ್ಪರ ಭಗವಂತನ ಭಕ್ತಿಯ ಕುರಿತು ಕಥನ ಮಾಡುತ್ತಾರೆ. (ಚೌ/೧-೪)

**ದೋ – ಬ್ರಹ್ಮ ನಿರೂಪನ ಧರಮ ಬಿಧಿ ಬರನಹಿಂ ತತ್ತ್ವ ಬಿಭಾಗ ।**
**ಕಹಹಿಂ ಭಗತಿ ಭಗವಂತ ಕೈ ಸಂಜುತ ಗ್ಯಾನ ಬಿರಾಗ ॥೪೪॥**

ಮುನಿಗಳು ತಮ್ಮ ಗೋಷ್ಠಿಯಲ್ಲಿ ಬ್ರಹ್ಮನಿರೂಪಣ, ಧರ್ಮವಿಧಾನ, ತತ್ತ್ವವಿಭಾಗ, (ವೇದಾಂತ, ಕರ್ಮಮೀಮಾಂಸಾ, ಸಾಂಖ್ಯ ಮುಂತಾದ ದರ್ಶನಗಳನ್ನು) ಮುಂತಾದವುಗಳನ್ನು ಚರ್ಚಿಸುತ್ತಾರೆ. ಜ್ಞಾನ ವೈರಾಗ್ಯದಿಂದ ಕೂಡಿದ ಭಗವಂತನ ಭಕ್ತಿಯ ಕುರಿತು ಚರ್ಚಿಸುತ್ತಾರೆ. (ದೋ/೪೪)

**ಚೌ – ಏಹಿ ಪ್ರಕಾರ ಭರಿ ಮಾಘ ನಹಾಹೀಂ । ಪುನಿ ಸಬ ನಿಜ ನಿಜ ಆಶ್ರಮ ಜಾಹೀಂ ॥**
**ಪ್ರತಿ ಸಂಬತ ಅತಿ ಹೋಇ ಅನಂದಾ । ಮಕರ ಮಜ್ಜಿ ಗವನಹಿಂ ಮುನಿಬೃಂದಾ ॥೧॥**
**ಏಕ ಬಾರ ಭರಿ ಮಕರ ನಹಾಏ । ಸಬ ಮುನೀಸ ಆಶ್ರಮನ್ಹ ಸಿಧಾಏ ॥**
**ಜಾಗಬಲಿಕ ಮುನಿ ಪರಮ ಬಿಬೇಕೀ । ಭರದ್ವಾಜ ರಾಖೇ ಪದ ಟೇಕೀ ॥೨॥**
**ಸಾದರ ಚರನ ಸರೋಜ ಪಖಾರೆ । ಅತಿ ಪುನೀತ ಆಸನ ಬೈಠಾರೆ ॥**
**ಕರಿ ಪೂಜಾ ಮುನಿ ಸುಜಸು ಬಖಾನೀ । ಬೋಲೆ ಅತಿ ಪುನೀತ ಮೃದು ಬಾನೀ ॥೩॥**
**ನಾಥ ಏಕ ಸಂಸಉ ಬಡ ಮೋರೇಂ । ಕರಗತ ಬೆದತತ್ತ್ವ ಸಬು ತೋರೇಂ ॥**
**ಕಹತ ಸೊ ಮೊಹಿ ಲಾಗತ ಭಯ ಲಾಜಾ । ಜೌಂ ನ ಕಹಉಂ ಬಡ ಹೋಇ ಅಕಾಜಾ ॥೪॥**

ಈ ವಿಧವಾಗಿ ಮಾಘಮಾಸವಿಡೀ ಪ್ರತಿದಿನವೂ ತ್ರಿವೇಣಿಯಲ್ಲಿ ಸ್ನಾನಮಾಡಿದ ಬಳಿಕ ಎಲ್ಲರೂ ತಮ್ಮ-ತಮ್ಮ ಆಶ್ರಮಗಳಿಗೆ ತೆರಳುತ್ತಾರೆ. ಪ್ರತಿವರ್ಷವೂ ಅಲ್ಲಿ ಈ ರೀತಿಯ ಆನಂದೋತ್ಸವವು ಜರುಗುತ್ತದೆ. ಮಕರಸ್ನಾನಾನಂತರ ಮುನೀಶ್ವರರೂ ತಮ್ಮ ಸ್ಥಾನಗಳಿಗೆ ಮರಳುತ್ತಾರೆ. ಹೀಗಿರಲು ಒಂದಾನೊಂದು ಮಕರಮಾಸ ಪುಣ್ಯಸ್ನಾನದ ಬಳಿಕ ಎಲ್ಲ ಮುನೀಶ್ವರರೂ ಅವರವರ ಆಶ್ರಮಗಳಿಗೆ ಹಿಂದಿರುಗಿದರು. ಆದರೆ ಭರದ್ವಾಜ ಮುನಿಗಳು ಪರಮಜ್ಞಾನಿಗಳಾದ ಯಾಜ್ಞವಲ್ಕ್ಯ ಮಹಾಮುನಿಗಳ

ಪಾದಗಳಿಗೆ ವಂದಿಸಿ, ಅವರನ್ನು ತಮ್ಮ ಆಶ್ರಮದಲ್ಲಿ ಉಳಿಸಿಕೊಂಡರು. ಆದರದಿಂದ ಅವರ ಅಡಿದಾವರೆಗಳನ್ನು ಅರ್ಚಿಸಿ, ಅತಿಪವಿತ್ರವಾದ ಎತ್ತರದ ಆಸನದಲ್ಲಿ ಕುಳ್ಳಿರಿಸಿದರು. ಅವರ ಸತ್ಕೀರ್ತಿಯನ್ನು ಕೊಂಡಾಡಿ, ಭರದ್ವಾಜರು ಅತ್ಯಂತ ಪೂನೀತವೂ, ವಿನೀತವೂ ಆದ ಮಧುರವಾಣಿಯಲ್ಲಿ ಹೀಗೆಂದು ಹೇಳಿದರು. ಓ ಮಹಾತ್ಮಾ! ನನ್ನ ಮನಸ್ಸಿನಲ್ಲಿ ಒಂದು ದೊಡ್ಡ ಸಂದೇಹ ಉಳಿದುಕೊಂಡಿದೆ. ನಿಮಗೆ ಎಲ್ಲ ವೇದತತ್ತ್ವಗಳು ಕರತಲಾಮಲಕ. ನೀವೇ ನನ್ನ ಸಂದೇಹವನ್ನು ನಿವಾರಣೆಮಾಡಲು ಸಮರ್ಥರು. ಆದರೆ ಆ ಸಂದೇಹವನ್ನು ಹೇಳಿಕೊಳ್ಳಲು ಭಯ, ನಾಚಿಕಗೆಳು ನನ್ನನ್ನು ಹಿಂದೆಳೆಯುತ್ತಿವೆ. ('ನನ್ನನ್ನು ಪರೀಕ್ಷಿಸುತ್ತಿದ್ದಾನೆ' ಎಂದು ನೀವು ತಿಳಿಯಬಾರದು. ಇದೇ ಭಯ, ಇಷ್ಟು ಆಯುಸ್ಸು ಕಳೆದುಹೋದರೂ ಇನ್ನೂ ಜ್ಞಾನ ಉಂಟಾಗಲಿಲ್ಲವಲ್ಲ ಎಂಬ ನಾಚಿಕೆ.) ಹಾಗೆಂದು ನಾನು ಹೇಳಿಕೊಳ್ಳದಿದ್ದರೆ ನನಗೆ ನಷ್ಟ. ಏಕೆಂದರೆ ನಾನು ಅಜ್ಞಾನಿಯಾಗಿಯೇ ಉಳಿದೇನು. (ಚೌ/೧-೪)

**ದೋ – ಸಂತ ಕಹಹಿಂ ಅಸಿ ನೀತಿ ಪ್ರಭು ಶ್ರುತಿ ಪುರಾನ ಮುನಿ ಗಾವ ।**
**ಹೋಇ ನ ಬಿಮಲ ಬಿಬೇಕ ಉರ ಗುರ ಸನ ಕಿಏಂ ದುರಾವ ॥೪೫॥**

ಪೂಜ್ಯರೇ! 'ಗುರುವಿನ ಬಳಿ ಯಾವ ಮುಚ್ಚುಮರೆಯನ್ನೂ ಮಾಡಬಾರದು. ಹಾಗೆ ಮಾಡಿದರೆ ಹೃದಯದಲ್ಲಿ ನಿರ್ಮಲ ಜ್ಞಾನವು ಉದಿಸದು' ಎಂದು ಸಂತರು, ಮುನಿಜನರು ಹೇಳುತ್ತಾರೆ. ವೇದಪುರಾಣಗಳೂ ಇದನ್ನೇ ಪ್ರತಿಪಾದಿಸುವವು. (ದೋ/೪೫)

**ಚೌ – ಅಸ ಬಿಚಾರಿ ಪ್ರಗಟಉಂ ನಿಜ ಮೋಹೂ । ಹರಹು ನಾಥ ಕರಿ ಜನ ಪರ ಛೋಹೂ ॥**
**ರಾಮ ನಾಮ ಕರ ಅಮಿತ ಪ್ರಭಾವಾ । ಸಂತ ಪುರಾನ ಉಪನಿಷದ ಗಾವಾ ॥೧॥**
**ಸಂತತ ಜಪತ ಸಂಭು ಅಬಿನಾಸೀ । ಸಿವ ಭಗವಾನ ಗ್ಯಾನ ಗುನ ರಾಸೀ ॥**
**ಆಕರ ಚಾರಿ ಜೀವ ಜಗ ಅಹಹೀಂ । ಕಾಸೀಂ ಮರತ ಪರಮ ಪದ ಲಹಹೀಂ ॥೨॥**
**ಸೋಪಿ ರಾಮ ಮಹಿಮಾ ಮುನಿರಾಯಾ । ಸಿವ ಉಪದೇಸು ಕರತ ಕರಿ ದಾಯಾ ॥**
**ರಾಮು ಕವನ ಪ್ರಭು ಪೂಛಉಂ ತೋಹೀ । ಕಹಿಅ ಬುಝಾಇ ಕೃಪಾನಿಧಿ ಮೋಹೀ ॥೩॥**
**ಏಕ ರಾಮ ಅವಧೇಸ ಕುಮಾರಾ । ತಿನ್ಹ ಕರ ಚರಿತ ಬಿದಿತ ಸಂಸಾರಾ ॥**
**ನಾರಿ ಬಿರಹಂ ದುಖು ಲಹೆಉ ಅಪಾರಾ । ಭಯಉ ರೋಷು ರನ ರಾವನು ಮಾರಾ ॥೪॥**

ಆದ್ದರಿಂದ ನಾನು ನನ್ನ ಅಜ್ಞಾನವನ್ನು ನಿವೇದಿಸಿಕೊಳ್ಳುತ್ತೇನೆ. ಸ್ವಾಮಿ! ಈ ಸೇವಕನ ಮೇಲೆ ಕೃಪೆಮಾಡಿ ಈ ಅಜ್ಞಾನವನ್ನು ತಾವು ಕಳೆಯಬೇಕು. ಸಜ್ಜನರು, ಪುರಾಣಗಳು, ಉಪನಿಷತ್ತುಗಳು ರಾಮನಾಮದ ಮಹಿಮೆಯನ್ನು ಅಪಾರವಾಗಿ ಹಾಡಿವೆ. ಕಲ್ಯಾಣ ಸ್ವರೂಪನೂ, ಜ್ಞಾನ ಗುಣರಾಶಿಯೂ, ಅವಿನಾಶಿಯೂ ಆದ ಭಗವಾನ್ ಶ್ರೀ ಶಿವನು ಸಂತತ ರಾಮನಾಮವನ್ನು ಜಪಿಸುತ್ತಿರುವನು. ಕಾಶಿಯಲ್ಲಿ ದೇಹಬಿಡುವ ಚತುರ್ವಿಧ ಜೀವರಾಶಿಗಳಿಗೆ ಶಂಕರನು ರಾಮನಾಮವನ್ನು ಉಪದೇಶಿಸುವನು. ತತ್ಪ್ರಭಾವದಿಂದ ಆ ಜೀವಕೋಟಿಯು ಮೋಕ್ಷವನ್ನು ಹೊಂದುವುದು. ಇದೂ ಕೂಡ ರಾಮನಾಮದ ಮಹಿಮೆಯೇ. ಪೂಜ್ಯರೇ! ರಾಮನೆಂದರೆ ಯಾರು? ಇದನ್ನೇ ನಾನು ತಮ್ಮಿಂದ ತಿಳಿದುಕೊಳ್ಳಬಯಸುವೆನು. ಎಲ್ಲರಿಗೆ ಗೊತ್ತಿರುವ ರಾಮನೆಂದರೆ ಅಯೋಧ್ಯೆಯ ರಾಜನಾದ ದಶರಥಕುಮಾರ. ಅವನ ಚರಿತ ವಿಶ್ವವಿದಿತ. ಅವನು ತನ್ನ ಪತ್ನಿಯ ವಿರಹದಲ್ಲಿ ತುಂಬಾ ನೊಂದು-ಬೆಂದು, ಕೋಪಗೊಂಡು ರಣದಲ್ಲಿ ರಾವಣನನ್ನು ಸಂಹರಿಸಿದನು. (ಚೌ/೧-೪)

**ದೋ – ಪ್ರಭು ಸೋಇ ರಾಮ ಕಿ ಅಪರ ಕೋಉ ಜಾಹಿ ಜಪತ ತ್ರಿಪುರಾರಿ ।**
**ಸತ್ಯಧಾಮ ಸರ್ಬಗ್ಯ ತುಮ್ಹ ಕಹಹು ಬಿಬೇಕು ಬಿಚಾರಿ ॥೪೬॥**

ಸ್ವಾಮಿ! ಪರಶಿವನು ನಿರಂತರ ಜಪಿಸುತ್ತಿರುವ ರಾಮನು ಇವನೇನೋ! ಅಥವಾ ಬೇರೊಬ್ಬ ರಾಮನಿರುವನೇ? ಸತ್ಯದ ನಿಧಾನರೂ ಸರ್ವಜ್ಞರೂ ಆದ ನೀವು ವಿಚಾರಮಾಡಿ ದಯವಿಟ್ಟು ತಿಳಿಸಬೇಕು. (ದೋ/೪೬)

**ಚೌ – ಜೈಸೇಂ ಮಿಟೈ ಮೋರ ಭ್ರಮ ಭಾರೀ । ಕಹಹು ಸೊ ಕಥಾ ನಾಥ ಬಿಸ್ತಾರೀ ॥**
**ಜಾಗಬಲಿಕ ಬೋಲೆ ಮುಸುಕಾಈ । ತುಮ್ಹಹಿ ಬಿದಿತ ರಘುಪತಿ ಪ್ರಭುತಾಈ ॥೧॥**
**ರಾಮಭಗತ ತುಮ್ಹ ಮನ ಕ್ರಮ ಬಾನೀ । ಚತುರಾಈ ತುಮ್ಹಾರಿ ಮೈಂ ಜಾನೀ ॥**
**ಚಾಹಹು ಸುನೈ ರಾಮ ಗುನ ಗೂಢಾ । ಕೀನ್ಹಿಹು ಪ್ರಸ್ನ ಮನಹುಂ ಅತಿ ಮೂಢಾ ॥೨॥**
**ತಾತ ಸುನಹು ಸಾದರ ಮನು ಲಾಈ । ಕಹಉಂ ರಾಮ ಕೈ ಕಥಾ ಸುಹಾಈ ॥**
**ಮಹಾಮೋಹು ಮಹಿಷೇಸು ಬಿಸಾಲಾ । ರಾಮಕಥಾ ಕಾಲಿಕಾ ಕರಾಲಾ ॥೩॥**

**ರಾಮಕಥಾ ಸಸಿ ಕಿರನ ಸಮಾನಾ । ಸಂತ ಚಕೋರ ಕರಹಿಂ ಜೆಹಿ ಪಾನಾ ॥**
**ಐಸೇಇ ಸಂಸಯ ಕೀನ್ಹ ಭವಾನೀ । ಮಹಾದೇವ ತಬ ಕಹಾ ಬಖಾನೀ ॥೪॥**

ಮಹಾತ್ಮಾ! 'ನನ್ನ ಭ್ರಮನಿವಾರಣವಾಗುವಂತೆ ನನಗೆ ಆ ಕಥೆಯನ್ನು ವಿಸ್ತಾರವಾಗಿ ಹೇಳಿರಿ' ಇದನ್ನು ಕೇಳಿ ಯಾಜ್ಞವಲ್ಕ್ಯರು ಮುಗುಳ್ನಗೆ ಬೀರಿ ಹೇಳಿದರು – 'ಭರದ್ವಾಜನೇ! ರಘುಪತಿಯ ವೈಭವವನ್ನು, ಪ್ರಭುತ್ವವನ್ನು ನೀನು ಚೆನ್ನಾಗಿ ತಿಳಿದಿರುವಿ. ನೀನು ಮನೋವಾಕ್ಕಾಯಗಳಿಂದ ಶ್ರೀರಾಮನ ಭಕ್ತನಾಗಿರುವಿ. ನಿನ್ನ ಚಾತುರ್ಯವನ್ನು ನಾನು ಬಲ್ಲೆನು. ಗೂಢತರವಾದ ಶ್ರೀರಾಮನ ಗುಣಶ್ರವಣಮಾಡುವುದೇ ನಿನ್ನ ಬಯಕೆಯೆಂದೂ ಬಲ್ಲೆ. ಆದ್ದರಿಂದ ಏನೂ ತಿಳಿಯದ ಮೂಢನಂತೆ ನೀನು ಪ್ರಶ್ನಿಸಿರುವೆ. ಅಯ್ಯಾ! ನೀನು ದತ್ತಚಿತ್ತನಾಗಿ ಕೇಳು. ಶ್ರೀರಾಮನ ಮನೋಹರವಾದ ಕಥೆಯನ್ನು ಹೇಳುತ್ತೇನೆ. ಮಹಾಮೋಹವೆನ್ನುವುದು ಮಹಿಷಾಸುರನಂತೆ ಬೃಹತ್ತಾದುದು. ಶ್ರೀರಾಮನ ಕಥೆಯು ಅದನ್ನು ನಾಶಮಾಡುವ ಕರಾಳ ಚಾಮುಂಡಿಯಂತಿದೆ. ರಾಮನ ಕಥೆ ಶಶಿಕಿರಣದಂತಿದೆ. ಇದನ್ನು ಚಕೋರರಂತಿರುವ ಸಾಧುಪುಂಗವರು ನಿರಂತರ ಪಾನ ಮಾಡುತ್ತಿರುತ್ತಾರೆ. ನಿನ್ನಂತೆಯೇ ಸಂದೇಹವು ಒಮ್ಮೆ ಪಾರ್ವತಿದೇವಿಗೂ ಉಂಟಾಗಿತ್ತು. ಆಗ ಮಹಾದೇವ ಶಿವನು ಆಕೆಗೆ ರಾಮಕಥೆಯನ್ನು ವಿಸ್ತಾರವಾಗಿ ಹೇಳಿ ಸಮಾಧಾನಪಡಿಸಿದ್ದನು. (ಚೌ/೧-೪)

**ದೋ – ಕಹಉಂ ಸೋ ಮತಿ ಅನುಹಾರಿ ಅಬ ಉಮಾ ಸಂಭು ಸಂಬಾದ ।**
**ಭಯಉ ಸಮಯ ಜೆಹಿ ಹೇತು ಜೆಹಿ ಸುನು ಮುನಿ ಮಿಟಿಹಿ ಬಿಷಾದ ॥೪೭॥**

ಈಗ ನಾನು ನನ್ನ ಬುದ್ಧಿಗೆ ತಿಳಿದಂತೆ ಅದೇ ಉಮಾಶಂಭು ಸಂವಾದವನ್ನು ನಿನಗೆ ತಿಳಿಸುತ್ತೇನೆ. ಆ ಸಂವಾದವು ಎಂದು, ಯಾವುದಕ್ಕೆ ನಡೆಯಿತು ಎನ್ನುವುದನ್ನು ನೀನು ಕೇಳುವವನಾಗು. ಮುನೀಶ್ವರನೇ! ಇದರಿಂದ ನಿನ್ನ ವಿಷಾದವು ದೂರವಾಗುವುದು. (ದೋ/೪೭)

**ಚೌ – ಏಕ ಬಾರ ತ್ರೇತಾ ಜುಗ ಮಾಹೀಂ । ಸಂಭು ಗಏ ಕುಂಭಜ ರಿಷಿ ಪಾಹೀಂ ॥**
**ಸಂಗ ಸತೀ ಜಗಜನನಿ ಭವಾನೀ । ಪೂಜೇ ರಿಷಿ ಅಖಿಲೇಸ್ವರ ಜಾನೀ ॥೧॥**
**ರಾಮಕಥಾ ಮುನಿಬರ್ಜ ಬಖಾನೀ । ಸುನೀ ಮಹೇಸ ಪರಮ ಸುಖು ಮಾನೀ ॥**
**ರಿಷಿ ಪೂಛೀ ಹರಿಭಗತಿ ಸುಹಾಈ । ಕಹೀ ಸಂಭು ಅಧಿಕಾರೀ ಪಾಈ ॥೨॥**
**ಕಹತ ಸುನತ ರಘುಪತಿ ಗುನ ಗಾಥಾ । ಕಛು ದಿನ ತಹಾಂ ರಹೇ ಗಿರಿನಾಥಾ ॥**
**ಮುನಿ ಸನ ಬಿದಾ ಮಾಗಿ ತ್ರಿಪುರಾರೀ । ಚಲೇ ಭವನ ಸಂಗ ದಚ್ಛಕುಮಾರೀ ॥೩॥**
**ತೇಹಿ ಅವಸರ ಭಂಜನ ಮಹಿಭಾರಾ । ಹರಿ ರಘುಬಂಸ ಲೀನ್ಹ ಅವತಾರಾ ॥**
**ಪಿತಾ ಬಚನ ತಜಿ ರಾಜು ಉದಾಸೀ । ದಂಡಕ ಬನ ಬಿಚರತ ಅಬಿನಾಸೀ ॥೪॥**

ತ್ರೇತಾಯುಗದಲ್ಲಿ ಒಮ್ಮೆ ಶಿವನು ಅಗಸ್ತ್ಯಋಷಿಯ ಬಳಿಗೆ ಹೋಗಿದ್ದನು. ಅವನ ಜೊತೆಯಲ್ಲಿ ಜಗಜ್ಜನನಿ ಭವಾನಿಯೂ ಹೋಗಿದ್ದಳು. ಶಿವನನ್ನು ಸರ್ವೇಶ್ವರನೆಂದು ಭಾವಿಸಿ ಋಷಿ ಅಗಸ್ತ್ಯರು ಅವನನ್ನು ಪೂಜಿಸಿ ಸತ್ಕರಿಸಿದರು. ಮುನಿವರ್ಯರಾದ ಅಗಸ್ತ್ಯರು ಶಿವನಿಗೆ ಶ್ರೀರಾಮಕಥೆಯನ್ನು ವಿಸ್ತಾರವಾಗಿ ಹೇಳಿದರು. ಅದನ್ನು ಪರಮಸುಖದಾಯಕವೆಂದು ಪರಮೇಶ್ವರನು ಕೇಳಿದನು. ತರುವಾಯ ಅಗಸ್ತ್ಯರು ಶಿವನ ಬಳಿಯಲ್ಲಿ ಮಹಿಮಾನ್ವಿತವಾದ ಹರಿಭಕ್ತಿಯ ರಹಸ್ಯವನ್ನು ಕೇಳಿದರು. ಶಿವನು ಅವರನ್ನು ಅಧಿಕಾರಿ ಎಂದು ಬಗೆದು ಹರಿಭಕ್ತಿಯ ಮಹಾತ್ಮ್ಯವನ್ನು ನಿರೂಪಿಸಿದನು. ರಘುಪತಿಯ ಗುಣಗಾಥೆಯನ್ನು ಹೇಳುತ್ತಾ, ಕೇಳುತ್ತಾ ಕೆಲದಿನಗಳವರೆಗೆ ಪರಶಿವನು ಅಲ್ಲೇ ಇದ್ದುಬಿಟ್ಟನು. ಅನಂತರ ಮುನಿಯಿಂದ ಬೀಳ್ಕೊಂಡು ಶಿವನು ದಕ್ಷಕುಮಾರಿ ಸತಿಯೊಡನೆ ಕೈಲಾಸಕ್ಕೆ ಮರಳಿದನು. ಅದೇ ಸಮಯದಲ್ಲಿ ಭೂಭಾರವನ್ನಿಳುಹಲು ಶ್ರೀಹರಿಯು ರಘುವಂಶದಲ್ಲಿ ಶ್ರೀರಾಮನಾಗಿ ಅವತರಿಸಿದ್ದನು. ಆ ಅವಿನಾಶಿ ಭಗವಾನ್ ಶ್ರೀರಾಮನು ಆಗ ಪಿತೃವಾಕ್ಯಪರಿಪಾಲನೆಗಾಗಿ, ರಾಜ್ಯವನ್ನು ತ್ಯಜಿಸಿ, ತಾಪಸವೇಷದಲ್ಲಿ ದಂಡಕಾರಣ್ಯದಲ್ಲಿ ವಿಹರಿಸುತ್ತಿದ್ದನು. (ಚೌ/೧-೪)

**ದೋ – ಹೃದಯಂ ಬಿಚಾರತ ಜಾತ ಹರ ಕೆಹಿ ಬಿಧಿ ದರಸನು ಹೋಇ ।**
**ಗುಪ್ತ ರೂಪ ಅವತರೆಉ ಪ್ರಭು ಗಏಂ ಜಾನ ಸಬು ಕೋಇ ॥೪೮(ಕ)॥**
**ಸೋ – ಸಂಕರ ಉರ ಅತಿ ಛೋಭು ಸತೀ ನ ಜಾನಹಿಂ ಮರಮು ಸೋಇ ।**
**ತುಲಸೀ ದರಸನ ಲೋಭು ಮನ ಡರು ಲೋಚನ ಲಾಲಚೀ ॥೪೮(ಖ)॥**

''ಭಗವಂತನ ದರ್ಶನವು ನನಗೆ ಹೇಗಾದೀತು? ಪ್ರಭುವು ಗುಪ್ತರೂಪದಲ್ಲಿ ಅವತರಿಸಿರುವನು. ನಾನು ಅಲ್ಲಿಗೆ ಹೋದರೆ, ಅವನ ರಹಸ್ಯ ಬಯಲಾಗಿ ಎಲ್ಲರಿಗೂ ಗೋತ್ತಾದೀತು'' ಎಂದು ಮಹಾದೇವನು ಆಲೋಚಿಸುತ್ತಾ ಹೋಗುತ್ತಿದ್ದನು. ಶಿವನ ಹೃದಯದಲ್ಲಿ ತಳಮಳ ಉಂಟಾಯಿತು. ಆದರೆ ಸತೀದೇವಿಗೆ ಈ ಒಗಟು ತಿಳಿಯದೆ ಹೋಯಿತು. ಶಂಕರನ ಕಣ್ಣುಗಳು ಶ್ರೀಹರಿದರ್ಶನಕ್ಕಾಗಿ ತವಕಗೊಂಡಿದ್ದವು. ಮನಸ್ಸು ಭಯಾಂದೋಳನಕ್ಕೆ ಗುರಿಯಾಯಿತು ಎಂದು ತುಳಸೀದಾಸರು ಹೇಳುತ್ತಿದ್ದಾರೆ. (ದೋ/೪೮ ಕ, ಖ)

**ಚೌ – ರಾವನ ಮರನ ಮನುಜ ಕರ ಜಾಚಾ । ಪ್ರಭು ಬಿಧಿ ಬಚನು ಕೀನ್ಹ ಚಹ ಸಾಚಾ ॥**
**ಜೌ ನಹೀಂ ಜಾಉಂ ರಹಇ ಪಛಿತಾವಾ । ಕರತ ಬಿಚಾರು ನ ಬನತ ಬನಾವಾ ॥೧॥**
**ಎಹಿ ಬಿಧಿ ಭಏ ಸೋಚಬಸ ಈಸಾ । ತೇಹೀ ಸಮಯ ಜಾಇ ದಸಸೀಸಾ ॥**
**ಲೀನ್ಹ ನೀಚ ಮಾರೀಚಹಿ ಸಂಗಾ । ಭಯಉ ತುರತ ಸೋಇ ಕಪಟ ಕುರಂಗಾ ॥೨॥**
**ಕರಿ ಛಲು ಮೂಢ ಹರೀ ಬೈದೇಹೀ । ಪ್ರಭು ಪ್ರಭಾಉ ತಸ ಬಿದಿತ ನ ತೇಹೀ ॥**
**ಮೃಗ ಬಧಿ ಬಂಧು ಸಹಿತ ಹರಿ ಆಏ । ಆಶ್ರಮು ದೇಖಿ ನಯನ ಜಲ ಛಾಏ ॥೩॥**
**ಬಿರಹ ಬಿಕಲ ನರ ಇವ ರಘುರಾಈ । ಖೋಜತ ಬಿಪಿನ ಫಿರತ ದೋಉ ಭಾಈ ॥**
**ಕಬಹೂಂ ಜೋಗ ಬಿಯೋಗ ನ ಜಾಕೇಂ । ದೇಖಾ ಪ್ರಗಟ ಬಿರಹ ದುಖು ತಾಕೇಂ ॥೪॥**

''ಮನುಷ್ಯನ ಕೈಯಲ್ಲಿ ತನಗೆ ಮರಣವು ಸಂಭವಿಸಲಿ ಎಂದು ರಾವಣನು ಬ್ರಹ್ಮದೇವರ ಬಳಿಯಲ್ಲಿ ವರವನ್ನು ಹೊಂದಿದ್ದನು. ಬ್ರಹ್ಮನ ಮಾತನ್ನು ಸತ್ಯವಾಗಿಸುವುದೇ ಶ್ರೀಹರಿಯ ಕಾರ್ಯವು. ನಾನು ಅಲ್ಲಿಗೆ ಹೋಗಿ, ಅವನನ್ನು ದರ್ಶಿಸದೆ ಹೋದರೆ ಮತ್ತೆ ಪಶ್ಚಾತ್ತಾಪ ಪಡಬೇಕಾದೀತು'' ಮುಂತಾದ ಆಲೋಚನೆಗಳು ಶಿವನ ಮನಸ್ಸಿನಲ್ಲಿ ನಡೆಯುತ್ತಿದ್ದವು. ಆದರೆ ಯಾವುದೇ ಇತ್ಯರ್ಥಕ್ಕೆ ಬರಲಾಗಲಿಲ್ಲ. ಇದೇ ಸಮಯಕ್ಕೆ ಸರಿಯಾಗಿ ನೀಚನಾದ ರಾವಣನು ಮಾರೀಚನೆಂಬ ರಾಕ್ಷಸನನ್ನು ಜೊತೆಗೆ ಕರಕೊಂಡು ಹೋಗುತ್ತಿದ್ದನು. ಕೂಡಲೇ ಮಾರೀಚನು ಮಾಯಾಮೃಗವಾದನು. ಶ್ರೀಹರಿಯ ಶಕ್ತಿಯನ್ನು ಅರಿಯದ ಮೂರ್ಖ ರಾವಣನು ಕಪಟದಿಂದ ಸೀತೆಯನ್ನು ಅಪಹರಿಸಿದನು. ಮಾಯಾಮೃಗವನ್ನು ವಧಿಸಿ, ಶ್ರೀರಾಮಲಕ್ಷ್ಮಣರು ಆಶ್ರಮಕ್ಕೆ ಬಂದರು. ಆಶ್ರಮದಲ್ಲಿ ಸೀತಾದೇವಿಯು ಕಾಣದಿರುವಾಗ ಶ್ರೀರಾಮನು ದುಃಖಿತನಾದನು. ಶ್ರೀರಘುನಾಥನು ಸಾಮಾನ್ಯಮಾನವರಂತೆ ವಿರಹವ್ಯಾಕುಲನಾಗಿದ್ದಾನೆ. ಸೋದರರಿಬ್ಬರೂ ಸೀತಾದೇವಿಯನ್ನು ಹುಡುಕುತ್ತಾ ಕಾಡಿನಲ್ಲೆಲ್ಲ ತೊಳಲಾಡುತ್ತಿದ್ದಾರೆ. ಎಂದಿಗೂ ಸಂಯೋಗ-ವಿಯೋಗವೇ ಇಲ್ಲದ ಶ್ರೀರಾಮನಲ್ಲಿ ವಿರಹ ಶೋಕವು ಪ್ರತ್ಯಕ್ಷವಾಗಿ ಕಂಡುಬರುತ್ತಿದೆ. (ಚೌ/೧-೪)

**ದೋ – ಅತಿ ಬಿಚಿತ್ರ ರಘುಪತಿ ಚರಿತ ಜಾನಹಿಂ ಪರಮ ಸುಜಾನ ।**
**ಜೇ ಮತಿಮಂದ ಬಿಮೋಹ ಬಸ ಹೃದಯಂ ಧರಹಿಂ ಕಛು ಆನ ॥೪೯॥**

ಶ್ರೀರಘುನಾಥನ ಚರಿತ್ರವು ನಿಜಕ್ಕೂ ವಿಚಿತ್ರವಾದುದು. ಅದನ್ನು ಪರಮಜ್ಞಾನಿಗಳೇ ಬಲ್ಲರು, ಮಂದಮತಿಗಳು ವಿಶೇಷವಾದ ಮೋಹಕ್ಕೆ ವಶರಾಗಿ, ಹೃದಯದಲ್ಲಿ ಬೇರೆನನ್ನೋ ಭಾವಿಸಿಕೊಳ್ಳುತ್ತಾರೆ. (ದೋ/೪೯)

**ಚೌ – ಸಂಭು ಸಮಯ ತೆಹಿ ರಾಮಹಿ ದೇಖಾ । ಉಪಜಾ ಹಿಯಂ ಅತಿ ಹರಷು ಬಿಸೇಷಾ ॥**
**ಭರಿ ಲೋಚನ ಛಬಿಸಿಂಧು ನಿಹಾರೀ । ಕುಸಮಯ ಜಾನಿ ನ ಕೀನ್ಹಿ ಚಿನ್ಹಾರೀ ॥೧॥**
**ಜಯ ಸಚ್ಚಿದಾನಂದ ಜಗ ಪಾವನ । ಅಸ ಕಹಿ ಚಲೇಉ ಮನೋಜ ನಸಾವನ ॥**
**ಚಲೇ ಜಾತ ಸಿವ ಸತೀ ಸಮೇತಾ । ಪುನಿ ಪುನಿ ಪುಲಕತ ಕೃಪಾನಿಕೇತಾ ॥೨॥**
**ಸತೀಂ ಸೋ ದಸಾ ಸಂಭು ಕೈ ದೇಖೀ । ಉರ ಉಪಜಾ ಸಂದೇಹು ಬಿಸೇಷೀ ॥**
**ಸಂಕರು ಜಗತಬಂದ್ಯ ಜಗದೀಸಾ । ಸುರ ನರ ಮುನಿ ಸಬ ನಾವತ ಸೀಸಾ ॥೩॥**
**ತಿನ್ಹ ನೃಪಸುತಹಿ ಕೀನ್ಹ ಪರನಾಮಾ । ಕಹಿ ಸಚ್ಚಿದಾನಂದ ಪರಧಾಮಾ ॥**
**ಭಏ ಮಗನ ಛಬಿ ತಾಸು ಬಿಲೋಕೀ । ಅಜಹುँ ಪ್ರೀತಿ ಉರ ರಹತಿ ನ ರೋಕೀ ॥೪॥**

ಶ್ರೀರಾಮಲಕ್ಷ್ಮಣರು ಅಡವಿಯಲ್ಲಿ ಸಂಚರಿಸುತ್ತಿರುವಾಗಲೇ ಶಿವನು ನೋಡಿ, ಅವನಿಗೆ ಅಮಿತವಾದ ಹರ್ಷವುಂಟಾಯಿತು. ಶಾಂತಿಸಿಂಧುವಾದ ಶ್ರೀರಾಮನನ್ನು ಶಿವನು ಕಣ್ತುಂಬ ನೋಡಿದನು. ಆದರೆ ಪರಿಚಯಮಾಡಿಕೊಳ್ಳಲು ಇದು ಸಮಯವಲ್ಲವೆಂದು ಎಣಿಸಿ ಸುಮ್ಮನಾದನು. ''ಎಲೈ ಸಚ್ಚಿದಾನಂದಾ! ಜಗತ್ಪಾವನಾ! ನಿನಗೆ ಜಯವಾಗಲೀ'' ಎಂದು ಹೇಳಿ ವಂದಿಸಿ, ಕಾಮಭಂಜಕನಾದ ಶಿವನು ಮರಳಿ ಹೋದನು. ಕೃಪಾನಿಕೇತನನಾದ ಶಿವನು ಪರಮಾನಂದದಲ್ಲಿ ಮುಳುಗಿಹೋಗಿ,

ಪುಲಕಿತನಾಗಿ ಸತಿಯೊಂದಿಗೆ ಹೋಗುತ್ತಿದ್ದನು. ಶಂಭುವಿನ ಈ ಸ್ಥಿತಿಯನ್ನು ಕಂಡು ಸತಿದೇವಿಗೆ ಒಂದು ಸಂದೇಹವುಂಟಾಯಿತು. ಅವಳು ತನ್ನಲ್ಲೆ ಅಂದುಕೊಂಡಳು – ''ನನ್ನ ಪತಿ ಶಿವನು ಜಗದ್ವಂದನೂ, ಜಗದೀಶನೂ, ಸುರ-ನರ-ಮುನಿವರರೆಲ್ಲರೂ ಅವನಿಗೆ ತಲೆವಾಗುತ್ತಾರೆ. ಇಂತಹ ಪರಶಿವನು ಓರ್ವ ರಾಜಕುಮಾರನನ್ನು– 'ಸಚ್ಚಿದಾನಂದಾ! ಪರಮಧಾಮಾ!' ಎಂದು ಹೇಳಿ ನಮಸ್ಕಾರ ಮಾಡಿದನಲ್ಲ! ಅವನ ಸೌಂದರ್ಯವನ್ನು ನೋಡಿ ಭಕ್ತಿ-ಪ್ರೇಮದಲ್ಲಿ ಮುಳುಗಿಹೋದನಲ್ಲ! ಆ ಪರವಶತೆಯಿಂದ ಇನ್ನೂ ಬಹಿರ್ಮುಖನಾಗಲಿಲ್ಲ. (ಚೌ/೧-೪)

## ಸತಿದೇವಿಯ ಸಂದೇಹ

**ದೋ – ಬ್ರಹ್ಮ ಜೋ ಬ್ಯಾಪಕ ಬಿರಜ ಅಜ ಅಕಲ ಅನೀಹ ಅಭೇದ ।**
**ಸೋ ಕಿ ದೇಹ ಧರಿ ಹೋಇ ನರ ಜಾಹಿ ನ ಜಾನತ ಬೇದ ॥ ೫೦ ॥**

ಸರ್ವವ್ಯಾಪಕನೂ, ಮಾಯಾತೀತನೂ, ಅಜನೂ, ಅಗೋಚರನೂ, ನಿಷ್ಕಾಮನೂ, ಭೇದರಹಿತನೂ, ವೇದಗಳಿಗೂ ಅಗೋಚರನೂ ಆದ ಪರಬ್ರಹ್ಮನು ಮಾನವದೇಹವನ್ನು ಧರಿಸುವನೇ? (ದೋ/೫೦)

**ಚೌ – ಬಿಷ್ನು ಜೋ ಸುರ ಹಿತ ನರತನು ಧಾರೀ । ಸೋಉ ಸರ್ಬಗ್ಯ ಜಥಾ ತ್ರಿಪುರಾರೀ ॥**
**ಖೋಜಇ ಸೋ ಕಿ ಅಗ್ಯ ಇವ ನಾರೀ । ಗ್ಯಾನಧಾಮ ಶ್ರೀಪತಿ ಅಸುರಾರೀ ॥ ೧ ॥**
**ಸಂಭುಗಿರಾ ಪುನಿ ಮೃಷಾ ನ ಹೋಈ । ಸಿವ ಸರ್ಬಗ್ಯ ಜಾನ ಸಬು ಕೋಈ ॥**
**ಅಸ ಸಂಸಯ ಮನ ಭಯಉ ಅಪಾರಾ । ಹೋಇ ನ ಹೃದಯ್ ಪ್ರಬೋಧ ಪ್ರಚಾರಾ ॥ ೨ ॥**
**ಜದ್ಯಪಿ ಪ್ರಗಟ ನ ಕಹೆಉ ಭವಾನೀ । ಹರ ಅಂತರಜಾಮೀ ಸಬ ಜಾನೀ ॥**
**ಸುನಹಿ ಸತೀ ತವ ನಾರಿ ಸುಭಾಊ । ಸಂಸಯ ಅಸ ನ ಧರಿಅ ಉರ ಕಾಊ ॥ ೩ ॥**
**ಜಾಸು ಕಥಾ ಕುಂಭಜ ರಿಷಿ ಗಾಈ । ಭಗತಿ ಜಾಸು ಮೈ ಮುನಿಹಿ ಸುನಾಈ ॥**
**ಸೋಇ ಮಮ ಇಷ್ಟದೇವ ರಘುಬೀರಾ । ಸೇವತ ಜಾಹಿ ಸದಾ ಮುನಿ ಧೀರಾ ॥ ೪ ॥**

ಒಂದು ವೇಳೆ ಭಗವಾನ್ ವಿಷ್ಣುಮೂರ್ತಿಯು ದೇವತೆಗಳನ್ನು ರಕ್ಷಿಸಲು ಮಾನವದೇಹವನ್ನು ಧರಿಸಿದರೂ ತ್ರಿಪುರಾರಿಯಾದ ಶಿವನಂತೆ ಸರ್ವಜ್ಞನಲ್ಲವೇ? ಅಂತಹ ಜ್ಞಾನನಿಧಿಯೂ, ಲಕ್ಷ್ಮೀಪತಿಯೂ, ಅಸುರಾರಿಯೂ, ಆದವನು ಅಜ್ಞಾನಿಗಳಂತೆ ಹೆಂಡತಿಯನ್ನು ಹುಡುಕುತ್ತಾ ತಿರುಗುತ್ತಾನೆಯೇ? ಇದೆಲ್ಲ ಸರಿ. ಆದರೆ ''ಶಂಭುವು ಸರ್ವಜ್ಞನು ಎಂಬುದು ಜಗದ್ವಿಖ್ಯಾತವು. ಅವನ ಮಾತು ಸುಳ್ಳಾಗುವುದಿಲ್ಲ.'' ಈ ವಿಧವಾಗಿ ಅವಳ ಮನಸ್ಸಿನಲ್ಲಿ ಅಪಾರವಾದ ಸಂದೇಹವುಂಟಾಯಿತು. ಮೋಹವಶದಿಂದ ಅವಳಿಗೆ ಜ್ಞಾನದ ಸ್ಮರಣೆ ಆಗಲಿಲ್ಲ. ಭವಾನಿಯು ಏನನ್ನೂ ಬಾಯಿಬಿಟ್ಟು ಹೇಳಲಿಲ್ಲ. ಆದರೆ ಪರಮೇಶ್ವರನು ಅಂತರ್ಯಾಮಿಯಾದ್ದರಿಂದ ಅವಳ ಮನಸ್ಸಿನಲ್ಲಿರುವುದೆಲ್ಲವೂ ತಿಳಿದುಕೊಂಡು, ಇಂತೆಂದನು – ಎಲೈ ಸತಿದೇವಿಯೇ! ನಿನ್ನದು ಸ್ತ್ರೀಸ್ವಭಾವವು. ಇಂತಹ ಸಂದೇಹವನ್ನು ಮನಸ್ಸಿನಲ್ಲಿ ಎಂದಿಗೂ ಇಟ್ಟುಕೊಳ್ಳಬಾರದು. ಈ ರಘುರಾಮನೇ ನನ್ನ ಇಷ್ಟದೇವರು. ಅಗಸ್ತ್ಯರು ಹಾಡಿದುದು ಈತನ ಕಥೆಯೇ. ನಾನು ವಿವರಿಸಿದುದೂ ಈತನ ಭಕ್ತಿಯೇ. ಮುನೀಶ್ವರರೆಲ್ಲರೂ ಯಾವಾಗಲೂ ಇವನನ್ನೇ ಸೇವಿಸುತ್ತಿರುವರು. (ಚೌ/೧-೪)

**ಛಂ – ಮುನಿ ಧೀರ ಜೋಗೀ ಸಿದ್ಧ ಸಂತತ ಬಿಮಲ ಮನ ಜೆಹಿ ಧ್ಯಾವಹೀ ।**
**ಕಹಿ ನೇತಿ ನಿಗಮ ಪುರಾನ ಆಗಮ ಜಾಸು ಕೀರತಿ ಗಾವಹೀ ॥**
**ಸೋಇ ರಾಮು ಬ್ಯಾಪಕ ಬ್ರಹ್ಮ ಭುವನ ನಿಕಾಯ ಪತಿ ಮಾಯಾ ಧನೀ ।**
**ಅವತರೆಉ ಅಪನೇ ಭಗತ ಹಿತ ನಿಜತಂತ್ರ ನಿತ ರಘುಕುಲಮನೀ ॥**

ಸರ್ವವ್ಯಾಪಕನೂ, ಸಮಸ್ತ ಬ್ರಹ್ಮಾಂಡಗಳ ಒಡೆಯನೂ, ಮಾಯಾಪತಿಯೂ, ನಿತ್ಯನೂ ಪರಮಸ್ವತಂತ್ರನೂ ಆದ ಶ್ರೀಹರಿಯೇ ಭಕ್ತರಕ್ಷಣೆಗಾಗಿ ರಘುಕುಲಮಣಿಯಾಗಿ ಶ್ರೀರಾಮರೂಪದಿಂದ ಅವತರಿಸಿರುವನು. ಜ್ಞಾನೀ ಮುನಿಗಳೂ, ಯೋಗಿಗಳೂ, ಸಿದ್ಧರೂ ನಿತ್ಯನಿರಂತರವೂ ನಿರ್ಮಲಚಿತ್ತದಿಂದ ಅವನನ್ನೇ ಧ್ಯಾನಿಸುತ್ತಿರುವರು. ವೇದಗಳೂ, ಪುರಾಣಗಳೂ, ಶಾಸ್ತ್ರಗಳೂ, ''ನೇತಿ-ನೇತಿ'' ಎಂದು ಅವನ ಕೀರ್ತಿಯನ್ನೇ ಹಾಡುತ್ತಿವೆ. (ಛಂ)

**ಸೋ – ಲಾಗ ನ ಉರ ಉಪದೇಸು ಜದಪಿ ಕಹೆಉ ಸಿವ್ ಬಾರ ಬಹು ।**
**ಬೋಲೇ ಬಿಹಸಿ ಮಹೇಸು ಹರಿಮಾಯಾ ಬಲು ಜಾನಿ ಜಿಯ್ ॥ ೫೧ ॥**

ಈ ರೀತಿಯಲ್ಲಿ ಪರಶಿವನು ಅನೇಕ ರೀತಿಯಿಂದ ಹೇಳಿದರೂ ಆ ಉಪದೇಶಗಳು ಸತಿಯ ಮನಸ್ಸಿಗೆ ನಾಟಲಿಲ್ಲ. ಆಗ ಮಹಾದೇವನು ಭಗವನ್ಮಾಯೆಯೇ ಬಲವತ್ತರವಾದುದು ಎಂದು ಮನಸ್ಸಿನಲ್ಲೇ ನಿಶ್ಚಯಿಸಿ ಮುಗುಳ್ನಗುತ್ತಾ ಇಂತೆಂದನು. (ಸೋ/೫೧)

**ಚೌ – ಜೌಂ ತುಮ್ಹರೇಂ ಮನ ಅತಿ ಸಂದೇಹೂ । ತೌ ಕಿನ ಜಾಇ ಪರೀಛಾ ಲೇಹೂ ॥**
**ತಬ ಲಗಿ ಬೈಠ ಅಹಉಂ ಬಟಛಾಹೀಂ । ಜಬ ಲಗಿ ತುಮ್ಹ ಐಹಹು ಮೋಹಿ ಪಾಹೀಂ ॥ ೧ ॥**
**ಜೈಸೇಂ ಜಾಇ ಮೋಹ ಭ್ರಮ ಭಾರೀ । ಕರೇಹು ಸೊ ಜತನು ಬಿಬೇಕ ಬಿಚಾರೀ ॥**
**ಚಲೀಂ ಸತೀ ಸಿವ ಆಯಸು ಪಾಈ । ಕರಹಿಂ ಬಿಚಾರು ಕರೌಂ ಕಾ ಭಾಈ ॥ ೨ ॥**
**ಇಹಾಂ ಸಂಭು ಅಸ ಮನ ಅನುಮಾನಾ । ದಚ್ಛಸುತಾ ಕಹುಂ ನಹಿಂ ಕಲ್ಯಾನಾ ॥**
**ಮೋರೆಹು ಕಹೇಂ ನ ಸಂಸಯ ಜಾಹೀಂ । ಬಿಧಿ ಬಿಪರೀತ ಭಲಾಈ ನಾಹೀಂ ॥ ೩ ॥**
**ಹೋಇಹಿ ಸೋಇ ಜೊ ರಾಮ ರಚಿ ರಾಖಾ । ಕೋ ಕರಿ ತರ್ಕ ಬಢಾವೈ ಸಾಖಾ ॥**
**ಅಸ ಕಹಿ ಲಗೇ ಜಪನ ಹರಿನಾಮಾ । ಗಈಂ ಸತೀ ಜಹಂ ಪ್ರಭು ಸುಖಧಾಮಾ ॥ ೪ ॥**

ನಿನ್ನ ಮನಸ್ಸಿನಲ್ಲಿ ಇಷ್ಟೊಂದು ಸಂದೇಹವಿದ್ದರೆ, ನೀನೇ ಹೋಗಿ ಏಕೆ ಪರೀಕ್ಷಿಸಬಾರದು? ಈಗ ನೀನು ಹೋಗು. ನೀನು ಹಿಂದಿರುಗಿ ಬರುವವರೆಗೂ ನಾನು ಇದೇ ವಟವೃಕ್ಷದ ನೆರಳಲ್ಲಿ ಕುಳಿತಿರುತ್ತೇನೆ. ನಿನ್ನ ಈ ಅಜ್ಞಾನವೂ ಭ್ರಮೆಯಿಂದೊಡಗೂಡಿದ ಸಂದೇಹವೂ ದೂರವಾಗಲು ಏನು ಬೇಕೋ ಅದನ್ನು ಯೋಚಿಸಿ ಮಾಡು. ವಿವೇಕದಿಂದ ವರ್ತಿಸು. ಪರಶಿವನ ಆಜ್ಞೆಯನ್ನು ಪಡೆದು ಸತಿದೇವಿಯು ಅಲ್ಲಿಂದ ಹೊರಟಳು. ಶ್ರೀರಾಮನ ದಿವ್ಯತತ್ತ್ವವನ್ನು ಹೇಗೆ ಪರೀಕ್ಷಿಸಬಹುದು? ಎಂದು ಆಲೋಚಿಸತೊಡಗಿದಳು. ಇತ್ತ ಶಂಭುವು ಈ ರೀತಿಯಾಗಿ ಯೋಚಿಸಿದನು – ''ದಕ್ಷಕನ್ಯೆ ಸತಿಗೆ ಇದು ಮಂಗಳಕರವಲ್ಲ. ನಾನು ಇಷ್ಟೊಂದು ತಿಳಿಯಹೇಳಿದರೂ ಸಂದೇಹ ದೂರವಾಗದಿದ್ದರೆ, ವಿಧಿಯೇ ವಿರುದ್ಧವಾಗಿರುವಂತೆ ತೋರುತ್ತದೆ. ಇದು ಸತಿಗೆ ಒಳಿತಲ್ಲ. ದೈವೇಚ್ಛೆ ಏನಿದೆಯೋ ಅದು ನಡೆಯಲಿ. ತರ್ಕದಿಂದೇನೂ ಪ್ರಯೋಜನವಿಲ್ಲ'' ಈ ರೀತಿ ಯೋಚಿಸಿ ಶಿವನು ಶ್ರೀಹರಿಯ ನಾಮವನ್ನು ಜಪಿಸತೊಡಗಿದನು. ಸತಿದೇವಿ ಮಾತ್ರ ಶುಭಪ್ರದನಾದ ಶ್ರೀರಾಮನಿರುವಲ್ಲಿಗೆ ಹೋದಳು. (ಚೌ/೧-೪)

**ದೋ – ಪುನಿ ಪುನಿ ಹೃದಯಂ ಬಿಚಾರು ಕರಿ ಧರಿ ಸೀತಾ ಕರ ರೂಪ ।**
**ಆಗೇಂ ಹೋಇ ಚಲಿ ಪಂಥ ತೆಹಿಂ ಜೆಹಿಂ ಆವತ ನರಭೂಪ ॥ ೫೨ ॥**

ಸತಿದೇವಿಯು ಮನಸ್ಸಿನಲ್ಲಿ ತುಂಬಾ ಆಲೋಚಿಸಿ ಕೊನೆಗೆ ಸೀತೆಯರೂಪವನ್ನು ಧರಿಸಿ, ಅವಳೆಣಿಸಿದಂತೆ ಮಾನವರಾಜನಾದ ಶ್ರೀರಾಮನು ಸೀತೆಯನ್ನು ಅರಸುತ್ತ ಬರುತ್ತಿದ್ದ ಹಾದಿಯತ್ತ ನಡೆದಳು. (ದೋ/೫೨)

**ಚೌ – ಲಛಿಮನ ದೀಖ ಉಮಾಕೃತ ಬೇಷಾ । ಚಕಿತ ಭಏ ಭ್ರಮ ಹೃದಯಂ ಬಿಸೇಷಾ ॥**
**ಕಹಿ ನ ಸಕತ ಕಛು ಅತಿ ಗಂಭೀರಾ । ಪ್ರಭು ಪ್ರಭಾಉ ಜಾನತ ಮತಿಧೀರಾ ॥ ೧ ॥**
**ಸತೀ ಕಪಟು ಜಾನೆಉ ಸುರಸ್ವಾಮೀ । ಸಬದರಸೀ ಸಬ ಅಂತರಜಾಮೀ ॥**
**ಸುಮಿರತ ಜಾಹಿ ಮಿಟಇ ಅಗ್ಯಾನಾ । ಸೋಇ ಸರಬಗ್ಯ ರಾಮು ಭಗವಾನಾ ॥ ೨ ॥**
**ಸತೀ ಕೀನ್ಹ ಚಹ ತಹಂಹುಂ ದುರಾಊ । ದೇಖಹು ನಾರಿ ಸುಭಾವ ಪ್ರಭಾಊ ॥**
**ನಿಜ ಮಾಯಾ ಬಲು ಹೃದಯಂ ಬಖಾನೀ । ಬೋಲೇ ಬಿಹಸಿ ರಾಮು ಮೃದು ಬಾನೀ ॥ ೩ ॥**
**ಜೋರಿ ಪಾನಿ ಪ್ರಭು ಕೀನ್ಹ ಪ್ರನಾಮೂ । ಪಿತಾ ಸಮೇತ ಲೀನ್ಹ ನಿಜ ನಾಮೂ ॥**
**ಕಹೆಉ ಬಹೋರಿ ಕಹಾಂ ಬೃಷಕೇತೂ । ಬಿಪಿನ ಅಕೇಲಿ ಫಿರಹು ಕೆಹಿ ಹೇತೂ ॥ ೪ ॥**

ಸತಿಯ ಈ ಮಾರುವೇಷವನ್ನು ಕಂಡು ಲಕ್ಷ್ಮಣನು ಚಕಿತನಾದನು. ಅವನಿಗೆ ಭ್ರಮೆಯುಂಟಾಯಿತು. ಅವನು ಗಂಭೀರನಾಗಿ ಏನೂ ಮಾತಾಡದಾದನು. ಧೀರಮತಿಯಾದ ಲಕ್ಷ್ಮಣಸ್ವಾಮಿಯು ಶ್ರೀರಾಮನ ಮಹಿಮೆಯನ್ನು ಚೆನ್ನಾಗಿ ತಿಳಿದವನು. ಸರ್ವದರ್ಶಿಯೂ, ಸರ್ವಾಂತರ್ಯಾಮಿಯೂ, ದೇವಾದಿದೇವನೂ ಆದ ಶ್ರೀರಾಮನು ಸತಿಯ ಕಪಟವನ್ನು ಅರ್ಥೈಸಿಕೊಂಡನು. ಸರ್ವಜ್ಞನಾದ ಶ್ರೀರಾಮನ ಸ್ಮರಣಮಾತ್ರದಿಂದಲೇ ಅಜ್ಞಾನವು ನಶಿಸಿಹೋಗುತ್ತದೆ. (ಯಾಜ್ಞವಲ್ಕ್ಯರು ಭರದ್ವಾಜರಲ್ಲಿ ಹೇಳುತ್ತಿದ್ದಾರೆ) ಸ್ತ್ರೀಸ್ವಭಾವವು ವಿಚಿತ್ರವಾದುದು. ಸರ್ವಜ್ಞನಾದ ಶ್ರೀರಾಮನಲ್ಲಿಯೂ ಸತಿದೇವಿಯು ತನ್ನ ಸ್ವರೂಪವನ್ನು ಮರೆಮಾಚುತ್ತಿದ್ದಾಳೆ. ಹೀಗೆ ಶ್ರೀರಾಮನು ತನ್ನ ಮಾಯಾಬಲವನ್ನು ಮನಸ್ಸಿನಲ್ಲಿ ಅಂದುಕೊಂಡು, ನಗುತ್ತಾ

ಮೃದುಮಧುರವಾಣಿಯಿಂದ ಇಂತೆಂದನು – ಮೊಟ್ಟಮೊದಲು ಪ್ರಭುವು ಸತಿದೇವಿಗೆ ಕೈಜೋಡಿಸಿ, ತಂದೆಯ ಹೆಸರಿನೊಡನೆ ತನ್ನ ಹೆಸರನ್ನು ಹೇಳಿ ಅಭಿವಾದನೆ ಮಾಡಿದ. ಅನಂತರ ಕೇಳಿದ – ದೇವೀ! ವೃಷಕೇತು ಶಿವನೆಲ್ಲಿರುವನು? ತಾವು ಒಂಟಿಯಾಗಿ ಈ ಕಾಡಿನಲ್ಲಿ ಸಂಚರಿಸುತ್ತಿರುವ ಕಾರಣವೇನು? (ಚೌ/೧-೪)

**ದೋ – ರಾಮ ಬಚನ ಮೃದು ಗೂಢ ಸುನಿ ಉಪಜಾ ಅತಿ ಸಂಕೋಚು ।**
**ಸತೀ ಸಭೀತ ಮಹೇಸ ಪಹಿಂ ಚಲೀಂ ಹೃದಯಂ ಬಡ ಸೋಚು ॥೫೩॥**

ಶ್ರೀರಾಮನ ಕೋಮಲವೂ, ರಹಸ್ಯಪೂರ್ಣವೂ ಆದ ಮಾತನ್ನು ಕೇಳಿ, ಸತಿದೇವಿಯು ಕಕ್ಕಾಬಿಕ್ಕಿಯಾದಳು. ಭಯದಿಂದ ಅವಳು ಚಿಂತಾಕ್ರಾಂತಳಾಗಿ ಶಿವನ ಬಳಿಗೆ ತೆರಳಿದಳು. ಆಕೆಯ ಹೃದಯದಲ್ಲಿ ದೊಡ್ಡ ಚಿಂತೆಮೂಡಿತು. (ದೋ/೫೩)

**ಚೌ – ಮೈಂ ಸಂಕರ ಕರ ಕಹಾ ನ ಮಾನಾ । ನಿಜ ಅಗ್ಯಾನು ರಾಮ ಪರ ಆನಾ ॥**
**ಜಾಇ ಉತರು ಅಬ ದೇಹಉಂ ಕಾಹಾ । ಉರ ಉಪಜಾ ಅತಿ ದಾರುನ ದಾಹಾ ॥೧॥**
**ಜಾನಾ ರಾಮ ಸತೀಂ ದುಖು ಪಾವಾ । ನಿಜ ಪ್ರಭಾಉ ಕಛು ಪ್ರಗಿಟಿ ಜನಾವಾ ॥**
**ಸತೀಂ ದೀಖ ಕೌತುಕು ಮಗ ಜಾತಾ । ಆಗೇಂ ರಾಮು ಸಹಿತ ಶ್ರೀ ಭ್ರಾತಾ ॥೨॥**
**ಫಿರಿ ಚಿತವಾ ಪಾಛೇಂ ಪ್ರಭು ದೇಖಾ । ಸಹಿತ ಬಂಧು ಸಿಯ ಸುಂದರ ಬೇಷಾ ॥**
**ಜಹಂ ಚಿತವಹಿಂ ತಹಂ ಪ್ರಭು ಆಸೀನಾ । ಸೇವಹಿಂ ಸಿದ್ಧ ಮುನೀಸ ಪ್ರಬೀನಾ ॥೩॥**
**ದೇಖೇ ಸಿವ ಬಿಧಿ ಬಿಷ್ನು ಅನೇಕಾ । ಅಮಿತ ಪ್ರಭಾಉ ಏಕ ತೇಂ ಏಕಾ ॥**
**ಬಂದತ ಚರನ ಕರತ ಪ್ರಭು ಸೇವಾ । ಬಿಬಿಧ ಬೇಷ ದೇಖೇ ಸಬ ದೇವಾ ॥೪॥**

''ನಾನು ಶಂಕರನ ಮಾತನ್ನು ಕೇಳಲಿಲ್ಲ. ನನ್ನ ಅಜ್ಞಾನವನ್ನು ರಾಮನ ಮೇಲೆ ಆರೋಪಿಸಿ ಪ್ರದರ್ಶಿಸಿದೆ. ಈಗ ಶಿವನಿಗೆ ನಾನು ಏನೆಂದು ಉತ್ತರ ಹೇಳಲೀ?'' ಈ ರೀತಿ ಯೋಚಿಸುತ್ತಾ ಸತಿಯ ಹೃದಯದಲ್ಲಿ ದಾರುಣವಾದ ಉರಿ ಉಂಟಾಯಿತು. ಸತಿದೇವಿಗೆ ಉಂಟಾದ ಭಯಾಂದೋಳನವನ್ನು ಅರಿತ ಶ್ರೀರಾಮನು ತನ್ನ ಪ್ರಭಾವದ ಸ್ವಲ್ಪಾಂಶವನ್ನು ಪ್ರತ್ಯಕ್ಷವಾಗಿ ತೋರಿಸಿದನು. ಸತಿಯು ಹೋಗುತ್ತಿದ್ದ ಮಾರ್ಗದಲ್ಲಿ ಸತಿಯು ಒಂದು ಆಶ್ಚರ್ಯಕರವಾದ ದೃಶ್ಯವನ್ನು ಕಂಡಳು. ಶ್ರೀರಾಮಚಂದ್ರಪ್ರಭುವು ಸೀತಾ ಲಕ್ಷ್ಮಣರೊಡನೆ ಮುಂದೆ ನಡೆಯುತ್ತಿದ್ದಾರೆ. ಆಗ ಆಕೆ ಹಿಂದಿರುಗಿ ನೋಡಿದರೆ ಅಲ್ಲೂ ಸೀತಾ ಲಕ್ಷ್ಮಣ ಸಮೇತ ಶ್ರೀರಾಮನು ಸುಂದರ ವೇಷದಲ್ಲಿ ವಿರಾಜಿಸುತ್ತಿದ್ದಾನೆ. ಆಕೆ ಎತ್ತ ನೋಡಿದತ್ತ ಪ್ರಭು ರಾಮಚಂದ್ರನೇ ವಿರಾಜಿಸುತ್ತಿದ್ದಾನೆ. ಸಿದ್ಧಮುನೀಶ್ವರರು ಅವನ ಸೇವೆ ಮಾಡುತ್ತಿದ್ದಾರೆ. ಚರಣ ವಂದನೆ ಮಾಡುತ್ತಿದ್ದಾರೆ. ಅನೇಕ ಬ್ರಹ್ಮ, ವಿಷ್ಣು, ಮಹೇಶ್ವರರನ್ನೂ ನೋಡಿದಳು. ಅವರು ಒಬ್ಬರಿಂದೊಬ್ಬರು ಪ್ರಭಾವ ಮಹಿಮೆಯಿಂದ ಮೆರೆಯುತ್ತಿದ್ದರು. ದೇವತೆಗಳು ವಿವಿಧ ವೇಷಗಳಲ್ಲಿ ಶ್ರೀರಾಮಚಂದ್ರನಿಗೆ ನಮಸ್ಕರಿಸಿ, ಆರಾಧಿಸುವುದನ್ನು ಅವಳು ನೋಡಿದಳು. (ಚೌ/೧-೪)

**ದೋ – ಸತೀ ಬಿಧಾತ್ರೀ ಇಂದಿರಾ ದೇಖೀಂ ಅಮಿತ ಅನೂಪ ।**
**ಜೆಹಿಂ ಜೆಹಿಂ ಬೇಷ ಅಜಾದಿ ಸುರ ತೆಹಿ ತೆಹಿ ತನ ಅನುರೂಪ ॥೫೪॥**

ಸತಿದೇವಿಯು ಅನೇಕ ಮಂದಿ ಸತೀ, ಲಕ್ಷ್ಮೀ, ಸರಸ್ವತಿ ಮುಂತಾದ ದೇವಿಯರನ್ನು ನೋಡಿದಳು. ಬ್ರಹ್ಮಾದಿ ದೇವತೆಗಳು ಯಾವ ಯಾವ ವೇಷವನ್ನು ಧರಿಸಿದ್ದರೋ, ಇವರೂ (ಶಕ್ತಿಯರೂ) ಕೂಡ ಅವರಿಗೆ ತಕ್ಕುದಾದ ರೂಪಗಳನ್ನು ಧರಿಸಿದ್ದರು. (ದೋ/೫೪)

**ಚೌ – ದೇಖೇ ಜಹಂ ತಹಂ ರಘುಪತಿ ಜೇತೇ । ಸಕ್ತಿನ್ಹ ಸಹಿತ ಸಕಲ ಸುರ ತೇತೇ ॥**
**ಜೀವ ಚರಾಚರ ಜೋ ಸಂಸಾರಾ । ದೇಖೇ ಸಕಲ ಅನೇಕ ಪ್ರಕಾರಾ ॥೧॥**
**ಪೂಜಹಿಂ ಪ್ರಭುಹಿ ದೇವ ಬಹು ಬೇಷಾ । ರಾಮ ರೂಪ ದೂಸರ ನಹಿಂ ದೇಖಾ ॥**
**ಅವಲೋಕೇ ರಘುಪತಿ ಬಹುತೇರೇ । ಸೀತಾ ಸಹಿತ ನ ಬೇಷ ಘನೇರೇ ॥೨॥**
**ಸೋಇ ರಘುಬರ ಸೋಇ ಲಛಿಮನು ಸೀತಾ । ದೇಖಿ ಸತೀ ಅತಿ ಭಈಂ ಸಭೀತಾ ॥**
**ಹೃದಯ ಕಂಪ ತನ ಸುಧಿ ಕಛು ನಾಹೀಂ । ನಯನ ಮೂದಿ ಬೈಠೀಂ ಮಗ ಮಾಹೀಂ ॥೩॥**
**ಬಹುರಿ ಬಿಲೋಕೆಉ ನಯನ ಉಘಾರೀ । ಕಛು ನ ದೀಖ ತಹಂ ದಚ್ಛಕುಮಾರೀ ॥**
**ಪುನಿ ಪುನಿ ನಾಇ ರಾಮ ಪದ ಸೀಸಾ । ಚಲೀಂ ತಹಾಂ ಜಹಂ ರಹೆ ಗಿರೀಸಾ ॥೪॥**

ಸತಿದೇವಿಯು ಎಲ್ಲೆಲ್ಲಿ ಎಷ್ಟು ರಘುನಾಥನ ರೂಪಗಳನ್ನು ನೋಡಿದಳೋ, ಅಲ್ಲೆಲ್ಲ ಶಕ್ತಿಗಳ ಸಹಿತವಾಗಿದ್ದ ದೇವತೆಗಳ ಗುಂಪನ್ನೂ ಕಂಡಳು. ಅನೇಕ ಪ್ರಕಾರದ ಚರಾಚರ ಸರ್ವಪ್ರಾಣಿಗಳನ್ನು ಕಂಡಳು. ದೇವತೆಗಳು ಅನೇಕರೂಪಗಳಿಂದ ಆ ಪ್ರಭುವನ್ನು ಆರಾಧಿಸುತ್ತಿದ್ದಾರೆ. ಸೀತಾರಾಮರ ಅನೇಕ ರೂಪಗಳಿದ್ದರೂ, ಅವೆಲ್ಲವೂ ಒಂದೇ ರೀತಿಯದಾಗಿತ್ತು. ದೇವತಾರೂಪದಿಂದ ಇರುವ ಸೀತಾರಾಮರ ಆಕೃತಿಗಳಲ್ಲಿ ಭಿನ್ನತ್ವವು ಇರಲಿಲ್ಲ. ಅಂತಹ ಸೀತಾರಾಮಲಕ್ಷ್ಮಣರನ್ನು ದರ್ಶಿಸಿ ಸತಿದೇವಿಯು ಚಕಿತಳಾದಳು. ಎದೆ ನಡುಗಿತು. ಮೈಮೇಲೆ ಜ್ಞಾನವೇ ಇರಲಿಲ್ಲ. ಅವಳಿಗೆ ಕಣ್ಣುಕತ್ತಲೆ ಬಂದು ಮಾರ್ಗಮಧ್ಯದಲ್ಲೇ ಕುಳಿತುಬಿಟ್ಟಳು. ಕೊಂಚಹೊತ್ತಿನಲ್ಲಿ ಕಣ್ಣುಬಿಟ್ಟು ನೋಡಿದಾಗ ದಕ್ಷಕುಮಾರಿಗೆ ಏನೂ ಹಿಂದಿನ ಯಾವ ದೃಶ್ಯವೂ ಕಾಣಿಸಲಿಲ್ಲ. ಆಕೆಯು ಪದೇ ಪದೇ ರಾಮಚಂದ್ರನಿಗೆ ನಮಸ್ಕರಿಸುತ್ತಾ ಶಿವನಿದ್ದ ವಟವೃಕ್ಷದ ಬಳಿಗೆ ಬಂದಳು. (ಚೌ/೧-೪)

**ದೋ – ಗಈಂ ಸಮೀಪ ಮಹೇಸ ತಬ ಹಂಸಿ ಪೂಛೀ ಕುಸಲಾತ ।**

**ಲೀನ್ಹಿ ಪರೀಛಾ ಕವನ ಬಿಧಿ ಕಹಹು ಸತ್ಯ ಸಬ ಬಾತ ॥ ೫೫ ॥**

ತನ್ನ ಬಳಿಗೆ ಬಂದ ಸತಿದೇವಿಯನ್ನು ಕಂಡು ಪರಶಿವನು ನಗುತ್ತಾ ಕುಶಲವನ್ನು ವಿಚಾರಿಸುತ್ತಾ– ''ನೀನು ರಾಮನನ್ನು ಹೇಗೆ ಪರೀಕ್ಷಿಸಿದೆ? ಇದನ್ನು ವಿಸ್ತಾರವಾಗಿ, ನಿಜವಾಗಿ ಹೇಳು'' ಎಂದು ಕೇಳಿದನು. (ದೋ/೫೫)

**ಮಾಸಪಾರಾಯಣದ ಎರಡನೆಯ ವಿಶ್ರಾಮ**

**ಚೌ – ಸತೀಂ ಸಮುಝಿ ರಘುಬೀರ ಪ್ರಭಾಊ । ಭಯ ಬಸ ಸಿವ ಸನ ಕೀನ್ಹ ದುರಾಊ ॥**
**ಕಛು ನ ಪರೀಛಾ ಲೀನ್ಹಿ ಗೊಸಾಈಂ । ಕೀನ್ಹ ಪ್ರನಾಮು ತುಮ್ಹಾರಿಹಿ ನಾಈಂ ॥ ೧ ॥**
**ಜೋ ತುಮ್ಹ ಕಹಾ ಸೊ ಮೃಷಾ ನ ಹೋಈ । ಮೋರೇಂ ಮನ ಪ್ರತೀತಿ ಅತಿ ಸೋಈ ॥**
**ತಬ ಸಂಕರ ದೇಖೆಉ ಧರಿ ಧ್ಯಾನಾ । ಸತೀಂ ಜೋ ಕೀನ್ಹ ಚರಿತ ಸಬು ಜಾನಾ ॥ ೨ ॥**
**ಬಹುರಿ ರಾಮಮಾಯಹಿ ಸಿರು ನಾವಾ । ಪ್ರೇರಿ ಸತಿಹಿ ಜೆಹಿಂ ಝೂಂಠ ಕಹಾವಾ ॥**
**ಹರಿ ಇಚ್ಛಾ ಭಾವೀ ಬಲವಾನಾ । ಹೃದಯಂ ಬಿಚಾರತ ಸಂಭು ಸುಜಾನಾ ॥ ೩ ॥**
**ಸತೀಂ ಕೀನ್ಹ ಸೀತಾ ಕರ ಬೇಷಾ । ಸಿವ ಉರ ಭಯಉ ಬಿಷಾದ ಬಿಸೇಷಾ ॥**
**ಜೌಂ ಅಬ ಕರಉಂ ಸತೀ ಸನ ಪ್ರೀತೀ । ಮಿಟಇ ಭಗತಿ ಪಥು ಹೋಇ ಅನೀತೀ ॥ ೪ ॥**

ಶ್ರೀರಾಮ ಪ್ರಭಾವವನ್ನು ಪ್ರತ್ಯಕ್ಷವಾಗಿ ಅರಿತುಕೊಂಡ ಸತಿದೇವಿಯು ಭಯಗೊಂಡು ನಿಜವನ್ನು ಮರೆಮಾಚಿ ಹೇಳಿದಳು – ''ಸ್ವಾಮಿ! ನಾನು ಪ್ರಭುವನ್ನು ಯಾವರೀತಿಯಿಂದಲೂ ಪರೀಕ್ಷಿಸಲಿಲ್ಲ. ಅಲ್ಲಿಗೆ ಹೋಗಿ ನಿಮ್ಮಂತೆ ಶ್ರೀರಾಮನಿಗೆ ನಮಸ್ಕರಿಸಿದೆ. ನೀವು ಹೇಳಿದ ಮಾತು ಹೇಗೆ ಸುಳ್ಳಾದೀತು? ನಿಮ್ಮ ಮಾತಿನಲ್ಲಿ ನನಗೆ ಪೂರ್ಣ ನಂಬಿಕೆ ಇದೆ.'' ಆಗ ಪರಮೇಶ್ವರನು ಧ್ಯಾನದೃಷ್ಟಿಯಿಂದ ನೋಡಿದನು. ಅವನಿಗೆ ಸತಿದೇವಿಯು ಪೊಂದಿದ ವಿಚಿತ್ರ ಅನುಭವಗಳೆಲ್ಲವೂ ವೇದ್ಯವಾಯಿತು. ಸತಿದೇವಿಯ ಬಾಯಿಂದ ಅನೃತ ವಚನಗಳು ಬಂದುದಕ್ಕೆ ಶ್ರೀರಾಮನ ಮಾಯೆಯೇ ಕಾರಣವಲ್ಲದೆ ಬೇರೆಯಲ್ಲ ಎಂದು ಚಿಂತಿಸಿ ಆ ಹರಿಯ ಮಾಯೆಗೆ ನಮಸ್ಕರಿಸಿದನು. ಸುಜ್ಞಾನಿಯಾದ ಶಿವನಿಗೆ ಅನಿಸಿತು – ಹರಿಯ ಇಚ್ಛಾರೂಪಿಯಾದ ಭವಿತವ್ಯವು ಅತ್ಯಂತ ಪ್ರಬಲವಾದುದು. ಸತಿಯು ಸೀತೆಯ ರೂಪವನ್ನು ಧರಿಸಿದ್ದನ್ನು ತಿಳಿದು ಶಿವನು ತುಂಬಾ ವಿಷಾದಗೊಂಡು ಯೋಚಿಸಿದನು – ''ನಾನೀಗ ಇವಳನ್ನು ಪತ್ನೀಭಾವದಿಂದ ನೋಡಿದರೆ ಭಕ್ತಿಮಾರ್ಗಕ್ಕೆ ಕಳಂಕ ಬಂದೀತು. ಎಲ್ಲಕಡೆಯಲ್ಲಿಯೂ ಅನೀತಿಯೇ ಪಸರಿಸೀತು. (ಚೌ/೧-೪)

**ದೋ – ಪರಮ ಪುನೀತ ನ ಜಾಇ ತಜಿ ಕಿಏಂ ಪ್ರೇಮ ಬಡ ಪಾಪು ।**

**ಪ್ರಗಟಿ ನ ಕಹತ ಮಹೇಸು ಕಛು ಹೃದಯಂ ಅಧಿಕ ಸಂತಾಪು ॥ ೫೬ ॥**

ಸತಿಯು ಪರಮಪವಿತ್ರಳು. ಅವಳನ್ನು ದೂರಮಾಡುವುದು ಸರಿಯಲ್ಲ. ಪತ್ನೀಭಾವದಿಂದ ನೋಡುವುದು ಮಹತ್‌ಪಾಪ'' ಎಂದು ವಿಚಾರಮಾಡುತ್ತಾ ಮಹೇಶ್ವರನು ಮೌನವಾದನು. ಆದರೆ ಅವನ ಹೃದಯದಲ್ಲಿ ಸಂತಾಪ ತಳಮಳ ತುಂಬಿತ್ತು. (ದೋ/೫೬)

**ಚೌ – ತಬ ಸಂಕರ ಪ್ರಭು ಪದ ಸಿರು ನಾವಾ । ಸುಮಿರತ ರಾಮು ಹೃದಯಂ ಅಸ ಆವಾ ॥**
**ಏಹಿಂ ತನ ಸತಿಹಿ ಭೇಟ ಮೊಹಿ ನಾಹೀಂ । ಸಿವ ಸಂಕಲ್ಪು ಕೀನ್ಹ ಮನ ಮಾಹೀಂ ॥ ೧ ॥**
**ಅಸ ಬಿಚಾರಿ ಸಂಕರು ಮತಿಧೀರಾ । ಚಲೇ ಭವನ ಸುಮಿರತ ರಘುಬೀರಾ ॥**
**ಚಲತ ಗಗನ ಭೈ ಗಿರಾ ಸುಹಾಈ । ಜಯ ಮಹೇಸ ಭಲಿ ಭಗತಿ ದೃಢಾಈ ॥ ೨ ॥**

**ಅಸ ಪನ ತುಮ್ಹ ಬಿನು ಕರಇ ಕೊ ಆನಾ । ರಾಮಭಗತ ಸಮರಥ ಭಗವಾನಾ ॥**
**ಸುನಿ ನಭಗಿರಾ ಸತೀ ಉರ ಸೋಚಾ । ಪೂಛಾ ಸಿವಹಿ ಸಮೇತ ಸಕೋಚಾ ॥ ೩ ॥**
**ಕೀನ್ಹ ಕವನ ಪನ ಕಹಹು ಕೃಪಾಲಾ । ಸತ್ಯಧಾಮ ಪ್ರಭು ದೀನದಯಾಲಾ ॥**
**ಜದಪಿ ಸತೀಂ ಪೂಛಾ ಬಹು ಭಾಁತೀ । ತದಪಿ ನ ಕಹೆಉ ತ್ರಿಪುರ ಆರಾತೀ ॥ ೪ ॥**

ಪರಮ ಶಿವನು ಶ್ರೀರಾಮನ ಚರಣಕಮಲಗಳನ್ನು ಸ್ಮರಿಸಿ ಮೂಸಿದನು. ಸ್ಮರಿಸುತ್ತಲೇ– ''ಈ ಶರೀರದಿಂದ ಸತೀದೇವಿಯನ್ನು ಪತ್ನಿಯಾಗಿ ಸ್ವೀಕರಿಸಲಾರೆನು'' ಎಂದು ನಿಶ್ಚಯಿಸಿಕೊಂಡನು. ಬಳಿಕ ಅವನು ಸ್ಥಿರಬುದ್ಧಿಯಿಂದ ಶ್ರೀರಾಮನನ್ನು ಸ್ಮರಿಸುತ್ತಾ ಕೈಲಾಸಕ್ಕೆ ಹೊರಟನು. ಆಗ ಒಂದು ಮನೋಹರವಾದ ಆಕಾಶವಾಣಿಯು ಕೇಳಿ ಬಂತು. ''ಓ ಮಹೇಶನೇ! ನಿನಗೆ ಜಯವಾಗಲೀ, ನಿನ್ನಿಂದ ಭಕ್ತಿಯು ದೃಢವಾಯಿತು. ನಿನ್ನನ್ನು ಬಿಟ್ಟು ಬೇರಾರು ಇಂತಹ ದೃಢ ಪ್ರತಿಜ್ಞೆಮಾಡಬಲ್ಲರು? ನೀನು ರಾಮಭಕ್ತನು, ಸಮರ್ಥನು, ಸಾಕ್ಷಾತ್ ಪರಮೇಶ್ವರನು'' ಎಂಬ ಆಕಾಶವಾಣಿಯನ್ನು ಕೇಳಿ, ಸತೀದೇವಿಯ ಮನಸ್ಸಿನಲ್ಲಿ ತುಂಬಾ ಕಳವಳವಾಯಿತು. ಆಕೆಯು ಸಂಕೋಚಪಡುತ್ತಲೇ ಶಿವನನ್ನು ಕೇಳಿದಳು – ಓ ಕೃಪಾಳುವಾದ ಪ್ರಭುವೇ! ನೀವು ಯಾವ ಪ್ರತಿಜ್ಞೆಯನ್ನು ಮಾಡಿರುವಿರಿ? ನೀವು ಸತ್ಯಸ್ವರೂಪರೂ, ದಯಾನಿಧಿಯೂ ಆಗಿರುವಿರಿ. ದಯವಿಟ್ಟು ತಿಳಿಸಿರಿ. ಸತಿಯು ಪರಿಪರಿಯಾಗಿ ಕೇಳಿದರೂ ಶಿವನು ಏನೂ ಹೇಳಲಿಲ್ಲ. (ಚೌ/೧-೪)

**ದೋ – ಸತೀಂ ಹೃದಯಁ ಅನುಮಾನ ಕಿಯ ಸಬು ಜಾನೆಉ ಸರ್ಬಗ್ಯ ।**
**ಕೀನ್ಹ ಕಪಟು ಮೈಂ ಸಂಭು ಸನ ನಾರಿ ಸಹಜ ಜಡ ಅಗ್ಯ ॥ ೫೭ (ಕ) ॥**

ಸತೀದೇವಿಯ ಮನಸ್ಸಿನಲ್ಲಿ ಆಂದೋಳನವುಂಟಾಯಿತು. ''ಸರ್ವಜ್ಞನಾದ ಪರಶಿವನು ಎಲ್ಲವನ್ನೂ ತಿಳಿದುಕೊಳ್ಳು ವವನು. ಸ್ತ್ರೀಸ್ವಭಾವದಿಂದ, ಮೂರ್ಖತ್ವದಿಂದ, ವಿವೇಕಹೀನಳಾದ ನಾನು ಪ್ರೇಮಸ್ವರೂಪವನ್ನು ತಿಳಿದುಕೊಳ್ಳದೆ ಹೋದೆನಲ್ಲ ! (ದೋ/೫೭ ಕ)

**ಸೋ – ಜಲು ಪಯ ಸರಿಸ ಬಿಕಾಇ ದೇಖಹು ಪ್ರೀತಿ ಕಿ ರೀತಿ ಭಲಿ ।**
**ಬಿಲಗ ಹೋಇ ರಸು ಜಾಇ ಕಪಟ ಖಟಾಈ ಪರತ ಪುನಿ ॥ ೫೭ (ಖ) ॥**

ನೀರೂ ಕೂಡ ಹಾಲಿಗೆ ಸೇರಿದಾಗ ಹಾಲಿನ ಬೆಲೆಗೆ ಮಾರಾಟವಾಗುತ್ತದೆ. ಆದರೆ ಅದರಲ್ಲಿ ಕಪಟರೂಪೀ ಆಮ್ಲವು ಬಿದ್ದರೆ ಆ ಹಾಲು ಒಡೆದುಹೋಗುತ್ತದೆ, ನೀರು ಬೇರಾಗುತ್ತದೆ. ರುಚಿ (ಪ್ರೇಮ)ಯು ಹೊರಟುಹೋಗುತ್ತದೆ. (ಸೋ/೫೭ ಖ)

**ಚೌ – ಹೃದಯಁ ಸೋಚು ಸಮುಝುತ ನಿಜ ಕರನೀ । ಚಿಂತಾ ಅಮಿತ ಜಾಇ ನಹಿಂ ಬರನೀ ॥**
**ಕೃಪಾಸಿಂಧು ಸಿವ ಪರಮ ಅಗಾಧಾ । ಪ್ರಗಟ ನ ಕಹೆಉ ಮೋರ ಅಪರಾಧಾ ॥ ೧ ॥**
**ಸಂಕರ ರುಖ ಅವಲೋಕಿ ಭವಾನೀ । ಪ್ರಭು ಮೊಹಿ ತಜೆಉ ಹೃದಯಁ ಅಕುಲಾನೀ ॥**
**ನಿಜ ಅಘ ಸಮುಝಿ ನ ಕಛು ಕಹಿ ಜಾಈ । ತಪಇ ಅವಾಁ ಇವ ಉರ ಅಧಿಕಾಈ ॥ ೨ ॥**
**ಸತಿಹಿ ಸಸೋಚ ಜಾನಿ ಬೃಷಕೇತೂ । ಕಹೀಂ ಕಥಾ ಸುಂದರ ಸುಖ ಹೇತೂ ॥**
**ಬರನತ ಪಂಥ ಬಿಬಿಧ ಇತಿಹಾಸಾ । ಬಿಸ್ವನಾಥ ಪಹುಁಚೇ ಕೈಲಾಸಾ ॥ ೩ ॥**
**ತಹಁ ಪುನಿ ಸಂಭು ಸಮುಝಿ ಪನ ಆಪನ । ಬೈಠೇ ಬಟ ತರ ಕರಿ ಕಮಲಾಸನ ॥**
**ಸಂಕರ ಸಹಜ ಸರೂಪು ಸಮ್ಹಾರಾ । ಲಾಗಿ ಸಮಾಧಿ ಅಖಂಡ ಅಪಾರಾ ॥ ೪ ॥**

ಸತೀದೇವಿಯು ತಾನು ಎಸಗಿದ ಕಾರ್ಯಕ್ಕಾಗಿ ತುಂಬಾ ಚಿಂತಿಸಿದಳು. ಹೃದಯದಲ್ಲಿ ಉಂಟಾದ ಕಳವಳ-ಆಂದೋಳನ ವರ್ಣಿಸಲು ಅಸದಳ. ''ಕೃಪಾಸಮುದ್ರನಾದ ಪರಮೇಶ್ವರನು ಗಂಭೀರನು. ಅದರಿಂದಲೇ ನನ್ನ ಅಪರಾಧವನ್ನು ಅವನು ಬಾಯಿಬಿಟ್ಟು ಎತ್ತಿ ಆಡಲಿಲ್ಲ'' ಎಂದು ಯೋಚಿಸಿದಳು. ಶಿವನ ಮುಖಚರ್ಯೆಯು ಬದಲಾಗಿರುವುದನ್ನು ಕಂಡು ಸತೀದೇವಿಯು – 'ಪ್ರಭುವು ತನ್ನನ್ನು ತ್ಯಜಿಸಿದ್ದಾನೆ' ಎಂದು ಅರಿತುಕೊಂಡಳು. ಅದರಿಂದ ಅವಳು ತುಂಬಾ ನೋವು ತಿಂದಳು. ತನ್ನ ಪಾಪವನ್ನು ನೆನೆದು ಕುಂಬಾರನ ಆವಿಗೆಯಂತೆ ಆಕೆಯ ಎದೆ ಉರಿಯತೊಡಗಿತು.

ಸತಿಯು ಚಿಂತಾಮಗ್ನಳಾಗಿರುವುದನ್ನು ಕಂಡು ಶಿವನು ಆಕೆಗೆ ನೆಮ್ಮದಿಯುಂಟಾಗಲು ಚೆಲುವಾದ ಕಥೆಗಳನ್ನು ಹೇಳಿದನು. ಹಾದಿಯಲ್ಲಿ ವಿವಿಧ ಪ್ರಕಾರದ ಇತಿಹಾಸಗಳನ್ನು ಹೇಳುತ್ತಾ ಕೈಲಾಸಕ್ಕೆ ತಲುಪಿದನು. ತನ್ನ ಪ್ರತಿಜ್ಞೆಯನ್ನು ನೆನೆದು ಹಾಗೆಯೇ ಸಾಗಿಬಂದು ಒಂದು ವಟವೃಕ್ಷದ ಬುಡದಲ್ಲಿ ಪದ್ಮಾಸನಹಾಕಿ ಕುಳಿತುಕೊಂಡನು. ಶಿವನು ತನ್ನ ಸಹಜರೂಪದಲ್ಲಿ ಸ್ಥಿತನಾಗಿ ಅಖಂಡ ಸಮಾಧಿಯಲ್ಲಿ ಮುಳುಗಿದನು. (ಚೌ/೧-೪)

**ದೋ – ಸತೀ ಬಸಹಿಂ ಕೈಲಾಸ ತಬ ಅಧಿಕ ಸೋಚು ಮನ ಮಾಹಿಂ ।**
**ಮರಮು ನ ಕೋಊ ಜಾನ ಕಛು ಜುಗ ಸಮ ದಿವಸ ಸಿರಾಹಿಂ ॥ ೫೮ ॥**

ಸತಿದೇವಿಯು ಕೈಲಾಸದಲ್ಲೇ ಉಳಿದಳು. ಆಕೆಯ ಮನಸ್ಸಿನಲ್ಲಿ ಅಪಾರದುಃಖ ತುಂಬಿತ್ತು. ಈ ರಹಸ್ಯವೂ ಯಾರಿಗೂ ತಿಳಿಯದು. ಆಕೆಗೆ ದಿನವೊಂದು ಯುಗವಾಗಿ ಕಳೆಯತೊಡಗಿತು. (ದೋ/೫೮)

**ಚೌ – ನಿತ ನವ ಸೋಚು ಸತೀ ಉರ ಭಾರಾ । ಕಬ ಜೈಹಉಂ ದುಖ ಸಾಗರ ಪಾರಾ ॥**
**ಮೈಂ ಜೊ ಕೀನ್ಹ ರಘುಪತಿ ಅಪಮಾನಾ । ಪುನಿ ಪತಿಬಚನು ಮೃಷಾ ಕರಿ ಜಾನಾ ॥ ೧ ॥**
**ಸೋ ಫಲು ಮೋಹಿ ಬಿಧಾತಾಂ ದೀನ್ಹಾ । ಜೋ ಕಛು ಉಚಿತ ರಹಾ ಸೊಇ ಕೀನ್ಹಾ ॥**
**ಅಬ ಬಿಧಿ ಅಸ ಬೂಝಿಅ ನಹಿಂ ತೋಹೀ । ಸಂಕರ ಬಿಮುಖ ಜಿಆವಸಿ ಮೋಹೀ ॥ ೨ ॥**
**ಕಹಿ ನ ಜಾಇ ಕಛು ಹೃದಯ ಗಲಾನೀ । ಮನ ಮಹುಂ ರಾಮಹಿ ಸುಮಿರ ಸಯಾನೀ ॥**
**ಜೌಂ ಪ್ರಭು ದೀನದಯಾಲು ಕಹಾವಾ । ಆರತಿ ಹರನ ಬೇದ ಜಸು ಗಾವಾ ॥ ೩ ॥**
**ತೌ ಮೈಂ ಬಿನಯ ಕರಉಂ ಕರ ಜೋರೀ । ಛೂಟಉ ಬೇಗಿ ದೇಹ ಯಹ ಮೋರೀ ॥**
**ಜೌಂ ಮೋರೇಂ ಸಿವ ಚರನ ಸನೇಹೂ । ಮನ ಕ್ರಮ ಬಚನ ಸತ್ಯ ಬ್ರತು ಏಹೂ ॥ ೪ ॥**

ಸತಿಯ ಹೃದಯದಲ್ಲಿ ನಿತ್ಯವೂ ಹೊಸ-ಹೊಸ ಚಿಂತೆಗಳು ಕಾಡುತ್ತಿದ್ದವು. ''ನಾನು ಈ ಅಳಲಿನ ಕಡಲನ್ನು ಎಂದಿಗೆ ದಾಟುವೆನು? ನಾನು ಶ್ರೀರಾಮನಿಗೆ ಅಪಮಾನಮಾಡಿರುವೆನು. ಗಂಡನ ಮಾತನ್ನು ಸುಳ್ಳು ಎಂದು ಭಾವಿಸಿದೆ. ವಿಧಾತನು ನನಗೆ ಸರಿಯಾದ ಶಿಕ್ಷೆಯನ್ನೇ ವಿಧಿಸಿರುವನು. ಆದರೆ ಶಂಕರನನ್ನು ಬಿಟ್ಟು, ನಾನು ಹೇಗೆ ಪ್ರಾಣಗಳನ್ನು ಇರಿಸಿಕೊಳ್ಳಬಲ್ಲೆ?'' ಹೀಗೆ ಅವಳ ಎದೆಯ ಕಳವಳ ಹೇಳತೀರದು. ಆದರೂ ಬುದ್ಧಿವಂತಳಾದ ಆ ಸತಿಯು ಕೊನೆಗೆ, ಆತ್ಮ ಪರೀಶೀಲನೆಗೈದು ಮನಸ್ಸಿನಲ್ಲೇ ಶ್ರೀರಾಮನನ್ನು ಇಂತು ಬೇಡಿಕೊಂಡಳು – ''ಹೇ ಪ್ರಭು! ನೀನು ದೀನಬಂಧುವು. ವೇದಗಳು ನಿನ್ನನ್ನು ಆಪದ್ಬಾಂಧವನೆಂದು ಹೊಗಳುತ್ತಿವೆ. ಈ ನನ್ನ ಶರೀರವು ಬೇಗನೇ ಬಿದ್ದುಹೋಗುವಂತೆ ಮಾಡು. ನಾನು ನಿನ್ನಲ್ಲಿ ಕೈಜೋಡಿಸಿ ಬೇಡುತ್ತೇನೆ. ಶಿವನ ಚರಣಗಳಲ್ಲಿ ನನ್ನ ಪ್ರೇಮವು ಸತ್ಯವಾಗಿದ್ದರೆ, ನನ್ನ ಈ ವ್ರತವು ತ್ರಿಕರಣಪೂರ್ವಕವಾಗಿ ಸತ್ಯವಾಗಿದ್ದರೆ, ನನ್ನ ಕೋರಿಕೆಯನ್ನು ಈಡೇರಿಸು'' (ಚೌ/೧-೪)

**ದೋ – ತೌ ಸಬದರಸೀ ಸುನಿಅ ಪ್ರಭು ಕರಉ ಸೊ ಬೇಗಿ ಉಪಾಇ ।**
**ಹೋಇ ಮರನು ಜೆಹಿಂ ಬಿನಹಿಂ ಶ್ರಮ ದುಸಹ ಬಿಪತ್ತಿ ಬಿಹಾಇ ॥ ೫೯ ॥**

ಹೇ ಸರ್ವದರ್ಶಿ ಪ್ರಭುವೇ! ನನ್ನ ಪ್ರಾಣಗಳು ಆದಷ್ಟು ಬೇಗ ಈ ದೇಹವನ್ನು ತೊರೆಯಲು ಯಾವುದಾದರೂ ಉಪಾಯ ಮಾಡು. ಅದರಿಂದಾಗಿ ಈ ಪತಿಪರಿತ್ಯಾಗವೆಂಬ ಅಸಹನೀಯ ದುಃಖವು ದೂರವಾಗಲೀ. (ದೋ/೫೯)

**ಚೌ – ಏಹಿ ಬಿಧಿ ದುಖಿತ ಪ್ರಜೇಸಕುಮಾರೀ । ಅಕಥನೀಯ ದಾರುನ ದುಖು ಭಾರೀ ॥**
**ಬೀತೇಂ ಸಂಬತ ಸಹಸ ಸತಾಸೀ । ತಜೀ ಸಮಾಧಿ ಸಂಭು ಅಬಿನಾಸೀ ॥ ೧ ॥**
**ರಾಮ ನಾಮ ಸಿವ ಸುಮಿರನ ಲಾಗೇ । ಜಾನೆಉ ಸತೀಂ ಜಗತಪತಿ ಜಾಗೇ ॥**
**ಜಾಇ ಸಂಭು ಪದ ಬಂದನು ಕೀನ್ಹಾ । ಸನಮುಖ ಸಂಕರ ಆಸನು ದೀನ್ಹಾ ॥ ೨ ॥**
**ಲಗೇ ಕಹನ ಹರಿಕಥಾ ರಸಾಲಾ । ದಚ್ಛ ಪ್ರಜೇಸ ಭಏ ತೆಹಿ ಕಾಲಾ ॥**
**ದೇಖಾ ಬಿಧಿ ಬಿಚಾರಿ ಸಬ ಲಾಯಕ । ದಚ್ಛಹಿ ಕೀನ್ಹ ಪ್ರಜಾಪತಿ ನಾಯಕ ॥ ೩ ॥**
**ಬಡ ಅಧಿಕಾರ ದಚ್ಛ ಜಬ ಪಾವಾ । ಅತಿ ಅಭಿಮಾನು ಹೃದಯಂ ತಬ ಆವಾ ॥**
**ನಹಿಂ ಕೊಉ ಅಸ ಜನಮಾ ಜಗ ಮಾಹೀಂ । ಪ್ರಭುತಾ ಪಾಇ ಜಾಹಿ ಮದ ನಾಹೀಂ ॥ ೪ ॥**

ದಕ್ಷ ಕುಮಾರಿಯಾದ ಸತಿದೇವಿಯು ಹೀಗೆ ವರ್ಣಿಸಲಸದಳವಾದ ದಾರುಣವಾದ ದುಃಖವನ್ನು ಅನುಭವಿಸುತ್ತಿದ್ದಳು. ಎಂಭತ್ತೇಳು ಸಾವಿರ ವರ್ಷ ಕಳೆದಮೇಲೆ ಶಿವನ ಸಮಾಧಿಯು ಭಂಗವಾಯಿತು. ಶಿವನು ರಾಮನಾಮ ಸ್ಮರಣೆಮಾಡುತ್ತಾ, ಸಮಾಧಿಯಿಂದ ಎಚ್ಚತ್ತಿರುವುದು ಸತಿಗೆ ಗೊತ್ತಾಯಿತು. ಆಕೆಯು ಹೋಗಿ ಅವನ ಚರಣಗಳಿಗೆ ಎರಗಿದಳು. ಶಿವನು ಆಕೆಗೆ ಇದುರ್ಗಡೆ ಇರುವ ಆಸನದಲ್ಲಿ ಕುಳಿತುಕೊಳ್ಳಲು ಆಜ್ಞಾಪಿಸಿದನು. ಅವಳಿಗೆ ಮಧುರವಾದ, ರಸಮಯ ಹರಿಕಥೆಗಳನ್ನು ಹೇಳತೊಡಗಿದನು. ಆ ಹೊತ್ತಿಗೆ ಸತಿಯ ತಂದೆಯಾದ ದಕ್ಷನು ಪ್ರಜಾಪತಿಯಾಗಿದ್ದನು. ಅವನು ಎಲ್ಲ ದೃಷ್ಟಿಯಿಂದಲೂ

ಯೋಗ್ಯನೆಂದು ತಿಳಿದು ಬ್ರಹ್ಮನು ಆತನನ್ನು ಪ್ರಜಾಪತಿಗಳ ನಾಯಕನನ್ನಾಗಿಸಿದನು. ಇಷ್ಟು ದೊಡ್ಡ ಅಧಿಕಾರ ಪಡೆದ ಮೇಲೆ ದಕ್ಷನಿಗೆ ಗರ್ವವು ತಲೆಗಡರಿತು. ಪ್ರಪಂಚದಲ್ಲಿ ಅಧಿಕಾರ ಬಂದಾಗ ಗರ್ವಪಡದವರು ಯಾರಿದ್ದಾರೆ? (ಚೌ/೧-೪)

## ದಕ್ಷಾಧ್ವರ ಧ್ವಂಸ – ಸತಿದೇವಿಯ ದೇಹತ್ಯಾಗ

**ದೋ – ದಚ್ಛ ಲಿಏ ಮುನಿ ಬೋಲಿ ಸಬ ಕರನ ಲಗೇ ಬಡ ಜಾಗ ।**
**ನೇವತೇ ಸಾದರ ಸಕಲ ಸುರ ಜೇ ಪಾವತ ಮಖ ಭಾಗ ॥ ೬೦ ॥**

ಅಧಿಕಾರೂಢನಾದ ಮೇಲೆ ದಕ್ಷನು ಎಲ್ಲ ಮುನಿಗಳನ್ನು ಆಮಂತ್ರಿಸಿ ಒಂದು ದೊಡ್ಡ ಯಜ್ಞವನ್ನು ಪ್ರಾರಂಭಿಸಿದನು. ಯಜ್ಞದಲ್ಲಿ ಹವಿರ್ಭಾಗವನ್ನು ಪಡೆಯುವ ದೇವತೆಗಳೆಲ್ಲರನ್ನೂ ಆದರದಿಂದ ಆಹ್ವಾನಿಸಿದನು. (ದೋ/೬೦)

**ಚೌ – ಕಿನ್ನರ ನಾಗ ಸಿದ್ಧ ಗಂಧರ್ಬಾ । ಬಧುನ್ಹ ಸಮೇತ ಚಲೇ ಸುರ ಸರ್ಬಾ ॥**
**ಬಿಷ್ನು ಬಿರಂಚಿ ಮಹೇಸು ಬಿಹಾಈ । ಚಲೇ ಸಕಲ ಸುರ ಜಾನ ಬನಾಈ ॥ ೧ ॥**
**ಸತೀಂ ಬಿಲೋಕೇ ಬ್ಯೋಮ ಬಿಮಾನಾ । ಜಾತ ಚಲೇ ಸುಂದರ ಬಿಧಿ ನಾನಾ ॥**
**ಸುರ ಸುಂದರೀ ಕರಹಿಂ ಕಲ ಗಾನಾ । ಸುನತ ಶ್ರವನ ಛೂಟಹಿಂ ಮುನಿ ಧ್ಯಾನಾ ॥ ೨ ॥**
**ಪೂಛೇಉ ತಬ ಸಿವ್ ಕಹೇಉ ಬಖಾನೀ । ಪಿತಾ ಜಗ್ಯ ಸುನಿ ಕಛು ಹರಷಾನೀ ॥**
**ಜೌ ಮಹೇಸು ಮೋಹಿ ಆಯಸು ದೇಹೀಂ । ಕಛು ದಿನ ಜಾಇ ರಹೌಂ ಮಿಸ ಏಹೀಂ ॥ ೩ ॥**
**ಪತಿ ಪರಿತ್ಯಾಗ ಹೃದಯ್ ದುಖು ಭಾರೀ । ಕಹಇ ನ ನಿಜ ಅಪರಾಧ ಬಿಚಾರೀ ॥**
**ಬೋಲೀ ಸತೀ ಮನೋಹರ ಬಾನೀ । ಭಯ ಸಂಕೋಚ ಪ್ರೇಮ ರಸ ಸಾನೀ ॥ ೪ ॥**

ದಕ್ಷನ ಆಮಂತ್ರಣದಂತೆ ಕಿನ್ನರರೂ, ನಾಗರೂ, ಸಿದ್ಧರೂ, ಗಂಧರ್ವರೂ, ಇತರ ದೇವತೆಗಳೂ ತಮ್ಮ ಪತ್ನಿಯರೊಂದಿಗೆ ಯಜ್ಞಕ್ಕಾಗಿ ಹೊರಟರು. ಬ್ರಹ್ಮಾ, ವಿಷ್ಣು, ಮಹೇಶ್ವರರನ್ನು ಬಿಟ್ಟು ಇತರ ಎಲ್ಲ ದೇವತೆಗಳು ತಮ್ಮ-ತಮ್ಮ ದಿವ್ಯವಿಮಾನಗಳಲ್ಲಿ ಹೋಗುತ್ತಿದ್ದರು. ಅಂದವಾದ ವಿಮಾನಗಳು ಆಕಾಶದಲ್ಲಿ ಹೋಗುತ್ತಿರುವುದನ್ನು ಸತಿದೇವಿಯು ನೋಡಿದಳು. ಮುನಿಗಳ ತಪಸ್ಸು ಸಮಾಧಿಗಳೂ ಕೂಡ ಭಂಗಗೊಳಿಸುವ ಸುರಸುಂದರಿಯರ ಮಧುರಗಾನವನ್ನು ಕೇಳಿದಳು. ವಿಮಾನಗಳಲ್ಲಿ ದೇವತೆಗಳು ಹೀಗೆ ಎಲ್ಲಿಗೆ, ಏಕೆ ಹೋಗುತ್ತಿದ್ದಾರೆ? ಎಂದು ಸತಿಯು ಶಿವನಲ್ಲಿ ಕೇಳಿದಳು. ಆಗ ಶಿವನು ಎಲ್ಲ ವಿಷಯಗಳನ್ನು ತಿಳಿಸಿದನು. ತಂದೆಯು ಮಾಡುವ ಯಜ್ಞದ ವಾರ್ತೆಯನ್ನು ಕೇಳಿ ಸತೀದೇವಿಯು ತುಂಬಾ ಹರ್ಷಗೊಂಡಳು. ಪತಿದೇವರು ಅನುಮತಿ ನೀಡಿದರೆ ತಾನೂ ಈ ನೆಪದಲ್ಲಿ ತವರುಮನೆಗೆ ಹೋಗಬಹುದು ಎಂದು ಆಕೆಗೆ ಅನ್ನಿಸಿತು. ಏಕೆಂದರೆ, ಪತಿಪರಿತ್ಯಾಗದ ದುಃಖದಲ್ಲಿ ಮೊದಲೇ ಮುಳುಗಿದ್ದಳು. ಆದ್ದರಿಂದ ತಪ್ಪು ತನ್ನದೇ ಎಂದು ತಿಳಿದು ಆಕೆಯು ಮೌನವಹಿಸಿದಳು. ಕೊನೆಗೆ ಸತೀದೇವಿಯು ಭಯ, ಸಂಕೋಚ ಹಾಗೂ ಪ್ರೇಮಪೂರಿತವಾದ ವಚನಗಳಿಂದ ಶಿವನಲ್ಲಿ ಇಂತು ನುಡಿದಳು – (ಚೌ/೧-೪)

**ದೋ – ಪಿತಾ ಭವನ ಉತ್ಸವ ಪರಮ ಜೌಂ ಪ್ರಭು ಆಯಸು ಹೋಇ ।**
**ತೌ ಮೈಂ ಜಾಉಂ ಕೃಪಾಯತನ ಸಾದರ ದೇಖನ ಸೋಇ ॥ ೬೧ ॥**

ಸ್ವಾಮೀ! ನಮ್ಮ ತಂದೆಯ ಮನೆಯಲ್ಲಿ ದೊಡ್ಡ ಯಜ್ಞೋತ್ಸವ ಜರಗುತ್ತಿದೆ. ದಯಾನಿಧೇ! ನೀವು ಅನುಮತಿ ನೀಡಿದರೆ ನಾನು ಆದರದಿಂದ ಆ ಉತ್ಸವವನ್ನು ನೋಡಹೋಗುವೆ. (ದೋ/೬೧)

**ಚೌ – ಕಹೆಹು ನೀಕ ಮೋರೆಹುಂ ಮನ ಭಾವಾ । ಯಹ ಅನುಚಿತ ನಹಿಂ ನೇವತ ಪಠಾವಾ ॥**
**ದಚ್ಛ ಸಕಲ ನಿಜ ಸುತಾ ಬೋಲಾಈಂ । ಹಮರೇಂ ಬಯರ ತುಮ್ಹಉ ಬಿಸರಾಈಂ ॥ ೧ ॥**
**ಬ್ರಹ್ಮಸಭಾಂ ಹಮ ಸನ ದುಖು ಮಾನಾ । ತೆಹಿ ತೇಂ ಅಜಹುಂ ಕರಹಿಂ ಅಪಮಾನಾ ॥**
**ಜೌ ಬಿನು ಬೋಲೇಂ ಜಾಹು ಭವಾನೀ । ರಹಇ ನ ಸೀಲು ಸನೇಹು ನ ಕಾನೀ ॥ ೨ ॥**
**ಜದಪಿ ಮಿತ್ರ ಪ್ರಭು ಪಿತು ಗುರ ಗೇಹಾ । ಜಾಇಅ ಬಿನು ಬೋಲೆಹುಂ ನ ಸಂದೇಹಾ ॥**
**ತದಪಿ ಬಿರೋಧ ಮಾನ ಜಹಂ ಕೋಈ । ತಹಾಂ ಗಏಂ ಕಲ್ಯಾನು ನ ಹೋಈ ॥ ೩ ॥**
**ಭಾಂತಿ ಅನೇಕ ಸಂಭು ಸಮುಝಾವಾ । ಭಾವೀ ಬಸ ನ ಗ್ಯಾನು ಉರ ಆವಾ ॥**
**ಕಹ ಪ್ರಭು ಜಾಹು ಜೋ ಬಿನಹಿಂ ಬೊಲಾಏಂ । ನಹಿಂ ಭಲಿ ಬಾತ ಹಮಾರೇ ಭಾಏಂ ॥ ೪ ॥**

ಅದನ್ನು ಕೇಳಿ ಶಿವನು ಹೇಳಿದ – ''ನಿನ್ನ ಮಾತು ಚೆನ್ನಾಗಿದೆ. ನೀನು ತವರಿಗೆ ಹೋಗುವುದು ನನಗೂ ಇಷ್ಟವೇ. ಆದರೆ ನಿನ್ನ ತಂದೆಯು ಆಮಂತ್ರಣ ಕಳಿಸಲಿಲ್ಲ. ಇದು ತಕ್ಕುದಲ್ಲ. ದಕ್ಷನು ತನ್ನ ಎಲ್ಲ ಹೆಣ್ಣುಮಕ್ಕಳನ್ನೂ ಕರೆದಿದ್ದಾನೆ. ಆದರೆ ನನ್ನ ಮೇಲಿನ ವೈರದಿಂದ ನಿನ್ನನ್ನು ಕರೆಯಲಿಲ್ಲ. ಒಮ್ಮೆ ಬ್ರಹ್ಮಸಭೆಯಲ್ಲಿ ನನ್ನ ಕುರಿತು ನಿನ್ನ ತಂದೆಯು ಅಪ್ರಸನ್ನನಾದನು. ಅದರಿಂದಾಗಿ ಈಗಲೂ ಕೂಡ ನನ್ನನ್ನು ಅಪಮಾನಗೊಳಿಸುತ್ತಿದ್ದಾನೆ. ಭವಾನೀ! ಕರೆಯದೇ ಹೋದರೆ ಶೀಲ, ಸ್ನೇಹವಾಗಲೀ, ಮಾನ, ಮರ್ಯಾದೆಯಾಗಲೀ ಉಳಿಯುವುದಿಲ್ಲ. ಮಿತ್ರ, ಯಜಮಾನ, ತಂದೆ, ಗುರು – ಇವರುಗಳ ಮನೆಗೆ ಕರೆಯದೆಯೂ ಹೋಗಬಹುದು. ಆದರೆ ದ್ವೇಷಿಸುವವರ ಕಡೆಗೆ ಹೋದರೆ ಶ್ರೇಯಸ್ಸಾಗುವುದಿಲ್ಲ.'' ಎಂದು ಶಿವನು ಆಕೆಗೆ ಪರಿ-ಪರಿಯಾಗಿ ಸಮಾಧಾನಪಡಿಸಿದನು. ಆದರೆ ವಿಧಿವಶದಿಂದ ಆ ಮಾತುಗಳು ಸತಿದೇವಿಗೆ ಪಥ್ಯವಾಗಲಿಲ್ಲ. ಶಿವನು ಮತ್ತೆ ಹೇಳಿದ– ''ಕರೆಯದೇ ಹೋಗುವುದು ಒಳಿತಲ್ಲ ಎಂಬುದೇ ನನ್ನ ಅಭಿಪ್ರಾಯವು.'' (ಚೌ/೧-೪)

**ದೋ – ಕಹಿ ದೇಖಾ ಹರ ಜತನ ಬಹು ರಹಇ ನ ದಚ್ಛಕುಮಾರಿ ।**
**ದಿಏ ಮುಖ್ಯ ಗನ ಸಂಗ ತಬ ಬಿದಾ ಕೀನ್ಹ ತ್ರಿಪುರಾರಿ ॥ ೬೨ ॥**

ಶಿವನು ದಕ್ಷಕುಮಾರಿಗೆ ಅನೇಕರೀತಿಯಲ್ಲಿ ಹೇಳಿ ನೋಡಿದ. ಆದರೆ ಅವಳು ಯಾವುದಕ್ಕೂ ಜಗ್ಗದಿರಲು, ಆಗ ತ್ರಿಪುರಾರಿಯು ತನ್ನ ಮುಖ್ಯ ಗಣಗಳೊಂದಿಗೆ ಆಕೆಯನ್ನು ಕಳಿಸಿಕೊಟ್ಟನು. (ದೋ/೬೨)

**ಚೌ – ಪಿತಾ ಭವನ ಜಬ ಗಈಂ ಭವಾನೀ । ದಚ್ಛ ತ್ರಾಸ ಕಾಹುಁ ನ ಸನಮಾನೀ ॥**
**ಸಾದರ ಭಲೆಹಿಂ ಮಿಲೀ ಏಕ ಮಾತಾ । ಭಗಿನೀಂ ಮಿಲೀಂ ಬಹುತ ಮುಸುಕಾತಾ ॥ ೧ ॥**
**ದಚ್ಛ ನ ಕಛು ಪೂಛೀ ಕುಸಲಾತಾ । ಸತಿಹಿ ಬಿಲೋಕಿ ಜರೇ ಸಬ ಗಾತಾ ॥**
**ಸತೀಂ ಜಾಇ ದೇಖೆಉ ತಬ ಜಾಗಾ । ಕತಹುಁ ನ ದೀಖ ಸಂಭು ಕರ ಭಾಗಾ ॥ ೨ ॥**
**ತಬ ಚಿತ ಚಢೆಉ ಜೊ ಸಂಕರ ಕಹೆಊ । ಪ್ರಭು ಅಪಮಾನು ಸಮುಝಿ ಉರ ದಹೆಊ ॥**
**ಪಾಛಿಲ ದುಖು ನ ಹೃದಯಁ ಅಸ ಬ್ಯಾಪಾ । ಜಸ ಯಹ ಭಯಉ ಮಹಾ ಪರಿತಾಪಾ ॥ ೩ ॥**
**ಜದ್ಯಪಿ ಜಗ ದಾರುನ ದುಖ ನಾನಾ । ಸಬ ತೇಂ ಕಠಿನ ಜಾತಿ ಅವಮಾನಾ ॥**
**ಸಮುಝಿ ಸೊ ಸತಿಹಿ ಭಯಉ ಅತಿ ಕ್ರೋಧಾ । ಬಹು ಬಿಧಿ ಜನನೀಂ ಕೀನ್ಹ ಪ್ರಬೋಧಾ ॥ ೪ ॥**

ಭವಾನಿಯು ತನ್ನ ತಂದೆಯ ಮನೆಗೆ ಹೋದಾಗ, ದಕ್ಷನಿಗೆ ಹೆದರಿ ಯಾರೂ ಆಕೆಯನ್ನು ಸ್ವಾಗತಿಸಲಿಲ್ಲ, ಸತ್ಕರಿಸಲಿಲ್ಲ, ತಾಯಿಯು ಮಾತ್ರ ಮಗಳನ್ನು ಆದರದಿಂದ ಕಂಡಳು. ಅಕ್ಕ ತಂಗಿಯರೆಲ್ಲ ಮುಗುಳ್ನಗೆ ಬೀರಿ, ಪರಿಹಾಸದಿಂದ ಹಲ್ಕಿರಿದರು. ದಕ್ಷನು ಆಕೆಯಲ್ಲಿ ಕ್ಷೇಮಸಮಾಚಾರವನ್ನೂ ಕೂಡ ವಿಚಾರಿಸಲಿಲ್ಲ. ಸತಿದೇವಿಯನ್ನು ನೋಡಿ ಸಿಟ್ಟಿನಿಂದ ಅವನ ಮೈಯೆಲ್ಲ ಉರಿಯಿತು. ಸತಿಯು ಯಜ್ಞಶಾಲೆಗೆ ಹೋಗಿ ನೋಡಿದಾಗ, ಅಲ್ಲಿ ಶಂಭುವಿಗೆ ಹವಿರ್ಭಾಗ ಕೊಟ್ಟಿರಲಿಲ್ಲ. ಆಗ ಆಕೆಗೆ ಗಂಡ ಹೇಳಿದ ಮಾತು ನೆನಪಾಯಿತು. ತನ್ನ ಸ್ವಾಮಿಗೆ ಆದ ಅಪಮಾನವನ್ನು ಕಂಡು, ಆಕೆಯ ಒಡಲು ಉರಿದುಹೋಯಿತು. ಪತಿಯ ಅಪಮಾನದಿಂದ ಉಂಟಾದ ದುಃಖವು, ಅವಳಿಗೆ ತನ್ನನ್ನು ಪರಿತ್ಯಜಿಸಿದ ದುಃಖಕ್ಕಿಂತಲೂ ಎಷ್ಟೋ ಹೆಚ್ಚಾಗಿತ್ತು. ಜಗತ್ತಿನಲ್ಲಿ ಅನೇಕ ವಿಧವಾದ ದಾರುಣದುಃಖಗಳು ಇವೆ. ಆದರೆ ಸ್ವಜನ ಅಪಮಾನದಂತಹ ದುರ್ಭರವಾದ ದುಃಖವು ಇನ್ನೊಂದಿಲ್ಲ. ಇದನು ಯೋಚಿಸಿದಾಗಲಂತೂ ಸತಿಯ ಕೋಪವು ಮೇರೆಮೀರಿತು. ಅವಳ ಸಿಟ್ಟನ್ನು ಕಂಡ ತಾಯಿಯು ಅವಳಿಗೆ ಅನೇಕ ರೀತಿಯಲ್ಲಿ ಸಮಾಧಾನ ಹೇಳಿದಳು. (ಚೌ/೧-೪)

**ದೋ – ಸಿವ ಅಪಮಾನು ನ ಜಾಇ ಸಹಿ ಹೃದಯಁ ನ ಹೋಇ ಪ್ರಬೋಧ ।**
**ಸಕಲ ಸಭಹಿ ಹಠಿ ಹಟಕಿ ತಬ ಬೋಲೀಂ ಬಚನ ಸಕ್ರೋಧ ॥ ೬೩ ॥**

ಆದರೆ ಶಿವನ ಅಪಮಾನವನ್ನು ಅವಳು ತಡೆಯದಾದಳು. ಮನಸ್ಸಿಗೆ ಏನೂ ತೋಚಲಿಲ್ಲ. ಅದರಿಂದ ತಾಯಿಯ ಮಾತುಗಳು ಅವಳ ಮೇಲೆ ಯಾವುದೇ ಪ್ರಭಾವ ಬೀರದೆ ಹೋದವು. ಯಜ್ಞಕಾರ್ಯದಲ್ಲಿ ತೊಡಗಿದ್ದ ಇಡೀ ಸಭೆಯನ್ನು ಜರೆದು ಜಂಕಿಸುತ್ತಾ ಹೇಳಿದಳು – (ದೋ/೬೩)

**ಚೌ – ಸುನಹು ಸಭಾಸದ ಸಕಲ ಮುನಿಂದಾ । ಕಹೀ ಸುನೀ ಜಿನ್ಹ ಸಂಕರ ನಿಂದಾ ॥**
**ಸೋ ಫಲು ತುರತ ಲಹಬ ಸಬ ಕಾಹೂಁ । ಭಲೀ ಭಾಁತಿ ಪಛಿತಾಬ ಪಿತಾಹೂಁ ॥ ೧ ॥**
**ಸಂತ ಸಂಭು ಶ್ರೀಪತಿ ಅಪಬಾದಾ । ಸುನಿಅ ಜಹಾಁ ತಹಁ ಅಸಿ ಮರಜಾದಾ ॥**
**ಕಾಟಿಅ ತಾಸು ಜೀಭ ಜೊ ಬಸಾಈ । ಶ್ರವನ ಮೂದಿ ನ ತ ಚಲಿಅ ಪರಾಈ ॥ ೨ ॥**

**ಜಗದಾತಮಾ ಮಹೇಸು ಪುರಾರೀ । ಜಗತ ಜನಕ ಸಬ ಕೇ ಹಿತಕಾರೀ ॥**
**ಪಿತಾ ಮಂದಮತಿ ನಿಂದತ ತೇಹೀ । ದಚ್ಛ ಸುಕ್ರ ಸಂಭವ ಯಹ ದೇಹೀ ॥ ೩ ॥**
**ತಜಿಹಉँ ತುರತ ದೇಹ ತೆಹಿ ಹೇತೂ । ಉರ ಧರಿ ಚಂದ್ರಮೌಲಿ ಬೃಷಕೇತೂ ॥**
**ಅಸ ಕಹಿ ಜೋಗ ಅಗಿನಿ ತನು ಜಾರಾ । ಭಯಉ ಸಕಲ ಮಖ ಹಾಹಾಕಾರಾ ॥ ೪ ॥**

''ಎಲೈ ಸಭಾಸದರೇ! ಮುನಿಗಳೇ! ಕೇಳಿರಿ. ಶಿವನನ್ನು ನಿಂದಿಸುವವರು, ಅದನ್ನು ಕೇಳಿದವರೆಲ್ಲರೂ ಅದರ ದುಷ್ಫಲವನ್ನು ಬೇಗನೇ ಅನುಭವಿಸುವರು. ನನ್ನ ತಂದೆ ದಕ್ಷಪ್ರಜಾಪತಿಯೂ ಕೂಡ ಪಶ್ಚಾತ್ತಾಪಪಡಲೇಬೇಕಾಗುತ್ತದೆ. ಸಜ್ಜನರು, ಶಂಕರ ಹಾಗೂ ನಾರಾಯಣ ಇವರ ನಿಂದೆ ಕಿವಿಗೆ ಬಿದ್ದಾಕ್ಷಣ, ನಮ್ಮ ಕೈನಡೆದರೆ ಆ ನಿಂದಕನ ನಾಲಿಗೆ ಕತ್ತರಿಸಿಬಿಡಬೇಕು. ಇಲ್ಲದಿದ್ದರೆ ಕಿವಿಗಳನ್ನು ಮುಚ್ಚಿಕೊಂಡು ಆ ಸ್ಥಳದಿಂದ ದೂರಹೋಗಬೇಕು. ತ್ರಿಪುರಾಂತಕನಾದ ಪರಮೇಶ್ವರನೇ ಜಗದಾತ್ಮನೂ, ಜಗತ್ಪಿತನೂ, ಎಲ್ಲರ ಹಿತಕಾರಿಯೂ ಆಗಿರುವನು. ಮಂದಮತಿಯಾದ ನನ್ನ ತಂದೆಯು ಇಂತಹ ಪರಶಿವನನ್ನು ನಿಂದಿಸುತ್ತಿದ್ದಾನೆ. ನನ್ನ ಈ ಶರೀರವು ಅದೇ ದಕ್ಷನಿಂದಾಗಿ ಹುಟ್ಟಿದುದು. ಆದ್ದರಿಂದ ಚಂದ್ರಮೌಳಿಯೂ, ವೃಷಭಧ್ವಜನೂ ಆದ ಪರಶಿವನನ್ನು ಹೃದಯದಲ್ಲಿ ಧ್ಯಾನಿಸುತ್ತಾ ನಾನು ಈ ಶರೀರವನ್ನು ಈಗಲೇ ವಿಸರ್ಜಿಸುತ್ತೇನೆ.'' ಹೀಗೆ ಹೇಳಿ ಸತಿದೇವಿಯು ಯೋಗಾಗ್ನಿಯಿಂದ ತನ್ನ ಶರೀರವನ್ನು ಭಸ್ಮಗೊಳಿಸಿದಳು. ಅದನ್ನು ನೋಡಿ ಯಜ್ಞಶಾಲೆಯಲ್ಲಿ ಹಾಹಾಕಾರವೆದ್ದಿತು.(ಚೌ/೧-೪)

**ದೋ – ಸತೀ ಮರನು ಸುನಿ ಸಂಭು ಗನ ಲಗೇ ಕರನ ಮಖ ಖೀಸ ।**
**ಜಗ್ಯ ಬಿಧಂಸ ಬಿಲೋಕಿ ಭೃಗು ರಚ್ಛಾ ಕೀನ್ಹಿ ಮುನೀಸ ॥ ೬೪ ॥**

ದಾಕ್ಷಾಯಣಿಯ ದೇಹತ್ಯಾಗ ದೃಶ್ಯವನ್ನು ಕಂಡ, ಶಿವನ ಪ್ರಮಥಾದಿ ಗಣಗಳು ಸಿಟ್ಟಿನಿಂದ ಯಜ್ಞವನ್ನು ಧ್ವಂಸಮಾಡತೊಡಗಿದರು. ಯಜ್ಞಧ್ವಂಸವನ್ನು ನೋಡಲಾಗದೆ ಭೃಗುಮುನಿಗಳು ಅದನ್ನು ರಕ್ಷಿಸಿದರು. (ದೋ/೬೪)

**ಚೌ – ಸಮಾಚಾರ ಸಬ ಸಂಕರ ಪಾಏ । ಬೀರಭದ್ರು ಕರಿ ಕೋಪ ಪಠಾಏ ॥**
**ಜಗ್ಯ ಬಿಧಂಸ ಜಾಇ ತಿನ್ಹ ಕೀನ್ಹಾ । ಸಕಲ ಸುರನ್ಹ ಬಿಧಿವತ ಫಲು ದೀನ್ಹಾ ॥ ೧ ॥**
**ಭೈ ಜಗಬಿದಿತ ದಚ್ಛ ಗತಿ ಸೋಈ । ಜಸಿ ಕಛು ಸಂಭು ಬಿಮುಖ ಕೈ ಹೋಈ ॥**
**ಯಹ ಇತಿಹಾಸ ಸಕಲ ಜಗ ಜಾನೀ । ತಾತೇ ಮೈँ ಸಂಛೇಪ ಬಖಾನೀ ॥ ೨ ॥**

ಈ ಸಮಾಚಾರವನ್ನು ಕೇಳಿದ ಶಿವನು ಭಾರೀ ಸಿಟ್ಟುಗೊಂಡು ವೀರಭದ್ರನನ್ನು ಸೃಷ್ಟಿಸಿ ಅಲ್ಲಿಗೆ ಕಳಿಸಿದನು. ಅವನು ಯಜ್ಞವನ್ನು ಧ್ವಂಸಗೊಳಿಸಿದನು ಹಾಗೂ ಅಲ್ಲಿನೆರೆದ ಎಲ್ಲ ದೇವತೆಗಳಿಗೆ, ಮುನಿಗಳಿಗೆ ತಕ್ಕ ಶಾಸ್ತಿ ಮಾಡಿದನು. ಶಿವದ್ರೋಹಿಗೆ ಆಗಬೇಕಾದ ಜಗತ್ಪ್ರಸಿದ್ಧ ಗತಿಯೇ ದಕ್ಷನಿಗೂ ಆಯಿತು. ಈ ಇತಿಹಾಸವು ಜಗದ್ವಿದಿತ. ಆದ್ದರಿಂದ ಈ ವೃತ್ತಾಂತವನ್ನು ನಾನು ಸಂಕ್ಷೇಪವಾಗಿ ವರ್ಣಿಸಿರುವೆನು, ಎಂದು ತುಳಸೀದಾಸರು ಹೇಳುತ್ತಾರೆ. (ಚೌ/೧-೨)

## ಪಾರ್ವತಿಯ ಜನನ

**ಚೌ – ಸತೀँ ಮರತ ಹರಿ ಸನ ಬರು ಮಾಗಾ । ಜನಮ ಜನಮ ಸಿವ ಪದ ಅನುರಾಗಾ ॥**
**ತೆಹಿ ಕಾರನ ಹಿಮಗಿರಿ ಗೃಹ ಜಾಈ । ಜನಮೀँ ಪಾರಬತೀ ತನು ಪಾಈ ॥ ೩ ॥**
**ಜಬ ತೇँ ಉಮಾ ಸೈಲ ಗೃಹ ಜಾಈँ । ಸಕಲ ಸಿದ್ಧಿ ಸಂಪತಿ ತಹँ ಛಾಈँ ॥**
**ಜಹँ ತಹँ ಮುನಿನ್ಹ ಸುಆಶ್ರಮ ಕೀನ್ಹೇ । ಉಚಿತ ಬಾಸ ಹಿಮ ಭೂಧರ ದೀನ್ಹೇ ॥ ೪ ॥**

ಸತಿದೇವಿಯು ದೇಹತ್ಯಾಗ ಮಾಡುವಾಗ ತನಗೆ ಜನ್ಮಜನ್ಮಾಂತರಗಳಲ್ಲಿಯೂ ಶಿವಚರಣಾನುರಾಗವು ಉಂಟಾಗಲೀ ಎಂದು ಶ್ರೀಹರಿಯಲ್ಲಿ ಪ್ರಾರ್ಥಿಸಿದ್ದಳು. ಆದ್ದರಿಂದ ಆಕೆಯು ಹಿಮವಂತನ ಮನೆಯಲ್ಲಿ ಪಾರ್ವತಿಯಾಗಿ ಅವತರಿಸಿದಳು. ಅವಳು ಅವತರಿಸಿದಂದಿನಿಂದ ಆ ಪ್ರದೇಶದಲ್ಲಿ ಸಕಲ ಸಿದ್ಧಿಗಳೂ, ಸಂಪತ್ತುಗಳೂ ತುಂಬಿ ತುಳುಕಾಡಿದವು. ಮುನಿಗಳು ಆ ಹಿಮಗಿರಿಯಲ್ಲಿ ಸುಂದರವಾದ ಆಶ್ರಮಗಳನ್ನು ನಿರ್ಮಿಸಿಕೊಂಡರು. ಹಿಮವಂತನು ಕೂಡ ಅವರಿಗೆ ಯಥೋಚಿತ ಸ್ಥಾನವನ್ನು ಕಲ್ಪಿಸಿಕೊಟ್ಟನು. (ಚೌ/೩-೪)

**ದೋ – ಸದಾ ಸುಮನ ಫಲ ಸಹಿತ ಸಬ ದ್ರುಮ ನವ ನಾನಾ ಜಾತಿ ।**
**ಪ್ರಗಟೀँ ಸುಂದರ ಸೈಲ ಪರ ಮನಿ ಆಕರ ಬಹು ಭಾँತಿ ॥ ೬೫ ॥**

ಆ ಮಹೋನ್ನತ ದಿವ್ಯ ಪರ್ವತದಲ್ಲಿ ಹಲವು ವಿಧವಾದ ಫಲ-ಪುಷ್ಪಗಳಿಂದ ಭರಿತವಾದ ವೃಕ್ಷಗಳು ಶೋಭಿಸುತ್ತಿದ್ದವು. ಅದರಲ್ಲಿ ಅನೇಕ ರೀತಿಯ ರತ್ನಗಳ ಗಣಿಗಳು ಮೈದೋರಿದವು. (ದೋ/೬೫)

**ಚೌ –** **ಸರಿತಾ ಸಬ ಪುನೀತ ಜಲು ಬಹಹೀಂ । ಖಗ ಮೃಗ ಮಧುಪ ಸುಖೀ ಸಬ ರಹಹೀಂ ॥**
**ಸಹಜ ಬಯರು ಸಬ ಜೀವನ್ಹ ತ್ಯಾಗಾ । ಗಿರಿ ಪರ ಸಕಲ ಕರಹಿಂ ಅನುರಾಗಾ ॥ ೧ ॥**
**ಸೋಹ ಸೈಲ ಗಿರಿಜಾ ಗೃಹ ಆಏಂ । ಜಿಮಿ ಜನು ರಾಮಭಗತಿ ಕೇ ಪಾಏಂ ॥**
**ನಿತ ನೂತನ ಮಂಗಲ ಗೃಹ ತಾಸೂ । ಬ್ರಹ್ಮಾದಿಕ ಗಾವಹಿಂ ಜಸು ಜಾಸೂ ॥ ೨ ॥**
**ನಾರದ ಸಮಾಚಾರ ಸಬ ಪಾಏ । ಕೌತುಕಹೀಂ ಗಿರಿ ಗೇಹ ಸಿಧಾಏ ॥**
**ಸೈಲರಾಜ ಬಡ ಆದರ ಕೀನ್ಹಾ । ಪದ ಪಖಾರಿ ಬರ ಆಸನು ದೀನ್ಹಾ ॥ ೩ ॥**
**ನಾರಿ ಸಹಿತ ಮುನಿ ಪದ ಸಿರು ನಾವಾ । ಚರನ ಸಲಿಲ ಸಬು ಭವನು ಸಿಂಚಾವಾ ॥**
**ನಿಜ ಸೌಭಾಗ್ಯ ಬಹುತ ಗಿರಿ ಬರನಾ । ಸುತಾ ಬೋಲಿ ಮೇಲೀ ಮುನಿ ಚರನಾ ॥ ೪ ॥**

ಅಲ್ಲಿಯ ಎಲ್ಲ ನದಿಗಳಲ್ಲಿಯೂ ಪವಿತ್ರ ಜಲವು ಹರಿಯತೊಡಗಿತು. ಪಶುಪಕ್ಷಿಗಳೂ, ತುಂಬಿಗಳೂ, ಸುಖವಾಗಿ ಸುಳಿಯತೊಡಗಿದವು. ಅಲ್ಲಿ ಜೀವಿಗಳು ತಮ್ಮ ಸಹಜವೈರಭಾವವನ್ನು ಮರೆತು ಪರಸ್ಪರ ಪ್ರೇಮದಿಂದ ಇರತೊಡಗಿದವು. ಗಿರಿಜಾದೇವಿಯು ಹುಟ್ಟಿದಂದಿನಿಂದ ಹಿಮವಂತನು ಶ್ರೀರಾಮಭಕ್ತಿಯನ್ನು ಪಡೆದ ಭಕ್ತನು ವಿರಾಜಿಸುವಂತೆ ಆನಂದಭರಿತನಾದನು. ಆ ಪರ್ವತರಾಜನ ಮನೆಯಲ್ಲಿ ನಿತ್ಯವೂ ಹೊಸ-ಹೊಸ ಮಂಗಳೋತ್ಸವಗಳು ನಡೆಯತೊಡಗಿದವು. ಬ್ರಹ್ಮಾದಿದೇವತೆಗಳು ಹಿಮಾಲಯದ ಕೀರ್ತಿಯನ್ನು ಗಾನಮಾಡತೊಡಗಿದರು. ನಾರದ ಮಹರ್ಷಿಗಳು ಈ ವಿಷಯವನ್ನು ಅರಿತು ಮಾನಸೋಲ್ಲಾಸದಿಂದ ಹಿಮವಂತನ ಮನೆಗೆ ಬಿಜಯಂಗೈದರು. ಪರ್ವತರಾಜನು ಅವರನ್ನು ಆದರದಿಂದ ಬರಮಾಡಿಕೊಂಡು ಅರ್ಘ್ಯಪಾದ್ಯಗಳನ್ನು ಇತ್ತು, ಉತ್ತಮಾಸನದಲ್ಲಿ ಕುಳ್ಳಿರಿಸಿದನು. ತನ್ನ ಪತ್ನಿಯಾದ ಮೈನಾದೇವಿಯಿಂದೊಡಗೂಡಿ, ಮುನಿಯ ಕಾಲಿಗೆರಗಿದನು. ಅವರ ಚರಣೋದಕವನ್ನು ಮನೆಯಲ್ಲೆಲ್ಲ ಸಿಂಪಡಿಸಿದನು. ಹಿಮವಂತನು ತನ್ನ ಸೌಭಾಗ್ಯವನ್ನು ಹೆಮ್ಮೆಯಿಂದ ಬಣ್ಣಿಸಿಕೊಂಡು, ತನ್ನ ಮುದ್ದುಮಗಳನ್ನು ಕರೆತಂದು ಮುನಿಯ ಪಾದಗಳಲ್ಲಿ ಕೆಡವಿದನು. (ಚೌ/೧-೪)

**ದೋ – ತ್ರಿಕಾಲಗ್ಯ ಸರ್ಬಗ್ಯ ತುಮ್ಹ ಗತಿ ಸರ್ಬತ್ರ ತುಮ್ಹಾರಿ ।**
**ಕಹಹು ಸುತಾ ಕೇ ದೋಷ ಗುನ ಮುನಿಬರ ಹೃದಯಂ ಬಿಚಾರಿ ॥ ೬೬ ॥**

ಅನಂತರ ಹಿಮವಂತನು ನಾರದರಲ್ಲಿ ವಿನಂತಿಸಿಕೊಂಡನು – ಮುನಿವರ್ಯ! ನೀವು ಸರ್ವಜ್ಞರೂ, ತ್ರಿಕಾಲಜ್ಞರೂ, ತ್ರಿಲೋಕಸಂಚಾರಿಗಳೂ ಆಗಿರುವಿರಿ. ಅದ್ದರಿಂದ ಚೆನ್ನಾಗಿ ಯೋಚಿಸಿ, ಈ ಕುಮಾರಿಕೆಯ ಗುಣದೋಷಗಳನ್ನು ದಯವಿಟ್ಟು ತಿಳಿಸಬೇಕು. (ದೋ/೬೬)

**ಚೌ –** **ಕಹ ಮುನಿ ಬಿಹಸಿ ಗೂಢ ಮೃದು ಬಾನೀ । ಸುತಾ ತುಮ್ಹಾರಿ ಸಕಲ ಗುನ ಖಾನೀ ॥**
**ಸುಂದರ ಸಹಜ ಸುಸೀಲ ಸಯಾನೀ । ನಾಮ ಉಮಾ ಅಂಬಿಕಾ ಭವಾನೀ ॥ ೧ ॥**
**ಸಬ ಲಚ್ಛನ ಸಂಪನ್ನ ಕುಮಾರೀ । ಹೋಇಹಿ ಸಂತತ ಪಿಯಹಿ ಪಿಆರೀ ॥**
**ಸದಾ ಅಚಲ ಎಹಿ ಕರ ಅಹಿವಾತಾ । ಎಹಿ ತೇಂ ಜಸು ಪೈಹಹಿಂ ಪಿತು ಮಾತಾ ॥ ೨ ॥**
**ಹೋಇಹಿ ಪೂಜ್ಯ ಸಕಲ ಜಗ ಮಾಹೀಂ । ಎಹಿ ಸೇವತ ಕಛು ದುರ್ಲಭ ನಾಹೀಂ ॥**
**ಎಹಿ ಕರ ನಾಮು ಸುಮಿರಿ ಸಂಸಾರಾ । ತ್ರಿಯ ಚಢಿಹಹಿಂ ಪತಿಬ್ರತ ಅಸಿಧಾರಾ ॥ ೩ ॥**
**ಸೈಲ ಸುಲಚ್ಛನ ಸುತಾ ತುಮ್ಹಾರೀ । ಸುನಹು ಜೆ ಅಬ ಅವಗುನ ದುಇ ಚಾರೀ ॥**
**ಅಗುನ ಅಮಾನ ಮಾತು ಪಿತು ಹೀನಾ । ಉದಾಸೀನ ಸಬ ಸಂಸಯ ಛೀನಾ ॥ ೪ ॥**

ಆಗ ನಾರದರು ನಕ್ಕು, ಕೋಮಲವಾಣಿಯಿಂದ ರಹಸ್ಯಯುಕ್ತವಾದ ಮಾತುಗಳನ್ನು ಹೇಳತೊಡಗಿದರು – ಎಲೈ ಗಿರಿರಾಜಾ! ನಿನ್ನ ಮಗಳು ಎಲ್ಲ ಸದ್ಗುಣಗಳ ರಾಶಿ. ಅವಳು ಸಹಜವಾದ ಸೌಂದರ್ಯವತಿಯು. ಸುಶೀಲೆ, ಜಾಣೆ. ಇವಳಿಗೆ ಉಮೆ, ಅಂಬಿಕೆ, ಭವಾನೀ ಮೊದಲಾದ ಹೆಸರುಗಳಿವೆ. ಈ ಸುಕುಮಾರಿಯು ಸರ್ವಸುಲಕ್ಷಣ ಸಂಪನ್ನಳು. ಈಕೆಯು ತನ್ನ ಪತಿಗೆ ಅತ್ಯಂತ ಪ್ರೇಮಪಾತ್ರಳಾಗುವವಳು. ಈಕೆಯ ಮುತ್ತೈದೆತನವು ಅಚಲವಾಗಿರುವುದು. ತಂದೆ-ತಾಯಿಗಳಿಗೆ ಇವಳು ಯಶಸ್ಸನ್ನು ತರುವವಳು. ಇವಳು ಇಡೀ ಜಗತ್ತಿಗೆ ಪೂಜ್ಯಳಾಗುತ್ತಾಳೆ. ಇವಳ ಸೇವೆಯನ್ನು ಮಾಡುವವರಿಗೆ ದುರ್ಲಭವಾದುದು ಯಾವುದೂ ಇಲ್ಲ.

ಪ್ರಪಂಚದಲ್ಲಿ ಇವಳ ನಾಮಸ್ಮರಣೆಮಾಡುವ ಸ್ತ್ರೀಯರೆಲ್ಲರೂ, ಅಸಿಧಾರಾವ್ರತತುಲ್ಯವಾದ ಕಠೋರ ಪಾತಿವ್ರತ್ಯ ಜೀವಿತವನ್ನು ಹೊಂದುವರು. ಎಲೈ ಪರ್ವತರಾಜಾ! ಇಷ್ಟೆಲ್ಲ ಸುಲಕ್ಷಣಗಳು ಈಕೆಯಲ್ಲಿ ಕಂಡು ಬಂದರೂ, ಈಕೆಯ ಹಸ್ತರೇಖೆಯಿಂದ ಕೆಲವು ಅವಗುಣಗಳೂ ಕಂಡುಬರುತ್ತಿವೆ. ಇವಳಿಗೆ ಸಿಗುವ ಪತಿಯು ನಿರ್ಗುಣನೂ, ಅಭಿಮಾನವಿಲ್ಲದವನೂ, ತಂದೆ-ತಾಯಿಯಿಲ್ಲದ ತಬ್ಬಲಿಯೂ, ಉದಾಸೀನನೂ, ಸಂಶಯರಹಿತನೂ – (ಚೌ/೧-೪)

**ದೋ – ಜೋಗೀ ಜಟಿಲ ಅಕಾಮ ಮನ ನಗನ ಅಮಂಗಲ ಬೇಷ ।**
**ಅಸ ಸ್ವಾಮೀ ಏಹಿ ಕಹ್ ಮಿಲಿಹಿ ಪರೀ ಹಸ್ತ ಅಸಿ ರೇಖ ॥ ೬೭ ॥**

ಯೋಗಿಯೂ, ಜಟಾಧಾರಿಯೂ, ನಿಷ್ಕಾಮಹೃದಯನೂ, ದಿಗಂಬರನೂ, ಅಮಂಗಳವೇಷಧಾರಿಯೂ, ಆದ ಈ ಲಕ್ಷಣಗಳಿಂದ ಕೂಡಿದವನಾಗಿರುತ್ತಾನೆ. ಹೀಗೆ ಇವಳ ಕೈಯ ರೇಖೆಗಳು ಹೇಳುತ್ತವೆ. (ದೋ/೬೭)

**ಚೌ – ಸುನಿ ಮುನಿ ಗಿರಾ ಸತ್ಯ ಜಿಯ್ ಜಾನೀ । ದುಖ ದಂಪತಿಹಿ ಉಮಾ ಹರಷಾನೀ ॥**
**ನಾರದಹೂ್ ಯಹ ಭೇದು ನ ಜಾನಾ । ದಸಾ ಏಕ ಸಮುಝುಬ ಬಿಲಗಾನಾ ॥ ೧ ॥**
**ಸಕಲ ಸಖೀ್ ಗಿರಿಜಾ ಗಿರಿ ಮೈನಾ । ಪುಲಕ ಸರೀರ ಭರೇ ಜಲ ನೈನಾ ॥**
**ಹೋಇ ನ ಮೃಷಾ ದೇವರಿಷಿ ಭಾಷಾ । ಉಮಾ ಸೊ ಬಚನು ಹೃದಯ್ ಧರಿ ರಾಖಾ ॥ ೨ ॥**
**ಉಪಜೆಉ ಸಿವ ಪದ ಕಮಲ ಸನೇಹೂ । ಮಿಲನ ಕಠಿನ ಮನ ಭಾ ಸಂದೇಹೂ ॥**
**ಜಾನಿ ಕುಅವಸರು ಪ್ರೀತಿ ದುರಾಈ । ಸಖೀ ಉಛ್ಗ ಬೈಠೀ ಪುನಿ ಜಾಈ ॥ ೩ ॥**
**ಝೂಠಿ ನ ಹೋಇ ದೇವರಿಷಿ ಬಾನೀ । ಸೋಚಹಿ್ ದಂಪತಿ ಸಖೀ್ ಸಯಾನೀ ॥**
**ಉರ ಧರಿ ಧೀರ ಕಹಇ ಗಿರಿರಾಊ । ಕಹಹು ನಾಥ ಕಾ ಕರಿಅ ಉಪಾಊ ॥ ೪ ॥**

ನಾರದ ಮುನಿಗಳ ಮಾತು ಸುಳ್ಳಾಗದು. ಆದ್ದರಿಂದ ಅದನ್ನು ಕೇಳಿದ, ಹಿಮವಂತ ಹಾಗೂ ಅವನ ಪತ್ನೀ ಮೈನಾದೇವಿಗೆ ತುಂಬಾ ದುಃಖವಾಯಿತು. ಆದರೆ ಪಾರ್ವತೀದೇವಿಗೆ ಮಾತ್ರ ಸಂತೋಷವಾಯಿತು. ನಾರದರಿಗೂ ಕೂಡ ಈ ಭೇದವು ತಿಳಿಯದೆ ಹೋಯಿತು. ಏಕೆಂದರೆ, ಎಲ್ಲರ ಹೊರಮುಖ ಒಂದೇ ಆಗಿದ್ದರೂ, ಅಂತರಂಗದ ಭಾವಗಳು ಬೇರೆ-ಬೇರೆಯಾಗಿರುತ್ತವೆ. ಪಾರ್ವತಿದೇವಿ, ಆಕೆಯ ಸಖಿಯರು, ಹಿಮವಂತನು, ಮೈನಾದೇವಿಯು ಹೀಗೆ ಎಲ್ಲರ ಶರೀರಗಳು ಪುಲಕಿತಗಳಾದವು. ಎಲ್ಲರ ಕಣ್ಣುಗಳು ತುಂಬಿಬಂದುವು. ದೇವಋಷಿಯ ಮಾತು ಎಂದಾದರೂ ಸುಳ್ಳಾದೀತೇ? ಎಂದು ಯೋಚಿಸಿ ಪಾರ್ವತಿದೇವಿಯು ಆ ಮಾತುಗಳನ್ನು ತನ್ನ ಹೃದಯದಲ್ಲಿ ಸ್ಥಿರವಾಗಿ ಧರಿಸಿಕೊಂಡಳು. ಆಕೆಗೆ ಶಿವನ ಚರಣಾರವಿಂದಗಳಲ್ಲಿ ಭಕ್ತಿ ಅಂಕುರಿಸಿತು. ಆದರೆ ಅವನನ್ನು ಪಡೆದುಕೊಳ್ಳುವುದು ಕಠಿಣವೆಂದು ಮನಸ್ಸಿನಲ್ಲಿ ಸಂದೇಹ ಉಂಟಾಯಿತು. ಇದು ಸಕಾಲವಲ್ಲವೆಂದು ಬಗೆದು ಉಮೆಯು ತನ್ನ ಪ್ರೇಮವನ್ನು ತೋರ್ಪಡಿಸದೆ ಗುಪ್ತವಾಗಿಟ್ಟುಕೊಂಡು ಸಖಿಯ ಒಡಲು ಸೇರಿದಳು. ದೇವರ್ಷಿಗಳ ವಚನಗಳು ಸಟೆಯಾಗದೆಂದು ಯೋಚಿಸಿ, ಹಿಮವಂತನು, ಮೈನಾದೇವಿಯು ಜಾಣರಾದ ಸಖಿಯರೆಲ್ಲರೂ ಕೊರಗತೊಡಗಿದರು. ಪರ್ವತರಾಜನು ಎದೆಯನ್ನು ಕಲ್ಲುಮಾಡಿಕೊಂಡು ಮುನೀಶ್ವರರಲ್ಲಿ ಕೇಳುತ್ತಾನೆ – ಪೂಜ್ಯರೇ! ನನ್ನ ಮಗಳ ಭವಿಷ್ಯವನ್ನು ತಡೆಯಲು ಏನಾದರೂ ಉಪಾಯವುಂಟೇ? (ಚೌ/೧-೪)

**ದೋ – ಕಹ ಮುನೀಸ ಹಿಮವಂತ ಸುನು ಜೋ ಬಿಧಿ ಲಿಖಾ ಲಿಲಾರ ।**
**ದೇವ ದನುಜ ನರ ನಾಗ ಮುನಿ ಕೋಉ ನ ಮೇಟನಿಹಾರ ॥ ೬೮ ॥**

ನಾರದ ಮಹರ್ಷಿಗಳು ಹೇಳಿದರು – ಪರ್ವತರಾಜಾ! ಬ್ರಹ್ಮದೇವರು ಬರೆದ ಲಲಾಟಲಿಖಿತವನ್ನು ದೇವ-ದಾನವರಾಗಲೀ, ಮನುಷ್ಯರಾಗಲೀ, ನಾಗರು ಆಗಲೀ, ಮುನಿಗಳಾಗಲೀ ಯಾರೂ ಅಳಿಸಲಾರರು. (ದೋ/೬೮)

**ಚೌ – ತದಪಿ ಏಕ ಮೈ್ ಕಹಉ್ ಉಪಾಈ । ಹೋಇ ಕರೈ ಜೌ್ ದೈಉ ಸಹಾಈ ॥**
**ಜಸ ಬರು ಮೈ್ ಬರನೆಉ್ ತುಮ್ಹ ಪಾಹೀ್ । ಮಿಲಿಹಿ ಉಮಹಿ ತಸ ಸಂಸಯ ನಾಹೀ್ ॥ ೧ ॥**
**ಜೇ ಜೇ ಬರ ಕೇ ದೋಷ ಬಖಾನೇ । ತೇ ಸಬ ಸಿವ ಪಹಿ್ ಮೈ್ ಅನುಮಾನೇ ॥**
**ಜೌ್ ಬಿಬಾಹು ಸಂಕರ ಸನ ಹೋಈ । ದೋಷಉ ಗುನ ಸಮ ಕಹ ಸಬು ಕೋಈ ॥ ೨ ॥**
**ಜೌ್ ಅಹಿ ಸೇಜ ಸಯನ ಹರಿ ಕರಹೀ್ । ಬುಧ ಕಛು ತಿನ್ಹ ಕರ ದೋಷು ನ ಧರಹೀ್ ॥**
**ಭಾನು ಕೃಸಾನು ಸರ್ಬ ರಸ ಖಾಹಿ್ । ತಿನ್ಹ ಕಹ್ ಮಂದ ಕಹತ ಕೋಉ ನಾಹೀ್ ॥ ೩ ॥**

**ಸುಭ ಅರು ಅಸುಭ ಸಲಿಲ ಸಬ ಬಹಈ। ಸುರಸರಿ ಕೋಉ ಅಪುನೀತ ನ ಕಹಈ ॥**
**ಸಮರಥ ಕಹುँ ನಹಿँ ದೋಷು ಗೊಸಾಈँ। ರಬಿ ಪಾವಕ ಸುರಸರಿ ಕೀ ನಾಈँ ॥ ೪ ॥**

ಆದರೂ ನಾನು ಒಂದು ಉಪಾಯವನ್ನು ಹೇಳುತ್ತೇನೆ. ದೈವಾನುಕೂಲವಿದ್ದರೆ ಅದು ಸಿದ್ಧಿಸಬಹುದು. ನಾನು ವರ್ಣಿಸಿದ ವರನೇ ಉಮೆಗೆ ಸಿಗುವುದು ಖಂಡಿತ. ಇದರಲ್ಲಿ ಸಂದೇಹವೇ ಇಲ್ಲ. ನಾನು ಹೇಳಿದ ಲಕ್ಷಣಗಳೆಲ್ಲವೂ ಪರಶಿವನಲ್ಲಿ ಇವೆ ಎಂದು ನನಗನಿಸುತ್ತದೆ. ಪರಶಿವನೊಡನೆ ಉಮೆಯ ವಿವಾಹವಾದರೆ, ಆ ದೋಷಗಳೆಲ್ಲವನ್ನೂ ಜನರು ಗುಣವೆಂದೇ ಪರಿಗಣಿಸುತ್ತಾರೆ. ಶ್ರೀ ಮಹಾವಿಷ್ಣುವೂ ಶೇಷನ ಮೇಲೆ ಪವಡಿಸುತ್ತಾನೆ, ಆದರೆ ಪಂಡಿತರು ಅದನ್ನು ದೋಷವೆಂದು ಪರಿಗಣಿಸುವುದಿಲ್ಲ. ಸೂರ್ಯ ಹಾಗೂ ಅಗ್ನಿ ಇವರು ಒಳ್ಳೆಯ-ಕೆಟ್ಟ ಎಲ್ಲ ರಸಗಳನ್ನೂ ಗ್ರಹಿಸುತ್ತಾರೆ. ಆದರೆ ಅವರನ್ನು ಯಾರೂ ನಿಂದಿಸುವುದಿಲ್ಲ. ಗಂಗೆಗೆ ಶುದ್ಧ-ಅಶುದ್ಧ ಎಲ್ಲ ನೀರು ಬಂದು ಸೇರಿದರೂ, ಗಂಗೆಯನ್ನು ಯಾರೂ ಅಪವಿತ್ರವೆಂದು ಭಾವಿಸುವುದಿಲ್ಲ. ಶ್ರೀಹರಿಯಂತೆ, ಸೂರ್ಯಾಗ್ನಿಯಂತೆ, ಗಂಗೆಯಂತೆ ಸಮರ್ಥರಿಗೆ ಯಾವ ದೋಷವೂ ತಟ್ಟಲಾರದು. (ಚೌ/೧-೪)

**ದೋ – ಜೌँ ಅಸ ಹಿಸಿಷಾ ಕರಹಿँ ನರ ಜಡ ಬಿಬೇಕ ಅಭಿಮಾನ ।**
**ಪರಹಿँ ಕಲಪ ಭರಿ ನರಕ ಮಹುँ ಜೀವ ಕಿ ಈಸ ಸಮಾನ ॥ ೬೯ ॥**

ಆದರೆ ಮೂರ್ಖರಾದವರು ಜ್ಞಾನಗರ್ವದಿಂದ ಇಂತಹವರೊಡನೆ ಸ್ಪರ್ಧೆಗಿಳಿದರೆ, ಅವರು ಕಲ್ಪಗಳವರೆಗೆ ನರಕದಲ್ಲಿ ನರಳುತ್ತಾರೆ. ಜೀವಿಯು ಎಂದಾದರೂ ಈಶ್ವರನಂತೆ ಸ್ವತಂತ್ರನಾಗಬಲ್ಲನೇ? (ದೋ/೬೯)

**ಚೌ – ಸುರಸರಿ ಜಲ ಕೃತ ಬಾರುನಿ ಜಾನಾ । ಕಬಹುँ ನ ಸಂತ ಕರಹಿँ ತೆಹಿ ಪಾನಾ ॥**
**ಸುರಸರಿ ಮಿಲೇँ ಸೊ ಪಾವನ ಜೈಸೇँ । ಈಸ ಅನೀಸಹಿ ಅಂತರು ತೈಸೇँ ॥ ೧ ॥**
**ಸಂಭು ಸಹಜ ಸಮರಥ ಭಗವಾನಾ । ಎಹಿ ಬಿಬಾಹँ ಸಬ ಬಿಧಿ ಕಲ್ಯಾನಾ ॥**
**ದುರಾರಾಧ್ಯ ಪೈ ಅಹಹಿँ ಮಹೇಸೂ । ಆಸುತೋಷ ಪುನಿ ಕಿಏँ ಕಲೇಸೂ ॥ ೨ ॥**
**ಜೌँ ತಪು ಕರೈ ಕುಮಾರಿ ತುಮ್ಹಾರೀ । ಭಾವಿಉ ಮೇಟಿ ಸಕಹಿँ ತ್ರಿಪುರಾರೀ ॥**
**ಜದ್ಯಪಿ ಬರ ಅನೇಕ ಜಗ ಮಾಹೀँ । ಎಹಿ ಕಹँ ಸಿವ ತಜಿ ದೂಸರ ನಾಹೀँ ॥ ೩ ॥**
**ಬರ ದಾಯಕ ಪ್ರನತಾರತಿ ಭಂಜನ । ಕೃಪಾಸಿಂಧು ಸೇವಕ ಮನ ರಂಜನ ॥**
**ಇಚ್ಛಿತ ಫಲ ಬಿನು ಸಿವ ಅವರಾಧೇँ । ಲಹಿಅ ನ ಕೋಟಿ ಜೋಗ ಜಪ ಸಾಧೇँ ॥ ೪ ॥**

''ಗಂಗಾಜಲದಿಂದಲೇ ಮಾಡಿದ ಮದಿರೆಯಾಗಿದ್ದರೂ ತಿಳಿದು-ತಿಳಿದು ಸಂತ-ಸಜ್ಜನರಾರೂ ಪಾನಮಾಡರು. ಆದರೆ ಅದೇ ಗಂಗೆಯೊಡನೆ ಬೆರೆತುಹೋದರೆ ಪವಿತ್ರವಾಗುತ್ತದೆ. ಅಂತೆಯೇ ಜೀವಿಯಲ್ಲಿ ಹಾಗೂ ಈಶ್ವರನಲ್ಲಿ ಭೇದವಿದೆ. ಶಿವನು ಸಹಜವಾಗಿಯೇ ಸರ್ವಸಮರ್ಥನು, ಭಗವಂತನು. ಆದ್ದರಿಂದ ಈ ವಿವಾಹವು ಎಲ್ಲ ವಿಧವಾಗಿ ಶುಭಪ್ರದವು. ಆದರೆ ಮಹಾದೇವನ ಆರಾಧನೆ ತುಂಬಾ ಕಠಿಣವಾಗಿದೆ. ಆದರೂ, ಕ್ಲೇಶಪಟ್ಟರೆ ಅವನು ಆಶುತೋಷನು. ಬಹುಬೇಗನೇ ಫಲವನ್ನು ಕೊಟ್ಟುಬಿಡುತ್ತಾನೆ. ನಿನ್ನ ಮಗಳು ಶಿವನಿಗಾಗಿ ತಪಸ್ಸನ್ನಾಚರಿಸಿದರೆ ಆ ತ್ರಿಪುರಾರಿಯು ಭವಿತವ್ಯವನ್ನೂ ಕೂಡ ಅಳಿಸಬಲ್ಲನು. ಪ್ರಪಂಚದಲ್ಲಿ ವರಗಳು ಬೇಕಾದಷ್ಟಿವೆ. ಆದರೆ ಈಕೆಗೆ ಶಿವನನ್ನುಳಿದು ಬೇರಾವ ವರನೂ ಇಲ್ಲ. ಶಿವನು ವರದಾಯಕನು. ಪ್ರಣತಾರ್ತಿಹರ, ಕೃಪಾಸಿಂಧು, ಸೇವಕರ ಮನಸ್ಸನ್ನು ಪ್ರಸನ್ನಗೊಳಿಸುವವನು. ಪರಶಿವನ ಆರಾಧನೆ ಮಾಡದೆ ಕೋಟಿ-ಕೋಟಿ ಯೋಗ-ಜಪ ಮಾಡಿದರೂ ಕೂಡ ಜನರು ಬಯಸಿದ ಫಲವನ್ನು ಹೊಂದಲಾರರು.'' (ಚೌ/೧-೪)

**ದೋ – ಅಸ ಕಹಿ ನಾರದ ಸುಮಿರಿ ಹರಿ ಗಿರಿಜಹಿ ದೀನ್ಹಿ ಅಸೀಸ ।**
**ಹೋಇಹಿ ಯಹ ಕಲ್ಯಾನ ಅಬ ಸಂಸಯ ತಜಹು ಗಿರೀಸ ॥ ೭೦ ॥**

ಈ ವಿಧವಾಗಿ ಹೇಳಿ, ನಾರದ ಮಹರ್ಷಿಗಳು ಶ್ರೀಹರಿಯನ್ನು ಸ್ಮರಿಸುತ್ತಾ, ಪಾರ್ವತಿದೇವಿಯನ್ನು ಆಶೀರ್ವದಿಸಿದರು. ಬಳಿಕ ಪರ್ವತರಾಜಾ! ಭಯವನ್ನು ತೊರೆ. ಎಲ್ಲವೂ ಶುಭವೇ ಆಗುವುದು. (ದೋ/೭೦)

**ಚೌ – ಕಹಿ ಅಸ ಬ್ರಹ್ಮಭವನ ಮುನಿ ಗಯಊ । ಆಗಿಲ ಚರಿತ ಸುನಹು ಜಸ ಭಯಊ ॥**
**ಪತಿಹಿ ಎಕಾಂತ ಪಾಇ ಕಹ ಮೈನಾ । ನಾಥ ನ ಮೈँ ಸಮುಝೇ ಮುನಿ ಬೈನಾ ॥ ೧ ॥**
**ಜೌँ ಘರು ಬರು ಕುಲು ಹೋಇ ಅನೂಪಾ । ಕರಿಅ ಬಿಬಾಹು ಸುತಾ ಅನುರೂಪಾ ॥**
**ನ ತ ಕನ್ಯಾ ಬರು ರಹಉ ಕುಆರೀ । ಕಂತ ಉಮಾ ಮಮ ಪ್ರಾನಪಿಆರೀ ॥ ೨ ॥**

**ಜೌ೦ ನ ಮಿಲಿಹಿ ಬರು ಗಿರಿಜಹಿ ಜೋಗೂ । ಗಿರಿ ಜಡ ಸಹಜ ಕಹಿಹಿ ಸಬು ಲೋಗೂ ॥**
**ಸೋಇ ಬಿಚಾರಿ ಪತಿ ಕರೆಹು ಬಿಬಾಹೂ । ಜೆಹಿಂ ನ ಬಹೋರಿ ಹೋಇ ಉರ ದಾಹೂ ॥ ೩ ॥**
**ಅಸ ಕಹಿ ಪರೀ ಚರನ ಧರಿ ಸೀಸಾ । ಬೋಲೇ ಸಹಿತ ಸನೇಹ ಗಿರೀಸಾ ॥**
**ಬರು ಪಾವಕ ಪ್ರಗಟೈ ಸಸಿ ಮಾಹೀಂ । ನಾರದ ಬಚನು ಅನ್ಯಥಾ ನಾಹೀಂ ॥ ೪ ॥**

ಯಾಜ್ಞವಲ್ಕ್ಯಮಹರ್ಷಿಗಳು ಹೇಳುತ್ತಾರೆ– ನಾರದರು ಹೀಗೆ ಹೇಳಿ ಬ್ರಹ್ಮಲೋಕಕ್ಕೆ ತೆರಳಿದರು. ಮುನಿವರ್ಯಾ! ಮುಂದಿನ ಕಥೆಯನ್ನು ಕೇಳು – ಮೈನಾದೇವಿಯು ತನ್ನ ಪತಿಯ ಬಳಿ ಏಕಾಂತದಲ್ಲಿ ಇಂತೆಂದಳು – ''ಸ್ವಾಮಿ! ಮುನಿಯ ಮಾತು ನನಗೆ ಅರ್ಥವಾಗಲಿಲ್ಲ. ನಮ್ಮ ಮಗಳಿಗೆ ಅನುಕೂಲವಾದ ಮನೆ, ವರ ದೊರೆತರೆ, ಅವನು ಉತ್ತಮಕುಲದವನಾಗಿದ್ದರೆ ಮದುವೆ ಮಾಡಿಬಿಡಿ. ಇಲ್ಲದಿದ್ದರೆ ಅವಳು ಕನ್ಯೆಯಾಗಿಯೇ ಉಳಿಯಲಿ (ಅಯೋಗ್ಯನಾದ ವರನೊಂದಿಗೆ ಅವಳ ಮದುವೆ ಮಾಡಲು ನಾನು ಬಯಸುವುದಿಲ್ಲ.). ಪಾರ್ವತಿಯು ನನಗೆ ಪ್ರಾಣಪ್ರಿಯಳು. ನಮ್ಮ ಗಿರಿಜೆಯ ವಿವಾಹವು ಯೋಗ್ಯವರನೊಂದಿಗೆ ನಡೆಯದಿದ್ದರೆ, ಜನರಾಡಿಕೊಳ್ಳುವರು; ಎಷ್ಟಾದರೂ ಪರ್ವತರಾಜನು ಸಹಜವಾಗಿಯೇ ಜಡ(ಮೂರ್ಖ)ನು. ಹುಟ್ಟುಗುಣ ಎಲ್ಲಿಗೆ ಹೋದೀತು? ಆದ್ದರಿಂದ ಚೆನ್ನಾಗಿ ಯೋಚನೆಮಾಡಿ ಅವಳಿಗೆ ಗಂಡು ಗೊತ್ತುಮಾಡಿ ಮದುವೆಮಾಡಿ. ಆಮೇಲೆ ಚಿಂತಿಸಿದರೆ ಪ್ರಯೋಜನವೇನು?'' ಹೀಗೆ ಹೇಳಿ ಮೈನಾದೇವಿಯು ತನ್ನ ಪತಿಯ ಚರಣಗಳಲ್ಲಿ ಹಣೆಚಾಚಿ ಅಡ್ಡಬಿದ್ದಳು. ಆಗ ಹಿಮವಂತನು ಪ್ರೇಮದಿಂದ ಹೇಳಿದ – ''ಒಂದೊಮ್ಮೆ ಚಂದ್ರನಲ್ಲಿ ಬೆಂಕಿ ಹುಟ್ಟಬಹುದು, ಆದರೆ ನಾರದರ ಮಾತುಗಳು ಮಾತ್ರ ಸುಳ್ಳಾಗದು.'' (ಚೌ/೧-೪)

**ದೋ – ಪ್ರಿಯಾ ಸೋಚು ಪರಿಹರಹು ಸಬು ಸುಮಿರಹು ಶ್ರೀಭಗವಾನ ।**
**ಪಾರಬತಿಹಿ ನಿರಮಯಉ ಜೆಹಿಂ ಸೋಇ ಕರಿಹಿ ಕಲ್ಯಾನ ॥ ೭೧ ॥**

''ಎಲೈ ಪ್ರಿಯೇ! ನಿಶ್ಚಿಂತಳಾಗಿ ಭಗವಂತನನ್ನು ಸ್ಮರಿಸು. ಪಾರ್ವತಿಯನ್ನು ಸೃಷ್ಟಿಸಿದಾತನೇ ಅವಳಿಗೆ ಶ್ರೇಯಸ್ಸನ್ನು ಮಾಡುವನು. (ದೋ/೭೧)

**ಚೌ – ಅಬ ಜೌಂ ತುಮ್ಹಹಿ ಸುತಾ ಪರ ನೇಹೂ । ತೌ ಅಸ ಜಾಇ ಸಿಖಾವನು ದೇಹೂ ॥**
**ಕರೈ ಸೊ ತಪು ಜೆಹಿಂ ಮಿಲಹಿಂ ಮಹೇಸೂ । ಆನ ಉಪಾಯ್ಂ ನ ಮಿಟಿಹಿ ಕಲೇಸೂ ॥ ೧ ॥**
**ನಾರದ ಬಚನ ಸಗರ್ಭ ಸಹೇತೂ । ಸುಂದರ ಸಬ ಗುನ ನಿಧಿ ಬೃಷಕೇತೂ ॥**
**ಅಸ ಬಿಚಾರಿ ತುಮ್ಹ ತಜಹು ಅಸಂಕಾ । ಸಬಹಿ ಭಾಂತಿ ಸಂಕರು ಅಕಲಂಕಾ ॥ ೨ ॥**
**ಸುನಿ ಪತಿ ಬಚನ ಹರಷಿ ಮನ ಮಾಹೀಂ । ಗಈ ತುರತ ಉಠಿ ಗಿರಿಜಾ ಪಾಹೀಂ ॥**
**ಉಮಹಿ ಬಿಲೋಕಿ ನಯನ ಭರೆ ಬಾರೀ । ಸಹಿತ ಸನೇಹ ಗೋದ ಬೈಠಾರೀ ॥ ೩ ॥**
**ಬಾರಹಿಂ ಬಾರ ಲೇತಿ ಉರ ಲಾಈ । ಗದಗದ ಕಂಠ ನ ಕಛು ಕಹಿ ಜಾಈ ॥**
**ಜಗತ ಮಾತು ಸರ್ಬಗ್ಯ ಭವಾನೀ । ಮಾತು ಸುಖದ ಬೋಲೀಂ ಮೃದು ಬಾನೀ ॥ ೪ ॥**

ನಿನಗೆ ಮಗಳ ಮೇಲೆ ಅಷ್ಟೊಂದು ಪ್ರೇಮವಿದ್ದರೆ, ಶಿವನನ್ನು ಒಲಿಸಿಕೊಳ್ಳಲು ತಪಸ್ಸುಮಾಡುವಂತೆ ಅವಳಿಗೆ ಹೇಳು. ಬೇರಾವ ಉಪಾಯದಿಂದಲೂ ಕ್ಲೇಶವು ಅಳಿಯದು. ನಾರದರ ವಚನಗಳು ರಹಸ್ಯಪೂರ್ಣವೂ, ಸಕಾರಣವೂ ಆಗಿವೆ. ಋಷಭಧ್ವಜ ಶಿವನು ಅತಿಸುಂದರನು. ಸಕಲಸದ್ಗುಣ ಸಂಪನ್ನನು. ಎಲ್ಲ ವಿಧದಿಂದಲೂ ನಿಷ್ಕಳಂಕನು. ಈ ವಿಷಯವನ್ನು ಗ್ರಹಿಸಿ ನೀನು ಸಂದೇಹವನ್ನು ತೊರೆ.'' ಪತಿಯ ಮಾತಿನಿಂದ ಮೈನಾದೇವಿಯು ಹೆಚ್ಚಿನ ಸಂತಸಗೊಂಡಳು. ಕೂಡಲೇ ಪಾರ್ವತಿಯ ಬಳಿಗೆ ಹೋದಳು. ಪಾರ್ವತಿಯನ್ನು ಕಂಡು ಆಕೆಯ ಕಣ್ಣುಗಳು ತುಂಬಿ ಬಂದವು. ಆ ಮುದ್ದು ಮಗಳನ್ನು ತನ್ನ ಮಡಿಲಲ್ಲಿ ಕುಳ್ಳಿರಿಸಿಕೊಂಡು, ಪದೇ-ಪದೇ ಆಕೆಯನ್ನು ಎದೆಗಪ್ಪಿಕೊಂಡಳು. ಪ್ರೇಮದಿಂದ ಮೈನಾದೇವಿಯ ಕೊರಳು ಕಟ್ಟಿತು. ಬಾಯಿಂದ ಮಾತೇ ಹೊರಡದಾಯಿತು. ಜಗಜ್ಜನನಿ ಭವಾನಿಯು ಸರ್ವಜ್ಞಳಲ್ಲವೇ? ಆಕೆ ತಾಯಿಯ ಸ್ಥಿತಿಯನ್ನರಿತು ಆಕೆಗೆ ಸುಖವುಂಟಾಗುವಂತೆ ಮೃದುಮಧುರಮಾತುಗಳಿಂದ ಇಂತೆಂದಳು – (ಚೌ/೧-೪)

## ಪಾರ್ವತಿಯ ತಪಸ್ಸು

**ದೋ – ಸುನಹಿ ಮಾತು ಮೈಂ ದೀಖ ಅಸ ಸಪನ ಸುನಾವಉಂ ತೋಹಿ ।**
**ಸುಂದರ ಗೌರ ಸುಬಿಪ್ರಬರ ಅಸ ಉಪದೇಸೆಉ ಮೋಹಿ ॥ ೭೨ ॥**

ಅಮ್ಮಾ! ಕೇಳು. ನಾನು ನೋಡಿದ ಸ್ವಪ್ನವೃತ್ತಾಂತವನ್ನು ಹೇಳುತ್ತೇನೆ. ಕನಸಿನಲ್ಲಿ ಓರ್ವಸುಂದರನಾದ, ಗೌರವರ್ಣದ ಬ್ರಾಹ್ಮಣೋತ್ತಮನು ನನಗೆ ಹೀಗೆ ಉಪದೇಶಿಸಿದನು – (ದೋ/೭೨)

**ಚೌ – ಕರಹಿ ಜಾಇ ತಪು ಸೈಲಕುಮಾರೀ । ನಾರದ ಕಹಾ ಸೊ ಸತ್ಯ ಬಿಚಾರೀ ॥**
**ಮಾತು ಪಿತಹಿ ಪುನಿ ಯಹ ಮತ ಭಾವಾ । ತಪು ಸುಖಪ್ರದ ದುಖ ದೋಷ ನಸಾವಾ ॥ ೧ ॥**
**ತಪಬಲ ರಚಇ ಪ್ರಪಂಚು ಬಿಧಾತಾ । ತಪಬಲ ಬಿಷ್ನು ಸಕಲ ಜಗ ತ್ರಾತಾ ॥**
**ತಪಬಲ ಸಂಭು ಕರಹಿಂ ಸಂಘಾರಾ । ತಪಬಲ ಸೇಷು ಧರಇ ಮಹಿಭಾರಾ ॥ ೨ ॥**
**ತಪ ಅಧಾರ ಸಬ ಸೃಷ್ಟಿ ಭವಾನೀ । ಕರಹಿ ಜಾಇ ತಪು ಅಸ ಜಿಯಂ ಜಾನೀ ॥**
**ಸುನತ ಬಚನ ಬಿಸಮಿತ ಮಹತಾರೀ । ಸಪನ ಸುನಾಯಉ ಗಿರಿಹಿ ಹಁಕಾರೀ ॥ ೩ ॥**
**ಮಾತು ಪಿತಹಿ ಬಹುಬಿಧಿ ಸಮುಝಾಈ । ಚಲೀಂ ಉಮಾ ತಪ ಹಿತ ಹರಷಾಈ ॥**
**ಪ್ರಿಯ ಪರಿವಾರ ಪಿತಾ ಅರು ಮಾತಾ । ಭಏ ಬಿಕಲ ಮುಖ ಆವ ನ ಬಾತಾ ॥ ೪ ॥**

''ಹೇ ಶೈಲಕುಮಾರೀ! ನಾರದರು ಹೇಳಿದ ಮಾತು ತ್ರಿಕಾಲದಲ್ಲೂ ಸತ್ಯವಾದವುಗಳೆಂದು ನಂಬಿ, ನೀನು ಹೋಗಿ ತಪಸ್ಸು ಮಾಡು. ಇದು ನಿಮ್ಮ ತಂದೆ-ತಾಯಿಯರಿಗೂ ಇಷ್ಟವಾಗಿದೆ. ತಪಸ್ಸು ಸುಖವನ್ನುಂಟುಮಾಡುವುದು. ದುಃಖ-ದೋಷಗಳನ್ನು ಕಳೆಯುವಂತಹುದು. ತಪೋಬಲದಿಂದಲೇ ಬ್ರಹ್ಮನು ಸೃಷ್ಟಿಮಾಡುತ್ತಾನೆ. ವಿಷ್ಣುವು ಜಗತ್ತನ್ನು ಪಾಲಿಸುತ್ತಾನೆ. ಶಂಭುವು ರುದ್ರರೂಪದಿಂದ ಲಯಮಾಡುತ್ತಾನೆ. ತಪಃಶಕ್ತಿಯಿಂದಲೇ ಆದಿಶೇಷನು ಭೂಭಾರವನ್ನು ಹೊತ್ತಿದ್ದಾನೆ. ಎಲೈ ಭವಾನೀ! ಈ ಅಖಿಲಸೃಷ್ಟಿಯು ತಪಸ್ಸಿನ ತಳಹದಿಯ ಮೇಲೆಯೇ ನಿಂತಿದೆ. ಇದನ್ನು ತಿಳಿದು ನೀನು ಹೋಗಿ ತಪಸ್ಸು ಮಾಡು.'' ಇದನ್ನು ಕೇಳಿ ಮೈನಾದೇವಿಯು ಆಶ್ಚರ್ಯಗೊಂಡಳು. ಆಕೆಯು ಹಿಮವಂತನಿಗೆ ಉಮೆಯ ಈ ಸ್ವಪ್ನವೃತ್ತಾಂತವನ್ನು ತಿಳಿಸಿದಳು. ತಂದೆ-ತಾಯಿಯರನ್ನು ಅನೇಕ ರೀತಿಯಿಂದ ಒಡಂಬಡಿಸಿ, ಅವರಿಗೆ ಸಮಾಧಾನ ಹೇಳಿ, ತುಂಬು ಹರ್ಷದಿಂದ ಉಮೆಯು ತಪಸ್ಸಿಗೆ ತೆರಳಿದಳು. ಅವಳು ಪ್ರಿಯಜನರೂ, ಪರಿಜನರೂ ಹಾಗೂ ತಂದೆ-ತಾಯಿಗಳು ಆಕೆಯ ನಿರ್ಗಮನದಿಂದ ತುಂಬಾ ವ್ಯಾಕುಲಗೊಂಡರು. ಯಾರ ಬಾಯಲ್ಲೂ ಮಾತೇ ಹೊರಡದಾಯಿತು. (ಚೌ/೧-೪)

**ದೋ – ಬೇದಸಿರಾ ಮುನಿ ಆಇ ತಬ ಸಬಹಿ ಕಹಾ ಸಮುಝಾಇ ।**
**ಪಾರಬತೀ ಮಹಿಮಾ ಸುನತ ರಹೇ ಪ್ರಬೋಧಹಿ ಪಾಇ ॥ ೭೩ ॥**

ಆಗ ವೇದಶಿರನೆಂಬ ಮುನಿಯು ಅಲ್ಲಿಗೆ ಬಂದು ಅವರೆಲ್ಲರನ್ನು ಸಂತೈಸಿದನು. ಪಾರ್ವತಿಯ ಮಹಿಮೆಯನ್ನು ಬಣ್ಣಿಸಿ ಹೇಳಿದನು. ಅದನ್ನು ಕೇಳಿ ಎಲ್ಲರಿಗೂ ಸಮಾಧಾನವಾಯಿತು. (ದೋ/೭೩)

**ಚೌ – ಉರ ಧರಿ ಉಮಾ ಪ್ರಾನಪತಿ ಚರನಾ । ಜಾಇ ಬಿಪಿನ ಲಾಗೀಂ ತಪು ಕರನಾ ॥**
**ಅತಿ ಸುಕುಮಾರ ನ ತನು ತಪ ಜೋಗೂ । ಪತಿ ಪದ ಸುಮಿರಿ ತಜೆಉ ಸಬು ಭೋಗೂ ॥ ೧ ॥**
**ನಿತ ನವ ಚರನ ಉಪಜ ಅನುರಾಗಾ । ಬಿಸರೀ ದೇಹ ತಪಹಿಂ ಮನು ಲಾಗಾ ॥**
**ಸಂಬತ ಸಹಸ ಮೂಲ ಫಲ ಖಾಏ । ಸಾಗು ಖಾಇ ಸತ ಬರಷ ಗವಾಁಏ ॥ ೨ ॥**
**ಕಛು ದಿನ ಭೋಜನು ಬಾರಿ ಬತಾಸಾ । ಕಿಏ ಕಠಿನ ಕಛು ದಿನ ಉಪಬಾಸಾ ॥**
**ಬೆಲ ಪಾತೀ ಮಹಿ ಪರಇ ಸುಖಾಈ । ತೀನಿ ಸಹಸ ಸಂಬತ ಸೋಇ ಖಾಈ ॥ ೩ ॥**
**ಪುನಿ ಪರಿಹರೇ ಸುಖಾನೆಉ ಪರನಾ । ಉಮಹಿ ನಾಮು ತಬ ಭಯಉ ಅಪರನಾ ॥**
**ದೇಖಿ ಉಮಹಿ ತಪ ಖೀನ ಸರೀರಾ । ಬ್ರಹ್ಮಗಿರಾ ಭೈ ಗಗನ ಗಭೀರಾ ॥ ೪ ॥**

ಪಾರ್ವತೀದೇವಿಯು ತನ್ನ ಭಾವೀಪ್ರಾಣಪತಿ ಶಿವನ ಚರಣಗಳನ್ನು ಹೃದಯದಲ್ಲಿ ಧ್ಯಾನಿಸುತ್ತಾ ಕಾಡಿಗೆ ಹೋಗಿ ತಪಸ್ಸು ಮಾಡತೊಡಗಿದಳು. ಆಕೆಯ ಅತ್ಯಂತ ಸುಕುಮಾರವಾದ ದೇಹವು ತಪಸ್ಸಿಗೆ ಯೋಗ್ಯವಲ್ಲದಿದ್ದರೂ, ಆಕೆ ಶಿವನ ಚರಣಕಮಲಗಳನ್ನು ಸ್ಮರಣೆಮಾಡಿ ಎಲ್ಲಾ ವಿಧವಾದ ಭೋಗಗಳನ್ನು ತೊರೆದಳು. ಪ್ರಭುವಿನ ಚರಣಗಳಲ್ಲಿ ಆಕೆಗೆ ನಿತ್ಯನೂತನ ಅನುರಾಗವು ಮೂಡುತ್ತಿತ್ತು. ಆಕೆಯು ದೇಹದ ಪರಿವೆಯಿಲ್ಲದೆ, ಪ್ರೇಮಭಕ್ತಿಯಿಂದ ತಪಸ್ಸು ಮಾಡತೊಡಗಿದಳು. ಒಂದು ಸಾವಿರ ವರ್ಷಗಳವರೆಗೆ ಆಕೆಯು ಕಂದ-ಮೂಲ, ಫಲಗಳನ್ನು ಸೇವಿಸಿದಳು. ಮತ್ತೆ ನೂರು ವರ್ಷಗಳನ್ನು ಕೇವಲ ಎಲೆಗಳನ್ನು ಮಾತ್ರ ಸೇವಿಸಿ ಕಳೆದಳು. ಮತ್ತೆ ಕೆಲವು ದಿನಗಳನ್ನು ನೀರು, ಗಾಳಿಯನ್ನೇ ಸೇವಿಸಿ ಕಳೆದಳು. ಮತ್ತೆ ಕೆಲವು ದಿನಗಳನ್ನು ಉಗ್ರವಾದ ನಿರಾಹಾರದಲ್ಲಿ ಕಳೆದಳು. ಒಣಗಿ ನೆಲಕ್ಕೆ ಬಿದ್ದಿದ್ದ ಬಿಲ್ವಪತ್ರಗಳನ್ನು ಸೇವಿಸಿ ಆಕೆಯು ಮೂರುಸಾವಿರ ವರ್ಷ ಕಳೆದಳು. ಅನಂತರ

ಆ ಶುಷ್ಕಪರ್ಣಗಳನ್ನು ತೊರೆದಳು. ಅದರಿಂದ ಅವಳಿಗೆ 'ಅಪರ್ಣಾ' ಎಂಬ ಹೆಸರಾಯಿತು. ಇಂತಹ ಕಠೋರ ತಪಸ್ಸಿನಿಂದ ಕ್ಷೀಣವಾದ ಅವಳ ಶರೀರವನ್ನು ಕಂಡು ಆಕಾಶದಿಂದ ಬ್ರಹ್ಮವಾಣಿಯೊಂದು ಗಂಭೀರವಾಗಿ ಇಂತು ನುಡಿಯಿತು. (ಚೌ/೧-೪)

**ದೋ – ಭಯಉ ಮನೋರಥ ಸುಫಲ ತವ ಸುನು ಗಿರಿರಾಜಕುಮಾರಿ ।**
**ಪರಿಹರು ದುಸಹ ಕಲೇಸ ಸಬ ಅಬ ಮಿಲಿಹಹಿಂ ತ್ರಿಪುರಾರಿ ॥ ೭೪ ॥**

''ಎಲೈ ಪರ್ವತರಾಜಕುಮಾರೀ! ಕೇಳು ನಿನ್ನ ಮನೋರಥವು ಸಫಲವಾಯಿತು. ಈಗ ನೀನು ಈ ಘೋರವಾದ ತಪಸ್ಸನ್ನು ನಿಲ್ಲಿಸು. ಇನ್ನು ನಿನಗೆ ತ್ರಿಪುರಾರಿಯು ದೊರೆಯುವನು. (ದೋ/೭೪)

**ಚೌ – ಅಸ ತಪು ಕಾಹುँ ನ ಕೀನ್ಹ ಭವಾನೀ । ಭಏ ಅನೇಕ ಧೀರ ಮುನಿ ಗ್ಯಾನೀ ॥**
**ಅಬ ಉರ ಧರಹು ಬ್ರಹ್ಮ ಬರ ಬಾನೀ । ಸತ್ಯ ಸದಾ ಸಂತತ ಸುಚಿ ಜಾನೀ ॥ ೧ ॥**
**ಆವೈ ಪಿತಾ ಬೊಲಾವನ ಜಬಹೀಂ । ಹಠ ಪರಿಹರಿ ಘರ ಜಾಏಹು ತಬಹೀಂ ॥**
**ಮಿಲಹಿಂ ತುಮ್ಹಹಿ ಜಬ ಸಪ್ತರಿಷೀಸಾ । ಜಾನೇಹು ತಬ ಪ್ರಮಾನ ಬಾಗೀಸಾ ॥ ೨ ॥**
**ಸುನತ ಗಿರಾ ಬಿಧಿ ಗಗನ ಬಖಾನೀ । ಪುಲಕ ಗಾತ ಗಿರಿಜಾ ಹರಷಾನೀ ॥**
**ಉಮಾ ಚರಿತ ಸುಂದರ ಮೈಂ ಗಾವಾ । ಸುನಹು ಸಂಭು ಕರ ಚರಿತ ಸುಹಾವಾ ॥ ೩ ॥**
**ಜಬ ತೇಂ ಸತೀಂ ಜಾಇ ತನು ತ್ಯಾಗಾ । ತಬ ತೇಂ ಸಿವ ಮನ ಭಯಉ ಬಿರಾಗಾ ॥**
**ಜಪಹಿಂ ಸದಾ ರಘುನಾಯಕ ನಾಮಾ । ಜಹँ ತಹँ ಸುನಹಿಂ ರಾಮ ಗುನ ಗ್ರಾಮಾ ॥ ೪ ॥**

ಓ ಭವಾನೀ! ಅನೇಕ ತೆರನಾದ ಧೀರರು, ಮುನಿಗಳು, ಜ್ಞಾನಿಗಳು ಆಗಿಹೋಗಿದ್ದಾರೆ. ಆದರೆ ನಿನ್ನಂತಹ ಕಠೋರ ತಪಸ್ಸನ್ನು ಯಾರೂ ಮಾಡಲಿಲ್ಲ. ಸರ್ವಶ್ರೇಷ್ಠವಾದ ಈ ಬ್ರಹ್ಮವಾಕ್ಯವನ್ನು ಸರ್ವದಾ ಸತ್ಯವೆಂದೂ, ನಿರ್ಮಲವೆಂದೂ ಪರಿಗಣಿಸಿ, ನಿನ್ನ ಹೃದಯದಲ್ಲಿ ದೃಢವಾಗಿ ಧರಿಸಿಕೊಂಡಿರು. ನಿನ್ನ ತಂದೆಯು ನಿನ್ನನ್ನು ಕರೆದೊಯ್ಯಲು ಬರುವನು. ಆಗ ಹಟಮಾಡದೆ ಮನೆಗೆ ಮರಳು. ಮುಂದೆ ನಿನಗೆ ಸಪ್ತರ್ಷಿಗಳ ದರ್ಶನವು ಒದಗುವುದು. ಆಗ ಈ ಬ್ರಹ್ಮವಾಣಿಯು ಸತ್ಯವಾಗುವುದು.'' ಆಕಾಶದಲ್ಲಿ ಮೊಳಗಿದ ಬ್ರಹ್ಮವಾಣಿಯನ್ನು ಕೇಳಿ ಗಿರಿಜೆಯು ಪುಳಕಿತಳಾದಳು. ಯಾಜ್ಞವಲ್ಕ್ಯರು ಭಾರದ್ವಾಜರಿಗೆ ಹೇಳುತ್ತಿದ್ದಾರೆ – ಇದುವರೆವಿಗೂ ನಾನು ಪಾರ್ವತಿಯ ಸುಂದರ ಚರಿತ್ರೆಯನ್ನು ವರ್ಣಿಸಿದೆ, ಇನ್ನು ಮುಂದೆ ಶಂಭುವಿನ ಪವಿತ್ರ ಚರಿತ್ರವನ್ನು ಕೇಳು.

ಸತಿದೇವಿಯು ತನ್ನ ಶರೀರವನ್ನು ತ್ಯಜಿಸಿದಂದಿನಿಂದ ಶಂಕರನ ಮನಸ್ಸಿನಲ್ಲಿ ವೈರಾಗ್ಯವು ಹೆಚ್ಚಾಯಿತು. ಅವನು ಸದಾ ರಾಮನಾಮವನ್ನು ಜಪಿಸುತ್ತಾ, ಶ್ರೀರಾಮನ ಗುಣಕೀರ್ತನ ಶ್ರವಣದಲ್ಲೇ ಮಗ್ನನಾದನು. (ಚೌ/೧-೪)

**ದೋ – ಚಿದಾನಂದ ಸುಖಧಾಮ ಸಿವ ಬಿಗತ ಮೋಹ ಮದ ಕಾಮ ।**
**ಬಿಚರಹಿಂ ಮಹಿ ಧರಿ ಹೃದಯँ ಹರಿ ಸಕಲ ಲೋಕ ಅಭಿರಾಮ ॥ ೭೫ ॥**

ಚಿದಾನಂದನೂ, ಸರ್ವಸುಖನಿಧಾನನೂ, ಮೋಹ, ಮದ, ಕಾಮರಹಿತನೂ ಆದ ಶಿವನು ಸಕಲ ಲೋಕಾನಂದಕರನಾದ ಶ್ರೀಹರಿಯನ್ನು ಹೃದಯದಲ್ಲಿ ನೆಲೆಗೊಳಿಸಿ, ಭೂಮಿಯಲ್ಲಿ ಸಂಚರಿಸತೊಡಗಿದನು. (ದೋ/೭೫)

**ಚೌ – ಕತಹುँ ಮುನಿನ್ಹ ಉಪದೇಸಹಿಂ ಗ್ಯಾನಾ । ಕತಹುँ ರಾಮ ಗುನ ಕರಹಿಂ ಬಖಾನಾ ॥**
**ಜದಪಿ ಅಕಾಮ ತದಪಿ ಭಗವಾನಾ । ಭಗತ ಬಿರಹ ದುಖ ದುಖಿತ ಸುಜಾನಾ ॥ ೧ ॥**
**ಏಹಿ ಬಿಧಿ ಗಯಉ ಕಾಲು ಬಹು ಬೀತೀ । ನಿತ ನೈ ಹೋಇ ರಾಮ ಪದ ಪ್ರೀತೀ ॥**
**ನೇಮು ಪ್ರೇಮು ಸಂಕರ ಕರ ದೇಖಾ । ಅಬಿಚಲ ಹೃದಯँ ಭಗತಿ ಕೈ ರೇಖಾ ॥ ೨ ॥**
**ಪ್ರಗಟೇ ರಾಮು ಕೃತಗ್ಯ ಕೃಪಾಲಾ । ರೂಪ ಸೀಲ ನಿಧಿ ತೇಜ ಬಿಸಾಲಾ ॥**
**ಬಹು ಪ್ರಕಾರ ಸಂಕರಹಿ ಸರಾಹಾ । ತುಮ್ಹ ಬಿನು ಅಸ ಬ್ರತು ಕೋ ನಿರಬಾಹಾ ॥ ೩ ॥**
**ಬಹುಬಿಧಿ ರಾಮ ಸಿವಹಿ ಸಮುಝಾವಾ । ಪಾರಬತೀ ಕರ ಜನ್ಮು ಸುನಾವಾ ॥**
**ಅತಿ ಪುನೀತ ಗಿರಿಜಾ ಕೈ ಕರನೀ । ಬಿಸ್ತರ ಸಹಿತ ಕೃಪಾನಿಧಿ ಬರನೀ ॥ ೪ ॥**

ಪರಮೇಶ್ವರನು ಒಮ್ಮೆ ಮುನಿಗಳಿಗೆ ಜ್ಞಾನೋಪದೇಶಮಾಡಿದರೆ, ಮತ್ತೊಮ್ಮೆ ಶ್ರೀರಾಮನ ಗುಣಗಳನ್ನು ಕೊಂಡಾಡುತ್ತಿದ್ದನು. ಮಹೇಶ್ವರನು ಪರಮಜ್ಞಾನಿಯೂ, ಕಾಮರಹಿತನೂ ಆಗಿದ್ದರೂ ಸತಿಯ ವಿಯೋಗದಿಂದ

ದುಃಖಿತನಾಗಿದ್ದನು. ಈ ವಿಧವಾಗಿ ಅನೇಕಕಾಲ ಕಳೆದುಹೋಯಿತು. ಅವನಲ್ಲಿ ಶ್ರೀರಾಮಚಂದ್ರನ ಚರಣಗಳಲ್ಲಿ ಪ್ರೀತಿಯು ನಿತ್ಯ-ನೂತನವಾಗಿ ಉಂಟಾಗುತ್ತಿತ್ತು. ಶಿವನಲ್ಲಿದ್ದ ಕಠೋರ ನಿಯಮಗಳೂ, ಅವನ ಪ್ರೇಮವೂ, ದೃಢಭಕ್ತಿಯನ್ನೂ ಶ್ರೀರಾಮನು ಗುರುತಿಸಿದನು. ಕೃತಜ್ಞನೂ, ಕೃಪಾಳುವೂ, ರೂಪಶೀಲನಿಧಿಯ ತೇಜೋರಾಶಿಯೂ ಆದ ಶ್ರೀರಾಮಚಂದ್ರನು ಶಿವನ ಮುಂದೆ ಪ್ರತ್ಯಕ್ಷನಾದನು. ಅವನು ಶಿವನನ್ನು ಪರಿಪರಿಯಾಗಿ ಕೊಂಡಾಡಿ, ಹೇಳಿದ – 'ನೀನಲ್ಲದೆ ಇಂತಹ ಘೋರವ್ರತವನ್ನು ಯಾರು ತಾನೇ ಸಾಧಿಸಬಲ್ಲರು?' ಎಂದು ಶ್ರೀರಾಮನು ಹಲವು ರೀತಿಯಿಂದ ಶಿವನನ್ನು ಸಮಾಧಾನಪಡಿಸಿ, ಪಾರ್ವತಿಯ ಜನನವೃತ್ತಾಂತವನ್ನು ಅರುಹಿದನು. ಕೃಪಾನಿಧಿ ಶ್ರೀರಾಮಚಂದ್ರನು ಪಾರ್ವತಿಯ ಪವಿತ್ರ ತಪಶ್ಚರ್ಯ ಸಾಧನೆಯನ್ನು ವಿಸ್ತಾರವಾಗಿ ವರ್ಣಿಸಿದನು – (ಚೌ/೧-೪)

**ದೋ – ಅಬ ಬಿನತೀ ಮಮ ಸುನಹು ಸಿವ ಜೌಂ ಮೊ ಪರ ನಿಜ ನೇಹು ।**
**ಜಾಇ ಬಿಬಾಹಹು ಸೈಲಜಹಿ ಯಹ ಮೋಹಿ ಮಾಗೇಂ ದೇಹು ॥ ೭೬ ॥**

ಶ್ರೀರಾಮನು ಶಿವನಲ್ಲಿ ಮತ್ತೆ ಹೇಳಿದನು – ''ನನ್ನ ಮೇಲೆ ನಿನಗೆ ನಿಜವಾಗಿಯೂ ಸ್ನೇಹವಿರುವುದಾದರೆ, ನನ್ನ ವಿನಂತಿಯನ್ನು ಮನ್ನಿಸು. ನೀನು ಪಾರ್ವತಿಯನ್ನು ವಿವಾಹವಾಗುವುದಾಗಿ ನನಗೆ ಮಾತನ್ನು ಕೊಡು.'' (ದೋ/೭೬)

**ಚೌ – ಕಹ ಸಿವ ಜದಪಿ ಉಚಿತ ಅಸ ನಾಹೀಂ । ನಾಥ ಬಚನ ಪುನಿ ಮೇಟಿ ನ ಜಾಹೀಂ ॥**
**ಸಿರ ಧರಿ ಆಯಸು ಕರಿಅ ತುಮ್ಹಾರಾ । ಪರಮ ಧರಮು ಯಹ ನಾಥ ಹಮಾರಾ ॥ ೧ ॥**
**ಮಾತು ಪಿತಾ ಗುರ ಪ್ರಭು ಕೈ ಬಾನೀ । ಬಿನಹಿಂ ಬಿಚಾರ ಕರಿಅ ಸುಭ ಜಾನೀ ॥**
**ತುಮ್ಹ ಸಬ ಭಾಂತಿ ಪರಮ ಹಿತಕಾರೀ । ಅಗ್ಯಾ ಸಿರ ಪರ ನಾಥ ತುಮ್ಹಾರೀ ॥ ೨ ॥**
**ಪ್ರಭು ತೋಷೇಉ ಸುನಿ ಸಂಕರ ಬಚನಾ । ಭಕ್ತಿ ಬಿಬೇಕ ಧರ್ಮ ಜುತ ರಚನಾ ॥**
**ಕಹ ಪ್ರಭು ಹರ ತುಮ್ಹಾರ ಪನ ರಹೇಊ । ಅಬ ಉರ ರಾಖೇಹು ಜೋ ಹಮ ಕಹೇಊ ॥ ೩ ॥**
**ಅಂತರಧಾನ ಭಏ ಅಸ ಭಾಷೀ । ಸಂಕರ ಸೋಇ ಮೂರತಿ ಉರ ರಾಖೀ ॥**
**ತಬಹಿಂ ಸಪ್ತರಿಷಿ ಸಿವ ಪಹಿಂ ಆಏ । ಬೋಲೇ ಪ್ರಭು ಅತಿ ಬಚನ ಸುಹಾಏ ॥ ೪ ॥**

ಆಗ ಶಿವನೆಂದ –''ಸ್ವಾಮಿ! ಇದು ನನಗೇನೋ ಉಚಿತವೆನಿಸುವುದಿಲ್ಲ. ಆದರೂ ಒಡೆಯನ ಮಾತನ್ನು ಮೀರುವಂತಿಲ್ಲ. ನಿಮ್ಮ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸುವುದು ನನ್ನ ಪರಮ ಧರ್ಮವು. ತಾಯಿ, ತಂದೆ, ಗುರು ಮತ್ತು ಪ್ರಭು ಇವರುಗಳ ಆಜ್ಞೆಯನ್ನು ಶುಭಪ್ರದವೆಂದು ತಿಳಿದು, ಯಾವುದೇ ಆಲೋಚನೆಯಿಲ್ಲದೆ ಪಾಲಿಸಬೇಕು. ನೀವು ನನಗೆ ಅತ್ಯಂತ ಹಿತವನ್ನು ಮಾಡುವವರು. ನಾಥನೇ! ನಿಮ್ಮ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸುತ್ತೇನೆ.'' ಶಿವನ ಭಕ್ತಿ, ಜ್ಞಾನ ಮತ್ತು ಧರ್ಮದಿಂದ ಕೂಡಿದ ಮಾತನ್ನು ಕೇಳಿ, ಪ್ರಭುರಾಮಚಂದ್ರನು ಸಂತುಷ್ಟನಾಗಿ ಹೋದನು. ''ಎಲೈ ಮಹೇಶ್ವರಾ! ನಿನ್ನ ವ್ರತವು ಸಫಲವಾಯಿತು. ನಾನು ನುಡಿದ ಮಾತುಗಳನ್ನು ನಿನ್ನ ಮನಸ್ಸಿನಲ್ಲಿ ಇರಿಸಿಕೋ'' ಎಂದು ಹೇಳಿ ಶ್ರೀರಾಮನು ಅಂತರ್ಧಾನನಾದನು. ಶಿವನು ರಾಮನ ಆ ಮಂಗಳ ಮೂರ್ತಿಯನ್ನು ತನ್ನ ಹೃದಯದಲ್ಲಿ ನೆಲೆಗೊಳಿಸಿದನು. ಅದೇ ವೇಳೆಗೆ ಸರಿಯಾಗಿ ಸಪ್ತರ್ಷಿಗಳು ಶಿವನ ದರ್ಶನಕ್ಕೆಂದು ಬಂದರು. ಮಹಾದೇವನು ಅವರನ್ನು ಕಂಡು ಅತ್ಯಂತ ನಲ್ವಾತುಗಳಿಂದ ಇಂತೆಂದನು – (ಚೌ/೧-೪)

**ದೋ – ಪಾರಬತೀ ಪಹಿಂ ಜಾಇ ತುಮ್ಹ ಪ್ರೇಮ ಪರಿಚ್ಛಾ ಲೇಹು ।**
**ಗಿರಿಹಿ ಪ್ರೇರಿ ಪಠಏಹು ಭವನ ದೂರಿ ಕರೇಹು ಸಂದೇಹು ॥ ೭೭ ॥**

''ನೀವುಗಳು ಪಾರ್ವತಿಯ ಬಳಿಗೆ ಹೋಗಿ, ಆಕೆಯ ಭಕ್ತಿಯನ್ನು ಪರೀಕ್ಷಿಸಿರಿ. ಆಕೆಯ ತಂದೆಯಾದ ಹಿಮವಂತನು ಅವಳನ್ನು ಮನೆಗೆ ಕರಕೊಂಡು ಹೋಗುವಂತೆ ಮಾಡಿರಿ. ಅವಳ ಸಂದೇಹಗಳನ್ನು ನಿವಾರಣೆಮಾಡಿರಿ. (ದೋ/೭೭)

**ಚೌ – ರಿಷಿನ್ಹ ಗೌರಿ ದೇಖೀ ತಹಂ ಕೈಸೀ । ಮೂರತಿಮಂತ ತಪಸ್ಯಾ ಜೈಸೀ ॥**
**ಬೋಲೇ ಮುನಿ ಸುನು ಸೈಲಕುಮಾರೀ । ಕರಹು ಕವನ ಕಾರನ ತಪು ಭಾರೀ ॥ ೧ ॥**
**ಕೆಹಿ ಅವರಾಧಹು ಕಾ ತುಮ್ಹ ಚಹಹೂ । ಹಮ ಸನ ಸತ್ಯ ಮರಮು ಕಿನ ಕಹಹೂ ॥**
**ಕಹತ ಬಚನ ಮನು ಅತಿ ಸಕುಚಾಈ । ಹಂಸಿಹಹು ಸುನಿ ಹಮಾರಿ ಜಡತಾಈ ॥ ೨ ॥**
**ಮನು ಹಠ ಪರಾ ನ ಸುನಇ ಸಿಖಾವಾ । ಚಹತ ಬಾರಿ ಪರ ಭೀತಿ ಉಠಾವಾ ॥**
**ನಾರದ ಕಹಾ ಸತ್ಯ ಸೋಇ ಜಾನಾ । ಬಿನು ಪಂಖನ್ಹ ಹಮ ಚಹಹಿಂ ಉಡಾನಾ ॥ ೩ ॥**
**ದೇಖಹು ಮುನಿ ಅಬಿಬೇಕು ಹಮಾರಾ । ಚಾಹಿಅ ಸದಾ ಸಿವಹಿ ಭರತಾರಾ ॥ ೪ ॥**

ಮೂರ್ತಿಭವಿಸಿದ ತಪಸ್ಸಿನ ಮೂರ್ತಿಯಂತಿದ್ದ ಪಾರ್ವತಿದೇವಿಯನ್ನು ಕಂಡು, ಸಪ್ತರ್ಷಿಗಳು ಹೀಗೆ ಪ್ರಶ್ನಿಸಿದರು – ಅಮ್ಮಾ, ಶೈಲಕುಮಾರೀ! ನೀನು ಏತಕ್ಕಾಗಿ ಇಷ್ಟು ಕಠೋರವಾದ ತಪಸ್ಸನ್ನು ಮಾಡುತ್ತಿರುವೆ? ಯಾರನ್ನು ಆರಾಧಿಸುತ್ತಿರುವೆ? ನಿನ್ನ ಕೋರಿಕೆ ಏನು? ನಿನ್ನ ಮನಸ್ಸಿನಲ್ಲಿರುವ ಮಾತನ್ನು ತಿಳಿಸು.'' ಆಗ ಪಾರ್ವತಿಯು ಹೇಳತೊಡಗಿದಳು – ನನ್ನ ಮನದಾಳವನ್ನು ಹೇಳಿಕೊಳ್ಳಲು ತುಂಬಾ ಸಂಕೋಚವಾಗುತ್ತದೆ. ನೀವುಗಳು ನನ್ನ ಹೆಡ್ಡತನವನ್ನು ಕಂಡು ನಗಬಹುದು. ನನ್ನ ಮನಸ್ಸು ಏನು ಹೇಳಿದರೂ ಕೇಳದು. ಒಂದೇ ವಿಧವಾದ ಹಟಹಿಡಿದು ಕುಳಿತಿದೆ. ಅದು ನೀರಿನ ಮೇಲೆ ಗೋಡೆ ಕಟ್ಟಬಯಸುತ್ತದೆ. ನಾರದ ಮಹರ್ಷಿಗಳ ಮಾತನ್ನು ಸತ್ಯವೆಂದು ನಂಬಿ ರೆಕ್ಕೆಯಿಲ್ಲದೆ ಹಾರಲು ಪ್ರಯತ್ನಿಸುವಂತಾಗಿದೆ ನನ್ನ ಸ್ಥಿತಿ. ಋಷಿಗಳಿರಾ! ನನ್ನ ಅವಿವೇಕವನ್ನು ನೋಡಿ. ಹರನೇ ಗಂಡನಾಗಬೇಕೆಂಬುದು ನನ್ನ ನಿರಂತರ ಬಯಕೆ. (ಚೌ/೧-೪)

**ದೋ – ಸುನತ ಬಚನ ಬಿಹಸೇ ರಿಷಯ ಗಿರಿಸಂಭವ ತವ ದೇಹ ।**
**ನಾರದ ಕರ ಉಪದೇಸು ಸುನಿ ಕಹಹು ಬಸೆಉ ಕಿಸು ಗೇಹ ॥ ೭೮ ॥**

ಉಮೆಯ ಮಾತುಗಳನ್ನು ಕೇಳಿ ಋಷಿಗಳು ನಕ್ಕು ಇಂತು ನುಡಿದರು – ಎಷ್ಟೇ ಆಗಲೀ ನೀನು ಪರ್ವತದ ಮಗಳಲ್ಲವೇ? ನಾರದರ ಮಾತನ್ನು ಕೇಳಿ ಇದುವರೆವಿಗೂ ಯಾರಾದರೂ ಉದ್ಧಾರವಾದವರುಂಟೋ? ಹೇಳು – (ದೋ/೭೮)

**ಚೌ – ದಚ್ಛಸುತನ್ಹ ಉಪದೇಸೆನ್ಹಿ ಜಾಈ । ತಿನ್ಹ ಫಿರಿ ಭವನು ನ ದೇಖಾ ಆಈ ॥**
**ಚಿತ್ರಕೇತು ಕರ ಘರು ಉನ ಘಾಲಾ । ಕನಕಕಸಿಪು ಕರ ಪುನಿ ಅಸ ಹಾಲಾ ॥ ೧ ॥**
**ನಾರದ ಸಿಖ ಜೆ ಸುನಹಿಂ ನರ ನಾರೀ । ಅವಸಿ ಹೋಹಿಂ ತಜಿ ಭವನು ಭಿಖಾರೀ ॥**
**ಮನ ಕಪಟೀ ತನ ಸಜ್ಜನ ಚೀನ್ಹಾ । ಆಪು ಸರಿಸ ಸಬಹೀ ಚಹ ಕೀನ್ಹಾ ॥ ೨ ॥**
**ತೆಹಿ ಕೇಂ ಬಚನ ಮಾನಿ ಬಿಸ್ವಾಸಾ । ತುಮ್ಹ ಚಾಹಹು ಪತಿ ಸಹಜ ಉದಾಸಾ ॥**
**ನಿರ್ಗುನ ನಿಲಜ ಕುಬೇಷ ಕಪಾಲೀ । ಅಕುಲ ಅಗೇಹ ದಿಗಂಬರ ಬ್ಯಾಲೀ ॥ ೩ ॥**
**ಕಹಹು ಕವನ ಸುಖು ಅಸ ಬರು ಪಾಏಂ । ಭಲ ಭೂಲಿಹು ಠಗ ಕೇ ಬೌರಾಏಂ ॥**
**ಪಂಚ ಕಹೇಂ ಸಿವಂ ಸತೀ ಬಿಬಾಹೀ । ಪುನಿ ಅವಡೇರಿ ಮರಾಎನ್ಹಿ ತಾಹೀ ॥ ೪ ॥**

''ನಾರದನು ದಕ್ಷಕುಮಾರರಿಗೆ ಉಪದೇಶ ಮಾಡಿದನು. ಅದನ್ನು ಕೇಳಿ ಅವರು ಮತ್ತೆ ಮನೆಯ ಮುಖನೋಡಲಿಲ್ಲ. ಚಿತ್ರಕೇತುವಿನ ಮನೆಹಾಳುಮಾಡಿದವನೂ ಇವನೇ. ಹಿರಣ್ಯಕಶಿಪುವಿನ ಸ್ಥಿತಿಯೂ ಹೀಗೆಯೇ ಆಯಿತು. ನಾರದರ ಉಪದೇಶಕ್ಕೆ ಕಿವಿಗೊಡುವರೆಲ್ಲಸ್ತ್ರೀ-ಪುರುಷರು ಮನೆ-ಮಠ ತೊರೆದು ತಿರುಪೆಗೆ ಹೋಗಿದ್ದಾರೆ. ಅವರ ಮನಸ್ಸಿನಲ್ಲಿ ಕಪಟ ತುಂಬಿದೆ. ಹೊರಗೆ ಶರೀರದ ಮೇಲೆ ಸಜ್ಜನರ ಚಿಹ್ನೆ! ವೇಷ! ಅವರು ಇತರರನ್ನೂ ತನ್ನಂತೆಯೇ ಮಾಡಲು ಬಯಸುತ್ತಿದ್ದಾರೆ. ಇಂತಹವನ ಮಾತನ್ನು ನೆಚ್ಚಿಕೊಂಡು ನೀನು ಶಿವನನ್ನು ಪತಿಯಾಗಿ ಪಡೆಯಲು ಬಯಸುತ್ತಿರುವೆ. ಶಂಕರನು ಸಹಜವಾಗಿಯೇ ಉದಾಸೀನನು, ಗುಣಹೀನನು, ಲಜ್ಜಾರಹಿತನೂ, ವಿಕೃತವೇಷಧಾರೀ, ಕಪಾಲಮಾಲಾಧಾರಿಯು, ಕುಲಹೀನ, ಮನೆಯಿಲ್ಲದವನೂ, ದಿಗಂಬರನೂ, ಸರ್ಪಗಳನ್ನು ಭೂಷಣಗಳನ್ನಾಗಿ ಧರಿಸುವವನು. ಇಂತಹ ವರನನ್ನು ವಿವಾಹವಾಗಿ ನೀನು ಯಾವ ಸುಖಪಡುವೆ? ನೀನು ಆ ನಾರದರ ಮಾಯದ ಮಾತಿಗೆ ಮೋಸಹೋದೆ. ಈಶ್ವರನು ಹಿಂದೆ ಪಂಚರ ಮಾತಿನಂತ ಸತಿದೇವಿಯ ಕೈ ಹಿಡಿದಿದ್ದ. ಆದರೆ ಬಳಿಕ ಆಕೆಯನ್ನು ಪರಿತ್ಯಜಿಸಿದನು. ಆಕೆಯು ದೇಹತ್ಯಾಗ ಮಾಡಿಕೊಂಡಳು. (ಚೌ/೧-೪)

**ದೋ – ಅಬ ಸುಖ ಸೋವತ ಸೋಚು ನಹಿಂ ಭೀಖ ಮಾಗಿ ಭವ ಖಾಹಿಂ ।**
**ಸಹಜ ಏಕಾಕಿನ್ಹ ಕೇ ಭವನ ಕಬಹುಂ ಕಿ ನಾರಿ ಖಟಾಹಿಂ ॥ ೭೯ ॥**

ಈಗ ಶಿವನು ನಿಶ್ಚಿಂತನಾಗಿ ಹಾಯಾಗಿ ನಿದ್ದೆಮಾಡುತ್ತಾನೆ. ಭಿಕ್ಷೆ ಎತ್ತಿಕೊಂಡು ಜೀವಿಸಿದ್ದಾನೆ. ಅವನಿಗೇನು ''ಅರಸರ ಅಂಕೆಯಿಲ್ಲ– ದೆವ್ವದ ಕಾಟವಿಲ್ಲ.'' ಇಂತಹ ಒಂಟಿಬಡಕ ಶುಂಠಿಯನ್ನು ಕಟ್ಟಿಕೊಂಡು ಯಾವ ಸ್ತ್ರೀಯು ಬಾಳಬಲ್ಲಳು? (ದೋ/೭೯)

**ಚೌ – ಅಜಹೂಂ ಮಾನಹು ಕಹಾ ಹಮಾರಾ । ಹಮ ತುಮ್ಹ ಕಹುಂ ಬರು ನೀಕ ಬಿಚಾರಾ ॥**
**ಅತಿ ಸುಂದರ ಸುಚಿ ಸುಖದ ಸುಸೀಲಾ । ಗಾವಹಿಂ ಬೇದ ಜಾಸು ಜಸ ಲೀಲಾ ॥ ೧ ॥**
**ದೂಷನ ರಹಿತ ಸಕಲ ಗುನ ರಾಸೀ । ಶ್ರೀಪತಿ ಪುರ ಬೈಕುಂಠ ನಿವಾಸೀ ॥**
**ಅಸ ಬರು ತುಮ್ಹಹಿ ಮಿಲಾಉಬ ಆನೀ । ಸುನತ ಬಿಹಸಿ ಕಹ ಬಚನ ಭವಾನೀ ॥ ೨ ॥**
**ಸತ್ಯ ಕಹೆಹು ಗಿರಿಭವ ತನು ಏಹಾ । ಹಠ ನ ಛೂಟ ಛೂಟೈ ಬರು ದೇಹಾ ॥**
**ಕನಕಉ ಪುನಿ ಪಷಾನ ತೇಂ ಹೋಈ । ಜಾರೆಹುಂ ಸಹಜು ನ ಪರಿಹರ ಸೋಈ ॥ ೩ ॥**

**ನಾರದ ಬಚನ ನ ಮೈಂ ಪರಿಹರಊಂ । ಬಸಉ ಭವನು ಉಜರಉ ನಹಿಂ ಡರಊಂ ॥**
**ಗುರ ಕೇಂ ಬಚನ ಪ್ರತೀತಿ ನ ಜೇಹೀ । ಸಪನೇಹುಁ ಸುಗಮ ನ ಸುಖ ಸಿಧಿ ತೇಹೀ ॥ ೪ ॥**

''ಇನ್ನಾದರೂ ನಾವು ಹೇಳಿದಂತೆ ಕೇಳು. ನಿನಗಾಗಿ ನಾವು ಓರ್ವ ಒಳ್ಳೆಯ ವರನನ್ನು ಹುಡುಕಿದ್ದೇವೆ. ಅವನು ಸುಂದರನೂ, ಪವಿತ್ರನೂ, ಸುಖಪ್ರದನೂ, ಸುಶೀಲನೂ ಆಗಿರುವನು. ಅವನ ಲೀಲಾವೈಭವಗಳನ್ನು ವೇದಗಳೇ ಕೊಂಡಾಡುತ್ತವೆ. ಅವನು ದೋಷದೂರನು, ಸದ್ಗುಣರಾಶಿಯೂ, ಶ್ರೀಪತಿಯೂ, ವೈಕುಂಠವಾಸಿಯೂ ಆಗಿದ್ದಾನೆ. ಇಂತಹ ವರನನ್ನು ತಂದು ನಿನ್ನ ಮುಂದೆ ನಿಲ್ಲಿಸುವೆವು.'' ಇದನ್ನು ಕೇಳುತ್ತಲೇ ಭವಾನಿಯು ನಗುತ್ತಾ ಇಂತೆಂದಳು – ''ನೀವು ಹೇಳಿದುದು ನಿಜವೇ. ಈ ಶರೀರವು ಬೆಟ್ಟದಿಂದಲೇ ಹುಟ್ಟಿದುದು. ಶರೀರ ಬಿಟ್ಟುಹೋದರೂ ನನ್ನ ಹಟಮಾತ್ರ ಹೋಗದು. ಚಿನ್ನವೂ ಕಲ್ಲಿನಲ್ಲೇ ಹುಟ್ಟುತ್ತದೆ. ಅದನ್ನು ಸುಟ್ಟರೂ ಅದರ ಹುಟ್ಟುಗುಣ ಹೋಗದು. ನಾನೂ ಕೂಡ ನಾರದರ ಮಾತನ್ನು ಮರೆಯಲಾರೆ; ಬಿಡಲಾರೆ. ಮನೆ ಉಳಿದರೇನು? ಹಾಳಾದರೇನು? ಇದಾವುದಕ್ಕೂ ನಾನು ಅಂಜುವುದಿಲ್ಲ. ಗುರುವಚನದಲ್ಲಿ ನಂಬಿಕೆಯಿಲ್ಲದವರಿಗೆ ಸುಖ-ಸಿದ್ಧಿಗಳು ಕನಸಿನಲ್ಲೂ ದೊರೆಯಲಾರವು. (ಚೌ/೧-೪)

**ದೋ – ಮಹಾದೇವ ಅವಗುನ ಭವನ ಬಿಷ್ನು ಸಕಲ ಗುನ ಧಾಮ ।**
**ಜೆಹಿ ಕರ ಮನು ರಮ ಜಾಹಿ ಸನ ತೇಹಿ ತೇಹೀ ಸನ ಕಾಮ ॥ ೮೦ ॥**

ನೀವು ಹೇಳಿದಂತೆ ಮಹಾದೇವನು ಅವಗುಣಗಳ ಭವನವೇ ಇರಬಹುದು. ವಿಷ್ಣುವು ಸಕಲ ಸದ್ಗುಣಗಳ ಧಾಮವೇ ಇರಬಹುದು. ಆದರೆ ಮನಸ್ಸು ಯಾರಲ್ಲಿ ಸಂಲಗ್ನವಾಗಿದೆಯೋ ಅವರಲ್ಲೇ ನಮಗೆ ಕೆಲಸ. ಬೇರೆಯವರಲ್ಲಿ ನಮಗೇನು ಕೆಲಸ? (ದೋ/೮೦)

**ಚೌ – ಜೌಂ ತುಮ್ಹ ಮಿಲತೆಹು ಪ್ರಥಮ ಮುನೀಸಾ । ಸುನತಿಉಁ ಸಿಖ ತುಮ್ಹಾರಿ ಧರಿ ಸೀಸಾ ॥**
**ಅಬ ಮೈಂ ಜನ್ಮು ಸಂಭು ಹಿತ ಹಾರಾ । ಕೋ ಗುನ ದೂಷನ ಕರೈ ಬಿಚಾರಾ ॥ ೧ ॥**
**ಜೌಂ ತುಮ್ಹರೇ ಹಠ ಹೃದಯಁ ಬಿಸೇಷೀ । ರಹಿ ನ ಜಾಇ ಬಿನು ಕಿಏಁ ಬರೇಷೀ ॥**
**ತೌ ಕೌತುಕಿ ಅನ್ಹ ಆಲಸು ನಾಹೀಂ । ಬರ ಕನ್ಯಾ ಅನೇಕ ಜಗ ಮಾಹೀಂ ॥ ೨ ॥**
**ಜನ್ಮ ಕೋಟಿ ಲಗಿ ರಗರ ಹಮಾರೀ । ಬರಉಁ ಸಂಭು ನ ತ ರಹಉಁ ಕುಆರೀ ॥**
**ತಜಉಁ ನ ನಾರದ ಕರ ಉಪದೇಸೂ । ಆಪು ಕಹಹಿಂ ಸತ ಬಾರ ಮಹೇಸೂ ॥ ೩ ॥**
**ಮೈಂ ಪಾ ಪರಉಁ ಕಹಇ ಜಗದಂಬಾ । ತುಮ್ಹ ಗೃಹ ಗವನಹು ಭಯಉ ಬಿಲಂಬಾ ॥**
**ದೇಖಿ ಪ್ರೇಮು ಬೋಲೇ ಮುನಿ ಗ್ಯಾನೀ । ಜಯ ಜಯ ಜಗದಂಬಿಕೇ ಭವಾನೀ ॥ ೪ ॥**

ಮುನಿವರೇಣ್ಯರೇ! ನೀವು ಮುಂಚೆಯೇ ಸಿಕ್ಕಿದ್ದರೆ, ನಾನು ನಿಮ್ಮ ಉಪದೇಶವನ್ನು ಶಿರಸಾವಹಿಸಿ ಪಾಲಿಸುತ್ತಿದ್ದೆ. ಆದರೆ ಈಗ ನನ್ನ ಜೀವಿತವು ಈಶ್ವರಾರ್ಪಣವಾಗಿದೆ. ಇನ್ನು ಗುಣದೋಷಗಳನ್ನು ಕುರಿತು ಏಕೆ ತಲೆಕೆಡಿಸಿಕೊಳ್ಳಬೇಕು? ಒಂದು ವೇಳೆ ನಿಮಗೆ ವಿವಾಹಮಹೋತ್ಸವವನ್ನು ಜರುಗಿಸಿ, ಆನಂದಿಸಲು ಆಸಕ್ತಿ ಇದ್ದರೆ, ಲೋಕದಲ್ಲಿ ಕನ್ಯೆಗಳು, ವರಗಳು ಹೇರಳವಾಗಿದ್ದಾರೆ. ಇಂತಹ ವಿನೋದದಲ್ಲಿ ಕಾಲಕಳೆಯುವವರಿಗೆ ಬೇಸರವೇ ಇರುವುದಿಲ್ಲ. ಕೋಟಿಜನ್ಮಗಳನ್ನು ಎತ್ತಿದರೂ ನಾನು ಪರಶಿವನನ್ನೇ ವರನಾಗಿ ಹೊಂದುವೆನು. ಇಲ್ಲದಿದ್ದರೆ ಕನ್ಯೆಯಾಗಿಯೇ ಉಳಿದೇನು. ಆ ಶಂಕರನೇ ಸ್ವತಃ ಬಂದು, ನೂರುಬಾರಿ ಹೇಳಿದರೂ, ನಾನು ನಾರದರ ಉಪದೇಶವನ್ನು ಉಲ್ಲಂಘಿಸಲಾರೆನು. ನಿಮ್ಮ ಕಾಲಿಗೆ ಬೀಳುತ್ತೇನೆ. ನಿಮ್ಮ ದಮ್ಮಯ್ಯ. ನೀವು ದಯವಿಟ್ಟು ನಿಮ್ಮ ಆಶ್ರಮಗಳಿಗೆ ತೆರಳಿರಿ. ತುಂಬಾ ಹೊತ್ತಾಗಿದೆ'' ಎಂದು ಹೇಳಿದಳು. ಮುನಿಗಳು ಶಿವನ ಕುರಿತು ಪಾರ್ವತೀದೇವಿಯಲ್ಲಿರುವ ಭಕ್ತಿ-ವಿಶ್ವಾಸಗಳನ್ನು ಗುರುತಿಸಿ, ಆನಂದದಿಂದ 'ಓ ಜಗದಂಬೆ! ಭವಾನೀ! ತಾಯಿ! ನಿನಗೆ ಜಯವಾಗಲೀ' ಎಂದು ಕೊಂಡಾಡಿದರು. (ಚೌ/೧-೪)

**ದೋ – ತುಮ್ಹ ಮಾಯಾ ಭಗವಾನ ಸಿವ ಸಕಲ ಜಗತ ಪಿತು ಮಾತು ।**
**ನಾಇ ಚರನ ಸಿರ ಮುನಿ ಚಲೇ ಪುನಿ ಪುನಿ ಹರಷತ ಗಾತು ॥ ೮೧ ॥**

''ಪರಶಿವನು ಭಗವಂತನು, ನೀನು ಮಹಾಮಾಯೆ. ನೀವಿಬ್ಬರೂ ಸಮಸ್ತ ಜಗತ್ತಿಗೆ ತಂದೆ-ತಾಯಿಗಳು'' ಎಂದು ಹೇಳಿ ಮುನೀಶ್ವರರು ಪಾರ್ವತಿದೇವಿಯ ಪಾದಗಳಿಗೆ ಪೊಡಮಟ್ಟು, ಪುಲಕಿತಗಾತ್ರರಾಗಿ ಹೊರಟುಹೋದರು. (ದೋ/೮೧)

**ಚೌ – ಜಾಇ ಮುನಿನ್ಹ ಹಿಮವಂತು ಪಠಾಏ । ಕರಿ ಬಿನತೀ ಗಿರಜಹಿಂ ಗೃಹ ಲ್ಯಾಏ ॥**
**ಬಹುರಿ ಸಪ್ತರಿಷಿ ಸಿವ ಪಹಿಂ ಜಾಈ । ಕಥಾ ಉಮಾ ಕೈ ಸಕಲ ಸುನಾಈ ॥ ೧ ॥**

ಭಏ ಮಗನ ಸಿವ ಸುನತ ಸನೇಹಾ । ಹರಷಿ ಸಪ್ತರಿಷಿ ಗವನೇ ಗೇಹಾ ॥
ಮನು ಥಿರ ಕರಿ ತಬ ಸಂಭು ಸುಜಾನಾ । ಲಗೇ ಕರನ ರಘುನಾಯಕ ಧ್ಯಾನಾ ॥ ೨ ॥
ತಾರಕು ಅಸುರ ಭಯಉ ತೆಹಿ ಕಾಲಾ । ಭುಜ ಪ್ರತಾಪ ಬಲ ತೇಜ ಬಿಸಾಲಾ ॥
ತೆಹಿಂ ಸಬ ಲೋಕ ಲೋಕಪತಿ ಜೀತೇ । ಭಏ ದೇವ ಸುಖ ಸಂಪತಿ ರೀತೇ ॥ ೩ ॥
ಅಜರ ಅಮರ ಸೋ ಜೀತಿ ನ ಜಾಈ । ಹಾರೇ ಸುರ ಕರಿ ಬಿಬಿಧ ಲರಾಈ ॥
ತಬ ಬಿರಂಚಿ ಸನ ಜಾಇ ಪುಕಾರೇ । ದೇಖೇ ಬಿಧಿ ಸಬ ದೇವ ದುಖಾರೇ ॥ ೪ ॥

ಅನಂತರ ಸಪ್ತರ್ಷಿಗಳು ಹಿಮವಂತನ ಬಳಿಗೆ ಹೋಗಿ, ಗಿರಿಜೆಯನ್ನು ಮನೆಗೆ ಕರೆತರುವಂತೆ ಹೇಳಿದರು. ಬಳಿಕ ಮಹರ್ಷಿಗಳು ಶಿವನಿದ್ದೆಡೆಗೆ ತೆರಳಿ, ಅವನಿಗೆ ಉಮೆಯ ವೃತ್ತಾಂತವೆಲ್ಲವನ್ನು ನಿವೇದಿಸಿಕೊಂಡರು. ಪಾರ್ವತಿದೇವಿಯ ಪ್ರೇಮ-ಭಕ್ತಿಯನ್ನು ಕಂಡು ಶಿವನು ಆನಂದತುಂದಿಲನಾದನು. ಸಪ್ತರ್ಷಿಗಳೂ ಸಂತೋಷಪಟ್ಟು ತಮ್ಮ-ತಮ್ಮ ಆಶ್ರಮಗಳಿಗೆ ಹೊರಟುಹೋದರು. ಆಗ ಮಹಾಜ್ಞಾನಿಯಾದ ಶಿವನು ತನ್ನ ಮನಸ್ಸನ್ನು ಸ್ಥಿರಗೊಳಿಸಿ, ಶ್ರೀರಘುನಾಥನ ಧ್ಯಾನದಲ್ಲಿ ಲೀನನಾದನು. ಇದೇ ವೇಳೆಗೆ 'ತಾರಕ'ನೆಂಬ ಅಸುರನು ಹುಟ್ಟಿಕೊಂಡ. ಅವನು ತನ್ನ ಭುಜ-ಬಲ, ಪ್ರತಾಪ, ತೇಜಸ್ಸುಗಳಿಂದ ಸಕಲ ಲೋಕಗಳನ್ನೂ, ಲೋಕಪಾಲಕರನ್ನೂ, ಗೆದ್ದುಕೊಂಡನು. ದೇವತೆಗಳು ತಮ್ಮ ಸುಖ-ಸಂಪತ್ತುಗಳನ್ನು ಕಳೆದುಕೊಂಡರು. ಬ್ರಹ್ಮದೇವರ ವರಬಲದಿಂದ ಆ ತಾರಕಾಸುರನು ಅಜರಾಮರನಾಗಿದ್ದ. ಆದ್ದರಿಂದ ಅವನನ್ನು ಸೋಲಿಸಲಾಗುತ್ತಿರಲಿಲ್ಲ. ದೇವತೆಗಳು ಅವನೊಡನೆ ಅನೇಕ ವಿಧವಾದ ಯುದ್ಧಗಳನ್ನು ಮಾಡಿ ಸೋತುಹೋದರು. ಅವರೆಲ್ಲರೂ ಬ್ರಹ್ಮದೇವರ ಬಳಿಗೆ ಹೋಗಿ ಮೊರೆಯಿಟ್ಟರು. ದೇವತೆಗಳ ದುಃಖವನ್ನು ಬ್ರಹ್ಮದೇವರು ಅರಿತುಕೊಂಡರು. (ಚೌ/೧-೪)

**ದೋ – ಸಬ ಸನ ಕಹಾ ಬುಝಾಇ ಬಿಧಿ ದನುಜ ನಿಧನ ತಬ ಹೋಇ ।**
**ಸಂಭು ಸುಕ್ರ ಸಂಭೂತ ಸುತ ಏಹಿ ಜೀತಇ ರನ ಸೋಇ ॥ ೮೨ ॥**

ಬ್ರಹ್ಮದೇವರು ಎಲ್ಲರನ್ನು ಸಮಾಧಾನಪಡಿಸಿ, ''ಶಿವನ ತೇಜಾಂಶದಿಂದ ಹುಟ್ಟಿದ ಕುಮಾರನಿಂದ ಮಾತ್ರ ತಾರಕಾಸುರನಿಗೆ ಸಾವು. ಅವನನ್ನು ಯುದ್ಧದಲ್ಲಿ ಇವನೊಬ್ಬನೇ ಗೆಲ್ಲಬಲ್ಲನು.'' (ದೋ/೮೨)

ಚೌ – ಮೋರ ಕಹಾ ಸುನಿ ಕರಹು ಉಪಾಈ । ಹೋಇಹಿ ಈಸ್ವರ ಕರಿಹಿ ಸಹಾಈ ॥
ಸತೀಂ ಜೋ ತಜೀ ದಚ್ಛ ಮಖ ದೇಹಾ । ಜನಮೀ ಜಾಇ ಹಿಮಾಚಲ ಗೇಹಾ ॥ ೧ ॥
ತೆಹಿಂ ತಪು ಕೀನ್ಹ ಸಂಭು ಪತಿ ಲಾಗೀ । ಸಿವ ಸಮಾಧಿ ಬೈಠೇ ಸಬು ತ್ಯಾಗೀ ॥
ಜದಪಿ ಅಹಇ ಅಸಮಂಜಸ ಭಾರೀ । ತದಪಿ ಬಾತ ಏಕ ಸುನಹು ಹಮಾರೀ ॥ ೨ ॥
ಪಠವಹು ಕಾಮು ಜಾಇ ಸಿವ ಪಾಹೀಂ । ಕರೈ ಛೋಭು ಸಂಕರ ಮನ ಮಾಹೀಂ ॥
ತಬ ಹಮ ಜಾಇ ಸಿವಹಿ ಸಿರ ನಾಈ । ಕರವಾಉಬ ಬಿಬಾಹು ಬರಿಆಈ ॥ ೩ ॥
ಏಹಿ ಬಿಧಿ ಭಲೆಹಿಂ ದೇವಹಿತ ಹೋಈ । ಮತ ಅತಿ ನೀಕ ಕಹಇ ಸಬು ಕೋಈ ॥
ಅಸ್ತುತಿ ಸುರನ್ಹ ಕೀನ್ಹಿ ಅತಿ ಹೇತೂ । ಪ್ರಗಟೆಉ ಬಿಷಮಬಾನ ಝಷಕೇತೂ ॥ ೪ ॥

ಬ್ರಹ್ಮದೇವರು ಪುನಃ ಹೇಳಿದರು – ''ನಾನು ಹೇಳಿದ್ದನ್ನು ಕೇಳಿ, ಅದರಂತೆ ನಡೆಯಿರಿ. ಭಗವಂತನು ನಿಮಗೆ ಒಳ್ಳೆಯದಾಗಿಸುವನು. ಮನೋರಥವು ಕೈಗೂಡುವುದು. ದಕ್ಷನ ಯಜ್ಞದಲ್ಲಿ ದೇಹತ್ಯಾಗ ಮಾಡಿದ ಸತಿದೇವಿಯು, ಮರಳಿ ಹಿಮವಂತನ ಮಗಳಾಗಿ ಆವಿರ್ಭವಿಸಿದ್ದಾಳೆ. ಅವಳು ಶಂಕರನನ್ನು ವಿವಾಹವಾಗಲು ತಪಸ್ಸನ್ನಾಚರಿಸುವಳು. ಆದರೆ ಶಿವನು ಸರ್ವಸಂಗಪರಿತ್ಯಾಗಿಯಾಗಿ ಧ್ಯಾನಮಗ್ನನಾಗಿರುವನು. ನನ್ನ ಮಾತು ಅಸಮಂಜಸವಿರಬಹುದು; ಆದರೂ ಈ ನನ್ನ ಮಾತನ್ನು ಕೇಳಿರಿ. ನೀವು ಹೋಗಿ ಕಾಮದೇವನನ್ನು ಶಿವನ ಬಳಿಗೆ ಕಳಿಸಿರಿ. ಅವನು ಶಿವನ ಮನಸ್ಸಿನಲ್ಲಿ ಕ್ಷೋಭೆಯನ್ನುಂಟುಮಾಡಿ, ಅವನ ಸಮಾಧಿಭಂಗವಾಗುವಂತೆ ಮಾಡಲೀ. ಬಳಿಕ ನಾವು ಅಲ್ಲಿಗೆ ಹೋಗಿ, ಶಿವನನ್ನು ಪ್ರಾರ್ಥಿಸಿ, ಪಾರ್ವತಿಯೊಡನೆ ಅವನ ವಿವಾಹವು ಜರಗುವಂತೆ ಮಾಡುತ್ತೇವೆ. ದೇವತೆಗಳನ್ನು ರಕ್ಷಿಸಲು ಇದೊಂದೇ ಮಾರ್ಗವಾಗಿದೆ.'' ಬ್ರಹ್ಮನ ಮಾತಿಗೆ ಎಲ್ಲರೂ ಸಂತೋಷಪಟ್ಟರು. ಮತ್ತೆ ದೇವತೆಗಳೆಲ್ಲರೂ ಭಕ್ತಿಯಿಂದ ಕಾಮದೇವರನ್ನು ಸ್ತುತಿಸಿದಾಗ, ಪಂಚಬಾಣನೂ, ಮೀನಕೇತನನೂ ಆದ ಮನ್ಮಥನು ಅಲ್ಲೇ ಮೈದೋರಿದನು. (ಚೌ/೧-೪)

# ಕಾಮದಹನ

**ದೋ – ಸುರನ್ಹ ಕಹೀ ನಿಜ ಬಿಪತಿ ಸಬ ಸುನಿ ಮನ ಕೀನ್ಹ ಬಿಚಾರ ।**
**ಸಂಭು ಬಿರೋಧ ನ ಕುಸಲ ಮೊಹಿ ಬಿಹಸಿ ಕಹೆಉ ಅಸ ಮಾರ ॥ ೮೩ ॥**

ದೇವತೆಗಳು ಮದನನ ಬಳಿ ತಮ್ಮ ಗೋಳನ್ನೆಲ್ಲ ತೋಡಿಕೊಂಡರು. ಅದೆಲ್ಲವನ್ನು ಆಲಿಸಿ ಕಾಮದೇವನು ನಕ್ಕು ನುಡಿದನು – ''ಶಿವನೊಡನೆ ವೈರಕಟ್ಟಿಕೊಂಡರೆ ನನಗೆ ಒಳಿತಾಗದು. (ದೋ/೮೩)

**ಚೌ – ತದಪಿ ಕರಬ ಮೈಂ ಕಾಜು ತುಮ್ಹಾರಾ । ಶ್ರುತಿ ಕಹ ಪರಮ ಧರಮ ಉಪಕಾರಾ ॥**
**ಪರ ಹಿತ ಲಾಗಿ ತಜಇ ಜೋ ದೇಹೀ । ಸಂತತ ಸಂತ ಪ್ರಸಂಸಹಿಂ ತೇಹೀ ॥ ೧ ॥**
**ಅಸ ಕಹಿ ಚಲೆಉ ಸಬಹಿ ಸಿರು ನಾಈ । ಸುಮನ ಧನುಷ ಕರ ಸಹಿತ ಸಹಾಈ ॥**
**ಚಲತ ಮಾರ ಅಸ ಹೃದಯಂ ಬಿಚಾರಾ । ಸಿವ ಬಿರೋಧ ಧ್ರುವ ಮರನು ಹಮಾರಾ ॥ ೨ ॥**
**ತಬ ಆಪನ ಪ್ರಭಾಉ ಬಿಸ್ತಾರಾ । ನಿಜ ಬಸ ಕೀನ್ಹ ಸಕಲ ಸಂಸಾರಾ ॥**
**ಕೋಪೆಉ ಜಬಹಿಂ ಬಾರಿಚರಕೇತೂ । ಛನ ಮಹುಂ ಮಿಟೇ ಸಕಲ ಶ್ರುತಿ ಸೇತೂ ॥ ೩ ॥**
**ಬ್ರಹ್ಮಚರ್ಜ ಬ್ರತ ಸಂಜಮ ನಾನಾ । ಧೀರಜ ಧರಮ ಗ್ಯಾನ ಬಿಗ್ಯಾನಾ ॥**
**ಸದಾಚಾರ ಜಪ ಜೋಗ ಬಿರಾಗಾ । ಸಭಯ ಬಿಬೇಕ ಕಟಕು ಸಬು ಭಾಗಾ ॥ ೪ ॥**

ಆದರೂ ನಾನು ನಿಮಗೆ ಸಹಾಯಮಾಡುತ್ತೇನೆ. ಪರೋಪಕಾರವೇ ಪರಮಧರ್ಮವೆಂದು ವೇದಗಳು ಹೇಳುತ್ತವೆ. ಪರರ ಹಿತಕ್ಕಾಗಿ ತನ್ನ ಶರೀರವನ್ನು ತ್ಯಾಗಮಾಡುವವನನ್ನು ಸಂತರು ಸದಾ ಕೊಂಡಾಡುತ್ತಾರೆ.'' ಹೀಗೆ ಹೇಳಿ ಎಲ್ಲರಿಗೂ ತಲೆವಾಗಿ, ಮನ್ಮಥನು ತನ್ನ ಕುಸುಮಕೋದಂಡವನ್ನು ಧರಿಸಿ, ಪುಷ್ಪಬಾಣಗಳನ್ನು ಸಜ್ಜುಗೊಳಿಸಿ, ವಸಂತನೇ ಮೊದಲಾದ ಸಹಾಯಕರೊಂದಿಗೆ ಹೊರಟನು. ''ಶಿವನಲ್ಲಿನ ವೈರದಿಂದ ತನಗೆ ಮರಣವು ನಿಶ್ಚಿತ''ವೆಂದು ಮನಸ್ಸಿನಲ್ಲಿ ಅಂದುಕೊಂಡನು. ಬಳಿಕ ಅವನು ತನ್ನ ಪ್ರಭಾವವನ್ನು ಬೀರಿದನು. ಇಡೀ ಜಗತ್ತೇ ಅವನ ಅಂಕಿತಕ್ಕೆ ಒಳಗಾಯಿತು. ಮೀನಕೇತನನ ಭ್ರೂಭಂಗಮಾತ್ರದಿಂದ ವೇದಮರ್ಯಾದೆಗಳೆಲ್ಲವೂ ಅಡಗಿಹೊದವು. ಬ್ರಹ್ಮಚರ್ಯ, ವ್ರತ-ನಿಯಮಗಳು, ನಾನಾವಿಧವಾದ ಸಂಯಮಗಳು, ಧೃತಿ, ಧೈರ್ಯ, ಜ್ಞಾನ, ವಿಜ್ಞಾನ, ಸದಾಚಾರ, ಜಪ, ಯೋಗ, ವೈರಾಗ್ಯ ಮೊದಲಾದ ವಿವೇಕದ ಇಡೀ ಸೇನೆಯು ಹೆದರಿ ಓಟಕಿತ್ತಿತು. (ಚೌ/೧-೪)

**ಛಂ – ಭಾಗೆಉ ಬಿಬೇಕು ಸಹಾಯ ಸಹಿತ ಸೊ ಸುಭಟ ಸಂಜುಗ ಮಹಿ ಮುರೇ ।**
**ಸದಗ್ರಂಥ ಪರ್ಬತ ಕಂದರನ್ಹಿ ಮಹುಂ ಜಾಇ ತೆಹಿ ಅವಸರ ದುರೇ॥**
**ಹೊನಿಹಾರ ಕಾ ಕರತಾರ ಕೋ ರಖವಾರ ಜಗ ಖರಭರು ಪರಾ।**
**ದುಇ ಮಾಥ ಕೆಹಿ ರತಿನಾಥ ಜೆಹಿ ಕಹುಂ ಕೋಪಿ ಕರ ಧನು ಸರು ಧರಾ॥**

ವಿವೇಕವು ತನ್ನ ಸಹಾಯಕರೊಂದಿಗೆ ಪಲಾಯನ ಮಾಡಿತು. ವಿವೇಕಯೋಧರು ರಣಭೂಮಿಗೆ ಬೆನ್ನು ತಿರುವಿದರು. ಆಗ ಇವೆಲ್ಲವೂ ಸದ್‌ಗ್ರಂಥಗಳೆಂಬ ಪರ್ವತದ ಕಂದರಗಳಲ್ಲಿ ಅಡಗಿಕೊಂಡವು (ಅರ್ಥಾತ್ – ಜ್ಞಾನ-ವೈರಾಗ್ಯ ಸದಾಚಾರ ಮೊದಲಾದವುಗಳು ಕೇವಲ ಗ್ರಂಥಗಳಲ್ಲೇ ಉಳಿದವು. ಅವುಗಳ ಆಚರಣೆಗಳು ನಿಂತುಹೋದುವು). ಜಗತ್ತೆಲ್ಲ ತಳಮಳಿಸಿತು. ಓ ವಿಧಾತನೇ! ಈಗ ಏನಾಗಲಿದೆ? ನಮ್ಮನ್ನು ಕಾಪಾಡುವವರು ಯಾರು? ರತಿನಾಥನು ಕುಪಿತನಾಗಿ ಧನುರ್ಬಾಣಗಳನ್ನು ಹಿಡಿಯುವಂತೆ ಮಾಡಿದ ಆ ಎರಡು ತಲೆಯ ಅಸಾಧಾರಣವ್ಯಕ್ತಿ (ಶೂಲಧಾರಿ) ಯಾರು? (ಛಂ)

**ದೋ – ಜೇ ಸಜೀವ ಜಗ ಅಚರ ಚರ ನಾರಿ ಪುರುಷ ಅಸ ನಾಮ ।**
**ತೇ ನಿಜ ನಿಜ ಮರಜಾದ ತಜಿ ಭಏ ಸಕಲ ಬಸ ಕಾಮ ॥ ೮೪ ॥**

ಜಗತ್ತಿನಲ್ಲಿ ಗಂಡು-ಹೆಣ್ಣು ಎನ್ನಿಸಿಕೊಳ್ಳುವ ಚರಾಚರಪ್ರಾಣಿಗಳೆಲ್ಲವೂ ತಮ್ಮ ಮೇರೆಯನ್ನು ಮೀರಿ ಕಾಮಕ್ಕೆ ವಶರಾದವು. (ದೋ/೮೪)

**ಚೌ – ಸಬ ಕೇ ಹೃದಯಂ ಮದನ ಅಭಿಲಾಷಾ । ಲತಾ ನಿಹಾರಿ ನವಹಿಂ ತರು ಸಾಖಾ ॥**
**ನದೀಂ ಉಮಗಿ ಅಂಬುಧಿ ಕಹುಂ ಧಾಈಂ । ಸಂಗಮ ಕರಹಿಂ ತಲಾವ ತಲಾಈಂ ॥ ೧ ॥**

ಜಹ್ ಅಸಿ ದಸಾ ಜಡನ್ಹ ಕೈ ಬರನೀ । ಕೋ ಕಹಿ ಸಕಇ ಸಚೇತನ ಕರನೀ ॥
ಪಸು ಪಚ್ಛೀ ನಭ ಜಲ ಥಲಚಾರೀ । ಭಏ ಕಾಮಬಸ ಸಮಯ ಬಿಸಾರೀ ॥ ೨ ॥
ಮದನ ಅಂಧ ಬ್ಯಾಕುಲ ಸಬ ಲೋಕಾ । ನಿಸಿ ದಿನು ನಹಿಂ ಅವಲೋಕಹಿಂ ಕೋಕಾ ॥
ದೇವ ದನುಜ ನರ ಕಿನ್ನರ ಬ್ಯಾಲಾ । ಪ್ರೇತ ಪಿಸಾಚ ಭೂತ ಬೇತಾಲಾ ॥ ೩ ॥
ಇನ್ಹ ಕೈ ದಸಾ ನ ಕಹೆಉಂ ಬಖಾನೀ । ಸದಾ ಕಾಮ ಕೇ ಚೇರೇ ಜಾನೀ ॥
ಸಿದ್ಧ ಬಿರಕ್ತ ಮಹಾಮುನಿ ಜೋಗೀ । ತೇಪಿ ಕಾಮಬಸ ಭಏ ಬಿಯೋಗೀ ॥ ೪ ॥

ಎಲ್ಲರ ಹೃದಯದಲ್ಲಿಯೂ ಕಾಮಕ್ರೀಡೆಯ ಆಸೆ ಚಿಗುರಿತು. ಲತೆಗಳನ್ನು ನೋಡಿ ಮರಗಳ ರೆಂಬೆಗಳು ಬಾಗಿದವು. ನದಿಗಳು ಕ್ಷುಬ್ಧವಾಗಿ ಸಮುದ್ರದತ್ತ ಧಾವಿಸಿದವು. ಕೆರೆ, ಕೆಟ್ಟೆಗಳೂ ಕೂಡ ತಹತಹಿಸಿ ಸಂಗಮಗೊಂಡವು. ಜಡದಕತೆಯೇ ಹೀಗಾದರೆ ಚೇತನದ ಕತೆಯನ್ನು ಕೇಳಬೇಕೇ? ಆಕಾಶ, ನೆಲ, ಜಲದ ಮೇಲೆ ವಿಹರಿಸುವ ಎಲ್ಲ ಪಶು-ಪಕ್ಷಿಗಳು ಸಮಯಾಸಮಯದ ಪ್ರಜ್ಞೆಯನ್ನು ಮರೆತು ಕಾಮವಶವಾದವು. ಜನರೆಲ್ಲರೂ ಕಾಮಾಂಧರಾಗಿ ತಲ್ಲಣಿಸಿ ಹೋದರು. ಚಕ್ರವಾಕಗಳಿಗೆ ಹಗಲು ರಾತ್ರಿಗಳ ಪರಿವೆ ಇಲ್ಲ. ದೇವತೆಗಳು, ದೈತ್ಯರು, ಮಾನವರು, ಕಿನ್ನರರು, ನಾಗರು, ಭೂತ ಬೇತಾಳ ಪಿಶಾಚಾದಿಗಳು ಸಹಜವಾಗಿಯೇ ಕಾಮದ ಗುಲಾಮರು. ಇವರ ಕುರಿತು ಹೇಳಬೇಕಾಗಿಯೇ ಇಲ್ಲ. ಆದರೆ ಸಿದ್ಧರೂ, ವಿರಕ್ತರೂ, ಮಹಾಮುನಿಗಳೂ, ಯೋಗಿಗಳೂ ಕೂಡ ಕಾಮಕ್ಕೆ ವಶರಾಗಿ ಯೋಗಭ್ರಷ್ಟರಾದರು. ವಿರಹತಾಪವನ್ನು ಅನುಭವಿಸಿದರು. (ಚೌ/೧-೪)

ಛಂ – ಭಏ ಕಾಮಬಸ ಜೋಗೀಸ ತಾಪಸ ಪಾವँರನ್ಹಿ ಕೀ ಕೋ ಕಹೇ ।
ದೇಖಹಿಂ ಚರಾಚರ ನಾರಿಮಯ ಜೇ ಬ್ರಹ್ಮಮಯ ದೇಖತ ರಹೇ ॥
ಅಬಲಾ ಬಿಲೋಕಹಿಂ ಪುರುಷಮಯ ಜಗು ಪುರುಷ ಸಬ ಅಬಲಾಮಯಂ ।
ದುಇ ದಂಡ ಭರಿ ಬ್ರಹ್ಮಾಂಡ ಭೀತರ ಕಾಮಕೃತ ಕೌತುಕ ಅಯಂ ॥

ಯೋಗೀಶ್ವರರೂ, ತಪಸ್ವಿಗಳೂ ಕಾಮವಶರಾದರೆಂದರೆ ಇನ್ನು ಪಾಮರ ಮನುಷ್ಯರ ಸಂಗತಿ ಹೇಳುವುದೇನು? ಸಮಸ್ತ ಚರಾಚರ ಜಗತ್ತು ಬ್ರಹ್ಮಮಯವೆಂದು ಭಾವಿಸುವವರಿಗೂ ಕೂಡ ಜಗತ್ತು ನಾರೀಮಯವಾಗಿ ಕಂಡಿತು. ಸ್ತ್ರೀಯರಿಗೆ ಜಗತ್ತೆಲ್ಲವೂ ಪುರುಷಮಯವಾಗಿ ಕಂಡರೆ, ಪುರುಷರಿಗೆ ಸ್ತ್ರೀಮಯವಾಗಿ ಗೋಚರಿಸಿತು. ಎರಡು ಘಳಿಗೆಯ ತನಕ ಇಡೀ ಬ್ರಹ್ಮಾಂಡದಲ್ಲಿ ಕಾಮದೇವನ ಚಮತ್ಕಾರ, ಮನ್ಮಥನ ಮಥನ ಕೋಲಾಹಲ ವಿಜೃಂಭಿಸಿತು. (ಛಂ)

ಸೋ – ಧರೀ ನ ಕಾಹೂँ ಧೀರ ಸಬ ಕೇ ಮನ ಮನಸಿಜ ಹರೇ ॥
ಜೇ ರಾಖೇ ರಘುಬೀರ ತೇ ಉಬರೇ ತೆಹಿ ಕಾಲ ಮಹುँ ॥ ೮೫ ॥

ಮನೋಧೈರ್ಯವು ಯಾರಿಗೂ ಇಲ್ಲದಂತಾಯಿತು. ಮನಸಿಜನು ಎಲ್ಲರ ಮನಸ್ಸನ್ನೂ ಅಪಹರಿಸಿದ್ದನು. ರಘುನಾಥನ ಕೃಪೆಗೆ ಪಾತ್ರರಾದವರು ಮಾತ್ರ ಮಾರನಟ್ಟುಳಿಯಿಂದ ತಪ್ಪಿಸಿಕೊಂಡರು. (ಸೋ/೮೫)

ಚೌ – ಉಭಯ ಘರೀ ಅಸ ಕೌತುಕ ಭಯಊ । ಜೌ ಲಗಿ ಕಾಮು ಸಂಭು ಪಹಿಂ ಗಯಊ ॥
ಸಿವಹಿ ಬಿಲೋಕಿ ಸಸಂಕೆಉ ಮಾರೂ । ಭಯಉ ಜಥಾ ಥಿತಿ ಸಬು ಸಂಸಾರೂ ॥ ೧ ॥
ಭಏ ತುರತ ಸಬ ಜೀವ ಸುಖಾರೇ । ಜಿಮಿ ಮದ ಉತರಿ ಗಏँ ಮತವಾರೇ ॥
ರುದ್ರಹಿ ದೇಖಿ ಮದನ ಭಯ ಮಾನಾ । ದುರಾಧರಷ ದುರ್ಗಮ ಭಗವಾನಾ ॥ ೨ ॥
ಫಿರತ ಲಾಜ ಕಛು ಕರಿ ನಹಿಂ ಜಾಈ । ಮರನು ಠಾನಿ ಮನ ರಚೆಸಿ ಉಪಾಈ ॥
ಪ್ರಗಟೆಸಿ ತುರತ ರುಚಿರ ರಿತುರಾಜಾ । ಕುಸುಮಿತ ನವ ತರು ರಾಜಿ ಬಿರಾಜಾ ॥ ೩ ॥
ಬನ ಉಪಬನ ಬಾಪಿಕಾ ತಡಾಗಾ । ಪರಮ ಸುಭಗ ಸಬ ದಿಸಾ ಬಿಭಾಗಾ ॥
ಜಹँ ತಹँ ಜನು ಉಮಗತ ಅನುರಾಗಾ । ದೇಖಿ ಮುಏಹುँ ಮನ ಮನಸಿಜ ಜಾಗಾ ॥ ೪ ॥

ಮನ್ಮಥನು ಶಿವನನ್ನು ಸಮೀಪಿಸುವವರೆಗೆ, ಎರಡು ಗಳಿಗೆಯವರೆಗೆ ಈ ಲೀಲೆಯು ನಡೆಯುತ್ತಲೇ ಇತ್ತು. ಶಿವನನ್ನು ನೋಡುತ್ತಲೇ ಕಾಮನು ಹೆದರಿ ಗಡ-ಗಡ ನಡುಗಿಹೋದನು. ಆಗ ಪ್ರಪಂಚವು ಯಥಾಸ್ಥಿತಿಗೆ ಮರಳಿತು. ಕೂಡಲೇ ಮದಾಂಧರು ಮತ್ತು ಇಳಿದ ನಂತರ ಶಾಂತರಾಗುವಂತೆ ಜೀವಿಗಳೆಲ್ಲವೂ ಶಾಂತಿಯನ್ನು ಹೊಂದಿದವು. ದುರ್ಜಯನೂ, ದುರ್ಗಮನನೂ ಆದ ಭಗವಾನ್ (ಷಡ್ಗುಣೈಶ್ವರ್ಯ ಸಂಪನ್ನ.) ರುದ್ರನನ್ನು ನೋಡಿ ಮದನನು ಭಯದಿಂದ

ತಲ್ಲಣಿಸಿಹೋದನು. ಹಿಂದಿರುಗಿ ಹೋದರೆ ಅಪಮಾನ. ಮುಂದಕ್ಕೆ ಹೋಗಲಾಗುವುದಿಲ್ಲ (ಮುಂದೆ ದರಿ, ಹಿಂದೆ ಹುಲಿ). ಹೀಗೆ ಮನ್ಮಥನ ಸ್ಥಿತಿ ಆಯಿತು. ಕೊನೆಗೆ ಮನದಲ್ಲಿ ಮಡಿಯಲು ನಿಶ್ಚಯಿಸಿ ಅವನು ಒಂದು ಉಪಾಯ ಮಾಡಿದನು. ಕೂಡಲೇ ವಸಂತಋತುವನ್ನು ಪ್ರೇರೇಪಿಸಿದನು. ಎಲ್ಲ ವೃಕ್ಷಗಳು ಚಿಗುರೊಡೆದು ಪುಷ್ಪಭರಿತವಾಗಿ ತರುಪಂಕ್ತಿಗಳು ಕಂಗೊಳಿಸಿದವು. ವನ, ಉಪವನ, ಬಾವಿ, ಕೆರೆ ಹಾಗೂ ಎಲ್ಲ ದಿಗ್ವಿಭಾಗಗಳಲ್ಲೂ ಪ್ರೇಮವೇ ಚೆಲ್ಲವರಿಯಿತು. ಈ ದೃಶ್ಯವು ಮರಣೋನ್ಮುಖನಾದವನ ಮನಸ್ಸಿನಲ್ಲಿಯೂ ಕಾಮೋದ್ದೀಪನವಾಗುವಂತಾಯಿತು. (ಚೌ/೧-೪)

**ಛಂ – ಜಾಗಇ ಮನೋಭವ ಮುಏಹುಂ ಮನ ಬನ ಸುಭಗತಾ ನ ಪರೈ ಕಹೀ।**
**ಸೀತಲ ಸುಗಂಧ ಸುಮಂದ ಮಾರುತ ಮದನ ಅನಲ ಸಖಾ ಸಹೀ॥**
**ಬಿಕಸೇ ಸರನ್ಹಿ ಬಹು ಕಂಜ ಗುಂಜತ ಪುಂಜ ಮಂಜುಲ ಮಧುಕರಾ।**
**ಕಲಹಂಸ ಪಿಕ ಸುಕ ಸರಸ ರವ ಕರಿ ಗಾನ ನಾಚಹಿಂ ಅಪಛರಾ॥**

ಸತ್ತುಹೋದ ಮನಸ್ಸಿನಲ್ಲಿಯೂ ಕೂಡ ಕಾಮವು ಜಾಗ್ರತವಾಯಿತು. ವನಸಿರಿಯ ಚೆಲುವಂತೂ ಹೇಳತೀರದು. ಸುಗಂಧಶೀತಲಯುಕ್ತವಾಗಿ ಬೀಸುವ ಮಂದಮಾರುತವು ಕಾಮಾಗ್ನಿಯೊಡನೆ ತನಗಿರುವ ಮೈತ್ರಿಯನ್ನು ತೋರ್ಪಡಿಸಿತು. ಸರೋವರಗಳ ತುಂಬಾ ಕಮಲಗಳು ಅರಳಿದವು. ಅವುಗಳ ಮೇಲೆ ದುಂಬಿಯ ಹಿಂಡುಗಳು ಝೇಂಕರಿಸತೊಡಗಿವು. ಕಲಹಂಸ, ಶುಕ, ಪಿಕಗಳು, ಮಧುರವಾಗಿ ಕಲರನ ಮಾಡತೊಡಗಿದವು. ಅಪ್ಸರೆಯರು ಮಧುರಸಂಗೀತದೊಂದಿಗೆ ಅದ್ಭುತವಾಗಿ ನಾಟ್ಯವಾಡತೊಡಗಿದರು. (ಛಂ)

**ದೋ – ಸಕಲ ಕಲಾ ಕರಿ ಕೋಟಿ ಬಿಧಿ ಹಾರೆಉ ಸೇನ ಸಮೇತ ।**
**ಚಲೀ ನ ಅಚಲ ಸಮಾಧಿ ಸಿವ ಕೋಪೆಉ ಹೃದಯನಿಕೇತ ॥ ೮೬ ॥**

ಮನ್ಮಥನು ತನ್ನ ಪರಿವಾರದೊಂದಿಗೆ ಕೋಟಿ-ಕೋಟಿ ಕಲೆಗಳನ್ನು (ಉಪಾಯಗಳನ್ನು) ಪ್ರದರ್ಶಿಸಿ (ಮಾಡಿ) ಸೋತು ಹೋದನು. ಆದರೆ ಶಿವನ ತಪಸ್ಸಮಾಧಿಯು ಸ್ವಲ್ಪವೂ ಕದಲಲಿಲ್ಲ. ಈಗ ಮದನನು ಕ್ರೋಧಗೊಂಡನು. (ದೋ/೮೬)

**ಚೌ – ದೇಖಿ ರಸಾಲ ಬಿಟಪ ಬರ ಸಾಖಾ। ತೆಹಿ ಪರ ಚಢೆಉ ಮದನು ಮನ ಮಾಖಾ॥**
**ಸುಮನ ಚಾಪ ನಿಜ ಸರ ಸಂಧಾನೇ। ಅತಿ ರಿಸ ತಾಕಿ ಶ್ರವನ ಲಗಿ ತಾನೇ॥ ೧ ॥**
**ಛಾಡೇ ಬಿಷಮ ಬಿಸಿಖ ಉರ ಲಾಗೇ। ಛೂಟಿ ಸಮಾಧಿ ಸಂಭು ತಬ ಜಾಗೇ॥**
**ಭಯಉ ಈಸ ಮನ ಛೋಭು ಬಿಸೇಷೀ। ನಯನ ಉಘಾರಿ ಸಕಲ ದಿಸಿ ದೇಖೀ॥ ೨ ॥**
**ಸೌರಭ ಪಲ್ಲವ ಮದನು ಬಿಲೋಕಾ। ಭಯಉ ಕೋಪು ಕಂಪೆಉ ತ್ರೈಲೋಕಾ॥**
**ತಬ ಸಿವ್ ತೀಸರ ನಯನ ಉಘಾರಾ। ಚಿತವತ ಕಾಮು ಭಯಉ ಜರಿ ಛಾರಾ ॥ ೩ ॥**
**ಹಾಹಾಕಾರ ಭಯಉ ಜಗ ಭಾರೀ। ಡರಪೇ ಸುರ ಭಏ ಅಸುರ ಸುಖಾರೀ॥**
**ಸಮುಝಿ ಕಾಮಸುಖು ಸೋಚಹಿಂ ಭೋಗೀ। ಭಏ ಅಕಂಟಕ ಸಾಧಕ ಜೋಗೀ॥ ೪ ॥**

ಅವನು ಮಾವಿನ ಮರದ ಒಂದು ಅಂದವಾದ ಕೊಂಬೆಯನ್ನು ನೋಡಿ, ಕೆರಳಿ ಅದರ ಮೇಲೇರಿದನು. ಅವನು ತನ್ನ ಕುಸುಮಚಾಪಕ್ಕೆ ಪಂಚಪುಷ್ಪಬಾಣಗಳನ್ನು ಹೂಡಿದನು. ಅತ್ಯಂತ ಕ್ರೋಧದಿಂದ ಅವನು ಗುರಿಯತ್ತ ನಿಟ್ಟಿಸಿ, ಬಿಲ್ಲಿನ ಹುರಿಯನ್ನು ಕಿವಿವರೆಗೆ ಸೆಳೆದನು. ಕಾಮದೇವನು ತೀಕ್ಷ್ಣವಾದ ಪಂಚಬಾಣಗಳನ್ನು ಒಂದೇಸಾರಿಗೆ ಪ್ರಯೋಗಿಸಿದನು. ಅವು ನೇರವಾಗಿ ಶಿವನ ಹೃದಯವನ್ನು ತಾಗಿದವು. ಆಗ ಅವನ ಸಮಾಧಿ ಭಂಗವಾಯಿತು. ಅವನು ಎಚ್ಚರಗೊಂಡ. ಮನಸ್ಸು ಕದಡಿಹೋಯಿತು. ಅವನು ಕಣ್ತೆರೆದು ಸುತ್ತಲೂ ನೋಡಿದನು. ಮಾಂದಳಿರ ಮರೆಯಲ್ಲಿದ್ದ ಮದನನನ್ನು ಕಂಡದ್ದೇ ತಡ, ಅವನಿಗೆ ಬೆಟ್ಟದಂತಹ ಸಿಟ್ಟು ಬಂತು. ಅದನ್ನು ಕಂಡು ಮೂರು ಲೋಕಗಳು ಕಂಪಿಸಿದವು. ಆಗ ಮುಕ್ಕಣ್ಣನು ತನ್ನ ಮೂರನೆಯ ಕಣ್ಣನ್ನು ತೆರೆದ. ಅದರಿಂದ ನೋಡುತ್ತಲೇ ಕಾಮನು ಸುಟ್ಟು ಬೂದಿಯಾದ. ಜಗತ್ತಿನಲ್ಲೆಲ್ಲ ಹಾಹಾಕಾರ ಹಬ್ಬಿತು. ದೇವತೆಗಳು ಹೆದರಿ ಕಂಗಾಲಾದರು. ದೈತ್ಯರು ಸಂತಸಗೊಂಡರು. ವಿಷಯಲೋಲುಪರು ಕಾಮಸುಖವನ್ನು ನೆನೆದು ಚಿಂತಿಸತೊಡಗಿದರು. ಯೋಗಸಾಧಕರು ನಿಷ್ಕಂಟಕರಾದರು. (ಚೌ/೧-೪)

**ಛಂ – ಜೋಗೀ ಅಕಂಟಕ ಭಏ ಪತಿ ಗತಿ ಸುನತ ರತಿ ಮುರುಛಿತ ಭಈ ।**
**ರೋದತಿ ಬದತಿ ಬಹು ಭಾಂತಿ ಕರುನಾ ಕರತಿ ಸಂಕರ ಪಹಿಂ ಗಈ ॥**

**ಅತಿ ಪ್ರೇಮ ಕರಿ ಬಿನತೀ ಬಿಬಿಧ ಬಿಧಿ ಜೋರಿ ಕರ ಸನ್ಮುಖ ರಹೀ ।**
**ಪ್ರಭು ಆಸುತೋಷ ಕೃಪಾಲ ಸಿವ ಅಬಲಾ ನಿರಖಿ ಬೋಲೇ ಸಹೀ ॥**

ಯೋಗಿಗಳು ನಿಷ್ಕಂಟಕರಾದರು ಕಾಮದೇವನ ಪತ್ನೀ ರತೀದೇವಿಯು ತನ್ನ ಪತಿಯ ಮರಣವಾರ್ತೆಯನ್ನು ಕೇಳಿ ಮೂರ್ಛೆಹೋದಳು. ಅವಳು ಅಳುತ್ತ-ಅಳುತ್ತ, ಕರೆಯುತ್ತಾ, ಪರಿಪರಿಯಾಗಿ ಹಲುಬುತ್ತಾ, ಶಿವನ ಬಳಿಗೆ ಧಾವಿಸಿದಳು. ಅತ್ಯಂತ ಪ್ರೇಮದಿಂದ ವಿವಿಧರೀತಿಯಿಂದ ಬಿನ್ನಹಮಾಡುತ್ತಾ, ಕೈಜೋಡಿಸಿ ಬೇಡಿಕೊಂಡಳು. ಆಶುತೋಷನಾದ, ಕೃಪಾಳು ಶಿವನು ಆ ಅಬಲೆಯನ್ನು ಕಂಡು ಕರಗಿ ಈ ರೀತಿ ಹೇಳಿದನು – (ಛಂ)

**ದೋ – ಅಬ ತೇಂ ರತಿ ತವ ನಾಥ ಕರ ಹೋಇಹಿ ನಾಮು ಅನಂಗು ।**
**ಬಿನು ಬಪು ಬ್ಯಾಪಿಹಿ ಸಬಹಿ ಪುನಿ ಸುನು ನಿಜ ಮಿಲನ ಪ್ರಸಂಗು ॥ ೮೭ ॥**

ಎಲೈ ರತಿಯೇ! ಇಂದಿನಿಂದ ನಿನ್ನ ಗಂಡನು ಅನಂಗನೆಂದು ಕರೆಸಿಕೊಳ್ಳುವನು. ಅವನು ಶರೀರವಿಲ್ಲದೆಯೇ ಎಲ್ಲ ಜಗತ್ತನ್ನು ವ್ಯಾಪಿಸುವನು. ನೀನು ನಿನ್ನ ಗಂಡನನ್ನು ಸೇರುವ ಪ್ರಸಂಗವನ್ನು ಕೇಳು – (ದೋ/೮೭)

**ಚೌ – ಜಬ ಜದುಬಂಸ ಕೃಷ್ನ ಅವತಾರಾ । ಹೋಇಹಿ ಹರನ ಮಹಾ ಮಹಿಭಾರಾ ॥**
**ಕೃಷ್ನ ತನಯ ಹೋಇಹಿ ಪತಿ ತೋರಾ । ಬಚನು ಅನ್ಯಥಾ ಹೋಇ ನ ಮೋರಾ ॥ ೧ ॥**
**ರತಿ ಗವನೀ ಸುನಿ ಸಂಕರ ಬಾನೀ । ಕಥಾ ಅಪರ ಅಬ ಕಹಉಂ ಬಖಾನೀ ॥**
**ದೇವನ್ಹ ಸಮಾಚಾರ ಸಬ ಪಾಏ । ಬ್ರಹ್ಮಾದಿಕ ಬೈಕುಂಠ ಸಿಧಾಏ ॥ ೨ ॥**
**ಸಬ ಸುರ ಬಿಷ್ನು ಬಿರಂಚಿ ಸಮೇತಾ । ಗಏ ಜಹಾಂ ಸಿವ ಕೃಪಾನಿಕೇತಾ ॥**
**ಪೃಥಕ ಪೃಥಕ ತಿನ್ಹ ಕೀನ್ಹಿ ಪ್ರಸಂಸಾ । ಭಏ ಪ್ರಸನ್ನ ಚಂದ್ರ ಅವತಂಸಾ ॥ ೩ ॥**
**ಬೋಲೇ ಕೃಪಾಸಿಂಧು ಬೃಷಕೇತೂ । ಕಹಹು ಅಮರ ಆಏ ಕೆಹಿ ಹೇತೂ ॥**
**ಕಹ ಬಿಧಿ ತುಮ್ಹ ಪ್ರಭು ಅಂತರಜಾಮೀ । ತದಪಿ ಭಗತಿ ಬಸ ಬಿನವಉಂ ಸ್ವಾಮೀ ॥ ೪ ॥**

''ಭೂಭಾರವನ್ನು ಇಳುಹಲು ಶ್ರೀಹರಿಯು ಯದುವಂಶದಲ್ಲಿ ಕೃಷ್ಣನಾಗಿ ಅವತರಿಸುವನು. ಆಗಲೇ ನಿನ್ನ ಪತಿಯು ಅವನಿಗೆ ಪ್ರದ್ಯುಮ್ನನೆಂಬ ಮಗನಾಗಿ ಜನಿಸುವನು. ಈ ನನ್ನ ಮಾತುಗಳು ಸತ್ಯವೆಂದೇ ತಿಳಿ. ಶಿವನ ಅಭಯವಾಣಿಯನ್ನು ಕೇಳಿ ರತಿದೇವಿಯು ಹೊರಟುಹೋದಳು.

ಈಗ ಮತ್ತೊಂದು ಕಥೆಯನ್ನು ಕೇಳು – ಬ್ರಹ್ಮಾದಿದೇವತೆಗಳು ಈ ಸಮಾಚಾರವನ್ನು ಕೇಳಿ, ನೇರವಾಗಿ ವೈಕುಂಠಕ್ಕೆ ತೆರಳಿದರು. ಬಳಿಕ ಮಹಾವಿಷ್ಣುವು ಅವರೆಲ್ಲರನ್ನು ಕರಕೊಂಡು ಪರಮೇಶ್ವರನ ಸನ್ನಿಧಿಗೆ ಬಂದರು. ಅವರೆಲ್ಲರೂ ಚಂದ್ರಶೇಖರನನ್ನು ಬೇರೆ-ಬೇರೆಯಾಗಿ ಸ್ತುತಿಸಿದರು. ಆಗ ದಯಾಳುವಾದ ಪರಶಿವನು ಪ್ರಸನ್ನನಾಗಿ – ''ದೇವತೆಗಳಿರಾ! ನೀವು ಯಾವ ಕಾರಣಕ್ಕೆ ಬರೋಣವಾಯಿತು?'' ಎಂದು ಕೇಳಿದನು. ಬ್ರಹ್ಮದೇವರು – ಪ್ರಭೋ! ನೀನು ಅಂತರ್ಯಾಮಿಯಾಗಿರುವೆ. ಆದರೂ ಭಕ್ತಿವಶ್ಯನು. ನಮ್ಮ ಮನವಿಯನ್ನು ಆಲಿಸಬೇಕು. (ಚೌ/೧-೪)

## ಗಿರಿಜಾ ಕಲ್ಯಾಣ

**ದೋ – ಸಕಲ ಸುರನ್ಹ ಕೇ ಹೃದಯಂ ಅಸ ಸಂಕರ ಪರಮ ಉಛಾಹು ।**
**ನಿಜ ನಯನನ್ಹಿ ದೇಖಾ ಚಹಹಿಂ ನಾಥ ತುಮ್ಹಾರ ಬಿಬಾಹು ॥ ೮೮ ॥**

''ಸ್ವಾಮೀ! ನಿನ್ನ ವಿವಾಹಮಹೋತ್ಸವವನ್ನು ಕಣ್ಣಾರೆ ನೋಡಬೇಕೆಂಬ ಬಯಕೆ ಎಲ್ಲ ದೇವತೆಗಳ ಹೃದಯದಲ್ಲಿ ಇದೆ. (ದೋ/೮೮)

**ಚೌ – ಯಹ ಉತ್ಸವ ದೇಖಿಅ ಭರಿ ಲೋಚನ । ಸೋಇ ಕಛು ಕರಹು ಮದನ ಮದ ಮೋಚನ ॥**
**ಕಾಮು ಜಾರಿ ರತಿ ಕಹುಂ ಬರು ದೀನ್ಹಾ । ಕೃಪಾಸಿಂಧು ಯಹ ಅತಿ ಭಲ ಕೀನ್ಹಾ ॥ ೧ ॥**
**ಸಾಸತಿ ಕರಿ ಪುನಿ ಕರಹಿಂ ಪಸಾಊ । ನಾಥ ಪ್ರಭುನ್ಹ ಕರ ಸಹಜ ಸುಭಾಊ ॥**
**ಪಾರಬತೀಂ ತಪು ಕೀನ್ಹ ಅಪಾರಾ । ಕರಹು ತಾಸು ಅಬ ಅಂಗೀಕಾರಾ ॥ ೨ ॥**
**ಸುನಿ ಬಿಧಿ ಬಿನಯ ಸಮುಝಿ ಪ್ರಭು ಬಾನೀ । ಐಸೇಇ ಹೋಉ ಕಹಾ ಸುಖು ಮಾನೀ ॥**
**ತಬ ದೇವನ್ಹ ದುಂದುಭೀಂ ಬಜಾಈಂ । ಬರಷಿ ಸುಮನ ಜಯ ಜಯ ಸುರ ಸಾಈ ॥ ೩ ॥**

**ಅವಸರು ಜಾನಿ ಸಪ್ತರಿಷಿ ಆಏ । ತುರತಹಿಂ ಬಿಧಿ ಗಿರಿಭವನ ಪಠಾಏ ॥**
**ಪ್ರಥಮ ಗಏ ಜಹಂ ರಹೀಂ ಭವಾನೀ । ಬೋಲೇ ಮಧುರ ಬಚನ ಛಲ ಸಾನೀ ॥ ೪ ॥**

ಹೇ ಮದನಾರೀ! ನಿನ್ನ ವಿವಾಹವನ್ನು ನಾವೆಲ್ಲ ಕಣ್ತುಂಬ ನೋಡುವಂತಾಗಬೇಕು. ಹೇ ಕೃಪಾಸಿಂಧುವೇ! ಕಾಮನನ್ನು ಭಸ್ಮಮಾಡಿ, ರತಿದೇವಿಗೆ ವರವನ್ನು ಕರುಣಿಸಿದುದು ತುಂಬಾ ಒಳಿತಾಯಿತು. ಪ್ರಭೋ! ಮೊದಲು ದಂಡಿಸಿ, ಬಳಿಕ ಕ್ಷಮಿಸುವುದು ಮಹಾತ್ಮರ ಸಹಜ ಲಕ್ಷಣವು. ಪಾರ್ವತಿದೇವಿಯು ಅಪಾರ ತಪಸ್ಸನ್ನು ಮಾಡಿರುವಳು. ಆಕೆಯನ್ನು ವಧುವಾಗಿ ಸ್ವೀಕರಿಸಬೇಕು.'' ಬ್ರಹ್ಮದೇವರ ಪ್ರಾರ್ಥನೆಯನ್ನು ಲಾಲಿಸಿ, ಶ್ರೀರಾಮಚಂದ್ರನ ಅಪ್ಪಣೆಯನ್ನು ನೆನೆದು, ಶಿವನು ಪ್ರಸನ್ನನಾಗಿ 'ಹಾಗೆಯೇ ಆಗಲಿ' (ತಥಾಸ್ತು) ಎಂದು ಹೇಳಿ ಸಮ್ಮತಿ ಸೂಚಿಸಿದನು. ಆಗ ದೇವ ದುಂದುಭಿಗಳು ಮೊಳಗಿದವು. ಪುಷ್ಪವೃಷ್ಟಿಮಾಡಿ ದೇವತೆಗಳು ಜಯಘೋಷಮಾಡಿದರು. 'ದೇವವಲ್ಲಭನಿಗೆ ಜಯವಾಗಲಿ' ಎಂಬ ಘೋಷ ಎಲ್ಲೆಡೆ ತುಂಬಿತು. ಉಚಿತವಾದ ಅವಕಾಶವನ್ನು ನೋಡಿ ಸಪ್ತರ್ಷಿಗಳು ಅಲ್ಲಿಗೆ ಬಂದರು. ಬ್ರಹ್ಮದೇವರು ಅವರನ್ನು ಕೂಡಲೇ ಹಿಮವಂತನಲ್ಲಿಗೆ ಕಳಿಸಿದರು. ಅವರು ಮೊದಲು ಪಾರ್ವತಿಯಿದ್ದೆಡೆಗೆ ಹೋಗಿ, ಮೃದುವಾಗಿ ಮಧುರ ವಿನೋದ ವಚನಗಳನ್ನು ಆಡಿದರು. (ಚೌ/೧-೪)

**ದೋ – ಕಹಾ ಹಮಾರ ನ ಸುನೆಹು ತಬ ನಾರದ ಕೇಂ ಉಪದೇಸ ।**
**ಅಬ ಭಾ ಝೂಠ ತುಮ್ಹಾರ ಪನ ಜಾರೆಉ ಕಾಮು ಮಹೇಸ ॥ ೮೯ ॥**

''ಆ ಸಮಯದಲ್ಲಿ ನೀನು ನಾರದರ ಮಾತಿಗೆ ಕಿವಿಗೊಟ್ಟು, ನಮ್ಮ ಮಾತನ್ನು ಕೇಳದೆ ಹೋದೆ. ಈಗ ನಿನ್ನ ಪ್ರತಿಜ್ಞೆಯೇ ಸುಳ್ಳಾಯಿತಲ್ಲ. ಮಹಾದೇವನು ಈಗ ಮನ್ಮಥನನ್ನೇ ಭಸ್ಮವಾಗಿಸಿದನಲ್ಲ.'' (ದೋ/೮೯)

**ಮಾಸಪಾರಾಯಣದ ಮೂರನೆಯ ವಿಶ್ರಾಮ**

**ಚೌ – ಸುನಿ ಬೋಲೀಂ ಮುಸುಕಾಇ ಭವಾನೀ । ಉಚಿತ ಕಹೆಹು ಮುನಿಬರ ಬಿಗ್ಯಾನೀ ॥**
**ತುಮ್ಹರೇಂ ಜಾನ ಕಾಮು ಅಬ ಜಾರಾ । ಅಬ ಲಗಿ ಸಂಭು ರಹೇ ಸಬಿಕಾರಾ ॥ ೧ ॥**
**ಹಮರೇಂ ಜಾನ ಸದಾ ಸಿವ ಜೋಗೀ । ಅಜ ಅನವದ್ಯ ಅಕಾಮ ಅಭೋಗೀ ॥**
**ಜೌಂ ಮೈಂ ಸಿವ ಸೇಯೇ ಅಸ ಜಾನೀ । ಪ್ರೀತಿ ಸಮೇತ ಕರ್ಮ ಮನ ಬಾನೀ ॥ ೨ ॥**
**ತೌ ಹಮಾರ ಪನ ಸುನಹು ಮುನೀಸಾ । ಕರಿಹಹಿಂ ಸತ್ಯ ಕೃಪಾನಿಧಿ ಈಸಾ ॥**
**ತುಮ್ಹ ಜೊ ಕಹಾ ಹರ ಜಾರೆಉ ಮಾರಾ । ಸೋಇ ಅತಿ ಬಡ ಅಬಿಬೇಕು ತುಮ್ಹಾರಾ ॥ ೩ ॥**
**ತಾತ ಅನಲ ಕರ ಸಹಜ ಸುಭಾಊ । ಹಿಮ ತೇಹಿ ನಿಕಟ ಜಾಇ ನಹಿಂ ಕಾಊ ॥**
**ಗಏಂ ಸಮೀಪ ಸೋ ಅವಸಿ ನಸಾಈ । ಅಸಿ ಮನ್ಮಥ ಮಹೇಸ ಕೀ ನಾಈ ॥ ೪ ॥**

ಈ ಮಾತನ್ನು ಕೇಳಿ ಪಾರ್ವತಿದೇವಿಯು ಮುಗುಳ್ನಗುತ್ತಾ ಇಂತೆಂದಳು – ''ಜ್ಞಾನಶ್ರೇಷ್ಠರಾದ ಮುನಿವರರೇ! ನೀವು ಉಚಿತವನ್ನೇ ಆಡಿದಿರಿ. ಪರಮೇಶ್ವರನು ಕಾಮನನ್ನು ಈಗಲೇ ಸುಟ್ಟುರುಹಿದನು. ಇದುವರೆಗೂ ಅವನು ಸವಿಕಾರಿ, ಸಕಾಮನಾಗಿದ್ದನೆಂಬುದು ನಿಮ್ಮ ತಿಳುವಳಿಕೆ. ಆದರೆ ನನ್ನ ಅಭಿಪ್ರಾಯದಲ್ಲಿ ಶಿವನು ಸದಾಯೋಗಿಯೂ, ಜನ್ಮರಹಿತನೂ, ಅನಿಂದ್ಯನೂ, ನಿಷ್ಕಾಮನೂ, ನಿರ್ವಿಕಾರನೂ, ನಿರಂಜನನೂ ಆಗಿರುವನು. ಈ ವಿಷಯವನ್ನು ತಿಳಿದುಕೊಂಡೇ ನಾನು ತ್ರಿಕರಣಶುದ್ಧಿಯಿಂದ, ಪ್ರೀತಿಯಿಂದ ಅವನ ಸೇವೆಮಾಡಿದ್ದೆ. ಎಲೈ ಮುನಿಗಳೇ! ಕೇಳಿರಿ. ದಯಾಮಯನಾದ ಪ್ರಭುವು ನನ್ನ ಪ್ರತಿಜ್ಞೆಯನ್ನು ಸಫಲಗೊಳಿಸುವನು. ಶಿವನು ಮನ್ಮಥನನ್ನು ಭಸ್ಮಮಾಡಿದನು ಎಂದು ನೀವು ಹೇಳಿದುದು ದೊಡ್ಡ ಅವಿವೇಕ. ಹಿಮವು ಎಂದಾದರೂ ಅಗ್ನಿಯ ಬಳಿಗೆ ಹೋಗಬಲ್ಲುದೇ? ಒಂದು ಪಕ್ಷ ಸಮೀಪಿಸಿದರೆ ಅದು ಕರಗಿ ಹೋಗುವುದು. ಹಾಗೆಯೇ ಮನ್ಮಥನು ತಾನಾಗಿಯೇ ಮಹಾದೇವನ ಬಳಿಗೆ ಹೋಗಿ ಸುಟ್ಟುಹೋದನು. ಇದು ಸತ್ಯವು, ನ್ಯಾಯವು. (ಚೌ/೧-೪)

**ದೋ – ಹಿಯಂ ಹರಷೇ ಮುನಿ ಬಚನ ಸುನಿ ದೇಖಿ ಪ್ರೀತಿ ಬಿಸ್ವಾಸ ।**
**ಚಲೇ ಭವಾನಿಹಿ ನಾಇ ಸಿರ ಗಏ ಹಿಮಾಚಲ ಪಾಸ ॥ ೯೦ ॥**

ಪಾರ್ವತಿದೇವಿಯ ಮಾತುಗಳನ್ನು ಕೇಳಿ, ಸಪ್ತರ್ಷಿಗಳು, ಅವಳ ಭಕ್ತಿ-ವಿಶ್ವಾಸಗಳಿಂದ ಸಂತಸಗೊಂಡು ಅವರು ಭವಾನಿಯನ್ನು ಶಿರಸಾವಂದಿಸಿ ಹಿಮವಂತನ ಬಳಿಗೆ ಹೋದರು. (ದೋ/೯೦)

**ಚೌ – ಸಬು ಪ್ರಸಂಗು ಗಿರಿಪತಿಹಿ ಸುನಾವಾ । ಮದನ ದಹನ ಸುನಿ ಅತಿ ದುಖು ಪಾವಾ ॥**
**ಬಹುರಿ ಕಹೆಉ ರತಿ ಕರ ಬರದಾನಾ । ಸುನಿ ಹಿಮವಂತ ಬಹುತ ಸುಖು ಮಾನಾ ॥ ೧ ॥**

ಹೃದಯ್ ಬಿಚಾರಿ ಸಂಭು ಪ್ರಭುತಾಈ ।ಸಾದರ ಮುನಿಬರ ಲಿಪಿ ಬೋಲಾಈ ॥
ಸುದಿನು ಸುನಖತು ಸುಘರೀ ಸೋಚಾಈ ।ಬೇಗಿ ಬೇದಬಿಧಿ ಲಗನ ಧರಾಈ ॥೨॥
ಪತ್ರೀ ಸಪ್ತರಿಷಿನ್ಹ ಸೋಇ ದೀನ್ಹೀ ।ಗಹಿ ಪದ ಬಿನಯ ಹಿಮಾಚಲ ಕೀನ್ಹೀ ॥
ಜಾಇ ಬಿಧಿಹಿ ತಿನ್ಹ ದೀನ್ಹಿ ಸೋ ಪಾತೀ ।ಬಾಚತ ಪ್ರೀತಿ ನ ಹೃದಯ್ ಸಮಾತೀ ॥೩॥
ಲಗನ ಬಾಚಿ ಅಜ ಸಬಹಿ ಸುನಾಈ ।ಹರಷೇ ಮುನಿ ಸಬ ಸುರ ಸಮುದಾಈ ॥
ಸುಮನ ಬೃಷ್ಟಿ ನಭ ಬಾಜನ ಬಾಜೇ ।ಮಂಗಲ ಕಲಸ ದಸಹುಁ ದಿಸಿ ಸಾಜೇ ॥೪॥

ಅವರು ಗಿರಿರಾಜನಿಗೆ ಎಲ್ಲ ವೃತ್ತಾಂತವನ್ನು ತಿಳಿಸಿದರು. ಕಾಮದೇವನು ಭಸ್ಮವಾದುದನ್ನು ಕೇಳಿ ಅವನು ದುಃಖಿತನಾದನು. ಮತ್ತೆ ರತಿದೇವಿಗೆ ವರವನ್ನು ಕೊಟ್ಟ ಸಂಗತಿಯನ್ನು ತಿಳಿದು ಹಿಮವಂತನಿಗೆ ತುಂಬಾ ನೆಮ್ಮದಿಯಾಯಿತು. ಶಂಭುವಿನ ಪ್ರಭಾವವನ್ನು ಮನಸ್ಸಿನಲ್ಲಿ ಮೆಲಕುಹಾಕಿ ಹಿಮವಂತನು ಶ್ರೇಷ್ಠ ಮುನಿಗಳನ್ನು ಆದರದಿಂದ ಆಹ್ವಾನಿಸಿದನು. ಅವರಿಂದ ಶುಭದಿನ, ನಕ್ಷತ್ರ, ಘಟಿಗಳನ್ನು ಪರಿಶೀಲಿಸಿ, ವೇದೋಕ್ತನಾಗಿ ವಿವಾಹಮುಹೂರ್ತವನ್ನು ನಿರ್ಣಯಿಸಿದನು. ಅನಂತರ ಲಗ್ನಪತ್ರಿಕೆಯನ್ನು ಬರೆಸಿ, ಅದನ್ನು ಸಪ್ತರ್ಷಿಗಳಿಗೆ ಇತ್ತು, ಅವರಿಗೆ ಪಾದಾಭಿವಂದನೆಗೈದು ವಿನಂತಿಸಿಕೊಂಡನು. ಅವರು ಆ ಲಗ್ನಪತ್ರಿಕೆಯನ್ನು ಬ್ರಹ್ಮದೇವರಿಗೆ ಒಪ್ಪಿಸಿದರು. ಬ್ರಹ್ಮನು ಅದನ್ನು ಓದಿ ಮಹದಾನಂದ ಭರಿತನಾದನು. ಬ್ರಹ್ಮದೇವರು ಲಗ್ನಪತ್ರಿಕೆಯನು ಓದಿ ಎಲ್ಲರಿಗೆ ಆ ಶುಭವಾರ್ತೆಯನ್ನು ತಿಳಿಸಿದನು. ಅದನ್ನು ಕೇಳಿ ಎಲ್ಲ ಮುನಿಗಳು, ದೇವತೆಗಳು ಸಂತೋಷಪಟ್ಟರು. ಆಕಾಶದಿಂದ ಹೂವಿನಮಳೆ ಸುರಿಯತೊಡಗಿತು. ಮಂಗಳವಾದ್ಯಗಳು ಮೊಳಗಿದವು. ಹತ್ತು ದಿಕ್ಕುಗಳಲ್ಲಿ ಮಂಗಳ ಕಲಶಗಳು ಅಲಂಕರಿಸಲ್ಪಟ್ಟವು. (ಚೌ/೧-೪)

ದೋ – ಲಗೇ ಸಁವಾರನ ಸಕಲ ಸುರ ಬಾಹನ ಬಿಬಿಧ ಬಿಮಾನ ।
ಹೋಹಿಁ ಸಗುನ ಮಂಗಲ ಸುಭದ ಕರಹಿಁ ಅಪಛರಾ ಗಾನ ॥೯೧॥

ದೇವತೆಗಳೆಲ್ಲರೂ ತಮ್ಮ-ತಮ್ಮ ವಿವಿಧ ವಾಹನಗಳನ್ನೂ, ವಿಮಾನಗಳನ್ನೂ ಸಜ್ಜುಗೊಳಿಸಿದರು. ಮಂಗಳ ಶಕುನಗಳು ಆಗತೊಡಗಿದವು. ಆನಂದದಿಂದ ಅಪ್ಸರೆಯರು ಹಾಡತೊಡಗಿದರು. (ದೋ/೯೧)

ಚೌ – ಸಿವಹಿ ಸಂಭು ಗನ ಕರಹಿಁ ಸಿಂಗಾರಾ ।ಜಟಾ ಮುಕುಟ ಅಹಿ ಮೌರು ಸಁವಾರಾ ॥
ಕುಂಡಲ ಕಂಕನ ಪಹಿರೇ ಬ್ಯಾಲಾ ।ತನ ಬಿಭೂತಿ ಪಟ ಕೇಹರಿ ಛಾಲಾ ॥೧॥
ಸಸಿ ಲಲಾಟ ಸುಂದರ ಸಿರ ಗಂಗಾ ।ನಯನ ತೀನಿ ಉಪಬೀತ ಭುಜಂಗಾ ॥
ಗರಲ ಕಂಠ ಉರ ನರ ಸಿರ ಮಾಲಾ ।ಅಸಿವ ಬೇಷ ಸಿವಧಾಮ ಕೃಪಾಲಾ ॥೨॥
ಕರ ತ್ರಿಸೂಲ ಅರು ಡಮರು ಬಿರಾಜಾ ।ಚಲೇ ಬಸಹಁ ಚಢಿ ಬಾಜಹಿಁ ಬಾಜಾ ॥
ದೇಖಿ ಸಿವಹಿ ಸುರತ್ರಿಯ ಮುಸುಕಾಹೀಁ ।ಬರ ಲಾಯಕ ದುಲಹಿನಿ ಜಗ ನಾಹೀಁ ॥೩॥
ಬಿಷ್ನು ಬಿರಂಚಿ ಆದಿ ಸುರಬ್ರಾತಾ ।ಚಢಿ ಚಢಿ ಬಾಹನ ಚಲೇ ಬರಾತಾ ॥
ಸುರ ಸಮಾಜ ಸಬ ಭಾಁತಿ ಅನೂಪಾ ।ನಹಿಁ ಬರಾತ ದೂಲಹ ಅನುರೂಪಾ ॥೪॥

ಪ್ರಮಥಗಣಗಳು ಶಿವನನ್ನು ಸಿಂಗರಿಸತೊಡಗಿದರು. ಅವನ ಜಟೆಗಳಿಂದಲೇ ಒಂದು ಮುಕುಟವನ್ನು ರಚಿಸಿದರು. ಅದರ ಮೇಲೆ ಹಾವಿನಬಾಸಿಂಗ ಕಟ್ಟಿದರು. ಶಿವನು ಸರ್ಪಗಳ ಕುಂಡಲಗಳನ್ನೂ, ಕಂಕಣಗಳನ್ನೂ ಧರಿಸಿಕೊಂಡನು. ಸುಂದರ ಶರೀರದಲ್ಲಿ ವಿಭೂತಿಯು ಅಲಂಕರಿಸಿತು. ಬಟ್ಟೆಗೆ ಬದಲಾಗಿ ವ್ಯಾಘ್ರಾಂಬರವನ್ನು ಧರಿಸಿಕೊಂಡನು. ಲಲಾಟದಲ್ಲಿ ಚಂದ್ರನೂ, ಶಿರದಲ್ಲಿ ಗಂಗೆಯೂ, ಮುಖದಲ್ಲಿ ತ್ರಿನೇತ್ರಗಳು, ನಾಗಯಜ್ಞೋಪವೀತವೂ, ಕೊರಳಿನಲ್ಲಿ ಗರಳವೂ, ಎದೆಯಮೇಲೆ ಕಪಾಲಮಾಲೆಯೂ ಶೋಭಿಸುತ್ತಿತ್ತ. ಈ ವಿಧವಾಗಿ ಅವನ ವಿಲಕ್ಷಣವೇಷವಿದ್ದರೂ ಕಲ್ಯಾಣಧಾಮನೂ, ಕೃಪಾಳುವೂ ಆಗಿದ್ದಾನೆ ಶಿವನು. ಒಂದು ಕೈಯಲ್ಲಿ ತ್ರಿಶೂಲ, ಮತ್ತೊಂದರಲ್ಲಿ ಡಮರುಗ ಧರಿಸಿ, ಮಂಗಳವಾದ್ಯಗಳು ಮೊಳಗುತ್ತಿರಲು, ನಂದಿಯನ್ನು ಏರಿ ಹೊರಟನು. ಶಿವನನ್ನು ಕಂಡು ದೇವಾಂಗನೆಯರು – ''ಈ ವರನಿಗೆ ತಕ್ಕದಾದ ವಧುವು ಈ ಜಗತ್ತಿನಲ್ಲೇ ದೊರಕದು'' ಎಂದು ತಮ್ಮ-ತಮ್ಮಲ್ಲೇ ಮಂದಹಾಸವನ್ನು ಬೀರುತ್ತಾ ಅಂದುಕೊಂಡರು. ವಿಷ್ಣು, ಬ್ರಹ್ಮನೇ ಮೊದಲಾದ ದೇವತೆಗಳು ತಮ್ಮ-ತಮ್ಮ ವಾಹನಗಳನ್ನೇರಿ ದಿಬ್ಬಣವನ್ನು ಬಂದು ಕೂಡಿಕೊಂಡರು. ದೇವತೆಗಳ ಕೋಲಾಹಲದಿಂದ ಸಾಗುವ ಆ ದಿಬ್ಬಣವು ಅತ್ಯದ್ಭುತವಾಗಿದ್ದರೂ ಅದು ವರನಿಗೆ ತಕ್ಕ ದಿಬ್ಬಣವಾಗಿರಲಿಲ್ಲ. (ಚೌ/೧-೪)

**ದೋ – ಬಿಷ್ನು ಕಹಾ ಅಸ ಬಿಹಸಿ ತಬ ಬೋಲಿ ಸಕಲ ದಿಸಿರಾಜ ।**
**ಬಿಲಗ ಬಿಲಗ ಹೊಇ ಚಲಹು ಸಬ ನಿಜ ನಿಜ ಸಹಿತ ಸಮಾಜ ॥ ೯೨ ॥**

ಆಗ ಮಹಾವಿಷ್ಣು ಎಲ್ಲ ದಿಕ್ಪಾಲಕರನ್ನು ಕರೆದು ನಕ್ಕು ನುಡಿದನು – ನೀವೆಲ್ಲರೂ ತಮ್ಮ-ತಮ್ಮ ಪರಿವಾರದೊಂದಿಗೆ ಬೇರೆ-ಬೇರೆಯಾಗಿ ಬನ್ನಿ. (ದೋ/೯೨)

**ಚೌ – ಬರ ಅನುಹಾರಿ ಬರಾತ ನ ಭಾಈ । ಹँಸೀ ಕರೈಹಹು ಪರ ಪುರ ಜಾಈ ॥**
**ಬಿಷ್ನು ಬಚನ ಸುನಿ ಸುರ ಮುಸುಕಾನೇ । ನಿಜ ನಿಜ ಸೇನ ಸಹಿತ ಬಿಲಗಾನೇ ॥ ೧ ॥**
**ಮನಹೀಂ ಮನ ಮಹೇಸು ಮುಸುಕಾಹೀಂ । ಹರಿ ಕೇ ಬಿಂಗ್ಯ ಬಚನ ನಹಿಂ ಜಾಹೀಂ ॥**
**ಅತಿ ಪ್ರಿಯ ಬಚನ ಸುನತ ಪ್ರಿಯ ಕೇರೇ । ಭೃಂಗಿಹಿ ಪ್ರೇರಿ ಸಕಲ ಗನ ಟೇರೇ ॥ ೨ ॥**
**ಸಿವ ಅನುಸಾಸನ ಸುನಿ ಸಬ ಆಏ । ಪ್ರಭು ಪದ ಜಲಜ ಸೀಸ ತಿನ್ಹ ನಾಏ ॥**
**ನಾನಾ ಬಾಹನ ನಾನಾ ಬೇಷಾ । ಬಿಹಸೇ ಸಿವ ಸಮಾಜ ನಿಜ ದೇಖಾ ॥ ೩ ॥**
**ಕೋಉ ಮುಖಹೀನ ಬಿಪುಲ ಮುಖ ಕಾಹೂ । ಬಿನು ಪದ ಕರ ಕೋಉ ಬಹು ಪದ ಬಾಹೂ ॥**
**ಬಿಪುಲ ನಯನ ಕೋಉ ನಯನ ಬಿಹೀನಾ । ರಿಷ್ಟಪುಷ್ಟ ಕೋಉ ಅತಿ ತನಖೀನಾ ॥ ೪ ॥**

ಸಹೋದರರೇ! ಈ ದಿಬ್ಬಣವು ಮದುವಣಿಗನಿಗೆ ತಕ್ಕುದಾಗಿಲ್ಲ. ಕಂಡವರ ಊರಿಗೆ ಬಂದು ನಗೆಪಾಟಲಾಗುವಿರೇನು? ವಿಷ್ಣುವಿನ ಮಾತನ್ನು ಕೇಳಿ, ದೇವತೆಗಳು ಮುಗುಳ್ನಗೆ ಬೀರುತ್ತಾ, ತಮ್ಮ ಸೈನ್ಯದೊಂದಿಗೆ ಬೇರೆ-ಬೇರೆಯಾಗಿ ಸಾಗಿದರು. ಶಿವನೂ ಕೂಡ ವಿಷ್ಣುವಿನ ಪ್ರಿಯವಚನವನ್ನು ಕೇಳಿ ನಕ್ಕು ''ಶ್ರೀಹರಿಯ ತನ್ನ ವ್ಯಂಗವಚನಗಳು ನನ್ನನ್ನು ಬಿಟ್ಟಿಲ್ಲ'' ಎಂದುಕೊಂಡನು. ಶಿವನು ಭೃಂಗಿಯನ್ನು ಕಳಿಸಿ, ತನ್ನ ಎಲ್ಲ ಗಣಗಳನ್ನು ಕರೆಸಿಕೊಂಡನು. ಶಿವನ ಆಜ್ಞೆಯಿಂದ ಅವರೆಲ್ಲರೂ ಬಂದು, ತಮ್ಮ ಪ್ರಭುವಿನ ಪಾದಪದ್ಮಗಳಿಗೆ ವಂದಿಸಿಕೊಂಡರು. ಚಿತ್ರ-ವಿಚಿತ್ರವಾದ ಅವರ ವೇಷವನ್ನೂ, ವಾಹನಗಳನ್ನೂ ನೋಡಿ ಶಿವನಿಗೇ ನಗು ಬಂತು. ಕೆಲವರಿಗೆ ಮುಖವೇ ಇಲ್ಲ, ಇನ್ನೊಬ್ಬನಿಗೆ ಮೈತುಂಬ ಮುಖಗಳು. ಕೆಲವರಿಗೆ ಕೈ-ಕಾಲೇ ಇಲ್ಲ. ಇನ್ನೂ ಕೆಲವರಿಗೆ ಮೈಯೆಲ್ಲ ಕೈ-ಕಾಲುಗಳು. ಕಣ್ಣುಗಳೇ ಇಲ್ಲದವರು ಕೆಲವರಾದರೆ, ಕೆಲವರಿಗೆ ಅನೇಕ ಕಣ್ಣುಗಳಿದ್ದುವು. ಕೆಲವರು ದಷ್ಟಪುಷ್ಟರಾದರೆ ಮತ್ತೆ ಕೆಲವರು ನರಪೇತಲರಾಗಿದ್ದರು. (ಚೌ/೧-೪)

**ಛಂ – ತನ ಖೀನ ಕೋಉ ಅತಿ ಪೀನ ಪಾವನ ಕೋಉ ಅಪಾವನ ಗತಿ ಧರೇಂ ।**
**ಭೂಷನ ಕರಾಲ ಕಪಾಲ ಕರ ಸಬ ಸದ್ಯ ಸೋನಿತ ತನ ಭರೇಂ ॥**
**ಖರ ಸ್ವಾನ ಸುಅರ ಸೃಕಾಲ ಮುಖ ಗನ ಬೇಷ ಅಗನಿತ ಕೋ ಗನೈ ।**
**ಬಹು ಜಿನಸ ಪ್ರೇತ ಪಿಸಾಚ ಜೋಗಿ ಜಮಾತ ಬರನತ ನಹಿಂ ಬನೈ ॥**

ಕೆಲವರು ಕ್ಷೀಣಕಾಯರು, ಕೆಲವರು, ಸ್ಥೂಲಕಾಯರು, ಕೆಲವರು ಪವಿತ್ರವೇಷವನ್ನು ಧರಿಸಿದರೆ ಕೆಲವರು ಅಪವಿತ್ರವೇಷದವರು. ಕೆಲವರು ಭಯಂಕರ ಒಡವೆಗಳನ್ನೂ ತೊಟ್ಟು, ಕೈಯಲ್ಲಿ ಕಪಾಲವನ್ನು ಹಿಡಿದು, ತಮ್ಮ ಶರೀರಕ್ಕೆ ಬಿಸಿರಕ್ತವನ್ನು ಬಳಿದುಕೊಂಡಿದ್ದರು. ಅವರ ಮುಖಗಳು ಕತ್ತೆಗಳಂತೆ, ನಾಯಿಗಳಂತೆ, ಹಂದಿ ಹಾಗೂ ನರಿಗಳಂತೆ ಇದ್ದವು. ಈ ಪ್ರಮಥಗಣಗಳ ಅಮಿತವೇಷಗಳನ್ನು ಯಾರು ಎಣಿಸಬಲ್ಲರು? ಬಹುವಿಧವಾದ ಪ್ರೇತ, ಪಿಶಾಚಿ, ಮತ್ತು ಯೋಗಿನಿಯರ ತಂಡಗಳು ಲೆಕ್ಕಿಸಲಾರದಷ್ಟು ಅಲ್ಲಿದ್ದವು. (ಛಂ)

**ಸೋ – ನಾಚಹಿಂ ಗಾವಹಿಂ ಗೀತ ಪರಮ ತರಂಗೀ ಭೂತ ಸಬ ।**
**ದೇಖತ ಅತಿ ಬಿಪರೀತ ಬೋಲಹಿಂ ಬಚನ ಬಿಚಿತ್ರ ಬಿಧಿ ॥ ೯೩ ॥**

ಆ ಭೂತ, ಪ್ರೇತಗಳು ಪರಮಾನಂದದಿಂದ ಹಾಡುಗಳನ್ನೂ ಹಾಡುತ್ತಾ, ನಾಟ್ಯವಾಡುತ್ತಾ, ನೋಡಲು ವಿಕಾರವಾಗಿದ್ದು, ವಿಚಿತ್ರವಾದ ಧ್ವನಿಗಳಿಂದ ಮಾತಾಡುತ್ತಿದ್ದವು. (ಸೋ/೯೩)

**ಚೌ – ಜಸ ದೂಲಹು ತಸಿ ಬನೀ ಬರಾತಾ । ಕೌತುಕ ಬಿಬಿಧ ಹೋಹಿಂ ಮಗ ಜಾತಾ ॥**
**ಇಹಾँ ಹಿಮಾಚಲ ರಚೆಉ ಬಿತಾನಾ । ಅತಿ ಬಿಚಿತ್ರ ನಹಿಂ ಜಾಇ ಬಖಾನಾ ॥ ೧ ॥**
**ಸೈಲ ಸಕಲ ಜಹँ ಲಗಿ ಜಗ ಮಾಹೀಂ । ಲಘು ಬಿಸಾಲ ನಹಿಂ ಬರನಿ ಸಿರಾಹೀಂ ॥**
**ಬನ ಸಾಗರ ಸಬ ನದೀಂ ತಲಾವಾ । ಹಿಮಗಿರಿ ಸಬ ಕಹँ ನೆವತ ಪಠಾವಾ ॥ ೨ ॥**

ಕಾಮರೂಪ ಸುಂದರ ತನ ಧಾರೀ । ಸಹಿತ ಸಮಾಜ ಸಹಿತ ಬರ ನಾರೀ ॥
ಗಏ ಸಕಲ ತುಹಿನಾಚಲ ಗೇಹಾ । ಗಾವಹಿಂ ಮಂಗಲ ಸಹಿತ ಸನೇಹಾ ॥ ೩ ॥
ಪ್ರಥಮಹಿಂ ಗಿರಿ ಬಹು ಗೃಹ ಸँವರಾಏ । ಜಥಾಜೋಗು ತಹँ ತಹँ ಸಬ ಛಾಏ ॥
ಪುರ ಸೋಭಾ ಅವಲೋಕಿ ಸುಹಾಈ । ಲಾಗಇ ಲಘು ಬಿರಂಚಿ ನಿಪುನಾಈ ॥ ೪ ॥

ವರನಂತೆ ದಿಬ್ಬಣ! ಮೆರವಣಿಗೆ! ದಾರಿಯಲ್ಲಿ ಹೋಗುವಾಗ ವಿಧವಿಧವಾದ ಚಮತ್ಕಾರಗಳನ್ನು ಪ್ರದರ್ಶಿಸುತ್ತಾ ಆ ದಿಬ್ಬಣ ಸಾಗುತ್ತಿತ್ತು. ಇತ್ತ ಹಿಮವಂತನು ಒಂದು ಅಪೂರ್ವವೂ, ಅವರ್ಣನೀಯವೂ ಆದ ವಿವಾಹಮಂಟಪವನ್ನು ರಚಿಸಿದನು. ಜಗತ್ತಿನ ಎಲ್ಲ ಸಣ್ಣ-ಪುಟ್ಟ ವರ್ಣನಾತೀತವಾದ ಲೆಕ್ಕವಿಲ್ಲದಷ್ಟು ಬೆಟ್ಟಗುಡ್ಡಗಳಿಗೆ, ವನ, ಸಮುದ್ರ, ನದಿ, ಕೆರೆ, ಕಟ್ಟೆ ಮೊದಲಾದವುಗಳನ್ನು ಅವನು ಆಮಂತ್ರಿಸಿದ್ದನು. ಕಾಮರೂಪಿಗಳಾದ ಅವೆಲ್ಲ ಸುಂದರ ಶರೀರಗಳನ್ನು ಧರಿಸಿ, ತಮ್ಮ ಪತ್ನೀ, ಪರಿವಾರದೊಂದಿಗೆ ಹಿಮವಂತನ ಅರಮನೆಗೆ ಬಂದು ಸೇರಿದರು. ಎಲ್ಲರೂ ಸ್ನೇಹದಿಂದ ಮಂಗಳ ಗೀತೆಗಳನ್ನು ಹಾಡಿದರು. ಪರ್ವತರಾಜನು ಅನೇಕ ಅತಿಥಿಗೃಹಗಳನ್ನು ಅಲಂಕರಿಸಿ ಅತಿಥಿಗಳಿಗಾಗಿ ಏರ್ಪಡಿಸಿಟ್ಟಿದ್ದನು. ಬಂದವರು ತಮಗೆ ತಕ್ಕುದಾದ ವಸತಿಗೃಹಗಳಲ್ಲಿ ತಂಗಿದರು. ಮನೋಹರವಾದ ನಗರದ ಚೆಲುವನ್ನು ನೋಡಿದಮೇಲೆ ಬ್ರಹ್ಮನ ಸೃಷ್ಟಿರಚನಾ ಚಾತುರ್ಯವೂ ಸಪ್ಪೆ ಎನಿಸುತ್ತಿತ್ತು. (ಚೌ/೧-೪)

ಛಂ – ಲಘು ಲಾಗ ಬಿಧಿ ಕೀ ನಿಪುನತಾ ಅವಲೋಕಿ ಪುರ ಸೋಭಾ ಸಹೀ ।
ಬನ ಬಾಗ ಕೂಪ ತಡಾಗ ಸರಿತಾ ಸುಭಗ ಸಬ ಸಕ ಕೋ ಕಹೀ ॥
ಮಂಗಲ ಬಿಪುಲ ತೋರನ ಪತಾಕಾ ಕೇತು ಗೃಹ ಗೃಹ ಸೋಹಹೀಂ ।
ಬನಿತಾ ಪುರುಷ ಸುಂದರ ಚತುರ ಛಬಿ ದೇಖಿ ಮುನಿ ಮನ ಮೋಹಹೀಂ ॥

ನಿಜವಾಗಿ ಈ ನಗರ ವೈಭವವು ಬ್ರಹ್ಮಸೃಷ್ಟಿಯನ್ನು ಮೀರಿಸುವಂತಿತ್ತು. ವನ, ಉಪವನ, ಕೆರೆ, ಕಟ್ಟೆ, ಬಾವಿ, ನದಿಗಳೆಲ್ಲವುಗಳ ಶೋಭೆಯು ವರ್ಣನಾತೀತವು. ಪ್ರತಿಯೊಂದು ಮನೆಯೂ ಮಂಗಳತೋರಣಗಳಿಂದ, ಧ್ವಜ-ಪತಾಕೆಗಳಿಂದ ಸಿಂಗರಿಸಿದ್ದವು. ಅಲ್ಲಿಯ ಸುಂದರ ಚತುರ ಸ್ತ್ರೀ-ಪುರುಷರ ಸೌಂದರ್ಯವು ಮುನಿಗಳ ಮನಸ್ಸೂ ಕೂಡ ಮೋಹಗೊಳ್ಳುತ್ತಿತ್ತು. (ಛಂ)

ದೋ – ಜಗದಂಬಾ ಜಹँ ಅವತರೀ ಸೋ ಪುರು ಬರನಿ ಕಿ ಜಾಇ ।
ರಿದ್ಧಿ ಸಿದ್ಧಿ ಸಂಪತ್ತಿ ಸುಖ ನಿತ ನೂತನ ಅಧಿಕಾಇ ॥ ೯೪ ॥

ಜಗನ್ಮಾಯೆಯು ಅವತರಿಸಿದ ಆ ನಗರಶೋಭೆಯನ್ನು ಹೇಗೆ ವರ್ಣಿಸಲು ಸಾಧ್ಯ? ಅಲ್ಲಿ ರಿದ್ಧಿ, ಸಿದ್ಧಿ, ಸುಖ-ಸಂಪತ್ತುಗಳು ಒಂದೇ ಕಡೆ ನೆಲಸಿ, ನಿತ್ಯನೂತನವಾಗಿ ವರ್ಧಿಸುತ್ತಿದ್ದವು. (ದೋ/೯೪)

ಚೌ – ನಗರ ನಿಕಟ ಬರಾತ ಸುನಿ ಆಈ । ಪುರ ಖರಭರು ಸೋಭಾ ಅಧಿಕಾಈ ॥
ಕರಿ ಬನಾವ ಸಜಿ ಬಾಹನ ನಾನಾ । ಚಲೇ ಲೇನ ಸಾದರ ಅಗವಾನಾ ॥ ೧ ॥
ಹಿಯँ ಹರಷೇ ಸುರ ಸೇನ ನಿಹಾರೀ । ಹರಿಹಿ ದೇಖಿ ಅತಿ ಭಏ ಸುಖಾರೀ ॥
ಸಿವ ಸಮಾಜ ಜಬ ದೇಖನ ಲಾಗೇ । ಬಿಡರಿ ಚಲೇ ಬಾಹನ ಸಬ ಭಾಗೇ ॥ ೨ ॥
ಧರಿ ಧೀರಜು ತಹँ ರಹೇ ಸಯಾನೇ । ಬಾಲಕ ಸಬ ಲೈ ಜೀವ ಪರಾನೇ ॥
ಗಏँ ಭವನ ಪೂಛಹಿಂ ಪಿತು ಮಾತಾ । ಕಹಹಿಂ ಬಚನ ಭಯ ಕಂಪಿತ ಗಾತಾ ॥ ೩ ॥
ಕಹಿಅ ಕಾಹ ಕಹಿ ಜಾಇ ನ ಬಾತಾ । ಜಮ ಕರ ಧಾರ ಕಿಧೌं ಬರಿಆತಾ ॥
ಬರು ಬೌರಾಹ ಬಸಹँ ಅಸವಾರಾ । ಬ್ಯಾಲ ಕಪಾಲ ಬಿಭೂಷನ ಛಾರಾ ॥ ೪ ॥

ದಿಬ್ಬಣವು ನಗರದ ಸಮೀಪಕ್ಕೆ ಬರುತ್ತಿದ್ದಂತೆ ನಗರದ ಜನರ ಸಡಗರ ಹೇಳತೀರದು. ಇದರಿಂದ ನಗರದ ಚೆಲುವು ಇಮ್ಮಡಿಸಿತು. ಗಂಡಿನವರನ್ನು ಇದಿರುಗೊಳ್ಳುವ ಜನರು ಅಲಂಕಾರ ಮಾಡಿಕೊಂಡು ನಾನಾವಿಧವಾದ ವಾಹನಗಳನ್ನು ಸಿದ್ಧಪಡಿಸಿಕೊಂಡು, ಆದರದಿಂದ ಸ್ವಾಗತಕ್ಕೆ ಹೊರಟರು. ಸುರರ ಸಮಾಜವನ್ನು ಕಂಡು ಎಲ್ಲರೂ ಹರ್ಷಗೊಂಡರು. ಅದರಲ್ಲೂ ಭಗವಾನ್ ವಿಷ್ಣುವನ್ನು ಕಂಡು ಹೆಚ್ಚಾಗಿ ಹರ್ಷಪುಲಕಿತರಾದರು. ಆದರೆ ಶಿವನ ಪರಿವಾರವನ್ನು ಕಂಡಾಗ ಅವರ ಆನೆ, ಕುದುರೆ ಮೊದಲಾದ ವಾಹನಗಳೆಲ್ಲ ಹೆದರಿ ಓಡತೊಡಗಿದವು. ಕೆಲವು ತಿಳಿವಳಿಕೆಯಿದ್ದ ಹಿರಿಯರು ಮಾತ್ರ ಹೇಗೋ ಧೈರ್ಯತಂದುಕೊಂಡು ಅಲ್ಲೇ ನಿಂತಿದ್ದರು. ಆದರೆ ಮಕ್ಕಳು ಮಾತ್ರ ಪ್ರಾಣಭಯದಿಂದ ಕಾಲಿಗೆ ಬುದ್ಧಿ ಹೇಳಿದರು. ಮನೆ ಸೇರಿದ ಬಳಿಕ ಗಾಬರಿಗೊಂಡ ಅವರನ್ನು ತಂದೆ-ತಾಯಂದಿರು ಕೇಳಿದಾಗ ಅವರು ನಡುಗುತ್ತಾ ಹೀಗೆಂದರು – ''ಏನು ಹೇಳುವುದು?

ಮಾತೇ ಹೊರಡುವುದಿಲ್ಲ. ಇದು ಮದುವೆಯ ದಿಬ್ಬಣವೋ? ಅಥವಾ ಯಮನ ಸೈನ್ಯವೋ? ಕಾಣೆವು. ಮದುಮಗನು ಹುಚ್ಚಪ್ಪ. ಅವನು ಎತ್ತಿನ ಮೇಲೆ ಕುಳಿತುಕೊಂಡು ಬರುತ್ತಿದ್ದಾನೆ. ಹಾವುಗಳು, ಕಾಪಾಲ, ಭಸ್ಮ ಇದು ಅವನ ಒಡವೆಗಳು. (ಚೌ/೧-೪)

**ಛಂ – ತನ ಛಾರ ಬ್ಯಾಲ ಕಪಾಲ ಭೂಷನ ನಗನ ಜಟಿಲ ಭಯಂಕರಾ ॥**
**ಸँಗ ಭೂತ ಪ್ರೇತ ಪಿಸಾಚ ಜೋಗಿನಿ ಬಿಕಟ ಮುಖ ರಜನೀಚರಾ ॥**
**ಜೋ ಜಿಅತ ರಹಿಹಿ ಬರಾತ ದೇಖತ ಪುನ್ಯ ಬಡ ತೆಹಿ ಕರ ಸಹೀ ।**
**ದೆಖಿಹಿ ಸೊ ಉಮಾ ಬಿಬಾಹು ಘರ ಘರ ಬಾತ ಅಸಿ ಲರಿಕನ್ಹ ಕಹೀ ॥**

ಮದುವಣಿಗನು ಶರೀರದಲ್ಲೆಲ್ಲ ಬೂದಿ ಹಚ್ಚಿಕೊಂಡಿರುವವನು. ಸರ್ಪಗಳನ್ನು, ಕಪಾಲಗಳನ್ನೂ, ಆಭೂಷಣವನ್ನಾಗಿ ಧರಿಸಿರುವವನು. ಅವನು ದಿಗಂಬರನೂ, ಜಟಾಧಾರಿಯೂ ಆಗಿ ಭಯಂಕರವಾಗಿರುವವನು. ಅವನ ಸಂಗಡ ಭಯಾನಕ ಮುಖಗಳುಳ್ಳ ಭೂತ, ಪ್ರೇತ, ಪಿಶಾಚ, ಯೋಗಿನಿಗಳೂ, ರಾಕ್ಷಸರೂ ಇದ್ದಾರೆ. ಈ ವರನ ದಿಬ್ಬಣವನ್ನು ನೋಡಿ ಬದುಕಿರುವವನು ಪುಣ್ಯಾತ್ಮನೇ ಸರಿ. ಆ ಬದುಕಿ ಉಳಿದವನು ಮಾತ್ರ ಪಾರ್ವತಿಯ ವಿವಾಹವನ್ನು ನೋಡಬಲ್ಲನು.'' ಪ್ರತಿಮನೆಗಳಲ್ಲಿಯೂ ಹುಡುಗರು ಇದನ್ನೇ ಹೇಳುತ್ತಿದ್ದಾರೆ. (ಛಂ)

**ದೋ – ಸಮುಝಿ ಮಹೇಸ ಸಮಾಜ ಸಬ ಜನನಿ ಜನಕ ಮುಸುಕಾಹಿँ ।**
**ಬಾಲ ಬುಝಾಏ ಬಿಬಿಧ ಬಿಧಿ ನಿಡರ ಹೋಹು ಡರು ನಾಹಿँ ॥ ೯೫ ॥**

ಇದೆಲ್ಲವೂ ಶಿವನ ಪರಿವಾರವೆಂದು ತಿಳಿದುಕೊಂಡು ಹಿರಿಯರು ನಕ್ಕುಬಿಟ್ಟರು. ಅವರು ಮಕ್ಕಳನ್ನು ಹೆದರಬೇಡಿರೆಂದು ಅನೇಕವಿಧದಿಂದ ಸಮಾಧಾನಪಡಿಸಿದರು. (ದೋ/೯೫)

**ಚೌ – ಲೈ ಅಗವಾನ ಬರಾತಹಿ ಆಏ । ದಿಏ ಸಬಹಿ ಜನವಾಸ ಸುಹಾಏ ।**
**ಮೈನಾँ ಸುಭ ಆರತೀ ಸँವಾರೀ । ಸಂಗ ಸುಮಂಗಲ ಗಾವಹಿँ ನಾರೀ ॥ ೧ ॥**
**ಕಂಚನ ಥಾರ ಸೋಹ ಬರ ಪಾನೀ । ಪರಿಛನ ಚಲೀ ಹರಹಿ ಹರಷಾನೀ ॥**
**ಬಿಕಟ ಬೇಷ ರುದ್ರಹಿ ಜಬ ದೇಖಾ । ಅಬಲನ್ಹ ಉರ ಭಯ ಭಯಉ ಬಿಸೇಷಾ ॥ ೨ ॥**
**ಭಾಗಿ ಭವನ ಪೈಠೀँ ಅತಿ ತ್ರಾಸಾ । ಗಏ ಮಹೇಸು ಜಹಾँ ಜನವಾಸಾ ॥**
**ಮೈನಾ ಹೃದಯँ ಭಯಉ ದುಖು ಭಾರೀ । ಲೀನ್ಹೀ ಬೋಲಿ ಗಿರೀಸ ಕುಮಾರೀ ॥ ೩ ॥**
**ಅಧಿಕ ಸನೇಹँ ಗೋದ ಬೈಠಾರೀ । ಸ್ಯಾಮ ಸರೋಜ ನಯನ ಭರೆ ಬಾರೀ ॥**
**ಜೆಹಿँ ಬಿಧಿ ತುಮ್ಹಹಿ ರೂಪು ಅಸ ದೀನ್ಹಾ । ತೆಹಿँ ಜಡ ಬರೂ ಬಾಉರ ಕಸ ಕೀನ್ಹಾ ॥ ೪ ॥**

ಇದಿರುಗೊಳ್ಳುವ ಜನರು ಗಂಡಿನವರನ್ನು ಆದರದಿಂದ ಸ್ವಾಗತಿಸಿ, ಅವರನ್ನು ಕರೆತಂದರು. ಎಲ್ಲರನ್ನು ಒಳ್ಳೆಯ ಬಿಡದಿಗಳಲ್ಲಿ ಇಳಿಸಲಾಯಿತು. ಪಾರ್ವತಿಯ ತಾಯಿಯಾದ ಮೈನಾದೇವಿಯು ಶುಭ ಆರತಿಯನ್ನು ಅಣಿಮಾಡಿಕೊಂಡಳು. ಇತರ ಸುಮಂಗಲಿಯರು ಮಂಗಳಗೀತೆಗಳನ್ನು ಹಾಡತೊಡಗಿದರು. ಮೈನಾದೇವಿಯು ಬಂಗಾರದ ಆರತಿ ತಟ್ಟೆಯನ್ನು ಸುಂದರವಾದ ಕೈಗಳಲ್ಲಿ ಹಿಡಿದುಕೊಂಡು, ಸೀಮಾಂತಪೂಜೆಗಾಗಿ ಹೊರಟು ಶಿವನನ್ನು ನೋಡಿದಳು. ಜೊತೆಯಲ್ಲಿದ್ದ ಸ್ತ್ರೀಯರು ಮಹಾದೇವನನ್ನು ನೋಡುತ್ತಲೇ ಭಯಚಕಿತರಾದರು. ಅವರೆಲ್ಲರೂ ಭಯಗೊಂಡು ತಮ್ಮ ಮನೆಯೊಳಗೆ ಸೇರಿಕೊಂಡರು. ಶಿವನು ತನಗಾಗಿ ನಿಗದಿಪಡಿಸಿದ ಬಿಡದಿಯನ್ನು ಪ್ರವೇಶಿಸಿದನು. ಮೈನಾದೇವಿಗಂತೂ ದುಃಖ ಒತ್ತರಿಸಿ ಬಂತು. ಆಕೆಯು ಪಾರ್ವತಿಯನ್ನು ತನ್ನ ಬಳಿಗೆ ಕರೆಸಿಕೊಂಡಳು. ಪ್ರೇಮದಿಂದ ತೊಡೆಯಲ್ಲಿ ಕುಳ್ಳಿರಿಸಿಕೊಂಡು, ನೀಲಕಮಲದಂತಿರುವ ಕಣ್ಣುಗಳಲ್ಲಿ ಕಂಬನಿ ತುಂಬಿಕೊಂಡು ಇಂತೆಂದಳು – ''ಮಗು! ಮೂರ್ಖನಾದ ವಿಧಾತನು ನಿನ್ನನ್ನು ಇಷ್ಟು ಸುಂದರವಾಗಿ ಸೃಷ್ಟಿಸಿ, ನಿನಗೆ ಒಬ್ಬ ಹುಚ್ಚಪ್ಪನನ್ನು ಪತಿಯಾಗಿ ಸೃಷ್ಟಿಸಿದನಲ್ಲ!'' (ಚೌ/೧-೪)

**ಛಂ – ಕಸ ಕೀನ್ಹ ಬರು ಬೌರಾಹ ಬಿಧಿ ಜೆಹಿँ ತುಮ್ಹಹಿ ಸುಂದರತಾ ದಈ ।**
**ಜೋ ಫಲು ಚಹಿಅ ಸುರತರುಹಿँ ಸೋ ಬರಬಸ ಬಬೂರಹಿँ ಲಾಗಈ ॥**
**ತುಮ್ಹ ಸಹಿತ ಗಿರಿ ತೇँ ಗಿರೌँ ಪಾವಕ ಜರೌँ ಜಲನಿಧಿ ಮಹುँ ಪರೌँ ।**
**ಘರು ಜಾಉ ಅಪಜಸು ಹೋಉ ಜಗ ಜೀವತ ಬಿಬಾಹು ನ ಹೌँ ಕರೌँ ॥**

ನಿನ್ನನ್ನು ಇಷ್ಟೊಂದು ರೂಪವತಿಯಾಗಿ ಸೃಷ್ಟಿಸಿದ ವಿಧಾತನು, ನಿನಗೆ ಇಂತಹ ಹುಚ್ಚ ವರನನ್ನು ಹೇಗೆ ಸೃಷ್ಟಿಸಿದ? ಕಲ್ಪವೃಕ್ಷದಲ್ಲಿ ಬಿಡಬೇಕಾದ ಹಣ್ಣು, ಈ ಜಾಲಿಯ ಮರದಲ್ಲಿ ಹೇಗೆ ಬರುವುದು? ನಾನು ನಿನ್ನನ್ನು ಕಟ್ಟಿಕೊಂಡು ಬೆಟ್ಟದಿಂದ ಕೆಳಕ್ಕೆ ಧುಮುಕಿಯೋ, ಬೆಂಕಿಗೆ ಬಿದ್ದೋ, ಇಲ್ಲವೇ ಸಮುದ್ರಕ್ಕೆ ಹಾರಿಯೋ ಪ್ರಾಣಕಳೆದುಕೊಳ್ಳುತ್ತೇನೆ. ನನ್ನ ಮನೆ ಹಾಳಾದದರೂ ಚಿಂತೆಯಲ್ಲಿ, ಜಗತ್ತಿನಲ್ಲಿ ಅಪಕೀರ್ತಿಯು ಹಬ್ಬಿದರೂ ಅಡ್ಡಿಯಿಲ್ಲ. ಆದರೆ ನನ್ನ ಜೀವವಿರುವತನಕ ಇಂತಹ ಹುಚ್ಚಪ್ಪನಿಗೆ ನಿನ್ನನ್ನು ಕೊಡಲಾರೆ. (ಛಂ)

**ದೋ – ಭಈಂ ಬಿಕಲ ಅಬಲಾ ಸಕಲ ದುಖಿತ ದೇಖಿ ಗಿರಿನಾರಿ ।**

**ಕರಿ ಬಿಲಾಪು ರೋದತಿ ಬದತಿ ಸುತಾ ಸನೇಹು ಸಂಭಾರಿ ॥ ೯೬ ॥**

ಹಿಮವಂತನ ಹೆಂಡತಿ ಈ ರೀತಿ ಶೋಕಿಸುತ್ತಿರುವುದನ್ನು ಕಂಡು ಇತರ ಸ್ತ್ರೀಯರೂ ಕೂಡ ದುಃಖಿತರಾದರು. ಮೈನಾದೇವಿಯು ತನ್ನ ಮಗಳ ಪ್ರೀತಿಯನ್ನು ನೆನೆದು-ನೆನೆದು ವಿಲಪಿಸುತ್ತಿದ್ದಳು. ಕಣ್ಣೀರು ಸುರಿಸುತ್ತಾ ಹೇಳುತ್ತಿದ್ದಳು – (ದೋ/೯೬)

**ಚೌ – ನಾರದ ಕರ ಮೈಂ ಕಾಹ ಬಿಗಾರಾ । ಭವನು ಮೋರ ಜಿನ್ಹ ಬಸತ ಉಜಾರಾ ॥**
**ಅಸ ಉಪದೇಸು ಉಮಹಿ ಜಿನ್ಹ ದೀನ್ಹಾ । ಬೌರೇ ಬರಹಿ ಲಾಗಿ ತಪು ಕೀನ್ಹಾ ॥ ೧ ॥**
**ಸಾಚೇಹುಂ ಉನ್ಹ ಕೇಂ ಮೋಹ ನ ಮಾಯಾ । ಉದಾಸೀನ ಧನು ಧಾಮು ನ ಜಾಯಾ ॥**
**ಪರ ಘರ ಘಾಲಕ ಲಾಜ ನ ಭೀರಾ । ಬಾಂಝು ಕಿ ಜಾನ ಪ್ರಸವ ಕೈ ಪೀರಾ ॥ ೨ ॥**
**ಜನನಿಹಿ ಬಿಕಲ ಬಿಲೋಕಿ ಭವಾನೀ । ಬೋಲೀ ಜುತ ಬಿಬೇಕ ಮೃದು ಬಾನೀ ॥**
**ಅಸ ಬಿಚಾರಿ ಸೋಚಹಿ ಮತಿ ಮಾತಾ । ಸೋ ನ ಟರಇ ಜೋ ರಚಇ ಬಿಧಾತಾ ॥ ೩ ॥**
**ಕರಮ ಲಿಖಾ ಜೌಂ ಬಾಉರ ನಾಹೂ । ತೌ ಕತ ದೋಸು ಲಗಾಇಅ ಕಾಹೂ ॥**
**ತುಮ್ಹ ಸನ ಮಿಟಹಿಂ ಕಿ ಬಿಧಿ ಕೇ ಅಂಕಾ । ಮಾತು ಬ್ಯರ್ಥ ಜನಿ ಲೇಹು ಕಲಂಕಾ ॥ ೪ ॥**

ಇಂತಹ ಹುಚ್ಚನಿಗಾಗಿ ತಪಸ್ಸುಮಾಡಲು ಪಾರ್ವತಿಗೆ ಉಪದೇಶಿಸಿ, ನನ್ನ ಮನೆಯನ್ನು ಹಾಳುಗೆಡಹಿದ ಆ ನಾರದನಿಗೆ ನಾನು ಯಾವ ಅಪಕಾರವನ್ನು ಮಾಡಿದ್ದೆ? ನಿಜವಾಗಿಯೂ ಅವನಿಗೆ ಯಾರಮೇಲೂ ಪ್ರೇಮ, ಮಮಕಾರಗಳು ಇಲ್ಲ. ಹಣ-ಕಾಸು ಇಲ್ಲ. ಮನೆ-ಮಠ ಮೊದಲೇ ಇಲ್ಲ. ಹೆಂಡತಿಯಂತೂ ಇಲ್ಲವೇ ಇಲ್ಲ. ಇಂತಹ ಉದಾಸೀನನಾದ ಅವನು ಕಂಡವರ ಮನೆಯನ್ನು ಹಾಳುಮಾಡಲು ಹೊರಟಿರುವನು. ಅವನಿಗೆ ಯಾರ ಭಯವೂ ಇಲ್ಲ, ನಾಚಿಕೆಯೂ ಇಲ್ಲ. 'ಬಂಜೆಯು ಹೆರಿಗೆಯ ನೋವನ್ನು ತಿಳಿಯಬಲ್ಲಳೇ?' ಹೀಗೆ ದುಃಖಿತಳಾದ ತಾಯಿಯನ್ನು ಕಂಡು ಪಾರ್ವತಿದೇವಿಯು ವಿವೇಕಯುಕ್ತವಾಗಿ ಮೃದುಮಧುರವಾಗಿ ಇಂತೆಂದಳು – ''ಅಮ್ಮಾ! ವಿಧಿಯ ಬರಹವನ್ನು ಯಾರೂ ತಪ್ಪಿಸಲಾರರು ಎಂದಕೊಂಡು ಮನಸ್ಸನ್ನು ಗಟ್ಟಿಯಾಗಿಸಿಕೋ. ನನ್ನ ಪ್ರಾರಬ್ಧದಲ್ಲಿ ಹುಚ್ಚಗಂಡನೇ ಇದ್ದರೆ, ಬೇರೆಯವರನ್ನು ನಿಂದಿಸಿ ಪ್ರಯೋಜನವೇನು? ಅಮ್ಮಾ! ವಿಧಿಯ ಬರಹವನ್ನು ನೀನು ತೊಡೆಯಬಲ್ಲೆಯಾ? ಸುಮ್ಮನೆ ಮಾತಾಡಿ ಏಕೆ ಕಳಂಕವನ್ನು ತಂದುಕೊಳ್ಳುವೆ? (ಚೌ/೧-೪)

**ಛಂ – ಜನಿ ಲೇಹು ಮಾತು ಕಲಂಕು ಕರುನಾ ಪರಿಹರಹು ಅವಸರ ನಹೀಂ।**

**ದುಖು ಸುಖು ಜೊ ಲಿಖಾ ಲಿಲಾರ ಹಮರೇಂ ಜಾಬ ಜಹಂ ಪಾಉಬ ತಹೀಂ॥**

**ಸುನಿ ಉಮಾ ಬಚನ ಬಿನೀತ ಕೋಮಲ ಸಕಲ ಅಬಲಾ ಸೋಚಹೀಂ।**

**ಬಹು ಭಾಂತಿ ಬಿಧಿಹಿ ಲಗಾಇ ದೂಷನ ನಯನ ಬಾರಿ ಬಿಮೋಚಹೀಂ॥**

ಅಮ್ಮಾ! ಅನಾವಶ್ಯಕವಾದ ಕಲಂಕವನ್ನು ಏಕೆ ಪಡೆಯುವೆ? ಅಳಬೇಡ. ವಿಷಾದ ಪಡುವ ಸಮಯ ಇದಲ್ಲ. ನನ್ನ ಹಣೆಯಲ್ಲಿ ಬರೆದ ಸುಖ-ದುಃಖಗಳನ್ನು ನಾನು ಎಲ್ಲಿಗೆ ಹೋದರೂ ಅನುಭವಿಸಿಯೇ ತೀರಬೇಕು, ಅದು ತಪ್ಪದು.'' ಪಾರ್ವತಿದೇವಿಯ ಈ ವಿನಯಯುಕ್ತ ಕೋಮಲ ವಚನಗಳನ್ನು ಕೇಳಿ ಹೆಂಗಸರೆಲ್ಲರೂ ಮತ್ತಷ್ಟು ದುಃಖಕ್ಕೆ ಗುರಿಯಾದರು. ಪರಿ-ಪರಿಯಾಗಿ ವಿಧಿಯನ್ನು ಹಳಿಯುತ್ತಾ ಕಣ್ಣೀರು ಸುರಿಸತೊಡಗಿದರು. (ಛಂ)

**ದೋ – ತೇಹಿ ಅವಸರ ನಾರದ ಸಹಿತ ಅರು ರಿಷಿ ಸಪ್ತ ಸಮೇತ ।**

**ಸಮಾಚಾರ ಸುನಿ ತುಹಿನಗಿರಿ ಗವನೇ ತುರತ ನಿಕೇತ ॥ ೯೭ ॥**

ಪಾರ್ವತಿಯ ವಿವಾಹವಾರ್ತೆಯನ್ನು ಕೇಳಿ, ಆಗಲೇ ನಾರದ ಮಹರ್ಷಿಗಳು ಸಪ್ತರ್ಷಿಗಳ ಜೊತೆಗೆ ಹಿಮವಂತನ ಮನೆಗೆ ಬಂದರು. (ದೋ/೯೭)

ಚೌ – ತಬ ನಾರದ ಸಬಹೀ ಸಮುಝಾವಾ । ಪೂರುಬ ಕಥಾಪ್ರಸಂಗು ಸುನಾವಾ ॥
ಮಯನಾ ಸತ್ಯ ಸುನಹು ಮಮ ಬಾನೀ । ಜಗದಂಬಾ ತವ ಸುತಾ ಭವಾನೀ ॥೧॥
ಅಜಾ ಅನಾದಿ ಸಕ್ತಿ ಅಬಿನಾಸಿನಿ । ಸದಾ ಸಂಭು ಅರಧಂಗ ನಿವಾಸಿನಿ ॥
ಜಗ ಸಂಭವ ಪಾಲನ ಲಯ ಕಾರಿನಿ । ನಿಜ ಇಚ್ಛಾ ಲೀಲಾ ಬಪು ಧಾರಿನಿ ॥೨॥
ಜನಮೀಂ ಪ್ರಥಮ ದಚ್ಛ ಗೃಹ ಜಾಈ । ನಾಮು ಸತೀ ಸುಂದರ ತನು ಪಾಈ ॥
ತಹँಹುँ ಸತೀ ಸಂಕರಹಿ ಬಿಬಾಹೀಂ । ಕಥಾ ಪ್ರಸಿದ್ಧ ಸಕಲ ಜಗ ಮಾಹೀಂ ॥೩॥
ಏಕ ಬಾರ ಆವತ ಸಿವ ಸಂಗಾ । ದೇಖೆಉ ರಘುಕುಲ ಕಮಲ ಪತಂಗಾ ॥
ಭಯಉ ಮೋಹು ಸಿವ ಕಹಾ ನ ಕೀನ್ಹಾ । ಭ್ರಮ ಬಸ ಬೇಷು ಸೀಯ ಕರ ಲೀನ್ಹಾ ॥೪॥

ಆಗ ನಾರದರು ಉಮಾದೇವಿಯ ಪೂರ್ವವೃತ್ತಾಂತವನ್ನು ತಿಳಿಸಿ, ಎಲ್ಲರನ್ನೂ ಸಮಾಧಾನಗೊಳಿಸಿದರು. ಮೈನಾದೇವಿಯೇ! ನನ್ನ ಮಾತು ನಿಜವೆಂದು ನಂಬು. ನಿನ್ನ ಮಗಳು ಸಾಕ್ಷಾತ್ ಜಗಜ್ಜನನಿ, ಭವಾನಿಯು. ಇವಳು ಆದ್ಯಂತರಹಿತಳಾದ ಶಕ್ತಿಸ್ವರೂಪಿಣಿಯು. ಶಿವನಿಗೆ ಸರ್ವದಾ ಅರ್ಧಾಂಗಿನಿಯು. ಲೋಕಸೃಷ್ಟಿ ಸ್ಥಿತಿ ಲಯಕಾರಿಣಿಯು. ಇಚ್ಛಾಮಾತ್ರದಿಂದ ಮಾಯಾಶರೀರವನ್ನು ಧರಿಸುತ್ತಾಳೆ. ಹಿಂದೆ ಇವಳು ದಕ್ಷಬ್ರಹ್ಮನ ಮಗಳಾಗಿ 'ಸತಿ' ಎಂಬ ಹೆಸರಿನಿಂದ ಖ್ಯಾತಳಾಗಿದ್ದು, ಸುಂದರ ಶರೀರವನ್ನು ಹೊಂದಿದ್ದಳು. ಆ ಅವತಾರದಲ್ಲಿಯೂ ಇವಳು ಶಿವನನ್ನು ವಿವಾಹವಾಗಿದ್ದಳು. ಇದು ಜಗತ್ಪ್ರಸಿದ್ಧ ಸಂಗತಿಯು. ಒಮ್ಮೆ ಈಕೆಯು ಶಿವನೊಡನೆ ಕೈಲಾಸಕ್ಕೆ ಬರುತ್ತಿದ್ದಾಗ ರಘುಕುಲತಿಲಕನಾದ ಶ್ರೀರಾಮಚಂದ್ರನನ್ನು ನೋಡಿದಳು. ಸಂಶಯಗೊಂಡ ಈಕೆಯು ಶಿವನ ಮಾತನ್ನು ಆಲಿಸದೆ, ಭ್ರಾಂತಿಯಿಂದ ಸೀತೆಯ ವೇಷವನ್ನು ತಾಳಿದಳು. (ಚೌ/೧-೪)

**ಛಂ – ಸಿಯ ಬೇಷು ಸತೀಂ ಜೊ ಕೀನ್ಹ ತೇಹಿं ಅಪರಾಧ ಸಂಕರ ಪರಿಹರೀಂ ।**
**ಹರ ಬಿರಹँ ಜಾಇ ಬಹೋರಿ ಪಿತು ಕೇಂ ಜಗ್ಯ ಜೋಗಾನಲ ಜರೀಂ ॥**
**ಅಬ ಜನಮಿ ತುಮ್ಹರೇ ಭವನ ನಿಜ ಪತಿ ಲಾಗಿ ದಾರುನ ತಪು ಕಿಯಾ ।**
**ಅಸ ಜಾನಿ ಸಂಸಯ ತಜಹು ಗಿರಿಜಾ ಸರ್ಬದಾ ಸಂಕರ ಪ್ರಿಯಾ ॥**

ಸೀತಾದೇವಿಯ ರೂಪವನ್ನು ಧರಿಸಿದ ಅಪರಾಧಕ್ಕಾಗಿ ಶಂಕರನು ಈಕೆಯನ್ನು ತ್ಯಜಿಸಿದನು. ಪತಿವಿಯೋಗವನ್ನು ಸಹಿಸಲಾರದೆ, ಇವಳು ತನ್ನ ತಂದೆಯಾದ ದಕ್ಷನ ಯಜ್ಞಮಂಟಪದಲ್ಲಿ ಯೋಗಾಗ್ನಿಯಿಂದ ತನ್ನನ್ನು ತಾನೇ ಸುಟ್ಟುಕೊಂಡಳು. ಈಗ ನಿಮ್ಮ ಮನೆಯಲ್ಲಿ ಜನಿಸಿ, ಶಿವನನ್ನು ತನ್ನ ಪತಿಯಾಗಿ ಪಡೆಯಲು ಕಠೋರ ತಪಸ್ಸನ್ನಾಚರಿಸಿದ್ದಾಳೆ. ಈ ವಿಷಯವನ್ನು ತಿಳಿದು, ಸಂದೇಹವನ್ನು ಕಳೆ. ಪಾರ್ವತಿಯು ಎಂದೆಂದಿಗೂ ಶಿವನ ಅರ್ಧಾಂಗಿಯೇ. (ಛಂ)

**ದೋ – ಸುನಿ ನಾರದ ಕೇ ಬಚನ ತಬ ಸಬ ಕರ ಮಿಟಾ ಬಿಷಾದ ।**
**ಛನ ಮಹुँ ಬ್ಯಾಪೆಉ ಸಕಲ ಪುರ ಘರ ಘರ ಯಹ ಸಂಬಾದ ॥೯೮॥**

ನಾರದರು ಹೇಳಿದ ಪೂರ್ವಕಥಾ ಪ್ರಸಂಗವನ್ನು ಕೇಳಿ ಎಲ್ಲರ ವಿಷಾದವೂ ತೊಲಗಿಹೋಯಿತು. ಕ್ಷಣಮಾತ್ರದಲ್ಲಿ ಈ ಸುದ್ದಿ ನಗರದಲ್ಲೆಲ್ಲ ಹಬ್ಬಿತು. (ದೋ/೯೮)

ಚೌ – ತಬ ಮಯನಾ ಹಿಮವಂತು ಅನಂದೇ । ಪುನಿ ಪುನಿ ಪಾರಬತೀ ಪದ ಬಂದೇ ॥
ನಾರಿ ಪುರುಷ ಸಿಸು ಜುಬಾ ಸಯಾನೇ । ನಗರ ಲೋಗ ಸಬ ಅತಿ ಹರಷಾನೇ ॥೧॥
ಲಗೇ ಹೋನ ಪುರ ಮಂಗಲಗಾನಾ । ಸಜೇ ಸಬಹಿं ಹಾಟಕ ಘಟ ನಾನಾ ॥
ಭಾँತಿ ಅನೇಕ ಭಈ ಜೆವನಾರಾ । ಸೂಪಸಾಸ್ತ್ರ ಜಸ ಕಛು ಬ್ಯವಹಾರಾ ॥೨॥
ಸೋ ಜೆವನಾರ ಕಿ ಜಾಇ ಬಖಾನೀ । ಬಸಹಿं ಭವನ ಜೆಹಿं ಮಾತು ಭವಾನೀ ॥
ಸಾದರ ಬೋಲೇ ಸಕಲ ಬರಾತೀ । ಬಿಷ್ನು ಬಿರಂಚಿ ದೇವ ಸಬ ಜಾತೀ ॥೩॥
ಬಿಬಿಧಿ ಪಾँತಿ ಬೈಠೀ ಜೆವನಾರಾ । ಲಾಗೇ ಪರುಸನ ನಿಪುನ ಸುಆರಾ ॥
ನಾರಿಬೃಂದ ಸುರ ಜೇवँತ ಜಾನೀ । ಲಗೀं ದೇನ ಗಾರೀं ಮೃದು ಬಾನೀ ॥೪॥

ಮೈನಾದೇವಿ ಹಾಗೂ ಹಿಮವಂತನು ಪಾರ್ವತಿಯ ದಿವ್ಯತ್ವವನ್ನು ಅರಿತು ಆನಂದತುಂದಿಲರಾದರು. ಅವಳ ಪಾದಗಳಿಗೆ ಪದೇ-ಪದೇ ವಂದಿಸಿಕೊಂಡರು. ನಗರದ ಸ್ತ್ರೀ ಪುರುಷರು, ಬಾಲಕರು, ಯುವಕರು, ವೃದ್ಧರು ಹೀಗೆ ಎಲ್ಲರೂ ಆನಂದದಲ್ಲಿ

ಮುಳುಗಿಹೋದರು. ಊರಿನಲ್ಲೆಲ್ಲ ಮಂಗಳಗೀತೆಗಳು ಮೊಳಗಿದವು. ನಾನಾವಿಧವಾದ ಸುವರ್ಣಕಲಶಗಳನ್ನು ಅಲಂಕರಿಸಿದರು. ಪಾಕಶಾಸ್ತ್ರಪ್ರವೀಣರಿಂದ ಅನೇಕವಿಧವಾದ ಅಡಿಗೆಗಳು, ಭಕ್ಷ್ಯ, ಭೋಜ್ಯಗಳು ಸಿದ್ಧವಾದವು. ಜಗನ್ಮಾತೆಯಾದ ಅನ್ನಪೂರ್ಣೆಯೇ ಮನೆಯೊಳಗಿರುವಾಗ ಅಲ್ಲಿಯ ಭಕ್ಷ್ಯ-ಭೋಜ್ಯಗಳನ್ನು ಏನೆಂದು ವರ್ಣಿಸುವುದು? ಹಿಮವಂತನು ಬ್ರಹ್ಮ, ವಿಷ್ಣು ಮೊದಲಾದ ಎಲ್ಲ ದೇವತೆಗಳನ್ನು ಭೋಜನಕ್ಕಾಗಿ ಆದರದಿಂದ ಆಹ್ವಾನಿಸಿದನು. ಅತಿಥಿಗಳ ಭೋಜನ ಪಂಕ್ತಿಗಳು ಬಹುಸಂಖ್ಯೆಯಲ್ಲಿ ಊಟಮಾಡಿ ಎದ್ದರು. ಜಾಣರಾದ ಬಾಣಸಿಗರು ಭೋಜನವನ್ನು ಬಡಿಸಿದರು. ಹೆಂಗಳೆಯರ ತಂಡ, ದೇವತೆಗಳು ಊಟಮಾಡುತ್ತಿರುವುದನ್ನು ಕಂಡು, ಕೋಮಲ ಸ್ವರದಿಂದ ಸರಸೋಕ್ತಿಗಳನ್ನು ಆಡಿದರು. (ಚೌ/೧-೪)

**ಛಂ – ಗಾರೀಂ ಮಧುರ ಸ್ವರ ದೇಹಿಂ ಸುಂದರಿ ಬಿಂಗ್ಯ ಬಚನ ಸುನಾವಹೀಂ।**
**ಭೋಜನು ಕರಹಿಂ ಸುರ ಅತಿ ಬಿಲಂಬು ಬಿನೋದು ಸುನಿ ಸಚು ಪಾವಹೀಂ॥**
**ಜೇವಂತ ಜೊ ಬಢ್ಯೋ ಅನಂದು ಸೋ ಮುಖ ಕೋಟಿಹೂಂ ನ ಪರೈ ಕಹ್ಯೋ।**
**ಅಚವಾಂಇ ದೀನ್ಹೆ ಪಾನ ಗವನೇ ಬಾಸ ಜಹಂ ಜಾಕೋ ರಹ್ಯೋ॥**

ಎಲ್ಲ ಸುಂದರ ನಾರೀಮಣಿಯರು ಮಧುರ ಸ್ವರದಲ್ಲಿ ಹಾಡುತ್ತಿದ್ದ ವ್ಯಂಗೋಕ್ತಿಗಳನ್ನೂ, ಹಾಸ್ಯೋಕ್ತಿಗಳನ್ನು ಕೇಳಿ ದೇವತೆಗಳು ಅಮಿತ ಆನಂದಿತರಾದರು. ಅದರಿಂದ ಭೋಜನವು ನಿಧಾನವಾಗಿ, ಸಾವಕಾಶವಾಗಿ ಸಾಗುತ್ತಿತ್ತು. ಆ ಭೋಜನದ ಆನಂದವನ್ನು ಕೋಟಿ ನಾಲಿಗೆಗಳೂ ಕೂಡ ಪೂರ್ಣ ವರ್ಣಿಸಲಾರವು. ಊಟದ ಬಳಿಕ ಕರ್ಪೂರ ವೀಳಯವನ್ನು ಸೇವಿಸುತ್ತಾ ತಮ್ಮ-ತಮ್ಮ ಬಿಡದಿಗೆ ಮರಳಿದರು. (ಛಂ)

**ದೋ – ಬಹುರಿ ಮುನಿನ್ಹ ಹಿಮವಂತ ಕಹುಂ ಲಗನ ಸುನಾಈ ಆಇ।**
**ಸಮಯ ಬಿಲೋಕಿ ಬಿಬಾಹ ಕರ ಪಠಏ ದೇವ ಬೋಲಾಇ ॥೯೯॥**

ಮುನಿಗಳು ಹಿಮವಂತನ ಬಳಿಗೆ ಬಂದು ಲಗ್ನಪತ್ರಿಕೆಯನ್ನು ಓದಿ, ಲಗ್ನದ ಮುಹೂರ್ತವೂ ಸಮೀಪಿಸಿದುದನ್ನು ತಿಳಿಸಿ, ದೇವತೆಗಳಿಗೆ ಕರೆ ಕಳುಹಲಾಯಿತು. (ದೋ/೯೯)

**ಚೌ – ಬೋಲಿ ಸಕಲ ಸುರ ಸಾದರ ಲೀನ್ಹೇ। ಸಬಹಿ ಜಥೋಚಿತ ಆಸನ ದೀನ್ಹೆ॥**
**ಬೇದೀ ಬೇದ ಬಿಧಾನ ಸಂವಾರೀ। ಸುಭಗ ಸುಮಂಗಲ ಗಾವಹಿಂ ನಾರೀ ॥೧॥**
**ಸಿಂಘಾಸನು ಅತಿ ದಿಬ್ಯ ಸುಹಾವಾ। ಜಾಇ ನ ಬರನಿ ಬಿರಂಚಿ ಬನಾವಾ॥**
**ಬೈಠೇ ಸಿವ ಬಿಪ್ರನ್ಹ ಸಿರು ನಾಈ। ಹೃದಯಂ ಸುಮಿರಿ ನಿಜ ಪ್ರಭು ರಘುರಾಈ ॥೨॥**
**ಬಹುರಿ ಮುನೀಸನ್ಹ ಉಮಾ ಬೋಲಾಈಂ। ಕರಿ ಸಿಂಗಾರು ಸಖೀಂ ಲೈ ಆಈಂ॥**
**ದೇಖತ ರೂಪು ಸಕಲ ಸುರ ಮೋಹೇ। ಬರನೈ ಛಬಿ ಅಸ ಜಗ ಕಬಿ ಕೋ ಹೈ ॥೩॥**
**ಜಗದಂಬಿಕಾ ಜಾನಿ ಭವ ಭಾಮಾ। ಸುರನ್ಹ ಮನಹಿಂ ಮನ ಕೀನ್ಹ ಪ್ರನಾಮಾ॥**
**ಸುಂದರತಾ ಮರಜಾದ ಭವಾನೀ। ಜಾಇ ನ ಕೋಟಿಹುಂ ಬದನ ಬಖಾನೀ ॥೪॥**

ಹಿಮವಂತನು ಆದರದಿಂದ ದೇವತೆಗಳನ್ನು ವಿವಾಹವೇದಿಕೆಗೆ ಆಹ್ವಾನಿಸಿದನು. ಅವರನ್ನು ಉಚಿತಾಸನಗಳಲ್ಲಿ ಕುಳ್ಳಿರಿಸಲಾಯಿತು. ವೇದಿಕೆಯು ವೇದೋಕ್ತರೀತಿಯಿಂದ ನಿರ್ಮಾಣಗೊಂಡಿತ್ತು. ಮುತ್ತೈದೆಯರು ಕಲ್ಯಾಣಗೀತೆಗಳನ್ನು ಹಾಡಲಾರಂಭಿಸಿದರು. ವೇದಿಕೆಯ ಮೇಲೆ ಒಂದು ದಿವ್ಯ ಸುಂದರ ಸಿಂಹಾಸನವನ್ನು ಅಣಿಗೊಳಿಸಿದ್ದರು. ಅದರ ಸೌಂದರ್ಯವು ವರ್ಣನಾತೀತವಾಗಿತ್ತು. ಅದನ್ನು ಸ್ವತಃ ಬ್ರಹ್ಮನೇ ನಿರ್ಮಿಸಿದ್ದನು. ಶಿವನು ವೇದಮೂರ್ತಿಗಳಾದ ಬ್ರಾಹ್ಮಣರನ್ನು ವಂದಿಸಿ, ಹೃದಯದಲ್ಲಿ ಇಷ್ಟಮೂರ್ತಿಯಾದ ಶ್ರೀರಾಮಚಂದ್ರನನ್ನು ಧ್ಯಾನಿಸುತ್ತಾ ಆ ಸಿಂಹಾಸನವನ್ನು ಅಲಂಕರಿಸಿದನು. ಅನಂತರ ಮುನೀಶ್ವರರು ಪಾರ್ವತಿಯನ್ನು ಆದರದಿಂದ ಬರಮಾಡಿಕೊಂಡರು. ಸಖಿಯರು ಆಕೆಯನ್ನು ಸಿಂಗರಿಸಿ ಕರೆತಂದರು. ಆ ಗಿರಿಜೆಯ ರೂಪವನ್ನು ಕಂಡು ದೇವತೆಗಳೆಲ್ಲ ಮುಗ್ಧರಾದರು. ಅಂತಹ ಚೆಲುವನ್ನು ವರ್ಣಿಸುವ ಕವಿ ಜಗತ್ತಿನಲ್ಲಿ ಯಾವನಿದ್ದಾನೆ? ಅವಳನ್ನು ಜಗನ್ಮಾತೆಯಾದ ಭವಾನಿಯೆಂದು ಗುರುತಿಸಿ ಎಲ್ಲ ದೇವತೆಗಳು ಮನಸ್ಸಿನಲ್ಲೇ ಮಣಿದರು. ಭವಾನಿಯು ಸೌಂದರ್ಯದ ನಿಧಿ. ಅವಳ ರೂಪ ಸೌಂದರ್ಯವಿಲಾಸವನ್ನು ಯಾರಿಂದಲೂ ವರ್ಣಿಸಲು ಸಾಧ್ಯವಿಲ್ಲ. (ಚೌ/೧-೪)

**ಛಂ – ಕೋಟಿಹುಂ ಬದನ ನಹಿಂ ಬನೈ ಬರನತ ಜಗ ಜನನಿ ಸೋಭಾ ಮಹಾ।**
**ಸಕುಚಹಿಂ ಕಹತ ಶ್ರುತಿ ಸೇಷ ಸಾರದ ಮಂದಮತಿ ತುಲಸೀ ಕಹಾ॥**

**ಛಬಿಖಾನಿ ಮಾತು ಭವಾನಿ ಗವನೀಂ ಮಧ್ಯ ಮಂಡಪ ಸಿವ ಜಹಾಂ।**
**ಅವಲೋಕಿ ಸಕಹಿಂ ನ ಸಕುಚ ಪತಿ ಪದ ಕಮಲ ಮನು ಮಧುಕರು ತಹಾಂ॥**

ಜಗಜ್ಜನನಿ ಪಾರ್ವತಿದೇವಿಯ ಸೌಂದರ್ಯವನ್ನು ವರ್ಣಿಸಲೂ ಕೋಟಿ ಬಾಯಿಗಳಿದ್ದರೂ ಸಾಲದು. ವೇದ, ಆದಿಶೇಷ, ಸರಸ್ವತಿಯಂಥವರೇ ಅದನ್ನು ಬಣ್ಣಿಸಲು ಹಿಂದರಿಯುವಾಗ ಮಂದಮತಿಯಾದ ತುಲಸೀದಾಸನು ಯಾವ ಲೆಕ್ಕ? ಸೌಂದರ್ಯರಾಶಿಯಾದ ತಾಯಿ ಭವಾನಿಯು ಶಿವನು ಕುಳಿತಿದ್ದ ವಿವಾಹ ಮಂಟಪವನ್ನು ಪ್ರವೇಶಿಸಿದಳು. ಅಲ್ಲಿ ಶಿವನ ಪಾದಪದ್ಮಗಳನ್ನು ನೋಡಲು ನಾಚಿಕೆ ಸಂಕೋಚಪಡುತ್ತಿದ್ದಳು. ಆದರೆ ಆಕೆಯ ಮನೋಭ್ರಮರವು ಮಾತ್ರ ಶಿವನ ಪಾದಕಮಲದ ರಸಪಾನದಲ್ಲಿ ಮತ್ತವಾಗಿತ್ತು. (ಛಂ)

**ದೋ – ಮುನಿ ಅನುಸಾಸನ ಗನಪತಿಹಿ ಪೂಜೆಉ ಸಂಭು ಭವಾನಿ ।**
**ಕೋಉ ಸುನಿ ಸಂಸಯ ಕರೈ ಜನಿ ಸುರ ಅನಾದಿ ಜಿಯಂ ಜಾನಿ ॥೧೦೦॥**

ಮುನಿಗಳ ಅದೇಶಕ್ಕನುಸಾರ ಶಿವಪಾರ್ವತಿಯರು ಮೊಟ್ಟಮೊದಲು ಮಹಾಗಣಪತಿಯನ್ನು ಪೂಜಿಸಿದರು. ಈ ಪೂಜಾವಿಷಯದಲ್ಲಿ ಯಾರಿಗೂ ಸಂದೇಹವು ಬರಬಾರದು. ಏಕೆಂದರೆ, ದೇವತೆಗಳು ಅನಾದಿಕಾಲದಿಂದಲೂ ಇರುವವರು. (ದೋ/೧೦೦)

**ಚೌ – ಜಸಿ ಬಿಬಾಹ ಕೈ ಬಿಧಿ ಶ್ರುತಿ ಗಾಈ । ಮಹಾಮುನಿನ್ಹ ಸೋ ಸಬ ಕರವಾಈ ॥**
**ಗಹಿ ಗಿರೀಸ ಕುಸ ಕನ್ಯಾ ಪಾನೀ । ಭವಹಿ ಸಮರಪೀಂ ಜಾನಿ ಭವಾನೀ ॥೧॥**
**ಪಾನಿಗ್ರಹನ ಜಬ ಕೀನ್ಹ ಮಹೇಸಾ । ಹಿಯಂ ಹರಷೇ ತಬ ಸಕಲ ಸುರೇಸಾ ॥**
**ಬೇದಮಂತ್ರ ಮುನಿಬರ ಉಚ್ಚರಹೀಂ । ಜಯ ಜಯ ಜಯ ಸಂಕರ ಸುರ ಕರಹೀಂ ॥೨॥**
**ಬಾಜಹಿಂ ಬಾಜನ ಬಿಬಿಧ ಬಿಧಾನಾ । ಸುಮನಬೃಷ್ಟಿ ನಭ ಭೈ ಬಿಧಿ ನಾನಾ ॥**
**ಹರ ಗಿರಿಜಾ ಕರ ಭಯಉ ಬಿಬಾಹೂ । ಸಕಲ ಭುವನ ಭರಿ ರಹಾ ಉಛಾಹೂ ॥೩॥**
**ದಾಸೀಂ ದಾಸ ತುರಗ ರಥ ನಾಗಾ । ಧೇನು ಬಸನ ಮನಿ ಬಸ್ತು ಬಿಭಾಗಾ ॥**
**ಅನ್ನ ಕನಕ ಭಾಜನ ಭರಿ ಜಾನಾ । ದಾಇಜ ದೀನ್ಹ ನ ಜಾಇ ಬಖಾನಾ ॥೪॥**

ಮಹರ್ಷಿಗಳು ವೇದೋಕ್ತಪದ್ಧತಿಯಿಂದ ವಿವಾಹಕಾರ್ಯವನ್ನು ಮಾಡಿಸಿದರು. ಹಿಮವಂತನು ಕುಶಪಾಣಿಯಾಗಿ ಮಗಳಾದ ಪಾರ್ವತಿಯ ಕೈಯನ್ನು ಹಿಡಿದುಕೊಂಡು, ಆಕೆಯನ್ನು ಭವಾನಿ ಎಂದೇ ತಿಳಿದು ಶಿವನಿಗೆ ಅರ್ಪಿಸಿದನು. ಮಹೇಶ್ವರನು ಪಾರ್ವತಿಯ 'ಪಾಣಿಗ್ರಹಣ' ಮಾಡಿದಾಗ, ಇಂದ್ರಾದಿ ದೇವತೆಗಳೆಲ್ಲರ ಹರ್ಷ ಮೇರೆ ಮೀರಿತು. ಮುನೀಶ್ವರರು ವೇದಾಶೀರ್ವಚನ ಮಂತ್ರಗಳನ್ನು ಉಚ್ಚರಿಸತೊಡಗಿದರು. ದೇವತಾಗಡಣವು ಶಂಕರನಿಗೆ ಜಯಕಾರ ಮಾಡಿತು. ದೇವದುಂದುಭಿಗಳೂ, ಅನೇಕ ವಾದ್ಯಗಳೂ ಮೊಳಗಿದವು. ಆಗಸದಿಂದ ನಾನಾ ವಿಧವಾದ ಹೂವಿನ ಮಳೆಯು ಸುರಿಯಿತು. ಶಿವಪಾರ್ವತಿಯರ ಕಲ್ಯಾಣೋತ್ಸವವು ಸಕಲ ಲೋಕಗಳಿಗೆ ಆನಂದದಾಯಕವಾಯಿತು. ಹಿಮವಂತನು ದಾಸದಾಸಿಯರು, ರಥ, ಗಜ, ತುರಗಗಳು, ಗೋವುಗಳು, ವಸ್ತ್ರ-ಭೂಷಣಗಳು, ಮಣಿ-ಮಾಣಿಕ್ಯವೇ ಮೊದಲಾದ ವಸ್ತುಗಳು, ಭಂಗಾರದ ಪಾತ್ರೆಗಳಲ್ಲಿ ಭಕ್ಷ್ಯ-ಭೋಜ್ಯಗಳು, ವಾಹನಗಳು ಮೊದಲಾದವುಗಳನ್ನು ಬಂಡಿಗಳಲ್ಲಿ ತುಂಬಿ ಬಳುವಳಿಯಾಗಿ ಅರ್ಪಿಸಿದನು. (ಚೌ/೧-೪)

**ಛಂ – ದಾಇಜ ದಿಯೋ ಬಹು ಭಾಂತಿ ಪುನಿ ಕರ ಜೋರಿ ಹಿಮಭೂಧರ ಕಹ್ಯೋ।**
**ಕಾ ದೇಉಂ ಪೂರನಕಾಮ ಸಂಕರ ಚರನ ಪಂಕಜ ಗಹಿ ರಹ್ಯೋ॥**
**ಸಿವಂ ಕೃಪಾಸಾಗರ ಸಸುರ ಕರ ಸಂತೋಷು ಸಬ ಭಾಂತಿಹಿಂ ಕಿಯೋ।**
**ಪುನಿ ಗಹೇ ಪದ ಪಾಥೋಜ ಮಯನಾಂ ಪ್ರೇಮ ಪರಿಪೂರನ ಹಿಯೋ॥**

ಅನೇಕ ವಿಧವಾದ ವರದಕ್ಷಿಣೆ, ವರೋಪಚಾರವನ್ನು ಸಮರ್ಪಿಸಿ, ಹಿಮವಂತನು ಕೈಜೋಡಿಸಿಕೊಂಡು ಹೀಗೆ ಪ್ರಾರ್ಥಿಸಿದನು – ''ಓ ಪರಮೇಶ್ವರಾ! ನೀನು ಪೂರ್ಣಕಾಮನು. ನಿನಗೆ ನಾನು ಏನು ಕೊಡಬಲ್ಲೆ?'' ಇಷ್ಟು ಹೇಳಿ ಅವನು ಶಿವನ ಪಾದಗಳನ್ನು ಹಿಡಿದುಕೊಂಡನು. ಕೃಪಾಸಾಗರನಾದ ಶಂಕರನು ಹಿಮವಂತನನ್ನು ಅನೇಕ ವಿಧದಿಂದ ಸಂತೈಸಿದನು. ಬಳಿಕ ಪ್ರೇಮಾರ್ದ್ರಹೃದಯದಿಂದ ಮೈನಾದೇವಿಯು ಶಿವನ ಪಾದಗಳಿಗೆ ಭಕ್ತಿಯಿಂದ ವಂದಿಸಿ, ಇಂತೆಂದಳು – (ಛಂ)

**ದೋ – ನಾಥ ಉಮಾ ಮಮ ಪ್ರಾನ ಸಮ ಗೃಹಕಿಂಕರೀ ಕರೇಹು ।**
**ಛಮೆಹು ಸಕಲ ಅಪರಾಧ ಅಬ ಹೊಇ ಪ್ರಸನ್ನ ಬರು ದೇಹು ॥ ೧೦೧ ॥**

ಸ್ವಾಮಿ! ನನ್ನ ಮಗಳಾದ ಈ ಉಮೆಯು ನನಗೆ ಪ್ರಾಣಕ್ಕಿಂತ ಪ್ರಿಯಳು. ನೀವು ಈಕೆಯನ್ನು ಗೃಹಸೇವಿಕೆಯನ್ನಾಗಿ ಮಾಡಿಕೊಂಡು ಕಾಪಾಡಿರಿ. ಇವಳು ಏನು ಅಪರಾಧಮಾಡಿದರೂ ಕ್ಷಮಿಸಿರಿ. ನೀವು ಪ್ರಸನ್ನರಾಗಿ ನನಗೆ ಈ ವರವನ್ನು ದಯಪಾಲಿಸಿರಿ. (ದೋ/೧೦೧)

**ಚೌ – ಬಹು ಬಿಧಿ ಸಂಭು ಸಾಸು ಸಮುಝಾಈ । ಗವನೀ ಭವನ ಚರನ ಸಿರು ನಾಈ ॥**
**ಜನನೀಂ ಉಮಾ ಬೋಲಿ ತಬ ಲೀನ್ಹೀ । ಲೈ ಉಛಂಗ ಸುಂದರ ಸಿಖ ದೀನ್ಹೀ ॥ ೧ ॥**
**ಕರೆಹು ಸದಾ ಸಂಕರ ಪದ ಪೂಜಾ । ನಾರಿಧರಮು ಪತಿ ದೇಉ ನ ದೂಜಾ ॥**
**ಬಚನ ಕಹತ ಭರೆ ಲೋಚನ ಬಾರೀ । ಬಹುರಿ ಲಾಇ ಉರ ಲೀನ್ಹಿ ಕುಮಾರೀ ॥ ೨ ॥**
**ಕತ ಬಿಧಿ ಸೃಜೀಂ ನಾರಿ ಜಗ ಮಾಹೀಂ । ಪರಾಧೀನ ಸಪನೇಹುಁ ಸುಖು ನಾಹೀಂ ॥**
**ಭೈ ಅತಿ ಪ್ರೇಮ ಬಿಕಲ ಮಹತಾರೀ । ಧೀರಜು ಕೀನ್ಹ ಕುಸಮಯ ಬಿಚಾರೀ ॥ ೩ ॥**
**ಪುನಿ ಪುನಿ ಮಿಲತಿ ಪರತಿ ಗಹಿ ಚರನಾ । ಪರಮ ಪ್ರೇಮು ಕಛು ಜಾಇ ನ ಬರನಾ ॥**
**ಸಬ ನಾರಿನ್ಹ ಮಿಲಿ ಭೇಟಿ ಭವಾನೀ । ಜಾಇ ಜನನಿ ಉರ ಪುನಿ ಲಪಟಾನೀ ॥ ೪ ॥**

ಶಿವನು ಅನೇಕರೀತಿಯಿಂದ ತನ್ನ ಅತ್ತೆಗೆ ಧೈರ್ಯಹೇಳಿ, ಸಾಂತ್ವನ ನೀಡಿದನು. ಅನಂತರ ಅವಳು ಶಿವನ ಚರಣಗಳಲ್ಲಿ ವಂದಿಸಿ, ಮನೆಗೆ ಮರಳಿದಳು. ಮತ್ತೆ ಮೈನಾದೇವಿಯು ಉಮೆಯನ್ನು ತೊಡೆಯಲ್ಲಿ ಕುಳ್ಳಿರಿಸಿಕೊಂಡು ಇಂತು ಉಪದೇಶಿಸಿದಳು – ''ಮಗು ಪಾರ್ವತೀ! ನೀನು ಯಾವಾಗಲೂ ಶಿವನ ಪಾದಸೇವೆಯನ್ನು ಮಾಡುತ್ತಿರು. ಇದೇ ನಾರಿಯರ ಧರ್ಮವಾಗಿದೆ. ಅವರಿಗೆ ಪತಿಯೇ ಪರದೈವ. ಅದರ ಮುಂದೆ ಬೇರಾವ ದೈವವೂ ಇಲ್ಲ.'' ಹೀಗೆ ಹೇಳುತ್ತಾ ಆಕೆಯು ಕಣ್ಣುಗಳು ಪ್ರೇಮಾಶ್ರುಗಳಿಂದ ತುಂಬಿಬಂದವು. ಬಳಿಕ ಆಕೆಯು ಮಗಳನ್ನು ಎದೆಗವುಚಿಕೊಂಡಳು. ಮತ್ತೆ ಹೇಳಿದಳು – ''ವಿಧಾತನು ಸ್ತ್ರೀಜಾತಿಯನ್ನು ಏಕೆ ಸೃಷ್ಟಿಸಿದನು? ಪರಾಧೀನರಿಗೆ ಕನಸಿನಲ್ಲೂ ಸುಖ ಸಿಗುವುದಿಲ್ಲ.'' ಹೀಗೆ ಹೇಳುತ್ತಾ ಮೈನಾದೇವಿಯು ಪ್ರೇಮದಲ್ಲಿ ವಿಹ್ವಲಳಾದಳು. ಅಳಲು ಒತ್ತರಿಸಿ ಬಂದರೂ, ಇದು ಅಳುವ ಸಮಯವಲ್ಲವೆಂದು ಧೈರ್ಯವನ್ನು ತಂದುಕೊಂಡಳು. ಮೈನಾದೇವಿಗೆ ಮಗಳನ್ನು ಎಷ್ಟುಸಲ ನೋಡಿದರೂ ತೃಪ್ತಿಯಾಗದು. ಆಕೆಯು ಮತ್ತೆ-ಮತ್ತೆ ಬಳಿಗೆ ಬರುವಳು. ಅವಳ ಕಾಲಿಗೆ ಬೀಳುವಳು. ತಾಯಿ-ಮಗಳ ಪ್ರೇಮವು ವರ್ಣನಾತೀತವು. ಭವಾನಿಯು ಎಲ್ಲ ಹೆಂಗಸರನ್ನು ಕಂಡು ಬೀಳ್ಕೊಂಡಳು. ಅನಂತರ ತಾಯಿಯ ಬಳಿಗೆ ಹೋಗಿ ಅಪ್ಪಿಕೊಂಡಳು. (ಚೌ/೧-೪)

**ಛಂ – ಜನನಿಹಿ ಬಹುರಿ ಮಿಲಿ ಚಲೀ ಉಚಿತ ಅಸೀಸ ಸಬ ಕಾಹೂಁ ದಈಂ ।**
**ಫಿರಿ ಫಿರಿ ಬಿಲೋಕತಿ ಮಾತು ತನ ತಬ ಸಖೀಂ ಲೈ ಸಿವ ಪಹಿಂ ಗಈಂ ॥**
**ಜಾಚಕ ಸಕಲ ಸಂತೋಷಿ ಸಂಕರು ಉಮಾ ಸಹಿತ ಭವನ ಚಲೇ ।**
**ಸಬ ಅಮರ ಹರಷೇ ಸುಮನ ಬರಷಿ ನಿಸಾನ ನಭ ಬಾಜೇ ಭಲೇ ॥**

ಪಾರ್ವತಿಯು ಪುನಃ ತಾಯಿಯ ಬಳಿಹೋಗಿ ಬೀಳ್ಕೊಂಡಳು. ಎಲ್ಲರೂ ಆಕೆಗೆ ತಕ್ಕುದಾದ ಆಶೀರ್ವಾದ ಮಾಡಿದರು. ಪಾರ್ವತಿಯ ಕಣ್ಣುಗಳು ತಿರು-ತಿರುಗಿ ತಾಯಿಯತ್ತ ದಿಟ್ಟಿಸುತ್ತಿದ್ದವು. ಸಖಿಯರು ಅವಳನ್ನು ಶಂಕರನ ಬಳಿಗೊಯ್ದರು. ಮಹಾದೇವನು ಅಲ್ಲಿ ನೆರೆದಿದ್ದ ಯಾಚಕರೆಲ್ಲರನ್ನು ಸಂತೋಷಪಡಿಸಿ, ಪಾರ್ವತಿಯೊಂದಿಗೆ, ಸಪರಿವಾರಸಹಿತ ಕೈಲಾಸಕ್ಕೆ ತೆರಳಿದನು. ದೇವತೆಗಳೆಲ್ಲರೂ ಸಂತುಷ್ಟರಾಗಿ ಹೂವಿನ ಮಳೆಯನ್ನು ಸುರಿದರು. ಆಕಾಶದಲ್ಲಿ ದೇವದುಂದುಭಿಗಳು ಮೊಳಗಿದವು. (ಛಂ)

**ದೋ – ಚಲೇ ಸಂಗ ಹಿಮವಂತು ತಬ ಪಹುಁಚಾವನ ಅತಿ ಹೇತು ।**
**ಬಿಬಿಧ ಭಾಂತಿ ಪರಿತೋಷು ಕರಿ ಬಿದಾ ಕೀನ್ಹ ಬೃಷಕೇತು ॥ ೧೦೨ ॥**

ಹಿಮವಂತನು ಅತ್ಯಂತ ಪ್ರೇಮಾದರಗಳಿಂದ ಪಾರ್ವತಿ ಪರಮೇಶ್ವರರನ್ನು ಬೀಳ್ಕೊಳ್ಳಲು ಅವರೊಂದಿಗೆ ಸ್ವಲ್ಪದೂರ ಸಾಗಿದನು. ಶಿವನು ಅವನನ್ನು ಬಹುವಿಧದಿಂದ ಸಂತೋಷಪಡಿಸಿ ಹಿಂದಕ್ಕೆ ಕಳಿಸಿಕೊಟ್ಟನು. (ದೋ/೧೦೨)

ಚೌ – ತುರತ ಭವನ ಆಏ ಗಿರಿರಾಈ । ಸಕಲ ಸೈಲ ಸರ ಲಿಏ ಬೊಲಾಈ ॥
ಆದರ ದಾನ ಬಿನಯ ಬಹುಮಾನಾ । ಸಬ ಕರ ಬಿದಾ ಕೀನ್ಹ ಹಿಮವಾನಾ ॥ ೧ ॥
ಜಬಹಿಂ ಸಂಭು ಕೈಲಾಸಹಿಂ ಆಏ । ಸುರ ಸಬ ನಿಜ ನಿಜ ಲೋಕ ಸಿಧಾಏ ॥
ಜಗತ ಮಾತು ಪಿತು ಸಂಭು ಭವಾನೀ । ತೇಹಿಂ ಸಿಂಗಾರು ನ ಕಹಉಁ ಬಖಾನೀ ॥ ೨ ॥
ಕರಹಿಂ ಬಿಬಿಧ ಬಿಧಿ ಭೋಗ ಬಿಲಾಸಾ । ಗನನ್ಹ ಸಮೇತ ಬಸಹಿಂ ಕೈಲಾಸಾ ॥
ಹರ ಗಿರಿಜಾ ಬಿಹಾರ ನಿತ ನಯಊ । ಏಹಿ ಬಿಧಿ ಬಿಪುಲ ಕಾಲ ಚಲಿ ಗಯಊ ॥ ೩ ॥
ತಬ ಜನಮೇಉ ಷಟಬದನ ಕುಮಾರಾ । ತಾರಕು ಅಸುರು ಸಮರ ಜೇಹಿಂ ಮಾರಾ ॥
ಆಗಮ ನಿಗಮ ಪ್ರಸಿದ್ಧ ಪುರಾನಾ । ಷನ್ಮುಖ ಜನ್ಮು ಸಕಲ ಜಗ ಜಾನಾ ॥ ೪ ॥

ಗಿರಿರಾಜನು ಅಳಿಯ-ಮಗಳನ್ನು ಬೀಳ್ಕೊಟ್ಟು ಮನೆಗೆ ಮರಳಿದ. ಇತರ ಪರ್ವತರಾಜರನ್ನೂ, ನದೀದೇವತೆಗಳನ್ನೂ ಬರಮಾಡಿಕೊಂಡು ಅವರೆಲ್ಲರನ್ನೂ ವಿಧ-ವಿಧವಾದ ಬಹುಮಾನಗಳಿಂದ ಸತ್ಕರಿಸಿ ಕಳುಹಿಸಿಕೊಟ್ಟನು. ಶಿವನು ಕೈಲಾಸಕ್ಕೆ ಮರಳಿದ ಮೇಲೆ ದೇವತೆಗಳೆಲ್ಲರೂ ತಮ್ಮ-ತಮ್ಮ ಲೋಕಗಳಿಗೆ ತೆರಳಿದರು. ಪಾರ್ವತೀ ಪರಮೇಶ್ವರರು ಜಗತ್ತಿನ ತಂದೆ-ತಾಯಿಗಳಲ್ಲವೇ? ಅದರಿಂದ ಆ ದಂಪತಿಗಳ ಶೃಂಗಾರ ವರ್ಣನೆಯನ್ನು ಈ ತುಲಸೀದಾಸನು ಮಾಡಲಾರನು. ಶಿವ ಪಾರ್ವತಿಯರು ಅನೇಕ ಭೋಗ-ಭಾಗ್ಯಗಳಲ್ಲಿ ಮಗ್ನರಾಗಿ ತಮ್ಮ ಪ್ರಮಥಾದಿ ಗಣಗಳೊಂದಿಗೆ ಕೈಲಾಸದಲ್ಲಿ ಇರತೊಡಗಿದರು. ಅವರಿಗೆ ನಿತ್ಯೋತ್ಸವ, ನಿತ್ಯನೂತನ ವಿಹಾರಗಳು. ಈ ರೀತಿ ಬಹಳಕಾಲ ಕಳೆಯಿತು. ಅನಂತರ ಷಣ್ಮುಖ ಕುಮಾರನ ಜನನವಾಯಿತು. ಅವನು ಯುದ್ಧದಲ್ಲಿ ತಾರಕಾಸುರನನ್ನು ಸಂಹರಿಸಿದನು. ಈ ಕಾರ್ತಿಕೇಯಸ್ವಾಮಿಯ ಕಥೆಯು ಆಗಮ, ನಿಗಮ ಹಾಗೂ ಪುರಾಣಗಳಲ್ಲಿ ವರ್ಣಿತವಾಗಿದೆ. ಇದು ಜಗದ್ವಿಖ್ಯಾತವೂ ಆಗಿದೆ. (ಚೌ/೧-೪)

ಛಂ – ಜಗು ಜಾನ ಷನ್ಮುಖ ಜನ್ಮು ಕರ್ಮು ಪ್ರತಾಪು ಪುರುಷಾರಥು ಮಹಾ ।
ತೇಹಿ ಹೇತು ಮೈಂ ಬೃಷಕೇತು ಸುತ ಕರ ಚರಿತ ಸಂಛೇಪಹಿಂ ಕಹಾ ॥
ಯಹ ಉಮಾ ಸಂಭು ಬಿಬಾಹು ಜೇ ನರ ನಾರಿ ಕಹಹಿಂ ಜೇ ಗಾವಹೀಂ ।
ಕಲ್ಯಾನ ಕಾಜ ಬಿಬಾಹ ಮಂಗಲ ಸರ್ಬದಾ ಸುಖು ಪಾವಹೀಂ ॥

ಷಡಾನನನ ಜನ್ಮವೃತ್ತಾಂತವೂ, ಕರ್ಮಕೌಶಲ್ಯವೂ, ಶೌರ್ಯಪರಾಕ್ರಮಗಳೂ, ಅದ್ಭುತ ಪೌರುಷವೂ ಲೋಕಪ್ರಸಿದ್ಧವು. ಅದರಿಂದ ವೃಷಭಧ್ವಜನ ಸುತನಾದ ಕಾರ್ತಿಕೇಯನ ಚರಿತ್ರವನ್ನು ಸಂಕ್ಷೇಪದಲ್ಲಿ ಹೇಳಿದ್ದೇನೆ. ಶಿವ-ಪಾರ್ವತಿಯರ ಕಲ್ಯಾಣದ ಕಥೆಯನ್ನು ಶ್ರವಣಿಸುವ, ಪಠಿಸುವ, ಹಾಡುವ ಎಲ್ಲ ಸ್ತ್ರೀ-ಪುರುಷರೂ ತಮ್ಮ-ತಮ್ಮ ಕಾರ್ಯಗಳಲ್ಲಿ ವಿಜಯವನ್ನೂ, ಶ್ರೇಯಸ್ಸನ್ನೂ ಹೊಂದುವರು. ವಿವಾಹಾದಿ ಮಂಗಳಕಾರ್ಯಗಳಲ್ಲಿ ಸುಖವನ್ನು ಪಡೆಯುವರು. (ಛಂ)

ದೋ – ಚರಿತ ಸಿಂಧು ಗಿರಿಜಾ ರಮನ ಬೇದ ನ ಪಾವಹಿಂ ಪಾರು ।
ಬರನೈ ತುಲಸೀದಾಸು ಕಿಮಿ ಅತಿ ಮತಿಮಂದ ಗವಾಁರು ॥ ೧೦೩ ॥

ಗಿರಿಜಾರಮಣ ಮಹಾದೇವನ ಚರಿತವು ಸಮುದ್ರದಂತೆ ಅಪಾರವಾದುದು. ವೇದಗಳೂ ಕೂಡ ಅದರ ದಡ ಮುಟ್ಟಲಾರವು. ಹೀಗಿರುವಾಗ ಅತ್ಯಂತ ಜಡಮತಿಯಾದ ತುಳಸೀದಾಸನು ಹೇಗೆ ವರ್ಣಿಸಬಲ್ಲನು? (ದೋ/೧೦೩)

ಚೌ – ಸಂಭು ಚರಿತ ಸುನಿ ಸರಸ ಸುಹಾವಾ । ಭರದ್ವಾಜ ಮುನಿ ಅತಿ ಸುಖು ಪಾವಾ ॥
ಬಹು ಲಾಲಸಾ ಕಥಾ ಪರ ಬಾಢೀ । ನಯನನ್ಹಿ ನೀರು ರೊಮಾವಲಿ ಠಾಢೀ ॥ ೧ ॥
ಪ್ರೇಮ ಬಿಬಸ ಮುಖ ಆವ ನ ಬಾನೀ । ದಸಾ ದೇಖಿ ಹರಷೇ ಮುನಿ ಗ್ಯಾನೀ ॥
ಅಹೋ ಧನ್ಯ ತವ ಜನ್ಮು ಮುನೀಸಾ । ತುಮ್ಹಹಿ ಪ್ರಾನ ಸಮ ಪ್ರಿಯ ಗೌರೀಸಾ ॥ ೨ ॥
ಸಿವ ಪದ ಕಮಲ ಜಿನ್ಹಹಿ ರತಿ ನಾಹೀಂ । ರಾಮಹಿ ತೇ ಸಪನೇಹುಁ ನ ಸೊಹಾಹೀಂ ॥
ಬಿನು ಛಲ ಬಿಸ್ವನಾಥ ಪದ ನೇಹೂ । ರಾಮ ಭಗತ ಕರ ಲಚ್ಛನ ಏಹೂ ॥ ೩ ॥
ಸಿವ ಸಮ ಕೋ ರಘುಪತಿ ಬ್ರತಧಾರೀ । ಬಿನು ಅಘ ತಜೀ ಸತೀ ಅಸಿ ನಾರೀ ॥
ಪನು ಕರಿ ರಘುಪತಿ ಭಗತಿ ದೇಖಾಈ । ಕೋ ಸಿವ ಸಮ ರಾಮಹಿ ಪ್ರಿಯ ಭಾಈ ॥ ೪ ॥

ಶಿವನ ಸರಸ ಸುಂದರ ಕಥೆಯನ್ನು ಕೇಳಿ, ಭರದ್ವಾಜ ಮಹರ್ಷಿಗಳು ಪರಮಾನಂದಭರಿತರಾದರು. ಕಥೆ ಕೇಳಬೇಕೆಂಬ ಅವರ ಬಯಕೆ ಇನ್ನೂ ಹೆಚ್ಚಿತು. ಕಣ್ಣುಗಳು ತುಂಬಿಬಂದವು. ಶರೀರ ರೋಮಾಂಚನಗೊಂಡಿತು. ಅವರು ಪ್ರೇಮಪರವಶರಾಗಿ, ಅವರ ಬಾಯಿಂದ ಮಾತೇ ಹೊರಡದಾಯಿತು. ಅವರ ಸ್ಥಿತಿಯನ್ನು ಗಮನಿಸಿದ ಜ್ಞಾನಿಗಳಾದ ಯಾಜ್ಞವಲ್ಕ್ಯರು ತುಂಬಾ ಪ್ರಸನ್ನರಾಗಿ ಇಂತೆಂದರು – ''ಮುನೀಶ್ವರಾ! ನಿಮ್ಮ ಜನ್ಮವು ಧನ್ಯ. ನಿಮಗೆ ಗೌರೀವಲ್ಲಭ ಶಿವನು ಪ್ರಾಣಪ್ರಿಯನು. ಶಿವನ ಚರಣಕಮಲಗಳಲ್ಲಿ ಪ್ರೀತಿಯಿಲ್ಲದವರು ಶ್ರೀರಾಮನ ದಯೆಗೆ ಕನಸಿನಲ್ಲಿಯೂ ಪಾತ್ರರಾಗಲಾರರು. ವಿಶ್ವನಾಥನಾದ ಶಿವನ ಚರಣಗಳಲ್ಲಿ ನಿಷ್ಕಪಟ ಪ್ರೇಮ ಉಂಟಾಗುವುದೇ ರಾಮಭಕ್ತನ ಲಕ್ಷಣ. ಶಿವನಂತೆ ರಘುಪತಿಯ ಭಕ್ತಿಯ ವ್ರತವನ್ನು ಕೈಗೊಂಡವರು ಯಾರಿದ್ದಾರೆ? ನಿರಪರಾಧಿಯಾದ ಸತಿದೇವಿಯನ್ನೂ ಕೂಡ ಪರಿತ್ಯಜಿಸಿ, ಶ್ರೀರಘುನಾಥನಲ್ಲಿ ತನಗಿರುವ ಭಕ್ತಿಶ್ರದ್ಧೆಗಳನ್ನು ಪ್ರತಿಜ್ಞಾಪೂರ್ವಕ ಪ್ರಕಟಿಸಿದನು. ಶ್ರೀರಾಮನಿಗೆ ಶಿವನಷ್ಟು ಪ್ರಿಯರು ಯಾರಿದ್ದಾರೆ? (ಚೌ/೧-೪)

**ದೋ – ಪ್ರಥಮಹಿಂ ಮೈಂ ಕಹಿ ಸಿವ ಚರಿತ ಬೂಝಾ ಮರಮು ತುಮ್ಹಾರ ।**
**ಸುಚಿ ಸೇವಕ ತುಮ್ಹ ರಾಮ ಕೇ ರಹಿತ ಸಮಸ್ತ ಬಿಕಾರ ॥ ೧೦೪ ॥**

ನಾನು ಮೊದಲಿಗೆ ಶಿವಚರಿತವನ್ನು ಹೇಳಿ ನಿನ್ನ ಮರ್ಮವನ್ನು ಅಳೆದುನೋಡಿದೆ. ನೀನು ರಾಮಚಂದ್ರನ ಪಾವನ ಭಕ್ತನು. ಸಮಸ್ತ ದೋಷಗಳಿಂದ ರಹಿತನಾಗಿರುವೆ. (ದೋ/೧೦೪)

**ಚೌ – ಮೈಂ ಜಾನಾ ತುಮ್ಹಾರ ಗುನ ಸೀಲಾ । ಕಹಉಂ ಸುನಹು ಅಬ ರಘುಪತಿ ಲೀಲಾ ॥**
**ಸುನು ಮುನಿ ಆಜು ಸಮಾಗಮ ತೋರೇಂ । ಕಹಿ ನ ಜಾಇ ಜಸ ಸುಖು ಮನ ಮೋರೇಂ ॥ ೧ ॥**
**ರಾಮ ಚರಿತ ಅತಿ ಅಮಿತ ಮುನೀಸಾ । ಕಹಿ ನ ಸಕಹಿಂ ಸತ ಕೋಟಿ ಅಹೀಸಾ ॥**
**ತದಪಿ ಜಥಾಶ್ರುತ ಕಹಉಂ ಬಖಾನೀ । ಸುಮಿರಿ ಗಿರಾಪತಿ ಪ್ರಭು ಧನುಪಾನೀ ॥ ೨ ॥**
**ಸಾರದ ದಾರುನಾರಿ ಸಮ ಸ್ವಾಮೀ । ರಾಮು ಸೂತ್ರಧರ ಅಂತರಜಾಮೀ ॥**
**ಜೆಹಿ ಪರ ಕೃಪಾ ಕರಹಿಂ ಜನು ಜಾನೀ । ಕಬಿ ಉರ ಅಜಿರ ನಚಾವಹಿಂ ಬಾನೀ ॥ ೩ ॥**
**ಪ್ರನವಉಂ ಸೋಇ ಕೃಪಾಲ ರಘುನಾಥಾ । ಬರನಉಂ ಬಿಸದ ತಾಸು ಗುನ ಗಾಥಾ ॥**
**ಪರಮ ರಮ್ಯ ಗಿರಿಬರು ಕೈಲಾಸೂ । ಸದಾ ಜಹಾಂ ಸಿವ ಉಮಾ ನಿವಾಸೂ ॥ ೪ ॥**

ನಾನು ನಿನ್ನ ಗುಣ, ಶೀಲಗಳನ್ನು ಅರಿತುಕೊಂಡೆ. ಈಗ ರಘುಪತಿಯ ದಿವ್ಯಲೀಲೆಗಳನ್ನು ಹೇಳುತ್ತೇನೆ, ಕೇಳು. ಮುನೀಶ್ವರಾ! ಇಂದು ನಿನ್ನ ಸಮಾಗಮದಿಂದ ನನಗೆ ಆದ ಆನಂದಕ್ಕೆ ಪಾರವೇ ಇಲ್ಲ. ಶ್ರೀರಾಮನ ಚರಿತ್ರವು ಅಪಾರವಾಗಿದೆ. ನೂರು ಕೋಟಿ ಶೇಷರೂ ಕೂಡ ಅದನ್ನು ವರ್ಣಿಸಲಾರರು. ಆದರೂ ನಾನು ಕೇಳಿದುದನ್ನು ವಾಕ್‌ಪ್ರೇರಕನೂ, ಧನುಷ್ಪಾಣಿಯೂ ಆದ ಶ್ರೀರಾಮಚಂದ್ರನನ್ನು ನೆನೆದು ಬಿತ್ತರಿಸುತ್ತೇನೆ. ವಾಗ್ದೇವಿಯಾದ ಸರಸ್ವತಿಯು ಸೂತ್ರದಬೊಂಬೆ. ಅಂತರ್ಯಾಮಿಯಾದ ಶ್ರೀರಾಮನೇ ಸೂತ್ರಧಾರನು. ತನ್ನ ಭಕ್ತನೆಂದು ತಿಳಿದು ಯಾವ ಕವಿಯ ಮೇಲೆ ಅವನು ಕೃಪೆಮಾಡುವನೋ, ಅವನ ಹೃದಯಾಂಗಣದಲ್ಲಿ ಸರಸ್ವತಿಯನ್ನು ಅವನು ಕುಣಿಸುತ್ತಾನೆ. ಅಂತಹ ಕೃಪಾಳುವಾದ ಶ್ರೀರಘುನಾಥನಿಗೆ ನಾನು ವಂದಿಸಿಕೊಂಡು, ಅವನ ನಿರ್ಮಲ ಗುಣಗಳ ಕಥೆಯನ್ನು ಬಣ್ಣಿಸುತ್ತೇನೆ. ಪಾರ್ವತಿ ಪರಮೇಶ್ವರ ನಿವಾಸಸ್ಥಾನವಾದ ಕೈಲಾಸವು ಪರ್ವತಗಳಲ್ಲಿ ಶ್ರೇಷ್ಠವೂ, ರಮಣೀಯವೂ ಆಗಿದೆ. (ಚೌ/೧-೪)

**ದೋ – ಸಿದ್ಧ ತಪೋಧನ ಜೋಗಿಜನ ಸುರ ಕಿನ್ನರ ಮುನಿಬೃಂದ ।**
**ಬಸಹಿಂ ತಹಾಂ ಸುಕೃತೀ ಸಕಲ ಸೇವಹಿಂ ಸಿವ ಸುಖಕಂದ ॥ ೧೦೫ ॥**

ಸಿದ್ಧರೂ, ತಪೋಧನರೂ, ಯೋಗಿಗಳೂ, ದೇವತೆಗಳೂ, ಕಿನ್ನರರೂ, ಮುನಿಗಳೂ, ಆ ಕೈಲಾಸದಲ್ಲಿ ವಾಸಿಸುತ್ತಿದ್ದರು. ಅವರೆಲ್ಲರೂ ಹೆಚ್ಚಿನ ಪುಣ್ಯಾತ್ಮರಾಗಿದ್ದು, ಆನಂದಸ್ವರೂಪನಾದ ಪರಶಿವನನ್ನು ಆರಾಧಿಸುತ್ತಿದ್ದಾರೆ. (ದೋ/೧೦೫)

**ಚೌ – ಹರಿ ಹರ ಬಿಮುಖ ಧರ್ಮ ರತಿ ನಾಹೀಂ । ತೇ ನರ ತಹಂ ಸಪನೆಹುಂ ನಹಿಂ ಜಾಹೀಂ ॥**
**ತೆಹಿ ಗಿರಿ ಪರ ಬಟ ಬಿಟಪ ಬಿಸಾಲಾ । ನಿತ ನೂತನ ಸುಂದರ ಸಬ ಕಾಲಾ ॥ ೧ ॥**
**ತ್ರಿಬಿಧ ಸಮೀರ ಸುಸೀತಲಿ ಛಾಯಾ । ಸಿವ ಬಿಶ್ರಾಮ ಬಿಟಪ ಶ್ರುತಿ ಗಾಯಾ ॥**
**ಏಕ ಬಾರ ತೆಹಿ ತರ ಪ್ರಭು ಗಯಊ । ತರು ಬಿಲೋಕಿ ಉರ ಅತಿ ಸುಖು ಭಯಊ ॥ ೨ ॥**

ನಿಜ ಕರ ಡಾಸಿ ನಾಗರಿಪು ಛಾಲಾ । ಬೈಠೇ ಸಹಜಹಿಂ ಸಂಭು ಕೃಪಾಲಾ ॥
ಕುಂದ ಇಂದು ದರ ಗೌರ ಸರೀರಾ । ಭುಜ ಪ್ರಲಂಬ ಪರಿಧನ ಮುನಿಚೀರಾ ॥ ೩ ॥
ತರುನ ಅರುನ ಅಂಬುಜ ಸಮ ಚರನಾ । ನಖ ದುತಿ ಭಗತ ಹೃದಯ ತಮ ಹರನಾ ॥
ಭುಜಗ ಭೂತಿ ಭೂಷನ ತ್ರಿಪುರಾರೀ । ಆನನು ಸರದ ಚಂದ ಛಬಿ ಹಾರೀ ॥ ೪ ॥

ಹರಿ-ಹರರಿಗೆ ವಿಮುಖರಾದವರೂ, ಧರ್ಮನಿಷ್ಠೆ ಇಲ್ಲದವರೂ, ಕೈಲಾಸಕ್ಕೆ ಸ್ವಪ್ನದಲ್ಲಿಯೂ ಹೋಗಲಾರರು. ಆ ಪರ್ವತದ ಮೇಲೆ ವಿಶಾಲವಾದ ಒಂದು ವಟವೃಕ್ಷವು ಇದೆ. ಅದು ಆರು ಋತುಗಳಲ್ಲಿಯೂ ಕೂಡ ನಿತ್ಯನೂತನವಾಗಿ, ಪರಮಸುಂದರವಾಗಿ ಇರುತ್ತದೆ. ಅಲ್ಲಿ ಶೀತಲ, ಮಂದ, ಸುಗಂಧಿತ ಹೀಗೆ ಮೂರು ವಿಧವಾದ ಗಾಳಿಯು ಬೀಸುತ್ತಿರುತ್ತದೆ. ಅದರ ನೆರಳು ತುಂಬಾ ತಂಪಾಗಿರುತ್ತದೆ. ಅದು ಶಿವನು ವಿಶ್ರಯಿಸುವ ವೃಕ್ಷವೆಂದು ವೇದಗಳು ಸಾರುತ್ತಿವೆ. ಒಂದಾನೊಂದು ದಿನ ಶಿವನು ಆ ವೃಕ್ಷದ ಛಾಯೆಯನ್ನು ಸೇರಿ, ಅದನ್ನು ನೋಡಿ ಅವನಿಗೆ ತುಂಬಾ ಆನಂದವಾಯಿತು. ಅಲ್ಲಿ ತನ್ನ ವ್ಯಾಘ್ರಾಂಬರವನ್ನು ಹಾಕಿಕೊಂಡು ಶಿವನು ಸಹಜವಾಗಿ ಕುಳಿತುಕೊಂಡನು. ಅವನ ಶರೀರವು ಕುಂದಪುಷ್ಪ, ಚಂದ್ರ, ಶಂಖದಂತೆ ಗೌರವರ್ಣದಿಂದ ಶೋಭಿಸುತ್ತಿತ್ತು. ಆಜಾನುಬಾಹುವಾದ ಶಿವನು, ಮುನಿಗಳಂತೆ ವಲ್ಕಲಗಳನ್ನು ಧರಿಸಿದ್ದನು. ಅವನ ಚರಣಗಳು ತರುಣ ಅರುಣಾಂಬುಜಗಳಂತಿದ್ದವು. ಅವನ ನಖಗಳ ಕಾಂತಿಯು ಭಕ್ತರ ಹೃದಯದ ಅಜ್ಞಾನಾಂಧಕಾರವನ್ನು ಹರಿಸುವಂತಿತ್ತು. ನಾಗಾಭರಣಗಳಿಂದಲೂ, ಭಸ್ಮೋದ್ಧೂಳಿತಲಿಪ್ತವಾದ ಅವನ ಶರೀರವು ಶೋಭಿಸುತ್ತಿತ್ತು. ಆ ತ್ರಿಪುರಾರಿಯ ಮುಖಕಮಲವು ಶರತ್ಕಾಲದ ಪೂರ್ಣಿಮೆಯ ಚಂದ್ರನ ಶೋಭೆಯನ್ನೂ ಕೂಡ ನಾಚಿಸುವಂತಿತ್ತು. (ಚೌ/೧-೪)

**ದೋ – ಜಟಾ ಮುಕುಟ ಸುರಸರಿತ ಸಿರ ಲೋಚನ ನಲಿನ ಬಿಸಾಲ ।**
**ನೀಲಕಂಠ ಲಾವನ್ಯನಿಧಿ ಸೋಹ ಬಾಲಬಿಧು ಭಾಲ ॥ ೧೦೬ ॥**

ಶಿರದ ಮೇಲೆ ಜಟಾಜೂಟವಿದ್ದು, ಅದರಲ್ಲಿ ಗಂಗೆಯು ನೆಲಸಿದ್ದಳು. ಕಮಲದಂತೆ ವಿಶಾಲನೇತ್ರಗಳೂ, ನೀಲವರ್ಣ ಶೋಭಿತವಾದ ಕಂಠವು, ಲಲಾಟದಲ್ಲಿ ಬಿದಿಗೆಯ ಚಂದ್ರನೂ, ಈ ವಿಧವಾಗಿ ಲಾವಣ್ಯದ ನಿಧಿಯಂತಿದ್ದ ಶಿವನು ವಿರಾಜಮಾನನಾಗಿದ್ದನು. (ದೋ/೧೦೬)

## ಶಿವಪಾರ್ವತೀ ಸಂವಾದ

ಚೌ – ಬೈಠೇ ಸೋಹ ಕಾಮರಿಪು ಕೈಸೇಂ । ಧರೇಂ ಸರೀರು ಸಾಂತರಸು ಜೈಸೇಂ ॥
ಪಾರಬತೀ ಭಲ ಅವಸರು ಜಾನೀ । ಗಈಂ ಸಂಭು ಪಹಿಂ ಮಾತು ಭವಾನೀ ॥ ೧ ॥
ಜಾನಿ ಪ್ರಿಯಾ ಆದರು ಅತಿ ಕೀನ್ಹಾ । ಬಾಮ ಭಾಗ ಆಸನು ಹರ ದೀನ್ಹಾ ॥
ಬೈಠೀಂ ಸಿವ ಸಮೀಪ ಹರಷಾಈ । ಪೂರುಬ ಜನ್ಮ ಕಥಾ ಚಿತ ಆಈ ॥ ೨ ॥
ಪತಿ ಹಿಯ್ ಹೇತು ಅಧಿಕ ಅನುಮಾನೀ । ಬಿಹಸಿ ಉಮಾ ಬೋಲೀಂ ಪ್ರಿಯ ಬಾನೀ ॥
ಕಥಾ ಜೊ ಸಕಲ ಲೋಕ ಹಿತಕಾರೀ । ಸೋಇ ಪೂಛನ ಚಹ ಸೈಲಕುಮಾರೀ ॥ ೩ ॥
ಬಿಸ್ವನಾಥ ಮಮ ನಾಥ ಪುರಾರೀ । ತ್ರಿಭುವನ ಮಹಿಮಾ ಬಿದಿತ ತುಮ್ಹಾರೀ ॥
ಚರ ಅರು ಅಚರ ನಾಗ ನರ ದೇವಾ । ಸಕಲ ಕರಹಿಂ ಪದ ಪಂಕಜ ಸೇವಾ ॥ ೪ ॥

ಕಾಮನನ್ನು ಗೆದ್ದಿರುವ ಶಂಕರನು ಮೂರ್ತೀಭವಿಸಿದ ಶಾಂತರಸದಂತೆ ಕುಳಿತಿದ್ದನು. ಇದೇ ಒಳ್ಳೆಯ ಸಮಯವೆಂದರಿತು, ಮಾತೆಯಾದ ಭವಾನಿಯು ಅವನ ಬಳಿಗೈದಿದಳು. ಶಿವನು ತನ್ನ ಪ್ರಿಯವಲ್ಲಭೆಯನ್ನು ಹೆಚ್ಚಾಗಿ ಆದರ-ಸತ್ಕಾರಗೈದು, ತನ್ನ ಎಡಭಾಗದಲ್ಲಿ ಕುಳಿತುಕೊಳ್ಳಲು ಆಸನವನ್ನೀಡಿದನು. ಪಾರ್ವತಿದೇವಿಯು ಹರ್ಷಪಟ್ಟು ಶಿವನ ಬಳಿಯಲ್ಲಿ ಮಂಡಿಸಿದಳು. ಆಕೆಗೆ ಪೂರ್ವಜನ್ಮದ ವೃತ್ತಾಂತವು ಜ್ಞಾಪಕಕ್ಕೆ ಬಂತು. ತನ್ನ ಪತಿಯ ಹೃದಯದಲ್ಲಿ ಮೊದಲು ನನ್ನ ಮೇಲೆ ಇದ್ದ ಪ್ರೇಮಕ್ಕಿಂತಲೂ ಹೆಚ್ಚು ಪ್ರೇಮಾದರವಿರುವುದನ್ನು ಗಮನಿಸಿ, ಪ್ರಸನ್ನಚಿತ್ತಳಾಗಿ, ಸರ್ವಲೋಕಹಿತಕರವಾದ ಕಥೆಯನ್ನು ಪರಮೇಶ್ವರನಿಂದ ಕೇಳಬೇಕೆಂಬ ಬಯಕೆಯಿಂದ ಆಕೆಯು ಮಧುರವಾಗಿ ಇಂತೆಂದಳು – ಓ ವಿಶ್ವನಾಥಾ! ನನ್ನೊಡೆಯಾ! ತ್ರಿಪುರಾಂತಕಾ! ನಿನ್ನ ಮಹಿಮೆಯು ಮೂರುಲೋಕಗಳಲ್ಲಿಯೂ ಪ್ರಸಿದ್ಧವಾಗಿದೆ. ಚರಾಚರಪ್ರಾಣಿಗಳೂ, ನಾಗಗಳೂ, ಮಾನವರೂ, ದೇವತೆಗಳೂ, ಹೀಗೆ ಎಲ್ಲರೂ ನಿನ್ನ ಪಾದಪದ್ಮಗಳನ್ನು ಸೇವಿಸುತ್ತಿದ್ದಾರೆ. (ಚೌ/೧-೪)

**ದೋ – ಪ್ರಭು ಸಮರಥ ಸರ್ಬಗ್ಯ ಸಿವ ಸಕಲ ಕಲಾ ಗುನ ಧಾಮ ।**
**ಜೋಗ ಗ್ಯಾನ ಬೈರಾಗ್ಯ ನಿಧಿ ಪ್ರನತ ಕಲಪತರು ನಾಮ ॥ ೧೦೭ ॥**

ಪ್ರಭು! ನೀವು ಸಮರ್ಥರು; ಸರ್ವಜ್ಞರು. ಕಲ್ಯಾಣಸ್ವರೂಪಿಗಳು. ಎಲ್ಲ ಸದ್ಗುಣಗಳಿಗೂ, ಕಲೆಗಳಿಗೂ ನಿಧಾನರು. ಯೋಗ, ಜ್ಞಾನ ಹಾಗೂ ವೈರಾಗ್ಯಗಳ ನಿಧಿಯು. ನಿಮ್ಮ ಹೆಸರು ಪ್ರಣತ ಜನರಿಗೆ ಕಲ್ಪವೃಕ್ಷದಂತಿದೆ. (ದೋ/೧೦೭)

**ಚೌ – ಜೌ ಮೋ ಪರ ಪ್ರಸನ್ನ ಸುಖರಾಸೀ । ಜಾನಿಅ ಸತ್ಯ ಮೋಹಿ ನಿಜ ದಾಸೀ॥**
**ತೌ ಪ್ರಭು ಹರಹು ಮೋರ ಅಗ್ಯಾನಾ । ಕಹಿ ರಘುನಾಥ ಕಥಾ ಬಿಧಿ ನಾನಾ ॥ ೧ ॥**
**ಜಾಸು ಭವನು ಸುರತರು ತರ ಹೋಈ । ಸಹಿ ಕಿ ದರಿದ್ರ ಜನಿತ ದುಖು ಸೋಈ ॥**
**ಸಸಿಭೂಷನ ಅಸ ಹೃದಯಁ ಬಿಚಾರೀ । ಹರಹು ನಾಥ ಮಮ ಮತಿ ಭ್ರಮ ಭಾರೀ ॥ ೨ ॥**
**ಪ್ರಭು ಜೇ ಮುನಿ ಪರಮಾರಥಬಾದೀ । ಕಹಹಿಂ ರಾಮ ಕಹುँ ಬ್ರಹ್ಮ ಅನಾದೀ ॥**
**ಸೇಸ ಸಾರದಾ ಬೇದ ಪುರಾನಾ । ಸಕಲ ಕರಹಿಂ ರಘುಪತಿ ಗುನ ಗಾನಾ ॥ ೩ ॥**
**ತುಮ್ಹ ಪುನಿ ರಾಮ ರಾಮ ದಿನ ರಾತೀ । ಸಾದರ ಜಪಹು ಅನँಗ ಆರಾತೀ ॥**
**ರಾಮು ಸೊ ಅವಧ ನೃಪತಿ ಸುತ ಸೋಈ । ಕೀ ಅಜ ಅಗುನ ಅಲಖಗತಿ ಕೋಈ ॥ ೪ ॥**

ಓ ಸುಖನಿಧೀ! ನೀವು ನನ್ನ ಮೇಲೆ ಒಲಿದಿರುವುದೇ ಆದರೆ, ನನ್ನನ್ನು ನಿಜಕ್ಕೂ ದಾಸಿಯೆಂದು ಭಾವಿಸಿದ್ದರೆ, ನನಗೆ ದಯಮಾಡಿ ಶ್ರೀ ರಘುನಾಥನ ನಾನಾವಿಧವಾದ ಕಥೆಯನ್ನು ಹೇಳಿ ನನ್ನ ಅಜ್ಞಾನವನ್ನು ಕಳೆಯಿರಿ. ಓ ಶಶಿಶೇಖರಾ! ಕಲ್ಪವೃಕ್ಷದಡಿಯಲ್ಲಿ ಮನೆಮಾಡಿಕೊಂಡವನು ದಾರಿದ್ರ್ಯದುಃಖಗಳು ಏಕೆ ಸಹಿಸುವನು? ಸ್ವಾಮಿ! ಈ ರೀತಿ ಮನದಲ್ಲಿ ಯೋಚಿಸಿ ತಾವು ನನ್ನ ಮನದ ಭಾರೀ ಭ್ರಮೆಯನ್ನು ಕಳೆಯಿರಿ. ಪರಮಾರ್ಥ ತತ್ತ್ವವನ್ನು ತಿಳಿದಿರುವ ಜ್ಞಾನಿಗಳೂ, ಬ್ರಹ್ಮಜ್ಞಾನಿಗಳಾದ ಮುನಿಗಳೂ ಶ್ರೀರಾಮಚಂದ್ರನನ್ನು ಅನಾದಿಬ್ರಹ್ಮನೆಂದು ಹೇಳುತ್ತಾರೆ; ಆದಿಶೇಷ, ಸರಸ್ವತೀ, ವೇದ-ಪುರಾಣಗಳೆಲ್ಲವೂ ಶ್ರೀರಘುನಾಥನ ಗುಣಗಾನ ಮಾಡುತ್ತವೆ. ಕಾಮಶತ್ರುವಾದ ಸ್ವಾಮಿಯೇ! ನೀವು ಹಗಲು ರಾತ್ರಿ 'ರಾಮ-ರಾಮ' ಎಂದು ಆದರದಿಂದ ಜಪಿಸುತ್ತಿರುವಿರಿ. ಈ ರಾಮನು ಆ ಅಯೋಧ್ಯಾಪತಿಯ ಕುಮಾರನಾದ ಶ್ರೀರಾಮನೋ? ಅಥವಾ ಅಜನ್ಮನೂ, ನಿರ್ಗುಣನೂ, ಅಗೋಚರನೂ ಆದ ಬೇರೊಬ್ಬ ರಾಮನಿರುವನೋ? (ಚೌ/೧-೪)

**ದೋ – ಜೌ ನೃಪ ತನಯ ತ ಬ್ರಹ್ಮ ಕಿಮಿ ನಾರಿ ಬಿರಹँ ಮತಿ ಭೋರಿ ।**
**ದೇಖಿ ಚರಿತ ಮಹಿಮಾ ಸುನತ ಭ್ರಮತಿ ಬುದ್ಧಿ ಅತಿ ಮೋರಿ ॥ ೧೦೮ ॥**

ಒಂದು ಪಕ್ಷ ಆತನು ರಾಜಪುತ್ರನೇ ಆಗಿದ್ದರೆ ಪರಬ್ರಹ್ಮ ಹೇಗಾದಾನು? ಪರಬ್ರಹ್ಮನಾಗಿದ್ದ ಪಕ್ಷದಲ್ಲಿ ಸ್ತ್ರೀವಿರಹದಲ್ಲಿ ಮತಿಭ್ರಮಣೆಯಾಗಲು ಹೇಗೆ ಸಾಧ್ಯ? ಒಂದು ಕಡೆ ಆತನ ಮಾನವೋಚಿತ ಜೀವನರೀತಿಗಳು, ಮತ್ತೊಂದೆಡೆ ಲೋಕೋತ್ತರ ಮಹಿಮೆಗಳನ್ನು ಕಂಡು, ಕೇಳಿ, ನನ್ನ ಬುದ್ಧಿಯು ಅತಿಯಾಗಿ ಭ್ರಮೆಗೊಂಡಿದೆ. (ದೋ/೧೦೮)

**ಚೌ – ಜೌ ಅನೀಹ ಬ್ಯಾಪಕ ಬಿಭು ಕೋಊ । ಕಹಹು ಬುಝಾಇ ನಾಥ ಮೊಹಿ ಸೋಊ ॥**
**ಅಗ್ಯ ಜಾನಿ ರಿಸ ಉರ ಜನಿ ಧರಹೂ । ಜೆಹಿ ಬಿಧಿ ಮೋಹ ಮಿಟೈ ಸೋಇ ಕರಹೂ ॥ ೧ ॥**
**ಮೈಁ ಬನ ದೀಖಿ ರಾಮ ಪ್ರಭುತಾಈ । ಅತಿ ಭಯ ಬಿಕಲ ನ ತುಮ್ಹಹಿ ಸುನಾಈ ॥**
**ತದಪಿ ಮಲಿನ ಮನ ಬೋಧು ನ ಆವಾ । ಸೋ ಫಲು ಭಲೀ ಭಾँತಿ ಹಮ ಪಾವಾ ॥ ೨ ॥**
**ಅಜಹೂँ ಕಛು ಸಂಸಉ ಮನ ಮೋರೇँ । ಕರಹು ಕೃಪಾ ಬಿನವಉँ ಕರ ಜೋರೇँ ॥**
**ಪ್ರಭು ತಬ ಮೊಹಿ ಬಹು ಭಾँತಿ ಪ್ರಬೋಧಾ । ನಾಥ ಸೊ ಸಮುಝಿ ಕರಹು ಜನಿ ಕ್ರೋಧಾ ॥ ೩ ॥**
**ತಬ ಕರ ಅಸ ಬಿಮೋಹ ಅಬ ನಾಹೀँ । ರಾಮಕಥಾ ಪರ ರುಚಿ ಮನ ಮಾಹೀँ ॥**
**ಕಹಹು ಪುನೀತ ರಾಮ ಗುನ ಗಾಥಾ । ಭುಜಗರಾಜ ಭೂಷನ ಸುರನಾಥಾ ॥ ೪ ॥**

ಪ್ರಭೂ! ಇಚ್ಛಾರಹಿತನೂ ಸರ್ವವ್ಯಾಪಕನೂ, ಸರ್ವಸಮರ್ಥನೂ ಆದ ಬೇರೊಬ್ಬ ಪರಬ್ರಹ್ಮನಿದ್ದರೆ ಅವನ ಕುರಿತು ನನಗೆ ತಿಳಿಸಿ ಹೇಳಿರಿ. ನನ್ನನ್ನು ಅಜ್ಞಳೆಂದು ತಿಳಿದು ಮನಸ್ಸಿನಲ್ಲಿ ಕೋಪಗೊಳ್ಳಬಾರದು. ಒಟ್ಟಿನಲ್ಲಿ ನನ್ನ ಮೋಹವು ದೂರವಾಗುವಂತೆ ಮಾಡಿರಿ. ಹಿಂದಿನ ಜನ್ಮದಲ್ಲಿ ನಾನು ವನದಲ್ಲಿ ಶ್ರೀರಾಮಚಂದ್ರನ ಮಹಿಮೆಯನ್ನು ಕಂಡಿದ್ದೆ. ಆದರೆ ಆಗ ನಾನು ಅತ್ಯಂತ ಭೀತಳಾದ್ದರಿಂದ ಆ ವಿಷಯವನ್ನು ನಿಮಗೆ ತಿಳಿಸಲಿಲ್ಲ. ಆದರೂ ನನ್ನ ಮಲಿನಮನಕ್ಕೆ ತಿಳಿವಳಿಕೆ ಬರಲಿಲ್ಲ. ಅದಕ್ಕೆ ತಕ್ಕುದಾದ

ಫಲವನ್ನೂ ನಾನು ಉಂಡಿರುವೆನು. ಇಂದೂ ಕೂಡ ನನ್ನ ಮನದಲ್ಲಿ ಕೊಂಚ ಸಂದೇಹವುಳಿದಿದೆ. ನೀವು ಕೃಪೆಮಾಡಿರಿ. ನಾನು ಕೈಜೋಡಿಸಿ ಕೇಳಿಕೊಳ್ಳುತ್ತೇನೆ. ಸ್ವಾಮಿ! ಆಗಲೂ ನೀವು ನನಗೆ ಅನೇಕ ರೀತಿಯಿಂದ ಶ್ರೀರಾಮತತ್ತ್ವವನ್ನೂ ಬೋಧಿಸಿದ್ದೀರಿ. ಆದರೆ ನಾನು ಗ್ರಹಿಸದೆ ಹೋದೆನು. ನಾಥಾ! ಆಗಿನ ಆ ಪ್ರಸಂಗವನ್ನು ನೆನೆದು ನನ್ನಮೇಲೆ ಸಿಟ್ಟಾಗಬೇಡಿರಿ. ಈಗ ನನಗೆ ಮೊದಲಿನ ಮೋಹವಿಲ್ಲ. ಈಗ ಮನದಲ್ಲಿ ಶ್ರೀರಾಮಕಥೆಯನ್ನು ಕೇಳಬೇಕೆಂಬ ಹೆಚ್ಚಿನ ತವಕವಿದೆ. ಓ ನಾಗಭೂಷಣಾ! ಸುರನಾಥಾ! ಶ್ರೀರಾಮನ ಪವಿತ್ರ ಗುಣಗಳ ಕಥೆಯನ್ನು ಹೇಳಿರಿ. (ಚೌ/೧-೪)

**ದೋ – ಬಂದಉँ ಪದ ಧರಿ ಧರನಿ ಸಿರು ಬಿನಯ ಕರಉँ ಕರ ಜೋರಿ ।**
**ಬರನಹು ರಘುಬರ ಬಿಸದ ಜಸು ಶ್ರುತಿ ಸಿದ್ಧಾಂತ ನಿಚೋರಿ ॥೧೦೯॥**

ನಾನು ನೆಲಕ್ಕೆ ತಲೆಬಾಗಿ ನಿಮ್ಮ ಚರಣಗಳಿಗೆ ವಂದಿಸುತ್ತೇನೆ. ಕೈಜೋಡಿಸಿ ಬಿನ್ನವಿಸಿಕೊಳ್ಳುತ್ತೇನೆ. ನೀವು ಶ್ರುತಿಸಿದ್ಧಾಂತಗಳ ಸಾರರೂಪವಾದ ಶ್ರೀರಘುನಾಥನ ನಿರ್ಮಲತತ್ತ್ವ ಯಶೋವೈಭವವನ್ನು ವರ್ಣಿಸಿರಿ. (ದೋ/೧೦೯)

**ಚೌ – ಜದಪಿ ಜೋಷಿತಾ ನಹಿँ ಅಧಿಕಾರೀ । ದಾಸೀ ಮನ ಕ್ರಮ ಬಚನ ತುಮ್ಹಾರೀ ॥**
**ಗೂಢಉ ತತ್ತ್ವ ನ ಸಾಧು ದುರಾವಹಿँ । ಆರತ ಅಧಿಕಾರೀ ಜಹँ ಪಾವಹಿँ ॥೧॥**
**ಅತಿ ಆರತಿ ಪೂಛಉँ ಸುರರಾಯಾ । ರಘುಪತಿ ಕಥಾ ಕಹಹು ಕರಿ ದಾಯಾ ॥**
**ಪ್ರಥಮ ಸೊ ಕಾರನ ಕಹಹು ಬಿಚಾರೀ । ನಿರ್ಗುನ ಬ್ರಹ್ಮ ಸಗುನ ಬಪು ಧಾರೀ ॥೨॥**
**ಪುನಿ ಪ್ರಭು ಕಹಹು ರಾಮ ಅವತಾರಾ । ಬಾಲಚರಿತ ಪುನಿ ಕಹಹು ಉದಾರಾ ॥**
**ಕಹಹು ಜಥಾ ಜಾನಕೀ ಬಿಬಾಹೀँ । ರಾಜ ತಜಾ ಸೋ ದೂಷನ ಕಾಹೀँ ॥೩॥**
**ಬನ ಬಸಿ ಕೀನ್ಹೇ ಚರಿತ ಅಪಾರಾ । ಕಹಹು ನಾಥ ಜಿಮಿ ರಾವನ ಮಾರಾ ॥**
**ರಾಜ ಬೈಠಿ ಕೀನ್ಹೀँ ಬಹು ಲೀಲಾ । ಸಕಲ ಕಹಹು ಸಂಕರ ಸುಖಸೀಲಾ ॥೪॥**

ಹೆಣ್ಣಾದುದರಿಂದ ನಾನು ಅದನ್ನು ಕೇಳುವ ಅಧಿಕಾರಿಣಿಯಲ್ಲದಿದ್ದರೂ, ನಾನು ಮನ, ವಚನ, ಕಾಯಪೂರ್ವಕ ನಿಮ್ಮ ದಾಸಿ. ಆರ್ತರಾದ ಅರ್ಹರನ್ನು ಕಂಡಾಗ ಸಜ್ಜನರು ಎಂತಹ ರಹಸ್ಯವಾದ ಮಾತನ್ನೂ ಕೂಡ ಅವರಿಂದ ಮರೆಮಾಚುವುದಿಲ್ಲ. ಓ ಪರಮೇಶ್ವರಾ! ನಾನು ತುಂಬಾ ಆರ್ತಭಾವದಿಂದ ದೀನಳಾಗಿ ನಿಮ್ಮನ್ನು ಕೇಳಿಕೊಳ್ಳುತ್ತೇನೆ. ನನ್ನ ಮೇಲೆ ದಯೆಗೈದು ನೀವು ಶ್ರೀರಘುಪತಿಯ ಕಥೆಯನ್ನು ಹೇಳಿರಿ. ನಿರ್ಗುಣ ಬ್ರಹ್ಮನು ಸಗುಣರೂಪವನ್ನು ಏಕೆ ಧರಿಸುತ್ತಾನೆ ಎಂಬುದರ ಕಾರಣವನ್ನು ಮೊದಲಿಗೆ ತಿಳಿಸಿರಿ. ಅನಂತರ ಶ್ರೀರಾಮನ ಅವತಾರ ಕಾರಣಗಳು, ಅವನ ಬಾಲಲೀಲೆಗಳು, ಜಾನಕಿಯೊಂದಿಗೆ ಆದ ವಿವಾಹವನ್ನು, ರಾಜ್ಯತ್ಯಾಗವೇ ಮೊದಲಾದ ವಿಷಯಗಳೆಲ್ಲವನ್ನು ತಿಳಿಸಿರಿ. ಸ್ವಾಮಿ! ಮತ್ತೆ ವನವಾಸ ಸಮಯದಲ್ಲಿ ಮಾಡಿದ ಅದ್ಭುತಕೃತ್ಯವನ್ನೂ, ರಾವಣನನ್ನು ವಧಿಸಿದ ಬಗೆ ಮೊದಲಾದುವನ್ನು ತಿಳಿಸಿರಿ. ಸುಖಸ್ವರೂಪಿಯಾದ ಶಂಕರನೇ! ಬಳಿಕ ರಾಜ್ಯಾಭಿಷಿಕ್ತನಾಗಿ ಅವನು ಗೈದ ಲೀಲೆಗಳನ್ನು ಸಮಗ್ರವಾಗಿ ತಿಳಿಸಿರಿ. (ಚೌ/೧-೪)

**ದೋ – ಬಹುರಿ ಕಹಹು ಕರುನಾಯತನ ಕೀನ್ಹ ಜೊ ಅಚರಜ ರಾಮ ।**
**ಪ್ರಜಾ ಸಹಿತ ರಘುಬಂಸಮನಿ ಕಿಮಿ ಗವನೇ ನಿಜ ಧಾಮ ॥೧೧೦॥**

ಓ ಕೃಪಾನಿಧೇ! ರಘುವಂಶ ಮಣಿಯಾದ ಶ್ರೀರಾಮನು ತನ್ನ ಅದ್ಭುತಲೀಲೆಗಳನ್ನು ಪ್ರಕಟಿಸಿದ ಬಳಿಕ, ತನ್ನನ್ನು ಆಶ್ರಯಿಸಿದವರೊಡನೆ ಪರಂಧಾಮಕ್ಕೆ ತೆರಳಿದ ಕಥೆಯನ್ನು ಕೂಡ ಹೇಳಿರಿ. (ದೋ/೧೧೦)

**ಚೌ – ಪುನಿ ಪ್ರಭು ಕಹಹು ಸೊ ತತ್ತ್ವ ಬಖಾನೀ । ಜೆಹಿँ ಬಿಗ್ಯಾನ ಮಗನ ಮುನಿ ಗ್ಯಾನೀ ॥**
**ಭಗತಿ ಗ್ಯಾನ ಬಿಗ್ಯಾನ ಬಿರಾಗಾ । ಪುನಿ ಸಬ ಬರನಹು ಸಹಿತ ಬಿಭಾಗಾ ॥೧॥**
**ಔರಉ ರಾಮ ರಹಸ್ಯ ಅನೇಕಾ । ಕಹಹು ನಾಥ ಅತಿ ಬಿಮಲ ಬಿಬೇಕಾ ॥**
**ಜೋ ಪ್ರಭು ಮೈँ ಪೂಛಾ ನಹಿँ ಹೋಈ । ಸೋಉ ದಯಾಲ ರಾಖಹು ಜನಿ ಗೋಈ ॥೨॥**
**ತುಮ್ಹ ತ್ರಿಭುವನ ಗುರ ಬೇದ ಬಖಾನಾ । ಆನ ಜೀವ ಪಾँವರ ಕಾ ಜಾನಾ ॥**
**ಪ್ರಸ್ನ ಉಮಾ ಕೈ ಸಹಜ ಸುಹಾಈ । ಛಲ ಬಿಹೀನ ಸುನಿ ಸಿವ ಮನ ಭಾಈ ॥೩॥**
**ಹರ ಹಿಯँ ರಾಮಚರಿತ ಸಬ ಆಏ । ಪ್ರೇಮ ಪುಲಕ ಲೋಚನ ಜಲ ಛಾಏ ॥**
**ಶ್ರೀರಘುನಾಥ ರೂಪ ಉರ ಆವಾ । ಪರಮಾನಂದ ಅಮಿತ ಸುಖ ಪಾವಾ ॥೪॥**

ಸ್ವಾಮಿ! ಜ್ಞಾನಿಗಳಾದ ಮುನಿಗಳು ಸರ್ವಥಾ ನಿಮಗ್ನರಾಗಿರುವ ಭಗವತತ್ತ್ವವನ್ನೂ, ಭಕ್ತಿ, ಜ್ಞಾನ, ವಿಜ್ಞಾನ, ವೈರಾಗ್ಯಗಳನ್ನು ಬೇರೆ-ಬೇರೆಯಾಗಿ ತಿಳಿಸಿ ಹೇಳಿರಿ. ಶ್ರೀರಾಮನ ಕಥೆಯಲ್ಲಿ ಇನ್ನೂ ಅಡಗಿರುವ ಅನೇಕ ಗೂಢವಿಷಯಗಳನ್ನೂ ಕೂಡ ವಿಶದಪಡಿಸಿರಿ. ನಾಥಾ! ನಿಮ್ಮ ಜ್ಞಾನವು ಅತ್ಯಂತ ನಿರ್ಮಲವಾಗಿದೆ. ನಾನು ಪ್ರಸ್ತಾಪಿಸದೇ ಇರುವ ಬೇರೆ ವಿಷಯಗಳಿದ್ದರೂ ಅದನ್ನೂ ಕೂಡ ವಿವರಿಸಿರಿ. ನೀವು ಸಕಲ ಲೋಕಗಳಿಗೂ ಗುರುಗಳೆಂದು ವೇದಗಳು ಹೊಗಳುತ್ತಿವೆ. ಸಾಮಾನ್ಯ ಜನರು ಈ ತತ್ತ್ವರಹಸ್ಯವನ್ನು ಏನು ಬಲ್ಲರು?'' ಪಾರ್ವತಿದೇವಿಯ ಸಹಜವೂ ಸುಂದರವೂ, ನೇರವೂ ಆದ ಪ್ರಶ್ನೆಗಳನ್ನು ಕೇಳಿ ಶಿವನು ಅವಳ ಮೇಲೆ ಪ್ರಸನ್ನನಾದನು. ಮಹಾದೇವನ ಹೃದಯದಲ್ಲಿ ಇಡೀ ರಾಮಚರಿತವು ಮೂಡಿತು. ಪ್ರೇಮಾತಿಶಯದಿಂದ ಅವನಿಗೆ ರೋಮಾಂಚನವಾಯಿತು. ಕಣ್ಣುಗಳು ತುಂಬಿಬಂದವು. ಶ್ರೀರಘುನಾಥನ ರೂಪವು ಅವನ ಹೃದಯದಲ್ಲಿ ಮೂಡಿತು. ಆದರಿಂದ ಪರಮಾನಂದ ಸ್ವರೂಪಿಯಾದ ಶಿವನಿಗೂ ಅಮಿತ ಸುಖವುಂಟಾಯಿತು. (ಚೌ/೧-೪)

**ದೋ – ಮಗನ ಧ್ಯಾನರಸ ದಂಡ ಜುಗ ಪುನಿ ಮನ ಬಾಹೇರ ಕೀನ್ಹ ।**
**ರಘುಪತಿ ಚರಿತ ಮಹೇಸ ತಬ ಹರಷಿತ ಬರನೈ ಲೀನ್ಹ ॥ ೧೧೧ ॥**

ಪರಮೇಶ್ವರನು ಕ್ಷಣಕಾಲ ಧ್ಯಾನಮಗ್ನನಾದನು. ಅನಂತರ ಅವನು ಬಹಿರ್ಮುಖನಾದಾಗ ಅಮಿತಾನಂದದಿಂದ ಶ್ರೀರಾಮಚರಿತ್ರವನ್ನು ವರ್ಣಿಸತೊಡಗಿದನು. (ದೋ/೧೧೧)

**ಚೌ – ಝೂಠೆಉ ಸತ್ಯ ಜಾಹಿ ಬಿನು ಜಾನೇಂ । ಜಿಮಿ ಭುಜಂಗ ಬಿನು ರಜು ಪಹಿಚಾನೇಂ ॥**
**ಜೆಹಿ ಜಾನೇಂ ಜಗ ಜಾಇ ಹೆರಾಈ । ಜಾಗೇಂ ಜಥಾ ಸಪನ ಭ್ರಮ ಜಾಈ ॥ ೧ ॥**
**ಬಂದಉಁ ಬಾಲರೂಪ ಸೋಇ ರಾಮೂ । ಸಬ ಸಿಧಿ ಸುಲಭ ಜಪತ ಜಿಸು ನಾಮೂ ॥**
**ಮಂಗಲ ಭವನ ಅಮಂಗಲ ಹಾರೀ । ದ್ರವಉ ಸೋ ದಸರಥ ಅಜಿರ ಬಿಹಾರೀ ॥ ೨ ॥**
**ಕರಿ ಪ್ರನಾಮ ರಾಮಹಿ ತ್ರಿಪುರಾರೀ । ಹರಷಿ ಸುಧಾ ಸಮ ಗಿರಾ ಉಚಾರೀ ॥**
**ಧನ್ಯ ಧನ್ಯ ಗಿರಿರಾಜಕುಮಾರೀ । ತುಮ್ಹ ಸಮಾನ ನಹಿಂ ಕೋಉ ಉಪಕಾರೀ ॥ ೩ ॥**
**ಪೂಁಛೇಹು ರಘುಪತಿ ಕಥಾ ಪ್ರಸಂಗಾ । ಸಕಲ ಲೋಕ ಜಗ ಪಾವನಿ ಗಂಗಾ ॥**
**ತುಮ್ಹ ರಘುಬೀರ ಚರನ ಅನುರಾಗೀ । ಕೀನ್ಹಿಹು ಪ್ರಸ್ನ ಜಗತ ಹಿತ ಲಾಗೀ ॥ ೪ ॥**

''ಪಾರ್ವತೀ! ಅಜ್ಞಾನಿಗಳಿಗೆ ಹಗ್ಗವು ಹಾವೆಂದು ತೋರುವಂತೆ ರಾಮತತ್ತ್ವವನ್ನು ತಿಳಿಯದವರಿಗೆ ಈ ಮಿಥ್ಯಾಪ್ರಪಂಚವು ಸತ್ಯವಾಗಿಯೇ ಕಂಡುಬರುತ್ತದೆ. ನಿದ್ದೆಯಿಂದ ಎಚ್ಚರಗೊಂಡವರಿಗೆ ಸ್ವಪ್ನ ಜಗತ್ತು ಮಿಥ್ಯೆಯಾಗಿ ಕಾಣುವಂತೆ, ಶ್ರೀರಾಮತತ್ತ್ವವನ್ನು ಅರಿತವರಿಗೆ ಈ ಮಾಯಾಜಗತ್ತು ಅದೃಶ್ಯವಾಗುವುದು. ಶ್ರೀರಾಮನಾಮವನ್ನು ಜಪಿಸಿದ ಮಾತ್ರದಿಂದಲೇ ಸರ್ವಸಿದ್ಧಿಗಳು ಆಯಾಸವಿಲ್ಲದೆ ಲಭಿಸುವುವು. ದಶರಥನ ಮನೆಯಂಗಳದಲ್ಲಿ ಆಡುತ್ತಿರುವ ಮಂಗಳಮೂರ್ತಿಯೂ, ಪಾಪಹಾರಿಯೂ ಆದ ಶ್ರೀರಾಮಚಂದ್ರನ ಬಾಲಸ್ವರೂಪವನ್ನು ನಾನು ವಂದಿಸುತ್ತೇನೆ. ಅವನ ಕೃಪೆಯು ನನ್ನ ಮೇಲಾಗಲಿ.'' ತ್ರಿಪುರಾಂತಕನಾದ ಶಿವನು ಈ ವಿಧವಾಗಿ ಶ್ರೀರಾಮನನ್ನು ಸ್ಮರಿಸಿ, ನಮಸ್ಕರಿಸಿ, ಆನಂದಭರಿತನಾಗಿ ಅಮೃತಮಯವಚನಗಳನ್ನು ಹೀಗೆ ನುಡಿದನು– ''ಗಿರಿರಾಜಕುಮಾರಿಯಾದ ಪಾರ್ವತೀ! ನೀನು ಧನ್ಯಳಾಗಿರುವೆ. ನಿನ್ನಂತಹ ಲೋಕೋಪಕಾರಿಯು ಯಾರೂ ಇರಲಾರರು. ಶ್ರೀರಘುನಾಥನ ಕಥಾ ಪ್ರಸಂಗವು ಜಗತ್ಪಾವನೀ ಗಂಗೆಯಂತೆ ಸರ್ವಲೋಕಗಳನ್ನು ಪವಿತ್ರವಾಗಿಸುವಂತಹುದು. ಆ ರಾಘವನ ಚರಣಕಮಲಗಳಲ್ಲಿರುವ ಭಕ್ತಿಯಿಂದ ಲೋಕಕಲ್ಯಾಣಕ್ಕಾಗಿ ನೀನು ಹೀಗೆ ಪ್ರಶ್ನಿಸಿರುವೆ. (ಚೌ/೧-೪)

**ದೋ – ರಾಮ ಕೃಪಾ ತೇಂ ಪಾರಬತಿ ಸಪನೇಹುँ ತವ ಮನ ಮಾಹಿಂ ।**
**ಸೋಕ ಮೋಹ ಸಂದೇಹ ಭ್ರಮ ಮಮ ಬಿಚಾರ ಕಛು ನಾಹಿಂ ॥ ೧೧೨ ॥**

ಎಲೈ ಪಾರ್ವತೀ! ಶ್ರೀರಾಮನ ಕೃಪೆಯಿಂದ ಸ್ವಪ್ನದಲ್ಲಿಯೂ ಕೂಡ ಶೋಕ, ಮೋಹ, ಸಂದೇಹ, ಭ್ರಮೆ ಇವು ನಿನ್ನ ಮನಸ್ಸಿನಲ್ಲಿ ಪ್ರವೇಶಿಸಲಾರವು. (ದೋ/೧೧೨)

**ಚೌ – ತದಪಿ ಅಸಂಕಾ ಕೀನ್ಹಿಹು ಸೋಈ । ಕಹತ ಸುನತ ಸಬ ಕರ ಹಿತ ಹೋಈ ॥**
**ಜಿನ್ಹ ಹರಿಕಥಾ ಸುನೀ ನಹಿಂ ಕಾನಾ । ಶ್ರವನ ರಂಧ್ರ ಅಹಿಭವನ ಸಮಾನಾ ॥ ೧ ॥**
**ನಯನನ್ಹಿ ಸಂತ ದರಸ ನಹಿಂ ದೇಖಾ । ಲೋಚನ ಮೋರಪಂಖ ಕರ ಲೇಖಾ ॥**
**ತೇ ಸಿರ ಕಟು ತುಂಬರಿ ಸಮತೂಲಾ । ಜೇ ನ ನಮತ ಹರಿ ಗುರ ಪದ ಮೂಲಾ ॥ ೨ ॥**

ಜಿನ್ಹ ಹರಿಭಗತಿ ಹೃದಯ್ ನಹಿಂ ಆನೀ ।ಜೀವತ ಸವ ಸಮಾನ ತೇಇ ಪ್ರಾನೀ ॥
ಜೋ ನಹಿಂ ಕರಇ ರಾಮ ಗುನ ಗಾನಾ ।ಜೀಹ ಸೊ ದಾದುರ ಜೀಹ ಸಮಾನಾ ॥೩॥
ಕುಲಿಸ ಕಠೋರ ನಿಠುರ ಸೋಇ ಛಾತೀ ।ಸುನಿ ಹರಿಚರಿತ ನ ಜೋ ಹರಷಾತೀ ॥
ಗಿರಿಜಾ ಸುನಹು ರಾಮ ಕೈ ಲೀಲಾ ।ಸುರ ಹಿತ ದನುಜ ಬಿಮೋಹನಸೀಲಾ ॥೪॥

ಆದರೂ ನೀನು ಪ್ರಶ್ನೆ ಕೇಳಿದ್ದೀಯೇ. ಕಾರಣ – ಈ ಪ್ರಸಂಗವನ್ನು ಹೇಳುವುದರಿಂದ ಕೇಳುವುದರಿಂದ ಎಲ್ಲರಿಗೂ ಶ್ರೇಯಸ್ಸೇ ಆದೀತು. ಹರಿಕಥೆಯನ್ನು ಕೇಳದ ಕಿವಿಗಳು ಹಾವಿನ ಬಿಲದಂತೆ ವ್ಯರ್ಥವು. ಸಜ್ಜನರನ್ನು ದರ್ಶಿಸದವರ ಕಣ್ಣುಗಳು ನವಿಲುಗರಿಯ ಕಣ್ಣುಗಳಂತೆ. ಹರಿ-ಗುರುಗಳ ಚರಣಗಳಿಗೆ ಎರಗದ ಶಿರವು ಕಹಿ ಸೋರೆಯ ಬುರುಡೆ. ಶ್ರೀಹರಿಭಕ್ತಿಶೂನ್ಯವಾದ ಹೃದಯವುಳ್ಳವರು ಬದುಕಿದ್ದರೂ ಸತ್ತಹೆಣದಂತೆ. ರಾಮನ ಗುಣಗಾನ ಮಾಡದ ನಾಲಿಗೆ ಕಪ್ಪೆಯ ನಾಲಿಗೆಯಂತೆ. ಹರಿಚರಿತವನ್ನು ಕೇಳಿ ಹರ್ಷಗೊಳ್ಳದ ಹೃದಯವು ವಜ್ರದಂತೆ ಕಠೋರವೂ, ನಿಷ್ಠುರವೂ ಆಗಿದೆ. ಆದ್ದರಿಂದ ಪಾರ್ವತೀ! ದೇವತೆಗಳಿಗೆ ಕಲ್ಯಾಣಪ್ರದವೂ, ದೈತ್ಯರನ್ನು ಭ್ರಮೆಗೊಳಿಸುವಂತಹ ಶ್ರೀರಾಮಚಂದ್ರನ ಲೀಲಾಕಥೆಯನ್ನು ಕೇಳು. (ಚೌ/೧-೪)

**ದೋ – ರಾಮಕಥಾ ಸುರಧೇನು ಸಮ ಸೇವತ ಸಬ ಸುಖ ದಾನಿ ।**
**ಸತಸಮಾಜ ಸುರಲೋಕ ಸಬ ಕೋ ನ ಸುನೈ ಅಸ ಜಾನಿ ॥೧೧೩॥**

ಶ್ರೀರಾಮನ ಕಥೆಯು ಕಾಮಧೇನುವಿನಂತೆ ಭಕ್ತರ ಕೋರಿಕೆಗಳನ್ನು ಈಡೇರಿಸಿ, ಅವರಿಗೆ ಸುಖವನ್ನೂ ನೀಡುವಂತಹುದು. ಸಾಧುಸಮಾಜವೇ ದೇವತೆಗಳಿಗೆ ನಿವಾಸಸ್ಥಾನವು. ಈ ರಹಸ್ಯವನ್ನು ತಿಳಿದವರು ಈ ಕಥೆಯನ್ನು ಕೇಳಿಯೇ ಕೇಳುವರು. (ದೋ/೧೧೩)

ಚೌ – ರಾಮಕಥಾ ಸುಂದರ ಕರ ತಾರೀ ।ಸಂಸಯ ಬಿಹಗ ಉಡಾವನಿಹಾರೀ ॥
ರಾಮಕಥಾ ಕಲಿ ಬಿಟಪ ಕುಠಾರೀ ।ಸಾದರ ಸುನು ಗಿರಿರಾಜಕುಮಾರೀ ॥೧॥
ರಾಮ ನಾಮ ಗುನ ಚರಿತ ಸುಹಾಏ ।ಜನಮ ಕರಮ ಅಗನಿತ ಶ್ರುತಿ ಗಾಏ ॥
ಜಥಾ ಅನಂತ ರಾಮ ಭಗವಾನಾ ।ತಥಾ ಕಥಾ ಕೀರತಿ ಗುನ ನಾನಾ ॥೨॥
ತದಪಿ ಜಥಾ ಶ್ರುತ ಜಸಿ ಮತಿ ಮೋರೀ ।ಕಹಿಹಉಂ ದೇಖಿ ಪ್ರೀತಿ ಅತಿ ತೋರೀ ॥
ಉಮಾ ಪ್ರಸ್ನ ತವ ಸಹಜ ಸುಹಾಈ ।ಸುಖದ ಸಂತಸಮ್ಮತ ಮೋಹಿ ಭಾಈ ॥೩॥
ಏಕ ಬಾತ ನಹಿಂ ಮೋಹಿ ಸೋಹಾನೀ ।ಜದಪಿ ಮೋಹ ಬಸ ಕಹೆಹು ಭವಾನೀ ॥
ತುಮ್ಹ ಜೊ ಕಹಾ ರಾಮ ಕೋಉ ಆನಾ ।ಜೆಹಿ ಶ್ರುತಿ ಗಾವ ಧರಹಿಂ ಮುನಿ ಧ್ಯಾನಾ ॥೪॥

ಶ್ರೀರಾಮನ ಕಥೆಯು ಕರತಾಳ (ಚಪ್ಪಾಳೆ) ಇದ್ದಹಾಗೆ. ಇದು ಸಂದೇಹರೂಪೀ ಪಕ್ಷಿಗಳನ್ನು ಓಡಿಸುತ್ತದೆ. ಶ್ರೀರಾಮಕಥೆಯು ಕಲಿಯುಗವೆಂಬ ಮರವನ್ನು (ಕಲಿಪಾಪಗಳನ್ನು) ಕತ್ತರಿಸುವಂತಹ ಕೊಡಲಿ. ಎಲೈ ಗಿರಿರಾಜಕುಮಾರಿ! ಆದ್ದರಿಂದ ನೀನು ಆದರದಿಂದ ಕೇಳು. ಶ್ರೀರಾಮನ ಸುಂದರನಾಮವೂ, ಗುಣಗಳೂ, ಚರಿತ್ರವೂ, ಜನ್ಮ-ಕರ್ಮಗಳೂ, ಅಗಣಿತವಾದವುಗಳು. ಶ್ರೀರಾಮಚಂದ್ರನು ಅನಂತ, ಅಂತೆಯೇ ಅವನ ಗುಣಗಳೂ, ಕೀರ್ತಿಯೂ, ಕಥೆಯೂ ಅನಂತವೆಂದು ವೇದಗಳು ಹೇಳುತ್ತವೆ. ರಾಮನ ಮೇಲೆ ನಿನಗೆ ಇರುವ ಮಿಗಿಲಾದ ಪ್ರೀತಿಯನ್ನು ಕಂಡು, ರಾಮಕಥೆಯನ್ನು ನಾನು ಕೇಳಿದಂತೆ, ಯಥಾಮತಿಯಾಗಿ ನಿನಗೆ ಹೇಳುತ್ತೇನೆ. ಎಲೈ ಉಮಾ! ನಿನ್ನ ಪ್ರಶ್ನೆಯು ಸ್ವಾಭಾವಿಕವಾಗಿಯೇ ಸುಂದರ, ಸುಖದಾಯಕ, ಸಜ್ಜನಸಮ್ಮತವಾಗಿದೆ. ನನಗಂತೂ ತುಂಬಾ ಹಿಡಿಸಿತು. ಆದರೆ ''ವೇದಗಳೂ ಪ್ರಶಂಸಿಸುವಂತಹ, ಮುನಿಗಳು ಧ್ಯಾನಿಸುವಂತಹ ಶ್ರೀರಾಮನು ಬೇರೆ ಯಾರಾದರೊಬ್ಬನಿರುವನೇ?'' ಎಂದು ನೀನು ಕೇಳಿದ ಪ್ರಶ್ನೆಯು ನನಗೆ ಯೋಗ್ಯವಾಗಿ ಕಾಣಲಿಲ್ಲ. ಬಹುಶಃ ನೀನು ಮೋಹವಶದಿಂದ ಹಾಗೆ ಕೇಳಿರಬಹುದು. (ಚೌ/೧-೪)

**ದೋ – ಕಹಹಿಂ ಸುನಹಿಂ ಅಸ ಅಧಮ ನರ ಗ್ರಸೇ ಜೆ ಮೋಹ ಪಿಸಾಚ ।**
**ಪಾಷಂಡೀ ಹರಿ ಪದ ಬಿಮುಖ ಜಾನಹಿಂ ಝೂಠ ನ ಸಾಚ ॥೧೧೪॥**

ಮೋಹಪಿಶಾಚಿ ಹಿಡಿದವರೂ, ಪಾಷಂಡಿಗಳೂ, ಹರಿಚರಣವಿಮುಖರೂ, ಸದಸದ್ವಿವೇಕಶೂನ್ಯರಾದ ಅಧಮರಾದ ಮನುಷ್ಯರು ಮಾತ್ರ ಹೀಗೆ ಹೇಳುತ್ತಾರೆ, ಕೇಳುತ್ತಾರೆ. (ದೋ/೧೧೪)

ಚೌ – ಅಗ್ಯ ಅಕೋಬಿದ ಅಂಧ ಅಭಾಗೀ ।ಕಾಈ ಬಿಷಯ ಮುಕುರ ಮನ ಲಾಗೀ ॥
ಲಂಪಟ ಕಪಟೀ ಕುಟಿಲ ಬಿಸೇಷೀ ।ಸಪನೆಹುಂ ಸಂತಸಭಾ ನಹಿಂ ದೇಖೀ ॥೧॥

ಕಹಹಿಂ ತೆ ಬೇದ ಅಸಮ್ಮತ ಬಾನೀ । ಜಿನ್ಹ ಕೇಂ ಸೂಝು ಲಾಭು ನಹಿಂ ಹಾನೀ ॥
ಮುಕುರ ಮಲಿನ ಅರು ನಯನ ಬಿಹೀನಾ । ರಾಮ ರೂಪ ದೇಖಹಿಂ ಕಿಮಿ ದೀನಾ ॥ ೨ ॥
ಜಿನ್ಹ ಕೇಂ ಅಗುನ ನ ಸಗುನ ಬಿಬೇಕಾ । ಜಲ್ಪಹಿಂ ಕಲ್ಪಿತ ಬಚನ ಅನೇಕಾ ॥
ಹರಿಮಾಯಾ ಬಸ ಜಗತ ಭ್ರಮಾಹೀಂ । ತಿನ್ಹಹಿ ಕಹತ ಕಛು ಅಘಟಿತ ನಾಹೀಂ ॥ ೩ ॥
ಬಾತುಲ ಭೂತ ಬಿಬಸ ಮತವಾರೇ । ತೇ ನಹಿಂ ಬೋಲಹಿಂ ಬಚನ ಬಿಚಾರೇ ॥
ಜಿನ್ಹ ಕೃತ ಮಹಾಮೋಹ ಮದ ಪಾನಾ । ತಿನ್ಹ ಕರ ಕಹಾ ಕರಿಅ ನಹಿಂ ಕಾನಾ ॥ ೪ ॥

ಅಜ್ಞಾನಿಗಳೂ, ಮೂರ್ಖರೂ, ವಿಷಯಾಂಧರೂ, ನಿರ್ಭಾಗ್ಯರೂ, ಮನೋದರ್ಪಣದ ಮೇಲೆ ವಿಷಯಮಾಲಿನ್ಯ ಆವರಿಸಿರುವವರೂ, ಸಂಸಾರಲಂಪಟರೂ, ಕಪಟಿಗಳೂ, ಕುಟಿಲರೂ, ಸ್ವಪ್ನದಲ್ಲಿಯೂ ಕೂಡ ಸಂತರನ್ನು ದರ್ಶಿಸದವರೂ, ಯುಕ್ತಾ-ಯುಕ್ತ ವಿವೇಕವಿಲ್ಲದವರೂ, ಇಂತಹ ವೇದವಿರುದ್ಧವಾದ ಮಾತುಗಳನ್ನು ಆಡುತ್ತಿರುತ್ತಾರೆ. ಮಲಿನ ಹೃದಯವುಳ್ಳವರೂ, ನೇತ್ರಹೀನರೂ, ಅತ್ಯಂತ ಕೃಪಣರೂ ಶ್ರೀರಾಮನನ್ನು ದರ್ಶಿಸಲಾರರು. ಪರಮಾತ್ಮನ ಸುಗುಣ-ನಿರ್ಗುಣರೂಪಗಳನ್ನು ತಿಳಿಯದವರೂ, ಕೊನೆಯಿಲ್ಲದ ಕಲ್ಪಿತ ಅಸತ್ಯ ಪ್ರಲಾಪಗಳನ್ನು ಮಾಡುವವರೂ, ಹರಿಯ ಮಾಯೆಗೆ ವಶರಾಗಿ ಜಗತ್ತಿನಲ್ಲಿ ಹುಟ್ಟು-ಸಾವು ಎಂಬ ಚಕ್ರದಲ್ಲಿ ಸಿಲುಕಿ ಸುತ್ತುತ್ತಿರುವವರೂ ಏನನ್ನಾದರೂ ಹೇಳಿ ಬಿಡುತ್ತಾರೆ. ಇದು ಅಸಂಭವವಲ್ಲ. ವಾತರೋಗಗ್ರಸಿತರೂ, ಭೂತಚೇಷ್ಟಿತರೂ, ಉನ್ಮಾದಭರಿತರೂ, ಮತ್ತುಏರಿದವರೂ ವಿಚಾರಮಾಡಿ ಮಾತಾಡಲಾರರು. ಮಹಾಮೋಹವೆಂಬ ಮದಿರೆಯನ್ನು ಕುಡಿದವರ ಮಾತಿಗೆ ಕಿವಿಗೊಡಬಾರದು. (ಚೌ/೧-೪)

ಸೋ – ಅಸ ನಿಜ ಹೃದಯಂ ಬಿಚಾರಿ ತಜು ಸಂಸಯ ಭಜು ರಾಮ ಪದ ।
ಸುನು ಗಿರಿರಾಜ ಕುಮಾರಿ ಭ್ರಮ ತಮ ರಬಿ ಕರ ಬಚನ ಮಮ ॥ ೧೧೫ ॥

ಎಲೈ ಗಿರಿರಾಜಕುಮಾರೀ! ನನ್ನ ಮಾತುಗಳನ್ನು ಆಲಿಸು. ನಿನ್ನ ಎಲ್ಲ ಸಂದೇಹವನ್ನು ದೂರಮಾಡು. ಶ್ರೀರಾಮನ ಚರಣಕಮಲಗಳನ್ನು ಭಜಿಸು. ನನ್ನ ಮಾತುಗಳು ಭ್ರಮರೂಪೀ ಅಂಧಕಾರವನ್ನು ಓಡಿಸುವ ಸೂರ್ಯಕಿರಣ ಗಳಂತಿವೆ. (ಸೋ/೧೧೫)

ಚೌ – ಸಗುನಹಿ ಅಗುನಹಿ ನಹಿಂ ಕಛು ಭೇದಾ । ಗಾವಹಿಂ ಮುನಿ ಪುರಾನ ಬುಧ ಬೇದಾ ॥
ಅಗುನ ಅರೂಪ ಅಲಖ ಅಜ ಜೋಈ । ಭಗತ ಪ್ರೇಮ ಬಸ ಸಗುನ ಸೊ ಹೋಈ ॥ ೧ ॥
ಜೋ ಗುನ ರಹಿತ ಸಗುನ ಸೋಇ ಕೈಸೇಂ । ಜಲು ಹಿಮ ಉಪಲ ಬಿಲಗ ನಹಿಂ ಜೈಸೇಂ ॥
ಜಾಸು ನಾಮ ಭ್ರಮ ತಿಮಿರ ಪತಂಗಾ । ತೆಹಿ ಕಿಮಿ ಕಹಿಅ ಬಿಮೋಹ ಪ್ರಸಂಗಾ ॥ ೨ ॥
ರಾಮ ಸಚ್ಚಿದಾನಂದ ದಿನೇಸಾ । ನಹಿಂ ತಹಂ ಮೋಹ ನಿಸಾ ಲವಲೇಸಾ ॥
ಸಹಜ ಪ್ರಕಾಸರೂಪ ಭಗವಾನಾ । ನಹಿಂ ತಹಂ ಪುನಿ ಬಿಗ್ಯಾನ ಬಿಹಾನಾ ॥ ೩ ॥
ಹರಷ ಬಿಷಾದ ಗ್ಯಾನ ಅಗ್ಯಾನಾ । ಜೀವ ಧರ್ಮ ಅಹಮಿತಿ ಅಭಿಮಾನಾ ॥
ರಾಮ ಬ್ರಹ್ಮ ಬ್ಯಾಪಕ ಜಗ ಜಾನಾ । ಪರಮಾನಂದ ಪರೇಸ ಪುರಾನಾ ॥ ೪ ॥

ಸಗುಣ ಹಾಗೂ ನಿರ್ಗುಣ ಇವುಗಳಲ್ಲಿ ಯಾವ ಭೇದವೂ ಇಲ್ಲವೆಂದೂ ಮುನಿಗಳೂ, ಪುರಾಣಗಳೂ, ಪಂಡಿತರೂ, ವೇದಗಳೂ ಹೇಳುತ್ತವೆ. ನಿರ್ಗುಣನೂ, ನಿರಾಕಾರನೂ, ಅವ್ಯಕ್ತನೂ, ಅಜನೂ ಆದ ಪರಮಾತ್ಮನೇ ಭಕ್ತರ ಮೇಲಣ ಪ್ರೇಮದಿಂದಾಗಿ ಸಗುಣನಾಗುತ್ತಾನೆ. ನೀರು ಮತ್ತು ಮಂಜುಗಡ್ಡೆ ಇವುಗಳಲ್ಲಿ ನಿಜವಾಗಿ ಯಾವ ಭೇದವೂ ಇಲ್ಲ. ಹಾಗೆಯೇ ಭಗವಂತನ ಸಗುಣ-ನಿರ್ಗುಣ ರೂಪಗಳಲ್ಲಿಯೂ ಯಾವುದೇ ಭೇದವಿಲ್ಲ. ರಾಮನ ನಾಮವೇ ಭ್ರಮತಿಮಿರವನ್ನು ತೊಡೆದುಹಾಕುವ ಸೂರ್ಯನಂತಿರುವಾಗ, ಆ ನಾಮಿಯಾದ ರಾಮನ ವಿಷಯದಲ್ಲಿ ಮೋಹದ ಪ್ರಸಂಗವನ್ನು ಹೇಗೆ ಹೇಳಬಹುದು? ಶ್ರೀರಾಮನು ಸಚ್ಚಿದಾನಂದಸ್ವರೂಪೀ ಸೂರ್ಯನೇ ಆಗಿರುವಾಗ, ಅಲ್ಲಿ ಮೋಹರೂಪೀ ರಾತ್ರಿಯ ಲವಲೇಶವೂ ಇರದು. ಷಡ್ಗುಣೈಶ್ವರ್ಯಸಂಪನ್ನ ಭಗವಂತನು ಸಹಜವಾಗಿಯೇ ಪ್ರಕಾಶಸ್ವರೂಪನಾಗಿರುವಾಗ, ಅಲ್ಲಿ ವಿಜ್ಞಾನರೂಪೀ ಪ್ರಾತಃಕಾಲವು ಕೂಡ ಇಲ್ಲ. ಏಕೆಂದರೆ, ಅಜ್ಞಾನರೂಪೀ ರಾತ್ರಿಯೇ ಇಲ್ಲದಿರುವಾಗ, ಪ್ರಾತಃಕಾಲವೆಲ್ಲಿಂದ? ಭಗವಂತನಾದರೋ ನಿತ್ಯ ಜ್ಞಾನಸ್ವರೂಪನು. ಹರ್ಷ-ಶೋಕಗಳೂ, ಜ್ಞಾನ-ಅಜ್ಞಾನಗಳೂ, ಅಹಂಕಾರ-ಅಭಿಮಾನಗಳೂ ಇವೆಲ್ಲ ಬದ್ಧಜೀವರ ಲಕ್ಷಣಗಳು. ಶ್ರೀರಾಮಚಂದ್ರನು ಸರ್ವವ್ಯಾಪಿಯಾದ ಪರಬ್ರಹ್ಮನೂ, ಪರಮಾನಂದಸ್ವರೂಪನೂ, ಪರಾತ್ಪರನೂ, ಪರಮೇಶ್ವರನೂ, ಪುರಾಣಪುರುಷನೂ ಆಗಿರುವನು; ಇದು ಲೋಕಪ್ರಸಿದ್ಧವು. (ಚೌ/೧-೪)

**ದೋ – ಪುರುಷ ಪ್ರಸಿದ್ಧ ಪ್ರಕಾಸ ನಿಧಿ ಪ್ರಗಟ ಪರಾವರ ನಾಥ ।**
**ರಘುಕುಲಮನಿ ಮಮ ಸ್ವಾಮಿ ಸೋಇ ಕಹಿ ಸಿವ್ ನಾಯಉ ಮಾಥ ॥ ೧೧೬ ॥**

''ಪುರಾಣಪುರುಷನೆಂದು ಪ್ರಸಿದ್ಧನೂ, ತೇಜೋರಾಶಿಯೂ, ಸಕಲರೂಪಗಳಲ್ಲಿಯೂ ಪ್ರಕಟನಾಗಿರುವವನೂ, ಜೀವ-ಮಾಯೆ-ಜಗತ್ತುಗಳಿಗೆ ಒಡೆಯನೂ ಆದ ರಘುಕುಲಮಣಿಯಾದ ಶ್ರೀರಾಮಚಂದ್ರನು ನನಗೆ ಸ್ವಾಮಿಯು'' ಎಂದು ಹೇಳಿ ಪರಶಿವನು ಶ್ರೀರಾಮನಿಗೆ ಶಿರಸಾ ವಂದಿಸಿದನು. (ದೋ/೧೧೬)

**ಚೌ – ನಿಜ ಭ್ರಮ ನಹಿಂ ಸಮುಝಹಿಂ ಅಗ್ಯಾನೀ । ಪ್ರಭು ಪರ ಮೋಹ ಧರಹಿಂ ಜಡ ಪ್ರಾನೀ ॥**
**ಜಥಾ ಗಗನ ಘನ ಪಟಲ ನಿಹಾರೀ । ಝಾಂಪೆಉ ಭಾನು ಕಹಹಿಂ ಕುಬಿಚಾರೀ ॥ ೧ ॥**
**ಚಿತವ ಜೋ ಲೋಚನ ಅಂಗುಲಿ ಲಾಏಂ । ಪ್ರಗಟ ಜುಗಲ ಸಸಿ ತೇಹಿ ಕೇ ಭಾಏಂ ॥**
**ಉಮಾ ರಾಮ ಬಿಷಇಕ ಅಸ ಮೋಹಾ । ನಭ ತಮ ಧೂಮ ಧೂರಿ ಜಿಮಿ ಸೋಹಾ ॥ ೨ ॥**
**ಬಿಷಯ ಕರನ ಸುರ ಜೀವ ಸಮೇತಾ । ಸಕಲ ಏಕ ತೇಂ ಏಕ ಸಚೇತಾ ॥**
**ಸಬ ಕರ ಪರಮ ಪ್ರಕಾಸಕ ಜೋಈ । ರಾಮ ಅನಾದಿ ಅವಧಪತಿ ಸೋಈ ॥ ೩ ॥**
**ಜಗತ ಪ್ರಕಾಸ್ಯ ಪ್ರಕಾಸಕ ರಾಮೂ । ಮಾಯಾಧೀಸ ಗ್ಯಾನ ಗುನ ಧಾಮೂ ॥**
**ಜಾಸು ಸತ್ಯತಾ ತೇಂ ಜಡ ಮಾಯಾ । ಭಾಸ ಸತ್ಯ ಇವ ಮೋಹ ಸಹಾಯಾ ॥ ೪ ॥**

ಅಜ್ಞಾನಿಗಳು ತಮ್ಮ ಭ್ರಮೆಯನ್ನು ಅರ್ಥಮಾಡಿಕೊಳ್ಳಲಾರರು. ಆಕಾಶದಲ್ಲಿ ಮೋಡಗಳ ಪಟಲವನ್ನು ಕಂಡು ಅಜ್ಞಾನಿಗಳೂ, ಮೂರ್ಖರೂ ಸೂರ್ಯನನ್ನು ಮೋಡಗಳು ಮುಚ್ಚಿವೆ ಎಂದು ಹೇಳುವಂತೆ ತಮ್ಮ ಭ್ರಮೆಯನ್ನು ಶ್ರೀರಾಮಚಂದ್ರನಲ್ಲಿ ಆರೋಪಿಸುತ್ತಾರೆ. ಕಣ್ಣಿಗೆ ಬೆಟ್ಟುಇಟ್ಟುಕೊಂಡು ನೋಡುವವರಿಗೆ ಆಗಸದಲ್ಲಿರುವ ಒಂದೇ ಚಂದ್ರನು ಎರಡಾಗಿ ಕಾಣುತ್ತಾನೆ. ಆಕಾಶವು ನಿರ್ಮಲವಾಗಿದ್ದು, ಸ್ವಚ್ಛಾಗಿರುತ್ತದೆ. ಆದರೆ ಅಂಧಕಾರ, ಹೊಗೆ, ಧೂಳು ಇವುಗಳಿಂದ ಆಕಾಶವು ಕಪ್ಪಾಗಿದೆ ಎಂದು ಅಜ್ಞಾನಿಗಳು ಭಾವಿಸುವರು. ಹಾಗೆಯೇ ಮಾಯಾತೀತನೂ, ನಿರ್ಮಲನೂ ಆದ ಶ್ರೀರಾಮಚಂದ್ರನಲ್ಲಿ ಅಜ್ಞಾನಿಗಳು ತಮ್ಮ ಭ್ರಮೆಯನ್ನು ಆರೋಪಿಸುತ್ತಾರೆ. ವಿಷಯವಸ್ತುಗಳು ಇಂದ್ರಿಯಗಳಿಂದಲೂ, ಇಂದ್ರಿಯಗಳು ತದಧಿಷ್ಠಾನ ದೇವತೆಗಳಿಂದಲೂ, ಇಂದ್ರಿಯ ದೇವತೆಗಳು ಜೀವಾತ್ಮನಿಂದಲೂ ಚೈತನ್ಯ ಪಡೆಯುತ್ತವೆ. ಆದರೆ ಇವೆಲ್ಲವನ್ನೂ ಚೇತನಗೊಳಿಸುವವನು ಅಯೋಧ್ಯಾಪತಿಯೂ, ಪರಮಾತ್ಮನೂ ಆದ ಶ್ರೀರಾಮಚಂದ್ರನೇ. ಅವನೇ ಪ್ರಕಾಶಕನೂ, ಅನಾದಿಯೂ, ಪರಬ್ರಹ್ಮನೂ ಆಗಿರುವನು. ಜಗತ್ತು ಪ್ರಕಾಶ್ಯವು – ಶ್ರೀರಾಮನು ಪ್ರಕಾಶಕನು. ಅವನು ಮಾಯಾಧೀಶನೂ, ಜ್ಞಾನನಿಧಿಯೂ ಆಗಿರುವನು. ಅವನ ಅಸ್ತಿತ್ವದಿಂದಲೇ ಜಡ (ಅಚೇತನ) ವಸ್ತುಗಳೂ ಕೂಡ ಮೋಹದ ಕಾರಣದಿಂದ ಸತ್ಯದಂತೆ ಕಾಣುತ್ತವೆ. (ಚೌ/೧-೪)

**ದೋ – ರಜತ ಸೀಪ ಮಹುಂ ಭಾಸ ಜಿಮಿ ಜಥಾ ಭಾನು ಕರ ಬಾರಿ ।**
**ಜದಪಿ ಮೃಷಾ ತಿಹುಂ ಕಾಲ ಸೋಇ ಭ್ರಮ ನ ಸಕಇ ಕೋಉ ಟಾರಿ ॥ ೧೧೭ ॥**

ಚಿಪ್ಪಿನಲ್ಲಿ ಬೆಳ್ಳಿಯೂ, ಸೂರ್ಯಕಿರಣಗಳಲ್ಲಿ ನೀರು ಇಲ್ಲದಿದ್ದರೂ ಇದ್ದಂತೆ ಭಾಸವಾಗುತ್ತದೆ. ಈ ಪ್ರತೀತಿಯು ತ್ರಿಕಾಲಗಳಲ್ಲಿಯೂ ಸುಳ್ಳಾಗಿದ್ದರೂ, ಈ ಭ್ರಾಂತಿಯನ್ನು ಯಾರೂ ತಪ್ಪಿಸಲಾರರು. (ದೋ/೧೧೭)

**ಚೌ – ಏಹಿ ಬಿಧಿ ಜಗ ಹರಿ ಆಶ್ರಿತ ರಹಈ । ಜದಪಿ ಅಸತ್ಯ ದೇತ ದುಖ ಅಹಈ ॥**
**ಜೌಂ ಸಪನೇಂ ಸಿರ ಕಾಟೈ ಕೋಈ । ಬಿನು ಜಾಗೇಂ ನ ದೂರಿ ದುಖ ಹೋಈ ॥ ೧ ॥**
**ಜಾಸು ಕೃಪಾಂ ಅಸ ಭ್ರಮ ಮಿಟಿ ಜಾಈ । ಗಿರಿಜಾ ಸೋಇ ಕೃಪಾಲ ರಘುರಾಈ ॥**
**ಆದಿ ಅಂತ ಕೋಉ ಜಾಸು ನ ಪಾವಾ । ಮತಿ ಅನುಮಾನಿ ನಿಗಮ ಅಸ ಗಾವಾ ॥ ೨ ॥**
**ಬಿನು ಪದ ಚಲಇ ಸುನಇ ಬಿನು ಕಾನಾ । ಕರ ಬಿನು ಕರಮ ಕರಇ ಬಿಧಿ ನಾನಾ ॥**
**ಆನನ ರಹಿತ ಸಕಲ ರಸ ಭೋಗೀ । ಬಿನು ಬಾನೀ ಬಕತಾ ಬಡ ಜೋಗೀ ॥ ೩ ॥**
**ತನ ಬಿನು ಪರಸ ನಯನ ಬಿನು ದೇಖಾ । ಗ್ರಹಇ ಘ್ರಾನ ಬಿನು ಬಾಸ ಅಸೇಷಾ ॥**
**ಅಸಿ ಸಬ ಭಾಂತಿ ಅಲೌಕಿಕ ಕರನೀ । ಮಹಿಮಾ ಜಾಸು ಜಾಇ ನಹಿಂ ಬರನೀ ॥ ೪ ॥**

ಇದೇ ರೀತಿ ಜಗತ್ತೆಲ್ಲವೂ ಶ್ರೀಹರಿಯಲ್ಲಿ ಆಶ್ರಿತವಾಗಿದೆ. ಕನಸಿನಲ್ಲಿ ಯಾರಾದರೂ ತಲೆಯನ್ನು ಕಡಿದುಕೊಂಡು ದುಃಖಿಸುತ್ತಿದ್ದರೆ, ಆ ದುಃಖವು ಎಚ್ಚರವಾಗದೆ ದೂರವಾಗದು. ಹಾಗೆಯೇ ಈ ಜಗತ್ತು ಅಸತ್ಯವಾಗಿದ್ದರೂ ಮೋಹದಿಂದಾಗಿ

ದುಃಖವನ್ನುಂಟುಮಾಡುತ್ತದೆ. ಎಲೈ ಗಿರಿಜೆ! ಕೃಪಾಳುವಾದ ಶ್ರೀರಾಮನ ಕೃಪೆಯಿಂದಲೇ ಇಂತಹ ಭ್ರಮೆ ನಾಶವಾಗುತ್ತದೆ. ಅವನು ಆದ್ಯಂತ ರಹಿತನು. ವೇದಗಳೂ ಕೂಡ ತಮ್ಮ ಬುದ್ಧಿಗನುಗುಣವಾಗಿ ಊಹಿಸಿ ಹೀಗೆ ಹಾಡುತ್ತವೆ – ಆ ಪರಬ್ರಹ್ಮನು ಕಾಲಿಲ್ಲದೇ ನಡೆಯುತ್ತಾನೆ. ಕಿವಿಗಳಿಲ್ಲದೆ ಕೇಳುತ್ತಾನೆ. ಕೈಗಳಿಲ್ಲದೆಯೇ ನಾನಾ ತೆರನಾದ ಕೆಲಸ ಮಾಡುತ್ತಾನೆ. ನಾಲಿಗೆಯಿಲ್ಲದೆಯೇ ಷಡ್ರಸಗಳನ್ನು ಸವಿಯಬಲ್ಲನು. ಮಾತಿಲ್ಲದೆ ಬಹಳ ದೊಡ್ಡ ವಕ್ತಾ. ತನುವಿಲ್ಲದೆಯೇ ಅವನು ಸ್ಪರ್ಶಿಸಬಲ್ಲನು. ಕಣ್ಣಿಲ್ಲದೆಯೇ ನೋಡಬಲ್ಲನು. ಮೂಗಿಲ್ಲದೆ ಎಲ್ಲವನ್ನೂ ಮೂಸುವವನು. ಆ ಹರಬ್ರಹ್ಮನ ಲೀಲೆಗಳೆಲ್ಲವೂ ಅಲೌಕಿಕವೇ. ಅವನ ಮಹಿಮೆ ವರ್ಣನಾತೀತವು. (ಚೌ/೧-೪)

**ದೋ – ಜೆಹಿ ಇಮಿ ಗಾವಹಿಂ ಬೇದ ಬುಧ ಜಾಹಿ ಧರಹಿಂ ಮುನಿ ಧ್ಯಾನ।**
**ಸೋಇ ದಸರಥ ಸುತ ಭಗತ ಹಿತ ಕೋಸಲಪತಿ ಭಗವಾನ॥ ೧೧೮ ॥**

ವೇದಗಳಿಂದ, ಪಂಡಿತರಿಂದ ಈ ರೀತಿ ಹೊಗಳಲ್ಪಡುವವನೂ, ಮುನಿಗಳಿಗೆ ಧ್ಯೇಯನಾಗಿರುವವನೂ ಆದ ಆ ಪರಬ್ರಹ್ಮನೇ ದಶರಥ ನಂದನನೂ, ಭಕ್ತಹಿತಕಾರಿಯೂ, ಅಯೋಧ್ಯಾಪತಿಯೂ ಆದ ಭಗವಾನ್ ಶ್ರೀರಾಮಚಂದ್ರನು. (ದೋ/೧೧೮)

**ಚೌ – ಕಾಸೀಂ ಮರತ ಜಂತು ಅವಲೋಕೀ। ಜಾಸು ನಾಮ ಬಲ ಕರಉಂ ಬಿಸೋಕೀ॥**
**ಸೋಇ ಪ್ರಭು ಮೋರ ಚರಾಚರ ಸ್ವಾಮೀ। ರಘುಬರ ಸಬ ಉರ ಅಂತರಜಾಮೀ॥ ೧ ॥**
**ಬಿಬಸಹುಂ ಜಾಸು ನಾಮ ನರ ಕಹಹೀಂ। ಜನಮ ಅನೇಕ ರಚಿತ ಅಘ ದಹಹೀಂ॥**
**ಸಾದರ ಸುಮಿರನ ಜೇ ನರ ಕರಹೀಂ। ಭವ ಬಾರಿಧಿ ಗೋಪದ ಇವ ತರಹೀಂ॥ ೨ ॥**
**ರಾಮ ಸೊ ಪರಮಾತಮಾ ಭವಾನೀ। ತಹಂ ಭ್ರಮ ಅತಿ ಅಬಿಹಿತ ತವ ಬಾನೀ॥**
**ಅಸ ಸಂಸಯ ಆನತ ಉರ ಮಾಹೀಂ। ಗ್ಯಾನ ಬಿರಾಗ ಸಕಲ ಗುನ ಜಾಹೀಂ॥ ೩ ॥**
**ಸುನಿ ಸಿವ ಕೇ ಭ್ರಮ ಭಂಜನ ಬಚನಾ। ಮಿಟಿ ಗೈ ಸಬ ಕುತರಕ ಕೈ ರಚನಾ॥**
**ಭಇ ರಘುಪತಿ ಪದ ಪ್ರೀತಿ ಪ್ರತೀತೀ। ದಾರುನ ಅಸಂಭಾವನಾ ಬೀತೀ॥ ೪ ॥**

ಎಲೈ ಉಮಾ! ಆ ರಾಮನಾಮದ ಬಲದಿಂದಲೇ ಕಾಶಿಯಲ್ಲಿ ಪ್ರಾಣತ್ಯಾಗ ಮಾಡುವ ಪ್ರಾಣಿಗಳಿಗೆಲ್ಲ ಆ ಮಂತ್ರವನ್ನು ಉಪದೇಶಿಸಿ ನಾನು ಮುಕ್ತರಾಗಿಸುತ್ತೇನೆ. ಆ ನನ್ನ ಪ್ರಭುವಾದ ಶ್ರೀರಾಮಚಂದ್ರನೇ ಜಡಚೇತನಗಳೊಡೆಯ ಹಾಗೂ ಸರ್ವಾಂತರ್ಯಾಮಿ. ಅನಿಚ್ಛೆಯಿಂದ ಅವನ ನಾಮವನ್ನು ಸ್ಮರಿಸಿದರೂ ಜನ್ಮ-ಜನ್ಮಾಂತರದ ಮನುಷ್ಯರ ಪಾಪಗಳು ಸುಟ್ಟುಹೋಗುತ್ತವೆ. ಹಾಗಿರುವಾಗ ಭಕ್ತಿಯಿಂದ ಧ್ಯಾನಿಸುವವರು ಸಂಸಾರ ಸಮುದ್ರವನ್ನು ಗೋಷ್ಪದದಂತೆ ಸುಲಭವಾಗಿ ದಾಟಬಲ್ಲರು. ಭವಾನೀ! ಆ ಪರಮಾತ್ಮನೇ ಶ್ರೀರಾಮಚಂದ್ರನು. ಅವನ ವಿಷಯದಲ್ಲಿ ಯಾವುದೇ ಸಂದೇಹಕ್ಕೆ ಎಡೆಯಿಲ್ಲ. ಇಂತಹ ಸಂದೇಹಗಳನು ಮನಸ್ಸಿನಲ್ಲಿ ಮೂಡಿದರೆ ಸಾಕು, ಮನುಷ್ಯರ ಜ್ಞಾನ, ವೈರಾಗ್ಯವೇ ಮೊದಲಾದ ಎಲ್ಲ ಸದ್ಗುಣಗಳು ನಶಿಸಿಹೋಗುತ್ತವೆ.'' ಭ್ರಮಭಂಜಕ ಶಿವನ ವಚನಗಳನ್ನು ಕೇಳಿ, ಪಾರ್ವತಿದೇವಿಯ ಸಂದೇಹಗಳೆಲ್ಲವೂ ಹೊರಟುಹೋದುವು. ಊಹಾಜನಿತ ದಾರುಣ ಸಂಶಯಗಳೂ, ತರ್ಕವಿತರ್ಕಗಳೆಲ್ಲವೂ ಮಾಯವಾಗಿಹೋದವು. ಶ್ರೀರಾಮನ ಪಾದಪದ್ಮಗಳಲ್ಲಿ ಅವಳಿಗೆ ಭಕ್ತಿವಿಶ್ವಾಸಗಳು ಇಮ್ಮಡಿಸಿದವು. (ಚೌ/೧-೪)

**ದೋ – ಪುನಿ ಪುನಿ ಪ್ರಭು ಪದ ಕಮಲ ಗಹಿ ಜೋರಿ ಪಂಕರುಹ ಪಾನಿ।**
**ಬೋಲೀಂ ಗಿರಿಜಾ ಬಚನ ಬರ ಮನಹುಂ ಪ್ರೇಮ ರಸ ಸಾನಿ॥ ೧೧೯ ॥**

ಉಮೆಯು ಮತ್ತೆ ಮತ್ತೆ ಶಿವನ ಪಾದಪದ್ಮಗಳನ್ನು ಹಿಡಿದುಕೊಂಡು, ತನ್ನ ಕರಕಮಲಗಳನ್ನು ಜೋಡಿಸಿ, ಪ್ರೇಮರಸದಲ್ಲಿ ಅದ್ದಿದಂತಹ ಮಾತುಗಳನ್ನು ಇಂತೆಂದಳು. (ದೋ/೧೧೯)

**ಚೌ – ಸಸಿ ಕರ ಸಮ ಸುನಿ ಗಿರಾ ತುಮ್ಹಾರೀ। ಮಿಟಾ ಮೋಹ ಸರದಾತಪ ಭಾರೀ॥**
**ತುಮ್ಹ ಕೃಪಾಲ ಸಬು ಸಂಸಉ ಹರೆಊ। ರಾಮ ಸ್ವರೂಪ ಜಾನಿ ಮೋಹಿ ಪರೆಊ॥ ೧ ॥**
**ನಾಥ ಕೃಪಾಂ ಅಬ ಗಯಉ ಬಿಷಾದಾ। ಸುಖೀ ಭಯಉಂ ಪ್ರಭು ಚರನ ಪ್ರಸಾದಾ॥**
**ಅಬ ಮೋಹಿ ಆಪನಿ ಕಿಂಕರಿ ಜಾನೀ। ಜದಪಿ ಸಹಜ ಜಡ ನಾರಿ ಅಯಾನೀ॥ ೨ ॥**
**ಪ್ರಥಮ ಜೊ ಮೈಂ ಪೂಛಾ ಸೋಇ ಕಹಹೂ। ಜೌಂ ಮೊ ಪರ ಪ್ರಸನ್ನ ಪ್ರಭು ಅಹಹೂ॥**
**ರಾಮ ಬ್ರಹ್ಮ ಚಿನಮಯ ಅಬಿನಾಸೀ। ಸರ್ಬ ರಹಿತ ಸಬ ಉರ ಪುರ ಬಾಸೀ॥ ೩ ॥**

**ನಾಥ ಧರೇಉ ನರತನು ಕೆಹಿ ಹೇತೂ। ಮೊಹಿ ಸಮುಝಾಇ ಕಹಹು ಬೃಷಕೇತೂ॥**
**ಉಮಾ ಬಚನ ಸುನಿ ಪರಮ ಬಿನೀತಾ। ರಾಮಕಥಾ ಪರ ಪ್ರೀತಿ ಪುನೀತಾ॥ ೪॥**

‘ಕೃಪಾನಿಧೇ! ನಿಮ್ಮ ಚಂದ್ರಕಿರಣಗಳಂತಹ ಶೀತಲವಾಣಿಯನ್ನು ಕೇಳಿ, ನನ್ನ ಅಜ್ಞಾನವೆಂಬ ಶರದೃತುವಿನ ಬಿಸಿಲಬೇಗೆ ಅಡಗಿಹೋಯಿತು. ನೀವು ನನ್ನ ಎಲ್ಲ ಸಂದೇಹಗಳನ್ನು ಪರಿಹರಿಸಿದಿರಿ. ಈಗ ಶ್ರೀರಾಮನ ಯಥಾರ್ಥಸ್ವರೂಪದ ಅರಿವು ನನಗುಂಟಾಯಿತು. ಸ್ವಾಮಿ! ನಿಮ್ಮ ಕೃಪೆಯಿಂದ ನನ್ನ ವಿಷಾದವೆಲ್ಲ ತೊಲಗಿತು. ನಿಮ್ಮ ಚರಣಾನುಗ್ರಹದಿಂದ ನನಗೆ ನೆಮ್ಮದಿ ದೊರೆಯಿತು. ಹೆಣ್ಣಾದುದರಿಂದ ಸಹಜವಾಗಿಯೇ ಜಡಳೂ, ಅಜ್ಞಾನಿಯೂ ಆದ ನನ್ನನ್ನು ಚರಣದಾಸಿಯೆಂದು ಬಗೆದು, ಹೇ ಪ್ರಭೂ! ನೀವು ನನಗೆ ಒಲಿದಿರುವುದಾದರೆ ನಾನು ಹಿಂದೆ ಕೇಳಿದಂತೆ ರಾಮಚರಿತ್ರೆಯನ್ನು ಶ್ರವಣಮಾಡಿಸಿರಿ. ಶ್ರೀರಾಮನು ಪರಬ್ರಹ್ಮನೂ, ಜ್ಞಾನಸ್ವರೂಪನೂ, ಅವ್ಯಯನೂ, ನಿರ್ಮಲನೂ, ಎಲ್ಲರ ಹೃದಯಾಂತರ್ಯಾಮಿಯೂ ಆಗಿರುವನು. ಓ ವೃಷಭಧ್ವಜಾ! ಅವನು ಮನುಷ್ಯಶರೀರವನ್ನು ಏತಕ್ಕಾಗಿ ಧರಿಸಿದನು? ಇದನ್ನು ನನಗೆ ತಿಳಿಯುವಂತೆ ವಿವರಿಸಿರಿ. ಹೀಗೆ ಪಾರ್ವತಿಯ ಅತ್ಯಂತ ನಮ್ರವಚನಗಳನ್ನು ಆಲಿಸಿ, ಶ್ರೀರಾಮಚಂದ್ರನ ಕಥೆಯಲ್ಲಿ ಆಕೆಗಿರುವ ವಿಶುದ್ಧ ಪ್ರೇಮವನ್ನು ಗಮನಿಸಿ – (ಚೌ/೧-೪)

**ದೋ – ಹಿಯಂ ಹರಷೇ ಕಾಮಾರಿ ತಬ ಸಂಕರ ಸಹಜ ಸುಜಾನ।**
**ಬಹು ಬಿಧಿ ಉಮಹಿ ಪ್ರಸಂಸಿ ಪುನಿ ಬೋಲೇ ಕೃಪಾನಿಧಾನ॥ ೧೨೦ (ಕ)॥**

ಜ್ಞಾನಸ್ವರೂಪನೂ, ಕಾಮಾರಿಯೂ, ಕೃಪಾಳುವೂ ಆದ ಶಿವನು ಮನಸ್ಸಿನಲ್ಲಿ ಆನಂದಿಸಿ, ಬಹುವಿಧದಿಂದ ಪಾರ್ವತಿಯನ್ನು ಪ್ರಶಂಸಿಸುತ್ತಾ ಹೀಗೆ ಹೇಳತೊಡಗಿದನು – (ದೋ/೧೨೦ ಕ)

## ನವಾಹ್ನಪಾರಾಯಣದ ಮೊದಲನೆಯ ವಿಶ್ರಾಮ
## ಮಾಸಪಾರಾಯಣದ ನಾಲ್ಕನೆಯ ವಿಶ್ರಾಮ

# ಶ್ರೀರಾಮಾವತಾರ ರಹಸ್ಯ

**ಸೋ – ಸುನು ಸುಭ ಕಥಾ ಭವಾನಿ ರಾಮಚರಿತಮಾನಸ ಬಿಮಲ।**
**ಕಹಾ ಭುಸುಂಡಿ ಬಖಾನಿ ಸುನಾ ಬಿಹಗ ನಾಯಕ ಗರುಡ॥೧೨೦(ಖ)॥**
**ಸೋ ಸಂಬಾದ ಉದಾರ ಜೆಹಿ ಬಿಧಿ ಭಾ ಆಗೇಂ ಕಹಬ।**
**ಸುನಹು ರಾಮ ಅವತಾರ ಚರಿತ ಪರಮ ಸುಂದರ ಅನಘ॥ ೧೨೦(ಗ)॥**
**ಹರಿ ಗುನ ನಾಮ ಅಪಾರ ಕಥಾ ರೂಪ ಅಗನಿತ ಅಮಿತ।**
**ಮೈಂ ನಿಜ ಮತಿ ಅನುಸಾರ ಕಹಉಂ ಉಮಾ ಸಾದರ ಸುನಹು॥ ೧೨೦(ಘ)॥**

ಎಲೈ ಭವಾನಿಯೇ! ನಿರ್ಮಲವಾದ ಶ್ರೀರಾಮಚರಿತಮಾನಸದ, ಮಂಗಲಮಯವಾದ ಕಥೆಯನ್ನು ಕೇಳು. ಇದನ್ನು ಮೊದಲು ಕಾಕಭುಶುಂಡಿ ಮುನಿಯು ಪಕ್ಷಿರಾಜನಾದ ಗರುಡನಿಗೆ ವಿವರಿಸಿದ್ದರು. ಅವರಲ್ಲಿ ನಡೆದ ಶ್ರೇಷ್ಠ ಸಂವಾದವನ್ನು ನಾನು ಮುಂದೆ ಹೇಳುತ್ತೇನೆ. ಮೊದಲಿಗೆ ರಾಮಾವತಾರದ ಪರಮ ಸುಂದರವೂ, ಪವಿತ್ರವೂ, ಪಾಪನಾಶಕವೂ ಆದ ಕಥೆಯನ್ನು ಕೇಳು. ಶ್ರೀಹರಿಯ ಗುಣಗಳು, ನಾಮಗಳು, ಕಥೆಯೂ, ರೂಪಗಳೆಲ್ಲವೂ ಅಪಾರ ಅಗಣಿತ ಹಾಗೂ ಅಸೀಮ. ಆದರೂ ಕೂಡ ನಾನು ನನ್ನ ಮತಿಗೆ ಅನುಸಾರವಾಗಿ ಅದನ್ನು ಹೇಳುತ್ತೇನೆ. ನೀನು ಆದರದಿಂದ ಕೇಳು. (ಸೋ/೧೨೦ ಖ, ಗ, ಘ)

**ಚೌ – ಸುನು ಗಿರಿಜಾ ಹರಿಚರಿತ ಸುಹಾಏ। ಬಿಪುಲ ಬಿಸದ ನಿಗಮಾಗಮ ಗಾಏ॥**
**ಹರಿ ಅವತಾರ ಹೇತು ಜೆಹಿ ಹೋಈ। ಇದಮಿತ್ಥಂ ಕಹಿ ಜಾಇ ನ ಸೋಈ॥ ೧ ॥**
**ರಾಮ ಅತರ್ಕ್ಯ ಬುದ್ಧಿಮನ ಬಾನೀ। ಮತ ಹಮಾರ ಅಸ ಸುನಹಿ ಸಯಾನೀ॥**
**ತದಪಿ ಸಂತ ಮುನಿ ಬೇದ ಪುರಾನಾ। ಜಸ ಕಛು ಕಹಹಿಂ ಸ್ವಮತಿ ಅನುಮಾನಾ॥ ೨ ॥**
**ತಸ ಮೈ ಸುಮುಖಿ ಸುನಾವಉಂ ತೋಹೀ। ಸಮುಝಿ ಪರಇ ಜಸ ಕಾರನ ಮೋಹೀ॥**
**ಜಬ ಜಬ ಹೋಇ ಧರಮ ಕೈ ಹಾನೀ। ಬಾಢಹಿಂ ಅಸುರ ಅಧಮ ಅಭಿಮಾನೀ॥ ೩ ॥**

**ಕರಹಿಂ ಅನೀತಿ ಜಾಇ ನಹಿಂ ಬರನೀ। ಸೀದಹಿಂ ಬಿಪ್ರ ಧೇನು ಸುರ ಧರನೀ॥**

**ತಬ ತಬ ಪ್ರಭು ಧರಿ ಬಿಬಿಧ ಸರೀರಾ। ಹರಹಿಂ ಕೃಪಾನಿಧಿ ಸಜ್ಜನ ಪೀರಾ ॥ ೪ ॥**

ಗಿರಿಜೆ! ನಿಗಮಾಗಮಗಳು ಶ್ರೀಹರಿಯ ಸುಂದರವೂ, ವಿಸ್ತೃತವೂ, ನಿರ್ಮಲವೂ ಆದ ಚರಿತ್ರೆಗಳನ್ನು ವರ್ಣಿಸಿವೆ. ಶ್ರೀಹರಿಯ ಅವತಾರ ಇದೇ ಕಾರಣಕ್ಕಾಗುತ್ತದೆ ಎಂದು 'ಇದಮಿತ್ಥಂ'' ಆಗಿ ಹೇಳಲಾಗುವುದಿಲ್ಲ. ಅವತಾರಕ್ಕೆ ಅನೇಕ ಕಾರಣಗಳು ಇರಬಹುದು. ಯಾರೂ ತಿಳಿಯಲಾರದಂತಹ ಕಾರಣಗಳೂ ಇರಬಹುದು. ಅಂತೂ ಭಗವದವತಾರಗಳ ಕಾರಣ ಭಗವಂತನೇ ಬಲ್ಲನು. ಎಲೈ ಬುದ್ಧಿಮತಿಯೇ! ನನ್ನ ಅಭಿಪ್ರಾಯದಲ್ಲಿ ಶ್ರೀರಾಮನು ವಾಙ್ಮನೋಬುದ್ಧಿಗಳಿಗೆ ಅತೀತನು. ಆದರೂ ಸತ್ಪುರುಷರೂ, ಮುನಿಗಳೂ ತಮ್ಮ-ತಮ್ಮ ಬುದ್ಧಿಗನುಸಾರವಾಗಿ ಶ್ರೀರಾಮನನ್ನು ಸ್ತುತಿಸಿರುವರು. ವೇದ-ಪುರಾಣಗಳು ವರ್ಣಿಸಿರುವವು. ಅಂತೆಯೇ ನನಗೆ ತಿಳಿದಷ್ಟನ್ನು ನಾನು ನಿನಗೆ ತಿಳಿಸುತ್ತೇನೆ. ಎಲೈ ಸುಮುಖಿಯೇ! ಧರ್ಮಕ್ಕೆ ಗ್ಲಾನಿ ಉಂಟಾದಾಗಲೆಲ್ಲ, ನೀಚ, ಅಭಿಮಾನೀರಾಕ್ಷಸರು ಹುಟ್ಟಿಕೊಂಡು, ವರ್ಣನಾತೀತವಾದ ಅಧರ್ಮಕಾರ್ಯದಲ್ಲಿ ತೊಡಗಿದಾಗ, ಬ್ರಾಹ್ಮಣರು, ಗೋವುಗಳು, ದೇವತೆಗಳು, ಸಂಕಷ್ಟಕ್ಕೀಡಾದಾಗ, ಭೂಭಾರವು ಹೆಚ್ಚಿದಾಗ ಕೃಪಾಳುವಾದ ಶ್ರೀಹರಿಯು ವಿವಿಧ ರೂಪಗಳಿಂದ ಅವತರಿಸಿ, ಸಾಧು ಸಜ್ಜನರ ದುಃಖವನ್ನು ಪರಿಹರಿಸುತ್ತಾನೆ. (ಚೌ/೧-೪)

**ದೋ – ಅಸುರ ಮಾರಿ ಥಾಪಹಿಂ ಸುರನ್ಹ ರಾಖಹಿಂ ನಿಜ ಶ್ರುತಿ ಸೇತು।**

**ಜಗ ಬಿಸ್ತಾರಹಿಂ ಬಿಸದ ಜಸ ರಾಮ ಜನ್ಮ ಕರ ಹೇತು ॥ ೧೨೧ ॥**

ಶ್ರೀಹರಿಯು ಅಸುರರನ್ನು ಸಂಹರಿಸಿ, ದೇವತೆಗಳನ್ನು ರಕ್ಷಿಸುವನು. ವೇದಮರ್ಯಾದೆಗಳನ್ನು ಕಾಪಾಡುತ್ತಾನೆ. ಲೋಕದಲ್ಲೆಲ್ಲ ಉಜ್ವಲವಾದ ಕೀರ್ತಿಯನ್ನು ವಿಸ್ತರಿಸುವನು. ಶ್ರೀರಾಮನ ಅವತಾರಕ್ಕೂ ಇದೇ ಕಾರಣವು. (ದೋ/೧೨೧)

**ಚೌ – ಸೋಇ ಜಸ ಗಾಇ ಭಗತ ಭವ ತರಹೀಂ। ಕೃಪಾಸಿಂಧು ಜನ ಹಿತ ತನು ಧರಹೀಂ॥**

**ರಾಮ ಜನಮ ಕೇ ಹೇತು ಅನೇಕಾ। ಪರಮ ಬಿಚಿತ್ರ ಏಕ ತೇಂ ಏಕಾ॥ ೧ ॥**

**ಜನಮ ಏಕ ದುಇ ಕಹಉಂ ಬಖಾನೀ। ಸಾವಧಾನ ಸುನು ಸುಮತಿ ಭವಾನೀ ॥**

**ದ್ವಾರಪಾಲ ಹರಿ ಕೇ ಪ್ರಿಯ ದೋಊ। ಜಯ ಅರು ಬಿಜಯ ಜಾನ ಸಬ ಕೋಊ॥ ೨ ॥**

**ಬಿಪ್ರ ಶ್ರಾಪ ತೇಂ ದೂನಉ ಭಾಈ। ತಾಮಸ ಅಸುರ ದೇಹ ತಿನ್ಹ ಪಾಈ॥**

**ಕನಕಕಸಿಪು ಅರು ಹಾಟಕ ಲೋಚನ। ಜಗತ ಬಿದಿತ ಸುರಪತಿ ಮದ ಮೋಚನ॥ ೩ ॥**

**ಬಿಜಈ ಸಮರ ಬೀರ ಬಿಖ್ಯಾತಾ। ಧರಿ ಬರಾಹ ಬಪು ಏಕ ನಿಪಾತಾ॥**

**ಹೋಇ ನರಹರಿ ದೂಸರ ಪುನಿ ಮಾರಾ। ಜನ ಪ್ರಹಲಾದ ಸುಜಸ ಬಿಸ್ತಾರಾ ॥ ೪ ॥**

ಅದೇ ಶ್ರೇಯಸ್ಸನ್ನು ಹಾಡಿ-ಹೊಗಳಿ ಭಕ್ತಜನರು ಭವಸಾಗರದಿಂದ ದಾಟುತ್ತಾರೆ. ಕೃಪಾಸಿಂಧುವಾದ ಭಗವಂತನು ಈ ರೀತಿ ತನ್ನ ಭಕ್ತರ ಹಿತಕ್ಕಾಗಿ ಶರೀರವನ್ನು ಧರಿಸುತ್ತಾನೆ. ಶ್ರೀರಾಮಚಂದ್ರನ ಅವತಾರಕ್ಕೆ ಅನೇಕ ಕಾರಣಗಳಿವೆ. ಅವುಗಳಲ್ಲಿ ಒಂದಕ್ಕಿಂತ ಒಂದು ವಿಚಿತ್ರವಾದವುಗಳು. ಸುಮತಿಯಾದ ಭವಾನಿಯೇ! ಆ ಕಾರಣಗಳಲ್ಲಿ ಒಂದೆರಡನ್ನು ವಿಸ್ತಾರವಾಗಿ ವರ್ಣಿಸುತ್ತೇನೆ. ಮನಗೊಟ್ಟು ಎಚ್ಚರಿಕೆಯಿಂದ ಕೇಳು. ಜಯ-ವಿಜಯರೆಂಬ ಈರ್ವರು ಶ್ರೀಹರಿಯ ಪ್ರಿಯರಾದ ದ್ವಾರಪಾಲಕರು ಎಂಬುದು ಎಲ್ಲರಿಗೆ ತಿಳಿದ ವಿಷಯ. ಅವರಿಬ್ಬರು ಸೋದರರೂ ಸನಕಾದಿಗಳ ವಿಪ್ರಶಾಪದಿಂದಾಗಿ ಅಸುರರ ತಾಮಸ ಶರೀರವನ್ನು ಪಡೆದರು. ಒಬ್ಬನ ಹೆಸರು ಹಿರಣ್ಯಕಶಿಪು, ಮತ್ತೊಬ್ಬನ ಹೆಸರು ಹಿರಣ್ಯಾಕ್ಷ. ಇವರು ಸುರಪತಿಯಾದ ದೇವೇಂದ್ರನನ್ನು ಕೂಡ ಜಯಿಸಿ, ಮೂರ್ಲೋಕಗಳಲ್ಲಿ ಮಹಾವೀರರೆಂದು ಪ್ರಸಿದ್ಧರಾದರು. ಇವರಲ್ಲಿ ಹಿರಣ್ಯಾಕ್ಷನನ್ನು ವಧಿಸಲು ಶ್ರೀಹರಿಯು ವರಾಹಾವತಾರವನ್ನು ಧರಿಸಿ ಸಂಹರಿಸಿದನು. ನರಸಿಂಹಾವತಾರವನ್ನು ತಾಳಿ ಹಿರಣ್ಯಕಶಿಪುವನ್ನು ವಧಿಸಿ, ತನ್ನ ಭಕ್ತನಾದ ಪ್ರಹ್ಲಾದನ ಕೀರ್ತಿಯನ್ನು ಹರಡಿದನು. (ಚೌ/೧-೪)

**ದೋ – ಭಏ ನಿಸಾಚರ ಜಾಇ ತೇಇ ಮಹಾಬೀರ ಬಲವಾನ।**

**ಕುಂಭಕರನ ರಾವನ ಸುಭಟ ಸುರ ಬಿಜಈ ಜಗ ಜಾನ ॥ ೧೨೨ ॥**

ಅವರಿಬ್ಬರೇ ಮರಳಿ ರಾವಣ-ಕುಂಭಕರ್ಣರೆಂಬ ಹೆಸರಿನಿಂದ ಮಹಾ ವೀರರಾಕ್ಷಸರಾಗಿ ಹುಟ್ಟಿದರು. ಇವರು ದೊಡ್ಡ ಯೋಧರಾಗಿದ್ದು ದೇವತೆಗಳನ್ನು ಕೂಡ ಜಯಿಸಿದರು. ಇವರನ್ನು ಇಡೀ ಜಗತ್ತೆ ಅರಿಯುತ್ತದೆ. (ದೋ/೧೨೨)

**ಚೌ – ಮುಕುತ ನ ಭಏ ಹತೇ ಭಗವಾನಾ। ತೀನಿ ಜನಮ ದ್ವಿಜ ಬಚನ ಪ್ರವಾನಾ ॥**

**ಏಕ ಬಾರ ತಿನ್ಹಕೇ ಹಿತ ಲಾಗೀ। ಧರೆಉ ಸರೀರ ಭಗತ ಅನುರಾಗೀ॥ ೧ ॥**

**ಕಸ್ಯಪ ಅದಿತಿ ತಹಾಁ ಪಿತು ಮಾತಾ। ದಸರಥ ಕೌಸಲ್ಯಾ ಬಿಖ್ಯಾತಾ॥**
**ಏಕ ಕಲಪ ಎಹಿ ಬಿಧಿ ಅವತಾರಾ। ಚರಿತ ಪವಿತ್ರ ಕಿಏ ಸಂಸಾರಾ॥ ೨॥**
**ಏಕ ಕಲಪ ಸುರ ದೇಖಿ ದುಖಾರೇ। ಸಮರ ಜಲಂಧರ ಸನ ಸಬ ಹಾರೇ॥**
**ಸಂಭು ಕೀನ್ಹ ಸಂಗ್ರಾಮ ಅಪಾರಾ। ದನುಜ ಮಹಾಬಲ ಮರಇ ನ ಮಾರಾ॥ ೩॥**
**ಪರಮ ಸತೀ ಅಸುರಾಧಿಪ ನಾರೀ। ತೆಹಿಂ ಬಲ ತಾಹಿ ನ ಜಿತಹಿಂ ಪುರಾರೀ॥ ೪॥**

ಭಗವಂತನ ಕೈಯಿಂದ ಸತ್ತರೂ, ಹಿರಣ್ಯಾಕ್ಷ-ಹಿರಣ್ಯಕಶಿಪು ಇವರಿಗೆ ಮುಕ್ತಿ ದೊರೆಯದಿರಲು ಕಾರಣ – ವಿಪ್ರಶಾಪ. ಇದನ್ನು ಕಳೆಯಲು ಮೂರು ಜನ್ಮವೆತ್ತಬೇಕಾಗಿತ್ತು. ಆದ್ದರಿಂದ ಅವರ ಉದ್ಧಾರಕ್ಕಾಗಿ ಭಕ್ತಾನುರಾಗಿಯಾದ ಭಗವಂತನು ಮತ್ತೊಮ್ಮೆ ಅವತಾರವೆತ್ತಿದನು. ಒಂದು (ವಾಮನ) ಅವತಾರದಲ್ಲಿ ಅದಿತಿ-ಕಶ್ಯಪರು ಅವನಿಗೆ ತಾಯಿ-ತಂದೆಗಳಾಗಿದ್ದರು. ಅವರೇ ರಾಮಾವತಾರದಲ್ಲಿ ಕೌಸಲ್ಯಾ-ದಶರಥರು. ಒಂದು ಕಲ್ಪದಲ್ಲಿ ಈ ವಿಧವಾಗಿ ಅವತಾರಗಳನ್ನು ಎತ್ತಿ ಭಗವಂತನು ಜಗತ್ತಿನಲ್ಲಿ ತನ್ನ ಅದ್ಭುತಲೀಲೆಯನ್ನು ಪ್ರಕಟಿಸುತ್ತಾ ಹೋದನು. ಮತ್ತೊಂದು ಕಲ್ಪದಲ್ಲಿ ಜಲಂಧರನೆಂಬ ರಾಕ್ಷಸನು ದೇವತೆಗಳೆಲ್ಲರನ್ನು ಯುದ್ಧದಲ್ಲಿ ಸೋಲಿಸಿದನು. ಅವರ ದುಃಖವನ್ನು ನಿವಾರಿಸಲು ಶಿವನು ಅವನೊಡನೆ ಘೋರಯುದ್ಧವನ್ನು ಮಾಡಿದನು. ಆದರೆ ಮಹಾಶಕ್ತಿವಂತನಾದ ಆ ರಾಕ್ಷಸನನ್ನು ವಧಿಸಲಾಗಲಿಲ್ಲ. ಅವನ ಹೆಂಡತಿಯಾದ ವೃಂದೆಯ ಪಾತಿವ್ರತ್ಯದ ಮಹಿಮೆಯಿಂದಾಗಿ ತ್ರಿಪುರಾಸುರನನ್ನು ಸಂಹರಿಸಿದ ಶಿವನಿಗೂ ಅವನನ್ನು ಕೊಲ್ಲಲಾಗಲಿಲ್ಲ. (ಚೌ/೧-೪)

**ದೋ – ಛಲ ಕರಿ ಟಾರೆಉ ತಾಸು ಬ್ರತ ಪ್ರಭು ಸುರ ಕಾರಜ ಕೀನ್ಹ।**
**ಜಬ ತೆಹಿಂ ಜಾನೆಉ ಮರಮ ತಬ ಶ್ರಾಪ ಕೋಪ ಕರಿ ದೀನ್ಹ॥ ೧೨೩॥**

ಒಂದು ಕಪಟೋಪಾಯದಿಂದ ಮಹಾವಿಷ್ಣುವು ಅವಳ ಪಾತಿವ್ರತ್ಯವನ್ನು ಭಂಗಗೊಳಿಸಿ, ದೇವತೆಗಳನ್ನು ಕಾಪಾಡಿದನು. ಈ ಮೋಸವನ್ನು ತಿಳಿದ ವೃಂದೆಯು ಸಿಟ್ಟುಗೊಂಡು ವಿಷ್ಣುವಿಗೆ ಶಾಪವನ್ನಿತ್ತಳು. (ದೋ/೧೨೩)

**ಚೌ – ತಾಸು ಶ್ರಾಪ ಹರಿ ದೀನ್ಹ ಪ್ರಮಾನಾ। ಕೌತುಕನಿಧಿ ಕೃಪಾಲ ಭಗವಾನಾ॥**
**ತಹಾಁ ಜಲಂಧರ ರಾವನ ಭಯಊ। ರನ ಹತಿ ರಾಮ ಪರಮ ಪದ ದಯಊ॥ ೧॥**
**ಏಕ ಜನಮ ಕರ ಕಾರನ ಏಹಾ। ಜೆಹಿ ಲಗಿ ರಾಮ ಧರೀ ನರದೇಹಾ॥**
**ಪ್ರತಿ ಅವತಾರ ಕಥಾ ಪ್ರಭು ಕೇರೀ। ಸುನು ಮುನಿ ಬರನೀ ಕಬಿನ್ಹ ಘನೇರೀ॥ ೨॥**
**ನಾರದ ಶ್ರಾಪ ದೀನ್ಹ ಏಕ ಬಾರಾ। ಕಲಪ ಏಕ ತೆಹಿ ಲಗಿ ಅವತಾರಾ॥**
**ಗಿರಿಜಾ ಚಕಿತ ಭಈಂ ಸುನಿ ಬಾನೀ। ನಾರದ ಬಿಷ್ನುಭಗತ ಪುನಿ ಗ್ಯಾನೀ॥ ೩॥**
**ಕಾರನ ಕವನ ಶ್ರಾಪ ಮುನಿ ದೀನ್ಹಾ। ಕಾ ಅಪರಾಧ ರಮಾಪತಿ ಕೀನ್ಹಾ॥**
**ಯಹ ಪ್ರಸಂಗ ಮೊಹಿ ಕಹಹು ಪುರಾರೀ। ಮುನಿ ಮನ ಮೋಹ ಆಚರಜ ಭಾರೀ॥ ೪॥**

ಲೀಲಾವಿಲಾಸನೂ, ಕೃಪಾಳುವೂ ಆದ ಶ್ರೀಹರಿಯು ಅವಳ ಶಾಪವನ್ನು ಅಂಗೀಕರಿಸಿದನು. ಆ ಜಲಂಧರನೇ ಮತ್ತೊಂದು ಕಲ್ಪದಲ್ಲಿ ರಾವಣನಾಗಿ ಹುಟ್ಟಿದನು. ಶ್ರೀರಾಮನು ಅವನನ್ನು ಯುದ್ಧದಲ್ಲಿ ಕೊಂದು, ಅವನಿಗೆ ಮೋಕ್ಷವನ್ನು ಕರುಣಿಸಿದನು. ಶ್ರೀರಾಮನು ಮಾನವನಾಗಿ ಅವತರಿಸಲು ಇದೂ ಒಂದು ಕಾರಣವು. ಭರದ್ವಾಜಾ! ಕೇಳು. ಪ್ರತಿಯೊಂದು ಅವತಾರದ ಕಥೆಗಳನ್ನು ಕವಿಗಳು ನಾನಾವಿಧದಿಂದ ಹಾಡಿದ್ದಾರೆ. ಶ್ರೀಹರಿಯು ಮಾನವನಾಗಿ ಅವತರಿಸಲು ನಾರದಮುನಿಯ ಶಾಪವೂ ಒಂದು ಕಾರಣವು. ಇದನ್ನು ಕೇಳಿ ಪಾರ್ವತಿಯು ಚಕಿತಳಾಗಿ ಶಿವನಲ್ಲಿ ಕೇಳಿದಳು – ಓ ತ್ರಿಪುರಾರಿ! ನಾರದರು ವಿಷ್ಣುಭಕ್ತರೂ ಪರಮಜ್ಞಾನಿಗಳೂ ಆಗಿದ್ದಾರೆ. ಅಂತಹ ದೇವಋಷಿಗಳು ಭಗವಂತನಿಗೆ ಏತಕ್ಕಾಗಿ ಶಪಿಸಿದರು? ಲಕ್ಷ್ಮೀಪತಿಯು ಯಾವ ಅಪರಾಧಮಾಡಿದ್ದನು? ಆ ಕಥೆಯನ್ನು ವಿಸ್ತಾರವಾಗಿ ನನಗೆ ಹೇಳಿರಿ. ನಾರದಮುನಿಯ ಮನಸ್ಸೂ ಕೂಡ ಮೋಹವಶನಾಗುವುದೆಂದರೆ ಆಶ್ಚರ್ಯವೇ ಅಲ್ಲವೇ? (ಚೌ/೧-೪)

## ನಾರದ ಗರ್ವಭಂಗ

**ದೋ – ಬೋಲೇ ಬಿಹಸಿ ಮಹೇಸ ತಬ ಗ್ಯಾನೀ ಮೂಢ ನ ಕೋಇ।**
**ಜೆಹಿ ಜಸ ರಘುಪತಿ ಕರಹಿಂ ಜಬ ಸೋ ತಸ ತೆಹಿ ಛನ ಹೋಇ॥ ೧೨೪(ಕ)॥**

ಶಿವನು ನಕ್ಕು ನುಡಿದನು – ಜಗತ್ತಿನಲ್ಲಿ ಅಜ್ಞಾನಿಯು ಯಾರೂ ಇಲ್ಲ, ಜ್ಞಾನಿಯೂ ಇಲ್ಲ. ಶ್ರೀರಘುನಾಥನ ಸಂಕಲ್ಪಾನುಸಾರವಾಗಿಯೇ ಎಲ್ಲವೂ ನಡಿಯುತ್ತಾ ಇದೆ. (ದೋ/೧೨೪ ಕ)

**ಸೋ – ಕಹಉಁ ರಾಮ ಗುನ ಗಾಥ ಭರದ್ವಾಜ ಸಾದರ ಸುನಹು।**
**ಭವ ಭಂಜನ ರಘುನಾಥ ಭಜು ತುಲಸೀ ತಜಿ ಮಾನ ಮದ ॥ ೧೨೪(ಖ)॥**

ಯಾಜ್ಞವಲ್ಕ್ಯರು ಹೇಳಿದರು – ''ಹೇ ಭರದ್ವಾಜಾ! ನಾನು ಶ್ರೀರಾಮಚಂದ್ರನ ಗುಣಗಳ ಕಥೆಯನ್ನು ಹೇಳುತ್ತೇನೆ. ನೀನು ಆದರದಿಂದ ಆಲಿಸು.'' ತುಳಸೀದಾಸರು ಹೇಳುತ್ತಾರೆ – ''ಮನಸ್ಸೇ! ದುರಭಿಮಾನವನ್ನೂ, ಗರ್ವವನ್ನೂ ತೊರೆದು ಭವಭಂಜಕನಾದ ರಘುನಾಥನನ್ನು ಭಜಿಸು.'' (ಸೋ/೧೨೪ ಖ)

**ಚೌ – ಹಿಮಗಿರಿ ಗುಹಾ ಏಕ ಅತಿ ಪಾವನಿ। ಬಹ ಸಮೀಪ ಸುರಸರೀ ಸುಹಾವನಿ॥**
**ಆಶ್ರಮ ಪರಮ ಪುನೀತ ಸುಹಾವಾ। ದೇಖಿ ದೇವರಿಷಿ ಮನ ಅತಿ ಭಾವಾ ॥ ೧ ॥**
**ನಿರಖಿ ಸೈಲ ಸರಿ ಬಿಪಿನ ಬಿಭಾಗಾ। ಭಯಉ ರಮಾಪತಿ ಪದ ಅನುರಾಗಾ॥**
**ಸುಮಿರತ ಹರಿಹಿ ಶ್ರಾಪ ಗತಿ ಬಾಧೀ। ಸಹಜ ಬಿಮಲ ಮನ ಲಾಗಿ ಸಮಾಧೀ ॥ ೨ ॥**
**ಮುನಿ ಗತಿ ದೇಖಿ ಸುರೇಸ ಡೆರಾನಾ। ಕಾಮಹಿ ಬೋಲಿ ಕೀನ್ಹ ಸನಮಾನಾ॥**
**ಸಹಿತ ಸಹಾಯ ಜಾಹು ಮಮ ಹೇತೂ। ಚಲೆಉ ಹರಷಿ ಹಿಯಁ ಜಲಚರಕೇತೂ ॥ ೩ ॥**
**ಸುನಾಸೀರ ಮನ ಮಹುಁ ಅಸಿ ತ್ರಾಸಾ। ಚಹತ ದೇವರಿಷಿ ಮಮ ಪುರ ಬಾಸಾ॥**
**ಜೇ ಕಾಮೀ ಲೋಲುಪ ಜಗ ಮಾಹೀಂ। ಕುಟಿಲ ಕಾಕ ಇವ ಸಬಹಿ ಡೆರಾಹೀಂ ॥ ೪ ॥**

ಹಿಮಾಲಯ ಪರ್ವತದಲ್ಲಿ ಅತಿಪವಿತ್ರವಾದ ಒಂದು ಗುಹೆಯಿತ್ತು. ಅದರ ಸಮೀಪದಲ್ಲಿ ನಿರ್ಮಲವಾದ ಗಂಗಾನದಿಯು ಹರಿಯುತ್ತಿದ್ದಳು. ಆ ಪರಮ ಪವಿತ್ರವೂ, ಸುಂದರವೂ ಆದ ಆಶ್ರಮವನ್ನು ಕಂಡು ನಾರದಮುನಿಯ ಮನಸ್ಸು ಪ್ರಫುಲ್ಲಗೊಂಡಿತು. ಸುಂದರವಾದ ಆ ಪರ್ವತಶಿಖರಗಳು, ನದಿ, ವನಗಳೂ ಇವುಗಳನ್ನು ನೋಡಿ ನಾರದರಿಗೆ ಭಗವಾನ್ ಲಕ್ಷ್ಮೀಪತಿಯ ಚರಣಗಳಲ್ಲಿ ಪ್ರೇಮಾಭಕ್ತಿ ಉಕ್ಕಿಹರಿಯಿತು. ಹರಿಸ್ಮರಣೆ ಪ್ರಾರಂಭಿಸುತ್ತಲೇ ಅವರಿಗೆ 'ನಿಂತಲ್ಲಿ ನಿಲ್ಲಬೇಡ' ಎಂದು ದಕ್ಷಬ್ರಹ್ಮನು ಕೊಟ್ಟ ಶಾಪಪ್ರಭಾವವೂ ಕೂಡ ಉಂಟಾಗಲಿಲ್ಲ. ಅವರ ಮನಸ್ಸು ಸಹಜವಾಗಿಯೇ ನಿರ್ಮಲವಾಗಿದ್ದುದರಿಂದ ಬೇಗನೇ ಸಮಾಧಿ ಹತ್ತಿತು. ನಾರದಮುನಿಯ ಆ ತಪೋನಿಮಗ್ನ ಸ್ಥಿತಿಯನ್ನು ಕಂಡ ದೇವೇಂದ್ರನು ಭಯಗೊಂಡನು. ಕೂಡಲೇ ಅವನು ಮನ್ಮಥನನ್ನು ಕರೆಸಿ, ಅವನ ಆದರ ಸತ್ಕಾರಗೈದು ಹೇಳಿದನು – ನನ್ನ ಹಿತಕ್ಕಾಗಿ ನೀನು ನಿನ್ನ ಸಹಾಯಕರೊಂದಿಗೆ ಹೋಗಿ ನಾರದರ ತಪಸ್ಸನ್ನು ಭಂಗಗೊಳಿಸಬೇಕು. ಇದನ್ನು ಕೇಳಿ ಮೀನಕೇತನನಾದ ಕಾಮದೇವನು ಹರ್ಷದಿಂದ ಹೊರಟುಹೋದನು. ದೇವಋಷಿ ನಾರದರು ನನ್ನ ಅಮರಾವತಿಯನ್ನು ಬಯಸುತ್ತಿರುವರು ಎಂದು ಇಂದ್ರನ ಮನದಲ್ಲಿ ಭಯವಿತ್ತು. 'ಜಗತ್ತಿನಲ್ಲಿ ಕಾಮಿಗಳೂ, ಲೋಭಿಗಳೂ ಕುಟಿಲಕಾಗೆಯಂತೆ ಯಾರನ್ನು ಕಂಡರೂ ಹೆದರುತ್ತಾರೆ.' (ಚೌ/೧-೪)

**ದೋ – ಸೂಖ ಹಾಡ ಲೈ ಭಾಗ ಸಠ ಸ್ವಾನ ನಿರಖಿ ಮೃಗರಾಜ।**
**ಛೀನಿ ಲೇಇ ಜನಿ ಜಾನ ಜಡ ತಿಮಿ ಸುರಪತಿಹಿ ನ ಲಾಜ ॥ ೧೨೫ ॥**

ಮೂಳೆಯೊಂದನ್ನು ಕಚ್ಚಿಕೊಂಡಿದ್ದ ಒಂದು ಮೂರ್ಖನಾಯಿಯು, ಸಿಂಹವನ್ನು ಕಂಡದ್ದೇ ತಡ, ನನ್ನ ಮೂಳೆಯನ್ನು ಇದೆಲ್ಲಿ ಕಸಿದುಕೊಳ್ಳುವುದೋ ಎಂದು ಓಡಿಹೋಗುವಂತೆಯೇ ಇಂದ್ರನಿಗೂ ನಾರದರು ನನ್ನ ರಾಜ್ಯವನ್ನು ಕಸಿದುಕೊಳ್ಳುವರು ಎಂದು ಯೋಚಿಸಲು ನಾಚಿಕೆಯಾಗಲಿಲ್ಲ. (ದೋ/೧೨೫)

**ಚೌ – ತೆಹಿ ಆಶ್ರಮಹಿಁ ಮದನ ಜಬ ಗಯಊ। ನಿಜ ಮಾಯಾಁ ಬಸಂತ ನಿರಮಯಊ॥**
**ಕುಸುಮಿತ ಬಿಬಿಧ ಬಿಟಪ ಬಹುರಂಗಾ। ಕೂಜಹಿಁ ಕೋಕಿಲ ಗುಂಜಹಿಁ ಭೃಂಗಾ ॥ ೧ ॥**
**ಚಲೀ ಸುಹಾವನಿ ತ್ರಿವಿಧ ಬಯಾರೀ। ಕಾಮ ಕೃಸಾನು ಬಢಾವನಿಹಾರೀ॥**
**ರಂಭಾದಿಕ ಸುರನಾರಿ ನಬೀನಾ। ಸಕಲ ಅಸಮಸರ ಕಲಾ ಪ್ರಬೀನಾ ॥ ೨ ॥**
**ಕರಹಿಁ ಗಾನ ಬಹು ತಾನ ತರಂಗಾ। ಬಹುಬಿಧಿ ಕ್ರೀಡಹಿಁ ಪಾನೀ ಪತಂಗಾ॥**
**ದೇಖಿ ಸಹಾಯ ಮದನ ಹರಷಾನಾ। ಕೀನ್ಹೆಸಿ ಪುನಿ ಪ್ರಪಂಚ ಬಿಧಿ ನಾನಾ ॥ ೩ ॥**
**ಕಾಮ ಕಲಾ ಕಛು ಮುನಿಹಿ ನ ಬ್ಯಾಪೀ। ನಿಜ ಭಯಁ ಡರೆಉ ಮನೋಭವ ಪಾಪೀ॥**
**ಸೀಮ ಕಿ ಚಾಁಪಿ ಸಕಇ ಕೋಉ ತಾಸೂ। ಬಡ ರಖವಾರ ರಮಾಪತಿ ಜಾಸೂ ॥ ೪ ॥**

ನಾರದರು ಇರುವ ಆಶ್ರಮಕ್ಕೆ ಹೋದ ಮನ್ಮಥನು ತನ್ನ ಮಾಯೆಯಿಂದ ಅಲ್ಲಿ ವಸಂತಋತುವನ್ನು ನಿರ್ಮಿಸಿದನು. ವಿವಿಧ ಮರಗಳಲ್ಲಿ ರಂಗು-ರಂಗಾದ ಹೂಗಳು ಅರಳಿದವು. ಕೋಗಿಲೆಗಳು ಪಂಚಮದ ಇಂಚರಗೈದವು. ದುಂಬಿಗಳು ಝೇಂಕರಿಸಿದವು. ಕಾಮಾಗ್ನಿಯನ್ನು ಕೆರಳಿಸುವ ತಂಗಾಳಿ, ಮೇಲುಗಾಳಿ, ತಂಬೆಲರು ಸೂಸಿದವು. ಕಾಮಕಲಾ ಪ್ರವೀಣೆಯರಾದ ರಂಭೆಯೇ ಮೊದಲಾದ ನವಯುವತಿಯರಾದ ದೇವಾಂಗನೆಯರು, ಬಹುವಿಧವಾದ ರಾಗಾಲಾಪಗಳಿಂದ ಹಾಡತೊಡಗಿದರು. ಕೈಯಲ್ಲಿ ಚೆಂಡು ಹಿಡಿದು ನಾನಾವಿಧವಾದ ಆಟ ಆಡತೊಡಗಿದರು. ತನ್ನ ಈ ಸಹಾಯಕರನ್ನು ಕಂಡು ಕಾಮದೇವನು ಹಿಗ್ಗಿ ಹೋದನು. ಅನಂತರ ಅವನು ನಾನಾ ವಿಧವಾದ ಮಾಯಾಜಾಲವನ್ನು ಬೀಸಿದ. ಆದರೆ ಕಾಮದೇವನ ಯಾವ ಆಟವೂ ನಾರದಮುನಿಯ ಮುಂದೆ ಸಾಗಲಿಲ್ಲ. ಆಗ ಪಾಪಿಯಾದ ಕಾಮನಿಗೆ ತಾನು ಎಲ್ಲಿ ನಾಶವಾಗಿಬಿಡುವೆನೋ ಎಂಬ ಭಯವಾಯಿತು. ಭಗವಾನ್ ಶ್ರೀಹರಿಯ ರಕ್ಷಣೆಯಲ್ಲಿರುವವರಿಗೆ ಯಾರಾದರೂ ಕೇಡು ಬಗೆಯಲು ಸಾಧ್ಯವೇ? (ಚೌ/೧-೪)

**ದೋ – ಸಹಿತ ಸಹಾಯ ಸಭೀತ ಅತಿ ಮಾನಿ ಹಾರಿ ಮನ ಮೈನ ।**
**ಗಹೆಸಿ ಜಾಇ ಮುನಿ ಚರನ ತಬ ಕಹಿ ಸುಠಿ ಆರತ ಬೈನ ॥ ೧೨೬ ॥**

ಮನ್ಮಥನು ತನ್ನ ಸೋಲನ್ನು ಒಪ್ಪಿಕೊಂಡು, ಹೆದರಿ ತನ್ನ ಸಹಾಯಕರೊಂದಿಗೆ ನಾರದಮುನಿಯ ಕಾಲುಗಳನ್ನು ಹಿಡಿದುಕೊಂಡು ವಿನಯದಿಂದ ಬೇಡಿಕೊಂಡನು. (ದೋ/೧೨೬)

**ಚೌ – ಭಯಉ ನ ನಾರದ ಮನ ಕಛು ರೋಷಾ । ಕಹಿ ಪ್ರಿಯ ಬಚನ ಕಾಮ ಪರಿತೋಷಾ ॥**
**ನಾಇ ಚರನ ಸಿರು ಆಯಸು ಪಾಈ । ಗಯಉ ಮದನ ತಬ ಸಹಿತ ಸಹಾಈ ॥ ೧ ॥**
**ಮುನಿ ಸುಸೀಲತಾ ಆಪನಿ ಕರನೀ । ಸುರಪತಿ ಸಭಾಂ ಜಾಇ ಸಬ ಬರನೀ ॥**
**ಸುನಿ ಸಬ ಕೇಂ ಮನ ಅಚರಜು ಆವಾ । ಮುನಿಹಿ ಪ್ರಸಂಸಿ ಹರಿಹಿ ಸಿರು ನಾವಾ ॥ ೨ ॥**
**ತಬ ನಾರದ ಗವನೇ ಸಿವ ಪಾಹೀಂ । ಜಿತಾ ಕಾಮ ಅಹಮಿತಿ ಮನ ಮಾಹೀಂ ॥**
**ಮಾರ ಚರಿತ ಸಂಕರಹಿ ಸುನಾಏ । ಅತಿಪ್ರಿಯ ಜಾನಿ ಮಹೇಸ ಸಿಖಾಏ ॥ ೩ ॥**
**ಬಾರ ಬಾರ ಬಿನವಉಂ ಮುನಿ ತೋಹೀ । ಜಿಮಿ ಯಹ ಕಥಾ ಸುನಾಯಹು ಮೋಹೀ ॥**
**ತಿಮಿ ಜನಿ ಹರಿಹಿ ಸುನಾವಹು ಕಬಹೂಂ । ಚಲೆಹುಂ ಪ್ರಸಂಗ ದುರಾಏಹು ತಬಹೂಂ ॥ ೪ ॥**

ನಾರದರ ಮನಸ್ಸಿನಲ್ಲಿ ಸ್ವಲ್ಪವೂ ಕೋಪ ಬರಲಿಲ್ಲ. ಅವರು ಪ್ರಿಯವಚನವನ್ನು ಹೇಳಿ ಕಾಮನನ್ನು ಸಮಾಧಾನಗೊಳಿಸಿದರು. ಅನಂತರ ಅವನು ಮುನಿಯ ಕಾಲಿಗೆರಗಿ, ಅವರ ಅಪ್ಪಣೆಪಡೆದು, ತನ್ನ ಸಂಗಡಿಗರೊಂದಿಗೆ ಬಂದದಾರಿ ಹಿಡಿದನು. ಅವನು ದೇವೇಂದ್ರನ ಆಸ್ಥಾನಕ್ಕೆ ಹೋಗಿ ತನ್ನ ಪ್ರಯತ್ನವೈಫಲ್ಯವನ್ನೂ, ನಾರದರ ತಪೋನಿಷ್ಠೆಯ ಗರಿಮೆಯನ್ನು ವಿವರಿಸಿದನು. ಇದನ್ನು ಕೇಳಿ ಎಲ್ಲರೂ ಆಶ್ಚರ್ಯಪಟ್ಟರು. ಅವರು ನಾರದರನ್ನು ಕೊಂಡಾಡಿ ಶ್ರೀಹರಿಗೆ ತಲೆಬಾಗಿದರು. ಇತ್ತ ನಾರದರು ಕಾಮನನ್ನು ಜಯಿಸಿದೆನೆಂಬ ಗರ್ವದಿಂದ ಒಡಗೊಂಡು ಪರಶಿವನ ಬಳಿಗೆ ಹೋದರು. ಅವರು ಶಿವನ ಬಳಿ ತನ್ನ ಕಾಮವಿಜಯದ ಕಥೆಯನ್ನು ಹೇಳಿಕೊಂಡರು. ಮಹಾದೇವನು ನಾರದರನ್ನು ತನ್ನ ಪ್ರಿಯನೆಂದು ಬಗೆದು – ಮುನೀಶ್ವರಾ! ನೀನು ನನಗೆ ಹೇಳಿದಂತೆ ಈ ಕಾಮವಿಜಯದ ವೃತ್ತಾಂತವನ್ನು ಶ್ರೀಹರಿಯ ಮುಂದೆ ಹೇಳಬೇಡ. ಅದರ ಪ್ರಸಂಗಬಂದರೂ ಅದನ್ನು ಮರೆಯಾಗಿಸಿಬಿಡು ಎಂದು ಈ ಪ್ರಕಾರ ಸಲಹೆ ನೀಡಿ ಎಚ್ಚರಿಸಿದನು. (ಚೌ/೧-೪)

**ದೋ – ಸಂಭು ದೀನ್ಹ ಉಪದೇಸ ಹಿತ ನಹಿಂ ನಾರದಹಿ ಸೊಹಾನ ।**
**ಭರದ್ವಾಜ ಕೌತುಕ ಸುನಹು ಹರಿ ಇಚ್ಛಾ ಬಲವಾನ ॥ ೧೨೭ ॥**

ಶಿವನ ಹಿತವಚನಗಳು ನಾರದರಿಗೆ ಪಥ್ಯವಾಗಲಿಲ್ಲ. ಎಲೈ ಭರದ್ವಾಜಾ! ಅನಂತರ ಜರಗಿದ ವಿನೋದ ಕಥೆಯನ್ನು ಕೇಳು. ಶ್ರೀಹರಿಯ ಇಚ್ಛೆಯು ಬಲವತ್ತರವಾದುದು. (ದೋ/೧೨೭)

**ಚೌ – ರಾಮ ಕೀನ್ಹ ಚಾಹಹಿಂ ಸೊಇ ಹೋಈ । ಕರೈ ಅನ್ಯಥಾ ಅಸ ನಹಿಂ ಕೋಈ ॥**
**ಸಂಭು ಬಚನ ಮುನಿ ಮನ ನಹಿಂ ಭಾಏ । ತಬ ಬಿರಂಚಿ ಕೇ ಲೋಕ ಸಿಧಾಏ ॥ ೧ ॥**
**ಏಕ ಬಾರ ಕರತಲ ಬರ ಬೀನಾ । ಗಾವತ ಹರಿ ಗುನ ಗಾನ ಪ್ರಬೀನಾ ॥**
**ಛೀರಸಿಂಧು ಗವನೇ ಮುನಿನಾಥಾ । ಜಹಂ ಬಸ ಶ್ರೀನಿವಾಸ ಶ್ರುತಿಮಾಥಾ ॥ ೨ ॥**
**ಹರಷಿ ಮಿಲೇ ಉಠಿ ರಮಾನಿಕೇತಾ । ಬೈಠೇ ಆಸನ ರಿಷಿಹಿ ಸಮೇತಾ ॥**
**ಬೋಲೇ ಬಿಹಸಿ ಚರಾಚರ ರಾಯಾ । ಬಹುತೇ ದಿನನ ಕೀನ್ಹಿ ಮುನಿ ದಾಯಾ ॥ ೩ ॥**

**ಕಾಮ ಚರಿತ ನಾರದ ಸಬ ಭಾಷೇ। ಜದ್ಯಪಿ ಪ್ರಥಮ ಬರಜಿ ಸಿವ್ ರಾಖೇ॥**
**ಅತಿ ಪ್ರಚಂಡ ರಘುಪತಿ ಕೈ ಮಾಯಾ। ಜೆಹಿ ನ ಮೋಹ ಅಸ ಕೋ ಜಗ ಜಾಯಾ॥ ೪ ॥**

ಶ್ರೀರಾಮನ ಸಂಕಲ್ಪದಂತೆ ಎಲ್ಲವೂ ನಡೆಯುತ್ತದೆ. ಅದಕ್ಕೆ ವಿರುದ್ಧವಾಗಿ ಯಾವುದೂ ನಡೆಯಲಾರದು. ''ತೇನವಿನಾ ತೃಣಮಪಿ ನ ಚಲತಿ''. ಶಿವನ ಹಿತವಚನಗಳು ನಾರದರಿಗೆ ಹಿಡಿಸಲಿಲ್ಲ. ಆಗ ಅವರು ಅಲ್ಲಿಂದ ಬ್ರಹ್ಮಲೋಕಕ್ಕೆ ನಡೆದರು. ಬಳಿಕ ಗಾನವಿದ್ಯಾಪ್ರವೀಣರಾದ ನಾರದರು ಕೈಯಲ್ಲಿ 'ಮಹತೀ' ಎಂಬ ಶ್ರೇಷ್ಠವಾದ ವೀಣೆಯನ್ನೆತ್ತಿಕೊಂಡು ಶ್ರೀಹರಿಯ ಗುಣಗಾನಮಾಡುತ್ತಾ, ವೇದಶಿರೋಭೂಷಣನಾದ ಲಕ್ಷ್ಮೀನಿವಾಸನಾದ ಶ್ರೀಮನ್ನಾರಾಯಣನಿದ್ದ ಕ್ಷೀರಸಾಗರವನ್ನು ಸೇರಿದರು. ರಮಾನಿಕೇತನನಾದ ಭಗವಾನ್ ಶ್ರೀವಿಷ್ಣುವು ದಿಗ್ಗನೆದ್ದು, ಆನಂದದಿಂದ ಮುಗುಳ್ನಗುತ್ತಾ ನಾರದರನ್ನು ಸ್ವಾಗತಿಸಿ, ಇಂತೆಂದನು – 'ಮುನಿಗಳೇ! ಬಹುದಿನಗಳಾದ ಮೇಲೆ ನಿಮ್ಮ ದಯೆ ನಮ್ಮ ಮೇಲಾಗಿದೆ. ಶಿವನು ಮೊದಲೇ ಎಚ್ಚರಿಸಿದ್ದರೂ, ನಾರದರು ಕಾಮವಿಜಯದ ಕಥೆಯನ್ನು ಮಹಾವಿಷ್ಣುವಿನ ಬಳಿ ವಿಸ್ತಾರವಾಗಿ ಹೇಳಿದರು. ರಘುಪತಿಯ ಮಾಯೆಯು ಅತ್ಯಂತ ಪ್ರಚಂಡವಾದುದು. ಅದರ ಬಲೆಗೆ ಬೀಳದವರು ಈ ಜಗತ್ತಿನಲ್ಲಿ ಯಾರಿದ್ದಾರೆ? (ಚೌ/೧-೪)

**ದೋ – ರೂಖ ಬದನ ಕರಿ ಬಚನ ಮೃದು ಬೋಲೇ ಶ್ರೀಭಗವಾನ।**
**ತುಮ್ಹರೇ ಸುಮಿರನ ತೇಂ ಮಿಟಹಿಂ ಮೊಹ ಮಾರ ಮದ ಮಾನ॥ ೧೨೮ ॥**

ಶ್ರೀಮಹಾವಿಷ್ಣುವು ಉದಾಸೀನಭಾವದಿಂದ ಕೇಳಿ, ಮೃದುಮಧುರವಾಗಿ ನಾರದರಲ್ಲಿ ಇಂತೆಂದನು – ''ಮುನಿವರ್ಯ! ನಿಮ್ಮ ಸ್ಮರಣೆಮಾಡಿದ ಮಾತ್ರದಿಂದಲೇ ಜನರ ಮೋಹ, ಮದ, ಕಾಮ, ಅಭಿಮಾನ ಇವುಗಳು ತೊಲಗಿಹೋಗುತ್ತವೆ. ಅಂತಹುದರಲ್ಲಿ ನಿಮ್ಮನ್ನು ಕೇಳಬೇಕೇ? (ದೋ/೧೨೮)

**ಚೌ – ಸುನು ಮುನಿ ಮೋಹ ಹೋಇ ಮನ ತಾಕೇಂ। ಗ್ಯಾನ ಬಿರಾಗ ಹೃದಯ ನಹಿಂ ಜಾಕೇಂ॥**
**ಬ್ರಹ್ಮಚರಜ ಬ್ರತ ರತ ಮತಿಧೀರಾ। ತುಮ್ಹಹಿ ಕಿ ಕರಇ ಮನೋಭವ ಪೀರಾ॥ ೧ ॥**
**ನಾರದ ಕಹೆಉ ಸಹಿತ ಅಭಿಮಾನಾ। ಕೃಪಾ ತುಮ್ಹಾರಿ ಸಕಲ ಭಗವಾನಾ॥**
**ಕರುನಾನಿಧಿ ಮನ ದೀಖ ಬಿಚಾರೀ। ಉರ ಅಂಕುರೆಉ ಗರಬ ತರು ಭಾರೀ॥ ೨ ॥**
**ಬೇಗಿ ಸೊ ಮೈಂ ಡಾರಿಹಉಂ ಉಖಾರೀ। ಪನ ಹಮಾರ ಸೇವಕ ಹಿತಕಾರೀ॥**
**ಮುನಿ ಕರ ಹಿತ ಮಮ ಕೌತುಕ ಹೋಈ। ಅವಸಿ ಉಪಾಯ ಕರಬಿ ಮೈಂ ಸೋಈ॥ ೩ ॥**
**ತಬ ನಾರದ ಹರಿ ಪದ ಸಿರ ನಾಈ। ಚಲೇ ಹೃದಯಂ ಅಹಮಿತಿ ಅಧಿಕಾಈ॥**
**ಶ್ರೀಪತಿ ನಿಜ ಮಾಯಾ ತಬ ಪ್ರೇರೀ। ಸುನಹು ಕಠಿನ ಕರನೀ ತೆಹಿ ಕೇರೀ॥ ೪ ॥**

ಮುನೀಶ್ವರರೇ! ಹೃದಯದಲ್ಲಿ ಜ್ಞಾನ, ವೈರಾಗ್ಯಗಳು ಇಲ್ಲದವರು ಮೋಹಕ್ಕೆ ವಶರಾಗುತ್ತಾರೆ. ನೀವಾದರೋ ನೈಷ್ಠಿಕ ಬ್ರಹ್ಮಚಾರಿಗಳು, ಸ್ಥಿತಪ್ರಜ್ಞರು. ಹಾಗಿರುವಾಗ ನಿಮ್ಮನ್ನು ಕಾಮದೇವನು ಹೇಗೆ ಕಾಡಬಲ್ಲನು?'' ನಾರದರು ಹೆಮ್ಮೆಯಿಂದ ಬೀಗಿ ಹೇಳಿದರು – ''ಭಗವಂತಾ! ಇವೆಲ್ಲ ನಿನ್ನ ಅನುಗ್ರಹಫಲವೇ.'' ಕರುಣಾನಿಧಿಯಾದ ಭಗವಂತನು ಯೋಚಿಸಿ ನೋಡಿದನು – ಈ ನಾರದರ ಮನದಲಿ ಗರ್ವದ ಹೆಮ್ಮರ ಮೊಳೆತಿದೆ. ನಾನು ಅದನ್ನು ಈಗಲೇ ಕಿತ್ತೆಸೆಯುತ್ತೇನೆ. ಭಕ್ತರನ್ನು ಕಾಪಾಡುವುದೇ ನನ್ನ ಪ್ರತಿಜ್ಞೆಯಾಗಿದೆ. ನಾರದಮುನಿಯ ಶ್ರೇಯಸ್ಸು ಆಗಿ, ನನ್ನ ಲೀಲೆಯು ನಡೆಯುವಂತೆ ಉಪಾಯ ಮಾಡುವೆನು. ಆಗ ನಾರದರು ಹರಿಯ ಚರಣಗಳಿಗೆ ಎರಗಿ ಹೊರಟುಹೋದರು. ಅವರ ಹೃದಯದಲ್ಲಿ ಅಭಿಮಾನವು ಇಮ್ಮಡಿಸಿತು. ಆಗಲೇ ಶ್ರೀಪತಿಯು ತನ್ನ ಮಾಯೆಯನ್ನು ಪ್ರೇರೇಪಿಸಿದನು. ಆ ಮಾಯೆಯ ಚರ್ಯೆಯ ಪ್ರಾಬಲ್ಯವನ್ನು ಕೇಳು. (ಚೌ/೧-೪)

**ದೋ – ಬಿರಚೆಉ ಮಗ ಮಹುಂ ನಗರ ತೆಹಿಂ ಸತ ಜೋಜನ ಬಿಸ್ತಾರ।**
**ಶ್ರೀನಿವಾಸಪುರ ತೇಂ ಅಧಿಕ ರಚನಾ ಬಿಬಿಧ ಪ್ರಕಾರ॥ ೧೨೯ ॥**

ವಿಷ್ಣುಮಾಯಾ ಪ್ರಭಾವದಿಂದ ಮಾರ್ಗಮಧ್ಯದಲ್ಲೇ ನೂರುಯೋಜನ ವಿಸ್ತೀರ್ಣವುಳ್ಳ ನಗರವೊಂದು ನಿರ್ಮಿತವಾಯಿತು. ಅದರಲ್ಲಿ ನಿರ್ಮಿತವಾದ ವಿವಿಧವಾದ ಭವನ ವೀಥಿಗಳ ಶೋಭೆಯಿಂದ ಆ ಮಹಾನಗರವು ವೈಕುಂಠಕ್ಕಿಂತಲೂ ಮಿಗಿಲಾಗಿತ್ತು. (ದೋ/೧೨೯)

**ಚೌ – ಬಸಹಿಂ ನಗರ ಸುಂದರ ನರ ನಾರೀ। ಜನು ಬಹು ಮನಸಿಜ ರತಿ ತನುಧಾರೀ॥**
**ತೆಹಿಂ ಪುರ ಬಸಇ ಸೀಲನಿಧಿ ರಾಜಾ। ಅಗನಿತ ಹಯ ಗಯ ಸೇನ ಸಮಾಜಾ॥ ೧ ॥**

**ಸತ ಸುರೇಸ ಸಮ ಬಿಭವ ಬಿಲಾಸಾ। ರೂಪ ತೇಜ ಬಲ ನೀತಿ ನಿವಾಸಾ ॥**
**ಬಿಸ್ವಮೋಹನೀ ತಾಸು ಕುಮಾರೀ। ಶ್ರೀ ಬಿಮೋಹ ಜಿಸು ರೂಪು ನಿಹಾರೀ ॥ ೨ ॥**
**ಸೋಇ ಹರಿಮಾಯಾ ಸಬ ಗುನ ಖಾನೀ। ಸೋಭಾ ತಾಸು ಕಿ ಜಾಇ ಬಖಾನೀ ॥**
**ಕರಇ ಸ್ವಯಂಬರ ಸೋ ನೃಪಬಾಲಾ। ಆಏ ತಹ್ ಅಗನಿತ ಮಹಿಪಾಲಾ ॥ ೩ ॥**
**ಮುನಿ ಕೌತುಕೀ ನಗರ ತೆಹಿ ಗಯಊ। ಪುರಬಾಸಿನ್ಹ ಸಬ ಪೂಛತ ಭಯಊ ॥**
**ಸುನಿ ಸಬ ಚರಿತ ಭೂಪಗೃಹ್ ಆಏ। ಕರಿ ಪೂಜಾ ನೃಪ ಮುನಿ ಬೈಠಾಏ ॥ ೪ ॥**

ಆ ನಗರದಲ್ಲಿದ್ದ ಸ್ತ್ರೀಪುರುಷರೆಲ್ಲರೂ ರತಿ ಮನ್ಮಥರೇ ಮೈದಳೆದು ಇರುವರೋ ಎಂಬಂತೆ ಅತಿಸುಂದರರಾಗಿದ್ದರು. ಆ ನಗರವನ್ನು 'ಶೀಲನಿಧಿ' ಎಂಬ ರಾಜನು ಆಳುತ್ತಿದ್ದನು. ಅವನ ಬಳಿ ಅಸಂಖ್ಯಾತ ಆನೆ, ಕುದುರೆ, ಸೈನಿಕರಿದ್ದರು. ಅವನ ವಿಭವ, ವಿಲಾಸಗಳು ಇಂದ್ರವೈಭವಕ್ಕೆ ನೂರುಪಟ್ಟು ಹೆಚ್ಚಾಗಿಯೇ ಇತ್ತು. ಅವನು ರೂಪ, ತೇಜಸ್ಸು, ಬಲ ಹಾಗೂ ನೀತಿಯ ನಿಲಯನಾಗಿದ್ದನು. ಆತನಿಗೆ ವಿಶ್ವಮೋಹಿನಿ ಎಂಬ ಕನ್ಯೆಯಿದ್ದಳು. ಅವಳ ಅಂದ-ಚಂದವನ್ನು ಕಂಡರೆ ಲಕ್ಷ್ಮೀದೇವಿಯೂ ಮೋಹಗೊಳ್ಳುತ್ತಿದ್ದಳು. ಸರ್ವಗುಣಸಂಪನ್ನೆಯಾದ ಆ ರಾಜಕುಮಾರಿಯು ಮಹಾವಿಷ್ಣುವಿನ ಮಾಯಾಶಕ್ತಿಯೇ ಆಗಿದ್ದಳು. ಅವಳ ಶೋಭೆಯು ವರ್ಣನಾತೀತವು. ಆ ರಾಜಕುಮಾರಿಯ ಸ್ವಯಂವರ ಏರ್ಪಟ್ಟಿತ್ತು. ಇದರಿಂದಾಗಿ ಅಲ್ಲಿ ಅಸಂಖ್ಯಾತ ರಾಜರು ಬಂದಿದ್ದರು. ಅತಿ ಕುತೂಹಲದಿಂದ ನಾರದರು ಅಲ್ಲಿಗೆ ಹೋಗಿ, ನಗರವಾಸಿಗಳಿಂದ ವಿಷಯವನ್ನು ತಿಳಿದುಕೊಂಡರು. ಮತ್ತೆ ನೇರವಾಗಿ ರಾಜನ ಅರಮನೆಗೆ ಹೋದರು. ಅರಸನು ನಾರದಮುನಿಯನ್ನು ಸತ್ಕರಿಸಿ, ಪೂಜಿಸಿ, ಆಸನದಲ್ಲಿ ಕುಳ್ಳಿರಿಸಿದನು. (ಚೌ/೧-೪)

**ದೋ – ಆನಿ ದೇಖಾಈ ನಾರದಹಿ ಭೂಪತಿ ರಾಜಕುಮಾರಿ।**
**ಕಹಹು ನಾಥ ಗುನ ದೋಷ ಸಬ ಏಹಿ ಕೇ ಹೃದಯ್ ಬಿಚಾರಿ ॥ ೧೩೦ ॥**

ಅನಂತರ ಅವನು ರಾಜಕುಮಾರಿಯನ್ನು ಕರೆದುಕೊಂಡು ಬಂದು ನಾರದರಿಗೆ ತೋರಿಸಿ, ಹೇಳಿದನು, ಮುನೀಶ್ವರಾ! ನೀವು ಈಕೆಯ ಗುಣದೋಷಗಳನ್ನು ಪರಿಶೀಲಿಸಿ ತಿಳಿಸಿರಿ. (ದೋ/೧೩೦)

**ಚೌ – ದೇಖಿ ರೂಪ ಮುನಿ ಬಿರತಿ ಬಿಸಾರೀ। ಬಡೀ ಬಾರ ಲಗಿ ರಹೇ ನಿಹಾರೀ॥**
**ಲಚ್ಛನ ತಾಸು ಬಿಲೋಕಿ ಭುಲಾನೇ। ಹೃದಯ್ ಹರಷ ನಹಿ ಪ್ರಗಟ ಬಖಾನೇ॥ ೧ ॥**
**ಜೋ ಏಹಿ ಬರಇ ಅಮರ ಸೋಇ ಹೋಈ। ಸಮರಭೂಮಿ ತೆಹಿ ಜೀತ ನ ಕೋಈ ॥**
**ಸೇವಹಿ ಸಕಲ ಚರಾಚರ ತಾಹೀ। ಬರಇ ಸೀಲನಿಧಿ ಕನ್ಯಾ ಜಾಹೀ ॥ ೨ ॥**
**ಲಚ್ಛನ ಸಬ ಬಿಚಾರಿ ಉರ ರಾಖೇ। ಕಛುಕ ಬನಾಇ ಭೂಪ ಸನ ಭಾಷೇ॥**
**ಸುತಾ ಸುಲಚ್ಛನ ಕಹಿ ನೃಪ ಪಾಹೀ। ನಾರದ ಚಲೇ ಸೋಚ ಮನ ಮಾಹೀ॥ ೩ ॥**
**ಕರೌ ಜಾಇ ಸೋಇ ಜತನ ಬಿಚಾರೀ। ಜೇಹಿ ಪ್ರಕಾರ ಮೋಹಿ ಬರೈ ಕುಮಾರೀ॥**
**ಜಪ ತಪ ಕಛು ನ ಹೋಇ ತೆಹಿ ಕಾಲಾ। ಹೇ ಬಿಧಿ ಮಿಲಇ ಕವನ ಬಿಧಿ ಬಾಲಾ॥ ೪ ॥**

ರಾಜಕುಮಾರಿಯ ರೂಪವನ್ನು ಕಂಡೊಡನೆ ನಾರದಮುನಿಯ ವೈರಾಗ್ಯವೆಲ್ಲವು ಮಾಯವಾಯಿತು. ಅವಳನ್ನೇ ತದೇಕದೃಷ್ಟಿಯಿಂದ ನೋಡುತ್ತಲೇ ಇದ್ದರು. ಅವಳ ಶುಭಲಕ್ಷಣಗಳನ್ನು ನೋಡಿ ನಾರದರು ತನ್ನನ್ನು-ತಾನೇ ಮರೆತರು. ಹೃದಯದಲ್ಲಿ ಹರ್ಷಿತರಾದರು. ಆದರೆ ವ್ಯಕ್ತವಾಗಿ ಆಕೆಯ ಲಕ್ಷಣಗಳನ್ನು ಹೇಳಲಿಲ್ಲ. ತನ್ನಲ್ಲೇ ತಾನು ತರ್ಕಿಸಿಕೊಂಡನು – ''ಇವಳನ್ನು ವಿವಾಹವಾಗುವವನು ಅಮರನಾಗುವನು. ಅವನ ಜನ್ಮವು ಧನ್ಯವು. ಅವನು ಸರ್ವವಿಜೇತನಾಗುವನು. ರಣರಂಗದಲ್ಲಿ ಅವನನ್ನು ಯಾರೂ ಗೆಲ್ಲಲಾರರು. ಇವಳು ವರಿಸುವವನನ್ನು ಚರಾ-ಚರಾ ಜೀವಿಗಳೆಲ್ಲರೂ ಸೇವೆಮಾಡುವರು.'' ನಾರದರು ಈ ವಿಧವಾಗಿ ಆಕೆಯ ಶುಭಲಕ್ಷಣಗಳನ್ನು ಮನಸ್ಸಿನಲ್ಲೇ ಇರಿಸಿಕೊಂಡರು. ಕೆಲವನ್ನು ತಾನೇ ಕಲ್ಪಿಸಿ, ರಾಜನಿಗೆ ಹೇಳಿದರು – ''ಇವಳು ಬಹು ಅದೃಷ್ಟವಂತೆ'' ಎಂದು ತಿಳಿಸಿ, ಹೊರಟುಹೋದರು. ಬಳಿಕ ಅವರು ತನ್ನಲ್ಲೇ-ತಾನು ಆಲೋಚಿಸತೊಡಗಿದರು – ಈ ರಾಜಕುಮಾರಿಯು ನನ್ನನ್ನೇ ವರಿಸುವಂತೆ ಮಾಡಬೇಕು. ಈಗ ಜಪ-ತಪಗಳಿಗೆ ಸಮಯವಿಲ್ಲ. 'ವಿಧಾತಾ! ಈ ಹೆಣ್ಣು ನನಗೆ ಹೇಗೆ ದೊರಕುವಳು?'' (ಚೌ/೧-೪)

**ದೋ – ಏಹಿ ಅವಸರ ಚಾಹಿಅ ಪರಮ ಸೋಭಾ ರೂಪ ಬಿಸಾಲ।**
**ಜೋ ಬಿಲೋಕಿ ರೀಝೈ ಕುಅँರಿ ತಬ ಮೇಲೈ ಜಯಮಾಲ ॥ ೧೩೧ ॥**

ಈಗ ನಾನು ಈ ರಾಜಕುಮಾರಿಯು ನನ್ನನ್ನು ನೋಡುತ್ತಲೇ ಮಾರುಹೋಗಿ ನನ್ನ ಕೊರಳಿಗೆ ಜಯಮಾಲೆ ಹಾಕುವಂತಹ ಅದ್ಭುತ ಸುಂದರವಾದ ರೂಪವನ್ನು ಪಡೆಯಬೇಕು. (ದೋ/೧೩೧)

**ಚೌ – ಹರಿ ಸನ ಮಾಗೌಂ ಸುಂದರತಾಈ । ಹೋಇಹಿ ಜಾತ ಗಹರು ಅತಿ ಭಾಈ ॥**
**ಮೋರೇಂ ಹಿತ ಹರಿ ಸಮ ನಹಿಂ ಕೋಊ । ಏಹಿ ಅವಸರ ಸಹಾಯ ಸೋಇ ಹೋಊ ॥ ೧ ॥**
**ಬಹುಬಿಧಿ ಬಿನಯ ಕೀನ್ಹಿ ತೆಹಿ ಕಾಲಾ । ಪ್ರಗಟೆಉ ಪ್ರಭು ಕೌತುಕೀ ಕೃಪಾಲಾ ॥**
**ಪ್ರಭು ಬಿಲೋಕಿ ಮುನಿ ನಯನ ಜುಡಾನೇ । ಹೋಇಹಿ ಕಾಜು ಹಿಏಂ ಹರಷಾನೇ ॥ ೨ ॥**
**ಅತಿ ಆರತಿ ಕಹಿ ಕಥಾ ಸುನಾಈ । ಕರಹು ಕೃಪಾ ಕರಿ ಹೋಹು ಸಹಾಈ ॥**
**ಆಪನ ರೂಪ ದೇಹು ಪ್ರಭು ಮೋಹೀ । ಆನ ಭಾಂತಿ ನಹಿಂ ಪಾವೌಂ ಓಹೀ ॥ ೩ ॥**
**ಜೆಹಿ ಬಿಧಿ ನಾಥ ಹೋಇ ಹಿತ ಮೋರಾ । ಕರಹು ಸೊ ಬೇಗಿ ದಾಸ ಮೈಂ ತೋರಾ ॥**
**ನಿಜ ಮಾಯಾ ಬಲ ದೇಖಿ ಬಿಸಾಲಾ । ಹಿಯಂ ಹಸಿ ಬೋಲೇ ದೀನದಯಾಲಾ ॥ ೪ ॥**

''ಈ ಕ್ಷಣದಲ್ಲೇ ಶ್ರೀಹರಿಯ ಬಳಿಗೆ ಹೋಗಿ, ಅವನ ರೂಪಸೌಂದರ್ಯವನ್ನು ಕೇಳಿಕೊಳ್ಳುವೆನು. ಆದರೆ ಅಲ್ಲಿಗೆ ಹೋಗಲು ತುಂಬಾ ಸಮಯ ಬೇಕಲ್ಲ! ಆ ಹರಿಯಂತೆ ನನ್ನ ಹಿತವನ್ನು ಬಯಸುವವರು ಬೇರೆ ಯಾರೂ ಇಲ್ಲ. ಈಗ ಅವನೇ ನನಗೆ ದಿಕ್ಕು'' ಎಂದು ಭಾವಿಸಿಕೊಂಡು ನಾರದರು ಶ್ರೀಹರಿಯನ್ನು ಅನೇಕ ವಿಧದಿಂದ ಪ್ರಾರ್ಥಿಸಿದರು. ಆಗ ಲೀಲಾಮಯನೂ, ಕೃಪಾಳುವೂ ಆದ ಭಗವಂತನು ತತ್‌ಕ್ಷಣದಲ್ಲಿ ಅಲ್ಲೇ ಪ್ರತ್ಯಕ್ಷನಾದನು. ಆ ಪ್ರಭುವನ್ನು ನೋಡಿ ಮುನೀಶ್ವರರು ಹೆಚ್ಚಿನ ಸಂತಸಪಟ್ಟರು. ಅವರ ಕಣ್ಣುಗಳು ಅರಳಿದವು. ಇನ್ನು ತನ್ನ ಕೆಲಸ ಕೈಗೂಡಿದಂತೆಯೇ ಎಂದು ಹರ್ಷಿತರಾದರು. ನಾರದರು ಆರ್ತರಾಗಿ ಭಗವಂತನಿಗೆ ತನ್ನ ಎಲ್ಲ ವಿಷಯ ಹೇಳಿಕೊಂಡರು. ವಿನೀತರಾಗಿ ಅಂಗಲಾಚಿದರು – ''ನೀನು ನಿನ್ನ ಸೌಂದರ್ಯವನ್ನು ನನಗೆ ಕರುಣಿಸು. ನಾನು ಅವಳನ್ನು ತಪ್ಪದೆ ವಿವಾಹವಾಗುವೆನು. ಪ್ರಭೋ! ನನಗೆ ಬೇಗನೇ ಒಳ್ಳೆಯದಾಗುವಂತೆ ಮಾಡು. ನಾನು ನಿನ್ನ ದಾಸನಲ್ಲವೇ? ನನಗೆ ಹಿತವಾಗುವಂತೆ ಅನುಗ್ರಹಿಸು.'' ದೀನದಯಾಳುವಾದ ಮಹಾವಿಷ್ಣುವು ತನ್ನ ವಿಶಾಲ ಮಾಯಾಪ್ರಭಾವವನ್ನು ನೋಡಿ ಮನಸ್ಸಿನಲ್ಲೇ ನಕ್ಕುಬಿಟ್ಟನು. (ಚೌ/೧-೪)

**ದೋ – ಜೆಹಿ ಬಿಧಿ ಹೋಇಹಿ ಪರಮ ಹಿತ ನಾರದ ಸುನಹು ತುಮ್ಹಾರ।**
**ಸೋಇ ಹಮ ಕರಬ ನ ಆನ ಕಛು ಬಚನ ನ ಮೃಷಾ ಹಮಾರ॥ ೧೩೨ ॥**

ಎಲೈ ನಾರದ ಮಹರ್ಷಿಯೇ! ನಿನಗೆ ಪರಮಹಿತವಾದುದನ್ನು ತಪ್ಪದೇ ನಾನು ಮಾಡುತ್ತೇನೆ. ಬೇರೇನೂ ಇಲ್ಲ. ನನ್ನ ಮಾತು ಎಂದೂ ಸುಳ್ಳಾಗದು. (ದೋ/೧೩೨)

**ಚೌ – ಕುಪಥ ಮಾಗ ರುಜ ಬ್ಯಾಕುಲ ರೋಗೀ । ಬೈದ ನ ದೇಇ ಸುನಹು ಮುನಿ ಜೋಗೀ ॥**
**ಏಹಿ ಬಿಧಿ ಹಿತ ತುಮ್ಹಾರ ಮೈಂ ಠಯಊ । ಕಹಿ ಅಸ ಅಂತರಹಿತ ಪ್ರಭು ಭಯಊ ॥ ೧ ॥**
**ಮಾಯಾ ಬಿಬಸ ಭಏ ಮುನಿ ಮೂಢಾ । ಸಮುಝೀ ನಹಿಂ ಹರಿ ಗಿರಾ ನಿಗೂಢಾ ॥**
**ಗವನೇ ತುರತ ತಹಾಂ ರಿಷಿರಾಈ । ಜಹಾಂ ಸ್ವಯಂಬರ ಭೂಮಿ ಬನಾಈ ॥ ೨ ॥**
**ನಿಜ ನಿಜ ಆಸನ ಬೈಠೇ ರಾಜಾ । ಬಹು ಬನಾವ ಕರಿ ಸಹಿತ ಸಮಾಜಾ ॥**
**ಮುನಿ ಮನ ಹರಷ ರೂಪ ಅತಿ ಮೋರೇಂ । ಮೋಹಿ ತಜಿ ಆನಹಿ ಬರಿಹಿ ನ ಭೋರೇಂ ॥ ೩ ॥**
**ಮುನಿ ಹಿತ ಕಾರನ ಕೃಪಾನಿಧಾನಾ । ದೀನ್ಹ ಕುರೂಪ ನ ಜಾಇ ಬಖಾನಾ ॥**
**ಸೋ ಚರಿತ್ರ ಲಖಿ ಕಾಹುಂ ನ ಪಾವಾ । ನಾರದ ಜಾನಿ ಸಬಹಿಂ ಸಿರ ನಾವಾ ॥ ೪ ॥**

''ಹೇ ಯೋಗಿವರ್ಯ! ಕೇಳು ರೋಗದಲ್ಲಿ ನರಳುತ್ತಿರುವ ರೋಗಿಯು ಕುಪಥ್ಯವನ್ನು ಬಯಸಿದರೆ ವೈದ್ಯನು ಅವನಿಗೆ ಕೊಡುವುದಿಲ್ಲ. ಹಾಗೆಯೇ ನಾನು ಕೂಡ ನಿನಗೆ ಹಿತವನ್ನೇ ಮಾಡಲು ನಿಶ್ಚಯಿಸಿರುವೆನು'' ಎಂದು ಹೇಳಿ ಭಗವಂತನು ಅಂತರ್ಧಾನನಾದನು. ಭಗವಂತನ ಮಾಯೆಗೆ ವಶರಾದ ನಾರದರು ಶ್ರೀಹರಿಯ ಮಾತಿನ ಅಂತರಾರ್ಥವನ್ನು ಗ್ರಹಿಸದೇ ಹೋದರು. ಬಳಿಕ ನಾರದ ಮಹರ್ಷಿಗಳು ಕೂಡಲೇ ಸ್ವಯಂವರ ಮಂಟಪಕ್ಕೆ ಹೋದರು. ರಾಜರುಗಳು ತಮ್ಮ ಪರಿವಾರಸಮೇತ ಅಲಂಕೃತರಾಗಿ, ತಮ್ಮ-ತಮ್ಮ ಆಸನದಲ್ಲಿ ಕುಳಿತಿದ್ದರು. ಮಹರ್ಷಿಯು ''ನನ್ನ ರೂಪವು ಎಲ್ಲರಿಗಿಂತ ಮಿಗಿಲಾದುದು. ಆ ಕನ್ಯೆ ನನ್ನನ್ನು ಬಿಟ್ಟು ಅನ್ಯರನ್ನು ಮರೆತಾದರೂ ವರಿಸಳು'' ಎಂದು ಮನಸ್ಸಿನಲ್ಲೇ ಹರ್ಷಪಡುತ್ತಿದ್ದರು.

ಕೃಪಾನಿಧಿಯಾದ ಭಗವಂತನು ಮಹರ್ಷಿಯ ಶ್ರೇಯಸ್ಸಿಗಾಗಿ ಅವನಿಗೆ ವರ್ಣನಾತೀತವಾದ ಕುರೂಪವನ್ನು ಕರುಣಿಸಿದ್ದನು. ಆದರೆ ಇದು ಯಾರಿಗೂ ತಿಳಿಯುತ್ತಿರಲಿಲ್ಲ, ಎಲ್ಲರೂ ಅವರನ್ನು ನಾರದರೆಂದೇ ಬಗೆದು ನಮಸ್ಕರಿಸಿದರು. (ಚೌ/೧-೪)

**ದೋ – ರಹೇ ತಹಾಁ ದುಇ ರುದ್ರ ಗನ ತೇ ಜಾನಹಿಁ ಸಬ ಭೇಉ ।**
**ಬಿಪ್ರ ಬೇಷ ದೇಖತ ಫಿರಹಿಁ ಪರಮ ಕೌತುಕೀ ತೇಉ ॥ ೧೩೩ ॥**

ಅಲ್ಲಿ ಶಿವನ ಪ್ರಮಥಗಣಗಳಲ್ಲಿ ಇಬ್ಬರು ಬಂದಿದ್ದರು. ಅವರು ಈ ರಹಸ್ಯವನೆಲ್ಲ ತಿಳಿದಿದ್ದರು. ಹಾಗಾಗಿ ಬ್ರಾಹ್ಮಣ ವೇಷಧಾರಿಗಳಾಗಿ ತಿರುಗಾಡುತ್ತಾ ಎಲ್ಲವನ್ನು ನೋಡುತ್ತಾ ಆನಂದಪಡುತ್ತಿದ್ದರು. (ದೋ/೧೩೩)

**ಚೌ – ಜೆಹಿಁ ಸಮಾಜ ಬೈಠೇ ಮುನಿ ಜಾಈ । ಹೃದಯಁ ರೂಪ ಅಹಮಿತಿ ಅಧಿಕಾಈ ॥**
**ತಹಁ ಬೈಠೇ ಮಹೇಸ ಗನ ದೋಊ । ಬಿಪ್ರಬೇಷ ಗತಿ ಲಖಇ ನ ಕೋಊ ॥ ೧ ॥**
**ಕರಹಿಁ ಕೂಟಿ ನಾರದಹಿ ಸುನಾಈ । ನೀಕಿ ದೀನ್ಹಿ ಹರಿ ಸುಂದರತಾಈ ॥**
**ರೀಝಿಹಿ ರಾಜಕುಅಁರಿ ಛಬಿ ದೇಖೀ । ಇನ್ಹಹಿ ಬರಿಹಿ ಹರಿ ಜಾನಿ ಬಿಸೇಷೀ ॥ ೨ ॥**
**ಮುನಿಹಿ ಮೊಹ ಮನ ಹಾಥ ಪರಾಏಁ । ಹಁಸಹಿಁ ಸಂಭು ಗನ ಅತಿ ಸಚು ಪಾಏಁ ॥**
**ಜದಪಿ ಸುನಹಿಁ ಮುನಿ ಅಟಪಟಿ ಬಾನೀ । ಸಮುಝಿ ನ ಪರಇ ಬುದ್ಧಿ ಭ್ರಮ ಸಾನೀ ॥ ೩ ॥**
**ಕಾಹುಁ ನ ಲಖಾ ಸೊ ಚರಿತ ಬಿಸೇಷಾ । ಸೋ ಸರೂಪ ನೃಪಕನ್ಯಾಁ ದೇಖಾ ॥**
**ಮರ್ಕಟ ಬದನ ಭಯಂಕರ ದೇಹೀ । ದೇಖತ ಹೃದಯಁ ಕ್ರೋಧ ಭಾ ತೇಹೀ ॥ ೪ ॥**

ನಾರದರು ತಮ್ಮ ಹೃದಯದಲ್ಲಿ ರೂಪಗರ್ವವನ್ನು ಹೊತ್ತು ಕುಳಿತಿದ್ದ ಸಾಲಿನಲ್ಲೇ ಈ ಶಿವಗಣಗಳೂ ಹೋಗಿ ಕುಳಿತುಕೊಂಡವು. ವಿಪ್ರವೇಷದಲ್ಲಿದ್ದುದರಿಂದ ಅವರ ಚರ್ಯೆ ಯಾರಿಗೂ ತಿಳಿಯಲಿಲ್ಲ. ಅವರು ನಾರದರಿಗೆ ಕೇಳುವಂತೆ ವ್ಯಂಗ್ಯವಾಗಿ ಹೇಳುತ್ತಿದ್ದರು – 'ದೇವರು ಈತನಿಗೆ ಅದೆಂತಹ ರೂಪವನ್ನು ಕೊಟ್ಟಿರುವನು! ಇವನ ಚೆಲುವನ್ನು ಕಂಡು ರಾಜಕುಮಾರಿಯಂತೂ ಮರುಳಾಗಿ ಬಿಡುತ್ತಾಳೆ. ಈತನೇ 'ಹರಿ' (ಕಪಿ) ಎಂದು ತಿಳಿದು ಆಕೆ ಇವನ ಕೊರಳಿಗೆ ಮಾಲೆ ಹಾಕುತ್ತಾಳೆ.' ನಾರದಮುನಿಗಂತೂ ಮೋಹ ನೆತ್ತಿಗೇರಿತ್ತು. ಅವನ ಮನೋಬುದ್ಧಿಗಳು ಅವನ ಕೈಯಲ್ಲಿರಲಿಲ್ಲ. ಶಿವಗಣಗಳು ನಕ್ಕಿದ್ದೂ ನಕ್ಕಿದ್ದೇ. ಮುನಿಗೆ ಅವರ ಹಾಸ್ಯವಿನೋದಗಳು ಕೇಳಿಸುತ್ತಿದ್ದರೂ ಬುದ್ಧಿ ಭ್ರಾಂತಿಯ ಕಾರಣದಿಂದ ಅವುಗಳು ಅರ್ಥವಾಗುತ್ತಿರಲಿಲ್ಲ. ಅವರ ಮಾತನ್ನು ತನ್ನ ಪ್ರಶಂಸೆ ಎಂದೇ ತಿಳಿಯುತ್ತಿದ್ದರು. ಈ ವಿಶೇಷ ದೃಶ್ಯವನ್ನು ಯಾರೂ ನೋಡಲಿಲ್ಲ. ಕೇವಲ ರಾಜಕುಮಾರಿಗೆ ಮಾತ್ರ ಆತನಿಗಿರುವ ಕೋತಿಸ್ವರೂಪವು ಕಾಣಿಸಿತು. ಅವನ ವಾನರಮುಖವನ್ನೂ, ಭಯಂಕರ ಶರೀರವನ್ನೂ ಕಂಡೊಡನೆ ಅವಳ ಹೃದಯದಲ್ಲಿ ಕ್ರೋಧವು ಮೂಡಿತು. (ಚೌ/೧-೪)

**ದೋ – ಸಖೀಁ ಸಂಗ ಲೈ ಕುಅಁರಿ ತಬ ಚಲಿ ಜನು ರಾಜಮರಾಲ ।**
**ದೇಖತ ಫಿರಇ ಮಹೀಪ ಸಬ ಕರ ಸರೋಜ ಜಯಮಾಲ ॥ ೧೩೪ ॥**

ರಾಜಕುಮಾರಿಯು ತನ್ನ ಸಖಿಯರೊಡನೆ ರಾಜಹಂಸದಂತೆ ನಡೆಯುತ್ತಾ ಸಭೆಯನ್ನು ಪ್ರವೇಶಿಸಿದಳು. ಆಕೆ ಕೈಯಲ್ಲಿ ವರಮಾಲೆಯನ್ನು ಹಿಡಿದುಕೊಂಡು ಎಲ್ಲ ರಾಜರನ್ನೂ ನೋಡುತ್ತಾ ಮುಂದಕ್ಕೆ ಸಾಗಿದಳು. (ದೋ/೧೩೪)

**ಚೌ – ಜೆಹಿ ದಿಸಿ ಬೈಠೇ ನಾರದ ಫೂಲೀ । ಸೋ ದಿಸಿ ತೆಹಿಁ ನ ಬಿಲೋಕೀ ಭೂಲೀ ॥**
**ಪುನಿ ಪುನಿ ಮುನಿ ಉಕಸಹಿಁ ಅಕುಲಾಹೀಁ । ದೇಖಿ ದಸಾ ಹರ ಗನ ಮುಸುಕಾಹೀಁ ॥ ೧ ॥**
**ಧರಿ ನೃಪತನು ತಹಁ ಗಯಉ ಕೃಪಾಲಾ । ಕುಅಁರಿ ಹರಷಿ ಮೇಲೆಉ ಜಯಮಾಲಾ ॥**
**ದುಲಹಿನಿ ಲೈ ಗೇ ಲಚ್ಛಿನಿವಾಸಾ । ನೃಪಸಮಾಜ ಸಬ ಭಯಉ ನಿರಾಸಾ ॥ ೨ ॥**
**ಮುನಿ ಅತಿ ಬಿಕಲ ಮೋಹಁ ಮತಿ ನಾಠೀ । ಮನಿ ಗಿರಿ ಗಈ ಛೂಟಿ ಜನು ಗಾಁಠೀ ॥**
**ತಬ ಹರ ಗನ ಬೋಲೇ ಮುಸುಕಾಈ । ನಿಜ ಮುಖ ಮುಕುರ ಬಿಲೋಕಹು ಜಾಈ ॥ ೩ ॥**
**ಅಸ ಕಹಿ ದೊಉ ಭಾಗೇ ಭಯಁ ಭಾರೀ । ಬದನ ದೀಖ ಮುನಿ ಬಾರಿ ನಿಹಾರೀ ॥**
**ಬೇಷು ಬಿಲೋಕಿ ಕ್ರೋಧ ಅತಿ ಬಾಢಾ । ತಿನ್ಹಹಿ ಸರಾಪ ದೀನ್ಹ ಅತಿ ಗಾಢಾ ॥ ೪ ॥**

ರೂಪಗರ್ವದಿಂದ ಕುಳಿತಿದ್ದ ನಾರದರ ಕಡೆಗೆ ಆಕೆಯು ಮರೆತೂ ಕಣ್ಣುಹಾಯಿಸಲಿಲ್ಲ. ನಾರದರು ಪದೇ-ಪದೇ ಕುಪ್ಪಳಿಸುತ್ತಾ, ತಡಪಡಿಸುತ್ತಿದ್ದನು. ಅವರ ಈ ಸ್ಥಿತಿಯನ್ನು ಕಂಡು ಶಿವಗಣಗಳು ಹಲ್ಲುಕಿರಿದವು. ಕೃಪಾಳುವಾದ ಶ್ರೀಹರಿಯೂ ಕೂಡ

ರಾಜವೇಷದಿಂದ ಅಲ್ಲಿಗೆ (ಆ ರಾಜಸಭೆಗೆ) ಬಂದೊದಗಿದನು. ರಾಜಕುಮಾರಿಯು ಅತಿಹರ್ಷದಿಂದ ಜಯಮಾಲೆಯನ್ನು ಅವನ ಕೊರಳಿಗೆ ತೊಡಿಸಿದಳು. ಭಗವಾನ್ ಲಕ್ಷ್ಮೀಪತಿಯು ವಧುವನ್ನು ಕರೆದುಕೊಂಡು ಹೋದನು. ಉಳಿದ ರಾಜರೆಲ್ಲರೂ ನಿರಾಶೆಯಲ್ಲಿ ಮುಳುಗಿದರು. ಮೋಹದಿಂದ ನಾರದಮುನಿಯ ಬುದ್ಧಿಯು ನಾಶವಾಗಿಹೋಗಿತ್ತು. ಸೆರಗಿನ ಗಂಟಿನಿಂದ ರತ್ನಜಾರಿ ಬಿದ್ದುಹೋಯಿತೋ ಎಂಬಂತೆ, ರಾಜಕುಮಾರಿಯು ಹೋದುದನ್ನು ಕಂಡು ಅವರು ವ್ಯಾಕುಲಚಿತ್ತನಾದನು. ಶಿವಗಣಗಳು ನಗುತ್ತಾ ಅವರಲ್ಲಿ ''ಕನ್ನಡಿಯಲ್ಲಿ ಮುಖವನ್ನಾದರೂ ಒಮ್ಮೆ ನೋಡಿಕೊಳ್ಳಬಾರದೇ?'' ಎಂದು ಹೇಳಿ ಭಯದಿಂದ ಅಲ್ಲಿಂದ ಓಡಿಹೋದರು. ನಾರದರು ನೀರಿನಲ್ಲಿ ತನ್ನ ವಿಕೃತವಾದ ರೂಪವನ್ನು ನೋಡಿಕೊಂಡು, ಅವರ ಕೋಪವು ಇಮ್ಮಡಿಸಿತು. ಕೂಡಲೇ ಅವರು ಶಿವಗಣಗಳಿಗೆ ಅತ್ಯಂತ ಕಠೋರವಾದ ಶಾಪವನ್ನು ಕೊಟ್ಟರು. (ಚೌ/೧-೪)

**ದೋ – ಹೋಹು ನಿಸಾಚರ ಜಾಇ ತುಮ್ಹ ಕಪಟೀ ಪಾಪೀ ದೋಉ ।**
**ಹँಸೆಹು ಹಮಹಿ ಸೋ ಲೇಹು ಫಲ ಬಹುರಿ ಹँಸೆಹು ಮುನಿ ಕೋಉ ॥ ೧೩೫ ॥**

''ಕಪಟಿಗಳೂ, ವಂಚಕರೂ ಆದ ನೀವಿಬ್ಬರೂ ರಾಕ್ಷಸರಾಗಿರಿ. ನೀವು ನನ್ನನ್ನು ಕುಚೋದ್ಯಮಾಡಿದ್ದೀರಿ, ಅದರ ಫಲವನ್ನು ಈಗ ಅನುಭವಿಸಿರಿ ಎಂದು ಶಪಿಸಿದರು. ಇನ್ನು ಮುಂದೆ ಯಾವುದೇ ಋಷಿಯನ್ನು ಹಾಸ್ಯಮಾಡಬೇಡಿರಿ. (ದೋ/೧೩೫)

**ಚೌ – ಪುನಿ ಜಲ ದೀಖ ರೂಪ ನಿಜ ಪಾವಾ । ತದಪಿ ಹೃದಯँ ಸಂತೋಷ ನ ಆವಾ ॥**
**ಫರಕತ ಅಧರ ಕೋಪ ಮನ ಮಾಹೀँ । ಸಪದಿ ಚಲೇ ಕಮಲಾಪತಿ ಪಾಹೀँ ॥ ೧ ॥**
**ದೇಹಉँ ಶ್ರಾಪ ಕಿ ಮರಿಹಉँ ಜಾಈ । ಜಗತ ಮೋರಿ ಉಪಹಾಸ ಕರಾಈ ॥**
**ಬೀಚಹಿँ ಪಂಥ ಮಿಲೇ ದನುಜಾರೀ । ಸಂಗ ರಮಾ ಸೋಇ ರಾಜಕುಮಾರೀ ॥ ೨ ॥**
**ಬೋಲೇ ಮಧುರ ಬಚನ ಸುರಸಾಈँ । ಮುನಿ ಕಹँ ಚಲೇ ಬಿಕಲ ಕೀ ನಾಈँ ॥**
**ಸುನತ ಬಚನ ಉಪಜಾ ಅತಿ ಕ್ರೋಧಾ । ಮಾಯಾ ಬಸ ನ ರಹಾ ಮನ ಬೋಧಾ ॥ ೩ ॥**
**ಪರ ಸಂಪದಾ ಸಕಹು ನಹಿँ ದೇಖೀ । ತುಮ್ಹರೇँ ಇರಿಷಾ ಕಪಟ ಬಿಸೇಷೀ ॥**
**ಮಥತ ಸಿಂಧು ರುದ್ರಹಿ ಬೌರಾಯಹು । ಸುರನ್ಹ ಪ್ರೇರಿ ಬಿಷ ಪಾನ ಕರಾಯಹು ॥ ೪ ॥**

ನಾರದಮುನಿಗಳು ಮರಳಿ ನೀರಿನಲ್ಲಿ ತನ್ನ ರೂಪವನ್ನು ನೋಡಿಕೊಂಡಾಗ ಅವರಿಗೆ ತನ್ನ ಮೊದಲಿನ ನಿಜರೂಪವು ಪ್ರಾಪ್ತವಾಗಿತ್ತು. ಆದರೂ ಅವರಿಗೆ ಸಂತೋಷವಾಗಲಿಲ್ಲ. ಅವರ ತುಟಿಗಳು ಅದುರುತ್ತಿದ್ದವು. ಮನಸ್ಸಿನಲ್ಲಿ ಕೋಪವು ತುಂಬಿಹೋಗಿತ್ತು. ಕೂಡಲೇ ಅವರು ಲಕ್ಷ್ಮೀಪತಿಯ ಬಳಿಗೆ ಹೊರಟರು. ''ಒಂದೋ ಅಲ್ಲಿಗೆ ಹೋಗಿ ಅವನಿಗೆ ಶಾಪಕೊಡುತ್ತೇನೆ, ಇಲ್ಲವೇ ಪ್ರಾಣಗಳನ್ನು ತೆತ್ತುಬಿಡುತ್ತೇನೆ. ಅವನು ಜಗತ್ತಿನಲ್ಲಿ ನನ್ನನ್ನು ನಗೆಗೀಡುಮಾಡಿದನಲ್ಲ!'' ಹೀಗೆ ಮನಸ್ಸಿನಲ್ಲಿ ಯೋಚಿಸುತ್ತಾ ಹೋಗುತ್ತಿರುವಾಗ, ದಾರಿಯಲ್ಲೇ-ದೈತ್ಯಾರಿಯಾದ ಶ್ರೀಹರಿಯು ಅವರಿಗೆ ಸಿಕ್ಕಿದನು. ಜೊತೆಯಲ್ಲಿ ಲಕ್ಷ್ಮೀದೇವಿ ಹಾಗೂ ಅದೇ ರಾಜಕುಮಾರಿಯಿದ್ದಳು. ದೇವದೇವನಾದ ಮಹಾವಿಷ್ಣುವು – ''ಮುನೀಶ್ವರಾ! ವ್ಯಾಕುಲಚಿತ್ತರಾಗಿ ಎತ್ತ ಹೋಗುತ್ತಿದ್ದೀರಿ?'' ಎಂದು ಮೃದು ಮಧುರವಾಗಿ ಕೇಳಿದನು. ಈ ಮಾತುಗಳನ್ನು ಕೇಳಿದ್ದೇ ತಡ, ಹತಾಶರಾದ ನಾರದರಿಗೆ ಬೆಟ್ಟದಂತಹ ಸಿಟ್ಟು ಬಂತು. ಮಾಯಾಮೋಹಿತನಾದ ಮುನಿಗೆ ಬುದ್ಧಿಯು ತನ್ನ ವಶದಲ್ಲಿರಲಿಲ್ಲ. ಅವರೆಂದರು – ''ನೀನು ಬೇರೆಯವರ ಸಂಪತ್ತನ್ನು ಕಂಡು ಸಹಿಸಲಾರೆ. ನಿನ್ನಲ್ಲಿ ಈರ್ಷ್ಯೆ, ಕಪಟ ತುಂಬಾ ಇದೆ. ಸಮುದ್ರಮಂಥನ ಸಮಯದಲ್ಲಿ ದೇವತೆಗಳ ಪ್ರೇರಣೆಯಿಂದ ನೀನು ಆ ಭೋಳಾಶಂಕರನಿಗೆ ವಿಷವನ್ನು ಕುಡಿಸಿದೆ. (ಚೌ/೧-೪)

**ದೋ – ಅಸುರ ಸುರಾ ಬಿಷ ಸಂಕರಹಿ ಆಪು ರಮಾ ಮನಿ ಚಾರು ।**
**ಸ್ವಾರಥ ಸಾಧಕ ಕುಟಿಲ ತುಮ್ಹ ಸದಾ ಕಪಟ ಬ್ಯವಹಾರು ॥ ೧೩೬ ॥**

ಅಸುರರಿಗೆ ಮದಿರೆ (ಮದ್ಯ) ಯನ್ನೂ, ಶಿವನಿಗೆ ವಿಷವನ್ನು ಇತ್ತು, ನೀನು ಮಾತ್ರ ಸೌಂದರ್ಯರಾಶಿಯಾದ ಲಕ್ಷ್ಮೀದೇವಿಯನ್ನೂ, ಕೌಸ್ತುಭಮಣಿಯನ್ನೂ ತೆಗೆದುಕೊಂಡೆ. ನೀನು ದೊಡ್ಡ ಸ್ವಾರ್ಥಿ, ಕುಟಿಲನೂ ಆಗಿರುವೆ. ನೀನು ಯಾವಾಗಲೂ ವಂಚನೆಯ ವ್ಯವಹಾರವನ್ನೇ ಮಾಡುವಿ. (ದೋ/೧೩೬)

**ಚೌ – ಪರಮ ಸ್ವತಂತ್ರ ನ ಸಿರ ಪರ ಕೋಈ । ಭಾವಇ ಮನಹಿ ಕರಹು ತುಮ್ಹ ಸೋಈ ॥**
**ಭಲೆಹಿ ಮಂದ ಮಂದೆಹಿ ಭಲ ಕರಹೂ । ಬಿಸಮಯ ಹರಷ ನ ಹಿಯँ ಕಛು ಧರಹೂ ॥ ೧ ॥**
**ಡಹಕಿ ಡಹಕಿ ಪರಿಚಿಹು ಸಬ ಕಾಹೂ । ಅತಿ ಅಸಂಕ ಮನ ಸದಾ ಉಛಾಹೂ ॥**
**ಕರಮ ಸುಭಾಸುಭ ತುಮ್ಹಹಿ ನ ಬಾಧಾ । ಅಬ ಲಗಿ ತುಮ್ಹಹಿ ನ ಕಾಹೂँ ಸಾಧಾ ॥ ೨ ॥**

**ಭಲೇ ಭವನ ಅಬ ಬಾಯನ ದೀನ್ಹಾ। ಪಾವಹುಗೇ ಫಲ ಆಪನ ಕೀನ್ಹಾ॥**
**ಬಂಚೆಹು ಮೋಹಿ ಜವನಿ ಧರಿ ದೇಹಾ। ಸೋಇ ತನು ಧರಹು ಶ್ರಾಪ ಮಮ ಏಹಾ॥ ೩॥**
**ಕಪಿ ಆಕೃತಿ ತುಮ್ಹ ಕೀನ್ಹಿ ಹಮಾರೀ। ಕರಿಹಹಿಂ ಕೀಸ ಸಹಾಯ ತುಮ್ಹಾರೀ॥**
**ಮಮ ಅಪಕಾರ ಕೀನ್ಹ ತುಮ್ಹ ಭಾರೀ। ನಾರಿ ಬಿರಹ್ ತುಮ್ಹ ಹೋಬ ದುಖಾರೀ॥ ೪॥**

ನೀನು ಪರಮ ಸ್ವತಂತ್ರನು. ಯಾರ ಅಧೀನದಲ್ಲಿಯೂ ನೀನಿಲ್ಲ. ಆದರಿಂದಾಗಿ ನಿನಗೆ ತೋಚಿದಂತೆ ಸ್ವಚ್ಛಂದವಾಗಿ ವರ್ತಿಸುತ್ತಿದ್ದಿಯೇ. ಒಳ್ಳೆಯದನ್ನು ಕೆಟ್ಟದಾಗಿಸಿ, ಕೆಟ್ಟದ್ದನ್ನು ಒಳ್ಳೆಯದನ್ನಾಗಿಸಿ ಮಾಡುತ್ತಿರುವೆ. ನಿನ್ನ ಹೃದಯದಲ್ಲಿ ಹರ್ಷ-ವಿಷಾದಗಳು ಉದಿಸುವುದೇ ಇಲ್ಲ. ಎಲ್ಲರಿಗೆ ಮೋಸ ಮಾಡಿ-ಮಾಡಿ ಪಳಗಿಹೋಗಿದ್ದೀಯೆ. ಯಾರ ಅಂಕೆಯೂ, ಭಯವೂ ನಿನಗಿಲ್ಲ. ಇದರಿಂದ ಮೋಸಮಾಡುವುದರಲ್ಲಿ ಯಾವಾಗಲೂ ನಿನ್ನ ಮನಸ್ಸಿನಲ್ಲಿ ಎಲ್ಲಿಲ್ಲದ ಉತ್ಸಾಹವಿರುತ್ತದೆ. ನಿನಗೆ ಶುಭ-ಅಶುಭ ಕರ್ಮಗಳು ಬಾಧಿಸುವುದಿಲ್ಲ. ಇದುವರೆಗೆ ನಿನಗೆ ಯಾರೂ ಬುದ್ಧಿ ಕಲಿಸಲಿಲ್ಲ. ನೀನು ಕೊಟ್ಟಿರುವ ವಾಯನವನ್ನು ನೀನೇ ಪಡೆಯುವೆ. ನೀನು ಮಾಡಿಕೊಂಡ ಕರ್ಮಫಲಗಳು ತಪ್ಪದೇ ನೀನೇ ಅನುಭವಿಸಬೇಕು. ''ನೀನು ಯಾವ ರೂಪದಿಂದ ನನ್ನನ್ನು ವಂಚಿಸಿದೆಯೋ ಅದೇ ನೃಪಶರೀರವು ನಿನಗೆ ಬರಲಿ.'' ಇದು ನಾನು ನಿನಗೆ ಕೊಟ್ಟಿರುವ ಶಾಪ. ನೀನು ನನಗೆ ಕಪಿಯರೂಪವನ್ನು ಕೊಟ್ಟೆ. ಆದ್ದರಿಂದ ಕಪಿಗಳಿಂದಲೇ ನೀನು ಸಹಾಯಪಡೆ. ನಾನು ಬಯಸಿದ ಹೆಣ್ಣು ನನಗೆ ದೊರಕದಂತೆ ಮಾಡಿ ನೀನು ನನಗೆ ಅಹಿತವನ್ನೇ ಮಾಡಿದಿ. ಇದರಿಂದ ನೀನೂ ಸ್ತ್ರೀವಿಯೋಗದಿಂದ ದುಃಖವನ್ನನುಭವಿಸು. (ಚೌ/೧-೪)

**ದೋ – ಶ್ರಾಪ ಸೀಸ ಧರಿ ಹರಷಿ ಹಿಯ್ ಪ್ರಭು ಬಹು ಬಿನತೀ ಕೀನ್ಹಿ।**
**ನಿಜ ಮಾಯಾ ಕೈ ಪ್ರಬಲತಾ ಕರಷಿ ಕೃಪಾನಿಧಿ ಲೀನ್ಹಿ॥ ೧೩೭॥**

ಪ್ರಭುವು ನಾರದಮುನಿಯ ಶಾಪವನ್ನು ಶಿರಸಾವಹಿಸಿ, ಹೃದಯದಲ್ಲಿ ಹರ್ಷಗೊಂಡು ನಾರದರನ್ನು ಪರಿ-ಪರಿಯಾಗಿ ಬಿನ್ನಹಮಾಡಿಕೊಂಡನು. ಅನಂತರ ತನ್ನ ಮಾಯೆಯ ಪ್ರಭಾವವನ್ನು ಅಡಗಿಸಿದನು. (ದೋ/೧೩೭)

**ಚೌ – ಜಬ ಹರಿ ಮಾಯಾ ದೂರಿ ನಿವಾರೀ। ನಹಿಂ ತಹ್ ರಮಾ ನ ರಾಜಕುಮಾರೀ॥**
**ತಬ ಮುನಿ ಅತಿ ಸಭೀತ ಹರಿ ಚರನಾ। ಗಹೇ ಪಾಹಿ ಪ್ರನತಾರತಿ ಹರನಾ॥ ೧॥**
**ಮೃಷಾ ಹೋಉ ಮಮ ಶ್ರಾಪ ಕೃಪಾಲಾ। ಮಮ ಇಚ್ಛಾ ಕಹ ದೀನದಯಾಲಾ॥**
**ಮೈಂ ದುರ್ಬಚನ ಕಹೇ ಬಹುತೇರೇ। ಕಹ ಮುನಿ ಪಾಪ ಮಿಟಿಹಿಂ ಕಿಮಿ ಮೇರೇ॥ ೨॥**
**ಜಪಹು ಜಾಈ ಸಂಕರ ಸತ ನಾಮಾ। ಹೋಇಹಿ ಹೃದಯ್ ತುರತ ಬಿಶ್ರಾಮಾ॥**
**ಕೋಉ ನಹಿಂ ಸಿವ ಸಮಾನ ಪ್ರಿಯ ಮೋರೇಂ। ಅಸಿ ಪರತೀತಿ ತಜಹು ಜನಿ ಭೋರೇಂ॥ ೩॥**
**ಜೆಹಿ ಪರ ಕೃಪಾ ನ ಕರಹಿಂ ಪುರಾರೀ। ಸೋ ನ ಪಾವ ಮುನಿ ಭಗತಿ ಹಮಾರೀ॥**
**ಅಸ ಉರ ಧರಿ ಮಹಿ ಬಿಚರಹು ಜಾಈ। ಅಬ ನ ತುಮ್ಹಹಿ ಮಾಯಾ ನಿಅರಾಈ॥ ೪॥**

ಶ್ರೀಹರಿಮಾಯೆಯು ಹರಿದ ಕೂಡಲೇ ಅಲ್ಲಿ ಲಕ್ಷ್ಮಿಯೂ, ರಾಜಕುಮಾರಿಯೂ ಅದೃಶ್ಯವಾಗಿಹೋದರು. ಅದನ್ನು ಕಂಡು ನಾರದರು ಭಯಕಂಪಿತರಾಗಿ ಶ್ರೀಹರಿಯ ಚರಣಗಳಲ್ಲಿ ಕೆಡಬಿದ್ದು, ''ಓ ಶರಣಾಗತ ವತ್ಸಲಾ! ನನ್ನನ್ನು ರಕ್ಷಿಸು. ಎಲೈ ಕೃಪಾಳು! ಸಿಟ್ಟಿನ ಭರದಲ್ಲಿ ನಾನು ನಿನಗೆ ಕೊಟ್ಟಿರುವ ಶಾಪವು ಹುಸಿಯಾಗಲೀ ಎಂದು ಬೇಡಿಕೊಂಡನು. ಆಗ ದೀನದಯಾಳುವಾದ ಪ್ರಭುವು ಹೇಳಿದನು – ''ಇದೆಲ್ಲವೂ ನನ್ನ ಸಂಕಲ್ಪದಂತೆ ಆಗಿದೆ. ಅದಕ್ಕೆ ನಾರದರು ಪುನಃ ಕೇಳಿದರು – ''ಸ್ವಾಮೀ! ನಾನು ನಿನ್ನ ಬಗೆಗೆ ದುರುಕ್ತಿಗಳನ್ನು ಆಡಿದ್ದೇನೆ. ನನ್ನ ಪಾಪಗಳು ಹೇಗೆ ತೊಲಗಬಹುದು? ಆಗ ಭಗವಂತನು ಇಂತೆಂದನು – ಎಲೈ ಮಹರ್ಷಿಯೇ! ನೀನು ಕೈಲಾಸಕ್ಕೆ ಹೋಗಿ ಶಂಕರನ ಶತನಾಮಗಳನ್ನು ಜಪಿಸು. ಅದರಿಂದ ಕೂಡಲೇ ನಿನ್ನ ಹೃದಯಕ್ಕೆ ಶಾಂತಿದೊರೆಯುತ್ತದೆ. ಶಿವನಷ್ಟು ಪ್ರಿಯರಾದವರು ನನಗೆ ಬೇರೆ ಯಾರೂ ಇಲ್ಲ. ಈ ನಂಬಿಕೆಯನ್ನು ಮರೆತಾದರೂ ತೊರೆಯದಿರು. ಮುನಿಯೇ! ತ್ರಿಪುರಾಂತಕನ ಕೃಪೆಯಿಲ್ಲದವರಿಗೆ ನನ್ನ ಭಕ್ತಿ ದೊರೆಯದು. ಇದನ್ನು ಹೃದಯದಲ್ಲಿ ಗಟ್ಟಿಮಾಡಿಕೊಂಡು ಹೋಗಿ ಭೂಮಿಯಲ್ಲಿ ವಿಚರಿಸು. ಇನ್ನು ಮುಂದೆ ನನ್ನ ಮಾಯೆ ನಿನ್ನ ಹತ್ತಿರ ಸುಳಿಯಲಾರದು. (ಚೌ/೧-೪)

**ದೋ – ಬಹುಬಿಧಿ ಮುನಿಹಿ ಪ್ರಬೋಧಿ ಪ್ರಭು ತಬ ಭಏ ಅಂತರಧಾನ।**
**ಸತ್ಯಲೋಕ ನಾರದ ಚಲೇ ಕರತ ರಾಮ ಗುನ ಗಾನ॥ ೧೩೮॥**

ಹೀಗೆ ಬಹುರೀತಿಯಲ್ಲಿ ನಾರದರನ್ನು ಸಮಾಧಾನಗೊಳಿಸಿ, ಮಹಾವಿಷ್ಣುವು ಅಂತರ್ಧಾನನಾದನು. ನಾರದರು ಶ್ರೀರಾಮನ ಗುಣಗಾನ ಮಾಡುತ್ತಾ ಸತ್ಯಲೋಕಕ್ಕೆ ತೆರಳಿದರು. (ದೋ/೧೩೮)

ಚೌ – ಹರ ಗನ ಮುನಿಹಿ ಜಾತ ಪಥ ದೇಖೀ । ಬಿಗತಮೋಹ ಮನ ಹರಷ ಬಿಸೇಷೀ ॥
ಅತಿ ಸಭೀತ ನಾರದ ಪಹಿಂ ಆಏ । ಗಹಿ ಪದ ಆರತ ಬಚನ ಸುನಾಏ ॥ ೧ ॥
ಹರ ಗನ ಹಮ ನ ಬಿಪ್ರ ಮುನಿರಾಯಾ । ಬಡ ಅಪರಾಧ ಕೀನ್ಹ ಫಲ ಪಾಯಾ ॥
ಶ್ರಾಪ ಅನುಗ್ರಹ ಕರಹು ಕೃಪಾಲಾ । ಬೋಲೇ ನಾರದ ದೀನದಯಾಲಾ ॥ ೨ ॥
ನಿಸಿಚರ ಜಾಇ ಹೋಹು ತುಮ್ಹ ದೋಊ । ಬೈಭವ ಬಿಪುಲ ತೇಜ ಬಲ ಹೋಊ ॥
ಭುಜಬಲ ಬಿಸ್ವ ಜಿತಬ ತುಮ್ಹ ಜಹಿಆ । ಧರಿಹಹಿಂ ಬಿಷ್ನು ಮನುಜ ತನು ತಹಿಆ ॥ ೩ ॥
ಸಮರ ಮರನ ಹರಿ ಹಾಥ ತುಮ್ಹಾರಾ । ಹೋಇಹಹು ಮುಕುತ ನ ಪುನಿ ಸಂಸಾರಾ ॥
ಚಲೇ ಜುಗಲ ಮುನಿ ಪದ ಸಿರ ನಾಈ । ಭಏ ನಿಸಾಚರ ಕಾಲಹಿ ಪಾಈ ॥ ೪ ॥

ಮೋಹರಹಿತರಾಗಿ ಮನಸ್ಸಿನಲ್ಲಿ ಪ್ರಸನ್ನರಾಗಿ ಹೋಗುತ್ತಿದ್ದ ನಾರದಮುನಿಗಳನ್ನು ದಾರಿಯಲ್ಲಿ ಶಿವಗಣಗಳು ಕಂಡು ಭಯಗೊಂಡವರಾಗಿ ಅವರ ಬಳಿಗೆ ಬಂದು ಅವರ ಕಾಲುಗಳನ್ನು ಹಿಡಿದುಕೊಂಡು ದೀನರಾಗಿ ಇಂತೆಂದರು – ''ಮುನೀಶ್ವರರೇ! ನಾವು ನಿಜವಾದ ಬ್ರಾಹ್ಮಣರಲ್ಲ. ಶಿವಗಣಗಳು. ನಾವು ಮಹಾಪರಾಧವನ್ನು ಮಾಡಿದೆವು. ಅದಕ್ಕೆ ತಕ್ಕ ಫಲವನ್ನೂ ಪಡೆದೆವು. ಕೃಪಾಳುಗಳೇ! ಈಗ ಶಾಪವು ದೂರವಾಗುವಂತೆ ಅನುಗ್ರಹಿಸಿರಿ.'' ಆಗ ದೀನವತ್ಸಲರಾದ ನಾರದರು ಇಂತೆಂದರು – ''ನೀವಿಬ್ಬರೂ ರಾಕ್ಷಸರಾಗಿ ಹುಟ್ಟಿರಿ, ನಿಮಗೆ ವಿಪುಲ ಐಶ್ವರ್ಯ, ತೇಜಸ್ಸು, ಬಲ ಪ್ರಾಪ್ತವಾಗುತ್ತದೆ. ನೀವು ನಿಮ್ಮ ಭುಜಬಲದಿಂದ ಇಡೀ ವಿಶ್ವವನ್ನು ಗೆದ್ದುಕೊಂಡಾಗ, ಭಗವಾನ್ ವಿಷ್ಣುವು ಮಾನವಾವತಾರವನ್ನು ತಾಳುವನು. ಆಗ ಯುದ್ಧದಲ್ಲಿ ನೀವು ಅವನ ಕೈಯಿಂದ ಹತರಾಗಿ, ಪುನರಾವೃತ್ತಿರಹಿತವಾದ ಮೋಕ್ಷವನ್ನು ಹೊಂದುವಿರಿ. ಅವರು ಮುನಿಯನ್ನು ವಂದಿಸಿ ಹೊರಟುಹೋದರು. ಕಾಲಾಂತರದಲ್ಲಿ ಅವರು ರಾಕ್ಷಸರಾಗಿ ಹುಟ್ಟಿದರು. (ಚೌ/೧-೪)

**ದೋ – ಏಕ ಕಲಪ ಏಹಿ ಹೇತು ಪ್ರಭು ಲೀನ್ಹ ಮನುಜ ಅವತಾರ ।**
**ಸುರ ರಂಜನ ಸಜ್ಜನ ಸುಖದ ಹರಿ ಭಂಜನ ಭುವಿ ಭಾರ ॥ ೧೩೯ ॥**

ದೇವತೆಗಳನ್ನು ಸಂತೋಷಪಡಿಸುವವನೂ, ಸಜ್ಜನಸುಖದಾಯಕನೂ, ಭೂಭಾರಹಾರಿಯೂ ಆದ ಭಗವಂತನು ಒಂದು ಕಲ್ಪದಲ್ಲಿ ಈ ಕಾರಣಕ್ಕಾಗಿಯೇ ಮನುಷ್ಯನಾಗಿ ಅವತರಿಸಿದನು. (ದೋ/೧೩೯)

ಚೌ – ಏಹಿ ಬಿಧಿ ಜನಮ ಕರಮ ಹರಿ ಕೇರೇ । ಸುಂದರ ಸುಖದ ಬಿಚಿತ್ರ ಘನೇರೇ ॥
ಕಲಪ ಕಲಪ ಪ್ರತಿ ಪ್ರಭು ಅವತರಹೀಂ । ಚಾರು ಚರಿತ ನಾನಾಬಿಧಿ ಕರಹೀಂ ॥ ೧ ॥
ತಬ ತಬ ಕಥಾ ಮುನೀಸನ್ಹ ಗಾಈ । ಪರಮ ಪುನೀತ ಪ್ರಬಂಧ ಬನಾಈ ॥
ಬಿಬಿಧ ಪ್ರಸಂಗ ಅನೂಪ ಬಖಾನೇ । ಕರಹಿಂ ನ ಸುನಿ ಆಚರಜು ಸಯಾನೇ ॥ ೨ ॥
ಹರಿ ಅನಂತ ಹರಿಕಥಾ ಅನಂತಾ । ಕಹಹಿಂ ಸುನಹಿಂ ಬಹುಬಿಧಿ ಸಬ ಸಂತಾ ॥
ರಾಮಚಂದ್ರ ಕೇ ಚರಿತ ಸುಹಾಏ । ಕಲಪ ಕೋಟಿ ಲಗಿ ಜಾಹಿಂ ನ ಗಾಏ ॥ ೩ ॥
ಯಹ ಪ್ರಸಂಗ ಮೈಂ ಕಹಾ ಭವಾನೀ । ಹರಿಮಾಯಾಁ ಮೋಹಹಿಂ ಮುನಿ ಗ್ಯಾನೀ ॥
ಪ್ರಭು ಕೌತುಕೀ ಪ್ರನತ ಹಿತಕಾರೀ । ಸೇವತ ಸುಲಭ ಸಕಲ ದುಖ ಹಾರೀ ॥ ೪ ॥

ಈ ರೀತಿ ಭಗವಾನ್ ಶ್ರೀಹರಿಯ ಜನ್ಮ, ಕರ್ಮಗಳು ಅನೇಕ, ಸುಂದರ, ಸುಖದಾಯಕ ಹಾಗೂ ಅಲೌಕಿಕ. ಪ್ರತಿಯೊಂದು ಕಲ್ಪದಲ್ಲಿಯೂ ಅವತರಿಸಿದಾಗಲೆಲ್ಲ, ಭಗವಂತನು ನಾನಾವಿಧವಾದ ರೀತಿಯ ಲೀಲೆಗಳನ್ನು ಮಾಡುತ್ತಾನೆ. ಆಗ ಮುನೀಶ್ವರರು ಪರಮಪುನೀತವಾದ ಕಾವ್ಯಗಳನ್ನು ರಚಿಸಿ, ಅವನ ಕಥೆಗಳನ್ನು ಹಾಡಿದ್ದಾರೆ ಹಾಗೂ ವಿವಿಧರೀತಿಯ ಅನುಪಮ ಪ್ರಸಂಗಗಳನ್ನು ವರ್ಣಿಸಿದ್ದಾರೆ. ಇದನ್ನು ಕೇಳಿ ವಿವೇಕಿಗಳು ಆಶ್ಚರ್ಯಪಡುವುದಿಲ್ಲ.

ಶ್ರೀಹರಿಯು ಅನಂತ, ಹರಿಕಥೆಗಳೂ ಅನಂತವಾಗಿವೆ. ಸತ್ಪುರುಷರು ಅದನ್ನು ಅನೇಕವಿಧಗಳಿಂದ ಹೇಳುತ್ತಾರೆ – ಕೇಳುತ್ತಾರೆ. ಶ್ರೀರಾಮನ ಸುಂದರ ಚರಿತವನ್ನು ಕಲ್ಪಕೋಟಿಗಳಲ್ಲೂ ಹಾಡಿ ಮುಗಿಸಲಾಗುವುದಿಲ್ಲ. ಶಿವನು ಭವಾನಿಗೆ ಹೇಳುತ್ತಾನೆ – ಭವಾನೀ! ಎಂಥೆಂಥ ಜ್ಞಾನೀ-ಮುನೀಶ್ವರರೂ ಕೂಡ ಶ್ರೀಹರಿಯ ಮಾಯೆಗೆ ಒಳಗಾಗುತ್ತಾರೆ ಎಂದು ತಿಳಿಸಲೆಂದೇ ಈ ಪ್ರಸಂಗವನ್ನು ಹೇಳಿರುವೆನು. ಪ್ರಭುವು ಲೀಲಾಮಯನೂ, ಶರಣಾಗತವತ್ಸಲನೂ, ಸುಲಭಸೇವ್ಯನೂ, ಎಲ್ಲರ ದುಃಖಗಳನ್ನು ಹರಿಸುವವನೂ ಆಗಿದ್ದಾನೆ. (ಚೌ/೧-೪)

**ಸೋ – ಸುರ ನರ ಮುನಿ ಕೊಉ ನಾಹಿಂ ಜೆಹಿ ನ ಮೋಹ ಮಾಯಾ ಪ್ರಬಲ ।**
**ಅಸ ಬಿಚಾರಿ ಮನ ಮಾಹಿಂ ಭಜಿಅ ಮಹಾಮಾಯಾ ಪತಿಹಿ ॥ ೧೪೦ ॥**

ದೇವತೆಗಳೂ, ಮುನಿಗಳೂ, ಮಾನವರೂ ಶ್ರೀಹರಿಯ ಮಾಯೆಗೆ ಈಡಾಗದವರು ಯಾರೂ ಇಲ್ಲ. ಈ ವಿಷಯವನ್ನು ಮನಗಂಡು, ಆ ಮಹಾಮಾಯಾಪತಿಯನ್ನು ಭಜಿಸಬೇಕು. (ಸೋ/೧೪೦)

## ಶತರೂಪಾ ಸ್ವಾಯಂಭುವ ಮನುವಿನ ವೃತ್ತಾಂತ

**ಚೌ – ಅಪರ ಹೇತು ಸುನು ಸೈಲಕುಮಾರೀ । ಕಹಉಂ ಬಿಚಿತ್ರ ಕಥಾ ಬಿಸ್ತಾರೀ ॥**
**ಜೆಹಿ ಕಾರನ ಅಜ ಅಗುನ ಅರೂಪಾ । ಬ್ರಹ್ಮ ಭಯಉ ಕೋಸಲಪುರ ಭೂಪಾ ॥ ೧ ॥**
**ಜೋ ಪ್ರಭು ಬಿಪಿನ ಫಿರತ ತುಮ್ಹ ದೇಖಾ । ಬಂಧು ಸಮೇತ ಧರೇಂ ಮುನಿಬೇಷಾ ॥**
**ಜಾಸು ಚರಿತ ಅವಲೋಕಿ ಭವಾನೀ । ಸತೀ ಸರೀರ ರಹಿಹು ಬೌರಾನೀ ॥ ೨ ॥**
**ಅಜಹುँ ನ ಛಾಯಾ ಮಿಟತಿ ತುಮ್ಹಾರೀ । ತಾಸು ಚರಿತ ಸುನು ಭ್ರಮ ರುಜ ಹಾರೀ ॥**
**ಲೀಲಾ ಕೀನ್ಹಿ ಜೊ ತೆಹಿಂ ಅವತಾರಾ । ಸೋ ಸಬ ಕಹಿಹಉಂ ಮತಿ ಅನುಸಾರಾ ॥ ೩ ॥**
**ಭರದ್ವಾಜ ಸುನಿ ಸಂಕರ ಬಾನೀ । ಸಕುಚಿ ಸಪ್ರೇಮ ಉಮಾ ಮುಸುಕಾನೀ ॥**
**ಲಗೇ ಬಹುರಿ ಬರನೈ ಬೃಷಕೇತೂ । ಸೋ ಅವತಾರ ಭಯಉ ಜೆಹಿ ಹೇತೂ ॥ ೪ ॥**

ಎಲೈ ಪಾರ್ವತೀ! ಭಗವಂತನು ಶ್ರೀರಾಮನಾಗಿ ಅವತರಿಸಲು ಮತ್ತೊಂದು ಕಾರಣವೂ ಇದೆ. ಅಜನೂ, ನಿರ್ಗುಣನೂ, ನಿರಾಕಾರನೂ, ಅವ್ಯಕ್ತ ಸಚ್ಚಿದಾನಂದಮಯನಾದ ಪರಬ್ರಹ್ಮನು ಅಯೋಧ್ಯೆಯಲ್ಲಿ ಅವತರಿಸಿದ ವಿಶಿಷ್ಟವಾದ ಕಥೆಯನ್ನು ವಿಸ್ತಾರವಾಗಿ ಹೇಳುವೆನು ಕೇಳು. ಮುನಿವೇಷಧಾರಿಯಾದ ಶ್ರೀರಾಮಚಂದ್ರನು ತಮ್ಮನಾದ ಲಕ್ಷ್ಮಣನೊಂದಿಗೆ ವನದಲ್ಲಿ ಸಂಚರಿಸುತ್ತಿದ್ದುದನ್ನು ನೀನು ಹಿಂದಿನ ಜನ್ಮದಲ್ಲಿ ನೋಡಿದ್ದೆ. ಆತನ ಚರಿತ್ರವನ್ನು ಕಂಡು ಸತಿಯ ಶರೀರದಲ್ಲಿ ನೀನು ಭ್ರಮೆಗೊಳಗಾಗಿದ್ದೆ. ಈಗಲೂ ನಿನ್ನ ಆ ಭ್ರಾಂತಿಯ ನೆರಳು ಅಳಿದಿಲ್ಲ. ಆ ಭ್ರಮೆಯನ್ನು ಹರಿಸುವ ಚರಿತವನ್ನು ಆಲಿಸು. ಆ ಅವತಾರದಲ್ಲಿ ಭಗವಂತನು ಗೈದಿರುವ ಎಲ್ಲ ಲೀಲೆಗಳನ್ನು ನಾನು ನನ್ನ ಬುದ್ಧಿಗೆ ತಿಳಿದಂತೆ ಹೇಳುವೆನು.

ಯಾಜ್ಞವಲ್ಕ್ಯರು ಹೇಳುತ್ತಿದ್ದಾರೆ – ಎಲೈ ಭರದ್ವಾಜನೇ! ಶಂಕರನ ಮಾತನ್ನು ಕೇಳಿ, ಸಂಕೋಚದಿಂದ ಉಮಾದೇವಿಯು ಒಂದು ಮುಗುಳ್ನಗೆಯನ್ನು ಬೀರಿದಳು. ಅನಂತರ ವೃಷಭಧ್ವಜ ಶಿವನು ಭಗವಂತನ ಅವತಾರದ ಕಾರಣವನ್ನು ವರ್ಣಿಸತೊಡಗಿದನು. (ಚೌ/೧-೪)

**ದೋ – ಸೋ ಮೈಂ ತುಮ್ಹ ಸನ ಕಹಉಂ ಸಬು ಸುನು ಮುನೀಸ ಮನ ಲಾಇ ।**
**ರಾಮ ಕಥಾ ಕಲಿ ಮಲ ಹರನಿ ಮಂಗಲ ಕರನಿ ಸುಹಾಇ ॥ ೧೪೧ ॥**

ಎಲೈ ಭರದ್ವಾಜಾ! ನಾನು ಅದೆಲ್ಲವನ್ನೂ ನಿನಗೆ ಹೇಳುತ್ತೇನೆ. ದತ್ತಚಿತ್ತನಾಗಿ ಕೇಳು. ಶ್ರೀರಾಮನ ಕಥೆಯು ಕಲಿಮಲಹಾರಿಯೂ, ಮನೋಜ್ಞವೂ, ಮಂಗಳಕಾರಿಯೂ ಆಗಿದೆ. (ದೋ/೧೪೧)

**ಚೌ – ಸ್ವಾಯಂಭೂ ಮನು ಅರು ಸತರೂಪಾ । ಜಿನ್ಹತೇಂ ಭೈ ನರಸೃಷ್ಟಿ ಅನೂಪಾ ॥**
**ದಂಪತಿ ಧರಮ ಆಚರನ ನೀಕಾ । ಅಜಹುँ ಗಾವ ಶ್ರುತಿ ಜಿನ್ಹಕೈ ಲೀಕಾ ॥ ೧ ॥**
**ನೃಪ ಉತ್ತಾನಪಾದ ಸುತ ತಾಸೂ । ಧ್ರುವ ಹರಿ ಭಗತ ಭಯಉ ಸುತ ಜಾಸೂ ॥**
**ಲಘು ಸುತ ನಾಮ ಪ್ರಿಯಬ್ರತ ತಾಹೀ । ಬೇದ ಪುರಾನ ಪ್ರಸಂಸಹಿಂ ಜಾಹೀ ॥ ೨ ॥**
**ದೇವಹೂತಿ ಪುನಿ ತಾಸು ಕುಮಾರೀ । ಜೋ ಮುನಿ ಕರ್ದಮ ಕೈ ಪ್ರಿಯ ನಾರೀ ॥**
**ಆದಿದೇವ ಪ್ರಭು ದೀನದಯಾಲಾ । ಜಠರ ಧರೆಉ ಜೆಹಿಂ ಕಪಿಲ ಕೃಪಾಲಾ ॥ ೩ ॥**
**ಸಾಂಖ್ಯ ಸಾಸ್ತ್ರ ಜಿನ್ಹ ಪ್ರಗಟ ಬಖಾನಾ । ತತ್ತ್ವ ಬಿಚಾರ ನಿಪುನ ಭಗವಾನಾ ॥**
**ತೆಹಿಂ ಮನು ರಾಜ ಕೀನ್ಹ ಬಹು ಕಾಲಾ । ಪ್ರಭು ಆಯಸು ಸಬ ಬಿಧಿ ಪ್ರತಿಪಾಲಾ ॥ ೪ ॥**

ಆದಿಯಲ್ಲಿ ಈ ಅನುಪಮವಾದ ಮಾನವಸೃಷ್ಟಿಯು ಸ್ವಾಯಂಭುವ ಮನು ಹಾಗೂ ಅವನ ಪತ್ನಿ ಶತರೂಪಾ ಎಂಬ ದಂಪತಿಯಿಂದ ಉಂಟಾಯಿತು. ಈ ದಂಪತಿಗಳ ಸದ್ಧರ್ಮಾಚರಣೆಗಳು ಆದರ್ಶವಾಗಿದ್ದು, ವೇದಗಳೂ ಕೂಡ ಅವನ್ನು

ಹಾಡುತ್ತಿದ್ದವು. ಇವರ ಮಗನೇ ಉತ್ತಾನಪಾದ. ಇವನಿಗೆ ಹರಿಭಕ್ತನಾದ ಧ್ರುವನೆಂಬ ಮಗನಿದ್ದನು. ಮನುವಿನ ಕಿರಿಯ ಮಗನೇ ಪ್ರಿಯವ್ರತ. ಇವನನ್ನು ವೇದ-ಪುರಾಣಗಳು ಹೊಗಳುತ್ತಿವೆ. ಸ್ವಾಯಂಭುವ ಮನುವಿನ ಮಗಳು ದೇವಹೂತಿಯು. ಆಕೆ ಕರ್ದಮಮುನಿಯ ಪತ್ನಿಯಾದಳು. ಈ ದಂಪತಿಗಳಲ್ಲಿ ಭಗವಾನ್ ಕಪಿಲನು ಉದಯಿಸಿದನು. ಅವನು ಆದಿದೇವನೂ, ಸಮರ್ಥನೂ, ದೀನದಯಾಳುವೂ ಆಗಿದ್ದನು. ತತ್ತ್ವವಿಚಾರದಲ್ಲಿ ಅತ್ಯಂತ ನಿಪುಣನಾದ ಭಗವಾನ್ ಕಪಿಲನು ಸಾಂಖ್ಯಶಾಸ್ತ್ರವನ್ನು ವ್ಯಾಖ್ಯಾನರೂಪದಿಂದ ಪ್ರಕಟಿಸಿದನು. ಸ್ವಾಯಂಭುವ ಮನುವು ಬಹಳ ಕಾಲದವರೆಗೆ ಭಗವದಾಜ್ಞಾನುಸಾರವಾಗಿ, ಶಾಸ್ತ್ರನಿಯಮಗಳನ್ನು ಪಾಲಿಸುತ್ತಾ ರಾಜ್ಯವಾಳಿದನು. (ಚೌ/೧-೪)

**ಸೋ – ಹೋಇ ನ ಬಿಷಯ ಬಿರಾಗ ಭವನ ಬಸತ ಭಾ ಚೌಥಪನ।**
**ಹೃದಯ್ ಬಹುತ ದುಖ ಲಾಗ ಜನಮ ಗಯಉ ಹರಿಭಗತಿ ಬಿನು॥ ೧೪೨ ॥**

ಅವನಿಗೆ ಮನೆಯಲ್ಲಿರುವಾಗಲೇ ಮುಪ್ಪು ಅಡರಿತು. ಆದರೂ ವಿಷಯಾಸಕ್ತಿಯಲ್ಲಿ ವೈರಾಗ್ಯ ಉಂಟಾಗಲಿಲ್ಲ. ಹರಿಭಕ್ತಿಯಿಲ್ಲದೆ ಜನ್ಮವು ವ್ಯರ್ಥವಾಗಿಹೋಯಿತಲ್ಲ! ಎಂದು ತುಂಬಾ ದುಃಖವಾಯಿತು. (ದೋ/೧೪೨)

**ಚೌ – ಬರಬಸ ರಾಜ ಸುತಹಿ ತಬ ದೀನ್ಹಾ। ನಾರಿ ಸಮೇತ ಗವನ ಬನ ಕೀನ್ಹಾ॥**
**ತೀರಥ ಬರ ನೈಮಿಷ ಬಿಖ್ಯಾತಾ। ಅತಿ ಪುನೀತ ಸಾಧಕ ಸಿಧಿ ದಾತಾ॥ ೧ ॥**
**ಬಸಹಿಂ ತಹಾಂ ಮುನಿ ಸಿದ್ಧ ಸಮಾಜಾ। ತಹಂ ಹಿಯ್ ಹರಷಿ ಚಲೆಉ ಮನು ರಾಜಾ॥**
**ಪಂಥ ಜಾತ ಸೋಹಹಿಂ ಮತಿಧೀರಾ। ಗ್ಯಾನ ಭಗತಿ ಜನು ಧರೇಂ ಸರೀರಾ॥ ೨ ॥**
**ಪಹುಂಚೇ ಜಾಇ ಧೇನುಮತಿ ತೀರಾ। ಹರಷಿ ನಹಾನೇ ನಿರಮಲ ನೀರಾ॥**
**ಆಏ ಮಿಲನ ಸಿದ್ಧ ಮುನಿ ಗ್ಯಾನೀ। ಧರಮ ಧುರಂಧರ ನೃಪರಿಷಿ ಜಾನೀ॥ ೩ ॥**
**ಜಹಂ ಜಹಂ ತೀರಥ ರಹೇ ಸುಹಾಏ। ಮುನಿನ್ಹ ಸಕಲ ಸಾದರ ಕರವಾಏ॥**
**ಕೃಸ ಸರೀರ ಮುನಿಪಟ ಪರಿಧಾನಾ। ಸತ ಸಮಾಜ ನಿತ ಸುನಹಿಂ ಪುರಾನಾ॥ ೪ ॥**

ಆಗ ಮನುವು ಬಲವಂತವಾಗಿ ರಾಜ್ಯವನ್ನು ತನ್ನ ಮಗನಿಗೆ ಕೊಟ್ಟು, ಪತ್ನಿಯಿಂದೊಡಗೂಡಿ ಕಾಡಿಗೆ ಹೋದನು. ಸಾಧಕರಿಗೆ ಸಿದ್ಧಿಯನ್ನು ನೀಡುವ ತೀರ್ಥಗಳಲ್ಲಿ ಅತಿಪವಿತ್ರವೂ, ಶ್ರೇಷ್ಠವೂ ಆದ ನೈಮಿಷಾರಣ್ಯ ಕ್ಷೇತ್ರವು ಪ್ರಸಿದ್ಧವಾದುದು. ಅಲ್ಲಿ ಮುನಿಗಳ, ಸಿದ್ಧರ ಸಮೂಹಗಳು ನೆಲೆಸಿವೆ. ಮನು ಮಹಾರಾಜನು ಹರ್ಷದಿಂದ ಅಲ್ಲಿಗೆ ಹೋದನು. ಧೀರಮತಿಗಳಾದ ಆ ರಾಜ-ರಾಣಿಯರು ದಾರಿಯಲ್ಲಿ ಹೋಗುತ್ತಿದ್ದರೆ, ಜ್ಞಾನ-ಭಕ್ತಿಗಳೇ ಶರೀರಧರಿಸಿಕೊಂಡು ಸಂಚರಿಸುತ್ತವೋ ಎಂದು ಕಾಣುತ್ತಿತ್ತು. ಅವರು ನಡೆಯುತ್ತಾ-ನಡೆಯುತ್ತಾ ಗೋಮತೀನದೀ ತೀರವನ್ನು ಮುಟ್ಟಿದರು. ಆ ನದಿಯ ನಿರ್ಮಲ ಜಲದಲ್ಲಿ ಸ್ನಾನಮಾಡಿ ಪುಳಕಿತರಾದರು. ಅವನು ಧರ್ಮಧುರಂಧರ ರಾಜರ್ಷಿ ಎಂದು ತಿಳಿದು ಜ್ಞಾನಿಗಳಾದ ಸಿದ್ಧರೂ, ಮುನಿಗಳೂ, ಅವನನ್ನು ನೋಡಲು ಬಂದರು. ಮುನಿಗಳೊಡಗೂಡಿ ಆ ದಂಪತಿಗಳು ಎಲ್ಲ ತೀರ್ಥಗಳನ್ನು ಸಂದರ್ಶಿಸಿದರು. ಅವರ ಶರೀರಗಳು ಕೃಶವಾಗಿ ಹೋಗಿದ್ದವು. ಅವರು ಮುನಿಗಳಂತೆ ಜಟಾವಲ್ಕಲಗಳನ್ನು ಧರಿಸಿ, ಸಂತಸಮಾಜದಲ್ಲಿ ದಿನವೂ ಪುರಾಣಶ್ರವಣ ಮಾಡುತ್ತಿದ್ದರು. (ಚೌ/೧-೪)

**ದೋ – ದ್ವಾದಸ ಅಚ್ಛರ ಮಂತ್ರ ಪುನಿ ಜಪಹಿಂ ಸಹಿತ ಅನುರಾಗ।**
**ಬಾಸುದೇವ ಪದ ಪಂಕರುಹ ದಂಪತಿ ಮನ ಅತಿ ಲಾಗ॥ ೧೪೩ ॥**

''ಓ ನಮೋ ಭಗವತೇ ವಾಸುದೇವಾಯ'' ಎಂಬ ಮಂತ್ರರಾಜವಾದ ದ್ವಾದಶಾಕ್ಷರೀ ಮಂತ್ರವನ್ನು ಭಕ್ತಿಯಿಂದ ಅವರು ಜಪಿಸುತ್ತಿದ್ದರು. ಭಗವಾನ್ ಶ್ರೀವಾಸುದೇವನ ಚರಣಕಮಲಗಳಲ್ಲಿ ಆ ದಂಪತಿಗಳ ಮನಸ್ಸು ಸಂಲಗ್ನವಾಗಿತ್ತು. (ದೋ/೧೪೩)

**ಚೌ – ಕರಹಿಂ ಅಹಾರ ಸಾಕ ಫಲ ಕಂದಾ। ಸುಮಿರಹಿಂ ಬ್ರಹ್ಮ ಸಚ್ಚಿದಾನಂದಾ॥**
**ಪುನಿ ಹರಿ ಹೇತು ಕರನ ತಪ ಲಾಗೇ। ಬಾರಿ ಅಧಾರ ಮೂಲ ಫಲ ತ್ಯಾಗೇ॥ ೧ ॥**
**ಉರ ಅಭಿಲಾಷ ನಿರಂತರ ಹೋಈ। ದೇಖಿಅ ನಯನ ಪರಮ ಪ್ರಭು ಸೋಈ॥**
**ಅಗುನ ಅಖಂಡ ಅನಂತ ಅನಾದೀ। ಜೆಹಿ ಚಿಂತಹಿಂ ಪರಮಾರಥಬಾದೀ॥ ೨ ॥**
**ನೇತಿ ನೇತಿ ಜೆಹಿ ಬೇದ ನಿರೂಪಾ। ನಿಜಾನಂದ ನಿರುಪಾಧಿ ಅನೂಪಾ॥**
**ಸಂಭು ಬಿರಂಚಿ ಬಿಷ್ನು ಭಗವಾನಾ। ಉಪಜಹಿಂ ಜಾಸು ಅಂಸ ತೇಂ ನಾನಾ॥ ೩ ॥**

**ಐಸೆಉ ಪ್ರಭು ಸೇವಕ ಬಸ ಅಹಈ । ಭಗತ ಹೇತು ಲೀಲಾತನು ಗಹಈ ॥**

**ಜೌ ಯಹ ಬಚನ ಸತ್ಯ ಶ್ರುತಿ ಭಾಷಾ । ತೌ ಹಮಾರ ಪೂಜಿಹಿ ಅಭಿಲಾಷಾ ॥ ೪ ॥**

ಅವರು ಕಂದ-ಮೂಲ, ಫಲಗಳನ್ನು ಮಾತ್ರ ಭುಂಜಿಸಿ, ಸಚ್ಚಿದಾನಂದ ಸ್ವರೂಪನಾದ ಪರಬ್ರಹ್ಮನನ್ನು ಸ್ಮರಿಸುತ್ತಿದ್ದರು. ಅನಂತರ ಅವರು ಶ್ರೀಹರಿಯ ಕುರಿತು ತಪಸ್ಸು ಮಾಡತೊಡಗಿದರು. ಕೊನೆಗೆ ಕಂದ-ಮೂಲ, ಫಲಗಳನ್ನು ತೊರೆದು ಬರಿಯ ನೀರನ್ನು ಸೇವಿಸತೊಡಗಿದರು. ಅವರು ನಿರಂತರ ಪ್ರಭುದರ್ಶನಾಭಿಲಾಷೆಯಿಂದ ತತ್ತ್ವವೇತ್ತರಾದ ಬ್ರಹ್ಮಜ್ಞಾನಿಗಳು ಸದಾ ಚಿಂತಿಸುತ್ತಿರುವ ನಿರ್ಗುಣನೂ, ಅಖಂಡನೂ, ಅನಂತನೂ, ಅನಾದಿಯೂ ಆದ ಆ ಪ್ರಭುವನ್ನು ಯಾವಾಗ ನೋಡುವೆವೋ ಎಂದು ತಳಮಳಿಸುತ್ತಿದ್ದರು. ನೇತಿ-ನೇತಿ ಎಂದು ವೇದಗಳು ನಿರೂಪಿಸುತ್ತಿರುವ, ಆನಂದಸ್ವರೂಪಿಯೂ, ಉಪಾಧಿರಹಿತನೂ, ಅನುಪಮನೂ, ಅವನ ಅಂಶದಿಂದ ಅನೇಕ ಬ್ರಹ್ಮ, ವಿಷ್ಣು, ಶಿವ ಮೊದಲಾದವರು ಪ್ರಕಟರಾಗುತ್ತಾರೋ, ಅಂತಹ ಮಹಾನ್ ಪ್ರಭುಕೂಡ ತನ್ನ ಭಕ್ತರ ವಶದಲ್ಲಿದ್ದಾನೆ. ತನ್ನ ಭಕ್ತರಿಗಾಗಿ ದಿವ್ಯಲೀಲಾ ಶರೀರವನ್ನು ಧರಿಸುತ್ತಾನೆ, ಎಂದು ವೇದಗಳು ಕೊಂಡಾಡುವ ವಾಣಿಯು ಸತ್ಯವಾದರೆ, ನಮ್ಮ ಅಭಿಲಾಷೆಯು ಖಂಡಿತ ಪೂರೈಸುವುದು. (ಚೌ/೧-೪)

**ದೋ – ಏಹಿ ಬಿಧಿ ಬೀತೇ ಬರಷ ಷಟ ಸಹಸ ಬಾರಿ ಆಹಾರ ।**

**ಸಂಬತ ಸಪ್ತಸಹಸ್ರ ಪುನಿ ರಹೇ ಸಮೀರ ಅಧಾರ ॥ ೧೪೪ ॥**

ಈ ರೀತಿ ಭಾವಿಸುತ್ತಾ ಕೇವಲ ನೀರಿನ ಆಹಾರದಿಂದಲೇ ತಪಸ್ಸನ್ನಾಚರಿಸುತ್ತಾ ಆರು ಸಾವಿರ ವರ್ಷಗಳು ಕಳೆದುಹೋದುವು. ಅನಂತರ ಏಳುಸಾವಿರ ವರ್ಷಗಳನ್ನು ಗಾಳಿಯನ್ನು ಮಾತ್ರ ಸೇವಿಸಿ ಕಳೆದರು. (ದೋ/೧೪೪)

**ಚೌ – ಬರಷ ಸಹಸ ದಸ ತ್ಯಾಗೆಉ ಸೋಊ । ಠಾಢೇ ರಹೇ ಏಕ ಪದ ದೋಊ ॥**

**ಬಿಧಿ ಹರಿ ಹರ ತಪ ದೇಖಿ ಅಪಾರಾ । ಮನು ಸಮೀಪ ಆಏ ಬಹು ಬಾರಾ ॥ ೧ ॥**

**ಮಾಗಹು ಬರ ಬಹು ಭಾಂತಿ ಲೊಭಾಏ । ಪರಮ ಧೀರ ನಹಿಂ ಚಲಹಿಂ ಚಲಾಏ ॥**

**ಅಸ್ಥಿಮಾತ್ರ ಹೊಇ ರಹೇ ಸರೀರಾ । ತದಪಿ ಮನಾಗ ಮನಹಿಂ ನಹಿಂ ಪೀರಾ ॥ ೨ ॥**

**ಪ್ರಭು ಸರ್ಬಗ್ಯ ದಾಸ ನಿಜ ಜಾನೀ । ಗತಿ ಅನನ್ಯ ತಾಪಸ ನೃಪ ರಾನೀ ॥**

**ಮಾಗು ಮಾಗು ಬರು ಭೈ ನಭ ಬಾನೀ । ಪರಮ ಗಭೀರ ಕೃಪಾಮೃತ ಸಾನೀ ॥ ೩ ॥**

**ಮೃತಕ ಜಿಆವನಿ ಗಿರಾ ಸುಹಾಈ । ಶ್ರವನ ರಂಧ್ರ ಹೊಇ ಉರ ಜಬ ಆಈ ॥**

**ಹೃಷ್ಟಪುಷ್ಟತನ ಭಏ ಸುಹಾಏ । ಮಾನಹುಂ ಅಬಹಿಂ ಭವನ ತೇ ಆಏ ॥ ೪ ॥**

ಬಳಿಕ ಅವರು ಗಾಳಿಯನ್ನು ಸೇವಿಸದೆ ಹತ್ತುಸಾವಿರ ವರ್ಷಗಳನ್ನು ಕಳೆದರು. ಇಬ್ಬರೂ ಒಂಟಿಕಾಲಿನಲ್ಲಿ ನಿಂತು ತಪಸ್ಸು ಮಾಡಿದರು. ಅವರ ಅಪಾರವಾದ ತಪವನ್ನು ಕಂಡು, ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು, ಮಹೇಶ್ವರರೂ ಅನೇಕ ಸಲ ಮನುವಿನ ಬಳಿಗೆ ಬಂದರು. ಅವರು ರಾಜನ ಮುಂದೆ ಅನೇಕ ಪ್ರಲೋಭನೆಗಳನ್ನು ಒಡ್ಡಿದರು. ಏನಾದರೂ ವರವನ್ನು ಕೇಳು ಎಂದು ಹೇಳಿದರು. ಆದರೆ ಪರಮ ಧೈರ್ಯವಂತರಾದ ಆ ರಾಜದಂಪತಿಗಳು ಯಾವುದಕ್ಕೂ ಜಗ್ಗಲಿಲ್ಲ. ಅವರ ಶರೀರಗಳು ಅಸ್ಥಿಪಂಜರಗಳಾದುವು. ಆದರೂ ಅವರ ಮನಸ್ಸಿನಲ್ಲಿ ಎಳ್ಳಷ್ಟೂ ನೋವಿರಲಿಲ್ಲ. ಸರ್ವಜ್ಞನಾದ ಪ್ರಭುವು ಅನನ್ಯ ಶರಣಾದ ತಾಪಸ ರಾಜ-ರಾಣಿಯರು ತನ್ನ ದಾಸರೆಂದು ತಿಳಿದನು. ಆಗ ಆಕಾಶದಿಂದ ''ವರವನ್ನು ಬೇಡಿರಿ'' ಎಂಬ ಅಮೃತತುಲ್ಯವಾದ ವಾಣಿಯು ಕೇಳಿಬಂತು. ಮೃತಸಂಜೀವಿನಿಯಂತಹ ಈ ಸುಂದರ ವಾಣಿಯು, ಕರ್ಣಕುಹರಗಳ ಮೂಲಕ ಹೃದಯವನ್ನು ಮುಟ್ಟಿದಾಗ, ಕೂಡಲೇ ಅವರ ಶರೀರಗಳು – ಈಗ ತಾನೇ ಅರಮನೆಯಿಂದ ಕಾಡಿಗೆ ಬಂದಿದ್ದಾರೋ ಎನ್ನುವಂತೆ ಹೃಷ್ಟಪುಷ್ಟವಾಗಿ ಮೈತುಂಬಿಕೊಂಡಿತು. (ಚೌ/೧-೪)

**ದೋ – ಶ್ರವನ ಸುಧಾ ಸಮ ಬಚನ ಸುನಿ ಪುಲಕ ಪ್ರಫುಲ್ಲಿತ ಗಾತ ।**

**ಬೋಲೇ ಮನು ಕರಿ ದಂಡವತ ಪ್ರೇಮ ನ ಹೃದಯಂ ಸಮಾತ ॥ ೧೪೫ ॥**

ಕರ್ಣಾಮೃತವಾಗಿದ್ದ ಆ ಆಕಾಶವಾಣಿಯನ್ನು ಕೇಳಿದೊಡನೆಯೇ ಅವರ ಶರೀರ ಪುಳಕಿತವಾಯಿತು. ಪ್ರಫುಲ್ಲವಾಯಿತು. ಅವರ ಹೃದಯದಲ್ಲಿ ಪ್ರೇಮವು ಹಿಡಿಸದಾಯಿತು. ಆಗ ಆ ದಂಪತಿಗಳು ಸಾಷ್ಟಾಂಗ ನಮಸ್ಕಾರಮಾಡಿ ಇಂತೆಂದರು – (ದೋ/೧೪೫)

**ಚೌ – ಸುನು ಸೇವಕ ಸುರತರು ಸುರಧೇನೂ । ಬಿಧಿ ಹರಿ ಹರ ಬಂದಿತ ಪದ ರೇನೂ ॥**

**ಸೇವತ ಸುಲಭ ಸಕಲ ಸುಖ ದಾಯಕ । ಪ್ರನತಪಾಲ ಸಚರಾಚರ ನಾಯಕ ॥ ೧ ॥**

ಜೌ ಅನಾಥ ಹಿತ ಹಮ ಪರ ನೇಹೂ । ತೌ ಪ್ರಸನ್ನ ಹೊಇ ಯಹ ಬರ ದೇಹೂ ॥
ಜೋ ಸರೂಪ ಬಸ ಸಿವ ಮನ ಮಾಹೀಂ । ಜೆಹಿ ಕಾರನ ಮುನಿ ಜತನ ಕರಾಹೀಂ ॥ ೨ ॥
ಜೋ ಭುಸುಂಡಿ ಮನ ಮಾನಸ ಹಂಸಾ । ಸಗುನ ಅಗುನ ಜೆಹಿ ನಿಗಮ ಪ್ರಸಂಸಾ ॥
ದೇಖಹಿಂ ಹಮ ಸೊ ರೂಪ ಭರಿ ಲೋಚನ । ಕೃಪಾ ಕರಹು ಪ್ರನತಾರತಿ ಮೋಚನ ॥ ೩ ॥
ದಂಪತಿ ಬಚನ ಪರಮ ಪ್ರಿಯ ಲಾಗೇ । ಮೃದುಲ ಬಿನೀತ ಪ್ರೇಮ ರಸ ಪಾಗೇ ॥
ಭಗತ ಬಛಲ ಪ್ರಭು ಕೃಪಾನಿಧಾನಾ । ಬಿಸ್ವಬಾಸ ಪ್ರಗಟೇ ಭಗವಾನಾ ॥ ೪ ॥

ಎಲೈ ಪ್ರಭುವೇ! ನೀನು ನಿನ್ನ ಸೇವಕರಿಗೆ ಕಾಮಧೇನು, ಕಲ್ಪವೃಕ್ಷವಿದ್ದಂತೆ. ನಿನ್ನ ಚರಣರಜಕ್ಕೆ ಹರಿಹರಬ್ರಹ್ಮರೂ ವಂದಿಸುತ್ತಾರೆ. ಸೇವಿಸುವವರಿಗೆ ನೀನು ಸುಲಭನು, ಸುಖಪ್ರದನು. ಶರಣಾಗತವತ್ಸಲನೂ, ಈ ಚರಾಚರ ಸೃಷ್ಟಿಗೆ ಒಡೆಯನೂ ಆಗಿರುವೆ. ಹೇ ಅನಾಥನಾಥಾ! ನಮ್ಮ ಮೇಲೆ ನಿನಗೆ ಪ್ರೀತಿಯಿರುವುದಾದರೆ, ಪ್ರಸನ್ನನಾಗಿ – ಶಿವನ ಹೃದಯದಲ್ಲಿ ನಿರಂತರವಾಗಿ ವಾಸವಾಗಿರುವನೋ, ಮುನಿಗಳು ಯಾವುದರ ಪ್ರಾಪ್ತಿಗಾಗಿ ಪ್ರೀತಿಯಿಂದ ಯತ್ನಿಸುತ್ತಿರುವರೋ, ಕಾಕಭುಶುಂಡಿಯ ಮನೋರೂಪೀ ಮಾನಸಸರೋವರದಲ್ಲಿ ವಿಹರಿಸುತ್ತಿರುವ ಹಂಸನೋ, ವೇದಗಳು ಸಗುಣನೆಂದೂ, ನಿರ್ಗುಣನೆಂದೂ ಯಾರನ್ನು ಕೊಂಡಾಡುತ್ತವೋ, ಅಂತಹ ನಿನ್ನ ರೂಪವನ್ನು ಕಣ್ತುಂಬಾ ನೋಡುವಂತೆ, ಎಲೈ ಶರಣಾಗತರ ದುಃಖಗಳನ್ನು ಕಳೆಯುವವನೇ! ನಮಗೆ ವರವನ್ನು ಕರುಣಿಸು. ರಾಜದಂಪತಿಗಳ ಮೃದುಲವೂ, ವಿನಯಪೂರ್ವಕವೂ ಹಾಗೂ ಪ್ರೇಮಾರ್ದ್ರವಾದ ಮಾತುಗಳಿಂದ ಭಗವಂತನು ಸಂತುಷ್ಟನಾದನು. ಆಗಲೇ ಭಕ್ತವತ್ಸಲನೂ, ಕೃಪಾಳುವೂ, ವಿಶ್ವವ್ಯಾಪಿಯೂ ಆದ ಸರ್ವಸಮರ್ಥ ಭಗವಂತನು ಅವರಿಗೆ ಪ್ರತ್ಯಕ್ಷನಾದನು. (ಚೌ/೧-೪)

**ದೋ – ನೀಲ ಸರೋರುಹ ನೀಲ ಮನಿ ನೀಲ ನೀರಧರ ಸ್ಯಾಮ ।**
**ಲಾಜಹಿಂ ತನ ಸೋಭಾ ನಿರಖಿ ಕೋಟಿ ಕೋಟಿ ಸತ ಕಾಮ ॥ ೧೪೬ ॥**

ನೀಲಕಮಲದಂತೆ ಕೋಮಲವೂ, ನೀಲಮಣಿಯಂತೆ ದೇದಿಪ್ಯಮಾನವೂ, ನೀಲಮೇಘದಂತೆ ಸರಸವೂ, ಪ್ರಕಾಶಮಯವೂ ಆದ ಪರಮಾತ್ಮನ ಆ ನೀಲದೇಹಶೋಭೆಯನ್ನು ನೋಡಿ, ಕೋಟಿ ಮನ್ಮಥರೂ ಕೂಡ ಲಜ್ಜಿತರಾದರು. (ದೋ/೧೪೬)

ಚೌ – ಸರದ ಮಯಂಕ ಬದನ ಛಬಿ ಸೀಂವಾ । ಚಾರು ಕಪೋಲ ಚಿಬುಕ ದರ ಗ್ರೀವಾ ॥
ಅಧರ ಅರುನ ರದ ಸುಂದರ ನಾಸಾ । ಬಿಧು ಕರ ನಿಕರ ಬಿನಿಂದಕ ಹಾಸಾ ॥ ೧ ॥
ನವ ಅಂಬುಜ ಅಂಬಕ ಛಬಿ ನೀಕೀ । ಚಿತನನಿ ಲಲಿತ ಭಾವ್‌ತೀ ಜೀ ಕೀ ॥
ಭೃಕುಟಿ ಮನೋಜ ಚಾಪ ಛಬಿ ಹಾರೀ । ತಿಲಕ ಲಲಾಟ ಪಟಲ ದುತಿಕಾರೀ ॥ ೨ ॥
ಕುಂಡಲ ಮಕರ ಮುಕುಟ ಸಿರ ಭ್ರಾಜಾ । ಕುಟಿಲ ಕೇಸ ಜನು ಮಧುಪ ಸಮಾಜಾ ॥
ಉರ ಶ್ರೀಬತ್ಸ ರುಚಿರ ಬನಮಾಲಾ । ಪದಿಕ ಹಾರ ಭೂಷನ ಮನಿಜಾಲಾ ॥ ೩ ॥
ಕೇಹರಿ ಕಂಧರ ಚಾರು ಜನೇಊ । ಬಾಹು ಬಿಭೂಷನ ಸುಂದರ ತೇಊ ॥
ಕರಿ ಕರ ಸರಿಸ ಸುಭಗ ಭುಜದಂಡಾ । ಕಟಿ ನಿಷಂಗ ಕರ ಸರ ಕೋದಂಡಾ ॥ ೪ ॥

ಆತನ ಮುಖವು ಶರಚ್ಚಂದ್ರನಂತೆ ಚೆಲುವಿನ ಮೇರೆಯಾಗಿತ್ತು. ಕಪೋಲ ಹಾಗೂ ಗಲ್ಲವು ಅತ್ಯಂತ ಸುಂದರವಾಗಿದ್ದವು. ಕೊರಳು ತ್ರಿರೇಖೆಗಳಿಂದ ಕೂಡಿದ್ದು ಶಂಖದಂತೆ ಇತ್ತು. ಅರುಣವರ್ಣದ ಅಧರಗಳು ಹಲ್ಲು ಹಾಗೂ ಮೂಗೂ ವಿಶೇಷವಾಗಿ ಅಂದವಾಗಿದ್ದವು. ಪ್ರಭುವಿನ ಮಂದಹಾಸವು ಚಂದ್ರಕಿರಣಗಳನ್ನೂ ಏಳಿಸುವಂತಿತ್ತು. ಕಣ್ಣುಗಳ ಕಾಂತಿಯು ಆಗತಾನೇ ಅರಳಿದ ತಾವರೆಯಂತೆ ಇತ್ತು. ಆಕರ್ಷಣೀಯವಾದ ಅವನ ಕುಡಿನೋಟವು ಮನೋಹರವಾಗಿದ್ದು, ಮನಸ್ಸಿಗೆ ಅತ್ಯಂತ ಹಿತವಾಗಿತ್ತು. ಬಾಗಿದ ಹುಬ್ಬುಗಳು ಕಾಮನ ಬಿಲ್ಲನ್ನು ನಾಚಿಸುವಂತಿತ್ತು. ಲಲಾಟದಲ್ಲಿ ಪ್ರಕಾಶಮಯ ಕಸ್ತೂರಿ ತಿಲಕ ಶೋಭಿಸುತ್ತಿತ್ತು. ಕಿವಿಗಳಲ್ಲಿ ಮಕರಾಕೃತಿಯ ಹೊಳೆಯುವ ಕುಂಡಲಗಳಿದ್ದು, ತಲೆಯ ಮೇಲೆ ಕಿರೀಟವು ಕಂಗೊಳಿಸುತ್ತಿತ್ತು. ದುಂಬಿಗಳಂತೆ ಮುಂಗುರುಗಳು ಹಾರಾಡುತ್ತಿದ್ದವು. ವಕ್ಷದಲ್ಲಿ ಶ್ರೀವತ್ಸ, ಸುಂದರ ವನಮಾಲೆ, ರತ್ನಖಚಿತ ಹಾರಗಳೂ ರತ್ನಾಭರಣಗಳು ಶೋಭಿಸುತ್ತಿದ್ದವು. ಸಿಂಹಸ್ಕಂಧದಂತಿದ್ದ ಹೆಗಲಿನಿಂದ ಸುಂದರ ಜನಿವಾರ ಇಳಿಬಿದ್ದು ಶೋಭಿಸುತ್ತಿತ್ತು. ಗಜಶುಂಡದಂತೆ ಭುಜಗಳಿದ್ದು, ಭುಜಕೀರ್ತಿ, ಅಂಗದಾದಿ ಆಭೂಷಣಗಳಿಂದ ಅಲಂಕೃತವಾಗಿದ್ದುವು. ಬೆನ್ನಿಗೆ ಬಿಗಿದ ಬತ್ತಳಿಕೆಯೂ, ಕೈಯಲ್ಲಿ ಧನುಸ್ಸೂ ಶೋಭಿಸುತ್ತಿದ್ದವು. (ಚೌ/೧-೪)

**ದೋ – ತಡಿತ ಬಿನಿಂದಕ ಪೀತ ಪಟ ಉದರ ರೇಖ ಬರ ತೀನಿ ।**
**ನಾಭಿ ಮನೋಹರ ಲೇತಿ ಜನು ಜಮುನ ಭವ^ರ ಛಬಿ ಛೀನಿ ॥ ೧೪೭ ॥**

ಮಿಸುನಿಯಂತೆ ಮಿರುಗುತ್ತಿದ್ದ ಪೀತಾಂಬರವು ವಿದ್ಯುತ್ಕಾಂತಿಯನ್ನು ಧಿಕ್ಕರಿಸುವಂತಿತ್ತು. ಉದರದ ಮೇಲೆ ಚೆಲುವಾದ ತ್ರಿವಳಿಗಳಿದ್ದು, ನಾಭಿಯು ಯಮುನಾನದಿಯ ಸುಳಿಯ ಚೆಲುವನ್ನೇ ಅಪಹರಿಸಿದಂತಿತ್ತು. (ದೋ/೧೪೭)

**ಚೌ – ಪದ ರಾಜೀವ ಬರನಿ ನಹಿಂ ಜಾಹೀಂ । ಮುನಿ ಮನ ಮಧುಪ ಬಸಹಿಂ ಜೆನ್ಹ ಮಾಹೀಂ ॥**
**ಬಾಮ ಭಾಗ ಸೋಭತಿ ಅನುಕೂಲಾ । ಆದಿಸಕ್ತಿ ಛಬಿನಿಧಿ ಜಗಮೂಲಾ ॥ ೧ ॥**
**ಜಾಸು ಅಂಸ ಉಪಜಹಿಂ ಗುನಖಾನೀ । ಅಗನಿತ ಲಚ್ಛಿ ಉಮಾ ಬ್ರಹ್ಮಾನೀ ॥**
**ಭೃಕುಟಿ ಬಿಲಾಸ ಜಾಸು ಜಗ ಹೋಈ । ರಾಮ ಬಾಮ ದಿಸಿ ಸೀತಾ ಸೋಈ ॥ ೨ ॥**
**ಛಬಿಸಮುದ್ರ ಹರಿ ರೂಪ ಬಿಲೋಕೀ । ಏಕಟಕ ರಹೇ ನಯನ ಪಟ ರೋಕೀ ॥**
**ಚಿತವಹಿಂ ಸಾದರ ರೂಪ ಅನೂಪಾ । ತೃಪ್ತಿ ನ ಮಾನಹಿಂ ಮನು ಸತರೂಪಾ ॥ ೩ ॥**
**ಹರಷ ಬಿಬಸ ತನ ದಸಾ ಭುಲಾನೀ । ಪರೇ ದಂಡ ಇವ ಗಹಿ ಪದ ಪಾನೀ ॥**
**ಸಿರ ಪರಸೆ ಪ್ರಭು ನಿಜ ಕರ ಕಂಜಾ । ತುರತ ಉಠಾಏ ಕರುನಾಪುಂಜಾ ॥ ೪ ॥**

ಮುನಿಗಳ ಮನಮಧುಕರಗಳು ಸರ್ವದಾ ನೆಲೆಸಿರುವ ಭಗವಂತನ ಚರಣಕಮಲಗಳು ವರ್ಣಿಸಲಸದಳವಾಗಿತ್ತು. ಭಗವಂತನ ಎಡಭಾಗದಲ್ಲಿ ಸದಾ ಅನುಕೂಲಳಾಗಿರುವ, ಸೌಂದರ್ಯರಾಶಿಯಾದ, ಜಗನ್ಮಾತೆ, ಆದಿಶಕ್ತಿಯಾದ ಸೀತಾದೇವಿಯು ಕಂಗೊಳಿಸುತ್ತಿದ್ದಳು. ಆ ಸೀತಾಮಾತೆಯ ಅಂಶದಿಂದಲೇ ಅಗಣಿತಗುಣಗಣಿಯರಾದ ಉಮಾ, ರಮಾ, ಬ್ರಹ್ಮಾಣಿಯರು ಉದ್ಭವಿಸುತ್ತಾರೆ. ತನ್ನ ಭ್ರುಕುಟಿವಿಲಾಸದಿಂದಲೇ ಜಗತ್ತನ್ನು ಸೃಷ್ಟಿಸುವ ಆ ಭಗವಂತನ ಸ್ವರೂಪ ಶಕ್ತಿಯಾದ ಸೀತಾದೇವಿಯು ಶ್ರೀರಾಮಚಂದ್ರನ ವಾಮಭಾಗದಲ್ಲಿ ವಿರಾಜಿಸುತ್ತಿದ್ದಳು. ಶೋಭಾಸಮುದ್ರನಾದ ಶ್ರೀಹರಿಯ ರೂಪವನ್ನು ದರ್ಶಿಸಿದ ಮನು-ಶತರೂಪಾ ಇವರ ನೇತ್ರಪಟಲಗಳು ಸ್ತಬ್ಧವಾದುವು. ಆ ಅನುಪಮರೂಪವನ್ನು ಅವರು ಆದರದಿಂದ ನೋಡುತ್ತಿದ್ದರು. ಎಷ್ಟೇ ನೋಡಿದರೂ ಕಣ್ಣುಗಳು ತೃಪ್ತಿಯಾಗಲೊಲ್ಲದು. ಅತೀವವಾದ ಹರ್ಷಪರವಶದಿಂದ ಅವರಿಗೆ ಶರೀರಸ್ಮೃತಿಯೂ ಕೂಡ ಇಲ್ಲದಂತಾಯ್ತು. ಬಳಿಕ ಅವರು ತಮ್ಮ ಕೈಗಳಿಂದ ಭಗವಂತನ ಚರಣಕಮಲಗಳನ್ನು ಹಿಡಿದುಕೊಂಡು ಸಾಷ್ಟಾಂಗ ನಮಸ್ಕಾರ ಮಾಡಿದರು. ಕರುಣಾಮಯನಾದ ಶ್ರೀಹರಿಯು ತನ್ನ ಕರಕಮಲಗಳಿಂದ ಅವರ ತಲೆಯನ್ನು ನೇವರಿಸಿ, ಅವರನ್ನು ಮೇಲಕ್ಕೆತ್ತಿದನು. (ಚೌ/೧-೪)

**ದೋ – ಬೋಲೆ ಕೃಪಾನಿಧಾನ ಪುನಿ ಅತಿ ಪ್ರಸನ್ನ ಮೊಹಿ ಜಾನಿ ।**
**ಮಾಗಹು ಬರ ಜೋಇ ಭಾವ ಮನ ಮಹಾದಾನಿ ಅನುಮಾನಿ ॥ ೧೪೮ ॥**

ಅನಂತರ ಕೃಪಾನಿಧಿಯಾದ ಶ್ರೀಹರಿಯು ಹೇಳಿದನು – ನಾನು ನಿಮ್ಮ ಮೇಲೆ ಅತ್ಯಂತ ಪ್ರಸನ್ನನಾಗಿರುವೆ. ನೀವು ಬಯಸಿದ ವರವನ್ನು ಕೊಡುವೆನು. ನನ್ನನ್ನು ಮಹದಾನೀ ಎಂದು ತಿಳಿದು ಕೇಳಿಕೊಳ್ಳಿ. (ದೋ/೧೪೮)

**ಚೌ – ಸುನಿ ಪ್ರಭು ಬಚನ ಜೋರಿ ಜುಗ ಪಾನೀ । ಧರಿ ಧೀರಜು ಬೋಲೀ ಮೃದು ಬಾನೀ ॥**
**ನಾಥ ದೇಖಿ ಪದ ಕಮಲ ತುಮ್ಹಾರೇ । ಅಬ ಪೂರೇ ಸಬ ಕಾಮ ಹಮಾರೇ ॥ ೧ ॥**
**ಏಕ ಲಾಲಸಾ ಬಡಿ ಉರ ಮಾಹೀಂ । ಸುಗಮ ಅಗಮ ಕಹಿ ಜಾತಿ ಸೊ ನಾಹೀಂ ॥**
**ತುಮ್ಹಹಿ ದೇತ ಅತಿ ಸುಗಮ ಗೊಸಾಈಂ । ಅಗಮ ಲಾಗ ಮೊಹಿ ನಿಜ ಕೃಪನಾಈಂ ॥ ೨ ॥**
**ಜಥಾ ದರಿದ್ರ ಬಿಬುಧತರು ಪಾಈ । ಬಹು ಸಂಪತಿ ಮಾಗತ ಸಕುಚಾಈ ॥**
**ತಾಸು ಪ್ರಭಾಉ ಜಾನ ನಹಿಂ ಸೋಈ । ತಥಾ ಹೃದಯಂ ಮಮ ಸಂಸಯ ಹೋಈ ॥ ೩ ॥**
**ಸೋ ತುಮ್ಹ ಜಾನಹು ಅಂತರಜಾಮೀ । ಪುರವಹು ಮೋರ ಮನೋರಥ ಸ್ವಾಮೀ ॥**
**ಸಕುಚ ಬಿಹಾಇ ಮಾಗು ನೃಪ ಮೋಹೀ । ಮೋರೇಂ ನಹಿಂ ಅದೇಯ ಕಛು ತೋಹೀ ॥ ೪ ॥**

ಪ್ರಭುವಚನವನ್ನು ಕೇಳಿ, ಆ ದಂಪತಿಗಳು ಕೈಜೋಡಿಸಿಕೊಂಡು, ಧೈರ್ಯವನ್ನು ತಂದುಕೊಂಡು ಮೃದುವಾಣಿಯಲ್ಲಿ ಹೇಳಿದರು – ''ಸ್ವಾಮಿ! ನಿನ್ನ ಪಾದಪದ್ಮಗಳನ್ನು ಕಂಡೊಡನೆ ನಮ್ಮ ಎಲ್ಲ ಕಾಮನೆಗಳು ಪೂರ್ಣಗೊಂಡವು. ಆದರೂ ಮನಸ್ಸಿನಲ್ಲಿ ಒಂದು ಲಾಲಸೆ ಇದೆ. ಅದು ಈಡೇರುವುದು ಸಹಜವೂ ಆಗಿದೆ. ಕಠಿಣವೂ ಆಗಿದೆ. ಆದ್ದರಿಂದ ಅದನ್ನು ಹೇಳಲಾಗುವುದಿಲ್ಲ.

ಸ್ವಾಮಿ! ನಿನಗಂತೂ ಅದನ್ನು ಈಡೇರಿಸುವುದು ಅತ್ಯಂತ ಸುಲಭ. ಆದರೆ ನನಗೆ ದಾಕ್ಷಿಣ್ಯದಿಂದಾಗಿ ಅದು ಬಹಳ ಕಠಿಣವಾಗಿ ತೋರುತ್ತದೆ. ದರಿದ್ರನು ಕಲ್ಪತರುವನ್ನು ಪಡೆದರೂ ಹೆಚ್ಚು ದ್ರವ್ಯವನ್ನು ಕೇಳಲು ಸಂಕೋಚ ಪಡುತ್ತಾನೆ. ಏಕೆಂದರೆ, ಅವನು ಅದರ ಪ್ರಭಾವವನ್ನು ಅರಿಯನು. ಹಾಗೆಯೇ ನನ್ನ ಹೃದಯವೂ ಸಂಕೋಚಪಡುತ್ತದೆ. ಒಡೆಯಾ! ನೀನು ಅಂತರ್ಯಾಮಿಯಾಗಿರುವೆ. ನನ್ನ ಕೋರಿಕೆಯನ್ನೂ ನೀನು ಬಲ್ಲೆ. ಆದ್ದರಿಂದ ನಮ್ಮ ಮನೋರಥವನ್ನು ಈಡೇರಿಸು.'' ಆಗ ಭಗವಂತನೆಂದ – ರಾಜನೇ! ಸಂಕೋಚವನ್ನು ಬಿಟ್ಟು ಏನು ಬೇಕಾದರೂ ಕೇಳಿಕೋ, ನಿನಗೆ ಕೊಡಲಾರದ ವಸ್ತು ನನ್ನ ಬಳಿ ಏನಿದೆ? (ಚೌ/೧-೪)

**ದೋ – ದಾನಿ ಸಿರೋಮನಿ ಕೃಪಾನಿಧಿ ನಾಥ ಕಹಉ ಸತಿಭಾಉ ।**
**ಚಾಹಉ ತುಮ್ಹಹಿ ಸಮಾನ ಸುತ ಪ್ರಭು ಸನ ಕವನ ದುರಾಉ ॥ ೧೪೯ ॥**

ರಾಜನೆಂದನು – ಓ ದಾತೃ ಶಿರೋಮಣಿಯೇ! ಹೇ ಕೃಪಾನಿಧಾನ! ಸ್ವಾಮಿ! ನನ್ನ ಮನಸ್ಸಿನಲ್ಲಿರುವುದನ್ನು ಸತ್ಯವಾಗಿ ಹೇಳುತ್ತೇನೆ, 'ನಾನು ನಿನ್ನಂತಹ ಪುತ್ರನನ್ನು ಬಯಸುತ್ತೇನೆ.'' ಪ್ರಭುವಿನೊಡನೆ ಮುಚ್ಚುಮರೆ ಏಕೆ? (ದೋ/೧೪೯)

**ಚೌ – ದೇಖಿ ಪ್ರೀತಿ ಸುನಿ ಬಚನ ಅಮೋಲೇ । ಏವಮಸ್ತು ಕರುನಾನಿಧಿ ಬೋಲೇ ॥**
**ಆಪು ಸರಿಸ ಖೋಜೌ ಕಹ ಜಾಈ । ನೃಪ ತವ ತನಯ ಹೋಬ ಮೈ ಆಈ ॥ ೧ ॥**
**ಸತರೂಪಹಿ ಬಿಲೋಕಿ ಕರ ಜೋರೇ । ದೇಬಿ ಮಾಗು ಬರು ಜೋ ರುಚಿ ತೋರೇ ॥**
**ಜೋ ಬರು ನಾಥ ಚತುರ ನೃಪ ಮಾಗಾ । ಸೋಇ ಕೃಪಾಲ ಮೋಹಿ ಅತಿ ಪ್ರಿಯ ಲಾಗಾ ॥ ೨ ॥**
**ಪ್ರಭು ಪರಂತು ಸುಠಿ ಹೋತಿ ಢಿಠಾಈ । ಜದಪಿ ಭಗತ ಹಿತ ತುಮ್ಹಹಿ ಸೋಹಾಈ ॥**
**ತುಮ್ಹ ಬ್ರಹ್ಮಾದಿ ಜನಕ ಜಗ ಸ್ವಾಮೀ । ಬ್ರಹ್ಮ ಸಕಲ ಉರ ಅಂತರಜಾಮೀ ॥ ೩ ॥**
**ಅಸ ಸಮುಝುತ ಮನ ಸಂಸಯ ಹೋಈ । ಕಹಾ ಜೊ ಪ್ರಭು ಪ್ರವಾನ ಪುನಿ ಸೋಈ ॥**
**ಜೆ ನಿಜ ಭಗತ ನಾಥ ಸಬ ಅಹಹೀ । ಜೋ ಸುಖು ಪಾವಹಿ ಜೋ ಗತಿ ಲಹಹೀ ॥ ೪ ॥**

ಅರಸನ ಪ್ರೀತಿಯನ್ನು ಕಂಡು, ಆತನ ಅನರ್ಘ್ಯವಚನವನ್ನು ಕೇಳಿ, ದಯಾನಿಧಿಯಾದ ಭಗವಂತನು ''ಹಾಗೆಯೇ ಆಗಲಿ'' ಎಂದು ನುಡಿದನು. ''ರಾಜನೇ! ನನ್ನಂತಹವನನ್ನು ಹುಡುಕಲು ಎಲ್ಲಿಗೆ ಹೋಗಲಿ? (ಏಕೆಂದರೆ ನನ್ನಂತಹವನು ನಾನೇ ಇರುವುದು ಬೇರೆ ಯಾರೂ ಇಲ್ಲ.) ಆದ್ದರಿಂದ ನಾನೇ ಸ್ವತಃ ನಿನ್ನ ಮಗನಾಗಿ ಜನಿಸುತ್ತೇನೆ.'' ಕೈಜೋಡಿಸಿಕೊಂಡು ನಮಸ್ಕರಿಸುತ್ತಿದ್ದ ಶತರೂಪಾದೇವಿಯನ್ನು ಕಂಡು ಭಗವಂತನೆಂದನು – ಹೇ ದೇವಿ! ನಿನಗೆ ಏನು ಬಯಕೆ ಇದೆ? ಬೇಕಾದ ವರವನ್ನು ಕೇಳಿಕೋ. ಆಕೆ ಹೇಳಿದಳು – ಕೃಪಾಳುವಾದ ಪ್ರಭುವೇ! ಚತುರರಾದ ರಾಜರು ಕೇಳಿದ ವರವೇ ನನಗೂ ಇಷ್ಟವಾದುದು. ಆದರೆ ಎಲೈ ಸ್ವಾಮೀ! ನನ್ನ ಮಾತು ಧಾರ್ಷ್ಟ್ಯವಾದೀತೋ ಏನೋ? ಭಕ್ತಬಂಧುವಾದ ನಿನಗೆ ಆ ಧಾರ್ಷ್ಟ್ಯವೂ ಇಷ್ಟವಾದೀತೋ ಏನೋ. ನೀನು ಬ್ರಹ್ಮಾದಿಗಳಿಗೆ ತಂದೆಯೂ, ಜಗತ್ತಿಗೆ ಒಡೆಯನೂ, ಸರ್ವಾಂತರ್ಯಾಮಿಯೂ, ಪರಬ್ರಹ್ಮನೂ ಆಗಿರುವೆ. ಇಂತಹ ನಿನ್ನ ಪ್ರಭಾವವನ್ನು ನೋಡಿ ನನಗೆ ಸಂಕೋಚವಾಗುತ್ತದೆ. ಆದರೂ ನೀನು ಹೇಳಿದುದೇ ಸತ್ಯವು. ನಿನ್ನ ಪರಮ ಭಕ್ತರು ಯಾವ ಅಲೌಕಿಕ ದಿವ್ಯಸುಖವನ್ನು ಅನುಭವಿಸುತ್ತಿರುವರೋ, ಪರಮಗತಿಯನ್ನು ಪಡೆಯುತ್ತಿರುವರೋ – (ಚೌ/೧-೪)

**ದೋ – ಸೋಇ ಸುಖ ಸೋಇ ಗತಿ ಸೋಇ ಭಗತಿ ಸೋಇ ನಿಜ ಚರನ ಸನೇಹು ।**
**ಸೋಇ ಬಿಬೇಕ ಸೋಇ ರಹನಿ ಪ್ರಭು ಹಮಹಿ ಕೃಪಾ ಕರಿ ದೇಹು ॥ ೧೫೦ ॥**

ಅದೇ ದಿವ್ಯಾನಂದವನ್ನು, ಪರಮಗತಿಯನ್ನು, ನಿನ್ನ ಪಾದಪದ್ಮಗಳಲ್ಲಿ ಭಕ್ತಿ ವಿಶ್ವಾಸವನ್ನೂ, ವಿವೇಕವನ್ನೂ, ವಿಶಿಷ್ಟವಾದ ಜೀವನವು ನಮಗೆ ದಯಮಾಡಿ ಕರುಣಿಸು. (ದೋ/೧೫೦)

**ಚೌ – ಸುನಿ ಮೃದು ಗೂಢ ರುಚಿರ ಬರ ರಚನಾ । ಕೃಪಾಸಿಂಧು ಬೋಲೆ ಮೃದು ಬಚನಾ ॥**
**ಜೋ ಕಛು ರುಚಿ ತುಮ್ಹರೇ ಮನ ಮಾಹೀ । ಮೈ ಸೋ ದೀನ್ಹ ಸಬ ಸಂಸಯ ನಾಹೀ ॥ ೧ ॥**
**ಮಾತು ಬಿಬೇಕ ಅಲೌಕಿಕ ತೋರೇ । ಕಬಹು ನ ಮಿಟಿಹಿ ಅನುಗ್ರಹ ಮೋರೇ ॥**
**ಬಂದಿ ಚರನ ಮನು ಕಹೆಉ ಬಹೋರೀ । ಅವರ ಏಕ ಬಿನತೀ ಪ್ರಭು ಮೋರೀ ॥ ೨ ॥**
**ಸುತ ಬಿಷಇಕ ತವ ಪದ ರತಿ ಹೋಊ । ಮೋಹಿ ಬಡ ಮೂಢ ಕಹೈ ಕಿನ ಕೋಊ ॥**
**ಮನಿ ಬಿನು ಫನಿ ಜಿಮಿ ಜಲ ಬಿನು ಮೀನಾ । ಮಮ ಜೀವನ ತಿಮಿ ತುಮ್ಹಹಿ ಅಧೀನಾ ॥ ೩ ॥**

**ಅಸ ಬರು ಮಾಗಿ ಚರನ ಗಹಿ ರಹೆಊ। ಏವಮಸ್ತು ಕರುನಾನಿಧಿ ಕಹೆಊ ॥**
**ಅಬ ತುಮ್ಹ ಮಮ ಅನುಸಾಸನ ಮಾನೀ। ಬಸಹು ಜಾಇ ಸುರಪತಿ ರಜಧಾನೀ ॥ ೪ ॥**

ರಾಣಿಯ ಕೋಮಲವೂ, ಗೂಢವೂ, ಮನೋಹರವೂ, ಶ್ರೇಷ್ಠವೂ ಆದ ಮಾತುಗಳನ್ನು ಕೇಳಿ, ಕೃಪಾಸಿಂಧು ಭಗವಂತನು ಮೃದುವಾದ ವಚನವನ್ನು ನುಡಿದನು – ನಿನ್ನ ಮನಸ್ಸಿನ ಇಚ್ಛೆಗಳೆಲ್ಲವನ್ನೂ ನಾನು ಈಡೇರಿಸುವೆನು. ಇದರಲ್ಲಿ ಸಂದೇಹವೇ ಇಲ್ಲ. ತಾಯೇ! ನನ್ನ ಕೃಪೆಯಿಂದ ನಿನ್ನ ಅಲೌಕಿಕ ಜ್ಞಾನವೂ ಎಂದೂ ನಾಶವಾಗದು. ಆಗ ಪುನಃ ಮನುವು ಭಗವಂತನ ಚರಣಗಳಲ್ಲಿ ವಂದಿಸಿ ಹೇಳಿದನು – ಪ್ರಭು! ನನ್ನದು ಮತ್ತೊಂದು ಬಿನ್ನಪವು. ನನ್ನನ್ನು ಯಾರಾದರೂ ಪರಮಮೂರ್ಖನೆಂದು ಬೇಕಾದರೆ ಭಾವಿಸಲಿ. ನಿನ್ನ ಚರಣಗಳಲ್ಲಿ ನನಗಿರುವ ಪ್ರೇಮವು – ಮಗನಮೇಲೆ ತಂದೆಗೆ ಪ್ರೀತಿಯಿರುವಂತೆ ಇರಲಿ. ಇದೇ ನನ್ನ ಬಯಕೆಯು. ಮಣಿಯಿಲ್ಲದ ಹಾವು, ನೀರಿಲ್ಲದೆ ಮೀನು ಹೇಗೆ ಇರಲಾರದೋ, ಹಾಗೆಯೇ ನೀನಿಲ್ಲದೆ ನಾನು ಇರಲಾರೆನು. ನನ್ನ ಜೀವನವು ನಿನಗೆ ಅಧೀನವಾಗಿರಲಿ. ಹೀಗೆ ವರವನ್ನು ಕೇಳಿ, ಮನುವು ಭಗವಂತನ ಚರಣಗಳನ್ನು ಹಿಡಿದುಕೊಂಡಿದ್ದನು. ಆಗ ದಯಾನಿಧಿಯಾದ ಭಗವಂತನು – ''ಹಾಗೇ ಆಗಲಿ. ಈಗ ನೀವು ನನ್ನ ಆಜ್ಞೆಯನ್ನು ಮನ್ನಿಸಿ, ದೇವೇಂದ್ರನ ರಾಜಧಾನಿ ಅಮರಾವತಿಯಲ್ಲಿ ಹೋಗಿ ವಾಸಿಸಿರಿ ಎಂದು ಅಪ್ಪಣೆಯಿತ್ತನು. (ಚೌ/೧-೪)

**ಸೋ – ತಹँ ಕರಿ ಭೋಗ ಬಿಸಾಲ ತಾತ ಗಏँ ಕಛು ಕಾಲ ಪುನಿ।**
**ಹೋಇಹಹು ಅವಧ ಭುಆಲ ತಬ ಮೈँ ಹೋಬ ತುಮ್ಹಾರ ಸುತ ॥ ೧೫೧ ॥**

ಅಯ್ಯಾ! ಕೆಲಕಾಲ ಸ್ವರ್ಗದಲ್ಲಿ ಬಹುವಿಧವಾದ ಭೋಗಗಳನ್ನು ಭೋಗಿಸಿ, ಮತ್ತೆ ನೀನು ಅಯೋಧ್ಯೆಯ ರಾಜನಾಗುವೆ. ಆಗ ನಾನು ನಿನ್ನ ಮಗನಾಗುವೆನು. (ದೋ/೧೫೧)

**ಚೌ – ಇಚ್ಛಾಮಯ ನರಬೇಷ ಸँವಾರೇँ। ಹೋಇಹಉँ ಪ್ರಗಟ ನಿಕೇತ ತುಮ್ಹಾರೇ ॥**
**ಅಂಸನ್ಹ ಸಹಿತ ದೇಹ ಧರಿ ತಾತಾ। ಕರಿಹಉँ ಚರಿತ ಭಗತ ಸುಖದಾತಾ ॥ ೧ ॥**
**ಜೇ ಸುನಿ ಸಾದರ ನರ ಬಡಭಾಗೀ। ಭವ ತರಿಹಹಿँ ಮಮತಾ ಮದ ತ್ಯಾಗೀ ॥**
**ಆದಿಸಕ್ತಿ ಜೆಹಿँ ಜಗ ಉಪಜಾಯಾ। ಸೋಉ ಅವತರಿಹಿ ಮೋರಿ ಯಹ ಮಾಯಾ ॥ ೨ ॥**
**ಪುರಉಬ ಮೈँ ಅಭಿಲಾಷ ತುಮ್ಹಾರಾ। ಸತ್ಯ ಸತ್ಯ ಪನ ಸತ್ಯ ಹಮಾರಾ ॥**
**ಪುನಿ ಪುನಿ ಅಸ ಕಹಿ ಕೃಪಾನಿಧಾನಾ। ಅಂತರಧಾನ ಭಏ ಭಗವಾನಾ ॥ ೩ ॥**
**ದಂಪತಿ ಉರ ಧರಿ ಭಗತ ಕೃಪಾಲಾ। ತೆಹಿँ ಆಶ್ರಮ ನಿವಸೇ ಕಛು ಕಾಲಾ ॥**
**ಸಮಯ ಪಾಇ ತನು ತಜಿ ಅನಯಾಸಾ। ಜಾಇ ಕೀನ್ಹ ಅಮರಾವತಿ ಬಾಸಾ ॥ ೪ ॥**

ಇಚ್ಛಾನಿರ್ಮಿತ ಮನುಷ್ಯರೂಪವನ್ನು ಧರಿಸಿ, ನಾನು ನಿನ್ನ ಮನೆಯಲ್ಲಿ ಮೈದೋರುತ್ತೇನೆ. ಅಯ್ಯಾ! ನಾನು ನನ್ನ ಅಂಶಗಳಸಹಿತ ಮಾನವದೇಹವನ್ನು ಧರಿಸಿ, ಭಕ್ತರಿಗೆ ಸುಖವನ್ನುಂಟುಮಾಡುವ ಲೀಲೆಗಳನ್ನು ಮಾಡುವೆನು. ಈ ಚರಿತಗಳನ್ನು ಭಾಗ್ಯಶಾಲಿಗಳಾದ ಜನರು, ಆದರದಿಂದ ಆಲಿಸಿ, ಮಮತೆ ಮದಗಳನ್ನು ತೊರೆದು ಭವಸಾಗರವನ್ನು ದಾಟುತ್ತಾರೆ. ಜಗದುತ್ಪತ್ತಿಗೆ ಕಾರಣಳಾದ, ಆದಿಶಕ್ತಿಯಾದ ನನ್ನ ಸ್ವರೂಪಭೂತಳಾದ ಮಾಯೆಯೂ ಕೂಡ ನನ್ನೊಂದಿಗೆ ಅವತರಿಸುವಳು. ಈ ರೀತಿ ನಾನು ನಿಮ್ಮ ಅಭಿಲಾಷೆಯನ್ನು ಈಡೇರಿಸುತ್ತೇನೆ. ನನ್ನ ಪ್ರತಿಜ್ಞೆಯು ತ್ರಿವಾರವೂ ಸತ್ಯವಾದುದು'' ಎಂದು ಪುನಃಪುನಃ ಹೇಳುತ್ತಾ ದಯಾನಿಧಿಯಾದ ಭಗವಂತನು ಅಂತರ್ಧಾನನಾದನು. ಆ ರಾಜದಂಪತಿಗಳು ಕೃಪಾಳುವಾದ ಭಗವಂತನನ್ನು ತಮ್ಮ ಹೃದಯದಲ್ಲಿ ಧ್ಯಾನಿಸುತ್ತಾ ಕೆಲಕಾಲ ಅಲ್ಲೇ ಆಶ್ರಮದಲ್ಲಿ ಉಳಿದರು. ಕಾಲಾಂತರದಲ್ಲಿ ಸಹಜವಾಗಿ, ಅನಾಯಾಸವಾಗಿ ದೇಹತ್ಯಾಗಗೈದು ಅಮರಾವತಿಗೆ ತೆರಳಿ ಅಲ್ಲಿ ವಾಸಿಸಿದರು. (ಚೌ/೧-೪)

**ದೋ – ಯಹ ಇಸಿಹಾಸ ಪುನೀತ ಅತಿ ಉಮಹಿ ಕಹೀ ಬೃಷಕೇತು।**
**ಭರದ್ವಾಜ ಸುನು ಅಪರ ಪುನಿ ರಾಮ ಜನಮ ಕರ ಹೇತು ॥ ೧೫೨ ॥**

ಯಾಜ್ಞವಲ್ಕ್ಯರು ಹೇಳುತ್ತಾರೆ – ಭರದ್ವಾಜನೇ! ಈ ಪವಿತ್ರ ಇತಿಹಾಸವನ್ನು ಶಿವನು ಪಾರ್ವತಿಗೆ ಹೇಳಿದನು. ಶ್ರೀರಾಮನ ಅವತಾರಕ್ಕೆ ಇನ್ನೊಂದು ಕಾರಣವೂ ಇದೆ. ಅದನ್ನು ಕೇಳು. (ದೋ/೧೫೨)

**ಮಾಸಪಾರಾಯಣದ ಐದನೆಯ ವಿಶ್ರಾಮ**

# ಪ್ರತಾಪಭಾನು ವೃತ್ತಾಂತ

**ಚೌ – ಸುನು ಮುನಿ ಕಥಾ ಪುನೀತ ಪುರಾನೀ। ಜೋ ಗಿರಿಜಾ ಪ್ರತಿ ಸಂಭು ಬಖಾನೀ॥**
**ಬಿಸ್ವ ಬಿದಿತ ಏಕ ಕೈಕಯ ದೇಸೂ। ಸತ್ಯಕೇತು ತಹ್ ಬಸಇ ನರೇಸೂ॥ ೧॥**
**ಧರಮ ಧುರಂಧರ ನೀತಿ ನಿಧಾನಾ। ತೇಜ ಪ್ರತಾಪ ಸೀಲ ಬಲವಾನಾ॥**
**ತೆಹಿ ಕೇಂ ಭಏ ಜುಗಲ ಸುತ ಬೀರಾ। ಸಬ ಗುನ ಧಾಮ ಮಹಾ ರನಧೀರಾ॥ ೨॥**
**ರಾಜ ಧನೀ ಜೊ ಜೇಠ ಸುತ ಆಹೀ। ನಾಮ ಪ್ರತಾಪಭಾನು ಅಸ ತಾಹೀ॥**
**ಅಪರ ಸುತಹಿ ಅರಿಮರ್ದನ ನಾಮಾ। ಭುಜಬಲ ಅತುಲ ಅಚಲ ಸಂಗ್ರಾಮಾ॥ ೩॥**
**ಭಾಇಹಿ ಭಾಇಹಿ ಪರಮ ಸಮೀತೀ। ಸಕಲ ದೋಷ ಛಲ ಬರಜಿತ ಪ್ರೀತೀ॥**
**ಜೇಠೇ ಸುತಹಿ ರಾಜ ನೃಪ ದೀನ್ಹಾ। ಹರಿ ಹಿತ ಆಪು ಗವನ ಬನ ಕೀನ್ಹಾ॥ ೪॥**

ಓ ಮುನೀಶ್ವರಾ! ಇದೊಂದು ಪವಿತ್ರವಾದ ಪ್ರಾಚೀನವಾದ ಕಥೆಯನ್ನು ಕೇಳು. ಇದನ್ನು ಪರಶಿವನು ಪಾರ್ವತಿಗೆ ಹೇಳಿದ್ದನು. ಜಗತ್ತಿನಲ್ಲಿ ಪ್ರಸಿದ್ಧವಾದ ಕೈಕೆಯ ಎಂಬ ರಾಜ್ಯದಲ್ಲಿ ಸತ್ಯಕೇತು ಹೆಸರಿನ ರಾಜನು ರಾಜ್ಯವಾಳುತ್ತಿದ್ದನು. ಅವನು ಧರ್ಮಧುರಂಧರನೂ, ನೀತಿನಿಧಿಯೂ, ತೇಜಸ್ವಿಯೂ, ಪರಾಕ್ರಮಿಯೂ, ಸುಶೀಲನೂ, ಬಲಶಾಲಿಯೂ ಆಗಿದ್ದನು. ಅವನಿಗೆ ಇಬ್ಬರು ಗಂಡುಮಕ್ಕಳಿದ್ದರು. ಅವರೂ ಕೂಡ ರಣಧೀರರೂ, ಸಕಲಗುಣಗಳ ಭಂಡಾರಸ್ವರೂಪರೂ ಆಗಿದ್ದರು. ರಾಜ್ಯದ ಉತ್ತರಾಧಿಕಾರಿಯಾದ ಹಿರಿಯ ಮಗನ ಹೆಸರು ಪ್ರತಾಪಭಾನು ಎಂದಿತ್ತು. ಕಿರಿಯವನ ಹೆಸರು ಅರಿಮರ್ದನ. ಅವನು ಮಹಾಬಲಶಾಲಿಯೂ, ಯುದ್ಧದಲ್ಲಿ ಪರ್ವತದಂತೆ ಅಚಲನಾಗಿರುತ್ತಿದ್ದನು. ಅಣ್ಣ-ತಮ್ಮಂದಿರಲ್ಲಿ ಐಕ್ಯಮತ್ಯವಿದ್ದು, ಎಲ್ಲ ವಿಧವಾದ ದೋಷ, ಕಪಟರಹಿತವಾದ ಪ್ರೀತಿ ಇತ್ತು. ಸತ್ಯಕೇತುವು ಹಿರಿಯಮಗನಿಗೆ ರಾಜ್ಯವನ್ನು ಒಪ್ಪಿಸಿ, ಶ್ರೀಹರಿಯ ಧ್ಯಾನಗೈಯ್ಯಲೋಸುಗ ಅಡವಿಗೆ ನಡೆದನು. (ಚೌ/೧-೪)

**ದೋ – ಜಬ ಪ್ರತಾಪರಬಿ ಭಯಉ ನೃಪ ಫಿರೀ ದೊಹಾಈ ದೇಸ।**
**ಪ್ರಜಾ ಪಾಲ ಅತಿ ಬೇದಬಿಧಿ ಕತಹುँ ನಹೀಂ ಅಘ ಲೇಸ॥ ೧೫೩॥**

ಪ್ರತಾಪಭಾನು ರಾಜನಾದ ಮೇಲಂತೂ ಎಲ್ಲೆಲ್ಲೂ ಅವನ ಹೆಸರು ಕೇಳಿ ಬರುತ್ತಿತ್ತು. ಅವನು ವೇದೋಕ್ತ ರೀತಿಯಲ್ಲಿ ನ್ಯಾಯದಿಂದ ರಾಜ್ಯಪಾಲನೆ ಮಾಡುತ್ತಿದ್ದನು. ಅವನ ರಾಜ್ಯದಲ್ಲಿ ಪಾಪದ ಲವಲೇಶವೂ ಇರಲಿಲ್ಲ. (ದೋ/೧೫೩)

**ಚೌ – ನೃಪ ಹಿತಕಾರಕ ಸಚಿವ ಸಯಾನಾ। ನಾಮ ಧರಮರುಚಿ ಸುಕ್ರ ಸಮಾನಾ॥**
**ಸಚಿವ ಸಯಾನ ಬಂಧು ಬಲಬೀರಾ। ಆಪು ಪ್ರತಾಪಪುಂಜ ರನಧೀರಾ॥ ೧॥**
**ಸೇನ ಸಂಗ ಚತುರಂಗ ಅಪಾರಾ। ಅಮಿತ ಸುಭಟ ಸಬ ಸಮರ ಜುಝಾರಾ॥**
**ಸೇನ ಬಿಲೋಕಿ ರಾಉ ಹರಷಾನಾ। ಅರು ಬಾಜೇ ಗಹಗಹೇ ನಿಸಾನಾ॥ ೨॥**
**ಬಿಜಯ ಹೇತು ಕಟಕಈ ಬನಾಈ। ಸುದಿನ ಸಾಧಿ ನೃಪ ಚಲೇಉ ಬಜಾಈ॥**
**ಜಹ್ ತಹ್ ಪರೀಂ ಅನೇಕ ಲರಾಈಂ। ಜೀತೇ ಸಕಲ ಭೂಪ ಬರಿಆಈಂ॥ ೩॥**
**ಸಪ್ತ ದೀಪ ಭುಜಬಲ ಬಸ ಕೀನ್ಹೇ। ಲೈ ಲೈ ದಂಡ ಛಾಡಿ ನೃಪ ದೀನ್ಹೇ॥**
**ಸಕಲ ಅವನಿ ಮಂಡಲ ತೆಹಿ ಕಾಲಾ। ಏಕ ಪ್ರತಾಪಭಾನು ಮಹಿಪಾಲಾ॥ ೪॥**

ಅರಸನ ಹಿತವನ್ನು ಬಯಸುವ, ಬುದ್ಧಿಯಲ್ಲಿ ಶುಕ್ರಾಚಾರ್ಯರಿಗೆ ಸಮಾನನಾದ ಧರ್ಮರುಚಿ ಎಂಬ ಮಂತ್ರಿ ರಾಜನಿಗಿದ್ದನು. ಈ ಪ್ರಕಾರ ಬುದ್ಧಿವಂತನಾದ ಮಂತ್ರಿ, ಪ್ರತಾಪಶಾಲಿಯಾದ ತಮ್ಮ ಇವರ ಜೊತೆಗೆ ಸ್ವತಃ ಪ್ರತಾಪಭಾನುವು ಮಹಾಪ್ರತಾಪಿಯೂ, ರಣಧೀರನೂ ಆಗಿದ್ದನು. ಅವನ ಬಳಿ ಅಪಾರವಾದ ಚತುರಂಗ ಸೈನ್ಯವೂ ಇತ್ತು. ಆ ಸೇನೆಯ ಅಸಂಖ್ಯಯೋಧರು ಯುದ್ಧದಲ್ಲಿ ಸೆಣಸಾಡಿ ಪ್ರಾಣ ಒಪ್ಪಿಸುವಂತಹ ಮಹಾವೀರರಾಗಿದ್ದರು. ಪಟ್ಟಕ್ಕೆ ಬಂದಮೇಲೆ ಜೈತ್ರಯಾತ್ರೆಗಾಗಿ ರಾಜನು ಸೇನೆಯನ್ನು ಸಜ್ಜುಗೊಳಿಸಿ, ಶುಭಲಗ್ನದಲ್ಲಿ ನಗಾರಿ ಹೊಡೆಸಿ ಹೊರಟನು. ಅಲ್ಲಲ್ಲಿ ಅನೇಕ ಯುದ್ಧಗಳಾದುವು. ಅವನು ಎಲ್ಲ ಭೂಪಾಲರನ್ನು ಗೆದ್ದು, ತನ್ನ ಬಾಹುಬಲದಿಂದ ಸಪ್ತದ್ವೀಪಗಳನ್ನು ಗೆದ್ದುಕೊಂಡನು. ಸೋತ ಅರಸರಿಂದ ಕಪ್ಪ-ಕಾಣಿಕೆಗಳನ್ನು ಪಡೆದು ಅವರನ್ನು ಬಿಟ್ಟುಬಿಟ್ಟನು. ಆಗ ಇಡೀ ಭೂಮಂಡಲದಲ್ಲಿ ಪ್ರತಾಪಭಾನುವು ಏಕಚ್ಛತ್ರ ಸಾಮ್ರಾಟನಾದನು. (ಚೌ/೧-೪)

**ದೋ – ಸ್ವಬಸ ಬಿಸ್ವಕರಿ ಬಾಹುಬಲ ನಿಜ ಪುರ ಕೀನ್ಹ ಪ್ರಬೇಸು।**
**ಅರಥ ಧರಮ ಕಾಮಾದಿ ಸುಖ ಸೇವಈ ಸಮಯ್ ನರೇಸು॥ ೧೫೪ ॥**

ಇಡೀ ವಿಶ್ವವನ್ನೇ ತನ್ನ ಬಾಹುಬಲದಿಂದ ವಶಪಡಿಸಿಕೊಂಡು, ಅರಸನು ತನ್ನ ರಾಜಧಾನಿಯನ್ನು ಪ್ರವೇಶಿಸಿದನು. ರಾಜನು ಧರ್ಮ, ಅರ್ಥ, ಕಾಮ ಎಂಬ ಪುರುಷಾರ್ಥತ್ರಯಗಳನ್ನು ಸಮಯಾನುಸಾರ ಸೇವಿಸುತ್ತಾ ಪ್ರಜಾಪಾಲನೆ ಮಾಡುತ್ತಿದ್ದನು. (ದೋ/೧೫೪)

**ಚೌ – ಭೂಪ ಪ್ರತಾಪಭಾನು ಬಲ ಪಾಈ।ಕಾಮಧೇನು ಭೈ ಭೂಮಿ ಸುಹಾಈ॥**
**ಸಬ ದುಖ ಬರಜಿತ ಪ್ರಜಾ ಸುಖಾರೀ।ಧರಮಸೀಲ ಸುಂದರ ನರ ನಾರೀ॥ ೧ ॥**
**ಸಚಿವ ಧರಮರುಚಿ ಹರಿ ಪದ ಪ್ರೀತೀ।ನೃಪ ಹಿತ ಹೇತು ಸಿಖವ ನಿತ ನೀತೀ॥**
**ಗುರ ಸುರ ಸಂತ ಪಿತರ ಮಹಿದೇವಾ।ಕರಇ ಸದಾ ನೃಪ ಸಬ ಕೈ ಸೇವಾ॥ ೨ ॥**
**ಭೂಪ ಧರಮ ಜೇ ಬೇದ ಬಖಾನೇ।ಸಕಲ ಕರಇ ಸಾದರ ಸುಖ ಮಾನೇ॥**
**ದಿನ ಪ್ರತಿ ದೇಇ ಬಿಬಿಧ ಬಿಧಿ ದಾನಾ।ಸುನಇ ಸಾಸ್ತ್ರ ಬರ ಬೇದ ಪುರಾನಾ॥ ೩ ॥**
**ನಾನಾ ಬಾಪೀಂ ಕೂಪ ತಡಾಗಾ।ಸುಮನ ಬಾಟಿಕಾ ಸುಂದರ ಬಾಗಾ॥**
**ಬಿಪ್ರ ಭವನ ಸುರಭವನ ಸುಹಾಏ।ಸಬ ತೀರಥನ್ಹ ಬಿಚಿತ್ರ ಬನಾಏ॥ ೪ ॥**

ಪ್ರತಾಪಭಾನುವಿನ ರಾಜ್ಯಪಾಲನೆಯಲ್ಲಿ ಭೂಮಿಯು ಕಾಮಧೇನುವಿನಂತೆ ಬಯಸಿದ ವಸ್ತುಗಳನ್ನು ನೀಡುತ್ತಿತ್ತು. ಅವನ ರಾಜ್ಯದಲ್ಲಿ ಪ್ರಜೆಗಳು ದುಃಖರಹಿತರಾಗಿ ಸುಖಿಗಳಾದರು. ಸ್ತ್ರೀಪುರುಷರೆಲ್ಲರೂ ಸುಂದರಾಂಗರೂ, ಧರ್ಮಾತ್ಮರೂ ಆಗಿದ್ದರು. ಮಂತ್ರಿಯಾದ ಧರ್ಮರುಚಿಯು ಹರಿಭಕ್ತನಾಗಿದ್ದನು. ರಾಜನಿಗೆ ಹಿತೈಷಿಯಾಗಿದ್ದು, ಯಾವಾಗಲೂ ಅವನಿಗೆ ರಾಜನೀತಿಯನ್ನು ಬೋಧಿಸುತ್ತಿದ್ದನು. ರಾಜನು – ಗುರುಗಳು, ಸಂತರು, ಪಿತೃಗಳು, ಬ್ರಾಹ್ಮಣರು ಹೀಗೆ ಎಲ್ಲರ ಸೇವೆಯನ್ನು ಭಕ್ತಿವಿಶ್ವಾಸದಿಂದ ಮಾಡುತ್ತಿದ್ದನು. ವೇದೋಕ್ತವಾದ ರಾಜಧರ್ಮವನ್ನು ಅವನು ಯಾವಾಗಲೂ ಆದರದಿಂದ ಪಾಲಿಸುತ್ತಿದ್ದನು. ಅವನು ನಿತ್ಯವೂ ಅನೇಕ ವಿಧವಾದ ದಾನ-ಧರ್ಮಗಳನ್ನು ಮಾಡುತ್ತಾ ವೇದ-ಪುರಾಣ-ಶಾಸ್ತ್ರಗಳನ್ನೂ ಶ್ರವಣಮಾಡುತ್ತಿದ್ದನು. ಎಲ್ಲ ತೀರ್ಥಕ್ಷೇತ್ರಗಳಲ್ಲಿ ಬಾವಿಗಳನ್ನು ತೋಡಿಸಿದನು. ಕೆರೆ-ಕಟ್ಟೆಗಳನ್ನು ಕಟ್ಟಿಸಿದನು. ಉದ್ಯಾನವನಗಳನ್ನೂ ನಿರ್ಮಿಸಿದನು. ಬ್ರಾಹ್ಮಣರಿಗೆ ಅಗ್ರಹಾರ ಕಟ್ಟಿಸಿಕೊಟ್ಟನು. ಸುಂದರವಾದ ಗುಡಿ-ಗೋಪುರಗಳನ್ನು ಕಟ್ಟಿಸಿದನು. (ಚೌ/೧-೪)

**ದೋ – ಜಹಂ ಲಗಿ ಕಹೇ ಪುರಾನ ಶ್ರುತಿ ಏಕ ಏಕ ಸಬ ಜಾಗ।**
**ಬಾರ ಸಹಸ್ರ ಸಹಸ್ರ ನೃಪ ಕಿಏ ಸಹಿತ ಅನುರಾಗ॥ ೧೫೫ ॥**

ರಾಜನು ವೇದಶಾಸ್ತ್ರಪುರಾಣಗಳಲ್ಲಿ ಹೇಳಿರುವ ಎಲ್ಲ ಯಜ್ಞ-ಯಾಗಗಳನ್ನು ಒಂದೊಂದಾಗಿ ವಿದ್ಯುಕ್ತವಾಗಿ, ಭಕ್ತಿಶ್ರದ್ಧೆಯಿಂದ ಸಾವಿರಾರು ಬಾರಿ ನಡೆಸಿದನು. (ದೋ/೧೫೫)

**ಚೌ – ಹೃದಯ್ ನ ಕಛು ಫಲ ಅನುಸಂಧಾನಾ।ಭೂಪ ಬಿಬೇಕೀ ಪರಮ ಸುಜಾನಾ॥**
**ಕರಇ ಜೆ ಧರಮ ಕರಮ ಮನ ಬಾನೀ।ಬಾಸುದೇವ ಅರ್ಪಿತ ನೃಪ ಗ್ಯಾನೀ॥ ೧ ॥**
**ಚಢ಼ಿ ಬರ ಬಾಜಿ ಬಾರ ಏಕ ರಾಜಾ।ಮೃಗಯಾ ಕರ ಸಬ ಸಾಜಿ ಸಮಾಜಾ॥**
**ಬಿಂಧ್ಯಾಚಲ ಗಭೀರ ಬನ ಗಯಊ।ಮೃಗ ಪುನೀತ ಬಹು ಮಾರತ ಭಯಊ॥ ೨ ॥**
**ಫಿರತ ಬಿಪಿನ ನೃಪ ದೀಖ ಬರಾಹೂ।ಜನು ಬನ ದುರೆಉ ಸಸಿಹಿ ಗ್ರಸಿ ರಾಹೂ॥**
**ಬಡ ಬಿಧು ನಹಿಂ ಸಮಾತ ಮುಖ ಮಾಹೀಂ।ಮನಹುಁ ಕ್ರೋಧ ಬಸ ಉಗಿಲತ ನಾಹೀಂ॥ ೩ ॥**
**ಕೋಲ ಕರಾಲ ದಸನ ಛಬಿ ಗಾಈ।ತನು ಬಿಸಾಲ ಪೀವರ ಅಧಿಕಾಈ॥**
**ಘುರುಘುರಾತ ಹಯ ಆರೌ ಪಾಏಂ।ಚಕಿತ ಬಿಲೋಕತ ಕಾನ ಉಠಾಏಂ॥ ೪ ॥**

ಅರಸನ ಮನದಲ್ಲಿ ಫಲೇಚ್ಛೆಯು ಲೇಶಮಾತ್ರವೂ ಇರಲಿಲ್ಲ. ಅವನು ತುಂಬಾ ವಿವೇಕಿ, ಬುದ್ಧಿವಂತ. ಜ್ಞಾನಿಯಾದ ಅವನು ತ್ರಿಕರಣಪೂರ್ವಕವಾಗಿ ಮಾಡಿದ ಎಲ್ಲ ಧರ್ಮಕಾರ್ಯಗಳನ್ನು ವಾಸುದೇವಾರ್ಪಣ ಮಾಡಿಯೇ ಮಾಡುತ್ತಿದ್ದನು. ಒಮ್ಮೆ ಆ ಪ್ರತಾಪಭಾನುವು ಒಂದು ಒಳ್ಳೆಯ ಕುದುರೆಯನ್ನೇರಿ, ಪರಿಕರಗಳೊಡನೆ ವಿಂಧ್ಯಾಚಲದ ದಟ್ಟಡವಿಯನ್ನು ಬೇಟೆಯಾಡಲು ಹೊಕ್ಕನು. ಅಲ್ಲಿ ಅವನು ಅನೇಕ ಉತ್ತಮ ಮೃಗಗಳನ್ನು ಕೊಂದನು. ಹಾಗೆ ಬೇಟೆಯಾಡುತ್ತಾ ಮುಂದುವರೆದಾಗ ಒಂದು

ಕಾಡುಹಂದಿಯನ್ನು ನೋಡಿದನು. ಅದರ ಕೋರೆ ದಾಡೆಗಳು, ಚಂದ್ರನನ್ನು ಕಚ್ಚಿಕೊಂಡು ಕಾಡಿನಲ್ಲಿ ಅವಿತುಕೊಂಡಿರುವ ರಾಹುವೋ ಎಂಬಂತಿದ್ದು, ಚಂದ್ರನು ದೊಡ್ಡದಾದ ಕಾರಣ ಅದರ ಬಾಯಲ್ಲಿ ಹಿಡಿಸಲಾರದು, ಆದರೆ ಹಟದಿಂದ ಉಗುಳಬಾರದು ಎಂಬಂತೆ ಆ ಹಂದಿಯ ಭಯಂಕರ ಕೋರೆದಾಡೆಗಳು ಗೋಚರಿಸುತ್ತಿತ್ತು. ಅದರ ಶರೀರವೂ ಪರ್ವತಾಕಾರದಂತಿತ್ತು. ಕುದುರೆಯ ಖುರಪುಟದ ದನಿಕೇಳಿ, ಅದು ಕಿವಿ ನಿಮಿರಿಕೊಂಡು ಗುರ್ರೆನ್ನುತ್ತಾ ಸುತ್ತಲೂ ನೋಡುತ್ತಿತ್ತು. (ಚೌ/೧-೪)

**ದೋ – ನೀಲ ಮಹೀಧರ ಸಿಖರ ಸಮ ದೇಖಿ ಬಿಸಾಲ ಬರಾಹು ।**
**ಚಪರಿ ಚಲೆಉ ಹಯ ಸುಟುಕಿ ನೃಪ ಹಾ್ಁಕಿ ನ ಹೋಇ ನಿಬಾಹು ॥ ೧೫೬ ॥**

ನೀಲಗಿರಿಯ ಶಿಖರದಂತಹ ಭಾರೀ ಗಾತ್ರದ ಆ ಹಂದಿಯನ್ನು ಕಂಡ ರಾಜನು ಕುದುರೆಗೆ ಚಾಟಿಯಿಂದ ತಿವಿದು, ವೇಗವಾಗಿ ಮುಂದೆ ಸಾಗಿದನು. ''ಇನ್ನು ನೀನು ತಪ್ಪಿಸಿಕೊಳ್ಳಲಾರೆ'' ಎಂದು ಹಂದಿಯನ್ನು ಮೂದಲಿಸಿದನು. (ದೋ/೧೫೬)

**ಚೌ – ಆವತ ದೇಖಿ ಅಧಿಕ ರವ ಬಾಜೀ । ಚಲೆಉ ಬರಾಹ ಮರುತ ಗತಿ ಭಾಜೀ ॥**
**ತುರತ ಕೀನ್ಹ ನೃಪ ಸರ ಸಂಧಾನಾ । ಮಹಿ ಮಿಲಿ ಗಯಉ ಬಿಲೋಕತ ಬಾನಾ ॥ ೧ ॥**
**ತಕಿ ತಕಿ ತೀರ ಮಹೀಸ ಚಲಾವಾ । ಕರಿ ಛಲ ಸುಅರ ಸರೀರ ಬಚಾವಾ ॥**
**ಪ್ರಗಟತ ದುರತ ಜಾಇ ಮೃಗ ಭಾಗಾ । ರಿಸ ಬಸ ಭೂಪ ಚಲೆಉ ಸಂಗ ಲಾಗಾ ॥ ೨ ॥**
**ಗಯಉ ದೂರಿ ಘನ ಗಹನ ಬರಾಹೂ । ಜಹ್ಁ ನಾಹಿನ ಗಜ ಬಾಜಿ ನಿಬಾಹೂ ॥**
**ಅತಿ ಅಕೇಲ ಬನ ಬಿಪುಲ ಕಲೇಸೂ । ತದಪಿ ನ ಮೃಗ ಮಗ ತಜಇ ನರೇಸೂ ॥ ೩ ॥**
**ಕೋಲ ಬಿಲೋಕಿ ಭೂಪ ಬಡ ಧೀರಾ । ಭಾಗಿ ಪೈಠ ಗಿರಿಗುಹಾ್ಁ ಗಭೀರಾ ॥**
**ಅಗಮ ದೇಖಿ ನೃಪ ಅತಿ ಪಛಿತಾಈ । ಫಿರೆಉ ಮಹಾಬನ ಪರೆಉ ಭುಲಾಈ ॥ ೪ ॥**

ಗದ್ದಲಮಾಡುತ್ತಾ ತನ್ನೆಡೆಗೆ ಬರುತ್ತಿದ್ದ ಕುದುರೆಯನ್ನು ಕಂಡು ಆ ಹಂದಿಯು ತಪ್ಪಿಸಿಕೊಳ್ಳಲು ವಾಯುವೇಗದಿಂದ ಓಡಿತು. ರಾಜನು ಕೂಡಲೇ ಬಿಲ್ಲಿಗೆ ಬಾಣಹೂಡಿದನು. ಬಾಣವನ್ನು ನೋಡಿದಕೊಡಲೇ ಹಂದಿಯು ನೆಲದೊಳಗೆ ಹುದುಗಿಕೊಂಡಿತು. ರಾಜನು ನೋಡಿ-ನೋಡಿ ಬಾಣಬಿಡುತ್ತಿದ್ದನು. ಆದರೆ ಹಂದಿಯು ಮರೆಮಾಚಿ ತಪ್ಪಿಸಿಕೊಳ್ಳುತ್ತಿತ್ತು. ಆ ಪ್ರಾಣಿಯು ಇಲ್ಲಿ ತೋರಿ, ಅಲ್ಲಿ ಹುದುಗಿ ಓಡಿಹೋಗುತ್ತಿತ್ತು. ಅರಸನೂ ಕೂಡ ರೋಷಗೊಂಡು ಅದನ್ನು ಬೆನ್ನಟ್ಟಿದನು. ಹಂದಿಯು ಕೊನೆಗೆ ತುಂಬಾ ದೂರ, ಆನೆ-ಕುದುರೆಗಳು ಹೋಗಲಾರದ ದಟ್ಟಡವಿಯೊಳಗೆ ನುಗ್ಗಿ ಒಂದು ಗುಹೆಯಲ್ಲಿ ಹೊಕ್ಕಿತ್ತು. ಅದು ದುರ್ಗಮವೆಂದು ತಿಳಿದು ರಾಜನು ಕೈ ಕೈ ಹಿಸುಕಿಕೊಂಡು ಹಿಂತಿರುಗಬೇಕಾಯಿತು. ಆದರೆ ಆ ಗೊಂಡಾರಣ್ಯದಲ್ಲಿ ದಾರಿತಪ್ಪಿಹೋಯಿತು. (ಚೌ/೧-೪)

**ದೋ – ಖೇದ ಖಿನ್ನ ಛುದ್ಧಿತ ತೃಷಿತ ರಾಜಾ ಬಾಜಿ ಸಮೇತ ।**
**ಖೋಜತ ಬ್ಯಾಕುಲ ಸರಿತ ಸರ ಜಲ ಬಿನು ಭಯಉ ಅಚೇತ ॥ ೧೫೭ ॥**

ತುಂಬಾ ಬಳಲಿದುದರಿಂದ ರಾಜನು ಕುದುರೆಸಹಿತ ಹಸಿವು ನೀರಡಿಕೆಗಳಿಂದ ಬಸವಳಿದು, ನದೀ ಸರೋವರಗಳನ್ನು ಹುಡುಕುತ್ತಾ ನೀರು ದೊರಕದೆ ಸ್ಮೃತಿತಪ್ಪಿ ಬಿದ್ದುಬಿಟ್ಟನು. (ದೋ/೧೫೭)

**ಚೌ – ಫಿರತ ಬಿಪಿನ ಆಶ್ರಮ ಏಕ ದೇಖಾ । ತಹ್ಁ ಬಸ ನೃಪತಿ ಕಪಟ ಮುನಿಬೇಷಾ ॥**
**ಜಾಸು ದೇಸ ನೃಪ ಲೀನ್ಹ ಛಡಾಈ । ಸಮರ ಸೇನ ತಜಿ ಗಯಉ ಪರಾಈ ॥ ೧ ॥**
**ಸಮಯ ಪ್ರತಾಪಭಾನು ಕರ ಜಾನೀ । ಆಪನ ಅತಿ ಅಸಮಯ ಅನುಮಾನೀ ॥**
**ಗಯಉ ನ ಗೃಹ ಮನ ಬಹುತ ಗಲಾನೀ । ಮಿಲಾ ನ ರಾಜಹಿ ನೃಪ ಅಭಿಮಾನೀ ॥ ೨ ॥**
**ರಿಸ ಉರ ಮಾರಿ ರಂಕ ಜಿಮಿ ರಾಜಾ । ಬಿಪಿನ ಬಸಇ ತಾಪಸ ಕೇ್ಁ ಸಾಜಾ ॥**
**ತಾಸು ಸಮೀಪ ಗವನ ನೃಪ ಕೀನ್ಹಾ । ಯಹ ಪ್ರತಾಪರಬಿ ತೇಹಿ್ಁ ತಬ ಚೀನ್ಹಾ ॥ ೩ ॥**
**ರಾಉ ತೃಷಿತ ನಹಿ್ಁ ಸೋ ಪಹಿಚಾನಾ । ದೇಖಿ ಸುಬೇಷ ಮಹಾಮುನಿ ಜಾನಾ ॥**
**ಉತರಿ ತುರಗ ತೇ್ಁ ಕೀನ್ಹ ಪ್ರನಾಮಾ । ಪರಮ ಚತುರ ನ ಕಹೆಉ ನಿಜ ನಾಮಾ ॥ ೪ ॥**

ಬಳಿಕ ಎಚ್ಚತ್ತು ಅವನು ಕಾಡಿನಲ್ಲಿ ಅಲೆಯುತ್ತಾ-ಅಲೆಯುತ್ತಾ ಒಂದು ಆಶ್ರಮವನ್ನು ಕಂಡನು. ಅಲ್ಲಿ ಮುನಿಯ ಕಪಟವೇಷದಿಂದ ಓರ್ವ ರಾಜನು ಇರುತ್ತಿದ್ದನು. ಅವನ ರಾಜ್ಯವನ್ನು ಪ್ರತಾಪಭಾನುವು ಕಿತ್ತುಕೊಂಡಿದ್ದುದರಿಂದ, ಅವನು ಯುದ್ಧಭೂಮಿಯಿಂದ ಕಾಲ್ತೆಗೆದು ಹಳುವನ್ನು ಹೊಕ್ಕಿದ್ದನು. ಪ್ರತಾಪಭಾನುವಿನ ಸ್ಥಿತಿಯನ್ನು ಹಾಗೂ ತನ್ನ ದುಸ್ಥಿತಿಯನ್ನು ಕಂಡು ಅವುಗಳ ಕುರಿತು ಯೋಚಿಸಿದಾಗ ಅವನ ಮನಸ್ಸಿಗೆ ತುಂಬಾ ಗ್ಲಾನಿಯಾಯಿತು. ಇದರಿಂದ ನೊಂದ ಅವನು ಮನೆಗೂ ಹೋಗಲಿಲ್ಲ. ಸ್ವಾಭಿಮಾನಿಯಾದ್ದರಿಂದ ಪ್ರತಾಪಭಾನುವಿಗೂ ಶರಣಾಗಲಿಲ್ಲ. ದರಿದ್ರನಂತೆ ಸಿಟ್ಟನ್ನು ಹೊಟ್ಟೆಯಲ್ಲಿ ಅಡಗಿಸಿಟ್ಟುಕೊಂಡೇ ಆ ರಾಜನು ಕಾಡಿನಲ್ಲಿ ತಾಪಸವೇಷದಿಂದ ಇರುತ್ತಿದ್ದನು. ಪ್ರತಾಪಭಾನುವು ಅವನ ಬಳಿಗೆ ಹೋದನು. ಬಂದವನು ಪ್ರತಾಪಭಾನು ಎಂದು ಅವನು ಕೂಡಲೇ ಗುರುತಿಸಿದನು. ವಿಪರೀತವಾದ ಬಾಯಾರಿಕೆಯ ಕಾರಣದಿಂದ ಪ್ರತಾಪಭಾನುವಿಗೆ ಅವನ ಗುರುತು ಸಿಗಲಿಲ್ಲ. ಸುಂದರ ವೇಷವನ್ನು ಕಂಡು ರಾಜನು ಅವನು ಮಹಾಮುನಿಯೆಂದು ಬಗೆದು, ತನ್ನ ಕುದುರೆಯಿಂದಿಳಿದು ಆತನಿಗೆ ನಮಸ್ಕರಿಸಿದನು. ಆದರೆ ಚತುರನಾದ್ದರಿಂದ ಪ್ರತಾಪಭಾನುವು ಅವನಿಗೆ ತನ್ನ ಹೆಸರನ್ನು ತಿಳಿಸಲಿಲ್ಲ. (ಚೌ/೧-೪)

**ದೋ – ಭೂಪತಿ ತೃಷಿತ ಬಿಲೋಕಿ ತೆಹಿಂ ಸರಬರು ದೀನ್ಹ ದೆಖಾಇ।**
**ಮಜ್ಜನ ಪಾನ ಸಮೇತ ಹಯ ಕೀನ್ಹ ನೃಪತಿ ಹರಷಾಇ ॥ ೧೫೮ ॥**

ರಾಜನು ಬಾಯಾರಿರುವುದನ್ನು ಕಂಡು ಆ ಮುನಿಯು ಅವನಿಗೆ ಒಂದು ಸರೋವರವನ್ನು ತೋರಿಸಿದ. ಹರ್ಷಗೊಂಡು ಅರಸನು ತಾನು ಮಿಂದು ನೀರುಕುಡಿದು, ಕುದುರೆಗೂ ನೀರು ಕುಡಿಸಿದನು. (ದೋ/೧೫೮)

**ಚೌ – ಗೈ ಶ್ರಮ ಸಕಲ ಸುಖೀ ನೃಪ ಭಯಊ। ನಿಜ ಆಶ್ರಮ ತಾಪಸ ಲೈ ಗಯಊ ॥**
**ಆಸನ ದೀನ್ಹ ಅಸ್ತ ರಬಿ ಜಾನೀ। ಪುನಿ ತಾಪಸ ಬೋಲೆಉ ಮೃದು ಬಾನೀ ॥ ೧ ॥**
**ಕೋ ತುಮ್ಹ ಕಸ ಬನ ಫಿರಹು ಅಕೇಲೇಂ। ಸುಂದರ ಜುಬಾ ಜೀವ ಪರಹೇಲೇಂ ॥**
**ಚಕ್ರಬರ್ತಿ ಕೇ ಲಚ್ಛನ ತೋರೇಂ। ದೇಖತ ದಯಾ ಲಾಗಿ ಅತಿ ಮೋರೇಂ ॥ ೨ ॥**
**ನಾಮ ಪ್ರತಾಪಭಾನು ಅವನೀಸಾ। ತಾಸು ಸಚಿವ ಮೈಂ ಸುನಹು ಮುನೀಸಾ ॥**
**ಫಿರತ ಅಹೇರೇಂ ಪರೆಉಂ ಭುಲಾಈ। ಬಡೇಂ ಭಾಗ ದೇಖೆಉಂ ಪದ ಆಈ ॥ ೩ ॥**
**ಹಮ ಕಹಂ ದುರ್ಲಭ ದರಸ ತುಮ್ಹಾರಾ। ಜಾನತ ಹೌಂ ಕಛು ಭಲ ಹೋನಿಹಾರಾ ॥**
**ಕಹ ಮುನಿ ತಾತ ಭಯಉ ಅಁಧಿಆರಾ। ಜೋಜನ ಸತ್ತರಿ ನಗರು ತುಮ್ಹಾರಾ ॥ ೪ ॥**

ರಾಜನ ಬಳಲಿಕೆ ತೊಲಗಿತು. ಲವಲವಿಕೆ ಉಂಟಾಗಿ ಹಾಯೆನಿಸಿತು. ಬಳಿಕ ಆ ತಾಪಸಿಯು ರಾಜನನ್ನು ತನ್ನ ಆಶ್ರಮಕ್ಕೆ ಕರೆದುಕೊಂಡು ಹೋದನು. ಸಾಯಂಸಮಯವನ್ನು ತಿಳದು ಅವನು ರಾಜನಿಗೆ ಕುಳಿತುಕೊಳ್ಳಲು ಆಸನ ನೀಡಿದನು. ಮತ್ತೆ ಆ ಮುನಿಯು ಮೃದುವಾದ ವಾಣಿಯಿಂದ ಇಂತೆಂದನು – ''ಅಯ್ಯಾ ನೀನು ಯಾರು? ಸುಂದರ ಯುವಕನಾಗಿದ್ದು, ಜೀವಭಯವಿಲ್ಲದೆ ಇಂತಹ ಗೊಂಡಾರಣ್ಯದಲ್ಲಿ ಒಬ್ಬಂಟಿಗನಾಗಿ ಏಕೆ ಸಂಚರಿಸುತ್ತಿರುವೆ? ನಿನ್ನಲ್ಲಿ ಚಕ್ರವರ್ತಿಯ ಲಕ್ಷಣಗಳನ್ನು ಕಂಡು ನನಗೆ ಕನಿಕರ ಉಂಟಾಗುತ್ತದೆ. ಇದನ್ನು ಕೇಳಿ ರಾಜನಿಂತೆಂದನು – ''ಮುನೀಶ್ವರರೇ! ಪ್ರತಾಪಭಾನು ಎಂಬ ಓರ್ವ ರಾಜನಿದ್ದಾನೆ. ನಾನು ಅವನ ಮಂತ್ರಿಯು. ಬೇಟೆಯಾಡುತ್ತಾ ಬಂದವನು. ಹಾದಿ ತಪ್ಪಿಹೋಯಿತು. ಸೌಭಾಗ್ಯದಿಂದ ನಿಮ್ಮ ಚರಣಗಳ ದರ್ಶನವಾಯಿತು. ನಮ್ಮಂತಹವರಿಗೆ ನಿಮ್ಮ ದರ್ಶನವು ಅತಿ ದುರ್ಲಭ. ಆದ್ದರಿಂದ ನಿಮ್ಮ ದರ್ಶನದಿಂದ ಏನೋ ಒಳ್ಳೆಯದು ಕಾದಿದೆ ಎಂದೇ ತಿಳಿಯುತ್ತೇನೆ.'' ಬಳಿಕ ಮುನಿಯು ಹೇಳಿದ – ಅಯ್ಯಾ! ಕತ್ತಲಾಯಿತು. ನಿನ್ನ ಊರು ಇಲ್ಲಿಂದ ಎಪ್ಪತ್ತುಯೋಜನ ದೂರದಲ್ಲಿದೆ. (ಚೌ/೧-೪)

**ದೋ – ನಿಸಾ ಘೋರ ಗಂಭೀರ ಬನ ಪಂಥ ನ ಸುನಹು ಸುಜಾನ।**
**ಬಸಹು ಆಜು ಅಸ ಜಾನಿ ತುಮ್ಹ ಜಾಏಹು ಹೋತ ಬಿಹಾನ ॥ ೧೫೯(ಕ)॥**
**ತುಲಸೀ ಜಸಿ ಭವತಬ್ಯತಾ ತೈಸೀ ಮಿಲಇ ಸಹಾಇ।**
**ಆಪುನು ಆವಇ ತಾಹಿ ಪಹಿಂ ತಾಹಿ ತಹಾಂ ಲೈ ಜಾಇ ॥ ೧೫೯(ಖ)॥**

''ಎಲೈ ಸಜ್ಜನನೇ! ನನ್ನ ಮಾತನ್ನು ಕೇಳು. ಇದು ಘೋರಾಂಧಕಾರದಿಂದ ಕೂಡಿದ ರಾತ್ರಿಯು. ಗೊಂಡಾರಣ್ಯ ಬೇರೆ. ದಾರಿ ಕಾಣದು. ಆದ್ದರಿಂದ ನೀನು ಇಂದು ಇಲ್ಲೇ ಉಳಿದು ಬೆಳಗಾದಾಗ ಹೊರಡುವೆಯಂತೆ.'' ತುಲಸೀದಾಸರು ಹೇಳುತ್ತಿದ್ದಾರೆ – ಭವಿತವ್ಯವಿದ್ದಂತೆ ನೆರವು ದೊರೆಯುತ್ತದೆ. ಒಂದೋ ಅದೇ ಸ್ವತಃ ಅವನ ಬಳಿಗೆ ಬರುತ್ತದೆ. ಇಲ್ಲವೇ ಅವನನ್ನೇ ಅಲ್ಲಿಗೆ ಎಳೆದೊಯ್ಯುತ್ತದೆ. (ದೋ/೧೫೯ ಕ, ಖ)

**ಚೌ– ಭಲೇಹಿಂ ನಾಥ ಆಯಸು ಧರಿ ಸೀಸಾ । ಬಾಂಧಿ ತುರಗ ತರು ಬೈಠ ಮಹೀಸಾ ॥**
**ನೃಪ ಬಹು ಭಾಂತಿ ಪ್ರಸಂಸೇಉ ತಾಹೀ । ಚರನ ಬಂದಿ ನಿಜ ಭಾಗ್ಯ ಸರಾಹೀ ॥ ೧ ॥**
**ಪುನಿ ಬೋಲೇಉ ಮೃದು ಗಿರಾ ಸುಹಾಈ । ಜಾನಿ ಪಿತಾ ಪ್ರಭು ಕರಉಂ ಢಿಠಾಈ ॥**
**ಮೋಹಿ ಮುನೀಸ ಸುತ ಸೇವಕ ಜಾನೀ । ನಾಥ ನಾಮ ನಿಜ ಕಹಹು ಬಖಾನೀ ॥ ೨ ॥**
**ತೇಹಿ ನ ಜಾನ ನೃಪ ನೃಪಹಿ ಸೊ ಜಾನಾ । ಭೂಪ ಸುಹೃದ ಸೋ ಕಪಟ ಸಯಾನಾ ॥**
**ಬೈರೀ ಪುನಿ ಛತ್ರೀ ಪುನಿ ರಾಜಾ । ಛಲ ಬಲ ಕೀನ್ಹ ಚಹಇ ನಿಜ ಕಾಜಾ ॥ ೩ ॥**
**ಸಮುಝಿ ರಾಜಸುಖ ದುಖಿತ ಅರಾತೀ । ಅವಾಂ ಅನಲ ಇವ ಸುಲಗಇ ಛಾತೀ ॥**
**ಸರಲ ಬಚನ ನೃಪ ಕೇ ಸುನಿ ಕಾನಾ । ಬಯರ ಸಂಭಾರಿ ಹೃದಯಂ ಹರಷಾನಾ ॥ ೪ ॥**

ಪೂಜ್ಯರೇ! 'ಹಾಗೇ ಆಗಲಿ' ಎಂದು ಹೇಳಿ ಮುನಿಯು ಆಜ್ಞೆಯನ್ನು ಶಿರಸಾವಹಿಸಿ, ಕುದುರೆಯನ್ನು ಮರಕ್ಕೆ ಕಟ್ಟಿಹಾಕಿ, ರಾಜನು ಕುಳಿತುಕೊಂಡನು. ರಾಜನು ಆ ಮುನಿಯನ್ನು ಪರಿಪರಿಯಾಗಿ ಕೊಂಡಾಡಿ ಅವರ ಚರಣಗಳಿಗೆ ವಂದಿಸಿ, ತನ್ನ ಭಾಗ್ಯವನ್ನು ಕೊಂಡಾಡಿದನು. ಮತ್ತೆ ವಿನಮ್ರನಾಗಿ, ಮೃದುಮಧುರವಾಗಿ ಇಂತೆಂದನು – ಪೂಜ್ಯರೇ! ನಿಮ್ಮನ್ನು ತಂದೆಯೆಂದು ತಿಳಿದು, ನಿಮ್ಮನ್ನು ಪ್ರಶ್ನಿಸುವ ಧಾರ್ಷ್ಟ್ಯವನ್ನು ಮಾಡುತ್ತೇನೆ. ಮುನೀಶ್ವರರೇ! ನನ್ನನ್ನು ನಿಮ್ಮ ಪುತ್ರನೆಂದೂ, ದಾಸನೆಂದೂ ಭಾವಿಸಿ, ನಿಮ್ಮ ಹೆಸರು, ಊರುಗಳನ್ನು ವಿಸ್ತಾರವಾಗಿ ತಿಳಿಸಿರಿ. ರಾಜನು ಅವನನ್ನು ಗುರುತಿಸಲಿಲ್ಲ. ಆದರೆ ಅವನು ರಾಜನನ್ನು ಗುರುತಿಸಿದ್ದ. ರಾಜನು ಶುದ್ಧ ಹೃದಯನಾಗಿದ್ದನು. ಮುನಿಯು ಕಪಟಪಟು. ಅವನು ರಾಜನಿಗೆ ಶತ್ರುವು, ಕ್ಷತ್ರಿಯನು ಬೇರೆ, ಅಲ್ಲದೆ ರಾಜವಂಶಜನು. ಅವನು ಕಪಟದಿಂದಾಗಲೀ, ಬಲದಿಂದಾಗಲೀ ತನ್ನ ಕಾರ್ಯವನ್ನು ಸಾಧಿಸಿಕೊಳ್ಳಲು ಬಯಸುತ್ತಿದ್ದನು. ಆ ಶತ್ರು ತನ್ನ ಕಳೆದುಹೋದ ರಾಜ್ಯಸುಖವನ್ನು ನೆನೆದು ನೊಂದುಕೊಂಡಿದ್ದನು. ಅವನ ಎದೆಯು ಕುಂಬಾರನ ಆವಿಗೆಯಂತೆ ಒಳಗೊಳಗೆ ಉರಿಯುತ್ತಿತ್ತು. ರಾಜನ ಸರಳ ವಚನವನ್ನು ಕೇಳಿ, ತನ್ನ ಹಗೆಯನ್ನು ನೆನೆದು ಹರ್ಷಿತನಾದನು. (ಚೌ/೧-೪)

**ದೋ – ಕಪಟ ಬೋರಿ ಬಾನೀ ಮೃದುಲ ಬೋಲೇಉ ಜುಗುತಿ ಸಮೇತ ।**
**ನಾಮ ಹಮಾರ ಭಿಖಾರಿ ಅಬ ನಿರ್ಧನ ರಹಿತ ನಿಕೇತ ॥ ೧೬೦ ॥**

ಆ ಮುನಿಯು ಕಪಟದಲ್ಲಿ ಅದ್ದಿ ತುಂಬಾ ಯುಕ್ತಿಯಿಂದ ಮೃದುಮಾತಿನಲ್ಲಿ ಹೀಗೆ ಹೇಳಿದನು – 'ಈಗ ನನ್ನ ಹೆಸರು ತಿರುಕ. ನಾನು ನಿರ್ಧನನು. ಮನೆಮಾರಿಲ್ಲದವನು. (ದೋ/೧೬೦)

**ಚೌ– ಕಹ ನೃಪ ಜೇ ಬಿಗ್ಯಾನ ನಿಧಾನಾ । ತುಮ್ಹ ಸಾರಿಖೇ ಗಲಿತ ಅಭಿಮಾನಾ ॥**
**ಸದಾ ರಹಹಿಂ ಅಪನಪೌ ದುರಾಏಂ । ಸಬ ಬಿಧಿ ಕುಸಲ ಕುಬೇಷ ಬನಾಏಂ ॥ ೧ ॥**
**ತೇಹಿ ತೇಂ ಕಹಹಿಂ ಸಂತ ಶ್ರುತಿ ಟೇರೇಂ । ಪರಮ ಅಕಿಂಚನ ಪ್ರಿಯ ಹರಿ ಕೇರೇಂ ॥**
**ತುಮ್ಹ ಸಮ ಅಧನ ಭಿಖಾರಿ ಅಗೇಹಾ । ಹೋತ ಬಿರಂಚಿ ಸಿವಹಿ ಸಂದೇಹಾ ॥ ೨ ॥**
**ಜೋಸಿ ಸೋಸಿ ತವ ಚರನ ನಮಾಮೀ । ಮೋ ಪರ ಕೃಪಾ ಕರಿಅ ಅಬ ಸ್ವಾಮೀ ॥**
**ಸಹಜ ಪ್ರೀತಿ ಭೂಪತಿ ಕೈ ದೇಖೀ । ಆಪು ಬಿಷಯ ಬಿಸ್ವಾಸ ಬಿಸೇಷೀ ॥ ೩ ॥**
**ಸಬ ಪ್ರಕಾರ ರಾಜಹಿ ಅಪನಾಈ । ಬೋಲೇಉ ಅಧಿಕ ಸನೇಹ ಜನಾಈ ॥**
**ಸುನು ಸತಿಭಾಉ ಕಹಉಂ ಮಹಿಪಾಲಾ । ಇಹಾಂ ಬಸತ ಬೀತೇ ಬಹು ಕಾಲಾ ॥ ೪ ॥**

ರಾಜನು ಹೇಳಿದನು – ನಿಮ್ಮಂಥ ವಿಜ್ಞಾನನಿಧಿಗಳು, ಯಾವಾಗಲೂ ನಿಗರ್ವಿಗಳಾಗಿದ್ದು ತಮ್ಮ ಸ್ವರೂಪವನ್ನು ಗೋಪ್ಯವಾಗಿಟ್ಟಿರುತ್ತಾರೆ. ಏಕೆಂದರೆ ಕುವೇಷದಲ್ಲಿರುವುದರಲ್ಲೇ ಎಲ್ಲ ರೀತಿಯ ಶ್ರೇಯಸ್ಸಿದೆ. ಪ್ರಕಟ ಸಂತವೇಷದಲ್ಲಿ ಮಾನ ಗೌರವದ ಹಾಗೂ ಪತನದ ಸಂಭವವಿರುತ್ತದೆ. ಆದ್ದರಿಂದ ಪರಮ ಅಕಿಂಚನ, ಸರ್ವಥಾ ಅಹಂಕಾರ, ಮಮತಾ, ಮಾನರಹಿತನಾದವನೇ ಭಗವಂತನಿಗೆ ಪ್ರಿಯರಾಗುತ್ತಾರೆ ಎಂದು ಸಂತರೂ ಮತ್ತು ವೇದಗಳು ಸಾರಿ-ಸಾರಿ ಹೇಳುತ್ತವೆ. ನಿಮ್ಮಂತಹ ನಿರ್ಧನರೂ, ತಿರುಕರೂ, ಅನಿಕೇತರನ್ನು ಕಂಡು, ಶಿವ, ಬ್ರಹ್ಮಾ ಮೊದಲಾದ ದೇವತೆಗಳಿಗೂ 'ಇವರು ಸಂತರೋ, ಇಲ್ಲವೇ ತಿರುಕರೋ?' ಎಂಬ ಸಂದೇಹ ಉಂಟಾಗುತ್ತದೆ. ನೀವು ಏನಾದರೂ ಆಗಿರಿ. ನಾನು ನಿಮ್ಮ ಚರಣಗಳಿಗೆ ವಂದಿಸುತ್ತೇನೆ. ಹೇ ಸ್ವಾಮಿ! ನೀವು ನನ್ನ ಮೇಲೆ ಕೃಪೆದೋರಿರಿ.'' ತನ್ನ ಮೇಲೆ ರಾಜನ ಸ್ವಾಭಾವಿಕ ಪ್ರೀತಿ, ನಂಬಿಕೆಗಳನ್ನು ಕಂಡು, ಎಲ್ಲ ವಿಧದಿಂದಲೂ ರಾಜನನ್ನು ತನ್ನ ವಶಪಡಿಸಿಕೊಂಡು, ಹೆಚ್ಚೆಚ್ಚು ಸ್ನೇಹವನ್ನು ತೋರುತ್ತಾ ಆ ಕಪಟ ತಪಸ್ವೀ ಹೇಳಿದನು – ರಾಜನೇ! ಕೇಳು. ನಾನು ಸತ್ಯವಾಗಿ ಹೇಳುತ್ತೇನೆ. ನಾನು ಇಲ್ಲಿ ಬಹಳ ಕಾಲದಿಂದ ವಾಸಿಸುತ್ತಿದ್ದೇನೆ. (ಚೌ/೧-೪)

**ದೋ – ಅಬ ಲಗಿ ಮೋಹಿ ನ ಮಿಲೆಉ ಕೊಉ ಮೈಂ ನ ಜನಾವಉಂ ಕಾಹು ।**
**ಲೋಕಮಾನ್ಯತಾ ಅನಲ ಸಮ ಕರ ತಪ ಕಾನನ ದಾಹು ॥ ೧೬೧(ಕ)॥**

ಇದುವರೆಗೆ ನನ್ನನ್ನು ಯಾರೂ ಸಂಧಿಸಲಿಲ್ಲ. ನಾನೂ ಕೂಡ ಯಾರಿಗೂ ಕಾಣಿಸಿಕೊಳ್ಳಲಿಲ್ಲ. ಏಕೆಂದರೆ, ಲೋಕಪ್ರತಿಷ್ಠೆ ಎನ್ನುವುದು ಬೆಂಕಿಯಂತೆ. ಅದು ತಪಸ್ಸೆಂಬ ಕಾಡನ್ನು ಸುಟ್ಟುಬಿಡುತ್ತದೆ. (ದೋ/೧೬೧ ಕ)

**ಸೋ – ತುಲಸೀ ದೇಖಿ ಸುಬೇಷು ಭೂಲಹಿಂ ಮೂಢ ನ ಚತುರ ನರ ।**
**ಸುಂದರ ಕೇಕಿಹಿ ಪೇಖು ಬಚನ ಸುಧಾ ಸಮ ಅಸನ ಅಹಿ ॥ ೧೬೧(ಖ)॥**

ತುಳಸೀದಾಸರು ಹೇಳುತ್ತಾರೆ – ಸುಂದರ ವೇಷವನ್ನು ನೋಡಿ ಮೂಢರೇ ಅಲ್ಲ, ಜಾಣರೂ ಮೋಸಹೋಗುತ್ತಾರೆ. ಸುಂದರವಾದ ನವಿಲನ್ನು ನೋಡು. ಅದರ ಕಂಠಸ್ವರವು ಅಮೃತದಂತೆ. ಆದರೆ ಆಹಾರಮಾತ್ರ ವಿಷಸರ್ಪಗಳು. (ಸೋ/೧೬೧ ಖ)

**ಚೌ – ತಾತೇಂ ಗುಪುತ ರಹಉಂ ಜಗ ಮಾಹೀಂ । ಹರಿ ತಜಿ ಕಿಮಪಿ ಪ್ರಯೋಜನ ನಾಹೀಂ ॥**
**ಪ್ರಭು ಜಾನತ ಸಬ ಬಿನಹಿಂ ಜನಾಏಂ । ಕಹಹು ಕವನಿ ಸಿಧಿ ಲೋಕ ರಿಝಾಏಂ ॥ ೧ ॥**
**ತುಮ್ಹ ಸುಚಿ ಸುಮತಿ ಪರಮ ಪ್ರಿಯ ಮೋರೇಂ । ಪ್ರೀತಿ ಪ್ರತೀತಿ ಮೋಹಿ ಪರ ತೋರೇಂ ॥**
**ಅಬ ಜೌಂ ತಾತ ದುರಾವಉಂ ತೋಹೀ । ದಾರುನ ದೋಷ ಘಟಇ ಅತಿ ಮೋಹೀ ॥ ೨ ॥**
**ಜಿಮಿ ಜಿಮಿ ತಾಪಸು ಕಥಇ ಉದಾಸಾ । ತಿಮಿ ತಿಮಿ ನೃಪಹಿ ಉಪಜ ಬಿಸ್ವಾಸಾ ॥**
**ದೇಖಾ ಸ್ವಬಸ ಕರ್ಮ ಮನ ಬಾನೀ । ತಬ ಬೋಲಾ ತಾಪಸ ಬಗಧ್ಯಾನೀ ॥ ೩ ॥**
**ನಾಮ ಹಮಾರ ಏಕತನು ಭಾಈ । ಸುನಿ ನೃಪ ಬೋಲೆಉ ಪುನಿ ಸಿರು ನಾಈ ॥**
**ಕಹಹು ನಾಮ ಕರ ಅರಥ ಬಖಾನೀ । ಮೊಹಿ ಸೇವಕ ಅತಿ ಆಪನ ಜಾನೀ ॥ ೪ ॥**

ಕಪಟ ತಪಸ್ವಿಯು ಹೇಳಿದನು – ''ಇದರಿಂದಲೇ ನಾನು ಜಗತ್ತಿನಲ್ಲಿ ಅಡಗಿರುತ್ತೇನೆ. ಹರಿಯನ್ನು ಬಿಟ್ಟು ಬೇರೆ ಯಾರೊಡನೆಯೂ ನನಗೆ ಸಂಬಂಧವಿಲ್ಲ. ಪ್ರಭುವಿಗೆ ಹೇಳದಿದ್ದರೂ ಎಲ್ಲವೂ ತಿಳಿಯುವುದಲ್ಲವೇ? ಲೋಕವನ್ನು ತೃಪ್ತಿಪಡಿಸುವುದರಿಂದ ಆಗುವ ಪ್ರಯೋಜನವಾದರೂ ಏನು? ನೀನು ಶುಚಿಯಾದ ಬುದ್ಧಿಯವನಾಗಿರುವಿ. ಆದ್ದರಿಂದ ನೀನು ನನಗೆ ತುಂಬಾ ಪ್ರಿಯನಾಗಿರುವೆ. ನಿನಗೂ ನನ್ನ ಮೇಲೆ ಪ್ರೀತಿ ವಿಶ್ವಾಸವಿದೆ. ಅಯ್ಯಾ! ಈಗಲೂ ಕೂಡ ನಿನ್ನಿಂದ ಏನನ್ನಾದರೂ ಮರೆಮಾಚಿದರೆ ನನಗೆ ದಾರುಣವಾದ ದೋಷವು ತಟ್ಟೀತು.'' ಆ ಕಪಟ ಸಂನ್ಯಾಸಿಯು ವಿರಕ್ತಿಯ ಮಾತುಗಳನ್ನು ಆಡಿದಂತೆಲ್ಲ ರಾಜನ ನಂಬಿಕೆ ಹೆಚ್ಚುತ್ತಾ ಹೋಯಿತು. ರಾಜನು ಕಾಯಾ, ವಾಚಾ, ಮನಸಾ ಹೀಗೆ ತ್ರಿಕರಣಪೂರ್ವಕ ತನಗೆ ವಶನಾದನೆಂದು ತಿಳಿದು, ಆ ಬಕಧ್ಯಾನಿ ಕಪಟೀ ಮುನಿಯು ಇಂತೆಂದನು – ''ತಮ್ಮಾ! ನನ್ನ ಹೆಸರು ಏಕತನು ಎಂದು.'' ಇದನ್ನು ಕೇಳಿ ರಾಜನು ಮತ್ತೊಮ್ಮೆ ತಲೆಬಾಗಿ ನುಡಿದನು – ಮಹಾತ್ಮರೇ! ನಾನು ನಿಮ್ಮ ಅತ್ಯಂತ ಆಪ್ತಸೇವಕನೆಂದು ತಿಳಿದು ನಿಮ್ಮ ಹೆಸರಿನ ಅರ್ಥವನ್ನು ವಿಶದಪಡಿಸಿ ಹೇಳಿರಿ. (ಚೌ/೧-೪)

**ದೋ – ಆದಿಸೃಷ್ಟಿ ಉಪಜೀ ಜಬಹಿಂ ತಬ ಉತಪತಿ ಭೈ ಮೋರಿ ।**
**ನಾಮ ಏಕತನು ಹೇತು ತೇಹಿ ದೇಹ ನ ಧರೀ ಬಹೋರಿ ॥ ೧೬೨ ॥**

ಕಪಟಮುನಿಯು ಹೇಳಿದನು – ಮೊಟ್ಟಮೊದಲು ಸೃಷ್ಟಿಯಾದಾಗಲೇ ನಾನು ಹುಟ್ಟಿದ್ದು. ಅಂದಿನಿಂದ ನಾನು ಮತ್ತೊಂದು ದೇಹವನ್ನು ತೊಡಲಿಲ್ಲ. ಅದರಿಂದ ನನಗೆ ಏಕತನು ಎಂಬ ಹೆಸರಾಯಿತು. (ದೋ/೧೬೨)

**ಚೌ – ಜನಿ ಆಚರಜು ಕರಹು ಮನ ಮಾಹೀಂ । ಸುತ ತಪ ತೇಂ ದುರ್ಲಭ ಕಛು ನಾಹೀಂ ॥**
**ತಪಬಲ ತೇಂ ಜಗ ಸೃಜಇ ಬಿಧಾತಾ । ತಪಬಲ ಬಿಷ್ನು ಭಏ ಪರಿತ್ರಾತಾ ॥ ೧ ॥**
**ತಪಬಲ ಸಂಭು ಕರಹಿಂ ಸಂಘಾರಾ । ತಪ ತೇಂ ಅಗಮ ನ ಕಛು ಸಂಸಾರಾ ॥**
**ಭಯಉ ನೃಪಹಿ ಸುನಿ ಅತಿ ಅನುರಾಗಾ । ಕಥಾ ಪುರಾತನ ಕಹೈ ಸೊ ಲಾಗಾ ॥ ೨ ॥**
**ಕರಮ ಧರಮ ಇತಿಹಾಸ ಅನೇಕಾ । ಕರಇ ನಿರೂಪನ ಬಿರತಿ ಬಿಬೇಕಾ ॥**
**ಉದಭವ ಪಾಲನ ಪ್ರಲಯ ಕಹಾನೀ । ಕಹೆಸಿ ಅಮಿತ ಆಚರಜ ಬಖಾನೀ ॥ ೩ ॥**
**ಸುನಿ ಮಹೀಪ ತಾಪಸ ಬಸ ಭಯಊ । ಆಪನ ನಾಮ ಕಹನ ತಬ ಲಯಊ ॥**
**ಕಹ ತಾಪಸ ನೃಪ ಜಾನಉಂ ತೋಹೀ । ಕೀನ್ಹೆಹು ಕಪಟ ಲಾಗ ಭಲ ಮೋಹೀ ॥ ೪ ॥**

''ಮಗು! ಇದರಲ್ಲಿ ಆಶ್ಚರ್ಯಪಡಬೇಡ. ತಪಸ್ಸಿನಿಂದ ಸಾಧ್ಯವಿಲ್ಲದುದು ಯಾವುದೂ ಇಲ್ಲ. ತಪೋಬಲದಿಂದಲೇ ಬ್ರಹ್ಮನು ಜಗತ್ತನ್ನು ಸೃಷ್ಟಿಸುತ್ತಾನೆ. ತಪೋಬಲದಿಂದಲೇ ವಿಷ್ಣುವು ವಿಶ್ವವನ್ನು ಪಾಲಿಸುತ್ತಾನೆ. ತಪೋಬಲದಿಂದಲೇ ರುದ್ರನು ಲಯಮಾಡುತ್ತಾನೆ. ತಪಸ್ಸಿನಿಂದ ಸಿಗದಿರುವ ವಸ್ತು ಈ ಪ್ರಪಂಚದಲ್ಲಿ ಯಾವುದೂ ಇಲ್ಲ.'' ಇದನ್ನು ಕೇಳಿ ರಾಜನಿಗೆ ಆ ಮುನಿಯ ಮೇಲೆ ವಿಶೇಷ ಅನುರಾಗ ಉಂಟಾಯಿತು. ಆಗ ಆ ತಾಪಸನು ಪ್ರಾಚೀನ ಕಥೆಗಳನ್ನೂ, ಧರ್ಮ, ಕರ್ಮಗಳಿಗೆ ಸಂಬಂಧಿಸಿದ ಇತಿಹಾಸವನ್ನು ವರ್ಣಿಸುತ್ತಾ, ಜ್ಞಾನ, ವೈರಾಗ್ಯಗಳನ್ನೂ ನಿರೂಪಿಸತೊಡಗಿದನು. ಸೃಷ್ಟಿಯ ಉತ್ಪತ್ತಿ, ಸ್ಥಿತಿ, ಪ್ರಳಯ ಇವುಗಳ ಅಮಿತವೂ, ಆಶ್ಚರ್ಯಕರವೂ ಆದ ಕಥೆಗಳನ್ನು ವಿಸ್ತಾರವಾಗಿ ಹೇಳಿದನು. ಇದೆಲ್ಲವನ್ನು ಕೇಳಿ ರಾಜನು ಪೂರ್ತಿಯಾಗಿ ಅವನಿಗೆ ವಶನಾದನು ಹಾಗೂ ತನ್ನ ಹೆಸರನ್ನು ಪ್ರಕಟಿಸಿದನು. ಆಗ ಆ ಸಂನ್ಯಾಸೀ – ರಾಜಾ! ನಾನು ನಿನ್ನನ್ನು ಬಲ್ಲೆ. ನೀನು ನಿನ್ನ ಹೆಸರನ್ನು ಅಡಗಿಸಿಟ್ಟೆ. ಅದೂ ನನಗೆ ಒಳಿತೇ ಎನಿಸಿತು. (ಚೌ/೧-೪)

**ಸೋ – ಸುನು ಮಹೀಸ ಅಸಿ ನೀತಿ ಜಹಁ ತಹಁ ನಾಮ ನ ಕಹಹಿಂ ನೃಪ ।**
**ಮೋಹಿ ತೋಹಿ ಪರ ಅತಿ ಪ್ರೀತಿ ಸೋಇ ಚತುರತಾ ಬಿಚಾರಿ ತವ॥ ೧೬೩ ॥**

ಎಲೈ ರಾಜನೇ! ರಾಜರು ಹೋದಲೆಲ್ಲ ತಮ್ಮ ಹೆಸರನ್ನು ಪ್ರಕಟಪಡಿಸಬಾರದು ಎಂಬುದನ್ನು ನೀತಿಶಾಸ್ತ್ರವು ಹೇಳುತ್ತದೆ. ನಿನ್ನ ಚಾತುರ್ಯವನ್ನು ಗ್ರಹಿಸಿ ನನಗೆ ನಿನ್ನ ಮೇಲೆ ಪ್ರೇಮವು ಹೆಚ್ಚಾಗಿದೆ. (ದೋ/೧೬೩)

**ಚೌ – ನಾಮ ತುಮ್ಹಾರ ಪ್ರತಾಪ ದಿನೇಸಾ । ಸತ್ಯಕೇತು ತವ ಪಿತಾ ನರೇಸಾ ॥**
**ಗುರ ಪ್ರಸಾದ ಸಬ ಜಾನಿಅ ರಾಜಾ । ಕಹಿಅ ನ ಆಪನ ಜಾನಿ ಅಕಾಜಾ ॥ ೧ ॥**
**ದೇಖಿ ತಾತ ತವ ಸಹಜ ಸುಧಾಈ । ಪ್ರೀತಿ ಪ್ರತೀತಿ ನೀತಿ ನಿಪುನಾಈ ॥**
**ಉಪಜಿ ಪರೀ ಮಮತಾ ಮನ ಮೋರೇಂ । ಕಹಉಁ ಕಥಾ ನಿಜ ಪೂಛೇ ತೋರೇಂ ॥ ೨ ॥**
**ಅಬ ಪ್ರಸನ್ನ ಮೈಂ ಸಂಸಯ ನಾಹೀಂ । ಮಾಗು ಜೊ ಭೂಪ ಭಾವ ಮನ ಮಾಹೀಂ ॥**
**ಸುನಿ ಸುಬಚನ ಭೂಪತಿ ಹರಷಾನಾ । ಗಹಿ ಪದ ಬಿನಯ ಕೀನ್ಹಿ ಬಿಧಿ ನಾನಾ ॥ ೩ ॥**
**ಕೃಪಾಸಿಂಧು ಮುನಿ ದರಸನ ತೋರೇಂ । ಚಾರಿ ಪದಾರಥ ಕರತಲ ಮೋರೇಂ ॥**
**ಪ್ರಭುಹಿ ತಥಾಪಿ ಪ್ರಸನ್ನ ಬಿಲೋಕೀ । ಮಾಗಿ ಅಗಮ ಬರ ಹೋಉಁ ಅಸೋಕೀ॥ ೪ ॥**

ನಿನ್ನ ಹೆಸರು ಪ್ರತಾಪಭಾನು. ಸತ್ಯಕೇತು ಮಹಾರಾಜರು ನಿನ್ನ ತಂದೆಯವರು. ಗುರುಕೃಪೆಯಿಂದ ನಾನು ಎಲ್ಲವನ್ನು ಬಲ್ಲೆ. ಆದರೆ ನಿಜವನ್ನು ಹೇಳಿದರೆ ಪ್ರಮಾದವಾದೀತೆಂದು ಭಾವಿಸಿ, ನಾನು ಮೊದಲೇ ಹೇಳಲಿಲ್ಲ. ಅಯ್ಯಾ! ನಿನ್ನ ಸಹಜವಾದ ಋಜುತ್ವ, ಪ್ರೀತಿ, ನಂಬಿಕೆ, ನೀತಿ ನೈಪುಣ್ಯ ಇವುಗಳನ್ನು ಕಂಡು ನನ್ನ ಮನಸ್ಸಿನಲ್ಲಿ ನಿನ್ನ ಮೇಲೆ ತುಂಬಾ ಮಮತೆ ಮೂಡಿದೆ. ಆದ್ದರಿಂದ ನೀನು ಕೇಳಿದ್ದರಿಂದ ನನ್ನ ಕಥೆಯನ್ನು ಹೇಳುತ್ತೇನೆ. ಈಗ ನಾನು ಪ್ರಸನ್ನನಾಗಿದ್ದೇನೆ. ಇದರಲ್ಲಿ ಸಂದೇಹ ಪಡಬೇಡ. ರಾಜನೇ! ನಿನ್ನ ಮನಸ್ಸಿಗೆ ಬಂದ ವರವನ್ನು ಕೇಳಿಕೋ'' ಎಂದು ನುಡಿಯಲು, ರಾಜನು ಮುನಿಯ ಪ್ರಿಯವಚನವನ್ನು ಕೇಳಿ ಹರ್ಷಿತನಾದನು. ಅವನಿಗೆ ವಂದಿಸಿ ಬಿನ್ನವಿಸಿಕೊಂಡನು – ಎಲೈ ಕೃಪಾಸಿಂಧು ಮುನಿಯೇ! ನಿನ್ನ ದರ್ಶನದಿಂದಲೇ ನನಗೆ ಚತುರ್ವಿಧ ಪುರುಷಾರ್ಥಗಳು ಕರಗತವಾದುವು. ಆದರೂ ಕೂಡ ನೀವು ಪ್ರಸನ್ನರಾಗಿರುವುದನ್ನು ಕಂಡು, ದುರ್ಲಭವಾದ ಈ ವರವನ್ನು ಬೇಡಿಕೊಂಡು ಶೋಕರಹಿತನಾಗುತ್ತೇನೆ. (ಚೌ/೧-೪)

**ದೋ – ಜರಾ ಮರನ ದುಖ ರಹಿತ ತನು ಸಮರ ಜಿತೈ ಜನಿ ಕೋಉ ।**
**ಏಕಛತ್ರ ರಿಪುಹೀನ ಮಹಿ ರಾಜ ಕಲಪ ಸತ ಹೋಉ ॥ ೧೬೪ ॥**

'ನನ್ನ ಶರೀರವು ಜರಾಮರಣಗಳಿಂದ ರಹಿತವಾಗಲಿ. ನಾನು ಯುದ್ಧದಲ್ಲಿ ಅಜೇಯನಾಗಲಿ. ಈ ಭೂತಳದಲ್ಲಿ ನೂರು ಕಲ್ಪಗಳವರೆಗೆ ನಾನು ನಿಷ್ಕಂಟಕನಾಗಿ ಏಕಚ್ಛತ್ರ ಸಾಮ್ರಾಟನಾಗಿರಲಿ' ಈ ವರವನ್ನು ತಾವು ಕರುಣಿಸಬೇಕು. (ದೋ/೧೬೪)

**ಚೌ – ಕಹ ತಾಪಸ ನೃಪ ಐಸೇಇ ಹೋಊ । ಕಾರನ ಏಕ ಕಠಿನ ಸುನು ಸೋಊ ॥**
**ಕಾಲಉ ತುಅ ಪದ ನಾಇಹಿ ಸೀಸಾ । ಏಕ ಬಿಪ್ರಕುಲ ಛಾಡಿ ಮಹೀಸಾ ॥ ೧ ॥**
**ತಪಬಲ ಬಿಪ್ರ ಸದಾ ಬರಿಆರಾ । ತಿನ್ಹ ಕೇ ಕೋಪ ನ ಕೋಉ ರಖವಾರಾ ॥**
**ಜೌಂ ಬಿಪ್ರನ್ಹ ಬಸ ಕರಹು ನರೇಸಾ । ತೌ ತುಅ ಬಸ ಬಿಧಿ ಬಿಷ್ನು ಮಹೇಸಾ ॥ ೨ ॥**
**ಚಲ ನ ಬ್ರಹ್ಮಕುಲ ಸನ ಬರಿಆಈ । ಸತ್ಯ ಕಹಉಁ ದೋಉ ಭುಜಾ ಉಠಾಈ ॥**
**ಬಿಪ್ರ ಶ್ರಾಪ ಬಿನು ಸುನು ಮಹಿಪಾಲಾ । ತೋರ ನಾಸ ನಹಿಂ ಕವನೆಹುಁ ಕಾಲಾ ॥ ೩ ॥**

**ಹರಷೆಉ ರಾಉ ಬಚನ ಸುನಿ ತಾಸೂ । ನಾಥ ನ ಹೋಇ ಮೋರ ಅಬ ನಾಸೂ ॥**
**ತವ ಪ್ರಸಾದ ಪ್ರಭು ಕೃಪಾನಿಧಾನಾ । ಮೋ ಕಹುँ ಸರ್ಬ ಕಾಲ ಕಲ್ಯಾನಾ ॥ ೪ ॥**

ತಪಸ್ವೀ ಹೇಳಿದ – 'ಎಲೈ ರಾಜನೇ! ಹಾಗೇಯಾಗಲೀ. ಆದರೆ ಒಂದು ಜಟಿಲ ಸಮಸ್ಯೆ ಇದೆ. ಅದನ್ನು ಕೇಳು. ಬ್ರಾಹ್ಮಣಕುಲವನ್ನು ಬಿಟ್ಟು, ಕಾಲವೂ ಕೂಡ ನಿನ್ನ ಮುಂದೆ ನತಮಸ್ತಕವಾಗುತ್ತದೆ. ಬ್ರಾಹ್ಮಣರು ತಪೋಬಲದಿಂದ ಶಕ್ತಿಸಂಪನ್ನರಾಗಿರುತ್ತಾರೆ. ಅವರ ಕೋಪದಿಂದ ಯಾರೂ ಕಾಪಾಡಲಾರರು. ನೀನು ಬ್ರಾಹ್ಮಣರನ್ನು ವಶಪಡಿಸಿಕೊಂಡರೆ, ಬ್ರಹ್ಮಾ, ವಿಷ್ಣು, ಶಿವ ಇವರೂ ಕೂಡ ನಿನಗೆ ಅಧೀನರಾಗುವರು. 'ಬ್ರಾಹ್ಮಣ ಕುಲದ ಮೇಲೆ ಹಠವು ಕೆಲಸಮಾಡದು.' ಇದನ್ನು ನಾನು ಎರಡೂ ಕರವೆತ್ತಿ ಪ್ರತಿಜ್ಞಾಪೂರ್ವಕವಾಗಿ ಹೇಳುತ್ತೇನೆ. ರಾಜನೇ! ಬ್ರಾಹ್ಮಣರ ಶಾಪದಿಂದಲ್ಲದೆ ನಿನ್ನ ನಾಶವು ಎಂದಿಗೂ ಆಗದು. ರಾಜನು ಆ ಮುನಿಯ ಮಾತನ್ನು ಕೇಳಿ ಹರ್ಷಗೊಂಡು ಹೀಗೆಂದನು – ಸ್ವಾಮಿ! ಹಾಗಾದರೆ ನನ್ನ ವಿನಾಶ ಈಗ ಆಗಲಾರದು. ಎಲೈ ಕೃಪಾನಿಧಿಯೇ! ನಿಮ್ಮ ಕೃಪೆಯಿಂದ ನನಗೆ ಎಂದೆಂದೂ ಶ್ರೇಯಸ್ಸೇ ಆಗುವುದು. (ಚೌ/೧-೪)

**ದೋ – ಏವಮಸ್ತು ಕಹಿ ಕಪಟಮುನಿ ಬೋಲಾ ಕುಟಿಲ ಬಹೋರಿ ।**
**ಮಿಲಬ ಹಮಾರ ಭುಲಾಬ ನಿಜ ಕಹಹು ತ ಹಮಹಿ ನ ಖೋರಿ ॥ ೧೬೫ ॥**

'ಹಾಗೇ ಆಗಲಿ' ಎಂದು ಹೇಳಿ, ಆ ಕುಟಿಲ ಮುನಿಯು ಮತ್ತೆ ಹೇಳಿದನು – ''ಆದರೆ ನೀನು ನನ್ನನ್ನು ಕಂಡದ್ದನ್ನು, ದಾರಿತಪ್ಪಿದ ಸಂಗತಿಯನ್ನು ಯಾರಿಗೂ ತಿಳಿಸಕೂಡದು. ಹಾಗೆ ತಿಳಿಸಿದರೆ ತಪ್ಪು ನನ್ನದಲ್ಲ. (ದೋ/೧೬೫)

**ಚೌ – ತಾತೇँ ಮೈँ ತೊಹಿ ಬರಜಉँ ರಾಜಾ । ಕಹೇँ ಕಥಾ ತವ ಪರಮ ಅಕಾಜಾ ॥**
**ಛಠೇँ ಶ್ರವನ ಯಹ ಪರತ ಕಹಾನೀ । ನಾಸ ತುಮ್ಹಾರ ಸತ್ಯ ಮಮ ಬಾನೀ ॥ ೧ ॥**
**ಯಹ ಪ್ರಗಟೇँ ಅಥವಾ ದ್ವಿಜಶ್ರಾಪಾ । ನಾಸ ತೋರ ಸುನು ಭಾನುಪ್ರತಾಪಾ ॥**
**ಆನ ಉಪಾಯँ ನಿಧನ ತವ ನಾಹೀँ । ಜೌँ ಹರಿ ಹರ ಕೋಪಹಿँ ಮನ ಮಾಹೀँ ॥ ೨ ॥**
**ಸತ್ಯ ನಾಥ ಪದ ಗಹಿ ನೃಪ ಭಾಷಾ । ದ್ವಿಜ ಗುರ ಕೋಪ ಕಹಹು ಕೋ ರಾಖಾ ॥**
**ರಾಖಇ ಗುರ ಜೌँ ಕೋಪ ಬಿಧಾತಾ । ಗುರ ಬಿರೋಧ ನಹಿँ ಕೋಉ ಜಗ ತ್ರಾತಾ ॥ ೩ ॥**
**ಜೌँ ನ ಚಲಬ ಹಮ ಕಹೇ ತುಮ್ಹಾರೇँ । ಹೋಉ ನಾಸ ನಹಿँ ಸೋಚ ಹಮಾರೇँ ॥**
**ಏಕಹಿँ ಡರ ಡರಪತ ಮನ ಮೋರಾ । ಪ್ರಭು ಮಹಿದೇವ ಶ್ರಾಪ ಅತಿ ಘೋರಾ ॥ ೪ ॥**

ರಾಜನೇ! ಈ ಪ್ರಸಂಗವನ್ನು ಯಾರಿಗಾದರೂ ಹೇಳಿದರೆ, ನಿನಗೆ ತೀವ್ರತರವಾದ ಹಾನಿ ತಟ್ಟೀತು. ಅದರಿಂದ ನಿನ್ನನ್ನು ಹೇಳಲು ಅಡ್ಡಿಪಡಿಸುತ್ತಿದ್ದೇನೆ. ಈ ವೃತ್ತಾಂತವು ಆರನೇ ಕಿವಿಗೆ ಬಿದ್ದರೆ ನಿನ್ನ ನಾಶವಾದೀತು; ಇದು ಸತ್ಯವಾದುದು. ಓ ಪ್ರತಾಪಭಾನು! ಈ ಸಂಗತಿಯನ್ನು ಬಹಿರಂಗಪಡಿಸುವುದರಿಂದ, ಅಥವಾ ಬ್ರಾಹ್ಮಣರ ಶಾಪದಿಂದ ಮಾತ್ರ ನೀನು ನಾಶವಾಗಿಹೋಗುವೆ. ಬೇರೆ ಯಾವುದೇ ಉಪಾಯದಿಂದಲೂ, ಹರಿಹರರು ಸಿಟ್ಟುಗೊಂಡರೂ ನೀನು ಸಾಯಲಾರೆ.'' ಮುನಿಯ ಚರಣಗಳನ್ನು ಹಿಡಿದುಕೊಂಡು ರಾಜನು ಇಂತೆಂದನು – ''ಸ್ವಾಮಿ! ನಿಜ, ನಿಜ! ಬ್ರಾಹ್ಮಣರ ಹಾಗೂ ಗುರುವಿನ ಕ್ರೋಧದಿಂದ ಯಾರು ರಕ್ಷಿಸಬಲ್ಲರು? ಬ್ರಹ್ಮನು ಕೋಪಿಸಿದರೆ ಗುರುವು ರಕ್ಷಿಸುವನು. ಆದರೆ ಗುರು ಮುನಿದರೆ ಜಗತ್ತಿನಲ್ಲಿ ರಕ್ಷಿಸುವವರು ಯಾರೂ ಇಲ್ಲ. ನಾನು ನಿಮ್ಮ ಮಾತಿನಂತೆ ನಡೆಯದೆ ನಾಶವಾದರೂ ಚಿಂತೆಯಿಲ್ಲ. ಆದರೆ ಬ್ರಾಹ್ಮಣರ ಶಾಪಕ್ಕೆ ಮಾತ್ರ ಅಂಜುತ್ತೇನೆ. ಅವರ ಶಾಪವು ಭಯಂಕರವಾಗಿರುತ್ತದೆ. (ಚೌ/೧-೪)

**ದೋ – ಹೋಹಿँ ಬಿಪ್ರ ಬಸ ಕವನ ಬಿಧಿ ಕಹಹು ಕೃಪಾ ಕರಿ ಸೋಉ ।**
**ತುಮ್ಹ ತಜಿ ದೀನದಯಾಲ ನಿಜ ಹಿತೂ ನ ದೇಖಉँ ಕೋಉ ॥ ೧೬೬ ॥**

ಈ ಬ್ರಾಹ್ಮಣರನ್ನು ವಶಪಡಿಸಿಕೊಳ್ಳುವುದು ಹೇಗೆ ಎಂಬುದನ್ನು ದಯವಿಟ್ಟು ಹೇಳಿ.'' ಹೇ ದೀನದಯಾಳುವೇ! ನಿಮ್ಮನ್ನು ಬಿಟ್ಟು ನನ್ನ ಹಿತವನ್ನು ಬಯಸುವವರು ಯಾರೂ ಇಲ್ಲ. (ದೋ/೧೬೬)

**ಚೌ – ಸುನು ನೃಪ ಬಿಬಿಧ ಜತನ ಜಗ ಮಾಹೀँ । ಕಷ್ಟಸಾಧ್ಯ ಪುನಿ ಹೋಹಿँ ಕಿ ನಾಹೀँ ॥**
**ಅಹಇ ಏಕ ಅತಿ ಸುಗಮ ಉಪಾಈ । ತಹಾँ ಪರಂತು ಏಕ ಕಠಿನಾಈ ॥ ೧ ॥**
**ಮಮ ಆಧೀನ ಜುಗುತಿ ನೃಪ ಸೋಈ । ಮೋರ ಜಾಬ ತವ ನಗರ ನ ಹೋಈ ॥**
**ಆಜು ಲಗೇँ ಅರು ಜಬ ತೇँ ಭಯಊँ । ಕಾಹೂ ಕೇ ಗೃಹ ಗ್ರಾಮ ನ ಗಯಊँ ॥ ೨ ॥**

**ಜೌ॑ ನ ಜಾಉ॑ ತವ ಹೋಇ ಅಕಾಜೂ । ಬನಾ ಆಇ ಅಸಮಂಜಸ ಆಜೂ ॥**
**ಸುನಿ ಮಹೀಸ ಬೋಲೇಉ ಮೃದು ಬಾನೀ । ನಾಥ ನಿಗಮ ಅಸಿ ನೀತಿ ಬಖಾನೀ ॥ ೩ ॥**
**ಬಡೇ ಸನೇಹ ಲಘುನ್ಹ ಪರ ಕರಹೀ॑ । ಗಿರಿ ನಿಜ ಸಿರನಿ ಸದಾ ತೃನ ಧರಹೀ॑ ॥**
**ಜಲಧಿ ಅಗಾಧ ಮೌಲಿ ಬಹ ಫೇನೂ । ಸಂತತ ಧರನಿ ಧರತ ಸಿರ ರೇನೂ ॥ ೪ ॥**

ಕಪಟ ಸಂನ್ಯಾಸಿಯು ಹೇಳಿದ – ''ರಾಜನೇ! ಬ್ರಾಹ್ಮಣರನ್ನು ವಶಪಡಿಸಿಕೊಳ್ಳಲು ಪ್ರಪಂಚದಲ್ಲಿ ಬೇಕಾದಷ್ಟು ಉಪಾಯಗಳಿವೆ. ಆದರೆ ಅವು ಕಷ್ಟಸಾಧ್ಯ. ಅಷ್ಟಾದರೂ ಅವು ಸಿದ್ಧಿಸಿಯಾವು ಎಂದು ಹೇಳುವಂತಿಲ್ಲ. ಒಂದು ಉಪಾಯವೇನೋ ತುಂಬ ಸುಗಮವಾಗಿದೆ. ಆದರೆ ಅದರಲ್ಲಿಯೂ ಒಂದು ತೊಡಕಿದೆ. ಆ ಯುಕ್ತಿಯೇನೋ ನನ್ನ ಕೈಯಲ್ಲಿದೆ. ಆದರೆ ನಾನು ನಿಮ್ಮ ಊರಿಗೆ ಬರಲಾರೆ. ಹುಟ್ಟಿದಾಗಿನಿಂದ ನಾನು ಯಾರ ಮನೆಗೇ ಆಗಲೀ, ಊರಿಗೇ ಆಗಲೀ ಹೋಗಿಲ್ಲ. ಆದರೆ ಹಾಗೆಂದು ಹೋಗದಿದ್ದರೆ ನಿನ್ನ ಕೆಲಸ ನೆರವೇರದು. ಇದು ತುಂಬಾ ದೊಡ್ಡ ಉಭಯಸಂಕಟ.'' ರಾಜನು ಇದನ್ನು ಕೇಳಿ, ಮೃದುಮಧುರವಾಗಿ ಇಂತೆಂದನು – ''ಸ್ವಾಮಿ! ವೇದಗಳಲ್ಲಿ ಇಂತಹ ನೀತಿ ಹೇಳಲಾಗಿದೆ – ಹಿರಿಯರು ಕಿರಿಯರ ಮೇಲೆ ಕನಿಕರ ತೋರುವರು. ಪರ್ವತಗಳು ತಮ್ಮ ತಲೆಯಮೇಲೆ ಹುಲ್ಲನ್ನು ಹೊತ್ತುಕೊಂಡಿರುತ್ತವೆ. ಸಮುದ್ರವು ತನ್ನ ತಲೆಯಲ್ಲಿ ನೊರೆಯನ್ನು ತಳೆದಿರುತ್ತದೆ. ಭೂಮಿಯು ಯಾವಾಗಲೂ ತನ್ನ ಮೇಲೆ ಧೂಳನ್ನು ಧರಿಸಿಕೊಂಡಿರುತ್ತದೆ. (ಚೌ/೧-೪)

**ದೋ – ಅಸ ಕಹಿ ಗಹೇ ನರೇಸ ಪದ ಸ್ವಾಮೀ ಹೋಹು ಕೃಪಾಲ ।**
**ಮೋಹಿ ಲಾಗಿ ದುಖ ಸಹಿಅ ಪ್ರಭು ಸಜ್ಜನ ದೀನದಯಾಲ ॥ ೧೬೭ ॥**

ಹೀಗೆ ಹೇಳಿ ರಾಜನು ಮುನಿಯ ಚರಣಕ್ಕೆರಗಿ ಮತ್ತೆ ಹೇಳಿದನು – ಸ್ವಾಮಿ! ಕೃಪೆಮಾಡಿರಿ. ನೀವು ಸಂತರು, ದೀನದಯಾಳುಗಳು. ಆದ್ದರಿಂದ ನನಗಾಗಿ ಈ ಕಷ್ಟವನ್ನು ಅವಶ್ಯವಾಗಿ ಸಹಿಸಿರಿ. (ದೋ/೧೬೭)

**ಚೌ – ಜಾನಿ ನೃಪಹಿ ಆಪನ ಆಧೀನಾ । ಬೋಲಾ ತಾಪಸ ಕಪಟ ಪ್ರಬೀನಾ ॥**
**ಸತ್ಯ ಕಹಉ॑ ಭೂಪತಿ ಸುನು ತೋಹೀ । ಜಗ ನಾಹಿನ ದುರ್ಲಭ ಕಛು ಮೋಹೀ ॥ ೧ ॥**
**ಅವಸಿ ಕಾಜ ಮೈ॑ ಕರಿಹಉ॑ ತೋರಾ । ಮನ ತನ ಬಚನ ಭಗತ ತೈ॑ ಮೋರಾ ॥**
**ಜೋಗ ಜುಗುತಿ ತಪ ಮಂತ್ರ ಪ್ರಭಾಊ । ಫಲಇ ತಬಹಿ॑ ಜಬ ಕರಿಅ ದುರಾಊ ॥ ೨ ॥**
**ಜೌ॑ ನರೇಸ ಮೈ॑ ಕರೌ॑ ರಸೋಈ । ತುಮ್ಹ ಪರುಸಹು ಮೊಹಿ ಜಾನ ನ ಕೋಈ ॥**
**ಅನ್ನ ಸೊ ಜೋಇ ಜೋಇ ಭೋಜನ ಕರಈ । ಸೋಇ ಸೋಇ ತವ ಆಯಸು ಅನುಸರಈ ॥ ೩ ॥**
**ಪುನಿ ತಿನ್ಹಕೇ ಗೃಹ ಜೇವ॑ಇ ಜೋಊ । ತವ ಬಸ ಹೋಇ ಭೂಪ ಸುನು ಸೋಊ ॥**
**ಜಾಇ ಉಪಾಯ ರಚಹು ನೃಪ ಏಹೂ । ಸಂಬತ ಭರಿ ಸಂಕಲಪ ಕರೇಹೂ ॥ ೪ ॥**

ರಾಜನು ಪೂರ್ಣವಾಗಿ ತನ್ನ ಅಧೀನವಾದುದನ್ನು ಕಂಡು ಕಪಟಿಯಾದ ಆ ತಪಸ್ವಿಯು ಇಂತೆಂದನು – ''ರಾಜನೇ! ಕೇಳು. ನಾನು ದಿಟವಾದುದನ್ನೇ ನುಡಿಯುತ್ತಿದ್ದೇನೆ. ಪ್ರಪಂಚದಲ್ಲಿ ನನಗೆ ದುರ್ಲಭವೆಂಬುದು ಯಾವುದೂ ಇಲ್ಲ. ನೀನು ತ್ರಿಕರಣಪೂರ್ವಕವಾಗಿ ನನ್ನ ಭಕ್ತನು. ಆದ್ದರಿಂದ ನಾನು ನಿನ್ನ ಕೆಲಸವನ್ನು ತಪ್ಪದೆ ಮಾಡುವೆನು. ಆದರೆ ಯಾಗ, ಯುಕ್ತಿ, ತಪಸ್ಸು,ಮಂತ್ರ ಇವುಗಳನ್ನು ರಹಸ್ಯವಾಗಿ ಸಾಧನೆಮಾಡಿದರೆ ಮಾತ್ರ ಸಫಲವಾಗುತ್ತವೆ. ರಾಜನೇ! ನಾನು ಅಡಿಗೆ ಮಾಡುತ್ತೇನೆ. ನೀನು ಅದನ್ನು ಬಡಿಸಬೇಕು. ನಾನು ಯಾರೆಂದು ಯಾರಿಗೂ ತಿಳಿಯಕೂಡದು. ಆ ಅನ್ನವನ್ನು ತಿಂದ ಎಲ್ಲ ಬ್ರಾಹ್ಮಣರು ನಿನ್ನ ವಶವರ್ತಿಗಳಾಗುವರು. ಇಷ್ಟೇ ಅಲ್ಲ, ಅವರ ಮನೆಯಲ್ಲಿ ಊಟ ಮಾಡಿದವರೂ ಕೂಡ ನಿನಗೆ ಅಧೀನರಾಗುವರು. ರಾಜಾ! ಈ ವ್ರತವನ್ನು ಒಂದು ವರ್ಷಪೂರ್ತಿಮಾಡಲು ಸಂಕಲ್ಪಮಾಡು. (ಚೌ/೧-೪)

**ದೋ – ನಿತ ನೂತನ ದ್ವಿಜ ಸಹಸ ಸತ ಬರೇಹು ಸಹಿತ ಪರಿವಾರ ।**
**ಮೈ॑ ತುಮ್ಹರೇ ಸಂಕಲಪ ಲಗಿ ದಿನಹಿ॑ ಕರಬಿ ಜೇವನಾರ ॥ ೧೬೮ ॥**

ರಾಜಾ! ಪ್ರತಿದಿನವೂ ಒಂದು ಲಕ್ಷ ಬ್ರಾಹ್ಮಣರನ್ನು ಸಕುಟುಂಬರಾಗಿ ಭೋಜನಕ್ಕಾಗಿ ಆಮಂತ್ರಿಸಬೇಕು. ಅವರಿಗೆ ನಾನು ಒಂದು ವರ್ಷದವರೆಗೆ ಅಡಿಗೆ ಮಾಡಿಕೊಡುತ್ತೇನೆ. (ದೋ/೧೬೮)

**ಚೌ – ಏಹಿ ಬಿಧಿ ಭೂಪ ಕಷ್ಟ ಅತಿ ಥೋರೇ॑ । ಹೋಇಹಹಿ॑ ಸಕಲ ಬಿಪ್ರ ಬಸ ತೋರೇ॑ ॥**
**ಕರಿಹಹಿ॑ ಬಿಪ್ರ ಹೋಮ ಮಖ ಸೇವಾ । ತೇಹಿ॑ ಪ್ರಸಂಗ ಸಹಜೆಹಿ॑ ಬಸ ದೇವಾ ॥ ೧ ॥**

ಔರ ಏಕ ತೊಹಿ ಕಹಉँ ಲಖಾಊ । ಮೈँ ಏಹಿँ ಬೇಷ ನ ಆಉಬ ಕಾಊ॥
ತುಮ್ಹರೇ ಉಪರೋಹಿತ ಕಹುँ ರಾಯಾ । ಹರಿ ಆನಬ ಮೈँ ಕರಿ ನಿಜ ಮಾಯಾ॥ ೨ ॥
ತಪಬಲ ತೆಹಿ ಕರಿ ಆಪು ಸಮಾನಾ । ರಖಿಹಉँ ಇಹಾँ ಬರಷ ಪರವಾನಾ॥
ಮೈँ ಧರಿ ತಾಸು ಬೇಷು ಸುನು ರಾಜಾ । ಸಬ ಬಿಧಿ ತೋರ ಸಂವಾರಬ ಕಾಜಾ ॥ ೩ ॥
ಗೈ ನಿಸಿ ಬಹುತ ಸಯನ ಅಬ ಕೀಜೇ । ಮೊಹಿ ತೊಹಿ ಭೂಪ ಭೇँಟ ದಿನ ತೀಜೇ॥
ಮೈँ ತಪಬಲ ತೊಹಿ ತುರಗ ಸಮೇತಾ । ಪಹುँಚೈಹಉँ ಸೋವತಹಿ ನಿಕೇತಾ॥ ೪ ॥

ಅರಸನೇ! ಈ ವಿಧವಾಗಿ ಸ್ವಲ್ಪಶ್ರಮದಿಂದಲೇ ಬ್ರಾಹ್ಮಣರೆಲ್ಲರೂ ನಿನಗೆ ವಶರಾಗುವರು. ಅವರು ಮಾಡುವ ಹವನ, ಯಜ್ಞ, ಪೂಜೆ, ದೈವಸೇವೆ ಇವುಗಳಿಂದಾಗಿ ದೇವತೆಗಳೂ ಸಹಜವಾಗಿ ನಿನಗೆ ವಶವರ್ತಿಗಳಾಗುವರು. ರಾಜನೇ! ಇನ್ನೊಂದು ಗುರುತನ್ನು ನಿನಗೆ ಹೇಳುವೆನು. ನಾನು ಈ ರೂಪದಿಂದ ನಿನ್ನಲ್ಲಿಗೆ ಬರಲಾರೆನು. ನಾನು ನನ್ನ ಮಾಯಾಶಕ್ತಿಯಿಂದ ನಿನ್ನ ಪುರೋಹಿತನನ್ನು ಅಪಹರಿಸಿ ತರುತ್ತೇನೆ. ತಪೋಬಲದಿಂದ ಅವನನ್ನು ನನ್ನಂತೆಯೇ ಮಾಡಿ ಒಂದು ವರ್ಷದವರೆಗೆ ಇಲ್ಲಿ ಇಟ್ಟಿರುತ್ತೇನೆ. ನಾನು ಆತನ ವೇಷದಲ್ಲಿದ್ದು ಎಲ್ಲರೀತಿಯಿಂದಲೂ ನಿನ್ನ ಕೆಲಸ ಮಾಡಿಕೊಡುತ್ತೇನೆ. ರಾಜಾ! ಸರಿ. ಹೊತ್ತಾಗಿದೆ. ಈಗ ನೀನು ಮಲಗಿಕೋ. ನನ್ನ ತಪೋಬಲದಿಂದ ಕುದುರೆಸಹಿತ ನಿದ್ದೆಯಲ್ಲೇ ನಿನ್ನನ್ನು ಮನೆಗೆ ಮುಟ್ಟಿಸುತ್ತೇನೆ. ಇಂದಿನಿಂದ ಮೂರನೇ ದಿನ ನಿನ್ನನ್ನು ನಾನು ಕಾಣುವೆ. (ಚೌ/೧-೪)

**ದೋ – ಮೈँ ಆಉಬ ಸೋಇ ಬೇಷು ಧರಿ ಪಹಿಚಾನೆಹು ತಬ ಮೋಹಿ ।**
**ಜಬ ಏಕಾಂತ ಬೊಲಾಇ ಸಬ ಕಥಾ ಸುನಾವೌँ ತೋಹಿ ॥ ೧೬೯ ॥**

ನಾನು ಆ ಪುರೋಹಿತನ ವೇಷದಿಂದ ನಿನ್ನ ಮನೆಗೆ ಬರುತ್ತೇನೆ. ನಿನ್ನನ್ನು ಕರೆದು ಏಕಾಂತದಲ್ಲಿ ಎಲ್ಲವನ್ನು ಹೇಳಿದಾಗ ನೀನು ನನ್ನನ್ನು ಗುರುತಿಸುವೆ. (ದೋ/೧೬೯)

ಚೌ – ಸಯನ ಕೀನ್ಹ ನೃಪ ಆಯಸು ಮಾನೀ । ಆಸನ ಜಾಇ ಬೈಠ ಛಲಗ್ಯಾನೀ ॥
ಶ್ರಮಿತ ಭೂಪ ನಿದ್ರಾ ಅತಿ ಆಈ । ಸೋ ಕಿಮಿ ಸೋವ ಸೋಚ ಅಧಿಕಾಈ ॥ ೧ ॥
ಕಾಲಕೇತು ನಿಸಿಚರ ತಹँ ಆವಾ । ಜೆಹಿँ ಸೂಕರ ಹೋಇ ನೃಪಹಿ ಭುಲಾವಾ॥
ಪರಮ ಮಿತ್ರ ತಾಪಸ ನೃಪ ಕೇರಾ । ಜಾನಇ ಸೋ ಅತಿ ಕಪಟ ಘನೇರಾ ॥ ೨ ॥
ತೆಹಿ ಕೇ ಸತ ಸುತ ಅರು ದಸ ಭಾಈ । ಖಲ ಅತಿ ಅಜಯ ದೇವ ದುಖದಾಈ॥
ಪ್ರಥಮಹಿँ ಭೂಪ ಸಮರ ಸಬ ಮಾರೇ । ಬಿಪ್ರ ಸಂತ ಸುರ ದೇಖಿ ದುಖಾರೇ ॥ ೩ ॥
ತೆಹಿँ ಖಲ ಪಾಛಿಲ ಬಯರು ಸँಭಾರಾ । ತಾಪಸ ನೃಪ ಮಿಲಿ ಮಂತ್ರ ಬಿಚಾರಾ ॥
ಜೆಹಿँ ರಿಪು ಛಯ ಸೋಇ ರಚೆನ್ಹಿ ಉಪಾಊ । ಭಾವೀ ಬಸ ನ ಜಾನ ಕಛು ರಾಊ॥ ೪ ॥

ಆ ಕಪಟ ಸಂನ್ಯಾಸಿಯ ಅಪ್ಪಣೆಯಂತೆ ರಾಜನು ಹೋಗಿ ಮಲಗಿದನು. ಅವನು ತುಂಬಾ ಬಳಲಿದ್ದರಿಂದ ಗಾಢನಿದ್ದೆ ಹತ್ತಿತು. ಕಪಟ ಮುನಿಯು ತನ್ನ ಆಸನದಲ್ಲಿ ಹೋಗಿ ಕುಳಿತನು. ತನ್ನ ಯುಕ್ತಿಯು ಹೇಗೆ ಕಾರ್ಯರೂಪಕ್ಕೆ ಬರುವುದು ಎಂದು ಆಲೋಚಿಸುತ್ತಿದ್ದನು; ಆದರಿಂದ ಅವನಿಗೆಲ್ಲಿಯ ನಿದ್ದೆ! ಆ ವೇಳೆಗೆ ಸರಿಯಾಗಿ ಹಂದಿಯಾಗಿ ರಾಜನಿಗೆ ದಾರಿತಪ್ಪಿಸಿದ್ದ 'ಕಾಲಕೇತು' ಎಂಬ ರಕ್ಕಸನು ಅಲ್ಲಿಗೆ ಬಂದನು. ಅವನು ತಾಪಸರಾಜನ ಗೆಳೆಯನೂ, ಅನೇಕ ಮಾಯೋಪಾಯಗಳನ್ನು ತಿಳಿದವನು. ಅವನಿಗೆ ನೂರು ಜನ ಪುತ್ರರು, ಹತ್ತುಜನ ಅಣ್ಣತಮ್ಮಂದಿರಿದ್ದರು. ಅವರೆಲ್ಲ ಅಜೇಯರೂ, ದೇವತೆಗಳನ್ನೂ ಕಾಡುವ ದುಷ್ಟರು. ಅವರಿಂದ ಬ್ರಾಹ್ಮಣರೂ, ಸಜ್ಜನರೂ, ದೇವತೆಗಳೂ ದುಃಖಿತರಾದುದನ್ನು ಕಂಡು, ಪ್ರತಾಪಭಾನುವು ಅವರೆಲ್ಲರನ್ನು ಯುದ್ಧದಲ್ಲಿ ಕೊಂದು ಕಳೆದಿದ್ದನು. ಆ ದುಷ್ಟನು ತನ್ನ ಹಳೆಯ ಹಗೆಯನ್ನು ನೆನೆದು ಕಪಟ ತಾಪಸರಾಜನೊಡನೆ ಸೇರಿಕೊಂಡು ಸಂಚುಹೂಡಿದ. ಶತ್ರುಕ್ಷಯಕ್ಕಾಗಿ ಹಂಚಿಕೆ ಹಾಕಿದನು. ವಿಧಿವಿಲಾಸದಿಂದ ರಾಜಾ ಪ್ರತಾಪಭಾನುವಿಗೆ ಇದಾವುದೂ ತಿಳಿಯಲಿಲ್ಲ. (ಚೌ/೧-೪)

**ದೋ – ರಿಪು ತೇಜಸೀ ಅಕೇಲ ಅಪಿ ಲಘು ಕರಿ ಗನಿಅ ನ ತಾಹು ।**
**ಅಜಹುँ ದೇತ ದುಖ ರಬಿ ಸಸಿಹಿ ಸಿರ ಅವಸೇಷಿತ ರಾಹು ॥ ೧೭೦ ॥**

ತೇಜಸ್ವಿಯಾದ ಶತ್ರು ಒಂಟಿಯಾದರೂ, ಅವನನ್ನು ಕಡೆಗಣಿಸಬಾರದು. ತಲೆಮಾತ್ರ ಉಳಿದಿದ್ದ ರಾಹು ಇಂದಿಗೂ ಸೂರ್ಯಚಂದ್ರರನ್ನು ಕಾಡುವುದಿಲ್ಲವೇ? (ದೋ/೧೭೦)

ಚೌ – ತಾಪಸ ನೃಪ ನಿಜ ಸಖಹಿ ನಿಹಾರೀ । ಹರಷಿ ಮಿಲೆಉ ಉಠಿ ಭಯಉ ಸುಖಾರೀ ॥
ಮಿತ್ರಹಿ ಕಹಿ ಸಬ ಕಥಾ ಸುನಾಈ । ಜಾತುಧಾನ ಬೋಲಾ ಸುಖ ಪಾಈ ॥ ೧ ॥
ಅಬ ಸಾಧೆಉँ ರಿಪು ಸುನಹು ನರೇಸಾ । ಜೌँ ತುಮ್ಹ ಕೀನ್ಹ ಮೋರ ಉಪದೇಸಾ ॥
ಪರಿಹರಿ ಸೋಚ ರಹಹು ತುಮ್ಹ ಸೋಈ । ಬಿನು ಔಷಧ ಬಿಆಧಿ ಬಿಧಿ ಖೋಈ ॥ ೨ ॥
ಕುಲ ಸಮೇತ ರಿಪು ಮೂಲ ಬಹಾಈ । ಚೌಥೇँ ದಿವಸ ಮಿಲಬ ಮೈँ ಆಈ ॥
ತಾಪಸ ನೃಪಹಿ ಬಹುತ ಪರಿತೋಷೀ । ಚಲಾ ಮಹಾಕಪಟೀ ಅತಿರೋಷೀ ॥ ೩ ॥
ಭಾನುಪ್ರತಾಪಹಿ ಬಾಜಿ ಸಮೇತಾ । ಪಹುँಚಾಏಸಿ ಛನ ಮಾಝ ನಿಕೇತಾ ॥
ನೃಪಹಿ ನಾರಿ ಪಹिं ಸಯನ ಕರಾಈ । ಹಯಗೃಹँ ಬಾँಧೇಸಿ ಬಾಜಿ ಬನಾಈ ॥ ೪ ॥

ತಪಸ್ವಿಯಾದ ರಾಜನು ತನ್ನ ಮಿತ್ರನನ್ನು ಕಂಡು ಸಂತೋಷಗೊಂಡನು. ಆತನಿಗೆ ಎಲ್ಲ ಕಥೆಯನ್ನು ಹೇಳಿದನು. ಕೇಳಿ ರಾಕ್ಷಸನೂ ಆನಂದಿತನಾಗಿ ಹೇಳಿದನು – ''ರಾಜಾ! ನೀನು ನನ್ನ ಮಾತಿನಂತೆ ಇಷ್ಟೊಂದು ಮಾಡಿರುವಾಗ ಇನ್ನು ಶತ್ರುವು ನನ್ನ ವಶನಾದನೆಂದೇ ತಿಳಿ. ಇನ್ನು ನೀನು ನಿಶ್ಚಿಂತನಾಗಿ ನಿದ್ದೆಮಾಡು. ವಿಧಿಯು ಮದ್ದಿಲ್ಲದೆಯೇ ರೋಗವನ್ನು ದೂರಮಾಡಿದನು. ಶತ್ರುವಿನ ಕುಲಸಹಿತ ಬೇರನ್ನೇ ಕಿತ್ತೆಸೆದು, ಇಂದಿನಿಂದ ನಾಲ್ಕನೇ ದಿನ ನಾನು ಬಂದು ನಿನ್ನನ್ನು ಕಾಣುತ್ತೇನೆ. ಈ ರೀತಿ ಕಪಟತಾಪಸೀ ರಾಜನಿಗೆ ಚೆನ್ನಾಗಿ ಧೈರ್ಯಹೇಳಿ, ಆ ಮಹಾಮಾಯಾವಿಯೂ, ಕ್ರೋಧಿಯೂ ಆದ ರಕ್ಕಸನು ಹೊರಟು ಹೋದನು. ಅವನು ಪ್ರತಾಪಭಾನು ರಾಜನನ್ನು ಕುದುರೆಸಹಿತ ಕ್ಷಣಮಾತ್ರದಲ್ಲಿ ಅವನ ಮನೆಯನ್ನು ಮುಟ್ಟಿಸಿದ. ರಾಜನನ್ನು ರಾಣಿಯ ಬಳಿ ಮಲಗಿಸಿ, ಕುದುರೆಯನ್ನು ಲಾಯದಲ್ಲಿ ಕಟ್ಟಿದನು. (ಚೌ/೧-೪)

ದೋ – ರಾಜಾ ಕೇ ಉಪರೋಹಿತಹಿ ಹರಿ ಲೈ ಗಯಉ ಬಹೋರಿ ।
ಲೈ ರಾಖೆಸಿ ಗಿರಿ ಖೋಹ ಮಹುँ ಮಾಯಾँ ಕರಿ ಮತಿ ಭೋರಿ ॥ ೧೭೧ ॥

ಅನಂತರ ಆ ಕಾಲಕೇತು ರಾಜನ ಪುರೋಹಿತನನ್ನು ಅಪಹರಿಸಿಕೊಂಡು ಹೋಗಿ, ಮಾಯೆಯಿಂದ ಅವನ ಬುದ್ಧಿಭ್ರಮಣೆಯಾಗುವಂತೆ ಮಾಡಿ, ಬೆಟ್ಟದ ಒಂದು ಗುಹೆಯಲ್ಲಿ ಅಡಗಿಸಿಟ್ಟನು. (ದೋ/೧೭೧)

ಚೌ – ಆಪು ಬಿರಚಿ ಉಪರೋಹಿತ ರೂಪಾ । ಪರೆಉ ಜಾಇ ತೆಹಿ ಸೇಜ ಅನೂಪಾ ॥
ಜಾಗೆಉ ನೃಪ ಅನಭಏँ ಬಿಹಾನಾ । ದೇಖಿ ಭವನ ಅತಿ ಅಚರಜು ಮಾನಾ ॥ ೧ ॥
ಮುನಿ ಮಹಿಮಾ ಮನ ಮಹುँ ಅನುಮಾನೀ । ಉಠೆಉ ಗವँಹಿँ ಜೆಹಿँ ಜಾನ ನ ರಾನೀ ॥
ಕಾನನ ಗಯಉ ಬಾಜಿ ಚಢ़ಿ ತೇಹೀँ । ಪುರ ನರ ನಾರಿ ನ ಜಾನೆಉ ಕೇಹೀँ ॥ ೨ ॥
ಗಏँ ಜಾಮ ಜುಗ ಭೂಪತಿ ಆವಾ । ಘರ ಘರ ಉತ್ಸವ ಬಾಜ ಬಧಾವಾ ॥
ಉಪರೋಹಿತಹಿ ದೇಖ ಜಬ ರಾಜಾ । ಚಕಿತ ಬಿಲೋಕ ಸುಮಿರಿ ಸೋಇ ಕಾಜಾ ॥ ೩ ॥
ಜುಗ ಸಮ ನೃಪಹಿ ಗಏ ದಿನ ತೀನೀ । ಕಪಟೀ ಮುನಿ ಪದ ರಹ ಮತಿ ಲೀನೀ ॥
ಸಮಯ ಜಾನಿ ಉಪರೋಹಿತ ಆವಾ । ನೃಪಹಿ ಮತೇ ಸಬ ಕಹಿ ಸಮುಝಾವಾ ॥ ೪ ॥

ಬಳಿಕ ತಾನು ಪುರೋಹಿತನ ರೂಪವನ್ನಾಂತು, ಅವನ ಹಾಸಿಗೆಯ ಮೇಲೆ ಹೋಗಿ ಮಲಗಿದನು. ರಾಜನು ಬೆಳಗಾಗುವುದಕ್ಕೆ ಮುನ್ನವೇ ಎದ್ದು, ತಾನು ತನ್ನ ಅರಮನೆಯಲ್ಲಿ ಇರುವುದನ್ನು ತಿಳಿದು ಅವನಿಗೆ ಭಾರೀ ಅಚ್ಚರಿಯಾಯಿತು. ಮನದಲ್ಲೇ ಮುನಿಯ ಮಹಿಮೆಯನ್ನು ನೆನೆದು, ರಾಜನು ರಾಣಿಗೆ ತಿಳಿಯದಂತೆ ಮೆಲ್ಲನೆ ಎದ್ದು, ಅದೇ ಕುದುರೆಯನ್ನೇರಿ ಕಾಡಿಗೆ ಹೋದನು. ನಗರದಲ್ಲಿ ಯಾರಿಗೂ ಈ ವಿಷಯ ತಿಳಿಯಲಿಲ್ಲ. ಮಧ್ಯಾಹ್ನ ಕಳೆದ ಮೇಲೆ ರಾಜನು ಮರಳಿದನು. ಮನೆಮನೆಗಳಲ್ಲಿಯೂ ಉತ್ಸವಗಳಾದುವು. ಮಂಗಳವಾದ್ಯಗಳೊಂದಿಗೆ ಅಭಿನಂದನೆಗಳಾದವು. ಪುರೋಹಿತನನ್ನು ಕಂಡ ಕೂಡಲೇ ರಾಜನಿಗೆ ಆ ಮುನಿಯು ಹೇಳಿದ ಕಾರ್ಯವು ನೆನಪಿಗೆ ಬಂದು, ಅವನನ್ನು ಆಶ್ಚರ್ಯದಿಂದ ನೋಡತೊಡಗಿದನು. ರಾಜನು ಮೂರು ದಿನಗಳನ್ನು ಮೂರು ಯುಗಗಳಂತೆ ಕಳೆದನು. ಅವನ ಬುದ್ಧಿಯು ಕಪಟ ಮುನಿಯು ಚರಣಗಳಲ್ಲೇ ಅಂಟಿಕೊಂಡಿತ್ತು. ನಿಶ್ಚಿತವೇಳೆಗೆ ಸರಿಯಾಗಿ ಆ ಕೃತಕ ಪುರೋಹಿತನು ಬಂದು, ಹಿಂದೆ ನೀಡಿದ ಗುಪ್ತಯೋಜನೆಯನ್ನು ತಿಳಿಸಿದನು. (ಚೌ/೧-೪)

ದೋ – ನೃಪ ಹರಷೆಉ ಪಹಿಚಾನಿ ಗುರು ಭ್ರಮ ಬಸ ರಹಾ ನ ಚೇತ ।
ಬರೇ ತುರತ ಸತ ಸಹಸ ಬರ ಬಿಪ್ರ ಕುಟುಂಬ ಸಮೇತ ॥ ೧೭೨ ॥

ಆತನನ್ನು ಗುರುವೆಂದು ಭಾವಿಸಿ ರಾಜನು ಸಂತೋಷಪಟ್ಟನು. (ವಾಸ್ತವವಾಗಿ ಅವನು ಕಪಟಿಮುನಿಯೂ ಅಲ್ಲ. ಕಾಲಕೇತು ರಾಕ್ಷಸನು.) ಅವನ ಮನಸ್ಸು ಪೂರ್ಣವಾಗಿ ಭ್ರಾಂತಿಯ ಪ್ರಭಾವಕ್ಕೆ ಒಳಗಾಗಿತ್ತು. ಕೂಡಲೇ ರಾಜನು ಒಂದು ಲಕ್ಷಮಂದಿ ಬ್ರಾಹ್ಮಣರನ್ನು ಕುಟುಂಬಸಹಿತರಾಗಿ ಭೋಜನಕ್ಕೆ ಆಮಂತ್ರಿಸಿದನು. (ದೋ/೧೭೨)

**ಚೌ – ಉಪರೋಹಿತ ಜೆವನಾರ ಬನಾಈ । ಛರಸ ಚಾರಿ ಬಿಧಿ ಜಸಿ ಶ್ರುತಿ ಗಾಈ ॥**
**ಮಾಯಾಮಯ ತೆಹಿಂ ಕೀನ್ಹಿ ರಸೋಈ । ಬಿಂಜನ ಬಹು ಗನಿ ಸಕಇ ನ ಕೋಈ ॥ ೧ ॥**
**ಬಿಬಿಧ ಮೃಗನ್ಹ ಕರ ಆಮಿಷ ರಾಂಧಾ । ತೆಹಿ ಮಹುँ ಬಿಪ್ರ ಮಾಂಸು ಖಲ ಸಾಂಧಾ ॥**
**ಭೋಜನ ಕಹುँ ಸಬ ಬಿಪ್ರ ಬೋಲಾಏ । ಪದ ಪಖಾರಿ ಸಾದರ ಬೈಠಾಏ ॥ ೨ ॥**
**ಪರುಸನ ಜಬಹಿಂ ಲಾಗ ಮಹಿಪಾಲಾ । ಭೈ ಅಕಾಸಬಾನೀ ತೆಹಿ ಕಾಲಾ ॥**
**ಬಿಪ್ರಬೃಂದ ಉಠಿ ಉಠಿ ಗೃಹ ಜಾಹೂ । ಹೈ ಬಡಿ ಹಾನಿ ಅನ್ನ ಜನಿ ಖಾಹೂ ॥ ೩ ॥**
**ಭಯಉ ರಸೋಈँ ಭೂಸುರ ಮಾಂಸೂ । ಸಬ ದ್ವಿಜ ಉಠೇ ಮಾನಿ ಬಿಸ್ವಾಸೂ ॥**
**ಭೂಪ ಬಿಕಲ ಮತಿ ಮೋಹँ ಭುಲಾನೀ । ಭಾವೀ ಬಸ ನ ಆವ ಮುಖ ಬಾನೀ ॥ ೪ ॥**

ಆ ಕಪಟೀ ಪುರೋಹಿತನು ಬಗೆಬಗೆಯ ಷಡ್ರಸ ಭೋಜ್ಯಗಳನ್ನು ಪಾಕಶಾಸ್ತ್ರವನ್ನನುಸರಿಸಿ ಮಾಯೆಯಿಂದ ಅಡಿಗೆಯನ್ನು ಸಿದ್ಧಗೊಳಿಸಿದನು. ಲೆಕ್ಕವಿಲ್ಲದಷ್ಟು ಭಕ್ಷ್ಯಭೋಜ್ಯಗಳನ್ನು ತಯಾರಿಸಿದ. ಅನೇಕವಿಧವಾದ ಪಶುಗಳ ಮಾಂಸವನ್ನು ಬೇಯಿಸಿದನು ಹಾಗೂ ಬ್ರಾಹ್ಮಣರ ಮಾಂಸವನ್ನು ಅದರಲ್ಲಿ ಬೆರೆಸಿದನು. ಎಲ್ಲ ಬ್ರಾಹ್ಮಣರನ್ನು ಸಂತರ್ಪಣೆಗಾಗಿ ಕರೆಸಲಾಯಿತು. ಕಾಲುತೊಳೆದು ಅವರನ್ನು ಆದರದಿಂದ ಕುಳ್ಳಿರಿಸಿದನು. ರಾಜನೇ ಸ್ವತಃ ಬಡಿಸತೊಡಗಿದನು. ಅಷ್ಟರಲ್ಲಿ ಕಾಲಕೇತುಕೃತ ಅಶರೀರವಾಣಿ ಕೇಳಿಸಿತು – ''ಎಲೈ ಬ್ರಾಹ್ಮಣರೇ! ನೀವೆಲ್ಲ ಎದ್ದು ಮನೆಗೆ ಹೋಗಿರಿ. ಈ ಅನ್ನವನ್ನು ತಿನ್ನಬೇಡಿರಿ. ಇದನ್ನು ತಿನ್ನುವುದರಿಂದ ತುಂಬಾ ಕೇಡಿದೆ. ಈ ಅಡಿಗೆಯಲ್ಲಿ ಬ್ರಾಹ್ಮಣ ಮಾಂಸ ಬೆರೆತಿದೆ.' ಈ ಆಕಾಶವಾಣಿಯನ್ನು ಕೇಳಿದೊಡನೆ ಎಲ್ಲ ಬ್ರಾಹ್ಮಣರು ಎದ್ದುಹೋದರು. ಅದನ್ನು ಕಂಡ ರಾಜನು ದಿಗ್ಭ್ರಾಂತನಾದನು. ಆದರೆ ಅವನ ಬುದ್ಧಿಗೆ ಮೋಹದ ಮಂಕು ಕವಿದಿತ್ತು. ದುರ್ದೈವದಿಂದ ಅವನ ಬಾಯಿಂದ ಮಾತೇ ಹೊರಡದಾಯಿತು. (ಚೌ/೧-೪)

**ದೋ – ಬೋಲೇ ಬಿಪ್ರ ಸಕೋಪ ತಬ ನಹಿಂ ಕಛು ಕೀನ್ಹ ಬಿಚಾರ ।**
**ಜಾಇ ನಿಸಾಚರ ಹೋಹು ನೃಪ ಮೂಢ ಸಹಿತ ಪರಿವಾರ ॥ ೧೭೩ ॥**

ಆಗ ಬ್ರಾಹ್ಮಣರೆಲ್ಲರೂ ಕೋಪಗೊಂಡು ಹಿಂದು-ಮುಂದು ಏನನ್ನೂ ಆಲೋಚಿಸದೆ ರಾಜನನ್ನು ಶಪಿಸಿದರು – ''ಎಲವೋ ಮೂರ್ಖರಾಜಾ! ನೀನು ಪರಿವಾರಸಹಿತ ರಾಕ್ಷಸನಾಗಿ ಹುಟ್ಟು. (ದೋ/೧೭೩)

**ಚೌ – ಛತ್ರಬಂಧು ತೈಂ ಬಿಪ್ರ ಬೋಲಾಈ । ಘಾಲೈ ಲಿಏ ಸಹಿತ ಸಮುದಾಈ ॥**
**ಈಸ್ವರ ರಾಖಾ ಧರಮ ಹಮಾರಾ । ಜೈಹಸಿ ತೈಂ ಸಮೇತ ಪರಿವಾರಾ ॥ ೧ ॥**
**ಸಂಬತ ಮಧ್ಯ ನಾಸ ತವ ಹೋಊ । ಜಲದಾತಾ ನ ರಹಿಹಿ ಕುಲ ಕೋಊ ॥**
**ನೃಪ ಸುನಿ ಶ್ರಾಪ ಬಿಕಲ ಅತಿ ತ್ರಾಸಾ । ಭೈ ಬಹೋರಿ ಬರ ಗಿರಾ ಅಕಾಸಾ ॥ ೨ ॥**
**ಬಿಪ್ರಹು ಶ್ರಾಪ ಬಿಚಾರಿ ನ ದೀನ್ಹಾ । ನಹಿಂ ಅಪರಾಧ ಭೂಪ ಕಛು ಕೀನ್ಹಾ ॥**
**ಚಕಿತ ಬಿಪ್ರ ಸಬ ಸುನಿ ನಭಬಾನೀ । ಭೂಪ ಗಯಉ ಜಹँ ಭೋಜನ ಖಾನೀ ॥ ೩ ॥**
**ತಹँ ನ ಅಸನ ನಹಿಂ ಬಿಪ್ರ ಸುಆರಾ । ಫಿರೆಉ ರಾಉ ಮನ ಸೋಚ ಅಪಾರಾ ॥**
**ಸಬ ಪ್ರಸಂಗ ಮಹಿಸುರನ್ಹ ಸುನಾಈ । ತ್ರಸಿತ ಪರೆಉ ಅವನೀಂ ಅಕುಲಾಈ ॥ ೪ ॥**

ಎಲೈ ಕ್ಷತ್ರಿಯಾಧಮಾ! ನೀನು ಬ್ರಾಹ್ಮಣರನ್ನು ಕರೆಸಿ, ಅವರನ್ನು ಪರಿವಾರಸಹಿತ ನಾಶಮಾಡಬೇಕೆಂದು ಯೋಚಿಸಿದ್ದೆ. ಆದರೆ ದೇವರು ನಮ್ಮ ಧರ್ಮವನ್ನು ಕಾಪಾಡಿದನು. ಈಗ ನೀನು ಪರಿವಾರ ಸಹಿತ ಹಾಳಾಗಿ ಹೋಗು. ಒಂದು ವರ್ಷದೊಳಗೆ ನೀನು ನಾಶವಾಗಿ ಹೋಗುವೆ. ನಿನ್ನ ಕುಲದಲ್ಲಿ ನಿನಗೆ ತಿಲಾಂಜಲಿಕೊಡುವವರೂ ಉಳಿಯಲಾರರು. ಈ ಶಾಪವನ್ನು ಕೇಳಿ ರಾಜನು ಭಯದಿಂದ ತಲ್ಲಣಿಸಿಹೋದನು. ಅಷ್ಟರಲ್ಲಿ ಇನ್ನೊಂದು ಆಕಾಶವಾಣಿ ಮೊಳಗಿತು – ''ಎಲೈ ಬ್ರಾಹ್ಮಣರಿರಾ! ನೀವು ನಿಜವನ್ನು ತಿಳಿಯದೆ ಇವನಿಗೆ ಶಪಿಸಿದಿರಿ. ರಾಜನು ಯಾವುದೇ ಅಪರಾಧವನ್ನು ಮಾಡಿಲ್ಲ.'' ಆಕಾಶವಾಣಿಯನ್ನು ಕೇಳಿ ಎಲ್ಲ ಬ್ರಾಹ್ಮಣರು ಚಕಿತರಾದರು. ಆಗ ರಾಜನು ಅಡಿಗೆ ಮನೆಗೆ ಹೋಗಿ ನೋಡುತ್ತಾನೆ – ಅಲ್ಲಿ ಅಡಿಗೆಯಾಗಲೀ, ಅಡಿಗೆಯ ಭಟ್ಟನಾಗಲೀ ಕಾಣಲಿಲ್ಲ.

ಆಗ ಅರಸನು ತಲೆಯಮೇಲೆ ಕೈಹೊತ್ತು ಹಿಂತಿರುಗಿದನು. ಅವನು ಬ್ರಾಹ್ಮಣರಿಗೆ ನಡೆದ ಎಲ್ಲ ವೃತ್ತಾಂತವನ್ನು ತಿಳಿಸಿದನು. ಭಯಾಕ್ರಾಂತನಾಗಿ ನಿಲ್ಲಲಾರದೆ ನೆಲಕ್ಕೆ ಕುಸಿದನು. (ಚೌ/೧-೪)

**ದೋ – ಭೂಪತಿ ಭಾವೀ ಮಿಟಇ ನಹಿಂ ಜದಪಿ ನ ದೂಷನ ತೋರ ।**
**ಕಿಏಂ ಅನ್ಯಥಾ ಹೋಇ ನಹಿಂ ಬಿಪ್ರಶ್ರಾಪ ಅತಿ ಘೋರ ॥ ೧೭೪ ॥**

ಬ್ರಾಹ್ಮಣರು ಹೇಳಿದರು – ಎಲೈ ರಾಜಾ! ತಪ್ಪು ನಿನ್ನದಲ್ಲದಿದ್ದರೂ ಬಪ್ಪದು ತಪ್ಪದು. ವಿಪ್ರಶಾಪವು ಅತ್ಯಂತ ಘೋರವಾದುದು, ಅಪ್ರತಿಹತವಾದುದು. ಅದನ್ನು ತಪ್ಪಿಸಲು ಸಾಧ್ಯವಿಲ್ಲ. (ದೋ/೧೭೪)

**ಚೌ – ಅಸ ಕಹಿ ಸಬ ಮಹಿದೇವ ಸಿಧಾಏ । ಸಮಾಚಾರ ಪುರಲೋಗನ್ಹ ಪಾಏ ॥**
**ಸೋಚಹಿಂ ದೂಷನ ದೈವಹಿ ದೇಹೀಂ । ಬಿರಚತ ಹಂಸ ಕಾಗ ಕಿಯ ಜೇಹೀಂ ॥ ೧ ॥**
**ಉಪರೋಹಿತಹಿ ಭವನ ಪಹುಂಚಾಈ । ಅಸುರ ತಾಪಸಹಿ ಖಬರಿ ಜನಾಈ ॥**
**ತೇಹಿಂ ಖಲ ಜಹಂ ತಹಂ ಪತ್ರ ಪಠಾಏ । ಸಜಿ ಸಜಿ ಸೇನ ಭೂಪ ಸಬ ಧಾಏ ॥ ೨ ॥**
**ಘೇರೆನ್ಹಿ ನಗರ ನಿಸಾನ ಬಜಾಈ । ಬಿಬಿಧ ಭಾಂತಿ ನಿತ ಹೋಇ ಲರಾಈ ॥**
**ಜೂಝೇ ಸಕಲ ಸುಭಟ ಕರಿ ಕರನೀ । ಬಂಧು ಸಮೇತ ಪರೆಉ ನೃಪ ಧರನೀ ॥ ೩ ॥**
**ಸತ್ಯಕೇತು ಕುಲ ಕೋಉ ನಹಿ ಬಾಂಚಾ । ಬಿಪ್ರಶ್ರಾಪ ಕಿಮಿ ಹೋಇ ಅಸಾಂಚಾ ॥**
**ರಿಪು ಜಿತಿ ಸಬ ನೃಪ ನಗರ ಬಸಾಈ । ನಿಜ ಪುರ ಗವನೇ ಜಯ ಜಸು ಪಾಈ ॥ ೪ ॥**

ಹೀಗೆ ಹೇಳಿ ಎಲ್ಲ ಬ್ರಾಹ್ಮಣರೂ ಹೊರಟುಹೋದರು. ನಗರ ವಾಸಿಗಳು ಈ ಸಮಾಚಾರವನ್ನು ಕೇಳಿ ಭಾರೀ ದುಃಖಿಸುತ್ತಾ ವಿಧಾತನನ್ನು ನಿಂದಿಸಿದರು. ವಿಧಾತನು ಹಂಸವನ್ನು ಮಾಡಲು ಹೋಗಿ ಕಾಗೆಯನ್ನು ಮಾಡಿದನು (ಇಂತಹ ಪುಣ್ಯಾತ್ಮನಾದ ರಾಜನನ್ನು ದೇವತೆಯನ್ನಾಗಿಸಬೇಕಾಗಿತ್ತು. ಆದರೆ ರಾಕ್ಷಸನನ್ನಾಗಿಸಿತಲ್ಲ!). ಕಾಲಕೇತುವು ನಿಜವಾದ ಪುರೋಹಿತನನ್ನು ಮನೆಗೆ ತಲುಪಿಸಿ, ಕಪಟ ಸಂನ್ಯಾಸಿಗೆ ಎಲ್ಲ ವಿಷಯಗಳನ್ನು ತಿಳಿಸಿದನು. ಆ ದುಷ್ಟನಾದ ಕಪಟ ಮುನಿಯು ಪ್ರತಾಪಭಾನು ರಾಜನ ಶತ್ರುರಾಜರಿಗೆಲ್ಲ ಪತ್ರ ಬರೆದನು. ಅವರೆಲ್ಲರೂ ಸೈನ್ಯವನ್ನು ಸಿದ್ಧಗೊಳಿಸಿ ರಣವಾದ್ಯಗಳನ್ನು ಮೊಳಗಿಸುತ್ತಾ ಪ್ರತಾಪಭಾನುವಿನ ಮೇಲೆ ದಂಡೆತ್ತಿ ಬಂದು, ನಗರವನ್ನು ಮುತ್ತಿದರು. ಅನೇಕ ದಿನಗಳವರೆಗೆ ಭಯಂಕರ ಯುದ್ಧ ನಡೆಯಿತು. ಪ್ರತಾಪಭಾನುವಿನ ಸೈನಿಕರೆಲ್ಲರೂ ವೀರಾವೇಶದಿಂದ ಹೋರಾಡಿ ವೀರಮೃತ್ಯುವನ್ನು ಅಪ್ಪಿದರು. ರಾಜನೂ ಕೂಡ ಭ್ರಾತೃಸಹಿತ ಯುದ್ಧದಲ್ಲಿ ಮಡಿದನು. ಸತ್ಯಕೇತುವಿನ ಕುಲದಲ್ಲಿ ಯಾರೂ ಉಳಿಯಲಿಲ್ಲ. ವಿಪ್ರಶಾಪವು ಹೇಗೆ ಸುಳ್ಳಾದೀತು? ಶತ್ರುವನ್ನು ಗೆದ್ದು, ನಗರವನ್ನು ಮತ್ತೆ ಸ್ಥಾಪಿಸಿ, ರಾಜರು ವಿಜಯ, ಯಶಸ್ಸಿನೊಂದಿಗೆ ತಮ್ಮ-ತಮ್ಮ ಊರಿಗೆ ಮರಳಿದರು. (ಚೌ/೧-೪)

**ದೋ – ಭರದ್ವಾಜ ಸುನು ಜಾಹಿ ಜಬ ಹೋಇ ಬಿಧಾತಾ ಬಾಮ ।**
**ಧೂರಿ ಮೇರುಸಮ ಜನಕ ಜಮ ತಾಹಿ ಬ್ಯಾಲಸಮ ದಾಮ ॥ ೧೭೫ ॥**

ಯಾಜ್ಞವಲ್ಕ್ಯರು ಹೇಳುತ್ತಿದ್ದಾರೆ – ಹೇ ಭರದ್ವಾಜಾ! ಕೇಳು. ವಿಧಿಯು ಪ್ರತಿಕೂಲವಾದಾಗ ಧೂಳೂ ಮೇರುಪರ್ವತವಾಗುತ್ತದೆ. ತಂದೆಯೂ ಯಮನಾಗುತ್ತಾನೆ. ಹಗ್ಗವೂ ಹಾವಾಗಿ ಬಿಡುತ್ತದೆ. (ದೋ/೧೭೫)

## ರಾವಣಾದಿಗಳ ಜನ್ಮವೃತ್ತಾಂತ

**ಚೌ – ಕಾಲ ಪಾಇ ಮುನಿ ಸುನು ಸೋಇ ರಾಜಾ । ಭಯಉ ನಿಸಾಚರ ಸಹಿತ ಸಮಾಜಾ ॥**
**ದಸ ಸಿರ ತಾಹಿ ಬೀಸ ಭುಜದಂಡಾ । ರಾವನ ನಾಮ ಬೀರ ಬರಿಬಂಡಾ ॥ ೧ ॥**
**ಭೂಪ ಅನುಜ ಅರಿಮರ್ದನ ನಾಮಾ । ಭಯಉ ಸೋ ಕುಂಭಕರನ ಬಲಧಾಮಾ ॥**
**ಸಚಿವ ಜೊ ರಹಾ ಧರಮರುಚಿ ಜಾಸು । ಭಯಉ ಬಿಮಾತ್ರ ಬಂಧು ಲಗು ತಾಸು ॥ ೨ ॥**
**ನಾಮ ಬಿಭೀಷನ ಜೆಹಿ ಜಗ ಜಾನಾ । ಬಿಷ್ನುಭಗತ ಬಿಗ್ಯಾನ ನಿಧಾನಾ ॥**
**ರಹೇ ಜೆ ಸುತ ಸೇವಕ ನೃಪ ಕೇರೇ । ಭಏ ನಿಸಾಚರ ಘೋರ ಘನೇರೇ ॥ ೩ ॥**
**ಕಾಮರೂಪ ಖಲ ಜಿನಸ ಅನೇಕಾ । ಕುಟಿಲ ಭಯಂಕರ ಬಿಗತ ಬಿಬೇಕಾ ॥**
**ಕೃಪಾ ರಹಿತ ಹಿಂಸಕ ಸಬ ಪಾಪೀ । ಬರನಿ ನ ಜಾಹಿಂ ಬಿಸ್ವಪರಿತಾಪೀ ॥ ೪ ॥**

ಮುನೀಶ್ವರಾ! ಕೇಳು. ಕಾಲಾಂತರದಲ್ಲಿ ಅದೇ ರಾಜನು ಪರಿವಾರಸಮೇತನಾಗಿ ರಾವಣನೆಂಬ ರಾಕ್ಷಸನಾಗಿ ಹುಟ್ಟಿದ. ಅವನಿಗೆ ಹತ್ತು ತಲೆ ಮತ್ತು ಇಪ್ಪತ್ತು ಕೈಗಳಿದ್ದವು. ಅವನು ಅತ್ಯಂತ ಪ್ರತಾಪಶಾಲಿಯಾಗಿದ್ದನು. ಅವನ ತಮ್ಮನಾದ ಅರಿಮರ್ದನನು ಮಹಾಬಲಶಾಲಿಯಾದ ಕುಂಭಕರ್ಣನಾಗಿ ಹುಟ್ಟಿದನು. ಮಂತ್ರಿಯಾದ ಧರ್ಮರುಚಿಯು ರಾವಣನಿಗೆ ಮಲತಮ್ಮನಾಗಿ ಹುಟ್ಟಿದನು. ಅವನೇ ವಿಶ್ವವಿಖ್ಯಾತನಾದ ವಿಭೀಷಣನು. ಅವನು ವಿಷ್ಣುಭಕ್ತನಾಗಿದ್ದು, ಜ್ಞಾನ-ವಿಜ್ಞಾನದ ಭಂಡಾರನಾಗಿದ್ದನು. ರಾಜನ ಮಕ್ಕಳೂ ಸೇವಕರೂ ಕೂಡ ಭಯಂಕರ ರಾಕ್ಷಸರಾಗಿ ಹುಟ್ಟಿದರು. ಅವರೆಲ್ಲರೂ ಮಾಯಾವಿಗಳೂ, ಕಾಮರೂಪಿಗಳೂ, ದುಷ್ಟರೂ, ಕುಟಿಲರೂ, ವಿವೇಕಹೀನರೂ, ನಿರ್ದಯಿಗಳೂ, ಪಾಪಿಗಳೂ, ಪ್ರಪಂಚವನ್ನು ಪೀಡಿಸುವವರು. ಅವರ ದುಷ್ಕೃತ್ಯಗಳಿಗೆ ಅಂತ್ಯವೇ ಇಲ್ಲ. (ಚೌ/೧-೪)

**ದೋ – ಉಪಜೇ ಜದಪಿ ಪುಲಸ್ತ್ಯಕುಲ ಪಾವನ ಅಮಲ ಅನೂಪ।**
**ತದಪಿ ಮಹೀಸುರ ಶ್ರಾಪ ಬಸ ಭಏ ಸಕಲ ಅಘರೂಪ॥ ೧೭೬ ॥**

ಪುಲಸ್ತ್ಯನ ನಿರ್ಮಲವೂ, ಪವಿತ್ರವೂ, ಅನುಪಮವೂ ಆದ ಕುಲದಲ್ಲಿ ಜನಿಸಿದ್ದರೂ, ಬ್ರಾಹ್ಮಣರ ಶಾಪದಿಂದ ಅವರೆಲ್ಲರೂ ಪಾಪರೂಪಿಗಳಾದರು. (ದೋ/೧೭೬)

**ಚೌ – ಕೀನ್ಹ ಬಿಬಿಧ ತಪ ತೀನಿಹುँ ಭಾಈ। ಪರಮ ಉಗ್ರ ನಹಿँ ಬರನಿ ಸೊ ಜಾಈ ॥**
**ಗಯಉ ನಿಕಟ ತಪ ದೇಖಿ ಬಿಧಾತಾ। ಮಾಗಹು ಬರ ಪ್ರಸನ್ನ ಮೈँ ತಾತಾ ॥ ೧ ॥**
**ಕರಿ ಬಿನತೀ ಪದ ಗಹಿ ದಸಸೀಸಾ। ಬೋಲೆಉ ಬಚನ ಸುನಹು ಜಗದೀಸಾ ॥**
**ಹಮ ಕಾಹೂ ಕೇ ಮರಹಿँ ನ ಮಾರೇँ। ಬಾನರ ಮನುಜ ಜಾತಿ ದುಇ ಬಾರೇँ ॥ ೨ ॥**
**ಏವಮಸ್ತು ತುಮ್ಹ ಬಡ ತಪ ಕೀನ್ಹಾ। ಮೈँ ಬ್ರಹ್ಮಾँ ಮಿಲಿ ತೆಹಿ ಬರ ದೀನ್ಹಾ॥**
**ಪುನಿ ಪ್ರಭು ಕುಂಭಕರನ ಪಹಿँ ಗಯಊ। ತೆಹಿ ಬಿಲೋಕಿ ಮನ ಬಿಸಮಯ ಭಯಊ ॥ ೩ ॥**
**ಜೌ ಎಹಿँ ಖಲ ನಿತ ಕರಬ ಅಹಾರೂ। ಹೋಇಹಿ ಸಬ ಉಜಾರಿ ಸಂಸಾರೂ॥**
**ಸಾರದ ಪ್ರೇರಿ ತಾಸು ಮತಿ ಫೇರೀ। ಮಾಗೆಸಿ ನೀದ ಮಾಸ ಷಟ ಕೇರೀ॥ ೪ ॥**

ಮೂವರೂ ಸೋದರರು, ವರ್ಣನಾತೀತವಾದ ಅನೇಕ ಪ್ರಕಾರದ ಘೋರ ತಪಸ್ಸನ್ನಾಚರಿಸಿದರು. ಅವರ ಉಗ್ರವಾದ ತಪಸ್ಸನ್ನು ನೋಡಿ ಬ್ರಹ್ಮದೇವರು ಅವರ ಬಳಿಗೆ ಬಂದು – ''ಅಯ್ಯಾ! ನಾನು ಪ್ರಸನ್ನನಾಗಿದ್ದೇನೆ. ಬೇಕಾದ ವರವನ್ನು ಬೇಡಿ'' ಎಂದು ಹೇಳಿದರು. ಆಗ ರಾವಣನು ವಿನಯದಿಂದ ಬ್ರಹ್ಮದೇವರ ಚರಣಗಳನ್ನು ಹಿಡಿದುಕೊಂಡು – ಜಗದೀಶ್ವರನೇ! ನರ-ವಾನರ ಈ ಎರಡು ಜಾತಿ ಬಿಟ್ಟು ಬೇರೆ ಯಾರಿಂದಲೂ ನನಗೆ ಮರಣವಾಗದಂತೆ ವರವನ್ನು ಕರುಣಿಸು, ಎಂದು ಬೇಡಿಕೊಂಡನು. (ಶಿವನು ಹೇಳುತ್ತಾನೆ –) ನಾನು ಮತ್ತು ಬ್ರಹ್ಮನು ಸೇರಿ 'ಹಾಗೇ ಆಗಲೀ' ಎಂದು ವರವನ್ನು ಕೊಟ್ಟೆವು. ಮತ್ತೆ ಬ್ರಹ್ಮನು ಕುಂಭಕರ್ಣನ ಬಳಿಗೆ ಹೋದನು. ಅವನನ್ನು ನೋಡಿ ಬ್ರಹ್ಮನಿಗೇ ಆಶ್ಚರ್ಯವಾಯಿತು. 'ಈ ದುಷ್ಟನು ನಿತ್ಯ ಉಂಡರೆ ಇಡೀ ಜಗತ್ತೇ ಹಾಳುಬಿದ್ದುಹೋದೀತು.' ಹೀಗೆ ಯೋಚಿಸಿ, ಅವನ ಬುದ್ಧಿಯು ವಿಕಲ್ಪವಾಗುವಂತೆ ಸರಸ್ವತಿಯನ್ನು ಪ್ರೇರೇಪಿಸಿದನು. ಅದರಂತೆ ಅವನು ವರ್ಷಕ್ಕೆ ಆರು ತಿಂಗಳು ನಿದ್ದೆಯನ್ನು ಬೇಡಿದನು. ಅದರಂತೆ ಅವನಿಗೆ ಷಣ್ಮಾಸಿಕ ನಿದ್ದೆಯ ವರವನ್ನು ಕರುಣಿಸಿದನು. (ಚೌ/೧-೪)

**ದೋ – ಗಏ ಬಿಭೀಷನ ಪಾಸ ಪುನಿ ಕಹೆಉ ಪುತ್ರ ಬರ ಮಾಗು।**
**ತೆಹಿँ ಮಾಗೆಉ ಭಗವಂತ ಪದ ಕಮಲ ಅಮಲ ಅನುರಾಗು॥ ೧೭೭ ॥**

ಬಳಿಕ ಬ್ರಹ್ಮದೇವರು ವಿಭೀಷಣನ ಬಳಿಗೆ ಹೋಗಿ – 'ಮಗು! ಬೇಕಾದ ವರವನ್ನು ಕೇಳಿಕೋ' ಎಂದು ಹೇಳಿದಾಗ, ಅವನು ಭಗವಂತನ ಚರಣಕಮಲಗಳಲ್ಲಿ ಅನನ್ಯ ನಿಷ್ಕಾಮಭಕ್ತಿಯು ಇರುವಂತೆ ಕರುಣಿಸೆಂದು ಬೇಡಿದನು. (ದೋ/೧೭೭)

**ಚೌ – ತಿನ್ಹಹಿ ದೇಇ ಬರ ಬ್ರಹ್ಮ ಸಿಧಾಏ। ಹರಷಿತ ತೇ ಅಪನೇ ಗೃಹ ಆಏ ॥**
**ಮಯ ತನುಜಾ ಮಂದೋದರಿ ನಾಮಾ। ಪರಮ ಸುಂದರೀ ನಾರಿ ಲಲಾಮಾ॥ ೧ ॥**
**ಸೋಇ ಮಯँ ದೀನ್ಹಿ ರಾವನಹಿ ಆನೀ। ಹೋಇಹಿ ಜಾತುಧಾನಪತಿ ಜಾನೀ॥**
**ಹರಷಿತ ಭಯಉ ನಾರಿ ಭಲಿ ಪಾಈ। ಪುನಿ ದೋಉ ಬಂಧು ಬಿಆಹೆಸಿ ಜಾಈ॥ ೨ ॥**
**ಗಿರಿ ತ್ರಿಕೂಟ ಎಕ ಸಿಂಧು ಮಝಾರೀ। ಬಿಧಿ ನಿರ್ಮಿತ ದುರ್ಗಮ ಅತಿ ಭಾರೀ॥**
**ಸೋಇ ಮಯ ದಾನವँ ಬಹುರಿ ಸँವಾರಾ। ಕನಕ ರಚಿತ ಮನಿಭವನ ಅಪಾರಾ॥ ೩ ॥**

**ಭೋಗಾವತಿ ಜಸಿ ಅಹಿಕುಲ ಬಾಸಾ । ಅಮರಾವತಿ ಜಸಿ ಸಕ್ರನಿವಾಸಾ ॥**
**ತಿನ್ಹತೇಂ ಅಧಿಕ ರಮ್ಯ ಅತಿ ಬಂಕಾ । ಜಗ ಬಿಖ್ಯಾತ ನಾಮ ತೆಹಿ ಲಂಕಾ ॥ ೪ ॥**

ಈ ವಿಧವಾಗಿ ಮೂವರಿಗೂ ವರವನ್ನು ಕರುಣಿಸಿ, ಬ್ರಹ್ಮದೇವರು ಸತ್ಯಲೋಕವನ್ನೈದಿದರು. ಅವರು ಮೂವರೂ ಹರ್ಷದಿಂದ ಮನೆಗೆ ಮರಳಿದರು. ಮಯನೆಂಬ ರಾಕ್ಷಸನಿಗೆ 'ಮಂಡೋದರಿ' ಎಂಬ ಚೆಲುವೆಯಾದ ಮಗಳಿದ್ದಳು. ಅವಳು ನಾರೀಶಿರೋಮಣಿಯಾಗಿದ್ದಳು. ಮಯಾಸುರನು ಆಕೆಯನ್ನು ರಾವಣನಿಗೆ ಕೊಟ್ಟು ಮದುವೆ ಮಾಡಿದನು. ರಾವಣನು ರಾಕ್ಷಸರ ರಾಜನಾಗುತ್ತಾನೆಂದು ಅವನಿಗೆ ತಿಳಿದಿತ್ತು. ಒಳ್ಳೆಯ ಹೆಂಡತಿಯನ್ನು ಪಡೆದು ರಾವಣನು ಸಂತುಷ್ಟನಾದನು. ಅನಂತರ ಅವನು ತನ್ನ ಇಬ್ಬರೂ ತಮ್ಮಂದಿರ ವಿವಾಹವನ್ನು ಮಾಡಿದನು.

ಸಮುದ್ರದ ಮಧ್ಯದಲ್ಲಿ ತ್ರಿಕೂಟ ಎಂಬ ಪರ್ವತದ ಮೇಲೆ ಬ್ರಹ್ಮನಿರ್ಮಿತವಾದ ಒಂದು ದೊಡ್ಡ ದುರ್ಗವಿತ್ತು. ಮಹಾಮಾಯಾವಿಯೂ, ದೈತ್ಯಶಿಲ್ಪಿಯೂ ಆದ ಮಯನೆಂಬ ದಾನವನು ಅದನ್ನು ಮತ್ತೆ ಮಣಿ-ಮಾಣಿಕ್ಯಗಳಿಂದ ಅಲಂಕರಿಸಿದನು. ಅದರಲ್ಲಿ ಚಿನ್ನದಿಂದ ಮಾಡಿದ ಅನೇಕ ಹರ್ಮ್ಯಗಳಿದ್ದವು. ಅದು ಪಾತಾಳಲೋಕದ ನಾಗರಾಜನ ರಾಜಧಾನಿಯಾದ 'ಭೋಗವತಿ'ಗಿಂತಲೂ ದೇವತೆಗಳ ವಾಸಸ್ಥಾನವಾದ, ಸ್ವರ್ಗದ ರಾಜಧಾನಿಯಾದ 'ಅಮರಾವತಿ'ಗಿಂತಲೂ ಮಿಗಿಲಾದ ಸೌಂದರ್ಯದಿಂದ ಕೂಡಿತ್ತು. ಅದು ದುರ್ಗಮವಾಗಿದ್ದು 'ಲಂಕೆ' ಎಂಬ ಹೆಸರಿನಿಂದ ಪ್ರಸಿದ್ಧವಾಗಿತ್ತು. (ಚೌ/೧-೪)

**ದೋ – ಖಾಈಂ ಸಿಂಧು ಗಭೀರ ಅತಿ ಚಾರಿಹುಂ ದಿಸಿ ಫಿರಿ ಆವ ।**
**ಕನಕ ಕೋಟ ಮನಿ ಖಚಿತ ದೃಢ ಬರನಿ ನ ಜಾಇ ಬನಾವ ॥ ೧೭೮(ಕ)॥**
**ಹರಿ ಪ್ರೇರಿತ ಜೆಹಿಂ ಕಲಪ ಜೋಇ ಜಾತುಧಾನಪತಿ ಹೋಇ ।**
**ಸೂರ ಪ್ರತಾಪೀ ಅತುಲಬಲ ದಲ ಸಮೇತ ಬಸ ಸೋಇ ॥ ೧೭೮(ಖ)॥**

ಅದರ ಸುತ್ತಲೂ ಆಳವಾದ ಸಮುದ್ರವೇ ಕಂದಕವಾಗಿತ್ತು. ಮಣಿಖಚಿತವಾದ, ಚಿನ್ನದ ಪ್ರಾಕಾರವು ಸುತ್ತಲೂ ಭದ್ರವಾಗಿದ್ದು ಬಲಿಷ್ಠವಾಗಿತ್ತು. ಅದರ ಶಿಲ್ಪಕಲಾಕೌಶಲವು ವರ್ಣನಾತೀತವು. ಭಗವಂತನ ಸಂಕಲ್ಪದಿಂದ ಪ್ರತಿಕಲ್ಪದಲ್ಲಿಯೂ, ಶೂರನೂ, ವೀರನೂ, ಪ್ರತಾಪಶಾಲಿಯೂ, ಬಲಶಾಲಿಯೂ ಆದ ರಾಕ್ಷಸರಾಜನು ದೊಡ್ಡ ಸೈನ್ಯದೊಂದಿಗೆ ಈ ಲಂಕೆಯಲ್ಲೇ ವಾಸಿಸುತ್ತಿದ್ದನು. (ದೋ/೧೭೮ ಕ, ಖ)

**ಚೌ – ರಹೇ ತಹಾಂ ನಿಸಿಚರ ಭಟ ಭಾರೇ । ತೇ ಸಬ ಸುರನ್ಹ ಸಮರ ಸಂಘಾರೇ ॥**
**ಅಬ ತಹ್ ರಹಹಿಂ ಸಕ್ರ ಕೇ ಪ್ರೇರೆ । ರಚ್ಛಕ ಕೋಟಿ ಜಚ್ಛಪತಿ ಕೇರೆ ॥ ೧ ॥**
**ದಸಮುಖ ಕತಹುಂ ಖಬರಿ ಅಸಿ ಪಾಈ । ಸೇನ ಸಾಜಿ ಗಢ ಘೇರೆಸಿ ಜಾಈ ॥**
**ದೇಖಿ ಬಿಕಟ ಭಟ ಬಡಿ ಕಟಕಾಈ । ಜಚ್ಛ ಜೀವ ಲೈ ಗಏ ಪರಾಈ ॥ ೨ ॥**
**ಫಿರಿ ಸಬ ನಗರ ದಸಾನನ ದೇಖಾ । ಗಯಉ ಸೋಚ ಸುಖ ಭಯಉ ಬಿಸೇಷಾ ॥**
**ಸುಂದರ ಸಹಜ ಅಗಮ ಅನುಮಾನೀ । ಕೀನ್ಹಿ ತಹಾಂ ರಾವನ ರಜಧಾನೀ ॥ ೩ ॥**
**ಜೆಹಿ ಜಸ ಜೋಗ ಬಾಂಟಿ ಗೃಹ ದೀನ್ಹೇ । ಸುಖೀ ಸಕಲ ರಜನೀಚರ ಕೀನ್ಹೇ ॥**
**ಏಕ ಬಾರ ಕುಬೇರ ಪರ ಧಾವಾ । ಪುಷ್ಪಕ ಜಾನ ಜೀತಿ ಲೈ ಆವಾ ॥ ೪ ॥**

ಮೊದಲು ಆ ಲಂಕೆಯಲ್ಲಿ ಭಾರೀ ರಾಕ್ಷಸಯೋಧರು ವಾಸಿಸುತ್ತಿದ್ದರು. ದೇವತೆಗಳು ಅವರೆಲ್ಲರನ್ನು ಯುದ್ಧದಲ್ಲಿ ಕೊಂದಿದ್ದರು. ಕಡೆಗೆ ಇಂದ್ರನ ಪ್ರೇರಣೆಯಂತೆ ಕುಬೇರನ ಒಂದು ಕೋಟಿ ಯಕ್ಷರು ಅದನ್ನು ರಕ್ಷಿಸುತ್ತಿದ್ದರು. ರಾವಣನು ಈ ವಾರ್ತೆಯನ್ನು ತಿಳಿದುಕೊಂಡು ಸೈನ್ಯಸಮೇತ ಆ ಕೋಟೆಯನ್ನು ಮುತ್ತಿದನು. ಆ ವಿಕಟ ಯೋಧನನ್ನು ಹಾಗೂ ಸೈನ್ಯವನ್ನು ನೋಡಿ ಯಕ್ಷರು ಪ್ರಾಣಭಯದಿಂದ ಓಡಿಹೋದರು. ಅನಂತರ ರಾವಣನು ಊರೆಲ್ಲ ಸುತ್ತಿ ನೋಡಿದನು. ತನಗೆ ತಕ್ಕುದಾದ ರಾಜಧಾನಿಯು ಲಭಿಸಿತೆಂದು ಸಂತೋಷಪಟ್ಟನು. ಸಹಜವಾಗಿ ಅಂದವಾದ, ಹೊರಗಿನವರಿಗೆ ದುರ್ಗಮವಾದ ಆ ನಗರವನ್ನು ತನ್ನ ರಾಜಧಾನಿಯಾಗಿಸಿಕೊಂಡನು. ಅವರವರ ಯೋಗ್ಯತೆಗೆ ತಕ್ಕಂತೆ ರಾಕ್ಷಸರಿಗೆ ಮನೆಗಳನ್ನು ಹಂಚಿ ಎಲ್ಲರಿಗೂ ನೆಮ್ಮದಿಯನ್ನುಂಟುಮಾಡಿದನು. ರಾವಣನು ಒಮ್ಮೆ ಕುಬೇರನ ಮೇಲೆ ದಂಡೆತ್ತಿಹೋಗಿ ಅವನ ಬಳಿ ಇದ್ದ ಪುಷ್ಪಕವಿಮಾನವನ್ನು ಗೆದ್ದು ತಂದನು. (ಚೌ/೧-೪)

**ದೋ – ಕೌತುಕಹೀಂ ಕೈಲಾಸ ಪುನಿ ಲೀನ್ಹೆಸಿ ಜಾಇ ಉಠಾಇ ।**
**ಮನಹುಂ ತೌಲಿ ನಿಜ ಬಾಹುಬಲ ಚಲಾ ಬಹುತ ಸುಖ ಪಾಇ ॥ ೧೭೯ ॥**

ಒಮ್ಮೆ ಅವನು ಕುತೂಹಲಕ್ಕಾಗಿಯೇ ಕೈಲಾಸಪರ್ವತವನ್ನು ಎತ್ತಿ ತನ್ನ ಭುಜಬಲವನ್ನು ತೂಗಿನೋಡಿಕೊಂಡು ಸಂತೋಷಪಟ್ಟು ತಿರುಗಿಬಂದನು. (ದೋ/೧೭೯)

**ಚೌ – ಸುಖ ಸಂಪತಿ ಸುತ ಸೇನ ಸಹಾಈ । ಜಯ ಪ್ರತಾಪ ಬಲ ಬುದ್ಧಿ ಬಡಾಈ ॥**
**ನಿತ ನೂತನ ಸಬ ಬಾಢತ ಜಾಈ । ಜಿಮಿ ಪ್ರತಿಲಾಭ ಲೋಭ ಅಧಿಕಾಈ ॥ ೧ ॥**
**ಅತಿಬಲ ಕುಂಭಕರನ ಅಸ ಭ್ರಾತಾ । ಜೆಹಿ ಕಹುँ ನಹಿं ಪ್ರತಿಭಟ ಜಗ ಜಾತಾ ॥**
**ಕರಇ ಪಾನ ಸೋವಇ ಷಟ ಮಾಸಾ । ಜಾಗತ ಹೋಇ ತಿಹೂँ ಪುರ ತ್ರಾಸಾ ॥ ೨ ॥**
**ಜೌँ ದಿನ ಪ್ರತಿ ಅಹಾರ ಕರ ಸೋಈ । ಬಿಸ್ವ ಬೇಗಿ ಸಬ ಚೌಪಟ ಹೋಈ ॥**
**ಸಮರ ಧೀರ ನಹಿं ಜಾಇ ಬಖಾನಾ । ತೆಹಿ ಸಮ ಅಮಿತ ಬೀರ ಬಲವಾನಾ ॥ ೩ ॥**
**ಬಾರಿದನಾದ ಜೇಠ ಸುತ ತಾಸೂ । ಭಟ ಮಹುँ ಪ್ರಥಮ ಲೀಕ ಜಗ ಜಾಸೂ ॥**
**ಜೆಹಿ ನ ಹೋಇ ರನ ಸನಮುಖ ಕೋಈ । ಸುರಪುರ ನಿತಹಿं ಪರಾವನ ಹೋಈ ॥ ೪ ॥**

'ಲಾಭವು ಬೆಳೆದಂತೆ, ಲೋಭವೂ ಹೆಚ್ಚಾಗುತ್ತದೆ, ಅಂತೆಯೇ ರಾವಣನಿಗೆ ಸುಖಸಂಪತ್ತುಗಳೂ, ಪುತ್ರರೂ, ಸೈನ್ಯವೂ, ಜಯವೂ, ಪ್ರತಾಪವೂ, ಬಲ, ಬುದ್ಧಿ, ದೊಡ್ಡಸ್ತಿಕೆ ಮುಂತಾದವುಗಳೂ ನಿತ್ಯನೂತನವಾಗಿ ವೃದ್ಧಿಯಾಗುತ್ತಾ ಇದ್ದವು. ಅವನ ಸೋದರ ಅತ್ಯಂತ ಬಲಶಾಲಿಯಾದ ಕುಂಭಕರ್ಣನು. ಅವನಿಗೆ ಸಾಟಿಯಾದ ಯೋಧ ಜಗತ್ತಿನಲ್ಲೇ ಇರಲಿಲ್ಲ. ಅವನು ಮದ್ಯವನ್ನು ಕುಡಿದು ಆರು ತಿಂಗಳು ನಿದ್ದೆ ಮಾಡುತ್ತಿದ್ದನು. ಅವನು ಕಣ್ದೆರೆದರೆ ಸಾಕು, ಮೂರು ಲೋಕಗಳೂ ತಲ್ಲಣಿಸುತ್ತಿದ್ದವು. ಅವನು ಪ್ರತಿದಿನ ಊಟಮಾಡಿದರೆ, ಪ್ರಪಂಚವೆಲ್ಲ ಬಹುಬೇಗನೇ ಬಟ್ಟಬಯಲಾಗುತ್ತಿತ್ತು. ಅವನ ಸಮರಶೌರ್ಯ ಮಾತಿಗೆ ಮೀರಿದುದು. ಲಂಕೆಯಲ್ಲಿ ಈ ಕುಂಭಕರ್ಣನಂತಹ ಅಸಂಖ್ಯವೀರರು ಇದ್ದರು. ಮೇಘನಾದನು (ಇಂದ್ರಜಿತ್ತು) ರಾವಣನ ಜೇಷ್ಠ ಪುತ್ರನು. ಲೋಕವೀರರಲ್ಲಿ ಆತನದು ಪ್ರಥಮ ಸ್ಥಾನ. ರಣದಲ್ಲಿ ಅವನನ್ನು ಎದುರಿಸುವವರು ಯಾರೂ ಇರಲಿಲ್ಲ. ದೇವಲೋಕದಲ್ಲಂತೂ ಅವನ ಭಯದಿಂದ ದೇವತೆಗಳು ಗಡಗಡನೆ ನಡುಗುತ್ತಿದ್ದರು. (ಚೌ/೧-೪)

**ದೋ – ಕುಮುಖ ಅಕಂಪನ ಕುಲಿಸರದ ಧೂಮಕೇತು ಅತಿಕಾಯ ।**
**ಏಕ ಏಕ ಜಗ ಜೀತಿ ಸಕ ಐಸೇ ಸುಭಟ ನಿಕಾಯ ॥ ೧೮೦ ॥**

ಇವರಲ್ಲದೆ ದುರ್ಮುಖ, ಅಕಂಪನ, ವಜ್ರದಂತ, ಧೂಮಕೇತು, ಅತಿಕಾಯನೇ ಮೊದಲಾದ ಬಹುಮಂದಿ ಯೋಧರಿದ್ದರು. ಇವರಲ್ಲಿ ಒಬ್ಬೊಬ್ಬನೂ ಪ್ರಪಂಚವನ್ನು ಗೆಲ್ಲಲು ಸಮರ್ಥನಾಗಿದ್ದನು. (ದೋ/೧೮೦)

**ಚೌ – ಕಾಮರೂಪ ಜಾನಹಿं ಸಬ ಮಾಯಾ । ಸಪನೆಹುँ ಜಿನ್ಹ ಕೇं ಧರಮ ನ ದಾಯಾ ॥**
**ದಸಮುಖ ಬೈಠ ಸಭಾँ ಏಕ ಬಾರಾ । ದೇಖಿ ಅಮಿತ ಆಪನ ಪರಿವಾರಾ ॥ ೧ ॥**
**ಸುತ ಸಮೂಹ ಜನ ಪರಿಜನ ನಾತೀ । ಗನೈ ಕೊ ಪಾರ ನಿಸಾಚರ ಜಾತೀ ॥**
**ಸೇನ ಬಿಲೋಕಿ ಸಹಜ ಅಭಿಮಾನೀ । ಬೋಲಾ ಬಚನ ಕ್ರೋಧ ಮದ ಸಾನೀ ॥ ೨ ॥**
**ಸುನಹು ಸಕಲ ರಜನೀಚರ ಜೂಥಾ । ಹಮರೇ ಬೈರೀ ಬಿಬುಧ ಬರೂಥಾ ॥**
**ತೇ ಸನಮುಖ ನಹಿं ಕರಹಿं ಲರಾಈ । ದೇಖಿ ಸಬಲ ರಿಪು ಜಾಹಿं ಪರಾಈ ॥ ೩ ॥**
**ತೆನ್ಹ ಕರ ಮರನ ಏಕ ಬಿಧಿ ಹೋಈ । ಕಹಉँ ಬುಝಾಇ ಸುನಹು ಅಬ ಸೋಈ ॥**
**ದ್ವಿಜಭೋಜನ ಮಖ ಹೋಮ ಸರಾಧಾ । ಸಬ ಕೈ ಜಾಇ ಕರಹು ತುಮ್ಹ ಬಾಧಾ ॥ ೪ ॥**

ಎಲ್ಲ ರಾಕ್ಷಸರೂ ಕಾಮರೂಪಿಗಳೂ, ಆಸುರೀ ಮಾಯೆಯಲ್ಲಿ ಪ್ರವೀಣರೂ ಆಗಿದ್ದರು. ದಯೆ, ದಾಕ್ಷಿಣ್ಯ, ಧರ್ಮ ಇವುಗಳು ಇವರ ಕನಸಿನಲ್ಲೂ ಇರಲಿಲ್ಲ. ಒಮ್ಮೆ ಒಡ್ಡೋಲಗದಲ್ಲಿ ಕುಳಿತ ರಾವಣನು ತನ್ನ ಅಗಣಿತ ಪರಿವಾರವನ್ನು ನೋಡಿದನು. ಪುತ್ರರು, ಪೌತ್ರರೂ, ಕುಟುಂಬಿಗಳೂ, ಸೇವಕರೂ ತಂಡ-ತಂಡವಾಗಿದ್ದರು. ನಿಶಾಚರರು ಲೆಕ್ಕಕ್ಕೆ ಸಿಗುವರೇ? ತನ್ನ ಸೇನೆಯನ್ನು ಕಂಡು ಸ್ವಭಾವದಿಂದಲೇ ದುರಭಿಮಾನಿಯಾದ ರಾವಣನು ಕ್ರೋಧ ಮತ್ತು ಗರ್ವದಿಂದ ಬೀಗಿ, ಇಂತೆಂದನು – ಎಲೈ ರಾಕ್ಷಸವೀರರೇ! ಕೇಳಿ. ದೇವತೆಗಳು ನಮ್ಮ ಶತ್ರುಗಳು. ಅವರು ನಮ್ಮೆದುರಿಗೆ ಬಂದು ಯುದ್ಧ ಮಾಡುವವರಲ್ಲ. ಬಲಾಢ್ಯರಾದ ಶತ್ರುಗಳನ್ನು ಕಂಡು ಓಡಿಬಿಡುತ್ತಾರೆ. ಅವರ ಮರಣವು ಒಂದು ಉಪಾಯದಿಂದ ಮಾತ್ರ ಸಾಧ್ಯ. ಅದನ್ನು ನಿಮಗೆ ಹೇಳುತ್ತೇನೆ ಕೇಳಿರಿ. ಅವರ ಬಲವು ಹೆಚ್ಚಿಸುವಂತಹ, ಬ್ರಾಹ್ಮಣಭೋಜನ, ಯಜ್ಞ-ಯಾಗಗಳು, ಹೋಮ-ಹವನಗಳು, ಶ್ರಾದ್ಧ ಇವೆಲ್ಲವುಗಳನ್ನು ನೀವು ಧ್ವಂಸಮಾಡಿರಿ. (ಚೌ/೧-೪)

**ದೋ – ಭುಧಾ ಛೀನ ಬಲಹೀನ ಸುರ ಸಹಜೆಹಿಂ ಮಿಲಿಹಹಿಂ ಆಇ ।**
**ತಬ ಮಾರಿಹಉಂ ಕಿ ಛಾಡಿಹಉಂ ಭಲೀ ಭಾಂತಿ ಅಪನಾಈ ॥೧೮೧॥**

ಆಗ ದೇವತೆಗಳು ಹೊಟ್ಟೆಗಿಲ್ಲದೆ ಕಂಗಾಲಾಗಿ, ಗತ್ಯಂತರವಿಲ್ಲದೆ ನಮಗೆ ಶರಣು ಬರುತ್ತಾರೆ. ಆಗ ಅವರನ್ನು ಕೊಂದುಬಿಡುತ್ತೇವೆ. ಇಲ್ಲವೇ ಅವರನ್ನು ಪರತಂತ್ರರಾಗಿಸಿ, ನನ್ನ ಅಂಕೆಯಲ್ಲಿರಿಸಿಕೊಳ್ಳುತ್ತೇನೆ. (ದೋ/೧೮೧)

**ಚೌ – ಮೇಘನಾದ ಕಹುಂ ಪುನಿ ಹಂಕರಾವಾ । ದೀನ್ಹೀ ಸಿಖ ಬಲು ಬಯರು ಬಢಾವಾ ॥**
**ಜೇ ಸುರ ಸಮರ ಧೀರ ಬಲವಾನಾ । ಜಿನ್ಹಕೇಂ ಲರಿಬೇ ಕರ ಅಭಿಮಾನಾ ॥೧॥**
**ತಿನ್ಹಹಿ ಜೀತಿ ರನ ಆನೆಸು ಬಾಂಧೀ । ಉಠಿ ಸುತ ಪಿತು ಅನುಸಾಸನ ಕಾಂಧೀ ॥**
**ಎಹಿ ಬಿಧಿ ಸಬಹೀ ಅಗ್ಯಾ ದೀನ್ಹೀ । ಆಪುನು ಚಲೆಉ ಗದಾ ಕರ ಲೀನ್ಹೀ ॥೨॥**
**ಚಲತ ದಸಾನನ ಡೋಲತಿ ಅವನೀ । ಗರ್ಜತ ಗರ್ಭ ಸ್ರವಹಿಂ ಸುರ ರವನೀ ॥**
**ರಾವನ ಆವತ ಸುನೆಉ ಸಕೋಹಾ । ದೇವನ್ಹ ತಕೇ ಮೇರು ಗಿರಿ ಖೋಹಾ ॥೩॥**
**ದಿಗಪಾಲನ್ಹಕೇ ಲೋಕ ಸುಹಾಏ । ಸೂನೇ ಸಕಲ ದಸಾನನ ಪಾಏ ॥**
**ಪುನಿ ಪುನಿ ಸಿಂಘನಾದ ಕರಿ ಭಾರೀ । ದೇಇ ದೇವತನ್ಹ ಗಾರಿ ಪಚಾರೀ ॥೪॥**
**ರನ ಮದ ಮತ್ತ ಫಿರಇ ಜಗ ಧಾವಾ । ಪ್ರತಿಭಟ ಖೋಜತ ಕತಹುಂ ನ ಪಾವಾ ॥**
**ರಬಿ ಸಸಿ ಪವನ ಬರುನ ಧನಧಾರೀ । ಅಗಿನಿ ಕಾಲ ಜಮ ಸಬ ಅಧಿಕಾರೀ ॥೫॥**
**ಕಿನ್ನರ ಸಿದ್ಧ ಮನುಜ ಸುರ ನಾಗಾ । ಹಠಿ ಸಬಹೀ ಕೇ ಪಂಥಹಿಂ ಲಾಗಾ ॥**
**ಬ್ರಹ್ಮಸೃಷ್ಟಿ ಜಹಂ ಲಗಿ ತನುಧಾರೀ । ದಸಮುಖ ಬಸಬರ್ತೀ ನರ ನಾರೀ ॥೬॥**
**ಆಯಸು ಕರಹಿಂ ಸಕಲ ಭಯಭೀತಾ । ನವಹಿಂ ಆಇ ನಿತ ಚರನ ಬಿನೀತಾ ॥೭॥**

ಅನಂತರ ರಾವಣನು ಮೇಘನಾದನನ್ನು ಕರೆದು, ಅವನ ಬಲ-ಪರಾಕ್ರಮವನ್ನು, ದೇವತೆಗಳ ಕುರಿತು ಇರುವ ವೈರವನ್ನೂ ಕೆರಳುವಂತೆ ಹುರಿದುಂಬಿಸಿ ಹೇಳಿದನು – ಕುಮಾರಾ! ಸಮರವೀರರೂ, ಬಲಾಢ್ಯರೂ ಆದ ದೇವತೆಗಳಿಗೆ ತಾವೇ ವೀರರೆಂಬ ಹೆಮ್ಮೆ ಇದೆ. ಅವರನ್ನು ಯುದ್ಧದಲ್ಲಿ ಸದೆಬಡಿದು ಹೆಡೆಮುರಿಕಟ್ಟಿ ತೆಗೆದುಕೊಂಡು ಬಾ. ತಂದೆಯ ಮಾತನ್ನು ಕೇಳಿ ಇಂದ್ರಜಿತುವು ಎದ್ದುನಿಂತು, ತಂದೆಗೆ ನಮಸ್ಕರಿಸಿ, ಅವನ ಆಜ್ಞೆಯಂತೆ ನಡೆಯಲು ಹೊರಟನು. ಹೀಗೆ ರಾವಣನು ಎಲ್ಲರಿಗೆ ಅಪ್ಪಣೆ ಇತ್ತು, ತಾನೂ ಗದಾಪಾಣಿಯಾಗಿ ದೇವತೆಗಳನ್ನು ಜಯಿಸಲು ಹೊರಟನು. ರಾವಣನ ಪದಹತಿಗೆ ಭೂಮಿ ನಡುಗುತ್ತಿತ್ತು. ಆತನ ಗರ್ಜನೆಯಿಂದ ದೇವಕಾಮಿನಿಯರಿಗೆ ಗರ್ಭಸ್ರಾವವಾಗುತ್ತಿತ್ತು. ಈ ರೀತಿ ಕೋಪೋದ್ರಿಕ್ತನಾಗಿ ಬರುತ್ತಿರುವ ರಾವಣನನ್ನು ಕಂಡು ದೇವತೆಗಳು ಓಡಿಹೋಗಿ, ಸುಮೇರು ಪರ್ವತದ ಗುಹೆಗಳಲ್ಲಿ ಅಡಗಿಕೊಂಡರು. ದಿಕ್ಪಾಲಕರ ಸುಂದರ ಲೋಕಗಳೆಲ್ಲ ಬರಿದಾಗಿ ಹಾಳು ಸುರಿಯುತ್ತಿದ್ದವು. ರಾವಣನು ಆಗಾಗ ಸಿಂಹನಾದ ಮಾಡುತ್ತಾ ದೇವತೆಗಳನ್ನು ಮೂದಲಿಸುತ್ತಾ ಬೈಯ್ಯುತ್ತಿದ್ದನು. ರಣೋನ್ಮತ್ತನಾಗಿ ಅವನು ತನಗೆ ಸರಿದೊರೆಯಾದ ಪ್ರತಿಭಟನನ್ನು ಅರಸುತ್ತಾ, ಪ್ರಪಂಚದಲ್ಲೆಲ್ಲ ಸುತ್ತಾಡಿದನು. ಆದರೆ ಅವನಿಗೆ ತಕ್ಕ ಪ್ರತಿದ್ವಂದ್ವಿ ದೊರೆಯಲಿಲ್ಲ. ಸೂರ್ಯ ಚಂದ್ರರನ್ನೂ, ಇಂದ್ರಾಗ್ನಿ ಯಮ ವರುಣ ವಾಯು ಕುಬೇರ ಈಶಾನ ಮೊದಲಾದ ದಿಕ್ಪಾಲಕರನ್ನು ದೇವತೆಗಳೂ, ಕಿನ್ನರರೂ, ಸಿದ್ಧರೂ, ಸುರರೂ, ನಾಗರೂ, ಮನುಷ್ಯರೂ ಮೊದಲಾದ ಎಲ್ಲರನ್ನೂ ಬೆನ್ನಟ್ಟಿ, ಸುಖವಾಗಿ ಒಂದೆಡೆ ಇರದಂತೆ ಮಾಡಿದನು. ಬ್ರಹ್ಮಸೃಷ್ಟಿಯಲ್ಲಿದ್ದ ಶರೀರಧಾರೀ ಸ್ತ್ರೀ-ಪುರುಷರೇ ಆದಿ ಎಲ್ಲರೂ ರಾವಣನಿಗೆ ಅಧೀನರಾದರು. ಭಯದಿಂದಾಗಿ ಎಲ್ಲರೂ ಅವನ ಆಜ್ಞೆಯನು ಪಾಲಿಸುತ್ತಿದ್ದರು. ನಿತ್ಯವೂ ಬಂದು ಅವನ ಕಾಲಿಗೆ ಎರಗುತ್ತಿದ್ದರು. (ಚೌ/೧-೭)

**ದೋ – ಭುಜಬಲ ಬಿಸ್ವ ಬಸ್ಯ ಕರಿ ರಾಖೆಸಿ ಕೋಉ ನ ಸುತಂತ್ರ ।**
**ಮಂಡಲೀಕ ಮನಿ ರಾವನ ರಾಜ ಕರಇ ನಿಜ ಮಂತ್ರ ॥೧೮೨(ಕ)॥**
**ದೇವ ಜಚ್ಛ ಗಂಧರ್ಬ ನರ ಕಿನ್ನರ ನಾಗ ಕುಮಾರಿ ।**
**ಜೀತಿ ಬರೀಂ ನಿಜ ಬಾಹುಬಲ ಬಹು ಸುಂದರ ಬರ ನಾರಿ ॥೧೮೨(ಖ)॥**

ಈ ವಿಧವಾಗಿ ರಾವಣನು ತನ್ನ ಭುಜಬಲದಿಂದ ವಿಶ್ವವನ್ನೇ ವಶಪಡಿಸಿಕೊಂಡನು. ಯಾರೂ ಸ್ವತಂತ್ರರಾಗಿ ಇರಲು ಬಿಡಲಿಲ್ಲ. ಮಾಂಡಲಿಕಮಣಿಯಾಗಿ, ಸಾಮ್ರಾಟನಾಗಿ ರಾವಣನು ತನ್ನ ಇಚ್ಛೆಗನುಸಾರವಾಗಿ ರಾಜ್ಯವಾಳತೊಡಗಿದನು. ದೇವ, ಯಕ್ಷ,

ಗಂಧರ್ವ ನರ, ಕಿನ್ನರ, ನಾಗಕನ್ಯೆಯರು ಹೀಗೆ ಅನೇಕ ಸುಂದರ ಕನ್ಯೆಯರನ್ನು, ಉತ್ತಮ ರಮಣಿಯರನ್ನು ತನ್ನ ಬಾಹುಬಲದಿಂದ ಗೆದ್ದು ತಂದು ಮದುವೆಯಾದನು. (ದೋ/೧೮೨ ಕ, ಖ)

**ಚೌ – ಇಂದ್ರಜೀತ ಸನ ಜೋ ಕಛು ಕಹೇಊ । ಸೋ ಸಬ ಜನು ಪಹಿಲೆಹಿಂ ಕರಿ ರಹೇಊ ॥**
**ಪ್ರಥಮಹಿಂ ಜಿನ್ಹ ಕಹುಂ ಆಯಸು ದೀನ್ಹಾ । ತಿನ್ಹಕರ ಚರಿತ ಸುನಹು ಜೋ ಕೀನ್ಹಾ ॥ ೧ ॥**
**ದೇಖತ ಭೀಮರೂಪ ಸಬ ಪಾಪೀ । ನಿಸೀಚರ ನಿಕರ ದೇವ ಪರಿತಾಪೀ ॥**
**ಕರಹಿಂ ಉಪದ್ರವ ಅಸುರ ನಿಕಾಯಾ । ನಾನಾ ರೂಪ ಧರಹಿಂ ಕರಿ ಮಾಯಾ ॥ ೨ ॥**
**ಜೆಹಿ ಬಿಧಿ ಹೋಇ ಧರ್ಮ ನಿರ್ಮೂಲಾ । ಸೋ ಸಬ ಕರಹಿಂ ಬೇದ ಪ್ರತಿಕೂಲಾ ॥**
**ಜೆಹಿಂ ಜೆಹಿಂ ದೇಸ ಧೇನು ದ್ವಿಜ ಪಾವಹಿಂ । ನಗರ ಗಾಉಂ ಪುರ ಆಗಿ ಲಗಾವಹಿಂ ॥ ೩ ॥**
**ಸುಭ ಆಚರನ ಕತಹುಂ ನಹಿಂ ಹೋಈ । ದೇವ ಬಿಪ್ರ ಗುರು ಮಾನ ನ ಕೋಈ ॥**
**ನಹಿಂ ಹರಿಭಗತಿ ಜಗ್ಯ ತಪ ಗ್ಯಾನಾ । ಸಪನೆಹುಂ ಸುನಿಅ ನ ಬೇದ ಪುರಾನಾ ॥ ೪ ॥**

ಮೇಘನಾದನಿಗೆ ಹೇಳುವುದಕ್ಕೆ ಮುಂಚೆಯೇ ಅವನು ಆ ಕೆಲಸ ಮಾಡಿದ್ದನು. ಇತರ ರಾಕ್ಷಸರೂ ಕೂಡ ರಾವಣನ ಆಜ್ಞೆಯನ್ನು ಶಿರಸಾವಹಿಸಿ ಹಾಗೇ ಮಾಡಿದರು. ಆ ಎಲ್ಲ ಅಸುರರು ಭಯಂಕರರೂ, ಪಾಪಿಗಳೂ, ದೇವತೆಗಳನ್ನು ಹಿಂಸಿಸುವವರೂ ಆಗಿದ್ದರು. ಅವರ ಆಟೋಪ ಹೇಳತೀರದು. ಅವರು ಮಾಯೆಯಿಂದ ಅನೇಕ ರೂಪಗಳನ್ನು ಧರಿಸುತ್ತಿದ್ದರು. ಧರ್ಮದ ಬೇರನ್ನು ಕತ್ತರಿಸಲು ಏನು ಬೇಕೋ, ಅದೆಲ್ಲವನ್ನೂ ವೇದವಿರುದ್ಧವಾದ ಎಲ್ಲ ಕಾರ್ಯಗಳನ್ನೂ ಮಾಡುತ್ತಿದ್ದರು. ಗೋವುಗಳು, ಬ್ರಾಹ್ಮಣರೂ ಇರುವ ಊರು-ಕೇರಿಗಳಿಗೆ ಬೆಂಕಿ ಹಚ್ಚುತ್ತಿದ್ದರು. ಇವರ ಕಾಟದಿಂದ ಬ್ರಾಹ್ಮಣಭೋಜನ, ಯಜ್ಞಗಳು, ಶ್ರಾದ್ಧ ಮೊದಲಾದ ಶುಭಕಾರ್ಯಗಳು ಜರುಗದಂತಾದುವು. ದೇವರು, ಬ್ರಾಹ್ಮಣರು, ಗುರುಗಳು ಇವರನ್ನು ಯಾರೂ ಆದರಿಸುತ್ತಿರಲಿಲ್ಲ. ಹರಿಭಕ್ತಿ, ಯಜ್ಞ, ತಪಸ್ಸು, ಜ್ಞಾನ ಕಣ್ಮರೆಯಾಗಿದ್ದವು. ವೇದಪುರಾಣಗಳಂತೂ ಕನಸಿನಲ್ಲಿಯೂ ಕೇಳಸಿಗುತ್ತಿರಲಿಲ್ಲ. (ಚೌ/೧-೪)

**ಛಂ – ಜಪ ಜೋಗ ಬಿರಾಗಾ ತಪ ಮಖ ಭಾಗಾ ಶ್ರವನ ಸುನಇ ದಸಸೀಸಾ ।**
**ಆಪುನು ಉಠಿ ಧಾವಇ ರಹೈ ನ ಪಾವಇ ಧರಿ ಸಬ ಘಾಲಇ ಖೀಸಾ ॥**
**ಅಸ ಭ್ರಷ್ಟ ಅಚಾರಾ ಭಾ ಸಂಸಾರಾ ಧರ್ಮ ಸುನಿಅ ನಹೀಂ ಕಾನಾ ।**
**ತೆಹಿ ಬಹುಬಿಧಿ ತ್ರಾಸಇ ದೇಸ ನಿಕಾಸಇ ಜೋ ಕಹ ಬೇದ ಪುರಾನಾ ॥**

ಜಪ, ಯೋಗ, ವೈರಾಗ್ಯ ಹಾಗೂ ಯಜ್ಞದಲ್ಲಿ ದೇವತೆಗಳಿಗೆ ಭಾಗಕೊಡುವ ಮಾತು ಕಿವಿಗೆ ಬೀಳುತ್ತಲೇ ರಾವಣನು ತತ್‌ಕ್ಷಣ ಅತ್ತ ಹಾಯುತ್ತಿದ್ದ. ಏನನ್ನೂ ಉಳಿಸುತ್ತಿರಲಿಲ್ಲ. ಎಲ್ಲ ಧ್ವಂಸಮಾಡಿಬಿಡುತ್ತಿದ್ದ. ಪ್ರಪಂಚದಲ್ಲೆಲ್ಲ ಭ್ರಷ್ಟಾಚಾರ ಹಬ್ಬಿತು. ಧರ್ಮವೆಂಬ ಮಾತು ಕೂಡ ಎಲ್ಲಿಯೂ ಕೇಳಿಬರುತ್ತಿರಲಿಲ್ಲ. ವೇದ ಪುರಾಣಗಳ ಮಾತೆತ್ತಿದವರಿಗೆ ಭಯಪಡಿಸಿ, ದೇಶಭ್ರಷ್ಟರಾಗಿಸಿ ಬಿಡುತ್ತಿದ್ದನು. (ಛಂದ)

**ಸೋ – ಬರನಿ ನ ಜಾಇ ಅನೀತಿ ಘೋರ ನಿಸಾಚರ ಜೋ ಕರಹಿಂ ।**
**ಹಿಂಸಾ ಪರ ಅತಿ ಪ್ರೀತಿ ತಿನ್ಹಕೇ ಪಾಪಹಿ ಕವನಿ ಮಿತಿ ॥ ೧೮೩ ॥**

ಆ ನಿಶಾಚರರು ಮಾಡುವ ದುಷ್ಕೃತ್ಯಗಳನ್ನು ವರ್ಣಿಸಲು ಮಾತುಗಳೇ ಸಾಲವು. ಅವರಿಗೆ ಹಿಂಸಾಕೃತ್ಯಗಳೇ ಅತ್ಯಂತ ಪ್ರಿಯವಾಗಿದ್ದುವು. ಅವರ ಪಾಪಗಳಿಗೆ ಕೊನೆಮೊದಲೆಲ್ಲಿ! (ಸೋ/೧೮೩)

**ಮಾಸಪಾರಾಯಣದ ಆರನೆಯ ವಿಶ್ರಾಮ**

## ಭೂದೇವಿಯ ದುಃಖ

**ಚೌ – ಬಾಢೇ ಖಲ ಬಹು ಚೋರ ಜುಆರಾ । ಜೇ ಲಂಪಟ ಪರಧನ ಪರದಾರಾ ॥**
**ಮಾನಹಿಂ ಮಾತು ಪಿತಾ ನಹಿಂ ದೇವಾ । ಸಾಧುನ್ಹ ಸನ ಕರವಾವಹಿಂ ಸೇವಾ ॥ ೧ ॥**
**ಜಿನ್ಹಕೇ ಯಹ ಆಚರನ ಭವಾನೀ । ತೇ ಜಾನೆಹು ನಿಸಿಚರ ಸಬ ಪ್ರಾನೀ ॥**
**ಅತಿಸಯ ದೇಖಿ ಧರ್ಮ ಕೈ ಗ್ಲಾನೀ । ಪರಮ ಸಭೀತ ಧರಾ ಅಕುಲಾನೀ ॥ ೨ ॥**

**ಗಿರಿ ಸರಿ ಸಿಂಧು ಭಾರ ನಹಿಂ ಮೋಹೀ । ಜಸ ಮೊಹಿ ಗರುಅ ಏಕ ಪರದ್ರೋಹೀ ॥**
**ಸಕಲ ಧರ್ಮ ದೇಖಇ ಬಿಪರೀತಾ । ಕಹಿ ನ ಸಕಇ ರಾವನ ಭಯ ಭೀತಾ ॥ ೩ ॥**
**ಧೇನು ರೂಪ ಧರಿ ಹೃದಯ್ ಬಿಚಾರೀ । ಗಈ ತಹಾಂ ಜಹ್ ಸುರ ಮುನಿ ಝಾರೀ ॥**
**ನಿಜ ಸಂತಾಪ ಸುನಾಏಸಿ ರೋಈ । ಕಾಹೂ ತೇಂ ಕಛು ಕಾಜ ನ ಹೋಈ ॥ ೪ ॥**

ಪರಧನ ಪರದಾರಾಪಹಾರಿಗಳಾದ ದುಷ್ಟರು, ಕಳ್ಳಕಾಕರು, ಜೂಜುಕೋರರು ಎಲ್ಲೆಡೆ ಹೆಚ್ಚಿದರು. ತಂದೆ-ತಾಯಿಯರನ್ನೂ, ದೇವರು-ದಿಂಡರನ್ನೂ ಯಾರೂ ಗೌರವಿಸುತ್ತಿರಲಿಲ್ಲ. ಸಾಧುಗಳ ಸೇವೆ ಮಾಡುವುದು ಹಾಗಿರಲಿ, ಅವರಿಂದಲೇ ಸೇವೆ ಮಾಡಿಸಿಕೊಳ್ಳುತ್ತಿದ್ದರು.

ಶಿವನು ಹೇಳಿದನು – ಭವಾನೀ! ಇಂತಹ ನಡತೆಯುಳ್ಳವರನ್ನು ನೀನು ರಾಕ್ಷಸರೆಂದೇ ತಿಳಿ. ಈ ಪ್ರಕಾರದಿಂದ ಆದ ಧರ್ಮಗ್ಲಾನಿಯನ್ನು ಕಂಡು ಭೂದೇವಿಯು ಅತ್ಯಂತ ಭಯಗೊಂಡು, ದುಃಖಿತಳಾದಳು.'' ಪರ್ವತಗಳೂ, ನದಿಗಳೂ, ಸಮುದ್ರಗಳೂ ಇವುಗಳು ನನಗೆ ಹೊರೆಯಾಗುವುದಿಲ್ಲ. ಆದರೆ ಈ ಪರದ್ರೋಹಿ ಪಾಪಿಗಳ ಭಾರ ಸಹಿಸಲಾಗುವುದಿಲ್ಲ'' ಎಂದು ಯೋಚಿಸುತ್ತಾ, ಭೂದೇವಿಯು ಧರ್ಮವು ತಲೆಕೆಳಗಾಗಿರುವುದನ್ನು ನೋಡಿದಳು. ಆದರೆ ರಾವಣನ ಭಯದಿಂದ ಏನನ್ನು ಮಾತಾಡದಾದಳು. ಕೊನೆಗೆ ಯೋಚಿಸಿ ಆಕೆಯು ಗೋವಿನ ರೂಪವನ್ನು ತಳೆದು, ದೇವತೆಗಳೂ, ಮುನಿಗಳೂ ಇರುವೆಡೆಗೆ ಹೊರಟಳು. ಆಕೆಯು ಅತ್ತು-ಕರೆದು ತನ್ನ ಗೋಳನ್ನು ತೋಡಿಕೊಂಡಳು. ಆದರೆ ಯಾರೂ ಏನನ್ನೂ ಮಾಡದಾದರು. (ಚೌ/೧-೪)

**ಛಂ – ಸುರ ಮುನಿ ಗಂಧರ್ಬಾ ಮಿಲಿ ಕರಿ ಸರ್ಬಾ ಗೇ ಬಿರಂಚಿ ಕೇ ಲೋಕಾ ।**
**ಸಂಗ ಗೋತನುಧಾರೀ ಭೂಮಿ ಬಿಚಾರೀ ಪರಮ ಬಿಕಲ ಭಯ ಸೋಕಾ ॥**
**ಬ್ರಹ್ಮಾಂ ಸಬ ಜಾನಾ ಮನ ಅನುಮಾನಾ ಮೋರ ಕಛೂ ನ ಬಸಾಈ ।**
**ಜಾ ಕರಿ ತೈಂ ದಾಸೀ ಸೋ ಅಬಿನಾಸೀ ಹಮರೇಉ ತೋರ ಸಹಾಈ ॥**

ಕೊನೆಗೆ ದೇವತೆಗಳೂ, ಮುನಿಗಳೂ, ಗಂಧರ್ವರೂ ಹೀಗೆ ಎಲ್ಲರೂ ಸೇರಿ ಅಸಹಾಯಕರಾಗಿ ಬ್ರಹ್ಮಲೋಕಕ್ಕೆ (ಸತ್ಯಲೋಕಕ್ಕೆ) ಹೋದರು. ಗೋರೂಪವನ್ನು ಧರಿಸಿದ ಭೂದೇವಿಯೂ ಭಯ, ದುಃಖದಿಂದ ವ್ಯಾಕುಲಳಾಗಿ ಅವರೊಡನೆ ಹೋದಳು. ಬ್ರಹ್ಮನಿಗೆ ಇವೆಲ್ಲ ವೇದ್ಯವಾಯಿತು. ಇದರಲ್ಲಿ ತನ್ನ ಅಸಹಾಯಕತೆಯನ್ನು ಮನಗಂಡು ಬ್ರಹ್ಮದೇವರು, ಗೋರೂಪಧಾರೀ ಭೂದೇವಿಯ ಬಳಿ ಇಂತೆಂದರು. ''ನಿನ್ನ ಸ್ವಾಮಿಯಾದ ಆ ಅವಿನಾಶೀ ಪರಮಾತ್ಮನೇ (ಮಹಾವಿಷ್ಣುವೇ) ನಮ್ಮೆಲ್ಲರನ್ನು ಕಾಪಾಡುವವನು.'' (ಛಂದ)

**ಸೋ – ಧರನಿ ಧರಹಿ ಮನ ಧೀರ ಕಹ ಬಿರಂಚಿ ಹರಿ ಪದ ಸುಮಿರು ।**
**ಜಾನತ ಜನ ಕೀ ಪೀರ ಪ್ರಭು ಭಂಜಿಹಿ ದಾರುನ ಬಿಪತಿ ॥ ೧೮೪ ॥**

ಬ್ರಹ್ಮದೇವರು ಹೇಳಿದರು – ಎಲೈ ಧರಿತ್ರಿಯೇ! ನೀನು ಮನಸ್ಸಿನಲ್ಲಿ ಧೈರ್ಯವನ್ನು ತಂದುಕೊಂಡು ಶ್ರೀಹರಿಯ ಚರಣಗಳನ್ನು ಸ್ಮರಿಸು. ಪ್ರಭುವು ತನ್ನ ದಾಸರ ನೋವನ್ನು ಬಲ್ಲನು. ಅವನೇ ನಿನ್ನ ದಾರುಣವಾದ ಆಪತ್ತನ್ನು ಕಳೆಯುವನು. (ಸೋ/೧೮೪)

**ಚೌ – ಬೈಠೇ ಸುರ ಸಬ ಕರಹಿಂ ಬಿಚಾರಾ । ಕಹ್ ಪಾಇಅ ಪ್ರಭು ಕರಿಅ ಪುಕಾರಾ ॥**
**ಪುರ ಬೈಕುಂಠ ಜಾನ ಕಹ ಕೋಈ । ಕೋಉ ಕಹ ಪಯನಿಧಿ ಬಸ ಪ್ರಭು ಸೋಈ ॥ ೧ ॥**
**ಜಾಕೇ ಹೃದಯ್ ಭಗತಿ ಜಸಿ ಪ್ರೀತೀ । ಪ್ರಭು ತಹ್ ಪ್ರಗಟ ಸದಾ ತೇಹಿಂ ರೀತೀ ॥**
**ತೇಹಿಂ ಸಮಾಜ ಗಿರಿಜಾ ಮೈಂ ರಹೇಊಂ । ಅವಸರ ಪಾಇ ಬಚನ ಏಕ ಕಹೇಊಂ ॥ ೨ ॥**
**ಹರಿ ಬ್ಯಾಪಕ ಸರ್ಬತ್ರ ಸಮಾನಾ । ಪ್ರೇಮ ತೆಂ ಪ್ರಗಟ ಹೋಹಿಂ ಮೈಂ ಜಾನಾ ॥**
**ದೇಸ ಕಾಲ ದಿಸಿ ಬಿದಿಸಿಹು ಮಾಹೀಂ । ಕಹಹು ಸೊ ಕಹಾಂ ಜಹಾಂ ಪ್ರಭು ನಾಹೀಂ ॥ ೩ ॥**
**ಅಗ ಜಗಮಯ ಸಬ ರಹಿತ ಬಿರಾಗೀ । ಪ್ರೇಮ ತೆಂ ಪ್ರಭು ಪ್ರಗಟಇ ಜಿಮಿ ಆಗೀ ॥**
**ಮೋರ ಬಚನ ಸಬ ಕೇ ಮನ ಮಾನಾ । ಸಾಧು ಸಾಧು ಕರಿ ಬ್ರಹ್ಮ ಬಖಾನಾ ॥ ೪ ॥**

ದೇವತೆಗಳೆಲ್ಲ ಸೇರಿ ಕುಳಿತು ಆಲೋಚಿಸಿದರು. ಪ್ರಭುವನ್ನು ಎಲ್ಲಿ ಕಾಣುವುದು? ಎಲ್ಲಿ ಮೊರೆ ಹೋಗುವುದು? ಕೆಲವರಂದರು ವೈಕುಂಠಕ್ಕೆ ಹೋಗೋಣ, ಮತ್ತೆ ಕೆಲವರಂದರು. ಅವನು ಕ್ಷೀರಸಾಗರದಲ್ಲಿ ವಾಸಿಸುತ್ತಾನೆ. ಅಲ್ಲಿಗೆ ಹೋಗೋಣ.

ಯಾರ ಹೃದಯದಲ್ಲಿ ಎಂತಹ ಭಕ್ತಿ ಇರುತ್ತದೋ, ಅಲ್ಲೇ ಪ್ರಭು ಅದೇ ರೀತಿಯಲ್ಲಿ ಮೈದೋರುತ್ತಾನೆ. ಪಾರ್ವತೀ! ಆ ಗುಂಪಿನಲ್ಲಿ ನಾನೂ ಇದ್ದೆ. ಸಮಯನೋಡಿ ನಾನು ಒಂದು ಸೂಚನೆ ಇತ್ತೆನು – ''ಶ್ರೀಹರಿಯು ಸರ್ವವ್ಯಾಪಿಯು. ಪ್ರೇಮದಿಂದ ಕರೆದಲ್ಲೇ ಓ ಎನ್ನುತ್ತಾನೆ ಎಂಬುದು ನನ್ನ ವಿಶ್ವಾಸ. ಪ್ರಭುವು ಇಲ್ಲದ ಪ್ರದೇಶ, ಕಾಲ, ದಿಶೆ, ವಿದಿಶೆ ಯಾವುದೂ ಇಲ್ಲ. ಅವನು ಚರಾಚರ ಜಗತ್ಸ್ವರೂಪನಾದರೂ, ವಿಕಾರರಹಿತನು, ವಿರಕ್ತನು, ಅನಾಸಕ್ತನಾಗಿರುವನು. ಅಗ್ನಿಯು ಅವ್ಯಕ್ತವು, ಸರ್ವವ್ಯಾಪಕವೂ ಆಗಿದ್ದರೂ, ಅರಣಿಮಂಥನದಿಂದ ಅಲ್ಲೇ ಪ್ರಕಟಗೊಳ್ಳುವಂತೆ, ಅವನು ಪ್ರೇಮದಿಂದ, ಭಕ್ತಿಯ ಮೂಲಕ ಪ್ರಕಟನಾಗುತ್ತಾನೆ. ನನ್ನ ಮಾತನ್ನು ಎಲ್ಲರೂ ಅನುಮೋದಿಸಿ, ಬ್ರಹ್ಮನು 'ಸಾಧು-ಸಾಧು' ಎಂದು ಮೆಚ್ಚುಗೆಯನ್ನು ಸೂಚಿಸಿದನು. (ಚೌ/೧-೪)

**ದೋ – ಸುನಿ ಬಿರಂಚಿ ಮನ ಹರಷ ತನ ಪುಲಕಿ ನಯನ ಬಹ ನೀರ ।**
**ಅಸ್ತುತಿ ಕರತ ಜೋರಿ ಕರ ಸಾವಧಾನ ಮತಿಧೀರ ॥ ೧೮೫ ॥**

ನನ್ನ ಮಾತನ್ನು ಕೇಳಿ ಬ್ರಹ್ಮನ ಮನಸ್ಸಿನಲ್ಲಿ ಆನಂದ ಉಕ್ಕಿಹರಿಯಿತು. ಶರೀರವು ರೋಮಾಂಚಿತವಾಯಿತು. ಅವರ ಕಣ್ಣುಗಳಿಂದ ಪ್ರೇಮಬಾಷ್ಪಗಳು ಉದುರತೊಡಗಿದವು. ಧೀರಮತಿಯಾದ ಬ್ರಹ್ಮದೇವರು ಎಚ್ಚರಗೊಂಡು ಕೈಜೋಡಿಸಿ ಪರಮಾತ್ಮನನ್ನು ಸ್ತುತಿಸತೊಡಗಿದರು – (ದೋ/೧೮೫)

## ಬ್ರಹ್ಮದೇವರ ಸ್ತುತಿ

**ಛಂ – ಜಯ ಜಯ ಸುರನಾಯಕ ಜನ ಸುಖದಾಯಕ ಪ್ರನತಪಾಲ ಭಗವಂತಾ ।**
**ಗೋ ದ್ವಿಜ ಹಿತಕಾರೀ ಜಯ ಅಸುರಾರೀ ಸಿಂಧುಸುತಾ ಪ್ರಿಯ ಕಂತಾ ॥**
**ಪಾಲನ ಸುರ ಧರನೀ ಅದ್ಭುತ ಕರನೀ ಮರಮ ನ ಜಾನಇ ಕೋಈ ।**
**ಜೋ ಸಹಜ ಕೃಪಾಲಾ ದೀನದಯಾಲಾ ಕರಉ ಅನುಗ್ರಹ ಸೋಈ ॥ ೧ ॥**
**ಜಯ ಜಯ ಅಬಿನಾಸೀ ಸಬ ಘಟ ಬಾಸೀ ಬ್ಯಾಪಕ ಪರಮಾನಂದಾ ।**
**ಅಬಿಗತ ಗೋತೀತಂ ಚರಿತ ಪುನೀತಂ ಮಾಯಾರಹಿತ ಮುಕುಂದಾ ॥**
**ಜೆಹಿ ಲಾಗಿ ಬಿರಾಗೀ ಅತಿ ಅನುರಾಗೀ ಬಿಗತಮೊಹ ಮುನಿಬೃಂದಾ ।**
**ನಿಸಿ ಬಾಸರ ಧ್ಯಾವಹಿಂ ಗುನ ಗನ ಗಾವಹೀಂ ಜಯತಿ ಸಚ್ಚಿದಾನಂದಾ ॥ ೨ ॥**
**ಜೆಹಿಂ ಸೃಷ್ಟಿ ಉಪಾಈ ತ್ರಿಬಿಧ ಬನಾಈ ಸಂಗ ಸಹಾಯ ನ ದೂಜಾ ।**
**ಸೋ ಕರಉ ಅಘಾರೀ ಚಿಂತ ಹಮಾರೀ ಜಾನಿಅ ಭಗತಿ ನ ಪೂಜಾ ॥**
**ಜೋ ಭವ ಭಯ ಭಂಜನ ಮುನಿ ಮನ ರಂಜನ ಗಂಜನ ಬಿಪತಿ ಬರೂಥಾ ।**
**ಮನ ಬಚ ಕ್ರಮ ಬಾನೀ ಛಾಡಿ ಸಯಾನೀ ಸರನ ಸಕಲ ಸುರ ಜೂಥಾ ॥ ೩ ॥**
**ಸಾರದ ಶ್ರುತಿ ಸೇಷಾ ರಿಷಯ ಅಸೇಷಾ ಜಾ ಕಹುಂ ಕೋಉ ನಹಿಂ ಜಾನಾ ।**
**ಜೆಹಿ ದೀನ ಪಿಆರೇ ಬೇದ ಪುಕಾರೇ ದ್ರವಉ ಸೊ ಶ್ರೀಭಗವಾನಾ ॥**
**ಭವ ಬಾರಿಧಿ ಮಂದರ ಸಬ ಬಿಧಿ ಸುಂದರ ಗುನ ಮಂದಿರ ಸುಖ ಪುಂಜಾ ।**
**ಮುನಿ ಸಿದ್ಧ ಸಕಲ ಸುರ ಪರಮ ಭಯಾತುರ ನಮತ ನಾಥ ಪದ ಕಂಜಾ ॥ ೪ ॥**

ಓ ದೇವಾದಿದೇವಾ! ಭಕ್ತಸುಖದಾಯಕಾ! ಶರಣಾಗತರಕ್ಷಕಾ! ಭಗವಂತಾ! ನಿನಗೆ ಜಯ ಜಯಾ. ಗೋಬ್ರಾಹ್ಮಣರಿಗೆ ಅಭಯಪ್ರದಾತಾ! ಅಸುರಾರೀ! ಸಿಂಧುಸುತೆಯ ಪ್ರಿಯಕಾಂತನೇ ನಿನಗೆ ಜಯ ಜಯಾ. ದೇವತೆಗಳನ್ನು ಹಾಗೂ ಭೂದೇವಿಯನ್ನು ಪಾಲಿಸುವವನೇ! ನಿನ್ನ ಲೀಲೆಗಳು ಅದ್ಭುತ. ಅದರ ರಹಸ್ಯವನ್ನು ಯಾರೂ ಅರಿಯರು. ನೀನು ಅವ್ಯಾಜ ಕೃಪಾಳುವೂ, ದೀನದಯಾಳೂವೂ ಆದ ನೀನು ನಮ್ಮ ಮೇಲೆ ಕೃಪೆದೋರು. ಓ ಅಚ್ಯುತಾ! ಎಲ್ಲರ ಹೃದಯದಲ್ಲಿ ವಾಸಿಸುವ ಅಂತರ್ಯಾಮಿಯೇ! ಸರ್ವವ್ಯಾಪಕಾ! ಪರಮಾನಂದ ಸ್ವರೂಪಿಯೇ! ವಾಚಾಮಗೋಚರಾ! ಅನಿರ್ವಚನೀಯಾ! ಮಾಯಾತೀತಾ! ಇಂದ್ರಿಯಾತೀತಾ! ಪವಿತ್ರಚರಿತ್ರಾ! ಮೋಕ್ಷಪ್ರದಾಯಕಾ! ಮುಕುಂದಾ! ನಿನಗೆ ಜಯ ಜಯಾ. ಈ ಲೋಕ ಮತ್ತು ಪರಲೋಕದ ಎಲ್ಲ ಭೋಗಗಳಿಂದ ವಿರಕ್ತರೂ, ಮೋಹದಿಂದ ಪೂರ್ಣವಾಗಿ ಬಿಡಲ್ಪಟ್ಟ ಜ್ಞಾನೀಮುನಿಗಳೂ ಕೂಡ ಅತ್ಯಂತ

ಅನುರಾಗೀ ಪ್ರೇಮಿಗಳಾಗಿ ಹಗಲು-ರಾತ್ರಿ ಯಾರ ಧ್ಯಾನಮಾಡುತ್ತಿರುವರೋ, ಯಾರ ಗುಣಸಮೂಹಗಳನ್ನು ಕೀರ್ತಿಸುತ್ತಾರೋ, ಆ ಸಚ್ಚಿದಾನಂದಸ್ವರೂಪಿಯಾದ ನಿನಗೆ ಜಯವಾಗಲೀ. ಸತ್ತ್ವರಜಸ್ತಮೋಮಯವಾದ ಜಗತ್ತನ್ನು ಸೃಷ್ಟಿಸಲು ನೀನು ಸರ್ವಸ್ವತಂತ್ರನು. ಬ್ರಹ್ಮಾ ವಿಷ್ಣು ಮಹೇಶ್ವರರೂಪನಾದ ನೀನೇ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನೂ ಆಗಿರುವ ನೀನು ನನ್ನ ಪ್ರಾರ್ಥನೆಯನ್ನು ಸ್ವೀಕರಿಸು. ಭಕ್ತಿ ಅಂದರೆ ಏನು ಎಂಬುದು ನನಗೆ ತಿಳಿಯದು. ನಾನು ಪೂಜಿಸಲೂ ಅರಿಯೆನು. ನೀನು ಜನನ-ಮರಣ ಭಯಗಳನ್ನು ಇಲ್ಲವಾಗಿಸುವವನೂ, ಮುನಿಗಳ ಮನಸ್ಸಿಗೆ ಆನಂದವನ್ನು ಕರುಣಿಸುವವನೂ, ಭಕ್ತರ ಆಪತ್ತುಗಳನ್ನು ದೂರಮಾಡುವವನೂ, ಭಗವಂತನೂ ಆದ ನಿನ್ನನ್ನು ದೇವತೆಗಳಾದ ನಾವು ತ್ರಿಕರಣಪೂರ್ವಕವಾಗಿ ನಿನಗೆ ಶರಣು ಬಂದಿದ್ದೇವೆ. ಶಾರದೆ, ಶ್ರುತಿಗಳು, ಆದಿಶೇಷ, ಸಂಪೂರ್ಣ ಋಷಿಸಮೂಹ, ನಿನ್ನ ಮಹಿಮೆಯನ್ನು ತಿಳಿಯಲಾರರು. ವೇದಗಳು ನಿನ್ನನ್ನು ದೀನಜನಬಂಧುವೆಂದು ಕರೆಸಿಕೊಳ್ಳುವ ಓ ಭಗವಂತಾ! ನಮ್ಮ ಮೇಲೆ ದಯೆದೋರು. ಸಂಸಾರಸಮುದ್ರ ಮಂಥನಕ್ಕೆ ಮಂದರಾಚಲದಂತಿರುವ, ಎಲ್ಲ ವಿಧದಿಂದಲೂ ಸುಂದರ ಗುಣಮಂದಿರವೂ, ಸುಖರಾಶಿಯೂ ಆದ ಹೇ ನಾಥನೇ! ನಿನ್ನ ಚರಣಕಮಲಗಳಲ್ಲಿ ಮುನಿಗಳೂ, ಸಿದ್ಧರೂ, ಸುರರೂ ಹೀಗೆ ಎಲ್ಲರೂ ಭಯವ್ಯಾಕುಲಿತರಾಗಿ ನಮಿಸುತ್ತಿದ್ದೇವೆ. (ಛಂ/೧-೪)

**ದೋ – ಜಾನಿ ಸಭಯ ಸುರಭೂಮಿ ಸುನಿ ಬಚನ ಸಮೇತ ಸನೇಹ ।**
**ಗಗನಗಿರಾ ಗಂಭೀರ ಭಇ ಹರನಿ ಸೋಕ ಸಂದೇಹ ॥ ೧೮೬ ॥**

ದೇವತೆಗಳೂ, ಭೂದೇವಿಯೂ ಭೀತಿಗೊಂಡಿರುವುದನ್ನು ತಿಳಿದುಕೊಂಡು ಅವರ ಭಕ್ತಿಯುಕ್ತವಾದ ಪ್ರಾರ್ಥನೆಯನ್ನು ಕೇಳಿ ಶೋಕ ಸಂದೇಹಗಳನ್ನು ಕಳೆಯುವ ಗಂಭೀರವಾದ ಭಗವದ್‌ವಾಣಿಯು ಮೊಳಗಿತು –(ದೋ/೧೮೬)

**ಚೌ – ಜನಿ ಡರಪಹು ಮುನಿ ಸಿದ್ಧಸುರೇಸಾ । ತುಮ್ಹಹಿ ಲಾಗಿ ಧರಿಹಉँ ನರ ಬೇಸಾ ॥**
**ಅಂಸನ್ಹ ಸಹಿತ ಮನುಜ ಅವತಾರಾ । ಲೇಹಉँ ದಿನಕರ ಬಂಸ ಉದಾರಾ ॥ ೧ ॥**
**ಕಸ್ಯಪ ಅದಿತಿ ಮಹಾತಪ ಕೀನ್ಹಾ । ತಿನ್ಹ ಕಹುँ ಮೈँ ಪೂರಬ ಬರ ದೀನ್ಹಾ ॥**
**ತೇ ದಸರಥ ಕೌಸಲ್ಯಾ ರೂಪಾ । ಕೋಸಲಪುರೀँ ಪ್ರಗಟ ನರಭೂಪಾ ॥ ೨ ॥**
**ತಿನ್ಹ ಕೇ ಗೃಹ ಅವತರಿಹಉँ ಜಾಈ । ರಘುಕುಲ ತಿಲಕ ಸೊ ಚಾರಿಉ ಭಾಈ ॥**
**ನಾರದ ಬಚನ ಸತ್ಯ ಸಬ ಕರಿಹಉँ । ಪರಮ ಸಕ್ತಿ ಸಮೇತ ಅವತರಿಹಉँ ॥ ೩ ॥**
**ಹರಿಹಉँ ಸಕಲ ಭೂಮಿ ಗರುಆಈ । ನಿರ್ಭಯ ಹೋಹು ದೇವ ಸಮುದಾಈ ॥**
**ಗಗನ ಬ್ರಹ್ಮಬಾನೀ ಸುನಿ ಕಾನಾ । ತುರತ ಫಿರೇ ಸುರ ಹೃದಯ ಜುಡಾನಾ ॥ ೪ ॥**
**ತಬ ಬ್ರಹ್ಮಾँ ಧರನಿಹಿ ಸಮುಝಾವಾ । ಅಭಯ ಭಈ ಭರೋಸ ಜಿಯँ ಆವಾ ॥ ೫ ॥**

''ಎಲೈ ಮುನಿಗಳೇ! ಸಿದ್ಧರುಗಳೇ! ದೇವತೆಗಳಿರಾ! ಭಯಪಡಬೇಡಿರಿ. ನಿಮಗಾಗಿ ನಾನು ಸರ್ವಾಂಶದಿಂದೊಡಗೊಂಡು, ಪವಿತ್ರವಾದ ಸೂರ್ಯವಂಶದಲ್ಲಿ ಮಾನವರೂಪದಿಂದ ಅವತರಿಸುತ್ತೇನೆ. ಹಿಂದೆ ಅದಿತಿ-ಕಶ್ಯಪರು ಘೋರವಾದ ತಪಸ್ಸನ್ನು ಆಚರಿಸಿದ್ದರು. ಅವರಿಗೆ ಮೊದಲೇ ವರವನ್ನು ಕೊಟ್ಟಿರುವೆನು. ಅವರೇ ಅಯೋಧ್ಯೆಯಲ್ಲಿ ಕೌಸಲ್ಯಾ-ದಶರಥರಾಗಿ ಜನ್ಮ ತಾಳಿದ್ದಾರೆ. ಅವರ ಮನೆಯಲ್ಲಿ ನಾನು ರಘುಕುಲತಿಲಕರಾದ ನಾಲ್ವರು ಸಹೋದರರ ರೂಪದಲ್ಲಿ ಅವತರಿಸುವೆನು. ನಾರದರ ಎಲ್ಲ ವಚನಗಳನ್ನು ನಾನು ಸತ್ಯಗೊಳಿಸುತ್ತೇನೆ. ನನ್ನ ಪರಾಶಕ್ತಿಯ ಜೊತೆಗೆ ಅವತರಿಸುತ್ತೇನೆ. ದೇವತೆಗಳಿರಾ! ನಾನು ಭೂಮಿಯ ಎಲ್ಲ ಭಾರವನ್ನು ಇಳುಹುತ್ತೇನೆ. ನೀವು ನಿರ್ಭಯರಾಗಿ ನಿಮ್ಮ ಸ್ಥಳಗಳಿಗೆ ಮರಳಿರಿ.'' ಆಕಾಶದಿಂದ ಈ ದೇವವಾಣಿಯನ್ನು ಕಿವಿಯಾರೆ ಕೇಳಿ ದೇವತೆಗಳು ಸಂತುಷ್ಟ ಹೃದಯದಿಂದ ತಮ್ಮ-ತಮ್ಮ ಸ್ಥಾನಗಳಿಗೆ ಹೊರಟುಹೋದರು. ಆಗ ಬ್ರಹ್ಮದೇವರು ಭೂದೇವಿಯನ್ನು ಸಮಾಧಾನಗೊಳಿಸಿದರು. ಅವಳೂ ನಿರ್ಭಯಳಾಗಿ ಮನಸ್ಸಿಗೆ ನೆಮ್ಮದಿ ತಂದುಕೊಂಡಳು. (ಚೌ/೧-೫)

**ದೋ – ನಿಜ ಲೋಕಹಿ ಬಿರಂಚಿ ಗೇ ದೇವನ್ಹ ಇಹಇ ಸಿಖಾಇ ।**
**ಬಾನರ ತನು ಧರಿ ಧರಿ ಮಹಿ ಹರಿ ಪದ ಸೇವಹು ಜಾಇ ॥ ೧೮೭ ॥**

ಬ್ರಹ್ಮದೇವರು ದೇವತೆಗಳಿಗೆ – ''ನೀವೆಲ್ಲ ವಾನರರಾಗಿ ಭೂಮಿಯಲ್ಲಿ ಹುಟ್ಟಿ ಭಗವಂತನ ಚರಣಸೇವೆ ಮಾಡಿರಿ'' ಎಂದು ಹೇಳಿ ತಮ್ಮ ಸತ್ಯಲೋಕಕ್ಕೆ ತೆರಳಿದರು. (ದೋ/೧೮೭)

**ಚೌ – ಗಏ ದೇವ ಸಬ ನಿಜ ನಿಜ ಧಾಮಾ । ಭೂಮಿ ಸಹಿತ ಮನ ಕಹುँ ಬಿಶ್ರಾಮಾ ॥**
**ಜೋ ಕಛು ಆಯಸು ಬ್ರಹ್ಮಾँ ದೀನ್ಹಾ । ಹರಷೇ ದೇವ ಬಿಲಂಬ ನ ಕೀನ್ಹಾ ॥ ೧ ॥**

ಬನಚರ ದೇಹ ಧರೀ ಛಿತಿ ಮಾಹೀಂ । ಅತುಲಿತ ಬಲ ಪ್ರತಾಪ ತಿನ್ಹ ಪಾಹೀಂ ॥
ಗಿರಿ ತರು ನಖ ಆಯುಧ ಸಬ ಬೀರಾ । ಹರಿ ಮಾರಗ ಚಿತವಹಿಂ ಮತಿಧೀರಾ ॥ ೨ ॥
ಗಿರಿ ಕಾನನ ಜಹಂ ತಹಂ ಭರಿ ಪೂರೀ । ರಹೆ ನಿಜ ನಿಜ ಅನೀಕ ರಚಿ ರೂರೀ ॥
ಯಹ ಸಬ ರುಚಿರ ಚರಿತ ಮೈಂ ಭಾಷಾ । ಅಬ ಸೋ ಸುನಹು ಜೊ ಬೀಚಹಿಂ ರಾಖಾ ॥ ೩ ॥
ಅವಧಪುರೀಂ ರಘುಕುಲಮನಿ ರಾಊ । ಬೇದ ಬಿದಿತ ತೆಹಿ ದಸರಥ ನಾಊಂ ॥
ಧರಮ ಧುರಂಧರ ಗುನನಿಧಿ ಗ್ಯಾನೀ । ಹೃದಯಂ ಭಗತಿ ಮತಿ ಸಾರಂಗಪಾನೀ ॥ ೪ ॥

ದೇವತೆಗಳೆಲ್ಲರೂ ಸ್ವಸ್ಥಾನಗಳಿಗೆ ತೆರಳಿದರು. ಅವರಿಗೂ, ಭೂದೇವಿಗೂ ಮನಶ್ಶಾಂತಿಯು ಲಭಿಸಿತು. ಬ್ರಹ್ಮನ ಆಜ್ಞೆಯಿಂದ ದೇವತೆಗಳೆಲ್ಲರೂ ಸಂತೋಷಪಟ್ಟರು. ಅವರು ತಡಮಾಡದೆ ಅವನ ಆಣತಿಯನ್ನು ಪಾಲಿಸಿದರು. ದೇವತೆಗಳೆಲ್ಲರೂ ಅಪಾರ ಬಲ ಪರಾಕ್ರಮಗಳನ್ನು ಹೊಂದಿ ಭೂಮಿಯಲ್ಲಿ ವಾನರರಾಗಿ ಜನಿಸಿದರು. ಎಲ್ಲರೂ ಅತುಳ ಶೌರ್ಯಸಂಪನ್ನರೂ ಆಗಿದ್ದರು. ಪರ್ವತ, ವೃಕ್ಷ, ನಖವೇ ಅವರ ಆಯುಧಗಳು. ಅವರು ಧೀರರೂ, ಬುದ್ಧಿವಂತರೂ ಆದ ವಾನರರೂಪೀ ದೇವತೆಗಳು ಭಗವಂತನ ಬರುವಿಕೆಯನ್ನು ನಿರೀಕ್ಷಿಸುತ್ತಿದ್ದರು. ಈ ವಾನರರು ಗಿರಿ, ಕಾನನಗಳಲ್ಲಿ ಅಲ್ಲಲ್ಲಿ ತಮ್ಮ-ತಮ್ಮ ಪಡೆಗಳನ್ನು ಕಟ್ಟಿಕೊಂಡು ಎಲ್ಲೆಲ್ಲೂ ಹಬ್ಬಿಕೊಂಡಿದ್ದರು.

ಭವಾನೀ! ಮನೋಹರವಾದ ಈ ಕಥೆಯನ್ನು ಹೇಳಿದೆನು. ಮಧ್ಯದಲ್ಲೇ ಬಿಟ್ಟುಹೋದ ಆ ಕಥೆಯನ್ನು ಕೂಡ ಕೇಳು – ರಘುಕುಲಶಿರೋಮಣಿಯಾದ ದಶರಥ ಮಹಾರಾಜನು ಅಯೋಧ್ಯಾನಗರವನ್ನು ಪಾಲಿಸುತ್ತಿದ್ದನು. ಅವನ ಹೆಸರು ವೇದಗಳಲ್ಲಿಯೂ ಪ್ರಸಿದ್ಧವಾಗಿದೆ. ಅವನು ಸರ್ವಸದ್ಗುಣನಿಧಿಯೂ, ಜ್ಞಾನಿಯೂ, ಧರ್ಮಧುರಂಧರನೂ ಆಗಿದ್ದನು. ಅವನ ಹೃದಯದಲ್ಲಿ ವಿಷ್ಣುಭಕ್ತಿಯು ನೆಲೆಸಿತ್ತು. ಅವನ ಮತಿಯೂ ಕೂಡ ಶ್ರೀಹರಿಯಲ್ಲೇ ನೆಟ್ಟಿತ್ತು. (ಚೌ/೧-೪)

**ದೋ – ಕೌಸಲ್ಯಾದಿ ನಾರಿ ಪ್ರಿಯ ಸಬ ಆಚರನ ಪುನೀತ ।**
**ಪತಿ ಅನುಕೂಲ ಪ್ರೇಮ ದೃಢ ಹರಿ ಪದ ಕಮಲ ಬಿನೀತ ॥ ೧೮೮ ॥**

ಅವನ ಧರ್ಮಪತ್ನಿಯರಾದ ಕೌಸಲ್ಯೆಯೇ ಮೊದಲಾದ ರಾಣಿಯರು ಪವಿತ್ರ ಆಚರಣೆಯುಳ್ಳವರು. ಅವರು ವಿನೀತರೂ, ಪತಿಯ ಮನೋನುಕೂಲೆಯರೂ ಆಗಿದ್ದರು. ಹರಿಪದದಲ್ಲಿ ಅವರಿಗೆ ದೃಢವಾದ ಭಕ್ತಿಯಿತ್ತು. (ದೋ/೧೮೮)

ಚೌ – ಏಕ ಬಾರ ಭೂಪತಿ ಮನ ಮಾಹೀಂ । ಭೈ ಗಲಾನಿ ಮೋರೇಂ ಸುತ ನಾಹೀಂ ॥
ಗುರ ಗೃಹ ಗಯಉ ತುರತ ಮಹಿಪಾಲಾ । ಚರನ ಲಾಗಿ ಕರಿ ಬಿನಯ ಬಿಸಾಲಾ ॥ ೧ ॥
ನಿಜ ದುಖ ಸುಖ ಸಬ ಗುರಹಿ ಸುನಾಯಉ । ಕಹಿ ಬಸಿಷ್ಠ ಬಹುಬಿಧಿ ಸಮುಝಾಯಉ ॥
ಧರಹು ಧೀರ ಹೋಇಹಹಿಂ ಸುತ ಚಾರೀ । ತ್ರಿಭುವನ ಬಿದಿತ ಭಗತ ಭಯ ಹಾರೀ ॥ ೨ ॥
ಸೃಂಗೀ ರಿಷಿಹಿ ಬಸಿಷ್ಠ ಬೊಲಾವಾ । ಪುತ್ರ ಕಾಮ ಸುಭ ಜಗ್ಯ ಕರಾವಾ ॥
ಭಗತಿ ಸಹಿತ ಮುನಿ ಆಹುತಿ ದೀನ್ಹೇಂ । ಪ್ರಗಟೇ ಅಗಿನಿ ಚರೂ ಕರ ಲೀನ್ಹೇಂ ॥ ೩ ॥
ಜೋ ಬಸಿಷ್ಠ ಕಛು ಹೃದಯಂ ಬಿಚಾರಾ । ಸಕಲ ಕಾಜು ಭಾ ಸಿದ್ಧ ತುಮ್ಹಾರಾ ॥
ಯಹ ಹಬಿ ಬಾಂಟಿ ದೇಹು ನೃಪ ಜಾಈ । ಜಥಾ ಜೋಗ ಜೆಹಿ ಭಾಗ ಬನಾಈ ॥ ೪ ॥

ದಶರಥ ಮಹಾರಾಜನು ತನಗೆ ಮಕ್ಕಳಿಲ್ಲ ಎಂದು ಚಿಂತಾತುರನಾದನು. ರಾಜನು ಕೂಡಲೇ ಗುರುಗಳಾದ ವಸಿಷ್ಠರ ಬಳಿಗೆ ಹೋಗಿ, ಅವರ ಚರಣಗಳಿಗೆ ಎರಗಿ, ತನ್ನ ಅಳಲನ್ನು ತೋಡಿಕೊಂಡನು. ಗುರು ವಸಿಷ್ಠರು ಆತನನ್ನು ಅನೇಕವಿಧದಿಂದ ಸಮಾಧಾನಪಡಿಸಿ ಹೇಳಿದನು – ''ರಾಜಾ! ಧೈರ್ಯವಹಿಸು. ನಿನಗೆ ತ್ರಿಲೋಕಗಳಲ್ಲಿ ವಿಖ್ಯಾತರಾದ ನಾಲ್ಕು ಮಂದಿ ಪುತ್ರರಾಗುವರು. ಅವರು ಭಕ್ತರ ಭಯವನ್ನು ದೂರಮಾಡುವವರಾಗುತ್ತಾರೆ. ಬಳಿಕ ವಸಿಷ್ಠರು ಋಷ್ಯಶೃಂಗಮುನಿಯನ್ನು ಕರೆಸಿ, ಅವನಿಂದ ಪುತ್ರಕಾಮೇಷ್ಠಿಯಾಗವನ್ನು ಮಾಡಿಸಿದನು. ಮುನಿಯು ಯಜ್ಞದಲ್ಲಿ ಶ್ರದ್ಧಾಭಕ್ತಿಯಿಂದ ಆಹುತಿಯನ್ನು ಕೊಟ್ಟಾಗ, ಅಗ್ನಿದೇವನು ಕೈಯಲ್ಲಿ ಚರುವನ್ನು ಹಿಡಿದುಕೊಂಡು ಪ್ರತ್ಯಕ್ಷನಾದನು. ಮತ್ತೆ ದಶರಥನನ್ನು ಸಂಬೋಧಿಸಿ ಹೇಳಿದನು – ''ವಸಿಷ್ಠರು ಹೇಳಿದಂತೆ ನಿನ್ನ ಮನೋಭೀಷ್ಟಗಳೆಲ್ಲವೂ ಸಿದ್ಧಿಸುವುವು. ರಾಜಾ! ಈ ದೇವನಿರ್ಮಿತವಾದ ಪಾಯಸವನ್ನು ಪಡೆದು, ಉಚಿತ ಕಂಡಂತೆ ಭಾರ್ಯೆಯರಿಗೆ ಹಂಚಿಬಿಡು. (ಚೌ/೧-೪)

**ದೋ – ತಬ ಅದೃಸ್ಯ ಭಏ ಪಾವಕ ಸಕಲ ಸಭಹಿ ಸಮುಝಾಇ ।**
**ಪರಮಾನಂದ ಮಗನ ನೃಪ ಹರಷ ನ ಹೃದಯಂ ಸಮಾಇ ॥ ೧೮೯ ॥**

ಅನಂತರ ಅಗ್ನಿದೇವರು ಈ ವಿಷಯವನ್ನು ಸಭಿಕರಿಗೆ ವಿವರಿಸಿ ಅದೃಶ್ಯನಾದನು. ರಾಜನು ಪರಮಾನಂದ ಭರಿತನಾದನು. ಅವನ ಹೃದಯದಲ್ಲಿ ಆನಂದವು ಉಕ್ಕಿ ಹರಿಯಿತು. (ದೋ/೧೮೯)

**ಚೌ – ತಬಹಿಂ ರಾಯಂ ಪ್ರಿಯ ನಾರೀ ಬೋಲಾಈಂ । ಕೌಸಲ್ಯಾದಿ ತಹಾಂ ಚಲೀ ಆಈಂ ॥**
**ಅರ್ಧ ಭಾಗ ಕೌಸಲ್ಯಹಿ ದೀನ್ಹಾ । ಉಭಯ ಭಾಗ ಆಧೇ ಕರ ಕೀನ್ಹಾ ॥ ೧ ॥**
**ಕೈಕೇಈ ಕಹಂ ನೃಪ ಸೋ ದಯಊ । ರಹ್ಯೋ ಸೊ ಉಭಯ ಭಾಗ ಪುನಿ ಭಯಊ ॥**
**ಕೌಸಲ್ಯಾ ಕೈಕಈ ಹಾಥ ಧರಿ । ದೀನ್ಹ ಸುಮಿತ್ರಹಿ ಮನ ಪ್ರಸನ್ನ ಕರಿ ॥ ೨ ॥**
**ಏಹಿ ಬಿಧಿ ಗರ್ಭ ಸಹಿತ ಸಬ ನಾರೀ । ಭಈಂ ಹೃದಯಂ ಹರಷಿತ ಸುಖ ಭಾರೀ ॥**
**ಜಾ ದಿನ ತೇ ಹರಿ ಗರ್ಭಹಿಂ ಆಏ । ಸಕಲ ಲೋಕ ಸುಖ ಸಂಪತಿ ಛಾಏ ॥ ೩ ॥**
**ಮಂದಿರ ಮಹಂ ಸಬ ರಾಜಹಿಂ ರಾನೀಂ । ಸೋಭಾ ಸೀಲ ತೇಜ ಕೀ ಖಾನೀಂ ॥**
**ಸುಖ ಜುತ ಕಛುಕ ಕಾಲ ಚಲಿ ಗಯಊ । ಜೆಹಿಂ ಪ್ರಭು ಪ್ರಗಟ ಸೊ ಅವಸರ ಭಯಊ ॥ ೪ ॥**

ದಶರಥ ಮಹಾರಾಜನು ಕೂಡಲೇ ತನ್ನ ಪ್ರಿಯಪತ್ನಿಯರನ್ನು ಕರೆಸಿದನು. ಕೌಸಲ್ಯಾದಿ ಎಲ್ಲ ರಾಣಿಯರು ಅಲ್ಲಿಗೆ ಬಂದರು. ರಾಜನು ಪಾಯಸವನ್ನು ಅರ್ಧಭಾಗಮಾಡಿ ಕೌಸಲ್ಯೆಗೆ ಕೊಟ್ಟನು. ಉಳಿದುದನ್ನು ಮತ್ತೆ ಎರಡು ಭಾಗಮಾಡಿದನು. ಅದರಲ್ಲಿ ಒಂದು ಭಾಗವನ್ನು ಕೈಕೆಯಿಗೆ ಕೊಟ್ಟನು. ಉಳಿದುದನ್ನು ಪುನಃ ಎರಡು ಭಾಗಗಳನ್ನಾಗಿ ಮಾಡಿದನು. ರಾಜನು ಅವುಗಳನ್ನು ಕೌಸಲ್ಯಾ ಮತ್ತು ಕೈಕೆಯಿಯ ಕೈಗಳಲ್ಲಿಟ್ಟು, ಅವರನ್ನು ಸಂತೋಷಗೊಳಿಸಿ, ಅವರಿಂದ ಅನುಮತಿಯನ್ನು ಪಡೆದು ಸುಮಿತ್ರೆಗೆ ಕೊಟ್ಟನು. ತರುವಾಯ ಮೂವರೂ ರಾಣಿಯರೂ, ಗರ್ಭವತಿಯರಾದರು. ಅವರು ಮನಸ್ಸಿನಲ್ಲಿ ಅತೀವ ಹರ್ಷಿತರಾದರು. ಶ್ರೀಹರಿಯು ಲೀಲೆಯಿಂದ ಗರ್ಭಕ್ಕೆ ಬಂದಾಗಿನಿಂದ ಸುಖ-ಸಂಪತ್ತುಗಳು ಎಲ್ಲೆಡೆ ಹಬ್ಬಿದವು. ಸೌಂದರ್ಯ, ಸೌಶೀಲ್ಯ ತೇಜೋರಾಶಿಯರಾದ ರಾಣಿಯರು ಅರಮನೆಯಲ್ಲಿ ವಿಜೃಂಭಿಸಿದರು. ಹೀಗೆ ಕೆಲಕಾಲವು ಆನಂದದಿಂದ ಸಾಗಿತು. ಭಗವಂತನು ಅವತರಿಸುವ ಕಾಲವು ಸನ್ನಿಹಿತವಾಯಿತು. (ಚೌ/೧-೪)

## ಶ್ರೀರಾಮಾವತಾರ ಹಾಗೂ ಬಾಲಲೀಲೆ

**ದೋ – ಜೋಗ ಲಗನ ಗ್ರಹ ಬಾರ ತಿಥಿ ಸಕಲ ಭಏ ಅನುಕೂಲ ।**
**ಚರ ಅರು ಅಚರ ಹರ್ಷಜುತ ರಾಮ ಜನಮ ಸುಖಮೂಲ ॥ ೧೯೦ ॥**

ಲಗ್ನ, ಗೃಹ, ತಿಥಿ, ವಾರ, ಯೋಗ ಹೀಗೆ ಎಲ್ಲವೂ ಅನುಕೂಲವಾಗಿ ಕೂಡಿಬಂದವು. ಸೃಷ್ಟಿಯಲ್ಲೆಲ್ಲ ಜಡ-ಚೇತನ ಪ್ರಾಣಿಗಳು ಹರ್ಷಗೊಂಡರು. ಏಕೆಂದರೆ, ಶ್ರೀರಾಮನ ಜನನವು ಎಲ್ಲ ಸುಖಗಳ ಮೂಲವಲ್ಲವೇ? (ದೋ/೧೯೦)

**ಚೌ – ನೌಮೀ ತಿಥಿ ಮಧು ಮಾಸ ಪುನೀತಾ । ಸುಕಲ ಪಚ್ಛ ಅಭಿಜಿತ ಹರಿಪ್ರೀತಾ ॥**
**ಮಧ್ಯದಿವಸ ಅತಿ ಸೀತ ನ ಘಾಮಾ । ಪಾವನ ಕಾಲ ಲೋಕ ಬಿಶ್ರಾಮಾ ॥ ೧ ॥**
**ಸೀತಲ ಮಂದ ಸುರಭಿ ಬಹ ಬಾಊ । ಹರಷಿತ ಸುರ ಸಂತನ ಮನ ಚಾಊ ॥**
**ಬನ ಕುಸುಮಿತ ಗಿರಿಗನ ಮನಿಆರಾ । ಸ್ರವಹಿಂ ಸಕಲ ಸರಿತಾಽಮೃತಧಾರಾ ॥ ೨ ॥**
**ಸೋ ಅವಸರ ಬಿರಂಚಿ ಜಬ ಜಾನಾ । ಚಲೆ ಸಕಲ ಸುರ ಸಾಜಿ ಬಿಮಾನಾ ॥**
**ಗಗನ ಬಿಮಲ ಸಂಕುಲ ಸುರ ಜೂಥಾ । ಗಾವಹಿಂ ಗುನ ಗಂಧರ್ಬ ಬರೂಥಾ ॥ ೩ ॥**
**ಬರಷಹಿಂ ಸುಮನ ಸುಅಂಜುಲಿ ಸಾಜೀ । ಗಹಗಹಿ ಗಗನ ದುಂದುಭೀ ಬಾಜೀ ॥**
**ಅಸ್ತುತಿ ಕರಹಿಂ ನಾಗ ಮುನಿ ದೇವಾ । ಬಹುಬಿಧಿ ಲಾವಹಿಂ ನಿಜ ನಿಜ ಸೇವಾ ॥ ೪ ॥**

ಪವಿತ್ರವಾದ ಚೈತ್ರಶುದ್ಧ ನವಮಿ ತಿಥಿಯ ದಿನ, ಭಗವಂತನಿಗೆ ಪ್ರಿಯವಾದ ಅಭಿಜಿತ್ ಮುಹೂರ್ತದ ಮಧ್ಯಾಹ್ನದ ವೇಳೆ, ಹೆಚ್ಚು ಚಳಿಯೂ, ಬಿಸಿಲೂ ಇಲ್ಲದ ಪವಿತ್ರ ಸಮಯ. ಇದು ಎಲ್ಲಲೋಕಗಳಿಗೂ ಪ್ರಶಾಂತಿಯನ್ನು ನೀಡುವಂತಹುದು. ಶೀತಲ, ಸುಗಂಧಿತ, ಮಂದಾನಿಲವು ಎಲ್ಲೆಡೆ ಬೀಸುತ್ತಿತ್ತು. ದೇವತೆಗಳು ಹರ್ಷಿತರಾಗಿದ್ದರು. ಸಂತರು ಮನಸ್ಸಿನಲ್ಲಿ ಬಹಳ ಉಲ್ಲಾಸಗೊಂಡಿದ್ದರು. ವನಗಳು ಕುಸುಮಿತವಾಗಿತ್ತು. ಪರ್ವತ ಸಮೂಹಗಳು ಮಣಿಗಳಿಂದ ಕಂಗೊಳಿಸುತ್ತಿದ್ದವು. ನದಿಗಳಲ್ಲಿ ಅಮೃತಧಾರೆ ಹರಿಯುತ್ತಿತ್ತು. ಪ್ರಕೃತಿಯೆಲ್ಲವೂ ಅಪೂರ್ವಶೋಭೆಯಿಂದ ಕಂಗೊಳಿಸಿತು. ಭಗವಂತನು ಅವತರಿಸುವ ಸಮಯವು

ಸನ್ನಿಹಿತವಾದುದನ್ನು ತಿಳಿದು, ಬ್ರಹ್ಮಾದಿ ಎಲ್ಲ ದೇವತೆಗಳು ತಮ್ಮ-ತಮ್ಮ ವಾಹನಗಳನ್ನು ಸಜ್ಜುಗೊಳಿಸಿ ಹೊರಟರು. ನಿರ್ಮಲ ಆಕಾಶವು ದೇವತೆಗಳ ಸಮೂಹಗಳಿಂದ ತುಂಬಿಹೋಯಿತು. ಗಂಧರ್ವರು ಭಗವದ್ಗುಣಗಳನ್ನು ಹಾಡತೊಡಗಿದರು. ಸುಂದರವಾದ ಬೊಗಸೆಗಳಿಂದ ಹೂವಿನ ಮಳೆಗರೆಯತೊಡಗಿದರು. ಆಗಸದಲ್ಲಿ ದೇವದುಂದುಭಿಗಳು ಮೊಳಗಿದವು. ದೇವತೆಗಳು, ನಾಗರು, ಮುನಿಗಳು ಭಗವಂತನ ಸ್ತೋತ್ರ ಮಾಡತೊಡಗಿದರು. ಬಹುವಿಧವಾದ, ಅಪೂರ್ವವಾದ ಕಾಣಿಕೆಗಳನ್ನು ಸೇವಾರ್ಥವಾಗಿ ಸಮರ್ಪಿಸಿದರು. (ಚೌ/೧-೪)

**ದೋ – ಸುರ ಸಮೂಹ ಬಿನತೀ ಕರಿ ಪಹುँಚೇ ನಿಜ ನಿಜ ಧಾಮ ।**
**ಜಗನಿವಾಸ ಪ್ರಭು ಪ್ರಗಟೇ ಅಖಿಲ ಲೋಕ ಬಿಶ್ರಾಮ ॥ ೧೯೧ ॥**

ಆಗ ಲೋಕಕಲ್ಯಾಣಾರ್ಥವಾಗಿ ಜಗದಾಧಾರನಾದ ಪ್ರಭುವು ಅವತರಿಸಿದನು. ದೇವತೆಗಳ ಸಮೂಹಗಳು ಅನೇಕವಿಧದಿಂದ ಪ್ರಭುವನ್ನು ಕೊಂಡಾಡಿ ತಮ್ಮ-ತಮ್ಮ ಲೋಕಗಳಿಗೆ ಪ್ರಯಾಣ ಬೆಳೆಸಿದರು. (ದೋ/೧೯೧)

**ಛಂ – ಭಏ ಪ್ರಗಟ ಕೃಪಾಲಾ ದೀನದಯಾಲಾ ಕೌಸಲ್ಯಾ ಹಿತಕಾರೀ ।**
**ಹರಷಿತ ಮಹತಾರೀ ಮುನಿ ಮನ ಹಾರೀ ಅದ್ಭುತ ರೂಪ ಬಿಚಾರೀ॥**
**ಲೋಚನ ಅಭಿರಾಮಾ ತನು ಘನಸ್ಯಾಮಾ ನಿಜ ಆಯುಧ ಭುಜ ಚಾರೀ ।**
**ಭೂಷನ ಬನಮಾಲಾ ನಯನ ಬಿಸಾಲಾ ಸೋಭಾಸಿಂಧು ಖರಾರೀ॥ ೧ ॥**
**ಕಹ ದುಇ ಕರ ಜೋರೀ ಅಸ್ತುತಿ ತೋರೀ ಕೇಹಿ ಬಿಧಿ ಕರೌं ಅನಂತಾ।**
**ಮಾಯಾ ಗುನ ಗ್ಯಾನಾತೀತ ಅಮಾನಾ ಬೇದ ಪುರಾನ ಭನಂತಾ॥**
**ಕರುನಾ ಸುಖ ಸಾಗರ ಸಬ ಗುನ ಆಗರ ಜೇಹಿ ಗಾವಹಿं ಶ್ರುತಿ ಸಂತಾ ।**
**ಸೋ ಮಮ ಹಿತ ಲಾಗೀ ಜನ ಅನುರಾಗೀ ಭಯಉ ಪ್ರಗಟ ಶ್ರೀಕಂತಾ ॥ ೨ ॥**
**ಬ್ರಹ್ಮಾಂಡ ನಿಕಾಯಾ ನಿರ್ಮಿತ ಮಾಯಾ ರೋಮ ರೋಮ ಪ್ರತಿ ಬೇದ ಕಹೈ ।**
**ಮಮ ಉರ ಸೋ ಬಾಸೀ ಯಹ ಉಪಹಾಸೀ ಸುನತ ಧೀರ ಮತಿ ಥಿರ ನ ರಹೈ ॥**
**ಉಪಜಾ ಜಬ ಗ್ಯಾನಾ ಪ್ರಭು ಮುಸುಕಾನಾ ಚರಿತ ಬಹುತ ಬಿಧಿ ಕೀನ್ಹ ಚಹೈ।**
**ಕಹಿ ಕಥಾ ಸುಹಾಈ ಮಾತು ಬುಝಾಈ ಜೇಹಿ ಪ್ರಕಾರ ಸುತ ಪ್ರೇಮ ಲಹೈ॥ ೩ ॥**
**ಮಾತಾ ಪುನಿ ಬೋಲೀ ಸೋ ಮತಿ ಡೋಲೀ ತಜಹು ತಾತ ಯಹ ರೂಪಾ ।**
**ಕೀಜೈ ಸಿಸುಲೀಲಾ ಅತಿ ಪ್ರಿಯಸೀಲಾ ಯಹ ಸುಖ ಪರಮ ಅನೂಪಾ ॥**
**ಸುನಿ ಬಚನ ಸುಜಾನಾ ರೋದನ ಠಾನಾ ಹೋಇ ಬಾಲಕ ಸುರಭೂಪಾ।**
**ಯಹ ಚರಿತ ಜೇ ಗಾವಹಿं ಹರಿಪದ ಪಾವಹಿं ತೇ ನ ಪರಹಿं ಭವಕೂಪಾ ॥ ೪ ॥**

ಕೃಪಾಳುವೂ, ಪರಮದಯಾನಿಧಿಯೂ, ಕೌಸಲ್ಯಾನಂದವರ್ಧನನಾದ ಶ್ರೀರಾಮಚಂದ್ರಪ್ರಭುವು ಪ್ರಕಟನಾದನು. ಮುನಿಮನೋಹಾರಿಯಾದ ಪ್ರಭುವಿನ ಅತ್ಯದ್ಭುತವಾದ ರೂಪವನ್ನು ಕಂಡು, ಕೌಸಲ್ಯಾಮಾತೆಯು ಪರಮಾನಂದ ಭರಿತಳಾದಳು. ಪ್ರಭುವಿನ ನೀಲಮೇಘಶರೀರವು ಎಲ್ಲರಿಗೂ ನೇತ್ರಾನಂದಕರವಾಗಿತ್ತು. ಅವನಿಗೆ ಚತುರ್ಭುಜಗಳಿದ್ದು, ನಾಲ್ಕೂ ಕೈಗಳಲ್ಲಿ ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿದ್ದನು. ಕಂಠದಲ್ಲಿ ದಿವ್ಯಹಾರಗಳನ್ನು, ವನಮಾಲೆಯನ್ನು ಧರಿಸಿದ್ದನು. ನೇತ್ರಗಳು ವಿಶಾಲವಾಗಿದ್ದು, ಸೌಂದರ್ಯರಾಶಿಯಂತಿದ್ದು, ಖರಾರಿ (ರಾಮನು)ಯಾದ ಭಗವಂತನು ಪ್ರಕಟಗೊಂಡನು. ಎರಡೂ ಕೈಜೋಡಿಸಿ ತಾಯಿ ಕೌಸಲ್ಯೆಯು ಹೇಳತೊಡಗಿದಳು – ''ಎಲೈ ಅನಂತಾ! ನಿನ್ನನ್ನು ನಾನು ಎಂತು ಸ್ತುತಿಸಲಿ? ನೀನು ಮಾಯೆಗೆ, ಗುಣಗಳಿಗೆ ಜ್ಞಾನಕ್ಕೂ ಅತೀತನೆಂದೂ, ಪ್ರಮಾಣರಹಿತನೆಂದೂ ವೇದ-ಪುರಾಣಗಳು ಸಾರುತ್ತಿವೆ. ಕರುಣಾಸಮುದ್ರನೂ, ಸರ್ವಸುಖನಿಧಾನನೂ, ಸದ್ಗುಣರಾಶಿಯೂ ಎಂದು ಶ್ರುತಿಗಳಿಂದ, ಸಂತ-ಸಜ್ಜನರಿಂದ ಸ್ತುತಿಸಲ್ಪಡುವ ಭಕ್ತಪರಾಧೀನನಾದ ಲಕ್ಷ್ಮೀಪತಿಯಾದ ನೀನು ನನ್ನ ಹಿತಕ್ಕಾಗಿ ಪ್ರತ್ಯಕ್ಷನಾಗಿರುವೆ. ಪ್ರಭೋ! ನಿನ್ನ ಪ್ರತಿಯೊಂದು ರೋಮದಲ್ಲೂ ಮಾಯಾನಿರ್ಮಿತ ಬ್ರಹ್ಮಾಂಡಸಮೂಹಗಳು ಅಡಗಿವೆ ಎಂದು ವೇದಗಳು ಹೇಳುತ್ತವೆ. ಅಂತಹ ನೀನು ನನ್ನ ಗರ್ಭದಲ್ಲಿ ವಾಸಿಸಿದೆ. ಇದು

ಆಶ್ಚರ್ಯಕರವಲ್ಲವೇ? ಈ ವಿಷಯವನ್ನು ಕೇಳಿದ ಧೀರಪುರುಷರ ಬುದ್ಧಿಯೂ ಭ್ರಮೆಗೊಳ್ಳುತ್ತದೆ.'' ಹೀಗೆ ತಾಯಿಗೆ ಜ್ಞಾನೋದಯವಾದುದನ್ನು ಕಂಡು ಭಗವಂತನು ಮುಗುಳ್ನಕ್ಕನು. ಅವನು ಬಹುವಿಧಾದ ಲೀಲೆಗಳನ್ನು ಪ್ರಕಟಿಸಲು ಬಯಸುತ್ತಿದ್ದನು. ಅವಳಿಗೆ ಹಿಂದಿನ ಜನ್ಮದ ಸುಂದರ ಕಥೆಯನ್ನು ತಿಳಿಸಿದನು. ಅದರಿಂದಾಗಿ ಅವಳಲ್ಲಿ ಭಗವಂತನ ಮೇಲಿದ್ದ ಅನನ್ಯ ಭಕ್ತಿಯೇ ಪುತ್ರವಾತ್ಸಲ್ಯವಾಗಿ ಮಾರ್ಪಟ್ಟಿತು. ಬಳಿಕ ಕೌಸಲ್ಯಾಮಾತೆಯು ಮತಿಮುಗ್ಧಳಾಗಿ ಇಂತೆಂದಳು – ''ಸ್ವಾಮಿ! ಈ ರೂಪವನ್ನು ತೊರೆದು ಅತ್ಯಂತ ಪ್ರಿಯವಾದ ಬಾಲಲೀಲೆಯನ್ನು ತೋರಿಸು. ಅದೇ ನನಗೆ ಅತ್ಯಂತ ಪ್ರಿಯಕರವೂ, ಸುಖದಾಯಕವೂ ಆದೀತು.'' ತಾಯಿಯ ಈ ಮಾತನ್ನು ಕೇಳಿ ದೇವತೆಗಳ ಒಡೆಯನಾದ ಭಗವಂತನು ಸಣ್ಣ ಬಾಲಕರೂಪನಾಗಿ ಅಳಲು ತೊಡಗಿದನು. ತುಳಸೀದಾಸರು ಹೇಳುತ್ತಾರೆ – ಪ್ರಭುವಿನ ಈ ಚರಿತ್ರವನ್ನು ಗಾನಮಾಡುವವರು ಶ್ರೀಹರಿಯ ಪದವನ್ನು ಪಡೆದುಕೊಳ್ಳುತ್ತಾರೆ. ಮತ್ತೆ ಸಂಸಾರಸಮುದ್ರದಲ್ಲಿ ಬೀಳಲಾರರು. (ಛಂ/೧-೪)

**ದೋ – ಬಿಪ್ರ ಧೇನು ಸುರ ಸಂತ ಹಿತ ಲೀನ್ಹ ಮನುಜ ಅವತಾರ ।**
**ನಿಜ ಇಚ್ಛಾ ನಿರ್ಮಿತ ತನು ಮಾಯಾ ಗುನ ಗೋ ಪಾರ ॥ ೧೯೨ ॥**

ದೇವತೆಗಳನ್ನೂ, ಬ್ರಾಹ್ಮಣರನ್ನೂ, ಸಜ್ಜನರನ್ನೂ, ಗೋವುಗಳನ್ನೂ ಕಾಪಾಡಲಿಕ್ಕಾಗಿ ಭಗವಂತನು ಮನುಷ್ಯ ರೂಪದಿಂದ ಅವತರಿಸಿರುವನು. ಅವನು - ತ್ರಿಗುಣಾತ್ಮಕವಾದ ಮಾಯೆಗೂ, ಗುಣಗಳಿಗೂ, ಇಂದ್ರಿಯಗಳಿಗೂ ಅತೀತನು. ಅವನ ತನುವು ಆತನ ಇಚ್ಛೆಯಿಂದ ಆದುದು, ಯಾವುದೇ ಕರ್ಮಬಂಧನಕ್ಕೆ ವಶನಾಗಿ ತ್ರಿಗುಣಾತ್ಮಕ ಭೌತಿಕ ಪದಾರ್ಥಗಳಿಂದ ನಿರ್ಮಿತವಲ್ಲ. (ದೋ/೧೯೨)

**ಚೌ – ಸುನಿ ಸಿಸು ರುದನ ಪರಮ ಪಿಯ ಬಾನೀ । ಸಂಭ್ರಮ ಚಲಿ ಆಈಂ ಸಬ ರಾನೀ ॥**
**ಹರಷಿತ ಜಹಁ ತಹಁ ಧಾಈಂ ದಾಸೀ । ಆನಂದ ಮಗನ ಸಕಲ ಪುರಬಾಸೀ ॥ ೧ ॥**
**ದಸರಥ ಪುತ್ರ ಜನ್ಮ ಸುನಿ ಕಾನಾ । ಮಾನಹುँ ಬ್ರಹ್ಮಾನಂದ ಸಮಾನಾ ॥**
**ಪರಮ ಪ್ರೇಮ ಮನ ಪುಲಕ ಸರೀರಾ । ಚಾಹತ ಉಠನ ಕರತ ಮತಿ ಧೀರಾ ॥ ೨ ॥**
**ಜಾಕರ ನಾಮ ಸುನತ ಸುಭ ಹೋಈ । ಮೋರೆಂ ಗೃಹ ಆವಾ ಪ್ರಭು ಸೋಈ ॥**
**ಪರಮಾನಂದ ಪೂರಿ ಮನ ರಾಜಾ । ಕಹಾ ಬೊಲಾಇ ಬಜಾವಹು ಬಾಜಾ ॥ ೩ ॥**
**ಗುರ ಬಸಿಷ್ಠ ಕಹಁ ಗಯಉ ಹँಕಾರಾ । ಆಏ ದ್ವಿಜನ ಸಹಿತ ನೃಪದ್ವಾರಾ ॥**
**ಅನುಪಮ ಬಾಲಕ ದೇಖೆನ್ಹಿ ಜಾಈ । ರೂಪ ರಾಸಿ ಗುನ ಕಹಿ ನ ಸಿರಾಈ ॥ ೪ ॥**

ಅತ್ಯಂತ ಮಧುರವೂ, ಪ್ರಿಯತಮವೂ ಆದ ಮಗುವಿನ ಅಳುವಿನ ಧ್ವನಿಯನ್ನು ಕೇಳಿದೊಡನೆ, ಎಲ್ಲ ರಾಣಿಯರು ಉತ್ಕಂಠಿತರಾಗಿ ಓಡಿಬಂದರು. ದಾಸೀಜನರು ಹರ್ಷಿತರಾಗಿ ಅತ್ತಿಂದಿತ್ತ ಹರಿದಾಡಿದರು. ಎಲ್ಲ ನಗರವಾಸಿಗಳು ಆನಂದಮಗ್ನರಾದರು. ಪುತ್ರಜನನ ವಾರ್ತೆಯನ್ನು ಕೇಳಿದ ದಶರಥ ಮಹಾರಾಜನು ಪರಮಾನಂದಭರಿತನಾದನು. ಪ್ರೇಮಾತಿಶಯದಿಂದ ಅವನ ಶರೀರ ಪುಲಕಗೊಂಡಿತು. ಆನಂದವನ್ನು ತಡೆಯಲಾರದೆ ತತ್ತರಿಸಿದನು. ಅವನು ಧೈರ್ಯತಂದುಕೊಂಡು ಪ್ರೇಮಶಿಥಿಲವಾದ ಶರೀರವನ್ನು ಸಾವರಿಸಿಕೊಂಡು ಏಳಬಯಸಿದನು. ನಾಮಶ್ರವಣಮಾತ್ರದಿಂದಲೇ ಎಲ್ಲ ಶುಭಗಳನ್ನು ಕರುಣಿಸುವ ಪ್ರಭುವು ಇಂದು ನನ್ನ ಮನೆಗೆ ಬಂದಿರುವನು ಎಂದು ಯೋಚಿಸುತ್ತಾ ರಾಜನ ಮನಸ್ಸು ಅಮಿತಾನಂದಭರಿತವಾಯಿತು. ಮಂಗಳವಾದ್ಯಗಳನ್ನೂ ನುಡಿಸುವಂತೆ ಕಲಾವಿದರಿಗೆ ಆಜ್ಞೆಯನ್ನಿತ್ತನು. ಕುಲಗುರುವಾದ ವಸಿಷ್ಠರನ್ನು ಕರೆ ಕಳಿಸಿದನು. ಅವರು ಬ್ರಾಹ್ಮಣರೊಡಗೂಡಿ ಬಂದು ರಾಜಾಂತಃಪುರವನ್ನು ತಲುಪಿದನು. ಸೌಂದರ್ಯದರಾಶಿಯೂ, ಹೇಳಿ ಮುಗಿಯದ ಅಗಣಿತ ಗುಣಖನಿಯೂ ಆದ ಆ ಅಪರೂಪಬಾಲಕನನ್ನು ಅವರೆಲ್ಲರೂ ನೋಡಿದರು. (ಚೌ/೧-೪)

**ದೋ – ನಂದೀಮುಖ ಸರಾಧ ಕರಿ ಜಾತಕರಮ ಸಬ ಕೀನ್ಹ ।**
**ಹಾಟಕ ಧೇನು ಬಸನ ಮನಿ ನೃಪ ಬಿಪ್ರನ್ಹ ಕಹँ ದೀನ್ಹ ॥ ೧೯೩ ॥**

ರಾಜನು ಗುರುಗಳ ಅಪ್ಪಣೆಯಂತೆ ನಾಂದೀಮುಖಶ್ರಾದ್ಧವನ್ನು ಗೈದು ಜಾತಕರ್ಮ ಸಂಸ್ಕಾರವನ್ನು ನಡೆಸಿ, ಬ್ರಾಹ್ಮಣರಿಗೆ ಚಿನ್ನ, ಗೋವು, ವಸ್ತ್ರ, ನವರತ್ನಗಳನ್ನೂ ದಾನಮಾಡಿದನು. (ದೋ/೧೯೩)

**ಚೌ – ಧ್ವಜ ಪತಾಕ ತೋರನ ಪುರ ಛಾವಾ । ಕಹಿ ನ ಜಾಇ ಜೆಹಿ ಭಾಂತಿ ಬನಾವಾ ॥**
**ಸುಮನಬೃಷ್ಟಿ ಅಕಾಸ ತೇಂ ಹೋಈ । ಬ್ರಹ್ಮಾನಂದ ಮಗನ ಸಬ ಲೋಈ ॥ ೧ ॥**

ಬೃಂದ ಬೃಂದ ಮಿಲಿ ಚಲೀಂ ಲೊಗಾಈಂ । ಸಹಜ ಸಿಂಗಾರ ಕಿಏಂ ಉಠಿ ಧಾಈ ॥
ಕನಕ ಕಲಸ ಮಂಗಲ ಭರಿ ಥಾರಾ । ಗಾವತ ಪೈಠಹಿಂ ಭೂಪ ದುಆರಾ ॥ ೨ ॥
ಕರಿ ಆರತಿ ನೆವಛಾವರಿ ಕರಹೀಂ । ಬಾರ ಬಾರ ಸಿಸು ಚರನನ್ಹಿ ಪರಹೀಂ ॥
ಮಾಗಧ ಸೂತ ಬಂದಿಗನ ಗಾಯಕ । ಪಾವನ ಗುನ ಗಾವಹಿಂ ರಘುನಾಯಕ ॥ ೩ ॥
ಸರ್ಬಸ ದಾನ ದೀನ್ಹ ಸಬ ಕಾಹೂ । ಜೆಹಿಂ ಪಾವಾ ರಾಖಾ ನಹಿಂ ತಾಹೂ ॥
ಮೃಗಮದ ಚಂದನ ಕುಂಕುಮ ಕೀಚಾ । ಮಚೀ ಸಕಲ ಬೀಥಿನ್ಹ ಬಿಚ ಬೀಚಾ ॥ ೪ ॥

ನಗರವನ್ನು ಧ್ವಜ, ಪತಾಕೆ, ತೋರಣಗಳಿಂದ ಅವರ್ಣನೀಯವಾಗಿ ಅಲಂಕರಿಸಲ್ಪಟ್ಟಿತ್ತು. ಆಕಾಶದಿಂದ ಪುಷ್ಪವೃಷ್ಟಿಯಾಗುತ್ತಿತ್ತು. ಪ್ರಜೆಗಳೆಲ್ಲರೂ ಬ್ರಹ್ಮಾನಂದದಲ್ಲಿ ಮುಳುಗಿಹೋದರು. ಸ್ತ್ರೀಯರು ಗುಂಪು-ಗುಂಪಾಗಿ, ಸಹಜ ಶೃಂಗಾರ ಮಾಡಿಕೊಂಡು ಅವಸರವಸರವಾಗಿ ಹೊರಟರು. ಸ್ವರ್ಣಕಲಶ ಹಿಡಿದುಕೊಂಡು, ಭಂಗಾರದ ತಟ್ಟೆಗಳಲ್ಲಿ ಮಂಗಳ ದ್ರವ್ಯಗಳನ್ನು ಅಣಿಮಾಡಿಕೊಂಡು ಹಾಡುತ್ತಾ ಅವರೆಲ್ಲರೂ ರಾಜದ್ವಾರವನ್ನು ಹೊಕ್ಕರು. ಬಾಲಕನಿಗೆ ಆರತಿಯನ್ನೆತ್ತಿ, ದೃಷ್ಟಿಯಾಗದಂತೆ ನಿವಾಳಿಸಿದರು. ಬಾಲಕನಿಗೆ ಮಂಗಳಾಶಾಸನವನ್ನು ಹಾಡುತ್ತಾ ಪದೇ-ಪದೇ ಬಾಲಕನ ಪಾದಗಳಿಗೆ ವಂದಿಸಿಕೊಂಡು ಉಡುಗೊರೆಗಳನ್ನು ಕೊಡುತ್ತಿದ್ದರು. ವಂದಿ, ಮಾಗಧರು, ಸೂತರು, ಗಾಯಕರು, ರಘುಕುಲದ ಒಡೆಯರ ಪವಿತ್ರ ಗುಣಗಳನ್ನು ಹಾಡತೊಡಗಿದರು. ಅರಸನು ಎಲ್ಲರಿಗೂ ಭೂರಿದಾನ ಮಾಡಿದನು. ದಾನ ಪಡೆದವರೂ ಕೂಡ ಅದನ್ನು ಇರಿಸಿಕೊಳ್ಳದೆ ಸೂರೆಮಾಡಿದರು. ನಗರದ ಎಲ್ಲ ಬೀದಿಗಳಲ್ಲಿ ಕಸ್ತೂರೀ, ಚಂದನ, ಕೇಸರಿ ಮುಂತಾದವುಗಳನ್ನು ಚೆಲ್ಲಾಡಿದರು. (ಚೌ/೧-೪)

**ದೋ – ಗೃಹ ಗೃಹ ಬಾಜ ಬಧಾವ ಸುಭ ಪ್ರಗಟೇ ಸುಷಮಾ ಕಂದ ।**
**ಹರಷವಂತ ಸಬ ಜಹಂ ತಹಂ ನಗರ ನಾರಿ ನರ ಬೃಂದ ॥ ೧೯೪ ॥**

ಸೌಂದರ್ಯದ ರಾಶಿಯಾದ ಆ ಬಾಲಕನ ಜನನದಿಂದ ಮನೆಮನೆಗಳಲ್ಲಿ ಮಂಗಳವಾದ್ಯಗಳು ಮೊಳಗಿದವು. ಊರಿನ ನರನಾರಿಯರು ಗುಂಪು-ಗುಂಪಾಗಿ ಆನಂದೋತ್ಸವದಲ್ಲಿ ಮಗ್ನರಾದರು. (ದೋ/೧೯೪)

ಚೌ – ಕೈಕಯಸುತಾ ಸುಮಿತ್ರಾ ದೋಊ । ಸುಂದರ ಸುತ ಜನಮತ ಭೈಂ ಓಊ ॥
ವಹ ಸುಖ ಸಂಪತಿ ಸಮಯ ಸಮಾಜಾ । ಕಹಿ ನ ಸಕಇ ಸಾರದ ಅಹಿರಾಜಾ ॥ ೧ ॥
ಅವಧಪುರೀ ಸೋಹಇ ಎಹಿ ಭಾಂತೀ । ಪ್ರಭುಹಿ ಮಿಲನ ಆಈ ಜನು ರಾತೀ ॥
ದೇಖಿ ಭಾನು ಜನು ಮನ ಸಕುಚಾನೀ । ತದಪಿ ಬನೀ ಸಂಧ್ಯಾ ಅನುಮಾನೀ ॥ ೨ ॥
ಅಗರ ಧೂಪ ಬಹು ಜನು ಅಁಧಿಆರೀ । ಉಡಇ ಅಬೀರ ಮನಹುಂ ಅರುನಾರೀ ॥
ಮಂದಿರ ಮನಿ ಸಮೂಹ ಜನು ತಾರಾ । ನೃಪ ಗೃಹ ಕಲಸ ಸೊ ಇಂದು ಉದಾರಾ ॥ ೩ ॥
ಭವನ ಬೇದಧುನಿ ಅತಿ ಮೃದು ಬಾನೀ । ಜನು ಖಗ ಮುಖರ ಸಮಯ್ ಜನು ಸಾನೀ ॥
ಕೌತುಕ ದೇಖಿ ಪತಂಗ ಭುಲಾನಾ । ಏಕ ಮಾಸ ತೆಈಂ ಜಾತ ನ ಜಾನಾ ॥ ೪ ॥

ಕೈಕೆಯಿ ಮತ್ತು ಸುಮಿತ್ರೆಯರೂ ಕೂಡ ಸುಂದರವಾದ ಗಂಡು ಮಕ್ಕಳನ್ನು ಹಡೆದರು. ಆ ಸುಖ, ಸಂಪತ್ತು, ಸಮಯ ಹಾಗೂ ಸಮಾಜ ಇವುಗಳನ್ನು ಸರಸ್ವತಿಯಾಗಲೀ, ಆದಿಶೇಷನಾಗಲೀ ವರ್ಣಿಸಲಾರರು. ರಾತ್ರಿಯು ತನ್ನ ಪ್ರಭುವನ್ನು ಕೂಡಲು ಬಂದಿದೆ, ಆದರೆ ಸೂರ್ಯನನ್ನು ಕಂಡು ನಾಚಿ ಹಿಂಜರಿದು ಸಂಧ್ಯೆಯಾಗಿ ಮಾರ್ಪಟ್ಟಿತೋ ಎಂಬಂತೆ ಅಯೋಧ್ಯೆ ಕಂಗೊಳಿಸಿತು. ಧೂಪಧೂಮವೇ ಆ ಸಂಧ್ಯೆಯ ಅಂಧಕಾರವು ಪರಸ್ಪರ ಒಬ್ಬರ ಮೇಲೊಬ್ಬರು ಚೆಲ್ಲುತ್ತಿದ್ದ ಗುಲಾಲು ಅದರ ಅರುಣಕಾಂತಿಯು. ಅರಮನೆಯಲ್ಲಿದ್ದ ಮಣಿಗಳೇ ತಾರಾಗಣವು. ಅರಮನೆಯ ಸ್ವರ್ಣ ಕಳಶವು ಚಂದ್ರನಂತೆ ಶೋಭಿಸುತ್ತಿತ್ತು. ಅರಮನೆಯಲ್ಲಿ ಅತ್ಯಂತ ಮೃದು ಮಧುರವಾಗಿ ಸಾಗುತ್ತಿದ್ದ ವೇದಘೋಷವೇ ಸಮಯಾನುಕೂಲವಾದ ಪಕ್ಷಿಗಳ ಇಂಚರ. ಈ ಕೌತುಕವನ್ನು ಕಂಡು ರವಿಯೂ ಕೂಡ ಮುಂದಕ್ಕೆ ಸಾಗುವುದನ್ನು ಮರೆತ. ಒಂದು ತಿಂಗಳು ಕಾಲ ತನ್ನ ರಥಸಹಿತ ಅಲ್ಲೇ ನಿಂತುಬಿಟ್ಟನು. ಅದರಿಂದಾಗಿ ಯಾರಿಗೂ ರಾತ್ರಿಯ ಅರಿವೇ ಆಗಲಿಲ್ಲ. (ಚೌ/೧-೪)

**ದೋ – ಮಾಸ ದಿವಸ ಕರ ದಿವಸ ಭಾ ಮರಮ ನ ಜಾನಇ ಕೋಇ ।**
**ರಥ ಸಮೇತ ರಬಿ ಥಾಕೆಉ ನಿಸಾ ಕವನ ಬಿಧಿ ಹೋಇ ॥ ೧೯೫ ॥**

ಒಂದು ತಿಂಗಳ ಕಾಲ ಒಂದು ದಿನದಂತೆ ಕಳೆಯಿತು. ಈ ರಹಸ್ಯವನ್ನು ಯಾರೂ ತಿಳಿಯದೆ ಹೋದರು. ಸೂರ್ಯನು ತನ್ನ ರಥವನ್ನು ಅಲ್ಲೇ ನಿಲ್ಲಿಸಿಬಿಟ್ಟನು. ಮತ್ತೆ ರಾತ್ರಿ ಹೇಗಾದೀತು? (ದೋ/೧೯೫)

**ಚೌ – ಯಹ ರಹಸ್ಯ ಕಾಹೂ ನಹಿಂ ಜಾನಾ । ದಿನಮನಿ ಚಲೆ ಕರತ ಗುನಗಾನಾ ॥**
**ದೇಖಿ ಮಹೋತ್ಸವ ಸುರ ಮುನಿ ನಾಗಾ । ಚಲೇ ಭವನ ಬರನತ ನಿಜ ಭಾಗಾ ॥ ೧ ॥**
**ಔರಉ ಏಕ ಕಹಉಂ ನಿಜ ಚೋರೀ । ಸುನು ಗಿರಿಜಾ ಅತಿ ದೃಢ ಮತಿ ತೋರೀ ॥**
**ಕಾಕಭುಸುಂಡಿ ಸಂಗ ಹಮ ದೋಊ । ಮನುಜರೂಪ ಜಾನಇ ನಹಿಂ ಕೋಊ ॥ ೨ ॥**
**ಪರಮಾನಂದ ಪ್ರೇಮಸುಖ ಫೂಲೇ । ಬೀಥಿನ್ಹ ಫಿರಹಿಂ ಮಗನ ಮನ ಭೂಲೇ ॥**
**ಯಹ ಸುಭ ಚರಿತ ಜಾನ ಪೈ ಸೋಈ । ಕೃಪಾ ರಾಮ ಕೈ ಜಾಪರ ಹೋಈ ॥ ೩ ॥**
**ತೆಹಿ ಅವಸರ ಜೋ ಜೆಹಿ ಬಿಧಿ ಆವಾ । ದೀನ್ಹ ಭೂಪ ಜೋ ಜೆಹಿ ಮನ ಭಾವಾ ॥**
**ಗಜ ರಥ ತುರಗ ಹೇಮ ಗೋ ಹೀರಾ । ದಿನ್ಹೇ ನೃಪ ನಾನಾಬಿಧಿ ಚೀರಾ ॥ ೪ ॥**

ಈ ರಹಸ್ಯವನ್ನು ಯಾರೂ ತಿಳಿಯರು. ಸೂರ್ಯನು ಭಗವಾನ್ ಶ್ರೀರಾಮನ ಗುಣಗಾನವನ್ನು ಮಾಡುತ್ತಾ ಹೊರಟುಹೋದನು. ಈ ಮಹೋತ್ಸವವನ್ನು ಕಂಡು ಸುರರು, ಮುನಿಗಳು, ನಾಗರು ತಮ್ಮ ಭಾಗ್ಯಕ್ಕೆ ಎಣೆಯಿಲ್ಲವೆಂದುಕೊಂಡು ತಮ್ಮ-ತಮ್ಮ ಮನೆಗಳಿಗೆ ಮರಳಿದರು. ಎಲೈ ಗಿರಿಜೆ! ನಿನಗೆ ಶ್ರೀರಾಮನ ಚರಣಗಳಲ್ಲಿ ಇರುವ ಭಕ್ತಿಯನ್ನು ನಾನು ಬಲ್ಲೆನು. ಅದಕ್ಕಾಗಿ ನಿನಗೊಂದು ರಹಸ್ಯವಾದ ಮಾತನ್ನು ಹೇಳುತ್ತೇನೆ, ಕೇಳು. ಕಾಕಭುಶುಂಡಿಯು ಹಾಗೂ ನಾನೂ ಆಗ ಅಲ್ಲಿ ಜೊತೆಯಲ್ಲೇ ಇದ್ದೆವು. ಆದರೆ ಮನುಷ್ಯರೂಪದಿಂದ ಇದ್ದಕಾರಣ ನಮ್ಮನ್ನು ಯಾರೂ ಗುರುತಿಸಲಿಲ್ಲ. ಪ್ರೇಮಾನಂದದಲ್ಲಿ ಮುಳುಗಿದ್ದು ನಾವಿಬ್ಬರೂ ಮೈಮರೆತು ಬೀದಿ-ಬೀದಿಗಳಲ್ಲಿ ಅಲೆಯುತ್ತಿದ್ದೆವು. ಶ್ರೀರಾಮನಕೃಪೆಗೆ ಪಾತ್ರರಾದವರು ಮಾತ್ರ ಈ ಮಂಗಳಕರವಾದ ಉತ್ಸವವನ್ನು ನೋಡಬಲ್ಲರು, ತಿಳಿಯಬಲ್ಲರು. ಆ ಶುಭಸಂದರ್ಭದಲ್ಲಿ ಯಾರೇ ಬರಲಿ, ಏನೇ ಬೇಡಲಿ, ಅದನ್ನು ರಾಜನು ಕೊಟ್ಟು ಬಿಡುತ್ತಿದ್ದನು. ಆನೆ, ಕುದುರೆ, ರಥ, ಚಿನ್ನ, ಗೋವುಗಳು, ವಜ್ರ-ವೈಡೂರ್ಯ ಹೀಗೆ ತೆರತೆರನಾದ ದಿವ್ಯ ವಸ್ತ್ರಗಳನ್ನೂ ದಾನಮಾಡಿದನು. (ಚೌ/೧-೪)

**ದೋ – ಮನ ಸಂತೋಷೆ ಸಬನ್ಹಿ ಕೇ ಜಹಂ ತಹಂ ದೇಹಿಂ ಅಸೀಸ ।**
**ಸಕಲ ತನಯ ಚಿರ ಜೀವಹುಂ ತುಲಸಿದಾಸ ಕೇ ಈಸ ॥ ೧೯೬ ॥**

ರಾಜನು ಎಲ್ಲರನ್ನು ಸಂತೋಷಪಡಿಸಿದನು. ಎಲ್ಲರೂ ತುಳಸೀದಾಸನ ಒಡೆಯರಾದ ನಾಲ್ವರೂ ರಾಜಕುಮಾರರೂ ಚಿರಂಜೀವಿಗಳಾಗಲಿ ಎಂದು ಆಶೀರ್ವದಿಸುತ್ತಿದ್ದರು. (ದೋ/೧೯೬)

**ಚೌ – ಕಛುಕ ದಿವಸ ಬೀತೇ ಏಹಿ ಭಾಂತೀ । ಜಾತ ನ ಜಾನಿಅ ದಿನ ಅರು ರಾತೀ ॥**
**ನಾಮಕರನ ಕರ ಅವಸರು ಜಾನೀ । ಭೂಪ ಬೋಲಿ ಪಠಏ ಮುನಿ ಗ್ಯಾನೀ ॥ ೧ ॥**
**ಕರಿ ಪೂಜಾ ಭೂಪತಿ ಅಸ ಭಾಷಾ । ಧರಿಅ ನಾಮ ಜೋ ಮುನಿ ಗುನಿ ರಾಖಾ ॥**
**ಇನ್ಹ ಕೇ ನಾಮ ಅನೇಕ ಅನೂಪಾ । ಮೈಂ ನೃಪ ಕಹಬ ಸ್ವಮತಿ ಅನುರೂಪಾ ॥ ೨ ॥**
**ಜೋ ಆನಂದ ಸಿಂಧು ಸುಖರಾಸೀ । ಸೀಕರ ತೇಂ ತ್ರೈಲೋಕ ಸುಪಾಸೀ ॥**
**ಸೋ ಸುಖ ಧಾಮ ರಾಮ ಅಸ ನಾಮಾ । ಅಖಿಲ ಲೋಕ ದಾಯಕ ಬಿಶ್ರಾಮಾ ॥ ೩ ॥**
**ಬಿಸ್ವ ಭರನ ಪೋಷನ ಕರ ಜೋಈ । ತಾಕರ ನಾಮ ಭರತ ಅಸ ಹೋಈ ॥**
**ಜಾಕೇ ಸುಮಿರನ ತೇಂ ರಿಪು ನಾಸಾ । ನಾಮ ಸತ್ರುಹನ ಬೇದ ಪ್ರಕಾಸಾ ॥ ೪ ॥**

ಹೀಗೆ ಕೆಲವು ದಿನಗಳು ಕಳೆದವು. ಹಗಲು-ರಾತ್ರಿಗಳು ಉರುಳಿದ್ದೇ ತಿಳಿಯಲಿಲ್ಲ. ಮಕ್ಕಳ ನಾಮಕರಣದ ಸಮಯ ಸನ್ನಿಹಿತವಾಯಿತೆಂದು ಗಮನಿಸಿ ಅರಸನು ಜ್ಞಾನಿಯಾದ ವಸಿಷ್ಠಮುನಿಗಳನ್ನು ಕರೆಸಿದನು. ಬಂದ ಮುನಿಯನ್ನು ವಿಧಿವತ್ತಾಗಿ ಪೂಜಿಸಿ ಇಂತೆಂದನು – ''ಮುನೀಶ್ವರರೇ! ಇವರಿಗೆ ನಾಮಕರಣ ಸಂಸ್ಕಾರವನ್ನು ಮಾಡಿರಿ. ನೀವು ನಿರ್ಣಯಿಸಿಕೊಂಡಿದ್ದ ಹೆಸರನ್ನು ಇಡಿರಿ.'' ಆಗ ವಸಿಷ್ಠರು ನುಡಿದರು – ರಾಜನೇ! ಇವನಿಗೆ ಅನೇಕ ಅನುಪಮ ನಾಮಗಳಿವೆ. ಆದರೂ ನನ್ನ ಬುದ್ಧಿಗೆ ತೋಚಿದಂತೆ ಹೇಳುತ್ತೇನೆ. ಸರ್ವಸುಖಗಳ ನಿಧಾನವಾದ ಈ ಆನಂದಸಿಂಧುವಿನ ಒಂದು ಬಿಂದುವಿನಿಂದಲೇ ಮೂರ್ಲೋಕಗಳು ಸುಖಮಯವಾಗುತ್ತವೆ. ಈ ಸುಖನಿಧಿಯ ಹೆಸರು ''ರಾಮ'' ಎಂದು. ಇವನು ಸರ್ವಲೋಕಗಳಿಗೂ ಶಾಂತಿಪ್ರದಾತನು. ಈ ಎರಡನೇ ಮಗನು – ಜಗತ್ತಿನ ಭರಣ-ಪೋಷಣ ಮಾಡುವವನಾದ್ದರಿಂದ ಇವನ ಹೆಸರು ಭರತನೆಂದು.

ಇನ್ನೊಬ್ಬನ ಸ್ಮರಣ ಮಾತ್ರದಿಂದ ಶತ್ರುಗಳ ನಾಶವಾಗುವುದರಿಂದ ಅವನ ಹೆಸರು ಶತ್ರುಘ್ನನೆಂದು ವೇದಗಳಲ್ಲಿ ಪ್ರಸಿದ್ಧವಾಗಿದೆ. (ಚೌ/೧-೪)

**ದೋ – ಲಚ್ಛನ ಧಾಮ ರಾಮ ಪ್ರಿಯ ಸಕಲ ಜಗತ ಆಧಾರ ।**
**ಗುರು ಬಸಿಷ್ಠ ತೆಹಿ ರಾಖಾ ಲಛಿಮನ ನಾಮ ಉದಾರ ॥ ೧೯೭ ॥**

ಮತ್ತೊಬ್ಬನು ಶುಭಲಕ್ಷಣಸಂಪನ್ನನೂ, ಶ್ರೀರಾಮನಿಗೆ ಅತ್ಯಂತ ಪ್ರೀತಿಪಾತ್ರನೂ, ಜಗದಾಧಾರನೂ, ಸುಮಿತ್ರಾನಂದನೂ ಆದ ಇವನ ಹೆಸರು ಲಕ್ಷ್ಮಣನೆಂದು ವಸಿಷ್ಠರು ನಾಮಕರಣಮಾಡಿದರು. (ದೋ/೧೯೭)

**ಚೌ – ಧರೇ ನಾಮ ಗುರ ಹೃದಯ್ ಬಿಚಾರೀ । ಬೇದ ತತ್ತ್ವ ನೃಪ ತವ ಸುತ ಚಾರೀ ॥**
**ಮುನಿ ಧನ ಜನ ಸರಬಸ ಸಿವ ಪ್ರಾನಾ । ಬಾಲ ಕೇಲಿ ರಸ ತೆಹಿಂ ಸುಖ ಮಾನಾ ॥ ೧ ॥**
**ಬಾರೆಹಿ ತೇ ನಿಜ ಹಿತ ಪತಿ ಜಾನೀ । ಲಛಿಮನ ರಾಮ ಚರನ ರತಿ ಮಾನೀ ॥**
**ಭರತ ಸತ್ರುಹನ ದೂನಉ ಭಾಈ । ಪ್ರಭು ಸೇವಕ ಜಸಿ ಪ್ರೀತಿ ಬಡಾಈ ॥ ೨ ॥**
**ಸ್ಯಾಮ ಗೌರ ಸುಂದರ ದೊಉ ಜೋರೀ । ನಿರಖಹಿಂ ಛಬಿ ಜನನೀಂ ತೃನ ತೋರೀ ॥**
**ಚಾರಿಉ ಸೀಲ ರೂಪ ಗುನ ಧಾಮಾ । ತದಪಿ ಅಧಿಕ ಸುಖಸಾಗರ ರಾಮಾ ॥ ೩ ॥**
**ಹೃದಯ್ ಅನುಗ್ರಹ ಇಂದು ಪ್ರಕಾಸಾ । ಸೂಚತ ಕಿರನ ಮನೋಹರ ಹಾಸಾ ॥**
**ಕಬಹುಁ ಉಛಂಗ ಕಬಹುಁ ಬರ ಪಲನಾ । ಮಾತು ದುಲಾರಇ ಕಹಿ ಪ್ರಿಯ ಲಲನಾ ॥ ೪ ॥**

(ಚೌ/೧-೪) ಕುಲಗುರುಗಳಾದ ವಸಿಷ್ಠರು ಚೆನ್ನಾಗಿ ವಿಚಾರಮಾಡಿ ಆ ನಾಲ್ವರೂ ರಾಜಕುಮಾರರಿಗೆ ನಾಮಕರಣವನ್ನು ಮಾಡಿದರು. ಬಳಿಕ ಇಂತೆಂದರು – ''ರಾಜಾ! ನಿನ್ನ ನಾಲ್ವರೂ ಕುಮಾರರೂ ವೇದತತ್ತ್ವವಾದ ಸಾಕ್ಷಾತ್ ಪರಾತ್ಪರ ಪರಮಾತ್ಮಸ್ವರೂಪಿಗಳಾಗಿದ್ದಾರೆ. ಇವರು ಮುನಿಗಳ ಧನವೂ, ಭಕ್ತರ ಸರ್ವಸ್ವರೂ, ಶಿವನಿಗೆ ಪ್ರಾಣರೂ ಆಗಿದ್ದಾರೆ. ಈಗವರು ನಿಮ್ಮ ಪ್ರೇಮಕ್ಕೆ ಪರವಶರಾಗಿ ತಮ್ಮ ಬಾಲಲೀಲಾನಂದರಸದಲ್ಲಿ ಮುಳುಗಿರುವರು. ಬಾಲ್ಯದಿಂದಲೇ ಶ್ರೀರಾಮಚಂದ್ರನು ತನ್ನ ಪರಮ ಹಿತೈಷಿ ಪ್ರಭುವೆಂದು ಬಗೆದು ಲಕ್ಷ್ಮಣನು ಅವನ ಚರಣಗಳಲ್ಲಿ ಅನನ್ಯ ಪ್ರೀತಿಯನ್ನು ಬೆಳೆಸಿಕೊಂಡಿದ್ದನು. ಭರತ-ಶತ್ರುಘ್ನರ ಪ್ರೇಮವು ಸ್ವಾಮಿ ಸೇವಕರ ಪ್ರೇಮದಂತೆ ಇತ್ತು. ಶ್ರೀರಾಮ-ಭರತರು ಶ್ಯಾಮವರ್ಣದಿಂದಲೂ ಹಾಗೂ ಲಕ್ಷ್ಮಣ-ಶತ್ರುಘ್ನರು ಗೌರವರ್ಣದಿಂದಲೂ ಶೋಭಿಸುತ್ತಿದ್ದರು. ರಾಮ-ಲಕ್ಷ್ಮಣ ಹಾಗೂ ಭರತ-ಶತ್ರುಘ್ನರೆಂಬ ಎರಡು ಜೋಡಿಗಳನ್ನು ನೋಡಿ ತಾಯಂದಿರು ಆನಂದಿಸುತ್ತಿದ್ದರು. ದೃಷ್ಟಿ ತೆಗೆಯುತ್ತಿದ್ದರು. ಸೋದರರಾದ ನಾಲ್ವರೂ ರೂಪ, ಶೀಲ, ಗುಣನಿಧಾನರು ಆಗಿದ್ದರೂ, ಶ್ರೀರಾಮನು ಎಲ್ಲರಿಗಿಂತ ಅತ್ಯಂತ ಸುಖಾನಂದದಾಯಕನು. ಅವನ ಹೃದಯದಲ್ಲಿ ಅನುಗ್ರಹವೆಂಬ ಚಂದ್ರನು ಯಾವಾಗಲೂ ಬೆಳಗುತ್ತಿದ್ದನು. ಅವನ ಮನೋಹರ ಮಂದಹಾಸವೇ ಅದನ್ನು ಸೂಚಿಸುತ್ತಿತ್ತು. ಒಮ್ಮೆ ತೊಡೆಯಮೇಲೆ ಒಮ್ಮೆ ತೊಟ್ಟಿಲಿನಲ್ಲಿ ಮಲಗಿಸಿಕೊಂಡು ತಾಯಿಯು ''ನನ್ನ ಮುದ್ದು ಕಂದಮ್ಮ'' ಎಂದು ಹೇಳಿ ಜೋಗುಳ ಹಾಡಿ ಆನಂದಿಸುತ್ತಿದ್ದಳು. (ಚೌ/೧-೪)

**ದೋ – ಬ್ಯಾಪಕ ಬ್ರಹ್ಮ ನಿರಂಜನ ನಿರ್ಗುನ ಬಿಗತ ಬಿನೋದ ।**
**ಸೋ ಅಜ ಪ್ರೇಮ ಭಗತಿ ಬಸ ಕೌಸಲ್ಯಾ ಕೇಂ ಗೋದ ॥ ೧೯೮ ॥**

ಸರ್ವವ್ಯಾಪಕನೂ, ನಿರಂಜನನೂ, ನಿರ್ಗುಣನೂ, ಲೌಕಿಕ ವಿನೋದರಹಿತನೂ, ಅಜನೂ ಆದ ಪರಬ್ರಹ್ಮನು ಕೌಸಲ್ಯಾದೇವಿಯ ಭಕ್ತಿ-ವಾತ್ಸಲ್ಯಗಳಿಗೆ ವಶನಾಗಿ, ಅವಳ ತೊಡೆಯಲ್ಲಿ ಆಡುತ್ತಿರುವನು. (ದೋ/೧೯೮)

**ಚೌ – ಕಾಮ ಕೋಟಿ ಛಬಿ ಸ್ಯಾಮ ಸರೀರಾ । ನೀಲ ಕಂಜ ಬಾರಿದ ಗಂಭೀರಾ ॥**
**ಅರುನ ಚರನ ಪಂಕಜ ನಖ ಜೋತೀ । ಕಮಲ ದಲನ್ಹಿ ಬೈಠೇ ಜನು ಮೋತೀ ॥ ೧ ॥**
**ರೇಖ ಕುಲಿಸ ಧ್ವಜ ಅಂಕುಸ ಸೋಹೇ । ನೂಪುರ ಧುನಿ ಸುನಿ ಮುನಿ ಮನ ಮೋಹೇ ॥**
**ಕಟಿ ಕಿಂಕಿನೀ ಉದರ ತ್ರಯ ರೇಖಾ । ನಾಭಿ ಗಭೀರ ಜಾನ ಜೆಹಿಂ ದೇಖಾ ॥ ೨ ॥**
**ಭುಜ ಬಿಸಾಲ ಭೂಷನ ಜುತ ಭೂರೀ । ಹಿಯ್ ಹರಿ ನಖ ಅತಿ ಸೋಭಾ ರೂರೀ ॥**
**ಉರ ಮನಿಹಾರ ಪದಿಕ ಕೀ ಸೋಭಾ । ಬಿಪ್ರ ಚರನ ದೇಖತ ಮನ ಲೋಭಾ ॥ ೩ ॥**
**ಕಂಬು ಕಂಠ ಅತಿ ಚಿಬುಕ ಸುಹಾಈ । ಆನನ ಅಮಿತ ಮದನ ಛಬಿ ಛಾಈ ॥**
**ದುಇ ದುಇ ದಸನ ಅಧರ ಅರುನಾರೇ । ನಾಸಾ ತಿಲಕ ಕೊ ಬರನೈ ಪಾರೇ ॥ ೪ ॥**

**ಸುಂದರ ಶ್ರವನ ಸುಚಾರು ಕಪೋಲಾ । ಅತಿ ಪ್ರಿಯ ಮಧುರ ತೋತರೇ ಬೋಲಾ ॥**
**ಚಿಕ್ಕನ ಕಚ ಕುಂಚಿತ ಗಭುಆರೇ । ಬಹು ಪ್ರಕಾರ ರಚಿ ಮಾತು ಸ್ವಾರೇ ॥ ೫ ॥**
**ಪೀತ ಝಗುಲಿಯಾ ತನು ಪಹಿರಾಈ । ಜಾನು ಪಾನಿ ಬಿಚರನಿ ಮೋಹಿ ಭಾಈ ॥**
**ರೂಪ ಸಕಹಿಂ ನಹಿಂ ಕಹಿ ಶ್ರುತಿ ಸೇಷಾ । ಸೋ ಜಾನಇ ಸಪನೆಹುಂ ಜೆಹಿಂ ದೇಖಾ ॥ ೬ ॥**

ನೀಲಕಮಲ ಮತ್ತು ಗಂಭೀರಮೇಘದಂತಿರುವ ಶ್ಯಾಮಸುಂದರ ಶರೀರವು ಕೋಟಿ ಮನ್ಮಥರ ಶೋಭೆಯಿಂದ ಪ್ರಕಾಶಿಸುತ್ತಿತ್ತು. ಅರುಣ ಚರಣಕಮಲಗಳಲ್ಲಿನ ಬೆಳ್ಳಗಿನ ನಖಕಾಂತಿಯು ಕೆಂದಾವರೆಯ ಎಸಳಮೇಲಿನ ಮುತ್ತಿನಂತೆ ಕಂಗೊಳಿಸುತ್ತಿತ್ತು. ಚರಣ ತಳದಲ್ಲಿ, ವಜ್ರ, ಧ್ವಜ, ಅಂಕುಶ ಮೊದಲಾದ ಚಿಹ್ನೆಗಳು ಶೋಭಿಸುತ್ತವೆ. ನೂಪುರದ ಧ್ವನಿಗಳು ಕೇಳಿ ಮುನಿಗಳ ಮನಸ್ಸೂ ಕೂಡ ಮೋಹಗೊಳಿಸುವಂತಿತ್ತು. ಸೊಂಟದಲ್ಲಿ ಕಿಂಕಿಣಿ ಮತ್ತು ಹೊಟ್ಟೆಯ ಮೇಲೆ ತ್ರಿವಳಿಗಳಿದ್ದವು. ಗಂಭೀರವಾದ ನಾಭಿಯ ಶೋಭೆಯನ್ನು ಅದನ್ನು ಕಂಡವರೇ ಬಲ್ಲರು. ವಿಶಾಲವಾದ ಭುಜಗಳು ಅನೇಕ ವಿಧವಾದ ಆಭೂಷಣಗಳಿಂದ ಅಲಂಕೃತವಾಗಿವೆ. ವಕ್ಷಸ್ಥಳದ ಮೇಲೆ ಹುಲಿಯ ಉಗುರಿನ ಚೆಲುವೇ ಚೆಲುವು. ಎದೆಯ ಮೇಲೆ ರತ್ನಮಯ ಮಣಿಹಾರಗಳ ಕಾಂತಿ ಹಾಗೂ ಭೃಗುವಿನ ಚರಣಚಿಹ್ನೆಯನ್ನು ಕಂಡು ಮನ ಮಾರುಹೋಗುತ್ತದೆ. ಶಂಖದಂತಿರುವ ಕಂಠವೂ ಮತ್ತು ಗಲ್ಲವು ಅತ್ಯಂತ ಸುಂದರವಾಗಿವೆ. ಮನೋಜ್ಞವಾದ ಮುಖವು ಅಸಂಖ್ಯಾತ ಮನ್ಮಥರ ಶೋಭೆಗಿಂತಲೂ ಮಿಗಿಲಾಗಿತ್ತು. ಬೆಳ್ಳಗಿನ ಎರಡೆರಡು ಹಲ್ಲುಗ್ಗಳಿದ್ದು, ಕೆಂಪಾದ ತುಟಿಗಳು, ನೀಳವಾದ ಮೂಗು, ತಿದ್ದಿದ ತಿಲಕ ಇವುಗಳ ಸೌಂದರ್ಯ ವರ್ಣನಾತೀತವಾದುದು. ಚೆಲುವಾದ ಕಿವಿಗಳೂ, ಮನೋಹರವಾದ ಕೆನ್ನೆಗಳು ಇದ್ದು, ಮಧುರವಾದ ತೊದಲುನುಡಿ ಬಲುಮುದ್ದು. ಹುಟ್ಟುವಾಗಲೇ ಇದ್ದ ದಟ್ಟವಾದ ಗುಂಗುರು ಕೂದಲುಗಳನ್ನೂ ತಾಯಿಯು ಅನೇಕವಿಧದಿಂದ ಸಿಂಗರಿಸುತ್ತಿದ್ದಳು. ಮಗುವಿನ ಮೈಮೇಲೆ ಪೀತವರ್ಣದ ಅಂಗಿ ತೊಡಿಸಿದ್ದರು. ಅದರ ಅಂಬೆಗಾಲು ನಡಿಗೆ ನನಗೆ ಅತ್ಯಂತ ಪ್ರಿಯವಾದುದು ಎಂದು ಶಿವನು ಪಾರ್ವತಿಗೆ ಹೇಳಿದನು. ಮತ್ತೆ ಹೇಳಿದ ಪಾರ್ವತೀ! ಶ್ರೀರಾಮನ ರೂಪ ಸೌಂದರ್ಯವನ್ನು ವೇದಗಳೇ ಅಲ್ಲ, ಆದಿಶೇಷನೂ ಕೂಡ ವರ್ಣಿಸಲಾರನು. ಕನಸಿನಲ್ಲಾದರೂ ಆ ಚೆಲುವನ್ನು ಕಂಡವರು ಮಾತ್ರ ತಿಳಿಯಬಲ್ಲರು. (ಚೌ/೧-೬)

**ದೋ – ಸುಖ ಸಂದೋಹ ಮೋಹಪರ ಗ್ಯಾನ ಗಿರಾ ಗೋತೀತ ।**
**ದಂಪತಿ ಪರಮ ಪ್ರೇಮ ಬಸ ಕರ ಸಿಸುಚರಿತ ಪುನೀತ ॥ ೧೯೯ ॥**

ಆನಂದಸ್ವರೂಪನೂ, ಮಾಯಾತೀತನೂ, ಜ್ಞಾನ, ವಾಣಿ ಮತ್ತು ಇಂದ್ರಿಯಗಳಿಗೆ ಅತೀತನೂ ಆದ ಆ ಭಗವಂತನು ದಶರಥ-ಕೌಸಲ್ಯೆಯರ ವಾತ್ಸಲ್ಯ-ಪ್ರೇಮಕ್ಕೆ ವಶನಾಗಿ ಪುನೀತವಾದ ಬಾಲಲೀಲೆಗಲನ್ನು ಪ್ರದರ್ಶಿಸುತ್ತಿರುವನು. (ದೋ/೧೯೯)

**ಚೌ – ಎಹಿ ಬಿಧಿ ರಾಮ ಜಗತ ಪಿತು ಮಾತಾ । ಕೋಸಲಪುರ ಬಾಸಿನ್ಹ ಸುಖದಾತಾ ॥**
**ಜಿನ್ಹ ರಘುನಾಥ ಚರನ ರತಿ ಮಾನೀ । ತಿನ್ಹಕೀ ಯಹ ಗತಿ ಪ್ರಗಟ ಭವಾನೀ ॥ ೧ ॥**
**ರಘುಪತಿ ಬಿಮುಖ ಜತನ ಕರ ಕೋರೀ । ಕವನ ಸಕಇ ಭವ ಬಂಧನ ಛೋರೀ ॥**
**ಜೀವ ಚರಾಚರ ಬಸ ಕೈ ರಾಖೇ । ಸೋ ಮಾಯಾ ಪ್ರಭು ಸೋಂ ಭಯ ಭಾಖೇ ॥ ೨ ॥**
**ಭೃಕುಟಿ ಬಿಲಾಸ ನಚಾವಇ ತಾಹೀ । ಅಸ ಪ್ರಭು ಛಾಡಿ ಭಜಿಅ ಕಹು ಕಾಹೀ ॥**
**ಮನ ಕ್ರಮ ಬಚನ ಛಾಡಿ ಚತುರಾಈ । ಭಜತ ಕೃಪಾ ಕರಿಹಹಿಂ ರಘುರಾಈ ॥ ೩ ॥**
**ಎಹಿ ಬಿಧಿ ಸಿಸುಬಿನೋದ ಪ್ರಭು ಕೀನ್ಹಾ । ಸಕಲ ನಗರಬಾಸಿನ್ಹ ಸುಖ ದೀನ್ಹಾ ॥**
**ಲೈ ಉಛಂಗ ಕಬಹುಂಕ ಹಲರಾವೈ । ಕಬಹುಂ ಪಾಲನೇಂ ಘಾಲಿ ಝುಲಾವೈ ॥ ೪ ॥**

ಈ ಪ್ರಕಾರ ಜಗತ್ತಿನ ತಂದೆಯೂ, ತಾಯಿಯೂ ಆದ ಶ್ರೀರಾಮನು ಅಯೋಧ್ಯೆಯ ಎಲ್ಲ ನಿವಾಸಿಗಳಿಗೆ ಆನಂದವನ್ನು ಉಂಟುಮಾಡುತ್ತಿದ್ದನು. ಎಲೈ ಭವಾನೀ! ಶ್ರೀರಾಮಚಂದ್ರನು ತನ್ನ ಪಾದಪದ್ಮಗಳನ್ನು ನಂಬಿದವರ ಪ್ರೇಮಕ್ಕೆ ವಶನಾಗಿ ಅವರಿಗೆ ಪರಮಾನಂದವನ್ನು ಕರುಣಿಸುತ್ತಿದ್ದಾನೆ. ಶ್ರೀರಘುನಾಥನಿಗೆ ವಿಮುಖನಾದ ವ್ಯಕ್ತಿಯು ಕೋಟಿ ಉಪಾಯ ಮಾಡಿದರೂ ಭವಬಂಧನದಿಂದ ಮುಕ್ತನಾಗಲಾರನು. ಚರಾಚರ ಜೀವಿಗಳನ್ನೂ ತನ್ನ ಅಧೀನದಲ್ಲಿಟ್ಟುಕೊಂಡ ಮಾಯಾಶಕ್ತಿಯೂ ಕೂಡ ಪ್ರಭುವಿಗೆ ಭಯಪಡುತ್ತಾಳೆ. ಅವನ ಕಣ್ಸನ್ನೆಯಂತೆ ಕುಣಿಯುತ್ತಾಳೆ. ಇಂತಹ ಪ್ರಭುವನ್ನು ಬಿಟ್ಟು ಬೇರೆ ಯಾರನ್ನೂ ಭಜಿಸಬಹುದು? ಹೇಳು. ಅಭಿಮಾನವನ್ನು ತೊರೆದು, ತ್ರಿಕರಣಶುದ್ಧಿಯಿಂದ, ಅನನ್ಯ ಭಕ್ತಿಯಿಂದ ತನ್ನ ಬಳಿಗೆ ಬರುವವರ ಮೇಲೆ ಶ್ರೀರಘುನಾಥನು ತಪ್ಪದೇ ಕೃಪೆಗೈಯ್ಯುವನು. ಈ ಪ್ರಕಾರ ಪ್ರಭು ರಾಮಚಂದ್ರನು ಬಾಲಲೀಲೆಗಳನ್ನು ತೋರಿ ನಗರನಿವಾಸಿಗಳಿಗೆ

ಸುಖವನ್ನುಂಟುಮಾಡಿದನು. ಕೌಸಲ್ಯೆಯು ಒಮ್ಮೆ ತೊಡೆಯ ಮೇಲಿರಿಸಿಕೊಂಡು ಆಡಿಸಿದರೆ, ಮತ್ತೊಮ್ಮೆ ತೊಟ್ಟಿಲಲ್ಲಿಟ್ಟು ತೂಗುತ್ತಿದ್ದಳು. (ಚೌ/೧-೪)

**ದೋ – ಪ್ರೇಮ ಮಗನ ಕೌಸಲ್ಯಾ ನಿಸಿ ದಿನ ಜಾತ ನ ಜಾನ ।**
**ಸುತ ಸನೇಹ ಬಸ ಮಾತಾ ಬಾಲಚರಿತ ಕರ ಗಾನ ॥ ೨೦೦ ॥**

ಪ್ರೇಮಮಗ್ನಳಾದ ಕೌಸಲ್ಯೆಗೆ ಹಗಲಿರುಳು ಉರುಳಿದುದೇ ಅರಿಯಲಿಲ್ಲ. ಪುತ್ರವಾತ್ಸಲ್ಯಕ್ಕೆ ವಶಳಾಗಿ ಶ್ರೀರಾಮನ ಬಾಲಲೀಲೆಗಳನ್ನು, ಚರಿತ್ರೆಗಳನ್ನು ಗಾನಮಾಡುತ್ತಿದ್ದಳು. (ದೋ/೨೦೦)

**ಚೌ – ಏಕ ಬಾರ ಜನನೀಂ ಅನ್ಹವಾಏ । ಕರಿ ಸಿಂಗಾರ ಪಲನಾಂ ಪೌಢಾಏ ॥**
**ನಿಜ ಕುಲ ಇಷ್ಟದೇವ ಭಗವಾನಾ । ಪೂಜಾ ಹೇತು ಕೀನ್ಹ ಅಸ್ನಾನಾ ॥ ೧ ॥**
**ಕರಿ ಪೂಜಾ ನೈಬೇದ್ಯ ಚಢಾವಾ । ಆಪು ಗಈ ಜಹ್ ಪಾಕ ಬನಾವಾ ॥**
**ಬಹುರಿ ಮಾತು ತಹವಾಂ ಚಲಿ ಆಈ । ಭೋಜನ ಕರತ ದೇಖ ಸುತ ಜಾಈ ॥ ೨ ॥**
**ಗೈ ಜನನೀ ಸಿಸು ಪಹಿಂ ಭಯಭೀತಾ । ದೇಖಾ ಬಾಲ ತಹಾಂ ಪುನಿ ಸೂತಾ ॥**
**ಬಹುರಿ ಆಇ ದೇಖಾ ಸುತ ಸೋಈ । ಹೃದಯಂ ಕಂಪ ಮನ ಧೀರ ನ ಹೋಈ ॥ ೩ ॥**
**ಇಹಾಂ ಉಹಾಂ ದುಇ ಬಾಲಕ ದೇಖಾ । ಮತಿಭ್ರಮ ಮೋರ ಕಿ ಆನ ಬಿಸೇಷಾ ॥**
**ದೇಖಿ ರಾಮ ಜನನೀ ಅಕುಲಾನೀ । ಪ್ರಭು ಹँಸಿ ದೀನ್ಹ ಮಧುರ ಮುಸುಕಾನೀ ॥ ೪ ॥**

ಒಂದು ದಿನ ತಾಯಿ ಕೌಸಲ್ಯೆಯು ರಾಮನಿಗೆ ಸ್ನಾನಮಾಡಿಸಿ, ಶೃಂಗಾರಗೈದು, ತೊಟ್ಟಿಲಿನಲ್ಲಿ ಮಲಗಿಸಿದಳು. ಬಳಿಕ ತಾನೂ ಸ್ನಾನಮಾಡಿ ಇಷ್ಟದೇವರ ಪೂಜೆಗೆ ಸಿದ್ಧಳಾದಳು. ಪೂಜೆ ಮುಗಿಸಿ ದೇವರಿಗೆ ನೈವೇದ್ಯವನ್ನರ್ಪಿಸಿದಳು. ಮತ್ತೆ ಅಡಿಗೆಮನೆಗೆ ಹೋಗಿ ಹಿಂದಿರುಗಿ ಪೂಜಾಮಂದಿರಕ್ಕೆ ಬಂದಳು. ಬಂದು ನೋಡುತ್ತಾಳೆ – ದೇವರಿಗೆ ಅರ್ಪಿಸಿದ ನೈವೇದ್ಯವನ್ನು ಶ್ರೀರಾಮನು ಭುಂಜಿಸುತ್ತಿರುವನು. ಆ ದೃಶ್ಯವನ್ನು ಕಂಡು ತೊಟ್ಟಿಲಲ್ಲಿ ಮಲಗಿದ್ದ ಮಗು ಇಲ್ಲಿಗೆ ಹೇಗೆ ಬಂತು? ಎಂದು ಭಯಗೊಂಡು, ಅಚ್ಚರಿಯಿಂದ ಮಗುವಿನ ಬಳಿಗೆ ಹೋದಾಗ ರಾಮನು ಮೊದಲಿನಂತೆ ತೊಟ್ಟಿಲಲ್ಲಿ ಮಲಗಿದ್ದನು. ಪುನಃ ಪೂಜಾಮಂದಿರಕ್ಕೆ ಬಂದು ನೋಡಿದರೆ ತನ್ನ ಮಗು ರಾಮನು ಅಲ್ಲೇ ಇದ್ದು, ನೈವೇದ್ಯವನ್ನು ಉಣ್ಣುತ್ತಿದ್ದಾನೆ. ಇದರಿಂದ ಅವಳ ಹೃದಯ ನಡುಗಿತು. ಮನಸ್ಸಿನ ಧೈರ್ಯ ಕುಸಿಯಿತು. ಅವಳು ಯೋಚಿಸತೊಡಗಿದಳು – ''ಇದೇನಿದು? ಇಲ್ಲಿ ಒಬ್ಬ ಮತ್ತು ಅಲ್ಲಿ ಮತ್ತೊಬ್ಬ ಎರಡು ರಾಮರನ್ನು ಕಾಣುತ್ತಿದ್ದೇನಲ್ಲ! ಇದು ಸಂಭವವೇ? ಅಥವಾ ಇದು ನನ್ನ ಭ್ರಮೆಯೇ? ದೈವಲೀಲೆಯೇ? ತಾಯಿಯು ಗಾಬರಿಗೊಂಡಿರುವುದನ್ನು ಕಂಡು ಪ್ರಭುವು ಮುಗುಳ್ನಗೆಯನ್ನು ಬೀರಿದನು. (ಚೌ/೧-೪)

**ದೋ – ದೆಖರಾವಾ ಮಾತಹಿ ನಿಜ ಅದ್ಭುತ ರೂಪ ಅಖಂಡ ।**
**ರೋಮ ರೋಮ ಪ್ರತಿ ಲಾಗೇ ಕೋಟಿ ಕೋಟಿ ಬ್ರಹ್ಮಂಡ ॥ ೨೦೧ ॥**

ಅನಂತರ ಅವನು ತಾಯಿಗೆ ತನ್ನ ಅದ್ಭುತವಾದ ಅಖಂಡರೂಪವನ್ನು ತೋರಿಸಿದನು. ಆ ರೂಪದ ಒಂದೊಂದು ರೋಮದಲ್ಲಿಯೂ ಕೋಟಿ-ಕೋಟಿ ಬ್ರಹ್ಮಾಂಡಗಳಿದ್ದವು. (ದೋ/೨೦೧)

**ಚೌ – ಅಗನಿತ ರಬಿ ಸಸಿ ಸಿವ ಚತುರಾನನ । ಬಹು ಗಿರಿ ಸರಿತ ಸಿಂಧು ಮಹಿ ಕಾನನ ॥**
**ಕಾಲ ಕರ್ಮ ಗುನ ಗ್ಯಾನ ಸುಭಾಊ । ಸೋಉ ದೇಖಾ ಜೋ ಸುನಾ ನ ಕಾಊ ॥ ೧ ॥**
**ದೇಖೀ ಮಾಯಾ ಸಬ ಬಿಧಿ ಗಾಢೀ । ಅತಿ ಸಭೀತ ಜೋರೇಂ ಕರ ಠಾಢೀ ॥**
**ದೇಖಾ ಜೀವ ನಚಾವಇ ಜಾಹೀ । ದೇಖೀ ಭಗತಿ ಜೊ ಛೋರಇ ತಾಹೀ ॥ ೨ ॥**
**ತನ ಪುಲಕಿತ ಮುಖ ಬಚನ ನ ಆವಾ । ನಯನ ಮೂದಿ ಚರನನಿ ಸಿರು ನಾವಾ ॥**
**ಬಿಸಮಯವಂತ ದೇಖಿ ಮಹತಾರೀ । ಭಏ ಬಹುರಿ ಸಿಸುರೂಪ ಖರಾರೀ ॥ ೩ ॥**
**ಅಸ್ತುತಿ ಕರಿ ನ ಜಾಇ ಭಯ ಮಾನಾ । ಜಗತ ಪಿತಾ ಮೈಂ ಸುತ ಕರಿ ಜಾನಾ ॥**
**ಹರಿ ಜನನೀ ಬಹುಬಿಧಿ ಸಮುಝಾಈ । ಯಹ ಜನಿ ಕತಹುಂ ಕಹಸಿ ಸುನು ಮಾಈ ॥ ೪ ॥**

ಆ ರೂಪದಲ್ಲಿ ಗಣನೆಯಿಲ್ಲದ ಸೂರ್ಯ-ಚಂದ್ರರು, ಪರಮೇಶ್ವರನು, ಬ್ರಹ್ಮಾದಿದೇವತೆಗಳು, ಅನೇಕ ಪರ್ವತಗಳು, ನದಿಗಳು, ಸಮುದ್ರಗಳು, ಪೃಥ್ವಿ, ವನಗಳು, ಕಾಲ, ಕರ್ಮ, ಗುಣ, ಜ್ಞಾನ, ಸ್ವಭಾವ ಮುಂತಾದವುಗಳನ್ನೂ ಹಾಗೂ ಎಂದೂ

ಕಾಣದ-ಕೇಳದ ಇನ್ನೂ ಅಸಂಖ್ಯ ಪದಾರ್ಥಗಳನ್ನು ಕೌಸಲ್ಯೆಯು ನೋಡಿದಳು. ಸರ್ವಶಕ್ತಿ ಸ್ವರೂಪಿಣಿಯಾದ ಮಾಯೆಯು ಭಯದಿಂದ ಕೈ ಜೋಡಿಸಿಕೊಂಡು ಅವನ ಮುಂದೆ ನಿಂತಿದ್ದಳು. ಮಾಯೆಗೆ ವಶರಾಗಿ ಅವಳು ಕುಣಿಸಿದಂತೆ ಕುಣಿಯುವ ಜೀವರನ್ನು ನೋಡಿದಳು. ಜೀವಿಗಳನ್ನು ಮಾಯೆಯಿಂದ ಬಿಡಿಸುವ ಭಕ್ತಿಯನ್ನೂ ಕೂಡ ಅವಳು ದರ್ಶಿಸಿದಳು. ಆಕೆಯ ಶರೀರ ಪುಳಕಿತವಾಯಿತು. ಬಾಯಿಯಿಂದ ಮಾತು ಹೊರಡದಾಯಿತು. ಆಗ ಅವಳು ಕಂಗಳನ್ನು ಮುಚ್ಚಿ, ಶ್ರೀರಾಮಚಂದ್ರನ ಚರಣಗಳಲ್ಲಿ ತಲೆವಾಗಿದಳು. ತಾಯಿಯು ಅಚ್ಚರಿಗೊಂಡಿರುವುದನ್ನು ಕಂಡು ಖರಾರಿಯಾದ ಶ್ರೀರಾಮನು ಪುನಃ ತಾನು ಬಾಲರೂಪಿಯಾದನು. ಅವಳು ಕಣ್ಣುಬಿಟ್ಟು ನೋಡಿದಾಗ ತನ್ನ ಇದಿರು ಮೊದಲಿನಂತೆ ಬಾಲರಾಮನನ್ನು ನೋಡಿದಳು. ಅವಳು ಸಂಭ್ರಮಾಶ್ಚರ್ಯಗಳಿಂದ ಅವನನ್ನು ಸ್ತುತಿಸಲೂ ಅಸಮರ್ಥಳಾಗಿದ್ದಳು. ''ಜಗತ್ಪಿತನಾದ ಪರಮಾತ್ಮನನ್ನು ನಾನು ಮಗನೆಂದು ಬಗೆದೆನಲ್ಲ!'' ಎಂದು ಅಂಜಿದಳು. ಶ್ರೀಹರಿಯು ತಾಯಿಯನ್ನು ಅನೇಕರೀತಿಯಿಂದ ಸಮಾಧಾನಮಾಡಿ – 'ಅಮ್ಮಾ! ಇದನ್ನು ಎಲ್ಲೂ ಹೇಳಬೇಡ' ಎಂದು ಹೇಳಿದನು. (ಚೌ/೧-೪)

**ದೋ – ಬಾರ ಬಾರ ಕೋಸಲ್ಯಾ ಬಿನಯ ಕರಇ ಕರ ಜೋರಿ ।**
**ಅಬ ಜನಿ ಕಬಹೂಁ ಬ್ಯಾಪೈ ಪ್ರಭು ಮೊಹಿ ಮಾಯಾ ತೋರಿ ॥ ೨೦೨ ॥**

ಕೌಸಲ್ಯೆಯು ಪದೇ-ಪದೇ ವಿನಯದಿಂದ ಕೈ ಜೋಡಿಸಿಕೊಂಡು – 'ಪ್ರಭುವೇ! ನಿನ್ನ ಮಾಯೆಯು ಮುಂದೆಂದೂ ನನಗೆ ಕವಿಯದಿರಲಿ' ಎಂದು ಪ್ರಾರ್ಥಿಸಿದಳು. (ದೋ/೨೦೨)

**ಚೌ – ಬಾಲಚರಿತ ಹರಿ ಬಹುಬಿಧಿ ಕೀನ್ಹಾ । ಅತಿ ಅನಂದ ದಾಸನ್ಹ ಕಹಁ ದೀನ್ಹಾ ॥**
**ಕಛುಕ ಕಾಲ ಬೀತೇಁ ಸಬ ಭಾಈ । ಬಡೇ ಭಏ ಪರಿಜನ ಸುಖದಾಈ ॥ ೧ ॥**
**ಚೂಡಾಕರನ ಕೀನ್ಹ ಗುರು ಜಾಈ । ಬಿಪ್ರನ್ಹ ಪುನಿ ದಛಿನಾ ಬಹು ಪಾಈ ॥**
**ಪರಮ ಮನೋಹರ ಚರಿತ ಅಪಾರಾ । ಕರತ ಫಿರತ ಚಾರಿಉ ಸುಕುಮಾರಾ ॥ ೨ ॥**
**ಮನ ಕ್ರಮ ಬಚನ ಅಗೋಚರ ಜೋಈ । ದಸರಥ ಅಜಿರ ಬಿಚರ ಪ್ರಭು ಸೋಈ ॥**
**ಭೋಜನ ಕರತ ಬೋಲ ಜಬ ರಾಜಾ । ನಹಿಁ ಆವತ ತಜಿ ಬಾಲ ಸಮಾಜಾ ॥ ೩ ॥**
**ಕೌಸಲ್ಯಾ ಜಬ ಬೋಲನ ಜಾಈ । ಠುಮುಕು ಠುಮುಕು ಪ್ರಭು ಚಲಹಿಁ ಪರಾಈ ॥**
**ನಿಗಮ ನೇತಿ ಸಿವ ಅಂತ ನ ಪಾವಾ । ತಾಹಿ ಧರೈ ಜನನೀ ಹಠಿ ಧಾವಾ ॥ ೪ ॥**
**ಧೂಸರ ಧೂರಿ ಭರೇಁ ತನು ಆಏ । ಭೂಪತಿ ಬಿಹಸಿ ಗೋದ ಬೈಠಾಏ ॥ ೫ ॥**

ಶ್ರೀಹರಿಯು ರಾಮನಾಗಿ ಗೈದ ಬಾಲಲೀಲೆಗಳಿಂದ ತನ್ನ ಸೇವಕರಿಗೆ ಮಿಗಿಲಾದ ಆನಂದವನ್ನು ನೀಡಿದ. ಕೆಲಕಾಲ ಕಳೆದ ಮೇಲೆ ನಾಲ್ಕೂಮಂದಿ ಸೋದರರು ದೊಡ್ಡವರಾಗಿ, ಪ್ರಿಯಜನರಿಗೆ, ಪರಿಜನರಿಗೆ, ಪುರಜನರಿಗೆ ಸುಖವನ್ನು ನೀಡಿದರು. ಪ್ರಾಪ್ತವಯಸ್ಕರಾದಾಗ ಗುರು ವಸಿಷ್ಠರು ಅವರಿಗೆ ಚೂಡಾಕರ್ಮ (ಚೌಲ) ಸಂಸ್ಕಾರವನ್ನು ಮಾಡಿಸಿದರು. ಬ್ರಾಹ್ಮಣರಿಗೆ ಹೇರಳವಾದ ದಕ್ಷಿಣೆ ಕೊಡಲಾಯಿತು. ಆ ನಾಲ್ವರೂ ರಾಜಕುಮಾರರು ವಿವಿಧ ವಿನೋದ ಕ್ರೀಡೆಗಳನ್ನಾಡುತ್ತಾ ಓಡಾಡಿಕೊಂಡಿದ್ದರು. ಮನ, ವಚನ, ಕರ್ಮಗಳಿಗೆ ಅಗೋಚರನಾದ ಪ್ರಭುವು ದಶರಥನ ಅರಮನೆಯಂಗಳದಲ್ಲಿ ಅಡ್ಡಾಡುತ್ತಾ ಆಟವಾಡುತ್ತಿದ್ದಾನೆ. ಊಟದ ಹೊತ್ತಿನಲ್ಲಿ ದಶರಥನು ಊಟಕ್ಕಾಗಿ ಎಷ್ಟು ಕರೆದರೂ ಅವರು ತಮ್ಮ ಗೆಳೆಯರನ್ನು ತೊರೆದು ಬರಲೊಲ್ಲರು. ಕೌಸಲ್ಯೆಯು ಕರೆಯಲು ಹೋದಾಗ ಪ್ರಭುವು ಬೆಡಗಿನಿಂದ ಓಡಿಹೋಗುತ್ತಾನೆ. ವೇದಗಳು 'ನೇತಿ-ನೇತಿ' ಎಂದು ಬಣ್ಣಿಸುವವನನ್ನೂ, ಶಿವನೂ ಕೂಡ ಅಂತ್ಯವನ್ನು ಕಾಣದಿರುವವನನ್ನು ತಾಯಿಯು ಹಟದಿಂದ ಹಿಡಿಯಲು ಓಡುತ್ತಿದ್ದಾಳೆ. ಕೊನೆಗೆ ಮೈಗೆ ಧೂಳು ಮೆತ್ತಿಕೊಂಡು ಅವರೇ ಬಳಿಗೆ ಬಂದಾಗ ದಶರಥನು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡನು. (ಚೌ/೧-೫)

**ದೋ – ಭೋಜನ ಕರತ ಚಪಲ ಚಿತ ಇತ ಉತ ಅವಸರು ಪಾಇ ।**
**ಭಾಜಿ ಚಲೇ ಕಿಲಕತ ಮುಖ ದಧಿ ಓದನ ಲಪಟಾಇ ॥ ೨೦೩ ॥**

ಊಟಮಾಡುವಾಗಲಂತೂ ಆ ಮಕ್ಕಳ ಚಿತ್ತಚಾಂಚಲ್ಯ ಹೇಳತೀರದು. ಹೇಗೋ ಬಾಯಿಗೆ ಮೊಸರನ್ನವನ್ನು ತುರುಕಿಕೊಂಡು ಕಿಲಕಿಲಗುಟ್ಟುತ್ತಾ ಅತ್ತಿತ್ತ ಓಡುತ್ತಾರೆ. (ದೋ/೨೦೩)

**ಚೌ – ಬಾಲಚರಿತ ಅತಿ ಸರಲ ಸುಹಾಏ । ಸಾರದ ಸೇಷ ಸಂಭು ಶ್ರುತಿ ಗಾಏ ॥**
**ಜಿನ್ಹ ಕರ ಮನ ಇನ್ಹ ಸನ ನಹಿಁ ರಾತಾ । ತೇ ಜನ ಬಂಚಿತ ಕಿಏ ಬಿಧಾತಾ ॥ ೧ ॥**

**ಭಏ ಕುಮಾರ ಜಬಹಿಂ ಸಬ ಭ್ರಾತಾ । ದೀನ್ಹ ಜನೇಊ ಗುರು ಪಿತು ಮಾತಾ ॥**
**ಗುರಗೃಹ್ ಗಏ ಪಢನ ರಘುರಾಈ । ಅಲಪ ಕಾಲ ಬಿದ್ಯಾ ಸಬ ಆಈ ॥ ೨ ॥**
**ಜಾಕೀ ಸಹಜ ಸ್ವಾಸ ಶ್ರುತಿ ಚಾರೀ । ಸೋ ಹರಿ ಪಢ ಯಹ ಕೌತುಕ ಭಾರೀ ॥**
**ಬಿದ್ಯಾ ಬಿನಯ ನಿಪುನ ಗುನ ಸೀಲಾ । ಖೇಲಹಿಂ ಖೇಲ ಸಕಲ ನೃಪಲೀಲಾ ॥ ೩ ॥**
**ಕರತಲ ಬಾನ ಧನುಷ ಅತಿ ಸೋಹಾ । ದೇಖತ ರೂಪ ಚರಾಚರ ಮೋಹಾ ॥**
**ಜಿನ್ಹ ಬೀಥಿನ್ಹ ಬಿಹರಹಿಂ ಸಬ ಭಾಈ । ಥಕಿತ ಹೋಹಿಂ ಸಬ ಲೋಗ ಲುಗಾಈ ॥ ೪ ॥**

ಶ್ರೀರಾಮನ ಬಾಲಲೀಲೆಗಳು ತುಂಬಾ ಸರಳ, ಸುಂದರ ಹಾಗೂ ಮನೋಜ್ಞವಾಗಿವೆ. ಆ ಲೀಲೆಗಳನ್ನು ವಾಗ್ದೇವಿಯು, ಶೇಷನು, ಪರಶಿವನು, ವೇದಗಳು ತನ್ಮಯರಾಗಿ ಹಾಡುತ್ತಿದ್ದಾರೆ. ಈ ಬಾಲಲೀಲೆಗಳಲ್ಲಿ ಅನುರಕ್ತನಾಗದವನ ಜೀವನವು ವ್ಯರ್ಥವೆಂದೇ ವಿಧಾತನ ಅಭಿಮತವು. ಮಕ್ಕಳು ಕೌಮಾರಾವಸ್ಥೆಯನ್ನು ಮುಟ್ಟಿದಾಗ ಗುರುಗಳು ಹಾಗೂ ತಂದೆ-ತಾಯಿಯರು ಸೇರಿ ಅವರಿಗೆ ಉಪನಯನ ಸಂಸ್ಕಾರ ನಡೆಸಿದರು. ಶ್ರೀರಘುನಾಥನು ತಮ್ಮಂದಿರನ್ನು ಒಡಗೊಂಡು ವಿದ್ಯಾಭ್ಯಾಸಕ್ಕಾಗಿ ಗುರುಕುಲಕ್ಕೆ ತೆರಳಿದನು. ಅಲ್ಪಕಾಲದಲ್ಲೇ ಅವರು ಸಕಲವಿದ್ಯಾ ಪಾರಂಗತರಾದರು. ನಾಲ್ಕು ವೇದಗಳೇ ಉಸಿರಾಗಿದ್ದ ಶ್ರೀರಾಘವನು ಈಗ ವೇದಗಳನ್ನು ಕಲಿಯಬೇಕಾಯಿತು. ಇದಕ್ಕಿಂತ ಮಿಗಿಲಾದ ಕೌತುಕವಿದೆಯೇ? ನಾಲ್ವರೂ ಸೋದರರು ವಿದ್ಯೆ, ವಿನಯ, ಗುಣ-ಶೀಲಗಳಲ್ಲಿ ನಿಪುಣರಾದರು. ಅವರೆಲ್ಲರು ನೃಪಲೀಲೆಯ ಆಟಗಳನ್ನೇ ಆಡುತ್ತಾರೆ. ಅವರ ಕೈಗಳಲ್ಲಿ ಬಿಲ್ಲು ಬಾಣಗಳು ಅತ್ಯಂತ ಮನೋಹರವಾಗಿ ಶೋಭಿಸುತ್ತಿದ್ದವು. ಚರಾಚರಸೃಷ್ಟಿಯೆಲ್ಲವೂ ಅವರ ರೂಪ ಸೌಂದರ್ಯವನ್ನು ಕಂಡು ಮೋಹಪರವಶವಾಗುತ್ತಿತ್ತು. ಅವರು ರಾಜಬೀದಿಗಳಲ್ಲಿ ವಿಹರಿಸುತ್ತಿರುವುದನ್ನು ನೋಡಿ ನಗರವಾಸಿಗಳೆಲ್ಲರೂ ಮುಗ್ಧರಾಗುತ್ತಿದ್ದು, ಪ್ರೇಮವಿಹ್ವಲರಾಗಿ ಎಲ್ಲಿಂದರಲ್ಲೇ ನಿಂತುಬಿಡುತ್ತಿದ್ದರು. (ಚೌ/೧-೪)

**ದೋ – ಕೋಸಲಪುರ ಬಾಸೀ ನರ ನಾರಿ ಬೃದ್ಧ ಅರು ಬಾಲ ।**
**ಪ್ರಾನಹು ತೇ ಪ್ರಿಯ ಲಾಗತ ಸಬ ಕಹುಂ ರಾಮ ಕೃಪಾಲ ॥ ೨೦೪ ॥**

ಅಯೋಧ್ಯೆಯಲ್ಲಿರುವ ಸ್ತ್ರೀಯರೂ, ಪುರುಷರೂ, ಬಾಲಕರೂ, ವೃದ್ಧರೂ ಹೀಗೆ ಎಲ್ಲರೂ ಶ್ರೀರಾಮಚಂದ್ರನನ್ನು ತಮ್ಮ ಪ್ರಾಣಗಳಿಂದಲೂ ಕೂಡ ಹೆಚ್ಚು ಪ್ರೀತಿಸುತ್ತಿದ್ದರು. (ದೋ/೨೦೪)

**ಚೌ – ಬಂಧು ಸಖಾ ಸಂಗ ಲೇಹಿಂ ಬೊಲಾಈ । ಬನ ಮೃಗಯಾ ನಿತ ಖೇಲಹಿಂ ಜಾಈ ॥**
**ಪಾವನ ಮೃಗ ಮಾರಹಿಂ ಜಿಯಂ ಜಾನೀ । ದಿನ ಪ್ರತಿ ನೃಪಹಿ ದೆಖಾವಹಿಂ ಆನೀ ॥ ೧ ॥**
**ಜೇ ಮೃಗ ರಾಮ ಬಾನ ಕೇ ಮಾರೇ । ತೇ ತನು ತಜಿ ಸುರಲೋಕ ಸಿಧಾರೇ ॥**
**ಅನುಜ ಸಖಾ ಸಂಗ ಭೋಜನ ಕರಹೀಂ । ಮಾತು ಪಿತಾ ಅಗ್ಯಾ ಅನುಸರಹೀಂ ॥ ೨ ॥**
**ಜೆಹಿ ಬಿಧಿ ಸುಖೀ ಹೋಹಿಂ ಪುರ ಲೋಗಾ । ಕರಹಿಂ ಕೃಪಾನಿಧಿ ಸೋಇ ಸಂಜೋಗಾ ॥**
**ಬೇದ ಪುರಾನ ಸುನಹಿಂ ಮನ ಲಾಈ । ಆಪು ಕಹಹಿಂ ಅನುಜನ್ಹ ಸಮುಝಾಈ ॥ ೩ ॥**
**ಪ್ರಾತಕಾಲ ಉಠಿ ಕೈ ರಘುನಾಥಾ । ಮಾತು ಪಿತಾ ಗುರು ನಾವಹಿಂ ಮಾಥಾ ॥**
**ಆಯಸು ಮಾಗಿ ಕರಹಿಂ ಪುರ ಕಾಜಾ । ದೇಖಿ ಚರಿತ ಹರಷಇ ಮನ ರಾಜಾ ॥ ೪ ॥**

ಶ್ರೀರಾಮಚಂದ್ರನು ತನ್ನ ಸೋದರರೊಡನೆ ಹಾಗೂ ಇಷ್ಟ-ಮಿತ್ರರ ಜೊತೆಯಲ್ಲಿ ಪ್ರತಿದಿನವೂ ಕಾಡಿಗೆ ಹೋಗಿ, ಮೋಕ್ಷಕ್ಕೆ ಅರ್ಹರಾದ ಮೃಗಗಳನ್ನು ಬೇಟೆಯಾಡುತ್ತಿದ್ದನು. (ಶಾಸ್ತ್ರದಲ್ಲಿ ಕ್ಷತ್ರಿಯರಿಗೆ ಹೇಳಿದ ರೀತಿಯಿಂದ ಬೇಟೆಯಾಡಬಹುದಾದ ಮೃಗಗಳನ್ನು ಮಾತ್ರ ಅವರು ಬೇಟೆಯಾಡುತ್ತಿದ್ದರು.) ರಾಮಬಾಣಕ್ಕೆ ಗುರಿಯಾಗಿ ಮೃತಿಯನ್ನೈದಿದ ಮೃಗಗಳನ್ನು ದಶರಥನು ನೋಡಿ, ಆತನ ಕೌಶಲ್ಯವನ್ನು ಕಂಡು ತೃಪ್ತಿಪಡುತ್ತಿದ್ದನು. ಶ್ರೀರಾಮಬಾಣದಿಂದ ಅಸುನೀಗಿದ ಪ್ರಾಣಿಗಳು ನೇರವಾಗಿ ಪರಮಪದವನ್ನು ಪಡೆಯುತ್ತಿದ್ದರು. ಶ್ರೀರಾಮಚಂದ್ರನು ತಮ್ಮ ತಮ್ಮಂದಿರೊಡಗೂಡಿಯೇ ಊಟಮಾಡುತ್ತಿದ್ದನು. ಅವನು ತಂದೆ-ತಾಯಿಯರ ಅಪ್ಪಣೆಯನ್ನೂ ಶಿರಸಾವಹಿಸಿ ನಡೆಸುತ್ತಿದ್ದನು. ತನ್ನ ಪ್ರಜೆಗಳೆಲ್ಲರಿಗೂ ಸುಖಗಳನ್ನು ಕೊಡುವಂತಹ ಕಾರ್ಯಗಳನ್ನೇ ಮಾಡುತ್ತಿದ್ದನು. ಅವನು ವೇದ ಪುರಾಣಗಳನ್ನು ಶ್ರವಣಿಸಿ, ಅವುಗಳ ಅಂತರಾರ್ಥವನ್ನು ಸೋದರರಿಗೆ ವಿವರಿಸುತ್ತಿದ್ದನು. ಶ್ರೀರಘುನಾಥನು ಪ್ರಾತಃಕಾಲದಲ್ಲಿ ಎದ್ದು ತಂದೆ-ತಾಯಿಗಳಿಗೆ, ಗುರುಗಳಿಗೆ ವಂದಿಸುತ್ತಿದ್ದನು. ಅವರ ಅಪ್ಪಣೆಯಂತೆ ಆಡಳಿತದ ಕಾರ್ಯಕಲಾಪಗಳನ್ನು ನೋಡಿಕೊಳ್ಳುತ್ತಿದ್ದನು. ಅವನ ನಿತ್ಯಕಾರ್ಯಕ್ರಮದ ರೀತಿಗಳನ್ನು ಕಂಡು ರಾಜನು ಹಿರಿಹಿರಿ ಹಿಗ್ಗುತ್ತಿದನು. (ಚೌ/೧-೪)

**ದೋ – ಬ್ಯಾಪಕ ಅಕಲ ಅನೀಹ ಅಜ ನಿರ್ಗುನ ನಾಮ ನ ರೂಪ ।**
**ಭಗತ ಹೇತು ನಾನಾ ಬಿಧಿ ಕರತ ಚರಿತ್ರ ಅನೂಪ ॥ ೨೦೫ ॥**

ಸರ್ವವ್ಯಾಪಿಯೂ, ಅವಿಭಾಜ್ಯನೂ, ಇಚ್ಛಾರಹಿತನೂ, ಅಜನೂ, ನಿರ್ಗುಣನೂ, ನಾಮರೂಪರಹಿತನೂ ಆದ ಪರಮಾತ್ಮ ಶ್ರೀರಾಮನು ತನ್ನ ಭಕ್ತರಿಗಾಗಿ ನಾನಾವಿಧವಾದ ಅಲೌಕಿಕ ಲೀಲೆಗಳನ್ನು ಮಾಡುತ್ತಾನೆ. (ದೋ/೨೦೫)

## ವಿಶ್ವಾಮಿತ್ರರ ಯಾಗ ಸಂರಕ್ಷಣ

**ಚೌ – ಯಹ ಸಬ ಚರಿತ ಕಹಾ ಮೈಂ ಗಾಈ । ಆಗಿಲಿ ಕಥಾ ಸುನಹು ಮನ ಲಾಈ ॥**
**ಬಿಸ್ವಾಮಿತ್ರ ಮಹಾಮುನಿ ಗ್ಯಾನೀ । ಬಸಹಿಂ ಬಿಪಿನ ಸುಭ ಆಶ್ರಮ ಜಾನೀ ॥ ೧ ॥**
**ಜಹँ ಜಪ ಜಗ್ಯ ಜೋಗ ಮುನಿ ಕರಹೀಂ । ಅತಿ ಮಾರಿಚ ಸುಬಾಹುಹಿ ಡರಹೀಂ ॥**
**ದೇಖತ ಜಗ್ಯ ನಿಸಾಚರ ಧಾವಹಿಂ । ಕರಹಿಂ ಉಪದ್ರವ ಮುನಿ ದುಖ ಪಾವಹಿಂ ॥ ೨ ॥**
**ಗಾಧಿತನಯ ಮನ ಚಿಂತಾ ಬ್ಯಾಪೀ । ಹರಿ ಬಿನು ಮರಹಿಂ ನ ನಿಸಿಚರ ಪಾಪೀ ॥**
**ತಬ ಮುನಿಬರ ಮನ ಕೀನ್ಹ ಬಿಚಾರಾ । ಪ್ರಭು ಅವತರೆಉ ಹರನ ಮಹಿ ಭಾರಾ ॥ ೩ ॥**
**ಏಹೂँ ಮಿಸ ದೇಖೌं ಪದ ಜಾಈ । ಕರಿ ಬಿನತೀ ಆನೌं ದೋಉ ಭಾಈ ॥**
**ಗ್ಯಾನ ಬಿರಾಗ ಸಕಲ ಗುನ ಅಯನಾ । ಸೋ ಪ್ರಭು ಮೈಂ ದೇಖಬ ಭರಿ ನಯನಾ ॥ ೪ ॥**

ಭವಾನೀ! ಈ ಕಥೆಯನ್ನು ಇಷ್ಟರವರೆಗೆ ಹಾಡಿ ಹೇಳಿದೆ. ಮುಂದಿನ ಕಥೆಯನ್ನು ಶ್ರದ್ಧೆಯಿಂದ ಆಲಿಸು. ಜ್ಞಾನಿಗಳಾದ ವಿಶ್ವಾಮಿತ್ರಮಹಾಮುನಿಗಳು ಕಾಡಿನಲ್ಲಿ ಆಶ್ರಮವನ್ನು ಕಟ್ಟಿಕೊಂಡು ವಾಸಿಸುತ್ತಿದ್ದರು. ಅಲ್ಲಿ ಅವರು ಜಪ-ತಪ, ಯೋಗ, ಯಜ್ಞಗಳನ್ನು ಆಚರಿಸುತ್ತಾ ಇದ್ದರು. ಆದರೆ ಅಲ್ಲಿ ಅವರು ಮಾರೀಚ ಮತ್ತು ಸುಬಾಹು ಎಂಬ ರಾಕ್ಷಸರಿಂದ ತುಂಬಾ ಭಯಪಡುತ್ತಿದ್ದರು. ಯಜ್ಞ ಕಂಡಕೂಡಲೇ ಆ ರಾಕ್ಷಸರು ಓಡಿ ಬಂದು ಕಾಟ ಕೊಡುತ್ತಿದ್ದುದರಿಂದ ಮುನಿಗಳು ತುಂಬಾ ದುಃಖಿತರಾಗುತ್ತಿದ್ದರು. ಈ ಪಾಪಿ ರಾಕ್ಷಸರು ಹರಿಯಿಂದಲ್ಲದೆ ಬೇರಾರಿಂದಲೂ ಸಾಯತಕ್ಕವರಲ್ಲ, ಎಂದು ಗಾಧಿತನಯ, ವಿಶ್ವಾಮಿತ್ರರು ಆಲೋಚಿಸಿ, 'ಭೂಭಾರವನ್ನು ಪರಿಹರಿಸಲು ಶ್ರೀಹರಿಯು ಅಯೋಧ್ಯೆಯಲ್ಲಿ ಶ್ರೀರಾಮನಾಗಿ ಈಗ ಅವತರಿಸಿರುವನು. ಈ ನೆಪದಿಂದ ನಾನು ಹೋಗಿ ಅವರ ಚರಣದರ್ಶನ ಮಾಡುವೆನು ಹಾಗೂ ರಾಜನಲ್ಲಿ ವಿನಂತಿಗೈದು ಈ ಇಬ್ಬರು ಸೋದರರರನ್ನೂ ಕರೆತಂದು, ಈ ರಾಕ್ಷಸರ ಬಾಧೆಯಿಂದ ಬಿಡುಗಡೆಹೊಂದುವೆ. ಜ್ಞಾನ, ವೈರಾಗ್ಯ, ಸದ್ಗುಣಗಳ ನಿಧಿಯಾದ ಪ್ರಭುವನ್ನು ಕಣ್ಣಾರೆ ಕಾಣುವೆ. ಆಹಾ! ಭಗವಾನ್ ಶ್ರೀರಾಮಚಂದ್ರನ ದರ್ಶನ ಪಡೆಯುವುದು ನನ್ನ ಸೌಭಾಗ್ಯವೇ ಸರಿ. (ಚೌ/೧-೪)

**ದೋ – ಬಹುಬಿಧಿ ಕರತ ಮನೋರಥ ಜಾತ ಲಾಗಿ ನಹಿಂ ಬಾರ ।**
**ಕರಿ ಮಜ್ಜನ ಸರಊ ಜಲ ಗಏ ಭೂಪ ದರಬಾರ ॥ ೨೦೬ ॥**

ಈ ಪ್ರಕಾರ ಅನೇಕ ಮನೋರಥಗಳನ್ನು ಮಾಡುತ್ತಾ ವಿಶ್ವಾಮಿತ್ರರಿಗೆ ಅಯೋಧ್ಯೆಗೆ ಬರಲು ತಡವಾಗಲಿಲ್ಲ. ಶರಯೂ ನದಿಯಲ್ಲಿ ಮಿಂದು, ರಾಜಸಭೆಗೆ ಆಗಮಿಸಿದರು. (ದೋ/೨೦೬)

**ಚೌ – ಮುನಿ ಆಗಮನ ಸುನಾ ಜಬ ರಾಜಾ । ಮಿಲನ ಗಯಉ ಲೈ ಬಿಪ್ರ ಸಮಾಜಾ ॥**
**ಕರಿ ದಂಡವತ ಮುನಿಹಿ ಸನಮಾನೀ । ನಿಜ ಆಸನ ಬೈಠಾರೆನ್ಹಿ ಆನೀ ॥ ೧ ॥**
**ಚರನ ಪಖಾರಿ ಕೀನ್ಹಿ ಅತಿ ಪೂಜಾ । ಮೋ ಸಮ ಆಜು ಧನ್ಯ ನಹಿಂ ದೂಜಾ ॥**
**ಬಿಬಿಧ ಭಾँತಿ ಭೋಜನ ಕರವಾವಾ । ಮುನಿಬರ ಹೃದಯँ ಹರಷ ಅತಿ ಪಾವಾ ॥ ೨ ॥**
**ಪುನಿ ಚರನನಿ ಮೇಲೇ ಸುತ ಚಾರೀ । ರಾಮ ದೇಖಿ ಮುನಿ ದೇಹ ಬಿಸಾರೀ ॥**
**ಭಏ ಮಗನ ದೇಖತ ಮುಖ ಸೋಭಾ । ಜನು ಚಕೋರ ಪೂರನ ಸಸಿ ಲೋಭಾ ॥ ೩ ॥**
**ತಬ ಮನ ಹರಷಿ ಬಚನ ಕಹ ರಾಊ । ಮುನಿ ಅಸ ಕೃಪಾ ನ ಕೀನ್ಹಿಹು ಕಾಊ ॥**
**ಕೆಹಿ ಕಾರನ ಆಗಮನ ತುಮ್ಹಾರಾ । ಕಹಹು ಸೊ ಕರತ ನ ಲಾವಉँ ಬಾರಾ ॥ ೪ ॥**
**ಅಸುರ ಸಮೂಹ ಸತಾವಹಿಂ ಮೋಹೀ । ಮೈಂ ಜಾಚನ ಆಯಉँ ನೃಪ ತೋಹೀ ॥**
**ಅನುಜ ಸಮೇತ ದೇಹು ರಘುನಾಥಾ । ನಿಸಿಚರ ಬಧ ಮೈಂ ಹೋಬ ಸನಾಥಾ ॥ ೫ ॥**

ಮುನೀಶ್ವರರ ಆಗಮನವನ್ನು ತಿಳಿದುಕೊಂಡು ದಶರಥ ಮಹಾರಾಜನು ಬ್ರಾಹ್ಮಣರೊಡನೆ ಎದಿರ್ಗೊಂಡು, ಸಾಷ್ಟಾಂಗ ನಮಸ್ಕಾರಮಾಡಿ, ಅವರನ್ನು ಕರೆತಂದು ಉನ್ನತ ಆಸನದಲ್ಲಿ ಕುಳ್ಳಿರಿಸಿದನು. ಅರ್ಘ್ಯಪಾದ್ಯಾದಿ ಪೂಜೆಗೈದು – 'ನನಗಿಂತ ಧನ್ಯರಾದವರು ಇಂದು ಯಾರಿದ್ದಾರೆ. ನನ್ನ ಜನ್ಮವು ಧನ್ಯವಾಯಿತು' ಎಂದುಕೊಂಡು, ಅತಿಥಿ ಮರ್ಯಾದೆಗನುಸಾರವಾಗಿ ಅವರನ್ನು ಭೋಜನಾದಿಗಳಿಂದ ತೃಪ್ತಿಪಡಿಸಿದನು. ಮುನಿವರನು ಇದರಿಂದ ಹರ್ಷಿತನಾದನು. ಬಳಿಕ ರಾಜನು ತನ್ನ ನಾಲ್ವರೂ ಕುಮಾರರನ್ನು ಕರೆಸಿದನು. ಅವರು ಮುನಿಯ ಚರಣಗಳಿಗೆ ವಂದನೆ ಮಾಡಿ ಆಶೀರ್ವಾದ ಪಡೆದರು. ಶ್ರೀರಾಮಚಂದ್ರನನ್ನು ಕಂಡ ಮುನಿಯು ಮೈಮರೆತನು. ಚಂದ್ರನನ್ನು ಕಂಡ ಚಕೋರದಂತೆ, ಶ್ರೀರಾಮನ ಸೌಂದರ್ಯವನ್ನು ಕಂಡು ಮುನಿಯು ಮುಗ್ಧನಾದನು. ಆಗ ರಾಜನು ಮನದಲ್ಲೇ ಹಿಗ್ಗಿ ಹೇಳಿದನು – ''ಮುನೀಶ್ವರರೇ! ದಯೆಗೈದು ನೀವು ಇಲ್ಲಿಗೆ ಬಂದು ನಮ್ಮನ್ನು ಅನುಗ್ರಹಿಸಿರುವಿರಿ. ಇಷ್ಟರವರೆಗೆ ಈ ವಿಧವಾಗಿ ನಿಮ್ಮ ಕೃಪೆ ಆಗಿದ್ದಿಲ್ಲ. ಇಂದು ನಿಮ್ಮ ಆಗಮನದ ಕಾರಣವನ್ನು ದಯವಿಟ್ಟು ತಿಳಿಸಿರಿ. ನಿಮ್ಮ ಆಜ್ಞೆಯನ್ನು ತಡಮಾಡದೆ ನಾನು ಈಡೇರಿಸುತ್ತೇನೆ.'' ಆಗ ಮುನಿಗಳೆಂದರು – ''ರಾಜ! ಅಸುರರ ಸಮೂಹಗಳು ನನಗೆ ತುಂಬಾ ಕಾಡುತ್ತಿವೆ. ಆದ್ದರಿಂದ ನಾನು ನಿನ್ನ ಸಹಾಯವನ್ನು ಕೋರಿ ಬಂದಿದ್ದೇನೆ. ತಮ್ಮನ ಸಹಿತ ಶ್ರೀರಘುನಾಥನನ್ನು ನನ್ನೊಡನೆ ಕಳಿಸಿಕೊಡು. ಅವರ ಸಹಾಯದಿಂದ ರಾಕ್ಷಸರನ್ನು ನಿರ್ಮೂಲನಗೈದು ನಾನು ಸುರಕ್ಷಿತನಾಗುವೆನು. ಇದೇ ನಾನು ಬಂದಿರುವ ಕಾರಣವು. (ಚೌ/೧-೫)

**ದೋ – ದೇಹು ಭೂಪ ಮನ ಹರಷಿತ ತಜಹು ಮೋಹ ಅಗ್ಯಾನ ।**
**ಧರ್ಮ ಸುಜಸ ಪ್ರಭು ತುಮ್ಹ ಕೌಂ ಇನ್ಹ ಕಹँ ಅತಿ ಕಲ್ಯಾನ ॥ ೨೦೭ ॥**

ರಾಜನೇ! ಅಜ್ಞಾನವನ್ನು, ಮೋಹವನ್ನು ತೊರೆದು, ಸಂತೋಷವಾದ ಮನಸ್ಸಿನಿಂದ ಇವರನ್ನು ನನಗೆ ಒಪ್ಪಿಸು. ಅದರಿಂದ ಧರ್ಮವು, ಪುಣ್ಯವು ಸತ್ಕೀರ್ತಿಯು ನಿನಗೆ ದೊರೆಯುವುದು. ಅವರಿಗೂ ಪರಮಶ್ರೇಯೋಲಾಭವೂ ಆಗುವುದು. (ದೋ/೨೦೭)

**ಚೌ – ಸುನಿ ರಾಜಾ ಅತಿ ಅಪ್ರಿಯ ಬಾನೀ। ಹೃದಯ ಕಂಪ ಮುಖ ದುತಿ ಕುಮುಲಾನೀ ॥**
**ಚೌಥೇಂ ಪನ ಪಾಯಉँ ಸುತ ಚಾರೀ। ಬಿಪ್ರ ಬಚನ ನಹಿँ ಕಹೆಹು ಬಿಚಾರೀ ॥ ೧ ॥**
**ಮಾಗಹು ಭೂಮಿ ಧೇನು ಧನ ಕೋಸಾ। ಸರ್ಬಸ ದೇಉँ ಆಜು ಸಹರೋಸಾ ॥**
**ದೇಹ ಪ್ರಾನ ತೇಂ ಪ್ರಿಯ ಕಛು ನಾಹೀಂ। ಸೋಉ ಮುನಿ ದೇಉँ ನಿಮಿಷ ಏಕ ಮಾಹೀಂ ॥ ೨ ॥**
**ಸಬ ಸುತ ಪ್ರಿಯ ಮೋಹಿ ಪ್ರಾನ ಕಿ ನಾಈं। ರಾಮ ದೇತ ನಹಿँ ಬನಇ ಗೊಸಾಈं॥**
**ಕಹँ ನಿಸಿಚರ ಅತಿ ಘೋರ ಕಠೋರಾ। ಕಹँ ಸುಂದರ ಸುತ ಪರಮ ಕಿಸೋರಾ॥ ೩ ॥**
**ಸುನಿ ನೃಪ ಗಿರಾ ಪ್ರೇಮ ರಸ ಸಾನೀ। ಹೃದಯँ ಹರಷ ಮಾನಾ ಮುನಿ ಗ್ಯಾನೀ ॥**
**ತಬ ಬಸಿಷ್ಠ ಬಹುಬಿಧಿ ಸಮುಝಾವಾ। ನೃಪ ಸಂದೇಹ ನಾಸ ಕಹँ ಪಾವಾ ॥ ೪ ॥**
**ಅತಿ ಆದರ ದೋಉ ತನಯ ಬೋಲಾಏ। ಹೃದಯँ ಲಾಇ ಬಹು ಭಾಂತಿ ಸಿಖಾಏ ॥**
**ಮೇರೇ ಪ್ರಾನ ನಾಥ ಸುತ ದೋಊ। ತುಮ್ಹ ಮುನಿ ಪಿತಾ ಆನ ನಹಿँ ಕೋಊ ॥ ೫ ॥**

ಮುನೀಶ್ವರರ ಮಾತು ರಾಜನಿಗೆ ಅಪ್ರಿಯವಾಗಿ ಅನಿಸಿತು. ಅವನ ಹೃದಯ ನಡುಗಿತು. ಮುಖವು ಬಾಡಿತು. ಅವನು ದುಃಖಾವೇಶದಿಂದ ಇಂತೆಂದನು – ಮುನಿವರ್ಯರೇ! ಈ ನಾಲ್ಕು ಕುಮಾರರನ್ನು ನಾನು ವೃದ್ಧಾಪ್ಯದಲ್ಲಿ ಪಡೆದಿರುವೆನು. ನೀವು ಇವರನ್ನು ಕೇಳುವುದು ಸಮುಚಿತವಲ್ಲ. ಮುನಿಯೇ! ತಾವು ಭೂಮಿಯನ್ನು, ಗೋ, ಧನ, ಬೊಕ್ಕಸಭಂಡಾರ ಬೇಕಾದರೆ ಕೇಳಿ, ಹರ್ಷದಿಂದ ನನ್ನ ಸರ್ವಸ್ವವನ್ನೂ ಕೊಟ್ಟೆನು. ದೇಹ-ಪ್ರಾಣಗಳಿಗಿಂತ ಹೆಚ್ಚು ಪ್ರಿಯವಾದುದೇನಾದರೂ ಇದ್ದರೆ ಅದನ್ನು ಕೊಟ್ಟು ಬಿಟ್ಟೇನು. ಎಲ್ಲ ಮಕ್ಕಳೂ ನನಗೆ ಪ್ರಾಣಪ್ರಿಯರು. ಸ್ವಾಮಿ! ಅವರಲ್ಲಿಯೂ ಶ್ರೀರಾಮನು ಅತಿಪ್ರಿಯನಾದ್ದರಿಂದ ಅವನನ್ನು ಯಾವರೀತಿಯಿಂದಲೂ ಕೊಡಲಾರೆ. ಅತ್ಯಂತ ಭಯಂಕರರಾದ ಕ್ರೂರರಾಕ್ಷಸರೆಲ್ಲಿ? ಕಿಶೋರ ವಯಸ್ಸಿನ ಪರಮ ಕೋಮಲರಾದ ಸುಂದರ ನನ್ನ ಪುತ್ರರೆಲ್ಲಿ? ಪ್ರೇಮರಸಭರಿತವಾದ ರಾಜನ ಮಾತನ್ನು ಕೇಳಿ, ಜ್ಞಾನೀಮುನಿ ವಿಶ್ವಾಮಿತ್ರರು ಹೃದಯದಲ್ಲಿ ಹರ್ಷಿತರಾದರು. ಬಳಿಕ ಗುರುಗಳಾದ ವಸಿಷ್ಠರು ಅರಸನಿಗೆ ಅನೇಕ ರೀತಿಯಿಂದ ವಿವೇಕವನ್ನು ಹೇಳಿದರು. ಅದರಿಂದ ರಾಜನ ಭಯ-ಸಂದೇಹಗಳು ದೂರವಾದುವು. ರಾಜನು ತುಂಬಾ ಆದರದಿಂದ ಇಬ್ಬರೂ (ರಾಮ-ಲಕ್ಷ್ಮಣರನ್ನೂ) ಮಕ್ಕಳನ್ನು ಕರೆಸಿದನು. ಅವರನ್ನು ಎದೆಗಪ್ಪಿಕೊಂಡು, ಅವರಿಗೆ ಅನೇಕವಿಧದಿಂದ ಉಪದೇಶಗಳನ್ನು ನೀಡಿದನು. ಮತ್ತೆ ಋಷಿಯ ಬಳಿ ಹೇಳಿದನು – ಮುನಿವರಾ! ಈ ಇಬ್ಬರು ಕುಮಾರರು ನನ್ನ ಪ್ರಾಣಗಳು. ಈಗ ನೀನೇ ಅವರಿಗೆ ತಂದೆಯೂ, ಗುರುವೂ ಆಗಿದ್ದೀರಿ. (ಚೌ/೧-೫)

**ದೋ – ಸೌಂಪೇ ಭೂಪ ರಿಷಿಹಿ ಸುತ ಬಹುಬಿಧಿ ದೇಇ ಅಸೀಸ ।**
**ಜನನೀ ಭವನ ಗಏ ಪ್ರಭು ಚಲೇ ನಾಇ ಪದ ಸೀಸ ॥ ೨೦೮(ಕ)॥**

ತರುವಾಯ ರಾಜನು ತನ್ನ ಕುಮಾರರನ್ನು ಅನೇಕ ಪ್ರಕಾರದಿಂದ ಆಶೀರ್ವದಿಸಿ, ಅವರನ್ನು ಋಷಿಗೆ ಒಪ್ಪಿಸಿದನು. ರಾಮಲಕ್ಷ್ಮಣರು ತಾಯಂದಿರ ಬಳಿಗೆ ಹೋಗಿ, ಚರಣಗಳಲ್ಲಿ ವಂದಿಸಿ, ಆಶೀರ್ವಾದಗಳನ್ನು ಪಡೆದುಕೊಂಡು ಹೊರಟರು. (ದೋ/೨೦೮ ಕ)

**ಸೋ – ಪುರುಷಸಿಂಹ ದೊಉ ಬೀರ ಹರಷಿ ಚಲೇ ಮುನಿ ಭಯ ಹರನ ।**
**ಕೃಪಾಸಿಂಧು ಮತಿಧೀರ ಅಖಿಲ ಬಿಸ್ವ ಕಾರನ ಕರನ ॥ ೨೦೮(ಖ)॥**

ಕೃಪಾಸಾಗರರೂ, ಮಹಾಧೀರರೂ, ಚರಾಚರಾತ್ಮಕ ಸೃಷ್ಟಿಗೆ ಕಾರಣೀಭೂತರಾದವರೂ, ಪುರುಷಸಿಂಹದಂತಿರುವ ಆ ರಾಮ-ಲಕ್ಷ್ಮಣರು ವಿಶ್ವಾಮಿತ್ರರ ಭಯವನ್ನು ಹೋಗಲಾಡಿಸಲು ಪ್ರಸನ್ನ ಮನಸ್ಸಿನಿಂದ ಹೊರಟರು. (ಸೋ/೨೦೮ ಖ)

**ಚೌ – ಅರುನ ನಯನ ಉರ ಬಾಹು ಬಿಸಾಲಾ । ನೀಲ ಜಲಜ ತನು ಸ್ಯಾಮ ತಮಾಲಾ ॥**
**ಕಟಿ ಪಟ ಪೀತ ಕಸೇಂ ಬರ ಭಾಥಾ । ರುಚಿರ ಚಾಪ ಸಾಯಕ ದುಹುಁ ಹಾಥಾ ॥ ೧ ॥**
**ಸ್ಯಾಮ ಗೌರ ಸುಂದರ ದೊಉ ಭಾಈ । ಬಿಸ್ವಾಮಿತ್ರ ಮಹಾನಿಧಿ ಪಾಈ ॥**
**ಪ್ರಭು ಬ್ರಹ್ಮನ್ಯದೇವ ಮೈಂ ಜಾನಾ । ಮೋಹಿ ನಿತಿ ಪಿತಾ ತಜೇಉ ಭಗವಾನಾ ॥ ೨ ॥**
**ಚಲೇ ಜಾತ ಮುನಿ ದೀನ್ಹಿ ದೆಖಾಈ । ಸುನಿ ತಾಡಕಾ ಕ್ರೋಧ ಕರಿ ಧಾಈ ॥**
**ಏಕಹಿಂ ಬಾನ ಪ್ರಾನ ಹರಿ ಲೀನ್ಹಾ । ದೀನ ಜಾನಿ ತೇಹಿ ನಿಜ ಪದ ದೀನ್ಹಾ ॥ ೩ ॥**
**ತಬ ರಿಷಿ ನಿಜ ನಾಥಹಿ ಜಿಯಁ ಚೀನ್ಹೀ । ಬಿದ್ಯಾನಿಧಿ ಕಹುಁ ಬಿದ್ಯಾ ದೀನ್ಹೀ ॥**
**ಜಾತೇ ಲಾಗ ನ ಛುಧಾ ಪಿಪಾಸಾ । ಅತುಲಿತ ಬಲ ತನು ತೇಜ ಪ್ರಕಾಸಾ ॥ ೪ ॥**

ಶ್ರೀರಾಮಚಂದ್ರನು ಅರುಣಕಮಲನಯನನೂ, ವಿಶಾಲಾಕ್ಷನೂ, ಆಜಾನುಬಾಹುವೂ, ನೀಲೋತ್ಪಲ, ತಮಾಲಸದೃಶ ಶ್ಯಾಮಲಶರೀರನೂ, ಪೀತಾಂಬರಧಾರಿಯೂ, ಕೈಯಲ್ಲಿ ಧನುರ್ಬಾಣಗಳನ್ನು ಧರಿಸಿಕೊಂಡು, ಭುಜದಲ್ಲಿ ಬತ್ತಳಿಕೆಯಿಂದ ಶೋಭಿಸುತ್ತಿರುವನು. ಗೌರವರ್ಣದ ಲಕ್ಷ್ಮಣನು – ಶ್ಯಾಮಲವರ್ಣದ ಶ್ರೀರಾಮನು ಈರ್ವರು ಸೋದರರು ಅತ್ಯಂತ ಸುಂದರರು. ಅವರಿಬ್ಬರನ್ನು ಪಡೆದು ಅವರೊಡನೆ ಹೋಗುತ್ತಿರುವ ವಿಶ್ವಾಮಿತ್ರರಿಗೆ ದೊಡ್ಡ ನಿಧಿಯೇ ಸಿಕ್ಕಿದಂತೆ ಆನಂದವಾಯಿತು. ಅವರು ಮನದಲ್ಲಿ ಅಂದುಕೊಂಡರು– ''ಪ್ರಭುವು ನಿಜವಾಗಿ ಭಕ್ತಪರಾಧೀನನೂ, ಬ್ರಾಹ್ಮಣಪ್ರಿಯನೆಂದೂ ತಿಳಿದುಕೊಂಡೆ. ನನ್ನ ಕೋರಿಕೆಗಾಗಿ ತಾಯಿ-ತಂದೆಯರನ್ನು ಕೂಡ ತೊರೆದು ಬಂದಿರುವನು.'' ಹಾದಿಯಲ್ಲಿ ಹೋಗುತ್ತಿದ್ದಾಗ ಮುನಿಗಳು ರಾಕ್ಷಸಿಯಾದ ತಾಟಕಿಯನ್ನು ತೋರಿದರು. ಸದ್ದು ಕೇಳುತ್ತಲೇ ಅವಳು ಅಬ್ಬರಿಸುತ್ತಾ ರಾಮನ ಬಳಿಗೆ ಬಂದಳು. ಗುರುಗಳ ಆಣತಿಯಂತೆ ಶ್ರೀರಾಮನು ಒಂದೇ ಬಾಣದಿಂದ ಅವಳನ್ನು ಸಂಹರಿಸಿದನು. ಕನಿಕರದಿಂದ ಅವಳಿಗೆ ಪರಮಧಾಮವನ್ನು ಕರುಣಿಸಿದನು. ಈ ಮೂಲಕ ರಾಮಚಂದ್ರಪ್ರಭುವು ಸಾಕ್ಷಾತ್ ಪರಮಾತ್ಮನೆಂದು ಮುನಿಗಳು ಅಂತರಂಗದಲ್ಲಿ ಅರಿತುಕೊಂಡರು. ಪ್ರಭುವು ವಿಜ್ಞಾನನಿಧಿಯೆಂದು ತಿಳಿದುಕೊಂಡು ಬಳಿಕ ವಿಶ್ವಾಮಿತ್ರರು ಅತ್ಯಂತ ಹರ್ಷದಿಂದ ಅವರಿಗೆ 'ಬಲಾ', 'ಅತಿಬಲಾ' ಎಂಬ ವಿದ್ಯೆಯನ್ನು ಉಪದೇಶಿಸಿದರು. ಇದರಿಂದ ಕ್ಷುತ್ಪಿಪಾಸಾ ಬಾಧೆಗಳು ಅವರಿಗೆ ತಟ್ಟಲಾರವು ಹಾಗೂ ಶರೀರದಲ್ಲಿ ಅತುಳ ಬಲ, ಪರಾಕ್ರಮಗಳು ನೆಲಸಿದವು. (ಚೌ/೧-೪)

**ದೋ – ಆಯುಧ ಸರ್ಬ ಸಮರ್ಪಿ ಕೈ ಪ್ರಭು ನಿಜ ಆಶ್ರಮ ಆನಿ ।**
**ಕಂದ ಮೂಲ ಫಲ ಭೋಜನ ದೀನ್ಹ ಭಗತಿ ಹಿತ ಜಾನಿ ॥ ೨೦೯ ॥**

ಮುನೀಶ್ವರರು ತಮ್ಮ ಬಳಿ ಇರುವ ಎಲ್ಲ ಅಸ್ತ್ರ-ಶಸ್ತ್ರಗಳನ್ನು ಶ್ರೀರಾಮನಿಗೆ ಸಮರ್ಪಿಸಿ, ಅವರನ್ನು ತನ್ನ ಆಶ್ರಮಕ್ಕೆ ಕರಕೊಂಡು ಬಂದರು. ಪರಮಹಿತೈಷಿಗಳಾದ ಆ ರಾಮಲಕ್ಷ್ಮಣರಿಗೆ ಅತ್ಯಂತ ಶ್ರದ್ಧೆ, ಆದರಗಳಿಂದ ಕಂದ-ಮೂಲ, ಫಲಗಳನ್ನು ಉಣಬಡಿಸಿದರು. (ದೋ/೨೦೯)

**ಚೌ – ಪ್ರಾತ ಕಹಾ ಮುನಿ ಸನ ರಘುರಾಈ । ನಿರ್ಭಯ ಜಗ್ಯ ಕರಹು ತುಮ್ಹ ಜಾಈ ॥**
**ಹೋಮ ಕರನ ಲಾಗೇ ಮುನಿ ಝಾರೀ । ಆಪು ರಹೇ ಮಖ ಕೀಂ ರಖವಾರೀ ॥ ೧ ॥**
**ಸುನಿ ಮಾರೀಚ ನಿಸಾಚರ ಕ್ರೋಹೀ । ಲೈ ಸಹಾಯ ಧಾವಾ ಮುನಿದ್ರೋಹೀ ॥**
**ಬಿನು ಫರ ಬಾನ ರಾಮ ತೇಹಿ ಮಾರಾ । ಸತ ಜೋಜನ ಗಾ ಸಾಗರ ಪಾರಾ ॥ ೨ ॥**

ಪಾವಕ ಸರ ಸುಬಾಹು ಪುನಿ ಮಾರಾ । ಅನುಜ ನಿಸಾಚರ ಕಟಕು ಸँಘಾರಾ ॥
ಮಾರಿ ಅಸುರ ದ್ವಿಜ ನಿರ್ಭಯಕಾರೀ । ಅಸ್ತುತಿ ಕರಹಿಂ ದೇವ ಮುನಿ ಝಾರೀ ॥ ೩ ॥
ತಹँ ಪುನಿ ಕಛುಕ ದಿವಸ ರಘುರಾಯಾ । ರಹೇ ಕೀನ್ಹಿ ಬಿಪ್ರನ್ಹ ಪರ ದಾಯಾ ॥
ಭಗತಿ ಹೇತು ಬಹು ಕಥಾ ಪುರಾನಾ । ಕಹೇ ಬಿಪ್ರ ಜದ್ಯಪಿ ಪ್ರಭು ಜಾನಾ ॥ ೪ ॥
ತಬ ಮುನಿ ಸಾದರ ಕಹಾ ಬುಝಾಈ । ಚರಿತ ಏಕ ಪ್ರಭು ದೇಖಿಅ ಜಾಈ ॥
ಧನುಷಜಗ್ಯ ಸುನಿ ರಘುಕುಲ ನಾಥಾ । ಹರಷಿ ಚಲೇ ಮುನಿಬರ ಕೇ ಸಾಥಾ ॥ ೫ ॥
ಆಶ್ರಮ ಏಕ ದೀಖ ಮಗ ಮಾಹೀಂ । ಖಗ ಮೃಗ ಜೀವ ಜಂತು ತಹँ ನಾಹೀಂ ॥
ಪೂಛಾ ಮುನಿಹಿ ಸಿಲಾ ಪ್ರಭು ದೇಖೀ । ಸಕಲ ಕಥಾ ಮುನಿ ಕಹಾ ಬಿಸೇಷೀ ॥ ೬ ॥

ಮರುದಿನ ಬೆಳಿಗ್ಗೆ ರಘುನಾಥನು ವಿಶ್ವಾಮಿತ್ರರಿಗೆ – 'ಗುರುಗಳೇ! ನೀವು ಇನ್ನು ನಿರ್ಭಯರಾಗಿ ಯಜ್ಞಪ್ರಾರಂಭಿಸಿರಿ' ಎಂದು ಹೇಳಿದನು. ಇದನ್ನು ಕೇಳಿ, ಮುನಿಗಳನ್ನೊಡಗೂಡಿ ವಿಶ್ವಾಮಿತ್ರರು ಯಜ್ಞಾರಂಭವನ್ನು ಮಾಡಿದರು. ಸೋದರರಿಬ್ಬರೂ ಯಜ್ಞರಕ್ಷಣೆಗಾಗಿ ನಿಂತರು. ಯಜ್ಞಧೂಮವನ್ನು ಕಂಡು, ವೇದಮಂತ್ರಗಳನ್ನು ಕೇಳಿ, ಮುನಿಗಳಿಗೆ ವೈರಿಯೆನಿಸಿದ ಕ್ರೂರಿಗಳಾದ ಮಾರೀಚ-ಸುಬಾಹುಗಳೆಂಬ ರಾಕ್ಷಸರು ತಮ್ಮ ಪರಿವಾರದೊಂದಿಗೆ ಯಜ್ಞವನ್ನು ಕೆಡಿಸಲು ಬಂದರು. ಆಗ ಶ್ರೀರಾಮನು ಮಾರೀಚನ ಮೇಲೆ ಸಾಧಾರಣವಾದ ಒಂದು ಬಾಣವನ್ನು ಪ್ರಯೋಗಿಸಿ, ಅವನನ್ನು ನೂರುಯೋಜನ ದೂರ ಸಮುದ್ರಮಧ್ಯದಲ್ಲಿ ಕೆಡಹಿದನು. ಮತ್ತೆ ಆಗ್ನೇಯಾಸ್ತ್ರದಿಂದ ಸುಬಾಹುವನ್ನು ವಧಿಸಿಬಿಟ್ಟನು. ತಮ್ಮನಾದ ಲಕ್ಷ್ಮಣನು ಉಳಿದ ರಾಕ್ಷಸ ಸೈನ್ಯವನ್ನೆಲ್ಲ ಸದೆಬಡಿದನು. ಈ ವಿಧವಾಗಿ ರಾಮಲಕ್ಷ್ಮಣರ ಸಂರಕ್ಷಣೆಯಲ್ಲಿ ಯಜ್ಞವು ನಿರ್ವಿಘ್ನವಾಗಿ ನೆರವೇರಿತು. ಹೀಗೆ ಅವರು ಬ್ರಾಹ್ಮಣರನ್ನು ನಿರ್ಭಯರಾಗಿಸಿದರು. ದೇವತೆಗಳು, ವಿಶ್ವಾಮಿತ್ರಾದಿ ಮುನಿಗಳು ಅವರನ್ನು ಅನೇಕ ರೀತಿಯಿಂದ ಸ್ತುತಿಸಿದರು. ಮುನಿಗಳನ್ನು ಅನುಗ್ರಹಿಸಲೋಸುಗ ಶ್ರೀರಘುನಾಥನು ಲಕ್ಷ್ಮಣನೊಂದಿಗೆ ಅಲ್ಲಿ ಕೆಲದಿನ ಇದ್ದನು. ಶ್ರೀರಾಮನು ಎಲ್ಲವನ್ನೂ ಬಲ್ಲವನಾಗಿದ್ದರೂ, ವಿಶ್ವಾಮಿತ್ರರು ಭಕ್ತಿಪರವಶರಾಗಿ ಅನೇಕ ಪುರಾಣಕಥೆಗಳನ್ನು ಹೇಳಿದರು. ಅದನ್ನು ರಾಮನು ಮನಗೊಟ್ಟು ಕೇಳಿದನು. ಅನಂತರ ವಿಶ್ವಾಮಿತ್ರರು ಆದರದಿಂದ ಶ್ರೀರಾಮನ ಬಳಿ ಇಂತೆಂದರು – ''ಪ್ರಭೋ! ಇಲ್ಲೇ ಮಿಥಿಲೆಯಲ್ಲಿ ಒಂದು ಧನುರ್ಯಜ್ಞ ಮಹೋತ್ಸವವು ನಡೆಯಲಿದೆ, ಅದನ್ನು ನೋಡಲು ಹೋಗೋಣ. ನೀನು ನಡೆ.'' ಧನುರ್ಯಜ್ಞದ ಮಾತು ಕೇಳಿದಾಕ್ಷಣ ಶ್ರೀರಘುನಾಥನು ಲಕ್ಷ್ಮಣನೊಡಗೂಡಿ ವಿಶ್ವಾಮಿತ್ರರೊಂದಿಗೆ ಸಂತೋಷದಿಂದ ಹೊರಟನು. ಮಾರ್ಗಮಧ್ಯದಲ್ಲಿ ಅವರು ಪಶು-ಪಕ್ಷಿ ಮುಂತಾದ, ಇತರ ಯಾವುದೇ ಪ್ರಾಣಿಗಳಿಂದ ಶೂನ್ಯವಾದ ಒಂದು ಆಶ್ರಮವನ್ನು ನೋಡಿದರು. ಅಲ್ಲಿ ಬಿದ್ದಿರುವ ಒಂದು ಬಂಡೆಯನ್ನು ಕಂಡು ಶ್ರೀರಾಮನು ಅದರ ಕುರಿತು ಕೇಳಿದಾಗ, ವಿಶ್ವಾಮಿತ್ರರು ವಿಸ್ತಾರವಾಗಿ ಅದರ ಕಥೆಯನ್ನು ಹೇಳಿದರು. (ಚೌ/೧-೬)

## ಅಹಲ್ಯೋದ್ಧಾರ

ದೋ – ಗೌತಮ ನಾರಿ ಶ್ರಾಪ ಬಸ ಉಪಲ ದೇಹ ಧರಿ ಧೀರ ।
ಚರನ ಕಮಲ ರಜ ಚಾಹತಿ ಕೃಪಾ ಕರಹು ರಘುಬೀರ ॥ ೨೧೦ ॥

''ಗೌತಮ ಮಹರ್ಷಿಗಳ ಧರ್ಮಪತ್ನಿಯಾದ ಅಹಲ್ಯೆಯು ಪತಿಶಾಪದಿಂದ ಹೀಗೆ ಇಲ್ಲಿ ಕಲ್ಲಾಗಿರುವಳು. ನಿನ್ನ ಚರಣರೇಣುವನ್ನು ಬಯಸುತ್ತಾ ನಿನಗಾಗಿ ಕಾದಿದ್ದಾಳೆ. ಹೇ ರಘುವೀರಾ! ಅವಳ ಮೇಲೆ ಕೃಪೆ ಮಾಡು'' ಎಂದು ವಿಶ್ವಾಮಿತ್ರರು ನುಡಿದರು. (ದೋ/೨೧೦)

ಛಂ – ಪರಸತ ಪದ ಪಾವನ ಸೋಕ ನಸಾವನ ಪ್ರಗಟ ಭಈ ತಪಪುಂಜ ಸಹೀ ।
ದೇಖತ ರಘುನಾಯಕ ಜನ ಸುಖ ದಾಯಕ ಸನಮುಖ ಹೋಇ ಕರ ಜೋರಿ ರಹೀ ॥
ಅತಿ ಪ್ರೇಮ ಅಧೀರಾ ಪುಲಕ ಸರೀರಾ ಮುಖ ನಹಿಂ ಆವಇ ಬಚನ ಕಹೀ ।
ಅತಿಸಯ ಬಡಭಾಗೀ ಚರನನ್ಹಿ ಲಾಗೀ ಜುಗಲ ನಯನ ಜಲಧಾರ ಬಹೀ ॥ ೧ ॥
ಧೀರಜು ಮನ ಕೀನ್ಹಾ ಪ್ರಭು ಕಹುँ ಚೀನ್ಹಾ ರಘುಪತಿ ಕೃಪಾँ ಭಗತಿ ಪಾಈ ।
ಅತಿ ನಿರ್ಮಲ ಬಾನೀಂ ಅಸ್ತುತಿ ಠಾನೀ ಗ್ಯಾನಗಮ್ಯ ಜಯ ರಘುರಾಈ ॥

**ಮೈ° ನಾರಿ ಅಪಾವನ ಪ್ರಭು ಜಗ ಪಾವನ ರಾವನ ರಿಪು ಜನ ಸುಖದಾಈ ।**
**ರಾಜೀವ ಬಿಲೋಚನ ಭವ ಭಯ ಮೋಚನ ಪಾಹಿ ಪಾಹಿ ಸರನಹಿ° ಆಈ ॥ ೨ ॥**
**ಮುನಿ ಶ್ರಾಪ ಜೊ ದೀನ್ಹಾ ಅತಿ ಭಲ ಕೀನ್ಹಾ ಪರಮ ಅನುಗ್ರಹ ಮೈ° ಮಾನಾ ।**
**ದೇಖೆಉ° ಭರಿ ಲೋಚನ ಹರಿ ಭವಮೋಚನ ಇಹಇ ಲಾಭ ಸಂಕರ ಜಾನಾ ॥**
**ಬಿನತೀ ಪ್ರಭು ಮೋರೀ ಮೈ° ಮತಿ ಭೋರೀ ನಾಥ ನ ಮಾಗಉ° ಬರ ಆನಾ ।**
**ಪದ ಕಮಲ ಪರಾಗಾ ರಸ ಅನುರಾಗಾ ಮಮ ಮನ ಮಧುಪ ಕರೈ ಪಾನಾ ॥ ೩ ॥**
**ಜೆಹಿ° ಪದ ಸುರಸರಿತಾ ಪರಮ ಪುನೀತಾ ಪ್ರಗಟ ಭಈ ಸಿವ ಸೀಸ ಧರೀ।**
**ಸೋಈ ಪದ ಪಂಕಜ ಜೆಹಿ ಪೂಜತ ಅಜ ಮಮ ಸಿರ ಧರೆಉ ಕೃಪಾಲ ಹರೀ ॥**
**ಏಹಿ ಭಾ°ತಿ ಸಿಧಾರೀ ಗೌತಮ ನಾರೀ ಬಾರ ಬಾರ ಹರಿ ಚರನ ಪರೀ।**
**ಜೋ ಅತಿ ಮನ ಭಾವಾ ಸೋ ಬರು ಪಾವಾ ಗೈ ಪತಿಲೋಕ ಅನಂದ ಭರೀ ॥ ೪ ॥**

ಪಾವನವೂ, ಶೋಕವಿಮೋಚಕವೂ ಆದ ಶ್ರೀರಾಮನ ಪಾದವು ಸೋಂಕಿದಾಕ್ಷಣ, ಮಹಾತಪಸ್ವಿನೀಯಾದ ಅಹಲ್ಯೆಯು ಆ ಬಂಡೆಯಿಂದ ಒಡಮೂಡಿದಳು. ಭಕ್ತಜನ ಸುಖದಾಯಕನಾದ ಶ್ರೀರಾಮನನ್ನು ಕಂಡು ಆಕೆಯು ಕೈ ಜೋಡಿಸಿಕೊಂಡು ಅವನೆದುರಿಗೆ ನಿಂತುಕೊಂಡಳು. ಅವಳು ಪ್ರೇಮಾಧಿಕ್ಯದಿಂದ ಅಧೀರಳಾಗಿದ್ದು, ಅವಳ ಶರೀರ ಪುಳಕಿತವಾಗಿತ್ತು. ಬಾಯಿಯಿಂದ ಮಾತುಗಳೇ ಹೊರಡದು. ಅತ್ಯಂತ ಭಾಗ್ಯಶಾಲಿನಿಯಾದ ಅಹಲ್ಯೆಯು ಪ್ರಭುಚರಣಗಳಲ್ಲಿ ಕೆಡೆದು ಬಿದ್ದಳು. ಅವಳ ಕಣ್ಣುಗಳಿಂದ ಪ್ರೇಮಾಶ್ರುಗಳ ಕೋಡಿಯೇ ಹರಿಯಿತು. ಮತ್ತೆ ಅವಳು ಮನಸ್ಸಿನಲ್ಲಿ ಧೈರ್ಯವನ್ನು ತಂದುಕೊಂಡು ಪ್ರಭುವನ್ನು ಗುರುತಿಸಿದಳು. ಶ್ರೀರಘುಪತಿಯ ಕೃಪೆಯಿಂದ ಆಕೆಯು ಭಕ್ತಿಯನ್ನು ಪಡೆದುಕೊಂಡಳು. ಆಗ ಆಕೆಯು ಅತ್ಯಂತ ನಿರ್ಮಲವಾದ ವಾಣಿಯಿಂದ ಈ ಪ್ರಕಾರ ಸ್ತುತಿಸತೊಡಗಿದಳು – ''ಓ ಜ್ಞಾನಗಮ್ಯನಾದ ರಘುನಾಥನೇ! ನಿನಗೆ ಜಯವಾಗಲೀ. ನಾನು ಸಹಜ ಅಪವಿತ್ರವಾದ ಹೆಣ್ಣು, ನೀನು ಜಗತ್ಪಾವನಮೂರ್ತಿಯೂ, ಭಕ್ತಜನ ಸುಖದಾಯಕನೂ, ರಾವಣಾರಿಯೂ ಆಗಿರುವೆ. ಓ ರಾಜೀವಲೋಚನಾ! ಜನನ-ಮರಣ ಮೃತ್ಯುವಿನಿಂದ ಬಿಡಿಸುವವನೇ! ನಾನು ನಿನಗೆ ಶರಣು ಬಂದಿದ್ದೇನೆ; ಕಾಪಾಡು, ಕಾಪಾಡು. ಮುನಿವರರು ಕೊಟ್ಟ ಶಾಪವು ನನಗೆ ವರವಾಗಿಯೇ ಪರಿಣಮಿಸಿತು. ಅದನ್ನು ಋಷಿಯ ಅನುಗ್ರಹವೆಂದೇ ತಿಳಿಯುತ್ತೇನೆ. ಏಕೆಂದರೆ, ಅದರಿಂದ ನಾನು ಭವಲೋಚನನಾದ ಶ್ರೀಹರಿಯನ್ನು ಕಣ್ತುಂಬ ಕಾಣುವಂತಾಯಿತು. ನಿನ್ನ ದರ್ಶನಭಾಗ್ಯವು ಎಲ್ಲಕ್ಕೂ ಮಿಗಿಲಾದ ಲಾಭವೆಂಬುದನ್ನು ಶಂಕರನು ತಿಳಿದಿರುವನು. ಪ್ರಭುವೇ! ನಾನು ಅತ್ಯಂತ ಅಮಾಯಕಳು. ನನಗೆ ಒಂದು ವರವನ್ನು ಕರುಣಿಸು. ನನ್ನ ಮನಸ್ಸೆಂಬ ಮಧುಕರವು ಯಾವಾಗಲೂ ನಿನ್ನ ಪಾದಕಮಲಗಳ ರಸಾಸ್ವಾದನೆ ಮಾಡುತ್ತಿರುವಂತೆ ಅನುಗ್ರಹಿಸು. ಇದಲ್ಲದೆ ಬೇರಾವ ವರವೂ ನನಗೆ ಬೇಡ. ನಿನ್ನ ಚರಣಗಳಿಂದಲೇ ಪರಮಪವಿತ್ರವಾದ ಗಂಗೆಯು ಉದ್ಭವಿಸಿರುವಳು. ಪರಶಿವನು ಅದನ್ನು ತನ್ನ ಜಟಾಜೂಟದಲ್ಲಿ ಧರಿಸಿಕೊಂಡಿರುವನು. ನಿನ್ನ ಪಾದಪದ್ಮವನ್ನು ಬ್ರಹ್ಮನೂ ಕೂಡ ಭಕ್ತಿಯಿಂದ ಸೇವಿಸುವನು. ಅಂತಹ ನಿನ್ನ ಪಾದವನ್ನು ನನ್ನ ತಲೆಯಮೇಲೆ ಇರಿಸಿದೆಯಲ್ಲ! ಇದಕ್ಕಿಂತ ಮಿಗಿಲಾದ ಭಾಗ್ಯವಾದರೂ ಏನಿದೆ?'' ಈ ಪ್ರಕಾರ ಸ್ತುತಿಸುತ್ತಾ ಪದೇ-ಪದೇ ಭಗವಂತನ ಚರಣಗಳಿಗೆ ನಮಸ್ಕರಿಸುತ್ತಾ, ಮನೋವಾಂಛಿತ ವರವನ್ನು ಪಡೆದು ಅಹಲ್ಯೆಯು ಮಹದಾನಂದದಿಂದ ಪತಿಯ ಬಳಿಗೆ ಹೋದಳು. (ಛಂ/೪)

**ದೋ – ಅಸ ಪ್ರಭು ದೀನಬಂಧು ಹರಿ ಕಾರನ ರಹಿತ ದಯಾಲ।**
**ತುಲಸಿದಾಸ ಸಠ ತೆಹಿ ಭಜು ಛಾಡಿ ಕಪಟ ಜಂಜಾಲ ॥ ೨೧೧ ॥**

ಶ್ರೀರಾಮಚಂದ್ರ ಪ್ರಭುವು ದೀನಜನಬಾಂಧವನೂ, ಅವ್ಯಾಜಕರುಣಾಸಿಂಧುವೂ ಆಗಿರುವನು. ತುಲಸೀದಾಸರು ಹೇಳುತ್ತಾರೆ – ಎಲೈ ಮೂಢ ಮನಸ್ಸೇ! ಕಪಟವೇ ಮುಂತಾದ ಜಂಜಾಟಗಳನ್ನು ಬಿಟ್ಟು, ಅವನನ್ನು ಭಜಿಸುತ್ತಿರು. (ದೋ/೨೧೧)

**ಮಾಸಪಾರಾಯಣದ ಏಳನೆಯ ವಿಶ್ರಾಮ**

## ಶ್ರೀರಾಮ-ಲಕ್ಷ್ಮಣರ ಮಿಥಿಲಾಗಮನ

**ಚೌ – ಚಲೇ ರಾಮ ಲಛಿಮನ ಮುನಿ ಸಂಗಾ । ಗಏ ಜಹಾ° ಜಗ ಪಾವನಿ ಗಂಗಾ ॥**
**ಗಾಧಿಸೂನು ಸಬ ಕಥಾ ಸುನಾಈ । ಜೆಹಿ ಪ್ರಕಾರ ಸುರಸರಿ ಮಹಿ ಆಈ ॥ ೧ ॥**

**ತಬ ಪ್ರಭು ರಿಷಿನ್ಹ ಸಮೇತ ನಹಾಏ । ಬಿಬಿಧ ದಾನ ಮಹಿದೇವನ್ಹಿ ಪಾಏ ॥**
**ಹರಷಿ ಚಲೇ ಮುನಿ ಬೃಂದ ಸಹಾಯಾ । ಬೇಗಿ ಬಿದೇಹ ನಗರ ನಿಅರಾಯಾ ॥ ೨ ॥**
**ಪುರ ರಮ್ಯತಾ ರಾಮ ಜಬ ದೇಖೀ । ಹರಷೇ ಅನುಜ ಸಮೇತ ಬಿಸೇಷಿ ॥**
**ಬಾಪೀಂ ಕೂಪ ಸರಿತ ಸರ ನಾನಾ । ಸಲಿಲ ಸುಧಾಸಮ ಮನಿ ಸೋಪಾನಾ ॥ ೩ ॥**
**ಗುಂಜತ ಮಂಜು ಮತ್ತ ರಸ ಭೃಂಗಾ । ಕೂಜತ ಕಲ ಬಹುಬರನ ಬಿಹಂಗಾ ॥**
**ಬರನ ಬರನ ಬಿಕಸೇ ಬನ ಜಾತಾ । ತ್ರಿಬಿಧ ಸಮೀರ ಸದಾ ಸುಖದಾತಾ ॥ ೪ ॥**

ಶ್ರೀರಾಮ ಲಕ್ಷ್ಮಣರು ವಿಶ್ವಾಮಿತ್ರ ಮುನಿಯೊಡನೆ ಸಾಗುತ್ತಿರುವಂತೆ, ಲೋಕಪಾವನಿಯಾದ ಗಂಗಾತೀರಕ್ಕೆ ಬಂದರು. ಮುನಿಶ್ರೇಷ್ಠರಾದ ಗಾಧೀಪುತ್ರ ವಿಶ್ವಾಮಿತ್ರರು – ದೇವನದಿಯಾದ ಗಂಗೆಯು ಭೂಲೋಕಕ್ಕೆ ಬಂದ ಕಥೆಯನ್ನು ವಿವರಿಸಿದರು. ಆಗ ಶ್ರೀರಾಮನು ಅಲ್ಲಿದ್ದ ಋಷಿಗಳೊಡನೆ ಗಂಗೆಯಲ್ಲಿ ಸ್ನಾನಮಾಡಿದನು. ಬ್ರಾಹ್ಮಣರಿಗೆ ಅನೇಕ-ರೀತಿಯ ದಾನವನ್ನು ಮಾಡಿದನು. ಬಳಿಕ ಶ್ರೀರಾಮನು ಮುನಿವೃಂದದೊಂದಿಗೆ ಪ್ರಸನ್ನನಾಗಿ ಬೇಗನೇ ಮಿಥಿಲಾನಗರವನ್ನು ಸಮೀಪಿಸಿದನು. ರಾಮ-ಲಕ್ಷ್ಮಣರು ಮಿಥಿಲಾನಗರದ ಶೋಭೆಯನ್ನು ಕಂಡು ಹೆಚ್ಚಿನ ಹರ್ಷವನ್ನು ಹೊಂದಿದರು. ಅಲ್ಲಿ ಅನೇಕ ಬಾವಿಗಳು, ಕೆರೆಕಟ್ಟೆಗಳು, ನದೀ-ನದಗಳು, ಸುಂದರ ಸರೋವರಗಳು ಶೋಭಿಸುತ್ತಿದ್ದು, ಅವುಗಳಲ್ಲಿ ಅಮೃತದಂತಹ ನೀರು ತುಂಬಿತ್ತು. ಅವುಗಳಿಗೆ ಮಣಿಮಯ ಸೋಪಾನಗಳಿದ್ದವು. ಮಕರಂದ ರಸವನ್ನುಂಡು ಮತ್ತೇರಿದ ದುಂಬಿಗಳ ಸಮೂಹಗಳು ಗುಂಜಾರವ ಮಾಡುತ್ತಿದ್ದವು. ರಂಗು-ರಂಗಿನ ಪಕ್ಷಿಗಳು ಇಂಚರಗೈಯುತ್ತಿದ್ದವು. ವಿವಿಧ ವರ್ಣದ ಕಮಲಗಳು ಅರಳಿದ್ದವು. ಎಲ್ಲ ಋತುಗಳಲ್ಲಿಯೂ ಸುಖವನ್ನುಂಟುಮಾಡುವ ಶೀತಲ, ಮಂದ, ಸುಗಂಧ ಸಮೀರ ಬೀಸುತ್ತಿತ್ತು. (ಚೌ/೧-೪)

**ದೋ – ಸುಮನ ಬಾಟಿಕಾ ಬಾಗ ಬನ ಬಿಪುಲ ಬಿಹಂಗ ನಿವಾಸ ।**
**ಫೂಲತ ಫಲತ ಸುಪಲ್ಲವತ ಸೋಹತ ಪುರ ಚಹುಂ ಪಾಸ ॥ ೨೧೨ ॥**

ನಗರದ ಸುತ್ತಲೂ ಪಕ್ಷಿಗಳಿಗೆ ನೆಲೆಯಾದ ಉದ್ಯಾನಗಳೂ, ಹೂದೋಟಗಳು ಇದ್ದು, ಅವುಗಳು ಫಲ-ಪುಷ್ಪ, ಸುಂದರವಾದ ಎಲೆಗಳಿಂದ ಸಶೋಭಿತವಾಗಿದ್ದವು. (ದೋ/೨೧೨)

**ಚೌ – ಬನಇ ನ ಬರನತ ನಗರ ನಿಕಾಈ । ಜಹಾಂ ಜಾಇ ಮನ ತಹಂಇಂ ಲೊಭಾಈ ॥**
**ಚಾರು ಬಜಾರು ಬಿಚಿತ್ರ ಅಂಬಾರೀ । ಮನಿಮಯ ಬಿಧಿ ಜನು ಸ್ವಕರ ಸಂವಾರೀ ॥ ೧ ॥**
**ಧನಿಕ ಬನಿಕ ಬರ ಧನದ ಸಮಾನಾ । ಬೈಠೇ ಸಕಲ ಬಸ್ತು ಲೈ ನಾನಾ ॥**
**ಚೌಹಟ ಸುಂದರ ಗಲೀಂ ಸುಹಾಈ । ಸಂತತ ರಹಹಿಂ ಸುಗಂಧ ಸಿಂಚಾಈ ॥ ೨ ॥**
**ಮಂಗಲಮಯ ಮಂದಿರ ಸಬ ಕೇರೇಂ । ಚಿತ್ರಿತ ಜನು ರತಿನಾಥ ಚಿತೇರೇಂ ॥**
**ಪುರ ನರ ನಾರಿ ಸುಭಗ ಸುಚಿ ಸಂತಾ । ಧರಮಸೀಲ ಗ್ಯಾನೀ ಗುನವಂತಾ ॥ ೩ ॥**
**ಅತಿ ಅನೂಪ ಜಹಂ ಜನಕ ನಿವಾಸೂ । ಬಿಥಕಹಿಂ ಬಿಬುಧ ಬಿಲೋಕಿ ಬಿಲಾಸೂ ॥**
**ಹೋತ ಚಕಿತ ಚಿತ ಕೋಟ ಬಿಲೋಕೀ । ಸಕಲ ಭುವನ ಸೋಭಾ ಜನು ರೋಕೀ ॥ ೪ ॥**

ಆ ನಗರದ ಚೆಲುವು ವರ್ಣನಾತೀತ. ಮನ ಹೋದಲೆಲ್ಲ ಮಾರುಹೋಗುತ್ತಿತ್ತು. ಸುಂದರವಾದ ಪೇಟೆಗಳು, ಮಣಿಮಯ ಚಿತ್ರವಾಗಿರುವ ಅಟ್ಟಾಲಿಕೆಗಳು, ಬ್ರಹ್ಮನು ತನ್ನ ಕೈಯಾರೆ ನಿರ್ಮಿಸಿದ್ದನೋ ಎನ್ನುವಂತೆ ಮನೋಹರವಾಗಿದ್ದವು. ಕುಬೇರನಿಗೆ ಸಮಾನರಾದ ಧನಿಕ ವರ್ತಕರು ಅನೇಕವಿಧವಾದ ವಸ್ತುಗಳನ್ನು ಅಣಿಗೊಳಿಸಿ ಅಂಗಡಿಗಳಲ್ಲಿ ಕುಳಿತಿದ್ದರು. ಪರಿಶುಭ್ರವಾದ ವೀಥಿಗಳು, ಸುಂದರವಾದ ವೃತ್ತಗಳು ಸುಗಂಧಜಲದಿಂದ ಸಿಂಚಿತವಾಗಿದ್ದವು. ಎಲ್ಲರ ಮನೆಗಳು ಮಂಗಳಮಯವಾಗಿದ್ದು, ಅಂಗಳಗಳು ರಂಗವಲ್ಲಿಗಳಿಂದ ಅಲಂಕೃತವಾಗಿದ್ದವು. ಗೋಡೆಗಳು ಕಾಮದೇವನೇ ಚಿತ್ರಬಿಡಿಸಿರುವನೇ ಎಂಬಂತೆ ಚಿತ್ತಾರಗಳಿಂದ ಶೋಭಿಸುತ್ತಿದ್ದವು. ಆ ನಗರದ ಸ್ತ್ರೀ-ಪುರುಷರೆಲ್ಲರೂ ಸುಂದರರೂ, ಪವಿತ್ರರೂ, ಸಾಧುಸ್ವಭಾವದವರೂ, ಧರ್ಮಾತ್ಮರೂ, ಜ್ಞಾನಿಗಳೂ ಹಾಗೂ ಗುಣವಂತರಾಗಿದ್ದರು. ಅತ್ಯಂತ ಅನುಪಮ ಸುಂದರವಾದ ಜನಕ ಮಹಾರಾಜನ ಅರಮನೆಯ ಐಶ್ವರ್ಯ-ವೈಭವಗಳನ್ನು ಕಂಡು ದೇವತೆಗಳೂ ಬೆರಗುಗೊಳ್ಳುತ್ತಿದ್ದರು. ಸುತ್ತಲ ಕೋಟೆಯು ಎಲ್ಲರನ್ನು ಚಕಿತಗೊಳಿಸುವಂತಹುದು. ಆ ರಾಜ ಪ್ರಾಸಾದದ ಶೋಭೆಯನ್ನು ನೋಡುವವರಿಗೆ, ಭವನದ ವೈಭವ, ಚೆಲುವನ್ನು ತನ್ನಲ್ಲೇ ತಡೆಹಿಡಿದಿಟ್ಟುಕೊಂಡಿದೆಯೋ ಎಂಬಂತೆ ಕಾಣುತ್ತಿತ್ತು. (ಚೌ/೧-೪)

**ದೋ – ಧವಲ ಧಾಮ ಮನಿ ಪುರಟ ಪಟ ಸುಘಟಿತ ನಾನಾ ಭಾಂತಿ ।**
**ಸಿಯ ನಿವಾಸ ಸುಂದರ ಸದನ ಸೋಭಾ ಕಿಮಿ ಕಹಿ ಜಾತಿ ॥ ೨೧೩ ॥**

ಉಜ್ವಲವಾದ ರಾಜ ಮಹಲುಗಳಲ್ಲಿ ಅನೇಕ ಪ್ರಕಾರದಿಂದ ನಿರ್ಮಿಸಲ್ಪಟ್ಟ ಮಣಿಜಟಿತ ಚಿನ್ನದ ಜಾಲರಿಗಳ ಪರದೆಗಳು ತೂಗುತ್ತಿದ್ದವು. ಸೀತಾದೇವಿಯು ವಾಸಿಸುವ ಸುಂದರ ಸದನದ ಸೌಂದರ್ಯವನ್ನು ವರ್ಣಿಸಲಸದಳವಾದುದು. (ದೋ/೨೧೩)

**ಚೌ – ಸುಭಗ ದ್ವಾರ ಸಬ ಕುಲಿಸ ಕಪಾಟಾ । ಭೂಪ ಭೀರ ನಟ ಮಾಗಧ ಭಾಟಾ ॥**
**ಬನೀ ಬಿಸಾಲ ಬಾಜಿ ಗಜ ಸಾಲಾ । ಹಯ ಗಯ ರಥ ಸಂಕುಲ ಸಬ ಕಾಲಾ ॥ ೧ ॥**
**ಸೂರ ಸಚಿವ ಸೇನಪ ಬಹುತೇರೆ । ನೃಪಗೃಹ ಸರಿಸ ಸದನ ಸಬ ಕೇರೇ ॥**
**ಪುರ ಬಾಹೆರ ಸರ ಸರಿತ ಸಮೀಪಾ । ಉತರೇ ಜಹ್ ತಹ್ ಬಿಪುಲ ಮಹೀಪಾ ॥ ೨ ॥**
**ದೇಖಿ ಅನೂಪ ಏಕ ಅँವರಾಈ । ಸಬ ಸುಪಾಸ ಸಬ ಭಾಂತಿ ಸುಹಾಈ ॥**
**ಕೌಸಿಕ ಕಹೆಉ ಮೋರ ಮನು ಮಾನಾ । ಇಹಾँ ರಹಿಅ ರಘುಬೀರ ಸುಜಾನಾ ॥ ೩ ॥**
**ಭಲೆಹಿं ನಾಥ ಕಹಿ ಕೃಪಾನಿಕೇತಾ । ಉತರೇ ತಹ್ ಮುನಿಬೃಂದ ಸಮೇತಾ ॥**
**ಬಿಸ್ವಾಮಿತ್ರ ಮಹಾಮುನಿ ಆಏ । ಸಮಾಚಾರ ಮಿಥಿಲಾಪತಿ ಪಾಏ ॥ ೪ ॥**

ರಾಜಭವನದ ದ್ವಾರಗಳು ವಜ್ರಖಚಿತ ಕವಾಟಗಳಿಂದ ಅಲಂಕೃತವಾಗಿದ್ದವು. ಅಲ್ಲಿ ಸಾಮಂತರ, ನಟರ, ಭಟರ, ವಂದಿ, ಮಾಗಧರ ಸಂದಣಿಯೇ ನೆರೆದಿರುತ್ತಿತ್ತು. ವಿಶಾಲವಾದ ಅಶ್ವಶಾಲೆಗಳೂ, ಗಜಶಾಲೆಗಳೂ, ರಥಶಾಲೆಗಳೂ, ಅಸಂಖ್ಯಾತವಾದ ಗಜ, ಹಯ, ರಥಗಳಿಂದ ತುಂಬಿರುತ್ತಿದ್ದವು. ಆ ಊರಿನಲ್ಲಿ ಅನೇಕಮಂದಿ ಶೂರವೀರರೂ, ಮಂತ್ರಿ, ಸೇನಾಪತಿಗಳಿದ್ದರು. ಅವರೆಲ್ಲರ ಮನೆಗಳೂ ಕೂಡ ಅರಮನೆಯಂತೆ ಭವ್ಯವಾಗಿದ್ದವು. ಊರ ಹೊರಗೆ ಕೆರೆ, ಹೊಳೆಗಳ ದಡದಲ್ಲಿ ಅನೇಕ ರಾಜಮಹಾರಾಜರು ಬಿಡಾರ ಹೂಡಿದ್ದರು. ಅಲ್ಲೇ ಸನಿಹದಲ್ಲೇ ಎಲ್ಲ ರೀತಿಯ ಸೌಲಭ್ಯಗಳಿಂದೊಡಗೂಡಿದ ಒಂದು ಮಾವಿನತೋಪನ್ನು ಕಂಡು ವಿಶ್ವಾಮಿತ್ರರು – ''ರಘುವೀರಾ! ಈ ಪ್ರದೇಶವು ನನಗೆ ತುಂಬಾ ಇಷ್ಟವಾಗಿದೆ. ಇಲ್ಲೇ ತಂಗೋಣ'' ಎಂದು ಹೇಳಿದರು. ಕೃಪಾನಿಕೇತನನಾದ ಶ್ರೀರಾಮನು – ''ಗುರುಗಳೇ – ಹಾಗೆಯೇ ಆಗಲೀ'' ಎಂದು ಹೇಳಿ ಮುನಿಗಳ ಸಮೂಹದೊಂದಿಗೆ ಅಲ್ಲೇ ತಂಗಿದನು. ವಿಶ್ವಾಮಿತ್ರರ ಆಗಮನದ ವಾರ್ತೆಯನ್ನು ಸೇವಕರು ಜನಕಮಹಾರಾಜನಿಗೆ ಮುಟ್ಟಿಸಿದರು. (ಚೌ/೧-೪)

**ದೋ – ಸಂಗ ಸಚಿವ ಸುಚಿ ಭೂರಿ ಭಟ ಭೂಸುರ ಬರ ಗುರ ಗ್ಯಾತಿ ।**
**ಚಲೇ ಮಿಲನ ಮುನಿನಾಯಕಹಿ ಮುದಿತ ರಾಉ ಏಹಿ ಭಾಂತಿ ॥ ೨೧೪ ॥**

ವಾರ್ತೆಯು ಮುಟ್ಟಿದಾಕ್ಷಣ ಜನಕ ಮಹಾರಾಜನು ತನ್ನ ಸ್ವಾಮಿಭಕ್ತ ಮಂತ್ರಿಗಳು, ಸುಭಟರು, ಭೂಸುರರು, ಗುರು ಶತಾನಂದರೂ ಹಾಗೂ ಅನೇಕಬಂಧುಗಳೊಡಗೂಡಿ ಸಂತೋಷದಿಂದ ಮುನಿಯನ್ನು ಇದಿರುಗೊಳ್ಳಲು ಹೊರಟನು. (ದೋ/೨೧೪)

**ಚೌ – ಕೀನ್ಹ ಪ್ರನಾಮು ಚರನ ಧರಿ ಮಾಥಾ । ದೀನ್ಹಿ ಅಸೀಸ ಮುದಿತ ಮುನಿನಾಥಾ ॥**
**ಬಿಪ್ರ ಬೃಂದ ಸಬ ಸಾದರ ಬಂದೇ । ಜಾನಿ ಭಾಗ್ಯ ಬಡ ರಾಉ ಅನಂದೇ ॥ ೧ ॥**
**ಕುಸಲ ಪ್ರಸ್ನಕಹಿ ಬಾರಹಿं ಬಾರಾ । ಬಿಸ್ವಾಮಿತ್ರ ನೃಪಹಿ ಬೈಠಾರಾ ॥**
**ತೆಹಿ ಅವಸರ ಆಏ ದೊಉ ಭಾಈ । ಗಏ ರಹೇ ದೇಖನ ಫುಲವಾಈ ॥ ೨ ॥**
**ಸ್ಯಾಮ ಗೌರ ಮೃದು ಬಯಸ ಕಿಸೋರಾ । ಲೋಚನ ಸುಖದ ಬಿಸ್ವಚಿತ ಚೋರಾ ॥**
**ಉಠೇ ಸಕಲ ಜಬ ರಘುಪತಿ ಆಏ । ಬಿಸ್ವಾಮಿತ್ರ ನಿಕಟ ಬೈಠಾಏ ॥ ೩ ॥**
**ಭಏ ಸಬ ಸುಖೀ ದೇಖಿ ದೊಉ ಭ್ರಾತಾ । ಬಾರಿ ಬಿಲೋಚನ ಪುಲಕಿತ ಗಾತಾ ॥**
**ಮೂರತಿ ಮಧುರ ಮನೋಹರ ದೇಖೀ । ಭಯಉ ಬಿದೇಹು ಬಿದೇಹು ಬಿಸೇಷೀ ॥ ೪ ॥**

ಜನಕ ಮಹಾರಾಜನು ವಿಶ್ವಾಮಿತ್ರರ ಪಾದಗಳಲ್ಲಿ ಸಾಷ್ಟಾಂಗ ನಮಸ್ಕರಿಸಿದನು. ಮುನಿಯು ಪ್ರಸನ್ನನಾಗಿ ಅವನನ್ನು ಆಶೀರ್ವದಿಸಿದನು. ಅನಂತರ ಜನಕನು ಅಲ್ಲಿದ್ದ ವಿಪ್ರವೃಂದಕ್ಕೆ ಆದರದಿಂದ ವಂದಿಸಿಕೊಂಡನು. ನಿಮ್ಮ ದರ್ಶನದಿಂದ ನಾನು ಧನ್ಯನಾದೆನು ಎಂದು ಹೇಳುತ್ತಾ, ಅಮಿತಾನಂದವನ್ನು ಹೊಂದಿದನು. ಕುಶಲಪ್ರಶ್ನೆಗಳಾದ ಬಳಿಕ ಮಹರ್ಷಿ ವಿಶ್ವಾಮಿತ್ರರು ಜನಕರಾಜನನ್ನು ಕುಳ್ಳಿರಿಸಿದನು. ಅದೇ ವೇಳೆಗೆ ಹೂದೋಟವನ್ನು ನೋಡಲು ಹೋಗಿದ್ದ ರಾಮ-ಲಕ್ಷ್ಮಣರಿಬ್ಬರೂ ಅಲ್ಲಿಗೆ

ಬಂದರು. ಸುಕುಮಾರ ಕಿಶೋರರಾದ ಆ ಶ್ಯಾಮ ಮತ್ತು ಗೌರವರ್ಣದ ಕುಮಾರರು, ಕಣ್ಣುಗಳಿಗೆ ಮುದವನ್ನು ನೀಡುವವರೂ, ವಿಶ್ವಚಿತ್ತಾಪಹಾರಿಗಳೂ ಆದ ರಘುನಾಥರು ಅಲ್ಲಿಗೆ ಬಂದಾಗ ಎಲ್ಲರೂ ಅವರ ತೇಜ, ರೂಪಗಳಿಗೆ ಪ್ರಭಾವಿತರಾಗಿ ಎದ್ದುನಿಂತರು. ವಿಶ್ವಾಮಿತ್ರರು ಅವರನ್ನು ಬಳಿಯಲ್ಲಿ ಕುಳ್ಳಿರಿಸಿಕೊಂಡರು. ಅಣ್ಣ-ತಮ್ಮಂದಿರಿಬ್ಬರನ್ನೂ ಕಂಡು ಎಲ್ಲರಿಗೂ ಆನಂದವಾಯಿತು. ಎಲ್ಲರ ಕಣ್ಣುಗಳಲ್ಲಿಯೂ ಆನಂದಬಾಷ್ಪಗಳು ತುಂಬಿಬಂದವು. ಶರೀರಗಳು ಪುಳಕಿತವಾದುವು. ಶ್ರೀರಾಮನ ಮಧುರ ಮನೋಹರ ಮೂರ್ತಿಯನ್ನು ಕಂಡು ವಿದೇಹ (ಜನಕ)ನು ನಿಜವಾಗಿ ವಿದೇಹನಾದನು (ಮೈಮರೆತನು). (ಚೌ/೧-೪)

**ದೋ – ಪ್ರೇಮ ಮಗನ ಮನು ಜಾನಿ ನೃಪು ಕರಿ ಬಿಬೇಕು ಧರಿ ಧೀರ ।**
**ಬೋಲೆಉ ಮುನಿ ಪದ ನಾಇ ಸಿರು ಗದಗದ ಗಿರಾ ಗಭೀರ ॥ ೨೧೫ ॥**

ಆನಂದಪರವಶನಾದ ತನ್ನ ಮನಸ್ಸನ್ನು, ವಿವೇಕದಿಂದ ಸಾವರಿಸಿಕೊಂಡು ಮುನಿಯ ಪಾದಗಳಿಗೆ ಎರಗಿ, ಗಂಭೀರವೂ, ಗದ್ಗದವೂ ಆದ ವಾಣಿಯಿಂದ ಇಂತೆಂದನು. (ದೋ/೨೧೫)

**ಚೌ – ಕಹಹು ನಾಥ ಸುಂದರ ದೋಉ ಬಾಲಕ । ಮುನಿಕುಲ ತಿಲಕ ಕಿ ನೃಪ ಕುಲ ಪಾಲಕ ॥**
**ಬ್ರಹ್ಮ ಜೊ ನಿಗಮ ನೇತಿ ಕಹಿ ಗಾವಾ । ಉಭಯ ಬೇಷ ಧರಿ ಕೀ ಸೋಇ ಆವಾ ॥ ೧ ॥**
**ಸಹಜ ಬಿರಾಗರೂಪ ಮನು ಮೋರಾ । ಥಕಿತ ಹೋತ ಜಿಮಿ ಚಂದ ಚಕೋರಾ ॥**
**ತಾತೇ ಪ್ರಭು ಪೂಛಉಁ ಸತಿಭಾಊ । ಕಹಹು ನಾಥ ಜನಿ ಕರಹು ದುರಾಊ ॥ ೨ ॥**
**ಇನ್ಹಹಿ ಬಿಲೋಕತ ಅತಿ ಅನುರಾಗಾ । ಬರಬಸ ಬ್ರಹ್ಮಸುಖಹಿ ಮನ ತ್ಯಾಗಾ ॥**
**ಕಹ ಮುನಿ ಬಿಹಸಿ ಕಹೆಹು ನೃಪ ನೀಕಾ । ಬಚನ ತುಮ್ಹಾರ ನ ಹೋಇ ಅಲೀಕಾ ॥ ೩ ॥**
**ಏ ಪ್ರಿಯ ಸಬಹಿ ಜಹಾಁ ಲಗಿ ಪ್ರಾನೀ । ಮನ ಮುಸುಕಾಹಿಁ ರಾಮು ಸುನಿ ಬಾನೀ ॥**
**ರಘುಕುಲ ಮನಿ ದಸರಥ ಕೇ ಜಾಏ । ಮಮ ಹಿತ ಲಾಗಿ ನರೇಸ ಪಠಾಏ ॥ ೪ ॥**

''ಪೂಜ್ಯರೇ! ಈ ಇಬ್ಬರು ಬಾಲಕರು ಮುನಿಕುಲತಿಲಕರೋ, ಇಲ್ಲವೇ ಯಾರಾದರೂ ನೃಪಕುಲ ಪಾಲಕರೋ ತಿಳಿಸಿರಿ. ಅಥವಾ ವೇದಗಳು 'ನೇತಿ-ನೇತಿ' ಎಂದು ಹೊಗಳುತ್ತಿರುವ ನಿರ್ಗುಣ-ನಿರಾಕಾರವಾದ ಪರಬ್ರಹ್ಮವೇ ಏನಾದರೂ ಸಗುಣ-ಸಾಕಾರವಾಗಿ ಯುಗಳರೂಪವನ್ನು ಧರಿಸಿ ಬಂದಿರುವರೋ? ದಯವಿಟ್ಟು ತಿಳಿಸಿರಿ. ಸಹಜವಾಗಿಯೇ ವೈರಾಗ್ಯಪೂರ್ಣವಾದ ನನ್ನ ಮನಸ್ಸು, ಇವರನ್ನು ಕಂಡು ಚಂದ್ರನನ್ನು ಕಂಡ ಚಕೋರದಂತೆ ಮುಗ್ಧವಾಗುತ್ತಿದೆ. ಮುನಿವರ್ಯರೇ! ನಿಜವಾಗಿ ಇವರಾರು? ಎಂಬುದನ್ನು ಮರೆಮಾಚದೆ ದಯಮಾಡಿ ತಿಳಿಸೋಣವಾಗಲಿ. ಇವರನ್ನು ನೋಡಿದ ಬಳಿಕ ನನ್ನ ಮನಸ್ಸು ಪ್ರೇಮಪರವಶರಾಗಿ ಬ್ರಹ್ಮಸುಖವನ್ನು ತೊರೆದುಬಿಟ್ಟಿದೆ.'' ಆಗ ಮುನಿವರ್ಯರು ನಕ್ಕು ನುಡಿದರು – ''ರಾಜನೇ! ನೀನು ಸರಿಯಾಗಿ ಹೇಳಿದೆ. ನಿನ್ನ ಮಾತು ಎಲ್ಲಾದರೂ ಸುಳ್ಳಾದೀತೇ? ಪ್ರಪಂಚದಲ್ಲಿರುವ ಸಮಸ್ತ ಪ್ರಾಣಿಗಳಿಗೂ ಇವರು ಪ್ರಿಯತಮರು.'' ಮುನಿಯ ಮಾತನ್ನು ಕೇಳಿ, ರಾಮನು ಮನದಲ್ಲೇ ನಕ್ಕುಬಿಟ್ಟನು. ಆ ನಗುವು ರಹಸ್ಯವನ್ನು ಬಯಲು ಮಾಡದಿರಿ ಎಂದು ಸೂಚಿಸುತ್ತಿರುವನೋ ಎಂದಿತ್ತು. ಆಗ ಮುನಿಯು ಹೇಳಿದರು – ಇವರು ರಘುಕುಲಶ್ರೇಷ್ಠನಾದ ದಶರಥ ಮಹಾರಾಜರ ಕುಮಾರರು. ನನಗೆ ಸಹಾಯ ಮಾಡಲೋಸುಗ ನನ್ನೊಡನೆ ಕಳಿಸಿರುವನು. (ಚೌ/೧-೪)

**ದೋ – ರಾಮು ಲಖನು ದೋಉ ಬಂಧುಬರ ರೂಪ ಸೀಲ ಬಲ ಧಾಮ ।**
**ಮಖ ರಾಖೆಉ ಸಬು ಸಾಖಿ ಜಗು ಜಿತೇ ಅಸುರ ಸಂಗ್ರಾಮ ॥ ೨೧೬ ॥**

ರಾಮ-ಲಕ್ಷ್ಮಣವೆಂಬ ನಾಮಧೇಯವುಳ್ಳ ಈ ಸೋದರರು ರೂಪ, ಶೀಲ, ಬಲ ಸಂಪನ್ನರು. ಇವರು ಯುದ್ಧಮಾಡಿ ರಾಕ್ಷಸರನ್ನು ಕೊಂದು ನನ್ನ ಯಜ್ಞವನ್ನು ಕಾಪಾಡಿದುದು ಲೋಕವಿದಿತವಾಗಿದೆ. (ದೋ/೨೧೬)

**ಚೌ – ಮುನಿ ತವ ಚರನ ದೇಖಿ ಕಹ ರಾಊ । ಕಹಿ ನ ಸಕಉಁ ನಿಜ ಪುನ್ಯ ಪ್ರಭಾಊ ॥**
**ಸುಂದರ ಸ್ಯಾಮ ಗೌರ ದೋಉ ಭ್ರಾತಾ । ಆನँದಹೂ ಕೇ ಆನँದ ದಾತಾ ॥ ೧ ॥**
**ಇನ್ಹ ಕೈ ಪ್ರೀತಿ ಪರಸಪರ ಪಾವನಿ । ಕಹಿ ನ ಜಾಇ ಮನ ಭಾವ ಸುಹಾವನಿ ॥**
**ಸುನಹು ನಾಥ ಕಹ ಮುದಿತ ಬಿದೇಹೂ । ಬ್ರಹ್ಮ ಜೀವ ಇವ ಸಹಜ ಸನೇಹೂ ॥ ೨ ॥**
**ಪುನಿ ಪುನಿ ಪ್ರಭುಹಿ ಚಿತವ ನರನಾಹೂ । ಪುಲಕ ಗಾತ ಉರ ಅಧಿಕ ಉಛಾಹೂ ॥**
**ಮುನಿಹಿ ಪ್ರಸಂಸಿ ನಾಇ ಪದ ಸೀಸೂ । ಚಲೆಉ ಲವಾಇ ನಗರ ಅವನೀಸೂ ॥ ೩ ॥**

**ಸುಂದರ ಸದನು ಸುಖದ ಸಬ ಕಾಲಾ । ತಹಾँ ಬಾಸು ಲೈ ದೀನ್ಹ ಭುಆಲಾ ॥**
**ಕರಿ ಪೂಜಾ ಸಬ ಬಿಧಿ ಸೇವಕಾಈ । ಗಯಉ ರಾಉ ಗೃಹ ಬಿದಾ ಕರಾಈ ॥ ೪ ॥**

ಜನಕರಾಜನೆಂದನು – ''ಮುನೀಶ್ವರರೇ! ನನ್ನ ಪುಣ್ಯವಿಶೇಷದಿಂದಾಗಿ ನಿಮ್ಮ ಪಾದದರ್ಶನ ಭಾಗ್ಯವು ದೊರೆಯಿತು. ಈ ಸುಂದರ ಶ್ಯಾಮ-ಗೌರವರ್ಣದ ಸೋದರರು ಆನಂದಕ್ಕೂ ಆನಂದವನ್ನುಂಟುಮಾಡುವವರು. ಈ ಸೋದರರ ಪರಸ್ಪರ ಪ್ರೀತಿಯು ಅತ್ಯಂತ ಪವಿತ್ರವೂ, ಮನೋಹರವೂ ಆದುದು. ಮನಮೋಹಕವಾದುದು. ಬ್ರಹ್ಮ-ಜೀವರ ಅನುಬಂಧದಂತೆ ಇವರ ಪ್ರೇಮವು ಸಹಜವಾಗಿದೆ. ಅದು ಮಾತಿಗೆ ಮೀರಿದುದು.'' ವಿದೇಹ ಭೂಪತಿಯು ಶ್ರೀರಾಮಚಂದ್ರ ಪ್ರಭುವನ್ನು ತದೇಕದೃಷ್ಟಿಯಿಂದ ನೋಡುತ್ತಾ, ಅವನ ಶರೀರವು ಆನಂದ ಪುಲಕಿತವಾಗುತ್ತದೆ. ಮನಸ್ಸಿನಲ್ಲಿ ಉತ್ಸಾಹದ ಉಬ್ಬರವೇಳುತ್ತದೆ. ವಿಶ್ವಾಮಿತ್ರಮುನಿಯನ್ನು ಜನಕನು ಪ್ರಶಂಸಿಸುತ್ತಾ ಅವರ ಕಾಲಿಗೆರಗಿ ಊರೊಳಗೆ ಕರಕೊಂಡು ಹೋದನು. ಎಲ್ಲ ಋತುಗಳಲ್ಲಿಯೂ ಸುಖದಾಯಕವಾದ ಒಂದು ಸುಂದರ ಮಹಲಿನಲ್ಲಿ ಅವರ ವಸತಿಗೆ ಏರ್ಪಾಡುಮಾಡಿದನು. ಉಚಿತವಾದ ಎಲ್ಲರೀತಿಯ ಪೂಜೆ, ಸೇವೆ ಸಲ್ಲಿಸಿ ರಾಜನು ಮುನಿಯ ಅಪ್ಪಣೆಪಡೆದು ಅರಮನೆಗೆ ಮರಳಿದನು. (ಚೌ/೧-೪)

**ದೋ – ರಿಷಯ ಸಂಗ ರಘುಬಂಸ ಮನಿ ಕರಿ ಭೋಜನು ಬಿಶ್ರಾಮು ।**
**ಬೈಠೇ ಪ್ರಭು ಭ್ರಾತಾ ಸಹಿತ ದಿವಸು ರಹಾ ಭರಿ ಜಾಮು ॥ ೨೧೭ ॥**

ರಘುವಂಶ ಶಿರೋಮಣಿಯಾದ ಶ್ರೀರಾಮನು ಋಷಿಗಳೊಡಗೂಡಿ, ಭೋಜನಾದಿಗಳನ್ನು ಮುಗಿಸಿ, ವಿಶ್ರಾಂತಿಯನ್ನು ಪಡೆದು, ಲಕ್ಷ್ಮಣನೊಡನೆ ಕುಳಿತುಕೊಂಡಿದ್ದನು. ಆಗ ಒಂದು ಜಾವಮಾತ್ರ ಹಗಲು ಉಳಿದಿತ್ತು. (ದೋ/೨೧೭)

**ಚೌ – ಲಖನ ಹೃದಯँ ಲಾಲಸಾ ಬಿಸೇಷೀ । ಜಾಇ ಜನಕಪುರ ಆಇಅ ದೇಖೀ ॥**
**ಪ್ರಭು ಭಯ ಬಹುರಿ ಮುನಿಹಿ ಸಕುಚಾಹೀँ । ಪ್ರಗಟ ನ ಕಹಹಿँ ಮನಹಿँ ಮುಸುಕಾಹೀँ ॥ ೧ ॥**
**ರಾಮ ಅನುಜ ಮನ ಕೀ ಗತಿ ಜಾನೀ । ಭಗತ ಬಛಲತಾ ಹಿಯँ ಹುಲಸಾನೀ ॥**
**ಪರಮ ಬಿನೀತ ಸಕುಚಿ ಮುಸುಕಾಈ । ಬೋಲೇ ಗುರ ಅನುಸಾಸನ ಪಾಈ ॥ ೨ ॥**
**ನಾಥ ಲಖನು ಪುರು ದೇಖನ ಚಹಹೀँ । ಪ್ರಭು ಸಕೋಚ ಡರ ಪ್ರಗಟ ನ ಕಹಹೀँ ॥**
**ಜೌँ ರಾಉರ ಆಯಸು ಮೈँ ಪಾವೌँ । ನಗರ ದೆಖಾಇ ತುರತ ಲೈ ಆವೌँ ॥ ೩ ॥**
**ಸುನಿ ಮುನೀಸು ಕಹ ಬಚನ ಸಪ್ರೀತೀ । ಕಸ ನ ರಾಮ ತುಮ್ಹ ರಾಖಹು ನೀತೀ ।**
**ಧರಮ ಸೇತು ಪಾಲಕ ತುಮ್ಹ ತಾತಾ । ಪ್ರೇಮ ಬಿಬಸ ಸೇವಕ ಸುಖದಾತಾ ॥ ೪ ॥**

ಲಕ್ಷ್ಮಣನಲ್ಲಿ ಜನಕಪುರದ ಶೋಭೆಯನ್ನು ನೋಡಬೇಕೆಂಬ ಬಯಕೆ ತೀವ್ರವಾಗಿತ್ತು. ಆದರೆ ಅಣ್ಣನಾದ ಶ್ರೀರಾಮನ ಭಯ; ಮುನಿಯ ಆತಂಕ. ಆದ್ದರಿಂದ ಬಾಯಿಂದ ಏನನ್ನೂ ಹೇಳಲಾರದೆ ಮನಸ್ಸಿನಲ್ಲೇ ನಗುತ್ತಿದ್ದನು. ಅಂತರ್ಯಾಮಿಯಾದ ಶ್ರೀರಾಮಚಂದ್ರನಿಗೆ ತಮ್ಮನ ಮನೋಗತವು ಅರ್ಥವಾದಾಗ ಅವನ ಮನಸ್ಸಿನಲ್ಲಿ ಭಕ್ತ (ಸೋದರ) ವತ್ಸಲತೆ ಉಕ್ಕಿ ಹರಿಯಿತು. ಶ್ರೀರಾಮನು ಗುರುಗಳಿಂದ ಅಪ್ಪಣೆ ಪಡೆಯಲು ಅವರ ಬಳಿ ವಿನಯದಿಂದ, ಸಂಕೋಚಪಡುತ್ತಾ ಇಂತೆಂದನು – ''ಸ್ವಾಮಿ! ಲಕ್ಷ್ಮಣನು ನಗರದ ಶೋಭೆಯನ್ನು ನೋಡಲು ಬಯಸುತ್ತಿರುವನು. ಪೂಜ್ಯರೇ! ಆದರೆ ಭಯ ಸಂಕೋಚದಿಂದಾಗಿ ಬಾಯಿಬಿಟ್ಟು ಕೇಳಲಾರನು. ತಮ್ಮ ಅಪ್ಪಣೆಯಾದರೆ ನಾನು ಅವನಿಗೆ ಊರು ತೋರಿಸಿಕೊಂಡು ಬೇಗನೇ ಬಂದುಬಿಡುತ್ತೇನೆ. ಇದನ್ನು ಕೇಳಿ ವಿಶ್ವಾಮಿತ್ರರು ಪ್ರೇಮದಿಂದ – ಮಗು! ರಾಮಾ! ನೀತಿಯನ್ನೂ, ಧರ್ಮವನ್ನೂ ರಕ್ಷಿಸುವುದರಲ್ಲಿ ನೀನು ಅಸಮಾನನು. ಭಕ್ತಿಗೆ ವಶನು. ನೀನು ಸೇವಕರಿಗೆ ಸುಖಗಳನ್ನು ಕೊಡುವವನಾಗಿರುವೆ. (ಚೌ/೧-೪)

**ದೋ – ಜಾಇ ದೇಖಿ ಆವಹು ನಗರು ಸುಖ ನಿಧಾನ ದೊಉ ಭಾಇ ।**
**ಕರಹು ಸುಫಲ ಸಬ ಕೇ ನಯನ ಸುಂದರ ಬದನ ದೆಖಾಇ ॥ ೨೧೮ ॥**

ಸುಖನಿಧಾನರಾದ ನೀವಿಬ್ಬರೂ ಸೋದರರು ಹೋಗಿ ನಗರದ ಶೋಭೆಯನ್ನು ನೋಡಿಕೊಂಡು ಬನ್ನಿ. ನಿಮ್ಮ ತನು ಸೌಂದರ್ಯದಿಂದಾಗಿ ನಗರದ ಪ್ರಜೆಗಳು ನೇತ್ರಾನಂದವನ್ನು ಪಡೆಯುವರು. ನಿಮ್ಮನ್ನು ಕಣ್ಣುಗಳಿಂದ ನೋಡಿದ ಪೌರರ ಜನ್ಮವು ಸಫಲವಾಗುವುದು. (ದೋ/೨೧೮)

**ಮುನಿ ಪದ ಕಮಲ ಬಂದಿ ದೊಉ ಭ್ರಾತಾ । ಚಲೇ ಲೋಕ ಲೋಚನ ಸುಖ ದಾತಾ ॥**
**ಬಾಲಕ ಬೃಂದ ದೇಖಿ ಅತಿ ಸೋಭಾ । ಲಗೇ ಸಂಗ ಲೋಚನ ಮನು ಲೋಭಾ ॥ ೧ ॥**

**ಪೀತ ಬಸನ ಪರಿಕರ ಕಟಿ ಭಾಥಾ । ಚಾರು ಚಾಪ ಸರ ಸೋಹತ ಹಾಥಾ ॥**
**ತನ ಅನುಹರತ ಸುಚಂದನ ಖೋರೀ । ಸ್ಯಾಮಲ ಗೌರ ಮನೋಹರ ಜೋರೀ ॥ ೨ ॥**
**ಕೇಹರಿ ಕಂಧರ ಬಾಹು ಬಿಸಾಲಾ । ಉರ ಅತಿ ರುಚಿರ ನಾಗಮನಿ ಮಾಲಾ ॥**
**ಸುಭಗ ಸೋನ ಸರಸೀರುಹ ಲೋಚನ । ಬದನ ಮಯಂಕ ತಾಪತ್ರಯ ಮೋಚನ ॥ ೩ ॥**
**ಕಾನನ್ಹಿ ಕನಕ ಫೂಲ ಛಬಿ ದೇಹೀಂ । ಚಿತವತ ಚಿತಹಿ ಚೋರಿ ಜನು ಲೇಹೀಂ ॥**
**ಚಿತವನಿ ಚಾರು ಭೃಕುಟಿ ಬರ ಬಾಂಕೀ । ತಿಲಕ ರೇಖ ಸೋಭಾ ಜನು ಚಾಂಕೀ ॥ ೪ ॥**

ಲೋಕಲೋಚನ ಸುಖದಾತರಾದ ಅವರಿಬ್ಬರೂ ಮುನಿಯ ಪಾದಕ್ಕೆ ನಮಸ್ಕರಿಸಿಕೊಂಡು ಹೊರಟರು. ಬಾಲಕರ ತಂಡಗಳು ರಾಮ-ಲಕ್ಷ್ಮಣರ ಅದ್ಭುತ ಸೌಂದರ್ಯಕ್ಕೆ ಮನಸೋತು ಅವರನ್ನು ಹಿಂಬಾಲಿಸಿದವು. ಅವರ ಕಣ್ಮನಗಳು ಇವರ ರೂಪಮಾಧುರಿಗೆ ಮಾರುಹೋದುವು. ಅಣ್ಣ-ತಮ್ಮಂದಿರಿಬ್ಬರೂ ಪೀತಾಂಬರವನ್ನು ತೊಟ್ಟಿದ್ದರು. ಸೊಂಟಕ್ಕೆ ಬಿಗಿದ ದಟ್ಟಿಯಲ್ಲಿ ಬತ್ತಳಿಕೆ ತೂಗುತ್ತಿದ್ದು, ಕೈಗಳಲ್ಲಿ ಸುಂದರವಾದ ಧನುಷ್ಯ ಬಾಣಗಳಿದ್ದವು. ಶ್ಯಾಮಲ-ಗೌರವರ್ಣ ಶರೀರಕ್ಕೆ ಅನುಗುಣವಾದ ಚಂದನವನ್ನು ಪೂಸಿಕೊಂಡು, ಸುಂದರ ತಿಲಕ ತಿದ್ದಿಕೊಂಡಿದ್ದು, ಶ್ಯಾಮ-ಗೌರವರ್ಣದ ಈ ಜೋಡಿಯನ್ನು ನೋಡುಗರಿಗೆ ಅಮಿತಾನಂದವನ್ನು ಉಂಟುಮಾಡುತ್ತಿತ್ತು. ಸಿಂಹಸದೃಶವಾದ ಕಂಠದಿಂದಲೂ, ಆಜಾನುಬಾಹುಗಳಿಂದಲೂ, ವಿಶಾಲವಾದ ವಕ್ಷಸ್ಥಳದಲ್ಲಿ ಗಜಮುಕ್ತಾಮಾಲೆಗಳಿಂದಲೂ, ಚೆಲುವಾದ ಕೆಂದಾವರೆಯಂತಹ ಕಣ್ಣುಗಳಿಂದಲೂ, ತಾಪತ್ರಯಗಳನ್ನು ಹರಿಸುವ ಚಂದ್ರವದನ ಶೋಭೆಯಿಂದ ವಿರಾಜಮಾನರಾಗಿದ್ದರು. ಅವರು ಸುವರ್ಣಮಯ ಕರ್ಣಕುಂಡಲಗಳನ್ನು ಧರಿಸಿದ್ದರು. ನೋಡಿದಕೂಡಲೇ ಅವು ಮನಸ್ಸನ್ನು ಸೂರೆಗೊಳ್ಳುವಂತಿತ್ತು. ಅವರ ದೃಷ್ಟಿಯು ಅತ್ಯಂತ ಮನೋಹರವಾಗಿದ್ದು, ಡೊಂಕಾದ ಹುಬ್ಬುಗಳ ಚೆಲುವು ಹೇಳತೀರದು. ಮೈವೆತ್ತ ಚೆಲುವಿನ ಮೇಲೆ ಮೊಹರು ಒತ್ತಿದಂತೆ ಹಣೆಯಮೇಲೆ ತಿದ್ದಿದ ತಿಲಕವು ಶೋಭಿಸುತ್ತಿತ್ತು. (ಚೌ/೧-೪)

**ದೋ – ರುಚಿರ ಚೌತನೀಂ ಸುಭಗ ಸಿರ ಮೇಚಕ ಕುಂಚಿತ ಕೇಸ ।**
**ನಖ ಸಿಖ ಸುಂದರ ಬಂಧು ದೋಉ ಸೋಭಾ ಸಕಲ ಸುದೇಸ ॥ ೨೧೯ ॥**

ಅವರು ತಲೆಯಮೇಲೆ ಚೆಲುವಾದ ನಾಲ್ಕು ಮೂಲೆಗಳ ಟೋಪಿಯನ್ನು ಧರಿಸಿದ್ದರು. ಕಪ್ಪಾದ ಗುಂಗುರು ಕೂದಲುಗಳಿದ್ದು, ಅಡಿಯಿಂದ ಮುಡಿಯವರೆಗೆ ಸೌಂದರ್ಯವು ವರ್ಣನಾತೀತವಾಗಿತ್ತು. (ದೋ/೨೧೯)

**ಚೌ – ದೇಖನ ನಗರ ಭೂಪಸುತ ಆಏ । ಸಮಾಚಾರ ಪುರಬಾಸಿನ್ಹ ಪಾಏ ॥**
**ಧಾಏ ಧಾಮ ಕಾಮ ಸಬ ತ್ಯಾಗೀ । ಮನಹುಁ ರಂಕ ನಿಧಿ ಲೂಟನ ಲಾಗೀ ॥ ೧ ॥**
**ನಿರಖಿ ಸಹಜ ಸುಂದರ ದೋಉ ಭಾಈ । ಹೋಹಿಂ ಸುಖೀ ಲೋಚನ ಫಲ ಪಾಈ ॥**
**ಜುಬತೀಂ ಭವನ ಝರೋಖನ್ಹಿ ಲಾಗೀಂ । ನಿರಖಹಿಂ ರಾಮ ರೂಪ ಅನುರಾಗೀಂ ॥ ೨ ॥**
**ಕಹಹಿಂ ಪರಸಪರ ಬಚನ ಸಪ್ರೀತೀ । ಸಖಿ ಇನ್ಹ ಕೋಟಿ ಕಾಮ ಛಬಿ ಜೀತೀ ॥**
**ಸುರ ನರ ಅಸುರ ನಾಗ ಮುನಿ ಮಾಹೀಂ । ಸೋಭಾ ಅಸಿ ಕಹುँ ಸುನಿಅತಿ ನಾಹೀಂ ॥ ೩ ॥**
**ಬಿಷ್ನು ಚಾರಿ ಭುಜ ಬಿಧಿ ಮುಖ ಚಾರೀ । ಬಿಕಟ ಬೇಷ ಮುಖ ಪಂಚ ಪುರಾರೀ ॥**
**ಅಪರ ದೇಉ ಅಸ ಕೋಉ ನ ಆಹೀ । ಯಹ ಛಬಿ ಸಖೀ ಪಟತರಿಅ ಜಾಹೀ ॥ ೪ ॥**

ಇಬ್ಬರು ರಾಜಕುಮಾರರು ನಗರವೀಕ್ಷಣೆಗಾಗಿ ಬಂದಿರುವರೆಂಬ ಸುದ್ದಿ ಕೇಳಿದಾಕ್ಷಣ, ಅವರನ್ನು ನೋಡಲು ಪುರಜನರು ತಮ್ಮ ಮನೆ-ಮಠ, ಕೆಲಸಕಾರ್ಯಗಳನ್ನು ತೊರೆದು, ಬಡವರು ಬೊಕ್ಕಸವನ್ನು ಕೊಳ್ಳೆಹೊಡೆಯಲು ಓಡುವಂತೆ ಓಡಿದರು. ಆ ಸೋದರರ ಸಹಜಸೌಂದರ್ಯವನ್ನು ನೋಡಿ, ತಮ್ಮ ಕಣ್ಣುಗಳು ಸಫಲವಾದುವು ಎಂದು ಅವರು ಆನಂದಿಸಿದರು. ಯುವತಿಯರು ಶ್ರೀರಾಮಚಂದ್ರನ ಅಪೂರ್ವ ಸೌಂದರ್ಯಾಮೃತವನ್ನು ಅನುರಾಗದಿಂದೊಡಗೂಡಿ ಕಿಟಕಿಗಳಿಂದ ಕಣ್ಣುಹಾಯಿಸಿ ಪಾನಮಾಡುತ್ತಿದ್ದರು. ಅವರು ಪ್ರೇಮವಿಹ್ವಲರಾಗಿ ಪರಸ್ಪರ ಹೀಗೆ ಸಂಭಾಷಿಸುತ್ತಿದ್ದರು – ಎಲೈ ಸಖೀ! ಕೋಟಿ ಮನ್ಮಥರ ಸೌಂದರ್ಯವೂ ಕೂಡ ಈತನ ಚೆಲುವಿಗೆ ಸರಿದೂಗಲಾರದು. ದೇವತೆಗಳಲ್ಲಿ, ಅಸುರರಲ್ಲಿ, ಮಾನವರಲ್ಲಿ, ನಾಗರಲ್ಲಿ, ಮುನಿಗಳಲ್ಲಿಯೂ ಕೂಡ ಇಂತಹ ಸೌಂದರ್ಯವಿರುವುದು ಇಂದಿನವರೆಗೆ ಕಂಡು-ಕೇಳಲಿಲ್ಲ. ವಿಷ್ಣುವು ನಾಲ್ಕು ಭುಜಗಳಿರುವವನು. ಬ್ರಹ್ಮನಿಗೆ ನಾಲ್ಕು ಮುಖಗಳು, ಶಿವನದೋ ವಿಕೃತವೇಷ. ಸಾಲದುದಕ್ಕೆ ಐದು ಮುಖಗಳು. ಗೆಳತಿ! ಆದ್ದರಿಂದ ಇವನನ್ನು ಹೋಲುವವರು ದೇವತೆಗಳಲ್ಲಿಯೂ ಯಾರೂ ಇಲ್ಲ. (ಚೌ/೧-೪)

**ದೋ – ಬಯ ಕಿಸೋರ ಸುಷಮಾ ಸದನ ಸ್ಯಾಮ ಗೌರ ಸುಖ ಧಾಮ ।**
**ಅಂಗ ಅಂಗ ಪರ ವಾರಿಅಹಿಂ ಕೋಟಿ ಕೋಟಿ ಸತ ಕಾಮ ॥ ೨೨೦ ॥**

ಇನ್ನೂ ಕಿಶೋರಾವಸ್ಥೆಯಲ್ಲಿರುವ, ಸೌಂದರ್ಯದ ನೆಲೆಯಾದ, ಶ್ಯಾಮ-ಗೌರವರ್ಣದಿಂದೊಡಗೂಡಿದ ಇವರು ಸುಖದ ಧಾಮರಾಗಿದ್ದಾರೆ. ಈ ರಾಜಕುಮಾರರ ಅಂಗಸೌಷ್ಠವದ ಮುಂದೆ ಕೋಟಿ-ಕೋಟಿ ಅನಂಗರನ್ನು ನಿವಾರಿಳಿ ಬಿಸಾಡಬೇಕು. (ದೋ/೨೨೦)

**ಚೌ – ಕಹಹು ಸಖೀ ಅಸ ಕೋ ತನುಧಾರೀ । ಜೋ ನ ಮೋಹ ಯಹ ರೂಪ ನಿಹಾರೀ ॥**
**ಕೋಉ ಸಪ್ರೇಮ ಬೋಲೀ ಮೃದು ಬಾನೀ । ಜೋ ಮೈಂ ಸುನಾ ಸೋ ಸುನಹು ಸಯಾನೀ ॥ ೧ ॥**
**ಏ ದೋಊ ದಸರಥ ಕೇ ಢೋಟಾ । ಬಾಲ ಮರಾಲನ್ಹಿ ಕೇ ಕಲ ಜೋಟಾ ॥**
**ಮುನಿ ಕೌಸಿಕ ಮಖ ಕೇ ರಖವಾರೇ । ಜಿನ್ಹ ರನ ಅಜಿರ ನಿಸಾಚರ ಮಾರೇ ॥ ೨ ॥**
**ಸ್ಯಾಮ ಗಾತ ಕಲ ಕಂಜ ಬಿಲೋಚನ । ಜೋ ಮಾರೀಚ ಸುಭುಜ ಮದು ಮೋಚನ ॥**
**ಕೌಸಲ್ಯಾ ಸುತ ಸೋ ಸುಖ ಖಾನೀ । ನಾಮು ರಾಮು ಧನು ಸಾಯಕ ಪಾನೀ ॥ ೩ ॥**
**ಗೌರ ಕಿಸೋರ ಬೇಷು ಬರ ಕಾಛೇಂ । ಕರ ಸರ ಚಾಪ ರಾಮ ಕೇ ಪಾಛೇಂ ॥**
**ಲಛಿಮನು ನಾಮು ರಾಮ ಲಘು ಭ್ರಾತಾ । ಸುನು ಸಖಿ ತಾಸು ಸುಮಿತ್ರಾ ಮಾತಾ ॥ ೪ ॥**

''ಸಖಿಯೇ! ಈ ರೂಪಸೌಂದರ್ಯವನ್ನು ನೋಡಿ, ಮುಗ್ಧರಾಗದ ಶರೀರಧಾರಿಗಳು ಯಾರಿದ್ದಾರೆ?'' (ಅಂದರೆ ಈ ರೂಪವು ಜಡ-ಚೇತನ ಹೀಗೆ ಎಲ್ಲರನ್ನೂ ಮೋಹಗೊಳಿಸುವಂತಹದು.) ಇನ್ನೊಬ್ಬ ಸಖಿಯು ತನ್ನ ಮೃದುವಚನಗಳಿಂದ ಇಂತು ನುಡಿದಳು – ಎಲೈ ಚತುರಮತಿಯೇ! ನಾನು ಕೇಳಿರುವುದನ್ನು ಹೇಳುತ್ತೇನೆ ಕೇಳು – ಬಾಲಹಂಸಗಳಂತೆ ಚೆಲುವಾಗಿ ಉಳ್ಳ ಈ ಜೋಡಿಯು ಅಯೋಧ್ಯೆಯ ದಶರಥ ಮಹಾರಾಜರ ಕುಮಾರರಂತೆ. ಯದ್ಧದಲ್ಲಿ ರಾಕ್ಷಸರನು ಸಂಹರಿಸಿ, ವಿಶ್ವಾಮಿತ್ರರ ಯಾಗವನ್ನು ರಕ್ಷಿಸಿದವರು. ಅದರಲ್ಲಿ ಶ್ಯಾಮಲವರ್ಣಶರೀರಿಯೂ, ಕಮಲನೇತ್ರನೂ, ಧನುರ್ಬಾಣಧಾರಿಯೂ, ಮಾರೀಚ-ಸುಬಾಹುಗಳ ಮದವನ್ನು ಮುರಿದವನೂ, ಹಿರಿಯನೂ, ಕೌಸಲ್ಯಾನಂದವರ್ಧನನೂ ಆದ ಇವನ ಹೆಸರು ಶ್ರೀರಾಮನಂತೆ. ಗೌರವರ್ಣದವನೂ, ಕಿಶೋರಾವಸ್ಥೆಯಲ್ಲಿರುವವನೂ, ಸುರುಚಿರವೇಷಭೂಷಣಗಳಿಂದ ಕೂಡಿದ್ದು, ಕೈಯಲ್ಲಿ ಬಿಲ್ಲುಬಾಣಗಳನ್ನು ಹಿಡಿದುಕೊಂಡು ಶ್ರೀರಾಮನ ಹಿಂದೆ-ಹಿಂದೆ ನಡೆದುಕೊಂಡು ಹೋಗುತ್ತಿರುವವನು, ಅವನ ತಮ್ಮನೂ, ಸುಮಿತ್ರಾನಂದವರ್ಧನನೂ ಆದವನ ಹೆಸರು ಲಕ್ಷ್ಮಣನಂತೆ. (ಚೌ/೧-೪)

**ದೋ – ಬಿಪ್ರಕಾಜು ಕರಿ ಬಂಧು ದೋಉ ಮಗ ಮುನಿಬಧೂ ಉಧಾರಿ ।**
**ಆಏ ದೇಖನ ಚಾಪಮಖ ಸುನಿ ಹರಷೀಂ ಸಬ ನಾರಿ ॥ ೨೨೧ ॥**

ಇಬ್ಬರು ಸೋದರರು ವಿಶ್ವಾಮಿತ್ರನ ಯಜ್ಞವನ್ನು ನೆರವೇರಿಸಿಕೊಟ್ಟು, ಮಾರ್ಗದಲ್ಲಿ ಗೌತಮಪತ್ನೀ ಅಹಲ್ಯೆಯನ್ನು ಉದ್ಧರಿಸಿ, ಈ ಮಿಥಿಲೆಯಲ್ಲಿ ಧನುರ್ಯಾಗವನ್ನು ನೋಡಲು ಬಂದಿರುವರಂತೆ. ಈ ಮಾತುಗಳನ್ನು ಕೇಳಿ ಎಲ್ಲ ಸ್ತ್ರೀಯರು ಹರ್ಷಿತರಾದರು. (ದೋ/೨೨೧)

**ಚೌ – ದೇಖಿ ರಾಮ ಛಬಿ ಕೋಉ ಏಕ ಕಹಈ । ಜೋಗು ಜಾನಕಿಹಿ ಯಹ ಬರು ಅಹಈ ॥**
**ಜೌಂ ಸಖಿ ಇನ್ಹಹಿ ದೇಖ ನರನಾಹೂ । ಪನ ಪರಿಹರಿ ಹಠಿ ಕರಇ ಬಿಬಾಹೂ ॥ ೧ ॥**
**ಕೋಉ ಕಹ ಏ ಭೂಪತಿ ಪಹಿಚಾನೇ । ಮುನಿ ಸಮೇತ ಸಾದರ ಸನಮಾನೇ ॥**
**ಸಖಿ ಪರಂತು ಪನು ರಾಉ ನ ತಜಈ । ಬಿಧಿ ಬಸ ಹಠಿ ಅಬಿಬೇಕಹಿ ಭಜಈ ॥ ೨ ॥**
**ಕೋಉ ಕಹ ಜೌಂ ಭಲ ಅಹಇ ಬಿಧಾತಾ । ಸಬ ಕಹಂ ಸುನಿಅ ಉಚಿತ ಫಲದಾತಾ ॥**
**ತೌ ಜಾನಕಿಹಿ ಮಿಲಿಹಿ ಬರು ಏಹೂ । ನಾಹಿನ ಆಲಿ ಇಹಾಂ ಸಂದೇಹೂ ॥ ೩ ॥**
**ಜೌಂ ಬಿಧಿ ಬಸ ಅಸ ಬನೈ ಸँಜೋಗೂ । ತೌ ಕೃತಕೃತ್ಯ ಹೋಇ ಸಬ ಲೋಗೂ ॥**
**ಸಖಿ ಹಮರೇಂ ಆರತಿ ಅತಿ ತಾತೇಂ । ಕಬಹುँಕ ಏ ಆವಹಿಂ ಏಹಿ ನಾತೇಂ ॥ ೪ ॥**

ಶ್ರೀರಾಮಚಂದ್ರನ ಸೌಂದರ್ಯವನ್ನು ನೋಡಿದ ಇನ್ನೊಬ್ಬ ತರುಣಿಯು ಹೀಗೆಂದಳು – ''ಇವನು ಜಾನಕೀದೇವಿಗೆ ಯೋಗ್ಯನಾದ ವರನು. ಗೆಳತೀ! ಜನಕ ಮಹಾರಾಜನು ಇವನ ರೂಪಲಾವಣ್ಯಗಳನ್ನು ಚೆನ್ನಾಗಿ ನೋಡಿದರೆ, ತನ್ನ ಪ್ರತಿಜ್ಞೆಯನ್ನು

ತೊರೆದು ಜಾನಕಿಯ ವಿವಾಹವನ್ನು ತಪ್ಪದೆ ಇವನೊಂದಿಗೆ ನೆರವೇರಿಸುವನು.'' ಮತ್ತೊಬ್ಬ ಭಾಮಿನಿಯು ಹೇಳಿದಳು – ''ರಾಜನು ಇವರನ್ನು ಗುರುತಿಸಿರುವನು. ಮುನಿಯೊಂದಿಗೆ ಇವರನ್ನೂ ಕೂಡ ಆದರದಿಂದ ಸಮ್ಮಾನಿಸಿರುವನು. ಆದರೆ ರಾಜನು ತನ್ನ ಪ್ರತಿಜ್ಞೆಯನ್ನು ಬಿಡಲೊಲ್ಲನು. ವಿಧಿವಶನಾಗಿ ಅವನು ಹಟಹಿಡಿದು ಅವಿವೇಕವನ್ನು ಆಶ್ರಯಿಸಿರುವನು.'' ಮಗದೊಬ್ಬ ಚೆಲುವೆಯು ಹೇಳಿದಳು – ''ವಿಧಾತನು ಬುದ್ಧಿವಂತನೂ, ಯೋಗ್ಯತಾನುಸಾರವಾಗಿ ಫಲವನ್ನು ಕೊಡುವವನು ಎಂದು ಕೇಳಿದ್ದೇನೆ. ಹಾಗಿದ್ದರೆ ಜಾನಕಿಗೆ ಇವನೇ ವರನಾಗುವನು. ಇದರಲ್ಲಿ ಸಂದೇಹವೇ ಇಲ್ಲ. ವಿಧಿವಶಾತ್ ಇಂತಹ ಯೋಗ ಒದಗಿದರೆ, ನಾವೆಲ್ಲರೂ ಕೃತಾರ್ಥರೇ ಸರಿ! ನನಗಂತೂ ಎಷ್ಟೊಂದು ಕಾತರತೆ ಎಂದರೆ ಈ ಕಾರಣದಿಂದಲೇ ಇವರು ನಮ್ಮ ನಗರಕ್ಕೆ ಬಂದಿದ್ದಾರೆ ಎಂದೆನಿಸುತ್ತದೆ. (ಚೌ/೧-೪)

**ದೋ – ನಾಹಿಂ ತ ಹಮ ಕಹುँ ಸುನಹು ಸಖಿ ಇನ್ಹ ಕರ ದರಸನು ದೂರಿ।**
**ಯಹ ಸಂಘಟು ತಬ ಹೋಇ ಜಬ ಪುನ್ಯ ಪುರಾಕೃತ ಭೂರಿ ॥ ೨೨೨ ॥**

ಒಂದು ಪಕ್ಷ ಮದುವೆ ಆಗದಿದ್ದರೆ, ಮರಳಿ ಇವನ ದರ್ಶನವು ನಮಗೆ ದುರ್ಲಭವೇ ಆಗಿದೆ. ನಮ್ಮ ಪೂರ್ವಜನ್ಮ ಪುಣ್ಯಫಲ ಪ್ರಭಾವದಿಂದಲೇ ಇಂತಹ ಸಂಘಟನೆ ಜರಗಬೇಕು.'' (ದೋ/೨೨೨)

**ಚೌ – ಬೋಲೀ ಅಪರ ಕಹೆಹು ಸಖಿ ನೀಕಾ । ಏಹಿಂ ಬಿಆಹ ಅತಿ ಹಿತ ಸಬಹೀ ಕಾ ॥**
**ಕೋಉ ಕಹ ಸಂಕರ ಚಾಪ ಕಠೋರಾ । ಏ ಸ್ಯಾಮಲ ಮೃದುಗಾತ ಕಿಸೋರಾ ॥ ೧ ॥**
**ಸಬು ಅಸಮಂಜಸ ಅಹಇ ಸಯಾನೀ । ಯಹ ಸುನಿ ಅಪರ ಕಹಇ ಮೃದು ಬಾನೀ ॥**
**ಸಖಿ ಇನ್ಹ ಕಹँ ಕೋಉ ಕೋಉ ಅಸ ಕಹಹೀಂ । ಬಡ ಪ್ರಭಾಉ ದೇಖತ ಲಘು ಅಹಹೀಂ ॥ ೨ ॥**
**ಪರಸಿ ಜಾಸು ಪದ ಪಂಕಜ ಧೂರೀ । ತರೀ ಅಹಲ್ಯಾ ಕೃತ ಅಘ ಭೂರೀ ॥**
**ಸೋ ಕಿ ರಹಿಹಿ ಬಿನು ಸಿವಧನು ತೋರೇಂ । ಯಹ ಪ್ರತೀತಿ ಪರಿಹರಿಅ ನ ಭೋರೇಂ ॥ ೩ ॥**
**ಜೆಹಿಂ ಬಿರಂಚಿ ರಚಿ ಸೀಯ ಸँವಾರೀ । ತೆಹಿಂ ಸ್ಯಾಮಲ ಬರು ರಚೆಉ ಬಿಚಾರೀ ॥**
**ತಾಸು ಬಚನ ಸುನಿ ಸಬ ಹರಷಾನೀಂ । ಐಸೇಇ ಹೋಉ ಕಹಹಿಂ ಮೃದು ಬಾನೀಂ ॥ ೪ ॥**

ಬೇರೊಬ್ಬ ಲಾವಣ್ಯವತಿಯು ಇಂತೆಂದಳು – ''ಸಖೀ! ನೀನು ಒಳ್ಳೆಯ ಮಾತನ್ನೇ ಹೇಳಿದೆ. ಈ ವಿವಾಹವು ಎಲ್ಲರಿಗೆ ಶುಭಪ್ರದವು.'' ಇನ್ನೊಬ್ಬಳು ನುಡಿದಳು – ''ಶಿವನ ಧನುಸ್ಸು ತುಂಬಾ ಕಠೋರವಾಗಿದೆ. ಶ್ಯಾಮಲ ರಾಜಕುಮಾರನು ಅತಿಕೋಮಲ ಬಾಲಕನಾಗಿದ್ದಾನೆ. ಒಂದು ವಿಧದಿಂದ ಇದು ಅಸಮಂಜಸವೇ ಆಗಿದೆ.'' ಈ ಮಾತನ್ನು ಕೇಳಿ, ಮಗದೊಬ್ಬ ಮಾನಿನಿಯು ತನ್ನ ಮೃದು ಮಧುರ ಮಾತುಗಳಿಂದ ಮಾತಾಡಿದಳು – ''ಎಲೈ ಸಖಿಯೇ! ಇವನ ಕುರಿತು ಕೆಲವರು – ''ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು'' ಎಂದು ಹೇಳುತ್ತಾರೆ. ಘೋರವಾದ ಶಾಪಕ್ಕೆ ಗುರಿಯಾದ ಅಹಲ್ಯೆಯು ಈತನ ಪಾದಧೂಳಿ ಸೋಂಕಿದೊಡನೆ ಪವಿತ್ರಳಾಗಿ ಮುಕ್ತಳಾದಳು. ಇಂತಹವನಿಗೆ ಈ ಶಿವಧನುಸ್ಸನ್ನು ಮುರಿಯುವುದು ದೊಡ್ಡ ಕೆಲಸವೇ? ಈ ವಿಶ್ವಾಸವನ್ನು ಮರೆತಾದರೂ ಬಿಡಬಾರದು. ಸೀತಾದೇವಿಯನ್ನು ಸೃಷ್ಟಿಸಿದ ಬ್ರಹ್ಮದೇವರೇ ಈ ಶ್ಯಾಮಲಾಂಗನನ್ನು ಆಕೆಗೆ ತಕ್ಕನಾದ ವರನೆಂದು ಸೃಷ್ಟಿಸಿ ನಿರ್ಣಯಿಸಿರುವನು.'' ಈ ಮಾತುಗಳನ್ನು ಕೇಳಿ ಎಲ್ಲರೂ ಸಂತಸಪಟ್ಟು ''ಹಾಗೇ ಆಗಲಿ'' ಎಂದು ಹಾರೈಸಿದರು. (ಚೌ/೧-೪)

**ದೋ – ಹಿಯँ ಹರಷಹಿಂ ಬರಷಹಿಂ ಸುಮನ ಸುಮುಖಿ ಸುಲೋಚನಿ ಬೃಂದ ।**
**ಜಾಹಿಂ ಜಹಾँ ಜಹँ ಬಂಧು ದೋಉ ತಹँ ತಹँ ಪರಮಾನಂದ ॥ ೨೨೩ ॥**

ಪರಮಾನಂದಭರಿತರಾದ ಸುಮುಖಿಯರೂ, ಸುಲೋಚನೆಯರೂ ತಂಡ-ತಂಡವಾಗಿ ಶ್ರೀರಾಮನ ಮೇಲೆ ಹೂಮಳೆ ಸುರಿಸಿದರು. ಆ ಸೋದರರರು ಹೋದಲ್ಲೆಲ್ಲ ಪರಮ ಆನಂದವೇ ಉಕ್ಕಿ ಹರಿಯುತ್ತಿತ್ತು. (ದೋ/೨೨೩)

**ಚೌ – ಪುರ ಪೂರಬ ದಿಸಿ ಗೇ ದೋಉ ಭಾಈ । ಜಹँ ಧನುಮಖ ಹಿತ ಭೂಮಿ ಬನಾಈ ॥**
**ಅತಿ ಬಿಸ್ತಾರ ಚಾರು ಗಚ ಢಾರೀ । ಬಿಮಲ ಬೇದಿಕಾ ರುಚಿರ ಸँವಾರೀ ॥ ೧ ॥**
**ಚಹुँ ದಿಸಿ ಕಂಚನ ಮಂಚ ಬಿಸಾಲಾ । ರಚೇ ಜಹಾँ ಬೈಠಹಿಂ ಮಹಿಪಾಲಾ ॥**
**ತೆಹಿ ಪಾಛೇಂ ಸಮೀಪ ಚಹुँ ಪಾಸಾ । ಅಪರ ಮಂಚ ಮಂಡಲೀ ಬಿಲಾಸಾ ॥ ೨ ॥**
**ಕಛುಕ ಊँಚಿ ಸಬ ಭಾँತಿ ಸುಹಾಈ । ಬೈಠಹಿಂ ನಗರ ಲೋಗ ಜಹँ ಜಾಈ ॥**
**ತಿನ್ಹಕೇ ನಿಕಟ ಬಿಸಾಲ ಸುಹಾಏ । ಧವಲ ಧಾಮ ಬಹುಬರನ ಬನಾಏ ॥ ೩ ॥**

**ಜಹ್ ಬೈಠೇ ದೇಖಹಿಂ ಸಬ ನಾರೀ । ಜಥಾ ಜೋಗು ನಿಜ ಕುಲ ಅನುಹಾರೀ ॥**
**ಪುರ ಬಾಲಕ ಕಹಿ ಕಹಿ ಮೃದು ಬಚನಾ । ಸಾದರ ಪ್ರಭುಹಿ ದೆಖಾವಹಿಂ ರಚನಾ ॥ ೪ ॥**

ಅಣ್ಣ-ತಮ್ಮಂದಿರಿಬ್ಬರೂ ನಗರದ ಪೂರ್ವದಿಕ್ಕಿನಕಡೆಗೆ ಹೋದರು. ಅಲ್ಲಿ ಧನುರ್ಯಜ್ಞಕ್ಕಾಗಿ ಮಂಟಪವನ್ನು ಸಿದ್ಧಗೊಳಿಸಲಾಗಿತ್ತು. ಅತ್ಯಂತ ವಿಸ್ತಾರವಾದ ಗಚ್ಚಿನಿಂದ ಮಾಡಿದ ನೆಲಗಟ್ಟು. ಅದರ ಮೇಲೆ ಸುಂದರವೂ, ನಿರ್ಮಲವೂ ಆದ ಎತ್ತರವಾದ ವೇದಿಕೆಯನ್ನು ನಿರ್ಮಿಸಿದ್ದರು. ಆ ವೇದಿಕೆಗೆ ನಾಲ್ಕೂ ಕಡೆಗಳಲ್ಲಿ ರಾಜರು ಕುಳಿತುಕೊಳ್ಳಲು ಚಿನ್ನದ ಆಸನಗಳು ಸಿದ್ಧಗೊಳಿಸಿದ್ದರು. ಅದರ ಸುತ್ತಲೂ ನಗರವಾಸಿಗಳಿಗೆ ಕುಳಿತುಕೊಳ್ಳಲು ಅನುಕೂಲವಾಗುವಂತೆ ವರ್ತುಲಾಕಾರವಾಗಿ ಸ್ವಲ್ಪ ಎತ್ತರವಾದ ಅಟ್ಟಣಿಗೆಯ ವ್ಯವಸ್ಥೆ ಇತ್ತು. ಅದು ಎಲ್ಲ ವಿಧದಿಂದಲೂ ಸುಂದರವಾಗಿತ್ತು. ಅವುಗಳ ಬಳಿಯಲ್ಲೇ ವಿಶಾಲವೂ, ಸುಂದರವೂ ಆದ ಧವಳಧಾಮಗಳು ಕಂಗೊಳಿಸುತ್ತಿದ್ದವು. ಅಲ್ಲಿ ತಮ್ಮ-ತಮ್ಮ ಅಂತಸ್ತಿಗೆ ತಕ್ಕದಾದ ಸ್ತ್ರೀಯರು ಆಸೀನರಾಗಿ ಧನುರ್ಯಾಗವನ್ನು ನೋಡುವಂತಹ ವ್ಯವಸ್ಥೆ ಇತ್ತು. ನಗರದ ಬಾಲಕರು ತಮ್ಮ ಮೃದುವಚನಗಳಿಂದ ಶ್ರೀರಾಮಚಂದ್ರನಿಗೆ ವಿವರಿಸಿ, ಧನುರ್ಯಾಗ ಮಂಟಪವನ್ನು ತೋರಿಸಿದರು. (ಚೌ/೧-೪)

**ದೋ – ಸಬ ಸಿಸು ಏಹಿ ಮಿಸ ಪ್ರೇಮಬಸ ಪರಸಿ ಮನೋಹರ ಗಾತ ।**
**ತನ ಪುಲಕಹಿಂ ಅತಿ ಹರಷು ಹಿಯ್ ದೇಖಿ ದೇಖಿ ದೊಉ ಭ್ರಾತ ॥ ೨೨೪ ॥**

ಇದೇ ಒಂದು ನೆಪಮಾಡಿಕೊಂಡು ಹುಡುಗರೆಲ್ಲ ಪ್ರೇಮವಶರಾಗಿ ಶ್ರೀರಾಮಚಂದ್ರನ ಮನೋಹರ ಅಂಗಗಳನ್ನು ಮುಟ್ಟಿ-ಮುಟ್ಟಿ ನೋಡಿ ಪುಲಕಿತರಾದರು. ಅಣ್ಣ-ತಮ್ಮಂದಿರಿಬ್ಬರನ್ನೂ ನೋಡಿ-ನೋಡಿ ಅವರು ಮಹದಾನಂದವನ್ನು ಅನುಭವಿಸಿದರು. (ದೋ/೨೨೪)

**ಚೌ – ಸಿಸು ಸಬ ರಾಮ ಪ್ರೇಮಬಸ ಜಾನೇ । ಪ್ರೀತಿ ಸಮೇತ ನಿಕೇತ ಬಖಾನೇ ॥**
**ನಿಜ ನಿಜ ರುಚಿ ಸಬ ಲೇಹಿಂ ಬೊಲಾಈ । ಸಹಿತ ಸನೇಹ ಜಾಹಿಂ ದೊಉ ಭಾಈ ॥ ೧ ॥**
**ರಾಮ ದೆಖಾವಹಿಂ ಅನುಜಹಿ ರಚನಾ । ಕಹಿ ಮೃದು ಮಧುರ ಮನೋಹರ ಬಚನಾ ॥**
**ಲವ ನಿಮೇಷ ಮಹುಂ ಭುವನ ನಿಕಾಯಾ । ರಚಇ ಜಾಸು ಅನುಸಾಸನ ಮಾಯಾ ॥ ೨ ॥**
**ಭಗತಿ ಹೇತು ಸೋಇ ದೀನದಯಾಲಾ । ಚಿತವತ ಚಕಿತ ಧನುಷ ಮಖಸಾಲಾ ॥**
**ಕೌತುಕ ದೇಖಿ ಚಲೇ ಗುರು ಪಾಹೀಂ । ಜಾನಿ ಬಿಲಂಬು ತ್ರಾಸ ಮನ ಮಾಹೀಂ ॥ ೩ ॥**
**ಜಾಸು ತ್ರಾಸ ಡರ ಕಹುಂ ಡರ ಹೋಈ । ಭಜನ ಪ್ರಭಾಉ ದೆಖಾವತ ಸೋಈ ॥**
**ಕಹಿ ಬಾತೇಂ ಮೃದು ಮಧುರ ಸುಹಾಈಂ । ಕಿಏ ಬಿದಾ ಬಾಲಕ ಬರಿಆಈಂ ॥ ೪ ॥**

ಎಲ್ಲ ಬಾಲಕರು ತಮ್ಮ ಕುರಿತು ಪ್ರದರ್ಶಿಸಿದ ಅನುರಾಗದಿಂದ ಸಂತುಷ್ಟನಾದ ಶ್ರೀರಾಮನು ಅವರು ತೋರಿದ ಸ್ಥಳಗಳನ್ನು ಮೆಚ್ಚಿ ಪ್ರಶಂಸಿಸಿದನು. ಇದರಿಂದ ಬಾಲಕರ ಉತ್ಸಾಹ, ಆನಂದ, ಪ್ರೀತಿ ಇಮ್ಮಡಿಸಿತು. ಹುಡುಗರೆಲ್ಲರೂ ತಮ್ಮ ಇಷ್ಟಾನುಸಾರವಾಗಿ ಅವರಿಬ್ಬರನ್ನು ತಮ್ಮ ಬಳಿಗೆ ಕರೆಯುತ್ತಿದ್ದರು. ಹಾಗೆ ಕರೆದಾಗ ಇಬ್ಬರೂ ಸೋದರರೂ ಪ್ರೇಮದಿಂದ ಅವರ ಬಳಿಗೆ ಹೋಗುತ್ತಿದ್ದರು. ಮೃದು ಮಧುರ ಹಾಗೂ ಮನೋಹರ ವಚನಗಳಿಂದ ಶ್ರೀರಾಮನು ಲಕ್ಷ್ಮಣನಿಗೆ ಯಜ್ಞಭೂಮಿಯನ್ನು ತೋರಿಸುತ್ತಿದ್ದನು. ಕ್ಷಣಮಾತ್ರದಲ್ಲಿ ತನ್ನ ಮಾಯೆಯ ಮೂಲಕ ಅನಂತ ಬ್ರಹ್ಮಾಂಡಗಳನ್ನು ಸೃಷ್ಟಿಸಬಲ್ಲ ಪರಮಾತ್ಮನಾದ ಶ್ರೀರಾಮನು ಆ ಧನುರ್ಯಾಗ ಶಾಲೆಯನ್ನು– ಬಾಲಕರ ಮೇಲಿನ ವಾತ್ಸಲ್ಯದಿಂದಾಗಿ ಆಶ್ಚರ್ಯಚಕಿತನಾಗಿ ನೋಡುತ್ತಿದ್ದಾನೆ. ಈ ಪ್ರಕಾರ ರಂಗಭೂಮಿಯ ಕೌತುಕವೆಲ್ಲವನ್ನು ಕಂಡಬಳಿಕ, ಹೊತ್ತಾಯಿತೆಂದು ಮನಸ್ಸಿನಲ್ಲಿ ಹೆದರಿ ಅವರು ಗುರುಗಳ ಬಳಿಗೆ ತೆರಳಿದರು. ಭಯಕ್ಕೂ ಭಯಗೊಳಿಸುವ ಪ್ರಭುವು ಭಜನೆಯ ಪ್ರಭಾವವನ್ನು ತೋರಿಸುತ್ತಿದ್ದಾನೆ. ಶ್ರೀರಾಮನು ಮೃದು ಮಧುರ ಸುಂದರ ವಚನಗಳಿಂದ ಬಾಲಕರನ್ನು ಸಂತೋಷಪಡಿಸಿ, ಒತ್ತಾಯಪೂರ್ವಕ ಬೀಳ್ಕೊಟ್ಟನು. (ಚೌ/೧-೪)

**ದೋ – ಸಭಯ ಸಪ್ರೇಮ ಬಿನೀತ ಅತಿ ಸಕುಚ ಸಹಿತ ದೊಉ ಭಾಇ ।**
**ಗುರ ಪದ ಪಂಕಜ ನಾಇ ಸಿರ ಬೈಠೇ ಆಯಸು ಪಾಇ ॥ ೨೨೫ ॥**

ಸೋದರರಿಬ್ಬರೂ ಗುರುಗಳ ಬಳಿಗೆ ತೆರಳಿ ಭಯ, ಪ್ರೀತಿ, ವಿನಯ ಸಂಕೋಚದಿಂದ ಗುರುಗಳ ಪಾದಕ್ಕೆ ಮಣಿದು, ಅಪ್ಪಣೆಪಡೆದು ಬಳಿಯಲ್ಲೇ ಕುಳಿತುಬಿಟ್ಟರು. (ದೋ/೨೨೫)

**ಚೌ – ನಿಸಿ ಪ್ರಬೇಸ ಮುನಿ ಆಯಸು ದೀನ್ಹಾ । ಸಬಹೀಂ ಸಂಧ್ಯಾಬಂದನು ಕೀನ್ಹಾ ॥**
**ಕಹತ ಕಥಾ ಇತಿಹಾಸ ಪುರಾನೀ । ರುಚಿರ ರಜನಿ ಜುಗ ಜಾಮ ಸಿರಾನೀ ॥ ೧ ॥**

**ಮುನಿಬರ ಸಯನ ಕೀನ್ಹಿ ತಬ ಜಾಈ । ಲಗೇ ಚರನ ಚಾಪನ ದೋಉ ಭಾಈ ॥**
**ಜಿನ್ಹ ಕೇ ಚರನ ಸರೋರುಹ ಲಾಗೀ । ಕರತ ಬಿಬಿಧ ಜಪ ಜೋಗ ಬಿರಾಗೀ ॥ ೨ ॥**
**ತೇಇ ದೋಉ ಬಂಧು ಪ್ರೇಮ ಜನು ಜೀತೇ । ಗುರ ಪದ ಕಮಲ ಪಲೋಟತ ಪ್ರೀತೇ ॥**
**ಬಾರ ಬಾರ ಮುನಿ ಅಗ್ಯಾ ದೀನ್ಹೀ । ರಘುಬರ ಜಾಇ ಸಯನ ತಬ ಕೀನ್ಹೀ ॥ ೩ ॥**
**ಚಾಪತ ಚರನ ಲಖನು ಉರ ಲಾಏँ । ಸಭಯ ಸಪ್ರೇಮ ಪರಮ ಸಚು ಪಾಏँ ॥**
**ಪುನಿ ಪುನಿ ಪ್ರಭು ಕಹ ಸೋವಹು ತಾತಾ । ಪೌಢ़ೇ ಧರಿ ಉರ ಪದ ಜಲಜಾತಾ ॥ ೪ ॥**

ಸಂಧ್ಯಾ ಸಮಯವಾಯಿತು. ಆಗ ವಿಶ್ವಾಮಿತ್ರರ ಅಪ್ಪಣೆಯಂತೆ ಎಲ್ಲರೂ ಸಂಧ್ಯಾವಂದನೆ ಮಾಡಿದರು. ಅನಂತರ ಪುರಾಣ ಪುಣ್ಯಕಥೆ, ಇತಿಹಾಸ ಹೇಳುತ್ತಾ-ಕೇಳುತ್ತಾ ರಾತ್ರಿಯ ಎರಡು ಜಾವಗಳು ಉರುಳಿದವು. ಆಗ ವಿಶ್ವಾಮಿತ್ರರು ಹೋಗಿ ಮಲಗಿಕೊಂಡರು. ಇಬ್ಬರೂ ಸೋದರರು ಅವರ ಪಾದಸೇವೆ ಮಾಡತೊಡಗಿದರು. ಯಾರ ಚರಣದರ್ಶನ, ಸ್ಪರ್ಶನಕ್ಕಾಗಿ ವಿರಾಗಿಗಳೂ ಕೂಡ ತೆರ-ತೆರವಾದ ಜಪ-ಯೋಗಗಳನ್ನು ಆಚರಿಸುತ್ತಾರೋ ಅಂತಹ ಈ ಸೋದರರು ಪ್ರೇಮದಿಂದ ಗುರುವಿನ ಕಾಲುಗಳನ್ನು ಒತ್ತುತ್ತಿದ್ದರು. ವಿಶ್ವಾಮಿತ್ರರು ಪುನಃ-ಪುನಃ ಒತ್ತಾಯಮಾಡಿ ಹೇಳಿದ ಮೇಲೆ ಶ್ರೀರಾಮನು ಹೋಗಿ ಮಲಗಿಕೊಂಡನು. ಶ್ರೀರಾಮನ ಚರಣಗಳನ್ನು ಎದೆಗವುಚಿಕೊಂಡು, ಲಕ್ಷ್ಮಣನು ಭಯ, ಪ್ರೇಮದೊಂದಿಗೆ ಪರಮ ಸುಖವನ್ನು ಅನುಭವಿಸುತ್ತಾ ರಾಮನ ಚರಮಸೇವೆಯನ್ನು ಮಾಡುತ್ತಿದ್ದಾನೆ. ಶ್ರೀರಾಮಚಂದ್ರನ ಚರಣಸೇವೆಯನ್ನು ಬಿಡಲು ಇಷ್ಟಪಡದೆ ಇರುತ್ತಿರಲು, ಶ್ರೀರಾಮನು – 'ಮಗು! ಸಾಕು! ಇನ್ನು ಹೋಗಿ ವಿಶ್ರಮಿಸು' ಎಂದು ಪದೇ-ಪದೇ ಹೇಳಿದ ಬಳಿಕ ಲಕ್ಷ್ಮಣನು ಪ್ರಭುಪಾದಗಳನ್ನು ಹೃದಯದಲ್ಲಿ ಧ್ಯಾನಿಸುತ್ತಾ ಮಲಗಿದನು. (ಚೌ/೧-೪)

**ದೋ – ಉಠೇ ಲಖನು ನಿಸಿ ಬಿಗತ ಸುನಿ ಅರುನಸಿಖಾ ಧುನಿ ಕಾನ ।**
**ಗುರ ತೇं ಪಹಿಲೇಹಿं ಜಗತಪತಿ ಜಾಗೇ ರಾಮು ಸುಜಾನ ॥ ೨೨೬ ॥**

ಇರುಳು ಕಳೆದು ಕೋಳಿ ಕೂಗಿದ ಶಬ್ದ ಕೇಳಿದ ಲಕ್ಷ್ಮಣನು ಎದ್ದನು. ಜಗತ್ಪತಿಯಾದ ಶ್ರೀರಾಮನೂ ಕೂಡ ಗುರುವಿನಿಂದ ಮೊದಲೇ ನಿದ್ದೆಯನ್ನು ಬಿಟ್ಟು ಮೇಲೆದ್ದನು. (ದೋ/೨೨೬)

## ಶ್ರೀರಾಮಲಕ್ಷ್ಮಣರ ಪುಷ್ಪವಾಟಿಕಾ ಸಂದರ್ಶನ

**ಚೌ – ಸಕಲ ಸೌಚ ಕರಿ ಜಾಇ ನಹಾಏ । ನಿತ್ಯ ನಿಬಾಹಿ ಮುನಿಹಿ ಸಿರ ನಾಏ ॥**
**ಸಮಯ ಜಾನಿ ಗುರ ಆಯಸು ಪಾಈ । ಲೇನ ಪ್ರಸೂನ ಚಲೇ ದೋಉ ಭಾಈ ॥ ೧ ॥**
**ಭೂಪ ಬಾಗು ಬರ ದೇಖೆಉ ಜಾಈ । ಜಹँ ಬಸಂತ ರಿತು ರಹೀ ಲೊಭಾಈ ॥**
**ಲಾಗೇ ಬಿಟಪ ಮನೋಹರ ನಾನಾ । ಬರನ ಬರನ ಬರ ಬೇಲಿ ಬಿತಾನಾ ॥ ೨ ॥**
**ನವ ಪಲ್ಲವ ಫಲ ಸುಮನ ಸುಹಾಏ । ನಿಜ ಸಂಪತಿ ಸುರ ರೂಖ ಲಜಾಏ ॥**
**ಚಾತಕ ಕೋಕಿಲ ಕೀರ ಚಕೋರಾ । ಕೂಜತ ಬಿಹಗ ನಟತ ಕಲ ಮೋರಾ ॥ ೩ ॥**
**ಮಧ್ಯ ಬಾಗ ಸರು ಸೋಹ ಸುಹಾವಾ । ಮನಿ ಸೋಪಾನ ಬಿಚಿತ್ರ ಬನಾವಾ ॥**
**ಬಿಮಲ ಸಲಿಲು ಸರಸಿಜ ಬಹುರಂಗಾ । ಜಲಖಗ ಕೂಜತ ಗುಂಜತ ಭೃಂಗಾ ॥ ೪ ॥**

ಎಲ್ಲರೂ ಶೌಚಾದಿಗಳಿಂದ ನಿವೃತ್ತರಾಗಿ, ಸ್ನಾನ ಮಾಡಿದರು. ಅನಂತರ ಸಂಧ್ಯಾವಂದನೆ – ಅಗ್ನಿಹೋತ್ರಾದಿ ನಿತ್ಯಾನುಷ್ಠಾನಗಳನ್ನು ಮುಗಿಸಿ, ರಾಮಲಕ್ಷ್ಮಣರು ವಿಶ್ವಾಮಿತ್ರ ಮಹರ್ಷಿಯವರಿಗೆ ನಮಸ್ಕರಿಸಿದರು. ಪೂಜೆಯ ಸಮಯವರಿತು ಹೂ, ತುಳಸಿ ತರಲು ಗುರುವಿನ ಅಪ್ಪಣೆ ಪಡೆದು ಹೊರಟರು. ಅವರಿಬ್ಬರೂ ಜನಕ ಮಹಾರಾಜರ ಸುಂದರವಾದ ಹೂದೋಟವನ್ನು ಪ್ರವೇಶಿಸಿದರು. ಅದರಲ್ಲಿ ವಸಂತಋತುವಿನ ಶೋಭೆ ಮೂರ್ತಿಭವಿಸಿತ್ತು. ವಿವಿಧ ಬಣ್ಣದ ಹೂವುಗಳು ಅರಳಿ ನಿಂತಿದ್ದವು. ಮನಸೆಳೆಯುವ ಅನೇಕ ಮರಗಿಡಗಳು ಅಲ್ಲಿ ಕಂಗೊಳಿಸುತ್ತಿದ್ದವು. ಬಣ್ಣ-ಬಣ್ಣದ ಲತಾವಿತಾನಗಳು ಅಲ್ಲಲ್ಲಿ ಶೋಭಿಸುತ್ತಿದ್ದವು. ಹೊಸ-ಹೊಸ ಚಿಗುರು, ಹೂವು ಹಣ್ಣುಗಳಿಂದ ಕೂಡಿದ ಚೆಲುವಾದ ಗಿಡಮರಗಳು ಕಲ್ಪವೃಕ್ಷಗಳನ್ನೂ ನಾಚಿಸುತ್ತಿದ್ದವು. ಚಾತಕ, ಕೋಗಿಲೆ, ಗಿಳಿ, ಚಕೋರ ಮುಂತಾದ ಪಕ್ಷಿಗಳ ಮಧುರ ಸ್ವರಗಳು ಆಹ್ಲಾದವನ್ನೀಯುತ್ತಿತ್ತು. ನವಿಲುಗಳು ಜಾಗರವಾಡುತ್ತಿದ್ದವು. ಆ ತೋಟದ ಮಧ್ಯಭಾಗದಲ್ಲಿ ಒಂದು ರಮಣೀಯ ಸರೋವರವಿತ್ತು. ಮಣಿಮಯ

ಸೋಪಾನಗಳಿಂದಲೂ, ನಿರ್ಮಲ ಮಧುರ ಜಲದಿಂದಲೂ, ಅರಳಿದ ಅನೇಕ ಬಣ್ಣದ ಕಮಲಗಳಿಂದಲೂ, ಶೋಭಿಸುತ್ತಿದ್ದ ಆ ಸರೋವರದಲ್ಲಿ ಜಲಪಕ್ಷಿಗಳು ಕಲರವಗೈಯ್ಯುತ್ತಿದ್ದವು. ದುಂಬಿಗಳು ಝೇಂಕರಿಸುತ್ತಿದ್ದವು. (ಚೌ/೧-೪)

**ದೋ – ಬಾಗು ತಡಾಗು ಬಿಲೋಕಿ ಪ್ರಭು ಹರಷೇ ಬಂಧು ಸಮೇತ ।**
**ಪರಮ ರಮ್ಯ ಆರಾಮು ಯಹು ಜೋ ರಾಮಹಿ ಸುಖ ದೇತ ॥ ೨೨೭ ॥**

ತೋಟವನ್ನೂ, ಸರೋವರವನ್ನೂ ಕಂಡು ರಾಮ-ಲಕ್ಷ್ಮಣರು ಅತೀವ ಹರ್ಷಿತರಾದರು. ಎಲ್ಲರಿಗೂ ಸರ್ವಸುಖ ಪ್ರದಾಯಕನಾದ ಶ್ರೀರಾಮನಿಗೂ ಕೂಡ ಆಹ್ಲಾದವನ್ನು ನೀಡಿದ ಆ ವನವು ನಿಜವಾಗಿಯೂ ರಮಣೀಯವೇ ಆಗಿದೆ.(ದೋ/೨೨೭)

**ಚೌ – ಚಹುँ ದಿಸಿ ಚಿತಇ ಪೂँಛಿ ಮಾಲೀಗನ । ಲಗೇ ಲೇನ ದಲ ಫೂಲ ಮುದಿತ ಮನ ॥**
**ತೇಹಿ ಅವಸರ ಸೀತಾ ತಹँ ಆಈ । ಗಿರಿಜಾ ಪೂಜನ ಜನನಿ ಪಠಾಈ ॥ ೧ ॥**
**ಸಂಗ ಸಖೀं ಸಬ ಸುಭಗ ಸಯಾನೀं । ಗಾವಹಿं ಗೀತ ಮನೋಹರ ಬಾನೀं ॥**
**ಸರ ಸಮೀಪ ಗಿರಿಜಾ ಗೃಹ ಸೋಹಾ । ಬರನಿ ನ ಜಾಇ ದೇಖಿ ಮನು ಮೋಹಾ ॥ ೨ ॥**
**ಮಜ್ಜನು ಕರಿ ಸರ ಸಖಿನ್ಹ ಸಮೇತಾ । ಗಈ ಮುದಿತ ಮನ ಗೌರಿ ನಿಕೇತಾ ॥**
**ಪೂಜಾ ಕೀನ್ಹಿ ಅಧಿಕ ಅನುರಾಗಾ । ನಿಜ ಅನುರೂಪ ಸುಭಗ ಬರು ಮಾಗಾ ॥ ೩ ॥**
**ಏಕ ಸಖೀ ಸಿಯ ಸಂಗು ಬಿಹಾಈ । ಗಈ ರಹೀ ದೇಖನ ಫುಲವಾಈ ॥**
**ತೇಹಿं ದೊಉ ಬಂಧು ಬಿಲೋಕೇ ಜಾಈ । ಪ್ರೇಮ ಬಿಬಸ ಸೀತಾ ಪಹिं ಆಈ ॥ ೪ ॥**

ನಾಲ್ಕೂ ಕಡೆಗಳಲ್ಲಿ ತೋಟದ ರಮಣೀಯತೆಯನ್ನು ವೀಕ್ಷಿಸಿದ ಬಳಿಕ, ಪ್ರಸನ್ನಚಿತ್ತರಾಗಿ, ತೋಟಿಗ (ಮಾಲಿ)ನನ್ನು ಕೇಳಿ ರಾಮ-ಲಕ್ಷ್ಮಣರು ಪೂಜೆಗಾಗಿ ತುಳಸೀ, ಬಿಲ್ವಪತ್ರೆಯನ್ನೂ, ಹೂವುಗಳನ್ನೂ ಕೊಯ್ಯಲು ತೊಡಗಿದರು. ಅದೇ ವೇಳೆಗೆ ತಾಯಿಯ ಅಪ್ಪಣೆಯಂತೆ ಗೌರೀಪೂಜೆಗಾಗಿ ಸೀತಾದೇವಿಯೂ ಅಲ್ಲಿಗೆ ಬಂದಿದ್ದಳು. ಆಕೆಯ ಜೊತೆಯಲ್ಲಿ ಸುಂದರ ತರುಣೀ ಮಣಿಯರಾದ ಸಖಿಯರೂ ಇದ್ದರು. ಅವರು ಮಧುರವಾಗಿ ಹಾಡುಗಳನ್ನು ಹಾಡುತ್ತಿದ್ದರು. ಸರೋವರದ ಸನಿಹದಲ್ಲೇ ಗಿರಿಜಾದೇವಿಯ ಮಂದಿರವಿತ್ತು. ಆ ಮಂದಿರದ ಶೋಭೆಯು ವರ್ಣನಾತೀತವು. ಅದು ನೋಡಿದವರ ಮನಸ್ಸನ್ನು ಮೋಹಗೊಳಿಸುವಂತಿತ್ತು. ಸೀತಾದೇವಿಯು ಸಖಿಯರೊಂದಿಗೆ ಸ್ನಾನವನ್ನು ಮಾಡಿ, ಪ್ರಸನ್ನಚಿತ್ತಳಾಗಿ ಗಿರಿಜೆಯ ಮಂದಿರವನ್ನು ಹೊಕ್ಕಳು. ಆಕೆಯು ಅತ್ಯಂತ ಭಕ್ತಿಶ್ರದ್ಧೆಗಳಿಂದ ಗೌರಿಯನ್ನು ಪೂಜಿಸಿ, ತನಗೆ ಅನುರೂಪನಾದ ಪತಿಯನ್ನು ಕರುಣಿಸುವಂತೆ, ವರವನ್ನು ಬೇಡಿದಳು. ಓರ್ವ ಸಖಿಯು ಸೀತೆಯನ್ನು ಅಲ್ಲೇ ಬಿಟ್ಟು ಹೂದೋಟವನ್ನು ನೋಡಲು ಹೋಗಿದ್ದಳು. ಅವಳು ರಾಮಲಕ್ಷ್ಮಣರನ್ನು ನೋಡಿ, ಅವರ ಅಂದಚಂದಕ್ಕೆ ಮಾರುಹೋಗಿ ಪ್ರೇಮವಿಹ್ವಲಳಾಗಿ, ಸೀತಾದೇವಿಯ ಬಳಿಗೆ ಬಂದಳು. (ಚೌ/೧-೪)

**ದೋ – ತಾಸು ದಸಾ ದೇಖೀ ಸಖಿನ್ಹ ಪುಲಕ ಗಾತ ಜಲು ನೈನ ।**
**ಕಹು ಕಾರನು ನಿಜ ಹರಷ ಕರ ಪೂछಹिं ಸಬ ಮೃದು ಬೈನ ॥ ೨೨೮ ॥**

ಬಂದವಳು ಪುಲಕಿತಳಾಗಿ ಸಜಲನಯನಳಾಗಿರುವುದನ್ನು ಕಂಡು ಇತರ ಸಖಿಯರು ಆಕೆಯ ಹಿಗ್ಗಿಗೆ ಕಾರಣವೇನೆಂದು ಕೇಳತೊಡಗಿದರು. (ದೋ/೨೨೮)

**ಚೌ – ದೇಖನ ಬಾಗು ಕुँಅರ ದುಇ ಆಏ । ಬಯ ಕಿಸೋರ ಸಬ ಭಾँತಿ ಸುಹಾಏ ॥**
**ಸ್ಯಾಮ ಗೌರ ಕಿಮಿ ಕಹौँ ಬಖಾನೀ । ಗಿರಾ ಅನಯನ ನಯನ ಬಿನು ಬಾನೀ ॥ ೧ ॥**
**ಸುನಿ ಹರಷೀं ಸಬ ಸಖೀं ಸಯಾನೀ । ಸಿಯ ಹಿಯँ ಅತಿ ಉತಕಂಠಾ ಜಾನೀ ॥**
**ಏಕ ಕಹಇ ನೃಪಸುತ ತೇಇ ಆಲೀ । ಸುನೇ ಜೆ ಮುನಿ ಸಂಗ ಆಏ ಕಾಲೀ ॥ ೨ ॥**
**ಜಿನ್ಹ ನಿಜ ರೂಪ ಮೋಹನೀ ಡಾರೀ । ಕೀನ್ಹೆ ಸ್ವಬಸ ನಗರ ನರ ನಾರೀ ॥**
**ಬರನತ ಛಬಿ ಜಹँ ತಹँ ಸಬ ಲೋಗೂ । ಅವಸಿ ದೇಖಿಅಹಿं ದೇಖನ ಜೋಗೂ ॥ ೩ ॥**
**ತಾಸು ಬಚನ ಅತಿ ಸಿಯಹಿ ಸೊಹಾನೇ । ದರಸ ಲಾಗಿ ಲೋಚನ ಅಕುಲಾನೇ ॥**
**ಚಲೀ ಅಗ್ರ ಕರಿ ಪ್ರಿಯ ಸಖಿ ಸೋಈ । ಪ್ರೀತಿ ಪುರಾತನ ಲಖಇ ನ ಕೋಈ ॥ ೪ ॥**

ಆಕೆ ಹೇಳಿದಳು – ಇಬ್ಬರು ರಾಜಕುಮಾರರು ಉಪವನವನ್ನು ನೋಡಲು ಬಂದಿದ್ದಾರೆ. ಅವರಿನ್ನೂ ಕಿಶೋರರಾಗಿದ್ದು, ಎಲ್ಲ ರೀತಿಯಿಂದಲೂ ಸುಂದರರಾಗಿದ್ದಾರೆ. ಒಬ್ಬನು ಶ್ಯಾಮಲಾಂಗನೂ, ಮತ್ತೊಬ್ಬನು ಗೌರಾಂಗನೂ ಆಗಿದ್ದಾರೆ. ಅವರ ಚೆಲುವನ್ನು ನಾನು ಏನೆಂದು ವರ್ಣಿಸಲಿ? ''ನಾಲಿಗೆಗೆ ಕಣ್ಣಿಲ್ಲ, ಕಣ್ಣಿಗೆ ನಾಲಿಗೆ ಇಲ್ಲ.'' ಈ ಮಾತನ್ನು ಕೇಳಿ ಚತುರರಾದ ಸಖಿಯರು ಸಂತೋಷಪಟ್ಟರು. ಸೀತಾದೇವಿಯ ಉತ್ಕಂಠತೆಯನ್ನು ನೋಡಿ, ಓರ್ವ ಸಖಿಯು ಹೇಳತೊಡಗಿದಳು – ''ಗೆಳತಿಯರೇ! ನಿನ್ನೆ ವಿಶ್ವಾಮಿತ್ರರ ಜೊತೆಗೆ ಇಬ್ಬರು ರಾಜಕುಮಾರರು ಬಂದಿದ್ದಾರೆ ಎಂದು ಕೇಳಿದ್ದೆ. ಬಹುಶಃ ಅವರೇ ಇವರಾಗಿರಬೇಕು. ಇವರು ನಗರದ ನರ-ನಾರಿಯರ ಮೇಲೆಲ್ಲ ತಮ್ಮ ಸೌಂದರ್ಯದ ಮೋಡಿಯನ್ನು ಚೆಲ್ಲಿ ಎಲ್ಲರನ್ನು ವಶಪಡಿಸಿಕೊಂಡಿರುವರಂತೆ. ಎಲ್ಲಿ ನೋಡಿದರಲ್ಲಿ ಜನರು ಇವರ ಅಂದದ ಚರ್ಚೆಯನ್ನೇ ಮಾಡುತ್ತಾರೆ. ದರ್ಶನೀಯರಾದ ಇವರನ್ನು ತಪ್ಪದೇ ಹೋಗಿ ನೋಡಬೇಕು. ಆ ಸಖಿಯ ಮಾತುಗಳು ಸೀತೆಗೆ ಅತ್ಯಂತ ಪ್ರಿಯವೆನಿಸಿದವು. ಅವರ ದರ್ಶನಕ್ಕಾಗಿ ಅವಳ ಕಣ್ಣುಗಳು ಹಾತೊರೆದವು. ಆ ಸಖಿಯನ್ನೇ ಮುಂದೆಮಾಡಿ ಸೀತೆಯು ಹೊರಟಳು. ಆ ಪುರಾತನವಾದ (ಶಾಶ್ವತ) ಪ್ರೇಮಾನುಬಂಧವನ್ನು ಯಾರೂ ಅರಿಯರು; ಕಾಣರು. (ಶ್ರೀರಾಮನು ಸಾಕ್ಷಾತ್ ಶ್ರೀಮಹಾವಿಷ್ಣು. ಸೀತಾದೇವಿಯು ಶ್ರೀಮಹಾಲಕ್ಷ್ಮೀಯಲ್ಲವೇ?) (ಚೌ/೧-೪)

**ದೋ – ಸುಮಿರಿ ಸೀಯ ನಾರದ ಬಚನ ಉಪಜೀ ಪ್ರೀತಿ ಪುನೀತ ।**
**ಚಕಿತ ಬಿಲೋಕತಿ ಸಕಲ ದಿಸಿ ಜನು ಸಿಸು ಮೃಗೀ ಸಭೀತ ॥ ೨೨೯ ॥**

ನಾರದ ಮಹರ್ಷಿಯ ವಚನಗಳನ್ನು ಜ್ಞಾಪಿಸಿಕೊಂಡು ಸೀತೆಯ ಮನಸ್ಸಿನಲ್ಲಿ ಪವಿತ್ರಪ್ರೇಮ ಅಂಕುರಿಸಿತು. ಅವಳು ಚಕಿತಳಾಗಿ ಭಯಗೊಂಡ ಜಿಂಕೆಯಂತೆ ಸುತ್ತಲೂ ನೋಡುತ್ತಿದ್ದಳು. (ದೋ/೨೨೯)

**ಚೌ – ಕಂಕನ ಕಿಂಕಿನಿ ನೂಪುರ ಧುನಿ ಸುನಿ । ಕಹತ ಲಖನ ಸನ ರಾಮು ಹೃದಯ್ ಗುನಿ ॥**
**ಮಾನಹುಁ ಮದನ ದುಂದುಭೀ ದೀನ್ಹೀ । ಮನಸಾ ಬಿಸ್ವಬಿಜಯ ಕಹಁ ಕೀನ್ಹೀ ॥ ೧ ॥**
**ಅಸ ಕಹಿ ಫಿರಿ ಚಿತಏ ತೆಹಿ ಓರಾ । ಸಿಯ ಮುಖ ಸಸಿ ಭಏ ನಯನ ಚಕೋರಾ ॥**
**ಭಏ ಬಿಲೋಚನ ಚಾರು ಅಚಂಚಲ । ಮನಹುಁ ಸಕುಚಿ ನಿಮಿ ತಜೇ ದಿಗಂಚಲ ॥ ೨ ॥**
**ದೇಖಿ ಸೀಯ ಸೋಭಾ ಸುಖು ಪಾವಾ । ಹೃದಯ್ ಸರಾಹತ ಬಚನು ನ ಆವಾ ॥**
**ಜನು ಬಿರಂಚಿ ಸಬ ನಿಜ ನಿಪುನಾಈ । ಬಿರಚಿ ಬಿಸ್ವ ಕಹಁ ಪ್ರಗಟಿ ದೆಖಾಈ ॥ ೩ ॥**
**ಸುಂದರತಾ ಕಹುಁ ಸುಂದರ ಕರಈ । ಛಬಿಗೃಹಁ ದೀಪಸಿಖಾ ಜನು ಬರಈ ॥**
**ಸಬ ಉಪಮಾ ಕಬಿ ರಹೇ ಜುಠಾರೀ । ಕೇಹಿಂ ಪಟತರೌಂ ಬಿದೇಹಕುಮಾರೀ ॥ ೪ ॥**

ಕೈಯ ಕಂಕಣಗಳ ದನಿಯನ್ನೂ, ಒಡ್ಯಾಣದ ಕಿರುಗಂಟೆಗಳ ನಿನಾದ, ನೂಪುರಗಳ ಘುಲು ಘುಲು ಶಬ್ದವನ್ನು ಕೇಳಿ, ಶ್ರೀರಾಮನು ಮನದಲ್ಲೇ ವಿಚಾರಮಾಡಿ ಲಕ್ಷ್ಮಣನಲ್ಲಿ ಹೇಳಿದನು – ಮನ್ಮಥನು ವಿಶ್ವವನ್ನು ಜಯಿಸಲಿಕ್ಕಾಗಿ ಈ ಮಂಜುಳರವರೂಪೀ ದುಂದುಭಿಯನ್ನು ನುಡಿಸುತ್ತಿರುವನೋ ಎಂಬಂತೆ ಈ ಧ್ವನಿ ಕೇಳಿ ಬರುತ್ತಿದೆಯಲ್ಲ! ಎಂದು ಹೇಳಿ, ಆ ಧ್ವನಿಗಳು ಬರುವ ದಿಕ್ಕನ್ನೇ ನೋಡತೊಡಗಿದನು. ಕೂಡಲೇ ಅವನು ಸೀತಾದೇವಿಯ ಮುಖಚಂದ್ರಮನನ್ನು ನೋಡಿದೊಡನೆ ಕಣ್ಣುಗಳು ಚಕೋರವಾದವು. ಸುಂದರ ನೇತ್ರಗಳು ನೆಟ್ಟು ನಿಂತವು. ಜನಕನ ಪೂರ್ವಜನಾದ ನಿಮಿಯು (ಈತ ಎಲ್ಲರ ರೆಪ್ಪೆಯಲ್ಲೂ ನೆಲೆಸಿದ್ದಾನಂತೆ). ಮಗಳು ಅಳಿಯನ ಮಿಲನ ಪ್ರಸಂಗವನ್ನು ನೋಡುವುದು ಅನುಚಿತವೆಂದು ಬಗೆದು, ಸಂಕೋಚದಿಂದ ರೆಪ್ಪೆಗಳನ್ನು ತೊರೆದು ಹೊರಟುಹೋದನೋ ಎಂಬಂತಿತ್ತು. ಅಂದರೆ ರೆಪ್ಪೆಗಳು ಮುಚ್ಚುತ್ತಿರಲಿಲ್ಲ. ಸೀತೆಯ ಚೆಲುವನ್ನು ಕಂಡು ಶ್ರೀರಾಮನಿಗೆ ತುಂಬಾ ಸುಖವಾಯಿತು. ಹೃದಯದಲ್ಲಿ ಅವನು ಆಕೆಯನ್ನು ಮೆಚ್ಚಿ ಹೊಗಳುತ್ತಿದ್ದ. ಆದರೆ ಬಾಯಿಂದ ಮಾತೇ ಹೊರಡದಾಯಿತು. ಬ್ರಹ್ಮದೇವರು ತಮ್ಮ ಸೃಷ್ಟಿರಚನಾಕೌಶಲ್ಯಕ್ಕೆ ಆಕೃತಿಯನ್ನಿತ್ತು, ಪ್ರಪಂಚಕ್ಕೆ ಸೌಂದರ್ಯವು ಹೇಗಿರುತ್ತದೆ ಎಂಬುದನ್ನು ತೋರಿಸಲೋಸುಗ ಸೀತಾದೇವಿಯನ್ನು ಸೃಷ್ಟಿಸಿರುವನೋ ಎಂಬಂತೆ ಆಕೆಯ ಚೆಲುವಿತ್ತು. ಸೀತಾದೇವಿಯು ನಿಜವಾಗಿ ಮೂರ್ತೀಭವಿಸಿದ ಸೌಂದರ್ಯವೇ ಆಗಿದ್ದಳು. ಆಕೆಯ ಚೆಲುವು ಚೆಲುವನ್ನೂ ಅಂದಗೊಳಿಸುವಂತಹುದು. ಅವಳು ಚೆಲುವಿನ ಮನೆಯಲ್ಲಿರುವ ಒಂದು ದೀಪಶಿಖೆಯಂತಿದ್ದಳು. ಎಲ್ಲ ಉಪಮೆಗಳನ್ನು ಕವಿಗಳು ಎಂಜಲು ಮಾಡಿ ಬಿಟ್ಟಿದ್ದಾರೆ. ನಾನು ಜನಕನಂದಿನಿಗೆ ಯಾವ ಉಪಮೆಯನ್ನು ಕೊಡಲಿ? ಯಾವುದನ್ನು ಆಕೆಗೆ ಹೋಲಿಸಲಿ? ಅವಳಿಗೆ ಅವಳೇ ಸಾಟಿ. (ಚೌ/೧-೪)

**ದೋ – ಸಿಯ ಸೋಭಾ ಹಿಯ್ ಬರನಿ ಪ್ರಭು ಆಪನಿ ದಸಾ ಬಿಚಾರಿ ।**
**ಬೋಲೇ ಸುಚಿ ಮನ ಅನುಜ ಸನ ಬಚನ ಸಮಯ ಅನುಹಾರಿ ॥ ೨೩೦ ॥**

ಈ ಪ್ರಕಾರ ಮನಸ್ಸಿನಲ್ಲೇ ಸೀತೆಯ ಚೆಲುವನ್ನು ವರ್ಣಿಸಿಕೊಳ್ಳುತ್ತಾ ತನ್ನ ದಶೆಯ ಕುರಿತು ಯೋಚಿಸಿ, ಪ್ರಭು ರಾಮಚಂದ್ರನು ಪವಿತ್ರಮನದಿಂದ ತನ್ನ ತಮ್ಮನಾದ ಲಕ್ಷ್ಮಣನೊಂದಿಗೆ ಸಮಯೋಚಿತವಾಗಿ ಇಂತೆಂದನು – (ದೋ/೨೩೦)

**ಚೌ – ತಾತ ಜನಕತನಯಾ ಯಹ ಸೋಈ । ಧನುಷಜಗ್ಯ ಜೆಹಿ ಕಾರನ ಹೋಈ ॥**
**ಪೂಜನ ಗೌರಿ ಸಖೀಂ ಲೈ ಆಈಂ । ಕರತ ಪ್ರಕಾಸು ಫಿರಇ ಫುಲವಾಈಂ ॥ ೧ ॥**
**ಜಾಸು ಬಿಲೋಕಿ ಅಲೌಕಿಕ ಸೋಭಾ । ಸಹಜ ಪುನೀತ ಮೋರ ಮನು ಛೋಭಾ ॥**
**ಸೋ ಸಬು ಕಾರನ ಜಾನ ಬಿಧಾತಾ । ಫರಕಹಿಂ ಸುಭದ ಅಂಗ ಸುನು ಭ್ರಾತಾ ॥ ೨ ॥**
**ರಘುಬಂಸಿನ್ಹ ಕರ ಸಹಜ ಸುಭಾಊ । ಮನು ಕುಪಂಥ ಪಗು ಧರಇ ನ ಕಾಊ ॥**
**ಮೊಹಿ ಅತಿಸಯ ಪ್ರತೀತಿ ಮನ ಕೇರೀ । ಜೆಹಿಂ ಸಪನೆಹುँ ಪರನಾರಿ ನ ಹೇರೀ ॥ ೩ ॥**
**ಜಿನ್ಹ ಕೈ ಲಹಹಿಂ ನ ರಿಪು ರನ ಪೀಠೀ । ನಹಿಂ ಪಾವಹಿಂ ಪರತಿಯ ಮನು ಡೀಠೀ ॥**
**ಮಂಗನ ಲಹಹಿಂ ನ ಜಿನ್ಹ ಕೈ ನಾಹೀಂ । ತೇ ನರಬರ ಥೋರೇ ಜಗ ಮಾಹೀಂ ॥ ೪ ॥**

ತಮ್ಮಾ! ಇವಳು ಜನಕ ಮಹಾರಾಜರ ಮಗಳು. ಈಕೆಯ ವಿವಾಹಕ್ಕಾಗಿಯೇ ಧನುರ್ಯಜ್ಞವು ನಡೆಯುತ್ತಿದೆ. ಸಖಿಯರು ಈಕೆಯನ್ನು ಗೌರೀಪೂಜೆಗಾಗಿ ಕರೆತಂದಿರುವರು. ಇವಳು ಈ ಪುಷ್ಪವಾಟಿಕೆಯನ್ನೇ ಬೆಳಗುತ್ತಾ ಇದ್ದಾಳೆ. ಸಹಜವಾಗಿ ಪುನೀತವಾದ, ನಿಶ್ಚಲವಾದ ನನ್ನ ಮನಸ್ಸು ಇವಳ ಅಪೂರ್ವ ಸೌಂದರ್ಯವನ್ನು ನೋಡಿ ಕ್ಷುಬ್ಧಗೊಂಡಿದೆ. ಇದರ ಕಾರಣ ಆ ವಿಧಾತನೇ ಬಲ್ಲನು. ಆದರೆ ಲಕ್ಷ್ಮಣಾ! ನನ್ನ ಬಲಭಾಗ ಅದುರುತ್ತಿರುವುದು ಶುಭವನ್ನೇ ಸೂಚಿಸುತ್ತಿದೆ. ರಘುವಂಶೀಯರ ಮನಸ್ಸು ಎಂದಿಗೂ ಕುಮಾರ್ಗದಲ್ಲಿ ಹೋಗದು. ಇದು ಅವರ ಹುಟುಗುಣವಾಗಿದೆ. ನನ್ನ ಮನಸ್ಸು ಕನಸಿನಲ್ಲಿಯೂ ಪರನಾರಿಯರನ್ನು ನೋಡದು ಎಂಬುದು ನನಗೆ ವಿಶ್ವಾಸವಿದೆ. ರಣರಂಗದಲ್ಲಿ ವೈರಿಗೆ ಬೆನ್ನು ತೋರಿಸದವನೂ, ಪರನಾರಿಯರನ್ನು ಅವಲೋಕಿಸದವನೂ, ಯಾಚಕರನ್ನು ನಿರಾಶೆಗೊಳಿಸದವನೂ ಇಂತಹ ಪುರುಷಶ್ರೇಷ್ಠನು ಈ ಜಗತ್ತಿನಲ್ಲಿ ಇರುವುದು ಬಹಳ ವಿರಳರೇ. (ಚೌ/೧-೪)

**ದೋ – ಕರತ ಬತಕಹೀ ಅನುಜ ಸನ ಮನ ಸಿಯ ರೂಪ ಲೊಭಾನ ।**
**ಮುಖ ಸರೋಜ ಮಕರಂದ ಛಬಿ ಕರಇ ಮಧುಪ ಇವ ಪಾನ ॥ ೨೩೧ ॥**

ಈ ವಿಧವಾಗಿ ಶ್ರೀರಾಮನು ತಮ್ಮನೊಡನೆ ಮಾತಾಡುತ್ತಿದ್ದರೂ, ಸೀತೆಯ ರೂಪಕ್ಕೆ ಮಾರುಹೋಗಿದ್ದ ಅವನ ಮನಸ್ಸು, ಆಕೆಯ ಮುಖಸರೋಜದ ಮಕರಂದ ಸವಿಯನ್ನು ಮಧುಪದಂತೆ ಪಾನಮಾಡುತ್ತಿತ್ತು. (ದೋ/೨೩೧)

**ಚೌ – ಚಿತವತಿ ಚಕಿತ ಚಹೂँ ದಿಸಿ ಸೀತಾ । ಕಹँ ಗಏ ನೃಪಕಿಸೋರ ಮನು ಚಿಂತಾ ॥**
**ಜಹँ ಬಿಲೋಕ ಮೃಗ ಸಾವಕ ನೈನೀ । ಜನು ತಹँ ಬರಿಸ ಕಮಲ ಸಿತ ಶ್ರೇನೀ ॥ ೧ ॥**
**ಲತಾ ಓಟ ತಬ ಸಖಿನ್ಹ ಲಖಾಏ । ಸ್ಯಾಮಲ ಗೌರ ಕಿಸೋರ ಸುಹಾಏ ॥**
**ದೇಖಿ ರೂಪ ಲೋಚನ ಲಲಚಾನೇ । ಹರಷೇ ಜನು ನಿಜ ನಿಧಿ ಪಹಿಚಾನೇ ॥ ೨ ॥**
**ಥಕೇ ನಯನ ರಘುಪತಿ ಛಬಿ ದೇಖೇಂ । ಪಲಕನ್ಹಿಹೂँ ಪರಿಹರೀಂ ನಿಮೇಷೇಂ ॥**
**ಅಧಿಕ ಸನೇಹँ ದೇಹ ಭೈ ಭೋರೀ । ಸರದ ಸಸಿಹಿ ಜನು ಚಿತವ ಚಕೋರೀ ॥ ೩ ॥**
**ಲೋಚನ ಮಗ ರಾಮಹಿ ಉರ ಆನೀ । ದೀನ್ಹೇ ಪಲಕ ಕಪಾಟ ಸಯಾನೀ ॥**
**ಜಬ ಸಿಯ ಸಖಿನ್ಹ ಪ್ರೇಮಬಸ ಜಾನೀ । ಕಹಿ ನ ಸಕಹಿಂ ಕಛು ಮನ ಸಕುಚಾನೀ ॥ ೪ ॥**

ಅತ್ತ ಸೀತಾದೇವಿಯು ಚಕಿತಳಾಗಿ ಸುತ್ತಲೂ ನೋಡುತ್ತಾ ಬರುತ್ತಿದ್ದಾಳೆ. 'ರಾಜಕುಮಾರರು ಎತ್ತ ಹೋದರು! ಕಂಡುಬರುತ್ತಿಲ್ಲವಲ್ಲ!' ಎಂದು ಮನಸ್ಸಿನಲ್ಲಿ ಚಿಂತಿಸುತ್ತಿದ್ದಾಳೆ. ಬಾಲಮೃಗನಯನೆ ಸೀತೆಯು ದೃಷ್ಟಿ ಹರಿಸಿದಲ್ಲಿ, ಶ್ವೇತಕಮಲಗಳ ಶ್ರೇಣಿ ಮಳೆಗರೆಯುವಂತಿದೆ. ಅಂದರೆ ಎಲ್ಲಕಡೆಗಳಲ್ಲಿ ಸಾತ್ತ್ವಿಕ ಭಾವವೇ ವ್ಯಾಪ್ತವಾದಂತಿದೆ. ಆಗ ಸಖಿಯರು – ಲತಾನಿಕುಂಜದ ಮರೆಯಲ್ಲಿದ್ದ ಸುಂದರರಾದ ಶ್ಯಾಮಲ-ಗೌರವರ್ಣಗಳಿಂದ ಶೋಭಿತರಾದ ಆ ರಾಜಕುಮಾರರನ್ನು ಸೀತೆಗೆ ತೋರಿದರು. ನಯನಾನಂದಕರವಾದ ಶ್ರೀರಾಮನ ರೂಪವೈಭವಗಳಿಗೆ ಆಕರ್ಷಿತಳಾದ ಆಕೆ, ತನ್ನ ಕಣ್ಣುಗಳಿಂದ ಅವನ ಸೌಂದರ್ಯಸುಧೆಯನ್ನು ಪಾನಮಾಡಿದಳು. ಕಳೆದುಹೋದ ನಿಧಿಯು ಹೊಂದಿದವರಂತೆ ಅವಳು ಸಂತೋಷಭರಿತಳಾದಳು. ರಘುಪತಿಯ ರೂಪಲಾವಣ್ಯವನ್ನು ಕಂಡು ಆಕೆಯ ಕಣ್ಣುಗಳು ನಿಶ್ಚಲವಾದವು. ರೆಪ್ಪೆಗಳು ಮುಚ್ಚುವುದನ್ನೇ ಮರೆತುಬಿಟ್ಟವು. ಸ್ನೇಹಾಧಿಕ್ಯದಿಂದಾಗಿ ಅವಳು ಪ್ರೇಮವಿಹ್ವಲಳಾದಳು. ಶರತ್ಕಾಲದ ಚಂದ್ರನನ್ನು ನೋಡಿದ ಚಕೋರಿಯಂತೆ ಪರವಶಳಾಗಿ ನೋಡುತ್ತಾ ನಿಂತುಬಿಟ್ಟಳು. ಜಾನಕಿಯ ಕಣ್ಣುಗಳ ಮೂಲಕ ಶ್ರೀರಾಮಚಂದ್ರನನ್ನು ತನ್ನ ಹೃದಯದಲ್ಲಿ ಬಂಧಿಸಿ, ಚತುರ

ಶಿರೋಮಣಿಯಾದ ಅವಳು ರೆಪ್ಪೆಗಳೆಂಬ ಕದವನ್ನು ಮುಚ್ಚಿದಳು. ಅಂದರೆ, ಕಂಗಳನ್ನು ಮುಚ್ಚಿ ರಾಮನ ಧ್ಯಾನ ಮಾಡತೊಡಗಿದಳು. ಪ್ರೇಮವಶಳಾಗಿರುವ ಸೀತೆಯನ್ನು ಕಂಡು ಸಖಿಯರು ಮನಸ್ಸಿನಲ್ಲೇ ಸಂಕೋಚಗೊಂಡರು. ಬಾಯಿಂದ ಮಾತೇ ಹೊರಡದು. (ಚೌ/೧-೪)

**ದೋ – ಲತಾಭವನ ತೇಂ ಪ್ರಗಟ ಭೇ ತೆಹಿ ಅವಸರ ದೋಉ ಭಾಇ ।**
**ನಿಕಸೇ ಜನು ಜುಗ ಬಿಮಲ ಬಿಧು ಜಲದ ಪಟಲ ಬಿಲಗಾಇ ॥ ೨೩೨ ॥**

ಅದೇ ವೇಳೆಗೆ ಅಣ್ಣ-ತಮ್ಮಂದಿರಿಬ್ಬರೂ, ಮೋಡದ ಮರೆಯಿಂದ ಮೂಡಿದ ಎರಡು ಚಂದ್ರರಂತೆ ಆ ಲತಾಭವನದಿಂದ ಹೊರಕ್ಕೆ ಬಂದರು. (ದೋ/೨೩೨)

**ಚೌ – ಸೋಭಾ ಸೀವ್ ಸುಭಗ ದೋಉ ಬೀರಾ । ನೀಲ ಪೀತ ಜಲಜಾಭ ಸರೀರಾ ॥**
**ಮೋರಪಂಖ ಸಿರ ಸೋಹತ ನೀಕೇ । ಗುಚ್ಛ ಬೀಚ ಬಿಚ ಕುಸುಮ ಕಲೀ ಕೇ ॥ ೧ ॥**
**ಭಾಲ ತಿಲಕ ಶ್ರಮಬಿಂದು ಸುಹಾಏ । ಶ್ರವನ ಸುಭಗ ಭೂಷನ ಛಬಿ ಛಾಏ ॥**
**ಬಿಕಟ ಭೃಕುಟಿ ಕಚ ಘೂಘರವಾರೇ । ನವ ಸರೋಜ ಲೋಚನ ರತನಾರೇ ॥ ೨ ॥**
**ಚಾರು ಚಿಬುಕ ನಾಸಿಕಾ ಕಪೋಲಾ । ಹಾಸ ಬಿಲಾಸ ಲೇತ ಮನು ಮೋಲಾ ॥**
**ಮುಖಛಬಿ ಕಹಿ ನ ಜಾಇ ಮೊಹಿ ಪಾಹೀಂ । ಜೋ ಬಿಲೋಕಿ ಬಹು ಕಾಮ ಲಜಾಹೀಂ ॥ ೩ ॥**
**ಉರ ಮನಿ ಮಾಲ ಕಂಬು ಕಲ ಗೀವಾ । ಕಾಮ ಕಲಭ ಕರ ಭುಜ ಬಲಸೀಂವಾ ॥**
**ಸುಮನ ಸಮೇತ ಬಾಮ ಕರ ದೋನಾ । ಸಾವँರ ಕುअँರ ಸಖೀ ಸುಠಿ ಲೋನಾ ॥ ೪ ॥**

ಈ ಸಾಟಿಯಿಲ್ಲದ ಇವರ ಸೌಂದರ್ಯಕ್ಕೆ ಮೇರೆಯೇ ಇಲ್ಲ. ಅವರ ಶರೀರಕಾಂತಿಯು ನೀಲ ಸುವರ್ಣ ಕಮಲಗಳಂತೆ ಹೋಲುತ್ತಿತ್ತು. ಹೂವಿನ ಗುಚ್ಛಗಳಿಂದ ಅಲಂಕರಿಸಲ್ಪಟ್ಟ, ನವಿಲುಗರಿಯಿಂದ ಶೋಭಿಸುತ್ತಿರುವ ಶಿರೋಭೂಷಣವನ್ನು ಅವರು ಧರಿಸಿದ್ದರು. ಹಣೆಯಲ್ಲಿ ಸುಂದರ ತಿಲಕ ಹಾಗೂ ಬೆವರು ಹನಿಗಳು ಶೋಭಿಸುತ್ತಿವೆ. ಕಿವಿಗಳಲ್ಲಿ ಅಂದವಾದ ಕರ್ಣಕುಂಡಲಗಳು ಹೊಳೆಯುತ್ತಿವೆ. ಬಿಲ್ಲಿನಂತಹ ಕಣ್ಣುಹುಬ್ಬುಗಳು, ಗುಂಗುರಾದ ಕೂದಲುಗಳು, ಕೆಂದಾವರೆಯಂತೆ ಕಣ್ಣುಗಳು ಶೋಭಾಯಮಾನವಾಗಿ ಒಪ್ಪುತ್ತಿವೆ. ಗಲ್ಲ, ಮೂಗು, ಕೆನ್ನೆಗಳು ಅತ್ಯಂತ ಸುಂದರವಾಗಿವೆ. ತಿಳಿನಗೆಯ ಚೆಲುವಂತೂ ಮನವನ್ನು ಮಾರುಗೊಳ್ಳುವಂತಹುದು. ಕಾಮದೇವನೂ ತಲೆತಗ್ಗಿಸುವಂತಹ ಮುಖದ ಸೌಂದರ್ಯವಂತೂ ವರ್ಣನಾತೀತ. ವಕ್ಷಸ್ಥಳದಲ್ಲಿ ಮಣಿಮಾಲೆಗಳೂ, ಶಂಖದಂತೆ ಕೊರಳು ಕಂಗೊಳಿಸುತ್ತದೆ. ಕಾಮದೇವನ ಮರಿಯಾನೆಯ ಸೊಂಡಿಲಿನಂತೆ, ಬಲದ ಮೇರೆಯಾದ ಭುಜಗಳು ಅನುಪಮವಾಗಿವೆ. ಓರ್ವ ಸಖಿಯು ಇಂತೆಂದಳು – ''ಎಡಕೈಯಲ್ಲಿ ಹೂವಿವ ದೊನ್ನೆಯನ್ನು ಹಿಡಿದಿರುವ ಶ್ಯಾಮಲ ಕುಮಾರನಂತೂ ಬಲು ಚೆಲುವು.'' (ಚೌ/೧-೪)

**ದೋ – ಕೇಹರಿ ಕಟಿ ಪಟ ಪೀತ ಧರ ಸುಷಮಾ ಸೀಲ ನಿಧಾನ ।**
**ದೇಖಿ ಭಾನುಕುಲಭೂಷನಹಿ ಬಿಸರಾ ಸಖಿನ್ಹ ಅಪಾನ ॥ ೨೩೩ ॥**

ಸಿಂಹದಂತೆ ಕಟಿಯುಳ್ಳವನೂ, ಪೀತಾಂಬರಧಾರಿಯೂ, ಪರಮಶೋಭಾನಿಧಾನನೂ, ಉತ್ತಮ ಶೀಲಸಂಪನ್ನನೂ, ಭಾನುಕುಲ ಭೂಷಣನೂ ಆದ ಶ್ರೀರಾಮಚಂದ್ರನನ್ನು ನೋಡಿ, ಸಖಿಯರು ತಮ್ಮನ್ನು ತಾವೇ ಮರೆತರು. (ದೋ/೨೩೩)

**ಚೌ – ಧರಿ ಧೀರಜು ಏಕ ಆಲಿ ಸಯಾನೀ । ಸೀತಾ ಸನ ಬೋಲೀ ಗಹಿ ಪಾನೀ ॥**
**ಬಹುರಿ ಗೌರಿ ಕರ ಧ್ಯಾನ ಕರೇಹೂ । ಭೂಪಕಿ ಸೋರ ದೇಖಿ ಕಿನ ಲೇಹೂ ॥ ೧ ॥**
**ಸಕುಚಿ ಸೀಯಂ ತಬ ನಯನ ಉಘಾರೇ । ಸನಮುಖ ದೋಉ ರಘುಸಿಂಘ ನಿಹಾರೇ ॥**
**ನಖ ಸಿಖ ದೇಖಿ ರಾಮ ಕೈ ಸೋಭಾ । ಸುಮಿರಿ ಪಿತಾ ಪನು ಮನು ಅತಿ ಛೋಭಾ ॥ ೨ ॥**
**ಪರಬಸ ಸಖಿನ್ಹ ಲಖೀ ಜಬ ಸೀತಾ । ಭಯಉ ಗಹರು ಸಬ ಕಹಹಿಂ ಸಭೀತಾ ॥**
**ಪುನಿ ಆಉಬ ಏಹಿ ಬೆರಿಆँ ಕಾಲೀ । ಅಸ ಕಹಿ ಮನ ಬಿಹಸೀ ಏಕ ಆಲೀ ॥ ೩ ॥**
**ಗೂಢ ಗಿರಾ ಸುನಿ ಸಿಯ ಸಕುಚಾನೀ । ಭಯಉ ಬಿಲಂಬು ಮಾತು ಭಯ ಮಾನೀ ॥**
**ಧರಿ ಬಡಿ ಧೀರ ರಾಮು ಉರ ಆನೇ । ಫಿರೀ ಅಪನಪಉ ಪಿತುಬಸ ಜಾನೇ ॥ ೪ ॥**

ತನ್ನನ್ನು ತಾನು ಸಾವರಿಸಿಕೊಂಡು ಓರ್ವ ಸಖಿಯು ಸೀತಾದೇವಿಯ ಕೈಹಿಡಿದುಕೊಂಡು ಇಂತೆಂದಳು – ''ಗಿರಿಜಾದೇವಿಯ ಧ್ಯಾನ ಆಮೇಲೆ ಮಾಡುವಿಯಂತೆ; ಈಗ ರಾಜಕುಮಾರರನ್ನು ಏಕೆ ನೋಡಬಾರದು?'' ಆಗ ಸೀತಾದವಿಯು ಸಂಕೋಚದಿಂದ ಕಣ್ಣು ತೆರೆದಳು. ಎದುರಿಗೆ ನಿಂತಿರುವ ಇಬ್ಬರು ರಘುಕುಲಸಿಂಹ ಕಿಶೋರರನ್ನು ನೋಡಿದಳು. ಅಡಿಯಿಂದ ಮುಡಿಯವರೆಗೆ ಶ್ರೀರಾಮನ ಚೆಲುವನ್ನು ಕಂಡು ಮತ್ತೆ ತಂದೆಯ ಪ್ರತಿಜ್ಞೆಯು ನೆನಪಿಗೆ ಬಂದಾಗ ಆಕೆಯ ಮನಸ್ಸಿನಲ್ಲಿ ಆಂದೋಳನವೆದ್ದಿತು. ಸೀತಾದೇವಿಯ ಪ್ರೇಮಪಾರವಶ್ಯವನ್ನು ಗಮನಿಸಿದ ಸಖಿಯರು ಹೆದರಿಕೊಂಡು ''ಅಮ್ಮಾ! ತುಂಬಾ ಹೊತ್ತಾಯಿತು. ನಾಳೆ ಇದೇ ವೇಳೆಗೆ ಮತ್ತೆ ಇಲ್ಲಿಗೆ ಬರೋಣ'' ಎಂದು ಓರ್ವ ಸಖಿಯು ಹೇಳಿ, ಮನದಲ್ಲೇ ನಕ್ಕಳು. ಸಖಿಯ ಈ ರಹಸ್ಯಮಯ ವಾಣಿಯನ್ನು ಕೇಳಿ ಸೀತೆಯು ಸಂಕೋಚಗೊಂಡಳು. ಹೊತ್ತಾದುದನ್ನು ತಿಳಿದು ಆಕೆಗೆ ತಾಯಿಯ ಭಯವಾಯಿತು. ಹೆಚ್ಚಿನ ಧೈರ್ಯವನ್ನು ತಂದುಕೊಂಡು ಸೀತೆಯು ಶ್ರೀರಾಮಚಂದ್ರನನ್ನು ತನ್ನ ಹೃದಯದಲ್ಲಿ ನೆಲೆನಿಲ್ಲಿಸಿ, ಆತನನ್ನೇ ಧ್ಯಾನಿಸುತ್ತಾ, ತಾನು ತಂದೆಯ ಅಧೀನಳೆಂದುಕೊಂಡು ಹಿಂದಿರುಗಿದಳು. (ಚೌ/೧-೪)

**ದೋ – ದೇಖನ ಮಿಸ ಮೃಗ ಬಿಹಗ ತರು ಫಿರಇ ಬಹೋರಿ ಬಹೋರಿ ।**
**ನಿರಖಿ ನಿರಖಿ ರಘುಬೀರ ಛಬಿ ಬಾಢಇ ಪ್ರೀತಿ ನ ಥೋರಿ ॥ ೨೩೪ ॥**

ಜಿಂಕೆಗಳನ್ನೂ, ಪಕ್ಷಿಗಳನ್ನೂ ಗಿಡ-ಮರಗಳನ್ನು ನೋಡುವ ನೆಪದಿಂದ ಸೀತೆಯು ಮತ್ತೆ ಮತ್ತೆ ಹಿಂದಿರುಗಿ, ಶ್ರೀರಾಮನ ಅನುಪಮ ಸೌಂದರ್ಯವನ್ನು ನೋಡಿಕೊಳ್ಳುತ್ತಾ ಅವಳ ಪ್ರೇಮವು ಹೆಚ್ಚುತ್ತಿತ್ತು. (ದೋ/೨೩೪)

**ಚೌ – ಜಾನಿ ಕಠಿನ ಸಿವಚಾಪ ಬಿಸೂರತಿ । ಚಲೀ ರಾಖಿ ಉರ ಸ್ಯಾಮಲ ಮೂರತಿ ॥**
**ಪ್ರಭು ಜಬ ಜಾತ ಜಾನಕೀ ಜಾನೀ । ಸುಖ ಸನೇಹ ಸೋಭಾ ಗುನ ಖಾನೀ ॥ ೧ ॥**
**ಪರಮ ಪ್ರೇಮಮಯ ಮೃದು ಮಸಿ ಕೀನ್ಹೀ । ಚಾರು ಚಿತ್ತಭೀತೀಂ ಲಿಖಿ ಲೀನ್ಹೀ ॥**
**ಗಈ ಭವಾನೀ ಭವನ ಬಹೋರೀ । ಬಂದಿ ಚರನ ಬೋಲೀ ಕರ ಜೋರೀ ॥ ೨ ॥**
**ಜಯ ಜಯ ಗಿರಿಬರರಾಜ ಕಿಸೋರೀ । ಜಯ ಮಹೇಸ ಮುಖ ಚಂದ ಚಕೋರೀ ॥**
**ಜಯ ಗಜಬದನ ಷಡಾನನ ಮಾತಾ । ಜಗತ ಜನನಿ ದಾಮಿನಿ ದುತಿ ಗಾತಾ ॥ ೩ ॥**
**ನಹಿಂ ತವ ಆದಿ ಮಧ್ಯ ಅವಸಾನಾ । ಅಮಿತ ಪ್ರಭಾಉ ಬೇದು ನಹಿಂ ಜಾನಾ ॥**
**ಭವ ಭವ ಬಿಭವ ಪರಾಭವ ಕಾರಿನಿ । ಬಿಸ್ವಬಿಮೋಹನಿ ಸ್ವಬಸ ಬಿಹಾರಿನಿ ॥ ೪ ॥**

ಸೀತಾದೇವಿಯು ಶಿವಧನುಸ್ಸು ಅತಿಕಠೋರವೆಂದು ನೆನೆದು ನಿಡುಸುಯ್ಯುತ್ತ, ಹೃದಯದಲ್ಲಿ ಶ್ರೀರಾಮನ ಸುಕೋಮಲ ಮೂರ್ತಿಯನ್ನು ನೆಲೆಗೊಳಿಸಿ ಹೊರಟಳು. ಶ್ರೀರಾಮಚಂದ್ರನೂ ಕೂಡ ಸುಖ, ಸ್ನೇಹ, ಶೋಭೆ, ಸುಗುಣಗಳ ಖಣಿಯಾದ ಸೀತಾದೇವಿಯು ಹೋಗುತ್ತಿರುವುದನ್ನು ಗಮನಿಸಿ, ಆಕೆಯ ರೂಪವನ್ನು ತನ್ನ ಚಿತ್ತಭಿತ್ತಿಯಮೇಲೆ ಪ್ರೇಮಮಯ ಶ್ಯಾಹಿಯಿಂದ ಚಿತ್ರಿಸಿಕೊಂಡನು. ಸೀತೆಯು ಮರಳಿ ಭವಾನಿಯ ಗುಡಿಗೆ ಹೋಗಿ, ದೇವಿಯ ಚರಣಗಳಿಗೆರಗಿ, ಕೈಜೋಡಿಸಿಕೊಂಡು ಇಂತು ಪ್ರಾರ್ಥಿಸಿದಳು – ''ಹೇ ಗಿರಿರಾಜಸುತೇ! ನಿನಗೆ ಜಯವಾಗಲಿ. ಮಹಾದೇವನ ಮುಖಚಂದ್ರಚಕೋರಿಯೇ ನಿನಗೆ ಜಯವಾಗಲಿ. ಗಜಾನನ ಹಾಗೂ ಷಡಾನನರ ಜನನಿಯೇ! ಜಗನ್ಮಾತೆಯೇ! ವಿದ್ಯುಲ್ಲತೆಯಂತೆ ಶರೀರವುಳ್ಳವಳೇ ನಿನಗೆ ಜಯವಾಗಲಿ! ನೀನು ಆದಿಮಧ್ಯಾಂತರಹಿತಳೂ, ನಿನ್ನ ಅಪರಿಮಿತ ಪ್ರಭಾವವನ್ನು ವೇದಗಳೂ ಕೂಡ ವರ್ಣಿಸಲಾರವು. ನೀನು ಜಗತ್ತಿನ ಸೃಷ್ಟಿಸ್ಥಿತಿಲಯಕಾರಿಣಿಯಾಗಿರುವೆ. ವಿಶ್ವವನ್ನು ಮೋಹಿಸಬಲ್ಲವಳೂ, ಸ್ವತಂತ್ರಳಾಗಿ ವಿಹರಿಸಬಲ್ಲವಳೂ ಆಗಿರುವೆ. (ಚೌ/೧-೪)

**ದೋ – ಪತಿದೇವತಾ ಸುತೀಯ ಮಹುಂ ಮಾತು ಪ್ರಥಮ ತವ ರೇಖ ।**
**ಮಹಿಮಾ ಅಮಿತ ನ ಸಕಹಿಂ ಕಹಿ ಸಹಸ ಸಾರದಾ ಸೇಷ ॥ ೨೩೫ ॥**

ಅಮ್ಮಾ! ಪತಿವ್ರತಾಶಿರೋಮಣಿಗಳಲ್ಲಿ ಮೊದಲನೆಯವಳೇ ನೀನಾಗಿರುವೆ. ನಿನ್ನ ಅಪಾರ ಮಹಿಮೆಯನ್ನು ಸಾವಿರಾರು ಸರಸ್ವತಿಯರಾಗಲೀ, ಆದಿಶೇಷರಾಗಲೀ ಸಂಪೂರ್ಣವಾಗಿ ವರ್ಣಿಸಲಾರವು. (ದೋ/೨೩೫)

**ಚೌ – ಸೇವತ ತೋಹಿ ಸುಲಭ ಫಲ ಚಾರೀ । ಬರದಾಯನೀ ಪುರಾರಿ ಪಿಆರೀ ॥**
**ದೇಬಿ ಪೂಜಿ ಪದ ಕಮಲ ತುಮ್ಹಾರೇ । ಸುರ ನರ ಮುನಿ ಸಬ ಹೋಹಿಂ ಸುಖಾರೇ ॥ ೧ ॥**
**ಮೋರ ಮನೋರಥು ಜಾನಹು ನೀಕೇಂ । ಬಸಹು ಸದಾ ಉರ ಪುರ ಸಬಹೀ ಕೇಂ ॥**
**ಕೀನ್ಹೆಉಂ ಪ್ರಗಟ ನ ಕಾರನ ತೇಹೀಂ । ಅಸ ಕಹಿ ಚರನ ಗಹೇ ಬೈದೇಹೀಂ ॥ ೨ ॥**

ಬಿನಯ ಪ್ರೇಮ ಬಸ ಭಈ ಭವಾನೀ । ಖಸೀ ಮಾಲ ಮೂರತಿ ಮುಸುಕಾನೀ ॥
ಸಾದರ ಸಿಯ್ ಪ್ರಸಾದು ಸಿರ ಧರೇಊ । ಬೋಲೀ ಗೌರಿ ಹರಷು ಹಿಯ್ ಭರೇಊ ॥ ೩ ॥
ಸುನು ಸಿಯ ಸತ್ಯ ಅಸೀಸ ಹಮಾರೀ । ಪೂಜಿಹಿ ಮನ ಕಾಮನಾ ತುಮ್ಹಾರೀ ॥
ನಾರದ ಬಚನ ಸದಾ ಸುಚಿ ಸಾಚಾ । ಸೋ ಬರು ಮಿಲಿಹಿ ಜಾಹಿ ಮನು ರಾಚಾ ॥ ೪ ॥

ಓ ವರಪ್ರದಾಯಿನೀ! ತ್ರಿಪುರಾರಿಯ ಪ್ರಾಣಪ್ರಿಯೆ! ನಿನ್ನ ಸೇವೆ ಮಾಡುವುದರಿಂದ ಚತುರ್ವಿಧ ಪುರುಷಾರ್ಥಗಳೂ ಸುಲಭವಾಗಿ ಕೈವಶವಾಗುತ್ತವೆ. ಅಮ್ಮಾ! ನಿನ್ನ ಚರಣಗಳನ್ನು ಆಶ್ರಯಿಸಿ ನಿನ್ನನ್ನು ಪೂಜಿಸಿದ ಸುರ, ನರ, ಮುನಿಗಳೆಲ್ಲ ಸುಖಿಗಳಾಗುತ್ತಾರೆ. ನೀನು ಎಲ್ಲ ಪ್ರಾಣಿಗಳ ಹೃದಯದಲ್ಲಿ ವಾಸಿಸಿರುವೆ. ನನ್ನ ಮನೋರಥವು ನೀನೇ ಬಲ್ಲೆ. ಅದರಿಂದ ನಾನು ಯಾವುದನ್ನು ಬಾಯಿಬಿಟ್ಟು ಹೇಳಲಿಲ್ಲ'' ಎಂದು ಹೇಳಿ ಸೀತಾದೇವಿಯು ಭವಾನಿಯ ಪಾದಗಳನ್ನು ಆಶ್ರಯಿಸಿದಳು. ಸೀತಾದೇವಿಯ ಭಕ್ತಿ, ವಿನಯ, ಪ್ರೇಮ ಇವುಗಳಿಗೆ ಗೌರೀದೇವಿಯು ಪ್ರಸನ್ನಳಾದಳು. ಆಕೆಗೆ ಅಲಂಕರಿಸಿದ ಕೊರಳ ಹೂವಿನಮಾಲೆಯು ಜಾರಿಬಿತ್ತು. ವಿಗ್ರಹವು ಮಂದಹಾಸ ಬೀರಿತು. ಸೀತೆಯು ಆದರದಿಂದ ಆ ಪ್ರಸಾದಮಾಲೆಯನ್ನು ತಲೆಯಲ್ಲಿ ಮುಡಿದುಕೊಂಡಳು. ಗೌರಿಯು ಹರ್ಷಗೊಂಡ ಹೃದಯದಿಂದ ಇಂತೆಂದಳು – ''ಎಲೈ ಸೀತೇ! ನಿನ್ನ ಮನೋಕಾಮನೆ ಪೂರ್ಣವಾಗುವುದು. ನಾರದರ ಪವಿತ್ರ ವಚನಗಳು ಸತ್ಯವಾದವುಗಳು. ನೀನು ಮನದಲ್ಲಿ ಅನುರಕ್ತನಾದ ವರನೇ ನಿನಗೆ ದೊರೆಯುವನು. ಇದು ನನ್ನ ಅಮೋಘವಾದ ವರವಾಗಿದೆ, ಆಶೀರ್ವಾದವಾಗಿದೆ. (ಚೌ/೧-೪)

ಛಂ – ಮನು ಜಾಹಿ ರಾಚೆಉ ಮಿಲಿಹಿ ಸೋ ಬರು ಸಹಜ ಸುಂದರ ಸಾಂವರೋ ।
ಕರುನಾ ನಿಧಾನ ಸುಜಾನ ಸೀಲು ಸನೇಹು ಜಾನತ ರಾವರೋ ॥
ಎಹಿ ಭಾಂತಿ ಗೌರಿ ಅಸೀಸ ಸುನಿ ಸಿಯ ಸಹಿತ ಹಿಯ್ ಹರಷೀಂ ಅಲೀ ।
ತುಲಸೀ ಭವಾನಿಹಿ ಪೂಜಿ ಪುನಿ ಪುನಿ ಮುದಿತ ಮನ ಮಂದಿರ ಚಲೀ ॥

ನಿನ್ನ ಮನಸ್ಸು ಪ್ರೇಮಿಸಿದ, ಸ್ವಭಾವತಃ ಸುಂದರನೂ, ಶ್ಯಾಮವರ್ಣನೂ ಆದ ವರನೇ ನಿನಗೆ ದೊರೆಯುವನು. ಅವನು ಪರಮ ದಯಾಳುವೂ, ಸರ್ವಜ್ಞನೂ, ನಿನ್ನ ಶೀಲ, ಸ್ನೇಹವನ್ನು ಬಲ್ಲವನೂ ಆಗಿರುವನು.'' ಈ ಪ್ರಕಾರ ಗೌರೀದೇವಿಯ ಆಶೀರ್ವಾದವನ್ನು ಕೇಳಿ, ಸೀತೆಸಹಿತ ಎಲ್ಲ ಸಖಿಯರು ಹರ್ಷಿತರಾದರು. ಸೀತೆಯು ಪದೇ-ಪದೇ ಭವಾನಿಯನ್ನು ಪೂಜಿಸುತ್ತಾ, ವಂದಿಸುತ್ತಾ ಪ್ರಶಾಂತಚಿತ್ತಳಾಗಿ ಅರಮನೆಗೆ ಹಿಂದಿರುಗಿದಳು, ಎಂದು ತುಳಸೀದಾಸರು ಹೇಳುತ್ತಿದ್ದಾರೆ. (ಛಂದ)

ಸೋ – ಜಾನಿ ಗೌರಿ ಅನುಕೂಲ ಸಿಯ ಹಿಯ ಹರಷು ನ ಜಾಇ ಕಹಿ ।
ಮಂಜುಲ ಮಂಗಲ ಮೂಲ ಬಾಮ ಅಂಗ ಫರಕನ ಲಗೇ ॥ ೨೩೬ ॥

ತನ್ನ ಮನೋರಥಗಳನ್ನು ಅರಿತು ಗಿರಿಜೆಯು ಆಶೀರ್ವದಿಸಿದುದನ್ನು ಸೀತಾದೇವಿಯು ಹೇಳಲಾರದಷ್ಟು ಆನಂದಪಟ್ಟಳು. ಶುಭಸೂಚಕವಾದ ಶರೀರದ ಅವಳ ವಾಮಾಂಗವು ಅದುರತೊಡಗಿತು. (ಸೋ/೨೩೬)

ಚೌ – ಹೃದಯ್ ಸರಾಹತ ಸೀಯ ಲೊನಾಈ । ಗುರ ಸಮೀಪ ಗವನೇ ದೊಉ ಭಾಈ ॥
ರಾಮ ಕಹಾ ಸಬು ಕೌಸಿಕ ಪಾಹೀಂ । ಸರಲ ಸುಭಾಉ ಛುಅತ ಛಲ ನಾಹೀಂ ॥ ೧ ॥
ಸುಮನ ಪಾಇ ಮುನಿ ಪೂಜಾ ಕೀನ್ಹೀ । ಪುನಿ ಅಸೀಸ ದುಹು ಭಾಇನ್ಹ ದೀನ್ಹೀ ॥
ಸುಫಲ ಮನೋರಥ ಹೋಹುಂ ತುಮ್ಹಾರೇ । ರಾಮು ಲಖನು ಸುನಿ ಭಏ ಸುಖಾರೇ ॥ ೨ ॥
ಕರಿ ಭೋಜನು ಮುನಿಬರ ಬಿಗ್ಯಾನೀ । ಲಗೇ ಕಹನ ಕಛು ಕಥಾ ಪುರಾನೀ ॥
ಬಿಗತ ದಿವಸು ಗುರು ಆಯಸು ಪಾಈ । ಸಂಧ್ಯಾ ಕರನ ಚಲೇ ದೊಉ ಭಾಈ ॥ ೩ ॥
ಪ್ರಾಚೀ ದಿಸಿ ಸಸಿ ಉಯಉ ಸುಹಾವಾ । ಸಿಯ ಮುಖ ಸರಿಸ ದೇಖಿ ಸುಖು ಪಾವಾ ॥
ಬಹುರಿ ಬಿಚಾರು ಕೀನ್ಹ ಮನ ಮಾಹೀಂ । ಸೀಯ ಬದನ ಸಮ ಹಿಮಕರ ನಾಹೀಂ ॥ ೪ ॥

ಶ್ರೀರಾಮನು ಸೀತಾದೇವಿಯ ಲಾವಣ್ಯವನ್ನು ಹೃದಯದಲ್ಲಿ ಕೊಂಡಾಡುತ್ತಾ, ಇಬ್ಬರೂ ಸೋದರರು ಗುರುಗಳ ಬಳಿಗೆ ಮರಳಿದರು. ಸರಳ ಸ್ವಭಾವದವನೂ, ಕಪಟವನ್ನರಿಯದವನೂ, ಆದ ಶ್ರೀರಾಮನು ಎಲ್ಲ ವಿಷಯವನ್ನು ವಿಶ್ವಾಮಿತ್ರರಿಗೆ ನಿವೇದಿಸಿಕೊಂಡನು. ಮುನೀಶ್ವರರು ಶ್ರೀರಾಮನು ತಂದ ಹೂವಿನಿಂದ ದೇವತಾರ್ಚನೆ ಮುಗಿಸಿದರು. ಬಳಿಕ ''ನಿಮ್ಮ ಮನೋರಥಗಳು ಈಡೇರಲಿ'' ಎಂದು ಇಬ್ಬರೂ ಸೋದರರಿಗೆ ಆಶೀರ್ವದಿಸಿದರು. ಅದನ್ನು ಕೇಳಿ ರಾಮ-ಲಕ್ಷ್ಮಣರು

ಸುಖಿಗಳಾದರು. ವಿಜ್ಞಾನಖನಿಯಾದ ವಿಶ್ವಾಮಿತ್ರರು ಭೋಜನಾನಂತರ ಅವರಿಗೆ ಅನೇಕ ಪೌರಾಣಿಕ ಕಥೆಗಳನ್ನು ಹೇಳತೊಡಗಿದರು. ಇಷ್ಟರಲ್ಲೇ ಸಂಜೆಯಾಯಿತು. ಗುರುವಿನ ಅಪ್ಪಣೆಪಡೆದು ರಾಮ-ಲಕ್ಷ್ಮಣರಿಬ್ಬರೂ ಸಂಧ್ಯಾವಂದನೆಗೆ ತೆರಳಿದರು. ಅತ್ತ ಮೂಡಣದಿಶೆಯಲ್ಲಿ ಚೆಲುವ ಚಂದ್ರಮನು ಮೂಡಿದನು. ಸೀತಾದೇವಿಯ ಮುಖದಂತೆ ಇರುವ ಚಂದ್ರಬಿಂಬವನ್ನು ನೋಡಿ ಶ್ರೀರಾಮಚಂದ್ರನು ಸುಖಿಯಾದನು. ಸ್ವಲ್ಪಹೊತ್ತಿನ ಬಳಿಕ ಈ ಚಂದ್ರನು ಸೀತಾದೇವಿಯ ಮುಖದಂತೆ ಇಲ್ಲವಲ್ಲ! ಎಂದುಕೊಂಡನು. (ಚೌ/೧-೪)

**ದೋ – ಜನಮು ಸಿಂಧು ಪುನಿ ಬಂಧು ಬಿಷು ದಿನ ಮಲೀನ ಸಕಲಂಕ ।**
**ಸಿಯ ಮುಖ ಸಮತಾ ಪಾವ ಕಿಮಿ ಚಂದು ಬಾಪುರೋ ರಂಕ ॥ ೨೩೭ ॥**

''ಇವನು ಉಪ್ಪಿನ ಕಡಲಲ್ಲಿ ಹುಟ್ಟಿದವನು. ಆ ಸಮುದ್ರದಲ್ಲೇ ಹುಟ್ಟಿದ ವಿಷವು ಇವನಿಗೆ ಸೋದರ. ಹಗಲಿನಲ್ಲಿ ಇವನು ಮಲಿನ (ಕಳಾಹೀನ)ನಾಗಿರುತ್ತಾನೆ. ಕಳಂಕಿತನು (ಕಪ್ಪುಮಚ್ಚೆಯಿರುವವನು). ಪಾಪ! ಇಂತಹ ಬಡಚಂದ್ರನು ಸೀತೆಯ ಮುಖಕ್ಕೆ ಎಣೆಯೇ? (ದೋ/೨೩೭)

**ಚೌ – ಘಟಇ ಬಢಇ ಬಿರಹಿನಿ ದುಖದಾಈ । ಗ್ರಸಇ ರಾಹು ನಿಜ ಸಂಧಿಹಿಂ ಪಾಈ ॥**
**ಕೋಕ ಸೋಕಪ್ರದ ಪಂಕಜ ದ್ರೋಹೀ । ಅವಗುನ ಬಹುತ ಚಂದ್ರಮಾ ತೋಹೀ ॥ ೧ ॥**
**ಬೈದೇಹೀ ಮುಖ ಪಟತರ ದೀನ್ಹೆ । ಹೋಇ ದೋಷು ಬಡ ಅನುಚಿತ ಕೀನ್ಹೆ ॥**
**ಸಿಯ ಮುಖ ಛಬಿ ಬಿಧು ಬ್ಯಾಜ ಬಖಾನೀ । ಗುರ ಪಹಿಂ ಚಲೇ ನಿಸಾ ಬಡಿ ಜಾನೀ ॥ ೨ ॥**
**ಕರಿ ಮುನಿ ಚರನ ಸರೋಜ ಪ್ರನಾಮಾ । ಆಯಸು ಪಾಇ ಕೀನ್ಹ ಬಿಶ್ರಾಮಾ ॥**
**ಬಿಗತ ನಿಸಾ ರಘುನಾಯಕ ಜಾಗೇ । ಬಂಧು ಬಿಲೋಕಿ ಕಹನ ಅಸ ಲಾಗೇ ॥ ೩ ॥**
**ಉಯಉ ಅರುನ ಅವಲೋಕಹು ತಾತಾ । ಪಂಕಜ ಕೋಕ ಲೋಕ ಸುಖದಾತಾ ॥**
**ಬೋಲೇ ಲಖನು ಜೋರಿ ಜುಗ ಪಾನೀ । ಪ್ರಭು ಪ್ರಭಾಉ ಸೂಚಕ ಮೃದು ಬಾನೀ ॥ ೪ ॥**

ಇಷ್ಟೇ ಅಲ್ಲ, ಅವನು ವೃದ್ಧಿ-ಕ್ಷಯ ಹೊಂದುತ್ತಿರುವನು. ವಿರಹಿಣಿಯರಿಗೆ ದುಃಖವನ್ನು ಉಂಟುಮಾಡುವವನು. ಆಗಾಗ ರಾಹುವು ಇವನನ್ನು ನುಂಗುತ್ತಾನೆ. ಇವನು ಚಕ್ರವಾಕಕ್ಕೆ ಶೋಕಪ್ರದನೂ, ಕಮಲಗಳಿಗೆ ಶತ್ರುವೂ ಆದ ಎಲೈ ಚಂದ್ರನೇ! ನಿನ್ನಲ್ಲಿ ಇಷ್ಟೆಲ್ಲಾ ಅವಗುಣಗಳಿವೆ. ಆದ್ದರಿಂದ ಜಾನಕಿಯ ಮುಖಕ್ಕೆ ನಿನ್ನ ಉಪಮೆ ಕೊಡುವುದು ಅನುಚಿತವೇ. ಹಾಗೆ ಮಾಡಿದರೆ ದೋಷವೇ ತಗಲೀತು.'' ಈ ವಿಧವಾಗಿ ಚಂದ್ರನ ನೆಪದಿಂದ ಸೀತಾದೇವಿಯ ಮುಖಸೌಂದರ್ಯವನ್ನು ಸ್ಮರಿಸಿಕೊಂಡು, ಹೆಚ್ಚು ರಾತ್ರಿಯಾದುದನ್ನು ಗಮನಿಸಿ, ಗುರುವಿನ ಬಳಿಗೆ ತೆರಳಿದನು. ಮುನಿಯ ಚರಣಗಳಿಗೆ ಎರಗಿ, ಅವರ ಅಪ್ಪಣೆಪಡೆದು ಶ್ರೀರಾಮನು ವಿಶ್ರಮಿಸಿದನು. ಇರುಳು ಕಳೆದ ಮೇಲೆ ರಘುನಾಯಕನು ಎದ್ದು, ತಮ್ಮನನ್ನು ಕುರಿತು ಇಂತೆಂದನು – ತಮ್ಮಾ! ನೋಡು! ಕಮಲಗಳಿಗೂ, ಚಕ್ರವಾಕಗಳಿಗೂ, ಸಮಸ್ತಲೋಕಗಳಿಗೂ ಸುಖಪ್ರದವಾದ ಅರುಣೋದಯವಾಗಿದೆ. ಲಕ್ಷ್ಮಣನು ಎರಡೂ ಕೈಗಳನ್ನು ಮುಗಿದು ಪ್ರಭುವಿನ ಪ್ರತಾಪವನ್ನು ಸೂಚಿಸುವಂತಹ ಮೃದುವಚನಗಳಿಂದ ಇಂತೆಂದನು – (ಚೌ/೧-೪)

**ದೋ – ಅರುನೋದಯಂ ಸಕುಚೇ ಕುಮುದ ಉಡಗನ ಜೋತಿ ಮಲೀನ ।**
**ಜಿಮಿ ತುಮ್ಹಾರ ಆಗಮನ ಸುನಿ ಭಏ ನೃಪತಿ ಬಲಹೀನ ॥ ೨೩೮ ॥**

''ಅರುಣೋದಯವಾದ್ದರಿಂದ ಕುಮುದಿನಿಗಳು ಬಾಡಿದವು. ಉಡುಗಣಗಳು ಮಂಕಾದವು. ಹಾಗೆಯೇ ನೀನು ಬಂದ ಕಾರಣದಿಂದ ರಾಜರೆಲ್ಲರೂ ಬಲಹೀನರಾಗಿದ್ದಾರೆ. (ದೋ/೨೩೮)

**ಚೌ – ನೃಪ ಸಬ ನಖತ ಕರಹಿಂ ಉಜಿಆರೀ । ಟಾರಿ ನ ಸಕಹಿಂ ಚಾಪ ತಮ ಭಾರೀ ॥**
**ಕಮಲ ಕೋಕ ಮಧುಕರ ಖಗ ನಾನಾ । ಹರಷೇ ಸಕಲ ನಿಸಾ ಅವಸಾನಾ ॥ ೧ ॥**
**ಐಸೆಹಿಂ ಪ್ರಭು ಸಬ ಭಗತ ತುಮ್ಹಾರೇ । ಹೋಇಹಹಿಂ ಟೂಟೇಂ ಧನುಷ ಸುಖಾರೇ ॥**
**ಉಯಉ ಭಾನು ಬಿನು ಶ್ರಮ ತಮ ನಾಸಾ । ದುರೇ ನಖತ ಜಗ ತೇಜು ಪ್ರಕಾಸಾ ॥ ೨ ॥**
**ರಬಿ ನಿಜ ಉದಯ ಬ್ಯಾಜ ರಘುರಾಯಾ । ಪ್ರಭು ಪ್ರತಾಪು ಸಬ ನೃಪನ್ಹ ದಿಖಾಯಾ ॥**
**ತವ ಭುಜ ಬಲ ಮಹಿಮಾ ಉದಘಾಟೀ । ಪ್ರಗಟೀ ಧನು ಬಿಘಟನ ಪರಿಪಾಟೀ ॥ ೩ ॥**
**ಬಂಧು ಬಚನ ಸುನಿ ಪ್ರಭು ಮುಸುಕಾನೇ । ಹೋಇ ಸುಚಿ ಸಹಜ ಪುನೀತ ನಹಾನೇ ॥**
**ನಿತ್ಯಕ್ರಿಯಾ ಕರಿ ಗುರು ಪಹಿಂ ಆಏ । ಚರನ ಸರೋಜ ಸುಭಗ ಸಿರ ನಾಏ ॥ ೪ ॥**

**ಸತಾನಂದು ತಬ ಜನಕ ಬೊಲಾಏ । ಕೌಸಿಕ ಮುನಿ ಪಹಿಂ ತುರತ ಪಠಾಏ ॥**
**ಜನಕ ಬಿನಯ ತಿನ್ಹ ಆಇ ಸುನಾಈ । ಹರಷೇ ಬೋಲಿ ಲಿಏ ದೊಉ ಭಾಈ ॥ ೫ ॥**

ರಾತ್ರಿಯಲ್ಲಿ ಮಿನುಗುವ ನಕ್ಷತ್ರಗಳಂತೆ ಈ ರಾಜರು ಕತ್ತಲೆಯಂತಿರುವ ದುರ್ಭೇದ್ಯವಾದ ಈ ಧನುಸ್ಸನ್ನು ಭಂಗಗೊಳಿಸಲಾರರು. ರಾತ್ರಿಯು ಕಳೆಯುತ್ತಲೇ ಕಮಲಗಳು, ಚಕ್ರವಾಕಗಳು, ದುಂಬಿಗಳು, ವಿವಿಧ ಪಕ್ಷಿಗಳು ಹರ್ಷಿತರಾಗುತ್ತವೆ. ಅಣ್ಣಾ! ಹಾಗೆಯೇ ನೀನು ಧನುರ್ಭಂಗಮಾಡಿದಾಗ ನಿನ್ನ ಭಕ್ತರು ಸಂತೋಷಗೊಳ್ಳುವರು. ಇದೋ ಸೂರ್ಯೋದಯವಾಗುತ್ತಾ ಇದೆ. ಅಂಧಕಾರವು ದೂರವಾಯಿತು. ನಕ್ಷತ್ರಗಳು ಮಾಯವಾದುವು. ಜಗತ್ತಿನಲ್ಲಿ ಪ್ರಕಾಶವು ಹಬ್ಬಿತು. ಹೇ ರಘುನಾಥಾ! ಎಲ್ಲ ರಾಜರಿಗೆ ನಿನ್ನ ಪ್ರತಾಪವನ್ನು ಪ್ರಕಟಗೊಲಿಸಲೆಂದೇ ಸೂರ್ಯನು ಉದಯಿಸುತ್ತಿದ್ದಾನೆ. ನಿನ್ನ ದೋರ್ದಂಡ ಬಲದ ಮಹಿಮೆಯನ್ನು ಮಂಡಿಸಲೆಂದೇ ಕೋದಂಡಖಂಡನದ ಈ ಪದ್ಧತಿ ಹುಟ್ಟಿಕೊಂಡಿದೆ.''

ತಮ್ಮನ ಮಾತುಗಳನ್ನು ಕೇಳಿ ಶ್ರೀರಾಮನು ಮುಗುಳ್ನಗೆ ಬೀರಿದನು. ಶ್ರೀರಾಮನು ಸಹಜನಾಗಿಯೇ ಸದಾ ಪವಿತ್ರನಾಗಿದ್ದರೂ, ಶೌಚ-ಸ್ನಾನಾದಿಗಳಿಂದ ನಿವೃತ್ತನಾಗಿ, ನಿತ್ಯಕರ್ಮಾನುಷ್ಠಾನಗಳನ್ನು ಮುಗಿಸಿ; ಗುರುಗಳ ಬಳಿಗೆ ಬಂದು, ಅವರ ಪವಿತ್ರ ಚರಣಗಳಿಗೆ ಶಿರವಾಗಿದನು. ಆಗಲೇ ಜನಕ ಮಹಾರಾಜನು ತನ್ನ ಪುರೋಹಿತರಾದ ಶತಾನಂದರನ್ನು ವಿಶ್ವಾಮಿತ್ರರ ಬಳಿಗೆ ಕಳಿಸಿದನು. ಅವರು ಬಂದು ಜನಕನ ಬಿನ್ನಹವನ್ನು ಮುನಿಯಬಳಿ ನಿವೇದಿಸಿಕೊಂಡರು. ವಿಶ್ವಾಮಿತ್ರರು ಸಂತುಷ್ಟರಾಗಿ ಸೋದರರಿಬ್ಬರನ್ನೂ ತನ್ನ ಬಳಿಗೆ ಕರೆಸಿದನು. (ಚೌ/೧-೫)

**ದೋ – ಸತಾನಂದ ಪದ ಬಂದಿ ಪ್ರಭು ಬೈಠೇ ಗುರ ಪಹಿಂ ಜಾಇ ।**
**ಚಲಹು ತಾತ ಮುನಿ ಕಹೇಉ ತಬ ಪಠವಾ ಜನಕ ಬೊಲಾಇ ॥ ೨೩೯ ॥**

ಶ್ರೀರಾಮನು ಶತಾನಂದರಿಗೆ ವಂದನೆಗೈದು, ಗುರುವಿನ ಬಳಿಹೋಗಿ ಕುಳಿತುಕೊಂಡನು. ಆಗ ವಿಶ್ವಾಮಿತ್ರರು – ಮಕ್ಕಳಿರಾ! ನಡೆಯಿರಿ, ಜನಕ ಮಹಾರಾಜನು ಕರೆಕಳುಹಿದ್ದಾನೆ, ಎಂದು ಹೇಳಿದರು. (ದೋ/೨೩೯)

**ಮಾಸಪಾರಾಯಣದ ಎಂಟನೆಯ ವಿಶ್ರಾಮ**
**ನವಾಹ್ನಪಾರಾಯಣದ ಎರಡನೆಯ ವಿಶ್ರಾಮ**

# ಶಿವಧನುರ್ಭಂಗ

**ಚೌ – ಸೀಯ ಸ್ವಯಂಬರು ದೇಖಿಅ ಜಾಈ । ಈಸು ಕಾಹಿ ಧೌಂ ದೇಇ ಬಡಾಈ ॥**
**ಲಖನ ಕಹಾ ಜಸ ಭಾಜನು ಸೋಈ । ನಾಥ ಕೃಪಾ ತವ ಜಾಪರ ಹೋಈ ॥ ೧ ॥**
**ಹರಷೇ ಮುನಿ ಸಬ ಸುನಿ ಬರ ಬಾನೀ । ದೀನ್ಹಿ ಅಸೀಸ ಸಬಹಿಂ ಸುಖು ಮಾನೀ ॥**
**ಪುನಿ ಮುನಿಬೃಂದ ಸಮೇತ ಕೃಪಾಲಾ । ದೇಖನ ಚಲೇ ಧನುಷಮಖ ಸಾಲಾ ॥ ೨ ॥**
**ರಂಗಭೂಮಿ ಆಏ ದೊಉ ಭಾಈ । ಅಸಿ ಸುಧಿ ಸಬ ಪುರಬಾಸಿನ್ಹ ಪಾಈ ॥**
**ಚಲೇ ಸಕಲ ಗೃಹ ಕಾಜ ಬಿಸಾರೀ । ಬಾಲ ಜುಬಾನ ಜರಠ ನರ ನಾರೀ ॥ ೩ ॥**
**ದೇಖೀ ಜನಕ ಭೀರ ಭೈ ಭಾರೀ । ಸುಚಿ ಸೇವಕ ಸಬ ಲಿಏ ಹೆಂಕಾರೀ ॥**
**ತುರತ ಸಕಲ ಲೋಗನ್ಹ ಪಹಿಂ ಜಾಹೂ । ಆಸನ ಉಚಿತ ದೇಹು ಸಬ ಕಾಹೂ ॥ ೪ ॥**

''ನಮಗೆ ಸೀತಾಸ್ವಯಂವರವನ್ನು ನೋಡಬೇಕಾಗಿದೆ. ಭಗವದನುಗ್ರಹವು ಯಾರ ಮೇಲಾಗುತ್ತದೋ ನೋಡೋಣ'' ಎಂದು ವಿಶ್ವಾಮಿತ್ರರು ನುಡಿದಾಗ, ಲಕ್ಷ್ಮಣನು ಇಂತೆಂದನು – ''ಸ್ವಾಮಿ! ನಿಮ್ಮ ಕೃಪೆ ಯಾರ ಮೇಲಿರುವುದೋ ಅವರೇ ಈ ಅದೃಷ್ಟಕ್ಕೆ ಪಾತ್ರರಾಗುವರು.'' ಲಕ್ಷ್ಮಣನ ಈ ಶ್ರೇಷ್ಠವಾಣಿಯನ್ನು ಕೇಳಿ ಎಲ್ಲಮುನಿಗಳು ಹಿಗ್ಗಿ ಶ್ರೀರಾಮನನ್ನು ಆಶೀರ್ವದಿಸಿದರು. ಕೃಪಾನಿಧಿಯಾದ ಶ್ರೀರಾಮನು ಮುನಿಗಳೊಡಗೂಡಿ ಧನುರ್ಯಾಗಶಾಲೆಯನ್ನು ನೋಡಲು ಹೊರಟನು. ಇಬ್ಬರು ಸೋದರರು ರಂಗಶಾಲೆಗೆ ಬಂದಿದ್ದಾರೆ ಎಂಬ ಸುದ್ದಿಯನ್ನು ಕೇಳಿದಾಕ್ಷಣ ನಗರದ ಬಾಲಕರು, ಯುವಕರು, ವೃದ್ಧರೂ ಹೀಗೆ ಸ್ತ್ರೀ-ಪುರುಷರೆಲ್ಲರೂ ತಮ್ಮ ಮನೆಮಾರು, ಕೆಲಸಗಳೆಲ್ಲವನ್ನೂ ಬದಿಗೊತ್ತಿ ಹೊರಟರು. ಆ ಮಹಾಸಮೂಹವನ್ನು ನೋಡಿ ಜನಕನು ತನ್ನ ನೆಚ್ಚಿನ ಸೇವಕರನ್ನು ಕರೆಸಿ – 'ನೀವು ಈ ಕೂಡಲೇ ಎಲ್ಲ ಜನರಿಗೂ ಉಚಿತವಾದ ಆಸನದ ವ್ಯವಸ್ಥೆ ಮಾಡಿರಿ' ಎಂದು ಆಜ್ಞಾಪಿಸಿದನು. (ಚೌ/೧-೪)

**ದೋ – ಕಹಿ ಮೃದು ಬಚನ ಬಿನೀತ ತಿನ್ಹ ಬೈಠಾರೇ ನರ ನಾರಿ।**
**ಉತ್ತಮ ಮಧ್ಯಮ ನೀಚ ಲಘು ನಿಜ ನಿಜ ಥಲ ಅನುಹಾರಿ॥ ೨೪೦ ॥**

ಆ ಸೇವಕರು ವಿನಯಪೂರ್ವಕವಾಗಿ ಮೃದು ಮಧುರವಚನಗಳನ್ನಾಡುತ್ತಾ ಉತ್ತಮ, ಮಧ್ಯಮ, ಸಾಧಾರಣ ಹೀಗೆ ಎಲ್ಲ ಶ್ರೇಣಿಯ ಸ್ತ್ರೀ-ಪುರುಷರಿಗೂ ಯಥಾಯೋಗ್ಯ ಆಸನಗಳಲ್ಲಿ ಕುಳ್ಳಿರಿಸಿದರು. (ದೋ/೨೪೦)

**ಚೌ – ರಾಜಕುಅ್ಁರ ತೇಹಿ ಅವಸರ ಆಏ। ಮನಹುಁ ಮನೋಹರತಾ ತನ ಛಾಏ ॥**
**ಗುನ ಸಾಗರ ನಾಗರ ಬರ ಬೀರಾ। ಸುಂದರ ಸ್ಯಾಮಲ ಗೌರ ಸರೀರಾ ॥ ೧ ॥**
**ರಾಜ ಸಮಾಜ ಬಿರಾಜತ ರೂರೇ। ಉಡಗನ ಮಹುಁ ಜನು ಜುಗ ಬಿಧು ಪೂರೇ ॥**
**ಜಿನ್ಹ ಕೇಁ ರಹೀ ಭಾವನಾ ಜೈಸೀ। ಪ್ರಭು ಮೂರತಿ ತಿನ್ಹ ದೇಖೀ ತೈಸೀ ॥ ೨ ॥**
**ದೇಖಹಿಁ ರೂಪ ಮಹಾ ರನಧೀರಾ। ಮನಹುಁ ಬೀರ ರಸು ಧರೇಁ ಸರೀರಾ ॥**
**ಡರೇ ಕುಟಿಲ ನೃಪ ಪ್ರಭುಹಿ ನಿಹಾರೀ। ಮನಹುಁ ಭಯಾನಕ ಮೂರತಿ ಭಾರೀ ॥ ೩ ॥**
**ರಹೇ ಅಸುರ ಛಲ ಛೋನಿಪ ಬೇಷಾ। ತಿನ್ಹ ಪ್ರಭು ಪ್ರಗಟ ಕಾಲಸಮ ದೇಖಾ ॥**
**ಪುರಬಾಸಿನ್ಹ ದೇಖೇ ದೋಉ ಭಾಈ। ನರಭೂಷನ ಲೋಚನ ಸುಖದಾಈ ॥ ೪ ॥**

ಅದೇ ವೇಳೆಗೆ ಮೂರ್ತೀಭವಿಸಿದ ಸೌಂದರ್ಯವೇ ಬರುತ್ತಿರುವಂತೆ ಶ್ರೀರಾಮ-ಲಕ್ಷ್ಮಣರು ಅಲ್ಲಿಗೆ ಬಂದರು. ಅವರು ಶ್ಯಾಮಲ-ಗೌರವರ್ಣದವರಾಗಿದ್ದು, ಗುಣಗಳ ಆಗರರೂ, ಚತುರರೂ, ಪರಾಕ್ರಮಶಾಲಿಗಳೂ ಆಗಿದ್ದರು. ಅವರು ರಾಜರ ಸಮಾಜದಲ್ಲಿ ತಾರಾಗಣಗಳ ನಡುವೆ ಶೋಭಿಸುವ ಎರಡು ಪೂರ್ಣಚಂದ್ರರಂತೆ ಇದ್ದರು. ಕುಳಿತವರ ಭಾವನೆಗನುಸಾರವಾಗಿ ಶ್ರೀರಾಮಚಂದ್ರನು ಅವರೆಲ್ಲರಿಗೆ ಕಂಡುಬಂದನು. ಶ್ರೀರಾಮನನ್ನು ರಣಧೀರರಾದ ಕ್ಷತ್ರಿಯರಾಜರು ಮೈವೆತ್ತವೀರರಸದಂತೆ ಕಂಡರು. ಕುಟಿಲರಾಜರು ಭಯಂಕರಮೂರ್ತಿಯಾಗಿ ಕಂಡು ಭಯಪಟ್ಟರು. ಮಾರುವೇಷದಲ್ಲಿದ್ದ ರಾಕ್ಷಸರಿಗೆ ಪ್ರಭುವು ಪ್ರತ್ಯಕ್ಷಕಾಲನಂತೆ ಕಂಡುಬಂದನು. ನಗರವಾಸಿಗಳು ಆ ಇಬ್ಬರು ಸೋದರರನ್ನು ನೇತ್ರಾನಂದಕರರಾದ ಪುರುಷೋತ್ತಮರಾಗಿ ದರ್ಶಿಸಿದರು. (ಚೌ/೧-೪)

**ದೋ – ನಾರಿ ಬಿಲೋಕಹಿಁ ಹರಷಿ ಹಿಯಁ ನಿಜ ನಿಜ ರುಚಿ ಅನುರೂಪ ।**
**ಜನು ಸೋಹತ ಸಿಂಗಾರ ಧರಿ ಮೂರತಿ ಪರಮ ಅನೂಪ ॥ ೨೪೧ ॥**

ಸ್ತ್ರೀಯರೆಲ್ಲರೂ ಹರ್ಷಿತ ಹೃದಯರಾಗಿ ತಮ್ಮ-ತಮ್ಮ ಭಾವಗಳಿಗನುಸಾರವಾಗಿ, ಮೂರ್ತೀಭವಿಸಿದ ಶೃಂಗಾರರಸವೋ ಎಂಬಂತೆ ಕಂಡರು. (ದೋ/೨೪೧)

**ಚೌ – ಬಿದುಷನ್ಹ ಪ್ರಭು ಬಿರಾಟಮಯ ದೀಸಾ। ಬಹು ಮುಖ ಕರ ಪಗ ಲೋಚನ ಸೀಸಾ ॥**
**ಜನಕ ಜಾತಿ ಅವಲೋಕಹಿಁ ಕೈಸೇಁ। ಸಜನ ಸಗೇ ಪ್ರಿಯ ಲಾಗಹಿಁ ಜೈಸೇಁ ॥ ೧ ॥**
**ಸಹಿತ ಬಿದೇಹ ಬಿಲೋಕಹಿಁ ರಾನೀ। ಸಿಸು ಸಮ ಪ್ರೀತಿ ನ ಜಾತಿ ಬಖಾನೀ ॥**
**ಜೋಗಿನ್ಹ ಪರಮ ತತ್ತ್ವಮಯ ಭಾಸಾ। ಸಾಂತ ಸುದ್ಧ ಸಮ ಸಹಜ ಪ್ರಕಾಸಾ ॥ ೨ ॥**
**ಹರಿಭಗತನ್ಹ ದೇಖೇ ದೋಉ ಭ್ರಾತಾ। ಇಷ್ಟದೇವ ಇವ ಸಬ ಸುಖ ದಾತಾ ॥**
**ರಾಮಹಿ ಚಿತವ ಭಾಯಁ ಜೆಹಿ ಸೀಯಾ। ಸೋ ಸನೇಹು ಸುಖು ನಹಿಁ ಕಥನೀಯಾ ॥ ೩ ॥**
**ಉರ ಅನುಭವತಿ ನ ಕಹಿ ಸಕ ಸೋಊ। ಕವನ ಪ್ರಕಾರ ಕಹೈ ಕಬಿ ಕೋಊ ॥**
**ಎಹಿ ಬಿಧಿ ರಹಾ ಜಾಹಿ ಜಸ ಭಾಊ। ತೇಹಿಁ ತಸ ದೇಖೆಉ ಕೋಸಲರಾಊ ॥ ೪ ॥**

ವಿದ್ವಾಂಸರು ಪ್ರಭುವನ್ನು ಅನೇಕ ಮುಖಗಳು, ಪಾದಗಳು, ಹಸ್ತಗಳು, ನೇತ್ರಗಳು, ಶಿರಗಳುಳ್ಳ ವಿರಾಟ್‌ರೂಪದಲ್ಲಿ ದರ್ಶಿಸಿದರು. ಜನಕನ ಬಂಧುಗಳು ಅವನನ್ನು ತಮ್ಮ ಆಪ್ತೇಷ್ಟನಂತೆ ಕಂಡರು. ಜನಕಸಹಿತ ಅವನ ರಾಣಿಯರು ಅವನನ್ನು ವಾತ್ಸಲ್ಯಭಾವದಿಂದ ತಮ್ಮ ಮಗನಂತೆ ನೋಡಿದರು. ಅವರ ಪ್ರೀತಿಯು ವರ್ಣನಾತೀತವು! ಯೋಗಿಗಳು ಶುದ್ಧ, ಶಾಂತಸ್ವರೂಪನಾದ ಪರಬ್ರಹ್ಮನೆಂದು ನೋಡಿದರು. ಹರಿಭಕ್ತರು ಇಬ್ಬರು ಸೋದರರನ್ನೂ ಸರ್ವಸುಖದಾಯಕ ಇಷ್ಟದೇವರಂತೆ ಕಂಡರು. ಸೀತಾದೇವಿಯು ಆ ಪ್ರಭುವನ್ನು ಅನಿರ್ವಚನೀಯ ಪ್ರೇಮಾನಂದಮೂರ್ತಿಯಾಗಿ ನೋಡಿದಳು. ಅವಳು ತನ್ನ ಹೃದಯದಲ್ಲಿರುವ ಪ್ರೇಮಸುಖಾನುಭೂತಿಯನ್ನು ಪ್ರಕಟಿಸದಾದಳು. ಹೀಗಿರುವಾಗ ಕವಿಯು ಹೇಗೆ

ಪ್ರಕಟಿಸಬಲ್ಲನು? ಈ ವಿಧವಾಗಿ ಎಲ್ಲರೂ ಕೋಸಲಾಧೀಶ ಕುಮಾರರನ್ನು ತಮ್ಮ-ತಮ್ಮ ಹೃದಯದಲ್ಲಿದ್ದ ಭಾವನೆಗನುಗುಣವಾಗಿ ದರ್ಶಿಸಿದರು. (ಚೌ/೧-೪)

**ದೋ – ರಾಜತ ರಾಜ ಸಮಾಜ ಮಹುँ ಕೋಸಲರಾಜ ಕಿಸೋರ ।**
**ಸುಂದರ ಸ್ಯಾಮಲ ಗೌರ ತನ ಬಿಸ್ವ ಬಿಲೋಚನ ಚೋರ ॥ ೨೪೨ ॥**

ಸುಂದರ ಶ್ಯಾಮಲ-ಗೌರಶರೀರಗಳುಳ್ಳ, ವಿಶ್ವವಿಲೋಚನ ಚೋರರೂ ಆದ ಆ ಕೋಸಲ ರಾಜಕಿಶೋರರು ಆ ರಾಜಸಭೆಯಲ್ಲಿ ವಿರಾಜಿಸಿದರು. (ದೋ/೨೪೨)

**ಚೌ – ಸಹಜ ಮನೋಹರ ಮೂರತಿ ದೋಊ । ಕೋಟಿ ಕಾಮ ಉಪಮಾ ಲಘು ಸೋಊ ॥**
**ಸರದ ಚಂದ ನಿಂದಕ ಮುಖ ನೀಕೇ । ನೀರಜ ನಯನ ಭಾವತೇ ಜೀ ಕೇ ॥ ೧ ॥**
**ಚಿತವನಿ ಚಾರು ಮಾರ ಮನು ಹರನೀ । ಭಾವತಿ ಹೃದಯ ಜಾತಿ ನಹಿँ ಬರನೀ ॥**
**ಕಲ ಕಪೋಲ ಶ್ರುತಿ ಕುಂಡಲ ಲೋಲಾ । ಚಿಬುಕ ಅಧರ ಸುಂದರ ಮೃದು ಬೋಲಾ ॥ ೨ ॥**
**ಕುಮುದಬಂಧು ಕರ ನಿಂದಕ ಹಾँಸಾ । ಭೃಕುಟೀ ಬಿಕಟ ಮನೋಹರ ನಾಸಾ ॥**
**ಭಾಲ ಬಿಸಾಲ ತಿಲಕ ಝಲಕಾಹೀँ । ಕಚ ಬಿಲೋಕಿ ಅಲಿ ಅವಲಿ ಲಜಾಹೀँ ॥ ೩ ॥**
**ಪೀತ ಚೌತನೀँ ಸಿರನ್ಹಿ ಸುಹಾಈँ । ಕುಸುಮ ಕಲೀँ ಬಿಚ ಬೀಚ ಬನಾಈँ ॥**
**ರೇಖೇँ ರುಚಿರ ಕಂಬು ಕಲ ಗೀವಾँ । ಜನು ತ್ರಿಭುವನ ಸುಷಮಾ ಕೀ ಸೀವಾँ ॥ ೪ ॥**

ಆ ಮೂರ್ತಿಗಳು ಸಹಜ ಮನೋಹರರು. ಕೋಟಿ ಮನ್ಮಥರ ಉಪಮೆಯೂ ಕೂಡ ಅವರಿಗೆ ಕೀಳಾದೀತು. ಶರತ್ಪೂರ್ಣಿಮೆಯ ಚಂದ್ರನೂ ಕೂಡ ಇವರ ಮುಂದೆ ಮಂಕಾಗುವನು. ಅವರ ನೀರಜನಯನಗಳು ಮನೋಮುಗ್ಧಕಾರಿ. ಇಡೀ ಜಗತ್ತಿನ ಮನವನ್ನು ಅಪಹರಿಸುವಂತಹ ಅವನ ಕಡೆಗಣ್ಣ ನೋಟವು, ಕಾಮನ ಮನವನ್ನು ಕೂಡ ಸೂರೆಗೊಳ್ಳುವಂತಹುದು. ಅದು ಎಲ್ಲರ ಹೃದಯಕ್ಕೆ ಪ್ರಿಯವಾದುದು. ಆದರೆ ವರ್ಣನಾತೀತವು. ಚೆಲುವಾದ ಕಪೋಲ, ಕಿವಿಯಲ್ಲಿ ಓಲಾಡುತ್ತಿರುವ ಕರ್ಣಕುಂಡಲಗಳಿವೆ. ಗಲ್ಲ ಹಾಗೂ ಅಧರಗಳು ಸುಂದರವಾಗಿವೆ. ವಾಣಿಯು ಅತ್ಯಂತ ಮಧುರ. ಅವರ ನಗು ಕುಮುದಬಂಧುವಾದ ಚಂದ್ರನನ್ನು ಏಳಿಸುವಂತಹುದು. ಡೊಂಕಾದ ಹುಬ್ಬುಗಳು, ಮನೋಹರವಾದ ಮೂಗು, ವಿಶಾಲವಾದ ಹಣೆಯಮೇಲೆ ತಿದ್ದಿದ ತಿಲಕ ಪರಮಾಕರ್ಷಣೀಯವು. ಕಪ್ಪಾದ ಗುಂಗುರು ಕೂದಲುಗಳನ್ನು ಕಂಡು ದುಂಬಿಗಳ ಪಂಕ್ತಿಯೂ ನಾಚುತ್ತಿತ್ತು. ಶಿರದಲ್ಲಿ ಹಳದಿಯ ಚತುಷ್ಕೋಣಾಕಾರವುಳ್ಳ ಟೋಪಿಗಳು ಸುಶೋಭಿತವಾಗಿದ್ದು ಅವುಗಳಲ್ಲಿ ಅಲ್ಲಲ್ಲಿ ರೇಶ್ಮೆಕಸೂತಿಯಿಂದ ಹೂವುಗಳನ್ನೂ ಬಿಡಿಸಿದ್ದರು. ಶಂಖದಂತಿರುವ ಕಂಠದಲ್ಲಿ ಮನೋಹರವಾದ ಮೂರು ಗೆರೆಗಳಿದ್ದವು. ಅವು ತ್ರಿಭುವನದ ಸೌಂದರ್ಯದ ಸೀಮಾರೇಖೆಗಳಂತಿದ್ದವು. (ಚೌ/೧-೪)

**ದೋ – ಕುಂಜರ ಮನಿ ಕಂಠಾ ಕಲಿತ ಉರನ್ಹಿ ತುಲಸಿಕಾ ಮಾಲ ।**
**ಬೃಷಭ ಕಂಧ ಕೇಹರಿ ಠವನಿ ಬಲ ನಿಧಿ ಬಾಹು ಬಿಸಾಲ ॥ ೨೪೩ ॥**

ಅವರ ಎದೆಯ ಮೇಲೆ ಸುಂದರವಾದ ಗಜಮುಕ್ತಾಮಾಲೆಗಳೂ, ಎಳೆ ತುಳಸೀಹಾರಗಳೂ ಶೋಭಿಸುತ್ತಿದ್ದವು. ಅವರ ಹೆಗಲುಗಳು ವೃಷಭಸ್ಕಂಧದಂತೆ ಉನ್ನತವಾಗಿದ್ದು, ಪುಷ್ಟವಾಗಿದ್ದವು. ನಿಲುವಿನ ಠೀವಿಯು ಸಿಂಹದಂತೆ ಧೀರ ಗಂಭೀರವಾಗಿದ್ದು, ಆಜಾನುಭುಜಗಳು ಬಲನಿಧಿಗಳಾಗಿದ್ದವು. (ದೋ/೨೪೩)

**ಚೌ – ಕಟಿ ತೂನೀರ ಪೀತ ಪಟ ಬಾಂಧೇँ । ಕರ ಸರ ಧನುಷ ಬಾಮ ಬರ ಕಾಂಧೇँ ॥**
**ಪೀತ ಜಗ್ಯ ಉಪಬೀತ ಸುಹಾಏ । ನಖ ಸಿಖ ಮಂಜು ಮಹಾಛಬಿ ಛಾಏ ॥ ೧ ॥**
**ದೇಖಿ ಲೋಗ ಸಬ ಭಏ ಸುಖಾರೇ । ಏಕಟಕ ಲೋಚನ ಚಲತ ನ ತಾರೇ ॥**
**ಹರಷೇ ಜನಕು ದೇಖಿ ದೋಉ ಭಾಈ । ಮುನಿ ಪದ ಕಮಲ ಗಹೇ ತಬ ಜಾಈ ॥ ೨ ॥**
**ಕರಿ ಬಿನತೀ ನಿಜ ಕಥಾ ಸುನಾಈ । ರಂಗ ಅವನಿ ಸಬ ಮುನಿಹಿ ದೆಖಾಈ ॥**
**ಜಹँ ಜಹँ ಜಾಹಿँ ಕುಅँರ ಬರ ದೋಊ । ತಹँ ತಹँ ಚಕಿತ ಚಿತವ ಸಬು ಕೋಊ ॥ ೩ ॥**
**ನಿಜ ನಿಜ ರುಖ ರಾಮಹಿ ಸಬು ದೇಖಾ । ಕೋಉ ನ ಜಾನ ಕಛು ಮರಮು ಬಿಸೇಷಾ ॥**
**ಭಲಿ ರಚನಾ ಮುನಿ ನೃಪ ಸನ ಕಹೇಊ । ರಾಜಾँ ಮುದಿತ ಮಹಾಸುಖ ಲಹೇಊ ॥ ೪ ॥**

ಪೀತಾಂಬರವನ್ನು ಉಟ್ಟಿದ್ದು, ಬತ್ತಳಿಕೆ ಸೊಂಟಕ್ಕೆ ಬಿಗಿದಿದೆ. ಬಲಕೈಯಲ್ಲಿ ಬಾಣ, ಸುಂದರವಾದ ಎಡಭುಜದಲ್ಲಿ ಧನುಸ್ಸು ಮತ್ತು ಪೀತಯಜ್ಞೋಪವೀತ ಸುಶೋಭಿತವಾಗಿತ್ತು. ಆ ರಾಜಕುಮಾರರು ಅಡಿಯಿಂದ ಮುಡಿಯವರೆಗೆ ಸರ್ವಾಂಗಸುಂದರರಾಗಿದ್ದು, ಮಹಾನ್ ಶೋಭೆಯಿಂದ ಬೆಳಗುತ್ತಿದ್ದರು. ಅಲ್ಲಿದ್ದ ಎಲ್ಲರೂ ಎವೆಯಿಕ್ಕದೆ ಇಬ್ಬರು ಸೋದರರನ್ನು ನೋಡುತ್ತಾ ಆನಂದಿತರಾದರು. ಜನಕನು ಅವರನ್ನು ನೋಡಿ ಹಿಗ್ಗಿದನು ಹಾಗೂ ಅವನು ಹೋಗಿ ವಿಶ್ವಾಮಿತ್ರರ ಪಾದಗಳಿಗೆ ಎರಗಿದನು. ಅವನು ಮುನಿಯ ಬಳಿ ಶಿವಧನುಸ್ಸಿನ ಕಥೆಯನ್ನು ಬಿನ್ನವಿಸಿಕೊಂಡನು. ಯಜ್ಞಶಾಲೆಯನ್ನೆಲ್ಲ ಅವರಿಗೆ ತೋರಿಸಿದ. ಮುನಿಯ ಜೊತೆಗೆ ಇಬ್ಬರೂ ರಾಜಕುಮಾರರು ಹೋದಲ್ಲೆಲ್ಲ ಎಲ್ಲರೂ ಆಶ್ಚರ್ಯಚಕಿತರಾಗಿ ನೋಡತೊಡಗಿದರು. ಶ್ರೀರಾಮನು ನಮ್ಮನ್ನೇ ನೋಡುತ್ತಿರುವಂತೆ ಎಲ್ಲರೂ ಅನುಭವಿಸಿದರು. ಆದರ ರಹಸ್ಯ ವಿಶೇಷ ಯಾರಿಗೂ ತಿಳಿಯಲಿಲ್ಲ. ಮುನಿಗಳು ರಾಜನಿಗೆ ಹೇಳಿದರು – 'ಯಾಗಶಾಲೆ ತುಂಬಾ ಚೆನ್ನಾಗಿದೆ'. ಅದನ್ನು ಕೇಳಿ ಅರಸನಿಗೆ ತುಂಬಾ ಸಂತೋಷವಾಯಿತು. (ಚೌ/೧-೪)

**ದೋ – ಸಬ ಮಂಚನ್ಹತೇಂ ಮಂಚು ಏಕ ಸುಂದರ ಬಿಸದ ಬಿಸಾಲ ।**
**ಮುನಿ ಸಮೇತ ದೊಉ ಬಂಧು ತಹँ ಬೈಠಾರೇ ಮಹಿಪಾಲ ॥ ೨೪೪ ॥**

ಎಲ್ಲ ವೇದಿಕೆಗಳಿಗಿಂತ ಒಂದು ವೇದಿಕೆ ಅತ್ಯಂತ ಸುಂದರವೂ, ಉಜ್ವಲವೂ, ವಿಶಾಲವೂ ಆಗಿತ್ತು. ಮಹಾರಾಜನು ಸೋದರರಿಬ್ಬರೊಡನೆ ಮಹಾಮುನಿಯನ್ನು ಆ ವೇದಿಕೆಯಲ್ಲಿ ಕುಳ್ಳಿರಿಸಿದನು. (ದೋ/೨೪೪)

**ಚೌ – ಪ್ರಭುಹಿ ದೇಖಿ ಸಬ ನೃಪ ಹಿಯँ ಹಾರೇ । ಜನು ರಾಕೇಸ ಉದಯ ಭಏँ ತಾರೇ ॥**
**ಅಸಿ ಪ್ರತೀತಿ ಸಬ ಕೇ ಮನ ಮಾಹೀಂ । ರಾಮ ಚಾಪ ತೋರಬ ಸಕ ನಾಹೀಂ ॥ ೧ ॥**
**ಬಿನು ಭಂಜೆಹುँ ಭವ ಧನುಷು ಬಿಸಾಲಾ । ಮೇಲಿಹಿ ಸೀಯ ರಾಮ ಉರ ಮಾಲಾ ॥**
**ಅಸ ಬಿಚಾರಿ ಗವನಹು ಘರ ಭಾಈ । ಜಸು ಪ್ರತಾಪು ಬಲು ತೇಜು ಗವाँಈ ॥ ೨ ॥**
**ಬಿಹಸೇ ಅಪರ ಭೂಪ ಸುನಿ ಬಾನೀ । ಜೇ ಅಬಿಬೇಕ ಅಂಧ ಅಭಿಮಾನೀ ॥**
**ತೋರೆಹುँ ಧನುಷು ಬ್ಯಾಹು ಅವಗಾಹಾ । ಬಿನು ತೋರೇँ ಕೋ ಕುअँರಿ ಬಿಆಹಾ ॥ ೩ ॥**
**ಏಕ ಬಾರ ಕಾಲಉ ಕಿನ ಹೋಊ । ಸಿಯ ಹಿತ ಸಮರ ಜಿತಬ ಹಮ ಸೋಊ ॥**
**ಯಹ ಸುನಿ ಅವರ ಮಹಿಪ ಮುಸುಕಾನೇ । ಧರಮಸೀಲ ಹರಿಭಗತ ಸಯಾನೇ ॥ ೪ ॥**

ಶ್ರೀರಾಮಚಂದ್ರನನ್ನು ನೋಡಿದ ರಾಜರೆಲ್ಲರೂ ಪೂರ್ಣಚಂದ್ರನು ಉದಯಿಸಿದಾಗ ತಾರೆಗಳು ಪ್ರಕಾಶಹೀನವಾಗುವಂತೆ ಹತೋತ್ಸಾಹಿಗಳಾದರು. ಆತನ ವರ್ಚಸ್ಸನ್ನು ಕಂಡು 'ಈತನೇ ಧನುಸ್ಸನ್ನು ಮುರಿಯುತ್ತಾನೆ. ಇದರಲ್ಲಿ ಸಂದೇಹವೇ ಇಲ್ಲ' ಎಂಬ ನಂಬಿಕೆ ಎಲ್ಲ ರಾಜರಲ್ಲಿ ಮೂಡಿತು. ಆತನ ರೂಪವನ್ನು ಕಂಡು ಅವರಿಗನ್ನಿಸಿತು – ಶಿವನ ವಿಶಾಲ ಧನುಸ್ಸನ್ನು ಮುರಿಯದಿದ್ದರೂ ಸೀತಾದೇವಿಯು ಶ್ರೀರಾಮಚಂದ್ರನ ಕೊರಳಿಗೆ ಜಯಮಾಲೆ ತೊಡಿಸುವಳು. ಅರ್ಥಾತ್ ಎರಡೂ ಕಡೆಯಿಂದ ನಮ್ಮ ಸೋಲಾಗಿ, ವಿಜಯವು ಶ್ರೀರಾಮನ ಕೈವಶವಾದೀತು. ಸೋದರರೇ! ಹೀಗೆ ವಿಚಾರಮಾಡಿ ಯಶ, ಪ್ರತಾಪ, ಬಲ, ತೇಜಗಳನ್ನು ಕೈಬಿಟ್ಟು ತಮ್ಮ-ತಮ್ಮ ಮನೆಗಳಿಗೆ ಹೋಗಿರಿ. ಅವಿವೇಕದಿಂದ ಅಂಧರಾಗಿದ್ದ , ಅಭಿಮಾನಿಗಳಾಗಿದ್ದ ಬೇರೆ ರಾಜರು ಇದನ್ನು ಕೇಳಿ ತುಂಬಾ ನಕ್ಕುಬಿಟ್ಟರು. 'ಶಿವಧನುಸ್ಸನ್ನು ಮುರಿದರೂ ಶ್ರೀರಾಮನ ವಿವಾಹವು ಸೀತೆಯೊಡನೆ ಜರಗುವುದು. ಅಸಂಭವವು. ಹೀಗಿರುವಾಗ ಧನುರ್ಭಂಗ ಗೈಯದೆ ಅದು ಹೇಗೆ ನಡೆದೀತು? ಕಾಲಯಮನೇ ಬಂದು ಇದಿರಾದರೂ ಸೀತೆಗಾಗಿ ಆತನೊಡನೆ ಹೋರಾಡಲು ನಾವು ಸಿದ್ಧರಿದ್ದೇವೆ.' ಮೂರ್ಖರ ಅಹಂಕಾರದ ಈ ಮಾತನ್ನು ಕೇಳಿ ಧರ್ಮಾತ್ಮರೂ, ಹರಿಭಕ್ತರೂ ಆದ ಕೆಲವು ರಾಜರು ನಕ್ಕುಬಿಟ್ಟರು. (ಚೌ/೧-೪)

**ಸೋ – ಸೀಯ ಬಿಆಹಬಿ ರಾಮ ಗರಬ ದೂರಿ ಕರಿ ನೃಪನ್ಹ ಕೇ ।**
**ಜೀತಿ ಕೊ ಸಕ ಸಂಗ್ರಾಮ ದಸರಥ ಕೇ ರನ ಬಾँಕುರೇ ॥ ೨೪೫ ॥**

ಆ ಸಜ್ಜನರು ಹೇಳಿದರು – ಈ ರಾಜರ ಹಮ್ಮನ್ನು ಇಳಿಸಿ ಶ್ರೀರಾಮನು ಸೀತೆಯನ್ನು ತಪ್ಪದೆ ಮದುವೆಯಾಗುತ್ತಾನೆ. ರಣಧೀರನಾದ ದಶರಥಕುಮಾರರನ್ನು ಯುದ್ಧದಲ್ಲಿ ಎದುರಿಸಿ ಗೆಲ್ಲುವವರು ಯಾರಿದ್ದಾರೆ? (ದೋ/೨೪೫)

**ಚೌ – ಬ್ಯರ್ಥ ಮರಹು ಜನಿ ಗಾಲ ಬಜಾಈ । ಮನ ಮೋದಕನ್ಹಿ ಕಿ ಭೂಖ ಬುತಾಈ ॥**
**ಸಿಖ ಹಮಾರಿ ಸುನಿ ಪರಮ ಪುನೀತಾ । ಜಗದಂಬಾ ಜಾನಹು ಜಿಯँ ಸೀತಾ ॥ ೧ ॥**

ಜಗತ ಪಿತಾ ರಘುಪತಿಹಿ ಬಿಚಾರೀ । ಭರಿ ಲೋಚನ ಛಬಿ ಲೇಹು ನಿಹಾರೀ ॥
ಸುಂದರ ಸುಖದ ಸಕಲ ಗುನ ರಾಸೀ । ಏ ದೋಉ ಬಂಧು ಸಂಭು ಉರ ಬಾಸೀ ॥ ೨ ॥
ಸುಧಾ ಸಮುದ್ರ ಸಮೀಪ ಬಿಹಾಈ । ಮೃಗಜಲು ನಿರಖಿ ಮರಹು ಕತ ಧಾಈ ॥
ಕರಹು ಜಾಇ ಜಾ ಕಹುँ ಜೋಇ ಭಾವಾ । ಹಮ ತೌ ಆಜು ಜನಮ ಫಲು ಪಾವಾ ॥ ೩ ॥
ಅಸ ಕಹಿ ಭಲೇ ಭೂಪ ಅನುರಾಗೇ । ರೂಪ ಅನೂಪ ಬಿಲೋಕನ ಲಾಗೇ ॥
ದೇಖಹಿँ ಸುರ ನಭ ಚಢೇ ಬಿಮಾನಾ । ಬರಷಹಿँ ಸುಮನ ಕರಹಿँ ಕಲ ಗಾನಾ ॥ ೪ ॥

ವ್ಯರ್ಥ ಪ್ರಲಾಪದಿಂದ ಪ್ರಾಣಗಳನ್ನು ಬಲಿಗೊಡಬೇಡಿರಿ. ಮನಸ್ಸಿನಲ್ಲಿ ಮಂಡಿಗೆ ತಿನ್ನುವುದರಿಂದ ಎಲ್ಲಾದರೂ ಹಸಿವೆ ಹೋದೀತೇ? ಹಿತಕರವಾದ ನಮ್ಮ ಬುದ್ಧಿವಾದವನ್ನು ಕೇಳಿರಿ. ಸೀತಾದೇವಿಯು ಸಾಕ್ಷಾತ್ ಜಗಜ್ಜನನಿ, ಶ್ರೀರಾಮಚಂದ್ರನು ಜಗತ್ಪಿತನೆಂದು ತಿಳಿದುಕೊಳ್ಳಿರಿ. ಅವರ ಸೌಂದರ್ಯವನ್ನು ಕಣ್ತುಂಬ ನೋಡಿಕೊಳ್ಳಿರಿ. ಇಂತಹ ಸಂದರ್ಭ ಮತ್ತೆ ಸಿಗಲಾರದು. ಸುಂದರರೂ, ಸುಖಪ್ರದಾಯಕರೂ, ಸದ್ಗುಣಸಂಪನ್ನರೂ ಆದ ರಾಮ-ಲಕ್ಷ್ಮಣರು ಯಾವಾಗಲೂ ಶಿವನ ಹೃದಯದಲ್ಲಿ ವಾಸಿಸುತ್ತಾರೆ. ಸಮೀಪಕ್ಕೆ ಬಂದ (ಭಗವದ್ದರ್ಶನರೂಪೀ) ಸುಧಾಸಮುದ್ರವನ್ನು ತೊರೆದು, ನೀವೇಕೆ ಜಾನಕಿಯನ್ನು ಪತ್ನಿರೂಪದಿಂದ ಪಡೆಯುವ ದುರಾಶೆಯೆಂಬ ಮರೀಚಿಕೆಯ ಬೆನ್ನುಹತ್ತಿ ಹಾಳಾಗುತ್ತಿದ್ದೀರಿ? ನಾವಾದರೋ ಹೇಳಬೇಕಾದುದನ್ನು ಹೇಳಿದೆವು. ಇನ್ನು ನೀವು ತೋಚಿದಂತೆ ಮಾಡಿರಿ. ನಾವುಗಳು ಮಾತ್ರ ಇಂದು ಜನ್ಮದ ಸಾಫಲ್ಯವನ್ನು ಪಡೆದೆವು. ಹುಟ್ಟಿದ್ದು ಸಾರ್ಥಕವಾಯಿತು. ಈ ವಿಧವಾಗಿ ಹೇಳಿ ಸಜ್ಜನರಾದ ಆ ರಾಜರು ಪ್ರೇಮಮಗ್ನರಾಗಿ ಶ್ರೀರಾಮನ ಅನುಪಮ ಸೌಂದರ್ಯವನ್ನು ನೋಡತೊಡಗಿದರು. ಮನುಷ್ಯರ ಮಾತೇನು – ದೇವತೆಗಳೂ ಕೂಡ ಆಗಸದಲ್ಲಿ ವಿಮಾನಾರೂಢರಾಗಿ ದರ್ಶನ ಪಡೆಯುತ್ತಾ, ಮಧುರವಾಗಿ ಹಾಡುತ್ತಾ ಹೂವಿನ ಮಳೆಯನ್ನು ಗರೆದರು. (ಚೌ/೧-೪)

**ದೋ – ಜಾನಿ ಸುಅವಸರು ಸೀಯ ತಬ ಪಠಈ ಜನಕ ಬೊಲಾಇ ।**
**ಚತುರ ಸಖೀँ ಸುಂದರ ಸಕಲ ಸಾದರ ಚಲೀँ ಲವಾಇ ॥ ೨೪೬ ॥**

ಆಗ ಇದೇ ಸಕಾಲವೆಂದು ತಿಳಿದು ಜನಕನು ಸೀತೆಯನ್ನು ಕರೆಕಳುಹಿಸಿದನು. ಚದುರೆಯರಾದ ಸಖಿಯರು ಆದರದಿಂದ ಆಕೆಯನ್ನು ಕರೆತರಲು ಹೋದರು. (ದೋ/೨೪೬)

ಚೌ – ಸಿಯ ಸೋಭಾ ನಹಿँ ಜಾಇ ಬಖಾನೀ । ಜಗದಂಬಿಕಾ ರೂಪ ಗುನ ಖಾನೀ ॥
ಉಪಮಾ ಸಕಲ ಮೋಹಿ ಲಘು ಲಾಗೀँ । ಪ್ರಾಕೃತ ನಾರಿ ಅಂಗ ಅನುರಾಗೀँ ॥ ೧ ॥
ಸಿಯ ಬರನಿಅ ತೇಇ ಉಪಮಾ ದೇಈ । ಕುಕಬಿ ಕಹಾಇ ಅಜಸು ಕೋ ಲೇಈ ॥
ಜೌँ ಪಟತರಿಅ ತೀಯ ಸಮ ಸೀಯಾ । ಜಗ ಅಸಿ ಜುಬತಿ ಕಹಾँ ಕಮನೀಯಾ ॥ ೨ ॥
ಗಿರಾ ಮುಖರ ತನ ಅರಧ ಭವಾನೀ । ರತಿ ಅತಿ ದುಖಿತ ಅತನು ಪತಿ ಜಾನೀ ॥
ಬಿಷ ಬಾರುನೀ ಬಂಧು ಪ್ರಿಯ ಜೇಹೀ । ಕಹಿಅ ರಮಾಸಮ ಕಿಮಿ ಬೈದೇಹೀ ॥ ೩ ॥
ಜೌँ ಛಬಿ ಸುಧಾ ಪಯೋನಿಧಿ ಹೋಈ । ಪರಮ ರೂಪಮಯ ಕಚ್ಛಪು ಸೋಈ ॥
ಸೋಭಾ ರಜು ಮಂದರು ಸಿಂಗಾರೂ । ಮಥೈ ಪಾನಿ ಪಂಕಜ ನಿಜ ಮಾರೂ ॥ ೪ ॥

ಜಗಜ್ಜನನಿಯಾದ ಸೀತಾದೇವಿಯ ಸೌಂದರ್ಯವು ವರ್ಣನಾತೀತ. ಅವಳು ಸದ್ಗುಣ ಸೌಂದರ್ಯರಾಶಿ. ಸಾಮಾನ್ಯ ಸ್ತ್ರೀಯರ ವರ್ಣಿಸುವ ಸಂದರ್ಭದಲ್ಲಿ ಉಪಯೋಗಿಸುವ ಯಾವ ಉಪಮೆಯೂ ಸೀತೆಯ ವಿಷಯದಲ್ಲಿ ಕೆಲಸಕ್ಕೆ ಬಾರದು. ಈ ಉಪಮಾನಗಳಿಂದ ಸೀತಾದೇವಿಯನ್ನು ವರ್ಣಿಸಿ, ಯಾರು ಕುಕವಿ ಎಂಬ ಅಪಕೀರ್ತಿಗೆ ಗುರಿಯಾಗುವರು? ಯಾವುದಾದರೂ ಒಂದು ಹೆಣ್ಣಿನೊಡನೆ ಸೀತೆಯನ್ನು ಹೋಲಿಸೋಣವೆಂದರೆ, ಜಗತ್ತಿನಲ್ಲಿ ಅಂತಹ ಬೇರೊಬ್ಬ ಸೌಂದರ್ಯವತಿ ಯಾರಿದ್ದಾರೆ? ಇನ್ನು ದೇವಕಾಮಿನಿಯರನ್ನು ತೆಗೆದುಕೊಂಡರೆ, ಸರಸ್ವತೀ ಬಲು ವಾಚಾಳಿ; ಪಾರ್ವತಿಯು ಅರ್ಧಾಂಗಿನಿ; ಅಂದರೆ ಅರ್ಧ ಸ್ತ್ರೀ - ಅರ್ಧ ಪುರುಷ. ಕಾಮದೇವನ ಹೆಂಡತಿ ರತಿ ತನ್ನ ಗಂಡ 'ಅನಂಗ'ನೆಂದು ಯಾವಾಗಲೂ ಅಳುಮೋರೆಯಿಂದಿರುವವಳು. ಇನು ವಿಷ ಮತ್ತು ಮದ್ಯದಂತಹ ಅಣ್ಣತಮ್ಮಂದಿರುಳ್ಳ ಲಕ್ಷ್ಮಿಯನ್ನು ಸೀತೆಗೆ ಹೇಗೆ ಹೋಲಿಸುವುದು? ಒಂದು ಪಕ್ಷ ಸೌಂದರ್ಯ ಅಮೃತದ ಕಡಲಿದ್ದು, ಪರಮರೂಪಮಯ ಆಮೆಯಿದ್ದು, ಕಾಂತಿಯ ರಜ್ಜುವಿದ್ದು, ಶೃಂಗಾರವೆಂಬ ಪರ್ವತವಿದ್ದು, ಚೆಲುವಿನ ಕಡಲನ್ನು ಸ್ವತಃ ಮನ್ಮಥನೇ ಕಡೆದರೆ – (ಚೌ/೧-೪)

**ದೋ – ಏಹಿ ಬಿಧಿ ಉಪಜೈ ಲಚ್ಛಿ ಜಬ ಸುಂದರತಾ ಸುಖ ಮೂಲ ।**
**ತದಪಿ ಸಕೋಚ ಸಮೇತ ಕಬಿ ಕಹಹಿಂ ಸೀಯ ಸಮತೂಲ ॥ ೨೪೭ ॥**

ಅಂತಹ ಮಂಥನದಿಂದ ಶೃಂಗಾರದೇವತೆಯಾದ ಲಕ್ಷ್ಮೀದೇವಿಯು ಉದ್ಭವಿಸಿದರೆ, ಅವಳೂ ಕೂಡ ಸೀತಾದೇವಿಗೆ ಸಾಟಿಯಾಗಲಾರಳು. ಹಾಗಿರುವಾಗ, ಲಾವಣ್ಯ, ಪರಮ ಸೌಂದರ್ಯ, ಶೋಭಾಶೃಂಗಾರಗಳ ಮಧುರಾಕೃತಿಯೇ ಸೀತಾದೇವಿಯು. (ದೋ/೨೪೭)

**ಚೌ – ಚಲೀಂ ಸಂಗ ಲೈ ಸಖೀಂ ಸಯಾನೀ । ಗಾವತ ಗೀತ ಮನೋಹರ ಬಾನೀ ॥**
**ಸೋಹ ನವಲ ತನು ಸುಂದರ ಸಾರೀ । ಜಗತ ಜನನಿ ಅತುಲಿತ ಛಬಿ ಭಾರೀ ॥ ೧ ॥**
**ಭೂಷನ ಸಕಲ ಸುದೇಸ ಸುಹಾಏ । ಅಂಗ ಅಂಗ ರಚಿ ಸಖಿನ್ಹ ಬನಾಏ ॥**
**ರಂಗಭೂಮಿ ಜಬ ಸಿಯ ಪಗು ಧಾರೀ । ದೇಖಿ ರೂಪ ಮೋಹೇ ನರ ನಾರೀ ॥ ೨ ॥**
**ಹರಷಿ ಸುರನ್ಹ ದುಂದುಭೀಂ ಬಜಾಈಂ । ಬರಷಿ ಪ್ರಸೂನ ಅಪಛರಾ ಗಾಈಂ ॥**
**ಪಾನಿ ಸರೋಜ ಸೋಹ ಜಯಮಾಲಾ । ಅವಚಟ ಚಿತಏ ಸಕಲ ಭುಆಲಾ ॥ ೩ ॥**
**ಸೀಯ ಚಕಿತ ಚಿತ ರಾಮಹಿ ಚಾಹಾ । ಭಏ ಮೋಹಬಸ ಸಬ ನರನಾಹಾ ॥**
**ಮುನಿ ಸಮೀಪ ದೇಖೇ ದೋಉ ಭಾಈ । ಲಗೇ ಲಲಕಿ ಲೋಚನ ನಿಧಿ ಪಾಈ ॥ ೪ ॥**

ಚತುರರಾದ ಸೀತೆಯ ಸಖಿಯರು ಮಧುರವಾಗಿ ಹಾಡುಗಳನ್ನು ಹಾಡುತ್ತಾ ಜೊತೆಯಲ್ಲಿ ಜಾನಕಿಯನ್ನು ಕರೆದುಕೊಂಡು ಹೊರಟರು. ಅಂದವಾದ ಸೀರೆಯನ್ನುಟ್ಟು ಸುಶೋಭಿತಳಾದ ಜಗಜ್ಜನನಿ (ಸೀತಮ್ಮ) ನಿರುಪಮಾನ ಸೌಂದರ್ಯರಾಶಿಯಾಗಿ ವಿರಾಜಿಸುತ್ತಿದ್ದಳು. ಸಖಿಯರಿಂದ ಆಯಾಯಾ ಅವಯವಗಳಿಗೂ ಸುಂದರ ಆಭೂಷಣಗಳು ತೊಡಿಸಲ್ಪಟ್ಟಿದ್ದುವು. ಸೀತಾದೇವಿಯು ಸ್ವಯಂವರ ಮಂಟಪದಲ್ಲಿ ಅಡಿಯಿಡುತ್ತಲೇ, ಆಕೆಯ ದಿವ್ಯ ಸೌಂದರ್ಯಶೋಭೆಯನ್ನು ಕಂಡು ನರ-ನಾರಿಯರೆಲ್ಲರೂ ಮೋಹಿತರಾದರು. ದೇವತೆಗಳು ಹರ್ಷಗೊಂಡು ದುಂದುಭಿಯನ್ನು ನುಡಿಸಿದರು. ಅಪ್ಸರೆಯರು ಹೂಮಳೆಯನ್ನು ಗರೆದು, ಸುಸ್ವರವಾಗಿ ಹಾಡತೊಡಗಿದರು. ಸೀತಾದೇವಿಯ ಕರಕಮಲಗಳಲ್ಲಿ ಜಯಮಾಲೆ ಶೋಭಿಸುತ್ತಿತ್ತು. ಎಲ್ಲ ರಾಜರು ಚಕಿತರಾಗಿ ಇದ್ದಕ್ಕಿದ್ದಂತೆ ಆಕೆಯ ಕಡೆಗೆ ನೋಡತೊಡಗಿದರು. ಸೀತೆಯೂ ಕೂಡ ಚಕಿತಚಿತ್ತಳಾಗಿ ಶ್ರೀರಾಮನನ್ನು ನೋಡತೊಡಗಿದಳು. ಆಗ ಎಲ್ಲ ನರನಾಥರೂ ಮೋಹಪರವಶರಾದರು. ಮುನಿಗಳ ಬಳಿಯಲ್ಲಿ ಕುಳಿತಿದ್ದ ಸೋದರರಿಬ್ಬರನ್ನೂ ನೋಡಿದಾಗ ಸೀತೆಯ ಕಣ್ಣುಗಳು ನಿಧಿಯನ್ನು ಪಡೆದಂತೆ ಆನಂದಪರವಶವಾಗಿ ಶ್ರೀರಾಮನಲ್ಲೇ ನೆಟ್ಟವು. (ಚೌ/೧-೪)

**ದೋ – ಗುರಜನ ಲಾಜ ಸಮಾಜು ಬಡ ದೇಖಿ ಸೀಯ ಸಕುಚಾನಿ ।**
**ಲಾಗಿ ಬಿಲೋಕನ ಸಖಿನ್ಹ ತನ ರಘುಬೀರಹಿ ಉರ ಆನಿ ॥ ೨೪೮ ॥**

ಸೀತಾದೇವಿಯು ಗುರುಹಿರಿಯರ ಎದುರು, ಇತರ ಸದಸ್ಯರ ಸಮ್ಮುಖದಲ್ಲಿ ಲಜ್ಜೆಪಟ್ಟು, ಶ್ರೀರಾಮನನ್ನು ತದೇಕ ದೃಷ್ಟಿಯಿಂದ ನೋಡಲು ಸಂಕೋಚಪಟ್ಟು, ಅವನ ರೂಪವನ್ನು ತನ್ನ ಹೃದಯದಲ್ಲಿ ನಿಲ್ಲಿಸಿಕೊಂಡು, ಸಖಿಯರತ್ತ ನೋಡತೊಡಗಿದಳು. (ದೋ/೨೪೮)

**ಚೌ – ರಾಮ ರೂಪು ಅರು ಸಿಯ ಛಬಿ ದೇಖೇಂ । ನರ ನಾರಿನ್ಹ ಪರಿಹರೀಂ ನಿಮೇಷೇಂ ॥**
**ಸೋಚಹಿಂ ಸಕಲ ಕಹತ ಸಕುಚಾಹೀಂ । ಬಿಧಿ ಸನ ಬಿನಯ ಕರಹಿಂ ಮನ ಮಾಹೀಂ ॥ ೧ ॥**
**ಹರು ಬಿಧಿ ಬೇಗಿ ಜನಕ ಜಡತಾಈ । ಮತಿ ಹಮಾರಿ ಅಸಿ ದೇಹಿ ಸುಹಾಈ ॥**
**ಬಿನು ಬಿಚಾರ ಪನು ತಜಿ ನರನಾಹೂ । ಸೀಯ ರಾಮ ಕರ ಕರೈ ಬಿಬಾಹೂ ॥ ೨ ॥**
**ಜಗು ಭಲ ಕಹಿಹಿ ಭಾವ ಸಬ ಕಾಹೂ । ಹಠ ಕೀನ್ಹೇಂ ಅಂತಹುँ ಉರದಾಹೂ ॥**
**ಏಹಿ ಲಾಲಸಾँ ಮಗನ ಸಬ ಲೋಗೂ । ಬರು ಸಾँವರೋ ಜಾನಕೀ ಜೋಗೂ ॥ ೩ ॥**
**ತಬ ಬಂದೀಜನ ಜನಕ ಬೊಲಾಏ । ಬಿರಿದಾವಲೀ ಕಹತ ಚಲಿ ಆಏ ॥**
**ಕಹ ನೃಪು ಜಾಇ ಕಹಹು ಪನ ಮೋರಾ । ಚಲೇ ಭಾಟ ಹಿಯँ ಹರಷು ನ ಥೋರಾ ॥ ೪ ॥**

ಸಭಾಸದರೆಲ್ಲರೂ ಸೀತೆಯ ಲಾವಣ್ಯ ಮತ್ತು ರಾಮನ ರೂಪವೈಭವವನ್ನು ನಿರ್ನಿಮೇಷರಾಗಿ ನೋಡತೊಡಗಿದರು. ಅವರು ತಮ್ಮ ಆನಂದವನ್ನು ಹೊರಗೆ ಪ್ರಕಟಿಸಲಾರದೆ ಮನಸ್ಸಿನಲ್ಲೇ ಅಡಗಿಸಿಕೊಂಡರು. ಬಳಿಕ ಅವರು ಬ್ರಹ್ಮದೇವರ ಕುರಿತು ಇಂತು

ಪ್ರಾರ್ಥಿಸಿದರು – ''ಓ ವಿಧಾತನೇ! ಜನಕನ ಜಡತ್ವವನ್ನು ಕಳೆದು, ಯಾವುದೇ ವಿಚಾರಮಾಡದೆ ರಾಜನು ತನ್ನ ಪ್ರತಿಜ್ಞೆಯನ್ನು ಬಿಟ್ಟು ಸೀತೆಯ ವಿವಾಹವನ್ನು ಶ್ರೀರಾಮನೊಂದಿಗೆ ಮಾಡಬೇಕು'' ಎಂದು ನಮಗೆ ತೋಚಿದಂತೆ ಅವನಿಗೂ ಬುದ್ಧಿಯನ್ನು ಕೊಡು. ಇದೇ ಸರಿಯಾದ ವಿಧಾನ. ಇದರಿಂದ ಜಗತ್ತಿನಲ್ಲಿ ಜನಕನೂ ಕೂಡ ಎಲ್ಲರಿಗೆ ಒಳ್ಳೆಯವನಾದಾನು. ಇಲ್ಲದೆ ಅವನು ಪಟ್ಟುಹಿಡಿದಿದ್ದರೆ ಪಶ್ಚಾತ್ತಾಪ ಪಡಬೇಕಾದೀತು. ಜಾನಕಿಗೆ ಈ ಶ್ಯಾಮಲನೇ ತಕ್ಕ ವರನೆಂಬುದು ಎಲ್ಲರ ಏಕಾಭಿಪ್ರಾಯ. ಆಗ ಜನಕ ಮಹಾರಾಜನು ವಂದಿಮಾಗಧರನ್ನು ಕರೆಸಿದನು. ಅವರು ವಂಶದ ಬಿರುದಾವಳಿಯನ್ನು ಉಗ್ಗಡಿಸುತ್ತಾ ಬಂದರು. ಅರಸ ಹೇಳಿದ – ಹೋಗಿ ನನ್ನ ಪ್ರತಿಜ್ಞೆಯನ್ನು ಎಲ್ಲರಿಗೂ ಶ್ರುತಪಡಿಸಿರಿ. ಅವರು ಹೊರಟರು – ಅವರ ಹೃದಯದಲ್ಲಿ ಆನಂದ ಹಿಡಿಸಲಾರದಷ್ಟು ತುಂಬಿತ್ತು. (ಚೌ/೧-೪)

**ದೋ – ಬೋಲೇ ಬಂದೀ ಬಚನ ಬರ ಸುನಹು ಸಕಲ ಮಹಿಪಾಲ।**
**ಪನ ಬಿದೇಹ ಕರ ಕಹಹಿಂ ಹಮ ಭುಜಾ ಉಠಾಇ ಬಿಸಾಲ ॥ ೨೪೯ ॥**

ವಂದಿಮಾಗಧರು ಘೋಷಿಸಿದರು – ''ಸಕಲ ಮಹೀಪಾಲರೇ! ಕೇಳಿ. ನಾವು ಜನಕ ಮಹಾರಾಜರ ದೃಢಪ್ರತಿಜ್ಞೆಯನ್ನು ಭುಜಗಳನ್ನೆತ್ತಿ ಸಾರುತ್ತಿದ್ದೇವೆ – (ದೋ/೨೪೯)

**ಚೌ – ನೃಪ ಭುಜಬಲು ಬಿಧು ಸಿವಧನು ರಾಹೂ । ಗರುಅ ಕಠೋರ ಬಿದಿತ ಸಬ ಕಾಹೂ ॥**
**ರಾವನು ಬಾನು ಮಹಾಭಟ ಭಾರೇ । ದೇಖಿ ಸರಾಸನ ಗವ್ಂಹಿಂ ಸಿಧಾರೇ ॥ ೧ ॥**
**ಸೋಇ ಪುರಾರಿ ಕೋದಂಡು ಕಠೋರಾ । ರಾಜ ಸಮಾಜ ಆಜು ಜೋಇ ತೋರಾ ॥**
**ತ್ರಿಭುವನ ಜಯ ಸಮೇತ ಬೈದೇಹೀ । ಬಿನಹಿಂ ಬಿಚಾರ ಬರಇ ಹಠಿ ತೇಹೀ ॥ ೨ ॥**
**ಸುನಿ ಪನ ಸಕಲ ಭೂಪ ಅಭಿಲಾಷೇ । ಭಟಮಾನೀ ಅತಿಸಯ ಮನ ಮಾಖೇ ॥**
**ಪರಿಕರ ಬಾಂಧಿ ಉಠೇ ಅಕುಲಾಈ । ಚಲೇ ಇಷ್ಟದೇವನ್ಹ ಸಿರ ನಾಈ ॥ ೩ ॥**
**ತಮಕಿ ತಾಕಿ ತಕಿ ಸಿವಧನು ಧರಹೀಂ । ಉಠಇ ನ ಕೋಟಿ ಭಾಂತಿ ಬಲು ಕರಹೀಂ ॥**
**ಜಿನ್ಹಕೇ ಕಛು ಬಿಚಾರು ಮನ ಮಾಹೀಂ । ಚಾಪ ಸಮೀಪ ಮಹೀಪ ನ ಜಾಹೀಂ ॥ ೪ ॥**

''ರಾಜರ ಭುಜಬಲವೆಂಬ ಚಂದ್ರಮನಿಗೆ ಈ ಶಿವಧನುಸ್ಸು ರಾಹುವಿನಂತಿದೆ. ಅದು ತುಂಬಾ ಭಾರವಾಗಿದ್ದು, ಕಠೋರವಾಗಿದೆ; ಇದು ಎಲ್ಲರಿಗೂ ತಿಳಿದೇ ಇದೆ. ಮಹಾ ಬಲಶಾಲಿಗಳಾದ ರಾವಣ, ಬಾಣಾಸುರರೂ ಕೂಡ ಈ ಬಿಲ್ಲನ್ನು ಕಂಡು ಮಾತಿಲ್ಲದೆ ಕಾಲುತೆಗೆದರು. ಅದನ್ನು ಎತ್ತುವುದಿರಲಿ, ಮುಟ್ಟಲೂ ಕೂಡ ಧೈರ್ಯವಾಗಲಿಲ್ಲ. ಆ ಶಂಭುಕೋದಂಡವನ್ನು ಯಾರೇ ಆಗಲೀ ಎತ್ತಿ ಮುರಿದರೆ ತ್ರಿಲೋಕವಿಜಯದೊಂದಿಗೆ ಅವನನ್ನು ಜಾನಕಿಯು ಹಿಂದೆ-ಮುಂದೆ ನೋಡದೆ ವರಿಸುವಳು.'' ರಾಜನ ಈ ಪ್ರತಿಜ್ಞೆಯನ್ನು ಕೇಳಿ ಎಲ್ಲ ರಾಜರು ಉತ್ಸುಕರಾದರು. ಪರಾಕ್ರಮದ ಅಭಿಮಾನಿಗಳಾದವರು ಮನದಲ್ಲೇ ಸಿಡಿಮಿಡಿಗೊಂಡರು. ಟೊಂಕಕಟ್ಟಿ ಚಡಪಡಿಸುತ್ತಾ ಎದ್ದು ತಮ್ಮ ಇಷ್ಟ ದೈವಕ್ಕೆ ತಲೆಬಾಗಿ ಮುಂದೆ ಸರಿದರು. ಅವರು ವೀರಾವೇಷದಿಂದ ಶಿವಧನುಸ್ಸಿನತ್ತ ದೃಷ್ಟಿಬೀರಿದರು. ಎಲ್ಲ ಬಲವನ್ನು ಉಪಯೋಗಿಸಿಕೊಂಡು ಅದನ್ನು ಎತ್ತಲು ಪ್ರಯತ್ನಿಸುತ್ತಾರೆ. ಆದರೆ ಅದು ಜಪ್ಪಯ್ಯ ಎಂದರೂ ಮಿಸುಕದು. ವಿವೇಕಶಾಲಿಗಳಾದ ರಾಜರು ಆ ಬಿಲ್ಲಿನತ್ತ ಸುಳಿಯಲೂ ಇಲ್ಲ. (ಚೌ/೧-೪)

**ದೋ – ತಮಕಿ ಧರಹಿಂ ಧನು ಮೂಢ ನೃಪ ಉಠಇ ನ ಚಲಹಿಂ ಲಜಾಇ।**
**ಮನಹುಂ ಪಾಇ ಭಟ ಬಾಹುಬಲು ಅಧಿಕು ಅಧಿಕು ಗರುಆಇ ॥ ೨೫೦ ॥**

ಮೂರ್ಖರಾದ ರಾಜರು ತುಡುಕಿ ಬಿಲ್ಲನ್ನು ಹಿಡಿದುಕೊಳ್ಳುವರು. ಆದರೆ ಕೈಯಲ್ಲಿ ಹರಿಯದಿದ್ದಾಗ ಲಜ್ಜಿತರಾಗಿ ಹಿಮ್ಮೆಟ್ಟುವರು. ಆ ವೀರಯೋಧರ ಭುಜಬಲವನ್ನು ಪಡೆದು ಆ ಬಿಲ್ಲು ಇನ್ನೂ-ಇನ್ನೂ ಭಾರವಾಗುತ್ತಿದೆಯೋ ಎಂಬಂತಿತ್ತು. (ದೋ/೨೫೦)

**ಚೌ – ಭೂಪ ಸಹಸ ದಸ ಏಕಹಿ ಬಾರಾ । ಲಗೇ ಉಠಾವನ ಟರಇ ನ ಟಾರಾ ॥**
**ಡಗಇ ನ ಸಂಭು ಸರಾಸನು ಕೈಸೇಂ । ಕಾಮೀ ಬಚನ ಸತೀ ಮನು ಜೈಸೇಂ ॥ ೧ ॥**
**ಸಬ ನೃಪ ಭಏ ಜೋಗು ಉಪಹಾಸೀ । ಜೈಸೇಂ ಬಿನು ಬಿರಾಗ ಸಂನ್ಯಾಸೀ ॥**
**ಕೀರತಿ ಬಿಜಯ ಬೀರತಾ ಭಾರೀ । ಚಲೇ ಚಾಪ ಕರ ಬರಬಸ ಹಾರೀ ॥ ೨ ॥**
**ಶ್ರೀ ಹತ ಭಏ ಹಾರಿ ಹಿಯಂ ರಾಜಾ । ಬೈಠೇ ನಿಜ ನಿಜ ಜಾಇ ಸಮಾಜಾ ॥**
**ನೃಪನ್ಹ ಬಿಲೋಕಿ ಜನಕು ಅಕುಲಾನೇ । ಬೋಲೇ ಬಚನ ರೋಷ ಜನು ಸಾನೇ ॥ ೩ ॥**

**ದೀಪ ದೀಪ ಕೇ ಭೂಪತಿ ನಾನಾ । ಆಏ ಸುನಿ ಹಮ ಜೋ ಪನು ಠಾನಾ ॥**
**ದೇವ ದನುಜ ಧರಿ ಮನುಜ ಸರೀರಾ । ಬಿಪುಲ ಬೀರ ಆಏ ರನಧೀರಾ ॥ ೪ ॥**

ಹತ್ತುಸಾವಿರ ಮಂದಿ ಅರಸರು ಒಮ್ಮೆಗೇ ಅದನ್ನು ಎತ್ತಲು ಪ್ರಯತ್ನಿಸಿದರೂ ಆ ಬಿಲ್ಲು ಕದಲಲಿಲ್ಲ. ಕಾಮೀ ಜನರ ಮಾತಿಗೆ ಪತಿವ್ರತೆಯ ಮನಸ್ಸು ಕದಲದಂತೇ ಅವರ ಬಲದ ಮುಂದೆ ಶಿವಧನುಸ್ಸು ಅಚಲವಾಗಿ ಇದ್ದುಬಿಟ್ಟಿತು. ಎಲ್ಲ ಅರಸರ ಪಾಡೂ ವೈರಾಗ್ಯವಿಲ್ಲದ ಸಂನ್ಯಾಸಿಯಂತೆ ನಗೆಪಾಟಲಾಯಿತು. ತಮ್ಮ ಕೀರ್ತಿ, ವಿಜಯ, ಅದ್ಭುತಶೌರ್ಯ – ಇವೆಲ್ಲವನ್ನೂ ಅವರು ಧನುಸ್ಸಿಗೆ ಒಪ್ಪಿಸಿ ನಿಸ್ಸಹಾಯಕ ಸ್ಥಿತಿಯಲ್ಲಿ ಮರಳಿ ಹೊರಟುಹೋದರು. ಎಲ್ಲ ರಾಜರೂ ಎದೆಗುಂದಿ ಹತಪ್ರಭರಾಗಿ ತಮ್ಮ-ತಮ್ಮ ಜಾಗದಲ್ಲಿ ಹೋಗಿ ಕುಳಿತರು. ರಾಜರುಗಳ ಈ ಸೋಲನ್ನು ಕಂಡು ಜನಕ ಮಹಾರಾಜನು ಆಕುಲಗೊಂಡು ರೋಷಾವೇಶದಿಂದ ನುಡಿದನು – ''ನನ್ನ ಪ್ರತಿಜ್ಞೆಯನ್ನು ಕೇಳಿ, ಪ್ರಪಂಚದ ಮೂಲೆ-ಮೂಲೆಗಳಿಂದ ಅನೇಕ ಭೂಪತಿಗಳು ಬಂದರು. ದೇವ ದನುಜರೂ ಕೂಡ ಮನುಜವೇಷತಾಳಿ ಬಂದರು. ಇನ್ನೂ ಅನೇಕ ಧೀರ-ವೀರರೂ ಬಂದರು. (ಚೌ/೧-೪)

**ದೋ – ಕುಅ‍ँರಿ ಮನೋಹರ ಬಿಜಯ ಬಡಿ ಕೀರತಿ ಅತಿ ಕಮನೀಯ ।**
**ಪಾವನಿಹಾರ ಬಿರಂಚಿ ಜನು ರಚೆಉ ನ ಧನು ದಮನೀಯ ॥ ೨೫೧ ॥**

ಆದರೆ ಧನುಸ್ಸನ್ನು ಮುರಿದು, ಮನೋಹರಕನ್ಯೆಯನ್ನು ಜಯಿಸಿ, ಅತ್ಯಂತ ಕಮನೀಯ ಕೀರ್ತಿ ಇವುಗಳನ್ನು ಪಡೆಯುವಂತವನನ್ನು ಬ್ರಹ್ಮನು ಸೃಷ್ಟಿಸಿಯೇ ಇಲ್ಲವೆಂದು ಕಾಣುತ್ತದೆ.'' (ದೋ/೨೫೧)

**ಚೌ – ಕಹಹು ಕಾಹಿ ಯಹು ಲಾಭು ನ ಭಾವಾ । ಕಾಹುँ ನ ಸಂಕರ ಚಾಪ ಚಢಾವಾ ॥**
**ರಹಉ ಚಢಾಉಬ ತೋರಬ ಭಾಈ । ತಿಲು ಭರಿ ಭೂಮಿ ನ ಸಕೇ ಛಡಾಈ ॥ ೧ ॥**
**ಅಬ ಜನಿ ಕೋಉ ಮಾಖೈ ಭಟ ಮಾನೀ । ಬೀರ ಬಿಹೀನ ಮಹೀ ಮೈ ಜಾನೀ ॥**
**ತಜಹು ಆಸ ನಿಜ ನಿಜ ಗೃಹ ಜಾಹೂ । ಲಿಖಾ ನ ಬಿಧಿ ಬೈದೇಹಿ ಬಿಬಾಹೂ ॥ ೨ ॥**
**ಸುಕೃತು ಜಾಇ ಜೌँ ಪನು ಪರಿಹರಊँ । ಕುಅँರಿ ಕುಆರಿ ರಹಉ ಕಾ ಕರಊँ ॥**
**ಜೌँ ಜನತೆಉँ ಬಿನು ಭಟ ಭುಬಿ ಭಾಈ । ತೌ ಪನು ಕರಿ ಹೋತೆಉँ ನ ಹँಸಾಈ ॥ ೩ ॥**
**ಜನಕ ಬಚನ ಸುನಿ ಸಬ ನರ ನಾರೀ । ದೇಖಿ ಜಾನಕಿ ಹಿ ಭಏ ದುಖಾರೀ ॥**
**ಮಾಖೆ ಲಖನು ಕುಟಿಲ ಭಇँ ಭೌँಹೇँ । ರದಪಟ ಫರಕತ ನಯನ ರಿಸೌँಹೇँ ॥ ೪ ॥**

ಜನಕನು ಇನ್ನೂ ಹೇಳುತ್ತಾನೆ – ''ಈ ಲಾಭ ಯಾರಿಗೆ ಬೇಡ? ಆದರೆ ಯಾರೂ ಶಿವಧನುಸ್ಸಿಗೆ ಹೆದೆ ಏರಿಸಲಿಲ್ಲ. ಹೆದೆ ಏರಿಸುವುದು, ಮುರಿಯುವುದು ಇರಲೀ, ಅದನ್ನು ನೆಲದಿಂದ ಎಳ್ಳಷ್ಟು ಮೇಲಕ್ಕೆತ್ತುವ ಭೂಪನೂ ಕಾಣಲಿಲ್ಲ. ಈಗ ಶೌರ್ಯಾಭಿಮಾನಿಗಳು ಯಾರೂ ಕೋಪಗೊಳ್ಳಬಾರದು. ಈ ಭೂಮಿಯು ವೀರಶೂನ್ಯವೆಂದು ಇದೀಗ ನಾನು ತಿಳಿದುಕೊಂಡೆ. ಈಗ ನೀವೆಲ್ಲ ಆಶೆಯನ್ನು ತೊರೆದು ನಿಮ್ಮ-ನಿಮ್ಮ ಮನೆಗಳಿಗೆ ತೆರಳಿರಿ. ಬ್ರಹ್ಮನು ಸೀತೆಯ ಹಣೆಯಲ್ಲಿ ಮದುವೆಯನ್ನೇ ಬರೆದಿಲ್ಲವೆಂದು ಕಾಣುತ್ತದೆ. (ಆದರೆ ಸೀತೆಯು ಬ್ರಹ್ಮಸೃಷ್ಟಿಯಲ್ಲವಲ್ಲ!) ಪಣವನ್ನು ತೊರೆದರೆ ಪುಣ್ಯ ಹೋಗುತ್ತದೆ. ಅದ್ದರಿಂದ ನಾನು ನಿರುಪಾಯನಾಗಿದ್ದೇನೆ. ಮಗಳು ಕನ್ಯೆಯಾಗಿಯೇ ಇರಲಿ, ಇನ್ನೇನು ಮಾಡಲಿ. ರಾಜರುಗಳಿರಾ! ಈ ಭೂಮಿಯಲ್ಲಿ ವೀರರೇ ಇಲ್ಲವೆಂದು ತಿಳಿದಿದ್ದರೆ ನಾನು ಈ ಪ್ರತಿಜ್ಞೆಯೇ ಮಾಡುತ್ತಿರಲಿಲ್ಲ. ಹೀಗೆ ಅಪಹಾಸ್ಯಕ್ಕೆ ಪಾತ್ರನಾಗುತ್ತಿರಲಿಲ್ಲ.'' ಜನಕನ ಮಾತುಗಳನ್ನು ಕೇಳಿ ಎಲ್ಲ ಸ್ತ್ರೀ-ಪುರುಷರು ಜಾನಕಿಯನ್ನು ನೋಡಿ ದುಃಖಿತರಾದರು. ಆದರೆ ಲಕ್ಷ್ಮಣನು ತನ್ನ ಕೋಪಾವೇಷವನ್ನು ಅಡಗಿಸದಾದನು. ಅವನ ಹುಬ್ಬು ಗಂಟಿಕ್ಕಿತು. ತುಟಿ ಅದುರತೊಡಗಿತು. ಕಣ್ಣುಗಳು ಕೋಪದಿಂದ ಕೆಂಪಾದವು. (ಚೌ/೧-೪)

**ದೋ – ಕಹಿ ನ ಸಕತ ರಘುಬೀರ ಡರ ಲಗೇ ಬಚನ ಜನು ಬಾನ ।**
**ನಾಇ ರಾಮ ಪದ ಕಮಲ ಸಿರು ಬೋಲೇ ಗಿರಾ ಪ್ರಮಾನ ॥ ೨೫೨ ॥**

ಜನಕನ ಮಾತುಗಳು ಬಾಣಗಳಂತೆ ನಾಟಿದರೂ, ಶ್ರೀರಘುವರನ ಭಯದಂದ ಏನನ್ನೂ ಮಾತಾಡದಾದನು. ಕೊನೆಗೆ ತಡೆಯಲಾರದೆ ಅವನು ಶ್ರೀರಾಮನ ಚರಣಗಳಿಗೆರಗಿ ದೃಢವಾಗಿ ಹೀಗೆ ಹೇಳಿದನು – (ದೋ/೨೫೨)

**ಚೌ – ರಘುಬಂಸಿನ್ಹ ಮಹुँ ಜಹँ ಕೋಉ ಹೋಈ । ತೇಹಿँ ಸಮಾಜ ಅಸ ಕಹಇ ನ ಕೋಈ ॥**
**ಕಹೀ ಜನಕ ಜಸಿ ಅನುಚಿತ ಬಾನೀ । ಬಿದ್ಯಮಾನ ರಘುಕುಲ ಮನಿ ಜಾನೀ ॥ ೧ ॥**
**ಸುನಹು ಭಾನುಕುಲ ಪಂಕಜ ಭಾನೂ । ಕಹಉँ ಸುಭಾಉ ನ ಕಛು ಅಭಿಮಾನೂ ॥**
**ಜೌँ ತುಮ್ಹಾರಿ ಅನುಸಾಸನ ಪಾವौँ । ಕಂದುಕ ಇವ ಬ್ರಹ್ಮಾಂಡ ಉಠಾವौँ ॥ ೨ ॥**

**ಕಾಚೇ ಘಟ ಜಿಮಿ ಡಾರೌಂ ಫೋರೀ । ಸಕಉಂ ಮೇರು ಮೂಲಕ ಜಿಮಿ ತೋರೀ ॥**
**ತವ ಪ್ರತಾಪ ಮಹಿಮಾ ಭಗವಾನಾ । ಕೋ ಬಾಪುರೋ ಪಿನಾಕ ಪುರಾನಾ ॥ ೩ ॥**
**ನಾಥ ಜಾನಿ ಅಸ ಆಯಸು ಹೋಊ । ಕೌತುಕು ಕರೌಂ ಬಿಲೋಕಿಅ ಸೋಊ ॥**
**ಕಮಲ ನಾಲ ಜಿಮಿ ಚಾಪ ಚಢಾವೌಂ । ಜೋಜನ ಸತ ಪ್ರಮಾನ ಲೈ ಧಾವೌಂ ॥ ೪ ॥**

ರಘುವಂಶಿಗಳು ಯಾರೇ ಆಗಲೀ ಇಲ್ಲಿ ಇದ್ದಲ್ಲಿ ಇಂತಹ ಮಾತನ್ನು ಯಾರೂ ಆಡಲಾರರು. ರಘುಕುಲ ಶಿರೋಮಣಿ ಶ್ರೀರಾಮನಿರುವುದನ್ನು ತಿಳಿದೂ-ತಿಳಿದೂ ಜನಕನು ಇಂತಹ ಅನುಚಿತವಾದ ಮಾತನ್ನು ಆಡಿದ್ದಾನೆ. ಓ ಸೂರ್ಯವಂಶತಿಲಕಾ! ನಾನು ಅಭಿಮಾನದಿಂದ ಅಲ್ಲ, ಸಹಜವಾಗಿಯೇ ಹೇಳುತ್ತಿದ್ದೇನೆ. ನೀನು ಅಪ್ಪಣೆಕೊಟ್ಟರೆ ನಾನು ಈ ಬ್ರಹ್ಮಾಂಡವನ್ನು ಚೆಂಡಿನಂತೆ ಎತ್ತಿ ಎಸೆಯುತ್ತೇನೆ. (ಅವನು ಮಹಾಶೇಷನಲ್ಲವೇ?) ಅದನ್ನು ಹಸಿ ಮಡಕೆಯಂತೆ ಒಡೆದುಬಿಡುವೆನು. ಸಮೇರು ಪರ್ವತವನ್ನು ಕೂಡ ಮುಲ್ಲಂಗಿಯಂತೆ ಚೂರು-ಚೂರು ಮಾಡಬಲ್ಲೆನು. ಭಗವಂತಾ! ನಿನ್ನ ಪ್ರತಾಪದ ಮಹಿಮೆಯ ಮುಂದೆ ಈ ಮುಗ್ಗಲು ಬಿಲ್ಲೂ ಒಂದು ಲೆಕ್ಕವೇ! ಅಣ್ಣಾ! ಅಪ್ಪಣೆಯಾದರೆ ನನ್ನ ಕೈಚಳಕವನ್ನು ನೋಡು. ಕಮಲದ ದಂಟಿನಂತೆ ಈ ಧನುಸ್ಸನ್ನು ಎತ್ತಿಕೊಂಡು ನೂರು ಯೋಜನಗಳವರೆಗೆ ಓಡಬಲ್ಲೆ. (ಚೌ/೧-೪)

**ದೋ – ತೋರೌಂ ಛತ್ರಕ ದಂಡ ಜಿಮಿ ತವ ಪ್ರತಾಪ ಬಲ ನಾಥ ।**
**ಜೌಂ ನ ಕರೌಂ ಪ್ರಭು ಪದ ಸಪಥ ಕರ ನ ಧರೌಂ ಧನು ಭಾಥ ॥ ೨೫೩ ॥**

ಪ್ರಭೂ! ನಿನ್ನ ಪ್ರತಾಪಬಲದಿಂದ ನಾನು ಈ ಬಿಲ್ಲನ್ನು ನಾಯಿಕೊಡೆಯಂತೆ ಮುರುಟಿಹಾಕಬಲ್ಲೆ. ಹಾಗೆ ಮಾಡದಿದ್ದರೆ, 'ನಾನು ಮತ್ತೆಂದಿಗೂ ಬಿಲ್ಲು-ಬತ್ತಳಿಕೆಯನ್ನು ಮುಟ್ಟಲಾರೆ' ಎಂದು ಪ್ರಭುವಿನ ಪಾದದಾಣೆ ಮಾಡಿ ಹೇಳುತ್ತೇನೆ. (ದೋ/೨೫೩)

**ಚೌ – ಲಖನ ಸಕೋಪ ಬಚನ ಜೇ ಬೋಲೇ । ಡಗಮಗಾನಿ ಮಹಿ ದಿಗ್ಗಜ ಡೋಲೇ ॥**
**ಸಕಲ ಲೋಗ ಸಬ ಭೂಪ ಡೆರಾನೇ । ಸಿಯ ಹಿಯಂ ಹರಷು ಜನಕು ಸಕುಚಾನೇ ॥ ೧ ॥**
**ಗುರ ರಘುಪತಿ ಸಬ ಮುನಿ ಮನ ಮಾಹೀಂ । ಮುದಿತ ಭಏ ಪುನಿ ಪುನಿ ಪುಲಕಾಹೀಂ ॥**
**ಸಯನಹಿಂ ರಘುಪತಿ ಲಖನು ನೆವಾರೇ । ಪ್ರೇಮ ಸಮೇತ ನಿಕಟ ಬೈಠಾರೇ ॥ ೨ ॥**
**ಬಿಸ್ವಾಮಿತ್ರ ಸಮಯ ಸುಭ ಜಾನೀ । ಬೋಲೇ ಅತಿ ಸನೇಹಮಯ ಬಾನೀ ॥**
**ಉಠಹು ರಾಮ ಭಂಜಹು ಭವಚಾಪಾ । ಮೇಟಹು ತಾತ ಜನಕ ಪರಿತಾಪಾ ॥ ೩ ॥**
**ಸುನಿ ಗುರು ಬಚನ ಚರನ ಸಿರು ನಾವಾ । ಹರಷು ಬಿಷಾದು ನ ಕಛು ಉರ ಆವಾ ॥**
**ಠಾಢೇ ಭಏ ಉಠಿ ಸಹಜ ಸುಭಾಏಂ । ಠವನಿ ಜುಬಾ ಮೃಗರಾಜು ಲಜಾಏಂ ॥ ೪ ॥**

ಲಕ್ಷ್ಮಣನ ಈ ಕ್ರೋಧತುಂಬಿದ ಮಾತುಗಳಿಂದ ಭೂಮಿಯು ಕಂಪಿಸಿತು. ದಿಗ್ಗಜಗಳು ಗಡಗಡನೆ ನಡುಗಿದವು. ಅಲ್ಲಿ ನೆರೆದ ರಾಜರೂ, ಜನರೂ ಎಲ್ಲರೂ ಭಯಭ್ರಾಂತರಾದರು. ಸೀತೆಯ ಮನಸ್ಸಿಗೆ ಹರ್ಷವಾಯಿತು. ಜನಕನು ಪೆಚ್ಚಾದನು. ಗುರು ವಿಶ್ವಾಮಿತ್ರರು, ಶ್ರೀರಘುನಾಥನು, ಎಲ್ಲ ಮುನಿಗಳು ಮನಸ್ಸಿನಲ್ಲಿ ಆನಂದಪಟ್ಟು ಪುಲಕಿತಗಾತ್ರರಾದರು. ಶ್ರೀರಾಮನು ಸನ್ನೆಯಿಂದ ಲಕ್ಷ್ಮಣನನ್ನು ತಡೆದು, ಪ್ರೇಮದಿಂದ ತನ್ನ ಬಳಿ ಕುಳ್ಳಿರಿಸಿಕೊಂಡನು. ಇದೇ ಶುಭಸಮಯವೆಂದರಿತು ವಿಶ್ವಾಮಿತ್ರರು ಅತ್ಯಂತ ಪ್ರೇಮದಿಂದ – ''ರಾಮಾ! ಏಳು, ಶಿವಧನುಸ್ಸನ್ನು ಮುರಿ. ಮಗೂ! ಜನಕನ ಸಂತಾಪವನ್ನು ಕಳೆ'' ಎಂದು ಹೇಳಿದರು. ಗುರುವಿನ ಮಾತು ಕೇಳಿ, ಶ್ರೀರಾಮನು ಅವರ ಚರಣಗಳಲ್ಲಿ ತಲೆವಾಗಿದನು. ಅವನ ಮನಸ್ಸಿನಲ್ಲಿ ಹರ್ಷವಾಗಲೀ, ವಿಷಾದವಾಗಲೀ ಉಂಟಾಗಲಿಲ್ಲ. ಅವನು ಸಹಜವಾದ ಶಾಂತಸ್ವಭಾವದಿಂದ ಸಿಂಹವನ್ನೂ ನಾಚಿಸುವ ಠೀವಿಯಿಂದ ಎದ್ದುನಿಂತನು. (ಚೌ/೧-೪)

**ದೋ – ಉದಿತ ಉದಯಗಿರಿ ಮಂಚ ಪರ ರಘುಬರ ಬಾಲಪತಂಗ ।**
**ಬಿಕಸೇ ಸಂತ ಸರೋಜ ಸಬ ಹರಷೇ ಲೋಚನ ಭೃಂಗ ॥ ೨೫೪ ॥**

ವೇದಿಕೆಯೆಂಬ ಉದಯಗಿರಿಯ ಮೇಲೆ ರಘುವರನೆಂಬ ಬಾಲರವಿಯು ಉದಿತನಾಗುತ್ತಿದ್ದಂತೆ, (ಎದ್ದುನಿಂತಂತೆ) ಎಲ್ಲ ಸಂತರೆಂಬ ಸರೋಜಗಳು ಅರಳಿದವು. ಲೋಚನ ಭೃಂಗಗಳು ಹರ್ಷಗೊಂಡವು. (ದೋ/೨೫೪)

**ಚೌ – ನೃಪನ್ಹ ಕೇರಿ ಆಸಾ ನಿಸಿ ನಾಸೀ । ಬಚನ ನಖತ ಅವಲೀ ನ ಪ್ರಕಾಸೀ ॥**
**ಮಾನೀ ಮಹಿಪ ಕುಮುದ ಸಕುಚಾನೇ । ಕಪಟೀ ಭೂಪ ಉಲೂಕ ಲುಕಾನೇ ॥ ೧ ॥**
**ಭಏ ಬಿಸೋಕ ಕೋಕ ಮುನಿ ದೇವಾ । ಬರಿಸಹಿಂ ಸುಮನ ಜನಾವಹಿಂ ಸೇವಾ ॥**
**ಗುರ ಪದ ಬಂದಿ ಸಹಿತ ಅನುರಾಗಾ । ರಾಮ ಮುನಿನ್ಹ ಸನ ಆಯಸು ಮಾಗಾ ॥ ೨ ॥**

**ಸಹಜಹಿಂ ಚಲೇ ಸಕಲ ಜಗ ಸ್ವಾಮೀ । ಮತ್ತ ಮಂಜು ಬರ ಕುಂಜರ ಗಾಮೀ ॥**
**ಚಲತ ರಾಮ ಸಬ ಪುರ ನರ ನಾರೀ । ಪುಲಕ ಪೂರಿ ತನ ಭಏ ಸುಖಾರೀ ॥ ೩ ॥**
**ಬಂದಿ ಪಿತರ ಸುರ ಸುಕೃತ ಸಂಭಾರೇ । ಜೌಂ ಕಛು ಪುನ್ಯ ಪ್ರಭಾಉ ಹಮಾರೇ ॥**
**ತೌ ಸಿವಧನು ಮೃನಾಲ ಕೀ ನಾಈಂ । ತೋರಹುಂ ರಾಮು ಗನೇಸ ಗೊಸಾಈಂ ॥ ೪ ॥**

ಅರಸರ ಆಶಾನಿಶಿಯು ಅಳಿಯಿತು. ಅವರ ಮಾತುಗಳೆಂಬ ತಾರೆಗಳು ಮಂಕಾದವು. ದುರಭಿಮಾನಿಗಳಾದ ಅರಸರೆಂಬ ಕುಮುದಗಳು ಬಾಡಿದವು. ಕಪಟರಾಜರೆಂಬ ಗೂಬೆಗಳು ತಲೆಮರೆಸಿಕೊಂಡವು. ಮುನಿಗಳೂ ಹಾಗೂ ದೇವತೆಗಳೆಂಬ ಚಕ್ರವಾಕಗಳು ಶೋಕರಹಿತರಾದರು. ಹೂವುಗಳ ಮಳೆಸುರಿಸಿ ತಮ್ಮ ಸೇವೆಯನ್ನು ಪ್ರದರ್ಶಿಸಿದರು. ಶ್ರೀರಾಮನು ಭಕ್ತಿಶ್ರದ್ಧೆಯಿಂದ ಗುರುಗಳ ಚರಣಗಳಿಗೆ ವಂದಿಸಿ, ಮುನಿಗಳ ಆಜ್ಞೆಯನ್ನು ಪ್ರಾರ್ಥಿಸಿದನು. ಸಕಲ ಜಗದೊಡೆಯನಾದ ಶ್ರೀರಾಮನು ಶ್ರೇಷ್ಠನಾದ ಸಲಗದ ಠೀವಿಯಿಂದ ಸಹಜವಾಗಿ ನಡೆದುಕೊಂಡು ಹೋಗುತ್ತಿರುವನು. ಶ್ರೀರಾಮಚಂದ್ರನು ಎದ್ದು ನಡೆದುದನ್ನು ನೋಡಿ ಜನಕಪುರದ ನರನಾರಿಯರು ಸುಖಿಗಳಾದರು. ಅವರ ಶರೀರ ರೋಮಾಂಚಿತವಾಯಿತು. ಅವರು ದೇವ-ಪಿತೃಗಳಿಗೆ ವಂದಿಸಿ, ತಮ್ಮ ಪುಣ್ಯವನ್ನು ನೆನೆದು, ಹೀಗೆ ಬೇಡಿಕೊಂಡರು – ''ಓ ಸ್ವಾಮಿ ಗಣಪತಿಯೇ! ನಮ್ಮ ಪೂರ್ವ ಪುಣ್ಯಫಲ ಏನಾದರೂ ಇದ್ದರೆ, ಶ್ರೀರಾಮನು ಶಿವಧನುಸ್ಸನ್ನು ಕಮಲದ ದಂಟಿನಂತೆ ಮುರಿದುಬಿಡಲಿ.'' (ಚೌ/೧-೪)

**ದೋ – ರಾಮಹಿ ಪ್ರೇಮ ಸಮೇತ ಲಖಿ ಸಖಿನ್ಹ ಸಮೀಪ ಬೊಲಾಇ ।**
**ಸೀತಾ ಮಾತು ಸನೇಹ ಬಸ ಬಚನ ಕಹಇ ಬಿಲಖಾಇ ॥ ೨೫೫ ॥**

ವಾತ್ಸಲ್ಯಪೂರ್ವಕವಾಗಿ ಶ್ರೀರಾಮಚಂದ್ರನನ್ನು ನೋಡಿ, ಸಖಿಯರನ್ನು ತನ್ನ ಬಳಿಗೆ ಕರೆದು, ಸೀತಾದೇವಿಯ ತಾಯಿಯಾದ ಸುನಯನಾದೇವಿಯು ಸ್ನೇಹಪರವಶಳಾಗಿ ಬಿಕ್ಕುತ್ತಾ ಹೀಗೆ ಹೇಳಿದಳು – (ದೋ/೨೫೫)

**ಚೌ – ಸಖಿ ಸಬ ಕೌತುಕು ದೇಖನಿಹಾರೇ । ಜೇಉ ಕಹಾವತ ಹಿತೂ ಹಮಾರೇ ॥**
**ಕೋಉ ನ ಬುಝಾಇ ಕಹಇ ಗುರ ಪಾಹೀಂ । ಏ ಬಾಲಕ ಅಸಿ ಹಠ ಭಲಿ ನಾಹೀಂ ॥ ೧ ॥**
**ರಾವನ ಬಾನ ಛುಆ ನಹಿಂ ಚಾಪಾ । ಹಾರೇ ಸಕಲ ಭೂಪ ಕರಿ ದಾಪಾ ॥**
**ಸೋ ಧನು ರಾಜಕುಅँರ ಕರ ದೇಹೀಂ । ಬಾಲ ಮರಾಲ ಕಿ ಮಂದರ ಲೇಹೀಂ ॥ ೨ ॥**
**ಭೂಪ ಸಯಾನಪ ಸಕಲ ಸಿರಾನೀ । ಸಖಿ ಬಿಧಿ ಗತಿ ಕಛು ಜಾತಿ ನ ಜಾನೀ ॥**
**ಬೋಲೀ ಚತುರ ಸಖೀ ಮೃದು ಬಾನೀ । ತೇಜವಂತ ಲಘು ಗನಿಅ ನ ರಾನೀ ॥ ೩ ॥**
**ಕಹँ ಕುಂಭಜ ಕಹँ ಸಿಂಧು ಅಪಾರಾ । ಸೋಷೇಉ ಸುಜಸು ಸಕಲ ಸಂಸಾರಾ ॥**
**ರಬಿ ಮಂಡಲ ದೇಖತ ಲಘು ಲಾಗಾ । ಉದಯँ ತಾಸು ತ್ರಿಭುವನ ತಮ ಭಾಗಾ ॥ ೪ ॥**

ಸಖಿಯರೇ! ಎಲ್ಲರೂ ವಿನೋದವಾಗಿ ನೋಡುತ್ತಿದ್ದಾರಲ್ಲ! ನಮಗೆ ಹಿತವನ್ನು ಬಯಸುವವರು ಯಾರಾದರೂ ವಿಶ್ವಾಮಿತ್ರರಿಗೆ ಹೇಳಿದರೆ ಚೆನ್ನಾಗಿತ್ತು. ಈ ಘೋರವಾದ ಶಿವಧನುಸ್ಸನ್ನು ಎತ್ತಲು ಏನೂ ಅರಿಯದ ಹಸುಳೆ ಈ ರಾಮನಿಗೆ ಆಜ್ಞಾಪಿಸುವುದು ಒಳ್ಳೆಯದಲ್ಲ. ರಾವಣನು ಬಾಣಾಸುರನೂ ಈ ಬಿಲ್ಲನ್ನು ಮುಟ್ಟಲೂ ಆಗದೆ ಹೋದರು. ಎಲ್ಲ ದರ್ಪಿಷ್ಠರಾಜರೂ ಸೋತರು. ಅಂತಹ ಮಹಾಧನುಸ್ಸನ್ನು ಈ ರಾಜಕುಮಾರನ ಕೈಗೆ ಕೊಡುತ್ತಿದ್ದಾರಲ್ಲ! ಬಾಲಹಂಸವು ಎಲ್ಲಾದರೂ ಮಂದರಾಚಲವನ್ನು ಎತ್ತಬಲ್ಲದೇ? ಹೋಗಲಿ, ಜನಕ ಮಹಾರಾಜರಾದರೂ ಇದನ್ನು ತಪ್ಪಿಸಬಹುದಿತ್ತು. ಆದರೆ ಅವರ ಬುದ್ಧಿ-ಕೌಶಲ್ಯವೆಲ್ಲ ಉಡುಗಿಹೋಗಿದೆ. ವಿಧಿವಿಲಾಸವನ್ನು ಯಾರು ಬಲ್ಲರು? ಆಗ ಒಬ್ಬ ಚದುರೆ ಬಂದು ಮೆಲುದನಿಯಲ್ಲಿ ಹೇಳಿದಳು – ''ಮಹಾರಾಣಿ! ತೇಜಸ್ವಿಯರ ವಿಷಯದಲ್ಲಿ ವಯಸ್ಸನ್ನು ಎಣಿಸಬಾರದು. ಕುಂಭಸಂಭವನಾದ ಅಗಸ್ತ್ಯನೆಲ್ಲಿ? ವಿಶಾಲವಾದ ಮಹಾಸಮುದ್ರವೆಲ್ಲಿ? ಆದರೆ ಅವನು ಆ ಕಡಲನ್ನೇ ಕುಡಿದು ಲೋಕಪ್ರಸಿದ್ಧನಾದನು. ಸೂರ್ಯಮಂಡಲವೂ ನೋಡುವಾಗ ಸಣ್ಣದಿದ್ದರೂ, ಅದು ಉದಯವಾದ ಕೂಡಲೇ ಮೂರು ಲೋಕಗಳ ಕತ್ತಲೆ ಮಾಯವಾಗುವುದಿಲ್ಲವೇ? (ಚೌ/೧-೪)

**ದೋ – ಮಂತ್ರ ಪರಮ ಲಘು ಜಾಸು ಬಸ ಬಿಧಿ ಹರಿ ಹರ ಸುರ ಸರ್ಬ ।**
**ಮಹಾಮತ್ತ ಗಜರಾಜ ಕಹುँ ಬಸ ಕರ ಅಂಕುಸ ಖರ್ಬ ॥ ೨೫೬ ॥**

ಬ್ರಹ್ಮ, ವಿಷ್ಣು, ಮಹೇಶ್ವರ ಹಾಗೂ ಇತರ ದೇವತೆಗಳೂ ಕೂಡ ಸಣ್ಣ-ಸಣ್ಣ ಮಂತ್ರಗಳಿಗೆ ವಶರಾಗುವುದಿಲ್ಲವೇ? ಮಹಾನ್ ಮದಗಜವನ್ನು ಸಣ್ಣ ಅಂಕುಶ ನಿಯಂತ್ರಿಸುವುದಿಲ್ಲವೇ? (ದೋ/೨೫೬)

**ಚೌ – ಕಾಮ ಕುಸುಮ ಧನು ಸಾಯಕ ಲೀನ್ಹೆ । ಸಕಲ ಭುವನ ಅಪನೇಂ ಬಸ ಕೀನ್ಹೆ ॥**
**ದೇಬಿ ತಜಿಅ ಸಂಸಉ ಅಸ ಜಾನೀ । ಭಂಜಬ ಧನುಷು ರಾಮು ಸುನು ರಾನೀ ॥ ೧ ॥**
**ಸಖೀ ಬಚನ ಸುನಿ ಭೈ ಪರತೀತೀ । ಮಿಟಾ ಬಿಷಾದು ಬಢೀ ಅತಿ ಪ್ರೀತೀ ॥**
**ತಬ ರಾಮಹಿ ಬಿಲೋಕಿ ಬೈದೇಹೀ । ಸಭಯ ಹೃದಯಂ ಬಿನವತಿ ಜೆಹಿ ತೇಹೀ ॥ ೨ ॥**
**ಮನಹೀಂ ಮನ ಮನಾವ ಅಕುಲಾನೀ । ಹೋಹು ಪ್ರಸನ್ನ ಮಹೇಸ ಭವಾನೀ ॥**
**ಕರಹು ಸಫಲ ಆಪನಿ ಸೇವಕಾಈ । ಕರಿ ಹಿತು ಹರಹು ಚಾಪ ಗರುಆಈ ॥ ೩ ॥**
**ಗನನಾಯಕ ಬರದಾಯಕ ದೇವಾ । ಆಜು ಲಗೇಂ ಕೀನ್ಹಿಉಂ ತುಅ ಸೇವಾ ॥**
**ಬಾರ ಬಾರ ಬಿನತೀ ಸುನಿ ಮೋರೀ । ಕರಹು ಚಾಪ ಗುರುತಾ ಅತಿ ಥೋರೀ ॥ ೪ ॥**

ಕಾಮದೇವನು ಹೂವಿನ ಬಿಲ್ಲು-ಬಾಣಗಳಿಂದಲೇ ಸಕಲ ಭುವನಗಳನ್ನು ವಶಪಡಿಸಿಕೊಂಡಿದ್ದಾನೆ. ದೇವೀ! ಆದ್ದರಿಂದ ನೀವು ಸಂದೇಹವನ್ನು ತೊರೆಯಿರಿ. ಮಹಾರಾಣಿಯರೇ! ಕೇಳಿ. ಶ್ರೀರಾಮಚಂದ್ರನು ಖಂಡಿತವಾಗಿ ಧನುಸ್ಸನ್ನು ಮುರಿಯುತ್ತಾನೆ.'' ಸಖಿಯ ಮಾತು ಕೇಳಿ ರಾಣಿಗೆ ರಾಮಚಂದ್ರನ ಸಾಮರ್ಥ್ಯದ ಕುರಿತು ನಂಬಿಕೆ ಉಂಟಾಯಿತು. ವಿಷಾದವು ಹರಿದುಹೋಯಿತು. ಶ್ರೀರಾಮನ ಬಗೆಗೆ ಆಕೆಯ ಪ್ರೇಮ ಉಕ್ಕಿಹರಿಯಿತು. ಆಗ ಶ್ರೀರಾಮಚಂದ್ರನನ್ನು ನೋಡಿ ಸೀತೆಯು ವ್ಯಾಕುಲಚಿತ್ತಳಾಗಿ ಕಂಡಕಂಡ ದೇವರಿಗೆಲ್ಲ ಕೈಮುಗಿದು, ಮನದಲ್ಲೇ ಹರಕೆ ಹೊರುತ್ತಿದ್ದಳು – ''ಪಾರ್ವತೀ, ಪರಮೇಶ್ವರರೇ ನನಗೆ ಒಲಿಯಿರಿ. ನಾನು ಮಾಡಿದ ಸೇವೆಗೆ ಪ್ರಸನ್ನರಾಗಿ, ನನ್ನ ಮೇಲೆ ಕೃಪೆಗೈದು ಶಿವಧನುಸ್ಸಿನ ಭಾರವನ್ನು ತಗ್ಗಿಸಿಬಿಡಿ. 'ಓ ಗಣನಾಯಕಾ! ವರದಾಯಕಾ! ಇಂದಿನದಿನದ ನಿರೀಕ್ಷೆಯಲ್ಲೇ ನಿನ್ನನ್ನು ನಾನು ಸೇವಿಸುತ್ತಾ ಬಂದಿರುವೆನು. ನನ್ನ ಪ್ರಾರ್ಥನೆಯನ್ನು ಮನ್ನಿಸಿ ಧನುಸ್ಸಿನ ಭಾರವನ್ನು ಹಗುರಮಾಡು.'' (ಚೌ/೧-೪)

**ದೋ – ದೇಖಿ ದೇಖಿ ರಘುಬೀರ ತನ ಸುರ ಮನಾವ ಧರಿ ಧೀರ ।**
**ಭರೇ ಬಿಲೋಚನ ಪ್ರೇಮ ಜಲ ಪುಲಕಾವಲೀ ಸರೀರ ॥ ೨೫೭ ॥**

ಸೀತಾದೇವಿಯು ರಘುನಾಥನನ್ನು ನೋಡಿ-ನೋಡಿ ಧೈರ್ಯ ತಂದುಕೊಂಡು ಭಗವಾನ್ ಭಾಸ್ಕರನಿಗೆ ಹಾಗೂ ಇತರ ದೇವತೆಗಳಿಗೆ ಹರಕೆ ಹೊರುತ್ತಿದ್ದಳು. ಆಕೆಯ ಕಣ್ಣುಗಳಲ್ಲಿ ಪ್ರೇಮದ ಕಂಬನಿ ತುಂಬಿತ್ತು. ಶರೀರ ರೋಮಾಂಚಿತವಾಗಿತ್ತು. (ದೋ/೨೫೭)

**ಚೌ – ನೀಕೇಂ ನಿರಖಿ ನಯನ ಭರಿ ಸೋಭಾ । ಪಿತು ಪನು ಸುಮಿರಿ ಬಹುರಿ ಮನು ಛೋಭಾ ॥**
**ಅಹಹ ತಾತ ದಾರುನಿ ಹಠ ಠಾನೀ । ಸಮುಝತ ನಹಿಂ ಕಛು ಲಾಭು ನ ಹಾನೀ ॥ ೧ ॥**
**ಸಚಿವ ಸಭಯ ಸಿಖ ದೇಇ ನ ಕೋಈ । ಬುಧ ಸಮಾಜ ಬಡ ಅನುಚಿತ ಹೋಈ ॥**
**ಕಹಂ ಧನು ಕುಲಿಸಹು ಚಾಹಿ ಕಠೋರಾ । ಕಹಂ ಸ್ಯಾಮಲ ಮೃದುಗಾತ ಕಿಸೋರಾ ॥ ೨ ॥**
**ಬಿಧಿ ಕೆಹಿ ಭಾಂತಿ ಧರೌಂ ಉರ ಧೀರಾ । ಸಿರಸ ಸುಮನ ಕನ ಬೇಧಿಅ ಹೀರಾ ॥**
**ಸಕಲ ಸಭಾ ಕೈ ಮತಿ ಭೈ ಭೋರೀ । ಅಬ ಮೊಹಿ ಸಂಭುಚಾಪ ಗತಿ ತೋರೀ ॥ ೩ ॥**
**ನಿಜ ಜಡತಾ ಲೋಗನ್ಹ ಪರ ಡಾರೀ । ಹೋಹಿ ಹರುಅ ರಘುಪತಿಹಿ ನಿಹಾರೀ ॥**
**ಅತಿ ಪರಿತಾಪ ಸೀಯ ಮನ ಮಾಹೀಂ । ಲವ ನಿಮೇಶ ಜುಗ ಸಯ ಸಮ ಜಾಹೀಂ ॥ ೪ ॥**

ಚೆನ್ನಾಗಿ ಕಣ್ತುಂಬ ಶ್ರೀರಾಮನ ಚೆಲುವನ್ನು ವೀಕ್ಷಿಸಿ ಮತ್ತೆ ತಂದೆಯ ಪ್ರತಿಜ್ಞೆಯನ್ನು ನೆನೆದಾಗ ಸೀತೆಯ ಮನಸ್ಸು ಕ್ಷುಬ್ಧವಾಯಿತು. ಆಕೆ ಮನದಲ್ಲೇ ಮಿಡುಕತೊಡಗಿದಳು – ಅಯ್ಯೋ! ನನ್ನ ತಂದೆಯವರು ಎಂತಹ ದಾರುಣಹಟಕ್ಕೆ ಕಟ್ಟುಬಿದ್ದಿರುವರು. ಲಾಭನಷ್ಟಗಳ ಯೋಚನೆಯೇ ಅವರಿಗಿಲ್ಲ. ಅವರ ಮಂತ್ರಿಗಳೆಲ್ಲರೂ ಒಳ್ಳೆಯ ಬುದ್ಧಿಶಾಲಿಗಳೇ. ಆದರೆ ಹೆದರಿಕೆಯಿಂದಾಗಿ ಅವರು ರಾಜರಿಗೆ ಬುದ್ಧಿ ಹೇಳಲಾರರು. ಪಂಡಿತರಿರುವ ಈ ಸಭೆಯಲ್ಲಿ ಎಂತಹ ಅನುಚಿತ ನಡೆಯುತ್ತಿದೆ. ಕುಲಿಶ ಕಠೋರವಾದ ಕೋದಂಡವೆಲ್ಲಿ? ಕಿಶೋರಾವಸ್ಥೆಯಲ್ಲಿರುವ ಕೋಮಲಗಾತ್ರನಾದ ಈ ಶ್ಯಾಮಸುಂದರನೆಲ್ಲಿ? ಅಯ್ಯೋ ವಿಧಿಯೇ! ನಾನು ಹೃದಯದಲ್ಲಿ ಹೇಗೆ ಧೈರ್ಯ ತಂದುಕೊಳ್ಳಲಿ? ಶಿರೀಷ ಕುಸುಮದ ಕಣದಿಂದ ವಜ್ರವನ್ನು ಕತ್ತರಿಸಲಾದೀತೇ? ಇಡೀ ಸಭೆಗೆ ಮಂಕು ಬಡಿದಿದೆ. ಆದ್ದರಿಂದ ಎಲೈ ಶಂಭುಚಾಪವೇ! ಈಗ ನೀನೇ ನನಗೆ ದಿಕ್ಕು. ನೀನು ನಿನ್ನ ಜಡತ್ವವನ್ನು ಜನರಮೇಲೆ ಹಾಕಿ, ಶ್ರೀರಘುನಾಥನ ಕೋಮಲತ್ವವನ್ನು ಗಮನಿಸಿ, ಅಷ್ಟೇ ಹಗುರವಾಗಿ ಬಿಡು. ಈ ಪರಿ ಸೀತೆಯ ಮನಸ್ಸು ವ್ಯಾಕುಲವಾಗಿದೆ. ಕ್ಷಣದ ಒಂದೊಂದು ಕಣವೂ ನೂರು ಯುಗಗಳಂತೆ ಕಳೆಯುತ್ತಿವೆ. (ಚೌ/೧-೪)

**ದೋ – ಪ್ರಭುಹಿ ಚಿತಇ ಪುನಿ ಚಿತವ ಮಹಿ ರಾಜತ ಲೋಚನ ಲೋಲ ।**
**ಖೇಲತ ಮನಸಿಜಮೀನ ಜುಗ ಜನು ಬಿಧು ಮಂಡಲ ಡೋಲ ॥ ೨೫೮ ॥**

ಪ್ರಭು ರಾಮಚಂದ್ರನನ್ನು ನೋಡಿ ಮತ್ತೆ ನೆಲದತ್ತ ದಿಟ್ಟಿಸುತ್ತಿದ್ದ ಸೀತೆಯ ಚಂಚಲ ನಯನಗಳು ಚಂದ್ರಮಂಡಲವೆಂಬ ಬಾನಿಯಲ್ಲಿ ಕಾಮದೇವನ ಎರಡು ಮೀನುಗಳು ಕ್ರೀಡಿಸುತ್ತಿವೆಯೋ ಎಂಬಂತೆ ಕಂಗೊಳಿಸುತ್ತಿದ್ದವು. (ದೋ/೨೫೮)

**ಚೌ – ಗಿರಾ ಅಲಿನಿ ಮುಖ ಪಂಕಜ ರೋಕೀ । ಪ್ರಗಟ ನ ಲಾಜ ನಿಸಾ ಅವಲೋಕೀ ॥**
**ಲೋಚನ ಜಲು ರಹ ಲೋಚನ ಕೋನಾ । ಜೈಸೇಂ ಪರಮ ಕೃಪನ ಕರ ಸೋನಾ ॥ ೧ ॥**
**ಸಕುಚೀ ಬ್ಯಾಕುಲತಾ ಬಡಿ ಜಾನೀ । ಧರಿ ಧೀರಜು ಪ್ರತೀತಿ ಉರ ಆನೀ ॥**
**ತನ ಮನ ಬಚನ ಮೋರ ಪನು ಸಾಚಾ । ರಘುಪತಿ ಪದ ಸರೋಜ ಚಿತು ರಾಚಾ ॥ ೨ ॥**
**ತೌ ಭಗವಾನು ಸಕಲ ಉರ ಬಾಸೀ । ಕರಿಹಿ ಮೋಹಿ ರಘುಬರ ಕೈ ದಾಸೀ ॥**
**ಜೆಹಿ ಕೇಂ ಜೆಹಿ ಪರ ಸತ್ಯ ಸನೇಹೂ । ಸೋ ತೆಹಿ ಮಿಲಇ ನ ಕಛು ಸಂದೇಹೂ ॥ ೩ ॥**
**ಪ್ರಭು ತನ ಚಿತಇ ಪ್ರೇಮ ತನ ಠಾನಾ । ಕೃಪಾನಿಧಾನ ರಾಮ ಸಬು ಜಾನಾ ॥**
**ಸಿಯಹಿ ಬಿಲೋಕಿ ತಕೆಉ ಧನು ಕೈಸೇಂ । ಚಿತವ ಗರುರು ಲಘು ಬ್ಯಾಲಹಿ ಜೈಸೇಂ ॥ ೪ ॥**

ಸೀತೆಯ ಮಾತೆಂಬ ತುಂಬಿಯು ಆಕೆಯ ಮುಖರೂಪೀ ಕಮಲದಲ್ಲೇ ತಡೆದುಬಿಟ್ಟಿತು. ಲಜ್ಜೆಯ ರಾತ್ರಿಯನ್ನು ಕಂಡು ಅದು ಹೊರಗೆ ಬರುತ್ತಿರಲಿಲ್ಲ. ಲೋಭಿಯ ಸಂಪತ್ತು ಮನೆಯ ಮೂಲೆಯಲ್ಲಿ ಹುದುಗಿರುವಂತೆ, ಸೀತೆಯ ಕಂಬನಿಯು ಕಣ್ಣಿನ ತುದಿಯಲ್ಲೇ ನಿಂತುಬಿಟ್ಟಿತ್ತು. ಉಲ್ಬಣವಾದ ತನ್ನ ವ್ಯಾಕುಲತೆಯನ್ನು ಕಂಡು ಸೀತೆಯು ಸಂಕೋಚಗೊಂಡಳು. ಮತ್ತೆ ಧೈರ್ಯತಾಳಿ ಅಂದುಕೊಂಡಳು – ಮನಸಾ, ವಾಚಾ, ಕರ್ಮಣಾ ನನ್ನ ನಿಶ್ಚಯವು (ಮನೋರಥವು) ಧರ್ಮಬದ್ಧವಾಗಿದ್ದರೆ, ನಿಜವಾಗಿ ನನ್ನ ಮನಸ್ಸು ರಾಮಚಂದ್ರನ ಪಾದಪದ್ಮಗಳಲ್ಲಿ ಅಂಕಿತವಾಗಿದ್ದರೆ, ಎಲ್ಲರ ಹೃದಯದಲ್ಲಿ ವಾಸಿಸುವ ಭಗವಂತನು ನನ್ನನ್ನು ಖಂಡಿತವಾಗಿ ರಘುವರನ ದಾಸಿಯನ್ನಾಗಿ ಮಾಡಲಿ. ನಿಜವಾದ ಪ್ರೀತಿಯುಳ್ಳವರಿಗೆ ಪ್ರಿಯವಸ್ತುವು ಖಂಡಿತವಾಗಿ ದೊರೆಯುತ್ತದೆ. ಇದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ಅವಳು ಶ್ರೀರಾಮನತ್ತ ನೋಡಿ – ''ಈ ಶರೀರದಲ್ಲಿ ಪ್ರಾಣಗಳು ಇರುವುದಾದರೆ ಅವು ಇವನಿಗಾಗಿಯೇ ಇರುವವು. ಇಲ್ಲವಾದರೆ ಇಲ್ಲ'' ಎಂದು ನಿಶ್ಚಯಿಸಿಕೊಂಡಳು. ಕೃಪಾನಿಧಾನನಾದ ಶ್ರೀರಾಮನು ಎಲ್ಲ ವಿಷಯವನ್ನು ಗ್ರಹಿಸಿಕೊಂಡನು. ಅವನು ಸೀತೆಯನ್ನು ನೋಡಿ, ಬಳಿಕ ಗರುಡನು ಒಂದು ಸಣ್ಣದಾದ ಹಾವನ್ನು ನೋಡುವಂತೆ ಧನುಸ್ಸಿನತ್ತ ನೋಡಿದನು. (ಚೌ/೧-೪)

**ದೋ – ಲಖನ ಲಖೆಉ ರಘುಬಂಸಮನಿ ತಾಕೆಉ ಹರ ಕೋದಂಡು ।**
**ಪುಲಕಿ ಗಾತ ಬೋಲೇ ಬಚನ ಚರನ ಚಾಪಿ ಬ್ರಹ್ಮಾಂಡು ॥ ೨೫೯ ॥**

ರಘುಕುಲಮಣಿಯಾದ ಶ್ರೀರಾಮಚಂದ್ರನು ಶಂಭುಕೋದಂಡದತ್ತ ದೃಷ್ಟಿಬೀರಿದುದನ್ನು ಕಂಡು, ಲಕ್ಷ್ಮಣನು ಪುಲಕಿತನಾಗಿ ಬ್ರಹ್ಮಾಂಡವನ್ನು ಕಾಲಿನಿಂದ ಅದುಮಿ ಹೀಗೆ ನುಡಿದನು – (ದೋ/೨೫೯)

**ಚೌ – ದಿಸಿಕುಂಜರಹು ಕಮಠ ಅಹಿ ಕೋಲಾ । ಧರಹು ಧರನಿ ಧರಿ ಧೀರ ನ ಡೋಲಾ ॥**
**ರಾಮು ಚಹಹಿಂ ಸಂಕರ ಧನು ತೋರಾ । ಹೋಹು ಸಜಗ ಸುನಿ ಆಯಸು ಮೋರಾ ॥ ೧ ॥**
**ಚಾಪ ಸಮೀಪ ರಾಮು ಜಬ ಆಏ । ನರ ನಾರಿನ್ಹ ಸುರ ಸುಕೃತ ಮನಾಏ ॥**
**ಸಬ ಕರ ಸಂಸಉ ಅರು ಅಗ್ಯಾನೂ । ಮಂದ ಮಹೀಪನ್ಹ ಕರ ಅಭಿಮಾನೂ ॥ ೨ ॥**
**ಭೃಗುಪತಿ ಕೇರಿ ಗರಬ ಗರುಆಈ । ಸುರ ಮುನಿ ಬರನ್ಹ ಕೇರಿ ಕದರಾಈ ॥**
**ಸಿಯ ಕರ ಸೋಚು ಜನಕ ಪಛಿತಾವಾ । ರಾನಿನ್ಹ ಕರ ದಾರುನ ದುಖ ದಾವಾ ॥ ೩ ॥**
**ಸಂಭುಚಾಪ ಬಡ ಬೋಹಿತು ಪಾಈ । ಚಢೇ ಜಾಇ ಸಬ ಸಂಗು ಬನಾಈ ॥**
**ರಾಮ ಬಾಹುಬಲ ಸಿಂಧು ಅಪಾರೂ । ಚಹತ ಪಾರು ನಹಿಂ ಕೋಉ ಕಡಹಾರೂ ॥ ೪ ॥**

''ಎಲೈ ದಿಗ್ಗಜಗಳಿರಾ! ಭೂಮಿಯನ್ನು ಹೊತ್ತ ಆಮೆಯೇ! ಆದಿಶೇಷನೇ! ಆದಿವರಾಹನೇ! ಧೈರ್ಯದಿಂದ ಭೂಮಿಯನ್ನು ಹೊತ್ತುಕೊಂಡಿರಿ. ಅದು ಸಿಡಿದು ಹೋದೀತು. ಜೋಕೆ. ಶ್ರೀರಾಮಚಂದ್ರನು ಶಿವಧನುಸ್ಸನ್ನು ಮುರಿಯಲು ಬಯಸುತ್ತಿರುವನು. ನನ್ನ ಅಪ್ಪಣೆಯನ್ನು ಕೇಳಿ ಎಚ್ಚರಗೊಳ್ಳಿ.'' ಶ್ರೀರಾಮನು ಧನುಸ್ಸಿನ ಬಳಿಗೆ ಬಂದಾಗ ಅಲ್ಲಿದ್ದ ನರನಾರಿಯರೆಲ್ಲ ದೇವತೆಗಳ ಹಾಗೂ

ತಮ್ಮ-ತಮ್ಮ ಪುಣ್ಯವನ್ನು ಬೇಡಿಕೊಂಡರು. ಎಲ್ಲರ ಸಂದೇಹ, ಅಜ್ಞಾನ, ನೀಚರಾಜರ ದುರಭಿಮಾನ, ಪರಶುರಾಮರ ಗರ್ವದ ಗುರುತ್ವ, ಸುರಮುನಿವರರ ಕಾತರತೆ, ಸೀತೆಯ ಚಿಂತೆ, ಜನಕನ ಪಶ್ಚಾತ್ತಾಪ, ರಾಣಿಯರ ದಾರುಣ ದುಃಖದ ದಾವಾನಲ ಇವೆಲ್ಲ ಶಂಭುಚಾಪವೆಂಬ ದೊಡ್ಡ ಹಡಗನ್ನು ಗುಂಪುಕಟ್ಟಿಕೊಂಡು ಏರಿದ್ದವು. ಅವುಗಳು ರಾಮನ ಬಾಹುಬಲವೆಂಬ ಅಪಾರ ಸಾಗರವನ್ನು ದಾಟಬಯಸುತ್ತಿದ್ದವು. ಆದರೆ ಅಂಬಿಗನೇ ಇಲ್ಲ. (ಚೌ/೧-೪)

**ದೋ – ರಾಮ ಬಿಲೋಕೇ ಲೋಗ ಸಬ ಚಿತ್ರ ಲಿಖೇ ಸೇ ದೇಖಿ ।**
**ಚಿತಈ ಸೀಯ ಕೃಪಾಯತನ ಜಾನೀ ಬಿಕಲ ಬಿಸೇಷಿ ॥ ೨೬೦ ॥**

ಶ್ರೀರಾಮನು ಅಲ್ಲಿ ನೆರೆದ ಜನರತ್ತ ನೋಡಿದಾಗ, ಅವರು ಬರೆದ ಚಿತ್ರಾರದಂತೆ ಕಂಡರು. ಮತ್ತೆ ಕೃಪಾನಿಧಾನನು ಸೀತೆಯ ಕಡೆಗೆ ನೋಡಿದನು. ಆಕೆ ವಿಶೇಷವಾಗಿ ವ್ಯಾಕುಲಳಾಗಿರುವುದನ್ನು ತಿಳಿದನು. (ದೋ/೨೬೦)

**ಚೌ – ದೇಖೀ ಬಿಪುಲ ಬಿಕಲ ಬೈದೇಹೀ । ನಿಮಿಷ ಬಿಹಾತ ಕಲಪ ಸಮ ತೇಹೀ ॥**
**ತೃಷಿತ ಬಾರಿ ಬಿನು ಜೋ ತನು ತ್ಯಾಗಾ । ಮುಏಁ ಕರಇ ಕಾ ಸುಧಾ ತಡಾಗಾ ॥ ೧ ॥**
**ಕಾ ಬರಷಾ ಸಬ ಕೃಷೀ ಸುಖಾನೇಁ । ಸಮಯ ಚುಕೇಁ ಪುನಿ ಕಾ ಪಛಿತಾನೇಁ ॥**
**ಅಸ ಜಿಯಁ ಜಾನಿ ಜಾನಕೀ ದೇಖೀ । ಪ್ರಭು ಪುಲಕೇ ಲಖಿ ಪ್ರೀತಿ ಬಿಸೇಷೀ ॥ ೨ ॥**
**ಗುರಹಿ ಪ್ರನಾಮು ಮನಹಿಁ ಮನ ಕೀನ್ಹಾ । ಅತಿ ಲಾಘವಁ ಉಠಾಇ ಧನು ಲೀನ್ಹಾ ॥**
**ದಮಕೆಉ ದಾಮಿನಿ ಜಿಮಿ ಜಬ ಲಯಊ । ಪುನಿ ನಭ ಧನು ಮಂಡಲ ಸಮ ಭಯಊ ॥ ೩ ॥**
**ಲೇತ ಚಢಾವತ ಖೈಂಚತ ಗಾಢೇಁ । ಕಾಹುಁ ನ ಲಖಾ ದೇಖ ಸಬು ಠಾಢೇಁ ॥**
**ತೇಹಿ ಛನ ರಾಮ ಮಧ್ಯ ಧನು ತೋರಾ । ಭರೇ ಭುವನ ಧುನಿ ಘೋರ ಕಠೋರಾ ॥ ೪ ॥**

ಸೀತಾದೇವಿಯು ಹೆಚ್ಚಾದ ವ್ಯಾಕುಲಿತಳಾಗಿರುವುದನ್ನು ಗ್ರಹಿಸಿದನು. ಅವಳಿಗೆ ಒಂದೊಂದು ಕ್ಷಣವು ಕಲ್ಪದಂತೆ ಅನಿಸುತ್ತಿತ್ತು. ಬಾಯಾರಿದವನು ನೀರಿಲ್ಲದೆ ಪ್ರಾಣಬಿಟ್ಟ ಮೇಲೆ ಅಮೃತದ ಕೆರೆಯೇ ಸಿಕ್ಕಿದರೂ ಏನು ಮಾಡೀತು? ಪೈರೆಲ್ಲ ಒಣಗಿಹೋದಮೇಲೆ ಮಳೆಬಂದರೆ ಏನು ಪ್ರಯೋಜನ? ಸಮಯ ಕಳೆದುಹೋದ ಬಳಿಕ ಪಶ್ಚಾತ್ತಾಪಪಟ್ಟರೆ ಏನು ಲಾಭ? ಈ ವಿಧವಾಗಿ ಆಲೋಚಿಸಿ, ಶ್ರೀರಾಮನು ಸೀತಾದೇವಿಯತ್ತ ನೋಡಿದ. ಆಕೆಯ ಪ್ರೇಮವಿಶೇಷವನ್ನು ಕಂಡು ಅವನು ಪುಲಕಿತನಾದನು. ಮನಸ್ಸಿನಲ್ಲೇ ಗುರುವನ್ನು ವಂದಿಸಿದನು. ಮತ್ತೆ ಅತಿ ಉತ್ಸಾಹದಿಂದ ಧನುಸ್ಸನ್ನು ಎತ್ತಿದನು. ಅದನ್ನು ಹಿಡಿದುಕೊಳ್ಳುತ್ತಲೇ ಅದು ಮಿಂಚಿನಂತೆ ಪ್ರಕಾಶಿಸಿತು. ಆಕಾಶದಲ್ಲಿನ ವಿದ್ಯುದ್ವಲಯದಂತೆ ಏರ್ಪಟ್ಟಿತು. ಶ್ರೀರಾಮನು ಧನುಸ್ಸನ್ನು ಕೈಗೆತ್ತಿಕೊಂಡದ್ದಿರಲೀ, ಹೆದೆಯೇರಿಸಿದುದಿರಲೀ, ಜೋರಾಗಿ ಎಳೆದುದಾಗಲೀ, ಯಾರ ಕಣ್ಣಿಗೂ ಬೀಳಲಿಲ್ಲ. ಅಂದರೆ ಅಷ್ಟು ವೇಗವಾಗಿ ಆ ಕ್ರಿಯೆ ನಡೆದುಹೋಯಿತು. ಶ್ರೀರಾಮನು ಧನುಸ್ಸನ್ನು ಎಳೆದುಹಿಡಿದು ನಿಂತಿರುವುದನ್ನು ಮಾತ್ರ ಎಲ್ಲರೂ ಗಮನಿಸಿದರು. ಆಗಲೇ ಶ್ರೀರಾಮನು ಧನುಸ್ಸನ್ನು ಮಧ್ಯದಲ್ಲಿ ಮುರಿದುಹಾಕಿದನು. ಧನುರ್ಭಂಗದ ಕಠೋರ ಭಯಂಕರಧ್ವನಿಯು ಮೂರುಲೋಕಗಳಲ್ಲಿ ತುಂಬಿಹೋಯಿತು. (ಚೌ/೧-೪)

**ಛಂ – ಭರೆ ಭುವನ ಘೋರ ಕಠೋರ ರವ ರಬಿ ಬಾಜಿ ತಜಿ ಮಾರಗು ಚಲೇ ।**
**ಚಿಕ್ಕರಹಿಁ ದಿಗ್ಗಜ ಡೋಲ ಮಹಿ ಅಹಿ ಕೋಲ ಕೂರುಮ ಕಲಮಲೇ ॥**
**ಸುರ ಅಸುರ ಮುನಿ ಕರ ಕಾನ ದೀನ್ಹೇಁ ಸಕಲ ಬಿಕಲ ಬಿಚಾರಹೀಁ ।**
**ಕೋದಂಡ ಖಂಡೆಉ ರಾಮ ತುಲಸೀ ಜಯತಿ ಬಚನ ಉಚಾರಹೀಁ ॥**

ಘೋರವಾದ ಆ ಕಠೋರ ಶಬ್ದವು ಸಮಸ್ತಲೋಕಗಳಲ್ಲಿ ಪ್ರತಿಧ್ವನಿಸಿತು. ಸೂರ್ಯನ ರಥದ ಕುದುರೆಗಳು ದಾರಿತಪ್ಪಿ ನಡೆದವು. ದಿಗ್ಗಜಗಳು ಘೀಳಿಡತೊಡಗಿದವು. ಭೂಮಿ ಕಂಪಿಸಿತು. ಆದಿಶೇಷ, ವರಾಹ, ಕಚ್ಛಪಗಳು ಕಳವಳಗೊಂಡರು. ದೇವತೆಗಳು, ರಾಕ್ಷಸರು, ಮುನಿಗಳು ತಮ್ಮ ಕಿವಿಗಳನ್ನು ಮುಚ್ಚಿಕೊಂಡು ಇದೆಂತಹ ಘೋರಧ್ವನಿ ಎಂದು ವಿಚಾರಮಗ್ನರಾದರು. ಶ್ರೀರಾಮನು ಶಿವನ ಬಿಲ್ಲನ್ನು ಮುರಿದನು ಎಂದು ನಿಚ್ಚಳವಾದ ಮೇಲೆ ಎಲ್ಲರೂ ಜಯ-ಜಯಕಾರ ಧ್ವನಿಗೈದರು, ಎಂದು ತುಳಸೀದಾಸರು ಹೇಳುತ್ತಿದ್ದಾರೆ. (ಛಂದ)

**ಸೋ – ಸಂಕರ ಚಾಪು ಜಹಾಜು ಸಾಗರು ರಘುಬರ ಬಾಹುಬಲು ।**
**ಬೂಡ ಸೋ ಸಕಲ ಸಮಾಜು ಚಢಾ ಜೊ ಪ್ರಥಮಹಿಁ ಮೋಹ ಬಸ ॥ ೨೬೧ ॥**

ಶ್ರೀರಾಮಚಂದ್ರನ ಅಪಾರ ಭುಜಬಲವೇ ಸಮುದ್ರವು. ಶಂಕರನ ಚಾಪವೇ ಹಡಗು. ಅಜ್ಞಾನಾದಿ ಕಾರಣಗಳಿಂದ ಈ ಹಡಗನ್ನು ಆಶ್ರಯಿಸಿದವರೆಲ್ಲರೂ, ಧನುರ್ಭಂಗದಿಂದಾಗಿ ಶ್ರೀರಾಮನ ಪರಾಕ್ರಮವೆಂಬ ಸಮುದ್ರದಲ್ಲಿ ಮುಳುಗಿಹೋದರು. (ಸೋ/೨೬೧)

**ಚೌ – ಪ್ರಭು ದೋಉ ಚಾಪಖಂಡ ಮಹಿ ಡಾರೇ। ದೇಖಿ ಲೋಗ ಸಬ ಭಏ ಸುಖಾರೇ॥**
**ಕೌಸಿಕರೂಪ ಪಯೋನಿಧಿ ಪಾವನ। ಪ್ರೇಮ ಬಾರಿ ಅವಗಾಹು ಸುಹಾವನ ॥ ೧ ॥**
**ರಾಮರೂಪ ರಾಕೇಸು ನಿಹಾರೀ। ಬಢತ ಬೀಚಿ ಪುಲಕಾವಲಿ ಭಾರೀ॥**
**ಬಾಜೇ ನಭ ಗಹಗಹೇ ನಿಸಾನಾ। ದೇವಬಧೂ ನಾಚಹಿಂ ಕರಿ ಗಾನಾ ॥ ೨ ॥**
**ಬ್ರಹ್ಮಾದಿಕ ಸುರ ಸಿದ್ಧ ಮುನೀಸಾ। ಪ್ರಭುಹಿ ಪ್ರಸಂಸಹಿಂ ದೇಹಿಂ ಅಸೀಸಾ ॥**
**ಬರಿಸಹಿಂ ಸುಮನ ರಂಗ ಬಹು ಮಾಲಾ। ಗಾವಹಿಂ ಕಿನ್ನರ ಗೀತ ರಸಾಲಾ ॥ ೩ ॥**
**ರಹೀ ಭುವನ ಭರಿ ಜಯ ಜಯ ಬಾನೀ। ಧನುಷಭಂಗ ಧುನಿ ಜಾತ ನ ಜಾನೀ ॥**
**ಮುದಿತ ಕಹಹಿಂ ಜಹಂ ತಹಂ ನರ ನಾರೀ। ಭಂಜೆಉ ರಾಮ ಸಂಭುಧನು ಭಾರೀ॥ ೪ ॥**

ಶ್ರೀರಾಮಚಂದ್ರನು ಧನುಸ್ಸಿನ ಎರಡೂ ತುಂಡುಗಳನ್ನು ನೆಲಕ್ಕೆಸೆದನು. ಇದನ್ನು ಕಂಡ ಜನರೆಲ್ಲರೂ ಸಂತೋಷದಲ್ಲಿ ಮುಳುಗಿಹೋದರು. ವಿಶ್ವಾಮಿತ್ರರೆಂಬ ಒಂದು ಪವಿತ್ರವಾದ ಸಾಗರವು. ಅವರ ವಾತ್ಸಲ್ಯವೇ ಸುಂದರವೂ, ಅಗಾಧವೂ ಆದ ನೀರು. ಚಂದ್ರನನ್ನು ನೋಡಿ ಸಮುದ್ರದ ಅಲೆಗಳು ಉಕ್ಕುವಂತೆ, ಶ್ರೀರಾಮನ ಮುಖಚಂದ್ರವನ್ನು ನೋಡಿ, ಅಲ್ಲಿದ್ದವರ ಶರೀರಗಳು ಪುಳಕಗೊಂಡವು. ಆಗಸದಲ್ಲಿ ಜೋರಾಗಿ ನಗಾರಿಗಳು ಉಲಿಯತೊಡಗಿದವು. ದೇವಾಂಗನೆಯರು ಗಾನಮಾಡುತ್ತಾ ನರ್ತಿಸತೊಡಗಿದರು. ಬ್ರಹ್ಮಾದಿ ದೇವತೆಗಳೂ, ಸಿದ್ಧರೂ, ಮುನೀಶ್ವರರೂ ಪ್ರಭುವನ್ನು ಪ್ರಶಂಸಿಸುತ್ತಾ ಮಂಗಳಾಶಾಸನಗಳನ್ನು ಹಾಡಿದರು. ಅವರು ರಂಗು-ರಂಗಿನ ಹೂವುಗಳು ಹಾಗೂ ಮಾಲೆಗಳನ್ನು ಮಳೆಗರೆಯತೊಡಗಿದರು. ಕಿನ್ನರರು ಸರಸ ಗೀತಗಳನ್ನು ಹಾಡತೊಡಗಿದರು. ಚತುರ್ದಶ ಭುವನಗಳಲ್ಲಿ ಜಯ-ಜಯಕಾರದ ಧ್ವನಿಯು ಹಬ್ಬಿತು. ಅದರ ನಡುವೆ ಧನುಸ್ಸು ಮುರಿದ ಶಬ್ದದ ಪ್ರತಿಧ್ವನಿಯು ಯಾವಾಗ ವಿಲೀನವಾಯಿತೆಂಬುದೂ ಯಾರಿಗೂ ತಿಳಿಯಲಿಲ್ಲ. ಅಲ್ಲಲ್ಲಿ ಸ್ತ್ರೀಪುರುಷರು ಮೈಯುಬ್ಬಿ 'ಶ್ರೀರಾಮನು ಶಿವಧನುಸ್ಸನ್ನು ಮುರಿದನು' ಎಂದು ಆಡಿಕೊಳ್ಳುತ್ತಿದ್ದರು. (ಚೌ/೧-೪)

**ದೋ – ಬಂದೀ ಮಾಗಧ ಸೂತಗನ ಬಿರುದ ಬದಹಿಂ ಮತಿಧೀರ।**
**ಕರಹಿಂ ನಿಛಾವರಿ ಲೋಗ ಸಬ ಹಯ ಗಯ ಧನ ಮನಿ ಚೀರ ॥ ೨೬೨ ॥**

ಧೀರಮತಿಗಳಾದ ವಂದಿ ಮಾಗಧರು, ಸೂತರು ಶ್ರೀರಾಮಚಂದ್ರನ ಬಿರುದುಗಳನ್ನು ಉಗ್ಗಡಿಸುತ್ತಿದ್ದರು. ಎಲ್ಲ ಜನರು ಆನೆ, ಕುದುರೆ, ಧನ, ರತ್ನ, ವಸ್ತ್ರ ಇವುಗಳನ್ನು ಉಡುಗೊರೆಯಾಗಿ ಅರ್ಪಿಸಿದರು. (ದೋ/೨೬೨)

**ಚೌ – ಝಾಂಝಿ ಮೃದಂಗ ಸಂಖ ಸಹನಾಈ। ಭೇರಿ ಢೋಲ ದುಂದುಭೀ ಸುಹಾಈ ॥**
**ಬಾಜಹಿಂ ಬಹು ಬಾಜನೇ ಸುಹಾಏ। ಜಹಂ ತಹಂ ಜುಬತಿನ್ಹ ಮಂಗಲ ಗಾಏ ॥ ೧ ॥**
**ಸಖಿನ್ಹ ಸಹಿತ ಹರಷೀ ಅತಿ ರಾನೀ। ಸೂಖತ ಧಾನ ಪರಾ ಜನು ಪಾನೀ॥**
**ಜನಕ ಲಹೆಉ ಸುಖು ಸೋಚು ಬಿಹಾಈ। ಪೈರತ ಥಕೇಂ ಥಾಹ ಜನು ಪಾಈ ॥ ೨ ॥**
**ಶ್ರೀಹತ ಭಏ ಭೂಪ ಧನು ಟೂಟೇ। ಜೈಸೇಂ ದಿವಸ ದೀಪ ಛಬಿ ಛೂಟೇ ॥**
**ಸೀಯ ಸುಖಹಿ ಬರನಿಅ ಕೆಹಿ ಭಾಂತೀ। ಜನು ಚಾತಕೀ ಪಾಇ ಜಲು ಸ್ವಾತೀ॥ ೩ ॥**
**ರಾಮಹಿ ಲಖನು ಬಿಲೋಕತ ಕೈಸೇಂ। ಸಸಿಹಿ ಚಕೋರ ಕಿಸೋರಕು ಜೈಸೇಂ ॥**
**ಸತಾನಂದ ತಬ ಆಯಸು ದೀನ್ಹಾ। ಸೀತಾಂ ಗಮನು ರಾಮ ಪಹಿಂ ಕೀನ್ಹಾ॥ ೪ ॥**

ತಾಳ, ಮೃದಂಗ, ಶಂಖ, ನಾದಸ್ವರ, ಡೋಲು, ಮನೋಹರವಾದ ನಗಾರಿಗಳೇ ಮುಂತಾದ ಅನೇಕ ಪ್ರಕಾರದ ವಾದ್ಯಗಳು ಮೊಳಗಿದವು. ಯುವತಿಯರು ಮಂಗಳ ಗೀತಗಳನ್ನು, ಸೋಬಾನೆಗಳನ್ನು ಹಾಡುತ್ತಿದ್ದಾರೆ. ಒಣಗುತ್ತಿದ್ದ ಭತ್ತದ ಪೈರಿಗೆ ಮಳೆಬಂದಂತೆ, ತನ್ನ ಸಖಿಯರ ಸಹಿತ ಮಹಾರಾಣಿಯು ಹರ್ಷಗೊಂಡಳು. ಈಜುತ್ತಾ-ಈಜುತ್ತಾ ಬಳಲಿದವನಿಗೆ ನೆಲೆಸಿಕ್ಕಿದಂತೆ, ಜನಕ ಮಹಾರಾಜನು ತನ್ನ ಚಿಂತೆಯನ್ನು ತೊರೆದು ಸುಖಿಯಾದನು. ಸೂರ್ಯೋದಯದಿಂದ ದೀಪವು ಮಂಕಾಗುವಂತೆ, ಧನುರ್ಭಂಗದಿಂದ ರಾಜರ ಮುಖಗಳು ನಿಸ್ತೇಜವಾದವು. ಸೀತಾದೇವಿಯ ಆನಂದಕ್ಕೆ ಪಾರವೇ ಇರಲಿಲ್ಲ. ಚಾತಕ ಪಕ್ಷಿಗೆ ಸ್ವಾತಿಯ ನೀರು ದೊರೆತಂತೆ ಸೀತೆಯು ತೃಪ್ತಳಾದಳು. ಲಕ್ಷ್ಮಣನು ಶ್ರೀರಾಮಚಂದ್ರನನ್ನು ಮರಿಚಕೋರವು ಚಂದ್ರನನ್ನು

ನೋಡುತ್ತಿರುವಂತೆ ನೆಟ್ಟನೋಟದಿಂದ ನೋಡುತ್ತಿದ್ದನು. ಆಗ ಶತಾನಂದರ ಆಜ್ಞೆಯಂತೆ ಸೀತೆಯು ಶ್ರೀರಾಮನ ಬಳಿಗೆ ತೆರಳಿದಳು. (ಚೌ/೧-೪)

**ದೋ – ಸಂಗ ಸಖೀಂ ಸುಂದರ ಚತುರ ಗಾವಹಿಂ ಮಂಗಲಚಾರ ।**
**ಗವನೀ ಬಾಲ ಮರಾಲ ಗತಿ ಸುಷಮಾ ಅಂಗ ಅಪಾರ ॥ ೨೬೩ ॥**

ರೂಪವತಿಯರೂ, ಚತುರರೂ ಆದ ಸಖಿಯರು ಅವಳೊಂದಿಗೆ ನಡೆಯುತ್ತಾ ಮಂಗಳ ಗೀತೆಗಳನ್ನು ಹಾಡುತ್ತಿದ್ದರು. ಸೀತೆಯು ಬಾಲಮರಾಳದ ಗಮನದಂತೆ ನಡೆಯುತ್ತಿದ್ದಳು. ಅವಳ ಅಂಗಾಂಗಗಳಲ್ಲಿ ಅಪಾರವಾದ ಸೌಂದರ್ಯ ಶೋಭೆಯು ತುಂಬಿತ್ತು. (ದೋ/೨೬೩)

**ಚೌ – ಸಖಿನ್ಹ ಮಧ್ಯ ಸಿಯ ಸೋಹತಿ ಕೈಸೇಂ । ಛಬಿಗನ ಮಧ್ಯ ಮಹಾಛಬಿ ಜೈಸೇಂ ॥**
**ಕರ ಸರೋಜ ಜಯಮಾಲ ಸುಹಾಈ । ಬಿಸ್ವ ಬಿಜಯ ಸೋಭಾ ಜೆಹಿಂ ಛಾಈ ॥ ೧ ॥**
**ತನ ಸಕೋಚು ಮನ ಪರಮ ಉಛಾಹೂ । ಗೂಢ ಪ್ರೇಮು ಲಖಿ ಪರಈ ನ ಕಾಹೂ ॥**
**ಜಾಇ ಸಮೀಪ ರಾಮ ಛಬಿ ದೇಖೀ । ರಹಿ ಜನು ಕುಅँರಿ ಚಿತ್ರ ಅವರೇಖೀ ॥ ೨ ॥**
**ಚತುರ ಸಖೀಂ ಲಖಿ ಕಹಾ ಬುಝಾಈ । ಪಹಿರಾವಹು ಜಯಮಾಲ ಸುಹಾಈ ॥**
**ಸುನತ ಜುಗಲ ಕರಮಾಲ ಉಠಾಈ । ಪ್ರೇಮ ಬಿಬಸ ಪಹಿರಾಈ ನ ಜಾಈ ॥ ೩ ॥**
**ಸೋಹತ ಜನು ಜುಗ ಜಲಜ ಸನಾಲಾ । ಸಸಿಹಿ ಸಭೀತ ದೇತ ಜಯಮಾಲಾ ॥**
**ಗಾವಹಿಂ ಛಬಿ ಅವಲೋಕಿ ಸಹೇಲೀ । ಸಿಯँ ಜಯಮಾಲ ರಾಮ ಉರ ಮೇಲೀ ॥ ೪ ॥**

ಸೌಂದರ್ಯರಾಶಿಗಳ ಮಧ್ಯದಲ್ಲಿ ಮಹಾಸೌಂದರ್ಯರಾಶಿಯಂತೆ ಸೀತಾದೇವಿಯು ಸಖಿಯರ ನಡುವೆ ಶೋಭಿಸುತ್ತಿದ್ದಳು. ಅವಳು ಕರಕಮಲಗಳಲ್ಲಿ ಸೌಂದರ್ಯದಿಂದ ಕೂಡಿದ ವಿಶ್ವವಿಜಯನಿ ಸುಂದರ 'ಜಯಮಾಲೆ' ಧರಿಸಿದ್ದಳು. ಆಕೆಯ ಶರೀರವು ನಾಚಿಕೆಯಿಂದ ಸಂಕೋಚಗೊಂಡಿದ್ದರೂ, ಮನಸ್ಸು ಪರಮಾನಂದಭರಿತವಾಗಿದೆ. ಸೀತೆಯ ಮನೋನುರಾಗವು ಯಾರಿಗೂ ತಿಳಿಯದೆ ಹೋಯಿತು. ಶ್ರೀರಾಮನ ಬಳಿಗೆ ಹೋಗಿ ಅವನ ಚೆಲುವನ್ನು ವೀಕ್ಷಿಸಿ ಸೀತೆಯು ಮುಗ್ಧಳಾಗಿ ಬರೆದ ಚಿತ್ತಾರದಂತೆ ನಿಶ್ಚಲವಾಗಿ ನಿಂತುಬಿಟ್ಟಳು. ಆಕೆಯ ತನ್ಮಯ ಸ್ಥಿತಿಯನ್ನು ಗಮನಿಸಿದ ಓರ್ವಸಖಿಯು – ''ಅಮ್ಮಾ! ಚೆಲುವಾದ ಜಯಮಾಲೆಯನ್ನು ಶ್ರೀರಾಮನ ಕೊರಳಿಗೆ ತೊಡಿಸು.'' ಎಂದು ಹೇಳಿದಳು. ಅದನ್ನು ಕೇಳಿದ ಸೀತೆಯು ಎರಡೂ ಕರಗಳಿಂದ ಮಾಲೆಯನ್ನು ಎತ್ತಿಕೊಂಡಳು; ಆದರೆ ಪ್ರೇಮವಿವಶಳಾಗಿ ಅದನ್ನು ರಾಮನ ಕೊರಳಿಗೆ ಹಾಕದಾದಳು. ಆಗ ಆಕೆಯ ಕೈಗಳು – ದಂಟಿನೊಡನಿದ್ದ ಎರಡು ಕಮಲಗಳು ಚಂದ್ರಮನಿಗೆ ಅಂಜುತ್ತಾ ಜಯಮಾಲೆ ನೀಡುತ್ತಿರುವಂತೆ ಕಂಗೊಳಿಸಿದವು. ಕಣ್ಣುಗಳಿಗೆ ಹಬ್ಬದಂತಿರುವ ಈ ಮನೋಜ್ಞದೃಶ್ಯವನ್ನು ನೋಡಿ, ಸಖಿಯರು ಪುನಃ ಹಾಡತೊಡಗಿದರು. ಆಗ ಸೀತಾದೇವಿಯು ಶ್ರೀರಾಮನ ಕೊರಳಿಗೆ ಜಯ (ವರ) ಮಾಲೆಯನ್ನು ತೊಡಿಸಿದಳು. (ಚೌ/೧-೪)

**ಸೋ – ರಘುಬರ ಉರ ಜಯಮಾಲ ದೇಖಿ ದೇವ ಬರಿಸಹಿಂ ಸುಮನ ।**
**ಸಕುಚೇ ಸಕಲ ಭುಆಲ ಜನು ಬಿಲೋಕಿ ರಬಿ ಕುಮುದಗನ ॥ ೨೬೪ ॥**

ಶ್ರೀರಾಮನ ಕಂಠದಲ್ಲಿ ಜಯ (ವರ) ಮಾಲೆಯನ್ನು ಕಂಡು, ದೇವತೆಗಳು ಹೂ ಮಳೆಗರೆಯತೊಡಗಿದರು. ಸೂರ್ಯೋದಯವಾಗುತ್ತಲೇ ಕನ್ನೈದಿಲೆಗಳು ಮುದುಡುವಂತೆ ಎಲ್ಲ ರಾಜರ ಮುಖಗಳು ಬಾಡಿಹೋದುವು. (ದೋ/೨೬೪)

**ಚೌ – ಪುರ ಅರು ಬ್ಯೋಮ ಬಾಜನೇ ಬಾಜೇ । ಖಲ ಭಏ ಮಲಿನ ಸಾಧು ಸಬ ರಾಜೇ ॥**
**ಸುರ ಕಿನ್ನರ ನರ ನಾಗ ಮುನೀಸಾ । ಜಯ ಜಯ ಜಯ ಕಹಿ ದೇಹಿಂ ಅಸೀಸಾ ॥ ೧ ॥**
**ನಾಚಹಿಂ ಗಾವಹಿಂ ಬಿಬುಧ ಬಧೂಟೀಂ । ಬಾರ ಬಾರ ಕುಸುಮಾಂಜಲಿ ಛೂಟೀಂ ॥**
**ಜಹँ ತಹँ ಬಿಪ್ರ ಬೇದಧುನಿ ಕರಹೀಂ । ಬಂದೀ ಬಿರಿದಾವಲಿ ಉಚ್ಚರಹೀಂ ॥ ೨ ॥**
**ಮಹಿ ಪಾತಾಲ ನಾಕ ಜಸು ಬ್ಯಾಪಾ । ರಾಮ ಬರೀ ಸಿಯ ಭಂಜೆಉ ಚಾಪಾ ॥**
**ಕರಹೀಂ ಆರತೀ ಪುರ ನರ ನಾರೀ । ದೇಹಿಂ ನಿಛಾವರಿ ಬಿತ್ತ ಬಿಸಾರೀ ॥ ೩ ॥**
**ಸೋಹತಿ ಸೀಯ ರಾಮ ಕೈ ಜೋರೀ । ಛಬಿ ಸಿಂಗಾರೂ ಮನಹुँ ಏಕ ಠೋರೀ ॥**
**ಸಖೀಂ ಕಹಹಿಂ ಪ್ರಭುಪದ ಗಹು ಸೀತಾ । ಕರತಿ ನ ಚರನ ಪರಸ ಅತಿ ಭೀತಾ ॥ ೪ ॥**

ನಗರದಲ್ಲಿ, ನಭದಲ್ಲಿ ವಾದ್ಯಗಳು ಭೋರ್ಗರೆದವು. ದುಷ್ಟರು ದುಃಖಿತರಾದರು. ಸಜ್ಜನರು ಹಿಗ್ಗಿದರು. ಸುರರು, ಕಿನ್ನರರು, ನರರು, ನಾಗರು, ಮುನಿಗಳೂ ''ಜಯವಾಗಲೀ, ಜಯವಾಗಲೀ'' ಎಂದು ಆಶೀರ್ವದಿಸುತ್ತಿದ್ದಾರೆ. ದೇವವಧುಗಳು ಹಾಡುತ್ತಾ ನರ್ತನಮಾಡುತ್ತಿದ್ದರು. ಅವರ ಕೈಗಳಿಂದ ಕುಸುಮಾಂಜಲಿಗಳು ಮತ್ತೆ ಮತ್ತೆ ಸುರಿಯುತ್ತಿದ್ದವು. ವಿಪ್ರರು ವೇದಘೋಷ ಮಾಡುತ್ತಿದ್ದರು. ಹೊಗಳುಭಟ್ಟರು ಬಿರುದಾವಳಿಗಳನ್ನು ಉಗ್ಗಡಿಸುತ್ತಿದ್ದರು. ''ಶ್ರೀರಾಮನು ಶಿವಧನುಸ್ಸನ್ನು ಮುರಿದ, ಸೀತೆಯನ್ನು ವರಿಸಿದ'' ಎಂಬ ಯಶೋವಾರ್ತೆ ತ್ರಿಭುವನಗಳಲ್ಲಿ ಹಬ್ಬಿತು. ನಗರದ ನರನಾರಿಯರು ಆರತಿ ಎತ್ತಿದರು. ಅವರು ತಮ್ಮ ಶಕ್ತಿಮೀರಿ ಕಾಣಿಕೆಗಳನ್ನು ಅರ್ಪಿಸಿದರು.

ಸೀತಾರಾಮರ ಜೋಡಿಯು ಸೌಂದರ್ಯ ಮತ್ತು ಶೃಂಗಾರರಸ ಒಂದೆಡೆ ಸೇರಿದಂತೆ ಶೋಭಿಸುತ್ತಿತ್ತು. ಸಖಿಯರು ಹೇಳುತ್ತಿದ್ದರು.– ''ಸೀತೇ! ನೀನು ಪ್ರಭುವಿನ ಪಾದಮುಟ್ಟಿ ವಂದಿಸು.'' ಆದರೆ ಸೀತಾದೇವಿಯು ಅವನ ಕಾಲುಗಳನ್ನು ಮುಟ್ಟಲು ಭಯಪಡುತ್ತಿರುವಳು. (ಚೌ/೧-೪)

**ದೋ – ಗೌತಮ ತಿಯ ಗತಿ ಸುರತಿ ಕರಿ ನಹಿಂ ಪರಸತಿ ಪಗ ಪಾನಿ ।**
**ಮನ ಬಿಹಸೇ ರಘುಬಂಸಮನಿ ಪ್ರೀತಿ ಅಲೌಕಿಕ ಜಾನಿ ॥ ೨೬೫ ॥**

ಗೌತಮಸತಿ ಅಹಲ್ಯೆಗಾದ ಗತಿಯನ್ನು ನೆನೆದು ಸೀತೆಯು ಶ್ರೀರಾಮನ ಚರಣಗಳನ್ನು ಕೈಯಿಂದ ಸ್ಪರ್ಶಿಸುತ್ತಿಲ್ಲ. ಸೀತೆಯ ಈ ಆಲೌಕಿಕ ಪ್ರೇಮವನ್ನು ಕಂಡು ರಘುವಂಶಮಣಿ ಶ್ರೀರಾಮಚಂದ್ರನು ಮನಸ್ಸಿನಲ್ಲೇ ನಕ್ಕನು. (ದೋ/೨೬೫)

**ಚೌ – ತಬ ಸಿಯ ದೇಖಿ ಭೂಪ ಅಭಿಲಾಷೇ । ಕೂರ ಕಪೂತ ಮೂಢ ಮನ ಮಾಖೇ ॥**
**ಉಠಿ ಉಠಿ ಪಹಿರಿ ಸನಾಹ ಅಭಾಗೇ । ಜಹಁ ತಹಁ ಗಾಲ ಬಜಾವನ ಲಾಗೇ ॥ ೧ ॥**
**ಲೇಹು ಛಡಾಇ ಸೀಯ ಕಹ ಕೋಊ । ಧರಿ ಬಾಁಧಹು ನೃಪ ಬಾಲಕ ದೋಊ ॥**
**ತೋರೇಂ ಧನುಷು ಚಾಡ ನಹಿಂ ಸರಈ । ಜೀವತ ಹಮಹಿ ಕುಅಁರಿ ಕೋ ಬರಈ ॥ ೨ ॥**
**ಜೌಂ ಬಿದೇಹು ಕಛು ಕರೈ ಸಹಾಈ । ಜೀತಹು ಸಮರ ಸಹಿತ ದೋಉ ಭಾಈ ॥**
**ಸಾಧು ಭೂಪ ಬೋಲೇ ಸುನಿ ಬಾನೀ । ರಾಜಸಮಾಜಹಿ ಲಾಜ ಲಜಾನೀ ॥ ೩ ॥**
**ಬಲು ಪ್ರತಾಪು ಬೀರತಾ ಬಡಾಈ । ನಾಕ ಪಿನಾಕಹಿ ಸಂಗ ಸಿಧಾಈ ॥**
**ಸೋಇ ಸೂರತಾ ಕಿ ಅಬ ಕಹುಁ ಪಾಈ । ಅಸಿ ಬುಧಿ ತೌ ಬಿಧಿ ಮುಹಁ ಮಸಿ ಲಾಈ ॥ ೪ ॥**

ಆಗ ಸೀತೆಯನ್ನು ನೋಡಿ ಕೆಲವು ರಾಜರಿಗೆ ಆಕೆಯನ್ನು ಪಡೆಯಬೇಕೆಂಬ ದುರಾಸೆ ಉಂಟಾಯಿತು. ದುಷ್ಟರೂ, ಕುಪುತ್ರರೂ, ಮೂರ್ಖರೂ ಆದ ಆ ರಾಜರು ಮನದಲ್ಲೇ ಉರಿದುಬಿದ್ದರು. ಆ ನಿರ್ಭಾಗ್ಯರು ಎದ್ದೆದ್ದು, ಕವಚವನ್ನು ತೊಟ್ಟು, ಅಲ್ಲಲ್ಲಿ ಆರ್ಭಟಿಸತೊಡಗಿದರು. ಅವರಲ್ಲಿ ಒಬ್ಬನು ಇಂತು ಮಾತಾಡತೊಡಗಿದನು – ''ಸೀತೆಯನ್ನು ಬಲವಂತವಾಗಿ ಕಸಿದುಕೊಳ್ಳಿ. ಆ ಇಬ್ಬರೂ ರಾಜಕುಮಾರರನ್ನು ಬಂಧಿಸಿರಿ. ಧನುಸ್ಸು ಮುರಿಯುವುದರಿಂದ ಮಾತ್ರ ಬಯಕೆ ಈಡೇರುವುದಿಲ್ಲ. ನಾವು ಬದುಕಿರುವಾಗ ರಾಜಕುಮಾರಿಯನ್ನು ಯಾರು ವರಿಸುವರು ನೋಡೇ ಬಿಡುತ್ತೇವೆ. ಜನಕನು ಏನಾದರೂ ಅವರ ನೆರವಿಗೆ ಹೋದರೆ ಯುದ್ಧದಲ್ಲಿ ಅಣ್ಣ-ತಮ್ಮಂದಿರ ಸಹಿತ ಅವನನ್ನೂ ಸದೆಬಡಿಯುವೆವು.'' ಅವರ ಈ ಮಾತುಗಳನ್ನು ಕೇಳಿ ಸಾಧುಮನಸ್ಸಿನ ಕೆಲವು ರಾಜರು ಇಂತೆಂದರು – ''ಈ ಮೂರ್ಖರಾಜರನ್ನು ನೋಡಿ ನಾಚಿಕೆಗೂ ನಾಚಿಕೆಯಾಗಿದೆ.'' ಅಯ್ಯಾ ಮೂರ್ಖರಿರಾ! ನಿಮ್ಮ ಬಲ, ಪರಾಕ್ರಮ, ಶೌರ್ಯ, ಗೌರವ – ಪ್ರತಿಷ್ಠೆಗಳು ಧನುಸ್ಸಿನೊಂದಿಗೇ ಮುರಿದುಹೋದವು. ನಿಮ್ಮಲ್ಲಿ ಈ ಶೌರ್ಯ ಇನ್ನೆಲ್ಲಿಂದ ಬಂದೀತು? ಇಂತಹ ದುಷ್ಟಬುದ್ಧಿಯು ಇರುವುದರಿಂದಲೇ ವಿಧಾತನು ನಿಮ್ಮ ಮುಖಕ್ಕೆ ಮಸಿ ಬಳಿದಿರುವನು. (ಚೌ/೧-೪)

**ದೋ – ದೇಖಹು ರಾಮಹಿ ನಯನ ಭರಿ ತಜಿ ಇರಿಷಾ ಮದು ಕೋಹು ।**
**ಲಖನ ರೋಷು ಪಾವಕು ಪ್ರಬಲ ಜಾನಿ ಸಲಭ ಜನಿ ಹೋಹು ॥ ೨೬೬ ॥**

ಅಸೂಯೆ, ಅಹಂಕಾರ, ಕ್ರೋಧವನ್ನು ತೊರೆದು ಕಣ್ತುಂಬಾ ಶ್ರೀರಾಮನ ಚೆಲುವನ್ನು ನೋಡಿಕೊಳ್ಳಿ. ಲಕ್ಷ್ಮಣನ ಕ್ರೋಧಾಗ್ನಿಗೆ ಪತಂಗಗಳಾಗಬೇಡಿರಿ. (ದೋ/೨೬೬)

**ಚೌ – ಬೈನತೇಯ ಬಲಿ ಜಿಮಿ ಚಹ ಕಾಗೂ । ಜಿಮಿ ಸಸು ಚಹೈ ನಾಗ ಅರಿ ಭಾಗೂ ॥**
**ಜಿಮಿ ಚಹ ಕುಸಲ ಅಕಾರನ ಕೋಹೀ । ಸಬ ಸಂಪದಾ ಚಹೈ ಸಿವದ್ರೋಹೀ ॥ ೧ ॥**
**ಲೋಭೀ ಲೋಲುಪ ಕಲ ಕೀರತಿ ಚಹಈ । ಅಕಲಂಕತಾ ಕಿ ಕಾಮೀ ಲಹಈ ॥**
**ಹರಿ ಪದ ಬಿಮುಖ ಪರಮ ಗತಿ ಚಾಹಾ । ತಸ ತುಮ್ಹಾರ ಲಾಲಚು ನರನಾಹಾ ॥ ೨ ॥**

**ಕೋಲಾಹಲು ಸುನಿ ಸೀಯ ಸಕಾನೀ । ಸಖೀಂ ಲವಾಇ ಗಈಂ ಜಹಂ ರಾನೀ ॥**
**ರಾಮು ಸುಭಾಯಂ ಚಲೇ ಗುರು ಪಾಹೀಂ । ಸಿಯ ಸನೇಹು ಬರನತ ಮನ ಮಾಹೀಂ ॥ ೩ ॥**
**ರಾನಿನ್ಹ ಸಹಿತ ಸೋಚಬಸ ಸೀಯಾ । ಅಬ ಧೌಂ ಬಿಧಿಹಿ ಕಾಹ ಕರನೀಯಾ ॥**
**ಭೂಪ ಬಚನ ಸುನಿ ಇತ ಉತ ತಕಹೀಂ । ಲಖನು ರಾಮ ಡರ ಬೋಲಿ ನ ಸಕಹೀಂ ॥ ೪ ॥**

ಗರುಡನ ಬಲಿಯನ್ನು ಕಾಗೆ ಬಯಸಿದರೆ, ಸಿಂಹದ ಪಾಲಿಗೆ ಮೊಲ ನಾಲಿಗೆ ಚಾಚಿದರೆ, ನಿಷ್ಕಾರಣವಾಗಿ ಕೋಪಮಾಡಿಕೊಳ್ಳುವವನು ತನ್ನ ಕುಶಲವನ್ನು ಬಯಸಿದರೆ, ಶಿವದ್ರೋಹಿಯು ಎಲ್ಲ ವಿಧವಾದ ಸಂಪತ್ತನ್ನೂ ಬಯಸಿದರೆ, ಲೋಭಿಯು ಸುಂದರ ಕೀರ್ತಿಯನ್ನು ಬಯಸಿದರೆ, ಕಾಮುಕನು ನಿಷ್ಕಳಂಕನಾಗಿರಬೇಕೆಂದರೆ ಅದು ಸಾಧ್ಯವೇ? ಹರಿಚರಣವಿಮುಖನು ಮೋಕ್ಷವನ್ನು ಬಯಸಿದರೆ ದೊರೆಯುವುದೇ? ಅಂತೆಯೇ ಎಲೈ ರಾಜರುಗಳೇ! ಸೀತೆಗಾಗಿ ನೀವು ಹಾತೊರೆಯುವುದು ಕೂಡ ವ್ಯರ್ಥವೇ.

ಈ ಕೋಲಾಹಲವನ್ನು ಕೇಳಿ ಸೀತಾದೇವಿಯು ಭಯಗೊಂಡಳು. ಸಖಿಯರು ಅಲ್ಲಿಂದ ಅವಳನ್ನು ಮಹಾರಾಣಿಯ ಬಳಿಗೆ ಕರಕೊಂಡು ಹೋದರು. ಶ್ರೀರಾಮನು ಮನಸ್ಸಿನಲ್ಲೇ ಸೀತೆಯ ಪ್ರೇಮವನ್ನು ನೆನೆಯುತ್ತಾ, ಸಹಜಗಮನದಿಂದ ಗುರುವಿನ ಬಳಿಗೆ ನಡೆದನು. 'ವಿಧಾತನು ಏನು ಮಾಡಲಿದ್ದಾನೋ'' ಎಂದು ಸೀತಾದೇವಿಯು, ಮಹಾರಾಣಿಯು ಚಿಂತಿತರಾದರು. ರಾಜರ ಮಾತನ್ನು ಕೇಳಿ, ಲಕ್ಷ್ಮಣನು ಅತ್ತ-ಇತ್ತ ನೋಡುತ್ತಿರುವನು. ಆದರೆ ಶ್ರೀರಾಮಚಂದ್ರನ ಭಯದಿಂದ ಮೌನ ವಹಿಸಿದನು. (ಚೌ/೧-೪)

**ದೋ – ಅರುನ ನಯನ ಭೃಕುಟೀ ಕುಟಿಲ ಚಿತವತ ನೃಪನ್ಹ ಸಕೋಪ ।**
**ಮನಹುಂ ಮತ್ತ ಗಜಗನ ನಿರಖಿ ಸಿಂಘಕಿಸೋರಹಿ ಚೋಪ ॥ ೨೬೭ ॥**

ಲಕ್ಷ್ಮಣನ ಕಣ್ಣುಗಳು ಕೋಪದಿಂದ ಕೆಂಪಾಗಿವೆ. ಹುಬ್ಬು ಗಂಟಿಕ್ಕಿದೆ. ಸಿಂಹದ ಮರಿಯು ಆನೆಗಳ ಗುಂಪನ್ನು ಕಂಡು ಆಕ್ರಮಿಸಲು ಸಿದ್ಧವಾಗುವಂತೆ, ಲಕ್ಷ್ಮಣನು ಕ್ರುದ್ಧನಾಗಿ ಆ ಮೂರ್ಖರಾಜರ ಕಡೆಗೆ ನಿಟ್ಟಿಸುತ್ತಿದ್ದಾನೆ. (ದೋ/೨೬೭)

## ಪರಶುರಾಮ ಪ್ರಸಂಗ

**ಚೌ – ಖರಭರು ದೇಖಿ ಬಿಕಲ ಪುರ ನಾರೀಂ । ಸಬ ಮಿಲಿ ದೇಹಿಂ ಮಹೀಪನ್ಹ ಗಾರೀಂ ॥**
**ತೇಹಿಂ ಅವಸರ ಸುನಿ ಸಿವ ಧನು ಭಂಗಾ । ಆಯಉ ಭೃಗುಕುಲ ಕಮಲ ಪತಂಗಾ ॥ ೧ ॥**
**ದೇಖಿ ಮಹೀಪ ಸಕಲ ಸಕುಚಾನೇ । ಬಾಜ ಝಪಟ ಜನು ಲವಾ ಲುಕಾನೇ ॥**
**ಗೌರಿ ಸರೀರ ಭೂತಿ ಭಲ ಭ್ರಾಜಾ । ಭಾಲ ಬಿಸಾಲ ತ್ರಿಪುಂಡ ಬಿರಾಜಾ ॥ ೨ ॥**
**ಸೀಸ ಜಟಾ ಸಸಿಬದನು ಸುಹಾವಾ । ರಿಸಬಸ ಕಛುಕ ಅರುನ ಹೋಇ ಆವಾ ॥**
**ಭೃಕುಟೀ ಕುಟಿಲ ನಯನ ರಿಸ ರಾತೇ । ಸಹಜಹುಂ ಚಿತವತ ಮನಹುಂ ರಿಸಾತೇ ॥ ೩ ॥**
**ಬೃಷಭ ಕಂಧ ಉರ ಬಾಹು ಬಿಸಾಲಾ । ಚಾರು ಜನೇಉ ಮಾಲ ಮೃಗಛಾಲಾ ॥**
**ಕಟಿ ಮುನಿಬಸನ ತೂನ ದುಇ ಬಾಂಧೇಂ । ಧನು ಸರ ಕರ ಕುಠಾರು ಕಲ ಕಾಂಧೇಂ ॥ ೪ ॥**

ಈ ಗೊಂದಲವನ್ನು ನೋಡಿ, ಜನಕಪುರದ ಸ್ತ್ರೀಯರೆಲ್ಲರೂ ವ್ಯಾಕುಲಗೊಂಡರು. ಎಲ್ಲರೂ ಸೇರಿ ರಾಜನನ್ನು ದೂಷಿಸತೊಡಗಿದರು. ಅದೇ ವೇಳೆಗೆ ಸರಿಯಾಗಿ, ಶಿವಧನುರ್ಭಂಗದ ಧ್ವನಿಯನ್ನು ಕೇಳಿದ, ಭೃಗುಕುಲಕಮಲಪತಂಗನಾದ ಪರಶುರಾಮನು ಅಲ್ಲಿಗೆ ಬಂದನು. ಅವನನ್ನು ನೋಡುತ್ತಲೇ ಎಲ್ಲ ರಾಜರು ಗಡ-ಗಡನೆ ನಡುಗಿದರು. ಗಿಡುಗ ಎರಗಿದಾಗ ಅಡಗಿಕೊಳ್ಳುವ ಲಾವಕ್ಕಿಯಂತೆ ಭಯಗೊಂಡು ತೇಜೋಹೀನರಾದರು. ಪರಶುರಾಮನ ಬಿಳಿಯ ಶರೀರದ ಮೇಲೆ ವಿಭೂತಿ, ವಿಶಾಲವಾದ ಹಣೆಯಮೇಲೆ ತ್ರಿಪುಂಡ್ರ ಶೋಭಿಸುತ್ತಿತ್ತು. ಶಿರದಲ್ಲಿ ಜಟಾಜೂಟವಿದ್ದು, ಸುಂದರವಾದ ಮುಖಚಂದ್ರವು ಕೋಪದಿಂದ ಕೊಂಚ ಕೆಂಪಾಗಿತ್ತು. ಹುಬ್ಬುಗಳು ಗಂಟಿಕ್ಕಿ, ಕಣ್ಣುಗಳು ಕ್ರೋಧದಿಂದ ಕೆಂಪಾಗಿದ್ದವು. ಸಹಜವಾಗಿಯೇ ನೋಡಿದರೂ ಅವನು ಸಿಟ್ಟಾಗಿದ್ದಾನೆ ಎಂದು ಕಾಣುತ್ತಿತ್ತು. ಅವನ ಹೆಗಲು ವೃಷಸ್ಕಂಧದಂತೆ ಉನ್ನತವಾಗಿ, ಪುಷ್ಟವಾಗಿತ್ತು. ಎದೆಯು ವಿಶಾಲವಾಗಿದ್ದು, ಬಾಹುಗಳು ಬಲಿಷ್ಠವಾಗಿದ್ದವು. ಅವನು ಯಜ್ಞೋಪವೀತವನ್ನು, ರುದ್ರಾಕ್ಷಮಾಲೆಗಳನ್ನು, ಮೃಗಚರ್ಮವನ್ನೂ ಧರಿಸಿರುವನು. ಸೊಂಟದಲ್ಲಿ ವಲ್ಕಲಗಳನ್ನುಟ್ಟು, ಎರಡು ಬತ್ತಳಿಕೆಗಳನ್ನು ಬಿಗಿದುಕೊಂಡಿರುವನು. ಕೈಯಲ್ಲಿ ಧನುರ್ಬಾಣಗಳನ್ನು ಹಿಡಿದಿದ್ದು, ಹೆಗಲಮೇಲೆ ಗಂಡುಕೊಡಲಿಯನ್ನು ಹೊತ್ತಿರುವನು. (ಚೌ/೧-೪)

**ದೋ – ಸಾಂತ ಬೇಷು ಕರನೀ ಕಠಿನ ಬರನಿ ನ ಜಾಇ ಸರೂಪ ।**
**ಧರಿ ಮುನಿತನು ಜನು ಬೀರ ರಸು ಆಯಉ ಜಹಁ ಸಬ ಭೂಪ ॥ ೨೬೮ ॥**

ಅವನು ಮುನಿವೇಷಧಾರಿಯಾಗಿದ್ದರೂ ಅವನ ಕಾರ್ಯಮಾತ್ರ ಅತ್ಯಂತ ಕಠೋರ. ವರ್ಣನಾತೀತ ಸ್ವರೂಪವಾಗಿದ್ದು, ವೀರರಸವೇ ಮುನಿರೂಪವನ್ನಾಂತು ರಾಜರ ಬಳಿಗೆ ಬಂದಿದೆಯೋ ಎಂಬಂತಿತ್ತು. (ದೋ/೨೬೮)

**ಚೌ – ದೇಖತ ಭೃಗುಪತಿ ಬೇಷು ಕರಾಲಾ । ಉಠೇ ಸಕಲ ಭಯ ಬಿಕಲ ಭುಆಲಾ ॥**
**ಪಿತು ಸಮೇತ ಕಹಿ ಕಹಿ ನಿಜ ನಾಮಾ । ಲಗೇ ಕರನ ಸಬ ದಂಡ ಪ್ರನಾಮಾ ॥ ೧ ॥**
**ಜೆಹಿ ಸುಭಾಯಁ ಚಿತವಹಿಁ ಹಿತು ಜಾನೀ । ಸೋ ಜಾನಇ ಜನು ಆಇ ಖುಟಾನೀ ॥**
**ಜನಕ ಬಹೋರಿ ಆಇ ಸಿರು ನಾವಾ । ಸೀಯ ಬೊಲಾಇ ಪ್ರನಾಮು ಕರಾವಾ ॥ ೨ ॥**
**ಆಸಿಷ ದೀನ್ಹಿ ಸಖೀಂ ಹರಷಾನೀಂ । ನಿಜ ಸಮಾಜ ಲೈ ಗಈಂ ಸಯಾನೀಂ ॥**
**ಬಿಸ್ವಾಮಿತ್ರು ಮಿಲೇ ಪುನಿ ಆಈ । ಪದ ಸರೋಜ ಮೇಲೇ ದೋಉ ಭಾಈ ॥ ೩ ॥**
**ರಾಮು ಲಖನು ದಸರಥ ಕೇ ಢೋಟಾ । ದೀನ್ಹಿ ಅಸೀಸ ದೇಖಿ ಭಲ ಜೋಟಾ ॥**
**ರಾಮಹಿ ಚಿತಇ ರಹೇ ಥಕಿ ಲೋಚನ । ರೂಪ ಅಪಾರ ಮಾರ ಮದ ಮೋಚನ ॥ ೪ ॥**

ಪರಶುರಾಮನ ಭಯಾನಕ ವೇಷವನ್ನು ನೋಡಿ ರಾಜರೆಲ್ಲರೂ ಹೆದರಿ ಎದ್ದು ನಿಂತರು. ತಮ್ಮ ಹೆಸರನ್ನು ಕುಲಗೋತ್ರಸಹಿತ ಹೇಳಿಕೊಂಡು ದಂಡವತ್ ಪ್ರಣಾಮ ಮಾಡತೊಡಗಿದರು. ಪರಶುರಾಮನು ಒಳ್ಳೆಯ ದೃಷ್ಟಿಯಿಂದಲೇ ಯಾರನ್ನಾದರೂ ನೋಡಿದರೆ, ಅವನು ತನ್ನ ಆಯಸ್ಸು ಮುಗಿಯಿತೆಂದೇ ಭಾವಿಸುತ್ತಿದ್ದನು. ಅನಂತರ ಜನಕನು ಅವನಿಗೆ ನಮಸ್ಕರಿಸಿ, ಸೀತೆಯನ್ನು ಕರೆಸಿ, ಅವಳಿಂದಲೂ ನಮಸ್ಕಾರ ಮಾಡಿಸಿದನು. ಪರಶುರಾಮನು ಆಕೆಗೆ ಆಶೀರ್ವದಿಸಿದನು. ಸಖಿಯರು ಹರ್ಷಿತರಾಗಿ, ಸೀತೆಯನ್ನು ತಮ್ಮೊಂದಿಗೆ ಕರಕೊಂಡು ಹೋದರು. ಬಳಿಕ ವಿಶ್ವಾಮಿತ್ರರು ಭೇಟಿಯಾಗಿ, ರಾಮ-ಲಕ್ಷ್ಮಣರಿಬ್ಬರನ್ನೂ ಪರಶುರಾಮನ ಚರಣಕಮಲಗಳಲ್ಲಿ ಕೆಡಹಿದರು. ಮತ್ತೆ ''ಇವರು ದಶರಥ ಮಹಾರಾಜರ ಸುಪುತ್ರರಾದ ರಾಮ-ಲಕ್ಷ್ಮಣರು'' ಎಂದು ಹೇಳಿದರು. ಆ ಸುಂದರ ರಾಜಕುಮಾರರ ಜೋಡಿಯನ್ನು ನೋಡಿ ಪರಶುರಾಮನು ಅವರನ್ನು ಆಶೀರ್ವದಿಸಿದನು. ಮಾರನ ಮದವನ್ನು ಇಳಿಸುವಂತಹ ಶ್ರೀರಾಮನ ಅದ್ಭುತವಾದ ಸೌಂದರ್ಯವನ್ನು ನೋಡಿ ಪರಶುರಾಮನ ಕಣ್ಣುಗಳು ನಟ್ಟುನಿಂತವು. (ಚೌ/೧-೪)

**ದೋ – ಬಹುರಿ ಬಿಲೋಕಿ ಬಿದೇಹ ಸನ ಕಹಹು ಕಾಹ ಅತಿ ಭೀರ ।**
**ಪೂಛತ ಜಾನಿ ಅಜಾನ ಜಿಮಿ ಬ್ಯಾಪೆಉ ಕೋಪು ಸರೀರ ॥ ೨೬೯ ॥**

ಪರಶುರಾಮನು ಸುತ್ತಲೂ ಒಮ್ಮೆ ನೋಡಿ, ತನಗೆ ಎಲ್ಲವೂ ತಿಳಿದಿದ್ದರೂ ಏನೂ ತಿಳಿಯದವನಂತೆ – ''ಈ ಜನಸಮೂಹವು ಇಲ್ಲಿ ನೆರೆಯಲು ಏನು ಕಾರಣ?'' ಎಂದು ಜನಕದಲ್ಲಿ ಕೇಳಿದನು. ಇಂತು ಪ್ರಶ್ನಿಸುತ್ತಿರುವಂತೆ ಅವನು ಕೋಪೋದ್ರಿಕ್ತನಾದನು. (ದೋ/೨೬೯)

**ಚೌ – ಸಮಾಚಾರ ಕಹಿ ಜನಕ ಸುನಾಏ । ಜೆಹಿ ಕಾರನ ಮಹೀಪ ಸಬ ಆಏ ॥**
**ಸುನತ ಬಚನ ಫಿರಿ ಅನತ ನಿಹಾರೇ । ದೇಖೇ ಚಾಪಖಂಡ ಮಹಿ ಡಾರೇ ॥ ೧ ॥**
**ಅತಿ ರಿಸ ಬೋಲೇ ಬಚನ ಕಠೋರಾ । ಕಹು ಜಡ ಜನಕ ಧನುಷ ಕೈ ತೋರಾ ॥**
**ಬೇಗಿ ದೇಖಾಉ ಮೂಢ ನ ತ ಆಜೂ । ಉಲಟಉಁ ಮಹಿ ಜಹಁ ಲಹಿ ತವ ರಾಜೂ ॥ ೨ ॥**
**ಅತಿ ಡರು ಉತರು ದೇತ ನೃಪು ನಾಹೀಂ । ಕುಟಿಲ ಭೂಪ ಹರಷೇ ಮನ ಮಾಹೀಂ ॥**
**ಸುರ ಮುನಿ ನಾಗ ನಗರ ನರ ನಾರೀ । ಸೋಚಹಿಁ ಸಕಲ ತ್ರಾಸ ಉರ ಭಾರೀ ॥ ೩ ॥**
**ಮನ ಪಛಿತಾತಿ ಸೀಯ ಮಹತಾರೀ । ಬಿಧಿ ಅಬ ಸಂವರೀ ಬಾತ ಬಿಗಾರೀ ॥**
**ಭೃಗುಪತಿ ಕರ ಸುಭಾಉ ಸುನಿ ಸೀತಾ । ಅರಧ ನಿಮೇಷ ಕಲಪ ಸಮ ಬೀತಾ ॥ ೪ ॥**

ರಾಜರು ಬಂದುದರ ಕಾರಣವನ್ನು ಜನಕನು ಪರಶುರಾಮರಲ್ಲಿ ಬಿನ್ನವಿಸಿಕೊಂಡನು. ಜನಕನ ಮಾತುಗಳನ್ನು ಕೇಳಿ, ಪರಶುರಾಮನು ಬೇರೆ ಕಡೆ ನೋಡಿದಾಗ ಶಿವಧನುಸ್ಸಿನ ತುಂಡುಗಳು ನೆಲದಮೇಲೆ ಬಿದ್ದಿರುವುದನ್ನು ನೋಡಿದನು. ಆಗ ಅತ್ಯಂತ ಕ್ರೋಧಾವಿಷ್ಟನಾಗಿ ಪರಶುರಾಮನು ಕಠೋರವಾಗಿ ಕೇಳಿದನು – 'ಎಲವೋ ಮೂರ್ಖ ಜನಕಾ! ಧನುಸ್ಸನ್ನು ಮುರಿದವರು

ಯಾರೆಂದು ಹೇಳು. ಅವನನ್ನು ಬೇಗ ತೋರು. ಇಲ್ಲದಿದ್ದರೆ ನಿನ್ನ ರಾಜ್ಯವನ್ನೇ ತಲೆಕೆಳಗು ಮಾಡಿಬಿಡುತ್ತೇನೆ. ಭಯದ ಕಾರಣದಿಂದ ಜನಕನ ಬಾಯಿಂದ ಮಾತೇ ಹೊರಡಲಿಲ್ಲ. ಇದನ್ನು ಕಂಡು ಕುಟಿಲ ರಾಜರು ಮನದಲ್ಲೇ ಹಿಗ್ಗಿದರು. ದೇವತೆಗಳು, ಮುನಿಗಳು, ನಾಗರು, ಪುರಜನರೂ ಎಲ್ಲರೂ ಯೋಚಿಸತೊಡಗಿದರು. ಅವರೆಲ್ಲರ ಹೃದಯದಲ್ಲಿ ಭಯಾಂದೋಳನ ಭುಗಿಲೆದ್ದಿತು. ಸೀತೆಯ ತಾಯಿ ಮನಸ್ಸಿನಲ್ಲೇ ಹಲುಬಿದಳು – ಅಯ್ಯೋ ವಿಧಿಯೇ! ಇದೇನು ಮಾಡಿಬಿಟ್ಟೆ? ಎಲ್ಲ ಹಾಳಾಯಿತಲ್ಲ! ಪರಶುರಾಮನ ಕ್ರೋಧಸ್ವಭಾವವನ್ನು ಕೇಳಿ ಸೀತೆಗೆ ಅರೆಕ್ಷಣವೂ ಕಲ್ಪದಂತೆ ಕಾಣಿಸಿತು. (ಚೌ/೧-೪)

**ದೋ – ಸಭಯ ಬಿಲೋಕೇ ಲೋಗ ಸಬ ಜಾನಿ ಜಾನಕೀ ಭೀರು ।**
**ಹೃದಯ್ ನ ಹರಷು ಬಿಷಾದು ಕಛು ಬೋಲೇ ಶ್ರೀರಘುಬೀರು ॥ ೨೭೦ ॥**

ಎಲ್ಲರೂ ಭಯಭ್ರಾಂತರಾಗಿರುವುದನ್ನು ಕಂಡು, ಮತ್ತೆ ಸೀತೆಯು ಹೆದರಿರುವುದನ್ನು ಗಮನಿಸಿ ಶ್ರೀರಾಮನು ಹರ್ಷ-ಶೋಕಾದಿ ವಿಕಾರಗಳಿಂದ ರಹಿತನಾಗಿ ಇಂತು ನುಡಿದನು – (ದೋ/೨೭೦)

**ಮಾಸಪಾರಾಯಣದ ಒಂಭತ್ತನೆಯ ವಿಶ್ರಾಮ**

**ಚೌ – ನಾಥ ಸಂಭುಧನು ಭಂಜನಿಹಾರಾ । ಹೋಇಹಿ ಕೆಉ ಎಕ ದಾಸ ತುಮ್ಹಾರಾ ॥**
**ಆಯಸು ಕಾಹ ಕಹಿಅ ಕಿನ ಮೋಹೀ । ಸುನಿ ರಿಸಾಇ ಬೋಲೇ ಮುನಿ ಕೋಹೀ ॥ ೧ ॥**
**ಸೇವಕು ಸೋ ಜೊ ಕರೈ ಸೇವಕಾಈ । ಅರಿ ಕರನೀ ಕರಿ ಕರಿಅ ಲರಾಈ ॥**
**ಸುನಹು ರಾಮ ಜೆಹಿಂ ಸಿವಧನು ತೋರಾ । ಸಹಸಬಾಹು ಸಮ ಸೋ ರಿಪು ಮೋರಾ ॥ ೨ ॥**
**ಸೋ ಬಿಲಗಾಉ ಬಿಹಾಇ ಸಮಾಜಾ । ನ ತ ಮಾರೇ ಜೈಹಹಿಂ ಸಬ ರಾಜಾ ॥**
**ಸುನಿ ಮುನಿ ಬಚನ ಲಖನ ಮುಸುಕಾನೇ । ಬೋಲೇ ಪರಸುಧರಹಿ ಅಪಮಾನೇ ॥ ೩ ॥**
**ಬಹು ಧನುಹೀಂ ತೋರೀಂ ಲರಿಕಾಈಂ । ಕಬಹುಁ ನ ಅಸಿ ರಿಸ ಕೀನ್ಹಿ ಗೊಸಾಈಂ ॥**
**ಏಹಿ ಧನು ಪರ ಮಮತಾ ಕೆಹಿ ಹೇತೂ । ಸುನಿ ರಿಸಾಇ ಕಹ ಭೃಗುಕುಲಕೇತೂ ॥ ೪ ॥**

''ಪೂಜ್ಯರೇ! ಯಾರೋ ನಿಮ್ಮ ದಾಸನೇ ಈ ಶಿವಧನುಸ್ಸನ್ನು ಮುರಿದಿರುವನು. ನಿಮ್ಮ ಆಜ್ಞೆ ಏನಿದೆಯೋ ನನಗೆ ಹೇಳಿರಿ.'' ಈ ಮಾತಿಗೆ ಪರಶುರಾಮನು ಇನ್ನೂ ಕೋಪೋದ್ರಿಕ್ತನಾಗಿ ಇಂತೆಂದನು – ಸೇವಾವೃತ್ತಿಯನ್ನು ಕೈಕೊಂಡವನೇ ನಿಜವಾದ ದಾಸ. ವಿರೋಧ ಕೃತ್ಯವನ್ನು ಕೈಕೊಂಡವನು ಯುದ್ಧವನ್ನೇ ಮಾಡಬೇಕು. ಎಲೈ ರಾಮಾ! ಕೇಳು. ನನಗೆ ವಿರುದ್ಧವಾಗಿ ಈ ಶಿವಧನುಸ್ಸನ್ನು ಮುರಿದವನು ಸಹಸ್ರಬಾಹುವಿನಂತೆ ನನ್ನ ಶತ್ರುವೇ ಸರಿ. ಅವನು ಈ ರಾಜಸಮೂಹದಿಂದ ದೂರಸರಿಯಲಿ. ಇಲ್ಲದಿದ್ದರೆ ಎಲ್ಲ ರಾಜರನ್ನೂ ಸಂಹರಿಸುತ್ತೇನೆ.' ಮುನಿಯ ಮಾತನ್ನು ಕೇಳಿ, ಲಕ್ಷ್ಮಣನು ಮುಗುಳ್ನಕ್ಕು ಪರಶುರಾಮನನ್ನು ಹೀಗಳೆಯುತ್ತ ಹೀಗೆಂದನು – ಮುನಿವರ್ಯರೇ! ಬಾಲ್ಯದಲ್ಲಿ ನಾವು ಬೇಕಾದಷ್ಟು ಧನುಸ್ಸುಗಳನ್ನು ಮುರಿದುಬಿಟ್ಟಿದ್ದೇವೆ. ಆದರೆ ಆಗ ತಾವು ಹೀಗೆ ಸಿಟ್ಟಾಗಲಿಲ್ಲ. ಈ ಧನುಸ್ಸಿನ ಮೇಲೆ ಇಷ್ಟೊಂದು ಮಮತೆ ಏಕೆ? ಇದನ್ನು ಕೇಳಿ ಭೃಗುವಂಶೋತ್ತಮ ಭಾರ್ಗವರಾಮನು ಕೋಪದಿಂದ ಕೆರಳಿ ಇಂತೆಂದನು – (ಚೌ/೧-೪)

**ದೋ – ರೇ ನೃಪ ಬಾಲಕ ಕಾಲ ಬಸ ಬೋಲತ ತೊಹಿ ನ ಸಂಭಾರ ।**
**ಧನುಹೀ ಸಮ ತಿಪುರಾರಿ ಧನು ಬಿದಿತ ಸಕಲ ಸಂಸಾರ ॥ ೨೭೧ ॥**

ಎಲವೋ ನೃಪಬಾಲಕಾ! ಕಾಲವಶನಾಗಿರುವುದರಿಂದ ನಿನಗೆ ಮಾತನಾಡುವಾಗ ಮೈಮೇಲೆ ಪ್ರಜ್ಞೆಯಿಲ್ಲ. ಜಗದ್ವಿಖ್ಯಾತವಾದ ಈ ಶಿವಧನುಸ್ಸಿಗೆ ಇತರ ಧನುಸ್ಸುಗಳನ್ನು ಹೋಲಿಸುವುದು ಸರಿಯೇ? (ದೋ/೨೭೧)

**ಚೌ – ಲಖನ ಕಹಾ ಹಁಸಿ ಹಮರೇಂ ಜಾನಾ । ಸುನಹು ದೇವ ಸಬ ಧನುಷ ಸಮಾನಾ ॥**
**ಕಾ ಛತಿ ಲಾಭು ಜೂನ ಧನು ತೋರೇಂ । ದೇಖಾ ರಾಮ ನಯನ ಕೇ ಭೋರೇಂ ॥ ೧ ॥**
**ಛುಅತ ಟೂಟ ರಘುಪತಿಹು ನ ದೋಸೂ । ಮುನಿ ಬಿನು ಕಾಜ ಕರಿಅ ಕತ ರೋಸೂ ॥**
**ಬೋಲೇ ಚಿತಇ ಪರಸು ಕೀ ಓರಾ । ರೇ ಸಠ ಸುನೆಹಿ ಸುಭಾಉ ನ ಮೋರಾ ॥ ೨ ॥**
**ಬಾಲಕು ಬೋಲಿ ಬಧಉಁ ನಹಿಂ ತೋಹೀ । ಕೇವಲ ಮುನಿ ಜಡ ಜಾನಹಿ ಮೋಹೀ ॥**
**ಬಾಲ ಬ್ರಹ್ಮಚಾರೀ ಅತಿ ಕೋಹೀ । ಬಿಸ್ವ ಬಿದಿತ ಛತ್ರಿಯಕುಲ ದ್ರೋಹೀ ॥ ೩ ॥**
**ಭುಜಬಲ ಭೂಮಿ ಭೂಪ ಬಿನು ಕೀನ್ಹೀ । ಬಿಪುಲ ಬಾರ ಮಹಿದೇವನ್ಹ ದೀನ್ಹೀ ॥**
**ಸಹಸಬಾಹು ಭುಜ ಛೇದನಿಹಾರಾ । ಪರಸು ಬಿಲೋಕು ಮಹೀಪಕುಮಾರಾ ॥ ೪ ॥**

ಲಕ್ಷ್ಮಣನು ನಕ್ಕು ನುಡಿದ – ''ಸ್ವಾಮಿ! ಕೇಳಿರಿ. ನಮ್ಮ ದೃಷ್ಟಿಯಲ್ಲಿ ಎಲ್ಲ ಬಿಲ್ಲುಗಳೂ ಒಂದೇ ರೀತಿಯಾಗಿವೆ. ಹಳೆಯ ಬಿಲ್ಲನ್ನು ಮುರಿಯುವುದರಿಂದ ನಷ್ಟವೇನು, ಲಾಭವೇನು? ಶ್ರೀರಾಮನು ಇದನ್ನು ಹೊಸದೆಂದೇ ಭಾವಿಸಿದ್ದನು. ಅದಲ್ಲದೆ ಅದು ಮುಟ್ಟಿದ ಕೂಡಲೇ ಮುರಿಯಿತು. ಇದರಲ್ಲಿ ರಘುನಾಥನ ಯಾವ ದೋಷವೂ ಇಲ್ಲ. ಮುನಿಗಳೇ! ನೀವೇಕೆ ನಿಷ್ಕಾರಣವಾಗಿ ಮುನಿಯುತ್ತೀರಿ?'' ಪರಶುರಾಮನು ತನ್ನ ಗಂಡುಕೊಡಲಿಯತ್ತ ನೋಡಿಕೊಂಡು ಹೇಳಿದನು – ''ಎಲವೋ ದುಷ್ಟ! ನಿನಗೆ ನನ್ನ ಸ್ವಭಾವದ ಪರಿಚಯವಿಲ್ಲ. ನೀನು ಹಸುಳೆ ಎಂದು ಕೊಲ್ಲದೆ ಸುಮ್ಮನಿದ್ದೇನೆ. ಮೂರ್ಖಾ! ನಾನು ಬರಿಯ ಮುನಿಯೆಂದು ತಿಳಿದುಕೊಂಡಿರುವೆಯಾ? ನಾನು ಬಾಲಬ್ರಹ್ಮಚಾರೀಯಾಗಿದ್ದು, ಅತಿ ಕ್ರೋಧಿಯಾಗಿದ್ದೇನೆ. ಕ್ಷತ್ರಿಯಕುಲಾಂತಕನೆಂದು ವಿಶ್ವವಿಖ್ಯಾತನಾಗಿದ್ದೇನೆ. ಸ್ವಭುಜಬಲದಿಂದ ನಾನು ಈ ಭೂಮಿಯನ್ನು ಅನೇಕ ಬಾರಿ ನಿಃಕ್ಷತ್ರಿಯವಾಗಿ ಮಾಡಿ, ಬ್ರಾಹ್ಮಣರಿಗೆ ದಾನಮಾಡಿರುವೆನು. ಎಲೈ ರಾಜಕುಮಾರಾ! ಸಹಸ್ರಬಾಹುವಿನ ಭುಜಗಳನ್ನು ಕೊಚ್ಚಿಹಾಕಿದ ನನ್ನ ಈ ಗಂಡುಕೊಡಲಿಯನ್ನು ನೋಡಿದೆಯಾ? (ಚೌ/೧-೪)

**ದೋ – ಮಾತು ಪಿತಹಿ ಜನಿ ಸೋಚಬಸ ಕರಸಿ ಮಹೀಸಕಿಸೋರ ।**
**ಗರ್ಭನ್ಹ ಕೇ ಅರ್ಭಕ ದಲನ ಪರಸು ಮೋರ ಅತಿ ಘೋರ ॥ ೨೭೨ ॥**

ಎಲವೋ ಅರಸಕುಮಾರಾ! ನೀನು ನಿನ್ನ ತಾಯಿ-ತಂದೆಯರನ್ನು ವ್ಯರ್ಥವಾಗಿ ಶೋಕ-ಸಾಗರಕ್ಕೆ ತಳ್ಳಬೇಡ. ನನ್ನ ಪರಶು ಅತ್ಯಂತ ಭಯಂಕರವಾದುದು. ಅದರ ಭಯದಿಂದ ಗರ್ಭದಲ್ಲಿರುವ ಕ್ಷತ್ರಿಯ ಪಿಂಡವೂ ಕೂಡ ಸತ್ತುಹೋಗುತ್ತದೆ. (ದೋ/೨೭೨)

**ಚೌ – ಬಿಹಸಿ ಲಖನು ಬೋಲೇ ಮೃದು ಬಾನೀ । ಅಹೋ ಮುನೀಸು ಮಹಾ ಭಟಮಾನೀ ॥**
**ಪುನಿ ಪುನಿ ಮೋಹಿ ದೆಖಾವ ಕುಠಾರೂ । ಚಹತ ಉಡಾವನ ಫೂಂಕಿ ಪಹಾರೂ ॥ ೧ ॥**
**ಇಹಾ್ ಕುಮ್ಹಡಬತಿಯಾ ಕೋಉ ನಾಹೀಂ । ಜೇ ತರಜನೀ ದೇಖಿ ಮರಿ ಜಾಹೀಂ ॥**
**ದೇಖಿ ಕುಠಾರು ಸರಾಸನ ಬಾನಾ । ಮೈಂ ಕಛು ಕಹಾ ಸಹಿತ ಅಭಿಮಾನಾ ॥ ೨ ॥**
**ಭೃಗುಸುತ ಸಮುಝಿ ಜನೇಉ ಬಿಲೋಕೀ । ಜೋ ಕಛು ಕಹಹು ಸಹಉ್ ರಿಸ ರೋಕೀ ॥**
**ಸುರ ಮಹಿಸುರ ಹರಿಜನ ಅರು ಗಾಈ । ಹಮರೇಂ ಕುಲ ಇನ್ಹ ಪರ ನ ಸುರಾಈ ॥ ೩ ॥**
**ಬಧೇಂ ಪಾಪು ಅಪಕೀರತಿ ಹಾರೇಂ । ಮಾರತಹೂಂ ಪಾ ಪರಿಅ ತುಮ್ಹಾರೇಂ ॥**
**ಕೋಟಿ ಕುಲಿಸ ಸಮ ಬಚನು ತುಮ್ಹಾರಾ । ಬ್ಯರ್ಥ ಧರಹು ಧನು ಬಾನ ಕುಠಾರಾ ॥ ೪ ॥**

ಲಕ್ಷ್ಮಣನು ನಕ್ಕು ಮೃದುಮಧುರವಾಗಿ ಹೇಳಿದನು – ಓಹೋ! ಮುನೀಶ್ವರರು ತಾವು ದೊಡ್ಡಯೋಧರೆಂದುಕೊಂಡಿದ್ದಾರೆ. ಮಾತು-ಮಾತಿಗೆ ನನಗೆ ಕೊಡಲಿ ತೋರಿಸುತ್ತಿದ್ದಾರೆ. ಬಾಯಿಂದ 'ಉಫ್' ಎಂದು ಊದಿ ಬೆಟ್ಟವನ್ನು ಹಾರಿಸಬಯಸುತ್ತಾರೆ. ತೋರುಬೆರಳನ್ನು ನೋಡುತ್ತಲೇ ಸತ್ತುಹೋಗುವಂತಹ ಕುಂಬಳದ ಮಿಡಿ ಇಲ್ಲಿ ಯಾರೂ ಇಲ್ಲ. ನಿಮ್ಮ ಕೈಯಲ್ಲಿರುವ ಕೊಡಲಿ ಮತ್ತು ಧನುರ್ಬಾಣಗಳನ್ನು ನೋಡಿಯೇ ನಾನು ಕೊಂಚ ಹೆಮ್ಮೆಯಿಂದ ಮಾತಾಡಿದೆ. ನೀವು ಭೃಗುವಂಶೀಯರು ಎಂದುಕೊಂಡು, ಯಜ್ಞೋಪವೀತವನ್ನು ನೋಡಿದಾಗ ನೀವು ಹೇಳಿದ್ದನ್ನೆಲ್ಲಾ ನಾನು ಕೋಪವನ್ನು ತಡೆದು ಸಹಿಸಿಕೊಳ್ಳುತ್ತಿದ್ದೇನೆ. ನಮ್ಮ ವಂಶದಲ್ಲಿ ಯಾರೂ ಕೂಡ ದೇವತೆಗಳು, ಬ್ರಾಹ್ಮಣರೂ, ಹರಿಭಕ್ತರೂ, ಗೋವುಗಳು ಇವರ ಮೇಲೆ ತಮ್ಮ ಪರಾಕ್ರಮವನ್ನು ತೋರುವುದಿಲ್ಲ. ಏಕೆಂದರೆ, ಅವರನ್ನು ಕೊಂದರೆ ಪಾಪತಟ್ಟುತ್ತದೆ. ಅವರಿಂದ ಸೋತರೆ ಅಪಕೀರ್ತಿ ಬರುತ್ತದೆ. ಆದ್ದರಿಂದ ನೀವು ಹೊಡೆದರೂ ನಿಮ್ಮ ಕಾಲಿಗೇ ಬೀಳಬೇಕು. ನಿಮ್ಮ ಒಂದೊಂದು ಮಾತು ಕೋಟಿವಜ್ರಸಮಾನವಾಗಿದೆ (ಅತಿ ಕಠೋರವು). ಬಿಲ್ಲುಬಾಣ ಮತ್ತು ಕೊಡಲಿಯನ್ನು ಧರಿಸುವ ಅವಕಾಶವೇ ಇಲ್ಲ. ವ್ಯರ್ಥವಾಗಿ ತಳೆದಿದ್ದೀರಿ. (ಚೌ/೧-೪)

**ದೋ – ಜೋ ಬಿಲೋಕಿ ಅನುಚಿತ ಕಹೇಉ್ ಛಮಹು ಮಹಾಮುನಿ ಧೀರ ।**
**ಸುನಿ ಸರೋಷ ಭೃಗುಬಂಸಮನಿ ಬೋಲೇ ಗಿರಾ ಗಭೀರ ॥ ೨೭೩ ॥**

ಎಲೈ ಧೀರ ಮುನಿಗಳೇ! ನಿಮ್ಮ ಕೊಡಲಿಯನ್ನು, ಧನುರ್ಬಾಣಗಳನ್ನು ನೋಡಿ ನಾನು ಏನಾದರೂ ಅನುಚಿತವಾಗಿ ಮಾತಾಡಿದ್ದರೆ ಅದನ್ನು ಕ್ಷಮಿಸಿರಿ. ಇದನ್ನು ಕೇಳಿದ ಭೃಗುವಂಶಮಣಿ ಪರಶುರಾಮನು ಕ್ರೋಧಗಂಭೀರ ವಾಣಿಯಲ್ಲಿ ಇಂತೆಂದನು – (ದೋ/೨೭೩)

**ಚೌ – ಕೌಸಿಕ ಸುನಹು ಮಂದ ಯಹು ಬಾಲಕು । ಕುಟಿಲ ಕಾಲಬಸ ನಿಜ ಕುಲ ಘಾಲಕು ॥**
**ಭಾನು ಬಂಸ ರಾಕೇಸ ಕಲಂಕೂ । ನಿಪಟ ನಿರಂಕುಸ ಅಬುಧ ಅಸಂಕೂ ॥ ೧ ॥**

**ಕಾಲ ಕವಲು ಹೋಇಹಿ ಛನ ಮಾಹೀಂ । ಕಹಉಂ ಪುಕಾರಿ ಖೋರಿ ಮೊಹಿ ನಾಹೀಂ ॥**
**ತುಮ್ಹ ಹಟಕಹು ಜೌಂ ಚಹಹು ಉಬಾರಾ । ಕಹಿ ಪ್ರತಾಪು ಬಲು ರೋಷು ಹಮಾರಾ ॥ ೨ ॥**
**ಲಖನ ಕಹೇಉ ಮುನಿ ಸುಜಸು ತುಮ್ಹಾರಾ । ತುಮ್ಹಹಿ ಅಛತ ಕೋ ಬರನೈ ಪಾರಾ ॥**
**ಅಪನೇ ಮುಂಹ ತುಮ್ಹ ಆಪನಿ ಕರನೀ । ಬಾರ ಅನೇಕ ಭಾಂತಿ ಬಹು ಬರನೀ ॥ ೩ ॥**
**ನಹಿಂ ಸಂತೋಷು ತ ಪುನಿ ಕಛು ಕಹಹೂ । ಜನಿ ರಿಸ ರೋಕಿ ದುಸಹ ದುಖ ಸಹಹೂ ॥**
**ಬೀರಬ್ರತೀ ತುಮ್ಹ ಧೀರ ಅಛೋಭಾ । ಗಾರೀ ದೇತ ನ ಪಾವಹು ಸೋಭಾ ॥ ೪ ॥**

''ಓ ವಿಶ್ವಾಮಿತ್ರ! ಕೇಳು. ಈ ಬಾಲಕನು ಮಂದಬುದ್ಧಿಯವನು. ಕುಟಿಲನೂ, ಕಾಲವಶನಾಗಿ ತನ್ನ ಕುಲಕ್ಕೆ ಘಾತಕನಾಗಿರುವನು. ಇವನು ಭಾನುವಂಶದ ಪೂರ್ಣಚಂದ್ರನಿಗೆ ಕಳಂಕಪ್ರಾಯನು. ಇವನು ತೀರ ಉದ್ದಂಡ, ಮೂರ್ಖ ಹಾಗೂ ಯಾವುದೇ ಭಯಭಕ್ತಿಯಿಲ್ಲದವನು. ಈಗ ಕ್ಷಣಮಾತ್ರದಲ್ಲಿ ಇವನು ಕಾಲನಿಗೆ ಕವಳವಾಗುತ್ತಾನೆ. ನಾನು ಘಂಟಾಘೋಷವಾಗಿ ಹೇಳುತ್ತಿದ್ದೇನೆ. ಆಮೇಲೆ ನನ್ನನ್ನು ಯಾರೂ ದೂಷಿಸಬೇಡಿರಿ. ಇವನನ್ನು ನೀನು ಉಳಿಸಬೇಕೆಂದಿದ್ದರೆ, ಇವನಿಗೆ ನನ್ನ ಪ್ರತಾಪ, ಬಲ, ಕೋಪದ ಆಳವನ್ನು ತಿಳಿಸಿ ಅವನನ್ನು ಸುಮ್ಮನಾಗಿಸು.'' ಮರಳಿ ಲಕ್ಷ್ಮಣನು ಹೇಳಿದನು – ಎಲೈ ಮುನೀಶ್ವರಾ! ನಿಮ್ಮ ಯಶಸ್ಸನ್ನು ನೀವಲ್ಲದೆ ಬೇರೆ ಯಾರು ವರ್ಣಿಸಬಲ್ಲರು? ನೀವು ನಿಮ್ಮ ಬಾಯಿಂದಲೇ ಅನೇಕ ಸಲ ನಿಮ್ಮ ಪ್ರತಾಪವನ್ನು ಕೊಚ್ಚಿಕೊಂಡಿದ್ದಿರಲ್ಲ! ಇನ್ನೂ ತೃಪ್ತಿಯಾಗಿಲ್ಲವಾದರೆ ಮತ್ತೆ ಇನ್ನೊಮ್ಮೆ ಹೇಳಿಕೊಳ್ಳಿ. ನೀವು ಕೋಪವನ್ನು ತಡೆದು ಅಸಹ್ಯವಾದ ದುಃಖಕ್ಕೆ ಭಾಗಿಯಾಗಬೇಡಿರಿ. ನೀವು ವೀರರೂ, ಧೀರರೂ, ಕ್ಷೋಭರಹಿತರೂ ಆಗಿರುವಿರಿ. ಈ ವಿಧವಾಗಿ ದೂಷಿಸುವುದು ಸಮುಚಿತವಾಗಲಾರದು. (ಚೌ/೧-೪)

**ದೋ – ಸೂರ ಸಮರ ಕರನೀ ಕರಹಿಂ ಕಹಿ ನ ಜನಾವಹಿಂ ಆಪು ।**
**ಬಿದ್ಯಮಾನ ರನ ಪಾಇ ರಿಪು ಕಾಯರ ಕಥಹಿಂ ಪ್ರತಾಪು ॥ ೨೭೪ ॥**

ಪರಾಕ್ರಮಶಾಲಿಗಳಾದವರು ಯುದ್ಧದಲ್ಲಿ ಸೆಣಸುತ್ತಾರೆ. ತಮ್ಮ ಬಲಪರಾಕ್ರಮಗಳನ್ನು ಹೇಳಿಕೊಳ್ಳುವುದಿಲ್ಲ. ಶತ್ರುವನ್ನು ರಣದಲ್ಲಿ ಕಂಡು ಹೇಡಿಗಳು ಮಾತ್ರ ತಮ್ಮ ಪ್ರತಾಪವನ್ನು ಕೊಚ್ಚಿಕೊಳ್ಳುತ್ತಾರೆ. (ದೋ/೨೭೪)

**ಚೌ – ತುಮ್ಹ ತೌ ಕಾಲು ಹಾಂಕ ಜನು ಲಾವಾ । ಬಾರ ಬಾರ ಮೊಹಿ ಲಾಗಿ ಬೊಲಾವಾ ॥**
**ಸುನತ ಲಖನ ಕೇ ಬಚನ ಕಠೋರಾ । ಪರಸು ಸುಧಾರಿ ಧರೇಉ ಕರ ಘೋರಾ ॥ ೧ ॥**
**ಅಬ ಜನಿ ದೇಇ ದೋಸು ಮೊಹಿ ಲೋಗೂ । ಕಟುಬಾದೀ ಬಾಲಕು ಬಧಜೋಗೂ ॥**
**ಬಾಲ ಬಿಲೋಕಿ ಬಹುತ ಮೈಂ ಬಾಂಚಾ । ಅಬ ಯಹು ಮರನಿಹಾರ ಭಾ ಸಾಂಚಾ ॥ ೨ ॥**
**ಕೌಸಿಕ ಕಹಾ ಛಮಿಅ ಅಪರಾಧೂ । ಬಾಲ ದೋಷ ಗುನ ಗನಹಿಂ ನ ಸಾಧೂ ॥**
**ಖರ ಕುಠಾರ ಮೈಂ ಅಕರುನ ಕೋಹೀ । ಆಗೇಂ ಅಪರಾಧೀ ಗುರುದ್ರೋಹೀ ॥ ೩ ॥**
**ಉತರ ದೇತ ಛೋಡಉಂ ಬಿನು ಮಾರೇಂ । ಕೇವಲ ಕೌಸಿಕ ಸೀಲ ತುಮ್ಹಾರೇಂ ॥**
**ನ ತ ಎಹಿ ಕಾಟಿ ಕುಠಾರ ಕಠೋರೇಂ । ಗುರಹಿ ಉರಿನ ಹೋತೇಉಂ ಶ್ರಮ ಥೋರೇಂ ॥ ೪ ॥**

ಎಲೈ ಮುನೀಶ್ವರಾ! ನೀವಂತೂ ಮಾತು ಮಾತಿಗೆ ನನಗಾಗಿ ಕಾಲನನ್ನು ಕೂಗಿ ಕರೆಯುತ್ತಿರುವಿರಿ. ಲಕ್ಷ್ಮಣನ ಈ ಕಠೋರವಚನವನ್ನು ಕೇಳಿ, ಪರಶುರಾಮನು ತನ್ನ ಭಯಂಕರ ಗಂಡುಕೊಡಲಿಯನ್ನು ಸರಿಪಡಿಸಿಕೊಂಡು ಕೈಗೆ ಎತ್ತಿಕೊಂಡು ಹೇಳಿದನು – ''ಈಗ ನನ್ನನ್ನು ಯಾರೂ ನಿಂದಿಸದಿರಲಿ. ಕಟುವಾಗಿ ಮಾತಾಡುವ ಈ ಬಾಲಕನು ವಧಾರ್ಹನು. ಇವನು ಹಸುಳೆ ಎಂದು ನಾನು ಸುಮ್ಮನಿದ್ದೆ. ಆದರೆ ನಿಜವಾಗಿ ಇವನು ಸಾಯಲೆಂದೇ ಬಂದಿರುವನು.'' ಆಗ ವಿಶ್ವಾಮಿತ್ರರು ಹೇಳಿದರು – ''ಈತನ ಅಪರಾಧವನ್ನು ಮನ್ನಿಸಿರಿ. ಬಾಲಕರ ಗುಣದೋಷಗಳನ್ನು ಸಾಧುಗಳು ಲೆಕ್ಕಕ್ಕೆ ತೆಗೆದುಕೊಳ್ಳುವುದಿಲ್ಲ.'' ಇದನ್ನು ಕೇಳಿ ಪರಶುರಾಮನೆಂದನು – ''ನನ್ನ ಕೊಡಲಿಯು ತುಂಬಾ ಹರಿತವಾದುದು. ನಾನಾದರೋ ದಯಾರಹಿತನೂ, ಕೋಪಿಷ್ಠನು. ಈ ಗುರುದ್ರೋಹಿ, ಅಪರಾಧಿ ನನ್ನ ಮುಂದೆ ನಿಂತು ಇದಿರು ವಾದಿಸುತ್ತಿದ್ದಾನೆ. ಇಷ್ಟಾದರೂ ನಿಮ್ಮ ಮೇಲಿನ ಗೌರವದಿಂದ ನಾನು ಇವನನ್ನು ಕೊಲ್ಲದೆ ಬಿಟ್ಟಿರುವೆನು. ಹೇ ವಿಶ್ವಾಮಿತ್ರರೇ! ಕೇವಲ ನಿಮ್ಮ ಮೇಲಿನ ಪ್ರೇಮದಿಂದ ಮಾತ್ರ ಇವನನ್ನು ವಧಿಸದೇ ಇರುವೆನು. ಇಲ್ಲದಿದ್ದರೆ ಇವನನ್ನು ಈ ಕಠೋರ ಕುಠಾರದಿಂದ ತುಂಡರಿಸಿ ಅಲ್ಪ ಶ್ರಮದಿಂದ ಗುರುವಿನ ಋಣ ತೀರಿಸುತ್ತಿದ್ದೆ. (ಚೌ/೧-೪)

**ದೋ – ಗಾಧಿಸೂನು ಕಹ ಹೃದಯ್ ಹ್ಁಸಿ ಮುನಿಹಿ ಹರಿಅರಇ ಸೂಝು ।**
**ಅಯಮಯ ಖಾ್ಁಡ ನ ಊಖಮಯ ಅಜಹ್ಁ ನ ಬೂಝು ಅಬೂಝು ॥ ೨೭೫ ॥**

ವಿಶ್ವಾಮಿತ್ರರು ಮನದಲ್ಲೇ ನಕ್ಕು ಹೀಗೆ ಅಂದುಕೊಂಡರು – ಇವನ ಹಮ್ಮು ಇನ್ನೂ ಕರಗಿಲ್ಲ. ತನಗೆ ಯಾರೂ ಇಲ್ಲವೆಂದೇ ತಿಳಿಯುತ್ತಿರುವನು. ಅಂದರೆ, ಎಲ್ಲ ಕ್ಷತ್ರಿಯರನ್ನೂ ಜಯಿಸಿದಂತೆ ರಾಮ-ಲಕ್ಷ್ಮಣರನ್ನೂ ಕೂಡ ಸಾಧಾರಣ ಕ್ಷತ್ರಿಯರೆಂದು ತಿಳಿಯುತ್ತಿರುವನು. ಈ ಸೋದರರು ಕಬ್ಬಿಣದ ಖಡ್ಗವು, ಕಬ್ಬಿನದಲ್ಲ. ಮುನಿಗೆ ಇನ್ನೂ ತಿಳಿವಳಿಕೆ ಬರಲಿಲ್ಲವಲ್ಲ! ಇವರ ಪ್ರಭಾವ ಇವರಿಗೆ ತಿಳಿದೇ ಇಲ್ಲವಲ್ಲ! (ದೋ/೨೭೫)

**ಚೌ – ಕಹೆಉ ಲಖನ ಮುನಿ ಸೀಲು ತುಮ್ಹಾರಾ । ಕೋ ನಹಿ್ಁ ಜಾನ ಬಿದಿತ ಸಂಸಾರಾ ॥**
**ಮಾತಾ ಪಿತಹಿ ಉರಿನ ಭಏ ನೀಕೇ್ಁ । ಗುರ ರಿನು ರಹಾ ಸೋಚು ಬಡ ಜೀಕೇ್ಁ ॥ ೧ ॥**
**ಸೋ ಜನು ಹಮರೆಹಿ ಮಾಥೇ ಕಾಢಾ । ದಿನ ಚಲಿ ಗಏ ಬ್ಯಾಜ ಬಡ ಬಾಢಾ ॥**
**ಅಬ ಆನಿಅ ಬ್ಯವಹರಿಆ ಬೋಲೀ । ತುರತ ದೇಉ್ಁ ಮೈ್ಁ ಥೈಲೀ ಖೋಲೀ ॥ ೨ ॥**
**ಸುನಿ ಕಟು ಬಚನ ಕುಠಾರ ಸುಧಾರಾ । ಹಾಯ ಹಾಯ ಸಬ ಸಭಾ ಪುಕಾರಾ ॥**
**ಭೃಗುಬರ ಪರಸು ದೆಖಾವಹು ಮೋಹೀ । ಬಿಪ್ರ ಬಿಚಾರಿ ಬಚಉ್ಁ ನೃಪದ್ರೋಹಿ ॥ ೩ ॥**
**ಮಿಲೇ ನ ಕಬಹ್ಁ ಸುಭಟ ರನ ಗಾಢೇ । ದ್ವಿಜ ದೇವತಾ ಘರಹಿ ಕೇ ಬಾಢೇ ॥**
**ಅನುಚಿತ ಕಹಿ ಸಬ ಲೋಗ ಪುಕಾರೇ । ರಘುಪತಿ ಸಯನಹಿ್ಁ ಲಖನು ನೆವಾರೇ ॥ ೪ ॥**

ಲಕ್ಷ್ಮಣನು ನುಡಿದನು – ''ಮುನಿಗಳೇ! ನಿಮ್ಮ ಶೀಲ ಯಾರಿಗೆ ತಾನೇ ತಿಳಿಯದು? ಅದು ಲೋಕಪ್ರಸಿದ್ಧವಾಗಿದೆ. ನೀವು ತಂದೆ-ತಾಯಂದಿರ ಋಣವನ್ನಂತೂ ತೀರಿಸಿಬಿಟ್ಟಿದ್ದೀರಿ. ಇನ್ನು ಗುರುವಿನ ಋಣ ತೀರಿಸಲು ಬಾಕಿ ಇದೆ. ಅದಕ್ಕಾಗಿ ನೀವು ವಿಚಾರಮಾಡುತ್ತಿರುವಂತಿದೆ. ಬಹುಶಃ ಆ ಋಣವೂ ನಮ್ಮ ಮೂಲಕ ತೀರಿಸಬೇಕೆಂದಿರುವಿರಾ? ತುಂಬಾ ದಿನಗಳಾದವು. ಅದರ ಬಡ್ಡಿಯೂ ತುಂಬಾ ಬೆಳೆದಿರಬಹುದು. ಈಗ ಯಾರಾದರೂ ಲೆಕ್ಕಿಗನನ್ನು ಕರೆಯಿರಿ. ನಾನು ಈ ಕೂಡಲೇ ಥೈಲಿ ಬಿಚ್ಚಿ ತೀರಿಸಿಬಿಡುತ್ತೇನೆ.'' ಲಕ್ಷ್ಮಣನ ಕಟುವಚನವನ್ನು ಕೇಳಿ ಪರಶುರಾಮನು ತನ್ನ ಗಂಡುಕೊಡಲಿಯನ್ನು ಎತ್ತಿದನು. ಸಭೆಯಲ್ಲಿ ಹಾಹಾಕಾರವೆದ್ದಿತು. ಆಗ ಲಕ್ಷ್ಮಣ ಹೇಳಿದ – ''ಭೃಗುವರೇಣ್ಯರೇ! ನೀವು ನನ್ನ ಮೇಲೆ ಕೊಡಲಿಯನ್ನು ಎತ್ತಿರುವಿರಿ. ಆದರೆ ನೃಪದ್ರೋಹಿಯೇ! ನಾನು ನಿಮ್ಮನ್ನು ಬ್ರಾಹ್ಮಣನೆಂದು ಕೊಲ್ಲದೆ ಬಿಡುತ್ತಿದ್ದೇನೆ. ನಿಮಗೆ ಇಷ್ಟರವರೆಗೆ ಸರಿಯಾದ ಪರಾಕ್ರಮಿಗಳಾದ ರಣಧೀರರು ಯಾರೂ ಸಿಗಲಿಲ್ಲವೆಂದು ತೋರುತ್ತದೆ. ಎಲೈ ಭೂಸುರರೇ! ನೀವು ನಿಮ್ಮ ಮನೆಯಲ್ಲೇ ದೊಡ್ಡವರು.' ಇದನ್ನು ಕೇಳಿ ''ಅನುಚಿತ! ಅನುಚಿತ!'' ಎಂದು ಎಲ್ಲ ಜನರೂ ಕೂಗಿದರು. ಆಗ ಶ್ರೀರಾಮನು 'ಸುಮ್ಮನಿರು' ಎಂದು ಲಕ್ಷ್ಮಣನನ್ನು ಸನ್ನೆಯಿಂದಲೇ ತಡೆದನು. (ಚೌ/೧-೪)

**ದೋ – ಲಖನ ಉತರ ಆಹುತಿ ಸರಿಸ ಭೃಗುಬರ ಕೋಪು ಕೃಸಾನು ।**
**ಬಢತ ದೇಖಿ ಜಲ ಸಮ ಬಚನ ಬೋಲೇ ರಘುಕುಲಭಾನು ॥ ೨೭೬ ॥**

ಲಕ್ಷ್ಮಣನ ಮಾತೆಂಬ ಆಜ್ಯದಿಂದ ಪರಶುರಾಮರ ಕ್ರೋಧಾಗ್ನಿಯು ಭುಗಿಲೆದ್ದಿತು. ಅದನ್ನು ನಂದಿಸಲು ಶ್ರೀರಾಮನು ನೀರಿನಂತಹ ಶೀತಲ ಮಾತುಗಳನ್ನಾಡಿದನು. (ದೋ/೨೭೬)

**ಚೌ – ನಾಥ ಕರಹು ಬಾಲಕ ಪರ ಛೋಹೂ । ಸೂಧ ದೂಧಮುಖ ಕರಿಅ ನ ಕೋಹೂ ॥**
**ಜೌ್ಁ ಪೈ ಪ್ರಭು ಪ್ರಭಾಉ ಕಛು ಜಾನಾ । ತೌ ಕಿ ಬರಾಬರಿ ಕರತ ಅಯಾನಾ ॥ ೧ ॥**
**ಜೌ್ಁ ಲರಿಕಾ ಕಛು ಅಚಗರಿ ಕರಹೀ್ಁ । ಗುರು ಪಿತು ಮಾತು ಮೋದ ಮನ ಭರಹೀ್ಁ ॥**
**ಕರಿಅ ಕೃಪಾ ಸಿಸು ಸೇವಕ ಜಾನೀ । ತುಮ್ಹ ಸಮ ಸೀಲ ಧೀರ ಮುನಿ ಗ್ಯಾನೀ ॥ ೨ ॥**
**ರಾಮ ಬಚನ ಸುನಿ ಕಛುಕ ಜುಡಾನೇ । ಕಹಿ ಕಛು ಲಖನು ಬಹುರಿ ಮುಸುಕಾನೇ ॥**
**ಹ್ಁಸತ ದೇಖಿ ನಖ ಸಿಖ ರಿಸ ಬ್ಯಾಪೀ । ರಾಮ ತೋರ ಭ್ರಾತಾ ಬಡ ಪಾಪೀ ॥ ೩ ॥**
**ಗೌರ ಸರೀರ ಸ್ಯಾಮ ಮನ ಮಾಹೀ್ಁ । ಕಾಲಕೂಟಮುಖ ಪಯಮುಖ ನಾಹೀ್ಁ ॥**
**ಸಹಜ ಟೇಢ ಅನುಹರಇ ನ ತೋಹೀ । ನೀಚು ಮೀಚು ಸಮ ದೇಖ ನ ಮೋಹೀ ॥ ೪ ॥**

''ಪೂಜ್ಯರೇ! ಬಾಲಕನ ಮೇಲೆ ಕೃಪೆಮಾಡಿರಿ. ಈ ಸರಳ ಹಾಲುಹಸುಳೆಯ ಮೇಲೆ ಕೋಪಮಾಡಬೇಡಿ. ನಿಮ್ಮ ಪ್ರತಾಪವನ್ನು ಏನೂ ಅರಿಯದ ಕಾರಣದಿಂದ ನಿಮ್ಮನ್ನು ಇದಿರಿಸಿ ಈ ರೀತಿ ಮಾತಾಡಿರುವನು. ಮಕ್ಕಳು ಏನಾದರೂ ತುಂಟತನ ಮಾಡಿದರೆ ಗುರುಹಿರಿಯರು, ತಂದೆ ತಾಯಿಯರು, ಮನದಲ್ಲೇ ಹಿಗ್ಗಿಹೋಗುತ್ತಾರೆ. ಆದ್ದರಿಂದ ಇವನು ಎಳೆಯ ಮಗು, ಸೇವಕನೆಂದು ಬಗೆದು ಕೃಪೆಮಾಡಿರಿ. ನೀವು ಸಮದರ್ಶಿಗಳೂ, ಸುಶೀಲರೂ, ಧೀರರೂ, ಜ್ಞಾನಿಗಳಾದ ಮುನಿಗಳೂ ಆಗಿರುವಿರಿ.'' ಶ್ರೀರಾಮನ ಮಾತುಕೇಳಿ ಪರಶುರಾಮನು ಕೊಂಚ ತಣ್ಣಗಾದನು. ಅಷ್ಟರಲ್ಲಿ ಲಕ್ಷ್ಮಣನು ಏನನ್ನೋ ಹೇಳಿ ಮುಗುಳ್ನಕ್ಕ. ಅವನು ನಗುತ್ತಿರುವುದನ್ನು ಕಂಡು ಪರಶುರಾಮರ ಕ್ರೋಧ ನಖ-ಶಿಖಾಂತವೇರಿತು. ಅವರೆಂದರು – ರಾಮಾ! ನಿನ್ನ ತಮ್ಮ ದೊಡ್ಡ ಪಾಪಿ. ಇವನು ನೋಡಲು ಬೆಳ್ಳಗಿದ್ದಾನೆ. ಆದರೆ ಅವನ ಹೃದಯ ಕಪ್ಪು. ಇವನು ಹಾಲು ಹಸುಳೆಯಲ್ಲ, ವಿಷನಾಗನು. ಸ್ವಾಭಾವಿಕವಾಗಿಯೇ ಇವನ ವಕ್ರಬುದ್ಧಿ. ನಿನ್ನನ್ನು ಅನುಸರಿಸುತ್ತಿಲ್ಲ, ನಿನ್ನಂತಲ್ಲ. ಈ ಅಧಮನು ನಾನು ಸಾಕ್ಷಾತ್‌ಕಾಲನೆಂಬುದನ್ನು ಅರಿಯನು. (ಚೌ/೧-೪)

**ದೋ – ಲಖನ ಕಹೆಉ ಹ॑ಸಿ ಸುನಹು ಮುನಿ ಕ್ರೋಧು ಪಾಪ ಕರ ಮೂಲ ।**
**ಜೆಹಿ ಬಸ ಜನ ಅನುಚಿತ ಕರಹಿ॑ ಚರಹಿ॑ ಬಿಸ್ವ ಪ್ರತಿಕೂಲ ॥ ೨೭೭ ॥**

ಲಕ್ಷ್ಮಣನು ನಕ್ಕು ನುಡಿದನು – ''ಮುನೀಶ್ವರರೇ! ಕೇಳಿ, ಕೋಪವು ಪಾಪಗಳ ಮೂಲ. ಅದಕ್ಕೆ ವಶನಾದವನು ದುಷ್ಕರ್ಮಗಳನ್ನು ಮಾಡುತ್ತಾನೆ. ಅವನು ಲೋಕಕ್ಕೆ ಕೇಡನ್ನೇ ಬಗೆಯುತ್ತಾನೆ. (ದೋ/೨೭೭)

**ಚೌ – ಮೈ॑ ತುಮ್ಹಾರ ಅನುಚರ ಮುನಿರಾಯಾ । ಪರಿಹರಿ ಕೋಪು ಕರಿಅ ಅಬ ದಾಯಾ ॥**
**ಟೂಟ ಚಾಪ ನಹಿ॑ ಜುರಿಹಿ ರಿಸಾನೇ । ಬೈಠಿಅ ಹೋಇಹಿ॑ ಪಾಯ ಪಿರಾನೇ ॥ ೧ ॥**
**ಜೌ॑ ಅತಿ ಪ್ರಿಯ ತೌ ಕರಿಅ ಉಪಾಈ । ಜೋರಿಅ ಕೋಉ ಬಡ ಗುನೀ ಬೊಲಾಈ ॥**
**ಬೋಲತ ಲಖನಹಿ॑ ಜನಕು ಡೆರಾಹೀ॑ । ಮಷ್ಟ ಕರಹು ಅನುಚಿತ ಭಲ ನಾಹೀ॑ ॥ ೨ ॥**
**ಥರ ಥರ ಕಾ॑ಪಹಿ॑ ಪುರ ನರ ನಾರೀ । ಛೋಟ ಕುಮಾರ ಖೋಟ ಬಡ ಭಾರೀ ॥**
**ಭೃಗುಪತಿ ಸುನಿ ಸುನಿ ನಿರಭಯ ಬಾನೀ । ರಿಸ ತನ ಜರಇ ಹೋಇ ಬಲ ಹಾನೀ ॥ ೩ ॥**
**ಬೋಲೇ ರಾಮಹಿ ದೇಇ ನಿಹೋರಾ । ಬಚಉ॑ ಬಿಚಾರಿ ಬಂಧು ಲಘು ತೋರಾ ॥**
**ಮನು ಮಲೀನ ತನು ಸುಂದರ ಕೈಸೇ॑ । ಬಿಷ ರಸ ಭರಾ ಕನಕ ಘಟು ಜೈಸೇ॑ ॥ ೪ ॥**

ಮುನಿವರ್ಯರೇ! ನಾನು ನಿಮ್ಮ ದಾಸನಾಗಿರುವೆನು. ತಾವು ಕ್ರೋಧವನ್ನು ತೊರೆದು ನನ್ನ ಮೇಲೆ ದಯೆತೋರಿರಿ. ಮುರಿದುಹೋದ ಬಿಲ್ಲು ಮುನಿದರೆ ಸರಿಯಾದೀತೇ? ನಿಂತೂ-ನಿಂತೂ ಕಾಲು ನೋಯುತ್ತಿರಬಹುದು. ಕೊಂಚ ಕುಳಿತುಕೊಳ್ಳಬಾರದೆ? ಈ ಬಿಲ್ಲು ನಿಮಗೆ ಇಷ್ಟೊಂದು ಪ್ರಿಯವಾಗಿದ್ದರೆ, ಬೇರೇನಾದರೂ ಉಪಾಯ ಮಾಡಬಹುದು. ಯಾವನಾದರೂ ಒಳ್ಳೆಯ ಕುಶಲಕರ್ಮಿಯನ್ನು ಕರೆಸಿ ಅವನಿಂದ ಜೋಡಿಸಬಹುದು.'' ಲಕ್ಷ್ಮಣನ ಮಾತುಗಳಿಂದ ಭಯಗೊಂಡ ಜನಕ ಮಹಾರಾಜನು ''ಲಕ್ಷ್ಮಣಾ! ದಯಮಾಡಿ ವಾಗ್ವಿವಾದ ನಿಲ್ಲಿಸಿಬಿಡು. ಹದ್ದುಮೀರುವುದು ಉಚಿತವಲ್ಲ'' ಎಂದನು. ಮಿಥಿಲೆಯ ಪ್ರಜಾಜನರು ಗಡ-ಗಡ ನಗುತ್ತಿದ್ದರು. 'ಈ ಸಣ್ಣವನು ನಿಜವಾಗಿ ತುಂಬಾ ತುಂಟನಾಗಿದ್ದಾನೆ' ಎಂದು ಮನಸ್ಸಿನಲ್ಲೇ ಎಣಿಸಿದರು. ಲಕ್ಷ್ಮಣನ ನಿರ್ಭಯವಾದ ಮಾತನ್ನು ಕೇಳಿ, ಪರಶುರಾಮನ ಶರೀರವು ಸಿಟ್ಟಿನಿಂದ ಉರಿದು ಹೋಗುತ್ತಿತ್ತು. ಅವನ ಕೋಪವು ಅವನನ್ನೇ ತಿನ್ನತೊಡಗಿತು. ಅವನ ಶಕ್ತಿ ಉಡುಗಿಹೋಗುತ್ತಿತ್ತು. ಆಗ ಶ್ರೀರಾಮನ ಮೇಲೆ ದಯೆತೋರುತ್ತಿರುವವನಂತೆ ಪರಶುರಾಮನಿಂತೆಂದನು – ಇವನು ನಿನ್ನ ತಮ್ಮನೆಂದು ತಿಳಿದು ಸುಮ್ಮನಿದ್ದೇನೆ. ಈತನ ಶರೀರವು ಅಂದವಾಗಿದೆ, ಆದರೆ ಮನಸ್ಸು ಮಲಿನವಾಗಿದೆ. ಇವನು ವಿಷತುಂಬಿದ ಚಿನ್ನದ ಗಡಿಗೆಯಂತಿದ್ದಾನೆ ('ಪಯೋಮುಖ ವಿಷಕುಂಭಮ್'). (ಚೌ/೧-೪)

**ದೋ – ಸುನಿ ಲಛಿಮನ ಬಿಹಸೇ ಬಹುರಿ ನಯನ ತರೇರೇ ರಾಮ ।**
**ಗುರ ಸಮೀಪ ಗವನೇ ಸಕುಚಿ ಪರಿಹರಿ ಬಾನೀ ಬಾಮ ॥ ೨೭೮ ॥**

ಈ ಮಾತನ್ನು ಕೇಳಿ ಲಕ್ಷ್ಮಣನು ಮರಳಿ ನಕ್ಕುಬಿಟ್ಟನು. ಆಗ ಶ್ರೀರಾಮಚಂದ್ರನು ಅವನಿಗೆ ಕಣ್ಸನ್ನೆಮಾಡಿ ಸುಮ್ಮನಾಗಿಸಿದನು. ಅದರಿಂದ ಲಕ್ಷ್ಮಣನು ಹಿಂಜರಿದು ಕುಹಕದ ಮಾತನ್ನು ಬಿಟ್ಟು ಗುರುವಿನ ಬಳಿಗೆ ಹೋದನು. (ದೋ/೨೭೮)

**ಚೌ – ಅತಿ ಬಿನೀತ ಮೃದು ಸೀತಲ ಬಾನೀ । ಬೋಲೇ ರಾಮು ಜೋರಿ ಜುಗ ಪಾನೀ ॥**
**ಸುನಹು ನಾಥ ತುಮ್ಹ ಸಹಜ ಸುಜಾನಾ । ಬಾಲಕ ಬಚನು ಕರಿಅ ನಹಿ॑ ಕಾನಾ ॥ ೧ ॥**

ಬರರೈ ಬಾಲಕು ಏಕು ಸುಭಾಊ । ಇನ್ಹಹಿ ನ ಸಂತ ಬಿದೂಷಹಿಂ ಕಾಊ ॥
ತೆಹಿಂ ನಾಹೀಂ ಕಛು ಕಾಜ ಬಿಗಾರಾ । ಅಪರಾಧೀ ಮೈಂ ನಾಥ ತುಮ್ಹಾರಾ ॥ ೨ ॥
ಕೃಪಾ ಕೋಪು ಬಧು ಬಂಧಬ ಗೊಸಾಈಂ । ಮೋ ಪರ ಕರಿಅ ದಾಸ ಕೀ ನಾಈಂ ॥
ಕಹಿಅ ಬೇಗಿ ಜೆಹಿ ಬಿಧಿ ರಿಸ ಜಾಈ । ಮುನಿನಾಯಕ ಸೊಇ ಕರೌಂ ಉಪಾಈ ॥ ೩ ॥
ಕಹ ಮುನಿ ರಾಮ ಜಾಇ ರಿಸ ಕೈಸೇಂ । ಅಜಹುಁ ಅನುಜ ತವ ಚಿತವ ಅನೈಸೇಂ ॥
ಏಹಿ ಕೇಂ ಕಂಠ ಕುಠಾರು ನ ದೀನ್ಹಾ । ತೌ ಮೈಂ ಕಾಹ ಕೋಪು ಕರಿ ಕೀನ್ಹಾ ॥ ೪ ॥

ಶ್ರೀರಾಮಚಂದ್ರನು ಎರಡೂ ಕೈಗಳನ್ನು ಜೋಡಿಸಿ ಅತ್ಯಂತ ವಿನಯದಿಂದ ಶೀತಲ ಮಧುರ ವಚನಗಳನ್ನು ಹೇಳಿದನು – ಪೂಜ್ಯರೇ! ನೀವು ಸ್ವಭಾವತಃ ಸುಜನರು. ಬಾಲಕನ ಮಾತಿಗೆ ಕಿವಿಗೊಡಬಾರದು. ಕಣಜದ ಹುಳ ಮತ್ತು ಬಾಲಕರು ಇವರಿಬ್ಬರದೂ ಒಂದೇ ಸ್ವಭಾವ. ಸಂತರು ಇವರ ದೋಷಗಳನ್ನು ಪರಿಗಣಿಸುವುದಿಲ್ಲ. ಅದೂ ಅಲ್ಲದೆ ಲಕ್ಷ್ಮಣನು ಅಂತಹ ಕೆಟ್ಟದೇನನ್ನೂ ಮಾಡಿಲ್ಲ. ನಿಜವಾದ ನಿಮ್ಮ ಅಪರಾಧಿಯು ನಾನಾಗಿದ್ದೇನೆ. ಆದ್ದರಿಂದ ಸ್ವಾಮಿ! ಕೃಪೆ, ಕ್ರೋಧ, ವಧೆ, ಬಂಧನ ಏನನ್ನೂ ಮಾಡುವುದಾದರೂ, ದಾಸನೆಂದು ತಿಳಿದು ನನ್ನ ಮೇಲೆ ಮಾಡಿರಿ. ನಿಮ್ಮ ಕೋಪವು ಶಾಂತವಾಗುವ ಉಪಾಯವನ್ನು ತಿಳಿಸಿರಿ. ನಾನು ಕೂಡಲೇ ಅದನ್ನು ಮಾಡುತ್ತೇನೆ. ಮುನಿಯು ಸಮಾಧಾನವಾಗದೆ ಹೇಳಿದನು – ರಾಮಾ! ನನ್ನ ಕ್ರೋಧವು ಹೇಗೆ ಶಾಂತವಾದೀತು? ಈಗಲೂ ನಿನ್ನ ತಮ್ಮ ವಕ್ರವಾಗಿಯೇ ನೋಡುತ್ತಿದ್ದಾನೆ. ಇವನ ಕೊರಳಮೇಲೆ ಕೊಡಲಿ ಹಾಯಿಸದಿದ್ದರೆ ಸಿಟ್ಟು ಮಾಡಿಯೂ ಏನು ಪ್ರಯೋಜನ? (ಚೌ/೧-೪)

**ದೋ – ಗರ್ಭ ಸ್ರವಹಿಂ ಅವನಿಪ ರವನಿ ಸುನಿ ಕುಠಾರ ಗತಿ ಘೋರ ।**
**ಪರಸು ಅಛತ ದೇಖಉಁ ಜಿಅತ ಬೈರೀ ಭೂಪಕಿಸೋರ ॥ ೨೭೯ ॥**

ನನ್ನ ಗಂಡುಕೊಡಲಿಗೈದ ಘೋರವಾದ ಕೃತ್ಯವನ್ನು ಕೇಳಿದ ಮಾತ್ರದಿಂದಲೇ ಅವನಿಪರ ರಮಣಿಯರಿಗೆ ಗರ್ಭಪಾತವಾಗುತ್ತದೆ. ಇಂತಹ ಕೊಡಲಿ ಇದ್ದರೂ ಈ ಶತ್ರುವಾದ ರಾಜಕುಮಾರನು ಜೀವಸಹಿತ ಇರುವುದನ್ನು ಕಣ್ಣಾರೆ ಕಾಣುತ್ತಿದ್ದೇನಲ್ಲ! (ದೋ/೨೭೯)

ಚೌ – ಬಹಇ ನ ಹಾಥು ದಹಇ ರಿಸ ಛಾತೀ । ಭಾ ಕುಠಾರು ಕುಂಠಿತ ನೃಪಘಾತೀ ॥
ಭಯಉ ಬಾಮ ಬಿಧಿ ಫಿರೆಉ ಸುಭಾಊ । ಮೋರೇ ಹೃದಯಁ ಕೃಪಾ ಕಸಿ ಕಾಊ ॥ ೧ ॥
ಆಜು ದಯಾ ದುಖು ದುಸಹ ಸಹಾವಾ । ಸುನಿ ಸೌಮಿತ್ರಿ ಬಿಹಸಿ ಸಿರು ನಾವಾ ॥
ಬಾಉ ಕೃಪಾ ಮೂರತಿ ಅನುಕೂಲಾ । ಬೋಲತ ಬಚನ ಝರತ ಜನು ಫೂಲಾ ॥ ೨ ॥
ಜೌಂ ಪೈ ಕೃಪಾಁ ಜರಿಹಿಂ ಮುನಿ ಗಾತಾ । ಕ್ರೋಧ ಭಏಁ ತನು ರಾಖ ಬಿಧಾತಾ ॥
ದೇಖು ಜನಕ ಹಠಿ ಬಾಲಕು ಏಹೂ । ಕೀನ್ಹ ಚಹತ ಜಡ ಜಮಪುರ ಗೇಹೂ ॥ ೩ ॥
ಬೇಗಿ ಕರಹು ಕಿನ ಆಁಖಿನ್ಹ ಓಟಾ । ದೇಖತ ಛೋಟ ಖೋಟ ನೃಪು ಢೋಟಾ ॥
ಬಿಹಸೇ ಲಖನು ಕಹಾ ಮನ ಮಾಹೀಂ । ಮೂದೇಂ ಆಁಖಿ ಕತಹುಁ ಕೋಉ ನಾಹೀಂ ॥ ೪ ॥

ಸಿಟ್ಟಿನಿಂದ ಎದೆ ಉರಿದು ಹೋಗುತ್ತಿದ್ದರೂ ನನ್ನ ಕೈ ಏಳೊಲ್ಲ! ಆಯ್ಯೋ! ನೃಪಘಾತುಕವಾದ ಈ ಕುಠಾರವೂ ಕೂಡ ಇಂದು ಕುಂಠಿತವಾಯಿತೇ? ವಿಧಿಯು ನನಗೆ ವ್ಯತಿರೇಕವಾಯಿತು. ಇದರಿಂದ ನನ್ನ ಸ್ವಭಾವವೇ ಬದಲಾಯಿತು. ಇಲ್ಲದಿದ್ದರೆ ನನ್ನ ಹೃದಯದಲ್ಲಿ ಬೇರೆಯವರ ಕುರಿತು ಎಂದಾದರೂ ಮರುಕ ಮೂಡುತ್ತಿತ್ತೇ? ಇಂದು ಈ ದಯೆಯು ನನಗೆ ದುಸ್ಸಹವಾದ ದುಃಖವನ್ನು ಸಹಿಸುವಂತೆ ಮಾಡುತ್ತಿದೆ. ಇದನ್ನು ಕೇಳಿ ಲಕ್ಷ್ಮಣನು ತಲೆಬಾಗಿ ಮುಗುಳ್ನಕ್ಕು ಇಂತೆಂದನು – ''ನಿಮ್ಮ ಕೃಪಾವಾಯುವೂ ಕೂಡ ನಿಮ್ಮ ಮೂರ್ತಿಗೆ ತಕ್ಕುದಾಗಿದೆ. ನೀವು ಮಾತಾಡಿದರೆ ಹೂವುಗಳು ಉದುರಿದಂತೆ ಇದೆ. ಓ ಮುನೀಶ್ವರಾ! ಕೃಪೆದೋರಿದರೂ ನಿಮ್ಮ ಮೈ ಉರಿದರೆ, ಕೋಪ ಬಂದಾಗ ನಿಮ್ಮ ಶರೀರವನ್ನು ವಿಧಾತನೇ ರಕ್ಷಿಸಬೇಕು.'' ಆಗ ಪರಶುರಾಮನು ಹೇಳಿದನು – ''ಅಯ್ಯೋ ಜನಕಾ! ನೋಡು. ಈ ಮೂರ್ಖ ಬಾಲಕನು ಹಟಹಿಡಿದು ಯಮಲೋಕದಲ್ಲಿ ಮನೆಮಾಡಲು ಬಯಸುತ್ತಿರುವನು. ಇವನನ್ನು ನನ್ನ ಕಣ್ಣಮುಂದಿನಿಂದ ಏಕೆ ತೊಲಗಿಸುವುದಿಲ್ಲ? ಈ ರಾಜಕುಮಾರನು ನೋಡಲು ಚಿಕ್ಕವನು, ಆದರೆ ಭಾರೀ ತುಂಟನಾಗಿದ್ದಾನೆ.'' ಲಕ್ಷ್ಮಣನು ನಕ್ಕು ತನ್ನಲ್ಲೇ ಅಂದುಕೊಂಡನು, 'ಕಣ್ಣು ಮುಚ್ಚಿಕೊಂಡರೆ ಏನೂ ಕಾಣುವುದಿಲ್ಲವಲ್ಲ!'' (ಚೌ/೧-೪)

**ದೋ – ಪರಸುರಾಮು ತಬ ರಾಮ ಪ್ರತಿ ಬೋಲೇ ಉರ ಅತಿ ಕ್ರೋಧು।**
**ಸಂಭು ಸರಾಸನು ತೋರಿ ಸಠ ಕರಸಿ ಹಮಾರ ಪ್ರಬೋಧು॥ ೨೮೦ ॥**

ಆಗ ಪರಶುರಾಮನು ಅತ್ಯಂತ ಕುಪಿತನಾಗಿ ಶ್ರೀರಾಮನಿಗೆ ಹೇಳಿದನು – ಎಲವೋ ಮೂರ್ಖ! ನೀನೇ ಶಿವಧನುಸ್ಸನ್ನು ಮುರಿದು, ತಿರುಗಿ ನನಗೇ ಬುದ್ಧಿ ಹೇಳುತ್ತಿರುವೆಯಲ್ಲ? (ದೋ/೨೮೦)

**ಚೌ – ಬಂಧು ಕಹಇ ಕಟು ಸಮ್ಮತ ತೋರೇಂ। ತೂ ಛಲ ಬಿನಯ ಕರಸಿ ಕರ ಜೋರೇಂ॥**
**ಕರು ಪರಿತೋಷು ಮೋರ ಸಂಗ್ರಾಮಾ। ನಾಹಿಂ ತ ಛಾಡ ಕಹಾಉಬ ರಾಮಾ॥ ೧ ॥**
**ಛಲು ತಜಿ ಕರಹಿ ಸಮರು ಸಿವದ್ರೋಹೀ। ಬಂಧು ಸಹಿತ ನ ತ ಮಾರಉಂ ತೋಹೀ॥**
**ಭೃಗುಪತಿ ಬಕಹಿಂ ಕುಠಾರ ಉಠಾಏಂ। ಮನ ಮುಸುಕಾಹಿಂ ರಾಮು ಸಿರ ನಾಏಂ॥ ೨ ॥**
**ಗುನಹ ಲಖನ ಕರ ಹಮ ಪರ ರೋಷೂ। ಕತಹುಂ ಸುಧಾಇಹು ತೇ ಬಡ ದೋಷೂ ॥**
**ಟೇಢ಼ ಜಾನಿ ಸಬ ಬಂದಇ ಕಾಹೂ। ಬಕ್ರ ಚಂದ್ರಮಹಿ ಗ್ರಸಇ ನ ರಾಹೂ ॥ ೩ ॥**
**ರಾಮ ಕಹೆಉ ರಿಸ ತಜಿಅ ಮುನೀಸಾ। ಕರ ಕುಠಾರು ಆಗೇಂ ಯಹ ಸೀಸಾ ॥**
**ಜೆಹಿಂ ರಿಸ ಜಾಇ ಕರಿಅ ಸೋಇ ಸ್ವಾಮೀ। ಮೋಹಿ ಜಾನಿಅ ಆಪನ ಅನುಗಾಮೀ॥ ೪ ॥**

ನಿನ್ನ ಈ ತಮ್ಮನು ನಿನ್ನ ಸಮ್ಮತಿಯಿಲ್ಲದೆ ಈ ರೀತಿ ಕಟುವಾಗಿ ಮಾತಾಡುತ್ತಾನೆಯೇ? ನೀನು ಮಾತ್ರ ಬೂಟಾಟಿಕೆಯಿಂದ ಕೈಮುಗಿದು ಬೇಡಿಕೊಳ್ಳುತ್ತಿರುವೆ. ಒಂದೋ ನೀನು ಯುದ್ಧದಲ್ಲಿ ನನ್ನನ್ನು ಮೆಚ್ಚಿಸು. ಇಲ್ಲವೇ 'ರಾಮ' ಎಂಬ ನಿನ್ನ ಹೆಸರನ್ನು ಬಿಟ್ಟುಬಿಡು. ಎಲವೋ ಶಿವದ್ರೋಹಿಯೇ! ಕಪಟವನ್ನು ತೊರೆದು ನನ್ನೊಡನೆ ಯುದ್ಧಮಾಡು. ಇಲ್ಲವಾದರೆ ಸೋದರನ ಸಹಿತ ನಿನ್ನನ್ನು ಯಮಸದನಕ್ಕೆ ಕಳಿಸುತ್ತೇನೆ. ಈ ಪ್ರಕಾರ ಪರಶುರಾಮನು ತನ್ನ ಕೊಡಲಿಯನ್ನು ಎತ್ತಿಕೊಂಡು ಮಿತಿಮೀರಿ ಮಾತಾಡುತ್ತಿದ್ದಾನೆ. ಶ್ರೀರಾಮನು ತಲೆತಗ್ಗಿಸಿ ಮನಸ್ಸಿನಲ್ಲೇ ನಗುತ್ತಿದ್ದನು. ಅವನು ಮನಸ್ಸಿನಲ್ಲೇ ಅಂದುಕೊಂಡನು – ತಪ್ಪು ಲಕ್ಷ್ಮಣನದು, ಆದರೆ ಕೋಪ ನನ್ನಮೇಲೆ ಮಾಡುತ್ತಿದ್ದಾನೆ. ಕೆಲವೊಮ್ಮೆ ಸರಳತೆ (ಮೆತ್ತಗಿರುವುದು)ಯಲ್ಲಿಯೂ ದೊಡ್ಡ ದೋಷವಿರುತ್ತದೆ. ಅದಕ್ಕಾಗಿಯೇ ವಕ್ರಬುದ್ಧಿ ಇರುವವರಿಗೆ ಜನರೆಲ್ಲರೂ ಗೌರವಿಸುತ್ತಾರೆ. ವಕ್ರನಾದ ಚಂದ್ರನನ್ನು (ಬಿದಿಗೆಚಂದ್ರನನ್ನು) ರಾಹುವೂ ನುಂಗುವುದಿಲ್ಲ (ಗ್ರಹಣ ಪೌರ್ಣಮಿಗೇ ಆಗುತ್ತದೆ, ಬಿದಿಗೆಗಲ್ಲ). ಬಳಿಕ ಶ್ರೀರಾಮನು ಬಾಯಿಬಿಟ್ಟು ಹೇಳಿದನು – ''ಮುನೀಶ್ವರರೇ! ಕೋಪವನ್ನು ತೊರೆಯಿರಿ. ನಿಮ್ಮ ಕೈಯಲ್ಲಿ ಕೊಡಲಿ ಇದೆ. ಎದುರಿಗೆ ನನ್ನ ತಲೆ ಇದೆ. ನಿಮ್ಮ ಕೋಪವು ಶಾಂತವಾಗುವಂತೆ ಮಾಡಿರಿ. ನಾನು ನಿಮ್ಮ ಅನುಚರ (ದಾಸ)ನೆಂದೇ ತಿಳಿಯಿರಿ. (ಚೌ/೧-೪)

**ದೋ – ಪ್ರಭುಹಿ ಸೇವಕಹಿ ಸಮರು ಕಸ ತಜಹು ಬಿಪ್ರಬರ ರೋಸು।**
**ಬೇಷು ಬಿಲೋಕೇಂ ಕಹೆಸಿ ಕಛು ಬಾಲಕಹೂ ನಹಿಂ ದೋಸು॥ ೨೮೧ ॥**

ಸ್ವಾಮಿ-ಸೇವಕರ ನಡುವೆ ಯುದ್ಧವು ಹೇಗೆ ಸಂಭವಿಸುವುದು? ವಿಪ್ರವರ್ಯರೇ! ಕ್ರೋಧವನ್ನು ಬಿಡಿರಿ. ನಿಮ್ಮ ವೀರೋಚಿತ ವೇಷವನ್ನು ನೋಡಿಯೇ ಈ ಬಾಲಕನು ಏನೇನೋ ಮಾತಾಡಿದನು. ನಿಜವಾಗಿ ನೋಡಿದರೆ ಅವನ ದೋಷವೂ ಇಲ್ಲ. (ದೋ/೨೮೧)

**ಚೌ – ದೇಖಿ ಕುಠಾರ ಬಾನ ಧನು ಧಾರೀ। ಭೈ ಲರಿಕಹಿ ರಿಸ ಬೀರು ಬಿಚಾರೀ ॥**
**ನಾಮು ಜಾನ ಪೈ ತುಮ್ಹಹಿ ನ ಚೀನ್ಹಾ। ಬಂಸ ಸುಭಾಯ್ ಉತರು ತೆಹಿಂ ದೀನ್ಹಾ ॥ ೧ ॥**
**ಜೌಂ ತುಮ್ಹ ಔತೆಹು ಮುನಿ ಕೀ ನಾಈಂ। ಪದ ರಜ ಸಿರ ಸಿಸು ಧರತ ಗೊಸಾಈಂ॥**
**ಛಮಹು ಚೂಕ ಅನಜಾನತ ಕೇರೀ। ಚಹಿಅ ಬಿಪ್ರ ಉರ ಕೃಪಾ ಘನೇರೀ॥ ೨ ॥**
**ಹಮಹಿ ತುಮ್ಹಹಿ ಸರಿಬರಿ ಕಸಿ ನಾಥಾ। ಕಹಹು ನ ಕಹಾಂ ಚರನ ಕಹಂ ಮಾಥಾ ॥**
**ರಾಮ ಮಾತ್ರ ಲಘು ನಾಮ ಹಮಾರಾ। ಪರಸು ಸಹಿತ ಬಡ ನಾಮ ತೊಹಾರಾ ॥ ೩ ॥**
**ದೇವ ಏಕು ಗುನು ಧನುಷ ಹಮಾರೇಂ। ನವ ಗುನ ಪರಮ ಪುನೀತ ತುಮ್ಹಾರೇಂ॥**
**ಸಬ ಪ್ರಕಾರ ಹಮ ತುಮ್ಹ ಸನ ಹಾರೇ। ಛಮಹು ಬಿಪ್ರ ಅಪರಾಧ ಹಮಾರೇ ॥ ೪ ॥**

ನಿಮ್ಮಲ್ಲಿ ಪರಶು, ಧನುರ್ಬಾಣಗಳು ಇರುವುದನ್ನು ಕಂಡು ನೀವೊಬ್ಬ ವೀರರೆಂದು ತಿಳಿದು ಬಾಲಕನ ತಲೆ ಬಿಸಿಯಾಯಿತು. ಅವನಿಗೆ ನಿಮ್ಮ ಹೆಸರೇನೋ ಗೊತ್ತಿತ್ತು. ಆದರೆ ನಿಮ್ಮ ಗುರುತು ಇರಲಿಲ್ಲ. ತನ್ನ ರಘುವಂಶಕ್ಕನುಸಾರವಾಗಿ ಅವನು ಉತ್ತರ ನೀಡಿದನು. ಸ್ವಾಮಿ! ನೀವು ಮುನಿಯ ವೇಷದಲ್ಲೇ ಬಂದಿದ್ದರೆ, ಬಾಲಕನು ನಿಮ್ಮ ಪಾದಧೂಳಿಯನ್ನು ತಲೆಯಲ್ಲಿ

ಮುಡಿದುಕೊಳ್ಳುತ್ತಿದ್ದನು. ಅರಿಯದವನ ತಪ್ಪನ್ನು ಮನ್ನಿಸಿರಿ. ವಿಪ್ರರ ಹೃದಯದಲ್ಲಿ ಹೆಚ್ಚಿನ ದಯೆಯು ಇರಬೇಕಲ್ಲ! ಪೂಜ್ಯರೇ! ನಿಮಗೂ, ನಮಗೂ ಎಲ್ಲಿಯ ಸರಿಸಮಾನತೆ. ಕಾಲೆಲ್ಲಿ? ತಲೆಯೆಲ್ಲಿ? 'ರಾಮ' ಎಂಬ ನನ್ನ ಪುಟ್ಟ ಹೆಸರೆಲ್ಲಿ? ಪರಶುಸಹಿತವಾಗಿರುವ ನಿಮ್ಮ ದೊಡ್ಡ ಹೆಸರೆಲ್ಲಿ? ಭೂಸುರರೇ! ನಮ್ಮಲ್ಲಿ ಒಂದೇ ಗುಣವು (ಧನುಸ್ಸಿನ ಹಗ್ಗ) ಧನುಸ್ಸು ಇದೆ. ನಿಮ್ಮಲ್ಲಾದರೋ ಪರಮಪವಿತ್ರವಾದ ಒಂಭತ್ತು ಗುಣಗಳಿವೆ.

**(ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವಮೇವ ಚ ।**
**ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಮ್ ॥** (ಗೀತಾ ೧೮/೪೨)

ಶಮ, ದಮ, ತಪಸ್ಸು, ಶೌಚ, ಕ್ಷಮೆ, ಸರಳತೆ, ಜ್ಞಾನ, ವಿಜ್ಞಾನ, ಆಸ್ತಿಕ್ಯಭಾವ ಈ ಒಂಭತ್ತು ಬ್ರಾಹ್ಮಣರ ಸಹಜಗುಣಗಳು.) ನಾವು ಎಲ್ಲ ರೀತಿಯಿಂದ ನಿಮ್ಮ ಮುಂದೆ ಸೋತಿದ್ದೇವೆ. ವಿಪ್ರವರೇಣ್ಯರೇ! ನಮ್ಮ ಅಪರಾಧವನ್ನು ಮನ್ನಿಸಿರಿ. (ಚೌ/೧-೪)

**ದೋ – ಬಾರ ಬಾರ ಮುನಿ ಬಿಪ್ರಬರ ಕಹಾ ರಾಮ ಸನ ರಾಮ ।**
**ಬೋಲೇ ಭೃಗುಪತಿ ಸರುಷ ಹಸಿ ತಹೂँ ಬಂಧು ಸಮ ಬಾಮ ॥ ೨೮೨ ॥**

ಶ್ರೀರಾಮಚಂದ್ರನು ಪದೇ-ಪದೇ ಪರಶುರಾಮನನ್ನು ಮುನೀಶ್ವರಾ! ಬ್ರಾಹ್ಮಣೋತ್ತಮಾ! ಎಂದು ಸಂಬೋಧಿಸಿದನು. ಅದರಿಂದ ಭಾರ್ಗವರಾಮನು ಮುನಿಸಿನ ನಗೆನಕ್ಕು – ''ನೀನೂ ಕೂಡ ನಿನ್ನ ತಮ್ಮನಂತೆಯೇ ವಕ್ರನು'' ಎಂದು ಹೇಳಿದನು. (ದೋ/೨೮೨)

**ಚೌ – ನಿಪಟಹಿँ ದ್ವಿಜ ಕರಿ ಜಾನಹಿ ಮೋಹೀ । ಮೈँ ಜಸ ಬಿಪ್ರ ಸುನಾವಉँ ತೋಹೀ ॥**
**ಚಾಪ ಸ್ರುವಾ ಸರ ಆಹುತಿ ಜಾನೂ । ಕೋಪು ಮೋರ ಅತಿ ಘೋರ ಕೃಸಾನೂ ॥ ೧ ॥**
**ಸಮಿಧಿ ಸೇನ ಚತುರಂಗ ಸುಹಾಈ । ಮಹಾ ಮಹೀಪ ಭಏ ಪಸು ಆಈ ॥**
**ಮೈँ ಏಹಿँ ಪರಸು ಕಾಟಿ ಬಲಿ ದೀನ್ಹೇ । ಸಮರ ಜಗ್ಯ ಜಪ ಕೋಟಿನ್ಹ ಕೀನ್ಹೇ ॥ ೨ ॥**
**ಮೋರ ಪ್ರಭಾಉ ಬಿದಿತ ನಹಿँ ತೋರೇँ । ಬೋಲಸಿ ನಿದರಿ ಬಿಪ್ರ ಕೇ ಭೋರೇँ ॥**
**ಭಂಜೆಉ ಚಾಪು ದಾಪು ಬಡ ಬಾಢಾ । ಅಹಮಿತಿ ಮನಹುँ ಜೀತಿ ಜಗು ಠಾಢಾ ॥ ೩ ॥**
**ರಾಮ ಕಹಾ ಮುನಿ ಕಹಹು ಬಿಚಾರೀ । ರಿಸ ಅತಿ ಬಡಿ ಲಘು ಚೂಕ ಹಮಾರೀ ॥**
**ಛುಅತಹಿँ ಟೂಟ ಪಿನಾಕ ಪುರಾನಾ । ಮೈँ ಕೆಹಿ ಹೇತು ಕರೌँ ಅಭಿಮಾನಾ ॥ ೪ ॥**

''ರಾಮಾ! ನೀನು ನನ್ನನ್ನು ಕೇವಲ ಓರ್ವ ಸಾಧಾರಣ ಬ್ರಾಹ್ಮಣನೆಂದು ತಿಳಿದಿರುವೆ. ನಾನು ಎಂತಹ ಬ್ರಾಹ್ಮಣನೆಂಬುದನ್ನು ಹೇಳುವೆನು, ಕೇಳು. ನನ್ನ ಧನುಸ್ಸೇ ಸ್ರುವೆಯು. ಬಾಣಗಳೇ ಆಜ್ಯವು. ನನ್ನ ಕ್ರೋಧವೇ ಅತಿಘೋರವಾದ ಅಗ್ನಿ, ಸುಂದರವಾದ ಚತುರಂಗಸೇನೆಯೇ ಸಮಿಧೆಗಳು. ಮಹಾರಾಜರುಗಳೇ ಬಲಿಪಶುಗಳು. ಅವರನ್ನು ಇದೇ ಕೊಡಲಿಯಿಂದ ಕೊಚ್ಚಿ ಬಲಿಕೊಟ್ಟಿರುವೆನು. ಇಂತಹ ಕೋಟ್ಯಂತರ ರಣಯಜ್ಞವನ್ನು, ಮಾರಣಹೋಮವನ್ನು ನಾನು ಮಾಡಿದ್ದೇನೆ. ನನ್ನ ಪ್ರಭಾವವು ನಿನಗೆ ತಿಳಿಯದು. ಆದರಿಂದಲೇ ನೀನು ನನ್ನನ್ನು ಸಾಮಾನ್ಯ ಬ್ರಾಹ್ಮಣನೆಂದು ಭಾವಿಸಿ ಅವಹೇಳನ ಮಾಡುತ್ತಿರುವೆ. 'ಧನುಸ್ಸನ್ನು ಮುರಿದೆ' ಎಂದು ಹೆಮ್ಮೆಪಡುತ್ತಿರುವೆ. ಜಗತ್ತನ್ನೇ ಗೆದ್ದಿರುವವನಂತೆ ನಿಂತುಕೊಂಡಿರುವೆ.'' ಆಗ ಶ್ರೀರಾಮಚಂದ್ರನು ಪ್ರತ್ಯುತ್ತರ ನೀಡಿದನು– ''ಮುನೀಶ್ವರರೇ! ವಿಚಾರಮಾಡಿ ಮಾತಾಡಿರಿ. ನಿಮ್ಮ ಸಿಟ್ಟು ಬೆಟ್ಟದಂತಹುದು. ನನ್ನ ತಪ್ಪು ತೀರ ಚಿಕ್ಕದು. ಆ ಹಳೆಯ ಜೀರ್ಣವಾದ ಧನುಸ್ಸು ಮುಟ್ಟಿದ್ದೇ ತಡ ಅದು ಮುರಿದು ಹೋಯಿತು. ನಾನು ಏನೆಂದು ಹೆಮ್ಮೆ ಪಡಲಿ? (ಚೌ/೧-೪)

**ದೋ – ಜೌँ ಹಮ ನಿದರಹಿँ ಬಿಪ್ರ ಬದಿ ಸತ್ಯ ಸುನಹು ಭೃಗುನಾಥ ।**
**ತೌ ಅಸ ಕೋ ಜಗ ಸುಭಟು ಜೆಹಿ ಭಯ ಬಸ ನಾವಹಿँ ಮಾಥ ॥ ೨೮೩ ॥**

ಎಲೈ ಭೃಗುನಾಥಾ! ಬ್ರಾಹ್ಮಣನೆಂದು ನಿಮ್ಮನ್ನು ನಿರಾದರಿಸುತ್ತಿದ್ದೇವೆ ಎಂದು ನೀವು ಭಾವಿಸುವುದಾದರೆ, ನಿಜ ಹೇಳುತ್ತೇನೆ, ಕೇಳಿ. ನಾವು ಭಯದಿಂದ ತಲೆತಗ್ಗಿಸುವಂತಹ ವೀರಯೋಧನು ಈ ಪ್ರಪಂಚದಲ್ಲಿದ್ದರೆ ಯಾರಿದ್ದಾನೆ ಹೇಳಿ. (ದೋ/೨೮೩)

**ಚೌ – ದೇವ ದನುಜ ಭೂಪತಿ ಭಟ ನಾನಾ । ಸಮಬಲ ಅಧಿಕ ಹೋಉ ಬಲವಾನಾ ॥**
**ಜೌँ ರನ ಹಮಹಿ ಪಚಾರೈ ಕೋಊ । ಲರಹಿँ ಸುಖೇನ ಕಾಲು ಕಿನ ಹೋಊ ॥ ೧ ॥**
**ಛತ್ರಿಯ ತನು ಧರಿ ಸಮರ ಸಕಾನಾ । ಕುಲ ಕಲಂಕು ತೆಹಿ ಪಾವँರ ಆನಾ ॥**
**ಕಹಉँ ಸುಭಾಉ ನ ಕುಲಹಿ ಪ್ರಸಂಸೀ । ಕಾಲಹು ಡರಹಿँ ನ ರನ ರಘುಬಂಸೀ ॥ ೨ ॥**

ಬಿಪ್ರ ಬಂಸ ಕೈ ಅಸಿ ಪ್ರಭುತಾಈ । ಅಭಯ ಹೋಇ ಜೋ ತುಮ್ಹಹಿ ಡೆರಾಈ॥
ಸುನಿ ಮೃದು ಗೂಢ ಬಚನ ರಘುಪತಿ ಕೇ। ಉಘರೇ ಪಟಲ ಪರಸುಧರ ಮತಿ ಕೇ॥ ೩ ॥
ರಾಮ ರಮಾಪತಿ ಕರ ಧನು ಲೇಹೂ । ಖೈಂಚಹು ಮಿಟೈ ಮೋರ ಸಂದೇಹೂ॥
ದೇತ ಚಾಪು ಆಪುಹಿಂ ಚಲಿ ಗಯಊ। ಪರಸುರಾಮ ಮನ ಬಿಸಮಯ ಭಯಊ॥ ೪ ॥

ದೇವತೆಗಳಲ್ಲಾಗಲೀ, ರಾಕ್ಷಸರಲ್ಲಾಗಲೀ, ಮಹಾರಾಜರಲ್ಲಾಗಲೀ ಅಥವಾ ಯಾರೇ ವೀರಯೋಧರಿರಲೀ, ನಮಗೆ ಸಮಾನರಾಗಿರಲಿ, ಇಲ್ಲವೇ ನಮ್ಮನ್ನು ಮೀರಿಸುವ ಯಾರೇ ಇರಲಿ, ನಮ್ಮನ್ನು ಕೆಣಕಿದರೆ, ಅವನು ಕಾಲನೇ ಆಗಿದ್ದರೂ ಸರಿ, ಸಂತೋಷದಿಂದ ನಾವು ಅವನನ್ನು ಎದುರಿಸಿಯೇ ತೀರುವೆವು. ಕ್ಷತ್ರಿಯ ಶರೀರವನ್ನು ತೊಟ್ಟು ಯುದ್ಧಕ್ಕೆ ಹೆದರಿದವನು ತನ್ನ ಕುಲಕ್ಕೆ ಮಸಿ ಬಳಿಯುತ್ತಾನೆ. ರಘುವಂಶದಲ್ಲಿ ಹುಟ್ಟಿದವನು ಯಾರೇ ಆಗಿರಲಿ, ಯುದ್ಧದಲ್ಲಿ ಯಮನಿಗೂ ಹೆದರುವುದಿಲ್ಲ. ಇದು ಹೆಮ್ಮೆಯ ಮಾತಲ್ಲ, ನಿಜವಾದುದು. ಯಾರಿಗೂ ಹೆದರದೆ ಇದ್ದರೂ, ನಿಮಗೆ ಭಯಪಡುತ್ತೇನೆ. ವಿಪ್ರವಂಶದ ಮಹಿಮೆಯೇ ಅಂತಹುದು. ರಘುರಾಮನ ಈ ಕೋಮಲವಾದ, ನಿಗೂಢವಾದ ಮಾತುಗಳನ್ನು ಕೇಳಿ, ಪರಶುರಾಮನ ಬುದ್ಧಿಗೆ ಆವರಿಸಿದ ತೆರೆ ಸರಿಯಿತು. ಆಗ ಪರಶುರಾಮರೆಂದರು – ''ಎಲೈ ರಾಮಾ! ಲಕ್ಷ್ಮೀಪತಿಯ ಈ ಧನುಸ್ಸನ್ನು ತೆಗೆದುಕೊಂಡು, ಅದನ್ನು ಎಳೆ. ಅದರಿಂದ ನನ್ನ ಸಂದೇಹವು ಪರಿಹಾರವಾಗಲಿ' ಎಂದು ಹೇಳುತ್ತಿರುವಾಗಲೇ ಧನುಸ್ಸು ತನ್ನಷ್ಟಕ್ಕೆ ತಾನೇ ಶ್ರೀರಾಮನ ಕೈಸೇರಿತು.(ಧನುಸ್ಸಿನೊಂದಿಗೆ ವೈಷ್ಣವ ತೇಜಸ್ಸು ಕೂಡ ಪರಶುರಾಮನಿಂದ ಶ್ರೀರಾಮನಿಗೆ ಸೇರಿತು.) ಪರಶುರಾಮನಿಗೆ ಅತ್ಯಂತ ಸಂಭ್ರಮಾಶ್ಚರ್ಯಗಳಾದವು. (ಚೌ/೧-೪)

ದೋ – ಜಾನಾ ರಾಮ ಪ್ರಭಾಉ ತಬ ಪುಲಕ ಪ್ರಫುಲ್ಲಿತ ಗಾತ ।
ಜೋರಿ ಪಾನಿ ಬೋಲೇ ಬಚನ ಹೃದಯ ನ ಪ್ರೇಮು ಅಮಾತ ॥ ೨೮೪ ॥

ಆಗ ಅವರು ಶ್ರೀರಾಮನ ಲೋಕೋತ್ತರ ಮಹಿಮೆಯನ್ನು ಗುರುತಿಸಿಕೊಂಡರು. ಅದರಿಂದ ಅವರ ಶರೀರ ರೋಮಾಂಚಿತವಾಯಿತು. ಮನಸ್ಸು ಆನಂದದಲ್ಲಿ ಮುಳುಗಿಹೋಯಿತು. ಹೃದಯದಲ್ಲಿ ಆನಂದೋದ್ರೇಕವು ಹಿಡಿಸದಾಯಿತು. ಕೈಜೋಡಿಸಿಕೊಂಡು ಇಂತೆಂದರು – (ದೋ/೨೮೪)

ಚೌ – ಜಯ ರಘುಬಂಸ ಬನಜ ಬನ ಭಾನೂ । ಗಹನ ದನುಜ ಕುಲ ದಹನ ಕೃಸಾನೂ॥
ಜಯ ಸುರ ಬಿಪ್ರ ಧೇನು ಹಿತಕಾರೀ । ಜಯ ಮದ ಮೋಹ ಕೋಹ ಭ್ರಮ ಹಾರೀ ॥ ೧ ॥
ಬಿನಯ ಸೀಲ ಕರುನಾ ಗುನ ಸಾಗರ । ಜಯತಿ ಬಚನ ರಚನಾ ಅತಿ ನಾಗರ॥
ಸೇವಕ ಸುಖದ ಸುಭಗ ಸಬ ಅಂಗಾ । ಜಯ ಸರೀರ ಛಬಿ ಕೋಟಿ ಅನಂಗಾ ॥ ೨ ॥
ಕರೌಂ ಕಾಹ ಮುಖ ಏಕ ಪ್ರಸಂಸಾ । ಜಯ ಮಹೇಸ ಮನ ಮಾನಸ ಹಂಸಾ॥
ಅನುಚಿತ ಬಹುತ ಕಹೆಉಁ ಅಗ್ಯಾತಾ । ಛಮಹು ಛಮಾಮಂದಿರ ದೋಉ ಭ್ರಾತಾ ॥ ೩ ॥
ಕಹಿ ಜಯ ಜಯ ಜಯ ರಘುಕುಲಕೇತೂ। ಭೃಗುಪತಿ ಗಏ ಬನಹಿ ತಪ ಹೇತೂ॥
ಅಪಭಯಁ ಕುಟಿಲ ಮಹೀಪ ಡೆರಾನೇ। ಜಹಁ ತಹಁ ಕಾಯರ ಗವಁಹಿಂ ಪರಾನೇ ॥ ೪ ॥

''ರಘುವಂಶವೆಂಬ ಸರೋಜವನಕ್ಕೆ ಸೂರ್ಯರೂಪನೇ! ದೈತ್ಯಕುಲವೆಂಬ ಅಡವಿಯನ್ನು ಸುಡುವ ಅಗ್ನಿದೇವನೇ! ನಿನಗೆ ಜಯವಾಗಲಿ. ದೇವ-ಬ್ರಾಹ್ಮಣ ಗೋ ಗಡಣ ಹಿತಕಾರಿಯೇ! ನಿನಗೆ ಜಯವಾಗಲಿ ಮದ, ಮೋಹ, ಕ್ರೋಧ, ಭ್ರಮಹಾರಿಯೇ! ನಿನಗೆ ಜಯವಾಗಲೀ. ವಿನಯ, ಶೀಲ, ಕರುಣಾಗುಣಸಾಗರಾ! ಮೃದು ಮಧುರ ವಚನರಚನಾಧುರಂಧರಾ! ನಿನಗೆ ಜಯವಾಗಲೀ. ಆಶ್ರಿತಜನಮಂದಾರಾ! ಮನೋಹರಾಂಗಾ! ಕೋಟಿ ಮನ್ಮಥ ಸುಂದರಾಕಾರ! ನಿನಗೆ ಜಯವಾಗಲೀ. ನಿನ್ನ ಅಪಾರ ಕೃಪಾಮಹಿಮೆಯನ್ನು ನಾನು ಒಂದು ಮುಖದಿಂದ ಹೇಗೆ ವರ್ಣಿಸಲೀ? ನೀನು ಮಹಾದೇವನ ಮಾನಸ ಸರೋವರದಲ್ಲಿ ವಿಹರಿಸುವ ಹಂಸವೇ! ನಿನಗೆ ಜಯವಾಗಲೀ. ನಾನು ಅಜ್ಞಾನದಿಂದ ಅನುಚಿತವಾದ ಅನೇಕ ಮಾತುಗಳನ್ನಾಡಿರುವೆ. ಸೋದರರಾದ ನೀವಿಬ್ಬರೂ ಕ್ಷಮಾನಿಧಾನರು. ನನ್ನನ್ನು ಮನ್ನಿಸಿರಿ. ಓ ರಘುಕುಲತಿಲಕಾ! ಶ್ರೀರಾಮಚಂದ್ರಾ! ನಿನಗೆ ಜಯವಾಗಲೀ! ಜಯವಾಗಲೀ! ಹೀಗೆ ಹೇಳಿ ಭಾರ್ಗವರಾಮನು ತಪಸ್ಸಿಗಾಗಿ ಕಾಡಿಗೆ ಹೊರಟುಹೋದರು. ಇದನ್ನು ಗಮನಿಸಿದ ದುಷ್ಟ ರಾಜರುಗಳು ನಾವು ಶ್ರೀರಾಮನಿಗೆ ಅಪಮಾನವೆಸಗಿದ್ದೇವೆ. ಅವನು ನಮ್ಮ ಮೇಲೆ ಪ್ರತಿಕಾರ ಮಾಡುವನೋ ಎಂಬ ಭಯದಿಂದ ದಿಕ್ಕುಪಾಲಾಗಿ ಸದ್ದಿಲ್ಲದೆ ಎದ್ದು ಓಡಿಹೋದರು. (ಚೌ/೧-೪)

# ಸೀತಾಕಲ್ಯಾಣ

**ದೋ – ದೇವನ್ಹ ದೀನ್ಹೀ ದುಂದುಭೀಂ ಪ್ರಭು ಪರ ಬರಷಹಿಂ ಫೂಲ ।**
**ಹರಷೇ ಪುರ ನರ ನಾರಿ ಸಬ ಮಿಟೀ ಮೋಹಮಯ ಸೂಲ ॥ ೨೮೫ ॥**

ದೇವದುಂದುಭಿಗಳು ಮೊಳಗಿದವು. ದೇವತೆಗಳು ಹೂಮಳೆಗರೆದರು. ಮಿಥಿಲಾನಗರದ ನರ-ನಾರಿಯರು ಹರ್ಷಿತರಾದರು. ಅವರ ಅಜ್ಞಾನಜನ್ಯವಾದ ದುಃಖ ತೊಲಗಿಹೋಯಿತು. (ದೋ/೨೮೫)

**ಚೌ – ಅತಿ ಗಹಗಹೇ ಬಾಜನೇ ಬಾಜೇ । ಸಬಹಿಂ ಮನೋಹರ ಮಂಗಲ ಸಾಜೇ ॥**
**ಜೂಥ ಜೂಥ ಮಿಲಿ ಸುಮುಖಿ ಸುನಯನೀಂ । ಕರಹಿಂ ಗಾನ ಕಲ ಕೋಕಿಲಬಯನೀಂ ॥ ೧ ॥**
**ಸುಖು ಬಿದೇಹ ಕರ ಬರನಿ ನ ಜಾಈ । ಜನ್ಮದರಿದ್ರ ಮನಹುಂ ನಿಧಿ ಪಾಈ ॥**
**ಬಿಗತ ತ್ರಾಸ ಭಇ ಸೀಯ ಸುಖಾರೀ । ಜನು ಬಿಧು ಉದಯಂ ಚಕೋರಕುಮಾರೀ ॥ ೨ ॥**
**ಜನಕ ಕೀನ್ಹ ಕೌಸಿಕಹಿ ಪ್ರನಾಮಾ । ಪ್ರಭು ಪ್ರಸಾದ ಧನು ಭಂಜೆಉ ರಾಮಾ ॥**
**ಮೊಹಿ ಕೃತಕೃತ್ಯ ಕೀನ್ಹ ದುಹುಂ ಭಾಈಂ । ಅಬ ಜೋ ಉಚಿತ ಸೊ ಕಹಿಅ ಗೊಸಾಈಂ ॥ ೩ ॥**
**ಕಹ ಮುನಿ ಸುನು ನರನಾಥ ಪ್ರಬೀನಾ । ರಹಾ ಬಿಬಾಹು ಚಾಪ ಆಧೀನಾ ॥**
**ಟೂಟತಹೀಂ ಧನು ಭಯಉ ಬಿಬಾಹೂ । ಸುರ ನರ ನಾಗ ಬಿದಿತ ಸಬ ಕಾಹೂ ॥ ೪ ॥**

ನಗರದಲ್ಲಿಯೂ ಎಲ್ಲೆಡೆ ವಾದ್ಯಗಳು ಭೋರ್ಗರೆದವು. ಎಲ್ಲರೂ ಮನೋಹರವಾದ ಮಂಗಳ ವಸ್ತ್ರಾಭೂಷಣಗಳಿಂದ ಸಿಂಗರಿಸಿಕೊಂಡರು. ಸುಮುಖಿಯರೂ, ಸುನಯನೆಯರೂ ಹಾಗೂ ಕೋಕಿಲಕಂಠಿಯರೂ ಆದ ರಮಣಿಯರು ಗುಂಪು-ಗುಂಪಾಗಿ ಮಂಗಳಹಾಡುಗಳನ್ನು ಹಾಡತೊಡಗಿದರು. ಜನಕಮಹಾರಾಜರ ಹಿಗ್ಗಂತೂ ಹೇಳತೀರದು. ಕಡುಬಡವನಿಗೆ ಅಮಿತನಿಧಿಯೇ ದೊರಕಿದಂತೆ ಸಂತೋಷಗೊಂಡನು. ಸೀತೆಯು ಭಯವನ್ನು ನೀಗಿ, ಚಂದ್ರನನ್ನು ನೋಡಿದ ಚಕೋರಿಯಂತೆ ಸಂತಸಪಟ್ಟಳು. ಜನಕರಾಜನು ಕೌಶಿಕರಿಗೆ ಪ್ರಣಾಮಗೈದು ಇಂತೆಂದನು – ಪ್ರಭುವಿನ ಕೃಪೆ ಹಾಗೂ ನಿಮ್ಮ ಆಶೀರ್ವಾದದಿಂದ ಶ್ರೀರಾಮಚಂದ್ರನು ಶಿವಧನುಸ್ಸನ್ನು ಭಂಗಗೊಳಿಸಿದನು. ಈ ಸೋದರರಿಬ್ಬರೂ ನನ್ನನ್ನು ಕೃತಾರ್ಥರನ್ನಾಗಿಸಿದರು. ಸ್ವಾಮಿಗಳೇ! ಈಗ ತಮಗೆ ಉಚಿತವಾಗಿ ಕಂಡಂತೆ ಮುಂದಿನ ಕಾರ್ಯವನ್ನು ಕೈಗೊಳ್ಳಿರಿ. ಆಗ ವಿಶ್ವಾಮಿತ್ರರು ಹೇಳಿದರು – ಓ ರಾಜಶಿರೋಮಣೀ! ಕೇಳು. ಮದುವೆ ಧನುರ್ಭಂಗವನ್ನೇ ಅವಲಂಬಿಸಿತ್ತು. ಅದು ಮುರಿಯುತ್ತಲೇ ಮದುವೆ ಆದಂತೆಯೇ, ಸುರ, ನರ, ನಾಗ ಎಲ್ಲರೂ ಇದನ್ನು ಬಲ್ಲರು. (ಚೌ/೧-೪)

**ದೋ – ತದಪಿ ಜಾಇ ತುಮ್ಹ ಕರಹು ಅಬ ಜಥಾ ಬಂಸ ಬ್ಯವಹಾರು ।**
**ಬೂಝಿ ಬಿಪ್ರ ಕುಲಬೃದ್ಧ ಗುರ ಬೇದ ಬಿದಿತ ಆಚಾರು ॥ ೨೮೬ ॥**

ಆದರೂ ಕೂಡ ನೀನು ಹೋಗಿ ನಿನ್ನ ಕುಲಾಚಾರದಂತೆ ವಿಪ್ರರನ್ನೂ, ಕುಲವೃದ್ಧರನ್ನೂ, ಗುರುಗಳಾದ ಶತಾನಂದರನ್ನು ಕೇಳಿ, ವೇದೋಕ್ತವಾಗಿ ಮುಂದಿನ ಕೆಲಸವನ್ನು ನಡೆಸು. (ದೋ/೨೮೬)

**ಚೌ – ದೂತ ಅವಧಪುರ ಪಠವಹು ಜಾಈ । ಆನಹಿಂ ನೃಪ ದಸರಥಹಿ ಬೊಲಾಈ ॥**
**ಮುದಿತ ರಾಉ ಕಹಿ ಭಲೆಹಿಂ ಕೃಪಾಲಾ । ಪಠಏ ದೂತ ಬೋಲಿ ತೆಹಿ ಕಾಲಾ ॥ ೧ ॥**
**ಬಹುರಿ ಮಹಾಜನ ಸಕಲ ಬೊಲಾಏ । ಆಇ ಸಬನ್ಹಿ ಸಾದರ ಸಿರ ನಾಏ ॥**
**ಹಾಟ ಬಾಟ ಮಂದಿರ ಸುರಬಾಸಾ । ನಗರು ಸಂವಾರಹು ಚಾರಿಹುಂ ಪಾಸಾ ॥ ೨ ॥**
**ಹರಷಿ ಚಲೇ ನಿಜ ನಿಜ ಗೃಹ ಆಏ । ಪುನಿ ಪರಿಚಾರಕ ಬೋಲಿ ಪಠಾಏ ॥**
**ರಚಹು ಬಿಚಿತ್ರ ಬಿತಾನ ಬನಾಈ । ಸಿರ ಧರಿ ಬಚನ ಚಲೇ ಸಚು ಪಾಈ ॥ ೩ ॥**
**ಪಠಏ ಬೋಲಿ ಗುನೀ ತಿನ್ಹ ನಾನಾ । ಜೇ ಬಿತಾನ ಬಿಧಿ ಕುಸಲ ಸುಜಾನಾ ॥**
**ಬಿಧಿಹಿ ಬಂದಿ ತಿನ್ಹ ಕೀನ್ಹ ಅರಂಭಾ । ಬಿರಚೇ ಕನಕ ಕದಲಿ ಕೇ ಖಂಭಾ ॥ ೪ ॥**

ದಶರಥ ಮಹಾರಾಜರನ್ನು ಸಪರಿವಾರವಾಗಿ ಆಮಂತ್ರಿಸಿ, ಅವರನ್ನು ಕರೆತರಲು ಅಯೋಧ್ಯೆಗೆ ದೂತರನ್ನು ಅಟ್ಟು. ಜನಕನು ಹಿಗ್ಗಿ, ಗುರುಗಳೇ! ಹಾಗೇ ಆಗಲಿ, ಎಂದು ಹೇಳಿ, ಆಗಲೇ ದೂತರನ್ನು ಅಯೋಧ್ಯೆಗೆ ಅಟ್ಟಿದನು. ಅನಂತರ ಅರಸನು ತನ್ನ

ರಾಜ್ಯದ ಪ್ರಮುಖರನ್ನು ಬರಮಾಡಿಕೊಂಡನು. ಅವರೆಲ್ಲರೂ ಬಂದು ಆದರದಿಂದ ಮಹಾರಾಜರಿಗೆ ತಲೆವಾಗಿದರು. ಅರಸನು ಅವರಿಗೆ – 'ಪೇಟೆ, ಬೀದಿ, ಮನೆ, ಮಠ, ಮಂದಿರಗಳು, ಗುಡಿ-ಗೋಪುರಗಳು ಹಾಗೂ ಇಡೀ ನಗರವನ್ನೇ ಎಲ್ಲ ರೀತಿಯಿಂದ ಸಿಂಗರಿಸಿರಿ' ಎಂದು ಅಪ್ಪಣೆ ಮಾಡಿದನು. ಪುರಪ್ರಮುಖರು ಹರ್ಷಚಿತ್ತರಾಗಿ ತಮ್ಮ ಮನೆಗಳಿಗೆ ಹೊರಟುಹೋದರು. ಅನಂತರ ಮಹಾರಾಜನು ತನ್ನ ಸೇವಕರನ್ನು ಕರೆಸಿ, ಮನೋಹರವಾದ, ಅದ್ಭುತವಾದ ವಿವಾಹಮಂಟಪವನ್ನು ನಿರ್ಮಿಸಿ, ಅಲಂಕರಿಸುವಂತೆ ಅಪ್ಪಣೆ ಮಾಡಿದನು. ಅದರಂತೆ ಅವರು ಕಾರ್ಯಪ್ರವೃತ್ತರಾದರು. ಮಂಡಪ ನಿರ್ಮಾಣದಲ್ಲಿ ಕುಶಲರೂ, ಚತುರರೂ ಆದ ಅನೇಕ ಶಿಲ್ಪಿಗಳನ್ನೂ ಅವರು ಕರೆತಂದರು. ಆ ಶಿಲ್ಪಿಗಳು ಬ್ರಹ್ಮದೇವರನ್ನು ಪೂಜಿಸಿ, ತಮ್ಮ ಕಾರ್ಯವನ್ನು ಪ್ರಾರಂಭಿಸಿದರು. ಮೊಟ್ಟಮೊದಲು ಬಂಗಾರದ ಬಾಳೆಯ ಕಂಭಗಳನ್ನು ತಯಾರಿಸಿದರು. (ಚೌ/೧-೪)

**ದೋ – ಹರಿತ ಮನಿನ್ಹ ಕೇ ಪತ್ರ ಫಲ ಪದುಮರಾಗ ಕೇ ಫೂಲ ।**
**ರಚನಾ ದೇಖಿ ಬಿಚಿತ್ರ ಅತಿ ಮನು ಬಿರಂಚಿ ಕರ ಭೂಲ ॥ ೨೮೭ ॥**

ಪಚ್ಚೆಯ ಎಲೆಗಳನ್ನೂ ಹಾಗೂ ಹಣ್ಣುಗಳನ್ನೂ ತಯಾರಿಸಿದರು. ಪದ್ಮರಾಗಮಣಿಯಿಂದ ಹೂಗಳನ್ನು ಮಾಡಿದರು. ಆ ಮಂಡಪದ ಚೆಲುವನ್ನು ಕಂಡು ಬ್ರಹ್ಮದೇವರೂ ಕೂಡ ಮೈಮರೆತನು. (ದೋ/೨೮೭)

**ಚೌ – ಬೇನು ಹರಿತ ಮನಿಮಯ ಸಬ ಕೀನ್ಹೇ । ಸರಲ ಸಪರಬ ಪರಹಿಂ ನಹಿಂ ಚೀನ್ಹೇ ॥**
**ಕನಕ ಕಲಿತ ಅಹಿಬೇಲಿ ಬನಾಈ । ಲಖಿ ನಹಿಂ ಪರಇ ಸಪರನ ಸುಹಾಈ ॥ ೧ ॥**
**ತೇಹಿ ಕೇ ರಚಿ ಪಚಿ ಬಂಧ ಬನಾಏ । ಬಿಚ ಬಿಚ ಮುಕುತಾ ದಾಮ ಸುಹಾಏ ॥**
**ಮಾನಿಕ ಮರಕತ ಕುಲಿಸ ಪಿರೋಜಾ । ಚೀರಿ ಕೋರಿ ಪಚಿ ರಚೇ ಸರೋಜಾ ॥ ೨ ॥**
**ಕಿಏ ಭೃಂಗ ಬಹುರಂಗ ಬಿಹಂಗಾ । ಗುಂಜಹಿಂ ಕೂಜಹಿಂ ಪವನ ಪ್ರಸಂಗಾ ॥**
**ಸುರ ಪ್ರತಿಮಾ ಖಂಭನ ಗಢಿ ಕಾಢೀಂ । ಮಂಗಲ ದ್ರಬ್ಯ ಲಿಏಂ ಸಬ ಠಾಢೀಂ ॥ ೩ ॥**
**ಚೌಕೇಂ ಭಾಂತಿ ಅನೇಕ ಪುರಾಈಂ । ಸಿಂಧುರ ಮನಿಮಯ ಸಹಜ ಸುಹಾಈಂ ॥ ೪ ॥**

ಪಚ್ಚೆಯಿಂದಲೇ ಬೊಂಬಿನ ಕಂಭಗಳನ್ನು, ಅದರಲ್ಲಿ ಎಲೆಗಳಿದ್ದು, ಗಿಣ್ಣುಗಳನ್ನೂ ನಿರ್ಮಿಸಿದ್ದರು. ಅದನ್ನು ನೋಡಿದವರು ಇದು ನಿಜವಾದುದೋ ಕೃತ್ರಿಮವೋ ಎಂದು ತಿಳಿಯದಾದರು. ಚಿನ್ನದಿಂದಲೇ ಮಾಡಿದ ವೀಳದೆಲೆ ಬಳ್ಳಿಯನ್ನು ಹಬ್ಬಿಸಲಾಗಿತ್ತು. ಅದು ಮಣಿಗಳದ್ದೋ ಇಲ್ಲವೇ ನಿಜವಾದದ್ದೋ ಎಂದು ಗುರುತಿಸುವುದು ಕಷ್ಟವಾಗಿತ್ತು. ವೀಳದೆಲೆಯ ಬಳ್ಳಿಯನ್ನು ಕಟ್ಟಿದ ಹಗ್ಗವನ್ನು ಕುಸುರಿ ಕೆಲಸದಿಂದ ಮಾಡಿದ್ದರು. ನಡುನಡುವೆ ಮುತ್ತಿನ ಚುಂಗುಗಳು, ಮಾಣಿಕ್ಯ, ಪಚ್ಚೆ, ವಜ್ರ, ನೀಲಿ ಮೊದಲಾದ ರತ್ನಗಳನ್ನು ಕತ್ತರಿಸಿ ಅವುಗಳಿಂದ ಕೆಂಪು, ಹಸಿರು, ಬಿಳಿ, ನೀಲಿ ಹೀಗೆ ಬಣ್ಣ-ಬಣ್ಣದ ಕಮಲಗಳನ್ನು ತಯಾರಿಸಿದರು. ಅವುಗಳ ಮೇಲೆ ದುಂಬಿಗಳೂ, ಬೇರೆ-ಬೇರೆ ಪಕ್ಷಿಗಳನ್ನೂ, ಕೆತ್ತಿದ್ದರು. ಅವು ಗಾಳಿಗೆ ಕದಲುತ್ತಿರುವಾಗ ಝೇಂಕರಿಸುತ್ತ, ಚಿಲಿಪಿಲಿಗೈಯುತ್ತಿರುವವೋ ಎಂಬಂತಿತ್ತು. ಪ್ರಾಂಗಣದ ಸ್ತಂಭಗಳ ಮೇಲೆ ಶುಭಪ್ರದ ಮಂಗಳ ದ್ರವ್ಯಗಳನ್ನು ಹಿಡಿದುಕೊಂಡಿದ್ದ ದೇವತಾಮೂರ್ತಿಗಳನ್ನು ಕೆತ್ತಿದ್ದರು. ಅಂಗಳದಲ್ಲಿ ಅನೇಕರೀತಿಯ ರಂಗವಲ್ಲಿಗಳನ್ನು ರಚಿಸಿ, ಅದನ್ನು ನವರತ್ನಗಳಿಂದ ಅಲಂಕರಿಸಿದ್ದರು. (ಚೌ/೧-೪)

**ದೋ – ಸೌರಭ ಪಲ್ಲವ ಸುಭಗ ಸುಠಿ ಕಿಏ ನೀಲಮನಿ ಕೋರಿ ।**
**ಹೇಮ ಬೌರ ಮರಕತ ಘವರಿ ಲಸತ ಪಾಟಮಯ ಡೋರಿ ॥ ೨೮೮ ॥**

ನೀಲಮಣಿಗಳನ್ನು ಕತ್ತರಿಸಿ ಅತ್ಯಂತ ಚೆಲುವಾದ ಮಾವಿನ ಸೊಪ್ಪನ್ನು ನಿರ್ಮಿಸಲಾಗಿತ್ತು. ಚಿನ್ನದ ಮಾವಿನ ಹೂವುಗಳು ಮತ್ತು ಹವಳದಿಂದ ತಯಾರಿಸಿದ ಹಣ್ಣುಗಳ ಗೊಂಚಲುಗಳನ್ನು ರೇಷ್ಮೆಯ ದಾರದಲ್ಲಿ ತೂಗುಹಾಕಿದ್ದರು. (ದೋ/೨೮೮)

**ಚೌ – ರಚೇ ರುಚಿರ ಬರ ಬಂದನಿವಾರೇ । ಮನಹುँ ಮನೋಭವँ ಫಂದ ಸँವಾರೇ ॥**
**ಮಂಗಲ ಕಲಸ ಅನೇಕ ಬನಾಏ । ಧ್ವಜ ಪತಾಕ ಪಟ ಚಮರ ಸುಹಾಏ ॥ ೧ ॥**
**ದೀಪ ಮನೋಹರ ಮನಿಮಯ ನಾನಾ । ಜಾಇ ನ ಬರನಿ ಬಿಚಿತ್ರ ಬಿತಾನಾ ॥**
**ಜೆಹಿಂ ಮಂಡಪ ದುಲಹಿನಿ ಬೈದೇಹೀ । ಸೋ ಬರನೈ ಅಸಿ ಮತಿ ಕಬಿ ಕೇಹೀ ॥ ೨ ॥**
**ದೂಲಹು ರಾಮು ರೂಪ ಗುನ ಸಾಗರ । ಸೋ ಬಿತಾನು ತಿಹುँ ಲೋಕ ಉಜಾಗರ ॥**
**ಜನಕ ಭವನ ಕೈ ಸೋಭಾ ಜೈಸೀ । ಗೃಹ ಗೃಹ ಪ್ರತಿ ಪುರ ದೇಖಿಅ ತೈಸೀ ॥ ೩ ॥**

**ಜೆಹಿಂ ತೆರಹುತಿ ತೆಹಿ ಸಮಯ ನಿಹಾರೀ । ತೆಹಿ ಲಘು ಲಗಹಿಂ ಭುವನ ದಸ ಚಾರೀ ॥**
**ಜೋ ಸಂಪದಾ ನೀಚ ಗೃಹ ಸೋಹಾ । ಸೋ ಬಿಲೋಕಿ ಸುರನಾಯಕ ಮೋಹಾ ॥ ೪ ॥**

ಕಾಮದೇವನು ತನ್ನ ಬಲೆಯನ್ನು ಬೀಸಿರುವನೋ ಎನ್ನುವಂತಹ ಸುಂದರ ತೋರಣಗಳು ಸಿದ್ಧವಾದವು. ಮಂಗಳ ಕಳಶಗಳೂ, ಸುಂದರ ಧ್ವಜಗಳೂ, ಪತಾಕೆಗಳೂ, ಪರದೆ, ಚಾಮರಗಳು ಅಣಿಗೊಂಡವು. ಅನೇಕ ಮಣಿದೀಪಗಳಿಂದ ದೇದೀಪ್ಯಮಾನ ಆ ವಿಚಿತ್ರ ಮಂಟಪವಂತೂ ವರ್ಣನಾತೀತವು. ಜಾನಕಿಯೇ ಮದುಮಗಳಾಗಿ ನಿಲ್ಲುವ ಮಂಟಪವನ್ನು ವರ್ಣಿಸುವ ಚಾತುರ್ಯ ಯಾವ ಕವಿಗಿದೆ? ಜಗನ್ಮೋಹನಾಕಾರರಾದ ಸೀತಾರಾಮರು ಸರ್ವಾಲಂಕಾರದಿಂದ ವಧೂವರರಾಗಿ ಕುಳಿತುಕೊಳ್ಳಲು ನಿರ್ಮಿತವಾದ ಮಂಟಪದ ಶೋಭೆಯನ್ನು ಯಾರೂ ವರ್ಣಿಸಲಾರರು. ಅದು ಮೂರ್ಲೋಕಗಳಲ್ಲಿಯೂ ವಿಖ್ಯಾತವಾಗಿರಲೇಬೇಕು. ಜನಕರಾಜನ ಅರಮನೆಯಂತೆಯೇ ಜನಕಪುರಿಯಲ್ಲಿರುವ ಮನೆ-ಮನೆಗಳು ಅನೇಕ ಅಲಂಕಾರಗಳಿಂದ ಶೋಭಿಸುತ್ತಿದ್ದವು. ರಾಜಧಾನಿಯಾದ ಮಿಥಿಲಾನಗರವು ಶೋಭೆಯಲ್ಲಿ ಹದಿನಾಲ್ಕು ಭುವನಗಳ ಶೋಭೆಗಳಿಂದಲೂ ಕೂಡ ಮಿಗಿಲಾಗಿಯೇ ಇತ್ತು. ಆ ನಗರದ ಸಾಮಾನ್ಯ ಪೌರರ ಗೃಹಾಲಂಕಾರ ಶೋಭೆಯು ಇಂದ್ರನಿಗೂ ಅಸೂಯೆ ಹುಟ್ಟಿಸುವಂತಿತ್ತು. (ಚೌ/೧-೪)

**ದೋ – ಬಸಇ ನಗರ ಜೆಹಿಂ ಲಚ್ಛಿ ಕರಿ ಕಪಟ ನಾರಿ ಬರ ಬೇಷು ।**
**ತೆಹಿ ಪುರ ಕೈ ಸೋಭಾ ಕಹತ ಸಕುಚಹಿಂ ಸಾರದ ಸೇಷು ॥ ೨೮೯ ॥**

ಸಾಕ್ಷಾತ್ ಲಕ್ಷ್ಮೀದೇವಿಯೇ ಮಾನವಕಾಂತೆ (ಸೀತೆ)ಯಾಗಿ ಅವತರಿಸಿ, ವಾಸಿಸುವ ಆ ನಗರದ ಶೋಭೆಯನ್ನು ಬಣ್ಣಿಸಲು ಸರಸ್ವತಿ, ಆದಿಶೇಷ ಇವರೂ ಕೂಡ ಹಂಜರಿಯುತ್ತಾರೆ. (ದೋ/೨೮೯)

**ಚೌ – ಪಹುಂಚೇ ದೂತ ರಾಮ ಪುರ ಪಾವನ । ಹರಷೇ ನಗರ ಬಿಲೋಕಿ ಸುಹಾವನ ॥**
**ಭೂಪ ದ್ವಾರ ತಿನ್ಹ ಖಬರಿ ಜನಾಈ । ದಸರಥ ನೃಪ ಸುನಿ ಲಿಏ ಬೊಲಾಈ ॥ ೧ ॥**
**ಕರಿ ಪ್ರನಾಮು ತಿನ್ಹ ಪಾತೀ ದೀನ್ಹೀ । ಮುದಿತ ಮಹೀಪ ಆಪು ಉಠಿ ಲೀನ್ಹೀ ॥**
**ಬಾರಿ ಬಿಲೋಚನ ಬಾಂಚತ ಪಾತೀ । ಪುಲಕ ಗಾತ ಆಈ ಭರಿ ಛಾತೀ ॥ ೨ ॥**
**ರಾಮು ಲಖನು ಉರ ಕರ ಬರ ಚೀಠೀ । ರಹಿ ಗಏ ಕಹತ ನ ಖಾಟೀ ಮೀಠೀ ॥**
**ಪುನಿ ಧರಿ ಧೀರ ಪತ್ರಿಕಾ ಬಾಂಚೀ । ಹರಷೀ ಸಭಾ ಬಾತ ಸುನಿ ಸಾಂಚೀ ॥ ೩ ॥**
**ಖೇಲತ ರಹೇ ತಹಾಂ ಸುಧಿ ಪಾಈ । ಆಏ ಭರತು ಸಹಿತ ಹಿತ ಭಾಈ ॥**
**ಪೂಛತ ಅತಿ ಸನೇಹಂ ಸಕುಚಾಈ । ತಾತ ಕಹಾಂ ತೇಂ ಪಾತೀ ಆಈ ॥ ೪ ॥**

ಅತ್ತ ಜನಕನ ದೂತರು ಶ್ರೀರಾಮಚಂದ್ರನ ಪಾವನ ಪುರಿ ಅಯೋಧ್ಯೆಯನ್ನು ಮುಟ್ಟಿದರು. ಆ ಸುಂದರ ನಗರವನ್ನು ಕಂಡು ಅವರು ಹರ್ಷಿತರಾದರು. ರಾಜದ್ವಾರದ ಬಳಿಗೆ ಹೋಗಿ ಅವರು ಸುದ್ದಿ ಮುಟ್ಟಿಸಿದರು. ಅದನ್ನು ಕೇಳಿದ ದಶರಥ ಮಹಾರಾಜರು ಅವರನ್ನು ಒಳಗೆ ಬರಮಾಡಿಕೊಂಡರು. ದೂತರು ಮಹಾರಾಜರಿಗೆ ವಂದಿಸಿ ತಾವು ತಂದ ಆಹ್ವಾನಪತ್ರಿಕೆಯನ್ನಿಡಿದರು. ಸಂತುಷ್ಟನಾದ ಅರಸನು ತಾನೇ ಎದ್ದು ಅದನ್ನು ತೆಗೆದುಕೊಂಡನು. ಅದನ್ನು ಓದುವಾಗ ಅವನ ಕಣ್ಣುಗಳು ಆನಂದಬಾಷ್ಪಗಳಿಂದ ತುಂಬಿಹೋಯಿತು. ಮೈರೋಮಾಂಚಿತವಾಯಿತು. ಎದೆಯು ಆನಂದದಿಂದ ತುಂಬಿ ಬಂದಿತು. ಕೋಸಲಪತಿಯ ಹೃದಯದಲ್ಲಿ ಶ್ರೀರಾಮ-ಲಕ್ಷ್ಮಣರು ತುಂಬಿದ್ದಾರೆ. ಕೈಯಲ್ಲಿ ಶುಭಾಹ್ವಾನಪತ್ರಿಕೆ ಇದೆ. ಪ್ರೇಮಾಧಿಕ್ಯದಿಂದ ಅದನ್ನು ನೋಡುತ್ತಿರುವ ದಶರಥನ ಕಂಠವು ಬಿಗಿಯಿತು. ಅನಂತರ ಧೈರ್ಯತಳೆದು ಅರಸ ಪತ್ರಿಕೆಯನ್ನು ಓದಿದನು. ಆ ಶುಭವಾರ್ತೆಯನ್ನು ಕೇಳಿ ಸಭಾಸದರು ಹರ್ಷಿತರಾದರು. ಭರತನು ತನ್ನ ತಮ್ಮ ಶತ್ರುಘ್ನ ಹಾಗೂ ಗೆಳೆಯರೊಂದಿಗೆ ಆಡುತ್ತಿದ್ದ ಈ ಸುದ್ದಿಕೇಳಿ ಆತನು ಅಲ್ಲಿಗೆ ಓಡಿಬಂದು ಸಂಕೋಚದಿಂದ ಪ್ರೇಮದಿಂದ ಕೇಳಿದ – ಅಪ್ಪಾಜಿ! ಈ ಕಾಗದ ಎಲ್ಲಿಂದ ಬಂದಿದೆ? (ಚೌ/೧-೪)

**ದೋ – ಕುಸಲ ಪ್ರಾನಪ್ರಿಯ ಬಂಧು ದೋಉ ಅಹಹಿಂ ಕಹಹು ಕೆಹಿಂ ದೇಸ ।**
**ಸುನಿ ಸನೇಹ ಸಾನೇ ಬಚನ ಬಾಚೀ ಬಹುರಿ ನರೇಸ ॥ ೨೯೦ ॥**

ನಮ್ಮ ಪ್ರಾಣಪ್ರಿಯರಾದ ರಾಮ-ಲಕ್ಷ್ಮಣರಿಬ್ಬರೂ ಕುಶಲತಾನೇ? ಅವರು ಯಾವ ದೇಶದಲ್ಲಿದ್ದಾರೆ? ಸ್ನೇಹಾರ್ದ್ರವಾದ ಈ ಮಾತುಗಳನ್ನು ಕೇಳಿ, ರಾಜನು ಮತ್ತೊಮ್ಮೆ ಪತ್ರವನ್ನೋದಿದನು. (ದೋ/೨೯೦)

**ಚೌ – ಸುನಿ ಪಾತೀ ಪುಲಕೇ ದೋಉ ಭ್ರಾತಾ । ಅಧಿಕ ಸನೇಹು ಸಮಾತ ನ ಗಾತಾ ॥**
**ಪ್ರೀತಿ ಪುನೀತ ಭರತ ಕೈ ದೇಖೀ । ಸಕಲ ಸಭಾಂ ಸುಖು ಲಹೆಉ ಬಿಸೇಷೀ ॥ ೧ ॥**

ತಬ ನೃಪ ದೂತ ನಿಕಟ ಬೈಠಾರೇ । ಮಧುರ ಮನೋಹರ ಬಚನ ಉಚಾರೇ ॥
ಭೈಯಾ ಕಹಹು ಕುಸಲ ದೋಉ ಬಾರೇ । ತುಮ್ಹ ನೀಕೇಂ ನಿಜ ನಯನ ನಿಹಾರೇ ॥ ೨ ॥
ಸ್ಯಾಮಲ ಗೌರ ಧರೇಂ ಧನು ಭಾಥಾ । ಬಯ ಕಿಸೋರ ಕೌಸಿಕ ಮುನಿ ಸಾಥಾ ॥
ಪಹಿಚಾನಹು ತುಮ್ಹ ಕಹಹು ಸುಭಾಊ । ಪ್ರೇಮ ಬಿಬಸ ಪುನಿ ಪುನಿ ಕಹ ರಾಊ ॥ ೩ ॥
ಜಾ ದಿನ ತೇಂ ಮುನಿ ಗಏ ಲವಾಈ । ತಬ ತೇಂ ಆಜು ಸಾಂಚಿ ಸುಧಿ ಪಾಈ ॥
ಕಹಹು ಬಿದೇಹ ಕವನ ಬಿಧಿ ಜಾನೇ । ಸುನಿ ಪ್ರಿಯ ಬಚನ ದೂತ ಮುಸುಕಾನೇ ॥ ೪ ॥

ಪತ್ರದ ಒಕ್ಕಣೆಯನ್ನು ಕೇಳಿ ಈರ್ವರೂ ಸೋದರರು ಪುಲಕಿತರಾದರು. ಅವರ ಪ್ರೀತಿ ಎದೆಯಲ್ಲಿ ಹಿಡಿಸಲಾರದಾಯಿತು. ಭರತನ ಈ ಪವಿತ್ರ ಪ್ರೇಮವನ್ನು ಕಂಡು ಇಡೀ ಸಭೆ ವಿಶೇಷವಾಗಿ ಹರ್ಷಿತವಾಯಿತು. ಆಗ ರಾಜನು ದೂತರನ್ನು ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡು ಅವರಲ್ಲಿ ಮೃದುಮಧುರವಾಗಿ ಕೇಳಿದನು – ''ಅಯ್ಯಾ! ನಮ್ಮ ಮುದ್ದು ಕಂದಮ್ಮಗಳಿಬ್ಬರೂ ಕ್ಷೇಮತಾನೇ? ನೀವು ಅವರನ್ನು ಕಣ್ಣಾರೆ ಕಂಡಿರುವಿರಾ? ತಿಳಿಸಿರಿ. ಅವರು ಶ್ಯಾಮಲ, ಗೌರವರ್ಣದವರು, ಕೈಯಲ್ಲಿ ಧನುರ್ಬಾಣಗಳನ್ನು ಹಿಡಿದಿರುವರಲ್ಲ? ಇನ್ನೂ ಕಿಶೋರಾವಸ್ಥೆಯಲ್ಲಿದ್ದು, ವಿಶ್ವಾಮಿತ್ರಮುನಿಗಳೊಂದಿಗೆ ಇದ್ದಾರಲ್ಲ? ನಿಮಗೆ ಅವರ ಗುರುತು ಇದ್ದರೆ, ಅವರ ಸ್ವಭಾವವನ್ನು ಹೇಳಿರಿ.'' ಹೀಗೆ ರಾಜನು ಪ್ರೇಮದಿಂದ ಪದೇ-ಪದೇ ಅವರನ್ನು ಕೇಳಿದನು. ''ವಿಶ್ವಾಮಿತ್ರರು ಅವರನ್ನು ಕರಕೊಂಡು ಹೋದಮೇಲೆ ಇಂದೇ ಅವರ ಕುರಿತು ನಿಜವಾದ ಕ್ಷೇಮಸಮಾಚಾರದ ಸುದ್ದಿ ನನಗೆ ಮುಟ್ಟಿದೆ. ಜನಕ ಮಹಾರಾಜರು ಅವರನ್ನು ಹೇಗೆ ಗುರುತಿಸಿದ? ಅರಸನ ಈ ಪ್ರೇಮಪೂರ್ಣ ಮಾತುಗಳನ್ನು ಕೇಳಿ ದೂತರು ಮುಗುಳ್ನಗೆ ಬೀರಿ ಹೇಳತೊಡಗಿದರು. (ಚೌ/೧-೪)

**ದೋ – ಸುನಹು ಮಹೀಪತಿ ಮುಕುಟ ಮನಿ ತುಮ್ಹ ಸಮ ಧನ್ಯ ನ ಕೋಉ ।**
**ರಾಮು ಲಖನು ಜಿನ್ಹ ಕೇ ತನಯ ಬಿಸ್ವ ಬಿಭೂಷನ ದೋಉ ॥ ೨೯೧ ॥**

ಓ ರಾಜಕುಲಶಿರೋಮಣಿಯೇ! ಕೇಳಿರಿ. ವಿಶ್ವಕ್ಕೆ ಅಲಂಕಾರಪ್ರಾಯರಾದ ರಾಮ-ಲಕ್ಷ್ಮಣರಂತಹ ಕುಮಾರರನ್ನು ಪಡೆದ ನಿಮ್ಮಂಥ ಧನ್ಯರು ಯಾರಿದ್ದಾರೆ? (ದೋ/೨೯೧)

ಚೌ – ಪೂಛನ ಜೋಗು ನ ತನಯ ತುಮ್ಹಾರೇ । ಪುರುಷಸಿಂಘ ತಿಹು ಪುರ उಜಿಆರೇ ॥
ಜಿನ್ಹ ಕೇ ಜಸ ಪ್ರತಾಪ ಕೇಂ ಆಗೇ । ಸಸಿ ಮಲೀನ ರಬಿ ಸೀತಲ ಲಾಗೇ ॥ ೧ ॥
ತಿನ್ಹ ಕಹಂ ಕಹಿಅ ನಾಥ ಕಿಮಿ ಚೀನ್ಹೇ । ದೇಖಿಅ ರಬಿ ಕಿ ದೀಪ ಕರ ಲೀನ್ಹೇ ॥
ಸೀಯ ಸ್ವಯಂಬರ ಭೂಪ ಅನೇಕಾ । ಸಮಿಟೇ ಸುಭಟ ಏಕ ತೇಂ ಏಕಾ ॥ ೨ ॥
ಸಂಭು ಸರಾಸನು ಕಾಹುಂ ನ ಟಾರಾ । ಹಾರೇ ಸಕಲ ಬೀರ ಬರಿಆರಾ ॥
ತೀನಿ ಲೋಕ ಮಹಂ ಜೇ ಭಟಮಾನೀ । ಸಭ ಕೈ ಸಕತಿ ಸಂಭು ಧನು ಭಾನೀ ॥ ೩ ॥
ಸಕಇ ಉಠಾಇ ಸರಾಸುರ ಮೇರೂ । ಸೋಉ ಹಿಯಂ ಹಾರಿ ಗಯಉ ಕರಿ ಫೇರೂ ॥
ಜೆಹಿಂ ಕೌತುಕ ಸಿವಸೈಲು ಉಠಾವಾ । ಸೋಉ ತೆಹಿ ಸಭಾಂ ಪರಾಭಉ ಪಾವಾ ॥ ೪ ॥

ಪುರುಷಸಿಂಹರೂ, ವಿಶ್ವಜ್ಯೋತಿಯೂ ಆದ ನಿಮ್ಮ ಮಕ್ಕಳ ವಿಷಯವಾಗಿ ಏನು ಹೇಳುವುದು? ಅವರ ಕೀರ್ತಿ ಶೋಭೆಯ ಮುಂದೆ ಚಂದ್ರನೂ ಮಲಿನವಾಗಿ ಹೋಗುತ್ತಾನೆ. ಅವರ ಪ್ರತಾಪದ ಮುಂದೆ ಸೂರ್ಯನೂ ತಣ್ಣಗಾಗುತ್ತಾನೆ. ಒಡೆಯಾ! ಅವರನ್ನು ಹೇಗೆ ಗುರುತಿಸಿದಿರಿ? ಎಂದು ನೀವು ನಮ್ಮನ್ನು ಕೇಳುತ್ತಿದ್ದೀರಿ. ಸೂರ್ಯನನ್ನು ನೋಡಲು ದಿವಟಿಗೆಯ ಆವಶ್ಯಕತೆ ಇದೆಯಾ? ಸೀತಾಸ್ವಯಂವರದಲ್ಲಿ ಅನೇಕರಾಜರು ಬಂದಿದ್ದರು. ಒಬ್ಬರಿಗಿಂತ ಒಬ್ಬರು ಮಿಗಿಲಾದ ಯೋಧರು ಕಲೆತಿದ್ದರು. ಆದರೆ ಶಿವಧನುಸ್ಸನ್ನು ಯಾರೂ ಕದಲಿಸಲಾರದೆ ಹೋದರು. ಮಹಾವೀರರೆಲ್ಲ ಸೋತು ಸೊರಗಿದರು. ತ್ರೈಲೋಕ್ಯವೀರರೆಂದು ಮಾನ್ಯರಾದವರ ಸೊಕ್ಕನ್ನು ಶಿವಧನುಸ್ಸು ಮುರಿಯಿತು. ಸುಮೇರು ಪರ್ವತವನ್ನು ಎತ್ತಬಲ್ಲ ಬಾಣಾಸುರನೂ ಕೂಡ ಎದೆಗುಂದಿ ಆ ಧನುಸ್ಸಿಗೆ ಸೋತು ಪ್ರದಕ್ಷಿಣೆ ಹಾಕಿ ತೆಪ್ಪಗೆ ಹೊರಟುಹೋದನು. ಕೈಲಾಸ ಶೈಲವನ್ನು ಲೀಲೆಯಿಂದ ಎತ್ತಿದ ರಾವಣನೂ ಕೂಡ ಆ ಸಭೆಯಲ್ಲಿ ಪರಾಭವಹೊಂದಿದನು. (ಚೌ/೧-೪)

**ದೋ – ತಹಾಂ ರಾಮ ರಘುಬಂಸ ಮನಿ ಸುನಿಅ ಮಹಾ ಮಹಿಪಾಲ ।**
**ಭಂಜೆಉ ಚಾಪ ಪ್ರಯಾಸ ಬಿನು ಜಿಮಿ ಗಜ ಪಂಕಜ ನಾಲ ॥ ೨೯೨ ॥**

ಮಹಾರಾಜಾ! ಕೇಳಿರಿ. ''ಆ ಸಮಯದಲ್ಲಿ ರಘುಕುಲಮಣಿಯಾದ ಶ್ರೀರಾಮನು ಪ್ರಯಾಸಪಡದೆ ಆನೆಯು ತಾವರೆಯ ದಂಟನ್ನು ಮುರಿಯುವಂತೆ ಶಿವಧನುಸ್ಸನ್ನು ಮುರಿದುಬಿಟ್ಟನು. (ದೋ/೨೯೨)

**ಚೌ – ಸುನಿ ಸರೋಷ ಭೃಗುನಾಯಕು ಆಏ । ಬಹುತ ಭಾಁತಿ ತಿನ್ಹ ಆಁಖಿ ದೇಖಾಏ ॥**
**ದೇಖಿ ರಾಮ ಬಲು ನಿಜ ಧನು ದೀನ್ಹಾ । ಕರಿ ಬಹು ಬಿನಯ ಗವನು ಬನ ಕೀನ್ಹಾ ॥ ೧ ॥**
**ರಾಜನ ರಾಮು ಅತುಲಬಲ ಜೈಸೇಂ । ತೇಜ ನಿಧಾನ ಲಖನು ಪುನಿ ತೈಸೇಂ ॥**
**ಕಂಪಹಿಂ ಭೂಪ ಬಿಲೋಕತ ಜಾಕೇಂ । ಜಿಮಿ ಗಜ ಹರಿ ಕಿಸೋರ ಕೇ ತಾಕೇಂ ॥ ೨ ॥**
**ದೇವ ದೇಖಿ ತವ ಬಾಲಕ ದೋಊ । ಅಬ ನ ಆಁಖಿ ತರ ಆವತ ಕೋಊ ॥**
**ದೂತ ಬಚನ ರಚನಾ ಪ್ರಿಯ ಲಾಗೀ । ಪ್ರೇಮ ಪ್ರತಾಪ ಬೀರ ರಸ ಪಾಗೀ ॥ ೩ ॥**
**ಸಭಾ ಸಮೇತ ರಾಉ ಅನುರಾಗೇ । ದೂತನ್ಹ ದೇನ ನಿಛಾವರಿ ಲಾಗೇ ॥**
**ಕಹಿ ಅನೀತಿ ತೇ ಮೂದಹಿಂ ಕಾನಾ । ಧರಮು ಬಿಚಾರಿ ಸಬಹಿಂ ಸುಖು ಮಾನಾ ॥ ೪ ॥**

ಅಪೂರ್ವವಾದ ಧನುರ್ಭಂಗ ಟಂಕಾರವನ್ನು ಕೇಳಿ, ಪರಶುರಾಮರು ಕ್ರೋಧದಿಂದ ಮಿಥಿಲೆಗೆ ಬಂದು, ಅನೇಕ ವಿಧದಿಂದ ನಿಷ್ಠುರೋಕ್ತಿಗಳನ್ನು ನುಡಿದರು. ಕೊನೆಗೆ ಶ್ರೀರಾಮಚಂದ್ರನ ಶಕ್ತಿಸಾಮರ್ಥ್ಯವನ್ನು ತಿಳಿದುಕೊಂಡು, ತನ್ನ ವಿಷ್ಣುಧನುಸ್ಸನ್ನು ರಾಮನಿಗೆ ಅರ್ಪಿಸಿ, ಅನೇಕರೀತಿಯಿಂದ ಹೊಗಳಿ, ವಿನಮ್ರರಾಗಿ ತಪೋವನಕ್ಕೆ ಹೊರಟುಹೋದರು. ಮಹಾರಾಜರೇ! ಶ್ರೀರಾಮನು ಅತುಲಿತ ಬಲಧಾಮನಿರುವಂತೆ ಲಕ್ಷ್ಮಣನೂ ಕೂಡ ಮಹಾಪರಾಕ್ರಮಿಯಾಗಿರುವನು. ಅವರನ್ನು ಕಂಡಕೂಡಲೇ ರಾಜರುಗಳು ಸಿಂಹದ ಕಿಶೋರವನ್ನು ಕಂಡ ಆನೆಯಂತೆ ಭಯಕಂಪಿತರಾಗುತ್ತಿದ್ದರು. ಸ್ವಾಮಿ! ನಿಮ್ಮ ಕುಮಾರರನ್ನು ಒಂದು ಬಾರಿ ನೋಡಿದ ಮಾತ್ರದಿಂದ, ಅವರು ನಮ್ಮ ಕಣ್ಣುಗಳಲ್ಲಿ ತುಂಬಿಹೋದರು. ಆ ಕಣ್ಣುಗಳು ಇತರರನ್ನು ನೋಡಲು ಬಯಸುವುದೇ ಇಲ್ಲ. ಅವರ ಸೌಂದರ್ಯ, ತೇಜಃಪ್ರತಾಪದ ಮುಂದೆ ಯಾರೂ ಸಾಟಿಯಿಲ್ಲ.'' ಪ್ರೇಮ, ಪ್ರತಾಪ ಹಾಗೂ ವೀರರಸದಿಂದ ಕೂಡದ ಆ ದೂತರ ಮಾತುಗಳನ್ನು ಕೇಳಿ, ಸಭಾಸದರೆಲ್ಲರೂ ಆನಂದಿತರಾದರು. ಸಭಾಸಹಿತರಾಜನು ಪ್ರೇಮಮಗ್ನನಾಗಿ ದೂತರಿಗೆ ಉಡುಗೊರೆಗಳನ್ನು ಕೊಡಲುತೊಡಗಿದನು. ಅವರು ಮಾತ್ರ ''ಇದು ಉಚಿತವಲ್ಲ, ಧರ್ಮವಿರುದ್ಧವು'' ಎಂದು ಹೇಳುತ್ತಾ ಅದನ್ನು ನಿರಾಕರಿಸಿದರು. (ಕನ್ಯಾಪಕ್ಷದವರು ಉಡುಗೊರೆಗಳನ್ನು ಸ್ವೀಕರಿಸುವುದು ಉಚಿತವಲ್ಲತಾನೇ!) ಅವರ ಧರ್ಮಪ್ರಜ್ಞೆಯನ್ನು ಕಂಡು ಎಲ್ಲರೂ ಅತ್ಯಂತ ಹರ್ಷಿತರಾದರು. (ಚೌ/೧-೪)

**ದೋ – ತಬ ಉಠಿ ಭೂಪ ಬಸಿಷ್ಟ ಕಹುँ ದೀನ್ಹಿ ಪತ್ರಿಕಾ ಜಾಇ ।**
**ಕಥಾ ಸುನಾಈ ಗುರಹಿ ಸಬ ಸಾದರ ದೂತ ಬೋಲಾಇ ॥ ೨೯೩ ॥**

ಅನಂತರ ರಾಜನು ಎದ್ದು ವಸಿಷ್ಠರ ಬಳಿಗೆ ಹೋಗಿ, ಅವರಿಗೆ ಪತ್ರಿಕೆಯನ್ನು ಕೊಟ್ಟನು. ಬಳಿಕ ದೂತರನ್ನು ಆದರದಿಂದ ಬರಮಾಡಿಕೊಂಡನು. ಅವರು ಭಕ್ತಿಶ್ರದ್ಧೆಯಿಂದ ಗುರುಗಳಿಗೆ ಸಮಸ್ತ ವಿಷಯವನ್ನು ವಿವರಿಸಿದರು (ದೂತರ ಮೂಲಕ ಹೇಳಿಸಿದುದರಲ್ಲಿ ಎರಡು ಕಾರಣಗಳಿವೆ – (೧) ತನ್ನ ಕುರಿತಾಗಲೀ, ತನ್ನ ಪುತ್ರರ ಕುರಿತಾಗಲೀ ಸ್ವತಃ ತಾನೇ ಹೇಳಿಕೊಳ್ಳುವ ಪದ್ಧತಿಯಿಲ್ಲ. (೨) ತನ್ನ ಪುತ್ರರಾದ ರಾಮಲಕ್ಷ್ಮಣರ ಪ್ರತಾಪವನ್ನು ಇನ್ನೊಮ್ಮೆ ಕೇಳಿ ಆನಂದಿಸುವ ಅವಕಾಶ ದೊರೆಯಿತು.) (ದೋ/೨೯೩)

**ಚೌ – ಸುನಿ ಬೋಲೇ ಗುರ ಅತಿ ಸುಖು ಪಾಈ । ಪುನ್ಯ ಪುರುಷ ಕಹುँ ಮಹಿ ಸುಖ ಛಾಈ ॥**
**ಜಿಮಿ ಸರಿತಾ ಸಾಗರ ಮಹುँ ಜಾಹೀಂ । ಜದ್ಯಪಿ ತಾಹಿ ಕಾಮನಾ ನಾಹೀಂ ॥ ೧ ॥**
**ತಿಮಿ ಸುಖ ಸಂಪತಿ ಬಿನಹಿಂ ಬೋಲಾಏಂ । ಧರಮಸೀಲ ಪಹಿಂ ಜಾಹಿಂ ಸುಭಾಏಂ ॥**
**ತುಮ್ಹ ಗುರ ಬಿಪ್ರ ಧೇನು ಸುರ ಸೇಬೀ । ತಸಿ ಪುನೀತ ಕೌಸಲ್ಯಾ ದೇಬೀ ॥ ೨ ॥**
**ಸುಕೃತೀ ತುಮ್ಹ ಸಮಾನ ಜಗ ಮಾಹೀಂ । ಭಯಉ ನ ಹೈ ಕೋಉ ಹೋನೇಉ ನಾಹೀಂ ॥**
**ತುಮ್ಹ ತೇ ಅಧಿಕ ಪುನ್ಯ ಬಡ ಕಾಕೇಂ । ರಾಜನ ರಾಮ ಸರಿಸ ಸುತ ಜಾಕೇಂ ॥ ೩ ॥**
**ಬೀರ ಬಿನೀತ ಧರಮ ಬ್ರತ ಧಾರೀ । ಗುನ ಸಾಗರ ಬರ ಬಾಲಕ ಚಾರೀ ॥**
**ತುಮ್ಹ ಕಹುँ ಸರ್ಬ ಕಾಲ ಕಲ್ಯಾನಾ । ಸಜಹು ಬರಾತ ಬಜಾಇ ನಿಸಾನಾ ॥ ೪ ॥**

ಎಲ್ಲ ಶುಭಸಮಾಚಾರಗಳನ್ನು ಕೇಳಿ, ಅತ್ಯಂತ ಸುಖವನ್ನು ಹೊಂದಿದವರಾಗಿ ವಸಿಷ್ಠರು ಇಂತೆಂದರು – ಪುಣ್ಯಪುರುಷರ ಪಾಲಿಗೆ ಭೂಮಿಯಲ್ಲಿ ಎಲ್ಲೆಲ್ಲೂ ಸುಖವೇ ತುಂಬಿರುತ್ತದೆ. ಸಮುದ್ರವು ಬಯಸದಿದ್ದರೂ ಎಲ್ಲ ನದಿಗಳು ಆ ಸಮುದ್ರವನ್ನೇ ಸೇರುವವು.

ಹಾಗೆಯೇ ಸುಖ-ಸಂಪತ್ತುಗಳೂ ಕೂಡ ಧರ್ಮಾತ್ಮರು ಇರುವಲ್ಲಿಗೇ ಅಯಾಚಿತವಾಗಿ ಬಂದು ಸೇರುವವು. ನಿನ್ನಂತೆಯೇ ಕೌಸಲ್ಯಾದೇವಿಯು, ದೇವತೆಗಳನ್ನೂ, ಗುರುಗಳನ್ನೂ, ಗೋ-ಬ್ರಾಹ್ಮಣರನ್ನೂ ಭಕ್ತಿಯಿಂದ ಸೇವೆಮಾಡುವಳು. ಅವಳ ಪವಿತ್ರಕಾರ್ಯಾಚರಣೆಯು ಪ್ರಶಂಸಾರ್ಹವಾದುದು. ನಿನಗೆ ಸಮಾನರಾದ ಪುಣ್ಯಾತ್ಮರೂ ಈ ಜಗತ್ತಿನಲ್ಲಿ 'ನ ಭೂತೋ ನ ಭವಿಷ್ಯತಿ'. ರಾಜಾ! ರಾಮನಂತಹ ಪುತ್ರನನ್ನು ಪಡೆದ ನಿನ್ನ ಭಾಗ್ಯಕ್ಕೆ ಎಣೆಯುಂಟೇ? ನಿನ್ನ ನಾಲ್ವರು ಕುಮಾರರು ವೀರರೂ, ವಿನಯಶೀಲರೂ, ಧರ್ಮವ್ರತಿಗಳೂ, ಸದ್ಗುಣಸಮುದ್ರರೂ, ಉತ್ತಮರೂ ಆಗಿರುವರು. ನಿನಗೆ ಎಲ್ಲ ಕಾಲದಲ್ಲಿಯೂ ಶುಭವೇ ಜರಗುವುದು. ಆದ್ದರಿಂದ ದುಂದುಭಿನಾದದೊಂದಿಗೆ ವಿವಾಹಕ್ಕಾಗಿ ಶೀಘ್ರವಾಗಿ ದಿಬ್ಬಣಹೊರಡಿಸು. (ಚೌ/೧-೪)

**ದೋ – ಚಲಹು ಬೇಗಿ ಸುನಿ ಗುರ ಬಚನ ಭಲೆಹಿಂ ನಾಥ ಸಿರು ನಾಇ ।**
**ಭೂಪತಿ ಗವನೇ ಭವನ ತಬ ದೂತನ್ಹ ಬಾಸು ದೆವಾಇ ॥ ೨೯೪ ॥**

'ಬೇಗನೇ ಹೊರಡಿರಿ' ಎಂಬ ವಸಿಷ್ಠರ ಆದೇಶವನ್ನು ಕೇಳಿ ದಶರಥನು – ''ಮಹರ್ಷಿಗಳೇ! ಹಾಗೇ ಆಗಲಿ'' ಎಂದು ಹೇಳಿ ನಮಸ್ಕರಿಸಿ, ದೂತರಿಗೆ ಬಿಡದಿಯನ್ನು ವ್ಯವಸ್ಥೆಗೊಳಿಸಿ, ತನ್ನ ಅಂತಃಪುರಕ್ಕೆ ನಡೆದನು. (ದೋ/೨೯೪)

**ಚೌ – ರಾಜಾ ಸಬು ರನಿವಾಸ ಬೊಲಾಈ । ಜನಕ ಪತ್ರಿಕಾ ಬಾಚಿ ಸುನಾಈ ॥**
**ಸುನಿ ಸಂದೇಸು ಸಕಲ ಹರಷಾನೀಂ । ಅಪರ ಕಥಾ ಸಬ ಭೂಪ ಬಖಾನೀಂ ॥ ೧ ॥**
**ಪ್ರೇಮ ಪ್ರಫುಲ್ಲಿತ ರಾಜಹಿಂ ರಾನೀ । ಮನಹುँ ಸಿಖಿನಿ ಸುನಿ ಬಾರಿದ ಬಾನೀ ॥**
**ಮುದಿತ ಅಸೀಸ ದೇಹಿಂ ಗುರ ನಾರೀಂ । ಅತಿ ಆನಂದ ಮಗನ ಮಹತಾರೀಂ ॥ ೨ ॥**
**ಲೇಹಿಂ ಪರಸ್ಪರ ಅತಿ ಪ್ರಿಯ ಪಾತೀ । ಹೃದಯँ ಲಗಾಇ ಜುಡಾವಹಿಂ ಛಾತೀ ॥**
**ರಾಮ ಲಖನ ಕೈ ಕೀರತಿ ಕರನೀ । ಬಾರಹಿಂ ಬಾರ ಭೂಪಬರ ಬರನೀ ॥ ೩ ॥**
**ಮುನಿ ಪ್ರಸಾದು ಕಹಿ ದ್ವಾರ ಸಿಧಾಏ । ರಾನಿನ್ಹ ತಬ ಮಹಿದೇವ ಬೊಲಾಏ ॥**
**ದಿಏ ದಾನ ಆನಂದ ಸಮೇತಾ । ಚಲೇ ಬಿಪ್ರಬರ ಆಸಿಷ ದೇತಾ ॥ ೪ ॥**

ರಾಜನು ಎಲ್ಲ ರಾಣೀವಾಸವನ್ನು ಕರೆದು, ಜನಕನ ವಿವಾಹದ ಆಹ್ವಾನವನ್ನು ಓದಿಹೇಳಿದನು. ಸುದ್ದಿಯನ್ನು ಕೇಳಿ, ರಾಣಿಯರು ಆನಂದತುಂದಿಲರಾದರು. ಅನಂತರ ತಾನು ದೂತರಿಂದ ಕೇಳಿದ ಎಲ್ಲ ವಿಷಯಗಳನ್ನು ಸ್ವತಃ ರಾಜನೇ ಅವರಿಗೆ ವಿವರಿಸಿ ತಿಳಿಸಿದನು. ಮೇಘಗರ್ಜನೆಯನ್ನು ಕೇಳಿದ ನವಿಲುಗಳಂತೆ ಅರಸಿಯರು ಪ್ರಫುಲ್ಲಿತರಾದರು. ಗುರುಪತ್ನೀ, ಹಿರಿಯ ಮುತ್ತೈದೆಯರೆಲ್ಲರೂ ಆಶೀರ್ವದಿಸಿದರು. ತಾಯಂದಿರು ಅತ್ಯಂತ ಆನಂದಮಗ್ನರಾದರು. ಅತ್ಯಂತ ಪ್ರಿಯವಾದ ಆ ಪತ್ರವನ್ನು ಅವರೆಲ್ಲರೂ ಎದೆಗೊತ್ತಿಗೊಂಡು ಆನಂದಪಟ್ಟರು. ರಾಜಶ್ರೇಷ್ಠನಾದ ದಶರಥನು ರಾಮ-ಲಕ್ಷ್ಮಣರ ಕೀರ್ತಿಪ್ರತಾಪಗಳನ್ನು ಪದೇ-ಪದೇ ಬಣ್ಣಿಸಿದನು. 'ಇದೆಲ್ಲವೂ ಮುನಿಯ ಕೃಪೆ' ಎಂದು ಹೇಳಿ ಅರಸನು ಹೊರಗೆ ಹೊರಟನು. ರಾಣಿಯರು ಬ್ರಾಹ್ಮಣರನ್ನು ಕರೆಸಿ, ಆನಂದದಿಂದ ಅವರಿಗೆ ಭೂರಿದಾನವನ್ನು ನೀಡಿದರು. ಅವರು ಆಶೀರ್ವದಿಸಿ ಹೊರಟುಹೋದರು. (ಚೌ/೧-೪)

**ಸೋ – ಜಾಚಕ ಲಿಏ ಹँಕಾರಿ ದೀನ್ಹಿ ನಿಛಾವರಿ ಕೋಟಿ ಬಿಧಿ ।**
**ಚಿರು ಜೀವಹುँ ಸುತ ಚಾರಿ ಚಕ್ರಬರ್ತಿ ದಸರತ್ಥಕೇ ॥ ೨೯೫ ॥**

ಪುನಃ ರಾಣಿಯರು ಯಾಚಕರನ್ನು ಕರೆಸಿ, ವಸ್ತ್ರ-ವಾಹನಾದಿ ವಿವಿಧ ಉಡುಗೊರೆಯನ್ನು, ಕಾಣಿಕೆಗಳನ್ನೂ ಕೊಟ್ಟರು. ಅವರೆಲ್ಲರೂ – ''ಚಕ್ರವರ್ತಿ ದಶರಥ ಮಹಾರಾಜರ ನಾಲ್ವರೂ ಕುಮಾರರೂ ಚಿರಂಜೀವಿಗಳಾಗಲಿ'' ಎಂದು ಹರಸಿದರು. (ದೋ/೨೯೫)

**ಚೌ – ಕಹತ ಚಲೇ ಪಹಿರೇಂ ಪಟ ನಾನಾ । ಹರಷಿ ಹನೇ ಗಹಗಹೇ ನಿಸಾನಾ ॥**
**ಸಮಾಚಾರ ಸಬ ಲೋಗನ್ಹ ಪಾಏ । ಲಾಗೇ ಘರ ಘರ ಹೋನ ಬಧಾಏ ॥ ೧ ॥**
**ಭುವನ ಚಾರಿ ದಸ ಭರಾ ಉಛಾಹೂ । ಜನಕಸುತಾ ರಘುಬೀರ ಬಿಆಹೂ ॥**
**ಸುನಿ ಸುಭ ಕಥಾ ಲೋಗ ಅನುರಾಗೇ । ಮಗ ಗೃಹ ಗಲೀಂ ಸँವಾರನ ಲಾಗೇ ॥ ೨ ॥**
**ಜದ್ಯಪಿ ಅವಧ ಸದೈವ ಸುಹಾವನಿ । ರಾಮ ಪುರೀ ಮಂಗಲಮಯ ಪಾವನಿ ॥**
**ತದಪಿ ಪ್ರೀತಿ ಕೈ ಪ್ರೀತಿ ಸುಹಾಈ । ಮಂಗಲ ರಚನಾ ರಚೀ ಬನಾಈ ॥ ೩ ॥**

**ಧ್ವಜ ಪತಾಕ ಪಟ ಚಾಮರ ಚಾರೂ । ಛಾವಾ ಪರಮ ಬಿಚಿತ್ರ ಬಜಾರೂ ॥**
**ಕನಕ ಕಲಸ ತೋರನ ಮನಿ ಜಾಲಾ । ಹರದ ದೂಬ ದಧಿ ಅಚ್ಛತ ಮಾಲಾ ॥ ೪ ॥**

ಹೀಗೆ ಹರಸಿ ಅವರು ಅನೇಕ ವಿಧವಾದ ನೂತನ ವಸ್ತ್ರಗಳನ್ನು ಧರಿಸಿ, ಆನಂದದಿಂದ ಹೊರಟುಹೋದರು. ಅರಮನೆಯಲ್ಲಿ ನಗಾರಿಗಳು ನುಡಿಸಲ್ಪಟ್ಟವು. ಈ ಶುಭವಾರ್ತೆಯು ಎಲ್ಲೆಡೆ ಹರಡಿಕೊಂಡಿತು. ಮನೆ-ಮನೆಗಳಲ್ಲಿ ಹಬ್ಬದ ವಾತಾವರಣ ನಿರ್ಮಾಣಗೊಂಡಿತು. ಶ್ರೀಸೀತಾರಾಮರ ವಿವಾಹವಾರ್ತೆಯು ಚತುರ್ದಶ ಭುವನಗಳಲ್ಲಿ ಉತ್ಸಾಹದ ಉಬ್ಬರವೆದ್ದಿತು. ಈ ಶುಭವಾರ್ತೆಯನ್ನು ಕೇಳಿ ಪ್ರಜಾಜನರು ಪ್ರೇಮಮಗ್ನರಾಗಿ ತಮ್ಮ ಮನೆಗಳನ್ನೂ, ಬೀದಿ ಕೇರಿಗಳನ್ನು ಸಿಂಗರಿಸತೊಡಗಿದರು. ಶ್ರೀರಾಮನ ಪವಿತ್ರಪುರಿಯಾದ ಅಯೋಧ್ಯೆ ಮೊದಲೇ ಸುಂದರವಾಗಿದ್ದರೂ, ಹರ್ಷದಮೇಲೆ ಹರ್ಷ ಉಂಟಾದ್ದರಿಂದ ಅದನ್ನು ಮಂಗಳ ಹಾಗೂ ಸುಂದರ ವಸ್ತುಗಳಿಂದ ಸಿಂಗರಿಸಲಾಯಿತು. ನಗರದ ವೀಧಿಗಳು, ಅಂಗಡಿಗಳು, ಧ್ವಜ-ಪತಾಕೆಗಳಿಂದ, ತೋರಣಗಳಿಂದ, ಪರದೆಗಳಿಂದ, ಮನೋಹರವಾದ ಚಾಮರಗಳಿಂದ ತುಂಬಿಹೋದವು. ಚಿನ್ನದ ಕಲಶ, ತೋರಣ, ಮಣಿಗಳ ಕುಚ್ಚುಗಳು, ಅರಶಿನ, ಕೇಸರೀ, ಮೊಸರು, ಅಕ್ಷತೆ, ಗರಿಕೆ ಹೂವಿನ ಮಾಲೆಗಳಿಂದ ಅಲಂಕರಿಸಲ್ಪಟ್ಟಿತು. (ಚೌ/೧-೪)

**ದೋ – ಮಂಗಲಮಯ ನಿಜ ನಿಜ ಭವನ ಲೋಗನ್ಹ ರಚೇ ಬನಾಇ ।**
**ಬೀಥೀಂ ಸೀಂಚೀಂ ಚತುರಸಮ ಚೌಕೇಂ ಚಾರು ಪುರಾಇ ॥ ೨೯೬ ॥**

ಈ ವಿಧವಾಗಿ ಪ್ರಜಾಜನರು ತಮ್ಮ-ತಮ್ಮ ಮನೆಗಳನ್ನು ಮಂಗಳಕರವಾಗಿ ಅಲಂಕರಿಸಿದರು. ಎಲ್ಲ ಬೀದಿ-ಬೀದಿಗಳಲ್ಲಿ ಚಂದನ, ಕೇಶರೀ, ಕಸ್ತೂರಿ ಹಾಗೂ ಕರ್ಪೂರ ಹೀಗೆ ಪರಿಮಳ ದ್ರವವ್ಯಗಳನ್ನು ಒಟ್ಟುಗೂಡಿಸಿ ಚುಮುಕಿಸಿದರು. ಎಲ್ಲ ಮುಖ್ಯದ್ವಾರಗಳನ್ನು ಅಂದವಾಗಿ ಅಲಂಕರಿಸಿ, ಅಂಗಳದಲ್ಲಿ ರಂಗವಲ್ಲಿಗಳನ್ನು ಬಿಡಿಸಿದರು. (ದೋ/೨೯೬)

**ಚೌ – ಜಹಂ ತಹಂ ಜೂಥ ಜೂಥ ಮಿಲಿ ಭಾಮಿನಿ । ಸಜಿ ನವ ಸಪ್ತ ಸಕಲ ದುತಿ ದಾಮಿನಿ ॥**
**ಬಿಧುಬದನೀಂ ಮೃಗ ಸಾವಕ ಲೋಚನಿ । ನಿಜ ಸರೂಪ ರತಿ ಮಾನು ಬಿಮೋಚನಿ ॥ ೧ ॥**
**ಗಾವಹಿಂ ಮಂಗಲ ಮಂಜುಲ ಬಾನೀಂ । ಸುನಿ ಕಲ ರವ ಕಲಂಕಠಿ ಲಜಾನೀಂ ॥**
**ಭೂಪ ಭವನ ಕಿಮಿ ಜಾಇ ಬಖಾನಾ । ಬಿಸ್ವ ಬಿಮೋಹನ ರಚೆಉ ಬಿತಾನಾ ॥ ೨ ॥**
**ಮಂಗಲ ದ್ರಬ್ಯ ಮನೋಹರ ನಾನಾ । ರಾಜತ ಬಾಜತ ಬಿಪುಲ ನಿಸಾನಾ ॥**
**ಕತಹುಂ ಬಿರಿದ ಬಂದೀ ಉಚ್ಚರಹೀಂ । ಕತಹುಂ ಬೇದ ಧುನಿ ಭೂಸುರ ಕರಹೀಂ ॥ ೩ ॥**
**ಗಾವಹಿಂ ಸುಂದರಿ ಮಂಗಲ ಗೀತಾ । ಲೈ ಲೈ ನಾಮು ರಾಮು ಅರು ಸೀತಾ ॥**
**ಬಹುತ ಉಛಾಹು ಭವನು ಅತಿ ಥೋರಾ । ಮಾನಹುಂ ಉಮಗಿ ಚಲಾ ಚಹು ಓರಾ ॥ ೪ ॥**

ವಿದ್ಯುಲ್ಲತೆಗಳಂತೆ ಪ್ರಕಾಶಿಸುವ ಚಂದ್ರಮುಖಿಯರು, ಮೃಗಶಾಬಾಕ್ಷಿಯರು, ರತಿದೇವಿಯನ್ನು ಮೀರಿಸುವಂತಹ ಸುಂದರ ಸುಮಂಗಲಿ ಸ್ತ್ರೀಯರು ಷೋಡಶ ಶೃಂಗಾರ ಮಾಡಿಕೊಂಡು, ಅಲ್ಲಲ್ಲಿ ತಂಡ-ತಂಡಗಳಲ್ಲಿ ಕಲೆತು, ಮಂಜುಳ ಕಂಠದಿಂದ ಮಂಗಳಗೀತೆಗಳನ್ನು ಹಾಡುತ್ತಿದ್ದರು. ಅವರ ಮಧುರ ಸ್ವರಗಳನ್ನು ಕೇಳಿದ ಕೋಗಿಲೆಗಳೂ ತಲೆತಗ್ಗಿಸುವಂತಿತ್ತು. ವಿಶ್ವಮೋಹಕವಾದ ಮಂಟಪ ಸಮೆದು ನಿಂತಿದ್ದ ಅರಮನೆಯನ್ನು ಎಂತು ಬಣ್ಣಿಸುವುದು? ನಾನಾ ವಿಧವಾದ ಮಂಗಳದ್ರವ್ಯಗಳು ಕಂಗೊಳಿಸುತ್ತಿದ್ದವು. ಅನೇಕ ನಗಾರಿಗಳು ಧ್ವನಿಗೈಯ್ಯುತ್ತಿದ್ದವು. ಒಂದೆಡೆ ವಂದಿಮಾಗಧರು ರಘುಕುಲದ ಕೀರ್ತಿಯನ್ನು ಉಗ್ಗಡಿಸುತ್ತಿದ್ದರು. ಮತ್ತೊಂದೆಡೆ ವಿಪ್ರರು ವೇದಘೋಷ ಮಾಡುತ್ತಿದ್ದರು. ಸುಂದರ ನಾರಿಯರು ರಾಮ-ಸೀತೆಯರ ಹೆಸರೆತ್ತಿ ಮಂಗಳಗೀತೆಗಳನ್ನು ಹಾಡುತ್ತಿದ್ದರು. ಉತ್ಸಾಹವೋ ಅಪಾರ, ಅದರ ಮುಂದೆ ಅರಮನೆ ಚಿಕ್ಕದಾಯಿತು. ಅದರಲ್ಲಿ ಉತ್ಸಾಹ (ಆನಂದ) ಹಿಡಿಸದೆ ಸುತ್ತಲೂ ಉಕ್ಕಿಹರಿದಂತಿತ್ತು. (ಚೌ/೧-೪)

**ದೋ – ಸೋಭಾ ದಸರಥ ಭವನ ಕಇ ಕೋ ಕಬಿ ಬರನೈ ಪಾರ ।**
**ಜಹಾಂ ಸಕಲ ಸುರ ಸೀಸ ಮನಿ ರಾಮ ಲೀನ್ಹ ಅವತಾರ ॥ ೨೯೭ ॥**

ಸಮಸ್ತ ದೇವತಾ ಶಿರೋಮಣಿಯಾದ ಶ್ರೀರಾಮನು ಅವತರಿಸಿದ ಆ ದಶರಥ ಮಹಾರಾಜರ ಅರಮನೆಯ ವೈಭವವನ್ನು ಯಾವ ಕವಿಯು ವರ್ಣಿಸಬಲ್ಲನು? (ದೋ/೨೯೭)

**ಚೌ – ಭೂಪ ಭರತ ಪುನಿ ಲಿಏ ಬೋಲಾಈ । ಹಯ ಗಯ ಸ್ಯಂದನ ಸಾಜಹು ಜಾಈ ॥**
**ಚಲಹು ಬೇಗಿ ರಘುಬೀರ ಬರಾತಾ । ಸುನತ ಪುಲಕ ಪೂರೇ ದೊಉ ಭ್ರಾತಾ ॥ ೧ ॥**

ಭರತ ಸಕಲ ಸಾಹನೀ ಬೊಲಾಏ । ಆಯಸು ದೀನ್ಹ ಮುದಿತ ಉಠಿ ಧಾಏ ॥
ರಚಿ ರುಚಿ ಜೀನ ತುರಗ ತಿನ್ಹ ಸಾಜೇ । ಬರನ ಬರನ ಬರ ಬಾಜಿ ಬಿರಾಜೇ ॥ ೨ ॥
ಸುಭಗ ಸಕಲ ಸುಠಿ ಚಂಚಲ ಕರನೀ । ಅಯ ಇವ ಜರತ ಧರತ ಪಗ ಧರನೀ ॥
ನಾನಾ ಜಾತಿ ನ ಜಾಹಿಂ ಬಖಾನೇ । ನಿದರಿ ಪವನು ಜನು ಚಹತ ಉಡಾನೇ ॥ ೩ ॥
ತಿನ್ಹ ಸಬ ಛಯಲ ಭಏ ಅಸವಾರಾ । ಭರತ ಸರಿಸ ಬಯ ರಾಜಕುಮಾರಾ ॥
ಸಬ ಸುಂದರ ಸಬ ಭೂಷನಧಾರೀ । ಕರ ಸರ ಚಾಪ ತೂನ ಕಟಿ ಭಾರೀ ॥ ೪ ॥

ದಶರಥ ಮಹಾರಾಜರು ಭರತನನ್ನು ಕರೆದು, ''ನೀನು ಹೋಗಿ ಆನೆ, ಕುದುರೆ, ರಥ, ಮೊದಲಾದವುಗಳನ್ನು ಸಜ್ಜುಗೊಳಿಸಿ, ಬೇಗನೇ ಶ್ರೀರಾಮನ ವಿವಾಹಕ್ಕಾಗಿ ದಿಬ್ಬಣಹೊರಡುವಂತೆ ವ್ಯವಸ್ಥೆಮಾಡು'' ಎಂದು ಆಜ್ಞಾಪಿಸಿದನು. ಇದನ್ನು ಕೇಳಿ ಭರತ-ಶತ್ರುಘ್ನರಿಬ್ಬರೂ ಪುಳಕಿತರಾದರು. ಭರತನು ಅಶ್ವಪಾಲಕರನ್ನೆಲ್ಲ ಬರಮಾಡಿಕೊಂಡು ಕುದುರೆಗಳನ್ನು ಸಜ್ಜುಗೊಳಿಸುವಂತೆ ಅಪ್ಪಣೆಯಿತ್ತನು. ಅವರು ಹರ್ಷದಿಂದ ಆ ಕೆಲಸಕ್ಕಾಗಿ ಓಡಿದರು. ಅವರು ಕುದುರೆಗಳಿಗೆ ಜೀನುಹಾಕಿ ಅಲಂಕರಿಸಿ ಸಿದ್ಧಗೊಳಿಸಿದರು. ಬಣ್ಣ-ಬಣ್ಣದ ಆ ಉತ್ತಮ ಅಶ್ವಗಳು ಶೋಭಿಸುತ್ತಿದ್ದವು. ಆ ಕುದುರೆಗಳೆಲ್ಲವೂ ಅತಿ ಸುಂದರವಾಗಿದ್ದವು. ವಾಯುಗತಿಯುಳ್ಳವುಗಳು. ಅವು ಕಾದಕಬ್ಬಿಣದ ಮೇಲೆ ಹೆಜ್ಜೆಯಿಡುವಂತೆ, ನೆಲದ ಮೇಲೆ ಹೆಜ್ಜೆಯಿಡುತ್ತಿದ್ದವು. ಅವುಗಳಲ್ಲಿ ಅನೇಕ ಜಾತಿಯ ಅಶ್ವಗಳಿದ್ದವು. ಅವುಗಳನ್ನು ಎಷ್ಟೆಂದು ವರ್ಣಿಸುವುದು? ಅವು ಗಾಳಿಯನ್ನೂ ನಿರ್ಲಕ್ಷಿಸಿ ಹಾರಬಯಸುತ್ತಿದ್ದವು. ಭರತನೂ ಹಾಗೂ ಅವನ ಸಮವಯಸ್ಕರಾದ ರಾಜಕುಮಾರರೂ ಆ ಕುದುರೆಗಳ ಮೇಲೆ ಆರೂಢರಾದರು. ಅವರೆಲ್ಲರೂ ಸುಂದರವಾದ ಒಡವೆ-ವಸ್ತ್ರಗಳನ್ನು ತೊಟ್ಟಿದ್ದು, ಕೈಯಲ್ಲಿ ಧನುರ್ಬಾಣಗಳನ್ನು ಧರಿಸಿ, ಸೊಂಟದಲ್ಲಿ ಬತ್ತಳಿಕೆ ಬಿಗಿದುಕೊಂಡು ಶೋಭಿಸುತ್ತಿದ್ದರು. (ಚೌ/೧-೪)

**ದೋ – ಛರೇ ಛಬೀಲೇ ಛಯಲ ಸಬ ಸೂರ ಸುಜಾನ ನಬೀನ ।**
**ಜುಗ ಪದಚರ ಅಸವಾರ ಪ್ರತಿ ಜೇ ಅಸಿಕಲಾ ಪ್ರಬೀನ ॥ ೨೯೮ ॥**

ಅವರೆಲ್ಲರೂ ಏರುಜವ್ವನದ ತರುಣರು, ಶೂರವೀರರೂ, ಯುದ್ಧನಿಪುಣರೂ ಆಗಿದ್ದರು. ಪ್ರತಿಯೋರ್ವ ಸವಾರನ ಜೊತೆಗೂ ಖಡ್ಗಯುದ್ಧದಲ್ಲಿ ಕೋವಿದರಾದ ಇಬ್ಬಿಬ್ಬರು ಕಾಲಾಳುಗಳು ಸಾಗುತ್ತಿದ್ದರು. (ದೋ/೨೯೮)

ಚೌ – ಬಾಂಧೇಂ ಬಿರದ ಬೀರ ರನ ಗಾಢೇ । ನಿಕಸಿ ಭಏ ಪುರ ಬಾಹೇರ ಠಾಢೇ ॥
ಫೇರಹಿಂ ಚತುರ ತುರಗ ಗತಿ ನಾನಾ । ಹರಷಹಿಂ ಸುನಿ ಸುನಿ ಪನವ ನಿಸಾನಾ ॥ ೧ ॥
ರಥ ಸಾರಥಿನ್ಹ ಬಿಚಿತ್ರ ಬನಾಏ । ಧ್ವಜ ಪತಾಕ ಮನಿ ಭೂಷನ ಲಾಏ ॥
ಚವಂರ ಚಾರು ಕಿಂಕಿನಿ ಧುನಿ ಕರಹೀಂ । ಭಾನು ಜಾನ ಸೋಭಾ ಅಪಹರಹೀಂ ॥ ೨ ॥
ಸಾವಂಕರನ ಅಗನಿತ ಹಯ ಹೋತೇ । ತೇ ತಿನ್ಹ ರಥನ್ಹ ಸಾರಥಿನ್ಹ ಜೋತೇ ॥
ಸುಂದರ ಸಕಲ ಅಲಂಕೃತ ಸೋಹೇ । ಜಿನ್ಹಹಿ ಬಿಲೋಕತ ಮುನಿ ಮನ ಮೋಹೇ ॥ ೩ ॥
ಜೇ ಜಲ ಚಲಹಿಂ ಥಲಹಿ ಕೀ ನಾಈಂ । ಟಾಪ ನ ಬೂಡ ಬೇಗ ಅಧಿಕಾಈಂ ॥
ಅಸ್ತ್ರ ಸಸ್ತ್ರ ಸಬು ಸಾಜು ಬನಾಈ । ರಥೀ ಸಾರಥಿನ್ಹ ಲಿಏ ಬೊಲಾಈ ॥ ೪ ॥

ವೀರವೇಷವನ್ನು ತೊಟ್ಟು, ಕುದುರೆಗಳನ್ನೇರಿ ಆ ರಣಧೀರರು ಹೊರಟು ಊರ ಹೊರಗೆ ಬಂದು ನಿಂತರು. ಚತುರರಾದ ರಾವುತರು ತಮ್ಮ-ತಮ್ಮ ಕುದುರೆಗಳನ್ನು ವಿವಿಧ ಗಮನರೀತಿಯಿಂದ ಓಡಿಸುತ್ತಾ, ಡೋಲು, ನಗಾರಿಗಳ ಸದ್ದನ್ನು ಕೇಳಿ ಹಿಗ್ಗುತ್ತಿದ್ದರು. ಸಾರಥಿಗಳು ಧ್ವಜ, ಪತಾಕೆ, ರತ್ನಾಭೂಷಣಗಳಿಂದ ರಥಗಳನ್ನು ಸಿಂಗರಿಸಿದ್ದರು. ಛತ್ರಚಾಮರಗಳಿಂದಲೂ ಮಧುರವಾಗಿ ಧ್ವನಿಗೈಯ್ಯುತ್ತಿದ್ದ ಗಂಟೆಗಳಿಂದಲೂ ಅಲಂಕೃತವಾದ ಆ ರಥಗಳ ಶೋಭೆಯು ಸೂರ್ಯನ ರಥದ ಅಂದವನ್ನು ಹಿಂದಕ್ಕೆ ಹಾಕುತ್ತಿದ್ದವು. ಯಜ್ಞವೇದಿಕೆಯಿಂದ ಆವಿರ್ಭವಿಸಿದ ಅಸಂಖ್ಯಾತವಾದ ಶ್ಯಾಮಕರ್ಣಶೋಭಿತವಾದ ದಿವ್ಯಾಶ್ವಗಳನ್ನು ಆ ರಥಕ್ಕೆ ಹೂಡಿದ್ದರು. ಅವು ನೋಡಲು ಅಂದವಾಗಿದ್ದು, ಅನೇಕ ಆಭೂಷಣಗಳಿಂದ ಅಲಂಕೃತವಾಗಿದ್ದವು. ಅವುಗಳ ರೂಪರೇಖಾವಿಲಾಸವು ಮುನೀಶ್ವರರ ಮನಸ್ಸನ್ನೂ ಕೂಡ ಅಪಹರಿಸುವಂತಿತ್ತು. ಈ ಕುದುರೆಗಳು ನೆಲದ ಮೇಲೆ ನಡೆದಂತೆ ನೀರಿನ ಮೇಲೆಯೂ ನಡೆಯಬಲ್ಲವು. ವೇಗಾಧಿಕ್ಯದಿಂದ ಅವುಗಳ ಗೊರಸು ನೀರಿನಲ್ಲಿ ಮುಳುಗುತ್ತಿರಲಿಲ್ಲ. ಶಸ್ತ್ರಾಸ್ತ್ರಗಳನ್ನು ಹಾಗೂ ಇತರ ವಸ್ತುಗಳನ್ನು ಅಣಿಗೊಳಿಸಿಕೊಂಡು ಸಾರಥಿಗಳು ರಥಿಕರನ್ನು ಆಹ್ವಾನಿಸಿದರು. (ಚೌ/೧-೪)

**ದೋ – ಚಢ಼ಿ ಚಢ಼ಿ ರಥ ಬಾಹೇರ ನಗರ ಲಾಗೀ ಜುರನ ಬರಾತ।**
**ಹೋತ ಸಗುನ ಸುಂದರ ಸಬಹಿ ಜೋ ಜೆಹಿ ಕಾರಜ ಜಾತ॥ ೨೯೯ ॥**

ರಥಿಕರು ರಥಗಳಲ್ಲಿ ಹತ್ತಿ ಕುಳಿತು ದಿಬ್ಬಣವು ನಗರದ ಹೊರಭಾಗದಲ್ಲಿ ಸೇರತೊಡಗಿದರು. ಎಲ್ಲರಿಗೂ ಶುಭಶಕುನಗಳೇ ಆಗುತ್ತಿದ್ದವು. (ದೋ/೨೯೯)

**ಚೌ – ಕಲಿತ ಕರಿಬರನ್ಹಿ ಪರೀಂ ಅಂಬಾರೀಂ। ಕಹಿ ನ ಜಾಹಿಂ ಜೆಹಿ ಭಾಂತಿ ಸಂವಾರೀಂ॥**
**ಚಲೇ ಮತ್ತ ಗಜ ಘಂಟ ಬಿರಾಜೀ। ಮನಹುँ ಸುಭಗ ಸಾವನ ಘನ ರಾಜೀ॥ ೧ ॥**
**ಬಾಹನ ಅಪರ ಅನೇಕ ಬಿಧಾನಾ। ಸಿಬಿಕಾ ಸುಭಗ ಸುಖಾಸನ ಜಾನಾ॥**
**ತಿನ್ಹ ಚಢ಼ಿ ಚಲೇ ಬಿಪ್ರಬರ ಬೃಂದಾ। ಜನು ತನು ಧರೇಂ ಸಕಲ ಶ್ರುತಿ ಛಂದಾ॥ ೨ ॥**
**ಮಾಗಧ ಸೂತ ಬಂದಿ ಗುನಗಾಯಕ। ಚಲೇ ಜಾನ ಚಢ಼ಿ ಜೋ ಜೆಹಿ ಲಾಯಕ॥**
**ಬೇಸರ ಊँಟ ಬೃಷಭ ಬಹು ಜಾತೀ। ಚಲೇ ಬಸ್ತು ಭರಿ ಅಗನಿತ ಭಾಂತೀ॥ ೩ ॥**
**ಕೋಟಿನ್ಹ ಕಾँವರಿ ಚಲೇ ಕಹಾರಾ। ಬಿಬಿಧ ಬಸ್ತು ಕೋ ಬರನೈ ಪಾರಾ॥**
**ಚಲೇ ಸಕಲ ಸೇವಕ ಸಮುದಾಈ। ನಿಜ ನಿಜ ಸಾಜು ಸಮಾಜು ಬನಾಈ॥ ೪ ॥**

ಶ್ರೇಷ್ಠ ಆನೆಗಳ ಮೇಲೆ ಅಂಬಾರಿಗಳು ಸಿದ್ಧವಾಗಿದ್ದವು. ಅವುಗಳ ಅಲಂಕಾರವಂತೂ ಹೇಳತೀರದು. ಮತ್ತಗಜಗಳು ಕೊರಳಗಂಟೆಗಳ ದನಿಗೈಯ್ಯುತ್ತಾ, ಮಳೆಗಾಲದ ಕರಿಮೋಡಗಳೇ ನಡೆದಾಡುತ್ತಿವೆಯೋ ಎಂಬಂತೆ ಹೊರಟವು. ಪಲ್ಲಕ್ಕಿಗಳಲ್ಲಿ, ಸಣ್ಣ-ಸಣ್ಣ ರಥ ಮೊದಲಾದ ವಾಹನಗಳಲ್ಲಿ ವೇದಮೂರ್ತಿಗಳಾದ ಬ್ರಾಹ್ಮಣರು – ಸಾಕ್ಷಾತ್ ವೇದಗಳ ಛಂದಗಳೇ ಶರೀರ ಧರಿಸಿಕೊಂಡು ಹೋಗುತ್ತಿವೆಯೋ ಎಂಬಂತೆ ಪ್ರಯಾಣಮಾಡುತ್ತಿದ್ದರು. ಮಾಗಧರು, ಸೂತರು, ಭಟ್ಟಂಗಿಗಳು, ಗುಣಗಾಯಕರು ತಮ-ತಮಗೆ ಬೇಕಾದ ವಾಹನಗಳನ್ನೇರಿ ಹೊರಟರು. ಅನೇಕ ಜಾತಿಯ ಹೇಸರಕತ್ತೆ, ಒಂಟೆ, ಎತ್ತುಗಳು ಅಸಂಖ್ಯಾತ ವಸ್ತುಗಳನ್ನು ಹೊತ್ತುಕೊಂಡು ಹೊರಟವು. ಪಾದಚಾರಿಗಳು ಇನ್ನೂ ಅನೇಕ ವಸ್ತುಗಳನ್ನು ಹೊತ್ತುಕೊಂಡು ಮುಂದು-ಮುಂದಕ್ಕೆ ಸಾಗುತ್ತಿದ್ದರು. ಸೇವಕರೆಲ್ಲರೂ ತಮ್ಮ-ತಮ್ಮ ಪರಿಕರಗಳನ್ನು ಎತ್ತಿಕೊಂಡು ಗುಂಪು-ಗುಂಪಾಗಿ ಹೊರಟರು. (ಚೌ/೧-೪)

**ದೋ – ಸಬ ಕೇಂ ಉರ ನಿರ್ಭರ ಹರಷು ಪೂರಿತ ಪುಲಕ ಸರೀರ।**
**ಕಬಹಿಂ ದೇಖಿಬೇ ನಯನ ಭರಿ ರಾಮು ಲಖನು ದೊಉ ಬೀರ॥ ೩೦೦ ॥**

ಎಲ್ಲರ ಹೃದಯಗಳು ಆನಂದದಿಂದ ತುಂಬಿಹೋದುವು. ಶರೀರ ರೋಮಾಂಚವಾಗಿತ್ತು. ಶ್ರೀರಾಮ-ಲಕ್ಷ್ಮಣರನ್ನು ಯಾವಾಗ ಕಣ್ಣಾರೆ ಕಾಣುವೆವೋ ಎಂಬ ತವಕ ಎಲ್ಲರಲ್ಲಿತ್ತು. (ದೋ/೩೦೦)

**ಚೌ – ಗರಜಹಿಂ ಗಜ ಘಂಟಾ ಧುನಿ ಘೋರಾ। ರಥ ರವ ಬಾಜಿ ಹಿಂಸ ಚಹು ಓರಾ॥**
**ನಿದರಿ ಘನಹಿ ಘುರ್ಮ್ಮರಹಿಂ ನಿಸಾನಾ। ನಿಜ ಪರಾಇ ಕಛು ಸುನಿಅ ನ ಕಾನಾ॥ ೧ ॥**
**ಮಹಾ ಭೀರ ಭೂಪತಿ ಕೇ ದ್ವಾರೇಂ। ರಜ ಹೋಇ ಜಾಇ ಪಷಾನ ಪಬಾರೇಂ॥**
**ಚಢ಼ೀ ಅಟಾರಿನ್ಹ ದೇಖಹಿಂ ನಾರೀಂ। ಲಿಏँ ಆರತೀ ಮಂಗಲ ಥಾರೀಂ॥ ೨ ॥**
**ಗಾವಹಿಂ ಗೀತ ಮನೋಹರ ನಾನಾ। ಅತಿ ಆನಂದು ನ ಜಾಇ ಬಖಾನಾ॥**
**ತಬ ಸುಮಂತ್ರ ದುಇ ಸ್ಯಂದನ ಸಾಜೀ। ಜೋತೇ ರಬಿ ಹಯ ನಿಂದಕ ಬಾಜೀ॥ ೩ ॥**
**ದೊಉ ರಥ ರುಚಿರ ಭೂಪ ಪಹಿಂ ಆನೇ। ನಹಿಂ ಸಾರದ ಪಹಿಂ ಜಾಹಿಂ ಬಖಾನೇ॥**
**ರಾಜ ಸಮಾಜು ಏಕ ರಥ ಸಾಜಾ। ದೂಸರ ತೇಜ ಪುಂಜ ಅತಿ ಭ್ರಾಜಾ॥ ೪ ॥**

ಆನೆಗಳು ಘೀಳಿಡುತ್ತಿದ್ದವು. ಅವುಗಳ ಕೊರಳ ಘಂಟೆಗಳು ಭೀಷಣವಾಗಿ ಉಲಿಯುತ್ತಿದ್ದವು. ಸುತ್ತಲೂ ಎತ್ತೆತ್ತಲೂ ರಥಗಳ ಗಡಗಡಸದ್ದು, ಕುದುರೆಗಲ ಹೇಷಾರವಗಳು, ನಗಾರಿಗಳ ಭೀಕರನಿನಾದ, ಹೀಗೆ ಇವೆಲ್ಲವೂ ಮೇಘಗರ್ಜನೆಯನ್ನೂ ಕೂಡ ಮೀರಿಸಿತ್ತು. ಒಬ್ಬರ ಮಾತು ಮತ್ತೊಬ್ಬರಿಗೆ ಕೇಳಿಸುತ್ತಿರಲಿಲ್ಲ. ದಶರಥ ಮಹಾರಾಜರ ಅರಮನೆಯ ಮುಂದೆ ಭಾರೀ ಗುಂಪು ಸೇರಿತ್ತು. ಅದರಲ್ಲಿ ಒಂದು ಕಲ್ಲು ಎಸೆದರೂ ಅದು ಪುಡಿ-ಪುಡಿಯಾಗಿ ಹಿಟ್ಟಾಗುವಷ್ಟು ಜನಸಂದಣಿ ನೆರೆದಿತ್ತು. ಉಪ್ಪರಿಗೆಯ ಮೇಲೆ ನಿಂತಿದ್ದ ಸ್ತ್ರೀಯರು ಮಂಗಳ ತಳಿಗೆಗಳಲ್ಲಿ ರತುನದಾರತಿಯನ್ನು ಬೆಳಗಲು ತವಕದಿಂದ ಕಾಯುತ್ತಾ ಸೋಬಾನೆ

ಹಾಡುತ್ತಿದ್ದರು. ಅವರ ಹರ್ಷವಂತೂ ಹೇಳತೀರದು. ಆಗಲೇ ಸುಮಂತ್ರನು ಎರಡು ರಥಗಳನ್ನು ಸಜ್ಜುಗೊಳಿಸಿ, ಅವುಗಳಿಗೆ ಸೂರ್ಯನ ರಥಾಶ್ವಗಳನ್ನೂ ಮೀರಿಸುವಂತಹ ಕುದುರೆಗಳನ್ನು ಹೂಡಿ ದಿವ್ಯವಾದ ಎರಡು ರಥಗಳನ್ನು ದಶರಥ ಮಹಾರಾಜನ ಬಳಿಗೆ ಕೊಂಡೊಯ್ದನು. ಆ ರಥಗಳ ಸೌಂದರ್ಯವನ್ನು ವರ್ಣಿಸುವುದು ಸರಸ್ವತಿಗೂ ಅಸಾಧ್ಯವಾಗಿತ್ತು. ಒಂದು ರಥದಲ್ಲಿ ರಾಜನ ಸಲಕರಣೆಗಳನ್ನು ತುಂಬಿಸಲಾಯಿತು. ಮತ್ತೊಂದು ರಥವು ತೇಜಃಪುಂಜವಾಗಿದ್ದು ಅತ್ಯಂತ ಶೋಭಾಯಮಾನವಾಗಿತ್ತು. (ಚೌ/೧-೪)

**ದೋ – ತೇಹಿಂ ರಥ ರುಚಿರ ಬಸಿಷ್ಠ ಕಹುಂ ಹರಷಿ ಚಢಾಇ ನರೇಸು ।**
**ಆಪು ಚಢೆಉ ಸ್ಯಂದನ ಸುಮಿರಿ ಹರ ಗುರ ಗೌರಿ ಗನೇಸು ॥ ೩೦೧ ॥**

ಆ ಸುಂದರವಾದ ರಥದಲ್ಲಿ ರಾಜನು ತಮ್ಮ ಕುಲಗುರುಗಳಾದ ವಸಿಷ್ಠರನ್ನು ಹರ್ಷದಿಂದ ಕುಳ್ಳಿರಿಸಿದನು. ಅನಂತರ ದಶರಥನು ಗುರು-ಗಣಪತಿ, ಶಿವ-ಪಾರ್ವತಿಯರನ್ನು ಮನಸ್ಸಿನಲ್ಲಿ ಸ್ಮರಿಸಿ ತನ್ನ ರಥವೇರಿದನು. (ದೋ/೩೦೧)

**ಚೌ – ಸಹಿತ ಬಸಿಷ್ಠ ಸೋಹ ನೃಪ ಕೈಸೇಂ । ಸುರ ಗುರ ಸಂಗ ಪುರಂದರ ಜೈಸೇಂ ॥**
**ಕರಿ ಕುಲ ರೀತಿ ಬೇದ ಬಿಧಿ ರಾಊ । ದೇಖಿ ಸಬಹಿ ಸಬ ಭಾಂತಿ ಬನಾಊ ॥ ೧ ॥**
**ಸುಮಿರಿ ರಾಮು ಗುರ ಆಯಸು ಪಾಈ । ಚಲೇ ಮಹೀಪತಿ ಸಂಖ ಬಜಾಈ ॥**
**ಹರಷೇ ಬಿಬುಧ ಬಿಲೋಕಿ ಬರಾತಾ । ಬರಷಹಿಂ ಸುಮನ ಸುಮಂಗಲ ದಾತಾ ॥ ೨ ॥**
**ಭಯಉ ಕೋಲಾಹಲ ಹಯ ಗಯ ಗಾಜೇ । ಬ್ಯೋಮ ಬರಾತ ಬಾಜನೇ ಬಾಜೇ ॥**
**ಸುರ ನರ ನಾರಿ ಸುಮಂಗಲ ಗಾಈಂ । ಸರಸ ರಾಗ ಬಾಜಹಿಂ ಸಹನಾಈಂ ॥ ೩ ॥**
**ಘಂಟ ಘಂಟಿ ಧುನಿ ಬರನಿ ನ ಜಾಹೀಂ । ಸರವ ಕರಹಿಂ ಪಾಇಕ ಫಹರಾಹೀಂ ॥**
**ಕರಹಿಂ ಬಿದೂಷಕ ಕೌತುಕ ನಾನಾ । ಹಾಸ ಕುಸಲ ಕಲ ಗಾನ ಸುಜಾನಾ ॥ ೪ ॥**

ವಸಿಷ್ಠರೊಂದಿಗೆ ಕುಳಿತಿದ್ದ ಮಹಾರಾಜನು ದೇವಗುರು ಬೃಹಸ್ಪತಿಯೊಡನೆ ಇರುವ ಇಂದ್ರನಂತೆ ಕಂಗೊಳಿಸುತ್ತಿದ್ದನು. ವೇದೋಕ್ತವಿಧಿಯಿಂದ ಎಲ್ಲ ಕುಲರೀತಿಗಳನ್ನು ಪೂರೈಸಿ, ಎಲ್ಲರೂ ಎಲ್ಲರೀತಿಯಲ್ಲೂ ಸಿದ್ಧರಾಗಿರುವುದನ್ನು ಕಂಡು, ಶ್ರೀರಾಮನನ್ನು ನೆನೆದು, ಗುರುವಿನ ಅಪ್ಪಣೆಯನ್ನು ಪಡೆದು, ದಶರಥ ಮಹಾರಾಜರು ಶಂಖವನ್ನೂದಿ ಹೊರಟನು. ದಿಬ್ಬಣವನ್ನು ಕಂಡು ದೇವತೆಗಳು ಹರ್ಷಿತರಾಗಿ ಶುಭಾಶೀರ್ವದಿಸುತ್ತವೋ ಎಂಬಂತೆ ಹೂವುಗಳ ಮಳೆಯನ್ನು ಸುರಿಸಿದರು. ಅಶ್ವಘೋಷದಿಂದ, ಗಜಘೀಂಕೃತಿಯಿಂದ, ಆಗಸದಲ್ಲಿ ಹಾಗೂ ದಿಬ್ಬಣದಲ್ಲಿ ಮೊಳಗಿದ ವಾದ್ಯಗಳಿಂದ ಎಲ್ಲೆಲ್ಲೂ ಗದ್ದಲ ಉಂಟಾಗಿ ದಶದಿಕ್ಕುಗಳಲ್ಲೂ ಪ್ರತಿಧ್ವನಿಸಿತು. ಆಕಾಶದಲ್ಲಿ ದೇವಾಂಗನೆಯರು ಮತ್ತು ಭೂಮಿಯಲ್ಲಿ ಮಾನವ ಭಾಮಿನಿಯರು ಮಂಗಳಗೀತಗಳನ್ನು ಮಧುರವಾಗಿ ಹಾಡತೊಡಗಿದರು. ಮಂಗಳವಾದ್ಯಗಳು ಮೊಳಗಿದವು. ಕಿರುಗಂಟೆಗಳ ಧ್ವನಿಗಳು, ಮಹಾಘಂಟಾನಾದಗಳು ಬೆರೆತು ಗಗನ ಮುಟ್ಟಿತು. ಪದಾತಿ ದಳದವರು ಅಂಗಸಾಧನೆಯ ಚಳಕ ತೋರಿಸುತ್ತಿದ್ದರು. ಹಾಸ್ಯ ನಿಪುಣರೂ, ಗಾನಚತುರರೂ ಆದ ವಿದೂಷಕರು ವಿವಿಧವಾದ ತಮಾಷೆ ಮಾಡುತ್ತಿದ್ದರು. (ಚೌ/೧-೪)

**ದೋ – ತುರಗ ನಚಾವಹಿಂ ಕುಅಁರ ಬರ ಅಕನಿ ಮೃದಂಗ ನಿಸಾನ ।**
**ನಾಗರ ನಟ ಚಿತವಹಿಂ ಚಕಿತ ಡಗಹಿಂ ನ ತಾಲ ಬಁಧಾನ ॥ ೩೦೨ ॥**

ಸ್ಫುರದ್ರೂಪಿಗಳಾದ ರಾಜಕುಮಾರರು ಮೃದಂಗ, ನಗಾರಿಯ ತಾಲ ಧ್ವನಿಗನುಗುಣವಾಗಿ ಕುದುರೆಗಳಿಂದ ನಾಟ್ಯವಿನ್ಯಾಸಗಳನ್ನು ತೋರುತ್ತಿದ್ದರು. ಅವು ಸ್ವಲ್ಪವೂ ತಾಳತಪ್ಪದಂತೆ ಕುಣಿಯುತ್ತಿದ್ದವು. ಇದನ್ನು ನೋಡಿ ಚತುರರಾದ ನಟರು ಚಕಿತರಾಗುತ್ತಿದ್ದರು. (ದೋ/೩೦೨)

**ಚೌ – ಬನಇ ನ ಬರನತ ಬನೀ ಬರಾತಾ । ಹೋಹಿಂ ಸಗುನ ಸುಂದರ ಸುಭದಾತಾ ॥**
**ಚಾರಾ ಚಾಷು ಬಾಮ ದಿಸಿ ಲೇಈ । ಮನಹುಁ ಸಕಲ ಮಂಗಲ ಕಹಿ ದೇಈ ॥ ೧ ॥**
**ದಾಹಿನ ಕಾಗ ಸುಖೇತ ಸುಹಾವಾ । ನಕುಲ ದರಸು ಸಬ ಕಾಹೂಂ ಪಾವಾ ॥**
**ಸಾನುಕೂಲ ಬಹ ತ್ರಿಬಿಧ ಬಯಾರೀ । ಸಘಟ ಸಬಾಲ ಆವ ಬರ ನಾರೀ ॥ ೨ ॥**
**ಲೋವಾ ಫಿರಿ ಫಿರಿ ದರಸು ದೆಖಾವಾ । ಸುರಭೀ ಸನಮುಖ ಸಿಸುಹಿ ಪಿಆವಾ ॥**
**ಮೃಗಮಾಲಾ ಫಿರಿ ದಾಹಿನಿ ಆಈ । ಮಂಗಲ ಗನ ಜನು ದೀನ್ಹಿ ದೆಖಾಈ ॥ ೩ ॥**

**ಛೇಮಕರೀ ಕಹ ಛೇಮ ಬಿಸೇಷೀ । ಸ್ಯಾಮಾ ಬಾಮ ಸುತರು ಪರ ದೇಖೀ ॥**
**ಸನಮುಖ ಆಯಉ ದಧಿ ಅರು ಮೀನಾ । ಕರ ಪುಸ್ತಕ ದುಇ ಬಿಪ್ರ ಪ್ರಬೀನಾ ॥ ೪ ॥**

ದಿಬ್ಬಣದ ವೈಭವವು ವರ್ಣನಾತೀತ. ಎಲ್ಲೆಲ್ಲೂ ಸುಂದರ ಶುಭದಾಯಕ ಶಕುನಗಳಾಗುತ್ತಿದ್ದವು. ಸಂಪೂರ್ಣ ಮಂಗಳವನ್ನು ಸೂಚಿಸಲೋ ಎಂಬಂತೆ ನೀಲಕಂಠಪಕ್ಷಿ ಎಡಕ್ಕೆ ಮೇವು ತೆಗೆದುಕೊಳ್ಳುತ್ತಿತ್ತು. ಬಲದಲ್ಲಿ ಕಾಗೆಗಳು ಹೊಲಗಳಲ್ಲಿ ಶೋಭಿಸಿದವು. ಕೆಲವರಿಗೆ ಮುಂಗುಸಿಯ ದರ್ಶನವಾಯಿತು. ಶೀತಲ, ಮಂದ, ಸುಗಂಧಿತ ಗಾಳಿಯು ಅನುಕೂಲವಾಗಿ ಬೀಸತೊಡಗಿತು. ಮುತ್ತೈದೆಯರು ನೀರು ತುಂಬಿದ ಕೊಡಗಳನ್ನೂ, ಕಂಕುಳಲ್ಲಿ ಮಕ್ಕಳನ್ನೂ ಎತ್ತಿಕೊಂಡು ಇದಿರಾದರು. ನರಿಯು ಮತ್ತೆ-ಮತ್ತೆ ಕಾಣಿಸಿಕೊಂಡಿತು. ಹಸುಗಳು ಕರುಗಳಿಗೆ ಹಾಲುಣಿಸುವುದನ್ನು ನೋಡಿದರು. ಜಿಂಕೆಗಳ ಹಿಂಡು ಎಡದಿಂದ ತಿರುಗಿ ಬಲಕ್ಕೆ ಬಂದವು. ಶುಭಸೂಚಕವಾಗಿ ಒಂದು ಬೆಳ್ಳಗಿನ ಹದ್ದು ಕಂಡುಬಂತು. ಎಡಬದಿಗೆ ಮರದ ಮೇಲೆ ಒಂದು ಶ್ಯಾಮಾಪಕ್ಷಿಯು ಗೋಚರಿಸಿತು. ಮುಂದುಗಡೆಯಿಂದ ಒಬ್ಬರು ಮೊಸರನ್ನು ಹಿಡಿದುಕೊಂಡು ಬಂದರು. ಸರೋವರದಲ್ಲಿ ಮೀನುಗಳು ಮೇಲಕ್ಕೆ ನೆಗೆಯುತ್ತಿರುವುದು ಕಂಡುಬಂತು. ವಿದ್ವಾಂಸರಾದ ಈರ್ವರು ಬ್ರಾಹ್ಮಣರು ತಮ್ಮ ಕೈಯಲ್ಲಿ ಪುಸ್ತಕ ಹಿಡಿದುಕೊಂಡು ಇದಿರಾದರು. (ಚೌ/೧-೪)

**ದೋ – ಮಂಗಲಮಯ ಕಲ್ಯಾನಮಯ ಅಭಿಮತ ಫಲ ದಾತಾರ ।**
**ಜನು ಸಬ ಸಾಚೇ ಹೋನ ಹಿತ ಭಏ ಸಗುನ ಏಕ ಬಾರ ॥ ೩೦೩ ॥**

ಎಲ್ಲ ವಿಧವಾದ ಮಂಗಳಕರವಾದ, ಕಲ್ಯಾಣಪ್ರದವಾದ, ವಾಂಛಿತಫಲದಾಯಕಗಳಾದ ಶಕುನಗಳು ಒಟ್ಟಿಗೆ ಕಾಣಿಸಿಕೊಂಡವು. (ದೋ/೩೦೩)

**ಚೌ – ಮಂಗಲ ಸಗುನ ಸುಗಮ ಸಬ ತಾಕೇಂ । ಸಗುನ ಬ್ರಹ್ಮ ಸುಂದರ ಸುತ ಜಾಕೇಂ ॥**
**ರಾಮ ಸರಿಸ ಬರು ದುಲಹಿನಿ ಸೀತಾ । ಸಮಧೀ ದಸರಥು ಜನಕು ಪುನೀತಾ ॥ ೧ ॥**
**ಸುನಿ ಅಸ ಬ್ಯಾಹು ಸಗುನ ಸಬ ನಾಚೇ । ಅಬ ಕೀನ್ಹೆ ಬಿರಂಚಿ ಹಮ ಸಾಂಚೇ ॥**
**ಏಹಿ ಬಿಧಿ ಕೀನ್ಹ ಬರಾತ ಪಯಾನಾ । ಹಯ ಗಯ ಗಾಜಹಿಂ ಹನೇ ನಿಸಾನಾ ॥ ೨ ॥**
**ಆವತ ಜಾನಿ ಭಾನುಕುಲ ಕೇತೂ । ಸರಿತನ್ಹಿ ಜನಕ ಬಂಧಾಏ ಸೇತೂ ॥**
**ಬೀಚ ಬೀಚ ಬರ ಬಾಸ ಬನಾಏ । ಸುರಪುರ ಸರಿಸ ಸಂಪದಾ ಛಾಏ ॥ ೩ ॥**
**ಅಸನ ಸಯನ ಬರ ಬಸನ ಸುಹಾಏ । ಪಾವಹಿಂ ಸಬ ನಿಜ ನಿಜ ಮನ ಭಾಏ ॥**
**ನಿತ ನೂತನ ಸುಖ ಲಖಿ ಅನುಕೂಲೇ । ಸಕಲ ಬರಾತಿನ್ಹ ಮಂದಿರ ಭೂಲೇ ॥ ೪ ॥**

ಸ್ವತಃ ಸಗುಣಬ್ರಹ್ಮನನ್ನೇ ಮಗನನ್ನಾಗಿ ಪಡೆದ ದಶರಥನಿಗೆ ಮಂಗಲ ಶಕುನಗಳೇ ಆಗುವುವು. ಅದರಲ್ಲೂ ರಾಮನಂತಹ ವರ, ಸೀತೆಯಂತಹ ವಧು, ದಶರಥ – ಜನಕರಂತಹ ಬೀಗರು ಇರುವಾಗ ಕೇಳಬೇಕೇ? ಇಂತಹ ವಿವಾಹದ ಸುದ್ದಿಯನ್ನು ಕೇಳಿ, ಎಲ್ಲ ಶಕುನಗಳೂ ಎದ್ದು ಕುಣಿದಾಡಿದವು. ಬ್ರಹ್ಮನು ನಮ್ಮ ಬದುಕನ್ನು ಇಂದು ಸಾರ್ಥಕಗೊಳಿಸಿದನು ಎಂದು ಹೇಳಿಕೊಂಡವೋ ಏನೋ! ಈ ವಿಧವಾಗಿ ದಿಬ್ಬಣ ಸಾಗಿತು. ಆನೆ-ಕುದುರೆಗಳು ಗರ್ಜಿಸುತ್ತಿದ್ದವು. ನಗಾರಿಗಳು ಭೋರ್ಗರೆಯುತ್ತಿದ್ದವು. ಸೂರ್ಯವಂಶ ಶ್ರೇಷ್ಠನಾದ ದಶರಥನು ಬರುತ್ತಿರುವುದನ್ನು ತಿಳಿದು, ಜನಕನು ನದಿಗಳ ಮೇಲೆ ಸೇತುವೆಗಳನ್ನು ನಿರ್ಮಿಸಿದನು. ನಡು-ನಡುವೆ ತಂಗಲು ಚೆಲುವಾದ ಬಿಡಾರಗಳನ್ನು, ತಂಗುದಾಣಗಳನ್ನೂ ಏರ್ಪಡಿಸಿದನು. ಅವುಗಳಲ್ಲಿ ದೇವಲೋಕದಂತಹ ಸಂಪತ್ತು ತುಂಬಿತ್ತು. ಅಲ್ಲಿ ದಿಬ್ಬಣದ ಜನರಿಗೆ ಉತ್ತಮವಾದ ಭೋಜನ, ಶಯನ, ವಸನದ ಏರ್ಪಾಟಾಗಿತ್ತು. ಮನೋನುಕೂಲವಾದ ಸುಖಭೋಗಗಳನ್ನು ಕಂಡು ಅವರಿಗೆ ಮನೆಯೇ ಮರೆತುಹೋಯಿತು. (ಚೌ/೧-೪)

**ದೋ – ಆವತ ಜಾನಿ ಬರಾತ ಬರ ಸುನಿ ಗಹಗಹೇ ನಿಸಾನ ।**
**ಸಜಿ ಗಜ ರಥ ಪದಚರ ತುರಗ ಲೇನ ಚಲೇ ಅಗವಾನ ॥ ೩೦೪ ॥**

ಜೋರಾಗಿ ಭೋರ್ಗರೆಯುತ್ತಿದ್ದ ನಗಾರಿಗಳ ಸದ್ದನ್ನು ಕೇಳಿ, ದಿಬ್ಬಣ ಬಂದಿತೆಂದು ತಿಳಿದು ಅವರನ್ನು ಇದಿರುಗೊಳ್ಳಲು, ಜನಕ ಮಹಾರಾಜನು ಪರಿವಾರ ಸಹಿತ, ಆನೆ, ಕುದುರೆ, ರಥ, ಪದಾತಿಗಳೊಂದಿಗೆ ಹೊರಟನು. (ದೋ/೩೦೪)

**ಮಾಸಪಾರಾಯಣದ ಹತ್ತನೆಯ ವಿಶ್ರಾಮ**

**ಚೌ – ಕನಕ ಕಲಸ ಭರಿ ಕೋಪರ ಥಾರಾ । ಭಾಜನ ಲಲಿತ ಅನೇಕ ಪ್ರಕಾರಾ ॥**
**ಭರೇ ಸುಧಾಸಮ ಸಬ ಪಕವಾನೇ । ನಾನಾ ಭಾಂತಿ ನ ಜಾಹಿಂ ಬಖಾನೇ ॥ ೧ ॥**

ಫಲ ಅನೇಕ ಬರ ಬಸ್ತು ಸುಹಾಈಂ। ಹರಷಿ ಭೇಂಟ ಹಿತ ಭೂಪ ಪಠಾಈಂ॥
ಭೂಷನ ಬಸನ ಮಹಾಮನಿ ನಾನಾ। ಖಗ ಮೃಗ ಹಯ ಗಯ ಬಹು ಬಿಧಿ ಜಾನಾ॥ ೨ ॥
ಮಂಗಲ ಸಗುನ ಸುಗಂಧ ಸುಹಾಏ। ಬಹುತ ಭಾಂತಿ ಮಹಿಪಾಲ ಪಠಾಏ॥
ದಧಿ ಚಿಉರಾ ಉಪಹಾರ ಅಪಾರಾ। ಭರಿ ಭರಿ ಕಾಂವರಿ ಚಲೇ ಕಹಾರಾ॥ ೩ ॥
ಅಗವಾನನ್ಹ ಜಬ ದೀಖಿ ಬರಾತಾ। ಉರ ಆನಂದು ಪುಲಕ ಭರ ಗಾತಾ॥
ದೇಖಿ ಬನಾವ ಸಹಿತ ಅಗವಾನಾ। ಮುದಿತ ಬರಾತಿನ್ಹ ಹನೇ ನಿಸಾನಾ॥ ೪ ॥

ಹಾಲು, ಪಾನಕ, ನೀರು, ತಂಪಾದ ಪಾನೀಯಗಳು ತುಂಬಿದ ಚಿನ್ನದ ಕಲಶಗಳೂ; ನಾನಾವಿಧವಾದ ಅಮೃತತುಲ್ಯವಾದ ಪಕ್ವಾನ್ನಗಳಿಂದ ತುಂಬಿದ ಪರಾತಗಳು, ತಟ್ಟೆ, ಮೊದಲಾದ ಪಾತ್ರೆಗಳೂ; ವಿವಿಧ ಉತ್ತಮ ಫಲಗಳು ನಾನಾವಿಧವಾದ ಸುಂದರ ವಸ್ತುಗಳನ್ನೂ ಜನಕನು ಸಂತೋಷದಿಂದ ಅವರ ಆತಿಥ್ಯಕ್ಕಾಗಿ ಕಳಿಸಿಕೊಟ್ಟನು. ಒಡವೆ, ವಸ್ತ್ರಗಳು, ನಾನಾವಿಧವಾದ ರತ್ನಗಳು, ಪಶು, ಪಕ್ಷಿ, ಆನೆ, ಕುದುರೆ ಮೊದಲಾದ ಇತರ ವಾಹನಗಳನ್ನು, ಸುಗಂಧ ಮಂಗಳ ದ್ರವ್ಯಗಳನ್ನೂ, ಶುಭಶಕುನಗಳೆಂದೂ ಭಾವಿಸಿ ಅನೇಕ ವಸ್ತುಗಳನ್ನು ಜನಕನು ಕಳಿಸಿಕೊಟ್ಟನು. ಮೊಸರು, ಅವಲಕ್ಕಿ ಹಾಗೂ ಇತರ ಅಸಂಖ್ಯಾತ ಉಪಹಾರದ ವಸ್ತುಗಳನ್ನು ಕಾವಡಿಗಳಲ್ಲಿ ತುಂಬಿಕೊಂಡು ಬೋವಿಗಳು ಹೊರಟರು. ದಿಬ್ಬಣವು ಕಣ್ಣಿಗೆ ಬೀಳುತ್ತಲೇ ಇದಿರುಗೊಳ್ಳಲು ಬಂದಿದ್ದ ಜನರು ಹಿಗ್ಗಿ ಹೋದರು. ಸ್ವಾಗತಕಾರರು ಅಲಂಕೃತರಾಗಿ ಬಂದಿದ್ದುದನ್ನು ನೋಡಿ ದಿಬ್ಬಣದವರು ಹರ್ಷದಿಂದ ನಗಾರಿಗಳನ್ನು ನುಡಿಸಿದರು. (ಚೌ/೧-೪)

**ದೋ – ಹರಷಿ ಪರಸಪರ ಮಿಲನ ಹಿತ ಕಛುಕ ಚಲೇ ಬಗಮೇಲ।**
**ಜನು ಆನಂದ ಸಮುದ್ರ ದುಇ ಮಿಲತ ಬಿಹಾಇ ಸುಬೇಲ॥ ೩೦೫ ॥**

ದಿಬ್ಬಣಿಗರು ಹಾಗೂ ಸ್ವಾಗತಕಾರರಲ್ಲಿ ಕೆಲವರು ಸಂತೋಷವನ್ನು ತಡೆದುಕೊಳ್ಳದೆ, ಒಬ್ಬರನ್ನೊಬ್ಬರು ಕಾಣಲು ಓಡಿದರು. ಅನಂತರ ಎರಡು ಕಡಲುಗಳು ಮೇರೆ ಮೀರಿ ಸಂಧಿಸಿದವೋ ಎಂಬಂತೆ ಅವರು ಒಬ್ಬರನ್ನೊಬ್ಬರು ಬೆರೆತರು. (ದೋ/೩೦೫)

**ಚೌ –** ಬರಷಿ ಸುಮನ ಸುರ ಸುಂದರಿ ಗಾವಹಿಂ। ಮುದಿತ ದೇವ ದುಂದುಭೀಂ ಬಜಾವಹಿಂ॥
ಬಸ್ತು ಸಕಲ ರಾಖೀಂ ನೃಪ ಆಗೇಂ। ಬಿನಯ ಕೀನ್ಹಿ ತಿನ್ಹ ಅತಿ ಅನುರಾಗೇಂ॥ ೧ ॥
ಪ್ರೇಮ ಸಮೇತ ರಾಯಂ ಸಬು ಲೀನ್ಹಾ। ಭೈ ಬಕಸೀಸ ಜಾಚಕನ್ಹಿ ದೀನ್ಹಾ॥
ಕರಿ ಪೂಜಾ ಮಾನ್ಯತಾ ಬಡಾಈ। ಜನವಾಸೇ ಕಹುಂ ಚಲೇ ಲವಾಈ॥ ೨ ॥
ಬಸನ ಬಿಚಿತ್ರ ಪಾಂವಡೇ ಪರಹೀಂ। ದೇಖಿ ಧನದು ಧನ ಮದು ಪರಿಹರಹೀಂ॥
ಅತಿ ಸುಂದರ ದೀನ್ಹೇಉ ಜನವಾಸಾ। ಜಹಂ ಸಬ ಕಹುಂ ಸಬ ಭಾಂತಿ ಸುಪಾಸಾ॥ ೩ ॥
ಜಾನೀ ಸಿಯಂ ಬರಾತ ಪುರ ಆಈ। ಕಛು ನಿಜ ಮಹಿಮಾ ಪ್ರಗಟಿ ಜನಾಈ॥
ಹೃದಯಂ ಸುಮಿರಿ ಸಬ ಸಿದ್ಧಿ ಬೊಲಾಈಂ। ಭೂಪ ಪಹುನಈ ಕರನ ಪಠಾಈಂ॥ ೪ ॥

ಸುರಸುಂದರೀಮಣಿಗಳು ಹೂಮಳೆ ಸುರಿಸುತ್ತಾ ಹಾಡುತ್ತಿದ್ದರು. ದೇವತೆಗಳು ನಲಿದು ದುಂದುಭಿಗಳನ್ನು ಬಾರಿಸಿದರು. ಇದಿರುಗೊಳ್ಳಲು ಬಂದಿದ್ದ ಹೆಣ್ಣಿನ ಕಡೆಯವರು ತಾವು ತಂದಿದ್ದ ಎಲ್ಲ ವಸ್ತುಗಳನ್ನು ದಶರಥ ಮಹಾರಾಜನ ಮುಂದಿರಿಸಿ, ಬಿನ್ನವಿಸಿಕೊಂಡರು. ಮಹಾರಾಜರು ಪ್ರೇಮದಿಂದ ಅವುಗಳನ್ನು ಸ್ವೀಕರಿಸಿದರು. ತನ್ನ ಪ್ರಜಾಜನರಿಗೆ ಕಾಣಿಕೆಗಳನ್ನು ಕೊಡಮಾಡಿದರು. ಆ ಪದಾರ್ಥಗಳು ಯಾಚಕರಿಗೆ ಕೊಡಲಾಯಿತು. ಬಳಿಕ ಪೂಜೆ, ಆದರ, ಸತ್ಕಾರ ಹಾಗೂ ಪ್ರಶಂಸೆಮಾಡಿ ಸ್ವಾಗತಕಾರರು ಅವರನ್ನು ಅವರಿಗಾಗಿ ಏರ್ಪಡಿಸಿದ್ದ ಬಿಡದಿಯತ್ತ ಕರೆದೊಯ್ದರು. ವಿಲಕ್ಷಣ ವಸ್ತ್ರಗಳನ್ನು ನಡೆಮುಡಿ ಹಾಸುತ್ತಿದ್ದರು. ಅದನ್ನು ಕಂಡು ಕುಬೇರನೂ ಕೂಡ ತನ್ನ ಐಶ್ವರ್ಯದ ಅಭಿಮಾನವನ್ನು ಮರೆಯುತ್ತಿದ್ದನು. ಅವರಿಗೆ ಏರ್ಪಡಿಸಿದ್ದ ಬಿಡದಿ ಗೃಹಗಳು ಸುಂದರವಾಗಿದ್ದು, ಎಲ್ಲ ವಿಧವಾದ ಸೌಕರ್ಯಗಳಿಂದ ಕೂಡಿದ್ದವು. ದಿಬ್ಬಣಿಗರು ಜನಕಪುರಿಗೆ ಬಂದುದನ್ನು ತಿಳಿದು ಸೀತೆಯು ತನ್ನ ಸ್ವಲ್ಪ ಮಹಿಮೆಯನ್ನು ತೋರಿದಳು. ಅವಳು ತನ್ನ ಎಲ್ಲ ಸಿದ್ಧಿಗಳನ್ನು ಮನದಲ್ಲೇ ನೆನೆದು, ಅವರನ್ನು ದಶರಥ ಮಹಾರಾಜನ ಆತಿಥ್ಯಕ್ಕೆ ನೆರವಾಗಲು ಕಳಿಸಿದಳು. (ಚೌ/೧-೪)

**ದೋ – ಸಿಧಿ ಸಬ ಸಿಯ ಆಯಸು ಅಕನಿ ಗಈಂ ಜಹಾಂ ಜನವಾಸ।**
**ಲಿಏಂ ಸಂಪದಾ ಸಕಲ ಸುಖ ಸುರಪುರ ಭೋಗ ಬಿಲಾಸ॥ ೩೦೬ ॥**

ಆ ಸಿದ್ಧಿಗಳು ಸೀತಾದೇವಿಯ ಆಜ್ಞೆಯಂತೆ, ಬಿಡದಿಯ ಮನೆಗಳಲ್ಲಿರುವವರಿಗೆ ಸಕಲ ಸುಖ-ಸಂಪತ್ತು ಹಾಗೂ ಇಂದ್ರನ ಅಮರಾವತಿಯ ಭೋಗ ವಿಲಾಸಗಳನ್ನು ಒದಗಿಸಿದರು. (ದೋ/೩೦೬)

**ಚೌ – ನಿಜ ನಿಜ ಬಾಸ ಬಿಲೋಕಿ ಬರಾತೀ । ಸುರ ಸುಖ ಸಕಲ ಸುಲಭ ಸಬ ಭಾಁತಿ ॥**
**ಬಿಭವ ಭೇದ ಕಛು ಕೋಉ ನ ಜಾನಾ । ಸಕಲ ಜನಕ ಕರ ಕರಹಿಂ ಬಖಾನಾ ॥ ೧ ॥**
**ಸಿಯ ಮಹಿಮಾ ರಘುನಾಯಕ ಜಾನೀ । ಹರಷೇ ಹೃದಯಁ ಹೇತು ಪಹಿಚಾನೀ ॥**
**ಪಿತು ಆಗಮನು ಸುನತ ದೋಉ ಭಾಈ । ಹೃದಯಁ ನ ಅತಿ ಆನಂದು ಅಮಾಈ ॥ ೨ ॥**
**ಸಕುಚನ್ಹ ಕಹಿ ನ ಸಕತ ಗುರು ಪಾಹೀಂ । ಪಿತು ದರಸನ ಲಾಲಚು ಮನ ಮಾಹೀಂ ॥**
**ಬಿಸ್ವಾಮಿತ್ರ ಬಿನಯ ಬಡಿ ದೇಖೀ । ಉಪಜಾ ಉರ ಸಂತೋಷು ಬಿಸೇಷೀ ॥ ೩ ॥**
**ಹರಷಿ ಬಂಧು ದೋಉ ಹೃದಯಁ ಲಗಾಏ । ಪುಲಕ ಅಂಗ ಅಂಬಕ ಜಲ ಛಾಏ ॥**
**ಚಲೇ ಜಹಾಁ ದಸರಥು ಜನವಾಸೇ । ಮನಹುಁ ಸರೋವರ ತಕೆಉ ಪಿಆಸೇ ॥ ೪ ॥**

ಬೀಗರ ಕಡೆಯವರು ತಮ್ಮ ಬಿಡಾರಗಳನ್ನು ಕಂಡಾಗ, ಅಲ್ಲಿ ದೇವತೆಗಳಿಗೆ ದೊರಕುವ ಎಲ್ಲ ರೀತಿಯ ಸುಖಭೋಗಗಳು ಇದ್ದವು. ಈ ಐಸಿರಿಯ ರಹಸ್ಯವು ಯಾರಿಗೂ ತಿಳಿಯದೆ ಹೋಯಿತು. ಎಲ್ಲರೂ ಜನಕನನ್ನು ಪ್ರಶಂಸಿಸಿದರು. ಇದೆಲ್ಲವೂ ಸೀತಾದೇವಿಯ ಮಹಿಮೆಯೆಂದು ಶ್ರೀರಾಮನಿಗೆ ಮಾತ್ರ ತಿಳಿಯಿತು. ಆಕೆಯ ಪ್ರಗಾಢ ಪ್ರೇಮವನ್ನು ಕಂಡು ಅವನು ಮನದಲ್ಲೇ ಹರ್ಷಿಸಿದನು. ತಮ್ಮ ತಂದೆಯವರಾದ ದಶರಥ ಮಹಾರಾಜರು ಬಂದಿರುವ ಸುದ್ದಿ ತಿಳಿದ ರಾಮ-ಲಕ್ಷ್ಮಣರ ಹೃದಯದಲ್ಲಿ ಆನಂದ ಹಿಡಿಸದಾಯಿತು. ತಂದೆ-ತಾಯಿಯರನ್ನು ನೋಡಬೇಕೆಂಬ ಕುತೂಹಲವಿದ್ದರೂ ಅವರು ಸಂಕೋಚದಿಂದ ಗುರುಗಳಿಗೆ ಹೇಳದಾದರು. ವಿಶ್ವಾಮಿತ್ರರು ಅವರ ವಿನಯ-ವಿಧೇಯತೆಗೆ ಹೆಚ್ಚಿನ ಸಂತೋಷಪಟ್ಟರು. ಹರ್ಷಿತರಾಗಿ ಅವರು ಅಣ್ಣ-ತಮ್ಮಂದಿರಿಬ್ಬರನ್ನೂ ತಬ್ಬಿಕೊಂಡರು. ಅವರ ಶರೀರವು ರೋಮಾಂಚಿತವಾಯಿತು. ಪ್ರೇಮಾಶ್ರುಗಳು ಕಣ್ಣುಗಳಲ್ಲಿ ತುಂಬಿಕೊಂಡವು. ಅವರು ದಶರಥನಿದ್ದ ಬಿಡದಿಗೆ ತೆರಳಿದರು. ಸರೋವರವೇ ಬಾಯಾರಿದವರ ಬಳಿಗೆ ಬಂದಂತಾಯಿತು. (ಚೌ/೧-೪)

**ದೋ – ಭೂಪ ಬಿಲೋಕೇ ಜಬಹಿಂ ಮುನಿ ಆವತ ಸುತನ್ಹ ಸಮೇತ ।**
**ಉಠೇ ಹರಷಿ ಸುಖಸಿಂಧು ಮಹುಁ ಚಲೇ ಥಾಹ ಸೀ ಲೇತ ॥ ೩೦೭ ॥**

ರಾಮಲಕ್ಷ್ಮಣರೊಂದಿಗೆ ಬರುತ್ತಿದ್ದ ವಿಶ್ವಾಮಿತ್ರಮುನಿಯನ್ನು ನೋಡಿ ದಶರಥ ಮಹಾರಾಜರು ಹರ್ಷಿತರಾಗಿ ಎದ್ದುನಿಂತು, ಸುಖಸಾಗರದಲ್ಲಿ ಮುಳುಗುವವನಿಗೆ ಆಸರೆ ದೊರೆಯುವಂತೆ ಅವರನ್ನು ಇದಿರ್ಗೊಳ್ಳಲು ಮುಂದಾದರು. (ದೋ/೩೦೭)

**ಚೌ – ಮುನಿಹಿ ದಂಡವತ ಕೀನ್ಹ ಮಹೀಸಾ । ಬಾರ ಬಾರ ಪದ ರಜ ಧರಿ ಸೀಸಾ ॥**
**ಕೌಸಿಕ ರಾಉ ಲಿಏ ಉರ ಲಾಈ । ಕಹಿ ಅಸೀಸ ಪೂಛೀ ಕುಸಲಾಈ ॥ ೧ ॥**
**ಪುನಿ ದಂಡವತ ಕರತ ದೋಉ ಭಾಈ । ದೇಖಿ ನೃಪತಿ ಉರ ಸುಖು ನ ಸಮಾಈ ॥**
**ಸುತ ಹಿಯಁ ಲಾಇ ದುಸಹ ದುಖ ಮೇಟೇ । ಮೃತಕ ಸರೀರ ಪ್ರಾನ ಜನು ಭೇಂಟೇ ॥ ೨ ॥**
**ಪುನಿ ಬಸಿಷ್ಠ ಪದ ಸಿರ ತಿನ್ಹ ನಾಏ । ಪ್ರೇಮ ಮುದಿತ ಮುನಿಬರ ಉರ ಲಾಏ ॥**
**ಬಿಪ್ರ ಬೃಂದ ಬಂದೇ ದುಹುಁ ಭಾಈಂ । ಮನಭಾವತೀ ಅಸೀಸೇಂ ಪಾಈಂ ॥ ೩ ॥**
**ಭರತ ಸಹಾನುಜ ಕೀನ್ಹ ಪ್ರನಾಮಾ । ಲಿಏ ಉಠಾಇ ಲಾಇ ಉರ ರಾಮಾ ॥**
**ಹರಷೇ ಲಖನ ದೇಖಿ ದೋಉ ಭ್ರಾತಾ । ಮಿಲೇ ಪ್ರೇಮ ಪರಿಪೂರಿತ ಗಾತಾ ॥ ೪ ॥**

ದಶರಥನು ವಿಶ್ವಾಮಿತ್ರರಿಗೆ ಸಾಷ್ಟಾಂಗ ನಮಸ್ಕಾರಗೈದು, ಅವರ ಪಾದಧೂಳಿಯನ್ನು ಪುನಃ ಪುನಃ ಶಿರದಲ್ಲಿ ಧರಿಸಿಕೊಂಡನು. ಮುನೀಶ್ವರರು ಅರಸನನ್ನು ತಬ್ಬಿಕೊಂಡು ಆಶೀರ್ವದಿಸಿ, ಕುಶಲಪ್ರಶ್ನೆಗಳನ್ನೂ ಕೇಳಿದರು. ರಾಮಲಕ್ಷ್ಮಣರಿಬ್ಬರೂ ತನಗೆ ದಂಡವತ್ ಪ್ರಣಾಮಮಾಡುತ್ತಿರುವುದನ್ನು ಕಂಡು ಮಹಾರಾಜನ ಹರ್ಷವು ಹೃದಯದಲ್ಲಿ ಹಿಡಿಸಲೊಲ್ಲದು. ಅವರನ್ನು ಎದೆಗಪ್ಪಿಕೊಂಡು ಅವನು ತನ್ನ ವಿಯೋಗಜನಿತ ದುಃಖವನ್ನು ಮರೆತನು. ಮೃತ ಶರೀರದಲ್ಲಿ ಮತ್ತೆ ಪ್ರಾಣಸಂಚಾರವಾದಂತಾಯಿತು. ಬಳಿಕ ರಾಮ-ಲಕ್ಷ್ಮಣರು ವಸಿಷ್ಠ ಮುನಿಗಳಿಗೆ ತಲೆವಾಗಿದರು. ಆ ಮುನಿವರರು ಪ್ರೇಮವಶರಾಗಿ ಅವರನ್ನು ಬಾಚಿ ತಬ್ಬಿಕೊಂಡರು. ಇಬ್ಬರೂ ಸೋದರರೂ ವಿಪ್ರವೃಂದಕ್ಕೆ ವಂದಿಸಿದರು. ಅವರು ''ಅಭೀಷ್ಟ ಸಿದ್ಧಿರಸ್ತು'' ಎಂದು ಆಶೀರ್ವಾದ ನೀಡಿದರು. ಭರತನು ತಮ್ಮನಾದ ಶತ್ರುಘ್ನನೊಂದಿಗೆ ಶ್ರೀರಾಮಚಂದ್ರನಿಗೆ ವಂದಿಸಿಕೊಂಡನು.

ಶ್ರೀರಾಮನು ಅವರಿಬ್ಬರನ್ನು ಎಬ್ಬಿಸಿ ಆಲಿಂಗಿಸಿಕೊಂಡನು. ಲಕ್ಷ್ಮಣನು ಅವರಿಬ್ಬರನ್ನು ನೋಡಿ ಅತ್ಯಂತಾನಂದದಿಂದ ಅವರನ್ನು ಎದೆಗಪ್ಪಿಕೊಂಡನು. (ಚೌ/೧-೪)

**ದೋ – ಪುರಜನ ಪರಿಜನ ಜಾತಿಜನ ಜಾಚಕ ಮಂತ್ರೀ ಮೀತ ।**
**ಮಿಲೇ ಜಥಾಬಿಧಿ ಸಬಹಿ ಪ್ರಭು ಪರಮ ಕೃಪಾಲ ಬಿನೀತ ॥ ೩೦೮ ॥**

ಪರಮಕೃಪಾಳುವೂ, ವಿನಯಶೀಲನೂ ಆದ ಶ್ರೀರಾಮಚಂದ್ರನು, ಪುರಜನರನ್ನೂ, ಪರಿಜನರನ್ನೂ, ಬಂಧುಗಳನ್ನೂ, ಮಂತ್ರಿಗಳನ್ನೂ, ಮಿತ್ರರನ್ನು ಹೀಗೆ ಎಲ್ಲರನ್ನೂ ಯಥಾವಿಧಿಯಾಗಿ ಲೋಕಮರ್ಯಾದೆಯಂತೆ ಪರಾಮರ್ಶಿಸಿದನು. (ದೋ/೩೦೮)

**ಚೌ – ರಾಮಹಿ ದೇಖಿ ಬರಾತ ಜುಡಾನೀ । ಪ್ರೀತಿ ಕಿ ರೀತಿ ನ ಜಾತಿ ಬಖಾನೀ ॥**
**ನೃಪ ಸಮೀಪ ಸೋಹಹಿಂ ಸುತ ಚಾರೀ । ಜನು ಧನ ಧರಮಾದಿಕ ತನುಧಾರೀ ॥ ೧ ॥**
**ಸುತನ್ಹ ಸಮೇತ ದಸರಥಹಿ ದೇಖೀ । ಮುದಿತ ನಗರ ನರ ನಾರಿ ಬಿಸೇಷೀ ॥**
**ಸುಮನ ಬರಿಸಿ ಸುರ ಹನಹಿಂ ನಿಸಾನಾ । ನಾಕನಟೀಂ ನಾಚಹಿಂ ಕರಿ ಗಾನಾ ॥ ೨ ॥**
**ಸತಾನಂದ ಅರು ಬಿಪ್ರ ಸಚಿವ ಗನ । ಮಾಗಧ ಸೂತ ಬಿದುಷ ಬಂದೀಜನ ॥**
**ಸಹಿತ ಬರಾತ ರಾಉ ಸನಮಾನಾ । ಆಯಸು ಮಾಗಿ ಫಿರೇ ಅಗವಾನಾ ॥ ೩ ॥**
**ಪ್ರಥಮ ಬರಾತ ಲಗನ ತೇಂ ಆಈ । ತಾತೇಂ ಪುರ ಪ್ರಮೋದು ಅಧಿಕಾಈ ॥**
**ಬ್ರಹ್ಮಾನಂದು ಲೋಗ ಸಬ ಲಹಹೀಂ । ಬಢಹುಁ ದಿವಸ ನಿಸಿ ಬಿಧಿ ಸನ ಕಹಹೀಂ ॥ ೪ ॥**

ಶ್ರೀರಾಮಚಂದ್ರನನ್ನು ನೋಡುತ್ತಲೇ ಅಯೋಧ್ಯಾವಾಸಿಗಳ ವಿರಹಾಗ್ನಿಯು ಒಮ್ಮೆಗೇ ಮಾಯವಾಯಿತು. ಆಗ ಅವರ ಪ್ರೇಮಾನಂದಗಳು ವರ್ಣನಾತೀತ. ದಶರಥ ಮಹಾರಾಜರ ಸಮೀಪದಲ್ಲಿರುವ ಆ ನಾಲ್ಕು ಸೋದರರು ಮೂರ್ತೀಭವಿಸಿದ ಚತುರ್ವಿಧಪುರುಷಾರ್ಥಗಳಂತೆ (ಧರ್ಮ, ಅರ್ಥ, ಕಾಮ, ಮೋಕ್ಷ) ಶೋಭಿಸುತ್ತಿದ್ದರು. ಪುತ್ರರೊಂದಿಗೆ ಇದ್ದ ದಶರಥನನ್ನು ನೋಡಿ, ಮಿಥಿಲಾನಗರವಾಸಿಗಳು ಪರಮಾನಂದವನ್ನು ಅನುಭವಿಸಿದರು. ಆಗಸದಲ್ಲಿ ದೇವತೆಗಲು ಹೂಮಳೆಯನ್ನು ಸುರಿಸುತ್ತಾ, ದುಂದುಭಿಗಳನ್ನು ನುಡಿಸುತ್ತಿದ್ದರು. ಅಪ್ಸರೆಯರು ಹಾಡುತ್ತಾ, ನರ್ತಿಸುತ್ತಿದ್ದರು. ಸ್ವಾಗತಕ್ಕಾಗಿ, ಬಂದ ಶತಾನಂದರೂ, ಇತರ ಬ್ರಾಹ್ಮಣರೂ, ಮಂತ್ರಿಗಳೂ, ಸೂತರೂ, ವಂದಿ-ಮಾಗಧರೂ ಹೀಗೆ ಎಲ್ಲರೂ ದಶರಥನನ್ನೂ, ವರಪಕ್ಷದ ಇತರರನ್ನೂ ಯಥೋಚಿತವಾಗಿ ಸ್ವಾಗತ ಸತ್ಕಾರಗಳನ್ನುಗೈದು, ಅವರು ಅಪ್ಪಣೆಪಡೆದು ಮರಳಿದರು. ದಿಬ್ಬಣವು ಮದುವೆಗೆ ತುಂಬಾ ಮೊದಲೇ ಬಂದಿರುವುದನ್ನು ಅರಿಯುತ್ತಲೇ ನಗರವಾಸಿಗಳೆಲ್ಲರಲ್ಲಿ ಆನಂದವು ಆವರಿಸಿಬಿಟ್ಟಿತು. ಎಲ್ಲರೂ ಬ್ರಹ್ಮಾನಂದವನ್ನು ಅನುಭವಿಸಿದರು. ಅವರು ತಮ್ಮ ಪಾಲಿಗೆ ಹಗಲಿರುಳು ದೀರ್ಘವಾಗಲೆಂದು ವಿಧಾತನನ್ನು ಬೇಡುತ್ತಿದ್ದರು. (ಚೌ/೧-೪)

**ದೋ – ರಾಮು ಸೀಯ ಸೋಭಾ ಅವಧಿ ಸುಕೃತ ಅವಧಿ ದೊಉ ರಾಜ ।**
**ಜಹಁ ತಹಁ ಪುರಜನ ಕಹಹಿಂ ಅಸ ಮಿಲಿ ನರ ನಾರಿ ಸಮಾಜ ॥ ೩೦೯ ॥**

ಜನಕಪುರದ ಎಲ್ಲ ನರನಾರಿಯರು ಅಲ್ಲಲ್ಲಿ ಗುಂಪುಗೂಡಿ – ''ಸೀತಾ-ರಾಮರು ಸೌಂದರ್ಯಕ್ಕೆ ಸೀಮೆಯಾಗಿದ್ದಾರೆ. ದಶರಥ-ಜನಕ ಮಹಾರಾಜರುಗಳು ಪುಣ್ಯದ ಪರಾಕಾಷ್ಠೆಯಾಗಿದ್ದಾರೆ'' ಎಂದು ಉದ್ಗರಿಸುತ್ತಿದ್ದರು. ಅರ್ಥಾತ್ ಸೀತಾ-ರಾಮರಂತೆ ಸೌಂದರ್ಯವಂತರು ಯಾರೂ ಇಲ್ಲ. ಜನಕ-ದಶರಥರಂತಹ ಪುಣ್ಯಾತ್ಮರು ಯಾರೂ ಇಲ್ಲ. (ದೋ/೩೦೯)

**ಚೌ – ಜನಕ ಸುಕೃತ ಮೂರತಿ ಬೈದೇಹೀ । ದಸರಥ ಸುಕೃತ ರಾಮು ಧರೆಂ ದೇಹೀ ॥**
**ಇನ್ಹ ಸಮ ಕಾಹುಁ ನ ಸಿವ ಅವರಾಧೇ । ಕಾಹುಁ ನ ಇನ್ಹ ಸಮಾನ ಫಲ ಲಾಧೇ ॥ ೧ ॥**
**ಇನ್ಹ ಸಮ ಕೊಉ ನ ಭಯಉ ಜಗ ಮಾಹೀಂ । ಹೈ ನಹಿಂ ಕತಹೂಂ ಹೋನೆಉ ನಾಹೀಂ ॥**
**ಹಮ ಸಬ ಸಕಲ ಸುಕೃತ ಕೈ ರಾಸೀ । ಭಏ ಜಗ ಜನಮಿ ಜನಕಪುರ ಬಾಸೀ ॥ ೨ ॥**
**ಜಿನ್ಹ ಜಾನಕೀ ರಾಮ ಛಬಿ ದೇಖೀ । ಕೋ ಸುಕೃತೀ ಹಮ ಸರಿಸ ಬಿಸೇಷೀ ॥**
**ಪುನಿ ದೇಖಬ ರಘುಬೀರ ಬಿಆಹೂ । ಲೇಬ ಭಲೀ ಬಿಧಿ ಲೋಚನ ಲಾಹೂ ॥ ೩ ॥**
**ಕಹಹಿಂ ಪರಸಪರ ಕೋಕಿಲಬಯನೀಂ । ಎಹಿ ಬಿಆಹಁ ಬಡ ಲಾಭು ಸುನಯನೀಂ ॥**
**ಬಡೇ ಭಾಗ ಬಿಧಿ ಬಾತ ಬನಾಈ । ನಯನ ಅತಿಥಿ ಹೋಇಹಹಿಂ ದೊಉ ಭಾಈ ॥ ೪ ॥**

ಜನಕನ ಪುಣ್ಯಫಲವೇ ಜಾನಕಿಯಾಗಿ ಅವತರಿಸಿರುವಳು. ದಶರಥನ ಸುಕೃತವೇ ಶ್ರೀರಾಮನಾಗಿ ಮೂರ್ತೀಭವಿಸಿದೆ. ಇವರೀರ್ವರೂ ಅರಸರಂತೆ ಬೇರಾರೂ ಶಿವನನ್ನು ಪೂಜಿಸಿರಲಾರರು ಹಾಗೂ ಫಲವನ್ನೂ ಪಡೆದಿರಲಾರರು. ಇವರಿಗೆ ಸಮಾನರಾದ ಪುಣ್ಯಮೂರ್ತಿಗಳು 'ನ ಭೂತೋ ನ ಭವಿಷ್ಯತಿ'. ನಾವುಗಳೂ ಕೂಡ ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯಫಲದಿಂದ ಈ ಜನಕಮಹಾರಾಜರ ರಾಜ್ಯದಲ್ಲಿ ಜನಿಸಿದ್ದೇವೆ. ಶ್ರೀ ಸೀತಾರಾಮರ ಅಲೌಕಿಕ ಸೌಂದರ್ಯವನ್ನು ಕಣ್ಣಾರೆ ಕಾಣುವ ಪುಣ್ಯಾತ್ಮರು ನಮ್ಮಂತೆ ಈ ಲೋಕದಲ್ಲಿ ಬೇರೆ ಯಾರಿದ್ದಾರೆ? ಈಗ ಶ್ರೀಸೀತಾರಾಮರ ವಿವಾಹ ಮಹೋತ್ಸವವನ್ನು ಕಣ್ಣಾರೆ ಕಂಡು ಕಣ್ಣುಗಳನ್ನು ಸಫಲಪಡಿಸಿಕೊಳ್ಳೋಣ. ಕೋಕಿಲಕಂಠಿಯರಾದ ರಮಣಿಯರು ತಮ್ಮ-ತಮ್ಮಲ್ಲೇ ಹೀಗೆ ಅಂದುಕೊಂಡರು - ಎಲೆ ಸುಲೋಚನೇ! ಈ ವಿವಾಹದಿಂದ ನಮಗೆಂತೋ ಲಾಭವಿದೆ. ನಮ್ಮ ಅದೃಷ್ಟಕ್ಕನುಸಾರವಾಗಿ ವಿಧಾತನು ನಮಗೆ ಈ ಅವಕಾಶವನ್ನು, ಕರುಣಿಸಿರುವನು. ಈ ಅಣ್ಣ-ತಮ್ಮಂದಿರಿಬ್ಬರೂ ನಮ್ಮ ಕಣ್ಣಿಗೆ ಅತಿಥಿಯಾಗುವರು. ನಮಗೆ ನೇತ್ರಾನಂದವನ್ನು ಕರುಣಿಸುವರು. (ಚೌ/೧-೪)

**ದೋ – ಬಾರಹಿಂ ಬಾರ ಸನೇಹ ಬಸ ಜನಕ ಬೋಲಾಉಬ ಸೀಯ।**
**ಲೇನ ಆಇಹಹಿಂ ಬಂಧು ದೋಉ ಕೋಟಿ ಕಾಮ ಕಮನೀಯ ॥ ೩೧೦ ॥**

ವಾತ್ಸಲ್ಯದಿಂದ ಜನಕನು ಮೇಲಿಂದ-ಮೇಲೆ ಸೀತಾದೇವಿಯನ್ನು ಅಯೋಧ್ಯೆಯಿಂದ ಇಲ್ಲಿಗೆ ಕರೆತರುವನು. ಕೋಟಿ ಮನ್ಮಥಾಕಾರರಾದ ಈ ಸೋದರರು ಅವಳನ್ನು ಮರಳಿ ಕರಕೊಂಡು ಹೋಗಲು ಇಲ್ಲಿಗೆ ಬರುವರು. (ದೋ/೩೧೦)

**ಚೌ – ಬಿಬಿಧ ಭಾಂತಿ ಹೋಇಹಿ ಪಹುನಾಈ। ಪ್ರಿಯ ನ ಕಾಹಿ ಅಸ ಸಾಸುರ ಮಾಈ॥**
**ತಬ ತಬ ರಾಮ ಲಖನಹಿ ನಿಹಾರೀ। ಹೋಇಹಹಿಂ ಸಬ ಪುರ ಲೋಗ ಸುಖಾರೀ॥ ೧ ॥**
**ಸಖಿ ಜಸ ರಾಮ ಲಖನ ಕರ ಜೋಟಾ। ತೈಸೇಇ ಭೂಪ ಸಂಗ ದುಇ ಢೋಟಾ ॥**
**ಸ್ಯಾಮ ಗೌರ ಸಬ ಅಂಗ ಸುಹಾಏ। ತೇ ಸಬ ಕಹಹಿಂ ದೇಖಿ ಜೇ ಆಏ ॥ ೨ ॥**
**ಕಹಾ ಏಕ ಮೈಂ ಆಜು ನಿಹಾರೇ। ಜನು ಬಿರಂಚಿ ನಿಜ ಹಾಥ ಸँವಾರೇ॥**
**ಭರತು ರಾಮಹೀ ಕೀ ಅನುಹಾರೀ। ಸಹಸಾ ಲಖಿ ನ ಸಕಹಿಂ ನರ ನಾರೀ॥ ೩ ॥**
**ಲಖನು ಸತ್ರು ಸೂದನು ಏಕರೂಪಾ। ನಖ ಸಿಖ ತೇ ಸಬ ಅಂಗ ಅನೂಪಾ॥**
**ಮನ ಭಾವಹಿಂ ಮುಖ ಬರನಿ ನ ಜಾಹೀಂ। ಉಪಮಾ ಕಹುँ ತ್ರಿಭುವನ ಕೋಉ ನಾಹೀಂ॥ ೪ ॥**

ಆಗ ಅನೇಕ ರೀತಿಗಳಲ್ಲಿ ಅವರ ಸ್ವಾಗತ-ಆತಿಥ್ಯ ನಡೆಯುವುದು. ಸಖೀ! ಇಂತಹ ಮಾವನಮನೆ ಯಾರಿಗೆ ಪ್ರಿಯವಾಗುವುದಿಲ್ಲ? ಅವರು ಹಾಗೆ ಬಂದಂತೆಲ್ಲ ನಗರವಾಸಿಗಳು ರಾಮ-ಲಕ್ಷ್ಮಣರನ್ನು ನೋಡಿ-ನೋಡಿ ಸುಖಿಯಾಗುತ್ತಾರೆ. ''ಎಲೆ ಸಖೀ! ದಶರಥ ಮಹಾರಾಜರೊಂದಿಗೆ ರಾಮಲಕ್ಷ್ಮಣರಂತೆ ಇನ್ನಿಬ್ಬರು ರಾಜಕುಮಾರರಿದ್ದಾರೆ. ಅವರೂ ಕೂಡ ಓರ್ವ ಶ್ಯಾಮವರ್ಣದವನೂ, ಮತ್ತೊಬ್ಬ ಗೌರವರ್ಣದವನೂ ಆಗಿದ್ದಾರೆ. ಅವರೂ ತುಂಬಾ ಸುಂದರರಾಗಿದ್ದಾರಂತೆ. ಅವರನ್ನು ನೋಡಿ ಬಂದವರೆಲ್ಲರೂ ಹೀಗೆ ಹೇಳುತ್ತಾರೆ.'' ಓರ್ವ ಯುವತಿಯು ಇಂತೆಂದಳು – ''ನಾನು ಇಂದೇ ಅವರನ್ನು ನೋಡಿರುವೆನು. ಬ್ರಹ್ಮನು ಸ್ವತಃ ತನ್ನ ಕೈಯಾರೆ ಇವರನ್ನು ಪ್ರತ್ಯೇಕವಾಗಿ ಸೃಷ್ಟಿಸಿರುವನೋ ಎಂಬಂತೆ ಅತೀವ ಮನೋಹರರಾಗಿದ್ದಾರೆ. ಭರತನಂತೂ ಶ್ರೀರಾಮನನ್ನೇ ಪೂರ್ತಿಯಾಗಿ ಹೋಲುತ್ತಾನೆ. ನೋಡಿದ ಜನರು ತಟ್ಟನೆ ಆತನನ್ನು ಗುರುತಿಸಲಾರರು. ಲಕ್ಷ್ಮಣ ಶತ್ರುಘ್ನರೂ ಒಂದೇ ರೂಪ. ಅಡಿಯಿಂದ ಮುಡಿಯವರೆಗೆ ಇಬ್ಬರೂ ಒಂದೇ ರೀತಿಯಿಂದ ಅನುಪಮ ಸೌಂದರ್ಯಮೂರ್ತಿಗಳು. ಮನಸ್ಸಿಗೆ ತುಂಬಾ ಆಹ್ಲಾದಕರ. ಆದರೆ ಆ ರೂಪ ಮಾತಿಗೆ ನಿಲುಕುವಂತಹುದಲ್ಲ. ಮೂರುಲೋಕಗಳಲ್ಲಿಯೂ ಅವರಿಗೆ ಸಾಟಿಯಾಗುವವರು ಯಾರೂ ಇಲ್ಲ. (ಚೌ/೧-೪)

**ಛಂ – ಉಪಮಾ ನ ಕೋಉ ಕಹ ದಾಸ ತುಲಸೀ ಕತಹುँ ಕಬಿ ಕೋಬಿದ ಕಹೈಂ।**
**ಬಲ ಬಿನಯ ಬಿದ್ಯಾ ಸೀಲ ಸೋಭಾ ಸಿಂಧು ಇನ್ಹ ಸೇ ಏಇ ಅಹೈಂ ॥**
**ಪುರ ನಾರಿ ಸಕಲ ಪಸಾರಿ ಅಂಚಲ ಬಿಧಿಹಿ ಬಚನ ಸುನಾವಹೀಂ।**
**ಬ್ಯಾಹಿ ಅಹುँ ಚಾರಿಉ ಭಾಇ ಏಹಿಂ ಪುರ ಹಮ ಸುಮಂಗಲ ಗಾವಹೀಂ॥**

ಬಲ, ವಿನಯ, ವಿದ್ಯೆ, ಶೀಲ ಮತ್ತು ಚೆಲುವಿನ ಕಡಲಾದ ಇವರಿಗೆ ಇವರೇ ಸಾಟಿ ಎಂದು ಕವಿಗಳೂ, ಪಂಡಿತರೂ ಹೊಗಳುತ್ತಿದ್ದಾರೆ. ತುಳಸೀದಾಸರು ಹೇಳುತ್ತಿದ್ದಾರೆ – ಜನಕಪುರದ ಹೆಂಗಳೆಯರೆಲ್ಲರೂ – ''ಈ ನಾಲ್ಕೂ ಮಕ್ಕಳ ವಿವಾಹಗಳೂ ನಮ್ಮ ಊರಿನಲ್ಲೇ ಆಗಲಿ. ನಾವೆಲ್ಲರೂ ಸೋಬಾನೆ ಹಾಡುವಂತಾಗಲಿ'' ಎಂದು ಸೆರಗೊಡ್ಡಿ ವಿಧಾತದಲ್ಲಿ ಬೇಡುತ್ತಿದ್ದರು. (ಛಂದ)

**ಸೋ – ಕಹಹಿಂ ಪರಸ್ಪರ ನಾರಿ ಬಾರಿ ಬಿಲೋಚನ ಪುಲಕ ತನ ।**
**ಸಖಿ ಸಬು ಕರಬ ಪುರಾರಿ ಪುನ್ಯ ಪಯೋನಿಧಿ ಭೂಪ ದೋಉ ॥ ೩೧೧ ॥**

ಅವರ ಕಣ್ಣುಗಳಲ್ಲಿ ಪ್ರೇಮಾಶ್ರುಗಳು ತುಂಬಿ ಬಂದಿತ್ತು. ಅವರು ಪುಳಕಗೊಂಡು ತಮ್ಮ-ತಮ್ಮಲ್ಲೇ ಮಾತನಾಡಿಕೊಳ್ಳುತ್ತಿದ್ದರು – ''ಸಖೀ! ತ್ರಿಪುರಾರಿಯಾದ ಆ ಪರಶಿವನು ನಮ್ಮ ಕೋರಿಕೆಗಳನ್ನು ತಪ್ಪದೆ ಈಡೇರಿಸುವನು. ಏಕೆಂದರೆ ಈ ಇಬ್ಬರೂ ರಾಜರೂ ಪುಣ್ಯಾತ್ಮರಾಗಿದ್ದಾರೆ. ಇಂತಹವರ ಮನೋರಥವನ್ನು ಭಗವಂತನು ಈಡೇರಿಸದೇ ಇರುವನೇ? ಅದರಿಂದ ಈ ನಾಲ್ವರ ವಿವಾಹಗಳೂ ಇಲ್ಲೇ ಜರಗುವವು. (ಸೋ/೩೧೧)

**ಚೌ – ಎಹಿ ಬಿಧಿ ಸಕಲ ಮನೋರಥ ಕರಹೀಂ । ಆನಂದ ಉಮಗಿ ಉಮಗಿ ಉರ ಭರಹೀಂ ॥**
**ಜೇ ನೃಪ ಸೀಯ ಸ್ವಯಂಬರ ಆಏ । ದೇಖಿ ಬಂಧು ಸಬ ತಿನ್ಹ ಸುಖ ಪಾಏ ॥ ೧ ॥**
**ಕಹತ ರಾಮ ಜಸು ಬಿಸದ ಬಿಸಾಲಾ । ನಿಜ ನಿಜ ಭವನ ಗಏ ಮಹಿಪಾಲಾ ॥**
**ಗಏ ಬೀತಿ ಕಛು ದಿನ ಎಹಿ ಭಾಂತೀ । ಪ್ರಮುದಿತ ಪುರಜನ ಸಕಲ ಬರಾತೀ ॥ ೨ ॥**
**ಮಂಗಲ ಮೂಲ ಲಗನ ದಿನು ಆವಾ । ಹಿಮ ರಿತು ಅಗಹನು ಮಾಸು ಸುಹಾವಾ ॥**
**ಗ್ರಹ ತಿಥಿ ನಖತು ಜೋಗು ಬರ ಬಾರೂ । ಲಗನ ಸೋಧಿ ಬಿಧಿ ಕೀನ್ಹ ಬಿಚಾರೂ ॥ ೩ ॥**
**ಪಠೈ ದೀನ್ಹಿ ನಾರದ ಸನ ಸೋಈ । ಗನೀ ಜನಕ ಕೇ ಗನಕನ್ಹ ಜೋಈ ॥**
**ಸುನೀ ಸಕಲ ಲೋಗನ್ಹ ಯಹ ಬಾತಾ । ಕಹಹಿಂ ಜೋತಿಷೀ ಆಹಿಂ ಬಿಧಾತಾ ॥ ೪ ॥**

ಈ ವಿಧವಾಗಿ ಪುರಸ್ತ್ರೀಯರು ಪ್ರಾರ್ಥಿಸುತ್ತಿದ್ದರು. ಅವರು ತಮ್ಮ ಹೃದಯದಲ್ಲಿ ಉತ್ಸಾಹ ಮತ್ತು ಆನಂದಗಳನ್ನು ತುಂಬಿಕೊಳ್ಳುತ್ತಿದ್ದರು. ಸೀತೆಯ ಸ್ವಯಂವರಕ್ಕೆ ಬಂದಿದ್ದ ಅನೇಕ ರಾಜರುಗಳು ಈ ನಾಲ್ವರು ರಾಜಕುಮಾರರನ್ನು ಕಂಡು ಹರ್ಷಿತರಾದರು. ಶ್ರೀರಾಮಚಂದ್ರನ ನಿರ್ಮಲವಾದ ಘನಕೀರ್ತಿಯನ್ನು ಬಣ್ಣಿಸುತ್ತಾ ಅವರು ತಮ್ಮ-ತಮ್ಮ ಬಿಡದಿಗಳಿಗೆ ತೆರಳಿದರು. ಹೀಗೆ ಕೆಲವು ದಿನಗಳು ಕಳೆದುವು. ಜನಕಪುರ ನಿವಾಸಿಗಳು ಹಾಗೂ ದಿಬ್ಬಣಿಗರು ಆನಂದವಾಗಿ ಇದ್ದರು.

ಶುಭಪ್ರದವಾದ ಆ ವಿವಾಹ ಮುಹೂರ್ತವು ಸಮೀಪಿಸಿತು. ಅದು ಶುಭವಾದ ಮಾರ್ಗಶಿರಮಾಸ, ಹೇಮಂತಋತುವಿನ ಪ್ರಾರಂಭದ ಸಮಯ. ಬ್ರಹ್ಮದೇವರು ಸರಿಯಾಗಿ ತಿಥಿ, ವಾರ, ನಕ್ಷತ್ರ, ಗ್ರಹಯೋಗಗಳನ್ನು ಪರಿಶೀಲಿಸಿ, ಮುಹೂರ್ತಕಾಲವನ್ನು ನಿರ್ಣಯಿಸಿ, ಅದನ್ನು ನಾರದರ ಮೂಲಕ ಕೊಟ್ಟು ಕಳುಹಿದರು. ನಾರದರು ಜನಕನ ಬಳಿಗೆ ಬಂದು ಅದನ್ನು ತಿಳಿಸುತ್ತಲೇ, ಜನಕನ ಸಂಸ್ಥಾನದ ಜ್ಯೋತಿಷಿಗಳೂ ಅದೇ ಮುಹೂರ್ತವನ್ನು ಗುಣಿಸಿ ನಿರ್ಣಯಿಸಿದ್ದರು. ಇದನ್ನು ತಿಳಿದು ಎಲ್ಲರೂ – ''ನಮ್ಮ ಜ್ಯೋತಿಷ್ಯವಿದ್ವಾಂಸರೂ ಕೂಡ ಯಾವ ಬ್ರಹ್ಮನಿಗೆ ಕಡಿಮೆ?'' ಎಂದುಕೊಂಡರು. (ಚೌ/೧-೪)

**ದೋ – ಧೇನುಧೂರಿ ಬೇಲಾ ಬಿಮಲ ಸಕಲ ಸುಮಂಗಲ ಮೂಲ ।**
**ಬಿಪ್ರನ್ಹ ಕಹೆಉ ಬಿದೇಹ ಸನ ಜಾನಿ ಸಗುನ ಅನುಕೂಲ ॥ ೩೧೨ ॥**

ನಿರ್ಮಲವೂ, ಸಕಲ ಮಂಗಳಮೂಲವೂ ಆದ ಗೋಧೂಳಿ ಸಮಯ ಸನ್ನಿಹಿತವಾಯಿತು. ಅನುಕೂಲವಾದ ಶುಭಶಕುನಗಳಾದವು. ವಿಪ್ರರು ಜನಕನಿಗೆ ಅದರ ಸೂಚನೆಯನ್ನಿತ್ತರು. (ದೋ/೩೧೨)

**ಚೌ – ಉಪರೋಹಿತಹಿ ಕಹೆಉ ನರನಾಹಾ । ಅಬ ಬಿಲಂಬ ಕರ ಕಾರನು ಕಾಹಾ ॥**
**ಸತಾನಂದ ತಬ ಸಚಿವ ಬೋಲಾಏ । ಮಂಗಲ ಸಕಲ ಸಾಜಿ ಸಬ ಲ್ಯಾಏ ॥ ೧ ॥**
**ಸಂಖ ನಿಸಾನ ಪನವ ಬಹು ಬಾಜೇ । ಮಂಗಲ ಕಲಸ ಸಗುನ ಸುಭ ಸಾಜೇ ॥**
**ಸುಭಗ ಸುಆಸಿನಿ ಗಾವಹಿಂ ಗೀತಾ । ಕರಹಿಂ ಬೇದ ಧುನಿ ಬಿಪ್ರ ಪುನೀತಾ ॥ ೨ ॥**
**ಲೇನ ಚಲೇ ಸಾದರ ಎಹಿ ಭಾಂತೀ । ಗಏ ಜಹಾಂ ಜನವಾಸ ಬರಾತೀ ॥**
**ಕೋಸಲಪತಿ ಕರ ದೇಖಿ ಸಮಾಜೂ । ಅತಿ ಲಘು ಲಾಗ ತಿನ್ಹಹಿ ಸುರರಾಜೂ ॥ ೩ ॥**
**ಭಯಉ ಸಮಉ ಅಬ ಧಾರಿಅ ಪಾಊ । ಯಹ ಸುನಿ ಪರಾ ನಿಸಾನಹಿಂ ಘಾಊ ॥**
**ಗುರಹಿ ಪೂಛಿ ಕರಿ ಕುಲ ಬಿಧಿ ರಾಜಾ । ಚಲೇ ಸಂಗ ಮುನಿ ಸಾಧು ಸಮಾಜಾ ॥ ೪ ॥**

ಆಗ ಜನಕ ಮಹಾರಾಜನು ತನ್ನ ಪುರೋಹಿತರಾದ ಶತಾನಂದರ ಬಳಿ ಹೇಳಿದನು – ಗುರುಗಳೇ! ಇನ್ನೇಕೆ ತಡ? ಆಗ ಶತಾನಂದರು ಮಂತ್ರಿಗಳನ್ನು ಕರೆದರು. ಅವರು ಮಂಗಳದ್ರವ್ಯಗಳನ್ನೆಲ್ಲ ಅಣಿಮಾಡಿತಂದರು. ಶಂಖ, ನಗಾರಿ, ಡೋಲು

ಮುಂತಾದ ಅನೇಕ ವಾದ್ಯಗಳು ಮೊಳಗತೊಡಗಿದವು. ಮಂಗಳ ಕಲಶಗಳೂ, ಶುಭಶಕುನ ಸಾಮಗ್ರಿಗಳಾದ ಮೊಸರು, ದೂರ್ವೆ ಮೊದಲಾದ ವಸ್ತುಗಳನ್ನು ಅಣಿಮಾಡಿಕೊಂಡರು. ಸುಂದರ ಸುಮಂಗಲಿಯರು ಹಾಡುಗಳನ್ನು ಹಾಡುತ್ತಿದ್ದರು. ಬ್ರಾಹ್ಮಣರು ವೇದಘೋಷ ಮಾಡುತ್ತಿದ್ದರು. ಎಲ್ಲರೂ ಈ ವಿಧವಾಗಿ ಆದರದಿಂದ ದಿಬ್ಬಣವನ್ನು ಇದಿರುಗೊಳ್ಳಲು ಗಂಡಿನವರು ಉಳಕೊಂಡಿದ್ದ ಬಿಡದಿಯಕಡೆಗೆ ಬಂದರು. ಅಯೋಧ್ಯಾಧಿಪತಿ ದಶರಥನ ಐಸಿರಿಯನ್ನು ಕಂಡು ಅವರಿಗೆ, ದೇವರಾಜ ಇಂದ್ರನು ಸಣ್ಣವನೆಂದೇ ತೋರಿತು. ಅವರು ಸವಿನಯದಿಂದ ದಶರಥನನ್ನು ಇಂತು ಆಹ್ವಾನಿಸಿದರು – ಮಹಾರಾಜರೇ! ಶುಭಮುಹೂರ್ತವು ಸಮೀಪಿಸುತ್ತಿದೆ. ದಯಮಾಡಿ ಬರಬೇಕು! ಇದನ್ನು ಕೇಳುತ್ತಲೇ ನಗಾರಿಗಳು ಭೋರ್ಗರೆದವು. ಗುರು ವಸಿಷ್ಠರನ್ನು ಮುಂದಿಟ್ಟುಕೊಂಡು, ಕುಲಾಚಾರಗಳನ್ನೆಲ್ಲಾ ಯಥಾವಿಧಿಯಾಗಿ ಮುಗಿಸಿ, ದಶರಥ ಮಹಾರಾಜನು ಮುನಿಗಳ, ಸಾಧುಗಳ ಸಮಾಜದೊಂದಿಗೆ, ಸಪರಿವಾರ ಸಮೇತನಾಗಿ ಹೊರಟನು. (ಚೌ/೧-೪)

**ದೋ – ಭಾಗ್ಯ ಬಿಭವ ಅವಧೇಸ ಕರ ದೇಖಿ ದೇವ ಬ್ರಹ್ಮಾದಿ ।**
**ಲಗೇ ಸರಾಹನ ಸಹಸ ಮುಖ ಜಾನಿ ಜನಮ ನಿಜ ಬಾದಿ ॥ ೩೧೩ ॥**

ಅವಧೇಶ ನರಪತಿ ದಶರಥ ಮಹಾರಾಜನ ಭಾಗ್ಯ, ವೈಭವವನ್ನು ಕಂಡು, ಬ್ರಹ್ಮಾದಿ ದೇವತೆಗಳು, ಸಾವಿರಾರು ಮುಖಗಳಿಂದ ಅವನನ್ನು ಕೊಂಡಾಡುತ್ತಾ, ತಮ್ಮ ಜನ್ಮವು ವ್ಯರ್ಥವೆಂದೇ ತಿಳಿದರು. (ದೋ/೩೧೩)

**ಚೌ – ಸುರನ್ಹ ಸುಮಂಗಲ ಅವಸರು ಜಾನಾ । ಬರಷಹಿಂ ಸುಮನ ಬಜಾಇ ನಿಸಾನಾ ॥**
**ಸಿವ ಬ್ರಹ್ಮಾದಿಕ ಬಿಬುಧ ಬರೂಥಾ । ಚಢೇ ಬಿಮಾನನ್ಹಿ ನಾನಾ ಜೂಥಾ ॥ ೧ ॥**
**ಪ್ರೇಮ ಪುಲಕ ತನ ಹೃದಯಂ ಉಛಾಹೂಂ । ಚಲೇ ಬಿಲೋಕನ ರಾಮು ಬಿಆಹೂ ॥**
**ದೇಖಿ ಜನಕಪುರು ಸುರ ಅನುರಾಗೇ । ನಿಜ ನಿಜ ಲೋಕ ಸಬಹಿಂ ಲಘು ಲಾಗೇ ॥ ೨ ॥**
**ಚಿತವಹಿಂ ಚಕಿತ ಬಿಚಿತ್ರ ಬಿತಾನಾ । ರಚನಾ ಸಕಲ ಅಲೌಕಿಕ ನಾನಾ ॥**
**ನಗರ ನಾರಿ ನರ ರೂಪ ನಿಧಾನಾ । ಸುಘರ ಸುಧರಮ ಸುಸೀಲ ಸುಜಾನಾ ॥ ೩ ॥**
**ತಿನ್ಹಹಿ ದೇಖಿ ಸಬ ಸುರ ಸುರನಾರೀಂ । ಭಏ ನಖತ ಜನು ಬಿಧು ಉಜಿಆರೀಂ ॥**
**ಬಿಧಿಹಿ ಭಯಉ ಆಚರಜು ಬಿಸೇಷೀ । ನಿಜಕರನೀ ಕಛು ಕತಹುಂ ನ ದೇಖೀ ॥ ೪ ॥**

ಆ ಸುಮುಹೂರ್ತವು ಅತೀವ ಮಂಗಳಕರವಾಗಿದೆ ಎಂದು ತಿಳಿದುಕೊಂಡು ದೇವತೆಗಳು ಪುಷ್ಪವೃಷ್ಟಿಗರೆದು, ದುಂದುಭಿಗಳನ್ನು ನುಡಿಸಿದರು. ಬ್ರಹ್ಮಾ, ಶಿವ ಮೊದಲಾದವರು ತಂಡ-ತಂಡವಾಗಿ ಶ್ರೀ ಸೀತಾರಾಮರ ವಿವಾಹ ಮಹೋತ್ಸವವನ್ನು ನೋಡಲಿಕ್ಕಾಗಿ ಪರಮೋತ್ಸಾಹದಿಂದ ತಮ್ಮ-ತಮ್ಮ ವಾಹನಗಳನ್ನೇರಿ ಮಿಥಿಲೆಗೆ ಆಗಮಿಸಿದರು. ಆ ಜನಕಪುರಿಯ ವೈಭವವನ್ನು ಕಂಡು ಅವರಿಗೆ ತಮ್ಮ ಲೋಕಗಳು ಸಪ್ಪೆ ಎನಿಸಿದವು. ಅವರು ಅಲ್ಲಿಯ ವಿಚಿತ್ರ ಮಂಡಪಗಳು ನಾನಾ ರೀತಿಯ ಅಲೌಕಿಕ ರಚನೆಗಳು ಮೊದಲಾದವುಗಳನ್ನು ಚಕಿತರಾಗಿ ನೋಡತೊಡಗಿದರು. ಆ ನಗರದ ಸ್ತ್ರೀಪುರುಷರು ಸೌಂದರ್ಯದ ನಿಧಿಗಳೂ, ಶ್ರೇಷ್ಠ ಧರ್ಮಾತ್ಮರೂ, ಸುಶೀಲರೂ, ಸುಜ್ಞಾನಿಗಳೂ ಆಗಿದ್ದರು. ಅವರ ಮುಂದೆ ದೇವತೆಗಳೂ, ದೇವಕಾಮಿನಿಯರೂ ಚಂದ್ರೋದಯವಾದಾಗ ನಕ್ಷತ್ರಗಳು ಮಂಕಾಗುವಂತೆ ಕಂಡು ಬಂದರು. ಬ್ರಹ್ಮದೇವರಿಗೆ ಅಲ್ಲಿ ತನ್ನ ಯಾವುದೇ ಸೃಷ್ಟಿರಚನೆ ಕಾಣದಿದ್ದಾಗ ಆಶ್ಚರ್ಯವಾಯಿತು. (ಚೌ/೧-೪)

**ದೋ – ಸಿವಂ ಸಮುಝಾಏ ದೇವ ಸಬ ಜನಿ ಆಚರಜ ಭುಲಾಹು ।**
**ಹೃದಯಂ ಬಿಚಾರಹು ಧೀರ ಧರಿ ಸಿಯ ರಘುಬೀರ ಬಿಆಹು ॥ ೩೧೪ ॥**

ಆಗ ಪರಶಿವನು ಎಲ್ಲ ದೇವತೆಗಳನ್ನು ಎಚ್ಚರಿಸುತ್ತಾ ಹೇಳಿದನು – ''ನೀವು ಆಶ್ಚರ್ಯಪಡಬೇಡಿರಿ. ಪ್ರಶಾಂತವಾಗಿ ಆಲೋಚಿಸಿರಿ. ಇದು ಸಾಮಾನ್ಯರ ವಿವಾಹವಲ್ಲ. ಭಗವಂತನ ಮಹಾಮಹಿಮಾಮಯವಾದ ನಿಜಶಕ್ತಿ ಜಾನಕಿಯ ಹಾಗೂ ಅಖಿಲಾಂಡಕೋಟಿ ಬ್ರಹ್ಮಾಂಡನಾಯಕನಾದ ಸಾಕ್ಷಾತ್ ಭಗವಾನ್ ಶ್ರೀರಾಮಚಂದ್ರನ ವಿವಾಹವಾಗಿದೆ. (ದೋ/೩೧೪)

**ಚೌ – ಜಿನ್ಹ ಕರ ನಾಮು ಲೇತ ಜಗ ಮಾಹೀಂ । ಸಕಲ ಅಮಂಗಲ ಮೂಲ ನಸಾಹೀಂ ॥**
**ಕರತಲ ಹೋಹಿಂ ಪದಾರಥ ಚಾರೀ । ತೇಇ ಸಿಯ ರಾಮು ಕಹೇಉ ಕಾಮಾರೀ ॥ ೧ ॥**
**ಏಹಿ ಬಿಧಿ ಸಂಭು ಸುರನ್ಹ ಸಮುಝಾವಾ । ಪುನಿ ಆಗೇಂ ಬರ ಬಸಹ ಚಲಾವಾ ॥**
**ದೇವನ್ಹ ದೇಖೇ ದಸರಥು ಜಾತಾ । ಮಹಾಮೋದ ಮನ ಪುಲಕಿತ ಗಾತಾ ॥ ೨ ॥**

**ಸಾಧು ಸಮಾಜ ಸಂಗ ಮಹಿದೇವಾ । ಜನು ತನು ಧರೇಂ ಕರಹಿಂ ಸುಖ ಸೇವಾ ॥**
**ಸೋಹತ ಸಾಥ ಸುಭಗ ಸುತ ಚಾರೀ । ಜನು ಅಪಬರಗ ಸಕಲ ತನುಧಾರೀ ॥ ೩ ॥**
**ಮರಕತ ಕನಕ ಬರನ ಬರ ಜೋರೀ । ದೇಖಿ ಸುರನ್ಹ ಭೈ ಪ್ರೀತಿ ನ ಥೋರೀ ॥**
**ಪುನಿ ರಾಮಹಿ ಬಿಲೋಕಿ ಹಿಯಂ ಹರಷೇ । ನೃಪಹಿ ಸರಾಹಿ ಸುಮನ ತಿನ್ಹ ಬರಷೇ ॥ ೪ ॥**

ಅವರ ನಾಮೋಚ್ಚಾರಣ ಮಾತ್ರದಿಂದ ಎಲ್ಲ ಅಮಂಗಳಗಳೂ ಸಮೂಲವಾಗಿ ನಾಶವಾಗುವುವು ಹಾಗೂ ಚತುರ್ವಿಧ ಪುರುಷಾರ್ಥಗಳು ಕೈಗೂಡುವುವು. ಅವರೇ ಸೀತಾರಾಮರು'' ಎಂದು ಕಾಮಾರಿಯಾದ ಪರಶಿವನು ದೇವತೆಗಳಿಗೆ ತಿಳಿಸಿ, ತನ್ನ ವಾಹನನಾದ ನಂದೀಶ್ವರನನ್ನು ಮುಂದಕ್ಕೆ ನಡೆಸಿದನು. ಅಮಿತಾನಂದದಿಂದ, ಪುಲಕಿತಗಾತ್ರನಾದ ದಶರಥನು ಜನಕನ ಭವನಕ್ಕೆ ಹೋಗುವುದನ್ನು ದೇವತೆಗಳು ನೋಡಿದರು. ಅವನೊಡನೆ ಸಮಸ್ತ ಸುಖಗಳು ಆಕೃತಿಯನ್ನು ಹೊಂದಿದಂತೆ ಸಾಧುಗಳೂ, ಬ್ರಾಹ್ಮಣರೂ ಜೊತೆಗೆ ನಡೆದುಕೊಂಡು ಹೋಗುತ್ತಿದ್ದಾರೆ. ಜೊತೆಗೆ ಇರುವ ನಾಲ್ವರು ಕುಮಾರರು ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಹಾಗೂ ಸಾಯುಜ್ಯಗಳೇ ಮೈವೆತ್ತು ಬಂದಿರುವಂತೆ ಶೋಭಿಸುತ್ತಿದ್ದರು. ಮರಕತಮಣಿ ಹಾಗೂ ಚಿನ್ನದ ಬಣ್ಣದ ಎರಡು ಜೋಡಿಗಳನ್ನು ನೋಡಿ ದೇವತೆಗಳು ಮಹದಾನಂದವನ್ನು ಹೊಂದಿದರು. ಶ್ರೀರಾಮಚಂದ್ರನನ್ನು ನೋಡಿಯಂತೂ ಅತ್ಯಂತ ಹರ್ಷಿತರಾದರು. ದಶರಥನನ್ನು ಕೊಂಡಾಡುತ್ತಾ ಹೂವಿನ ಮಳೆಯನ್ನು ಸುರಿಸಿದರು. (ಚೌ/೧-೪)

**ದೋ – ರಾಮ ರೂಪು ನಖ ಸಿಖ ಸುಭಗ ಬಾರಹಿಂ ಬಾರ ನಿಹಾರಿ ।**
**ಪುಲಕ ಗಾತ ಲೋಚನ ಸಜಲ ಉಮಾ ಸಮೇತ ಪುರಾರಿ ॥ ೩೧೫ ॥**

ಅಡಿಯಿಂದ ಮುಡಿಯವರೆಗೆ ಶ್ರೀರಾಮನ ಅಪೂರ್ವನಾದ ಚೆಲುವನ್ನು ಮತ್ತೆ-ಮತ್ತೆ ನೋಡುತ್ತಾ ಉಮಾಮಹೇಶ್ವರರು ಹರ್ಷವಿಹ್ವಲರಾದರು. ಅವರ ಕಣ್ಣುಗಳಲ್ಲಿ ಆನಂದಾಶ್ರುಗಳು ತುಂಬಿಬಂದವು. (ದೋ/೩೧೫)

**ಚೌ – ಕೇಕಿ ಕಂಠ ದುತಿ ಸ್ಯಾಮಲ ಅಂಗಾ । ತಡಿತ ಬಿನಿಂದಕ ಬಸನ ಸುರಂಗಾ ॥**
**ಬ್ಯಾಹ ಬಿಭೂಷನ ಬಿಬಿಧ ಬನಾಏ । ಮಂಗಲ ಸಬ ಸಬ ಭಾಂತಿ ಸುಹಾಏ ॥ ೧ ॥**
**ಸರದ ಬಿಮಲ ಬಿಧು ಬದನು ಸುಹಾವನ । ನಯನ ನವಲ ರಾಜೀವ ಲಜಾವನ ॥**
**ಸಕಲ ಅಲೌಕಿಕ ಸುಂದರತಾಈ । ಕಹಿ ನ ಜಾಇ ಮನಹೀಂ ಮನ ಭಾಈ ॥ ೨ ॥**
**ಬಂಧು ಮನೋಹರ ಸೋಹಹಿಂ ಸಂಗಾ । ಜಾತ ನಚಾವತ ಚಪಲ ತುರಂಗಾ ॥**
**ರಾಜಕುಅ್ಁರ ಬರ ಬಾಜಿ ದೆಖಾವಹಿಂ । ಬಂಸ ಪ್ರಸಂಸಕ ಬಿರಿದ ಸುನಾವಹಿಂ ॥ ೩ ॥**
**ಜೆಹಿ ತುರಂಗ ಪರ ರಾಮು ಬಿರಾಜೇ । ಗತಿ ಬಿಲೋಕಿ ಖಗನಾಯಕು ಲಾಜೇ ॥**
**ಕಹಿ ನ ಜಾಇ ಸಬ ಭಾಂತಿ ಸುಹಾವಾ । ಬಾಜಿ ಬೇಷು ಜನು ಕಾಮ ಬನಾವಾ ॥ ೪ ॥**

ಶ್ರೀರಾಮನದು ನವಿಲಿನ ಕೊರಳಿನಂತೆ ಶ್ಯಾಮಲವಾದ ಶರೀರ. ವಿದ್ಯುಲ್ಲತೆಯನ್ನು ಮೀರಿಸುವ ಹೊಳೆಯುವ ಪೀತಾಂಬರವನ್ನು ಉಟ್ಟಿರುವನು. ಎಲ್ಲ ವಿಧದ ಮಂಗಳಮಯ ಚೆಲುವಾದ ಮದುವೆಯ ಆಭರಣಗಳಿಂದ ಅಲಂಕೃತನಾಗಿದ್ದನು. ಅವನ ಸುಂದರವದನ ಶರತ್‌ಪೂರ್ಣಿಮೆಯ ನಿರ್ಮಲ ಚಂದ್ರನಂತಿದ್ದು, ಕಣ್ಣುಗಳು ನವ ಕಮಲಗಳನ್ನು ಏಳಿಸುವಂತಿತ್ತು. ಅವನ ಅಲೌಕಿಕ ಸೌಂದರ್ಯವು ಮನೋಜ್ಞವೂ, ವರ್ಣನಾತೀತವೂ ಆಗಿತ್ತು. ಶ್ರೀರಾಮನ ಜೊತೆಯಲ್ಲಿ ಮನೋಹರರಾದ ಅವನ ತಮ್ಮಂದಿರು, ಚಂಚಲವಾದ ಕುದುರೆಗಳನ್ನು ಕುಣಿಸುತ್ತಾ ಹೋಗುತ್ತಿದ್ದರು. ವಂದಿಮಾಗಧರು ವಂಶವನ್ನು ಕೊಂಡಾಡುತ್ತಾ, ಬಿರುದಾವಳಿಗಳನ್ನು ಉಗ್ಗಡಿಸುತ್ತಿದ್ದಾರೆ. ಶ್ರೀರಾಮನು ಕುಳಿತಿರುವ ಕುದುರೆಯ ಚೆಲುವನ್ನು ಕಂಡು ಗರುಡನೂ ಲಜ್ಜಿತನಾಗುತ್ತಾನೆ. ಅಂತಹ ಅದ್ಭುತ ಚೆಲುವಾದ ಕುದುರೆಯು, ಮನ್ಮಥನೇ ಅಶ್ವಾಕೃತಿಯನ್ನು ಹೊಂದಿರುವನೋ ಎಂಬಂತಿತ್ತು. (ಚೌ/೧-೪)

**ಛಂ – ಜನು ಬಾಜಿ ಬೇಷು ಬನಾಇ ಮನಸಿಜು ರಾಮ ಹಿತ ಅತಿ ಸೋಹಈ ।**
**ಆಪನೇ ಬಯ ಬಲ ರೂಪ ಗುನ ಗತಿ ಸಕಲ ಭುವನ ಬಿಮೋಹಈ ॥**
**ಜಗಮಗತ ಜೀನು ಜರಾವ ಜೋತಿ ಸುಮೋತಿ ಮನಿ ಮಾನಿಕ ಲಗೇ ।**
**ಕಿಂಕಿನಿ ಲಲಾಮ ಲಗಾಮು ಲಲಿತ ಬಿಲೋಕಿ ಸುರ ನರ ಮುನಿ ಠಗೇ ॥**

ಕಾಮದೇವನೇ ಶ್ರೀರಾಮನಿಗಾಗಿ ಕುದುರೆಯಾಗಿ ಅತ್ಯಂತ ಶೋಭಿಸುತ್ತಿರುವನು. ಅದು ತನ್ನ ಯೌವನ, ಬಲ, ರೂಪ, ಗುಣ, ಗಮನ ಇವುಗಳಿಂದ ಸಕಲ ಲೋಕಗಳನ್ನು ಮೋಹಗೊಳಿಸುತ್ತಿತ್ತು. ಅಂದವಾದ ಮುತ್ತುಗಳು, ಮಣಿಗಳು, ಮಾಣಿಕ್ಯಗಳು,

ಇವುಗಳಿಂದ ಶೋಭಿತವಾದ ಜೀನು ಕಣ್ಣುಗಳಿಗೆ ಹಬ್ಬದಂತಿತ್ತು. ಲಗಾಮಿಗೆ ಕಟ್ಟಿದ ಸುಂದರವಾದ ಭಂಗಾರದ ಕಿರುಗಂಟೆಗಳ ನಿನಾದದಿಂದ ದೇವತೆಗಳು, ಮಾನವರು, ಮುನಿಗಳೂ ಕೂಡ ಮೋಹಿತರಾಗುತ್ತಿದ್ದರು. (ಛಂದ)

**ದೋ – ಪ್ರಭು ಮನಸಹಿಂ ಲಯಲೀನ ಮನು ಚಲತ ಬಾಜಿ ಛಬಿ ಪಾವ।**
**ಭೂಷಿತ ಉಡಗನ ತಡಿತ ಘನು ಜನು ಬರ ಬರಹಿ ನಚಾವ॥ ೩೧೬ ॥**

ನಕ್ಷತ್ರಗಳಿಂದ, ವಿದ್ಯುಲ್ಲತೆಯಿಂದ ಶೋಭಿಸುವ ಮೇಘವನ್ನು ಕಂಡು ನಾಟ್ಯವಾಡುವ ನವಿಲಿನಂತೆ ಆ ಕುದುರೆಯು ಶ್ರೀರಾಮನ ಇಚ್ಛೆಗನುಸಾರವಾಗಿ ಮನೋಜ್ಞಪದವಿನ್ಯಾಸದಿಂದ ನಡೆದುಕೊಂಡು ಹೋಗುತ್ತಿತ್ತು. (ದೋ/೩೧೬)

**ಚೌ – ಜೆಹಿಂ ಬರ ಬಾಜಿ ರಾಮು ಅಸವಾರಾ। ತೆಹಿ ಸಾರದಉ ನ ಬರನೈ ಪಾರಾ॥**
**ಸಂಕರು ರಾಮ ರೂಪ ಅನುರಾಗೇ। ನಯನ ಪಂಚದಸ ಅತಿ ಪ್ರಿಯ ಲಾಗೇ॥ ೧ ॥**
**ಹರಿಹಿತ ಸಹಿತ ರಾಮು ಜಬ ಜೋಹೇ। ರಮಾ ಸಮೇತ ರಮಾಪತಿ ಮೋಹೇ॥**
**ನಿರಖಿ ರಾಮ ಛಬಿ ಬಿಧಿ ಹರಷಾನೇ। ಆಠಇ ನಯನ ಜಾನಿ ಪಛಿತಾನೇ॥ ೨ ॥**
**ಸುರ ಸೇನಪ ಉರ ಬಹುತ ಉಛಾಹೂ। ಬಿಧಿ ತೇ ಡೇವಢ ಲೋಚನ ಲಾಹೂ॥**
**ರಾಮಹಿ ಚಿತವ ಸುರೇಸ ಸುಜಾನಾ। ಗೌತಮ ಶ್ರಾಪು ಪರಮ ಹಿತ ಮಾನಾ॥ ೩ ॥**
**ದೇವ ಸಕಲ ಸುರಪತಿಹಿ ಸಿಹಾಹೀಂ। ಆಜು ಪುರಂದರ ಸಮ ಕೋಉ ನಾಹೀಂ॥**
**ಮುದಿತ ದೇವಗನ ರಾಮಹಿ ದೇಖೀ। ನೃಪಸಮಾಜ ದುಹುಁ ಹರಷು ಬಿಸೇಷೀ॥ ೪ ॥**

ಶ್ರೀರಾಮನು ಏರಿದ ಕುದುರೆಯ ಲೋಕೋತ್ತರ ಸೌಂದರ್ಯ, ವೈಭವವನ್ನು ವಾಗ್ದೇವಿಯೂ ವರ್ಣಿಸದಾದಳು. ಶ್ರೀರಾಮಚಂದ್ರನ ಚೆಲುವನ್ನು ಕಂಡ ಹದಿನೈದು ಕಣ್ಣುಗಳುಳ್ಳ ಪಂಚಮುಖ ಪರಮೇಶ್ವರನು ತನ್ನ ಧನ್ಯತೆಯನ್ನು ತಾನೇ ಅಭಿನಂದಿಸಿಕೊಂಡನು. ಶ್ರೀಮಹಾವಿಷ್ಣುವು ಲಕ್ಷ್ಮೀದೇವಿಯೊಂದಿಗೆ ಶ್ರೀರಾಮನ ಸೌಂದರ್ಯವನ್ನು ನೋಡಿ ಮುಗ್ಧನಾದನು. ಚತುರ್ಮುಖರಾದ ಬ್ರಹ್ಮದೇವರು ಶ್ರೀರಾಮನ ಲಾವಣ್ಯಲಾಲಿತ್ಯದಿಂದ ಅತೀವ ಹರ್ಷಿತರಾದರು. ಆದರೆ ತನಗೆ ಎಂಟೇ ಕಣ್ಣುಗಳಿವೆಯಲ್ಲ! ಎಂದು ಹಲುಬತೊಡಗಿದರು. ದೇವಸೇನಾಪತಿಯಾದ ಷಣ್ಮುಖನ ಸಂಭ್ರಮ ಹೇಳತೀರದು. ಏಕೆಂದರೆ, ಅವನು ಬ್ರಹ್ಮದೇವರಿಗಿಂತ ಒಂದುವರೆಪಟ್ಟು (ಹನ್ನೆರಡು) ಕಣ್ಣುಗಳಿಂದ ಶ್ರೀರಾಮಚಂದ್ರನ ದರ್ಶನಲಾಭವನ್ನು ಪಡೆಯುತ್ತಿದ್ದನು. ಜಾಣನಾದ ಇಂದ್ರನು ತನ್ನ ಸಾವಿರ ಕಣ್ಣುಗಳಿಂದಲೂ ರಘುರಾಮನನ್ನು ನೋಡುತ್ತಿದ್ದನು. ಗೌತಮಮುನಿಯ ಶಾಪವು ತನಗೆ ಇಂದು ಪರಮ ಹಿತಕಾರಿ ಎನಿಸಿತು ಎಂದು ಸಂಭ್ರಮಪಟ್ಟುಕೊಂಡನು. ಎಲ್ಲ ದೇವತೆಗಳು ಆ ಸಹಸ್ರಾಕ್ಷನಾದ ಪುರಂದರನನ್ನು ಕಂಡು ಅಸೂಯೆಪಟ್ಟುಕೊಂಡರು. 'ಇಂದು ಅವನಂತೆ ಭಾಗ್ಯಶಾಲಿಯೂ ಬೇರೆ ಯಾರೂ ಇಲ್ಲ' ಎಂದು ಹೇಳಿಕೊಂಡರು. ಶ್ರೀರಾಮನನ್ನು ನೋಡಿ ಎಲ್ಲ ದೇವತೆಗಳೂ ಸಂತೋಷಭರಿತರಾದರು. ಉಭಯರಾಜರ ಸಮಾಜದಲ್ಲೂ ವಿಶೇಷ ಹರ್ಷ ಹಬ್ಬಿಕೊಂಡಿತು. (ಚೌ/೧-೪)

**ಛಂ – ಅತಿ ಹರಷು ರಾಜಸಮಾಜ ದುಹು ದಿಸಿ ದುಂದುಭೀಂ ಬಾಜಹಿಂ ಘನೀ।**
**ಬರಷಹಿಂ ಸುಮನ ಸುರ ಹರಷಿ ಕಹಿ ಜಯ ಜಯತಿ ಜಯ ರಘುಕುಲಮನೀ॥**
**ಎಹಿ ಭಾಁತಿ ಜಾನಿ ಬರಾತ ಆವತ ಬಾಜನೇ ಬಹು ಬಾಜಹೀಂ।**
**ರಾನೀ ಸುಆಸಿನಿ ಬೋಲಿ ಪರಿಛನಿ ಹೇತು ಮಂಗಲ ಸಾಜಹೀಂ॥**

ಇಬ್ಬರ ಪಕ್ಷದವರೂ ಆನಂದೋತ್ಸಾಹದಲ್ಲಿ ಮುಳುಗಿಹೋದರು. ನಗಾರಿಗಳು ಭೋರ್ಗರೆದವು. ದೇವತೆಗಳು ಹರ್ಷಿತರಾಗಿ 'ರಘುಕುಲಮಣಿ ಶ್ರೀರಾಮನಿಗೆ ಜಯವಾಗಲೀ' ಎಂದು ಘೋಷಿಸುತ್ತಾ ಹೂಮಳೆಗರೆದರು. ಈ ಪ್ರಕಾರ ದಿಬ್ಬಣವು ಬರುತ್ತಿರುವುದನ್ನು ಕಂಡು ಅನೇಕ ವಿಧವಾದ ವಾದ್ಯಗಳು ಮೊಳಗಿದವು. ಜನಕನ ರಾಣಿಯಾದ ಸುನಯನಾದೇವಿಯು ಅನೇಕ ಮುತ್ತೈದೆಯರೊಡಗೂಡಿ ಸೀಮಾಂತಪೂಜೆಗಾಗಿ ಮಂಗಳ ದ್ರವ್ಯಗಳನ್ನು ಅಣಿಮಾಡಿಕೊಂಡಳು. (ಛಂದ)

**ದೋ – ಸಜಿ ಆರತೀ ಅನೇಕ ಬಿಧಿ ಮಂಗಲ ಸಕಲ ಸಁವಾರಿ।**
**ಚಲೀಂ ಮುದಿತ ಪರಿಛನಿ ಕರನ ಗಜಗಾಮಿನಿ ಬರ ನಾರಿ॥ ೩೧೭ ॥**

ಅಂದವಾದ ಗಜಗಾಮಿನಿಯರು ಅನೇಕವಿಧವಾದ ಆರತಿಗಳನ್ನೂ, ಮಂಗಳದ್ರವ್ಯಗಳನ್ನೂ ಅಣಿಮಾಡಿಕೊಂಡು, ಆನಂದೋತ್ಸಾಹದಿಂದ ಸೀಮಾಂತಪೂಜೆಗೆ ಹೊರಟರು. (ದೋ/೩೧೭)

**ಚೌ – ಬಿಧುಬದನೀಂ ಸಬ ಸಬ ಮೃಗಲೋಚನಿ । ಸಬ ನಿಜ ತನ ಛಬಿ ರತಿ ಮದು ಮೋಚನಿ ॥**
**ಪಹಿರೇಂ ಬರನ ಬರನ ಬರ ಚೀರಾ । ಸಕಲ ಬಿಭೂಷನ ಸಜೇಂ ಸರೀರಾ ॥ ೧ ॥**
**ಸಕಲ ಸುಮಂಗಲ ಅಂಗ ಬನಾಏಂ । ಕರಹಿಂ ಗಾನ ಕಲಕಂಠಿ ಲಜಾಏಂ ॥**
**ಕಂಕನ ಕಿಂಕಿನಿ ನೂಪುರ ಬಾಜಹಿಂ । ಚಾಲಿ ಬಿಲೋಕಿ ಕಾಮ ಗಜ ಲಾಜಹಿಂ ॥ ೨ ॥**
**ಬಾಜಹಿಂ ಬಾಜನೆ ಬಿಬಿಧ ಪ್ರಕಾರಾ । ನಭ ಅರು ನಗರ ಸುಮಂಗಲಚಾರಾ ॥**
**ಸಚೀ ಸಾರದಾ ರಮಾ ಭವಾನೀ । ಜೇ ಸುರತಿಯ ಸುಚಿ ಸಹಜ ಸಯಾನೀ ॥ ೩ ॥**
**ಕಪಟ ನಾರಿ ಬರ ಬೇಷ ಬನಾಈ । ಮಿಲೀಂ ಸಕಲ ರನಿವಾಸಹಿಂ ಜಾಈ ॥**
**ಕರಹಿಂ ಗಾನ ಕಲ ಮಂಗಲ ಬಾನೀಂ । ಹರಷ ಬಿಬಸ ಸಬ ಕಾಹುಂ ನ ಜಾನೀಂ ॥ ೪ ॥**

ಆ ಎಲ್ಲ ಸ್ತ್ರೀಯರೂ ಚಂದ್ರಮುಖಿಯರೂ, ಮೃಗನಯನೆಯರೂ ಆಗಿದ್ದರು. ಅವರ ತನುಶೋಭೆಯು ರತಿದೇವಿಯ ಸೌಂದರ್ಯವನ್ನು ತಿರಸ್ಕರಿಸುವಂತಿತ್ತು. ಅವರೆಲ್ಲರೂ ರಂಗು-ರಂಗಿನ ಸುಂದರ ಸೀರೆಯನ್ನುಟ್ಟು, ಎಲ್ಲ ವಿಧವಾದ ಆಭರಣಗಳನ್ನು ಧರಿಸಿದ್ದರು. ಅವರು ತಮ್ಮ ಅಂಗಾಂಗಗಳಲ್ಲಿ ಪರಿಮಳ ಮಂಗಳ ದ್ರವ್ಯಗಳನ್ನು ಪೂಸಿಕೊಂಡು, ಕೋಗಿಲೆಯನ್ನು ನಾಚಿಸುವಂತಹ ಮಧುರಕಂಠದಿಂದ ಹಾಡುಗಳನ್ನು ಹಾಡುತ್ತಿದ್ದರು. ಬಳೆಗಳ ಗಲಗಲ ಧ್ವನಿಗಳಿಂದಲೂ, ಕಾಲಂದುಗೆ, ಒಡ್ಯಾಣಗಳ ಕಿರುಗಂಟೆಗಳ ಮಂಜುಳರವದಿಂದ ನಡೆಯುತ್ತಿರುವಾಗ ಮನ್ಮಥನ ಆನೆಯೂ ಕೂಡ ನಾಚಿಕೆಯಿಂದ ತಲೆತಗ್ಗಿಸಿತು. ವಿವಿಧ ಸಂಗೀತ ವಾದ್ಯಗಳ ಗೋಷ್ಠಿಗಳೂ ಅಲ್ಲಲ್ಲಿ ನಡೆಯುತ್ತಿದ್ದವು. ಆಗಸದಲ್ಲಿ ನಗರದಲ್ಲಿ (ಮಿಥಿಲೆಯಲ್ಲಿ) ಆಶೀರ್ವಚನ ಗೀತೆಗಳು ಹಾಡುತ್ತಿದ್ದರು. ಶಚಿದೇವಿಯೂ, ಲಕ್ಷ್ಮೀ, ಸರಸ್ವತಿ, ಪಾರ್ವತಿಯರು ಇತರ ದೇವಾಂಗನೆಯರೊಂದಿಗೆ ಮಾರುವೇಷದಲ್ಲಿ ರಾಣಿವಾಸದಲ್ಲಿ ಸೇರಿಕೊಂಡು, ಮಧುರಸ್ವರದಿಂದ ಮಂಗಳಗೀತಗಳನ್ನು ಹಾಡುತ್ತಿದ್ದರು. ಎಲ್ಲರೂ ಹರ್ಷಾತಿರೇಕದಿಂದ ಇದ್ದರು. ಅದರಿಂದ ಯಾರಿಗೂ ಇವರ ಸುಳಿವು ಸಿಗಲಿಲ್ಲ. (ಚೌ/೧-೪)

**ಛಂ – ಕೋ ಜಾನ ಕೇಹಿ ಆನಂದ ಬಸ ಸಬ ಬ್ರಹ್ಮ ಬರ ಪರಿಛನ ಚಲೀ ।**
**ಕಲ ಗಾನ ಮಧುರ ನಿಸಾನ ಬರಷಹಿಂ ಸುಮನ ಸುರ ಸೋಭಾ ಭಲೀ ॥**
**ಆನಂದಕಂದು ಬಿಲೋಕಿ ದೂಲಹು ಸಕಲ ಹಿಯಂ ಹರಷಿತ ಭಈ ।**
**ಅಂಭೋಜ ಅಂಬಕ ಅಂಬು ಉಮಗಿ ಸುಅಂಗ ಪುಲಕಾವಲಿ ಛಈ ॥**

ಯಾರು ಯಾರನ್ನು ಗುರುತಿಸುವುದು? ಎಲ್ಲರೂ ಆನಂದಪರವಶರಾಗಿದ್ದಾರೆ. ಪರಬ್ರಹ್ಮನ ಅವತಾರವಾದ ಶ್ರೀರಾಮಚಂದ್ರನೇ ಸಾಕ್ಷಾತ್ ಮದುಮಗನು. ಅವನ ವರಪೂಜೆಗಾಗಿ ಎಲ್ಲರೂ ಹೊರಟರು. ಮನೋಹರ ಗೀತಗಳಿಂದ, ಮಧುರದುಂದುಭಿಗಳ ನಾದದಿಂದ, ದೇವತೆಗಳ ಪುಷ್ಪವೃಷ್ಟಿಯಿಂದ ಎಲ್ಲೆಲ್ಲೂ ಹಿಗ್ಗು, ಸಂಭ್ರಮ. ಆನಂದಕಂದನಾದ ಮದುಮಗನನ್ನು ಕಂಡು ಸ್ತ್ರೀಯರೆಲ್ಲರೂ ಹರ್ಷೋಲ್ಲಸಿತರಾದರು. ಅವರ ಕಮಲದಂತಿರುವ ಕಣ್ಣುಗಳಲ್ಲಿ ಪ್ರೇಮಾಶ್ರುಗಳು ಉದುರತೊಡಗಿದವು. ಚೆಲುವಾದ ಶರೀರಗಳು ಪುಳಕಗೊಂಡವು. (ಛಂದ)

**ದೋ – ಜೋ ಸುಖು ಭಾ ಸಿಯ ಮಾತು ಮನ ದೇಖಿ ರಾಮ ಬರ ಬೇಷು ।**
**ಸೋ ನ ಸಕಹಿಂ ಕಹಿ ಕಲಪ ಸತ ಸಹಸ ಸಾರದಾ ಸೇಷು ॥ ೩೧೮ ॥**

ಸೀತಾದೇವಿಯ ತಾಯಿಯಾದ ಸುನಯನಾದೇವಿಯು ವರರೂಪದಲ್ಲಿದ್ದ ಶ್ರೀರಾಮಚಂದ್ರನನ್ನು ನೋಡಿ ಹೊಂದಿದ ಆನಂದವನ್ನು ನೂರುಸಾವಿರ ಸರಸ್ವತಿಯರು ಹಾಗೂ ಆದಿಶೇಷರು ನೂರು ಕಲ್ಪಗಳಲ್ಲಿಯೂ ಕೂಡ ವರ್ಣಿಸಲಾರರು. (ದೋ/೩೧೮)

**ಚೌ – ನಯನ ನೀರು ಹಟಿ ಮಂಗಲ ಜಾನೀ । ಪರಿಛನಿ ಕರಹಿಂ ಮುದಿತ ಮನ ರಾನೀ ॥**
**ಬೇದ ಬಿಹಿತ ಅರು ಕುಲ ಆಚಾರೂ । ಕೀನ್ಹ ಭಲೀ ಬಿಧಿ ಸಬ ಬ್ಯವಹಾರೂ ॥ ೧ ॥**
**ಪಂಚ ಸಬದ ಧುನಿ ಮಂಗಲ ಗಾನಾ । ಪಟ ಪಾಂವಡೇ ಪರಹಿಂ ಬಿಧಿ ನಾನಾ ॥**
**ಕರಿ ಆರತೀ ಅರಘು ತಿನ್ಹ ದೀನ್ಹಾ । ರಾಮ ಗಮನು ಮಂಡಪ ತಬ ಕೀನ್ಹಾ ॥ ೨ ॥**

ದಸರಥು ಸಹಿತ ಸಮಾಜ ಬಿರಾಜೇ। ಬಿಭವ ಬಿಲೋಕಿ ಲೋಕಪತಿ ಲಾಜೇ॥
ಸಮಯ್ ಸಮಯ್ ಸುರ ಬರಷಹಿಂ ಫೂಲಾ। ಸಾಂತಿ ಪಢಹಿಂ ಮಹಿಸುರ ಅನುಕೂಲಾ॥ ೩॥
ನಭ ಅರು ನಗರ ಕೊಲಾಹಲ ಹೋಈ। ಆಪನಿ ಪರ ಕಛು ಸುನಇ ನ ಕೋಈ॥
ಏಹಿ ಬಿಧಿ ರಾಮು ಮಂಡಪಹಿಂ ಆಏ। ಅರಘು ದೇಇ ಆಸನ ಬೈಠಾಏ॥ ೪॥

ಇದು ಮಂಗಳಕರ ಸಂದರ್ಭ, ಕಣ್ಣೀರು ಸುರಿಸಬಾರದು ಎಂದುಕೊಂಡು ರಾಣಿಯು ತನ್ನ ಕಂಬನಿಯನ್ನು ತಡೆದುಕೊಂಡು ಸಂತಸಮನದಿಂದ ಮಹಾದ್ವಾರದ ಬಳಿಗೆ ಬಂದಿರುವ ವರನ ಪೂಜೆಮಾಡಿ ಆರತಿ ಎತ್ತಿದಳು. ರಾಣಿಯು ವೇದವಿಹಿತವಾದ ಹಾಗೂ ಕುಲಾಚಾರಕ್ಕನುಸಾರವಾಗಿ ಎಲ್ಲ ಕಾರ್ಯಗಳನ್ನು ಚೆನ್ನಾಗಿ ನೆರವೇರಿಸಿದಳು. ಪಂಚಶಬ್ದ (ತಂತಿ, ತಾಳ, ಝಾಂಝು, ನಗಾರಿ, ತುರಹಿ (ಕೊಂಬು) ಇವುಗಳ ಶಬ್ದ), ಪಂಚಧ್ವನಿ (ವೇದಧ್ವನಿ, ವಂದಿಧ್ವನಿ, ಜಯಧ್ವನಿ, ಶಂಖಧ್ವನಿ, ಗೀತಧ್ವನಿ) ಮತ್ತು ಮಂಗಳ ಗೀತಗಳು ಕೇಳಿಬರುತ್ತಿದ್ದವು. ನಾನಾ ವಿಧವಾದ ವಸ್ತ್ರಗಳ ನಡೆಮುಡಿ ಹಾಸಿದ್ದವು. ಮಹಾರಾಣಿಯು ಬಾಗಿಲಲ್ಲಿ ಆರತಿ ಎತ್ತಿ, ಅರ್ಘ್ಯ ನೀಡಿದಳು. ಆಗ ಶ್ರೀರಾಮನು ಮಂಟಪದೊಳಗೆ ಪ್ರವೇಶಿಸಿದನು. ದಶರಥನು ತನ್ನ ಪರಿವಾರದೊಂದಿಗೆ ಸಭೆಯಲ್ಲಿ ಆಸೀನನಾದನು. ಅವನ ವೈಭವವನ್ನು ಕಂಡು ಲೋಕಪಾಲಕರೂ ತಲೆ ತಗ್ಗಿಸಿದರು. ಆಗಾಗ ದೇವತೆಗಳು ಪುಷ್ಪವೃಷ್ಟಿಗೈಯ್ಯುತ್ತಿದ್ದರು. ಬ್ರಾಹ್ಮಣೋತ್ತಮರು ಸಮಯಾನುಸಾರ ಶಾಂತಿಪಾಠವನ್ನು ಪಾಡುತ್ತಿದ್ದರು. ಮೇಲೆ ಆಕಾಶದಲ್ಲಿ, ಕೆಳಗೆ ನಗರದಲ್ಲಿ ಆಗುತ್ತಿದ್ದ ಗದ್ದಲದ ಮಧ್ಯದಲ್ಲಿ ಒಬ್ಬರ ಮಾತು ಮತ್ತೊಬ್ಬರಿಗೆ ಕೇಳಿಸುತ್ತಿರಲಿಲ್ಲ. ಈ ಪ್ರಕಾರ ಶ್ರೀರಾಮನು ಕಲ್ಯಾಣಮಂಟಪದೊಳಗೆ ಪ್ರವೇಶಿಸುತ್ತಲೇ ಅವನಿಗೆ ಅರ್ಘ್ಯವನ್ನಿತ್ತು ಉಚಿತಾಸನದಲ್ಲಿ ಕುಳ್ಳಿರಿಸಲಾಯಿತು. (ಚೌ/೧-೪)

ಛಂ— ಬೈಠಾರಿ ಆಸನ ಆರತೀ ಕರಿ ನಿರಖಿ ಬರು ಸುಖು ಪಾವಹೀಂ।
ಮನಿ ಬಸನ ಭೂಷನ ಭೂರಿ ವಾರಹಿಂ ನಾರಿ ಮಂಗಲ ಗಾವಹೀಂ॥
ಬ್ರಹ್ಮಾದಿ ಸುರಬರ ಬಿಪ್ರ ಬೇಷ ಬನಾಇ ಕೌತುಕ ದೇಖಹೀಂ।
ಅವಲೋಕಿ ರಘುಕುಲ ಕಮಲ ರಬಿ ಛಬಿ ಸುಫಲ ಜೀವನ ಲೇಖಹೀಂ॥

ಮದುಮಗನನ್ನು ಆಸನದಲ್ಲಿ ಕುಳ್ಳಿರಿಸಿ, ಆರತಿಯನ್ನೆತ್ತಿ, ಅವನನ್ನು ನೋಡುತ್ತಾ ಸ್ತ್ರೀಯರು ಸಂತೋಷಭರಿತರಾದರು. ಅವರು ರಾಶಿ-ರಾಶಿಯಾಗಿ ನವರತ್ನಗಳನ್ನೂ, ವಸ್ತ್ರಗಳನ್ನೂ, ಒಡವೆಗಳನ್ನೂ ಸಮರ್ಪಿಸಿ, ಸೋಬಾನೆ ಹಾಡುತ್ತಿದ್ದರು. ಬ್ರಹ್ಮಾದಿದೇವತೆಗಳು ಬ್ರಾಹ್ಮಣರ ವೇಷದಲ್ಲಿ ಬಂದು ಅಲ್ಲಿಯ ಕೌತುಕವನ್ನು ವೀಕ್ಷಿಸುತ್ತಿದ್ದರು. ಅವರು ರಘುಕುಲ ಕಮಲರವಿಯಾದ ಶ್ರೀರಾಮಚಂದ್ರನ ಸೌಂದರ್ಯವನ್ನು ಕಂಡು, ತಮ್ಮ ಬದುಕು ಸಾರ್ಥಕವಾಯಿತು ಎಂದುಕೊಂಡರು. (ಛಂದ)

ದೋ— ನಾಊ ಬಾರೀ ಭಾಟ ನಟ ರಾಮ ನಿಛಾವರಿ ಪಾಇ।
ಮುದಿತ ಅಸೀಸಹಿಂ ನಾಇ ಸಿರ ಹರಷು ನ ಹೃದಯ್ ಸಮಾಇ॥ ೩೧೯॥

ಮಂಗಳವಾದ್ಯದವರು, ದೀವಟಿಗೆಯವರು, ವಂದಿ-ಮಾಗಧರು, ನಟರು, ಗಾಯಕರು ಶ್ರೀರಾಮನ ಪಕ್ಷದವರಿಂದ ಅಮೂಲ್ಯವಾದ ಕಾಣಿಕೆಗಳನ್ನು ಸ್ವೀಕರಿಸಿ ಹೃದಯದಲ್ಲಿ ಅಮಿತ ಹರ್ಷೋಲ್ಲಾಸವನ್ನು ಪಡೆದು ಆನಂದದಿಂದ ಹರಸಿದರು. (ದೋ/೩೧೯)

ಚೌ— ಮಿಲೇ ಜನಕು ದಸರಥು ಅತಿ ಪ್ರೀತೀಂ। ಕರಿ ಬೈದಿಕ ಲೌಕಿಕ ಸಬ ರೀತೀಂ॥
ಮಿಲತ ಮಹಾ ದೋಉ ರಾಜ ಬಿರಾಜೇ। ಉಪಮಾ ಖೋಜಿ ಖೋಜಿ ಕಬಿ ಲಾಜೇ॥ ೧॥
ಲಹೀ ನ ಕತಹುँ ಹಾರಿ ಹಿಯ್ ಮಾನೀ। ಇನ್ಹ ಸಮ ಏಇ ಉಪಮಾ ಉರ ಆನೀ॥
ಸಾಮಧ ದೇಖಿ ದೇವ ಅನುರಾಗೇ। ಸುಮನ ಬರಷಿ ಜಸು ಗಾವನ ಲಾಗೇ॥ ೨॥
ಜಗು ಬಿರಂಚಿ ಉಪಜಾವಾ ಜಬ ತೇಂ। ದೇಖೇ ಸುನೇ ಬ್ಯಾಹ ಬಹು ತಬ ತೇಂ॥
ಸಕಲ ಭಾಂತಿ ಸಮ ಸಾಜು ಸಮಾಜೂ। ಸಮ ಸಮಧೀ ದೇಖೇ ಹಮ ಆಜೂ॥ ೩॥
ದೇವ ಗಿರಾ ಸುನಿ ಸುಂದರ ಸಾಂಚೀ। ಪ್ರೀತಿ ಅಲೌಕಿಕ ದುಹು ದಿಸಿ ಮಾಚೀ॥
ದೇತ ಪಾಂವಡೇ ಅರಘು ಸುಹಾಏ। ಸಾದರ ಜನಕು ಮಂಡಪಹಿಂ ಲ್ಯಾಏ॥ ೪॥

ಲೌಕಿಕ, ವೈದಿಕ ಎಲ್ಲ ವಿಧಿಗಳನ್ನು ಪೂರೈಸಿದ ಬಳಿಕ ಜನಕನು ಮತ್ತು ದಶರಥನು ಪ್ರೇಮಾನುರಾಗದಿಂದ ಪರಸ್ಪರ ಆಲಿಂಗಿಸಿಕೊಂಡರು. ಅವರಿಬ್ಬರ ಮಿಳನವು ಅತ್ಯಂತ ಮನೋಜ್ಞವಾಗಿತ್ತು. ಅದಕ್ಕೆ ತಕ್ಕ ಉಪಮೆಯನ್ನು ತಡಕಾಡಿ ಕವಿಗಳು

ಬಳಲಿದರು. ಕೊನೆಗೆ ಎಲ್ಲೂ ಉಪಮೆ ದೊರೆಯದೆ ಸೋತು ಕೊನೆಗೆ ಅವರು ಮನಸ್ಸಿನಲ್ಲಿ 'ಅವರಿಗೆ ಅವರೇ ಸಾಟಿ' ಎಂದು ವರ್ಣಿಸಿದರು. ಬೀಗರಿಬ್ಬರ ಸಮಾಗಮವನ್ನು ಕಂಡು, ದೇವತೆಗಳು ಆನಂದದಿಂದ ಹೂಮಳೆಗರೆದು ಅವರ ಕೀರ್ತಿಗಾನ ಮಾಡತೊಡಗಿದರು. ಇವರು ತಮ್ಮ-ತಮ್ಮಲ್ಲೇ ಇಂತು ಅಂದುಕೊಂಡರು – ''ಬ್ರಹ್ಮನು ಈ ಸೃಷ್ಟಿಯನ್ನು ಪ್ರಾರಂಭಿಸಿದಂದಿನಿಂದ ಇಂದಿನವರೆಗೆ ನಾವು ಬೇಕಾದಷ್ಟು ಮದುವೆಗಳನ್ನು ನೋಡಿದ್ದೇವೆ, ಕೇಳಿದ್ದೇವೆ. ಆದರೆ ಎಲ್ಲ ರೀತಿಯಿಂದಲೂ ವೈಭವೋಪೇತವಾದ ವಿವಾಹವನ್ನು, ಎಲ್ಲ ವಿಧದಿಂದ ಸಮಾನರಾದ ಬೀಗರನ್ನು ಇಂದೇ ನೋಡುತ್ತಿದ್ದೇವೆ.'' ದೇವತೆಗಳ ಸತ್ಯಸುಂದರ ವಾಣಿಯನ್ನು ಕೇಳಿ, ಎರಡೂ ಪಕ್ಷದವರು ಅಲೌಕಿಕ ಸುಖಾನಂದವನ್ನು ಹೊಂದಿದರು. ಮನೋಹರವಾದ ಅಮೂಲ್ಯವಸ್ತ್ರಗಳನ್ನು ನಡೆಮುಡಿಹಾಸಿ, ಅರ್ಘ್ಯವನ್ನು ನೀಡಿ, ಜನಕನು ದಶರಥನನ್ನು ಸಕಲ ರಾಜಮರ್ಯಾದೆಗಳಿಂದ ಕಲ್ಯಾಣಮಂಟಪದತ್ತ ಕರೆದೊಯ್ದನು. (ಚೌ/೧-೪)

**ಛಂ – ಮಂಡಪು ಬಿಲೋಕಿ ಬಿಚಿತ್ರ ರಚನಾಁ ರುಚಿರತಾಁ ಮುನಿ ಮನ ಹರೇ।**
**ನಿಜ ಪಾನಿ ಜನಕ ಸುಜಾನ ಸಬ ಕಹುಁ ಆನಿ ಸಿಂಘಾಸನ ಧರೇ ॥**
**ಕುಲ ಇಷ್ಟ ಸರಿಸ ಬಸಿಷ್ಟ ಪೂಜೇ ಬಿನಯ ಕರಿ ಆಸಿಷ ಲಹೀ।**
**ಕೌಸಿಕಹಿ ಪೂಜತ ಪರಮ ಪ್ರೀತಿ ಕಿ ರೀತಿ ತೌ ನ ಪರೈ ಕಹೀ ॥**

ಮಂಟಪದ ರಚನಾ ವೈಚಿತ್ರ್ಯವನ್ನೂ, ಸೌಂದರ್ಯವನ್ನೂ ಕಂಡು ಮುನಿಗಳ ಮನಸ್ಸು ಕೂಡ ಮಾರುಹೋಯಿತು. ಸುಜ್ಞಾನಿಯಾದ ಜನಕನೇ ಸ್ವತಃ ತನ್ನ ಕೈಗಳಿಂದ ಎಲ್ಲರಿಗೆ ಆಸನವನ್ನು ನೀಡಿದನು. ಅವನು ತನ್ನ ಕುಲದೇವತೆಯಂತಿದ್ದ ವಸಿಷ್ಠರ ಪಾದಪೂಜೆಗೈದು, ಅವರಿಂದ ಆಶೀರ್ವಾದವನ್ನು ಪಡೆದನು. ವಿಶ್ವಾಮಿತ್ರರ ಪೂಜೆ ಮಾಡುವಾಗ ಅವನು ಪ್ರಕಟಿಸಿದ ಭಕ್ತಿ ವಿಶ್ವಾಸಗಳು ಅಪೂರ್ವವಾದವು. (ಛಂದ)

**ದೋ – ಬಾಮದೇವ ಆದಿಕ ರಿಷಯ ಪೂಜೇ ಮುದಿತ ಮಹೀಸ ।**
**ದಿಏ ದಿಬ್ಯ ಆಸನ ಸಬಹಿ ಸಬ ಸನ ಲಹೀ ಅಸೀಸ ॥ ೩೨೦ ॥**

ಇದೇ ರೀತಿ ಅರಸನು ವಾಮದೇವನೇ ಮೊದಲಾದ ಋಷಿಗಳನ್ನು ಹರ್ಷದಿಂದ ಪೂಜಿಸಿದನು. ಎಲ್ಲರಿಗೂ ದಿವ್ಯಾಸನವನ್ನಿತ್ತು, ಅವರಿಂದ ಆಶೀರ್ವಾದವನ್ನು ಪಡೆದುಕೊಂಡನು. (ದೋ/೩೨೦)

**ಚೌ – ಬಹುರಿ ಕೀನ್ಹಿ ಕೋಸಲಪತಿ ಪೂಜಾ। ಜಾನಿ ಈಸ ಸಮ ಭಾಉ ನ ದೂಜಾ ॥**
**ಕೀನ್ಹಿ ಜೋರಿ ಕರ ಬಿನಯ ಬಡಾಈ। ಕಹಿ ನಿಜ ಭಾಗ್ಯ ಬಿಭವ ಬಹುತಾಈ ॥ ೧ ॥**
**ಪೂಜೇ ಭೂಪತಿ ಸಕಲ ಬರಾತೀ। ಸಮಧಿ ಸಮ ಸಾದರ ಸಬ ಭಾಁತೀ ॥**
**ಆಸನ ಉಚಿತ ದಿಏ ಸಬ ಕಾಹೂ। ಕಹೌಁ ಕಾಹ ಮುಖ ಏಕ ಉಛಾಹೂ ॥ ೨ ॥**
**ಸಕಲ ಬರಾತ ಜನಕ ಸನಮಾನೀ। ದಾನ ಮಾನ ಬಿನತೀ ಬರ ಬಾನೀ ॥**
**ಬಿಧಿ ಹರಿ ಹರು ದಿಸಿಪತಿ ದಿನರಾಊ। ಜೇ ಜಾನಹಿಁ ರಘುಬೀರ ಪ್ರಭಾಊ ॥ ೩ ॥**
**ಕಪಟ ಬಿಪ್ರ ಬರ ಬೇಷ ಬನಾಏಁ। ಕೌತುಕ ದೇಖಹಿಁ ಅತಿ ಸಚು ಪಾಏಁ ॥**
**ಪೂಜೇ ಜನಕ ದೇವ ಸಮ ಜಾನೇಁ। ದಿಏ ಸುಆಸನ ಬಿನು ಪಹಿಚಾನೇಁ ॥ ೪ ॥**

ಬಳಿಕ ಜನಕನು ಕೋಸಲಾಧಿಪತಿಯಾದ ದಶರಥ ಮಹಾರಾಜನನ್ನು ಸಾಕ್ಷಾತ್ ಪರಮೇಶ್ವರನೆಂದು ಬಾವಿಸಿ ಪೂಜಿಸಿದನು. ಅನಂತರ ಆತನ ಜೊತೆ ಸಂಬಂಧ ಬೆಳೆದುದರಿಂದ ಉಂಟಾದ ತನ್ನ ಭಾಗ್ಯ, ವೈಭವಗಳನ್ನು ವೃದ್ಧಿಯನ್ನು ಕೊಂಡಾಡಿ ಕೈ ಜೋಡಿಸಿ ವಿಜ್ಞಾಪಿಸಿಕೊಂಡನು. ಇದೇ ರೀತಿ ಅವನು ಎಲ್ಲ ದಿಬ್ಬಣಿಗರನ್ನು ದಶರಥ ಮಹಾರಾಜನಂತೆಯೇ ಆದರದಿಂದ ಕಂಡು ಪೂಜಿಸಿ, ಅವರಿಗೆ ಉಚಿತಾಸನಗಳನ್ನು ನೀಡಿದನು. ಅವನ ಪ್ರೇಮೋತ್ಸಾಹವನ್ನು ತುಲಸೀದಾಸನು ಒಂದು ಮುಖದಿಂದ ಎಂತು ವರ್ಣಿಸಿಯಾನು? ಜನಕ ಮಹಾರಾಜನು ದಿಬ್ಬಣದವರೆಲ್ಲರನ್ನೂ ದಾನ-ಮಾನ, ಸಮ್ಮಾನ, ನಯ-ವಿನಯ ಹಾಗೂ ಸದ್ವಚನಗಳಿಂದ ಸತ್ಕರಿಸಿದನು. ಶ್ರೀರಘುನಾಥನ ಪ್ರಭಾವವನ್ನು ಅರಿತಿರುವ ಬ್ರಹ್ಮಾ, ವಿಷ್ಣು, ಮಹೇಶ್ವರರೂ, ದಿಕ್ಪಾಲಕರೂ, ಸೂರ್ಯನೂ ಸೇರಿ ಎಲ್ಲರೂ ಬ್ರಾಹ್ಮಣರಂತೆ ಮಾರುವೇಷದಿಂದ ಬಂದು ಈ ವಿವಾಹಲೀಲೆಯನ್ನು ನೋಡುತ್ತಿದ್ದರು. ಜನಕನು ಅವರ ಗುರುತು ಹತ್ತದಿದ್ದರೂ, ಅವರನ್ನು ದೇವತೆಗಳೆಂದೇ ಬಗೆದು, ಪೂಜಿಸಿ, ಅವರಿಗೆ ದಿವ್ಯಾಸನಗಳನ್ನು ಕೊಟ್ಟನು. (ಚೌ/೧-೪)

**ಛಂ – ಪಹಿಚಾನ ಕೋ ಕೆಹಿ ಜಾನ ಸಬಹಿ ಅಪಾನ ಸುಧಿ ಭೋರೀ ಭಈ।**
**ಆನಂದ ಕಂದು ಬಿಲೋಕಿ ದೂಲಹು ಉಭಯ ದಿಸಿ ಆನँದ ಮಈ॥**
**ಸುರ ಲಖೇ ರಾಮು ಸುಜಾನ ಪೂಜೇ ಮಾನಸಿಕ ಆಸನ ದಏ।**
**ಅವಲೋಕಿ ಸೀಲು ಸುಭಾಉ ಪ್ರಭು ಕೋ ಬಿಬುಧ ಮನ ಪ್ರಮುದಿತ ಭಏ॥**

ಯಾರು ಯಾರನ್ನು ಗುರುತಿಸುವುದು? ಎಲ್ಲರೂ ತಮ್ಮನ್ನೇ ತಾವು ಮರೆತರು. ಆನಂದಕಂದನಾದ ಮದುವಣಿಗನನ್ನು ಕಂಡು ಎರಡೂ ಕಡೆಯವರು ಆನಂದದಲ್ಲಿ ಮುಳುಗಿಹೋದರು. ಸರ್ವಜ್ಞನಾದ ಶ್ರೀರಾಮಚಂದ್ರನು ದೇವತೆಗಳನ್ನು ಗುರುತಿಸಿ ಅವರಿಗೆ ಮಾನಸಿಕ ಪೂಜೆ ಸಲ್ಲಿಸಿ, ದಿವ್ಯಆಸನಗಳನ್ನು ನೀಡಿದನು. ಪ್ರಭುವಿನ ಸೌಶೀಲ್ಯವನ್ನು ಕಂಡು ದೇವತೆಗಳು ಆನಂದಿತರಾದರು. (ಛಂದ)

**ದೋ – ರಾಮಚಂದ್ರ ಮುಖ ಚಂದ್ರ ಛಬಿ ಲೋಚನ ಚಾರು ಚಕೋರ।**
**ಕರತ ಪಾನ ಸಾದರ ಸಕಲ ಪ್ರೇಮು ಪ್ರಮೋದು ನ ಥೋರ॥೩೨೧॥**

ಎಲ್ಲರ ನೇತ್ರಚಕೋರಗಳು ಅಪೂರ್ವವಾದ, ವರ್ಣನಾತೀತವಾದ ಶ್ರೀರಾಮಚಂದ್ರನ ಮುಖಚಂದಿರನನ್ನು ಪಾನಮಾಡುತ್ತಿದ್ದವು. ಅವರ ಪ್ರೇಮಾನುರಾಗಗಳು ನಿರುಪಮಾನ. (ದೋ/೩೨೧)

**ಚೌ – ಸಮಉ ಬಿಲೋಕಿ ಬಸಿಷ್ಠ ಬೊಲಾಏ। ಸಾದರ ಸತಾನಂದು ಸುನಿ ಆಏ॥**
**ಬೇಗಿ ಕುಅँರಿ ಅಬ ಆನಹು ಜಾಈ। ಚಲೇ ಮುದಿತ ಮುನಿ ಆಯಸು ಪಾಈ॥೧॥**
**ರಾನೀ ಸುನಿ ಉಪರೋಹಿತ ಬಾನೀ। ಪ್ರಮುದಿತ ಸಖಿನ್ಹ ಸಮೇತ ಸಯಾನೀ॥**
**ಬಿಪ್ರ ಬಧೂ ಕುಲಬೃದ್ಧ ಬೊಲಾಈं। ಕರಿ ಕುಲ ರೀತಿ ಸುಮಂಗಲ ಗಾಈं॥೨॥**
**ನಾರಿ ಬೇಷ ಜೇ ಸುರ ಬರ ಬಾಮಾ। ಸಕಲ ಸುಭಾಯँ ಸುಂದರೀ ಸ್ಯಾಮಾ॥**
**ತಿನ್ಹಹಿ ದೇಖಿ ಸುಖು ಪಾವಹिं ನಾರೀं। ಬಿನು ಪಹಿಚಾನಿ ಪ್ರಾನಹು ತೇ ಪ್ಯಾರೀं॥೩॥**
**ಬಾರ ಬಾರ ಸನಮಾನಹिं ರಾನೀ। ಉಮಾ ರಮಾ ಸಾರದ ಸಮ ಜಾನೀ॥**
**ಸೀಯ ಸँವಾರಿ ಸಮಾಜು ಬನಾಈ। ಮುದಿತ ಮಂಡಪಹिं ಚಲೀं ಲವಾಈ॥೪॥**

ವಿವಾಹ ಸಮಯ ಸಮೀಪಿಸಿದುದನ್ನು ನೋಡಿ ವಸಿಷ್ಠರು ಶತಾನಂದರನ್ನು ಆದರದಿಂದ ಬರಮಾಡಿಕೊಂಡು ''ಬೇಗನೇ ರಾಜಕುಮಾರಿಯನ್ನು ಕರೆದು ತನ್ನಿ''ರೆಂದೂ ಹೇಳಿದರು. ಮುನಿಯ ಆಜ್ಞೆಯನ್ನು ಪಡೆದು ಅವರು ಹರ್ಷಚಿತ್ತರಾಗಿ ತೆರಳಿದರು. ಪುರೋಹಿತರ ಸಂದೇಶವನ್ನು ಕೇಳಿ ಸಖಿಯರ ಸಮೇತ ರಾಣಿಯು ಅತ್ಯಂತ ಪ್ರಸನ್ನಳಾದಳು. ವಿಪ್ರಸುಮಂಗಲಿಯರು ಹಾಗೂ ತಮ್ಮ ಕುಲದ ಹಿರಿಯ ಮುತ್ತೈದೆಯರನ್ನು, ಕರೆದು, ಕುಲಾಚಾರಗಳನ್ನು ಆಚರಿಸಿ, ಮಂಗಳಗೀತೆಗಳನ್ನು ಹಾಡಿದರು. ಮನುಷ್ಯವೇಷದಲ್ಲಿದ್ದ ಶ್ರೇಷ್ಠ ದೇವಾಂಗನೆಯರು ಸಹಜವಾಗಿಯೇ ಸುಂದರಿಯರೂ, ಷೋಡಶಿಯರೂ ಆಗಿದ್ದರು. ಅವರನ್ನು ಕಂಡು ರಾಣಿವಾಸದ ಸ್ತ್ರೀಯರಿಗೆ ಎಲ್ಲಿಲ್ಲದ ಸುಖ. ಗುರುತಿಸದಿದ್ದರೂ ಅವರು ಎಲ್ಲರಿಗೂ ಪ್ರಾಣಪ್ರಿಯರಾಗಿದ್ದರು. ಅವರನ್ನು ಉಮೆ, ರಮೆ, ಶಾರದೆ ಇವರಿಗೆ ಸಮಾನರೆಂದು ತಿಳಿದು ಮಹಾರಾಣಿಯು ಮತ್ತೆ-ಮತ್ತೆ ಗೌರವ ಮರ್ಯಾದೆಗಳನ್ನು ಕೊಡಮಾಡಿದಳು. ರಾಣಿವಾಸದ ಸ್ತ್ರೀಯರು ಹಾಗೂ ಸಖಿಯರು ಸೀತೆಯನ್ನು ಸಿಂಗರಿಸಿ ಗುಂಪುಕಟ್ಟಿಕೊಂಡು ಹರ್ಷದಿಂದ ಕಲ್ಯಾಣಮಂಟಪದತ್ತ ಕರೆತಂದರು. (ಚೌ/೧-೪)

**ಛಂ – ಚಲಿ ಲ್ಯಾಇ ಸೀತಹಿ ಸಖೀं ಸಾದರ ಸಜಿ ಸುಮಂಗಲ ಭಾಮಿನೀं।**
**ನವಸಪ್ತ ಸಾಜೇं ಸುಂದರೀं ಸಬ ಮತ್ತ ಕುಂಜರ ಗಾಮಿನೀं॥**
**ಕಲ ಗಾನ ಸುನಿ ಮುನಿ ಧ್ಯಾನ ತ್ಯಾಗಹिं ಕಾಮ ಕೋಕಿಲ ಲಾಜಹೀं।**
**ಮಂಜೀರ ನೂಪುರ ಕಲಿತ ಕಂಕನ ತಾಲ ಗತಿ ಬರ ಬಾಜಹೀं॥**

ಸುಂದರವಾದ ಮಂಗಳಕರ ವಸ್ತುಗಳನ್ನು ಅಣಿಮಾಡಿಕೊಂಡು, ರಾಣೀವಾಸದ ಸ್ತ್ರೀಯರೂ, ಸಖಿಯರೂ ಆದರದಿಂದ ಸೀತೆಯನ್ನು ಕರೆತಂದರು. ಅವರೆಲ್ಲ ಚೆಲುವೆಯರು ಷೋಡಶಶೃಂಗಾರ ಮಾಡಿಕೊಂಡು ಮತ್ತಗಜಗಮನದಂತೆ ನಡೆದರು. ಅವರ ಮಧುರಗಾನವನ್ನು ಕೇಳಿ, ಮುನಿಗಳ ಧ್ಯಾನ ಭಂಗವಾಯಿತು; ಕಾಮದೇವನ ಕೋಗಿಲೆಗಳು ಲಜ್ಜೆಯಿಂದ ತಲೆತಗ್ಗಿಸಿದವು. ಅವರ ನೂಪುರಗಳೂ, ಕಂಕಣಗಳೂ, ಸೊಂಟದ ಕಿರುಗೆಜ್ಜೆಗಳು ತಾಳಕ್ಕೆ ತಕ್ಕಂತೆ ಉಲಿಯುತ್ತಿದ್ದವು. (ಛಂದ)

**ದೋ – ಸೋಹತಿ ಬನಿತಾ ಬೃಂದ ಮಹುঁ ಸಹಜ ಸುಹಾವನಿ ಸೀಯ ।**
**ಛಬಿ ಲಲನಾ ಗನ ಮಧ್ಯ ಜನು ಸುಷಮಾ ತಿಯ ಕಮನೀಯ ॥ ೩೨೨ ॥**

ಸುಂದರೀಮಣಿಗಳ ನಡುವೆ ಸಹಜವಾಗಿಯೇ ಸುಂದರಿಯಾದ ಸೀತಾದೇವಿಯು ಮೂರ್ತೀಭವಿಸಿದ ಸೌಂದರ್ಯರಾಶಿಯಂತೆ ಕಂಗೊಳಿಸಿದಳು. (ದೋ/೩೨೨)

**ಚೌ – ಸಿಯ ಸುಂದರತಾ ಬರನಿ ನ ಜಾಈ । ಲಘು ಮತಿ ಬಹುತ ಮನೋಹರತಾಈ ॥**
**ಆವತ ದೀಖಿ ಬರಾತಿನ್ಹ ಸೀತಾ । ರೂಪ ರಾಸಿ ಸಬ ಭಾঁತಿ ಪುನೀತಾ ॥ ೧ ॥**
**ಸಬಹಿ ಮನಹಿঁ ಮನ ಕಿಏ ಪ್ರನಾಮಾ । ದೇಖಿ ರಾಮ ಭಏ ಪೂರನಕಾಮಾ ॥**
**ಹರಷೇ ದಸರಥ ಸುತನ್ಹ ಸಮೇತಾ । ಕಹಿ ನ ಜಾಇ ಉರ ಆನঁದು ಜೇತಾ ॥ ೨ ॥**
**ಸುರ ಪ್ರನಾಮು ಕರಿ ಬರಿಸಹಿঁ ಫೂಲಾ । ಮುನಿ ಅಸೀಸ ಧುನಿ ಮಂಗಲ ಮೂಲಾ ॥**
**ಗಾನ ನಿಸಾನ ಕೋಲಾಹಲು ಭಾರೀ । ಪ್ರೇಮ ಪ್ರಮೋದ ಮಗನ ನರ ನಾರೀ ॥ ೩ ॥**
**ಏಹಿ ಬಿಧಿ ಸೀಯ ಮಂಡಪಹಿঁ ಆಈ । ಪ್ರಮುದಿತ ಸಾಂತಿ ಪಢಹಿঁ ಮುನಿರಾಈ ॥**
**ತೇಹಿ ಅವಸರ ಕರ ಬಿಧಿ ಬ್ಯವಹಾರೂ । ದುಹುঁ ಕುಲಗುರ ಸಬ ಕೀನ್ಹ ಅಚಾರೂ ॥ ೪ ॥**

ಸೀತಾದೇವಿಯ ಸೌಂದರ್ಯವೈಭವಗಳನ್ನು ವರ್ಣಿಸಲು ನನ್ನ ಬುದ್ಧಿಯು ಕಿರಿದು. ಅವಳ ಚೆಲುವೋ ಅತ್ಯಂತ ಹಿರಿದು. ಅವಳು ನಡೆದುಕೊಂಡು ಬರುತ್ತಿರುವಾಗ ನೋಡಿದ ದಿಬ್ಬಣಿಗರು ಒಂದು ಸೌಂದರ್ಯದ ತೇಜಃಪುಂಜವೇ ನಡೆದುಬರುತ್ತಿರುವಂತೆ ಭಾವಿಸಿದರು. ಅವರೆಲ್ಲರೂ ಮನಸ್ಸಿನಲ್ಲೇ ಅವಳಿಗೆ ಮಣಿದರು. ಶ್ರೀರಾಮಚಂದ್ರನನ್ನು ನೋಡಿದ ಮೇಲಂತೂ ಎಲ್ಲರೂ ಪೂರ್ಣಕಾಮ (ಕೃತಕೃತ್ಯ)ರಾದರು. ದಶರಥ ಮಹಾರಾಜರು ಪುತ್ರಸಮೇತ ಹರ್ಷಿತರಾದರು. ಅವನ ಹೃದಯದಲ್ಲಿ ತುಂಬಿದ್ದ ಆನಂದವು ಮಾತಿಗೆ ನಿಲುಕದಂತಹುದು. ದೇವತೆಗಳು ಪ್ರಣಾಮಗೈಯ್ಯುತ್ತಾ ಹೂಮಳೆಗರೆಯುತ್ತಿದ್ದರು. ಮಂಗಳಮೂಲವಾದ ಮುನಿಗಳ ಆಶೀರ್ವಾದಗಳು ಕೇಳಿ ಬರುತ್ತಿದ್ದವು. ವನಿತೆಯರ ಹಾಡುಗಳಿಂದ, ನಗಾರಿಯೇ ಮೊದಲಾದ ವಾದ್ಯಗಳ ಶಬ್ದದಿಂದ ಎಲ್ಲೆಡೆ ಗದ್ದಲವೇ ಗದ್ದಲವೆದ್ದಿತು. ಎಲ್ಲ ನರನಾರಿಯರೂ ಪ್ರೇಮಾನಂದದಲ್ಲಿ ಮಗ್ನರಾದರು. ಈ ರೀತಿ ಸೀತಾದೇವಿಯು ಕಲ್ಯಾಣಮಂಟಪಕ್ಕೆ ಬಿಜಯಂಗೈಯ್ದಳು. ಮುನೀಶ್ವರರು ಹರ್ಷಿತರಾಗಿ ಶಾಂತಿಮಂತ್ರ ಪಠಣಮಾಡುತ್ತಿದ್ದರು. ಕುಲಗುರುಗಳಾದ ವಸಿಷ್ಠರೂ, ಶತಾನಂದರೂ ಉಭಯಕುಲಾಚಾರಗಳಿಗನುಸಾರವಾಗಿ ಎಲ್ಲ ವಿಧಿವಿಧಾನಗಳನ್ನು ನಡೆಸಿದರು. (ಚೌ/೧-೪)

**ಛಂ – ಆಚಾರು ಕರಿ ಗುರ ಗೌರಿ ಗನಪತಿ ಮುದಿತ ಬಿಪ್ರ ಪುಜಾವಹೀঁ ।**
**ಸುರ ಪ್ರಗಟಿ ಪೂಜಾ ಲೇಹಿঁ ದೇಹಿঁ ಅಸೀಸ ಅತಿ ಸುಖು ಪಾವಹೀঁ ॥**
**ಮಧುಪರ್ಕ ಮಂಗಲ ದ್ರಬ್ಯ ಜೋ ಜೆಹಿ ಸಮಯ ಮುನಿ ಮನ ಮಹುঁ ಚಹೈঁ ।**
**ಭರೆ ಕನಕ ಕೋಪರ ಕಲಸ ಸೋ ತಬ ಲಿಏಹಿঁ ಪರಿಚಾರಕ ರಹೈঁ ॥ ೧ ॥**
**ಕುಲ ರೀತಿ ಪ್ರೀತಿ ಸಮೇತ ರಬಿ ಕಹಿ ದೇತ ಸಬು ಸಾದರ ಕಿಯೋ ।**
**ಏಹಿ ಭಾঁತಿ ದೇವ ಪುಜಾಇ ಸೀತಹಿ ಸುಭಗ ಸಿಂಘಾಸನು ದಿಯೋ ॥**
**ಸಿಯ ರಾಮ ಅವಲೋಕನಿ ಪರಸಪರ ಪ್ರೇಮು ಕಾಹು ನ ಲಖಿ ಪರೈ ।**
**ಮನ ಬುದ್ಧಿ ಬರ ಬಾನೀ ಅಗೋಚರ ಪ್ರಗಟ ಕಬಿ ಕೈಸೇঁ ಕರೈ ॥ ೨ ॥**

ವಂಶ ಸಂಪ್ರದಾಯಗಳನ್ನೆಲ್ಲ ಆಚರಿಸಿ, ಗುರುಗಳು ಪ್ರಸನ್ನರಾಗಿ ಬ್ರಾಹ್ಮಣರ ಮೂಲಕ ಗೌರೀ, ಗಣೇಶರ ಪೂಜೆಗಳನ್ನು ನಡೆಸಿದರು. ದೇವತೆಗಳು ಅವರ ಪೂಜೆಯನ್ನು ಸ್ವತಃ ಸ್ವೀಕರಿಸಿ, ಆನಂದಿತರಾಗಿ, ಆಶೀರ್ವದಿಸುತ್ತಿದ್ದರು. ಮಧುಪರ್ಕವೇ ಮೊದಲಾದ ಯಾವುದೇ ಮಂಗಳವಸ್ತುಗಳನ್ನು ಮುನಿಗಳು ಮನಸ್ಸಿನಲ್ಲಿ ಬಯಸಿದಾಕ್ಷಣ, ಸೇವಕರು ಚಿನ್ನದ ತಟ್ಟೆಗಳಲ್ಲಿ, ಕಲಶಗಳಲ್ಲಿ ತುಂಬಿ ತಂದು ಅಣಿಗೈಯ್ಯುತ್ತಿದ್ದರು. ರಘುವಂಶದ ಮೂಲಪುರುಷನಾದ ಸೂರ್ಯನೇ ಪ್ರೇಮದಿಂದ ತನ್ನ ಕುಲದ ರೀತಿಗಳನ್ನು ತಿಳಿಸುತ್ತಿದ್ದನು. ಅದರಂತೆ ಎಲ್ಲವನ್ನೂ ಆದರದಿಂದ ಮಾಡುತ್ತಿದ್ದರು. ಈ ವಿಧವಾಗಿ ಬ್ರಾಹ್ಮಣರು ಶ್ರೀರಾಮನಿಂದ ದೇವತೆಗಳ ಪೂಜೆಮಾಡಿಸಿದರು. ಬಳಿಕ ಮುನಿಗಳು ಸೀತೆಯನ್ನು ಸುಂದರವಾದ ಸಿಂಹಾಸನದಲ್ಲಿ

ಕುಳ್ಳಿರಿಸಿದರು. ಶ್ರೀಸೀತಾರಾಮರು ಪರಸ್ಪರ ನೋಡಿಕೊಂಡಾಗ ಅವರ ಸನಾತನ ಪ್ರೇಮಭಾವಗಳು ಯಾರ ಬುದ್ಧಿಗೂ ನಿಲುಕದಂತಿತ್ತು. (ಶ್ರೀಸೀತಾರಾಮರ ಪರಸ್ಪರ ಪ್ರೇಮವು ಚೇತನವು. ಬುದ್ಧಿಯು ಜಡ. ಚೇತನ ತತ್ತ್ವವನ್ನು ಜಡವಾದ ಬುದ್ಧಿಯು ಗ್ರಹಿಸದು, ಚೇತನವೇ ಗ್ರಹಿಸಬಲ್ಲದು. ''ಯತೋವಾಚೋ ನಿವರ್ತಂತೇ ಅಪ್ರಾಪ್ಯಮನಸಾಸಹ'' ಎಂದಲ್ಲವೇ ಶ್ರುತಿಪ್ರಮಾಣವು.) (ಛಂ/೧-೨)

**ದೋ – ಹೋಮ ಸಮಯ ತನು ಧರಿ ಅನಲು ಅತಿ ಸುಖ ಆಹುತಿ ಲೇಹಿಂ।**
**ಬಿಪ್ರ ಬೇಷ ಧರಿ ಬೇದ ಸಬ ಕಹಿ ಬಿಬಾಹ ಬಿಧಿ ದೇಹಿಂ॥ ೩೨೩ ॥**

ಹವನದ ವೇಳೆಯಲ್ಲಿ ಸಾಕ್ಷಾತ್ ಯಜ್ಞೇಶ್ವರನೇ ಪ್ರತ್ಯಕ್ಷನಾಗಿ ಆಹುತಿಯನ್ನು ಸ್ವೀಕರಿಸಿದನು. ವೇದಗಳೆಲ್ಲವೂ ವಿಪ್ರವೇಷದಿಂದ ಬಂದು ವಿವಾಹವಿಧಿಗಳನ್ನು ತಿಳಿಸುತ್ತಿದ್ದವು. (ದೋ/೩೨೩)

**ಚೌ – ಜನಕ ಪಾಟಮಹಿಷೀ ಜಗ ಜಾನೀ। ಸೀಯ ಮಾತು ಕಿಮಿ ಜಾಇ ಬಖಾನೀ॥**
**ಸುಜಸು ಸುಕೃತ ಸುಖ ಸುಂದರತಾಈ। ಸಬ ಸಮೇಟಿ ಬಿಧಿ ರಚೀ ಬನಾಈ ॥ ೧ ॥**
**ಸಮಉ ಜಾನಿ ಮುನಿಬರನ್ಹ ಬೊಲಾಈಂ। ಸುನತ ಸುಆಸಿನಿ ಸಾದರ ಲ್ಯಾಈಂ ॥**
**ಜನಕ ಬಾಮ ದಿಸಿ ಸೋಹ ಸುನಯನಾ। ಹಿಮಗಿರಿ ಸಂಗ ಬನೀ ಜನು ಮಯನಾ ॥ ೨ ॥**
**ಕನಕ ಕಲಸ ಮನಿ ಕೋಪರ ರೂರೇ। ಸುಚಿ ಸುಗಂಧ ಮಂಗಲ ಜಲ ಪೂರೇ॥**
**ನಿಜ ಕರ ಮುದಿತ ರಾಯಂ ಅರು ರಾನೀ। ಧರೇ ರಾಮ ಕೇ ಆಗೇಂ ಆನೀ॥ ೩ ॥**
**ಪಢಹಿಂ ಬೇದ ಮುನಿ ಮಂಗಲ ಬಾನೀ। ಗಗನ ಸುಮನ ಝುರಿ ಅವಸರು ಜಾನೀ॥**
**ಬರು ಬಿಲೋಕಿ ದಂಪತಿ ಅನುರಾಗೇ। ಪಾಯ ಪುನೀತ ಪಖಾರನ ಲಾಗೇ॥ ೪ ॥**

ಜನಕನ ಪಟ್ಟಮಹಿಷಿಯೂ, ಸೀತಾದೇವಿಯ ತಾಯಿಯಾದ ಸುನಯನಾದೇವಿಯ ವೈಭವವನ್ನು ಯಾರು ವರ್ಣಿಸಬಲ್ಲರು? ಕೀರ್ತಿಯನ್ನೂ, ಸುಕೃತವನ್ನೂ, ಸುಖ, ಸೌಂದರ್ಯಗಳನ್ನೂ ಬೆರೆಸಿ ಬ್ರಹ್ಮನು ಅವಳನ್ನು ಸೃಷ್ಟಿಸಿರುವನು. ಸುಮುಹೂರ್ತವನ್ನು ಮನಗಂಡು ಮುನಿಗಳು ಅವಳನ್ನು ಕರೆಸಿದರು. ಸುವಾಸಿನಿಯರು ಆಕೆಯನ್ನು ಆದರದಿಂದ ಕರೆತಂದರು. ಹಿಮವಂತನ ಪಕ್ಕದಲ್ಲಿ ಮೈನಾದೇವಿಯು ಶೋಭಿಸುವಂತೆ, ಜನಕನ ವಾಮಭಾಗದಲ್ಲಿ ಸುನಯನಾದೇವಿಯು ಶೋಭಿಸಿದಳು. ಪವಿತ್ರವೂ, ಸುಗಂಧಪೂರ್ಣವೂ, ಮಂಗಳಜಲದಿಂದ ತುಂಬಿದ ಚಿನ್ನದಕಲಶಗಳನ್ನು, ಮಣಿಗಳ ತಟ್ಟೆಗಳನ್ನೂ ರಾಜ ಮತ್ತು ರಾಣಿಯರು ಹರ್ಷದಿಂದ ತಮ್ಮ ಕೈಯಾರೆ ತಂದು ಶ್ರೀರಾಮನ ಎದುರಿಗೆ ಇರಿಸಿದರು. ಮುನಿಗಳು ಶ್ರಾವ್ಯಕಂಠಸ್ವರದಿಂದ ವೇದಮಂತ್ರಗಳನ್ನು ಪಠಿಸುತ್ತಿರುವಾಗ, ಸಮಯನೋಡಿ ಆಕಾಶದಿಂದ ಪುಷ್ಪವೃಷ್ಟಿಯಾಯಿತು. ಆ ರಾಜದಂಪತಿಗಳು ಪ್ರೇಮಮಗ್ನರಾಗಿ ವರನನ್ನು ನೋಡಿ, ಅವನ ಪಾವನ ಚರಣಗಳನ್ನು ತೊಳೆಯತೊಡಗಿದರು. (ಚೌ/೧-೪)

**ಛಂ – ಲಾಗೇ ಪಖಾರನ ಪಾಯ ಪಂಕಜ ಪ್ರೇಮ ತನ ಪುಲಕಾವಲೀ।**
**ನಭ ನಗರ ಗಾನ ನಿಸಾನ ಜಯ ಧುನಿ ಉಮಗಿ ಜನು ಚಹುಂ ದಿಸಿ ಚಲೀ ॥**
**ಜೇ ಪದ ಸರೋಜ ಮನೋಜ ಅರಿ ಉರ ಸರ ಸದೈವ ಬಿರಾಜಹೀಂ।**
**ಜೇ ಸಕೃತ ಸುಮಿರತ ಬಿಮಲತಾ ಮನ ಸಕಲ ಕಲಿ ಮಲ ಭಾಜಹೀಂ ॥ ೧ ॥**
**ಜೇ ಪರಸಿ ಮುನಿಬನಿತಾ ಲಹೀ ಗತಿ ರಹೀ ಜೋ ಪಾತಕಮಈ ।**
**ಮಕರಂದು ಜಿನ್ಹ ಕೋ ಸಂಭು ಸಿರ ಸುಚಿತಾ ಅವಧಿ ಸುರ ಬರನಈ ॥**
**ಕರಿ ಮಧುಪ ಮನ ಮುನಿ ಜೋಗಿಜನ ಜೇ ಸೇಇ ಅಭಿಮತ ಗತಿ ಲಹೈಂ।**
**ತೇ ಪದ ಪಖಾರತ ಭಾಗ್ಯಭಾಜನು ಜನಕು ಜಯ ಜಯ ಸಬ ಕಹೈಂ ॥ ೨ ॥**
**ಬರ ಕುಅಂರಿ ಕರತಲ ಜೋರಿ ಸಾಖೋಚಾರು ದೋಉ ಕುಲಗುರ ಕರೈಂ।**
**ಭಯೊ ಪಾನಿಗಹನು ಬಿಲೋಕಿ ಬಿಧಿ ಸುರ ಮನುಜ ಮುನಿ ಆನಂದ ಭರೈಂ ॥**
**ಸುಖಮೂಲ ದೂಲಹು ದೇಖಿ ದಂಪತಿ ಪುಲಕ ತನ ಹುಲಸ್ಯೋ ಹಿಯೋ।**
**ಕರಿ ಲೋಕ ಬೇದ ಬಿಧಾನು ಕನ್ಯಾ ದಾನು ನೃಪಭೂಷನ ಕಿಯೋ॥ ೩ ॥**

**ಹಿಮವಂತ ಜಿಮಿ ಗಿರಿಜಾ ಮಹೇಸಹಿ ಹರಿಹಿ ಶ್ರೀ ಸಾಗರ ದಈ।**
**ತಿಮಿ ಜನಕ ರಾಮಹಿ ಸಿಯ ಸಮರಪೀ ಬಿಸ್ವಕಲ ಕೀರತಿ ನಈ॥**
**ಕ್ಯೋಂ ಕರೈ ಬಿನಯ ಬಿದೇಹು ಕಿಯೋ ಬಿದೇಹು ಮೂರತಿ ಸಾಂವರೀ।**
**ಕರಿ ಹೋಮು ಬಿಧಿವತ ಗಾಂಠಿ ಜೋರೀ ಹೋನ ಲಾಗೀಂ ಭಾಂವರೀ॥ ೪ ॥**

ಶ್ರೀರಾಮನ ಚರಣಗಳನ್ನು ತೊಳೆಯುವಾಗ ಪ್ರೇಮಾಧಿಕ್ಯದಿಂದ ಅವರ ಶರೀರ ಪುಳಕಿತವಾಯಿತು. ಆಗಸದಲ್ಲಿ ನಗರದಲ್ಲಿ ಆಗುತ್ತಿದ್ದ ಗಾನ, ನಗಾರಿ ಹಾಗೂ ಜಯಕಾರದ ಧ್ವನಿಗಳು ಎಲ್ಲೆಡೆ ಉಕ್ಕಿಹರಿದವು. ಆ ಪಾದಪದ್ಮಗಳು ಅತ್ಯಂತ ಪವಿತ್ರವಾದವುಗಳು. ಅವುಗಳು ಕಾಮಾರಿಯಾದ ಪರಶಿವನ ಹೃದಯದಲ್ಲಿ ಸದಾಕಾಲ ವಿರಾಜಿಸುತ್ತಿವೆ. ಅವುಗಳನ್ನು ಒಮ್ಮೆಯಾದರೂ ಸ್ಮರಿಸಿದ ಮಾತ್ರದಿಂದ ಮನಸ್ಸಿನಲ್ಲಿ ನಿರ್ಮಲತೆ ಬಂದು ಬಿಡುತ್ತದೆ ಹಾಗೂ ಕಲಿಯುಗದ ಎಲ್ಲ ಪಾಪಗಳು ಓಡಿಹೋಗುತ್ತವೆ. ಅವುಗಳ ಸ್ಪರ್ಶಮಾತ್ರದಿಂದ ಪಾಪಮಯಿಯಾದ ಗೌತಮ ಪತ್ನೀ ಅಹಲ್ಯೆಯು ಪರಮಗತಿಯನ್ನು ಪಡೆದಳು. ಆ ರಾಮಚರಣಕಮಲ ಮಕರಂದರಸ (ಗಂಗೆ)ವೇ ಶಿವನ ತಲೆಯಮೇಲೆ ವಿರಾಜಿಸುತ್ತಿದೆ. ಈ ಚರಣಗಳನ್ನು ದೇವತೆಗಳು ಪಾವಿತ್ರ್ಯದ ಪರಮಾವಧಿಯೆಂದು ಭಾವಿಸುವರು. ಮುನಿಗಳೂ, ಯೋಗಿಗಳೂ ತಮ್ಮ ಮನವನ್ನು ಮಧುಕರವನ್ನಾಗಿಸಿ ಈ ಚರಣಕಮಲಗಳನ್ನು ಸೇವಿಸಿ, ಮನೋವಾಂಛಿತ ಗತಿಯನ್ನು ಪಡೆಯುವರು. ಇಂತಹ ದಿವ್ಯಚರಣಗಳನ್ನು ಪುಣ್ಯಾತ್ಮನಾದ ಜನಕನು ತೊಳೆಯುತ್ತಿರುವನು. ಇದನ್ನು ಕಂಡು ಎಲ್ಲರೂ ಜಯ-ಜಯಕಾರ ಮಾಡಿದರು. ಇಬ್ಬರೂ ಕುಲಗುರುಗಳು ವಧೂ-ವರರ ಕೈಗಳನ್ನು ಕೂಡಿಸಿ, ಗೋತ್ರ ಪ್ರವರಗಳನ್ನು ಉಚ್ಚರಿಸಿದರು. ಪಾಣಿಗ್ರಹಣ ಮಹೋತ್ಸವವನ್ನು ಕಂಡು ಬ್ರಹ್ಮಾದಿ ದೇವತೆಗಳು, ವಿಶ್ವಾಮಿತ್ರಾದಿ ಮುನಿಗಳು, ಪುರಜನರು ಪರಮಾನಂದಭರಿತರಾದರು. ಸಕಲಸುಖನಿಧಾನವಾದ ವರನನ್ನು ಕಂಡು ರಾಜ-ರಾಣಿಯರ ಶರೀರಗಳು ಪುಳಕಿತವಾದುವು, ಹೃದಯಗಳು ಆನಂದದಿಂದ ತುಂಬಿತುಳುಕಿತು. ರಾಜಶ್ರೇಷ್ಠನಾದ ಜನಕ ಮಹಾರಾಜನು ವೇದೋಕ್ತವಾಗಿ, ಲೋಕಾಚಾರ ರೀತಿ-ರಿವಾಜುಗಳನ್ನನುಸರಿಸಿ ಶ್ರೀರಾಮನಿಗೆ ಕನ್ಯಾದಾನ ಮಾಡಿಕೊಟ್ಟನು. ಹಿಮವಂತನು ಪಾರ್ವತಿದೇವಿಯನ್ನು ಪರಶಿವನಿಗೆ ಅರ್ಪಿಸುವಂತೆ, ಸಮುದ್ರವು ಲಕ್ಷ್ಮೀದೇವಿಯನ್ನು ಶ್ರೀಮಹಾವಿಷ್ಣುವಿಗೆ ಸಮರ್ಪಿಸುವಂತೆ, ಜನಕ ಮಹಾರಾಜನು ಸೀತಾದೇವಿಯನ್ನು ಶ್ರೀರಾಮಚಂದ್ರನಿಗೆ ಸಮರ್ಪಿಸಿದನು. ಇದರಿಂದ ವಿಶ್ವದಲ್ಲೆಲ್ಲ ಅವನ ನವೀನ ಕೀರ್ತಿಯು ಹಬ್ಬಿತು. ವಿದೇಹರಾಜನಿಗೆ ಬಿನ್ನಹಕೆ ಬಾಯಿಲ್ಲ. ಆ ಶ್ಯಾಮಸುಂದರನಾದ ಶ್ರೀರಾಮನು ಅವನನ್ನು ನಿಜವಾಗಿ ವಿದೇಹ (ಮೈಮರೆತ)ನನ್ನಾಗಿ ಮಾಡಿದನು. ಆ ನೂತನ ವಧೂವರರೂ ವಿಧ್ಯುಕ್ತವಾಗಿ ವಿವಾಹಹೋಮವನ್ನು ನಿರ್ವಹಿಸಿ, ಅವರ ಸೆರಗಿಗೆ ಗಂಟುಹಾಕಿ, ಅಗ್ನಿಗೆ ಪ್ರದಕ್ಷಿಣೆ ಮಾಡಿದರು. (ಛಂ/೧-೪)

**ದೋ – ಜಯ ಧುನಿ ಬಂದೀ ಬೇದ ಧುನಿ ಮಂಗಲ ಗಾನ ನಿಸಾನ।**
**ಸುನಿ ಹರಷಹಿಂ ಬರಷಹಿಂ ಬಿಬುಧ ಸುರತರು ಸುಮನ ಸುಜಾನ॥ ೩೨೪ ॥**

ಜಯ-ಜಯಧ್ವನಿಗಳು, ವಂದಿಮಾಗಧರ ಧ್ವನಿಗಳೂ, ವೇದಘೋಷವನ್ನೂ, ಮಂಗಳಗೀತೆಗಳನ್ನೂ, ದುಂದುಭಿನಾಧಗಳನ್ನೂ ಕೇಳಿದ ದೇವತೆಗಳು ಹರ್ಷಿತರಾಗಿ ಕಲ್ಪವೃಕ್ಷದ ಹೂಗಳನ್ನು ಮಳೆಗರೆದರು. (ದೋ/೩೨೪)

**ಚೌ – ಕುಅँರು ಕುಅँರಿ ಕಲ ಭಾಂವರಿ ದೇಹೀಂ। ನಯನ ಲಾಭು ಸಬ ಸಾದರ ಲೇಹೀಂ॥**
**ಜಾಇ ನ ಬರನಿ ಮನೋಹರ ಜೋರೀ। ಜೋ ಉಪಮಾ ಕಛು ಕಹೌಂ ಸೋ ಥೋರೀ॥ ೧ ॥**
**ರಾಮ ಸೀಯ ಸುಂದರ ಪ್ರತಿಛಾಹೀಂ। ಜಗಮಗಾತ ಮನಿ ಖಂಭನ ಮಾಹೀಂ॥**
**ಮನಹುँ ಮದನ ರತಿ ಧರಿ ಬಹು ರೂಪಾ। ದೇಖತ ರಾಮ ಬಿಆಹು ಅನೂಪಾ॥ ೨ ॥**
**ದರಸ ಲಾಲಸಾ ಸಕುಚ ನ ಥೋರೀ। ಪ್ರಗಟತ ದುರತ ಬಹೋರಿ ಬಹೋರೀ॥**
**ಭಏ ಮಗನ ಸಬ ದೇಖನಿಹಾರೇ। ಜನಕ ಸಮಾನ ಅಪಾನ ಬಿಸಾರೇ॥ ೩ ॥**
**ಪ್ರಮುದಿತ ಮುನಿನ್ಹ ಭಾಂವರೀಂ ಫೇರೀಂ। ನೇಗಸಹಿತ ಸಬ ರೀತಿ ನಿಬೇರೀಂ॥**
**ರಾಮ ಸೀಯ ಸಿರ ಸೇಂದುರ ದೇಹೀಂ। ಸೋಭಾ ಕಹಿ ನ ಜಾತಿ ಬಿಧಿ ಕೇಹೀಂ॥ ೪ ॥**
**ಅರುನ ಪರಾಗ ಜಲಜು ಭರಿ ನೀಕೇಂ। ಸಸಿಹಿ ಭೂಷ ಅಹಿ ಲೋಭ ಅಮೀ ಕೇಂ॥**
**ಬಹುರಿ ಬಸಿಷ್ಠ ದೀನ್ಹಿ ಅನುಸಾಸನ। ಬರು ದುಲಹಿನಿ ಬೈಠೇ ಎಕ ಆಸನ॥ ೫ ॥**

ವಧೂವರರೂ ಅಗ್ನಿಗೆ ಪ್ರದಕ್ಷಿಣೆ ಮಾಡುತ್ತಾ ಪರಿಣಯವಿಧಿಯನ್ನು ಆಚರಿಸಿದರು. ಎಲ್ಲರೂ ಇವರನ್ನು ನೋಡಿ-ನೋಡಿ ತಮ್ಮ ಕಣ್ಣುಗಳನ್ನು ಸಾರ್ಥಕಪಡಿಸಿಕೊಂಡರು. ಆ ಮನೋಹರವಾದ ಜೋಡಿಯು ವರ್ಣನಾತೀತ. ಯಾವ ಉಪಮೆಕೊಟ್ಟರೂ

ಸಾಲದು. ಅಪೂರ್ವವಾದ ಈ ವಿವಾಹಮಹೋತ್ಸವವನ್ನು ನೋಡಲು ರತಿ-ಮನ್ಮಥರೇ ಅನೇಕ ರೂಪಗಳಲ್ಲಿ ಬಂದಿದ್ದಾರೋ ಎಂಬಂತೆ, ಮಣಿಮಯ ಸ್ತಂಭಗಳಲ್ಲಿ ಆ ಸೀತಾರಾಮರ ಪ್ರತಿರೂಪಗಳು ಪ್ರಕಾಶಿಸುತ್ತಿದ್ದವು. ರತಿ-ಮನ್ಮಥರಲ್ಲಿ ಸೀತಾರಾಮರ ಚೆಲುವನ್ನು ಸವಿಯಲು ತಮ್ಮ ಅಭಿಲಾಷೆಯು ಹೇಳತೀರದು. ಅದರಿಂದ ಒಮ್ಮೆ ಕಾಣಿಸಿಕೊಂಡು ಮಗದೊಮ್ಮೆ ನಾಚಿಕೆಯಿಂದ ಮರೆಯಾಗುತ್ತಾರೋ ಎಂಬಂತೆ ಆ ಮಣಿಖಚಿತ ಸ್ತಂಭಗಳಲ್ಲಿ ಅವರು ಆಗಾಗ ಕಂಡು ಬಂದು, ಮರೆಯಾಗುತ್ತಿದ್ದರು. ಅಲ್ಲಿ ನೆರೆದವರೆಲ್ಲರೂ ಜನಕನಂತೆ ತಮ್ಮನ್ನು ತಾವೇ ಮರೆತರು. ಮುನೀಶ್ವರ ಆದೇಶದಂತೆ ಸೀತಾರಾಮರು ಅಗ್ನಿಗೆ ಪ್ರದಕ್ಷಿಣೆ ಬಂದರು. ಬಾಗಿನ, ತಾಂಬೂಲಸಹಿತ ಎಲ್ಲ ಕಲಾಪಗಳನ್ನು ಮುಗಿಸಿದರು. ಶ್ರೀರಾಮನು ಸೀತೆಯ ಬೈತಲೆಯಲ್ಲಿ ಕುಂಕುಮವಿಡುವ ದೃಶ್ಯವು ನಯನಾನಂದಕರವು. ಆ ದರ್ಶನಾನಂದವು ಅನುಭವೈಕ ವೇದ್ಯವು. ವರ್ಣನಾತೀತವು. ಕಮಲದಲ್ಲಿ ಕೆಂಪು ಪರಾಗವನ್ನು ತುಂಬಿ ಅಮೃತ ಲೋಭದಿಂದ ಹಾವು ಚಂದ್ರನನ್ನು ಅಲಂಕರಿಸುತ್ತಿದೆಯೋ ಎನ್ನುವಂತಿತ್ತು. (ಇಲ್ಲಿ ಶ್ರೀರಾಮನ ಕೈಗೆ ಕಮಲದ, ಕುಂಕುಮಕ್ಕೆ ಪರಾಗದ, ಶ್ರೀರಾಮನ ಶ್ಯಾಮಲ ಭುಜವನ್ನು ಸರ್ಪದ ಮತ್ತು ಸೀತೆಯ ಮುಖಕ್ಕೆ ಚಂದ್ರನ ಉಪಮೆ ಕೊಡಲಾಗಿದೆ.) ಅನಂತರ ವಸಿಷ್ಠರ ಅಪ್ಪಣೆಯಂತೆ ವಧೂವರರೂ ಒಂದೇ ಆಸನದಲ್ಲಿ ಕುಳಿತರು. (ಚೌ/೧-೩)

**ಛಂ –** **ಬೈಠೇ ಬರಾಸನ ರಾಮು ಜಾನಕಿ ಮುದಿತ ಮನ ದಸರಥು ಭಏ ।**
**ತನು ಪುಲಕ ಪುನಿ ಪುನಿ ದೇಖಿ ಅಪನೇಂ ಸುಕೃತ ಸುರತರು ಫಲ ನಏ ।**
**ಭರಿ ಭುವನ ರಹಾ ಉಛಾಹು ರಾಮ ಬಿಬಾಹು ಭಾ ಸಬಹೀಂ ಕಹಾ ।**
**ಕೇಹಿ ಭಾಁತಿ ಬರನಿ ಸಿರಾತ ರಸನಾ ಏಕ ಯಹು ಮಂಗಲು ಮಹಾ ॥ ೧ ॥**

ಸೀತಾರಾಮರು ಶ್ರೇಷ್ಠವಾದ ಒಂದೇ ಆಸನದಲ್ಲಿ ಕುಳಿತಿರುವುದನ್ನು ನೋಡಿ ದಶರಥನ ಮನಸ್ಸು ಆನಂದದಿಂದ ತುಂಬಿಹೋಯಿತು. ತನ್ನ ಸುಕೃತರೂಪಿಯಾದ ಕಲ್ಪವೃಕ್ಷದಲ್ಲಿ ಹೊಸಫಲಬಿಟ್ಟುದನ್ನು ಕಂಡು ಅವನ ಶರೀರದಲ್ಲಿ ಪದೇ-ಪದೇ ರೋಮಾಂಚವಾಯಿತು. ''ಶ್ರೀ ಸೀತಾರಾಮರ ವಿವಾಹವು ಜಯಪ್ರದವಾಗಿ ನೆರವೇರಿತು'' ಎಂದು ಹದಿನಾಲ್ಕು ಲೋಕದವರೆಲ್ಲರೂ ಮಿಗಿಲಾದ ಆನಂದದಿಂದ ಸಾರಿದರು. ''ಈ ವಿವಾಹಮಹೋತ್ಸವವು ಮಹಾಮಂಗಳಕರವು, ನನ್ನ ಸಣ್ಣನಾಲಿಗೆ ಇದನ್ನು ಹೇಗೆ ವರ್ಣಿಸಬಲ್ಲದು? (ಛಂ/೧)

## ಭರತಾದಿಗಳ ವಿವಾಹ

**ಛಂ –** **ತಬ ಜನಕ ಪಾಇ ಬಸಿಷ್ಠ ಆಯಸು ಬ್ಯಾಹ ಸಾಜ ಸँವಾರಿ ಕೈ ।**
**ಮಾಂಡವೀ ಶ್ರುತಕೀರತಿ ಉರಮಿಲಾ ಕುಅँರಿ ಲಈಂ ಹँಕಾರಿ ಕೈ ॥**
**ಕುಸಕೇತು ಕನ್ಯಾ ಪ್ರಥಮ ಜೋ ಗುನ ಸೀಲ ಸುಖ ಸೋಭಾಮಈ ।**
**ಸಬ ರೀತಿ ಪ್ರೀತಿ ಸಮೇತ ಕರಿ ಸೋ ಬ್ಯಾಹಿ ನೃಪ ಭರತಹಿ ದಈ ॥ ೨ ॥**
**ಜಾನಕೀ ಲಘು ಭಗಿನೀ ಸಕಲ ಸುಂದರಿ ಸಿರೋಮನಿ ಜಾನಿ ಕೈ ।**
**ಸೋ ತನಯ ದೀನ್ಹೀ ಬ್ಯಾಹಿ ಲಖನಹಿ ಸಕಲ ಬಿಧಿ ಸನಮಾನಿ ಕೈ ॥**
**ಜೇಹಿ ನಾಮು ಶ್ರುತಕೀರತಿ ಸುಲೋಚನಿ ಸುಮುಖಿ ಸಬ ಗುನ ಆಗರೀ ।**
**ಸೋ ದಈ ರಿಪುಸೂದನಹಿ ಭೂಪತಿ ರೂಪ ಸೀಲ ಉಜಾಗರೀ ॥ ೩ ॥**
**ಅನುರೂಪ ಬರ ದುಲಹಿನಿ ಪರಸ್ಪರ ಲಖಿ ಸಕುಚಿ ಹಿಯँ ಹರಷಹೀಂ ।**
**ಸಬ ಮುದಿತ ಸುಂದರತಾ ಸರಾಹಹಿಂ ಸುಮನ ಸುರ ಗನ ಬರಷಹೀಂ ॥**
**ಸುಂದರೀಂ ಸುಂದರ ಬರನ್ಹ ಸಹ ಸಬ ಏಕ ಮಂಡಪ ರಾಜಹೀಂ ।**
**ಜನು ಜೀವ ಉರ ಚಾರಿಉ ಅವಸ್ಥಾ ಬಿಭುನ ಸಹಿತ ಬಿರಾಜಹೀಂ ॥ ೪ ॥**

ವಸಿಷ್ಠರ ಆದೇಶಕ್ಕನುಸಾರವಾಗಿ ಜನಕ ಮಹಾರಾಜನು ವಿವಾಹಕ್ಕೆ ಬೇಕಾದ ಸಾಮಗ್ರಿಗಳನ್ನು ಅಣಿಗೊಳಿಸಿ, ಮಾಂಡವಿ, ಶ್ರುತಕೀರ್ತಿ, ಊರ್ಮಿಳೆ ಈ ಮೂವರೂ ರಾಜಕುಮಾರಿಯರನ್ನು ಬರಮಾಡಿದನು. ಜನಕರಾಜನು ತನ್ನ ತಮ್ಮನಾದ ಕುಶಧ್ವಜನ ಹಿರಿಯ ಮಗಳಾದ, ಗುಣಶೀಲ ಸುಖಸೌಂದರ್ಯಗಳ ಗನಿಯೆನಿಸಿದ 'ಮಾಂಡವಿ'ಯನ್ನು ಭರತನಿಗೆ ಇತ್ತು, ಹೆಚ್ಚಾದ ಪ್ರೇಮಾನುರಾಗದಿಂದ ಯಥಾವಿಧಿಯಾಗಿ ವಿವಾಹಮಾಡಿಕೊಟ್ಟನು.

ಬಳಿಕ ಸೀತೆಯ ತಂಗಿಯೂ, ಸುಂದರಿಯರ ಶಿರೋಮಣಿಯೂ ಆದ 'ಊರ್ಮಿಳೆ'ಯನ್ನು ಲಕ್ಷ್ಮಣನಿಗೆ ಧಾರೆಯೆರೆದು ಕೊಟ್ಟನು. ಮತ್ತೆ ಸುಲೋಚನೆಯೂ, ಸುಮುಖಿಯೂ ಸುಗುಣರೂಪ ಶೀಲಸಂಪನ್ನೆಯೂ ಆದ 'ಶ್ರುತಕೀರ್ತಿ'ಯನ್ನು ಜನಕನು ಶತ್ರುಘ್ನನಿಗೆ ಧಾರೆಯೆರೆದು ಮದುವೆಮಾಡಿಕೊಟ್ಟನು.

ವಧೂವರರ ಜೋಡಿಗಳು ಒಬ್ಬರಿಗೊಬ್ಬರು ನೋಡಿಕೊಂಡು ಮನಸ್ಸಿನಲ್ಲಿ ಆನಂದಿಸಿದರು. ಹೊರಗೆ ಮಾತ್ರ ನಾಚಿಕೆಯಲ್ಲಿ ಮುಳುಗಿಹೋದರು. ಈ ನವದಂಪತಿಗಳನ್ನು ನೋಡಿ, ದೇವತೆಗಳು ಸಂತಸದಿಂದ ಪುಷ್ಪವೃಷ್ಟಿಯನ್ನು ಸುರಿಸಿದರು. ಅಂದವಾದ ನವವಧೂವರರ ಜೋಡಿಗಳು ಒಂದೇ ಮಂಟಪದಲ್ಲಿ ಶೋಭಿಸುತ್ತಿರುವಾಗ ಅಲ್ಲಿ ನೆರೆದವರೆಲ್ಲರೂ ಪರಮಾನಂದಭರಿತರಾದರು. ಅವರು ಜೀವಿಯ ಜಾಗ್ರತ್, ಸ್ವಪ್ನ, ಸುಷುಪ್ತಿ, ತುರೀಯ ಎಂಬ ನಾಲ್ಕು ಅವಸ್ಥೆಗಳು ತಮ್ಮ ಅಧಿಪತಿಯಾದ ವಿಶ್ವ, ತೈಜಸ, ಪ್ರಾಜ್ಞ ಹಾಗೂ ಬ್ರಹ್ಮದೊಂದಿಗೆ ಸೇರಿರುವಂತೆ ವಿರಾಜಿಸಿದರು. (ಛಂ/೨-೪)

**ದೋ – ಮುದಿತ ಅವಧಪತಿ ಸಕಲ ಸುತ ಬಧುನ್ಹ ಸಮೇತ ನಿಹಾರಿ ।**
**ಜನು ಪಾಏ ಮಹಿಪಾಲ ಮನಿ ಕ್ರಿಯನ್ಹ ಸಹಿತ ಫಲ ಚಾರಿ ॥ ೩೨೫ ॥**

ಅಯೋಧ್ಯಾಧೀಶನಾದ ದಶರಥ ಮಹಾರಾಜನು ತನ್ನ ಕುಮಾರರನ್ನೂ, ಸೊಸೆಯರ ಸಹಿತ ನೋಡಿ, ಕ್ರಿಯಾಸಹಿತವಾಗಿ (ಯಜ್ಞಕ್ರಿಯೆ, ಶ್ರಾದ್ಧಕ್ರಿಯ, ಯೋಗಕ್ರಿಯೆ, ಜ್ಞಾನಕ್ರಿಯೆ) ಚತುರ್ವಿಧ ಪುರುಷಾರ್ಥಫಲ (ಧರ್ಮ, ಅರ್ಥ, ಕಾಮ, ಮೋಕ್ಷ) ಪಡೆದನೋ ಎಂದು ಭಾವಿಸಿದನು. (ದೋ/೩೨೫)

**ಚೌ – ಜಸಿ ರಘುಬೀರ ಬ್ಯಾಹ ಬಿಧಿ ಬರನೀ । ಸಕಲ ಕುಅ್ँರ ಬ್ಯಾಹೇ ತೆಹಿँ ಕರನೀ ॥**
**ಕಹಿ ನ ಜಾಇ ಕಛು ದಾಇಜ ಭೂರೀ । ರಹಾ ಕನಕ ಮನಿ ಮಂಡಪು ಪೂರೀ ॥ ೧ ॥**
**ಕಂಬಲ ಬಸನ ಬಿಚಿತ್ರ ಪಟೋರೇ । ಭಾँತಿ ಭಾँತಿ ಬಹು ಮೋಲ ನ ಥೋರೇ ॥**
**ಗಜ ರಥ ತುರಗ ದಾಸ ಅರು ದಾಸೀ । ಧೇನು ಅಲಂಕೃತ ಕಾಮದುಹಾ ಸೀ ॥ ೨ ॥**
**ಬಸ್ತು ಅನೇಕ ಕರಿಅ ಕಿಮಿ ಲೇಖಾ । ಕಹಿ ನ ಜಾಇ ಜಾನಹಿँ ಜಿನ್ಹ ದೇಖಾ ॥**
**ಲೋಕಪಾಲ ಅವಲೋಕಿ ಸಿಹಾನೇ । ಲೀನ್ಹ ಅವಧಪತಿ ಸಬು ಸುಖು ಮಾನೇ ॥ ೩ ॥**
**ದೀನ್ಹ ಜಾಚಕನ್ಹಿ ಜೋ ಜೆಹಿ ಭಾವಾ । ಉಬರಾ ಸೋ ಜನವಾಸೆಹಿँ ಆವಾ ॥**
**ತಬ ಕರ ಜೋರಿ ಜನಕು ಮೃದು ಬಾನೀ । ಬೋಲೇ ಸಬ ಬರಾತ ಸನಮಾನೀ ॥ ೪ ॥**

ಸೀತಾರಾಮರ ವಿವಾಹದಂತೆ ಉಳಿದ ರಾಜಕುಮಾರರ ವಿವಾಹಗಳೂ ಕೂಡ ಜರಗಿದವು. ವರೋಪಚಾರ, ಉಡುಗೊರೆಯ ಹೆಚ್ಚಳವಂತೂ ಹೇಳತೀರದು. ಮಂಟಪವೆಲ್ಲ ಚಿನ್ನ, ರತ್ನಗಳಿಂದ ತುಂಬಿಹೋಯಿತು. ಬಹುವಿಧವಾದ ರತ್ನಗಂಬಳಿಗಳೂ, ವಸ್ತ್ರಗಳೂ, ವಿಧವಿಧವಾದ ಬಹುಮೂಲ್ಯ ರೇಷ್ಮೆಯ ಜರತಾರೀ ಸೀರೆಗಳೂ, ಆನೆಗಳೂ, ರಥಗಳೂ, ಕುದುರೆಗಳೂ, ದಾಸ-ದಾಸೀಜನರೂ, ಕಾಮಧೇನುವಿಗೆ ಸಮಾನವಾದ ಆಭರಣಗಳಿಂದ ಅಲಂಕೃತವಾದ ಸಾವಿರಾರು ಹಸುಗಳು – ಈ ಪ್ರಕಾರ ಇನ್ನೂ ಅನೇಕ ಅಸಂಖ್ಯಾತ ವಸ್ತುಗಳು ಕೊಡಲ್ಪಟ್ಟವು. ಅದನ್ನು ನೋಡಿದವರೇ ಬಲ್ಲರು, ವರ್ಣಿಸಲಂತೂ ಅಸಾಧ್ಯವಾಗಿತ್ತು. ಅವುಗಳನ್ನು ನೋಡಿದ ದಿಕ್ಪಾಲಕರೇ ಅಸೂಯೆಗೊಂಡರು. ಅಯೋಧ್ಯಾಧಿಪತಿ ದಶರಥನು ಪ್ರಸನ್ನಚಿತ್ತದಿಂದ ಅವುಗಳನ್ನು ಅಂಗೀಕರಿಸಿ, ಯಾಚಕರಿಗೆ ಏನು ಬೇಕೋ ಅದನ್ನು ದಾನಮಾಡಿದನು. ಉಳಿದ ವಸ್ತುಗಳು ಬಿಡದಿಗೆ ಕಳಿಸಲಾಯಿತು. ರಾಜನ ಜೊತೆಗೆ ಬಂದಿರುವ ಎಲ್ಲರನ್ನೂ ಗೌರವಿಸಿ, ಬಳಿಕ ಜನಕನು ಕೈಜೋಡಿಸಿ, ಮೃದುಮಧುರ ವಚನಗಳಿಂದ ಬಿನ್ನವಿಸಿಕೊಂಡನು. (ಚೌ/೧-೪)

**ಛಂ – ಸನಮಾನಿ ಸಕಲ ಬರಾತ ಆದರ ದಾನ ಬಿನಯ ಬಡಾಇ ಕೈ ।**
**ಪ್ರಮುದಿತ ಮಹಾ ಮುನಿ ಬೃಂದ ಬಂದೇ ಪೂಜಿ ಪ್ರೇಮ ಲಡಾಇ ಕೈ ॥**
**ಸಿರು ನಾಇ ದೇವ ಮನಾಇ ಸಬ ಸನ ಕಹತ ಕರ ಸಂಪುಟ ಕಿಏँ ।**
**ಸುರ ಸಾಧು ಚಾಹತ ಭಾಉ ಸಿಂಧು ಕಿ ತೋಷ ಜಲ ಅಂಜಲಿ ದಿಏँ ॥ ೧ ॥**
**ಕರ ಜೋರಿ ಜನಕು ಬಹೋರಿ ಬಂಧು ಸಮೇತ ಕೋಸಲರಾಯ ಸೋँ ।**
**ಬೋಲೇ ಮನೋಹರ ಬಯನ ಸಾನಿ ಸನೇಹ ಸೀಲ ಸುಭಾಯ ಸೋँ ॥**

**ಸಂಬಂಧ ರಾಜನ ರಾವರೇಂ ಹಮ ಬಡೇ ಅಬ ಸಬ ಬಿಧಿ ಭಏ ।**
**ಏಹಿ ರಾಜ ಸಾಜ ಸಮೇತ ಸೇವಕ ಜಾನಿಬೇ ಬಿನು ಗಥ ಲಏ ॥ ೨ ॥**
**ಏ ದಾರಿಕಾ ಪರಿಚಾರಿಕಾ ಕರಿ ಪಾಲಿಬೀಂ ಕರುನಾ ನಈ ।**
**ಅಪರಾಧು ಛಮಿಬೋ ಬೋಲಿ ಪಠಏ ಬಹುತ ಹೌಂ ಢೀಟ್ಯೋ ಕಈ ॥**
**ಪುನಿ ಭಾನುಕುಲಭೂಷನ ಸಕಲ ಸನಮಾನ ನಿಧಿ ಸಮಧೀ ಕಿಏ ।**
**ಕಹಿ ಜಾತಿ ನಹಿಂ ಬಿನತೀ ಪರಸ್ಪರ ಪ್ರೇಮ ಪರಿಪೂರನ ಹಿಏ ॥ ೩ ॥**
**ಬೃಂದಾರಕಾ ಗನ ಸುಮನ ಬರಿಸಹಿಂ ರಾಉ ಜನವಾಸೆಹಿ ಚಲೇ ।**
**ದುಂದುಭೀ ಜಯ ಧುನಿ ಬೇದ ಧುನಿ ನಭ ನಗರ ಕೌತೂಹಲ ಭಲೇ ॥**
**ತಬ ಸಖೀಂ ಮಂಗಲ ಗಾನ ಕರತ ಮುನೀಸ ಆಯಸು ಪಾಇ ಕೈ ॥**
**ದೂಲಹ ದುಲಹಿನಿನ್ಹ ಸಹಿತ ಸುಂದರಿ ಚಲೀಂ ಕೊಹಬರ ಲ್ಯಾಇ ಕೈ ॥ ೪ ॥**

ವರ ಪಕ್ಷದವರೆಲ್ಲರನ್ನು ದಾನಗಳಿಂದ, ಬಹುಮಾನಗಳಿಂದ, ಪ್ರಶಂಸೆಗಳಿಂದ ಗೌರವಪೂರ್ಣವಾಗಿ ಸತ್ಕರಿಸಿ ಬಿನ್ನವಿಸಿಕೊಂಡನು. ಬಳಿಕ ಜನಕ ಮಹಾರಾಜನು ಆನಂದದಿಂದ, ಪ್ರೇಮಪೂರ್ವಕ ವಂದಿಸುತ್ತಾ, ಮುನೀಶ್ವರರನ್ನು ಪೂಜಿಸಿದನು. ತಲೆವಾಗಿ ದೇವತೆಗಳಿಗೆ ಮಣಿದನು. ಅರಸನು ಎಲ್ಲರಿಗೂ ಕೈಮುಗಿದುಕೊಂಡು ಹೀಗೆ ಹೇಳಿದನು – ''ಸುರರು, ಸಾಧುಗಳು ಭಾವವನ್ನೇ ಗ್ರಹಿಸುತ್ತಾರೆ. ಪ್ರೇಮಕ್ಕೆ ಮಾತ್ರ ಒಲಿಯುತ್ತಾರೆ. ಒಂದು ಬೊಗಸೆ ನೀರಿನಿಂದ ಸಮುದ್ರವನ್ನು ಸಂತೋಷಪಡಿಸಬಹುದೇ?'' ಬಳಿಕ ಜನಕ ಮಹಾರಾಜನೂ ತಮ್ಮನಾದ ಕುಶಧ್ವಜನೂ ಕೈ ಜೋಡಿಸಿಕೊಂಡು ಕೋಸಲಾಧೀಶ ದಶರಥನಲ್ಲಿ ಸ್ನೇಹ, ಶೀಲ, ಪ್ರೇಮದಿಂದ ತುಂಬಿದ ನುಡಿಗಳನ್ನು ಹೇಳಿದರು – ''ಮಹಾರಾಜರೇ! ನಿಮ್ಮ ಜೊತೆಯ ಬೀಗತನದಿಂದ ನಮ್ಮ ಗೌರವವು ಇಮ್ಮಡಿಸಿತು. ಈ ರಾಜ್ಯ, ಸಿಂಹಾಸನಸಹಿತ ನಮ್ಮಿಬ್ಬರನ್ನೂ ತಾವು ತಮ್ಮ ನಿಃಶುಲ್ಕಸೇವಕರೆಂದು ಭಾವಿಸಿರಿ. ಈ ಬಾಲಿಕೆಯರನ್ನು ಸೇವಕಿಯರೆಂದು ಬಗೆದು ಅವರ ಮೇಲೆ ದಯೆದೋರಿ ಲಾಲನೆ-ಪಾಲನೆ ಮಾಡಿರಿ. ತಮ್ಮನ್ನು ಇಲ್ಲಿಗೆ ಬರಮಾಡಿಕೊಂಡು ವ್ಯರ್ಥವಾಗಿ ಶ್ರಮಕೊಟ್ಟೆ. ನನ್ನ ಅಪರಾಧವನ್ನು ಕ್ಷಮಿಸಿರಿ.'' ಆಗ ಭಾನುಕುಲಭೂಷಣನಾದ ದಶರಥ ಮಹಾರಾಜನು ಬೀಗನಾದ ಜನಕನನ್ನು ತುಂಬಾ ಸಮ್ಮಾನಪೂರ್ವಕ ಗೌರವಿಸಿದನು. ಅವರ ಪರಸ್ಪರ ಗೌರವ-ಪ್ರೇಮಗಳು ವರ್ಣನಾತೀತವಾದುದು. ಆ ಉಭಯರೂ ಪರಸ್ಪರ ಆಲಿಂಗನದಿಂದ ಆನಂದಿತರಾದರು. ದೇವತೆಗಳು ಹೂವುಗಳನ್ನು ಮಳೆಗರೆದರು. ರಾಜನು ತನ್ನ ಬಿಡದಿಗೆ ತೆರಳಿದರು. ಜಯಕಾರ ಧ್ವನಿಗಳೂ, ವೇದಧ್ವನಿಗಳು ಎಲ್ಲೆಡೆ ಆಗುತ್ತಿದ್ದವು. ನಭ-ನಗರದಲ್ಲಿ ಗದ್ದಲ ತುಂಬಿಹೋಯಿತು. ಎಲ್ಲೆಡೆ ಆನಂದ ಹಬ್ಬಿತು. ಆಗ ಮುನೀಶ್ವರರ ಅಪ್ಪಣೆಯಂತೆ ಸುಂದರಿಯರಾದ ಸಖಿಯರು ಸೋಬಾನೆ ಹಾಡುತ್ತಾ, ವಧೂ-ವರರನ್ನು ಕುಲದೇವರನ್ನು ಇರಿಸಿದ್ದ ಪೂಜಾಮಂದಿರಕ್ಕೆ ಕರೆದುಕೊಂಡು ಹೋದರು. (ಛಂ/೧-೪)

**ದೋ – ಪುನಿ ಪುನಿ ರಾಮಹಿ ಚಿತವ ಸಿಯ ಸಕುಚತಿ ಮನು ಸಕುಚೈ ನ ।**
**ಹರತ ಮನೋಹರ ಮೀನ ಛಬಿ ಪ್ರೇಮ ಪಿಆಸೇ ನೈನ ॥ ೩೨೬ ॥**

ಸೀತಾದೇವಿಯು ಪುನಃ ಪುನಃ ಶ್ರೀರಾಮನನ್ನು ನೋಡುವಳು ಹಾಗೂ ನಾಚಿಗೊಳ್ಳುವಳು. ಆದರೆ ಆಕೆಯ ಮನಕ್ಕೆ ಸಂಕೋಚವಿರಲಿಲ್ಲ. ಪ್ರೇಮತೃಷಿತವಾದ ಆಕೆಯ ಕಣ್ಣುಗಳು ಮನೋಹರವಾದ ಮೀನಕಾಂತಿಯನ್ನು ಅಪಹರಿಸುತ್ತಿದ್ದವು. (ದೋ/೩೨೬)

**ಮಾಸಪಾರಾಯಣದ ಹನ್ನೊಂದನೆಯ ವಿಶ್ರಾಮ**

**ಚೌ – ಸ್ಯಾಮ ಸರೀರು ಸುಭಾಯಂ ಸುಹಾವನ । ಸೋಭಾ ಕೋಟಿ ಮನೋಜ ಲಜಾವನ ॥**
**ಜಾವಕ ಜುತ ಪದ ಕಮಲ ಸುಹಾಏ । ಮುನಿ ಮನ ಮಧುಪ ರಹತ ಜಿನ್ಹ ಛಾಏ ॥ ೧ ॥**
**ಪೀತ ಪುನೀತ ಮನೋಹರ ಧೋತೀ । ಹರತಿ ಬಾಲ ರಬಿ ದಾಮಿನಿ ಜೋತೀ ॥**
**ಕಲ ಕಿಂಕಿನಿ ಕಟಿ ಸೂತ್ರ ಮನೋಹರ । ಬಾಹು ಬಿಸಾಲ ಬಿಭೂಷನ ಸುಂದರ ॥ ೨ ॥**

ಪೀತ ಜನೇಉ ಮಹಾಛಬಿ ದೇಈ । ಕರ ಮುದ್ರಿಕಾ ಚೋರಿ ಚಿತು ಲೇಈ ॥
ಸೋಹತ ಬ್ಯಾಹ ಸಾಜ ಸಬ ಸಾಜೇ । ಉರ ಆಯತ ಉರಭೂಷನ ರಾಜೇ ॥ ೩ ॥
ಪಿಅರ ಉಪರನಾ ಕಾಖಾಸೋತೀ । ದುಹುँ ಆँಚರನ್ಹಿ ಲಗೇ ಮನಿ ಮೋತೀ ॥
ನಯನ ಕಮಲ ಕಲ ಕುಂಡಲ ಕಾನಾ । ಬದನು ಸಕಲ ಸೌಂದರ್ಜ ನಿಧಾನಾ ॥ ೪ ॥
ಸುಂದರ ಭೃಕುಟಿ ಮನೋಹರ ನಾಸಾ । ಭಾಲ ತಿಲಕು ರುಚಿರತಾ ನಿವಾಸಾ ॥
ಸೋಹತ ಮೌರು ಮನೋಹರ ಮಾಥೇ । ಮಂಗಲಮಯ ಮುಕುತಾ ಮನಿ ಗಾಥೇ ॥ ೫ ॥

ಶ್ರೀರಾಮಚಂದ್ರನು ನೀಲಮೇಘಶ್ಯಾಮನೂ, ಸಹಜಸುಂದರನೂ, ಕೋಟಿ ಮನ್ಮಥಾಕಾರನೂ ಆಗಿರುವನು. ಅವನ ಸುಂದರ ಪಾದಪದ್ಮಗಳು ಮದರಂಗಿಯ ಬಣ್ಣದಿಂದ ಇನ್ನೂ ಅಂದವಾಗಿ ಕಾಣುತ್ತವೆ. ಅವುಗಳನ್ನು ಮುನಿಮನಮಧುಪಗಳು ಯಾವಾಗಲೂ ಮುತ್ತಿಕೊಂಡಿರುತ್ತವೆ. ಶ್ರೀರಾಮನ ಪುನೀತ, ಮನೋಹರವಾದ ಪಟ್ಟಪೀತಾಂಬರದ ಶೋಭೆಯು ಬಾಲರವಿಯ ಹಾಗೂ ವಿದ್ಯುಲ್ಲತೆಯ ಪ್ರಭೆಯನ್ನು ಮೀರಿಸುವಂತಿದೆ. ಸೊಂಟದಲ್ಲಿ ಸ್ವರ್ಣ ಉಡಿದಾವರೆಯ ಕಿರುಗೆಜ್ಜೆಗಳ ಕಲರವವು ಆಹ್ಲಾದಕರವಾಗಿದೆ. ವಿಶಾಲ ಭುಜಗಳಲ್ಲಿ ಚೆಲುವಾದ ಒಡವೆಗಳು ಕಂಗೊಳಿಸುತ್ತಿವೆ. ಎಡಭುಜದಲ್ಲಿ ಹಳದಿಯ ಜನಿವಾರ ವಿರಾಜಿಸುತ್ತಿದೆ. ಬೆರಳಿನಲ್ಲಿದ್ದ ಮುದ್ರೆಯುಂಗರ ಮನವನ್ನು ಸೂರೆಗೊಳ್ಳುತ್ತದೆ. ವಿವಾಹದ ಎಲ್ಲ ಅಲಂಕಾರಗಳಿಂದ ಅಲಂಕೃತನಾಗಿ ಶೋಭಿಸುತ್ತಿರುವನು. ಅವನ ವಿಶಾಲವಾದ ವಕ್ಷಸ್ಥಳದಲ್ಲಿ ಚೆಲುವಾದ ಆಭೂಷಣಗಳು ಕಂಗೊಳಿಸುತ್ತಿದ್ದವು. ಹಳದಿಯ ಉತ್ತರೀಯವು ಬಲಕಂಕುಳನ್ನು ಬಳಸಿ ಬ್ರಹ್ಮವಸ್ತ್ರದಂತೆ ಶೋಭಿಸುತ್ತಿದೆ. ಅದರ ಎರಡೂ ಅಂಚುಗಳಲ್ಲಿ ಮುತ್ತು ಮಾಣಿಕ್ಯಗಳು ಬೆಳಗುತ್ತಿವೆ. ಕಮಲದಂತಹ ಕಣ್ಣುಗಳು, ಕಿವಿಗಳಲ್ಲಿ ತೂಗುತ್ತಿರುವ ಮಕರ ಕುಂಡಲಗಳು, ಸೌಂದರ್ಯದ ಖನಿಯಂತಿರುವ ಮುಖವು, ಸುಂದರವಾದ ಹುಬ್ಬುಗಳು, ಮನೋಹರವಾದ ಮೂಗು, ವಿಶಾಲವಾದ ಹಣೆಯಲ್ಲಿನ ತಿಲಕವಂತೂ ಚೆಲುವಿನ ಆಗರವಾಗಿದೆ. ಶಿರದಲ್ಲಿ ಮುತ್ತು ಮಾಣಿಕ್ಯಗಳಿಂದ ಕೂಡಿದ ಕಿರೀಟ, ಬಹುಮೂಲ್ಯವಾದ ಮಣಿರತ್ನಗಳಿಂದ ಪೋಣಿಸಿದ ಬಾಸಿಂಗ ಎದ್ದು ಕಾಣುತ್ತಿದೆ. (ಚೌ/೧-೫)

ಛಂ – ಗಾಥೇ ಮಹಾಮನಿ ಮೌರ ಮಂಜುಲ ಅಂಗ ಸಬ ಚಿತ ಚೋರಹೀं ।
ಪುರ ನಾರಿ ಸುರ ಸುಂದರೀं ಬರಹಿ ಬಿಲೋಕಿ ಸಬ ತಿನ ತೋರಹೀं ॥
ಮನಿ ಬಸನ ಭೂಷನ ವಾರಿ ಆರತಿ ಕರಹಿ ಮಂಗಲ ಗಾವಹೀं ।
ಸುರ ಸುಮನ ಬರಿಸಹಿं ಸೂತ ಮಾಗಧ ಬಂದಿ ಸುಜಸು ಸುನಾವಹೀं ॥ ೧ ॥
ಕೊಹಬರಹಿं ಆನೇ ಕುಅँರ ಕುಅँರಿ ಸುಆಸಿನಿನ್ಹ ಸುಖ ಪಾಇ ಕೈ ।
ಅತಿ ಪ್ರೀತಿ ಲೌಕಿಕ ರೀತಿ ಲಾಗೀं ಕರನ ಮಂಗಲ ಗಾಇ ಕೈ ॥
ಲಹಕೌರಿ ಗೌರಿ ಸಿಖಾವ ರಾಮಹಿ ಸೀಯ ಸನ ಸಾರದ ಕಹೈं ।
ರನಿವಾಸು ಹಾಸ ಬಿಲಾಸ ರಸ ಬಸ ಜನ್ಮ ಕೋ ಫಲು ಸಬ ಲಹೈं ॥ ೨ ॥
ನಿಜ ಪಾನಿ ಮನಿ ಮಹುँ ದೇಖಿಅತಿ ಮೂರತಿ ಸುರೂಪನಿಧಾನ ಕೀ ।
ಚಾಲತಿ ನ ಭುಜಬಲ್ಲೀ ಬಿಲೋಕನಿ ಬಿರಹ ಭಯ ಬಸ ಜಾನಕೀ ॥
ಕೌತುಕ ಬಿನೋದ ಪ್ರಮೋದು ಪ್ರೇಮು ನ ಜಾಇ ಕಹಿ ಜಾನಹಿं ಅಲೀं ।
ಬರ ಕುಅँರಿ ಸುಂದರ ಸಕಲ ಸಖೀं ಲವಾಇ ಜನವಾಸೆಹಿ ಚಲೀं ॥ ೩ ॥
ತೆಹಿ ಸಮಯ ಸುನಿಅ ಅಸೀಸ ಜಹँ ತಹँ ನಗರ ನಭ ಆನँದು ಮಹಾ ।
ಚಿರು ಜಿಅಹುँ ಜೋರೀं ಚಾರು ಚಾರ್ಯೋ ಮುದಿತ ಮನ ಸಬಹೀं ಕಹಾ ॥
ಜೋಗೀಂದ್ರ ಸಿದ್ಧ ಮುನೀಸ ದೇವ ಬಿಲೋಕಿ ಪ್ರಭು ದುಂದುಭಿ ಹನೀ ॥
ಚಲೆ ಹರಷಿ ಬರಷಿ ಪ್ರಸೂನ ನಿಜ ನಿಜ ಲೋಕ ಜಯ ಜಯ ಜಯ ಭನೀ ॥ ೪ ॥

ಮಂಜುಲ ಮುಕುಟದಲ್ಲಿ ಮತ್ತು ಬಾಸಿಂಗದಲ್ಲಿ ಅಮೂಲ್ಯವಾದ ಮಣಿಗಳನ್ನು ಪೋಣಿಸಿದ್ದರು. ಶ್ರೀರಾಮನ ಪ್ರತಿಯೊಂದು ಅಂಗಾಂಗಗಳ ಲಾವಣ್ಯ ಲಾಲಿತ್ಯವು ಚೇತೋಹಾರಿಯಾಗಿದೆ. ಪುರನಾರಿಯರು ಹಾಗೂ ಸುರಸುಂದರಿಯರೆಲ್ಲರೂ ವರನನ್ನು ನೋಡಿ, ಕಡ್ಡಿಮುರಿದು ದೃಷ್ಟಿತೆಗೆಯುತ್ತಾ ರತ್ನಭೂಷಣಗಳನ್ನು ನಿವಾಳಿಸಿ ಆರತಿ ಎತ್ತುತ್ತಿದ್ದಾರೆ. ಮಂಗಳಗೀತೆಗಳನ್ನು ಹಾಡುತ್ತಿದ್ದಾರೆ. ದೇವತೆಗಳು ಪುಷ್ಪವೃಷ್ಟಿ ಮಾಡುತ್ತಿದ್ದಾರೆ. ಸೂತರು, ವಂದಿ, ಮಾಗಧರು, ಭಟ್ಟಂಗಿಗಳು ಶ್ರೀರಾಮನ ಯಶೋಗಾನವನ್ನು ಮಾಡುತ್ತಿದ್ದಾರೆ. ಸುಮಂಗಲಿಯರು ನಾಲ್ಕೂ ವಧೂವರರ ಜೋಡಿಗಳನ್ನು ಕುಲದೇವತಾ ಗೃಹಕ್ಕೆ ಕರೆತಂದರು. ಅತ್ಯಂತ ಪ್ರೀತಿಯಿಂದ ಮಂಗಳಗೀತೆಗಳನ್ನು ಹಾಡುತ್ತಾ, ಲೌಕಿಕಶಾಸ್ತ್ರಗಳನ್ನು ಮಾಡತೊಡಗಿದರು. ಪಾರ್ವತಿದೇವಿಯು ಶ್ರೀರಾಮನ ಕೈಯಿಂದ, ಸರಸ್ವತಿದೇವಿಯು ಸೀತೆಯ ಕೈಯಿಂದ ಪರಸ್ಪರ ತುತ್ತು ತಿನ್ನಿಸಲು ಹೇಳಿಕೊಡುತ್ತಿದ್ದರು. ರಾಣಿವಾಸದವರು ಇದೆಲ್ಲವನ್ನು ನೋಡಿ ಆನಂದ ಸಾಗರದಲ್ಲಿ ಮುಳುಗಿಹೋದರು. ಶ್ರೀಸೀತಾರಾಮರ ದರ್ಶನಪಡೆದು ತಮ್ಮ ಜನ್ಮ ಸಾರ್ಥಕವಾಯಿತೆಂದು ಭಾವಿಸಿಕೊಂಡರು. ಸೀತಾದೇವಿಯು ತನ್ನ ಕಂಕಣದಲ್ಲಿದ್ದ ಮಣಿರತ್ನಗಳಲ್ಲಿ ಪ್ರತಿಫಲಿತವಾದ ಶ್ರೀರಾಮನ ರೂಪವನ್ನು ತದೇಕವಾಗಿ ನೋಡುತ್ತಿದ್ದಳು. ರಾಮದರ್ಶನದಲ್ಲಿ ವಿಯೋಗ ಉಂಟಾಗದಿರಲೆಂದು, ಕಣ್ಣಿನ ನೋಟ ಮತ್ತು ಕೈಗಳನ್ನು ಕದಲಿಸುತ್ತಿರಲಿಲ್ಲ. ಆ ಸಮಯದಲ್ಲಿ ನಡೆಯುತ್ತಿದ್ದ ಆಟ-ಪಾಟಗಳು, ವಿನೋದ ಹಾಸ-ವಿಲಾಸಗಳು, ಪ್ರೇಮಾನುರಾಗಗಳು ವರ್ಣನಾತೀತಗಳು. ಅದು ಅಲ್ಲಿದ್ದ ಸಖಿಯರೇ ಬಲ್ಲರು. ಅನಂತರ ವಧೂವರರನ್ನು ಬಿಡದಿಮನೆಗೆ ಕರಕೊಂಡು ಹೋದರು. ಆಗ ಊರಿನಲ್ಲಿ, ಆಕಾಶದಲ್ಲಿ ಎಲ್ಲೆಲ್ಲೂ ಆಶೀರ್ವಾದದ ಧ್ವನಿಗಳು ಕೇಳಿ ಬರುತ್ತಿದ್ದವು. ಎಲ್ಲೆಡೆ ಆನಂದವೇ ಹರಡಿಕೊಂಡಿತು. ಎಲ್ಲರೂ ಹರ್ಷಚಿತ್ತರಾಗಿ– ''ನಾಲ್ಕೂ ಮದುಮಕ್ಕಳ ಜೋಡಿಗಳು ಚಿರಂಜೀವಿಯಾಗಲಿ'' ಎಂದು ಹರಸಿದರು. ದೇವತೆಗಳೂ, ಮುನೀಶ್ವರರೂ, ಸಿದ್ಧರೂ, ಯೋಗಿಗಳೂ ಶ್ರೀರಾಮಚಂದ್ರನನ್ನು ನೋಡಿ ದುಂದುಭಿಗಳನ್ನು ಬಾರಿಸಿದರು. ಹರ್ಷದಿಂದ ಹೂಮಳೆಗರೆಯುತ್ತಾ ಜಯಜಯಕಾರಮಾಡುತ್ತಾ, ಅವರು ತಮ್ಮ-ತಮ್ಮ ಲೋಕಗಳಿಗೆ ತೆರಳಿದರು. (ಛಂ/೧-೪)

**ದೋ – ಸಹಿತ ಬಧೂಟಿನ್ಹ ಕುಅ್ಁರ ಸಬ ತಬ ಆಏ ಪಿತು ಪಾಸ ।**
**ಸೋಭಾ ಮಂಗಲ ಮೋದ ಭರಿ ಉಮಗೆಉ ಜನು ಜನವಾಸ ॥ ೩೨೭ ॥**

ಬಳಿಕ ನಾಲ್ಕೂ ರಾಜಕುಮಾರರು ತಮ್ಮ-ತಮ್ಮ ವಧುಗಳೊಂದಿಗೆ ತಂದೆಯವರ ಬಳಿಗೆ ಬಂದರು. ಆ ಬಿಡದಿಮನೆಯು (ಜನವಾಸ) ಸೌಂದರ್ಯ, ಶೋಭಾನಂದದಿಂದ ತುಂಬಿಹೋಯಿತು. (ದೋ/೩೨೭)

**ಚೌ – ಪುನಿ ಜೆವನಾರ ಭಈ ಬಹು ಭಾಁತೀ । ಪಠಏ ಜನಕ ಬೋಲಾಈ ಬರಾತೀ ॥**
**ಪರತ ಪಾಁವಡೇ ಬಸನ ಅನೂಪಾ । ಸುತನ್ಹ ಸಮೇತ ಗವನ ಕಿಯೊ ಭೂಪಾ ॥ ೧ ॥**
**ಸಾದರ ಸಬ ಕೇ ಪಾಯ ಪಖಾರೇ । ಜಥಾಜೋಗು ಪೀಢನ್ಹ ಬೈಠಾರೇ ॥**
**ಧೋಏ ಜನಕ ಅವಧಪತಿ ಚರನಾ । ಸೀಲು ಸನೇಹು ಜಾಇ ನಹಿಂ ಬರನಾ ॥ ೨ ॥**
**ಬಹುರಿ ರಾಮ ಪದ ಪಂಕಜ ಧೋಏ । ಜೇ ಹರ ಹೃದಯ ಕಮಲ ಮಹುಁ ಗೋಏ ॥**
**ತೀನಿಉ ಭಾಇ ರಾಮ ಸಮ ಜಾನೀ । ಧೋಏ ಚರನ ಜನಕ ನಿಜ ಪಾನೀ ॥ ೩ ॥**
**ಆಸನ ಉಚಿತ ಸಬಹಿ ನೃಪ ದೀನ್ಹೇ । ಬೋಲಿ ಸೂಪಕಾರೀ ಸಬ ಲೀನ್ಹೇ ॥**
**ಸಾದರ ಲಗೇ ಪರನ ಪನವಾರೇ । ಕನಕ ಕೀಲ ಮನಿ ಪಾನ ಸಁವಾರೇ ॥ ೪ ॥**

ಅನಂತರ ಅನೇಕ ವಿಧವಾದ ರುಚಿಕರ ಪಕ್ವಾನ್ನಗಳಿಂದದೊಡಗೂಡಿ ಅಡಿಗೆ ಸಿದ್ಧವಾಯಿತು. ಜನಕನು ಬೀಗರನ್ನು (ಗಂಡಿನ ಕಡೆಯವರನ್ನು) ಮೊದಲಿಗೆ ಊಟಕ್ಕೆ ಆಹ್ವಾನಿಸಿದನು. ದಶರಥ ಮಹಾರಾಜರು ಪುತ್ರರೊಂದಿಗೆ, ಪರಿವಾರಸಹಿತವಾಗಿ ಭೋಜನಕ್ಕಾಗಿ ಹೊರನಡೆದನು. ದಾರಿಯುದ್ದಕ್ಕೂ ಅನುಪಮ ವಸ್ತ್ರಗಳನ್ನು ನಡೆಮುಡಿ ಹಾಸಲಾಗಿತ್ತು. ಆದರದಿಂದ ಎಲ್ಲರ ಕಾಲು ತೊಳೆಯಲಾಯಿತು. ಎಲ್ಲರನ್ನೂ ಯೋಗ್ಯವಾದ ಆಸನಗಳಲ್ಲಿ ಕುಳ್ಳಿರಿಸಲಾಯಿತು. ಆಗ ಜನಕನು ಸ್ವತಃ ಅಯೋಧ್ಯಾಧಿಪತಿ ದಶರಥನ ಕಾಲುಗಳನ್ನು ತೊಳೆದನು. ಅವರ ಸ್ನೇಹ, ಸೌಶೀಲ್ಯಗಳು ಪ್ರಶಂಸನೀಯವಾದವುಗಳು. ಬಳಿಕ ಪರಶಿವನು ಸರ್ವದಾ ತನ್ನ ಹೃದಯದಲ್ಲಿರಿಸಿಕೊಂಡಿರುವ ಶ್ರೀರಾಮನ ಚರಣಕಮಲಗಳನ್ನು ಜನಕನು ತೊಳೆದನು. ಉಳಿದ ಮೂವರೂ ಸೋದರರ ಪಾದಗಳನ್ನೂ, ಶ್ರೀರಾಮನ ಪಾದಗಳಂತೆ ತೊಳೆದನು. ಅನಂತರ ಅವರಿಗೆಲ್ಲರಿಗೂ ಉಚಿತಾಸನಗಳನ್ನು ನೀಡಿದನು. ಬಡಿಸುವವರನ್ನೂ ಕರೆಸಿದನು. ಆದರದಿಂದ ರತ್ನದ ತಗಡುಗಳಿಗೆ ಚಿನ್ನದ ಕೀಲುಹೊಡೆದು ನಿರ್ಮಿತವಾದ ಊಟದೆಲೆಗಳು ಅಣಿಮಾಡಲಾಯಿತು. (ಚೌ/೧-೪)

**ದೋ – ಸೂಪೋದನ ಸುರಭೀ ಸರಪಿ ಸುಂದರ ಸ್ವಾದು ಪುನೀತ ।**
**ಛನ ಮಹುಂ ಸಬ ಕೇಂ ಪರುಸಿ ಗೇ ಚತುರ ಸುಆರ ಬಿನೀತ ॥ ೩೨೮ ॥**

ಚತುರರೂ, ವಿನೀತರೂ ಆದ ಬಾಣಸಿಗರು ಚೆಲುವಾದ ರುಚಿಕರವಾದ ತೊವ್ವೆ, ಅನ್ನ, ಹಸುವಿನ ಗಮಗಮಿಸುವ ತುಪ್ಪ ಕ್ಷಣಾರ್ಧದಲ್ಲಿ ಬಡಿಸಿ ಹೋದರು. (ದೋ/೩೨೮)

**ಚೌ – ಪಂಚ ಕವಲ ಕರಿ ಜೇವನ ಲಾಗೇ । ಗಾರಿ ಗಾನ ಸುನಿ ಅತಿ ಅನುರಾಗೇ ॥**
**ಭಾಂತಿ ಅನೇಕ ಪರೇ ಪಕವಾನೇ । ಸುಧಾ ಸರಿಸ ನಹಿಂ ಜಾಹಿಂ ಬಖಾನೇ ॥ ೧ ॥**
**ಪರುಸನ ಲಗೇ ಸುಆರ ಸುಜಾನಾ । ಬಿಂಜನ ಬಿಬಿಧ ನಾಮ ಕೋ ಜಾನಾ ॥**
**ಚಾರಿ ಭಾಂತಿ ಭೋಜನ ಬಿಧಿ ಗಾಈ । ಏಕ ಏಕ ಬಿಧಿ ಬರನಿ ನ ಜಾಈ ॥ ೨ ॥**
**ಛರಸ ರುಚಿರ ಬಿಂಜನ ಬಹು ಜಾತೀ । ಏಕ ಏಕ ರಸ ಅಗನಿತ ಭಾಂತೀ ॥**
**ಜೇವತ ದೇಹಿಂ ಮಧುರ ಧುನಿ ಗಾರೀ । ಲೈ ಲೈ ನಾಮ ಪುರುಷ ಅರು ನಾರೀ ॥ ೩ ॥**
**ಸಮಯ ಸುಹಾವನಿ ಗಾರಿ ಬಿರಾಜಾ । ಹಂಸತ ರಾಉ ಸುನಿ ಸಹಿತ ಸಮಾಜಾ ॥**
**ಏಹಿ ಬಿಧಿ ಸಬಹೀಂ ಭೋಜನು ಕೀನ್ಹಾ । ಆದರ ಸಹಿತ ಆಚಮನು ದೀನ್ಹಾ ॥ ೪ ॥**

ಮೊದಲಿಗೆ ಎಲ್ಲರೂ ಐದುತುತ್ತು (ಪಂಚ-ಪ್ರಾಣಾಹುತಿಗಳನ್ನು) ಗಳನ್ನು ಮಂತ್ರಯುಕ್ತವಾಗಿ ಉಂಡಬಳಿಕ ಊಟಕ್ಕೆ ತೊಡಗಿದರು. ವ್ಯಂಗೋಕ್ತಿಗಳಿಂದೊಡಗೊಂಡ (ಸರಸಾಲಾಪದಿಂದ ಕೂಡಿದ) ಹಾಡುಗಳನ್ನು ಸಂತೋಷವಾಗಿ ಕೇಳಿದರು. ಅನೇಕ ವಿಧವಾದ ಅಮೃತೋಪಮವಾದ ಪಂಚಭಕ್ಷ್ಯಪರಮಾನ್ನಗಳನ್ನು ಬಡಿಸಿದರು. ಇವುಗಳನ್ನು ವರ್ಣಿಸುವುದೇ ಅಸಾಧ್ಯವಾಗಿದೆ. ಕುಶಲರಾದ ಬಾಣಸಿಗರು ನಾನಾವಿಧವಾದ ವ್ಯಂಜನಗಳನ್ನು ಬಡಿಸತೊಡಗಿದರು. ಚತುರ್ವಿಧ ಭೋಜನ ಪದಾರ್ಥಗಳನ್ನು (ಭಕ್ಷ್ಯ, ಭೋಜ್ಯ, ಚೋಷ್ಯ, ಲೇಹ್ಯ) ಬಡಿಸಿದರು. ಇವುಗಳಲ್ಲಿ ಒಂದೊಂದು ವರ್ಗದಲ್ಲೂ ಎಷ್ಟೊಂದು ಬಗೆಯ ಪದಾರ್ಥಗಳು ತಯಾರಾಗಿದ್ದವೆಂದರೆ ಅದನ್ನು ವರ್ಣಿಸಲಸದಳ. ಆರೂ ರಸಗಳ ಅನೇಕ ವಿಧವಾದ ವ್ಯಂಜನಗಳಿವೆ. ಒಂದೊಂದು ರಸದ್ದೂ ಅಸಂಖ್ಯ ಪದಾರ್ಥಗಳು. ಊಟ ಮಾಡುತ್ತಿದ್ದಾಗ ಬೀಗರ ಹೆಂಗಸರ ಹಾಗೂ ಗಂಡಸರ ಹೆಸರುಗಳನ್ನು ಎತ್ತಿ-ಎತ್ತಿ ಮಧುರವಾಗಿ ವ್ಯಂಗ ಹಾಸ್ಯೋಕ್ತಿ ಗೀತೆಗಳನ್ನು ಹಾಡುತ್ತಿದ್ದರು. ಸಂದರ್ಭೋಚಿತವಾಗಿ ಕಟ್ಟಿದ ಹಾಸ್ಯಮಯ ಹಾಡುಗಳಿಂದ ಎಲ್ಲರೂ ಸಂತಸಪಟ್ಟರು. ದಶರಥ ಮಹಾರಾಜರೂ ತನ್ನ ಪರಿವಾರದೊಂದಿಗೆ ಆನಂದಪಟ್ಟರು. ಈ ರೀತಿಯಿಂದ ಎಲ್ಲರೂ ಭೋಜನ ಮಾಡಿದರು. ಅನಂತರ ಎಲ್ಲರಿಗೂ ಕೈ ಬಾಯಿ ತೊಳೆಯಲು ನೀರು ಕೊಡಲಾಯಿತು. (ಚೌ/೧-೪)

**ದೋ – ದೇಇ ಪಾನ ಪೂಜೇ ಜನಕ ದಸರಥು ಸಹಿತ ಸಮಾಜ ।**
**ಜನವಾಸೆಹಿ ಗವನೇ ಮುದಿತ ಸಕಲ ಭೂಪ ಸಿರತಾಜ ॥ ೩೨೯ ॥**

ಜನಕನು ದಶರಥನನ್ನೂ ಅವನ ಪರಿವಾರದವರನ್ನೂ ತಾಂಬೂಲಾದಿಗಳಿಂದ ಯಥೋಚಿತವಾಗಿ ಸತ್ಕರಿಸಿದನು. ರಾಜಶಿರೋಮಣಿಯಾದ ದಶರಥನು ಸಂತುಷ್ಟನಾಗಿ ಸಕಲ ಮರ್ಯಾದೆಗಳಿಂದ ತನ್ನ ಬಿಡದಿಗೆ ಬಿಜಯಂಗೈದನು. (ದೋ/೩೨೯)

**ಚೌ – ನಿತ ನೂತನ ಮಂಗಲ ಪುರ ಮಾಹೀಂ । ನಿಮಿಷ ಸರಿಸ ದಿನ ಜಾಮಿನಿ ಜಾಹೀಂ ॥**
**ಬಡೇ ಭೋರ ಭೂಪತಿಮನಿ ಜಾಗೇ । ಜಾಚಕ ಗುನ ಗನ ಗಾವನ ಲಾಗೇ ॥ ೧ ॥**
**ದೇಖಿ ಕುಅಂರ ಬರ ಬಧುನ್ಹ ಸಮೇತಾ । ಕಿಮಿ ಕಹಿ ಜಾತ ಮೋದು ಮನ ಜೇತಾ ॥**
**ಪ್ರಾತಕ್ರಿಯಾ ಕರಿ ಗೇ ಗುರು ಪಾಹೀಂ । ಮಹಾಪ್ರಮೋದು ಪ್ರೇಮು ಮನ ಮಾಹೀಂ ॥ ೨ ॥**
**ಕರಿ ಪ್ರನಾಮು ಪೂಜಾ ಕರ ಜೋರೀ । ಬೋಲೇ ಗಿರಾ ಅಮಿಅಂ ಜನು ಬೋರೀ ॥**
**ತುಮ್ಹರೀ ಕೃಪಾಂ ಸುನಹು ಮುನಿರಾಜಾ । ಭಯಉಂ ಆಜು ಮೈಂ ಪೂರನಕಾಜಾ ॥ ೩ ॥**
**ಅಬ ಸಬ ಬಿಪ್ರ ಬೊಲಾಇ ಗೊಸಾಈಂ । ದೇಹು ಧೇನು ಸಬ ಭಾಂತಿ ಬನಾಈಂ ॥**
**ಸುನಿ ಗುರ ಕರಿ ಮಹಿಪಾಲ ಬಡಾಈ । ಪುನಿ ಪಠಏ ಮುನಿ ಬೃಂದ ಬೊಲಾಈ ॥ ೪ ॥**

ಮಿಥಿಲಾನಗರದಲ್ಲಿ ಪ್ರತಿದಿನವೂ ಮಂಗಳ ಮಹೋತ್ಸವಗಳು ನಿತ್ಯನೂತನವಾಗಿ ಜರಗುತ್ತಾ ಇದ್ದವು. ಹಗಲು-ಇರುಳುಗಳು ನಿಮಿಷದಂತೆ ಉರುಳಿಹೋದವು. ಒಂದು ದಿನ ದಶರಥನು ಮುಂಜಾನೆಯೇ ಮೇಲೆದ್ದನು. ಸೂತರು ಅವನ ಗುಣಗಾನಮಾಡತೊಡಗಿದರು. ತನ್ನ ನಾಲ್ವರು ಕುಮಾರರನ್ನು, ನವವಧುಗಳನ್ನೂ ಕಂಡು, ದಶರಥನ ಮನಸ್ಸಿನಲ್ಲಿ ಉಂಟಾದ

ಆನಂದವನ್ನು ಹೇಳತೀರದು. ಅವನು ತನ್ನ ಪ್ರಾತರಾಹ್ನಿಕಗಳನ್ನೂ, ಮುಗಿಸಿಕೊಂಡು, ವಸಿಷ್ಠರಿದ್ದಲ್ಲಿಗೆ ತೆರಳಿದನು. ದಶರಥನ ಹೃದಯವು ಪ್ರೇಮಾನಂದದಿಂದ ತುಂಬಿಹೋಗಿತ್ತು. ಅವನು ವಸಿಷ್ಠರನ್ನು ಪೂಜಿಸಿ, ಕೈಜೋಡಿಸಿ ವಂದಿಸಿಕೊಂಡು, ಅಮೃತಮಯ ವಚನಗಳಿಂದ ಇಂತೆಂದನು – ''ಮುನಿವರೇಣ್ಯರೇ! ನಿಮ್ಮ ಕೃಪೆಯಿಂದ ಇಂದು ನಾನು ಪೂರ್ಣಕಾಮನಾದೆ. ಸ್ವಾಮಿ! ಬ್ರಾಹ್ಮಣರನ್ನು ಬರಮಾಡಿಕೊಂಡು ಅವರಿಗೆ ಚೆನ್ನಾಗಿ ಒಡವೆ ವಸ್ತ್ರಗಳಿಂದ ಅಲಂಕರಿಸಿದ ಗೋವುಗಳನ್ನು ದಾನಮಾಡಿರಿ.'' ಇದನ್ನು ಕೇಳಿದ ಗುರುಗಳು ರಾಜನನ್ನು ಹೊಗಳಿ, ಮುನಿವೃಂದವನ್ನು ಆಹ್ವಾನಿಸಿದನು. (ಚೌ/೧-೪)

**ದೋ – ಬಾಮದೇಉ ಅರು ದೇವರಿಷಿ ಬಾಲಮೀಕಿ ಜಾಬಾಲಿ ।**
**ಆಏ ಮುನಿಬರ ನಿಕರ ತಬ ಕೌಸಿಕಾದಿ ತಪಸಾಲಿ ॥ ೩೩೦ ॥**

ಆಗ ವಾಮದೇವರೂ, ನಾರದಮಹರ್ಷಿಗಳೂ, ವಾಲ್ಮೀಕಿ, ಜಾಬಾಲೀ, ವಿಶ್ವಾಮಿತ್ರರೂ ಮೊದಲುಗೊಂಡು ತಪೋಧನರಾದ ಮುನಿಶ್ರೇಷ್ಠರ ಗಡಣವೇ ಆಗಮಿಸಿತು. (ದೋ/೩೩೦)

**ಚೌ – ದಂಡ ಪ್ರನಾಮ ಸಬಹಿ ನೃಪ ಕೀನ್ಹೆ । ಪೂಜಿ ಸಪ್ರೇಮ ಬರಾಸನ ದೀನ್ಹೆ ॥**
**ಚಾರಿ ಲಚ್ಛ ಬರ ಧೇನು ಮಗಾಈ । ಕಾಮಸುರಭಿ ಸಮ ಸೀಲ ಸುಹಾಈಂ ॥ ೧ ॥**
**ಸಬ ಬಿಧಿ ಸಕಲ ಅಲಂಕೃತ ಕೀನ್ಹೀಂ । ಮುದಿತ ಮಹಿಪ ಮಹಿದೇವನ್ಹ ದೀನ್ಹೀಂ ॥**
**ಕರತ ಬಿನಯ ಬಹು ಬಿಧಿ ನರನಾಹೂ । ಲಹೆಉಁ ಆಜು ಜಗ ಜೀವನ ಲಾಹೂ ॥ ೨ ॥**
**ಪಾಇ ಅಸೀಸ ಮಹೀಸು ಅನಂದಾ । ಲಿಏ ಬೋಲಿ ಪುನಿ ಜಾಚಕ ಬೃಂದಾ ॥**
**ಕನಕ ಬಸನ ಮನಿ ಹಯ ಗಯ ಸ್ಯಂದನ । ದಿಏ ಬೂಝಿ ರುಚಿ ರಬಿಕುಲನಂದನ ॥ ೩ ॥**
**ಚಲೇ ಪಢತ ಗಾವತ ಗುನ ಗಾಥಾ । ಜಯ ಜಯ ಜಯ ದಿನಕರ ಕುಲ ನಾಥಾ ॥**
**ಏಹಿ ಬಿಧಿ ರಾಮ ಬಿಆಹ ಉಛಾಹೂ । ಸಕಇ ನ ಬರನಿ ಸಹಸ ಮುಖ ಜಾಹೂ ॥ ೪ ॥**

ರಾಜನು ಅವರಿಗೆಲ್ಲರಿಗೂ ದಂಡವತ್ ಪ್ರಣಾಮಗೈದು, ಭಕ್ತಿಶ್ರದ್ಧೆಯಿಂದ ಪೂಜಿಸಿ ಅವರಿಗೆ ಉತ್ತಮವಾದ ದಿವ್ಯಾಸನಗಳನ್ನು ನೀಡಿದನು. ಕಾಮಧೇನುವಿನಂತೆ ಸುಂದರ, ಸಾಧುಗಳಾದ ನಾಲ್ಕು ಲಕ್ಷ ಉತ್ತಮ ಗೋವುಗಳನ್ನು ತರಿಸಿದನು. ಅವುಗಳನ್ನು ಚೆನ್ನಾಗಿ ಅಲಂಕರಿಸಿ, ಪೂಜಿಸಿ, ಪ್ರಸನ್ನಚಿತ್ತದಿಂದ ವಿಪ್ರರಿಗೆ ದಾನಮಾಡಿದನು. ಜಗತ್ತಿನಲ್ಲಿ ಇಂದು ನಾನು ಬದುಕಿನ ಫಲವನ್ನು ಪಡೆದೆ, ಕೃತಕೃತ್ಯನಾದೆ ಎಂದು ಬಿನ್ನವಿಸಿಕೊಂಡನು. ಬ್ರಾಹ್ಮಣರ ಆಶೀರ್ವಾದವನ್ನು ಪಡೆದು ರಾಜನು ಆನಂದಿತನಾದನು. ಅನಂತರ ಯಾಚಕರ ಸಮೂಹವನ್ನು ಕರೆಸಿ, ಅವರೆಲ್ಲರಿಗೂ ಅವರವರ ಅಭಿರುಚಿಯಂತೆ ವಿಚಾರಿಸಿ, ಚಿನ್ನ, ರನ್ನ, ವಸ್ತ್ರ, ಆನೆ, ಕುದುರೆ, ರಥ ಮೊದಲಾದವುಗಳನ್ನು ರವಿಕುಲನಂದನನಾದ ದಶರಥನು ದಾನಮಾಡಿದನು. ದಾನ ಪಡೆದು ಎಲ್ಲರೂ 'ಸೂರ್ಯಕುಲದ ಒಡೆಯನಿಗೆ ಜಯವಾಗಲಿ' ಎಂದು ಹರಸುತ್ತಾ, ಅವನ ಗುಣಗಳನ್ನು ಕೊಂಡಾಡುತ್ತಾ ತಮ್ಮ ಮನೆಗೆ ಮರಳಿದರು. ಈ ವಿಧವಾಗಿ ಶ್ರೀರಾಮನ ವಿವಾಹಮಹೋತ್ಸವ ವೈಭವದಿಂದ ಜರಗಿತು. ಇದನ್ನು ಸಹಸ್ರಮುಖನಾದ ಆದಿಶೇಷನೂ ಕೂಡ ವರ್ಣಿಸಲಾರನು. (ಚೌ/೧-೪)

**ದೋ – ಬಾರ ಬಾರ ಕೌಸಿಕ ಚರನ ಸೀಸು ನಾಇ ಕಹ ರಾಉ ।**
**ಯಹ ಸಬು ಸುಖು ಮುನಿರಾಜ ತವ ಕೃಪಾ ಕಟಾಚ್ಛ ಪಸಾಉ ॥ ೩೩೧ ॥**

ದಶರಥನು ಪುನಃ ಪುನಃ ವಿಶ್ವಾಮಿತ್ರರ ಚರಣಗಳಿಗೆರಗಿ – ''ಈ ಎಲ್ಲ ಆನಂದವೂ ನಿಮ್ಮ ಕೃಪಾಕಟಾಕ್ಷದ ಪ್ರಸಾದವೇ'' ಎಂದು ಬಿನ್ನವಿಸಿಕೊಂಡನು. (ದೋ/೩೩೧)

## ಸೀತಾರಾಮರ ಅಯೋಧ್ಯಾಗಮನ

**ಚೌ – ಜನಕ ಸನೇಹು ಸೀಲು ಕರತೂತೀ । ನೃಪು ಸಬ ಭಾಂತಿ ಸರಾಹ ಬಿಭೂತೀ ॥**
**ದಿನ ಉಠಿ ಬಿದಾ ಅವಧಪತಿ ಮಾಗಾ । ರಾಖಹಿಂ ಜನಕು ಸಹಿತ ಅನುರಾಗಾ ॥ ೧ ॥**
**ನಿತ ನೂತನ ಆದರು ಅಧಿಕಾಈ । ದಿನ ಪ್ರತಿ ಸಹಸ ಭಾಁತಿ ಪಹುನಾಈ ॥**
**ನಿತ ನವ ನಗರ ಅನಂದ ಉಛಾಹೂ । ದಸರಥ ಗವನು ಸೊಹಾಇ ನ ಕಾಹೂ ॥ ೨ ॥**
**ಬಹುತ ದಿವಸ ಬೀತೇ ಏಹಿ ಭಾಁತೀ । ಜನು ಸನೇಹ ರಜು ಬಁಧೇ ಬರಾತೀ ॥**
**ಕೌಸಿಕ ಸತಾನಂದ ತಬ ಜಾಈ । ಕಹಾ ಬಿದೇಹ ನೃಪಹಿ ಸಮುಝಾಈ ॥ ೩ ॥**

**ಅಬ ದಸರಥ ಕಹ್ ಆಯಸು ದೇಹೂ । ಜದ್ಯಪಿ ಛಾಡಿ ನ ಸಕಹು ಸನೇಹೂ ॥**
**ಭಲೇಹಿಂ ನಾಥ ಕಹಿ ಸಚಿವ ಬೊಲಾಏ । ಕಹಿ ಜಯ ಜೀವ ಸೀಸ ತಿನ್ಹ ನಾಏ ॥ ೪ ॥**

ದಶರಥ ಮಹಾರಾಜನು ಜನಕ ಮಹಾರಾಜನ ಸ್ನೇಹಸೌಶೀಲ್ಯವನ್ನೂ, ಐಶ್ವರ್ಯಪ್ರಭಾವವನ್ನೂ, ಸಕಲ ಗೌರವ ಮರ್ಯಾದೆಗಳನ್ನೂ, ಅನೇಕವಿಧದಿಂದ ಪ್ರಶಂಸಿಸಿದನು. ಪ್ರತಿದಿನ ಬೆಳಗೆದ್ದು ದಶರಥನು ಅಯೋಧ್ಯೆಗೆ ಹಿಂತಿರುಗಲು ಅಪ್ಪಣೆ ಬೇಡುವನು. ಆದರೆ ಜನಕನು ಅವರನ್ನು ಬಲವಂತವಾಗಿ ಅಲ್ಲೇ ಉಳಿಸಿಕೊಳ್ಳುವನು. ಆದರ ಸತ್ಕಾರಗಳು ನಿತ್ಯನೂತನವಾಗಿ ಹೆಚ್ಚುತ್ತಾ ಹೋಗುತ್ತವೆ. ನಿತ್ಯವೂ ಸಾವಿರಾರು ಬಗೆಯ ಆತಿಥ್ಯ ನಡೆಯುತ್ತದೆ. ನಗರದಲ್ಲಿ ಪ್ರತಿದಿನವೂ ಹೊಸ-ಹೊಸ ವಿನೋದ ಪ್ರದರ್ಶನಗಳೂ, ಆನಂದೋತ್ಸವಗಳೂ ನಡೆಯುತ್ತವೆ. ದಶರಥನು ಅಯೋಧ್ಯೆಗೆ ಹೋಗುವುದು ಮಿಥಿಲಾವಾಸಿಗಳಿಗೆ ಯಾರಿಗೂ ಹಿಡಿಸುತ್ತಿರಲಿಲ್ಲ. ಈ ವಿಧವಾಗಿ ಗಂಡಿನ ಕಡೆಯವರು ಮಿಥಿಲಾನಗರದ ಜನರ ಪ್ರೇಮಪಾಶದಿಂದ ಬಂಧಿತರಾಗಿದ್ದಾರೋ ಎನ್ನುವಂತೆ ಅನೇಕ ದಿನಗಳು ಕಳೆದವು. ಆಗ ವಿಶ್ವಾಮಿತ್ರರೂ ಮತ್ತು ಶತಾನಂದರೂ ಜನಕನ ಬಳಿಗೆ ಹೋಗಿ ಇಂತೆಂದರು – ''ನಿಮ್ಮ ಸ್ನೇಹ ಅವರನ್ನು ಬೀಳ್ಕೊಡಲೊಲ್ಲದು; ನಿಜ. ಆದರೂ ದಶರಥನಿಗೆ ಹೋಗಲು ಅನುಮತಿಯನ್ನು ನೀಡಿರಿ.'' ಜನಕನು – 'ಸ್ವಾಮಿ! ಹಾಗೇ ಆಗಲಿ' ಎಂದು ಹೇಳಿ ಮಂತ್ರಿಗಳನ್ನು ಕರೆಸಿದನು. ಅವರು ಬಂದು – 'ಮಹಾರಾಜರಿಗೆ ಜಯವಾಗಲಿ' ಎಂದು ಜಯಕಾರಮಾಡಿ ತಲೆವಾಗಿದರು. (ಚೌ/೧-೪)

**ದೋ – ಅವಧನಾಥು ಚಾಹತ ಚಲನ ಭೀತರ ಕರಹು ಜನಾಉ ।**
**ಭಏ ಪ್ರೇಮಬಸ ಸಚಿವ ಸುನಿ ಬಿಪ್ರ ಸಭಾಸದ ರಾಉ ॥ ೩೩೨ ॥**

ಜನಕನು ಹೇಳಿದನು – ''ಅಯೋಧ್ಯಾನಾಥರು ಊರಿಗೆ ಮರಳಲು ಆತುರಪಡುತ್ತಿರುವರು. ಒಳಗೆ ರಾಣೀವಾಸಕ್ಕೆ ಇದರ ಸುದ್ದಿಯನ್ನು ಮುಟ್ಟಿಸಿರಿ.'' ಇದನ್ನು ಕೇಳುತ್ತಲೇ ಸಚಿವರು, ವಿಪ್ರರು, ಸಭಾಸದರು, ಮಹಾರಾಜಾ ಜನಕನೂ ಕೂಡ ಪ್ರೇಮವಿಹ್ವಲರಾದರು. (ದೋ/೩೩೨)

**ಚೌ – ಪುರಬಾಸೀ ಸುನಿ ಚಲಿಹಿ ಬರಾತಾ । ಬೂಝುತ ಬಿಕಲ ಪರಸ್ಪರ ಬಾತಾ ॥**
**ಸತ್ಯ ಗವನು ಸುನಿ ಸಬ ಬಿಲಖಾನೇ । ಮನಹುೆ ಸಾಁಝ ಸರಸಿಜ ಸಕುಚಾನೇ ॥ ೧ ॥**
**ಜಹ್ ಜಹ್ ಆವತ ಬಸೇ ಬರಾತೀ । ತಹ್ ತಹ್ ಸಿದ್ಧ ಚಲಾ ಬಹು ಭಾಁತೀ ॥**
**ಬಿಬಿಧ ಭಾಁತಿ ಮೇವಾ ಪಕವಾನಾ । ಭೋಜನ ಸಾಜು ನ ಜಾಇ ಬಖಾನಾ ॥ ೨ ॥**
**ಭರಿ ಭರಿ ಬಸಹ್ ಅಪಾರ ಕಹಾರಾ । ಪಠಈಂ ಜನಕ ಅನೇಕ ಸುಸಾರಾ ॥**
**ತುರಗ ಲಾಖ ರಥ ಸಹಸ ಪಚೀಸಾ । ಸಕಲ ಸ್ವಾರೇ ನಖ ಅರು ಸೀಸಾ ॥ ೩ ॥**
**ಮತ್ತ ಸಹಸ ದಸ ಸಿಂಧುರ ಸಾಜೇ । ಜಿನ್ಹಹಿ ದೇಖಿ ದಿಸಿಕುಂಜರ ಲಾಜೇ ॥**
**ಕನಕ ಬಸನ ಮನಿ ಭರಿ ಭರಿ ಜಾನಾ । ಮಹಿಷೀಂ ಧೇನು ಬಸ್ತು ಬಿಧಿ ನಾನಾ ॥ ೪ ॥**

ಗಂಡಿನ ದಿಬ್ಬಣವು ಹಿಂದಿರುಗುವುದೆಂದು ಕೇಳಿ, ಮಿಥಿಲಾನಿವಾಸಿಗಳು ''ಇದು ನಿಜವೇ?'' ಎಂದು ಆಶ್ಚರ್ಯದಿಂದ ಪರಸ್ಪರ ಮಾತಾಡಿಕೊಂಡರು. ಹೋಗುವುದು ದಿಟವೆಂದು ತಿಳಿದು ಅವರೆಲ್ಲರ ಮುಖಗಳು ಸಂಧ್ಯಾಕಾಲದಲ್ಲಿ ಮುದುಡುವ ಕಮಲದಂತೆ ಬಾಡಿದವು. ಅಯೋಧ್ಯೆಯಿಂದ ಮಿಥಿಲೆಗೆ ಬರುವಾಗ ದಿಬ್ಬಣದವರು ತಂಗಿಕೊಂಡಿದ್ದ ಕಡೆಗಳಿಗೆಲ್ಲ, ಮರಳಿ ಹೋಗುವಾಗಲೂ ಕೂಡ ಮುಂದಾಗಿಯೇ ಆಹಾರ ಪದಾರ್ಥಗಳನ್ನು ಕಳಿಸಿಕೊಡಲಾಯಿತು. ಅನೇಕ ವಿಧವಾದ ಅವರ್ಣನೀಯವಾದ ಫಲಗಳನ್ನೂ, ಪಕ್ವಾನ್ನಗಳನ್ನೂ, ಭೋಜನ ಸಾಮಗ್ರಿಯನ್ನೂ, ಲೆಕ್ಕವಿಲ್ಲದಷ್ಟು ಎತ್ತುಗಳ ಮೇಲೆ ಹೇರಿ ಹಾಗೂ ಕಾವಡಿಗಳಲ್ಲಿ ತುಂಬಿ ಬೋವಿಗಳ ಮೂಲಕ ಕಳಿಸಿಕೊಡಲಾಯಿತು. ಜೊತೆಗೆ ಅನೇಕ ವಿಧವಾದ ಹಾಸಿಗೆಗಳನ್ನು, ಮಂಚಗಳನ್ನು ಕಳಿಸಲಾಯಿತು. ಸರ್ವಾಲಂಕೃತ ವಾದ ಒಂದು ಲಕ್ಷ ಕುದುರೆಗಳು, ಇಪ್ಪತ್ತೈದು ಸಾವಿರ ರಥಗಳು ಅವರೊಂದಿಗೆ ಕಳುಹಿಸಿದನು. ದಿಗ್ಗಜಗಳೂ ಕೂಡ ತಲೆತಗ್ಗಿಸುವಂತ ಹತ್ತು ಸಾವಿರ ಅಲಂಕೃತ ಮದಗಜಗಳನ್ನೂ ಕಳುಹಿಸಿದನು. ಬಂಡಿಗಳಲ್ಲಿ ಭಂಗಾರ, ರತ್ನಗಳೂ, ವಸ್ತ್ರಗಳೂ, ಹಸು ಮತ್ತು ದಾಸ-ದಾಸಿಯರು ಹಾಗೂ ನಾನಾ ವಿಧವಾದ ಉಡುಗೊರೆಗಳನ್ನು ಜನಕನು ಕಳುಹಿಸಿಕೊಟ್ಟನು. (ಚೌ/೧-೪)

**ದೋ – ದಾಇಜ ಅಮಿತ ನ ಸಕಿಅ ಕಹಿ ದೀನ್ಹ ಬಿದೇಹ್ ಬಹೋರಿ ।**
**ಜೋ ಅವಲೋಕತ ಲೋಕಪತಿ ಲೋಕ ಸಂಪದಾ ಥೋರಿ ॥ ೩೩೩ ॥**

ಜನಕನು ಮತ್ತೆ ಹೇಳಲಾರದಷ್ಟು ಅಪರಿಮಿತವಾದ ಬಳುವಳಿಯನ್ನು ನೀಡಿದನು. ಅದರ ಮುಂದೆ ಲೋಕಪಾಲಕರು ತಮ್ಮ ಸಂಪತ್ತನ್ನು ಅತ್ಯಲ್ಪವೆಂದು ಭಾವಿಸಿದರು. (ದೋ/೩೩೩)

**ಚೌ – ಸಬು ಸಮಾಜು ಏಹಿ ಭಾँತಿ ಬನಾಈ । ಜನಕ ಅವಧಪುರ ದೀನ್ಹ ಪಠಾಈ ॥**
**ಚಲಿಹಿ ಬರಾತ ಸುನತ ಸಬ ರಾನೀਂ । ಬಿಕಲ ಮೀನಗನ ಜನು ಲಘು ಪಾನೀਂ ॥ ೧ ॥**
**ಪುನಿ ಪುನಿ ಸೀಯ ಗೋದ ಕರಿ ಲೇಹೀਂ । ದೇಇ ಅಸೀಸ ಸಿಖಾವನು ದೇಹೀਂ ॥**
**ಹೋ ಏಹು ಸಂತತ ಪಿಯಹಿ ಪಿಆರೀ । ಚಿರು ಅಹಿಬಾತ ಅಸೀಸ ಹಮಾರೀ ॥ ೨ ॥**
**ಸಾಸು ಸಸುರ ಗುರ ಸೇವಾ ಕರೇಹೂ । ಪತಿ ರುಖ ಲಖಿ ಆಯಸು ಅನುಸರೇಹೂ ॥**
**ಅತಿ ಸನೇಹ ಬಸ ಸಖೀਂ ಸಯಾನೀ । ನಾರಿ ಧರಮ ಸಿಖವಹಿਂ ಮೃದು ಬಾನೀ ॥ ೩ ॥**
**ಸಾದರ ಸಕಲ ಕುಅँರಿ ಸಮುಝಾಈਂ । ರಾನಿನ್ಹ ಬಾರ ಬಾರ ಉರ ಲಾಈਂ ॥**
**ಬಹುರಿ ಬಹುರಿ ಭೇಟಹਿਂ ಮಹತಾರೀਂ । ಕಹಹਿਂ ಬಿರಂಚಿ ರಚೀਂ ಕತ ನಾರೀਂ ॥ ೪ ॥**

ಈ ವಿಧವಾಗಿ ಎಲ್ಲ ವಸ್ತುಗಳನ್ನು ಜೊತೆಸೇರಿಸಿ ಜನಕನು ಅಯೋಧ್ಯೆಗೆ ಕಳಿಸಿಕೊಟ್ಟನು. ದಿಬ್ಬಣವು ಮರಳುವುದು ಎಂಬ ಸುದ್ದಿಯನ್ನು ಕೇಳುತ್ತಲೇ ಎಲ್ಲ ರಾಣಿಯರು ಸ್ವಲ್ಪ ನೀರಿನಲ್ಲಿ ಮೀನುಗಳು ವಿಲವಿಲನೆ ಒದ್ದಾಡುವಂತೆ ಒದ್ದಾಡಿದರು. ಅವರು ಮತ್ತೆ-ಮತ್ತೆ ಸೀತೆಯನ್ನು ತೊಡೆಯಲ್ಲಿ ಕುಳ್ಳಿರಿಸಿಕೊಂಡು ಆಶೀರ್ವದಿಸುತ್ತಾ, ಬುದ್ಧಿವಾದ ಹೇಳುತ್ತಾರೆ – ''ನೀನು ಯಾವಾಗಲೂ ನಿನ್ನ ಪತಿಗೆ ಅತ್ಯಂತ ಪ್ರಿಯಳಾಗಿರು. ನಿನ್ನ ಸೌಮಂಗಲ್ಯವು ಅಚಲವಾಗಿರಲಿ, ಇದೇ ನಮ್ಮ ಆಶೀರ್ವಾದವು. ನೀನು ಅತ್ತೆ, ಮಾವ ಮತ್ತು ಗುರುವಿನ ಸೇವೆಮಾಡು. ಪತಿಯ ಸ್ವಭಾವವನ್ನು ಅರಿತು ಅವನಿಗೆ ಸೇವೆ ಮಾಡುತ್ತಿರು'' ಎಂದು ಹಿತವಚನವನ್ನು ಹೇಳುತ್ತಾರೆ. ಚತುರರಾದ ಸೀತೆಯ ಓರಿಗೆಯ ಗೆಳತಿಯರೂ ಆಕೆಗೆ ಹದಿಬದೆಯ ಧರ್ಮವನ್ನು ಅರುಹುತ್ತಿದ್ದರು. ಆದರದಿಂದ ಎಲ್ಲ ಹೆಣ್ಣುಮಕ್ಕಳಿಗೂ ಸ್ತ್ರೀಧರ್ಮವನ್ನು ಉಪದೇಶಿಸಿ ರಾಣಿಯರು ಮತ್ತೆ-ಮತ್ತೆ ಅವರನ್ನು ಆಲಿಂಗಿಸಿಕೊಂಡರು. ತಾಯಿಯರಿಗೆ ಮಕ್ಕಳನ್ನು ಎಷ್ಟುನೋಡಿದರೂ ತೃಪ್ತಿಯಿಲ್ಲ. 'ಬ್ರಹ್ಮನು ಈ ಹೆಣ್ಣು ಜನ್ಮವನ್ನು ಏಕೆ ಕೊಟ್ಟನೋ?' ಎಂದು ಹಲುಬುತ್ತಿದ್ದರು. (ಚೌ/೧-೪)

**ದೋ – ತೇಹಿ ಅವಸರ ಭಾಇನ್ಹ ಸಹಿತ ರಾಮು ಭಾನು ಕುಲ ಕೇತು ।**
**ಚಲೇ ಜನಕ ಮಂದಿರ ಮುದಿತ ಬಿದಾ ಕರಾವನ ಹೇತು ॥ ೩೩೪ ॥**

ಅದೇ ವೇಳೆಯಲ್ಲಿ ಭಾನುಕುಲಕೇತು (ಶ್ರೇಷ್ಠ)ವಾದ ಶ್ರೀರಾಮಚಂದ್ರನು ಪ್ರಸನ್ನಚಿತ್ತನಾಗಿ, ಸೋದರರೊಂದಿಗೆ ಬೀಳ್ಕೊಳ್ಳಲು ಜನಕನ ಅರಮನೆಗೆ ತೆರಳಿದನು. (ದೋ/೩೩೪)

**ಚೌ – ಚಾರಿಉ ಭಾಇ ಸುಭಾಯँ ಸುಹಾಏ । ನಗರ ನಾರಿ ನರ ದೇಖನ ಧಾಏ ॥**
**ಕೋಉ ಕಹ ಚಲನ ಚಹತ ಹಹਿਂ ಆಜೂ । ಕೀನ್ಹ ಬಿದೇಹ ಬಿದಾ ಕರ ಸಾಜೂ ॥ ೧ ॥**
**ಲೇಹು ನಯನ ಭರಿ ರೂಪ ನಿಹಾರೀ । ಪ್ರಿಯ ಪಾಹುನೇ ಭೂಪ ಸುತ ಚಾರೀ ॥**
**ಕೋ ಜಾನೈ ಕೇಹਿਂ ಸುಕೃತ ಸಯಾನೀ । ನಯನ ಅತಿಥಿ ಕೀನ್ಹೇ ಬಿಧಿ ಆನೀ ॥ ೨ ॥**
**ಮರನಸೀಲು ಜಿಮಿ ಪಾವ ಪಿಊಷಾ । ಸುರತರು ಲಹೈ ಜನಮ ಕರ ಭೂಖಾ ॥**
**ಪಾವ ನಾರಕೀ ಹರಿಪದು ಜೈಸೇਂ । ಇನ್ಹ ಕರ ದರಸನು ಹಮ ಕಹँ ತೈಸೇਂ ॥ ೩ ॥**
**ನಿರಖಿ ರಾಮ ಸೋಭಾ ಉರ ಧರಹೂ । ನಿಜ ಮನ ಫನಿ ಮೂರತಿ ಮನಿ ಕರಹೂ॥**
**ಏಹಿ ಬಿಧಿ ಸಬಹಿ ನಯನ ಫಲು ದೇತಾ । ಗಏ ಕುಅँರ ಸಬ ರಾಜ ನಿಕೇತಾ ॥ ೪ ॥**

ಮಿಥಿಲಾನಗರದ ಸ್ತ್ರೀಪುರುಷರೆಲ್ಲರೂ ಸಹಜಸುಂದರರಾದ ಆ ನಾಲ್ವರೂ ಸೋದರರನ್ನು ನೋಡಲು ಗುಂಪು ಸೇರಿದರು. ಅವರಲ್ಲಿ ಒಬ್ಬರು – ''ಇಂದೇ ಇವರು ಹಿಂದಿರುಗಲಿದ್ದಾರಂತೆ. ಅದಕ್ಕಾಗಿಯೇ ವಿದೇಹರಾಜನು ಅವರ ಬೀಳ್ಕೊಡುಗೆಗೆ ಎಲ್ಲ ಏರ್ಪಾಡುಗಳನ್ನೂ ಮಾಡಿದ್ದಾನೆ. ನಮ್ಮ ಈ ಅತಿಥಿಗಳು ಪ್ರೇಮಾಸ್ಪದರೂ, ಸುಂದರರೂ ಆದ ನಾಲ್ವರು ರಾಜಕುಮಾರರನ್ನು ಕಣ್ತುಂಬಾ ನೋಡಿಕೊಳ್ಳಿ. ಅವರ ಸೌಂದರ್ಯಮಕರಂದವನ್ನು ನಿಮ್ಮ ನೇತ್ರಗಲೆಂಬ ಚಷಕಗಳಿಂದ ತೃಪ್ತಿಯಾಗಿ ಪಾನಮಾಡಿರಿ'' ಎಂದರು. ಮತ್ತೊಬ್ಬಳು – ''ಎಲೈ ಸಖೀ! ಯಾರ ಪುಣ್ಯದಿಂದಲೋ ವಿಧಾತನು ಇವರನ್ನು ಇಲ್ಲಿಗೆ ತಂದು ನಮ್ಮ ಕಣ್ಣುಗಳ ಅತಿಥಿಯನ್ನಾಗಿಸಿರುವನು. ಇವರ ದರ್ಶನವು ನಮ್ಮ ಪಾಲಿಗೆ – ಸಾಯುವವನಿಗೆ ಅಮೃತ ದೊರೆತಂತೆ. ಜೀವನವಿಡೀ ಹಸಿದವನಿಗೆ ಕಲ್ಪವೃಕ್ಷದೊರೆತಂತೆ, ನಾರಕಿಗೆ (ನರಕಕ್ಕೆ ಹೋಗುವವರು) ಹರಿಪದ ದೊರಕಿದಂತೆ ಇವರ ದರ್ಶನ ಭಾಗ್ಯ ದೊರಕಿದೆ. ಶ್ರೀರಾಮಚಂದ್ರನ ಅಲೌಕಿಕ ಸೌಂದರ್ಯವನ್ನು ಕಣ್ಣಿಟ್ಟು ನೋಡಿ, ಸರ್ಪವು ಮಣಿಯನ್ನು ತನ್ನ ಹೆಡೆಯಮೇಲೆ ಭದ್ರವಾಗಿರಿಸಿಕೊಳ್ಳುವಂತೆ, ಅವನ ರೂಪವನ್ನು ಹೃದಯದಲ್ಲಿ ಸ್ಥಿರವಾಗಿಸಿಟ್ಟುಕೊಳ್ಳಿ ಎಂದು ಹೇಳುತ್ತಾಳೆ. ಈ ವಿಧವಾಗಿ ಎಲ್ಲರಿಗೆ ನಯನಾನಂದವನ್ನು ಕರುಣಿಸಿ, ರಾಜಕುಮಾರರು ರಾಜಭವನವನ್ನು ಪ್ರವೇಶಿಸಿದರು. (ಚೌ/೧-೪)

**ದೋ – ರೂಪ ಸಿಂಧು ಸಬ ಬಂಧು ಲಖಿ ಹರಷಿ ಉಠಾ ರನಿವಾಸು।**
**ಕರಹಿಂ ನಿಛಾವರಿ ಆರತೀ ಮಹಾ ಮುದಿತ ಮನ ಸಾಸು ॥ ೩೩೫ ॥**

ರೂಪಸಿಂಧುವಾದ ಆ ರಾಜಕುಮಾರರನ್ನು ಕಂಡು ರಾಣಿವಾಸದವರೆಲ್ಲರೂ ಹರ್ಷೋಲ್ಲಾಸಭರಿತರಾದರು. ಅತ್ತೆಯಂದಿರು ಹರ್ಷಚಿತ್ತದಿಂದ ಅಳಿಯಂದಿರನ್ನು ನಿವಾಳಿಸಿ ದೃಷ್ಟಿತೆಗೆದರು ಹಾಗೂ ಆರತಿ ಬೆಳಗಿದರು. (ದೋ/೩೩೫)

**ಚೌ – ದೇಖಿ ರಾಮ ಛಬಿ ಅತಿ ಅನುರಾಗೀಂ । ಪ್ರೇಮಬಿಬಸ ಪುನಿ ಪುನಿ ಪದ ಲಾಗೀಂ ॥**
**ರಹೀ ನ ಲಾಜ ಪ್ರೀತಿ ಉರ ಛಾಈ । ಸಹಜ ಸನೇಹು ಬರನಿ ಕಿಮಿ ಜಾಈ ॥ ೧ ॥**
**ಭಾಇನ್ಹ ಸಹಿತ ಉಬಟಿ ಅನ್ಹವಾಏ । ಛರಸ ಅಸನ ಅತಿ ಹೇತು ಜೆವಾಂಏ ॥**
**ಬೋಲೇ ರಾಮು ಸುಅವಸರು ಜಾನೀ । ಸೀಲ ಸನೇಹ ಸಕುಚಮಯ ಬಾನೀ ॥ ೨ ॥**
**ರಾಉ ಅವಧಪುರ ಚಹತ ಸಿಧಾಏ । ಬಿದಾ ಹೋನ ಹಮ ಇಹಾಂ ಪಠಾಏ ॥**
**ಮಾತು ಮುದಿತ ಮನ ಆಯಸು ದೇಹೂ । ಬಾಲಕ ಜಾನಿ ಕರಬ ನಿತ ನೇಹೂ ॥ ೩ ॥**
**ಸುನತ ಬಚನ ಬಿಲಖೆಉ ರನಿವಾಸೂ । ಬೋಲಿ ನ ಸಕಹಿಂ ಪ್ರೇಮಬಸ ಸಾಸೂ ॥**
**ಹೃದಯಂ ಲಗಾಇ ಕುಅಁರಿ ಸಬ ಲೀನ್ಹೀ । ಪತಿನ್ಹ ಸೌಂಪಿ ಬಿನತೀ ಅತಿ ಕೀನ್ಹೀ ॥ ೪ ॥**

ಶ್ರೀರಾಮನ ಚೆಲುವನ್ನು ಕಂಡು ಅವರು ಅತ್ಯಂತ ಪ್ರೇಮಮಗ್ನರಾಗಿ ಹೋದರು. ಮತ್ತೆ-ಮತ್ತೆ ಚರಣಗಳಿಗೆ ಎರಗಿದರು. ಅವರ ಹೃದಯದಲ್ಲಿ ಪ್ರೀತಿ ತುಂಬಿ ಬಂತು. ಆದ್ದರಿಂದ ಲಜ್ಜೆ ಹೆಜ್ಜೆ ಹಾಕಲಿಲ್ಲ. ಅವರ ಸ್ನೇಹವನ್ನು ಏನೆಂದು ಬಣ್ಣಿಸುವುದು? ಅವರು ಶ್ರೀರಾಮನಿಗೆ ಹಾಗೂ ಅವನ ಸೋದರರಿಗೆ ಎಣ್ಣೆ ನೀರು ಹಾಕಿದರು. ಪ್ರೇಮದಿಂದ ಷಡ್ರಸೋಪೇತ ಭೋಜನ ಮಾಡಿಸಿದರು. ಆಗ ಶ್ರೀರಾಮನು ಅವಕಾಶವನ್ನರಿತು ಸ್ನೇಹ, ಸೌಶೀಲ್ಯ, ಸಂಕೋಚದಿಂದ ಹೀಗೆ ನುಡಿದನು – ನಮ್ಮ ತಂದೆಯವರು ಅಯೋಧ್ಯೆಗೆ ಮರಳಲು ಬಯಸುತ್ತಿರುವರು. ನಿಮ್ಮಿಂದ ಬೀಳ್ಕೊಳ್ಳಲು ನಮ್ಮನ್ನು ಇಲ್ಲಿಗೆ ಕಳಿಸಿರುವರು. ಅದರಿಂದ ''ಅಮ್ಮಾ! ನಮ್ಮನ್ನು ನಿಮ್ಮ ಕಂದಮ್ಮಗಳೆಂದು ತಿಳಿದು, ವಾತ್ಸಲ್ಯದಿಂದ ನಮಗೆ ಅನುಮತಿಯನ್ನು ನೀಡಿರಿ.'' ಈ ಮಾತನ್ನು ಕೇಳಿದ ಕೂಡಲೇ ರಾಣಿವಾಸದವರು ದುಗುಡಗೊಂಡರು. ಪ್ರೇಮದಿಂದ ಅತ್ತೆಯವರ ಬಾಯಿಕಟ್ಟಿಹೋಯಿತು. ಅವರು ಎಲ್ಲ ರಾಜಕುಮಾರಿಯರನ್ನು ಎದೆಗವುಚಿಕೊಂಡರು. ಮತ್ತೆ ಅವರನ್ನು ಅವರವರ ಗಂಡಂದಿರಿಗೆ ಒಪ್ಪಿಸಿ ಇಂತೆಂದರು – (ಚೌ/೧-೪)

**ಛಂ – ಕರಿ ಬಿನಯ ಸಿಯ ರಾಮಹಿ ಸಮರಪೀ ಜೋರಿ ಕರ ಪುನಿ ಪುನಿ ಕಹೈ ।**
**ಬಲಿ ಜಾಉಂ ತಾತ ಸುಜಾನ ತುಮ್ಹ ಕಹುಂ ಬಿದಿತ ಗತಿ ಸಬ ಕೀ ಅಹೈ ॥**
**ಪರಿವಾರ ಪುರಜನ ಮೋಹಿ ರಾಜಹಿ ಪ್ರಾನಪ್ರಿಯ ಸಿಯ ಜಾನಿಬೀ ।**
**ತುಲಸೀಸ ಸೀಲು ಸನೇಹು ಲಖಿ ನಿಜ ಕಿಂಕರೀ ಕರಿ ಮಾನಿಬೀ ॥**

ಸೀತಾದೇವಿಯ ತಾಯಿಯು ಆಕೆಯನ್ನು ಶ್ರೀರಾಮನಿಗೆ ಒಪ್ಪಿಸಿ, ಕೈಜೋಡಿಸಿಕೊಂಡು ಹೀಗೆ ಬಿನ್ನವಿಸಿಕೊಂಡಳು – ''ಮಗೂ! ನೀನು ಸಜ್ಜನ ಶಿರೋಮಣಿಯು! ನಾನು ಆಣೆಯಿಟ್ಟು ಹೇಳುತ್ತೇನೆ. ಸೀತೆಯು ನನಗೂ, ಮಹಾರಾಜರಿಗೂ, ಮಾತ್ರವಲ್ಲ, ಬಂಧುಗಳಿಗೆ, ಪುರವಾಸಿಗಳಿಗೆ ಪ್ರಾಣಪ್ರಿಯಳು ಎಂದು ತಿಳಿ. ಓ ತುಳಸೀ(ದಾಸ) ಪ್ರಭು! ಅವಳ ಸ್ನೇಹ, ಸೌಶೀಲ್ಯವನ್ನು ಮನಗಂಡು, ಅವಳನ್ನು ತನ್ನ ದಾಸಿಯೆಂದು ಭಾವಿಸಿರಿ. (ಛಂದ)

**ಸೋ – ತುಮ್ಹ ಪರಿಪೂರನ ಕಾಮ ಜಾನ ಸಿರೋಮನಿ ಭಾವ ಪ್ರಿಯ।**
**ಜನ ಗುನ ಗಾಹಕ ರಾಮ ದೋಷ ದಲನ ಕರುನಾಯತನ ॥ ೩೩೬ ॥**

ರಾಮಾ! ನೀನು ಪೂರ್ಣಕಾಮನು, ಜ್ಞಾನಶಿರೋಮಣಿಯು. ಭಾವಪ್ರಿಯನು. ನೀನು ಭಕ್ತರ ಗುಣಗಳನ್ನು ಮಾತ್ರ ಗ್ರಹಿಸಿ, ಅವರ ದೋಷಗಳನ್ನು ನಾಶಮಾಡುವವನೂ, ಕರುಣಾನಿಧಿಯೂ ಆಗಿರುವೆ. (ದೋ/೩೩೬)

**ಚೌ – ಅಸ ಕಹಿ ರಹೀ ಚರನ ಗಹಿ ರಾನೀ । ಪ್ರೇಮ ಪಂಕ ಜನು ಗಿರಾ ಸಮಾನೀ ॥**
**ಸುನಿ ಸನೇಹಸಾನೀ ಬರ ಬಾನೀ । ಬಹುಬಿಧಿ ರಾಮ ಸಾಸು ಸನಮಾನೀ ॥ ೧ ॥**
**ರಾಮ ಬಿದಾ ಮಾಗತ ಕರ ಜೋರೀ । ಕೀನ್ಹ ಪ್ರನಾಮು ಬಹೋರಿ ಬಹೋರೀ ॥**
**ಪಾಇ ಅಸೀಸ ಬಹುರಿ ಸಿರು ನಾಈ । ಭಾಇನ್ಹ ಸಹಿತ ಚಲೇ ರಘುರಾಈ ॥ ೨ ॥**

**ಮಂಜು ಮಧುರ ಮೂರತಿ ಉರ ಆನೀ ।ಭಈಂ ಸನೇಹ ಸಿಥಿಲ ಸಬ ರಾನೀ ॥**
**ಪುನಿ ಧೀರಜು ಧರಿ ಕುಅँರಿ ಹँಕಾರೀ ।ಬಾರ ಬಾರ ಭೇಟಹಿಂ ಮಹತಾರೀ ॥ ೩ ॥**
**ಪಹುँಚಾವಹಿಂ ಫಿರಿ ಮಿಲಹಿಂ ಬಹೋರೀ ।ಬಢೀ ಪರಸ್ಪರ ಪ್ರೀತಿ ನ ಥೋರೀ ॥**
**ಪುನಿ ಪುನಿ ಮಿಲತ ಸಖಿನ್ಹ ಬಿಲಗಾಈ ।ಬಾಲ ಬಚ್ಛ ಜಿಮಿ ಧೇನು ಲವಾಈ ॥ ೪ ॥**

ಹೀಗೆ ಹೇಳಿ ರಾಣಿಯು ಶ್ರೀರಾಮನ ಚರಣಕಮಲಗಳನ್ನು ಹಿಡಿದುಕೊಂಡು ಏನೂ ತೋಚದವಳಂತೆ ತೆಪ್ಪನೆ ಕುಳಿತುಬಿಟ್ಟಳು. ಆಕೆಯ ವಾಣಿಯು ಪ್ರೇಮಪಂಕದಲ್ಲಿ ಹೂತುಹೋಗಿದೆಯೋ ಎನ್ನುವಂತಿತ್ತು. ಸ್ನೇಹಾರ್ದ್ರವಾದ ಆಕೆಯ ಮಾತನ್ನು ಕೇಳಿ ಶ್ರೀರಾಮನು ಅವಳನ್ನು ಅನೇಕ ರೀತಿಯಿಂದ ಸಂತೈಸಿದನು. ಶ್ರೀರಾಮನು ಕೈಜೋಡಿಸಿಕೊಂಡು ಹಿಂದಿರುಗಲು ಅಪ್ಪಣೆಬೇಡುತ್ತಾ ಮತ್ತೆ-ಮತ್ತೆ ಪ್ರಣಾಮಮಾಡಿದನು. ಅವರೆಲ್ಲರ ಆಶೀರ್ವಾದವನ್ನು ಪಡೆದು ಪುನಃ ತಲೆವಾಗಿ ತನ್ನ ತಮ್ಮಂದಿರೊಂದಿಗೆ ಶ್ರೀರಘುನಾಥನು ಬೀಳ್ಕೊಂಡನು. ಶ್ರೀರಾಮನ ಸುಂದರ ಮಧುರಮೂರ್ತಿಯನ್ನು ಹೃದಯದಲ್ಲಿ ನಿಲ್ಲಿಸಿಕೊಂಡು, ರಾಣಿಯರು ಪ್ರೇಮವಿಹ್ವಲರಾದರು. ಅನಂತರ ಸಾವರಿಸಿಕೊಂಡು ತಮ್ಮ ಕುಮಾರಿಯರನ್ನು ಕರೆದು ತಾಯಂದಿರು ಮತ್ತೆ-ಮತ್ತೆ ತಬ್ಬಿಕೊಂಡರು. ಅವರು ತಮ್ಮ ಹೆಣ್ಣುಮಕ್ಕಳನ್ನು ಬೀಳ್ಕೊಡುತ್ತಿದ್ದರು. ಮತ್ತೆ ಸ್ವಲ್ಪದೂರ ಹೋಗಿ ಅವರನ್ನು ಅಪ್ಪಿಕೊಳ್ಳುತ್ತಿದ್ದರು. ತಾಯಿ-ಮಕ್ಕಳ ಪ್ರೀತಿ ಉಕ್ಕಿಹರಿಯಿತು. ಮತ್ತೆ-ಮತ್ತೆ ಬಂದು ಹೋಗುತ್ತಿದ್ದ ತಾಯಂದಿರನ್ನು ಈದ ಹಸುವನ್ನು ಕರುವಿನಿಂದ ಬೇರ್ಪಡಿಸುವಂತೆ ಸಖಿಯರು ಬೇರೆಯಾಗಿ ಕರೆದೊಯ್ದರು. (ಚೌ/೧-೪)

**ದೋ – ಪ್ರೇಮಬಿಬಸ ನರ ನಾರಿ ಸಬ ಸಖಿನ್ಹ ಸಹಿತ ರನಿವಾಸು ।**
**ಮಾನಹುँ ಕೀನ್ಹ ಬಿದೇಹಪುರ ಕರುನಾँ ಬಿರಹँ ನಿವಾಸು ॥ ೩೩೭ ॥**

ಮಿಥಿಲಾನಗರದ ಎಲ್ಲ ಸ್ತ್ರೀ-ಪುರುಷರೂ, ಸಖಿಯರಿಂದ ಕೂಡಿದ ಇಡೀ ರಾಣೀವಾಸವೂ ಪ್ರೇಮಾಭಿಭೂತವಾಯಿತು. ಜನಕಪುರದಲ್ಲಿ ಕರುಣಾರಸವೂ, ವಿರಹವೇದನೆಯೂ ಮೂರ್ತೀಭವಿಸಿದಂತೆ ಎಲ್ಲೆಡೆ ಹರಡಿತು. (ದೋ/೩೩೭)

**ಚೌ – ಸುಕ ಸಾರಿಕಾ ಜಾನಕೀ ಜ್ಯಾಏ ।ಕನಕ ಪಿಂಜರನ್ಹಿ ರಾಖಿ ಪಢಾಏ ॥**
**ಬ್ಯಾಕುಲ ಕಹಹಿಂ ಕಹಾँ ಬೈದೇಹೀ ।ಸುನಿ ಧೀರಜು ಪರಿಹರಇ ನ ಕೇಹೀ ॥ ೧ ॥**
**ಭಏ ಬಿಕಲ ಖಗ ಮೃಗ ಏಹಿ ಭಾँತೀ ।ಮನುಜ ದಸಾ ಕೈಸೇಂ ಕಹಿ ಜಾತೀ ॥**
**ಬಂಧು ಸಮೇತ ಜನಕು ತಬ ಆಏ ।ಪ್ರೇಮ ಉಮಗಿ ಲೋಚನ ಜಲ ಛಾಏ ॥ ೨ ॥**
**ಸೀಯ ಬಿಲೋಕಿ ಧೀರತಾ ಭಾಗೀ ।ರಹೇ ಕಹಾವತ ಪರಮ ಬಿರಾಗೀ ॥**
**ಲೀನ್ಹಿ ರಾಯँ ಉರ ಲಾಇ ಜಾನಕೀ ।ಮಿಟೀ ಮಹಾಮರಜಾದ ಗ್ಯಾನ ಕೀ ॥ ೩ ॥**
**ಸಮುಝಾವತ ಸಬ ಸಚಿವ ಸಯಾನೇ ।ಕೀನ್ಹ ಬಿಚಾರು ನ ಅವಸರ ಜಾನೇ ॥**
**ಬಾರಹಿಂ ಬಾರ ಸುತಾ ಉರ ಲಾಈಂ ।ಸಜಿ ಸುಂದರ ಪಾಲಕೀಂ ಮಗಾಈಂ ॥ ೪ ॥**

ಜಾನಕಿಯು ಬಂಗಾರದ ಪಂಜರದಲ್ಲಿ ಸಾಕಿದ ಗಿಳಿಗಳು, ಮೈನಾಹಕ್ಕಿಗಳು ವೈದೇಹಿ ಎಲ್ಲಿ? ವೈದೇಹಿ ಎಲ್ಲಿ? ಎಂದು ಕೂಗಿಕೊಳ್ಳುತ್ತಿದ್ದವು. ಇದನ್ನು ಕೇಳಿದವರ ಕರುಳು ಕತ್ತರಿಸುವಂತೆ ಸಂಕಟಪಡುತ್ತಿದ್ದರು. ಪಶು-ಪಕ್ಷಿಗಳೇ ಈ ವಿಧವಾಗಿ ವ್ಯಾಕುಲರಾಗಿರುವಾಗ, ಮನುಷ್ಯರ ಸ್ಥಿತಿ ಹೇಳತೀರದು. ಜನಕನು ತನ್ನ ತಮ್ಮನಾದ ಕುಶಧ್ವಜನೊಂದಿಗೆ ಅಲ್ಲಿಗೆ ಬಂದನು. ಪ್ರೇಮಾತಿರೇಕದಿಂದ ಆತನ ಕಣ್ಣುಗಳಿಂದ ಕಂಬನಿ ಹರಿದವು. ಅವನನ್ನು ಎಲ್ಲರೂ ಪರಮವಿರಾಗಿ ಎಂದು ಹೇಳುತ್ತಿದ್ದರು. ಆದರೆ ಗಂಡನಮನೆಗೆ ಹೊರಟಿರುವ ಸೀತೆಯನ್ನು ಕಂಡು ಅವನ ಧೈರ್ಯ, ವೈರಾಗ್ಯಗಳು ಎಗರಿಹೋದವು. ಜನಕನು ಜಾನಕಿಯನ್ನು ಎದೆಗವುಚಿಕೊಂಡನು. ಪ್ರೇಮದ ಪ್ರಭಾವದಿಂದ ಜ್ಞಾನದ ಮಹಾನ್ ಕಟ್ಟೆ ಒಡೆದುಹೋಯಿತು. ಆಗ ಬುದ್ಧಿವಂತರಾದ ಮಂತ್ರಿಗಳು ಅವರನ್ನು ಸಂತೈಸತೊಡಗಿದರು. ಆಗ ಅರಸನು ಇದು ವಿಷಾದಪಡುವ ಸಮಯವಲ್ಲವೆಂದು ಮನಗಂಡು, ಮತ್ತೆ-ಮತ್ತೆ ತನ್ನ ಕುಮಾರಿಯರನ್ನು ಅಪ್ಪಿಕೊಂಡು, ಅವನು ಸುಂದರವೂ, ಸುಸಜ್ಜಿತವೂ ಆದ ಪಲ್ಲಕ್ಕಿಗಳನ್ನು ತರಿಸಿದನು. (ಚೌ/೧-೪)

**ದೋ – ಪ್ರೇಮಬಿಬಸ ಪರಿವಾರು ಸಬು ಜಾನಿ ಸುಲಗನ ನರೇಸ ।**
**ಕುಅँರಿ ಚಢಾಈಂ ಪಾಲಕಿನ್ಹ ಸುಮಿರೇ ಸಿದ್ಧಿ ಗನೇಸ ॥ ೩೩೮ ॥**

ಜನಕನ ಇಡೀ ಪರಿವಾರವು ಪ್ರೇಮವೇದನೆಯಲ್ಲಿ ಬಸವಳಿದಿತ್ತು. ಅರಸನು ಒಳ್ಳೆಯ ಸುಮುಹೂರ್ತದಲ್ಲಿ ಸಿದ್ಧಿಸಹಿತ ಗಣಪತಿಯನ್ನು ಸ್ಮರಿಸಿ, ತನ್ನ ಕುಮಾರಿಯರನ್ನು ಪಲ್ಲಕ್ಕಿಗಳಲ್ಲಿ ಕುಳ್ಳಿರಿಸಿದನು. (ದೋ/೩೩೮)

**ಚೌ – ಬಹುಬಿಧಿ ಭೂಪ ಸುತಾ ಸಮುಝಾಈಂ । ನಾರಿಧರಮು ಕುಲರೀತಿ ಸಿಖಾಈಂ ॥**
**ದಾಸೀಂ ದಾಸ ದಿಏ ಬಹುತೇರೇ । ಸುಚಿ ಸೇವಕ ಜೇ ಪ್ರಿಯ ಸಿಯ ಕೇರೇ ॥ ೧ ॥**
**ಸೀಯ ಚಲತ ಬ್ಯಾಕುಲ ಪುರಬಾಸೀ । ಹೋಹಿಂ ಸಗುನ ಸುಭ ಮಂಗಲ ರಾಸೀ ॥**
**ಭೂಸುರ ಸಚಿವ ಸಮೇತ ಸಮಾಜಾ । ಸಂಗ ಚಲೇ ಪಹುಂಚಾವನ ರಾಜಾ ॥ ೨ ॥**
**ಸಮಯ ಬಿಲೋಕಿ ಬಾಜನೇ ಬಾಜೇ । ರಥ ಗಜ ಬಾಜಿ ಬರಾತಿನ್ಹ ಸಾಜೇ ॥**
**ದಸರಥ ಬಿಪ್ರ ಬೋಲಿ ಸಬ ಲೀನ್ಹೇ । ದಾನ ಮಾನ ಪರಿಪೂರನ ಕೀನ್ಹೇ ॥ ೩ ॥**
**ಚರನ ಸರೋಜ ಧೂರಿ ಧರಿ ಸೀಸಾ । ಮುದಿತ ಮಹೀಪತಿ ಪಾಇ ಅಸೀಸಾ ॥**
**ಸುಮಿರಿ ಗಜಾನನು ಕೀನ್ಹ ಪಯಾನಾ । ಮಂಗಲಮೂಲ ಸಗುನ ಭಏ ನಾನಾ ॥ ೪ ॥**

ಜನಕ ಮಹಾರಾಜನು ತನ್ನ ಮಕ್ಕಳಿಗೆ ಅನೇಕವಿಧದಿಂದ ಬುದ್ಧಿವಾದವನ್ನು ಹೇಳಿ ಹದಿಬದೆಯ ಧರ್ಮ ಹಾಗೂ ಕುಲದ ರೀತಿನೀತಿಗಳನ್ನು ಬೋಧಿಸಿದನು. ಸೀತಾದೇವಿಗೆ ವಿಶ್ವಾಸಪಾತ್ರರೂ, ಪ್ರಿಯರೂ ಆದ ಅನೇಕ ದಾಸ-ದಾಸಿಯರನ್ನು ಬಳುವಳಿಯಾಗಿ ನೀಡಿದನು. ಸೀತಾದೇವಿಯು ಗಂಡನೊಡನೆ ಅತ್ತೆಯ ಮನೆಗೆ ಹೊರಟಾಗ ಜನಕಪುರದ ನಿವಾಸಿಗಳು ಅತ್ಯಂತ ವ್ಯಾಕುಲಿತರಾದರು. ಶುಭ ಶಕುನಗಳೂ, ಮಂಗಳಕರ ಚಿಹ್ನೆಗಳೂ ಗೋಚರಿಸಿದವು. ಬ್ರಾಹ್ಮಣರೂ, ಮಂತ್ರಿಗಳೂ ಇವರೊಂದಿಗೆ ಜನಕನು ಅವರನ್ನು ಬೀಳ್ಕೊಳ್ಳಲು ಸ್ವಲ್ಪದೂರ ಅವರೊಂದಿಗೆ ಹೊರಟನು. ಸಮಯಕ್ಕೆ ಸರಿಯಾಗಿ ವಾದ್ಯಗಳು ಮೊಳಗಿದವು. ದಿಬ್ಬಣಿಗರು ತಮ್ಮ ಆನೆ, ಕುದುರೆ, ರಥ ಮೊದಲಾದ ವಾಹನಗಳನ್ನು ಸಜ್ಜುಗೊಳಿಸಿದರು. ದಶರಥನು ಎಲ್ಲ ವಿಪ್ರರನ್ನು ಕರೆಸಿ, ಅವರನ್ನು ದಾನ-ಸಮ್ಮಾನಗಳಿಂದ ಸತ್ಕರಿಸಿ ಸಂತುಷ್ಟಗೊಳಿಸಿದನು. ಅವರ ಚರಣಕಮಲಧೂಳಿಯನ್ನು ಶಿರದಲ್ಲಾಂತು, ಅವರಿಂದ ಆಶೀರ್ವಾದಗಳನ್ನು ಪಡೆದು, ಮಹಾಗಣಪತಿಯನ್ನು ಸ್ಮರಿಸಿ, ದಶರಥನು ಪ್ರಯಾಣ ಪ್ರಾರಂಭಿಸಿದನು. ಮಂಗಳಕರವಾದ ಅನೇಕ ಶುಭ ಶಕುನಗಳಾದವು. (ಚೌ/೧-೪)

**ದೋ – ಸುರ ಪ್ರಸೂನ ಬರಷಹಿಂ ಹರಷಿ ಕರಹಿಂ ಅಪಛರಾ ಗಾನ ।**
**ಚಲೇ ಅವಧಪತಿ ಅವಧಪುರ ಮುದಿತ ಬಜಾಇ ನಿಸಾನ ॥ ೩೩೯ ॥**

ದೇವತೆಗಳು ಹರ್ಷಗೊಂಡು ಪುಷ್ಪವೃಷ್ಟಿಯನ್ನು ಗರೆದರು. ಅಪ್ಸರೆಯರು ಹಾಡಿ, ಕುಣಿದರು. ಅಯೋಧ್ಯಾಪತಿಯಾದ ದಶರಥನು ನಗಾರಿಗಳನ್ನು ಬಾರಿಸಲು ಅಪ್ಪಣೆಯಿತ್ತು, ಆನಂದವಾಗಿ ಅಯೋಧ್ಯೆಯ ಕಡೆಗೆ ಪಯಣ ಬೆಳೆಸಿದನು. (ದೋ/೩೩೯)

**ಚೌ – ನೃಪ ಕರಿ ಬಿನಯ ಮಹಾಜನ ಫೇರೇ । ಸಾದರ ಸಕಲ ಮಾಗನೇ ಟೇರೇ ॥**
**ಭೂಷನ ಬಸನ ಬಾಜಿ ಗಜ ದೀನ್ಹೇ । ಪ್ರೇಮ ಪೋಷಿ ಠಾಢೇ ಸಬ ಕೀನ್ಹೇ ॥ ೧ ॥**
**ಬಾರ ಬಾರ ಬಿರಿದಾವಲಿ ಭಾಷೀ । ಫಿರೇ ಸಕಲ ರಾಮಹಿ ಉರ ರಾಖೀ ॥**
**ಬಹುರಿ ಬಹುರಿ ಕೋಸಲಪತಿ ಕಹಹೀಂ । ಜನಕು ಪ್ರೇಮಬಸ ಫಿರೈ ನ ಚಹಹೀಂ ॥ ೨ ॥**
**ಪುನಿ ಕಹ ಭೂಪತಿ ಬಚನ ಸುಹಾಏ । ಫಿರಿಅ ಮಹೀಸ ದೂರಿ ಬಡಿ ಆಏ ॥**
**ರಾಉ ಬಹೋರಿ ಉತರಿ ಭಏ ಠಾಢೇ । ಪ್ರೇಮ ಪ್ರಬಾಹ ಬಿಲೋಚನ ಬಾಢೇ ॥ ೩ ॥**
**ತಬ ಬಿದೇಹ ಬೋಲೇ ಕರ ಜೋರೀ । ಬಚನ ಸನೇಹ ಸುಧಾಂ ಜನು ಬೋರೀ ॥**
**ಕರೌಂ ಕವನ ಬಿಧಿ ಬಿನಯ ಬನಾಈ । ಮಹಾರಾಜ ಮೋಹಿ ದೀನ್ಹಿ ಬಡಾಈ ॥ ೪ ॥**

ದಶರಥನು ಬ್ರಾಹ್ಮಣರನ್ನೂ, ಪುರಪ್ರಮುಖರನ್ನೂ, ಪ್ರಜಾಜನರನ್ನೂ ಸಂತೈಸಿ, ಆದರದಿಂದ ಹಿಂದಿರುಗುವಂತೆ ಬೇಡಿಕೊಂಡನು. ಸಂಪ್ರದಾಯವನ್ನನುಸರಿಸಿ, ಅವರವರಿಗೆ ತಕ್ಕದಾದ ವಸ್ತ್ರಾಭೂಷಣಗಳನ್ನೂ, ರಥ, ಗಜ, ಹಯ ಮೊದಲಾದುವನ್ನು ಉಡುಗೊರೆಯಾಗಿ ಕೊಟ್ಟು, ಎಲ್ಲರನ್ನೂ ಸಂತುಷ್ಟಗೊಳಿಸಿದನು. ಅವರೆಲ್ಲರೂ ಪದೇ-ಪದೇ ರಾಜನ ಬಿರುದಾವಳಿ (ಕುಲಕೀರ್ತಿ)ಗಳನ್ನು ಹೊಗಳುತ್ತಾ, ಶ್ರೀರಾಮನನ್ನು ತಮ್ಮ ಹೃದಯದಲ್ಲಿ ನೆಲೆಗೊಳಿಸಿಕೊಂಡು ಮರಳಿದರು. ಕೋಸಲೇಶ ದಶರಥನು ಮತ್ತೆ-ಮತ್ತೆ ಮರಳಲು ಹೇಳಿದರೂ ಜನಕನು ಪ್ರೇಮವಶನಾಗಿ ಹಿಂದಿರುಗಲೇ ಇಲ್ಲ. ಬಳಿಕ ದಶರಥನು ರಥದಿಂದ ಇಳಿದು ವಿನಯದಿಂದ ಇಂತೆಂದನು – ''ಮಹಾರಾಜರೇ! ನೀವು ತುಂಬಾ ದೂರ ಬಂದುಬಿಟ್ಟಿರುವಿರಿ. ಇನ್ನು ತಾವು ಹಿಂದಿರುಗಿರಿ.'' ಅವನ ಕಣ್ಣುಗಳಲ್ಲಿ ಪ್ರೇಮಾಶ್ರುಗಳ ನೆರೆಯೇ ಬಂದುಬಿಟ್ಟಿತು. ಆಗ ಜನಕನು ಕೈಜೋಡಿಸಿ, ಪ್ರೇಮಾಮೃತವಚನಗಳನ್ನು ಈ ರೀತಿ ಹೇಳಿದನು – ''ಮಹಾರಾಜರೇ! ನೀವು ನನ್ನ ಮೇಲೆ ಅಮಿತವಾದ ಗೌರವವನ್ನು ಹೊರೆಸಿದಿರಿ. ಆ ಋಣಭಾರವನ್ನು ನಾನು ಎಂತು ತೀರಿಸಬಲ್ಲೆನು? (ಚೌ/೧-೪)

**ದೋ – ಕೋಸಲಪತಿ ಸಮಧೀ ಸಜನ ಸನಮಾನೇ ಸಬ ಭಾಂತಿ ।**
**ಮಿಲನಿ ಪರಸಪರ ಬಿನಯ ಅತಿ ಪ್ರೀತಿ ನ ಹೃದಯ್ ಸಮಾತಿ ॥ ೩೪೦ ॥**

ಕೋಸಲಾಧಿಪತಿ ದಶರಥನು ತನ್ನ ಸ್ವಜನ, ಬೀಗರನ್ನು ಎಲ್ಲರೀತಿಯಿಂದ ಆದರಿಸಿದ. ಅವರ ಪರಸ್ಪರ ಮಿಲನದಲ್ಲಿ ವಿನಯ, ಸೌಜನ್ಯ ತುಂಬಿತ್ತು. ಅವರ ಹೃದಯಗಳು ಪ್ರೇಮದಿಂದ ತುಂಬಿ ಉಕ್ಕಿಹೋದುವು. (ದೋ/೩೪೦)

**ಚೌ – ಮುನಿ ಮಂಡಲಿಹಿ ಜನಕ ಸಿರು ನಾವಾ । ಆಸಿರಬಾದು ಸಬಹಿ ಸನ ಪಾವಾ ॥**
**ಸಾದರ ಪುನಿ ಭೇಂಟೇ ಜಾಮಾತಾ । ರೂಪ ಸೀಲ ಗುನ ನಿಧಿ ಸಬ ಭ್ರಾತಾ ॥ ೧ ॥**
**ಜೋರಿ ಪಂಕರುಹ ಪಾನಿ ಸುಹಾಏ । ಬೋಲೇ ಬಚನ ಪ್ರೇಮ ಜನು ಜಾಏ ॥**
**ರಾಮ ಕರೌ ಕೇಹಿ ಭಾಂತಿ ಪ್ರಸಂಸಾ । ಮುನಿ ಮಹೇಸ ಮನ ಮಾನಸ ಹಂಸಾ ॥ ೨ ॥**
**ಕರಹಿಂ ಜೋಗ ಜೋಗೀ ಜೇಹಿ ಲಾಗೀ । ಕೋಹು ಮೋಹು ಮಮತಾ ಮದು ತ್ಯಾಗೀ ॥**
**ಬ್ಯಾಪಕು ಬ್ರಹ್ಮ ಅಲಖು ಅಬಿನಾಸೀ । ಚಿದಾನಂದು ನಿರಗುನ ಗುನರಾಸೀ ॥ ೩ ॥**
**ಮನ ಸಮೇತ ಜೇಹಿ ಜಾನ ನ ಬಾನೀ । ತರಕಿ ನ ಸಕಹಿಂ ಸಕಲ ಅನುಮಾನೀ ॥**
**ಮಹಿಮಾ ನಿಗಮು ನೇತಿ ಕಹಿ ಕಹಈ । ಜೋ ತಿಹು ಕಾಲ ಏಕರಸ ರಹಈ ॥ ೪ ॥**

ಜನಕನು ಮುನಿಮಂಡಲಿಗೆ ತಲೆವಾಗಿ, ಅವರೆಲ್ಲರಿಂದಲೂ ಆಶೀರ್ವಾದ ಪಡೆದುಕೊಂಡನು. ಬಳಿಕ ಅವನು ರೂಪ, ಶೀಲ, ಗುಣನಿಧಿಗಳಾದ ಅಳಿಯಂದಿರನ್ನು ಆದರದಿಂದ ಕಂಡು, ಕಮಲದಂತಹ ಸುಂದರ ಕೈಗಳನ್ನು ಜೋಡಿಸಿ, ಪ್ರೇಮಭರಿತ ಕಂಠದಿಂದ ಇಂತೆಂದನು – ಓ ರಾಮಾ! ನಾನು ಎಂತು ನಿನ್ನನ್ನು ಕೊಂಡಾಡಲಿ? ನೀನು ಮುನಿಗಳ ಮತ್ತು ಮಹೇಶ್ವರನ ಮನಸ್ಸೆಂಬ ಸರೋವರದಲ್ಲಿ ಸಂಚರಿಸುವ ಹಂಸನಾಗಿರುವೆ. ನಿನಗಾಗಿಯೇ ಯೋಗಿಗಳು ಕಾಮ ಕ್ರೋಧ ಮೋಹ ಮದಗಳನ್ನು ತ್ಯಜಿಸಿ, ಯೋಗಸಾಧನೆ ಮಾಡುತ್ತಿದ್ದಾರೆ. ನೀನು ಸರ್ವವ್ಯಾಪಿಯೂ, ಪರಬ್ರಹ್ಮನೂ, ಅವ್ಯಕ್ತನೂ, ಅವಿನಾಶಿಯೂ, ಚಿದಾನಂದಸ್ವರೂಪನೂ, ನಿರ್ಗುಣನೂ, ಸಕಲಗುಣಗಳ ರಾಶಿಯೂ, ವಾಙ್ಮನಗಳಿಗೆ ಅಗೋಚರನೂ, ತಾರ್ಕಿಕರ ಹೇತುವಾದಗಳಿಗೆ ದೊರಕದವನೂ ಆಗಿರುವೆ. ವೇದಗಳು ನಿನ್ನ ಮಹಿಮೆಯನ್ನು ನೇತಿ-ನೇತಿ ಎಂದು ವರ್ಣಿಸುವವು. ತ್ರಿಕಾಲಗಳಲ್ಲಿಯೂ ಒಂದೇ ವಿಧವಾಗಿ ಇರುವವನೂ, ನಿರ್ವಿಕಾರನೂ ಆಗಿರುವೆ. (ಚೌ/೧-೪)

**ದೋ – ನಯನ ಬಿಷಯ ಮೋ ಕಹುಂ ಭಯಉ ಸೋ ಸಮಸ್ತ ಸುಖ ಮೂಲ ।**
**ಸಬಇ ಲಾಭು ಜಗ ಜೀವ ಕಹಂ ಭಏಂ ಈಸು ಅನುಕೂಲ ॥ ೩೪೧ ॥**

ಸರ್ವಸುಖನಿಧಾನನಾದ ನೀನು ನನಗೆ ಇಂದು ಕಂಗಳ ವಿಷಯನಾದೆ. ಈಶ್ವರಾನುಗ್ರಹ ದೊರಕಿದವರಿಗೆ ಈ ಪ್ರಪಂಚದಲ್ಲಿ ದೊರೆಯದೆ ಇರುವುದು ಯಾವುದೂ ಇಲ್ಲ. (ದೋ/೩೪೧)

**ಚೌ – ಸಬಹಿ ಭಾಂತಿ ಮೋಹಿ ದೀನ್ಹಿ ಬಡಾಈ । ನಿಜ ಜನ ಜಾನಿ ಲೀನ್ಹ ಅಪನಾಈ ॥**
**ಹೋಹಿಂ ಸಹಸ ದಸ ಸಾರದ ಸೇಷಾ । ಕರಹಿಂ ಕಲಪ ಕೋಟಿಕ ಭರಿ ಲೇಖಾ ॥ ೧ ॥**
**ಮೋರ ಭಾಗ್ಯ ರಾಉರ ಗುನ ಗಾಥಾ । ಕಹಿ ನ ಸಿರಾಹಿಂ ಸುನಹು ರಘುನಾಥಾ ॥**
**ಮೈಂ ಕಛು ಕಹಉಂ ಏಕ ಬಲ ಮೋರೇಂ । ತುಮ್ಹ ರೀಝಹು ಸನೇಹ ಸುಠಿ ಥೋರೇಂ ॥ ೨ ॥**
**ಬಾರ ಬಾರ ಮಾಗಉಂ ಕರ ಜೋರೇಂ । ಮನು ಪರಿಹರೈ ಚರನ ಜನಿ ಭೋರೇಂ ॥**
**ಸುನಿ ಬರ ಬಚನ ಪ್ರೇಮ ಜನು ಪೋಷೇ । ಪೂರನಕಾಮ ರಾಮು ಪರಿತೋಷೇ ॥ ೩ ॥**
**ಕರಿ ಬರ ಬಿನಯ ಸಸುರ ಸನಮಾನೇ । ಪಿತು ಕೌಸಿಕ ಬಸಿಷ್ಠ ಸಮ ಜಾನೇ ॥**
**ಬಿನತೀ ಬಹುರಿ ಭರತ ಸನ ಕೀನ್ಹೀ । ಮಿಲಿ ಸಪ್ರೇಮು ಪುನಿ ಆಸಿಷ ದೀನ್ಹೀ ॥ ೪ ॥**

ನೀವು ಎಲ್ಲ ವಿಧಗಳಿಂದ ನನಗೆ ದೊಡ್ಡತನ ನೀಡಿದಿರಿ. ನಿಮ್ಮವನೆಂದು ತಿಳಿದು ಸ್ವೀಕರಿಸಿದಿರಿ. ಹತ್ತುಸಾವಿರ ಮಂದಿ ಶಾರದೆಯರು, ಶೇಷರೂ ಕೋಟಿ ಕಲ್ಪದವರೆಗೂ ಎಣಿಸಿದರೂ ನನ್ನ ಅದೃಷ್ಟವನ್ನು ನಿನ್ನ ಗುಣಗಳನ್ನು ಹೇಳಿ ಮುಗಿಸಲಾರರು. ನೀನು ಅತ್ಯಲ್ಪ ಪ್ರೇಮಕ್ಕೆ ಒಲಿಯುವವನು, ಎಂಬ ಧೈರ್ಯದಿಂದ ನಾನು ಈ ಮಾತನ್ನು ಆಡುತ್ತಿದ್ದೇನೆ. 'ನನ್ನ ಮನಸ್ಸು ಮರೆತಾದರೂ ನಿನ್ನ ಚರಣಗಳನ್ನು ತೊರೆಯದಿರಲಿ' ಎಂದು ನಾನು ಪುನಃ ಪುನಃ ಕೈಜೋಡಿಸಿ ಬೇಡುತ್ತೇನೆ. ಭಕ್ತಿಭರಿತವಾದ ಜನಕನ ಮಾತುಗಳನ್ನು ಕೇಳಿ, ಪೂರ್ಣಕಾಮನಾದ ಶ್ರೀರಾಮಚಂದ್ರನು ಸಂತುಷ್ಟನಾದನು. ವಿನಮ್ರಭಾವದಿಂದ ಅವನು ಜನಕ

ಮಹಾರಾಜನನ್ನು ತನ್ನ ತಂದೆ ದಶರಥ, ಗುರು ವಿಶ್ವಾಮಿತ್ರರು, ಕುಲಗುರು ವಸಿಷ್ಠರು ಇವರಿಗೆ ಸಮಾನನೆಂದು ತಿಳಿದು ಗೌರವಿಸಿದನು. ಮತ್ತೆ ಜನಕನು ಭರತನನ್ನು ವಿಜ್ಞಾಪಿಸಿಕೊಂಡು, ಪ್ರೇಮದಿಂದ ಆಶೀರ್ವಾದ ಮಾಡಿದನು. (ಚೌ/೧-೪)

**ದೋ – ಮಿಲೇ ಲಖನ ರಿಪುಸೂದನಹಿ ದೀನ್ಹಿ ಅಸೀಸ ಮಹೀಸ ।**
**ಭಏ ಪರಸಪರ ಪ್ರೇಮಬಸ ಫಿರಿ ಫಿರಿ ನಾವಹಿಂ ಸೀಸ ॥ ೩೪೨ ॥**

ಅನಂತರ ಜನಕರಾಜನು ಲಕ್ಷ್ಮಣ, ಶತ್ರುಘ್ನರನ್ನೂ ಕೂಡ ಆಶೀರ್ವದಿಸಿದನು. ಅವರು ಪ್ರೇಮಾಧಿಕ್ಯದಿಂದ ಪರಸ್ಪರ ಮತ್ತೆ-ಮತ್ತೆ ಹಣೆ ಮಣಿದರು. (ದೋ/೩೪೨)

**ಚೌ – ಬಾರ ಬಾರ ಕರಿ ಬಿನಯ ಬಡಾಈ । ರಘುಪತಿ ಚಲೇ ಸಂಗ ಸಬ ಭಾಈ ॥**
**ಜನಕ ಗಹೇ ಕೌಸಿಕ ಪದ ಜಾಈ । ಚರನ ರೇನು ಸಿರ ನಯನನ್ಹ ಲಾಈ ॥ ೧ ॥**
**ಸುನು ಮುನೀಸ ಬರ ದರಸನ ತೋರೇಂ । ಅಗಮು ನ ಕಛು ಪ್ರತೀತಿ ಮನ ಮೋರೇಂ ॥**
**ಜೋ ಸುಖು ಸುಜಸು ಲೋಕಪತಿ ಚಹಹೀಂ । ಕರತ ಮನೋರಥ ಸಕುಚತ ಅಹಹೀಂ ॥ ೨ ॥**
**ಸೋ ಸುಖು ಸುಜಸು ಸುಲಭ ಮೊಹಿಸ್ವಾಮೀ । ಸಬ ಸಿಧಿ ತವ ದರಸನ ಅನುಗಾಮೀ ॥**
**ಕೀನ್ಹಿ ಬಿನಯ ಪುನಿ ಪುನಿ ಸಿರು ನಾಈ । ಫಿರೇ ಮಹೀಸು ಆಸಿಷಾ ಪಾಈ ॥ ೩ ॥**
**ಚಲೀ ಬರಾತ ನಿಸಾನ ಬಜಾಈ । ಮುದಿತ ಛೋಟ ಬಡ ಸಬ ಸಮುದಾಈ ॥**
**ರಾಮಹಿ ನಿರಖಿ ಗ್ರಾಮ ನರ ನಾರೀ । ಪಾಇ ನಯನ ಫಲು ಹೋಹಿಂ ಸುಖಾರೀ ॥ ೪ ॥**

ಕಡೆಗೆ ಜನಕ ಮಹಾರಾಜನನ್ನು ಅನೇಕ ವಿಧದಿಂದ ಬಿನ್ನವಿಸಿಕೊಂಡು ಶ್ರೀರಾಮಚಂದ್ರನು ತನ್ನ ಸಹೋದರರೊಂದಿಗೆ ಹೊರಟನು. ಬಳಿಕ ಜನಕನು ವಿಶ್ವಾಮಿತ್ರರ ಚರಣಗಳಿಗೆರಗಿ, ಅವರ ಚರಣಧೂಳಿಯನ್ನು ಶಿರದಲ್ಲಿ ಹೊತ್ತು, ಕಣ್ಣಿಗೊತ್ತಿಕೊಂಡು ಇಂತೆಂದನು – ''ಮುನೀಶ್ವರರೇ! ನಿಮ್ಮ ದರ್ಶನದಿಂದ ಯಾವುದೂ ದುರ್ಲಭವೆನಿಸುವುದಿಲ್ಲ. ಇದು ನನ್ನ ನಂಬಿಕೆ. ಲೋಕಪಾಲಕರೂ ಕೂಡ ಸಂಕೋಚಪಟ್ಟುಕೊಂಡು ಬಯಸುವ ಸುಖ-ಸಂಪತ್ತುಗಳು, ಕೀರ್ತಿ-ಪ್ರತಿಷ್ಠೆಗಳು ಇಂದು ನನಗೆ ಸುಲಭವಾಗಿ ಲಭಿಸಿವೆ. ಏಕೆಂದರೆ, ಎಲ್ಲ ಸಿದ್ಧಿಗಳು ನಿಮ್ಮ ದರ್ಶನವನ್ನೇ ಅನುಸರಿಸಿ ಇರುತ್ತವೆ.'' ಈ ವಿಧವಾಗಿ ಮಾತು-ಮಾತಿಗೆ ಬಿನ್ನವಿಸಿ, ನಮಸ್ಕರಿಸಿಕೊಂಡು ಆಶೀರ್ವಾದ ಪಡೆದು ಜನಕನು ಅರಮನೆಗೆ ಮರಳಿದನು. ನಗಾರಿಗಳು ಮೊಳಗುತ್ತಿರುವಂತೆ ದಿಬ್ಬಣದವರು ಹೊರಟರು. ಸಣ್ಣವರು, ದೊಡ್ಡವರು ಎಲ್ಲರೂ ಸಂತಸಪಟ್ಟರು. ಹಾದಿಯ ಹಳ್ಳಿಯ ಜನರು ಶ್ರೀರಾಮಚಂದ್ರನನ್ನು ನೋಡಿಕೊಂಡು ತಮ್ಮ ಕಣ್ಣುಗಳನ್ನು ಸಾರ್ಥಕಪಡಿಸಿಕೊಂಡು ಸುಖಿಗಳಾದರು. (ಚೌ/೧-೪)

**ದೋ – ಬೀಚ ಬೀಚ ಬರ ಬಾಸ ಕರಿ ಮಗ ಲೋಗನ್ಹ ಸುಖ ದೇತ ।**
**ಅವಧ ಸಮೀಪ ಪುನೀತ ದಿನ ಪಹುಂಚೀ ಆಇ ಜನೇತ ॥ ೩೪೩ ॥**

ನಡುನಡುವೆ ಅಲ್ಲಲ್ಲಿ ತಂಗುತ್ತಾ ಹಾದಿಯ ಜನರಿಗೆ ಸುಖವನ್ನುಂಟುಮಾಡುತ್ತಾ ಆ ದಿಬ್ಬಣವು ಒಂದು ಶುಭದಿನ ಅಯೋಧ್ಯೆಯ ಸಮೀಪಕ್ಕೆ ಬಂದು ತಲುಪಿತು. (ದೋ/೩೪೩)

**ಚೌ – ಹನೇ ನಿಸಾನ ಪನವ ಬರ ಬಾಜೇ । ಭೇರಿ ಸಂಖ ಧುನಿ ಹಯ ಗಯ ಗಾಜೇ ॥**
**ಝಾಂಝಿ ಬಿರವ ಡಿಂಡಿಮೀ ಸುಹಾಈ । ಸರಸ ರಾಗ ಬಾಜಹಿಂ ಸಹನಾಈ ॥ ೧ ॥**
**ಪುರ ಜನ ಆವತ ಅಕನಿ ಬರಾತಾ । ಮುದಿತ ಸಕಲ ಪುಲಕಾವಲಿ ಗಾತಾ ॥**
**ನಿಜ ನಿಜ ಸುಂದರ ಸದನ ಸಂವಾರೇ । ಹಾಟ ಬಾಟ ಚೌಹಟ ಪುರ ದ್ವಾರೇ ॥ ೨ ॥**
**ಗಲೀಂ ಸಕಲ ಅರಗಜಾಂ ಸಿಂಚಾಈಂ । ಜಹಂ ತಹಂ ಚೌಕೇಂ ಚಾರು ಪುರಾಈಂ ॥**
**ಬನಾ ಬಜಾರು ನ ಜಾಇ ಬಖಾನಾ । ತೋರನ ಕೇತು ಪತಾಕ ಬಿತಾನಾ ॥ ೩ ॥**
**ಸಫಲ ಪೂಗಫಲ ಕದಲಿ ರಸಾಲಾ । ರೋಪೇ ಬಕುಲ ಕದಂಬ ತಮಾಲಾ ॥**
**ಲಗೇ ಸುಭಗ ತರು ಪರಸತ ಧರನೀ । ಮನಿಮಯ ಆಲಬಾಲ ಕಲ ಕರನೀ ॥ ೪ ॥**

ನಗಾರಿಗಳು ಮೊಳಗಿದವು, ಡೋಲುಗಳು ಧ್ವನಿಗೈದವು, ಭೇರಿ-ಶಂಖಗಳು ಭೋರ್ಗರೆದವು. ಆನೆಗಳ ಘೀಂಕಾರ, ಕುದುರೆಗಳ ಹೇಷಾರವ, ವಿಶೇಷ ಶಬ್ದವಾಡುವ ತಾಳ, ಮೃದಂಗಗಳೂ ಹಾಗೂ ಮಧುರ ರಾಗಾಲಾಪಗಳನ್ನು ಮಾಡುವ ನಾದಸ್ವರಗಳು ಧ್ವನಿಗೈದವು. ಇಂತಹ ಗದ್ದಲದಿಂದ ಬರುತ್ತಿರುವ ದಿಬ್ಬಣಿಗರನ್ನು ನೋಡಿದ ಆಯೋಧ್ಯಾನಗರವಾಸಿಗಳು

ಅತ್ಯಂತ ಹರ್ಷಿತರಾದರು. ಎಲ್ಲರೂ ರೋಮಾಂಚಿತರಾದರು. ಎಲ್ಲರೂ ತಮ್ಮ-ತಮ್ಮ ಅಂದವಾದ ಮನೆಗಳನ್ನೂ, ಪೇಟೆ, ಬೀದಿ-ಬೀದಿಗಳನ್ನೂ, ಕೂಡುರಸ್ತೆಗಳನ್ನೂ, ನಗರದ್ವಾರಗಳನ್ನೂ ಸಿಂಗರಿಸಿದರು. ಎಲ್ಲ ಬೀದಿಗಳಲ್ಲಿ ಸುಗಂಧದ್ರವ್ಯಗಳನ್ನೂ ಸಿಂಪಡಿಸಲಾಯಿತು. ಚೆಲುವಾದ ರಂಗೋಲೆಯಿಂದ ಹಸೆ ಬರೆದರು. ತೋರಣಗಳಿಂದ, ಧ್ವಜ-ಪತಾಕೆಗಳಿಂದ, ಮಂಡಪಗಳಿಂದ ಇಡೀ ನಗರವು ಅವರ್ಣನೀಯ ರೀತಿಯಲ್ಲಿ ಅಲಂಕೃತವಾದುವು. ಫಲಗಳ ಸಹಿತ, ಅಡಿಕೆ, ಬಾಳೆ, ಮಾವು, ಬಕುಳ, ಕದಂಬ, ಹೊಂಗೆ ಮರಗಳ ಕಂಭಗಳನ್ನು ಕಟ್ಟಿದ್ದರು. ಆ ಸುಂದರವಾದ ಗಿಡಗಳು ಫಲಭಾರದಿಂದ ಜಗ್ಗಿ ನೆಲವನ್ನು ಮುಟ್ಟುತ್ತಿದ್ದವು. ಅದರ ಬುಡದಲ್ಲಿ ಸುತ್ತಲೂ ರತ್ನಗಳಿಂದ ಮಾಡಿದ ಕಟ್ಟೆ (ಆಲವಾಲ) ಗಳು ಕಲಾತ್ಮಕವಾಗಿ ರಚಿಸಿದ್ದರು. (ಚೌ/೧-೪)

**ದೋ – ಬಿಬಿಧ ಭಾಁತಿ ಮಂಗಲ ಕಲಸ ಗೃಹ ಗೃಹ ರಚೇ ಸँವಾರಿ ।**
**ಸುರ ಬ್ರಹ್ಮಾದಿ ಸಿಹಾಹಿಂ ಸಬ ರಘುಬರ ಪುರೀ ನಿಹಾರಿ ॥ ೩೪೪ ॥**

ಅನೇಕ ವಿಧವಾದ ಮಂಗಳಕಲಶಗಳು ಮನೆ-ಮನೆಯಲ್ಲೂ ಅಣಿಗೊಳಿಸಿಟ್ಟಿದ್ದರು. ಶ್ರೀ ರಘುವರನ ಪುರಿ ಅಯೋಧ್ಯೆಯನ್ನು ನೋಡಿ ಬ್ರಹ್ಮಾದಿ ದೇವತೆಗಳೂ ಕೂಡ ಅಸೂಯೆಪಟ್ಟರು. (ದೋ/೩೪೪)

**ಚೌ – ಭೂಪ ಭವನು ತೇಹಿ ಅವಸರ ಸೋಹಾ । ರಚನಾ ದೇಖಿ ಮದನ ಮನು ಮೋಹಾ ॥**
**ಮಂಗಲ ಸಗುನ ಮನೋಹರತಾಈ । ರಿಧಿ ಸಿಧಿ ಸುಖ ಸಂಪದಾ ಸುಹಾಈ ॥ ೧ ॥**
**ಜನು ಉಛಾಹ ಸಬ ಸಹಜ ಸುಹಾಏ । ತನು ಧರಿ ಧರಿ ದಸರಥ ಗೃಹँ ಛಾಏ ॥**
**ದೇಖನ ಹೇತು ರಾಮ ಬೈದೇಹೀ । ಕಹಹು ಲಾಲಸಾ ಹೋಹಿ ನ ಕೇಹೀ ॥ ೨ ॥**
**ಜೂಥ ಜೂಥ ಮಿಲಿ ಚಲೀಂ ಸುಆಸಿನಿ । ನಿಜ ಛಬಿ ನಿದರಹಿಂ ಮದನ ಬಿಲಾಸಿನಿ ॥**
**ಸಕಲ ಸುಮಂಗಲ ಸಜೇಂ ಆರತೀ । ಗಾವಹಿಂ ಜನು ಬಹು ಬೇಷ ಭಾರತೀ ॥ ೩ ॥**
**ಭೂಪತಿ ಭವನ ಕೋಲಾಹಲು ಹೋಈ । ಜಾಇ ನ ಬರನಿ ಸಮಉ ಸುಖು ಸೋಈ ॥**
**ಕೌಸಲ್ಯಾದಿ ರಾಮ ಮಹತಾರೀಂ । ಪ್ರೇಮಬಿಬಸ ತನ ದಸಾ ಬಿಸಾರೀಂ ॥ ೪ ॥**

ಆ ಸಮಯದ ಅರಮನೆಯ ಸೌಂದರ್ಯ ವೈಭವಗಳನ್ನು ನೋಡಿ, ಮನ್ಮಥನ ಮನಸ್ಸು ಕೂಡ ಆಕರ್ಷಿತವಾಯಿತು. ಮಂಗಳ ಶಕುನಗಳು, ಚೆಲುವು, ಋದ್ಧಿ, ಸಿದ್ಧಿ, ಸುಖ-ಸಂಪತ್ತುಗಳು, ಎಲ್ಲ ಪ್ರಕಾರದ ಉತ್ಸಾಹಗಳು ಇವೆಲ್ಲವೂ ಸಹಜ ಸುಂದರ ಶರೀರಗಳನ್ನು ಧರಿಸಿ, ದಶರಥನ ಅರಮನೆಯನ್ನು ಪ್ರವೇಶಿಸಿದಂತೆ ಇತ್ತು. ಶ್ರೀರಾಮಚಂದ್ರನನ್ನು, ಸೀತಾದೇವಿಯನ್ನು ನೋಡಲು ಯಾರ ಕಣ್ಣುಗಳು ತವಕಗೊಳ್ಳಲಾರವು? ಮನ್ಮಥನ ಸತಿಯಾದ ರತಿದೇವಿಯ ಸೌಂದರ್ಯವನ್ನು ಕೂಡ ತಿರಸ್ಕರಿಸುವಂತಹ ಸುಂದರ ಸುಮಂಗಲಿಯರು ಗುಂಪುಗುಂಪಾಗಿ ಅಲ್ಲಿಗೆ ಹೊರಟರು. ಎಲ್ಲರೂ ಮಂಗಳದ್ರವ್ಯವನ್ನೂ, ಆರತಿಗಳನ್ನೂ ಅಣಿಮಾಡಿಕೊಂಡು, ಸರಸ್ವತಿಯೇ ಅನೇಕ ರೂಪತಾಳಿ ಹಾಡುತ್ತಿರುವಳೋ ಎಂಬಂತೆ ಹಾಡುತ್ತಿದ್ದರು. ರಾಜಭವನವು ಆನಂದೋತ್ಸಾಹ ಕೋಲಾಹಲದಿಂದ ಗಜಿಬಿಜಿಗೊಂಡಿತು. ಆ ಸಮಯದ ಸುಖಾನಂದಗಳು ವರ್ಣನಾತೀತವು. ಕೌಸಲ್ಯಾದೇವಿ ಮೊದಲಾದ ಶ್ರೀರಾಮನ ಮಾತೆಯರು ಪ್ರೇಮಪರವಶರಾಗಿ ಮೈಮರೆತರು. (ಚೌ/೧-೪)

**ದೋ – ದಿಏ ದಾನ ಬಿಪ್ರನ್ಹ ಬಿಪುಲ ಪೂಜಿ ಗನೇಸ ಪುರಾರಿ ।**
**ಪ್ರಮುದಿತ ಪರಮ ದರಿದ್ರ ಜನು ಪಾಇ ಪದಾರಥ ಚಾರಿ ॥ ೩೪೫ ॥**

ಅತ್ಯಂತ ದರಿದ್ರನಿಗೆ ಚತುರ್ವಿಧ ಪುರುಷಾರ್ಥಗಳು ಪ್ರಾಪ್ತವಾಗುವಂತೆ ರಾಣೀವಾಸದವರು ಅಪರಿಮಿತಾನಂದ ವನ್ನು ಹೊಂದಿದರು. ಶ್ರೀಗಣೇಶನನ್ನೂ, ಪರಶಿವನನ್ನೂ ಪೂಜಿಸಿ, ಅವರು ಬ್ರಾಹ್ಮಣೋತ್ತಮರಿಗೆ ಪುಷ್ಕಳವಾಗಿ ದಾನಮಾಡಿದರು. (ದೋ/೩೪೫)

**ಚೌ – ಮೋದ ಪ್ರಮೋದ ಬಿಬಸ ಸಬ ಮಾತಾ । ಚಲಹಿಂ ನ ಚರನ ಸಿಥಿಲ ಭಏ ಗಾತಾ ॥**
**ರಾಮ ದರಸ ಹಿತ ಅತಿ ಅನುರಾಗೀಂ । ಪರಿಛನಿ ಸಾಜು ಸಜನ ಸಬ ಲಾಗೀಂ ॥ ೧ ॥**
**ಬಿಬಿಧ ಬಿಧಾನ ಬಾಜನೇ ಬಾಜೇ । ಮಂಗಲ ಮುದಿತ ಸುಮಿತ್ರಾँ ಸಾಜೇ ॥**
**ಹರದ ದೂಬ ದಧಿ ಪಲ್ಲವ ಫೂಲಾ । ಪಾನ ಪೂಗಫಲ ಮಂಗಲ ಮೂಲಾ ॥ ೨ ॥**
**ಅಚ್ಛತ ಅಂಕುರ ಲೋಚನ ಲಾಜಾ । ಮಂಜುಲ ಮಂಜರಿ ತುಲಸಿ ಬಿರಾಜಾ ॥**
**ಛುಹೇ ಪುರಟ ಘಟ ಸಹಜ ಸುಹಾಏ । ಮದನ ಸಕುನ ಜನು ನೀಡ ಬನಾಏ ॥ ೩ ॥**

ಸಗುನ ಸುಗಂಧ ನ ಜಾಹಿಂ ಬಖಾನೀ । ಮಂಗಲ ಸಕಲ ಸಜಹಿಂ ಸಬ ರಾನೀ ॥
ರಚೀಂ ಆರತೀಂ ಬಹುತ ಬಿಧಾನಾ । ಮುದಿತ ಕರಹಿಂ ಕಲ ಮಂಗಲ ಗಾನಾ ॥ ೪ ॥

ಮೋದ-ಪ್ರಮೋದಗಳಿಂದ ವಿವಶರಾದ ಆ ಮಾತೆಯರ ಶರೀರಗಳು ಶಿಥಿಲವಾದುವು. ಕಾಲುಗಳು ಏನು ಮಾಡಿದರೂ ಮುಂದಕ್ಕೆ ಚಲಿಸಲೊಲ್ಲದು. ಶ್ರೀರಾಮಚಂದ್ರನ ದರ್ಶನಕ್ಕಾಗಿ, ದ್ವಾರಪೂಜೆಗಾಗಿ ಆನಂದೋತ್ಸಾಹಗಳಿಂದ ಮಂಗಳದ್ರವ್ಯಗಳನ್ನೂ, ಆರತಿಗಳನ್ನೂ, ಅಣಿಮಾಡಿಕೊಳ್ಳುತ್ತಿದ್ದರು. ಅನೇಕ ವಿಧವಾದ ವಾದ್ಯಗಳು ಭೋರ್ಗರೆಯುತ್ತಿದ್ದವು. ಸುಮಿತ್ರಾದೇವಿಯು ಸಂತೋಷದಿಂದ – ಅರಶಿನ, ಗರಿಕೆ, ಮೊಸರು, ಪತ್ರೆ, ಹೂವು, ವೀಳೆಯದೆಲೆ, ಅಡಿಕೆ, ಮಂಗಲಾಕ್ಷತೆ, ಧಾನ್ಯದ ಅಂಕುರಗಳು, ಗೋರೋಚನ, ಅರಳು ಹಾಗೂ ತುಳಸೀದಳಗಳು ಮುಂತಾದ ಮಂಗಳದ್ರವ್ಯಗಳನ್ನು ಅಣಿಗೊಳಿಸಿದಳು. ನಾನಾ ವರ್ಣಗಳಿಂದ ಚಿತ್ರಿತ ಚೆಲುವಾದ ಚಿನ್ನದ ಕಲಶಗಳು ಮದನನ ಪಕ್ಷಿಗಳು ಗೂಡುಕಟ್ಟಿರುವವೋ ಎಂಬಂತೆ ಇದ್ದವು. ಶುಭಶಕುನದ ಸುಗಂಧಿತ ವಸ್ತುಗಳಂತೂ ಏನೆಂದು ವರ್ಣಿಸುವುದು? ಎಲ್ಲ ರಾಣಿಯರೂ ಮಂಗಳ ವಸ್ತುಗಳನ್ನು ಸಿದ್ಧಗೊಳಿಸಿ ತಾವೂ ಅಣಿಯಾದರು. ಬಹುವಿಧವಾದ ಆರತಿಗಳಿಗೆ ಅಣಿಮಾಡಿಕೊಂಡು ಅವರು ಮಂಗಳಗೀತೆಗಳನ್ನು ಹಾಡುತ್ತಿದ್ದರು. (ಚೌ/೧-೪)

**ದೋ – ಕನಕ ಥಾರ ಭರಿ ಮಂಗಲನ್ಹಿ ಕಮಲ ಕರನ್ಹಿ ಲಿಏಂ ಮಾತ ।**
**ಚಲೀಂ ಮುದಿತ ಪರಿಛನಿ ಕರನ ಪುಲಕ ಪಲ್ಲವಿತ ಗಾತ ॥ ೩೪೬ ॥**

ಚಿನ್ನದ ಹರಿವಾಣಗಳಲ್ಲಿ ಮಂಗಳದ್ರವ್ಯಗಳನ್ನು ಅಣಿಮಾಡಿಕೊಂಡು, ತಮ್ಮ ಕರಕಮಲಗಳಿಂದ ರಾಣಿಯರು ಆನಂದದಿಂದ ಆರತಿ ಮಾಡಲು ಹೊರಟರು. ಹರ್ಷಾತಿರೇಕದಿಂದ ಅವರು ಪುಳಕಿತಗಾತ್ರರಾಗಿದ್ದರು. (ದೋ/೩೪೬)

ಚೌ – ಧೂಪ ಧೂಮ ನಭು ಮೇಚಕ ಭಯಊ । ಸಾವನ ಘನ ಘಮಂಡು ಜನು ಠಯಊ ॥
ಸುರತರು ಸುಮನ ಮಾಲ ಸುರ ಬರಷಹಿಂ । ಮನಹುँ ಬಲಾಕ ಅವಲಿ ಮನು ಕರಷಹಿಂ ॥ ೧ ॥
ಮಂಜುಲ ಮನಿಮಯ ಬಂದನಿವಾರೇ । ಮನಹುँ ಪಾಕರಿಪು ಚಾಪ ಸँವಾರೇ ॥
ಪ್ರಗಟಹಿಂ ದುರಹಿಂ ಅಟನ್ಹ ಪರ ಭಾಮಿನಿ । ಚಾರು ಚಪಲ ಜನು ದಮಕಹಿಂ ದಾಮಿನಿ ॥ ೨ ॥
ದುಂದುಭಿ ಧುನಿ ಘನ ಗರಜನಿ ಘೋರಾ । ಜಾಚಕ ಚಾತಕ ದಾದುರ ಮೋರಾ ॥
ಸುರ ಸುಗಂಧ ಸುಚಿ ಬರಷಹಿಂ ಬಾರೀ । ಸುಖೀ ಸಕಲ ಸಸಿ ಪುರ ನರ ನಾರೀ ॥ ೩ ॥
ಸಮಉ ಜಾನಿ ಗುರ ಆಯಸು ದೀನ್ಹಾ । ಪುರ ಪ್ರಬೇಸು ರಘುಕುಲಮನಿ ಕೀನ್ಹಾ ॥
ಸುಮಿರಿ ಸಂಭು ಗಿರಿಜಾ ಗನರಾಜಾ । ಮುದಿತ ಮಹೀಪತಿ ಸಹಿತ ಸಮಾಜಾ ॥ ೪ ॥

ಅವರು ಹಾಕಿದ ಧೂಪದ ಹೊಗೆಯು ಶ್ರಾವಣದ ಮೇಘಗಳಂತೆ ಆಗಸದಲ್ಲಿ ತುಂಬಿಹೋಯಿತು. ದೇವತೆಗಳು ಕಲ್ಪವೃಕ್ಷದ ಹೂವಿನ ಮಾಲೆಗಳನ್ನು ಮಳೆಗರೆದರು. ಆ ಪುಷ್ಪಗುಚ್ಛಗಳನ್ನು ನೋಡಿದರೆ, ಕೊಕ್ಕರೆಗಳ ಗುಂಪುಗಳಂತೆ ಜನರ ಮನಗಳನ್ನು ಸೆಳೆಯುತ್ತಿದ್ದವು. ಸುಂದರ ಮಣಿಗಳಿಂದ ನಿರ್ಮಿತವಾದ ತೋರಣ (ಕಮಾನು)ಗಳು ಕಾಮನ ಬಿಲ್ಲಿನಂತೆ ಕಂಗೊಳಿಸುತ್ತಿದ್ದವು. ಉಪ್ಪರಿಗೆಗಳ ಮೇಲೆ ಚಪಲೆಯರಾದ ಚೆಲುವೆಯರು ಒಮ್ಮೆ ಕಾಣಿಸಿಕೊಂಡು, ಮಗದೊಮ್ಮೆ ಮರೆಯಾಗುತ್ತಿದ್ದರು. ಆಗ ಅವರು, ಆಗಸದಲ್ಲಿನ ವಿದ್ಯುಲ್ಲತೆಯಂತೆ ಭಾಸವಾಗುತ್ತಿದ್ದರು. ನಗಾರಿಗಳ ಧ್ವನಿಗಳು ಮೇಘಗರ್ಜನೆಯಂತೆ ಮೊಳಗುತ್ತಿದ್ದವು. ಯಾಚಕರ ಗೋಗರೆಯುವ ದನಿಯು ಚಾತಕ, ಕಪ್ಪೆ, ನವಿಲು ಇವುಗಳ ಸದ್ದಿನಂತಿತ್ತು. ದೇವತೆಗಳು ಪವಿತ್ರ ಸುಗಂಧಜಲವನ್ನು ಮಳೆಗರೆಯುತ್ತಿದ್ದರು. ಇದರಿಂದ ಮಳೆಯಿಂದ ಪೈರು ನಳನಳಿಸುವಂತೆ ನಗರವಾಸಿಗಳು ಸುಖಿಗಳಾದರು. ಪುರಪ್ರವೇಶಕ್ಕೆ ಶುಭಮುಹೂರ್ತವೆಂದು ತಿಳಿದು, ವಸಿಷ್ಠರ ಅಪ್ಪಣೆಯಂತೆ ರಘುಕುಲಮಣಿ ದಶರಥನು ಶಿವಪಾರ್ವತಿಯರನ್ನೂ, ಗಣಪತಿಯನ್ನೂ ಸ್ಮರಿಸಿ, ಪರಿವಾರದಿಂದೊಡಗೂಡಿ, ಆನಂದತುಂದಿಲನಾಗಿ ನಗರವನ್ನು ಪ್ರವೇಶಿಸಿದನು. (ಚೌ/೧-೪)

**ದೋ – ಹೋಹಿಂ ಸಗುನ ಬರಷಹಿಂ ಸುಮನ ಸುರ ದುಂದುಭೀಂ ಬಜಾಇ ।**
**ಬಿಬುಧ ಬಧೂ ನಾಚಹಿಂ ಮುದಿತ ಮಂಜುಲ ಮಂಗಲ ಗಾಇ ॥ ೩೪೭ ॥**

ಶುಭಶಕುನಗಳಾದವು. ದೇವತೆಗಳು ದುಂದುಭಿಗಳನ್ನು ನುಡಿಸುತ್ತಾ, ಹೂಮಳೆಗರೆಯುತ್ತಿದ್ದಾರೆ. ದೇವ ವನಿತೆಯರು ಮುದಿತರಾಗಿ ಮಂಗಳಗೀತೆಗಳನ್ನು ಹಾಡುತ್ತಾ, ನರ್ತಿಸುತ್ತಿದ್ದಾರೆ. (ದೋ/೩೪೭)

ಚೌ – ಮಾಗಧ ಸೂತ ಬಂದಿ ನಟ ನಾಗರ । ಗಾವಹಿಂ ಜಸು ತಿಹು ಲೋಕ ಉಜಾಗರ ।
ಜಯ ಧುನಿ ಬಿಮಲ ಬೇದ ಬರ ಬಾನೀ । ದಸ ದಿಸಿ ಸುನಿ ಅ ಸುಮಂಗಲ ಸಾನೀ ॥ ೧ ॥

ಬಿಪುಲ ಬಾಜನೇ ಬಾಜನ ಲಾಗೇ । ನಭ ಸುರ ನಗರ ಲೋಗ ಅನುರಾಗೇ ॥
ಬನೇ ಬರಾತೀ ಬರನಿ ನ ಜಾಹೀಂ । ಮಹಾ ಮುದಿತ ಮನ ಸುಖ ನ ಸಮಾಹೀಂ ॥ ೨ ॥
ಪುರಬಾಸಿನ್ಹ ತಬ ರಾಯ ಜೊಹಾರೇ । ದೇಖತ ರಾಮಹಿ ಭಏ ಸುಖಾರೇ ॥
ಕರಹಿಂ ನಿಛಾವರಿ ಮನಿಗನ ಚೀರಾ । ಬಾರಿ ಬಿಲೋಚನ ಪುಲಕ ಸರೀರಾ ॥ ೩ ॥
ಆರತಿ ಕರಹೀಂ ಮುದಿತ ಪುರ ನಾರೀ । ಹರಷಹಿಂ ನಿರಖಿ ಕುಅಁರ ಬರ ಚಾರೀ ॥
ಸಿಬಿಕಾ ಸುಭಗ ಓಹಾರ ಉಘಾರೀ । ದೇಖಿ ದುಲಹಿನಿನ್ಹ ಹೋಹಿಂ ಸುಖಾರೀ ॥ ೪ ॥

ತ್ರಿಲೋಕವ್ಯಾಪ್ತವಾದ ದಶರಥನ ಹಾಗೂ ಎಲ್ಲರಿಗೆ ಪ್ರಕಾಶಕೊಡುವಂತಹ ಪರಮಪ್ರಕಾಶರೂಪೀ ಶ್ರೀರಾಮಚಂದ್ರನ ಯಶೋಗಾನವನ್ನು ವಂದಿಮಾಗಧರು, ಸೂತರು, ಹೊಗಳುಭಟ್ಟರು, ನಟರೂ ಹಾಡಿ ಹೊಗಳುತ್ತಿದ್ದಾರೆ. ಜಯಕಾರಗಳು, ನಿರ್ಮಲವೂ, ಶ್ರೇಷ್ಠವೂ, ಮಂಗಳಕರವೂ ಆದ ವೇದಧ್ವನಿಗಳು ದಶದಿಶೆಗಳಲ್ಲಿಯೂ ಮೊಳಗುತ್ತಿವೆ. ವಿವಿಧವಾದ್ಯಗೋಷ್ಠಿಗಳು ಜರಗಿದವು. ಆಕಾಶದಲ್ಲಿ ದೇವತೆಗಳು, ನಗರದಲ್ಲಿ ಪ್ರಜೆಗಳು ಪ್ರೇಮಪರವಶರಾದರು. ಮದುವೆಯ ದಿಬ್ಬಣದವರ ಶೃಂಗಾರ, ಠೀವಿ, ವೈಭವ ಹೇಳತೀರದು. ಅವರು ಪರಮಾನಂದ ಮಗ್ನರಾದರು. ಸುಖವು ಅವರ ಹೃದಯದಲ್ಲಿ ಹಿಡಿಸದೆ ಉಕ್ಕಿ ಹರಿಯುತ್ತಿದೆ. ಆಗ ಅಯೋಧ್ಯಾನಿವಾಸಿಗಳು ರಾಜರಿಗೆ ವಂದಿಸಿ, ಗೌರವ ಸೂಚಿಸಿದರು. ಶ್ರೀರಾಮನನ್ನು ದರ್ಶಿಸುತ್ತಲೇ ಪ್ರಸನ್ನಮನಸ್ಕರಾಗಿ, ರತ್ನಗಳನ್ನೂ, ವಸ್ತ್ರಗಳನ್ನೂ, ಉಡುಗೊರೆಯಾಗಿ ಅರ್ಪಿಸಿದರು. ಅವರ ಕಣ್ಣುಗಳು ಆನಂದಾಶ್ರುಗಳಿಂದ ತುಂಬಿಹೋಯಿತು. ಮೈಯೆಲ್ಲ ರೋಮಾಂಚನವಾಯಿತು. ಪುರನಾರಿಯರು ಮುದದಿಂದ ಆರತಿ ಎತ್ತುತ್ತಿದ್ದಾರೆ. ನಾಲ್ಕೂ ರಾಜಕುಮಾರರನ್ನು ಕಂಡು ಹರ್ಷಿತರಾದರು. ಪಲ್ಲಕ್ಕಿಗಳ ಪರದೆಗಳನ್ನು ಸರಿಸಿ, ಸರಿಸಿ ಅವರು ಮದುವಣಗಿತ್ತಿಯರ ಚೆಲುವನ್ನು ನೋಡುತ್ತಾ ಹಿಗ್ಗುತ್ತಿದ್ದಾರೆ. (ಚೌ/೧-೪)

**ದೋ – ಎಹಿ ಬಿಧಿ ಸಬಹೀ ದೇತ ಸುಖು ಆಏ ರಾಜದುಆರ ।**
**ಮುದಿತ ಮಾತು ಪರಿಛನಿ ಕರಹಿಂ ಬಧುನ್ಹ ಸಮೇತ ಕುಮಾರ ॥ ೩೪೮ ॥**

ಈ ಪ್ರಕಾರ ಎಲ್ಲರಿಗೂ ಸುಖವನ್ನುಂಟುಮಾಡುತ್ತಾ ನವವಧೂವರರ ಜೋಡಿಗಳು ರಾಜಭವನದ್ವಾರದ ಬಳಿಗೆ ಬಂದಿತು. ರಾಜಮಾತೆಯರು ಆನಂದಿತರಾಗಿ ವಧೂಗಳ ಸಹಿತ ಕುಮಾರರಿಗೆ ತಿಲಕವಿಟ್ಟು, ಆರತಿ ಬೆಳಗಿದರು. (ದೋ/೩೪೮)

ಚೌ – ಕರಹಿಂ ಆರತೀ ಬಾರಹಿಂ ಬಾರಾ । ಪ್ರೇಮು ಪ್ರಮೋದ ಕಹೈ ಕೋ ಪಾರಾ ॥
ಭೂಷನ ಮನಿ ಪಟ ನಾನಾ ಜಾತೀ । ಕರಹೀಂ ನಿಛಾವರಿ ಅಗನಿತ ಭಾಂತೀ ॥ ೧ ॥
ಬಧುನ್ಹ ಸಮೇತ ದೇಖಿ ಸುತ ಚಾರೀ । ಪರಮಾನಂದ ಮಗನ ಮಹತಾರೀ ॥
ಪುನಿ ಪುನಿ ಸೀಯ ರಾಮ ಛಬಿ ದೇಖೀ । ಮುದಿತ ಸಫಲ ಜಗ ಜೀವನ ಲೇಖೀ ॥ ೨ ॥
ಸಖೀಂ ಸೀಯ ಮುಖ ಪುನಿ ಪುನಿ ಚಾಹೀ । ಗಾನ ಕರಹಿಂ ನಿಜ ಸುಕೃತ ಸರಾಹೀ ॥
ಬರಷಹಿಂ ಸುಮನ ಛನಹಿಂ ಛನ ದೇವಾ । ನಾಚಹಿಂ ಗಾವಹಿಂ ಲಾವಹಿಂ ಸೇವಾ ॥ ೩ ॥
ದೇಖಿ ಮನೋಹರ ಚಾರಿಉ ಜೋರೀಂ । ಸಾರದ ಉಪಮಾ ಸಕಲ ಢಁಢೋರೀಂ ॥
ದೇತ ನ ಬನಹಿಂ ನಿಪಟ ಲಘು ಲಾಗೀಂ । ಏಕಟಕ ರಹೀಂ ರೂಪ ಅನುರಾಗೀಂ ॥ ೪ ॥

ಒಬ್ಬರಾದರೊಬ್ಬರು ಮತ್ತೆ-ಮತ್ತೆ ಆರತಿ ಬೆಳಗಿದರು. ಅವರ ಪ್ರೇಮ, ಪ್ರಮೋದವನ್ನು ಯಾರೂ ಬಣ್ಣಿಸಲಾರರು. ಅವರು ಅನೇಕ ವಿಧವಾದ ರತ್ನಾಭೂಷಣಗಳನ್ನೂ, ಅಮೂಲ್ಯ ವಸ್ತುಗಳನ್ನೂ, ವಸ್ತ್ರಗಳನ್ನೂ ಹಾಗೂ ಇತರ ಬಹುಮೂಲ್ಯ ಪದಾರ್ಥಗಳನ್ನೂ ನಿವಾಳಿಸುತ್ತಿದ್ದಾರೆ. ಮಗ ಸೊಸೆಯರನ್ನು ಕಂಡು ತಾಯಂದಿರು ಪರಮಾನಂದ ಭರಿತರಾದರು. ಸೀತಾರಾಮರ ಚೆಲುವನ್ನು ಪುನಃ ಪುನಃ ನೋಡುತ್ತಾ, ಅವರು ತಮ್ಮ ಬದುಕು ಸಾರ್ಥಕವಾಯಿತೆಂದುಕೊಂಡು ಹಿಗ್ಗಿಹೋದರು. ಸಖಿಯರು ಸೀತೆಯ ಮುಖವನ್ನು ಮತ್ತೆ-ಮತ್ತೆ ನೋಡುತ್ತಾ ತಮ್ಮ ಪೂರ್ವಪುಣ್ಯವನ್ನು ಕೊಂಡಾಡುತ್ತಾ ಹಾಡುತ್ತಿದ್ದಾರೆ. ದೇವತೆಗಳು ಕ್ಷಣಕ್ಷಣಕ್ಕೂ ಪುಷ್ಪವೃಷ್ಟಿಯಿಂದ, ನಾಟ್ಯದಿಂದ, ಮಧುರಗಾನದಿಂದ ತಮ್ಮ ಭಕ್ತಿ ಪ್ರಪತ್ತಿಗಳನ್ನು ಪ್ರಕಟಿಸಿ ಸಮರ್ಪಿಸುತ್ತಿದ್ದಾರೆ. ನಾಲ್ಕೂ ಮನೋಹರ ಜೋಡಿಗಳನ್ನು ನೋಡಿ ವಾಗ್ದೇವಿಯು ಅವರ ವೈಭವವನ್ನು ವರ್ಣಿಸಲು, ಉಪಮೆಗಳಿಗಾಗಿ ತಡಕಾಡಿದಳು. ಆದರೆ ಯಾವ ಉಪಮೆಯೂ ಕೂಡ ಅವರ ರೂಪಸೌಭಾಗ್ಯಗಳಿಗೆ ಸರಿಬೀಳಲಿಲ್ಲ. ಕೊನೆಗೆ ಸೋತು ಅವಳೂ ಕೂಡ ಶ್ರೀರಾಮನ ರೂಪದಲ್ಲಿ ಅನುರಕ್ತಳಾಗಿ ಎವೆಯಿಕ್ಕದೆ ನೋಡುತ್ತಾ ಇದ್ದುಬಿಟ್ಟಳು. (ಚೌ/೧-೪)

**ದೋ – ನಿಗಮ ನೀತಿ ಕುಲ ರೀತಿ ಕರಿ ಅರಘ ಪಾಂ ವಡೇ ದೇತ ।**
**ಬಧುನ್ಹ ಸಹಿತ ಸುತ ಪರಿಛಿ ಸಬ ಚಲೀಂ ಲವಾಇ ನಿಕೇತ ॥ ೩೪೯ ॥**

ವೇದೋಕ್ತ ವಿಧಿಗಳು ಹಾಗೂ ಕುಲಾಚಾರಗಳನ್ನು ಪೂರೈಸಿ, ರಾಜಮಾತೆಯರು ಆ ನವವಧೂವರರಿಗೆ ಅರ್ಘ್ಯವಿತ್ತು, ಆರತಿ ಎತ್ತಿ, ನೂತನ ವಸ್ತ್ರಗಳ ನಡೆಮುಡಿಹಾಸಿ, ನಡೆಸಿಕೊಂಡು ಅರಮನೆಯೊಳಗೆ ಕರೆದುಕೊಂಡು ಹೋದರು. (ದೋ/೩೪೯)

**ಚೌ – ಚಾರಿ ಸಿಂಘಾಸನ ಸಹಜ ಸುಹಾಏ । ಜನು ಮನೋಜ ನಿಜ ಹಾಥ ಬನಾಏ ॥**
**ತಿನ್ಹಪರ ಕುಅಁರಿ ಕುಅಁರ ಬೈಠಾರೇ । ಸಾದರ ಪಾಯ ಪುನೀತ ಪಖಾರೇ ॥ ೧ ॥**
**ಧೂಪ ದೀಪ ನೈ ಬೇದ ಬೇದ ಬಿಧಿ । ಪೂಜೇ ಬರ ದುಲಹಿನಿ ಮಂಗಲನಿಧಿ ॥**
**ಬಾರಹಿಂ ಬಾರ ಆರತೀ ಕರಹೀಂ । ಬ್ಯಜನ ಚಾರು ಚಾಮರ ಸಿರ ಢರಹೀಂ ॥ ೨ ॥**
**ಬಸ್ತು ಅನೇಕ ನಿಛಾವರಿ ಹೋಹೀಂ । ಭರೀಂ ಪ್ರಮೋದ ಮಾತು ಸಬ ಸೋಹೀಂ ॥**
**ಪಾವಾ ಪರಮ ತತ್ವಜನು ಜೋಗೀಂ । ಅಮೃತು ಲಹೆಉ ಜನು ಸಂತತ ರೋಗೀಂ ॥ ೩ ॥**
**ಜನಮ ರಂಕ ಜನು ಪಾರಸ ಪಾವಾ । ಅಂಧಹಿ ಲೋಚನ ಲಾಭು ಸುಹಾವಾ ॥**
**ಮೂಕ ಬದನ ಜನು ಸಾರದ ಛಾಈ । ಮಾನಹುಂ ಸಮರ ಸೂರ ಜಯ ಪಾಈ ॥ ೪ ॥**

ಮನ್ಮಥನೇ ತನ್ನ ಕೈಯಾರೆ ನಿರ್ಮಿಸಿದ್ದನೋ ಎಂಬಂತಿದ್ದ ಸಹಜ ಸುಂದರ ಶೋಭೆಯಿಂದ ಶೋಭಿಸುವ ನಾಲ್ಕು ಸಿಂಹಾಸನಗಳಲ್ಲಿ, ಮಾತೆಯರು ನವವಧೂವರರನ್ನು ಕುಳ್ಳಿರಿಸಿ, ಆದರದಿಂದ ಅವರ ಪವಿತ್ರಪಾದಗಳನ್ನು ತೊಳೆದರು. ಬಳಿಕ ವೇದೋಕ್ತರೀತಿಯಿಂದ ಮಂಗಳನಿಧಿಯಂತಿದ್ದ ಮದುಮಕ್ಕಳನ್ನು ಧೂಪ, ದೀಪ, ನೈವೇದ್ಯಗಳಿಂದ ಪೂಜಿಸಿದರು. ತಾಯಂದಿರು ಪುನಃ ಪುನಃ ಆರತಿ ಎತ್ತಿದರು. ವಧೂವರರ ತಲೆಯ ಮೇಲೆ ಚಾಮರ, ಬೀಸಣಿಗೆಯಿಂದ ಗಾಳಿ ಬೀಸಲಾಯಿತು. ಅನೇಕ ವಿಧವಾದ ವಸ್ತುಗಳನ್ನು ಇಳಿ ತೆಗೆದರು. ತಾಯಂದಿರೆಲ್ಲರೂ – ಯೋಗಿಗಳು ಬ್ರಹ್ಮಾನಂದವನ್ನು ಹೊಂದಿದಂತೆ, ನಿತ್ಯ ರೋಗಿಗೆ ಅಮೃತ ದೊರೆತಂತೆ ಆನಂದಭರಿತರಾಗಿ ಕಂಗೊಳಿಸುತ್ತಿದ್ದರು. ಹುಟ್ಟು ದರಿದ್ರನಿಗೆ ಸ್ಪರ್ಶಮಣಿ ದೊರೆತಂತೆ, ಕುರುಡನಿಗೆ ಸುಂದರ ಕಣ್ಣುಗಳು ಬಂದಂತೆ, ಮೂಕನ ನಾಲಿಗೆಗೆ ಸರಸ್ವತಿ ಒಲಿದಂತೆ, ಶೂರನು ಸಮರದಲ್ಲಿ ವಿಜಯಿಯಾದಂತೆ ಆ ತಾಯಂದಿರೆಲ್ಲರೂ ಅತ್ಯಂತ ಸುಖಿಗಳಾದರು. (ಚೌ/೧-೪)

**ದೋ – ಏಹಿ ಸುಖ ತೇ ಸತ ಕೋಟಿ ಗುನ ಪಾವಹಿಂ ಮಾತು ಅನಂದು ।**
**ಭಾಇನ್ಹ ಸಹಿತ ಬಿ ಆಹಿ ಘರ ಆಏ ರಘುಕುಲಚಂದು ॥ ೩೫೦(ಕ)॥**
**ಲೋಕ ರೀತಿ ಜನನೀಂ ಕರಹಿಂ ಬರ ದುಲಹಿನಿ ಸಕುಚಾಹಿಂ ।**
**ಮೋದು ಬಿನೋದು ಬಿಲೋಕಿ ಬಡ ರಾಮು ಮನಹಿಂ ಮುಸುಕಾಹಿಂ ॥ ೩೫೦(ಖ)॥**

ಈ ಮೇಲಿನ ಸುಖಗಳಿಗಿಂತಲೂ ಶತಕೋಟಿ ಮಡಿ ಹೆಚ್ಚಾದ ಆನಂದವನ್ನು ಮಾತೆಯರು ಹೊಂದಿದರು. ಏಕೆಂದರೆ, ರಘುಕುಲಚಂದ್ರ ಶ್ರೀರಾಮಚಂದ್ರನು ತಮ್ಮಂದಿರ ಸಹಿತ ವಿವಾಹಿತನಾಗಿ ಮನೆಗೆ ಮರಳಿದ್ದ. ತಾಯಂದಿರು ಸಂಪ್ರದಾಯದಂತೆ ಶಾಸ್ತ್ರಗಳನ್ನೂ, ಹಾಸ್ಯ ವಿನೋದಗಳನ್ನೂ ಮಾಡಿದಾಗ ವಧೂ-ವರರು ನಾಚಿ ನೀರಾದರು. ಈ ಮಹಾನ್ ಆನಂದ, ವಿನೋದವನ್ನು ಕಂಡು ಶ್ರೀರಾಮನು ಮನದಲ್ಲೇ ಮುಗುಳ್ನಗುತ್ತಿರುವನು. (ದೋ/೩೫೦ ಕ, ಖ)

**ಚೌ – ದೇವ ಪಿತರ ಪೂಜೇ ಬಿಧಿ ನೀಕೀ । ಪೂಜೀಂ ಸಕಲ ಬಾಸನಾ ಜೀ ಕೀ ॥**
**ಸಬಹಿ ಬಂದಿ ಮಾಗಹಿಂ ಬರದಾನಾ । ಭಾಇನ್ಹ ಸಹಿತ ರಾಮ ಕಲ್ಯಾನಾ ॥ ೧ ॥**
**ಅಂತರಹಿತ ಸುರ ಆಸಿಷ ದೇಹೀಂ । ಮುದಿತ ಮಾತು ಅಂಚಲ ಭರಿ ಲೇಹೀಂ ॥**
**ಭೂಪತಿ ಬೋಲಿ ಬರಾತಿ ಲೀನ್ಹೇ । ಜಾನ ಬಸನ ಮನಿ ಭೂಷನ ದೀನ್ಹೇ ॥ ೨ ॥**
**ಆಯಸು ಪಾಇ ರಾಖಿ ಉರ ರಾಮಹಿ । ಮುದಿತ ಗಏ ಸಬ ನಿಜ ನಿಜ ಧಾಮಹಿ ॥**
**ಪುರ ನರ ನಾರಿ ಸಕಲ ಪಹಿರಾಏ । ಘರ ಘರ ಬಾಜನ ಲಗೇ ಬಧಾಏ ॥ ೩ ॥**
**ಜಾಚಕ ಜನ ಜಾಚಹಿಂ ಜೋಇ ಜೋಈ । ಪ್ರಮುದಿತ ರಾಉ ದೇಹಿ ಸೋಇ ಸೋಇ ॥**
**ಸೇವಕ ಸಕಲ ಬಜನಿಆ ನಾನಾ । ಪೂರನ ಕಿಏ ದಾನ ಸನಮಾನಾ ॥ ೪ ॥**

ತಮ್ಮ ಮನದ ಎಲ್ಲ ಬಯಕೆಗಳು ಈಡೇರಿದುದನ್ನು ಕಂಡು ಮಾತೆಯರು ದೇವ-ಪಿತೃಗಳನ್ನು ಪೂಜಿಸಿದರು. ಎಲ್ಲರಿಗೂ ವಂದಿಸಿ, ಸೋದರರ ಸಹಿತ ಶ್ರೀರಾಮನಿಗೆ ಕಲ್ಯಾಣವಾಗಲೀ ಎಂದು ಭಕ್ತಿಯಿಂದ ಬೇಡಿದರು. ದೇವತೆಗಳು ಅದೃಶ್ಯರೂಪದಿಂದಲೇ ಅವರನ್ನು ಆಗಸದಲ್ಲಿದ್ದುಕೊಂಡು ಹರಸುತ್ತಿದ್ದರು. ಮಾತೆಯರು ಅಮಿತಾನಂದದಿಂದ ತಮ್ಮ ಸೆರಗೊಡ್ಡಿ ಸ್ವೀಕರಿಸುತ್ತಿದ್ದರು. ಅನಂತರ ಮಹಾರಾಜನು ದಿಬ್ಬಣಿಗರನ್ನು ಕರೆಸಿ, ಅವರಿಗೆ ವಸ್ತ್ರ, ವಾಹನ, ಮಣಿ-ರತ್ನಗಳನ್ನೂ ಆಭೂಷಣಗಳನ್ನೂ ಉಡುಗೊರೆಯಾಗಿ ಕೊಟ್ಟನು. ಅವರೆಲ್ಲರೂ ರಾಜಾಜ್ಞೆಯನ್ನು ಪಡೆದು ಶ್ರೀರಾಮನನ್ನು ತಮ್ಮ ಹೃದಯದಲ್ಲಿ ನೆಲೆಗೊಳಿಸಿ, ಅವರವರ ಮನೆಗಳಿಗೆ ತೆರಳಿದರು. ನಗರದ ಎಲ್ಲ ಸ್ತ್ರೀ-ಪುರುಷರಿಗೆ ಅರಸನು ವಸ್ತ್ರ-ಒಡವೆಗಳನ್ನು ನೀಡಿದನು. ಮನೆ-ಮನೆಗಳಲ್ಲೂ ಅಭಿನಂದನಾ ವಾದ್ಯಗಳು ಮೊಳಗತೊಡಗಿದವು. ಯಾಚಕರು ಬೇಡಿದ್ದೆಲ್ಲವನ್ನು ಅವರಿಗೆ ರಾಜನು ವಿಶೇಷ ಸಂತೋಷದಿಂದ ದಾನಮಾಡಿದನು. ಸೇವಕರನ್ನು, ವಾದ್ಯಗಾರರನ್ನೂ ಹಾಗೂ ಇತರರನ್ನೂ ನಾನಾ ವಿಧವಾದ ದಾನ ಸಮ್ಮಾನಗಳಿಂದ ಸಂತೋಷಪಡಿಸಿದನು. (ಚೌ/೧-೪)

**ದೋ – ದೇಹಿಂ ಅಸೀಸ ಜೋಹಾರಿ ಸಬ ಗಾವಹಿಂ ಗುನ ಗನ ಗಾಥ ।**
**ತಬ ಗುರ ಭೂಸುರ ಸಹಿತ ಗೃಹ್ಂ ಗವನು ಕೀನ್ಹ ನರನಾಥ ॥ ೩೫೧ ॥**

ಅವರೆಲ್ಲರೂ ಮಹಾರಾಜರಿಗೆ ವಂದನೆ ಸಲ್ಲಿಸಿ, ಹಾಡಿ-ಹರಸಿ ಹೊರಟುಹೋದರು. ಆಗ ಗುರುಗಳು ಹಾಗೂ ಭೂಸುರರೊಂದಿಗೆ ದಶರಥನು ಗೃಹಪ್ರವೇಶಮಾಡಿದನು. (ದೋ/೩೫೧)

**ಚೌ – ಜೋ ಬಸಿಷ್ಟ ಅನುಸಾಸನ ದೀನ್ಹೀ । ಲೋಕ ಬೇದ ಬಿಧಿ ಸಾದರ ಕೀನ್ಹೀ ॥**
**ಭೂಸುರ ಭೀರ ದೇಖಿ ಸಬ ರಾನೀ । ಸಾದರ ಉಠೀ ಭಾಗ್ಯ ಬಡ ಜಾನೀ ॥ ೧ ॥**
**ಪಾಯ ಪಖಾರಿ ಸಕಲ ಅನ್ಹವಾಏ । ಪೂಜಿ ಭಲೀ ಬಿಧಿ ಭೂಪ ಜೆವಾಂಏ ॥**
**ಆದರ ದಾನ ಪ್ರೇಮ ಪರಿಪೋಷೇ । ದೇತ ಅಸೀಸ ಚಲೇ ಮನ ತೋಷೇ ॥ ೨ ॥**
**ಬಹು ಬಿಧಿ ಕೀನ್ಹಿ ಗಾಧಿಸುತ ಪೂಜಾ । ನಾಥ ಮೋಹಿ ಸಮ ಧನ್ಯ ನ ದೂಜಾ ॥**
**ಕೀನ್ಹಿ ಪ್ರಸಂಸಾ ಭೂಪತಿ ಭೂರೀ । ರಾನಿನ್ಹ ಸಹಿತ ಲೀನ್ಹಿ ಪಗ ಧೂರೀ ॥ ೩ ॥**
**ಭೀತರ ಭವನ ದೀನ್ಹ ಬರ ಬಾಸೂ । ಮನ ಜೋಗವತ ರಹ ನೃಪು ರನಿವಾಸೂ ॥**
**ಪೂಜೇ ಗುರ ಪದ ಕಮಲ ಬಹೋರೀ । ಕೀನ್ಹಿ ಬಿನಯ ಉರ ಪ್ರೀತಿ ನ ಥೋರೀ ॥ ೪ ॥**

ವಸಿಷ್ಠರ ಆದೇಶಾನುಸಾರ ರಾಜನು ಲೋಕಾಚಾರವನ್ನೂ, ವೈದಿಕ ವಿಧಿಗಳನ್ನೂ ಆದರದಿಂದ ನೆರವೇರಿಸಿದನು. ಬ್ರಾಹ್ಮಣರ ಗುಂಪನ್ನು ಕಂಡು, ರಾಣಿಯರೆಲ್ಲರೂ ತಮ್ಮ ಭಾಗ್ಯವೆಂದು ಬಗೆದು ಆದರದಿಂದ ಎದ್ದು ನಿಂತರು. ರಾಜನು ಅವರ ಪಾದಗಳನ್ನು ತೊಳೆದು, ಸ್ನಾನಮಾಡಿಸಿ, ಚೆನ್ನಾಗಿ ಪೂಜೆಗೈದು, ಅವರಿಗೆ ಭೋಜನಮಾಡಿಸಿದನು. ಅವರು ಪ್ರೇಮಾದರಗಳಿಂದ, ದಾನ-ಮಾನಗಳಿಂದ ತೃಪ್ತಿಹೊಂದಿದ ವಿಪ್ರೋತ್ತಮರು ರಾಜಪರಿವಾರವನ್ನು ಆಶೀರ್ವದಿಸಿ, ತಮ್ಮ ಮನೆಗಳಿಗೆ ತೆರಳಿದರು. ದಶರಥ ಮಹಾರಾಜನು ಗಾಧಿಪುತ್ರರಾದ ವಿಶ್ವಾಮಿತ್ರರನ್ನು ಅನೇಕ ವಿಧದಿಂದ ಪೂಜಿಸಿ– ''ಮುನೀಶ್ವರರೇ! ನಿಮ್ಮಂಥ ಗುರುವಿನ ಆಶೀರ್ವಾದ ಪಡೆದ ನನ್ನಂಥ ಧನ್ಯರು ಬೇರೆ ಯಾರಿದ್ದಾರೆ?'' ಎಂದು ಬಿನ್ನವಿಸಿಕೊಂಡನು. ರಾಜನು ಅವರನ್ನು ಪರಿಪರಿಯಾಗಿ ಕೊಂಡಾಡಿ, ರಾಣಿಯರ ಸಹಿತ ಅವರ ಚರಣಧೂಳಿಯನ್ನು ಶಿರದಲ್ಲಿ ಮುಡಿದುಕೊಂಡನು. ರಾಜಭವನದಲ್ಲಿ ಆ ಮಹರ್ಷಿಯ ಸೇವೆ ಎಲ್ಲರೂ ಮಾಡಲು ಅನುಕೂಲವಾಗುವಂತಹ ಉತ್ತಮವಾದ ವಸತಿಯನ್ನು ರಾಜನು ಏರ್ಪಡಿಸಿದನು. ಅವನು ಮಿಗಿಲಾದ ವಿನಯದಿಂದ, ಭಕ್ತಿಯಿಂದ ವಸಿಷ್ಠರ ಚರಣಕಮಲಗಳನ್ನೂ ಪೂಜಿಸಿ, ವಿನಂತಿಸಿಕೊಂಡನು. ಪ್ರೀತಿಯು ಅವನ ಹೃದಯದಲ್ಲಿ ಹಿಡಿಸದಾಯಿತು. (ಚೌ/೧-೪)

**ದೋ – ಬಧುನ್ಹ ಸಮೇತ ಕುಮಾರ ಸಬ ರಾನಿನ್ಹ ಸಹಿತ ಮಹೀಸು ।**
**ಪುನಿ ಪುನಿ ಬಂದತ ಗುರ ಚರನ ದೇತ ಅಸೀಸ ಮುನೀಸು ॥ ೩೫೨ ॥**

ರಾಜಕುಮಾರರೂ, ನವವಧೂಗಳೂ, ದಶರಥನೂ, ರಾಣಿಯರೂ ಹೀಗೆ ಎಲ್ಲರೂ ಗುರುಗಳ ಪಾದಗಳಿಗೆ ಪದೇ-ಪದೇ ವಂದಿಸಿಕೊಳ್ಳುತ್ತಾರೆ. ವಸಿಷ್ಠ ಮಹಾಮುನಿಗಳು ಅವರನ್ನು ಆಶೀರ್ವದಿಸಿದರು. (ದೋ/೩೫೨)

**ಚೌ – ಬಿನಯ ಕೀನ್ಹಿ ಉರ ಅತಿ ಅನುರಾಗೇ । ಸುತ ಸಂಪದಾ ರಾಖಿ ಸಬ ಆಗೇಂ ॥**
**ನೇಗು ಮಾಗಿ ಮುನಿನಾಯಕ ಲೀನ್ಹಾ । ಆಸಿರಬಾದು ಬಹುತ ಬಿಧಿ ದೀನ್ಹಾ ॥ ೧ ॥**

**ಉರ ಧರಿ ರಾಮಹಿ ಸೀಯ ಸಮೇತಾ । ಹರಷಿ ಕೀನ್ಹ ಗುರ ಗವನು ನಿಕೇತಾ ॥**
**ಬಿಪ್ರಬಧೂ ಸಬ ಭೂಪ ಬೊಲಾಈಂ । ಚೈಲ ಚಾರು ಭೂಷನ ಪಹಿರಾಈ ॥ ೨ ॥**
**ಬಹುರಿ ಬೊಲಾಇ ಸುಆಸಿನಿ ಲೀನ್ಹೀಂ । ರುಚಿ ಬಿಚಾರಿ ಪಹಿರಾವನಿ ದೀನ್ಹೀಂ ॥**
**ನೇಗೀ ನೇಗ ಜೋಗ ಸಬ ಲೇಹೀಂ । ರುಚಿ ಅನುರೂಪ ಭೂಪಮನಿ ದೇಹೀಂ ॥ ೩ ॥**
**ಪ್ರಿಯ ಪಾಹುನೆ ಪೂಜ್ಯ ಜೇ ಜಾನೇ । ಭೂಪತಿ ಭಲೀ ಭಾಂತಿ ಸನಮಾನೇ ॥**
**ದೇವ ದೇಖಿ ರಘುಬೀರ ಬಿಬಾಹೂ । ಬರಷಿ ಪ್ರಸೂನ ಪ್ರಸಂಸಿ ಉಛಾಹೂ ॥ ೪ ॥**

ದಶರಥನು ತನ್ನ ಕುಮಾರರಿಂದೊಡಗೂಡಿ ಅತ್ಯಂತ ಭಕ್ತಿ ಪ್ರಪತ್ತಿಗಳಿಂದ ತನ್ನ ಅಖಿಲ ಸಂಪತ್ತನ್ನು ವಸಿಷ್ಠ ಮುನಿಯ ಮುಂದಿರಿಸಿ, ಸ್ವೀಕರಿಸಬೇಕೆಂದು ಪ್ರಾರ್ಥಿಸಿಕೊಂಡನು. ಆದರೆ ಆ ಮಹಾಮುನಿವರರು ಸಂಪ್ರದಾಯಕ್ಕನುಸಾರ ಪೌರೋಹಿತ್ಯದ ದಕ್ಷಿಣೆಯನ್ನುಮಾತ್ರ ಸ್ವೀಕರಿಸಿ, ಅನೇಕ ರೀತಿಯಲ್ಲಿ ಆಶೀರ್ವದಿಸಿದರು. ಬಳಿಕ ಗುರುವಸಿಷ್ಠರು ಸೀತಾರಾಮರ ದಿವ್ಯರೂಪವನ್ನು ತಮ್ಮ ಹೃದಯದಲ್ಲಿ ನೆಲೆಗೊಳಿಸಿಕೊಂಡು, ಹರ್ಷಚಿತ್ತರಾಗಿ ತಮ್ಮ ನಿವಾಸಕ್ಕೆ ತೆರಳಿದರು. ರಾಜನು ಬ್ರಾಹ್ಮಣ ಸುವಾಸಿನಿಯರೆಲ್ಲರನ್ನು ಬರಮಾಡಿಕೊಂಡು, ಅವರಿಗೆ ಸುಂದರ ವಸ್ತ್ರಾಭೂಷಣಗಳನ್ನು ನೀಡಿದನು. ಅನಂತರ ನಗರದ ಮುತ್ತೈದೆಯರು ಅವರ, ತಂಗೀ, ಮಕ್ಕಳು ಹೀಗೆ ಎಲ್ಲರನ್ನು ಕರೆಸಿ ಅವರ ಅಭಿರುಚಿಗೆ ತಕ್ಕಂತೆ ಉಡುಗೊರೆಗಳನ್ನು ಕೊಡಮಾಡಿದನು. ಉಡುಗೊರೆ ಪಡೆಯಬೇಕಾದ ಜನರು ತಮ್ಮ-ತಮ್ಮ ಉಡುಗೊರೆಗಳನ್ನು ಪಡೆದುಕೊಂಡು ಹೋದರು. ತನಗೆ ಪ್ರಿಯರೂ, ಪೂಜ್ಯರೂ ಆದ ಅತಿಥಿಗಳೆಲ್ಲರನ್ನು ರಾಜನು ಆದರದಿಂದ ಸನ್ಮಾನಿಸಿದನು. ದೇವತೆಗಳೆಲ್ಲರೂ ಶ್ರೀರಾಮನ ವಿವಾಹ ಮಹೋತ್ಸವವನ್ನು ನೋಡಿ ಕೊಂಡಾಡಿ, ಹೂಮಳೆಗರೆದರು. (ಚೌ/೧-೪)

**ದೋ – ಚಲೇ ನಿಸಾನ ಬಜಾಇ ಸುರ ನಿಜ ನಿಜ ಪುರ ಸುಖ ಪಾಇ ।**
**ಕಹತ ಪರಸಪರ ರಾಮ ಜಸು ಪ್ರೇಮ ನ ಹೃದಯಁ ಸಮಾಇ ॥ ೩೫೩ ॥**

ದುಂದುಭಿಗಳನ್ನು ಮೊಳಗಿಸಿ ದೇವತೆಗಳು ಶ್ರೀರಾಮನ ಗುಣವೈಭವಗಳನ್ನು ಪರಸ್ಪರ ಹೇಳಿಕೊಂಡು, ತಮ್ಮ-ತಮ್ಮ ಲೋಕಗಳಿಗೆ ತೆರಳಿದರು. ಅವರ ಹೃದಯಗಳು ರಾಮಪ್ರೇಮದಿಂದ ತುಂಬಿಹೋಯಿತು. (ದೋ/೩೫೩)

**ಚೌ – ಸಬ ಬಿಧಿ ಸಬಹಿ ಸಮದಿ ನರನಾಹೂ । ರಹಾ ಹೃದಯಁ ಭರಿ ಪೂರಿ ಉಛಾಹೂ ॥**
**ಜಹಁ ರನಿವಾಸು ತಹಾಁ ಪಗು ಧಾರೇ । ಸಹಿತ ಬಹೂಟಿನ್ಹ ಕುಅँರ ನಿಹಾರೇ ॥ ೧ ॥**
**ಲಿಏ ಗೋದ ಕರಿ ಮೋದ ಸಮೇತಾ । ಕೋ ಕಹಿ ಸಕಇ ಭಯಉ ಸುಖು ಜೇತಾ ॥**
**ಬಧೂ ಸಪ್ರೇಮ ಗೋದ ಬೈಠಾರೀಂ । ಬಾರ ಬಾರ ಹಿಯಁ ಹರಷಿ ದುಲಾರೀಂ ॥ ೨ ॥**
**ದೇಖಿ ಸಮಾಜು ಮುದಿತ ರನಿವಾಸೂ । ಸಬ ಕೇಂ ಉರ ಅನಂದ ಕಿಯೊ ಬಾಸೂ ॥**
**ಕಹೆಉ ಭೂಪ ಜಿಮಿ ಭಯಉ ಬಿಬಾಹೂ । ಸುನಿ ಸುನಿ ಹರಷು ಹೋತ ಸಬ ಕಾಹೂ ॥ ೩ ॥**
**ಜನಕ ರಾಜ ಗುನ ಸೀಲು ಬಡಾಈ । ಪ್ರೀತಿ ರೀತಿ ಸಂಪದಾ ಸುಹಾಈ ॥**
**ಬಹುಬಿಧಿ ಭೂಪ ಭಾಟ ಜಿಮಿ ಬರನೀ । ರಾನೀಂ ಸಬ ಪ್ರಮುದಿತ ಸುನಿ ಕರನೀ ॥ ೪ ॥**

ಎಲ್ಲ ವಿಧದಿಂದ ಎಲ್ಲರಿಗೂ ಆದರ ಸತ್ಕಾರಮಾಡಿದ ಮೇಲೆ ದಶರಥನ ಎದೆಯಲ್ಲಿ ಉತ್ಸಾಹ, ಆನಂದ ತುಂಬಿ ತುಳುಕಿತು. ಅನಂತರ ಅರಸನು ರಾಣೀವಾಸಕ್ಕೆ ತೆರಳಿ, ಪತ್ನೀಸಮೇತರಾದ ಪುತ್ರರನ್ನು ನೋಡಿದನು. ರಾಜನು ಹರ್ಷದಿಂದ ಪುತ್ರರನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಅಪರಿಮಿತವಾದ ಆನಂದವನ್ನು ಅನುಭವಿಸಿದನು. ಅನಂತರ ಸೊಸೆಯರನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಅವರನ್ನು ವಾತ್ಸಲ್ಯದಿಂದ ಮುದ್ದಿಸಿ ಲಾಲಿಸಿದನು. ಈ ಸಂಭ್ರಮವನ್ನು ಕಂಡು ರಾಣೀವಾಸವು ಹಿಗ್ಗಿಹೋಯಿತು. ಎಲ್ಲರ ಹೃದಯದಲ್ಲಿಯೂ ಆನಂದವು ಮನೆಮಾಡಿಕೊಂಡಿತು. ಆಗ ರಾಜನು ಮದುವೆ ಹೇಗೆ ನಡೆಯಿತು ಎಂಬುದನ್ನು ವರ್ಣಿಸಿದನು. ಇದನ್ನು ಕೇಳಿದ ರಾಣೀವಾಸವೆಲ್ಲವೂ ಹರ್ಷಗೊಂಡರು. ಜನಕ ಮಹಾರಾಜನ ಗುಣ, ಶೀಲ, ಹಿರಿಮೆ, ಪ್ರೇಮಾಭಿಮಾನಗಳನ್ನೂ, ಸಂಪತ್ತು ಮೊದಲಾದುವನ್ನು ದಶರಥನು ಹೊಗಳುಭಟ್ಟರಂತೆ ಕೊಂಡಾಡಿದನು. ಜನಕ ಮಹಾರಾಜನ ನಡವಳಿಕೆಯನ್ನೂ, ಆದರ ಸತ್ಕಾರಗಳನ್ನೂ ಕೇಳಿ, ಎಲ್ಲ ರಾಣೀವಾಸದವರೂ ತುಂಬಾ ಸಂತೋಷಗೊಂಡರು. (ಚೌ/೧-೪)

**ದೋ – ಸುತನ್ಹ ಸಮೇತ ನಹಾಇ ನೃಪ ಬೋಲಿ ಬಿಪ್ರ ಗುರ ಗ್ಯಾತಿ ।**
**ಭೋಜನ ಕೀನ್ಹ ಅನೇಕ ಬಿಧಿ ಘರೀ ಪಂಚ ಗಇ ರಾತಿ ॥ ೩೫೪ ॥**

ರಾಜನು ಪುತ್ರರಸಹಿತ ಸ್ನಾನಾದಿಗಳನ್ನು ಮಾಡಿ, ಗುರುಗಳನ್ನು, ವಿಪ್ರರನ್ನು, ಜ್ಞಾತಿಬಾಂಧವನ್ನು ಬರಮಾಡಿಕೊಂಡು, ಅವರ ಜೊತೆಯಲ್ಲಿ ಅನೇಕ ವಿಧವಾದ ಪಂಚಭಕ್ಷ್ಯಪರಮಾನ್ನಗಳ ಭೋಜನ ಮಾಡಿದನು. ಇವೆಲ್ಲ ಆಗುವ ಹೊತ್ತಿಗೆ ಐದು ಘಳಿಗೆ ರಾತ್ರಿಯು ಉರುಳಿಹೋಗಿತ್ತು. (ದೋ/೩೫೪)

**ಚೌ – ಮಂಗಲಗಾನ ಕರಹಿಂ ಬರ ಭಾಮಿನಿ । ಭೈ ಸುಖಮೂಲ ಮನೋಹರ ಜಾಮಿನಿ ॥**
**ಅಂಚಇ ಪಾನ ಸಬ ಕಾಹೂಂ ಪಾಏ । ಸ್ರಗ ಸುಗಂಧ ಭೂಷಿತ ಛಬಿ ಛಾಏ ॥ ೧ ॥**
**ರಾಮಹಿ ದೇಖಿ ರಜಾಯಸು ಪಾಈ । ನಿಜ ನಿಜ ಭವನ ಚಲೇ ಸಿರ ನಾಈ ॥**
**ಪ್ರೇಮು ಪ್ರಮೋದು ಬಿನೋದು ಬಡಾಈ । ಸಮಉ ಸಮಾಜು ಮನೋಹರತಾಈ ॥ ೨ ॥**
**ಕಹಿ ನ ಸಕಹಿಂ ಸತ ಸಾರದ ಸೇಸೂ । ಬೇದ ಬಿರಂಚಿ ಮಹೇಸ ಗನೇಸೂ ॥**
**ಸೋ ಮೈಂ ಕಹೌಂ ಕವನ ಬಿಧಿ ಬರನೀ । ಭೂಮಿನಾಗು ಸಿರ ಧರಇ ಕಿ ಧರನೀ ॥ ೩ ॥**
**ನೃಪ ಸಬ ಭಾಂತಿ ಸಬಹಿ ಸನಮಾನೀ । ಕಹಿ ಮೃದು ಬಚನ ಬೊಲಾಈಂ ರಾನೀ ॥**
**ಬಧೂ ಲರಿಕನೀಂ ಪರ ಘರ ಆಈಂ । ರಾಖೇಹು ನಯನ ಪಲಕ ಕೀ ನಾಈಂ ॥ ೪ ॥**

ಸುಂದರ ರಮಣಿಯರು ಮಂಗಳಗಾನ ಮಾಡುತ್ತಿದ್ದರು. ಆ ರಾತ್ರಿಯು ಸುಖದ ಮೂಲವಾಯಿತು, ಮನೋಹರವಾಯಿತು. ಎಲ್ಲರೂ ಆಚಮನ ಮಾಡಿ, ತಾಂಬೂಲ ಸ್ವೀಕರಿಸಿದರು. ಹೂಮಾಲೆ, ಸುಗಂಧದ್ರವ್ಯಗಳಿಂದ ಭೂಷಿತರಾಗಿ ಕಾಂತಿಯಿಂದ ಕಂಗೊಳಿಸಿದರು. ಅತಿಥಿಗಳು ಶ್ರೀರಾಮನನ್ನು ಕಂಡು ತಲೆವಾಗಿ, ಅಪ್ಪಣೆಪಡೆದು ತಮ್ಮ-ತಮ್ಮ ಮನೆಗಳಿಗೆ ನಡೆದರು. ಅಲ್ಲಿಯ ಪ್ರೇಮ, ಪ್ರಮೋದ, ವಿನೋದ, ಮಹತ್ವ, ಸಮಯ ಸಂದಣಿ ಹಾಗೂ ಚೆಲುವನ್ನು ನೂರಾರು ಮಂದಿ ಸರಸ್ವತಿಯರೂ, ಆದಿಶೇಷರೂ, ವೇದಗಳೂ, ಬ್ರಹ್ಮರೂ, ಶಿವ-ಗಣೇಶರೂ ಯಾರೂ ಬಣ್ಣಿಸಲಾರರು. ಅಂತಹುದರಲ್ಲಿ ನಾನು ಎಂತು ವರ್ಣಿಸಲಿ? ಎಲ್ಲಾದರೂ ಎರೆಹುಳವು ಬೂಮಿಯನ್ನು ಹೊರಬಲ್ಲುದೇ? ಎಲ್ಲರನ್ನು ಎಲ್ಲರೀತಿಯಿಂದಲೂ ಸನ್ಮಾನಿಸಿದ ಬಳಿಕ ರಾಜನು ನಲ್ನಾತುಗಳನ್ನಾಡಿ ರಾಣಿಯರನ್ನು ಕರೆದು ಹೇಳಿದ – 'ಸೊಸೆಯರು ಇನ್ನೂ ಸಣ್ಣ ಪ್ರಾಯದವರು. ಬೇರೆ ಮನೆಗೆ ಬಂದಿರುವರು. ಇವರನ್ನು ಕಣ್ಣನ್ನು ರೆಪ್ಪೆ ಕಾಪಾಡುವಂತೆ ಕಾಪಾಡಬೇಕು. (ಚೌ/೧-೪)

**ದೋ – ಲರಿಕಾ ಶ್ರಮಿತ ಉನೀದ ಬಸ ಸಯನ ಕರಾವಹು ಜಾಇ ।**
**ಅಸ ಕಹಿ ಗೇ ಬಿಶ್ರಾಮಗೃಹಂ ರಾಮ ಚರನ ಚಿತು ಲಾಇ ॥ ೩೫೫ ॥**

ಮಕ್ಕಳು ಬಳಲಿ ತೊಳಲುತ್ತಿದ್ದಾರೆ. ಅವರನ್ನು ಕರಕೊಂಡು ಹೋಗಿ ಮಲಗಿಸಿರಿ.' ಹೀಗೆ ಹೇಳಿ ಅರಸನು ರಾಮಚರಣಗಳಲ್ಲಿ ಮನವನ್ನು ನೆಟ್ಟು ವಿಶ್ರಾಂತಿಗೃಹಕ್ಕೆ ತೆರಳಿದನು. (ದೋ/೩೫೫)

**ಚೌ – ಭೂಪ ಬಚನ ಸುನಿ ಸಹಜ ಸುಹಾಏ । ಜರಿತ ಕನಕ ಮನಿ ಪಲಂಗ ಡಸಾಏ ॥**
**ಸುಭಗ ಸುರಭಿ ಪಯ ಫೇನ ಸಮಾನಾ । ಕೋಮಲ ಕಲಿತ ಸುಪೇತೀಂ ನಾನಾ ॥ ೧ ॥**
**ಉಪಬರಹನ ಬರ ಬರನಿ ನ ಜಾಹೀಂ । ಸ್ರಗ ಸುಗಂಧ ಮನಿಮಂದಿರ ಮಾಹೀಂ ॥**
**ರತನದೀಪ ಸುಠಿ ಚಾರು ಚಂದೋವಾ । ಕಹತ ನ ಬನಇ ಜಾನ ಜೆಹಿಂ ಜೋವಾ ॥ ೨ ॥**
**ಸೇಜ ರುಚಿರ ರಚಿ ರಾಮು ಉಠಾಏ । ಪ್ರೇಮ ಸಮೇತ ಪಲಂಗ ಪೌಢಾಏ ॥**
**ಅಗ್ಯಾ ಪುನಿ ಪುನಿ ಭಾಇನ್ಹ ದೀನ್ಹೀ । ನಿಜ ನಿಜ ಸೇಜ ಸಯನ ತಿನ್ಹ ಕೀನ್ಹೀ ॥ ೩ ॥**
**ದೇಖಿ ಸ್ಯಾಮ ಮೃದು ಮಂಜುಲ ಗಾತಾ । ಕಹಹಿಂ ಸಪ್ರೇಮ ಬಚನ ಸಬ ಮಾತಾ ॥**
**ಮಾರಗ ಜಾತ ಭಯಾವನಿ ಭಾರೀ । ಕೇಹಿ ಬಿಧಿ ತಾತ ತಾಡಕಾ ಮಾರೀ ॥ ೪ ॥**

ಅರಸನ ಸಹಜಸುಂದರ ವಚನಗಳನ್ನು ಕೇಳಿ, ರಾಣಿಯರು ರತ್ನಖಚಿತವಾದ ಭಂಗಾರದ ಮಂಚಗಳಲ್ಲಿ ಮೃದು ಸುಪ್ಪತ್ತಿಗೆಗಳನ್ನು ಹಾಸಿ, ಅದರ ಮೇಲೆ ಹಾಲಿನ ನೊರೆಯಂತಹ ಬೆಳ್ಳಗಿನ, ಕೋಮಲವಾದ ಹಚ್ಚಡಗಳನ್ನು ಹಾಸಿದರು. ಅವರ್ಣನೀಯವಾದ ಸುಂದರ ದಿಂಬುಗಳನ್ನು ಅಣಿಗೊಳಿಸಿದರು. ಮಣಿಮಯ ಭವನವನ್ನು ಪುಷ್ಪಮಾಲೆಗಳಿಂದ, ಸುಗಂಧದ್ರವ್ಯಗಳಿಂದ ಸಿಂಗರಿಸಿದ್ದರು. ಸುಂದರವಾದ ರತ್ನದೀಪಗಳು, ಮೇಲುಕಟ್ಟುಗಳ ಶೋಭೆಯನ್ನು ವರ್ಣಿಸಲು ಸಾಧ್ಯವಿಲ್ಲ, ಅವುಗಳನ್ನು ನೋಡಿದವರು ಮಾತ್ರ ಬಲ್ಲರು. ಈ ಪ್ರಕಾರ ಸುಂದರ ಶಯ್ಯೆಗಳನ್ನು ಸಿದ್ಧಗೊಳಿಸಿ ತಾಯಂದಿರು ಶ್ರೀರಾಮಚಂದ್ರನನ್ನು ಮುದ್ದಿಸುತ್ತಾ ಮಲಗಿಸಿದರು. ರಾಮನ ಅನುಮತಿಯಂತೆ ಸೋದರರು ತಮ್ಮ-ತಮ್ಮ ಹಾಸಿಗೆಗಳಲ್ಲಿ

ಪವಡಿಸಿದರು. ಶ್ರೀರಾಮನ ಶ್ಯಾಮಸುಂದರ ಕೋಮಲ ಅಂಗಗಳನ್ನು ನೋಡಿ ಎಲ್ಲ ತಾಯಂದಿರು ಕೇಳುತ್ತಾರೆ – 'ಮಗೂ! ನೀನು ಹೋಗುತ್ತಿರುವಾಗ ಹಾದಿಯಲ್ಲಿ ಅತ್ಯಂತ ಭಯಂಕರಳಾದ ತಾಟಕಿಯೆಂಬ ರಕ್ಕಸಿಯನ್ನು ಹೇಗೆ ಕೊಂದೆ? (ಚೌ/೧-೪)

**ದೋ – ಘೋರ ನಿಸಾಚರ ಬಿಕಟ ಭಟ ಸಮರ ಗನಹಿಂ ನಹಿಂ ಕಾಹು ।**
**ಮಾರೇ ಸಹಿತ ಸಹಾಯ ಕಿಮಿ ಖಲ ಮಾರೀಚ ಸುಬಾಹು ॥ ೩೫೬ ॥**

ವಿಕಟ ಭಟರೂ, ಘೋರನಿಶಾಚರರೂ, ಯುದ್ಧದಲ್ಲಿಯಾರನ್ನು ಲೆಕ್ಕಿಸದಿರುವ ದುಷ್ಟರಾದ ಮಾರೀಚ, ಸುಬಾಹು ಇವರನ್ನೂ, ಇವರ ಸಹಾಯಕರನ್ನೂ ನೀನು ಹೇಗೆ ಕೊಂದೆ? (ದೋ/೩೫೬)

**ಚೌ – ಮುನಿ ಪ್ರಸಾದ ಬಲಿ ತಾತ ತುಮ್ಹಾರೀ । ಈಸ ಅನೇಕ ಕರವರೇಂ ಟಾರೀ ॥**
**ಮಖ ರಖವಾರೀ ಕರಿ ದುಹುಂ ಭಾಈ । ಗುರು ಪ್ರಸಾದ ಸಬ ಬಿದ್ಯಾ ಪಾಈಂ ॥ ೧ ॥**
**ಮುನಿತಿಯ ತರೀ ಲಗತ ಪಗ ಧೂರೀ । ಕೀರತಿ ರಹೀ ಭುವನ ಭರಿ ಪೂರೀ ॥**
**ಕಮಠ ಪೀಠಿ ಪಬಿ ಕೂಟ ಕಠೋರಾ । ನೃಪ ಸಮಾಜ ಮಹುಂ ಸಿವ ಧನು ತೋರಾ ॥ ೨ ॥**
**ಬಿಸ್ವ ಬಿಜಯ ಜಸು ಜಾನಕಿ ಪಾಈ । ಆಏ ಭವನ ಬ್ಯಾಹಿ ಸಬ ಭಾಈ ॥**
**ಸಕಲ ಅಮಾನುಷ ಕರಮ ತುಮ್ಹಾರೇ । ಕೇವಲ ಕೌಸಿಕ ಕೃಪಾಂ ಸುಧಾರೇ ॥ ೩ ॥**
**ಆಜು ಸುಫಲ ಜಗ ಜನಮು ಹಮಾರಾ । ದೇಖಿ ತಾತ ಬಿಧುಬದನ ತುಮ್ಹಾರಾ ॥**
**ಜೇ ದಿನ ಗಏ ತುಮ್ಹಹಿ ಬಿನು ದೇಖೇಂ । ತೇ ಬಿರಂಚಿ ಜನಿ ಪಾರಹಿಂ ಲೇಖೇಂ ॥ ೪ ॥**

ಮಗೂ! ವಿಶ್ವಾಮಿತ್ರರ ಕೃಪೆಯಿಂದಲೇ, ಪರಮೇಶ್ವರನು ನಿನ್ನ ಅನೇಕ ಆಪತ್ತುಗಳನ್ನು ದೂರಮಾಡಿ ಕಾಪಾಡಿದನು. ಇದು ನಮ್ಮ ನಂಬಿಕೆಯಾಗಿದೆ. ಅವರ ಆಶೀರ್ವಾದದಿಂದ ಎಲ್ಲ ವಿದ್ಯೆಗಳನ್ನು ಕಲಿತು, ಆ ಯಾಗಸಂರಕ್ಷಣಗೈದಿರುವಿ. ನಿನ್ನ ಚರಣಧೂಳಿಯು ಸೋಕಿದಾಗಲೇ ಅಹಲ್ಯೆ ಮುಕ್ತಳಾದಳು. ನಿನ್ನ ಕೀರ್ತಿಯು ವಿಶ್ವದಲ್ಲೆಲ್ಲ ವ್ಯಾಪಿಸಿತು. ಮಹಾಕೂರ್ಮನ ಬೆನ್ನಿನಂತೆ, ವಜ್ರದಂತೆ, ಪರ್ವತಶಿಖರದಂತೆ ಕಠೋರವಾದ ಶಿವಧನುಸ್ಸನ್ನು, ಅನೇಕ ರಾಜರು ನೆರೆದಿದ್ದ ಸಭೆಯಲ್ಲಿ ನೀನು ಅದನ್ನೂ ಮುರಿದೆ. ವಿಶ್ವವಿಜಯದ ಯಶಸ್ಸು ಮತ್ತು ಜಾನಕಿಯನ್ನು ಪಡೆದುಕೊಂಡು, ಎಲ್ಲ ತಮ್ಮಂದಿರಿಗೂ ವಿವಾಹವನ್ನೂ ಮಾಡಿಸಿ, ಅವರೊಂದಿಗೆ ಮನೆಗೆ ಮರಳಿರುವೆ. ನಿನ್ನ ಎಲ್ಲ ಘನಕಾರ್ಯಗಳು ಅಲೌಕಿಕವೂ, ಅತಿಮಾನುಷವೂ (ಮಾನವಾತೀತವೂ) ಆಗಿವೆ. ವಿಶ್ವಾಮಿತ್ರರ ಕೃಪೆಯಿಂದಲೇ ಇದೆಲ್ಲವೂ ಸಾಧ್ಯವಾಯಿತು. ಮಗೂ! ನಿನ್ನ ಪೂರ್ಣಚಂದ್ರಮುಖವನ್ನು ನೋಡಿ, ನಮ್ಮ ಜನ್ಮಗಳು ಸಫಲವಾದುವೆಂದು ಭಾವಿಸುತ್ತೇವೆ. ನಿನ್ನನ್ನು ನೋಡದೆ ಕಳೆದ ದಿನವನ್ನು ಬ್ರಹ್ಮನು ನಮ್ಮ ಆಯುಷ್ಯದಲ್ಲಿ ಸೇರಿಸದಿರಲಿ. (ಚೌ/೧-೪)

**ದೋ – ರಾಮ ಪ್ರತೋಷೀಂ ಮಾತು ಸಬ ಕಹಿ ಬಿನೀತ ಬರ ಬೈನ ।**
**ಸುಮಿರಿ ಸಂಭು ಗುರ ಬಿಪ್ರ ಪದ ಕಿಏ ನೀದಬಸ ನೈನ ॥ ೩೫೭ ॥**

ಶ್ರೀರಾಮನು ಸಮಯೋಚಿತವಾದ ಮಧುರವಚನಗಳನ್ನು ಆಡಿ, ತಾಯಂದಿರನ್ನು ಸಂತೋಷಪಡಿಸಿದನು. ಬಳಿಕ ಹರ, ಗುರು, ವಿಪ್ರರ ಚರಣಸ್ಮರಣೆ ಮಾಡಿ ನಿದ್ದೆಹೋದನು. (ದೋ/೩೫೭)

**ಚೌ – ನೀದಉಂ ಬದನ ಸೋಹ ಸುಠಿ ಲೋನಾ । ಮನಹುಂ ಸಾಂಝ ಸರಸೀರುಹ ಸೋನಾ ॥**
**ಘರ ಘರ ಕರಹಿಂ ಜಾಗರನ ನಾರೀಂ । ದೇಹಿಂ ಪರಸಪರ ಮಂಗಲ ಗಾರೀಂ ॥ ೧ ॥**
**ಪುರೀ ಬಿರಾಜತಿ ರಾಜತಿ ರಜನೀ । ರಾನೀಂ ಕಹಹಿಂ ಬಿಲೋಕಹು ಸಜನೀ ॥**
**ಸುಂದರ ಬಧುನ್ಹ ಸಾಸು ಲೈ ಸೋಈಂ । ಫನಿಕನ್ಹ ಜನು ಸಿರಮನಿ ಉರ ಗೋಈಂ ॥ ೨ ॥**
**ಪ್ರಾತ ಪುನೀತ ಕಾಲ ಪ್ರಭು ಜಾಗೇ । ಅರುನಚೂಡ ಬರ ಬೋಲನ ಲಾಗೇ ॥**
**ಬಂದಿ ಮಾಗಧನ್ಹಿ ಗುನಗನ ಗಾಏ । ಪುರಜನ ದ್ವಾರ ಜೊಹಾರನ ಆಏ ॥ ೩ ॥**
**ಬಂದಿ ಬಿಪ್ರ ಸುರ ಗುರ ಪಿತು ಮಾತಾ । ಪಾಇ ಅಸೀಸ ಮುದಿತ ಸಬ ಭ್ರಾತಾ ॥**
**ಜನನಿನ್ಹ ಸಾದರ ಬದನ ನಿಹಾರೇ । ಭೂಪತಿ ಸಂಗ ದ್ವಾರ ಪಗು ಧಾರೇ ॥ ೪ ॥**

ನಿದ್ದೆಯಲ್ಲಿಯೂ ಶ್ರೀರಾಮನ ಸುಂದರ ಮುಖವು ಸಂಧ್ಯಾಕಾಲದಲ್ಲಿ ಕೆಂಪು ಕಮಲವು ಮಲಗಿ ಮುಕುಳಿತವಾಗಿದೆಯೋ ಎಂಬಂತೆ ಶೋಭಿಸುತ್ತಿತ್ತು. ಸ್ತ್ರೀಯರು ಪ್ರತಿಗೃಹ-ಗೃಹಗಳಲ್ಲಿ ಜಾಗರಣೆ ಮಾಡುತ್ತಿದ್ದರು. ಅವರು ಪರಸ್ಪರ ಸರಸಸಲ್ಲಾಪಗಳಿಂದ,

ಮಂಗಳಗೀತೆಗಳಿಂದ ಆ ರಾತ್ರಿಯನ್ನು ಕಳೆದರು. ರಾಣಿಯರು ಹೇಳುತ್ತಿದ್ದರು – ಸಖಿಯರೇ! ನೋಡಿ, ಇಂದಿನ ರಾತ್ರಿಯು ಎಷ್ಟೊಂದು ಮನೋಹರವಾಗದೆ. ಅಯೋಧ್ಯಾನಗರವು ಇದರಿಂದ ವಿಶೇಷವಾಗಿ ಕಳೆಗೊಂಡಿದೆ ಎಂದು ಪರಸ್ಪರ ಹೇಳಿಕೊಳ್ಳುತ್ತಿದ್ದಾರೆ. ಅತ್ತೆಯರು ತಮ್ಮ ಸುಂದರಿಯರಾದ ಸೊಸೆಯರೊಂದಿಗೆ – ಸರ್ಪಗಳು ತಮ್ಮ ಶಿರೋಮಣಿಯನ್ನು ಎದೆಯಲ್ಲಿ ಅವಚಿಟ್ಟುಕೊಂಡಿರುವಂತೆ ಮಲಗಿ ನಿದ್ರಿಸಿದರು.

ಮರುದಿನ ಪ್ರಾತಃಕಾಲ ಪವಿತ್ರ ಬ್ರಾಹ್ಮೀಮುಹೂರ್ತದಲ್ಲಿ ಶ್ರೀರಾಮನು ಎಚ್ಚರಗೊಂಡನು. ಕೋಳಿಗಳು ಕೂಗಿದವು. ವಂದಿಮಾಗಧರು ಗುಣಗಾನ ಮಾಡಿದರು. ಪುರಜನರು ರಾಮನ ದರ್ಶನಕ್ಕಾಗಿ ಅರಮನೆಯ ಮಹಾದ್ವಾರದಲ್ಲಿ ನೆರೆದರು. ನಾಲ್ಕೂ ಮಂದಗಿ ಸೋದರರು ಬ್ರಾಹ್ಮಣರಿಗೆ, ಗುರುಗಳಿಗೆ, ತಂದೆ-ತಾಯಿಯರನ್ನು ವಂದಿಸಿ, ಆಶೀರ್ವಾದವನ್ನು ಪಡೆದು ಪ್ರಸನ್ನಚಿತ್ತರಾದರು. ತಾಯಿಯರು ಆದರದಿಂದ ಅವರ ಮುಖ ನೋಡಿದರು. ಅನಂತರ ಆ ಸೋದರರು ತಂದೆಯವರೊಂದಿಗೆ ಪ್ರಜಾಜನರಿಗೆ ದರ್ಶನಕೊಡಲು ರಾಜದ್ವಾರಕ್ಕೆ ಬಂದರು (ಚೌ/೧-೪)

**ದೋ – ಕೀನ್ಹಿ ಸೌಚ ಸಬ ಸಹಜ ಸುಚಿ ಸರಿತ ಪುನೀತ ನಹಾಇ ।**
**ಪ್ರಾತಕ್ರಿಯಾ ಕರಿ ತಾತ ಪಹಿಂ ಆಏ ಚಾರಿಉ ಭಾಇ ॥ ೩೫೮ ॥**

ಸಹಜ ಶುಚಿಗಳಾದ ನಾಲ್ವರೂ ಸೋದರರು ಉದಯಕಾಲೀನ ಕೃತ್ಯವನ್ನು ಮುಗಿಸಿಕೊಂಡು ಪವಿತ್ರ ಸರಯೂ ನದಿಯಲ್ಲಿ ಸ್ನಾನಮಾಡಿ, ಪ್ರಾತಃಸಂಧ್ಯಾವಂದನಾದಿಗಳನ್ನೂ ಗೈದು ತಂದೆಯ ಬಳಿಗೆ ಬಂದರು. (ದೋ/೩೫೮)

**ನವಾಹ್ನಪಾರಾಯಣದ ಮೂರನೆಯ ವಿಶ್ರಾಮ**

**ಚೌ – ಭೂಪ ಬಿಲೋಕಿ ಲಿಏ ಉರ ಲಾಈ । ಬೈಠೇ ಹರಷಿ ರಜಾಯಸು ಪಾಈ ॥**
**ದೇಖಿ ರಾಮು ಸಬ ಸಭಾ ಜುಡಾನೀ । ಲೋಚನ ಲಾಭ ಅವಧಿ ಅನುಮಾನೀ ॥ ೧ ॥**
**ಪುನಿ ಬಸಿಷ್ಟು ಮುನಿ ಕೌಸಿಕು ಆಏ । ಸುಭಗ ಆಸನನ್ಹಿ ಮುನಿ ಬೈಠಾಏ ॥**
**ಸುತನ್ಹ ಸಮೇತ ಪೂಜಿ ಪದ ಲಾಗೇ । ನಿರಖಿ ರಾಮು ದೋಉ ಗುರ ಅನುರಾಗೇ ॥ ೨ ॥**
**ಕಹಹಿಂ ಬಸಿಷ್ಟು ಧರಮ ಇತಿಹಾಸಾ । ಸುನಹಿಂ ಮಹೀಸು ಸಹಿತ ರನಿವಾಸಾ ॥**
**ಮುನಿ ಮನ ಅಗಮ ಗಾಧಿಸುತ ಕರನೀ । ಮುದಿತ ಬಸಿಷ್ಟ ಬಿಪುಲ ಬಿಧಿ ಬರನೀ ॥ ೩ ॥**
**ಬೋಲೇ ಬಾಮದೇಉ ಸಬ ಸಾಂಚೀ । ಕೀರತಿ ಕಲಿತ ಲೋಕ ತಿಹುಂ ಮಾಚೀ ॥**
**ಸುನಿ ಆನಂದು ಭಯಉ ಸಬ ಕಾಹೂ । ರಾಮ ಲಖನ ಉರ ಅಧಿಕ ಉಛಾಹೂ ॥ ೪ ॥**

ರಾಜನು ಅವರನ್ನು ನೋಡುತ್ತಲೇ ಎದೆಗಪ್ಪಿಕೊಂಡನು. ಅನಂತರ ಅವರು ಹರ್ಷಿತರಾಗಿ ರಾಜಾಜ್ಞೆಯಂತೆ ಸುಖಾಸೀನರಾದರು. ಎಲ್ಲ ಸಭಾಸದರು ಶ್ರೀರಾಮಚಂದ್ರನನ್ನು ನೋಡಿ, ತಮ್ಮ ಕಣ್ಣು ಸಾರ್ಥಕವಾಯಿತೆಂದುಕೊಂಡು ಹಿಗ್ಗಿದರು. ಅವರೆಲ್ಲರ ತ್ರಿತಾಪಗಳು ಅಳಿದುಹೋದುವು. ಇಷ್ಟರಲ್ಲಿ ವಸಿಷ್ಠರೂ, ವಿಶ್ವಾಮಿತ್ರರೂ ಅಲ್ಲಿಗೆ ಆಗಮಿಸಿದರು. ರಾಜನು ಅವರನ್ನು ಸುಖಾಸನಗಳಲ್ಲಿ ಕುಳ್ಳಿರಿಸಿ, ತನ್ನ ಕುಮಾರರೊಂದಿಗೆ ಅವರನ್ನು ಪೂಜಿಸಿ, ಚರಣಗಳಿಗೆರಗಿದನು. ಗುರುಗಳಿಬ್ಬರೂ ಶ್ರೀರಾಮನನ್ನು ನೋಡಿ ಪ್ರೇಮಮುಗ್ಧರಾದರು. ವಸಿಷ್ಠರು ಇತಿಹಾಸ ಪ್ರಸ್ತಾವನೆಯಿಂದ ಧರ್ಮದ ಉಪದೇಶವನ್ನು ಕೊಡಮಾಡಿದನು. ರಾಜನು ರಾಣಿಯರ ಸಹಿತ ಶ್ರದ್ಧೆಯಿಂದ ಕೇಳುತ್ತಿದ್ದನು. ಮುನಿಮನಕ್ಕೂ ಅಗಮ್ಯವಾದ ವಿಶ್ವಾಮಿತ್ರರ ಕಾರ್ಯವನ್ನು ವಸಿಷ್ಠರು ಹರ್ಷದಿಂದ ವಿಧವಿಧವಾಗಿ ವರ್ಣಿಸಿದರು. ವಾಮದೇವರು ಹೇಳಿದರು – ''ವಸಿಷ್ಠರು ಹೇಳಿದ್ದೆಲ್ಲ ನಿಜ. ವಿಶ್ವಾಮಿತ್ರರ ಸತ್ಕೀರ್ತಿಯು ತ್ರಿಭುವನಗಳಲ್ಲಿ ಹಬ್ಬಿದೆ.'' ಇದನ್ನು ಕೇಳಿ ಎಲ್ಲರೂ ಆನಂದಿತರಾದರು. ರಾಮ-ಲಕ್ಷ್ಮಣರು ಪರಮಾನಂದಭರಿತರಾದರು. (ಚೌ/೧-೪)

**ದೋ – ಮಂಗಲ ಮೋದ ಉಛಾಹ ನಿತ ಜಾಹಿಂ ದಿವಸ ಏಹಿ ಭಾಂತಿ ।**
**ಉಮಗೀ ಅವಧ ಅನಂದ ಭರಿ ಅಧಿಕ ಅಧಿಕ ಅಧಿಕಾತಿ ॥ ೩೫೯ ॥**

ಈ ವಿಧವಾಗಿ ಪ್ರತಿದಿನವೂ ಶುಭಪ್ರದವಾದ ಸತ್ಕಥಾಲಾಪದಿಂದಲೂ, ಮೋದ-ಪ್ರಮೋದಗಳಿಂದಲೂ, ನಿತ್ಯೋತ್ಸವಗಳು ಜರಗುತ್ತಿದ್ದವು. ಆನಂದದಲ್ಲಿ ದಿನಗಳು ಉರುಳುತ್ತಿದ್ದವು. ಅಯೋಧ್ಯೆಯು ಆನಂದದಿಂದ ಉಕ್ಕಿಹರಿಯಿತು. ಆನಂದವು ದಿನದಿಂದ ದಿನಕ್ಕೆ ಹೆಚ್ಚುತ್ತಾ ಹೋಯಿತು. (ದೋ/೩೫೯)

**ಚೌ – ಸುದಿನ ಸೋಧಿ ಕಲ ಕಂಕನ ಛೋರೇ । ಮಂಗಲ ಮೋದ ಬಿನೋದ ನ ಥೋರೇ ॥**
**ನಿತ ನವ ಸುಖು ಸುರ ದೇಖಿ ಸಿಹಾಹೀಂ । ಅವಧ ಜನ್ಮ ಜಾಚಹಿಂ ಬಿಧಿ ಪಾಹೀಂ ॥ ೧ ॥**

ಬಿಸ್ವಾಮಿತ್ರು ಚಲನ ನಿತ ಚಹಹೀಂ । ರಾಮ ಸಪ್ರೇಮ ಬಿನಯ ಬಸ ರಹಹೀಂ ॥
ದಿನ ದಿನ ಸಯಗುನ ಭೂಪತಿ ಭಾಊ । ದೇಖಿ ಸರಾಹ ಮಹಾಮುನಿರಾಊ ॥ ೨ ॥
ಮಾಗತ ಬಿದಾ ರಾಉ ಅನುರಾಗೇ । ಸುತನ್ಹ ಸಮೇತ ಠಾಢ ಭೇ ಆಗೇ ॥
ನಾಥ ಸಕಲ ಸಂಪದಾ ತುಮ್ಹಾರೀ । ಮೈಂ ಸೇವಕು ಸಮೇತ ಸುತ ನಾರೀ ॥ ೩ ॥
ಕರಬ ಸದಾ ಲರಿಕನ್ಹ ಪರ ಛೋಹೂ । ದರಸನು ದೇತ ರಹಬ ಮುನಿ ಮೋಹೂ ॥
ಅಸ ಕಹಿ ರಾಉ ಸಹಿತ ಸುತ ರಾನೀ । ಪರೆಉ ಚರನ ಮುಖ ಆವ ನ ಬಾನೀ ॥ ೪ ॥
ದೀನ್ಹಿ ಅಸೀಸ ಬಿಪ್ರ ಬಹು ಭಾಁತೀ । ಚಲೇ ನ ಪ್ರೀತಿ ರೀತಿ ಕಹಿ ಜಾತೀ ॥
ರಾಮು ಸಪ್ರೇಮ ಸಂಗ ಸಬ ಭಾಈ । ಆಯಸು ಪಾಇ ಫಿರೇ ಪಹುಁಚಾಈ ॥ ೫ ॥

ಒಂದು ಶುಭದಿನದಲ್ಲಿ ವಧೂವರರ ಕಂಕಣವಿಸರ್ಜನೆ ಮಾಡಲಾಯಿತು. ಆ ಸಮಯದಲ್ಲಿ ಮಂಗಳಕರವಾದ, ಆನಂದೋತ್ಸವಗಳಿಗೆ ಕೊನೆಯೇ ಇಲ್ಲ. ಈ ನಿತ್ಯನೂತನ ವಿನೋದ, ಉತ್ಸವಗಳನ್ನು ಕಂಡು, ದೇವತೆಗಳು ಈರ್ಷ್ಯೆ ಪಡುತ್ತಿದ್ದರು ಹಾಗೂ ಅಯೋಧ್ಯೆಯಲ್ಲಿ ಜನ್ಮತಾಳಲು ಬ್ರಹ್ಮದೇವರನ್ನು ಪ್ರಾರ್ಥಿಸುತ್ತಿದ್ದರು. ವಿಶ್ವಾಮಿತ್ರರು ತಮ್ಮ ಆಶ್ರಮಕ್ಕೆ ತೆರಳಲು ಪ್ರತಿದಿನ ಪ್ರಸ್ತಾವನೆ ಮಾಡುತ್ತಾರೆ. ಆದರೆ ಶ್ರೀರಾಮಚಂದ್ರನ ಪ್ರೇಮ, ವಿನಯಕ್ಕೆ ಮಾರುಹೋಗಿ ನಿಲ್ಲುತ್ತಾರೆ. ದಿನ-ದಿನವು ಅರಸನ ನೂರ್ಮಡಿಯಾದ ಪ್ರೇಮವನ್ನು ಕಂಡು ಮುನೀಶ್ವರರು ಆತನನ್ನು ಕೊಂಡಾಡಿದರು. ಕೊನೆಗೆ ವಿಶ್ವಾಮಿತ್ರರು ಹಿಂತಿರುಗಲು ಸಿದ್ಧರಾದಾಗ ರಾಜನು ಪ್ರೇಮಮುಗ್ಧನಾದನು. ಪುತ್ರರೊಂದಿಗೆ ಮುಂದೆ ನಿಂತು ಇಂತೆಂದನು – ''ಸ್ವಾಮಿ! ಈ ಐಶ್ವರ್ಯವೆಲ್ಲ ನಿಮ್ಮದೇ. ನಾನಾದರೋ ಹೆಂಡತಿ-ಮಕ್ಕಳ ಸಹಿತ ನಿಮ್ಮ ಡಿಂಗರಿಗ. ಮುನಿಗಳೇ! ನಮ್ಮ ಮಕ್ಕಳ ಮೇಲೆ ನಿಮ್ಮ ವಾತ್ಸಲ್ಯವಿರಲಿ. ನನಗೂ ಆಗಾಗ ನಿಮ್ಮ ದರ್ಶನಭಾಗ್ಯ ದೊರಕುತ್ತಿರಲಿ.'' ಹೀಗೆ ಹೇಳಿ ದಶರಥನು ಪತ್ನೀಪುತ್ರರೊಂದಿಗೆ ವಿಶ್ವಾಮಿತ್ರರ ಚರಣಗಳಲ್ಲಿ ಹೊರಳಾಡಿದನು. ಪ್ರೇಮವಿಹ್ವಲನಾದ್ದರಿಂದ ಅವನ ಬಾಯಿಂದ ಮಾತೇ ಹೊರಡದಾಯಿತು. ಆಗಿನ ಅವರ ಪರಸ್ಪರ ಪ್ರೇಮಾದರಗಳು ವರ್ಣನಾತೀತವು. ವಿಶ್ವಾಮಿತ್ರರು ಬಹುವಿಧದಿಂದ ಆಶೀರ್ವದಿಸಿ, ತಮ್ಮ ಆಶ್ರಮಕ್ಕೆ ಹೊರಟರು. ಶ್ರೀರಾಮನು ತಮ್ಮಂದಿರನ್ನು ಕರಕೊಂಡು ಅವರೊಂದಿಗೆ ಸ್ವಲ್ಪದೂರ ಹೋಗಿ ಅವರನ್ನೂ ಮುಟ್ಟಿಸಿ, ಅಪ್ಪಣೆಪಡೆದು ಮರಳಿದನು. (ಚೌ/೧-೫)

**ದೋ – ರಾಮ ರೂಪು ಭೂಪತಿ ಭಗತಿ ಬ್ಯಾಹು ಉಛಾಹು ಅನಂದು ।**
**ಜಾತ ಸರಾಹತ ಮನಹಿಂ ಮನ ಮುದಿತ ಗಾಧಿಕುಲಚಂದು ॥ ೩೬೦ ॥**

ಗಾಧಿಕುಲ ಚಂದ್ರನಾದ ವಿಶ್ವಾಮಿತ್ರರು ಅತ್ಯಂತ ಹರ್ಷದಿಂದ ರಾಮನ ರೂಪವನ್ನು ಅರಸನ ಭಕ್ತಿ, ನಾಲ್ವರು ಸೋದರರ ವಿವಾಹಮಹೋತ್ಸವ, ಪ್ರಜೆಗಳ ಆನಂದೋತ್ಸಾಹಗಳನ್ನು ಮನದಲ್ಲೇ ನೆನೆಯುತ್ತಾ ಹೊರಟುಹೋದರು. (ದೋ/೩೬೦)

**ಚೌ – ಬಾಮದೇವ ರಘುಕುಲ ಗುರ ಗ್ಯಾನೀ । ಬಹುರಿ ಗಾಧಿಸುತ ಕಥಾ ಬಖಾನೀ ॥**
ಸುನಿ ಮುನಿ ಸುಜಸು ಮನಹಿಂ ಮನ ರಾಊ । ಬರನತ ಆಪನ ಪುನ್ಯ ಪ್ರಭಾಊ ॥ ೧ ॥
ಬಹುರೇ ಲೋಗ ರಜಾಯಸು ಭಯಊ । ಸುತನ್ಹ ಸಮೇತ ನೃಪತಿ ಗೃಹಁ ಗಯಊ ॥
ಜಹಁ ತಹಁ ರಾಮ ಬ್ಯಾಹು ಸಬು ಗಾವಾ । ಸುಜಸು ಪುನೀತ ಲೋಕ ತಿಹುಁ ಛಾವಾ ॥ ೨ ॥
ಆಏ ಬ್ಯಾಹಿ ರಾಮು ಘರ ಜಬ ತೇಂ । ಬಸಇ ಅನಂದ ಅವಧ ಸಬ ತಬ ತೇಂ ॥
ಪ್ರಭು ಬಿಬಾಹಁ ಜಸ ಭಯಉ ಉಛಾಹೂ । ಸಕಹಿಂ ನ ಬರನಿ ಗಿರಾ ಅಹಿನಾಹೂ ॥ ೩ ॥
ಕಬಿಕುಲ ಜೀವನು ಪಾವನ ಜಾನೀ । ರಾಮ ಸೀಯ ಜಸು ಮಂಗಲ ಖಾನೀ ॥
ತೇಹಿ ತೇ ಮೈಂ ಕಛು ಕಹಾ ಬಖಾನೀ । ಕರನ ಪುನೀತ ಹೇತು ನಿಜ ಬಾನೀ ॥ ೪ ॥

ವಾಮದೇವರು, ರಘುಕುಲದ ಜ್ಞಾನೀಗುರುಗಳಾದ ವಸಿಷ್ಠರು, ಪುನಃ ವಿಶ್ವಾಮಿತ್ರರ ಕಥೆಯನ್ನು ಹೊಗಳಿ ಹೇಳಿದರು. ಮುನಿಯ ಕೀರ್ತಿಗಾಥೆಯನ್ನು ಕೇಳಿ, ಅರಸನು ಮನದಲ್ಲೇ ತನ್ನ ಪುಣ್ಯಕ್ಕೆಣೆಯಿಲ್ಲ ಎಂದುಕೊಂಡನು. ರಾಜಾಜ್ಞೆಯನ್ನು ಪಡೆದು ಪ್ರಜೆಗಳೆಲ್ಲರೂ ತಮ್ಮ-ತಮ್ಮ ಮನೆಗಳಿಗೆ ಮರಳಿದರು. ದಶರಥನೂ ಕೂಡ ಪುತ್ರರೊಂದಿಗೆ ಅಂತಃಪುರವನ್ನು ಸೇರಿದನು. ಎಲ್ಲೆಲ್ಲೂ ಜನರು ಶ್ರೀರಾಮಚಂದ್ರನ ವಿವಾಹಗಾಥೆಯನ್ನು ಹಾಡುತ್ತಿದ್ದರು. ಶ್ರೀರಾಮನ ನಿರ್ಮಲಯಶಸ್ಸು ಮೂರ್ಲೋಕಗಳಲ್ಲಿಯೂ ಹಬ್ಬಿತು. ಶ್ರೀರಾಮನು ಸೀತಾದೇವಿಯೊಂದಿಗೆ ವಿವಾಹವಾಗಿ ಅಯೋಧ್ಯೆಗೆ ಬಂದಂದಿನಿಂದ ಅಲ್ಲಿ

ಎಲ್ಲ ವಿಧವಾದ ಆನಂದಗಳು ಬಂದು ನೆಲಸಿದವು. ಸೀತಾರಾಮರ ಕಲ್ಯಾಣಮಹೋತ್ಸವದ ವೈಭವವನ್ನು ವಾಗ್ದೇವಿಯಾಗಲೀ, ಆದಿಶೇಷನಾಗಲೀ ಬಣ್ಣಿಸಲಾರರು. ಶ್ರೀಸೀತಾರಾಮರ ಯಶೋಗಾಥೆಯು ಕವಿಕುಲ ಜೀವನ ಪಾವನೀ ಮತ್ತು ಮಂಗಳದ ಗಣಿ ಎಂದು ಬಗೆದು, ನನ್ನ ವಾಣಿಯನ್ನು ಪವಿತ್ರಗೊಳಿಸಲು ನಾನು ಕೊಂಚಮಾತ್ರ ಬಣ್ಣಿಸಿ ಹೇಳಿದ್ದೇನೆ. (ಚೌ/೧-೪)

**ಛಂ – ನಿಜ ಗಿರಾ ಪಾವನಿ ಕರನ ಕಾರನ ರಾಮ ಜಸು ತುಲಸೀಂ ಕಹ್ಯೋ ।**
**ರಘುಬೀರ ಚರಿತ ಅಪಾರ ಬಾರಿಧಿ ಪಾರು ಕಬಿ ಕೌನೇಂ ಲಹ್ಯೋ ॥**
**ಉಪಬೀತ ಬ್ಯಾಹ ಉಛಾಹ ಮಂಗಲ ಸುನಿ ಜೆ ಸಾದರ ಗಾವಹೀಂ ।**
**ಬೈದೇಹಿ ರಾಮ ಪ್ರಸಾದ ತೇ ಜನ ಸರ್ಬದಾ ಸುಖ ಪಾವಹೀಂ ॥**

ತನ್ನ ವಾಣಿಯನ್ನು ಪವಿತ್ರಗೊಳಿಸಲು ತುಳಸೀದಾಸನು ಶ್ರೀರಾಮಚಂದ್ರನ ಕಥೆಯನ್ನು ವರ್ಣಿಸಿರುವನು. ಇಲ್ಲವಾದರೆ ಶ್ರೀ ರಘುವೀರನ ಕಥೆಯಂತೂ ಅಪಾರ ಪಾರಾವಾರ. ಯಾವ ಕವಿಯು ಅದನ್ನು ದಾಟಬಲ್ಲನು? ದಡ ಮುಟ್ಟಬಲ್ಲನು? ಶ್ರೀರಾಮನ ಉಪನಯನ, ಹಾಗೂ ಮಂಗಳಪ್ರದ ಕಲ್ಯಾಣಮಹೋತ್ಸವವನ್ನು ಭಕ್ತಿಶ್ರದ್ಧೆಯಿಂದ ಕೇಳಿ, ಹಾಡಿದವರು ಶ್ರೀಜಾನಕೀರಾಮಚಂದ್ರರ ಅನುಗ್ರಹಕ್ಕೆ ಪಾತ್ರರಾಗುವರು. ಸುಖ ಸಂಪತ್ತುಗಳಲ್ಲಿ ಓಲಾಡುವರು. (ಛಂದ)

**ಸೋ – ಸಿಯ ರಘುಬೀರ ಬಿಬಾಹು ಜೇ ಸಪ್ರೇಮ ಗಾವಹಿಂ ಸುನಹಿಂ ।**
**ತಿನ್ಹ ಕಹುಂ ಸದಾ ಉಛಾಹು ಮಂಗಲಾಯತನ ರಾಮ ಜಸು ॥ ೩೬೧ ॥**

ಶ್ರೀಸೀತಾರಾಮರ ಕಲ್ಯಾಣಗಾಥೆಯನ್ನು ಭಕ್ತಿ ಶ್ರದ್ಧೆಯಿಂದ ಹಾಡುವವರು, ಕೇಳುವವರು, ಜೀವನದಲ್ಲಿ ಯಾವಾಗಲೂ ಉತ್ಸಾಹಭರಿತರಾಗಿ ಧನ್ಯರಾಗುವರು. ಶ್ರೀರಾಮಚಂದ್ರನ ಯಶೋವೈಭವಗಾನವು ಮಂಗಳದ ಮನೆಯಾಗಿದೆ. (ಸೋ/೩೬೧)

**ಮಾಸಪಾರಾಯಣದ ಹನ್ನೆರಡನೆಯ ವಿಶ್ರಾಮ**

**ಇತಿ ಶ್ರೀಮದ್ರಾಮಚರಿತಮಾನಸೇ ಸಕಲಕಲಿಕಲುಷವಿಧ್ವಂಸನೇ ಪ್ರಥಮಃ ಸೋಪಾನಃ ಸಮಾಪ್ತಃ ॥ ೧ ॥**

*ಕಲಿಯುಗದ ಎಲ್ಲ ಪಾಪಗಳನ್ನು ಧ್ವಂಸಮಾಡುವ ಶ್ರೀರಾಮಚರಿತಮಾನಸದಲ್ಲಿ*
*ಬಾಲಕಾಂಡವೆಂಬ ಮೊದಲನೆಯ ಸೋಪಾನವು ಮುಗಿದುದು.*

## (ಬಾಲಕಾಂಡ ಸಮಾಪ್ತವು)

**॥ ಶ್ರೀಸೀತಾರಾಮಚಂದ್ರಾರ್ಪಣಮಸ್ತು ॥**



ಶ್ರೀಗಣೇಶಾಯ ನಮಃ

ಶ್ರೀಜಾನಕೀವಲ್ಲಭೋ ವಿಜಯತೇ

# ಶ್ರೀರಾಮಚರಿತಮಾನಸ

## ದ್ವಿತೀಯ ಸೋಪಾನ

## ಅಯೋಧ್ಯಾಕಾಂಡ

### ಭಗವದ್‌ಸ್ತುತಿ

**ಶ್ಲೋ – ಯಸ್ಯಾಂಕೇ ಚ ವಿಭಾತಿ ಭೂಧರಸುತಾ ದೇವಾಪಗಾ ಮಸ್ತಕೇ**
**ಭಾಲೇ ಬಾಲವಿಧುರ್ಗಲೇ ಚ ಗರಲಂ ಯಸ್ಯೋರಸಿ ವ್ಯಾಲರಾಟ್ ।**
**ಸೋಽಯಂ ಭೂತಿವಿಭೂಷಣಃ ಸುರವರಃ ಸರ್ವಾಧಿಪಃ ಸರ್ವದಾ**
**ಶರ್ವಃ ಸರ್ವಗತಃ ಶಿವಃ ಶಶಿನಿಭಃ ಶ್ರೀಶಂಕರಃ ಪಾತು ಮಾಮ್ ॥ ೧ ॥**

ಸರ್ವೇಶ್ವರನಾದ ಶಂಕರನು ವಾಮಾಂಕದಲ್ಲಿ ಹಿಮಗಿರಿತನಯೆ ಪಾರ್ವತಿಯನ್ನೂ, ಜಟಾಜೂಟದಲ್ಲಿ ಗಂಗೆಯನ್ನೂ, ನೊಸಲಿನಲ್ಲಿ ಬಿದಿಗೆಯ ಚಂದ್ರಮನನ್ನೂ, ಕೊರಳಲ್ಲಿ ಗರಳವನ್ನೂ, ಉದರದಮೇಲೆ ನಾಗಾರಾಜನನ್ನೂ ಧರಿಸಿಕೊಂಡಿರುವವನು. ಅವನು ಭಸ್ಮವಿಭೂಷಿತನೂ, ದೇವತೆಗಳಲ್ಲಿ ಶ್ರೇಷ್ಠನೂ, ಲಯಕರ್ತನೂ, ಭಕ್ತರ ಪಾಪಗಳನ್ನು ದೂರಮಾಡುವವನೂ, ಸರ್ವವ್ಯಾಪಕನೂ, ಕಲ್ಯಾಣಪ್ರದನೂ, ಚಂದ್ರನಂತೆ ಶುಭ್ರವರ್ಣನೂ ಆಗಿರುವನು. ಅಂತಹ ಪರಮೇಶ್ವರನು ಸರ್ವದಾ ನನ್ನನ್ನು ರಕ್ಷಿಸಲಿ. ॥ ೧ ॥

**ಪ್ರಸನ್ನತಾಂ ಯಾ ನ ಗತಾಭಿಷೇಕತಸ್ತಥಾ ನ ಮಮ್ಲೇ ವನವಾಸದುಃಖತಃ ।**
**ಮುಖಾಂಬುಜಶ್ರೀ ರಘುನಂದನಸ್ಯ ಮೇ ಸದಾಸ್ತು ಸಾ ಮಂಜುಲಮಂಗಳಪ್ರದಾ ॥ ೨ ॥**

ರಘುಕುಲಕ್ಕೆ ಆನಂದಪ್ರದನಾದ ಶ್ರೀರಾಮಚಂದ್ರನ ಮುಖಕಮಲವೂ, ರಾಜ್ಯಾಭಿಷೇಕವಾರ್ತೆಯನ್ನು ಕೇಳಿದಾಗ ಹಿಗ್ಗಲಿಲ್ಲ; ವನವಾಸದ ದುಃಖದಿಂದ ಕುಗ್ಗಲಿಲ್ಲ. ಎಲ್ಲ ಕಾಲಗಳಲ್ಲಿ, ಎಲ್ಲ ಅವಸ್ಥೆಗಳಲ್ಲಿ ಒಂದೇ ರೀತಿಯಿಂದ ವಿಲಸಿತವಾದ ಅವನ ಮುಖಕಾಂತಿಯು ಯಾವಾಗಲೂ ನನಗೆ ಮಂಗಳಪ್ರದವಾಗಿರಲಿ. ॥ ೨ ॥

**ನೀಲಾಂಬುಜಶ್ಯಾಮಲಕೋಮಲಾಂಗಂ ಸೀತಾಸಮಾರೋಪಿತವಾಮಭಾಗಮ್ ।**
**ಪಾಣೌ ಮಹಾಸಾಯಕಚಾರುಚಾಪಂ ನಮಾಮಿ ರಾಮಂ ರಘುವಂಶನಾಥಮ್ ॥ ೩ ॥**

ನೀಲಾಂಬುಜದಂತೆ ಶ್ಯಾಮಲನೂ, ಅತಿಕೋಮಲವೂ ಆದ ಶರೀರ ಉಳ್ಳವನೂ, ವಾಮಾಂಕದಲ್ಲಿ ಸೀತಾದೇವಿಯೊಂದಿಗೆ ಶೋಭಿಸುತ್ತಿರುವವನೂ, ಅಮೋಘವಾದ ಧನುರ್ಬಾಣಗಳನ್ನು ಕೈಯಲ್ಲಿ ಧರಿಸಿಕೊಂಡಿರುವವನೂ, ರಘುವಂಶಪ್ರಭುವೂ ಆದ ಶ್ರೀರಾಮಚಂದ್ರನಿಗೆ ನಮಸ್ಕರಿಸುತ್ತೇನೆ. ॥ ೩ ॥

**ದೋ – ಶ್ರೀಗುರು ಚರನ ಸರೋಜ ರಜ ನಿಜ ಮನು ಮುಕುರು ಸುಧಾರಿ ।**
**ಬರನಉँ ರಘುಬರ ಬಿಮಲ ಜಸು ಜೋ ದಾಯಕು ಫಲ ಚಾರಿ ॥**

ಶ್ರೀ ಗುರುಚರಣಸರೋಜರೇಣುವಿನಿಂದ ನನ್ನ ಮನಮುಕುರವನ್ನು ಸ್ವಚ್ಛಗೊಳಿಸಿ, ಚತುರ್ವಿಧ ಫಲಪುರುಷಾರ್ಥದಾಯಕನಾದ ರಘುವರನ ವಿಮಲ ಯಶಸ್ಸನ್ನು ಬಣ್ಣಿಸುತ್ತೇನೆ. (ದೋ)

## ಶ್ರೀರಾಮನ ಪಟ್ಟಾಭಿಷೇಕದ ಸಿದ್ಧತೆ

**ಚೌ – ಜಬ ತೇಂ ರಾಮು ಬ್ಯಾಹಿ ಘರ ಆಏ । ನಿತ ನವ ಮಂಗಲ ಮೋದ ಬಧಾಏ ॥**
**ಭುವನ ಚಾರಿದಸ ಭೂಧರ ಭಾರೀ । ಸುಕೃತ ಮೇಘ ಬರಷಹಿಂ ಸುಖ ಬಾರೀ ॥ ೧ ॥**
**ರಿಧಿ ಸಿಧಿ ಸಂಪತಿ ನದೀಂ ಸುಹಾಈ । ಉಮಗಿ ಅವಧ ಅಂಬುಧಿ ಕಹುಂ ಆಈ ॥**
**ಮನಿಗನ ಪುರ ನರ ನಾರಿ ಸುಜಾತೀ । ಸುಚಿ ಅಮೋಲ ಸುಂದರ ಸಬ ಭಾಂತೀ ॥ ೨ ॥**
**ಕಹಿ ನ ಜಾಇ ಕಛು ನಗರ ಬಿಭೂತೀ । ಜನು ಏತನಿಅ ಬಿರಂಚಿ ಕರತೂತೀ ॥**
**ಸಬ ಬಿಧಿ ಸಬ ಪುರ ಲೋಗ ಸುಖಾರೀ । ರಾಮಚಂದ ಮುಖ ಚಂದು ನಿಹಾರೀ ॥ ೩ ॥**
**ಮುದಿತ ಮಾತು ಸಬ ಸಖೀಂ ಸಹೇಲೀ । ಫಲಿತ ಬಿಲೋಕಿ ಮನೋರಥ ಬೇಲೀ ॥**
**ರಾಮ ರೂಪು ಗುನ ಸೀಲು ಸುಭಾಊ । ಪ್ರಮುದಿತ ಹೋಇ ದೇಖಿ ಸುನಿ ರಾಊ ॥ ೪ ॥**

ಶ್ರೀರಾಮಚಂದ್ರನು ವಿವಾಹಿತನಾಗಿ ಅಯೋಧ್ಯೆಗೆ ಬಂದಂದಿನಿಂದ ಅಲ್ಲಿ ಮಂಗಳಕರವಾದ ಆನಂದೋತ್ಸವಗಳು ನಿತ್ಯನೂತನವಾಗಿ ಜರಗುತ್ತಲೇ ಇದ್ದವು. ಚತುರ್ದಶಭುವನಗಳೆಂಬ ಮಹತ್‌ಪರ್ವತಗಳ ಮೇಲೆ ಪುಣ್ಯರೂಪೀ ಮೇಘಗಳು ಸುಖಸಂಪತ್ತುಗಳೆಂಬ ನೀರನ್ನು ಮಳೆಗರೆಯುತ್ತಿವೆ. ಋದ್ಧಿ, ಸಿದ್ಧಿ, ಸಂಪತ್ತೆಂಬ ಚೆಲುವಾದ ನದಿಗಳು ಉಕ್ಕಿಹರಿದು, ಅಯೋಧ್ಯೆಯೆಂಬ ಅಂಬುಧಿಗೆ ಬಂದು ಸೇರಿದವು. ಕುಲೀನರಾದ ಪುರಜನರು ಪವಿತ್ರವಾದ ಅನರ್ಘ್ಯರತ್ನಗಳಂತೆ ಪ್ರಕಾಶಿಸುತ್ತಿರುವರು. ನಗರದ ಸಿರಿಯಂತೂ ವರ್ಣನಾತೀತ. ಬ್ರಹ್ಮದೇವರ ಸೃಷ್ಟಿವೈಶಿಷ್ಟ್ಯಕ್ಕೆ ಅದು ಪರಾಕಾಷ್ಠೆ. ಅಯೋಧ್ಯಾವಾಸಿಗಳು ಶ್ರೀರಾಮಚಂದ್ರನ ಮುಖಕಮಲ ಶೋಭೆಯಿಂದ ಮುಗ್ಧರಾಗಿರುವರು. ಎಲ್ಲತಾಯಂದಿರೂ, ಸಖಿಯರೂ ತಮ್ಮ ಮನೋರಥರೂಪೀ ಬಳ್ಳಿಯು ಫಲಭರಿತವಾದುದನ್ನು ಕಂಡು, ಹರ್ಷಿತರಾಗಿರುವರು. ರಾಮನ ರೂಪ, ಗುಣ, ಶೀಲ, ಸ್ವಭಾವಗಳನ್ನು ನೋಡಿ, ಕೇಳಿ ದಶರಥ ಮಹಾರಾಜರು ಅತ್ಯಂತ ಸಂತುಷ್ಟರಾಗಿದ್ದರು. (ಚೌ/೧-೪)

**ದೋ – ಸಬ ಕೇಂ ಉರ ಅಭಿಲಾಷು ಅಸ ಕಹಹಿಂ ಮನಾಇ ಮಹೇಸು ।**
**ಆಪ ಅಛತ ಜುಬರಾಜ ಪದ ರಾಮಹಿ ದೇಉ ನರೇಸು ॥ ೧ ॥**

''ಮಹಾರಾಜರು ತನ್ನ ಜೀವಿತಕಾಲದಲ್ಲೇ ಶ್ರೀರಾಮನಿಗೆ ಯುವರಾಜ ಪಟ್ಟಕಟ್ಟಲಿ'' ಎಂಬ ಒಂದೇ ಅಭಿಲಾಷೆ ಎಲ್ಲರ ಹೃದಯದಲ್ಲಿತ್ತು. ತಮ್ಮ ಈ ಏಕೈಕ ಮನೋರಥವನ್ನು ಪೂರೈಸುವಂತೆ ಅವರು ಪರಶಿವನಲ್ಲಿ ಪ್ರಾರ್ಥಿಸುತ್ತಿದ್ದರು. (ದೋ/೧)

**ಚೌ – ಏಕ ಸಮಯ ಸಬ ಸಹಿತ ಸಮಾಜಾ । ರಾಜಸಭಾಂ ರಘುರಾಜು ಬಿರಾಜಾ ॥**
**ಸಕಲ ಸುಕೃತ ಮೂರತಿ ನರನಾಹೂ । ರಾಮ ಸುಜಸು ಸುನಿ ಅತಿಹಿ ಉಛಾಹೂ ॥ ೧ ॥**
**ನೃಪ ಸಬ ರಹಹಿಂ ಕೃಪಾ ಅಭಿಲಾಷೇಂ । ಲೋಕಪ ಕರಹಿಂ ಪ್ರೀತಿ ರುಖ ರಾಖೇಂ ॥**
**ತಿಭುವನ ತೀನಿ ಕಾಲ ಜಗ ಮಾಹೀಂ । ಭೂರಿ ಭಾಗ ದಸರಥ ಸಮ ನಾಹೀಂ ॥ ೨ ॥**
**ಮಂಗಲಮೂಲ ರಾಮು ಸುತ ಜಾಸೂ । ಜೋ ಕಛು ಕಹಿಅ ಥೋರ ಸಬು ತಾಸೂ ॥**
**ರಾಯಂ ಸುಭಾಯಂ ಮುಕುರು ಕರ ಲೀನ್ಹಾ । ಬದನು ಬಿಲೋಕಿ ಮುಕುಟು ಸಮ ಕೀನ್ಹಾ ॥ ೩ ॥**
**ಶ್ರವನ ಸಮೀಪ ಭಏ ಸಿತ ಕೇಸಾ । ಮನಹುಂ ಜರಠಪನು ಅಸ ಉಪದೇಸಾ ॥**
**ನೃಪ ಜುಬರಾಜು ರಾಮ ಕಹುಂ ದೇಹೂ । ಜೀವನ ಜನಮ ಲಾಹು ಕಿನ ಲೇಹೂ ॥ ೪ ॥**

ಹೀಗಿರಲು ಒಮ್ಮೆ ದಶರಥ ಮಹಾರಾಜರು ತನ್ನ ಸಭಾಸದರೊಂದಿಗೆ ಒಡ್ಡೋಲಗದಲ್ಲಿ ವಿರಾಜಿಸುತ್ತಿದ್ದರು. ಸುಕೃತ ಸದ್ಗುಣರಾಶಿಯಾದ ಮಹಾರಾಜರು ಶ್ರೀರಾಮಚಂದ್ರನ ಸತ್ಕೀರ್ತಿಯನ್ನು ಕೇಳಿ ಅಮಿತ ಆನಂದಿತನಾಗುತ್ತಿದ್ದರು. ಎಲ್ಲ ರಾಜರೂ ಅವನ ಕೃಪೆಯನ್ನು ಬಯಸುತ್ತಿದ್ದರು. ಇಂದ್ರಾದಿ ದಿಕ್ಪಾಲಕರೆಲ್ಲರೂ ಅವನ ಮನೋಭಾವವನ್ನು ಗ್ರಹಿಸಿ, ಅದಕ್ಕನುಗುಣವಾಗಿ ವರ್ತಿಸಿ, ಅವನ ಸ್ನೇಹವನ್ನು ಬಯಸುತ್ತಿದ್ದರು. ಮೂರುಲೋಕಗಳಲ್ಲಿಯೂ ತ್ರಿಕಾಲಗಳಲ್ಲಿಯೂ ದಶರಥನಂತಹ ಭಾಗ್ಯಶಾಲಿಯು ಯಾರೂ ಇರಲಿಲ್ಲ. ಮಂಗಳದ ಮೂಲವಾದ ಶ್ರೀರಾಮಚಂದ್ರನನ್ನು ಪುತ್ರನಾಗಿ ಪಡೆದ ದಶರಥನ ಬಗ್ಗೆ ಎಷ್ಟು ಹೇಳಿದರೂ ಕಡಿಮೆಯೇ. ಒಂದು ದಿನ ರಾಜನು ಕನ್ನಡಿಯಲ್ಲಿ ಮುಖನೋಡಿಕೊಂಡು, ತನ್ನ ಕಿರೀಟವನ್ನು ಸರಿಪಡಿಸಿಕೊಂಡಾಗ ಕಿವಿಯ ಬಳಿಯ ಕೂದಲು ನೆರೆತಿರುವುದನ್ನು ನೋಡಿದನು. 'ರಾಜಾ! ರಾಮನಿಗೆ ಯುವರಾಜ ಪಟ್ಟಕಟ್ಟಿ, ನಿನ್ನ ಜನ್ಮವನ್ನು ಏಕೆ ಸಾರ್ಥಕಪಡಿಸಿಕೊಳ್ಳುವುದಿಲ್ಲ?' ಎಂದು ಮುಪ್ಪು ಉಪದೇಶಿಸುವಂತಿತ್ತು. (ಚೌ/೧-೪)

**ದೋ – ಯಹ ಬಿಚಾರು ಉರ ಆನಿ ನೃಪ ಸುದಿನು ಸುಅವಸರು ಪಾಇ।**
**ಪ್ರೇಮ ಪುಲಕಿ ತನ ಮುದಿತ ಮನ ಗುರಹಿ ಸುನಾಯಉ ಜಾಇ॥ ೨ ॥**

ಮನದಲ್ಲಿ ರಾಮನಿಗೆ ಯುವರಾಜ ಪಟ್ಟಕಟ್ಟಬೇಕೆಂದು ನಿಶ್ಚಯಿಸಿ, ಒಂದು ಶುಭದಿನ, ಸೂಕ್ತಸಮಯವನ್ನು ನೋಡಿ ದಶರಥನು ಪ್ರೇಮದಿಂದ ಪುಲಕಿತನಾಗಿ, ಮುದಿತಮನದಿಂದ ಕುಲಗುರು ವಸಿಷ್ಠರಲ್ಲಿ ನಿವೇದಿಸಿಕೊಂಡನು. (ದೋ/೨)

**ಚೌ – ಕಹಇ ಭುಆಲು ಸುನಿಅ ಮುನಿನಾಯಕ।ಭಏ ರಾಮ ಸಬ ಬಿಧಿ ಸಬ ಲಾಯಕ ॥**
**ಸೇವಕ ಸಚಿವ ಸಕಲ ಪುರಬಾಸೀ।ಜೇ ಹಮಾರೆ ಅರಿ ಮಿತ್ರ ಉದಾಸೀ ॥ ೧ ॥**
**ಸಬಹಿ ರಾಮು ಪ್ರಿಯ ಜೆಹಿ ಬಿಧಿ ಮೋಹೀ।ಪ್ರಭು ಅಸೀಸ ಜನು ತನು ಧರಿ ಸೋಹೀ ॥**
**ಬಿಪ್ರ ಸಹಿತ ಪರಿವಾರ ಗೊಸಾಈಂ।ಕರಹಿಂ ಛೋಹು ಸಬ ರೌರಿಹಿ ನಾಈಂ ॥ ೨ ॥**
**ಜೇ ಗುರ ಚರನ ರೇನು ಸಿರ ಧರಹೀಂ।ತೇ ಜನು ಸಕಲ ಬಿಭವ ಬಸ ಕರಹೀಂ ॥**
**ಮೊಹಿ ಸಮ ಯಹು ಅನುಭಯಉ ನ ದೂಜೇಂ।ಸಬು ಪಾಯಉಂ ರಜ ಪಾವನಿ ಪೂಜೇಂ ॥ ೩ ॥**
**ಅಬ ಅಭಿಲಾಷು ಏಕು ಮನ ಮೋರೇಂ।ಪೂಜಿಹಿ ನಾಥ ಅನುಗ್ರಹ ತೋರೇಂ ॥**
**ಮುನಿ ಪ್ರಸನ್ನ ಲಖಿ ಸಹಜ ಸನೇಹೂ।ಕಹೇಉ ನರೇಸ ರಜಾಯಸು ದೇಹೂ ॥ ೪ ॥**

ದಶರಥನೆಂದ – ''ಓ ಮುನೀಶ್ವರರೇ! ಶ್ರೀರಾಮಚಂದ್ರನು ಎಲ್ಲ ವಿಧದಿಂದಲೂ, ಸಕಲ ಕಾರ್ಯಗಳನ್ನು ನಿರ್ವಹಿಸಲು ಸಮರ್ಥನಾಗಿದ್ದಾನೆ. ಅವನು ನನಗೆ ಪ್ರಿಯನಾಗಿರುವಂತೆ ಮಂತ್ರಿಗಳಿಗೆ, ಪುರಜನರಿಗೆ, ಸೇವಕರಿಗೆ, ಮಿತ್ರರಿಗೆ, ಶತ್ರುಗಳಿಗೆ, ಉದಾಸೀನರಿಗೆ ಹೀಗೆ ಎಲ್ಲರಿಗೂ ಪ್ರಿಯನಾಗಿರುವನು. ನಿಮ್ಮ ಆಶೀರ್ವಾದವೇ ರಾಮನಾಗಿ ಮೈವೆತ್ತಿ ರಾರಾಜಿಸುತ್ತಿರುವಂತಿದೆ. ಸ್ವಾಮಿ! ಎಲ್ಲ ಬ್ರಾಹ್ಮಣರೂ ನಿಮ್ಮಂತೆಯೇ ಅವನ ಮೇಲೆ ಪ್ರೇಮವಿಟ್ಟಿರುವರು. ಗುರುಚರಣಧೂಳಿಯನ್ನು ಶಿರದಲ್ಲಿ ಧರಿಸಿರುವವರಿಗೆ ಸಮಸ್ತ ಐಶ್ವರ್ಯಗಳು ಲಭಿಸುವುವು. ಈ ಸತ್ಯವು ನನಗೆ ಅನುಭವಸಿದ್ಧವಾದುದು. ನಿಮ್ಮ ಪವಿತ್ರಚರಣಧೂಳಿಯನ್ನು ಶಿರದಲ್ಲಾಂತು ನಾನು ಎಲ್ಲವನ್ನೂ ಪಡೆದುಕೊಂಡಿರುವೆನು. ಈಗ ನನ್ನ ಮನಸ್ಸಿನಲ್ಲಿ ಒಂದೇ ಒಂದು ಅಭಿಲಾಷೆ ಇದೆ. ಸ್ವಾಮಿ! ಅದೂ ಕೂಡ ನಿಮ್ಮ ಅನುಗ್ರಹದಿಂದಲೇ ಪೂರ್ಣವಾಗುವುದು.'' ಅರಸನ ಸಹಜ ಪ್ರೇಮವನ್ನು ಮುನಿಯು ಕಂಡು ಇಂತೆಂದನು – ರಾಜಾ! ನಿನ್ನ ಅಭಿಲಾಷೆಯನ್ನು ತಿಳಿಸು. (ಚೌ/೧-೪)

**ದೋ – ರಾಜನ ರಾಉರ ನಾಮು ಜಸು ಸಬ ಅಭಿಮತ ದಾತಾರ।**
**ಫಲ ಅನುಗಾಮೀ ಮಹಿಪ ಮನಿ ಮನ ಅಭಿಲಾಷು ತುಮ್ಹಾರ ॥ ೩ ॥**

ಎಲೈ ರಾಜಶಿರೋಮಣಿಯೇ! ನಿನ್ನ ಹೆಸರು, ಯಶಸ್ಸೇ ಕಾಮಿತವಸ್ತುವನ್ನು ಕೊಡುವಂತಹುದು. ನಿನ್ನ ಅಭಿಲಾಷೆಗಳು ಮನಸ್ಸಿನಿಂದ ಪ್ರಕಟಿತವಾಗುವ ಮೊದಲೇ ಅದರ ಫಲಗಳು ಬೆಂಬತ್ತಿಬರುವುವು. (ದೋ/೩)

**ಚೌ – ಸಬ ಬಿಧಿ ಗುರು ಪ್ರಸನ್ನ ಜಿಯಂ ಜಾನೀ।ಬೋಲೇಉ ರಾಉ ರಹಁಸಿ ಮೃದು ಬಾನೀ ॥**
**ನಾಥ ರಾಮು ಕರಿಅಹಿಂ ಜುಬರಾಜೂ।ಕಹಿಅ ಕೃಪಾ ಕರಿ ಕರಿಅ ಸಮಾಜೂ ॥ ೧ ॥**
**ಮೋಹಿ ಅಛತ ಯಹು ಹೋಇ ಉಛಾಹೂ।ಲಹಹಿಂ ಲೋಗ ಸಬ ಲೋಚನ ಲಾಹೂ ॥**
**ಪ್ರಭು ಪ್ರಸಾದ ಸಿವ ಸಬಇ ನಿಬಾಹೀಂ।ಯಹ ಲಾಲಸಾ ಏಕ ಮನ ಮಾಹೀಂ ॥ ೨ ॥**
**ಪುನಿ ನ ಸೋಚ ತನು ರಹಉ ಕಿ ಜಾಊ।ಜೆಹಿಂ ನ ಹೋಇ ಪಾಛೇಂ ಪಛಿತಾಊ ॥**
**ಸುನಿ ಮುನಿ ದಸರಥ ಬಚನ ಸುಹಾಏ।ಮಂಗಲ ಮೋದ ಮೂಲ ಮನ ಭಾಏ ॥ ೩ ॥**
**ಸುನು ನೃಪ ಜಾಸು ಬಿಮುಖ ಪಛಿತಾಹೀಂ।ಜಾಸು ಭಜನ ಬಿನು ಜರನಿ ನ ಜಾಹೀಂ॥**
**ಭಯಉ ತುಮ್ಹಾರ ತನಯ ಸೋಇ ಸ್ವಾಮಿ।ರಾಮು ಪುನೀತ ಪ್ರೇಮ ಅನುಗಾಮೀ॥ ೪ ॥**

ಗುರುಗಳು ಪ್ರಸನ್ನರಾಗಿದ್ದಾರೆ ಎಂದು ತಿಳಿದು ಹರ್ಷಿತನಾದ ರಾಜನು ಮೃದು ಮಧುರವಾಗಿ ಇಂತೆಂದನು – ''ಸ್ವಾಮಿ! ಶ್ರೀರಾಮಚಂದ್ರನನ್ನು ಯುವರಾಜನನ್ನಾಗಿ ಮಾಡಬೇಕೆಂಬುದು ನನ್ನ ಬಯಕೆ. ನಿಮ್ಮ ಅಪ್ಪಣೆಯಾದರೆ ಅದಕ್ಕೆ ತಕ್ಕ ಸಿದ್ಧತೆ ಮಾಡಿಸುತ್ತೇನೆ. ನಾನು ಬದುಕಿರುವಾಗಲೇ ಆ ಆನಂದೋತ್ಸವವು ಜರಗಲಿ. ಎಲ್ಲರೂ ತಮ್ಮ ಕಣ್ಣುಗಳನ್ನು ಸಾರ್ಥಕಪಡಿಸಿಕೊಳ್ಳಲಿ. ಭಗವದನುಗ್ರಹದಿಂದ ಶಿವನು ಎಲ್ಲವನ್ನೂ ಕರುಣಿಸಿದ್ದಾನೆ. ಇದೊಂದು ಬಯಕೆಮಾತ್ರ ಹಾಗೇ ಉಳಿದಿದೆ. ಇದೊಂದು ತೀರಿಬಿಟ್ಟರೆ ಈ ಶರೀರವು ಇದ್ದರೂ, ಹೋದರೂ ನನಗೆ ಪಶ್ಚಾತ್ತಾಪವಿಲ್ಲ.'' ಮಂಗಳಕರ, ಆನಂದದಾಯಕವಾದ ದಶರಥನ

ವಚನಗಳನ್ನು ಕೇಳಿ, ಮುನಿಗಳು ಮನದಲ್ಲೇ ಹಿಗ್ಗಿ, ಹೀಗೆ ಹೇಳಿದರು – ''ರಾಜಾ! ಕೇಳು. ಶ್ರೀರಾಮನಿಂದ ವಿಮುಖರಾದವರು ಪಶ್ಚಾತ್ತಾಪ ಪಡಬೇಕಾಗುತ್ತದೆ. ಅವನನ್ನು ಸೇವಿಸುವವರು ಮನದ ತಾಪವನ್ನು ಕಳೆದುಕೊಳ್ಳುವರು. ಅಂತಹ ಸಕಲಲೋಕ ಮಹೇಶ್ವರನಾದ ಶ್ರೀರಾಮನು ನಿನ್ನ ಪವಿತ್ರಪ್ರೇಮಾನುಗಾಮಿಯಾಗಿ ನಿನ್ನ ಕುಮಾರನಾಗಿ ಅವತರಿಸಿದ್ದಾನೆ. (ಚೌ/೧-೪)

**ದೋ – ಬೇಗಿ ಬಿಲಂಬು ನ ಕರಿಅ ನೃಪ ಸಾಜಿಅ ಸಬುಇ ಸಮಾಜು ।**
**ಸುದಿನ ಸುಮಂಗಲು ತಬಹಿಂ ಜಬ ರಾಮು ಹೋಹಿಂ ಜುಬರಾಜು ॥ ೪ ॥**

ರಾಜಾ! ಇನ್ನು ತಡಮಾಡಬೇಡ. ಬೇಗನೇ ಪಟ್ಟಾಭಿಷೇಕಕ್ಕೆ ಅಣಿಗೊಳಿಸು. ಶ್ರೀರಾಮನು ಯುವರಾಜನಾಗುವ ದಿನವೇ ಮಂಗಳಕರವು. ಅದೇ ಸುದಿನ.'' (ದೋ/೪)

**ಚೌ – ಮುದಿತ ಮಹೀಪತಿ ಮಂದಿರ ಆಏ । ಸೇವಕ ಸಚಿವ ಸುಮಂತ್ರು ಬೋಲಾಏ ॥**
**ಕಹಿ ಜಯಜೀವ ಸೀಸ ತಿನ್ಹ ನಾಏ । ಭೂಪ ಸುಮಂಗಲ ಬಚನ ಸುನಾಏ ॥ ೧ ॥**
**ಜೌಂ ಪಾಂಚಹಿ ಮತ ಲಾಗೈ ನೀಕಾ । ಕರಹು ಹರಷಿ ಹಿಯಂ ರಾಮಹಿ ಟೀಕಾ ॥ ೨ ॥**
**ಮಂತ್ರೀ ಮುದಿತ ಸುನತ ಪ್ರಿಯ ಬಾನೀ । ಅಭಿಮತ ಬಿರವಂ ಪರೆಉ ಜನು ಪಾನೀ ॥**
**ಬಿನತೀ ಸಚಿವ ಕರಹಿಂ ಕರ ಜೋರೀ । ಜಿಅಹು ಜಗತಪತಿ ಬರಿಸ ಕರೋರೀ ॥ ೩ ॥**
**ಜಗ ಮಂಗಲ ಭಲ ಕಾಜು ಬಿಚಾರಾ । ಬೇಗಿಅ ನಾಥ ನ ಲಾಇಅ ಬಾರಾ ॥**
**ನೃಪಹಿ ಮೋದು ಸುನಿ ಸಚಿವ ಸುಭಾಷಾ । ಬಢತ ಬೌಂಡ ಜನು ಲಹೀ ಸುಸಾಖಾ ॥ ೪ ॥**

ಇದನ್ನು ಕೇಳಿ ಹರ್ಷಿತನಾದ ರಾಜನು ಅರಮನೆಗೆ ಹಿಂತಿರುಗಿದನು. ಸೇವಕರ ಮೂಲಕ ಸುಮಂತ್ರನೇ ಮೊದಲಾದ ಮಂತ್ರಿಗಳನ್ನು ಕರೆಸಿಕೊಂಡನು. ಅವರು ಬಂದು 'ಜಯ, ಜಯಾ' ಎಂದು ಹೇಳಿ ತಲೆವಾಗಿದರು. ರಾಜನು ಮಂತ್ರಿಗಳಿಗೆ ರಾಮನ ಯುವರಾಜ ಪಟ್ಟಾಭಿಷೇಕ ಶುಭವಾರ್ತೆಯನ್ನು ತಿಳಿಸಿ, ಇಂತೆಂದನು – ''ಮುಖ್ಯರಾದ ನಿಮಗೆಲ್ಲರಿಗೆ ಇದು ಸಮ್ಮತವಾಗಿದ್ದರೆ, ಆನಂದದಿಂದ ಶ್ರೀರಾಮನ ಪಟ್ಟಾಭಿಷೇಕದ ಸಿದ್ಧತೆಯನ್ನು ಮಾಡಿರಿ.'' ಈ ಪ್ರಿಯವಾದ ಮಾತುಗಳನ್ನು ಕೇಳುತ್ತಲೇ ಮಂತ್ರಿಗಳು ತಮ್ಮ ಮನೋರಥವೆಂಬ ಗಿಡಕ್ಕೆ ನೀರೆರೆದಂತೆ ಆನಂದಿತರಾದರು. ಅವರು ಕರಜೋಡಿಸಿಕೊಂಡು – ''ಓ ಜಗತ್ಪ್ರಭು! ನೀವು ಚಿರಕಾಲ ಬಾಳಿರಿ. ನೀವು ಇಡೀ ಲೋಕಕ್ಕೆ ಮಂಗಳಕಾರಿಯಾದ ಕೆಲಸವನ್ನು ಯೋಚಿಸಿದ್ದೀರಿ. ಪ್ರಭುಗಳೇ! ತ್ವರೆಮಾಡಿ, ತಡಮಾಡಬೇಡಿ.'' ಎಂದು ಬೇಡಿಕೊಂಡರು. ಮಂತ್ರಿಗಳ ಮಧುರವಚನಗಳನ್ನು ಕೇಳಿ, ರಾಜನಿಗೆ ಬೆಳೆಯುತ್ತಿರುವ ಬಳ್ಳಿಗೆ ಕೊಂಬೆಯ ಆಸರೆ ದೊರೆತಂತೆ ಆನಂದಿತನಾದನು. (ಚೌ/೧-೪)

**ದೋ – ಕಹೆಉ ಭೂಪ ಮುನಿರಾಜ ಕರ ಜೋಇ ಜೋಇ ಆಯಸು ಹೋಇ ।**
**ರಾಮ ರಾಜ ಅಭಿಷೇಕ ಹಿತ ಬೇಗಿ ಕರಹು ಸೋಇ ಸೋಇ ॥ ೫ ॥**

ರಾಜನು ಹೇಳಿದನು – ''ಮಂತ್ರಿಗಳೇ! ಶ್ರೀರಾಮನ ಯುವರಾಜ ಪಟ್ಟಾಭಿಷೇಕಕ್ಕೆ ವಸಿಷ್ಠಮುನಿಗಳು ಆಜ್ಞೆಕೊಟ್ಟಂತೆ, ನೀವೆಲ್ಲ ಅದೆಲ್ಲವನ್ನು ಕೂಡಲೇ ಸಿದ್ಧಪಡಿಸಿರಿ. (ದೋ/೫)

**ಚೌ – ಹರಷಿ ಮುನೀಸ ಕಹೆಉ ಮೃದು ಬಾನೀ । ಆನಹು ಸಕಲ ಸುತೀರಥ ಪಾನೀ ॥**
**ಔಷಧ ಮೂಲ ಫೂಲ ಫಲ ಪಾನಾ । ಕಹೇ ನಾಮ ಗನಿ ಮಂಗಲ ನಾನಾ ॥ ೧ ॥**
**ಚಾಮರ ಚರಮ ಬಸನ ಬಹು ಭಾಂತೀ । ರೋಮ ಪಾಟ ಪಟ ಅಗನಿತ ಜಾತೀ ॥**
**ಮನಿಗನ ಮಂಗಲ ಬಸ್ತು ಅನೇಕಾ । ಜೋ ಜಗ ಜೋಗು ಭೂಪ ಅಭಿಷೇಕಾ ॥ ೨ ॥**
**ಬೇದ ಬಿದಿತ ಕಹಿ ಸಕಲ ಬಿಧಾನಾ । ಕಹೆಉ ರಚಹು ಪುರ ಬಿಬಿಧ ಬಿತಾನಾ ॥**
**ಸಫಲ ರಸಾಲ ಪೂಗಫಲ ಕೇರಾ । ರೋಪಹು ಬೀಥಿನ್ಹ ಪುರ ಚಹುಂ ಫೇರಾ ॥ ೩ ॥**
**ರಚಹು ಮಂಜು ಮನಿ ಚೌಕೇಂ ಚಾರೂ । ಕಹಹು ಬನಾವನ ಬೇಗಿ ಬಜಾರೂ ॥**
**ಪೂಜಹು ಗನಪತಿ ಗುರ ಕುಲದೇವಾ । ಸಬ ಬಿಧಿ ಕರಹು ಭೂಮಿಸುರ ಸೇವಾ ॥ ೪ ॥**

ಅತಿಹರ್ಷದಿಂದ ವಸಿಷ್ಠರು – 'ಸಕಲ ತೀರ್ಥಗಳ ಉದಕವನ್ನು ತೆಗೆದುಕೊಂಡು ಬನ್ನಿ' ಎಂದು ಆದೇಶಿಸಿದರು. ಬಳಿಕ ಮುನಿಗಳು ಒಂದೊಂದು ಎಣಿಸುತ್ತಾ, ಸರ್ವೌಷಧಿಗಳು, ಮೂಲಿಕೆಗಳು, ಹೂ-ಹಣ್ಣು-ವೀಳ್ಯದೆಲೆ, ಅಡಿಕೆ ಮೊದಲಾದ ಅನೇಕ ಮಾಂಗಲಿಕ ವಸ್ತುಗಳನ್ನು ತರುವಂತೆ ಆಜ್ಞಾಪಿಸಿದರು. ಚಾಮರಗಳನ್ನೂ, ಕೃಷ್ಣಾಜಿನ, ಅನೇಕ ಜಾತಿಯ ರೇಷ್ಮೆ, ಉಣ್ಣೆಯ, ನೂಲಿನ

ಬಟ್ಟೆಗಳನ್ನೂ, ನಾನಾರೀತಿಯ ರತ್ನಗಳನ್ನೂ, ಜಗತ್ತಿನಲ್ಲಿ ರಾಜ್ಯಾಭಿಷೇಕಕ್ಕೆ ಯೋಗ್ಯವಾದ ಎಲ್ಲ ಮಂಗಳ ವಸ್ತುಗಳನ್ನೂ ತರುವಂತೆ ಆ ಮುನೀಶ್ವರರು ಹೇಳಿದರು. ವೇದೋಕ್ತವಾದ ಎಲ್ಲ ವಿಧಾನಗಳನ್ನೂ ತಿಳಿಸಿ, ಮುನಿಗಳು ಹೇಳಿದರು – ''ನಗರದಲ್ಲೆಲ್ಲ ಅಲ್ಲಲ್ಲಿ ಅನೇಕವಿಧವಾದ ಮಂಗಳತೋರಣ (ಕಮಾನು) ಗಳಿಂದ, ವಿತಾನ (ಮೇಲ್ಕಟ್ಟು) ಗಳಿಂದ ಅಲಂಕರಿಸಿರಿ. ಫಲಸಮೇತವಾಗಿರುವ ತೆಂಗು, ಕಂಗು, ಬಾಳೆಯ ಗಿಡ-ಮರಗಳನ್ನೂ ಕಂಭಗಳಾಗಿ ಬೀದಿ-ಬೀದಿಗಳಲ್ಲಿ ನಿಲ್ಲಿಸಿರಿ. ಸುಂದರ ಮಣಿಗಳ ಸಾರಣೆ-ಕಾರಣೆ ಮಾಡಿ, ಪೇಟೆಗಳನ್ನು ಕೂಡಲೇ ಶೃಂಗರಿಸುವಂತೆ ಏರ್ಪಾಡುಮಾಡಿರಿ. ಗುರು-ಗಣಪತಿ, ಕುಲದೇವತೆಗಳನ್ನು ಪೂಜಿಸಿರಿ. ಎಲ್ಲ ಪ್ರಕಾರದಿಂದ ಬ್ರಾಹ್ಮಣರ ಸೇವೆ ಮಾಡಿರಿ. (ಚೌ/೧-೪)

**ದೋ – ಧ್ವಜ ಪತಾಕ ತೋರನ ಕಲಸ ಸಜಹು ತುರಗ ರಥ ನಾಗ ।**
**ಸಿರ ಧರಿ ಮುನಿಬರ ಬಚನ ಸಬು ನಿಜ ನಿಜ ಕಾಜಹಿಂ ಲಾಗ ॥ ೬ ॥**

ಧ್ವಜ-ಪತಾಕೆಗಳನ್ನೂ, ತೋರಣಗಳನ್ನೂ, ಕಲಶಗಳನ್ನೂ, ಆನೆ-ಕುದುರೆ-ರಥಗಳೇ ಮೊದಲಾದುವನ್ನು ಅಲಂಕರಿಸಿರಿ. ಮುನೀಶ್ವರರ ಆಜ್ಞೆಯನ್ನು ಶಿರಸಾವಹಿಸಿ, ಎಲ್ಲರೂ ತಮ್ಮ-ತಮ್ಮ ಕೆಲಸಗಳಲ್ಲಿ ತೊಡಗಿದರು. (ದೋ/೬)

**ಚೌ – ಜೋ ಮುನೀಸ ಜೆಹಿ ಆಯಸು ದೀನ್ಹಾ । ಸೋ ತೆಹಿಂ ಕಾಜು ಪ್ರಥಮ ಜನು ಕೀನ್ಹಾ ॥**
**ಬಿಪ್ರ ಸಾಧು ಸುರ ಪೂಜತ ರಾಜಾ । ಕರತ ರಾಮ ಹಿತ ಮಂಗಲ ಕಾಜಾ ॥ ೧ ॥**
**ಸುನತ ರಾಮ ಅಭಿಷೇಕ ಸುಹಾವಾ । ಬಾಜ ಗಹಾಗಹ ಅವಧ ಬಧಾವಾ ॥**
**ರಾಮ ಸೀಯ ತನ ಸಗುನ ಜನಾಏ । ಫರಕಹಿಂ ಮಂಗಲ ಅಂಗ ಸುಹಾಏ ॥ ೨ ॥**
**ಪುಲಕಿ ಸಪ್ರೇಮ ಪರಸಪರ ಕಹಹೀಂ । ಭರತ ಆಗಮನು ಸೂಚಕ ಅಹಹೀಂ ॥**
**ಭಏ ಬಹುತ ದಿನ ಅತಿ ಅವಸೇರೀ । ಸಗುನ ಪ್ರತೀತಿ ಭೇಂಟ ಪ್ರಿಯ ಕೇರೀ ॥ ೩ ॥**
**ಭರತ ಸರಿಸ ಪ್ರಿಯ ಕೋ ಜಗ ಮಾಹೀಂ । ಇಹಇ ಸಗುನ ಫಲು ದೂಸರ ನಾಹೀಂ ॥**
**ರಾಮಹಿ ಬಂಧು ಸೋಚ ದಿನ ರಾತೀ । ಅಂಡನ್ಹಿ ಕಮಠ ಹೃದಉ ಜೆಹಿ ಭಾಂತೀ ॥ ೪ ॥**

ವಸಿಷ್ಠಮಹರ್ಷಿಗಳು ಅಪ್ಪಣೆಕೊಡಿಸಿದ ಕೆಲಸಗಳನ್ನು ಅವರೆಲ್ಲರೂ ಮೊದಲೇ ಮಾಡಿದ್ದರೋ ಎನ್ನುವಷ್ಟು ಬೇಗನೇ ನೆರವೇರಿಸಿದರು. ರಾಜನು ದೇವತೆಗಳನ್ನು, ಸಾಧುಗಳನ್ನು, ವಿಪ್ರರನ್ನು ಪೂಜಿಸಿ, ಶ್ರೀರಾಮಚಂದ್ರನಿಗಾಗಿ ಎಲ್ಲ ವಿಧವಾದ ಮಂಗಳಕಾರ್ಯಗಳನ್ನು ಮಾಡುತ್ತಿದ್ದಾನೆ. ಶ್ರೀರಾಮಚಂದ್ರನ ರಾಜ್ಯಾಭಿಷೇಕದ ಶುಭವಾರ್ತೆಯನ್ನು ಕೇಳಿದ ಕೂಡಲೇ ಅಯೋಧ್ಯೆಯಲ್ಲೆಲ್ಲ ವಿಜೃಂಭಣೆಯಿಂದ ಮಂಗಳವಾದ್ಯಗಳು ಮೊಳಗತೊಡಗಿದವು. ಶ್ರೀರಾಮಸೀತೆಯರ ಶುಭಾಂಗಗಳು ಅದುರಿ ಶುಭಸೂಚಕವಾದ ಶಕುನಗಳನ್ನು ವ್ಯಕ್ತಗೊಳಿಸಿದವು. ಅವರು ಪುಲಕಿತರಾಗಿ ಸಮಾರಂಭದ ವಾತಾವರಣವನ್ನು ಲಕ್ಷಿಸದೆ, ಒಬ್ಬರಿಗೊಬ್ಬರು ಹೀಗೆ ಮಾತಾಡಿಕೊಂಡರು. ರಾಮನೆಂದ – 'ಈ ಶಕುನಗಳೆಲ್ಲ ಭರತನ ಆಗಮನವನ್ನು ಸೂಚಿಸುತ್ತವೆ. ಅವನು ತನ್ನ ಮಾವನಮನೆಗೆ ಹೋಗಿ ತುಂಬಾ ದಿನಗಳಾಗಿ ಹೋಗಿವೆ. ಅವನನ್ನು ನೋಡಬೇಕೆಂದು ಮನಸ್ಸು ತವಕಪಡುತ್ತಿದೆ. ಈ ಶಕುನಗಳನ್ನು ನೋಡಿದರೆ ಪ್ರಿಯದರ್ಶನದ ನಂಬಿಕೆ ಉಂಟಾಗುತ್ತದೆ. ಈ ಜಗತ್ತಿನಲ್ಲಿ ನಮಗೆ ಭರತನಿಗಿಂತ ಪ್ರಿಯರಾದವರು ಬೇರೆ ಯಾರಿದ್ದಾರೆ? ಆದ್ದರಿಂದ ಶಕುನಗಳ ಫಲ ಇಷ್ಟೇ, ಬೇರೆ ಏನೂ ಅಲ್ಲ. ಆಮೆಗೆ ತನ್ನ ಮೊಟ್ಟೆಗಳ ಮೇಲೆ ಪ್ರೀತಿಯಿರುವಂತೆ, ಶ್ರೀರಾಮಚಂದ್ರನು ಹಗಲು-ರಾತ್ರಿ ಭರತನನ್ನೇ ಚಿಂತಿಸುತ್ತಿರುತ್ತಾನೆ. (ಚೌ/೧-೪)

**ದೋ – ಏಹಿ ಅವಸರ ಮಂಗಲು ಪರಮ ಸುನಿ ರಹಁಸೇಉ ರನಿವಾಸು ।**
**ಸೋಭತ ಲಖಿ ಬಿಧು ಬಢತ ಜನು ಬಾರಿಧಿ ಬೀಚಿ ಬಿಲಾಸು ॥ ೭ ॥**

ಆ ಹೊತ್ತಿಗೆ ಸರಿಯಾಗಿ ರಾಮನ ಯೌವರಾಜ್ಯಾಭಿಷೇಕದ ಶುಭವಾರ್ತೆಯನ್ನು ಕೇಳಿದ ಅಂತಃಪುರದ ರಾಣೀವಾಸವು, ಪೂರ್ಣಚಂದ್ರನ ವೃದ್ಧಿಯನ್ನು ಕಂಡ ಕಡಲು ಉಕ್ಕುವಂತೆ ಹರ್ಷಗೊಂಡಿತು. (ದೋ/೭)

**ಚೌ – ಪ್ರಥಮ ಜಾಇ ಜಿನ್ಹ ಬಚನ ಸುನಾಏ । ಭೂಷನ ಬಸನ ಭೂರಿ ತಿನ್ಹ ಪಾಏ ॥**
**ಪ್ರೇಮ ಪುಲಕಿ ತನ ಮನ ಅನುರಾಗೀಂ । ಮಂಗಲ ಕಲಸ ಸಜನ ಸಬ ಲಾಗೀಂ ॥ ೧ ॥**
**ಚೌಕೇಂ ಚಾರು ಸುಮಿತ್ರಾಂ ಪೂರೀ । ಮನಿಮಯ ಬಿಬಿಧ ಭಾಂತಿ ಅತಿ ರೂರೀ ॥**
**ಆನಁದ ಮಗನ ರಾಮ ಮಹತಾರೀ । ದಿಏ ದಾನ ಬಹು ಬಿಪ್ರ ಹಁಕಾರೀ ॥ ೨ ॥**

**ಪೂಜೀಂ ಗ್ರಾಮದೇಬಿ ಸುರ ನಾಗಾ । ಕಹೆಉ ಬಹೋರಿ ದೇನ ಬಲಿಭಾಗಾ ॥**
**ಜೆಹಿ ಬಿಧಿ ಹೋಇ ರಾಮ ಕಲ್ಯಾನೂ । ದೇಹು ದಯಾ ಕರಿ ಸೋ ಬರದಾನೂ ॥ ೩ ॥**
**ಗಾವಹಿಂ ಮಂಗಲ ಕೋಕಿಲಬಯನೀಂ । ಬಿಧುಬದನೀಂ ಮೃಗಸಾವಕನಯನೀಂ ॥ ೪ ॥**

ಮೊಟ್ಟಮೊದಲು ಈ ಸುದ್ದಿಯನ್ನು ರಾಣೀವಾಸಕ್ಕೆ ಮುಟ್ಟಿಸಿದವರಿಗೆ ಮೈ-ಕೈತುಂಬಾ ವಸ್ತ್ರಾಭರಣಗಳು ಉಡುಗೊರೆಯಾಗಿ ದೊರೆತವು. ರಾಣಿಯರ ಶರೀರಗಳು ಪ್ರೇಮದಿಂದ ಹೊಂಪುಳಿಗೊಂಡವು. ಮನಸ್ಸು ಪ್ರೇಮಮಗ್ನವಾಯಿತು. ಅವರೆಲ್ಲರೂ ಮಂಗಳ ಕಳಶಗಳನ್ನು ಅಣಿಗೊಳಿಸತೊಡಗಿದರು. ಸುಮಿತ್ರಾದೇವಿಯು ರತ್ನಗಳಿಂದ ಅನೇಕ ಪ್ರಕಾರದ ಸುಂದರ ರಂಗವಲ್ಲಿಗಳನ್ನಿಟ್ಟು ಅಂಗಳವನ್ನು ಅಲಂಕರಿಸಿದಳು. ಶ್ರೀರಾಮನ ಜನನಿಯಾದ ಕೌಸಲ್ಯಾದೇವಿಯು ಆನಂದಮಗ್ನಳಾಗಿ ವಿಪ್ರರನ್ನು ಕರೆಸಿ, ಅವರಿಗೆ ಕೈತುಂಬಾ ಅನೇಕ ದಾನಗಳನ್ನು ಮಾಡಿದಳು. ಆಕೆಯು ಗ್ರಾಮದೇವತೆಗಳನ್ನು, ಇತರ ದೇವತೆಗಳನ್ನು, ನಾಗದೇವತೆಗಳನ್ನು ಪೂಜಿಸಿ, ಕಾರ್ಯಸಿದ್ಧಿಗಾಗಿ ಮೀಸಲು ಕಟ್ಟಿದಳು. ಶ್ರೀರಾಮನಿಗೆ ಎಲ್ಲರೀತಿಯಿಂದ ಶುಭ-ಕಲ್ಯಾಣಗಳು ಉಂಟಾಗಲೆಂದು ಬೇಡಿಕೊಂಡಳು. ಕೋಕಿಲವಾಣಿಯರೂ, ವಿಧುವದನೆಯರೂ, ಮೃಗಶ್ಯಾವಕನಯನೆಯರೂ ಆದ ಲಲನೆಯರು ಮಂಗಳಗೀತೆಗಳನ್ನು ಹಾಡತೊಡಗಿದರು. (ಚೌ/೧-೪)

**ದೋ – ರಾಮ ರಾಜ ಅಭಿಷೇಕು ಸುನಿ ಹಿಯಂ ಹರಷೇ ನರ ನಾರಿ ।**
**ಲಗೇ ಸುಮಂಗಲ ಸಜನ ಸಬ ಬಿಧಿ ಅನುಕೂಲ ಬಿಚಾರಿ ॥ ೮ ॥**

ಶ್ರೀರಾಮಚಂದ್ರನ ರಾಜ್ಯಾಭಿಷೇಕದ ವಾರ್ತೆಯನ್ನು ಕೇಳಿದ ನಗರದ ಎಲ್ಲ ನರ-ನಾರಿಯರು ಹರ್ಷಿತರಾಗಿ, 'ವಿಧಿ ತನಗೆ ಅನುಕೂಲನಾಗಿದ್ದಾನೆ' ಎಂದು ತಿಳಿದು ಮಂಗಳಕಾರ್ಯಗಳಲ್ಲಿ ತೊಡಗಿದರು. (ದೋ/೮)

**ಚೌ – ತಬ ನರನಾಹಂ ಬಸಿಷ್ಠು ಬೋಲಾಏ । ರಾಮಧಾಮ ಸಿಖ ದೇನ ಪಠಾಏ ॥**
**ಗುರ ಆಗಮನು ಸುನತ ರಘುನಾಥಾ । ದ್ವಾರ ಆಇ ಪದ ನಾಯಉ ಮಾಥಾ ॥ ೧ ॥**
**ಸಾದರ ಅರಘ ದೇಇ ಘರ ಆನೇ । ಸೋರಹ ಭಾಂತಿ ಪೂಜಿ ಸನಮಾನೇ ॥**
**ಗಹೇ ಚರನ ಸಿಯ ಸಹಿತ ಬಹೋರೀ । ಬೋಲೇ ರಾಮು ಕಮಲ ಕರ ಜೋರೀ ॥ ೨ ॥**
**ಸೇವಕ ಸದನ ಸ್ವಾಮಿ ಆಗಮನೂ । ಮಂಗಲ ಮೂಲ ಅಮಂಗಲ ದಮನೂ ॥**
**ತದಪಿ ಉಚಿತ ಜನು ಬೋಲಿ ಸಪ್ರೀತೀ । ಪಠಇಅ ಕಾಜ ನಾಥ ಅಸಿ ನೀತೀ ॥ ೩ ॥**
**ಪ್ರಭುತಾ ತಜಿ ಪ್ರಭು ಕೀನ್ಹ ಸನೇಹೂ । ಭಯಉ ಪುನೀತ ಆಜು ಯಹು ಗೇಹೂ ॥**
**ಆಯಸು ಹೋಇ ಸೊ ಕರೌಂ ಗೊಸಾಈಂ । ಸೇವಕು ಲಹಇ ಸ್ವಾಮಿ ಸೇವಕಾಈಂ ॥ ೪ ॥**

ಆಗ ದಶರಥನು ವಸಿಷ್ಠರನ್ನು ಕರೆಸಿ, ಶ್ರೀರಾಮಚಂದ್ರನಿಗೆ ಸಮಯೋಚಿತ ಉಪದೇಶವನ್ನೀಯಲು ಅವರನ್ನು ಅವನ ಭವನಕ್ಕೆ ಕಳಿಸಿದನು. ಗುರುಗಳ ಆಗಮನವನ್ನು ಕೇಳಿ, ಶ್ರೀರಾಮನು ಬಾಗಿಲಿಗೆ ಬಂದು ಗುರುಪಾದಕ್ಕೆ ಹಣೆ ಚಾಚಿದನು. ಆದರದಿಂದ ಅರ್ಘ್ಯಪಾದ್ಯಾದಿಗಳನ್ನಿತ್ತು ಅವರನ್ನು ಮನೆಯೊಳಗೆ ಕರೆದೊಯ್ದನು. ಷೋಡಶೋಪಚಾರಗಳಿಂದ ಪೂಜಿಸಿ, ಅವರನ್ನು ಸತ್ಕರಿಸಿದನು. ಬಳಿಕ ಸೀತೆಯೊಂದಿಗೆ ಪಾದಗಳಿಗೆ ಎರಗಿ, ಕಮಲದಂತಹ ಕೈಗಳನ್ನು ಜೋಡಿಸಿಕೊಂಡು ಶ್ರೀರಾಮನು ಇಂತೆಂದನು – ''ಸೇವಕನ ಮನೆಗೆ ಸ್ವಾಮಿಯು ಬರುವುದು ಮಂಗಳದ ಮೂಲ, ಅಮಂಗಳದ ಶೂಲವಾಗಿದೆ. ಆದರೂ ಪೂಜ್ಯರೇ! ತಾವೇ ಪ್ರೀತಿಯಿಂದ ಈ ಸೇವಕನಿಗೆ ಅಪ್ಪಣೆಮಾಡಿ, ಕರೆಕಳಿಸಬಹುದಾಗಿತ್ತು. ಇದು ಲೋಕನೀತಿಯಾಗಿದೆ. ಆದರೆ ಪ್ರಭೂ! ನೀವು ಗುರುತರ ಕಾರ್ಯವನ್ನೂ ಪಕ್ಕಕ್ಕಿಟ್ಟು ಇಲ್ಲಿಗೆ ಬಿಜಯಂಗೈದು ತೋರಿದ ಪ್ರೇಮದಿಂದ ಇಂದು ಈ ಮನೆ ಪಾವನವಾಯಿತು. ಗುರುಗಳೇ! ಅಪ್ಪಣೆಯಾಗಲೀ! ನಾನು ಅದರಂತೆ ಮಾಡುವೆನು. ಸ್ವಾಮಿಗಳ ಸೇವೆಯಲ್ಲೇ ಸೇವಕನಿಗೆ ಲಾಭವಿದೆ.'' (ಚೌ/೧-೪)

**ದೋ – ಸುನಿ ಸನೇಹ ಸಾನೇ ಬಚನ ಮುನಿ ರಘುಬರಹಿ ಪ್ರಸಂಸ ।**
**ರಾಮ ಕಸ ನ ತುಮ್ಹ ಕಹಹು ಅಸ ಹಂಸ ಬಂಸ ಅವತಂಸ ॥ ೯ ॥**

ಶ್ರೀರಾಮನ ಪ್ರೇಮಾರ್ದ್ರವಾಣಿಯನ್ನು ಕೇಳಿ, ವಸಿಷ್ಠರು ಅವನನ್ನು ಕೊಂಡಾಡುತ್ತಾ ಹೇಳಿದರು – ''ರಾಮಾ! ಸೂರ್ಯವಂಶಭೂಷನಾದ ನೀನಲ್ಲದೆ ಇಂತಹ ಸುಂದರ ವಾಕ್ಯಗಳನ್ನು ಬೇರೆ ಯಾರು ಆಡಬಲ್ಲರು?'' (ದೋ/೯)

**ಚೌ – ಬರನಿ ರಾಮ ಗುನ ಸೀಲು ಸುಭಾಊ । ಬೋಲೇ ಪ್ರೇಮ ಪುಲಕಿ ಮುನಿರಾಊ ॥**
**ಭೂಪ ಸಜೆಉ ಅಭಿಷೇಕ ಸಮಾಜೂ । ಚಾಹತ ದೇನ ತುಮ್ಹಹಿ ಜುಬರಾಜೂ ॥ ೧ ॥**

**ರಾಮ ಕರಹು ಸಬ ಸಂಜಮ ಆಜೂ । ಜೌ ಬಿಧಿ ಕುಸಲ ನಿಬಾಹೈ ಕಾಜೂ ॥**
**ಗುರು ಸಿಖ ದೇಇ ರಾಯ ಪಹಿಂ ಗಯಊ । ರಾಮ ಹೃದಯಂ ಅಸ ಬಿಸಮಉ ಭಯಊ ॥ ೨ ॥**
**ಜನಮೇ ಏಕ ಸಂಗ ಸಬ ಭಾಈ । ಭೋಜನ ಸಯನ ಕೇಲಿ ಲರಿಕಾಈ ॥**
**ಕರನಬೇಧ ಉಪಬೀತ ಬಿಆಹಾ । ಸಂಗ ಸಂಗ ಸಬ ಭಏ ಉಛಾಹಾ ॥ ೩ ॥**
**ಬಿಮಲ ಬಂಸ ಯಹು ಅನುಚಿತ ಏಕೂ । ಬಂಧು ಬಿಹಾಇ ಬಡೆಹಿ ಅಭಿಷೇಕೂ ॥**
**ಪ್ರಭು ಸಪ್ರೇಮ ಪಛಿತಾನಿ ಸುಹಾಈ । ಹರಉ ಭಗತ ಮನ ಕೈ ಕುಟಿಲಾಈ ॥ ೪ ॥**

ವಸಿಷ್ಠ ಮಹರ್ಷಿಗಳು ಶ್ರೀರಾಮಚಂದ್ರನ ಗುಣ-ಶೀಲ-ಸ್ವಭಾವಗಳನ್ನು ಬಣ್ಣಿಸಿ, ಪುಲಕಿತಗಾತ್ರರಾಗಿ ಇಂತೆಂದರು – ''ರಾಮಾ! ಮಹಾರಾಜರು ನಿನಗೆ ಯುವರಾಜ್ಯಪಟ್ಟವನ್ನು ಕಟ್ಟಲು ಅಣಿಮಾಡಿದ್ದಾರೆ. ಅವರು ನಿನ್ನನ್ನು ಯುವರಾಜನನ್ನಾಗಿಸಲು ಬಯಸುತ್ತಿದ್ದಾರೆ. ಆದ್ದರಿಂದ ರಾಮಾ! ಇಂದು ನೀನು ಉಪವಾಸ, ಹವನವೇ ಮೊದಲಾದ ವಿಧಿಗಳಿಂದ ಸಂಯಮವನ್ನು ಆಚರಿಸು. ಅದರಿಂದ ವಿಧಿಯು ಈ ಶುಭಕಾರ್ಯವನ್ನು ಸಫಲಗೊಳಿಸುವನು'' ಎಂದು ಉಪದೇಶಿಸಿ, ವಸಿಷ್ಠರು ಮಹಾರಾಜರ ಬಳಿಗೆ ತೆರಳಿದರು. ಇದನ್ನು ಕೇಳಿದ ಶ್ರೀರಾಮನು ಹರ್ಷಪಡುವ ಬದಲಿಗೆ ಆಶ್ಚರ್ಯಚಕಿತನಾದನು. ''ನಾವೆಲ್ಲ ಸೋದರರೂ ಒಟ್ಟಿಗೆ ಹುಟ್ಟಿದವರು, ಬಾಲ್ಯದ ಆಟ-ಪಾಟ, ಊಟ-ತಿಂಡಿ, ಮಲಗುವುದು, ಕಿವಿಚುಚ್ಚುವುದು, ಉಪನಯನ, ವಿವಾಹ ಮುಂತಾದ ಎಲ್ಲವೂ ಒಟ್ಟಿಗೆ ಜರಗಿತು. ಆದರೆ ಇತರ ಒಡಹುಟ್ಟಿದವರನ್ನು ಬಿಟ್ಟು ರಾಜ್ಯಾಭಿಷೇಕವು ಹಿರಿಯವನಾದ ನನಗೊಬ್ಬನಿಗೇ ನಡೆಯುವುದು, ಇದೊಂದು ಈ ವಿಮಲವಂಶದಲ್ಲಿ ಅನುಚಿತಕಾರ್ಯ ನಡೆಯುತ್ತಿದೆ.'' ತುಳಸೀದಾಸರು ಹೇಳುತ್ತಾರೆ– ಪ್ರಭುರಾಮಚಂದ್ರನ ನಿರ್ಮಲ ಪ್ರೇಮಪೂರ್ಣ ಪಶ್ಚಾತ್ತಾಪವು ಭಕ್ತರ ಮನಸ್ಸಿನ ಕುಟಿಲತೆಯನ್ನು ಕಳೆಯಲಿ. (ಚೌ/೧-೪)

**ದೋ – ತೆಹಿ ಅವಸರ ಆಏ ಲಖನ ಮಗನ ಪ್ರೇಮ ಆನಂದ ।**
**ಸನಮಾನೇ ಪ್ರಿಯ ಬಚನ ಕಹಿ ರಘುಕುಲ ಕೈರವ ಚಂದ ॥ ೧೦ ॥**

ಅದೇ ವೇಳೆಗೆ ಪ್ರೇಮಾನಂದಮಗ್ನನಾದ ಲಕ್ಷ್ಮಣನು ಅಲ್ಲಿಗೆ ಬಂದನು. ರಘುಕುಲರೂಪೀ ಕುಮುದವನ್ನು ವಿಕಸಿತಗೊಳಿಸುವ ಚಂದ್ರನಂತಿರುವ ಶ್ರೀರಾಮಚಂದ್ರನು ಪ್ರಿಯವಚನಗಳಿಂದ ಅವನನ್ನು ಆದರಿಸಿದನು. (ದೋ/೧೦)

**ಚೌ – ಬಾಜಹಿಂ ಬಾಜನೆ ಬಿಬಿಧ ಬಿಧಾನಾ । ಪುರ ಪ್ರಮೋದು ನಹಿಂ ಜಾಇ ಬಖಾನಾ ॥**
**ಭರತ ಆಗಮನು ಸಕಲ ಮನಾವಹಿಂ । ಆವಹುಂ ಬೇಗಿ ನಯನ ಫಲು ಪಾವಹಿಂ ॥ ೧ ॥**
**ಹಾಟ ಬಾಟ ಘರ ಗಲೀಂ ಅಥಾಈಂ । ಕಹಹಿಂ ಪರಸಪರ ಲೋಗ ಲೊಗಾಈಂ ॥**
**ಕಾಲಿ ಲಗನ ಭಲಿ ಕೇತಿಕ ಬಾರಾ । ಪೂಜಿಹಿ ಬಿಧಿ ಅಭಿಲಾಷು ಹಮಾರಾ ॥ ೨ ॥**
**ಕನಕ ಸಿಂಘಾಸನ ಸೀಯ ಸಮೇತಾ । ಬೈಠಹಿಂ ರಾಮು ಹೋಇ ಚಿತ ಚೇತಾ ॥**
**ಸಕಲ ಕಹಹಿಂ ಕಬ ಹೋಇಹಿ ಕಾಲೀ । ಬಿಘನ ಮನಾವಹಿಂ ದೇವ ಕುಚಾಲೀ ॥ ೩ ॥**
**ತಿನ್ಹಹಿ ಸೊಹಾಇ ನ ಅವಧ ಬಧಾವಾ । ಚೋರಹಿ ಚಂದಿನಿ ರಾತಿ ನ ಭಾವಾ ॥**
**ಸಾರದ ಬೋಲಿ ಬಿನಯ ಸುರ ಕರಹೀಂ । ಬಾರಹಿಂ ಬಾರ ಪಾಯ ಲೈ ಪರಹೀಂ ॥ ೪ ॥**

ಅನೇಕ ಪ್ರಕಾರದ ವಾದ್ಯಗಳು ಉಲಿಯುತ್ತಿದ್ದವು. ಅಯೋಧ್ಯಾನಗರ ಪ್ರಜೆಗಳ ಹರ್ಷಾತಿರೇಕ ಸ್ಥಿತಿಯು ವರ್ಣನಾತೀತವು. ಎಲ್ಲರೂ ಭರತನ ಬರವನ್ನೇ ನಿರೀಕ್ಷಿಸುತ್ತಾ – 'ಅವನು ಬೇಗನೇ ಬರಲಿ, ಈ ಉತ್ಸವವನ್ನು ನೋಡಿ ತನ್ನ ಕಣ್ಣುಗಳನ್ನು ಸಾರ್ಥಕಪಡಿಸಿಕೊಳ್ಳಲಿ' ಎಂದು ಹಾರೈಸುತ್ತಿದ್ದರು. ಪೇಟೆ, ಹಾದಿ-ಬೀದಿ, ಕೇರಿ-ಕೇರಿಗಳು, ಮನೆ, ಅಂಗಳ, ಜಗುಲಿಗಳಲ್ಲಿ, ಎಲ್ಲಂದರಲ್ಲಿ ಸ್ತ್ರೀ-ಪುರುಷರು ತಮ್ಮ-ತಮ್ಮಲ್ಲಿ ಇಂತು ಮಾತಾಡಿಕೊಳ್ಳುತ್ತಿದ್ದಾರೆ – ''ದೇವರು ನಮ್ಮ ಕೋರಿಕೆಯನ್ನು ಈಡೇರಿಸುವಂತಹ ಆ ಸುಮುಹೂರ್ತವು ನಾಳೆ ಎಷ್ಟೊತ್ತಿಗೆ ಬಂದೀತು? ಆಗ ಸ್ವರ್ಣಸಿಂಹಾಸನದ ಮೇಲೆ ಸೀತಾಸಹಿತನಾದ ಶ್ರೀರಾಮಚಂದ್ರನು ವಿರಾಜಿಸುವನು ಹಾಗೂ ನಮ್ಮ ಮನೋರಥವು ಈಡೇರುವುದು.'' ಹೀಗೆ ಎಲ್ಲರೂ ನಾಳೆ ಎಂದಿಗಾದೀತು ಎಂದು ತಹತಹಿಸುತ್ತಿದ್ದರು. ಅಯೋಧ್ಯೆಯಲ್ಲಿ ಈ ರೀತಿ ಸಂಭ್ರಮವಿದ್ದರೆ, ಅತ್ತ ಸ್ವರ್ಗದಲ್ಲಿ ಸ್ವಾರ್ಥಿಗಳಾದ ದೇವತೆಗಳು ಈ ಪಟ್ಟಾಭಿಷೇಕದಲ್ಲಿ ತೊಡರುಂಟಾಗಲೀ ಎಂದು ಹಾರೈಸುತ್ತಿದ್ದರು. ಕಳ್ಳನಿಗೆ ಬೆಳದಿಂಗಳು ಹಿಡಿಸದಿರುವಂತೆ, ದೇವತೆಗಳಿಗೆ ಅಯೋಧ್ಯೆಯಲ್ಲಿನ ಆನಂದೋತ್ಸವವನ್ನು ನೋಡಿ ಸಹಿಸಲಾಗಲಿಲ್ಲ. ದೇವತೆಗಳೆಲ್ಲರೂ ಸರಸ್ವತಿದೇವಿಯನ್ನು ಬರಮಾಡಿಕೊಂಡು, ಪದೇ-ಪದೇ ಆಕೆಯ ಕಾಲಿಗೆಬಿದ್ದು ವಿನಯದಿಂದ ಬೇಡಿಕೊಂಡರು – (ಚೌ/೧-೪)

## ಸರಸ್ವತಿಯಿಂದ ಮಂಥರೆಯ ಬುದ್ಧಿಪಲ್ಲಟ

**ದೋ – ಬಿಪತಿ ಹಮಾರಿ ಬಿಲೋಕಿ ಬಡಿ ಮಾತು ಕರಿಅ ಸೋಇ ಆಜು ।**
**ರಾಮು ಜಾಹಿಂ ಬನ ರಾಜು ತಜಿ ಹೋಇ ಸಕಲ ಸುರಕಾಜು ॥ ೧೧ ॥**

‘ಅಮ್ಮಾ! ನಮ್ಮ ಆಪತ್ತನ್ನು ನೋಡಿ, ಶ್ರೀರಾಮಚಂದ್ರನು ರಾಜ್ಯತ್ಯಾಗಗೈದು ಕಾಡಿಗೆ ಹೋಗುವಂತೆ ಮಾಡು. ಇದರಿಂದ ದೇವತೆಗಳ ಎಲ್ಲ ಕಾರ್ಯಗಳು ಸಿದ್ಧಿಸುತ್ತವೆ.’ (ದೋ/೧೧)

**ಚೌ – ಸುನಿ ಸುರ ಬಿನಯ ಠಾಢಿ ಪಛಿತಾತೀ । ಭಇಉಁ ಸರೋಜ ಬಿಪಿನ ಹಿಮರಾತೀ ॥**
**ದೇಖಿ ದೇವ ಪುನಿ ಕಹಹಿಂ ನಿಹೋರೀ । ಮಾತು ತೋಹಿ ನಹಿಂ ಥೋರಿಉ ಖೋರೀ ॥ ೧ ॥**
**ಬಿಸಮಯ ಹರಷ ರಹಿತ ರಘುರಾಊ । ತುಮ್ಹ ಜಾನಹು ಸಬ ರಾಮ ಪ್ರಭಾಊ ॥**
**ಜೀವ ಕರಮ ಬಸ ಸುಖ ದುಖ ಭಾಗೀ । ಜಾಇಅ ಅವಧ ದೇವ ಹಿತ ಲಾಗೀ ॥ ೨ ॥**
**ಬಾರ ಬಾರ ಗಹಿ ಚರನ ಸँಕೋಚೀ । ಚಲೀ ಬಿಚಾರಿ ಬಿಬುಧ ಮತಿ ಪೋಚೀ ॥**
**ಊँಚ ನಿವಾಸು ನೀಚಿ ಕರತೂತೀ । ದೇಖಿ ನ ಸಕಹಿಂ ಪರಾಇ ಬಿಭೂತೀ ॥ ೩ ॥**
**ಆಗಿಲ ಕಾಜು ಬಿಚಾರಿ ಬಹೋರೀ । ಕರಿಹಹಿಂ ಚಾಹ ಕುಸಲ ಕಬಿ ಮೋರೀ ॥**
**ಹರಷಿ ಹೃದಯँ ದಸರಥ ಪುರ ಆಈ । ಜನು ಗ್ರಹ ದಸಾ ದುಸಹ ದುಖದಾಈ ॥ ೪ ॥**

ದೇವತೆಗಳ ಬಿನ್ನಹವನ್ನು ಆಲಿಸಿದ ಸರಸ್ವತಿಯು ಪಶ್ಚಾತ್ತಾಪಪಡುತ್ತಾ – ‘‘ಅಯ್ಯೋ! ನಾನು ಕಮಲಕಾನನಕ್ಕೆ ಹೇಮಂತರಾತ್ರಿಯಾದೆನಲ್ಲ!’’ ಎಂದು ತನ್ನಲ್ಲೇ ತಾನು ವಿಚಾರಮಾಡಿದಳು. ಈ ರೀತಿ ಹಲುಬುತ್ತಿರುವುದನ್ನು ಕಂಡು ದೇವತೆಗಳು ಮತ್ತೆ ಪುನಃ ವಿನಯದಿಂದ ಪ್ರಾರ್ಥಿಸಿಕೊಂಡರು – ತಾಯೆ! ಇದರಿಂದ ನಿನಗೆ ಕೊಂಚವೂ ದೋಷ ತಗಲದು. ಶ್ರೀರಘುನಾಥನು ಹರ್ಷ-ವಿಷಾದರಹಿತನು. ನೀನು ಶ್ರೀರಾಮನ ಪ್ರಭಾವವೆಲ್ಲವನ್ನೂ ಬಲ್ಲೆ. ಜೀವಿಯು ತನ್ನ ಕರ್ಮವಶದಿಂದಲೇ ಸುಖದುಃಖಗಳಿಗೆ ಭಾಗಿಯಾಗುತ್ತಾನೆ. ಆದರೆ ಶ್ರೀರಘುನಾಥನು ಜೀವನು ಅಲ್ಲ, ಪರಮಾತ್ಮನು. ಆದರಿಂದ ನೀನು ದೇವತೆಗಳ ಹಿತಕ್ಕಾಗಿ ಅಯೋಧ್ಯೆಗೆ ಹೋಗಬೇಕು. ಅವರು ಪದೇ ಪದೇ ಅವಳ ಕಾಲುಹಿಡಿದುಕೊಂಡು ಬೇಡುತ್ತಿದ್ದರು. ಸರಸ್ವತಿಯು ದಾಕ್ಷಿಣ್ಯಕ್ಕೆ ಬಲಿಯಾಗಿ ಇಂತು ಯೋಚಿಸಿದಳು – ದೇವತೆಗಳ ಬುದ್ಧಿಯು ತುಂಬಾ ಲಘುವಾದುದು. ಅವರ ನಿವಾಸವು ಉನ್ನತವಾದುದು, ಆದರೆ ಅವರ ಕೃತ್ಯಗಳು ಅಲ್ಪವಾದವುಗಳು. ಇತರರ ಉನ್ನತಿಯನ್ನು ಇವರು ಸಹಿಸಲಾರರು. ಆದರೆ ಮುಂದಿನದನ್ನು ನೆನೆದು ಪುನಃ ಯೋಚಿಸುವಳು – ‘‘ಶ್ರೀರಾಮನು ಅಡವಿಗೆ ಹೋಗುವುದರಿಂದ ರಾಕ್ಷಸರ ವಧೆಯಾಗುತ್ತದೆ. ಇದರಿಂದ ಜಗತ್ಕಲ್ಯಾಣವಾಗುತ್ತದೆ. ಚತುರಕವಿಗಳು ನನ್ನನ್ನು ಆಹ್ವಾನಿಸುವರು. ನಾನು ಎಲ್ಲರ ನಾಲಿಗೆಯನ್ನು ಸೇರಿ, ಶ್ರೀರಾಮನ ಚರಿತ್ರೆಯನ್ನು ತಿಳಿಸುವೆನು. ಇದರಿಂದ ನನ್ನ ಪ್ರತಿಷ್ಠೆ ಇಮ್ಮಡಿಗೊಂಡೀತು. ಈ ಪ್ರಕಾರ ಸರಸ್ವತಿಯು ಆಲೋಚಿಸಿ ಮನದಲ್ಲೇ ಹಿಗ್ಗಿ, ದುಃಸಹವಾದ ದುಃಖವನ್ನುಂಟುಮಾಡುವ ಯಾವುದೋ ಒಂದು ಕೆಟ್ಟ ಗ್ರಹವು ಬರುವಂತೆ ಅಯೋಧ್ಯೆಗೆ ಬಂದಳು. (ಚೌ/೧-೪)

**ದೋ – ನಾಮು ಮಂಥರಾ ಮಂದಮತಿ ಚೇರೀ ಕೈಕಇ ಕೇರಿ ।**
**ಅಜಸ ಪೇಟಾರೀ ತಾಹಿ ಕರಿ ಗಈ ಗಿರಾ ಮತಿ ಫೇರಿ ॥ ೧೨ ॥**

ಭರತನ ತಾಯಿಯಾದ ಕೈಕೇಯಿಯ ಬಳಿ ‘ಮಂಥರೆ’ ಎಂಬ ತಿಳಿಗೇಡಿ ದಾಸಿಯಿದ್ದಳು. ಸರಸ್ವತಿಯು ಅವಳ ಬುದ್ಧಿಯು ಭ್ರಂಶವಾಗುವಂತೆ ಮಾಡಿ, ಅವಳನ್ನು ಅಪಕೀರ್ತಿಗೆ ಗುರಿಯಾಗಿಸಿ ಹೊರಟುಹೋದಳು. (ದೋ/೧೨)

**ಚೌ – ದೀಖ ಮಂಥರಾ ನಗರು ಬನಾವಾ । ಮಂಜುಲ ಮಂಗಲ ಬಾಜ ಬಧಾವಾ ॥**
**ಪೂಛೆಸಿ ಲೋಗನ್ಹ ಕಾಹ ಉಛಾಹೂ । ರಾಮ ತಿಲಕು ಸುನಿ ಭಾ ಉರ ದಾಹೂ ॥ ೧ ॥**
**ಕರಇ ಬಿಚಾರು ಕುಬುದ್ಧಿ ಕುಜಾತೀ । ಹೋಇ ಅಕಾಜು ಕವನಿ ಬಿಧಿ ರಾತೀ ॥**
**ದೇಖಿ ಲಾಗಿ ಮಧು ಕುಟಿಲ ಕಿರಾತೀ । ಜಿಮಿ ಗವँ ತಕಇ ಲೇಉँ ಕೇಹಿ ಭಾँತೀ ॥ ೨ ॥**
**ಭರತ ಮಾತು ಪಹಿಂ ಗಇ ಬಿಲಖಾನೀ । ಕಾ ಅನಮನಿ ಹಸಿ ಕಹ ಹँಸಿ ರಾನೀ ॥**
**ಊತರು ದೇಇ ನ ಲೇಇ ಉಸಾಸೂ । ನಾರಿ ಚರಿತ ಕರಿ ಢಾರಇ ಆँಸೂ ॥ ೩ ॥**

**ಹಁಸೀ ಕಹ ರಾನಿ ಗಾಲು ಬಡ ತೋರೇಂ। ದೀನ್ಹ ಲಖನ ಸಿಖ ಅಸ ಮನ ಮೋರೇಂ ॥**
**ತಬಹುಁ ನ ಬೋಲ ಚೇರಿ ಬಡಿ ಪಾಪಿನಿ। ಛಾಡಇ ಸ್ವಾಸ ಕಾರಿ ಜನು ಸಾಁಪಿನಿ ॥ ೪ ॥**

ಮಂಥರೆಯು ನಗರದ ಸುಂದರಾಲಂಕಾರಗಳನ್ನು ನೋಡಿ, ಮಂಗಳಕರವಾದ ವಾದ್ಯಗಳನ್ನು ಕೇಳಿ – ''ಏನು ವಿಶೇಷ? ಏಕೆ ಇದೆಲ್ಲ ಸಂಭ್ರಮ?'' ಎಂದು ಜನರನ್ನು ಕೇಳಿದಳು. ಶ್ರೀರಾಮಚಂದ್ರನ ಯುವರಾಜ ಪಟ್ಟಾಭಿಷೇಕದ ಸಮಾಚಾರವನ್ನು ಕೇಳಿದಾಕ್ಷಣವೇ ಅವಳ ಒಡಲು ಅಸೂಯೆಯಿಂದ ಉರಿದುಹೋಯಿತು.ಆ ಕುಬುದ್ಧಿ, ಕುಜಾತಿಯವಳಾದ ದಾಸಿಯು ಕುಟಿಲ ಕಿರಾತ ಹೆಂಗಸೋರ್ವಳು ಎತ್ತರದ ಮರದಲ್ಲಿ ಕಟ್ಟಿರುವ ಜೇನುಗೂಡನ್ನು ನೋಡಿ, ಅದನ್ನು ಹೇಗೆ ಕೀಳುವುದು ಎಂದು ಹೊಂಚುಹಾಕುವಂತೆ, ಮಂಥರೆಯು ಈ ಕಾರ್ಯವನ್ನು ಒಂದೇ ಇರುಳಲ್ಲಿ ಹೇಗೆ ಕೆಡಿಸಬಹುದು? ಎಂದು ಯೋಚಿಸತೊಡಗಿದಳು.

ಮಂಥರೆಯು ಕೆಟ್ಟಮೋರೆಯನ್ನು ಹೊತ್ತಕೊಂಡು ಭರತನ ತಾಯಿಯಾದ ಕೈಕೆಯಿಯ ಬಳಿಗೆ ಹೋದಳು. ಕೈಕೆಯು ನಕ್ಕು ಕೇಳಿದಳು – 'ನೀನೇಕೆ ಸಪ್ಪಗಿರುವೆ?' ಮಂಥರೆಯು ಯಾವ ಉತ್ತರವನ್ನೂ ಕೊಡದೆ, ನಿಟ್ಟುಸಿರುಬಿಟ್ಟು ಸ್ತ್ರೀಯರಿಗೆ ಸಹಜವಾದ ಕೃತಕ ಕಂಬನಿ ಮಿಡಿಯತೊಡಗಿದಳು. ಆಗ ರಾಣಿಯು ನಕ್ಕು ನುಡಿದಳು – 'ನಿನ್ನ ಬಾಯಿ ದೊಡ್ಡದು. ವಾಚಾಳಿ ಬೇರೆ. ಲಕ್ಷ್ಮಣನೇನಾದರೂ ನಿನ್ನನ್ನು ದಂಡಿಸಿದನೋ ಎನ್ನಿಸುತ್ತದೆ? ಆಗಲೂ ಆ ಮಹಾಪಾಪಿಯಾದ ದಾಸಿಯು ತುಟಿಪಿಟಕ್ಕೆನ್ನಲಿಲ್ಲ. ಕಪ್ಪಾದ ನಾಗಿನಿಯು ಬುಸುಗುಟ್ಟುವಂತೆ, ನಿಡುಸುಯ್ಯತೊಡಗಿದಳು. (ಚೌ/೧-೪)

**ದೋ – ಸಭಯ ರಾನಿ ಕಹ ಕಹಸಿ ಕಿನ ಕುಸಲ ರಾಮು ಮಹಿಪಾಲು ।**
**ಲಖನು ಭರತು ರಿಪುದಮನು ಸುನಿ ಭಾ ಕುಬರೀ ಉರ ಸಾಲು ॥ ೧೩ ॥**

ಆಗ ರಾಣಿಯು ಹೆದರಿ ಕೇಳಿದಳು – ''ಎಲೆಗೆ! ನೀನು ಏಕೆ ಮಾತಾಡುವುದಿಲ್ಲ? ಏನು ಸಮಾಚಾರ? ಶ್ರೀರಾಮನು, ಮಹಾರಾಜರು ಲಕ್ಷ್ಮಣ, ಭರತ, ಶತ್ರುಘ್ನರೂ ಕ್ಷೇಮತಾನೇ?'' ಇದನ್ನು ಕೇಳಿದ ಆ ಗೂನುಬೆನ್ನಿನ ದಾಸಿಯ ಹೃದಯ ಪರಿತಪಿಸಿತು. (ದೋ/೧೩)

**ಚೌ – ಕತ ಸಿಖ ದೇಇ ಹಮಹಿ ಕೋಉ ಮಾಈ । ಗಾಲು ಕರಬ ಕೆಹಿ ಕರ ಬಲು ಪಾಈ ॥**
**ರಾಮಹಿ ಛಾಡಿ ಕುಸಲ ಕೆಹಿ ಆಜೂ । ಜೇಹಿ ಜನೇಸು ದೇಇ ಜುಬರಾಜೂ ॥ ೧ ॥**
**ಭಯಉ ಕೌಸಿಲಹಿ ಬಿಧಿ ಅತಿ ದಾಹಿನ । ದೇಖತ ಗರಬ ರಹತ ಉರ ನಾಹಿನ ॥**
**ದೇಖಹು ಕಸ ನ ಜಾಇ ಸಬ ಸೋಭಾ । ಜೋ ಅವಲೋಕಿ ಮೋರ ಮನು ಛೋಭಾ ॥ ೨ ॥**
**ಪೂತು ಬಿದೇಶ ನ ಸೋಚು ತುಮ್ಹಾರೇಂ । ಜಾನತಿ ಹಹು ಬಸ ನಾಹು ಹಮಾರೇಂ ॥**
**ನೀದ ಬಹುತ ಪ್ರಿಯ ಸೇಜ ತುರಾಈ । ಲಖಹು ನ ಭೂಪ ಕಪಟ ಚತುರಾಈ ॥ ೩ ॥**
**ಸುನಿ ಪ್ರಿಯ ಬಚನ ಮಲಿನ ಮನು ಜಾನೀ । ಝುಕೀ ರಾನಿ ಅಬ ರಹು ಅರಗಾನೀ ॥**
**ಪುನಿ ಅಸ ಕಬಹುಁ ಕಹಸಿ ಘರಫೋರೀ । ತಬ ಧರಿ ಜೀಭ ಕಢಾವಉಁ ತೋರೀ ॥ ೪ ॥**

ಆ ದಾಸಿಯು ಹೇಳತೊಡಗಿದಳು – ''ಅಮ್ಮ! ಯಾರಾದರೂ ನನಗೇಕೆ ಚುಚ್ಚಿಕೊಡುತ್ತಾರೆ? ನಾನು ಯಾರ ಧೈರ್ಯದ ಮೇಲೆ ಬಾಯಿಬಿಡಲಿ? ಯುವರಾಜ ಪದವಿಯನ್ನು ಪಡೆಯುತ್ತಿರುವ ರಾಮನಲ್ಲದೆ ಇಂದು ಯಾರು ಸಂತೋಷದಲ್ಲಿದ್ದಾರೆ? ಅವರಿಗೇನಾದರು ರಾಜನು ಯುವರಾಜಪದವಿಯನ್ನು ಕೊಡುತ್ತಿರುವನೇ? ಇಂದು ಕೌಸಲ್ಯೆಯ ಅದೃಷ್ಟವೋ ಅದೃಷ್ಟ. ಆಕೆಯ ಹೆಮ್ಮೆ ಹೇಳತೀರದು. ನೀನೇ ಸ್ವತಃ ಹೋಗಿ ನಗರಶೋಭೆಯನ್ನು ಏಕೆ ನೋಡಿಕೊಂಡು ಬರುವುದಿಲ್ಲ? ನನಗಂತೂ ಹೊಟ್ಟೆ ಉರಿದುಹೋಯಿತು. ನಿನ್ನ ಕುಮಾರನು ಪರದೇಶಿಯಾಗಿದ್ದಾನೆ. ನಿನಗೆ ಅದರ ಯೋಚನೆಯೇ ಇಲ್ಲವಲ್ಲ! ಮಹಾರಾಜರು ನನ್ನ ಕೈವಶದಲ್ಲಿದ್ದಾರೆ ಎಂದು ಭ್ರಮಿಸುತ್ತಿರುವೆ. ನಿನಗಂತೂ ಸುಖದ ಸುಪ್ಪತ್ತಿಗೆಯ ಮೇಲೆ ಮಲಗಿ ನಿದ್ರಿಸುವುದು ಇಷ್ಟವಾದುದು. ರಾಜನ ಕಪಟ, ಕುಯುಕ್ತಿಗಳು ನಿನಗರಿಯವು.'' ಮಂಥರೆಯ ಇಂತಹ ಬಣ್ಣದ ಮಾತನ್ನು ಕೇಳಿ, ಕೈಕೆಯಿಯು ಅವಳ ಮನಸ್ಸಿನಲ್ಲಿರುವ ಮಲಿನತೆಯನ್ನು ಗ್ರಹಿಸಿ, ಗದರಿಕೊಂಡು ಇಂತೆಂದಳು – 'ಸಾಕು, ಮುಚ್ಚು ಬಾಯಿ. ಮನೆಮುರುಕಿ. ಮತ್ತೆ ಇಂತಹ ಮಾತು ಎತ್ತಿದರೆ ನಿನ್ನ ನಾಲಿಗೆ ಸೀಳಿಬಿಟ್ಟೇನು.' (ಚೌ/೧-೪)

**ದೋ – ಕಾನೇ ಖೋರೇ ಕೂಬರೇ ಕುಟಿಲ ಕುಚಾಲೀ ಜಾನಿ ।**
**ತಿಯ ಬಿಸೇಷಿ ಪುನಿ ಚೇರಿ ಕಹಿ ಭರತಮಾತು ಮುಸುಕಾನಿ ॥ ೧೪ ॥**

ಒಕ್ಕಣ್ಣರು, ಕುಂಟರು, ಗೂನರು-ಕುಟಿಲರೂ, ಕುತಂತ್ರಿಗಳೂ ಆಗಿರುತ್ತಾರೆ. ಅದರಲ್ಲೂ ಹೆಣ್ಣು ಆಗಿದ್ದು, ದಾಸಿಯಾಗಿದ್ದರೆ ಕೇಳಬೇಕೇ? ಹೀಗೆ ಹೇಳಿ, ಭರತನ ತಾಯಿಯು ಮುಗುಳ್ನಗೆ ಬೀರಿದಳು. (ದೋ/೧೪)

**ಚೌ – ಪ್ರಿಯಬಾದಿನಿ ಸಿಖ ದೀನ್ಹಿಉ ತೋಹೀ । ಸಪನೆಹು ತೋ ಪರ ಕೋಪು ನ ಮೋಹೀ ॥**
**ಸುದಿನು ಸುಮಂಗಲ ದಾಯಕು ಸೋಈ । ತೋರ ಕಹಾ ಫುರ ಜೆಹಿ ದಿನ ಹೋಈ ॥ ೧ ॥**
**ಜೇಠ ಸ್ವಾಮಿ ಸೇವಕ ಲಘು ಭಾಈ । ಯಹ ದಿನಕರ ಕುಲ ರೀತಿ ಸುಹಾಈ ॥**
**ರಾಮ ತಿಲಕು ಜೌ ಸಾಂಚೆಹು ಕಾಲೀ । ದೇಉ ಮಾಗು ಮನ ಭಾವತ ಆಲೀ ॥ ೨ ॥**
**ಕೌಸಲ್ಯಾ ಸಮ ಸಬ ಮಹತಾರೀ । ರಾಮಹಿ ಸಹಜ ಸುಭಾಯ ಪಿಆರೀ ॥**
**ಮೋ ಪರ ಕರಹಿಂ ಸನೇಹು ಬಿಸೇಷೀ । ಮೈಂ ಕರಿ ಪ್ರೀತಿ ಪರೀಛಾ ದೇಖೀ ॥ ೩ ॥**
**ಜೌ ಬಿಧಿ ಜನಮು ದೇಇ ಕರಿ ಛೋಹೂ । ಹೋಹುಂ ರಾಮ ಸಿಯ ಪೂತ ಪುತೋಹೂ ॥**
**ಪ್ರಾನ ತೆಂ ಅಧಿಕ ರಾಮು ಪ್ರಿಯ ಮೋರೇಂ । ತಿನ್ಹ ಕೇಂ ತಿಲಕ ಛೋಭು ಕಸ ತೋರೇಂ ॥ ೪ ॥**

ಅನಂತರ ಹೇಳಿದಳು – ಎಲೈ ಪ್ರಿಯಂವದ ಮಂಥರೇ! ನಿನಗೆ ಬುದ್ಧಿವಾದ ಹೇಳಿದೆ ಅಷ್ಟೇ. ನಿನ್ನ ಮೇಲೆ ನನಗೆ ಕನಸು-ಮನಸಿನಲ್ಲಿಯೂ ಸಿಟ್ಟು ಇಲ್ಲ. ನೀನು ಹೇಳಿದ ಮಾತು (ಶ್ರೀರಾಮನ ಪಟ್ಟಾಭಿಷೇಕದ ವಿಷಯ) ನಿಜವಾದ ದಿನವೇ ಶುಭದಿನವು. ಸೋದರರಲ್ಲಿ ಹಿರಿಯವನು ರಾಜ್ಯಕ್ಕೆ ಒಡೆಯನಾಗುವುದು, ಕಿರಿಯವರು ಸೇವಕರಾಗುವುದು ಸೂರ್ಯವಂಶದ ಸುಂದರ ರೀತಿಯಾಗಿದೆ. ನಾಳೆಯೇ ನಿಜವಾಗಿ ರಾಮನ ಪಟ್ಟಾಭಿಷೇಕವಾದರೆ, ಸಖಿಯೇ! ನೀನು ಬೇಕಾದ್ದನ್ನು ಕೇಳು. ಅದನ್ನು ಕೊಟ್ಟುಬಿಡುತ್ತೇನೆ. ರಾಮನಿಗೆ ಸಹಜವಾಗಿಯೇ ಎಲ್ಲ ತಾಯಂದಿರೂ ಕೂಡ ಕೌಸಲ್ಯೆಯಂತೆಯೇ ಪ್ರಿಯರಾಗಿದ್ದಾರೆ. ನನ್ನನ್ನು ಕಂಡರಂತೂ ಅವನಿಗೆ ವಿಶೇಷ ಪ್ರೇಮಾದರಗಳು. ನಾನು ಅವನ ಪ್ರೀತಿಯನ್ನು ಪರೀಕ್ಷಿಸಿ ನೋಡಿದ್ದೇನೆ. ವಿಧಿಯು ಏನಾದರೂ ಮತ್ತೆ ನನಗೆ ಜನ್ಮ ನೀಡಿದರೆ ರಾಮನಂತಹ ಮಗನಾಗಲೀ, ಸೀತೆಯಂತಹ ಸೊಸೆಬರಲಿ ಎಂದೇ ಆಶಿಸುತ್ತೇನೆ. ರಾಮನು ನನಗೆ ಪ್ರಾಣಕ್ಕಿಂತಲೂ ಪ್ರಿಯನು. ಅವನ ರಾಜ್ಯಾಭಿಷೇಕವು ನನಗೆ ಏಕೆ ಕ್ಷೋಭೆತಂದೀತು? (ಚೌ/೧-೪)

**ದೋ – ಭರತ ಸಪಥ ತೊಹಿ ಸತ್ಯ ಕಹು ಪರಿಹರಿ ಕಪಟ ದುರಾಉ ।**
**ಹರಷ ಸಮಯ ಬಿಸಮಉ ಕರಸಿ ಕಾರನ ಮೋಹಿ ಸುನಾಉ ॥ ೧೫ ॥**

ನಿನಗೆ ಭರತನ ಆಣೆ. ಮುಚ್ಚುಮರೆಯಿಲ್ಲದೇ, ಕಪಟವನ್ನು ಬಿಟ್ಟು ನಿಜವನ್ನು ಹೇಳು. ಹರ್ಷದ ವೇಳೆಯಲ್ಲಿ ನೀನು ದುಃಖಗೊಂಡಿರಲು ಏನು ಕಾರಣ? ಹೇಳು. (ದೋ/೧೫)

**ಚೌ – ಏಕಹಿಂ ಬಾರ ಆಸ ಸಬ ಪೂಜೀ । ಅಬ ಕಛು ಕಹಬ ಜೀಭ ಕರಿ ದೂಜೀ ॥**
**ಫೋರೈ ಜೋಗು ಕಪಾರು ಅಭಾಗಾ । ಭಲೆಉ ಕಹತ ದುಖ ರಉರೆಹಿ ಲಾಗಾ ॥ ೧ ॥**
**ಕಹಹಿಂ ಝೂಠಿ ಫುರಿ ಬಾತ ಬನಾಈ । ತೇ ಪ್ರಿಯ ತುಮ್ಹಹಿ ಕರುಇ ಮೈಂ ಮಾಈ ॥**
**ಹಮಹುಂ ಕಹಬಿ ಅಬ ಠಕುರಸೊಹಾತೀ । ನಾಹಿಂ ತ ಮೌನ ರಹಬ ದಿನು ರಾತೀ ॥ ೨ ॥**
**ಕರಿ ಕುರೂಪ ಬಿಧಿ ಪರಬಸ ಕೀನ್ಹಾ । ಬವಾ ಸೊ ಲುನಿಅ ಲಹಿಅ ಜೋ ದೀನ್ಹಾ ॥**
**ಕೋಉ ನೃಪ ಹೋಉ ಹಮಹಿ ಕಾ ಹಾನೀ । ಚೇರಿ ಛಾಡಿ ಅಬ ಹೋಬ ಕಿ ರಾನೀ ॥ ೩ ॥**
**ಜಾರೈ ಜೋಗು ಸುಭಾಉ ಹಮಾರಾ । ಅನಭಲ ದೇಖಿ ನ ಜಾಇ ತುಮ್ಹಾರಾ ॥**
**ತಾತೇಂ ಕಛುಕ ಬಾತ ಅನುಸಾರೀ । ಛಮಿಅ ದೇಬಿ ಬಡಿ ಚೂಕ ಹಮಾರೀ ॥ ೪ ॥**

ಮಂಥರೆಯು ಹೇಳಿದಳು – ''ನನ್ನ ಎಲ್ಲ ಆಸೆಗಳು ಒಂದೇ ಸಾರಿಗೆ ಪೂರ್ತಿಯಾಗಿವೆ. ನಾನು ಹೇಳಬೇಕಾದ ಮಾತನ್ನು ಏನಾದರೂ ಉಳಿದಿದ್ದರೆ, ಅದನ್ನು ಮತ್ತೊಂದು ನಾಲಿಗೆಯನ್ನು ತಂದು ಹೇಳುತ್ತೇನೆ. ನನ್ನ ದುರ್ಭಾಗ್ಯವಾದ ತಲೆಯನ್ನು ಒಡೆದು ಹಾಕಬೇಕು. ನಾನು ನಿನಗೆ ಒಳ್ಳೆಯ ಮಾತುಗಳನ್ನು ಹೇಳಿದರೂ ಅವು ನಿನಗೆ ದುಃಖಕರವಾಗಿದೆ. ಅಮ್ಮಾ! ಸುಳ್ಳು-ಪಳ್ಳು, ಉಪ್ಪು-ಕಾರ ಬೆರೆಸಿ ಹೇಳುವ ಮಾತೇ ನಿನಗೆ ಇಷ್ಟವಾಗುತ್ತವೆ. ನನ್ನ ಮಾತು ಕಹಿಯಾಗಿ ಕಾಣುತ್ತದೆ. ಇಂದಿನಿಂದ ನಾನು ಕೂಡ ಮುಖನೋಡಿ ಮಣೆಹಾಕುವ ಮಾತನ್ನೇ ಆಡುತ್ತೇನೆ. ಇಲ್ಲದಿದ್ದರೆ ಮೌನವಾಗಿಯೇ ಇರುತ್ತೇನೆ. ಬ್ರಹ್ಮನು ನನ್ನನ್ನು ಕುರೂಪಿಯಾಗಿ ಸೃಷ್ಟಿಸಿ, ಪರಾಧೀನಳಾಗಿ ಮಾಡಿರುವನು. ಇದರಲ್ಲಿ ಬೇರೆಯವನ ಯಾವ ದೋಷವೂ ಇಲ್ಲ. 'ಬಿತ್ತಿ ಬೆಳೆದುದನ್ನು ಕೊಯ್ಯಲೇಬೇಕಲ್ಲವೇ? ಕೊಟ್ಟದ್ದನ್ನು ಪಡೆಯಲೇಬೇಕಲ್ಲವೇ? ಯಾರು ರಾಜರಾದರೇನು? ನಾನು ದಾಸಿಯಾಗಿರದೆ ರಾಣಿಯಾಗಬಲ್ಲೆನೇ? ಶ್ರೀರಾಮನು ಯುವರಾಜನಾದರೆ ನೀನು ಕೌಸಲ್ಯಾದೇವಿಗೆ ದಾಸಿಯೇ ಆಗುವೆ. ರಾಣಿಯಾಗಿ

ಉಳಿವೆಯಾ? ನನ್ನ ಸ್ವಭಾವವನ್ನು ಸುಡಬೇಕು. ಏಕೆಂದರೆ ನಿನ್ನ ಕೇಡು ನನ್ನಿಂದ ನೋಡಲಾಗುವುದಿಲ್ಲ. ಆದ್ದರಿಂದ ಏನೋ ಆಡಿದೆ. ಅವ್ವಾ! ತಪ್ಪಾಯಿತು. ನನ್ನನ್ನು ಕ್ಷಮಿಸು. (ಚೌ/೧-೪)

**ದೋ – ಗೂಢ ಕಪಟ ಪ್ರಿಯ ಬಚನ ಸುನಿ ತೀಯ ಅಧರಬುಧಿ ರಾನಿ ।**
**ಸುರಮಾಯಾ ಬಸ ಬೈರಿನಿಹಿ ಸುಹೃದ ಜಾನಿ ಪತಿಆನಿ ॥ ೧೬ ॥**

ಅಸ್ಥಿರಮತಿಯಾದ ಹೆಂಗಸು. ಅದರ ಮೇಲೆ ದೇವತೆಗಳ ಮಾಯೆ! ಆದ್ದರಿಂದ ಗೂಢವೂ, ಕಪಟವೂ ಆದ ಪ್ರಿಯವಚನಗಳನ್ನು ಕೇಳಿ, ರಾಣಿ ಕೈಕೇಯಿಯು ತನ್ನ ಹಗೆಯಾದ ಮಂಥರೆಯನ್ನು ಹಿತಚಿಂತಕಳೆಂದು ಬಗೆಯತೊಡಗಿದಳು. (ದೋ/೧೬)

**ಚೌ – ಸಾದರ ಪುನಿ ಪುನಿ ಪೂಂಛತಿ ಓಹೀ । ಸಬರೀ ಗಾನ ಮೃಗೀ ಜನು ಮೋಹೀ ॥**
**ತಸಿ ಮತಿ ಫಿರೀ ಅಹಇ ಜಸಿ ಭಾಬೀ । ರಹಸೀ ಚೇರಿ ಘಾತ ಜನು ಫಾಬೀ ॥ ೧ ॥**
**ತುಮ್ಹ ಪೂಂಛಹು ಮೈಂ ಕಹತ ಡೆರಾಊಂ । ಧರೆಹು ಮೋರ ಘರಫೋರೀ ನಾಊಂ ॥**
**ಸಜಿ ಪ್ರತೀತಿ ಬಹುಬಿಧಿ ಗಢಿ ಛೋಲೀ । ಅವಧ ಸಾಢಸಾತೀ ತಬ ಬೋಲೀ ॥ ೨ ॥**
**ಪ್ರಿಯ ಸಿಯ ರಾಮು ಕಹಾ ತುಮ್ಹ ರಾನೀ । ರಾಮಹಿ ತುಮ್ಹ ಪ್ರಿಯ ಸೊ ಫುರಿ ಬಾನೀ ॥**
**ರಹಾ ಪ್ರಥಮ ಅಬ ತೇ ದಿನ ಬೀತೇ । ಸಮಉ ಫಿರೇಂ ರಿಪು ಹೋಹಿಂ ಪಿರೀತೇ ॥ ೩ ॥**
**ಭಾನು ಕಮಲ ಕುಲ ಪೋಷನಿಹಾರಾ । ಬಿನು ಜಲ ಜಾರಿ ಕರಇ ಸೋಇ ಛಾರಾ ॥**
**ಜರಿ ತುಮ್ಹಾರಿ ಚಹ ಸವತಿ ಉಖಾರೀ । ರೂಂಧಹು ಕರಿ ಉಪಾಉ ಬರ ಬಾರೀ ॥ ೪ ॥**

ರಾಣಿಯು ಮತ್ತೆ-ಮತ್ತೆ ಆಕೆಯನ್ನು ಆದರದಿಂದ ಕೇಳುತ್ತಿದ್ದಾಳೆ. 'ಭಿಲ್ಲ ಸ್ತ್ರೀಯ ಗಾನಕ್ಕೆ ಜಿಂಕೆಯು ಮೋಹಗೊಳ್ಳುವಂತೆ, ಅವಳು ಮಂಥರೆಯ ಮಾತುಗಳಿಗೆ ಲುಬ್ಧಳಾದಳು. ಭವಿತವ್ಯವಿರುವಂತೆ ಬುದ್ಧಿಯೂ ಭ್ರಮಿತವಾಯಿತು. ತನ್ನ ದಾಳ ಉರುಳಿದುದನ್ನು ಕಂಡು ದಾಸಿಯು ಹಿಗ್ಗಿದಳು ಹಾಗೂ ಹೇಳಿದಳು – 'ನೀನು ಕೇಳುತ್ತಿರುವೆ, ಆದರೆ ಹೇಳಲು ನನಗೆ ಹೆದರಿಕೆಯಾಗುತ್ತಿದೆ. ಏಕೆಂದರೆ ನೀನು ಮೊದಲೇ ನನಗೆ ಮನೆಮುರುಕಿ ಎಂದು ಹೆಸರಿಟ್ಟಿರುವೆ.' ಈ ರೀತಿ ಅನೇಕ ರೀತಿಯಾಗಿ ಇಲ್ಲದ ಸಲ್ಲದುದನ್ನೆಲ್ಲ ಹೇಳಿ, ನಂಬಿಸಿ, ಆ ಆಯೋಧ್ಯೆಯ ಏಳರಾಟ ಶನಿಯಂತಿರುವ ಮಂಥರೆ ಹೇಳಿದಳು – 'ರಾಣೀ! ಸೀತಾರಾಮರು ನನಗೆ ಪ್ರಿಯರು ಎಂದು ನೀನು ಹೇಳಿದೆಯಲ್ಲ! ನಿನ್ನನ್ನು ನೋಡಿದರೆ ರಾಮನಿಗೂ ಇಷ್ಟವೆ, ಇದೆಲ್ಲ ಸತ್ಯವಾದುದೇ. ಆದರೆ ಈಗಲ್ಲ; ಹಿಂದೆ, ಒಂದು ಕಾಲದಲ್ಲಿ. ಆ ಕಾಲ ಈಗಿಲ್ಲ. ಕಾಲವು ಸರಿದರೆ ಮಿತ್ರರೂ ಶತ್ರುಗಳಾಗುತ್ತಾರೆ. * ನೀರಿನಲ್ಲಿರುವಾಗ ಕಮಲಗಳನ್ನು ಸೂರ್ಯನು ಪೋಷಿಸುತ್ತಾನೆ. ಆದರೆ ನೀರಿಲ್ಲದಿದ್ದರೆ ಅದೇ ಸೂರ್ಯನು ಆ ಕಮಲಕುಲವನ್ನು ಸುಟ್ಟು ಬೂದಿಮಾಡಿಬಿಡುತ್ತಾನೆ. ನಿನ್ನ ಸವತಿ ಕೌಸಲ್ಯೆಯು ನಿನ್ನ ಬೇರನ್ನೇ ಕಿತ್ತೊಗೆಯಲು ಬಯಸುತ್ತಿದ್ದಾಳೆ. ಆದ್ದರಿಂದ ಉಪಾಯದ ಬೇಲಿಹಾಕಿ ಅದನ್ನು ಗಟ್ಟಿಮಾಡು. (ಚೌ/೧-೪)

**ದೋ – ತುಮ್ಹಹಿ ನ ಸೋಚು ಸೊಹಾಗ ಬಲ ನಿಜ ಬಸ ಜಾನಹು ರಾಉ ।**
**ಮನ ಮಲೀನ ಮುಹ ಮೀಠ ನೃಪು ರಾಉರ ಸರಲ ಸುಭಾಉ ॥ ೧೭ ॥**

ನಿನಗಂತು ನೀನಾಯಿತು, ನಿನ್ನ ಸೌಭಾಗ್ಯವಾಯಿತು. ಬೇರೆ ಏನೂ ನಿನಗೆ ಹೊಳೆಯುವುದೇ ಇಲ್ಲ. ರಾಜನು ನೀನು ಕುಣಿಸಿದಂತೆ ಕುಣಿಯುತ್ತಿದ್ದಾನೆ ಎಂದುಕೊಂಡಿದ್ದೆ. ಆದರೆ ರಾಜನದು 'ಮನಸ್ಸು ಮಲಿನ, ಮಾತು ಮಧುರ.' ನಿನ್ನದೋ ನೇರಸ್ವಭಾವ, ಅಮಾಯಕ. (ದೋ/೧೭)

**ಚೌ – ಚತುರ ಗಂಭೀರ ರಾಮ ಮಹತಾರೀ । ಬೀಚು ಪಾಇ ನಿಜ ಬಾತ ಸಂವಾರೀ ॥**
**ಪಠಏ ಭರತು ಭೂಪ ನನಿಅಉರೇಂ । ರಾಮ ಮಾತು ಮತ ಜಾನಬ ರಉರೇಂ ॥ ೧ ॥**
**ಸೇವಹಿಂ ಸಕಲ ಸವತಿ ಮೊಹಿ ನೀಕೇಂ । ಗರಬಿತ ಭರತ ಮಾತು ಬಲ ಪೀ ಕೇಂ ॥**
**ಸಾಲು ತುಮ್ಹಾರ ಕೌಸಿಲಹಿ ಮಾಈ । ಕಪಟ ಚತುರ ನಹಿಂ ಹೋಇ ಜನಾಈ ॥ ೨ ॥**
**ರಾಜಹಿ ತುಮ್ಹ ಪರ ಪ್ರೇಮು ಬಿಸೇಷೀ । ಸವತಿ ಸುಭಾಉ ಸಕಇ ನಹಿಂ ದೇಖೀ ॥**
**ರಚಿ ಪ್ರಪಂಚು ಭೂಪಹಿ ಅಪನಾಈ । ರಾಮ ತಿಲಕ ಹಿತ ಲಗನ ಧರಾಈ ॥ ೩ ॥**

---

* ಶಕ್ತನಾದರೆ ನೆಂಟರೆಲ್ಲ ಹಿತರು। ಅಶಕ್ತನಾದರೆ ಆಪ್ತ ಜನರೆ ವೈರಿಗಳು ॥ ಪ ॥
ಕಮಲಾರ್ಕರಿಗೆ ನಿರುತ। ಕಡುನಂಟತನವೆಂದು। ಕಮಲ ಜಲದೊಳಗೆ ತಾ। ನಾಡುತಿರಲು।
ಕ್ರಮಗೆಟ್ಟು ನೀರಿಂದ। ತಡಿಗೆ ಬೀಳಲು ರವಿಯ। ಅಮಿತ ಕಿರಣಗಳಿಂದ। ಕಂದಿ ಹೋಗುವುದು ॥ ೧ ॥

**ಯಹ ಕುಲ ಉಚಿತ ರಾಮ ಕಹುँ ಟೀಕಾ । ಸಬಹಿ ಸೊಹಾಇ ಮೋಹಿ ಸುಠಿ ನೀಕಾ ॥**
**ಆಗಿಲಿ ಬಾತ ಸಮುಝಿ ಡರು ಮೋಹೀ । ದೇಉ ದೈಉ ಫಿರಿ ಸೋ ಫಲು ಓಹೀ ॥ ೪ ॥**

ರಾಮನ ತಾಯಿ ಕೌಸಲ್ಯೆಯ ಬುದ್ಧಿಯು ತುಂಬಾ ಚುರುಕು, ಗಂಭೀರವಾದುದು. ಅವಳ ಆಳ ಯಾರಿಗೂ ತಿಳಿಯದು. ಅವಳು ಸಮಯ ಸಾಧಿಸಿ ತನ್ನ ಕಾರ್ಯವನ್ನು ಸಾಧಿಸಿಕೊಂಡಿದ್ದಾಳೆ. ರಾಜನು ಭರತನನ್ನು ಮಾವನಮನೆಗೆ ಕಳಿಸಿದುದರಲ್ಲಿ ರಾಮನ ತಾಯಿಯ ಸಲಹೆ ಇಲ್ಲದಿಲ್ಲ. ಎಲ್ಲ ಸವತಿಯರು ನನಗೆ ಚೆನ್ನಾಗಿ ಸೇವೆ ಮಾಡುತ್ತಾರೆ, ಭರತನ ತಾಯಿ ಮಾತ್ರ ಗಂಡನ ಪ್ರೇಮದಿಂದ ಗರ್ವಿತಳಾಗಿದ್ದಾಳೆ' ಎಂದು ಕೌಸಲ್ಯೆಯು ಭಾವಿಸಿದ್ದಾಳೆ. ಆದ್ದರಿಂದ ಅಮ್ಮಾ! ಈಕೆಗೆ ಮಗ್ಗುಲು ಮುಳ್ಳಾಗಿದ್ದೀಯೆ. ಅವಳು ಕಪಟಪಟು. ಅವಳ ಒಳಗೇನಿದೆ ಎನ್ನುವುದು ಯಾರಿಗೂ ತಿಳಿಯದು. ಅರಸನಿಗೆ ನಿನ್ನ ಮೇಲೆ ವಿಶೇಷವಾದ ಪ್ರೇಮವಿದೆ. ಸವತಿಯಾದ್ದರಿಂದ ಕೌಸಲ್ಯೆಗೆ ಇದು ಅರ್ಥವಾಗುವುದಿಲ್ಲ. ಅದರಿಂದ ಆಕೆಯು ರಾಜನಿಗೆ ಮಂಕುಬೂದಿ ಎರಚಿ ಭರತನಿಲ್ಲದ ವೇಳೆಯಲ್ಲಿ ರಾಮನಿಗೆ ಅಭಿಷೇಕದ ವ್ಯವಸ್ಥೆ ಮಾಡಿದ್ದಾಳೆ. ರಾಮನಿಗೆ ಅಭಿಷೇಕವಾಗಬೇಕು. ಇದು ರಘುಕುಲಕ್ಕೆ ಉಚಿತವೂ, ಎಲ್ಲರಿಗೂ ಸಮಂಜಸವೂ ಆಗಿದೆ. ನನಗೂ ಕೂಡ ತುಂಬಾ ಇಷ್ಟವೇ. ಆದರೆ ಮುಂದಿನದನ್ನು ಯೋಚನೆ ಮಾಡಿದಾಗ ನನಗೆ ಮೈ ಜುಂ ಎನ್ನುತ್ತದೆ. ದೈವವು ಇದನ್ನು ತಲೆಕೆಳಗು ಮಾಡಲಿ. ಇದರ ಫಲವು ಅವಳೇ ಉಣ್ಣುವಂತಾಗಲಿ. (ಚೌ/೧-೪)

**ದೋ – ರಚಿ ಪಚಿ ಕೋಟಿಕ ಕುಟಿಲಪನ ಕೀನ್ಹೆಸಿ ಕಪಟ ಪ್ರಬೋಧು ।**
**ಕಹಿಸಿ ಕಥಾ ಸತ ಸವತಿ ಕೈ ಜೆಹಿ ಬಿಧಿ ಬಾಢ ಬಿರೋಧು ॥ ೧೮ ॥**

ಈ ವಿಧವಾಗಿ ಮಂಥರೆಯು ಹಲವಾರು ಕುಯುಕ್ತಿಗಳಿಂದ ಕೈಕೆಯಿಯ ಬುದ್ಧಿಯು ಕೆಡುವಂತೆ ಮಾಡಿದಳು. ನೂರಾರು ಸವತಿಯರ ಕಥೆಗಳನ್ನು ಹೇಳಿ, ಆಕೆಯಲ್ಲಿ ವೈರಾಗ್ನಿಯು ಬೆಳೆಯುವಂತೆ ಮಾಡಿದಳು. (ದೋ/೧೮)

**ಚೌ – ಭಾವೀ ಬಸ ಪ್ರತೀತಿ ಉರ ಆಈ । ಪೂँಛ ರಾನಿ ಪುನಿ ಸಪಥ ದೇವಾಈ ॥**
**ಕಾ ಪೂँಛಹು ತುಮ್ಹ ಅಬಹುँ ನ ಜಾನಾ । ನಿಜ ಹಿತ ಅನಹಿತ ಪಸು ಪಹಿಚಾನಾ ॥ ೧ ॥**
**ಭಯಉ ಪಾಖು ದಿನ ಸಜತ ಸಮಾಜೂ । ತುಮ್ಹ ಪಾಈ ಸುಧಿ ಮೋಹಿ ಸನ ಆಜೂ ॥**
**ಖಾಇಅ ಪಹಿರಿಅ ರಾಜ ತುಮ್ಹಾರೇं । ಸತ್ಯ ಕಹೇं ನಹಿ ದೋಷು ಹಮಾರೇं ॥ ೨ ॥**
**ಜೌं ಅಸತ್ಯ ಕಛು ಕಹಬ ಬನಾಈ । ತೌ ಬಿಧಿ ದೇಇಹಿ ಹಮಹಿ ಸಜಾಈ ॥**
**ರಾಮಹಿ ತಿಲಕ ಕಾಲಿ ಜೌं ಭಯಊ । ತುಮ್ಹ ಕಹುँ ಬಿಪತಿ ಬೀಜು ಬಿಧಿ ಬಯಊ ॥ ೩ ॥**
**ರೇಖ ಖँಚಾಇ ಕಹಉँ ಬಲು ಭಾಷೀ । ಭಾಮಿನಿ ಭಇಹು ದೂಧ ಕಇ ಮಾಖೀ ॥**
**ಜೌं ಸುತ ಸಹಿತ ಕರಹು ಸೇವಕಾಈ । ತೌ ಘರ ರಹಹು ನ ಆನ ಉಪಾಈ ॥ ೪ ॥**

ವಿಧಿವಿಲಾಸದಿಂದ ಕೈಕೆಯಿಗೆ ಮಂಥರೆಯ ಮೇಲೆ ಪೂರ್ಣವಿಶ್ವಾಸ ಉಂಟಾಯಿತು. ಆಕೆ ಆಣೆಯಿಟ್ಟು ಕೇಳತೊಡಗಿದಳು. ಆಗ ಮಂಥರೆಯು ಇಂತೆಂದಳು – 'ಇದರಲ್ಲಿ ತಿಳಿಯದಿರುವುದು ಏನಿದೆ? ಇಷ್ಟಾದರೂ ನಿನಗೆ ಅರ್ಥವಾಗದಿರುವುದು ಆಶ್ಚರ್ಯವೇ ಸರಿ! 'ತಮಗೆ ಒಳ್ಳೆಯದು ಯಾವುದು, ಕೆಟ್ಟದ್ದು ಯಾವುದು ಎಂಬುದು ಪಶು-ಪಕ್ಷಿಗಳಿಗೂ ತಿಳಿಯುತ್ತದೆ.' ಹದಿನೈದು ದಿನಗಳಿಂದ ಪಟ್ಟಾಭಿಷೇಕದ ಸಿದ್ಧತೆ ನಡೆಯುತ್ತದೆ. ನಿನಗೆ ಈ ಸಮಾಚಾರ ನನ್ನಿಂದ ಇಂದು ತಿಳಿದುದು ಆಶ್ಚರ್ಯವೇ! ನಾನು ನಿನ್ನ ಅನ್ನ ತಿನ್ನುತ್ತಿದ್ದೇನೆ. ಅದರಿಂದ ನಿಜವನ್ನೇ ಹೇಳುತ್ತಿದ್ದೇನೆ. ಅಲ್ಲಸಲ್ಲದ, ಸುಳ್ಳು-ಪಳ್ಳು ಮಾತಾಡಿದರೆ ದೇವರು ನನಗೆ ಶಿಕ್ಷೆ ವಿಧಿಸಲಿ. ನಾಳೆ ರಾಮನಿಗೆ ಪಟ್ಟಾಭಿಷೇಕವಾಯಿತಾದರೆ, ನಿನಗೆ ಬರುವ ಕಷ್ಟಪರಂಪರೆಗಳ ಬೀಜ ಬಿತ್ತಿದಂತೆ ಸರಿ. ಅಮ್ಮಾ! ನಾನು ನೂರಕ್ಕೆ ನೂರು ಪಾಲು ಆಣೆಯಿಟ್ಟು ಹೇಳುತ್ತೇನೆ. ಹಾಲಿಗೆ ಬಿದ್ದ ನೊಣವನ್ನು ಎತ್ತಿ ಎಸೆಯುವಂತೆ ನಿನ್ನನ್ನೂ ಮನೆಯಿಂದ ಎಲ್ಲರೂ ಹೊರಹಾಕುತ್ತಾರೆ. ನೀನು ಮಗನೊಡನೆ ಕೌಸಲ್ಯೆಯ ದಾಸಿಯಾಗಿ ಇರುವುದಾದರೆ ಈ ಮನೆಯಲ್ಲಿ ಇರಬಹುದು. ಬೇರೆ ಉಪಾಯವೇ ಇಲ್ಲ. (ಚೌ/೧-೪)

**ದೋ – ಕದ್ರೂँ ಬಿನತಹಿ ದೀನ್ಹ ದುಖು ತುಮ್ಹಹಿ ಕೌಸಿಲಾँ ದೇಬ ।**
**ಭರತು ಬಂದಿಗೃಹ ಸೇಇಹಹಿँ ಲಖನು ರಾಮ ಕೇ ನೇಬ ॥ ೧೯ ॥**

ಕಶ್ಯಪನ ಪತ್ನಿಯಾದ ಕದ್ರುವು ತನ್ನ ಸವತಿಯಾದ ವಿನತೆಯನ್ನು ಕಾಡಿದಂತೆ, ಕೌಸಲ್ಯೆಯು ನಿನ್ನನ್ನು ಕಾಡುವಳು. ಭರತನು ಸೆರೆಮನೆ ಸೇರುವನು. ಲಕ್ಷ್ಮಣನು ರಾಮನ ಬಲಭುಜನಂತಾಗುವನು. (ದೋ/೧೯)

**ಚೌ – ಕೈಕಯಸುತಾ ಸುನತ ಕಟು ಬಾನೀ । ಕಹಿ ನ ಸಕಇ ಕಛು ಸಹಮಿ ಸುಖಾನೀ ॥**
**ತನ ಪಸೇಉ ಕದಲೀ ಜಿಮಿ ಕಾँಪೀ । ಕುಬರೀ ದಸನ ಜೀಭ ತಬ ಚಾँಪೀ ॥ ೧ ॥**

**ಕಹಿ ಕಹಿ ಕೋಟಿಕ ಕಪಟ ಕಹಾನೀ। ಧೀರಜು ಧರಹು ಪ್ರಬೋಧಿಸಿ ರಾನೀ॥**
**ಫಿರಾ ಕರಮು ಪ್ರಿಯ ಲಾಗಿ ಕುಚಾಲೀ। ಬಕಿಹಿ ಸರಾಹಇ ಮಾನಿ ಮರಾಲೀ ॥ ೨ ॥**
**ಸುನು ಮಂಥರಾ ಬಾತ ಫುರಿ ತೋರೀ। ದಹಿನಿ ಆಖೀ ನಿತ ಫರಕಇ ಮೋರೀ ॥**
**ದಿನ ಪ್ರತಿ ದೇಖಉಁ ರಾತಿ ಕುಸಪನೇ। ಕಹಉಁ ನ ತೋಹಿ ಮೋಹ ಬಸ ಅಪನೇ॥ ೩ ॥**
**ಕಾಹ ಕರೌಁ ಸಖಿ ಸೂಧ ಸುಭಾಊ। ದಾಹಿನ ಬಾಮ ನ ಜಾನಉಁ ಕಾಊ ॥ ೪ ॥**

ಮಂಥರೆಯ ಕಟುವಾಣಿಯನ್ನು ಕೇಳಿ, ಕೈಕೆಯಿ ಹೆದರಿ ಹಿಂಜಿಹೋದಳು. ಅವಳ ಬಾಯಿಂದ ಮಾತೇ ಹೊರಡದು. ಶರೀರವು ಬೆವರಿನಿಂದ ಒದ್ದೆಯಾಯಿತು. ಗಾಳಿಗೆ ಸಿಲುಕಿದ ಬಾಳೆಗಿಡದಂತೆ ನಡುಗಿಹೋದಳು. ಆಗ ಗೂನಿ ಮಂಥರೆಗೆ ಒಂದು ಹೋಗಿ ಒಂದಾದೀತೋ (ಭವಿಷ್ಯದ ಕರಾಳ ಚಿತ್ರದಿಂದ ಕೈಕೆಯಿಯ ಹೃದಯಗತಿ ಎಲ್ಲಾದರು ನಿಂತುಹೋದೀತೋ) ಎಂದು ಭಯಪಟ್ಟಳು. ಬಳಿಕ ಅವಳು ಅನೇಕ ಕಪಟದ ಕಥೆಗಳನ್ನೂ ಹೇಳುತ್ತಾ ರಾಣಿಯಲ್ಲಿ ಧೈರ್ಯತುಂಬಿದಳು. ವಿಧಿಯ ವೈಪರೀತ್ಯಕ್ಕೆ ಕೈಕೆಯು ಮಾರುಹೋದಳು. ಅವಳಿಗೆ ಕುತಂತ್ರ ಪ್ರಿಯವಾಯಿತು. ಕೊಕ್ಕರೆಯಂತಹ ಮಂಥರೆಯನ್ನು ಹಂಸವೆಂದು ಬಗೆದು, ಅವಳನ್ನು ಹೊಗಳುತ್ತಾ ಕೈಕೆಯಿಯು ಇಂತೆಂದಳು – ''ಮಂಥರೆ! ನಿನ್ನ ಮಾತು ನಿಜ. ನನ್ನ ಬಲಗಣ್ಣು ನಿತ್ಯವೂ ಅದುರುತ್ತಾ ಇದೆ. ನಾನು ಪ್ರತಿರಾತ್ರಿಯೂ ಕೆಟ್ಟ ಕನಸುಗಳನ್ನೇ ನೋಡುತ್ತಿದ್ದೇನೆ. ಆದರೆ ನನ್ನ ತಿಳಿಗೇಡಿತನದಿಂದ ನಾನು ನಿನಗೆ ಹೇಳಲಿಲ್ಲ. ಸಖೀ! ನಾನೇನು ಮಾಡಲಿ! ನನ್ನ ಸ್ವಭಾವವೇ ನೇರವಾದುದು. ನನಗೆ ಎಡ-ಬಲ, ಮುಚ್ಚು-ಮರೆ ಒಂದೂ ತಿಳಿಯುತ್ತಿಲ್ಲ. (ಚೌ/೧-೪)

**ದೋ – ಅಪನೇ ಚಲತ ನ ಆಜು ಲಗಿ ಅನಭಲ ಕಾಹುಕ ಕೀನ್ಹ।**
**ಕೆಹಿ ಅಘ ಏಕಹಿ ಬಾರ ಮೋಹಿ ದೈಅಁ ದುಸಹ ದುಖು ದೀನ್ಹ॥ ೨೦ ॥**

ನಾನು ಇದುವರೆವಿಗೂ ಯಾರಿಗೂ ಬುದ್ಧಿಪೂರ್ವಕವಾಗಿ ಅಪಕಾರವನ್ನು ಮಾಡಲಿಲ್ಲ. ವಿಧಿಯು ಈ ದುಃಸ್ಥಿತಿಯನ್ನು ನನಗೆ ಏಕೆ ಒಟ್ಟಿಗೆ ಕೊಟ್ಟನೋ ತಿಳಿಯದು. (ದೋ/೨೦)

**ಚೌ – ನೈಹರ ಜನಮು ಭರಬ ಬರು ಜಾಈ। ಜಿಅತ ನ ಕರಬಿ ಸವತಿ ಸೇವಕಾಈ ॥**
**ಅರಿ ಬಸ ದೈಉ ಜಿಆವತ ಜಾಹೀ। ಮರನು ನೀಕ ತೆಹಿ ಜೀವನ ಚಾಹೀ॥ ೧ ॥**
**ದೀನ ಬಚನ ಕಹ ಬಹುಬಿಧಿ ರಾನೀ। ಸುನಿ ಕುಬರೀಁ ತಿಯಮಾಯಾ ಠಾನೀ ॥**
**ಅಸ ಕಸ ಕಹಹು ಮಾನಿ ಮನ ಊನಾ। ಸುಖು ಸೋಹಾಗು ತುಮ್ಹ ಕಹುಁ ದಿನ ದೂನಾ॥ ೨ ॥**
**ಜೆಹಿ ರಾಉರ ಅತಿ ಅನಭಲ ತಾಕಾ। ಸೋಇ ಪಾಇಹಿ ಯಹು ಫಲು ಪರಿಪಾಕಾ ॥**
**ಜಬ ತೇಁ ಕುಮತ ಸುನಾ ಮೈಁ ಸ್ವಾಮಿನಿ। ಭೂಖ ನ ಬಾಸರ ನೀದ ನ ಜಾಮಿನಿ॥ ೩ ॥**
**ಪೂಁಛೆಉಁ ಗುನಿನ್ಹ ರೇಖ ತಿನ್ಹ ಖಾಁಚೀ। ಭರತ ಭುಆಲ ಹೋಹಿಁ ಯಹ ಸಾಁಚೀ॥**
**ಭಾಮಿನಿ ಕರಹು ತ ಕಹೌಁ ಉಪಾಊ। ಹೈ ತುಮ್ಹರೀಁ ಸೇವಾ ಬಸ ರಾಊ ॥ ೪ ॥**

ನಾನು ಬೇಕಾದರೆ ತವರುಮನೆಗಾದರೂ ಹೋಗಿ ಇರಬಲ್ಲೆ; ಆದರೆ ಬದುಕಿರುವಾಗ ಸವತಿಯ ಸೇವೆಮಾತ್ರ ಮಾಡಲಾರೆನು. ವಿಧಿಯು ಶತ್ರುವಿನ ದಾಸಿಯಾಗಿಸುವವಳಿಗೆ ಬದುಕುವುದಕ್ಕಿಂತ ಸಾವೇ ಮೇಲು. ರಾಣಿಯು ಈ ವಿಧವಾಗಿ ಅನೇಕ ಮರುಕದ ಮಾತುಗಳನ್ನಾಡಿದಳು. ಅದನ್ನು ಕೇಳಿ ಕುಬ್ಜೆ ತನ್ನ ಕುತಂತ್ರವನ್ನು ಹೀಗೆ ಹೊರಗೆಡಹಿದಳು – ''ಅಮ್ಮಾ! ನೀನು ಮನಸ್ಸಿನಲ್ಲಿ ಬೇಸರವನ್ನು ತಂದುಕೊಂಡು ಏಕೆ ಇಷ್ಟು ಧೈರ್ಯಗೆಡುತ್ತಿರುವೆ? ನಿನ್ನ ಸುಖ-ಸೌಭಾಗ್ಯಗಳು ಇನ್ನು ಇಮ್ಮಡಿಯಾಗುವುವು. ನಿನಗೆ ಕೇಡನ್ನು ಬಗೆದವಳೇ ಕೊನೆಗೆ ಅದರ ಫಲವನ್ನು ಉಣ್ಣುತ್ತಾಳೆ. ಒಡತಿಯೇ! ಈ ಮಾತು ಕೇಳಿದಾಗಿನಿಂದ ನನಗಂತೂ ಹಗಲು ಹಸಿವಾಗಲೊಲ್ಲದು, ಇರುಳು ನಿದ್ದೆ ಬರಲೊಲ್ಲದು. ನಾನು ಜೋಯಿಸರನ್ನು ಕೇಳಿದಾಗ ಅವರು ಲೆಕ್ಕಾಚಾರಹಾಕಿ – ''ಭರತನೇ ರಾಜನಾಗುವುದು ಸತ್ಯ'' ಎಂದು ದೃಢವಾಗಿ ಹೇಳಿರುವರು. ಭಾಮಿನೀ! ನೀನು ಮಾಡುವುದಾದರೆ ನಾನು ಉಪಾಯವನ್ನು ಹೇಳುವೆನು. ಅರಸನಂತೂ ನಿನ್ನ ಕೈವಶದಲ್ಲೇ ಇರುವನಲ್ಲ! (ಚೌ/೧-೪)

**ದೋ – ಪರಉಁ ಕೂಪ ತುಅ ಬಚನ ಪರ ಸಕಉಁ ಪೂತ ಪತಿ ತ್ಯಾಗಿ।**
**ಕಹಸಿ ಮೋರ ದುಖು ದೇಖಿ ಬಡ ಕಸ ನ ಕರಬ ಹಿತ ಲಾಗಿ॥ ೨೧ ॥**

ಆಗ ಕೈಕೆಯು ಹೇಳಿದಳು – ''ನೀನು ಹೇಳಿದರೆ ನಾನು ಬಾವಿಗೆ ಬೀಳಲೂ ಸಿದ್ಧಳಿದ್ದೇನೆ. ಅಗತ್ಯಬಿದ್ದರೆ ಪತಿಯನ್ನೂ, ಪುತ್ರನನ್ನೂ ತೊರೆಯಬಲ್ಲೆ. ನೀನು ನನ್ನ ಒಳಿತಿಗಾಗಿ ಒಂದು ಮಾತು ಹೇಳಿದರೆ ನಾನೇಕೆ ಅದನ್ನು ಮಾಡದಿರಲಿ? (ದೋ/೨೧)

ಚೌ – ಕುಬರೀಂ ಕರಿ ಕಬುಲೀ ಕೈಕೇಈ । ಕಪಟ ಛುರೀ ಉರ ಪಾಹನ ಟೇಈ ॥
ಲಖಇ ನ ರಾನಿ ನಿಕಟ ದುಖು ಕೈಸೇ । ಚರಇ ಹರಿತ ತಿನ ಬಲಿಪಸು ಜೈಸೇಂ ॥ ೧ ॥
ಸುನತ ಬಾತ ಮೃದು ಅಂತ ಕಠೋರೀ । ದೇತಿ ಮನಹುँ ಮಧು ಮಾಹುರ ಘೋರೀ ॥
ಕಹಇ ಚೇರಿ ಸುಧಿ ಅಹಇ ಕಿ ನಾಹೀ । ಸ್ವಾಮಿನಿ ಕಹಿಹು ಕಥಾ ಮೊಹಿ ಪಾಹೀಂ ॥ ೨ ॥
ದುಇ ಬರದಾನ ಭೂಪ ಸನ ಥಾತೀ । ಮಾಗಹು ಆಜು ಜುಡಾವಹು ಛಾತೀ ॥
ಸುತಹಿ ರಾಜು ರಾಮಹಿ ಬನಬಾಸೂ । ದೇಹು ಲೇಹು ಸಬ ಸವತಿ ಹುಲಾಸೂ ॥ ೩ ॥
ಭೂಪತಿ ರಾಮ ಸಪಥ ಜಬ ಕರಈ । ತಬ ಮಾಗೇಹು ಜೆಹಿ ಬಚನು ನ ಟರಈ ॥
ಹೋಇ ಅಕಾಜು ಆಜು ನಿಸಿ ಬೀತೇಂ । ಬಚನು ಮೋರ ಪ್ರಿಯ ಮಾನೇಹು ಜೀ ತೇಂ ॥ ೪ ॥

ಹೀಗೆ ಆ ಗೂನಿ ಮಂಥರೆಯು ಕೈಕೆಯಿಯನ್ನು ವಶಪಡಿಸಿಕೊಂಡು, ಅಂದರೆ ಅವಳನ್ನು ಬಲಿಪಶುವನ್ನಾಗಿ ಮಾಡಿಕೊಂಡು, ಕಪಟವೆಂಬ ತನ್ನ ಕತ್ತಿಯನ್ನು ಕಠೋರವಾದ ತನ್ನ ಹೃದಯದಮೇಲೆ ಮಸೆದು ಹರಿತಗೊಳಿಸಿದಳು. ಬಲಿಪಶುವು ಮುಂದೆ ಬರುವ ವಿಪತ್ತನ್ನು (ಸಾವನ್ನು) ಎಣಿಸದೆ ಹುಲ್ಲುಮೇಯುವಂತೆ, ಕೈಕೆಯಿಯು ತನಗೆ ಮುಂದೆ ಪ್ರಾಪ್ತವಾಗುವ ಕಳಂಕವನ್ನು, ವೈಧವ್ಯವನ್ನು ಗಮನಿಸದೆ ಆ ಗೂನಿದಾಸಿಯ ಮಾತಿಗೆ ಕಿವಿಗೊಟ್ಟಳು. ಅವಳ ಮಾತು ಕೇಳಲೂ ಮೃದು ಮಧುರವಾಗಿದ್ದರೂ, ಅದರ ಪರಿಣಾಮ ಕಹಿ-ಕಠೋರ. 'ನಂಜು ಬೆರೆತ ಜೇನಿನಂತೆ.' ಆ ದಾಸಿಯು ಇಂತೆಂದಳು – ''ಅಮ್ಮಾ! ನಾನು ಹಿಂದೆ ನಿಮಗೊಂದು ಕಥೆ ಹೇಳಿದ್ದೆ, ಅದು ಜ್ಞಾಪಕವಿದೆಯಲ್ಲ! ಒಮ್ಮೆ ಮಹಾರಾಜರು ನಿನಗೆ ಎರಡು ವರವನ್ನು ಕೊಡಲು ಮಾತುಕೊಟ್ಟಿದ್ದರಲ್ಲ. ಆ ಎರಡೂ ವರಗಳು ನಿನ್ನ ಬಳಿಯಲ್ಲಿ ಒತ್ತೆಯಾಗಿವೆ. ಅದನ್ನು ಇಂದು ಕೇಳಿಕೊಂಡು ಮನಸ್ಸನ್ನು ತಂಪುಮಾಡಿಕೋ. ಆ ಎರಡು ವರಗಳಿಂದ ಭರತನಿಗೆ ರಾಜ್ಯವನ್ನೂ, ರಾಮನಿಗೆ ವನವಾಸವನ್ನೂ ಬೇಡಿಕೋ. ನಿನ್ನ ಸವತಿಯರ ಎಲ್ಲ ಸುಖವನ್ನು ದೋಚಿಕೋ. ಅರಸನು ರಾಮನಮೇಲೆ ಆಣೆಯಿಟ್ಟ ಬಳಿಕವೇ ವರಗಳನ್ನು ಕೇಳಿಕೋ. ಇಲ್ಲದಿದ್ದರೆ ಮಹಾರಾಜರು ತನ್ನ ಮಾತಿಗೆ ತಪ್ಪುವರು. ಇಂದಿನ ಇರುಳು ಕಳೆದುಹೋದರೆ ನಿನ್ನ ಕೆಲಸ ಕೆಟ್ಟಂತೆಯೇ. ನನ್ನ ಮಾತುಗಳು ನಿನಗೆ ಪ್ರಾಣಕ್ಕಿಂತಲೂ ಮಿಗಿಲು ಎಂದು ಭಾವಿಸಿಕೋ. (ಚೌ/೧-೪)

ದೋ – ಬಡ ಕುಘಾತು ಕರಿ ಪಾತಕಿನಿ ಕಹೆಸಿ ಕೋಪಗೃಹँ ಜಾಹು ।
ಕಾಜು ಸँವಾರೆಹು ಸಜಗ ಸಬು ಸಹಸಾ ಜನಿ ಪತಿಆಹು ॥ ೨೨ ॥

ಈ ವಿಧವಾಗಿ ಪಾಪಿಯಾದ ಆ ಗೂನಿ ಮಂಥರೆಯು ಮರ್ಮಾಘಾತವಾದ ಮಾತುಗಳನ್ನಾಡಿ ಹೇಳಿದಳು – ''ಈಗ ನೀನು ಕೋಪಭವನವನ್ನು ಸೇರು. ಎಲ್ಲ ಕೆಲಸಗಳನ್ನು ಎಚ್ಚರಿಕೆಯಿಂದ ಮಾಡಬೇಕು. ಸುಲಭವಾಗಿ ಅರಸನ ಮಾತಿಗೆ ಒಳಗಾಗಬೇಡ. (ದೋ/೨೨)

## ಕೈಕೆಯಿಯು ಕೋಪಗೃಹವನ್ನು ಸಾರ್ದು ಎರಡು ವರಗಳನ್ನು ಕೇಳಿದುದು

ಚೌ – ಕುಬರಿಹಿ ರಾನೀ ಪ್ರಾನಪ್ರಿಯ ಜಾನೀ । ಬಾರ ಬಾರ ಬಡಿ ಬುದ್ಧಿ ಬಖಾನೀ ॥
ತೊಹಿ ಸಮ ಹಿತ ನ ಮೋರ ಸಂಸಾರಾ । ಬಹೇ ಜಾತ ಕಇ ಭಇಸಿ ಅಧಾರಾ ॥ ೧ ॥
ಜೌಂ ಬಿಧಿ ಪುರಬ ಮನೋರಥು ಕಾಲೀ । ಕರೌಂ ತೋಹಿ ಚಖ ಪೂತರಿ ಆಲೀ ॥
ಬಹುಬಿಧಿ ಚೇರಿಹಿ ಆದರು ದೇಈ । ಕೋಪಭವನ ಗವನೀ ಕೈಕೇಈ ॥ ೨ ॥
ಬಿಪತಿ ಬೀಜು ಬರಷಾ ರಿತು ಚೇರೀ । ಭುಇँ ಭಇ ಕುಮತಿ ಕೈಕಈ ಕೇರೀ ॥
ಪಾಇ ಕಪಟ ಜಲು ಅಂಕುರ ಜಾಮಾ । ಬರ ದೊಉ ದಲ ದುಖ ಫಲ ಪರಿನಾಮಾ ॥ ೩ ॥
ಕೋಪ ಸಮಾಜು ಸಾಜಿ ಸಬು ಸೋಈ । ರಾಜು ಕರತ ನಿಜ ಕುಮತಿ ಬಿಗೋಈ ॥
ರಾಉರ ನಗರ ಕೊಲಾಹಲು ಹೋಈ । ಯಹ ಕುಚಾಲಿ ಕಛು ಜಾನ ನ ಕೋಈ ॥ ೪ ॥

ಕೈಕೆಯಿಯು ಗೂನಿಯನ್ನು ತನ್ನ ಪ್ರಾಣಪ್ರಿಯಳೆಂದು ಭಾವಿಸಿ, ಪದೇ-ಪದೇ ಅವಳನ್ನು ಹೊಗಳಿ, ಕೊಂಡಾಡಿ, ಇಂತೆಂದಳು – ''ಈ ಪ್ರಪಂಚದಲ್ಲಿ ನಿನಗಿಂತಲೂ ಮಿಗಿಲಾಗಿ ನನ್ನ ಹಿತವನ್ನು ಬಯಸುವವರು ಯಾರಿದ್ದಾರೆ? ಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗುವವರಿಗೆ ಸಿಗುವ ಆಸರೆಯಂತೆ ನೀನು ನನಗೆ ದೊರೆತಿರುವೆ. ವಿಧಾತನು ನಾಳೆ ನನ್ನ ಅಭಿಲಾಷೆಯನ್ನು ಪೂರ್ತಿಗೊಳಿಸಿದರೆ, ನಾನು ನಿನ್ನನ್ನು ಕಣ್ಮಣಿಯಂತೆ ನೋಡಿಕೊಳ್ಳುತ್ತೇನೆ.'' ಹೀಗೆ ತನ್ನ ದಾಸಿಯನ್ನು ಅನೇಕವಿಧದಿಂದ ಕೊಂಡಾಡಿ, ಕೈಕೆಯಿ ಕೋಪಭವನವನ್ನು ಸೇರಿದಳು.

ಮಂಥರೆಯೇ ವರ್ಷಾಋತುವು. ಆಪತ್ತುಗಳೇ ಬೀಜ. ಕೈಕೆಯಿಯ ಕುಬುದ್ಧಿಯು ಬೀಜಾರೋಪಣೆಗೆ ಹೊಲವಾದಳು. ಅದರಲ್ಲಿ ಕಪಟದ ಜಲಬಿದ್ದದ್ದೇ ತಡ, ಅದು ಮೊಳೆಯಿತು. ಎರಡು ವರದಾನಗಳೆಂಬ ಚಿಗುರು ಎಲೆಗಳಾದುವು. ಕೊನೆಗೆ ಇದರ ಪರಿಣಾಮ ಫಲವು ದುಃಖವೇ. ಕೋಪವನ್ನು ಸೂಚಿಸುವಂತಹ ವೇಷವನ್ನಾಂತು ಕೈಕೆಯಿಯು ಕೋಪಭವನದಲ್ಲಿ ನೆಲದಮೇಲೆ ಮಲಗಿದಳು. ರಾಜ್ಯವಾಳುವ ಆಕೆಯು ತನ್ನ ದುರ್ಬುದ್ಧಿಯಿಂದಲೇ ಹಾಳಾಗಿಹೋದಳು. ಅರಮನೆ ಮತ್ತು ನಗರದಲ್ಲಿ ಆನಂದೋತ್ಸವವು ತುಂಬಿಹೋಗಿತ್ತು. ಆದರೆ ಈ ಕುತಂತ್ರ ಯಾರಿಗೂ ತಿಳಿಯಲೇ ಇಲ್ಲ. (ಚೌ/೧-೪)

**ದೋ – ಪ್ರಮುದಿತ ಪುರ ನರ ನಾರಿ ಸಬ ಸಜಹಿಂ ಸುಮಂಗಲಚಾರ ।**
**ಏಕ ಪ್ರಬಿಸಹಿಂ ಏಕ ನಿರ್ಗಮಹಿಂ ಭೀರ ಭೂಪ ದರಬಾರ ॥ ೨೩ ॥**

ನಗರವಾಸಿಗಳಾದ ಸ್ತ್ರೀ-ಪುರುಷರೆಲ್ಲರೂ ಅತ್ಯುತ್ಸಾಹದಿಂದ ಪಟ್ಟಾಭಿಷೇಕದ ಸಿದ್ಧತೆಯಲ್ಲಿ ಮುಳುಗಿಹೋಗಿದ್ದಾರೆ. ರಾಜಭವನದ ಮಹಾದ್ವಾರದಲ್ಲಿ ಗದ್ದಲವೋ ಗದ್ದಲ. ಕೆಲವರು ಒಳಗೆ ಹೋಗುತ್ತಿದ್ದಾರೆ. ಕೆಲವರು ಹೊರಗೆ ಬರುತ್ತಿದ್ದಾರೆ. (ದೋ/೨೩)

**ಚೌ – ಬಾಲ ಸಖಾ ಸುನಿ ಹಿಯಂ ಹರಷಾಹೀಂ । ಮಿಲಿ ದಸ ಪಾಂಚ ರಾಮ ಪಹಿಂ ಜಾಹೀಂ ॥**
**ಪ್ರಭು ಆದರಹಿಂ ಪ್ರೇಮು ಪಹಿಚಾನೀ । ಪೂಂಛಹಿಂ ಕುಸಲ ಖೇಮ ಮೃದು ಬಾನೀ ॥ ೧ ॥**
**ಫಿರಹಿಂ ಭವನ ಪ್ರಿಯ ಆಯಸು ಪಾಈ । ಕರತ ಪರಸಪರ ರಾಮ ಬಡಾಈ ॥**
**ಕೋ ರಘುಬೀರ ಸರಿಸ ಸಂಸಾರಾ । ಸೀಲು ಸನೇಹು ನಿಬಾಹನಿಹಾರಾ ॥ ೨ ॥**
**ಜೇಹಿಂ ಜೇಹಿಂ ಜೋನಿ ಕರಮ ಬಸ ಭ್ರಮಹೀಂ । ತಹಂ ತಹಂ ಈಸು ದೇಉ ಯಹ ಹಮಹೀಂ ॥**
**ಸೇವಕ ಹಮ ಸ್ವಾಮೀ ಸಿಯನಾಹೂ । ಹೋಉ ನಾತ ಯಹ ಓರ ನಿಬಾಹೂ ॥ ೩ ॥**
**ಅಸ ಅಭಿಲಾಷು ನಗರ ಸಬ ಕಾಹೂ । ಕೈಕಯಸುತಾ ಹೃದಯಂ ಅತಿ ದಾಹೂ ॥**
**ಕೋ ನ ಕುಸಂಗತಿ ಪಾಇ ನಸಾಈ । ರಹಇ ನ ನೀಚ ಮತೇಂ ಚತುರಾಈ ॥ ೪ ॥**

ಶ್ರೀರಾಮನ ಬಾಲ್ಯಸ್ನೇಹಿತರಂತೂ ರಾಮನ ಪಟ್ಟಾಭಿಷೇಕದ ಸುದ್ದಿಯನ್ನು ಕೇಳಿ ಹಿಗ್ಗಿಹೋದರು. ಅವರು ಐದಾರು ಮಂದಿ ಒಟ್ಟಿಗೆ ಸೇರಿ ಶ್ರೀರಾಮನ ಬಳಿಗೆ ಬಂದರು. ಅವರ ಪ್ರೇಮವನ್ನು ಗುರುತಿಸಿ ಶ್ರೀರಾಮನು ಅವರನ್ನು ಆದರಿಸಿ, ಇನಿವಾತುಗಳಿಂದ ಯೋಗಕ್ಷೇಮವನ್ನು ವಿಚಾರಿಸಿದನು. ತಮ್ಮ ಪ್ರಿಯಸಖನಾದ ಶ್ರೀರಾಮನ ಆಜ್ಞೆಯನ್ನು ಪಡೆದು ಮನೆಗೆ ಹೊರಡುವಾಗ ಅವರು ತಮ್ಮ-ತಮ್ಮಲ್ಲೇ ರಾಮಚಂದ್ರನ ಗುಣಗಾನ ಮಾಡುತ್ತಾ – ''ಶ್ರೀರಾಮನಂತಹ ಸ್ನೇಹಶೀಲರು ಈ ಜಗತ್ತಿನಲ್ಲಿ ಯಾರಿದ್ದಾರೆ? ನಾವು ನಮ್ಮ ಕರ್ಮವಶದಿಂದ ಎಲ್ಲೇ, ಯಾವುದೇ ಯೋನಿಯಲ್ಲಿ ಹುಟ್ಟಿದರೂ, ಆಯಾಯಾ ಯೋನಿಗಳಲ್ಲಿ 'ಶ್ರೀಸೀತಾಪತಿರಾಮನೇ ನಮಗೆ ಪ್ರಭುವು. ನಾವು ಅವನಿಗೆ ದಾಸರು' ಆಗುವಂತೆ ಭಗವಂತನು ಅನುಗ್ರಹಿಸಲಿ'' ಎಂದು ಮಾತಾಡಿಕೊಂಡರು. ನಗರದಲ್ಲಿರುವವರೆಲ್ಲರ ಅಭಿಲಾಷೆಯು ಇದೇಯೆ. ಆದರೆ ಕೈಕೇಯಿಯ ಹೃದಯಮಾತ್ರ ಈರ್ಷ್ಯಾಗ್ನಿಯಿಂದ ಸುಡುತ್ತಿದೆ. ದುರ್ಜನರ ಸಹವಾಸದಿಂದ ಯಾರು ತಾನೇ ಕೆಡದೆ ಇರುತ್ತಾರೆ? ನೀಚರ ಸಹವಾಸದಿಂದ ವಿವೇಕವು ನಶಿಸುತ್ತದೆ. (ಚೌ/೧-೪)

**ದೋ – ಸಾಂಝು ಸಮಯ ಸಾನಂದ ನೃಪು ಗಯಉ ಕೈಕಇ ಗೇಹಂ ।**
**ಗವನು ನಿಠುರತಾ ನಿಕಟ ಕಿಯ ಜನು ಧರಿ ದೇಹ ಸನೇಹಂ ॥ ೨೪ ॥**

ಸಂಧ್ಯಾಕಾಲದಲ್ಲಿ ದಶರಥಮಹಾರಾಜರು ಸಾಕ್ಷಾತ್ ಸ್ನೇಹವೇ ಶರೀರಧಾರಣೆಮಾಡಿ, ನಿಷ್ಠುರತೆಯ ಬಳಿಗೆ ಹೋದಂತೆ ಆನಂದದಿಂದ ಕೈಕೆಯಿಯ ಅಂತಃಪುರಕ್ಕೆ ಹೋದರು. (ದೋ/೨೪)

**ಚೌ – ಕೋಪಭವನ ಸುನಿ ಸಕುಚೆಉ ರಾಊ । ಭಯ ಬಸ ಅಗಹುಡ ಪರಇ ನ ಪಾಊ ॥**
**ಸುರಪತಿ ಬಸಇ ಬಾಹಂಬಲ ಜಾಕೇಂ । ನರಪತಿ ಸಕಲ ರಹಹಿಂ ರುಖ ತಾಕೇಂ ॥ ೧ ॥**
**ಸೋ ಸುನಿ ತಿಯ ರಿಸ ಗಯಉ ಸುಖಾಈ । ದೇಖಹು ಕಾಮ ಪ್ರತಾಪ ಬಡಾಈ ॥**
**ಸೂಲ ಕುಲಿಸ ಅಸಿ ಅಂಗವನಿಹಾರೇ । ತೇ ರತಿನಾಥ ಸುಮನ ಸರ ಮಾರೇ ॥ ೨ ॥**
**ಸಭಯ ನರೇಸು ಪ್ರಿಯಾ ಪಹಿಂ ಗಯಊ । ದೇಖಿ ದಸಾ ದುಖು ದಾರುನ ಭಯಊ ॥**
**ಭೂಮಿ ಸಯನ ಪಟು ಮೋಟ ಪುರಾನಾ । ದಿಏ ಡಾರಿ ತನ ಭೂಷನ ನಾನಾ ॥ ೩ ॥**

**ಕುಮತಿಹಿ ಕಸಿ ಕುಬೇಷತಾ ಫಾಬೀ । ಅನ ಅಹಿವಾತು ಸೂಚ ಜನು ಭಾಬೀ ॥**

**ಜಾಇ ನಿಕಟ ನೃಪು ಕಹ ಮೃದು ಬಾನೀ । ಪ್ರಾನಪ್ರಿಯಾ ಕೆಹಿ ಹೇತು ರಿಸಾನೀ ॥ ೪ ॥**

ಕೈಕೆಯಿ ಕೋಪಭವನದಲ್ಲಿದ್ದಾಳೆ ಎಂದು ಕೇಳಿ, ದಶರಥನ ಎದೆ ಝಲ್ಲೆಂದಿತು. ಭಯದಿಂದ ಅವನ ಹೆಜ್ಜೆ ಮುಂದಕ್ಕೆ ಸಾಗದಾಯಿತು. ಇಂದ್ರನು ಯಾರ ಭುಜಬಲದ ಆಧಾರದಿಂದ ರಾಕ್ಷಸರಿಂದ ನಿರ್ಭಯನಾಗಿರುವನೋ, ಸಂಪೂರ್ಣ ರಾಜಸಮೂಹವು ಯಾರ ಮುಖದರ್ಶನಕ್ಕಾಗಿ ಕಾಯುತ್ತಿರುತ್ತದೋ, ಅಂತಹ ದಶರಥಮಹಾರಾಜನು ಹೆಂಡತಿಯ ಕೋಪವನ್ನು ಕೇಳಿ, ಒಣಗಿಹೋದನು. ತ್ರಿಶೂಲ, ವಜ್ರಾಯುಧ, ಖಡ್ಗ ಮೊದಲಾದವುಗಳ ಹೊಡತವನ್ನು ಸಹಿಸಬಲ್ಲವರೂ ಕೂಡ, ರತಿನಾಥ ಮನ್ಮಥನ ಹೂಬಾಣಕ್ಕೆ ಬಲಿಯಾದರು. ಕಾಮದೇವನ ಪ್ರತಾಪ, ಮಹಿಮೆಯನ್ನು ಹೇಳತೀರದು. ಅರಸನು ಅಂಜುತ್ತಾ-ಅಂಜುತ್ತಾ ತನ್ನ ಮುದ್ದಿನ ಮಡದಿಯಾದ ಕೈಕೆಯಿಯ ಬಳಿಗೆ ಹೋದನು. ಆಕೆಯ ಸ್ಥಿತಿಯನ್ನು ನೋಡಿ, ಅವನ ಕರುಳು ಹಿಂಡಿದಂತಾಯಿತು. ಆಗ ಕೈಕೆಯಿಯು ನೆಲದ ಮೇಲೆ ಬಿದ್ದಿದ್ದಳು. ಹಳೆಯ ಒರಟು ಬಟ್ಟೆಯನ್ನು ತೊಟ್ಟಿದ್ದಳು. ಮೈಮೇಲಿನ ಎಲ್ಲ ಒಡವೆಗಳನ್ನು ಕಳಚಿ ಬಿಸಾಡಿದ್ದಳು. ಆ ದುರ್ಬುದ್ಧಿ ಕೈಕೆಯಿಯ ಆ ಅನಿಷ್ಟವೇಷವು ಮುಂದೆ ಬರಲಿರುವ ವೈಧವ್ಯದ ಸೂಚನೆ ಕೊಡುತ್ತಿರುವಂತೆ ಕಂಡಿತು. ಅರಸನು ಅವಳ ಬಳಿಗೆ ಹೋಗಿ, ಮೃದು-ಮಧುರವಾಗಿ– 'ಎಲೈ ಪ್ರಾಣಪ್ರಿಯೆ! ಏಕೆ ಸಿಟ್ಟಾಗಿರುವೆ?' ಎಂದು ಕೇಳಿದನು. (ಚೌ/೧-೪)

**ಛಂ – ಕೆಹಿ ಹೇತು ರಾನಿ ರಿಸಾನಿ ಪರಸತ ಪಾನಿ ಪತಿಹಿ ನೇವಾರಈ ।**

**ಮಾನಹುँ ಸರೋಷ ಭುಅಂಗ ಭಾಮಿನಿ ಬಿಷಮ ಭಾಂತಿ ನಿಹಾರಈ ॥**

**ದೋಉ ಬಾಸನಾ ರಸನಾ ದಸನ ಬರ ಮರಮ ಠಾಹರು ದೇಖಈ ।**

**ತುಲಸೀ ನೃಪತಿ ಭವತಬ್ಯತಾ ಬಸ ಕಾಮ ಕೌತುಕ ಲೇಖಈ ॥**

ರಾಣೀ! ಏಕೆ ಕೋಪಗೊಂಡಿರುವೆ? ಎಂದು ಹೇಳುತ್ತಾ ರಾಜನು ಅವಳ ಕೈಹಿಡಿಯಲು ಹೋದ. ಆಗ ಅವಳು ಅವನ ಕೈಕೊಡವಿ, ಕೋಪದಿಂದ ಕೆರಳಿದ ಹಾವು ಬುಸುಗುಟ್ಟುವಂತೆ ದುರುಗುಟ್ಟಿ ನೋಡತೊಡಗಿದಳು. ಅವಳ ಎರಡು ಕೋರಿಕೆಗಳೇ ಎರಡು ನಾಲಿಗೆಗಳು. ಎರಡು ವರಗಳೇ ಹಲ್ಲುಗಳು. ಅದು ಕಡಿಯಲು ಮರ್ಮಸ್ಥಾನವನ್ನು ಹುಡುಕುವಂತಿದೆ. ತುಳಸೀದಾಸರು ಹೇಳುತ್ತಾರೆ – ದಶರಥ ಮಹಾರಾಜರು ಭವಿತವ್ಯಕ್ಕೆ ವಶನಾಗಿ ಕೈಕೆಯಿಯ ಈ ಚರ್ಯೆಗಳನ್ನು ಪ್ರೇಮಪೂರ್ವಕ ಸರಸವೆಂದು ಭಾವಿಸಿದನು. (ಛಂದ)

**ಸೋ – ಬಾರ ಬಾರ ಕಹ ರಾಉ ಸುಮುಖಿ ಸುಲೋಚನಿ ಪಿಕಬಚನಿ ।**

**ಕಾರನ ಮೋಹಿ ಸುನಾಉ ಗಜಗಾಮಿನಿ ನಿಜ ಕೋಪ ಕರ ॥ ೨೫ ॥**

ರಾಜನು ಮತ್ತೆ-ಮತ್ತೆ ಕೇಳುತ್ತಾನೆ – ''ಓ ಸುಮುಖೀ! ಸುಲೋಚನೆ! ಪಿಕವಾಣಿ! ಗಜಗಮನೆ! ನನಗೆ ನಿನ್ನ ಸಿಟ್ಟಿನ ಕಾರಣವನ್ನಾದರೂ ತಿಳಿಸಬಾರದೇ?'' (ಸೋ/೨೫)

**ಚೌ – ಅನಹಿತ ತೋರ ಪ್ರಿಯಾ ಕೇಇँ ಕೀನ್ಹಾ । ಕೆಹಿ ದುಇ ಸಿರ ಕೆಹಿ ಜಮು ಚಹ ಲೀನ್ಹಾ ॥**

**ಕಹು ಕೆಹಿ ರಂಕಹಿ ಕರೌँ ನರೇಸೂ । ಕಹು ಕೆಹಿ ನೃಪಹಿ ನಿಕಾಸೌँ ದೇಸೂ ॥ ೧ ॥**

**ಸಕಉँ ತೋರ ಅರಿ ಅಮರಉ ಮಾರೀ । ಕಾಹ ಕೀಟ ಬಪುರೇ ನರ ನಾರೀ ॥**

**ಜಾನಸಿ ಮೋರ ಸುಭಾಉ ಬರೋರೂ । ಮನು ತವ ಆನನ ಚಂದ ಚಕೋರೂ ॥ ೨ ॥**

**ಪ್ರಿಯಾ ಪ್ರಾನ ಸುತ ಸರಬಸು ಮೋರೇँ । ಪರಿಜನ ಪ್ರಜಾ ಸಕಲ ಬಸ ತೋರೇँ ॥**

**ಜೌँ ಕಛು ಕಹೌँ ಕಪಟು ಕರಿ ತೋಹೀ । ಭಾಮಿನಿ ರಾಮ ಸಪಥ ಸತ ಮೋಹೀ ॥ ೩ ॥**

**ಬಿಹಸಿ ಮಾಗು ಮನಭಾವತಿ ಬಾತಾ । ಭೂಷನ ಸಜಹಿ ಮನೋಹರ ಗಾತಾ ॥**

**ಘರೀ ಕುಘರೀ ಸಮುಝಿ ಜಿಯँ ದೇಖೂ । ಬೇಗಿ ಪ್ರಿಯಾ ಪರಿಹರಹಿ ಕುಬೇಷೂ ॥ ೪ ॥**

ಪ್ರಿಯೇ! ಯಾರು ನಿನಗೆ ಅನಿಷ್ಟವೆಸಗಿದರು? ಯಾರ ತಲೆಯನ್ನು ತರಿಯಬೇಕು? ಹೇಳು. ಯಮನು ಯಾರನ್ನು ಬಯಸುತ್ತಿರುವನು? ಯಾವ ದರಿದ್ರನನ್ನು ರಾಜನನ್ನಾಗಿಸಬೇಕು? ಯಾವ ಸಾಮಂತರಾಜನನ್ನು ದೇಶಭ್ರಷ್ಟನಾಗಿಸಬೇಕು? ನಿನ್ನ ಶತ್ರುಗಳು ದೇವತೆಗಳೇ ಆಗಿರಲಿ, ನಾನು ಅವರನ್ನು ಜೀವಸಹಿತ ಉಳಿಸುವುದಿಲ್ಲ. ಇನ್ನು ಕೀಟದಂತಿರುವ ಉಳಿದ ಜನರದ್ದೂ ಒಂದು ಲೆಕ್ಕವೇ? ಓ ಸುಂದರೀ! ನಿನಗೆ ನನ್ನ ಸ್ವಭಾವವು ಗೊತ್ತೇ ಇದೆ. ನನ್ನ ಮನಸ್ಸು ಯಾವಾಗಲೂ ನಿನ್ನ ಮುಖಚಂದ್ರಮನಿಗೆ

ಚಕೋರವಿದ್ದಂತೆ. ಎಲೈ ಪ್ರಿಯೇ! ನನ್ನ ಪ್ರಜೆಗಳು, ಕುಟುಂಬಿಗಳು, ಸಕಲೈಶ್ವರ್ಯ, ಮಕ್ಕಳು, ಕೊನೆಗೆ ನನ್ನ ಪಂಚಪ್ರಾಣಗಳೂ ಕೂಡ ನಿನ್ನ ಅಧೀನವಾಗಿದೆ. ನಾನೇನಾದರೂ ನಿನ್ನೊಡನೆ ಸುಳ್ಳು, ಕಪಟವಾಡಿದರೆ ನೂರುಸಲ ರಾಮನ ಆಣೆಯಿಟ್ಟು ಹೇಳುತ್ತೇನೆ. ನೀನು ನಕ್ಕು ಸಂತೋಷದಿಂದ ನಿನಗೆ ಬೇಕಾದ ವರವನ್ನು ಬೇಡು. ನಿನ್ನ ಮನೋಹರವಾದ ಅಂಗಗಳನ್ನು ಆಭೂಷಣಗಳಿಂದ ಅಲಂಕರಿಸಿಕೋ. ಸಮಯಾಸಮಯವನ್ನು ಅರಿತು ಈ ವಿಕೃತವೇಷವನ್ನು ಬಿಡು. (ಚೌ/೧-೪)

**ದೋ – ಯಹ ಸುನಿ ಮನ ಗುನಿ ಸಪಥ ಬಡಿ ಬಿಹಸಿ ಉಠೀ ಮತಿಮಂದ।**
**ಭೂಷನ ಸಜತಿ ಬಿಲೋಕಿ ಮೃಗು ಮನಹುಁ ಕಿರಾತಿನಿ ಫಂದ ॥ ೨೬ ॥**

ರಾಜನ ಈ ಮಾತನ್ನು ಕೇಳಿ, ಮನದಲ್ಲೇ ರಾಮನ ಆಣೆಯನ್ನು ಕುರಿತು ವಿಚಾರಮಾಡಿ ಮಂದಬುದ್ಧಿಯಾದ ಕೈಕೆಯಿಯು ನಗುತ್ತಾ ಎದ್ದು ಕುಳಿತಳು. ಕಿರಾತ ಹೆಂಗಸು ಜಿಂಕೆಯನ್ನು ಕಂಡು ಬಲೆಯೊಡ್ಡಲು ಸಿದ್ಧಳಾಗುವಂತೆ ಕೈಕೆಯಿಯು ಒಡವೆಗಳನ್ನು ಧರಿಸತೊಡಗಿದಳು. (ದೋ/೨೬)

**ಚೌ – ಪುನಿ ಕಹ ರಾಉ ಸುಹೃದ ಜಿಯಁ ಜಾನೀ। ಪ್ರೇಮ ಪುಲಕಿ ಮೃದು ಮಂಜುಲ ಬಾನೀ॥**
**ಭಾಮಿನಿ ಭಯಉ ತೋರ ಮನಭಾವಾ। ಘರ ಘರ ನಗರ ಅನಂದ ಬಧಾವಾ ॥ ೧ ॥**
**ರಾಮಹಿ ದೇಉಁ ಕಾಲಿ ಜುಬರಾಜೂ। ಸಜಹಿ ಸುಲೋಚನಿ ಮಂಗಲ ಸಾಜೂ॥**
**ದಲಕಿ ಉಠೆಉ ಸುನಿ ಹೃದಯ ಕಠೋರೂ। ಜನು ಛುಇ ಗಯಉ ಪಾಕ ಬರತೋರೂ॥ ೨ ॥**
**ಐಸಿಉ ಪೀರ ಬಿಹಸಿ ತೆಹಿಁ ಗೋಈ। ಚೋರ ನಾರಿ ಜಿಮಿ ಪ್ರಗಟಿ ನ ರೋಈ॥**
**ಲಖಹಿಁ ನ ಭೂಪ ಕಪಟ ಚತುರಾಈ। ಕೋಟಿ ಕುಟಿಲ ಮನಿ ಗುರೂ ಪಢಾಈ ॥ ೩ ॥**
**ಜದ್ಯಪಿ ನೀತಿ ನಿಪುನ ನರನಾಹೂ। ನಾರಿಚರಿತ ಜಲನಿಧಿ ಅವಗಾಹೂ ॥**
**ಕಪಟ ಸನೇಹು ಬಢಾಇ ಬಹೋರೀ। ಬೋಲೀ ಬಿಹಸಿ ನಯನ ಮುಹು ಮೋರೀ॥ ೪ ॥**

ಕೈಕೆಯಿಯ ಕೋಪವು ತಗ್ಗಿತೆಂದು ತಿಳಿದು ದಶರಥ ಮಹಾರಾಜನು ಪ್ರೇಮಪುಳಕಿತನಾಗಿ, ಮೃದುಮಧುರ ವಾಣಿಯಿಂದ ಹೇಳತೊಡಗಿದನು – ''ಎಲೈ ಭಾಮಿನಿ! ನಿನ್ನ ಮನದ ಬಯಕೆ ಈಡೇರಿತೆಂದೇ ತಿಳಿ. ನಗರದ ಪ್ರತಿ ಮನೆ-ಮನೆಗಳಲ್ಲಿ ಆನಂದೋತ್ಸವಗಳು, ಮಂಗಳವಾದ್ಯಗಲು ನಡೆಯುತ್ತಿವೆ. ಎಲೈ ಸುಲೋಚನೆ! ನಾನು ನಾಳೆಯೇ ರಾಮನಿಗೆ ಯುವರಾಜ ಪಟ್ಟ ಕಟ್ಟಲಿದ್ದೇನೆ. ಆದ್ದರಿಂದ ಮಂಗಳಕರ ವಸ್ತ್ರಾಭರಣಗಳನ್ನೂ ಧರಿಸು. ಇದನ್ನು ಕೇಳಿದ ಕೂಡಲೇ ಕೈಕೆಯಿಯ ಕಲ್ಲೆದೆ ಬಿರಿದಂತಾಯಿತು. ಹುಣ್ಣಿನ ಮೇಲೆ ಮೆಣಸಿನ ಪುಡಿ ಎರಚಿದಂತಾಯಿತು. ಇಂತಹ ಭಯಂಕರ ನೋವನ್ನೂ ಕೂಡ ನಗೆಯ ಅವಗುಂಠನದಲ್ಲಿ ಅಡಗಿಸಿಟ್ಟಳು. ಕಳ್ಳನ ಹೆಂಡತಿ ಎಲ್ಲರಿಗೂ ತಿಳಿಯುವಂತೆ ಅಳಲು ಸಾಧ್ಯವೇ? ಹಾಗೆಯೇ ಅರಸನಿಗೆ ಆಕೆಯ ಕುಟಿಲಜಾಣ್ಮೆ ಅರಿವಾಗಲಿಲ್ಲ. ಏಕೆಂದರೆ, ಆಕೆಗೆ ಕೋಟಿ ಕುಟಿಲರ ಶಿರೋಮಣಿಯಾದ ಮಂಥರೆಯು ಉಪದೇಶಿಸಿದ್ದಳಲ್ಲ! ಅರಸನು ಪರೇಂಗಿತತಜ್ಞನಾಗಿದ್ದರೂ, ನೀತಿ ನಿಪುಣನಾಗಿದ್ದರೂ, ಸ್ತ್ರೀ ಸ್ವಭಾವವು ಆಳವರಿಯದ ಕಡಲಾದ್ದರಿಂದ ತಿಳಿಯದೇ ಹೋದನು. ಆಕೆಯು ಮತ್ತೆ ಕಪಟ ಪ್ರೇಮವನ್ನು ತೋರಿ, ಕಣ್ಣು-ಮುಖ ತಿರುವಿ ನಗೆಮಲ್ಲಿಗೆಯನ್ನು ಚೆಲ್ಲುತ್ತಾ ಇಂತೆಂದಳು – (ಚೌ/೧-೪)

**ದೋ – ಮಾಗು ಮಾಗು ಪೈ ಕಹಹು ಪಿಯ ಕಬಹುಁ ನ ದೇಹು ನ ಲೇಹು।**
**ದೇನ ಕಹೆಹು ಬರದಾನ ದುಇ ತೆಉ ಪಾವತ ಸಂದೇಹು ॥ ೨೭ ॥**

ಪ್ರಿಯತಮಾ! ನೀವೇನೋ ಕೇಳು-ಕೇಳು ಎನ್ನುತ್ತಿರುವಿರಿ. ಆದರೆ ಇಷ್ಟರವರೆಗೆ 'ತಗೋ' ಎಂದು ಕೊಟ್ಟದ್ದೇ ಕಾಣೆ. ನೀವು ಹಿಂದೆ ಎರಡು ವರ ಕೊಡುವುದಾಗಿ ಹೇಳಿದ್ದೀರಿ. ಆದರೆ ಅವುಗಳು ಸಿಗುವುದೋ? ಇಲ್ಲವೋ? (ದೋ/೨೭)

**ಚೌ – ಜಾನೆಉಁ ಮರಮು ರಾಉ ಹಁಸಿ ಕಹಈ। ತುಮ್ಹಹಿ ಕೊಹಾಬ ಪರಮ ಪ್ರಿಯ ಅಹಈ ॥**
**ಥಾತೀ ರಾಖಿ ನ ಮಾಗಿಹು ಕಾಊ। ಬಿಸರಿ ಗಯಉ ಮೊಹಿ ಭೋರ ಸುಭಾಊ ॥ ೧ ॥**
**ಝೂಠೆಹುಁ ಹಮಹಿ ದೋಷು ಜನಿ ದೇಹೂ। ದುಇ ಕೈ ಚಾರಿ ಮಾಗಿ ಮಕು ಲೇಹೂ ॥**
**ರಘುಕುಲ ರೀತಿ ಸದಾ ಚಲಿ ಆಈ। ಪ್ರಾನ ಜಾಹುಁ ಬರು ಬಚನು ನ ಜಾಈ॥ ೨ ॥**
**ನಹಿಁ ಅಸತ್ಯ ಸಮ ಪಾತಕ ಪುಂಜಾ। ಗಿರಿ ಸಮ ಹೋಹಿಁ ಕಿ ಕೋಟಿಕ ಗುಂಜಾ॥**
**ಸತ್ಯಮೂಲ ಸಬ ಸುಕೃತ ಸುಹಾಏ। ಬೇದ ಪುರಾನ ಬಿದಿತ ಮನು ಗಾಏ॥ ೩ ॥**

**ತೆಹಿ ಪರ ರಾಮ ಸಪಥ ಕರಿ ಆಈ । ಸುಕೃತ ಸನೇಹ ಅವಧಿ ರಘುರಾಈ ॥**
**ಬಾತ ದೃಢಾಇ ಕುಮತಿ ಹँಸಿ ಬೋಲೀ । ಕುಮತ ಕುಬಿಹಗ ಕುಲಹ ಜನು ಖೋಲೀ ॥ ೪ ॥**

ಆಗ ರಾಜನು ನಕ್ಕು ನುಡಿದನು – ಈಗ ನನಗೆ ನಿನ್ನ ಅಭಿಪ್ರಾಯ ಅರ್ಥವಾಯಿತು. ಮುನಿಸು ನಿನಗೆ ತುಂಬಾ ಇಷ್ಟ. ನೀನು ಆ ವರಗಳನ್ನು ನನ್ನಲ್ಲೇ ನ್ಯಾಸವಾಗಿ, ಇಡುಗಂಟಾಗಿ ಇಟ್ಟಿದ್ದೆ. ಆದರೆ ಎಂದೂ ಬೇಡಲೇ ಇಲ್ಲ. ಮರೆವಿನ ಸ್ವಭಾವವುಳ್ಳ ನನಗೂ ಆ ಪ್ರಸಂಗ ಜ್ಞಾಪಕಕ್ಕೆ ಬರಲಿಲ್ಲ. ನನ್ನ ಮೇಲೆ ಇಲ್ಲದ ಸುಳ್ಳು ಆರೋಪಣೆ ಮಾಡಬೇಡ. ಬೇಕಾದರೆ ಎರಡೇಕೆ, ನಾಲ್ಕು ವರ ಬೇಡಿಕೋ. ಪ್ರಾಣಹೋದರೂ ಸರಿ. ಕೊಟ್ಟಮಾತಿಗೆ ತಪ್ಪದೇ ಇರುವುದು ರಘುಕುಲದಲ್ಲಿ ಎಂದಿನಿಂದಲೂ ನಡೆದುಬಂದ ನೀತಿ. ಅಸತ್ಯಕ್ಕೆ ಸಮಾನವಾದ ಪಾಪಪುಂಜವೇ ಇಲ್ಲ. ಕೋಟಿ ಗುಲಗುಂಜಿಗಳು ಸೇರಿದರೂ ಒಂದು ಬೆಟ್ಟವಾಗಬಲ್ಲುದೇ? ಸತ್ಯವೇ ಎಲ್ಲ ಉತ್ತಮ ಪುಣ್ಯಗಳಿಗೆ ಮೂಲವಾಗಿದೆ. ಇದು ವೇದ, ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಮನವೂ ಕೂಡ ಇದನ್ನೇ ಹೇಳಿರುವನು. ಇದು ಸಾಲದೆಂಬಂತೆ ನಾನು ರಾಮನಮೇಲೆ ಆಣೆ ಮಾಡಿರುವೆನು. ಶ್ರೀರಾಮನು ನನ್ನ ಪುಣ್ಯ ಹಾಗೂ ಪ್ರೇಮದ ಸೀಮಾಪುರುಷನು. ಈ ರೀತಿ ದಶರಥನನ್ನು ವಚನಬದ್ಧನನ್ನಾಗಿಸಿದ ಮೇಲೆ, ಆ ದುರ್ಬುದ್ಧಿ ಕೈಕೆಯಿಯು ಒಂದು ವಿಷಾಕ್ತ ನಗುವನ್ನು ನಕ್ಕು, ಕುವಿಚಾರವೆಂಬ ಗಿಡುಗನ ಪಂಜರದ ಬಾಗಿಲು ತೆಗೆದು ಹೊರಕ್ಕೆ ಬಿಡಲು ಸಿದ್ಧತೆ ಮಾಡುತ್ತಿರುವಳೋ ಎಂಬಂತೆ ಇಂತು ನುಡಿದಳು – (ಚೌ/೧-೪)

**ದೋ – ಭೂಪ ಮನೋರಥ ಸುಭಗ ಬನು ಸುಖ ಸುಬಿಹಂಗ ಸಮಾಜು ।**
**ಭಿಲ್ಲಿನಿ ಜಿಮಿ ಛಾಡನ ಚಹತಿ ಬಚನು ಭಯಂಕರು ಬಾಜು ॥ ೨೮ ॥**

ರಾಜನ ಮನೋರಥವೆಂಬ ಒಂದು ಸುಂದರವನ. ಅವನ ಸುಖಗಳೇ ಸುಂದರವಾದ ಪಕ್ಷಿಗಳ ಸಮುದಾಯ. ಅದರ ಮೇಲೆ ಕಿರಾತಿನಿಯಂತಿರುವ ಕೈಕೆಯಿಯು ತನ್ನ ಮಾತೆಂಬ ಭಯಂಕರವಾದ ಗಿಡುಗವನ್ನು ಛೂ ಬಿಡಲು ಬಯಸುವಳು. (ದೋ/೨೮)

**ಮಾಸಪಾರಾಯಣದ ಹದಿಮೂರನೆಯ ವಿಶ್ರಾಮ**

**ಚೌ – ಸುನಹು ಪ್ರಾನಪ್ರಿಯ ಭಾವತ ಜೀ ಕಾ । ದೇಹು ಏಕ ಬರ ಭರತಹಿ ಟೀಕಾ ॥**
**ಮಾಗಉँ ದೂಸರ ಬರ ಕರ ಜೋರೀ । ಪುರವಹು ನಾಥ ಮನೋರಥ ಮೋರೀ ॥ ೧ ॥**
**ತಾಪಸ ಬೇಷ ಬಿಸೇಷಿ ಉದಾಸೀ । ಚೌದಹ ಬರಿಸ ರಾಮು ಬನಬಾಸೀ ॥**
**ಸುನಿ ಮೃದು ಬಚನ ಭೂಪ ಹಿಯँ ಸೋಕೂ । ಸಸಿ ಕರ ಛುಅತ ಬಿಕಲ ಜಿಮಿ ಕೋಕೂ ॥ ೨ ॥**
**ಗಯಉ ಸಹಮಿ ನಹಿँ ಕಛು ಕಹಿ ಆವಾ । ಜನು ಸಚಾನ ಬನ ಝಪಟೇಉ ಲಾವಾ ॥**
**ಬಿಬರನ ಭಯಉ ನಿಪಟ ನರಪಾಲೂ । ದಾಮಿನಿ ಹನೇಉ ಮನಹುँ ತರು ತಾಲೂ ॥ ೩ ॥**
**ಮಾಥೇँ ಹಾಥ ಮೂದಿ ದೋಉ ಲೋಚನ । ತನು ಧರಿ ಸೋಚು ಲಾಗ ಜನು ಸೋಚನ ॥**
**ಮೋರ ಮನೋರಥು ಸುರತರು ಫೂಲಾ । ಫರತ ಕರಿನಿ ಜಿಮಿ ಹತೇಉ ಸಮೂಲಾ ॥ ೪ ॥**
**ಅವಧ ಉಜಾರಿ ಕೀನ್ಹಿ ಕೈಕೇಈँ । ದೀನ್ಹಿಸಿ ಅಚಲ ಬಿಪತಿ ಕೈ ನೇಈँ ॥ ೫ ॥**

ಅವಳು ಹೇಳಿದಳು – ''ಪ್ರಾಣನಾಥಾ! ಹಾಗಾದರೆ ಕೇಳಿ. ನನ್ನ ಮನ ಮೆಚ್ಚುವ ಮೊದಲನೇ ವರದಿಂದ ಭರತನಿಗೆ ರಾಜ್ಯಾಭಿಷೇಕವಾಗಬೇಕು. ಸ್ವಾಮಿ! ಇನ್ನೊಂದು ವರವನ್ನು ನಾನು ಕೈಜೋಡಿಸಿ ಬೇಡುತ್ತೇನೆ. ನನ್ನ ಮನೋರಥವನ್ನು ಈಡೇರಿಸಿರಿ. 'ವೈಭವವಿಲಾಸವನ್ನು ತೊರೆದು, ತಾಪಸವೇಷದಲ್ಲಿ, ಮುನಿಗಳಂತೆ ಶ್ರೀರಾಮನು ಹದಿನಾಲ್ಕು ವರ್ಷಗಳ ಕಾಲ ವನವಾಸ ಮಾಡಲಿ' ಇದೇ ನನ್ನ ಎರಡನೆಯ ವರವು. ದಯವಿಟ್ಟು ಈ ಎರಡು ವರಗಳನ್ನು ನನಗೆ ಕರುಣಿಸಿರಿ. ಕೈಕೆಯಿಯ ಮೃದುವಚನಗಳನ್ನುಕೇಳುತ್ತಲೇ, ಚಂದ್ರಕಿರಣ ಸೋಕಿದಾಗ ವಿಕಲವಾಗುವ ಚಕ್ರವಾಕದಂತೆ ರಾಜನ ಎದೆ ಶೋಕತಪ್ತವಾಯಿತು. ರಾಜನು ಚಕಿತನಾಗಿ ಅಂಜಿಹೋದನು. ಬಾಯಿಂದ ಮಾತೇ ಹೊರಡದಾಯಿತು. ಕಾಡಿನಲ್ಲಿ ಗಿಡುಗನು ತಿತ್ತಿರಿ ಪಕ್ಷಿಯ ಮೇಲೆ ಎರಗಿದಂತಾಯಿತು. ತಾಳೆಯ ಮರಕ್ಕೆ ಸಿಡಿಲು ಬಡಿದಂತೆ, ರಾಜನ ಮುಖ ವಿವರ್ಣವಾಯಿತು. ತಲೆಯ ಮೇಲೆ ಕೈಗಳನ್ನು ಹೊತ್ತುಕೊಂಡು, ಕಣ್ಣುಮುಚ್ಚಿಕೊಂಡು, ಯೋಚನೆಯೇ ಶರೀರತಾಳಿ ಯೋಚನೆ ಮಾಡುತ್ತಾ ಕುಳಿತುಕೊಂಡಿತೋ ಎಂಬಂತೆ ಕುಳಿತುಬಿಟ್ಟನು. ಅವನು ಯೋಚಿಸುವನು – 'ಅಯ್ಯೋ! ನನ್ನ ಮನೋರಥವೆಂಬ ಕಲ್ಪವೃಕ್ಷವು ಹೂಬಿಟ್ಟಿತ್ತು. ಆದರೆ ಇನ್ನೇನು ಫಲಬಿಡುತ್ತಿದೆ ಎನ್ನುವಾಗ ಕೈಕೆಯಿಯೆಂಬ ಹೆಣ್ಣಾನೆಯು ಅದನ್ನು ಬುಡಸಹಿತ ಕಿತ್ತು ಹಾಳುಮಾಡಿದಳು. ಇವಳು ಅಯೋಧ್ಯೆಯನ್ನೇ ನಾಶಮಾಡಿದಳು. ಶಾಶ್ವತವಾದ ವಿಪತ್ತುಗಳಿಗೆ ಅಡಿಪಾಯ ಹಾಕಿದಂತಾಯಿತು. (ಚೌ/೧-೫)

**ದೋ – ಕವನೇ ಅವಸರ ಕಾ ಭಯಉ ಗಯಉ ನಾರಿ ಬಿಸ್ವಾಸ।**
**ಜೋಗ ಸಿದ್ಧಿ ಫಲ ಸಮಯ ಜಿಮಿ ಜತಿಹಿ ಅಬಿದ್ಯಾ ನಾಸ ॥೨೯॥**

ಎಂತಹ ಸಮಯದಲ್ಲಿ ಏನಾಗಿಹೋಯಿತು! ಯೋಗದ ಸಿದ್ಧಿಯು ಕರಗತವಾಗುತ್ತದೆ ಎನ್ನುವಾಗ ಯೋಗಿಯನ್ನು ಅವಿದ್ಯೆ ಹಾಳುಮಾಡುವಂತೆ, ಹೆಣ್ಣನ್ನು ನೆಚ್ಚಿ ನಾನು ಹಾಳಾದೆ. (ದೋ/೨೯)

**ಚೌ – ಏಹಿ ಬಿಧಿ ರಾಉ ಮನಹಿಂ ಮನ ಝಾಖಾ। ದೇಖಿ ಕುಭಾಂತಿ ಕುಮತಿ ಮನ ಮಾಖಾ॥**
**ಭರತು ಕಿ ರಾಉರ ಪೂತ ನ ಹೋಹೀ। ಆನೇಹು ಮೋಲ ಬೆಸಾಹಿ ಕಿ ಮೋಹೀ ॥೧॥**
**ಜೋ ಸುನಿ ಸರು ಅಸ ಲಾಗ ತುಮ್ಹಾರೇ। ಕಾಹೆ ನ ಬೋಲಹು ಬಚನು ಸಂಭಾರೇ॥**
**ದೇಹು ಉತರು ಅನು ಕರಹು ಕಿ ನಾಹೀ। ಸತ್ಯಸಂಧ ತುಮ್ಹ ರಘುಕುಲ ಮಾಹೀ ॥೨॥**
**ದೇನ ಕಹೆಹು ಅಬ ಜನಿ ಬರು ದೇಹೂ। ತಜಹು ಸತ್ಯ ಜಗ ಅಪಜಸು ಲೇಹೂ॥**
**ಸತ್ಯ ಸರಾಹಿ ಕಹೆಹು ಬರು ದೇನಾ। ಜಾನೆಹು ಲೇಇಹಿ ಮಾಗಿ ಚಬೇನಾ ॥೩॥**
**ಸಿಬಿ ದಧೀಚಿ ಬಲಿ ಜೋ ಕಛು ಭಾಷಾ। ತನು ಧನು ತಜೆಉ ಬಚನ ಪನು ರಾಖಾ॥**
**ಅತಿ ಕಟು ಬಚನ ಕಹತಿ ಕೈಕೇಈ। ಮಾನಹುಂ ಲೋನ ಜರೇ ಪರ ದೇಈ ॥೪॥**

ಈ ವಿಧವಾಗಿ ದಶರಥನು ಮನಸ್ಸಿನಲ್ಲೇ ಹಲುಬುತ್ತಿದ್ದ. ಅವನ ದುಃಸ್ಥಿತಿಯನ್ನು ನೋಡಿ ಕುಮತಿಯಾದ ಕೈಕೆಯಿಗೆ ಬೆಟ್ಟದಂತಹ ಸಿಟ್ಟುಬಂತು. ಅವಳು ಹೇಳಿದಳು – ಭರತನು ನಿಮ್ಮ ಮಗನಲ್ಲವೇ? ನನ್ನನ್ನು ನೀವು ಮದುವೆಯಾಗದೆ ಕೊಂಡು ತಂದಿರುವಿರಾ? ನನ್ನ ಮಾತನ್ನು ಕೇಳಿದ ಕೂಡಲೇ ನಿಮಗೆ ಬಾಣ ನಾಟಿದಂತಾಯಿತಲ್ಲ? ನೀವೇಕೆ ಯೋಚನೆಮಾಡಿ ಮಾತಾಡಬಾರದು? ಯಾವುದಕ್ಕೂ ಉತ್ತರಕೊಡಿ. ಹ್ಞೂ, ಎನ್ನಿ; ಇಲ್ಲವೇ ಇಲ್ಲವೆನ್ನಿ. ನೀವು ರಘುಕುಲದಲ್ಲಿ ಸತ್ಯಸಂಧರೆಂದು ಪ್ರಸಿದ್ಧರಲ್ಲವೇ? ನೀವೇ ವರಕೊಡುತ್ತೇನೆ ಎಂದು ಹೇಳಿದ್ದೀರಿ. ಈಗ ಕೊಡದೇ ಇದ್ದರೂ ಚಿಂತೆಯಿಲ್ಲ. ಸತ್ಯಕ್ಕೆ ತಿಲಾಂಜಲಿಯನ್ನಿತ್ತು ಅಪಕೀರ್ತಿಯನ್ನು ಗಳಿಸಿರಿ. ಸತ್ಯವನ್ನು ಕೊಂಡಾಡಿ ನೀವು ವರಕೊಡುತ್ತೇನೆ ಎಂದು ಹೇಳಿದ್ದೀರಿ. ಬಹುಶಃ ನಾನು ಹುರಿಗಾಳು ಕೇಳಬಹುದೆಂದು ಯೋಚಿಸಿದ್ದಿರೋ ಏನೋ! ಶಿಬಿ, ದಧೀಚಿ, ಬಲಿಚಕ್ರವರ್ತಿ ಮುಂತಾದ ಮಹಾಪುರುಷರು ತಮ್ಮ ಸಂಪತ್ತನ್ನೂ, ಪ್ರಾಣಗಳನ್ನೂ ಕೂಡ ಲೆಕ್ಕಿಸದೆ ತಮ್ಮ ಮಾತನ್ನು ಉಳಿಸಿಕೊಂಡಿರುವರು. ಕೈಕೆಯಿಯು ಗಾಯದ ಮೇಲೆ ಖಾರದ ಪುಡಿ ಚೆಲ್ಲಿದಂತೆ ಕಟುವಚನಗಳನ್ನಾಡಿದಳು. (ಚೌ/೧-೪)

**ದೋ – ಧರಮ ಧುರಂಧರ ಧೀರ ಧರಿ ನಯನ ಉಘಾರೇ ರಾಯ।**
**ಸಿರು ಧುನಿ ಲೀನ್ಹಿ ಉಸಾಸ ಸಿ ಮಾರೆಸಿ ಮೋಹಿ ಕುಠಾಯ ॥೩೦॥**

ಧರ್ಮಧುರಂಧರನಾದ ದಶರಥ ಮಹಾರಾಜನು ಧೈರ್ಯತಾಳಿ ಕಣ್ಣು ತೆರೆದನು. ತಲೆಯಲ್ಲಾಡಿಸಿ, ಒಂದು ನಿಟ್ಟುಸಿರು ಬಿಡುತ್ತಾ ನುಡಿದನು – 'ಇವಳು ನನ್ನನ್ನು ಇಕ್ಕಟ್ಟಿಗೆ ಸಿಕ್ಕಿಸಿದಳು. ಮರ್ಮಕ್ಕೆ ಪೆಟ್ಟು ಕೊಟ್ಟಿರುವಳು. ಬದುಕುಳಿಯವುದೇ ಕಷ್ಟವಾಗಿದೆ.' (ದೋ/೩೦)

**ಚೌ – ಆಗೇ ದೀಖಿ ಜರತ ರಿಸ ಭಾರೀ। ಮನಹುಂ ರೋಷ ತರವಾರಿ ಉಘಾರೀ॥**
**ಮೂಠಿ ಕುಬುದ್ಧಿ ಧಾರ ನಿಠುರಾಈ। ಧರೀ ಕೂಬರೀಂ ಸಾನ ಬನಾಈ ॥೧॥**
**ಲಖೀ ಮಹೀಪ ಕರಾಲ ಕಠೋರಾ। ಸತ್ಯ ಕಿ ಜೀವನು ಲೇಇಹಿ ಮೋರಾ॥**
**ಬೋಲೇ ರಾಉ ಕಠಿನ ಕರಿ ಛಾತೀ। ಬಾನೀ ಸಬಿನಯ ತಾಸು ಸೋಹಾತೀ ॥೨॥**
**ಪ್ರಿಯಾ ಬಚನ ಕಸ ಕಹಸಿ ಕುಭಾಂತೀ। ಭೀರ ಪ್ರತೀತಿ ಪ್ರೀತಿ ಕರಿ ಹಾಂತೀ॥**
**ಮೋರೇ ಭರತು ರಾಮು ದುಇ ಆಂಖೀ। ಸತ್ಯ ಕಹಉಂ ಕರಿ ಸಂಕರು ಸಾಖೀ ॥೩॥**
**ಅವಸಿ ದೂತು ಮೈಂ ಪಠಇಬ ಪ್ರಾತಾ। ಐಹಹಿಂ ಬೇಗಿ ಸುನತ ದೋಉ ಭ್ರಾತಾ॥**
**ಸುದಿನ ಸೋಧಿ ಸಬು ಸಾಜು ಸಜಾಈ। ದೇಉಂ ಭರತ ಕಹುಂ ರಾಜು ಬಜಾಈ ॥೪॥**

ಪ್ರಚಂಡ ಕ್ರೋಧದಿಂದ ಉರಿಯುತ್ತಿದ್ದ ಕೈಕೆಯಿಯು ಕ್ರೋಧವೆಂಬ ಬಿಚ್ಚುಗತ್ತಿ ಎದುರಿಗೆ ನಿಂತಿರುವಂತೆ ಕಂಡಳು. ದುರ್ಬುದ್ಧಿಯೇ ಆ ಕತ್ತಿಯ ಹಿಡಿ. ನಿಷ್ಠುರತೆಯೇ ಅದರ ಅಲಗು. ಅದು ಗೂನಿ ಮಂಥರೆಯೆಂಬ ಸಾಣೆಕಲ್ಲಿನ ಮೇಲೆ ಮಸೆದಂತಿತ್ತು. ಅರಸನಿಗೆ ಈ ಖಡ್ಗವು ಭಯಾನಕವೂ, ಕಠೋರವಾಗಿಯೂ ಕಂಡಿತು. ಇವಳು ನಿಜಕ್ಕೂ ನನ್ನ ಪ್ರಾಣವನ್ನೇ

ತೆಗೆದುಕೊಳ್ಳುವಳು ಎಂದೆನಿಸಿತು. ಅವನು ತನ್ನ ಎದೆಯನ್ನು ಗಟ್ಟಿಯಾಗಿಸಿಕೊಂಡು ವಿನಮ್ರನಾಗಿ ಕೈಕೆಯಿಗೆ ಪ್ರಿಯವಾಗುವಂತೆ ಹೇಳಿದನು – ''ಪ್ರಿಯೇ! ಭೀರು! ಪ್ರೇಮವನ್ನು ನಂಬಿಕೆಯನ್ನು ನುಚ್ಚುನೂರುಗೊಳಿಸಿ, ಇದೆಂತಹ ಮಾತುಗಳನ್ನಾಡುತ್ತಿರುವೆ? ಭರತನು ರಾಮನು ಇಬ್ಬರೂ ನನಗೆ ಎರಡು ಕಣ್ಣುಗಳಿದ್ದಂತೆ. ಶಿವನಮೇಲೆ ಆಣೆಯಿಟ್ಟು, ಪ್ರಮಾಣಮಾಡಿ ಇದನ್ನು ಹೇಳುತ್ತಿದ್ದೇನೆ. ನಾನು ಬೆಳಗಾದ ಕೂಡಲೇ ದೂತರನ್ನು ಅಟ್ಟುತ್ತೇನೆ. ಭರತ-ಶತ್ರುಘ್ನರಿಬ್ಬರೂ ಸುದ್ದಿ ತಿಳಿದಕೂಡಲೇ ಓಡಿಬರುತ್ತಾರೆ. ಒಳ್ಳೆಯ ಶುಭಮುಹೂರ್ತವನ್ನು ನಿರ್ಣಯಿಸಿ, ವೈಭವೋಪೇತದಿಂದ ಸಂಭ್ರಮದಿಂದ ಭರತನಿಗೆ ರಾಜ್ಯವನ್ನು ಕೊಡುತ್ತೇನೆ. (ಚೌ/೧-೪)

**ದೋ – ಲೋಭು ನ ರಾಮಹಿ ರಾಜು ಕರ ಬಹುತ ಭರತ ಪರ ಪ್ರೀತಿ ।**
**ಮೈಂ ಬಡ ಛೋಟ ಬಿಚಾರಿ ಜಿಯಁ ಕರತ ರಹೇಉಁ ನೃಪನೀತಿ ॥ ೩೧ ॥**

ರಾಮನಿಗೆ ರಾಜ್ಯದ ಲೋಭವಂತೂ ಖಂಡಿತವಾಗಿಯೂ ಇಲ್ಲ. ಅವನಿಗೆ ಭರತನಮೇಲೆ ಅಪಾರಪ್ರೇಮವಿದೆ. ಹಿರಿಯವನು, ಕಿರಿಯವನು ಎಂಬ ವಿಷಯದಲ್ಲಿ ವಿಚಾರಗೈದು ರಾಜನೀತಿಯನ್ನು ಅನುಸರಿಸಿದ್ದೆ. (ದೋ/೩೧)

**ಚೌ – ರಾಮ ಸಪಥ ಸತ ಕಹಉಁ ಸುಭಾಊ । ರಾಮಮಾತು ಕಛು ಕಹೇಉ ನ ಕಾಊ ॥**
**ಮೈಂ ಸಬು ಕೀನ್ಹ ತೋಹಿ ಬಿನು ಪೂಁಛೇಂ । ತೇಹಿ ತೇಂ ಪರೇಉ ಮನೋರಥು ಛೂಛೇಂ ॥ ೧ ॥**
**ರಿಸ ಪರಿಹರು ಅಬ ಮಂಗಲ ಸಾಜೂ । ಕಛು ದಿನ ಗಏಁ ಭರತ ಜುಬರಾಜೂ ॥**
**ಏಕಹಿ ಬಾತ ಮೋಹಿ ದುಖು ಲಾಗಾ । ಬರ ದೂಸರ ಅಸಮಂಜಸ ಮಾಗಾ ॥ ೨ ॥**
**ಅಜಹೂಁ ಹೃದಉ ಜರತ ತೇಹಿ ಆಁಚಾ । ರಿಸ ಪರಿಹಾಸ ಕಿ ಸಾಁಚೆಹುಁ ಸಾಁಚಾ ॥**
**ಕಹು ತಜಿ ರೋಷು ರಾಮ ಅಪರಾಧೂ । ಸಬು ಕೋಉ ಕಹಇ ರಾಮು ಸುಠಿ ಸಾಧೂ ॥ ೩ ॥**
**ತುಹೂಁ ಸರಾಹಸಿ ಕರಸಿ ಸನೇಹೂ । ಅಬ ಸುನಿ ಮೋಹಿ ಭಯಉ ಸಂದೇಹೂ ॥**
**ಜಾಸು ಸುಭಾಉ ಅರಿಹಿ ಅನುಕೂಲಾ । ಸೋ ಕಿಮಿ ಕರಿಹಿ ಮಾತು ಪ್ರತಿಕೂಲಾ ॥ ೪ ॥**

ರಾಮನ ತಾಯಿ ಕೌಸಲ್ಯೆಯು ಈ ಬಗೆಗೆ ಎಂದೂ ಏನನ್ನೂ, ನನ್ನ ಬಳಿ ಹೇಳಲಿಲ್ಲ. ಇದರ ಬಗ್ಗೆ ನೂರು ಸಲ ರಾಮನಮೇಲೆ ಆಣೆಯಿಟ್ಟು ಹೇಳುತ್ತೇನೆ. ನಿನ್ನನ್ನು ಒಂದು ಮಾತು ಕೇಳದ ನಾನು ಈ ಕೆಲಸಮಾಡಿದುದು ನಿಜ. ಅದರಿಂದಲೇ ನನ್ನ ಮನೋರಥ ಈಡೇರದಾಯಿತು. ಈಗ ಸಿಟ್ಟನ್ನು ಬಿಟ್ಟುಬಿಡು. ಮಂಗಳಕರವಾಗಿ ಅಲಂಕರಿಸಿಕೋ. ಕೆಲವೇ ದಿನಗಳಲ್ಲಿ ಭರತನು ಯುವರಾಜನಾಗುತ್ತಾನೆ. ನನಗೆ ನೋವುಂಟುಮಾಡಿದ ಸಂಗತಿಯೆಂದರೆ ನಿನ್ನ ಎರಡನೆಯ ವರ. ಇದು ಪೂರ್ಣವಾಗಿ ಅಸಮಂಜಸವಾಗಿದೆ. ಅದರ ಬೇಗೆಯಿಂದ ಈಗಲೂ ನನ್ನ ಎದೆಯು ಉರಿಯುತ್ತಿದೆ. ಈ ಮಾತನ್ನು ನೀನು ಪರಿಹಾಸ, ತಮಾಷೆಗೆಂದು ಆಡಿದೆಯೋ? ಇಲ್ಲವೇ ರೋಷದಿಂದ ಆಡಿದೆಯೋ? ಅಥವಾ ನಿಜಕ್ಕೂ ಆಡಿದೆಯೋ? ರಾಮನು ಎಸಗಿದ ಅಪರಾಧವಾದರೂ ಏನು? ಸಿಟ್ಟು ಮರೆತು ಹೇಳು. ರಾಮನು ತುಂಬಾ ಸಾಧು ಎಂದು ಎಲ್ಲರೂ ಹೇಳುತ್ತಾರೆ. ನೀನೇ ಸ್ವತಃ ರಾಮನನ್ನು ಕೊಂಡಾಡುತ್ತಿದ್ದೆ, ಪ್ರೀತಿಸುತ್ತಿದ್ದೆ. ಈಗ ಈ ಮಾತನ್ನು ಕೇಳಿದ ಮೇಲೆ ನೀನು ತೋರಿದ ಪ್ರೀತಿ, ಗೈದ ಪ್ರಶಂಸೆ ಎಲ್ಲವೂ ಸುಳ್ಳೇ ಇತ್ತೋ? ಎಂದು ಸಂದೇಹವಾಗುತ್ತಿದೆ. ವೈರಿಗೂ ಕೂಡ ಕೇಡುಬಗೆಯದ ಸ್ವಭಾವವುಳ್ಳವನು ತಾಯಿಗೆ ಪ್ರತಿಕೂಲನಾಗುವನೇ? (ಚೌ/೧-೪)

**ದೋ – ಪ್ರಿಯಾ ಹಾಸ ರಿಸ ಪರಿಹರಹಿ ಮಾಗು ಬಿಚಾರಿ ಬಿಬೇಕು ।**
**ಜೆಹಿಂ ದೇಖೌಂ ಅಬ ನಯನ ಭರಿ ಭರತ ರಾಜ ಅಭಿಷೇಕು ॥ ೩೨ ॥**

ಪ್ರಿಯೇ! ಪರಿಹಾಸ, ಕೋಪವನ್ನು ತೊರೆದು, ವಿವೇಕದಿಂದ ಉಚಿತ-ಅನುಚಿತ ಯೋಚಿಸಿ, ವರಕೇಳು. ಇದರಿಂದ ಭರತನ ರಾಜ್ಯಾಭಿಷೇಕವನ್ನು ಕಣ್ತುಂಬಾ ನೋಡುವಂತಾದೀತು. (ದೋ/೩೨)

**ಚೌ – ಜಿಅಇ ಮೀನ ಬರು ಬಾರಿ ಬಿಹೀನಾ । ಮನಿ ಬಿನು ಫನಿಕು ಜಿಅಇ ದುಖ ದೀನಾ ॥**
**ಕಹಉಁ ಸುಭಾಉ ನ ಛಲು ಮನ ಮಾಹೀಂ । ಜೀವನು ಮೋರ ರಾಮ ಬಿನು ನಾಹೀಂ ॥ ೧ ॥**
**ಸಮುಝಿ ದೇಖು ಜಿಯಁ ಪ್ರಿಯಾ ಪ್ರಬೀನಾ । ಜೀವನು ರಾಮ ದರಸ ಆಧೀನಾ ॥**
**ಸುನಿ ಮೃದು ಬಚನ ಕುಮತಿ ಅತಿ ಜರಈ । ಮನಹು ಅನಲ ಆಹುತಿ ಘೃತ ಪರಈ ॥ ೨ ॥**
**ಕಹಇ ಕರಹು ಕಿನ ಕೋಟಿ ಉಪಾಯಾ । ಇಹಾಁ ನ ಲಾಗಿಹಿ ರಾಉರಿ ಮಾಯಾ ॥**
**ದೇಹು ಕಿ ಲೇಹು ಅಜಸು ಕರಿ ನಾಹೀಂ । ಮೋಹಿ ನ ಬಹುತ ಪ್ರಪಂಚ ಸೋಹಾಹೀಂ ॥ ೩ ॥**

**ರಾಮು ಸಾಧು ತುಮ್ಹ ಸಾಧು ಸಯಾನೇ । ರಾಮಮಾತು ಭಲಿ ಸಬ ಪಹಿಚಾನೇ ॥**
**ಜಸ ಕೌಸಿಲಾಂ ಮೋರ ಭಲ ತಾಕಾ । ತಸ ಫಲು ಉನ್ಹಹಿ ದೇಉಂ ಕರಿ ಸಾಕಾ ॥ ೪ ॥**

ಬೇಕಾದರೆ ನೀರಿಲ್ಲದೆಯೂ ಮೀನು ಜೀವಿಸಿರಬಹುದು. ಮಣಿಯಿಲ್ಲದೆಯೂ ಹಾವು ದೀನವಾಗಿ ಬದುಕಿರಬಹುದು. ಆದರೆ ನಾನು ಸಹಜವಾಗಿ ಮುಚ್ಚುಮರೆಯಿಲ್ಲದೆ ಹೇಳುತ್ತೇನೆ – 'ರಾಮನಿಲ್ಲದೆ ನಾನು ಬದುಕಿರಲಾರೆನು.' ಎಲೈ ಚತುರಪ್ರಿಯೆ! ಚೆನ್ನಾಗಿ ಆಲೋಚಿಸಿ ನೋಡು. ನಾನು ಬದುಕಿರಲು ರಾಮದರ್ಶನವೇ ಆಧಾರವಾಗಿದೆ.'' ರಾಜನ ಹಿತವಚನಗಳನ್ನು ಕೇಳಿ ದುರ್ಬುದ್ಧಿಯಾದ ಕೈಕೇಯಿಯು ಬೆಂಕಿಗೆ ತುಪ್ಪ ಸುರಿದಂತೆ ಕ್ರೋಧಾಗ್ನಿಯಿಂದ ಉರಿದುಬಿದ್ದಳು. ಆಕೆಯು ಹೇಳಿದಳು – 'ನೀವು ಕೋಟಿ ಉಪಾಯಮಾಡಿದರೂ ನಿಮ್ಮ ಆಟ ನನ್ನೆದುರಿಗೆ ನಡೆಯದು. ಒಂದೋ ನಾನು ಕೇಳಿದ ವರವನ್ನು ಕೊಡಿ, ಇಲ್ಲವೇ ಕೊಡಲಾರೆ' ಎಂದು ಹೇಳಿ ಅಪಕೀರ್ತಿಯನ್ನು ಕಟ್ಟಿಕೊಳ್ಳಿರಿ. ನನಗೆ ಈ ಬಣ್ಣದಮಾತು ಬೇಡ. ರಾಮನು ಸಾಧುವು, ನೀವು ಪರಮಸಾಧುಗಳು. ರಾಮನ ತಾಯಿಯು ಕಡಿಮೆ ಸಾಧು ಅಲ್ಲ. ನಾನು ಎಲ್ಲರ ಬಣ್ಣವನ್ನೂ ನೋಡಿರುವೆ. ಕೌಸಲ್ಯೆಯು ನನಗೆ ಮಾಡಿದ ಒಳಿತಿನ ಫಲದಷ್ಟೇ ಪ್ರತಿಫಲವನ್ನು ಅವಳಿಗೆ ಸದಾಕಾಲ ನೆನಪಿನಲ್ಲಿ ಉಳಿಯುವಂತೆ ಕೊಡುತ್ತೇನೆ. (ಚೌ/೧-೪)

**ದೋ – ಹೋತ ಪ್ರಾತು ಮುನಿಬೇಷ ಧರಿ ಜೌಂ ನ ರಾಮು ಬನ ಜಾಹಿಂ ।**
**ಮೋರ ಮರನು ರಾಉರ ಅಜಸ ನೃಪ ಸಮುಝಿಅ ಮನ ಮಾಹಿಂ ॥ ೩೩ ॥**

ನಾಳೆ ಬೆಳಕು ಹರಿಯುತ್ತಲೇ ರಾಮನು ಮುನಿವೇಷವನ್ನು ತೊಟ್ಟು ಕಾಡಿಗೆ ಹೋಗದಿದ್ದರೆ, ಮಹಾರಾಜರೇ! ನಾನು ಪ್ರಾಣತ್ಯಾಗ ಮಾಡುತ್ತೇನೆ. ಇದು ನಿಶ್ಚಿತ. ಆದರಿಂದ ನೀವು ಅಪಕೀರ್ತಿ ಪಡೆಯುವುದೆಂದು ತಿಳಿಯಿರಿ. (ದೋ/೩೩)

**ಚೌ – ಅಸ ಕಹಿ ಕುಟಿಲ ಭಈ ಉಠಿ ಠಾಢೀ । ಮಾನಹುಂ ರೋಷ ತರಂಗಿನಿ ಬಾಢೀ ॥**
**ಪಾಪ ಪಹಾರ ಪ್ರಗಟ ಭಇ ಸೋಈ । ಭರೀ ಕ್ರೋಧ ಜಲ ಜಾಇ ನ ಜೋಈ ॥ ೧ ॥**
**ದೋಉ ಬರ ಕೂಲ ಕಠಿನ ಹಠ ಧಾರಾ । ಭವಂರ ಕೂಬರೀ ಬಚನ ಪ್ರಚಾರಾ ॥**
**ಢಾಹತ ಭೂಪರೂಪ ತರು ಮೂಲಾ । ಚಲೀ ಬಿಪತಿ ಬಾರಿಧಿ ಅನುಕೂಲಾ ॥ ೨ ॥**
**ಲಖೀ ನರೇಸ ಬಾತ ಫುರಿ ಸಾಂಚೀ । ತಿಯ ಮಿಸ ಮೀಚು ಸೀಸ ಪರ ನಾಚೀ ॥**
**ಗಹಿ ಪದ ಬಿನಯ ಕೀನ್ಹ ಬೈಠಾರೀ । ಜನಿ ದಿನಕರ ಕುಲ ಹೋಸಿ ಕುಠಾರೀ ॥ ೩ ॥**
**ಮಾಗು ಮಾಥ ಅಬಹೀಂ ದೇಉಂ ತೋಹೀ । ರಾಮ ಬಿರಹಂ ಜನಿ ಮಾರಸಿ ಮೋಹೀ ॥**
**ರಾಖು ರಾಮ ಕಹುಂ ಜೆಹಿ ತೆಹಿ ಭಾಂತೀ । ನಾಹಿಂ ತ ಜರಿಹಿ ಜನಮ ಭರಿ ಛಾತೀ ॥ ೪ ॥**

ಹೀಗೆ ಹೇಳಿ ಆ ಕುಟಿಲ ಕೈಕೇಯಿಯು ಪಟ್ಟನೆ ಎದ್ದುನಿಂತಳು. ಪಾಪವೆಂಬ ಪರ್ವತದಲ್ಲಿ ಹುಟ್ಟಿದ ಕ್ರೋಧವೆಂಬ ಜಲದಿಂದೊಡಗೂಡಿದ ಕ್ರೋಧನದಿಯು ಮಹಾಪೂರದಿಂದ ಹರಿಯುವಂತಹ ಆ ನದಿಯು ನೋಡಲಾಗದಷ್ಟು ಭಯಂಕರವಾಗಿತ್ತು. ಎರಡು ವರಗಳೇ ಆ ನದಿಯ ಎರಡು ದಂಡೆಗಳು. ಕೈಕೇಯಿಯ ಕಠೋರ ಹಟವೇ ಆ ನದಿಯ ತೀವ್ರ ಪ್ರವಾಹ. ಗೂನಿ ಮಂಥರೆಯ ಮಾತಿನ ಚಿತಾವಣೆಯೇ ಅದರ ಸುಳಿ. ಅದು ದಶರಥ ಮಹಾರಾಜನೆಂಬ ಮರವನ್ನು ಬೇರುಸಹಿತ ಉರುಳಿಸುತ್ತಾ ವಿಪತ್ತೆಂಬ ಸಮುದ್ರದ ಕಡೆಗೆ ಧಾವಿಸುತ್ತಿತ್ತು. ಕೈಕೇಯಿಯು ಆ ವರಗಳನ್ನು ನಿಜವಾಗಿಯೇ ಕೇಳುತ್ತಿದ್ದಾಳೆ ಎಂದು ರಾಜನಿಗೆ ಮನವರಿಕೆಯಾಯಿತು. ಹೆಂಡತಿಯ ನೆಪದಲ್ಲಿ ಮೃತ್ಯುವು ತನ್ನ ತಲೆಯ ಮೇಲೆ ಕುಣಿಯುತ್ತಿದೆ ಎಂದು ಅವನಿಗೆನಿಸಿತು. ಅನಂತರ ಅವನು ಆಕೆಯ ಕಾಲುಹಿಡಿದು ಕುಳ್ಳಿರಿಸಿಕೊಂಡು ಬೇಡಿಕೊಂಡನು – ''ನೀನು ಸೂರ್ಯಕುಲವೆಂಬ ಮರಕ್ಕೆ ಕೊಡಲಿಯಾಗಬೇಡ. ಬೇಕಾದರೆ ನನ್ನ ತಲೆಯನ್ನೇ ಬೇಡು, ಈಗಲೇ ಕೊಟ್ಟುಬಿಡುತ್ತೇನೆ. ಆದರೆ ರಾಮವಿರಹದಲ್ಲಿ ನನ್ನನ್ನು ತಳ್ಳಿ ಕೊಲ್ಲಬೇಡ. ಹೇಗಾದರೂ ಮಾಡಿ ನೀನು ರಾಮನನ್ನು ಉಳಿಸಿಕೊಡು. ಇಲ್ಲವಾದರೆ ಸಾಯುವತನಕ ನಿನಗೆ ಹೃದಯವೇದನೆ ತಪ್ಪದು.'' (ಚೌ/೧-೪)

## ದಶರಥನ ಪರಿತಾಪ

**ದೋ – ದೇಖೀ ಬ್ಯಾಧಿ ಅಸಾಧ ನೃಪು ಪರೆಉ ಧರನಿ ಧುನಿ ಮಾಥ ।**
**ಕಹತ ಪರಮ ಆರತ ಬಚನ ರಾಮ ರಾಮ ರಘುನಾಥ ॥ ೩೪ ॥**

ಕೈಕೇಯಿಯು ಹಿಡಿದಿರುವ ಪಟ್ಟುವೆಂಬ ರೋಗವು ಅಸಾಧ್ಯವಾದುದು ಎಂದು ವಿಚಾರಮಾಡಿ ರಾಜನು ಅತ್ಯಂತ ಆರ್ತನಾಗಿ – ಅಯ್ಯೋ! ರಾಮಾ! ರಾಮಾ! ರಘುರಾಮಾ! ಹೀಗೆ ಹೇಳುತ್ತಾ ತಲೆಚಚ್ಚಿಕೊಂಡು ನೆಲಕ್ಕುರುಳಿದನು. (ದೋ/೩೪)

**ಚೌ – ಬ್ಯಾಕುಲ ರಾಉ ಸಿಥಿಲ ಸಬ ಗಾತಾ । ಕರಿನಿ ಕಲಪತರು ಮನಹುಂ ನಿಪಾತಾ ॥**
**ಕಂಠು ಸೂಖ ಮುಖ ಆವ ನ ಬಾನೀ । ಜನು ಪಾಠೀನು ದೀನ ಬಿನು ಪಾನೀ ॥ ೧ ॥**

**ಪುನಿ ಕಹ ಕಟು ಕಠೋರ ಕೈಕೇಈ । ಮನಹುঁ ಘಾಯ ಮಹುঁ ಮಾಹುರ ದೇಈ ॥**
**ಜೌঁ ಅಂತಹುঁ ಅಸ ಕರತಬು ರಹೇಊ । ಮಾಗು ಮಾಗು ತುಮ್ಹ ಕೇಹಿঁ ಬಲ ಕಹೇಊ ॥ ೨ ॥**
**ದುಇ ಕಿ ಹೋಇ ಏಕ ಸಮಯ ಭುಆಲಾ । ಹঁಸಬ ಠಠಾಇ ಫುಲಾಉಬ ಗಾಲಾ ॥**
**ದಾನಿ ಕಹಾಉಬ ಅರು ಕೃಪನಾಈ । ಹೋಇ ಕಿ ಖೇಮ ಕುಸಲ ರೌತಾಈ ॥ ೩ ॥**
**ಛಾಡಹು ಬಚನು ಕಿ ಧೀರಜು ಧರಹೂ । ಜನಿ ಅಬಲಾ ಜಿಮಿ ಕರುನಾ ಕರಹೂ ॥**
**ತನು ತಿಯ ತನಯ ಧಾಮು ಧನು ಧರನೀ । ಸತ್ಯಸಂಧ ಕಹುঁ ತೃನ ಸಮ ಬರನೀ ॥ ೪ ॥**

ದಶರಥನು ಅತ್ಯಂತ ವ್ಯಾಕುಲನಾದನು. ಕಲ್ಪವೃಕ್ಷವನ್ನು ಒಂದು ಹೆಣ್ಣಾನೆಯು ಕಿತ್ತೆಸೆಯುವಂತೆ ಅವನ ಶರೀರ ಶಿಥಿಲವಾಯಿತು. ಗಂಟಲು ಒಣಗಿತ್ತು. ಬಾಯಿಂದ ಮಾತೇ ಹೊರಡದು. ನೀರಿಲ್ಲದೆ ಚಡಪಡಿಸುವ ಮೀನಿನಂತೆ ವಿಲವಿಲನೆ ಒದ್ದಾಡಿದನು. ಹುಣ್ಣಿಗೆ ವಿಷವುಣಿಸುವಂತೆ ಕೈಕೆಯಿಯು ಪುನಃ ಕಠೋರವಾಗಿ ಹೀಗೆ ಆಡಿದಳು – ಹೀಗೆ ನೀವು ಹಳಿಹಳಿಸುವುದಾಗಿದ್ದರೆ ವರಬೇಡು-ಬೇಡು ಎಂದು ಯಾವ ಧೈರ್ಯದಿಂದ ಹೇಳಿದಿರಿ? ಆರಸ! ಅಟ್ಟಹಾಸ ತೋರಿ ನಗುವುದು, ಮೋರೆ ಸಿಂಡರಿಸಿಕೊಳ್ಳುವುದು ಎರಡೂ ಒಂದೇ ಸಲ ಸಾಧ್ಯವೇ? ಕಂಜೂಸಿ ಆಗಿದ್ದು, ದಾನಿ ಎನಿಸಿಕೊಳ್ಳಲು ಸಾಧ್ಯವೇ? ಹಾಗೆಯೇ ಯುದ್ಧದಲ್ಲಿ ಪರಾಕ್ರಮವನ್ನು ತೋರಬೇಕು. ಆದರೆ ಮೈಗೆ ಗಾಯವಾಗಬಾರದು, (ಅಕ್ಕಿಯ ಮೇಲೆ ಆಸೆ, ನೆಂಟರಮೇಲೆ ಪ್ರೀತಿ ಎನ್ನುವಂತೆ) ಇದು ಹೇಗೆ ಸಾಧ್ಯ? ಒಂದೋ ಪ್ರತಿಜ್ಞೆಯನ್ನು ಬಿಡಿರಿ, ಇಲ್ಲವೇ ಧೈರ್ಯ ತಳೆದು ವರ್ತಿಸಿರಿ. ಆದರೆ ಅಬಲೆ ಸ್ತ್ರೀಯಂತೆ ಅತ್ತು-ಕರೆದು ಮಾಡಬೇಡಿ. ಸತ್ಯಸಂಧರಿಗೆ ಶರೀರ, ಹೆಂಡತಿ, ಮಗ, ಮನೆ, ಮಠ, ಧನ, ನೆಲ ಇವೆಲ್ಲ ಹುಲ್ಲುಕಡ್ಡಿಗೆ ಸಮವೆಂದು ಹೇಳಲಾಗಿದೆ. (ಚೌ/೧-೪)

**ದೋ – ಮರಮ ಬಚನ ಸುನಿ ರಾಉ ಕಹ ಕಹು ಕಛು ದೋಷು ನ ತೋರ ।**
**ಲಾಗೆಉ ತೋಹಿ ಪಿಸಾಚ ಜಿಮಿ ಕಾಲು ಕಹಾವತ ಮೋರ ॥ ೩೫ ॥**

ಕೈಕೆಯಿಯ ಮರ್ಮಭೇದಕ ವಚನಗಳನ್ನು ಕೇಳಿ, ದಶರಥನು ಇಂತೆಂದನು – ನೀನು ಏನು ಬೇಕಾದರೂ ಹೇಳು. ಇದರಲ್ಲಿ ನಿನ್ನ ದೋಷವೇನೂ ಇಲ್ಲ. ನನ್ನ ಮೃತ್ಯುವೇ ಪಿಶಾಚಿಯಾಗಿ ಬಂದು ನಿನ್ನನ್ನು ಹಿಡಿದು ಈ ರೀತಿ ಮಾತನಾಡಿಸುತ್ತಿದೆ. (ದೋ/೩೫)

**ಚೌ – ಚಹತ ನ ಭರತ ಭೂಪತಹಿ ಭೋರೇঁ । ಬಿಧಿ ಬಸ ಕುಮತಿ ಬಸೀ ಜಿಯ ತೋರೇঁ ॥**
**ಸೋ ಸಬು ಮೋರ ಪಾಪ ಪರಿನಾಮೂ । ಭಯಉ ಕುಠಾಹರ ಜೇಹಿঁ ಬಿಧಿ ಬಾಮೂ ॥ ೧ ॥**
**ಸುಬಸ ಬಸಿಹಿ ಫಿರಿ ಅವಧ ಸುಹಾಈ । ಸಬ ಗುನ ಧಾಮ ರಾಮ ಪ್ರಭುತಾಈ ॥**
**ಕರಿಹಹಿঁ ಭಾಇ ಸಕಲ ಸೇವಕಾಈ । ಹೋಇಹಿ ತಿಹುঁ ಪುರ ರಾಮ ಬಡಾಈ ॥ ೨ ॥**
**ತೋರ ಕಲಂಕು ಮೋರ ಪಛಿತಾಊ । ಮುಏಹುঁ ನ ಮಿಟಿಹಿ ನ ಜಾಇಹಿ ಕಾಊ ॥**
**ಅಬ ತೊಹಿ ನೀಕ ಲಾಗ ಕರು ಸೋಈ । ಲೋಚನ ಓಟ ಬೈಠು ಮುಹು ಗೋಈ ॥ ೩ ॥**
**ಜಬ ಲಗಿ ಜಿಔঁ ಕಹಉঁ ಕರ ಜೋರೀ । ತಬ ಲಗಿ ಜನಿ ಕಛು ಕಹಸಿ ಬಹೋರೀ ॥**
**ಫಿರಿ ಪಛಿತೈಹಸಿ ಅಂತ ಅಭಾಗೀ । ಮಾರಸಿ ಗಾಇ ನಹಾರೂ ಲಾಗೀ ॥ ೪ ॥**

ಭರತನು ತಾನು ಯುವರಾಜನಾಗಬೇಕೆಂದು ಮರೆತಾದರೂ ಬಯಸನು. ವಿಧಿಯ ವೈಪರೀತ್ಯದಿಂದ ನಿನ್ನಲ್ಲಿ ಈ ದುರ್ಬುದ್ಧಿಯು ಹುಟ್ಟಿಕೊಂಡಿದೆ. ಇದೆಲ್ಲವೂ ನನ್ನ ಪಾಪಗಳ ಪರಿಣಾಮವಾಗಿದೆ. ಅದರಿಂದಲೇ ವಿಧಿಯು ಅಸಮಯದಲ್ಲಿ ನನ್ನ ಪಾಲಿಗೆ ಪ್ರತಿಕೂಲವಾಗಿದೆ. ನಿನ್ನಿಂದ ಹಾಳಾಗಿಸಲ್ಪಟ್ಟ ಸರ್ವಾಂಗಸುಂದರವಾದ ಈ ಅಯೋಧ್ಯೆಯು ಶ್ರೀರಾಮನ ಆಳ್ವಿಕೆಯಿಂದ ಮರಳಿ ನಳನಳಿಸೀತು. ಸೋದರರೆಲ್ಲರೂ ಅವನ ಸೇವೆ ಮಾಡುವರು. ಶ್ರೀರಾಮನ ಕೀರ್ತಿಯು ತ್ರಿಭುವನಗಳಲ್ಲಿಯೂ ವ್ಯಾಪಿಸೀತು. ಆದರೆ ನಿನ್ನ ಕಳಂಕ ಮತ್ತು ನನ್ನ ಪಶ್ಚಾತ್ತಾಪವು ನಮ್ಮ ಮರಣಾನಂತರವೂ ಅಳಿದುಹೋಗದು. ಈಗ ನೀನು ಇಷ್ಟಬಂದಂತೆ ಮಾಡು. ನನ್ನ ಎದುರಿನಿಂದ ಹೊರಟುಹೋಗು. ನಿನ್ನ ಮೋರೆ ತೋರಿಸಬೇಡ. ನಾನು ಕೈಮುಗಿದು ಕೇಳಿಕೊಳ್ಳುತ್ತೇನೆ. ನಾನು ಬದುಕಿರುವತನಕ ನೀನು ನನ್ನೆದುರಿಗೆ, ನನ್ನೊಂದಿಗೆ ಮಾತಾಡಬೇಡ. ಎಲೈ ನಿರ್ಭಾಗ್ಯಳೇ! ಕೊನೆಗೆ ನೀನು ಪಶ್ಚಾತ್ತಾಪ ಪಡುತ್ತೀಯೆ. ನೀನು ಸಣ್ಣ ಚರ್ಮದ ತುಂಡಿಗಾಗಿ ಹಸುವನ್ನೇ ಕೊಲ್ಲುತ್ತಿದ್ದೀಯೆ. (ರಾಜಮಾತೆ ಎಂದು ಕರೆಸಿಕೊಳ್ಳಲು ಪತಿಯನ್ನೇ ವಧಿಸುತ್ತಿರುವೆ.) (ಚೌ/೧-೪)

**ದೋ – ಪರೆಉ ರಾಉ ಕಹಿ ಕೋಟಿ ಬಿಧಿ ಕಾಹೇ ಕರಸಿ ನಿದಾನು ।**
**ಕಪಟ ಸಯಾನಿ ನ ಕಹತಿ ಕಛು ಜಾಗತಿ ಮನಹುঁ ಮಸಾನು ॥ ೩೬ ॥**

ಎಷ್ಟೋ ವಿಧದಿಂದ ಸಮಜಾಯಿಸಿ, 'ನೀನು ಸರ್ವನಾಶ ಮಾಡುತ್ತಿರುವೆ' ಎಂದು ಹೇಳುತ್ತಾ ರಾಜನು ನೆಲಕ್ಕುರುಳಿದನು. ಆದರೆ ಕಪಟಪಟುವಾದ ಕೈಕೆಯಿಯು ಸ್ಮಶಾನದಲ್ಲಿ ಮೌನವಾಗಿ ಪ್ರೇತಗಳನ್ನು ಆಹ್ವಾನಿಸುವವಳಂತೆ ತುಟಿಪಿಟಕ್ಕೆನ್ನಲಿಲ್ಲ. (ದೋ/೩೬)

**ಚೌ – ರಾಮ ರಾಮ ರಟ ಬಿಕಲ ಭುಆಲೂ। ಜನು ಬಿನು ಪಂಖ ಬಿಹಂಗ ಬೆಹಾಲೂ॥**
**ಹೃದಯ್ ಮನಾವ ಭೋರು ಜನಿ ಹೋಈ। ರಾಮಹಿ ಜಾಇ ಕಹೈ ಜನಿ ಕೋಈ॥ ೧ ॥**
**ಉದಉ ಕರಹು ಜನಿ ರಬಿ ರಘುಕುಲ ಗುರ। ಅವಧ ಬಿಲೋಕಿ ಸೂಲ ಹೋಇಹಿ ಉರ॥**
**ಭೂಪ ಪ್ರೀತಿ ಕೈಕಇ ಕಠಿನಾಈ। ಉಭಯ ಅವಧಿ ಬಿಧಿ ರಚೀ ಬನಾಈ ॥ ೨ ॥**
**ಬಿಲಪತ ನೃಪಹಿ ಭಯಉ ಭಿನುಸಾರಾ। ಬೀನಾ ಬೇನು ಸಂಖ ಧುನಿ ದ್ವಾರಾ ॥**
**ಪಢಹಿಂ ಭಾಟ ಗುನ ಗಾವಹಿಂ ಗಾಯಕ। ಸುನತ ನೃಪಹಿ ಜನು ಲಾಗಹೀಂ ಸಾಯಕ॥ ೩ ॥**
**ಮಂಗಲ ಸಕಲ ಸೊಹಾಹಿಂ ನ ಕೈಸೇ। ಸಹಗಾಮಿನಿಹಿ ಬಿಭೂಷನ ಜೈಸೇ॥**
**ತೆಹಿಂ ನಿಸಿ ನೀದ ಪರೀ ನಹಿಂ ಕಾಹೂ। ರಾಮ ದರಸ ಲಾಲಸಾ ಉಛಾಹೂ ॥ ೪ ॥**

ದಶರಥನು ರಾಮಾ! ರಾಮಾ! ಎಂದು ವಿಲಾಪಿಸುತ್ತಾ ರೆಕ್ಕೆ ಮುರಿದ ಪಕ್ಷಿಯಂತೆ ಒದ್ದಾಡುತ್ತಿದ್ದನು. 'ಬೆಳಗಾದರೆ ಎಲ್ಲಿ ರಾಮನಿಗೆ ಈ ಸುದ್ದಿ ಮುಟ್ಟಿಸುವರೋ, ಎಂದಿಗೂ ಬೆಳಗಾಗದಿರಲಿ' ಎಂದು ಹಾರೈಸುತ್ತಿದ್ದನು. 'ಓ ರಘುಕುಲದ ಮೂಲಪುರುಷನೇ! ಸೂರ್ಯ ಭಗವಂತನೇ! ನೀನು ಉದಯಿಸಲೇ ಬೇಡ. ಅಯೋಧ್ಯೆಯ ದುರ್ದಶೆಯನ್ನು ಕಂಡು ನಿನಗೆ ಅಪಾರವೇದನೆಯಾದೀತು' ಎಂದು ಸೂರ್ಯನನ್ನು ಬೇಡುತ್ತಿದ್ದನು. ರಾಜನ ಪ್ರೇಮವನ್ನು, ಕೈಕೇಯಿಯ ಕಾಠಿಣ್ಯವನ್ನು ವಿಧಾತನು ಪರಾಕಾಷ್ಠೆಗೆ ತಲುಪಿಸಿದನು. ರಾಜನು ವಿಲಾಪಿಸುತ್ತಿರುವಂತೆಯೇ ಬೆಳಕು ಹರಿಯಿತು. ರಾಜದ್ವಾರದಲ್ಲಿ ವೀಣಾವೇಣುಮೃದಂಗ ಶಂಖಧ್ವನಿಗಳು ಮೊಳಗಿದವು. ವಂದಿಮಾಗಧರು ಬಿರುದುಬಾವಲಿಗಳನ್ನು ಉಗ್ಗಡಿಸತೊಡಗಿದರು. ಗಾಯಕರು ಗುಣಗಾನ ಮಾಡತೊಡಗಿದರು. ಆದರೆ ಇಂದು ಅವು ರಾಜನ ಕಿವಿಗಳಿಗೆ ಶೂಲದಂತೆ ಚುಚ್ಚಿದವು. ಪತಿಯೊಡನೆ ಸಹಗಮನ ಗೈಯ್ಯುವ ಸ್ತ್ರೀಗೆ ಒಡವೆಗಲು ಹಿಡಿಸಿಯಾವೆ? ಅಂತೆಯೇ ರಾಜನಿಗೂ ಈ ಮಂಗಳಗಾನಗಳು ಕರ್ಣಕರ್ಕಶವಾಗಿ ಕಂಡಿತು. ಬೆಳಗಾದಾಗ ಪಟ್ಟಾಭಿಷಿಕ್ತನಾಗುವ ಶ್ರೀರಾಮಚಂದ್ರನನ್ನು ನೋಡಬಹುದೆಂಬ ಬಯಕೆಯಿಂದ ನಗರವಾಸಿಗಳಿಗೆ ಆ ರಾತ್ರಿ ನಿದ್ದೆಯೇ ಇರಲಿಲ್ಲ. (ಚೌ/೧-೪)

**ದೋ – ದ್ವಾರ ಭೀರ ಸೇವಕ ಸಚಿವ ಕಹಹಿಂ ಉದಿತ ರಬಿ ದೇಖಿ।**
**ಜಾಗೆಉ ಅಜಹುಁ ನ ಅವಧಪತಿ ಕಾರನು ಕವನು ಬಿಸೇಷಿ ॥ ೩೭ ॥**

ರಾಜದ್ವಾರದಲ್ಲಿ ಮಂತ್ರಿಗಳು, ಸೇವಕರು, ತಂಡ-ತಂಡವಾಗಿ ನೆರೆದಿದ್ದರು. 'ಸೂರ್ಯೋದಯವಾದರೂ ದಶರಥ ಮಹಾರಾಜರು ಇನ್ನೂ ಎಚ್ಚರವಾಗದಿರಲು ಏನು ವಿಶೇಷ ಕಾರಣವಿರಬಹುದು?' ಎಂದು ಅವರೆಲ್ಲರೂ ತಮ್ಮ-ತಮ್ಮಲ್ಲೇ ಆಡಿಕೊಳ್ಳುತ್ತಿದ್ದರು. (ದೋ/೩೭)

**ಚೌ – ಪಛಿಲೇ ಪಹರ ಭೂಪು ನಿತ ಜಾಗಾ। ಆಜು ಹಮಹಿ ಬಡ ಅಚರಜು ಲಾಗಾ ॥**
**ಜಾಹು ಸುಮಂತ್ರ ಜಗಾವಹು ಜಾಈ। ಕೀಜಿಅ ಕಾಜು ರಜಾಯಸು ಪಾಈ ॥ ೧ ॥**
**ಗಏ ಸುಮಂತ್ರು ತಬ ರಾಉರ ಮಾಹೀಂ। ದೇಖಿ ಭಯಾವನ ಜಾತ ಡೆರಾಹೀಂ ॥**
**ಧಾಇ ಖಾಇ ಜನು ಜಾಇ ನ ಹೇರಾ। ಮಾನಹುಁ ಬಿಪತಿ ಬಿಷಾದ ಬಸೇರಾ ॥ ೨ ॥**
**ಪೂಛೇಂ ಕೋಉ ನ ಊತರು ದೇಈ। ಗಏ ಜೆಹಿಂ ಭವನ ಭೂಪ ಕೈಕೇಈ॥**
**ಕಹಿ ಜಯಜೀವ ಬೈಠ ಸಿರು ನಾಈ। ದೇಖಿ ಭೂಪ ಗತಿ ಗಯಉ ಸುಖಾಈ ॥ ೩ ॥**
**ಸೋಚ ಬಿಕಲ ಬಿಬರನ ಮಹಿ ಪರೆಊ। ಮಾನಹುಁ ಕಮಲ ಮೂಲು ಪರಿಹರೆಊ॥**
**ಸಚಿಉ ಸಭೀತ ಸಕಇ ನಹಿಂ ಪೂಛೀ। ಬೋಲೀ ಅಸುಭ ಭರೀ ಸುಭ ಛೂಛೀ ॥ ೪ ॥**

ಮಹಾರಾಜರು ರಾತ್ರಿಯ ಕೊನೆಯ ಜಾವದಲ್ಲೇ ಎದ್ದು ಬಿಡುತ್ತಿದ್ದರು. ಆದರೆ ಇಂದು ಇಷ್ಟರವರೆಗೆ ಮಲಗಿರುವುದು ನೋಡಿದರೆ ನಮಗೆ ತುಂಬಾ ಆಶ್ಚರ್ಯವಾಗುತ್ತಿದೆ. ಎಲೈ ಸಮಂತ್ರ! ನೀನು ಹೋಗಿ ಮಹಾರಾಜರನ್ನು ಎಚ್ಚರಿಸು. ಅವರ ಅಪ್ಪಣೆ ಪಡೆದು ನಾವೆಲ್ಲ ಕೆಲಸಕ್ಕೆ ತೊಡಗೋಣ. ಆಗ ಮಹಾಮಂತ್ರಿ ಸುಮಂತ್ರನು ಅರಮನೆಯನ್ನು ಪ್ರವೇಶಿಸುತ್ತಲೇ ಅಲ್ಲಿಯ ವಿಷಾದಕರ ದೃಶ್ಯವನ್ನು ನೋಡಿ ಭಯಗೊಂಡನು. ಅಲ್ಲಿ ಅದೃಶ್ಯವಾಗಿದ್ದ ಯಾವುದೋ ಭೂತವು ತನ್ನನ್ನು ತಿನ್ನಲು ಬರುತ್ತದೋ ಎಂದು ಅವನಿಗೆ ಅನಿಸಿತು. ವಿಷಾದ ಹಾಗೂ ವಿಪತ್ತಿಗಳು ಅಲ್ಲಿ ಬೀಡುಬಿಟ್ಟಿರುವಂತೆ ಕಂಡಿತು. ಕೇಳಿದರೆ ಯಾರೂ

ಮಾತಾಡಲೊಲ್ಲರು. ಕೊನೆಗೆ ಅವನು ದಶರಥ ಮಹಾರಾಜರು, ಕೈಕೇಯಿಯು ಇದ್ದ ಮಂದಿರವನ್ನು ಪ್ರವೇಶಿಸಿದನು. 'ಮಹಾರಾಜರಿಗೆ ಜಯವಾಗಲೀ' ಎಂದು ತಲೆವಾಗಿ ವಂದಿಸಿ ಕುಳಿತುಕೊಂಡನು. ಮಹಾರಾಜರ ಸ್ಥಿತಿಯನ್ನು ನೋಡಿ ಮಂತ್ರಿಯು ಚಿಂತಾಕ್ರಾಂತನಾದನು. ಸರೋವರದಿಂದ ಕಿತ್ತು ಬಿಸಾಡಿದ ಕಮಲದಂತೆ ಮಹಾರಾಜರು ನೆಲದ ಮೇಲೆ ಬಿದ್ದಿರುವರು. ಅವರ ಮುಖವು ಬಿಳಿಚಿಹೋಗಿ, ಚಿಂತಾಕುಲರಾಗಿದ್ದಾರೆ. ಭಯದಿಂದ ಮಂತ್ರಿಯ ಬಾಯಿಂದ ಮಾತೇ ಹೊರಡದು. ಆಗ ಅಮಂಗಳಳೂ, ಶುಭಹೀನಳೂ ಆದ ಕೈಕೇಯಿಯು ಇಂತು ನುಡಿದಳು – (ಚೌ/೧-೪)

**ದೋ – ಪರೀ ನ ರಾಜಹಿ ನೀದ ನಿಸಿ ಹೇತು ಜಾನ ಜಗದೀಸು ।**
**ರಾಮು ರಾಮು ರಟಿ ಭೋರು ಕಿಯ ಕಹಇ ನ ಮರಮು ಮಹೀಸು ॥ ೩೮ ॥**

''ಮಹಾರಾಜರಿಗೆ ರಾತ್ರಿಯೆಲ್ಲ ನಿದ್ದೆ ಬರಲಿಲ್ಲ. ಅದರ ಕಾರಣ ಜಗದೀಶ್ವರನೇ ಬಲ್ಲ! ಬೆಳಗಾಗುವವರೆಗೆ ರಾಮಾ! ರಾಮಾ! ಎಂದು ಒರಲುತ್ತಲೇ ಇದ್ದರು. ಆದರೆ ಏಕೆ ಎನ್ನುವುದು ಅವರು ಹೇಳಲೊಲ್ಲರು. (ದೋ/೩೮)

**ಚೌ – ಆನಹು ರಾಮಹಿ ಬೇಗಿ ಬೊಲಾಈ । ಸಮಾಚಾರ ತಬ ಪೂಁಛೆಹು ಆಈ ॥**
**ಚಲೆಉ ಸುಮಂತ್ರು ರಾಯ ರುಖ ಜಾನೀ । ಲಖೀ ಕುಚಾಲಿ ಕೀನ್ಹಿ ಕಛು ರಾನೀ ॥ ೧ ॥**
**ಸೋಚ ಬಿಕಲ ಮಗ ಪರಇ ನ ಪಾಊ । ರಾಮಹಿ ಬೋಲಿ ಕಹಿಹಿ ಕಾ ರಾಊ ॥**
**ಉರ ಧರಿ ಧೀರಜು ಗಯಉ ದುಆರೇಂ । ಪೂಁಛಹಿಂ ಸಕಲ ದೇಖಿ ಮನು ಮಾರೇಂ ॥ ೨ ॥**
**ಸಮಾಧಾನು ಕರಿ ಸೋ ಸಬಹೀ ಕಾ । ಗಯಉ ಜಹಾಁ ದಿನಕರ ಕುಲ ಟೀಕಾ ॥**
**ರಾಮ ಸುಮಂತ್ರಹಿ ಆವತ ದೇಖಾ । ಆದರು ಕೀನ್ಹ ಪಿತಾ ಸಮ ಲೇಖಾ ॥ ೩ ॥**
**ನಿರಖಿ ಬದನು ಕಹಿ ಭೂಪ ರಜಾಈ । ರಘುಕುಲದೀಪಹಿ ಚಲೆಉ ಲೆವಾಈ ॥**
**ರಾಮು ಕುಭಾಂತಿ ಸಚಿವ ಸಁಗ ಜಾಹೀಂ । ದೇಖಿ ಲೋಗ ಜಹಁ ತಹಁ ಬಿಲಖಾಹೀಂ ॥ ೪ ॥**

ಸುಮಂತ್ರಾ! ನೀನು ಬೇಗನೇ ರಾಮನನ್ನು ಕರೆದು ತಾ. ಅನಂತರ ಕ್ಷೇಮಸಮಾಚಾರ ಕೇಳುವಿಯಂತೆ.'' ಮಹಾರಾಜರ ಮುಖಭಂಗಿಯನ್ನು ಕಂಡು, ರಾಣಿಯು ಏನೋ ಕುತಂತ್ರ ನಡೆಸಿರುವಳು ಎಂದು ಊಹಿಸಿ ಸುಮಂತ್ರನು ಅಲ್ಲಿಂದ ಹೊರಟುಹೋದನು. ಸುಮಂತ್ರನು ಯೋಚನೆಯಿಂದ ವಿಕಳನಾಗಿದ್ದನು. ಮುಂದಕ್ಕೆ ಕಾಲು ಬೀಳಲೊಲ್ಲದು. ಅವನು ಯೋಚಿಸುತ್ತಾನೆ – ರಾಮನನ್ನು ಕರೆದು ಅರಸರು ಏನು ಹೇಳುವರು? ಧೈರ್ಯ ತಂದುಕೊಂಡು ಅವನು ಮಹಾದ್ವಾರಕ್ಕೆ ಬಂದನು. ಅವನ ಸಪ್ಪೆಮೋರೆಯನ್ನು ಕಂಡು ಎಲ್ಲ ಜನರೂ ಅವನನ್ನು 'ಏನು ಸಮಾಚಾರ' ಎಂದು ಕೇಳತೊಡಗಿದರು. ಎಲ್ಲರಿಗೂ ಸಮಯೋಚಿತ ಮಾತುಗಳನ್ನು ಹೇಳಿ, ಸಮಾಧಾನಪಡಿಸಿ, ಅವನು ಸೂರ್ಯಕುಲತಿಲಕನಾದ ಶ್ರೀರಾಮಚಂದ್ರನ ಮಂದಿರವನ್ನು ತಲುಪಿದನು. ಸುಮಂತ್ರನು ಬರುತ್ತಿರುವುದನ್ನು ಕಂಡು ಶ್ರೀರಾಮನು ಆತನನ್ನು ತಂದೆಯಂತೆ ಆದರಿಸಿದನು. ಸುಮಂತ್ರನು ರಾಜಾಜ್ಞೆಯನ್ನು ತಿಳಿಸಿದನು ಹಾಗೂ ಅವನನ್ನು ತನ್ನೊಡನೆ ಕರೆದೊಯ್ದನು. ಶ್ರೀರಾಮನು ಮಂತ್ರಿಯಜೊತೆ ಛತ್ರ, ಚಾಮರಾದಿ ರಾಜಚಿಹ್ನೆಗಳಿಲ್ಲದೆ ಕಾಲ್ನಡಿಗೆಯಲ್ಲಿ ಹೋಗುತ್ತಿರುವುದನ್ನು ನೋಡಿ ಪ್ರಜೆಗಳು ಅಲ್ಲಲ್ಲಿ ದುಃಖಿಸುತ್ತಿದ್ದರು. (ಚೌ/೧-೪)

**ದೋ – ಜಾಇ ದೀಖ ರಘುಬಂಸಮನಿ ನರಪತಿ ನಿಪಟ ಕುಸಾಜು ।**
**ಸಹಮಿ ಪರೆಉ ಲಖಿ ಸಿಂಘಿನಿಹಿ ಮನಹುಁ ಬೃದ್ಧ ಗಜರಾಜು ॥ ೩೯ ॥**

ಸಿಂಹಿಣಿಯನ್ನು ಕಂಡು ಹೆದರಿ ಮುದಿ ಸಲಗವೊಂದು ನೆಲದಲ್ಲಿ ಬಿದ್ದಿರುವಂತೆ, ಶೋಕಸಂತಪ್ತ ಹೃದಯದಿಂದೊಡಗೊಂಡು ಅಸ್ತವ್ಯಸ್ತವಾಗಿ ಬಿದ್ದಿರುವ ಮಹಾರಾಜರನ್ನು ಶ್ರೀರಾಮಚಂದ್ರನು ನೋಡಿದನು. (ದೋ/೩೯)

**ಚೌ – ಸೂಖಹಿಂ ಅಧರ ಜರಇ ಸಬು ಅಂಗೂ । ಮನಹುಁ ದೀನ ಮನಿಹೀನ ಭುಅಂಗೂ ॥**
**ಸರುಷ ಸಮೀಪ ದೀಖಿ ಕೈಕೇಈ । ಮಾನಹುಁ ಮೀಚು ಘರೀಂ ಗನಿ ಲೇಈ ॥ ೧ ॥**
**ಕರುನಾಮಯ ಮೃದು ರಾಮ ಸುಭಾಊ । ಪ್ರಥಮ ದೀಖ ದುಖು ಸುನಾ ನ ಕಾಊ ॥**
**ತದಪಿ ಧೀರ ಧರಿ ಸಮಉ ಬಿಚಾರೀ । ಪೂಁಛೀ ಮಧುರ ಬಚನ ಮಹತಾರೀ ॥ ೨ ॥**
**ಮೊಹಿ ಕಹು ಮಾತು ತಾತ ದುಖ ಕಾರನ । ಕರಿಅ ಜತನ ಜೆಹಿಂ ಹೋಇ ನಿವಾರನ ॥**
**ಸುನಹು ರಾಮ ಸಬು ಕಾರನ ಏಹೂ । ರಾಜಹಿ ತುಮ್ಹ ಪರ ಬಹುತ ಸನೇಹೂ ॥ ೩ ॥**
**ದೇನ ಕಹೆನ್ಹಿ ಮೊಹಿ ದುಇ ಬರದಾನಾ । ಮಾಗೆಉಁ ಜೋ ಕಛು ಮೋಹಿ ಸೊಹಾನಾ ॥**
**ಸೋ ಸುನಿ ಭಯಉ ಭೂಪ ಉರ ಸೋಚೂ । ಛಾಡಿ ನ ಸಕಹಿಂ ತುಮ್ಹಾರ ಸಁಕೋಚೂ ॥ ೪ ॥**

ಅರಸನ ತುಟಿ ಒಣಗಿ ಹೋಗಿವೆ. ಮೈಯೆಲ್ಲ ಸುಡುತ್ತಿದೆ. ಮಣಿಯಿಲ್ಲದೆ ನರಳುವ ಹಾವಿನಂತೆ ಅವನು ನಿಃಸಹಾಯಸ್ಥಿತಿಯಲ್ಲಿ ಬಿದ್ದುಕೊಂಡಿರುವನು. ರಾಜನ ಅಂತಿಮ ಘಳಿಗೆಗಳನ್ನು ಲೆಕ್ಕಹಾಕುತ್ತಿರುವ ಮೃತ್ಯುದೇವತೆಯಂತೆ ಸಮೀಪದಲ್ಲೇ ಕೈಕೆಯಿಯು ಕ್ರೋಧಮೂರ್ತಿಯಾಗಿ ಕುಳಿತಿರುವಳು. ಶ್ರೀರಾಮಚಂದ್ರನು ಕೋಮಲ ಸ್ವಭಾವದವನು. ಕರುಣಾಮೂರ್ತಿಯು. ಅವನಿಗೆ ಇದಕ್ಕೆ ಮುಂಚೆ ದುಃಖವೇನೆಂದೇ ತಿಳಿಯದು. ಈ ಶೋಕ ವಾತಾವರಣವನ್ನು ನೋಡುವುದು ಅವನು ಇದೇ ಮೊದಲು. ಆದರೂ ಪರಿಸ್ಥಿತಿಯನ್ನು ಅರಿತು, ಧೈರ್ಯತಂದುಕೊಂಡು, ಮೃದುವಾಗಿ ತಾಯಿ ಕೈಕೆಯಿಯನ್ನು ಕೇಳಿದನು – ''ಅಮ್ಮಾ! ತಂದೆಯವರ ದುಃಖದ ಕಾರಣವನ್ನಾದರೂ ನನಗೆ ತಿಳಿಸಿರಿ. ತಿಳಿದರೆ ಅದರ ನಿವಾರಣೆಗಾಗಿ ಪ್ರಯತ್ನಿಸಬಹುದು.'' ಆಗ ಕೈಕೆಯಿಯು ಹೇಳಿದಳು – ''ರಾಮಾ! ಮಹಾರಾಜರ ದುಃಖಕ್ಕೆ ಕಾರಣ ನಿನ್ನ ಮೇಲೆ ಇರುವ ಸ್ನೇಹವೇ ಆಗಿದೆ. ಇವರು ನನಗೆ ಎರಡು ವರಗಳನ್ನು ಕೊಡಲು ವಾಗ್ದಾನ ಮಾಡಿದ್ದರು. ನನಗೆ ಇಷ್ಟವಾದುದನ್ನು ನಾನು ಕೇಳಿಕೊಂಡೆ. ಅದನ್ನು ಕೇಳಿ ರಾಜರ ಹೃದಯವು ದುಃಖಪೂರಿತವಾಯಿತು. ಏಕೆಂದರೆ, ಅವರು ನಿನ್ನ ಮೇಲಿರುವ ಮಮಕಾರವನ್ನು ಬಿಡಲೊಲ್ಲರು. (ಚೌ/೧-೪)

**ದೋ – ಸುತ ಸನೇಹೂ ಇತ ಬಚನು ಉತ ಸಂಕಟ ಪರೆಉ ನರೇಸು।**
**ಸಕಹು ತ ಆಯಸು ಧರಹು ಸಿರ ಮೇಟಹು ಕಠಿನ ಕಲೇಸು ॥ ೪೦ ॥**

ಒಂದೆಡೆ ಪುತ್ರಸ್ನೇಹ, ಇನ್ನೊಂದೆಡೆ ಪ್ರತಿಜ್ಞಾಪಾಲನೆ. ಇವೆರಡರ ನಡುವೆ ನಿರ್ಣಯಿಸಲಾರದೆ ಮಹಾರಾಜರು ಧರ್ಮಸಂಕಟದಲ್ಲಿ ಬಿದ್ದಿರುವರು. ಸಾಧ್ಯವಾದರೆ ರಾಜಾಜ್ಞೆಯನ್ನು ಶಿರಸಾವಹಿಸು. ಅವರ ದುರ್ಭರವಾದ ದುಃಖವನ್ನು ಇಲ್ಲವಾಗಿಸು. (ದೋ/೪೦)

**ಚೌ – ನಿಧರಕ ಬೈಠಿ ಕಹಇ ಕಟು ಬಾನೀ । ಸುನತ ಕಠಿನತಾ ಅತಿ ಅಕುಲಾನೀ ॥**
**ಜೀಭ ಕಮಾನ ಬಚನ ಸರ ನಾನಾ । ಮನಹುँ ಮಹಿಪ ಮೃದು ಲಚ್ಛ ಸಮಾನಾ ॥ ೧ ॥**
**ಜನು ಕಠೋರಪನು ಧರೇँ ಸರೀರೂ । ಸಿಖಇ ಧನುಷಬಿದ್ಯಾ ಬರ ಬೀರೂ ॥**
**ಸಬು ಪ್ರಸಂಗು ರಘುಪತಿಹಿ ಸುನಾಈ । ಬೈಠಿ ಮನಹುँ ತನು ಧರಿ ನಿಠುರಾಈ ॥ ೨ ॥**
**ಮನ ಮುಸುಕಾಇ ಭಾನುಕುಲ ಭಾನೂ । ರಾಮು ಸಹಜ ಆನಂದ ನಿಧಾನೂ ॥**
**ಬೋಲೇ ಬಚನ ಬಿಗತ ಸಬ ದೂಷನ । ಮೃದು ಮಂಜುಲ ಜನು ಬಾಗ ಬಿಭೂಷನ ॥ ೩ ॥**
**ಸುನು ಜನನೀ ಸೋಇ ಸುತು ಬಡಭಾಗೀ । ಜೋ ಪಿತು ಮಾತು ಬಚನ ಅನುರಾಗೀ ॥**
**ತನಯ ಮಾತು ಪಿತು ತೋಷನಿಹಾರಾ । ದುರ್ಲಭ ಜನನಿ ಸಕಲ ಸಂಸಾರಾ ॥ ೪ ॥**

ಕೈಕೆಯಿಯು ನಿಃಸಂಕೋಚವಾಗಿ ಕುಳಿತುಕೊಂಡು ಇಂತಹ ಕಠೋರವಾದ ಮಾತನ್ನಾಡುತ್ತಿದ್ದಾಳೆ. ಅದನ್ನು ಕೇಳಿ ಕಠೋರತೆಯೂ ಕೂಡ ಅತ್ಯಂತ ವ್ಯಾಕುಲವಾಯಿತು. ನಾಲಿಗೆಯೇ ಬಿಲ್ಲು, ಅವಳ ಮಾತುಗಳೇ ಬಾಣಗಳು. ಅವು ನೇರವಾಗಿ ದಶರಥನ ಹೃದಯದಲ್ಲಿ ಚುಚ್ಚಿಕೊಂಡವು. ಎಲ್ಲ ಸಾಮಗ್ರಿಗಳಿಂದ ಸುಸಜ್ಜಿತವಾದ ಕಠೋರತೆಯೇ ಶ್ರೇಷ್ಠ ಶರೀರತೊಟ್ಟು, ಧನುರ್ವಿದ್ಯೆಯನ್ನು ಕಲಿಯುವಂತಿತ್ತು. ಶ್ರೀರಾಮನಿಗೆ ಎಲ್ಲವನ್ನು ತಿಳಿಸಿ, ಆಕೆಯು ನಿಷ್ಠುರತೆಯೇ ಮೈತಳೆದು ಕುಳಿತಂತೆ ಕುಳಿತಳು. ಭಾನುಕುಲಭಾನುವೂ, ಸಹಜ ಆನಂದನಿಧಾನನೂ ಆದ ಶ್ರೀರಾಮನು ಮನಸ್ಸಿನಲ್ಲೇ ಮುಗುಳ್ನಗುತ್ತಾ, ದೋಷರಹಿತವಾದ ಕೋಮಲ ಮಧುರ ವಚನಗಳನ್ನಾಡಿದನು. ಅವು ವಾಗ್ದೇವಿಯ ಆಭರಣಗಳಂತಿದ್ದವು. – ''ಅಮ್ಮಾ! ಕೇಳು. ತಾಯಿ-ತಂದೆಯರ ಮಾತನ್ನು ಪಾಲಿಸುವುದರಲ್ಲಿ ಅನುರಾಗವುಳ್ಳ ಪುತ್ರನೇ ನಿಜವಾಗಿ ಭಾಗ್ಯಶಾಲಿಯು. ಜನನೀ! ತಾಯಿ-ತಂದೆಯವರನ್ನು ಸಂತೋಷಪಡಿಸುವ ಮಗನು ಈ ಪ್ರಪಂಚದಲ್ಲಿ ದುರ್ಲಭನು. (ಚೌ/೧-೪)

**ದೋ – ಮುನಿಗನ ಮಿಲನು ಬಿಸೇಷಿ ಬನ ಸಬಹಿ ಭಾಂತಿ ಹಿತ ಮೋರ।**
**ತೆಹಿ ಮಹँ ಪಿತು ಆಯಸು ಬಹುರಿ ಸಮ್ಮತ ಜನನೀ ತೋರ ॥ ೪೧ ॥**

ಕಾಡಿಗೆ ಹೋದರೆ ನನಗೆ ಶ್ರೇಯಸ್ಸೇ ಆಗುವುದು. ಅಲ್ಲಿ ನನಗೆ ಋಷಿಗಳ ಸಂಗ ದೊರೆಯುವುದು. ಅದರಲ್ಲಿಯೂ ನೀನು ಹೇಳಿದಂತೆ ಇದು ನನಗೆ ತಂದೆಯವರ ಆಜ್ಞೆ, ಅದಕ್ಕೆ ನಿಮ್ಮ ಸಮ್ಮತಿಯೂ ಇದೆಯಲ್ಲ! (ದೋ/೪೧)

**ಚೌ – ಭರತು ಪ್ರಾನಪ್ರಿಯ ಪಾವಹಿँ ರಾಜೂ । ಬಿಧಿ ಸಬ ಬಿಧಿ ಮೋಹಿ ಸನಮುಖ ಆಜೂ ॥**
**ಜೌँ ನ ಜಾಉँ ಬನ ಐಸೆಹು ಕಾಜಾ । ಪ್ರಥಮ ಗನಿಅ ಮೋಹಿ ಮೂಢ ಸಮಾಜಾ ॥ ೧ ॥**
**ಸೇವಹಿँ ಅರँಡು ಕಲಪತರು ತ್ಯಾಗೀ । ಪರಿಹರಿ ಅಮೃತ ಲೇಹಿँ ಬಿಷು ಮಾಗೀ ॥**
**ತೇಉ ನ ಪಾಇ ಅಸ ಸಮಉ ಚುಕಾಹೀँ । ದೇಖು ಬಿಚಾರಿ ಮಾತು ಮನ ಮಾಹೀँ ॥ ೨ ॥**

**ಅಂಬ ಏಕ ದುಖು ಮೋಹಿ ಬಿಸೇಷೀ । ನಿಪಟ ಬಿಕಲ ನರನಾಯಕು ದೇಖೀ ॥**
**ಥೋರಿಹಿಂ ಬಾತ ಪಿತಹಿ ದುಖ ಭಾರೀ । ಹೋತಿ ಪ್ರತೀತಿ ನ ಮೋಹಿ ಮಹತಾರೀ ॥ ೩ ॥**
**ರಾಉ ಧೀರ ಗುನ ಉದಧಿ ಅಗಾಧೂ । ಭಾ ಮೋಹಿ ತೇಂ ಕಛು ಬಡ ಅಪರಾಧೂ ॥**
**ಜಾತೇಂ ಮೋಹಿ ನ ಕಹತ ಕಛು ರಾಊ । ಮೋರಿ ಸಪಥ ತೋಹಿ ಕಹು ಸತಿಭಾಊ ॥ ೪ ॥**

ನನ್ನ ಬಹಿಃಪ್ರಾಣನಾದ ಭರತನು ರಾಜನಾಗುವನು. ಇದೆಲ್ಲವನ್ನು ನೋಡಿದರೆ, – ವಿಧಾತನು ಇಂದು ನನಗೆ ಎಲ್ಲ ವಿಧದಿಂದಲೂ ಅನುಕೂಲವಾಗಿಯೇ ಮಾಡುತ್ತಿದ್ದಾನೆ. ಇಂತಹ ಪರಿಸ್ಥಿತಿಯಲ್ಲಿಯೂ ಕೂಡ ಕಾಡಿಗೆ ಹೋಗದಿದ್ದರೆ ನಾನೊಬ್ಬ ಮಹಾಮೂರ್ಖನೇ ಆಗುವೆನು. ಕಲ್ಪವೃಕ್ಷವನ್ನು ತೊರೆದು ಔಡಲಗಿಡದ ಸೇವೆ ಮಾಡುವವನು. ಅಮೃತವನ್ನು ತೊರೆದು ವಿಷವನ್ನು ಬೇಡುವಂತಹ ಮಹಾಮೂರ್ಖನೂ ಕೂಡ ಇಂತಹ ಅವಕಾಶವನ್ನು ಕಳೆದುಕೊಳ್ಳುವುದಿಲ್ಲ. ತಾಯಿ! ಮಹಾರಾಜರು ಹೆಚ್ಚಾಗಿ ವ್ಯಾಕುಲಗೊಂಡಿರುವುದನ್ನು ನೋಡಿ, ನನಗೆ ಅತೀವ ದುಃಖವಾಗುತ್ತಿದೆ. ಇಂತಹ ಸಣ್ಣ ವಿಷಯಕ್ಕಾಗಿ ತಂದೆಯವರು ಇಷ್ಟೊಂದು ದುಃಖಿಸುವುದೇ? ನಿಜವಾಗಿ ನನಗೆ ವಿಶ್ವಾಸವೇ ಉಂಟಾಗುವುದಿಲ್ಲ. ಮಹಾರಾಜರು ಧೀರರು. ಗುಣಗಳ ಅಗಾಧಸಾಗರರು. ಖಂಡಿತವಾಗಿ ನನ್ನಿಂದ ಏನೋ ಮಹಾಪರಾಧ ಜರಗಿಹೋಗಿರಬೇಕು. ಅದರಿಂದಾಗಿಯೇ ಮಹಾರಾಜರು ನನ್ನ ಬಳಿ ಏನನ್ನೂ ಹೇಳುತ್ತಿಲ್ಲ. ಅಮ್ಮಾ! ನನ್ನಾಣೆ. ನಿಜವನ್ನು ಹೇಳು. (ಚೌ/೧-೪)

**ದೋ – ಸಹಜ ಸರಲ ರಘುಬರ ಬಚನ ಕುಮತಿ ಕುಟಿಲ ಕರಿ ಜಾನ ।**
**ಚಲಇ ಜೋಂಕ ಜಲ ಬಕ್ರಗತಿ ಜದ್ಯಪಿ ಸಲಿಲು ಸಮಾನ ॥ ೪೨ ॥**

ನೀರು ಪ್ರಶಾಂತವಾಗಿದ್ದು, ನೇರವಾಗಿ ಪ್ರವಹಿಸುತ್ತಿದ್ದರೂ ಜಿಗಣೆ ಅದರಲ್ಲಿ ಡೊಂಕುಡೊಂಕಾಗಿ ಹರಿದಾಡುವಂತೆ, ಸಹಜವೂ, ಸರಳವೂ, ನೇರವೂ ಆದ ರಘುವರನ ಮಾತು ಕೈಕೆಗೆ ವಕ್ರವಾಗಿಯೇ ಕಂಡಿತು. (ದೋ/೪೨)

**ಚೌ – ರಹಸೀ ರಾನಿ ರಾಮ ರುಖ ಪಾಈ । ಬೋಲೀ ಕಪಟ ಸನೇಹು ಜನಾಈ ॥**
**ಸಪಥ ತುಮ್ಹಾರ ಭರತ ಕೈ ಆನಾ । ಹೇತು ನ ದೂಸರ ಮೈಂ ಕಛು ಜಾನಾ ॥ ೧ ॥**
**ತುಮ್ಹ ಅಪರಾಧ ಜೋಗು ನಹಿಂ ತಾತಾ । ಜನನೀ ಜನಕ ಬಂಧು ಸುಖದಾತಾ ॥**
**ರಾಮ ಸತ್ಯ ಸಬು ಜೋ ಕಛು ಕಹಹೂ । ತುಮ್ಹ ಪಿತು ಮಾತು ಬಚನ ರತ ಅಹಹೂ ॥ ೨ ॥**
**ಪಿತಹಿ ಬುಝಾಇ ಕಹಹು ಬಲಿ ಸೋಈ । ಚೌಥೇಂಪನ ಜೆಹಿಂ ಅಜಸು ನ ಹೋಈ ॥**
**ತುಮ್ಹ ಸಮ ಸುಅನ ಸುಕೃತ ಜೆಹಿಂ ದೀನ್ಹೇ । ಉಚಿತ ನ ತಾಸು ನಿರಾದರು ಕೀನ್ಹೇ ॥ ೩ ॥**
**ಲಾಗಹಿಂ ಕುಮುಖ ಬಚನ ಸುಭ ಕೈಸೇ । ಮಗಹ್ ಗಯಾದಿಕ ತೀರಥ ಜೈಸೇ ॥**
**ರಾಮಹಿ ಮಾತು ಬಚನ ಸಬ ಭಾಏ । ಜಿಮಿ ಸುರಸರಿ ಗತ ಸಲಿಲ ಸುಹಾಏ ॥ ೪ ॥**

ಶ್ರೀರಾಮನ ಸ್ವೀಕೃತಿಯ ಆಭಾಸದಿಂದ ಕೈಕೆಯಿಯು ಹರ್ಷಿತಳಾದಳು. ಕಪಟಪ್ರೇಮವನ್ನು ನಟಿಸುತ್ತಾ– 'ನಿನ್ನಮೇಲೆ ಹಾಗೂ ಭರತನ ಮೇಲೆ ಆಣೆಯಿಟ್ಟು ಹೇಳುತ್ತೇನೆ – ಮಹಾರಾಜರ ದುಃಖಕ್ಕೆ ಬೇರಾವ ಕಾರಣವೂ ನನಗೆ ಕಾಣುತ್ತಿಲ್ಲ.'' ಮಗು! ನಿನ್ನಿಂದ ತಾಯಿ-ತಂದೆಯವರ ಕುರಿತು ಅಪರಾಧ ನಡೆಯುವುದು ಅಸಂಭವವು. ನೀನು ತಂದೆ-ತಾಯಂದಿರಿಗೆ, ಸೋದರರಿಗೆ ಸುಖವನ್ನು ಕೊಡುವವನು. ನೀನು ಹೇಳುವುದೆಲ್ಲ ಸತ್ಯವು. ನೀನು ತಾಯಿತಂದೆಗಳ ವಚನ ಪರಿಪಾಲನೆಯಲ್ಲಿ ತತ್ಪರನಾಗಿದ್ದೀಯೆ. ರಾಮಾ! ಪ್ರೇಮದಿಂದ ಹೇಳುತ್ತಿರುವೆನು. ನೀನು ತಂದೆಯವರಿಗೆ ಹೇಳಿ, ಅವರಿಗೆ ಈ ವಯಸ್ಸಿನಲ್ಲಿ ಕೆಟ್ಟ ಹೆಸರು ಬರದಂತೆ ನೋಡಿಕೋ. ಯಾವುದೋ ಪುಣ್ಯಫಲದಿಂದಲೇ ನಿನ್ನಂತಹ ಪುತ್ರನನ್ನು ಪಡೆದಿರುವನು. ಅದನ್ನು ಅನಾದರಿಸುವುದು ಒಳ್ಳೆಯದಲ್ಲ.'' ಕೈಕೆಯಿಯ ಕೆಟ್ಟಬಾಯಲ್ಲಿ ಈ ಶುಭವಚನಗಳು ಮಗಧದೇಶದಲ್ಲಿ ಗಯೆಯಂತೆ ಶೋಭಿಸಿತು. ಆದರೆ ಎಲ್ಲ ಪ್ರಕಾರದ ಪ್ರವಾಹಗಳೂ (ಒಳ್ಳೆಯ-ಕೆಟ್ಟ) ಕೂಡ ಗಂಗೆಗೆ ಸೇರಿದ ಬಳಿಕ ಪವಿತ್ರವೇ ಆಗುವಂತೆ, ಶ್ರೀರಾಮಚಂದ್ರನಿಗೆ ತಾಯಿಯ ಮಾತುಗಳು ಶುಭವೂ ಸುಂದರವೂ ಆಗಿ ಒಳ್ಳೆಯದೆನಿಸಿದವು. (ಚೌ/೧-೪)

**ದೋ – ಗಇ ಮುರುಛಾ ರಾಮಹಿ ಸುಮಿರಿ ನೃಪ ಫಿರಿ ಕರವಟ ಲೀನ್ಹ ।**
**ಸಚಿವ ರಾಮ ಆಗಮನ ಕಹಿ ಬಿನಯ ಸಮಯ ಸಮ ಕೀನ್ಹ ॥ ೪೩ ॥**

ಇಷ್ಟರಲ್ಲಿ ರಾಜನು ಮೂರ್ಛೆಯಿಂದ ಎಚ್ಚರಗೊಂಡನು. ರಾಮನನ್ನು ಸ್ಮರಿಸಿ ಮಗ್ಗುಲಾದ. 'ಶ್ರೀರಾಮನು ಇಲ್ಲಿಗೆ ಬಂದಿರುವನು' ಎಂದು ಮಂತ್ರಿಯು ಸಮಯಾನುಸಾರ ವಿನಂತಿಸಿಕೊಂಡನು. (ದೋ/೪೩)

**ಚೌ – ಅವನಿಪ ಅಕನಿ ರಾಮು ಪಗು ಧಾರೇ । ಧರಿ ಧೀರಜು ತಬ ನಯನ ಉಘಾರೇ ॥**
**ಸಚಿವ್ ಸ್ಂಭಾರಿ ರಾಉ ಬೈಠಾರೇ । ಚರನ ಪರತ ನೃಪ ರಾಮು ನಿಹಾರೇ ॥ ೧ ॥**
**ಲಿಏ ಸನೇಹ ಬಿಕಲ ಉರ ಲಾಈ । ಗೈ ಮನಿ ಮನಹುँ ಫನಿಕ ಫಿರಿ ಪಾಈ ॥**
**ರಾಮಹಿ ಚಿತಇ ರಹೆಉ ನರನಾಹೂ । ಚಲಾ ಬಿಲೋಚನ ಬಾರಿ ಪ್ರಬಾಹೂ ॥ ೨ ॥**
**ಸೋಕ ಬಿಬಸ ಕಛು ಕಹೈ ನ ಪಾರಾ । ಹೃದಯँ ಲಗಾವತ ಬಾರಹಿं ಬಾರಾ ॥**
**ಬಿಧಿಹಿ ಮನಾವ ರಾಉ ಮನ ಮಾಹೀं । ಜೆಹಿं ರಘುನಾಥ ನ ಕಾನನ ಜಾಹೀं ॥ ೩ ॥**
**ಸುಮಿರಿ ಮಹೇಸಹಿ ಕಹಇ ನಿಹೋರೀ । ಬಿನತೀ ಸುನಹು ಸದಾಸಿವ ಮೋರೀ ॥**
**ಆಸುತೋಷ ತುಮ್ಹ ಅವಢರ ದಾನೀ । ಆರತಿ ಹರಹು ದೀನ ಜನು ಜಾನೀ ॥ ೪ ॥**

ಶ್ರೀರಾಮಚಂದ್ರನು ಬಂದಿರುವುದನ್ನು ಕೇಳಿ, ರಾಜನು ಧೈರ್ಯತಾಳಿ ಮೆಲ್ಲನೆ ಕಣ್ಣು ತೆರೆದನು. ಮಂತ್ರಿಯು ಅವನನ್ನು ಸಾವಧಾನವಾಗಿ ಕುಳ್ಳಿರಿಸಿದನು. ಶ್ರೀರಾಮನು ಕಾಲಿಗೆರಗಿದುದನ್ನು ನೋಡಿದನು. ಸ್ನೇಹವಿಕಳನಾಗಿ ರಾಜನು ರಾಮನನ್ನು ಆಲಿಂಗಿಸಿಕೊಂಡನು. ಸರ್ಪಕ್ಕೆ ಕಳೆದುಹೋದ ಮಣಿಯು ದೊರೆತಂತಾಯಿತು. ದಶರಥನು ರಾಮನನ್ನು ನೋಡುತ್ತಲೇ ಇದ್ದ. ಅವನ ಕಣ್ಣುಗಳಿಂದ ಕಂಬನಿ ಕೋಡಿಯಾಗಿ ಹರಿಯಿತು. ವಿಶೇಷವಾಗಿ ಶೋಕಕ್ಕೆ ವಶನಾದ್ದರಿಂದ ರಾಜನು ಏನನ್ನೂ ಮಾತಾಡದಾದನು. ಅವನು ಮತ್ತೆ-ಮತ್ತೆ ರಾಮನನ್ನು ಎದೆಗಪ್ಪಿಕೊಳ್ಳತೊಡಗಿದನು. ಮನಸ್ಸಿನಲ್ಲಿ – 'ಶ್ರೀರಾಮನು ಕಾಡಿಗೆ ಹೋಗದಿರುವಂತೆ ಮಾಡು' ಎಂದು ಬ್ರಹ್ಮನನ್ನು ಬೇಡಿಕೊಳ್ಳುತ್ತಿದ್ದನು. ಅನಂತರ ಶಿವನನ್ನು ಸ್ಮರಿಸಿ ಬೇಡಿಕೊಂಡನು – ''ಓ ಸದಾಶಿವಾ! ನನ್ನ ಬಿನ್ನಪವನ್ನು ಲಾಲಿಸು. ನೀನು ಆಶುತೋಷ ಹಾಗೂ ಬೇಡಿದುದನ್ನು ಕೊಡುವ ದೇವನು. ಆದ್ದರಿಂದ ನನ್ನನ್ನು ನಿನ್ನ ದೀನ ಸೇವಕನೆಂದು ಬಗೆದು, ನನ್ನ ದುಃಖವನ್ನು ದೂರಮಾಡು. (ಚೌ/೧-೪)

**ದೋ – ತುಮ್ಹ ಪ್ರೇರಕ ಸಬ ಕೇ ಹೃದಯँ ಸೋ ಮತಿ ರಾಮಹಿ ದೇಹು ।**
**ಬಚನು ಮೋರ ತಜಿ ರಹಹಿं ಘರ ಪರಿಹರಿ ಸೀಲು ಸನೇಹು ॥ ೪೪ ॥**

ನೀನು ಪ್ರೇರಕನಾಗಿ ಎಲ್ಲರ ಹೃದಯದಲ್ಲಿಯೂ ನೆಲೆಸಿದ್ದೀಯೆ. ರಾಮನು ನನ್ನ ಮಾತನ್ನು ಒಪ್ಪದೇ, ತನ್ನ ಸಹಜ ಸ್ನೇಹಶೀಲ ಸ್ವಭಾವಗಳನ್ನು ತ್ಯಜಿಸಿ ಮನೆಯಲ್ಲೇ ಇರುವಂತೆ ಅವನಿಗೆ ಬುದ್ಧಿಯನ್ನು ಕೊಡು. (ದೋ/೪೪)

**ಚೌ – ಅಜಸು ಹೋಉ ಜಗ ಸುಜಸು ನಸಾಊ । ನರಕ ಪರೌं ಬರು ಸುರಪುರು ಜಾಊ ॥**
**ಸಬ ದುಖ ದುಸಹ ಸಹಾವಹು ಮೋಹೀ । ಲೋಚನ ಓಟ ರಾಮು ಜನಿ ಹೋंಹೀ ॥ ೧ ॥**
**ಅಸ ಮನ ಗುನಇ ರಾಉ ನಹಿं ಬೋಲಾ । ಪೀಪರ ಪಾತ ಸರಿಸ ಮನು ಡೋಲಾ ॥**
**ರಘುಪತಿ ಪಿತಹಿ ಪ್ರೇಮಬಸ ಜಾನೀ । ಪುನಿ ಕಛು ಕಹಿಹಿ ಮಾತು ಅನುಮಾನೀ ॥ ೨ ॥**
**ದೇಸ ಕಾಲ ಅವಸರ ಅನುಸಾರೀ । ಬೋಲೇ ಬಚನ ಬಿನೀತ ಬಿಚಾರೀ ॥**
**ತಾತ ಕಹಉँ ಕಛು ಕರಉँ ಢಿಠಾಈ । ಅನುಚಿತು ಛಮಬ ಜಾನಿ ಲರಿಕಾಈ ॥ ೩ ॥**
**ಅತಿ ಲಘು ಬಾತ ಲಾಗಿ ದುಖು ಪಾವಾ । ಕಾಹुँ ನ ಮೊಹಿ ಕಹಿ ಪ್ರಥಮ ಜನಾವಾ ॥**
**ದೇಖಿ ಗೊಸಾಇँಹಿ ಪೂँಛಿಉँ ಮಾತಾ । ಸುನಿ ಪ್ರಸಂಗು ಭಏ ಸೀತಲ ಗಾತಾ ॥ ೪ ॥**

ಜಗತ್ತಿನಲ್ಲಿ ಬೇಕಾದ ಅಪಕೀರ್ತಿಯಾಗಲೀ, ಯಶಸ್ಸು ಹಾಳಾದರೂ ಚಿಂತೆಯಿಲ್ಲ. ಹೊಸಪಾಪದಿಂದ ನರಕದಲ್ಲಿ ಬಿದ್ದರೂ ಸರಿ. ಪೂರ್ವಪುಣ್ಯಫಲಸ್ವರೂಪವಾಗಿ ದೊರೆಯುವ ಸ್ವರ್ಗವು ಸಿಗದೆಹೋದರೂ ಸರಿ. ಇನ್ನೂ ಏನು ಬೇಕಾದರೂ ದುಃಸಹವಾದ ದುಃಖಗಳು ಬರಲಿ, ಸಹಿಸಲು ಸಿದ್ಧನಿರುವೆನು. ಆದರೆ ಶ್ರೀರಾಮನು ಮಾತ್ರ ನನ್ನ ಕಣ್ಣಿನಿಂದ ಮರೆಯಾಗದಿರಲಿ.'' ಈ ವಿಧವಾಗಿ ರಾಜನು ತನ್ನ ಮನಸ್ಸಿನಲ್ಲೇ ಪ್ರಾರ್ಥಿಸಿದನು. ಆದರೆ ಅವನ ಬಾಯಿಂದ ಮಾತೇ ಹೊರಡದು. ಅವನ ಮನಸ್ಸು ಅರಳಿಯ ಎಲೆಯಂತೆ ಅಲುಗುತ್ತಿತ್ತು. ತಂದೆಯು ಪ್ರೇಮವಿವಶನಾದುದನ್ನು ಕಂಡು, ಕೈಕೆಯಿಯು ಮರಳಿ ಏನಾದರೂ ಹೇಳಿದರೆ ತಂದೆಯವರಿಗೆ ಹೆಚ್ಚಿನ ನೋವಾಗಬಹುದೆಂದು ಊಹಿಸಿ, ದೇಶ-ಕಾಲ ಹಾಗೂ ಪರಿಸ್ಥಿತಿಗೆ ತಕ್ಕಂತೆ ಯೋಚಿಸಿ ಶ್ರೀರಾಮನು ನಮ್ರವಾದ ವಚನಗಳನ್ನು ನುಡಿದನು – ''ಅಪ್ಪಾಜೀ! ನಾನೊಂದು ವಿಷಯವನ್ನು ಹೇಳುವ ಸಾಹಸಕ್ಕೆ ಕೈಯಿಕ್ಕಿರುವೆನು. ನನ್ನ ಈ ಅನುಚಿತಕಾರ್ಯವನ್ನು ಹುಡುಗುವರ್ತನೆ ಎಂದು ಬಗೆದು ಮನ್ನಿಸಿರಿ. ಇಷ್ಟು ಸಣ್ಣ ವಿಷಯಕ್ಕಾಗಿ ನೀವು ದುಃಖಿಸುತ್ತಿರುವಿರಿ. ಯಾರೂ ಈ ವಿಷಯವನ್ನು ಮೊದಲಿಗೆ ನನಗೆ ಹೇಳಿರಲಿಲ್ಲ. ನಿಮ್ಮನ್ನು ಈ ಸ್ಥಿತಿಯಲ್ಲಿ ಕಂಡು ನಾನು ಅಮ್ಮನನ್ನು ಕೇಳಿದೆ. ಆಕೆಯಿಂದ ವಿಷಯ ತಿಳಿದು, ಪ್ರಶಾಂತಚಿತ್ತನಾಗಿರುವೆನು.'' (ಚೌ/೧-೪)

**ದೋ – ಮಂಗಲ ಸಮಯ ಸನೇಹ ಬಸ ಸೋಚ ಪರಿಹರಿಅ ತಾತ ।**
**ಆಯಸು ದೇಇಅ ಹರಷಿ ಹಿಯಁ ಕಹಿ ಪುಲಕೇ ಪ್ರಭು ಗಾತ ॥ ೪೫ ॥**

''ಅಪ್ಪಾಜಿ! ಸಂತೋಷಕರ ಸಮಯದಲ್ಲಿ ಸ್ನೇಹವಶರಾಗಿ ನೀವು ಚಿಂತಿಸುವುದನ್ನು ಬಿಟ್ಟುಬಿಡಿರಿ. ಪ್ರಸನ್ನಚಿತ್ತರಾಗಿ ನನಗೆ ಅಪ್ಪಣೆನೀಡಿರಿ.' ಹೀಗೆ ಹೇಳುತ್ತಾ-ಹೇಳುತ್ತಾ ಶ್ರೀರಾಮನ ಶರೀರವು ಪುಳಕಿತವಾಯಿತು. (ದೋ/೪೫)

**ಚೌ – ಧನ್ಯ ಜನಮು ಜಗತೀತಲ ತಾಸೂ । ಪಿತಹಿ ಪ್ರಮೋದು ಚರಿತ ಸುನಿ ಜಾಸೂ ॥**
**ಚಾರಿ ಪದಾರಥ ಕರತಲ ತಾಕೇಂ । ಪ್ರಿಯ ಪಿತು ಮಾತು ಪ್ರಾನ ಸಮ ಜಾಕೇಂ ॥ ೧ ॥**
**ಆಯಸು ಪಾಲಿ ಜನಮ ಫಲು ಪಾಈ । ಐಹಉಁ ಬೇಗಿಹಿಂ ಹೋಉ ರಜಾಈ ॥**
**ಬಿದಾ ಮಾತು ಸನ ಆವಉಁ ಮಾಗೀ । ಚಲಿಹಉಁ ಬನಹಿ ಬಹುರಿ ಪಗ ಲಾಗೀ ॥ ೨ ॥**
**ಅಸ ಕಹಿ ರಾಮ ಗವನು ತಬ ಕೀನ್ಹಾ । ಭೂಪ ಸೋಕ ಬಸ ಉತರು ನ ದೀನ್ಹಾ ॥**
**ನಗರ ಬ್ಯಾಪಿ ಗಇ ಬಾತ ಸುತೀಛೀ । ಛುಅತ ಚಢೀ ಜನು ಸಬ ತನ ಬೀಛೀ ॥ ೩ ॥**
**ಸುನಿ ಭಏ ಬಿಕಲ ಸಕಲ ನರ ನಾರೀ । ಬೇಲಿ ಬಿಟಪ ಜಿಮಿ ದೇಖಿ ದವಾರೀ ॥**
**ಜೋ ಜಹಁ ಸುನಇ ಧುನಇ ಸಿರು ಸೋಈ । ಬಡ ಬಿಷಾದು ನಹಿಂ ಧೀರಜು ಹೋಈ ॥ ೪ ॥**

ಶ್ರೀರಾಮನು ಮತ್ತೆ ನುಡಿದನು – ''ತನ್ನ ನಡತೆಯಿಂದ ತಂದೆಗೆ ಪರಮಾನಂದವನ್ನು ಉಂಟುಮಾಡುವ ಪುತ್ರನ ಜನ್ಮವು ಈ ಭುವಿಯಲ್ಲಿ ಧನ್ಯವು. ತಂದೆ-ತಾಯಿಯರು ಪ್ರಾಣಪ್ರಿಯರಾಗಿರುವ ಮಗನಿಗೆ ಧರ್ಮಾರ್ಥಕಾಮಮೋಕ್ಷಗಳು ಕರತಲಾಮಲಕ. ನಿಮ್ಮ ಆಜ್ಞೆಯನ್ನು ಪಾಲಿಸಿ, ನನ್ನ ಜನ್ಮವನ್ನು ಸಫಲವಾಗಿಸಿಕೊಂಡು ಬೇಗನೇ ಮರಳಿ ಬರುತ್ತೇನೆ. ಆದ್ದರಿಂದ ತಾವು ದಯಮಾಡಿ ನನಗೆ ಅನುಮತಿಯನ್ನು ನೀಡಿರಿ. ಅಮ್ಮನ ಅನುಜ್ಞೆಯನ್ನು ಪಡೆದುಬರುತ್ತೇನೆ. ಅನಂತ ನಿಮ್ಮ ಚರಣಗಳಿಗೆ ನಮಿಸಿ ಕಾಡಿಗೆ ಹೋಗುತ್ತೇನೆ.'' ಹೀಗೆ ಹೇಳಿ ರಾಮನು ಅಲ್ಲಿಂದ ತೆರಳಿದನು. ಶೋಕವಶನಾದ ರಾಜನು ಏನೂ ಉತ್ತರಕೊಡಲಿಲ್ಲ. ಈ ಕಟುವಾರ್ತೆಯು ಚೇಳುಕುಟುಕಿದ ಕೂಡಲೇ ವಿಷವು ದೇಹಾದ್ಯಂತ ವ್ಯಾಪಿಸುವಂತೆ, ಕೂಡಲೇ ಶೀಘ್ರವಾಗಿ ನಗರದಲ್ಲೆಲ್ಲ ಹಬ್ಬಿತು. ಈ ವಾರ್ತೆಯನ್ನು ಕೇಳುತ್ತಲೇ ಎಲ್ಲ ನಗರವಾಸಿಗಳು – ದಾವಾನಲದ ಬೇಗೆಯಿಂದ ಗಿಡಮರಬಳ್ಳಿಗಳು ಬಾಡುವಂತೆ, ದುಃಖಿತರಾದರು. ಈ ಕೆಟ್ಟವಾರ್ತೆಯನ್ನು ಕೇಳಿದವರು ಅಲ್ಲಲ್ಲೇ ತಲೆಚಚ್ಚಿಕೊಳ್ಳತೊಡಗಿದರು. ಈ ದುಃಖವು ದುರ್ಭರವಾದುದು. ಯಾರಿಗೂ ಧೈರ್ಯವೇ ಇಲ್ಲ. (ಚೌ/೧-೪)

**ದೋ – ಮುಖ ಸುಖಾಹಿಂ ಲೋಚನ ಸ್ರವಹಿಂ ಸೋಕು ನ ಹೃದಯಁ ಸಮಾಇ।**
**ಮನಹುಁ ಕರುನ ರಸ ಕಟಕಈ ಉತರೀ ಅವಧ ಬಜಾಇ ॥ ೪೬ ॥**

ಎಲ್ಲರ ಬಾಯಿ ಒಣಗಿಹೋಗಿತ್ತು. ಕಣ್ಣುಗಳಿಂದ ಕಂಬನಿ ಹರಿಯುತ್ತಿದ್ದವು. ಶೋಕವು ಹೃದಯದಲ್ಲಿ ಹಿಡಿಸುತ್ತಿರಲಿಲ್ಲ. ಕರುಣಾರಸ ವಾಹಿನಿಯು ಕಹಳೆ ಊದಿ ಅಯೋಧ್ಯೆಯ ಮೇಲೆ ದಂಡೆತ್ತಿ ಬಂದಂತಿತ್ತು. ಪುರವೆಲ್ಲ ಶೋಕಾಕುಲವಾಗಿತ್ತು. ಆನಂದವು ಪಲಾಯನ ಮಾಡಿತ್ತು. (ದೋ/೪೬)

**ಚೌ – ಮಿಲೇಹಿ ಮಾಝು ಬಿಧಿ ಬಾತ ಬೇಗಾರೀ । ಜಹಁ ತಹಁ ದೇಹಿಂ ಕೈಕಇಹಿ ಗಾರೀ ॥**
**ಏಹಿ ಪಾಪಿನಿಹಿ ಬೂಝಿ ಕಾ ಪರೇಊ । ಛಾಇ ಭವನ ಪರ ಪಾವಕು ಧರೇಊ ॥ ೧ ॥**
**ನಿಜ ಕರ ನಯನ ಕಾಢಿ ಚಹ ದೀಖಾ । ಡಾರಿ ಸುಧಾ ಬಿಷು ಚಾಹತ ಚೀಖಾ ॥**
**ಕುಟಿಲ ಕಠೋರ ಕುಬುದ್ಧಿ ಅಭಾಗೀ । ಭಇ ರಘುಬಂಸ ಬೇನು ಬನ ಆಗೀ ॥ ೨ ॥**
**ಪಾಲವ ಬೈಠೀ ಪೇಡು ಏಹಿಂ ಕಾಟಾ । ಸುಖ ಮಹುಁ ಸೋಕ ಠಾಟು ಧರಿ ಠಾಟಾ ॥**
**ಸದಾ ರಾಮು ಏಹಿ ಪ್ರಾನ ಸಮಾನಾ । ಕಾರನ ಕವನ ಕುಟಿಲಪನು ಠಾನಾ ॥ ೩ ॥**
**ಸತ್ಯ ಕಹಹಿಂ ಕಬಿ ನಾರಿ ಸುಭಾಊ । ಸಬ ಬಿಧಿ ಅಗಹು ಅಗಾಧ ದುರಾಊ ॥**
**ನಿಜ ಪ್ರತಿಬಿಂಬು ಬರುಕು ಗಹಿ ಜಾಈ । ಜಾನಿ ನ ಜಾಇ ನಾರಿ ಗತಿ ಭಾಈ ॥ ೪ ॥**

ಪುರವಾಸಿಗಳು ಆಡಿಕೊಳ್ಳುತ್ತಿದ್ದರು – ಎಲ್ಲ ಏರ್ಪಾಟುಗಳು ಸರಿಯಾಗಿದ್ದವು. ಆದರೆ ಇಷ್ಟರಲ್ಲೇ ವಿಧಾತನು ಎಲ್ಲವನ್ನು ಕೆಡಿಸಿಬಿಟ್ಟನು. ಜನರು ಕಂಡ-ಕಂಡಲ್ಲಿ ಕೈಕೆಯಿಯನ್ನು ಬೈಯ್ಯುವವರೇ. ಈ ಪಾಪಿನಿಗೆ ಏನು ತೋಚಿತೋ ಏನೋ! ಹೊಸದಾಗಿ ಕಟ್ಟಿದ ಮನೆಗೆ ಬೆಂಕಿಯಿಟ್ಟಂತಾಯಿತಲ್ಲ. ಇವಳು ತನ್ನ ಕೈಯಾರೆ ತನ್ನ ಕಣ್ಣುಗಳನ್ನೇ ಕಿತ್ತು ನೋಡಬಯಸುತ್ತಿದ್ದಾಳೆ. ಅಮೃತವನ್ನು

ಎಸೆದು ವಿಷವನ್ನು ಸವಿಯಲು ಬಯಸುತ್ತಿದ್ದಾಳೆ. ಈ ಕುಟಿಲ, ಕಠೋರ, ಕುಬುದ್ಧಿಯವಳೂ, ದುರ್ಭಾಗ್ಯಳೂ ಆದ ಕೈಕೆಯಿಯು ರಘುವಂಶವೆಂಬ ಬಿದಿರಿನ ಕಾಡಿಗೆ ಬೆಂಕಿಯಾದಳಲ್ಲ! ತಾನು ಕುಳಿತಿರುವ ಮರದ ಕೊಂಬೆಯನ್ನು ಬುಡದಿಂದ ಕಡಿದಳಲ್ಲ! ಶುಭಾನಂದೋತ್ಸಾಹದಲ್ಲಿ ದುರ್ಭರವಾದ ಶೋಕವನ್ನು ತಂದೊಡ್ಡಿದಳು. ಶ್ರೀರಾಮನು ಈಕೆಗೆ ಯಾವಾಗಲೂ ಪ್ರಾಣಪ್ರಿಯನಾಗಿದ್ದನು. ಆದರೂ ಇವಳು ಇಂತಹ ಕುಟಿಲತ್ವವನ್ನು, ಕಾಠಿಣ್ಯವನ್ನು ಏಕೆ ಗೈದಳು? ಹೆಣ್ಣಿನ ಸ್ವಭಾವವು ಹಿಡಿತಕ್ಕೆ ಸಿಗುವಂತಹುದಲ್ಲ. ಆಳವರಿಯದು. ರಹಸ್ಯಮಯವೆಂದು ಕವಿಗಳು ನಿಜವನ್ನೇ ಹೇಳಿರುವರು. ನಮ್ಮ ನೆರಳನ್ನಾದರೂ ಹಿಡಿಯಬಹುದು. ಆದರೆ ಸ್ತ್ರೀಚಿತ್ತವನ್ನು ಅರ್ಥವಿಸುವುದು ಕಷ್ಟ. ಅದು ಭೇದಬುದ್ಧಿಯಿಂದ ತುಂಬಿರುತ್ತದೆ. (ಚೌ/೧-೪)

**ದೋ – ಕಾಹ ನ ಪಾವಕು ಜಾರಿ ಸಕ ಕಾ ನ ಸಮುದ್ರ ಸಮಾಇ।**
**ಕಾ ನ ಕರೈ ಅಬಲಾ ಪ್ರಬಲ ಕೆಹಿ ಜಗ ಕಾಲು ನ ಖಾಇ॥ ೪೭ ॥**

ಬೆಂಕಿಯು ಏನನ್ನು ತಾನೆ ಸುಡದು? ಸಮುದ್ರದಲ್ಲಿ ಯಾವ ವಸ್ತುವು ಹಿಡಿಸದು? ಅಬಲೆ ಎನಿಸಿಕೊಳ್ಳುವ ಪ್ರಬಲ ಸ್ತ್ರೀಯು ಏನು ತಾನೇ ಮಾಡಲಾರಳು? ಜಗತ್ತಿನಲ್ಲಿ ಕಾಲವು ಯಾರನ್ನು ತಾನೇ ಕಬಳಿಸಲಾರದು. (ದೋ/೪೭)

**ಚೌ – ಕಾ ಸುನಾಇ ಬಿಧಿ ಕಾಹ ಸುನಾವಾ। ಕಾ ದೆಖಾಇ ಚಹ ಕಾಹ ದೆಖಾವಾ ॥**
**ಏಕ ಕಹಹಿಂ ಭಲ ಭೂಪ ನ ಕೀನ್ಹಾ। ಬರು ಬಿಚಾರಿ ನಹಿಂ ಕುಮತಿಹಿ ದೀನ್ಹಾ ॥ ೧ ॥**
**ಜೋ ಹಠಿ ಭಯಉ ಸಕಲ ದುಖ ಭಾಜನು । ಅಬಲಾ ಬಿಬಸ ಗ್ಯಾನು ಗುನು ಗಾ ಜನು ॥**
**ಏಕ ಧರಮ ಪರಮಿತಿ ಪಹಿಚಾನೇ। ನೃಪಹಿ ದೋಸು ನಹಿಂ ದೇಹಿಂ ಸಯಾನೇ ॥ ೨ ॥**
**ಸಿಬಿ ದಧೀಚಿ ಹರಿಚಂದ ಕಹಾನೀ। ಏಕ ಏಕ ಸನ ಕಹಹಿಂ ಬಖಾನೀ ॥**
**ಏಕ ಭರತ ಕರ ಸಮ್ಮತ ಕಹಹೀಂ। ಏಕ ಉದಾಸ ಭಾಯ್ ಸುನಿ ರಹಹೀಂ ॥ ೩ ॥**
**ಕಾನ ಮೂದಿ ಕರ ರದ ಗಹಿ ಜೀಹಾ । ಏಕ ಕಹಹಿಂ ಯಹ ಬಾತ ಅಲೀಹಾ ॥**
**ಸುಕೃತ ಜಾಹಿಂ ಅಸ ಕಹತ ತುಮ್ಹಾರೇ। ರಾಮು ಭರತ ಕಹುಂ ಪ್ರಾನಪಿಆರೇ ॥ ೪ ॥**

ವಿಧಾತನು ಮೊದಲು ನಿರ್ಣಯಿಸಿದುದು ಏನು? ಈಗ ಪ್ರಕಟಿಸಿದುದೇನು? ಅವನು ತೋರಬಯಸಿದ ದೃಶ್ಯವೇನು? ಈಗೇನು ತೋರಿಸಲಿದ್ದಾನೆ? ಒಬ್ಬ ಪೌರನು ಹೀಗೆ ಹೇಳಿದನು – ಮಹಾರಾಜರು ದುರ್ಬುದ್ಧಿಯಾದ ಕೈಕೆಯಿಗೆ ವರಗಳನ್ನು ನೀಡುವಾಗ ವಿಚಾರಮಾಡಲಿಲ್ಲ. ಮುಂದಾಗುವುದನ್ನು ಆಲೋಚಿಸದೆ ಇತ್ತ ವರಗಳಿಂದ ದುಃಖಕ್ಕೆ ಪಾತ್ರನಾಗಬೇಕಾಯಿತು. ಹೆಣ್ಣಿಗೆ ಹೆಚ್ಚು ವಶನಾದ್ದರಿಂದ ರಾಜನ ಜ್ಞಾನ, ಗುಣ ಎಲ್ಲ ಮಾಯವಾದುವು. ಧರ್ಮದ ಪರಿಮಿತಿಯನ್ನು ಬಲ್ಲವರು, ಪ್ರಾಜ್ಞರಾದವರು ರಾಜನನ್ನು ನಿಂದಿಸಲಾರರು. ಅವರು ಶಿಬಿ, ದಧೀಚಿ ಮತ್ತು ಹರಿಶ್ಚಂದ್ರರ ಕಥೆಗಳನ್ನು ಒಬ್ಬರಿಗೊಬ್ಬರು ಹೇಳತೊಡಗಿದರು. ಇದರಲ್ಲಿ ಭರತನ ಸಮ್ಮತಿಯೂ ಇರಬಹುದೆಂದು ಒಬ್ಬರು ಅಂದರು. ಇನ್ನು ಕೆಲವರು ಇವೆಲ್ಲವನ್ನು ಕೇಳಿ, ಉದಾಸೀನರಾಗಿ ಮಾತಾಡದೆ ಸುಮ್ಮನಿದ್ದುಬಿಟ್ಟರು. ಮತ್ತೆ ಕೆಲವರು ಕಿವಿಗಳನ್ನು ಮುಚ್ಚಿಕೊಂಡು ನಾಲಿಗೆಯನ್ನು ಕಡಿಯುತ್ತಾ ಹೇಳಿದರು – 'ಇದು ಶುದ್ಧಸುಳ್ಳು. ಇಂತಹ ಮಾತಾಡಿದರೆ ನಿನ್ನ ಪುಣ್ಯವೆಲ್ಲ ನಶಿಸೀತು! ಭರತನಿಗಂತೂ ಶ್ರೀರಾಮನು ಪ್ರಾಣಪ್ರಿಯನು. (ಚೌ/೧-೪)

**ದೋ – ಚಂದು ಚವೈ ಬರು ಅನಲ ಕನ ಸುಧಾ ಹೋಇ ಬಿಷತೂಲ।**
**ಸಪನೆಹುಂ ಕಬಹುಂ ನ ಕರಹಿಂ ಕಿಛು ಭರತು ರಾಮ ಪ್ರತಿಕೂಲ ॥ ೪೮ ॥**

ಬೇಕಾದರೆ ಚಂದ್ರನು ಬೆಂಕಿಯ ಮಳೆಗರೆಯಬಹುದು. ಅಮೃತ ವಿಷವಾದೀತು. ಆದರೆ ಭರತನು ಮಾತ್ರ ಕನಸಿನಲ್ಲಿಯೂ ಕೂಡ ಶ್ರೀರಾಮಚಂದ್ರನಿಗೆ ವಿರುದ್ಧವಾಗಿ ಏನನ್ನೂ ಮಾಡಲಾರನು. (ದೋ/೪೮)

**ಚೌ – ಏಕ ಬಿಧಾತಹಿ ದೂಷನು ದೇಹೀಂ। ಸುಧಾ ದೇಖಾಇ ದೀನ್ಹ ಬಿಷು ಜೇಹೀಂ ॥**
**ಖರಭರು ನಗರ ಸೋಚು ಸಬ ಕಾಹೂ। ದುಸಹ ದಾಹು ಉರ ಮಿಟಾ ಉಛಾಹೂ ॥ ೧ ॥**
**ಬಿಪ್ರಬಧೂ ಕುಲಮಾನ್ಯ ಜಠೇರೀ। ಜೇ ಪ್ರಿಯ ಪರಮ ಕೈಕಈ ಕೇರೀ ॥**
**ಲಗೀಂ ದೇನ ಸಿಖ ಸೀಲು ಸರಾಹೀ। ಬಚನ ಬಾನಸಮ ಲಾಗಹಿಂ ತಾಹೀ ॥ ೨ ॥**
**ಭರತು ನ ಮೋಹಿ ಪ್ರಿಯ ರಾಮ ಸಮಾನಾ । ಸದಾ ಕಹಹು ಯಹು ಸಬು ಜಗು ಜಾನಾ ॥**
**ಕರಹು ರಾಮ ಪರ ಸಹಜ ಸನೇಹೂ। ಕೆಹಿಂ ಅಪರಾಧ ಆಜು ಬನು ದೇಹೂ ॥ ೩ ॥**

**ಕಬಹುँ ನ ಕಿಯಹು ಸವತಿ ಆರೇಸೂ । ಪ್ರೀತಿ ಪ್ರತೀತಿ ಜಾನ ಸಬು ದೇಸೂ ॥**
**ಕೌಸಲ್ಯಾँ ಅಬ ಕಾಹ ಬಿಗಾರಾ । ತುಮ್ಹ ಜೆಹಿ ಲಾಗಿ ಬಜ್ರ ಪುರ ಪಾರಾ ॥ ೪ ॥**

ಕೆಲವರು ವಿಧಾತನನ್ನು ದೂಷಿಸಿದರು – ಅವನು ಅಮೃತವನ್ನು ತೋರಿ ವಿಷವನ್ನು ಕೊಟ್ಟಿರುವನು. ನಗರವೆಲ್ಲವೂ ಅಲ್ಲೋಲಕಲ್ಲೋಲವಾಯಿತು. ಪ್ರತಿಯೋರ್ವ ವ್ಯಕ್ತಿಯು ವಿಷಾದಕ್ಕೆ ಗುರಿಯಾದರು. ಅವರ ಹೃದಯದಲ್ಲಿ ದುಸ್ಸಹವಾದ ಬಾಧೆ, ದುರ್ಭರವಾದ ವೇದನೆ ತುಂಬಿಹೋಯಿತು. ಆನಂದ, ಉತ್ಸಾಹಗಳೆಲ್ಲ ಮಾಯವಾಯಿತು. ಬ್ರಾಹ್ಮಣ ಸ್ತ್ರೀಯರೂ, ಕುಲದ ಹಿರಿಯ ಮುತ್ತೈದೆಯರೂ, ಕೈಕೆಯಿಗೆ ಅತ್ಯಂತ ಪ್ರಿಯರಾದವರು ಆಕೆಯ ಶೀಲವನ್ನು ಹೊಗಳಿ, ಆಕೆಗೆ ಬುದ್ಧಿವಾದ ಹೇಳತೊಡಗಿದರು. ಆದರೆ ಆಕೆಗೆ ಅವರ ಮಾತುಗಳು ಬಾಣದಂತೆ ಇರಿಯುತ್ತಿದ್ದವು. ಅವರು ಹೇಳುತ್ತಿದ್ದರು – ''ರಾಣೀ! ಶ್ರೀರಾಮನು ನನಗೆ ಭರತನಿಗಿಂತಲೂ ಹೆಚ್ಚು ಪ್ರಿಯನು; ಇದನ್ನು ಜಗತ್ತೇ ಬಲ್ಲದು ಎಂದು ನೀನು ಹೇಳುತ್ತಿದ್ದೆಯಲ್ಲ! ಆದರೆ ಇಂದು ಯಾವ ಅಪರಾಧಕ್ಕಾಗಿ ಆತನನ್ನು ಕಾಡಿಗೆ ಕಳಿಸುತ್ತಿದ್ದೀಯೆ? ನೀನು ಎಂದೂ ಸವತಿಮತ್ಸರ ತೋರಿದವಳಲ್ಲ. ನಿನ್ನ ಪ್ರೇಮ, ವಿಶ್ವಾಸವನ್ನು ಇಡೀ ದೇಶವೇ ಬಲ್ಲದು. ಈಗ ಕೌಸಲ್ಯೆಯು ನಿನಗೆ ಏನು ಕೆಡುಕು ಮಾಡಿದಳು? ಆಕೆಯ ಯಾವ ಅಪರಾಧಕ್ಕಾಗಿ ನೀನು ಇಡೀ ನಗರದ ಮೇಲೆ ಬರಸಿಡಿಲು ಬೀಳಿಸಿದ್ದೀಯೆ? (ಚೌ/೧-೪)

**ದೋ – ಸೀಯ ಕಿ ಪಿಯ ಸँಗು ಪರಿಹರಿಹಿ ಲಖನು ಕಿ ರಹಿಹಹिँ ಧಾಮ ।**
**ರಾಜು ಕಿ ಭೂँಜಬ ಭರತ ಪುರ ನೃಪು ಕಿ ಜಿಇಹಿ ಬಿನು ರಾಮ ॥ ೪೯ ॥**

ಸೀತಾದೇವಿಯು ತನ್ನ ಪತಿಯಾದ ಶ್ರೀರಾಮಚಂದ್ರನನ್ನುಳಿದು ಇರಬಲ್ಲಳೇ? ಲಕ್ಷ್ಮಣನು ಅಣ್ಣನಿಲ್ಲದೆ ಮನೆಯಲ್ಲಿರ ಬಲ್ಲನೇ? ಶ್ರೀರಾಮನು ಇಲ್ಲದೆ ಭರತನು ಅಯೋಧ್ಯೆಯನ್ನು ಆಳಬಲ್ಲನೇ? ಶ್ರೀರಾಮನಿಲ್ಲದೆ ಮಹಾರಾಜರು ಬದುಕಿರಬಲ್ಲರೇ? (ದೋ/೪೯)

**ಚೌ – ಅಸ ಬಿಚಾರಿ ಉರ ಛಾಡಹು ಕೋಹೂ । ಸೋಕ ಕಲಂಕ ಕೋಠಿ ಜನಿ ಹೋಹೂ ॥**
**ಭರತಹಿ ಅವಸಿ ದೇಹು ಜುಬರಾಜೂ । ಕಾನನ ಕಾಹ ರಾಮ ಕರ ಕಾಜೂ ॥ ೧ ॥**
**ನಾಹಿನ ರಾಮು ರಾಜ ಕೇ ಭೂಖೇ । ಧರಮ ಧುರೀನ ಬಿಷಯ ರಸ ರೂಖೇ ॥**
**ಗುರ ಗೃಹ ಬಸಹुँ ರಾಮು ತಜಿ ಗೇಹೂ । ನೃಪ ಸನ ಅಸ ಬರು ದೂಸರ ಲೇಹೂ ॥ ೨ ॥**
**ಜೌँ ನಹಿँ ಲಗಿಹಹು ಕಹೇँ ಹಮಾರೇ । ನಹಿँ ಲಾಗಿಹಿ ಕಛು ಹಾಥ ತುಮ್ಹಾರೇ ॥**
**ಜೌँ ಪರಿಹಾಸ ಕೀನ್ಹಿ ಕಛು ಹೋಈ । ತೌ ಕಹಿ ಪ್ರಗಟ ಜನಾವಹು ಸೋಈ ॥ ೩ ॥**
**ರಾಮ ಸರಿಸ ಸುತ ಕಾನನ ಜೋಗೂ । ಕಾಹ ಕಹಿಹಿ ಸುನಿ ತುಮ್ಹ ಕಹुँ ಲೋಗೂ ॥**
**ಉಠಹು ಬೇಗಿ ಸೋಇ ಕರಹು ಉಪಾಈ । ಜೆಹಿ ಬಿಧಿ ಸೋಕು ಕಲಂಕು ನಸಾಈ ॥ ೪ ॥**

ಇವೆಲ್ಲವನ್ನು ಯೋಚಿಸಿ ಕೋಪವನ್ನು ತೋರೆ. ಶೋಕ-ಕಳಂಕಕ್ಕೆ ಭಂಡಾರವಾಗಬೇಡ. ಭರತನನ್ನು ಯುವರಾಜನನ್ನಾಗಿ ಮಾಡುವುದಾದರೆ ಅವಶ್ಯವಾಗಿ ಮಾಡು. ಆದರೆ ಶ್ರೀರಾಮನನ್ನು ಕಾಡಿಗೆ ಏಕೆ ಕಳಿಸುತ್ತಿರುವೆ? ಶ್ರೀರಾಮನಿಗೆ ರಾಜ್ಯದ ಹಸಿವು ಇಲ್ಲ. ಆತನು ಧರ್ಮಧುರಂಧರನು. ಅವನಲ್ಲಿ ವಿಷಯಾಸಕ್ತಿ ಇಲ್ಲವೇ ಇಲ್ಲ. ರಾಮನು ಅರಮನೆಯಲ್ಲಿ ಇರುವುದು ಬೇಡವೆಂದಾದರೆ, ಗುರುಗಳ ಮನೆಯಲ್ಲಿರುವಂತೆ ಮತ್ತೊಂದು ವರವನ್ನು ಬೇಡಿಕೊ. ನಾವು ಹೇಳಿದಂತೆ ನೀನು ನಡೆಯದಿದ್ದರೆ, ನಿನ್ನ ಕೈಗೆ ಏನೂ ಹತ್ತದು. ಒಂದು ವೇಳೆ ಇದೆಲ್ಲವೂ ಪರಿಹಾಸ್ಯಕ್ಕಾಗಿ ಹೇಳಿದ್ದರೆ, ಅದನ್ನು ಸ್ಪಷ್ಟವಾಗಿ ಹೇಳಿಬಿಡು. ರಾಮನಂತಹ ಪುತ್ರನು ವನವಾಸಕ್ಕಾಗಿ ಅರ್ಹನೇ? ಇದನ್ನು ಕೇಳಿ ಜನ ಏನಂದಾರು? ಬೇಗನೆ ಏಳು. ಈ ಶೋಕ, ಕಳಂಕವೆಲ್ಲ ಮಾಯವಾಗುವ ಉಪಾಯವನ್ನು ಮಾಡು. (ಚೌ/೧-೪)

**ಛಂ – ಜೆಹಿ ಭಾँತಿ ಸೋಕು ಕಲಂಕು ಜಾಇ ಉಪಾಯ ಕರಿ ಕುಲ ಪಾಲಹೀ ॥**
**ಹಠಿ ಫೇರು ರಾಮಹಿ ಜಾತ ಬನ ಜನಿ ಬಾತ ದೂಸರಿ ಚಾಲಹೀ ॥**
**ಜಿಮಿ ಭಾನು ಬಿನು ದಿನು ಪ್ರಾನ ಬಿನು ತನು ಚಂದ ಬಿನು ಜಿಮಿ ಜಾಮಿನೀ ॥**
**ತಿಮಿ ಅವಧ ತುಲಸೀದಾಸ ಪ್ರಭು ಬಿನು ಸಮುಝಿ ಧೌँ ಜಿಯँ ಭಾಮಿನೀ ॥**

ನಗರದ ಶೋಕ ಹಾಗೂ ನಿನ್ನ ಕಳಂಕ ಎರಡೂ ತೊಲಗುವಂತೆ ಏನಾದರೂ ಉಪಾಯಮಾಡು. ಕುಲವನ್ನು ಕಾಪಾಡು. ಕಾಡಿಗೆ ಹೋಗುತ್ತಿರುವ ಶ್ರೀರಾಮನನ್ನು ಬಲವಂತವಾಗಿ ಹಿಂದಕ್ಕೆ ಕರೆದು ತಾ. ಬೇರೇನೂ ಮಾಡಬೇಡ. ಭಾನುವಿಲ್ಲದ ದಿನ,

ಪ್ರಾಣವಿಲ್ಲದ ಶರೀರ, ಚಂದ್ರನಿಲ್ಲದ ರಾತ್ರಿಯಂತೆ ಶ್ರೀರಾಮನಿಲ್ಲದ ಅಯೋಧ್ಯೆಯು ಕಳಾಹೀನದೀತು. ಎಲೆ ಭಾಮಿನಿ! ಈ ವಿಷಯವನ್ನು ಚೆನ್ನಾಗಿ ವಿಚಾರಮಾಡಿ ನೋಡು.'' (ಛಂದ)

**ಸೋ – ಸಖಿನ್ಹ ಸಿಖಾವನು ದೀನ್ಹ ಸುನತ ಮಧುರ ಪರಿನಾಮ ಹಿತ ।**
**ತೇಇಂ ಕಛು ಕಾನ ನ ಕೀನ್ಹ ಕುಟಿಲ ಪ್ರಬೋಧೀಂ ಕೂಬರೀ ॥ ೫೦ ॥**

ಈ ಪ್ರಕಾರ ಆಕೆಯ ಸಖಿಯರು ಕೇಳಲು ಮಧುರವೂ, ಪರಿಣಾಮದಲ್ಲಿ ಹಿತಕರವೂ ಆದ ಬುದ್ಧಿವಾದವನ್ನು ಹೇಳಿದರು. ಆದರೆ ಕುಟಿಲ ಕುಬ್ಜ, ಮಂಥರೆಯ ಬುದ್ಧಿವಾದದ ಮುಂದೆ ಕೈಕೆಯಿಯು ಇದಾವುದರ ಕಡೆಗೂ ಕಿವಿಯೇ ಕೊಡಲಿಲ್ಲ. (ಸೋ/೫೦)

**ಚೌ – ಉತರು ನ ದೇಇ ದುಸಹ ರಿಸ ರೂಖೀ । ಮೃಗಿನ್ಹ ಚಿತವ ಜನು ಬಾಘಿನಿ ಭೂಖೀ ॥**
**ಬ್ಯಾಧಿ ಅಸಾಧಿ ಜಾನಿ ತಿನ್ಹತ್ಯಾಗೀ । ಚಲೀಂ ಕಹತ ಮತಿಮಂದ ಅಭಾಗೀ ॥ ೧ ॥**
**ರಾಜು ಕರತ ಯಹ ದೈಅಂ ಬಿಗೋಈ । ಕೀನ್ಹೇಸಿ ಅಸ ಜಸ ಕರಇ ನ ಕೋಈ ॥**
**ಏಹಿ ಬಿಧಿ ಬಿಲಪಹಿಂ ಪುರ ನರ ನಾರೀಂ । ದೇಹಿಂ ಕುಚಾಲಿಹಿ ಕೋಟಿಕ ಗಾರೀಂ ॥ ೨ ॥**
**ಜರಹಿಂ ಬಿಷಮ ಜರ ಲೇಹಿಂ ಉಸಾಸಾ । ಕವನಿ ರಾಮ ಬಿನು ಜೀವನ ಆಸಾ ॥**
**ಬಿಪುಲ ಬಿಯೋಗ ಪ್ರಜಾ ಅಕುಲಾನೀ । ಜನು ಜಲಚರ ಗನ ಸೂಖತ ಪಾನೀ ॥ ೩ ॥**
**ಅತಿ ಬಿಷಾದ ಬಸ ಲೋಗ ಲೊಗಾಈಂ । ಗಏ ಮಾತೂ ಪಹಿಂ ರಾಮು ಗೊಸಾಈಂ ॥**
**ಮುಖ ಪ್ರಸನ್ನ ಚಿತ ಚೌಗುನ ಚಾಊ । ಮಿಟಾ ಸೋಚೂ ಜನೀ ರಾಖೈ ರಾಊ ॥ ೪ ॥**

ದುಸ್ಸಹವಾದ ಕೋಪದಿಂದ ಕ್ರೌರ್ಯವನ್ನು ತಾಳಿದ ಕೈಕೆಯಿಯ ಕಣ್ಣುಗಳು ಕೆಂಪಾದವು. ಅವಳು ಅವರಲ್ಲಿ ಏನನ್ನೂ ಮಾತಾಡದೆ, ಹಸಿದ ಹೆಣ್ಣುಹುಲಿಯು ಹುಲ್ಲೆಯನ್ನು ನೋಡುವಂತೆ, ದಿಟ್ಟಿಸಿ ನೋಡುತ್ತಿದ್ದಳು. ಎಲ್ಲ ಸಖಿಯರೂ ಇದು ಮದ್ದಿಲ್ಲದ ರೋಗವೆಂದು ತಿಳಿದು, ಅವಳನ್ನು ತೊರೆದು ಸದ್ದಿಲ್ಲದೆ ಹೊರಟರು. ಇವಳು ಮಂದಮತಿ, ಅಭಾಗಿನಿ ಎಂದು ನಿಂದಿಸುತ್ತಾ ಅವರೆಲ್ಲರೂ ಹೊರಟುಹೋದರು.

''ಕೈಕೆಯಿಗೆ ರಾಜ್ಯವೈಭವಗಳೆಲ್ಲವೂ ಇದ್ದರೂ ವಿಧಿಯು ಅದನ್ನು ದೂರಮಾಡಿತು. ಇವಳು ಮಾಡಿದಂತಹ ದುಷ್ಕೃತ್ಯವನ್ನು ಇತರರು ಊಹಿಸಲೂ ಕೂಡ ಸಾಹಸಪಡರು.'' ಈ ವಿಧವಾಗಿ ನಗರದ ಸ್ತ್ರೀ-ಪುರುಷರೆಲ್ಲರೂ ಪರಿತಪಿಸುತ್ತಿದ್ದರು. ಕುತಂತ್ರಿಯಾದ ಕೈಕೆಯಿಯನ್ನು ಹಲವು ರೀತಿಯಿಂದ ಬೈಯ್ಯುತ್ತಿದ್ದರು. ಅಯೋಧ್ಯಾವಾಸಿಗಳು ವಿಷಮಜ್ವರದಲ್ಲಿ ಬೇಯುತ್ತಿದ್ದರು. ನಿಟ್ಟುಸಿರು ಬಿಡುತ್ತಾ - ಶ್ರೀರಾಮನಿಲ್ಲದೆ ಇಲ್ಲಿ ಬದುಕುವ ಆಶೆ ಯಾರಿಗಿದೆ? ಎಂದು ಅಂದುಕೊಳ್ಳುತ್ತಿದ್ದರು. ಉರಿಬಿಸಿಲಿಗೆ ನೀರು ಇಂಗಿಹೋದಾಗ ಅದರಲ್ಲಿದ್ದ ಜಲಚರಗಳು ಒದ್ದಾಡುವಂತೆ, ರಾಮವಿಯೋಗದ ಆಶಂಕೆಯಿಂದ ಪ್ರಜೆಗಳೆಲ್ಲವೂ ವ್ಯಾಕುಲವಾಯಿತು. ಎಲ್ಲ ಸ್ತ್ರೀಪುರುಷರು ವಿಷಾದ ವಿಹ್ವಲರಾಗಿದ್ದರು. ಇಷ್ಟರಲ್ಲಿ ಶ್ರೀರಾಮಚಂದ್ರನು ತಾಯಿ ಕೌಸಲ್ಯೆಯ ಬಳಿಗೆ ಹೋದನು. ಅವನ ವದನ ಪ್ರಸನ್ನವಾಗಿತ್ತು. ಮನಸ್ಸಿನಲ್ಲಿ ಅಮಿತ ಉತ್ಸಾಹ ತುಂಬಿತ್ತು. ಮಹಾರಾಜರು ಎಲ್ಲಾದರೂ ಉಳಿಸಿಕೊಂಡಾರು ಎಂಬ ಚಿಂತೆಯೂ ಹರಿಯಿತು. (ರಾಜ್ಯಾಭಿಷೇಕದ ವಾರ್ತೆಯನ್ನು ಕೇಳಿದಾಗ, ಸೋದರರನ್ನು ಬಿಟ್ಟು ಹಿರಿಯವನಾದ ನನಗೆ ಪಟ್ಟಾಭಿಷೇಕ ಏಕೆ ಮಾಡುವರು ಎಂಬ ವಿಷಾದ ಶ್ರೀರಾಮನಿಗಾಗಿತ್ತು. ಈಗ ಮಾತೆ ಕೈಕೆಯಮ್ಮನವರ ಆಜ್ಞೆ, ತಂದೆಯವರ ಮೌನಸಮ್ಮತಿ ಪಡೆದು ಆ ವಿಷಾದ ಹೊರಟುಹೋಯಿತು.) (ಚೌ/೧-೪)

**ದೋ – ನವ ಗಯಂದು ರಘುಬೀರ ಮನು ರಾಜು ಅಲಾನ ಸಮಾನ ।**
**ಛೂಟ ಜಾನಿ ಬನ ಗವನು ಸುನಿ ಉರ ಅನಂದು ಅಧಿಕಾನ ॥ ೫೧ ॥**

ಶ್ರೀರಘುವೀರನ ಮನಸ್ಸು ಹೊಸದಾಗಿ ಹಿಡಿದ ಸಲಗದಂತಿತ್ತು. ಪಟ್ಟಾಭಿಷೇಕವು ಆ ಆನೆಯನ್ನು ಕಟ್ಟಿಹಾಕುವ ಮುಳ್ಳಿರುವ ಸರಪಳಿಯಂತಿತ್ತು. 'ಕಾಡಿಗೆ ಹೋಗಬೇಕು' ಎಂಬುದನ್ನು ಕೇಳಿ, ಬಂಧನದಿಂದ ಬಿಡುಗಡೆ ಹೊಂದಿದಂತೆ ಅವನ ಮನಸ್ಸು ಆನಂದಮಗ್ನವಾಯಿತು. (ದೋ/೫೧)

## ರಾಮ ಕೌಸಲ್ಯಾ ಸಂವಾದ

**ಚೌ – ರಘುಕುಲತಿಲಕ ಜೋರಿ ದೊಉ ಹಾಥಾ । ಮುದಿತ ಮಾತು ಪದ ನಾಯಉ ಮಾಥಾ ॥**
**ದೀನ್ಹಿ ಅಸೀಸ ಲಾಇ ಉರ ಲೀನ್ಹೇ । ಭೂಷನ ಬಸನ ನಿಛಾವರಿ ಕೀನ್ಹೇ ॥ ೧ ॥**

ಬಾರ ಬಾರ ಮುಖ ಚುಂಬತಿ ಮಾತಾ । ನಯನ ನೇಹ ಜಲು ಪುಲಕಿತ ಗಾತಾ ॥
ಗೋದ ರಾಖಿ ಪುನಿ ಹೃದಯಁ ಲಗಾಏ । ಸ್ರವತ ಪ್ರೇಮರಸ ಪಯದ ಸುಹಾಏ ॥ ೨ ॥
ಪ್ರೇಮು ಪ್ರಮೋದು ನ ಕಛು ಕಹಿ ಜಾಈ । ರಂಕ ಧನದ ಪದಬೀ ಜನು ಪಾಈ ॥
ಸಾದರ ಸುಂದರ ಬದನು ನಿಹಾರೀ । ಬೋಲೀ ಮಧುರ ಬಚನ ಮಹತಾರೀ ॥ ೩ ॥
ಕಹಹು ತಾತ ಜನನೀ ಬಲಿಹಾರೀ । ಕಬಹಿಂ ಲಗನ ಮುದ ಮಂಗಲಕಾರೀ ॥
ಸುಕೃತ ಸೀಲಸುಖ ಸೀವಁ ಸುಹಾಈ । ಜನಮ ಲಾಭ ಕಇ ಅವಧಿ ಅಘಾಈ ॥ ೪ ॥

ರಘುಕುಲತಿಲಕನಾದ ಶ್ರೀರಾಮಚಂದ್ರನು ಎರಡೂ ಕೈಗಳನ್ನೂ ಜೋಡಿಸಿ, ಆನಂದದಿಂದ ತಾಯಿಯ ಕಾಲಿಗೆರಗಿದನು. ತಾಯಿಯು ಆಶೀರ್ವಾದ ನೀಡಿದಳು. ಎದೆಗವುಚಿಕೊಂಡಳು. ಒಡವೆ-ವಸ್ತ್ರಗಳನ್ನು ಅವನಿಗೆ ನಿವಾಳಿಸಿ ಬಿಸಾಡಿದಳು. ಕೌಸಲ್ಯೆಯು ಮತ್ತೆ-ಮತ್ತೆ ರಾಮನ ಮುಖವನ್ನು ಮುದ್ದಾಡಿದಳು. ಕಂಗಳಲ್ಲಿ ಆನಂದಬಾಷ್ಪಗಳು ತುಂಬಿಬಂದುವು. ದೇಹವು ಪುಳಕಿತವಾಯಿತು. ಆಕೆಯು ಶ್ರೀರಾಮನನ್ನು ತೊಡೆಯಲ್ಲಿ ಕುಳ್ಳಿರಿಸಿಕೊಂಡು, ಎದೆಗಪ್ಪಿಕೊಂಡಳು. ಪ್ರೇಮದ ದೆಸೆಯಿಂದ ಅವಳ ಸ್ತನಗಳಲ್ಲಿ ಹಾಲು ಉಕ್ಕಿ ಹರಿಯತೊಡಗಿತು. ಆಕೆಯ ಪ್ರೇಮ, ಆನಂದ ಹೇಳತೀರದು. ತಿರುಕನಿಗೆ ಕುಬೇರನ ಬೊಕ್ಕಸ ದೊರೆತಂತಾಯಿತು. ತುಂಬ ಆದರದಿಂದ ಮಗನ ಮುದ್ದು ಮೊಗವನ್ನು ನೋಡಿ ಆಕೆಯು ಮಧುರವಾಗಿ ನುಡಿದಳು – ''ಮಗೂ! ಪ್ರೇಮದಿಂದ ಕೇಳುತ್ತಿದ್ದೇನೆ. ನಿಶ್ಚಯವಾಗಿ ಹೇಳು. ಆನಂದ ಮಂಗಳಪ್ರದವಾದ ಆ ಶುಭಮುಹೂರ್ತವು ಯಾವಾಗ? ಪುಣ್ಯಾತ್ಮರ ಶೀಲ-ಸುಖಗಳಿಗಾಗಿ, ಮಾನವಜನ್ಮಸಾಫಲ್ಯಸಿದ್ಧಿಗಾಗಿ ಪರಾಕಾಷ್ಠೆಯಾದ ಆ ಶುಭಸಮಯ ಯಾವಾಗ? (ಚೌ/೧-೪)

**ದೋ – ಜೆಹಿ ಚಾಹತ ನರ ನಾರಿ ಸಬ ಅತಿ ಆರತ ಎಹಿ ಭಾಁತಿ ।**
**ಜಿಮಿ ಚಾತಕ ಚಾತಕಿ ತೃಷಿತ ಬೃಷ್ಟಿ ಸರದ ರಿತು ಸ್ವಾತಿ ॥ ೫೨ ॥**

ಬಾಯಾರಿದ ಚಾತಕ ಪಕ್ಷಿಯು ಶರದೃತುವಿನ ಸ್ವಾತಿನಕ್ಷತ್ರದ ನೀರಿಗಾಗಿ ಎದುರು ನೋಡುತ್ತಿರುವಂತೆ, ಆಬಾಲ ಸ್ತ್ರೀಪುರುಷರೆಲ್ಲರೂ ಯುವರಾಜ ಪಟ್ಟಾಭಿಷೇಕದ ಶುಭಮುಹೂರ್ತವನ್ನು ಎದುರುನೋಡುತ್ತಿದ್ದಾರೆ. (ದೋ/೫೨)

ಚೌ – ತಾತ ಜಾಉಁ ಬಲಿ ಬೇಗಿ ನಹಾಹೂ । ಜೋ ಮನ ಭಾವ ಮಧುರ ಕಛು ಖಾಹೂ ॥
ಪಿತು ಸಮೀಪ ತಬ ಜಾಏಹು ಭೈಆ । ಭಇ ಬಡಿ ಬಾರ ಜಾಇ ಬಲಿ ಮೈಆ ॥ ೧ ॥
ಮಾತು ಬಚನ ಸುನಿ ಅತಿ ಅನುಕೂಲಾ । ಜನು ಸನೇಹ ಸುರತರು ಕೇ ಫೂಲಾ ॥
ಸುಖ ಮಕರಂದ ಭರೇ ಶ್ರಿಯಮೂಲಾ । ನಿರಖಿ ರಾಮ ಮನು ಭವಁರು ನ ಭೂಲಾ ॥ ೨ ॥
ಧರಮ ಧುರೀನ ಧರಮ ಗತಿ ಜಾನೀ । ಕಹೇಉ ಮಾತು ಸನ ಅತಿ ಮೃದು ಬಾನೀ ॥
ಪಿತಾಁ ದೀನ್ಹ ಮೋಹಿ ಕಾನನ ರಾಜೂ । ಜಹಁ ಸಬ ಭಾಂತಿ ಮೋರ ಬಡ ಕಾಜೂ ॥ ೩ ॥
ಆಯಸು ದೇಹಿ ಮುದಿತ ಮನ ಮಾತಾ । ಜೆಹಿಂ ಮುದ ಮಂಗಲ ಕಾನನ ಜಾತಾ ॥
ಜನಿ ಸನೇಹ ಬಸ ಡರಪಸಿ ಭೋರೇಁ । ಆನಁದು ಅಂಬ ಅನುಗ್ರಹ ತೋರೇಁ ॥ ೪ ॥

ಕಂದ! ಪ್ರೇಮದಿಂದ ಹೇಳುತ್ತಿದ್ದೇನೆ. ಬೇಗನೇ ಸ್ನಾನಮಾಡು. ಇಷ್ಟಬಂದ ಯಾವುದಾದರೂ ಮೃಷ್ಟಾನ್ನವನ್ನು ಭುಂಜಿಸು. ಬಳಿಕ ತಂದೆಯವರ ಬಳಿಗೆ ಹೋಗು. ಈಗಲೇ ತುಂಬಾ ತಡವಾಗಿದೆ. ತಾಯಿಯ ಪ್ರೇಮಾನುರಾಗದಿಂದೊಡಗೂಡಿದ ಕಲ್ಪವೃಕ್ಷದ ಹೂವುಗಳಂತಿದ್ದ, ಸುಖವೆಂಬ ಮಕರಂದದಿಂದ ಕೂಡಿದ್ದ, ಸಿರಿಯಮೂಲವಾಗಿದ್ದ ವಚನಗಳೆಂಬ ಹೂವುಗಳನ್ನು ಕಂಡು ಶ್ರೀರಾಮನ ಮನರೂಪೀ ಭ್ರಮರವು ಆಕರ್ಷಿತವಾಗಲಿಲ್ಲ. ಧರ್ಮಧುರೀಣನಾದ ಶ್ರೀರಾಮನು ಧರ್ಮದ ಮರ್ಮವನ್ನು ತಿಳಿದವನಾದ್ದರಿಂದ ತಾಯಿಯಬಳಿ ಅತ್ಯಂತ ಮೃದುವಾಗಿ ಇಂತೆಂದನು – ಅಮ್ಮಾ! ತಂದೆಯವರು ನನಗೆ ವನದ ರಾಜ್ಯವನ್ನು ಕರುಣಿಸಿದ್ದಾರೆ. ಅಲ್ಲಿ ಎಲ್ಲ ರೀತಿಯಿಂದಲೂ ನನ್ನ ದೊಡ್ಡದಾದ ಕಾರ್ಯವು ನೆರವೇರಲಿದೆ. ತಾಯಿ! ನೀನು ಸಂತೋಷದಿಂದ ನನ್ನ ವನದಯಾತ್ರೆಯು ಮಂಗಳಮಯವಾಗುವಂತೆ, ಆನಂದಕರವಾಗುವಂತೆ ಆಶೀರ್ವದಿಸು. ನನ್ನ ಮೇಲಿನ ಪ್ರೇಮದಲ್ಲಿ ಮುಳುಗಿ ಮರೆತಾದರೂ ಭಯಪಡಬೇಡ. ನಿನ್ನ ಕೃಪೆಯಿಂದ ಎಲ್ಲವೂ ಶುಭವೇ ಜರುಗುವುದು. (ಚೌ/೧-೪)

**ದೋ – ಬರಷ ಚಾರಿ ದಸ ಬಿಪಿನ ಬಸಿ ಕರಿ ಪಿತು ಬಚನ ಪ್ರಮಾನ ।**
**ಆಇ ಪಾಯ ಪುನಿ ದೇಖಿಹಉಁ ಮನು ಜನಿ ಕರಸಿ ಮಲಾನ ॥ ೫೩ ॥**

ತಂದೆಯವರ ಮಾತನ್ನು ಸತ್ಯವಾಗಿಸಲು ಹದಿನಾಲ್ಕು ವರ್ಷ ಕಾಡಿನಲ್ಲಿದ್ದು, ಮರಳಿ ಬೇಗನೇ ಬರುತ್ತೇನೆ. ಅನಂತರ ನಿನ್ನ ಚರಣದರ್ಶನ ಮಾಡುತ್ತೇನೆ. ನೀನು ವೃಥಾ ಮನಸ್ಸನ್ನು ಕೆಡಿಸಿಕೊಳ್ಳಬೇಡ. (ದೋ/೫೩)

**ಚೌ – ಬಚನ ಬಿನೀತ ಮಧುರ ರಘುಬರ ಕೇ । ಸರ ಸಮ ಲಗೇ ಮಾತು ಉರ ಕರಕೇ ॥**
**ಸಹಮಿ ಸೂಖಿ ಸುನಿ ಸೀತಲಿ ಬಾನೀ । ಜಿಮಿ ಜವಾಸ ಪರೆ ಪಾವಸ ಪಾನೀ ॥ ೧ ॥**
**ಕಹಿ ನ ಜಾಇ ಕಛು ಹೃದಯ ಬಿಷಾದೂ । ಮನಹುँ ಮೃಗೀ ಸುನಿ ಕೇಹರಿ ನಾದೂ ॥**
**ನಯನ ಸಜಲ ತನ ಥರ ಥರ ಕಾಂಪೀ । ಮಾಜಹಿ ಖಾಇ ಮೀನ ಜನು ಮಾಪೀ ॥ ೨ ॥**
**ಧರಿ ಧೀರಜು ಸುತ ಬದನು ನಿಹಾರೀ । ಗದಗದ ಬಚನ ಕಹತಿ ಮಹತಾರೀ ॥**
**ತಾತ ಪಿತಹಿ ತುಮ್ಹ ಪ್ರಾನಪಿಆರೇ । ದೇಖಿ ಮುದಿತ ನಿತ ಚರಿತ ತುಮ್ಹಾರೇ ॥ ೩ ॥**
**ರಾಜು ದೇನ ಕಹುँ ಸುಭ ದಿನ ಸಾಧಾ । ಕಹೇಉ ಜಾನ ಬನ ಕೆಹಿँ ಅಪರಾಧಾ ॥**
**ತಾತ ಸುನಾವಹು ಮೋಹಿ ನಿದಾನು । ಕೋ ದಿನಕರ ಕುಲ ಭಯಉ ಕೃಸಾನೂ ॥ ೪ ॥**

ರಘುವಂಶಶ್ರೇಷ್ಠನಾದ ಶ್ರೀರಾಮಚಂದ್ರನ ವಚನಗಳು ನಮ್ರವೂ, ಮಧುರವೂ ಆಗಿದ್ದರೂ ಆ ಸ್ಥಿತಿಯಲ್ಲಿ ಅವಳಿಗೆ ಕಟುವಾಗಿ ಕಂಡವು. ಅವು ಬಾಣಗಳಂತೆ ಹೃದಯಕ್ಕೆ ನಾಟಿದವು. ಅವು ಅವಳನ್ನು ಬಾಧಿಸತೊಡಗಿದವು. ಆ ಶೀತಲವಾಣಿಯನ್ನು ಕೇಳಿ, ಮಳೆಯ ನೀರು ಬಿದ್ದಾಗ 'ಜವಾಸ' ಗಿಡವು ಒಣಗುವಂತೆ, ಕೌಸಲ್ಯೆಯು ಒಣಗಿಹೋದಳು. ಅವಳ ಮನೋವೇದನೆ ಮಾತಿಗೆ ಮೀರಿದುದು. ಸಿಂಹಗರ್ಜನೆಯನ್ನು ಕೇಳಿದ ಜಿಂಕೆಯಂತೆ ಆಕೆಯ ಮನಸ್ಸು ವಿಕಲವಾಯಿತು. ಕಣ್ಣು ತುಂಬಿಬಂದವು. ದೇಹ ಕಂಪಿಸತೊಡಗಿತು. ಮುಂಗಾರು ಮಳೆಯ ನೀರಿನ ನೊರೆಯನ್ನು ತಿಂದ ಮೀನಿನಂತೆ ವಿಲವಿಲನೆ ಒದ್ದಾಡಿದಳು. ಅವಳು ಧೈರ್ಯವನ್ನು ತಂದುಕೊಂಡು ಮಗನ ಮುಖವನ್ನು ನೋಡಿ ತಾಯಿಯು ಗದ್ಗದಳಾಗಿ ಹೇಳತೊಡಗಿದಳು – 'ಮಗು! ನೀನು ನಿನ್ನ ತಂದೆಗೆ ಪ್ರಾಣಪ್ರಿಯವಲ್ಲವೇ? ನಿನ್ನ ಚರಿತ್ರವನ್ನು ಕಂಡು ಅವರು ಸಂತೋಷಪಡುತ್ತಿದ್ದರು. ಮಹಾರಾಜರೇ ನಿನ್ನ ಪಟ್ಟಾಭಿಷೇಕಕ್ಕಾಗಿ ಮುಹೂರ್ತವನ್ನು ನಿರ್ಣಯಿಸಿದ್ದರು. ಈಗ ಯಾವ ಅಪರಾಧಕ್ಕಾಗಿ ನಿನ್ನನ್ನು ಕಾಡಿಗೆ ಕಳಿಸುತ್ತಾರಂತೆ. ಮಗು! ಇದಕ್ಕೆ ಕಾರಣವಾದರೂ ಏನು? ಸೂರ್ಯವಂಶವನ್ನು ಸುಡಲು ಯಾರು ಅಗ್ನಿಯಾಗಿ ಹುಟ್ಟಿಕೊಂಡರು? (ಚೌ/೧-೪)

**ದೋ – ನಿರಖಿ ರಾಮ ರುಖ ಸಚಿವಸುತ ಕಾರನು ಕಹೇಉ ಬುಝಾಇ ।**
**ಸುನಿ ಪ್ರಸಂಗು ರಹಿ ಮೂಕ ಜಿಮಿ ದಸಾ ಬರನಿ ನಹಿँ ಜಾಇ ॥ ೫೪ ॥**

ಆಗ ಶ್ರೀರಾಮಚಂದ್ರನ ಮನೋಭಾವವನ್ನು ಅರಿತ ಮಂತ್ರಿಕುಮಾರನು ಕೌಸಲ್ಯೆಗೆ ಎಲ್ಲ ಕಾರಣಗಳನ್ನು ವಿವರಿಸಿ ಹೇಳಿದನು. ಅದನ್ನು ಕೇಳಿದ ಅವಳು ಮೂಕಳಂತಾದಳು. ಆಕೆಯ ದೆಸೆಯನ್ನು ಯಾರು ವರ್ಣಿಸಬಲ್ಲರು? (ದೋ/೫೪)

**ಚೌ – ರಾಖಿ ನ ಸಕಇ ನ ಕಹಿ ಸಕ ಜಾಹೂ । ದುಹೂँ ಭಾಂತಿ ಉರ ದಾರುನ ದಾಹೂ ॥**
**ಲಿಖತ ಸುಧಾಕರ ಗಾ ಲಿಖಿ ರಾಹೂ । ಬಿಧಿ ಗತಿ ಬಾಮ ಸದಾ ಸಬ ಕಾಹೂ ॥ ೧ ॥**
**ಧರಮ ಸನೇಹ ಉಭಯँ ಮತಿ ಘೇರೀ । ಭಇ ಗತಿ ಸಾಂಪ ಛುಛುಂದರಿ ಕೇರೀ ॥**
**ರಾಖಉँ ಸುತಹಿ ಕರಉँ ಅನುರೋಧೂ । ಧರಮು ಜಾಇ ಅರು ಬಂಧು ಬಿರೋಧೂ ॥ ೨ ॥**
**ಕಹಉँ ಜಾನ ಬನ ತೌ ಬಡಿ ಹಾನೀ । ಸಂಕಟ ಸೋಚ ಬಿಬಸ ಭಇ ರಾನೀ ॥**
**ಬಹುರಿ ಸಮುಝಿ ತಿಯ ಧರಮು ಸಯಾನೀ । ರಾಮು ಭರತು ದೋಉ ಸುತ ಸಮ ಜಾನೀ ॥ ೩ ॥**
**ಸರಲ ಸುಭಾಉ ರಾಮ ಮಹತಾರೀ । ಬೋಲೀ ಬಚನ ಧೀರ ಧರಿ ಭಾರೀ ॥**
**ತಾತ ಜಾಉँ ಬಲಿ ಕೀನ್ಹೆಹು ನೀಕಾ । ಪಿತು ಆಯಸು ಸಬ ಧರಮಕ ಟೀಕಾ ॥ ೪ ॥**

'ಇರು' ಎಂದು ಹೇಳುವಂತಿಲ್ಲ. 'ಹೋಗು' ಎಂದೂ ಹೇಳುವಂತಿಲ್ಲ. ಎರಡೂ ಕಡೆಯಿಂದ ಎದೆಗುದಿ. ಅವಳು ಮನಸ್ಸಿನಲ್ಲೇ ಅಂದುಕೊಂಡಳು – ವಿಧಾತನ ನಡತೆಯು ಎಲ್ಲರಿಗಾಗಿ, ಯಾವಾಗಲೂ ವಕ್ರವಾಗಿಯೇ ಇರುತ್ತದೆ. ಚಂದ್ರನನ್ನು ಬರೆಯಲು ಹೋಗಿ ಅದು ರಾಹು ಆಯಿತು. (ರಾಜ್ಯದ ಬದಲಿಗೆ ವನವಾಸವನ್ನು ನೀಡಿದನು) ಧರ್ಮ ಮತ್ತು ಪುತ್ರವಾತ್ಸಲ್ಯ ಇವೆರಡರ ನಡುವೆ ಕೌಸಲ್ಯೆಯ ಬುದ್ಧಿ ಸಿಕ್ಕಿಹಾಕಿಕೊಂಡಿತು. ಅವಳ ಮನೋಸ್ಥಿತಿಯು – ವಿಷದ ಮೂಗಿಲಿಯನ್ನು ತಿಂದ ಹಾವಿನಂತಾಯಿತು. * ನಾನು ಹಟದಿಂದ ಮಗನನ್ನು ಉಳಿಸಿಕೊಂಡರೆ ಧರ್ಮಲೋಪವಾಗುತ್ತದೆ. ಅಣ್ಣ-ತಮ್ಮಂದಿರ ನಡುವೆ ವಿರಸ ಉಂಟಾಗುತ್ತದೆ.

* ಒಂದು ಹಾವು – ಸಾಮಾನ್ಯ ಇಲಿ ಎಂದು ತಿಳಿದು ಮೂಗಿಲಿಯನ್ನು ಬಾಯಿಗೆ ಹಾಕಿಕೊಂಡಿತು. ಬಳಿಕ ಅದು ವಿಷಪೂರಿತವೆಂದು ತಿಳಿಯಿತು. ಈಗ ನಾನು ಇದನ್ನು ನುಂಗಿದರೆ ತಾನು ಸಾಯುತ್ತೇನೆ. ಉಗುಳಿದರೆ ಅದೇ ನನ್ನನ್ನು ಕಚ್ಚೀತು. ನುಂಗಲಾಗದೆ ಉಗಿಯಲಾಗದೆ ಆ ಹಾವು ಒದ್ದಾಡುವಂತೆ ಕೌಸಲ್ಯೆಯ ಮನೋಸ್ಥಿತಿಯೂ ಹೀಗೆ ಆಯಿತು. ವನವಾಸಕ್ಕೆ ಹೋಗಬೇಡ ಎಂದು ಹೇಳಿದರೆ ಧರ್ಮಹಾನಿ. ಅದು ತನಗೆ ಮರಣಸದೃಶವಾದುದು. ಹೋಗು ಎಂದು ಹೇಳಿದರೂ ತನ್ನ ಕಣ್ಮಣಿಯಾದ ರಾಮನು ಕಾಡಿಗೆ ಹೋದರೆ ನಾನು ಕುರುಡಳಂತೆ ಆಗುವೆನು.

ಒಂದು ವೇಳೆ ವನಕ್ಕೆ ಹೋಗು ಎಂದು ಹೇಳಿದರೆ ಭಾರೀ ನಷ್ಟವು ಸಂಭವಿಸಬಹುದು. ಈ ಪ್ರಕಾರ ಧರ್ಮಸಂಕಟದಲ್ಲಿ ಬಿದ್ದ ರಾಣಿಯು ವಿಶೇಷವಾಗಿ ವಿಚಾರಗ್ರಸ್ತಳಾದಳು. ಅನಂತರ ಚತುರೆಯಾದ ಕೌಸಲ್ಯೆಯು ಪತಿವ್ರತಾಧರ್ಮವನ್ನು ನೆನೆದು ರಾಮ ಹಾಗೂ ಭರತ ಇಬ್ಬರೂ ತನ್ನ ಮಕ್ಕಳೇ ಎಂದು ಬಗೆದು, ಸರಳ ಸ್ವಭಾವದ ಶ್ರೀರಾಮನ ತಾಯಿಯು ಧೈರ್ಯತಂದುಕೊಂಡು ಇಂತೆಂದಳು – ಮಗು! ನೀನು ಒಳಿತನ್ನೇ ಮಾಡಿದೆ. ಪಿತೃವಾಕ್ಯ ಪರಿಪಾಲನೆಯೇ ಎಲ್ಲ ಧರ್ಮಗಳಿಗೂ ಮಕುಟಮಣಿಯಾದ ಧರ್ಮವಾಗಿದೆ. (ಚೌ/೧-೪)

**ದೋ – ರಾಜು ದೇನ ಕಹಿ ದೀನ್ಹ ಬನು ಮೋಹಿ ನ ಸೋ ದುಖ ಲೇಸು ।**
**ತುಮ್ಹ ಬಿನು ಭರತಹಿ ಭೂಪತಿಹಿ ಪ್ರಜಹಿ ಪ್ರಚಂಡ ಕಲೇಸು ॥ ೫೫ ॥**

ನಿನ್ನ ತಂದೆಯವರು ರಾಜ್ಯಕೊಡುವೆನೆಂದು ಹೇಳಿ, ಮತ್ತೆ ವನವನ್ನು ಕೊಟ್ಟರು. ಇದಕ್ಕಾಗಿ ನನಗೆ ಲೇಶಮಾತ್ರವೂ ದುಃಖವಿಲ್ಲ. ಆದರೆ ನೀನಿಲ್ಲದೆ, ಭರತನಿಗೆ, ಮಹಾರಾಜರಿಗೆ ಪ್ರಜೆಗಳಿಗೆ ತುಂಬಾ ಕ್ಲೇಶ ಉಂಟಾಗುವುದಲ್ಲ ಎಂಬುದೇ ದೊಡ್ಡ ದುಃಖವಾಗಿದೆ. (ದೋ/೫೫)

**ಚೌ – ಜೌ ಕೇವಲ ಪಿತು ಆಯಸು ತಾತಾ । ತೌ ಜನಿ ಜಾಹು ಜಾನಿ ಬಡಿ ಮಾತಾ ॥**
**ಜೌ ಪಿತು ಮಾತು ಕಹೆಉ ಬನ ಜಾನಾ । ತೌ ಕಾನನ ಸತ ಅವಧ ಸಮಾನಾ ॥ ೧ ॥**
**ಪಿತು ಬನದೇವ ಮಾತು ಬನದೇವೀ । ಖಗ ಮೃಗ ಚರಣ ಸರೋರುಹ ಸೇವೀ ॥**
**ಅಂತಹುँ ಉಚಿತ ನೃಪಹಿ ಬನಬಾಸು । ಬಯ ಬಿಲೋಕಿ ಹಿಯँ ಹೋಇ ಹರಾँಸೂ ॥ ೨ ॥**
**ಬಡಭಾಗೀ ಬನು ಅವಧ ಅಭಾಗೀ । ಜೋ ರಘುಬಂಸತಿಲಕ ತುಮ್ಹ ತ್ಯಾಗೀ ॥**
**ಜೌ ಸುತ ಕಹೌ ಸಂಗ ಮೊಹಿ ಲೇಹೂ । ತುಮ್ಹರೇ ಹೃದಯँ ಹೋಇ ಸಂದೇಹೂ ॥ ೩ ॥**
**ಪೂತ ಪರಮ ಪ್ರಿಯ ತುಮ್ಹ ಸಬಹೀ ಕೇ । ಪ್ರಾನ ಪ್ರಾನ ಕೇ ಜೀವನ ಜೀ ಕೇ ॥**
**ತೇ ತುಮ್ಹ ಕಹಹು ಮಾತು ಬನ ಜಾಊँ । ಮೈ ಸುನಿ ಬಚನ ಬೈಠಿ ಪಛಿತಾಊँ ॥ ೪ ॥**

ಮಗು! ಕೇವಲ ತಂದೆಯವರ ಆಜ್ಞೆಯಾಗಿದ್ದರೆ ನಾನು ಹೇಳುತ್ತಿದ್ದೆ, ವನಕ್ಕೆ ಹೋಗಬೇಡ. ಏಕೆಂದರೆ, ತಾಯಿಯ ಸ್ಥಾನವು ತಂದೆಯ ಸ್ಥಾನಕ್ಕಿಂತ ಎತ್ತರವಾದುದು. ಆದರೆ ತಂದೆ-ತಾಯಿಗಳಿಬ್ಬರು ವನಕ್ಕೆ ಹೋಗಲು ಹೇಳಿದ್ದರೆ ಆ ವನವು ನಿನ್ನ ಪಾಲಿಗೆ ನೂರಾರು ಅಯೋಧ್ಯೆಗಳಿಗೆ ಸಮಾನವಾದೀತು. ಅಲ್ಲಿಯ ವನದೇವತೆಗಳೇ ನಿನಗೆ ತಂದೆ-ತಾಯಿಯವರಾಗುವರು. ಅಲ್ಲಿಯ ಪಶು-ಪಕ್ಷಿಗಳೇ ನಿನ್ನ ಚರಣ ಸೇವಕರಾಗುವರು.ಅರಸನಾದವನು ವಾರ್ಧಕ್ಯದಲ್ಲಿ ಕಾಡಿಗೆ ಹೋಗುವುದು ಉಚಿತವೇ ಆಗಿದೆ. ಆದರೆ ನಿನ್ನ ಸುಕುಮಾರ ಸ್ಥಿತಿಯನ್ನು ನೋಡಿ ನನ್ನೆದೆ ಕಿವಿಚಿದಂತಾಗುತ್ತದೆ. ಓ ರಘುವಂಶತಿಲಕಾ! ವನವು ತುಂಬಾ ಭಾಗ್ಯಶಾಲಿಯು. ನೀ ತೊರೆದ ಈ ಅಯೋಧ್ಯೆಯೇ ದೌರ್ಭಾಗ್ಯಶಾಲಿಯು. ಕುಮಾರಾ! ನನ್ನನ್ನೂ ಜೊತೆಯಲ್ಲಿ ಕರೆದುಕೊಂಡು ಹೋಗು ಎಂದರೆ (ನನ್ನನ್ನು ಈ ನೆಪದಲ್ಲಿ ತಾಯಿಯು ತಡೆಯುತ್ತಿದ್ದಾಳೆ ಎಂದು) ನಿನಗೆ ನನ್ನ ಮೇಲೆ ಸಂದೇಹವಾಗಬಹುದು.

ಮಗೂ! ನೀನು ಎಲ್ಲರಿಗೂ ಪರಮಪ್ರಿಯನಾಗಿರುವೆ. ಪ್ರಾಣಗಳ ಪ್ರಾಣ, ಹೃದಯದ ಜೀವನನಾಗಿರುವೆ. ಅಂತಹ ಪ್ರಾಣಾಧಾರನಾದ ನೀನು ಈಗ ಹೇಳುತ್ತಿದ್ದೀಯೆ – 'ಅಮ್ಮಾ! ನಾನು ಕಾಡಿಗೆ ಹೋಗುತ್ತೇನೆ', ಎಂದು. ನಿನ್ನ ಮಾತನ್ನು ಕೇಳಿ ನಾನು ಪಶ್ಚಾತ್ತಾಪಪಡುತ್ತಾ ಕುಳಿತಿದ್ದೇನೆ. (ಚೌ/೧-೪)

**ದೋ – ಯಹ ಬಿಚಾರೀ ನಹಿँ ಕರಉँ ಹಠ ಝೂಠ ಸನೇಹು ಬಢಾಇ ।**
**ಮಾನಿ ಮಾತು ಕರ ನಾತ ಬಲಿ ಸುರತಿ ಬಿಸರಿ ಜನಿ ಜಾಇ ॥ ೫೬ ॥**

ಇದೆಲ್ಲ ಯೋಚಿಸಿ, ಕೃತ್ರಿಮವಾದ ಸ್ನೇಹವನ್ನು ತೋರಿಸುತ್ತಾ ನಾನು ಹಟ ಮಾಡುವುದಿಲ್ಲ. ಮಗೂ! ನಾನು ನಿನಗೆ ಕೈಮುಗಿಯುತ್ತೇನೆ. ಈ ತಾಯಿಯ ಸಂಬಂಧವನ್ನೂ, ತಾಯಿಯನ್ನೂ ಮರೆಯಬೇಡ. (ದೋ/೫೬)

**ಚೌ – ದೇವ ಪಿತರ ಸಬ ತುಮ್ಹಹಿ ಗೊಸಾಈँ । ರಾಖಹುँ ಪಲಕ ನಯನ ಕೀ ನಾಈँ ॥**
**ಅವಧಿ ಅಂಬು ಪ್ರಿಯ ಪರಿಜನ ಮೀನಾ । ತುಮ್ಹ ಕರುಣಾಕರ ಧರಮ ಧುರೀನಾ ॥ ೧ ॥**
**ಅಸ ಬಿಚಾರಿ ಸೋಇ ಕರಹು ಉಪಾಈ । ಸಬಹಿ ಜಿಅತ ಜೆಹಿँ ಭೇಂಟಉ ಆಈ ॥**
**ಜಾಹು ಸುಖೇನ ಬನಹಿ ಬಲಿ ಜಾಉँ । ಕರಿ ಅನಾಥ ಜನ ಪರಿಜನ ಗಾಊँ ॥ ೨ ॥**
**ಸಬ ಕರ ಆಜು ಸುಕೃತ ಫಲ ಬೀತಾ । ಭಯಉ ಕರಾಲ ಕಾಲು ಬಿಪರೀತಾ ॥**
**ಬಹುಬಿಧಿ ಬಿಲಪಿ ಚರಣ ಲಪಟಾನೀ । ಪರಮ ಅಭಾಗಿನಿ ಆಪುಹಿ ಜಾನೀ ॥ ೩ ॥**

**ದಾರುನ ದುಸಹ ದಾಹು ಉರ ಬ್ಯಾಪಾ। ಬರನಿ ನ ಜಾಹಿಂ ಬಿಲಾಪ ಕಲಾಪಾ॥**
**ರಾಮ ಉಠಾಇ ಮಾತು ಉರ ಲಾಈ। ಕಹಿ ಮೃದು ಬಚನ ಬಹುರಿ ಸಮುಝಾಈ॥ ೪॥**

ಓ ನನ್ನ ಕಣ್ಮಣಿಯೇ! ಕಣ್ಣು ರೆಪ್ಪೆಗಳು ಕಣ್ಣನ್ನು ಕಾಪಾಡುವಂತೆ, ದೇವತೆಗಳು, ಪಿತೃಗಳು, ನಿನ್ನನ್ನು ಅಡವಿಯಲ್ಲಿ ಕಾಪಾಡಲಿ. ನಿನ್ನ ವನವಾಸದ ಅವಧಿಯು ಸರೋವರದಲ್ಲಿರುವ ನೀರು. (ಜೀವನಾಧಾರ) ನಿನ್ನ ಪ್ರಿಯಜನರು, ಪರಿಜನರು ಅದರಲ್ಲಿರುವ ಮೀನುಗಳು. ನೀನು ಕರುಣಾಸಾಗರನು. ಧರ್ಮಧುರಂಧರನಾಗಿರುವೆ. ಇದನ್ನು ನೆನೆದು ನಾವೆಲ್ಲರೂ ಬದುಕಿರುವಾಗಲೇ ಹಿಂತಿರುಗುವ ಉಪಾಯವನ್ನು ಮಾಡು. ನನ್ನ ಜೀವನವೇ ನಿನಗೆ ನಿವಾಳಿಸಿ ಬಿಟ್ಟಿದ್ದೇನೆ. ನೀನು ಸೇವಕರನ್ನು, ಕುಟುಂಬವರ್ಗದವರನ್ನು ಹಾಗೂ ನಗರವನ್ನು ತಬ್ಬಲಿಯಾಗಿಸಿ ಸುಖವಾಗಿ ಕಾಡಿಗೆ ತೆರಳು. ಇಂದು ಎಲ್ಲರ ಪುಣ್ಯಫಲವೂ ಮಣ್ಣುಗೂಡಿತು. ಕರಾಳಕಾಲವು ಎಂತಹ ವಿರುದ್ಧ ಸ್ಥಿತಿಯನ್ನುಂಟುಮಾಡಿದ್ದಾನೆ! ಈ ಪ್ರಕಾರ ತುಂಬಾ ವಿಲಾಪಮಾಡುತ್ತಾ, ತಾನು ಪರಮ ಅಭಾಗಿನಿ ಎಂದುಕೊಂಡು ತಾಯಿಕೌಸಲ್ಯೆಯು ಶ್ರೀರಾಮನ ಚರಣಗಳಿಗೆ ಗೋಜಿಕೊಂಡಳು. ಎದೆಯಲ್ಲಿ ಭಯಂಕರವೂ, ದುಃಸಹವೂ ಆದ ತಾಪ ಉಂಟಾಯಿತು. ಆಗಿನ ಆಕೆಯ ಶೋಕ ವಿಲಾಪಗಳನ್ನು ವರ್ಣನಾತೀತವು. ಶ್ರೀರಾಮಚಂದ್ರನು ತಾಯಿಯನ್ನು ಎಬ್ಬಿಸಿ ತಬ್ಬಿಕೊಂಡನು. ನಲ್ಮಾತುಗಳಿಂದ ಆಕೆಯನ್ನು ಸಂತೈಸಿದನು. (ಚೌ/೧-೪)

## ಸೀತಾರಾಮರ ಸಂವಾದ

**ದೋ – ಸಮಾಚಾರ ತೆಹಿ ಸಮಯ ಸುನಿ ಸೀಯ ಉಠಿ ಅಕುಲಾಇ।**
**ಜಾಇ ಸಾಸು ಪದ ಕಮಲ ಜುಗ ಬಂದಿ ಬೈಠೀ ಸಿರು ನಾಇ॥ ೫೭॥**

ಅದೇ ವೇಳೆಗೆ ಶ್ರೀರಾಮಚಂದ್ರನ ವನವಾಸದ ವಾರ್ತೆಯನ್ನು ಕೇಳಿ ಸೀತಾದೇವಿಯು ವ್ಯಾಕುಲಳಾಗಿ ಅತ್ತೆಯಬಳಿಗೆ ಬಂದು, ಆಕೆಗೆ ಕಾಲಿಗೆರಗಿ ತಲೆತಗ್ಗಿಸಿಕೊಂಡು ಕುಳಿತುಕೊಂಡಳು. (ದೋ/೫೭)

**ಚೌ – ದೀನ್ಹಿ ಅಸೀಸ ಸಾಸು ಮೃದು ಬಾನೀ। ಅತಿ ಸುಕುಮಾರಿ ದೇಖಿ ಅಕುಲಾನೀ॥**
**ಬೈಠಿ ನಮಿತಮುಖ ಸೋಚತಿ ಸೀತಾ। ರೂಪ ರಾಸಿ ಪತಿ ಪ್ರೇಮ ಪುನೀತಾ॥ ೧॥**
**ಚಲನ ಚಹತ ಬನ ಜೀವನನಾಥೂ। ಕೆಹಿ ಸುಕೃತೀ ಸನ ಹೋಇಹಿ ಸಾಥೂ॥**
**ಕೀ ತನು ಪ್ರಾನ ಕಿ ಕೇವಲ ಪ್ರಾನಾ। ಬಿಧಿ ಕರತಬು ಕಛು ಜಾಇ ನ ಜಾನಾ॥ ೨॥**
**ಚಾರು ಚರನ ನಖ ಲೇಖತಿ ಧರನೀ। ನೂಪುರ ಮುಖರ ಮಧುರ ಕಬಿ ಬರನೀ॥**
**ಮನಹುँ ಪ್ರೇಮ ಬಸ ಬಿನತೀ ಕರಹೀಂ। ಹಮಹಿ ಸೀಯ ಪದ ಜನಿ ಪರಿಹರಹೀಂ॥ ೩॥**
**ಮಂಜು ಬಿಲೋಚನ ಮೋಚತಿ ಬಾರೀ। ಬೋಲೀ ದೇಖಿ ರಾಮ ಮಹತಾರೀ॥**
**ತಾತ ಸುನಹು ಸಿಯ ಅತಿ ಸುಕುಮಾರೀ। ಸಾಸು ಸಸುರ ಪರಿಜನಹಿ ಪಿಆರೀ॥ ೪॥**

ಕೌಸಲ್ಯಾದೇವಿಯು ತನ್ನ ಕೋಮಲವಾಣಿಯಿಂದ ಆಶೀರ್ವದಿಸಿದಳು. ಅತ್ಯಂತ ಸುಕುಮಾರಿಯಾದ ಸೀತೆಯನ್ನು ಕಂಡು ಆಕೆ ತುಂಬಾ ನೊಂದುಕೊಂಡಳು. ಪತಿಪ್ರೇಮದಿಂದ ಪುನೀತಳೂ, ಸೌಂದರ್ಯರಾಶಿಯೂ ಆದ ಸೀತಾದೇವಿಯು ತಲೆತಗ್ಗಿಸಿಕೊಂಡು ಯೋಚನಾಮಗ್ನಳಾಗಿದ್ದಳು. ಜೀವಿತೇಶನು ಕಾಡಿಗೆ ಹೊರಟುಹೋಗಲು ಬಯಸುತ್ತಿರುವನು. ಯಾವ ಸುಕೃತಶಾಲಿಯು ಅವನ ಜೊತೆಗೆ ಹೋಗುವನೋ ನೋಡೋಣ. ಶರೀರ ಪ್ರಾಣಗಳೆರಡೂ ಹೋಗುವವೋ ಅಥವಾ ಪ್ರಾಣಮಾತ್ರ ಹೋಗುವುದೋ? ವಿಧಿವಿಲಾಸವನ್ನು ಯಾರು ಬಲ್ಲರು? ಸೀತೆಯು ತನ್ನ ಮೆಲ್ಲಡಿಗಳ ಉಗುರಿನಿಂದ ನೆಲವನ್ನು ಕೆರೆಯುತ್ತಿದ್ದಾಳೆ. ಆಗ ಆಕೆಯ ನೂಪುರದ ಧ್ವನಿಯು – ಸೀತೆಯ ಚರಣಗಳು ನಮ್ಮನ್ನು ಎಂದೂ ತ್ಯಜಿಸದಿರಲಿ ಎಂದು ಪ್ರೇಮದಿಂದ ಬಿನ್ನೈಸಿಕೊಳ್ಳುವವೋ ಎಂದು ಕವಿಗಳು ವರ್ಣಿಸುತ್ತಿರುವರು. ಆಕೆಯು ತನ್ನ ಚೆಲುವಾದ ಕಂಗಳಿಂದ ಕಂಬನಿ ಮಿಡಿಯುತ್ತಿದ್ದಳು. ಆಕೆಯ ಆ ಸ್ಥಿತಿಯನ್ನು ಕಂಡು ಕೌಸಲ್ಯೆಯು ಶ್ರೀರಾಮನಲ್ಲಿ ಹೀಗೆ ಹೇಳಿದಳು– ''ಮಗೂ! ಸೀತೆಯು ಅತ್ಯಂತ ಸುಕುಮಾರಿಯು. ಅತ್ತೆ, ಮಾವ ಮತ್ತು ಕುಟುಂಬವರ್ಗದವರಿಗೆಲ್ಲ ಪ್ರಿಯಳು. (ಚೌ/೧-೪)

**ದೋ – ಪಿತಾ ಜನಕ ಭೂಪಾಲ ಮನಿ ಸಸುರ ಭಾನುಕುಲ ಭಾನು।**
**ಪತಿ ರಬಿಕುಲ ಕೈರವ ಬಿಪಿನ ಬಿಧು ಗುನ ರೂಪ ನಿಧಾನು॥ ೫೮॥**

ಈಕೆಯ ತಂದೆಯು ರಾಜಶಿರೋಮಣಿಯಾದ ಜನಕಮಹಾರಾಜರು. ಮಾವನವರು ಸೂರ್ಯಕುಲದ ಸೂರ್ಯ. ಪತಿಯು ಸೂರ್ಯವಂಶವೆಂಬ ಕುಮುದವನಕ್ಕೆ ಚಂದ್ರನೂ, ರೂಪಸದ್ಗುಣನಿಧಿಯೂ ಆಗಿರುವ ನೀನಾಗಿರುವೆ. (ದೋ/೫೮)

**ಚೌ – ಮೈಂ ಪುನಿ ಪುತ್ರಬಧೂ ಪ್ರಿಯ ಪಾಈ। ರೂಪ ರಾಸಿ ಗುನ ಸೀಲ ಸುಹಾಈ॥**
**ನಯನ ಪುತರಿ ಕರಿ ಪ್ರೀತಿ ಬಢಾಈ। ರಾಖೆಉಁ ಪ್ರಾನ ಜಾನಕಿಹಿಂ ಲಾಈ॥ ೧॥**
**ಕಲಪ ಬೇಲಿ ಜಿಮಿ ಬಹುಬಿಧಿ ಲಾಲೀ। ಸೀಂಚಿ ಸನೇಹ ಸಲಿಲ ಪ್ರತಿ ಪಾಲೀ॥**
**ಫೂಲತ ಫಲತ ಭಯಉ ಬಿಧಿ ಬಾಮಾ। ಜಾನಿ ನ ಜಾಇ ಕಾಹ ಪರಿನಾಮಾ॥ ೨॥**
**ಪಲಂಗ ಪೀಠ ತಜಿ ಗೋದ ಹಿಂಡೋರಾ। ಸಿಯಁ ನ ದೀನ್ಹ ಪಗು ಅವನಿ ಕಠೋರಾ॥**
**ಜಿಅನಮೂರಿ ಜಿಮಿ ಜೊಗವತ ರಹಊಁ। ದೀಪ ಬಾತಿ ನಹಿಂ ಟಾರನ ಕಹಊಁ॥ ೩॥**
**ಸೋಇ ಸಿಯ ಚಲನ ಚಹತಿ ಬನ ಸಾಥಾ। ಆಯಸು ಕಾಹ ಹೋಇ ರಘುನಾಥಾ॥**
**ಚಂದ ಕಿರನ ರಸ ರಸಿಕ ಚಕೋರೀ। ರಬಿ ರುಖ ನಯನ ಸಕಇ ಕಿಮಿ ಜೋರೀ॥ ೪॥**

'ಇನ್ನು ನನ್ನ ಮನೆಗೆ ಬಂದ ಸೊಸೆಯು ರೂಪರಾಶಿ, ಗುಣವಂತೆ, ಶೀಲವತಿ, ಅತ್ಯಂತ ಪ್ರಿಯಳಾದವಳು. ನಾನು ಈಕೆಯನ್ನು (ಜಾನಕಿಯನ್ನು) ಕಣ್ಮಣಿಯೆಂದು ಬಗೆದು, ನನ್ನ ಪ್ರಾಣಗಳನ್ನೇ ಇವಳಲ್ಲಿಟ್ಟಿರುವೆನು. ಇವಳನ್ನು ಕಲ್ಪಲತೆಯೆಂದು ಬಗೆದು ನಾನು ಸ್ನೇಹಜಲವನ್ನು ಎರೆದು ಸಾಕಿದ್ದೇನೆ. ಈಗ ಈ ಲತೆಯು ಹೂವು-ಹಣ್ಣು ಬಿಡಬೇಕು ಎನ್ನುವ ಹೊತ್ತಿಗೆ ವಿಧಿಯು ಇವಳಿಗೆ ಪ್ರತಿಕೂಲನಾದನು. ಇದರ ಪರಿಣಾಮ ಏನಾಗುವುದೋ ತಿಳಿಯದು. ಸೀತೆಯು ಮೆತ್ತನೆಯ ಮಂಚ, ಮೃದುವಾದ ಮಡಿಲು, ಕೋಮಲವಾದ ತೊಟ್ಟಿಲು, ಉಯ್ಯಾಲೆಯನ್ನುಳಿದು ಕಠೋರವಾದ ನೆಲದಮೇಲೆ ಕಾಲಿಟ್ಟವಳೇ ಅಲ್ಲ. ನಾನು ಸಂಜೀವಿನಿ ಮೂಲಿಕೆಯಂತೆ ಅವಳನ್ನು ಕಾಪಾಡಿಕೊಂಡು ಬಂದಿದ್ದೇನೆ. ದೀಪದ ಬತ್ತಿಯನ್ನು ಸರಿಮಾಡಲೂ ಕೂಡ ನಾನು ಅವಳಿಗೆ ಒಮ್ಮೆಗೂ ಹೇಳಲಿಲ್ಲ. ಅಂತಹ ಸುಕುಮಾರಿಯಾದ ಸೀತೆಯು ಈಗ ನಿನ್ನ ಜೊತೆಗೆ ಕಾಡಿಗೆ ತೆರಳಬಯಸುತ್ತಿದ್ದಾಳೆ. ಹೇ ರಘುನಾಥಾ! ಅವಳಿಗೆ ಏನು ಅಪ್ಪಣೆ ಮಾಡುತ್ತೀಯೆ? ಚಂದ್ರನ ಶೀತಲ ಕಿರಣಾಮೃತವನ್ನು ಆಸ್ವಾದಿಸುವ ಚಕೋರಿಯು ಪ್ರಖರ ಸೂರ್ಯಕಿರಣಗಳನ್ನು ಹೇಗೆ ದಿಟ್ಟಿಸಬಲ್ಲದು? (ಚೌ/೧-೪)

**ದೋ – ಕರಿ ಕೇಹರಿ ನಿಸಿಚರ ಚರಹಿಂ ದುಷ್ಟ ಜಂತು ಬನ ಭೂರಿ।**
**ಬಿಷ ಬಾಟಿಕಾಂ ಕಿ ಸೋಹ ಸುತ ಸುಭಗ ಸಜೀವನಿ ಮೂರಿ॥ ೫೯॥**

ಆನೆ, ಸಿಂಹ, ರಾಕ್ಷಸರೇ ಮೊದಲಾದ ಅನೇಕ-ದುಷ್ಟಜೀವ-ಜಂತುಗಳು ವನದಲ್ಲಿ ವಿಹರಿಸುತ್ತವೆ. ಮಗೂ! ವಿಷವಾಟಿಕೆಯಲ್ಲಿ ಸಂಜೀವಿನೀ ಮೂಲಿಕೆ ಶೋಭಿಸಬಲ್ಲುದೇ? (ದೋ/೫೯)

**ಚೌ – ಬನ ಹಿತ ಕೋಲ ಕಿರಾತ ಕಿಸೋರೀ। ರಚೀಂ ಬಿರಂಚಿ ಬಿಷಯ ಸುಖ ಭೋರೀ॥**
**ಪಾಹನ ಕೃಮಿ ಜಿಮಿ ಕಠಿನ ಸುಭಾಉ। ತಿನ್ಹಹಿ ಕಲೇಸು ನ ಕಾನನ ಕಾಊ॥ ೧॥**
**ಕೈ ತಾಪಸ ತಿಯ ಕಾನನ ಜೋಗೂ। ಜಿನ್ಹ ತಪ ಹೇತು ತಜಾ ಸಬ ಭೋಗೂ॥**
**ಸಿಯ ಬನ ಬಸಿಹಿ ತಾತ ಕೆಹಿ ಭಾಁತೀ। ಚಿತ್ರಲಿಖಿತ ಕಪಿ ದೇಖಿ ಡೆರಾತೀ॥ ೨॥**
**ಸುರಸರ ಸುಭಗ ಬನಜ ಬನ ಚಾರೀ। ಡಾಬರ ಜೋಗು ಕಿ ಹಂಸಕುಮಾರೀ॥**
**ಅಸ ಬಿಚಾರಿ ಜಸ ಆಯಸು ಹೋಈ। ಮೈಂ ಸಿಖ ದೇಉಁ ಜಾನಕಿಹಿ ಸೋಈ॥ ೩॥**
**ಜೌಂ ಸಿಯ ಭವನ ರಹೈ ಕಹ ಅಂಬಾ। ಮೋಹಿ ಕಹಁ ಹೋಇ ಬಹುತ ಅವಲಂಬಾ॥**
**ಸುನಿ ರಘುಬೀರ ಮಾತು ಪ್ರಿಯ ಬಾನೀ। ಸೀಲ ಸನೇಹ ಸುಧಾಁ ಜನು ಸಾನೀ॥ ೪॥**

ಅಡವಿಯಲ್ಲಿ ವಾಸಿಸಲೆಂದೇ ಬ್ರಹ್ಮನು ಕೋಲ, ಕಿರಾತ, ಕಿಶೋರಿಯರನ್ನು ಸೃಷ್ಟಿಸಿರುವನು. ಅವರು ಈ ಸುಖಭೋಗವನ್ನು ಬಯಸರು. ಕಲ್ಲಿನ ಹುಳುವಿನಂತಹ ಕಠೋರ ಸ್ವಭಾವದ ಅವರಿಗೆ ಕಾಡಿನಲ್ಲಿ ಎಂದಿಗೂ ಕ್ಲೇಶವಾಗುವುದಿಲ್ಲ. ಇಲ್ಲವಾದರೆ ತಪಸ್ಸಿಗಾಗಿ ಎಲ್ಲ ಭೋಗಗಳನ್ನೂ ತ್ಯಾಗಮಾಡಿರುವ ತಾಪಸ ರಮಣಿಯರು ವನವಾಸಾರ್ಹರು. ಮಗೂ! ಚಿತ್ರದಲ್ಲಿ ಬರೆದಿರುವ ಕೋತಿಯನ್ನು ನೋಡಿ ಹೆದರಿಕೊಳ್ಳುವ ಸೀತೆಯು ಕಾಡಿನಲ್ಲಿ ಹೇಗೆ ಇರುವಳು? ಸುರಸರೋವರದ ಕಮಲವನದಲ್ಲಿ ವಿಹರಿಸುವ ಹಂಸಿನಿಯು ಹಳ್ಳ, ಕುಂಟೆಗಳಲ್ಲಿ ಇರತಕ್ಕುದೇ? ಈ ಪ್ರಕಾರ ಯೋಚನೆಮಾಡಿ ಅಪ್ಪಣೆಯಾಗಲೀ, ಅದರಂತೆ ನಾನು ಸೀತೆಗೆ ಬುದ್ಧಿವಾದ ಹೇಳುತ್ತೇನೆ. ಆಕೆಯು ಇಲ್ಲೇ ಮನೆಯಲ್ಲಿದ್ದರೆ ನನಗೂ ಒಂದು ಅವಲಂಬನ ದೊರೆತಂತಾಗುತ್ತದೆ.'' ಪ್ರೇಮಾದರಗಳಿಂದ ಕೌಸಲ್ಯೆಯು ಹೇಳಿದ ಅಮೃತವಚನಗಳನ್ನು ಶ್ರೀರಾಮನು ಕೇಳಿದನು. (ಚೌ/೧-೪)

**ದೋ – ಕಹಿ ಪ್ರಿಯ ಬಚನ ಬಿಬೇಕಮಯ ಕೀನ್ಹಿ ಮಾತು ಪರಿತೋಷ।**
**ಲಗೇ ಪ್ರಬೋಧನ ಜಾನಕಿಹಿ ಪ್ರಗಟಿ ಬಿಪಿನ ಗುನ ದೋಷ॥ ೬೦॥**

ಶ್ರೀರಾಮಚಂದ್ರನು ವಿವೇಕದಿಂದ ತುಂಬಿದ ಪ್ರಿಯವಾದ ಮಾತುಗಳನ್ನಾಡಿ ತಾಯಿಯನ್ನು ಸಂತೋಷಪಡಿಸಿದನು. ಅನಂತರ ಕಾಡಿನ ಗುಣದೋಷಗಳನ್ನು ಬಣ್ಣಿಸಿ ಜಾನಕಿಗೆ ತಿಳಿವಳಿಕೆ ಹೇಳಿದನು. (ದೋ/೬೦)

**ಮಾಸಪಾರಾಯಣದ ಹದಿನಾಲ್ಕನೆಯ ವಿಶ್ರಾಮ**

**ಚೌ – ಮಾತು ಸಮೀಪ ಕಹತ ಸಕುಚಾಹೀಂ। ಬೋಲೆ ಸಮಉ ಸಮುಝಿ ಮನ ಮಾಹೀಂ॥**
**ರಾಜಕುಮಾರಿ ಸಿಖಾವನು ಸುನಹೂ। ಆನ ಭಾಂತಿ ಜಿಯಂ ಜನಿ ಕಛು ಗುನಹೂ॥ ೧॥**
**ಆಪನ ಮೋರ ನೀಕ ಜೌಂ ಚಹಹೂ। ಬಚನು ಹಮಾರ ಮಾನಿ ಗೃಹ ರಹಹೂ॥**
**ಆಯಸು ಮೋರ ಸಾಸು ಸೇವಕಾಈ। ಸಬ ಬಿಧಿ ಭಾಮಿನಿ ಭವನ ಭಲಾಈ॥ ೨॥**
**ಏಹಿ ತೇ ಅಧಿಕ ಧರಮು ನಹಿಂ ದೂಜಾ। ಸಾದರ ಸಾಸು ಸಸುರ ಪದ ಪೂಜಾ॥**
**ಜಬ ಜಬ ಮಾತು ಕರಿಹಿ ಸುಧಿ ಮೋರೀ। ಹೋಇಹಿ ಪ್ರೇಮ ಬಿಕಲ ಮತಿ ಭೋರೀ॥ ೩॥**
**ತಬ ತಬ ತುಮ್ಹ ಕಹಿ ಕಥಾ ಪುರಾನೀ। ಸುಂದರಿ ಸಮುಝಾಏಹು ಮೃದು ಬಾನೀ॥**
**ಕಹಉಂ ಸುಭಾಯಂ ಸಪಥ ಸತ ಮೋಹೀ। ಸುಮುಖಿ ಮಾತು ಹಿತ ರಾಖಉಂ ತೋಹೀ॥ ೪॥**

ತಾಯಿಯ ಎದುರಿಗೆ ಸೀತೆಯಬಳಿ ಮಾತಾಡಲು ಶ್ರೀರಾಮನಿಗೆ ಸಂಕೋಚವೆನಿಸುತ್ತದೆ. ಆದರೆ ಆಪದ್ಧರ್ಮವನ್ನು ಅನುಸರಿಸಿ, ಅವಳಲ್ಲಿ ಇಂತೆಂದನು – ಎಲೈ ರಾಜಕುಮಾರಿಯೆ! ನನ್ನ ಬುದ್ಧಿವಾದವನ್ನು ಶ್ರದ್ಧೆಯಿಂದ ಕೇಳು. ಮನಸ್ಸಿನಲ್ಲಿ ಅನ್ಯಥಾ ಭಾವಿಸಬೇಡ. ನನ್ನ ಮತ್ತು ನಿನ್ನ ಒಳಿತನ್ನೇ ಎಣಿಸುವೆಯಾದರೆ ನನ್ನ ಮಾತನ್ನು ಪಾಲಿಸಿ ಮನೆಯಲ್ಲೇ ಇರು. ಇದರಿಂದ ನನ್ನ ಅಪ್ಪಣೆಯನ್ನು ಪಾಲಿಸಿದಂತಾಗುತ್ತದೆ. ಅತ್ತೆಯ ಸೇವೆಯನ್ನೂ ಮಾಡಿದಂತಾಗುತ್ತದೆ. ಮನೆಯಲ್ಲೇ ಉಳಿದುಕೊಳ್ಳುವುದರಿಂದ ಎಲ್ಲ ವಿಧದಿಂದಲೂ ಕ್ಷೇಮವೇ ಆಗುವುದು. ಆದರದಿಂದ ಅತ್ತೆ-ಮಾವಂದಿರ ಚರಣಸೇವೆ ಮಾಡುವುದಕ್ಕಿಂತ ಮಿಗಿಲಾದ ಧರ್ಮವಿಲ್ಲ. ತಾಯಿಯು ನನ್ನನ್ನು ನೆನೆದು ಭಾವವಿಹ್ವಲಳಾದಾಗ, ನೀನು ಆಕೆಯನ್ನು ಪುರಾಣ-ಪುಣ್ಯಕಥೆಗಳನ್ನು ಹೇಳಿ ಸಂತೈಸು. ಓ ಸುಮುಖಿ! ತಾಯಿಯವರ ಸೇವೆಗಾಗಿಯೇ ನೀನು ಇಲ್ಲಿ ಇರುವುದು ನಾನು ಬಯಸುತ್ತೇನೆ. ಇದು ಸತ್ಯವಾದುದು, ನನ್ನ ಸ್ವಭಾವದಿಂದ ಹೇಳುತ್ತಿದ್ದೇನೆ. (ಚೌ/೧-೪)

**ದೋ – ಗುರ ಶ್ರುತಿ ಸಮ್ಮತ ಧರಮ ಫಲು ಪಾಇಅ ಬಿನಹಿಂ ಕಲೇಸ।**
**ಹಠ ಬಸ ಸಬ ಸಂಕಟ ಸಹೇ ಗಾಲವ ನಹುಷ ನರೇಸ॥ ೬೧॥**

ನನ್ನ ಅಪ್ಪಣೆಯಂತೆ ನೀನು ಮನೆಯಲ್ಲೇ ಉಳಿಯುವುದಾದರೆ ಗುರುಗಳೂ, ಶ್ರುತಿಗಳೂ ಬೋಧಿಸಿದ ಸಮಸ್ತ ಧರ್ಮಪಾಲನೆಯ ಪುಣ್ಯ ನಿನಗೆ ಅನಾಯಾಸವಾಗಿ ದೊರೆಯುವುದು. ಆದರೆ ಹಟದಿಂದ ಯಾರಿಗೂ ಸುಖವಿಲ್ಲ. ಗಾಲವಮುನಿ, ನಹುಷರಾಜ ಇವರು ಹಟದಿಂದ ಪಡಬಾರದ ಪಾಡುಪಟ್ಟರು. (ದೋ/೬೧)

**ಚೌ – ಮೈಂ ಪುನಿ ಕರಿ ಪ್ರವಾನ ಪಿತು ಬಾನೀ। ಬೇಗಿ ಫಿರಬ ಸುನು ಸುಮುಖಿ ಸಯಾನೀ॥**
**ದಿವಸ ಜಾತ ನಹಿಂ ಲಾಗಿಹಿ ಬಾರಾ। ಸುಂದರಿ ಸಿಖವನು ಸುನಹು ಹಮಾರಾ॥ ೧॥**
**ಜೌಂ ಹಠ ಕರಹು ಪ್ರೇಮ ಬಸ ಬಾಮಾ। ತೌ ತುಮ್ಹ ದುಖು ಪಾಉಬ ಪರಿನಾಮಾ॥**
**ಕಾನನು ಕಠಿನ ಭಯಂಕರು ಭಾರೀ। ಘೋರ ಘಾಮು ಹಿಮ ಬಾರಿ ಬಯಾರೀ॥ ೨॥**
**ಕುಸ ಕಂಟಕ ಮಗ ಕಾಂಕರ ನಾನಾ। ಚಲಬ ಪಯಾದೆಹಿಂ ಬಿನು ಪದತ್ರಾನಾ॥**
**ಚರನ ಕಮಲ ಮೃದು ಮಂಜು ತುಮ್ಹಾರೇ। ಮಾರಗ ಅಗಮ ಭೂಮಿಧರ ಭಾರೇ॥ ೩॥**
**ಕಂದರ ಖೋಹ ನದೀಂ ನದ ನಾರೇ। ಅಗಮ ಅಗಾಧ ನ ಜಾಹಿಂ ನಿಹಾರೇ॥**
**ಭಾಲು ಬಾಘ ಬೃಕ ಕೇಹರಿ ನಾಗಾ। ಕರಹಿಂ ನಾದ ಸುನಿ ಧೀರಜು ಭಾಗಾ॥ ೪॥**

ಎಲೈ ಸುಕುಮಾರಿ! ಬುದ್ಧಿವಂತಳೇ! ಕೇಳು. ನಾನು ತಂದೆಯವರ ಆಜ್ಞೆಯನ್ನು ಪಾಲಿಸಿ, ಬೇಗನೇ ಹಿಂದಿರುಗುತ್ತೇನೆ. ಈ ವನವಾಸ ಕಾಲವು ಇಷ್ಟರಲ್ಲೇ ಕಳೆದುಹೋಗುತ್ತದೆ. ನನ್ನ ಮಾತಿನಂತೆ ನಡೆ. ಸುಂದರೀ! ಪ್ರೇಮವಶಳಾಗಿ ನೀನು ಹಟ ಮಾಡುವೆಯಾದರೆ ಅದರ ಪರಿಣಾಮ ದುಃಖಪಡಬೇಕಾದೀತು. ಕಾಡು ತುಂಬಾ ಭಯಂಕರವೂ ಕಷ್ಟದಾಯಕವೂ ಆಗಿದೆ.

ಅಲ್ಲಿಯ ಬಿಸಿಲು, ಚಳಿ, ಮಳೆ, ಗಾಳಿ ಎಲ್ಲವೂ ಭಯಾನಕವಾದುದು. ಹಾದಿಯಲ್ಲಿ ಬರಿಯ ಕಲ್ಲುಮುಳ್ಳುಗಳೇ ಇರುವುವು. ಆದರ ಮೇಲೆ ಪಾದರಕ್ಷೆಗಳಿಲ್ಲದೆ ಬರಿಯ ಕಾಲಿನಿಂದಲೇ ನಡೆಯಬೇಕಾಗುತ್ತದೆ. ನಿನ್ನ ಚರಣಗಳು ಕಮಲಗಳಂತೆ ತುಂಬಾ ಕೋಮಲವೂ, ಸುಂದರವೂ ಆಗಿವೆ. ದಾರಿಯಲ್ಲಿ ಬಹು ದುರ್ಗಮವಾದ ಪರ್ವತಗಳಿವೆ. ಗಿರಿ ಗುಹೆ ಕಂದರಗಳೂ, ಕಣಿವೆಗಳೂ, ನದಿ-ನದಗಳೂ, ಹಳ್ಳ-ಕೊಳ್ಳಗಳೂ, ದಾಟಲಶಕ್ಯವೂ, ಆಳವಾಗಿಯೂ ಇರುವುವು. ಅವುಗಳನ್ನು ಕಣ್ಣಿಂದ ನೋಡುವುದೂ ಭಯಾನಕವೇ! ಹುಲಿ, ಕರಡಿ, ಸಿಂಹ, ತೋಳ, ಆನೆಯೇ ಮೊದಲಾದ ಪ್ರಾಣಿಗಳ ಗರ್ಜನೆಗೆ ಎಂತಹ ಧೈರ್ಯವಂತನ ಎದೆಯು ತಲ್ಲಣಿಸುತ್ತದೆ. (ಚೌ/೧-೪)

**ದೋ – ಭೂಮಿ ಸಯನ ಬಲಕಲ ಬಸನ ಅಸನು ಕಂದ ಫಲ ಮೂಲ।**
**ತೇ ಕಿ ಸದಾ ಸಬ ದಿನ ಮಿಲಹಿಂ ಸಬುಇ ಸಮಯ ಅನುಕೂಲ ॥ ೬೨ ॥**

ಅಲ್ಲಿ ನೆಲದ ಮೇಲೆ ಮಲಗಬೇಕಾಗುತ್ತದೆ. ಗಿಡದ ತೊಗಟೆಯ ಬಟ್ಟೆಯನ್ನು ತೊಟ್ಟುಕೊಳ್ಳಬೇಕಾಗುತ್ತದೆ. ಕಂದ, ಮೂಲ, ಫಲಗಳೇ ಅಲ್ಲಿಯ ಆಹಾರ. ಋತುಧರ್ಮಕ್ಕನುಸಾರ ಲಭಿಸುವ ಫಲಗಳೇ ಭಕ್ಷಿಸಬೇಕು. ಒಮ್ಮೊಮ್ಮೆ ಅವೂ ಕೂಡ ದೊರೆಯಲಾರವು. (ದೋ/೬೨)

**ಚೌ – ನರ ಅಹಾರ ರಜನೀಚರ ಚರಹೀಂ । ಕಪಟ ಬೇಷ ಬಿಧಿ ಕೋಟಿಕ ಕರಹೀಂ ॥**
**ಲಾಗಇ ಅತಿ ಪಹಾರ ಕರ ಪಾನೀ । ಬಿಪಿನ ಬಿಪತಿ ನಹಿಂ ಜಾಇ ಬಖಾನೀ ॥ ೧ ॥**
**ಬ್ಯಾಲ ಕರಾಲ ಬಿಹಗ ಬನ ಘೋರಾ । ನಿಸಿಚರ ನಿಕರ ನಾರಿ ನರ ಚೋರಾ ॥**
**ಡರಪಹಿಂ ಧೀರ ಗಹನ ಸುಧಿ ಆಏಂ । ಮೃಗಲೋಚನಿ ತುಮ್ಹ ಭೀರು ಸುಭಾಏಂ ॥ ೨ ॥**
**ಹಂಸಗವನಿ ತುಮ್ಹ ನಹಿಂ ಬನ ಜೋಗೂ । ಸುನಿ ಅಪಜಸು ಮೊಹಿ ದೇಇಹಿ ಲೋಗೂ ॥**
**ಮಾನಸ ಸಲಿಲ ಸುಧಾಂ ಪ್ರತಿಪಾಲೀ । ಜಿಅಇ ಕಿ ಲವನ ಪಯೋಧಿ ಮರಾಲೀ ॥ ೩ ॥**
**ನವ ರಸಾಲ ಬನ ಬಿಹರನಸೀಲಾ । ಸೋಹ ಕಿ ಕೋಕಿಲ ಬಿಪಿನ ಕರೀಲಾ ॥**
**ರಹಹು ಭವನ ಅಸ ಹೃದಯಂ ಬಿಚಾರೀ । ಚಂದಬದನಿ ದುಖು ಕಾನನ ಭಾರೀ ॥ ೪ ॥**

ಇದಲ್ಲದೆ ನರಭಕ್ಷಕರಾದ ರಾಕ್ಷಸರು ಅಲ್ಲಿ ವಿಹರಿಸುತ್ತಿರುತ್ತಾರೆ. ಅವರು ಕೋಟಿ ತೆರನಾದ ಕಪಟರೂಪ ಧರಿಸುವಂತಹವರು. ಬೆಟ್ಟದ ನೀರು ತುಂಬಾ ಶೀತವಾಗಿದ್ದು, ಬಾಧಿಸುತ್ತದೆ. ಅಡವಿಯ ತೊಡರುಗಳು ಹೇಳಿ ಮುಗಿಯುವಂತಹುದಲ್ಲ! ಕಾಡಿನಲ್ಲಿ ಭೀಷಣ ಸರ್ಪಗಳೂ, ಘೋರ ಭಯಂಕರ ಪಕ್ಷಿಗಳೂ, ನರನಾರಿಯರನ್ನು ಕದ್ದೊಯ್ಯುವ ರಕ್ಕಸರು ಹಿಂಡು-ಹಿಂಡಾಗಿ ತಿರುಗುತ್ತಿರುತ್ತಾರೆ. ಕಾಡಿನ ಭಯಂಕರತೆಯನ್ನು ನೆನೆದರೆ ಸಾಕು, ವೀರಾಧಿವೀರರೂ ನಡುಗುತ್ತಾರೆ. ಹೀಗಿರುವಾಗ ಎಲೈ ಮೃಗನಯನೇ! ನೀನು ಸ್ವಭಾವತಃ ಭೀರುವಾಗಿರುವೆ. ಎಲೈ ಹಂಸಗಮನೇ! ನೀನು ಕಾಡಿಗೆ ಬರಲು ತಕ್ಕವಳಲ್ಲ. ನೀನು ವನವಾಸಕ್ಕೆ ತೆರಳಿದರೆ ಜನರು ನನ್ನನ್ನು ನಿಂದಿಸುವರು. ಮಾನಸ ಸರೋವರದ ಅಮೃತದಂತಹ ಜಲದಲ್ಲಿ ಬೆಳೆದ ಹಂಸಿನಿಯು ಕ್ಷಾರ ಸಮುದ್ರದಲ್ಲಿ ಜೀವಿಸಬಲ್ಲುದೇ? ತಳಿರುಗಳಿಂದೊಡಗೂಡಿದ ಮಾವಿನ ತೋಪಿನಲ್ಲಿ ವಿಹರಿಸುವ ಕೋಗಿಲೆಯು ಗೊಬ್ಬುಳಿಯ ತೋಟದಲ್ಲಿ ಶೋಭಿಸುವುದೇ? ಎಲೈ ಚಂದ್ರಮುಖೀ! ಇದೆಲ್ಲವನ್ನು ಚೆನ್ನಾಗಿ ಯೋಚಿಸಿ ನೀನು ಮನೆಯಲ್ಲಿ ಇರು. ಕಾಡಿನಲ್ಲಿ ತುಂಬಾ ಕಷ್ಟಗಳಿವೆ. (ಚೌ/೧-೪)

**ದೋ – ಸಹಜ ಸುಹೃದ ಗುರ ಸ್ವಾಮಿ ಸಿಖ ಜೋ ನ ಕರಇ ಸಿರ ಮಾನಿ।**
**ಸೋ ಪಛಿತಾಇ ಅಘಾಇ ಉರ ಅವಸಿ ಹೋಇ ಹಿತ ಹಾನಿ ॥ ೬೩ ॥**

ಸಹಜವಾಗಿಯೇ ಹಿತವನ್ನು ಬಯಸುವ ಗುರುಗಳೂ, ಪ್ರಭುವೂ, ಸುಹೃದಯರೂ ಹೇಳುವ ಬುದ್ಧಿವಾದವನ್ನು ಶಿರಸಾವಹಿಸಿ ಅದರಂತೆ ನಡೆಯದವರು ಮುಂದೆ ತುಂಬಾ ಪಶ್ಚಾತ್ತಾಪಪಡುತ್ತಾರೆ. ಅವರ ಹಿತಕ್ಕೆ ಹಾನಿಯಾಗುವುದೂ ನಿಶ್ಚಿತವಾಗಿದೆ. (ದೋ/೬೩)

**ಚೌ – ಸುನಿ ಮೃದು ಬಚನ ಮನೋಹರ ಪಿಯ ಕೇ। ಲೋಚನ ಲಲಿತ ಭರೇ ಜಲ ಸಿಯ ಕೇ॥**
**ಸೀತಲ ಸಿಖ ದಾಹಕ ಭಇ ಕೈಸೇಂ । ಚಕಇಹಿ ಸರದ ಚಂದ ನಿಸಿ ಜೈಸೇಂ ॥ ೧ ॥**
**ಉತರು ನ ಆವ ಬಿಕಲ ಬೈದೇಹೀ । ತಜನ ಚಹತ ಸುಚಿ ಸ್ವಾಮಿ ಸನೇಹೀ ॥**
**ಬರಬಸ ರೋಕಿ ಬಿಲೋಚನ ಬಾರೀ । ಧರಿ ಧೀರಜು ಉರ ಅವನಿಕುಮಾರೀ ॥ ೨ ॥**

**ಲಾಗಿ ಸಾಸು ಪಗ ಕಹ ಕರ ಜೋರೀ । ಛಮಬಿ ದೇಬಿ ಬಡಿ ಅಬಿನಯ ಮೋರೀ ॥**
**ದೀನ್ಹಿ ಪ್ರಾನಪತಿ ಮೊಹಿ ಸಿಖ ಸೋಈ । ಜೆಹಿ ಬಿಧಿ ಮೋರ ಪರಮ ಹಿತ ಹೋಈ ॥ ೩ ॥**
**ಮೈಂ ಪುನಿ ಸಮುಝಿ ದೀಖಿ ಮನ ಮಾಹೀಂ । ಪಿಯ ಬಿಯೋಗ ಸಮ ದುಖು ಜಗ ನಾಹೀಂ ॥ ೪ ॥**

ಪ್ರಿಯತಮನ ಮೃದುಮನೋಹರವಾದ ಮಾತುಗಳನ್ನು ಕೇಳಿ ಸೀತೆಯ ಚೆಲುವಾದ ಕಣ್ಣುಗಳು ತುಂಬಿಬಂದವು. ಶ್ರೀರಾಮನ ಈ ಶೀತಲ ಉಪದೇಶವು ಆಕೆಗೆ ಚಕೋರ ಪಕ್ಷಿಗೆ ಶರದೃತುವಿನ ಬೆಳದಿಂಗಳಂತೆ ಕಂಡಿತು. ಆಕೆ ಏನೂ ಉತ್ತರ ಕೊಡಲಾರದಾದಳು. ಅಯ್ಯೋ! ನನ್ನ ಪ್ರಿಯನೂ, ಪವಿತ್ರಪ್ರೇಮವುಳ್ಳ ಸ್ವಾಮಿಯೂ, ನನ್ನನ್ನು ಬಿಟ್ಟು ವನಕ್ಕೆ ಹೋಗಬಯಸುತ್ತಾನೆ ಎಂದು ಯೋಚಿಸಿ ಅವಳು ವ್ಯಾಕುಲಳಾದಳು. ಒತ್ತರಿಸಿ ಬರುತ್ತಿದ್ದ ಕಂಬನಿಯನ್ನು ಬಲವಂತದಿಂದ ತಡೆದು, ಅವನಿಕುಮಾರಿ (ಸೀತೆ)ಯು ಧೈರ್ಯವನ್ನು ತಂದುಕೊಂಡು ಅತ್ತೆಯ ಕಾಲಿಗೆರಗಿ ಕೈಮುಗಿದು ಹೇಳತೊಡಗಿದಳು. ಅತ್ತೆಯಮ್ಮನವರೇ! ನನ್ನ ದಿಟ್ಟತನವನ್ನು ಮನ್ನಿಸಿರಿ. ನನಗೆ ಪರಮ ಹಿತವಾಗುವಂತಹ ಬುದ್ಧಿವಾದವನ್ನೇ ನನ್ನ ಪ್ರಾಣೇಶನು ನೀಡಿರುವನು. ಆದರೆ ನಾನು ಯೋಚಿಸಿನೋಡಿದಾಗ 'ಪತಿಯ ಅಗಲಿಕೆಗಿಂತ ಮಿಗಿಲಾದ ದುಃಖ ಈ ಜಗತ್ತಿನಲ್ಲಿ ಬೇರಾವುದೂ ಇಲ್ಲ' ಎಂದು ಅರ್ಥವಾಯಿತು. (ಚೌ/೧-೪)

**ದೋ – ಪ್ರಾನನಾಥ ಕರುನಾಯತನ ಸುಂದರ ಸುಖದ ಸುಜಾನ ।**
**ತುಮ್ಹ ಬಿನು ರಘುಕುಲ ಕುಮುದ ಬಿಧು ಸುರಪುರ ನರಕ ಸಮಾನ ॥ ೬೪ ॥**

ಓ ಪ್ರಾಣನಾಥಾ! ಕರುಣಾನಿಧೇ! ಸುಂದರಾಂಗನೇ! ಸುಖಪ್ರದನೆ! ಸಜ್ಜನಶಿರೋಮಣಿಯೇ! ರಘುವಂಶ ಕುಮುದಚಂದ್ರನೇ! ನೀನಿಲ್ಲದೆ ಸ್ವರ್ಗವೂ ಕೂಡ ನನ್ನ ಪಾಲಿಗೆ ನರಕಪ್ರಾಯವೇ. (ದೋ/೬೪)

**ಚೌ – ಮಾತು ಪಿತಾ ಭಗಿನೀ ಪ್ರಿಯ ಭಾಈ । ಪ್ರಿಯ ಪರಿವಾರು ಸುಹೃದ ಸಮುದಾಈ ॥**
**ಸಾಸು ಸಸುರ ಗುರ ಸಜನ ಸಹಾಈ । ಸುತ ಸುಂದರ ಸುಸೀಲ ಸುಖದಾಈ ॥ ೧ ॥**
**ಜಹ್ ಲಗಿ ನಾಥ ನೇಹ ಅರು ನಾತೇ । ಪಿಯ ಬಿನು ತಿಯಹಿ ತರನಿಹು ತೇ ತಾತೇ ॥**
**ತನು ಧನು ಧಾಮು ಧರನಿ ಪುರ ರಾಜೂ । ಪತಿ ಬಿಹೀನ ಸಬು ಸೋಕ ಸಮಾಜೂ ॥ ೨ ॥**
**ಭೋಗ ರೋಗಸಮ ಭೂಷನ ಭಾರೂ । ಜಮ ಜಾತನಾ ಸರಿಸ ಸಂಸಾರೂ ॥**
**ಪ್ರಾನನಾಥ ತುಮ್ಹ ಬಿನು ಜಗ ಮಾಹೀಂ । ಮೋ ಕಹುಂ ಸುಖದ ಕತಹುಂ ಕಛು ನಾಹೀಂ ॥ ೩ ॥**
**ಜಿಯ ಬಿನು ದೇಹ ನದೀ ಬಿನು ಬಾರೀ । ತೈಸಿಅ ನಾಥ ಪುರುಷ ಬಿನು ನಾರೀ ॥**
**ನಾಥ ಸಕಲ ಸುಖ ಸಾಥ ತುಮ್ಹಾರೇಂ । ಸರದ ಬಿಮಲ ಬಿಧು ಬದನು ನಿಹಾರೇಂ ॥ ೪ ॥**

ನಾಥಾ! ತಾಯಿ-ತಂದೆ, ಅಕ್ಕ-ತಂಗಿಯರು, ಅಣ್ಣ-ತಮ್ಮಂದಿರು, ಪ್ರಿಯ ಪರಿವಾರ, ಮಿತ್ರಸಮೂಹ, ಅತ್ತೆ-ಮಾವ, ಗುರು, ಸ್ವಜನರು, ಬಂಧು-ಬಾಂಧವರು, ಸಹಾಯಕನೂ, ಸುಂದರನೂ, ಸುಶೀಲನೂ, ಸುಖದಾಯಕನೂ ಆದ ಮಗನೂ, ಎಷ್ಟೆಲ್ಲ ನಂಟಿದೆಯೋ, ಸ್ನೇಹವಿದೆಯೋ ಇವೆಲ್ಲವೂ ಪತಿಯಿಲ್ಲದೆ ಸೂರ್ಯನಿಗಿಂತಲೂ ಮಿಗಿಲಾದ ತಾಪದಾಯಕರು. ಶರೀರ, ಧನ, ಧಾಮ, ಧರಣಿ, ಪುರ, ರಾಜ್ಯ ಇವೆಲ್ಲವೂ ಪತಿಯಿಲ್ಲದೆ ಸತಿಗೆ ಶೋಕದಾಯಕವೇ ಆಗಿವೆ. ಭೋಗಗಳು ರೋಗಕ್ಕೆ ಸಮಾನ. ಭೂಷಣಗಳು ಭಾರಸ್ವರೂಪ. ಪ್ರಪಂಚವೇ ಯಮಯಾತನೆ. ಹೇ ಪ್ರಾಣನಾಥಾ! ನೀವಿಲ್ಲದೆ ಈ ಜಗತ್ತಿನಲ್ಲಿ ಯಾವುದೂ ಸುಖದಾಯಕವಲ್ಲ. ನಾಥ! ಜೀವವಿಲ್ಲದ ದೇಹದಂತೆ, ಜಲವಿಲ್ಲದ ನದಿಯಂತೆ, ಗಂಡನಿಲ್ಲದ ಸ್ತ್ರೀಯಾಗಿದ್ದಾಳೆ. ನಿನ್ನ ಜೊತೆಗಿದ್ದು ನಿಮ್ಮ ಶರತ್‌ಚಂದ್ರನಂತಹ ಮುಖನೋಡಿದರೆ ಸಾಕು. ಎಲ್ಲ ಸುಖಗಳೂ ದೊರೆತಂತೆ. (ಚೌ/೧-೪)

**ದೋ – ಖಗ ಮೃಗ ಪರಿಜನ ನಗರು ಬನು ಬಲಕಲ ಬಿಮಲ ದುಕೂಲ ।**
**ನಾಥ ಸಾಥ ಸುರಸದನ ಸಮ ಪರನಸಾಲ ಸುಖ ಮೂಲ ॥ ೬೫ ॥**

ಸ್ವಾಮಿ! ನಿಮ್ಮೊಡನೆ ಇದ್ದಾಗ ಪಶುಪಕ್ಷಿಗಳೇ ನನ್ನ ಕುಟುಂಬ. ವನವೇ ನಗರ. ನಾರುಬಟ್ಟೆಯೇ ನಿರ್ಮಲ ವಸ್ತ್ರ. ಪರ್ಣಕುಟಿಯೇ ಸ್ವರ್ಗತುಲ್ಯ ಸುಖ ಕೊಡುವುದು. (ದೋ/೬೫)

**ಚೌ – ಬನದೇಬೀಂ ಬನದೇವ ಉದಾರಾ । ಕರಿಹಹಿಂ ಸಾಸು ಸಸುರ ಸಮ ಸಾರಾ ॥**
**ಕುಸ ಕಿಸಲಯ ಸಾಥರೀ ಸುಹಾಈ । ಪ್ರಭು ಸಂಗ ಮಂಜು ಮನೋಜ ತುರಾಈ ॥ ೧ ॥**
**ಕಂದ ಮೂಲ ಫಲ ಅಮಿಅ ಅಹಾರೂ । ಅವಧ ಸೌಧ ಸತ ಸರಿಸ ಪಹಾರೂ ॥**
**ಛಿನು ಛಿನು ಪ್ರಭು ಪದ ಕಮಲ ಬಿಲೋಕೀ । ರಹಿಹಉಂ ಮುದಿತ ದಿವಸ ಜಿಮಿ ಕೋಕೀ ॥ ೨ ॥**

ಬನ ದುಖ ನಾಥ ಕಹೇ ಬಹುತೇರೇ । ಭಯ ಬಿಷಾದ ಪರಿತಾಪ ಘನೇರೇ ॥
ಪ್ರಭು ಬಿಯೋಗ ಲವಲೇಸ ಸಮಾನಾ । ಸಬ ಮಿಲಿ ಹೋಹಿಂ ನ ಕೃಪಾನಿಧಾನಾ ॥ ೩ ॥
ಅಸ ಜಿಯ್ ಜಾನಿ ಸುಜಾನ ಸಿರೋಮನಿ । ಲೇಇಅ ಸಂಗ ಮೋಹಿ ಛಾಡಿಅ ಜನಿ ॥
ಬಿನತೀ ಬಹುತ ಕರೌ ಕಾ ಸ್ವಾಮೀ । ಕರುನಾಮಯ ಉರ ಅಂತರಜಾಮೀ ॥ ೪ ॥

ಉದಾರಹೃದಯರಾದ ವನದೇವಿ, ದೇವತೆಗಳೇ ಅತ್ತೆ-ಮಾವಂದಿರಂತೆ ನನ್ನನ್ನು ಪೋಷಿಸುವರು. ಕುಶಕೀಸಲಯಗಳೇ ಮನ್ಮಥಪರ್ಯಂಕದಂತೆ, ಕಂದಮೂಲಗಳೇ ಅಮೃತದಂತಹ ಆಹಾರಪದಾರ್ಥಗಳು. ಆ ಅರಣ್ಯದ ಗುಡ್ಡಗಾಡು ಅಯೋಧ್ಯೆಯ ರಾಜಮಂದಿರಗಳಿಗೆ ನೂರ್ಮಡಿ ಸುಖದಾಯಕ. ಕ್ಷಣ-ಕ್ಷಣವೂ ಪ್ರಭುವಿನ ಚರಣಗಳನ್ನು ಕಂಡು-ಹಗಲಿನಲ್ಲಿ ಚಕ್ರವಾಕ ನಲಿಯುತ್ತಿರುವಂತೆ, ನಾನು ನಲಿಯುತ್ತಿರುತ್ತೇನೆ. ನಾಥಾ! ನೀವು ಕಾಡಿನ ಅನೇಕ ದುಃಖ, ಭಯ, ವಿಷಾದ, ಸಂತಾಪಗಳನ್ನು ಬಣ್ಣಿಸಿದಿರಿ. ಆದರೆ ಅವೆಲ್ಲ ಒಟ್ಟಟ್ಟಿಗೆ ಸೇರಿದರೂ ಕೂಡ ನಿಮ್ಮ ವಿಯೋಗಜನ್ಯ ದುಃಖದ ಲವಲೇಶವೂ ಸಮವಾಗಲಾರದು. ಓ ಸಜ್ಜನಶಿರೋಮಣಿ! ಈ ಎಲ್ಲ ವಿಷಯಗಳನ್ನು ಚೆನ್ನಾಗಿ ಪರಿಶೀಲಿಸಿ, ನನ್ನನ್ನು ನಿಮ್ಮೊಡನೆ ಕರೆದುಕೊಂಡು ಹೋಗಿರಿ. ಇಲ್ಲಿ ಮಾತ್ರ ಬಿಟ್ಟುಹೋಗಬೇಡಿ. ಸ್ವಾಮಿ! ಇದರಿಂದ ಹೆಚ್ಚೇನು ಪ್ರಾರ್ಥಿಸಲಿ? ನೀವು ಕರುಣಾಮಯರು, ಸರ್ವಾಂತರ್ಯಾಮಿಗಳು. (ಚೌ/೧-೪)

**ದೋ – ರಾಖಿಅ ಅವಧ ಜೊ ಅವಧಿ ಲಗಿ ರಹತ ನ ಜನಿಅಹಿಂ ಪ್ರಾನ ।**
**ದೀನಬಂಧು ಸುಂದರ ಸುಖದ ಸೀಲ ಸನೇಹ ನಿಧಾನ ॥ ೬೬ ॥**

ಓ ದೀನಬಂಧು! ಸುಂದರಾ! ಸುಖಪ್ರದಾತಾ! ಸ್ನೇಹಸೌಶೀಲ್ಯನಿಧಾನಾ! ತಾವೇನಾದರೂ ಹದಿನಾಲ್ಕು ವರ್ಷಗಳಕಾಲ ನನ್ನನ್ನು ಅಯೋಧ್ಯೆಯಲ್ಲಿ ಬಿಟ್ಟುಹೋದರೆ, ನೀವಿಲ್ಲದೆ ನಾನು ಒಂದು ಕ್ಷಣವೂ ಕೂಡ ಬದುಕಿರಲಾರೆನೆಂದು ತಿಳಿಯಿರಿ. (ದೋ/೬೬)

ಚೌ – ಮೊಹಿ ಮಗ ಚಲತ ನ ಹೋಇಹಿ ಹಾರೀ । ಛಿನು ಛಿನು ಚರನ ಸರೋಜ ನಿಹಾರೀ ॥
ಸಬಹಿ ಭಾಂತಿ ಪಿಯ ಸೇವಾ ಕರಿಹೌ । ಮಾರಗ ಜನಿತ ಸಕಲ ಶ್ರಮ ಹರಿಹೌ ॥ ೧ ॥
ಪಾಯ ಪಖಾರಿ ಬೈಠಿ ತರು ಛಾಹೀಂ । ಕರಿಹಉಂ ಬಾಉ ಮುದಿತ ಮನ ಮಾಹೀಂ ॥
ಶ್ರಮ ಕನ ಸಹಿತ ಸ್ಯಾಮ ತನು ದೇಖೇಂ । ಕಹ್ ದುಖ ಸಮಉ ಪ್ರಾನಪತಿ ಪೇಖೇಂ ॥ ೨ ॥
ಸಮ ಮಹಿ ತೃನ ತರುಪಲ್ಲವ ಡಾಸೀ । ಪಾಯ ಪಲೋಟಿಹಿ ಸಬ ನಿಸಿ ದಾಸೀ ॥
ಬಾರ ಬಾರ ಮೃದು ಮೂರತಿ ಜೋಹೀ । ಲಾಗಿಹಿ ತಾತ ಬಯಾರಿ ನ ಮೋಹೀ ॥ ೩ ॥
ಕೋ ಪ್ರಭು ಸ್ಂಗ ಮೊಹಿ ಚಿತವನಿ ಹಾರಾ । ಸಿಂಘಬಧುಹಿ ಜಿಮಿ ಸಸಕ ಸಿಆರಾ ॥
ಮೈಂ ಸುಕುಮಾರಿ ನಾಥ ಬನ ಜೋಗೂ । ತುಮ್ಹಹಿ ಉಚಿತ ತಪ ಮೋ ಕಹುಂ ಭೋಗೂ ॥ ೪ ॥

ಕ್ಷಣ-ಕ್ಷಣವೂ ನಿಮ್ಮ ಚರಣಕಮಲಗಳನ್ನು ನೋಡುತ್ತಿರುವುದರಿಂದ ನನಗೆ ಯಾವುದೇ ಮಾರ್ಗಾಯಾಸ ಉಂಟಾಗಲಾರದು. ಪ್ರಾಣೇಶ್ವರಾ! ನಾನು ಎಲ್ಲರೀತಿಯಿಂದಲೂ ನಿಮ್ಮ ಸೇವೆ ಮಾಡುತ್ತೇನೆ. ನಿಮ್ಮ ಮಾರ್ಗಾಯಾಸವನ್ನು ಕಳೆಯುವಂತೆ ಮಾಡುತ್ತೇನೆ. ಶೀತಲ ವೃಕ್ಷಛಾಯೆಯಲ್ಲಿ ಕುಳಿತು, ನಿಮ್ಮ ಪಾದಗಳನ್ನು ತೊಳೆದು, ಹರ್ಷದಿಂದ ನಿಮಗೆ ಗಾಳಿ ಬೀಸುತ್ತೇನೆ. ಸ್ವೇದಬಿಂದುಗಳಿಂದ ಶೋಭಿಸುವ ನಿಮ್ಮ ಶ್ಯಾಮಸುಂದರ ಶರೀರವನ್ನು ನೋಡುತ್ತಿರುವಾಗ ದುಃಖಗಳು ನನ್ನ ಬಳಿಗೆ ಹೇಗೆ ಬಂದಾವು? ಸಮತಟ್ಟಾದ ಭೂಮಿಯ ಮೇಲೆ ಹುಲ್ಲು, ಎಲೆಗಳಿಂದ ಹಾಸಿಗೆಯನ್ನು ರಚಿಸಿ, ಈ ದಾಸಿಯು ಇರುಳೆಲ್ಲ ತಮ್ಮ ಪಾದಸೇವೆ ಮಾಡುವಳು. ನಿಮ್ಮ ಕೋಮಲಮೂರ್ತಿಯನ್ನು ಮತ್ತೆ-ಮತ್ತೆ ನೋಡುತ್ತಿರುವಾಗ ನನಗೆ ಬಿಸಿಗಾಳಿಯೂ ತಟ್ಟದು. ನಾನು ಪ್ರಭುವಿನೊಡನೆ ಇರುವಾಗ ನನ್ನತ್ತ ಕಣ್ಣೆತ್ತಿ ನೋಡುವ ಎದೆಗಾರಿಕೆ ಯಾರಿಗಿದೆ? ಸಿಂಹಿಣಿಯನ್ನು ಮೊಲ, ನರಿಗಳು ನೋಡಬಲ್ಲವೇ? ನನ್ನನ್ನು ಸುಕುಮಾರಿ ಎಂದು ತಿಳಿದು ಇಲ್ಲೇ ಬಿಟ್ಟು ನೀವು ಮಾತ್ರ ವನವಾಸಕ್ಕೆ ಹೋಗುತ್ತಿದ್ದೀರಿ. ನನ್ನನ್ನು ವಿಷಯ ಭೋಗಗಳನ್ನು ಅನುಭವಿಸು ಎಂದು ಹೇಳಿ, ತಾವು ವನದಲ್ಲಿ ತಪಸ್ಸನ್ನಾಚರಿಸಲು ಹೋಗುವಂತೆ ಹೇಳುತ್ತಿರುವಿರಲ್ಲ! ಇದು ನ್ಯಾಯವೇ? (ಚೌ/೧-೪)

**ದೋ – ಐಸೆಉ ಬಚನ ಕಠೋರ ಸುನಿ ಜೌಂ ನ ಹೃದಉ ಬಿಲಗಾನ।**
**ತೌ ಪ್ರಭು ಬಿಷಮ ಬಿಯೋಗ ದುಖ ಸಹಿಹಹಿಂ ಪಾವ್ರ ಪ್ರಾನ ॥ ೬೭ ॥**

ಇಂತಹ ಕಠೋರ ವಚನಗಳನ್ನು ಕೇಳಿಯೂ ನನ್ನ ಎದೆ ಒಡೆದುಹೋಗದಿದ್ದರೆ, ಈ ಪಾಮರ ಪ್ರಾಣಗಳು ನಿಮ್ಮ ವಿಯೋಗ ದುಃಖವನ್ನೂ ಕೂಡ ಸಹಿಸಿಯಾವೋ ಏನೋ? (ಅಂದರೆ ನಿಮ್ಮ ವಿಯೋಗದಿಂದ ನನ್ನ ಪ್ರಾಣಗಳು ಖಂಡಿತವಾಗಿ ನಿಲ್ಲಲಾರವು. (ದೋ/೬೭)

ಚೌ – ಅಸ ಕಹಿ ಸೀಯ ಬಿಕಲ ಭಇ ಭಾರೀ । ಬಚನ ಬಿಯೋಗು ನ ಸಕೀ ಸಂಭಾರೀ ॥
ದೇಖಿ ದಸಾ ರಘುಪತಿ ಜಿಯ್ ಜಾನಾ । ಹಠಿ ರಾಖೇ ನಹಿಂ ರಾಖಿಹಿ ಪ್ರಾನಾ ॥ ೧ ॥
ಕಹೆಉ ಕೃಪಾಲ ಭಾನುಕುಲನಾಥಾ । ಪರಿಹರಿ ಸೋಚು ಚಲಹು ಬನ ಸಾಥಾ ॥
ನಹಿಂ ಬಿಷಾದ ಕರ ಅವಸರು ಆಜೂ । ಬೇಗಿ ಕರಹು ಬನ ಗವನ ಸಮಾಜೂ ॥ ೨ ॥
ಕಹಿ ಪ್ರಿಯ ಬಚನ ಪ್ರಿಯಾ ಸಮುಝಾಈ । ಲಗೇ ಮಾತು ಪದ ಆಸಿಷ ಪಾಈ ॥
ಬೇಗಿ ಪ್ರಜಾ ದುಖ ಮೇಟಬ ಆಈ । ಜನನೀ ನಿಠುರ ಬಿಸರಿ ಜನಿ ಜಾಈ ॥ ೩ ॥
ಫಿರಿಹಿ ದಸಾ ಬಿಧಿ ಬಹುರಿ ಕಿ ಮೋರೀ । ದೆಖಿಹಉಂ ನಯನ ಮನೋಹರ ಜೋರೀ ॥
ಸುದಿನ ಸುಘರೀ ತಾತ ಕಬ ಹೋಇಹಿ । ಜನನೀ ಜಿಅತ ಬದನ ಬಿಧು ಜೋಇಹಿ ॥ ೪ ॥

ಹೀಗೆ ಹೇಳಿ ಸೀತೆಯು ತುಂಬಾ ವ್ಯಾಕುಲಗೊಂಡಳು. ಆಕೆಯು ಶರೀರ ವಿಯೋಗದ ಮಾತಿರಲಿ, ಮಾತಿನ ವಿಯೋಗವನ್ನೂ ಕೂಡ ಸಹಿಸದಾದಳು. ಆಕೆಯ ಈ ಸ್ಥಿತಿಯನ್ನು ಕಂಡು ಶ್ರೀ ರಘನಾಥನಿಗೆ 'ಹಟದಿಂದ ಈಕೆಯನ್ನು ಇಲ್ಲಿ ಇರಿಸಿದರೆ ಇವಳು ಪ್ರಾಣಗಳನ್ನು ತೊರೆದಾಳು' ಎಂದು ಮನಸ್ಸಿಗನಿಸಿತು. ಆಗ ಕೃಪಾಳುವೂ, ಸೂರ್ಯಕುಲದ ಪ್ರಭುವೂ ಆದ ಶ್ರೀರಾಮನು ಇಂತೆಂದನು – 'ಸರಿ, ಹಾಗಾದರೆ ಯೋಚನೆಮಾಡಬೇಡ. ನನ್ನ ಜೊತೆಗೆ ಕಾಡಿಗೆ ನಡೆ. ಇದು ವಿಷಾದಪಡುವ ವೇಳೆಯಲ್ಲ. ಬೇಗನೇ ವನಗಮನದ ಸಿದ್ಧತೆಯನ್ನು ಮಾಡು. ಹೀಗೆ ಪ್ರಿಯವಚನಗಳಿಂದ ತನ್ನ ಪ್ರಿಯತಮೆ ಸೀತೆಯನ್ನು ಸಮಾಧಾನಪಡಿಸಿದ. ಅನಂತರ ತಾಯಿಯ ಕಾಲಿಗೆರಗಿ ಆಕೆಯ ಆಶೀರ್ವಾದವನ್ನು ಪಡೆದನು. ತಾಯಿ ಹೇಳಿದಳು – ಮಗು! ಬೇಗನೆ ಹಿಂದಿರುಗಿ ಪ್ರಜೆಗಳ ದುಃಖವನ್ನು ಕಳೆ. ಕಠಿಣಾತ್ಮಳಾದ ಈ ತಾಯಿಯನ್ನು ಮರೆಯಬೇಡ. ಓ ವಿಧಾತಾ! ನನ್ನ ಅದೃಷ್ಟವು ಮತ್ತೆ ಬದಲಾದೀತೇ? ಈ ಚೆಲುವಾದ ಜೋಡಿಯನ್ನು ಮತ್ತೆ ಕಣ್ಣಾರೆಕಂಡೆನೆ! ಕಂದಾ! ಚಂದ್ರಬಿಂಬದಂತಿರುವ ನಿನ್ನ ಸುಂದರ ಮುಖವನ್ನು ಪುನಃ ನೋಡುವ ಶುಭದಿನ, ಶುಭಗಳಿಗೆ, ನಿನ್ನ ತಾಯಿಗೆ ಎಂದು ಲಭಿಸುವುದೋ! (ಚೌ/೧-೪)

**ದೋ – ಬಹುರಿ ಬಚ್ಛ ಕಹಿ ಲಾಲು ಕಹಿ ರಘುಪತಿ ರಘುಬರ ತಾತ ।**
**ಕಬಹಿಂ ಬೊಲಾಇ ಲಗಾಇ ಹಿಯ್ ಹರಷಿ ನಿರಖಿಹಉಂ ಗಾತ ॥ ೬೮ ॥**

ಮಗೂ! ವತ್ಸಾ! ಕಂದಾ! ರಘುಪತಿ! ರಘುವರಾ! ಎಂದು ಪದೇ-ಪದೇ ನಿನ್ನನ್ನು ಕರೆಯುತ್ತಾ ಎಂದು ಎದೆಗಪ್ಪಿಕೊಂಡೆನೋ? ಹರ್ಷಗೊಂಡು ನಿನ್ನ ಅಂಗಗಳನ್ನು ನೋಡುವೆನೋ? (ದೋ/೬೮)

ಚೌ – ಲಖಿ ಸನೇಹ ಕಾತರಿ ಮಹತಾರೀ । ಬಚನು ನ ಆವ ಬಿಕಲ ಭಇ ಭಾರೀ ॥
ರಾಮ ಪ್ರಬೋಧು ಕೀನ್ಹ ಬಿಧಿ ನಾನಾ । ಸಮಉ ಸನೇಹು ನ ಜಾಇ ಬಖಾನಾ ॥ ೧ ॥
ತಬ ಜಾನಕೀ ಸಾಸು ಪಗ ಲಾಗೀ । ಸುನಿಅ ಮಾಯ ಮೈಂ ಪರಮ ಅಭಾಗೀ ॥
ಸೇವಾ ಸಮಯ ದೈಅಂ ಬನು ದೀನ್ಹಾ । ಮೋರ ಮನೋರಥು ಸಫಲ ನ ಕೀನ್ಹಾ ॥ ೨ ॥
ತಜಬ ಛೋಭು ಜನಿ ಛಾಡಿಅ ಛೋಹೂ । ಕರಮು ಕಠಿನ ಕಛು ದೋಸು ನ ಮೋಹು ॥
ಸುನಿ ಸಿಯ ಬಚನ ಸಾಸು ಅಕುಲಾನೀ । ದಸಾ ಕವನಿ ಬಿಧಿ ಕಹೌಂ ಬಖಾನೀ ॥ ೩ ॥
ಬಾರಹಿಂ ಬಾರ ಲಾಇ ಉರ ಲೀನ್ಹೀ । ಧರಿ ಧೀರಜು ಸಿಖ ಆಸಿಷ ದೀನ್ಹೀ ॥
ಅಚಲ ಹೋಉ ಅಹಿವಾತು ತುಮ್ಹಾರಾ । ಜಬ ಲಗಿ ಗಂಗ ಜಮುನ ಜಲ ಧಾರಾ ॥ ೪ ॥

ತಾಯಿಯು ಸ್ನೇಹಾಭಿಭೂತಳಾಗಿದ್ದಾಳೆ. ಮೈಮರೆತಿದ್ದಾಳೆ. ಆಕೆಯ ಬಾಯಿಂದ ಮಾತೇ ಹೊರಡದು. ಆಕೆ ಅಷ್ಟೊಂದು ವ್ಯಾಕುಲಿತಳಾಗಿದ್ದಾಳೆ ಎಂದು ತಿಳಿದು ಶ್ರೀರಾಮಚಂದ್ರನು ಅನೇಕ ವಿಧದಿಂದ ತಾಯಿಯನ್ನು ಸಂತೈಸಿದನು. ಆ ಸಮಯದ ದೃಶ್ಯ ಹಾಗೂ ಪ್ರೇಮವನ್ನು ವರ್ಣಿಸಲಸದಳ. ಆಗ ಜಾನಕಿಯು ಅತ್ತೆಯ ಚರಣಗಳಿಗೆರಗಿ ಹೇಳಿದಳು – ''ಅಮ್ಮಾ! ನಾನು ತುಂಬಾ ನಿರ್ಭಾಗ್ಯೆ. ನಿಮ್ಮ ಸೇವೆಮಾಡುವ ಹೊತ್ತಿಗೆ ದೈವವು ನನಗೆ ವನವಾಸವನ್ನು ತಂದೊಡ್ಡಿತು. ನನ್ನ ಮನೋರಥ ಕೈಗೂಡಲಿಲ್ಲ. ನೀವು ಚಿತ್ತಕ್ಷೋಭೆಯನ್ನು ತೊರೆಯಿರಿ. ಆದರೆ ಕೃಪೆಯನ್ನು ಮಾತ್ರ ತೊರೆಯಬೇಡಿರಿ. ಕರ್ಮಗತಿಯು ತುಂಬಾ ಕಠೋರವಾದುದು. ನನ್ನದೇನೂ ತಪ್ಪಿಲ್ಲ.'' ಸೀತಾದೇವಿಯ ಮಾತುಗಳನ್ನು ಕೇಳಿ ಕೌಸಲ್ಯೆಯು ವ್ಯಾಕುಲಗೊಂಡಳು. ಆಗಿನ ಆಕೆಯ ಸ್ಥಿತಿಯನ್ನು ತುಳಸೀದಾಸರು ವರ್ಣಿಸದಾದರು. ಅವಳು ಸೀತೆಯನ್ನು ಮತ್ತೆ-ಮತ್ತೆ ಎದೆಗಪ್ಪಿಕೊಂಡು, ಧೈರ್ಯವಹಿಸಿ ಕೊನೆಗೆ ಬುದ್ಧಿವಾದ ಹೇಳಿ – ''ಗಂಗಾ-ಯಮುನಾ ನದಿಗಳಲ್ಲಿ ನೀರು ಹರಿಯುತ್ತಿರುವವರೆಗೆ ನಿನ್ನ ಸೌಭಾಗ್ಯವು ಅಚಲವಾಗಿರಲಿ'' ಎಂದು ಆಶೀರ್ವದಿಸಿದಳು. (ಚೌ/೧-೪)

**ದೋ – ಸೀತಹಿ ಸಾಸು ಅಸೀಸ ಸಿಖ ದೀನ್ಹಿ ಅನೇಕ ಪ್ರಕಾರ ।**
**ಚಲೀ ನಾಇ ಪದ ಪದುಮ ಸಿರು ಅತಿ ಹಿತ ಬಾರಹಿಂ ಬಾರ ॥ ೬೯ ॥**

ಸೀತಾದೇವಿಗೆ ಅತ್ತೆ ಕೌಸಲ್ಯೆಯು ಅನೇಕ ರೀತಿಯಲ್ಲಿ ಆಶೀರ್ವದಿಸಿ, ಉಪದೇಶಗಳನ್ನು ಕೊಟ್ಟಳು. ಸೀತೆಯು ಪುನಃ-ಪುನಃ ಪ್ರೇಮದಿಂದ ಅತ್ತೆಯ ಪಾದಗಳಿಗೆ ವಂದಿಸಿ, ಅವಳಿಂದ ಬೀಳ್ಕೊಂಡಳು. (ದೋ/೬೯)

## ಲಕ್ಷ್ಮಣನ ಬಿನ್ನಹ – ಶ್ರೀರಾಮನ ಒಪ್ಪಿಗೆ

**ಚೌ – ಸಮಾಚಾರ ಜಬ ಲಛಿಮನ ಪಾಏ । ಬ್ಯಾಕುಲ ಬಿಲಖ ಬದನ ಉಠಿ ಧಾಏ ॥**
**ಕಂಪ ಪುಲಕ ತನ ನಯನ ಸನೀರಾ । ಗಹೇ ಚರನ ಅತಿ ಪ್ರೇಮ ಅಧೀರಾ ॥ ೧ ॥**
**ಕಹಿ ನ ಸಕತ ಕಛು ಚಿತವತ ಠಾಢ़ೇ । ಮೀನು ದೀನ ಜನು ಜಲ ತೇಂ ಕಾಢ़ೇ ॥**
**ಸೋಚು ಹೃದಯಂ ಬಿಧಿ ಕಾ ಹೋನಿಹಾರಾ । ಸಬು ಸುಖು ಸುಕೃತು ಸಿರಾನ ಹಮಾರಾ ॥ ೨ ॥**
**ಮೋ ಕಹುಂ ಕಾಹ ಕಹಬ ರಘುನಾಥಾ । ರಖಿಹಹಿಂ ಭವನ ಕಿ ಲೇಹಹಿಂ ಸಾಥಾ ॥**
**ರಾಮ ಬಿಲೋಕಿ ಬಂಧು ಕರ ಜೋರೇಂ । ದೇಹ ಗೇಹ ಸಬ ಸನ ತೃನು ತೋರೇಂ ॥ ೩ ॥**
**ಬೋಲೇ ಬಚನು ರಾಮ ನಯ ನಾಗರ । ಸೀಲ ಸನೇಹ ಸರಲ ಸುಖ ಸಾಗರ ॥**
**ತಾತ ಪ್ರೇಮ ಬಸ ಜನಿ ಕದರಾಹೂ । ಸಮುಝಿ ಹೃದಯ ಪರಿನಾಮ ಉಛಾಹೂ ॥ ೪ ॥**

ರಾಮನ ವನಗಮನದ ವಾರ್ತೆಯು ಲಕ್ಷ್ಮಣನಿಗೆ ಮುಟ್ಟಿದಾಗ ಅವನು ಅತ್ಯಂತ ವ್ಯಾಕುಲಗೊಂಡು ಸಪ್ಪೆಮೋರೆ ಹಾಕಿಕೊಂಡು ಅಣ್ಣನ ಬಳಿಗೆ ಗಾಬರಿಯಿಂದ ಓಡಿದ. ಅವನ ಶರೀರ ಕಂಪಿಸುತ್ತಿತ್ತು. ರೋಮಾಂಚನಗೊಂಡಿತ್ತು. ಕಣ್ಣುತುಂಬಿ ಬಂದವು. ಪ್ರೇಮವಿಹ್ವಲನಾಗಿ ಶ್ರೀರಾಮನ ಚರಣಗಳನ್ನು ಗಟ್ಟಿಯಾಗಿ ಅಪ್ಪಿಕೊಂಡನು. ಅವನ ಬಾಯಿಂದ ಮಾತೇ ಹೊರಡದು. ಸುಮ್ಮನೇ ನಿಂತುಕೊಂಡು ನೀರಿನಿಂದ ತೆಗೆದ ಮೀನಿನಂತೆ ಅವನು ದೀನನಾಗಿ ಮಿಕಿಮಿಕಿ ನೋಡತೊಡಗಿದನು. ಅವನು ಮನಸ್ಸಿನಲ್ಲೇ ಯೋಚಿಸುತ್ತಿರುವನು – 'ಹೇ ವಿಧಾತಾ! ಮುಂದೇ ಏನು ಆಗುವುದಿದೆ? ನಮ್ಮ ಪುಣ್ಯ, ಸುಖ ಎಲ್ಲ ಮುಗಿದುಹೋದುವೇ? ಶ್ರೀರಾಮನು ನನಗೆ ಏನು ಅಪ್ಪಣೆ ಕೊಡುವನೋ? ಮನೆಯಲ್ಲೇ ಇರು ಎನ್ನುವನೋ, ಜೊತೆಯಲ್ಲಿ ಕರೆದುಕೊಂಡು ಹೋಗುವನೋ ಕಾಣೆ.' ಅಂಜಲೀಬದ್ಧನಾಗಿ ಶರೀರ, ಮನೆ, ಮಠ ಇವೆಲ್ಲದರೊಡನೆ ಸಂಬಂಧ ಹರಿದುಕೊಂಡು ನಿಂತಿರುವ ಲಕ್ಷ್ಮಣನನ್ನು ನೋಡಿ, ನೀತಿ ಶಾಸ್ತ್ರನಿಪುಣನೂ, ಶೀಲ, ಸ್ನೇಹ, ಸರಳತೆ, ಸುಖ ಇವುಗಳ ಸಾಗರನೂ ಆದ ಶ್ರೀರಾಮಚಂದ್ರನು ಇಂತು ನುಡಿದನು – ''ಮಗೂ! ಪ್ರೇಮಾತಿರೇಕದಿಂದ ನೀನು ಧೈರ್ಯಗೆಡಬೇಡ. ಪರಿಣಾಮದಲ್ಲಿ ಆಗುವ ಆನಂದವನ್ನು ಹೃದಯದಲ್ಲಿ ತುಂಬಿಕೋ. ಮುಂದೆ ಶುಭವೇ ಆಗುವುದು. (ಚೌ/೧-೪)

**ದೋ – ಮಾತು ಪಿತಾ ಗುರು ಸ್ವಾಮಿ ಸಿಖ ಸಿರ ಧರಿ ಕರಹಿಂ ಸುಭಾಯಂ ।**
**ಲಹೇಉ ಲಾಭು ತಿನ್ಹ ಜನಮ ಕರ ನತರು ಜನಮು ಜಗ ಜಾಯಂ ॥ ೭೦ ॥**

ತಂದೆ, ತಾಯಿ, ಗುರು, ಇವರ ಉಪದೇಶಗಳನ್ನು, ಒಡೆಯನ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸುವವರ ಜನ್ಮ ಸಾರ್ಥಕವಾಗುತ್ತದೆ. ಇಲ್ಲವಾದರೆ ಅವರ ಜನ್ಮ ವ್ಯರ್ಥವೇ ಸರಿ. (ದೋ/೭೦)

**ಚೌ – ಅಸ ಜಿಯಂ ಜಾನಿ ಸುನಹು ಸಿಖ ಭಾಈ । ಕರಹು ಮಾತು ಪಿತು ಪದ ಸೇವಕಾಈ ॥**
**ಭವನ ಭರತು ರಿಪುಸೂದನು ನಾಹೀಂ । ರಾಉ ಬೃದ್ಧ ಮಮ ದುಖು ಮನ ಮಾಹೀಂ ॥ ೧ ॥**
**ಮೈಂ ಬನ ಜಾಉಂ ತುಮ್ಹಹಿ ಲೇಇ ಸಾಥಾ । ಹೋಇ ಸಬಹಿ ಬಿಧಿ ಅವಧ ಅನಾಥಾ ॥**
**ಗುರು ಪಿತು ಮಾತು ಪ್ರಜಾ ಪರಿವಾರೂ । ಸಬ ಕಹು ಪರಇ ದುಸಹ ದುಖ ಭಾರೂ ॥ ೨ ॥**
**ರಹಹು ಕರಹು ಸಬ ಕರ ಪರಿತೋಷೂ । ನತರು ತಾತ ಹೋಇಹಿ ಬಡ ದೋಷೂ ॥**
**ಜಾಸು ರಾಜ ಪ್ರಿಯ ಪ್ರಜಾ ದುಖಾರೀ । ಸೋ ನೃಪು ಅವಸಿ ನರಕ ಅಧಿಕಾರೀ ॥ ೩ ॥**
**ರಹಹು ತಾತ ಅಸಿ ನೀತಿ ಬಿಚಾರೀ । ಸುನತ ಲಖನು ಭಏ ಬ್ಯಾಕುಲ ಭಾರೀ ॥**
**ಸಿಅರೇಂ ಬಚನ ಸೂಖಿ ಗಏ ಕೈಸೇಂ । ಪರಸತ ತುಹಿನ ತಾಮರಸು ಜೈಸೇಂ ॥ ೪ ॥**

ಸೋದರಾ! ಇದನ್ನು ಮನಸ್ಸಿನಲ್ಲಿಟ್ಟುಕೊಂಡು, ನನ್ನ ಮಾತನ್ನು ಕೇಳು. ತಂದೆ-ತಾಯಿಯವರ ಸೇವೆಮಾಡಿಕೊಂಡು ನೀನು ಇಲ್ಲೇ ಇರು. ಭರತ, ಶತ್ರುಘ್ನರು ಮನೆಯಲ್ಲಿಲ್ಲ. ಮಹಾರಾಜರು ವಯೋವೃದ್ಧರು. ಅದೂ ಅಲ್ಲದೆ ಅವರು ನನ್ನನ್ನು ಹೆಚ್ಚು

ಹಚ್ಚಿಕೊಂಡು ತುಂಬಾ ದುಃಖಗೊಂಡಿದ್ದಾರೆ. ಇಂತಹ ಸ್ಥಿತಿಯಲ್ಲಿ ನಾನು ನಿನ್ನನ್ನು ಜೊತೆಯಲ್ಲಿ ಕರಕೊಂಡು ಕಾಡಿಗೆ ಹೋದರೆ, ಅಯೋಧ್ಯೆ ಎಲ್ಲ ವಿಧದಿಂದಲೂ ಅನಾಥವಾಗುವುದು. ಗುರುಗಳೂ, ತಂದೆ-ತಾಯಂದಿರೂ, ಪ್ರಜೆ-ಪರಿವಾರದವರೂ ಹೀಗೆ ಎಲ್ಲರೂ ದುರ್ಭರವಾದ ದುಃಖವನ್ನು ಹೊಂದುವರು. ಆದ್ದರಿಂದ ನೀನು ಇಲ್ಲೇ ಇದ್ದು ಎಲ್ಲರನ್ನೂ ಸಮಾಧಾನಪಡಿಸು. ಇಲ್ಲವಾದರೆ ತಮ್ಮಾ! ದೊಡ್ಡ ದೋಷ ತಟ್ಟೀತು. ತನ್ನನ್ನು ಪ್ರೇಮಿಸುವ ಪ್ರಜೆಗಳಿಗೆ ದುಃಖಕ್ಕೀಡುಮಾಡುವ ರಾಜನು ನಿಶ್ಚಯವಾಗಿಯೂ ನರಕಕ್ಕೆ ಹೋಗುವನು. ಆದ್ದರಿಂದ ಮಗೂ! ಇದನ್ನು ನೀನು ಧರ್ಮವೆಂದು ಭಾವಿಸಿ, ಮನೆಯಲ್ಲೇ ಇರು.'' ಇದನ್ನು ಕೇಳಿದ ಕೂಡಲೇ ಲಕ್ಷ್ಮಣನು ತುಂಬಾ ವ್ಯಾಕುಲಗೊಂಡನು. ಶ್ರೀರಾಮನ ಶೀತಲ ವಚನಗಳಿಂದ – ಮಂಜಿನ ಸ್ಪರ್ಶಕ್ಕೆ ಕಮಲವು ಬಾಡುವಂತೆ ಲಕ್ಷ್ಮಣನ ಮುಖ ಬಾಡಿಹೋಯಿತು. (ಚೌ/೧-೪)

**ದೋ – ಉತರು ನ ಆವತ ಪ್ರೇಮ ಬಸ ಗಹೇ ಚರನ ಅಕುಲಾಇ।**
**ನಾಥ ದಾಸು ಮೈಂ ಸ್ವಾಮಿ ತುಮ್ಹ ತಜಹು ತ ಕಾಹ ಬಸಾಇ॥ ೭೧ ॥**

ಪ್ರೇಮಪರವಶನಾದ ಲಕ್ಷ್ಮಣನಿಗೆ ಉತ್ತರಕೊಡಲು ಮಾತೇ ಹೊರಡದಾಗಿದೆ. ಅವನು ವ್ಯಾಕುಲನಾಗಿ ಶ್ರೀರಾಮಚಂದ್ರನ ಚರಣಗಳಲ್ಲಿ ಕೆಡಬಿದ್ದು ನುಡಿದನು – ''ಸ್ವಾಮಿ! ನಾನು ನಿನ್ನ ದಾಸನು. ನೀನು ನನಗೆ ಈಶನು. ಆದ್ದರಿಂದ ನೀನೇ ನನ್ನನ್ನು ತೊರೆಯುವಿಯಾದರೆ ನನ್ನ ಗತಿ ಏನಾದೀತು? (ದೋ/೭೧)

**ಚೌ – ದೀನ್ಹಿ ಮೋಹಿ ಸಿಖ ನೀಕಿ ಗೊಸಾಈಂ। ಲಾಗಿ ಅಗಮ ಅಪನೀ ಕದರಾಈಂ ॥**
**ನರಬರ ಧೀರ ಧರಮ ಧುರ ಧಾರೀ। ನಿಗಮ ನೀತಿ ಕಹುಂ ತೇ ಅಧಿಕಾರೀ॥ ೧ ॥**
**ಮೈಂ ಸಿಸು ಪ್ರಭು ಸನೇಹಂ ಪ್ರತಿಪಾಲಾ। ಮಂದರು ಮೇರು ಕಿ ಲೇಹಿಂ ಮರಾಲಾ ॥**
**ಗುರ ಪಿತು ಮಾತು ನ ಜಾನಉಂ ಕಾಹೂ। ಕಹಉಂ ಸುಭಾಉ ನಾಥ ಪತಿಆಹೂ ॥ ೨ ॥**
**ಜಹಂ ಲಗಿ ಜಗತ ಸನೇಹ ಸಗಾಈ। ಪ್ರೀತಿ ಪ್ರತೀತಿ ನಿಗಮ ನಿಜು ಗಾಈ ॥**
**ಮೋರೇಂ ಸಬಇ ಏಕ ತುಮ್ಹ ಸ್ವಾಮೀ। ದೀನಬಂಧು ಉರ ಅಂತರಜಾಮೀ ॥ ೩ ॥**
**ಧರಮ ನೀತಿ ಉಪದೇಸಿಅ ತಾಹೀ। ಕೀರತಿ ಭೂತಿ ಸುಗತಿ ಪ್ರಿಯ ಜಾಹೀ ॥**
**ಮನ ಕ್ರಮ ಬಚನ ಚರನ ರತ ಹೋಈ। ಕೃಪಾಸಿಂಧು ಪರಿಹರಿಅ ಕಿ ಸೋಈ ॥ ೪ ॥**

ಸ್ವಾಮೀ! ನೀವೇನೋ ನನಗೆ ಒಳ್ಳೆಯ ಉಪದೇಶವನ್ನೇ ಕೊಟ್ಟಿರುವಿರಿ. ಆದರೆ ಅದು ನನ್ನ ದೌರ್ಬಲ್ಯದಿಂದ ಅಸಾಧ್ಯವೆನಿಸಿದೆ. ಧೀರರೂ, ಧರ್ಮನಿರತರೂ ಆದ ಶ್ರೇಷ್ಠರು ಮಾತ್ರ ವೇದ, ನೀತಿ-ಶಾಸ್ತ್ರಗಳಿಗೆ ಅಧಿಕಾರಿಗಳು. ಆದರೆ ನಾನು ಪ್ರಭುಗಳ ಪ್ರೇಮದಲ್ಲಿ ಬೆಳೆದ ಹಸುಳೆಯಾಗಿರುವೆನು. ಹಂಸವು ಎಲ್ಲಾದರೂ ಮಂದರಾಚಲನ್ನು ಅಥವಾ ಮೇರುಪರ್ವತವನ್ನು ಹೊರಬಲ್ಲುದೇ? ಪ್ರಭೂ! ಸಹಜವಾಗಿಯೇ ಹೇಳುತ್ತಿದ್ದೇನೆ. ನಿಮ್ಮನ್ನು ಬಿಟ್ಟು ಗುರುಹಿರಿಯರೂ, ತಂದೆ-ತಾಯಂದಿರೂ ಯಾರನ್ನೂ ನಾನು ಅರಿಯೆ; ಇದನ್ನು ನಂಬಿರಿ. ಓ ದೀನಬಂಧೂ! ಓ ಸರ್ವಾಂತರ್ಯಾಮೀ! ವೇದಗಳು ಹೊಗಳುವ ಸ್ನೇಹಬಂಧಗಳೂ, ಪ್ರೇಮವಿಶ್ವಾಸಗಳೂ ಈ ಜಗತ್ತಿನಲ್ಲಿ ನನಗೆ ಎಲ್ಲವೂ ನೀನೇ ಆಗಿರುವೆ. ಯಶ, ಐಶ್ವರ್ಯ, ಸದ್ಗತಿ, ಬಯಸುವವರಿಗೆ ಧರ್ಮವನ್ನು, ನೀತಿಶಾಸ್ತ್ರವನ್ನು ಉಪದೇಶಿಸಬೇಕು. ಆದರೆ ನನಗೆ ಅವು ಯಾವುವೂ ಬೇಡ. ಓ ಕೃಪಾಸಿಂಧು! ಮನೋವಾಕ್ಕರ್ಮಗಳಿಂದ ನಿನ್ನಲ್ಲೇ ಅನುರಕ್ತನಾದ ನನ್ನನ್ನು ದೂರೀಕರಿಸುವುದೇ?'' (ಚೌ/೧-೪)

**ದೋ – ಕರುನಾಸಿಂಧು ಸುಬಂಧು ಕೇ ಸುನಿ ಮೃದು ಬಚನ ಬಿನೀತ।**
**ಸಮುಝಾಏ ಉರ ಲಾಇ ಪ್ರಭು ಜಾನಿ ಸನೇಹಂ ಸಭೀತ ॥ ೭೨ ॥**

ಕರುಣಾಸಿಂಧುವಾದ ಶ್ರೀರಾಮಚಂದ್ರನು ತನ್ನ ತಮ್ಮನ ಕೋಮಲವೂ, ವಿನಯಪೂರ್ಣವೂ ಆದ ಮಾತುಗಳನ್ನು ಕೇಳಿ, ಪ್ರೇಮಾತಿರೇಕದಿಂದ ಅವನು ಹೆದರಿದನೆಂದು ತಿಳಿದು ಅವನನ್ನು ಎದೆಗಪ್ಪಿಕೊಂಡು ಸಮಾಧಾನಪಡಿಸಿದನು. (ದೋ/೭೨)

## ಲಕ್ಷ್ಮಣನಿಗೆ ಸುಮಿತ್ರಾದೇವಿಯ ಹಿತೋಪದೇಶ

**ಚೌ – ಮಾಗಹು ಬಿದಾ ಮಾತು ಸನ ಜಾಈ। ಆವಹು ಬೇಗಿ ಚಲಹು ಬನ ಭಾಈ ॥**
**ಮುದಿತ ಭಏ ಸುನಿ ರಘುಬರ ಬಾನೀ। ಭಯಉ ಲಾಭ ಬಡ ಗಇ ಬಡಿ ಹಾನೀ ॥ ೧ ॥**
**ಹರಷಿತ ಹೃದಯಂ ಮಾತು ಪಹಿಂ ಆಏ। ಮನಹುಂ ಅಂಧ ಫಿರಿ ಲೋಚನ ಪಾಏ ॥**
**ಜಾಇ ಜನನಿ ಪಗ ನಾಯಉ ಮಾಥಾ। ಮನು ರಘುನಂದನ ಜಾನಕಿ ಸಾಥಾ ॥ ೨ ॥**

**ಪೂಂಛೇ ಮಾತು ಮಲಿನ ಮನ ದೇಖೀ । ಲಖನ ಕಹೀ ಸಬ ಕಥಾ ಬಿಸೇಷೀ ॥**
**ಗಈ ಸಹಮಿ ಸುನಿ ಬಚನ ಕಠೋರಾ । ಮೃಗೀ ದೇಖಿ ದವ ಜನು ಚಹು ಓರಾ ॥ ೩ ॥**
**ಲಖನ ಲಖೆಉ ಭಾ ಅನರಥ ಆಜೂ । ಎಹಿಂ ಸನೇಹ ಬಸ ಕರಬ ಅಕಾಜೂ ॥**
**ಮಾಗತ ಬಿದಾ ಸಭಯ ಸಕುಚಾಹೀಂ । ಜಾಇ ಸಂಗ ಬಿಧಿ ಕಹಿಹಿ ಕಿ ನಾಹೀಂ ॥ ೪ ॥**

ಅನಂತರ ಹೇಳಿದನು – 'ತಮ್ಮಾ! ನೀನು ಹೋಗಿ ತಾಯಿಯ ಅನುಮತಿಯನ್ನು ಪಡೆದುಕೊಂಡು ಬಾ. ಬೇಗನೇ ಕಾಡಿಗೆ ಬರುವೆಯಂತೆ.' ರಘುವರನ ಮಾತನ್ನು ಕೇಳಿ ಲಕ್ಷ್ಮಣನು ಆನಂದತುಂದಿಲನಾದನು. ದೊಡ್ಡ ಹಾನಿಯು ದೂರವಾಗಿ ಭಾರೀ ಲಾಭವಾದಂತೆ ನೆಮ್ಮದಿಪಟ್ಟನು. ಶ್ರೀರಾಮನು ಅನುಮತಿ ಕೊಟ್ಟಿದ್ದು ಕುರುಡನಿಗೆ ಕಣ್ಣು ಬಂದಂತಾಗಿ ಹರ್ಷಿತ ಹೃದಯದಿಂದ ಲಕ್ಷ್ಮಣನು ತಾಯಿ ಸುಮಿತ್ರೆಯ ಬಳಿಗೆ ಹೋಗಿ ಅವಳ ಕಾಲಿಗೆರಗಿದನು. ಆದರೆ ಆತನ ಮನಸ್ಸು ಮಾತ್ರ ರಘುಕುಲಾನಂದಪ್ರದನಾದ ಶ್ರೀರಾಮನ ಮತ್ತು ಜಾನಕಿಯರ ಚರಣಗಳಲ್ಲಿ ನಿಮಗ್ನವಾಗಿತ್ತು. ವಿಷಣ್ಣವದನನಾಗಿರುವ ಲಕ್ಷ್ಮಣನನ್ನು ನೋಡಿ ಸುಮಿತ್ರೆಯು ಕಾರಣವನ್ನು ಕೇಳಿದಳು. ಲಕ್ಷ್ಮಣನು ಜರುಗಿದ ಎಲ್ಲ ಕಥೆಯನ್ನು ವಿಸ್ತಾರವಾಗಿ ತಿಳಿಸಿದನು. ಕೆಟ್ಟಸುದ್ದಿಯನ್ನು ಕೇಳಿ, ಸುಮಿತ್ರೆಯು ಕಾಡಿನಲ್ಲಿ ಸುತ್ತಲೂ ಹಬ್ಬಿರುವ ಕಾಳ್ಗಿಚ್ಚನ್ನು ಕಂಡು ಬೆದರುವ ಜಿಂಕೆಯಂತೆ ಬೆದರಿಹೋದಳು. ಲಕ್ಷ್ಮಣನು ಅಂದುಕೊಂಡನು – 'ಅನರ್ಥವಾಯಿತು! ವಾತ್ಸಲ್ಯದ ಕಾರಣದಿಂದ ತಾಯಿಯು ಕೆಲಸ ಕೆಡಿಸಿ ಬಿಡುವಳೋ ಏನೋ? ಆದ್ದರಿಂದ ಕಾಡಿಗೆ ಹೋಗಲು ಅಪ್ಪಣೆ ಬೇಡಲು ಅವನು ಹಿಂಜರಿದನು. ಅವನು ಮನದಲ್ಲೇ – 'ಹೇ ವಿಧಾತಾ! ಅಣ್ಣನ ಜೊತೆ ಕಾಡಿಗೆ ಹೋಗಲು ತಾಯಿಯು ನನಗೆ ಒಪ್ಪಿಗೆ ಕೊಡುವಳೋ ಇಲ್ಲವೋ'ಎಂದು ಯೋಚಿಸಿದನು. (ಚೌ/೧-೪)

**ದೋ – ಸಮುಝಿ ಸುಮಿತ್ರಾಂ ರಾಮ ಸಿಯ ರೂಪು ಸುಸೀಲು ಸುಭಾಉ ।**
**ನೃಪ ಸನೇಹು ಲಖಿ ಧುನೆಉ ಸಿರು ಪಾಪಿನಿ ದೀನ್ಹ ಕುದಾಉ ॥ ೭೩ ॥**

ಸುಮಿತ್ರಾದೇವಿಯು ಶ್ರೀಸೀತಾರಾಮರ ರೂಪವನ್ನೂ, ಸೌಶೀಲ್ಯವನ್ನೂ, ಸ್ವಭಾವವನ್ನೂ ನೆನೆದು, ಹಾಗೆಯೇ ರಾಜನಿಗೆ ಅವರ ಮೇಲೆ ಇರುವ ಪ್ರೇಮಾನುರಾಗವನ್ನು ಕೂಡ ಸ್ಮರಿಸಿ, ತನ್ನ ತಲೆಚಚ್ಚಿಕೊಂಡು 'ಅಯ್ಯೋ! ಪಾಪಿ ಕೈಕೆಯಿಯು ಅನರ್ಥಮಾಡಿಬಿಟ್ಟಳಲ್ಲ!' ಎಂದು ಹೇಳಿದಳು. (ದೋ/೭೩)

**ಚೌ – ಧೀರಜು ಧರೆಉ ಕುಅವಸರ ಜಾನೀ । ಸಹಜ ಸುಹೃದ ಬೋಲೀ ಮೃದು ಬಾನೀ ॥**
**ತಾತ ತುಮ್ಹಾರಿ ಮಾತು ಬೈದೇಹೀ । ಪಿತಾ ರಾಮು ಸಬ ಭಾಂತಿ ಸನೇಹೀ ॥ ೧ ॥**
**ಅವಧ ತಹಾಂ ಜಹಂ ರಾಮ ನಿವಾಸೂ । ತಹಂಇಂ ದಿವಸು ಜಹಂ ಭಾನು ಪ್ರಕಾಸೂ ॥**
**ಜೌಂ ಪೈ ಸೀಯ ರಾಮು ಬನ ಜಾಹೀಂ । ಅವಧ ತುಮ್ಹಾರ ಕಾಜು ಕಛು ನಾಹೀಂ ॥ ೨ ॥**
**ಗುರ ಪಿತು ಮಾತು ಬಂಧು ಸುರ ಸಾಈಂ । ಸೇಇಅಹಿಂ ಸಕಲ ಪ್ರಾನ ಕೀ ನಾಈಂ ॥**
**ರಾಮು ಪ್ರಾನಪ್ರಿಯ ಜೀವನ ಜೀ ಕೇ । ಸ್ವಾರಥ ರಹಿತ ಸಖಾ ಸಬಹೀ ಕೇ ॥ ೩ ॥**
**ಪೂಜನೀಯ ಪ್ರಿಯ ಪರಮ ಜಹಾಂ ತೇಂ । ಸಬ ಮಾನಿಅಹಿಂ ರಾಮ ಕೇ ನಾತೇಂ ॥**
**ಅಸ ಜಿಯಂ ಜಾನಿ ಸಂಗ ಬನ ಜಾಹೂ । ಲೇಹು ತಾತ ಜಗ ಜೀವನ ಲಾಹೂ ॥ ೪ ॥**

ಸಹಜವಾಗಿಯೇ ಹಿತವನ್ನು ಬಯಸುವ ಆ ಸುಮಿತ್ರಾದೇವಿಯು ಇದು ಶೋಕಿಸಲು ಸರಿಯಾದ ಸಮಯವಲ್ಲವೆಂದು ತಿಳಿದು, ಧೈರ್ಯವನ್ನು ತಂದುಕೊಂಡು, ಮೃದುಮಧುರ ವಚನಗಳನ್ನು ಇಂತೆಂದಳು – ''ಮಗೂ! ವೈದೇಹಿಯೇ ನಿನಗೆ ತಾಯಿಯು. ಪ್ರೇಮಸ್ವರೂಪನಾದ ಶ್ರೀರಾಮನೇ ನಿನಗೆ ತಂದೆಯು. ರಾಮನಿರುವೆಡೆಯೇ ಅಯೋಧ್ಯೆಯು. ಸೂರ್ಯನ ಬೆಳಕಿದ್ದಲ್ಲಿಯೇ ಹಗಲಲ್ಲವೇ? ನಿಜಕ್ಕೂ ಸೀತಾರಾಮರು ಕಾಡಿಗೆ ಹೋಗುವುದಾದರೆ ಅಯೋಧ್ಯೆಯಲ್ಲಿ ನಿನಗೇನೂ ಕೆಲಸವಿಲ್ಲ. ಗುರುಹಿರಿಯರು, ತಂದೆತಾಯಿಯರು, ಅಣ್ಣ, ದೇವರು, ದಣಿ ಇವರ ಸೇವೆಯನ್ನು ಪ್ರಾಣಕ್ಕೆ ಸಮಾನವಾಗಿ ತಿಳಿದು ಮಾಡಬೇಕು. ಆದರೆ ಶ್ರೀರಾಮಚಂದ್ರನು ಪ್ರಾಣಕ್ಕಿಂತಲೂ ಪ್ರೀತಿಪಾತ್ರನು. ಎಲ್ಲರಿಗೂ ಆತ್ಮನಾಗಿರುವವನು. ನಿಃಸ್ವಾರ್ಥಸಖನು. ಶ್ರೀರಾಮನಲ್ಲಿ ಭಕ್ತಿಶ್ರದ್ಧೆಯುಳ್ಳವರೇ ಈ ಪ್ರಪಂಚದಲ್ಲಿ ಎಲ್ಲರಿಗೂ ಪೂಜ್ಯರೂ, ಪರಮಪ್ರಿಯರೂ ಆಗಿದ್ದಾರೆ. ಇದನ್ನು ಮನಸ್ಸಿನಲ್ಲಿಟ್ಟುಕೊಂಡು ಅಣ್ಣನೊಡನೆ ವನಕ್ಕೆ ಹೋಗು. ಅದರಿಂದ ಈ ಜಗತ್ತಿನಲ್ಲಿ ನಿನ್ನ ಜನ್ಮವನ್ನು ಸಾರ್ಥಕಪಡಿಸಿಕೋ. (ಚೌ/೧-೪)

**ದೋ – ಭೂರಿ ಭಾಗ ಭಾಜನು ಭಯಹು ಮೋಹಿ ಸಮೇತ ಬಲಿ ಜಾಉಂ ।**
**ಜೌಂ ತುಮ್ಹರೇಂ ಮನ ಛಾಡಿ ಛಲು ಕೀನ್ಹ ರಾಮ ಪದ ಠಾಉಂ ॥ ೭೪ ॥**

ಕುಮಾರಾ! ನಿನ್ನ ಚಿತ್ತವು ಸದಾಕಾಲ ಶ್ರೀರಾಮನ ಚರಣಗಳಲ್ಲಿ ನೆಲೆಸುವುದರಿಂದ ನೀನು ಬಹು ಭಾಗ್ಯಶಾಲಿಯು. ನಿನಗೆ ತಾಯಿಯಾದ್ದರಿಂದ ನಾನೂ ಕೂಡ ದೊಡ್ಡ ಅದೃಷ್ಟವಂತಳು. ನಿನ್ನ ರಾಮಭಕ್ತಿಗೆ ನಿವಾಳಿಸಿಕೊಳ್ಳುತ್ತೇನೆ. (ದೋ/೭೪)

**ಚೌ – ಪುತ್ರವತೀ ಜುಬತೀ ಜಗ ಸೋಈ । ರಘುಪತಿ ಭಗತು ಜಾಸು ಸುತು ಹೋಈ॥**
**ನತರು ಬಾಂಝ ಭಲಿ ಬಾದಿ ಬಿಆನೀ । ರಾಮ ಬಿಮುಖ ಸುತ ತೇಂ ಹಿತ ಜಾನೀ ॥ ೧ ॥**
**ತುಮ್ಹರೇಹಿಂ ಭಾಗ ರಾಮು ಬನ ಜಾಹೀಂ । ದೂಸರ ಹೇತು ತಾತ ಕಛು ನಾಹೀಂ॥**
**ಸಕಲ ಸುಕೃತ ಕರ ಬಡ ಫಲು ಏಹೂ । ರಾಮ ಸೀಯ ಪದ ಸಹಜ ಸನೇಹೂ ॥ ೨ ॥**
**ರಾಗು ರೋಷು ಇರಿಷಾ ಮದು ಮೋಹೂ । ಜನಿ ಸಪನೇಹುँ ಇನ್ಹ ಕೇ ಬಸ ಹೋಹೂ ॥**
**ಸಕಲ ಪ್ರಕಾರ ಬಿಕಾರ ಬಿಹಾಈ । ಮನ ಕ್ರಮ ಬಚನ ಕರೇಹು ಸೇವಕಾಈ॥ ೩ ॥**
**ತುಮ್ಹ ಕಹುँ ಬನ ಸಬ ಭಾಂತಿ ಸುಪಾಸೂ । ಸँಗ ಪಿತು ಮಾತು ರಾಮು ಸಿಯ ಜಾಸೂ॥**
**ಜೇಹಿಂ ನ ರಾಮು ಬನ ಲಹಹಿಂ ಕಲೇಸೂ । ಸುತ ಸೋಇ ಕರೇಹು ಇಹಇ ಉಪದೇಸೂ ॥ ೪ ॥**

ಶ್ರೀರಘುನಾಥನ ಭಕ್ತನಾದ ಪುತ್ರನನ್ನು ಹಡೆದವಳೇ ನಿಜವಾದ ಪುತ್ರವತಿಯು. ರಾಮನಿಗೆ ವಿಮುಖನಾದ ಪುತ್ರನಿಂದ ತನ್ನ ಹಿತವನ್ನು ಬಯಸುವಾಕೆ ತಾಯಿಯಾಗಿರುವುದಕ್ಕಿಂತ ಬಂಜೆಯಾಗಿರುವುದೇ ಲೇಸು. ಪಶುಪ್ರಸವದಂತೆ ಆಕೆಯ ಪ್ರಸವವೂ ವ್ಯರ್ಥವೇ. ನಿನ್ನ ಭಾಗ್ಯದಿಂದಲೇ ಶ್ರೀರಾಮನು ಕಾಡಿಗೆ ಹೊರಟಿದ್ದಾನೆ. ಬೇರೆ ಕಾರಣವು ಇಲ್ಲವೇ ಇಲ್ಲ. ಮಗೂ! ಶ್ರೀಸೀತಾರಾಮರ ಪಾದಪದ್ಮಗಳಲ್ಲಿ ಸ್ವಾಭಾವಿಕವಾದ ಪ್ರೇಮ (ಭಕ್ತಿ) ಉಂಟಾಗುವುದು. ಎಲ್ಲ ಪುಣ್ಯಗಳ ದೊಡ್ಡ ಫಲವಾಗಿದೆ. ರಾಗ, ರೋಷ, ಈರ್ಷ್ಯೆ, ಮದ, ಮೋಹ ಇವುಗಳಿಗೆ ಕನಸಿನಲ್ಲೂ ವಶನಾಗಬೇಡ. ಎಲ್ಲ ವಿಧವಾದ ವಿಕಾರಗಳನ್ನು ತೊರೆದು ತ್ರಿಕರಣಪೂರ್ವಕವಾಗಿ ಶ್ರೀಸೀತಾರಾಮರ ಸೇವೆಮಾಡು. ಸೀತಾರಾಮರಂತಹ ತಂದೆ-ತಾಯಂದಿರು ಜೊತೆಯಲ್ಲಿರುವಾಗ ಕಾಡಿನಲ್ಲಿ ನಿನಗೇನು ಕಷ್ಟವಿದ್ದೀತು? ಕಂದಾ! ರಾಮನಿಗೆ ಕಾಡಿನಲ್ಲಿ ಕೊಂಚವೂ ಕ್ಲೇಶವಾಗದಂತೆ ನಡೆದುಕೋ. ಇದೇ ನಿನಗೆ ನನ್ನ ಉಪದೇಶವು.'' (ಚೌ/೧-೪)

**ಛಂ – ಉಪದೇಸು ಯಹು ಜೇಹಿಂ ತಾತ ತುಮ್ಹರೇ ರಾಮ ಸಿಯ ಸುಖ ಪಾವಹೀಂ।**
**ಪಿತು ಮಾತು ಪ್ರಿಯ ಪರಿವಾರ ಪುರ ಸುಖ ಸುರತಿ ಬನ ಬಿಸರಾವಹೀಂ॥**
**ತುಲಸೀ ಪ್ರಭುಹಿ ಸಿಖ ದೇಇ ಆಯಸು ದೀನ್ಹ ಪುನಿ ಆಸಿಷ ದಈ।**
**ರತಿ ಹೋಉ ಅಬಿರಲ ಅಮಲ ಸಿಯ ರಘುಬೀರ ಪದ ನಿತ ನಿತ ನಈ॥**

'ಮಗೂ! ಕಾಡಿನಲ್ಲಿ ನಿನ್ನ ದೆಸೆಯಿಂದ ಸೀತಾರಾಮರಿಗೆ ಸುಖವಾಗಲಿ. ಅಂತೆಯೇ ನೀನು ಪ್ರಯತ್ನಿಸುತ್ತಿರು. ಅವರು ತಂದೆ-ತಾಯಿ, ಪ್ರಿಯಪರಿವಾರ, ನಗರದ ಸುಖಗಳೂ ಕೂಡ ಮರೆಯುವಂತೆ ಸೇವೆ ಮಾಡಿಕೊಂಡಿರು. ಇದೇ ನನ್ನ ಉಪದೇಶವು.' ತುಳಸೀದಾಸರು ಹೇಳುತ್ತಾರೆ – ಈ ವಿಧವಾಗಿ ಸುಮಿತ್ರಾದೇವಿಯು ನಮ್ಮ ಲಕ್ಷ್ಮಣಸ್ವಾಮಿಗೆ ಉಪದೇಶಿಸುತ್ತಾ, ವನಗಮನಕ್ಕಾಗಿ ಅವನಿಗೆ ಅನುಮತಿಯನ್ನಿತ್ತಳು. 'ಶ್ರೀ ಸೀತಾರಾಮರ ಚರಣಗಳಲ್ಲಿ ನಿನ್ನ ವಿಶುದ್ಧ ಪ್ರಗಾಢ ಪ್ರೇಮವು ನಿತ್ಯನೂತನವಾಗಿ ವರ್ಧಿಸುತ್ತಿರಲಿ' ಎಂದು ಪುನಃ ಆಶೀರ್ವದಿಸಿದಳು. (ಛಂದ)

**ಸೋ – ಮಾತು ಚರನ ಸಿರು ನಾಇ ಚಲೇ ತುರತ ಸಂಕಿತ ಹೃದಯँ।**
**ಬಾಗುರ ಬಿಷಮ ತೊರಾಇ ಮನಹುँ ಭಾಗ ಮೃಗು ಭಾಗ ಬಸ ॥ ೭೫ ॥**

ಲಕ್ಷ್ಮಣನು ತಾಯಿಯ ಚರಣಗಳಿಗೆರಗಿ, ಬೇರೇನಾದರೂ ವಿಘ್ನಬಂದೀತೆಂದು ಮನಸ್ಸಿನಲ್ಲಿ ಅಂಜುತ್ತಲೇ – ಸುದೈವದಿಂದ ಬಲೆಯನ್ನು ಹರಿದುಕೊಂಡು ಓಡುವ ಜಿಂಕೆಯಂತೆ ಲಗುಬಗೆಯಿಂದ ಹೊರಟನು. (ಸೋ/೭೫)

**ಚೌ – ಗಏ ಲಖನು ಜಹँ ಜಾನಕಿನಾಥೂ । ಭೇ ಮನ ಮುದಿತ ಪಾಇ ಪ್ರಿಯ ಸಾಥೂ॥**
**ಬಂದಿ ರಾಮ ಸಿಯ ಚರನ ಸುಹಾಏ । ಚಲೇ ಸಂಗ ನೃಪಮಂದಿರ ಆಏ॥ ೧ ॥**
**ಕಹಹಿಂ ಪರಸಪರ ಪುರ ನರ ನಾರೀ । ಭಲಿ ಬನಾಇ ಬಿಧಿ ಬಾತ ಬಿಗಾರೀ॥**
**ತನ ಕೃಸ ಮನ ದುಖು ಬದನ ಮಲೀನೇ। ಬಿಕಲ ಮನಹು ಮಾಖೀ ಮಧು ಛೀನೇ॥ ೨ ॥**
**ಕರ ಮೀಜಹಿಂ ಸಿರು ಧುನಿ ಪಛಿತಾಹೀಂ। ಜನು ಬಿನು ಪಂಖ ಬಿಹಗ ಅಕುಲಾಹೀಂ॥**
**ಭಇ ಬಡಿ ಭೀರ ಭೂಪ ದರಬಾರಾ । ಬರನಿ ನ ಜಾಇ ಬಿಷಾದು ಅಪಾರಾ ॥ ೩ ॥**

**ಸಚಿವ್ ಉಠಾಇ ರಾಉ ಬೈಠಾರೇ। ಕಹಿ ಪ್ರಿಯ ಬಚನ ರಾಮು ಪಗು ಧಾರೇ॥**
**ಸಿಯ ಸಮೇತ ದೋಉ ತನಯ ನಿಹಾರೀ। ಬ್ಯಾಕುಲ ಭಯಉ ಭೂಮಿಪತಿ ಭಾರೀ॥ ೪ ॥**

ಬಳಿಕ ಲಕ್ಷ್ಮಣನು ಮಿಗಿಲಾದ ಹರ್ಷಚಿತ್ತನಾಗಿ ಶ್ರೀರಾಮನಿದ್ದೆಡೆ ಹೋದನು. ಪ್ರಿಯಸಮಾಗಮದಿಂದ ಅವನು ಅತ್ಯಂತ ಸಂತೋಷಗೊಂಡನು. ಶ್ರೀಸೀತಾರಾಮರ ಚರಣಗಳಿಗೆ ವಂದಿಸಿ ಅವರೊಡನೆ ರಾಜಪ್ರಾಸಾದವನ್ನು ಸೇರಿದನು. 'ಚೆನ್ನಾಗಿ ಆಲೋಚಿಸಿ ನಿರ್ಣಯಿಸಿದ ಕಾರ್ಯವನ್ನು ವಿಧಾತನು ಹೇಗೆ ಕೆಡಿಸಿಬಿಟ್ಟನು ನೋಡಿ!' ಎಂದು ನಗರವಾಸಿಗಳು ತಮ್ಮ-ತಮ್ಮಲ್ಲೇ ಮಾತನಾಡಿಕೊಳ್ಳುತ್ತಿದ್ದರು. ಅವರ ದೇಹ ದುರ್ಬಲವಾಗಿತ್ತು. ಮನಸ್ಸು ದುಃಖಭರಿತವಾಗಿತ್ತು. ಮುಖ ಮ್ಲಾನವಾಗಿತ್ತು. ಜೇನುತುಪ್ಪವನ್ನು ತೆಗೆದುಕೊಂಡು ಹೋದಬಳಿಕ ಜೇನುಹುಳಗಳು ವ್ಯಾಕುಲವಾದಂತೆ ಅವರೆಲ್ಲರೂ ವ್ಯಾಕುಲರಾಗಿದ್ದರು. ಎಲ್ಲರೂ ಕೈ ಕೈ ಹಿಸುಕಿಕೊಳ್ಳುತ್ತಾ ತಲೆ ಚಚ್ಚಿಕೊಳ್ಳುತ್ತಿದ್ದರು. ರೆಕ್ಕೆ ಕತ್ತರಿಸಿದ ಹಕ್ಕಿಗಳಂತೆ ಬಡಬಡಿಸುತ್ತಿದ್ದರು. ರಾಜದ್ವಾರದಲ್ಲಿ ದೊಡ್ಡದಾದ ಜನಸಂದಣಿಯೇ ನೆರೆಯಿತು. ಅವರ ವಿಷಾದವನ್ನು ಮಾತಿನಿಂದ ವರ್ಣಿಸಲು ಅಸಾಧ್ಯವಾಗಿತ್ತು.

'ಮಹಾರಾಜರೇ! ಶ್ರೀರಾಮಚಂದ್ರನು ಬಂದಿದ್ದಾನೆ' ಎಂದು ಹೇಳಿ ಮಹಾಮಂತ್ರಿಯು ಅರಸನನ್ನು ಎಬ್ಬಿಸಿ ಕೂರಿಸಿದನು. ಸೀತಾ ಲಕ್ಷ್ಮಣಸಹಿತನಾದ ಶ್ರೀರಾಮನು ವನವಾಸಕ್ಕಾಗಿ ಹೋಗಲು ಅಣಿಯಾಗಿರುವುದನ್ನು ಕಂಡು ರಾಜನು ಮಮ್ಮಲ ಮರುಗಿದನು. (ಚೌ/೧-೪)

**ದೋ – ಸೀಯ ಸಹಿತ ಸುತ ಸುಭಗ ದೋಉ ದೇಖಿ ದೇಖಿ ಅಕುಲಾಇ।**
**ಬಾರಹಿಂ ಬಾರ ಸನೇಹ ಬಸ ರಾಉ ಲೇಇ ಉರ ಲಾಇ॥ ೭೬ ॥**

ಸುಕುಮಾರಿಯಾದ ಜಾನಕಿಯನ್ನು, ರಾಮಲಕ್ಷ್ಮಣರನ್ನು ನೋಡು-ನೋಡುತ್ತಾ, ರಾಜನು ವ್ಯಾಕುಲನಾಗಿ ಕುಮಾರರಿಬ್ಬರನ್ನೂ ಪ್ರೇಮದಿಂದ ಅಪ್ಪಿಕೊಂಡನು. (ದೋ/೭೬)

**ಚೌ – ಸಕಇ ನ ಬೋಲಿ ಬಿಕಲ ನರನಾಹೂ। ಸೋಕ ಜನಿತ ಉರ ದಾರುನ ದಾಹೂ॥**
**ನಾಇ ಸೀಸು ಪದ ಅತಿ ಅನುರಾಗಾ। ಉಠಿ ರಘುಬೀರ ಬಿದಾ ತಬ ಮಾಗಾ॥ ೧ ॥**
**ಪಿತು ಅಸೀಸ ಆಯಸು ಮೋಹಿ ದೀಜೈ। ಹರಷ ಸಮಯ ಬಿಸಮಉ ಕತ ಕೀಜೈ॥**
**ತಾತ ಕಿಏಂ ಪ್ರಿಯ ಪ್ರೇಮ ಪ್ರಮಾದೂ। ಜಸು ಜಗ ಜಾಇ ಹೋಇ ಅಪಬಾದೂ॥ ೨ ॥**
**ಸುನಿ ಸನೇಹ ಬಸ ಉಠಿ ನರನಾಹಾಂ। ಬೈಠಾರೇ ರಘುಪತಿ ಗಹಿ ಬಾಹಾಂ॥**
**ಸುನಹು ತಾತ ತುಮ್ಹ ಕಹುಂ ಮುನಿ ಕಹಹೀಂ। ರಾಮು ಚರಾಚರ ನಾಯಕ ಅಹಹೀಂ॥ ೩ ॥**
**ಸುಭ ಅರು ಅಸುಭ ಕರಮ ಅನುಹಾರೀ। ಈಸು ದೇಇ ಫಲು ಹೃದಯ ಬಿಚಾರೀ॥**
**ಕರಇ ಜೋ ಕರಮ ಪಾವ ಫಲ ಸೋಈ। ನಿಗಮ ನೀತಿ ಅಸಿ ಕಹ ಸಬು ಕೋಈ॥ ೪ ॥**

ರಾಜನು ಹೆಚ್ಚಾಗಿ ವ್ಯಾಕುಲನಾದ್ದರಿಂದ ಮಾತಾಡದಾದನು. ಎದೆಯಲ್ಲಿ ಎಲ್ಲಿಲ್ಲದ ಸಂತಾಪ ತುಂಬಿದೆ. ಆಗ ರಘುವೀರನು ಅತ್ಯಂತ ಪ್ರೀತಿಯಿಂದ ತಂದೆಯ ಚರಣಗಳಿಗೆರಗಿ ವನಗಮನಕ್ಕೆ ಅಪ್ಪಣೆ ಬೇಡಿದನು. ''ಅಪ್ಪಾಜಿ! ನನ್ನನ್ನು ಹರಸಿ, ಅಪ್ಪಣೆಕೊಟ್ಟು ಕಳಿಸಿರಿ. ಇಂತಹ ಹರ್ಷದ ವೇಳೆಯಲ್ಲಿ ನೀವೇಕೆ ಶೋಕಿಸುತ್ತಿದ್ದೀರಿ? ಅಪ್ಪಾ! ಪ್ರಿಯಜನರ ಪ್ರೇಮದಲ್ಲಿ ಪ್ರಮಾದ ಮಾಡಿದರೆ ಜಗತ್ತಿನಲ್ಲಿ ಅಪಯಶಸ್ಸು ತಗಲುತ್ತದೆ. ಲೋಕಾಪವಾದಕ್ಕೆ ಗುರಿಯಾಗಬೇಕಾಗುತ್ತದೆ.'' ಇದನ್ನು ಕೇಳಿ ಸ್ನೇಹವಶನಾಗಿ ಅರಸನು ಎದ್ದು, ಕೈಹಿಡಿದುಕೊಂಡು ರಾಮನನ್ನು ಕುಳ್ಳಿರಿಸಿಕೊಂಡು ಹೇಳಿದನು – ''ಮಗೂ! ಕೇಳು. ಶ್ರೀರಾಮನು ಚರಾಚರಕ್ಕೆ ಪ್ರಭುವೆಂದು ನಿನ್ನ ಕುರಿತು ಮುನಿಗಳು ಹೇಳುತ್ತಾರೆ. ಶುಭಾ-ಶುಭಕರ್ಮಗಳನ್ನು ಪರಿಶೀಲಿಸಿ, ವಿಧಾತನು ಅದಕ್ಕನುಗುಣವಾದ ಫಲಗಳನ್ನು ನೀಡುತ್ತಾನೆ. ಮಾಡಿದ ಕರ್ಮದ ಫಲಗಳನ್ನು ಅನುಭವಿಸುವುದು ಅನಿವಾರ್ಯವೆಂಬುದೇ ಸರ್ವಸಮ್ಮತವಾದ ವೇದನೀತಿ. (ಅವಶ್ಯಂ ಅನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಮ್।) (ಚೌ/೧-೪)

**ದೋ – ಔರು ಕರೈ ಅಪರಾಧು ಕೋಉ ಔರ ಪಾವ ಫಲ ಭೋಗು।**
**ಅತಿ ಬಿಚಿತ್ರ ಭಗವಂತ ಗತಿ ಕೋ ಜಗ ಜಾನೈ ಜೋಗು॥ ೭೭ ॥**

ಆದರೆ ಈಗ ಇದಕ್ಕೆ ವಿರುದ್ಧವಾಗಿ ಘಟನೆ ನಡೆಯುತ್ತಿದೆ. ಅಪರಾಧ ಮಾಡುವವರು ಯಾರೋ? ಅದರ ಫಲವನ್ನು ಉಣ್ಣುವವರು ಯಾರೋ? ಭಗವಂತನ ಲೀಲೆಯು ತುಂಬಾ ವಿಚಿತ್ರವಾದುದು. ಅದನ್ನು ಯಾರೂ ತಿಳಿಯಲಾರರು. (ದೋ/೭೭)

**ಚೌ – ರಾಯಂ ರಾಮ ರಾಖನ ಹಿತ ಲಾಗೀ। ಬಹುತ ಉಪಾಯ ಕಿಏ ಛಲು ತ್ಯಾಗೀ॥**
**ಲಖೀ ರಾಮ ರುಖ ರಹತ ನ ಜಾನೇ। ಧರಮ ಧುರಂಧರ ಧೀರ ಸಯಾನೇ॥ ೧ ॥**

ತಬ ನೃಪ ಸೀಯ ಲಾಇ ಉರ ಲೀನ್ಹೀ । ಅತಿ ಹಿತ ಬಹುತ ಭಾಂತಿ ಸಿಖ ದೀನ್ಹೀ ॥
ಕಹಿ ಬನ ಕೇ ದುಖ ದುಸಹ ಸುನಾಏ । ಸಾಸು ಸಸುರ ಪಿತು ಸುಖ ಸಮುಝಾಏ ॥ ೨ ॥
ಸಿಯ ಮನು ರಾಮ ಚರನ ಅನುರಾಗಾ । ಘರು ನ ಸುಗಮು ಬನು ಬಿಷಮು ನ ಲಾಗಾ ॥
ಔರಉ ಸಬಹಿಂ ಸೀಯ ಸಮುಝಾಈ । ಕಹಿ ಕಹಿ ಬಿಪಿನ ಬಿಪತಿ ಅಧಿಕಾಈ ॥ ೩ ॥
ಸಚಿವ ನಾರಿ ಗುರ ನಾರಿ ಸಯಾನೀ । ಸಹಿತ ಸನೇಹ ಕಹಹಿಂ ಮೃದು ಬಾನೀ ॥
ತುಮ್ಹ ಕಹುಂ ತೌ ನ ದೀನ್ಹ ಬನಬಾಸೂ । ಕರಹು ಜೊ ಕಹಹಿಂ ಸಸುರ ಗುರ ಸಾಸೂ ॥ ೪ ॥

ಅರಸನು ಶ್ರೀರಾಮನನ್ನು ಉಳಿಸಿಕೊಳ್ಳಲು ಬಹಳ ಉಪಾಯ ಮಾಡಿದನು. ಆದರೆ ಧರ್ಮ-ಧುರಂಧರನೂ, ಧೀರನೂ, ಬುದ್ಧಿವಂತನೂ ಆದ ಶ್ರೀರಾಮನು ಕದಲುವಂತೆ ಕಾಣಲಿಲ್ಲ. ಆಗ ರಾಜನು ಸೀತೆಯನ್ನು ಬಳಿಯಲ್ಲಿ ಕುಳ್ಳಿರಿಸಿಕೊಂಡು, ಪ್ರೇಮದಿಂದ ಆಕೆಗೆ ಹಿತವಚನಗಳನ್ನು ನುಡಿದನು. ಕಾಡಿನ ಕಷ್ಟಕೋಟಲೆಗಳನ್ನೂ ಬಣ್ಣಿಸಿ ಹೇಳಿದನು. ಅತ್ತೆ-ಮಾವಂದಿರು, ತಂದೆ-ತಾಯಂದಿರು ಇವರ ಬಳಿಯಲ್ಲಿ ದೊರೆಯುವ ಸುಖವನ್ನು ವರ್ಣಿಸಿ ತಿಳಿಸಿದನು. ಆದರೆ ಸೀತೆಯ ಮನಸ್ಸು ಶ್ರೀರಾಮನ ಚರಣಗಳಲ್ಲಿ ಅನುರಕ್ತವಾಗಿತ್ತು. ಆದ್ದರಿಂದ ಆಕೆಗೆ ಮನೆ ಹಿಡಿಸಲಿಲ್ಲ. ಕಾಡು ಭಯಂಕರವಾಗಿ ಎನಿಸಲಿಲ್ಲ. ಅನಂತರ ಉಳಿದವರೂ ಕೂಡ ಆಕೆಗೆ ಕಾಡಿನ ಕಷ್ಟಕ್ಲೇಶಗಳನ್ನು ಬಣ್ಣಿಸಿ ಸೀತೆಗೆ ಹೇಳಿದರು. ಮಂತ್ರಿಯಾದ ಸುಮಂತ್ರನ ಪತ್ನೀ, ಗುರುವಸಿಷ್ಠರ ಪತ್ನಿಯಾದ ಅರುಂಧತಿಯು, ಇನ್ನೂ ಅನೇಕ ವಿವೇಕಮತಿಯರಾದ ಸ್ತ್ರೀಯರೂ ಹೆಚ್ಚಾದ ಸ್ನೇಹದಿಂದ ಮೃದುಮಧರವಾಗಿ ಹೇಳಿದರು – ''ಜಾನಕೀ! ಮಹಾರಾಜರು ನಿನಗೆ ವನವಾಸವನ್ನು ವಿಧಿಸಲಿಲ್ಲವಲ್ಲ! ಆದ್ದರಿಂದ ನೀನು ಅತ್ತೆ-ಮಾವಂದಿರು, ಗುರುಹಿರಿಯರು ಹೇಳಿದ ಹಾಗೇ ಕೇಳಬೇಕಮ್ಮ. (ಚೌ/೧-೪)

**ದೋ – ಸಿಖ ಸೀತಲಿ ಹಿತ ಮಧುರ ಮೃದು ಸುನಿ ಸೀತಹಿ ನ ಸೊಹಾನಿ ।**
**ಸರದ ಚಂದ ಚಂದಿನಿ ಲಗತ ಜನು ಚಕಈ ಅಕುಲಾನಿ ॥ ೭೮ ॥**

ಅವರ ಈ ಶೀತಲವೂ, ಹಿತಕರವೂ ಮಧುರ ಕೋಮಲವೂ ಆದ ಮಾತುಗಳು ಸೀತೆಗೆ ರುಚಿಸಲಿಲ್ಲ. ಶರಚ್ಚಂದ್ರನ ಬೆಳದಿಂಗಳು ಚೆಲ್ಲಿದಾಗ, ಚಕ್ರವಾಕ ಪಕ್ಷಿ ಬಾಡಿಹೋಗುವಂತೆ ಆಕೆಯು ಬಾಡಿಹೋದಳು. (ದೋ/೭೮)

ಚೌ – ಸೀಯ ಸಕುಚ ಬಸ ಉತರು ನ ದೇಈ । ಸೋ ಸುನಿ ತಮಕಿ ಉಠೀ ಕೈಕೇಈ ॥
ಮುನಿ ಪಟ ಭೂಷನ ಭಾಜನ ಆನೀ । ಆಗೇಂ ಧರಿ ಬೋಲೀ ಮೃದು ಬಾನೀ ॥ ೧ ॥
ನೃಪಹಿ ಪ್ರಾನಪ್ರಿಯ ತುಮ್ಹ ರಘುಬೀರಾ । ಸೀಲ ಸನೇಹ ನ ಛಾಡಿಹಿ ಭೀರಾ ॥
ಸುಕೃತು ಸುಜಸು ಪರಲೋಕು ನಸಾಊ । ತುಮ್ಹಹಿ ಜಾನ ಬನ ಕಹಿಹಿ ನ ಕಾಊ ॥ ೨ ॥
ಅಸ ಬಿಚಾರಿ ಸೊಇ ಕರಹು ಜೊ ಭಾವಾ । ರಾಮ ಜನನಿ ಸಿಖ ಸುನಿ ಸುಖು ಪಾವಾ ॥
ಭೂಪಹಿ ಬಚನ ಬಾನಸಮ ಲಾಗೇ । ಕರಹಿಂ ನ ಪ್ರಾನ ಪಯಾನ ಅಭಾಗೇ ॥ ೩ ॥
ಲೋಗ ಬಿಕಲ ಮುರುಛಿತ ನರನಾಹೂ । ಕಾಹ ಕರಿಅ ಕಛು ಸೂಝ ನ ಕಾಹೂ ॥
ರಾಮು ತುರತ ಮುನಿ ಬೇಷು ಬನಾಈ । ಚಲೇ ಜನಕ ಜನನಿಹಿ ಸಿರು ನಾಈ ॥ ೪ ॥

ಸೀತಾದೇವಿಯು ಸಂಕೋಚದಿಂದ ಅವರಿಗೆ ಉತ್ತರ ಕೊಡಲಿಲ್ಲ. ಇದನ್ನು ನೋಡಿದ ಕೈಕೇಯಿಯು ಕೆರಳಿ ಎದ್ದು ವನವಾಸಕ್ಕೆ ತಕ್ಕುದಾದ ವಲ್ಕಲಗಳನ್ನೂ, ಆಭರಣಗಳನ್ನೂ, ಪಾತ್ರೆಗಳನ್ನೂ (ಕಮಂಡಲು ಮುಂತಾದ) ತಂದು ಶ್ರೀರಾಮನ ಮುಂದಿರಿಸಿ, ಇನಿದನಿಯಲ್ಲಿ ಹೇಳಿದಳು – ''ಎಲೈ ರಘುವೀರಾ! ನೀನು ಮಹಾರಾಜರಿಗೆ ಪ್ರಾಣಕ್ಕಿಂತಲೂ ಪ್ರಿಯನಾದವನು. ಪ್ರೇಮವಶನಾಗಿ ದುರ್ಬಲನಾದ ಅರಸನು ಶೀಲ, ಸ್ನೇಹಗಳನ್ನು ತೊರೆಯಲಾರರು. ಪುಣ್ಯ, ಸುಯಶಸ್ಸು, ಪರಲೋಕ ಹಾಳಾದರೂ ಸರಿ, ಆದರೆ ನಿನಗೆ ಕಾಡಿಗೆ ಹೋಗಲು ಮಾತ್ರ ಹೇಳಲಾರರು ಈ ವಿಷಯವನ್ನು ಚೆನ್ನಾಗಿ ಯೋಚಿಸಿ, ನಿನಗೆ ಸರಿಕಂಡಂತೆ ಮಾಡು.'' ತಾಯಿ ಕೈಕೆಯಿಯ ಹಿತವಚನದಿಂದ ರಾಮನು ಸಂತಸಪಟ್ಟನು. ಆದರೆ ಅರಸನಿಗೆ ಈ ಮಾತುಗಳು ಅಂಬುಗಳಂತೆ ನಾಟಿದವು. 'ಅಯ್ಯೋ! ಇಂತಹ ಮಾತುಗಳನ್ನು ಕೇಳಿಯೂ ನನ್ನ ಪ್ರಾಣಗಳು ಹಾರಿಹೋಗದೆ ಉಳಿದಿವೆಯಲ್ಲ! ಎಂದು ಯೋಚಿಸುತ್ತಾ ರಾಜನು ಮೂರ್ಛಿತನಾದನು. ಜನರು ತಲ್ಲಣಿಸಿ ಹೋದರು. ಯಾರಿಗೂ ಏನು ಮಾಡಲು ತೋಚುವುದಿಲ್ಲ. ಶ್ರೀರಾಮನು ಕೂಡಲೇ ಮುನಿಯ ವೇಷವನ್ನು ತೊಟ್ಟು, ತಂದೆ-ತಾಯಿಯರಿಗೆ ನಮಸ್ಕರಿಸಿ ಹೊರಟುಬಿಟ್ಟನು. (ಚೌ/೧-೪)

# ಶ್ರೀರಾಮನ ವನಗಮನ

**ದೋ – ಸಜಿ ಬನ ಸಾಜು ಸಮಾಜು ಸಬು ಬನಿತಾ ಬಂಧು ಸಮೇತ।**
**ಬಂದಿ ಬಿಪ್ರ ಗುರ ಚರನ ಪ್ರಭು ಚಲೆ ಕರಿ ಸಬಹಿ ಅಚೇತ ॥ ೭೯ ॥**

ವನವಾಸಕ್ಕಾಗಿ ಎಲ್ಲ ವಸ್ತುಗಳನ್ನು ಅಣಿಮಾಡಿಕೊಂಡು, ಸೀತಾಲಕ್ಷ್ಮಣಸಹಿತನಾಗಿ ಶ್ರೀರಾಮನು ಬ್ರಾಹ್ಮಣರಿಗೆ, ಗುರುಹಿರಿಯರಿಗೆ ವಂದಿಸಿದನು. ವನಕ್ಕೆ ಹೊರಟಿರುವ ರಾಮನನ್ನು ನೋಡಿ, ಎಲ್ಲರೂ ಅಚೇತನರಾದರು. (ದೋ/೭೯)

**ಚೌ – ನಿಕಸಿ ಬಸಿಷ್ಠ ದ್ವಾರ ಭಏ ಠಾಢೇ। ದೇಖೇ ಲೋಗ ಬಿರಹ ದವ ದಾಢೇ॥**
**ಕಹಿ ಪ್ರಿಯ ಬಚನ ಸಕಲ ಸಮುಝಾಏ। ಬಿಪ್ರ ಬೃಂದ ರಘುಬೀರ ಬೋಲಾಏ ॥ ೧ ॥**
**ಗುರ ಸನ ಕಹಿ ಬರಷಾಸನ ದೀನ್ಹೇ। ಆದರ ದಾನ ಬಿನಯ ಬಸ ಕೀನ್ಹೇ ॥**
**ಜಾಚಕ ದಾನ ಮಾನ ಸಂತೋಷೇ। ಮೀತ ಪುನೀತ ಪ್ರೇಮ ಪರಿತೋಷೇ॥ ೨ ॥**
**ದಾಸೀಂ ದಾಸ ಬೊಲಾಇ ಬಹೋರೀ। ಗುರಹಿ ಸೌಂಪಿ ಬೋಲೇ ಕರ ಜೋರೀ ॥**
**ಸಬ ಕೈ ಸಾರ ಸಁಭಾರ ಗೊಸಾಈಂ। ಕರಬಿ ಜನಕ ಜನನೀ ಕೀ ನಾಈಂ ॥ ೩ ॥**
**ಬಾರಹಿಂ ಬಾರ ಜೋರಿ ಜುಗ ಪಾನೀ। ಕಹತ ರಾಮು ಸಬ ಸನ ಮೃದು ಬಾನೀ॥**
**ಸೋಇ ಸಬ ಭಾಂತಿ ಮೋರ ಹಿತಕಾರೀ। ಜೆಹಿ ತೇಂ ರಹೈ ಭುಆಲ ಸುಖಾರೀ॥ ೪ ॥**

ರಾಜಮಂದಿರದಿಂದ ಹೊರಟು ಶ್ರೀರಾಮನು ವಸಿಷ್ಠರ ಮನೆಗೆ ಬಂದನು. ಅಲ್ಲಿ ಪ್ರಜಾಜನರೆಲ್ಲರೂ ಶ್ರೀರಾಮನ ಅಗಲುವಿಕೆಯ ದುಃಖವೆಂಬ ಬೆಂಕಿಯಲ್ಲಿ ಬೇಯುತ್ತಿದ್ದರು. ರಘುರಾಮನು ಪ್ರಿಯವಚನಗಳನ್ನು ಹೇಳಿ ಅವರೆಲ್ಲರನ್ನೂ ಸಮಾಧಾನಪಡಿಸಿದನು. ಅನಂತರ ಅವನು ವಿಪ್ರವೃಂದವನ್ನು ಬರಮಾಡಿಕೊಂಡನು. ಗುರುಗಳಿಗೆ ಹೇಳಿ ಅವರೆಲ್ಲರಿಗೂ ವರ್ಷಾಶನವನ್ನು ಕೊಡಿಸಿ, ದಾನ, ವಿನಯದಿಂದ ಅವರನ್ನು ಸಂತೋಷಪಡಿಸಿದನು. ಅನಂತರ ಯಾಚಕರನ್ನು ದಾನ, ಸಮ್ಮಾನಗಳಿಂದ ತೃಪ್ತಿಪಡಿಸಿದನು. ಮಿತ್ರರನ್ನು ಪವಿತ್ರಪ್ರೇಮದಿಂದ ಪ್ರಸನ್ನಗೊಳಿಸಿದನು. ಬಳಿಕ ದಾಸ-ದಾಸಿಯರನ್ನು ಕರೆಸಿ, ಅವರನ್ನು ಗುರುಗಳಿಗೆ ಒಪ್ಪಿಸಿ, ಕೈ ಜೋಡಿಸಿ ಕೇಳಿಕೊಂಡನು – 'ಸ್ವಾಮಿ! ಇವರೆಲ್ಲರನ್ನು ನಿಮ್ಮ ಮಕ್ಕಳಂತೇ ಕಾಪಾಡಿರಿ.' ಅಲ್ಲಿದ್ದ ಎಲ್ಲರನ್ನೂ ಶ್ರೀರಾಮನು ಮತ್ತೆ-ಮತ್ತೆ ನಮಸ್ಕರಿಸುತ್ತಾ ಮೃದುಮಧುರ ವಚನಗಳನ್ನು ಆಡುತ್ತಿದ್ದನು – 'ಮಹಾರಾಜರನ್ನು ಸುಖಪಡಿಸುವಾತನೇ ನನ್ನ ಅತ್ಯಂತ ಹಿತಕಾರಿಮಿತ್ರನಾಗುವನು.' (ಚೌ/೧-೪)

**ದೋ – ಮಾತು ಸಕಲ ಮೋರೇ ಬಿರಹಁ ಜೆಹಿಂ ನ ಹೋಹಿಂ ದುಖ ದೀನ।**
**ಸೋಇ ಉಪಾಉ ತುಮ್ಹ ಕರೆಹು ಸಬ ಪುರ ಜನ ಪರಮ ಪ್ರಬೀನ ॥ ೮೦ ॥**

ಅನಂತರ ರಾಮನು ಪುರಜನರನ್ನು ಕುರಿತು – ಓ ಪರಮ ಚತುರ ಪುರವಾಸೀ ಸಜ್ಜನರೇ! ನನ್ನ ತಾಯಂದಿರು ನನ್ನ ದುಃಖದಿಂದ ನೋಯದಂತೆ ನೀವೆಲ್ಲ ನೋಡಿಕೊಳ್ಳಬೇಕು. (ದೋ/೮೦)

**ಚೌ – ಏಹಿ ಬಿಧಿ ರಾಮ ಸಬಹಿ ಸಮುಝಾವಾ। ಗುರ ಪದ ಪದುಮ ಹರಷಿ ಸಿರು ನಾವಾ ॥**
**ಗನಪತಿ ಗೌರಿ ಗಿರೀಸು ಮನಾಈ। ಚಲೇ ಅಸೀಸ ಪಾಇ ರಘುರಾಈ ॥ ೧ ॥**
**ರಾಮ ಚಲತ ಅತಿ ಭಯಉ ಬಿಷಾದೂ। ಸುನಿ ನ ಜಾಇ ಪುರ ಆರತ ನಾದೂ॥**
**ಕುಸಗುನ ಲಂಕ ಅವಧ ಅತಿ ಸೋಕೂ। ಹರಷ ಬಿಷಾದ ಬಿಬಸ ಸುರಲೋಕೂ ॥ ೨ ॥**
**ಗಇ ಮುರುಛಾ ತಬ ಭೂಪತಿ ಜಾಗೇ। ಬೋಲಿ ಸುಮಂತ್ರು ಕಹನ ಅಸ ಲಾಗೇ ॥**
**ರಾಮು ಚಲೇ ಬನ ಪ್ರಾನ ನ ಜಾಹೀಂ। ಕೆಹಿ ಸುಖ ಲಾಗಿ ರಹತ ತನ ಮಾಹೀಂ ॥ ೩ ॥**
**ಏಹಿ ತೇಂ ಕವನ ಬ್ಯಥಾ ಬಲವಾನಾ। ಜೋ ದುಖು ಪಾಇ ತಜಹಿಂ ತನು ಪ್ರಾನಾ ॥**
**ಪುನಿ ಧರಿ ಧೀರ ಕಹಇ ನರನಾಹೂ। ಲೈ ರಥು ಸಂಗ ಸಖಾ ತುಮ್ಹ ಜಾಹೂ ॥ ೪ ॥**

ಈ ಪ್ರಕಾರ ಶ್ರೀರಾಮನು ಎಲ್ಲರಿಗೂ ಸಮಾಧಾನ ಹೇಳಿ, ಹರ್ಷಿತನಾಗಿ, ಗುರುವಿನ ಚರಣಕಮಲಗಳಲ್ಲಿ ತಲೆವಾಗಿದನು. ಅನಂತರ ಗಣಪತಿ, ಗೌರೀ, ಗಿರೀಶ ಇವರಿಗೆ ವಂದಿಸಿ, ಅವರ ಹರಕೆ ಹೊತ್ತು ರಘುನಾಥನು ಹೊರಟನು. ಶ್ರೀರಾಮನು ಹೊರಡುವಾಗ ಇಡೀ ನಗರವು ವಿಷಾದದಿಂದ ಗೈವ ಆರ್ತನಾದದಲ್ಲಿ ತುಂಬಿಹೋಯಿತು. ಲಂಕೆಯಲ್ಲಿ ಕೆಟ್ಟ ಶಕುನಗಳು

ಕಾಣಿಸಿಕೊಂಡವು. ಅಯೋಧ್ಯೆಯು ಶೋಕವಿಹ್ವಲವಾಯಿತು. ದೇವಲೋಕವು ಹರ್ಷಶೋಕ ಸಮ್ಮಿಳಿತವಾಯಿತು. (ಇನ್ನು ರಾಕ್ಷಸರ ನಾಶವಾಗಬಹುದೆಂದು ಹರ್ಷವಾಯಿತು. ಅಯೋಧ್ಯಾನಿವಾಸಿಗಳ ದುಃಖದಿಂದಾಗಿ ಶೋಕವಾಯಿತು.)

ಮೂರ್ಛೆತಿಳಿದೆದ್ದ ದಶರಥನು ಸುಮಂತ್ರನನ್ನು ಕರೆದು ಇಂತೆಂದನು – ''ಶ್ರೀರಾಮನು ವನಕ್ಕೆ ಹೊರಟುಹೋದನು. ಆದರೆ ನನ್ನ ಪ್ರಾಣಗಳು ಯಾವ ಸುಖಕ್ಕಾಗಿ ಈ ಶರೀರದಲ್ಲಿ ನೆಲೆಸಿವೆಯೋ ತಿಳಿಯದು. ಇಂತಹ ದುಃಖಕ್ಕೆ ಗುರಿಯಾದರೂ ಕೂಡ ಈ ಪ್ರಾಣಗಳು ಹೊರಟುಹೋಗುವುದಿಲ್ಲವಲ್ಲ! ಇದರಿಂದ ಹೆಚ್ಚಿನ ವ್ಯಥೆ ಯಾವುದಿರಬಹುದು?'' ಬಳಿಕ ಧೈರ್ಯವನ್ನು ತಂದುಕೊಂಡು ರಾಜನು ಹೇಳಿದನು – ''ಮಿತ್ರನೇ! ನೀನು ರಥವನ್ನು ಎತ್ತಿಕೊಂಡು ಶ್ರೀರಾಮನೊಂದಿಗೆ ಹೋಗು. (ಚೌ/೧-೪)

**ದೋ – ಸುಠಿ ಸುಕುಮಾರ ಕುಮಾರ ದೋಉ ಜನಕಸುತಾ ಸುಕುಮಾರಿ।**
**ರಥ ಚಢಾಇ ದೆಖರಾಇ ಬನು ಫಿರೆಹು ಗಏ ದಿನ ಚಾರಿ ॥ ೮೧ ॥**

ಅತ್ಯಂತ ಸುಕುಮಾರರಾದ ರಾಜಪುತ್ರರಿಬ್ಬರನ್ನೂ, ಹೆಚ್ಚು ಸುಕುಮಾರಿಯಾದ ಜಾನಕಿಯನ್ನೂ ರಥದಲ್ಲಿ ಕುಳ್ಳಿರಿಸಿ ವನವನ್ನು ತೋರಿಸಿ, ನಾಲ್ಕು ದಿನಗಳಲ್ಲಿ ಮರಳಿ ಕರಕೊಂಡು ಬಾ. (ದೋ/೮೧)

**ಚೌ – ಜೌ ನಹಿಂ ಫಿರಹಿಂ ಧೀರ ದೋಉ ಭಾಈ। ಸತ್ಯಸಂಧ ದೃಢಬ್ರತ ರಘುರಾಈ ॥**
**ತೌ ತುಮ್ಹ ಬಿನಯ ಕರೆಹು ಕರ ಜೋರೀ। ಫೇರಿಅ ಪ್ರಭು ಮಿಥಿಲೇಸಕಿಸೋರೀ ॥ ೧ ॥**
**ಜಬ ಸಿಯ ಕಾನನ ದೇಖಿ ಡೆರಾಈ। ಕಹೆಹು ಮೋರಿ ಸಿಖ ಅವಸರು ಪಾಈ ॥**
**ಸಾಸು ಸಸುರ ಅಸ ಕಹೆಉ ಸँದೇಸೂ। ಪುತ್ರಿ ಫಿರಿಅ ಬನ ಬಹುತ ಕಲೇಸೂ ॥ ೨ ॥**
**ಪಿತುಗೃಹ ಕಬಹುँ ಕಬಹುँ ಸಸುರಾರೀ। ರಹೆಹು ಜಹಾँ ರುಚಿ ಹೋಇ ತುಮ್ಹಾರೀ ॥**
**ಎಹಿ ಬಿಧಿ ಕರೆಹು ಉಪಾಯ ಕದಂಬಾ। ಫಿರಇ ತ ಹೋಇ ಪ್ರಾನ ಅವಲಂಬಾ ॥ ೩ ॥**
**ನಾಹಿ ತ ಮೋರಮರನು ಪರಿನಾಮಾ। ಕಛು ನ ಬಸಾಈ ಭಏँ ಬಿಧಿ ಬಾಮಾ ॥**
**ಅಸ ಕಹಿ ಮುರುಛಿ ಪರಾ ಮಹಿ ರಾಊ। ರಾಮು ಲಖನು ಸಿಯ ಆನಿ ದೇಖಾಊ ॥ ೪ ॥**

ರಘುನಾಥನು ಸತ್ಯವ್ರತನೂ, ದೃಢತೆಯಿಂದ ನಿಯಮವನ್ನು ಪಾಲಿಸುವವನೂ ಆಗಿರುವನು. ಧೈರ್ಯವಂತರಾದ ಸಹೋದರರಿಬ್ಬರು ಹಿಂದಕ್ಕೆ ಮರಳದಿದ್ದರೆ – ರಾಮನಲ್ಲಿ ಕೈಜೋಡಿಸಿ, 'ದಯವಿಟ್ಟು ಜನಕಸುತೆಯನ್ನಾದರೂ ಅಯೋಧ್ಯೆಗೆ ಕಳಿಸಿಕೊಡು' ಎಂದು ಪ್ರಾರ್ಥಿಸು. ಸೀತೆಯು ವನದ ದೃಶ್ಯಗಳಿಗೆ ಭಯಪಟ್ಟಾಗ, ಅವಕಾಶವನ್ನು ನೋಡಿ ಈ ಸಂದೇಶವನ್ನು ತಿಳಿಸು. 'ಕುಮಾರೀ! ನೀನು ಅತ್ತೆ-ಮಾವಂದಿರ ಸಂದೇಶವನ್ನು ಅನುಸರಿಸಿ, ಈ ಭಯಂಕರವಾದ ಅಡವಿಯಿಂದ ಹಿಂದಕ್ಕೆ ನಡೆಯಿರಮ್ಮ. ನೀವು ತಂದೆಯ ಮನೆಯಲ್ಲಾಗಲೀ, ಅತ್ತೆಮನೆಯಲ್ಲಾಗಲೀ ನಿನಗಿಷ್ಟಬಂದಹಾಗೆ ಬಯಸಿದಷ್ಟು ಕಾಲ ಇರಬಹುದು.' ಈ ವಿಧವಾಗಿ ನೀನು ಅನೇಕ ಉಪಾಯಗಳನ್ನು ಮಾಡಿ, ಆಕೆಯನ್ನು ಅಯೋಧ್ಯೆಗೆ ಕರೆದುಕೊಂಡು ಬಾ. ಕನಿಷ್ಠಪಕ್ಷ ಸೀತೆಯು ಮರಳಿ ಬಂದರೆ ನನ್ನ ಪ್ರಾಣಗಳಿಗೆ ಅವಲಂಬನ ದೊರಕಿದಂತಾದೀತು. ಇಲ್ಲದಿದ್ದರೆ ಕೊನೆಗೆ ನನ್ನ ಸಾವೇ ಆದೀತು. ವಿಧಿಯು ವಿರುದ್ಧವಾದಾಗ ಯಾರದೂ ಏನೂ ನಡೆಯುವುದಿಲ್ಲ ಎಂದು ಹೇಳುತ್ತಾ, ಮತ್ತೆ 'ಹಾ ರಾಮಾ! ಲಕ್ಷ್ಮಣ, ಸೀತೆಯರನ್ನು ತಂದು ತೋರಿಸಲಾರೆಯಾ?' ಎಂದು ಹೇಳಿ ದಶರಥನು ಮೂರ್ಛಿತನಾದನು. (ಚೌ/೧-೪)

**ದೋ – ಪಾಇ ರಜಾಯಸು ನಾಇ ಸಿರು ರಥು ಅತಿ ಬೇಗ ಬನಾಇ।**
**ಗಯಉ ಜಹಾँ ಬಾಹೆರ ನಗರ ಸೀಯ ಸಹಿತ ದೋಉ ಭಾಇ ॥ ೮೨ ॥**

ರಾಜಾಜ್ಞೆಯನ್ನು ಹೊಂದಿದ ಸುಮಂತ್ರನು ರಾಜನಿಗೆ ತಲೆವಾಗಿ, ಕೂಡಲೇ ವೇಗವುಳ್ಳ ಉತ್ತಮ ಕುದುರೆಗಳನ್ನು ರಥಕ್ಕೆ ಹೂಡಿ, ನಗರದ ಹೊರಭಾಗದಲ್ಲಿ ಸೀತಾಲಕ್ಷ್ಮಣಸಹಿತ ಶ್ರೀರಾಮನಿರುವಲ್ಲಿಗೆ ಆಗಮಿಸಿದನು. (ದೋ/೮೨)

**ಚೌ – ತಬ ಸುಮಂತ್ರ ನೃಪ ಬಚನ ಸುನಾಏ। ಕರಿ ಬಿನತೀ ರಥ ರಾಮು ಚಢಾಏ ॥**
**ಚಢಿ ರಥ ಸೀಯ ಸಹಿತ ದೋಉ ಭಾಈ। ಚಲೇ ಹೃದಯँ ಅವಧಹಿ ಸಿರು ನಾಈ ॥ ೧ ॥**
**ಚಲತ ರಾಮು ಲಖಿ ಅವಧ ಅನಾಥಾ। ಬಿಕಲ ಲೋಗ ಸಬ ಲಾಗೇ ಸಾಥಾ ॥**
**ಕೃಪಾಸಿಂಧು ಬಹುಬಿಧಿ ಸಮುಝಾವಹಿಂ। ಫಿರಹಿಂ ಪ್ರೇಮ ಬಸ ಪುನಿ ಫಿರಿ ಆವಹಿಂ ॥ ೨ ॥**
**ಲಾಗತಿ ಅವಧ ಭಯಾವನಿ ಭಾರೀ। ಮಾನಹುँ ಕಾಲರಾತಿ ಅँಧಿಆರೀ ॥**
**ಘೋರ ಜಂತು ಸಮ ಪುರ ನರ ನಾರೀ। ಡರಪಹಿಂ ಏಕಹಿ ಏಕ ನಿಹಾರೀ ॥ ೩ ॥**

**ಘರ ಮಸಾನ ಪರಿಜನ ಜನು ಭೂತಾ। ಸುತ ಹಿತ ಮೀತ ಮನಹುँ ಜಮದೂತಾ॥**
**ಬಾಗನ್ಹ ಬಿಟಪ ಬೇಲಿ ಕುಮ್ಹಿಲಾಹೀं। ಸರಿತ ಸರೋವರ ದೇಖಿ ನ ಜಾಹೀं॥ ೪॥**

ಸುಮಂತ್ರನು ಶ್ರೀರಾಮಚಂದ್ರನಿಗೆ ವಂದಿಸಿ, ಮಹಾರಾಜರ ಸಂದೇಶವನ್ನು ತಿಳಿಸಿ, ವಿನಂತಿಸಿಕೊಂಡು ಒತ್ತಾಯದಿಂದ ರಥದಲ್ಲಿ ಕುಳ್ಳಿರಿಸಿಕೊಂಡನು. ಸೀತೆಯಸಹಿತ ಇಬ್ಬರೂ ಸಹೋದರರೂ ರಥವನ್ನಡರಿ, ಮನದಲ್ಲೇ ಅಯೋಧ್ಯೆಗೆ ನಮಿಸಿ ಮುಂದಕ್ಕೆ ಹೊರಟರು. ಶ್ರೀರಾಮಚಂದ್ರನು ಅಯೋಧ್ಯೆಯನ್ನು ಅನಾಥವಾಗಿಸಿ ಹೋಗುತ್ತಿರುವುದನ್ನು ನೋಡಿ ಪ್ರಜಾಜನರು ವ್ಯಾಕುಲಚಿತ್ತರಾಗಿ, ಅವರ ರಥದ ಜೊತೆಗೆ ಹೊರಟುಬಿಟ್ಟರು. ದಯಾಮೂರ್ತಿಯಾದ ಶ್ರೀರಾಮನು ಅವರಿಗೆ ಅನೇಕ ವಿಧದಿಂದ ಸಮಾಧಾನಪಡಿಸಿ, ಅವರು ಮರಳುವಂತೆ ಹೇಳಿದನು. ಅವರು ಅಯೋಧ್ಯೆಯ ಕಡೆಗೆ ತಿರುಗಿದರೂ ಪ್ರೇಮವಶರಾಗಿ ಪುನಃ ಶ್ರೀರಾಮನನ್ನು ಅನುಸರಿಸಿ ನಡೆದರು. ಇತ್ತ ಅಯೋಧ್ಯೆಯಲ್ಲಿ ಅಂಧಕಾರಮಯವಾದ ಕಾಳರಾತ್ರಿಯು ಆವರಿಸಿದಂತೆ ಭಯಂಕರ ವಾತಾವರಣ ನಿರ್ಮಾಣವಾಗಿತ್ತು. ನಗರದ ನರ-ನಾರಿಯರು ಒಬ್ಬರಿಗೊಬ್ಬರು ಕ್ರೂರಮೃಗಗಳಂತೆ ಕಂಡುಬರುತ್ತಿದ್ದರು. ಅವರ ಮನೆಯೇ ಮಸಣದಂತಾಗಿತ್ತು. ಮನೆಯ ಮಂದಿಯೇ ಭೂತಪ್ರೇತಗಳಂತೆ ಕಂಡರೆ, ಪುತ್ರ, ಮಿತ್ರ, ಹಿತೈಷಿಗಳು ಯಮದೂತರಂತೆ ಕಾಣುತ್ತಿದ್ದರು. ತೋಟಗಳಲ್ಲಿ ಮರ-ಬಳ್ಳಿಗಳು ಬಾಡಿಹೋಗಿದ್ದವು. ಹೊಳೆ-ಹಳ್ಳಗಳು ನೋಡಲಾಗದಷ್ಟು ಭಯಂಕರವಾಗಿ ಕಾಣುತ್ತಿದ್ದವು. (ಚೌ/೧-೪)

**ದೋ – ಹಯ ಗಯ ಕೋಟಿನ್ಹ ಕೇಲಿಮೃಗ ಪುರಪಸು ಚಾತಕ ಮೋರ।**
**ಪಿಕ ರಥಾಂಗ ಸುಕ ಸಾರಿಕಾ ಸಾರಸ ಹಂಸ ಚಕೋರ॥ ೮೩॥**

ಅಸಂಖ್ಯಾತವಾದ ಆನೆಗಳು, ಕುದುರೆಗಳು, ಕ್ರೀಡಾಮೃಗಗಳಾದ ಜಿಂಕೆಗಳು, ದನಕರುಗಳೇ ಮೊದಲಾದ ಪುರಪಶುಗಳು, ಶುಕ, ಪಿಕ, ಚಕ್ರವಾಕ, ಮಯೂರ, ಸಾರಸ, ಹಂಸ, ಕರಂಡ, ಚಕೋರ ಮೊದಲಾದ ಮೃಗಪಕ್ಷಿಗಳು – (ದೋ/೮೩)

**ಚೌ – ರಾಮ ಬಿಯೋಗ ಬಿಕಲ ಸಬ ಠಾಢೇ। ಜಹँ ತಹँ ಮನಹುँ ಚಿತ್ರ ಲಿಖಿ ಕಾಢೇ॥**
**ನಗರು ಸಫಲ ಬನು ಗಹಬರ ಭಾರೀ। ಖಗ ಮೃಗ ಬಿಪುಲ ಸಕಲ ನರ ನಾರೀ॥ ೧॥**
**ಬಿಧಿ ಕೈಕಈ ಕಿರಾತಿನಿ ಕೀನ್ಹಿ। ಜೆಹಿं ದವ ದುಸಹ ದಸಹುँ ದಿಸಿ ದೀನ್ಹಿ॥**
**ಸಹಿ ನ ಸಕೇ ರಘುಬರ ಬಿರಹಾಗೀ। ಚಲೇ ಲೋಗ ಸಬ ಬ್ಯಾಕುಲ ಭಾಗೀ॥ ೨॥**
**ಸಬಹಿं ಬಿಚಾರು ಕೀನ್ಹ ಮನ ಮಾಹೀं। ರಾಮ ಲಖನ ಸಿಯ ಬಿನು ಸುಖು ನಾಹೀं॥**
**ಜಹಾँ ರಾಮು ತಹँ ಸಬುಇ ಸಮಾಜೂ। ಬಿನು ರಘುಬೀರ ಅವಧ ನಹಿं ಕಾಜೂ॥ ೩॥**
**ಚಲೇ ಸಾಥ ಅಸ ಮಂತ್ರು ದೃಢಾಈ। ಸುರ ದುರ್ಲಭ ಸುಖ ಸದನ ಬಿಹಾಈ॥**
**ರಾಮ ಚರನ ಪಂಕಜ ಪ್ರಿಯ ಜಿನ್ಹಹೀ। ಬಿಷಯ ಭೋಗ ಬಸ ಕರಹಿं ಕಿ ತಿನ್ಹಹೀ॥ ೪॥**

ಶ್ರೀರಾಮನ ಅಗಲುವಿಕೆಯಿಂದ ಎಲ್ಲವೂ ವ್ಯಾಕುಲಗೊಂಡು ಬರೆದ ಚಿತ್ತಾರದಂತೆ ಅಲ್ಲಲ್ಲೇ ಅಚಲವಾಗಿ ನಿಂತುಬಿಟ್ಟವು. ಇಷ್ಟರವರೆಗೆ ಅಯೋಧ್ಯಾನಗರವು ಫಲಪೂರ್ಣವಾದ ದೊಡ್ಡ ವನದಂತಿದ್ದು, ಅದರಲ್ಲಿ ವಾಸಿಸುವ ಸ್ತ್ರೀ-ಪುರುಷರು ಅದನ್ನು ಸೇವಿಸುವ ಪಶುಪಕ್ಷಿಗಳಂತಿದ್ದರು. (ಅಂದರೆ ಅವಧಪುರಿಯು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕೂ ಫಲಗಳನ್ನು ಕೊಡುವ ನಗರಿಯಾಗಿತ್ತು. ಎಲ್ಲ ಸ್ತ್ರೀ-ಪುರುಷರು ಆ ಫಲಗಳನ್ನು ಪಡೆಯುತ್ತಿದ್ದರು.) ಆದರೆ ವಿಧಾತನು ಕೈಕೆಯಿ ಎಂಬ ಕಿರಾತಸ್ತ್ರೀಯನ್ನು ಸೃಷ್ಟಿಸಿದನು. ಅವಳು ಈ ವನ (ಅಯೋಧ್ಯೆ)ವನ್ನು ಸುಡಲು ದಶದಿಕ್ಕುಗಳಲ್ಲಿಯೂ ದುಸ್ಸಹವಾದ ದಾವಾಗ್ನಿಯನ್ನು ಉರಿಸಿಬಿಟ್ಟಳು. ಆದರಿಂದಾಗಿ ಉಂಟಾದ ಶ್ರೀರಾಮಚಂದ್ರನ ವಿರಹಾಗ್ನಿಯನ್ನು ಸಹಿಸಲಾಗದೆ, ಎಲ್ಲ ಜನರು ವ್ಯಾಕುಲರಾಗಿ ಓಡಿಹೋದರು. ಎಲ್ಲರಿಗೂ ತಮ್ಮ-ತಮ್ಮ ಮನದಲ್ಲಿ ಒಂದೇ ಆಲೋಚನೆ ಹೊಳೆಯಿತು – ''ಸೀತಾರಾಮ ಲಕ್ಷ್ಮಣರು ಇಲ್ಲದೆ ಸುಖವಿಲ್ಲ. ಶ್ರೀರಾಮನಿರುವಲ್ಲಿಯೇ ಸಮಾಜವು ಸುಖವಾಗಿ ಇರಬಲ್ಲುದು. ಶ್ರೀರಾಮಚಂದ್ರನಿಲ್ಲದೆ ಅಯೋಧ್ಯೆಲ್ಲಿ ನಮಗೆ ಯಾವ ಕೆಲಸವೂ ಇಲ್ಲ. ಹೀಗೆ ದೃಢನಿಶ್ಚಯಗೈದು, ಅವರು ದೇವದುರ್ಲಭವಾದ ಸುಖಸಮೃದ್ಧವಾದ ಮನೆಗಳನ್ನು ತೊರೆದು ಶ್ರೀರಾಮನೊಡನೆ ಹೊರಟರು. ಶ್ರೀರಾಮಚರಣ ಪಂಕಜಪ್ರಿಯರಾದವರಿಗೆ ವಿಷಯಸುಖ ಹೇಗೆ ಹಿಡಿಸೀತು? (ಚೌ/೧-೪)

**ದೋ – ಬಾಲಕ ಬೃದ್ಧ ಬಿಹಾಇ ಗೃಹँ ಲಗೇ ಲೋಗ ಸಬ ಸಾಥ।**
**ತಮಸಾ ತೀರ ನಿವಾಸು ಕಿಯ ಪ್ರಥಮ ದಿವಸ ರಘುನಾಥ॥ ೮೪॥**

ಮಕ್ಕಳು ಹಾಗೂ ಮುದುಕರನ್ನು ಮನೆಯಲ್ಲೇ ಬಿಟ್ಟು, ಎಲ್ಲರೂ ಶ್ರೀರಾಮನ ಜೊತೆಗೆ ಹೋದರು. ಮೊದಲ ದಿನ ರಘುನಾಥನು ತಮಸಾ ನದೀತೀರದಲ್ಲಿ ಬೀಡುಬಿಟ್ಟನು. (ದೋ/೮೪)

**ಚೌ – ರಘುಪತಿ ಪ್ರಜಾ ಪ್ರೇಮಬಸ ದೇಖೀ। ಸದಯ ಹೃದಯ್ ದುಖು ಭಯಉ ಬಿಸೇಷೀ॥**
**ಕರುನಾಮಯ ರಘುನಾಥ ಗೊಸಾಂಈ। ಬೇಗಿ ಪಾಇಅಹಿಂ ಪೀರ ಪರಾಈ॥ ೧ ॥**
**ಕಹಿ ಸಪ್ರೇಮ ಮೃದು ಬಚನ ಸುಹಾಏ। ಬಹುಬಿಧಿ ರಾಮ ಲೋಗ ಸಮುಝಾಏ॥**
**ಕಿಏ ಧರಮ ಉಪದೇಸ ಘನೇರೇ। ಲೋಗ ಪ್ರೇಮ ಬಸ ಫಿರಹಿಂ ನ ಫೇರೇ॥ ೨ ॥**
**ಸೀಲು ಸನೇಹು ಛಾಡಿ ನಹಿಂ ಜಾಈ। ಅಸಮಂಜಸ ಬಸ ಭೇ ರಘುರಾಈ॥**
**ಲೋಗ ಸೋಗ ಶ್ರಮ ಬಸ ಗಏ ಸೋಈ। ಕಛುಕ ದೇವಮಾಯಾಂ ಮತಿ ಮೋಈ॥ ೩ ॥**
**ಜಬಹಿಂ ಜಾಮ ಜುಗ ಜಾಮಿನಿ ಬೀತೀ। ರಾಮ ಸಚಿವ ಸನ ಕಹೆಉ ಸಪ್ರೀತೀ॥**
**ಖೋಜ ಮಾರಿ ರಥು ಹಾಂಕಹು ತಾತಾ। ಆನ ಉಪಾಯ್ ಬನಿಹಿ ನಹಿಂ ಬಾತಾ॥ ೪ ॥**

ಪ್ರೇಮವಶರಾದ ಪ್ರಜೆಗಳನ್ನು ಕಂಡು ಶ್ರೀರಘುನಾಥನಿಗೆ ತುಂಬಾ ವ್ಯಥೆಯಾಯಿತು. ಶ್ರೀರಾಮಚಂದ್ರಪ್ರಭುವು ಕರುಣಾಮಯನು. ಬೇರೆಯವರ ದುಃಖವನ್ನು ಕಂಡು ಅವನು ಕೂಡಲೇ ಅತ್ಯಂತ ದುಃಖಿತನಾಗುತ್ತಾನೆ. ಪ್ರೇಮಪೂರ್ವಕವಾಗಿ ಕೋಮಲ ಮಧುರವಚನಗಳಿಂದ ಶ್ರೀರಾಮನು ಪರಿ-ಪರಿಯಾಗಿ ಪ್ರಜೆಗಳನ್ನು ಸಮಾಧಾನಗೊಳಿಸಿದನು. ಧಾರ್ಮಿಕವಾದ ಉಪದೇಶವನ್ನು ನೀಡಿದನು. ಆದರೆ ಪ್ರೇಮವಶರಾದ ಅವರು ಹಿಂತಿರುಗೆಂದು ಹೇಳಿದರೂ, ಹಿಂತಿರುಗಲೊಲ್ಲರು. ಶ್ರೀರಾಮಚಂದ್ರನಲ್ಲಿರುವ ತಮ್ಮ ಸ್ನೇಹಶೀಲವನ್ನು ಅವರು ಬಿಡಲೊಲ್ಲರು. ಶ್ರೀರಾಮನು ಹೀಗೆ ಧರ್ಮಸಂಕಟಕ್ಕೆ ಸಿಕ್ಕಿಕೊಂಡನು. ಆ ರಾತ್ರಿ ಶೋಕಶ್ರಮದ ಕಾರಣದಿಂದ ಎಲ್ಲ ಪ್ರಜೆಗಳು ನಿದ್ದೆಹೋದರು. ದೇವತೆಗಳ ಮಾಯೆಯಿಂದಾಗಿಯೂ ಕೂಡ ಅವರ ಬುದ್ಧಿಗೆ ಮಂಕು ಕವಿಯಿತು. ರಾತ್ರಿಯ ಎರಡು ಜಾವಗಳು ಕಳೆದ ಮೇಲೆ ಶ್ರೀರಾಮಚಂದ್ರನು ಪ್ರೇಮಪೂರ್ವಕವಾಗಿ ಸುಮಂತ್ರನ ಬಳಿ ಇಂತೆಂದನು – ಅಯ್ಯಾ! ರಥವನ್ನು ಇಲ್ಲಿಂದಲೇ ಮರಳಿಹೋದಂತೆ ಹೊಡೆ. ರಥಚಕ್ರದ ಜಾಡು ಯಾರಿಗೂ ತಿಳಿಯದಂತೆ ರಥವನ್ನು ಮುಂದೆ ಕೊಂಡುಹೋಗು. ಅದರಿಂದ ರಥವು ಯಾವದಿಕ್ಕಿಗೆ ಹೋಯಿತೆಂದು ಪ್ರಜೆಗಳಿಗೆ ತಿಳಿಯದೇ ಹೋದೀತು. ಹೀಗೆ ಮಾಡದೆ ಬೇರೆ ಉಪಾಯವೇ ಇಲ್ಲ. (ಚೌ/೧-೪)

**ದೋ – ರಾಮ ಲಖನ ಸಿಯ ಜಾನ ಚಢಿ ಸಂಭು ಚರನ ಸಿರು ನಾಇ।**
**ಸಚಿವ್ ಚಲಾಯಉ ತುರತ ರಥು ಇತ ಉತ ಖೋಜ ದುರಾಇ॥ ೮೫ ॥**

ಶಿವನ ಚರಣಗಳಿಗೆ ಶಿರಬಾಗಿ, ಸೀತಾರಾಮಲಕ್ಷ್ಮಣರು ರಥವನ್ನು ಅಡರಿದರು. ಮಂತ್ರಿಯು ಕೂಡಲೇ ರಥದ ಗಾಲಿಗಳ ಗುರುತು ಸ್ಪಷ್ಟವಾಗಿ ತಿಳಿಯದಂತೆ ರಥವನ್ನು ಮುಂದಕ್ಕೆ ಓಡಿಸಿದನು. (ದೋ/೮೫)

**ಚೌ – ಜಾಗೇ ಸಕಲ ಲೋಗ ಭಏ್ ಭೋರೂ। ಗೇ ರಘುನಾಥ ಭಯಉ ಅತಿ ಸೋರೂ॥**
**ರಥ ಕರ ಖೋಜ ಕತಹುಂ ನಹಿಂ ಪಾವಹಿಂ। ರಾಮ ರಾಮ ಕಹಿ ಚಹು ದಿಸಿ ಧಾವಹಿಂ॥ ೧ ॥**
**ಮನಹುಂ ಬಾರಿನಿಧಿ ಬೂಡ ಜಹಾಜೂ। ಭಯಉ ಬಿಕಲ ಬಡ ಬನಿಕ ಸಮಾಜೂ॥**
**ಏಕಹಿ ಏಕ ದೇಹಿಂ ಉಪದೇಸೂ। ತಜೇ ರಾಮ ಹಮ ಜಾನಿ ಕಲೇಸೂ॥ ೨ ॥**
**ನಿಂದಹಿಂ ಆಪು ಸರಾಹಹಿಂ ಮೀನಾ। ಧಿಗ ಜೀವನು ರಘುಬೀರ ಬಿಹೀನಾ॥**
**ಜೌಂ ಪೈ ಪ್ರಿಯ ಬಿಯೋಗು ಬಿಧಿ ಕೀನ್ಹಾ। ತೌ ಕಸ ಮರನು ನ ಮಾಗೇಂ ದೀನ್ಹಾ॥ ೩ ॥**
**ಏಹಿ ಬಿಧಿ ಕರತ ಪ್ರಲಾಪ ಕಲಾಪಾ। ಆಏ ಅವಧ ಭರೇ ಪರಿತಾಪಾ॥**
**ಬಿಷಮ ಬಿಯೋಗು ನ ಜಾಇ ಬಖಾನಾ। ಅವಧಿ ಆಸ ಸಬ ರಾಖಹಿಂ ಪ್ರಾನಾ॥ ೪ ॥**

ಬೆಳಕು ಹರಿಯುತ್ತಲೇ ಜನರು ಕಣ್ತೆರೆದು ನೋಡಿದಾಗ ರಾಮನಿಲ್ಲದುದು ತಿಳಿಯಿತು. 'ಶ್ರೀರಘುನಾಥನು ಹೊರಟು ಹೋದನು' ಎಂದು ಕೂಗುತ್ತಾ ಗದ್ದಲವೇರ್ಪಟ್ಟಿತು. ರಥಚಕ್ರದ ಗುರುತೂ ಕೂಡ ಸಿಗದೆ ಎಲ್ಲರೂ 'ಹಾ ರಾಮಾ! ರಾಮಾ!!' ಎಂದು ಹುಯ್ಯಲಿಡುತ್ತಾ ದಿಕ್ಕಾಪಾಲಾಗಿ ಓಡತೊಡಗಿದರು. ಸಮುದ್ರದಲ್ಲಿ ಹಡಗು ಮುಳುಗಿದಾಗ ವ್ಯಾಪಾರಿಗಳು ಕಂಗಾಲಾದಂತೆ ಪ್ರಜಾಜನರ ಸ್ಥಿತಿಯಾಯಿತು. 'ನಮಗೆ ವನವಾಸದ ಕ್ಲೇಶಗಳು ತಾಕದಿರಲಿ ಎಂದು ಶ್ರೀರಾಮಚಂದ್ರನು ನಮ್ಮನ್ನು ಇಲ್ಲೇ ತೊರೆದು ಹೋಗಿರುವನು' ಎಂದು ಅವರು ಪರಸ್ಪರ ಆಡಿಕೊಳ್ಳತೊಡಗಿದರು. ಜನರು ತಮ್ಮನ್ನು ತಾವು ಹಾಳಾದ ನಿದ್ದೆಗೆ ವಶರಾಗಿ ರಾಮನಿಂದ ಅಗಲಿದೆವಲ್ಲ! ಎಂದು ಹಳಿದುಕೊಳ್ಳತೊಡಗಿದರು. ಶ್ರೀರಾಮನಿಲ್ಲದ ನಮ್ಮ ಜೀವನಕ್ಕೆ ಧಿಕ್ಕಾರವಿರಲಿ.

ವಿಧಾತನು ನಮ್ಮ ಪ್ರಿಯತಮನಾದ ಪ್ರಭುವನ್ನು ನಮ್ಮಿಂದ ಬೇರ್ಪಡಿಸಿದಂತೆ, ನಮಗೆ ಬೇಡಿದಾಗ ಸಾವನ್ನು ಏಕೆ ಕರುಣಿಸುವುದಿಲ್ಲ? ಈ ಪ್ರಕಾರ ಪರಿಪರಿಯಾಗಿ ಪ್ರಲಾಪಿಸುತ್ತಾ ಸಂತಪ್ತರಾಗಿ ಅಯೋಧ್ಯೆಗೆ ಮರಳಿದರು. ಅವರ ವಿಷಮ ವಿಯೋಗಾವಸ್ಥೆ ವರ್ಣನಾತೀತ. ಶ್ರೀರಾಮನು ಹದಿನಾಲ್ಕು ವರ್ಷ ವನವಾಸ ಮುಗಿಸಿಬರುವನೆಂಬ ಒಂದೇ ಆಸೆ ಅವರ ಬದುಕಿಗೆ ಊರುಗೋಲಾಗಿತ್ತು. (ಚೌ/೧-೪)

**ದೋ – ರಾಮ ದರಸ ಹಿತ ನೇಮ ಬ್ರತ ಲಗೇ ಕರನ ನರ ನಾರಿ।**
**ಮನಹುँ ಕೋಕ ಕೋಕೀ ಕಮಲ ದೀನ ಬಿಹೀನ ತಮಾರಿ ॥ ೮೬ ॥**

ಎಲ್ಲ ನರನಾರಿಯರೂ ಶ್ರೀರಾಮನ ದರ್ಶನಕ್ಕಾಗಿ ನೇಮ, ವ್ರತಗಳನ್ನು ಮಾಡತೊಡಗಿದರು. ಹೆಣ್ಣು ಚಕ್ರವಾಕವಿಲ್ಲದ ಗಂಡು ಚಕ್ರವಾಕದಂತೆ, ಸೂರ್ಯನಿಲ್ಲದ ಕಮಲದಂತೆ ಅವರು ದೀನರಾಗಿದ್ದರು. (ದೋ/೮೬)

## ಶೃಂಗವೇರಪುರ ಗಮನ – ಗುಹಾತಿಥ್ಯ

**ಚೌ – ಸೀತಾ ಸಚಿವ ಸಹಿತ ದೊಉ ಭಾಈ। ಸೃಂಗಬೇರಪುರ ಪಹुँಚೇ ಜಾಈ ॥**
**ಉತರೇ ರಾಮ ದೇವಸರಿ ದೇಖೀ। ಕೀನ್ಹ ದಂಡವತ ಹರಷು ಬಿಸೇಷೀ ॥ ೧ ॥**
**ಲಖನ ಸಚಿವँ ಸಿಯँ ಕಿಏ ಪ್ರನಾಮಾ। ಸಬಹಿ ಸಹಿತ ಸುಖು ಪಾಯಉ ರಾಮಾ ॥**
**ಗಂಗ ಸಕಲ ಮುದ ಮಂಗಲ ಮೂಲಾ। ಸಬ ಸುಖ ಕರನಿ ಹರನಿ ಸಬ ಸೂಲಾ ॥ ೨ ॥**
**ಕಹಿ ಕಹಿ ಕೋಟಿಕ ಕಥಾ ಪ್ರಸಂಗಾ। ರಾಮು ಬಿಲೋಕಹिँ ಗಂಗ ತರಂಗಾ ॥**
**ಸಚಿವಹಿ ಅನುಜಹಿ ಪ್ರಿಯಹಿ ಸುನಾಈ। ಬಿಬುಧ ನದೀ ಮಹಿಮಾ ಅಧಿಕಾಈ ॥ ೩ ॥**
**ಮಜ್ಜನು ಕೀನ್ಹ ಪಂಥ ಶ್ರಮ ಗಯಊ। ಸುಚಿ ಜಲು ಪಿಅತ ಮುದಿತ ಮನ ಭಯಊ ॥**
**ಸುಮಿರತ ಜಾಹಿ ಮಿಟಇ ಶ್ರಮ ಭಾರೂ। ತೆಹಿ ಶ್ರಮ ಯಹ ಲೌಕಿಕ ಬ್ಯವಹಾರೂ ॥ ೪ ॥**

ಸೀತಾದೇವಿಯೊಡನೆ, ಮಂತ್ರಿಸಹಿತ ಸೋದರರಿಬ್ಬರೂ ಶೃಂಗವೇರಪುರವನ್ನು ತಲುಪಿದರು. ಅಲ್ಲಿ ಗಂಗಾನದಿಯನ್ನು ಕಂಡು ಶ್ರೀರಾಮನು ರಥದಿಂದಿಳಿದು, ಹರ್ಷದಿಂದ ಜಾಹ್ನವಿಯನ್ನು ಸಾಷ್ಟಾಂಗ ನಮಸ್ಕರಿಸಿದನು. ಲಕ್ಷ್ಮಣ, ಸುಮಂತ್ರ, ಸೀತೆಯೂ ಗಂಗಾದೇವಿಗೆ ಪ್ರಣಾಮಗಳನ್ನು ಸಲ್ಲಿಸಿದರು. ಎಲ್ಲರೊಂದಿಗೆ ಶ್ರೀರಾಮನು ಅಮಿತಾನಂದವನ್ನು ಹೊಂದಿದನು. ಭಾಗೀರಥಿಯು ಆನಂದಸ್ವರೂಪಿಣಿಯೂ, ಎಲ್ಲ ಮಂಗಳಗಳಿಗೂ ಮೂಲಳೂ, ಸಕಲ ಸುಖಪ್ರದಾಯಿನಿಯೂ, ಎಲ್ಲ ಪೀಡಾಪರಿಹಾರಿಣಿಯೂ ಆಗಿರುವಳು. ಗಂಗಾತರಂಗಗಳನ್ನು ನೋಡುತ್ತಾ ಶ್ರೀರಾಮನು ದೇವನದಿಯಾದ ಗಂಗಾದೇವಿಯ ಮಹಿಮೆಯನ್ನೊಳಗೊಂಡ ಅನೇಕ ಕಥೆಗಳನ್ನೂ, ಸುಮಂತ್ರನಿಗೆ, ಲಕ್ಷ್ಮಣನಿಗೆ, ಸೀತೆಗೆ ಹೇಳಿದನು. ತರುವಾಯ ಅವರೆಲ್ಲರೂ ಗಂಗೆಯಲ್ಲಿ ಸ್ನಾನಮಾಡಿದರು. ಅದರಿಂದ ಮಾರ್ಗಾಯಾಸವೆಲ್ಲ ಮಾಯವಾಯಿತು. ಪವಿತ್ರಜಲವನ್ನು ಕುಡಿದು ಅವರ ಮನಸ್ಸುಗಳು ಪ್ರಸನ್ನಗೊಂಡವು. ಶ್ರೀರಾಮನ ನಾಮಸ್ಮರಣೆಯಿಂದ ಜನ್ಮ-ಜನ್ಮಾಂತರದ ಶ್ರಮ (ಕಷ್ಟ)ಗಳು ದೂರವಾಗುವವು. ಅಂತಹ ಪ್ರಭುವು ಆಯಾಸಗೊಳ್ಳುವುದು, ಅವನಿಗೆ ಶ್ರಮವಾಗುವುದು ಇದೆಲ್ಲ ಕೇವಲ ಲೌಕಿಕ ವ್ಯವಹಾರ (ನರಲೀಲೆ) ಮಾತ್ರವಾಗಿದೆ. ಅವನಿಗೆ ಶ್ರಮವಾಗಲೀ, ಆಯಾಸವಾಗಲೀ ಇಲ್ಲವೇ ಇಲ್ಲ. (ಚೌ/೧-೪)

**ದೋ – ಸುದ್ಧ ಸಚ್ಚಿದಾನಂದಮಯ ಕಂದ ಭಾನುಕುಲ ಕೇತು।**
**ಚರಿತ ಕರತ ನರ ಅನುಹರತ ಸಂಸೃತಿ ಸಾಗರ ಸೇತು ॥ ೮೭ ॥**

ಶ್ರೀರಾಮಚಂದ್ರನು ಸತ್ತ್ವರಜಸ್ತಮೋಗುಣಗಳಿಗೆ ಅತೀತನಾದ, ಶುದ್ಧ ಸಚ್ಚಿದಾನಂದ ವಿಗ್ರಹನೂ, ಸೂರ್ಯಕುಲ ಭೂಷಣನೂ ಆಗಿರುವನು. ಆದರೂ ಅವನು ಸಾಮಾನ್ಯ ಮನುಷ್ಯರಂತೆ ಲೀಲೆಗಳನ್ನು ಮಾಡುತ್ತಿರುತ್ತಾನೆ. ಆ ಲೀಲೆಗಳೇ ಭವಸಾಗರವನ್ನು ದಾಟುವ ಸೇತುವೆ ಆಗಿದೆ. (ದೋ/೮೭)

**ಚೌ – ಯಹ ಸುಧಿ ಗುಹँ ನಿಷಾದ ಜಬ ಪಾಈ। ಮುದಿತ ಲಿಏ ಪ್ರಿಯ ಬಂಧು ಬೊಲಾಈ ॥**
**ಲಿಏ ಫಲ ಮೂಲ ಭೇँಟ ಭರಿ ಭಾರಾ। ಮಿಲನ ಚಲೇಉ ಹಿಯँ ಹರಷು ಅಪಾರಾ ॥ ೧ ॥**
**ಕರಿ ದಂಡವತ ಭೇँಟ ಧರಿ ಆಗೇँ। ಪ್ರಭುಹಿ ಬಿಲೋಕತ ಅತಿ ಅನುರಾಗೇँ ॥**
**ಸಹಜ ಸನೇಹ ಬಿಬಸ ರಘುರಾಈ। ಪೂँಛೀ ಕುಸಲ ನಿಕಟ ಬೈಠಾಈ ॥ ೨ ॥**

**ನಾಥ ಕುಸಲ ಪದ ಪಂಕಜ ದೇಖೇ। ಭಯಉಁ ಭಾಗಭಾಜನ ಜನ ಲೇಖೇ॥**
**ದೇವ ಧರನಿ ಧನು ಧಾಮು ತುಮ್ಹಾರಾ। ಮೈಂ ಜನು ನೀಚು ಸಹಿತ ಪರಿವಾರಾ॥ ೩ ॥**
**ಕೃಪಾ ಕರಿಅ ಪುರ ಧಾರಿಅ ಪಾಊ। ಥಾಪಿಅ ಜನು ಸಬು ಲೋಗು ಸಿಹಾಊ॥**
**ಕಹೆಹು ಸತ್ಯ ಸಬು ಸಖಾ ಸುಜಾನಾ। ಮೋಹಿ ದೀನ್ಹ ಪಿತು ಆಯಸು ಆನಾ॥ ೪ ॥**

ನಿಷಾದರಾಜನಾದ ಗುಹನು ಶ್ರೀರಾಮನ ಆಗಮನದ ವಾರ್ತೆಯನ್ನು ಕೇಳಿ, ಹರ್ಷೋತ್ಫುಲ್ಲನಾಗಿ, ತನ್ನ ಬಂಧು ಮಿತ್ರರನ್ನೂ, ಕುಲಬಾಂಧವರನ್ನೂ ಜೊತೆಗೊಡಿ, ರಾಮನಿಗೆ ಕಾಣಿಕೆಯಾಗಿ ಅರ್ಪಿಸಲು ಕಂದ, ಮೂಲ, ಫಲಗಳನ್ನು ಅಣಿಮಾಡಿಕೊಂಡು, ಅವುಗಳನ್ನು ಅಡ್ಡೆಗಳಲ್ಲಿ ಹೊರೆಸಿಕೊಂಡು ಬಂದನು. ಅವನ ಹರ್ಷಕ್ಕೆ ಪಾರವೇ ಇರಲಿಲ್ಲ. ಬಂದವನೇ ದಂಡಪ್ರಣಾಮ ಮಾಡಿ, ಕಾಣಿಕೆಗಳನ್ನು ಒಪ್ಪಿಸಿ, ಅತ್ಯಂತ ಪ್ರೇಮದಿಂದ ಪ್ರಭುವನ್ನು ನೋಡತೊಡಗಿದನು. ಶ್ರೀರಾಮಚಂದ್ರನು ಆತನ ಸಹಜ ಸ್ನೇಹಕ್ಕೆ ವಶನಾಗಿ, ಅವನನ್ನು ತನ್ನ ಹತ್ತಿರ ಕುಳ್ಳಿರಿಸಿಕೊಂಡು ಯೋಗಕ್ಷೇಮವನ್ನು ವಿಚಾರಿಸಿದನು. ನಿಷಾದರಾಜನೆಂದ – 'ಪ್ರಭೂ! ತಮ್ಮ ಪಾದಪಂಕಜಗಳನ್ನು ಕಂಡದ್ದೇ ಒಂದು ಕುಶಲ. ಅವುಗಳ ದರ್ಶನದಿಂದ ನಾನು ಭಾಗ್ಯವಂತನಾದೆ. ದೇವಾ! ಈ ಧರಣಿ, ಧಾಮ, ಧನ ಎಲ್ಲ ನಿಮ್ಮದು. ನಾನು ನನ್ನ ಪರಿವಾರದೊಂದಿಗೆ ತಮ್ಮ ಅತಿ ಕಿರಿದಾದ ದಾಸನಾಗಿದ್ದೇನಷ್ಟೆ. ಈಗ ತಾವು ದಯಮಾಡಿ ಶೃಂಗವೇರಪುರಕ್ಕೆ ಬಿಜಯಂಗೈದು, ಈ ಚರಣದಾಸನ ಕೀರ್ತಿಯು ಇಮ್ಮಡಿಯಾಗಿಸಿರಿ. ಅದರಿಂದ ಎಲ್ಲ ಜನರೂ ನನ್ನ ಭಾಗ್ಯವನ್ನು ಹೊಗಳುವಂತಾಗಲಿ.' ಆಗ ಶ್ರೀರಾಮಚಂದ್ರನು ಹೇಳಿದ – 'ಎಲೈ ಬುದ್ಧಿವಂತನಾದ ಸಖನೇ! ನೀನು ಹೇಳಿದುದೆಲ್ಲ ನಿಜವಾದುದು. ಆದರೆ ನಮ್ಮ ತಂದೆಯವರ ಆಣತಿಯೇ ಬೇರೆಯಾಗಿದೆ. (ಚೌ/೧-೪)

**ದೋ – ಬರಷ ಚಾರಿದಸ ಬಾಸು ಬನ ಮುನಿ ಬ್ರತ ಬೇಷು ಅಹಾರು।**
**ಗ್ರಾಮ ಬಾಸು ನಹಿಂ ಉಚಿತ ಸುನಿ ಗುಹಹಿ ಭಯಉ ದುಖು ಭಾರು ॥ ೮೮ ॥**

ತಂದೆಯವರ ಅಪ್ಪಣೆಯಂತೆ ನಾನು ಹದಿನಾಲ್ಕು ವರ್ಷಗಳವರೆಗೆ ಮುನಿವೇಷದಲ್ಲಿದ್ದು, ಮುನಿಜನಯೋಗ್ಯವಾದ ಆಹಾರವನ್ನು ಸೇವಿಸಿ, ವನವಾಸ ಮಾಡಬೇಕು. ಊರೊಳಗೆ ವಾಸಮಾಡುವುದು ನನಗೆ ಅನುಚಿತವು. ಇದನ್ನು ಕೇಳಿ, ಗುಹನಿಗೆ ತುಂಬಾ ದುಃಖವಾಯಿತು. (ದೋ/೮೮)

**ಚೌ – ರಾಮ ಲಖನ ಸಿಯ ರೂಪ ನಿಹಾರೀ। ಕಹಹಿಂ ಸಪ್ರೇಮ ಗ್ರಾಮ ನರ ನಾರೀ॥**
**ತೇ ಪಿತು ಮಾತು ಕಹಹು ಸಖಿ ಕೈಸೇ। ಜಿನ್ಹ ಪಠಏ ಬನ ಬಾಲಕ ಐಸೇ॥ ೧ ॥**
**ಏಕ ಕಹಹಿಂ ಭಲ ಭೂಪತಿ ಕೀನ್ಹಾ। ಲೋಯನ ಲಾಹು ಹಮಹಿ ಬಿಧಿ ದೀನ್ಹಾ॥**
**ತಬ ನಿಷಾದಪತಿ ಉರ ಅನುಮಾನಾ। ತರು ಸಿಂಸುಪಾ ಮನೋಹರ ಜಾನಾ॥ ೨ ॥**
**ಲೈ ರಘುನಾಥಹಿ ಠಾಉಁ ದೆಖಾವಾ। ಕಹೆಉ ರಾಮ ಸಬ ಭಾಂತಿ ಸುಹಾವಾ॥**
**ಪುರಜನ ಕರಿ ಜೊಹಾರು ಘರ ಆಏ। ರಘುಬರ ಸಂಧ್ಯಾ ಕರನ ಸಿಧಾಏ॥ ೩ ॥**
**ಗುಹಁ ಸಂವಾರಿ ಸಾಂಥರೀ ಡಸಾಈ। ಕುಸ ಕಿಸಲಯಮಯ ಮೃದುಲ ಸುಹಾಈ॥**
**ಸುಚಿ ಫಲ ಮೂಲ ಮಧುರ ಮೃದು ಜಾನೀ। ದೋನಾ ಭರಿ ಭರಿ ರಾಖೇಸಿ ಪಾನೀ॥ ೪ ॥**

ಶ್ರೀರಾಮ, ಲಕ್ಷ್ಮಣ, ಸೀತೆ ಇವರ ಸೌಂದರ್ಯವನ್ನು ಕಂಡು ಗ್ರಾಮದ ನರ-ನಾರಿಯರು ಪ್ರೇಮದಿಂದ ಮಾತನಾಡಿಕೊಳ್ಳತೊಡಗಿದರು. ಓರ್ವಳು ಹೇಳಿದಳು – ''ಸಖೀ! ಇಂತಹ ಸುಕುಮಾರರನ್ನು ಕಾಡಿಗೆ ಕಳಿಸಿದ ಆ ತಂದೆ-ತಾಯಿಗಳು ಎಂಥವರು?'' ಮತ್ತೊಬ್ಬರು ಹೇಳಿದರು – ''ರಾಜನು ಮಾಡಿದ್ದು ಒಳ್ಳೆಯದೇ ಆಯಿತು. ಈ ನೆಪದಲ್ಲಾದರೂ ವಿಧಿಯು ನಮಗೆ ನೇತ್ರಾನಂದವನ್ನು ಕರುಣಿಸಿದನು.'' ಆಗ ನಿಷಾದರಾಜನು ರಾಮಲಕ್ಷ್ಮಣ ಸೀತೆಯರಿಗೆ ಉಳಿದುಕೊಳ್ಳಲು ಅಶೋಕವೃಕ್ಷದ ಆಸರೆಯೇ ಸರಿಯಾದುದು ಎಂದು ಮನದಲ್ಲಿ ಯೋಚಿಸಿ, ರಾಮನಿಗೆ ಆ ತಾಣವನ್ನು ತೋರಿಸಿದನು. ಅದನ್ನು ಕಂಡು ಶ್ರೀರಾಮನು – 'ಇದು ಎಲ್ಲ ರೀತಿಯಿಂದಲೂ ಚೆಲುವಾಗಿದೆ' ಎಂದು ಸಂತೋಷವ್ಯಕ್ತಪಡಿಸಿದನು. ಊರ ಜನರು ಶ್ರೀರಾಮನಿಗೆ ವಂದಿಸಿ, ತಮ್ಮ-ತಮ್ಮ ಮನೆಗಳಿಗೆ ತೆರಳಿದರು. ಶ್ರೀರಾಮಲಕ್ಷ್ಮಣರು ಸಂಧ್ಯಾವಂದನೆಗಾಗಿ ನದಿಯಕಡೆಗೆ ತೆರಳಿದರು. ಅಷ್ಟರಲ್ಲಿ ಗುಹನು ದರ್ಭೆ ಹಾಗೂ ಮೃದುವಾದ ಎಲೆ-ಚಿಗುರುಗಳಿಂದ ಮೆತ್ತನೆಯ ಹಾಸಿಗೆಯನ್ನು ಅಣಿಗೊಳಿಸಿದನು. ನಿರ್ಮಲ ಮಧುರವಾದ ಕಂದ, ಮೂಲ, ಫಲಗಳನ್ನು ದೊನ್ನೆಗಳಲ್ಲಿ ತುಂಬಿ-ತುಂಬಿ ಇರಿಸಿದನು. ಹಾಗೇ ಕುಡಿಯಲು ನೀರನ್ನೂ ಅಣಿಗೊಳಿಸಿಟ್ಟನು. (ಚೌ/೧-೪)

**ದೋ – ಸಿಯ ಸುಮಂತ್ರ ಭ್ರಾತಾ ಸಹಿತ ಕಂದ ಮೂಲ ಫಲ ಖಾಇ।**
**ಸಯನ ಕೀನ್ಹ ರಘುಬಂಸಮನಿ ಪಾಯ ಪಲೋಟತ ಭಾಇ ॥ ೮೯ ॥**

ಶ್ರೀರಾಮನು ಸೀತಾ, ಲಕ್ಷ್ಮಣ, ಸುಮಂತ್ರರೊಂದಿಗೆ ಕಂದ ಮೂಲ ಫಲಗಳನ್ನು ಭುಂಜಿಸಿ, ಮತ್ತೆ ರಘುಕುಲಮಣಿ ಶ್ರೀರಾಮನು ಪವಡಿಸಿದನು. ಲಕ್ಷ್ಮಣನು ಅವನ ಕಾಲೊತ್ತತೊಡಗಿದನು. (ದೋ/೮೯)

**ಚೌ – ಉಠೇ ಲಖನು ಪ್ರಭು ಸೋವತ ಜಾನೀ। ಕಹಿ ಸಚಿಬಹಿ ಸೋವನ ಮೃದು ಬಾನೀ॥**
**ಕಛುಕ ದೂರಿ ಸಜಿ ಬಾನ ಸರಾಸನ। ಜಾಗನ ಲಗೇ ಬೈಠಿ ಬೀರಾಸನ ॥ ೧ ॥**
**ಗುಹ್ ಬೊಲಾಇ ಪಾಹರೂ ಪ್ರತೀತೀ। ಠಾವ್ ಠಾವ್ ರಾಖೇ ಅತಿ ಪ್ರೀತೀ ॥**
**ಆಪು ಲಖನ ಪಹಿಂ ಬೈಠೆಉ ಜಾಈ। ಕಟಿ ಭಾಥೀ ಸರ ಚಾಪ ಚಢಾಈ ॥ ೨ ॥**
**ಸೋವತ ಪ್ರಭುಹಿ ನಿಹಾರಿ ನಿಷಾದೂ। ಭಯಉ ಪ್ರೇಮ ಬಸ ಹೃದಯ್ ಬಿಷಾದೂ ॥**
**ತನು ಪುಲಕಿತ ಜಲು ಲೋಚನ ಬಹಈ। ಬಚನ ಸಪ್ರೇಮ ಲಖನ ಸನ ಕಹಈ ॥ ೩ ॥**
**ಭೂಪತಿ ಭವನ ಸುಭಾಯ್ ಸುಹಾವಾ। ಸುರಪತಿ ಸದನು ನ ಪಟತರ ಪಾವಾ॥**
**ಮನಿಮಯ ರಚಿತ ಚಾರು ಚೌಬಾರೇ। ಜನು ರತಿಪತಿ ನಿಜ ಹಾಥ ಸ್ವಾರೇ॥ ೪ ॥**

ಶ್ರೀರಾಮನು ನಿದ್ರಿಸಿರುವುದನ್ನು ಕಂಡು, ಲಕ್ಷ್ಮಣನು ಎದ್ದು ಮಂತ್ರಿ ಸುಮಂತ್ರನಿಗೆ ಮಲಗಲು ಹೇಳಿ, ಅವನು ಧನುರ್ಬಾಣಗಳನ್ನು ಧರಿಸಿ ತುಸುದೂರ ಹೋಗಿ ವೀರಾಸನದಲ್ಲಿ ಕುಳಿತು ಕಾವಲು ಕಾಯತೊಡಗಿದನು. ಗುಹನು ತನ್ನ ವಿಶ್ವಾಸಪಾತ್ರರಾದ ಪಹರೆಯವರನ್ನು ಕರೆದು ಅಲ್ಲಲ್ಲಿ ನೇಮಿಸಿದನು. ತಾನು ಸ್ವತಃ ಸೊಂಟಕ್ಕೆ ಬತ್ತಳಿಕೆ ಕಟ್ಟಿಕೊಂಡು, ಬಿಲ್ಲಿಗೆ ಹೆದೆಯೇರಿಸಿ ಲಕ್ಷ್ಮಣನ ಬಳಿಗೆ ಬಂದು ಕುಳಿತನು. ಪ್ರಭುವು ನೆಲದಮೇಲೆ ಮಲಗಿ ನಿದ್ರಿಸುತ್ತಿರುವುದನ್ನು ಕಂಡು ನಿಷಾದರಾಜನಿಗೆ ಹೆಚ್ಚಾದ ವಿಷಾದವಾಯಿತು. ಅವನ ಮೈ ಹೊಂಪುಳಿಗೊಂಡಿತು. ಕಣ್ಣಿನಿಂದ ಪ್ರೇಮಾಶ್ರುಗಳು ಕೋಡಿಯಾಗಿ ಹರಿದವು. ಅವನು ಪ್ರೇಮಗದ್ಗದಿತನಾಗಿ ಲಕ್ಷ್ಮಣನ ಬಳಿ ಹೇಳಿದ – 'ದಶರಥ ಮಹಾರಾಜರ ಅರಮನೆ ಇಂದ್ರನ ಭವನವನ್ನೂ ಏಳಿಸುವಂತಹುದು. ಅದರಲ್ಲಿ ಮಣಿಮಯ ಮಹಡಿಗಳಿವೆ. ಅವುಗಳನ್ನು ಸ್ವತಃ ಕಾಮದೇವನೇ ನಿರ್ಮಿಸಿರುವನೋ ಎಂಬಂತೆ ಕಂಗೊಳಿಸುತ್ತವೆ. (ಚೌ/೧-೪)

**ದೋ – ಸುಚಿ ಸುಬಿಚಿತ್ರ ಸುಭೋಗಮಯ ಸುಮನ ಸುಗಂಧ ಸುಬಾಸ।**
**ಪಲ್ಂಗ ಮಂಜು ಮನಿದೀಪ ಜಹ್ ಸಬ ಬಿಧಿ ಸಕಲ ಸುಪಾಸ ॥ ೯೦ ॥**

ಆ ಅರಮನೆಯು ಪವಿತ್ರವೂ, ವಿಲಕ್ಷಣವೂ ಆದ ಸಮಸ್ತ ಬೋಗ ಸಾಮಗ್ರಿಗಳಿಂದ ಪೂರ್ಣವಾಗಿದೆ. ಕುಸುಮಗಳ ಪರಿಮಳದಿಂದ ಗಮಗಮಿಸುವಂತಹುದು. ಅಲ್ಲಿ ಚೆಲುವಾದ ಮಂಚಗಳಿವೆ. ಮಣಿದೀಪಗಳಿವೆ. ಎಲ್ಲ ವಿಧವಾದ ಸುಖ-ಸೌಲಭ್ಯಗಳಿವೆ. (ದೋ/೯೦)

**ಚೌ – ಬಿಬಿಧ ಬಸನ ಉಪಧಾನ ತುರಾಈಂ। ಛೀರ ಫೇನ ಮೃದು ಬಿಸದ ಸುಹಾಈಂ॥**
**ತಹ್ ಸಿಯ ರಾಮು ಸಯನ ನಿಸಿ ಕರಹೀಂ। ನಿಜ ಛಬಿ ರತಿ ಮನೋಜ ಮದು ಹರಹೀಂ॥ ೧ ॥**
**ತೇ ಸಿಯ ರಾಮು ಸಾಥರೀಂ ಸೋಏ। ಶ್ರಮಿತ ಬಸನ ಬಿನು ಜಾಹಿಂ ನ ಜೋಏ॥**
**ಮಾತು ಪಿತಾ ಪರಿಜನ ಪುರಬಾಸೀ। ಸಖಾ ಸುಸೀಲ ದಾಸ ಅರು ದಾಸೀ ॥ ೨ ॥**
**ಜೋಗವಹಿಂ ಜಿನ್ಹಹಿ ಪ್ರಾನ ಕೀ ನಾಈಂ। ಮಹಿ ಸೋವತ ತೇಇ ರಾಮ ಗೊಸಾಈಂ॥**
**ಪಿತಾ ಜನಕ ಜಗ ಬಿದಿತ ಪ್ರಭಾಊ। ಸಸುರ ಸುರೇಸ ಸಖಾ ರಘುರಾಊ ॥ ೩ ॥**
**ರಾಮಚಂದು ಪತಿ ಸೋ ಬೈದೇಹೀ। ಸೋವತ ಮಹಿ ಬಿಧಿ ಬಾಮ ನ ಕೇಹೀ ॥**
**ಸಿಯ ರಘುಬೀರ ಕಿ ಕಾನನ ಜೋಗೂ। ಕರಮ ಪ್ರಧಾನ ಸತ್ಯ ಕಹ ಲೋಗೂ ॥ ೪ ॥**

ಮಂಚದ ಮೇಲೆ ಮೆತ್ತನೆಯ ಹಾಸಿಗೆ ಇದ್ದು, ಹಾಸಿ-ಹೊದೆಯಲು ಹಾಲಿನ ನೊರೆಯಂತಹ ಉಜ್ವಲವೂ, ಕೋಮಲವೂ, ಸುಂದರವೂ ಆದ ಅನೇಕ ವಸ್ತ್ರಗಳೂ, ದಿಂಬುಗಳೂ ಇವೆ. ಅಂತಹ ದಿವ್ಯವಾದ ಮಂಚದಲ್ಲಿ ಸೀತಾರಾಮರು ಇರುಳು ಕಳೆಯುತ್ತಿದ್ದರು. ಅವರು ತಮ್ಮ ಶೋಭೆಯಿಂದ ರತಿ-ಮನ್ಮಥರ ಗರ್ವವನ್ನೂ ಹರಣಮಾಡುತ್ತಿದ್ದರು. ಅಂತಹ ಸೀತಾರಾಮರು ಇಂದು ಈ ಹುಲ್ಲು-ಎಲೆಗಳ ಹಾಸಿಗೆಯ ಮೇಲೆ ವಸ್ತ್ರಗಳಿಲ್ಲದೆ ಮಲಗಿದ್ದಾರಲ್ಲ! ಅಯ್ಯೋ! ಇವರ ಸ್ಥಿತಿಯನ್ನು

ನೋಡಲಾಗುವುದಿಲ್ಲ. ತಾಯಿ, ತಂದೆ, ಕುಟುಂಬ ಪರಿವಾರದವರು, ಪುರಜನರು, ಪ್ರಿಯಜನರು, ಸುಶೀಲರಾದ ದಾಸ-ದಾಸಿಯರೂ, ಇವರೆಲ್ಲ ಇವರನ್ನು ತಮ್ಮ ಪ್ರಾಣಕ್ಕಿಂತಲೂ ಮಿಗಿಲಾಗಿ ಕಂಡು ಸೇವೆ ಸಲ್ಲಿಸುತ್ತಿದ್ದರು. ಅಂತಹ ಪ್ರಭು ರಾಮಚಂದ್ರನು ಇಂದು ನೆಲದಮೇಲೆ ಮಲಗಿದ್ದಾನೆ. ಜಗದ್ವಿಖ್ಯಾತ ಪ್ರಭಾವವುಳ್ಳ ಜನಕಮಹಾರಾಜರ ಮಗಳೂ, ಸುರೇಶಸಖನಾದ ದಶರಥನಿಗೆ ಸೊಸೆಯೂ, ಪುರಷೋತ್ತಮನಾದ ಶ್ರೀರಾಮಚಂದ್ರನಿಗೆ ಪತ್ನಿಯೂ ಆಗಿರುವ ಸೀತಾದೇವಿಯು ಇಂದು ನೆಲದ ಮೇಲೆ ಮಲಗಿರುವಳು. ವಿಧಾತನು ಯಾರಿಗೆ ತಾನೇ ಪ್ರತಿಕೂಲನಾಗುವುದಿಲ್ಲ? ಸೀತಾರಾಮರು ಕಾಡಿನಲ್ಲಿರಲು ಅರ್ಹರೇ? 'ದೈವದ ಮುಂದೆ ಯಾರದೂ ಏನೂ ನಡೆಯುವುದಿಲ್ಲ' ಎಂದು ಜನ ಹೇಳುವುದು ಸತ್ಯವಾಗಿದೆ. (ಚೌ/೧-೪)

**ದೋ – ಕೈಕಯನಂದಿನಿ ಮಂದಮತಿ ಕಠಿನ ಕುಟಿಲಪನು ಕೀನ್ಹ।**
**ಜೆಹಿಂ ರಘುನಂದನ ಜಾನಕಿಹಿ ಸುಖ ಅವಸರ ದುಖು ದೀನ್ಹ॥ ೯೧ ॥**

ಕೈಕಯರಾಜನ ಕುಮಾರಿ ಕೈಕೇಯಿಯು ತುಂಬಾ ಕುಟಿಲ ಕೆಲಸಮಾಡಿದಳು. ಆಕೆ ಸೀತಾರಾಮರಿಗೆ ಸುಖಪಡುವ ಕಾಲದಲ್ಲಿ ಕಷ್ಟಕೊಟ್ಟಳಲ್ಲ! (ದೋ/೯೧)

**ಚೌ – ಭಇ ದಿನಕರ ಕುಲ ಬಿಟಪ ಕುಠಾರೀ। ಕುಮತಿ ಕೀನ್ಹ ಸಬ ಬಿಸ್ವ ದುಖಾರೀ ॥**
**ಭಯಉ ಬಿಷಾದು ನಿಷಾದಹಿ ಭಾರೀ। ರಾಮ ಸೀಯ ಮಹಿ ಸಯನ ನಿಹಾರೀ॥ ೧ ॥**
**ಬೋಲೇ ಲಖನ ಮಧುರ ಮೃದು ಬಾನೀ। ಗ್ಯಾನ ಬಿರಾಗ ಭಗತಿ ರಸ ಸಾನೀ ॥**
**ಕಾಹು ನ ಕೋಉ ಸುಖ ದುಖ ಕರ ದಾತಾ। ನಿಜ ಕೃತ ಕರಮ ಭೋಗ ಸಬು ಭ್ರಾತಾ ॥ ೨ ॥**
**ಜೋಗ ಬಿಯೋಗ ಭೋಗ ಭಲ ಮಂದಾ। ಹಿತ ಅನಹಿತ ಮಧ್ಯಮ ಭ್ರಮ ಫಂದಾ ॥**
**ಜನಮು ಮರನು ಜಹಁ ಲಗಿ ಜಗ ಜಾಲೂ। ಸಂಪತಿ ಬಿಪತಿ ಕರಮು ಅರು ಕಾಲೂ ॥ ೩ ॥**
**ಧರನಿ ಧಾಮು ಧನು ಪುರ ಪರಿವಾರೂ। ಸರಗು ನರಕು ಜಹಁ ಲಗಿ ಬ್ಯವಹಾರೂ ॥**
**ದೇಖಿಅ ಸುನಿಅ ಗುನಿಅ ಮನ ಮಾಹೀಂ। ಮೋಹ ಮೂಲ ಪರಮಾರಥು ನಾಹೀಂ ॥ ೪ ॥**

ಅವಳು ಸೂರ್ಯವಂಶವೆಂಬ ಮರಕ್ಕೆ ಕೊಡಲಿಯಾದಳು. ಆ ಕುಮತಿಯು ಇಡೀ ಜಗತ್ತನ್ನೇ ಅಳಲಿನ ಕಡಲಿಗೆ ನೂಕಿದಳು. ಸೀತಾರಾಮರು ನೆಲದ ಮೇಲೆ ಮಲಗಿರುವುದನ್ನು ಕಂಡು ಗುಹನಿಗೆ ಅತೀವ ವಿಷಾದವುಂಟಾಯಿತು. ಆಗ ಲಕ್ಷ್ಮಣನು ಜ್ಞಾನ, ವೈರಾಗ್ಯ, ಹಾಗೂ ಭಕ್ತಿರಸದಿಂದ ಆರ್ದ್ರವಾದ ಮಾತುಗಳನ್ನು ಆಡಿದನು – ''ಸೋದರಾ! ಯಾರೂ ಯಾರಿಗೂ ಸುಖ, ದುಃಖಗಳನ್ನು ಕೊಡಲಾರರು. ಎಲ್ಲರೂ ತಮ್ಮ-ತಮ್ಮ ಕರ್ಮದ ಫಲವನ್ನೇ ಅನುಭವಿಸುತ್ತಾರೆ. ಸಂಯೋಗ-ವಿಯೋಗಗಳೂ, ಒಳ್ಳೆಯ-ಕೆಟ್ಟ ಭೋಗಗಳೂ, ಶತ್ರು-ಮಿತ್ರ-ಉದಾಸೀನ ಇವರೆಲ್ಲರೂ, ಭ್ರಾಂತಿಯ ಬಲೆಗಳು. ಜನನ-ಮರಣ, ಸಂಪತ್ತು-ವಿಪತ್ತು, ಕರ್ಮ-ಕಾಲ, ಭೂಮಿ, ಮನೆ, ಧನ, ಊರು, ಪರಿವಾರ, ಸ್ವರ್ಗ, ನರಕ ಮೊದಲಾದ ನೋಡಲು, ಕೇಳಲು, ವಿಚಾರಮಾಡಲು ಬರುವ ಎಲ್ಲ ಸಾಂಸಾರಿಕ ವ್ಯವಹಾರಗಳ ಮೂಲ ಅಜ್ಞಾನವೇ ಆಗಿದೆ. ನಿಜವಾಗಿ ಇವಾವುದೂ ಸತ್ಯವಾದವುಗಳಲ್ಲ. (ಚೌ/೧-೪)

**ದೋ – ಸಪನೇಂ ಹೋಇ ಭಿಖಾರಿ ನೃಪು ರಂಕು ನಾಕಪತಿ ಹೋಇ।**
**ಜಾಗೇಂ ಲಾಭು ನ ಹಾನಿ ಕಛು ತಿಮಿ ಪ್ರಪಂಚ ಜಿಯಁ ಜೋಇ॥ ೯೨ ॥**

ಕನಸಿನಲ್ಲಿ ರಾಜನು ತಿರುಕನಾದರೆ, ಇಲ್ಲವೇ ತಿರುಕ ಇಂದ್ರನಾದರೆ, ಸ್ವಪ್ನಕಳೆದು ಎಚ್ಚರವಾದಾಗ ಲಾಭ-ನಷ್ಟಗಳು ಯಾವುದೂ ಇರದಂತೆ, ಈ ದೃಶ್ಯಪ್ರಪಂಚದ ಸತ್ಯತೆಯನ್ನು ಅರಿಯಬೇಕು. (ದೋ/೯೨)

**ಚೌ – ಅಸ ಬಿಚಾರಿ ನಹಿಂ ಕೀಜಿಅ ರೋಸೂ। ಕಾಹುಹಿ ಬಾದಿ ನ ದೇಇಅ ದೋಸೂ ॥**
**ಮೋಹ ನಿಸಾಁ ಸಬು ಸೋವನಿಹಾರಾ। ದೇಖಿಅ ಸಪನ ಅನೇಕ ಪ್ರಕಾರಾ ॥ ೧ ॥**
**ಏಹಿಂ ಜಗ ಜಾಮಿನಿ ಜಾಗಹಿಂ ಜೋಗೀ। ಪರಮಾರಥೀ ಪ್ರಪಂಚ ಬಿಯೋಗೀ ॥**
**ಜಾನಿಅ ತಬಹಿಂ ಜೀವ ಜಗ ಜಾಗಾ। ಜಬ ಸಬ ಬಿಷಯ ಬಿಲಾಸ ಬಿರಾಗಾ ॥ ೨ ॥**
**ಹೋಇ ಬಿಬೇಕು ಮೋಹ ಭ್ರಮ ಭಾಗಾ। ತಬ ರಘುನಾಥ ಚರನ ಅನುರಾಗಾ ॥**
**ಸಖಾ ಪರಮ ಪರಮಾರಥು ಏಹೂ। ಮನ ಕ್ರಮ ಬಚನ ರಾಮ ಪದ ನೇಹೂ ॥ ೩ ॥**
**ರಾಮ ಬ್ರಹ್ಮ ಪರಮಾರಥ ರೂಪಾ। ಅಬಿಗತ ಅಲಖ ಅನಾದಿ ಅನೂಪಾ ॥**
**ಸಕಲ ಬಿಕಾರ ರಹಿತ ಗತಭೇದಾ। ಕಹಿ ನಿತ ನೇತಿ ನಿರೂಪಹಿಂ ಬೇದಾ ॥ ೪ ॥**

ಹೀಗೆ ಆಲೋಚಿಸಿ ನಾವು ಯಾರ ಮೇಲಾದರೂ ಕೋಪಿಸಿಕೊಳ್ಳುವುದಾಗಲೀ, ದೋಷಾರೋಪಣೆ ಮಾಡುವುದಾಗಲೀ ಕೂಡದು. ಎಲ್ಲರೂ ಮೋಹ ನಿಶೆಯಲ್ಲಿ ಮಲಗಿ ನಿದ್ರಿಸುವವರೇ. ಮಲಗಿರುವಾಗ ಅವರಿಗೆ ಅನೇಕ ವಿಧವಾದ ಸ್ವಪ್ನಗಳು ಬೀಳುತ್ತವೆ. ಈ ಜಗತ್ತೆಂಬ ರಾತ್ರಿಯಲ್ಲಿ ಪರಮಾರ್ಥಿಗಳಾದ, ಪ್ರಪಂಚ ವಿಯೋಗಿಗಳಾದ ಯೋಗಿಗಳು ಎಚ್ಚರವಾಗಿರುತ್ತಾರೆ. ಎಲ್ಲ ವಿಧವಾದ ಭೋಗವಿಲಾಸಗಳಲ್ಲಿ ಜಿಹಾಸೆಯುಂಟಾದಾಗ ಜೀವಿಯು ಎಚ್ಚತ್ತಿರುವುದು ಎಂದು ತಿಳಿಯಬೇಕು. ವಿವೇಕ ಉಂಟಾದಾಗ ಮೋಹರೂಪೀಯಾದ ಭ್ರಮೆಯು ದೂರವಾಗುತ್ತದೆ. ಈ ಪ್ರಕಾರ ಅಜ್ಞಾನನಾಶವಾದ ಬಳಿಕ ಶ್ರೀರಘುನಾಥನ ಚರಣಗಳಲ್ಲಿ ಪ್ರೇಮವುಂಟಾಗುತ್ತದೆ. ಮಿತ್ರನೇ! ಮನ, ವಚನ, ಕರ್ಮಗಳಲ್ಲಿ ಶ್ರೀರಾಮನ ಪಾದಗಳಲ್ಲಿ ಪ್ರೇಮ ಉಂಟಾಗುವುದೇ ಪರಮ ಪುರುಷಾರ್ಥವಾಗಿದೆ. ಶ್ರೀರಾಮನು ಪರಮಾರ್ಥಸ್ವರೂಪಿಯಾದ ಪರಬ್ರಹ್ಮನು. ಅವನು ಅನಿರ್ದೇಶ್ಯ ಸ್ವರೂಪನೂ, ಅಗೋಚರನೂ, ಆದ್ಯಂತ ರಹಿತನೂ, ಉಪಮಾರಹಿತನೂ, ಅವಿಕಾರಿಯೂ, ಭೇದಶೂನ್ಯನೂ, ವೇದಗಳು ನೇತಿ-ನೇತಿ ಎಂದು ನಿರ್ದೇಶಿಸುವವನೂ ಆಗಿರುವನು. (ಚೌ/೧-೪)

**ದೋ – ಭಗತ ಭೂಮಿ ಭೂಸುರ ಸುರಭಿ ಸುರ ಹಿತ ಲಾಗಿ ಕೃಪಾಲ।**
**ಕರತ ಚರಿತ ಧರಿ ಮನುಜ ತನು ಸುನತ ಮಿಟಹಿಂ ಜಗ ಜಾಲ॥ ೯೩ ॥**

ಅಂತಹ ಕೃಪಾಳುವಾದ ಶ್ರೀರಾಮನು – ಭಕ್ತರು, ಭೂಮಿ, ಗೋವು, ಬ್ರಾಹ್ಮಣ, ದೇವತೆಗಳು, ಇವರೆಲ್ಲರ ಹಿತಕ್ಕಾಗಿ ನರಶರೀರವನ್ನು ಧರಿಸಿ, ಲೀಲೆಗಳನ್ನು ಮಾಡುತ್ತಿದ್ದಾನೆ. ಅವುಗಳ ಶ್ರವಣದಿಂದಲೇ ಭವ-ಬಂಧನಗಳಿಂದ ನಾವು ಬಿಡುಗಡೆಹೊಂದುತ್ತೇವೆ.'' (ದೋ/೯೩)

**ಮಾಸಪಾರಾಯಣದ ಹದಿನೈದನೆಯ ವಿಶ್ರಾಮ**

**ಚೌ – ಸಖಾ ಸಮುಝಿ ಅಸ ಪರಿಹರಿ ಮೋಹೂ। ಸಿಯ ರಘುಬೀರ ಚರನ ರತ ಹೋಹೂ॥**
**ಕಹತ ರಾಮ ಗುನ ಭಾ ಭಿನುಸಾರಾ। ಜಾಗೇ ಜಗ ಮಂಗಲ ಸುಖದಾರಾ॥ ೧ ॥**
**ಸಕಲ ಸೌಚ ಕರಿ ರಾಮ ನಹಾವಾ। ಸುಚಿ ಸುಜಾನ ಬಟ ಛೀರ ಮಗಾವಾ॥**
**ಅನುಜ ಸಹಿತ ಸಿರ ಜಟಾ ಬನಾಏ। ದೇಖಿ ಸುಮಂತ್ರ ನಯನ ಜಲ ಛಾಏ॥ ೨ ॥**
**ಹೃದಯಂ ದಾಹು ಅತಿ ಬದನ ಮಲೀನಾ। ಕಹ ಕರ ಜೋರಿ ಬಚನ ಅತಿ ದೀನಾ॥**
**ನಾಥ ಕಹೆಉ ಅಸ ಕೋಸಲನಾಥಾ। ಲೈ ರಥು ಜಾಹು ರಾಮ ಕೇಂ ಸಾಥಾ॥ ೩ ॥**
**ಬನು ದೇಖಾಇ ಸುರಸರಿ ಅನ್ಹವಾಈ। ಆನೇಹು ಫೇರಿ ಬೇಗಿ ದೋಉ ಭಾಈ॥**
**ಲಖನು ರಾಮು ಸಿಯ ಆನೇಹು ಫೇರೀ। ಸಂಸಯ ಸಕಲ ಸಂಕೋಚ ನಿಬೇರೀ॥ ೪ ॥**

ಲಕ್ಷ್ಮಣನು ಹೇಳುತ್ತಾನೆ– ''ಮಿತ್ರನೇ! ಇದನ್ನು ಗ್ರಹಿಸಿ ಮೋಹವನ್ನು ತೊರೆದು ಶ್ರೀರಾಮನ ಚರಣಗಳಲ್ಲಿ ಅನುರಕ್ತನಾಗು.'' ಈ ಪ್ರಕಾರ ಶ್ರೀರಾಮಚಂದ್ರನ ಗುಣಗಳನ್ನು ಹೇಳುತ್ತಿರುವಂತೆ, ಬೆಳಗಾಯಿತು. ಆಗ ಜಗತ್ತಿಗೆ ಮಂಗಳಕಾರಿಯೂ, ಸುಖದಾಯಿಯೂ ಆದ ಶ್ರೀರಾಮನು ಎದ್ದನು. ಸಚ್ಛೀಲನಾದ ಶ್ರೀರಾಮನು ಸ್ನಾನಾದಿ ನಿತ್ಯಕರ್ಮಗಳನ್ನು ಆಚರಿಸಿದ ಬಳಿಕ ಆಲದ ಹಾಲನ್ನು ತರಿಸಿ, ಅದರಿಂದ ಲಕ್ಷ್ಮಣನೊಂದಿಗೆ ಜಟೆಗಳನ್ನು ಕಟ್ಟಿಕೊಂಡನು. ಇದನ್ನು ನೋಡಿದ ಸುಮಂತ್ರನ ಕಣ್ಣುಗಳು ತುಂಬಿಬಂದವು. ಎದೆಯಲ್ಲಿ ಬೆಂಕಿಯಿಟ್ಟಂತಾಯಿತು. ಮುಖಮಲಿನವಾಯಿತು. ಅವನು ಕೈಜೋಡಿಸಿ ಅತ್ಯಂತ ದೀನನಾಗಿ ಇಂತು ವಿನಂತಿಸಿಕೊಂಡನು – ''ಪ್ರಭೂ! ಕೋಸಲನಾಥ ದಶರಥ ಮಹಾರಾಜರು ನನ್ನನ್ನೇ – ''ರಥವನ್ನು ತೆಗೆದುಕೊಂಡು ಶ್ರೀರಾಮನ ಜೊತೆಗೆ ಹೋಗು. ಕಾಡನ್ನು ತೋರಿಸಿ, ಗಂಗಾಸ್ನಾನಮಾಡಿಸಿ, ಅಣ್ಣ-ತಮ್ಮಂದಿರಿಬ್ಬರನ್ನೂ ಬೇಗ ಮರಳಿ ಕರೆದುಕೊಂಡು ತಾ. ಸಮಸ್ತ ಸಂಶಯ, ಸಂಕೋಚಗಳನ್ನು ತೊರೆದು ರಾಮ, ಲಕ್ಷ್ಮಣ, ಸೀತೆಯರನ್ನು ಕರೆದು ತಾ'' ಎಂದು ಆಜ್ಞಾಪಿಸಿರುವನು. (ಚೌ/೧-೪)

**ದೋ – ನೃಪ ಅಸ ಕಹೆಉ ಗೊಸಾಈಂ ಜಸ ಕಹಇ ಕರೌಂ ಬಲಿ ಸೋಇ।**
**ಕರಿ ಬಿನತೀ ಪಾಯನ್ಹ ಪರೆಉ ದೀನ್ಹ ಬಾಲ ಜಿಮಿ ರೋಇ॥ ೯೪ ॥**

''ಒಡೆಯಾ! ಮಹಾರಾಜರು ಹೀಗೆ ಅಪ್ಪಣೆ ಮಾಡಿದ್ದರು. ಈಗ ನೀವು ಅಪ್ಪಣೆ ಕೊಡುವಂತೆ ನಡೆಯುತ್ತೇನೆ.'' ಈ ಪ್ರಕಾರ ವಿನಂತಿಸಿಕೊಂಡು ಸುಮಂತ್ರನು ಶ್ರೀರಾಮನ ಕಾಲುಗಳನ್ನು ಹಿಡಿದುಕೊಂಡು ಮಕ್ಕಳಂತೆ ಅತ್ತುಬಿಟ್ಟನು. (ದೋ/೯೪)

**ಚೌ – ತಾತ ಕೃಪಾ ಕರಿ ಕೀಜಿಅ ಸೋಈ। ಜಾತೇಂ ಅವಧ ಅನಾಥ ನ ಹೋಈ॥**
**ಮಂತ್ರಿಹಿ ರಾಮ ಉಠಾಇ ಪ್ರಬೋಧಾ। ತಾತ ಧರಮ ಮತು ತುಮ್ಹ ಸಬು ಸೋಧಾ॥ ೧ ॥**

**ಸಿಬಿ ದಧೀಚ ಹರಿಚಂದ ನರೇಸಾ। ಸಹೇ ಧರಮ ಹಿತ ಕೋಟಿ ಕಲೇಸಾ ॥**
**ರಂತಿದೇವ ಬಲಿ ಭೂಪ ಸುಜಾನಾ। ಧರಮು ಧರೇಉ ಸಹಿ ಸಂಕಟ ನಾನಾ ॥ ೨ ॥**
**ಧರಮು ನ ದೂಸರ ಸತ್ಯ ಸಮಾನಾ। ಆಗಮ ನಿಗಮ ಪುರಾನ ಬಖಾನಾ ॥**
**ಮೈಂ ಸೋಇ ಧರಮು ಸುಲಭ ಕರಿ ಪಾವಾ। ತಜೇಂ ತಿಹೂಂ ಪುರ ಅಪಜಸು ಛಾವಾ ॥ ೩ ॥**
**ಸಂಭಾವಿತ ಕಹುಂ ಅಪಜಸ ಲಾಹೂ। ಮರನ ಕೋಟಿ ಸಮ ದಾರುನ ದಾಹೂ ॥**
**ತುಮ್ಹ ಸನ ತಾತ ಬಹುತ ಕಾ ಕಹಊಂ। ದಿಏಂ ಉತರು ಫಿರಿ ಪಾತಕು ಲಹಊಂ॥ ೪ ॥**

ಮತ್ತೆ ಹೇಳತೊಡಗಿದನು – ''ಅಪ್ಪಾ! ದಯಮಾಡಿ ಅಯೋಧ್ಯೆಯು ಅನಾಥವಾಗದ ಹಾಗೆ, ಏನಾದರೂ ಮಾಡಿರಿ.'' ಶ್ರೀರಾಮನು ಮಂತ್ರಿಯನ್ನು ಎಬ್ಬಿಸಿ, ಧೈರ್ಯಹೇಳುತ್ತಾ ಸಮಜಾಯಿಸಿ ನುಡಿದನು – ''ಅಯ್ಯಾ ಸುಮಂತ್ರರೇ! ನೀವು ಧರ್ಮಸಿದ್ಧಾಂತಗಳನ್ನೆಲ್ಲ ಜಾಲಾಡಿಸಿ ಬಿಟ್ಟಿದ್ದೀರಿ. ರಾಜಾ ಶಿಬಿ, ದಧೀಚಿ, ಹರಿಶ್ಚಂದ್ರರು ಧರ್ಮಕ್ಕಾಗಿ ಕೋಟಿ ಕಷ್ಟಗಳನ್ನು ಸಹಿಸಿದರು. ಪ್ರಾಜ್ಞರಾದ ರಂತಿದೇವ, ಬಲಿ ಮುಂತಾದವರು ಅನೇಕ ಕಷ್ಟಗಳನ್ನು ಸಹಿಸಿ ಧರ್ಮವನ್ನು ಪಾಲಿಸಿರುವರು. ಸತ್ಯಪಾಲನೆಗೆ ಸಮಾನವಾದ ಧರ್ಮವಿಲ್ಲವೆಂದು ನಿಗಮಾಗಮ ಪುರಾಣಗಳಲ್ಲಿ ಹೇಳಿದೆ. ಆ ಧರ್ಮವು ನನಗೆ ಸಹಜವಾಗಿ ಲಭಿಸಿದೆ. ಈ ಸತ್ಯಧರ್ಮವನ್ನು ತೊರೆಯುವುದರಿಂದ ತ್ರಿಭುವನಗಳಲ್ಲಿಯೂ ಅಪಕೀರ್ತಿ ಸಂಭವಿಸುವುದು. ಗೌರವಾನ್ವಿತ ವ್ಯಕ್ತಿಗೆ ಅಪಕೀರ್ತಿಯು ಕೋಟಿ ಮರಣದಂತೆ ದಾರುಣವಾದ ಸಂತಾಪಗಳನ್ನು ಕೊಡುವುದು. ಹಿರಿಯರೇ! ಹೆಚ್ಚೇನು ಹೇಳಲಿ? ನಿಮ್ಮ ಮಾತಿಗೆ ಪ್ರತಿಯಾಗಿ ಉತ್ತರಹೇಳುವುದೂ ಕೂಡ ಪಾತಕವಾದೀತು. (ಚೌ/೧-೪)

**ದೋ – ಪಿತು ಪದ ಗಹಿ ಕಹಿ ಕೋಟಿ ನತಿ ಬಿನಯ ಕರಬ ಕರ ಜೋರಿ।**
**ಚಿಂತಾ ಕವನಿಹು ಬಾತ ಕೈ ತಾತ ಕರಿಅ ಜನಿ ಮೋರಿ ॥ ೯೫ ॥**

ನೀವು ಅಯೋಧ್ಯೆಗೆ ಹೋಗಿ ನಮ್ಮ ತಂದೆಯವರ ಕಾಲುಗಳನ್ನು ಹಿಡಿದು, ಪ್ರಮಾಣಗಳನ್ನು ಸಲ್ಲಿಸಿ, ಅವರು ನನ್ನ ಬಗೆಗೆ ಯಾವುದೇ ವಿಷಯದಲ್ಲಿ ಚಿಂತೆ ಮಾಡಬಾರದೆಂದು ತಿಳಿಸಿರಿ. (ದೋ/೯೫)

**ಚೌ – ತುಮ್ಹ ಪುನಿ ಪಿತು ಸಮ ಅತಿ ಹಿತ ಮೋರೇಂ। ಬಿನತೀ ಕರಉಂ ತಾತ ಕರ ಜೋರೇಂ ॥**
**ಸಬ ಬಿಧಿ ಸೋಇ ಕರತಬ್ಯ ತುಮ್ಹಾರೇಂ। ದುಖ ನ ಪಾವ ಪಿತು ಸೋಚ ಹಮಾರೇಂ ॥ ೧ ॥**
**ಸುನಿ ರಘುನಾಥ ಸಚಿವ ಸಂಬಾದೂ। ಭಯಉ ಸಪರಿಜನ ಬಿಕಲ ನಿಷಾದೂ ॥**
**ಪುನಿ ಕಛು ಲಖನ ಕಹೀ ಕಟು ಬಾನೀ। ಪ್ರಭು ಬರಜೇ ಬಡ ಅನುಚಿತ ಜಾನೀ ॥ ೨ ॥**
**ಸಕುಚಿ ರಾಮ ನಿಜ ಸಪಥ ದೇವಾಈ। ಲಖನ ಸँದೇಸು ಕಹಿಅ ಜನಿ ಜಾಈ ॥**
**ಕಹ ಸುಮಂತ್ರು ಪುನಿ ಭೂಪ ಸँದೇಸೂ। ಸಹಿ ನ ಸಕಿಹಿ ಸಿಯ ಬಿಪಿನ ಕಲೇಸೂ ॥ ೩ ॥**
**ಜೆಹಿ ಬಿಧಿ ಅವಧ ಆವ ಫಿರಿ ಸೀಯಾ। ಸೋಇ ರಘುಬರಹಿ ತುಮ್ಹಹಿ ಕರನೀಯಾ ॥**
**ನತರು ನಿಪಟ ಅವಲಂಬ ಬಿಹೀನಾ। ಮೈಂ ನ ಜಿಅಬ ಜಿಮಿ ಜಲ ಬಿನು ಮೀನಾ ॥ ೪ ॥**

ನೀವೂ ಕೂಡ ತಂದೆಯಂತೆಯೇ ನನ್ನ ಹಿತೈಷಿಗಳು. ನಮ್ಮ ತಂದೆಯವರು ನಮ್ಮ ಕುರಿತಾಗಿ ದುಃಖಪಡದಂತೆ ನೋಡಿಕೊಳ್ಳುವುದು ನಿಮ್ಮದೂ ಕರ್ತವ್ಯವಾಗಿದೆ. ಅವರು ದುಃಖಿಸದಂತೆ ನೋಡಿಕೊಂಡಿರಬೇಕೆಂದು ಕೈಜೋಡಿಸಿ ವಿನಂತಿಸಿಕೊಳ್ಳುತ್ತೇನೆ.'' ಶ್ರೀ ರಘುನಾಥನ ಮತ್ತು ಸುಮಂತ್ರರ ಈ ಸಂಭಾಷಣೆಯನ್ನು ಕೇಳಿ, ನಿಷಾದರಾಜನು ಕುಟುಂಬಸಮೇತ ದುಃಖಕ್ಕೊಳಗಾದನು. ಅನಂತರ ಲಕ್ಷ್ಮಣನು ಕೈಕೇಯಿಯ ಬಗೆಗೆ ಕೆಲವು ಕಟುವಾದ ಮಾತನ್ನಾಡಿದನು. ಹಾಗೆ ಹೇಳುವುದು ಅನುಚಿತವೆಂದು ಶ್ರೀರಾಮನು ಲಕ್ಷ್ಮಣನನ್ನು ತಡೆದನು. ಶ್ರೀರಾಮನು ನಾಚಿಕೆಯಿಂದ ಲಕ್ಷ್ಮಣನ ಈ ಮಾತನ್ನು ಮಹಾರಾಜರಿಗೆ ಹೇಳದಿರುವಂತೆ ತನ್ನ ಮೇಲೆ ಆಣೆಯಿಟ್ಟು ಸುಮಂತ್ರನಲ್ಲಿ ವಿನಂತಿಸಿಕೊಂಡನು. ಪುನಃ ಸುಮಂತ್ರನು – ''ಸೀತಾದೇವಿಯು ಕಾಡಿನ ಕಷ್ಟಗಳನ್ನು ತಾಳಲಾರಳು. ನೀನೂ, ರಾಮಚಂದ್ರನೂ ಹೇಗಾದರೂ ಉಪಾಯಮಾಡಿ ಸೀತೆಯು ಅಯೋಧ್ಯೆಗೆ ಮರಳುವಂತೆ ಮಾಡಬೇಕು. ಇಲ್ಲವಾದರೆ ಖಂಡಿತವಾಗಿ ನಾನು ನೀರಿಲ್ಲದ ಮೀನಿನಂತಾಗಿ ಆಸರೆಯಿಲ್ಲದೆ ಅಸುನೀಗುವೆನು'' ಎಂದು ಅರಸನ ಸಂದೇಶವನ್ನು ರಾಮನಿಗೆ ತಿಳಿಸಿದನು. (ಚೌ/೧-೪)

**ದೋ – ಮಇಕೇಂ ಸಸುರೇಂ ಸಕಲ ಸುಖ ಜಬಹಿಂ ಜಹಾಂ ಮನು ಮಾನ।**
**ತಹँ ತಬ ರಹಿಹಿ ಸುಖೇನ ಸಿಯ ಜಬ ಲಗಿ ಬಿಪತಿ ಬಿಹಾನ ॥ ೯೬ ॥**

ಸುಮಂತ್ರನು ಮತ್ತೆ ಹೇಳಿದ– 'ಸೀತಾದೇವಿಯು ಹುಟ್ಟಿದಮನೆಯಲ್ಲಾಗಲೀ, ಮೆಟ್ಟಿದ ಮನೆಯಲ್ಲಾಗಲೀ ಈ ವನವಾಸ ಅವಧಿ ಕಳೆಯುವವರೆಗೆ ಇಷ್ಟಬಂದಲ್ಲಿ ಸುಖವಾಗಿ ಇರಬಹುದು' ಎಂದೂ ಅರಸರು ಹೇಳಿರುವರು. (ದೋ/೯೬)

**ಚೌ– ಬಿನತೀ ಭೂಪ ಕೀನ್ಹ ಜೆಹಿ ಭಾಂತೀ। ಆರತಿ ಪ್ರೀತಿ ನ ಸೋ ಕಹಿ ಜಾತೀ॥**
**ಪಿತು ಸँದೇಸು ಸುನಿ ಕೃಪಾನಿಧಾನಾ। ಸಿಯಹಿ ದೀನ್ಹ ಸಿಖ ಕೋಟಿ ಬಿಧಾನಾ॥ ೧॥**
**ಸಾಸು ಸಸುರ ಗುರ ಪ್ರಿಯ ಪರಿವಾರೂ। ಫಿರಹು ತ ಸಬ ಕರ ಮಿಟೈ ಖಭಾರೂ॥**
**ಸುನಿ ಪತಿ ಬಚನ ಕಹತಿ ಬೈದೇಹೀ। ಸುನಹು ಪ್ರಾನಪತಿ ಪರಮ ಸನೇಹೀ॥ ೨॥**
**ಪ್ರಭು ಕರುನಾಮಯ ಪರಮ ಬಿಬೇಕೀ। ತನು ತಜಿ ರಹತಿ ಛಾँಹ ಕಿಮಿ ಛೇಂಕೀ॥**
**ಪ್ರಭಾ ಜಾಇ ಕಹँ ಭಾನು ಬಿಹಾಈ। ಕಹँ ಚಂದ್ರಿಕಾ ಚಂದು ತಜಿ ಜಾಈ॥ ೩॥**
**ಪತಿಹಿ ಪ್ರೇಮಮಯ ಬಿನಯ ಸುನಾಈ। ಕಹತಿ ಸಚಿವ ಸನ ಗಿರಾ ಸುಹಾಈ॥**
**ತುಮ್ಹ ಪಿತು ಸಸುರ ಸರಿಸ ಹಿತಕಾರೀ। ಉತರು ದೇಉँ ಫಿರಿ ಅನುಚಿತ ಭಾರೀ॥ ೪॥**

ಈ ಪ್ರಕಾರ ಅರಸರು ಅತ್ಯಂತ ದೈನ್ಯದಿಂದ ಮತ್ತುಪ್ರೇಮದಿಂದ ವಿನಂತಿಸಿಕೊಂಡಿರುವರು. ಅವರ ಪ್ರೇಮ ಹಾಗೂ ದೀನತೆ ಮಾತಿಗೆ ಮೀರಿದುದು. ತಂದೆಯ ಈ ಮಾತನ್ನು ಕೇಳಿ, ಕೃಪಾನಿಧಾನನಾದ ಶ್ರೀರಾಮನು ಸೀತೆಗೆ ಅನೇಕ ಪ್ರಕಾರದಿಂದ ಬುದ್ಧಿವಾದವನ್ನು ಹೇಳಿದನು. ರಾಮನೆಂದ – 'ಜಾನಕೀ! ನೀನು ಮನೆಗೆ ಮರಳಿದರೆ ನಿನ್ನ ಅತ್ತೆ, ಮಾವ, ಗುರು, ಪ್ರಿಯಜನರು, ಕುಟುಂಬಿಗಳು ಇವರೆಲ್ಲರ ಚಿಂತೆ ತೊಲಗೀತು.' ಪತಿಯ ವಚನಗಳನ್ನು ಕೇಳಿ ಸೀತೆಯು ಹೇಳಿದಳು– ''ಓ ಪ್ರಾಣೇಶ್ವರಾ! ಕೇಳಿರಿ. ಸ್ವಾಮಿ! ನೀವು ಕರುಣಾಮಯರು, ಪರಮ ಜ್ಞಾನಿಗಳು. ದಯಮಾಡಿ ಕೊಂಚ ವಿಚಾರಮಾಡಿ ನೋಡಿ. ದೇಹವನ್ನು ಬಿಟ್ಟು ಎಲ್ಲಾದರೂ ನೆರಳು ಇದ್ದೀತೆ? ಸೂರ್ಯನ ಪ್ರಭೆ ಸೂರ್ಯನನ್ನು ಬಿಟ್ಟು ಹೋದೀತೇ? ಚಂದ್ರಿಕೆ (ಬೆಳದಿಂಗಳು) ಚಂದ್ರನನ್ನು ಬಿಟ್ಟು ತೊಲಗೀತೇ?'' ಈ ಪ್ರಕಾರ ಪತಿದೇವರಲ್ಲಿ ಪ್ರೇಮಪೂರ್ವಕವಾಗಿ ಬಿನ್ನವಿಸಿಕೊಂಡು, ಮಂತ್ರಿಯ ಬಳಿ ಹೇಳುತ್ತಾಳೆ – ''ನೀವು ನನಗೆ ತಂದೆಯಂತೆ, ಮಾವನವರಂತೆ ಹಿತೈಷಿಗಳು. ನಿಮ್ಮಲ್ಲಿ ಇದಿರು ಮಾತಾಡುತ್ತಿರುವುದು ಅನುಚಿತವೇ. (ಚೌ/೧-೪)

**ದೋ – ಆರತಿ ಬಸ ಸನಮುಖ ಭಇಉँ ಬಿಲಗು ನ ಮಾನಬ ತಾತ।**
**ಆರಜಸುತ ಪದ ಕಮಲ ಬಿನು ಬಾದಿ ಜಹಾँ ಲಗಿ ನಾತ॥ ೯೭॥**

ಆದರೆ ಹಿರಿಯರೇ! ನಾನು ಆರ್ತಳಾಗಿ ನಿಮ್ಮ ಎದುರಿಗೆ ಬಂದಿರುವೆನು. ತಾವು ತಪ್ಪು ತಿಳಿಯಬಾರದು. ಆರ್ಯಪುತ್ರನಾದ ಸ್ವಾಮಿಯ ಚರಣಕಮಲಗಳಿಲ್ಲದೆ ಈ ಜಗತ್ತಿನ ಎಲ್ಲ ಸಂಬಂಧಗಳೂ ನನಗಾಗಿ ವ್ಯರ್ಥವೇ ಸರಿ. (ದೋ/೯೭)

**ಚೌ– ಪಿತು ಬೈಭವ ಬಿಲಾಸ ಮೈँ ಡೀಠಾ। ನೃಪ ಮನಿ ಮುಕುಟ ಮಿಲಿತ ಪದ ಪೀಠಾ॥**
**ಸುಖನಿಧಾನ ಅಸ ಪಿತು ಗೃಹ ಮೋರೇँ। ಪಿಯ ಬಿಹೀನ ಮನ ಭಾವ ನ ಭೋರೇँ॥ ೧॥**
**ಸಸುರ ಚಕ್ಕವಇ ಕೋಸಲರಾಊ। ಭುವನ ಚಾರಿದಸ ಪ್ರಗಟ ಪ್ರಭಾಊ॥**
**ಆಗೇँ ಹೋಇ ಜೆಹಿ ಸುರಪತಿ ಲೇಈ। ಅರಧ ಸಿँಘಾಸನ ಆಸನು ದೇಈ॥ ೨॥**
**ಸಸುರ ಏತಾದೃಸ ಅವಧ ನಿವಾಸೂ। ಪ್ರಿಯ ಪರಿವಾರು ಮಾತು ಸಮ ಸಾಸೂ॥**
**ಬಿನು ರಘುಪತಿ ಪದ ಪದುಮ ಪರಾಗಾ। ಮೊಹಿ ಕೇಉ ಸಪನೆಹುँ ಸುಖದ ನ ಲಾಗಾ॥ ೩॥**
**ಅಗಮ ಪಂಥ ಬನಭೂಮಿ ಪಹಾರಾ। ಕರಿ ಕೇಹರಿ ಸರ ಸರಿತ ಅಪಾರಾ॥**
**ಕೋಲ ಕಿರಾತ ಕುರಂಗ ಬಿಹಂಗಾ। ಮೊಹಿ ಸಬ ಸುಖದ ಪ್ರಾನಪತಿ ಸಂಗಾ॥ ೪॥**

ನಾನು ನನ್ನ ತಂದೆಯ ವೈಭವ ವಿಲಾಸಗಳನ್ನು ಕಂಡಿದ್ದೇನೆ. ಅವರ ಪಾದಪೀಠಗಳಲ್ಲಿ ನೃಪಶ್ರೇಷ್ಠರ ಮಣಿಮಯ ಕಿರೀಟಗಳು ಮಣಿಯುತ್ತವೆ. ಸುಖನಿಧಿಯಾದ ಇಂತಹ ತಂದೆಯ ಮನೆಯೂ ಕೂಡ ಪತಿಯಿಲ್ಲದೆ ನನಗೆ ಮರೆತಾದರೂ ಏನೂ ರುಚಿಸದು. ಚತುರ್ದಶ ಭುವನಗಳಲ್ಲಿಯೂ ಯಾರ ಪ್ರಭಾವ ಹಬ್ಬಿದೆಯೋ, ಇಂದ್ರನೂ ಯಾರನ್ನು ಎದುರುಗೊಳ್ಳುವನೋ, ತನ್ನ ಸಿಂಹಾಸನದಲ್ಲಿ ಅರ್ಧಾಸನ ನೀಡುವನೋ, ಅಂತಹ ಪ್ರಭಾವಶಾಲಿಯರಾದ ಕೋಸಲ ಚಕ್ರವರ್ತಿ ನನ್ನ ಮಾವನವರು. ಅವರ ನಿವಾಸವಾದ ಅಯೋಧ್ಯೆ, ಪ್ರಿಯಕುಟುಂಬಿಗಳು, ತಾಯಿಯಂತಹ ಅತ್ತೆಯರು ಇವರು ಯಾರೂ ಶ್ರೀ ರಘುನಾಥನ ಚರಣಕಮಲರಜವಿಲ್ಲದೆ ಕನಸಿನಲ್ಲಿಯೂ ಸುಖವನ್ನು ಕೊಡಲಾರರು. ನನ್ನ ಪ್ರಾಣೇಶ್ವರನು ಜೊತೆಗಿರುವಾಗ, ದುರ್ಗಮ ಮಾರ್ಗಗಲೂ, ವನಭೂಮಿ, ಬೆಟ್ಟಗುಡ್ಡಗಳೂ, ಆಳವಾದ ಸರೋವರಗಳೂ, ನದಿಗಳೂ, ಆನೆಗಳೂ, ಸಿಂಹಗಳೂ, ಕೋಲ,

ಕಿರಾತರೂ ಇವುಗಳಿಂದ ನನಗೆ ಭಯವು ಖಂಡಿತವಾಗಿ ಇರದು. ಜಿಂಕೆಗಳು, ಪಕ್ಷಿಗಳು ಮಿತ್ರರಂತೆ ಆಗುವರು. ಇವೆಲ್ಲವೂ ಸುಖಮಯವಾಗುವುದು. (ಚೌ/೧-೪)

**ದೋ – ಸಾಸು ಸಸುರ ಸನ ಮೋರಿ ಹುँತಿ ಬಿನಯ ಕರಬಿ ಪರಿ ಪಾಯँ।**
**ಮೋರ ಸೋಚು ಜನಿ ಕರಿಅ ಕಛು ಮೈँ ಬನ ಸುಖೀ ಸುಭಾಯँ॥ ೯೮ ॥**

ಆದ್ದರಿಂದ ಅತ್ತೆಮಾವಂದಿರ ಕಾಲಿಗೆರಗಿ ನನ್ನ ಪರವಾಗಿ ಅವರನ್ನು ಬೇಡಿಕೊಳ್ಳಿ – ಅವರು ನನ್ನ ಬಗೆಗೆ ಯಾವುದೇ ಯೋಚನೆ ಮಾಡದಿರಲಿ. ನಾನು ವನದಲ್ಲಿ ಸಹಜವಾಗಿಯೇ ಸುಖವಾಗಿ ಇರುವೆನು. (ದೋ/೯೮)

**ಚೌ – ಪ್ರಾನನಾಥ ಪ್ರಿಯ ದೇವರ ಸಾಥಾ। ಬೀರ ಧುರೀನ ಧರೇँ ಧನು ಭಾಥಾ॥**
**ನಹಿँ ಮಗ ಶ್ರಮು ಭ್ರಮು ದುಖ ಮನ ಮೋರೇँ। ಮೊಹಿ ಲಗಿ ಸೋಚು ಕರಿಅ ಜನಿ ಭೋರೇँ॥ ೧ ॥**
**ಸುನಿ ಸುಮಂತ್ರು ಸಿಯ ಸೀತಲಿ ಬಾನೀ। ಭಯಉ ಬಿಕಲ ಜನು ಫನಿ ಮನಿ ಹಾನೀ॥**
**ನಯನ ಸೂಝ ನಹಿँ ಸುನಇ ನ ಕಾನಾ। ಕಹಿ ನ ಸಕಇ ಕಛು ಅತಿ ಅಕುಲಾನಾ॥ ೨ ॥**
**ರಾಮ ಪ್ರಬೋಧು ಕೀನ್ಹ ಬಹು ಭಾಂತೀ। ತದಪಿ ಹೋತಿ ನಹಿँ ಸೀತಲಿ ಛಾತೀ॥**
**ಜತನ ಅನೇಕ ಸಾಥ ಹಿತ ಕೀನ್ಹೇ। ಉಚಿತ ಉತರ ರಘುನಂದನ ದೀನ್ಹೇ॥ ೩ ॥**
**ಮೇಟಿ ಜಾಇ ನಹಿँ ರಾಮ ರಜಾಈ। ಕಠಿನ ಕರಮ ಗತಿ ಕಛು ನ ಬಸಾಈ॥**
**ರಾಮ ಲಖನ ಸಿಯ ಪದ ಸಿರು ನಾಈ। ಫಿರೆಉ ಬನಿಕ ಜಿಮಿ ಮೂರ ಗವಾँಈ॥ ೪ ॥**

ವೀರರಲ್ಲಿ ಅಗ್ರಗಣ್ಯನೂ ಧನುಷ್ತೂಣೀರಪಾಣಿಯಾದ ನನ್ನ ಪ್ರಾಣನಾಥನೂ, ಮೈದುನನೂ ನನ್ನ ಜೊತೆಗಿದ್ದಾರೆ. ಇದರಿಂದ ನನಗೆ ಮಾರ್ಗಾಯಾಸವಾಗಲೀ, ಭ್ರಮೆಯಾಗಲೀ ಇಲ್ಲ. ದುಃಖವೂ ಇಲ್ಲ. ತಾವು ಮರೆತಾದರೂ ನನ್ನ ಕುರಿತು ಯೋಚನೆ ಮಾಡಬೇಡಿ.'' ಸೀತೆಯ ಶೀತಲವಾಣಿಯನ್ನು ಕೇಳಿದ ಸುಮಂತ್ರನು ಮಣಿಯನ್ನು ಕಳೆದುಕೊಂಡ ಸರ್ಪದಂತೆ ವ್ಯಾಕುಲಗೊಂಡನು. ಅವನ ಕಣ್ಣಿಗೆ ಏನೂ ಕಾಣದಂತಾಯಿತು. ಕಿವಿಗೆ ಏನೂ ಕೇಳದಾಯಿತು. ಹೆಚ್ಚಾದ ಪರಿತಾಪದಿಂದ ಅವನ ಬಾಯಿಂದ ಮಾತೇ ಹೊರಡದು. ಶ್ರೀರಾಮನು ಆತನನ್ನು ಬಹುವಿಧವಾಗಿ ಸಂತೈಸಿದನು. ಆದರೂ ಅವನಿಗೆ ನೆಮ್ಮದಿಯಾಗಲಿಲ್ಲ. ಮರಳಿ ಅಯೋಧ್ಯೆಗೆ ಬರಲು ಮಂತ್ರಿಯು ಅನೇಕ ಯುಕ್ತಿಗಳನ್ನು ಹೂಡಿದನು. ಆದರೆ ರಾಮನು ಅವೆಲ್ಲಕ್ಕೂ ತಕ್ಕ ಉತ್ತರ ಕೊಡುತ್ತಾ ಹೋದನು. ಶ್ರೀರಾಮನ ಆಜ್ಞೆಯು ಅನುಲ್ಲಂಘನೀಯ. ಕರ್ಮಗತಿಯು ಕಠಿಣವಾದುದು. ಅದರ ಮೇಲೆ ಯಾರ ಅಧಿಕಾರವೂ ನಡೆಯದು. ಕೊನೆಗೆ ಶ್ರೀರಾಮ, ಲಕ್ಷ್ಮಣ, ಸೀತೆ ಇವರ ಚರಣಗಳಿಗೆ ನಮಿಸಿ ಸುಮಂತ್ರನು ಭಂಡವಾಳವನ್ನು ಕಳಕೊಂಡ ವ್ಯಾಪಾರಿಯಂತೆ ಸಪ್ಪೆಮೋರೆಯನ್ನು ಹೊತ್ತು ಹಿಂತಿರುಗಿದನು. ಆದರೆ ಅವನ ಕಾಲುಗಳು ಕದಲಲಿಲ್ಲ. (ಚೌ/೧-೪)

**ದೋ – ರಥು ಹಾँಕೆಉ ಹಯ ರಾಮ ತನ ಹೇರಿ ಹೇರಿ ಹಿಹಿನಾಹಿँ।**
**ದೇಖಿ ನಿಷಾದ ಬಿಷಾದಬಸ ಧುನಹಿँ ಸೀಸ ಪಛಿತಾಹಿँ॥ ೯೯ ॥**

ಸುಮಂತ್ರನು ರಥವನ್ನು ಓಡಿಸಿದನು. ಆದರೆ ಕುದುರೆಗಳು ಹಿಂದಿರುಗಿ ಶ್ರೀರಾಮನನ್ನು ನೋಡುತ್ತಾ ಕೆನೆಯುತ್ತಾ ಅಲ್ಲೇ ನಿಂತುಬಿಟ್ಟವು. ಇದನ್ನು ಕಂಡು ನಿಷಾದ ಜನರು ವಿಷಾದದಿಂದ ತಲೆಚಚ್ಚಿಕೊಂಡರು. (ದೋ/೯೯)

## ಅಂಬಿಗನ ಮೇಲೆ ಅನುಗ್ರಹ – ಗಂಗೆಯನ್ನು ದಾಟಿದುದು

**ಚೌ – ಜಾಸು ಬಿಯೋಗ ಬಿಕಲ ಪಸು ಐಸೇँ। ಪ್ರಜಾ ಮಾತು ಪಿತು ಜಿಇಹಹಿँ ಕೈಸೇँ॥**
**ಬರಬಸ ರಾಮ ಸುಮಂತ್ರು ಪಠಾಏ। ಸುರಸರಿ ತೀರ ಆಪು ತಬ ಆಏ॥ ೧ ॥**
**ಮಾಗೀ ನಾವ ನ ಕೇವಟು ಆನಾ। ಕಹಇ ತುಮ್ಹಾರ ಮರಮು ಮೈँ ಜಾನಾ॥**
**ಚರನ ಕಮಲ ರಜ ಕಹುँ ಸಬು ಕಹಈ। ಮಾನುಷ ಕರನಿ ಮೂರಿ ಕಛು ಅಹಈ॥ ೨ ॥**
**ಛುಅತ ಸಿಲಾ ಭಇ ನಾರಿ ಸುಹಾಈ। ಪಾಹನ ತೇँ ನ ಕಾಠ ಕಠಿನಾಈ॥**
**ತರನಿಉ ಮುನಿ ಘರಿನೀ ಹೊಇ ಜಾಈ। ಬಾಟ ಪರಇ ಮೊರಿ ನಾವ ಉಡಾಈ॥ ೩ ॥**
**ಏಹಿँ ಪ್ರತಿಪಾಲಉँ ಸಬು ಪರಿವಾರೂ। ನಹಿँ ಜಾನಉँ ಕಛು ಅಉರ ಕಬಾರೂ॥**
**ಜೌँ ಪ್ರಭು ಪಾರ ಅವಸಿ ಗಾ ಚಹಹೂ। ಮೊಹಿ ಪದ ಪದುಮ ಪಖಾರನ ಕಹಹೂ॥ ೪ ॥**

ಮೂಕಪ್ರಾಣಿಗಳೂ ಕೂಡ ಶ್ರೀರಾಮನ ಅಗಲುವಿಕೆಯಿಂದ ಇಷ್ಟೊಂದು ದುಃಖಿತವಾಗುವುದಾದರೆ, ಪ್ರಜೆಗಳು, ತಂದೆ-ತಾಯಂದಿರು ಹೇಗೆ ಬದುಕಿರಬಲ್ಲರು? ಶ್ರೀರಾಮಚಂದ್ರನು ಬಲವಂತವಾಗಿ ಸುಮಂತ್ರನನ್ನು ಕಳಿಸಿಕೊಟ್ಟನು. ಅನಂತರ ಅವನು ಗಂಗಾತೀರಕ್ಕೆ ಬಂದನು. ಶ್ರೀರಾಮನು ಗಂಗೆಯನ್ನು ದಾಟಲು ಅಂಬಿಗನಿಗೆ ದೋಣಿತರುವಂತೆ ಹೇಳಿದನು. ಆದರೆ ಅವನು ತರಲೊಲ್ಲನು. ಅವನು ಹೇಳತೊಡಗಿದನು – ನಾನು ನಿನ್ನ ಮರ್ಮವನ್ನು ತಿಳಿದಿರುವೆನು. ನಿನ್ನ ಚರಣಕಮಲರಜದಲ್ಲಿ ಮನುಷ್ಯರನ್ನು ಸೃಷ್ಟಿಸುವ ಮೂಲಿಕೆ ಇದೆ ಎಂಬುದು ಪ್ರತೀತಿ. ಆ ಧೂಳಿಯು ಸೋಂಕಿದಾಕ್ಷಣವೇ ಒಂದು ಶಿಲೆಯು ಅಂದವಾದ ಹೆಣ್ಣಾದಳಂತೆ. ಈ ನನ್ನ ದೋಣಿಯು ಮರದ್ದು. ಮರವು ಕಲ್ಲಿಗಿಂತ ಮೃದುತಾನೆ. ನನ್ನ ನಾವೆಯೂ ಕೂಡ ಮುನಿಸ್ತ್ರೀಯಾದರೆ, ನಾನು ಕೆಟ್ಟಂತೆಯೇ. ಈ ದೋಣಿಯಿಂದಲೇ ನನ್ನ ಕುಟುಂಬದ ಹೊಟ್ಟೆ ಹೊರೆಯುತ್ತಿದೆ. ಬೇರೆ ಯಾವ ಕಸಬೂ ನನಗಿಲ್ಲ. ಆದ್ದರಿಂದ ಹೇ ಪ್ರಭುವೇ! ನೀನು ನದಿ ದಾಟಬೇಕಾದರೆ ಮೊದಲು ನಿನ್ನ ಚರಣಕಮಲಗಳನ್ನು ತೊಳೆಯಲು ಅನುವು ಮಾಡಿಕೊಡು. (ಚೌ/೧-೪)

**ಛಂ – ಪದ ಕಮಲ ಧೋಇ ಚಢ಼ಾಇ ನಾವ ನ ನಾಥ ಉತರಾಈ ಚಹೌಂ ।**
**ಮೊಹಿ ರಾಮ ರಾಉರಿ ಆನ ದಸರಥ ಸಪಥ ಸಬ ಸಾಚೀ ಕಹೌಂ ॥**
**ಬರು ತೀರ ಮಾರಹುँ ಲಖನು ಪೈ ಜಬ ಲಗಿ ನ ಪಾಯ ಪಖಾರಿಹೌಂ ।**
**ತಬ ಲಗಿ ನ ತುಲಸೀದಾಸ ನಾಥ ಕೃಪಾಲ ಪಾರು ಉತಾರಿಹೌಂ ॥**

ಸ್ವಾಮಿ! ನಿನ್ನ ಪಾದಪದ್ಮಗಳನ್ನು ತೊಳೆದ ತರುವಾಯವೇ ನಿಮ್ಮನ್ನು ದೋಣಿಯೊಳಗೆ ಹತ್ತಿಸುವೆನು. ಅದಕ್ಕಾಗಿ ನನಗೇನೂ ಪ್ರತಿಫಲ (ಕೂಲಿ) ಕೊಡಬೇಕಾಗಿಲ್ಲ. ಓ ರಾಮಾ! ನಿಮ್ಮ ದಮ್ಮಯ್ಯ. ದಶರಥನ ಆಣೆ. ನಾನು ನಿಜವನ್ನೇ ಹೇಳುತ್ತೇನೆ. ಲಕ್ಷ್ಮಣನು ಬೇಕಾದರೆ ಬಾಣದಿಂದ ನನ್ನನ್ನು ಹೊಡೆದು ಸಾಯಿಸಲಿ. ಓ ತುಲಸೀದಾಸ ಪ್ರಭೂ! ಕೃಪಾಳೂ! ಆದರೆ ನಾನು ಕಾಲು ತೊಳೆಯುವವರೆಗೆ ದೋಣಿಹತ್ತಲು ಬಿಡಲಾರೆ. (ಛಂದ)

**ಸೋ – ಸುನಿ ಕೇವಟ ಕೇ ಬೈನ ಪ್ರೇಮ ಲಪೇಟೇ ಅಟಪಟೇ ।**
**ಬಿಹಸೇ ಕರುನಾಐನ ಚಿತಇ ಜಾನಕೀ ಲಖನ ತನ ॥ ೧೦೦ ॥**

ಅಂಬಿಗನ ಪ್ರೇಮತುಂಬಿದ ಮಾತುಗಳನ್ನು ಕೇಳಿ, ಕರುಣಾಯತನನಾದ ಶ್ರೀರಾಮನು ಜಾನಕಿ ಮತ್ತು ಲಕ್ಷ್ಮಣರ ಕಡೆಗೆ ನೋಡಿ ನಕ್ಕುಬಿಟ್ಟನು. (ಸೋ/೧೦೦)

**ಚೌ – ಕೃಪಾಸಿಂಧು ಬೋಲೇ ಮುಸುಕಾಈ । ಸೋಇ ಕರು ಜೆಹಿं ತವ ನಾವ ನ ಜಾಈ ॥**
**ಬೇಗಿ ಆನು ಜಲ ಪಾಯ ಪಖಾರೂ । ಹೋತ ಬಿಲಂಬು ಉತಾರಹಿ ಪಾರೂ ॥ ೧ ॥**
**ಜಾಸು ನಾಮ ಸುಮಿರತ ಏಕ ಬಾರಾ । ಉತರಹಿं ನರ ಭವಸಿಂಧು ಅಪಾರಾ ॥**
**ಸೋಇ ಕೃಪಾಲು ಕೇವಟಹಿ ನಿಹೋರಾ । ಜೆಹಿं ಜಗು ಕಿಯ ತಿಹು ಪಗಹು ತೇ ಥೋರಾ ॥ ೨ ॥**
**ಪದ ನಖ ನಿರಖಿ ದೇವಸರಿ ಹರಷೀ । ಸುನಿ ಪ್ರಭು ಬಚನ ಮೋಹँ ಮತಿ ಕರಷೀ ॥**
**ಕೇವಟ ರಾಮ ರಜಾಯಸು ಪಾವಾ । ಪಾನಿ ಕಠವತಾ ಭರಿ ಲೇಇ ಆವಾ ॥ ೩ ॥**
**ಅತಿ ಆನಂದ ಉಮಗಿ ಅನುರಾಗಾ । ಚರನ ಸರೋಜ ಪಖಾರನ ಲಾಗಾ ॥**
**ಬರಷಿ ಸುಮನ ಸುರ ಸಕಲ ಸಿಹಾಹೀं । ಏಹಿ ಸಮ ಪುನ್ಯಪುಂಜ ಕೋಉ ನಾಹೀं ॥ ೪ ॥**

ಕೃಪಾಸಿಂಧುವಾದ ಶ್ರೀರಾಮಚಂದ್ರನು ಮುಗುಳ್ನಗೆ ಬೀರುತ್ತಾ ಅಂಬಿಗನಲ್ಲಿ ಇಂತೆಂದನು – ಸಹೋದರಾ! ನಿನ್ನ ದೋಣಿಯು ಉಳಿಯಲು ಏನು ಮಾಡಬೇಕೋ ಅದನ್ನು ಮಾಡು. ಬೇಗನೇ ನೀರನ್ನು ತಂದು ಕಾಲುತೊಳೆ. ತಡವಾಗುತ್ತಿದೆ. ನದಿಯನ್ನು ದಾಟಿಸು. ಒಮ್ಮೆ ಶ್ರೀರಾಮನ ನಾಮಸ್ಮರಣೆ ಮಾಡಿದರೆ ಸಾಕು, ಮನುಷ್ಯನು ಅಪಾರ ಭವಸಾಗರವನ್ನು ದಾಟಬಲ್ಲನು. ಅವನ ವಾಮನಾವತಾರದಲ್ಲಿ ಜಗತ್ತನ್ನು ಮೂರು ಅಡಿಗಳಿಂದ ಕಿರಿದಾಗಿಸಿದ್ದನು. ಅಂತಹ ಕೃಪಾಳುವಾದ ಶ್ರೀರಾಮನು ಗಂಗೆಯನ್ನು ದಾಟಲು ಅಂಬಿಗನಲ್ಲಿ ಕೇಳಿಕೊಳ್ಳುತ್ತಿದ್ದಾನೆ. ಪ್ರಭುವಿನ ಈ ಮಾತನ್ನು ಕೇಳಿ ಗಂಗೆಯು – 'ಇವನು ಸಾಕ್ಷಾತ್ ಭಗವಂತನಾಗಿದ್ದರೂ ನದಿಯನ್ನು ದಾಟಲು ನಾವಿಕನನ್ನು ಪ್ರಾರ್ಥಿಸುತ್ತಿರುವನು. ಇವನು ನಿಜವಾಗಿ ಮಹಾವಿಷ್ಣುವೇ ಆಗಿದ್ದಾನೆ. ಆದರೆ ಈ ನಾವಿಕನ ಮೇಲೆ ಎಂತಹ ಕೃಪೆದೋರುತ್ತಿರುವನು? ಅವನ ನರಲೀಲೆಯನ್ನು ಕಂಡು ಮನಸ್ಸಿನಲ್ಲಿ ಆನಂದಿತಳಾದಳು. ಅವನು ಬಳಿಗೆ ಬಂದಾಗ ಅವನ ಪದನಖಗಳನ್ನು ನೋಡಿದೊಡನೆ ಅವನನ್ನು ತನ್ನ ಜನ್ಮಸ್ಥಾನವೆಂದು ಗುರುತಿಸಿ, ದೇವನದಿ ಗಂಗೆಯು ಹರ್ಷಿತಳಾದಳು. ಶ್ರೀರಾಮನ ಅಪ್ಪಣೆಯಂತೆ ಅಂಬಿಗನು ಮರದ ಮೊರಗಿಯಲ್ಲಿ ನೀರು ಮೊಗೆದು ತಂದನು. ಅತ್ಯಂತ ಆನಂದ

ಹಾಗೂ ಅನುರಾಗದಿಂದ ತುಂಬಿದವನಾಗಿ ಆ ನಾವಿಕನು ಭಗವಂತನ ಚರಣಗಳನ್ನು ತೊಳೆಯತೊಡಗಿದನು. ದೇವತೆಗಳು ಈ ಅಂಬಿಗನ ಭಾಗ್ಯವನ್ನು ಕೊಂಡಾಡುತ್ತಾ ಹೂವಿನ ಮಳೆಗರೆದರು. (ಚೌ/೧-೪)

**ದೋ – ಪದ ಪಖಾರಿ ಜಲು ಪಾನ ಕರಿ ಆಪು ಸಹಿತ ಪರಿವಾರ।**
**ಪಿತರ ಪಾರು ಕರಿ ಪ್ರಭುಹಿ ಪುನಿ ಮುದಿತ ಗಯಉ ಲೇಇ ಪಾರ॥ ೧೦೧ ॥**

ಶ್ರೀರಾಮಚಂದ್ರನ ಚರಣಗಳನ್ನು ತೊಳೆದು, ಪರಿವಾರ ಸಮೇತ ಆ ಪಾದೋದಕವನ್ನು ಪ್ರಾಶನಮಾಡಿದನು. ಅದರ ಪುಣ್ಯಪ್ರಭಾವದಿಂದ ಅಂಬಿಗನು ತನ್ನ ಪಿತೃಗಳನ್ನು ಭವಸಾಗರದಿಂದ ಪಾರುಮಾಡಿದನು. ಅನಂತರ ಆನಂದದಿಂದ ಶ್ರೀರಾಮಚಂದ್ರನನ್ನು ಗಂಗೆಯ ಆಚೆ ದಡಕ್ಕೆ ಕೊಂಡೊಯ್ದನು. (ದೋ/೧೦೧)

**ಚೌ – ಉತರಿ ಠಾಢ ಭಏ ಸುರಸರಿ ರೇತಾ। ಸೀಯ ರಾಮು ಗುಹ ಲಖನ ಸಮೇತಾ॥**
**ಕೇವಟ ಉತರಿ ದಂಡವತ ಕೀನ್ಹಾ। ಪ್ರಭುಹಿ ಸಕುಚ ಏಹಿ ನಹಿಂ ಕಛು ದೀನ್ಹಾ॥ ೧ ॥**
**ಪಿಯ ಹಿಯ ಕೀ ಸಿಯ ಜಾನನಿಹಾರೀ। ಮನಿ ಮುದರೀ ಮನ ಮುದಿತ ಉತಾರೀ॥**
**ಕಹೇಉ ಕೃಪಾಲ ಲೇಹಿ ಉತರಾಈ। ಕೇವಟ ಚರನ ಗಹೇ ಅಕುಲಾಈ॥ ೨ ॥**
**ನಾಥ ಆಜು ಮೈಂ ಕಾಹ ನ ಪಾವಾ। ಮಿಟೇ ದೋಷ ದುಖ ದಾರಿದ ದಾವಾ॥**
**ಬಹುತ ಕಾಲ ಮೈಂ ಕೀನ್ಹಿ ಮಜೂರೀ। ಆಜು ದೀನ್ಹ ಬಿಧಿ ಬನಿ ಭಲಿ ಭೂರೀ॥ ೩ ॥**
**ಅಬ ಕಛು ನಾಥ ನ ಚಾಹಿಅ ಮೋರೇಂ। ದೀನದಯಾಲ ಅನುಗ್ರಹ ತೋರೇಂ॥**
**ಫಿರತೀ ಬಾರ ಮೋಹಿ ಜೋ ದೇಬಾ। ಸೋ ಪ್ರಸಾದು ಮೈಂ ಸಿರ ಧರಿ ಲೇಬಾ॥ ೪ ॥**

ನಿಷಾದರಾಜನಾದ ಗುಹ, ಲಕ್ಷ್ಮಣ, ಸೀತೆಯೊಂದಿಗೆ ಶ್ರೀರಾಮನು ದೋಣಿಯಿಂದ ಇಳಿದು ಭಾಗೀರಥೀತೀರದ ಮಳಲಲ್ಲಿ ನಿಂತುಕೊಂಡರು. ಆಗ ಅಂಬಿಗನೂ ದೋಣಿಯಿಂದಿಳಿದು ಬಂದು ಶ್ರೀರಾಮನಿಗೆ ದಂಡವತ್ ಪ್ರಣಾಮಮಾಡಿದನು. ಅದನ್ನು ಕಂಡು ಅವನಿಗೆ ಏನನ್ನೂ ಕೊಡಲಿಲ್ಲವಲ್ಲ ಎಂದು ರಾಮನಿಗೆ ಸಂಕೋಚವಾಯಿತು. ಪತಿಹೃದಯವನ್ನು ಬಲ್ಲ ಸೀತಾದೇವಿಯು ಮುದಿತಮನದಿಂದ ತನ್ನ ರತ್ನಖಚಿತವಾದ ಉಂಗುರವನ್ನು ತೆಗೆದಳು. ಕೃಪಾಳುವಾದ ಶ್ರೀರಾಮನು ನಾವಿಕನ ಬಳಿ – 'ಇದೋ ದೋಣಿಯ ತೆರ ತೆಗೆದುಕೋ' ಎಂದು ಹೇಳಿದನು. ಅಂಬಿಗನು ವ್ಯಾಕುಲನಾಗಿ ಶ್ರೀರಾಮನ ಕಾಲು ಹಿಡಿದುಕೊಂಡು ಹೇಳಿದ – ಸ್ವಾಮಿ! ಇಂದು ನನಗೆ ದೊರೆಯದಿದ್ದುದ್ದೇನು? ನನ್ನ ದೋಷಗಳೂ, ದುಃಖಗಳೂ, ದಾರಿದ್ರ್ಯಗಳೂ, ಎಲ್ಲವೂ ನನ್ನಿಂದ ದೂರವಾದುವು. ನಾನು ಜೀವನಕ್ಕಾಗಿ ಬಹಳ ಕಾಲದಿಂದ ಶ್ರಮಪಡುತ್ತಿದ್ದೆ. ಆದರೆ ವಿಧಾತನು ನಿಜವಾಗಿ ನನಗೆ ಇಂದೇ ಸಂತೃಪ್ತಿಯಾಗಿ ಪ್ರತಿಫಲವನ್ನು ಕೊಟ್ಟಿರುವನು. ಪ್ರಭೂ! ದೀನದಯಾಳುವೇ! ನಿನ್ನ ಕೃಪೆಯಿಂದ ನನಗೆ ಈಗ ಏನೂ ಬೇಡ. ನೀವು ಹಿಂತಿರುಗಿ ಬಂದಾಗ ಏನು ಕೊಟ್ಟರೂ ಬೇಡವೆನ್ನದೆ ಶಿರಸಾವಹಿಸಿ ಸ್ವೀಕರಿಸುತ್ತೇನೆ. (ಚೌ/೧-೪)

**ದೋ – ಬಹುತ ಕೀನ್ಹ ಪ್ರಭು ಲಖನ ಸಿಯಂ ನಹಿಂ ಕಛು ಕೇವಟು ಲೇಇ।**
**ಬಿದಾ ಕೀನ್ಹ ಕರುನಾಯತನ ಭಗತಿ ಬಿಮಲ ಬರು ದೇಇ॥ ೧೦೨ ॥**

ಶ್ರೀರಾಮಚಂದ್ರಪ್ರಭುವು, ಲಕ್ಷ್ಮಣ, ಸೀತೆಯರು ಅಂಬಿಗನಿಗೆ ತುಂಬಾ ಆಗ್ರಹ ಮಾಡಿದರು. ಆದರೆ ನಾವಿಕನು ಏನನ್ನೂ ಪಡೆಯಲೊಲ್ಲ. ಆಗ ಕರುಣಾನಿಧಾನನಾದ ಶ್ರೀರಾಮನು ಆತನಿಗೆ ನಿರ್ಮಲಭಕ್ತಿಯ ವರದಾನವನ್ನಿತ್ತು, ಅವನನ್ನು ಬೀಳ್ಕೊಟ್ಟನು. (ದೋ/೧೦೨)

**ಚೌ – ತಬ ಮಜ್ಜನು ಕರಿ ರಘುಕುಲನಾಥಾ। ಪೂಜಿ ಪಾರಥಿವ ನಾಯಉ ಮಾಥಾ॥**
**ಸಿಯಂ ಸುರಸರಿಹಿ ಕಹೇಉ ಕರ ಜೋರೀ। ಮಾತು ಮನೋರಥ ಪುರಉಬಿ ಮೋರೀ॥ ೧ ॥**
**ಪತಿ ದೇವರ ಸಂಗ ಕುಸಲ ಬಹೋರೀ। ಆಇ ಕರೌಂ ಜೇಹಿಂ ಪೂಜಾ ತೋರೀ॥**
**ಸುನಿ ಸಿಯ ಬಿನಯ ಪ್ರೇಮ ರಸ ಸಾನೀ। ಭಇ ತಬ ಬಿಮಲ ಬಾರಿ ಬರ ಬಾನೀ॥ ೨ ॥**
**ಸುನು ರಘುಬೀರ ಪ್ರಿಯಾ ಬೈದೇಹೀ। ತವ ಪ್ರಭಾಉ ಜಗ ಬಿದಿತ ನ ಕೇಹೀ॥**
**ಲೋಕಪ ಹೋಹಿಂ ಬಿಲೋಕತ ತೋರೇಂ। ತೊಹಿ ಸೇವಹಿಂ ಸಬ ಸಿಧಿ ಕರ ಜೋರೇಂ॥ ೩ ॥**
**ತುಮ್ಹ ಜೋ ಹಮಹಿ ಬಡಿ ಬಿನಯ ಸುನಾಈ। ಕೃಪಾ ಕೀನ್ಹಿ ಮೋಹಿ ದೀನ್ಹಿ ಬಡಾಈ॥**
**ತದಪಿ ದೇಬಿ ಮೈಂ ದೇಬಿ ಅಸೀಸಾ। ಸಫಲ ಹೋನ ಹಿತ ನಿಜ ಬಾಗೀಸಾ॥ ೪ ॥**

ಅನಂತರ ಶ್ರೀರಘುನಾಥನು ಸ್ನಾನವನ್ನು ಮಾಡಿ, ಪಾರ್ಥಿವ ಪೂಜೆಯನ್ನು ಮಾಡಿ, ಶಿವನಿಗೆ ನಮಿಸಿದನು. ಸೀತಾದೇವಿಯು ಗಂಗಾದೇವಿಯನ್ನು ಪೂಜಿಸಿ, ಕೈಜೋಡಿಸಿ ಪ್ರಾರ್ಥಿಸಿಕೊಂಡಳು – ಮಾತೆ! ನನ್ನ ಮನೋರಥವನ್ನು ಪೂರ್ಣಗೊಳಿಸು. ನಾನು ಪತಿದೇವರು, ಮೈದುನರೊಂದಿಗೆ ಕ್ಷೇಮದಿಂದ ಮರಳಿ ಬಂದು ನಿನ್ನನ್ನು ಮತ್ತೆ ಪೂಜಿಸುವಂತೆ ಕರುಣಿಸು. ಸೀತಾದೇವಿಯ ಪ್ರೇಮಪೂರ್ವಕ ಪ್ರಾರ್ಥನೆಯನ್ನು ಕೇಳಿ, ನಿರ್ಮಲ ಗಂಗಾಜಲದಿಂದ ಶ್ರೇಷ್ಠವಾದ ವಾಣಿಯು ಮೊಳಗಿತು. 'ಹೇ ರಘುವೀರನ ಪ್ರಿಯೆ ಜಾನಕಿ! ನಿನ್ನ ಮಹಿಮೆ ಈ ಜಗತ್ತಿನಲ್ಲಿ ಯಾರಿಗೆ ತಿಳಿಯದು? ನಿನ್ನ ಕೃಪಾದೃಷ್ಟಿ ಬಿದ್ದರೆ ಸಾಕು, ಜನರು ಲೋಕಪಾವನರಾಗುತ್ತಾರೆ. ಸಕಲ ಸಿದ್ಧಿಗಳು ಕೈಜೋಡಿಸಿ, ನಿನ್ನ ಊಳಿಗಮಾಡುತ್ತಿವೆ. ನೀನು ನನ್ನಲ್ಲಿ ಪ್ರಾರ್ಥಿಸಿ, ನನ್ನ ಮೇಲೆ ಬಹುದೊಡ್ಡ ಕೃಪೆಗೈದು, ಹಿರಿತನವನ್ನು ಕರುಣಿಸಿದ್ದೀಯೆ. ಆದರೂ ದೇವಿ! ನಾನು ನನ್ನ ವಾಣಿಯನ್ನು ಸಾರ್ಥಕಪಡಿಸಿಕೊಳ್ಳುವುದಕ್ಕಾಗಿ ನಿನಗೆ ಆಶೀರ್ವಾದಮಾಡುತ್ತೇನೆ. (ಚೌ/೧-೪)

**ದೋ – ಪ್ರಾನನಾಥ ದೇವರ ಸಹಿತ ಕುಸಲ ಕೋಸಲಾ ಆಇ।**
**ಪೂಜಿಹಿ ಸಬ ಮನಕಾಮನಾ ಸುಜಸು ರಹಿಹಿ ಜಗ ಛಾಇ॥ ೧೦೩ ॥**

ನೀನು ನಿನ್ನ ಪ್ರಾಣನಾಥ ಹಾಗೂ ಮೈದುನರೊಂದಿಗೆ ಕ್ಷೇಮವಾಗಿ ಅಯೋಧ್ಯೆಗೆ ಮರಳುವೆ. ನಿನ್ನ ಎಲ್ಲ ಮನೋಕಾಮನೆಗಳು ಈಡೇರುವುವು. ನಿನ್ನ ಸತ್ಕೀರ್ತಿಯು ಜಗತ್ತಿನಲ್ಲೆಲ್ಲ ಹಬ್ಬುವುದು. (ದೋ/೧೦೩)

**ಚೌ – ಗಂಗ ಬಚನ ಸುನಿ ಮಂಗಲ ಮೂಲಾ। ಮುದಿತ ಸೀಯ ಸುರಸರಿ ಅನುಕೂಲಾ ॥**
**ತಬ ಪ್ರಭು ಗುಹಹಿ ಕಹೆಉ ಘರ ಜಾಹೂ। ಸುನತ ಸೂಖ ಮುಖು ಭಾ ಉರ ದಾಹೂ॥ ೧ ॥**
**ದೀನ ಬಚನ ಗುಹ ಕಹ ಕರ ಜೋರೀ। ಬಿನಯ ಸುನಹು ರಘುಕುಲಮನಿ ಮೋರೀ॥**
**ನಾಥ ಸಾಥ ರಹಿ ಪಂಥು ದೇಖಾಈ। ಕರಿ ದಿನ ಚಾರಿ ಚರನ ಸೇವಕಾಈ॥ ೨ ॥**
**ಜೆಹಿಂ ಬನ ಜಾಇ ರಹಬ ರಘುರಾಈ। ಪರನಕುಟೀ ಮೈಂ ಕರಬಿ ಸುಹಾಈ॥**
**ತಬ ಮೊಹಿ ಕಹँ ಜಸಿ ದೇಬ ರಜಾಈ। ಸೋಇ ಕರಿಹಉँ ರಘುಬೀರ ದೊಹಾಈ॥ ೩ ॥**
**ಸಹಜ ಸನೇಹ ರಾಮ ಲಖಿ ತಾಸೂ। ಸಂಗ ಲೀನ್ಹ ಗುಹ ಹೃದಯँ ಹುಲಾಸೂ॥**
**ಪುನಿ ಗುಹँ ಗ್ಯಾತಿ ಬೋಲಿ ಸಬ ಲೀನ್ಹೇ। ಕರಿ ಪರಿತೋಷು ಬಿದಾ ತಬ ಕೀನ್ಹೇ॥ ೪ ॥**

ಮಂಗಳಕರವಾದ ಗಂಗೆಯ ಈ ಮಾತನ್ನು ಕೇಳಿ, ದೇವನದಿಯು ತನಗೆ ಅನುಕೂಲವಾಗಿರುವುದನ್ನು ಕೇಳಿ ಸೀತೆಯು ಹರ್ಷಿತಳಾದಳು. ಆಗ ಪ್ರಭು ರಾಮಚಂದ್ರನು ಗುಹನಿಗೆ 'ನೀನು ಮರಳಿ ಮನೆಗೆ ಹೋಗು' ಎಂದು ಹೇಳಿದನು. ಇದನ್ನು ಕೇಳಿದ ಕೂಡಲೇ ಅವನ ಬಾಯಿ ಒಣಗಿತು. ಹೃದಯವು ಪರಿತಪಿಸಿತು. ಗುಹನು ಕೈಜೋಡಿಸಿಕೊಂಡು ದೀನನಾಗಿ ಇಂತೆಂದನು – ''ಓ ರಘುಕುಲಶಿರೋಮಣೀ! ನನ್ನ ಬಿನ್ನಹವನ್ನು ಲಾಲಿಸು. ನಾನು ಕೆಲದಿನ ನಿಮ್ಮ ಜೊತೆಗಿದ್ದು, ನಿಮಗೆ ದಾರಿತೋರುತ್ತಾ, ನಿಮ್ಮ ಪಾದಪದ್ಮಗಳ ಸೇವೆಮಾಡಿಕೊಂಡಿರುತ್ತೇನೆ. ನೀವು ನೆಲೆನಿಲ್ಲುವ ಕಾಡಿನಲ್ಲಿ ಪರ್ಣಕುಟಿಯನ್ನು ಕಟ್ಟಿಕೊಡುವೆ. ಅನಂತರ ಪ್ರಭುಗಳು ಅಪ್ಪಣೆಕೊಟ್ಟಂತೆ ನಡೆದುಕೊಳ್ಳುವೆ, ಎಂದು ಪ್ರಮಾಣಮಾಡಿ ಹೇಳುತ್ತೇನೆ.'' ಅವನ ಸಹಜವಾದ ಪ್ರೇಮವನ್ನು ನೋಡಿ, ಶ್ರೀರಾಮಚಂದ್ರನು ಅವನನ್ನು ಜೊತೆಗೆ ಬರಲು ಅನುಮತಿಯಿತ್ತನು. ಇದರಿಂದ ಗುಹನಿಗೆ ತುಂಬಾ ಆನಂದವಾಯಿತು. ಅವನು ತನ್ನ ಜಾತಿಯ ಜನರೆಲ್ಲರನ್ನು ಕರೆಸಿ, ಅವರನ್ನು ಸಂತೋಷಪಡಿಸಿ, ಅವರವರ ಮನೆಗಳಿಗೆ ಬೀಳ್ಕೊಟ್ಟನು. (ಚೌ/೧-೪)

**ದೋ – ತಬ ಗನಪತಿ ಸಿವ ಸುಮಿರಿ ಪ್ರಭು ನಾಇ ಸುರಸರಿಹಿ ಮಾಥ।**
**ಸಖಾ ಅನುಜ ಸಿಯ ಸಹಿತ ಬನ ಗವನು ಕೀನ್ಹ ರಘುನಾಥ॥ ೧೦೪ ॥**

ಅನಂತರ ಪ್ರಭುರಾಮಚಂದ್ರನು ಗಣಪತಿ, ಶಿವ ಇವರನ್ನು ಸ್ಮರಿಸಿ, ಗಂಗಾದೇವಿಗೆ ತಲೆವಾಗಿ, ಸಖನಾದ ನಿಷಾದರಾಜ, ಲಕ್ಷ್ಮಣ, ಸೀತಾದೇವಿಯೊಂದಿಗೆ ಕಾಡಿಗೆ ತೆರಳಿದರು. (ದೋ/೧೦೪)

## ತೀರ್ಥರಾಜ ಪ್ರಯಾಗವನ್ನು ಸೇರಿ ಭರದ್ವಾಜರ ದರ್ಶನ

**ಚೌ – ತೆಹಿ ದಿನ ಭಯಉ ಬಿಟಪ ತರ ಬಾಸೂ। ಲಖನ ಸಖಾँ ಸಬ ಕೀನ್ಹ ಸುಪಾಸೂ॥**
**ಪ್ರಾತ ಪ್ರಾತಕೃತ ಕರಿ ರಘುರಾಈ। ತೀರಥರಾಜು ದೀಖ ಪ್ರಭು ಜಾಈ॥ ೧ ॥**
**ಸಚಿವ ಸತ್ಯ ಶ್ರದ್ಧಾಪ್ರಿಯ ನಾರೀ। ಮಾಧವ ಸರಿಸ ಮೀತು ಹಿತಕಾರೀ॥**
**ಚಾರಿ ಪದಾರಥ ಭರಾ ಭँಡಾರೂ। ಪುನ್ಯ ಪ್ರದೇಸ ದೇಸ ಅತಿ ಚಾರೂ॥ ೨ ॥**

**ಛೇತ್ರು ಅಗಮು ಗಢು ಗಾಢ ಸುಹಾವಾ । ಸಪನೆಹುँ ನಹಿँ ಪ್ರತಿಪಚ್ಛಿನ್ಹ ಪಾವಾ ॥**
**ಸೇನ ಸಕಲ ತೀರಥ ಬರ ಬೀರಾ । ಕಲುಷ ಅನೀಕ ದಲನ ರನಧೀರಾ ॥ ೩ ॥**
**ಸಂಗಮು ಸಿಂಹಾಸನು ಸುಠಿ ಸೋಹಾ । ಛತ್ರು ಅಖಯಬಟು ಮುನಿ ಮನು ಮೋಹಾ ॥**
**ಚವँರ ಜಮುನ ಅರು ಗಂಗ ತರಂಗಾ । ದೇಖಿ ಹೋಹಿँ ದುಖ ದಾರಿದ ಭಂಗಾ ॥ ೪ ॥**

ಅಂದು ಪ್ರಭುವು ಸೀತೆಯೊಡನೆ ಒಂದು ಮರದ ಕೆಳಗೆ ವಾಸಿಸಿದನು. ಲಕ್ಷ್ಮಣನೂ, ಗುಹನೂ ಅವರಿಗೆ ಬೇಕಾದ ವ್ಯವಸ್ಥೆಯನ್ನು ಮಾಡಿದರು. ಪ್ರಾತಃಕಾಲದಲ್ಲಿ ಶ್ರೀರಾಮನು ಪ್ರಾತರ್ವಿಧಿಗಳಿಂದ ಮುಕ್ತನಾಗಿ ಅಲ್ಲಿಂದ ಹೊರಟು, ತೀರ್ಥರಾಜನಾದ ಪ್ರಯಾಗಕ್ಕೆ ತಲುಪಿದನು. ಈ ತೀರ್ಥರಾಜನಿಗೆ ಸತ್ಯವೇ ಮಂತ್ರಿಯು. ಶ್ರದ್ಧೆಯೇ ಪ್ರಿಯಪತ್ನಿ, ವೇಣೀಮಾಧವರಂತಹ ಹಿತಕಾರಿಗಳೇ ಮಿತ್ರರು. ಚತುರ್ವಿಧ ಪುರುಷಾರ್ಥಗಳಿಂದ ಅವನ ಭಂಡಾರ ತುಂಬಿದೆ. ಆ ಪುಣ್ಯಮಯ ಪ್ರಾಂತವೇ ಆ ರಾಜನ ಸುಂದರ ರಾಜ್ಯವು. ಪ್ರಯಾಗ ಕ್ಷೇತ್ರವೇ ದುರ್ಗಮವೂ, ದೃಢವೂ ಆದ ಬಲವಾದ ಕೋಟೆ. ಅದನ್ನು ಪಾಪರೂಪೀ ಶತ್ರುಗಳು ಕನಸಿನಲ್ಲಿಯೂ ಪಡೆಯಲಾರರು. ಸಕಲತೀರ್ಥಗಳೇ ಅದರ ಶ್ರೇಷ್ಠ ವೀರ ಸೈನಿಕರು. ಅವರು ಪಾಪಗಳೆಂಬ ಶತ್ರುಗಳನ್ನು ಹೊಡೆದೋಡಿಸುವ ರಣಧೀರರು. ಗಂಗಾ, ಯಮುನಾ, ಸರಸ್ವತಿಯರ ಸಂಗಮವೇ ಅದರ ಅತ್ಯಂತ ಸುಶೋಭಿತ ಸಿಂಹಾಸನ. ಮುನಿಗಳ ಮನವನ್ನು ಮುಗ್ಧವಾಗಿಸುವ ಅಕ್ಷಯವಟವೇ ಛತ್ರ. ಗಂಗಾ ಹಾಗೂ ಯಮುನೆಯ ಕಪ್ಪು-ಬಿಳುಪು ಅಲೆಗಳೇ ದುಃಖ ದಾರಿದ್ರ್ಯ ಭಂಗಕಾರಿಯಾದ ಚಾಮರಗಳು. (ಚೌ/೧-೪)

**ದೋ – ಸೇವಹಿँ ಸುಕೃತೀ ಸಾಧು ಸುಚಿ ಪಾವಹಿँ ಸಬ ಮನಕಾಮ ।**
**ಬಂದೀ ಬೇದ ಪುರಾನ ಗನ ಕಹಹಿँ ಬಿಮಲ ಗುನ ಗ್ರಾಮ ॥ ೧೦೫ ॥**

ಪುಣ್ಯಾತ್ಮರೂ, ಪವಿತ್ರರೂ ಆದ ಸಾಧುಗಳು ಅದರ ಸೇವೆ ಮಾಡಿ ತಮ್ಮ ಎಲ್ಲ ಮನೋರಥಗಳನ್ನು ಈಡೇರಿಸಿಕೊಳ್ಳುತ್ತಾರೆ. ವೇದ-ಪುರಾಣಗಳ ಸಮೂಹವೇ ವಂದಿಮಾಗಧರು, ಅವು ಅದರ ನಿರ್ಮಲ ಗುಣಗಳನ್ನು ಗಾನಮಾಡುತ್ತವೆ. (ದೋ/೧೦೫)

**ಚೌ – ಕೋ ಕಹಿ ಸಕಇ ಪ್ರಯಾಗ ಪ್ರಭಾಊ । ಕಲುಷ ಪುಂಜ ಕುಂಜರ ಮೃಗರಾಊ ॥**
**ಅಸ ತೀರಥಪತಿ ದೇಖಿ ಸುಹಾವಾ । ಸುಖ ಸಾಗರ ರಘುಬರ ಸುಖು ಪಾವಾ ॥ ೧ ॥**
**ಕಹಿ ಸಿಯ ಲಖನಹಿ ಸಖಹಿ ಸುನಾಈ । ಶ್ರೀಮುಖ ತೀರಥರಾಜ ಬಡಾಈ ॥**
**ಕರಿ ಪ್ರನಾಮು ದೇಖತ ಬನ ಬಾಗಾ । ಕಹತ ಮಹಾತಮ ಅತಿ ಅನುರಾಗಾ ॥ ೨ ॥**
**ಏಹಿ ಬಿಧಿ ಆಇ ಬಿಲೋಕೀ ಬೇನೀ । ಸುಮಿರತ ಸಕಲ ಸುಮಂಗಲ ದೇನೀ ॥**
**ಮುದಿತ ನಹಾಇ ಕೀನ್ಹಿ ಸಿವ ಸೇವಾ । ಪೂಜಿ ಜಥಾಬಿಧಿ ತೀರಥ ದೇವಾ ॥ ೩ ॥**
**ತಬ ಪ್ರಭು ಭರದ್ವಾಜ ಪಹಿँ ಆಏ । ಕರತ ದಂಡವತ ಮುನಿ ಉರ ಲಾಏ ॥**
**ಮುನಿ ಮನ ಮೋದ ನ ಕಛು ಕಹಿ ಜಾಈ । ಬ್ರಹ್ಮಾನಂದ ರಾಸಿ ಜನು ಪಾಈ ॥ ೪ ॥**

ಪಾಪಗಳ ಸಮೂಹರೂಪೀ ಆನೆಯನ್ನು ಕೊಲ್ಲುವ ಸಿಂಹವಾಗಿರುವ ಪ್ರಯಾಗರಾಜನ ಮಹಿಮೆಯನ್ನು ಯಾರು ವರ್ಣಿಸಬಲ್ಲರು. ಇಂತಹ ಚೆಲುವಾದ ತೀರ್ಥರಾಜನ ದರ್ಶನಮಾಡಿ, ಸುಖಸಾಗರನಾದ ಶ್ರೀರಾಮನು ಸುಖಿಯಾದನು. ಅವನು ತನ್ನ ಶ್ರೀಮುಖದಿಂದ ಸೀತೆ, ಲಕ್ಷ್ಮಣ ಹಾಗೂ ಸಖನಾದ ಗುಹನಿಗೆ ತೀರ್ಥರಾಜನ ಮಹಿಮೆಯನ್ನು ಬಣ್ಣಿಸಿ ಹೇಳಿದನು. ಅನಂತರ ಪ್ರಣಾಮಮಾಡಿ ವನ, ಉಪವನಗಳನ್ನು ನೋಡುತ್ತಾ, ಪ್ರೇಮದಿಂದ ತೀರ್ಥಮಹಾತ್ಮ್ಯೆಯನ್ನು ಹೇಳುತ್ತಾ, ಶ್ರೀರಾಮನು ಈ ಪ್ರಕಾರದಿಂದ ಸ್ಮರಣಮಾತ್ರದಿಂದಲೇ ಸಕಲ ಮಂಗಳವನ್ನೂ ಕರುಣಿಸುವ ತ್ರಿವೇಣಿಯ ದರ್ಶನ ಮಾಡಿದನು. ಅನಂತರ ಆನಂದದಿಂದ ಸಂಗಮದಲ್ಲಿ ಸ್ನಾನವನ್ನು ಮಾಡಿ ಶಿವನನ್ನೂ, ತೀರ್ಥದೇವತೆಗಳನ್ನೂ ಪೂಜಿಸಿದನು. ಸ್ನಾನ ಪೂಜಾದಿಗಳನ್ನು ಮುಗಿಸಿ, ಪ್ರಭು ರಾಮಚಂದ್ರನು ಭರದ್ವಾಜ ಮಹಾಮುನಿಗಳ ಬಳಿಗೆ ಬಂದನು. ರಾಮನು ದಂಡಪ್ರಣಾಮ ಮಾಡಿದುದೇ ತಡ, ಮುನಿಗಳು ಆತನನ್ನು ಎದೆಗಪ್ಪಿಕೊಂಡರು. ಅವರಿಗೆ ಬ್ರಹ್ಮಾನಂದದ ರಾಶಿಯೇ ದೊರೆತಂತಾಯಿತು. (ಚೌ/೧-೪)

**ದೋ – ದೀನ್ಹಿ ಅಸೀಸ ಮುನೀಸ ಉರ ಅತಿ ಅನಂದು ಅಸ ಜಾನಿ ।**
**ಲೋಚನ ಗೋಚರ ಸುಕೃತ ಫಲ ಮನಹುँ ಕಿಏ ಬಿಧಿ ಆನಿ ॥ ೧೦೬ ॥**

ಮುನೀಶ್ವರ ಭರದ್ವಾಜರು ಶ್ರೀರಾಮನಿಗೆ ಆಶೀರ್ವದಿಸಿದರು. ಶ್ರೀಸೀತಾರಾಮಲಕ್ಷ್ಮಣರ ದರ್ಶನದ ಮೂಲಕ ತನ್ನ ಎಲ್ಲ ಪುಣ್ಯಫಲಗಳು ವಿಧಾತನು ನನಗೆ ಇಂದೇ ಅನುಗ್ರಹಿಸಿದನು ಎಂದು ಭಾವಿಸಿ ಆನಂದಿತನಾದನು. (ದೋ/೧೦೬)

**ಚೌ – ಕುಸಲ ಪ್ರಸ್ನ ಕರಿ ಆಸನ ದೀನ್ಹೆ। ಪೂಜಿ ಪ್ರೇಮ ಪರಿಪೂರನ ಕೀನ್ಹೆ॥**
**ಕಂದ ಮೂಲ ಫಲ ಅಂಕುರ ನೀಕೇ। ದಿಏ ಆನಿ ಮುನಿ ಮನಹುँ ಅಮೀ ಕೇ॥ ೧ ॥**
**ಸೀಯ ಲಖನ ಜನ ಸಹಿತ ಸುಹಾಏ। ಅತಿ ರುಚಿ ರಾಮ ಮೂಲ ಫಲ ಖಾಏ॥**
**ಭಏ ಬಿಗತಶ್ರಮ ರಾಮು ಸುಖಾರೇ। ಭರದ್ವಾಜ ಮೃದು ಬಚನ ಉಚಾರೇ॥ ೨ ॥**
**ಆಜು ಸುಫಲ ತಪು ತೀರಥ ತ್ಯಾಗೂ। ಆಜು ಸುಫಲ ಜಪ ಜೋಗ ಬಿರಾಗೂ॥**
**ಸಫಲ ಸಕಲ ಸುಭ ಸಾಧನ ಸಾಜೂ। ರಾಮ ತುಮ್ಹಹಿ ಅವಲೋಕತ ಆಜೂ॥ ೩ ॥**
**ಲಾಭ ಅವಧಿ ಸುಖ ಅವಧಿ ನ ದೂಜೀ। ತುಮ್ಹರೇँ ದರಸ ಆಸ ಸಬ ಪೂಜೀ॥**
**ಅಬ ಕರಿ ಕೃಪಾ ದೇಹು ಬರ ಏಹೂ। ನಿಜ ಪದ ಸರಸಿಜ ಸಹಜ ಸನೇಹೂ॥ ೪ ॥**

ಕುಶಲಪ್ರಶ್ನೆಗಳಾದ ನಂತರ ಮುನೀಶ್ವರರು ಶ್ರೀರಾಮನಿಗೆ ಆಸನವನ್ನೀಡಿ ಕುಳ್ಳಿರಿಸಿದರು. ಬಳಿಕ ಭಕ್ತಿಯಿಂದ ಪೂಜಿಸಿ, ಸಂತೋಷಪಡಿಸಿದನು. ಅನಂತರ ಅಮೃತತುಲ್ಯ, ರುಚಿಕರವಾದ ಕಂದಮೂಲ ಫಲಗಳನ್ನು, ಅಂಕುರಗಳನ್ನು ತಂದು ಸಮರ್ಪಿಸಿದರು. ಸೀತಾ, ಲಕ್ಷ್ಮಣ ಗುಹ ಇವರನ್ನೊಡಗೂಡಿ ಶ್ರೀರಾಮಚಂದ್ರನು ಆ ಫಲಮೂಲಗಳನ್ನು ಅತ್ಯಂತ ಆಸಕ್ತಿಯಿಂದ ಭುಂಜಿಸಿದನು. ಬಳಲಿಕೆ ದೂರವಾದುದರಿಂದ ಶ್ರೀರಾಮನಿಗೆ ಹಾಯೆನಿಸಿತು. ಆಗ ಭರದ್ವಾಜರು ಆತನಿಗೆ ಈ ಪ್ರಕಾರ ಮೃದು-ವಚನಗಳನ್ನು ಹೇಳಿದನು– ''ಎಲೈ ರಾಮಾ! ನಿನ್ನ ದರ್ಶನದಿಂದ ಇಂದು ನನ್ನ ತಪಸ್ಸು, ತೀರ್ಥಸೇವನೆ, ತ್ಯಾಗ, ಇವುಗಳು ಸಫಲವಾದುವು. ಇಂದು ನನ್ನ ಜಪ, ಯೋಗ, ವೈರಾಗ್ಯಗಳು ಸಾರ್ಥಕವಾದುವು. ಇಂದು ನನ್ನ ಸಂಪೂರ್ಣ ಶುಭಸಾಧನ ಸಮುದಾಯಗಳ ಫಲಗಳು ಲಭಿಸಿದವು. ನಿನ್ನ ದರ್ಶನಕ್ಕಿಂತ ಮಿಗಿಲಾದ ಸುಖ-ಲಾಭಗಳೂ ಯಾವುದೂ ಇಲ್ಲ. ನಿನ್ನ ದರ್ಶನದಿಂದ ನನ್ನ ಎಲ್ಲ ಆಸೆಗಳು ಪೂರ್ಣವಾದುವು. ಅಷ್ಟೇ ಅಲ್ಲ, ನನ್ನ ಜನ್ಮವು ಧನ್ಯವಾಯಿತು. ನಿನ್ನ ಪದಸರೋಜಗಳಲ್ಲಿ ನನಗೆ ಸಹಜವಾದ ಭಕ್ತಿಯು ಉಂಟಾಗುವಂತೆ ವರವನ್ನು ಕರುಣಿಸೆಂದು ಪ್ರಾರ್ಥಿಸಿದರು. (ಚೌ/೧-೪)

**ದೋ – ಕರಮ ಬಚನ ಮನ ಛಾಡಿ ಛಲು ಜಬ ಲಗಿ ಜನು ನ ತುಮ್ಹಾರ।**
**ತಬ ಲಗಿ ಸುಖು ಸಪನೇಹುँ ನಹೀँ ಕಿಏँ ಕೋಟಿ ಉಪಚಾರ॥ ೧೦೭ ॥**

ಮನೋವಾಕ್ಕಾಯಕರ್ಮಗಳಿಂದ ಛಲಕಪಟವನ್ನು ತೊರೆದು ನಿನ್ನ ದಾಸನಾಗುವವರೆಗೂ ಕೋಟಿ ಉಪಾಯ ಮಾಡಿದರೂ ಕನಸಿನಲ್ಲಿಯೂ ಸುಖ ದೊರೆಯದು. (ದೋ/೧೦೭)

**ಚೌ – ಸುನಿ ಮುನಿ ಬಚನ ರಾಮು ಸಕುಚಾನೇ। ಭಾವ ಭಗತಿ ಆನಂದ ಅಘಾನೇ॥**
**ತಬ ರಘುಬರ ಮುನಿ ಸುಜಸು ಸುಹಾವಾ। ಕೋಟಿ ಭಾँತಿ ಕಹಿ ಸಬಹಿ ಸುನಾವಾ॥ ೧ ॥**
**ಸೋ ಬಡ ಸೋ ಸಬ ಗುನ ಗನ ಗೇಹೂ। ಜೇಹಿ ಮುನೀಸ ತುಮ್ಹ ಆದರ ದೇಹೂ॥**
**ಮುನಿ ರಘುಬೀರ ಪರಸಪರ ನವಹೀँ। ಬಚನ ಅಗೋಚರ ಸುಖು ಅನುಭವಹೀँ॥ ೨ ॥**
**ಯಹ ಸುಧಿ ಪಾಇ ಪ್ರಯಾಗ ನಿವಾಸೀ। ಬಟು ತಾಪಸ ಮುನಿ ಸಿದ್ಧ ಉದಾಸೀ॥**
**ಭರದ್ವಾಜ ಆಶ್ರಮ ಸಬ ಆಏ। ದೇಖನ ದಸರಥ ಸುಅನ ಸುಹಾಏ॥ ೩ ॥**
**ರಾಮ ಪ್ರನಾಮ ಕೀನ್ಹ ಸಬ ಕಾಹೂ। ಮುದಿತ ಭಏ ಲಹಿ ಲೋಯನ ಲಾಹೂ॥**
**ದೇಹಿँ ಅಸೀಸ ಪರಮ ಸುಖು ಪಾಈ। ಫಿರೇ ಸರಾಹತ ಸುಂದರತಾಈ॥ ೪ ॥**

ಮುನಿವಚನವನ್ನು ಕೇಳಿ, ಅವರ ಭಕ್ತಿಭಾವವನ್ನು ಕಂಡು ಆನಂದದಿಂದ ತೃಪ್ತನಾಗಿ ಭಗವಂತನಾದ ಶ್ರೀರಾಮನು ಸಂಕೋಚಗೊಂಡನು. ಆಗ ಶ್ರೀರಾಮಚಂದ್ರನು ಭರದ್ವಾಜಮುನಿಯ ಸುಯಶವನ್ನು ಎಲ್ಲರಿಗೂ ವರ್ಣಿಸತೊಡಗಿದನು. ''ಮುನೀಶ್ವರರೇ! ನಿಮ್ಮ ಆದರಕ್ಕೆ ಪಾತ್ರರಾದವರೇ ಗುಣಾಢ್ಯನೂ, ಉತ್ತಮನೂ ಆಗುವನು.'' ಈ ವಿಧವಾದ ಸಂಭಾಷಣೆಯಿಂದ ಶ್ರೀರಾಮನೂ, ಭರದ್ವಾಜಮುನಿಗಳೂ ಇಬ್ಬರೂ ಪರಸ್ಪರ ಪ್ರೇಮಾದರಗಳಿಂದ ವಿನಮ್ರರಾಗಿ, ಅನಿರ್ವಚನೀಯ ಸುಖವನ್ನು ಅನುಭವಿಸುತ್ತಿದ್ದರು. ಶ್ರೀರಾಮಾದಿಗಳ ಆಗಮನದ ಸುದ್ದಿಕೇಳಿ, ಪ್ರಯಾಗದ ನಿವಾಸಿಗಳಾದ ಬ್ರಹ್ಮಚಾರಿಗಳೂ, ತಪಸ್ವಿಗಳೂ, ಮುನಿಗಳೂ, ಸಿದ್ಧರೂ, ವಿರಕ್ತರೂ ಎಲ್ಲರೂ ದಶರಥ ಕುಮಾರರನ್ನು ನೋಡಲು ಭರದ್ವಾಜರ ಆಶ್ರಮಕ್ಕೆ ಆಗಮಿಸಿದರು. ಶ್ರೀರಾಮಚಂದ್ರನು ಅವರೆಲ್ಲರಿಗೂ ನಮಸ್ಕರಿಸಿದನು. ಅವರೆಲ್ಲರೂ ನೇತ್ರಾನಂದವನ್ನು ಪಡೆದು, ಆನಂದಿತರಾಗಿ, ಶ್ರೀರಾಮನ ಚೆಲುವನ್ನು ಹೊಗಳುತ್ತಾ, ಆಶೀರ್ವದಿಸಿ ಹರ್ಷದಿಂದ ಮರಳಿದರು. (ಚೌ/೧-೪)

**ದೋ – ರಾಮ ಕೀನ್ಹ ಬಿಶ್ರಾಮ ನಿಸಿ ಪ್ರಾತ ಪ್ರಯಾಗ ನಹಾಇ।**
**ಚಲೇ ಸಹಿತ ಸಿಯ ಲಖನ ಜನ ಮುದಿತ ಮುನಿಹಿ ಸಿರು ನಾಇ॥ ೧೦೮ ॥**

ಶ್ರೀರಾಮನು ಆ ರಾತ್ರಿಯನ್ನು ಅದೇ ಆಶ್ರಮದಲ್ಲಿ ಕಳೆದನು. ಬೆಳಗೆದ್ದು ಪ್ರಯಾಗರಾಜನಲ್ಲಿ ಸ್ನಾನಾದಿಗಳನ್ನಾಚರಿಸಿ, ಪ್ರಸನ್ನಚಿತ್ತನಾಗಿ ಮುನಿಯನ್ನು ವಂದಿಸಿ, ಸೀತಾಲಕ್ಷ್ಮಣ ಗುಹನೊಡಗೂಡಿ ಮುಂದಕ್ಕೆ ಹೊರಟನು. (ದೋ/೧೦೮)

**ಚೌ – ರಾಮ ಸಪ್ರೇಮ ಕಹೆಉ ಮುನಿ ಪಾಹೀಂ। ನಾಥ ಕಹಿಅ ಹಮ ಕೆಹಿ ಮಗ ಜಾಹೀಂ॥**
**ಮುನಿ ಮನ ಬಿಹಸಿ ರಾಮ ಸನ ಕಹಹೀಂ। ಸುಗಮ ಸಕಲ ಮಗ ತುಮ್ಹ ಕಹುँ ಅಹಹೀಂ॥ ೧ ॥**
**ಸಾಥ ಲಾಗಿ ಮುನಿ ಸಿಷ್ಯ ಬೋಲಾಏ। ಸುನಿ ಮನ ಮುದಿತ ಪಚಾಸಕ ಆಏ॥**
**ಸಬನ್ಹಿ ರಾಮ ಪರ ಪ್ರೇಮ ಅಪಾರಾ। ಸಕಲ ಕಹಹಿಂ ಮಗು ದೀಖ ಹಮಾರಾ॥ ೨ ॥**
**ಮುನಿ ಬಟು ಚಾರಿ ಸಂಗ ತಬ ದೀನ್ಹೆ। ಜಿನ್ಹ ಬಹು ಜನಮ ಸುಕೃತ ಸಬ ಕೀನ್ಹೆ॥**
**ಕರಿ ಪ್ರನಾಮು ರಿಷಿ ಆಯಸು ಪಾಈ। ಪ್ರಮುದಿತ ಹೃದಯँ ಚಲೇ ರಘುರಾಈ॥ ೩ ॥**
**ಗ್ರಾಮ ನಿಕಟ ಜಬ ನಿಕಸಹಿಂ ಜಾಈ। ದೇಖಹಿಂ ದರಸು ನಾರಿ ನರ ಧಾಈ॥**
**ಹೋಹಿಂ ಸನಾಥ ಜನಮ ಫಲು ಪಾಈ। ಫಿರಹಿಂ ದುಖಿತ ಮನು ಸಂಗ ಪಠಾಈ॥ ೪ ॥**

ಹೋಗುವಾಗ ಪ್ರೇಮದಿಂದ ರಾಮನು ಮುನಿಯ ಬಳಿ ಕೇಳಿದನು – ಸ್ವಾಮಿ! ನಾವು ಯಾವ ದಾರಿಯಿಂದ ಮುಂದಕ್ಕೆ ಹೋಗಬೇಕು? ತಿಳಿಸಿರಿ. ಮುನಿಗಳು ಮನದಲ್ಲೇ ನಕ್ಕು ನುಡಿದರು – 'ರಾಮಾ! ನಿನಗೆ ಎಲ್ಲ ಮಾರ್ಗಗಳೂ ಸುಗಮ ಹಾಗೂ ಸುಖಕರವೇ.' ಅನಂತರ ಶ್ರೀರಾಮನಿಗೆ ದಾರಿತೋರಲು ಮುನಿಗಳು ತಮ್ಮ ಶಿಷ್ಯರನ್ನು ಕರೆಸಿದನು. ಗುರುಗಳ ಮಾತು ಕೇಳಿದ್ದೇ ತಡ, ಹರ್ಷಿತರಾಗಿ ಐವತ್ತುಮಂದಿ ಶಿಷ್ಯರು ಬಂದರು. ಅವರೆಲ್ಲರಿಗೂ ಶ್ರೀರಾಮನಲ್ಲಿ ಅಪಾರವಾದ ಪ್ರೇಮ. ಎಲ್ಲರೂ ನಮಗೆ ದಾರಿ ಗೊತ್ತಿದೆ, ನಮಗೆ ದಾರಿಗೊತ್ತಿದೆ ಎಂದು ಹೇಳುವವರೇ. ಆಗ ಭಾರದ್ವಾಜರು ಆರಿಸಿ ನಾಲ್ಕುಮಂದಿ ಬ್ರಹ್ಮಚಾರಿಗಳನ್ನು ಅವರ ಜೊತೆ ಕಳಿಸಿದರು. ಅವರು ನಿಜವಾಗಿ ಅನೇಕ ಜನ್ಮಗಳಲ್ಲಿ ಪುಣ್ಯಮಾಡಿದ್ದಿರಬೇಕು. ಶ್ರೀರಘುನಾಥನು ಮುನಿಗಳಿಗೆ ನಮಸ್ಕರಿಸಿ, ಅವರ ಅಪ್ಪಣೆಪಡೆದು ಆನಂದತುಂದಿಲನಾಗಿ ಅಲ್ಲಿಂದ ಹೊರಟನು. ಅವರು ಯಾವುದಾದರು ಹಳ್ಳಿಯನ್ನು ಸಮೀಪಿಸಿದರೆ ಸಾಕು, ಅಲ್ಲಿಯ ಸ್ತ್ರೀ-ಪುರುಷರೆಲ್ಲರೂ ಅವರ ದರ್ಶನಕ್ಕಾಗಿ ಓಡಿಬರುತ್ತಿದ್ದರು. ಅವರು ತಮ್ಮ ಜನ್ಮವನ್ನು ಸಫಲವಾಯಿತೆಂದು ತಿಳಿದು ಅನಾಥರಾದ ನಮಗೆ ನಾಥನು ದೊರಕಿದನೆಂದು ಸಂತಸಹೊಂದುತ್ತಿದ್ದರು. ಸ್ವಲ್ಪದೂರ ರಾಮನೊಂದಿಗೆ ನಡೆದುಕೊಂಡು ಹೋಗಿ, ಮನವನ್ನು ಅಲ್ಲೇ ಬಿಟ್ಟು ಶರೀರದಿಂದ ಮನೆಗೆ ಮರಳುತ್ತಿದ್ದರು. (ಚೌ/೧-೪)

**ದೋ – ಬಿದಾ ಕಿಏ ಬಟು ಬಿನಯ ಕರಿ ಫಿರೇ ಪಾಇ ಮನ ಕಾಮ।**
**ಉತರಿ ನಹಾಏ ಜಮುನ ಜಲ ಜೋ ಸರೀರ ಸಮ ಸ್ಯಾಮ॥ ೧೦೯ ॥**

ಕೊಂಚದೂರ ಹೋದಬಳಿಕ ಶ್ರೀರಾಮನು ಆ ನಾಲ್ವರು ಬ್ರಹ್ಮಚಾರಿಗಳನ್ನು ವಿನಂತಿಸಿ ಹಿಂದಕ್ಕೆ ಬೀಳ್ಕೊಟ್ಟನು. ಅವರು ತಮ್ಮ ಮನೋವಾಂಛಿತ ಅನನ್ಯ ಭಕ್ತಿಯನ್ನು ಹೊಂದಿ ಮರಳಿದರು. ಬಳಿಕ ಎಲ್ಲರೂ ಯಮುನಾನದಿಯನ್ನು ಸಮೀಪಿಸಿ, ಬಳಿಕ ನೀಲವರ್ಣದಿಂದ ಶೋಭಿಸುವ ಆ ಯಮುನಾನದಿಯಲ್ಲಿ ಎಲ್ಲರೂ ಸ್ನಾನಮಾಡಿದರು. (ದೋ/೧೦೯)

**ಚೌ – ಸುನತ ತೀರಬಾಸೀ ನರ ನಾರೀ। ಧಾಏ ನಿಜ ನಿಜ ಕಾಜ ಬಿಸಾರೀ॥**
**ಲಖನ ರಾಮ ಸಿಯ ಸುಂದರತಾಈ। ದೇಖಿ ಕರಹಿಂ ನಿಜ ಭಾಗ್ಯ ಬಡಾಈ॥ ೧ ॥**
**ಅತಿ ಲಾಲಸಾ ಬಸಹಿಂ ಮನ ಮಾಹೀಂ। ನಾಉँ ಗಾಉँ ಬೂಝತ ಸಕುಚಾಹೀಂ॥**
**ಜೇ ತಿನ್ಹ ಮಹುँ ಬಯಬಿರಿಧ ಸಯಾನೇ। ತಿನ್ಹ ಕರಿ ಜುಗುತಿ ರಾಮು ಪಹಿಚಾನೇ॥ ೨ ॥**
**ಸಕಲ ಕಥಾ ತಿನ್ಹ ಸಬಹಿ ಸುನಾಈ। ಬನಹಿ ಚಲೇ ಪಿತು ಆಯಸು ಪಾಈ॥**
**ಸುನಿ ಸಬಿಷಾದ ಸಕಲ ಪಛಿತಾಹೀಂ। ರಾನೀ ರಾಯँ ಕೀನ್ಹ ಭಲ ನಾಹೀಂ॥ ೩ ॥**

ಯಮುನಾನದಿಯ ತೀರದಲ್ಲಿವಾಸಿಸುವ ಸ್ತ್ರೀ-ಪುರುಷರು – ನಿಷಾದರಾಜನೊಂದಿಗೆ ಇಬ್ಬರು ಸುಂದರ ರಾಜಕುಮಾರರೂ, ಓರ್ವ ಪರಮಸುಂದರ ಸ್ತ್ರೀಯು ಬರುತ್ತಿದ್ದಾರೆ ಎಂದು ತಿಳಿದು, ಎಲ್ಲರೂ ತಮ್ಮ-ತಮ್ಮ ಕೆಲಸ-ಕಾರ್ಯಗಳನ್ನು ಮರೆತು ಓಡಿಬಂದರು. ಸೀತಾರಾಮಲಕ್ಷ್ಮಣರ ಅಲೌಕಿಕ ಸೌಂದರ್ಯವನ್ನು ಕಂಡು ತಮ್ಮ ಸೌಭಾಗ್ಯವನ್ನು ಕೊಂಡಾಡಿದರು. ಅವರಿಗೆ ಇವರ ಪರಿಚಯ ಮಾಡಿಕೊಳ್ಳುವ ಹಂಬಲ. ಆದರೆ ಅವರು ಹೆಸರು, ಊರು ಕೇಳಲು ಸಂಕೋಚಪಡುತ್ತಾರೆ. ಅವರಲ್ಲಿ

ಚತುರರೂ, ವಯೋವೃದ್ಧರೂ ಆದವರು ಶ್ರೀರಾಮನನ್ನು ಯುಕ್ತಿಯಿಂದ ಗುರುತಿಸಿದರು. ಇವರು ತಂದೆಯ ಆಜ್ಞೆಯನ್ನು ಪಾಲಿಸಲೆಂದು ಕಾಡಿಗೆ ಬಂದಿರುವ ಇವನೇ ಶ್ರೀರಾಮನೆಂದು ಅವರು ಎಲ್ಲರಿಗೆ ಹೇಳಿದರು. ಅದನ್ನು ಕೇಳಿ ಎಲ್ಲ ಜನರೂ – ಮಹಾರಾಜರೂ, ರಾಣಿಯರೂ ಇಂತಹ ಸುಂದರಾಂಗರನ್ನು ಕಾಡಿಗೆ ಕಳಿಸಿ ಒಳ್ಳೆಯ ಕೆಲಸ ಮಾಡಲಿಲ್ಲ ಎಂದು ದುಃಖಿತರಾದರು. (ಚೌ/೧-೩)

## ತಾಪಸ ಪ್ರಸಂಗ

**ತೆಹಿ ಅವಸರ ಏಕ ತಾಪಸು ಆವಾ। ತೇಜಪುಂಜ ಲಘುಬಯಸ ಸುಹಾವಾ ॥**
**ಕಬಿ ಅಲಖಿತ ಗತಿ ಬೇಷು ಬಿರಾಗೀ। ಮನ ಕ್ರಮ ಬಚನ ರಾಮ ಅನುರಾಗೀ ॥ ೪ ॥**

ಅದೇ ಸಮಯದಲ್ಲಿ ಅಲ್ಲಿಗೆ ಓರ್ವ ತಾಪಸ ಬಂದನು. ಅವನು ತೇಜಃಪುಂಜನಾಗಿದ್ದು, ಯುವಕನಾಗಿದ್ದು, ಸುಂದರಕಾಯನಾಗಿದ್ದನು. ಅವನ ಬಗೆಗೆ ಕವಿಗೂ ಏನೂ ಅರಿಯದು. (ಅಥವಾ ತನ್ನ ಪರಿಚಯ ಮಾಡಿಕೊಡಲೊಲ್ಲದ ಓರ್ವ ಕವಿಯಾಗಿರಬೇಕು *) ಅವನು ಬೈರಾಗಿಯ ವೇಷದಲ್ಲಿದ್ದನು. ಮನ, ವಚನ, ಕಾಯಗಳಿಂದ ಶ್ರೀರಾಮಚಂದ್ರನ ಪ್ರೇಮಿಯಾಗಿದ್ದನು. (ಚೌ/೪)

**ದೋ – ಸಜಲ ನಯನ ತನ ಪುಲಕಿ ನಿಜ ಇಷ್ಟದೇಉ ಪಹಿಚಾನಿ।**
**ಪರೆಉ ದಂಡ ಜಿಮಿ ಧರನಿತಲ ದಸಾ ನ ಜಾಇ ಬಖಾನಿ ॥ ೧೧೦ ॥**

ತನ್ನ ಇಷ್ಟದೈವವನ್ನು ಕಂಡು ಅವನ ಕಣ್ಣುಗಳು ತುಂಬಿಬಂದವು. ಶರೀರ ರೋಮಾಂಚಿತವಾಯಿತು. ಅವನು ನೆಲದ ಮೇಲೆ ಸಾಷ್ಟಾಂಗ ನಮಸ್ಕಾರ ಮಾಡಿದನು. ಅವನ ಪ್ರೇಮವಿಹ್ವಲದೆಸೆಯು ಅವರ್ಣನೀಯವಾದುದು. (ದೋ/೧೧೦)

**ಚೌ – ರಾಮ ಸಪ್ರೇಮ ಪುಲಕಿ ಉರ ಲಾವಾ। ಪರಮ ರಂಕ ಜನು ಪಾರಸು ಪಾವಾ ॥**
**ಮನಹುँ ಪ್ರೇಮು ಪರಮಾರಥು ದೋಊ। ಮಿಲತ ಧರೇँ ತನ ಕಹ ಸಬು ಕೋಊ ॥ ೧ ॥**
**ಬಹುರಿ ಲಖನ ಪಾಯನ್ಹ ಸೋಇ ಲಾಗಾ। ಲೀನ್ಹ ಉಠಾಇ ಉಮಗಿ ಅನುರಾಗಾ ॥**
**ಪುನಿ ಸಿಯ ಚರನ ಧೂರಿ ಧರಿ ಸೀಸಾ। ಜನನಿ ಜಾನಿ ಸಿಸು ದೀನ್ಹಿ ಅಸೀಸಾ ॥ ೨ ॥**
**ಕೀನ್ಹ ನಿಷಾದ ದಂಡವತ ತೇಹೀ। ಮಿಲೆಉ ಮುದಿತ ಲಖಿ ರಾಮ ಸನೇಹೀ ॥**
**ಪಿಅತ ನಯನ ಪುಟ ರೂಪು ಪಿಯೂಷಾ। ಮುದಿತ ಸುಅಸನು ಪಾಇ ಜಿಮಿ ಭೂಖಾ ॥ ೩ ॥**
**ತೇ ಪಿತು ಮಾತು ಕಹಹು ಸಖಿ ಕೈಸೇ। ಜಿನ್ಹ ಪಠಏ ಬನ ಬಾಲಕ ಐಸೇ ॥**
**ರಾಮ ಲಖನ ಸಿಯ ರೂಪು ನಿಹಾರೀ। ಹೋಹಿँ ಸನೇಹ ಬಿಕಲ ನರ ನಾರೀ ॥ ೪ ॥**

ಶ್ರೀರಾಮಚಂದ್ರನು ಪ್ರೇಮದಿಂದ ಪುಲಕಿತನಾಗಿ ಅವನನ್ನು ಎದೆಗಪ್ಪಿಕೊಂಡನು. ಒಬ್ಬ ತಿರುಕನಿಗೆ ಸ್ಪರ್ಶಮಣಿ ದೊರಕಿದಷ್ಟು ಆನಂದ ಆ ತಾಪಸಿಗಾಯಿತು. ಅವರಿಬ್ಬರನ್ನು ಕಂಡವರೆಲ್ಲ – 'ಇವರ ಮಿಲನವು ಪ್ರೇಮ ಮತ್ತು ಪರಮಾರ್ಥಗಳೆರಡೂ ಮೈವೆತ್ತಿ ಬಂದಂತಿದೆ' ಎಂದು ಹೇಳಿದರು. ಅನಂತರ ಅವನು ಲಕ್ಷ್ಮಣನ ಚರಣಗಳಿಗೆರಗಿದನು. ಸೌಮಿತ್ರಿಯು ಆತನನ್ನು ಎಬ್ಬಿಸಿ ಪ್ರೇಮದಿಂದ ಅಪ್ಪಿಕೊಂಡನು. ಬಳಿಕ ತಾಪಸಿಯು ಸೀತಾದೇವಿಯ ಚರಣಧೂಳನ್ನು ಮಸ್ತಕದಲ್ಲಿ ಹೊತ್ತುಕೊಂಡನು. ಆಕೆಯು ಅವನನ್ನು ಸಣ್ಣಮಗುವೆಂದು ಬಗೆದು ಹರಸಿದಳು. ಮತ್ತೆ ನಿಷಾದರಾಜನೂ ಆ ತಾಪಸಿಯನ್ನು ಶ್ರೀರಾಮನ ಪ್ರೇಮಿಯೆಂದು ತಿಳಿದು ನಮಸ್ಕರಿಸಿದನು. ಹಾಗೂ ಅವನೊಡನೆ ಹರ್ಷದಿಂದ ಕೂಡಿದ. ಆ ತಪಸ್ವಿಯು ತನ್ನ ಕಣ್ಣೆಂಬ ಎರಡೂ ದೊನ್ನೆಗಳಿಂದ ಶ್ರೀರಾಮನ ಸೌಂದರ್ಯಸುಧೆಯನ್ನು ಪಾನಮಾಡತೊಡಗಿದನು. ಹಸಿದ ವ್ಯಕ್ತಿಗೆ ಸುಭೋಜ್ಯ ಸಿಕ್ಕಿದಷ್ಟು ಆತನಿಗೆ ಆನಂದವಾಯಿತು.

ಇತ್ತ ಹಳ್ಳಿಯ ಸ್ತ್ರೀಯರು ಮಾತನಾಡಿಕೊಳ್ಳುತ್ತಿದ್ದರು – 'ಸಖೀ! ಇಂತಹ ಸುಂದರ ಸುಕುಮಾರ ಬಾಲಕರನ್ನು ಕಾಡಿಗೆ ಕಳಿಸಿದ ಆ ತಂದೆ-ತಾಯಂದಿರು ಎಂತಹ ಕಠಿಣ ಹೃದಯರು.' ಶ್ರೀಸೀತಾರಾಮಲಕ್ಷ್ಮಣರ ಅಂದ-ಚೆಂದವನ್ನು ಕಂಡು ಎಲ್ಲ ಸ್ತ್ರೀ-ಪುರುಷರು ಪ್ರೇಮಪರವಶರಾಗಿ ವ್ಯಾಕುಲಚಿತ್ತರಾದರು. (ಚೌ/೧-೪)

---

* ಈ ತೇಜಃಪುಂಜ ತಪಸ್ವಿಯ ಪ್ರಸಂಗವನ್ನು ಕೆಲವು ಟೀಕಾಕಾರರು ಪ್ರಕ್ಷಿಪ್ತವೆಂದು ತಿಳಿಯುತ್ತಾರೆ. ಇನ್ನು ಕೆಲವರು ಇದು ಅಪ್ರಾಸಂಗಿಕ ಹಾಗೂ ಮತ್ತೆ ಸೇರಿಸಿದುದು ಎಂದೂ ತಿಳಿಯುತ್ತಾರೆ. ಆದರೆ ಇದು ಎಲ್ಲ ಪ್ರಾಚೀನ ಪ್ರತಿಗಳಲ್ಲಿಯೂ ದೊರೆಯುತ್ತದೆ. ಶ್ರೀತುಲಸೀದಾಸರು ಅಲೌಕಿಕ ಅನುಭವಿಗಳಾಗಿದ್ದರು. ಈ ಪ್ರಸಂಗವನ್ನು ಇಲ್ಲಿ ಇರಿಸಿದ ರಹಸ್ಯ ತಿಳಿಯದು, ಆದರೆ ಪ್ರಕ್ಷಿಪ್ತಮಾತ್ರ ಖಂಡಿತವಾಗಿಯೂ ಅಲ್ಲ. ಈ ತಪಸ್ವಿಯನ್ನು 'ಕಬಿ ಅಲಖಿತ ಗತಿ' ಎಂದು ಹೇಳಿದಾಗ ನಿಶ್ಚಯವಾಗಿ ಯಾರಾದರೂ ಏನು ಹೇಳಬಲ್ಲರು? ನಮ್ಮ ಅರಿವಿನಂತೆ ಈ ತಪಸ್ವಿಯು ಒಂದೋ 'ಹನುಮಂತ'ನಾಗಿರಬೇಕು ಅಥವಾ ಧ್ಯಾನಸ್ಥ ತುಲಸೀದಾಸರಿರಬೇಕು.'

**ದೋ – ತಬ ರಘುಬೀರ ಅನೇಕ ಬಿಧಿ ಸಖಹಿ ಸಿಖಾವನು ದೀನ್ಹ।**
**ರಾಮ ರಜಾಯಸು ಸೀಸ ಧರಿ ಭವನ ಗವನು ತೇಇಂ ಕೀನ್ಹ॥ ೧೧೧ ॥**

ಆಗ ರಘುವೀರನು ಸಖನಾದ ಗುಹನಿಗೆ ಅನೇಕ ವಿಧದಿಂದ ಸಮಾಧಾನಮಾಡಿ, ಮನೆಗೆ ಮರಳುವಂತೆ ತಿಳಿಸಿದನು. ಶ್ರೀರಾಮನ ಅಪ್ಪಣೆಯನ್ನು ಶಿರಸಾವಹಿಸಿ, ತನ್ನ ಮನೆಗೆ ಹಿಂತಿರುಗಿದನು. (ದೋ/೧೧೧)

**ಚೌ – ಪುನಿ ಸಿಯ್ ರಾಮ ಲಖನ ಕರ ಜೋರೀ। ಜಮುನಹಿ ಕೀನ್ಹ ಪ್ರನಾಮು ಬಹೋರೀ॥**
**ಚಲೇ ಸಸೀಯ ಮುದಿತ ದೊಉ ಭಾಈ। ರಬಿತನುಜಾ ಕಇ ಕರತ ಬಡಾಈ॥ ೧ ॥**
**ಪಥಿಕ ಅನೇಕ ಮಿಲಹಿಂ ಮಗ ಜಾತಾ। ಕಹಹಿಂ ಸಪ್ರೇಮ ದೇಖಿ ದೊಉ ಭ್ರಾತಾ॥**
**ರಾಜ ಲಖನ ಸಬ ಅಂಗ ತುಮ್ಹಾರೇಂ। ದೇಖಿ ಸೋಚು ಅತಿ ಹೃದಯ ಹಮಾರೇಂ॥ ೨ ॥**
**ಮಾರಗ ಚಲಹು ಪಯಾದೆಹಿ ಪಾಏಂ। ಜ್ಯೋತಿಷು ಝೂಠ ಹಮಾರೇಂ ಭಾಏಂ॥**
**ಅಗಮು ಪಂಥು ಗಿರಿ ಕಾನನ ಭಾರೀ। ತೇಹಿ ಮಹಂ ಸಾಥ ನಾರಿ ಸುಕುಮಾರೀ॥ ೩ ॥**
**ಕರಿ ಕೇಹರಿ ಬನ ಜಾಇ ನ ಜೋಈ। ಹಮ ಸಂಗ ಚಲಹಿಂ ಜೊ ಆಯಸು ಹೋಈ॥**
**ಜಾಬ ಜಹಾಂ ಲಗಿ ತಹಂ ಪಹುಂಚಾಈ। ಫಿರಬ ಬಹೋರಿ ತುಮ್ಹಹಿ ಸಿರು ನಾಈ॥ ೪ ॥**

ಅನಂತರ ಸೀತಾರಾಮಲಕ್ಷ್ಮಣರು ಅಂಜಲಿಬದ್ಧರಾಗಿ ಯಮುನೆಗೆ ಪ್ರಣಾಮಮಾಡಿ, ಆ ರವಿತನುಜೆಯ ಮಹಿಮೆಯನ್ನು ಕೊಂಡಾಡುತ್ತಾ, ಅವರು ಮೂವರೂ ಆನಂದದಿಂದ ಮುಂದುವರೆದರು. ಹಾದಿಯಲ್ಲಿ ಅವರಿಗೆ ಅನೇಕ ಪಯಣಿಗರು ಜೊತೆಯಾಗುತ್ತಿದ್ದರು. ಅವರೆಲ್ಲರೂ ಈ ಸೋದರರನ್ನು ಕಂಡು ಪ್ರೇಮದಿಂದ ಕೇಳುತ್ತಿದ್ದರು – ''ನಿಮ್ಮಲ್ಲಿರುವ ರಾಜಲಕ್ಷಣಗಳನ್ನು ನೋಡಿ ನಾವು ವಿಚಾರಪರರಾಗಿ, ದುಃಖಿತರಾಗಿದ್ದೇವೆ. ಇಂತಹ ರಾಜಚಿಹ್ನೆಗಳಿಂದೊಡಗೂಡಿದ ನೀವು ಕಾಲ್ನಡಿಗೆಯಿಂದ ನಡೆದುಕೊಂಡು ಹೋಗುತ್ತಿರುವುದನ್ನು ನೋಡಿದರೆ, ಜೋತಿಷ್ಯಶಾಸ್ತ್ರವು ಸುಳ್ಳೇ ಇರಬೇಕು ಎಂದು ನಮಗನಿಸುತ್ತದೆ. ಇದಾದರೋ ಭಯಂಕರವಾದ ದಟ್ಟವಾದ ಅಡವಿ. ಎತ್ತರವಾದ ಪರ್ವತಗಳ ನಡುವೆ ದುರ್ಗಮವಾದ ದಾರಿ. ಅದೂ ಅಲ್ಲದೆ ನಿಮ್ಮ ಜೊತೆಯಲ್ಲಿ ಓರ್ವ ಸುಕುಮಾರಿಯೂ ಇದ್ದಾಳೆ. ಕರಿಕೇಸರಿಗಳಿಂದ ಕೂಡಿದ ಭಯಾನಕ ಈ ಕಾಡನ್ನು ನೋಡುವುದೂ ಕಷ್ಟ. ತಮ್ಮ ಅಪ್ಪಣೆಯಾದರೆ ನಾವೂ ತಮ್ಮ ಜೊತೆಗೆ ಬರುತ್ತೇವೆ. ತಾವು ಎಲ್ಲಿಯವರೆಗೆ ಹೋಗುವಿರೋ, ಅಲ್ಲಿಯವರೆಗೆ ನಿಮ್ಮ ಜೊತೆಗಿದ್ದು ಅನಂತರ ನಿಮಗೆ ಮಣಿದು ಮರಳುತ್ತೇವೆ. (ಚೌ/೧-೪)

**ದೋ – ಎಹಿ ಬಿಧಿ ಪೂಂಛಹಿಂ ಪ್ರೇಮ ಬಸ ಪುಲಕ ಗಾತ ಜಲು ನೈನ।**
**ಕೃಪಾಸಿಂಧು ಫೇರಹಿಂ ತಿನ್ಹಹಿ ಕಹಿ ಬಿನೀತ ಮೃದು ಬೈನ॥ ೧೧೨ ॥**

ಈ ಪ್ರಕಾರ ಆ ಪಯಣಿಗರು ಪ್ರೇಮವಶರಾಗಿ, ಪುಲಕಿತರಾಗಿ, ಪ್ರೇಮಾಶ್ರುಲೋಚನರಾಗಿ ಅವರನ್ನು ಬೇಡಿಕೊಳ್ಳುತ್ತಾರೆ. ಆದರೆ ದಯಾಸಾಗರನಾದ ಶ್ರೀರಾಮನು ವಿನಯದಿಂದೊಡಗೂಡಿದ ಮಧುರವಚನಗಳಿಂದ ಅವರನ್ನು ಹಿಂದಕ್ಕೆ ಕಳಿಸಿಕೊಡುತ್ತಾನೆ. (ದೋ/೧೧೨)

**ಚೌ – ಜೇ ಪುರ ಗಾಂವ ಬಸಹಿಂ ಮಗ ಮಾಹೀಂ। ತಿನ್ಹಹಿ ನಾಗ ಸುರ ನಗರ ಸಿಹಾಹೀಂ॥**
**ಕೆಹಿ ಸುಕೃತೀಂ ಕೆಹಿ ಘರೀಂ ಬಸಾಏ। ಧನ್ಯ ಪುನ್ಯಮಯ ಪರಮ ಸುಹಾಏ॥ ೧ ॥**
**ಜಹಂ ಜಹಂ ರಾಮ ಚರನ ಚಲಿ ಜಾಹೀಂ। ತಿನ್ಹ ಸಮಾನ ಅಮರಾವತಿ ನಾಹೀಂ॥**
**ಪುನ್ಯಪುಂಜ ಮಗ ನಿಕಟ ನಿವಾಸೀ। ತಿನ್ಹಹಿ ಸರಾಹಹಿಂ ಸುರಪುರಬಾಸೀ॥ ೨ ॥**
**ಜೇ ಭರಿ ನಯನ ಬಿಲೋಕಹಿಂ ರಾಮಹಿ। ಸೀತಾ ಲಖನ ಸಹಿತ ಘನಸ್ಯಾಮಹಿ॥**
**ಜೇ ಸರ ಸರಿತ ರಾಮ ಅವಗಾಹಹಿಂ। ತಿನ್ಹಹಿ ದೇವ ಸರ ಸರಿತ ಸರಾಹಹಿಂ॥ ೩ ॥**
**ಜೆಹಿ ತರು ತರ ಪ್ರಭು ಬೈಠಹಿಂ ಜಾಈ। ಕರಹಿಂ ಕಲಪತರು ತಾಸು ಬಡಾಈ॥**
**ಪರಸಿ ರಾಮ ಪದ ಪದುಮ ಪರಾಗಾ। ಮಾನತಿ ಭೂಮಿ ಭೂರಿ ನಿಜ ಭಾಗಾ॥ ೪ ॥**

ಸೀತಾರಾಮಲಕ್ಷ್ಮಣರ ದಾರಿಯಲ್ಲಿದ್ದ ಊರು, ಹಳ್ಳಿ, ಕೊಪ್ಪಲುಗಳನ್ನು ಕಂಡು ನಾಗರ, ಅಮರರ ನಗರಗಳೂ ಹಿಗ್ಗಿ ಅವುಗಳ ಸೌಭಾಗ್ಯಕ್ಕೆ ಮತ್ಸರಿಸಿ ಇಂತು ಹೇಳುತ್ತವೆ – ''ಯಾವ ಪುಣ್ಯಾತ್ಮ ಎಂತಹ ಗಳಿಗೆಯಲ್ಲಿ ಇವುಗಳನ್ನು ಸ್ಥಾಪಿಸಿದನೋ! ಈ ದಿನ ಇವು ಇಷ್ಟೊಂದು ಪುಣ್ಯಮಯವಾದುವು. ಧನ್ಯವಾದುವು. ಪರಮರಮಣೀಯವಾಗಿ ಕಂಗೊಳಿಸುತ್ತಿವೆ.'' ಶ್ರೀರಾಮನ

ಚರಣಸ್ಪರ್ಶವಾದ ಊರು, ಗ್ರಾಮ, ಪ್ರದೇಶ – ಇಂದ್ರನ ಅಮರಾವತಿಗಿಂತಲೂ ಎಷ್ಟೋ ಹೆಚ್ಚು ಭಾಗ್ಯಶಾಲಿಯು. ದಾರಿಯ ಸನಿಹದಲ್ಲಿ ನೆಲೆಸಿರುವ ಜನರು ಅದೇನು ಪುಣ್ಯವಂತರೋ! ಸೀತಾ ಲಕ್ಷ್ಮಣ ಸಹಿತ ಶ್ಯಾಮಸುಂದರ ರಾಮಚಂದ್ರನನ್ನು ಕಣ್ಣುತುಂಬಾ ನೋಡಿದವರನ್ನು ಸುರಪುರದ ನಿವಾಸಿಗಳು ಕೊಂಡಾಡುತ್ತಾರೆ. ಶ್ರೀರಾಮನು ಸ್ನಾನಮಾಡಿದ ನದಿ-ಸರೋವರಗಳನ್ನು ದೇವಸರೋವರಗಳೂ, ದೇವನದಿಗಳೂ ಕೂಡ ಕೊಂಡಾಡುತ್ತವೆ. ಶ್ರೀರಾಮಚಂದ್ರನು ಯಾವ ವೃಕ್ಷದ ಬುಡದಲ್ಲಿ ಕುಳಿತಿರುವನೋ, ಆ ಮರವನ್ನು ಕಲ್ಪವೃಕ್ಷವೂ ಕೊಂಡಾಡುತ್ತದೆ. ಶ್ರೀರಘುನಾಥನ ಚರಣರಜದ ಸ್ಪರ್ಶದಿಂದ ಭೂದೇವಿಯು ತಾನು ಧನ್ಯಳೆಂದು ಭಾವಿಸುತ್ತಾಳೆ. (ಚೌ/೧-೪)

**ದೋ – ಛಾಂಹ ಕರಹಿಂ ಘನ ಬಿಬುಧಗನ ಬರಷಹಿಂ ಸುಮನ ಸಿಹಾಹಿಂ।**
**ದೇಖತ ಗಿರಿ ಬನ ಬಿಹಗ ಮೃಗ ರಾಮು ಚಲೇ ಮಗ ಜಾಹಿಂ ॥ ೧೧೩ ॥**

ಶ್ರೀರಾಮನು ಪರ್ವತಗಳನ್ನೂ, ವನಗಳನ್ನೂ, ಪಕ್ಷಿಗಳನ್ನೂ ನೋಡುತ್ತಾ ಹೋಗುತ್ತಿರುವಾಗ, ಮೋಡಗಳು ಕೊಡೆಹಿಡಿದಂತೆ ಕವಿಯುತ್ತಿದ್ದರು. ದೇವತೆಗಳು ಅವನನ್ನು ಹೊಗಳುತ್ತಾ ಹೂಮಳೆಗರೆಯುವರು. (ದೋ/೧೧೩)

**ಚೌ – ಸೀತಾ ಲಖನ ಸಹಿತ ರಘುರಾಈ। ಗಾಂವ ನಿಕಟ ಜಬ ನಿಕಸಹಿಂ ಜಾಈ॥**
**ಸುನಿ ಸಬ ಬಾಲ ಬೃದ್ಧ ನರ ನಾರೀ। ಚಲಹಿಂ ತುರತ ಗೃಹಕಾಜು ಬಿಸಾರೀ ॥ ೧ ॥**
**ರಾಮ ಲಖನ ಸಿಯ ರೂಪ ನಿಹಾರೀ। ಪಾಇ ನಯನಫಲು ಹೋಹಿಂ ಸುಖಾರೀ॥**
**ಸಜಲ ಬಿಲೋಚನ ಪುಲಕ ಸರೀರಾ। ಸಬ ಭಏ ಮಗನ ದೇಖಿ ದೋಉ ಬೀರಾ ॥ ೨ ॥**
**ಬರನಿ ನ ಜಾಇ ದಸಾ ತಿನ್ಹ ಕೇರೀ। ಲಹಿ ಜನು ರಂಕನ್ಹ ಸುರಮನಿ ಢೇರೀ ॥**
**ಏಕನ್ಹ ಏಕ ಬೋಲಿ ಸಿಖ ದೇಹೀಂ। ಲೋಚನ ಲಾಹು ಲೇಹು ಛನ ಏಹೀಂ ॥ ೩ ॥**
**ರಾಮಹಿ ದೇಖಿ ಏಕ ಅನುರಾಗೇ। ಚಿತವತ ಚಲೇ ಜಾಹಿಂ ಸಂಗ ಲಾಗೇ॥**
**ಏಕ ನಯನ ಮಗ ಛಬಿ ಉರ ಆನೀ। ಹೋಹಿಂ ಸಿಥಿಲ ತನ ಮನ ಬರ ಬಾನೀ॥ ೪ ॥**

ಸೀತಾಲಕ್ಷ್ಮಣ ಸಮೇತ ಶ್ರೀರಾಮನು ಯಾವುದೇ ಹಳ್ಳಿಯನ್ನು ಹಾದುಹೋಗುವಾಗ, ಅವರ ಆಗಮನದ ವಾರ್ತೆಯನ್ನು ಕೇಳಿದ ಕೂಡಲೇ ಮಕ್ಕಳು, ಮುದುಕರು, ನರ-ನಾರಿಯರು ಎಲ್ಲರೂ ತಮ್ಮ ಮನೆ-ಮಠ, ಕೆಲಸ-ಕಾರ್ಯಗಳನ್ನು ಮರೆತು ಅವರನ್ನು ನೋಡಲು ಹೊರಡುತ್ತಿದ್ದರು. ಅವರನ್ನು ದರ್ಶಿಸಿ, ತಮ್ಮ ಕಣ್ಣುಗಳನ್ನು ಸಾರ್ಥಕಪಡಿಸಿಕೊಂಡು ಅವರು ಸುಖಿಗಳಾಗುತ್ತಿದ್ದರು. ಅಣ್ಣ-ತಮ್ಮಂದಿರಿಬ್ಬರನ್ನೂ ಕಂಡು ಎಲ್ಲರೂ ಪ್ರೇಮಾನಂದದಲ್ಲಿ ಮುಳುಗುತ್ತಿದ್ದರು. ಅವರ ಕಣ್ಣುಗಳು ತುಂಬಿಬರುತ್ತಿದ್ದವು. ಶರೀರ ಪುಲಕಿತವಾಗುತ್ತಿತ್ತು. ಅವರ ಹರ್ಷಾತಿರೇಕ ಸ್ಥಿತಿಯು ಅವರ್ಣನೀಯವು. ದರಿದ್ರನಿಗೆ ಚಿಂತಾಮಣಿಗಳ ರಾಶಿಯೇ ದೊರೆತಂತೆ ಆನಂದವನ್ನು ಅನುಭವಿಸುತ್ತಿದ್ದರು. ಅವರು ಪ್ರತಿಯೊಬ್ಬರನ್ನು ಕರೆದು ಈ ಕ್ಷಣ ನಿಮ್ಮ ಕಣ್ಣುಗಳನ್ನು ಸಾರ್ಥಕಪಡಿಸಿಕೊಳ್ಳಿ ಎಂದು ಹೇಳುತ್ತಿದ್ದರು. ಅವರಲ್ಲಿ ಕೆಲವರು ಶ್ರೀರಾಮನನ್ನು ನೋಡಿ ಪ್ರೇಮಪರವಶರಾಗಿ ಅವನೊಂದಿಗೆ ಹೊರಟೇಬಿಟ್ಟರು. ಅವರು ನೇತ್ರಗಳ ಮೂಲಕ ರಾಮನ ಸೌಂದರ್ಯವನ್ನು ತಮ್ಮ ಹೃದಯದಲ್ಲಿ ತಂದಿಟ್ಟುಕೊಂಡು, ತನು, ಮನ, ವಾಣಿಯಿಂದ ಶಿಥಿಲರಾಗುತ್ತಿದ್ದರು. ಅಂದರೆ, ಅವರ ಶರೀರ, ಮನ, ವಾಣಿಗಳ ವ್ಯವಹಾರಗಳು ನಿಂತುಹೋದುವು. (ಚೌ/೧-೪)

**ದೋ – ಏಕ ದೇಖಿ ಬಟ ಛಾಂಹ ಭಲಿ ಡಾಸಿ ಮೃದುಲ ತೃನ ಪಾತ ।**
**ಕಹಹಿಂ ಗವಾಂಇಅ ಛಿನುಕು ಶ್ರಮು ಗವನಬ ಅಬಹಿಂ ಕಿ ಪ್ರಾತ ॥ ೧೧೪ ॥**

ಕೆಲವರು, ಆಲದ ಮರದ ತಣ್ಣೆಳಲನ್ನು ಕಂಡು, ಅಲ್ಲಿ ಮೆತ್ತನೆಯ ಹುಲ್ಲು ಹಾಗೂ ಎಲೆಗಳನ್ನು ಹಾಸಿ, ಅವರಿಗೆ ಹೇಳುತ್ತಿದ್ದರು – 'ಕ್ಷಣಕಾಲ ಇಲ್ಲಿ ಕುಳಿತು ವಿಶ್ರಮಿಸಿಕೊಳ್ಳಿರಿ. ಮತ್ತೆ ನಿಮ್ಮ ಇಷ್ಟಬಂದಂತೆ ಈಗಬೇಕಾದರೆ ಹೋಗಿ, ಅಥವಾ ಬೆಳಿಗ್ಗೆ ಬೇಕಾದರೂ ಹೊರಡಬಹುದು. (ದೋ/೧೧೪)

**ಚೌ – ಏಕ ಕಲಸ ಭರಿ ಆನಹಿಂ ಪಾನೀ। ಅಂಚಇಅ ನಾಥ ಕಹಹಿಂ ಮೃದು ಬಾನೀ॥**
**ಸುನಿ ಪ್ರಿಯ ಬಚನ ಪ್ರೀತಿ ಅತಿ ದೇಖೀ। ರಾಮ ಕೃಪಾಲ ಸುಸೀಲ ಬಿಸೇಷೀ ॥ ೧ ॥**
**ಜಾನೀ ಶ್ರಮಿತ ಸೀಯ ಮನ ಮಾಹೀಂ। ಘರಿಕ ಬಿಲಂಬು ಕೀನ್ಹ ಬಟ ಛಾಹೀಂ ॥**
**ಮುದಿತ ನಾರಿ ನರ ದೇಖಹಿಂ ಸೋಭಾ। ರೂಪ ಅನೂಪ ನಯನ ಮನು ಲೋಭಾ ॥ ೨ ॥**

**ಏಕಟಕ ಸಬ ಸೋಹಹಿಂ ಚಹುಂ ಓರಾ । ರಾಮಚಂದ್ರ ಮುಖ ಚಂದ ಚಕೋರಾ ॥**
**ತರುನ ತಮಾಲ ಬರನ ತನು ಸೋಹಾ । ದೇಖತ ಕೋಟಿ ಮದನ ಮನು ಮೋಹಾ ॥ ೩ ॥**
**ದಾಮಿನಿ ಬರನ ಲಖನ ಸುಠಿ ನೀಕೇ । ನಖ ಸಿಖ ಸುಭಗ ಭಾವತೇ ಜೀ ಕೇ ॥**
**ಮುನಿಪಟ ಕಟಿನ್ಹ ಕಸೇಂ ತೂನೀರಾ । ಸೋಹಹಿಂ ಕರ ಕಮಲನಿ ಧನು ತೀರಾ ॥ ೪ ॥**

ಮತ್ತೆ ಕೆಲವರು ಬಿಂದಿಗೆಯಲ್ಲಿ ನೀರು ತುಂಬಿತಂದು ಮಧುರವಚನಗಳಿಂದ – 'ಪ್ರಭೂ! ಸ್ವಲ್ಪ ನೀರನ್ನು ಸ್ವೀಕರಿಸುವಿರಾ' ಎಂದು ಕೇಳಿಕೊಳ್ಳುತ್ತಿದ್ದರು. ಅವರ ಪ್ರಿಯವಚನವನ್ನು ಕೇಳಿ, ಅಪಾರ ಪ್ರೇಮಕ್ಕೆ ಕರುಣಾಳುವಾದ ಶ್ರೀರಾಮನು ಮುಗ್ಧನಾದನು. ಸೀತೆಯು ಬಳಲಿರುವುದನ್ನು ಮನಗಂಡು ಕ್ಷಣಕಾಲ ಆಲದ ಮರದ ನೆರಳಿನಲ್ಲಿ ವಿಶ್ರಮಿಸಿಕೊಂಡನು. ಆಗ ಆನಂದಿತರಾದ ನರ-ನಾರಿಯರು ಸೀತಾರಾಮರ ಚೆಲುವನ್ನು ನೋಡತೊಡಗಿದರು. ಅವರ ಅನುಪಮ ರೂಪ ಆ ಜನರ ಮನೋನಯನಗಳನ್ನು ಲುಬ್ಧಗೊಳಿಸಿತು. ಎಲ್ಲರೂ ನಿರ್ನಿಮೇಷನಯನರಾಗಿ ಚಕೋರದಂತೆ ಶ್ರೀರಾಮಚಂದ್ರನ ಮುಖಚಂದ್ರವನ್ನು ವೀಕ್ಷಿಸತೊಡಗಿದರು. ಶ್ರೀರಾಮನ ತರುಣ ತಮಾಲ ವೃಕ್ಷದ ಕಾಂತಿಯಂತಿರುವ ಶರೀರವನ್ನು ಕಂಡರೆ ಕೋಟಿ ಮನ್ಮಥರೂ ಕೂಡ ಮೋಹಿತರಾಗುವರು. ವಿದ್ಯುತ್ಕಾಂತಿಯಿಂದ ಕಂಗೊಳಿಸುವ ಲಕ್ಷ್ಮಣನು ಅಡಿಯಿಂದ ಮುಡಿಯವರೆಗೂ ಚೆಲುವಾಗಿದ್ದಾನೆ. ಚಿತ್ತಾಕರ್ಷಕನಾಗಿದ್ದಾನೆ. ಮುನಿ ವಲ್ಕಲಗಳನ್ನು ಧರಿಸಿ ಇಬ್ಬರೂ ಸೋದರರು ಸೊಂಟಕ್ಕೆ ಬತ್ತಳಿಕೆಯನ್ನು ಕಟ್ಟಿಕೊಂಡು, ಕರಕಮಲಗಳಲ್ಲಿ ಧನುರ್ಬಾಣಗಳನ್ನು ಧರಿಸಿಕೊಂಡಿರುವರು. (ಚೌ/೧-೪)

**ದೋ – ಜಟಾ ಮುಕುಟ ಸೀಸನಿ ಸುಭಗ ಉರ ಭುಜ ನಯನ ಬಿಸಾಲ ।**
**ಸರದ ಪರಬ ಬಿಧು ಬದನ ಬರ ಲಸತ ಸ್ವೇದ ಕನ ಜಾಲ ॥ ೧೧೫ ॥**

ಅವರ ತಲೆಯಮೇಲೆ ಚೆಲುವಾದ ಜಟಾಮುಕುಟವಿದ್ದು, ವಕ್ಷಸ್ಥಳ, ಭುಜಗಳು, ಕಣ್ಣುಗಳು ವಿಶಾಲವಾಗಿವೆ. ಶರತ್ಪೂರ್ಣಿಮೆಯ ಚಂದ್ರನಂತೆ ಇರುವ ಅವರ ವದನಗಳ ಮೇಲೆ ಸ್ವೇದಬಿಂದುಗಳು ಶೋಭಿಸುತ್ತಿವೆ. (ದೋ/೧೧೫)

**ಚೌ – ಬರನಿ ನ ಜಾಇ ಮನೋಹರ ಜೋರೀ । ಸೋಭಾ ಬಹುತ ಥೋರಿ ಮತಿ ಮೋರೀ ॥**
**ರಾಮ ಲಖನ ಸಿಯ ಸುಂದರತಾಈ । ಸಬ ಚಿತವಹಿಂ ಚಿತ ಮನ ಮತಿ ಲಾಈ ॥ ೧ ॥**
**ಥಕೇ ನಾರಿ ನರ ಪ್ರೇಮ ಪಿಆಸೇ । ಮನಹುಂ ಮೃಗೀ ಮೃಗ ದೇಖಿ ದಿಆ ಸೇ ॥**
**ಸೀಯ ಸಮೀಪ ಗ್ರಾಮತಿಯ ಜಾಹೀಂ । ಪೂಂಛತ ಅತಿ ಸನೇಹಂ ಸಕುಚಾಹೀಂ ॥ ೨ ॥**
**ಬಾರ ಬಾರ ಸಬ ಲಾಗಹಿಂ ಪಾಏಂ । ಕಹಹಿಂ ಬಚನ ಮೃದು ಸರಲ ಸುಭಾಏಂ ॥**
**ರಾಜಕುಮಾರಿ ಬಿನಯ ಹಮ ಕರಹೀಂ । ತಿಯ ಸುಭಾಯಂ ಕಛು ಪೂಂಛತ ಡರಹೀಂ ॥ ೩ ॥**
**ಸ್ವಾಮಿನಿ ಅಬಿನಯ ಛಮಬಿ ಹಮಾರೀ । ಬಿಲಗು ನ ಮಾನಬ ಜಾನಿ ಗವಾಂರೀ ॥**
**ರಾಜಕುಅಂರ ದೊಉ ಸಹಜ ಸಲೋನೇ । ಇನ್ಹ ತೆಂ ಲಹೀ ದುತಿ ಮರಕತ ಸೋನೇ ॥ ೪ ॥**

ಆ ಮನೋಹರ ಜೋಡಿಯು ವರ್ಣನಾತೀತವು. ಏಕೆಂದರೆ, ಚೆಲುವು ಅಪಾರವಾಗಿದೆ. ನನ್ನ ಬುದ್ಧಿಯು ಅಲ್ಪವಾಗಿದೆ. ಅವರೆಲ್ಲರೂ ಶ್ರೀರಾಮ ಲಕ್ಷ್ಮಣ ಸೀತೆಯರ ಚೆಲುವನ್ನು ಮನ, ಬುದ್ಧಿ, ಚಿತ್ತ, ಈ ಮೂರನ್ನು ನೆಟ್ಟು ನೋಡುತ್ತಿದ್ದರು. ಪ್ರೇಮಪಿಪಾಸುಗಳಾದ ಆ ಗ್ರಾಮೀಣ ಜನರು ದೀಪಶಿಖೆಯನ್ನು ಕಂಡು ಹರಿಣ-ಹರಿಣಿಗಳು ಸ್ತಬ್ಧರಾಗುವಂತೆ, ತಮ್ಮನ್ನು ತಾವೇ ಮರೆತುಹೋದರು. ಹಳ್ಳಿಯ ಹೆಂಗಸರು ಏನನ್ನೋ ಕೇಳಬೇಕೆಂದು ಸೀತೆಯ ಬಳಿಗೆ ಹೋಗುವರು. ಆದರೆ ಸಂಕೋಚದಿಂದ ಹೆದರಿ ಸುಮ್ಮನಾಗುವರು. ಅವರು ಮತ್ತೆ-ಮತ್ತೆ ಸೀತಾದೇವಿಯ ಚರಣಗಳಿಗೆ ಎರಗಿ, ನೇರವೂ ಸರಳವೂ ಆದ ಕೋಮಲ ಮಾತುಗಳನ್ನು ಆಡುವರು. ''ಎಲೈ ರಾಜಕುಮಾರೀ! ನಮಗೆ ನಿಮ್ಮಲ್ಲಿ ಏನನ್ನೋ ಕೇಳಬೇಕೆಂಬ ತವಕ. ಆದರೆ ಸ್ತ್ರೀಸ್ವಭಾವದ ಕಾರಣ ಕೇಳಲು ಭಯವಾಗುತ್ತದೆ. ಒಡತಿ! ನಮ್ಮ ದಿಟ್ಟತನವನ್ನು ಮನ್ನಿಸಿರಿ. ನಾವು ಹಳ್ಳಿಯ ಹೆಣ್ಮಕ್ಕಳು ಎಂದು ತಿಳಿದು, ಅನ್ಯಥಾ ಭಾವಿಸಬಾರದು. ಈ ಇಬ್ಬರು ರಾಜಕುಮಾರರು ಸಹಜ ಸೌಂದರ್ಯ ಲಾವಣ್ಯಮೂರ್ತಿಗಳು. ಮರಕತಮಣಿಗಳು, ಭಂಗಾರವು ಇವರಿಂದಲೇ ಕಾಂತಿಯನ್ನು ಪಡೆದು ಶೋಭಿಸುತ್ತದೆ. (ಚೌ/೧-೪)

**ದೋ – ಸ್ಯಾಮಲ ಗೌರ ಕಿಸೋರ ಬರ ಸುಂದರ ಸುಷಮಾ ಐನ ।**
**ಸರದ ಸರ್ಬರೀನಾಥ ಮುಖು ಸರದ ಸರೋರುಹ ನೈನ ॥ ೧೧೬ ॥**

ಇವರಲ್ಲಿ ಒಬ್ಬರ ಶ್ಯಾಮಲ ವರ್ಣವೂ, ಮತ್ತೊಬ್ಬರ ಗೌರವರ್ಣವೂ ಇದೆ. ಇಬ್ಬರೂ ಸುಂದರರೂ, ಸುಕುಮಾರರೂ, ಶೋಭಾಪುಂಜರೂ ಆಗಿದ್ದಾರೆ. ಇವರ ಮುಖವು ಶರತ್‌ಚಂದ್ರನಂತೆ ಇದ್ದು, ಕಣ್ಣುಗಳು ಶರದೃತುವಿನ ಕಮಲದಂತೆ ಇವೆ. (ದೋ/೧೧೬)

**ಮಾಸಪಾರಾಯಣದ ಹದಿನಾರನೆಯ ವಿಶ್ರಾಮ**

**ನವಾಹ್ನಪಾರಾಯಣದ ನಾಲ್ಕನೆಯ ವಿಶ್ರಾಮ**

**ಚೌ – ಕೋಟಿ ಮನೋಜ ಲಜಾವನಿಹಾರೇ । ಸುಮುಖಿ ಕಹಹು ಕೋ ಆಹಿಂ ತುಮ್ಹಾರೇ ॥**
**ಸುನಿ ಸನೇಹಮಯ ಮಂಜುಲ ಬಾನೀ । ಸಕುಚೀ ಸಿಯ ಮನ ಮಹುँ ಮುಸುಕಾನೀ ॥ ೧ ॥**
**ತಿನ್ಹಹಿ ಬಿಲೋಕಿ ಬಿಲೋಕತಿ ಧರನೀ । ದುಹುँ ಸಕೋಚ ಸಕುಚತಿ ಬರಬರನೀ ॥**
**ಸಕುಚಿ ಸಪ್ರೇಮ ಬಾಲ ಮೃಗ ನಯನೀ । ಬೋಲೀ ಮಧುರ ಬಚನ ಪಿಕಬಯನೀ ॥ ೨ ॥**
**ಸಹಜ ಸುಭಾಯ ಸುಭಗ ತನ ಗೋರೇ । ನಾಮು ಲಖನು ಲಘು ದೇವರ ಮೋರೇ ॥**
**ಬಹುರಿ ಬದನು ಬಿಧು ಅಂಚಲ ಢಾँಕೀ । ಪಿಯ ತನ ಚಿತಇ ಭೌँಹ ಕರಿ ಬಾँಕೀ ॥ ೩ ॥**
**ಖಂಜನ ಮಂಜು ತಿರೀಛೇ ನಯನನಿ । ನಿಜ ಪತಿ ಕಹೇಉ ತಿನ್ಹಹಿ ಸಿಯँ ಸಯನನಿ ॥**
**ಭಈं ಮುದಿತ ಸಬ ಗ್ರಾಮಬಧೂಟೀं । ರಂಕನ್ಹ ರಾಯ ರಾಸಿ ಜನು ಲೂಟೀं ॥ ೪ ॥**

ಎಲೈ ಸುಮುಖಿಯೇ! ತಮ್ಮ ಚೆಲುವಿನಿಂದ ಕೋಟಿ ಮನ್ಮಥರಿಗೆ ಮೀರಿದ ಪ್ರಕಾಶವುಳ್ಳ ಇವರು ನಿನಗೇನಾಗಬೇಕು?'' ಅವರ ಆ ಪ್ರೇಮಮಯ ವಾಣಿಯನ್ನು ಕೇಳಿ, ಸೀತೆಯು ಸಂಕೋಚಗೊಂಡು, ಮನಸ್ಸಿನಲ್ಲೇ ಮುಗುಳ್ನಕ್ಕಳು. ಗೌರವರ್ಣದ ಸೀತಾದೇವಿಯು ಮೊದಲಿಗೆ ರಾಮಲಕ್ಷ್ಮಣರನ್ನು ನೋಡಿ, ಸಂಕೋಚದಿಂದ ನೆಲ ನೋಡತೊಡಗಿದಳು. ಹೇಳದಿದ್ದರೆ ಹಳ್ಳಿಯ ಹೆಂಗಸರ ಮನ ನೋಯಿಸಿದಂತಾಗುತ್ತದೆ. ಹೇಳೋಣವೆಂದರೆ ನಾಚಿಕೆ ಅಡ್ಡಬರುತ್ತದೆ. ಬಳಿಕ ಮೃಗಲೋಚನೆಯೂ, ಪಿಕವಾಣಿಯೂ ಆದ ಸೀತೆಯು ಸಂಕೋಚಗೊಂಡು ಪ್ರೇಮದಿಂದ ಮಧುರವಾಗಿ ಇಂತೆಂದಳು – ''ಸರಳ ಸ್ವಭಾವದವನೂ, ಸುಂದರನೂ, ಗೌರವರ್ಣನೂ, ಸಣ್ಣವನೂ ಆದ ಅವನು ನನ್ನ ಮೈದುನನು. ಅವನ ಹೆಸರು ಲಕ್ಷ್ಮಣ. ಅನಂತರ ಸೀತೆಯು ತನ್ನ ಚಂದ್ರವದನವನ್ನು ಸೆರಗಿನಿಂದ ಮುಚ್ಚಿಕೊಂಡು ತನ್ನ ಪ್ರಿಯಕರನತ್ತ ನೋಡಿ ಹುಬ್ಬು ಕೊಂಕಿಸಿ, ಖಂಜನ ಪಕ್ಷಿಯಂತಹ ತನ್ನ ಕಂಗಳನ್ನು ತಿರುಚಿ ಸನ್ನೆಯಿಂದಲೇ ಹೇಳಿದಳು – ''ಇವರು ನನ್ನ ಯಜಮಾನರು.'' ಆಕೆಯ ಪ್ರಸಂಗೋಚಿತ ಉತ್ತರವನ್ನು ಕೇಳಿ, ಗ್ರಾಮವಧುಗಳಿಗೆ ತಿರುಕನಿಗೆ ರಾಜಭಂಡಾರವೇ ಸಿಕ್ಕಿದಂತೆ ಆನಂದಿತರಾದರು. (ಚೌ/೧-೪)

**ದೋ – ಅತಿ ಸಪ್ರೇಮ ಸಿಯ ಪಾಯँ ಪರಿ ಬಹುಬಿಧಿ ದೇಹಿಂ ಅಸೀಸ ।**
**ಸದಾ ಸೊಹಾಗಿನಿ ಹೋಹು ತುಮ್ಹ ಜಬ ಲಗಿ ಮಹಿ ಅಹಿ ಸೀಸ ॥ ೧೧೭ ॥**

ಅವಕು ಅತ್ಯಂತ ಪ್ರೇಮದಿಂದ ಸೀತೆಯ ಕಾಲಿಗೆರಗಿ, ಅನೇಕ ವಿಧದಿಂದ ಅವಳನ್ನು ಹರಿಸಿ, ''ತಾಯಿ! ಆದಿಶೇಷನ ಹೆಡೆಯಮೇಲೆ ಈ ಭೂಮಿಯು ಇರುವತನಕ ನೀನು ಮುತ್ತೈದೆಯಾಗಿರು'' ಎಂದು ಹಾರೈಸಿದರು. (ದೋ/೧೧೭)

**ಚೌ – ಪಾರಬತೀ ಸಮ ಪತಿಪ್ರಿಯ ಹೋಹೂ । ದೇಬಿ ನ ಹಮ ಪರ ಛಾಡಬ ಛೋಹೂ ॥**
**ಪುನಿ ಪುನಿ ಬಿನಯ ಕರಿಅ ಕರ ಜೋರೀ । ಜೌं ಏಹಿ ಮಾರಗ ಫಿರಿಅ ಬಹೋರೀ ॥ ೧ ॥**
**ದರಸನು ದೇಬ ಜಾನಿ ನಿಜ ದಾಸೀ । ಲಖೀं ಸೀಯँ ಸಬ ಪ್ರೇಮ ಪಿಆಸೀ ॥**
**ಮಧುರ ಬಚನ ಕಹಿ ಕಹಿ ಪರಿತೋಷೀं । ಜನು ಕುಮುದಿನೀं ಕೌಮುದೀं ಪೋಷೀं ॥ ೨ ॥**
**ತಬಹಿं ಲಖನ ರಘುಬರ ರುಖ ಜಾನೀ । ಪೂँಛೇಉ ಮಗು ಲೋಗನ್ಹಿ ಮೃದು ಬಾನೀ ॥**
**ಸುನತ ನಾರಿ ನರ ಭಏ ದುಖಾರೀ । ಪುಲಕಿತ ಗಾತ ಬಿಲೋಚನ ಬಾರೀ ॥ ೩ ॥**
**ಮಿಟಾ ಮೋದು ಮನ ಭಏ ಮಲೀನೇ । ಬಿಧಿ ನಿಧಿ ದೀನ್ಹ ಲೇತ ಜನು ಛೀನೇ ॥**
**ಸಮುಝಿ ಕರಮ ಗತಿ ಧೀರಜು ಕೀನ್ಹಾ । ಸೋಧಿ ಸುಗಮ ಮಗು ತಿನ್ಹ ಕಹಿ ದೀನ್ಹಾ ॥ ೪ ॥**

ಅವರೆಲ್ಲರೂ ಇನ್ನೂ ಹೇಳಿದರು – ''ಪರಶಿವನಿಗೆ ಪಾರ್ವತಿಯಂತೆ ನೀನೂ ನಿನ್ನ ಪತಿಗೆ ಪ್ರೇಮಪಾತ್ರವಾಗಿರು. ದೇವಿ! ನಮ್ಮ ಮೇಲೆ ನಿನ್ನ ದಯೆ ಇರಲಿ. ನೀವು ಮರಳಿ ಇದೇ ದಾರಿಯಿಂದ ಬರಬೇಕೆಂದು ನಾವು ಪುನಃ ಪುನಃ ಕೈಜೋಡಿಸಿ ಪ್ರಾರ್ಥಿಸಿಕೊಳ್ಳುವೆವು. ನೀವು ನಮ್ಮನ್ನು ತಮ್ಮ ದಾಸಿಯರೆಂದು ಭಾವಿಸಿ ನಮಗೆ ದರ್ಶನ ನೀಡಬೇಕು. ಅವರೆಲ್ಲರೂ

ಪ್ರೇಮಪಿಪಾಸುಗಳೆಂಬುದನ್ನು ಸೀತೆಯು ಮನಗಂಡು, ನಲ್ನಾತುಗಳಿಂದ ಬೆಳದಿಂಗಳು ನೈದಿಲೆಗಳನ್ನು ಅರಳಿಸಿದಂತೆ ಅವರೆಲ್ಲರ ಮನಸ್ಸನ್ನು ಸಂತೋಷಪಡಿಸಿದಳು. ಅದೇ ವೇಳೆಗೆ ಶ್ರೀರಾಮನ ಒಲವನ್ನು ತಿಳಿದು ಲಕ್ಷ್ಮಣನು ಮೃದುಮಧುರವಾಣಿಯಿಂದ ಜನರಲ್ಲಿ ದಾರಿ ಕೇಳಿದನು. ಆ ಮಾತು ಕಿವಿಗೆ ಬಿದ್ದಕೂಡಲೇ ಅಲ್ಲಿದ್ದ ನರನಾರಿಯರು ದುಃಖಿಗೊಂಡರು. ಅವರ ಶರೀರ ಪುಲಕಿತವಾಯಿತು. ಕಣ್ಣುಗಳು ತುಂಬಿಬಂದವು. ಅವರ ಆನಂದ ಮಾಯವಾಯಿತು. ವಿಧಿಯು ಕೊಟ್ಟ ಸಂಪತ್ತನ್ನು ಕಿತ್ತುಕೊಂಡಷ್ಟು ಅವರಿಗೆ ದುಃಖವಾಯಿತು. ಕೊನೆಗೆ ಕರ್ಮಗತಿ ಎಂದುಕೊಂಡು ಅವರು ಧೈರ್ಯತಂದುಕೊಂಡು, ತಮ್ಮ-ತಮ್ಮಲ್ಲೇ ಚರ್ಚಿಸಿ, ವಿಧಿಯಿಲ್ಲದೆ ಅವರಿಗೆ ಸುಗಮವಾದ ದಾರಿಯನ್ನು ತೋರಿದರು. (ಚೌ/೧-೪)

**ದೋ – ಲಖನ ಜಾನಕೀ ಸಹಿತ ತಬ ಗವನು ಕೀನ್ಹ ರಘುನಾಥ ।**
**ಫೇರೇ ಸಬ ಪ್ರಿಯ ಬಚನ ಕಹಿ ಲಿಏ ಲಾಇ ಮನ ಸಾಥ ॥ ೧೧೮ ॥**

ಅನಂತರ ಸೀತಾ ಲಕ್ಷ್ಮಣಸಹಿತ ಶ್ರೀರಾಮನು ಮುಂದಕ್ಕೆ ಸಾಗಿದನು. ಹಿಂಬಾಲಿಸಿ ಬರುತ್ತಿದ್ದ ಜನರಿಗೆ ಪ್ರಿಯವಚನಗಳನ್ನಾಡಿ ಹಿಂದಕ್ಕೆ ಕಳಿಸಿದನು. ಆದರೆ ಅವರ ಮನಸ್ಸು ಮಾತ್ರ ಇವರ ಜೊತೆಯಲ್ಲೇ ಇತ್ತು. (ದೋ/೧೧೮)

**ಚೌ – ಫಿರತ ನಾರಿ ನರ ಅತಿ ಪಛಿತಾಹೀಂ । ದೈಅಹಿ ದೋಷು ದೇಹಿಂ ಮನ ಮಾಹೀಂ ॥**
**ಸಹಿತ ಬಿಷಾದ ಪರಸಪರ ಕಹಹೀಂ । ಬಿಧಿ ಕರತಬ ಉಲಟೇ ಸಬ ಅಹಹೀಂ ॥ ೧ ॥**
**ನಿಪಟ ನಿರಂಕುಸ ನಿಠುರ ನಿಸಂಕೂ । ಜೆಹಿಂ ಸಸಿ ಕೀನ್ಹ ಸರುಜ ಸಕಲಂಕೂ ॥**
**ರೂಖ ಕಲಪತರು ಸಾಗರು ಖಾರಾ । ತೇಹಿಂ ಪಠಏ ಬನ ರಾಜಕುಮಾರಾ ॥ ೨ ॥**
**ಜೌಂ ಪೈ ಇನ್ಹಹಿ ದೀನ್ಹ ಬನಬಾಸೂ । ಕೀನ್ಹ ಬಾದಿ ಬಿಧಿ ಭೋಗ ಬಿಲಾಸೂ ॥**
**ಏ ಬಿಚರಹಿಂ ಮಗ ಬಿನು ಪದತ್ರಾನಾ । ರಚೇ ಬಾದಿ ಬಿಧಿ ಬಾಹನ ನಾನಾ ॥ ೩ ॥**
**ಏ ಮಹಿ ಪರಹಿಂ ಡಾಸಿ ಕುಸ ಪಾತಾ । ಸುಭಗ ಸೇಜ ಕತ ಸೃಜತ ಬಿಧಾತಾ ॥**
**ತರುಬರ ಬಾಸ ಇನ್ಹಹಿ ಬಿಧಿ ದೀನ್ಹಾ । ಧವಲ ಧಾಮ ರಚಿ ರಚಿ ಶ್ರಮು ಕೀನ್ಹಾ ॥ ೪ ॥**

ಹಿಂದಿರುಗುವಾಗ ಆ ಸ್ತ್ರೀ-ಪುರುಷರು ತುಂಬಾ ಪಶ್ಚಾತ್ತಾಪಪಟ್ಟರು. ಮನಸ್ಸಿನಲ್ಲೇ ವಿಧಿಯನ್ನು ಶಪಿಸಿದರು. ಅವರು ತಮ್ಮ-ತಮ್ಮಲ್ಲೇ ವಿಷಾದದಿಂದ ಅಂದುಕೊಂಡರು – ''ಈ ವಿಧಿವಿಲಾಸವೇ ಹೀಗೆ ಯಾವಾಗಲೂ ತಲೆಕೆಳಗಿರುತ್ತದೆ. ಆ ವಿಧಾತನು ನಿರಂಕುಸ, ನಿಷ್ಠುರ, ನಿರ್ದಯಿ ಹಾಗೂ ಭಯರಹಿತನೂ ಆಗಿರುವನು. ಅವನು ಚಂದ್ರನನ್ನು ರೋಗಿಯನ್ನಾಗಿಸಿ, ಅವನಿಗೆ ಕಳಂಕವನ್ನು ಹಚ್ಚಿದನು. ಕಲ್ಪವೃಕ್ಷವನ್ನು ಮರವಾಗಿಸಿ, ಸ್ಥಾವರವಾಗಿಸಿದನು. ಸಮುದ್ರವನ್ನು ಉಪ್ಪಾಗಿಸಿದನು. ಅಂತಹ ವಿಧಾತನೇ ಈ ರಾಜಕುಮಾರರನ್ನು ಕಾಡಿಗೆ ಕಳಿಸಿರುವನು. ವಿಧಾತನು ಇಂತಹ ಸುಕುಮಾರರಾದ ರಾಜಕುಮಾರರನ್ನು ಕಾಡಿಗೆ ಅಟ್ಟಿದ ಮೇಲೆ ಅವನು ರಚಿಸಿದ ಭೋಗವಿಲಾಸಗಳು ವ್ಯರ್ಥವೇ ಸರಿ. ಇವರು ಪಾದರಕ್ಷೆಗಳೂ ಇಲ್ಲದೆ ದಾರಿ ನಡೆಯುತ್ತಿರುವುದನ್ನು ನೋಡಿದರೆ ಆ ಸೃಷ್ಟಿಕರ್ತ ನಿರ್ಮಿಸಿದ ವಾಹನಗಳೆಲ್ಲವೂ ವ್ಯರ್ಥವಾದವುಗಳೇ. ಇವರು ಕುಶಕಿಸಲಯಗಳ ಮೇಲೆ ನೆಲದಮೇಲೆ ಮಲಗುವಾಗ ಸುಖಶಯ್ಯೆಗಳನ್ನು ವಿಧಿಯು ಏಕೆ ನಿರ್ಮಿಸಿದನೋ ಕಾಣೆ! ಹೆಮ್ಮರಗಳ ಕೆಳಗೆ ಇವರು ನೆಲಸಬೇಕಾದ ಪರಿಸ್ಥಿತಿ ಒದಗಿರುವಾಗ ಉಜ್ವಲ ಸೌಧಗಳನ್ನೂ, ದಿವ್ಯ ಹರ್ಮ್ಯಗಳನ್ನೂ ನಿರ್ಮಿಸಿ ಅವನು ವ್ಯರ್ಥವಾಗಿ ಪರಿಶ್ರಮಪಟ್ಟನು. (ಚೌ/೧-೪)

**ದೋ – ಜೌಂ ಏ ಮುನಿ ಪಟ ಧರ ಜಟಿಲ ಸುಂದರ ಸುಠಿ ಸುಕುಮಾರ ।**
**ಬಿಬಿಧ ಭಾಂತಿ ಭೂಷನ ಬಸನ ಬಾದಿ ಕಿಏ ಕರತಾರ ॥ ೧೧೯ ॥**

ಈ ಸುಂದರ ಸುಕುಮಾರ ಯುವಕರು ಮುನಿಯೋಗ್ಯವಾದ ಜಟೆಗಳನ್ನೂ, ವಲ್ಕಲಗಳನ್ನೂ ಧರಿಸಿರುವಾಗ ವಿಧಾತನು ವಿವಿಧಾಭರಣಗಳನ್ನೂ, ವಸ್ತ್ರಗಳನ್ನೂ ನಿರ್ಮಿಸಿದುದು ವ್ಯರ್ಥವೇ. (ದೋ/೧೧೯)

**ಚೌ – ಜೌಂ ಏ ಕಂದ ಮೂಲ ಫಲ ಖಾಹೀಂ । ಬಾದಿ ಸುಧಾದಿ ಅಸನ ಜಗ ಮಾಹೀಂ ॥**
**ಏಕ ಕಹಹಿಂ ಏ ಸಹಜ ಸುಹಾಏ । ಆಪು ಪ್ರಗಟ ಭಏ ಬಿಧಿ ನ ಬನಾಏ ॥ ೧ ॥**
**ಜಹಂ ಲಗಿ ಬೇದ ಕಹೀ ಬಿಧಿ ಕರನೀ । ಶ್ರವನ ನಯನ ಮನ ಗೋಚರ ಬರನೀ ॥**
**ದೇಖಹು ಖೋಜಿ ಭುಅನ ದಸ ಚಾರೀ । ಕಹಂ ಅಸ ಪುರುಷ ಕಹಾಂ ಅಸಿ ನಾರೀ ॥ ೨ ॥**
**ಇನ್ಹಹಿ ದೇಖಿ ಬಿಧಿ ಮನು ಅನುರಾಗಾ । ಪಟತರ ಜೋಗ ಬನಾವೈ ಲಾಗಾ ॥**
**ಕೀನ್ಹ ಬಹುತ ಶ್ರಮ ಐಕ ನ ಆಏ । ತೇಹಿಂ ಇರಿಷಾ ಬನ ಆನಿ ದುರಾಏ ॥ ೩ ॥**

**ಏಕ ಕಹಹಿಂ ಹಮ ಬಹುತ ನ ಜಾನಹಿಂ। ಆಪುಹಿ ಪರಮ ಧನ್ಯ ಕರಿ ಮಾನಹಿಂ॥**
**ತೇ ಪುನಿ ಪುನ್ಯಪುಂಜ ಹಮ ಲೇಖೇ। ಜೇ ದೇಖಹಿಂ ದೇಖಿಹಹಿಂ ಜಿನ್ಹ ದೇಖೇ॥ ೪ ॥**

ಇವರಿಗೆ ಕಂದಮೂಲಫಲಗಳನ್ನೂ ಆಹಾರವಾಗಿಸಿದ ಆ ವಿಧಿಯು ನಿರ್ಮಿಸಿದ ಅಮೃತವೇ ಮೊದಲಾದ ದಿವ್ಯಭೋಜನಗಳು ನಿಷ್ಪ್ರಯೋಜಕ. ಬೇರೆ ಯಾರೋ ಹೇಳಿದರು – ''ಇವರು ಸಹಜ ಸುಂದರರು. ಬ್ರಹ್ಮನು ಇವರನ್ನು ನಿರ್ಮಿಸಲಿಲ್ಲ. ಇವರು ತಮ್ಮನ್ನು ತಾವೇ ಸೃಷ್ಟಿಸಿಕೊಂಡವರು, ಸ್ವಯಂಭುಗಳು. ನಮ್ಮ ಕಣ್ಣು, ಕಿವಿ ಹಾಗೂ ಮನಸ್ಸಿಗೆ ಗೋಚರವಾಗುವ ಅನುಭವಗಳು ವೇದದ ಪ್ರಕಾರ ಎಷ್ಟಿವೆಯೋ ಅಲ್ಲಿಯವರೆವಿಗೂ ಹದಿನಾಲ್ಕು ಲೋಕಗಳಲ್ಲಿ ಹುಡುಕಿದರೂ ಇಂತಹ ಪುರುಷರಾಗಲೀ, ಸ್ತ್ರೀಯಾಗಲೀ ಬೇರೆಲ್ಲಿಯೂ ದೊರಕಲಾರರು. ಇವರು ವಿಧಾತನ ಹದಿನಾಲ್ಕು ಭುವನಗಳಿಂದ ಬೇರೆಯೇ ಆಗಿರುವರು. ಇವರು ತಮ್ಮ ಮಹಿಮೆಯಿಂದಲೇ ಕಾಣಿಸಿಕೊಂಡವರು ಎಂಬುದು ಸಿದ್ಧವಾಗುತ್ತದೆ. ಇವರನ್ನು ಕಂಡು ವಿಧಾತನ ಮನಸ್ಸು ಅನುರಕ್ತವಾಯಿತು. ಆಗ ಅವನೂ ಕೂಡ ಇವರ ಉಪಮೆಗೆ ತಕ್ಕ ಸ್ತ್ರೀ-ಪುರುಷರನ್ನು ಸೃಷ್ಟಿಸತೊಡಗಿನು. ಆದರೆ ಅವನು ಯಶಸ್ವೀಯಾಗಲಿಲ್ಲ. ಹೊಟ್ಟೇಕಿಚ್ಚಿನಿಂದ ಅವನು ಇವರನ್ನು ಕಾಡಿಗೆ ತಂದು ಅಡಗಿಸಿಟ್ಟನು.'' ಮತ್ತೊಬ್ಬ ಹೇಳಿದನು – ''ನಮಗೆ ಹೆಚ್ಚೇನೂ ತಿಳಿಯದು. ಇವರ ದರ್ಶನ ಪಡೆದ ನಾವು ಪರಮ ಧನ್ಯರು ಇಷ್ಟುಮಾತ್ರ ಬಲ್ಲೆವು. ಅಷ್ಟೇ ಅಲ್ಲ, ಇವರನ್ನು ಕಂಡವರು, ಕಾಣುತ್ತಿರುವವರು, ಕಾಣಲಿರುವವರು ಇವರೆಲ್ಲ ಪುಣ್ಯಾತ್ಮರು. (ಚೌ/೧-೪)

**ದೋ – ಏಹಿ ಬಿಧಿ ಕಹಿ ಕಹಿ ಬಚನ ಪ್ರಿಯ ಲೇಹಿಂ ನಯನ ಭರಿ ನೀರ।**
**ಕಿಮಿ ಚಲಿಹಹಿಂ ಮಾರಗ ಅಗಮ ಸುಠಿ ಸುಕುಮಾರ ಸರೀರ॥ ೧೨೦ ॥**

ಈ ಪ್ರಕಾರ ಪ್ರಿಯವಚನಗಳನ್ನಾಡುತ್ತಾ ಎಲ್ಲರೂ ಪ್ರೇಮದ ಕಂಬನಿ ಮಿಡಿದರು. ಹಾಗೂ ''ಅತ್ಯಂತ ಸುಕುಮಾರ ಶರೀರರಾದ ಇವರು ದುರ್ಗಮ ಮಾರ್ಗವನ್ನು ಹೇಗೆ ಕ್ರಮಿಸುವರೋ ಏನೋ!'' ಎಂದು ಆಡಿಕೊಳ್ಳುತ್ತಿದ್ದರು. (ದೋ/೧೨೦)

**ಚೌ – ನಾರಿ ಸನೇಹ ಬಿಕಲ ಬಸ ಹೋಹೀಂ। ಚಕಈಂ ಸಾಂಝ ಸಮಯ ಜನು ಸೋಹೀಂ॥**
**ಮೃದು ಪದ ಕಮಲ ಕಠಿನ ಮಗು ಜಾನೀ। ಗಹಬರಿ ಹೃದಯಂ ಕಹಹಿಂ ಬರ ಬಾನೀ॥ ೧ ॥**
**ಪರಸತ ಮೃದುಲ ಚರನ ಅರುನಾರೇ। ಸಕುಚತಿ ಮಹಿ ಜಿಮಿ ಹೃದಯ ಹಮಾರೇ॥**
**ಜೌಂ ಜಗದೀಸ ಇನ್ಹಹಿ ಬನು ದೀನ್ಹಾ। ಕಸ ನ ಸುಮನಮಯ ಮಾರಗು ಕೀನ್ಹಾ॥ ೨ ॥**
**ಜೌಂ ಮಾಗಾ ಪಾಇಅ ಬಿಧಿ ಪಾಹೀಂ। ಏ ರಖಿಅಹಿಂ ಸಖಿ ಆಂಖಿನ್ಹ ಮಾಹೀಂ॥**
**ಜೇ ನರ ನಾರಿ ನ ಅವಸರ ಆಏ। ತಿನ್ಹ ಸಿಯ ರಾಮು ನ ದೇಖನ ಪಾಏ॥ ೩ ॥**
**ಸುನಿ ಸುರೂಪು ಬೂಝಹಿಂ ಅಕುಲಾಈ। ಅಬ ಲಗಿ ಗಏ ಕಹಾಂ ಲಗಿ ಭಾಈ॥**
**ಸಮರಥ ಧಾಇ ಬಿಲೋಕಹಿಂ ಜಾಈ। ಪ್ರಮುದಿತ ಫಿರಹಿಂ ಜನಮಫಲು ಪಾಈ॥ ೪ ॥**

ಸಂಜೆಯ ಹೊತ್ತಿನಲ್ಲಿ ಮುಂದಾಗುವ ವಿರಹದುಃಖದ ಕಲ್ಪನೆಯಿಂದ ದುಃಖಿತವಾಗುವ ಚಕ್ರವಾಕ ಪಕ್ಷಿಯಂತೆ, ಆ ಸ್ತ್ರೀಯರು ತಮಗೆ ಸೀತಾರಾಮಲಕ್ಷ್ಮಣರ ಅಗಲುವಿಕೆ ಉಂಟಾಗುವುದೆಂದು ತಿಳಿದು ಸ್ನೇಹಪರವಶರಾಗಿ ವಿಕಳರಾದರು. ಅವರ ಚರಣಕಮಲಗಳ ಕೋಮಲತ್ವವನ್ನು, ಮಾರ್ಗದ ಕಠಿಣತ್ವವನ್ನು ಅರಿತಕೊಂಡು ದುಃಖಿತರಾಗಿ ಗದ್ಗದಕಂಠದಿಂದ ಹೀಗೆ ನುಡಿದರು – ''ಇವರ ಅರುಣವರ್ಣದ ಕೋಮಲ ಚರಣಗಳು ಸೋಂಕಿದ ಕೂಡಲೇ ಭೂಮಿಯು, ನಮ್ಮ ಹೃದಯಗಳು ಸಂಕೋಚಗೊಳ್ಳುವಂತೆ ಕುಗ್ಗುತ್ತದೆ. ಜಗದೀಶ್ವರನು ಇವರಿಗೆ ವನವಾಸವನ್ನೇ ನೀಡುವುದಾಗಿದ್ದರೆ, ಇವರಿಗಾಗಿ ಹೂವಿನ ಹಾದಿಯನ್ನೇಕೆ ರಚಿಸಲಿಲ್ಲ? ವಿಧಾತನು ಏನು ಕೇಳಿದರೂ ಕೊಡುವುದಾದರೆ ನಾವು ಇವರನ್ನೇ ಕೇಳಿ ಪಡೆದುಕೊಂಡು ನಮ್ಮ ಕಣ್ಣಿನಲ್ಲೇಕೆ ಇರಿಸಿಕೊಳ್ಳಬಾರದು?'' ಈ ಸಂದರ್ಭದಲ್ಲಿ ಅಲ್ಲಿಗೆ ಬಾರದಿದ್ದ ಸ್ತ್ರೀ-ಪುರುಷರಿಗೆ ಸೀತಾರಾಮರ ದರ್ಶನ ದೊರೆಯಲಿಲ್ಲ. ಅವರು ಸೀತಾರಾಮರ ಸೌಂದರ್ಯದ ಬಗೆಗೆ ಕೇಳಿ ವ್ಯಾಕುಲರಾಗಿ ಹೇಳುತ್ತಿದ್ದರು – ''ತಮ್ಮಾ! ಇಷ್ಟು ಹೊತ್ತಿಗೆ ಅವರು ಎಲ್ಲಿಯವರೆಗೆ ಹೋಗಿರಬಹುದು? ಅವರಲ್ಲಿ ಸಮರ್ಥರಾದವರು ಓಡುತ್ತಾಹೋಗಿ ಅವರ ದರ್ಶನ ಪಡೆದು, ತಮ್ಮ ಜನ್ಮದ ಪರಮಫಲವನ್ನು ಪಡೆದು ಅತೀವ ಆನಂದಿತರಾಗಿ ಮರಳುತ್ತಿದ್ದರು. (ಚೌ/೧-೪)

**ದೋ – ಅಬಲಾ ಬಾಲಕ ಬೃದ್ಧ ಜನ ಕರ ಮೀಜಹಿಂ ಪಛಿತಾಹಿಂ।**
**ಹೋಹಿಂ ಪ್ರೇಮಬಸ ಲೋಗ ಇಮಿ ರಾಮು ಜಹಾಂ ಜಹಂ ಜಾಹಿಂ॥ ೧೨೧ ॥**

ಬಸುರಿ, ಬಾಣಂತಿಯರೇ ಮೊದಲಾದ ಅಬಲೆಯರೂ, ಮಕ್ಕಳೂ, ಮುದುಕರೂ ಅವರ ದರ್ಶನ ಪಡೆಯಲಾಗದಿದ್ದುದಕ್ಕೆ ಕೈ-ಕೈ ಹಿಸುಕಿಕೊಳ್ಳುತ್ತಿದ್ದರು. ಈ ವಿಧವಾಗಿ ರಾಮನು ಹೋದಲ್ಲೆಲ್ಲ ಜನರು ಪ್ರೇಮಪರವಶರಾಗುತ್ತಿದ್ದರು. (ದೋ/೧೨೧)

**ಚೌ – ಗಾವ್ ಗಾವ್ ಅಸ ಹೋಇ ಅನಂದೂ । ದೇಖಿ ಭಾನುಕುಲ ಕೈರವ ಚಂದೂ ॥**
**ಜೇ ಕಛು ಸಮಾಚಾರ ಸುನಿ ಪಾವಹಿಂ । ತೇ ನೃಪ ರಾನಿಹಿ ದೋಸು ಲಗಾವಹಿಂ ॥ ೧ ॥**
**ಕಹಹಿಂ ಏಕ ಅತಿ ಭಲ ನರನಾಹೂ । ದೀನ್ಹ ಹಮಹಿ ಜೋಇ ಲೋಚನ ಲಾಹೂ ॥**
**ಕಹಹಿಂ ಪರಸಪರ ಲೋಗ ಲೊಗಾಈಂ । ಬಾತೇಂ ಸರಲ ಸನೇಹ ಸುಹಾಈಂ ॥ ೨ ॥**
**ತೇ ಪಿತು ಮಾತು ಧನ್ಯ ಜಿನ್ಹ ಜಾಏ । ಧನ್ಯ ಸೊ ನಗರು ಜಹಾಂ ತೇಂ ಆಏ ॥**
**ಧನ್ಯ ಸೊ ದೇಸು ಸೈಲು ಬನ ಗಾಊಂ । ಜಹಂ ಜಹಂ ಜಾಹಿಂ ಧನ್ಯ ಸೋಇ ಠಾಊಂ ॥ ೩ ॥**
**ಸುಖು ಪಾಯಉ ಬಿರಂಚಿ ರಚಿ ತೇಹೀ । ಏ ಜೆಹಿ ಕೇ ಸಬ ಭಾಂತಿ ಸನೇಹೀ ॥**
**ರಾಮ ಲಖನ ಪಥಿ ಕಥಾ ಸುಹಾಈ । ರಹೀ ಸಕಲ ಮಗ ಕಾನನ ಛಾಈ ॥ ೪ ॥**

ಸೂರ್ಯಕುಲರೂಪೀ ನೈದಿಲೆಯನ್ನು ಅರಳಿಸುವ ಚಂದ್ರನಂತಿರುವ ಶ್ರೀರಾಮಚಂದ್ರನ ದರ್ಶನ ಪಡೆದು ಹಳ್ಳಿ-ಹಳ್ಳಿಯಲ್ಲೂ ಇಂತಹುದೇ? ಆನಂದ ಹಬ್ಬುತ್ತಿತ್ತು. ಅವರ ವನವಾಸದ ಸುದ್ದಿಯನ್ನು ಕೇಳಿದ ಜನರು ಅದಕ್ಕೆ ಕಾರಣರಾದ ರಾಜರಾಣಿಯರನ್ನು ದೂಷಿಸುತ್ತಿದ್ದರು. ಕೆಲವರು – ನಮಗೆ ನಮ್ಮ ಕಣ್ಣನ್ನು ಸಾರ್ಥಕಪಡಿಸಿಕೊಳ್ಳುವ ಅವಕಾಶ ನೀಡಿದ ರಾಜನು ನಿಜಕ್ಕೂ ತುಂಬಾ ಒಳ್ಳೆಯವನು, ಎಂದು ಹೇಳುತ್ತಿದ್ದರು. ಮತ್ತೆ ಕೆಲವರು ಸರಳವಾದ, ಪ್ರೇಮಪೂರಿತ, ಮಧುರವಚನಗಳನ್ನು ಆಡಿಕೊಳ್ಳುತ್ತಿದ್ದರು – 'ಇವರಿಗೆ ಜನ್ಮವನ್ನು ಕೊಟ್ಟ ಆ ತಂದೆ-ತಾಯಿಯರು ನಿಜವಾಗಿ ಧನ್ಯರು. ಇವರಿದ್ದ ಊರು ಧನ್ಯವು. ಇವರು ಹೋಗುವ ದೇಶ, ಪರ್ವತ, ವನ, ಹಳ್ಳಿ, ತಾಣಗಳು ಧನ್ಯಾತಿಧನ್ಯಗಳು. ಇವರ ಪ್ರೇಮಪಾತ್ರರಾದವರನ್ನು ಸೃಷ್ಟಿಸಿ, ಬ್ರಹ್ಮನು ನಿಜಕ್ಕೂ ಸುಖ ಪಡೆದನು. ಈ ರಾಮ ಲಕ್ಷ್ಮಣ ಪಥಿಕರ ಸುಂದರ ಕಥೆ ಹಾದಿಬೀದಿಗಳಲ್ಲಿ, ಕಾಡಿನಲ್ಲೆಲ್ಲ ಹಬ್ಬಿತು. (ಚೌ/೧-೪)

**ದೋ – ಏಹಿ ಬಿಧಿ ರಘುಕುಲ ಕಮಲ ರಬಿ ಮಗ ಲೋಗನ್ಹ ಸುಖ ದೇತ ।**
**ಜಾಹಿಂ ಚಲೇ ದೇಖತ ಬಿಪಿನ ಸಿಯ ಸೌಮಿತ್ರಿ ಸಮೇತ ॥ ೧೨೨ ॥**

ರಘುಕುಲರೂಪೀ ಕಮಲವನ್ನು ಅರಳಿಸುವ ಸೂರ್ಯನಂತಿರುವ ಶ್ರೀರಾಮಚಂದ್ರನು ಈ ಪ್ರಕಾರವಾಗಿ ಹಾದಿಯ ಜನರಿಗೆ ಸುಖವನ್ನು ನೀಡುತ್ತಾ, ಸೀತಾಲಕ್ಷ್ಮಣರೊಂದಿಗೆ ವನವೀಕ್ಷಣೆ ಮಾಡುತ್ತಾ ಹೋಗುತ್ತಿದ್ದನು. (ದೋ/೧೨೨)

**ಚೌ – ಆಗೇಂ ರಾಮು ಲಖನು ಬನೇ ಪಾಛೇಂ । ತಾಪಸ ಬೇಷ ಬಿರಾಜತ ಕಾಛೇಂ ॥**
**ಉಭಯ ಬೀಚ ಸಿಯ ಸೋಹತಿ ಕೈಸೇಂ । ಬ್ರಹ್ಮ ಜೀವ ಬಿಚ ಮಾಯಾ ಜೈಸೇಂ ॥ ೧ ॥**
**ಬಹುರಿ ಕಹಉಂ ಛಬಿ ಜಸಿ ಮನ ಬಸಈ । ಜನು ಮಧು ಮದನ ಮಧ್ಯ ರತಿ ಲಸಈ ॥**
**ಉಪಮಾ ಬಹುರಿ ಕಹಉಂ ಜಿಯಂ ಜೋಹೀ । ಜನು ಬುಧ ಬಿಧು ಬಿಚ ರೋಹಿನಿ ಸೋಹೀ ॥ ೨ ॥**
**ಪ್ರಭು ಪದ ರೇಖ ಬೀಚ ಬಿಚ ಸೀತಾ । ಧರತಿ ಚರನ ಮಗ ಚಲತಿ ಸಭೀತಾ ॥**
**ಸೀಯ ರಾಮ ಪದ ಅಂಕ ಬರಾಏಂ । ಲಖನ ಚಲಹಿಂ ಮಗು ದಾಹಿನ ಲಾಏಂ ॥ ೩ ॥**
**ರಾಮ ಲಖನ ಸಿಯ ಪ್ರೀತಿ ಸುಹಾಈ । ಬಚನ ಅಗೋಚರ ಕಿಮಿ ಕಹಿ ಜಾಈ ॥**
**ಖಗ ಮೃಗ ಮಗನ ದೇಖಿ ಛಬಿ ಹೋಹೀಂ । ಲಿಏ ಚೋರಿ ಚಿತ ರಾಮ ಬಟೋಹೀಂ ॥ ೪ ॥**

ಮುಂದೆ ಶ್ರೀರಾಮನು, ಹಿಂದೆ ಲಕ್ಷ್ಮಣನು ಇಬ್ಬರೂ ತಾಪಸವೇಷದಿಂದ ಸುಶೋಭಿತರಾಗುತ್ತಿದ್ದಾರೆ. ಅವರಿಬ್ಬರ ನಡುವೆ ಸೀತೆಯು ಬ್ರಹ್ಮಮತ್ತು ಜೀವರ ನಡುವೆ ಮಾಯೆ ಇರುವಂತೆ ಶೋಭಿಸುತ್ತಿರುವಳು. ವಸಂತಋತು ಹಾಗೂ ಕಾಮದೇವರ ನಡುವೆ ರತಿಯಂತೆ ಕಂಗೊಳಿಸಿದಳು. ಬುಧ ಮತ್ತು ಚಂದ್ರಮನ ನಡುವೆ ರೋಹಿಣಿ ಇರುವಂತೆ ಸೀತೆಯು ವಿರಾಜಿಸುತ್ತಿದ್ದಳು. ದಾರಿನಡೆವಾಗ ನೆಲದಲ್ಲಿ ಮೂಡಿದ ಶ್ರೀರಾಮನ ಚರಣ ಚಿಹ್ನೆಗಳ ಮೇಲೆ ತನ್ನ ಕಾಲು ಬೀಳದಂತೆ ಜಾಗ್ರತೆಯಾಗಿ ಸೀತೆಯು ನಡೆಯುತ್ತಿದ್ದಳು. ಮತ್ತೆ ಲಕ್ಷ್ಮಣನು ಸೀತಾರಾಮರಿಬ್ಬರ ಚರಣಚಿಹ್ನೆಗಳನ್ನು ತಪ್ಪಿಸಿಕೊಳ್ಳುತ್ತಾ, ಅವುಗಳನ್ನು ಬಲಕ್ಕೆ ಮಾಡಿಕೊಂಡು ನಡೆದುಕೊಂಡು ಹೋಗುತ್ತಿದ್ದನು. ಶ್ರೀಸೀತಾರಾಮಲಕ್ಷ್ಮಣರ ಅಲೌಕಿಕ ಪ್ರೇಮವು ಮಾತಿಗೆ ನಿಲುಕುವಂತಹುದಲ್ಲ, ಅನಿರ್ವಚನೀಯ. ಅದನ್ನು ಎಂತು ವರ್ಣಿಸುವುದು? ಪಶು-ಪಕ್ಷಿಗಳೂ ಕೂಡ ಅವರ ಸೌಂದರ್ಯಕ್ಕೆ ಮಾರು ಹೋಗಿದ್ದವು, ಪ್ರೇಮಪರವಶರಾಗುತ್ತಿದ್ದವು. ಪಥಿಕರೂಪೀ ಶ್ರೀರಾಮನು ಅವುಗಳ ಚಿತ್ತವನ್ನೂ ಅಪಹರಿಸಿದ್ದನು. (ಚೌ/೧-೪)

**ದೋ – ಜಿನ್ಹ ಜಿನ್ಹ ದೇಖೇ ಪಥಿಕ ಪ್ರಿಯ ಸಿಯ ಸಮೇತ ದೋಉ ಭಾಇ ।**
**ಭವ ಮಗು ಅಗಮು ಅನಂದು ತೇಇ ಬಿನು ಶ್ರಮ ರಹೇ ಸಿರಾಇ ॥ ೧೨೩ ॥**

ಪ್ರಿಯ ಪಥಿಕರಾದ ಸೀತಾಸಮೇತ ಅಣ್ಣ-ತಮ್ಮಂದಿರಿಬ್ಬರನ್ನೂ ಕಂಡವರು ಅಗಮವಾದ ಭವಮಾರ್ಗವನ್ನು ಸುಲಭವಾಗಿ ಶ್ರಮವಿಲ್ಲದೆ ದಾಟಿಬಿಟ್ಟರು. ಅಂದರೆ – ಜನ್ಮ-ಮರಣ ಚಕ್ರದಿಂದ ಬಿಡುಗಡೆಹೊಂದಿ ಮುಕ್ತರಾದರು. (ದೋ/೧೨೩)

**ಚೌ – ಅಜಹುँ ಜಾಸು ಉರ ಸಪನೆಹುँ ಕಾಊ । ಬಸಹುँ ಲಖನು ಸಿಯ ರಾಮು ಬಟಾಊ ॥**
**ರಾಮ ಧಾಮ ಪಥ ಪಾಇಹಿ ಸೋಈ । ಜೋ ಪಥ ಪಾವ ಕಬಹುँ ಮುನಿ ಕೋಈ ॥ ೧ ॥**
**ತಬ ರಘುಬೀರ ಶ್ರಮಿತ ಸಿಯ ಜಾನೀ । ದೇಖಿ ನಿಕಟ ಬಟು ಸೀತಲ ಪಾನೀ ॥**
**ತಹँ ಬಸಿ ಕಂದ ಮೂಲ ಫಲ ಖಾಈ । ಪ್ರಾತ ನಹಾಇ ಚಲೇ ರಘುರಾಈ ॥ ೨ ॥**

ಇಂದೂ ಕೂಡ ಪಥಿಕರಾದ ಸೀತಾಲಕ್ಷ್ಮಣಸಹಿತ ಶ್ರೀರಾಮನ ಪವಿತ್ರರೂಪವು ಕನಸಿನಲ್ಲಾದರೂ ಹೃದಯದಲ್ಲಿ ಬಂದು ನೆಲಸಿದರೆ, ಅವರು ಮುನಿಗಳಿಗೂ ಅಗಮ್ಯವಾದ ಶ್ರೀರಾಮನ ಸಾಕೇತಧಾಮವನ್ನು ಹೊಂದುವರು. ಆಗ ಶ್ರೀರಾಮನು ಸೀತೆಯು ಬಳಲಿರುವುದನ್ನು ಕಂಡು ಸನಿಹದಲ್ಲೇ ಒಂದು ಆಲದ ಮರ ಹಾಗೂ ತಣ್ಣೀರನ್ನು ಕಂಡು ಅಂದು ಅಲ್ಲೇ ತಂಗಿದರು. ಕಂದಮೂಲಫಲಗಳನ್ನು ಭುಂಜಿಸಿ, ಆ ರಾತ್ರಿ ಅಲ್ಲೇ ಕಳೆದು ಮರುದಿನ ಬೆಳಿಗ್ಗೆ ಸ್ನಾನಾದಿಗಳನ್ನು ಮುಗಿಸಿ ಮುಂದೆ ಸಾಗಿದರು. (ಚೌ/೧-೨)

## ವಾಲ್ಮೀಕಿಯ ಆಶ್ರಮಕ್ಕೆ ಆಗಮನ

**ದೇಖತ ಬನ ಸರ ಸೈಲ ಸುಹಾಏ । ಬಾಲಮೀಕಿ ಆಶ್ರಮ ಪ್ರಭು ಆಏ ॥**
**ರಾಮ ದೀಖ ಮುನಿ ಬಾಸು ಸುಹಾವನ । ಸುಂದರ ಗಿರಿ ಕಾನನು ಜಲು ಪಾವನ ॥ ೩ ॥**
**ಸರನಿ ಸರೋಜ ಬಿಟಪ ಬನ ಫೂಲೇ । ಗುಂಜತ ಮಂಜು ಮಧುಪ ರಸ ಭೂಲೇ ॥**
**ಖಗ ಮೃಗ ಬಿಪುಲ ಕೋಲಾಹಲ ಕರಹೀं । ಬಿರಹಿತ ಬೈರ ಮುದಿತಮನ ಚರಹೀं ॥ ೪ ॥**

ಸುಂದರ ವನ, ಶೈಲ, ಸರೋವರಗಳನ್ನು ವೀಕ್ಷಿಸುತ್ತಾ ಶ್ರೀರಾಮಚಂದ್ರನು ವಾಲ್ಮೀಕಿಯ ಆಶ್ರಮಕ್ಕೆ ಬಂದನು. ಶ್ರೀರಾಮನು ನೋಡಿದನು – ಮುನಿಯ ನಿವಾಸ ಅತ್ಯಂತ ರಮಣೀಯವಾಗಿದೆ. ಅಲ್ಲಿ ಸುಂದರ ಗಿರಿ, ಕಾನನಗಳಿವೆ, ಪವಿತ್ರಜಲವಿದೆ. ಸರೋವರಗಳಲ್ಲಿ ಕಮಲಗಳು ಅರಳಿವೆ. ವನವೃಕ್ಷಗಳಲ್ಲಿ ಹೂವುಗಳು ಅರಳಿದ್ದು, ಅವುಗಳ ಮಕರಂದ ರಸದಲ್ಲಿ ಮುಳುಗಿದ ಮಿಳಿಂದ ವೃಂದ ಗುಂಜಾರವ ಮಾಡುತ್ತಿದೆ. ಅನೇಕ ಪಶು-ಪಕ್ಷಿಗಳು ಮಧುರ ಕಲರವಮಾಡುತ್ತಾ, ತಮ್ಮ-ತಮ್ಮ ಸಹಜವಾದ ವೈರವನ್ನು ಬಿಟ್ಟು ಪ್ರಸನ್ನಚಿತ್ತದಿಂದ ವಿಹರಿಸುತ್ತವೆ. (ಚೌ/೩-೪)

**ದೋ – ಸುಚಿ ಸುಂದರ ಆಶ್ರಮು ನಿರಖಿ ಹರಷೇ ರಾಜಿವನೇನ ।**
**ಸುನಿ ರಘುಬರ ಆಗಮನು ಮುನಿ ಆಗೆं ಆಯಉ ಲೇನ ॥ ೧೨೪ ॥**

ರಾಜೀವಲೋಚನನಾದ ಶ್ರೀರಾಮನು ಪವಿತ್ರವೂ, ಸುಂದರವೂ ಆದ ಆಶ್ರಮವನ್ನು ನೋಡಿ ಹರ್ಷಗೊಂಡನು. ರಘುವರನ ಬರವನ್ನು ತಿಳಿದು ಮುನಿವಾಲ್ಮೀಕಿಗಳು ಆತನನ್ನು ಬರಮಾಡಿಕೊಳ್ಳಲು ಅಲ್ಲಿಗೆ ಬಂದರು. (ದೋ/೧೨೪)

**ಚೌ – ಮುನಿ ಕಹುँ ರಾಮ ದಂಡವತ ಕೀನ್ಹಾ । ಆಸಿರಬಾದು ಬಿಪ್ರಬರ ದೀನ್ಹಾ ॥**
**ದೇಖಿ ರಾಮ ಛಬಿ ನಯನ ಜುಡಾನೇ । ಕರಿ ಸನಮಾನು ಆಶ್ರಮಹिं ಆನೇ ॥ ೧ ॥**
**ಮುನಿಬರ ಅತಿಥಿ ಪ್ರಾನಪ್ರಿಯ ಪಾಏ । ಕಂದ ಮೂಲ ಫಲ ಮಧುರ ಮಗಾಏ ॥**
**ಸಿಯ ಸೌಮಿತ್ರಿ ರಾಮ ಫಲ ಖಾಏ । ತಬ ಮುನಿ ಆಶ್ರಮ ದಿಏ ಸುಹಾಏ ॥ ೨ ॥**
**ಬಾಲಮೀಕಿ ಮನ ಆನಂದು ಭಾರೀ । ಮಂಗಲ ಮೂರತಿ ನಯನ ನಿಹಾರೀ ॥**
**ತಬ ಕರ ಕಮಲ ಜೋರಿ ರಘುರಾಈ । ಬೋಲೇ ಬಚನ ಶ್ರವನ ಸುಖದಾಈ ॥ ೩ ॥**
**ತುಮ್ಹ ತ್ರಿಕಾಲ ದರಸೀ ಮುನಿನಾಥಾ । ಬಿಸ್ವ ಬದರ ಜಿಮಿ ತುಮ್ಹರೇं ಹಾಥಾ ॥**
**ಅಸ ಕಹಿ ಪ್ರಭು ಸಬ ಕಥಾ ಬಖಾನೀ । ಜೆಹಿ ಜೆಹಿ ಭಾँತಿ ದೀನ್ಹ ಬನು ರಾನೀ ॥ ೪ ॥**

ಶ್ರೀರಾಮಚಂದ್ರನು ಮುನಿಗಳಿಗೆ ದಂಡವತ್ ನಮಸ್ಕಾರಮಾಡಿದನು. ಮುನಿಗಳು ಅವನಿಗೆ ಆಶೀರ್ವದಿಸಿದನು. ಶ್ರೀರಾಮನ ನಿರುಪಮವಾದ ಶೋಭೆಯನ್ನು ಕಂಡು ಮುನಿಯ ಕಣ್ಣುಗಳು ತಣಿದವು. ಸಮ್ಮಾನಪೂರ್ವಕವಾಗಿ ಮುನಿಯು ಅವರನ್ನು ತನ್ನ ಆಶ್ರಮಕ್ಕೆ ಕರೆದೊಯ್ದರು. ಪ್ರಾಣಪ್ರಿಯ ಅತಿಥಿಯನ್ನು ಕಂಡು ವಾಲ್ಮೀಕಿಮುನಿಗಳು ಅವರಿಗಾಗಿ ಕಂದಮೂಲಫಲಗಳನ್ನು ತರಿಸಿದರು. ಸೀತಾರಾಮಲಕ್ಷ್ಮಣರು ಫಲಹಾರ ಮಾಡಿದರು. ಅನಂತರ ಮುನಿಗಳು ರಾಮನಿಗೆ

ವಿಶ್ರಮಿಸಿಕೊಳ್ಳಲು ಸುಂದರ ತಾಣವನ್ನು ತೋರಿಸಿದರು. ಮುನಿಗಳು ಶ್ರೀರಾಮನ ಬಳಿ ಕುಳಿತಿದ್ದಾರೆ, ಅವನ ಮಂಗಳ ಮೂರ್ತಿಯನ್ನು ಕಣ್ತುಂಬಾ ಕಂಡು ವಾಲ್ಮೀಕಿಗಳ ಮನದಲ್ಲಿ ಅಪಾರ ಹರ್ಷವಾಗುತ್ತಿದೆ. ಆಗ ಶ್ರೀರಾಮನು ತನ್ನ ಕಮಲದಂತಹ ಕೈಗಳನ್ನು ಜೋಡಿಸಿ, ಶ್ರವಣಸುಖದಾಯಕವಾದ ಮಾತುಗಳನ್ನು ಆಡಿದನು – ''ಓ ಮುನಿನಾಥಾ! ನೀವು ತ್ರಿಕಾಲದರ್ಶಿಗಳು. ಇಡೀ ವಿಶ್ವವೇ ನಿಮಗೆ ಕರತಲ ಬದರಿಯಂತೆ.'' ಹೀಗೆ ಹೇಳಿ ಅನಂತರ ಶ್ರೀರಾಮಚಂದ್ರನು ಕೈಕೆಯಿಯಿಂದ ತನಗೆ ಪ್ರಾಪ್ತವಾದ ವನವಾಸದ ವೃತ್ತಾಂತವೆಲ್ಲವನ್ನೂ ಅರುಹಿದನು. (ಚೌ/೧-೪)

**ದೋ – ತಾತ ಬಚನ ಪುನಿ ಮಾತು ಹಿತ ಭಾಇ ಭರತ ಅಸ ರಾಉ ।**
**ಮೋ ಕಹುँ ದರಸ ತುಮ್ಹಾರ ಪ್ರಭು ಸಬು ಮಮ ಪುನ್ಯ ಪ್ರಭಾಉ ॥ ೧೨೫ ॥**

ಶ್ರೀರಾಮನು ಪುನಃ ಹೇಳಿದನು – ಸ್ವಾಮಿ! ಪಿತೃವಾಕ್ಯ ಪರಿಪಾಲನೆ, ಮಾತೆಯ ಹಿತ, ಭರತನಂತಹ ಧರ್ಮಾತ್ಮಾ, ಸ್ನೇಹೀ, ತಮ್ಮನು ರಾಜನಾದುದು, ನಿಮ್ಮ ದರ್ಶನ ಲಭಿಸಿದುದು ಇವೆಲ್ಲ ನನ್ನ ಪುಣ್ಯದ ಪ್ರಭಾವವೇ ಆಗಿದೆ. (ದೋ/೧೨೫)

**ಚೌ – ದೇಖಿ ಪಾಯ ಮುನಿರಾಯ ತುಮ್ಹಾರೇ । ಭಏ ಸುಕೃತ ಸಬ ಸುಫಲ ಹಮಾರೇ ॥**
**ಅಬ ಜಹँ ರಾಉರ ಆಯಸು ಹೋಈ । ಮುನಿ ಉದಬೇಗು ನ ಪಾವೈ ಕೋಈ ॥ ೧ ॥**
**ಮುನಿ ತಾಪಸ ಜಿನ್ಹ ತೇँ ದುಖು ಲಹಹೀँ । ತೇ ನರೇಸ ಬಿನು ಪಾವಕ ದಹಹೀँ ॥**
**ಮಂಗಲ ಮೂಲ ಬಿಪ್ರ ಪರಿತೋಷೂ । ದಹಇ ಕೋಟಿ ಕುಲ ಭೂಸುರ ರೋಷೂ ॥ ೨ ॥**
**ಅಸ ಜಿಯँ ಜಾನಿ ಕಹಿಅ ಸೋಇ ಠಾಊँ । ಸಿಯ ಸೌಮಿತ್ರಿ ಸಹಿತ ಜಹँ ಜಾಊँ ॥**
**ತಹँ ರಚಿ ರುಚಿರ ಪರನ ತೃನ ಸಾಲಾ । ಬಾಸು ಕರೌँ ಕಛು ಕಾಲ ಕೃಪಾಲಾ ॥ ೩ ॥**
**ಸಹಜ ಸರಲ ಸುನಿ ರಘುಬರ ಬಾನೀ । ಸಾಧು ಸಾಧು ಬೋಲೇ ಮುನಿ ಗ್ಯಾನೀ ॥**
**ಕಸ ನ ಕಹಹು ಅಸ ರಘುಕುಲಕೇತೂ । ತುಮ್ಹ ಪಾಲಕ ಸಂತತ ಶ್ರುತಿ ಸೇತೂ ॥ ೪ ॥**

''ಮುನೀಶ್ವರಾ! ನಿಮ್ಮ ಪಾದದರ್ಶನ ಮಾಡಿದ್ದರಿಂದ ಇಂದು ನಮ್ಮ ಎಲ್ಲ ಸುಕೃತಗಳೂ ಸಫಲವಾದುವು. ಇನ್ನು ನಿಮ್ಮ ಅಪ್ಪಣೆಯಾದಲ್ಲಿ, ಮುನೀಶ್ವರರಿಗೆ, ತಪೋಧನರಿಗೆ ಯಾವುದೇ ಆತಂಕವಾಗದಂತೆ ಇರುವಲ್ಲಿ ಒಂದು ರಮಣೀಯವಾದ ಪರ್ಣಕುಟಿಯನ್ನು ನಿರ್ಮಿಸಿಕೊಂಡು ಅಲ್ಲಿ ಸೀತಾಲಕ್ಷ್ಮಣರೊಡನೆ ವಾಸಿಸಬೇಕೆಂದು ಯೋಚಿಸಿದ್ದೇನೆ. ಏಕೆಂದರೆ, ಮುನಿಗಳ ಕೋಪವು ಅಗ್ನಿಯಿಲ್ಲದೆಯೇ ರಾಜನನ್ನು ಸುಟ್ಟುಬಿಡುತ್ತದೆ. ಬ್ರಾಹ್ಮಣರ ಸಂತೋಷವೇ ಎಲ್ಲ ಶುಭಗಳಿಗೆ ಮೂಲವು. ಭೂಸುರರ ಕೋಪವು ಕೋಟಿ ಕುಲಗಳನ್ನು ಸುಟ್ಟುರುಹುತ್ತದೆ. ಇದೆಲ್ಲವನ್ನೂ ಮನಗಂಡು ನಾನು ಸೀತಾಲಕ್ಷ್ಮಣರೊಡನೆ ಎಲ್ಲಿಗೆ ಹೋಗಲಿ? ತಿಳಿಸಿರಿ. ಅಲ್ಲಿ ಚೆಲುವಾದ ಪರ್ಣತೃಣಶಾಲೆಯನ್ನು ನಿರ್ಮಿಸಿಕೊಂಡು ಕೆಲಕಾಲ ವಾಸಮಾಡಬಯಸುತ್ತೇನೆ.'' ರಘುವರನ ಸಹಜ, ಸರಳವಾಣಿಯನ್ನು ಕೇಳಿ, ಜ್ಞಾನಿಯಾದ ಮುನಿಯು ಇಂತೆಂದನು – ''ಸಾಧು, ಸಾಧು, ಓ ರಘುಕುಲತಿಲಕಾ! ಚೆನ್ನಾಗಿಯೇ ಕೇಳಿದೆ! ಯಾವಾಗಲೂ ವೇದಮರ್ಯಾದೆಯನ್ನು ಕಾಪಾಡುವ ನೀನು ಹೀಗೆ ನುಡಿಯುವುದು ಯೋಗ್ಯವೇ ಆಗಿದೆ. (ಚೌ/೧-೪)

**ಛಂ – ಶ್ರುತಿ ಸೇತು ಪಾಲಕ ರಾಮ ತುಮ್ಹ ಜಗದೀಸ ಮಾಯಾ ಜಾನಕೀ ।**
**ಜೋ ಸೃಜತಿ ಜಗು ಪಾಲತಿ ಹರತಿ ರುಖ ಪಾಇ ಕೃಪಾನಿಧಾನ ಕೀ ॥**
**ಜೋ ಸಹಸಸೀಸು ಅಹೀಸು ಮಹಿಧರು ಲಖನು ಸಚರಾಚರ ಧನೀ ।**
**ಸುರ ಕಾಜ ಧರಿ ನರರಾಜ ತನು ಚಲೆ ದಲನ ಖಲ ನಿಸಿಚರ ಅನೀ ॥**

ರಾಮಚಂದ್ರಾ! ನೀನು ವೇದಮರ್ಯಾದೆಯನ್ನು ಕಾಪಾಡುವ ಜಗದೀಶ್ವರನಾಗಿರುವೆ. ಆದಿಶಕ್ತಿಯೂ, ಕರುಣಾಮೂರ್ತಿಯೂ ಆದ ಜಾನಕೀದೇವಿಯೇ ಮಾಯೆಯು. ಅವಳು ನಿನ್ನ ಕಣ್ಸನ್ನೆಯಂತೆ ಜಗತ್ತಿನ ಉತ್ಪತ್ತಿ, ಸ್ಥಿತಿ, ಸಂಹಾರವನ್ನು ಮಾಡುವವಳು. ಸಹಸ್ರಶೀರ್ಷನೂ, ಅಹೀಶನೂ, ಮಹೀಧರನೂ, ಆದ ಚರಾಚರಸ್ವಾಮಿ ಆದಿಶೇಷನೇ ಲಕ್ಷ್ಮಣನು. ದೇವತೆಗಳ ಕಾರ್ಯಸಿದ್ಧಿಗಾಗಿ ನೀನು ರಾಜಶರೀರವನ್ನು ಧರಿಸಿಕೊಂಡು, ದುಷ್ಟರಾಕ್ಷಸರ ಸೇನೆಯನ್ನು ನಾಶಮಾಡಲಿಕ್ಕಾಗಿ ಹೊರಟಿರುವೆ. (ಛಂದ)

**ಸೋ – ರಾಮ ಸರೂಪ ತುಮ್ಹಾರ ಬಚನ ಅಗೋಚರ ಬುದ್ಧಿಪರ ।**
**ಅಬಿಗತ ಅಕಥ ಅಪಾರ ನೇತಿ ನೇತಿ ನಿತ ನಿಗಮ ಕಹ ॥ ೧೨೬ ॥**

ಹೇ ರಾಮಾ! ನಿನ್ನ ಸ್ವರೂಪವು ಮಾತಿಗೂ, ಬುದ್ಧಿಗೂ ಅಗೋಚರ. ಅದು ಅವ್ಯಕ್ತವೂ, ಅವರ್ಣನೀಯವೂ, ಅನಂತವೂ ಆಗಿದೆ. ಅದನ್ನು ವೇದಗಳೂ ಕೂಡ 'ನೇತಿ-ನೇತಿ' ಎಂದು ಹೇಳಿ ವರ್ಣಿಸುತ್ತವೆ. (ಸೋ/೧೨೬)

**ಚೌ – ಜಗು ಪೇಖನ ತುಮ್ಹ ದೇಖನಿಹಾರೇ । ಬಿಧಿ ಹರಿ ಸಂಭು ನಚಾವನಿಹಾರೇ ॥**
**ತೇಉ ನ ಜಾನಹಿಂ ಮರಮು ತುಮ್ಹಾರಾ । ಔರು ತುಮ್ಹಹಿ ಕೋ ಜಾನನಿಹಾರಾ ॥ ೧ ॥**
**ಸೋಇ ಜಾನಇ ಜೆಹಿ ದೇಹು ಜನಾಈ । ಜಾನತ ತುಮ್ಹಹಿ ತುಮ್ಹಇ ಹೋಇ ಜಾಈ ॥**
**ತುಮ್ಹರಿಹಿ ಕೃಪಾಂ ತುಮ್ಹಹಿ ರಘುನಂದನ । ಜಾನಹಿಂ ಭಗತ ಭಗತ ಉರ ಚಂದನ ॥ ೨ ॥**
**ಚಿದಾನಂದಮಯ ದೇಹ ತುಮ್ಹಾರೀ । ಬಿಗತ ಬಿಕಾರ ಜಾನ ಅಧಿಕಾರೀ ॥**
**ನರ ತನು ಧರೇಹು ಸಂತ ಸುರ ಕಾಜಾ । ಕಹಹು ಕರಹು ಜಸ ಪ್ರಾಕೃತ ರಾಜಾ ॥ ೩ ॥**
**ರಾಮ ದೇಖಿ ಸುನಿ ಚರಿತ ತುಮ್ಹಾರೇ । ಜಡ ಮೋಹಹಿಂ ಬುಧ ಹೋಹಿಂ ಸುಖಾರೇ ॥**
**ತುಮ್ಹ ಜೋ ಕಹಹು ಕರಹು ಸಬು ಸಾಂಚಾ । ಜಸ ಕಾಛಿಅ ತಸ ಚಾಹಿಅ ನಾಚಾ ॥ ೪ ॥**

ರಾಮಾ! ಈ ಜಗತ್ತು ನಿನ್ನ ಲೀಲಾವಿಲಾಸವು. ನೀನು ಇದರ ದ್ರಷ್ಟಾರನು. ಬ್ರಹ್ಮ, ವಿಷ್ಣು, ಮಹೇಶ್ವರರನ್ನೂ ನೀನು ಕುಣಿಸುವವನು. ಅವರೂ ಕೂಡ ನಿನ್ನ ಮರ್ಮವನ್ನು ಅರಿಯದಿರುವಾಗ ಬೇರಾರು ನಿನ್ನನ್ನು ತಿಳಿಯಬಲ್ಲರು? ನೀನು ಯಾರಿಗೆ ಸ್ವತಃ ತಿಳಿಸಿಕೊಡುವಿಯೋ, ಅವರೇ ನಿನ್ನನ್ನು ಅರಿಯಬಲ್ಲರು. ನಿನ್ನನ್ನು ಅರಿಯುತ್ತಲೇ ಅವರು ನಿನ್ನ ಸ್ವರೂಪರೇ ಆಗಿಬಿಡುತ್ತಾರೆ. ಓ ರಘುನಂದನಾ! ಭಕ್ತಹೃದಯ ಚಂದನಾ! ನಿನ್ನ ಕೃಪೆಯಿಂದಲೇ ಭಕ್ತರು ನಿನ್ನನ್ನು ತಿಳಿಯಬಲ್ಲರು. ನಿನ್ನ ದೇಹವೂ ಪಾಂಚಭೌತಿಕವಲ್ಲ. ಅದು ಚಿದಾನಂದಮಯವೂ ವಿಕಾರರಹಿತವೂ ಆಗಿದೆ. ಈ ರಹಸ್ಯವನ್ನು ಅಧಿಕಾರಿ ಪುರುಷರು ಮಾತ್ರ ಬಲ್ಲರು. ನೀನು ಸತ್ಪುರುಷರ, ದೇವತೆಗಳ ಕಾರ್ಯಕ್ಕಾಗಿ ದಿವ್ಯ ಮಾನವ ಶರೀರವನ್ನು ಧರಿಸಿರುವೆ ಹಾಗೂ ಪ್ರಾಕೃತ ರಾಜರಂತೆ ನಡೆಯುತ್ತಿರುವಿ, ನುಡಿಯುತ್ತಿರುವಿ. ರಾಮಾ! ನಿನ್ನ ಚರಿತ್ರವನ್ನು ಕಂಡು, ಕೇಳಿ, ಮೂರ್ಖರು ಮೋಹಗೊಳ್ಳುತ್ತಾರೆ. ಜ್ಞಾನಿಗಳು ಸುಖಿಗಳಾಗುತ್ತಾರೆ. ನೀನು ನುಡಿಯುವುದು, ಮಾಡುವುದು ಎಲ್ಲವೂ ಉಚಿತವೇ, ಸತ್ಯವೇ. ಏಕೆಂದರೆ ಸೋಗುಹಾಕಿಕೊಂಡಂತೆ ಕುಣಿಯಬೇಕಲ್ಲ! (ಈಗ ನೀನು ಮನುಷ್ಯರೂಪದಲ್ಲಿರುವಾದ ಮನುಷ್ಯರಿಗೆ ಉಚಿತವಾದ ವ್ಯವಹಾರವನ್ನು ಮಾಡುವುದು ಸರಿಯೇ ಆಗಿದೆ.) (ಚೌ/೧-೪)

**ದೋ – ಪೂಂಛೆಹು ಮೋಹಿ ಕಿ ರಹೌಂ ಕಹಂ ಮೈಂ ಪೂಂಛತ ಸಕುಚಾಉಂ ।**
**ಜಹಂ ನ ಹೋಹು ತಹಂ ದೇಹು ಕಹಿ ತುಮ್ಹಹಿ ದೇಖಾವೌಂ ಠಾಉಂ ॥ ೧೨೭ ॥**

'ನಾನು ಎಲ್ಲಿ ನೆಲಸಲಿ?' ಎಂದು ನೀನು ನನ್ನನ್ನು ಕೇಳಿದೆ. ಆದರೆ ಮೊದಲಿಗೆ ನೀನು ಇಲ್ಲದ ಸ್ಥಳವನ್ನು ತಿಳಿಸು. ಆಗ ನಾನು ನೀನು ಇರಬಹುದಾದ ಸ್ಥಳವನ್ನು ಸೂಚಿಸುತ್ತೇನೆ. (ದೋ/೧೨೭)

**ಚೌ – ಸುನಿ ಮುನಿ ಬಚನ ಪ್ರೇಮ ರಸ ಸಾನೇ । ಸಕುಚಿ ರಾಮ ಮನ ಮಹುಂ ಮುಸುಕಾನೇ ॥**
**ಬಾಲಮೀಕಿ ಹಂಸಿ ಕಹಹಿಂ ಬಹೋರೀ । ಬಾನೀ ಮಧುರ ಅಮಿಅ ರಸ ಬೋರೀ ॥ ೧ ॥**
**ಸುನಹು ರಾಮ ಅಬ ಕಹಉಂ ನಿಕೇತಾ । ಜಹಾಂ ಬಸಹು ಸಿಯ ಲಖನ ಸಮೇತಾ ॥**
**ಜಿನ್ಹಕೇ ಶ್ರವನ ಸಮುದ್ರ ಸಮಾನಾ । ಕಥಾ ತುಮ್ಹಾರಿ ಸುಭಗ ಸರಿ ನಾನಾ ॥ ೨ ॥**
**ಭರಹಿಂ ನಿರಂತರ ಹೋಹಿಂ ನ ಪೂರೇ । ತಿನ್ಹಕೇ ಹಿಯ ತುಮ್ಹ ಕಹುಂ ಗೃಹ ರೂರೇ ॥**
**ಲೋಚನ ಚಾತಕ ಜಿನ್ಹ ಕರಿ ರಾಖೇ । ರಹಹಿಂ ದರಸ ಜಲಧರ ಅಭಿಲಾಷೇ ॥ ೩ ॥**
**ನಿದರಹಿಂ ಸರಿತ ಸಿಂಧು ಸರ ಭಾರೀ । ರೂಪ ಬಿಂದು ಜಲ ಹೋಹಿಂ ಸುಖಾರೀ ॥**
**ತಿನ್ಹಕೇಂ ಹೃದಯ ಸದನ ಸುಖದಾಯಕ । ಬಸಹು ಬಂಧು ಸಿಯ ಸಹ ರಘುನಾಯಕ ॥ ೪ ॥**

ಮುನಿಯ ಪ್ರೇಮಾರ್ದ್ರವಾಣಿಯನ್ನು ಕೇಳಿ ರಾಮಚಂದ್ರನು ಸ್ವಲ್ಪ ಸಂಕೋಚಪಟ್ಟು ಮುಗುಳ್ನಕ್ಕನು. ವಾಲ್ಮೀಕಿಗಳೂ ನಕ್ಕು ಅಮೃತಸಿಕ್ತವಾದ ಮಧುರವಾಣಿಯಲ್ಲಿ ಇಂತೆಂದರು – ''ಓ ರಾಮಾ! ಸೀತಾ ಲಕ್ಷ್ಮಣ ಸಮೇತರಾಗಿ ನೀನು ಇರಬಹುದಾದ ಸ್ಥಾನವನ್ನು ಈಗ ಹೇಳುತ್ತೇನೆ. ಕೇಳು. ಹಗಲು ರಾತ್ರಿ ನಿನ್ನ ದಿವ್ಯ ಕಥಾರೂಪೀ ನದಿಗಳಿಂದ ಸಮುದ್ರದಂತಿರುವ ಕಿವಿಗಳು ಎಂದಿಗೂ ತುಂಬುವುದಿಲ್ಲವೋ, ಅಂತಹವರ ಹೃದಯಗಳು ನಿನಗೆ ಸುಂದರವಾದ ಸದನಗಳು. ನಿಮ್ಮ ದರ್ಶನವೆಂಬ ಮೇಘಕ್ಕಾಗಿ ಯಾರು ತಮ್ಮ ಕಣ್ಣುಗಳನ್ನು ಚಾತಕವನ್ನಾಗಿ ಮಾಡಿಕೊಂಡಿದ್ದಾರೆ, ಯಾರು ದೊಡ್ಡ-ದೊಡ್ಡ ನದಿ, ಸಮುದ್ರ, ಸರೋವರಗಳನ್ನು

ಕಡೆಗಣಿಸಿ, ನಿಮ್ಮ ರೂಪದ ಒಂದು ಬಿಂದುಮಾತ್ರದಿಂದ ಸುಖಿಗಳಾಗುವರೋ ಅಂತಹವರ ಸುಖದಾಯಕವಾದ ಹೃದಯಸದನದಲ್ಲಿ ನೀನು ಸೀತಾಲಕ್ಷ್ಮಣ ಸಮೇತ ನೆಲೆಸು. (ಚೌ/೧-೪)

**ದೋ – ಜಸು ತುಮ್ಹಾರ ಮಾನಸ ಬಿಮಲ ಹಂಸಿನಿ ಜೀಹಾ ಜಾಸು ।**
**ಮುಕತಾಹಲ ಗುನ ಗನ ಚುನಇ ರಾಮ ಬಸಹು ಹಿಯ್ ತಾಸು ॥ ೧೨೮ ॥**

ನಿನ್ನ ಯಶಸ್ಸೆಂಬ ನಿರ್ಮಲ ಮಾನಸಸರೋವರದಲ್ಲಿ, ನಿನ್ನ ಸದ್ಗುಣಗಳೆಂಬ ಮುತ್ತುಗಳನ್ನು ಹಂಸದಂತೆ ಯಾರು ತನ್ನ ನಾಲಿಗೆಯಿಂದ ಹೆಕ್ಕುತ್ತಾರೋ (ಸದಾಕಾಲ ನಿನ್ನ ಗುಣಗಾನಮಾಡುತ್ತಾರೋ) ಅಂತಹವರ ಹೃದಯದಲ್ಲಿ ನೀನು ನೆಲೆಸು. (ದೋ/೧೨೮)

**ಚೌ – ಪ್ರಭು ಪ್ರಸಾದ ಸುಚಿ ಸುಭಗ ಸುಬಾಸಾ । ಸಾದರ ಜಾಸು ಲಹಇ ನಿತ ನಾಸಾ ॥**
**ತುಮ್ಹಹಿ ನಿಬೇದಿತ ಭೋಜನ ಕರಹೀಂ । ಪ್ರಭು ಪ್ರಸಾದ ಪಟ ಭೂಷನ ಧರಹೀಂ ॥ ೧ ॥**
**ಸೀಸ ನವಹಿಂ ಸುರ ಗುರು ದ್ವಿಜ ದೇಖೀ । ಪ್ರೀತಿ ಸಹಿತ ಕರಿ ಬಿನಯ ಬಿಸೇಷೀ ॥**
**ಕರ ನಿತ ಕರಹಿಂ ರಾಮ ಪದ ಪೂಜಾ । ರಾಮ ಭರೋಸ ಹೃದಯ್ ನಹಿಂ ದೂಜಾ ॥ ೨ ॥**
**ಚರನ ರಾಮ ತೀರಥ ಚಲಿ ಜಾಹೀಂ । ರಾಮ ಬಸಹು ತಿನ್ಹ ಕೇ ಮನ ಮಾಹೀಂ ॥**
**ಮಂತ್ರರಾಜು ನಿತ ಜಪಹಿಂ ತುಮ್ಹಾರಾ । ಪೂಜಹಿಂ ತುಮ್ಹಹಿ ಸಹಿತ ಪರಿವಾರಾ ॥ ೩ ॥**
**ತರಪನ ಹೋಮ ಕರಹಿಂ ಬಿಧಿ ನಾನಾ । ಬಿಪ್ರ ಜೆವಾಂಇ ದೇಹಿಂ ಬಹು ದಾನಾ ॥**
**ತುಮ್ಹ ತೇಂ ಅಧಿಕ ಗುರಹಿ ಜಿಯ್ ಜಾನೀ । ಸಕಲ ಭಾಯ್ ಸೇವಹಿಂ ಸನಮಾನೀ ॥ ೪ ॥**

ರಾಮಾ! ಯಾವ ನಾಸಿಕವು ಪ್ರಭುವಿನ ಪವಿತ್ರವೂ, ಸುಗಂಧಿತವೂ ಆದ ಪ್ರಸಾದವನ್ನು ನಿತ್ಯವೂ ಆದರದಿಂದ ಆಘ್ರಾಣಿಸುತ್ತದೋ, ನಿನಗೆ ಅರ್ಪಿಸಿ ಯಾರು ಭೋಜನಮಾಡುವರೋ, ಯಾರು ನಿನ್ನ ಪ್ರಸಾದರೂಪವಾಗಿ ವಸ್ತ್ರಾಭೂಷಣಗಳನ್ನು ಧರಿಸುವರೋ, ಯಾರ ಮಸ್ತಕವು ದೇವರು, ಗುರುಗಳು, ದ್ವಿಜರು ಇವರನ್ನು ಕಂಡಕೂಡಲೇ ಪ್ರೇಮದಿಂದ, ವಿನಮ್ರವಾಗಿ ಬಾಗುವುದೋ, ಯಾರ ಕೈಗಳು ನಿತ್ಯವೂ (ರಾಮಚಂದ್ರನ) ನಿನ್ನ ಚರಣಗಳನ್ನು ಪೂಜಿಸುತ್ತವೆಯೋ, ಯಾರ ಹೃದಯದಲ್ಲಿ ಶ್ರೀರಾಮಚಂದ್ರನಾದ ನಿನ್ನ ಭರವಸೆಯಲ್ಲದೆ ಬೇರೆ ಭರವಸೆಯಿಲ್ಲವೋ, ಯಾರ ಚರಣಗಳು ಶ್ರೀರಾಮನಾದ ನಿನ್ನ ತೀರ್ಥಗಳಿಗೆ ನಡೆದುಹೋಗುತ್ತವೋ, ರಾಮಾ! ಅಂತಹವರ ಮನಸ್ಸಿನಲ್ಲಿ ನೆಲೆಸುವವನಾಗು. ಯಾರು ಪ್ರತಿದಿನವು ನಿನ್ನ ಮಂತ್ರರಾಜವನ್ನು ಜಪಿಸುತ್ತಾ, ಪರಿವಾರಸಹಿತ ನಿನ್ನನ್ನು ಪೂಜಿಸುವರೋ ಅವರ ಹೃದಯದಲ್ಲಿ ವಾಸವಾಗಿರು. ಯಾರು ಅನೇಕ ವಿಧದಿಂದ ತರ್ಪಣ, ಹೋಮಗಳನ್ನು ಮಾಡುವರೋ, ಬ್ರಾಹ್ಮಣರಿಗೆ ಭೋಜನಮಾಡಿಸಿ, ಕೈತುಂಬಾ ದಾನಕೊಡುವರೋ, ಯಾರು ಗುರುವನ್ನು ತಮ್ಮ ಹೃದಯದಲ್ಲಿ ನಿನ್ನಿಂದಲೂ ಹೆಚ್ಚೆಂದು ತಿಳಿದು ಅವರ ಸೇವೆ ಮಾಡುವರೋ – (ಚೌ/೧-೪)

**ದೋ – ಸಬು ಕರಿ ಮಾಗಹಿಂ ಏಕ ಫಲು ರಾಮ ಚರನ ರತಿ ಹೋಉ ।**
**ತಿನ್ಹ ಕೇಂ ಮನ ಮಂದಿರ ಬಸಹು ಸಿಯ ರಘುನಂದನ ದೋಉ ॥ ೧೨೯ ॥**

ಇವೆಲ್ಲ ಕರ್ಮಗಳನ್ನು ಮಾಡಿ, ಎಲ್ಲದರ ಏಕೈಕ ಫಲವಾದ – 'ಶ್ರೀರಾಮನ ಚರಣಗಳಲ್ಲಿಯೇ ಯಾವಾಗಲೂ ನನಗೆ ಭಕ್ತಿಯಿರಲಿ' ಎಂಬುದನ್ನು ಆಶಿಸುತ್ತಾರೋ, ಅಂತಹವರ ಮನಮಂದಿರದಲ್ಲಿ ನೀನು ಸೀತಾಲಕ್ಷ್ಮಣಸಹಿತನಾಗಿ ವಾಸಮಾಡುವವನಾಗು. (ದೋ/೧೨೯)

**ಚೌ – ಕಾಮ ಕೋಹ ಮದ ಮಾನ ನ ಮೋಹಾ । ಲೋಭ ನ ಛೋಭ ನ ರಾಗ ನ ದ್ರೋಹಾ ॥**
**ಜಿನ್ಹ ಕೇಂ ಕಪಟ ದಂಭ ನಹಿಂ ಮಾಯಾ । ತಿನ್ಹ ಕೇಂ ಹೃದಯ ಬಸಹು ರಘುರಾಯಾ ॥ ೧ ॥**
**ಸಬ ಕೇ ಪ್ರಿಯ ಸಬ ಕೇ ಹಿತಕಾರೀ । ದುಖ ಸುಖ ಸರಿಸ ಪ್ರಸಂಸಾ ಗಾರೀ ॥**
**ಕಹಹಿ ಸತ್ಯ ಪ್ರಿಯ ಬಚನ ಬಿಚಾರೀ । ಜಾಗತ ಸೋವತ ಸರನ ತುಮ್ಹಾರೀ ॥ ೨ ॥**
**ತುಮ್ಹಹಿ ಛಾಡಿ ಗತಿ ದೂಸರಿ ನಾಹೀಂ । ರಾಮ ಬಸಹು ತಿನ್ಹ ಕೇ ಮನ ಮಾಹೀಂ ॥**
**ಜನನೀ ಸಮ ಜಾನಹಿಂ ಪರನಾರೀ । ಧನು ಪರಾವ ಬಿಷ ತೇಂ ಬಿಷ ಭಾರೀ ॥ ೩ ॥**
**ಜೇ ಹರಷಹಿಂ ಪರ ಸಂಪತಿ ದೇಖೀ । ದುಖಿತ ಹೋಹಿಂ ಪರ ಬಿಪತಿ ಬಿಸೇಷೀ ॥**
**ಜಿನ್ಹಹಿ ರಾಮ ತುಮ್ಹ ಪ್ರಾನಪಿಆರೇ । ತಿನ್ಹ ಕೇ ಮನ ಸುಭ ಸದನ ತುಮ್ಹಾರೇ ॥ ೪ ॥**

ಓ ರಘುರಾಮಾ! ಯಾರಲ್ಲಿ ಕಾಮ, ಕ್ರೋಧ,ಮದ, ಅಭಿಮಾನ, ಮೋಹ, ಲೋಭ, ಕ್ಷೋಭಗಳಿಲ್ಲವೋ, ರಾಗ-ದ್ವೇಷಗಳಿಲ್ಲವೋ, ಕಪಟ, ಜಂಭ, ಮಾಯೆಯಿಂದ ದೂರವಿರುವರೋ, ಅವರ ಹೃದಯದಲ್ಲಿನೀನು ನೆಲೆಸು. ಯಾರು ಎಲ್ಲರಿಗೆ ಪ್ರಿಯರೋ, ಎಲ್ಲರಿಗೆ ಹಿತಕಾರಿಗಳೋ, ಸುಖ-ದುಃಖ, ನಿಂದಾ-ಸ್ತುತಿಗಳು ಸಮಾನವಾಗಿರುವವೋ, ಯೋಚಿಸಿ ಸತ್ಯವನ್ನೂ, ಪ್ರಿಯವನ್ನೂನುಡಿಯುವರೋ, ಜಾಗ್ರತಿ-ಸುಪ್ತಾವಸ್ಥೆಯಲ್ಲಿಯೂ ನಿನ್ನಲ್ಲಿಶರಣಾಗುವರೋ, ಯಾರಿಗೆ ನಿನ್ನ ಬಿಟ್ಟು ಬೇರೆಗತಿಯೇ ಇಲ್ಲವೋ, ಪರನಾರಿಯನ್ನು ತಾಯಿಯೆಂದು ಕಾಣುವರೋ, ಪರರ ಧನವನ್ನು ವಿಷಕ್ಕಿಂತ ಭಯಂಕರವೆಂದು ಬಗೆಯುವರೋ, ಯಾರು ಬೇರೆಯವರ ಸಂಪತ್ತನ್ನು ಕಂಡು ಹರ್ಷಿತರಾಗುವರೋ, ಬೇರೆಯವರ ವಿಪತ್ತನ್ನು ನೋಡಿ ವಿಶೇಷವಾಗಿ ದುಃಖಿತರಾಗುವರೋ, ರಾಮಾ! ಯಾರಿಗೆ ನೀನು ಪ್ರಾಣಗಳಿಗಿಂತಲೂ ಪ್ರಿಯನಾಗಿರುವೆಯೋ ಅಂತಹವರ ಹೃದಯವು ನಿನಗೆ ವಾಸಿಸಲು ಯೋಗ್ಯಭವನವಾಗಿದೆ. (ಚೌ/೧-೪)

**ದೋ – ಸ್ವಾಮಿ ಸಖಾ ಪಿತು ಮಾತು ಗುರ ಜಿನ್ಹ ಕೇ ಸಬ ತುಮ್ಹ ತಾತ ।**
**ಮನ ಮಂದಿರ ತಿನ್ಹ ಕೇಂ ಬಸಹು ಸೀಯ ಸಹಿತ ದೋಉ ಭ್ರಾತ ॥ ೧೩೦ ॥**

ಪ್ರಭೂ! ಯಾರಿಗೆ ಸ್ವಾಮಿ, ಸ್ನೇಹಿತ, ತಂದೆ, ತಾಯಿ, ಗುರು ಹೀಗೆ ಎಲ್ಲವೂ ನೀನೇ ಆಗಿರುವೆಯೋ ಅಂತಹವರ ಮನ ಮಂದಿರದಲ್ಲಿ ಸೀತಾಸಹಿತ ನೀವಿಬ್ಬರೂ ಸೋದರರು ವಾಸವಾಗಿರಿ. (ದೋ/೧೩೦)

**ಚೌ – ಅವಗುನ ತಜಿ ಸಬ ಕೇ ಗುನ ಗಹಹೀಂ । ಬಿಪ್ರ ಧೇನು ಹಿತ ಸಂಕಟ ಸಹಹೀಂ ॥**
**ನೀತಿ ನಿಪುನ ಜಿನ್ಹ ಕಇ ಜಗ ಲೀಕಾ । ಘರ ತುಮ್ಹಾರ ತಿನ್ಹ ಕರ ಮನು ನೀಕಾ ॥ ೧ ॥**
**ಗುನ ತುಮ್ಹಾರ ಸಮುಝಇ ನಿಜ ದೋಸಾ । ಜೆಹಿ ಸಬ ಭಾಂತಿ ತುಮ್ಹಾರ ಭರೋಸಾ ॥**
**ರಾಮ ಭಗತ ಪ್ರಿಯ ಲಾಗಹಿಂ ಜೇಹಿ । ತೆಹಿ ಉರ ಬಸಹು ಸಹಿತ ಬೈದೇಹೀ ॥ ೨ ॥**
**ಜಾತಿ ಪಾಂತಿ ಧನು ಧರಮು ಬಡಾಈ । ಪ್ರಿಯ ಪರಿವಾರ ಸದನ ಸುಖದಾಈ ॥**
**ಸಬ ತಜಿ ತುಮ್ಹಹಿ ರಹಇ ಉರ ಲಾಈ । ತೆಹಿ ಕೇ ಹೃದಯ ರಹಹು ರಘುರಾಈ ॥ ೩ ॥**
**ಸರಗು ನರಕು ಅಪಬರಗು ಸಮಾನಾ । ಜಹಂ ತಹಂ ದೇಖ ಧರೇಂ ಧನು ಬಾನಾ ॥**
**ಕರಮ ಬಚನ ಮನ ರಾಉರ ಚೇರಾ । ರಾಮ ಕರಹು ತೆಹಿ ಕೇಂ ಉರ ಡೇರಾ ॥ ೪ ॥**

ಯಾರು ಅವಗುಣಗಳನ್ನು ಬಿಟ್ಟು, ಎಲ್ಲರ ಸದ್ಗುಣಗಳನ್ನು ಗ್ರಹಿಸುವರೋ, ಗೋ-ಬ್ರಾಹ್ಮಣರಿಗಾಗಿ ಆಪತ್ತನ್ನು ಸಹಿಸುವರೋ, ನೀತಿ ನೈಪುಣ್ಯಗಳ ಮೂಲಕ ಜಗತ್ತಿನಲ್ಲಿನಿಯಮ ನಿಬಂಧನೆಗಳನ್ನು ಪಾಲಿಸುವರೋ, ಅವರ ಸುಂದರ ಮನಸ್ಸು ನಿನಗೆ ಮನೆಯಾಗಿದೆ. ಯಾರು ಗುಣಗಳನ್ನು ನಿನ್ನವು ಹಾಗೂ ದೋಷಗಳನ್ನು ತನ್ನವು ಎಂದು ತಿಳಿಯುತ್ತಾರೋ, ಎಲ್ಲ ವಿಧದಿಂದ ನಿನ್ನ ಭರವಸೆಯನ್ನೇ ಇರಿಸಿಕೊಂಡಿರುವರೋ, ರಾಮಭಕ್ತರು ಯಾರಿಗೆ ಪ್ರಿಯರಾಗಿರುವರೋ, ಅವರ ಹೃದಯದಲ್ಲಿ ಸೀತೆಯೊಂದಿಗೆ ವಾಸಿಸು. ತಮ್ಮ ಜಾತಿಯನ್ನೂ, ಬಂಧುಗಳನ್ನೂ, ಸಂಪತ್ತನ್ನೂ, ಲೌಕಿಕವಾದ ಸರ್ವಧರ್ಮಗಳನ್ನೂ, ಕೀರ್ತಿ-ಪ್ರತಿಷ್ಠೆಯನ್ನೂ, ಪ್ರಿಯಪರಿವಾರವನ್ನೂ, ಸುಖ-ಸಂತೋಷಕೊಡುವ ಮನೆಯನ್ನೂ, ತೊರೆದು, ಕೇವಲ ನಿನ್ನನ್ನೇ ಹೃದಯದಲ್ಲಿ ಇರಿಸಿಕೊಳ್ಳುವವರ ಮನಸ್ಸೇ ನಿನಗೆ ವಾಸಸ್ಥಾನವು. ಧನುರ್ಬಾಣಧಾರಿಯಾದ ನಿನ್ನನ್ನು ಸರ್ವತ್ರ ದರ್ಶಿಸುವವರು, ಸ್ವರ್ಗ, ನರಕ, ಮೋಕ್ಷ ಇವುಗಳನ್ನು ಸಮಾನವೆಂದು ತಿಳಿಯುವವರು, ಮನೋವಾಕ್ಕಾಯ ಕರ್ಮಗಳಿಂದ ನಿನಗೆ ದಾಸರಾದವರು ಪರಮ ಭಕ್ತರು. ಅಂತಹವರ ಹೃದಯದಲ್ಲಿ ವಾಸಿಸುವವನಾಗು. (ಚೌ/೧-೪)

**ದೋ – ಜಾಹಿ ನ ಚಾಹಿಅ ಕಬಹುಂ ಕಛು ತುಮ್ಹ ಸನ ಸಹಜ ಸನೇಹು ।**
**ಬಸಹು ನಿರಂತರ ತಾಸು ಮನ ಸೋ ರಾಉರ ನಿಜ ಗೇಹು ॥ ೧೩೧ ॥**

ನಿನ್ನ ಮೇಲೆ ಸಹಜ ಪ್ರೇಮ ಉಂಟಾಗಿ, ಬೇರೇನನ್ನೂ ಅಪೇಕ್ಷಿಸದೆ ಇರುವವರ ಮನಸ್ಸಿನಲ್ಲಿ ನೀನು ನಿರಂತರ ನಿವಾಸಮಾಡು. ಅದೇ ನಿನ್ನ ನಿಜವಾದ ಮನೆಯಾಗಿದೆ. (ದೋ/೧೩೧)

**ಚೌ – ಏಹಿ ಬಿಧಿ ಮುನಿಬರ ಭವನ ದೆಖಾಏ । ಬಚನ ಸಪ್ರೇಮ ರಾಮ ಮನ ಭಾಏ ॥**
**ಕಹ ಮುನಿ ಸುನಹು ಭಾನುಕುಲನಾಯಕ । ಆಶ್ರಮ ಕಹಉಁ ಸಮಯ ಸುಖದಾಯಕ ॥ ೧ ॥**
**ಚಿತ್ರಕೂಟ ಗಿರಿ ಕರಹು ನಿವಾಸೂ । ತಹಂ ತುಮ್ಹಾರ ಸಬ ಭಾಂತಿ ಸುಪಾಸೂ ॥**
**ಸೈಲು ಸುಹಾವನ ಕಾನನ ಚಾರೂ । ಕರಿ ಕೇಹರಿ ಮೃಗ ಬಿಹಗ ಬಿಹಾರೂ ॥ ೨ ॥**

ನದೀ ಪುನೀತ ಪುರಾನ ಬಖಾನೀ। ಅತ್ರಿಪ್ರಿಯಾ ನಿಜ ತಪಬಲ ಆನೀ॥
ಸುರಸರಿ ಧಾರ ನಾಉ ಮಂದಾಕಿನಿ। ಜೋ ಸಬ ಪಾತಕ ಪೋತಕ ಡಾಕಿನಿ॥ ೩ ॥
ಅತ್ರಿ ಆದಿ ಮುನಿಬರ ಬಹು ಬಸಹೀಂ। ಕರಹೀಂ ಜೋಗ ಜಪ ತಪ ತನ ಕಸಹೀಂ॥
ಚಲಹು ಸಫಲ ಶ್ರಮ ಸಬ ಕರ ಕರಹೂ। ರಾಮ ದೇಹು ಗೌರವ ಗಿರಿಬರಹೂ ॥ ೪ ॥

ಈ ವಿಧವಾಗಿ ಮುನಿಶ್ರೇಷ್ಠರಾದ ವಾಲ್ಮೀಕಿಗಳು ಶ್ರೀರಾಮಚಂದ್ರನಿಗೆ ನಿವಾಸ ಸ್ಥಾನವನ್ನು ತೋರಿಸಿದರು. ಅವರ ಪ್ರೇಮಪೂರ್ಣವಾದ ವಚನಗಳನ್ನು ಕೇಳಿ ರಾಮನ ಮನಸ್ಸಿಗೆ ಹಾಯೆನಿಸಿತು. ಮತ್ತೆ ಮುನಿಗಳು ನುಡಿದರು – ಎಲೈ ಸೂರ್ಯಕುಲತಿಲಕಾ! ನಿನಗೆ ಒಂದು ಸುಖಪ್ರದವಾದ ನಿವಾಸಸ್ಥಾನವನ್ನು ಹೇಳುತ್ತೇನೆ. ನೀನು ಚಿತ್ರಕೂಟ ಪರ್ವತದಲ್ಲಿ ವಾಸಮಾಡು. ಅಲ್ಲಿ ನಿಮಗೆ ಎಲ್ಲ ವಿಧವಾದ ಅನುಕೂಲಗಳಿವೆ. ಮನೋಹರವಾದ ಪರ್ವತ, ಸುಂದರವಾದ ವನಗಳು ಇವೆ. ಅದು ಕರಿ, ಕೇಸರಿ, ಹರಿಣ ಹಾಗೂ ವಿಹಗಗಳ ವಿಹಾರಸ್ಥಳವಾಗಿದೆ. ಅತ್ರಿ ಮಹರ್ಷಿಪತ್ನಿಯಾದ ಅನಸೂಯಾದೇವಿಯು ತನ್ನ ತಪಃಪ್ರಭಾವದಿಂದ ತಂದಿರುವ ಪವಿತ್ರ ಮಂದಾಕಿನಿ ನದಿಯು ಅಲ್ಲಿದೆ. ಅದು ಪುರಾಣ ಪ್ರಸಿದ್ಧವಾಗಿದೆ. ಅದು ಗಂಗೆಯ ಒಂದು ಧಾರೆಯಾಗಿದೆ. ಅದು ಎಲ್ಲ ರೀತಿಯ ಪಾತಕಶಿಶುಗಳನ್ನು ತಿನ್ನುವ ಡಾಕಿನಿಯು. ಅಲ್ಲೇ ಅತ್ರಿಯೇ ಮೊದಲಾದ ಮುನಿಗಳು ವಾಸಿಸುತ್ತಾರೆ. ಅವರು ಯೋಗ, ಜಪ, ತಪಗಳಿಂದ ಶರೀರವನ್ನು ಸವೆಸುತ್ತಿದ್ದಾರೆ. ಶ್ರೀರಾಮಾ! ಅಲ್ಲಿಗೆ ಹೋಗಿ ಅವರ ತಪಸ್ಸನ್ನು ಸಫಲಗೊಳಿಸಿರಿ. ಪರ್ವತಶ್ರೇಷ್ಠವಾದ ಚಿತ್ರಕೂಟಕ್ಕೂ ಗೌರವ ನೀಡಿ. (ಚೌ/೧-೪)

ದೋ – ಚಿತ್ರಕೂಟ ಮಹಿಮಾ ಅಮಿತ ಕಹೀ ಮಹಾಮುನಿ ಗಾಇ।
ಆಇ ನಹಾಏ ಸರಿತ ಬರ ಸಿಯ ಸಮೇತ ದೊಉ ಭಾಇ ॥ ೧೩೨ ॥

ಮಹಾಮುನಿ ವಾಲ್ಮೀಕಿಗಳು ಚಿತ್ರಕೂಟದ ಅಪರಿಮಿತ ಮಹಿಮೆಯನ್ನು ಬಣ್ಣಿಸಿ ಹೇಳಿದರು. ಇಬ್ಬರೂ ಸೋದರರು ಸೀತೆಯೊಂದಿಗೆ ಆ ಪರ್ವತವನ್ನು ಸೇರಿ, ಮಂದಾಕಿನಿಯ ಪವಿತ್ರಜಲದಲ್ಲಿ ಸ್ನಾನಮಾಡಿದರು. (ದೋ/೧೩೨)

## ಚಿತ್ರಕೂಟ ನಿವಾಸ

ಚೌ – ರಘುಬರ ಕಹೆಉ ಲಖನ ಭಲ ಘಾಟೂ। ಕರಹು ಕತಹುँ ಅಬ ಠಾಹರ ಠಾಟೂ॥
ಲಖನ ದೀಖ ಪಯ ಉತರ ಕರಾರಾ। ಚಹುँ ದಿಸಿ ಫಿರೆಉ ಧನುಷ ಜಿಮಿ ನಾರಾ॥ ೧ ॥
ನದೀ ಪನಚ ಸರ ಸಮ ದಮ ದಾನಾ। ಸಕಲ ಕಲುಷ ಕಲಿ ಸಾಉಜ ನಾನಾ ॥
ಚಿತ್ರಕೂಟ ಜನು ಅಚಲ ಅಹೇರೀ। ಚುಕಇ ನ ಘಾತ ಮಾರ ಮುಠಭೇರೀ॥ ೨ ॥
ಅಸ ಕಹಿ ಲಖನ ಠಾಉँ ದೆಖರಾವಾ। ಥಲು ಬಿಲೋಕಿ ರಘುಬರ ಸುಖು ಪಾವಾ॥
ರಮೆಉ ರಾಮ ಮನು ದೇವನ್ಹ ಜಾನಾ। ಚಲೇ ಸಹಿತ ಸುರ ಥಪತಿ ಪ್ರಧಾನಾ॥ ೩ ॥
ಕೋಲ ಕಿರಾತ ಬೇಷ ಸಬ ಆಏ। ರಚೇ ಪರನ ತೃನ ಸದನ ಸುಹಾಏ॥
ಬರನಿ ನ ಜಾಹಿँ ಮಂಜು ದುಇ ಸಾಲಾ। ಏಕ ಲಲಿತ ಲಘು ಏಕ ಬಿಸಾಲಾ॥ ೪ ॥

ಅನಂತರ ರಘುನಾಥನು ಹೇಳಿದನು – ''ಲಕ್ಷ್ಮಣಾ! ಈ ನದೀತೀರವು ತುಂಬಾ ಚೆಲುವಾಗಿದೆ. ಈಗ ಇಲ್ಲೇ ಎಲ್ಲಾದರೂ ತಂಗುವ ವ್ಯವಸ್ಥೆಮಾಡು.'' ಆಗ ಲಕ್ಷ್ಮಣನು ಪಯಸ್ವಿನೀ (ಮಂದಾಕಿನೀ) ನದಿಯ ಉತ್ತರದಲ್ಲಿ ಎತ್ತರದ ದಡವನ್ನು ನೋಡಿ ಹೇಳಿದನು – ಇದರ ಸುತ್ತಲೂ ಬಿಲ್ಲಿನಂತೆ ಒಂದು ನಾಲೆ ಹಬ್ಬಿಕೊಂಡಿದೆ. ನದಿಯೇ ಆ ಬಿಲ್ಲಿನ ಹುರಿ. ಶಮ, ದಮ, ದಾನಗಳೇ ಅದರ ಬಾಣಗಳು. ಕಲಿಯುಗದ ಪಾಪಗಳೇ ಅದರ ಗುರಿಯಾದ ಹಿಂಸ್ರಪಶುಗಳು. ಚಿತ್ರಕೂಟವೇ ಒಂದು ಅಚಲ ಬೇಟೆಗಾರ. ಈ ಬೇಟೆಗಾರನ ಗುರಿಯು ಎಂದೂ ತಪ್ಪದು. ಅವನು ಇದಿರಿನಿಂದಲೇ ಬೇಟೆಯಾಡುವನು. ಹೀಗೆ ಹೇಳಿ ಲಕ್ಷ್ಮಣನು ಸ್ಥಾನವನ್ನು ತೋರಿದನು. ಆ ತಾಣವನ್ನು ಕಂಡು ರಘುವರನಿಗೆ ಸುಖವುಂಟಾಯಿತು. ಈ ಸ್ಥಾನವು ಶ್ರೀರಾಮನ ಮನಸ್ಸಿಗೆ ಹಿಡಿಸಿದೆ ಎಂದು ತಿಳಿದ ದೇವತೆಗಳು. ತಮ್ಮ ಪ್ರಧಾನ ಸ್ಥಪತಿಯಾದ ವಿಶ್ವಕರ್ಮನನ್ನು ಜೊತೆಯಲ್ಲಿ ಕರೆತಂದರು. ಆಗ ಆ ದೇವತೆಗಳೆಲ್ಲರೂ ಕೋಲ, ಭಿಲ್ಲರ ವೇಷದಲ್ಲಿ ಬಂದು, ತೃಣಪರ್ಣಗಳಿಂದ ಸುಂದರವಾದ ಸದನವನ್ನು ನಿರ್ಮಿಸಿದರು. ವರ್ಣನಾತೀತವೂ, ಸುಂದರವೂ ಆದ ಎರಡು ಕುಟೀರಗಳನ್ನು ಕಟ್ಟಿದರು. ಅದರಲ್ಲಿ ಒಂದು ದೊಡ್ಡದು, ಇನ್ನೊಂದು ಚಿಕ್ಕದು. (ಚೌ/೧-೪)

ದೋ – ಲಖನ ಜಾನಕೀ ಸಹಿತ ಪ್ರಭು ರಾಜತ ರುಚಿರ ನಿಕೇತ।
ಸೋಹ ಮದನು ಮುನಿ ಬೇಷ ಜನು ರತಿ ರಿತುರಾಜ ಸಮೇತ॥ ೧೩೩ ॥

ಆ ಸುಂದರವಾದ ಪರ್ಣಕುಟೀರದಲ್ಲಿ ಶ್ರೀರಾಮಚಂದ್ರನು ಸೀತಾ ಲಕ್ಷ್ಮಣರೊಡಗೂಡಿ, ಮದನನೇ ಮುನಿವೇಷ ಧರಿಸಿ, ತನ್ನ ಪತ್ನೀ ರತಿದೇವಿಯೊಡಗೂಡಿ, ಸ್ನೇಹಿತನಾದ ವಸಂತನೊಂದಿಗೆ ಇರುವನೋ! ಎಂಬಂತೆ ಶೋಭಾಯಮಾನನಾದನು. (ದೋ/೧೩೩)

## ಮಾಸಪಾರಾಯಣದ ಹದಿನೇಳನೆಯ ವಿಶ್ರಾಮ

**ಚೌ – ಅಮರ ನಾಗ ಕಿನ್ನರ ದಿಸಿಪಾಲಾ । ಚಿತ್ರಕೂಟ ಆಏ ತೇಹಿ ಕಾಲಾ ॥**
**ರಾಮ ಪ್ರನಾಮು ಕೀನ್ಹ ಸಬ ಕಾಹೂ । ಮುದಿತ ದೇವ ಲಹಿ ಲೋಚನ ಲಾಹೂ ॥ ೧ ॥**
**ಬರಷಿ ಸುಮನ ಕಹ ದೇವ ಸಮಾಜೂ । ನಾಥ ಸನಾಥ ಭಏ ಹಮ ಆಜೂ ॥**
**ಕರಿ ಬಿನತೀ ದುಖ ದುಸಹ ಸುನಾಏ । ಹರಷಿತ ನಿಜ ನಿಜ ಸದನ ಸಿಧಾಏ ॥ ೨ ॥**
**ಚಿತ್ರಕೂಟ ರಘುನಂದನು ಛಾಏ । ಸಮಾಚಾರ ಸುನಿ ಸುನಿ ಮುನಿ ಆಏ ॥**
**ಆವತ ದೇಖಿ ಮುದಿತ ಮುನಿಬೃಂದಾ । ಕೀನ್ಹ ದಂಡವತ ರಘುಕುಲ ಚಂದಾ ॥ ೩ ॥**
**ಮುನಿ ರಘುಬರಹಿ ಲಾಇ ಉರ ಲೇಹೀಂ । ಸುಫಲ ಹೋನ ಹಿತ ಆಸಿಷ ದೇಹೀಂ ॥**
**ಸಿಯ ಸೌಮಿತ್ರಿ ರಾಮ ಛಬಿ ದೇಖಹಿಂ । ಸಾಧನ ಸಕಲ ಸಫಲ ಕರಿ ಲೇಖಹಿಂ ॥ ೪ ॥**

ಆಗ ಒಂದುದಿನ ದೇವತೆಗಳು, ನಾಗರು, ಕಿನ್ನರರು, ದಿಕ್ಪಾಲಕರು ಚಿತ್ರಕೂಟಕ್ಕೆ ಬಂದರು. ಶ್ರೀರಾಮನು ಅವರೆಲ್ಲರನ್ನು ವಂದಿಸಿದನು. ದೇವತೆಗಳು ತಮ್ಮ ನೇತ್ರಸಾಫಲ್ಯವನ್ನು ಹೊಂದಿದರು. ಹೂಮಳೆಗರೆದು ದೇವಸಮಾಜವು ಹೇಳಿತು – 'ನಾಥ! ಇಂದು ನಿನ್ನ ದರ್ಶನದಿಂದ ಸನಾಥರಾದೆವು. ಅನಂತರ ಅವರು ತಮ್ಮ ಅಳಲನ್ನು ತೋಡಿಕೊಂಡರು. ದುಃಖನಿವಾರಣೆಯ ಆಶ್ವಾಸನೆಯನ್ನು ಪಡೆದು, ಹರ್ಷದಿಂದ ತಮ್ಮ-ತಮ್ಮ ಸ್ಥಾನಗಳಿಗೆ ತೆರಳಿದರು.

ರಘುನಂದನನು ಚಿತ್ರಕೂಟದಲ್ಲಿ ಬಂದು ನೆಲೆಸಿರುವನು ಎಂಬ ವಾರ್ತೆಯನ್ನು ಕೇಳಿ, ಅನೇಕ ಜನ ಮುನಿಗಳು ಅಲ್ಲಿಗೆ ಬಂದರು. ರಘುವಂಶ ಚಂದ್ರಮನಾದ ಶ್ರೀರಾಮನು ಸಂತಸಗೊಂಡು ಆ ಮುನಿಗಳಿಗೆ ದಂಡವತ್ ನಮಸ್ಕಾರ ಮಾಡಿದನು. ಮುನಿಗಳು ರಾಮನನ್ನು ಅಪ್ಪಿಕೊಂಡು 'ಸಫಲನಾಗು' ಎಂದು ಆಶೀರ್ವದಿಸಿದರು. ಆವರು ಸೀತೆ, ಸೌಮಿತ್ರಿ ಹಾಗೂ ಶ್ರೀರಾಮನ ಚೆಲುವನ್ನು ಕಂಡು ಅವರು ತಮ್ಮ ಸಕಲ ಸಾಧನೆಗಳು ಸಫಲವಾದುವೆಂದು ಅಂದುಕೊಂಡರು. (ಚೌ/೧-೪)

**ದೋ – ಜಥಾಜೋಗ ಸನಮಾನಿ ಪ್ರಭು ಬಿದಾ ಕಿಏ ಮುನಿಬೃಂದ।**
**ಕರಹಿಂ ಜೋಗ ಜಪ ಜಾಗ ತಪ ನಿಜ ಆಶ್ರಮನ್ಹಿ ಸುಛಂದ ॥ ೧೩೪ ॥**

ಪ್ರಭು ರಾಮಚಂದ್ರನು ಅವರನ್ನು ಯಥಾಯೋಗ್ಯವಾಗಿ ಸತ್ಕರಿಸಿ ಬೀಳ್ಕೊಟ್ಟನು. ಶ್ರೀರಾಮನು ಬಂದುದರಿಂದ ಅವರೆಲ್ಲರೂ ತಮ್ಮ-ತಮ್ಮ ಆಶ್ರಮಗಳಲ್ಲಿ ಈಗ ನಿಶ್ಚಿಂತರಾಗಿ ಯೋಗ, ಜಪ-ತಪ, ಯಜ್ಞ-ಯಾಗಾದಿಗಳನ್ನು ಮಾಡತೊಡಗಿದರು. (ದೋ/೧೩೪)

**ಚೌ – ಯಹ ಸುಧಿ ಕೋಲ ಕಿರಾತನ್ಹ ಪಾಈ । ಹರಷೇ ಜನು ನವ ನಿಧಿ ಘರ ಆಈ ॥**
**ಕಂದ ಮೂಲ ಫಲ ಭರಿ ಭರಿ ದೋನಾ । ಚಲೇ ರಂಕ ಜನು ಲೂಟನ ಸೋನಾ ॥ ೧ ॥**
**ತಿನ್ಹ ಮಹಂ ಜಿನ್ಹ ದೇಖೇ ದೋಉ ಭ್ರಾತಾ । ಅಪರ ತಿನ್ಹಹಿ ಪೂಂಛಹಿಂ ಮಗು ಜಾತಾ ॥**
**ಕಹತ ಸುನತ ರಘುಬೀರ ನಿಕಾಈ । ಆಇ ಸಬನ್ಹಿ ದೇಖೇ ರಘುರಾಈ ॥ ೨ ॥**
**ಕರಹಿಂ ಜೊಹಾರು ಭೇಂಟ ಧರಿ ಆಗೇ । ಪ್ರಭುಹಿ ಬಿಲೋಕಹಿಂ ಅತಿ ಅನುರಾಗೇ ॥**
**ಚಿತ್ರ ಲಿಖೇ ಜನು ಜಹಂ ತಹಂ ಠಾಢೇ । ಪುಲಕ ಸರೀರ ನಯನ ಜಲ ಬಾಢೇ ॥ ೩ ॥**
**ರಾಮ ಸನೇಹ ಮಗನ ಸಬ ಜಾನೇ । ಕಹಿ ಪ್ರಿಯ ಬಚನ ಸಕಲ ಸನಮಾನೇ ॥**
**ಪ್ರಭುಹಿ ಜೊಹಾರಿ ಬಹೋರಿ ಬಹೋರಿ । ಬಚನ ಬಿನೀತ ಕಹಹಿಂ ಕರ ಜೋರೀ ॥ ೪ ॥**

ಕಾಡಿನಲ್ಲಿ ವಾಸಿಸುವ ಕೋಲರೂ, ಭಿಲ್ಲರೂ ಶ್ರೀರಾಮನ ಆಗಮನದ ವಾರ್ತೆಯನ್ನು ಕೇಳಿ, ಅವರಿಗೆ ಮನೆಬಾಗಿಲಿಗೆ ನವನಿಧಿಗಳು ಬಂದಷ್ಟು ಹರ್ಷವಾಯಿತು. ಅವರು ದೊನ್ನೆಗಳಲ್ಲಿ ಕಂದ, ಮೂಲ, ಫಲಗಳನ್ನು ತುಂಬಿಕೊಂಡು ಅತ್ಯುತ್ಸಾಹದಿಂದ ತಿರುಕನು ಚಿನ್ನವನ್ನು ದೋಚಿಕೊಳ್ಳಲು ಹೊರಡುವಂತೆ ಹೊರಟರು. ಅವರಲ್ಲಿ ಮೊದಲು ರಾಮಲಕ್ಷ್ಮಣರಿಬ್ಬರನ್ನೂ ಕಂಡವರನ್ನು ಬೇರೆ ಜನರು ಅವರ ಬಗ್ಗೆ ಕೇಳುತ್ತಾ ದಾರಿ ಸಾಗಿದರು. ಈ ಪ್ರಕಾರ ರಘುವರನ ಸೌಂದರ್ಯವನ್ನು ವರ್ಣಿಸುತ್ತಾ,

ಶ್ರವಣಿಸುತ್ತಾ ಅವರೆಲ್ಲರೂ ಬಂದು ರಘುನಾಥನ ದರ್ಶನ ಮಾಡಿದರು. ಅವರು ತಂದ ಕಾಣಿಕೆಗಳನ್ನು ಮುಂದಿರಿಸಿ ನಮಸ್ಕರಿಸುತ್ತಾ, ಅತ್ಯಂತ ಅನುರಾಗದಿಂದ ಶ್ರೀರಾಮನನ್ನು ನೋಡತೊಡಗಿದರು. ಅವರು ಆ ದಿವ್ಯಸೌಂದರ್ಯವನ್ನು ಕಂಡು ಮುಗ್ಧರಾಗಿ ಅಲ್ಲಲ್ಲೇ ಚಿತ್ರಬರೆದಂತೆ ನಿಶ್ಚಲರಾಗಿ ನಿಂತುಬಿಟ್ಟರು. ಶರೀರಗಳು ಪುಲಕಿತಗೊಂಡವು. ಕಣ್ಣುಗಳಲ್ಲಿ ಪ್ರೇಮಾಂಬುಧಾರೆ ಹರಿಯುತ್ತಿತ್ತು. ಶ್ರೀರಾಮನು ತನ್ನ ಇದಿರಲ್ಲಿ ಪ್ರೇಮಮಗ್ನರಾಗಿರುವ ಅವರೆಲ್ಲರನ್ನೂ ಕಂಡು, ಪ್ರಿಯವಚನಗಳಿಂದ ಗೌರವಿಸಿದನು. ಅವರು ಶ್ರೀರಾಮಚಂದ್ರನಿಗೆ ಪದೇ-ಪದೇ ನಮಸ್ಕರಿಸುತ್ತಾ, ಕೈಜೋಡಿಸಿಕೊಂಡು ವಿನಯದಿಂದ ವಿನಂತಿಸಿಕೊಂಡರು – (ಚೌ/೧-೪)

**ದೋ – ಅಬ ಹಮ ನಾಥ ಸನಾಥ ಸಬ ಭಏ ದೇಖಿ ಪ್ರಭು ಪಾಯ।**
**ಭಾಗ ಹಮಾರೇಂ ಆಗಮನು ರಾಉರ ಕೋಸಲರಾಯ ॥ ೧೩೫ ॥**

ಒಡೆಯಾ! ಅನಾಥರಾದ ನಾವೆಲ್ಲರೂ ನಿಮ್ಮ ಪಾದದರ್ಶನದಿಂದ ಸನಾಥರಾದೆವು. ಕೋಸಲರಾಯಾ! ನಮ್ಮ ಭಾಗ್ಯದಿಂದಲೇ ತಾವು ಇಲ್ಲಿಗೆ ಬಿಜಯಂಗೈದಿರಿ. (ದೋ/೧೩೫)

**ಚೌ – ಧನ್ಯ ಭೂಮಿ ಬನ ಪಂಥ ಪಹಾರಾ। ಜಹಂ ಜಹಂ ನಾಥ ಪಾಉ ತುಮ್ಹ ಧಾರಾ॥**
**ಧನ್ಯ ಬಿಹಗ ಮೃಗ ಕಾನನಚಾರೀ। ಸಫಲ ಜನಮ ಭಏ ತುಮ್ಹಹಿ ನಿಹಾರೀ॥ ೧ ॥**
**ಹಮ ಸಬ ಧನ್ಯ ಸಹಿತ ಪರಿವಾರಾ। ದೀಖ ದರಸು ಭರಿ ನಯನ ತುಮ್ಹಾರಾ॥**
**ಕೀನ್ಹ ಬಾಸು ಭಲ ಠಾಉಂ ಬಿಚಾರೀ। ಇಹಾಂ ಸಕಲ ರಿತು ರಹಬ ಸುಖಾರೀ ॥ ೨ ॥**
**ಹಮ ಸಬ ಭಾಂತಿ ಕರಬ ಸೇವಕಾಈ। ಕರಿ ಕೇಹರಿ ಅಹಿ ಬಾಘ ಬರಾಈ॥**
**ಬನ ಬೇಹಡ ಗಿರಿ ಕಂದರ ಖೋಹಾ। ಸಬ ಹಮಾರ ಪ್ರಭು ಪಗ ಪಗ ಜೋಹಾ॥ ೩ ॥**
**ತಹಂ ತಹಂ ತುಮ್ಹಹಿ ಅಹೇರ ಖೆಲಾಉಬ। ಸರ ನಿರಝುರ ಜಲಠಾಉಂ ದೆಖಾಉಬ॥**
**ಹಮ ಸೇವಕ ಪರಿವಾರ ಸಮೇತಾ। ನಾಥ ನ ಸಕುಚಬ ಆಯಸು ದೇತಾ ॥ ೪ ॥**

ಸ್ವಾಮಿ! ನೀವು ಪಾದಬೆಳೆಸಿದ ಭೂಮಿ, ವನ, ಮಾರ್ಗ, ಬೆಟ್ಟಗಳು ಧನ್ಯ. ಆ ವನಗಳಲ್ಲಿ ಸಂಚರಿಸುವ ಪಶು-ಪಕ್ಷಿಗಳೂ ಕೂಡ ಧನ್ಯಜೀವಿಗಳು. ಏಕೆಂದರೆ, ನಿಮ್ಮ ದರ್ಶನದಿಂದ ಅವರ ಜನ್ಮವು ಸಫಲವಾಗಿದೆ. ಕಣ್ಣಿಗೆ ಹಬ್ಬದಂತಿರುವ ನಿಮ್ಮನ್ನು ದರ್ಶಿಸಿದ ನಾವೆಲ್ಲರೂ, ನಮ್ಮ ಕುಟುಂಬಿಗಳೂ ಕೂಡ, ಧನ್ಯರು. ತಾವು ತುಂಬಾ ಒಳ್ಳೆಯ ಸ್ಥಾನವನ್ನು ನೋಡಿ ನೆಲಸಿದ್ದೀರಿ. ಇಲ್ಲಿ ಎಲ್ಲ ಋತುಗಳಲ್ಲಿಯೂ ನೀವು ಸುಖವಾಗಿ ಇರಿ. ನಾವೆಲ್ಲರೂ ಎಲ್ಲ ಪ್ರಕಾರದಿಂದ ಆನೆ, ಸಿಂಹ, ಹಾವು, ಹುಲಿ ಇವುಗಳಿಂದ ತಮ್ಮನ್ನು ರಕ್ಷಿಸಿ ತಮಗೆ ಸೇವೆ ಸಲ್ಲಿಸುತ್ತೇವೆ. ಒಡೆಯರೇ! ಈ ನಿಬಿಡವಾದ ಕಾಡಿನ ಬೆಟ್ಟ-ಗುಡ್ಡಗಳು, ಗುಹೆಗಳು, ಕಣಿವೆಗಳು ಒಂದೂಬಿಡದೆ ಎಲ್ಲವೂ ನಮಗೆ ಪರಿಚಿತವುಗಳು. ನಾವು ಅಲ್ಲಲ್ಲಿ ತಮ್ಮನ್ನು ಬೇಟೆಗೆ ಕರೆದುಕೊಂಡು ಹೋಗುತ್ತೇವೆ. ಕೆರೆ-ಕಟ್ಟೆ, ಜಲಪಾತಗಳು ಮೊದಲಾದ ನೀರ್ದಾಣ (ಜಲಾಶಯ)ಗಳನ್ನು ನಿಮಗೆ ತೋರಿಸುತ್ತೇನೆ. ನಾವು ಪರಿವಾರ ಸಹಿತ ನಿಮ್ಮ ಸೇವಕರು. ಪ್ರಭುಗಳೇ! ನಮಗೆ ಅಪ್ಪಣೆಕೊಡಲು ಸಂಕೋಚ ಪಡಬಾರದು. (ಚೌ/೧-೪)

**ದೋ – ಬೇದ ಬಚನ ಮುನಿ ಮನ ಅಗಮ ತೇ ಪ್ರಭು ಕರುನಾ ಐನ।**
**ಬಚನ ಕಿರಾತನ್ಹ ಕೇ ಸುನತ ಜಿಮಿ ಪಿತು ಬಾಲಕ ಬೈನ ॥ ೧೩೬ ॥**

ವೇದವಚನಗಳಿಗೂ, ಮುನಿಗಳ ಮನಸ್ಸಿಗೂ ಅಗಮ್ಯನಾದ, ಕರುಣಾನಿಧಿಯಾದ ಪ್ರಭು ರಾಮಚಂದ್ರನು ಆ ಭಿಲ್ಲರ ಮಾತುಗಳನ್ನು – ತಂದೆಯು ಮಕ್ಕಳ ಮಾತನ್ನು ಆಲಿಸುವಂತೆ ಪ್ರೇಮದಿಂದ ಆಲಿಸಿದನು. (ದೋ/೧೩೬)

**ಚೌ – ರಾಮಹಿ ಕೇವಲ ಪ್ರೇಮು ಪಿಆರಾ। ಜಾನಿ ಲೇಉ ಜೋ ಜಾನನಿಹಾರಾ॥**
**ರಾಮ ಸಕಲ ಬನಚರ ತಬ ತೋಷೇ। ಕಹಿ ಮೃದು ಬಚನ ಪ್ರೇಮ ಪರಿಪೋಷೇ॥ ೧ ॥**
**ಬಿದಾ ಕಿಏ ಸಿರ ನಾಇ ಸಿಧಾಏ। ಪ್ರಭು ಗುನ ಕಹತ ಸುನತ ಘರ ಆಏ॥**
**ಎಹಿ ಬಿಧಿ ಸಿಯ ಸಮೇತ ದೋಉ ಭಾಈ। ಬಸಹಿಂ ಬಿಪಿನ ಸುರ ಮುನಿ ಸುಖದಾಈ ॥ ೨ ॥**
**ಜಬ ತೇಂ ಆಇ ರಹೇ ರಘುನಾಯಕು। ತಬ ತೆಂ ಭಯಉ ಬನು ಮಂಗಲದಾಯಕು॥**
**ಫೂಲಹಿಂ ಫಲಹಿಂ ಬಿಟಪ ಬಿಧಿ ನಾನಾ। ಮಂಜು ಬಲಿತ ಬರ ಬೇಲಿ ಬಿತಾನಾ॥ ೩ ॥**
**ಸುರತರು ಸರಿಸ ಸುಭಾಯಂ ಸುಹಾಏ। ಮನಹುಂ ಬಿಬುಧ ಬನ ಪರಿಹರಿ ಆಏ ॥**
**ಗುಂಜ ಮಂಜುತರ ಮಧುಕರ ಶ್ರೇನೀ। ತ್ರಿಬಿಧ ಬಯಾರಿ ಬಹಇ ಸುಖ ದೇನೀ॥ ೪ ॥**

''ಶ್ರೀರಾಮನು ಭಕ್ತವತ್ಸಲನು. ಅವನು ಭಕ್ತರಿಂದ ಪ್ರೇಮವನ್ನೇ ಬಯಸುತ್ತಾನೆ.'' ಇದನ್ನು ತಿಳಿದವರೇ ನಿಜವಾಗಿ ಅರಿತವರು. ಆಗ ಶ್ರೀರಾಮಚಂದ್ರನು ವನವಾಸಿಗಳಾದ ಕೋಲ-ಭಿಲ್ಲರನ್ನು ಪ್ರೇಮಪೂರ್ವಕ ವಚನಗಳಿಂದ ಸಂತೃಪ್ತಗೊಳಿಸಿ ಬೀಳ್ಕೊಟ್ಟನು. ಅವರೆಲ್ಲರೂ ಶ್ರೀರಾಮನಿಗೆ ತಲೆಬಾಗಿ, ಅವನ ಗುಣಗಳನ್ನು ಕೊಂಡಾಡುತ್ತಾ ಮನೆಗಳಿಗೆ ಮರಳಿದರು. ಈ ವಿಧವಾಗಿ ದೇವತೆಗಳಿಗೆ, ಮುನಿಗಳಿಗೆ ಸುಖವನ್ನು ಕೊಡುವ ಸೋದರರಿಬ್ಬರೂ ಸೀತಾದೇವಿಯೊಂದಿಗೆ ಆ ವನದಲ್ಲಿ ವಾಸಿಸತೊಡಗಿದರು. ಅಂದಿನಿಂದ ಆ ವನವೆಲ್ಲವೂ ಮಂಗಳಪ್ರದವಾಯಿತು. ಮಂಗಳದ ಅಂಗಳವಾಯಿತು. ವಿಧವಿಧವಾದ ಗಿಡಮರಗಳಲ್ಲಿ ಹೂ ಹಣ್ಣುಗಳು ಬಿಟ್ಟವು. ಅವುಗಳಲ್ಲಿ ಹಬ್ಬಿದ ಬಳ್ಳಿಗಳು ಚಪ್ಪರದಂತೆ ಕಾಣುತ್ತಿದ್ದವು. ಅವು ಕಲ್ಪವೃಕ್ಷದಂತೆ ಸಹಜ ಸುಂದರವಾಗಿ, ದೇವಕಾನನವನ್ನು ತೊರೆದು ಬಂದವುಗಳಂತೆ ಇದ್ದವು. ಮಧುಕರ ಶ್ರೇಣಿಯು ಮಂದ್ರ ಮಧುರ ಗುಂಜಾರವ ಮಾಡುತ್ತಿದ್ದವು. ಸುಖಕರವಾದ ಶೀತಲ, ಮಂದ, ಸುಗಂಧಿತ ಗಾಳಿಯು ಬೀಸುತ್ತಿತ್ತು. (ಚೌ/೧-೪)

**ದೋ – ನೀಲಕಂಠ ಕಲಕಂಠ ಸುಕ ಚಾತಕ ಚಕ್ಕ ಚಕೋರ।**
**ಭಾಂತಿ ಭಾಂತಿ ಬೋಲಹಿಂ ಬಿಹಗ ಶ್ರವನ ಸುಖದ ಚಿತ ಚೋರ ॥ ೧೩೭ ॥**

ನವಿಲು, ಕೋಗಿಲೆ, ಗಿಳಿ, ಚಾತಕ, ಚಕ್ರವಾಕ, ಚಕೋರವೇ ಮೊದಲಾದ ವಿವಿಧ ಪಕ್ಷಿಗಳು ಚಿತ್ತಾಕರ್ಷಕವಾಗಿ, ಶ್ರವಣಸುಭಗವಾಗಿ ಉಲಿಯುತ್ತಿದ್ದವು. (ದೋ/೧೩೭)

**ಚೌ – ಕರಿ ಕೇಹರಿ ಕಪಿ ಕೋಲ ಕುರಂಗಾ। ಬಿಗತಬೈರ ಬಿಚರಹಿಂ ಸಬ ಸಂಗಾ॥**
**ಫಿರತ ಅಹೇರ ರಾಮ ಛಬಿ ದೇಖೀ। ಹೋಹಿಂ ಮುದಿತ ಮೃಗಬೃಂದ ಬಿಸೇಷೀ ॥ ೧ ॥**
**ಬಿಬುಧ ಬಿಪಿನ ಜಹಁ ಲಗಿ ಜಗ ಮಾಹೀಂ। ದೇಖಿ ರಾಮ ಬನು ಸಕಲ ಸಿಹಾಹೀಂ॥**
**ಸುರಸರಿ ಸರಸಇ ದಿನಕರ ಕನ್ಯಾ। ಮೇಕಲಸುತಾ ಗೋದಾವರಿ ಧನ್ಯಾ॥ ೨ ॥**
**ಸಬ ಸರ ಸಿಂಧು ನದೀಂ ನದ ನಾನಾ। ಮಂದಾಕಿನಿ ಕರ ಕರಹಿಂ ಬಖಾನಾ ॥**
**ಉದಯ ಅಸ್ತಗಿರಿ ಅರು ಕೈಲಾಸೂ। ಮಂದರ ಮೇರು ಸಕಲ ಸುರಬಾಸೂ॥ ೩ ॥**
**ಸೈಲ ಹಿಮಾಚಲ ಆದಿಕ ಜೇತೇ। ಚಿತ್ರಕೂಟ ಜಸು ಗಾವಹಿಂ ತೇತೇ॥**
**ಬಿಂಧಿ ಮುದಿತ ಮನ ಸುಖು ನ ಸಮಾಈ। ಶ್ರಮ ಬಿನು ಬಿಪುಲ ಬಡಾಈ ಪಾಈ॥ ೪ ॥**

ಆನೆಗಳು, ಸಿಂಹಗಳು, ಕೋತಿಗಳು, ಕಾಡುಹಂದಿಗಳು, ಜಿಂಕೆಗಳು ಮೊದಲಾದ ಪ್ರಾಣಿಗಳು ತಮ್ಮ ಜನ್ಮಜಾತ ವೈರವನ್ನು ಮರೆತು ಒತ್ತಟ್ಟಿಗೆ ವಿಹರಿಸುತ್ತಿದ್ದವು. ವನದಲ್ಲಿ ತಿರುಗಾಡುತ್ತಿದ್ದ ಶ್ರೀರಾಮನ ಸೌಂದರ್ಯವನ್ನು ಕಂಡು ಪ್ರಾಣಿಗಳೆಲ್ಲವೂ ಆನಂದಿತರಾಗುತ್ತಿದ್ದವು. ವಿಶ್ವದಲ್ಲಿರುವ ದೇವಕಾನನಗಳೆಲ್ಲವೂ ಶ್ರೀರಾಮನು ನೆಲೆಸಿದ ವನವನ್ನು ನೋಡಿ ಹೊಗಳುತ್ತಿದ್ದವು. ಗಂಗೆ, ಸೂರ್ಯಪುತ್ರಿ ಯಮುನೆ, ಸರಸ್ವತಿ, ನರ್ಮದೆ, ಗೋದಾವರಿ, ಮೊದಲಾದ ಪುಣ್ಯನದಿಗಳು, ಸಮಸ್ತಸರೋವರಗಳು, ಸಮುದ್ರ, ನದೀನದಗಳು ಮಂದಾಕಿನಿಯನ್ನು ಹೊಗಳುತ್ತವೆ. ಉದಯಾಚಲ, ಅಸ್ತಾಚಲ, ಕೈಲಾಸ, ಮಂದರಾಚಲ, ಸುಮೇರುವೇ ಮೊದಲಾದವುಗಳು, ದೇವತೆಗಳ ನಿವಾಸಸ್ಥಾನಗಳು ಹಾಗೂ ಹಿಮಾಲಯವೇ ಆದಿಪರ್ವತಗಳು ರಾಮನಿವಾಸವಾದ ಚಿತ್ರಕೂಟದ ಯಶಸ್ಸನ್ನು ಕೊಂಡಾಡುತ್ತವೆ. ವಿಂಧ್ಯಾಚಲದ ಹರ್ಷವಂತೂ ಹಿಡಿಸಲೊಲ್ಲದು. ಏಕೆಂದರೆ, ಅದು ಯಾವ ಕಷ್ಟವೂ ಪಡದೆ ಈ ಹಿರಿಮೆಯನ್ನು ಪಡೆಯಿತು. (ಚೌ/೧-೪)

**ದೋ – ಚಿತ್ರಕೂಟ ಕೇ ಬಿಹಗ ಮೃಗ ಬೇಲಿ ಬಿಟಪ ತೃನ ಜಾತಿ।**
**ಪುನ್ಯ ಪುಂಜ ಸಬ ಧನ್ಯ ಅಸ ಕಹಹಿಂ ದೇವ ದಿನ ರಾತಿ ॥ ೧೩೮ ॥**

ಚಿತ್ರಕೂಟದಲ್ಲಿರುವ ಪಶು, ಪಕ್ಷಿಗಳು, ಗಿಡ, ಮರಗಳು, ಬಳ್ಳಿಗಲು, ತೃಣಾಂಕುರಗಳೂ ಇವೆಲ್ಲವೂ ಪುಣ್ಯಪುಂಜಗಳು. ಧನ್ಯರು ಎಂದು ದೇವತೆಗಳು ಹಗಲಿರುಳು ಕೊಂಡಾಡಿದರು. (ದೋ/೧೩೮)

**ಚೌ – ನಯನವಂತ ರಘುಬರಹಿ ಬಿಲೋಕೀ। ಪಾಇ ಜನಮ ಫಲ ಹೋಹಿಂ ಬಿಸೋಕೀ॥**
**ಪರಸಿ ಚರನ ರಜ ಅಚರ ಸುಖಾರೀ। ಭಏ ಪರಮ ಪದ ಕೇ ಅಧಿಕಾರೀ॥ ೧ ॥**
**ಸೋ ಬನು ಸೈಲು ಸುಭಾಯಁ ಸುಹಾವನ। ಮಂಗಲಮಯ ಅತಿ ಪಾವನ ಪಾವನ ॥**
**ಮಹಿಮಾ ಕಹಿಅ ಕವನಿ ಬಿಧಿ ತಾಸೂ। ಸುಖಸಾಗರ ಜಹಁ ಕೀನ್ಹ ನಿವಾಸೂ॥ ೨ ॥**
**ಪಯ ಪಯೋಧಿ ತಜಿ ಅವಧ ಬಿಹಾಈ। ಜಹಁ ಸಿಯ ಲಖನು ರಾಮು ರಹೆ ಆಈ॥**
**ಕಹಿ ನ ಸಕಹಿಂ ಸುಷಮಾ ಜಸಿ ಕಾನನ। ಜೌಂ ಸತ ಸಹಸ ಹೋಹಿಂ ಸಹಸಾನನ॥ ೩ ॥**

**ಸೋ ಮೈಂ ಬರನಿ ಕಹೌಂ ಬಿಧಿ ಕೇಹೀಂ। ಡಾಬರ ಕಮಠ ಕಿ ಮಂದರ ಲೇಹೀಂ॥**
**ಸೇವಹಿಂ ಲಖನು ಕರಮ ಮನ ಬಾನೀ। ಜಾಇ ನ ಸೀಲು ಸನೇಹು ಬಖಾನೀ॥ ೪ ॥**

ಕಣ್ಣಿದ್ದ ಜೀವಿಗಳೆಲ್ಲ ಶ್ರೀರಾಮಚಂದ್ರನನ್ನು ನೋಡಿ ಜನ್ಮಸಾಫಲ್ಯವನ್ನು ಹೊಂದಿ, ಶೋಕರಹಿತವಾದವು. ಅಚರ (ಜಡವಾದ) ಪರ್ವತ, ವೃಕ್ಷ, ಭೂಮಿ, ನದಿ ಮೊದಲಾದವುಗಳು ಭಗವಂತನ ಚರಣರಜದ ಸ್ಪರ್ಶಪಡೆದು ಸುಖಿಗಳಾಗುತ್ತಿದ್ದವು. ಈ ವಿಧವಾಗಿ ಚರಾಚರಗಳೆಲ್ಲವೂ ಪರಮಪದಕ್ಕೆ ಪಾತ್ರವಾಯಿತು. ಆ ವನ, ಪರ್ವತಗಳು ಸಹಜವಾಗಿಯೇ ಸುಂದರವಾಗಿದ್ದು, ಮಂಗಳಪ್ರದವಾಗಿದ್ದವು. ಪವಿತ್ರವಸ್ತುಗಳನ್ನು ಪವಿತ್ರಗೊಳಿಸುವಂತಹ ಸುಖಸಾಗರನಾದ ಶ್ರೀರಾಮನು ನೆಲೆಸಿದ ಬಳಿಕವಂತೂ ಆ ಪ್ರದೇಶದ ಮಹಿಮೆಯನ್ನು ಹೇಗೆ ಕೊಂಡಾಡಬಹುದು? ಲೋಕಕಲ್ಯಾಣಾರ್ಥವಾಗಿ ಕ್ಷೀರಸಮುದ್ರವನ್ನು ತೊರೆದು, ಅಯೋಧ್ಯೆಯನ್ನೂ ಕೂಡ ತೊರೆದು ಶ್ರೀರಾಮನು ಸೀತಾಲಕ್ಷ್ಮಣರೊಂದಿಗೆ ವಾಸವಾಗಿದ್ದ ಆ ವನ ಶೋಭಾವೈಭವವನ್ನು ಸಾವಿರಮುಖವುಳ್ಳ ಲಕ್ಷಮಂದಿ ಆದಿಶೇಷರೂ ಬಣ್ಣಿಸಲಾರರು. ಹೀಗಿರುವಾಗ ನಾನೆಂತು ವರ್ಣಿಸಬಲ್ಲೆನು? ಕ್ಷುದ್ರಕೊಳದಲ್ಲಿ ಇರುವ ಆಮೆಯು ಮಂದರಾಚಲವನ್ನು ಎತ್ತಬಲ್ಲುದೇ? ಲಕ್ಷ್ಮಣನು ಮನೋವಾಕ್ಕಾಯಕರ್ಮಗಳಿಂದ ಶ್ರೀರಾಮನ ಸೇವೆ ಮಾಡುತ್ತಾನೆ. ಆತನ ಶೀಲ, ಸ್ನೇಹಗಳು ವರ್ಣನೆಗೆ ನಿಲುಕುವಂತಹುದಲ್ಲ. (ಚೌ/೧-೪)

**ದೋ – ಛಿನು ಛಿನು ಲಖಿ ಸಿಯ ರಾಮ ಪದ ಜಾನಿ ಆಪು ಪರ ನೇಹು।**
**ಕರತ ನ ಸಪನೇಹುಂ ಲಖನು ಚಿತು ಬಂಧು ಮಾತು ಪಿತು ಗೇಹು॥ ೧೩೯ ॥**

ಸೀತಾರಾಮರ ಪಾದಗಳನ್ನು ಕ್ಷಣ-ಕ್ಷಣಕ್ಕೂ ದರ್ಶಿಸುತ್ತಾ, ತನ್ನ ಮೇಲೆ ಅವರಿಗಿರುವ ವಾತ್ಸಲ್ಯವನ್ನು ಮನಗಂಡು, ಲಕ್ಷ್ಮಣನು ಕನಸಿನಲ್ಲಿಯೂ, ತನ್ನ ಸೋದರರನ್ನು, ತಂದೆ-ತಾಯಿಯರನ್ನು, ಬಂಧುಗಳನ್ನು ನೆನಪು ಮಾಡಿಕೊಳ್ಳುವುದಿಲ್ಲ. (ದೋ/೧೩೯)

**ಚೌ – ರಾಮ ಸಂಗ ಸಿಯ ರಹತಿ ಸುಖಾರೀ। ಪುರ ಪರಿಜನ ಗೃಹ ಸುರತಿ ಬಿಸಾರೀ॥**
**ಛಿನು ಛಿನು ಪಿಯ ಬಿಧು ಬದನು ನಿಹಾರೀ। ಪ್ರಮುದಿತ ಮನಹುಂ ಚಕೋರಕುಮಾರೀ॥ ೧ ॥**
**ನಾಹ ನೇಹು ನಿತ ಬಢತ ಬಿಲೋಕೀ। ಹರಷಿತ ರಹತಿ ದಿವಸ ಜಿಮಿ ಕೋಕೀ॥**
**ಸಿಯ ಮನು ರಾಮ ಚರನ ಅನುರಾಗಾ। ಅವಧ ಸಹಸ ಸಮ ಬನು ಪ್ರಿಯ ಲಾಗಾ॥ ೨ ॥**
**ಪರನಕುಟೀ ಪ್ರಿಯ ಪ್ರಿಯತಮ ಸಂಗಾ। ಪ್ರಿಯ ಪರಿವಾರು ಕುರಂಗ ಬಿಹಂಗಾ॥**
**ಸಾಸು ಸಸುರ ಸಮ ಮುನಿತಿಯ ಮುನಿಬರ। ಅಸನು ಅಮಿಅ ಸಮ ಕಂದ ಮೂಲ ಫರ॥ ೩ ॥**
**ನಾಥ ಸಾಥ ಸಾಂಥರೀ ಸುಹಾಈ। ಮಯನ ಸಯನ ಸಯ ಸಮ ಸುಖದಾಈ॥**
**ಲೋಕಪ ಹೋಹಿಂ ಬಿಲೋಕತ ಜಾಸೂ। ತೆಹಿ ಕಿ ಮೋಹಿ ಸಕ ಬಿಷಯ ಬಿಲಾಸೂ॥ ೪ ॥**

ಶ್ರೀರಾಮಚಂದ್ರನೊಡನೆ ಸೀತಾದೇವಿಯು ಅಯೋಧ್ಯೆಯನ್ನೂ, ಕುಟುಂಬಿಗಳನ್ನೂ, ಮನೆಯನ್ನೂ ಮರೆತು ತುಂಬಾ ಸುಖಿಯಾಗಿದ್ದಳು. ಪ್ರತಿಕ್ಷಣವು ಆಕೆಯು ಚಕೋರವು ಚಂದ್ರನನ್ನು ನೋಡುವಂತೆ, ತನ್ನ ಪತಿಯನ್ನು ನೋಡುತ್ತಾ ಆನಂದಿಸುತ್ತಿದ್ದಳು. ತನ್ನ ಮೇಲೆ ಪತಿಯಪ್ರೇಮವೂ ಕೂಡ ಪ್ರತಿದಿನವೂ ಹೆಚ್ಚುತ್ತಿರುವುದನ್ನು ಕಂಡು ಆಕೆಯು ಹಗಲಿನ ಚಕ್ರವಾಕದಂತೆ ಹಿಗ್ಗುತ್ತಿದ್ದಳು. ಸೀತೆಯ ಮನಸ್ಸು ರಾಮಚರಣದಲ್ಲಿ ಅನುರಕ್ತವಾಗಿತ್ತು. ಆದ್ದರಿಂದ ಅವಳಿಗೆ ಆ ವನವು ಸಾವಿರಾರು ಅಯೋಧ್ಯೆಗಳಂತೆ ಪ್ರಿಯವಾಗಿತ್ತು. ಪ್ರಿಯತಮನೊಂದಿಗಿರುವಾಗ ಆಕೆಗೆ ಪರ್ಣಕುಟಿಯು ಪ್ರಿಯವಾಗಿಯೇ ಕಾಣುತ್ತದೆ. ಮೃಗ-ಪಕ್ಷಿಗಳು ಪ್ರಿಯ ಕುಟುಂಬಿಗಳಂತೆ ಕಾಣುತ್ತಿದ್ದವು. ಮುನಿಪತ್ನಿಯರು ಅತ್ತೆಯವರಂತೆ, ಶ್ರೇಷ್ಠ ಮುನಿಗಳು ಮಾವನವರಂತೆ ಇದ್ದರು. ಕಂದ, ಮೂಲ, ಫಲಗಳ ಆಹಾರವು ಆಕೆಗೆ ಅಮೃತತುಲ್ಯವಾಗಿತ್ತು. ತನ್ನ ಸ್ವಾಮಿಯೊಂದಿಗೆ ಮಲಗುತ್ತಿದ್ದ ಹುಲ್ಲಿನ ಚಾಪೆಯೂ ನೂರಾರು ಮನ್ಮಥರ ಶಯ್ಯೆಯಂತೆ ಸುಖದಾಯಕವಾಗಿತ್ತು. ಸಕಲ ಸಂಪತ್ ವೈಭವಗಳಿಗೆ ಕಾರಣಲಾದ ಲಕ್ಷ್ಮೀ! (ಸೀತಾ)ದೇವಿಯ ದೃಷ್ಟಿಮಾತ್ರದಿಂದ ಸಾಮಾನ್ಯಜೀವಿಗಳು ಲೋಕಪಾಲರಾಗುವುದಾದರೆ, ಅವಳನ್ನು ಈ ಭೋಗವಿಲಾಸ ವಸ್ತುಗಳು ಆಕರ್ಷಿಸುವವೇ? (ಚೌ/೧-೪)

**ದೋ – ಸುಮಿರತ ರಾಮಹಿ ತಜಹಿಂ ಜನ ತೃನ ಸಮ ಬಿಷಯ ಬಿಲಾಸು।**
**ರಾಮಪ್ರಿಯಾ ಜಗ ಜನನಿ ಸಿಯ ಕಛು ನ ಆಚರಜು ತಾಸು॥ ೧೪೦ ॥**

ಶ್ರೀರಾಮಚಂದ್ರನ ಸ್ಮರಣಮಾತ್ರದಿಂದಲೇ ಭಕ್ತಜನರು ಎಲ್ಲ ಭೋಗವಿಲಾಸಗಳನ್ನು ತೃಣಪ್ರಾಯದಂತೆ ತ್ಯಜಿಸುವಾಗ, ಆ ರಾಮನ ಪ್ರಿಯ ಪತ್ನಿಯೂ, ಜಗಜ್ಜನನಿಯೂ ಆದ ಸೀತಾದೇವಿಯು ಭೋಗವಿಲಾಸಗಳನ್ನು ತ್ಯಾಗಮಾಡುವುದರಲ್ಲಿ ಯಾವುದೇ ಆಶ್ಚರ್ಯವಿಲ್ಲ. (ದೋ/೧೪೦)

**ಚೌ – ಸೀಯ ಲಖನ ಜೆಹಿ ಬಿಧಿ ಸುಖು ಲಹಹೀಂ । ಸೋಇ ರಘುನಾಥ ಕರಹಿಂ ಸೋಇ ಕಹಹೀಂ ॥**
**ಕಹಹಿಂ ಪುರಾತನ ಕಥಾ ಕಹಾನೀ । ಸುನಹಿಂ ಲಖನು ಸಿಯ ಅತಿ ಸುಖು ಮಾನೀ ॥ ೧ ॥**
**ಜಬ ಜಬ ರಾಮು ಅವಧ ಸುಧಿ ಕರಹೀಂ । ತಬ ತಬ ಬಾರಿ ಬಿಲೋಚನ ಭರಹೀಂ ॥**
**ಸುಮಿರಿ ಮಾತು ಪಿತು ಪರಿಜನ ಭಾಈ । ಭರತ ಸನೇಹು ಸೀಲು ಸೇವಕಾಈ ॥ ೨ ॥**
**ಕೃಪಾಸಿಂಧು ಪ್ರಭು ಹೋಹಿಂ ದುಖಾರೀ । ಧೀರಜು ಧರಹಿಂ ಕುಸಮಉ ಬಿಚಾರೀ ॥**
**ಲಖಿ ಸಿಯ ಲಖನು ಬಿಕಲ ಹೊಇ ಜಾಹೀಂ । ಜಿಮಿ ಪುರುಷಹಿ ಅನುಸರ ಪರಿಛಾಹೀಂ ॥ ೩ ॥**
**ಪ್ರಿಯಾ ಬಂಧು ಗತಿ ಲಖಿ ರಘುನಂದನು । ಧೀರ ಕೃಪಾಲ ಭಗತ ಉರ ಚಂದನು ॥**
**ಲಗೇ ಕಹನ ಕಛು ಕಥಾ ಪುನೀತಾ । ಸುನಿ ಸುಖು ಲಹಹಿಂ ಲಖನು ಅರು ಸೀತಾ ॥ ೪ ॥**

ಶ್ರೀರಾಮನು ನಿರಂತರವಾಗಿ ಸೀತಾಲಕ್ಷ್ಮಣರಿಗೆ ಸಂತೋಷ ಉಂಟಾಗುವಂತಹ ಕೆಲಸಗಳನ್ನೇ ಮಾಡುತ್ತಿದ್ದನು. ಅಂಥಹ ಮಾತುಗಳನ್ನೇ ಆಡುತ್ತಿದ್ದನು. ಭಗವಂತನು ಪ್ರಾಚೀನ ಕಥೆಗಳನ್ನು ಹೇಳುತ್ತಿದ್ದನು ಹಾಗೂ ಲಕ್ಷ್ಮಣ ಸೀತಾದೇವಿಯು ಅತ್ಯಂತ ಹರ್ಷದಿಂದ ಆಲಿಸುತ್ತಿದ್ದರು. ಅಯೋಧ್ಯೆಯನ್ನು ನೆನೆದುಕೊಂಡಾಗಲೆಲ್ಲ ಅವನ ಕಣ್ಣುಗಳು ತುಂಬಿ ಬರುತ್ತಿದ್ದವು. ತಂದೆ, ತಾಯಂದಿರು, ತಮ್ಮಂದಿರು, ಪರಿಜನರು ಹಾಗೂ ಭರತನ ಸ್ನೇಹಸೌಶೀಲ್ಯ ಸೇವಾಭಾವಗಳನ್ನು ನೆನೆದಾಗ ಕೃಪಾಸಮುದ್ರನಾದ ಪ್ರಭುವು ದುಃಖಿತನಾಗುತ್ತಿದ್ದನು. ಆದರೆ ಅದಕ್ಕೆ ತಕ್ಕ ಸಮಯವಲ್ಲವೆಂದು ಬಗೆದು ಧೈರ್ಯತಾಳುತ್ತಿದ್ದನು. ಶ್ರೀರಾಮನ ದುಃಖವನ್ನು ಕಂಡು ಸೀತಾಲಕ್ಷ್ಮಣರು ವ್ಯಾಕುಲರಾಗುತ್ತಿದ್ದರು. ಮನುಷ್ಯನ ನೆರಳೂ ಆತನಂತೆಯೇ ವರ್ತಿಸುತ್ತದೆಯಲ್ಲ! ಆಗ ಧೀರನೂ, ಕೃಪಾಳುವೂ, ಭಕ್ತರ ಹೃದಯಗಳನ್ನು ತಂಪಾಗಿಸುವ ಚಂದನದಂತಿರುವ, ರಘುಕುಲವನ್ನು ಆನಂದಗೊಳಿಸುವ ಶ್ರೀರಾಮಚಂದ್ರನು ಪ್ರಿಯಪತ್ನೀ ಹಾಗೂ ತಮ್ಮ ಲಕ್ಷ್ಮಣ ಇವರ ಸ್ಥಿತಿಯನ್ನು ಕಂಡು, ಇವರನ್ನು ಸಂತೈಸಲು ಕೆಲವು ಪುನೀತ ಕಥೆಗಳನ್ನು ಹೇಳುತ್ತಿದ್ದನು. ಅದನ್ನು ಕೇಳಿದ ಸೀತಾಲಕ್ಷ್ಮಣರು ಸುಖಿಗಳಾಗುತ್ತಿದ್ದರು. (ಚೌ/೧-೪)

**ದೋ – ರಾಮು ಲಖನ ಸೀತಾ ಸಹಿತ ಸೋಹತ ಪರನ ನಿಕೇತ ।**
**ಜಿಮಿ ಬಾಸವ ಬಸ ಅಮರಪುರ ಸಚೀ ಜಯಂತ ಸಮೇತ ॥ ೧೪೧ ॥**

ಅಮರಾವತಿಯಲ್ಲಿ ಇಂದ್ರನು ತನ್ನ ಭಾರ್ಯೆ ಶಚೀದೇವಿ, ಕುಮಾರನಾದ ಜಯಂತರೊಂದಿಗೆ ಶೋಭಿಸುವಂತೆ, ಶ್ರೀರಾಮನು ಆ ಪರ್ಣಕುಟಿಯಲ್ಲಿ ಸೀತಾಲಕ್ಷ್ಮಣರೊಂದಿಗೆ ಶೋಭಿತನಾಗುತ್ತಿದ್ದಾನೆ. (ದೋ/೧೪೧)

**ಚೌ – ಜೊಗವಹೀಂ ಪ್ರಭು ಸಿಯ ಲಖನಹಿಂ ಕೈಸೇಂ । ಪಲಕ ಬಿಲೋಚನ ಗೋಲಕ ಜೈಸೇಂ ॥**
**ಸೇವಹಿಂ ಲಖನು ಸೀಯ ರಘುಬೀರಹಿ । ಜಿಮಿ ಅಬಿಬೇಕೀ ಪುರುಷ ಸರೀರಹಿ ॥ ೧ ॥**
**ಏಹಿ ಬಿಧಿ ಪ್ರಭು ಬನ ಬಸಹಿಂ ಸುಖಾರೀ । ಖಗ ಮೃಗ ಸುರ ತಾಪಸ ಹಿತಕಾರೀ ॥**
**ಕಹೆಉँ ರಾಮು ಬನ ಗವನು ಸುಹಾವಾ । ಸುನಹು ಸುಮಂತ್ರ ಅವಧ ಜಿಮಿ ಆವಾ ॥ ೨ ॥**

ಕಣ್ಣುರೆಪ್ಪೆಗಳು ಕಣ್ಣುಗಳನ್ನು ಕಾಪಾಡುವಂತೆ ಶ್ರೀರಾಮನು ಸೀತಾ, ಲಕ್ಷ್ಮಣರನ್ನು ಜೋಪಾನವಾಗಿ ನೋಡಿಕೊಳ್ಳುತ್ತಿದ್ದನು. ಸಾಮಾನ್ಯ ಮನುಷ್ಯನು ತನ್ನ ಶರೀರದ ಸೇವೆ ಮಾಡುವಂತೆ, ಲಕ್ಷ್ಮಣನು ಸೀತಾರಾಮರ ಸೇವೆಯನ್ನು ನಿರಂತರವಾಗಿ ಮಾಡುತ್ತಿದ್ದನು. ಈ ವಿಧವಾಗಿ ಪಕ್ಷಿಗಳಿಗೂ, ಮೃಗಗಳಿಗೂ, ದೇವತೆಗಳಿಗೂ, ಮುನಿಗಳಿಗೂ ಹಿತಕಾರಿಯಾದ ಶ್ರೀರಾಮಚಂದ್ರಪ್ರಭುವು ವನದಲ್ಲಿ ಸುಖವಾಗಿ ವಾಸಿಸುತ್ತಿದ್ದನು. (ತುಳಸೀದಾಸರು ಹೇಳುತ್ತಾರೆ – ನಾನು ಇಷ್ಟರವರೆಗೆ ಮನೋಹರವಾದ ರಾಮವನಗಮನದ ಕಥೆಯನ್ನು ಹೇಳಿದೆನು. ಇನ್ನು ಸುಮಂತ್ರನು ಅಯೋಧ್ಯೆಗೆ ಹೋದ ಕಥೆಯನ್ನು ಕೇಳಿರಿ. * (ಚೌ/೧-೨)

## ಸುಮಂತ್ರನು ಅಯೋಧ್ಯೆಗೆ ಮರಳಿದುದು

**ಫಿರೆಉ ನಿಷಾದು ಪ್ರಭುಹಿ ಪಹುಂಚಾಈ । ಸಚಿವ ಸಹಿತ ರಥ ದೇಖೆಸಿ ಆಈ ॥**
**ಮಂತ್ರೀ ಬಿಕಲ ಬಿಲೋಕಿ ನಿಷಾದೂ । ಕಹಿ ನ ಜಾಇ ಜಸ ಭಯಉ ಬಿಷಾದೂ ॥ ೩ ॥**

* ಶ್ರೀ ಸೀತಾರಾಮಲಕ್ಷ್ಮಣರು ವಾಲ್ಮೀಕಿ ಆಶ್ರಮವನ್ನು ತಲುಪುವ ಮೊದಲು, ಯಮುನಾ ನದೀತೀರದಿಂದಲೇ ಗುಹನನ್ನು ಹಿಂದಕ್ಕೆ ಕಳಿಸಿದ್ದನು. (ಇದನ್ನು ೧೧೧ನೇ ದೋಹೆಯಲ್ಲಿ ಪ್ರಸ್ತಾಪಿಸಲಾಗಿದೆ.) ಸೀತಾರಾಮರು ಅಯೋಧ್ಯೆಗೆ ಮರಳುವರೆಂದು ಭಾವಿಸಿ, ಗುಹನು ಬರುವವರೆಗೆ ಸುಮಂತ್ರನು ಅಲ್ಲೇ ಶೃಂಗವೇರಪುರದಲ್ಲೇ ನಿರೀಕ್ಷಿಸುತ್ತಿದ್ದನು. ಗುಹನು ಓರ್ವನೇ ಹಿಂದಿರುಗಿದುದನ್ನು ನೋಡಿ ಅವನು ನಿರಾಶನಾದನು.

**ರಾಮ ರಾಮ ಸಿಯ ಲಖನ ಪುಕಾರೀ। ಪರೆಉ ಧರನಿತಲ ಬ್ಯಾಕುಲ ಭಾರೀ॥**
**ದೇಖಿ ದಖಿನ ದಿಸಿ ಹಯ ಹಿಹಿನಾಹೀಂ। ಜನು ಬಿನು ಪಂಖ ಬಿಹಗ ಅಕುಲಾಹೀಂ॥ ೪ ॥**

ಶ್ರೀರಾಮಚಂದ್ರನಿಂದ ಬೀಳ್ಕೊಂಡು ನಿಷಾದರಾಜ ಗುಹನು ಮರಳಿ ಶೃಂಗವೇರಪುರಕ್ಕೆ ಬಂದಾಗ, ಗಂಗಾತೀರದಲ್ಲಿ ಸುಮಂತ್ರನನ್ನು ಅವನ ರಥವನ್ನು, ಕುದುರೆಗಳನ್ನು ನೋಡಿದನು. ವ್ಯಾಕುಲನಾದ ಮಂತ್ರಿಯನ್ನು ನೋಡಿ ಗುಹನು ಅತೀವ ದುಃಖಿತನಾದನು. ಒಂಟಿಯಾಗಿ ಹಿಂದಿರುಗಿದ ನಿಷಾದರಾಜನನ್ನು ಕಂಡು ಸುಮಂತ್ರನು 'ಹಾ ರಾಮಾ! ಹಾ ಸೀತೆ! ಹಾ ಲಕ್ಷ್ಮಣಾ!' ಎಂದು ಚೀರಿ ಸ್ಮೃತಿತಪ್ಪಿ ನೆಲಕ್ಕುರುಳಿದನು. ರಥದ ಕುದುರೆಗಳು ಶ್ರೀರಾಮನು ಹೋದ ದಕ್ಷಿಣದಿಕ್ಕಿನತ್ತ ನೋಡಿ-ನೋಡಿ ರೆಕ್ಕೆಗಳಿಲ್ಲದ ಪಕ್ಷಿಗಳಂತೆ ಒದ್ದಾಡುತ್ತಾ ಕೆನೆಯುತ್ತಿದ್ದವು. (ಚೌ/೩-೪)

**ದೋ – ನಹಿಂ ತೃನ ಚರಹಿಂ ನ ಪಿಅಹಿಂ ಜಲು ಮೋಚಹಿ ಲೋಚನ ಬಾರಿ।**
**ಬ್ಯಾಕುಲ ಭಏ ನಿಷಾದ ಸಬ ರಘುಬರ ಬಾಜಿ ನಿಹಾರಿ॥ ೧೪೨ ॥**

ಆ ಕುದುರೆಗಳು ಹುಲ್ಲು ಮೇಯಲೊಲ್ಲವು. ನೀರು ಕುಡಿಯಲೊಲ್ಲವು. ಅವುಗಳ ಕಣ್ಣುಗಳಿಂದ ಧಾರಾಕಾರವಾಗಿ ನೀರು ಹರಿಯುತ್ತಿತ್ತು. ಶ್ರೀರಾಮನ ಕುದುರೆಗಳ ಈ ದೆಸೆಯನ್ನು ಕಂಡು ನಿಷಾದರೆಲ್ಲರೂ ತಲ್ಲಣಿಸಿದರು. (ದೋ/೧೪೨)

**ಚೌ – ಧರಿ ಧೀರಜು ತಬ ಕಹಇ ನಿಷಾದೂ। ಅಬ ಸುಮಂತ್ರ ಪರಿಹರಹು ಬಿಷಾದೂ॥**
**ತುಮ್ಹ ಪಂಡಿತ ಪರಮಾರಥ ಗ್ಯಾತಾ। ಧರಹು ಧೀರ ಲಖಿ ಬಿಮುಖ ಬಿಧಾತಾ॥ ೧ ॥**
**ಬಿಬಿಧ ಕಥಾ ಕಹಿ ಕಹಿ ಮೃದುಬಾನೀ। ರಥ ಬೈಠಾರೆಉ ಬರಬಸ ಆನೀ॥**
**ಸೋಕ ಸಿಥಿಲ ರಥ ಸಕಇ ನ ಹಾಂಕೀ। ರಘುಬರ ಬಿರಹ ಪೀರ ಉರ ಬಾಂಕೀ॥ ೨ ॥**
**ಚರಫರಾಹಿಂ ಮಗ ಚಲಹಿಂ ನ ಘೋರೇ। ಬನ ಮೃಗ ಮನಹುँ ಆನಿ ರಥ ಜೋರೇ॥**
**ಅಢುಕಿ ಪರಹಿಂ ಫಿರಿ ಹೇರಹಿಂ ಪೀಛೇಂ। ರಾಮ ಬಿಯೋಗಿ ಬಿಕಲ ದುಖ ತೀಛೇಂ॥ ೩ ॥**
**ಜೋ ಕಹ ರಾಮು ಲಖನು ಬೈದೇಹೀ। ಹಿंಕರಿ ಹಿंಕರಿ ಹಿತ ಹೇರಹಿಂ ತೇಹೀ॥**
**ಬಾಜಿ ಬಿರಹ ಗತಿ ಕಹಿ ಕಿಮಿ ಜಾತೀ। ಬಿನು ಮನಿ ಫನಿಕ ಬಿಕಲ ಜೆಹಿ ಭಾಂತೀ॥ ೪ ॥**

ಆ ನಿಷಾದರಾಜನು ಧೈರ್ಯತಂದುಕೊಂಡು ಹೇಳಿದನು – ''ಸುಮಂತ್ರರೇ! ನೀವು ವಿಷಾದವನ್ನು ತೊರೆಯಿರಿ. ನೀವು ಪಂಡಿತರು, ಪರಮಾರ್ಥವನ್ನು ಬಲ್ಲವರು. ವಿಧಾತನು ಪ್ರತಿಕೂಲನಾಗಿದ್ದಾನೆಂದು ತಿಳಿದು ಧೈರ್ಯವನ್ನು ವಹಿಸಿರಿ.'' ಈ ರೀತಿಯಾಗಿ ಮೃದುಮಧುರವಾಗಿ ಅನೇಕ ಕಥೆಗಳನ್ನು ಹೇಳುತ್ತಾ, ಸಮಾಧಾನಪಡಿಸಿ ಗುಹನು ಸುಮಂತ್ರನನ್ನು ಬಲವಂತವಾಗಿ ರಥದಲ್ಲಿ ಕುಳ್ಳಿರಿಸಿದನು. ಆದರೆ ಆತನು ರಥ ನಡೆಸಲಾರದಷ್ಟು ಶೋಕ ಶಿಥಿಲನಾಗಿದ್ದನು. ಶ್ರೀರಾಮಚಂದ್ರನ ವಿರಹದಿಂದಾಗಿ ಅವನ ಮನಸ್ಸು ಅತೀವ ಬಾಧೆಪಡುತ್ತಿತ್ತು. ರಾಮವಿಯೋಗದಿಂದ ಆ ಕುದುರೆಗಳು ಚಡಪಡಿಸುತ್ತಿದ್ದು, ಸರಿಯಾದ ದಾರಿಯಲ್ಲಿ ಹೋಗಲೊಲ್ಲವು. ಕಾಡು ಮೃಗಗಳನ್ನು ತಂದು ರಥಕ್ಕೆ ಹೂಡಿರುವರೋ ಎಂಬಂತಿತ್ತು. ಅವು ಒಮ್ಮೆ ಮುಗ್ಗರಿಸಿದರೆ, ಒಮ್ಮೆ ಹಿಂತಿರುಗಿ ನೋಡುತ್ತಿದ್ದವು. ಈ ಪ್ರಕಾರ ಅವು ಆಳವಾದ ಅಳಲಿನಲ್ಲಿ ಮುಳುಗಿವೆ. ಯಾರಾದರೂ ರಾಮ, ಲಕ್ಷ್ಮಣ, ಸೀತೆಯರ ಹೆಸರು ಹೇಳಿದರೆ ಸಾಕು, ಕುದುರೆಗಳು ಕೆನೆಯುತ್ತಾ ಪ್ರೀತಿಯಿಂದ ಅವರತ್ತ ದೃಷ್ಟಿ ಬೀರುತ್ತಿದ್ದವು. ಅವರ ವಿರಹವು ಮಾತಿಗೆ ಮೀರಿದುದು. ಮಣಿಯಿಲ್ಲದೆ ವ್ಯಾಕುಲಗೊಂಡ ಸರ್ಪದಂತೆ ವ್ಯಾಕುಲರಾಗಿದ್ದವು. (ಚೌ/೧-೪)

**ದೋ – ಭಯಉ ನಿಷಾದು ಬಿಷಾದಬಸ ದೇಖತ ಸಚಿವ ತುರಂಗ।**
**ಬೋಲಿ ಸುಸೇವಕ ಚಾರಿ ತಬ ದಿಏ ಸಾರಥೀ ಸಂಗ॥ ೧೪೩ ॥**

ಮಂತ್ರಿ ಮತ್ತು ಕುದುರೆಗಳ ಈ ದೆಸೆಯನ್ನು ಕಂಡು, ನಿಷಾದರಾಜನೂ ಕೂಡ ವಿಷಾದಮಗ್ನನಾದನು. ಆಗ ಆತನು ತನ್ನ ನಾಲ್ಕು ಮಂದಿ ಉತ್ತಮ ಸೇವಕರನ್ನು ಕರೆದು ಸಾರಥಿಯಾಗಿಸಿ ಜೊತೆಗೆ ಕಳಿಸಿದನು. (ದೋ/೧೪೩)

**ಚೌ – ಗುಹ ಸಾರಥಿಹಿ ಫಿರೆಉ ಪಹुँಚಾಈ। ಬಿರಹು ಬಿಷಾದು ಬರನಿ ನಹಿಂ ಜಾಈ॥**
**ಚಲೇ ಅವಧ ಲೇಇ ರಥಹಿ ನಿಷಾದಾ। ಹೋಹಿಂ ಛನಹಿಂ ಛನ ಮಗನ ಬಿಷಾದಾ॥ ೧ ॥**
**ಸೋಚ ಸುಮಂತ್ರ ಬಿಕಲ ದುಖ ದೀನಾ। ಧಿಗ ಜೀವನ ರಘುಬೀರ ಬಿಹೀನಾ॥**
**ರಹಿಹಿ ನ ಅಂತಹು ಅಧಮ ಸರೀರೂ। ಜಸು ನ ಲಹೆಉ ಬಿಛುರತ ರಘುಬೀರೂ॥ ೨ ॥**
**ಭಏ ಅಜಸ ಅಘ ಭಾಜನ ಪ್ರಾನಾ। ಕವನ ಹೇತು ನಹಿಂ ಕರತ ಪಯಾನಾ॥**
**ಅಹಹ ಮಂದ ಮನು ಅವಸರ ಚೂಕಾ। ಅಜಹुँ ನ ಹೃದಯ ಹೋತ ದುಇ ಟೂಕಾ॥ ೩ ॥**

**ಮೀಜಿ ಹಾಥ ಸಿರು ಧುನಿ ಪಛಿತಾಈ। ಮನಹುँ ಕೃಪನ ಧನ ರಾಸಿ ಗವಾँಈ॥**
**ಬಿರಿದ ಬಾಂಧಿ ಬರ ಬೀರು ಕಹಾಈ। ಚಲೆಉ ಸಮರ ಜನು ಸುಭಟ ಪರಾಈ॥ ೪ ॥**

ಸುಮಂತ್ರನ ಸಂಗಡ ಸ್ವಲ್ಪದೂರ ಹೋಗಿ, ಬಳಿಕ ಅವನನ್ನು ಬೀಳ್ಕೊಟ್ಟು, ನಿಷಾದರಾಜನಾದ ಗುಹನು ತನ್ನ ಮನೆಗೆ ಮರಳಿದನು. ಅವನ ವಿರಹವನ್ನು, ದುಃಖವನ್ನು ವರ್ಣಿಸಲು ಶಬ್ದಗಳು ಸಾಲವು. ನಾಲ್ವರು ನಿಷಾದರು ಮಂತ್ರಿಯೊಂದಿಗೆ ಅಯೋಧ್ಯೆಗೆ ಹೋದರು. ಸುಮಂತ್ರ ಮತ್ತು ಕುದುರೆಗಳ ದೀನಾವಸ್ಥೆಯನ್ನು ಕಂಡು ಅವರು ಕ್ಷಣ-ಕ್ಷಣಕ್ಕೂ ವಿಷಾದಮಗ್ನರಾದರು. ವಿಕಳನೂ ದುಃಖದಿಂದ ದೀನನೂ ಆದ ಸುಮಂತ್ರನಿಗೆ ಅನ್ನಿಸಿತು – ''ಶ್ರೀರಘುವೀರನು ಇಲ್ಲದ ನನ್ನ ಜೀವನಕ್ಕೆ ಧಿಕ್ಕಾರವಿರಲಿ. ಕೊನೆಗೆ ಈ ಅಧಮ ಶರೀರವಂತೂ ಶಾಶ್ವತವಲ್ಲ. ನನ್ನ ಪ್ರಾಣಗಳು ರಾಮವಿಯೋಗದೊಂದಿಗೇ ಹೊರಟುಹೋಗಿ ಏಕೆ ಯಶಸ್ಸನ್ನು ಗಳಿಸಲಿಲ್ಲ. ಈ ಹಾಳು ಪ್ರಾಣಗಳು ಅಪಯಶಸ್ಸಿಗೆ ಹಾಗೂ ಪಾಪಗಳಿಗೆ ಭಾಜನವಾಗಿದೆ. ಈಗ ಇವು ಏಕಾದರೂ ತೊಲಗಲೊಲ್ಲವು. ಅಯ್ಯೋ! ಹಾಳು ಮನವೆ, ಒಳ್ಳೆಯ ಸದವಕಾಶವನ್ನು ಕಳೆದುಕೊಂಡೆಯಲ್ಲ! ಈಗಲಾದರೂ ಏಕೆ ನನ್ನ ಹೃದಯ ಒಡೆದುಹೋಗಬಾರದು? ಈ ಪ್ರಕಾರ ಸುಮಂತ್ರನು ಕೈ-ಕೈ ಹಿಸುಕಿಕೊಳ್ಳುತ್ತಾ, ತಲೆಚಚ್ಚಿಕೊಂಡು, ತನ್ನ ಧನವನ್ನು ಕಳೆದುಕೊಂಡ ಲೋಭಿಯಂತೆ ಪಶ್ಚಾತ್ತಾಪ ಪಡತೊಡಗಿದನು. ಉತ್ತಮವೀರನೆಂದು ಹೇಳಿಸಿಕೊಂಡು, ದೊಡ್ಡ ಯೋಧವೀರನ ಉಡುಪು ಧರಿಸಿಕೊಂಡು ಯುದ್ಧದಿಂದ ಹಿಮ್ಮೆಟ್ಟಿ ಓಡಿ ಬಂದನೋ ಎಂಬಂತೆ ಅವನು ಹೋಗುತ್ತಿದ್ದನು. (ಚೌ/೧-೪)

**ದೋ – ಬಿಪ್ರ ಬಿಬೇಕೀ ಬೇದಬಿದ ಸಮ್ಮತ ಸಾಧು ಸುಜಾತಿ।**
**ಜಿಮಿ ಧೋಖೇँ ಮದಪಾನ ಕರ ಸಚಿವ ಸೋಚ ತೆಹಿ ಭಾಂತಿ ॥ ೧೪೪ ॥**

ಓರ್ವ ವಿವೇಕವಂತನೂ, ವೇದವಿದನೂ, ಸದಾಚಾರನಿರತನೂ ಆದ ಉತ್ತಮ ಕುಲೀನ ಬ್ರಾಹ್ಮಣನು ಪ್ರಮಾದವಶದಿಂದ ಹೆಂಡ ಕುಡಿದು ಪಶ್ಚಾತ್ತಾಪ ಪಡುವಂತೆ ಮಂತ್ರಿ ಸುಮಂತ್ರನು ಪಶ್ಚಾತ್ತಾಪಕ್ಕೆ ಗುರಿಯಾದನು. (ದೋ/೧೪೪)

**ಚೌ – ಜಿಮಿ ಕುಲೀನ ತಿಯ ಸಾಧು ಸಯಾನೀ। ಪತಿದೇವತಾ ಕರಮ ಮನ ಬಾನೀ॥**
**ರಹೈ ಕರಮ ಬಸ ಪರಿಹರಿ ನಾಹೂ। ಸಚಿವ ಹೃದಯँ ತಿಮಿ ದಾರುನ ದಾಹೂ॥ ೧ ॥**
**ಲೋಚನ ಸಜಲ ಡೀಠಿ ಭಇ ಥೋರೀ। ಸುನಇ ನ ಶ್ರವನ ಬಿಕಲ ಮತಿ ಭೋರೀ॥**
**ಸೂಖಹಿँ ಅಧರ ಲಾಗಿ ಮುँಹ ಲಾಟೀ। ಜಿಉ ನ ಜಾಇ ಉರ ಅವಧಿ ಕಪಾಟೀ॥ ೨ ॥**
**ಬಿಬರನ ಭಯಉ ನ ಜಾಇ ನಿಹಾರೀ। ಮಾರೆಸಿ ಮನಹುँ ಪಿತಾ ಮಹತಾರೀ॥**
**ಹಾನಿ ಗಲಾನಿ ಬಿಪುಲ ಮನ ಬ್ಯಾಪೀ। ಜಮಪುರ ಪಂಥ ಸೋಚ ಜಿಮಿ ಪಾಪೀ॥ ೩ ॥**
**ಬಚನು ನ ಆವ ಹೃದಯँ ಪಛಿತಾಈ। ಅವಧ ಕಾಹ ಮೈँ ದೇಖಬ ಜಾಈ॥**
**ರಾಮ ರಹಿತ ರಥ ದೇಖಿಹಿ ಜೋಈ। ಸಕುಚಿಹಿ ಮೋಹಿ ಬಿಲೋಕತ ಸೋಈ॥ ೪ ॥**

ಯಾವಳೋ ಉತ್ತಮ ಕುಲೀನಳೂ, ಸಾಧ್ವಿಯೂ, ತ್ರಿಕರಣಪೂರ್ವಕವಾಗಿ ಪತಿಯೇ ಪರದೈವವೆಂದು ತಿಳಿದಿರುವ ಪತಿವ್ರತಾ ಸ್ತ್ರೀಯು ದೌರ್ಭಾಗ್ಯದಿಂದ ಗಂಡನಿಂದ ದೂರವಿರಬೇಕಾದಾಗ ಉಂಟಾಗುವ ಸಂತಾಪದಂತೆ ಮಂತ್ರಿಯ ಹೃದಯದಲ್ಲಿ ದುಃಖವಾಗುತ್ತಿತ್ತು. ಅವನ ಕಣ್ಣುಗಳಲ್ಲಿ ಕಂಬನಿ ತುಂಬಿದೆ. ದೃಷ್ಟಿ ಮಂದವಾಗಿದೆ. ಕಿವಿ ಕೇಳದು, ವಿಕಳವಾದ ಮತಿಯು ಸ್ತಿಮಿತದಲ್ಲಿಲ್ಲ. ತುಟಿ ಒಣಗಿತ್ತು. ಬಾಯಲ್ಲಿ ದ್ರವ ಆರಿಹೋಗಿತ್ತು. ಇವೆಲ್ಲ ಮರಣದ ಚಿಹ್ನೆಗಳಾದರೂ ಪ್ರಾಣಗಳು ಹೋಗಲೊಲ್ಲವು. ಏಕೆಂದರೆ, ಅವಧಿಯೆಂಬ ಕದ ಅಡ್ಡವಾಗಿದೆ. ಹದಿನಾಲ್ಕು ವರ್ಷಗಳ ವನವಾಸವನ್ನು ಮುಗಿಸಿ ಶ್ರೀರಾಮನು ಮರಳಿ ಬರುವನೆಂಬ ಆಸೆ ಪ್ರಾಣಗಳನ್ನು ತಡೆಯುತ್ತವೆ. ಸುಮಂತ್ರನ ಮುಖ ನೋಡಲಾಗುವುದಿಲ್ಲ. ಅದರ ಬಣ್ಣವೇ ಬದಲಾಗಿದೆ. ಪಶ್ಚಾತ್ತಾಪಕ್ಕೆ ಗುರಿಯಾದ ಮಾತಾ-ಪಿತೃಹಂತಕನಂತೆ ಅವನು ಹೃದಯದಲ್ಲಿ ಪಶ್ಚಾತ್ತಾಪ ಪಡುತ್ತಿದ್ದಾನೆ. ರಾಮವಿಯೋಗಿಯಾದೆನಲ್ಲ ಎಂಬ ಕೊರಗು ಆತನ ಮನವನ್ನು ಕೊರೆಯುತ್ತಿತ್ತು. ಪಾಪಿಯು ನರಕಕ್ಕೆ ಹೋಗುವಾಗ ಯೋಚಿಸುತ್ತಿರುವಂತೆ ಮಂತ್ರಿಯೂ ದಾರಿಯಲ್ಲಿ ಯೋಚಿಸುತ್ತಿರುವನು. ಆತನ ಬಾಯಿಂದ ಮಾತೇ ಹೊರಡದು. ಅಯೋಧ್ಯೆಗೆ ಹೋಗಿ ಏನನ್ನು ನೋಡಲಿ? ಶ್ರೀರಾಮನಿಲ್ಲದ ಬರಿದಾದ ರಥವನ್ನು ಕಂಡವರು ನನ್ನ ಮೊರೆಯನ್ನು ಹೇಗೆ ನೋಡುವರು? ಎಂದು ಮನದಲ್ಲೇ ಮರಗುತ್ತಿದ್ದನು. (ಚೌ/೧-೪)

**ದೋ – ಧಾಇ ಪೂँಛಿಹಹಿँ ಮೋಹಿ ಜಬ ಬಿಕಲ ನಗರ ನರ ನಾರಿ।**
**ಉತರು ದೇಬ ಮೈँ ಸಬಹಿ ತಬ ಹೃದಯँ ಬಜ್ರು ಬೈಠಾರಿ ॥ ೧೪೫ ॥**

ಊರಿನ ದುಃಖಿಗಳಾದ ಎಲ್ಲ ಜನರು ಓಡಿ ಬಂದು 'ರಾಮನೆಲ್ಲಿ' ಎಂದು ನನ್ನನ್ನು ಕೇಳಿದರೆ, ಆಗ ಎದೆಯನ್ನು ಕಲ್ಲಾಗಿಸಿಕೊಂಡು ಉತ್ತರ ಕೊಡಬೇಕಾಗುವುದು. (ದೋ/೧೪೫)

**ಚೌ – ಪುಛಿಹಹಿಂ ದೀನ ದುಖಿತ ಸಬ ಮಾತಾ। ಕಹಬ ಕಾಹ ಮೈಂ ತಿನ್ಹಹಿ ವಿಧಾತಾ॥**
**ಪೂಛಿಹಿ ಜಬಹಿಂ ಲಖನ ಮಹತಾರೀ। ಕಹಿಹಉಂ ಕವನ ಸಂದೇಸ ಸುಖಾರೀ॥ ೧ ॥**
**ರಾಮ ಜನನಿ ಜಬ ಆಇಹಿ ಧಾಈ। ಸುಮಿರಿ ಬಚ್ಛು ಜಿಮಿ ಧೇನು ಲವಾಈ॥**
**ಪೂಂಛತ ಉತರು ದೇಬ ಮೈಂ ತೇಹೀ। ಗೇ ಬನು ರಾಮ ಲಖನು ಬೈದೇಹೀ॥ ೨ ॥**
**ಜೋಇ ಪೂಂಛಿಹಿ ತೆಹಿ ಊತರು ದೇಬಾ। ಜಾಇ ಅವಧ ಅಬ ಯಹು ಸುಖು ಲೇಬಾ॥**
**ಪೂಂಛಿಹಿ ಜಬಹಿಂ ರಾಉ ದುಖ ದೀನಾ। ಜಿವನು ಜಾಸು ರಘುನಾಥ ಅಧೀನಾ॥ ೩ ॥**
**ದೇಹಉಂ ಉತರು ಕೌನು ಮುಹು ಲಾಈ। ಆಯಉಂ ಕುಸಲ ಕುಅಂರ ಪಹುಂಚಾಈ॥**
**ಸುನತ ಲಖನ ಸಿಯ ರಾಮ ಸಂದೇಸೂ। ತೃನ ಜಿಮಿ ತನು ಪರಿಹರಿಹಿ ನರೇಸೂ ॥ ೪ ॥**

ಎಲೈ ವಿಧಾತಾ! ದೀನವದನರಾದ, ದುಃಖಿತರಾದ ತಾಯಂದಿರು ರಾಮನ ಕುರಿತು ಕೇಳಿದಾಗ ನಾನು ಏನು ಉತ್ತರ ಕೊಡಲಿ? ಲಕ್ಷ್ಮಣನ ತಾಯಿ ನನ್ನನ್ನು ಕೇಳುವಳು. ಅವಳಿಗೆ ಯಾವ ಸಂತೋಷದ ವಾರ್ತೆ ಹೇಳಲಿ? ಆಗತಾನೇ ಈದಿರುವ ಹಸು ತನ್ನ ಕರುವನ್ನು ನೆನೆದು ಓಡಿ ಬರುವಂತೆ ಶ್ರೀರಾಮನ ತಾಯಿಯು ನನ್ನ ಬಳಿಗೆ ಓಡಿಬಂದರೆ ಆಕೆಗೆ ಶ್ರೀರಾಮ, ಲಕ್ಷ್ಮಣ, ಸೀತೆ ಇವರು ಕಾಡಿಗೆ ಹೋದರು ಎಂದು ಉತ್ತರ ಕೊಡಲೇ? ಕೇಳಿದವರಿಗೆಲ್ಲ ಇದೆ ಉತ್ತರ ಕೊಡಬೇಕಾಗುತ್ತದೆ. ಅಯ್ಯೋ! ನಾನು ಅಯೋಧ್ಯೆಗೆ ಹೋಗಿ ಹೊಂದುವ ಸುಖವು ಇದೆಯೋ? ಶೋಕವಿಹ್ವಲನಾದ ದಶರಥನು ತನ್ನ ಪಂಚಪ್ರಾಣಗಳನ್ನು ಶ್ರೀರಾಮನ ಮೇಲೆಯೇ ಇಟ್ಟಿರುವನು. ಅವನು ರಾಮನ ಬಗೆಗೆ ಕೇಳಿದರೆ, ನಾನು ಯಾವ ಮುಖವಿಟ್ಟುಕೊಂಡು 'ರಾಜಕುಮಾರರನ್ನು ಕುಶಲಪೂರ್ವಕವಾಗಿ ಕಾಡಿಗೆ ಬಿಟ್ಟು ಬಂದೆ' ಎಂದು ಉತ್ತರ ಕೊಡಲಿ? ಲಕ್ಷ್ಮಣ, ಸೀತೆ ಹಾಗೂ ರಾಮನ ಸಮಾಚಾರ ಕೇಳಿದಕೂಡಲೇ ಮಹಾರಾಜರು ಹುಲ್ಲಿಗೆ ಸಮವಾಗಿ ಗಣಿಸಿ ಶರೀರವನ್ನು ತ್ಯಾಗಮಾಡುವರು. ಇಷ್ಟು ಜನರಿಗೆ ಕಷ್ಟಕೊಟ್ಟು ಇನ್ನೂ ಜೀವಿಸಿದ್ದು ನಾನು ಏನನ್ನು ಪಡೆದಂತಾಯಿತು? (ಚೌ/೧-೪)

**ದೋ – ಹೃದಉ ನ ಬಿದರೇಉ ಪಂಕ ಜಿಮಿ ಬಿಛುರತ ಪ್ರೀತಮು ನೀರು।**
**ಜಾನತ ಹೌಂ ಮೊಹಿ ದೀನ್ಹ ಬಿಧಿ ಯಹು ಜಾತನಾ ಸರೀರು॥ ೧೪೬ ॥**

ನೀರಿಲ್ಲದೆ ಒಣಗಿಹೋದ ಕೆಸರು ಬಿರುಕು ಬಿಟ್ಟಿರುವಂತೆ, ಪ್ರಿಯತಮನಾದ ಶ್ರೀರಾಮನ ವಿರಹದಿಂದ ನನ್ನ ಹೃದಯ ಒಡೆದುಹೋಗಲಿಲ್ಲವಲ್ಲ! ಆದರೆ ವಿಧಾತನು ಸತ್ತಮೇಲೆ ಪಾಪಿಗಳಿಗೆ ದೊರೆಯುವ ಯಾತನಾಶರೀರವು ನನಗೆ ಈಗಲೇ ಕೊಟ್ಟಿರುವನು. (ದೋ/೧೪೬)

**ಚೌ – ಏಹಿ ಬಿಧಿ ಕರತ ಪಂಥ ಪಛಿತಾವಾ। ತಮಸಾ ತೀರ ತುರತ ರಥು ಆವಾ॥**
**ಬಿದಾ ಕಿಏ ಕರಿ ಬಿನಯ ನಿಷಾದಾ। ಫಿರೇ ಪಾಯಂ ಪರಿ ಬಿಕಲ ಬಿಷಾದಾ॥ ೧ ॥**
**ಪೈಠತ ನಗರ ಸಚಿವ ಸಕುಚಾಈ। ಜನು ಮಾರೆಸಿ ಗುರ ಬಾಂಭನ ಗಾಈ॥**
**ಬೈಠಿ ಬಿಟಪ ತರ ದಿವಸು ಗಂವಾವಾ। ಸಾಂಝ ಸಮಯ ತಬ ಅವಸರು ಪಾವಾ॥ ೨ ॥**
**ಅವಧ ಪ್ರಬೇಸು ಕೀನ್ಹ ಅಂಧಿಆರೇಂ। ಪೈಠ ಭವನ ರಥು ರಾಖಿ ದುಆರೇಂ॥**
**ಜಿನ್ಹ ಜಿನ್ಹ ಸಮಾಚಾರ ಸುನಿ ಪಾಏ। ಭೂಪ ದ್ವಾರ ರಥು ದೇಖನ ಆಏ॥ ೩ ॥**
**ರಥು ಪಹಿಚಾನಿ ಬಿಕಲ ಲಖಿ ಘೋರೇ। ಗರಹಿಂ ಗಾತ ಜಿಮಿ ಆತಪ ಓರೆ॥**
**ನಗರ ನಾರಿ ನರ ಬ್ಯಾಕುಲ ಕೈಸೇಂ। ನಿಘಟತ ನೀರ ಮೀನಗನ ಜೈಸೇಂ॥ ೪ ॥**

ಸುಮಂತ್ರನು ಈ ವಿಧವಾಗಿ ಪಶ್ಚಾತ್ತಾಪಪಡುತ್ತಾ ಇರುವಾಗ ಆತನ ರಥ ತಮಸಾ ನದಿಯ ತೀರವನ್ನು ಮುಟ್ಟಿತು. ಮಂತ್ರಿಯು ವಿನಯದಿಂದ ನಿಷಾದರಾಜನ ನಾಲ್ವರು ಸೇವಕರನ್ನು ಹಿಂದಕ್ಕೆ ಕಳಿಸಿಕೊಟ್ಟನು. ಅವರು ವ್ಯಾಕುಲಚಿತ್ತರಾಗಿ ಸುಮಂತ್ರನ ಪಾದಗಳಿಗೆ ಎರಗಿ ಹಿಂದಿರುಗಿದರು. ನಗರವನ್ನು ಪ್ರವೇಶಿಸುತ್ತಲೇ ಮಂತ್ರಿಯು ಗುರುಹತ್ಯೆ, ಬ್ರಹ್ಮಹತ್ಯೆ, ಗೋಹತ್ಯೆ ಮಾಡಿದವನಂತೆ ಹಿಂಜರಿದನು. ಇಡೀ ದಿನವೆಲ್ಲ ಒಂದು ಮರದ ಕೆಳಗೆ ಕುಳಿತು ಕಳೆದ. ಸಾಯಂಕಾಲವಾಗುತ್ತಿರುವಂತೆ ಸಮಯನೋಡಿ ಕತ್ತಲಾದ ಬಳಿಕ ಅವನೂ ಅಯೋಧ್ಯೆಯನ್ನು ಪ್ರವೇಶಿಸಿ, ರಥವನ್ನು ಅರಮನೆಯ ಬಾಗಿಲಲ್ಲಿ ನಿಲ್ಲಿಸಿ ಯಾರಿಗೂ ತಿಳಿಯದಂತೆ ಅರಮನೆಯನ್ನು ಹೊಕ್ಕನು. ಸುಮಂತ್ರನು ಬಂದನೆಂದು ಕೇಳಿದ ಕೂಡಲೇ ಜನರೆಲ್ಲ ರಥವನ್ನು ನೋಡಲು

ಅರಮನೆಯ ಬಳಿಗೆ ಬಂದರು. ರಥವನ್ನು ಗುರುತಿಸಿ, ಕುದುರೆಗಳು ವ್ಯಾಕುಲರಾಗಿರುವುದನ್ನು ಕಂಡು, ಬಿಸಿಲಲ್ಲಿ ಆಲಿಕಲ್ಲು ಕರಗಿದಂತೆ ಅವರ ದೇಹ ಕರಗಿತು. ನಗರದ ನರ-ನಾರಿಯರು ನೀರು ಬತ್ತಿಹೋದ ಮೇಲೆ ಮೀನುಗಳು ವಿಲವಿಲನೆ ಒದ್ದಾಡುವಂತೆ ಒದ್ದಾಡುತ್ತಿದ್ದರು. (ಚೌ/೧-೪)

## ಪುತ್ರಶೋಕದಿಂದ ದಶರಥನು ಸ್ವರ್ಗಸ್ಥನಾದುದು

**ದೋ – ಸಚಿವ ಆಗಮನು ಸುನತ ಸಬು ಬಿಕಲ ಭಯಉ ರನಿವಾಸು।**
**ಭವನು ಭಯಂಕರು ಲಾಗ ತೆಹಿ ಮಾನಹು ಪ್ರೇತ ನಿವಾಸು ॥ ೧೪೭ ॥**

ಒಂಟಿಯಾಗಿ ಬಂದಿರುವ ಮಂತ್ರಿಯನ್ನು ನೋಡಿ ಇಡೀ ರಾಣೀವಾಸವು ವ್ಯಾಕುಲಗೊಂಡಿತು. ಅವರಿಗೆ ಅರಮನೆಯು ಭಯಾನಕ ಸುಡುಗಾಡಿನಂತೆ ಕಂಡಿತು. (ದೋ/೧೪೭)

**ಚೌ – ಅತಿ ಆರತಿ ಸಬ ಪೂಂಛಹಿಂ ರಾನೀ। ಉತರು ನ ಆವ ಬಿಕಲ ಭಇ ಬಾನೀ॥**
**ಸುನಇ ನ ಶ್ರವನ ನಯನ ನಹಿಂ ಸೂಝಾ। ಕಹಹು ಕಹಾಂ ನೃಪು ತೆಹಿ ತೆಹಿ ಬೂಝಾ ॥ ೧ ॥**
**ದಾಸಿನ್ಹ ದೀಖ ಸಚಿವ ಬಿಕಲಾಈ। ಕೌಸಲ್ಯಾ ಗೃಹಂ ಗಈಂ ಲವಾಈ॥**
**ಜಾಇ ಸುಮಂತ್ರ ದೀಖ ಕಸ ರಾಜಾ। ಅಮಿಅ ರಹಿತ ಜನು ಚಂದು ಬಿರಾಜಾ॥ ೨ ॥**
**ಆಸನ ಸಯನ ಬಿಭೂಷನ ಹೀನಾ। ಪರೆಉ ಭೂಮಿತಲ ನಿಪಟ ಮಲೀನಾ॥**
**ಲೇಇ ಉಸಾಸು ಸೋಚ ಎಹಿ ಭಾಂತೀ। ಸುರಪುರ ತೇಂ ಜನು ಖಂಸೆಉ ಜಜಾತೀ॥ ೩ ॥**
**ಲೇತ ಸೋಚ ಭರಿ ಛಿನು ಛಿನು ಛಾತೀ। ಜನು ಜರಿ ಪಂಖ ಪರೆಉ ಸಂಪಾತೀ॥**
**ರಾಮ ರಾಮ ಕಹ ರಾಮ ಸನೇಹೀ। ಪುನಿ ಕಹ ರಾಮ ಲಖನ ಬೈದೇಹೀ॥ ೪ ॥**

ಅತ್ಯಂತ ಆರ್ತರಾಗಿ ಎಲ್ಲ ರಾಣಿಯರು ಸುಮಂತ್ರನನ್ನು ಪ್ರಶ್ನಿಸಿದರು – ಆದರೆ ಸುಮಂತ್ರನು ಏನು ಉತ್ತರ ಹೇಳಿಯಾನು? ಅವನಿಗೆ ಮಾತೇ ನಿಂತು ಹೋದಂತಾಗಿತ್ತು. ಕಿವಿಗಳಿಗೆ ಏನೂ ಕೇಳಲೊಲ್ಲದು. ಕಣ್ಣುಕಾಣದು. ಅವನು ಕಣ್ಣೆದುರಿಗೆ ಬಂದವರನ್ನೆಲ್ಲ ಕೇಳುತ್ತಿದ್ದನು – 'ಮಹಾರಾಜರೆಲ್ಲಿ?' ಮಂತ್ರಿಯು ವ್ಯಾಕುಲನಾಗಿರುವುದನ್ನು ಕಂಡು ದಾಸಿಯರು ಆತನನ್ನು ಮಹಾರಾಣಿ ಕೌಸಲ್ಯೆಯ ಅರಮನೆಗೆ ಕರೆದುಕೊಂಡು ಹೋದರು. ಸುಮಂತ್ರನು ಅಲ್ಲಿ ಕಳಾವಿಹೀನನಾದ ಚಂದ್ರನಂತೆ ಬಿದ್ದಿರುವ ಮಹಾರಾಜನನ್ನು ನೋಡಿದನು. ಸಿಂಹಾಸನ, ಮಂಚ, ಭೂಷಣಗಳಿಂದ ವಿರಹಿತನಾಗಿ, ಅತಿದೀನಾವಸ್ಥೆಯಲ್ಲಿ ನೆಲದಮೇಲೆ ಒರಗಿದ್ದನು. ದೀರ್ಘವಾಗಿ ನಿಟ್ಟುಸಿರು ಬಿಡುತ್ತಾ 'ಯಯಾತಿಯೇ ಸ್ವರ್ಗದಿಂದ ಚ್ಯುತನಾಗಿ ಬಿದ್ದಿರುವಂತೆ' ಚಿಂತಾಮಗ್ನನಾಗಿ ಬಿದ್ದಿದ್ದನು. ಅರಸನು ಕ್ಷಣ-ಕ್ಷಣವೂ ಯೋಚಿಸಿ, ಎದೆಯನ್ನು ಹಿಡಿದುಕೊಳ್ಳುತ್ತಿದ್ದ. ಜಟಾಯುವಿನ ಸೋದರ ಸಂಪಾತಿಯು ರೆಕ್ಕೆ ಸುಟ್ಟು ನೆಲಕ್ಕುರುಳಿರುವನೋ ಎಂಬಂತೆ ಬಿಕ್ಕಿ-ಬಿಕ್ಕಿ ದುಃಖಿಸುತ್ತಿದ್ದನು. ರಾಜನು ಪುನಃ ಪುನಃ ಹಾ ರಾಮಾ! ಹಾ ಸೀತೆ! ಹಾ ಲಕ್ಷ್ಮಣಾ! ಹಾ ಪ್ರಿಯರಾಮಾ! ಎಂದು ಹಲುಬುತ್ತಾ ಅಳುತ್ತಿದ್ದನು. (ಚೌ/೧-೪)

**ದೋ – ದೇಖಿ ಸಚಿವಂ ಜಯ ಜೀವ ಕಹಿ ಕೀನ್ಹೆಉ ದಂಡ ಪ್ರನಾಮು।**
**ಸುನತ ಉಠೆಉ ಬ್ಯಾಕುಲ ನೃಪತಿ ಕಹು ಸುಮಂತ್ರ ಕಹಂ ರಾಮು॥ ೧೪೮ ॥**

ಮಂತ್ರಿಯು ಸಮಯವರಿತು 'ಮಹಾರಾಜರಿಗೆ ಜಯವಾಗಲಿ' ಎಂದು ಹೇಳುತ್ತಾ ದಂಡವತ್ ಪ್ರಣಾಮಮಾಡಿದನು. ಇದನ್ನು ಕೇಳುತ್ತಲೇ ರಾಜನು ವ್ಯಾಕುಲನಾಗಿ ಎದ್ದು ಕುಳಿತು – 'ಸುಮಂತ್ರಾ! ರಾಮನೆಲ್ಲಿರುವನು? ಹೇಳು!' (ದೋ/೧೪೮)

**ಚೌ – ಭೂಪ ಸುಮಂತ್ರು ಲೀನ್ಹ ಉರ ಲಾಈ। ಬೂಡತ ಕಛು ಅಧಾರ ಜನು ಪಾಈ॥**
**ಸಹಿತ ಸನೇಹ ನಿಕಟ ಬೈಠಾರೀ। ಪೂಂಛತ ರಾಉ ನಯನ ಭರಿ ಬಾರೀ॥ ೧ ॥**
**ರಾಮ ಕುಸಲ ಕಹು ಸಖಾ ಸನೇಹೀ। ಕಹಂ ರಘುನಾಥು ಲಖನು ಬೈದೇಹೀ॥**
**ಆನೇ ಫೇರಿ ಕಿ ಬನಹಿ ಸಿಧಾಏ। ಸುನತ ಸಚಿವ ಲೋಚನ ಜಲ ಛಾಏ॥ ೨ ॥**
**ಸೋಕ ಬಿಕಲ ಪುನಿ ಪೂಂಛ ನರೇಸೂ। ಕಹು ಸಿಯ ರಾಮ ಲಖನ ಸಂದೇಸೂ॥**
**ರಾಮ ರೂಪ ಗುನ ಸೀಲ ಸುಭಾಊ। ಸುಮಿರಿ ಸುಮಿರಿ ಉರ ಸೋಚತ ರಾಊ॥ ೩ ॥**
**ರಾಉ ಸುನಾಇ ದೀನ್ಹ ಬನಬಾಸೂ। ಸುನಿ ಮನ ಭಯಉ ನ ಹರಷು ಹರಾಂಸೂ॥**
**ಸೋ ಸುತ ಬಿಛುರತ ಗಏ ನ ಪ್ರಾನಾ। ಕೋ ಪಾಪೀ ಬಡ ಮೋಹಿ ಸಮಾನಾ॥ ೪ ॥**

ಅರಸನು ಸುಮಂತ್ರನನ್ನು ಎದೆಗಪ್ಪಿಕೊಂಡನು. ಮುಳುಗುತ್ತಿರುವವನಿಗೆ ಏನೋ ಆಸರೆ ದೊರೆತಂತಾಯಿತು. ಮಂತ್ರಿಯನ್ನು ಸ್ನೇಹದಿಂದ ಹತ್ತಿರ ಕುಳ್ಳಿರಿಸಿಕೊಂಡು ಸಜಲನಯನನಾಗಿ ಅರಸನು ಕೇಳತೊಡಗಿದನು – 'ಪ್ರಿಯ ಗೆಳೆಯಾ! ಶ್ರೀರಾಮನ ಕುಶಲಕ್ಷೇಮವನ್ನು ಕುರಿತು ಹೇಳು. ಶ್ರೀರಾಮ, ಲಕ್ಷ್ಮಣ, ಸೀತೆ ಇವರು ಎಲ್ಲಿದ್ದಾರೆ? ತಿಳಿಸು. ಅವರನ್ನು ಹಿಂತಿರುಗಿ ಕರೆತಂದೆಯೋ, ಇಲ್ಲವೇ ಅವರು ಕಾಡಿಗೆ ಹೊರಟುಹೋದರೋ? ಇದನ್ನು ಕೇಳುತ್ತಲೇ ಮಂತ್ರಿಯ ಕಣ್ಣುಗಳು ತುಂಬಿಬಂದವು. ಶೋಕಾಕುಲನಾದ ರಾಜನು ಮತ್ತೆ ಕೇಳತೊಡಗಿದ – 'ಸೀತಾರಾಮಲಕ್ಷ್ಮಣರ ಸಂದೇಶವನ್ನಾದರೂ ತಿಳಿಸು.' ಶ್ರೀರಾಮಚಂದ್ರನ ರೂಪ, ಗುಣ, ಶೀಲ, ಸ್ವಭಾವಗಳನ್ನು ನೆನೆನೆನೆದು ದಶರಥ ಮಹಾರಾಜನು ಹಲಬುತ್ತಿದ್ದನು – 'ನಾನು ರಾಜ್ಯ ಕೊಡುತ್ತೇನೆ, ಪಟ್ಟಕಟ್ಟುತ್ತೇನೆ ಎಂದು ಹೇಳಿ ರಾಮನಿಗೆ ವನವಾಸವಿತ್ತೆ. ಇದನ್ನು ಕೇಳಿಯೂ ಅವನ ಮನದಲ್ಲಿ ಹರ್ಷವಾಗಲೀ, ವಿಷಾದವಾಗಲೀ ಉಂಟಾಗಲಿಲ್ಲ. ಇಂತಹ ಮಗನ ಅಗಲುವಿಕೆಯಲ್ಲಿಯೂ ಕೂಡ ನನ್ನ ಪ್ರಾಣಗಳು ಹಾರಿಹೋಗಲಿಲ್ಲವಲ್ಲ! ನನ್ನಂತಹ ಪಾಪಿಯು ಯಾರಿರಬಹುದು? (ಚೌ/೧-೪)

**ದೋ – ಸಖಾ ರಾಮು ಸಿಯ ಲಖನು ಜಹಂ ತಹಾಂ ಮೋಹಿ ಪಹುಂಚಾಉ।**
**ನಾಹಿಂ ತ ಚಾಹತ ಚಲನ ಅಬ ಪ್ರಾನ ಕಹಉಂ ಸತಿಭಾಉ॥ ೧೪೯ ॥**

ಗೆಳೆಯಾ! ಶ್ರೀರಾಮ, ಲಕ್ಷ್ಮಣ, ಸೀತೆ ಇವರಿರುವ ತಾಣಕ್ಕೆ ನನ್ನನ್ನೂ ಕರಕೊಂಡು ಹೋಗು. ಇಲ್ಲವಾದರೆ ನಿಜ ಹೇಳುತ್ತೇನೆ. ನನ್ನ ಪ್ರಾಣಗಳು ಈಗಲೇ ಹೊರಟುಹೋಗುವುವು. (ದೋ/೧೪೯)

**ಚೌ – ಪುನಿ ಪುನಿ ಪೂಂಛತ ಮಂತ್ರಿಹಿ ರಾಊ। ಪ್ರಿಯತಮ ಸುಅನ ಸಂದೇಸ ಸುನಾಊ॥**
**ಕರಹಿ ಸಖಾ ಸೋಇ ಬೇಗಿ ಉಪಾಊ। ರಾಮು ಲಖನು ಸಿಯ ನಯನ ದೇಖಾಊ॥ ೧ ॥**
**ಸಚಿವ ಧೀರ ಧರಿ ಕಹ ಮೃದು ಬಾನೀ। ಮಹಾರಾಜ ತುಮ್ಹ ಪಂಡಿತ ಗ್ಯಾನೀ॥**
**ಬೀರ ಸುಧೀರ ಧುರಂಧರ ದೇವಾ। ಸಾಧು ಸಮಾಜು ಸದಾ ತುಮ್ಹ ಸೇವಾ॥ ೨ ॥**
**ಜನಮ ಮರನ ಸಬ ದುಖ ಸುಖ ಭೋಗಾ। ಹಾನಿ ಲಾಭು ಪ್ರಿಯ ಮಿಲನ ಬಿಯೋಗಾ॥**
**ಕಾಲ ಕರಮ ಬಸ ಹೋಹಿಂ ಗೊಸಾಈಂ। ಬರಬಸ ರಾತಿ ದಿವಸ ಕೀ ನಾಈಂ ॥ ೩ ॥**
**ಸುಖ ಹರಷಹಿಂ ಜಡ ದುಖ ಬಿಲಖಾಹೀಂ। ದೋಉ ಸಮ ಧೀರ ಧರಹಿಂ ಮನ ಮಾಹೀಂ॥**
**ಧೀರಜ ಧರಹು ಬಿಬೇಕು ಬಿಚಾರೀ। ಛಾಡಿಅ ಸೋಚ ಸಕಲ ಹಿತಕಾರೀ॥ ೪ ॥**

ಅರಸನು ಮತ್ತೆ-ಮತ್ತೆ ಮಂತ್ರಿಯನ್ನು ಕೇಳುತ್ತಾನೆ – 'ನನ್ನ ಪ್ರಿಯತಮರಾದ ಪುತ್ರರ ಸಂದೇಶವನ್ನು ತಿಳಿಸು. ಗೆಳೆಯಾ! ಹೇಗಾದರೂ ಉಪಾಯಮಾಡಿ – ಸೀತಾರಾಮಲಕ್ಷ್ಮಣರು ನನ್ನ ಕಣ್ಮುಂದೆ ಇರುವಂತೆ ಮಾಡು. ಮಂತ್ರಿಯು ಧೈರ್ಯವನ್ನು ತಂದುಕೊಂಡು ಕೋಮಲವಾಣಿಯಲ್ಲಿ ಇಂತೆಂದನು – ಮಹಾರಾಜರೇ! ನೀವು ಪಂಡಿತರು, ಜ್ಞಾನಿಗಳು. ಶೂರರೂ, ವೀರರೂ, ಧೀರರೂ, ಶ್ರೇಷ್ಠರೂ ಆಗಿರುವಿರಿ. ನೀವು ಯಾವಾಗಲೂ ದೇವತೆಗಳನ್ನೂ, ಸಾಧುಗಳನ್ನೂ ಸೇವಿಸುವವರು. ಜನ್ಮ-ಮರಣ, ಸುಖ-ದುಃಖ, ಲಾಭ-ಹಾನಿ, ಪ್ರಿಯಜನರ ಸಂಯೋಗ-ವಿಯೋಗ ಇವೆಲ್ಲವೂ ಕಾಲ-ಕರ್ಮವಶ. ಹಗಲಿರುಳಿನಂತೆ ನಿರಂತರ ಪರಿಭ್ರಮಿಸುತ್ತಲೇ ಇರುತ್ತವೆ. ಮೂರ್ಖರು ಸುಖ ಬಂದಾಗ ಹಿಗ್ಗುತ್ತಾರೆ, ದುಃಖಬಂದಾಗ ಕುಗ್ಗುತ್ತಾರೆ. ಆದರೆ ಧೀರಪುರುಷರು ಎರಡನ್ನೂ ಸಮಾನವಾಗಿ ಕಾಣುತ್ತಾರೆ. ಎಲ್ಲರ ಹಿತಕಾರಿಗಳಾದ ಅರಸನೇ! ತಾವು ವಿಚಾರಮಾಡಿ ಧೈರ್ಯತಾಳಿರಿ. ಶೋಕವನ್ನು ತೊರೆಯಿರಿ. (ಚೌ/೧-೪)

**ದೋ – ಪ್ರಥಮ ಬಾಸು ತಮಸಾ ಭಯಉ ದೂಸರ ಸುರಸರಿ ತೀರ।**
**ನ್ಹಾಇ ರಹೇ ಜಲಪಾನು ಕರಿ ಸಿಯ ಸಮೇತ ದೋಉ ಬೀರ॥ ೧೫೦ ॥**

ಶ್ರೀರಾಮಚಂದ್ರನು ಮೊದಲದಿನ ತಮಸಾತೀರದಲ್ಲಿಯೂ, ಎರಡನೇ ದಿನ ಪವಿತ್ರ ಗಂಗಾತೀರದಲ್ಲಿಯೂ ವಾಸಮಾಡಿದನು. ಸೀತಾಸಮೇತ ಅಣ್ಣತಮ್ಮಂದಿರಿಬ್ಬರೂ ಗಂಗೆಯಲ್ಲಿ ಮಿಂದು ಕೇವಲ ಜಲಪಾನಮಾಡಿ ದಿನ ಕಳೆದರು. (ದೋ/೧೫೦)

**ಚೌ – ಕೇವಟ ಕೀನ್ಹಿ ಬಹುತ ಸೇವಕಾಈ। ಸೋ ಜಾಮಿನಿ ಸಿಂಗರೌರ ಗವಾಂಈ॥**
**ಹೋತ ಪ್ರಾತ ಬಟ ಛೀರು ಮಗಾವಾ। ಜಟಾ ಮುಕುಟ ನಿಜ ಸೀಸ ಬನಾವಾ ॥ ೧ ॥**
**ರಾಮ ಸಖಾಂ ತಬ ನಾವ ಮಗಾಈ। ಪ್ರಿಯಾ ಚಢಾಇ ಚಢೇ ರಘುರಾಈ॥**
**ಲಖನ ಬಾನ ಧನು ಧರೇ ಬನಾಈ। ಆಪು ಚಢೇ ಪ್ರಭು ಆಯಸು ಪಾಈ॥ ೨ ॥**

**ಬಿಕಲ ಬಿಲೋಕಿ ಮೋಹಿ ರಘುಬೀರಾ। ಬೋಲೇ ಮಧುರ ಬಚನ ಧರಿ ಧೀರಾ॥**
**ತಾತ ಪ್ರನಾಮು ತಾತ ಸನ ಕಹೆಹೂ। ಬಾರ ಬಾರ ಪದ ಪಂಕಜ ಗಹೆಹೂ॥ ೩ ॥**
**ಕರಬಿ ಪಾಯಁ ಪರಿ ಬಿನಯ ಬಹೋರೀ। ತಾತ ಕರಿಅ ಜನಿ ಚಿಂತಾ ಮೋರೀ॥**
**ಬನ ಮಗ ಮಂಗಲ ಕುಸಲ ಹಮಾರೇಁ। ಕೃಪಾ ಅನುಗ್ರಹ ಪುನ್ಯ ತುಮ್ಹಾರೇಁ॥ ೪ ॥**

ನಿಷಾದರಾಜನಾದ ಗುಹನು ಅವರಿಗೆ ತುಂಬಾ ಸೇವೆ ಮಾಡಿದನು. ಆ ರಾತ್ರಿ ಅವರು ಶೃಂಗವೇರಪುರದಲ್ಲಿಯೇ ಕಳೆದರು. ಮರುದಿನ ಬೆಳಿಗ್ಗೆ ಆಲದ ಹಾಲನ್ನು ತರಿಸಿ, ರಾಮ ಲಕ್ಷ್ಮಣರು ಜಟೆಯನ್ನು ಕಟ್ಟಿ ಜಟಾಮುಕುಟವನ್ನಾಗಿಸಿಕೊಂಡರು. ಅನಂತರ ಶ್ರೀರಾಮನ ಮಿತ್ರನಾದ ನಿಷಾದರಾಜನು ನಾವೆಯನ್ನು ತರಿಸಿದನು. ಮೊದಲು ಪ್ರಿಯೆ ಸೀತೆಯನ್ನು ದೋಣಿಯಮೇಲೆ ಹತ್ತಿಸಿ, ಬಳಿಕ ಶ್ರೀರಾಮನು ಹತ್ತಿದನು. ಅನಂತರ ಲಕ್ಷ್ಮಣನು ಧನುರ್ಬಾಣಗಳನ್ನು ಜೊತೆಮಾಡಿ ಇರಿಸಿ, ಪ್ರಭುರಾಮನ ಅಪ್ಪಣೆಪಡೆದು ದೋಣಿಯನ್ನೇರಿದನು. ವ್ಯಾಕುಲನಾದ ನನ್ನನ್ನು ಕಂಡು ಶ್ರೀರಾಮಚಂದ್ರನು ಧೈರ್ಯವಹಿಸಿ, ಮಧುರವಚನಗಳನ್ನು ಹೇಳಿದನು – ''ಅಯ್ಯಾ! ತಂದೆಯವರಿಗೆ ನನ್ನ ನಮಸ್ಕಾರಗಳನ್ನು ಹೇಳು. ನನ್ನ ಪರವಾಗಿ ಅವರ ಚರಣಗಳಿಗೆರಗು. ನನ್ನ ಬಿನ್ನಹವನ್ನು ತಂದೆಯವರಲ್ಲಿ ಹೇಳು – ಅಪ್ಪಾ! ತಾವು ನನ್ನ ಚಿಂತೆಯನ್ನು ತಲೆಗೆ ಹಚ್ಚಿಕೊಳ್ಳಬೇಡಿ, ತಮ್ಮ ಕೃಪೆ, ಅನುಗ್ರಹ ಹಾಗೂ ಪುಣ್ಯದಿಂದ ಕಾಡಿನ ಹಾದಿಯಲ್ಲಿ ನಮಗೆ ಎಲ್ಲವೂ ಮಂಗಳವೇ ಆಗುತ್ತದೆ. (ಚೌ/೧-೪)

**ಛಂ – ತುಮ್ಹರೇಁ ಅನುಗ್ರಹ ತಾತ ಕಾನನ ಜಾತ ಸಬ ಸುಖು ಪಾಇಹೌಁ।**
**ಪ್ರತಿಪಾಲಿ ಆಯಸು ಕುಸಲ ದೇಖನ ಪಾಯ ಪುನಿ ಫಿರಿ ಆಇಹೌಁ॥**
**ಜನನೀಂ ಸಕಲ ಪರಿತೋಷಿ ಪರಿ ಪರಿ ಪಾಯಁ ಕರಿ ಬಿನತೀ ಘನೀ।**
**ತುಲಸೀ ಕರಹು ಸೋಇ ಜತನು ಜೆಹಿಂ ಕುಸಲೀ ರಹಹಿಂ ಕೋಸಲ ಧನೀ॥**

ತಂದೆಯವರೇ! ನಿಮ್ಮ ಅನುಗ್ರಹದಿಂದ ವನವಾಸದಲ್ಲಿ ನನಗೆ ಶುಭವೇ ದೊರೆಯುತ್ತದೆ. ತಮ್ಮ ಆಜ್ಞೆಯನ್ನು ಪಾಲಿಸಿ ಬೇಗನೇ ನಿಮ್ಮ ಚರಣದರ್ಶನಕ್ಕಾಗಿ ಕ್ಷೇಮದಿಂದ ಹಿಂತಿರುಗುತ್ತೇನೆ.'' ಎಲ್ಲ ತಾಯಂದಿರ ಕಾಲಿಗೂ ಬಿದ್ದು ಅವರನ್ನು ಸಂತೈಸು. ತುಲಸೀದಾಸರ ಪ್ರಭುವಾದ ಶ್ರೀರಾಮನು – ''ಕೋಸಲಾಧೀಶನಾದ ದಶರಥನು ಕುಶಲನಾಗಿರುವುದಕ್ಕೆ ಏನು ಬೇಕೋ ಅದನ್ನು ಮಾಡು ಎಂದ ಹೇಳಿದನು. (ಛಂದ)

**ಸೋ – ಗುರ ಸನ ಕಹಬ ಸಁದೇಸು ಬಾರ ಬಾರ ಪದ ಪದುಮ ಗಹಿ।**
**ಕರಬ ಸೋಇ ಉಪದೇಸು ಜೆಹಿಂ ನ ಸೋಚ ಮೋಹಿ ಅವಧಪತಿ॥ ೧೫೧ ॥**

ಗುರುಗಳಾದ ವಸಿಷ್ಠರ ಪಾದಪದ್ಮಗಳಿಗೆ, ನನ್ನ ನಮಸ್ಕಾರಗಳನ್ನು ತಿಳಿಸು. 'ಅಯೋಧ್ಯಾಧಿಪತಿ ದಶರಥ ಮಹಾರಾಜರು ನನ್ನ ಕುರಿತು ಚಿಂತಿಸದಿರುವಂತೆ ಉಪದೇಶಿಸಬೇಕು'' ಎಂದು ನನ್ನ ಸಂದೇಶವನ್ನು ಹೇಳು. (ಸೋ/೧೫೧)

**ಚೌ – ಪುರಜನ ಪರಿಜನ ಸಕಲ ನಿಹೋರೀ। ತಾತ ಸುನಾಏಹು ಬಿನತೀ ಮೋರೀ॥**
**ಸೋಇ ಸಬ ಭಾಂತಿ ಮೋರ ಹಿತಕಾರೀ। ಜಾತೇಂ ರಹ ನರನಾಹು ಸುಖಾರೀ॥ ೧ ॥**
**ಕಹಬ ಸಂದೇಸು ಭರತ ಕೇ ಆಏಁ। ನೀತಿ ನ ತಜಿಅ ರಾಜಪದು ಪಾಏಁ॥**
**ಪಾಲೆಹು ಪ್ರಜಹಿ ಕರಮ ಮನ ಬಾನೀ। ಸೇಏಹು ಮಾತು ಸಕಲ ಸಮ ಜಾನೀ॥ ೨ ॥**
**ಓರ ನಿಬಾಹೆಹು ಭಾಯಪ ಭಾಈ। ಕರಿ ಪಿತು ಮಾತು ಸುಜನ ಸೇವಕಾಈ॥**
**ತಾತ ಭಾಂತಿ ತೆಹಿ ರಾಖಬ ರಾಊ। ಸೋಚ ಮೋರ ಜೆಹಿಂ ಕರೈ ನ ಕಾಊ॥ ೩ ॥**
**ಲಖನ ಕಹೇ ಕಛು ಬಚನ ಕಠೋರಾ। ಬರಜಿ ರಾಮ ಪುನಿ ಮೋಹಿ ನಿಹೋರಾ॥**
**ಬಾರ ಬಾರ ನಿಜ ಸಪಥ ದೇವಾಈ। ಕಹಬಿ ನ ತಾತ ಲಖನ ಲರಿಕಾಈ॥ ೪ ॥**

ಅಯ್ಯಾ! ನಗರವಾಸಿಗಳಿಗೂ, ಕುಟುಂಬದವರಿಗೂ ನನ್ನ ಮಾತನ್ನು ತಿಳಿಸು. ಮಹಾರಾಜರು ಕ್ಷೇಮವಾಗಿರಲು ಪ್ರಯತ್ನಿಸುವವರೇ ನನಗೆ ನಿಜವಾದ ಹಿತಕಾರಿಗಳು. ಭರತನು ಬಂದ ಬಳಿಕ – 'ರಾಜಪದವಿ ದೊರೆತ ಮೇಲೆ ನೀತಿಯನ್ನು ತೊರೆಯಬಾರದು.' ಕರ್ಮ, ವಚನ, ಮನಸ್ಸಿನಿಂದ ಪ್ರಜೆಯನ್ನು ಪಾಲಿಸುವುದು. ಎಲ್ಲ ತಾಯಂದಿರನ್ನು ಸಮಾನವಾಗಿ ಆದರಿಸಿ ಸೇವೆ ಮಾಡು. ತಮ್ಮಾ! ತಂದೆ-ತಾಯಿ ಹಾಗೂ ಸ್ವಜನರ ಸೇವೆಗೈದು ಭ್ರಾತೃತ್ವವನ್ನು ಕೊನೆಯವರೆಗೆ ಉಳಿಸಿಕೊಂಡು ಬರುವುದು', ಎಂಬ ನನ್ನ ಸಂದೇಶವನ್ನು ಅವನಿಗೆ ತಿಳಿಸುವುದು. ಅಯ್ಯಾ! ತಂದೆಯವರು ನನ್ನ ಕುರಿತು

ಯಾವುದೇ ಚಿಂತೆಮಾಡದಂತೆ ಅವರನ್ನು ಪ್ರೇಮದಿಂದ ವಿನಂತಿಸಿಕೋ. ಆಗ ಲಕ್ಷ್ಮಣನು ಏನೋ ಕಟುಮಾತನ್ನಾಡಿದನು. ಆದರೆ ರಾಮನು ಆತನನ್ನು ತಡೆದು, ನನಗೆ ಅನುರೋಧಮಾಡಿ ತನ್ನ ಮೇಲೆ ಆಣೆಯಿಟ್ಟುಕೊಂಡು ಹೇಳಿದ – 'ಲಕ್ಷ್ಮಣನ ಹುಡುಗುತನವನ್ನು ಅಲ್ಲಿ ಹೇಳಬೇಡ.' (ಲಕ್ಷ್ಮಣನು ಆಡಿದ ಕಠೋರ ವಚನಗಳು ಶ್ರೀರಾಮನ ಮೇಲೆ ಅವನಿಗಿರುವ ಪ್ರೀತಿಯ ನಿದರ್ಶನ.) (ಚೌ/೧-೪)

**ದೋ – ಕಹಿ ಪ್ರನಾಮು ಕಛು ಕಹನ ಲಿಯ ಸಿಯ ಭಇ ಸಿಥಿಲ ಸನೇಹ ।**
**ಥಕಿತ ಬಚನ ಲೋಚನ ಸಜಲ ಪುಲಕ ಪಲ್ಲವಿತ ದೇಹ ॥ ೧೫೨ ॥**

ಸೀತಾದೇವಿಯೂ ಪ್ರಣಾಮಗೈದು ಏನನ್ನೋ ಹೇಳಬೇಕೆಂದಿದ್ದಳು. ಆದರೆ ಆಕೆ ಪ್ರೇಮವಿಹ್ವಲಳಾಗಿ ಶಿಥಿಲಳಾದಳು. ಅವಳ ಕೊರಳು ಕಟ್ಟಿಬಂದಿತು. ಕಣ್ಣು ತುಂಬಿ ಬಂದವು. ಮೈ ಪುಳಕಿತವಾಯಿತು. (ದೋ/೧೫೨)

**ಚೌ – ತೇಹಿ ಅವಸರ ರಘುಬರ ರುಖ ಪಾಈ । ಕೇವಟ ಪಾರಹಿ ನಾವ ಚಲಾಈ ॥**
**ರಘುಕುಲತಿಲಕ ಚಲೇ ಏಹಿ ಭಾಂತೀ । ದೇಖಉ ಠಾಢ ಕುಲಿಸ ಧರಿ ಛಾತೀ ॥ ೧ ॥**
**ಮೈಂ ಆಪನ ಕಿಮಿ ಕಹೌಂ ಕಲೇಸೂ । ಜಿಅತ ಫಿರೇಉಂ ಲೇಇ ರಾಮ ಸಂದೇಸೂ ॥**
**ಅಸ ಕಹಿ ಸಚಿವ ಬಚನ ರಹಿ ಗಯಊ । ಹಾನಿ ಗಲಾನಿ ಸೋಚ ಬಸ ಭಯಊ ॥ ೨ ॥**
**ಸೂತ ಬಚನ ಸುನತಹಿಂ ನರನಾಹೂ । ಪರೇಉ ಧರನಿ ಉರ ದಾರುನ ದಾಹೂ ॥**
**ತಲಫತ ಬಿಷಮ ಮೋಹ ಮನ ಮಾಪಾ । ಮಾಜಾ ಮನಹುಂ ಮೀನ ಕಹುಂ ಬ್ಯಾಪಾ ॥ ೩ ॥**
**ಕರಿ ಬಿಲಾಪ ಸಬ ರೋವಹಿಂ ರಾನೀ । ಮಹಾ ಬಿಪತಿ ಕಿಮಿ ಜಾಇ ಬಖಾನೀ ॥**
**ಸುನಿ ಬಿಲಾಪ ದುಖಹೂ ದುಖು ಲಾಗಾ । ಧೀರಜಹೂ ಕರ ಧೀರಜು ಭಾಗಾ ॥ ೪ ॥**

ಅದೇ ವೇಳೆಗೆ ಶ್ರೀರಾಮನ ಮನೋಧರ್ಮವನ್ನು ಲಕ್ಷಿಸಿ, ಅಂಬಿಗನು ದೋಣಿಯನ್ನು ಮುಂದಕ್ಕೆ ನಡೆಸಿದನು. ಈ ಪ್ರಕಾರ ರಘುಕುಲತಿಲಕನಾದ ಶ್ರೀರಾಮನು ವನಕ್ಕೆ ಹೊರಟುಹೋದನು. ನಾನು ಎದೆಯನ್ನು ವಜ್ರದಂತೆ ಗಟ್ಟಿಯಾಗಿಸಿಕೊಂಡು ಎಲ್ಲವನ್ನು ನೋಡುತ್ತಾ ನಿಂತುಕೊಂಡೆ. ಶ್ರೀರಾಮನ ಈ ಸಂದೇಶವನ್ನು ಹೊತ್ತುಕೊಂಡು ಜೀವಸಹಿತ ಬಂದೆನಲ್ಲ! ನನ್ನ ಕ್ಲೇಶವನ್ನು ಏನೆಂದು ಹೇಳಲಿ? ಹೀಗೆ ಹೇಳುತ್ತಾ ಮಂತ್ರಿಯ ಕೊರಳು ಕಟ್ಟಿದಂತಾಯಿತು. ಅವನ ಹೃದಯ ಶೋಕತಪ್ತವಾಯಿತುಯ. ಸಾರಥಿಯಾದ ಸುಮಂತ್ರನ ಮಾತನ್ನು ಕೇಳಿದ ಕೂಡಲೇ ಅರಸನು ನೆಲಕ್ಕೊರಗಿದನು. ಆತನ ಎದೆಯಲ್ಲಿ ದಳ್ಳುರಿಯೆದ್ದಿತು. ಮೀನುಗಳಿಗೆ ಮುಂಗಾರು ಮಳೆಯ ನೀರು ಬಡೆದಂತೆ ಅವನು ಒದ್ದಾಡತೊಡಗಿದನು. ಭೀಷಣ ಮೋಹದಿಂದ ವ್ಯಾಕುಲನಾದನು. ಎಲ್ಲ ರಾಣಿಯರೂ ಪ್ರಲಾಪಮಾಡುತ್ತಾ ಅಳತೊಡಗಿದರು. ಆ ಮಹಾನ್ ವಿಪತ್ತನ್ನು ವರ್ಣಿಸುವುದೆಂತು? ಆ ವಿಲಾಪವನ್ನು ಕೇಳಿ ದುಃಖಕ್ಕೂ ದುಃಖವಾಯಿತು. ಧೈರ್ಯದ ಧೈರ್ಯವೂ ಹಾರಿಹೋಯಿತು. (ಚೌ/೧-೪)

**ದೋ – ಭಯಉ ಕೊಲಾಹಲು ಅವಧ ಅತಿ ಸುನಿ ನೃಪ ರಾಉರ ಸೋರು ।**
**ಬಿಪುಲ ಬಿಹಗ ಬನ ಪರೇಉ ನಿಸಿ ಮಾನಹುಂ ಕುಲಿಸ ಕಠೋರು ॥ ೧೫೩ ॥**

ಮಹಾರಾಣಿ ಕೌಸಲ್ಯಾದೇವಿಯ ಭವನದಿಂದ ಕೇಳಿಬರುತ್ತಿದ್ದ ಈ ಅಳುವಿನ ಧ್ವನಿಯು ಅಯೋಧ್ಯಾನಗರದಲ್ಲೆಲ್ಲಾ ಹಾಹಾಕಾರದಿಂದ ತುಂಬಿಹೋಯಿತು. ವಿಶಾಲವಾದ ಪಕ್ಷಿಗಳ ವನದಲ್ಲಿ ರಾತ್ರಿ ಸಿಡಿಲು ಬಡಿಯಿತೋ ಎನ್ನುವಂತಾಯಿತು. (ದೋ/೧೫೩)

**ಚೌ – ಪ್ರಾನ ಕಂಠಗತ ಭಯಉ ಭುಆಲೂ । ಮನಿ ಬಿಹೀನ ಜನು ಬ್ಯಾಕುಲ ಬ್ಯಾಲೂ ॥**
**ಇಂದ್ರೀಂ ಸಕಲ ಬಿಕಲ ಭಇಂ ಭಾರೀ । ಜನು ಸರ ಸರಸಿಜ ಬನು ಬಿನು ಬಾರೀ ॥ ೧ ॥**
**ಕೌಸಲ್ಯಾಂ ನೃಪು ದೀಖ ಮಲಾನಾ । ರಬಿಕುಲ ರಬಿ ಅಁಥಯಉ ಜಿಯಁ ಜಾನಾ ॥**
**ಉರ ಧರಿ ಧೀರ ರಾಮ ಮಹತಾರೀ । ಬೋಲೀ ಬಚನ ಸಮಯ ಅನುಸಾರೀ ॥ ೨ ॥**
**ನಾಥ ಸಮುಝಿ ಮನ ಕರಿಅ ಬಿಚಾರೂ । ರಾಮ ಬಿಯೋಗ ಪಯೋಧಿ ಅಪಾರೂ ॥**
**ಕರನಧಾರ ತುಮ್ಹ ಅವಧ ಜಹಾಜೂ । ಚಢ಼ೇಉ ಸಕಲ ಪ್ರಿಯ ಪಥಿಕ ಸಮಾಜೂ ॥ ೩ ॥**
**ಧೀರಜು ಧರಿಅ ತ ಪಾಇಅ ಪಾರೂ । ನಾಹಿಂ ತ ಬೂಡಿಹಿ ಸಬು ಪರಿವಾರೂ ॥**
**ಜೌಂ ಜಿಯಁ ಧರಿಅ ಬಿನಯ ಪಿಯ ಮೋರೀ । ರಾಮು ಲಖನು ಸಿಯ ಮಿಲಹಿಂ ಬಹೋರೀ ॥ ೪ ॥**

ಮಹಾರಾಜರ ಪ್ರಾಣಗಳು ಕಂಠಗತವಾದುವು. ಅವನು ಮಣಿಯನ್ನು ಕಳಕೊಂಡ ಸರ್ಪದಂತೆ ವ್ಯಾಕುಲನಾದನು. ನೀರಿಲ್ಲದ ಸರೋವರದಲ್ಲಿನ ಕಮಲಗಳು ಬಾಡಿಹೋಗುವಂತೆ ಅವನ ಎಲ್ಲ ಇಂದ್ರಿಯಗಳು ವಿಕಲವಾದುವು. ಕೌಸಲ್ಯೆಯು ಮಹಾರಾಜರ ದುಃಖವನ್ನು ನೋಡಿ ಸೂರ್ಯವಂಶದ ಭಾನುವು ಮುಳುಗಲಿದ್ದಾನೆ ಎಂದು ಗ್ರಹಿಸಿ, ಧೈರ್ಯವನ್ನು ತಂದುಕೊಂಡು ಅವಳು ಸಂದರ್ಭೋಚಿತವಾಗಿ ಇಂತೆಂದಳು – ನಾಥಾ! ನೀವು ತಿಳಿದು ವಿಚಾರಮಾಡಿರಿ. ಶ್ರೀರಾಮಚಂದ್ರನ ವಿಯೋಗವೆಂಬುದು ಒಂದು ಅಪಾರಸಮುದ್ರವಾಗಿದೆ. ಅಯೋಧ್ಯೆಯೇ ಹಡಗು. ನೀವು ಅದನ್ನು ನಡೆಸುವ ಕರ್ಣಧಾರರು. ಪ್ರಿಯಜನರೇ ಇದನ್ನೇರಿರುವ ಪ್ರಯಾಣಿಕರು. ನೀವು ಧೈರ್ಯತಾಳಿದರೆ ಎಲ್ಲರೂ ದಡಮುಟ್ಟುವರು. ಇಲ್ಲದಿದ್ದರೆ ಅವರೆಲ್ಲ ಮುಳುಗಿ ಹೋದಾರು. ಪ್ರಿಯಸ್ವಾಮಿ! ನೀವು ನನ್ನ ಪ್ರಾರ್ಥನೆ ಆಲಿಸುವುದಾದರೆ ರಾಮ, ಲಕ್ಷ್ಮಣ, ಸೀತೆ ಇವರನ್ನು ನೀವು ಮರಳಿ ನೋಡಬಹುದು. (ಚೌ/೧-೪)

**ದೋ – ಪ್ರಿಯಾ ಬಚನ ಮೃದು ಸುನತ ನೃಪು ಚಿತಯಉ ಆँಖಿ ಉಘಾರಿ ।**
**ತಲಫತ ಮೀನ ಮಲೀನ ಜನು ಸೀँಚತ ಸೀತಲ ಬಾರಿ ॥ ೧೫೪ ॥**

ಪ್ರಿಯಪತ್ನೀ ಕೌಸಲ್ಯೆಯ ಕೋಮಲವಾಣಿಯನ್ನು ಕೇಳಿ ರಾಜನು ಮೆಲ್ಲನೆ ಕಣ್ಣುಬಿಟ್ಟು ನೋಡಿದನು. ವಿಲವಿಲನೆ ಒದ್ದಾಡುತ್ತಿದ್ದ ಮೀನಿನ ಮೇಲೆ ತಣ್ಣೀರನ್ನು ಚಿಮುಕಿಸಿದಂತಾಯಿತು. (ದೋ/೧೫೪)

**ಚೌ – ಧರಿ ಧೀರಜು ಉಠಿ ಬೈಠ ಭುಆಲೂ । ಕಹು ಸುಮಂತ್ರ ಕಹँ ರಾಮ ಕೃಪಾಲೂ ॥**
**ಕಹಾँ ಲಖನು ಕಹँ ರಾಮು ಸನೇಹೀ । ಕಹँ ಪ್ರಿಯ ಪುತ್ರ ಬಧೂ ಬೈದೇಹೀ ॥ ೧ ॥**
**ಬಿಲಪತ ರಾಉ ಬಿಕಲ ಬಹು ಭಾಂತೀ । ಭಇ ಜುಗ ಸರಿಸ ಸಿರಾತಿ ನ ರಾತೀ ॥**
**ತಾಪಸ ಅಂಧ ಸಾಪ ಸುಧಿ ಆಈ । ಕೌಸಲ್ಯಹಿ ಸಬ ಕಥಾ ಸುನಾಈ ॥ ೨ ॥**
**ಭಯಉ ಬಿಕಲ ಬರನತ ಇತಿಹಾಸಾ । ರಾಮ ರಹಿತ ಧಿಗ ಜೀವನ ಆಸಾ ॥**
**ಸೋ ತನು ರಾಖಿ ಕರಬ ಮೈँ ಕಾಹಾ । ಜೆಹಿँ ನ ಪ್ರೇಮ ಪನು ಮೋರ ನಿಬಾಹಾ ॥ ೩ ॥**
**ಹಾ ರಘುನಂದನ ಪ್ರಾನ ಪಿರೀತೇ । ತುಮ್ಹ ಬಿನು ಜಿಅತ ಬಹುತ ದಿನ ಬೀತೇ ॥**
**ಹಾ ಜಾನಕೀ ಲಖನ ಹಾ ರಘುಬರ । ಹಾ ಪಿತು ಹಿತ ಚಿತ ಚಾತಕ ಜಲಧರ ॥ ೪ ॥**

ರಾಜನು ಧೈರ್ಯವಹಿಸಿ ಎದ್ದು ಕುಳಿತು ಇಂತೆಂದನು – ''ಸುಮಂತ್ರಾ! ಹೇಳು. ಕೃಪಾಳುವಾದ ನನ್ನ ಶ್ರೀರಾಮನು ಎಲ್ಲಿ? ರಾಮಸ್ನೇಹಿಯಾದ ಲಕ್ಷ್ಮಣನೆಲ್ಲಿ? ನನ್ನ ಪ್ರೀತಿಯ ಸೊಸೆ ವೈದೇಹಿ ಎಲ್ಲಿ?'' ಈ ಪ್ರಕಾರ ರಾಜನು ವ್ಯಾಕುಲಗೊಂಡು ವಿಲಾಪಿಸುತ್ತಿರುವನು. ಆ ಇರುಳು ಯುಗದಂತೆ ಕಂಡಿತು. ಏನು ಮಾಡಿದರೂ ಹೊತ್ತು ಉರುಳಲೇ ಒಲ್ಲದು. ಆಗ ಅರಸನಿಗೆ ಶ್ರವಣಕುಮಾರನ ತಂದೆ ಅಂಧತಾಪಸಿಯ ಶಾಪದ ನೆನಪಾಯಿತು. ಆ ಎಲ್ಲ ಕಥೆಯನ್ನು ಕೌಸಲ್ಯೆಗೆ ಹೇಳಿದನು. ಆ ಇತಿಹಾಸವನ್ನು ವರ್ಣಿಸುತ್ತಾ ಇನ್ನೂ ವಿಕಲಮನಸ್ಕನಾದನು. 'ಶ್ರೀರಾಮನು ಇಲ್ಲದೆ ನಾನು ಜೀವಿಸಿರುವುದು ಅಸಂಭವ. ಪ್ರೇಮವು ಸಫಲವಾಗದಿರುವಾಗ ಈ ಶರೀರವಿದ್ದು ಏನು ಲಾಭ? ಹಾ ರಘುಕುಲನಂದನಾ! ಪ್ರಾಣಪ್ರಿಯರಾಮಾ! ನೀನಿಲ್ಲದೆ ನಾನು ತುಂಬಾ ದಿನಗಳಿಂದ ಬದುಕುತ್ತಾ ಬಂದಿದ್ದೇನೆ. ಹಾ ಜಾನಕೀ! ಹಾ ಲಕ್ಷ್ಮಣಾ! ಹಾ ರಘುರಾಮಾ! ನಿನ್ನ ತಂದೆಯ ಚಿತ್ತರೂಪೀ ಚಾತಕಕ್ಕೆ ಮೇಘದಂತಿರುವವನೇ! – (ಚೌ/೧-೪)

**ದೋ – ರಾಮ ರಾಮ ಕಹಿ ರಾಮ ಕಹಿ ರಾಮ ರಾಮ ಕಹಿ ರಾಮ ।**
**ತನು ಪರಿಹರಿ ರಘುಬರ ಬಿರಹँ ರಾಉ ಗಯಉ ಸುರಧಾಮ ॥ ೧೫೫ ॥**

ರಾಮಾ ರಾಮಾ'' ಎಂದು ಪದೇ-ಪದೇ ಕನವರಿಸುತ್ತಾ ರಾಜನು ರಾಮವಿಯೋಗವನ್ನು ಸಹಿಸಲಾಗದೆ ಶರೀರವನ್ನು ತ್ಯಜಿಸಿ ಸುರಲೋಕವನ್ನೈದಿದನು. (ದೋ/೧೫೫)

**ಚೌ – ಜಿಅನ ಮರನ ಫಲು ದಸರಥ ಪಾವಾ । ಅಂಡ ಅನೇಕ ಅಮಲ ಜಸು ಛಾವಾ ॥**
**ಜಿಅತ ರಾಮ ಬಿಧು ಬದನು ನಿಹಾರಾ । ರಾಮ ಬಿರಹ ಕರಿ ಮರನು ಸँವಾರಾ ॥ ೧ ॥**
**ಸೋಕ ಬಿಕಲ ಸಬ ರೋವಹಿँ ರಾನೀ । ರೂಪು ಸೀಲು ಬಲು ತೇಜು ಬಖಾನೀ ॥**
**ಕರಹಿँ ಬಿಲಾಪ ಅನೇಕ ಪ್ರಕಾರಾ । ಪರಹಿँ ಭೂಮಿತಲ ಬಾರಹಿँ ಬಾರಾ ॥ ೨ ॥**
**ಬಿಲಪಹಿँ ಬಿಕಲ ದಾಸ ಅರು ದಾಸೀ । ಘರ ಘರ ರುದನು ಕರಹಿँ ಪುರಬಾಸೀ ॥**
**ಅँಥಯಉ ಆಜು ಭಾನುಕುಲ ಭಾನೂ । ಧರಮ ಅವಧಿ ಗುನ ರೂಪ ನಿಧಾನೂ ॥ ೩ ॥**

ಗಾರೀಂ ಸಕಲ ಕೈಕಇಹಿ ದೇಹೀಂ । ನಯನ ಬಿಹೀನ ಕೀನ್ಹ ಜಗ ಜೇಹೀಂ ॥
ಏಹಿ ಬಿಧಿ ಬಿಲಪತ ರೈನಿ ಬಿಹಾನೀ । ಆಏ ಸಕಲ ಮಹಾಮುನಿ ಗ್ಯಾನೀ ॥ ೪ ॥

ದಶರಥನು ತನ್ನ ಜೀವಿತವನ್ನೂ, ಮರಣವನ್ನೂ ಸಾರ್ಥಕಪಡಿಸಿಕೊಂಡನು. ಆತನ ನಿರ್ಮಲ ಯಶಸ್ಸು ಬ್ರಹ್ಮಾಂಡದಲ್ಲೆಲ್ಲ ಹಬ್ಬಿತು. ಬದುಕಿರುವಾಗಲಂತೂ ಆವನು ಶ್ರೀರಾಮಚಂದ್ರನ ಸುಂದರ ವದನವನ್ನು ದರ್ಶಿಸಿದನು ಹಾಗೂ ಆತನ ವಿಯೋಗವನ್ನು ನಿಮಿತ್ತವಾಗಿಸಿಕೊಂಡು ತನ್ನ ಸಾವನ್ನು ಸಾರ್ಥಕಪಡಿಸಿಕೊಂಡನು. ಎಲ್ಲ ರಾಣಿಯರೂ ಶೋಕಾಕುಲರಾಗಿ ಅಳುತ್ತಿದ್ದರು. ಅವರು ಅರಸನ ರೂಪ, ಶೀಲ, ಬಲ, ಪ್ರತಾಪವನ್ನು ಕೊಂಡಾಡುತ್ತಾ ಪರಿಪರಿಯಾಗಿ ಗೋಳಾಡುತ್ತಾ, ಮತ್ತೆ-ಮತ್ತೆ ನೆಲಕ್ಕುರುಳುತ್ತಿದ್ದರು. ದಾಸ-ದಾಸಿಯರು ವ್ಯಾಕುಲರಾಗಿ ವಿಲಾಪ ಮಾಡುತ್ತಿದ್ದರು. ನಗರವಾಸಿಗಳು ಮನೆ-ಮನೆಯಲ್ಲೂ ರೋದಿಸುತ್ತಿದ್ದರು. 'ಇಂದು ಧರ್ಮದ ಸೀಮಾಪುರುಷ, ಗುಣ ರೂಪದ ಭಂಡಾರ ಹಾಗೂ ಭಾನುಕುಲದ ಸೂರ್ಯನು ಅಸ್ತಂಗತನಾದನು' ಎಂದು ಹಲಬುತ್ತಿದ್ದರು. ಜಗತ್ತಿನ ಕಣ್ಣನ್ನೇ ಕಿತ್ತುಕೊಂಡ ಕೈಕೆಯಿಯನ್ನು ಎಲ್ಲರೂ ಬೈಯ್ಯುತ್ತಿದ್ದರು. ಈ ಪ್ರಕಾರ ವಿಲಾಪಿಸುವುದರಲ್ಲಿ ಇರುಳು ಕಳೆಯಿತು. ಪ್ರಾತಃಕಾಲದಲ್ಲಿ ಮಹಾ ಜ್ಞಾನಿಗಳೂ, ಮುನಿಗಳೂ ಆಗಮಿಸಿದರು. (ಚೌ/೧-೪)

**ದೋ – ತಬ ಬಸಿಷ್ಠ ಮುನಿ ಸಮಯ ಸಮ ಕಹಿ ಅನೇಕ ಇತಿಹಾಸ ।**
**ಸೋಕ ನೆವಾರೆಉ ಸಬಹಿ ಕರ ನಿಜ ಬಿಗ್ಯಾನ ಪ್ರಕಾಸ ॥ ೧೫೬ ॥**

ಆಗ ವಸಿಷ್ಠಮುನಿಗಳು ಸಮಯೋಚಿತವಾಗಿ ಅನೇಕ ಇತಿಹಾಸಗಳನ್ನು ಹೇಳಿ, ತನ್ನ ವಿಜ್ಞಾನದ ಪ್ರಕಾಶದಿಂದ ಎಲ್ಲರ ಶೋಕವನ್ನು ದೂರಮಾಡಿದರು. (ದೋ/೧೫೬)

## ಅಯೋಧ್ಯೆಗೆ ಭರತನ ಆಗಮನ

**ಚೌ – ತೇಲ ನಾವ್ ಭರಿ ನೃಪ ತನು ರಾಖಾ । ದೂತ ಬೊಲಾಇ ಬಹುರಿ ಅಸ ಭಾಷಾ ॥**
**ಧಾವಹು ಬೇಗಿ ಭರತ ಪಹಿಂ ಜಾಹೂ । ನೃಪ ಸುಧಿ ಕತಹುಂ ಕಹಹು ಜನಿ ಕಾಹೂ ॥ ೧ ॥**
**ಏತನೇಇ ಕಹೆಹು ಭರತ ಸನ ಜಾಈ । ಗುರ ಬೊಲಾಈ ಪಠಯಉ ದೊಉ ಭಾಈ॥**
**ಸುನಿ ಮುನಿ ಆಯಸು ಧಾವನ ಧಾಏ । ಚಲೇ ಬೇಗ ಬರ ಬಾಜಿ ಲಜಾಏ ॥ ೨ ॥**
**ಅನರಥು ಅವಧ ಅರಂಭೆಉ ಜಬ ತೇಂ । ಕುಸಗುನ ಹೋಹಿಂ ಭರತ ಕಹುಂ ತಬ ತೇಂ ॥**
**ದೇಖಹಿಂ ರಾತಿ ಭಯಾನಕ ಸಪನಾ । ಜಾಗಿ ಕರಹಿಂ ಕಟು ಕೋಟಿ ಕಲಪನಾ ॥ ೩ ॥**
**ಬಿಪ್ರ ಜೆವಾँಇ ದೇಹಿಂ ದಿನ ದಾನಾ । ಸಿವ ಅಭಿಷೇಕ ಕರಹಿಂ ಬಿಧಿ ನಾನಾ ॥**
**ಮಾಗಹಿಂ ಹೃದಯಂ ಮಹೇಸ ಮನಾಈ । ಕುಸಲ ಮಾತು ಪಿತು ಪರಿಜನ ಭಾಈ ॥ ೪ ॥**

ಎಣ್ಣೆತುಂಬಿದ ದೋಣಿಯಲ್ಲಿ ರಾಜನ ಮೃತ ಕಳೇಬರವನ್ನು ಇರಿಸಲು ಮಹರ್ಷಿಗಲು ಆಜ್ಞಾಪಿಸಿದರು. ಅನಂತರ ದೂತರನ್ನು ಕರೆದು ಹೇಳಿದರು – ''ನೀವುಗಳು ಬೇಗನೇ ಧಾವಿಸಿ ಭರತನ ಬಳಿಗೆ ಹೋಗಿರಿ. ಅರಸನ ಮೃತ್ಯುವಿನ ವಾರ್ತೆಯನ್ನು ಎಲ್ಲಿಯೂ ಯಾರಿಗೂ ಹೇಳಬೇಡಿರಿ. ಹೋಗಿ ಭರತನಲ್ಲಿ – 'ನಿಮ್ಮಿಬ್ಬರನ್ನೂ ಗುರುಗಳು ಬೇಗನೇ ಬರಹೇಳಿರುವರು' ಎಂದು ಮಾತ್ರ ಹೇಳಿರಿ.'' ಮುನಿಯ ಆಜ್ಞೆಯಂತೆ ದೂತರು ಕೂಡಲೇ ಉತ್ತಮಾಶ್ವಗಳಿಂದಲೂ ಹೆಚ್ಚು ವೇಗವಾಗಿ ಓಡುತ್ತಾ ತೆರಳಿದರು.

ಅಯೋಧ್ಯೆಯಲ್ಲಿ ಈ ಅನರ್ಥಪರಂಪರೆಗಳು ಪ್ರಾರಂಭವಾದಾಗಿನಿಂದ ಭರತನಿಗೆ ಅಪಶಕುನಗಳೇ ಎದುರಾಗುತ್ತಿದ್ದವು. ಅವನಿಗೆ ರಾತ್ರಿಯಲ್ಲಿ ಭಯಂಕರವಾದ ಕನಸುಗಳು ಬೀಳುತ್ತಿದ್ದವು. ಎಚ್ಚರವಾದಾಗ ಆ ಸ್ವಪ್ನಗಳಿಂದಾಗಿ ಅನೇಕ ಕೆಟ್ಟ ಕಲ್ಪನೆಗಳು ಬರುತ್ತಿದ್ದವು. ಅನಿಷ್ಟಶಾಂತಿಗಾಗಿ ಆತನು ಪ್ರತಿದಿನವೂ ಬ್ರಾಹ್ಮಣಭೋಜನ ಮಾಡಿಸಿ, ದಾನಮಾಡುತ್ತಿದ್ದನು. ಅನೇಕ ವಿಧಿಗಳಿಂದ ರುದ್ರಾಭಿಷೇಕ ಮಾಡಿಸುತ್ತಿದ್ದನು. ಶಿವನಿಗೆ ಮನದಲ್ಲೇ ಹರಕೆಹೊತ್ತು ತನ್ನ ತಾಯಿ-ತಂದೆ, ಅಣ್ಣ-ತಮ್ಮಂದಿರಿಗೆ ಕ್ಷೇಮ ಉಂಟಾಗಲೆಂದು ಬೇಡುತ್ತಿದ್ದನು. (ಚೌ/೧-೪)

**ದೋ – ಏಹಿ ಬಿಧಿ ಸೋಚತ ಭರತ ಮನ ಧಾವನ ಪಹುಂಚೆ ಆಇ ।**
**ಗುರ ಅನುಸಾಸನ ಶ್ರವನ ಸುನಿ ಚಲೇ ಗನೇಸು ಮನಾಇ ॥ ೧೫೭ ॥**

ಭರತನು ಈ ವಿಧವಾಗಿ ಚಿಂತಾಗ್ರಸ್ಥನಾಗಿರುವಾಗ ಅಯೋಧ್ಯೆಯ ದೂತರು ಭರತನಲ್ಲಿಗೆ ಬಂದರು. ಗುರುವಿನ ಆಜ್ಞೆಯು ಕಿವಿಗೆ ಬಿದ್ದದ್ದೇ ತಡ, ಗಣಪತಿಯನ್ನು ನೆನೆದು ಭರತನು ಶತ್ರುಘ್ನನೊಂದಿಗೆ ಅಯೋಧ್ಯೆಗೆ ಹೊರಟೇ ಬಿಟ್ಟನು. (ದೋ/೧೫೭)

**ಚೌ – ಚಲೇ ಸಮೀರ ಬೇಗ ಹಯ ಹಾಂಕೇ । ನಾಘತ ಸರಿತ ಸೈಲ ಬನ ಬಾಂಕೇ ॥**
**ಹೃದಯ್ ಸೋಚು ಬಡ ಕಛು ನ ಸೊಹಾಈ । ಅಸ ಜಾನಹಿಂ ಜಿಯ್ ಜಾಉಂ ಉಡಾಈ ॥ ೧ ॥**
**ಏಕ ನಿಮೇಷ ಬರಷ ಸಮ ಜಾಈ । ಏಹಿ ಬಿಧಿ ಭರತ ನಗರ ನಿಅರಾಈ ॥**
**ಅಸಗುನ ಹೋಹಿಂ ನಗರ ಪೈಠಾರಾ । ರಟಹಿಂ ಕುಭಾಂತಿ ಕುಖೇತ ಕರಾರಾ ॥ ೨ ॥**
**ಖರ ಸಿಆರ ಬೋಲಹಿಂ ಪ್ರತಿಕೂಲಾ । ಸುನಿ ಸುನಿ ಹೋಇ ಭರತ ಮನ ಸೂಲಾ ॥**
**ಶ್ರೀಹತ ಸರ ಸರಿತಾ ಬನ ಬಾಗಾ । ನಗರು ಬಿಸೇಷಿ ಭಯಾವನು ಲಾಗಾ ॥ ೩ ॥**
**ಖಗ ಮೃಗ ಹಯ ಗಯ ಜಾಹಿಂ ನ ಜೋಏ । ರಾಮ ಬಿಯೋಗ ಕುರೋಗ ಬಿಗೋಏ ॥**
**ನಗರ ನಾರಿ ನರ ನಿಪಟ ದುಖಾರೀ । ಮನಹುಂ ಸಬನ್ಹಿ ಸಬ ಸಂಪತಿ ಹಾರೀ ॥ ೪ ॥**

ವಾಯುವೇಗದ ಕುದುರೆಗಳನ್ನು ಓಡಿಸಿಕೊಂಡು ಆ ಸೋದರರು ವಿಕಟ ನದಿಗಳನ್ನು, ಬೆಟ್ಟಗುಡ್ಡಗಳನ್ನು, ದಟ್ಟಡವಿಯನ್ನು ಹಾದು ಹೋಗುತ್ತಿದ್ದರು. ಭರತನ ಮನಸ್ಸಿಗೆ ಎಲ್ಲಿಲ್ಲದ ಕಳವಳ. ಯಾವುದೂ ಹಿಡಿಸದು. ಹಾರಿಹೋದೇನು ಎಂದು ಅವನ ಮನ ಮಿಡುಕುತ್ತಿತ್ತು. ಅವನಿಗೆ ಒಂದೊಂದು ಕ್ಷಣವು ಯುಗದಂತೆ ಕಾಣುತ್ತಿತ್ತು. ಹೀಗೆ ಆಲೋಚಿಸುತ್ತಾ ಭರತನು ಅಯೋಧ್ಯೆಯ ಸಮೀಪಕ್ಕೆ ಬಂದು ಪುರಪ್ರವೇಶಮಾಡುವಾಗ ಅನೇಕ ಅಪಶಕುನಗಳು ಕಾಣಿಸಿದವು. ಕಾಗೆಗಳು ಕೆಟ್ಟ ಜಾಗದಲ್ಲಿ ಕುಳಿತು ಕರ್ಕಶವಾಗಿ ಕೂಗುತ್ತಿದ್ದವು. ಕತ್ತೆಗಳು, ನರಿಗಳು ಅಶುಭಸೂಚಕವಾಗಿ ಅರಚುತ್ತಿದ್ದವು. ಅದನ್ನು ಕೇಳಿ ಭರತನ ಮನಸ್ಸು ತಲ್ಲಣಿಸಿಹೋಯಿತು. ನದಿಗಳು, ಸರೋವರಗಳು, ವನ-ಉಪವನಗಳೂ ಶೋಭಾಹೀನವಾಗಿ ಹಾಳು ಸುರಿಯುತ್ತಿದ್ದವು. ನಗರವು ಅತ್ಯಂತ ಭಯಾನಕವಾಗಿ ಕಾಣುತ್ತಿತ್ತು. ರಾಮವಿಯೋಗವೆಂಬ ಕೆಟ್ಟರೋಗಕ್ಕೆ ತುತ್ತಾಗಿ ಪಶುಪಕ್ಷಿಗಳೂ, ಆನೆಗಳು, ಕುದುರೆಗಳು, ಕಂಗೆಟ್ಟು ಹೋಗಿದ್ದವು. ನಗರದ ನರ-ನಾರಿಯರು ತಮ್ಮ ಸಕಲ ಸಂಪತ್ತನ್ನು ಕಳಕೊಂಡವರಂತೆ ದುಃಖಿಗಳಾಗಿದ್ದರು. (ಚೌ/೧-೪)

**ದೋ – ಪುರಜನ ಮಿಲಹಿಂ ನ ಕಹಹಿಂ ಕಛು ಗವಂಹಿಂ ಜೊಹಾರಹಿಂ ಜಾಹಿಂ ।**
**ಭರತ ಕುಸಲ ಪೂಂಛಿ ನ ಸಕಹಿಂ ಭಯ ಬಿಷಾದ ಮನ ಮಾಹಿಂ ॥ ೧೫೮ ॥**

ಅಯೋಧ್ಯಾನಿವಾಸಿಗಳು ಭರತನಿಗೆ ಎದಿರಾಗುತ್ತಾರೆ, ಆದರೆ ಏನನ್ನು ಮಾತಾಡದೆ ವಂದಿಸಿ ಹಾಗೇ ಹೊರಟುಹೋಗುತ್ತಿದ್ದರು. ಭರತನೂ ಯಾರ ಯೋಗಕ್ಷೇಮವನ್ನು ವಿಚಾರಿಸಲು ಹೋಗುತ್ತಿರಲಿಲ್ಲ. ಏಕೆಂದರೆ, ಅವನ ಮನದಲ್ಲಿ ಭಯ-ವಿಷಾದಗಳು ತುಂಬಿಹೋಗಿದ್ದವು. (ದೋ/೧೫೮)

**ಚೌ – ಹಾಟ ಬಾಟ ನಹಿಂ ಜಾಇ ನಿಹಾರೀ । ಜನು ಪುರ ದಹಂ ದಿಸಿ ಲಾಗಿ ದವಾರೀ ॥**
**ಆವತ ಸುತ ಸುನಿ ಕೈಕಯನಂದಿನಿ । ಹರಷೀ ರಬಿಕುಲ ಜಲರುಹ ಚಂದಿನಿ ॥ ೧ ॥**
**ಸಜಿ ಆರತೀ ಮುದಿತ ಉಠಿ ಧಾಈ । ದ್ವಾರೆಹಿಂ ಭೇಂಟಿ ಭವನ ಲೇಇ ಆಈ ॥**
**ಭರತ ದುಖಿತ ಪರಿವಾರು ನಿಹಾರಾ । ಮಾನಹುಂ ತುಹಿನ ಬನಜ ಬನು ಮಾರಾ ॥ ೨ ॥**
**ಕೈಕೇಈ ಹರಷಿತ ಏಹಿ ಭಾಂತೀ । ಮನಹುಂ ಮುದಿತ ದವ ಲಾಇ ಕಿರಾತೀ ॥**
**ಸುತಹಿ ಸಸೋಚ ದೇಖಿ ಮನು ಮಾರೇಂ । ಪೂಂಛತಿ ನೈಹರ ಕುಸಲ ಹಮಾರೇಂ ॥ ೩ ॥**
**ಸಕಲ ಕುಸಲ ಕಹಿ ಭರತ ಸುನಾಈ । ಪೂಂಛೀ ನಿಜ ಕುಲ ಕುಸಲ ಭಲಾಈ ॥**
**ಕಹು ಕಹಂ ತಾತ ಕಹಾಂ ಸಬ ಮಾತಾ । ಕಹಂ ಸಿಯ ರಾಮ ಲಖನ ಪ್ರಿಯ ಭ್ರಾತಾ ॥ ೪ ॥**

ಪೇಟೆ, ಬೀದಿಗಳು ನೋಡಲಾಗುತ್ತಿರಲಿಲ್ಲ. ನಗರದಲ್ಲಿ ದಶದಿಕ್ಕುಗಳಲ್ಲಿಯೂ ದಾವಾಗ್ನಿಯು ಹಬ್ಬಿದಂತಿತ್ತು. ಮಗನ ಆಗಮನದ ವಾರ್ತೆಯನ್ನು ಕೇಳಿದ ರವಿಕುಲ ಕಮಲ ಚಂದ್ರಿಕೆಯಾದ ಕೈಕೆಯಿ ತುಂಬಾ ಹರ್ಷಗೊಂಡಳು. ಅವಳು ಆರತಿಯನ್ನು ಅಣಿಮಾಡಿಕೊಂಡು ಸಂಭ್ರಮದಿಂದ ಎದ್ದುಓಡಿದಳು. ಬಾಗಿಲಲ್ಲೇ ಭರತ-ಶತ್ರುಘ್ನರನ್ನು ಇದಿರ್ಗೊಂಡು ಅರಮನೆಯೊಳಗೆ ಕರಕೊಂಡು ಹೋದಳು. ಭರತನು ತನ್ನ ಪರಿವಾರವನ್ನು ನೋಡಿದಾಗ ಅವರು ಕಮಲವನಕ್ಕೆ ಹಿಮಪಾತವಾದಂತೆ ದುಃಖದಲ್ಲಿ ಮುಳುಗಿಹೋಗಿದ್ದರು. ಆದರೆ ಕೈಕೆಯಿ ಮಾತ್ರ ಕಾಡಿಗೆ ಬೆಂಕಿಹಚ್ಚಿ ಹಿಗ್ಗುತ್ತಿರುವ ಕಿರಾತರಮಣಿಯಂತೆ ಹಿಗ್ಗಿನಿಂದಿದ್ದಳು. ಮಗನು ಚಿಂತಾಕ್ರಾಂತನಾಗಿ, ಸಪ್ಪಗಿರುವುದನ್ನು ಕಂಡು, ಅವಳು ಕೇಳಿದಳು – 'ಮಗು! ನಮ್ಮ ತವರು ಮನೆಯಲ್ಲಿ ಎಲ್ಲರೂ ಕ್ಷೇಮತಾನೇ? ಭರತನು ಅಲ್ಲಿ ಎಲ್ಲರೂ ಕ್ಷೇಮವೆಂದು ತಿಳಿಸಿ, ತಮ್ಮ ಮನೆಯ ಕ್ಷೇಮಸಮಾಚಾರವನ್ನು ಕೇಳಿದನು – ಅಮ್ಮಾ! ತಂದೆಯವರು ಎಲ್ಲಿ? ಉಳಿದ ನನ್ನ ತಾಯಂದಿರು ಎಲ್ಲಿ? ಅತ್ತಿಗೆ ಸೀತಾದೇವಿಯೂ, ಪ್ರಿಯ ಸೋದರರಾದ ರಾಮ-ಲಕ್ಷ್ಮಣರು ಎಲ್ಲಿ? (ಚೌ/೧-೪)

**ದೋ – ಸುನಿ ಸುತ ಬಚನ ಸನೇಹಮಯ ಕಪಟ ನೀರ ಭರಿ ನೈನ ।**
**ಭರತ ಶ್ರವನ ಮನ ಸೂಲ ಸಮ ಪಾಪಿನಿ ಬೋಲೀ ಬೈನ ॥ ೧೫೯॥**

ಪುತ್ರನ ಸ್ನೇಹಮಯ ವಚನವನ್ನು ಕೇಳಿ, ಕಣ್ಣುಗಳಲ್ಲಿ ಕಪಟದ ಕಂಬನಿಯನ್ನು ತುಂಬಿಕೊಂಡು, ಪಾಪಿನಿಯಾದ ಕೈಕೇಯಿ ಭರತನ ಕಿವಿಗಳಿಗೆ ಹಾಗೂ ಮನಸ್ಸಿಗೆ ಶೂಲಪ್ರಾಯವಾದ ಮಾತನ್ನು ಆಡಿದಳು. (ದೋ/೧೫೯)

**ಚೌ – ತಾತ ಬಾತ ಮೈಂ ಸಕಲ ಸँವಾರೀ । ಭೈ ಮಂಥರಾ ಸಹಾಯ ಬಿಚಾರೀ ॥**
**ಕಛುಕ ಕಾಜ ಬಿಧಿ ಬೀಚ ಬಿಗಾರೆಉ । ಭೂಪತಿ ಸುರಪತಿ ಪುರ ಪಗು ಧಾರೆಉ ॥ ೧ ॥**
**ಸುನತ ಭರತು ಭಏ ಬಿಬಸ ಬಿಷಾದಾ । ಜನು ಸಹಮೆಉ ಕರಿ ಕೇಹರಿ ನಾದಾ ॥**
**ತಾತ ತಾತ ಹಾ ತಾತ ಪುಕಾರೀ । ಪರೇ ಭೂಮಿತಲ ಬ್ಯಾಕುಲ ಭಾರೀ ॥ ೨ ॥**
**ಚಲತ ನ ದೇಖನ ಪಾಯಉँ ತೋಹೀ । ತಾತ ನ ರಾಮಹಿ ಸೌಂಪೆಹು ಮೋಹೀ ॥**
**ಬಹುರಿ ಧೀರ ಧರಿ ಉಠೇ ಸಂಭಾರೀ । ಕಹು ಪಿತು ಮರನ ಹೇತು ಮಹತಾರೀ ॥ ೩ ॥**
**ಸುನಿ ಸುತ ಬಚನ ಕಹತಿ ಕೈಕೇಈ । ಮರಮು ಪಾँಛಿ ಜನು ಮಾಹುರ ದೇಈ ॥**
**ಆದಿಹು ತೇಂ ಸಬ ಆಪನಿ ಕರನೀ । ಕುಟಿಲ ಕಠೋರ ಮುದಿತ ಮನ ಬರನೀ ॥ ೪ ॥**

'ಮಗೂ! ನಾನು ಎಲ್ಲವೂ ಸಕ್ರಮವಾಗಿ ಏರ್ಪಡಿಸಿದ್ದೆ. ಮಂಥರೆಯು ನನಗೆ ತುಂಬಾ ಸಹಾಯಮಾಡಿದಳು. ಆದರೆ ವಿಧಿಯು ನಡುವೆ ಬಂದು ಕೆಲಸ ಕೆಡಿಸಿಬಿಟ್ಟಿತು. ಮಹಾರಾಜರು ಸ್ವರ್ಗಸ್ಥರಾದರು.' ಇದನ್ನು ಕೇಳುತ್ತಲೇ ಸಿಂಹಗರ್ಜನೆಯನ್ನು ಕೇಳಿದ ಆನೆಯಂತೆ ಭರತನು ವಿಷಾದದಿಂದ ವಿವಶನಾಗಿ – 'ಅಪ್ಪಾ! ಅಪ್ಪಾ! ತಂದೆಯೇ!' ಎಂದು ಚೀರಿ ನೆಲಕ್ಕುರುಳಿದನು. ಮತ್ತೆ ವಿಲಾಪಿಸುತ್ತಾ 'ಅಯ್ಯೋ ತಂದೆಯೇ! ನಿಮ್ಮ ಅವಸಾನಕಾಲದಲ್ಲಿಯೂ ಕೂಡ ನಾನು ನಿಮ್ಮನ್ನು ದರ್ಶಿಸದೆ ಹೋದೆನಲ್ಲ! ನೀವು ನನ್ನನ್ನು ಶ್ರೀರಾಮನಿಗೆ ಒಪ್ಪಿಸಿಯೂ ಹೋಗಲಿಲ್ಲ.' ಮತ್ತೆ ಭರತನು ಧೈರ್ಯವನ್ನು ತಂದುಕೊಂಡು ಮೇಲಕ್ಕೆದ್ದು ಕೇಳಿದನು – 'ಅಮ್ಮಾ! ತಂದೆಯವರ ಸಾವಿಗೆ ಕಾರಣವೇನು ಹೇಳು.' ಮಗನ ಮಾತನ್ನು ಕೇಳಿ, ಕಠಿಣಾತ್ಮಳಾದ ಕೈಕೇಯಿಯು ಹರ್ಷದಿಂದ ತಾನು ಮಾಡಿದ ಎಲ್ಲ ಕೆಲಸವನ್ನು ಮೊದಲಿನಿಂದ ವಿವರಿಸಿದಳು. ಅವಳ ಮಾತುಗಳು ಭರತನಿಗೆ 'ಮರ್ಮಸ್ಥಾನದಲ್ಲಿ ಗಾಯಗೊಳಿಸಿ ಅದರಲ್ಲಿ ವಿಷತುಂಬಿದಂತೆ ಅತೀವ ದುಃಖಪ್ರದವಾದವು. (ಚೌ/೧-೪)

**ದೋ – ಭರತಹಿ ಬಿಸರೆಉ ಪಿತು ಮರನ ಸುನತ ರಾಮ ಬನ ಗೌನು ।**
**ಹೇತು ಅಪನಪಉ ಜಾನಿ ಜಿಯँ ಥಕಿತ ರಹೇ ಧರಿ ಮೌನು ॥ ೧೬೦ ॥**

ಶ್ರೀರಾಮಚಂದ್ರನ ವನಗಮನ ವಾರ್ತೆಯನ್ನು ಕೇಳಿ, ಭರತನಿಗೆ ತಂದೆಯ ಮರಣ ಮರೆತುಹೋಯಿತು. ಈ ಎಲ್ಲ ಅನರ್ಥಕ್ಕೆ ತಾನೇ ಮೂಲಕಾರಣನೆಂದು ತಿಳಿದು ಆತನು ಮೌನವಾಗಿ ಸ್ತಂಭೀಭೂತನಾದನು. (ದೋ/೧೬೦)

**ಚೌ – ಬಿಕಲ ಬಿಲೋಕಿ ಸುತಹಿ ಸಮುಝಾವತಿ । ಮನಹುँ ಜರೇ ಪರ ಲೋನು ಲಗಾವತಿ ॥**
**ತಾತ ರಾಉ ನಹಿं ಸೋಚೈ ಜೋಗೂ । ಬಿಢಇ ಸುಕೃತ ಜಸು ಕೀನ್ಹೆಉ ಭೋಗೂ ॥ ೧ ॥**
**ಜೀವತ ಸಕಲ ಜನಮ ಫಲ ಪಾಏ । ಅಂತ ಅಮರಪತಿ ಸದನ ಸಿಧಾಏ ॥**
**ಅಸ ಅನುಮಾನಿ ಸೋಚ ಪರಿಹರಹೂ । ಸಹಿತ ಸಮಾಜ ರಾಜ ಪುರ ಕರಹೂ ॥ ೨ ॥**
**ಸುನಿ ಸುಠಿ ಸಹಮೆಉ ರಾಜಕುಮಾರೂ । ಪಾಕೇं ಛತ ಜನು ಲಾಗ ಅँಗಾರೂ ॥**
**ಧೀರಜ ಧರಿ ಭರಿ ಲೇಹಿं ಉಸಾಸಾ । ಪಾಪಿನಿ ಸಬಹಿ ಭಾँತಿ ಕುಲ ನಾಸಾ ॥ ೩ ॥**
**ಜೌं ಪೈ ಕುರುಚಿ ರಹೀ ಅತಿ ತೋಹೀ । ಜನಮತ ಕಾಹೆ ನ ಮಾರೇ ಮೋಹೀ ॥**
**ಪೇಡ ಕಾಟಿ ತೈं ಪಾಲಉ ಸೀಂಚಾ । ಮೀನ ಜಿಅನ ನಿತಿ ಬಾರಿ ಉಲೀಚಾ ॥ ೪ ॥**

ಪುತ್ರನು ವ್ಯಾಕುಲಗೊಂಡಿರುವುದನ್ನು ಕಂಡು ಕೈಕೇಯಿಯು ಅವನನ್ನು ಸಮಾಧಾನಪಡಿಸಲು ಪ್ರಯತ್ನಿಸಿದಳು. ಅದರಿಂದ ಗಾಯದಮೇಲೆ ಕಾರದಪುಡಿ ಹಾಕಿದಂತೆ ಭರತನಿಗೆ ಬಾಧೆ ಉಂಟಾಯಿತು. ಅವಳು ಹೇಳಿದಳು – 'ಮಗೂ! ಮಹಾರಾಜರ ಕುರಿತು ಶೋಕಿಸುವುದು ತರವಲ್ಲ. ಅವರು ಪುಣ್ಯ ಮತ್ತು ಯಶಸ್ಸನ್ನು ಸಂಪಾದಿಸಿಕೊಂಡು ಅದನ್ನು ಸಾಕಷ್ಟು ಭೋಗಿಸಿದ್ದಾರೆ. ಬದುಕಿರುವಾಗಲೇ ಅವರು ಬದುಕಿನ ಸಂಪೂರ್ಣಫಲವನ್ನು ಪಡೆದವರು. ಕೊನೆಗೆ ಅವರು ಇಂದ್ರಲೋಕವನ್ನು ಕುರಿತು ಪ್ರಯಾಣಮಾಡಿದರು. ಚೆನ್ನಾಗಿ ವಿಚಾರಮಾಡಿ ಶೋಕವನ್ನು ತೊರೆದು, ಸಮಾಜಸಹಿತ ರಾಜ್ಯವಾಳು.' ರಾಜಕುಮಾರ ಭರತನು

ಇದನ್ನು ಕೇಳುತ್ತಲೇ – ಮಾಗಿದ ಗಾಯಕ್ಕೆ ಕೆಂಡ ತಗುಲಿದಂತೆ ತುಂಬಾ ನೊಂದುಕೊಂಡನು. ಆದರೂ ಅವನು ಧೈರ್ಯತಾಳಿ ದೀರ್ಘವಾದ ನಿಟ್ಟುಸಿರುಬಿಡುತ್ತಾ ಹೇಳಿದ – ಎಲೈ ಪಾಪಿಣಿಯೇ! ನೀನು ಎಲ್ಲ ರೀತಿಯಿಂದ ನಮ್ಮ ಕುಲವನ್ನು ನಾಶಮಾಡಿದೆ. ನಿನಗೆ ಇಂತಹ ದುರಾಸೆ ಇದ್ದಿದ್ದರೆ, ನೀನು ಹುಟ್ಟಿದ ಕೂಡಲೇ ಏಕೆ ನನ್ನನ್ನು ಕೊಲ್ಲಲಿಲ್ಲ? ನೀನು ಮರವನ್ನು ಕಡಿದು ಎಲೆಗಳಿಗೆ ನೀರೆರೆದಂತಾಯಿತು. ಮೀನು ಬದುಕಲೆಂದು ನೀರನ್ನು ಹೊರಕ್ಕೆ ಚೆಲ್ಲಿದ್ದೀಯೆ. ಅರ್ಥಾತ್ – ನನ್ನ ಹಿತವನ್ನು ಮಾಡಲು ಹೋಗಿ ನನಗೆ ಅಹಿತವನ್ನೇ ಮಾಡಿಬಿಟ್ಟೆ. (ಚೌ/೧-೪)

**ದೋ – ಹಂಸಬಂಸು ದಸರಥು ಜನಕು ರಾಮ ಲಖನ ಸೇ ಭಾಇ।**
**ಜನನೀ ತೂಂ ಜನನೀ ಭಈ ಬಿಧಿ ಸನ ಕಛು ನ ಬಸಾಇ॥ ೧೬೧ ॥**

ನನಗೆ ಸೂರ್ಯವಂಶದಂತಹ ವಂಶದೊರೆಯಿತು. ದಶರಥನಂತಹ ತಂದೆಯು ಲಭಿಸಿದನು. ರಾಮಲಕ್ಷ್ಮಣರಂತಹ ಅಣ್ಣ-ತಮ್ಮಂದಿರು ಸಿಕ್ಕಿದರು. ಆದರೆ ನಿನ್ನಂತಹವಳ ಹೊಟ್ಟೆಯಲ್ಲಿ ನಾನು ಹುಟ್ಟಿದೆಯಲ್ಲ! ಏನು ಮಾಡಲಿ? ವಿಧಿಯ ಎದುರು ಯಾರ ಕೈವಾಡವೂ ನಡೆಯುವುದಿಲ್ಲ. (ದೋ/೧೬೧)

**ಚೌ – ಜಬ ತೈಂ ಕುಮತಿ ಕುಮತ ಜಿಯಂ ಠಯಊ। ಖಂಡ ಖಂಡ ಹೋಇ ಹೃದಉ ನ ಗಯಊ॥**
**ಬರ ಮಾಗತ ಮನ ಭಇ ನಹಿಂ ಪೀರಾ। ಗರಿ ನ ಜೀಹ ಮುಂಹ ಪರೇಉ ನ ಕೀರಾ ॥ ೧ ॥**
**ಭೂಪಂ ಪ್ರತೀತಿ ತೋರಿ ಕಿಮಿ ಕೀನ್ಹೀ। ಮರನ ಕಾಲ ಬಿಧಿ ಮತಿ ಹರಿ ಲೀನ್ಹೀ॥**
**ಬಿಧಿಹುಂ ನ ನಾರಿ ಹೃದಯ ಗತಿ ಜಾನೀ। ಸಕಲ ಕಪಟ ಅಘ ಅವಗುನ ಖಾನೀ॥ ೨ ॥**
**ಸರಲ ಸುಸೀಲ ಧರಮ ರತ ರಾಊ। ಸೋ ಕಿಮಿ ಜಾನೈ ತೀಯ ಸುಭಾಊ॥**
**ಅಸ ಕೋ ಜೀವ ಜಂತು ಜಗ ಮಾಹೀಂ। ಜೆಹಿ ರಘುನಾಥ ಪ್ರಾನಪ್ರಿಯ ನಾಹೀಂ॥ ೩ ॥**
**ಭೇ ಅತಿ ಅಹಿತ ರಾಮು ತೇಉ ತೋಹೀ। ಕೋ ತೂ ಅಹಸಿ ಸತ್ಯ ಕಹು ಮೋಹೀ॥**
**ಜೋ ಹಸಿ ಸೋ ಹಸಿ ಮುಹಂ ಮಸಿ ಲಾಈ। ಆಂಖಿ ಓಟ ಉಠಿ ಬೈಠಹಿ ಜಾಈ॥ ೪ ॥**

ಎಲೈ ದುರ್ಮತಿಯೇ! ನಿನ್ನ ಮನಸ್ಸಿನಲ್ಲಿ ಈ ದುರಾಲೋಚನೆ ಬಂದಾಗಲೇ ನಿನ್ನ ಎದೆ ಏಕೆ ಒಡೆದು ಚೂರು-ಚೂರು ಆಗಲಿಲ್ಲ? ವರಬೇಡುವಾಗ ನಿನ್ನ ಅಂತರಾತ್ಮ ಬಾಧೆ ಪಡಲಿಲ್ಲವೇ? ನಿನ್ನ ನಾಲಿಗೆ ಬಿದ್ದುಹೋಗಲಿಲ್ಲವೇ? ನಿನ್ನ ಬಾಯಿಗೆ ಏಕೆ ಹುಳಬೀಳಲಿಲ್ಲ? ಮಹಾರಾಜರು ನಿನ್ನ ಮೇಲೆ ಹೇಗೆ ವಿಶ್ವಾಸವಿಟ್ಟರು? ಬಹುಷಃ ಮರಣಕಾಲದಲ್ಲಿ ವಿಧಿಯು ಅವನ ಬುದ್ಧಿಯನ್ನು ಅಪಹರಿಸಿ ಬಿಟ್ಟಿರಬೇಕು. ಹೆಣ್ಣಿನ ಹೃದಯದ ಗತಿಯನ್ನು ವಿಧಾತನೂ ಅರಿಯದೆ ಹೋದನು.ಅದು ಎಲ್ಲ ಪಾಪಗಳ, ಕಪಟಗಳ, ದುರ್ಗುಣಗಳ ಗಣಿಯಾಗಿದೆ. ಮಹಾರಾಜರು ಸರಳ ಪ್ರಕೃತಿಯವರು, ಸುಶೀಲರೂ, ಧರ್ಮಪರಾಯಣರಾಗಿದ್ದರು. ಅಂತಹವರಿಗೆ ಸ್ತ್ರೀ ಸ್ವಭಾವವು ಹೇಗೆ ಅರಿವಾಗಬೇಕು? ಈ ಪ್ರಪಂಚದಲ್ಲಿ ರಘುನಾಥನನ್ನು ಪ್ರಾಣಕ್ಕಿಂತ ಹೆಚ್ಚು ಪ್ರೀತಿಸದ ಜೀವ-ಜಂತುಗಳು ಯಾವುದಿರಬಹುದು? ಅಂತಹ ಶ್ರೀರಾಮನು ನಿನಗೆ ಹಗೆಯಾದನೇ? ನಿಜ ಹೇಳು. ನೀನು ಯಾರು? ನೀನು ಯಾರೇ ಆಗಿದ್ದರೂ ಸರಿ. ನಿನ್ನ ಕಪ್ಪಾದ ಈ ದರಿದ್ರ ಮೋರೆಯನ್ನು ನನಗೆ ತೋರಬೇಡ. ನನ್ನ ಕಣ್ಮುಂದಿನಿಂದ ಎಲ್ಲಾದರೂ ತೊಲಗಿಹೋಗು. (ಚೌ/೧-೪)

**ದೋ – ರಾಮ ಬಿರೋಧೀ ಹೃದಯ ತೇಂ ಪ್ರಗಟ ಕೀನ್ಹ ಬಿಧಿ ಮೋಹಿ।**
**ಮೋ ಸಮಾನ ಕೋ ಪಾತಕೀ ಬಾದಿ ಕಹಉಂ ಕಛು ತೋಹಿ॥ ೧೬೨ ॥**

ಶ್ರೀರಾಮವಿರೋಧಿಯಾದ ನಿನ್ನಂತಹ ಸ್ತ್ರೀಯಳ ಒಡಲಲ್ಲಿ ವಿಧಾತನು ನನ್ನನ್ನು ಹುಟ್ಟಿಸಿದನಲ್ಲ! ನನ್ನಂತಹ ಪಾಪಿಯು ಬೇರೆ ಯಾರಿದ್ದಾನೆ? ನಿನಗೆ ಏನು ಹೇಳಿದರೂ ವ್ಯರ್ಥವೇ. (ದೋ/೧೬೨)

**ಚೌ – ಸುನಿ ಸತ್ರುಘುನ ಮಾತು ಕುಟಿಲಾಈ। ಜರಹಿಂ ಗಾತ ರಿಸ ಕಛು ನ ಬಸಾಈ॥**
**ತೇಹಿ ಅವಸರ ಕುಬರೀ ತಹಂ ಆಈ। ಬಸನ ಬಿಭೂಷನ ಬಿಬಿಧ ಬನಾಈ॥ ೧ ॥**
**ಲಖಿ ರಿಸ ಭರೇಉ ಲಖನ ಲಘು ಭಾಈ। ಬರತ ಅನಲ ಘೃತ ಆಹುತಿ ಪಾಈ॥**
**ಹುಮಗಿ ಲಾತ ತಕಿ ಕೂಬರ ಮಾರಾ। ಪರಿ ಮುಹ ಭರ ಮಹಿ ಕರತ ಪುಕಾರಾ॥ ೨ ॥**
**ಕೂಬರ ಟೂಟೇಉ ಫೂಟ ಕಪಾರೂ। ದಲಿತ ದಸನ ಮುಖ ರುಧಿರ ಪ್ರಚಾರೂ॥**
**ಆಹ ದಇಅ ಮೈಂ ಕಾಹ ನಸಾವಾ। ಕರತ ನೀಕ ಫಲು ಅನಇಸ ಪಾವಾ॥ ೩ ॥**

**ಸುನಿ ರಿಪುಹನ ಲಖಿ ನಖ ಸಿಖ ಖೋಟೀ। ಲಗೇ ಘಸೀಟನ ಧರಿ ಧರಿ ಝೋಂಟೀ॥**
**ಭರತ ದಯಾನಿಧಿ ದೀನ್ಹಿ ಛಡಾಈ। ಕೌಸಲ್ಯಾ ಪಹಿಂ ಗೇ ದೋಉ ಭಾಈ॥ ೪ ॥**

ತಾಯಿಯ ಕುಟಿಲತೆಯನ್ನು ಕಂಡು ಕೇಳಿ ಶತ್ರುಘ್ನನ ಮೈಯೆಲ್ಲ ಉರಿಯತೊಡಗಿತು. ಆದರೆ ಏನೂ ಮಾಡಲಾಗದೆ ಹೋದನು. ಅದೇ ಸಮಯದಲ್ಲಿ ವಿಧವಿಧವಾದ ಒಡವೆ ವಸ್ತ್ರಗಳನ್ನು ತೊಟ್ಟುಕೊಂಡು ಗೂನಿ ಮಂಥರೆಯು ಅಲ್ಲಿಗೆ ಬಂದಳು. ಅವಳನ್ನು ನೋಡುತ್ತಲೇ ಶತ್ರುಘ್ನನಿಗೆ – ಉರಿಯುತ್ತಿರುವ ಬೆಂಕಿಗೆ ತುಪ್ಪ ಸುರಿದಂತೆ ಕೋಪವು ಭುಗಿಲೆದ್ದಿತು. ಅವನು ಆಕೆಯು ಗೂನಿನ ಮೇಲೆ ಜೋರಾಗಿ ಒದೆದ. ಅದರಿಂದ ಅವಳು ಚೀರುತ್ತಾ ಕೆಳಮುಖವಾಗಿ ನೆಲಕ್ಕುರುಳಿದಳು. ಅವಳ ಗೂನು ಮುರಿಯಿತು. ಕಪಾಲ ಒಡೆಯಿತು.  ಹಲ್ಲು ಮುರಿದವು, ಬಾಯಿಂದ ರಕ್ತ ಹರಿಯತೊಡಗಿತು. ಅವಳು ನರಳುತ್ತಾ ಕೂಗಿದಳು – ಅಯ್ಯೋ ದೇವರೇ! ನಾನೇನು ಕೆಟ್ಟದು ಮಾಡಿದೆ? ಒಳ್ಳೆಯದನ್ನು ಮಾಡಿದಕ್ಕೆ ಇಂತಹ ಕೆಟ್ಟ ಫಲ ದೊರಕಿತಲ್ಲ! ಅವಳ ಈ ಮಾತನ್ನು ಕೇಳಿ, ಅವಳು ಅಡಿಯಿಂದ ಮುಡಿಯವರೆಗೂ ದುಷ್ಟಳೆಂದು ಅರಿತು ಶತ್ರುಘ್ನನು ಅವಳ ಜುಟ್ಟುಹಿಡಿದು ಎಳೆದಾಡಿದನು. ಆಗ ದಯಾನಿಧಿಯಾದ ಭರತನು ಅವಳನ್ನು ಬಿಡಿಸಿದನು. ಅನಂತರ ಭರತ-ಶತ್ರುಘ್ನರಿಬ್ಬರೂ ಕೌಸಲ್ಯೆಯ ಬಳಿಗೆ ತೆರಳಿದರು. (ಚೌ/೧-೪)

## ಕೌಸಲ್ಯಾ ಭರತ ಸಂವಾದ

**ದೋ – ಮಲಿನ ಬಸನ ಬಿಬರನ ಬಿಕಲ ಕೃಸ ಸರೀರ ದುಖ ಭಾರ।**
**ಕನಕ ಕಲಪ ಬರ ಬೇಲಿ ಬನ ಮಾನಹುಁ ಹನೀ ತುಸಾರ ॥ ೧೬೩ ॥**

ಕೌಸಲ್ಯೆಯು ಉಟ್ಟವಸ್ತ್ರಗಳು ಮಲಿನವಾಗಿದ್ದವು. ಅವಳ ಮುಖ ವಿವರ್ಣವಾಗಿದ್ದು, ಮನಸ್ಸು ವ್ಯಾಕುಲತೆಗೆ ಗುರಿಯಾಗಿತ್ತು, ದುಃಖಭಾರದಿಂದ ಅವಳ ಶರೀರವು ಒಣಗಿಹೋಗಿತ್ತು. ಭಂಗಾರದ ಕಲ್ಪಲತೆಗೆ ಮಂಜು ಬಡಿದಂತೆ ಆಕೆ ತೇಜೋವಿಹೀನಳಾಗಿ ಕಾಣುತ್ತಿದ್ದಳು. (ದೋ/೧೬೩)

**ಚೌ – ಭರತಹಿ ದೇಖಿ ಮಾತು ಉಠಿ ಧಾಈ। ಮುರುಛಿತ ಅವನಿ ಪರೀ ಝುಇಁ ಆಈ॥**
**ದೇಖತ ಭರತು ಬಿಕಲ ಭಏ ಭಾರೀ। ಪರೇ ಚರನ ತನ ದಸಾ ಬಿಸಾರೀ ॥ ೧ ॥**
**ಮಾತು ತಾತ ಕಹಁ ದೇಹಿ ದೇಖಾಈ। ಕಹಁ ಸಿಯ ರಾಮು ಲಖನು ದೋಉ ಭಾಈ॥**
**ಕೈಕಇ ಕತ ಜನಮೀ ಜಗ ಮಾಝಾ। ಜೌಂ ಜನಮಿ ತ ಭಇ ಕಾಹೇ ನ ಬಾಁಝಾ॥ ೨ ॥**
**ಕುಲ ಕಲಂಕು ಜೆಹಿಂ ಜನಮೆಉ ಮೋಹೀ। ಅಪಜಸ ಭಾಜನ ಪ್ರಿಯಜನ ದ್ರೋಹೀ ॥**
**ಕೋ ತಿಭುವನ ಮೊಹಿ ಸರಿಸ ಅಭಾಗೀ। ಗತಿ ಅಸಿ ತೋರಿ ಮಾತು ಜೆಹಿ ಲಾಗೀ ॥ ೩ ॥**
**ಪಿತು ಸುರಪುರ ಬನ ರಘುಬರ ಕೇತೂ। ಮೈಂ ಕೇವಲ ಸಬ ಅನರಥ ಹೇತೂ॥**
**ಧಿಗ ಮೊಹಿ ಭಯಉಁ ಬೇನು ಬನ ಆಗೀ। ದುಸಹ ದಾಹ ದುಖ ದೂಷನ ಭಾಗೀ ॥ ೪ ॥**

ಭರತನನ್ನು ಕಾಣುತ್ತಲೇ ಕೌಸಲ್ಯೆಯು ಎದ್ದು ಓಡಿಬಂದಳು. ಆದರೆ ತಲೆಸುತ್ತು ಬಂದು ಜ್ಞಾನತಪ್ಪಿ ನೆಲಕ್ಕುರುಳಿದಳು. ಇದನ್ನು ಕಂಡ ಭರತನ ಕರುಳು ಕಿತ್ತುಬಂದಂತಾಯಿತು. ಅವನೂ ಕೂಡ ದೇಹಪ್ರಜ್ಞೆಯನ್ನು ಮರೆತು ಆಕೆಯ ಪಾದಕಮಲದಲ್ಲಿ ಕುಸಿದುಬಿದ್ದನು. ಅನಂತರ ಅವನು ಹೇಳಿದನು – 'ಅಮ್ಮಾ! ತಂದೆಯವರು ಎಲ್ಲಿ? ಅವರನ್ನು ತೋರಿಸು. ಸೀತಾದೇವಿಯು, ನನ್ನ ಸೋದರರಾದ ರಾಮ-ಲಕ್ಷ್ಮಣರು ಎಲ್ಲಿ? ಈ ಲೋಕದಲ್ಲಿ ಕೈಕೆಯಿಯು ಏಕಾದರೂ ಹುಟ್ಟಿದಳೋ? ಹುಟ್ಟಿದರೂ ಬಂಜೆಯೇಕೆ ಆಗಲಿಲ್ಲ? ಅವಳಲ್ಲಿ ಹುಟ್ಟಿದ್ದರಿಂದ ನಾನು ಅಪಕೀರ್ತಿಗೆ ಗುರಿಯಾದೆ, ಪ್ರಿಯಜನರಿಗೆ ದ್ರೋಹಿಯಾದೆ, ವಂಶಕೆ ಕಳಂಕ ತರುವಂತಹವನಾದೆ. ಅಮ್ಮಾ! ನನ್ನಂತಹ ನಿರ್ಭಾಗ್ಯನು ಈ ಮೂರು ಲೋಕಗಳಲ್ಲಿ ಯಾರಿದ್ದಾನೆ? ನನ್ನಿಂದಾಗಿಯೇ ನಿನಗೆ ಇಂತಹ ದುರ್ಗತಿ ಒದಗಿತಲ್ಲ! ತಂದೆಯವರು ಸ್ವರ್ಗದಲ್ಲಿಯೂ, ರಘುವಂಶಶ್ರೇಷ್ಠನಾದ ಅಣ್ಣ ರಾಮಚಂದ್ರನು ಕಾಡಿನಲ್ಲಿಯೂ ಇದ್ದಾರೆ. ಕೇತುವಿನಂತೆ ನಾನೇ ಈ ಎಲ್ಲ ಅನರ್ಥಗಳಿಗೆ ಕಾರಣನಾದೆನಲ್ಲ! ನನ್ನ ಬದುಕಿಗೆ ಧಿಕ್ಕಾರವಿರಲಿ. ಬಿದಿರಿನ ವನಕ್ಕೆ ನಾನು ಬೆಂಕಿಯಂತಾದೆನು. ಸಹಿಸಲಾರದ ದಾಹ, ದುಃಖ ಮತ್ತು ದೂಷಣೆಗೆ ಗುರಿಯಾದೆನಲ್ಲ! (ಚೌ/೧-೪)

**ದೋ – ಮಾತು ಭರತ ಕೇ ಬಚನ ಮೃದು ಸುನಿ ಪುನಿ ಉಠೀ ಸಁಭಾರಿ।**
**ಲಿಏ ಉಠಾಇ ಲಗಾಇ ಉರ ಲೋಚನ ಮೋಚತಿ ಬಾರಿ॥ ೧೬೪ ॥**

ಭರತನ ಕೋಮಲವಚನಗಳನ್ನು ಕೇಳಿ, ತಾಯಿ ಕೌಸಲ್ಯೆಯು ಸಾವರಿಸಿಕೊಂಡು ಎದ್ದಳು. ಆಕೆ-ಭರತನನ್ನು ಎಬ್ಬಿಸಿ ಆಲಿಂಗಿಸಿಕೊಂಡಳು. ಕಂಬನಿ ಮಿಡಿಯತೊಡಗಿದಳು. (ದೋ/೧೬೪)

**ಚೌ – ಸರಲ ಸುಭಾಯ ಮಾಯ್ ಹಿಯ್ ಲಾಏ । ಅತಿ ಹಿತ ಮನಹುಁ ರಾಮ ಫಿರಿ ಆಏ ॥**
**ಭೇಁಟೆಉ ಬಹುರಿ ಲಖನ ಲಘು ಭಾಈ । ಸೋಕು ಸನೇಹು ನ ಹೃದಯ್ ಸಮಾಈ ॥ ೧ ॥**
**ದೇಖಿ ಸುಭಾಉ ಕಹತ ಸಬು ಕೋಈ । ರಾಮ ಮಾತು ಅಸ ಕಾಹೆ ನ ಹೋಈ ॥**
**ಮಾತಾಁ ಭರತು ಗೋದ ಬೈಠಾರೇ । ಆಁಸು ಪೋಂಛಿ ಮೃದು ಬಚನ ಉಚಾರೇ ॥ ೨ ॥**
**ಅಜಹುಁ ಬಚ್ಛ ಬಲಿ ಧೀರಜ ಧರಹೂ । ಕುಸಮಉ ಸಮುಝಿ ಸೋಕ ಪರಿಹರಹೂ ॥**
**ಜನಿ ಮಾನಹು ಹಿಯ್ ಹಾನಿ ಗಲಾನೀ । ಕಾಲ ಕರಮ ಗತಿ ಅಘಟಿತ ಜಾನೀ ॥ ೩ ॥**
**ಕಾಹುಹಿ ದೋಸು ದೇಹು ಜನಿ ತಾತಾ । ಭಾ ಮೋಹಿ ಸಬ ಬಿಧಿ ಬಾಮ ಬಿಧಾತಾ ॥**
**ಜೋ ಏತೇಹುಁ ದುಖ ಮೋಹಿ ಜಿಆವಾ । ಅಜಹುಁ ಕೋ ಜಾನಇ ಕಾ ತೆಹಿ ಭಾವಾ ॥ ೪ ॥**

ಸರಳ ಸ್ವಭಾವದ ಕೌಸಲ್ಯಾದೇವಿಯು ಶ್ರೀರಾಮನೇ ವನದಿಂದ ಹಿಂದಿರುಗಿ ಬಂದನೋ ಎಂದು ಭಾವಿಸಿ ಅತ್ಯಂತ ಪ್ರೇಮದಿಂದ ಭರತನನ್ನು ಎದೆಗವುಚಿಕೊಂಡಳು. ಅನಂತರ ಲಕ್ಷ್ಮಣನ ತಮ್ಮನಾದ ಶತ್ರುಘ್ನನನ್ನು ತಬ್ಬಿಕೊಂಡಳು. ಶೋಕ, ಸ್ನೇಹಗಳು ಅವಳ ಎದೆಯಲ್ಲಿ ಹಿಡಿಸದೆ ಉಕ್ಕಿಹರಿದವು. ಕೌಸಲ್ಯೆಯ ಸ್ವಭಾವವನ್ನು ನೋಡಿದವರು – 'ಎಷ್ಟಾದರೂ ಅವಳು ಶ್ರೀರಾಮನ ತಾಯಿಯಲ್ಲವೇ? ಅದರಿಂದಾಗಿಯೇ ಅವಳು ಪ್ರೇಮಸ್ವರೂಪಳು.' ಎಂದು ಮಾತಾಡಿಕೊಳ್ಳುತ್ತಿದ್ದರು. ಕೌಸಲ್ಯೆಯು ಭರತನನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು, ಅವನ ಕಂಬನಿಯನ್ನು ಒರೆಸಿ, ಸಂತೈಸಿ ಮೃದುಮಧುರವಾಗಿ ಇಂತೆಂದಳು – ''ಮಗೂ! ನೀನು ಧೈರ್ಯವನ್ನು ವಹಿಸು. ಇದೊಂದು ಕೆಟ್ಟಸಮಯವೆಂದರಿತು ಶೋಕವನ್ನು ಬಿಟ್ಟುಬಿಡು. ಕಾಲ-ಕರ್ಮಗತಿಯು ಅನಿವಾರ್ಯವೆಂದು ಗ್ರಹಿಸಿಕೊಂಡು, ಹೃದಯದ ಹಾನಿಯನ್ನು, ಗ್ಲಾನಿಯನ್ನು ದೂರಮಾಡು. ಮಗೂ! ಯಾರ ಮೇಲೂ ತಪ್ಪು ಹೊರಿಸಬೇಡ. ವಿಧಿಯು ನನ್ನ ಪಾಲಿಗೆ ಎಲ್ಲ ವಿಧದಲ್ಲೂ ಪ್ರತಿಕೂಲವಾಗಿದೆ. ಇಷ್ಟೊಂದು ದುಃಖವಾದರೂ ನನಗೆ ಸಾವು ಕೊಡುವುದಿಲ್ಲವಲ್ಲ! ಅದರ ಇಚ್ಛೆ ಇನ್ನೇನಿದೆಯೋ, ಅದು ಏನು ಮಾಡಬಯಸುತ್ತಿದೆಯೋ ತಿಳಿಯದು. (ಚೌ/೧-೪)

**ದೋ – ಪಿತು ಆಯಸ ಭೂಷನ ಬಸನ ತಾತ ತಜೇ ರಘುಬೀರ ।**
**ಬಿಸಮಉ ಹರಷು ನ ಹೃದಯ್ ಕಛು ಪಹಿರೇ ಬಲಕಲ ಚೀರ ॥ ೧೬೫ ॥**

ಮಗು! ತಂದೆಯ ಆಜ್ಞೆಯಂತೆ ರಘುವೀರನು ವಸನಭೂಷಣಗಳನ್ನು ತ್ಯಜಿಸಿ, ವಲ್ಕಲಗಳನ್ನು ಧರಿಸಿದನು. ಅವನ ಹೃದಯದಲ್ಲಿ ಹರ್ಷವಾಗಲೀ, ವಿಷಾದವಾಗಲೀ ಇರಲಿಲ್ಲ. (ದೋ/೧೬೫)

**ಚೌ – ಮುಖ ಪ್ರಸನ್ನ ಮನ ರಂಗ ನ ರೋಷೂ । ಸಬ ಕರ ಸಬ ಬಿಧಿ ಕರಿ ಪರಿತೋಷೂ ॥**
**ಚಲೇ ಬಿಪಿನ ಸುನಿ ಸಿಯ ಸಁಗ ಲಾಗೀ । ರಹಇ ನ ರಾಮ ಚರನ ಅನುರಾಗೀ ॥ ೧ ॥**
**ಸುನತಹಿಁ ಲಖನು ಚಲೇ ಉಠಿ ಸಾಥಾ । ರಹಹಿಁ ನ ಜತನ ಕಿಏ ರಘುನಾಥಾ ॥**
**ತಬ ರಘುಪತಿ ಸಬಹೀ ಸಿರು ನಾಈ । ಚಲೇ ಸಂಗ ಸಿಯ ಅರು ಲಘು ಭಾಈ ॥ ೨ ॥**
**ರಾಮು ಲಖನು ಸಿಯ ಬನಹಿ ಸಿಧಾಏ । ಗಇಉಁ ನ ಸಂಗ ನ ಪ್ರಾನ ಪಠಾಏ ॥**
**ಯಹು ಸಬು ಭಾ ಇನ್ಹ ಆಁಖಿನ್ಹ ಆಗೇಁ । ತಉ ನ ತಜಾ ತನು ಜೀವ ಅಭಾಗೇಁ ॥ ೩ ॥**
**ಮೋಹಿ ನ ಲಾಜ ನಿಜ ನೇಹು ನಿಹಾರೀ । ರಾಮ ಸರಿಸ ಸುತ ಮೈಁ ಮಹತಾರೀ ॥**
**ಜಿಐ ಮರೈ ಭಲ ಭೂಪತಿ ಜಾನಾ । ಮೋರ ಹೃದಯ ಸತ ಕುಲಿಸ ಸಮಾನಾ ॥ ೪ ॥**

ಆತನ ಮುಖವು ಪ್ರಸನ್ನವಾಗಿತ್ತು. ಮನಸ್ಸಿನಲ್ಲಿ ಆಸಕ್ತಿಯಾಗಲೀ, ದ್ವೇಷವಾಗಲೀ ಇರಲಿಲ್ಲ. ಎಲ್ಲರನ್ನೂ ಎಲ್ಲ ರೀತಿಯಿಂದ ಸಂತಸಗೊಳಿಸಿ, ಅವನು ಕಾಡಿಗೆ ತೆರಳಿದನು. ಇದನ್ನು ಕೇಳಿ ಸೀತೆಯೂ ಕೂಡ ಅವನ ಜೊತೆ ಹೋದಳು. ಶ್ರೀರಾಮಚರಣಾನುರಾಗಿಣಿಯಾದ ಆಕೆಯು ಏನು ಮಾಡಿದರೂ ಮನೆಯಲ್ಲಿ ಉಳಿಯಲಿಲ್ಲ. ಇದನ್ನು ಕೇಳುತ್ತಲೇ ಲಕ್ಷ್ಮಣನೂ ಕೂಡ ಅವರನ್ನು ಹಿಂಬಾಲಿಸಿದ. ರಘುನಾಥನು ಅವನನ್ನು ತಡೆಯಲು ವಿಶ್ವಪ್ರಯತ್ನ ಮಾಡಿದನು. ಆದರೆ ಅವನು ಇಲ್ಲಿ ಉಳಿಯಲಿಲ್ಲ. ಆಗ ಶ್ರೀರಾಮಚಂದ್ರನು ಎಲ್ಲರಿಗೆ ತಲೆವಾಗಿ ಸೀತಾ ಲಕ್ಷ್ಮಣರೊಡನೆ ಹೊರಟುಹೋದನು. ಈ ವಿಧವಾಗಿ ಅವರು ಕಾಡಿಗೆ ತೆರಳಿದರು. ಅವರ ಜೊತೆಗೆ ನಾನಾಗಲೀ, ನನ್ನ ಪ್ರಾಣಗಳಾಗಲೀ ಕಳಿಸಲು ನನ್ನಿಂದ ಸಾಧ್ಯವಾಗದೆ ಹೋಯಿತು. ಇವೆಲ್ಲ ನನ್ನ ಕಣ್ಣಮುಂದೆಯೇ ಘಟಿಸಿತು. ಆದರೂ ಈ ಹಾಳು ಜೀವ ಈ ದೇಹವನ್ನು ತೊರೆದು ಹೋಗಲಿಲ್ಲ. ನನ್ನ ಪ್ರೀತಿಯನ್ನು ಕಂಡು ನನಗೆ ನಾಚಿಕೆಯಾದರೂ ಆಗಬಾರದೆ? ರಾಮನಂತಹ ಮಗನ ತಾಯಿ ನಾನು! ಹೇಗೆ ಬದುಕಬೇಕು? ಹೇಗೆ ಸಾಯಬೇಕು?

ಎಂಬುದನ್ನು ಮಹಾರಾಜರು ಚೆನ್ನಾಗಿ ತಿಳಿದಿದ್ದರು. ನನ್ನ ಹೃದಯವಾದರೋ ವಜ್ರಕ್ಕಿಂತಲೂ ಸಾವಿರಪಾಲು ಕಠಿಣಾತಿಕಠಿಣವಾದುದು.'' (ಚೌ/೧-೪)

**ದೋ – ಕೌಸಲ್ಯಾ ಕೇ ಬಚನ ಸುನಿ ಭರತ ಸಹಿತ ರನಿವಾಸು।**
**ಬ್ಯಾಕುಲ ಬಿಲಪತ ರಾಜಗೃಹ ಮಾನಹುँ ಸೋಕ ನೆವಾಸು॥ ೧೬೬ ॥**

ಕೌಸಲ್ಯೆಯ ಮಾತುಗಳನ್ನು ಕೇಳಿ, ಭರತನೂ ಸೇರಿ ಇಡೀ ರಾಣೀನಿವಾಸವು ವ್ಯಾಕುಲರಾಗಿ ಶೋಕಿಸತೊಡಗಿದರು. ರಾಜಮಂದಿರವು ಶೋಕಮಂದಿರವಾಯಿತು. (ದೋ/೧೬೬)

**ಚೌ – ಬಿಲಪಹಿँ ಬಿಕಲ ಭರತ ದೊಉ ಭಾಈ। ಕೌಸಲ್ಯಾँ ಲಿಏ ಹೃದಯँ ಲಗಾಈ॥**
**ಭಾಂತಿ ಅನೇಕ ಭರತು ಸಮುಝಾಏ। ಕಹಿ ಬಿಬೇಕಮಯ ಬಚನ ಸುನಾಏ॥ ೧ ॥**
**ಭರತಹುँ ಮಾತು ಸಕಲ ಸಮುಝಾಈँ। ಕಹಿ ಪುರಾನ ಶ್ರುತಿ ಕಥಾ ಸುಹಾಈँ॥**
**ಛಲ ಬಿಹೀನ ಸುಚಿ ಸರಲ ಸುಬಾನೀ। ಬೋಲೇ ಭರತ ಜೋರಿ ಜುಗ ಪಾನೀ॥ ೨ ॥**
**ಜೇ ಅಘ ಮಾತು ಪಿತಾ ಸುತ ಮಾರೇँ। ಗಾಇ ಗೋಠ ಮಹಿಸುರ ಪುರ ಜಾರೇँ॥**
**ಜೇ ಅಘ ತಿಯ ಬಾಲಕ ಬಧ ಕೀನ್ಹೇँ। ಮೀತ ಮಹೀಪತಿ ಮಾಹುರ ದೀನ್ಹೇँ॥ ೩ ॥**
**ಜೇ ಪಾತಕ ಉಪಪಾತಕ ಅಹಹೀँ। ಕರಮ ಬಚನ ಮನ ಭವ ಕಬಿ ಕಹಹೀँ॥**
**ತೇ ಪಾತಕ ಮೊಹಿ ಹೋಹುँ ಬಿಧಾತಾ। ಜೌँ ಯಹು ಹೋಇ ಮೋರ ಮತ ಮಾತಾ॥ ೪ ॥**

ಭರತ ಶತ್ರುಘ್ನರಿಬ್ಬರೂ ವಿಕಲರಾಗಿ ಅಳತೊಡಗಿದರು. ಆಗ ಕೌಸಲ್ಯೆಯು ಅವರನ್ನು ಎದೆಗಪ್ಪಿಕೊಂಡು, ಪರಿಪರಿಯಾಗಿ ಅವರನ್ನು ಸಂತೈಸಿದಳು. ವಿವೇಕಯುಕ್ತ ಅನೇಕ ಮಾತುಗಳನ್ನು ಹೇಳಿದಳು. ಭರತನೂ ಕೂಡ ಎಲ್ಲ ತಾಯಂದಿರಿಗೆ ವೇದ ಪುರಾಣಗಳ ಅನೇಕ ಕಥೆಗಳನ್ನು ಹೇಳಿ ಅವರನ್ನು ಸಂತೈಸಿದನು. ಕೈಗಳನ್ನು ಜೋಡಿಸಿಕೊಂಡು ನಿಷ್ಕಪಟನಾಗಿ, ಋಜುಭಾವದಿಂದ ಇಂತೆಂದನು – ''ಓ ವಿಧಾತಾ! ಒಂದು ವೇಳೆ ನನ್ನ ಸಮ್ಮತಿಯಿಂದ ಈ ಕಾರ್ಯ ನಡೆದಿದ್ದರೆ, ತಂದೆ-ತಾಯಿಯರನ್ನೂ, ಮಗನನ್ನೂ ಕೊಂದ ಪಾಪವು ಗೋಶಾಲೆಗಳಿಗೆ, ಬ್ರಾಹ್ಮಣರ ಅಗ್ರಹಾರಗಳಿಗೆ ಬೆಂಕಿ ಹಚ್ಚುವುದರಿಂದ ಉಂಟಾಗುವ ಪಾಪವು, ಸ್ತ್ರೀ, ಶಿಶುಹತ್ಯೆಯ ಪಾಪವು, ಮಿತ್ರನಿಗೂ, ರಾಜನಿಗೂ ವಿಷವಿಟ್ಟ ಪಾಪವೂ, ಕವಿಗಳು ವರ್ಣಿಸಿರುವ ಮನ, ವಚನ, ಕಾಯಗಳಿಂದ ನಡೆಯಬಹುದಾದ ಏನೇನು ಪಾತಕಗಳು, ಉಪ ಪಾತಕಗಳು ಇವೆಯೋ ಅವೆಲ್ಲವೂ ನನಗೆ ತಗಲಲಿ. (ಚೌ/೧-೪)

**ದೋ – ಜೇ ಪರಿಹರಿ ಹರಿ ಹರ ಚರನ ಭಜಹಿँ ಭೂತಗನ ಘೋರ।**
**ತೇಹಿ ಕಇ ಗತಿ ಮೊಹಿ ದೇಉ ಬಿಧಿ ಜೌँ ಜನನೀ ಮತ ಮೋರ॥ ೧೬೭ ॥**

ತಾಯೇ! ಇದರಲ್ಲಿ ನನಗೆ ಸಮ್ಮತಿ ಇದ್ದರೆ – ಹರಿಹರರ ಚರಣಗಳನ್ನು ತೊರೆದು, ಭಯಂಕರವಾದ ಭೂತ-ಪ್ರೇತಗಳನ್ನು ಪೂಜಿಸುವವರಿಗೆ ಸಿಗುವ ಗತಿಯು ನನಗೆ ಸಿಗಲಿ. (ದೋ/೧೬೭)

**ಚೌ – ಬೇಚಹಿँ ಬೇದು ಧರಮು ದುಹಿ ಲೇಹೀँ। ಪಿಸುನ ಪರಾಯ ಪಾಪ ಕಹಿ ದೇಹೀँ॥**
**ಕಪಟೀ ಕುಟಿಲ ಕಲಹಪ್ರಿಯ ಕ್ರೋಧೀ। ಬೇದ ಬಿದೂಷಕ ಬಿಸ್ವಬಿರೋಧೀ॥ ೧ ॥**
**ಲೋಭೀ ಲಂಪಟ ಲೋಲುಪಚಾರಾ। ಜೇ ತಾಕಹಿँ ಪರಧನು ಪರದಾರಾ॥**
**ಪಾವౌँ ಮೈँ ತಿನ್ಹ ಕೈ ಗತಿ ಘೋರಾ। ಜೌँ ಜನನೀ ಯಹು ಸಮ್ಮತ ಮೋರಾ॥ ೨ ॥**
**ಜೇ ನಹಿँ ಸಾಧುಸಂಗ ಅನುರಾಗೇ। ಪರಮಾರಥ ಪಥ ಬಿಮುಖ ಅಭಾಗೇ॥**
**ಜೇ ನ ಭಜಹಿँ ಹರಿ ನರತನು ಪಾಈ। ಜಿನ್ಹಹಿ ನ ಹರಿ ಹರ ಸುಜಸು ಸೊಹಾಈ॥ ೩ ॥**
**ತಜಿ ಶ್ರುತಿಪಂಥು ಬಾಮ ಪಥ ಚಲಹೀँ। ಬಂಚಕ ಬಿರಚಿ ಬೇಷ ಜಗು ಛಲಹೀँ॥**
**ತಿನ್ಹ ಕೈ ಗತಿ ಮೊಹಿ ಸಂಕರ ದೇಊ। ಜನನೀ ಜೌँ ಯಹು ಜಾನౌँ ಭೇಊ॥ ೪ ॥**

ಅಮ್ಮಾ! ಈ ಕಾರ್ಯದಲ್ಲಿ ನನ್ನ ಸಮ್ಮತಿ ಇದ್ದರೆ – ವೇದಗಳನ್ನು ಮಾರುವವರು, ಧರ್ಮದ ಹೆಸರಿನಲ್ಲಿ ಇತರರನ್ನು ಹಿಂಡಿ ಕೊಲ್ಲುವವರು, ಚಾಡಿ ಹೇಳುವವರು, ಅನ್ಯರ ಪಾಪಗಳನ್ನು ಹೇಳುವವರು, ಕಪಟೀ, ಕುಟಿಲ, ಕಲಹಪ್ರಿಯರಾದವರು, ಕೋಪಿಷ್ಠರೂ, ವೇದಗಳನ್ನು ನಿಂದಿಸುವವರು, ಲೋಕವಿರೋಧಿಗಳು, ಲೋಭಿಗಳೂ, ಲಂಪಟರೂ, ಲೋಲುಪರೂ, ಪರಧನ, ಪರಸ್ತ್ರೀಯನ್ನು ಬಯಸುವವರು ಹೊಂದುವ ದುರ್ಗತಿಯು ನನಗೆ ಬರಲಿ. ಅಷ್ಟೇ ಅಲ್ಲ, ಮಾತೇ! ಒಂದು ವೇಳೆ

ನನಗೆ ಇದರ ಸುಳಿವು ದೊರೆತಿದ್ದರೂ ಕೂಡ – ಸಜ್ಜನ ಸಾಂಗತ್ಯವು ಇಷ್ಟವಿಲ್ಲದವರಿಗೆ, ಪರಮಾರ್ಥಕ್ಕೆ ವಿಮುಖರಾದವರಿಗೆ, ಮಾನವ ಜನ್ಮವನ್ನು ಪಡೆದರೂ ಹರಿಯನ್ನು ಭಜಿಸದವರಿಗೆ, ಹರಿ-ಹರರ ಗುಣಗಾನದಿಂದ ಆನಂದಪಡದವರಿಗೆ, ವೈದಿಕ ಮಾರ್ಗವನ್ನು ತೊರೆದು ವಾಮಮಾರ್ಗವನ್ನು ಹಿಡಿದಿರುವವರಿಗೆ, ವಂಚಕರಾಗಿದ್ದು ವೇಷಧಾರಿಗಳಾಗಿ ಜಗತ್ತಿಗೆ ಮೋಸಮಾಡುವವರಿಗೆ ದೊರೆಯುವ ದುರ್ಗತಿಯನ್ನು ಶಂಕರನು ನನಗೂ ಕೊಡಲಿ. (ಚೌ/೧-೪)

**ದೋ – ಮಾತು ಭರತ ಕೇ ಬಚನ ಸುನಿ ಸಾಂಚೇ ಸರಲ ಸುಭಾಯ್ಁ ।**
**ಕಹತಿ ರಾಮ ಪ್ರಿಯ ತಾತ ತುಮ್ಹ ಸದಾ ಬಚನ ಮನ ಕಾಯ್ಁ ॥ ೧೬೮ ॥**

ಭರತನ ನಿಷ್ಕಪಟವಾದ ಸ್ವಾಭಾವಿಕ ವಚನಗಳನ್ನು ಕೇಳಿ ಕೌಸಲ್ಯಾದೇವಿಯು 'ಮಗೂ! ನೀನು ತ್ರಿಕರಣಶುದ್ಧಿಯಿಂದ ಯಾವಾಗಲೂ ಶ್ರೀರಾಮನಲ್ಲಿಪ್ರೀತಿಯನ್ನಿಟ್ಟಿರುವವನು. (ಶ್ರೀರಾಮನಿಗೆ ಪ್ರೀತಿಪಾತ್ರನು) ಎಂದು ಹೇಳಿದಳು. (ದೋ/೧೬೮)

**ಚೌ – ರಾಮ ಪ್ರಾನಹು ತೇಂ ಪ್ರಾನ ತುಮ್ಹಾರೇ । ತುಮ್ಹ ರಘುಪತಿಹಿ ಪ್ರಾನಹು ತೇಂ ಪ್ಯಾರೇ ॥**
**ಬಿಧು ಬಿಷ ಚವೈ ಸ್ರವೈ ಹಿಮು ಆಗೀ । ಹೋಇ ಬಾರಿಚರ ಬಾರಿ ಬಿರಾಗೀ ॥ ೧ ॥**
**ಭಏಁ ಗ್ಯಾನು ಬರು ಮಿಟೈ ನ ಮೋಹೂ । ತುಮ್ಹ ರಾಮಹಿ ಪ್ರತಿಕೂಲ ನ ಹೋಹೂ ॥**
**ಮತ ತುಮ್ಹಾರ ಯಹು ಜೋ ಜಗ ಕಹಹೀಂ । ಸೋ ಸಪನೆಹುಁ ಸುಖ ಸುಗತಿ ನ ಲಹಹೀಂ ॥ ೨ ॥**
**ಅಸ ಕಹಿ ಮಾತು ಭರತು ಹಿಯ್ಁ ಲಾಏ । ಥನ ಪಯ ಸ್ರವಹಿಂ ನಯನ ಜಲ ಛಾಏ ॥**
**ಕರತ ಬಿಲಾಪ ಬಹುತ ಏಹಿ ಭಾಂತೀ । ಬೈಠೆಹಿಂ ಬೀತಿ ಗಈ ಸಬ ರಾತೀ ॥ ೩ ॥**
**ಬಾಮದೇಉ ಬಸಿಷ್ಠ ತಬ ಆಏ । ಸಚಿವ ಮಹಾಜನ ಸಕಲ ಬೊಲಾಏ ॥**
**ಮುನಿ ಬಹು ಭಾಂತಿ ಭರತ ಉಪದೇಸೇ । ಕಹಿ ಪರಮಾರಥ ಬಚನ ಸುದೇಸೇ ॥ ೪ ॥**

''ಶ್ರೀರಾಮನು ನಿನಗೆ ಪ್ರಾಣಕ್ಕಿಂತಲೂ ಪ್ರಿಯನಾದವನು. ಹಾಗೆಯೇ ಶ್ರೀರಾಮನಿಗೂ ನೀನು ಪ್ರೀತಿಪಾತ್ರನು. ಚಂದ್ರನಿಂದ ವಿಷವಾದರೂ ಒಸರೀತು, ಮಂಜಿನಿಂದ ಬೆಂಕಿಯೂ ಉದುರೀತು, ಜಲಚರಗಳು ನೀರನ್ನಾದರೂ ತೊರೆದಾವು. ಜ್ಞಾನೋದಯವಾದರೂ ಮೋಹವು ದೂರವಾಗದಿರಬಹುದು, ಆದರೆ ನೀನು ಶ್ರೀರಾಮನಿಗೆ ಪ್ರತಿಕೂಲನಾಗಲಾರೆ. ಈ ಕೃತ್ಯ ನಿನಗೆ ಒಮ್ಮತ-ಸಮ್ಮತ ಎಂದು ಹೇಳುವ ಜನರು ಕನಸಿನಲ್ಲಿಯೂ ಸುಖವನ್ನೂ, ಶುಭಗತಿಯನ್ನೂ ಪಡೆಯಲಾರರು.'' ಹೀಗೆ ಹೇಳಿ ಕೌಸಲ್ಯೆಯು ಭರತನನ್ನು ಅಪ್ಪಿಕೊಂಡಳು. ಆಕೆಯ ಸ್ತನಗಳಿಂದ ಹಾಲು ಸುರಿಯತೊಡಗಿತು. ಕಣ್ಣಿನಲ್ಲಿ ಕಂಬನಿ ತುಂಬಿ ಬಂತು. ಈ ವಿಧವಾಗಿ ಅವರು ವಿಲಪಿಸುತ್ತಿರುವಾಗ ಆ ರಾತ್ರಿಯು ಕಳೆದುಹೋಯಿತು. ಉದಯವಾಗುತ್ತಲೇ ವಾಮದೇವರು, ವಸಿಷ್ಠರು ಅಲ್ಲಿಗೆ ಬಂದರು. ಅವರು ಎಲ್ಲ ಮಂತ್ರಿಗಳನ್ನೂ, ಮಹಾಜನರನ್ನೂ ಕರೆಸಿದರು. ಅನಂತರ ವಸಿಷ್ಠ ಮಹರ್ಷಿಗಳು ಸಂದರ್ಭೋಚಿತವಾಗಿ ಪರಮಾರ್ಥ ವಿಷಯಗಳನ್ನುತಿಳಿಸುತ್ತಾ, ಭರತನಿಗೆ ಅನೇಕರೀತಿಯಿಂದ ಉಪದೇಶಮಾಡಿದರು. (ಚೌ/೧-೪)

**ದೋ – ತಾತ ಹೃದಯ್ಁ ಧೀರಜು ಧರಹು ಕರಹು ಜೊ ಅವಸರ ಆಜು ।**
**ಉಠೇ ಭರತ ಗುರ ಬಚನ ಸುನಿ ಕರನ ಕಹೆಉ ಸಬು ಸಾಜು ॥ ೧೬೯ ॥**

ವಸಿಷ್ಠರು ಹೇಳಿದರು – ''ಮಗೂ! ಧೈರ್ಯವನ್ನು ಹೊಂದು. ಈಗ ಮಾಡಬೇಕಾಗಿರುವ ವಿಧಿಗಳನ್ನು ಆಚರಿಸು.'' ಗುರುಗಳ ಮಾತುಕೇಳಿ ಭರತನು ಮೇಲೆದ್ದ. ತಂದೆಯವರ ಅಂತ್ಯಕ್ರಿಯೆಗೆ ಏರ್ಪಾಡು ಮಾಡುವಂತೆ ಕೈಕೆಳಗಿನವರಿಗೆ ಹೇಳಿದನು. (ದೋ/೧೬೯)

**ಚೌ – ನೃಪತನು ಬೇದ ಬಿದಿತ ಅನ್ಹವಾವಾ । ಪರಮ ಬಿಚಿತ್ರ ಬಿಮಾನು ಬನಾವಾ ॥**
**ಗಹಿ ಪದ ಭರತ ಮಾತು ಸಬ ರಾಖೀ । ರಹೀಂ ರಾನಿ ದರಸನ ಅಭಿಲಾಷೀ ॥ ೧ ॥**
**ಚಂದನ ಅಗರ ಭಾರ ಬಹು ಆಏ । ಅಮಿತ ಅನೇಕ ಸುಗಂಧ ಸುಹಾಏ ॥**
**ಸರಜು ತೀರ ರಚಿ ಚಿತಾ ಬನಾಈ । ಜನು ಸುರಪುರ ಸೋಪಾನ ಸುಹಾಈ ॥ ೨ ॥**
**ಏಹಿ ಬಿಧಿ ದಾಹ ಕ್ರಿಯಾ ಸಬ ಕೀನ್ಹೀ । ಬಿಧಿಬತ ನ್ಹಾಇ ತಿಲಾಂಜುಲಿ ದೀನ್ಹೀ ॥**
**ಸೋಧಿ ಸುಮೃತಿ ಸಬ ಬೇದ ಪುರಾನಾ । ಕೀನ್ಹ ಭರತ ದಸಗಾತ ಬಿಧಾನಾ ॥ ೩ ॥**
**ಜಹಁ ಜಸ ಮುನಿಬರ ಆಯಸು ದೀನ್ಹಾ । ತಹಁ ತಸ ಸಹಸ ಭಾಂತಿ ಸಬು ಕೀನ್ಹಾ ॥**
**ಭಏ ಬಿಸುದ್ಧ ದಿಏ ಸಬ ದಾನಾ । ಧೇನು ಬಾಜಿ ಗಜ ಬಾಹನ ನಾನಾ ॥ ೪ ॥**

ವೇದೋಕ್ತ ವಿಧಿಯಂತೆ ರಾಜನ ಕಳೇಬರಕ್ಕೆ ಸ್ನಾನ ಮಾಡಿಸಲಾಯಿತು. ಬಳಿಕ ವಿಶಿಷ್ಟವಾಗಿ ನಿರ್ಮಿಸಲ್ಪಟ್ಟ ವಿಮಾನದಲ್ಲಿ ರಾಜಮರ್ಯಾದೆಯಿಂದ ಆ ಕಳೇಬರವನ್ನು ಸರಯೂ ನದೀತೀರಕ್ಕೆ ತರಲಾಯಿತು. ಭರತನು ಎಲ್ಲ ತಾಯಂದಿರ ಕಾಲು ಹಿಡಿದುಕೊಂಡು ಸಹಗಮನ ಮಾಡಕೂಡದೆಂದು ವಿನಂತಿಸಿಕೊಂಡನು. ಅವರೂ ಕೂಡ ರಾಮದರ್ಶನಾಕಾಂಕ್ಷಿಗಳಾಗಿ ಉಳಿದುಕೊಂಡರು. ಚಂದನ, ಅಗರು ಮೊದಲಾದ ಅನೇಕ ಸುಗಂಧದ್ರವ್ಯಗಳನ್ನು ಅಲ್ಲಿಗೆ ತರಲಾಯಿತು. ಸರಯೂ ನದಿಯ ದಡದಲ್ಲಿ ಸುಂದರ ಚಿತೆಯನ್ನು ನಿರ್ಮಿಸಲ್ಪಟ್ಟಿತು. ಅದು ಸ್ವರ್ಗಕ್ಕೆ ಏರುವ ಏಣಿಯೋ ಎಂಬಂತೆ ರಮಣೀಯವಾಗಿತ್ತು. ದಹನ ಸಂಸ್ಕಾರಗಳನ್ನು ಮುಗಿಸಿದ ಬಳಿಕ ವಿಧ್ಯುಕ್ತವಾಗಿ ಎಲ್ಲರೂ ಸ್ನಾನಾದಿಗಳನ್ನು ಮಾಡಿ ತಿಲಾಂಜಲಿಯನ್ನು ಅರ್ಪಿಸಿದರು. ಶ್ರುತಿ, ಸ್ಮೃತಿ, ಪುರಾಣಗಳಲ್ಲಿ ಹೇಳಲಾದ ವಿಧಿಯಿಂದ ದಶಾಹ ಕಾರ್ಯವನ್ನು ಭರತನು ಸಕ್ರಮವಾಗಿ ನಿರ್ವಹಿಸಿದನು. ವಸಿಷ್ಠರ ಎಲ್ಲ ಆಜ್ಞೆಗಳನ್ನು ಭರತನು ಚೆನ್ನಾಗಿ ನೆರವೇರಿಸಿದನು. ಶುಚಿಯಾದ ಬಳಿಕ ಅವನು ಅನೇಕ ದಾನಗಳನ್ನು ಮಾಡಿದನು. ಗೋವುಗಳೂ, ಕುದುರೆಗಳೂ, ಆನೆಗಳೂ, ಅನೇಕ ವಾಹನಗಳೂ (ಚೌ/೧-೪)

**ದೋ – ಸಿಂಘಾಸನ ಭೂಷನ ಬಸನ ಅನ್ನ ಧರನಿ ಧನ ಧಾಮ।**
**ದಿಏ ಭರತ ಲಹಿ ಭೂಮಿಸುರ ಭೇ ಪರಿಪೂರನ ಕಾಮ ॥ ೧೭೦ ॥**

ಸಿಂಹಾಸನಗಳೂ, ಆಭರಣಗಳೂ, ಅನ್ನ ವಸ್ತ್ರಗಳೂ, ಭೂಮಿಗಳು, ಮನೆಗಳೂ, ಧನವೇ ಮೊದಲಾದ ದಾನಗಳನ್ನು ನೀಡಿದನು. ಈ ದಾನಾದಿಗಳಿಂದ ಭೂಸುರರು ಸಂತೃಪ್ತರಾದರು. (ದೋ/೧೭೦)

**ಚೌ – ಪಿತು ಹಿತ ಭರತ ಕೀನ್ಹಿ ಜಸಿ ಕರನೀ। ಸೋ ಮುಖ ಲಾಖ ಜಾಇ ನಹಿಂ ಬರನೀ॥**
**ಸುದಿನು ಸೋಧಿ ಮುನಿಬರ ತಬ ಆಏ। ಸಚಿವ ಮಹಾಜನ ಸಕಲ ಬೊಲಾಏ॥ ೧ ॥**
**ಬೈಠೇ ರಾಜಸಭಾँ ಸಬ ಜಾಈ। ಪಠಏ ಬೋಲಿ ಭರತ ದೋಉ ಭಾಈ॥**
**ಭರತು ಬಸಿಷ್ಠ ನಿಕಟ ಬೈಠಾರೇ। ನೀತಿ ಧರಮಮಯ ಬಚನ ಉಚಾರೇ ॥ ೨ ॥**
**ಪ್ರಥಮ ಕಥಾ ಸಬ ಮುನಿಬರ ಬರನೀ। ಕೈಕಇ ಕುಟಿಲ ಕೀನ್ಹಿ ಜಸಿ ಕರನೀ ॥**
**ಭೂಪ ಧರಮಬ್ರತು ಸತ್ಯ ಸರಾಹಾ। ಜೆಹಿ ತನು ಪರಿಹರಿ ಪ್ರೇಮು ನಿಬಾಹಾ॥ ೩ ॥**
**ಕಹತ ರಾಮ ಗುನ ಸೀಲ ಸುಭಾಊ। ಸಜಲ ನಯನ ಪುಲಕೆಉ ಮುನಿರಾಊ ॥**
**ಬಹುರಿ ಲಖನ ಸಿಯ ಪ್ರೀತಿ ಬಖಾನೀ। ಸೋಕ ಸನೇಹ ಮಗನ ಮುನಿ ಗ್ಯಾನೀ ॥ ೪ ॥**

ಭರತನು ತಂದೆಯವರ ಅಂತ್ಯಕ್ರಿಯೆಗಳನ್ನು ವಿಧಿವಿಧಾನದಿಂದ ಆಚರಿಸಿದ ರೀತಿಯೂ, ಅವನು ತೋರಿದ ಭಕ್ತಿಶ್ರದ್ಧೆಗಳೂ, ಶ್ಲಾಘನೀಯವಾದುದು. ಮತ್ತೆ ಒಂದು ಶುಭದಿನದಲ್ಲಿ ವಸಿಷ್ಠ ಮುನಿಗಳು ಬಂದು, ಮಂತ್ರಿಗಳನ್ನೂ, ಪುರಪ್ರಮುಖರನ್ನೂ ಕರೆಸಿದರು. ಎಲ್ಲರೂ ರಾಜಸಭೆಯಲ್ಲಿ ಆಸೀನರಾದ ಬಳಿಕ ವಸಿಷ್ಠರು ಭರತ-ಶತ್ರುಘ್ನರನ್ನು ಕರೆಕಳಿಸಿದರು. ಭರತನು ಬಂದಾಗ ವಸಿಷ್ಠರು ಆತನನ್ನು ಬಳಿಯಲ್ಲಿ ಕುಳ್ಳಿರಿಸಿಕೊಂಡು, ಅನೇಕ ನೀತಿಗಳನ್ನೂ, ಧರ್ಮಗಳನ್ನೂ ಉಪದೇಶಿಸಿದರು. ಮೊದಲಿಗೆ ಆ ಮಹಾಮುನಿಗಳು ಕೈಕೆಯಿಯು ನಡೆಸಿದ ಕುಟಿಲಕಾರ್ಯವನ್ನು ವಿವರಿಸಿದರು. ಅನಂತರ ಮಹಾರಾಜರ ಧರ್ಮವ್ರತವನ್ನೂ, ಸತ್ಯನಿಷ್ಠೆಯನ್ನೂ ಪ್ರಶಂಸಿಸಿದರು. ಮಹಾರಾಜರ ಈ ಪ್ರಾಣತ್ಯಾಗವು ಅವರಿಗೆ ಶ್ರೀರಾಮಚಂದ್ರನ ಮೇಲೆ ಇದ್ದ ಗಾಢಪ್ರೇಮವನ್ನು ಸೂಚಿಸುತ್ತಿರುವುದನ್ನು ತೋರಿಸಿಕೊಟ್ಟರು. ಶ್ರೀರಾಮಚಂದ್ರನ ಗುಣಶೀಲ ಸ್ವಭಾವಗಳನ್ನು ವರ್ಣಿಸುತ್ತಾ, ವರ್ಣಿಸುತ್ತಾ ಮುನೀಶ್ವರರ ಕಣ್ಣುಗಳು ಪ್ರೇಮಾಶ್ರುಗಳಿಂದ ತುಂಬಿ ಬಂದವು. ಶರೀರ ಪುಳಕಿತವಾಯಿತು. ಮತ್ತೆ ಲಕ್ಷ್ಮಣ, ಸೀತೆಯರಿಗೆ ಶ್ರೀರಾಮನ ಮೇಲೆ ಇರುವ ಪ್ರೇಮವನ್ನು ವರ್ಣಿಸುತ್ತಾ ಜ್ಞಾನೀಮುನಿಗಳೂ ಕೂಡ ಶೋಕ ಸ್ನೇಹಗಳಲ್ಲಿ ಮುಳುಗಿಹೋದರು. (ಚೌ/೧-೪)

**ದೋ – ಸುನಹು ಭರತ ಭಾವೀ ಪ್ರಬಲ ಬಿಲಖಿ ಕಹೆಉ ಮುನಿನಾಥ।**
**ಹಾನಿ ಲಾಭು ಜೀವನು ಮರನು ಜಸು ಅಪಜಸು ಬಿಧಿ ಹಾಥ ॥ ೧೭೧ ॥**

ವಿಕಲಮನಸ್ಕರಾದ ವಸಿಷ್ಠರು ಇಂತೆಂದರು – ಭರತಾ! ಕೇಳು. ಭವಿತವ್ಯವು ತುಂಬಾ ಬಲವತ್ತರವಾದುದು. ಲಾಭ-ಹಾನಿ, ಜೀವನ-ಮರಣ, ಕೀರ್ತಿ-ಅಪಕೀರ್ತಿ ಇವೆಲ್ಲವೂ ವಿಧಿಯ ಅಧೀನ. (ದೋ/೧೭೧)

**ಚೌ – ಅಸ ಬಿಚಾರಿ ಕೆಹಿ ದೇಇಅ ದೋಸೂ। ಬ್ಯರಥ ಕಾಹಿ ಪರ ಕೀಜಿಅ ರೋಸೂ ॥**
**ತಾತ ಬಿಚಾರು ಕರಹು ಮನ ಮಾಹೀं। ಸೋಚ ಜೋಗು ದಸರಥು ನೃಪು ನಾಹೀं ॥ ೧ ॥**

**ಸೋಚಿಅ ಬಿಪ್ರ ಜೊ ಬೇದ ಬಿಹೀನಾ। ತಜಿ ನಿಜ ಧರಮು ಬಿಷಯ ಲಯಲೀನಾ॥**
**ಸೋಚಿಅ ನೃಪತಿ ಜೊ ನೀತಿ ನ ಜಾನಾ। ಜೆಹಿ ನ ಪ್ರಜಾ ಪ್ರಿಯ ಪ್ರಾನ ಸಮಾನಾ॥ ೨ ॥**
**ಸೋಚಿಅ ಬಯಸು ಕೃಪನ ಧನವಾನೂ। ಜೋ ನ ಅತಿಥಿ ಸಿವ ಭಗತಿ ಸುಜಾನೂ॥**
**ಸೋಚಿಅ ಸೂದ್ರು ಬಿಪ್ರ ಅವಮಾನೀ। ಮುಖರ ಮಾನಪ್ರಿಯ ಗ್ಯಾನ ಗುಮಾನೀ॥ ೩ ॥**
**ಸೋಚಿಅ ಪುನಿ ಪತಿ ಬಂಚಕ ನಾರೀ। ಕುಟಿಲ ಕಲಹಪ್ರಿಯ ಇಚ್ಛಾಚಾರೀ॥**
**ಸೋಚಿಅ ಬಟು ನಿಜ ಬ್ರತು ಪರಿಹರಈ। ಜೋ ನಹಿಂ ಗುರ ಆಯಸು ಅನುಸರಈ॥ ೪ ॥**

ಹೀಗೆ ಯೋಚನೆ ಮಾಡಿದಾಗ ಯಾರ ಮೇಲೆ ತಪ್ಪು ಹೊರಿಸುವುದು? ಯಾರ ಮೇಲೆ ಸಿಟ್ಟಾಗುವುದು? ಇದನ್ನು ನೆಮ್ಮದಿಯಾಗಿ ಆಲೋಚಿಸು. ದಶರಥ ಮಹಾರಾಜರ ಕುರಿತು ಶೋಕಿಸುವುದು ತರವಲ್ಲ. ಅವನು ಶೋಚನೀಯನಲ್ಲ. ವೇದವಿಜ್ಞಾನಹೀನನಾದವನೂ, ತನ್ನ ವಿಧ್ಯುಕ್ತ ಕರ್ಮಗಳನ್ನು ತೊರೆದು ವಿಷಯ ಭೋಗಗಳಲ್ಲಿ ಮುಳುಗಿದ ಬ್ರಾಹ್ಮಣನ ಕುರಿತು ಯೋಚಿಸಬೇಕು. ನೀತಿ ಧರ್ಮಗಳಿಗೆ ತಿಲಾಂಜಲಿಯಿತ್ತು, ಪ್ರಜೆಗಳನ್ನು ಪ್ರಾಣಸಮವಾಗ ನೋಡದ ರಾಜನಕುರಿತು ವಿಚಾರಮಾಡಬೇಕು. ಧನಿಕನಾಗಿದ್ದರೂ ಕೃಪಣನಾಗಿ, ಅತಿಥಿಸತ್ಕಾರವನ್ನು, ಶಿವಪೂಜೆಯನ್ನು ಮಾಡದೇ ಇರುವ ವೈಶ್ಯನು ಶೋಚನೀಯನು. ವಿಪ್ರರನ್ನು ಅಪಮಾನಪಡಿಸುವವನೂ, ಹೆಚ್ಚು ಮಾತಾಡುವವನೂ, ಸನ್ಮಾನಪ್ರಿಯನೂ, ಜ್ಞಾನಗರ್ವಿತನೂ ಆದ ಶೂದ್ರನೇ ಶೋಚನೀಯನು. ಪತಿಯನ್ನು ಮೋಸಗೊಳಿಸುವವಳೂ, ಕುಟಿಲಳೂ, ಕಲಹಪ್ರಿಯಳೂ, ಸ್ವೈರಿಣಿಯೂ ಆದ ಸ್ತ್ರೀಯು ಶೋಚನೀಯಳು. ಬ್ರಹ್ಮಚರ್ಯವ್ರತವನ್ನು ತೊರೆದು ಗುರುವಿನ ಆಜ್ಞೆಯನ್ನು ಪಾಲಿಸದ ಬ್ರಹ್ಮಚಾರಿಯು ಶೋಚನೀಯನು. (ಚೌ/೧-೪)

**ದೋ – ಸೋಚಿಅ ಗೃಹೀ ಜೊ ಮೋಹ ಬಸ ಕರಇ ಕರಮ ಪಥ ತ್ಯಾಗ।**
**ಸೋಚಿಅ ಜತೀ ಪ್ರಪಂಚ ರತ ಬಿಗತ ಬಿಬೇಕ ಬಿರಾಗ॥ ೧೭೨ ॥**

ಮೋಹವಶನಾಗಿ ಕರ್ಮಮಾರ್ಗವನ್ನು ತೊರೆದಿರುವ ಗೃಹಸ್ಥನಕುರಿತು, ಜ್ಞಾನ-ವೈರಾಗ್ಯಹೀನನಾಗಿ ಮಾಯಾ ಪ್ರಪಂಚದಲ್ಲಿ ಮಗ್ನನಾದ ಸಂನ್ಯಾಸಿಯ ಕುರಿತು ಯೋಚಿಸಬೇಕಾಗಿದೆ. (ದೋ/೧೭೨)

**ಚೌ – ಬೈಖಾನಸ ಸೋಇ ಸೋಚೈ ಜೋಗೂ। ತಪು ಬಿಹಾಇ ಜೆಹಿ ಭಾವಇ ಭೋಗೂ॥**
**ಸೋಚಿಅ ಪಿಸುನ ಅಕಾರನ ಕ್ರೋಧೀ। ಜನನಿ ಜನಕ ಗುರ ಬಂಧು ಬಿರೋಧೀ॥ ೧ ॥**
**ಸಬ ಬಿಧಿ ಸೋಚಿಅ ಪರ ಅಪಕಾರೀ। ನಿಜ ತನು ಪೋಷಕ ನಿರದಯ ಭಾರೀ॥**
**ಸೋಚನೀಯ ಸಬಹೀಂ ಬಿಧಿ ಸೋಈ। ಜೋ ನ ಛಾಡಿ ಛಲು ಹರಿ ಜನ ಹೋಈ॥ ೨ ॥**
**ಸೋಚನೀಯ ನಹೀಂ ಕೋಸಲರಾಊ। ಭುವನ ಚಾರಿದಸ ಪ್ರಗಟ ಪ್ರಭಾಊ॥**
**ಭಯಉ ನ ಅಹಇ ನ ಅಬ ಹೋನಿಹಾರಾ। ಭೂಪ ಭರತ ಜಸ ಪಿತಾ ತುಮ್ಹಾರಾ॥ ೩ ॥**
**ಬಿಧಿ ಹರಿ ಹರು ಸುರಪತಿ ದಿಸಿನಾಥಾ। ಬರನಹೀಂ ಸಬ ದಸರಥ ಗುನ ಗಾಥಾ॥ ೪ ॥**

ತಪಸ್ಸನ್ನು ತೊರೆದು ಭೋಗದಲ್ಲಿ ಮಗ್ನನಾಗಿರುವ ವಾನಪ್ರಸ್ಥನ ಬಗ್ಗೆ ಯೋಚಿಸಬೇಕು. ಚಾಡಿಖೋರನೂ, ಕಾರಣವಿಲ್ಲದೆ ಸಿಟ್ಟಾಗುವವರನ್ನು, ತಂದೆ-ತಾಯಿ, ಗುರು, ಬಂಧು-ಬಾಂಧವರನ್ನು ದ್ವೇಷಿಸುವವನೂ, ಇವರೆಲ್ಲರೂ ಶೋಚನೀಯರು. ಇತರರಿಗೆ ಕೇಡನ್ನು ಬಗೆಯುತ್ತಾ ತನ್ನ ಉದರಪೋಷಣಕ್ಕಾಗಿಯೇ ಜೀವಿಸಿರುವ, ನಿರ್ದಯಿಯಾದ ಇವನ ಕುರಿತು ಯೋಚಿಸಬೇಕು. ಕಪಟಸ್ವಭಾವವನ್ನು ತೊರೆದು ಹರಿಭಕ್ತನಾಗದವನು ಎಲ್ಲ ವಿಧದಿಂದ ಶೋಚನೀಯನು. ಆದರೆ ಹದಿನಾಲ್ಕು ಲೋಕಗಳಲ್ಲಿ ತನ್ನ ಪ್ರಭಾವವನ್ನು ಬೀರಿ ಪ್ರಸಿದ್ಧನಾದ ಕೋಸಲೇಶ ದಶರಥ ಮಹಾರಾಜನು ಶೋಚನೀಯನಲ್ಲ. ಎಲೈ ಭರತಾ! ನಿನ್ನ ತಂದೆಯಂತಹ ರಾಜನು ಹಿಂದೆ ಆಗಿಲ್ಲ, ಇಂದು ಬೇರೆ ಯಾರೂ ಇಲ್ಲ, ಮುಂದೆ ಆಗಲಾರ. ಬ್ರಹ್ಮ, ವಿಷ್ಣು, ಮಹೇಶ್ವರ ಹಾಗೂ ಇಂದ್ರಾದಿ ದಿಕ್ಪಾಲಕರು ಇವರೆಲ್ಲ ದಶರಥ ಮಹಾರಾಜರ ಗುಣಗಳನ್ನು ಕೀರ್ತಿಸುತ್ತಾರೆ. (ಚೌ/೧-೪)

**ದೋ – ಕಹಹು ತಾತ ಕೆಹಿ ಭಾಂತಿ ಕೋಉ ಕರಿಹಿ ಬಡಾಈ ತಾಸು।**
**ರಾಮ ಲಖನ ತುಮ್ಹ ಸತ್ರುಹನ ಸರಿಸ ಸುಅನ ಸುಚಿ ಜಾಸು॥ ೧೭೩ ॥**

ಮಗೂ! ಶ್ರೀರಾಮ, ಲಕ್ಷ್ಮಣ, ನೀನು, ಶತ್ರುಘ್ನ ಹೀಗೆ ನಿಮ್ಮಂತಹ ಶ್ರೇಷ್ಠ ಕುಮಾರರನ್ನು ಪಡೆದ ಅವನ ಹಿರಿಮೆಯನ್ನು ಎಂತು ಕೊಂಡಾಡಬಹುದು? ಹೇಳು (ದೋ/೧೭೩)

ಚೌ – ಸಬ ಪ್ರಕಾರ ಭೂಪತಿ ಬಡಭಾಗೀ। ಬಾದಿ ಬಿಷಾದು ಕರಿಅ ತೆಹಿ ಲಾಗೀ॥
ಯಹ ಸುನಿ ಸಮುಝಿ ಸೋಚು ಪರಿಹರಹೂ। ಸಿರ ಧರಿ ರಾಜ ರಜಾಯಸು ಕರಹೂ॥ ೧ ॥
ರಾಯ್ ರಾಜಪದು ತುಮ್ಹ ಕಹ್ ದೀನ್ಹಾ। ಪಿತಾ ಬಚನು ಫುರ ಚಾಹಿಅ ಕೀನ್ಹಾ॥
ತಜೇ ರಾಮು ಜೆಹಿ ಬಚನಹಿ ಲಾಗೀ। ತನು ಪರಿಹರೆಉ ರಾಮ ಬಿರಹಾಗೀ॥ ೨ ॥
ನೃಪಹಿ ಬಚನ ಪ್ರಿಯ ನಹಿಂ ಪ್ರಿಯ ಪ್ರಾನಾ। ಕರಹು ತಾತ ಪಿತು ಬಚನ ಪ್ರವಾನಾ॥
ಕರಹು ಸೀಸ ಧರಿ ಭೂಪ ರಜಾಈ। ಹಇ ತುಮ್ಹ ಕಹ್ ಸಬ ಭಾಂತಿ ಭಲಾಈ॥ ೩ ॥
ಪರಸುರಾಮ ಪಿತು ಅಗ್ಯಾ ರಾಖೀ। ಮಾರೀ ಮಾತು ಲೋಕ ಸಬ ಸಾಖೀ॥
ತನಯ ಜಜಾತಿಹಿ ಜೌಬನು ದಯಊ। ಪಿತು ಅಗ್ಯಾಂ ಅಘ ಅಜಸು ನ ಭಯಊ॥ ೪ ॥

ಮಹಾರಾಜರು ಎಲ್ಲ ವಿಧದಿಂದ ಭಾಗ್ಯವಂತರಾಗಿದ್ದರು. ಅವರಿಗಾಗಿ ವಿಷಾದಪಡುವುದು ವ್ಯರ್ಥ. ಈ ರೀತಿ ಯೋಚಿಸಿ ಶೋಕವನ್ನು ತೊರೆ. ಅರಸರ ಆಜ್ಞೆಯನ್ನು ಶಿರಸಾವಹಿಸಿ ಅದರಂತೆ ನಡೆ. ಅವರು ರಾಜಪದವಿಯನ್ನು ನಿನಗೆ ಕೊಟ್ಟಿರುವರು. ಅವರ ಮಾತನ್ನು ಸುಳ್ಳಾಗಿಸದಂತೆ ನೀನು ನಡೆದುಕೊಳ್ಳಬೇಕು. ಸತ್ಯವಾಕ್ಯ ಪಾಲನೆಗಾಗಿಯೇ ಶ್ರೀರಾಮನನ್ನು ತೊರೆದು, ರಾಮವಿರಹಾಗ್ನಿಗೆ ತನ್ನ ಶರೀರವನ್ನೇ ಆಹುತಿಯಾಗಿ ನೀಡಿದನು. ಅರಸರಿಗೆ ಪ್ರಾಣಗಳಿಗಿಂತ ಸತ್ಯವಾಕ್ಯಪರಿಪಾಲನೆಯೇ ಪ್ರಿಯವಾಗಿತ್ತು. ಆದ್ದರಿಂದ ಕುಮಾರಾ! ನೀನು ತಂದೆಯವರ ಮಾತನ್ನು ಸತ್ಯಗೊಳಿಸು. ಅವರ ಆಜ್ಞೆಯನ್ನು ಶಿರಸಾವಹಿಸಿ ನಡೆಯುವುದರಲ್ಲಿ ಎಲ್ಲ ರೀತಿಯಿಂದಲೂ ನಿನ್ನ ಒಳಿತೇ ಇದೆ. ಪರಶುರಾಮನು ತಂದೆಯ ಆಜ್ಞೆಯನ್ನು ಪಾಲಿಸಿ, ತಾಯಿಯನ್ನೇ ಕೊಂದುಬಿಟ್ಟನು. ಇದು ಲೋಕವಿದಿತ. ಯಯಾತಿಯ ಮಗನು ತಂದೆಗೆ ತನ್ನ ಯೌವನವನ್ನೇ ಕೊಟ್ಟನು. ತಂದೆಯ ಆಜ್ಞೆಯನ್ನು ಪಾಲಿಸಿದ್ದರಿಂದ ಅವರಿಗೆ ಅಪಯಶಸ್ಸಾಗಲೀ, ಪಾಪವಾಗಲೀ ತಟ್ಟಲಿಲ್ಲ. (ಚೌ/೧-೪)

ದೋ – ಅನುಚಿತ ಉಚಿತ ಬಿಚಾರೂ ತಜಿ ಜೇ ಪಾಲಹಿಂ ಪಿತು ಬೈನ।
ತೇ ಭಾಜನ ಸುಖ ಸುಜಸ ಕೇ ಬಸಹಿಂ ಅಮರಪತಿ ಐನ ॥ ೧೭೪ ॥

ಉಚಿತಾನುಚಿತಗಳನ್ನು ಯೋಚಿಸದೆ ತಂದೆಯ ಆಜ್ಞೆಯನ್ನು ಪಾಲಿಸುವವರು, ಲೋಕದಲ್ಲಿ ಕೀರ್ತಿಪ್ರತಿಷ್ಠೆಗಳನ್ನೂ, ಸುಖವನ್ನೂ ಹೊಂದಿ, ಕೊನೆಗೆ ಸ್ವರ್ಗಧಾಮವನ್ನು ಸೇರುವರು. (ದೋ/೧೭೪)

ಚೌ – ಅವಸಿ ನರೇಸ ಬಚನ ಫುರ ಕರಹೂ। ಪಾಲಹು ಪ್ರಜಾ ಸೋಕು ಪರಿಹರಹೂ॥
ಸುರಪುರ ನೃಪು ಪಾಇಹಿ ಪರಿತೋಷೂ। ತುಮ್ಹ ಕಹ್ ಸುಕೃತು ಸುಜಸು ನಹಿಂ ದೋಷೂ॥ ೧ ॥
ಬೇದ ಬಿದಿತ ಸಮ್ಮತ ಸಬಹೀ ಕಾ। ಜೆಹಿ ಪಿತು ದೇಇ ಸೊ ಪಾವಇ ಟೀಕಾ॥
ಕರಹು ರಾಜು ಪರಿಹರಹು ಗಲಾನೀ। ಮಾನಹು ಮೋರ ಬಚನ ಹಿತ ಜಾನೀ॥ ೨ ॥
ಸುನಿ ಸುಖು ಲಹಬ ರಾಮ ಬೈದೇಹೀಂ। ಅನುಚಿತ ಕಹಬ ನ ಪಂಡಿತ ಕೇಹೀಂ॥
ಕೌಸಲ್ಯಾದಿ ಸಕಲ ಮಹತಾರೀಂ। ತೇಉ ಪ್ರಜಾ ಸುಖ ಹೋಹಿಂ ಸುಖಾರೀಂ॥ ೩ ॥
ಪರಮ ತುಮ್ಹಾರ ರಾಮ ಕರ ಜಾನಿಹಿ। ಸೋ ಸಬ ಬಿಧಿ ತುಮ್ಹ ಸನ ಭಲ ಮಾನಿಹಿ॥
ಸೌಂಪೇಹು ರಾಜು ರಾಮ ಕೇ ಆಏಂ। ಸೇವಾ ಕರೇಹು ಸನೇಹ ಸುಹಾಏಂ॥ ೪ ॥

ಅರಸರ ಮಾತನ್ನು ಖಂಡಿತವಾಗಿ ಸತ್ಯಗೊಳಿಸು. ಶೋಕವನ್ನು ತೊರೆದು, ಪ್ರಜೆಗಳನ್ನು ಪಾಲಿಸು. ಇದರಿಂದ ಸ್ವರ್ಗದಲ್ಲಿರುವ ಮಹಾರಾಜರು ಸಂತೋಷಪಡುತ್ತಾರೆ. ನಿನಗೆ ಪುಣ್ಯದೊರೆಯುತ್ತದೆ, ಸತ್ಕೀರ್ತಿ ಲಭಿಸೀತು, ದೋಷವು ತಟ್ಟಲಾರದು. ತಂದೆಯು ಯಾರಿಗೆ ರಾಜ್ಯ ಕೊಡುವನೋ ಅವನೇ ರಾಜನಾಗುವವನು. ಇದು ವೇದ-ಶಾಸ್ತ್ರ-ಪುರಾಣಾದಿಗಳಿಗೆ ಸಮ್ಮತ ಹಾಗೂ ಪ್ರಸಿದ್ಧವಾಗಿದೆ. ಆದ್ದರಿಂದ ನೀನು ರಾಜ್ಯವನ್ನಾಳು. ಗ್ಲಾನಿಯನ್ನು ತೊರೆ. ನನ್ನ ಮಾತುಗಳನ್ನು ಹಿತವೆಂದು ತಿಳಿದು ಒಪ್ಪಿಕೋ. ನೀನು ರಾಜನಾದ ವಾರ್ತೆಯನ್ನು ಕೇಳಿ ಸೀತಾರಾಮರು ಸಂತೋಷಪಡುವರು. ಯಾವ ಪಂಡಿತರೂ ಇದನ್ನು ಅನುಚಿತವೆಂದು ಹೇಳಲಾರರು. ಪ್ರಜೆಗಳು ಸುಖವಾಗಿ ಇರುವುದರಿಂದ ಕೌಸಲ್ಯಾದಿ ರಾಜಮಾತೆಯರೂ ಸುಖಿಯಾಗುವರು. ನಿನಗೂ ಶ್ರೀರಾಮನಿಗೂ ಇರುವ ಶ್ರೇಷ್ಠ ಸಂಬಂಧವನ್ನು ತಿಳಿದವರು ಎಲ್ಲ ವಿಧದಿಂದಲೂ ನಿನ್ನನ್ನು ಮೆಚ್ಚಿಕೊಳ್ಳುವರು. ಶ್ರೀರಾಮಚಂದ್ರನು ಹಿಂತಿರುಗಿ ಬಂದ ಬಳಿಕ ಆತನಿಗೆ ರಾಜ್ಯವನ್ನು ಒಪ್ಪಿಸು. ಸ್ನೇಹದಿಂದ ಆತನ ಸೇವೆ ಮಾಡು.'' (ಚೌ/೧-೪)

ದೋ – ಕೀಜಿಅ ಗುರ ಆಯಸು ಅವಸಿ ಕಹಹಿಂ ಸಚಿವ ಕರ ಜೋರಿ।
ರಘುಪತಿ ಆಏಂ ಉಚಿತ ಜಸ ತಸ ತಬ ಕರಬ ಬಹೋರಿ ॥ ೧೭೫ ॥

ಮಂತ್ರಿಗಳು ಕೈಜೋಡಿಸಿಕೊಂಡು ಭರತನಲ್ಲಿ ಪ್ರಾರ್ಥಿಸಿದರು – ''ರಾಜಕುಮಾರಾ! ಗುರುಗಳ ಆಜ್ಞೆಯನ್ನು ಅವಶ್ಯವಾಗಿ ಪಾಲಿಸು. ರಘುಪತಿಯು ಮರಳಿದ ಬಳಿಕ ನಿನಗೆ ಉಚಿತವೆಂದು ಕಂಡಂತೆ ಮಾಡು. (ದೋ/೧೭೫)

**ಚೌ – ಕೌಸಲ್ಯಾ ಧರಿ ಧೀರಜು ಕಹಈ। ಪೂತ ಪಥ್ಯ ಗುರ ಆಯಸು ಅಹಈ॥**
**ಸೋ ಆದರಿಅ ಕರಿಅ ಹಿತ ಮಾನೀ। ತಜಿಅ ಬಿಷಾದು ಕಾಲ ಗತಿ ಜಾನೀ॥ ೧ ॥**
**ಬನ ರಘುಪತಿ ಸುರಪತಿ ನರನಾಹೂ। ತುಮ್ಹ ಏಹಿ ಭಾಂತಿ ತಾತ ಕದರಾಹೂ॥**
**ಪರಿಜನ ಪ್ರಜಾ ಸಚಿವ ಸಬ ಅಂಬಾ। ತುಮ್ಹಹೀ ಸುತ ಸಬ ಕಹँ ಅವಲಂಬಾ ॥ ೨ ॥**
**ಲಖಿ ಬಿಧಿ ಬಾಮ ಕಾಲು ಕಠಿನಾಈ। ಧೀರಜು ಧರಹು ಮಾತು ಬಲಿ ಜಾಈ॥**
**ಸಿರ ಧರಿ ಗುರ ಆಯಸು ಅನುಸರಹೂ। ಪ್ರಜಾ ಪಾಲಿ ಪರಿಜನ ದುಖು ಹರಹೂ॥ ೩ ॥**
**ಗುರ ಕೇ ಬಚನ ಸಚಿವ ಅಭಿನಂದನು। ಸುನೇ ಭರತ ಹಿಯ ಹಿತ ಜನು ಚಂದನು॥**
**ಸುನೀ ಬಹೋರಿ ಮಾತು ಮೃದು ಬಾನೀ। ಸೀಲ ಸನೇಹ ಸರಲ ರಸ ಸಾನೀ॥ ೪ ॥**

ಕೌಸಲ್ಯೆಯು ಕೂಡ ಧೈರ್ಯ ತಳೆದು ಹೇಳಿದಳು – ''ಮಗು! ಗುರುಗಳ ಆಜ್ಞೆಯು ಶ್ರೇಯೋದಾಯಕವಾಗಿದೆ. ಅದನ್ನು ಹಿತವೆಂದು ತಿಳಿದು ಆದರಿಸುತ್ತಾ ಪಾಲಿಸಬೇಕು. ಇದೆಲ್ಲವೂ ವಿಧಿನಿರ್ಣಯವೆಂದು ತಿಳಿದು ವಿಷಾದವನ್ನು ಬಿಡು. ಶ್ರೀರಾಮಚಂದ್ರನು ವನದಲ್ಲಿದ್ದಾನೆ. ಮಹಾರಾಜರು ಸ್ವರ್ಗದಲ್ಲಿದ್ದಾರೆ. ಮಗೂ! ನೀನು ಈ ವಿಧವಾಗಿ ಕಾತರಗೊಂಡಿರುವೆ. ಕುಟುಂಬಕ್ಕೆ, ಪ್ರಜೆಗಳಿಗೆ, ಮಂತ್ರಿಗಳಿಗೆ, ಎಲ್ಲ ತಾಯಂದಿರಿಗೆ ನೀನೇ ಆಧಾರನು. ವಿಧಿಯ ವೈಪರೀತ್ಯವನ್ನು, ಪ್ರತಿಕೂಲವಾದ ಕಠಿಣ ಕಾಲಪರಿಸ್ಥಿತಿಯನ್ನು ಗಮನಿಸಿ ಧೈರ್ಯತಾಳು. ನಾನು ನಿನ್ನ ತಾಯಿಯಾಗಿ ಹೇಳುತ್ತೇನೆ. ಗುರುವಿನ ಆಜ್ಞೆಯನ್ನು ಶಿರಸಾವಹಿಸು. ಪ್ರಜೆಗಳನ್ನು ಪಾಲಿಸು. ಕುಟುಂಬಿಗಳ ದುಃಖವನ್ನು ದೂರಮಾಡು.'' ಭರತನು ಗುರುವಿನ ವಚನಗಳನ್ನು ಮತ್ತು ಮಂತ್ರಿಗಳ ಅನುಮೋದನೆಯನ್ನು ಗ್ರಹಿಸಿದನು. ಅವು ಅವನ ಹೃದಯಕ್ಕೆ ಚಂದನದಂತೆ ಶೀತಲವಾಗಿದ್ದವು. ಕೌಸಲ್ಯಾದೇವಿಯ ವಾತ್ಸಲ್ಯ ಸೌಶೀಲ್ಯಗಳಿಂದ ಹೇಳಿದ ಅಮೃತತುಲ್ಯ ಮೃದುವಚನಗಳನ್ನೂ ಕೂಡ ಕೇಳಿದನು. (ಚೌ/೧-೪)

**ಛಂ – ಸಾನೀ ಸರಲ ರಸ ಮಾತು ಬಾನೀ ಸುನಿ ಭರತು ಬ್ಯಾಕುಲ ಭಏ।**
**ಲೋಚನ ಸರೋರುಹ ಸ್ರವತ ಸೀಂಚತ ಬಿರಹ ಉರ ಅಂಕುರ ನಏ॥**
**ಸೋ ದಸಾ ದೇಖತ ಸಮಯ ತೇಹಿ ಬಿಸರೀ ಸಬಹಿ ಸುಧಿ ದೇಹ ಕೀ।**
**ತುಲಸೀ ಸರಾಹತ ಸಕಲ ಸಾದರ ಸೀವँ ಸಹಜ ಸನೇಹ ಕೀ॥**

ಸರಳತೆಯ ರಸದಲ್ಲಿ ಅದ್ದಿದ ತಾಯಿಯ ಮಾತುಗಳನ್ನು ಕೇಳಿ, ಭರತನು ವ್ಯಾಕುಲನಾದನು. ಅವನ ಲೋಚನ ಸರೋರುಹಗಳು ನೀರನ್ನು ಗರೆಯುತ್ತಾ ಹೃದಯದಲ್ಲಿ ಮೊಳೆತಿದ್ದ ವಿರಹಾಂಕುರಗಳಿಗೆ ನೀರೆರೆದವು. ಅವನ ಆ ಸ್ಥಿತಿಯನ್ನು ಕಂಡು ಎಲ್ಲರೂ ಮೈಮರೆತರು. ಭರತನ ಈ ಸಹಜವಾದ ಭ್ರಾತೃಪ್ರೇಮವು ಲೋಕಕ್ಕೆ ಆದರ್ಶವೆಂದು ಎಲ್ಲರೂ ಕೊಂಡಾಡಿದರೆಂದು ತುಳಸೀದಾಸರು ಹೇಳುತ್ತಾರೆ. (ಛಂದ)

**ಸೋ – ಭರತು ಕಮಲ ಕರ ಜೋರಿ ಧೀರ ಧುರಂಧರ ಧೀರ ಧರಿ।**
**ಬಚನ ಅಮಿಅँ ಜನು ಬೋರಿ ದೇತ ಉಚಿತ ಉತ್ತರ ಸಬಹಿ॥ ೧೭೬ ॥**

ಧೈರ್ಯಧುರಂಧರನಾದ ಭರತನು ಧೈರ್ಯತಳೆದು ತನ್ನ ಕರಕಮಲಗಳನ್ನು ಜೋಡಿಸಿ, ಅಮೃತಸಿಕ್ತವಾದ ವಾಕ್ಯಗಳಿಂದ ಎಲ್ಲರನ್ನೂ ಸಮಾಧಾನಗೊಳಿಸತೊಡಗಿದನು. (ದೋ/೧೭೬)

ಮಾಸಪಾರಾಯಣದ ಹದಿನೆಂಟನೆಯ ವಿಶ್ರಾಮ

**ಚೌ – ಮೊಹಿ ಉಪದೇಸು ದೀನ್ಹ ಗುರ ನೀಕಾ। ಪ್ರಜಾ ಸಚಿವ ಸಮ್ಮತ ಸಬಹೀ ಕಾ॥**
**ಮಾತು ಉಚಿತ ಧರಿ ಆಯಸು ದೀನ್ಹಾ। ಅವಸಿ ಸೀಸ ಧರಿ ಚಾಹಉँ ಕೀನ್ಹಾ॥ ೧ ॥**
**ಗುರ ಪಿತು ಮಾತು ಸ್ವಾಮಿ ಹಿತ ಬಾನೀ। ಸುನಿ ಮನ ಮುದಿತ ಕರಿಅ ಭಲಿ ಜಾನೀ॥**
**ಉಚಿತ ಕಿ ಅನುಚಿತ ಕಿಏँ ಬಿಚಾರೂ। ಧರಮು ಜಾಇ ಸಿರ ಪಾತಕ ಭಾರೂ॥ ೨ ॥**
**ತುಮ್ಹ ತೌ ದೇಹು ಸರಲ ಸಿಖ ಸೋಈ। ಜೋ ಆಚರತ ಮೋರ ಭಲ ಹೋಈ॥**
**ಜದ್ಯಪಿ ಯಹ ಸಮುಝತ ಹಉँ ನೀಕೇँ। ತದಪಿ ಹೋತ ಪರಿತೋಷು ನ ಜೀ ಕೇँ॥ ೩ ॥**

**ಅಬ ತುಮ್ಹ ಬಿನಯ ಮೋರಿ ಸುನಿ ಲೇಹೂ। ಮೋಹಿ ಅನುಹರತ ಸಿಖಾವನು ದೇಹೂ॥**
**ಊತರು ದೇಉ ಛಮಬ ಅಪರಾಧೂ। ದುಖಿತ ದೋಷ ಗುನ ಗನಹಿಂ ನ ಸಾಧೂ॥ ೪॥**

'ಗುರುಗಳು ನನಗೆ ಒಳ್ಳೆಯ ಬುದ್ಧಿವಾದ ಹೇಳಿರುವರು. ಮತ್ತೆ ಪ್ರಜಾಜನರಿಗೂ, ಮಂತ್ರಿಗಳಿಗೂ ಅದು ಸಮ್ಮತವೇ. ತಾಯಿಯವರೂ ಕೂಡ ಅದೇ ಉಚಿತವೆಂದು ಉಪದೇಶಿಸಿರುವರು. ನಾನೂ ಕೂಡ ಖಂಡಿತವಾಗಿ ಅದನ್ನು ಶಿರಸಾವಹಿಸಿ, ಹಾಗೆಯೇ ಮಾಡಬಯಸುತ್ತೇನೆ. ಏಕೆಂದರೆ, ಗುರುಗಳು, ತಂದೆ, ತಾಯಿ, ಪ್ರಭುಗಳು, ಮಿತ್ರರು ಇವರ ಮಾತನ್ನು ಒಳ್ಳೆಯದೆಂದು ತಿಳಿದು ಸಂತೋಷದಿಂದ ಸ್ವೀಕರಿಸಬೇಕು. ಉಚಿತಾನುಚಿತಗಳನ್ನು ಆಲೋಚಿಸುವುದರಿಂದ ಧರ್ಮವು ನಾಶವಾಗುತ್ತದೆ, ತಲೆಯ ಮೇಲೆ ಪಾಪದ ಹೊರೆಯೇರುತ್ತದೆ. ನೀವುಗಳು ನನಗೆ ಹಿತಕರವಾದ ವಿಷಯಗಳನ್ನೇ ಬೋಧಿಸುತ್ತಿದ್ದೀರಿ. ಇದನ್ನು ನಾನು ಚೆನ್ನಾಗಿ ಬಲ್ಲೆ. ಆದರೂ ನನಗೇಕೋ ಸಂತೋಷವಾಗುತ್ತಿಲ್ಲ. ತಾವುಗಳು ನನ್ನ ಬಿನ್ನಹವನ್ನು ಲಾಲಿಸಿ, ನನ್ನ ಯೋಗ್ಯತೆಗೆ ಅನುಸಾರವಾಗಿ ನನಗೆ ಬುದ್ಧಿವಾದ ಹೇಳಿರಿ. ನಾನು ಇದಿರು ಮಾತಾಡುತ್ತಿದ್ದೇನೆ ಎಂದು ಬಗೆಯದೆ ನನ್ನನ್ನು ಕ್ಷಮಿಸಿರಿ. ಸಾಧು ಜನರು ನೊಂದವರ ಗುಣದೋಷಗಳನ್ನು ಗಮನಿಸುವುದಿಲ್ಲ. (ಚೌ/೧-೪)

**ದೋ – ಪಿತು ಸುರಪುರ ಸಿಯ ರಾಮು ಬನ ಕರನ ಕಹಹು ಮೋಹಿ ರಾಜು।**
**ಏಹಿ ತೇಂ ಜಾನಹು ಮೋರ ಹಿತ ಕೈ ಆಪನ ಬಡ ಕಾಜು॥ ೧೭೭॥**

ತಂದೆಯವರು ಸ್ವರ್ಗದಲ್ಲಿದ್ದಾರೆ. ಸೀತಾರಾಮರು ವನದಲ್ಲಿದ್ದಾರೆ. ನೀವು ನನ್ನನ್ನು ರಾಜ್ಯವನ್ನಾಳು ಎಂದು ಹೇಳುತ್ತಿರುವಿರಿ. ಇದರಿಂದ ನನಗೆ ಒಳ್ಳೆಯದಾಗುವುದೆಂದು ನೀವು ತಿಳಿದಿದ್ದೀರಿ. ಅಥವಾ ತಮ್ಮ ಯಾವುದೋ ದೊಡ್ಡ ಕೆಲಸವಾದೀತೆಂದು ಆಶಿಸುತ್ತಿರುವಿರೇನೋ? (ದೋ/೧೭೭)

**ಚೌ – ಹಿತ ಹಮಾರ ಸಿಯಪತಿ ಸೇವಕಾಈಂ। ಸೋ ಹರಿ ಲೀನ್ಹ ಮಾತು ಕುಟಿಲಾಈಂ॥**
**ಮೈಂ ಅನುಮಾನಿ ದೀಖ ಮನ ಮಾಹೀಂ। ಆನ ಉಪಾಯ್ ಮೋರ ಹಿತ ನಾಹೀಂ॥ ೧॥**
**ಸೋಕ ಸಮಾಜು ರಾಜು ಕೆಹಿ ಲೇಖೇಂ। ಲಖನ ರಾಮ ಸಿಯ ಬಿನು ಪದ ದೇಖೇಂ॥**
**ಬಾದಿ ಬಸನ ಬಿನು ಭೂಷನ ಭಾರೂ। ಬಾದಿ ಬಿರತಿ ಬಿನು ಬ್ರಹ್ಮ ಬಿಚಾರೂ॥ ೨॥**
**ಸರುಜ ಸರೀರ ಬಾದಿ ಬಹು ಭೋಗಾ। ಬಿನು ಹರಿಭಗತಿ ಜಾಯ್ ಜಪ ಜೋಗಾ॥**
**ಜಾಯ್ ಜೀವ ಬಿನು ದೇಹ ಸುಹಾಈ। ಬಾದಿ ಮೋರ ಸಬು ಬಿನು ರಘುರಾಈ॥ ೩॥**
**ಜಾಉಂ ರಾಮ ಪಹಿಂ ಆಯಸು ದೇಹೂ। ಏಕಹಿಂ ಆಂಕ ಮೋರ ಹಿತ ಏಹೂ॥**
**ಮೋಹಿ ನೃಪ ಕರಿ ಭಲ ಆಪನ ಚಹಹೂ। ಸೋಉ ಸನೇಹ ಜಡತಾ ಬಸ ಕಹಹೂ॥ ೪॥**

ಆದರೆ ನನ್ನ ಹಿತವಿರುವುದು ಸೀತಾಪತಿಯ ಸೇವೆಯಲ್ಲೇ. ಆದರೆ ನನ್ನ ತಾಯಿಯ ಕುಟಿಲತೆಯು ಆ ಸೌಭಾಗ್ಯವನ್ನು ನನ್ನಿಂದ ಕಸಿದುಕೊಂಡಿದೆ. ನಾನು ಚೆನ್ನಾಗಿ ಯೋಚಿಸಿ ನೋಡಿದ್ದೇನೆ; ಬೇರೆ ಯಾವುದೇ ಮಾರ್ಗವು ನನಗೆ ಹಿತಕಾರಿಯಲ್ಲ. ಲಕ್ಷ್ಮಣ, ಸೀತಾದೇವಿ, ಶ್ರೀರಾಮಚಂದ್ರನ ಚರಣಗಳನ್ನು ಕಾಣದಿರುವಾಗ ಈ ಶೋಕ ಸಮುದಾಯವಾದ ರಾಜ್ಯ ಯಾವ ಲೆಕ್ಕಕ್ಕೆ? ಇದಕ್ಕೆ ಏನು ಬೆಲೆ? ವಸ್ತ್ರಗಳನ್ನೇ ಧರಿಸದೆ ಎಲ್ಲ ಒಡವೆಗಳನ್ನು ಧರಿಸಿದರೂ ಏನು ಪ್ರಯೋಜನ? ವೈರಾಗ್ಯವಿಲ್ಲದ ಬ್ರಹ್ಮವಿಚಾರವು ವ್ಯರ್ಥವಲ್ಲವೇ! ರೋಗಿಯಾದ ಶರೀರಕ್ಕೆ ನಾನಾವಿಧವಾದ ಭೋಗಗಳು ವ್ಯರ್ಥ. ಹರಿಭಕ್ತಿಯಿಲ್ಲದೆ ಜಪ, ಯೋಗಗಳು ವ್ಯರ್ಥ. ಜೀವವಿಲ್ಲದ ಸುಂದರದೇಹ ಯಾವ ಕೆಲಸಕ್ಕೆ? ಹಾಗೆಯೇ ಶ್ರೀರಘುನಾಥನಿಲ್ಲದೆ ಇವೆಲ್ಲ ನನ್ನಪಾಲಿಗೆ ನಿಷ್ಪ್ರಯೋಜಕ. ಶ್ರೀರಾಮನ ಬಳಿಗೆ ಹೋಗಲು ನನಗೆ ಅಪ್ಪಣೆಯನ್ನು ಕೊಡಿರಿ. ಇದರಿಂದಾಗಿಯೇ ನನಗೆ ಸರ್ವಶ್ರೇಯಸ್ಸುಗಳು ಲಭಿಸುವುವು ಎಂಬುದೇ ನನ್ನ ಏಕೈಕ ನಿಶ್ಚಯವು. ನನ್ನನ್ನು ರಾಜನನ್ನಾಗಿಸಿ ನೀವು ನಿಮ್ಮ ಒಳಿತನ್ನು ಬಯಸುತ್ತಿರುವಿರಿ. ಆದರೆ ಇದನ್ನು ನೀವು ಸ್ನೇಹವಶರಾಗಿ ಹೇಳುತ್ತಿರುವಿರಿ. (ಚೌ/೧-೪)

**ದೋ – ಕೈಕೇಈ ಸುಅ ಕುಟಿಲಮತಿ ರಾಮ ಬಿಮುಖ ಗತಲಾಜ।**
**ತುಮ್ಹ ಚಾಹತ ಸುಖ ಮೋಹಬಸ ಮೋಹಿ ಸೇ ಅಧಮ ಕೆಂ ರಾಜ॥ ೧೭೮॥**

ಕೈಕೆಯಿಯ ಪುತ್ರನೂ, ಕುಟಿಲಮತಿಯೂ, ರಾಮವಿಮುಖನೂ, ಲಜ್ಜಾವಿಹೀನನೂ ಆದ ಈ ಅಧಮನ ಆಳ್ವಿಕೆಯಿಂದ ನೀವು ಸುಖವನ್ನು ಬಯಸುವುದು ಬರಿಯ ಮೋಹವಷ್ಟೇ. (ದೋ/೧೭೮)

**ಚೌ – ಕಹಉಂ ಸಾಂಚು ಸಬ ಸುನಿ ಪತಿಆಹೂ। ಚಾಹಿಅ ಧರಮಸೀಲ ನರನಾಹೂ॥**
**ಮೋಹಿ ರಾಜು ಹಠಿ ದೇಇಹಹು ಜಬಹೀಂ। ರಸಾ ರಸಾತಲ ಜಾಇಹಿ ತಬಹೀಂ॥ ೧॥**

**ಮೊಹಿ ಸಮಾನ ಕೋ ಪಾಪ ನಿವಾಸೂ। ಜೆಹಿ ಲಗೀ ಸೀಯ ರಾಮ ಬನಬಾಸೂ॥**
**ರಾಯ್ ರಾಮ ಕಹುಁ ಕಾನನು ದೀನ್ಹಾ। ಬಿಛುರತ ಗಮನು ಅಮರಪುರ ಕೀನ್ಹಾ॥ ೨ ॥**
**ಮೈಂ ಸಠು ಸಬ ಅನರಥ ಕರ ಹೇತೂ। ಬೈಠ ಬಾತ ಸಬ ಸುನಉಁ ಸಚೇತೂ॥**
**ಬಿನು ರಘುಬೀರ ಬಿಲೋಕಿ ಅಬಾಸೂ। ರಹೇ ಪ್ರಾನ ಸಹಿ ಜಗ ಉಪಹಾಸೂ॥ ೩ ॥**
**ರಾಮ ಪುನೀತ ಬಿಷಯ ರಸ ರೂಖೇ। ಲೋಲುಪ ಭೂಮಿ ಭೋಗ ಕೇ ಭೂಖೇ॥**
**ಕಹಁ ಲಗಿ ಕಹೌಁ ಹೃದಯ ಕಠಿನಾಈ। ನಿದರಿ ಕುಲಿಸು ಜೆಹಿಁ ಲಹೀ ಬಡಾಈ॥ ೪ ॥**

ನಾನು ನಿಜವನ್ನೇ ಹೇಳುತ್ತೇನೆ. ನೀವೆಲ್ಲ ಕೇಳಿ ವಿಶ್ವಾಸವಿಡಿರಿ. ಧರ್ಮಶೀಲನಾದವನೇ ರಾಜನಾಗಬೇಕು. ನೀವು ಬಲವಂತವಾಗಿ ನನ್ನನ್ನು ರಾಜನನ್ನಾಗಿಸಿದರೆ ಈ ಭೂಮಿಯು ರಸಾತಳಕ್ಕೆ ಸೇರಿಹೋದೀತು. ನನ್ನ ಕಾರಣದಿಂದಲೇ ಸೀತಾರಾಮರು ಅಡವಿ ಪಾಲಾದರು. ಅಂತಹ ಪಾಪಾತ್ಮನು ನಾನಲ್ಲದೆ ಬೇರೆ ಯಾರು ಇದ್ದಾರು? ಮಹಾರಾಜರು ಶ್ರೀರಾಮನಿಗೆ ವನವಾಸವನ್ನು ವಿಧಿಸಿದನು. ಮತ್ತೆ ಅವನ ವಿಯೋಗವನ್ನು ತಡೆದುಕೊಳ್ಳಲಾಗದೆ ಸ್ವರ್ಗಸ್ಥರಾದರು. ಆದರೆ ಈ ಎಲ್ಲ ಅನರ್ಥಗಳಿಗೆ ಕಾರಣನಾದ ನಾನು ಪ್ರಜ್ಞಾಪೂರ್ಣನಾಗಿ ಕುಳಿತಿದ್ದು ಇವೆಲ್ಲವನ್ನೂ ಕೇಳುತ್ತಿದ್ದೇನೆ. ರಾಮನಿಲ್ಲದ ಮನೆಯನ್ನು ಕಂಡೂ, ಜಗತ್ತಿನ ಉಪಹಾಸವನ್ನು ಸಹಿಸಿಯೂ ಈ ಪ್ರಾಣಗಳು ಉಳಿದಿವೆಯಲ್ಲ! ಕಾರಣ ಈ ಪ್ರಾಣಗಳು ಪವಿತ್ರವಾದ ಶ್ರೀರಾಮನ ಪ್ರೇಮರಸದಲ್ಲಿ ಆಸಕ್ತವಾಗಿಲ್ಲ. ಇವು ಭೂಮಿ ಮತ್ತು ಭೋಗಲೋಲುಪವಾಗಿವೆ. ನನ್ನ ಕಲ್ಲೆದೆಯನ್ನು ಏನೆಂದು ಬಣ್ಣಿಸಲಿ? ಅದು ವಜ್ರಕ್ಕಿಂತಲೂ ಕಠಿಣವಾಗಿದೆ. (ಚೌ/೧-೪)

**ದೋ – ಕಾರನ ತೇಂ ಕಾರಜು ಕಠಿನ ಹೋಇ ದೋಸು ನಹೀಂ ಮೋರ।**
**ಕುಲಿಸ ಅಸ್ಥಿ ತೇಂ ಉಪಲ ತೇಂ ಲೋಹ ಕರಾಲ ಕಠೋರ॥ ೧೭೯ ॥**

ಕಾರಣಕ್ಕಿಂತ ಕಾರ್ಯವು ಕಠಿಣವಾಗಿರುತ್ತದೆ. ಇದರಲ್ಲಿ ನನ್ನದೇನೂ ದೋಷವಿಲ್ಲ. ಮೂಳೆಗಿಂತ ವಜ್ರವು, ಕಲ್ಲಿಗಿಂತ ಕಬ್ಬಿಣವು ಕಠೋರವಾಗಿರುತ್ತದೆ. (ದೋ/೧೭೯)

**ಚೌ – ಕೈಕೇಈ ಭವ ತನು ಅನುರಾಗೇ। ಪಾವँರ ಪ್ರಾನ ಅಘಾಇ ಅಭಾಗೇ॥**
**ಜೌಁ ಪ್ರಿಯ ಬಿರಹಁ ಪ್ರಾನ ಪ್ರಿಯ ಲಾಗೇ। ದೇಖಬ ಸುನಬ ಬಹುತ ಅಬ ಆಗೇ॥ ೧ ॥**
**ಲಖನ ರಾಮ ಸಿಯ ಕಹುಁ ಬನು ದೀನ್ಹಾ। ಪಠಇ ಅಮರಪುರ ಪತಿ ಹಿತ ಕೀನ್ಹಾ॥**
**ಲೀನ್ಹ ಬಿಧವಪನ ಅಪಜಸು ಆಪೂ। ದೀನ್ಹೆಉ ಪ್ರಜಹಿ ಸೋಕು ಸಂತಾಪೂ॥ ೨ ॥**
**ಮೋಹಿ ದೀನ್ಹ ಸುಖು ಸುಜಸು ಸುರಾಜೂ। ಕೀನ್ಹ ಕೈಕಈಂ ಸಬ ಕರ ಕಾಜೂ॥**
**ಏಹಿ ತೇಂ ಮೋರ ಕಾಹ ಅಬ ನೀಕಾ। ತೆಹಿ ಪರ ದೇನ ಕಹಹು ತುಮ್ಹ ಟೀಕಾ॥ ೩ ॥**
**ಕೈಕಇ ಜಠರ ಜನಮಿ ಜಗ ಮಾಹೀಂ। ಯಹ ಮೊಹಿ ಕಹಁ ಕಛು ಅನುಚಿತ ನಾಹೀಂ॥**
**ಮೋರಿ ಬಾತ ಸಬ ಬಿಧಿಹಿಂ ಬನಾಈ। ಪ್ರಜಾ ಪಾँಚ ಕತ ಕರಹು ಸಹಾಈ॥ ೪ ॥**

ಕೈಕೆಯಿಯ ಗರ್ಭದಿಂದ ಹುಟ್ಟಿದ ಈ ದೇಹವನ್ನು ಪ್ರೀತಿಸುವ ಈ ಪಾಮರ ಪ್ರಾಣಗಳು, ಎಲ್ಲ ರೀತಿಯಿಂದಲೂ ನಿರ್ಭಾಗ್ಯವೇ ಸರಿ. ಪ್ರಿಯವಿಯೋಗದಲ್ಲಿಯೂ ನನಗೆ ಪ್ರಾಣಗಳೇ ಪ್ರಿಯವೆನಿಸಿರುವಾಗ ಮುಂದೆ ನಾನು ತುಂಬ ನೋಡಬೇಕಾಗಿದೆ; ಕೇಳಬೇಕಾಗಿದೆ. ಕೈಕೆಯಿಯು ಸೀತಾರಾಮರನ್ನೂ, ಲಕ್ಷ್ಮಣನನ್ನೂ ಕಾಡಿಗೆ ಕಳಿಸಿದಳು. ಪತಿಯನ್ನು ದೇವಲೋಕಕ್ಕೆ ಕಳಿಸಿ ಅವನಿಗೆ ಹಿತವನ್ನೇ ಮಾಡಿದಳು. ಸ್ವತಃ ವೈಧವ್ಯವನ್ನೂ, ಅಪಯಶಸ್ಸನ್ನೂ ಪಡೆದುಕೊಂಡಳು. ಪ್ರಜೆಗಳಿಗೆ ಶೋಕ-ಸಂತಾಪಗಳನ್ನು ಕೊಟ್ಟಳು. ನನಗೆ ಮಾತ್ರ ಸುಖವನ್ನೂ, ರಾಜ್ಯವನ್ನೂ, ಸತ್ಕೀರ್ತಿಯನ್ನೂ ದಯಪಾಲಿಸಿದಳು. ಈ ಪ್ರಕಾರ ಕೈಕೆಯಿಯು ಎಲ್ಲರ ಕೆಲಸವನ್ನೂ ಎಷ್ಟು ನೈಪುಣ್ಯದಿಂದ ಮಾಡಿರುವಳು! ನನಗೆ ಇದಕ್ಕಿಂತ ಉತ್ತಮವಾದುದು ಬೇರೇನಿರಬಹುದು? ಇಷ್ಟಾದರೂ ನೀವು ನನಗೆ ರಾಜ್ಯಾಭಿಷೇಕ ಮಾಡಬೇಕೆನ್ನುತ್ತಿರುವಿರಲ್ಲ! ಕೈಕೆಯಿಯ ಹೊಟ್ಟೆಯಲ್ಲಿ ಹುಟ್ಟಿದಮೇಲೆ ಇದರಲ್ಲಿ ಯಾವುದೂ ಅನುಚಿತವೆನಿಸುವುದಿಲ್ಲ. ನನ್ನ ಎಲ್ಲ ಕೆಲಸವನ್ನು ವಿಧಿಯೇ ಮಾಡಿಬಿಟ್ಟಿದೆ. ಅದರಲ್ಲಿ ನೀವಾಗಲೀ, ಈ ಪ್ರಜೆಯಾಗಲೀ ಸಹಾಯಮಾಡುವುದು ಏನಿದೆ? (ಚೌ/೧-೪)

**ದೋ – ಗ್ರಹ ಗ್ರಹೀತ ಪುನಿ ಬಾತ ಬಸ ತೆಹಿ ಪುನಿ ಬೀಛೀ ಮಾರ।**
**ತೇಹಿ ಪಿಆಇಅ ಬಾರುನೀ ಕಹಹು ಕಾಹ ಉಪಚಾರ॥ ೧೮೦ ॥**

ಮೊದಲೇ ಕ್ರೂರಗ್ರಹ (ಪಿಶಾಚಿ) ಹಿಡಿದಿದ್ದು, ವಾಯುಪ್ರಕೋಪವಾದರೆ, ನಡುವೆ ಚೇಳು ಕುಟುಕಿದರೆ, ಅಷ್ಟುಸಾಲದೆಂದು ಅವನಿಗೆ ಕಳ್ಳು ಕುಡಿಸಿದರೆ ಯಾವ ಚಿಕಿತ್ಸೆ ಮಾಡಬಹುದು? ಹೇಳಿ. (ದೋ/೧೮೦)

**ಚೌ – ಕೈಕಇ ಸುಅನ ಜೋಗು ಜಗ ಜೋಈ। ಚತುರ ಬಿರಂಚಿ ದೀನ್ಹ ಮೊಹಿ ಸೋಈ॥**
**ದಸರಥ ತನಯ ರಾಮ ಲಘು ಭಾಈ। ದೀನ್ಹಿ ಮೋಹಿ ಬಿಧಿ ಬಾದಿ ಬಡಾಈ॥ ೧॥**
**ತುಮ್ಹ ಸಬ ಕಹಹು ಕಢಾವನ ಟೀಕಾ। ರಾಯ ರಜಾಯಸು ಸಬ ಕಹ್ ನೀಕಾ॥**
**ಉತರು ದೇಉ್ ಕೆಹಿ ಬಿಧಿ ಕೆಹಿ ಕೇಹೀ। ಕಹಹು ಸುಖೇನ ಜಥಾ ರುಚಿ ಜೇಹೀ॥ ೨॥**
**ಮೋಹಿ ಕುಮಾತು ಸಮೇತ ಬಿಹಾಈ। ಕಹಹು ಕಹಿಹಿ ಕೇ ಕೀನ್ಹ ಭಲಾಈ॥**
**ಮೋ ಬಿನು ಕೋ ಸಚರಾಚರ ಮಾಹೀಂ। ಜೆಹಿ ಸಿಯ ರಾಮು ಪ್ರಾನಪ್ರಿಯ ನಾಹೀಂ॥ ೩॥**
**ಪರಮ ಹಾನಿ ಸಬ ಕಹ್ ಬಡ ಲಾಹೂ। ಅದಿನು ಮೋರ ನಹಿಂ ದೂಷನ ಕಾಹೂ॥**
**ಸಂಸಯ ಸೀಲ ಪ್ರೇಮ ಬಸ ಅಹಹೂ। ಸಬುಇ ಉಚಿತ ಸಬ ಜೋ ಕಛು ಕಹಹೂ॥ ೪॥**

ಕೈಕೆಯಿಯ ಮಗನಿಗೆ ಜಗತ್ತಿನಲ್ಲಿಯೋಗ್ಯವಾದುದೆಲ್ಲವನ್ನು, ಚತುರನಾದ ವಿಧಾತನು ನನಗೆ ಕರುಣಿಸಿದ್ದಾನೆ. ಆದರೆ 'ದಶರಥ ತನಯ' ಮತ್ತು 'ರಾಮನ ತಮ್ಮ' ನಾಗಿರುವ ಹೆಮ್ಮೆ ವಿಧಿವಿಲಾಸದಿಂದ ವ್ಯರ್ಥವಾಯಿತು. ಸಾಲದೆನ್ನುವಂತೆ ನೀವೂ ಕೂಡ ನನಗೆ ಪಟ್ಟಾಭಿಷಿಕ್ತನಾಗಲು ಹೇಳುತ್ತಿರುವಿರಿ. ರಾಜಾಜ್ಞೆಯು ಎಲ್ಲರಿಗೂ ಒಳ್ಳೆಯದೆ. ನಾನು ಯಾರು ಯಾರಿಗೆ ಯಾವ-ಯಾವ ರೀತಿಯಲ್ಲಿ ಉತ್ತರ ಕೊಡಲಿ? ಯಾರಿಗೆ ಏನು ಸುಖಪ್ರದವೋ ಅದನ್ನು ಹೇಳಿರಿ. ನನ್ನ ಕುಮಾತೆ ಕೈಕೆಯಿ ಸಮೇತ ನನ್ನನ್ನುಳಿದು 'ಈ ಕೆಲಸ ಚೆನ್ನಾಯಿತು' ಎಂದು ಬೇರೆ ಯಾರು ಹೇಳಬಲ್ಲರು? ಹೇಳಿರಿ. ಜಡ-ಚೇತನಾತ್ಮಕವಾದ ಈ ಜಗತ್ತಿನಲ್ಲಿನನ್ನನ್ನುಳಿದು ಸೀತಾರಾಮರು ಪ್ರಾಣಪ್ರಿಯರಲ್ಲದವರು ಯಾರಿದ್ದಾರೆ? ಈ ಪರಮಹಾನಿಯೇ ಎಲ್ಲರಿಗೂ ದೊಡ್ಡಲಾಭವೆಂದು ಕಾಣುತ್ತಿದೆಯಲ್ಲ! ನನ್ನ ದಿನಗಳು ಕೆಟ್ಟದಾಗಿವೆ, ಇದರಲ್ಲಿ ಯಾರ ದೋಷವೂ ಇಲ್ಲ. ನೀವೆಲ್ಲರೂ ಸಂಶಯ, ಸೌಶೀಲ್ಯ, ಪ್ರೇಮ ಇವುಗಳಿಗೆ ವಶರಾಗಿದ್ದೀರಿ. ಅದರಿಂದ ನೀವು ಹೇಳುವುದೆಲ್ಲವೂ ಉಚಿತವೇ ಆಗಿದೆ. (ಚೌ/೧-೪)

**ದೋ – ರಾಮ ಮಾತು ಸುಠಿ ಸರಲಚಿತ ಮೋ ಪರ ಪ್ರೇಮು ಬಿಸೇಷಿ।**
**ಕಹಇ ಸುಭಾಯ ಸನೇಹ ಬಸ ಮೋರಿ ದೀನತಾ ದೇಖಿ॥ ೧೮೧॥**

ಶ್ರೀರಾಮಚಂದ್ರನ ತಾಯಿ ಅತ್ಯಂತ ಸರಳ ಹೃದಯಿ. ನನ್ನ ಮೇಲೆ ಅವರಿಗೆ ವಿಶೇಷವಾದ ಪ್ರೇಮವಿದೆ. ಆದ್ದರಿಂದ ನನ್ನ ದೈನ್ಯವನ್ನು ಕಂಡು ಆಕೆ ಸಹಜವಾದ ಸ್ನೇಹದಿಂದಲೇ ಇಂತಹ ಮಾತುಗಳನ್ನಾಡಿದ್ದಾರೆ. (ದೋ/೧೮೧)

**ಚೌ – ಗುರ ಬಿಬೇಕ ಸಾಗರ ಜಗು ಜಾನಾ। ಜಿನ್ಹಹಿ ಬಿಸ್ವ ಕರ ಬದರ ಸಮಾನಾ॥**
**ಮೋ ಕಹ್ ತಿಲಕ ಸಾಜ ಸಜ ಸೋಊ। ಭಏ್ ಬಿಧಿ ಬಿಮುಖ ಬಿಮುಖ ಸಬು ಕೋಊ॥ ೧॥**
**ಪರಿಹರಿ ರಾಮು ಸೀಯ ಜಗ ಮಾಹೀಂ। ಕೋಉ ನ ಕಹಿಹಿ ಮೋರ ಮತ ನಾಹೀಂ॥**
**ಸೋ ಮೈಂ ಸುನಬ ಸಹಬ ಸುಖು ಮಾನೀ। ಅಂತಹುಂ ಕೀಚ ತಹಾಂ ಜಹ್ ಪಾನೀ॥ ೨॥**
**ಡರು ನ ಮೋಹಿ ಜಗ ಕಹಿಹಿ ಕಿ ಪೋಚೂ। ಪರಲೋಕಹು ಕರ ನಾಹಿನ ಸೋಚೂ॥**
**ಏಕಇ ಉರ ಬಸ ದುಸಹ ದವಾರೀ। ಮೊಹಿ ಲಗಿ ಭೇ ಸಿಯ ರಾಮು ದುಖಾರೀ॥ ೩॥**
**ಜೀವನ ಲಾಹು ಲಖನ ಭಲ ಪಾವಾ। ಸಬು ತಜಿ ರಾಮ ಚರನ ಮನು ಲಾವಾ॥**
**ಮೋರ ಜನಮ ರಘುಬರ ಬನ ಲಾಗೀ। ಝೂಠ ಕಾಹ ಪಛಿತಾಉ್ ಅಭಾಗೀ॥ ೪॥**

ಗುರುದೇವರು ಜ್ಞಾನಸಮುದ್ರರೆಂಬುದನ್ನು ಜಗತ್ತೆಲ್ಲ ಬಲ್ಲದು. ಅವರಿಗೆ ವಿಶ್ವವೇ ಕರತಲಾಮಲಕದಂತೆ. ಅವರೂ ಕೂಡ ನನ್ನ ಪಟ್ಟಾಭಿಷೇಕಕ್ಕೆ ಅಣಿಮಾಡುತ್ತಿದ್ದಾರೆ. ವಿಧಿಯು ವಿಮುಖವಾದರೆ, ಎಲ್ಲರೂ ವಿಮುಖರಾಗುತ್ತಾರೆಂಬುದು ಸತ್ಯವು. ಶ್ರೀರಾಮ ಸೀತೆಯರನ್ನು ಬಿಟ್ಟರೆ ಇದರಲ್ಲಿ ನನ್ನ ಸಮ್ಮತಿಯಿಲ್ಲ ಎಂದು ಜಗತ್ತಿನಲ್ಲಿ ಬೇರೆ ಯಾರೂ ಹೇಳಲಾರರು. ನಾನು ಅದನ್ನು ಹರ್ಷದಿಂದ ಕೇಳಿ ಸಹಿಸುತ್ತೇನೆ. ಏಕೆಂದರೆ, ನೀರಿದ್ದ ಕಡೆ ಕೆಸರು ಇದ್ದೇ ಇರುತ್ತದಲ್ಲ! ಜಗತ್ತು ನನ್ನನ್ನು ದೂಷಿಸೀತು ಎಂಬ ಭಯ ನನಗಿಲ್ಲ. ಪರಲೋಕದ ಚಿಂತೆಯೂ ನನಗಿಲ್ಲ. ಆದರೆ ನನ್ನ ಕಾರಣದಿಂದ ಸೀತಾರಾಮರಿಗೆ ದುಃಖವಾಯಿತಲ್ಲ ಎಂಬ ಒಂದೇಒಂದು ದುಸ್ಸಹವಾದ ದಾವಾನಲವು ನನ್ನ ಹೃದಯದಲ್ಲಿ ಭುಗಿಲೆದ್ದಿದೆ. ಜೀವಿತದ ಸರ್ವೋತ್ತಮವಾದ ಪೂರ್ಣಫಲವನ್ನು ಲಕ್ಷ್ಮಣನು ಹೊಂದಿದನು. ಅವನು ಎಲ್ಲವನ್ನೂ ತ್ಯಜಿಸಿ ತನ್ನ ಚಿತ್ತವನ್ನು ಶ್ರೀರಾಮನ ಚರಣಗಳಲ್ಲೇ ತೊಡಗಿಸಿದನು. ನನ್ನ ಹುಟ್ಟು ಶ್ರೀರಾಮನ ವನವಾಸಕ್ಕಾಗಿಯೇ ಆಗಿತ್ತು. ಹೀಗಿರುವಾಗ ನಿರ್ಭಾಗ್ಯನಾದ ನಾನು ಸುಳ್ಳು-ಸುಳ್ಳೇ ಏಕೆ ಪಶ್ಚಾತ್ತಾಪಪಡಲಿ? (ಚೌ/೧-೪)

**ದೋ – ಆಪನಿ ದಾರುನ ದೀನತಾ ಕಹಉಁ ಸಬಹಿ ಸಿರು ನಾಇ।**
**ದೇಖೇಁ ಬಿನು ರಘುನಾಥ ಪದ ಜಿಯ ಕೈ ಜರನಿ ನ ಜಾಇ॥ ೧೮೨॥**

ಎಲ್ಲರಿಗೂ ತಲೆವಾಗಿ ನಾನು ನನ್ನ ದಾರುಣ ದೈನ್ಯವನ್ನು ತೋಡಿಕೊಳ್ಳುತ್ತೇನೆ. ಶ್ರೀರಘುನಾಥನ ಚರಣದರ್ಶನ ಮಾಡದೆಯೇ ನನ್ನ ಎದೆಗುದಿ ಹೋಗದು. (ದೋ/೧೮೨)

**ಚೌ – ಆನ ಉಪಾಉ ಮೋಹಿ ನಹಿಁ ಸೂಝಾ। ಕೋ ಜಿಯ ಕೈ ರಘುಬರ ಬಿನು ಬೂಝಾ॥**
**ಏಕಹಿಁ ಆಁಕ ಇಹಇ ಮನ ಮಾಹೀಁ। ಪ್ರಾತಕಾಲ ಚಲಿಹಉಁ ಪ್ರಭು ಪಾಹೀಁ॥ ೧॥**
**ಜದ್ಯಪಿ ಮೈಁ ಅನಭಲ ಅಪರಾಧೀ। ಭೈ ಮೋಹಿ ಕಾರನ ಸಕಲ ಉಪಾಧೀ॥**
**ತದಪಿ ಸರನ ಸನಮುಖ ಮೋಹಿ ದೇಖೀ। ಛಮಿ ಸಬ ಕರಿಹಹಿಁ ಕೃಪಾ ಬಿಸೇಷೀ॥ ೨॥**
**ಸೀಲ ಸಕುಚ ಸುಠಿ ಸರಲ ಸುಭಾಊ। ಕೃಪಾ ಸನೇಹ ಸದನ ರಘುರಾಊ॥**
**ಅರಿಹುಕ ಅನಭಲ ಕೀನ್ಹ ನ ರಾಮಾ। ಮೈಁ ಸಿಸು ಸೇವಕ ಜದ್ಯಪಿ ಬಾಮಾ॥ ೩॥**
**ತುಮ್ಹ ಪೈ ಪಾಁಚ ಮೋರ ಭಲ ಮಾನೀ। ಆಯಸು ಆಸಿಷ ದೇಹು ಸುಬಾನೀ॥**
**ಜೇಹಿಁ ಸುನಿ ಬಿನಯ ಮೋಹಿ ಜನು ಜಾನೀ। ಆವಹಿಁ ಬಹುರಿ ರಾಮು ರಜಧಾನೀ॥ ೪॥**

ಬೇರೆ ಯಾವ ಉಪಾಯವೂ ನನಗೆ ಕಂಡುಬರುವುದಿಲ್ಲ. ಶ್ರೀರಾಮನಿಲ್ಲದೆ ನನ್ನ ಮನಸ್ಸಿನ ಮಾತನ್ನು ಬೇರೆ ಯಾರೂ ತಿಳಿಯಲಾರರು. ನಾನು ಕೊನೆಗೆ ಒಂದು ನಿರ್ಣಯಕ್ಕೆ ಬಂದಿರುವೆನು – ಪ್ರಾತಃಕಾಲವಾಗುತ್ತಲೇ ಪ್ರಭುರಾಮಚಂದ್ರನ ಸನ್ನಿಧಿಗೆ ಹೊರಡುವುದು. ನಾನು ಕೆಟ್ಟವನಾಗಿದ್ದರೂ, ಅಪರಾಧಿಯಾಗಿದ್ದರೂ, ನನ್ನ ದೆಸೆಯಿಂದಲೇ ಈ ಎಲ್ಲ ಉಪದ್ರವಗಳು ಜರುಗಿದ್ದರೂ, ಶರಣಾಗಿ ಬಂದಿರುವ ನನ್ನನ್ನು ಕಂಡು ಶ್ರೀರಾಮಚಂದ್ರನು ನನ್ನ ಅಪರಾಧಗಳನ್ನು ಕ್ಷಮಿಸಿ, ನನ್ನ ಮೇಲೆ ವಿಶೇಷ ಕೃಪೆಮಾಡುವನು. ಶ್ರೀರಘುನಾಥನು ಸುಶೀಲನೂ, ಅತ್ಯಂತ ಸರಳ ಸ್ವಭಾವದವನೂ, ಕೃಪಾಸ್ನೇಹಗಳಿಗೆ ನೆಲೆಮನೆಯಾಗಿರುವನು. ಶತ್ರುಗಳಿಗೂ ಅವನು ಅಪಕಾರವನ್ನು ಮಾಡುವವನಲ್ಲ. ನಾನು ವಕ್ರನಾಗಿದ್ದರೂ ಆತನ ಕೂಸು ಹಾಗೂ ಸೇವಕನಲ್ಲವೇ! ಆದ್ದರಿಂದ ನೀವೆಲ್ಲರೂ ಈ ನನ್ನ ನಿರ್ಣಯವು ಒಳ್ಳೆಯದೆಂದು ಭಾವಿಸಿ, ಶ್ರೀರಾಮಚಂದ್ರನನ್ನು ಕರೆದುಕೊಂಡು ಬರುವುದಕ್ಕೆ ಪ್ರಸನ್ನರಾಗಿ ನನಗೆ ಆಶೀರ್ವದಿಸಿರಿ, ಆಜ್ಞೆಯನ್ನು ಕೊಡಿರಿ. ನನ್ನ ಬಿನ್ನಪವನ್ನು ಆಲಿಸಿ, ನನ್ನನ್ನು ದಾಸನೆಂದು ತಿಳಿದು ಶ್ರೀರಾಮನು ರಾಜಧಾನಿಗೆ ಮರಳಿ ಬರುವನು. (ಚೌ/೧-೪)

**ದೋ – ಜದ್ಯಪಿ ಜನಮು ಕುಮಾತು ತೇಁ ಮೈಁ ಸಠು ಸದಾ ಸದೋಸ।**
**ಆಪನ ಜಾನಿ ನ ತ್ಯಾಗಿಹಹಿಁ ಮೋಹಿ ರಘುಬೀರ ಭರೋಸ॥ ೧೮೩॥**

ನಾನೇನೋ ಕೆಟ್ಟತಾಯಿಯ ಹೊಟ್ಟೆಯಲ್ಲಿ ಹುಟ್ಟಿದ್ದರೂ, ದುಷ್ಟನೂ, ದೋಷಿಯೂ ಆಗಿದ್ದರೂ ಶ್ರೀರಾಮನು ನನ್ನನ್ನು ತನ್ನವನೆಂದು ತಿಳಿದು ತ್ಯಾಗಮಾಡಲಾರನೆಂಬ ಭರವಸೆ ನನಗಿದೆ. (ದೋ/೧೮೩)

**ಚೌ – ಭರತ ಬಚನ ಸಬ ಕಹಁ ಪ್ರಿಯ ಲಾಗೇ। ರಾಮ ಸನೇಹ ಸುಧಾಁ ಜನು ಪಾಗೇ॥**
**ಲೋಗ ಬಿಯೋಗ ಬಿಷಮ ಬಿಷ ದಾಗೇ। ಮಂತ್ರ ಸಬೀಜ ಸುನತ ಜನು ಜಾಗೇ॥ ೧॥**
**ಮಾತು ಸಚಿವ ಗುರ ಪುರ ನರ ನಾರೀ। ಸಕಲ ಸನೇಹಁ ಬಿಕಲ ಭಇ ಭಾರೀ॥**
**ಭರತಹಿ ಕಹಹಿಁ ಸರಾಹಿ ಸರಾಹೀ। ರಾಮ ಪ್ರೇಮ ಮೂರತಿ ತನು ಆಹೀ॥ ೨॥**
**ತಾತ ಭರತ ಅಸ ಕಾಹೇ ನ ಕಹಹೂ। ಪ್ರಾನ ಸಮಾನ ರಾಮ ಪ್ರಿಯ ಅಹಹೂ॥**
**ಜೋ ಪಾವಁರೂ ಅಪನೀ ಜಡತಾಈಁ। ತುಮ್ಹಹಿ ಸುಗಾಇ ಮಾತು ಕುಟಿಲಾಈಁ॥ ೩॥**
**ಸೋ ಸಠು ಕೋಟಿಕ ಪುರುಷ ಸಮೇತಾ। ಬಸಿಹಿ ಕಲಪ ಸತ ನರಕ ನಿಕೇತಾ॥**
**ಅಹಿ ಅಘ ಅವಗುನ ನಹಿಁ ಮನಿ ಗಹಈ। ಹರಇ ಗರಲ ದುಖ ದಾರಿದ ದಹಈ॥ ೪॥**

ಭರತನ ಮಾತು ಎಲ್ಲರಿಗೂ ಪ್ರಿಯವೆನಿಸಿತು. ಅದು ಪ್ರೇಮಾಮೃತದಲ್ಲಿ ಅದ್ದಿದಂತಿತ್ತು. ಶ್ರೀರಾಮವಿಯೋಗವೆಂಬ ಭೀಷಣ ವಿಷದಲ್ಲಿ ಅವರೆಲ್ಲ ಬೆಂದಿದ್ದರು. ಬೀಜಯುಕ್ತ ಮಂತ್ರದಿಂದ ಆ ವಿಷವು ಇಳಿದುಹೋದಂತೆ ಭರತನ ವಚನಾಮೃತ ಸೇಚನದಿಂದ ಅವರು ಉಪಶಮನ ಹೊಂದಿದರು. ತಾಯಿಯರು, ಮಂತ್ರಿಗಳು, ಗುರುಗಳು, ನಗರದ ನರ-ನಾರಿಯರು ಹೀಗೆ ಇವರೆಲ್ಲರೂ ಪ್ರೇಮವಿಹ್ವಲರಾಗಿದ್ದರು. ಭರತನ ಮಾತುಗಳಿಗೆ ಅವರು ಅವನನ್ನು ಶ್ಲಾಘಿಸುತ್ತಾ– ''ನಿನ್ನ ಶರೀರವು ನಿಜಕ್ಕೂ ರಾಮಪ್ರೇಮದ

ಸಾಕ್ಷಾತ್ ವಿಗ್ರಹವಾಗಿದೆ'' ಎಂದು ಪ್ರಶಂಸಿಸಿದರು. ಅಯ್ಯಾ ಭರತಾ! ನಿನ್ನ ಬಾಯಿಂದ ಇಂತಹ ಮಾತು ಬರದೆ ಬೇರೇನು ಬಂದೀತು? ನೀನು ಶ್ರೀರಾಮನಿಗೆ ಪ್ರಾಣಪ್ರಿಯನು. ಕೈಕೆಯಿಯ ಕಪಟಕ್ಕಾಗಿ ನಿನ್ನ ಮೇಲೆ ಸಂದೇಹಪಡುವವನು ನೀಚನು. ಆ ದುಷ್ಟನು ಕೋಟಿ ವಂಶಜರೊಂದಿಗೆ ನೂರುಕಲ್ಪಗಳ ತನಕ ನರಕದಲ್ಲಿ ನೆಲಸುವನು. ಹಾವಿನ ಪಾಪ ಮತ್ತು ಅವಗುಣಗಳು ಅದರ ಮಣಿಗೆ ತಟ್ಟಲಾರದು. ಅದಕ್ಕೆ ಬದಲಾಗಿ ಆ ಮಣಿಯು ವಿಷವನ್ನು ಕಳೆದು, ದುಃಖದಾರಿದ್ರ್ಯಗಳನ್ನು ಸುಟ್ಟು ಬೂದಿಮಾಡುತ್ತದೆ. (ಚೌ/೧-೪)

## ಭರತನು ಸಪರಿವಾರವಾಗಿ ಚಿತ್ರಕೂಟಕ್ಕೆ ಹೊರಟಿದ್ದು

**ದೋ – ಅವಸಿ ಚಲಿಅ ಬನ ರಾಮು ಜಹ್ ಭರತ ಮಂತ್ರು ಭಲ ಕೀನ್ಹ।**
**ಸೋಕ ಸಿಂಧು ಬೂಡತ ಸಬಹಿ ತುಮ್ಹ ಅವಲಂಬನು ದೀನ್ಹ॥ ೧೮೪ ॥**

ಭರತಾ! ನಿನ್ನ ನಿರ್ಣಯವು ಸರಿಯಾದುದು. ಶ್ರೀರಾಮನಿರುವ ವನಕ್ಕೆ ನಾವೆಲ್ಲರೂ ಹೊರಡುವೆವು. ಶೋಕಸಮುದ್ರದಲ್ಲಿ ಮುಳುಗಿದ್ದ ನಮ್ಮೆಲ್ಲರಿಗೂ ನೀನು ದೊಡ್ಡ ಅವಲಂಬನ ನೀಡಿದ್ದೀಯೆ. (ದೋ/೧೮೪)

**ಚೌ – ಭಾ ಸಬ ಕೇಂ ಮನ ಮೋದು ನ ಥೋರಾ। ಜನು ಘನ ಧುನಿ ಸುನಿ ಚಾತಕ ಮೋರಾ॥**
**ಚಲತ ಪ್ರಾತ ಲಖಿ ನಿರನಉ ನೀಕೇ। ಭರತು ಪ್ರಾನಪ್ರಿಯ ಭೇ ಸಬಹೀ ಕೇ॥ ೧ ॥**
**ಮುನಿಹಿ ಬಂದಿ ಭರತಹಿ ಸಿರು ನಾಈ। ಚಲೇ ಸಕಲ ಘರ ಬಿದಾ ಕರಾಈ॥**
**ಧನ್ಯ ಭರತ ಜೀವನು ಜಗ ಮಾಹೀಂ। ಸೀಲು ಸನೇಹು ಸರಾಹತ ಜಾಹೀಂ ॥ ೨ ॥**
**ಕಹಹಿಂ ಪರಸಪರ ಭಾ ಬಡ ಕಾಜೂ। ಸಕಲ ಚಲೈ ಕರ ಸಾಜಹಿಂ ಸಾಜೂ॥**
**ಜೆಹಿ ರಾಖಹಿಂ ರಹು ಘರ ರಖವಾರೀ। ಸೋ ಜಾನಇ ಜನು ಗರದನಿ ಮಾರೀ॥ ೩ ॥**
**ಕೋಉ ಕಹ ರಹನ ಕಹಿಅ ನಹಿಂ ಕಾಹೂ। ಕೋ ನ ಚಹಇ ಜಗ ಜೀವನ ಲಾಹೂ ॥ ೪ ॥**

ಮೇಘಗರ್ಜನೆಯನ್ನು ಕೇಳಿ, ಚಾತಕಗಳಿಗೂ ನವಿಲುಗಳಿಗೂ ಆನಂದವಾಗುವಂತೆ ಎಲ್ಲರ ಮನಸ್ಸಿಗೂ ಹಿಡಿಸಲಾರದ ಆನಂದವಾಯಿತು. ಮರುದಿನ ಬೆಳಿಗ್ಗೆ ಹೊರಡುವ ನಿರ್ಣಯವನ್ನು ಕೇಳಿದ ಅವರೆಲ್ಲರಿಗೂ ಭರತನು ಪ್ರಾಣಪ್ರಿಯನಾಗಿ ಕಂಡನು. ವಸಿಷ್ಠ ಮಹಾಮುನಿಗಳಿಗೂ, ಭರತನಿಗೂ ತಲೆವಾಗಿ ಅವರೆಲ್ಲರೂ ತಮ್ಮ-ತಮ್ಮ ಮನೆಗಳಿಗೆ ಮರಳಿದರು. 'ಜಗತ್ತಿನಲ್ಲಿ ಭರತನ ಬಾಳೇ ಧನ್ಯ' ಎಂದು ಉದ್ಗರಿಸುತ್ತಾ, ಅವರೆಲ್ಲರೂ ಅವನ ಸ್ನೇಹ, ಸೌಶೀಲ್ಯಗಳನ್ನು ಕೊಂಡಾಡುತ್ತಾ ಹೋದರು. 'ಒಳ್ಳೆಯ ದೊಡ್ಡದೊಂದು ಕೆಲಸ ನಡೆಯಿತು' ಎಂದು ಅವರೆಲ್ಲರೂ ಪರಸ್ಪರ ಮಾತಾಡಿಕೊಂಡರು. ಎಲ್ಲರೂ ಶ್ರೀರಾಮನ ಬಳಿಗೆ ಹೋಗಲು ಸಿದ್ಧತೆ ಮಾಡಿಕೊಳ್ಳತೊಡಗಿದರು. ಮನೆಯ ಕಾವಲಿಗೆ ನೀನಿರು ಎಂದು ಯಾರಿಗಾದರೂ ಹೇಳಿದರೆ, ಅವರಿಗೆ ತನ್ನ ಕತ್ತೇ ಕತ್ತರಿಸಿದಂತಹ ನೋವಾಗುತ್ತಿತ್ತು. ಕೆಲವರು ಹೇಳುತ್ತಿದ್ದರು – 'ಇರು' ಎಂದು ಯಾರಿಗೂ ಹೇಳಬೇಡಿ. ತಮ್ಮ ಬದುಕನ್ನು ಸಾರ್ಥಕಪಡಿಸಿಕೊಳ್ಳುವುದು ಯಾರಿಗೆ ತಾನೆ ಬೇಡ? (ಚೌ/೧-೪)

**ದೋ – ಜರಉ ಸೋ ಸಂಪತಿ ಸದನ ಸುಖು ಸುಹೃದ ಮಾತು ಪಿತು ಭಾಇ।**
**ಸನಮುಖ ಹೋತ ಜೊ ರಾಮ ಪದ ಕರೈ ನ ಸಹಸ ಸಹಾಇ॥ ೧೮೫ ॥**

'ಶ್ರೀರಾಮಚಂದ್ರನ ಚರಣಕಮಲಗಳನ್ನು ದರ್ಶಿಸುವುದಕ್ಕೆ ಐಶ್ವರ್ಯ, ಮನೆ, ಮಿತ್ರ, ಸುಖ, ತಂದೆ, ತಾಯಿ, ಅಣ್ಣತಮ್ಮಂದಿರು ಇವರೆಲ್ಲರೂ ಅಗಲಿದರೂ ದಿಗಿಲು ಪಡುವ ಕೆಲಸವಿಲ್ಲ' ಎಂದು ಎಲ್ಲರೂ ಹೇಳುತ್ತಿದ್ದರು. (ದೋ/೧೮೫)

**ಚೌ – ಘರ ಘರ ಸಾಜಹಿಂ ಬಾಹನ ನಾನಾ। ಹರಷು ಹೃದಯ್ ಪರಭಾತ ಪಯಾನಾ ॥**
**ಭರತ ಜಾಇ ಘರ ಕೀನ್ಹ ಬಿಚಾರೂ। ನಗರು ಬಾಜಿ ಗಜ ಭವನ ಭಂಡಾರೂ ॥ ೧ ॥**
**ಸಂಪತಿ ಸಬ ರಘುಪತಿ ಕೈ ಆಹೀ। ಜೌಂ ಬಿನು ಜತನ ಚಲೌಂ ತಜಿ ತಾಹೀ ॥**
**ತೌ ಪರಿನಾಮ ನ ಮೋರಿ ಭಲಾಈ। ಪಾಪ ಸಿರೋಮನಿ ಸಾಇಂ ದೊಹಾಈ ॥ ೨ ॥**
**ಕರಇ ಸ್ವಾಮಿ ಹಿತ ಸೇವಕು ಸೋಈ। ದೂಷನ ಕೋಟಿ ದೇಇ ಕಿನ ಕೋಈ ॥**
**ಅಸ ಬಿಚಾರಿ ಸುಚಿ ಸೇವಕ ಬೋಲೇ। ಜೇ ಸಪನೆಹುಂ ನಿಜ ಧರಮ ನ ಡೋಲೇ॥ ೩ ॥**
**ಕಹಿ ಸಬು ಮರಮು ಧರಮು ಭಲ ಭಾಷಾ । ಜೋ ಜೆಹಿ ಲಾಯಕ ಸೋ ತೆಹಿಂ ರಾಖಾ ॥**
**ಕರಿ ಸಬು ಜತನು ರಾಖಿ ರಖವಾರೇ। ರಾಮ ಮಾತು ಪಹಿಂ ಭರತು ಸಿಧಾರೇ॥ ೪ ॥**

ಮನೆಮನೆಗಳಲ್ಲಿಯೂ ಜನರು ಅನೇಕ ವಿಧವಾದ ವಾಹನಗಳನ್ನು ಅಣಿಮಾಡಿಕೊಳ್ಳುತ್ತಿದ್ದರು. ಬೆಳಿಗ್ಗೆ ಹೊರಡುವುದೆಂದು ಎಲ್ಲರ ಹೃದಯಗಳು ಹರ್ಷೋಲ್ಲಾಸದಲ್ಲಿ ಮುಳುಗಿಹೋದವು. ಭರತನು ತನ್ನ ಭವನಕ್ಕೆ ತೆರಳಿ ಇಂತು ಆಲೋಚಿಸತೊಡಗಿದನು – ''ಈ ನಗರ, ಆನೆ, ಕುದುರೆ, ಭವನ, ಭಂಡಾರ ಮುಂತಾದ ಎಲ್ಲ ಸಂಪತ್ತೂ ಶ್ರೀರಾಮನದೇ. ಇವುಗಳ ರಕ್ಷಣೆಯ ವ್ಯವಸ್ಥೆಮಾಡದೆ ನಾನು ಹೊರಟರೆ ನನಗೆ ಕ್ಷೇಮಕರವಾಗದು. ಏಕೆಂದರೆ, ಸ್ವಾಮಿದ್ರೋಹವು ಎಲ್ಲಪಾಪಗಳ ಶಿರೋಮಣಿಯಾಗಿದೆ. ಇತರರು ಎಷ್ಟೇ ದೂಷಿಸಿದರೂ ಸ್ವಾಮಿಯ ಹಿತವನ್ನು ಬಯಸುವವನೇ ನಿಜವಾದ ಸೇವಕನು.'' ಹೀಗೆ ಯೋಚಿಸಿ ಭರತನು ಸ್ವಪ್ನದಲ್ಲಿಯೂ ಕೂಡ ತಮ್ಮ ಧರ್ಮಪಥವನ್ನು ಬಿಡದ, ವಿಶ್ವಾಸಕ್ಕೆ ಪಾತ್ರರಾದ ಸೇವಕರನ್ನು ಕರೆಸಿದನು. ಅವರಿಗೆ ಎಲ್ಲ ಮುಖ್ಯವಿಷಯಗಳನ್ನು ವಿವರಿಸಿ, ಉತ್ತಮ ಧರ್ಮವನ್ನು ಅರುಹಿ, ಅವರವರಿಗೆ ಯೋಗ್ಯವಾದ ಕೆಲಸಕ್ಕೆ ನಿಯಮಿಸಿದನು. ರಕ್ಷಣೆಯ ಎಲ್ಲ ಏರ್ಪಾಡುಗೈದು, ರಕ್ಷಕರನ್ನು ನಿಯಮಿಸಿ, ಕೌಸಲ್ಯಾದೇವಿಯ ಬಳಿಗೆ ಹೋದನು. (ಚೌ/೧-೪)

**ದೋ – ಆರತ ಜನನೀ ಜಾನಿ ಸಬ ಭರತ ಸನೇಹ ಸುಜಾನ।**
**ಕಹೇಉ ಬನಾವನ ಪಾಲಕೀಂ ಸಜನ ಸುಖಾಸನ ಜಾನ ॥ ೧೮೬ ॥**

ಪ್ರೇಮತತ್ತ್ವವನ್ನು ಅರಿತಿರುವ ಭರತನು – ಎಲ್ಲತಾಯಂದಿರು ಶ್ರೀರಾಮವಿರಹದಿಂದ ದುಃಖಾರ್ತರಾಗಿರುವುದನ್ನು ಕಂಡು, ಅವರಿಗೆ ಪಲ್ಲಕ್ಕಿಗಳನ್ನೂ, ಸುಖಾಸನವುಳ್ಳ ವಾಹನಗಳನ್ನು ಸಿದ್ಧಗೊಳಿಸಿದನು. (ದೋ/೧೮೬)

**ಚೌ – ಚಕ್ಕ ಚಕ್ಕಿ ಜಿಮಿ ಪುರ ನರ ನಾರೀ। ಚಹತ ಪ್ರಾತ ಉರ ಆರತ ಭಾರೀ॥**
**ಜಾಗತ ಸಬ ನಿಸಿ ಭಯಉ ಬಿಹಾನಾ। ಭರತ ಬೋಲಾಏ ಸಚಿವ ಸುಜಾನಾ ॥ ೧ ॥**
**ಕಹೇಉ ಲೇಹು ಸಬು ತಿಲಕ ಸಮಾಜೂ। ಬನಹಿಂ ದೇಬ ಮುನಿ ರಾಮಹಿ ರಾಜೂ॥**
**ಬೇಗಿ ಚಲಹು ಸುನಿ ಸಚಿವ ಜೊಹಾರೇ। ತುರತ ತುರಗ ರಥ ನಾಗ ಸँವಾರೇ॥ ೨ ॥**
**ಅರುಂಧತೀ ಅರು ಅಗಿನಿ ಸಮಾಊ। ರಥ ಚಢ಼ಿ ಚಲೇ ಪ್ರಥಮ ಮುನಿರಾಊ॥**
**ಬಿಪ್ರ ಬೃಂದ ಚಢ಼ಿ ಬಾಹನ ನಾನಾ। ಚಲೇ ಸಕಲ ತಪ ತೇಜ ನಿಧಾನಾ ॥ ೩ ॥**
**ನಗರ ಲೋಗ ಸಬ ಸಜಿ ಸಜಿ ಜಾನಾ। ಚಿತ್ರಕೂಟ ಕಹँ ಕೀನ್ಹ ಪಯಾನಾ॥**
**ಸಿಬಿಕಾ ಸುಭಗ ನ ಜಾಹಿಂ ಬಖಾನೀ। ಚಢ಼ಿ ಚಢ಼ಿ ಚಲತ ಭಈಂ ಸಬ ರಾನೀ॥ ೪ ॥**

ನಗರದ ನರ-ನಾರಿಯರು ಚಕ್ರವಾಕ ಪಕ್ಷಿಗಳಂತೆ ಅತ್ಯಂತ ಆರ್ತರಾಗಿ ಬೆಳಗಾಗುವುದಕ್ಕೆ ಕಾಯುತ್ತಿದ್ದರು. ಇರುಳೆಲ್ಲ ಜಾಗರಣೆಯಲ್ಲೇ ಕಳೆದರು. ಬೆಳಕು ಹರಿಯುತ್ತಲೇ ಭರತನು ಸರ್ವಸಮರ್ಥರಾದ ಮಂತ್ರಿಗಳನ್ನು ಕರೆಸಿ – ''ಪಟ್ಟಾಭಿಷೇಕದ ಎಲ್ಲಸಾಮಗ್ರಿಗಳನ್ನು ಅಣಿಮಾಡಿಕೊಂಡು ಹೋಗಬೇಕು. ವನದಲ್ಲೇ ವಸಿಷ್ಠಮುನಿಗಳು ರಾಮನಿಗೆ ಪಟ್ಟಾಭಿಷೇಕ ಮಾಡುವರು. ಬೇಗನೆ ಹೊರಡಿರಿ'' ಎಂದು ಆಜ್ಞಾಪಿಸಿದನು. ಇದನ್ನು ಕೇಳಿ ಮಂತ್ರಿಗಳು 'ಹಾಗೇ ಆಗಲಿ' ಎಂದು ವಂದಿಸಿ ಹೊರಟುಹೋಗಿ ಕೂಡಲೇ ಆನೆ, ಕುದುರೆ, ರಥ ಇವುಗಳನ್ನು ಸಿದ್ಧಪಡಿಸಿದರು. ಎಲ್ಲರಿಗೆ ಮುಂದಾಗಿ ವಸಿಷ್ಠಮಹರ್ಷಿಗಳು ಪತ್ನಿಯಾದ ಅರುಂಧತಿಯಿಂದೊಡಗೂಡಿ, ಅಗ್ನಿಹೋತ್ರದ ಎಲ್ಲ ಸಾಮಗ್ರಿಗಳೊಂದಿಗೆ ರಥದಲ್ಲಿ ಕುಳಿತು ಹೊರಟರು. ಬಳಿಕ ತಪಸ್ವಿ, ತೇಜನಿಧಿಯಾದ ವಿಪ್ರರ ಸಮೂಹಗಳು ಅನೇಕ ವಿಧವಾದ ವಾಹನಗಳನ್ನೇರಿ ಹೊರಟರು. ನಗರದ ಎಲ್ಲ ಜನರೂ ರಥಗಳನ್ನು ಸಜ್ಜುಗೊಳಿಸಿಕೊಂಡು ಚಿತ್ರಕೂಟದ ಕಡೆಗೆ ಹೊರಟರು. ಚಿತ್ರ-ವಿಚಿತ್ರವಾದ ವರ್ಣನಾತೀತ ಪಲ್ಲಕ್ಕಿಗಳಲ್ಲಿ ರಾಣಿಯರು ಪ್ರಯಾಣಿಸಿದರು. (ಚೌ/೧-೪)

**ದೋ – ಸೌಂಪಿ ನಗರ ಸುಚಿ ಸೇವಕನಿ ಸಾದರ ಸಕಲ ಚಲಾಇ।**
**ಸುಮಿರಿ ರಾಮ ಸಿಯ ಚರನ ತಬ ಚಲೇ ಭರತ ದೋಉ ಭಾಇ॥ ೧೮೭ ॥**

ವಿಶ್ವಾಸಪಾತ್ರರಾದ ಸೇವಕರನ್ನು ನಗರದ ರಕ್ಷಣೆಗೆ ನೇಮಿಸಿ, ಎಲ್ಲರನ್ನೂ ಆದರದಿಂದ ಮುಂದೆ ಕಳಿಸಿ, ಭರತ-ಶತ್ರುಘ್ನರು ಶ್ರೀರಾಮನ ಚರಣಗಳನ್ನೂ ಸ್ಮರಿಸುತ್ತಾ ಹೊರಟರು. (ದೋ/೧೮೭)

**ಚೌ – ರಾಮ ದರಸ ಬಸ ಸಬ ನರ ನಾರೀ। ಜನು ಕರಿ ಕರಿನಿ ಚಲೇ ತಕಿ ಬಾರೀ॥**
**ಬನ ಸಿಯ ರಾಮು ಸಮುಝಿ ಮನ ಮಾಹೀಂ। ಸಾನುಜ ಭರತ ಪಯಾದೇಹಿಂ ಜಾಹೀಂ ॥ ೧ ॥**
**ದೇಖಿ ಸನೇಹು ಲೋಗ ಅನುರಾಗೇ। ಉತರಿ ಚಲೇ ಹಯ ಗಯ ರಥ ತ್ಯಾಗೇ॥**
**ಜಾಇ ಸಮೀಪ ರಾಖಿ ನಿಜ ಡೋಲೀ। ರಾಮ ಮಾತು ಮೃದು ಬಾನೀ ಬೋಲೀ॥ ೨ ॥**

**ತಾತ ಚಢಹು ರಥ ಬಲಿ ಮಹತಾರೀ। ಹೋಇಹಿ ಪ್ರಿಯ ಪರಿವಾರು ದುಖಾರೀ॥**
**ತುಮ್ಹರೇಂ ಚಲತ ಚಲಿಹಿ ಸಬು ಲೋಗೂ। ಸಕಲ ಸೋಕ ಕೃಸ ನಹಿಂ ಮಗ ಜೋಗೂ॥ ೩ ॥**
**ಸಿರ ಧರಿ ಬಚನ ಚರನ ಸಿರು ನಾಈ। ರಥ ಚಢಿ ಚಲತ ಭಏ ದೋಉ ಭಾಈ॥**
**ತಮಸಾ ಪ್ರಥಮ ದಿವಸ ಕರಿ ಬಾಸೂ। ದೂಸರ ಗೋಮತಿ ತೀರ ನಿವಾಸೂ॥ ೪ ॥**

ಶ್ರೀರಾಮದರ್ಶನೋತ್ಸುಕರಾದ ನಗರದ ನರ-ನಾರಿಯರು ಬಾಯಾರಿದ ಆನೆಗಳ ಹಿಂಡು ನೀರಿನ ಮಡುವನ್ನು ಹುಡುಕಿಕೊಂಡು ಹೋಗುವಂತೆ ಓಡುತ್ತಾ ಹೋಗುತ್ತಿದ್ದರು. ''ಸೀತಾರಾಮರು ವನದಲ್ಲಿ ಬರೀಕಾಲಿನಿಂದ ಸಂಚರಿಸುತ್ತಾ ಇದ್ದು ದುಃಖಪಡುತ್ತಿರುವರು'' ಎಂದು ಯೋಚಿಸಿ, ಭರತ-ಶತ್ರುಘ್ನರು ಕಾಲ್ನಡಿಗೆಯಿಂದಲೇ ಹೋಗುತ್ತಿರುವರು. ಭರತನ ಪ್ರೇಮವನ್ನು ಕಂಡು, ಪ್ರಜೆಗಳೂ ಕೂಡ ಪ್ರೇಮಮಗ್ನರಾಗಿ ತಮ್ಮ-ತಮ್ಮ ವಾಹನಗಳಿಂದ ಇಳಿದು ನಡೆಯತೊಡಗಿದರು. ಆಗ ರಾಮಮಾತೆಯಾದ ಕೌಸಲ್ಯೆಯು ತನ್ನ ಪಲ್ಲಕ್ಕಿಯನ್ನು ಭರತನ ಸಮೀಪದಲ್ಲಿ ನಿಲ್ಲಿಸಿಕೊಂಡು ಕೋಮಲವಾಣಿಯಿಂದ ಇಂತೆಂದಳು – ''ಮಗೂ! ನಿನ್ನ ದಮ್ಮಯ್ಯ ಎನ್ನುತ್ತೇನೆ. ನೀನು ರಥವನ್ನು ಏರು. ಇಲ್ಲದಿದ್ದರೆ ಇಡೀ ಪರಿವಾರವು ದುಃಖಿಯಾಗುವುದು. ನೀನು ನಡೆದುಹೋಗುವುದರಿಂದ ಉಳಿದ ಜನರೆಲ್ಲರೂ ನಡೆದೇ ಬರುತ್ತಾರೆ. ಶೋಕದಿಂದ ಅವರೆಲ್ಲರೂ ಮೊದಲೇ ಕಂಗೆಟ್ಟಿದ್ದಾರೆ. ಈ ದಾರಿ ಕಾಲುನಡಿಗೆಗೆ ಯೋಗ್ಯವಲ್ಲ.'' ತಾಯಿಯ ಅಪ್ಪಣೆಯನ್ನು ಶಿರದಲ್ಲಾಂತು, ಅವರ ಚರಣಗಳಿಗೆ ಅಭಿನಮಿಸಿ, ಅಣ್ಣ-ತಮ್ಮಂದಿರಿಬ್ಬರೂ ರಥವನ್ನು ಹತ್ತಿದರು. ಮೊದಲನೆಯ ದಿನ ಅವರು ತಮಸಾತೀರದಲ್ಲಿ ತಂಗಿದರು. ಎರಡನೆಯ ದಿನ ಗೋಮತಿಯ ತೀರದಲ್ಲಿ ಬೀಡುಬಿಟ್ಟರು. (ಚೌ/೧-೪)

**ದೋ – ಪಯ ಅಹಾರ ಫಲ ಅಸನ ಏಕ ನಿಸಿ ಭೋಜನ ಏಕ ಲೋಗ।**
**ಕರತ ರಾಮ ಹಿತ ನೇಮ ಬ್ರತ ಪರಿಹರಿ ಭೂಷನ ಭೋಗ॥ ೧೮೮ ॥**

ಕೆಲವರು ಕೇವಲ ಹಾಲನ್ನು ಕುಡಿದರು. ಕೆಲವರು ಫಲಹಾರ ಮಾಡಿದರು. ಕೆಲವರು ರಾತ್ರಿಮಾತ್ರ ಒಪ್ಪೊತ್ತು ಊಟಮಾಡಿದರು. ಒಡವೆ, ವಸ್ತ್ರ ಭೋಗವಿಲಾಸಗಳನ್ನು ತೊರೆದು ಎಲ್ಲರೂ ಶ್ರೀರಾಮನಿಗಾಗಿ ನೇಮ, ವ್ರತಗಳನ್ನು ಕೈಗೊಂಡಿದ್ದರು. (ದೋ/೧೮೮)

## ಗುಹ-ಭರತ ಸಮಾಗಮ

**ಚೌ – ಸಈ ತೀರ ಬಸಿ ಚಲೇ ಬಿಹಾನೇ। ಸೃಂಗಬೇರಪುರ ಸಬ ನಿಅರಾನೇ॥**
**ಸಮಾಚಾರ ಸಬ ಸುನೇ ನಿಷಾದಾ। ಹೃದಯಂ ಬಿಚಾರ ಕರಇ ಸಬಿಷಾದಾ॥ ೧ ॥**
**ಕಾರನ ಕವನ ಭರತು ಬನ ಜಾಹೀಂ। ಹೈ ಕಛು ಕಪಟ ಭಾಉ ಮನ ಮಾಹೀಂ॥**
**ಜೌಂ ಪೈ ಜಿಯಂ ನ ಹೋತಿ ಕುಟಿಲಾಈ। ತೌ ಕತ ಲೀನ್ಹ ಸಂಗ ಕಟಕಾಈ॥ ೨ ॥**
**ಜಾನಹಿಂ ಸಾನುಜ ರಾಮಹಿ ಮಾರೀ। ಕರಉಂ ಅಕಂಟಕ ರಾಜು ಸುಖಾರೀ॥**
**ಭರತ ನ ರಾಜನೀತಿ ಉರ ಆನೀ। ತಬ ಕಲಂಕು ಅಬ ಜೀವನ ಹಾನೀ॥ ೩ ॥**
**ಸಕಲ ಸುರಾಸುರ ಜುರಹಿಂ ಜುಝಾರಾ। ರಾಮಹಿ ಸಮರ ನ ಜೀತನಿಹಾರಾ॥**
**ಕಾ ಆಚರಜು ಭರತು ಅಸ ಕರಹೀಂ। ನಹಿಂ ಬಿಷ ಬೇಲಿ ಅಮಿಅ ಫಲ ಫರಹೀಂ॥ ೪ ॥**

ಆ ರಾತ್ರಿಯನ್ನು 'ಸರಯೂ' ನದೀತೀರದಲ್ಲಿ ಕಳೆದು, ಮರುದಿನ ಬೆಳಗಾಗುತ್ತಲೇ ಅಲ್ಲಿಂದ ಹೊರಟು ಶೃಂಗವೇರಪುರವನ್ನು ಸಮೀಪಿಸಿದರು. ಭರತನು ಚತುರಂಗ ಬಲದೊಂದಿಗೆ ಬಂದಿರುವ ಎಲ್ಲ ವಿಷಯವನ್ನು ನಿಷಾದ ರಾಜನಾದ ಗುಹನು ಅರಿತುಕೊಂಡು, ದುಃಖಿತವಾದ ಮನಸ್ಸಿನಿಂದ ಇಂತು ಆಲೋಚಿಸಿದನು – ''ಭರತನು ಕಾಡಿಗೆ ಬರುತ್ತಿರುವ ಕಾರಣ ಏನಿರಬಹುದು? ಇವನ ಮನಸ್ಸಿನಲ್ಲಿ ಏನೋ ಕಪಟಭಾವವಿರಬೇಕು. ಮನದಲ್ಲಿ ಕುಟಿಲತೆ ಇಲ್ಲದಿದ್ದಲ್ಲಿ ಜೊತೆಗೆ ಸೇನೆಯನ್ನು ಏಕೆ ತರುತ್ತಿದ್ದನು? ತಮ್ಮ ಲಕ್ಷ್ಮಣನೊಂದಿಗೆ ಶ್ರೀರಾಮನನ್ನು ಕೊಂದು ನಿಷ್ಕಂಟಕವಾದ ರಾಜ್ಯವಾಳಬೇಕೆಂಬ ಹಂಬಲವಿರಬಹುದು. ಆದರೆ ಭರತನು ರಾಜನೀತಿಯ ಕುರಿತು ಯೋಚಿಸಲಿಲ್ಲ. ಮೊದಲೇ ಇವನಿಗೆ ಕಳಂಕ ತಟ್ಟಿದೆ. ಈಗ ಪ್ರಾಣವನ್ನೇ ಕಳೆದುಕೊಂಡಾನು. ದೇವ-ದಾನವರೆಲ್ಲರೂ ಒಟ್ಟುಗೂಡಿ ಬಂದರೂ ಶ್ರೀರಾಮನನ್ನು ರಣರಂಗದಲ್ಲಿ ಗೆಲ್ಲಲಾರದು. ಭರತನ ಈ ನಡತೆಯಲ್ಲಿ ಅಚ್ಚರಿಯಿಲ್ಲ. ವಿಷದ ಬಳ್ಳಿಯು ಅಮೃತದ ಫಲವನ್ನು ಎಂದಾದರೂ ಕೊಟ್ಟೀತೇ? (ಚೌ/೧-೪)

**ದೋ – ಅಸ ಬಿಚಾರಿ ಗುಹ್ ಗ್ಯಾತಿ ಸನ ಕಹೆಉ ಸಜಗ ಸಬ ಹೋಹು।**
**ಹಥವಾ್ಸಹು ಬೋರಹು ತರನಿ ಕೀಜಿಅ ಘಾಟಾರೋಹು॥ ೧೮೯ ॥**

ಹೀಗೆ ಯೋಚಿಸಿ ನಿಷಾದರಾಜ ಗುಹನು ತನ್ನ ಜಾತಿಯವರನ್ನು ಎಚ್ಚರಿಸುತ್ತಾ – ''ನೀವೆಲ್ಲರೂ ಎಚ್ಚರಿಕೆಯಿಂದಿರಿ. ನಾವೆಗಳನ್ನು ಸ್ವಾಧೀನದಲ್ಲಿ ಇಟ್ಟುಕೊಳ್ಳಿ. ಅವನ್ನು ನೀರಿನಲ್ಲಿ ಮುಳುಗಿಸಿಬಿಡಿರಿ. ಎಲ್ಲ ನದೀ ದಂಡೆಯನ್ನು ಮುಚ್ಚಿಬಿಡಿರಿ' ಎಂದು ಹೇಳಿದನು. (ದೋ/೧೮೯)

**ಚೌ – ಹೋಹು ಸ್ಜೋಇಲ ರೋಕಹು ಘಾಟಾ। ಠಾಟಹು ಸಕಲ ಮರೈ ಕೇ ಠಾಟಾ॥**
**ಸನಮುಖ ಲೋಹ ಭರತ ಸನ ಲೇಊ್। ಜಿಅತ ನ ಸುರಸರಿ ಉತರನ ದೇಊ್॥ ೧ ॥**
**ಸಮರ ಮರನು ಪುನಿ ಸುರಸರಿ ತೀರಾ। ರಾಮ ಕಾಜು ಛನಭಂಗು ಸರೀರಾ॥**
**ಭರತ ಭಾಇ ನೃಪು ಮೈ್ ಜನ ನೀಚೂ। ಬಡೇ್ ಭಾಗ ಅಸಿ ಪಾಇಅ ಮೀಚೂ॥ ೨ ॥**
**ಸ್ವಾಮಿ ಕಾಜ ಕರಿಹಉ್ ರನ ರಾರೀ। ಜಸ ಧವಲಿಹಉ್ ಭುವನ ದಸ ಚಾರೀ॥**
**ತಜಉ್ ಪ್ರಾನ ರಘುನಾಥ ನಿಹೋರೇ್। ದುಹೂ್ ಹಾಥ ಮುದ ಮೋದಕ ಮೋರೇ್॥ ೩ ॥**
**ಸಾಧು ಸಮಾಜ ನ ಜಾಕರ ಲೇಖಾ। ರಾಮ ಭಗತ ಮಹು್ ಜಾಸು ನ ರೇಖಾ॥**
**ಜಾಯ್ ಜಿಅತ ಜಗ ಸೋ ಮಹಿ ಭಾರೂ। ಜನನೀ ಜೌಬನ ಬಿಟಪ ಕುಠಾರೂ॥ ೪ ॥**

''ಯುದ್ಧಸಾಮಗ್ರಿಯನ್ನು ಸಿದ್ಧಗೊಳಿಸಿಕೊಂಡು, ಈ ದಡದಿಂದ ಯಾರನ್ನು ಆಚೆಯ ದಡಕ್ಕೆ ಹೋಗಲು ಬಿಡಬೇಡಿರಿ. ಜೀವದ ಹಂಗು ತೊರೆದು ಎಲ್ಲರೂ ಯುದ್ಧದಲ್ಲಿ ಸಾಯಲು ಸಿದ್ಧರಾಗಿರಿ. ನಾನು ಮುಂದಾಗಿ ಭರತನನ್ನು ಇದಿರಿಸುತ್ತೇನೆ. ನಾನು ಬದುಕಿರುವ ತನಕ ಅವರನ್ನು ಗಂಗೆದಾಟಲು ಬಿಡುವುದಿಲ್ಲ. ಈ ಶರೀರವು ಕ್ಷಣಭಂಗುರ. ಎಂದೋ ಒಂದುದಿನ ಹೋಗುವುದೇ. ಯುದ್ಧದಲ್ಲಿ ಸತ್ತರೆ, ಅದೂ ಗಂಗಾತೀರದಲ್ಲಿ, ಅಲ್ಲದೆ ರಾಮಕಾರ್ಯಾರ್ಥವಾಗಿ; ಇದಕ್ಕಿಂತ ಹೆಚ್ಚಿನ ಪುಣ್ಯವೇನಿದೆ? ಭರತನು ಶ್ರೀರಾಮನ ಸೋದರನು ಹಾಗೂ ರಾಜನು. ಸಾಮಾನ್ಯಸೇವಕನಾದ ನನಗೆ ಇಂತಹ ಮೃತ್ಯು ಲಭಿಸಿದರೆ ನನ್ನ ಭಾಗ್ಯವೇ ಸರಿ. ನಾನು ಸ್ವಾಮಿಕಾರ್ಯಕ್ಕಾಗಿ ಯುದ್ಧ ಮಾಡಿಗೆದ್ದರೆ ಹದಿನಾಲ್ಕು ಲೋಕಗಳಲ್ಲಿ ಕೀರ್ತಿಶಾಲಿಯಾಗುವೆನು. ಶ್ರೀರಾಮನ ಕಾರ್ಯಕ್ಕಾಗಿ ಪ್ರಾಣಗಳನ್ನು ಅರ್ಪಿಸಿದರೂ ಲಾಭವೇ. ಜಯವಾದರೂ, ಅಪಜಯವಾದರೂ ನನಗೆ ಆನಂದವೇ ನನಗೆ ಯಾವ ವಿಧದಿಂದಲೂ ಒಳ್ಳೆಯದೇ ಆದೀತು . ಸಾಧುಸಮಾಜದಲ್ಲಿ ಗಣನೆಯಿಲ್ಲದವನೂ, ಶ್ರೀರಾಮಭಕ್ತನಲ್ಲದವನೂ ಭೂಮಿಗೆ ಭಾರವಾಗಿ ಅವನ ಜೀವನು ವ್ಯರ್ಥವಾದುದು. ಅವನು ತಾಯಿಯ ಯೌವನವೆಂಬ ಮರವನ್ನು ಕಡಿಯುವ ಕೊಡಲಿಯಂತಿದ್ದಾನೆ.'' (ಚೌ/೧-೪)

**ದೋ – ಬಿಗತ ಬಿಷಾದ ನಿಷಾದಪತಿ ಸಬಹಿ ಬಢಾಇ ಉಛಾಹು।**
**ಸುಮಿರಿ ರಾಮ ಮಾಗೆಉ ತುರತ ತರಕಸ ಧನುಷ ಸನಾಹು॥ ೧೯೦ ॥**

ಈ ಪ್ರಕಾರ ಶ್ರೀರಾಮನಿಗಾಗಿ ಪ್ರಾಣಾರ್ಪಣೆ ಮಾಡಲು ನಿಶ್ಚಯಿಸಿ, ನಿಷಾದರಾಜನು ವಿಷಾದರಹಿತನಾದನು. ಎಲ್ಲರನ್ನು ಹುರಿದುಂಬಿಸಿ, ಶ್ರೀರಾಮನನ್ನು ನೆನೆದು ಅವನು ಕೂಡಲೇ ಬಿಲ್ಲು, ಬತ್ತಳಿಕೆ, ಕವಚವನ್ನು ತರಿಸಿದನು. (ದೋ/೧೯೦)

**ಚೌ – ಬೇಗಹು ಭಾಇಹು ಸಜಹು ಸ್ಜೋಊ। ಸುನಿ ರಜಾಇ ಕದರಾಇ ನ ಕೋಊ॥**
**ಭಲೆಹಿ್ ನಾಥ ಸಬ ಕಹಹಿ್ ಸಹರಷಾ। ಏಕಹಿ್ ಏಕ ಬಢಾವಇ ಕರಷಾ॥ ೧ ॥**
**ಚಲೇ ನಿಷಾದ ಜೊಹಾರಿ ಜೊಹಾರೀ। ಸೂರ ಸಕಲ ರನ ರೂಚಇ ರಾರೀ॥**
**ಸುಮಿರಿ ರಾಮ ಪದ ಪಂಕಜ ಪನಹೀ್। ಭಾಥೀ್ ಬಾಂಧಿ ಚಢಾಇನ್ಹಿ ಧನಹೀ್॥ ೨ ॥**
**ಅ್ಗರೀ ಪಹಿರಿ ಕೂ್ಡಿ ಸಿರ ಧರಹೀ್। ಫರಸಾ ಬಾ್ಸ ಸೇಲ ಸಮ ಕರಹೀ್॥**
**ಏಕ ಕುಸಲ ಅತಿ ಓಡನ ಖಾ್ಡೇ। ಕೂದಹಿ್ ಗಗನ ಮನಹು್ ಛಿತಿ ಛಾ್ಡೇ॥ ೩ ॥**
**ನಿಜ ನಿಜ ಸಾಜು ಸಮಾಜು ಬನಾಈ। ಗುಹ ರಾಉತಹಿ ಜೊಹಾರೇ ಜಾಈ॥**
**ದೇಖಿ ಸುಭಟ ಸಬ ಲಾಯಕ ಜಾನೇ। ಲೈ ಲೈ ನಾಮ ಸಕಲ ಸನಮಾನೇ॥ ೪ ॥**

ಮತ್ತೆ ಅವನು ಹೇಳಿದನು – ಸೋದರರರೇ! ತ್ವರೆಮಾಡಿ. ಎಲ್ಲ ಯುದ್ಧಸಾಮಗ್ರಿಗಳನ್ನು ಸಜ್ಜುಗೊಳಿಸಿರಿ. ನನ್ನ ಆಜ್ಞೆಯನ್ನು ಕೇಳಿ ಯಾರೂ ಅಂಜಬೇಡಿರಿ. ಎಲ್ಲರೂ ಹರ್ಷದಿಂದ 'ಹಾಗೇ ಆಗಲೀ' ಎಂದು ಹೇಳುತ್ತಾ ಪರಸ್ಪರರನ್ನು ಹುರಿದುಂಬಿಸತೊಡಗಿದರು. ನಿಷಾದರಾಜನಿಗೆ ವಂದಿಸಿ ಅವರೆಲ್ಲರೂ ಯುದ್ಧಸನ್ನದ್ಧರಾಗಿ ನದೀತೀರಕ್ಕೆ ಹೊರಟರು. ಅವರೆಲ್ಲರೂ ಮಹಾವೀರರೂ, ಯುದ್ಧದಲ್ಲಿ

ಹೋರಾಡುವುದೆಂದರೆ ಅವರಿಗೆ ಅತಿ ಉತ್ಸಾಹ. ಅವರೆಲ್ಲರೂ ಶ್ರೀರಾಮನ ಪಾದವನ್ನು ನೆನೆದು ಕವಚಗಳನ್ನು, ತುಣೀರಗಳನ್ನೂ, ಧನುಸ್ಸುಗಳನ್ನೂ, ಶಿರಸ್ತ್ರಾಣಗಳನ್ನೂ ಧರಿಸಿದರು. ಗಂಡುಕೊಡಲಿ, ಭಲ್ಲೆ, ಈಟಿಗಳನ್ನು ಸರಿಮಾಡಿಕೊಂಡರು. ಕೆಲವರು ಖಡ್ಗಯುದ್ಧದಲ್ಲಿ ನಿಷ್ಣಾತರಾಗಿದ್ದರು. ಅವರು ನೆಲಬಿಟ್ಟು ಮುಗಿಲಿಗೆ ಜಿಗಿಯುವರೋ ಎಂಬಂತೆ ಉತ್ಸಾಹದಿಂದ ಮೆರೆಯುತ್ತಿದ್ದರು. ಅವರೆಲ್ಲರೂ ತಮ್ಮ-ತಮ್ಮ ಆಯುಧಗಳನ್ನು ಧರಿಸಿ, ಗುಂಪುಕೂಡಿ ನಿಷಾದರಾಜನಿಗೆ ಬಂದು ವಂದಿಸಿದರು. ಆ ಸುಭಟರೆಲ್ಲರೂ ಸಮರ ಪಟುಗಳೆಂದು ತಿಳಿದು ಗುಹನು ಅವರೆಲ್ಲರ ಹೆಸರಿಡಿದು ಕೂಗಿ ಸಮ್ಮಾನಮಾಡಿದನು. (ಚೌ/೧-೪)

**ದೋ – ಭಾಇಹು ಲಾವಹು ಧೋಖ ಜನಿ ಆಜು ಕಾಜ ಬಡ ಮೋಹಿ।**
**ಸುನಿ ಸರೋಷ ಬೋಲೇ ಸುಭಟ ಬೀರ ಅಧೀರ ನ ಹೋಹಿ॥ ೧೯೧ ॥**

ಗುಹನು ಹೇಳಿದನು– ''ಸೋದರರೇ! ಸಾವಿಗೆ ಅಂಜದಿರಿ. ಇಂದು ನಮಗೆ ಒಂದು ಮಹತ್ಕಾರ್ಯವು ಲಭಿಸಿದೆ.'' ಇದನ್ನು ಕೇಳಿ ಎಲ್ಲಶೂರಯೋಧರು ವೀರಾವೇಷದಿಂದ ಕೂಗಿದರು– 'ಎಲೈ ವೀರಾಧಿವೀರಾ! ಧೈರ್ಯವಾಗಿರು.' (ದೋ/೧೯೧)

**ಚೌ – ರಾಮ ಪ್ರತಾಪ ನಾಥ ಬಲ ತೋರೇ। ಕರಹಿಂ ಕಟಕು ಬಿನು ಭಟ ಬಿನು ಘೋರೇ॥**
**ಜೀವತ ಪಾಉ ನ ಪಾಛೇಂ ಧರಹೀಂ। ರುಂಡ ಮುಂಡಮಯ ಮೇದಿನಿ ಕರಹೀಂ ॥ ೧ ॥**
**ದೀಖ ನಿಷಾದನಾಥ ಭಲ ಟೋಲೂ। ಕಹೆಉ ಬಜಾಉ ಜುಝಾಊ ಢೋಲೂ ॥**
**ಏತನಾ ಕಹತ ಛೀಂಕ ಭಇ ಬಾಂಏ। ಕಹೆಉ ಸಗುನಿಅನ್ಹ ಖೇತ ಸುಹಾಏ ॥ ೨ ॥**
**ಬೂಢು ಏಕು ಕಹ ಸಗುನ ಬಿಚಾರೀ। ಭರತಹಿ ಮಿಲಿಅ ನ ಹೋಇಹಿ ರಾರೀ॥**
**ರಾಮಹಿ ಭರತು ಮನಾವನ ಜಾಹೀಂ। ಸಗುನ ಕಹಇ ಅಸ ಬಿಗ್ರಹು ನಾಹೀಂ॥ ೩ ॥**
**ಸುನಿ ಗುಹ ಕಹಇ ನೀಕ ಕಹ ಬೂಢಾ। ಸಹಸಾ ಕರಿ ಪಛಿತಾಹಿಂ ಬಿಮೂಢಾ ॥**
**ಭರತ ಸುಭಾಉ ಸೀಲು ಬಿನು ಬೂಝೇಂ। ಬಡಿ ಹಿತ ಹಾನಿ ಜಾನಿ ಬಿನು ಜೂಝೇಂ॥ ೪ ॥**

''ಒಡೆಯಾ! ಶ್ರೀರಾಮಚಂದ್ರನ ಪ್ರತಾಪದಿಂದ, ನಿಮ್ಮ ಬಲದಿಂದ ನಾವು ಭರತನ ಸೈನ್ಯವನ್ನೂ, ವೀರರನ್ನೂ, ಆನೆ, ಕುದುರೆಗಳನ್ನೂ ಒಂದೂ ಬಿಡದೆ ಇಲ್ಲವಾಗಿಸುವೆವು. ಪ್ರಾಣವಿರುವ ತನಕ ಹಿಂದಕ್ಕೆ ಅಡಿಯಿಡೆವು. ಈ ಮೇದಿನಿಯನ್ನು ರುಂಡಮುಂಡಮಯವಾಗಿ ಮಾಡುವೆವು.'' ನಿಷಾದರಾಜನು ವೀರರ ಹಿರಿಯದಳವನ್ನು ಕಂಡು ಹೇಳಿದ – 'ಯುದ್ಧ ಭೇರಿಗಳು ಮೊಳಗಲಿ.' ಹೀಗೆ ಹೇಳುತ್ತಿರುವಂತೆ ಯಾರೋ ಎಡಗಡೆಯಿಂದ ಸೀನಿದರು. ಶಕುನ ಬಲ್ಲವರು ಹೇಳಿದರು – 'ಸೀನು ಒಳ್ಳೆಯ ದಿಕ್ಕಿನಿಂದ ಬಂದಿದೆ, ನಮಗೆ ವಿಜಯವು ನಿಶ್ಚಿತವು.' ಓರ್ವ ವೃದ್ಧನು ಶಕುನವನ್ನು ಕುರಿತು ವಿಚಾರಮಾಡುತ್ತಾ ಹೇಳಿದನು – 'ನಮಗೆ ಭರತನ ಭೇಟಿಯಾದೀತು. ಅವನೊಡನೆ ಯುದ್ಧವಾಗದು. ಭರತನು ಶ್ರೀರಾಮಚಂದ್ರನ ಮನವೊಲಿಸಲು ಹೋಗುತ್ತಿದ್ದಾನೆ. ವಿರೋಧವಿಲ್ಲ ಎಂದು ಶಕುನ ಹೇಳುತ್ತದೆ.'' ಇದನ್ನು ಕೇಳಿ, ನಿಷಾದರಾಜ ಗುಹ ಹೇಳಿದ – 'ಈ ವೃದ್ಧನು ಸರಿಯಾಗಿಯೇ ಹೇಳುತ್ತಿರುವನು. ಮೂಢರು ಆತುರಪಟ್ಟು ಕೊನೆಗೆ ಪಶ್ಚಾತ್ತಾಪಪಡುತ್ತಾರೆ. 'ಆತುರಗಾರನಿಗೆ ಬುದ್ಧಿಮಟ್ಟ.' ಭರತನ ಶೀಲ-ಸ್ವಭಾವಗಳನ್ನು ಅರಿಯದೆ ಯುದ್ಧಮಾಡುವುದರಲ್ಲಿ ಹಿತಕ್ಕಿಂತ ಹಾನಿಯೇ ಹೆಚ್ಚಾಗಿದೆ. (ಚೌ/೧-೪)

**ದೋ – ಗಹಹು ಘಾಟ ಭಟ ಸಮಿಟಿ ಸಬ ಲೇಉಂ ಮರಮ ಮಿಲಿ ಜಾಇ।**
**ಬೂಝಿ ಮಿತ್ರ ಅರಿ ಮಧ್ಯ ಗತಿ ತಸ ತಬ ಕರಿಹಉಂ ಆಇ॥ ೧೯೨ ॥**

ವೀರಸೈನಿಕರೇ! ನೀವೆಲ್ಲ ಒಟ್ಟುಗೂಡಿ ಘಟ್ಟಗಳನ್ನು ಕಾಯುತ್ತಿರಿ. ನಾನು ಹೋಗಿ ಭರತನನ್ನು ಕಂಡು ಅವನ ಉದ್ದೇಶವನ್ನು ತಿಳಿಯುವೆನು. ಆವನ ಮನೋಭಾವವು ಮಿತ್ರನದೋ, ಶತ್ರುವಿನದೋ, ಇಲ್ಲವೇ ತಟಸ್ಥನದೋ ಎಂದು ತಿಳಿದು ಅದರಂತೆ ಮುಂದೆ ಏರ್ಪಾಡುಮಾಡುತ್ತೇನೆ. (ದೋ/೧೯೨)

**ಚೌ – ಲಖಬ ಸನೇಹು ಸುಭಾಯ್ ಸುಹಾಏಂ। ಬೈರು ಪ್ರೀತಿ ನಹಿಂ ದುರಇಂ ದುರಾಏಂ॥**
**ಅಸ ಕಹಿ ಭೇಂಟ ಸಂಜೋವನ ಲಾಗೇ। ಕಂದ ಮೂಲ ಫಲ ಖಗ ಮೃಗ ಮಾಗೇ॥ ೧ ॥**
**ಮೀನ ಪೀನ ಪಾಠೀನ ಪುರಾನೇ। ಭರಿ ಭರಿ ಭಾರ ಕಹಾರನ್ಹ ಆನೇ॥**
**ಮಿಲನ ಸಾಜು ಸಜಿ ಮಿಲನ ಸಿಧಾಏ। ಮಂಗಲ ಮೂಲ ಸಗುನ ಸುಭ ಪಾಏ ॥ ೨ ॥**
**ದೇಖಿ ದೂರಿ ತೇಂ ಕಹಿ ನಿಜ ನಾಮೂ। ಕೀನ್ಹ ಮುನೀಸಹಿ ದಂಡ ಪ್ರನಾಮೂ॥**
**ಜಾನಿ ರಾಮಪ್ರಿಯ ದೀನ್ಹಿ ಅಸೀಸಾ। ಭರತಹಿ ಕಹೆಉ ಬುಝಾಇ ಮುನೀಸಾ॥ ೩ ॥**

**ರಾಮ ಸಖಾ ಸುನಿ ಸಂದನು ತ್ಯಾಗಾ। ಚಲೇ ಉತರಿ ಉಮಗತ ಅನುರಾಗಾ॥**
**ಗಾಉ್ ಜಾತಿ ಗುಹ್ ನಾಉ್ ಸುನಾಈ। ಕೀನ್ಹ ಜೋಹಾರು ಮಾಥ ಮಹಿ ಲಾಈ॥೪॥**

'ಅವನ ಸುಂದರ ಸ್ವಭಾವದಿಂದಲೇ ಆತನ ಸ್ನೇಹವನ್ನು ಗುರುತಿಸುತ್ತೇನೆ. ಏಕೆಂದರೆ ಪ್ರೇಮವಾಗಲೀ, ವೈರವಾಗಲೀ ಅಡಗಿಸಿಡಲಾಗುವುದಿಲ್ಲ' ಎಂದು ಹೇಳಿ ಗುಹನು ಕಾಣಿಕೆಯ ವಸ್ತುಗಳನ್ನು ಅಣಿ ಮಾಡಿಕೊಂಡನು. ಕಂದ, ಮೂಲ, ಫಲ, ಪಕ್ಷಿ ಹಾಗೂ ಜಿಂಕೆಗಳನ್ನೂ ಸೇವಕರು ಸಿದ್ಧಗೊಳಿಸಿದರು. ಬೆಸ್ತರು ದೊಡ್ಡ-ದೊಡ್ಡ ಮೀನುಗಳನ್ನು ಹೊತ್ತು ತಂದರು. ಈ ವಿಧವಾಗಿ ಕಾಣಿಕೆಗಳೆಲ್ಲವನ್ನೂ ಜೋಡಿಸಿಕೊಂಡು, ನಿಷಾದರಾಜನು ಭರತನನ್ನು ಭೇಟಿಯಾಗಲು ಹೊರಟನು. ದಾರಿಯಲ್ಲಿ ಆತನಿಗೆ ಶುಭ ಶಕುನಗಳೇ ಆದವು. ಗುಹನು ಮುನೀಶ್ವರರಾದ ವಸಿಷ್ಠರನ್ನು ಕಂಡು ತನ್ನ ಹೆಸರನ್ನು ಹೇಳಿ ದೂರದಿಂದಲೇ ದಂಡಪ್ರಣಾಮ ಸಲ್ಲಿಸಿದನು. ಅವನು ಶ್ರೀರಾಮನಿಗೆ ಪ್ರಿಯನೆಂದು ತಿಳಿದು ವಸಿಷ್ಠರು ಅವನನ್ನು ಆಶೀರ್ವದಿಸಿದರು. ಬಳಿಕ ಭರತನಿಗೆ ಇವನು ಶ್ರೀರಾಮನ ಪ್ರಿಯಮಿತ್ರನೆಂದು ಪರಿಚಯಮಾಡಿಸಿದರು. ಇದನ್ನು ಕೇಳಿದಕೂಡಲೇ ಭರತನು ರಥದಿಂದಿಳಿದು ಪ್ರೇಮಮಗ್ನನಾಗಿ ಕಾಲ್ನಡಿಗೆಯಿಂದ ಅವನೊಂದಿಗೆ ಹೊರಟನು. ನಿಷಾದರಾಜನು ತನ್ನ ಹೆಸರು, ಊರು, ಜಾತಿ ಇವುಗಳನ್ನು ಹೇಳಿ ನೆಲಮುಟ್ಟಿ, ಹಣೆಚಾಚಿ ನಮಸ್ಕಾರಮಾಡಿದನು. (ಚೌ/೧-೪)

**ದೋ – ಕರತ ದಂಡವತ ದೇಖಿ ತೇಹಿ ಭರತ ಲೀನ್ಹ ಉರ ಲಾಇ।**
**ಮನಹುಂ ಲಖನ ಸನ ಭೇಂಟ ಭಇ ಪ್ರೇಮು ನ ಹೃದಯ್ ಸಮಾಇ॥೧೯೩॥**

ಗುಹನು ದಂಡಪ್ರಣಾಮವನ್ನು ಮಾಡಿದುದು ನೋಡಿ, ಭರತನು ಆತನನ್ನು ಕೈಹಿಡಿದೆಬ್ಬಿಸಿ ಎದೆಗಪ್ಪಿಕೊಂಡನು. ಅವನ ಹೃದಯದಲ್ಲಿ ಪ್ರೇಮವು ಹಿಡಿಸಲೊಲ್ಲದು. ಅವನು ಲಕ್ಷ್ಮಣನನ್ನೇ ಭೇಟಿಯಾದಷ್ಟು ಆನಂದಿತನಾದನು. (ದೋ/೧೯೩)

**ಚೌ – ಭೇಂಟತ ಭರತು ತಾಹಿ ಅತಿ ಪ್ರೀತೀ। ಲೋಗ ಸಿಹಾಹಿಂ ಪ್ರೇಮ ಕೈ ರೀತೀ॥**
**ಧನ್ಯ ಧನ್ಯ ಧುನಿ ಮಂಗಲ ಮೂಲಾ। ಸುರ ಸರಾಹಿ ತೇಹಿ ಬರಿಸಹಿಂ ಫೂಲಾ॥೧॥**
**ಲೋಕ ಬೇದ ಸಬ ಭಾಂತಿಹಿಂ ನೀಚಾ। ಜಾಸು ಛಾಂಹ ಛುಇ ಲೇಇಅ ಸೀಂಚಾ॥**
**ತೇಹಿ ಭರಿ ಅಂಕ ರಾಮ ಲಘು ಭ್ರಾತಾ। ಮಿಲತ ಪುಲಕ ಪರಿಪೂರಿತ ಗಾತಾ॥೨॥**
**ರಾಮ ರಾಮ ಕಹಿ ಜೇ ಜಮುಹಾಹೀಂ। ತಿನ್ಹಹಿ ನ ಪಾಪ ಪುಂಜ ಸಮುಹಾಹೀಂ॥**
**ಯಹ ತೌ ರಾಮ ಲಾಇ ಉರ ಲೀನ್ಹಾ। ಕುಲ ಸಮೇತ ಜಗು ಪಾವನ ಕೀನ್ಹಾ॥೩॥**
**ಕರಮನಾಸ ಜಲು ಸುರಸರಿ ಪರಈ। ತೇಹಿ ಕೋ ಕಹಹು ಸೀಸ ನಹಿಂ ಧರಈ॥**
**ಉಲಟಾ ನಾಮು ಜಪತ ಜಗು ಜಾನಾ। ಬಾಲಮೀಕಿ ಭಏ ಬ್ರಹ್ಮ ಸಮಾನಾ॥೪॥**

ಭರತನು ಗುಹನನ್ನು ಅತ್ಯಂತ ಪ್ರೇಮದಿಂದ ಆಲಿಂಗಿಸಿಕೊಳ್ಳುತ್ತಿರುವುದನ್ನು ಕಂಡು, ಪ್ರಜೆಗಳೆಲ್ಲರೂ ಪ್ರಶಂಸಿಸತೊಡಗಿದರು. ಅವರೆಲ್ಲರೂ 'ಭರತನ ಪ್ರೇಮವು ಧನ್ಯ, ಧನ್ಯ' ಎಂದು ಕೊಂಡಾಡುತ್ತಾ ಜಯಜಯಕಾರ ಮಾಡಿದರು. ಸಾಧು-ಸಾಧು ಎಂದು ದೇವತೆಗಳು ಹೊಗಳುತ್ತಾ ಹೂಮಳೆಯನ್ನು ಸುರಿಸಿದರು. ಅವರು ಉದ್ಗಾರವೆತ್ತಿದರು – ''ಈ ನಿಷಾದನು ನಿಮ್ನಜಾತಿಯವನು. ಅವನ ನೆರಳು ಸೋಂಕಿದರೂ ಸ್ನಾನಮಾಡಬೇಕೆಂದು ಶಾಸ್ತ್ರಗಳು, ವೇದಗಳು ಭಾವಿಸುತ್ತಿವೆ. ಅಂತಹ ಗುಹನನ್ನು ಶ್ರೀರಾಮಚಂದ್ರನ ಸೋದರನು ಅತಿ ಪ್ರೇಮದಿಂದ ಆಲಿಂಗಿಸಿಕೊಂಡು ಪುಲಕಿತನಾಗುತ್ತಿದ್ದಾನೆ.'' ಆಕಳಿಸಿದಾಗಲೂ ರಾಮನಾಮ ಸ್ಮರಣಮಾಡುವವರ ಬಳಿಗೆ ಯಾವುದೇ ಪಾಪವೂ ಸುಳಿಯಲಾರದು. ಅಂತಹುದರಲ್ಲಿ ಈ ಗುಹನನ್ನು ಸ್ವತಃ ಶ್ರೀರಾಮನೇ ಆಲಿಂಗಿಸಿಕೊಂಡು, ಆತನನ್ನೂ, ಆತನ ಜಾತಿಯನ್ನೂ ಜಗತ್ಪಾವನವನ್ನಾಗಿ ಮಾಡಿದನು. ಕರ್ಮನಾಶಾ ನದಿಯ ನೀರು ಗಂಗೆಗೆ ಸೇರಿದ ಮೇಲೆ ಅದನ್ನು ಯಾರು ತಾನೇ ತಲೆಯಮೇಲೆ ಪ್ರೋಕ್ಷಿಸಿಕೊಳ್ಳುವುದಿಲ್ಲ? ರಾಮನಾಮವನ್ನು ತಲೆಕೆಳಗಾಗಿ ಜಪಿಸಿದರೂ ವಾಲ್ಮೀಕಿಯು ಬ್ರಹ್ಮಸಮಾನನಾದುದು ಜಗದ್ವಿದಿತವಾಗಿದೆ. (ಚೌ/೧-೪)

**ದೋ – ಸ್ವಪಚ ಸಬರ ಖಸ ಜಮನ ಜಡ ಪಾವ್ಁರ ಕೋಲ ಕಿರಾತ।**
**ರಾಮು ಕಹತ ಪಾವನ ಪರಮ ಹೋತ ಭುವನ ಬಿಖ್ಯಾತ॥೧೯೪॥**

ಪಾಮರರೂ ಆದ ಚಾಂಡಾಲರೂ, ಶಬರರೂ, ಖಸರೂ, ಯವನರೂ, ಕೋಲ-ಕಿರಾತರೂ ಮೊದಲಾದ ನಿಮ್ನಜಾತಿಯವರೂ, ಮೂರ್ಖರಾದವರೂ ಕೂಡ ಶ್ರೀರಾಮನಾಮವನ್ನು ಸ್ಮರಿಸುತ್ತಲೇ ಪವಿತ್ರರಾಗಿ, ಮೂರ್ಲೋಕಗಳಲ್ಲಿಯೂ ವಿಖ್ಯಾತರಾಗಿ ಬಿಡುತ್ತಾರೆ. (ದೋ/೧೯೪)

**ಚೌ – ನಹಿಂ ಅಚಿರಿಜು ಜುಗ ಜುಗ ಚಲಿ ಆಈ। ಕೆಹಿ ನ ದೀನ್ಹಿ ರಘುಬೀರ ಬಡಾಈ॥**
**ರಾಮ ನಾಮ ಮಹಿಮಾ ಸುರ ಕಹಹೀಂ। ಸುನಿ ಸುನಿ ಅವಧಲೋಗ ಸುಖು ಲಹಹೀಂ॥ ೧॥**
**ರಾಮಸಖಹಿ ಮಿಲಿ ಭರತ ಸಪ್ರೇಮಾ। ಪೂಂಛೀ ಕುಸಲ ಸುಮಂಗಲ ಖೇಮಾ॥**
**ದೇಖಿ ಭರತ ಕರ ಸೀಲು ಸನೇಹೂ। ಭಾ ನಿಷಾದ ತೆಹಿ ಸಮಯ ಬಿದೇಹೂ॥ ೨॥**
**ಸಕುಚ ಸನೇಹು ಮೋದು ಮನ ಬಾಢಾ। ಭರತಹಿ ಚಿತವತ ಎಕಟಕ ಠಾಢಾ॥**
**ಧರಿ ಧೀರಜು ಪದ ಬಂದಿ ಬಹೋರೀ। ಬಿನಯ ಸಪ್ರೇಮ ಕರತ ಕರ ಜೋರೀ॥ ೩॥**
**ಕುಸಲ ಮೂಲ ಪದ ಪಂಕಜ ಪೇಖೀ। ಮೈಂ ತಿಹುಂ ಕಾಲ ಕುಸಲ ನಿಜ ಲೇಖೀ॥**
**ಅಬ ಪ್ರಭು ಪರಮ ಅನುಗ್ರಹ ತೋರೇಂ। ಸಹಿತ ಕೋಟಿ ಕುಲ ಮಂಗಲ ಮೋರೇಂ॥ ೪॥**

ಶ್ರೀರಘುನಾಥನು ಭಕ್ತರನ್ನು ಕರುಣಿಸಿ ಉದ್ಧರಿಸುವುದು ಯುಗ-ಯುಗಗಳಿಂದ ನಡೆದುಕೊಂಡು ಬಂದ ಪದ್ಧತಿಯಾಗಿದೆ. ಆದರಿಂದ ಗುಹನನ್ನು ಕರುಣಿಸಿ ಯೋಗ್ಯನನ್ನಾಗಿಸಿದುದು ಆಶ್ಚರ್ಯವೇ ಇಲ್ಲ. ಈ ವಿಧವಾಗಿ ದೇವತೆಗಳು ಶ್ರೀರಾಮನಾಮ ಮಹಿಮೆಯನ್ನು ಕೊಂಡಾಡಿದುದನ್ನು ಕೇಳಿ, ಅಯೋಧ್ಯಾವಾಸಿಗಳು ಆನಂದಿತರಾದರು. ಶ್ರೀರಾಮನ ಮಿತ್ರನಾದ ನಿಷಾದರಾಜನನ್ನು ಅತ್ಯಂತ ಪ್ರೇಮದಿಂದ ಕಂಡು ಭರತನು ಅವನ ಯೋಗಕ್ಷೇಮವನ್ನು ವಿಚಾರಿಸಿದನು. ಭರತನ ಸೌಶೀಲ್ಯ, ಪ್ರೇಮಸ್ವಭಾವಗಳನ್ನು, ಭಾತೃಪ್ರೇಮವನ್ನೂ ಕಂಡು ಗುಹನು ಮುಗ್ಧನಾಗಿ, ತನ್ನನ್ನು ತಾನೇ ಮರೆತುಹೋದನು. ಆತನ ಮನದಲ್ಲಿ ಸಂಕೋಚ, ಪ್ರೇಮ, ಆನಂದ ತುಂಬಿಹೋಗಿ ನಿಂತು-ನಿಂತೇ ಭರತನನ್ನು ಎವೆಯಿಕ್ಕದೆ ನೋಡತೊಡಗಿದನು. ಅನಂತರ ಧೈರ್ಯತಾಳಿ, ಭರತನ ಪಾದಗಳಿಗೆ ವಂದಿಸಿ, ಪ್ರೇಮದಿಂದ ಕೈ ಜೋಡಿಸಿ ಬಿನ್ನವಿಸಿಕೊಂಡನು – ಪ್ರಭೂ! ನಿಮ್ಮ ಪಾದಗಳು ಶುಭಗಳಿಗೆ ಮೂಲವು. ಅವನ್ನು ಕಂಡು ನಾನು ಎಲ್ಲ ಕಾಲದಲ್ಲಿಯೂ ಧನ್ಯನಾದೆನೆಂದು ಭಾವಿಸುತ್ತೇನೆ. ಈಗ ನಿಮ್ಮ ಪರಮಾನುಗ್ರಹದಿಂದ ನನ್ನ ಕುಲಕೋಟಿಗಳು ಉದ್ಧಾರವಾದುವು. (ಚೌ/೧-೪)

**ದೋ – ಸಮುಝಿ ಮೋರಿ ಕರತೂತಿ ಕುಲು ಪ್ರಭು ಮಹಿಮಾ ಜಿಯ್ಂ ಜೋಇ।**
**ಜೋ ನ ಭಜಇ ರಘುಬೀರ ಪದ ಜಗ ಬಿಧಿ ಬಂಚಿತ ಸೋಇ॥ ೧೯೫॥**

''ನಾನು ಕಾಡಾಡಿಯು, ಕೆಳಜಾತಿಯವನು ಆಗಿದ್ದರೂ ಶ್ರೀರಾಮನು ನನ್ನನ್ನು ಅನುಗ್ರಹಿಸಿ ಧನ್ಯನನ್ನಾಗಿಸಿರುವನು. ಇಂತಹ ಶ್ರೀರಾಮನ ಮಹಿಮೆಯನ್ನು ಅರಿತೂ ಕೂಡ ಅವನ ಚರಣಕಮಲಗಳನ್ನು ಭಜಿಸದವನು ಜಗತ್ತಿನಲ್ಲಿ ವಿಧಿವಂಚಿತನೆಂದೇ ತಿಳಿಯಬೇಕು. (ದೋ/೧೯೫)

**ಚೌ – ಕಪಟೀ ಕಾಯರ ಕುಮತಿ ಕುಜಾತೀ। ಲೋಕ ಬೇದ ಬಾಹೇರ ಸಬ ಭಾಂತೀ॥**
**ರಾಮ ಕೀನ್ಹ ಆಪನ ಜಬಹೀ ತೇಂ। ಭಯಉಂ ಭುವನ ಭೂಷನ ತಬಹೀ ತೇಂ॥ ೧॥**
**ದೇಖಿ ಪ್ರೀತಿ ಸುನಿ ಬಿನಯ ಸುಹಾಈ। ಮಿಲೆಉ ಬಹೋರಿ ಭರತ ಲಘು ಭಾಈ॥**
**ಕಹಿ ನಿಷಾದ ನಿಜ ನಾಮ ಸುಬಾನೀಂ। ಸಾದರ ಸಕಲ ಜೊಹಾರೀಂ ರಾನೀಂ॥ ೨॥**
**ಜಾನಿ ಲಖನ ಸಮ ದೇಹಿಂ ಅಸೀಸಾ। ಜಿಅಹು ಸುಖೀ ಸಯ ಲಾಖ ಬರೀಸಾ॥**
**ನಿರಖಿ ನಿಷಾದು ನಗರ ನರ ನಾರೀ। ಭಏ ಸುಖೀ ಜನು ಲಖನು ನಿಹಾರೀ॥ ೩॥**
**ಕಹಹಿಂ ಲಹೆಉ ಎಹಿಂ ಜೀವನ ಲಾಹೂ। ಭೇಂಟೆಉ ರಾಮಭದ್ರ ಭರಿ ಬಾಹೂ॥**
**ಸುನಿ ನಿಷಾದು ನಿಜ ಭಾಗ ಬಡಾಈ। ಪ್ರಮುದಿತ ಮನ ಲಇ ಚಲೆಉ ಲೆವಾಈ॥ ೪॥**

ನಾನು ಕಪಟಿ, ಹೇಡಿ, ಕುಮತಿ, ಕುಜಾತಿ ಆಗಿದ್ದು, ಲೋಕವೇದಗಳಿಂದ ಬಾಹಿರನಾಗಿದ್ದೇನೆ. ಆದರೆ ಶ್ರೀರಾಮನು ನನ್ನನ್ನು ಆದರಿಸಿದಂದಿನಿಂದ ನಾನು ಭುವನಕ್ಕೆ ಭೂಷಣನಾಗಿ ಬಿಟ್ಟಿದ್ದೇನೆ.'' ನಿಷಾದರಾಜನ ಪ್ರೀತಿಯನ್ನು ಕಂಡು, ಆತನ ವಿನಯ ವಚನಗಳನ್ನು ಕೇಳಿ, ಮುಗ್ಧನಾಗಿ ಶತ್ರುಘ್ನನೂ ಅವನನ್ನು ಭೇಟಿಯಾದನು. ಅನಂತರ ಗುಹನು ನಮ್ರ ಮಧುರವಾಣಿಯಿಂದ ತನ್ನ ಹೆಸರನ್ನು ಹೇಳಿಕೊಂಡು ಎಲ್ಲ ರಾಣಿಯರಿಗೂ ನಮಸ್ಕಾರ ಮಾಡಿದನು. ರಾಣಿಯರು ಅವನನ್ನು ಲಕ್ಷ್ಮಣನಿಗೆ ಸಮಾನವೆಂದು ಬಗೆದು 'ನೀನು ಚಿರಂಜೀವಿಯಾಗಿರು, ಸುಖವಾಗಿರು' ಎಂದು ಆಶೀರ್ವದಿಸಿದರು. ಆಯೋಧ್ಯೆಯ ಜನರಿಗೆ ನಿಷಾದರಾಜನನ್ನು ನೋಡಿ, ಲಕ್ಷ್ಮಣನನ್ನು ಕಂಡಷ್ಟೇ ಸಂತಸವಾಯಿತು. 'ಕಲ್ಯಾಣಸ್ವರೂಪಿಯಾದ ಶ್ರೀರಾಮಚಂದ್ರನ ಗಾಢಾಲಿಂಗನ ಸೌಖ್ಯವನ್ನು ಅನುಭವಿಸಿದ ಈತನ ಜೀವಿತವು ನಿಜವಾಗಿ ಸಾರ್ಥಕವಾಗಿದೆ' ಎಂದು ಅವರೆಲ್ಲರೂ ಅಂದುಕೊಂಡರು. ತನ್ನ ಭಾಗ್ಯದ ಪ್ರಶಂಸೆಯನ್ನು ಕೇಳಿ ಗುಹನು ಅತ್ಯಂತ ಪ್ರಸನ್ನಚಿತ್ತನಾಗಿ, ಅವರೆಲ್ಲರನ್ನು ತನ್ನ ಜೊತೆಗೆ ಕರಕೊಂಡು ಹೊರಟನು. (ಚೌ/೧-೪)

**ದೋ – ಸನಕಾರೇ ಸೇವಕ ಸಕಲ ಚಲೇ ಸ್ವಾಮಿ ರುಖ ಪಾಇ ।**
**ಘರ ತರು ತರ ಸರ ಬಾಗ ಬನ ಬಾಸ ಬನಾಏನ್ಹಿ ಜಾಇ ॥ ೧೯೬ ॥**

ಅವನು ತನ್ನ ಸೇವಕರಿಗೆ ಸನ್ನೆ ಮಾಡಿ ತಿಳಿಸಿದನು. ಅವರು ತಮ್ಮ ಧಣಿಯ ಇಂಗಿತವನ್ನರಿತು ಅಯೋಧ್ಯೆಯಿಂದ ಬಂದಿರುವವರಿಗಾಗಿ, ತಮ್ಮ ಮನೆಗಳಲ್ಲಿ, ಮರದಡಿಯಲ್ಲಿ, ಕೆರೆಯ ಏರಿಯಮೇಲೆ, ಉಪವನಗಳಲ್ಲಿ, ತೋಪುಗಳಲ್ಲಿ ತಂಗಲು ಏರ್ಪಾಡುಮಾಡಿಕೊಟ್ಟರು. (ದೋ/೧೯೬)

**ಚೌ – ಸೃಂಗಬೇರಪುರ ಭರತ ದೀಖ ಜಬ । ಭೇ ಸನೇಹ್ ಸಬ ಅಂಗ ಸಿಥಿಲ ತಬ ॥**
**ಸೋಹತ ದಿಏ ನಿಷಾದಹಿ ಲಾಗೂ । ಜನು ತನು ಧರೇಂ ಬಿನಯ ಅನುರಾಗೂ ॥ ೧ ॥**
**ಏಹಿ ಬಿಧಿ ಭರತ ಸೇನು ಸಬು ಸಂಗಾ । ದೀಖಿ ಜಾಇ ಜಗ ಪಾವನಿ ಗಂಗಾ ॥**
**ರಾಮಘಾಟ ಕಹ್ ಕೀನ್ಹ ಪ್ರನಾಮೂ । ಭಾ ಮನು ಮಗನು ಮಿಲೇ ಜನು ರಾಮೂ ॥ ೨ ॥**
**ಕರಹಿಂ ಪ್ರನಾಮ ನಗರ ನರ ನಾರೀ । ಮುದಿತ ಬ್ರಹ್ಮಮಯ ಬಾರಿ ನಿಹಾರೀ ॥**
**ಕರಿ ಮಜ್ಜನು ಮಾಗಹಿಂ ಕರ ಜೋರೀ । ರಾಮಚಂದ್ರ ಪದ ಪ್ರೀತಿ ನ ಥೋರೀ ॥ ೩ ॥**
**ಭರತ ಕಹೆಉ ಸುರಸರಿ ತವ ರೇನೂ । ಸಕಲ ಸುಖದ ಸೇವಕ ಸುರಧೇನೂ ॥**
**ಜೋರಿ ಪಾನಿ ಬರ ಮಾಗಉಂ ಏಹೂ । ಸೀಯ ರಾಮ ಪದ ಸಹಜ ಸನೇಹೂ ॥ ೪ ॥**

ಶೃಂಗವೇರಪುರವನ್ನು ಕಂಡಾಗ ಸ್ನೇಹಪರವಶನಾಗಿ ಭರತನ ಶರೀರವು ಪುಳಕಿತವಾಯಿತು. ಅವನು ನಿಷಾದನ ಹೆಗಲಮೇಲೆ ಕೈಹಾಕಿಕೊಂಡು ನಡೆಯುತ್ತಿದ್ದಾಗ ವಿನಯ ಮತ್ತು ಪ್ರೇಮವೇ ಮೈವೆತ್ತಂತೆ ಕಾಣುತ್ತಿತ್ತು. ಈ ಪ್ರಕಾರ ಭರತನು ತನ್ನ ಪರಿವಾರದೊಡನೆ ಲೋಕಪಾವನಿಯಾದ ಗಂಗೆಯ ದರ್ಶನಮಾಡಿದನು. ಶ್ರೀರಾಮನು ಸ್ನಾನಮಾಡಿದ ರಾಮಘಟ್ಟವನ್ನು ದರ್ಶಿಸಿ, ವಂದಿಸಿದನು. ಅದನ್ನು ಕಂಡು ಅವನು ರಾಮನನ್ನು ಕಂಡಷ್ಟೇ ಆನಂದಮಗ್ನನಾದನು. ಅಯೋಧ್ಯೆಯ ಜನರು ಗಂಗೆಗೆ ಅಡ್ಡಬೀಳುತ್ತಾ, ಆದರ ಬ್ರಹ್ಮಮಯ ಜಲವನ್ನು ಕಂಡು ಅವರು ಸಂತುಷ್ಟರಾದರು. ಆ ಪಾವನಗಂಗೆಯಲ್ಲಿ ಮಿಂದು ಅವರೆಲ್ಲರೂ ಕೈಜೋಡಿಸಿಕೊಂಡು 'ಶ್ರೀರಾಮಚಂದ್ರನ ಚರಣಗಳಲ್ಲಿ ನಮ್ಮ ಪ್ರೇಮಾಭಕ್ತಿಯು ದಿನೇದಿನೇ ವರ್ಧಿಸುವಂತೆ ಅನುಗ್ರಹಿಸಮ್ಮಾ' ಎಂದು ಪ್ರಾರ್ಥಿಸಿಕೊಂಡರು. ಭರತನು – ಎಲೈ ಗಂಗಾಭವಾನಿಯೇ! ನಿನ್ನರೇಣು ಎಲ್ಲರಿಗೂ ಸುಖಪ್ರದವಾದುದು. ಸೇವಿಸುವವರಿಗೆ ನೀನು ಕಾಮಧೇನುವಾಗಿರುವೆ. ಶ್ರೀಸೀತಾರಾಮರ ಚರಣಕಮಲಗಳಲ್ಲಿ ನನಗೆ ಅನನ್ಯ ಭಕ್ತಿ ಉಂಟಾಗುವಂತೆ ಕರುಣಿಸು' ಎಂದು ಬೇಡಿಕೊಂಡರು. (ಚೌ/೧-೪)

**ದೋ – ಏಹಿ ಬಿಧಿ ಮಜ್ಜನು ಭರತು ಕರಿ ಗುರ ಅನುಸಾಸನ ಪಾಇ ।**
**ಮಾತು ನಹಾನೀಂ ಜಾನಿ ಸಬ ಡೇರಾ ಚಲೇ ಲವಾಇ ॥ ೧೯೭ ॥**

ಈ ಪ್ರಕಾರ ಭರತನು ಗಂಗೆಯಲ್ಲಿ ಮಿಂದು, ಗುರುವಿನ ಅನುಜ್ಞೆಪಡೆದು, ತಾಯಂದಿರೆಲ್ಲರೂ ಮಿಂದಾಯಿತು ಎಂದು ತಿಳಿದು ಅವನು ಗುಡಾರಗಳನ್ನು ಹೂಡಲು ಸಿದ್ಧತೆ ನಡೆಸಿದನು. (ದೋ/೧೯೭)

**ಚೌ – ಜಹ್ ತಹ್ ಲೋಗನ್ಹ ಡೇರಾ ಕೀನ್ಹಾ । ಭರತ ಸೋಧು ಸಬಹೀ ಕರ ಲೀನ್ಹಾ ॥**
**ಸುರ ಸೇವಾ ಕರಿ ಆಯಸು ಪಾಈ । ರಾಮ ಮಾತು ಪಹಿಂ ಗೇ ದೊಉ ಭಾಈ ॥ ೧ ॥**
**ಚರನ ಚಾಂಪಿ ಕಹಿ ಕಹಿ ಮೃದು ಬಾನೀ । ಜನನೀಂ ಸಕಲ ಭರತ ಸನಮಾನೀ ॥**
**ಭಾಇಹಿ ಸೌಂಪಿ ಮಾತು ಸೇವಕಾಈ । ಆಪು ನಿಷಾದಹಿ ಲೀನ್ಹ ಬೊಲಾಈ ॥ ೨ ॥**
**ಚಲೇ ಸಖಾ ಕರ ಸೋಂ ಕರ ಜೋರೇಂ । ಸಿಥಿಲ ಸರೀರು ಸನೇಹ ನ ಥೋರೇಂ ॥**
**ಪೂಂಛತ ಸಖಹಿ ಸೊ ಠಾಉಂ ದೆಖಾಊ । ನೇಕು ನಯನ ಮನ ಜರನಿ ಜುಡಾಊ ॥ ೩ ॥**
**ಜಹ್ ಸಿಯ ರಾಮು ಲಖನು ನಿಸಿ ಸೋಏ । ಕಹತ ಭರೇ ಜಲ ಲೋಚನ ಕೋಏ ॥**
**ಭರತ ಬಚನ ಸುನಿ ಭಯಉ ಬಿಷಾದೂ । ತುರತ ತಹಾಂ ಲಇ ಗಯಉ ನಿಷಾದೂ ॥ ೪ ॥**

ಜನರು ಅಲ್ಲಲ್ಲಿ ಬಿಡಾರ ಹೂಡಿದರು. ಎಲ್ಲರಿಗೂ ಉಳಕೊಳ್ಳಲು ಸರಿಯಾದ ಅನುಕೂಲವಿದೆಯೇ ಇಲ್ಲವೇ ಎಂದು ಭರತನು ಎಲ್ಲರನ್ನು ವಿಚಾರಿಸಿಕೊಂಡನು. ದೇವತೆಗಳನ್ನು ಪೂಜಿಸಿ, ಗುರುಗಳ ಆಜ್ಞೆಯನ್ನು ಪಡೆದು ಭರತ-ಶತ್ರುಘ್ನರು ತಾಯಿ ಕೌಸಲ್ಯೆಯ ಬಳಿಗೆ ತೆರಳಿದರು. ಭರತನು ಅವರೆಲ್ಲರ ಕಾಲುಗಳನ್ನು ಒತ್ತಿ ನಲ್ನುಡಿಗಳನ್ನಾಡಿ ಅವರೆಲ್ಲರನ್ನು ಸತ್ಕರಿಸಿದನು. ಅನಂತರ

ಮಾತೃಸೇವೆಯನ್ನು ಶತ್ರುಘ್ನನಿಗೆ ಒಪ್ಪಿಸಿ ಭರತನು ಗುಹನನ್ನು ಬರಮಾಡಿಕೊಂಡನು. ಭರತನು ಗುಹನ ಕೈಯಲ್ಲಿ ಕೈಯಿಟ್ಟು ನಡೆದನು. ಆತನ ಪ್ರೇಮವು ಅನುಪಮವಾದುದು. ಆದರಿಂದ ಅವನ ಶರೀರ ಶಿಥಿಲವಾಗುತ್ತಿತ್ತು. ಭರತನು ಗೆಳೆಯ ಗುಹನನ್ನು– 'ಸೀತಾರಾಮ, ಲಕ್ಷ್ಮಣರು ರಾತ್ರಿ ಮಲಗಿದ್ದ ತಾಣವನ್ನು ತೋರು, ಅದನ್ನು ಕಂಡು ನನ್ನ ಕಣ್ಣುಗಳು ತಂಪಾಗಲಿ' ಎಂದು ಕೇಳಿದನು. ಹೀಗೆ ಹೇಳುತ್ತಾ ಆತನ ಕಂಗಳಲ್ಲಿ ಕಂಬನಿ ತುಂಬಿ ಬಂದವು. ಭರತನ ಮಾತನ್ನು ಕೇಳಿ, ನಿಷಾದನಿಗೆ ತುಂಬಾ ವಿಷಾದವಾಯಿತು. ಅವನು ಕೂಡಲೇ ಭರತನನ್ನು ಆ ಸ್ಥಳಕ್ಕೆ ಕರೆದೊಯ್ದನು. (ಚೌ/೧-೪)

**ದೋ – ಜಹँ ಸಿಂಸುಪಾ ಪುನೀತ ತರ ರಘುಬರ ಕಿಯ ಬಿಶ್ರಾಮು ।**
**ಅತಿ ಸನೇಹँ ಸಾದರ ಭರತ ಕೀನ್ಹೆಉ ದಂಡ ಪ್ರನಾಮು ॥ ೧೯೮ ॥**

ಶ್ರೀರಾಮಚಂದ್ರನು ವಿಶ್ರಮಿಸಿದ್ದ ಶಿಂಶುಪಾವೃಕ್ಷ ಬುಡವನ್ನು ಕಂಡು ಭರತನು ಪ್ರೇಮಾದರಗಳಿಂದ ದಂಡಪ್ರಣಾಮಮಾಡಿದನು. (ದೋ/೧೯೮)

**ಚೌ – ಕುಸ ಸಾँಥರೀ ನಿಹಾರಿ ಸುಹಾಈ । ಕೀನ್ಹ ಪ್ರನಾಮು ಪ್ರದಚ್ಛಿನ ಜಾಈ ॥**
**ಚರನ ರೇಖ ರಜ ಆँಖಿನ್ಹ ಲಾಈ । ಬನಇ ನ ಕಹತ ಪ್ರೀತಿ ಅಧಿಕಾಈ ॥ ೧ ॥**
**ಕನಕ ಬಿಂದು ದುಇ ಚಾರಿಕ ದೇಖೇ । ರಾಖೇ ಸೀಸ ಸೀಯ ಸಮ ಲೇಖೇ ॥**
**ಸಜಲ ಬಿಲೋಚನ ಹೃದಯँ ಗಲಾನೀ । ಕಹತ ಸಖಾ ಸನ ಬಚನ ಸುಬಾನೀ ॥ ೨ ॥**
**ಶ್ರೀಹತ ಸೀಯ ಬಿರಹँ ದುತಿಹೀನಾ । ಜಥಾ ಅವಧ ನರ ನಾರಿ ಬಿಲೀನಾ ॥**
**ಪಿತಾ ಜನಕ ದೆಉँ ಪಟತರ ಕೇಹೀ । ಕರತಲ ಭೋಗು ಜೋಗು ಜಗ ಜೇಹೀ ॥ ೩ ॥**
**ಸಸುರ ಭಾನುಕುಲ ಭಾನು ಭುಆಲೂ । ಜೆಹಿ ಸಿಹಾತ ಅಮರಾವತಿಪಾಲೂ ॥**
**ಪ್ರಾನನಾಥು ರಘುನಾಥ ಗೊಸಾಈँ । ಜೋ ಬಡ ಹೋತ ಸೊ ರಾಮ ಬಡಾಈ ॥ ೪ ॥**

ಅಲ್ಲಿದ್ದ ದರ್ಭೆಯ ಚಾಪೆಯನ್ನು ನೋಡಿ ಅದಕ್ಕೆ ಪ್ರದಕ್ಷಿಣೆ ಬಂದು ಪ್ರಣಾಮ ಸಲ್ಲಿಸಿದನು. ಶ್ರೀರಾಮಚಂದ್ರನ ಚರಣಚಿನ್ಹೆಯ ರಜವನ್ನು ಅವನು ಕಣ್ಣಿಗೊತ್ತಿಕೊಂಡನು. ಆಗಿನ ಅವನ ಪ್ರೇಮಾತಿಶಯವು ಅವರ್ಣನೀಯ. ಸೀತಾದೇವಿಯ ವಸ್ತ್ರಗಳಿಂದಲೋ, ಆಭರಣಗಳಿಂದಲೋ ಉದುರಿದ ನಾಲ್ಕಾರು ಸ್ವರ್ಣಕಣಗಳು ಭರತನಿಗೆ ಕಂಡು ಬಂದವು. ಅವನ್ನು ನೋಡಿ ಸೀತೆಯ ಸಮಾನವೆಂದು ಗೌರವಿಸಿ, ಶಿರದಲ್ಲಿ ಧರಿಸಿಕೊಂಡನು. ಅವನ ಕಣ್ಣುಗಳು ಪ್ರೇಮಾಂಬುಧಿಯಿಂದ ತುಂಬಿಬಂದವು. ಹೃದಯವು ಪರಿತಪಿಸುತ್ತಿತ್ತು. ಅವನು ಸ್ನೇಹಿತನಾದ ಗುಹನ ಬಳಿ ಇಂತೆಂದನು– 'ಶ್ರೀರಾಮನ ವಿಯೋಗದಿಂದ ಆಯೋಧ್ಯೆಯ ಸ್ತ್ರೀ-ಪುರುಷರು ಕಂಗೆಟ್ಟಂತೆ ಈ ಸ್ವರ್ಣಕಣಗಳೂ ಕೂಡ ಸೀತಾದೇವಿಯ ವಿರಹದಿಂದ ಕಾಂತಿಯನ್ನು ಕಳಕೊಂಡು ನಿಃಸ್ತೇಜವಾಗಿವೆ. ಸೀತಾದೇವಿಯ ತಂದೆಯಾದ ಜನಕಮಹಾರಾಜನಿಗೆ ಪ್ರಪಂಚದಲ್ಲಿ ಯೋಗ-ಭೋಗಗಳೆರಡೂ ಕರತಲಾಮಲಕ. ಅಂತಹ ಮಹಿಮಾನ್ವಿತನಿಗೆ ಯಾವ ಉಪಮೆ ಕೊಡಬಹುದು? ಅವಳ ಮಾವನವರಾದ ದಶರಥ ಮಹಾರಾಜರ ಪ್ರತಾಪ, ಐಶ್ವರ್ಯವನ್ನು ಕಂಡು ಅಮರಾಧಿಪತಿ ದೇವೇಂದ್ರನೂ ಈರ್ಷ್ಯೆಪಡುತ್ತಿದ್ದನು. ಆಕೆಯ ಪ್ರಾಣನಾಥನಾದ ಶ್ರೀರಾಮನ ಮಹಿಮೆಯಿಂದಲೇ ಇತರರು ದೊಡ್ಡವರಾಗುತ್ತಿದ್ದಾರೆ. (ಚೌ/೧-೪)

**ದೋ – ಪತಿ ದೇವತಾ ಸುತೀಯ ಮನಿ ಸೀಯ ಸಾँಥರೀ ದೇಖಿ ।**
**ಬಿಹರತ ಹೃದಉ ನ ಹಹರಿ ಹರ ಪಬಿ ತೇँ ಕಠಿನ ಬಿಸೇಷಿ ॥ ೧೯೯ ॥**

ಅಂತಹ ಪತಿವ್ರತಾಶಿರೋಮಣಿಯಾದ ಸೀತಾದೇವಿಯು ಪವಡಿಸಿದ ಈ ದರ್ಭೆಯ ಚಾಪೆಯನ್ನು ನೋಡಿ ನನ್ನ ಹೃದಯವು ಏಕೆ ಒಡೆದುಹೋಗುವುದಿಲ್ಲ? ಶಿವ ಶಿವಾ! ಇದು ವಜ್ರಕ್ಕಿಂತಲೂ ಕಠೋರವಾಗಿದೆ. (ದೋ/೧೯೯)

**ಚೌ – ಲಾಲನ ಜೋಗು ಲಖನ ಲಘು ಲೋನೇ । ಭೇ ನ ಭಾಇ ಅಸ ಅಹಹಿँ ನ ಹೋನೇ ॥**
**ಪುರಜನ ಪ್ರಿಯ ಪಿತು ಮಾತು ದುಲಾರೇ । ಸಿಯ ರಘುಬೀರಹಿ ಪ್ರಾನಪಿಆರೇ ॥ ೧ ॥**
**ಮೃದು ಮೂರತಿ ಸುಕುಮಾರ ಸುಭಾಊ । ತಾತ ಬಾಉ ತನ ಲಾಗ ನ ಕಾಊ ॥**
**ತೇ ಬನ ಸಹಹಿँ ಬಿಪತಿ ಸಬ ಭಾँತೀ । ನಿದರೇ ಕೋಟಿ ಕುಲಿಸ ಎಹಿँ ಛಾತೀ ॥ ೨ ॥**
**ರಾಮ ಜನಮಿ ಜಗು ಕೀನ್ಹ ಉಜಾಗರ । ರೂಪ ಸೀಲ ಸುಖ ಸಬ ಗುನ ಸಾಗರ ॥**
**ಪುರಜನ ಪರಿಜನ ಗುರ ಪಿತು ಮಾತಾ । ರಾಮ ಸುಭಾಉ ಸಬಹಿ ಸುಖದಾತಾ ॥ ೩ ॥**

**ಬೈರಿಉ ರಾಮ ಬಡಾಈ ಕರಹೀಂ। ಬೋಲನಿ ಮಿಲನಿ ಬಿನಯ ಮನ ಹರಹೀಂ॥**
**ಸಾರದ ಕೋಟಿ ಕೋಟಿ ಸತ ಸೇಷಾ। ಕರಿ ನ ಸಕಹಿಂ ಪ್ರಭು ಗುನ ಗನ ಲೇಖಾ॥ ೪॥**

ನನ್ನ ತಮ್ಮ ಮುದ್ದು ಲಕ್ಷ್ಮಣ ಇನ್ನೂ ಲಾಲನೆಗೆ ಅರ್ಹನಾದವನು. ಇಂತಹ ತಮ್ಮನು ಹಿಂದೆ ಯಾರಿಗೂ ಇರಲಿಲ್ಲ, ಇಂದು ಇಲ್ಲ, ಮುಂದೆಯೂ ಇರಲಾರನು. ಆ ಲಕ್ಷ್ಮಣನು ಅಯೋಧ್ಯೆಯ ಜನರ ಕಣ್ಮಣಿಯೂ ತಂದೆ-ತಾಯಿಯರ ಮುದ್ದಿನ ಕಣಿ. ಸೀತಾರಾಮರಿಗಂತೂ ಪ್ರಾಣಪ್ರಿಯ ಶಿರೋಮಣಿ. ಕೋಮಲವಾದ ದೇಹವುಳ್ಳವನೂ, ಸುಕುಮಾರ ಸ್ವಭಾವದವನೂ, ಮೈಗೆ ಒಮ್ಮೆಯೂ ಬಿಸಿಗಾಳಿಯೂ ಕೂಡ ತಗಲದವನೂ ಆದ ಅವನು ಈ ಕಾಡಿನಲ್ಲಿ ಏನೆಲ್ಲ ಕಷ್ಟ-ಕಾರ್ಪಣ್ಯಗಳನ್ನು ಅನುಭವಿಸುತ್ತಿದ್ದಾನೆ! ಅಯ್ಯೋ! ನನ್ನ ಈ ಹಾಳು ಎದೆ ಕೋಟಿ ಕುಲಿಶಕ್ಕಿಂತಲೂ ಕಠೋರವಾಗಿದೆ. ಇಲ್ಲದಿದ್ದರೆ ಅದು ಒಡೆದುಹೋಗಬೇಕಾಗಿತ್ತು. ಶ್ರೀರಾಮಚಂದ್ರನು ಅವತರಿಸಿ, ಜಗತ್ತನ್ನೇ ಬೆಳಗಿಸಿದನು. ಅವನು ರೂಪ, ಶೀಲ, ಸುಖ ಮತ್ತು ಎಲ್ಲ ಗುಣಗಳ ಸಾಗರ. ಪುರಜನರಿಗೆ ಪರಿಜನರಿಗೆ, ಗುರುಗಳಿಗೆ, ತಂದೆ-ತಾಯಂದಿರಿಗೆ ಎಲ್ಲರಿಗೂ ಶ್ರೀರಾಮನ ಸ್ವಭಾವವು ಸುಖದಾಯಕವಾದುದು. ಶತ್ರುಗಳೂ ಶ್ರೀರಾಮನನ್ನು ಕೊಂಡಾಡುತ್ತಾರೆ. ಅವನ ನಡೆ-ನುಡಿ, ವರ್ತನೆ, ವಿನಯ ಇವೆಲ್ಲವುಗಳಿಂದ ಎಲ್ಲರ ಮನಸ್ಸುಗಳೂ ಸೂರೆಗೊಳ್ಳುವುವು. ಕೋಟಿ, ಸರಸ್ವತಿಯರೂ, ಶತಕೋಟಿ-ಆದಿಶೇಷರೂ ಶ್ರೀರಾಮಚಂದ್ರನ ಗುಣಗಳನ್ನು ಇಷ್ಟೇ ಎಂದು ಎಣಿಸಲಾರರು. (ಚೌ/೧-೪)

**ದೋ – ಸುಖಸ್ವರೂಪ ರಘುಬಂಸಮನಿ ಮಂಗಲ ಮೋದ ನಿಧಾನ।**
**ತೇ ಸೋವತ ಕುಸ ಡಾಸಿ ಮಹಿ ಬಿಧಿ ಗತಿ ಅತಿ ಬಲವಾನ॥ ೨೦೦॥**

ಸುಖಸ್ವರೂಪನೂ, ರಘುಕುಲಶಿರೋಮಣಿಯೂ, ಶುಭಗಳಿಗೆ, ಆನಂದಗಳಿಗೆ ಸನ್ನಿಧಿಯಾದ ಶ್ರೀರಾಮಚಂದ್ರನು ಬಟ್ಟಬರಿಯ ನೆಲದ ಮೇಲೆ ಹುಲ್ಲುಹಾಸಿಗೆಯನ್ನು ಹಾಸಿ ಮಲಗುವುದೆಂದರೆ ವಿಧಿಯ ಗತಿಯು ನಿಜಕ್ಕೂ ಬಲವತ್ತರವಾದುದು. (ದೋ/೨೦೦)

**ಚೌ – ರಾಮ ಸುನಾ ದುಖು ಕಾನ ನ ಕಾಊ। ಜೀವನತರು ಜಿಮಿ ಜೋಗವಇ ರಾಊ॥**
**ಪಲಕ ನಯನ ಫನಿ ಮನಿ ಜೆಹಿ ಭಾಁತೀ। ಜೋಗವಹಿಂ ಜನನಿ ಸಕಲ ದಿನ ರಾತೀ॥ ೧॥**
**ತೇ ಅಬ ಫಿರತ ಬಿಪಿನ ಪದಚಾರೀ। ಕಂದ ಮೂಲ ಫಲ ಫೂಲ ಅಹಾರೀ॥**
**ಧಿಗ ಕೈಕಈ ಅಮಂಗಲ ಮೂಲಾ। ಭಇಸಿ ಪ್ರಾನ ಪ್ರಿಯತಮ ಪ್ರತಿಕೂಲಾ॥ ೨॥**
**ಮೈಂ ಧಿಗ ಧಿಗ ಅಘ ಉದಧಿ ಅಭಾಗೀ। ಸಬು ಉತಪಾತು ಭಯಉ ಜೆಹಿ ಲಾಗೀ॥**
**ಕುಲ ಕಲಂಕು ಕರಿ ಸೃಜೆಉ ಬಿಧಾತಾಂ। ಸಾಇँದೋಹ ಮೊಹಿ ಕೀನ್ಹ ಕುಮಾತಾಂ॥ ೩॥**
**ಸುನಿ ಸಪ್ರೇಮ ಸಮುಝಾವ ನಿಷಾದೂ। ನಾಥ ಕರಿಅ ಕತ ಬಾದಿ ಬಿಷಾದೂ॥**
**ರಾಮ ತುಮ್ಹಹಿ ಪ್ರಿಯ ತುಮ್ಹ ಪ್ರಿಯ ರಾಮಹಿ। ಯಹ ನಿರಜೋಸು ದೋಸು ಬಿಧಿ ಬಾಮಹಿ॥ ೪॥**

ಶ್ರೀರಾಮಚಂದ್ರನು ತನ್ನ ಕಿವಿಯಿಂದ ಎಂದೂ ದುಃಖದ ಹೆಸರನ್ನೇ ಕೇಳಿರಲಿಲ್ಲ. ಮಹಾರಾಜರು ಸ್ವತಃ ಜೀವನವೃಕ್ಷದಂತೆ ಆತನನ್ನು ನೋಡಿಕೊಳ್ಳುತ್ತಿದ್ದರು. ಎಲ್ಲ ತಾಯಂದಿರೂ ಅವನನ್ನು ರೆಪ್ಪೆ ಕಣ್ಣುಗಳನ್ನು ರಕ್ಷಿಸುವಂತೆ, ಹಾವು ತನ್ನ ಮಣಿಯನ್ನು ನೋಡಿಕೊಳ್ಳುವಂತೆ ಹಗಲುರಾತ್ರಿಯೂ ನೋಡಿಕೊಳ್ಳುತ್ತಿದ್ದರು. ಅದೇ ಶ್ರೀರಾಮನು ಇಂದು ಕಾಡಿನಲ್ಲಿ ಪಾದಚಾರಿಯಾಗಿ ಓಡಾಡುತ್ತಿದ್ದಾನೆ. ಕಂದಮೂಲ, ಫಲಗಳನ್ನು ಭುಂಜಿಸುತ್ತಿದ್ದಾನೆ. ತನ್ನ ಪ್ರಾಣಗಳಂತೆ ನೋಡುತ್ತಿದ್ದ ಪತಿಯ ಕುರಿತು ಪ್ರತಿಕೂಲಳಾಗಿ ವರ್ತಿಸಿದ, ಈ ಅಮಂಗಳ (ಅನರ್ಥ) ಮೂಲಳಾದ ಕೈಕೇಯಿಯ ಜೀವನಕ್ಕೆ ಧಿಕ್ಕಾರ. ಇಷ್ಟೆಲ್ಲ ಉತ್ಪಾತಗಳು ಜರುಗಲು ಕಾರಣನಾದ ಪಾಪಸಮುದ್ರನೂ, ಅಭಾಗ್ಯನೂ ಆದ ನನಗೆ ಧಿಕ್ಕಾರವಿರಲಿ. ವಿಧಾತನು ನನ್ನನ್ನು ಕುಲಕಳಂಕಿತನನ್ನಾಗಿ ಸೃಷ್ಟಿಸಿದನು. ನನ್ನ ಕುಮಾತೆಯು ನನ್ನನ್ನು ಸ್ವಾಮಿದ್ರೋಹಿಯಾಗಿಸಿಬಿಟ್ಟಳು. ಈ ಮಾತುಗಳನ್ನು ಕೇಳಿ, ನಿಷಾದರಾಜನು ಭರತನಿಗೆ ಪ್ರೇಮಾದರಗಳಿಂದ ಸಮಾಧಾನಪಡಿಸತೊಡಗಿದನು – 'ಒಡೆಯಾ! ನೀವೇಕೆ ಸುಮ್ಮಸುಮ್ಮನೆ ವಿಷಾದಪಡುತ್ತಿರುವಿರಿ? ಶ್ರೀರಾಮಚಂದ್ರನು ನಿಮಗೆ ಪ್ರಿಯನು, ಅವನಿಗೆ ನೀವು ಪ್ರಿಯರು. ಇದು ನಿಶ್ಚಿತಸಿದ್ಧಾಂತವಾಗಿದೆ. ಈ ದೋಷವಾದರೋ ಪ್ರತಿಕೂಲವಾದ ವಿಧಿಯದು. (ಚೌ/೧-೪)

**ಛಂ – ಬಿಧಿ ಬಾಮ ಕೀ ಕರನೀ ಕಠಿನ ಜೆಹಿಂ ಮಾತು ಕೀನ್ಹೀ ಬಾವರೀ।**
**ತೆಹಿ ರಾತಿ ಪುನಿ ಪುನಿ ಕರಹಿಂ ಪ್ರಭು ಸಾದರ ಸರಹನಾ ರಾವರೀ॥**
**ತುಲಸೀ ನ ತುಮ್ಹ ಸೋ ರಾಮ ಪ್ರೀತಮು ಕಹತು ಹೌಂ ಸೌಹೇಂ ಕಿಏಂ।**
**ಪರಿನಾಮ ಮಂಗಲ ಜಾನಿ ಅಪನೇ ಆನಿಏ ಧೀರಜು ಹಿಏಂ॥**

ವಿಧಿಯ ವೈಪರೀತ್ಯವು ಕ್ರೂರವಾದುದು. ಅದು ತಾಯಿ ಕೈಕೆಯಿಯ ತಲೆಕೆಡಿಸಿತು. ಆ ರಾತ್ರಿ ಶ್ರೀರಾಮಚಂದ್ರನು ಮತ್ತೆ-ಮತ್ತೆ ನಿಮ್ಮನ್ನು ಆದರದಿಂದ ಕೊಂಡಾಡುತ್ತಿದ್ದನು. ನಿಷಾದನು ಹೇಳುತ್ತಿದ್ದುದನ್ನು ತುಳಸೀದಾಸರು ಹೇಳುತ್ತಾರೆ – ''ಶ್ರೀರಾಮಚಂದ್ರನಿಗೆ ನಿಮ್ಮಷ್ಟು ಪ್ರಿಯರಾದವರು ಯಾರೂ ಇಲ್ಲ. ನಾನು ಆಣೆಯಿಟ್ಟು ಹೇಳುತ್ತೇನೆ. ಪರಿಣಾಮದಲ್ಲಿ ಒಳಿತಾಗುವುದು ಎಂದು ತಿಳಿದು ತಾವು ಧೈರ್ಯದಿಂದ ಇರಿ. (ಛಂದ)

**ಸೋ – ಅಂತರಜಾಮೀ ರಾಮು ಸಕುಚ ಸಪ್ರೇಮ ಕೃಪಾಯತನ।**
**ಚಲಿಅ ಕರಿಅ ಬಿಶ್ರಾಮು ಯಹ ಬಿಚಾರಿ ದೃಢ ಆನಿ ಮನ ॥ ೨೦೧ ॥**

''ಶ್ರೀರಾಮಚಂದ್ರನು ಅಂತರ್ಯಾಮಿಯು. ವಿನಯ ಪ್ರೇಮ ದಯಾಸ್ವರೂಪನು. ಇದನ್ನು ಗಟ್ಟಿಯಾಗಿ ನಂಬಿ ಯಾವ ಚಿಂತೆಯೂ ಇಲ್ಲದೆ ನೀವು ಹಾಯಾಗಿ ವಿಶ್ರಮಿಸಿರಿ'' ಎಂದು ನಿಷಾದನು ಹೇಳಿದನು. (ಸೋ/೨೦೧)

**ಚೌ – ಸಖಾ ಬಚನ ಸುನಿ ಉರ ಧರಿ ಧೀರಾ। ಬಾಸ ಚಲೇ ಸುಮಿರತ ರಘುಬೀರಾ॥**
**ಯಹ ಸುಧಿ ಪಾಇ ನಗರ ನರ ನಾರೀ। ಚಲೇ ಬಿಲೋಕನ ಆರತ ಭಾರೀ ॥ ೧ ॥**
**ಪರದಖಿನಾ ಕರಿ ಕರಹಿಂ ಪ್ರನಾಮಾ। ದೇಹಿಂ ಕೈಕಇಹಿ ಖೋರಿ ನಿಕಾಮಾ॥**
**ಭರಿ ಭರಿ ಬಾರಿ ಬಿಲೋಚನ ಲೇಹೀಂ। ಬಾಮ ಬಿಧಾತಹಿ ದೂಷನ ದೇಹೀಂ ॥ ೨ ॥**
**ಏಕ ಸರಾಹಹಿಂ ಭರತ ಸನೇಹೂ। ಕೋಉ ಕಹ ನೃಪತಿ ನಿಬಾಹೆಉ ನೇಹೂ ॥**
**ನಿಂದಹಿಂ ಆಪು ಸರಾಹಿ ನಿಷಾದಹಿ। ಕೋ ಕಹಿ ಸಕಈ ಬಿಮೋಹ ಬಿಷಾದಹಿ ॥ ೩ ॥**
**ಏಹಿ ಬಿಧಿ ರಾತಿ ಲೋಗು ಸಬು ಜಾಗಾ। ಭಾ ಭಿನುಸಾರ ಗುದಾರಾ ಲಾಗಾ ॥**
**ಗುರಹಿ ಸುನಾವँ ಚಢ಼ಾಇ ಸುಹಾಈಂ। ನಈಂ ನಾವ ಸಬ ಮಾತು ಚಢ಼ಾಈಂ ॥ ೪ ॥**
**ದಂಡ ಚಾರಿ ಮಹँ ಭಾ ಸಬು ಪಾರಾ। ಉತರಿ ಭರತ ತಬ ಸಬಹಿ ಸँಭಾರಾ ॥ ೫ ॥**

ಗೆಳೆಯನ ಮಾತನ್ನು ಕೇಳಿ, ಧೈರ್ಯ ತಂದುಕೊಂಡು ಶ್ರೀರಾಮನನ್ನು ನೆನೆಯುತ್ತಾ ಭರತನು ತನ್ನ ಬಿಡಾರಕ್ಕೆ ತೆರಳಿದನು. ಇಷ್ಟರಲ್ಲಿ ಅಯೋಧ್ಯಾಪುರ ಜನರು ಶ್ರೀರಾಮನು ವಿಶ್ರಮಿಸಿದ್ದ ಸ್ಥಳವನ್ನು ದರ್ಶಿಸಲು ಆತುರದಿಂದ ಹೊರಟರು. ಅವರು ಆ ಸ್ಥಾನಕ್ಕೆ ಪ್ರದಕ್ಷಿಣೆ ನಮಸ್ಕಾರ ಮಾಡಿದರು. ಕೈಕೆಯಿಯನ್ನು ನಿಂದಿಸುತ್ತಾ ಆಕೆಯ ದೋಷಗಳನ್ನೆತ್ತಿ ಆಡುತ್ತಿದ್ದರು. ಕಣ್ಣೀರು ತುಂಬಿಕೊಂಡು, ವಿಧಿಯನ್ನು ಹಳಿಯತೊಡಗಿದರು. ಕೆಲವರು ಭರತನ ಪ್ರೇಮವನ್ನು ಕೊಂಡಾಡಿದರೆ, ಮತ್ತೆ ಕೆಲವರು, 'ಮಹಾರಾಜರು ರಾಮನ ಮೇಲೆ ಇದ್ದ ಪ್ರೇಮವನ್ನು ಚೆನ್ನಾಗಿ ನಿರ್ವಹಿಸಿದರು' ಎಂದು ಹೇಳುತ್ತಿದ್ದರು. ಎಲ್ಲರೂ ತಮ್ಮನ್ನು ಹಳಿದುಕೊಂಡು ನಿಷಾದನನ್ನು ಹೊಗಳಿದರು. ಆಗಿನ ವಿಮೋಹ, ವಿಷಾದ ಮಾತಿಗೆ ಮೀರಿದುದು. ಜನರೆಲ್ಲರೂ ಅಂದಿನ ಇರುಳನ್ನು ಜಾಗರಣೆಯಿಂದಲೇ ಕಳೆದರು. ಮರುದಿನ ಬೆಳಗಾಗುತ್ತಲೇ ಎಲ್ಲರೂ ಗಂಗೆಯನ್ನು ದಾಟಲು ತೀರಕ್ಕೆ ಬಂದರು. ಗುಹನು ಎಲ್ಲರಿಗೂ ದೋಣಿಗಳಿಂದ ನದಿದಾಟುವ ವ್ಯವಸ್ಥೆಮಾಡಿದನು. ಒಂದು ಒಳ್ಳೆಯ ದೋಣಿಯ ಮೇಲೆ ಗುರುಗಳನ್ನು ಹತ್ತಿಸಿದರು. ಬಳಿಕ ಹೊಸದೊಂದು ನಾವೆಯಲ್ಲಿ ಎಲ್ಲ ತಾಯಂದಿರನ್ನು ಸುಖವಾಗಿ ಕುಳ್ಳಿರಿಸಿದನು. ನಾಲ್ಕು ಗಳಿಗೆಯಲ್ಲಿ ಅವರೆಲ್ಲರೂ ಗಂಗಾನದಿಯನ್ನು ದಾಟಿದರು. ಭರತನು ಮೊದಲು ಇಳಿದು ಎಲ್ಲರೂ ಬಂದಿರುವರೋ, ಇಲ್ಲವೋ ಎಂದು ನೋಡಿಕೊಂಡನು. (ಚೌ/೧-೫)

**ದೋ – ಪ್ರಾತಕ್ರಿಯಾ ಕರಿ ಮಾತು ಪದ ಬಂದಿ ಗುರಹಿ ಸಿರು ನಾಇ।**
**ಆಗೇಂ ಕಿಏ ನಿಷಾದ ಗನ ದೀನ್ಹೆಉ ಕಟಕು ಚಲಾಇ ॥ ೨೦೨ ॥**

ಪ್ರಾತರ್ವಿಧಿಗಳನ್ನು ಮುಗಿಸಿ, ಭರತನು ಮಾತೆಯರ ಚರಣಗಳಿಗೆ ವಂದಿಸಿ, ಗುರುಪಾದಗಳಿಗೆ ಹಣೆಚಾಚಿ, ದಾರಿತೋರಲು ನಿಷಾದರ ತಂಡವನ್ನು ಮುಂದಿಟ್ಟುಕೊಂಡು ಪರಿವಾರದೊಡನೆ ಮುಂದರಿದನು. (ದೋ/೨೦೨)

**ಚೌ – ಕಿಯಉ ನಿಷಾದನಾಥು ಅಗುಆಈಂ। ಮಾತು ಪಾಲಕೀಂ ಸಕಲ ಚಲಾಈಂ॥**
**ಸಾಥ ಬೊಲಾಇ ಭಾಇ ಲಘು ದೀನ್ಹಾ। ಬಿಪ್ರನ್ಹ ಸಹಿತ ಗವನು ಗುರ ಕೀನ್ಹಾ ॥ ೧ ॥**
**ಆಪು ಸುರಸರಿಹಿ ಕೀನ್ಹ ಪ್ರನಾಮೂ। ಸುಮಿರೇ ಲಖನ ಸಹಿತ ಸಿಯ ರಾಮೂ॥**
**ಗವನೇ ಭರತ ಪಯಾದೆಹಿಂ ಪಾಏ। ಕೋತಲ ಸಂಗ ಜಾಹಿಂ ಡೋರಿಆಏ ॥ ೨ ॥**
**ಕಹಹಿಂ ಸುಸೇವಕ ಬಾರಹಿಂ ಬಾರಾ। ಹೋಇಅ ನಾಥ ಅಸ್ವ ಅಸವಾರಾ॥**
**ರಾಮು ಪಯಾದೆಹಿ ಪಾಯँ ಸಿಧಾಏ। ಹಮ ಕಹँ ರಥ ಗಜ ಬಾಜಿ ಬನಾಏ ॥ ೩ ॥**

**ಸಿರ ಭರ ಜಾಉಁ ಉಚಿತ ಅಸ ಮೋರಾ । ಸಬ ತೇಂ ಸೇವಕ ಧರಮು ಕಠೋರಾ ॥**
**ದೇಖಿ ಭರತ ಗತಿ ಸುನಿ ಮೃದು ಬಾನೀ । ಸಬ ಸೇವಕ ಗನ ಗರಹಿಂ ಗಲಾನೀ ॥ ೪ ॥**

ನಿಷಾದರಾಜನು ಮುಂದಕ್ಕೆ ದಾರಿ ತೋರುತ್ತಿರುವಂತೆ, ರಾಜಮಾತೆಯರ ಪಲ್ಲಕ್ಕಿಗಳು ಶತ್ರುಘ್ನನ ರಕ್ಷಣೆಯಲ್ಲಿ ಮುಂದಕ್ಕೆ ಸಾಗಿದವು. ವಸಿಷ್ಠಮಹಾಮುನಿಗಳು ಬ್ರಾಹ್ಮಣರ ತಂಡದೊಂದಿಗೆ ಪಯಣ ಬೆಳೆಸಿದರು. ಅನಂತರ ಭರತನು ಗಂಗೆಗೆ ನಮಿಸಿ, ಲಕ್ಷ್ಮಣಸಹಿತ ಸೀತಾರಾಮರನ್ನು ಸ್ಮರಿಸುತ್ತಾ, ಪಾದಚಾರಿಯಾಗಿಯೇ ಹೊರಟನು. ಅವನ ಜೊತೆಗೆ ಜೀನು ಬಿಗಿಯಲ್ಪಟ್ಟು ಸವಾರರಿಲ್ಲದ ಅಲಂಕೃತ ಕುದುರೆಗಳು ನಡೆಯುತ್ತಿದ್ದವು. ವಿಶ್ವಾಸಕ್ಕೆ ಪಾತ್ರರಾದ ಸೇವಕರು ಭರತನ ಬಳಿ ಮಾತು-ಮಾತಿಗೆ 'ಪ್ರಭುಗಳೇ! ನೀವು ಕುದುರೆಯನ್ನು ಹತ್ತಿಕೊಳ್ಳಿರಿ', ಎಂದು ವಿನಂತಿಸಿಕೊಂಡರು. ಅದಕ್ಕೆ ಭರತನೆಂದ – 'ಶ್ರೀರಾಮಚಂದ್ರನು ಪಾದಚಾರಿಯಾಗಿಯೇ ಹೋದನು. ರಥ, ಆನೆ, ಕುದುರೆಗಳು ನಮಗಾಗಿಯೇ ನಿರ್ಮಿತವಾಗಿರುವಂತೆ ಕಾಣುತ್ತದೆ. ನ್ಯಾಯವಾಗಿ ನೋಡಿದರೆ ನಾನು ತಲೆಕೆಳಗಾಗಿ ನಡೆದು ಹೋಗಬೇಕು. ಸೇವಕನ ಧರ್ಮವು ಎಲ್ಲಕ್ಕಿಂತ ಅತ್ಯಂತ ಕಠಿಣವಾದುದು.' ಭರತನ ಸ್ಥಿತಿಯನ್ನು ಕಂಡು, ಅವನ ಮಾತನ್ನು ಕೇಳಿ, ಸೇವಕರೆಲ್ಲರೂ ಗ್ಲಾನಿಯಿಂದ ಕರಗಿಹೋಗುತ್ತಿದ್ದರು. (ಚೌ/೧-೪)

## ಭರತನು ಪ್ರಯಾಗವನ್ನು ಸೇರಿ ಭರದ್ವಾಜರನ್ನು ದರ್ಶಿಸುವುದು

**ದೋ – ಭರತ ತೀಸರೇ ಪಹರ ಕಹಁ ಕೀನ್ಹ ಪ್ರಬೇಸು ಪ್ರಯಾಗ ।**
**ಕಹತ ರಾಮ ಸಿಯ ರಾಮ ಸಿಯ ಉಮಗಿ ಉಮಗಿ ಅನುರಾಗ ॥ ೨೦೩ ॥**

ಅಪರಿಮಿತವಾದ ಭಕ್ತಿಯಿಂದ 'ಸೀತಾರಾಮ-ಸೀತಾರಾಮ' ಎಂದು ಹೇಳುತ್ತಾ, ಭರತನು ಸಪರಿವಾರ ಸಹಿತನಾಗಿ ದಿನದ ಮೂರನೇ ಪ್ರಹರದಲ್ಲಿ ಪ್ರಯಾಗವನ್ನು ಪ್ರವೇಶಿಸಿದನು. (ದೋ/೨೦೩)

**ಚೌ – ಝಲಕಾ ಝಲಕತ ಪಾಯನ್ಹ ಕೈಸೇಂ । ಪಂಕಜ ಕೋಸ ಓಸ ಕನ ಜೈಸೇಂ ॥**
**ಭರತ ಪಯಾದೆಹಿಂ ಆಏ ಆಜೂ । ಭಯಉ ದುಖಿತ ಸುನಿ ಸಕಲ ಸಮಾಜೂ ॥ ೧ ॥**
**ಖಬರಿ ಲೀನ್ಹ ಸಬ ಲೋಗ ನಹಾಏ । ಕೀನ್ಹ ಪ್ರನಾಮು ತ್ರಿಬೇನಿಹಿಂ ಆಏ ॥**
**ಸಬಿಧಿ ಸಿತಾಸಿತ ನೀರ ನಹಾನೇ । ದಿಏ ದಾನ ಮಹಿಸುರ ಸನಮಾನೇ ॥ ೨ ॥**
**ದೇಖತ ಸ್ಯಾಮಲ ಧವಲ ಹಲೋರೇ । ಪುಲಕಿ ಸರೀರ ಭರತ ಕರ ಜೋರೇ ॥**
**ಸಕಲ ಕಾಮ ಪ್ರದ ತೀರಥರಾಊ । ಬೇದ ಬಿದಿತ ಜಗ ಪ್ರಗಟ ಪ್ರಭಾಊ ॥ ೩ ॥**
**ಮಾಗಉಁ ಭೀಖ ತ್ಯಾಗಿ ನಿಜ ಧರಮೂ । ಆರತ ಕಾಹ ನ ಕರಇ ಕುಕರಮೂ ॥**
**ಅಸ ಜಿಯಁ ಜಾನಿ ಸುಜಾನ ಸುದಾನೀ । ಸಫಲ ಕರಹಿಂ ಜಗ ಜಾಚಕ ಬಾನೀ ॥ ೪ ॥**

ತಾವರೆಯ ಮೊಗ್ಗಿನಮೇಲೆ ಹೊಳೆಯುವ ಮಂಜಿನ ಹನಿಗಳಂತೆ ಭರತನ ಕೋಮಲವಾದ ಕಾಲುಗಳಲ್ಲಿ ಹೊಪ್ಪಳೆಗಳು ಎದ್ದಿದ್ದವು. ಭರತನು ಇಂದು ಕಾಲ್ನಡಿಗೆಯಿಂದಲೇ ಬಂದಿರುವನೆಂದು ತಿಳಿದು ಇಡೀ ಪರಿವಾರ ದುಃಖಿತವಾಯಿತು. ಎಲ್ಲರೂ ಸ್ನಾನಾದಿಗಳನ್ನು ಮಾಡಿದ ಬಳಿಕ ಭರತನು ತ್ರಿವೇಣಿಸಂಗಮಕ್ಕೆ ಹೋಗಿ ಪ್ರಣಾಮಗೈದನು. ಅನಂತರ ವಿಧಿವತ್ತಾಗಿ ಗಂಗಾ-ಯಮುನೆಯ ಶ್ವೇತ, ನೀಲ ಜಲಸಂಗಮದಲ್ಲಿ ಸ್ನಾನಮಾಡಿದನು. ಮತ್ತೆ ಬ್ರಾಹ್ಮಣರನ್ನು ದಾನಾದಿಗಳಿಂದ ಸಂತೃಪ್ತಿಗೊಳಿಸಿದನು. ಗಂಗಾ-ಯಮುನಾ ನದಿಗಳ ಧವಳ, ಶ್ಯಾಮಲ ತರಂಗಗಳನ್ನು ನೋಡಿ ಭರತನು ಪುಳಕಿತಗಾತ್ರನಾಗಿ, ಕೈಜೋಡಿಸಿ ಬಿನ್ನವಿಸಿಕೊಂಡನು – ಓ ತೀರ್ಥರಾಜಾ! ನೀನು ಎಲ್ಲ ಕಾಮನೆಗಳನ್ನು ಈಡೇರಿಸುವವನು. ನಿನ್ನ ಮಹಿಮೆ ವೇದವಿದಿತ, ವಿಶ್ವವಿಖ್ಯಾತ. ನಾನು ಕ್ಷತ್ರಿಯ ಧರ್ಮವನ್ನೂ ಕೂಡ ತೊರೆದು, ನಿನ್ನಲ್ಲಿ ಭಿಕ್ಷೆಬೇಡುತ್ತಿದ್ದೇನೆ. ದುಃಖದಲ್ಲಿ ಮುಳುಗಿದವನು ಯಾವ ಕುಕರ್ಮವನ್ನು ಮಾಡುವುದಿಲ್ಲ? ಇದನ್ನು ಮನಗಂಡು, ಸಜ್ಜನ ಶ್ರೇಷ್ಠರಾದ ದಾನಿಗಳು ಯಾಚಕರಿಗೆ ಬೇಡಿದುದನ್ನು ಕೊಟ್ಟುಬಿಡುತ್ತಾರೆ. (ಚೌ/೧-೪)

**ದೋ – ಅರಥ ನ ಧರಮ ನ ಕಾಮ ರುಚಿ ಗತಿ ನ ಚಹಉಁ ನಿರಬಾನ ।**
**ಜನಮ ಜನಮ ರತಿ ರಾಮ ಪದ ಯಹ ಬರದಾನು ನ ಆನ ॥ ೨೦೪ ॥**

'ನನಗೆ ಧನದ ಅಭಿಲಾಷೆಯಿಲ್ಲ, ಧರ್ಮದಲ್ಲಾಗಲೀ, ಕಾಮದಲ್ಲಾಗಲೀ ನನಗೆ ಆಸಕ್ತಿಯಿಲ್ಲ. ಮೋಕ್ಷವನ್ನು ನಾನು ಬಯಸೆನು. ಜನ್ಮ-ಜನ್ಮದಲ್ಲಿಯೂ ಶ್ರೀರಾಮಚರಣಗಳಲ್ಲಿ ನನಗೆ ರತಿಯುಂಟಾಗಲಿ' ಇದೇ ನಾನು ಬೇಡುವ ವರ. ಇದಲ್ಲದೆ ಬೇರೇನೂ ಬೇಡ. (ದೋ/೨೦೪)

**ಚೌ – ಜಾನಹುँ ರಾಮ ಕುಟಿಲ ಕರಿ ಮೋಹೀ । ಲೋಗ ಕಹಉ ಗುರ ಸಾಹಿಬ ದ್ರೋಹೀ ॥**
**ಸೀತಾ ರಾಮ ಚರನ ರತಿ ಮೋರೇँ । ಅನುದಿನ ಬಢಉ ಅನುಗ್ರಹ ತೋರೇँ ॥ ೧ ॥**
**ಜಲದು ಜನಮ ಭರಿ ಸುರತಿ ಬಿಸಾರಉ । ಜಾಚತ ಜಲು ಪಬಿ ಪಾಹನ ಡಾರಉ ॥**
**ಚಾತಕು ರಟನಿ ಘಟೇँ ಘಟಿ ಜಾಈ । ಬಢೇ ಪ್ರೇಮು ಸಬ ಭಾँತಿ ಭಲಾಈ ॥ ೨ ॥**
**ಕನಕಹಿँ ಬಾನ ಚಢಇ ಜಿಮಿ ದಾಹೇँ । ತಿಮಿ ಪ್ರಿಯತಮ ಪದ ನೇಮ ನಿಬಾಹೇँ ॥**
**ಭರತ ಬಚನ ಸುನಿ ಮಾಝ ತ್ರಿಬೇನೀ । ಭಇ ಮೃದು ಬಾನಿ ಸುಮಂಗಲ ದೇನೀ ॥ ೩ ॥**
**ತಾತ ಭರತ ತುಮ್ಹ ಸಬ ಬಿಧಿ ಸಾಧೂ । ರಾಮ ಚರನ ಅನುರಾಗ ಅಗಾಧೂ ॥**
**ಬಾದಿ ಗಲಾನಿ ಕರಹು ಮನ ಮಾಹೀँ । ತುಮ್ಹ ಸಮ ರಾಮಹಿ ಕೋಉ ಪ್ರಿಯ ನಾಹೀँ ॥ ೪ ॥**

ಶ್ರೀರಾಮನು ಸ್ವತಃ ನನ್ನನ್ನು ಕುಟಿಲನೆಂದು ತಿಳಿದರೂ, ಪ್ರಜೆಗಳು ನನ್ನನ್ನು ಗುರುದ್ರೋಹಿ ಎಂದು ತಿಳಿದರೂ, ನಿನ್ನ ದಯೆಯಿಂದ ನನಗೆ ಶ್ರೀಸೀತಾರಾಮರ ಚರಣಗಳಲ್ಲಿ ಪ್ರೇಮವು ದಿನೇ-ದಿನೇ ಹೆಚ್ಚುವಂತೆ ಮಾಡು. ಮೋಡವು ಚಾತಕನನ್ನೇ ಮರೆತು ಬಿಡಲಿ, ಜಲವನ್ನು ಬೇಡಿದಾಗ ಅದು ಬರಸಿಡಿಲು, ಆಲಿಕಲ್ಲುಗಳನ್ನೇ ಮಳೆಗರೆಯಲಿ, ಆದರೆ ಚಾತಕ ಪಕ್ಷಿಯು ಮಾತ್ರ ಮೇಘದಮೇಲೆ ಇದ್ದ ತನ್ನ ಪ್ರೇಮವನ್ನು ತೊರೆದು ಪೀ, ಪೀ ಎಂದು ನೀರನ್ನು ಬೇಡದಿದ್ದರೆ ಅದರ ಪ್ರತಿಷ್ಠೆಯು ಹಾಳಾಗಿಹೋದೀತು. ಅದರ ಪ್ರೇಮ ಹೆಚ್ಚುತ್ತಲೇ ಇರಬೇಕು. ಅದರಲ್ಲೇ ಅದಕ್ಕೆ ಒಳಿತು. ಹಾಗೆಯೇ ಪ್ರಭುವಾದ ಶ್ರೀರಾಮನಲ್ಲಿ ಭಕ್ತಿಯು ಬೆಳೆಯುತ್ತಿದ್ದರೇನೇ ಭರತನಿಗೆ ಶ್ರೇಯಸ್ಕರ. ಭಂಗಾರವು ಪುಟಕ್ಕೆ ಹಾಕಿದರೆ ಅದು ಮತ್ತು ಹೊಳೆಯುವಂತೆ, ಪ್ರಿಯತಮನ ಚರಣಗಳಲ್ಲಿ ನೇಮ, ನಿಷ್ಠೆಗಳನ್ನು ಪಾಲಿಸಿದರೆ, ಆ ಪ್ರೇಮಿಯಾದ ಸೇವಕನ ಗೌರವವೂ ಹೆಚ್ಚುತ್ತದೆ. ಭರತನ ಬಿನ್ನಹವನ್ನು ಲಾಲಿಸಿದ ತ್ರಿವೇಣಿಸಂಗಮದ ನಡುವಿನಿಂದ ಮೃದುಮಂಗಳವಾದ ವಾಣಿಯೊಂದು ಮೊಳಗಿತು – ''ಮಗೂ ಭರತಾ! ನೀನು ಎಲ್ಲ ವಿಧದಿಂದಲೂ ಉತ್ತಮನು. ಶ್ರೀರಾಮನ ಚರಣಗಳಲ್ಲಿ ನಿನಗೆ ಗಾಢವಾದ ಭಕ್ತಿಯಿದೆ. ನೀನು ವ್ಯರ್ಥವಾಗಿ ಮನಸ್ಸಿನಲ್ಲಿ ಗ್ಲಾನಿಯನ್ನು ಅನುಭವಿಸುತ್ತಿದ್ದೀಯೆ. ಶ್ರೀರಾಮನಿಗೆ ನಿನಗೆ ಸಮಾನರಾದ ಪ್ರಿಯರು ಬೇರಾರೂ ಇಲ್ಲ.'' (ಚೌ/೧-೪)

**ದೋ – ತನು ಪುಲಕೆಉ ಹಿಯँ ಹರಷು ಸುನಿ ಬೇನಿ ಬಚನ ಅನುಕೂಲ ।**
**ಭರತ ಧನ್ಯ ಕಹಿ ಧನ್ಯ ಸುರ ಹರಷಿತ ಬರಷಹಿँ ಫೂಲ ॥ ೨೦೫ ॥**

ತ್ರಿವೇಣಿಯಿಂದ ಅನುಕೂಲವಾದ ವಾಣಿಯನ್ನು ಕೇಳಿ ಭರತನ ಶರೀರವು ಪುಳಕಿತವಾಯಿತು. ಹೃದಯವು ಹರ್ಷದಿಂದ ತುಂಬಿಹೋಯಿತು. ''ಭರತನು ಧನ್ಯ-ಧನ್ಯ''ವೆಂದು ಹೇಳುತ್ತಾ ದೇವತೆಗಳು ಹರ್ಷೋಲ್ಲಾಸದಿಂದ ಹೂಮಳೆಯನ್ನು ಗರೆದರು. (ದೋ/೨೦೫)

**ಚೌ – ಪ್ರಮುದಿತ ತೀರಥರಾಜ ನಿವಾಸೀ । ಬೈಖಾನಸ ಬಟು ಗೃಹೀ ಉದಾಸೀ ॥**
**ಕಹಹಿँ ಪರಸಪರ ಮಿಲಿ ದಸ ಪಾಂಚಾ । ಭರತ ಸನೇಹು ಸೀಲು ಸುಚಿ ಸಾँಚಾ ॥ ೧ ॥**
**ಸುನತ ರಾಮ ಗುನ ಗ್ರಾಮ ಸುಹಾಏ । ಭರದ್ವಾಜ ಮುನಿಬರ ಪಹಿँ ಆಏ ॥**
**ದಂಡ ಪ್ರನಾಮು ಕರತ ಮುನಿ ದೇಖೇ । ಮೂರತಿಮಂತ ಭಾಗ್ಯ ನಿಜ ಲೇಖೇ ॥ ೨ ॥**
**ಧಾಇ ಉಠಾಇ ಲಾಇ ಉರ ಲೀನ್ಹೇ । ದೀನ್ಹಿ ಅಸೀಸ ಕೃತಾರಥ ಕೀನ್ಹೇ ॥**
**ಆಸನು ದೀನ್ಹ ನಾಇ ಸಿರು ಬೈಠೇ । ಚಹತ ಸಕುಚ ಗೃಹँ ಜನು ಭಜಿ ಪೈಠೇ ॥ ೩ ॥**
**ಮುನಿ ಪೂँಛಬ ಕಛು ಯಹ ಬಡ ಸೋಚೂ । ಬೋಲೇ ರಿಷಿ ಲಖಿ ಸೀಲು ಸँಕೋಚೂ ॥**
**ಸುನಹು ಭರತ ಹಮ ಸಬ ಸುಧಿ ಪಾಈ । ಬಿಧಿ ಕರತಬ ಪರ ಕಿಛು ನ ಬಸಾಈ ॥ ೪ ॥**

ತೀರ್ಥರಾಜ ಪ್ರಯಾಗದ ನಿವಾಸಿಗಳಾದ ವಾನಪ್ರಸ್ಥರು, ಬ್ರಹ್ಮಚಾರಿಗಳು, ಗೃಹಸ್ಥರು ಹಾಗೂ ಸಂನ್ಯಾಸಿಗಳು ಇವರೆಲ್ಲರೂ ಆನಂದತುಂದಿಲರಾದರು. ಆರೆಂಟು ಜನಸೇರಿ ತಮ್ಮ-ತಮ್ಮಲ್ಲೇ ಮಾತನಾಡಿಕೊಂಡರು – 'ಭರತನ ಸ್ನೇಹಶೀಲಗಳು ಪವಿತ್ರವಾದವುಗಳು ಹಾಗೂ ಅಕೃತ್ರಿಮವಾದುವುಗಳು. ಶ್ರೀರಾಮಚಂದ್ರನ ಮನೋಹರ ಗುಣಗಳನ್ನು ಅವರಿಂದ ಆಲಿಸುತ್ತಾ ಭರತಾದಿಗಳು ಭರದ್ವಾಜಮುನಿಗಳ ಬಳಿಗೆ ಬಂದರು. ತನಗೆ ಸಾಷ್ಟಾಂಗ ನಮಸ್ಕರಿಸುತ್ತಿರುವ ಭರತನನ್ನು ಕಂಡು ಭರದ್ವಾಜ ಮಹರ್ಷಿಗಳು – ತನ್ನ ಸೌಭಾಗ್ಯವೇ ಮೈವೆತ್ತಿ ಬಂದಂತೆ ತಿಳಿದರು. ಅವರು ಓಡಿಬಂದು ಭರತನನ್ನು ಎತ್ತಿ ಆಲಿಂಗಿಸಿಕೊಂಡು, ಆಶೀರ್ವಾದಮಾಡಿ ಕೃತಾರ್ಥನನ್ನಾಗಿಸಿದರು. ಅವನಿಗೆ ಉಚಿತಾಸನವನ್ನಿತ್ತು ಆದರಿಸಿದರು. ಭರತನು ತಲೆಯನ್ನು ತಗ್ಗಿಸಿ,

ಓಡಿಹೋದವನು ತಿರುಗಿ ಬಂದು ಮನೆಯನ್ನು ಪ್ರವೇಶಿಸಿ ಸಂಕೋಚಪಡುವವನಂತೆ ಕುಳಿತಿದ್ದನು. ಮುನಿಗಳು ಏನನ್ನಾದರೂ ಕೇಳಿದರೆ ಏನು ಉತ್ತರ ಕೊಡಲೀ ಎಂದು ಭರತನು ಮನಸ್ಸಿನಲ್ಲಿ ಯೋಚಿಸುತ್ತಿದ್ದನು. ಭರತನ ಸಂಕೋಚವನ್ನು ಕಂಡು ಮುನಿಗಳು ಹೇಳಿದರು – ''ಭರತಾ! ನಮಗೆ ನಿಮ್ಮ ಎಲ್ಲ ಸುದ್ದಿ ತಿಳಿದಿದೆ. ವಿಧಿವಿಲಾಸದ ಮುಂದೆ ಯಾರ ಕೈವಾಡವೂ ನಡೆಯುವುದಿಲ್ಲ. (ಚೌ/೧-೪)

**ದೋ – ತುಮ್ಹ ಗಲಾನಿ ಜಿಯ್ ಜನಿ ಕರಹು ಸಮುಝಿ ಮಾತು ಕರತೂತಿ।**
**ತಾತ ಕೈಕಇಹಿ ದೋಸು ನಹಿಂ ಗಈ ಗಿರಾ ಮತಿ ಧೂತಿ ॥ ೨೦೬ ॥**

ನಿನ್ನ ತಾಯಿಯ ಚರ್ಯೆಯನ್ನು ನೆನೆದು ನೀನು ನೊಂದುಕೊಳ್ಳಬೇಡ. ಮಗೂ! ವಾಸ್ತವವಾಗಿ ಇದರಲ್ಲಿ ಕೈಕೆಯಿಯ ಯಾವ ದೋಷವೂ ಇಲ್ಲ. ಸರಸ್ವತಿಯು ಅವಳ ಬುದ್ಧಿಯನ್ನು ಕೆಡಿಸಿದ್ದಳು. (ದೋ/೨೦೬)

**ಚೌ – ಯಹಉ ಕಹತ ಭಲ ಕಹಿಹಿ ನ ಕೋಊ। ಲೋಕು ಬೇದು ಬುಧ ಸಮ್ಮತ ದೋಊ॥**
**ತಾತ ತುಮ್ಹಾರ ಬಿಮಲ ಜಸು ಗಾಈ। ಪಾಇಹಿ ಲೋಕಉ ಬೇದು ಬಡಾಈ ॥ ೧ ॥**
**ಲೋಕ ಬೇದ ಸಮ್ಮತ ಸಬು ಕಹಈ। ಜೆಹಿ ಪಿತು ದೇಇ ರಾಜು ಸೋ ಲಹಈ ॥**
**ರಾಉ ಸತ್ಯಬ್ರತ ತುಮ್ಹಹಿ ಬೊಲಾಈ। ದೇತ ರಾಜು ಸುಖು ಧರಮು ಬಡಾಈ ॥ ೨ ॥**
**ರಾಮ ಗವನು ಬನ ಅನರಥ ಮೂಲಾ। ಜೋ ಸುನಿ ಸಕಲ ಬಿಸ್ವ ಭಇ ಸೂಲಾ ॥**
**ಸೋ ಭಾವೀ ಬಸ ರಾನಿ ಅಯಾನೀ। ಕರಿ ಕುಚಾಲಿ ಅಂತಹುಁ ಪಛಿತಾನೀ ॥ ೩ ॥**
**ತಹಁಉಁ ತುಮ್ಹಾರ ಅಲಪ ಅಪರಾಧೂ। ಕಹೈ ಸೊ ಅಧಮ ಅಯಾನ ಅಸಾಧೂ॥**
**ಕರತೆಹು ರಾಜು ತ ತುಮ್ಹಹಿ ನ ದೋಷೂ। ರಾಮಹಿ ಹೋತ ಸುನತ ಸಂತೋಷೂ ॥ ೪ ॥**

ಹೀಗೆ ಹೇಳಿದ ಮಾತ್ರಕ್ಕೆ ಆಕೆಯಿಂದ ಒಳ್ಳೆಯದಾಯಿತೆಂದು ಯಾರೂ ಹೇಳಲಾರರು. ಏಕೆಂದರೆ, ಸಿದ್ಧಾಂತ ಹಾಗೂ ವ್ಯವಹಾರ ಎರಡೂ ಪ್ರಾಜ್ಞರಿಗೆ ಮಾನ್ಯವಿದೆ. ಆದರೆ ಮಗೂ! ನಿನ್ನ ವಿಮಲ ಯಶಸ್ಸನ್ನು ಹಾಡುವುದರಿಂದ ಲೋಕವೇದಗಳೆರಡೂ ಅಗ್ಗಳಿಕೆಯನ್ನು ಪಡೆಯುತ್ತವೆ. ತಂದೆಯು ರಾಜ್ಯನೀಡಿದವನಿಗೆ ರಾಜ್ಯ ದೊರೆಯುವುದೆಂಬ ಮತ ಶಾಸ್ತ್ರಮತ್ತು ವೇದ ಇವೆರಡಕ್ಕೂ ಮಾನ್ಯವಿದೆ. ಸತ್ಯವ್ರತನಾಗಿದ್ದ ರಾಜನು ನಿನ್ನನ್ನು ಕರೆದು ರಾಜ್ಯನೀಡಿದ್ದರೆ ಚೆನ್ನಾಗಿತ್ತು; ಧರ್ಮ ಉಳಿಯುತ್ತಿತ್ತು. ಪ್ರತಿಷ್ಠೆ ಹೆಚ್ಚುತ್ತಿತ್ತು. ಆದರೆ ಎಲ್ಲ ಅನರ್ಥಗಳ ಮೂಲವೆಂದರೆ ಶ್ರೀರಾಮನ ವನಗಮನ. ಅದನ್ನು ಕೇಳಿ ಇಡೀ ಲೋಕವೇ ಶೋಕದಲ್ಲಿಮುಳುಗಿತು. ಆ ರಾಮನ ವನಗಮನವೂ ಕೂಡ ಅದೃಷ್ಟದ ಕೈವಾಡದಿಂದ ನಡೆಯಿತು. ಏನೂ ತಿಳಿಯದ ಕೈಕೆಯಿಯು ಅದೃಷ್ಟದ ಕೈಗೊಂಬೆಯಾಗಿ, ಕುತಂತ್ರಮಾಡಿ, ಕೊನೆಗೆ ಪಶ್ಚಾತ್ತಾಪ ಪಡುತ್ತಿರುವಳು. ಇದರಲ್ಲಿ ಎಳ್ಳಷ್ಟಾದರೂ ನಿನ್ನ ಅಪರಾಧವಿದೆಯೆಂದು ಯಾರಾದರೂ ಹೇಳಿದರೆ ಅವನು ಅಧಮನು, ಅಜ್ಞಾನಿಯು ಹಾಗೂ ಅಸಾಧುವೂ ಆಗಿರುವನು. ನೀನು ರಾಜ್ಯವನ್ನು ಆಳಿದ್ದರೂ ನಿನಗೆ ದೋಷ ತಟ್ಟುತ್ತಿರಲಿಲ್ಲ. ಅದನ್ನು ಕೇಳಿ, ಶ್ರೀರಾಮಚಂದ್ರನೂ ಸಂತೋಷಪಡುತ್ತಿದ್ದನು. (ಚೌ/೧-೪)

**ದೋ – ಅಬ ಅತಿ ಕೀನ್ಹೆಹು ಭರತ ಭಲ ತುಮ್ಹಹಿ ಉಚಿತ ಮತ ಏಹು।**
**ಸಕಲ ಸುಮಂಗಲ ಮೂಲ ಜಗ ರಘುಬರ ಚರನ ಸನೇಹು ॥ ೨೦೭ ॥**

ಆದರೆ ಭರತಾ! ಈಗ ನೀನು ಮಾಡಿದುದು ತುಂಬಾ ಒಳ್ಳೆಯದೇ ಆಯಿತು. ಇದು ನಿನಗೆ ಉಚಿತವೇ ಆಗಿತ್ತು. ಶ್ರೀರಘುವರನ ಚರಣಗಳಲ್ಲಿ ಅನುರಾಗ ಉಂಟಾಗುವುದೇ ಜಗತ್ತಿನಲ್ಲಿ ಎಲ್ಲ ಮಂಗಳಗಳ ಮೂಲವು. (ದೋ/೨೦೭)

**ಚೌ – ಸೋ ತುಮ್ಹಾರ ಧನು ಜೀವನು ಪ್ರಾನಾ। ಭೂರಿಭಾಗ ಕೋ ತುಮ್ಹಹಿ ಸಮಾನಾ॥**
**ಯಹ ತುಮ್ಹಾರ ಆಚರಜು ನ ತಾತಾ। ದಸರಥ ಸುಅನ ರಾಮ ಪ್ರಿಯ ಭ್ರಾತಾ ॥ ೧ ॥**
**ಸುನಹು ಭರತ ರಘುಬರ ಮನ ಮಾಹೀಂ। ಪೇಮ ಪಾತ್ರು ತುಮ್ಹ ಸಮ ಕೊಉ ನಾಹೀಂ ॥**
**ಲಖನ ರಾಮ ಸೀತಹಿ ಅತಿ ಪ್ರೀತೀ। ನಿಸಿ ಸಬ ತುಮ್ಹಹಿ ಸರಾಹತ ಬೀತೀ ॥ ೨ ॥**
**ಜಾನಾ ಮರಮು ನಹಾತ ಪ್ರಯಾಗಾ। ಮಗನ ಹೋಹಿಂ ತುಮ್ಹರೇಂ ಅನುರಾಗಾ॥**
**ತುಮ್ಹ ಪರ ಅಸ ಸನೇಹು ರಘುಬರ ಕೇಂ। ಸುಖ ಜೀವನ ಜಗ ಜಸ ಜಡ ನರ ಕೇಂ ॥ ೩ ॥**
**ಯಹ ನ ಅಧಿಕ ರಘುಬೀರ ಬಡಾಈ। ಪ್ರನತ ಕುಟುಂಬ ಪಾಲ ರಘುರಾಈ॥**
**ತುಮ್ಹ ತೌ ಭರತ ಮೋರ ಮತ ಏಹೂ। ಧರೇಂ ದೇಹ ಜನು ರಾಮ ಸನೇಹೂ ॥ ೪ ॥**

ಅದು (ಶ್ರೀರಾಮನ ಪಾದಗಳಲ್ಲಿರುವ ಭಕ್ತಿಯು) ನಿನಗಂತೂ ಧನ, ಜೀವನ, ಪ್ರಾಣವಾಗಿದೆ. ನಿನ್ನಂತಹ ಭಾಗ್ಯವಂತರು ಬೇರೆ ಯಾರಿದ್ದಾರೆ? ಇದರಲ್ಲಿ ಯಾವುದೇ ಸೋಜಿಗವಿಲ್ಲ. ಏಕೆಂದರೆ, ನೀನು ದಶರಥ ಮಹಾರಾಜರ ಕುಮಾರನೂ, ಶ್ರೀರಾಮಚಂದ್ರನ ಪ್ರಿಯ ಸಹೋದರನಾಗಿರುವೆ. ಭರತಾ! ಕೇಳು. ಶ್ರೀರಾಮಚಂದ್ರನಿಗೆ ನಿನಗೆ ಸಮಾನನಾದ ಪ್ರೀತಿಪಾತ್ರನಾದವನು ಬೇರೊಬ್ಬನಿಲ್ಲ. ಶ್ರೀಸೀತಾರಾಮ ಲಕ್ಷ್ಮಣರು ಇಲ್ಲಿ ತಂಗಿದಾಗ ನಿನ್ನ ಗುಣಗಾನದಲ್ಲೇ ಆ ರಾತ್ರಿಯನ್ನು ಕಳೆದರು. ಅವರು ತ್ರಿವೇಣಿ ಸಂಗಮದಲ್ಲಿ ಸ್ನಾನಮಾಡುತ್ತಿದ್ದಾಗ ನನಗೆ ಅವರ ಈ ಮರ್ಮ ತಿಳಿಯಿತು. ಪ್ರಯಾಗದಲ್ಲಿ ಶ್ರೀರಾಮನು ಸ್ನಾನಮಾಡುವ ಸಮಯದಲ್ಲಿ ಸ್ನಾನಸಂಕಲ್ಪ ಹೇಳುವಾಗ ''ಭರತವರ್ಷೇ, ಭರತಖಂಡೇ'' ಎಂದು ಉಚ್ಚರಿಸಿದಾಗ ಭರತ! ಭರತ! ಎಂದು ಪುನಃ ಪುನಃ ಹೇಳುತ್ತಾ, ನಿನ್ನ ಪ್ರೇಮದಲ್ಲಿ ಮಗ್ನನಾಗಿ ಗಂಗೆಯಲ್ಲಿ ಮುಳುಗು ಹಾಕಿದನು. ಪ್ರಯಾಗದಲ್ಲಿರುವವರೆಲ್ಲರೂ ಈ ವಿಷಯವನ್ನು ಬಲ್ಲರು. ಅವರು ನಿನ್ನ ಮೇಲಿನ ಪ್ರೇಮದಲ್ಲಿ ಮಗ್ನರಾಗಿದ್ದರು. ಮೂರ್ಖವಿಷಯಾಸಕ್ತನಿಗೆ ಸಂಸಾರದಲ್ಲಿ ಸುಖಮಯ ಜೀವನದ ಬಗ್ಗೆ ಆಸಕ್ತಿ ಇರುವಂತೆ, ಶ್ರೀರಾಮಚಂದ್ರನಿಗೆ ನಿನ್ನ ಮೇಲೆ ಅಗಾಧವಾದ ಸ್ನೇಹವಿದೆ. ಇದೇನು ಶ್ರೀರಾಮನ ಹಿರಿಮೆ ಎಂದುಕೊಳ್ಳಬೇಡ. ಏಕೆಂದರೆ, ಅವನು ಪ್ರಣತ ಜನರ ಕುಟುಂಬವನ್ನು ಪೊರೆಯುವವನು. ಭರತಾ! ನೀನು ಮೈವೆತ್ತ ಶ್ರೀರಾಮನ ಪ್ರೇಮಾವತಾರವು ಎಂದು ನನ್ನ ಅಭಿಪ್ರಾಯವು. (ಚೌ/೧-೪)

**ದೋ – ತುಮ್ಹ ಕಹ್ ಭರತ ಕಲಂಕ ಯಹ ಹಮ ಸಬ ಕಹ್ ಉಪದೇಸು।**
**ರಾಮ ಭಗತಿ ರಸ ಸಿದ್ಧಿ ಹಿತ ಭಾ ಯಹ ಸಮಉ ಗನೇಸು ॥ ೨೦೮ ॥**

ಭರತಾ! ನೀನು ಕಳಂಕವೆಂದು ಹೇಳುವ ವಿಷಯವು ಲೋಕಕ್ಕೆ ಉಪದೇಶವು. ಶ್ರೀರಾಮಭಕ್ತಿರಸಾಮೃತವನ್ನು ಹೊಂದಲು ಈ ಸಮಯವು ಶುಭಾರಂಭವು (ಶ್ರೀಗಣೇಶ) ಅಂದರೆ ನಿನ್ನನ್ನು ನೋಡಿ ರಾಮನ ಮೇಲೆ ಭಕ್ತಿಯನ್ನು ಅಳವಡಿಸಿಕೊಳ್ಳುವರು. (ದೋ/೨೦೮)

**ಚೌ – ನವ ಬಿಧು ಬಿಮಲ ತಾತ ಜಸು ತೋರಾ। ರಘುಬರ ಕಿಂಕರ ಕುಮುದ ಚಕೋರಾ॥**
**ಉದಿತ ಸದಾ ಅँಥಇಹಿ ಕಬಹೂँ ನಾ। ಘಟಿಹಿ ನ ಜಗ ನಭ ದಿನ ದಿನ ದೂನಾ॥ ೧ ॥**
**ಕೋಕ ತಿಲೋಕ ಪ್ರೀತಿ ಅತಿ ಕರಿಹೀ। ಪ್ರಭು ಪ್ರತಾಪ ರಬಿ ಛಬಿಹಿ ನ ಹರಿಹೀ॥**
**ನಿಸಿ ದಿನ ಸುಖದ ಸದಾ ಸಬ ಕಾಹೂ। ಗ್ರಸಿಹಿ ನ ಕೈಕಇ ಕರತಬು ರಾಹೂ॥ ೨ ॥**
**ಪೂರನ ರಾಮ ಸುಪೇಮ ಪಿಯೂಷಾ। ಗುರ ಅವಮಾನ ದೋಷ ನಹಿं ದೂಷಾ॥**
**ರಾಮ ಭಗತ ಅಬ ಅಮಿಅँ ಅಘಾಹೂँ। ಕೀನ್ಹೆಹು ಸುಲಭ ಸುಧಾ ಬಸುಧಾಹೂँ॥ ೩ ॥**
**ಭೂಪ ಭಗೀರಥ ಸುರಸರಿ ಆನೀ। ಸುಮಿರತ ಸಕಲ ಸುಮಂಗಲ ಖಾನೀ॥**
**ದಸರಥ ಗುನ ಗನ ಬರನಿ ನ ಜಾಹೀं। ಅಧಿಕು ಕಹಾ ಜೆಹಿ ಸಮ ಜಗ ನಾಹೀं॥ ೪ ॥**

ಮಗೂ! ನಿನ್ನ ನಿರ್ಮಲ ಕೀರ್ತಿಯು ನವೀನ ಚಂದ್ರನಿದ್ದಂತೆ. ಶ್ರೀರಾಮಕಿಂಕರರು ಕುಮುದರೂ, ಚಕೋರಗಳು. ಆಕಾಶದ ಚಂದ್ರನು ಪ್ರತಿದಿನವು ಅಸ್ತನಾಗುತ್ತಾ ಕ್ಷೀಣನಾಗುತ್ತಿರುತ್ತಾನೆ. ಆದರಿಂದ ಕುಮುದ, ಚಕೋರಗಳಿಗೆ ದುಃಖವಾಗುತ್ತದೆ. ಆದರೆ ನಿನ್ನ ಯಶರೂಪೀ ಚಂದ್ರನು ಯಾವಾಗಲೂ ಉದಿತನಾಗಿಯೇ ಇರುವನು, ಎಂದು ಅಸ್ತನಾಗಲಾರನು. ಜಗತ್‌ರೂಪೀ ಆಕಾಶದಲ್ಲಿ ಇದು ಕ್ಷೀಣಿಸದೆ ದಿನೇ-ದಿನೇ ವೃದ್ಧಿಸುತ್ತಲೇ ಇರುತ್ತದೆ. ತ್ರೈಲೋಕ್ಯವೆಂಬ ಚಕೋರವು ಈ ಯಶರೂಪೀ ಚಂದ್ರನನ್ನು ಅತ್ಯಂತ ಪ್ರೀತಿಸೀತು. ಪ್ರಭುರಾಮಚಂದ್ರನ ಪ್ರತಾಪರವಿಯು ಇದರ ಪ್ರಕಾಶವನ್ನು ಕಳೆಯಲಾರದು. ಈ ನಿನ್ನ ನಿರ್ಮಲ ಕೀರ್ತಿಚಂದ್ರಮನು ಹಗಲಿರುಳೂ ಎಲ್ಲರಿಗೂ ಸುಖವನ್ನುಂಟುಮಾಡುವುದು. ಕೈಕೇಯಿಯ ಕುಕರ್ಮವೆಂಬ ರಾಹುವು ಅದನ್ನು ನುಂಗಲಾರದು. ಈ ಚಂದ್ರನು ಶ್ರೀರಾಮಚಂದ್ರನ ಸುಂದರ ಪ್ರೇಮರೂಪೀ ಅಮೃತದಿಂದ ಪರಿಪೂರ್ಣನಾಗಿರುವನು. ಇವನು ಗುರುದ್ರೋಹವೆಂಬ ಕಳಂಕದಿಂದ ರಹಿತನಾಗಿರುವನು. ನೀನು ಯಶರೂಪೀ ಚಂದ್ರನನ್ನು ಸೃಷ್ಟಿಸಿ ಈ ವಸುಧೆಯಲ್ಲಿಯೂ ಸುಧೆಯು ಎಲ್ಲರಿಗೂ ಸಿಗುವಂತೆ ಮಾಡಿದೆ. ಈಗ ರಾಮಭಕ್ತರು ಈ ಅಮೃತದಿಂದ ತೃಪ್ತರಾಗುವರು. ನಿನ್ನ ವಂಶದ ಪೂರ್ವಜನಾದ ಭಗೀರಥನು ಗಂಗೆಯನ್ನು ಭುವಿಗೆ ತಂದನು. ಅಂತಹ ಗಂಗೆಯ ಸ್ಮರಣೆಯೇ ಎಲ್ಲ ಶುಭಗಳಿಗೆ ಮೂಲವು. ಆ ಭಗೀರಥನಿಂದಲೂ ಹೆಚ್ಚಿನ ಮಹಿಮೆ ದಶರಥ ಮಹಾರಾಜನಲ್ಲಿತ್ತು. ಅವನಿಗೆ ಸಮಾನಾರಾದವರು ಯಾರೂ ಇಲ್ಲ. ಇನ್ನು ಹೆಚ್ಚಿನವರು ಹೇಗೆ ಇದ್ದಾರು? (ಚೌ/೧-೪)

**ದೋ – ಜಾಸು ಸನೇಹ ಸಕೋಚ ಬಸ ರಾಮ ಪ್ರಗಟ ಭಏ ಆಇ।**
**ಜೇ ಹರ ಹಿಯ ನಯನನಿ ಕಬಹುँ ನಿರಖೇ ನಹೀं ಅಘಾಇ ॥ ೨೦೯ ॥**

ಆ ದಶರಥನ ಪ್ರೇಮ, ಸೌಶೀಲ್ಯಗಳಿಗೆ ವಶನಾಗಿ ಸ್ವತಃ ಸಚ್ಚಿದಾನಂದಘನ ಭಗವಾನ್ ಶ್ರೀರಾಮನು ಒಲಿದು ಮೈದೋರಿದನು. ಶಂಕರನು ತನ್ನ ಮನೋನೇತ್ರಗಳಿಂದ ನಿರಂತರ ಶ್ರೀರಾಮಚಂದ್ರನನ್ನು ನೋಡುತ್ತಾ, ಸ್ಮರಿಸುತ್ತಾ ಇದ್ದರೂ ತೃಪ್ತಿಪಡೆಯುವುದಿಲ್ಲ. (ದೋ/೨೦೯)

ಚೌ – ಕೀರತಿ ಬಿಧು ತುಮ್ಹ ಕೀನ್ಹ ಅನೂಪಾ। ಜಹ್ ಬಸ ರಾಮ ಪೇಮ ಮೃಗರೂಪಾ॥
ತಾತ ಗಲಾನಿ ಕರಹು ಜಿಯ್ ಜಾಏ್। ಡರಹು ದರಿದ್ರಹಿ ಪಾರಸು ಪಾಏ್॥ ೧॥
ಸುನಹು ಭರತ ಹಮ ಝೂಠ ನ ಕಹಹೀ್। ಉದಾಸೀನ ತಾಪಸ ಬನ ರಹಹೀ್॥
ಸಬ ಸಾಧನ ಕರ ಸುಫಲ ಸುಹಾವಾ। ಲಖನ ರಾಮ ಸಿಯ ದರಸನು ಪಾವಾ॥ ೨॥
ತೆಹಿ ಫಲ ಕರ ಫಲು ದರಸ ತುಮ್ಹಾರಾ। ಸಹಿತ ಪಯಾಗ ಸುಭಾಗ ಹಮಾರಾ॥
ಭರತ ಧನ್ಯ ತುಮ್ಹ ಜಸು ಜಗು ಜಯಊ। ಕಹಿ ಅಸ ಪೇಮ ಮಗನ ಮುನಿ ಭಯಊ॥ ೩॥
ಸುನಿ ಮುನಿ ಬಚನ ಸಭಾಸದ ಹರಷೇ। ಸಾಧು ಸರಾಹಿ ಸುಮನ ಸುರ ಬರಷೇ॥
ಧನ್ಯ ಧನ್ಯ ಧುನಿ ಗಗನ ಪಯಾಗಾ। ಸುನಿ ಸುನಿ ಭರತು ಮಗನ ಅನುರಾಗಾ॥ ೪॥

ಆದರೆ ಭರತಾ! ಆ ಭಗೀರಥ, ದಶರಥ ಇವರನ್ನೂ ಮೀರಿಸಿ ನೀನು ನಿನ್ನ ಕೀರ್ತಿಯೆಂಬ ಅನುಪಮ ಚಂದ್ರನನ್ನು ಸೃಷ್ಟಿಸಿದ್ದೀಯೆ. ಅದರಲ್ಲಿ ರಾಮಪ್ರೇಮವೆಂಬ ಮೃಗಚಿಹ್ನೆಯು ಶೋಭಿಸುತ್ತಿದೆ. ಮಗೂ! ನೀನು ವ್ಯರ್ಥವಾಗಿ ಗ್ಲಾನಿಯನ್ನು ಪಡೆಯುತ್ತಿರುವೆ. ಸ್ಪರ್ಶಮಣಿಯನ್ನು ಪಡೆದಿದ್ದರೂ ನೀನು ಬಡತನಕ್ಕೆ ಹೆದರುತ್ತಿರುವೆಯಲ್ಲ! ಭರತಾ! ಕೇಳು. ನಾವು ಸುಳ್ಳು ಹೇಳುತ್ತಿಲ್ಲ. ನಾವು ಉದಾಸೀನರೂ (ಯಾರ ಪಕ್ಷವನ್ನೂ ವಹಿಸುವುದಿಲ್ಲ), ತಪಸ್ವಿಗಳೂ, ವನವಾಸಿಗಳೂ, ನಮ್ಮ ಸಾಧನೆಗಳ ಉತ್ತಮ ಫಲವಾದ ಸೀತಾರಾಮ ಲಕ್ಷ್ಮಣರ ದರ್ಶನವಾಯಿತು. ಆ ಮಹಾಫಲದ ಪರಮಫಲವೇ ನಿನ್ನ ದರ್ಶನ. ಪ್ರಯಾಗರಾಜನ ಸಹಿತ ನಾವೆಲ್ಲರೂ ಪರಮ ಸೌಭಾಗ್ಯಶಾಲಿಗಳಾದೆವು. ಭರತಾ! ನೀನು ಧನ್ಯನು! ನೀನು ನಿನ್ನ ಕೀರ್ತಿಯಿಂದ ಈ ಜಗತ್ತನ್ನೇ ಗೆದ್ದಿರುವೆ. ಈ ವಿಧವಾಗಿ ನುಡಿದು ಮುನಿಗಳು ಪ್ರೇಮಮಗ್ನರಾದರು. ಮುನಿಗಳ ವಚನಗಳನ್ನು ಕೇಳಿ ಸಭಾಸದರೆಲ್ಲರೂ ಹರ್ಷಿತರಾದರು. 'ಸಾಧು-ಸಾಧು' ಎಂದು ಹೇಳಿ ಕೊಂಡಾಡುತ್ತಾ ದೇವತೆಗಳು ಹೂಮಳೆಯನ್ನು ಸುರಿಸಿದರು. ಗಗನದಲ್ಲಿ ಮತ್ತು ಪ್ರಯಾಗದಲ್ಲಿ 'ಧನ್ಯ-ಧನ್ಯ' ಎಂಬ ಮಾತನ್ನು ಕೇಳಿ, ಭರತನು ರಾಮಪ್ರೇಮದಲ್ಲಿ ಮಗ್ನನಾದನು. (ಚೌ/೧-೪)

**ದೋ – ಪುಲಕ ಗಾತ ಹಿಯ್ ರಾಮು ಸಿಯ ಸಜಲ ಸರೋರುಹ ನೈನ।**
**ಕರಿ ಪ್ರನಾಮು ಮುನಿ ಮಂಡಲಿಹಿ ಬೋಲೇ ಗದಗದ ಬೈನ॥ ೨೧೦॥**

ಅವನ ಶರೀರವು ಹೊಂಪುಳಿಗೊಂಡಿತು. ಹೃದಯದಲ್ಲಿ ಸೀತಾರಾಮರು ವಿರಾಜಿಸುತ್ತಿದ್ದಾರೆ. ಕಮಲಗಳಂತಿರುವ ಕಣ್ಣುಗಳಲ್ಲಿ ಪ್ರೇಮಾಶ್ರುಗಳು ತುಂಬಿವೆ. ಭರತನು ಮುನಿಮಂಡಳಿಗೆ ಮಣಿದು ಗದ್ಗದಸ್ವರದಿಂದ ಇಂತೆಂದನು – (ದೋ/೨೧೦)

ಚೌ – ಮುನಿ ಸಮಾಜು ಅರು ತೀರಥರಾಜೂ। ಸಾಂಚಿಹು್ ಸಪಥ ಅಘಾಇ ಅಕಾಜೂ॥
ಏಹಿ್ ಥಲ ಜೌ್ ಕಿಛು ಕಹಿಅ ಬನಾಈ। ಏಹಿ ಸಮ ಅಧಿಕ ನ ಅಘ ಅಧಮಾಈ॥ ೧॥
ತುಮ್ಹ ಸರ್ಬಗ್ಯ ಕಹಉ್ ಸತಿಭಾಊ। ಉರ ಅಂತರಜಾಮೀ ರಘುರಾಊ॥
ಮೊಹಿ ನ ಮಾತು ಕರತಬ ಕರ ಸೋಚೂ। ನಹಿ್ ದುಖು ಜಿಯ್ ಜಗು ಜಾನಿಹಿ ಪೋಚೂ॥ ೨॥
ನಾಹಿನ ಡರು ಬಿಗರಿಹಿ ಪರಲೋಕೂ। ಪಿತಹು ಮರನ ಕರ ಮೋಹಿ ನ ಸೋಕೂ॥
ಸುಕೃತ ಸುಜಸ ಭರಿ ಭುಅನ ಸುಹಾಏ। ಲಛಿಮನ ರಾಮ ಸರಿಸ ಸುತ ಪಾಏ॥ ೩॥
ರಾಮ ಬಿರಹ್ ತಜಿ ತನು ಛನಭಂಗೂ। ಭೂಪ ಸೋಚ ಕರ ಕವನ ಪ್ರಸಂಗೂ॥
ರಾಮ ಲಖನ ಸಿಯ ಬಿನು ಪಗ ಪನಹೀ್। ಕರಿ ಮುನಿ ಬೇಷ ಫಿರಹಿ್ ಬನ ಬನಹೀ್॥ ೪॥

''ಇಲ್ಲಿ ಮುನಿಗಳ ಸಮಾಜವಿದೆ. ತೀರ್ಥರಾಜನಿದ್ದಾನೆ. ಇಲ್ಲಿ ಪ್ರತಿಜ್ಞಾಪೂರ್ವಕವಾಗಿ ಸತ್ಯವನ್ನು ಪ್ರಸ್ತಾವನೆ ಮಾಡುವುದು ನಿಷ್ಪ್ರಯೋಜಕ. ಇಂತಹ ಸ್ಥಾನದಲ್ಲಿ ಏನಾದರೂ ಕೃತಕ ಹೇಳಿದರೆ ಅದಕ್ಕಿಂತ ಮಿಗಿಲಾದ ಪಾಪ ನೀಚತ್ವ ಬೇರೊಂದಿರಲಾರದು. ನಾನು ನಿಜ ಹೇಳುತ್ತೇನೆ. ತಾವು ಸರ್ವಜ್ಞರು. ಶ್ರೀರಾಮನು ಅಂತರ್ಯಾಮಿಯು. ಎಲ್ಲರ ಮನಸ್ಸಿನೊಳಗಿನ ಭಾವವನ್ನು ಗ್ರಹಿಸುವವನು. ನನ್ನ ತಾಯಿಯಾದ ಕೈಕೇಯಿಯ ಕೃತ್ಯಕ್ಕಾಗಿ ನನಗೆ ಶೋಕವಿಲ್ಲ. ಜಗತ್ತು ನನ್ನನ್ನು ನೀಚನೆಂದೀತು ಎಂಬ ಭಯವೂ ನನಗಿಲ್ಲ. ನನ್ನ ಪರಲೋಕ ಹಾಳಾದೀತೆಂಬ ಭೀತಿಯೂ ನನಗಿಲ್ಲ. ತಂದೆಯ ಸಾವಿನ ಶೋಕವು ನನಗಿಲ್ಲ. ಏಕೆಂದರೆ, ಅವರ ಸತ್ಕೀರ್ತಿಗಳು, ಪುಣ್ಯವು ವಿಶ್ವವ್ಯಾಪ್ತವಾದವುಗಳು. ಅವರು ರಾಮ-ಲಕ್ಷ್ಮಣರಂತಹ ಅನುಪಮ ಪುತ್ರರತ್ನರನ್ನು ಪಡೆದ ಪುಣ್ಯಾತ್ಮರು. ಶ್ರೀರಾಮಚಂದ್ರನ ವಿಯೋಗ ಬಾಧೆಯನ್ನು ಸಹಿಸದೆ ಕ್ಷಣಭಂಗುರವಾದ ಪಾರ್ಥಿವ ಶರೀರವನ್ನು ತೊರೆದ ಮಹಾಪುರುಷನಿಗಾಗಿ ಶೋಕಮಾಡುವುದು ತರವಲ್ಲ. ಆದರೆ ಶ್ರೀಸೀತಾರಾಮ ಲಕ್ಷ್ಮಣ ಪಾದರಕ್ಷೆಗಳೂ ಇಲ್ಲದೆ, ಮುನಿವೇಷದಿಂದ ವನದಲ್ಲಿ ಸಂಚರಿಸುತ್ತಿರುವರಲ್ಲ– ಎಂಬುದೇ ಚಿಂತೆಯ ವಿಷಯವಾಗಿದೆ. (ಚೌ/೧-೪)

**ದೋ – ಅಜಿನ ಬಸನ ಫಲ ಅಸನ ಮಹಿ ಸಯನ ಡಾಸಿ ಕುಸ ಪಾತ।**
**ಬಸಿ ತರು ತರ ನಿತ ಸಹತ ಹಿಮ ಆತಪ ಬರಷಾ ಬಾತ॥ ೨೧೧ ॥**

ಅವರು ವಲ್ಕಲಗಳನ್ನು ಧರಿಸುತ್ತಿರುವರು. ಹಣ್ಣು-ಹಂಪಲು ಭುಂಜಿಸುತ್ತಿರುವರು. ದರ್ಭೆ, ಪತ್ರೆಗಳನ್ನು ಹಾಸಿ ನೆಲದ ಮೇಲೆ ಮಲಗುತ್ತಾರೆ. ಮರದಡಿಯಲ್ಲಿ ವಾಸಿಸುತ್ತಾ, ಪ್ರತಿದಿನವೂ ಚಳಿ, ಮಳೆ, ಗಾಳಿ, ಬಿಸಿಲನ್ನು ಸಹಿಸುತ್ತಿದ್ದಾರೆ. (ದೋ/೨೧೧)

**ಚೌ – ಏಹಿ ದುಖ ದಾಹ್ ದಹಇ ದಿನ ಛಾತೀ। ಭೂಖ ನ ಬಾಸರ ನೀದ ನ ರಾತೀ॥**
**ಏಹಿ ಕುರೋಗ ಕರ ಔಷಧು ನಾಹೀಂ। ಸೋಧೆಉಁ ಸಕಲ ಬಿಸ್ವ ಮನ ಮಾಹೀಂ॥ ೧ ॥**
**ಮಾತು ಕುಮತ ಬಢಈ ಅಘ ಮೂಲಾ। ತೆಹಿಂ ಹಮಾರ ಹಿತ ಕೀನ್ಹ ಬಁಸೂಲಾ॥**
**ಕಲಿ ಕುಕಾಠ ಕರ ಕೀನ್ಹ ಕುಜಂತ್ರೂ। ಗಾಡಿ ಅವಧಿ ಪಢಿ ಕಠಿನ ಕುಮಂತ್ರೂ॥ ೨ ॥**
**ಮೋಹಿ ಲಗಿ ಯಹು ಕುಠಾಟು ತೆಹಿಂ ಠಾಟಾ। ಘಾಲೆಸಿ ಸಬ ಜಗು ಬಾರಹಬಾಟಾ॥**
**ಮಿಟಇ ಕುಜೋಗು ರಾಮ ಫಿರಿ ಆಏಁ। ಬಸಇ ಅವಧ ನಹಿಂ ಆನ ಉಪಾಏಁ॥ ೩ ॥**
**ಭರತ ಬಚನ ಸುನಿ ಮುನಿ ಸುಖು ಪಾಈ। ಸಬಹಿಂ ಕೀನ್ಹಿ ಬಹು ಭಾಁತಿ ಬಡಾಈ॥**
**ತಾತ ಕರಹು ಜನಿ ಸೋಚು ಬಿಸೇಷೀ। ಸಬ ದುಖು ಮಿಟಿಹಿ ರಾಮ ಪಗ ದೇಖೀ॥ ೪ ॥**

ಈ ದುಃಖ ತಾಪಗಳಿಂದ ಪ್ರತಿಕ್ಷಣವೂ ನನ್ನ ಹೃದಯವು ಸುಡುತ್ತಾ ಇರುತ್ತದೆ. ನನಗೆ ಹಗಲಿನಲ್ಲಿ ಊಟ ಸೇರದು, ಇರುಳಲ್ಲಿ ನಿದ್ದೆ ಬರದು. ನಾನು ಮನದಲ್ಲಿ ಇಡೀ ಜಗತ್ತನ್ನೇ ಸೋಸಿ ಬಿಟ್ಟರೂ ನನ್ನ ಈ ಭಯಂಕರ ರೋಗಕ್ಕೆ ಔಷಧಿ ಕಂಡುಬರಲಿಲ್ಲ. ತಾಯಿಯ ಕೆಟ್ಟ ವಿಚಾರಗಳು ಪಾಪದ ಮೂಲವಾದ ಬಡಗಿಯು. ಅವನು ನಮ್ಮ ಹಿತವನ್ನು ಬಾಚಿಯನ್ನಾಗಿಸಿಕೊಂಡು ಅದರಿಂದ ಕಲಹವೆಂಬ ಕೆಟ್ಟ ಮರದಿಂದ ದುಷ್ಟಯಂತ್ರವನ್ನು ತಯಾರಿಸಿ, ಹದಿನಾಲ್ಕು ಅವಧಿಯೆಂಬ ಕುಮಂತ್ರವನ್ನು ಪಠಿಸಿ, ಆ ಯಂತ್ರವನ್ನು ಅಯೋಧ್ಯೆಯಲ್ಲಿ ಹೂಳಿದನು. (ಇಲ್ಲಿ ತಾಯಿಯ ಕುವಿಚಾರವೇ ಬಡಗಿ, ಭರತನಿಗೆ ರಾಜ್ಯವೇ ಬಾಚಿಯು. ರಾಮನ ವನವಾಸವೇ ಕುಯಂತ್ರ. ಹದಿನಾಲ್ಕು ವರ್ಷಗಳ ಅವಧಿಯೇ ಕುಮಂತ್ರವು.) (ಶತ್ರುಗಳನ್ನು ನಾಶಮಾಡಲು ತಾಂತ್ರಿಕರು 'ಮಾಟಮೋಡಿ' ಇಂತಹ ದುಷ್ಟ ಪ್ರಯೋಗಗಳನ್ನು ಮಾಡುತ್ತಾರೆ. ಅಂತಹ ದುಷ್ಟ ವಾಮಾಚಾರ ಪ್ರಯೋಗವನ್ನು ತುಲಸೀದಾಸರು ಕಂಡು ಈ ಸಂದರ್ಭದಲ್ಲಿ ಬರೆದಿರುವರು.) ನನಗಾಗಿ ಆಕೆಯು ಈ ಎಲ್ಲ ಕೆಟ್ಟಹಂಚಿಕೆ ಹೂಡಿ ಜಗತ್ತನ್ನು ಛಿನ್ನಭಿನ್ನವಾಗಿಸಿ ನಾಶಮಾಡಿಬಿಟ್ಟಳು. ಈ ಕುಯೋಗವು ಶ್ರೀರಾಮನು ಹಿಂದಿರುಗಿದಾಗ ಮಾತ್ರ ಇಲ್ಲವಾದೀತು. ಆಗಲೇ ಅಯೋಧ್ಯೆಯು ಉಳಿದೀತು. ಬೇರೆಯಾವ ಉಪಾಯವೂ ಇಲ್ಲ.'' ಭರದ್ವಾಜಮುನಿಗಳು ಭರತನ ವಚನಗಳನ್ನು ಕೇಳಿ ಸಂತುಷ್ಟರಾದರು. ಅವನನ್ನು ಅನೇಕವಿಧದಿಂದ ಪ್ರಶಂಸಿಸಿದರು ಹಾಗೂ ಹೇಳಿದರು – ಮಗೂ ಭರತಾ! ನೀನು ಈ ಪ್ರಕಾರ ವಿಶೇಷವಾಗಿ ಯೋಚಿಸಬೇಡ. ಶ್ರೀರಾಮಚಂದ್ರನ ಚರಣದರ್ಶನ ಮಾಡುತ್ತಲೇ ಎಲ್ಲ ದುಃಖಗಳು ತೊಲಗಿಹೋಗುವವು. (ಚೌ/೧-೪)

**ದೋ – ಕರಿ ಪ್ರಬೋಧು ಮುನಿಬರ ಕಹೆಉ ಅತಿಥಿ ಪೇಮಪ್ರಿಯ ಹೋಹು।**
**ಕಂದ ಮೂಲ ಫಲ ಫೂಲ ಹಮ ದೇಹಿಂ ಲೇಹು ಕರಿ ಛೋಹು॥ ೨೧೨ ॥**

ಈ ವಿಧವಾಗಿ ಸಮಾಧಾನಗೊಳಿಸಿ, ಮುನಿಶ್ರೇಷ್ಠರಾದ ಭರದ್ವಾಜರು ಭರತನಲ್ಲಿ – ''ಈಗ ನೀವುಗಳು ನಮಗೆ ಪ್ರಿಯರಾದ ಅತಿಥಿಗಳು. ನಾವು ನೀಡುವ ಕಂದ, ಮೂಲ, ಫಲ-ಪುಷ್ಪಗಳನ್ನು ದಯವಿಟ್ಟು ಸ್ವೀಕರಿಸಿರಿ. (ದೋ/೨೧೨)

**ಚೌ – ಸುನಿ ಮುನಿ ಬಚನ ಭರತ ಹಿಯಁ ಸೋಚೂ। ಭಯಉ ಕುಅವಸರ ಕಠಿನ ಸಁಕೋಚೂ॥**
**ಜಾನಿ ಗರುಇ ಗುರ ಗಿರಾ ಬಹೋರೀ। ಚರನ ಬಂದಿ ಬೋಲೇ ಕರ ಜೋರೀ॥ ೧ ॥**
**ಸಿರ ಧರಿ ಆಯಸು ಕರಿಅ ತುಮ್ಹಾರಾ। ಪರಮ ಧರಮ ಯಹು ನಾಥ ಹಮಾರಾ॥**
**ಭರತ ಬಚನ ಮುನಿಬರ ಮನ ಭಾಏ। ಸುಚಿ ಸೇವಕ ಸಿಷ ನಿಕಟ ಬೋಲಾಏ॥ ೨ ॥**
**ಚಾಹಿಅ ಕೀನ್ಹಿ ಭರತ ಪಹುನಾಈ। ಕಂದ ಮೂಲ ಫಲ ಆನಹು ಜಾಈ॥**
**ಭಲೇಹಿಂ ನಾಥ ಕಹಿ ತಿನ್ಹ ಸಿರ ನಾಏ। ಪ್ರಮುದಿತ ನಿಜ ನಿಜ ಕಾಜ ಸಿಧಾಏ॥ ೩ ॥**
**ಮುನಿಹಿ ಸೋಚ ಪಾಹುನ ಬಡ ನೇವತಾ। ತಸಿ ಪೂಜಾ ಚಾಹಿಅ ಜಸ ದೇವತಾ॥**
**ಸುನಿ ರಿಧಿ ಸಿಧಿ ಅನಿಮಾದಿಕ ಆಈಂ। ಆಯಸು ಹೋಇ ಸೊ ಕರಹಿಂ ಗೊಸಾಈಂ॥ ೪ ॥**

ಅದನ್ನು ಕೇಳಿ ಭರತನಿಗೆ ಅನ್ನಿಸಿತು – ಇದೇನು? ಈ ಬಿಕ್ಕಟ್ಟಿನ ಪ್ರಸಂಗದಲ್ಲಿ ಮತ್ತೊಂದು ಸಂಕಟ ಬಂದೊದಗಿತಲ್ಲ! ಆದರೆ ಗುರುಗಳ ಆಜ್ಞೆಯನ್ನು ಹೆಚ್ಚಿನದೆಂದು ತಿಳಿದು, ಅವರ ಚರಣಗಳಿಗೆ ವಂದಿಸಿ ಕೈ ಜೋಡಿಸಿ ಹೇಳಿದ – ''ಸ್ವಾಮಿ! ತಮ್ಮ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸುವುದು ನಮಗೆ ಪರಮ ಧರ್ಮವಾಗಿದೆ.'' ಭರತನ ಈ ಮಾತುಗಳು ಮುನಿಯ ಮನವನ್ನು ಮುದಗೊಳಿಸಿದವು. ಅವರು ತಮ್ಮ ನಂಬಿಕಸ್ಥ ಸೇವಕರನ್ನೂ, ಶಿಷ್ಯರನ್ನೂ ಕರೆದು – ಭರತಾದಿಗಳಿಗೆ ಆತಿಥ್ಯವನ್ನು ಮಾಡಲು ಕಂದ, ಮೂಲ, ಫಲ-ಪುಷ್ಪಗಳನ್ನು ತರಬೇಕೆಂದು ಹೇಳಿದರು. ಅವರು ತಲೆವಾಗಿ 'ಅಪ್ಪಣೆ ಗುರುಗಳೇ' ಎಂದು ಹೇಳಿ, ಹರ್ಷದಿಂದ ತಮಗೊಪ್ಪಿಸಿದ ಕಾರ್ಯಕ್ಕಾಗಿ ಹೊರಟುಹೋದರು. ಮುನಿಗಳು ಮನಸ್ಸಿನಲ್ಲೇ ಆಲೋಚಿಸಿದರು – ''ನಾವು ಬಹುದೊಡ್ಡ ಅತಿಥಿಗೆ ಆಮಂತ್ರಿಸಿದ್ದೇವೆ. ಅತಿಥಿದೇವರ ಔನ್ನತ್ಯಸ್ಥಿತಿಯನ್ನು ಗಮನಿಸಿ, ಅವರಿಗೆ ತಕ್ಕದಾದ ಮರ್ಯಾದೆಗಳನ್ನೂ ಮಾಡಬೇಕಲ್ಲ!'' ಮುನಿಗಳ ಆಲೋಚನೆಯನ್ನು ಗ್ರಹಿಸಿ, ಕುಬೇರನ ಸೇವಕರಾದ ಋದ್ಧಿಗಳೂ, ಅಣಿಮಾದಿ ಅಷ್ಟಸಿದ್ಧಿಗಳೂ ಪ್ರತ್ಯಕ್ಷವಾಗಿ – 'ಸ್ವಾಮಿ! ನಮಗೆ ಅಪ್ಪಣೆಯಾಗಲಿ' ಎಂದು ಪ್ರಾರ್ಥಿಸಿಕೊಂಡರು. (ಚೌ/೧-೪)

**ದೋ – ರಾಮ ಬಿರಹ ಬ್ಯಾಕುಲ ಭರತು ಸಾನುಜ ಸಹಿತ ಸಮಾಜ।**
**ಪಹುನಾಈ ಕರಿ ಹರಹು ಶ್ರಮ ಕಹಾ ಮುದಿತ ಮುನಿರಾಜ॥ ೨೧೩ ॥**

ಮುನಿವರ್ಯರು ಪ್ರಸನ್ನರಾಗಿ ಹೇಳಿದರು – ''ಭರತನೂ ಆತನ ಸೋದರನೂ ಆದ ಶತ್ರುಘ್ನನೂ ಅವರ ಇಡೀ ಪರಿವಾರವೂ ಶ್ರೀರಾಮನ ವಿರಹದಲ್ಲಿ ವ್ಯಾಕುಲವಾಗಿದೆ. ಅವರಿಗೆ ತಕ್ಕುದಾದ ಆತಿಥ್ಯ-ಸತ್ಕಾರಗಳನ್ನು ಮಾಡಿ, ಅವರ ಶ್ರಮವನ್ನು ಪರಿಹರಿಸಿರಿ. (ದೋ/೨೧೩)

**ಚೌ – ರಿಧಿ ಸಿಧಿ ಸಿರ ಧರಿ ಮುನಿಬರ ಬಾನೀ। ಬಡಭಾಗಿನಿ ಆಪುಹಿ ಅನುಮಾನೀ॥**
**ಕಹಹಿಂ ಪರಸಪರ ಸಿಧಿ ಸಮುದಾಈ। ಅತುಲಿತ ಅತಿಥಿ ರಾಮ ಲಘು ಭಾಈ॥ ೧ ॥**
**ಮುನಿ ಪದ ಬಂದಿ ಕರಿಅ ಸೋಇ ಆಜೂ। ಹೋಇ ಸುಖೀ ಸಬ ರಾಜ ಸಮಾಜೂ॥**
**ಅಸ ಕಹಿ ರಚೆಉ ರುಚಿರ ಗೃಹ ನಾನಾ। ಜೆಹಿ ಬಿಲೋಕಿ ಬಿಲಖಾಹಿಂ ಬಿಮಾನಾ॥ ೨ ॥**
**ಭೋಗ ಬಿಭೂತಿ ಭೂರಿ ಭರಿ ರಾಖೇ। ದೇಖತ ಜಿನ್ಹಹಿ ಅಮರ ಅಭಿಲಾಷೇ॥**
**ದಾಸೀಂ ದಾಸ ಸಾಜು ಸಬ ಲೀನ್ಹೇಂ। ಜೋಗವತ ರಹಹಿಂ ಮನಹಿ ಮನು ದೀನ್ಹೇಂ॥ ೩ ॥**
**ಸಬ ಸಮಾಜು ಸಜಿ ಸಿಧಿ ಪಲ ಮಾಹೀಂ। ಜೇ ಸುಖ ಸುರಪುರ ಸಪನೆಹುಁ ನಾಹೀಂ॥**
**ಪ್ರಥಮಹಿಂ ಬಾಸ ದಿಏ ಸಬ ಕೇಹೀ। ಸುಂದರ ಸುಖದ ಜಥಾ ರುಚಿ ಜೇಹೀ॥ ೪ ॥**

ಮುನಿವರರ ಆಜ್ಞೆಯನ್ನು ಶಿರಸಾವಹಿಸಿ, ಋದ್ಧಿ-ಸಿದ್ಧಿಗಳು ತಾವು ಧನ್ಯರೆಂದುಕೊಂಡವು. ಅವರು ತಮ್ಮ-ತಮ್ಮಲ್ಲಿ ಅಂದುಕೊಂಡರು – ''ಶ್ರೀರಾಮಚಂದ್ರನ ಸೋದರನಾದ ಭರತನು ಸಾಟಿಯಿಲ್ಲದ ಅತಿಥಿಯು. ಆದ್ದರಿಂದ ಮುನಿಯ ಚರಣಗಳಿಗೆ ವಂದಿಸಿ, ಈ ಇಡೀ ರಾಜಸಮೂಹವು ಸುಖಿಯಾಗುವಂತೆ ಮಾಡಬೇಕು.'' ಈ ರೀತಿ ಮಾತನಾಡಿಕೊಂಡು, ಅವರು ವಿಮಾನಗಳೇ ನಾಚಿಸುವಂತಹ ನಾನಾ ವಿಧವಾದ ಸುಂದರ ಮನೆಗಳನ್ನು ರಚಿಸಿದರು. ಆ ಮನೆಗಳಲ್ಲಿ ಎಲ್ಲ ರೀತಿಯ ಭೋಗಸಾಮಗ್ರಿಗಳನ್ನು ಇಡಲಾಯಿತು. ಅವುಗಳನ್ನು ನೋಡಿ ದೇವತೆಗಳೂ ಜೊಲ್ಲು ಸುರಿಸಿದವು. ಎಲ್ಲ ಪ್ರಕಾರದ ಆತಿಥ್ಯದ ಸಾಮಗ್ರಿಗಳನ್ನು ಹಿಡಿದುಕೊಂಡು, ದಾಸ-ದಾಸಿಯರು ಅತಿಥಿಗಳ ಇಂಗಿತವನ್ನು ನಿರೀಕ್ಷಿಸುತ್ತಿದ್ದರು. ಸ್ವರ್ಗದಲ್ಲಿಯೂ ಸ್ವಪ್ನದಲ್ಲಿಯೂ ಕಾಣದಂತಹ ಸುಖಸಾಮಗ್ರಿಗಳನ್ನು ಸಿದ್ಧಿಗಳು ಕ್ಷಣಮಾತ್ರದಲ್ಲಿ ಅಣಿಗೊಳಿಸಿದರು. ಮೊದಲಿಗೆ ಅವರು ಅವರವರ ರುಚಿಗೆ ತಕ್ಕಂತೆ ವಾಸಗೃಹಗಳನ್ನು ಬಿಟ್ಟುಕೊಟ್ಟರು. (ಚೌ/೧-೪)

**ದೋ – ಬಹುರಿ ಸಪರಿಜನ ಭರತ ಕಹುಁ ರಿಷಿ ಅಸ ಆಯಸು ದೀನ್ಹ।**
**ಬಿಧಿ ಬಿಸಮಯ ದಾಯಕು ಬಿಭವ ಮುನಿಬರ ತಪಬಲ ಕೀನ್ಹ॥ ೨೧೪ ॥**

ಬಳಿಕ ಭರತನಿಗೆ ಹಾಗೂ ಅವನ ಕುಟುಂಬವರ್ಗಕ್ಕೆ ಅದೇ ವಿಧವಾದ ಅವರಿಗೆ ತಕ್ಕುದಾದ ಬಿಡಾರಗಳನ್ನು ಕೊಡಮಾಡಿದರು; ಏಕೆಂದರೆ, ಭರದ್ವಾಜರು ಹಾಗೇ ಅಪ್ಪಣೆ ಕೊಡಿಸಿದ್ದರು. ಮುನೀಶ್ವರರ ತಪೋಬಲಕ್ಕೆ ಬ್ರಹ್ಮನೂ ಕೂಡ ಆಶ್ಚರ್ಯಪಟ್ಟನು. (ದೋ/೨೧೪)

**ಚೌ – ಮುನಿ ಪ್ರಭಾಉ ಜಬ ಭರತ ಬಿಲೋಕಾ। ಸಬ ಲಘು ಲಗೇ ಲೋಕಪತಿ ಲೋಕಾ॥**
**ಸುಖ ಸಮಾಜು ನಹಿಂ ಜಾಇ ಬಖಾನೀ। ದೇಖತ ಬಿರತಿ ಬಿಸಾರಹಿಂ ಗ್ಯಾನೀ॥ ೧ ॥**
**ಆಸನ ಸಯನ ಸುಬಸನ ಬಿತಾನಾ। ಬನ ಬಾಟಿಕಾ ಬಿಹಗ ಮೃಗ ನಾನಾ॥**
**ಸುರಭಿ ಫೂಲ ಫಲ ಅಮಿಅ ಸಮಾನಾ। ಬಿಮಲ ಜಲಾಸಯ ಬಿಬಿಧ ಬಿಧಾನಾ॥ ೨ ॥**

**ಅಸನ ಪಾನ ಸುಚಿ ಅಮಿಅ ಅಮೀ ಸೇ। ದೇಖಿ ಲೋಗ ಸಕುಚಾತ ಜಮೀ ಸೇ॥**
**ಸುರ ಸುರಭೀ ಸುರತರು ಸಬಹೀ ಕೇಂ। ಲಖಿ ಅಭಿಲಾಷು ಸುರೇಸ ಸಚೀ ಕೇಂ॥ ೩॥**
**ರಿತು ಬಸಂತ ಬಹ ತ್ರಿಬಿಧ ಬಯಾರೀ। ಸಬ ಕಹಂ ಸುಲಭ ಪದಾರಥ ಚಾರೀ॥**
**ಸ್ರಕ ಚಂದನ ಬನಿತಾದಿಕ ಭೋಗಾ। ದೇಖಿ ಹರಷ ಬಿಸಮಯ ಬಸ ಲೋಗಾ॥ ೪॥**

ಮುನಿಯ ಪ್ರಭಾವವನ್ನು ಕಂಡ ಭರತನಿಗೆ ಅದರ ಮುಂದೆ ಇಂದ್ರಾದಿ ಲೋಕಪಾಲಕರ ವೈಭವಗಳೂ ಕೂಡ ಅಲ್ಪವೆನಿಸಿದವು. ವರ್ಣನಾತೀತವಾದ ಆ ಸುಖಸಾಮಗ್ರಿಗಳನ್ನು ನೋಡಿ, ಪರಮ ಜ್ಞಾನಿಗಳೂ ಕೂಡ ತಮ್ಮ ವೈರಾಗ್ಯವನ್ನು ಮರೆಯುವಂತಿತ್ತು. ಆಸನ, ಶಯನ, ಸುಂದರವಸನ, ವಿತಾನ, ವನ, ಉಪವನ, ವಿವಿಧ ಪಶು-ಪಕ್ಷಿಗಳೂ, ಸುಗಂಧಿತ ಪುಷ್ಪಗಳೂ, ಅಮೃತದಂತಹ ಸವಿಯಾದ ಫಲಗಳು, ವಿಧವಿಧವಾದ ವಿಮಲ ಜಲಾಶಯಗಳೂ, ಅಮೃತತುಲ್ಯವಾದ ಶುಚಿರುಚಿಯಾದ ಭಕ್ಷ್ಯಭೋಜ್ಯಗಳೂ, ಪಾನೀಯಗಳೂ ಅಣಿಗೊಂಡಿದ್ದವು. ಅವನ್ನು ಕಂಡು ಅಯೋಧ್ಯಾವಾಸಿಗಳು ಸಂಯಮಿಗಳಂತೆ ಅವುಗಳನ್ನು ಬಳಸಲು ಸಂಕೋಚ ಪಡುತ್ತಾ ಇದ್ದರು. ಎಲ್ಲರ ಬಿಡಾರಗಳಲ್ಲಿಯೂ ಕಾಮಧೇನು, ಕಲ್ಪವೃಕ್ಷಗಳು ಇದ್ದವು. ಅವುಗಳನ್ನು ಕಂಡು ದೇವೇಂದ್ರ, ಶಚಿಯರ ಬಾಯಲ್ಲೂ ನೀರು ಬರುತ್ತಿತ್ತು. ವಸಂತ ಋತುವಿನಂತೆ ಶೀತಲ ಮಂದ ಸುಗಂಧ ವಾಯುಗಳು ಬೀಸುತ್ತಿದ್ದವು. ಎಲ್ಲರಿಗೂ ಚತುರ್ವಿಧ ಫಲಗಳು ಅಲ್ಲಿ ಸುಲಭವಾಗಿ ದೊರೆಯುತ್ತಿತ್ತು. ವನಿತಾದಿ ಎಲ್ಲ ಭೋಗ್ಯವಸ್ತುಗಳನ್ನು ನೋಡಿ, ಜನರೆಲ್ಲರೂ ಹರ್ಷ, ವಿಷಾದಕ್ಕೆ ಒಳಗಾದರು. (ಮುನಿಗಳ ತಪಃಪ್ರಭಾವವನ್ನು ಭೋಗಸಾಮಗ್ರಿಗಳನ್ನು ನೋಡಿ ಹರ್ಷವಾದರೆ, ಶ್ರೀರಾಮವಿಯೋಗದಲ್ಲಿ ವ್ರತ-ನಿಯಮದಲ್ಲಿ ಇರುವ ನಾವುಗಳು ಭೋಗವಿಲಾಸದಲ್ಲಿ ಏಕೆ ಸಿಕ್ಕಿಹಾಕಿಕೊಂಡೆವು? ಎಂದು ವಿಷಾದಪಟ್ಟರು.) (ಚೌ/೧-೪)

**ದೋ – ಸಂಪತಿ ಚಕಈ ಭರತು ಚಕ ಮುನಿ ಆಯಸ ಖೆಲವಾರ।**
**ತೇಹಿ ನಿಸಿ ಆಶ್ರಮ ಪಿಂಜರಾಂ ರಾಖೇ ಭಾ ಭಿನುಸಾರ॥ ೨೧೫॥**

ಈ ಭೋಗಸಾಮಗ್ರಿಗಳು ಹೆಣ್ಣು ಚಕ್ರವಾಕ ಪಕ್ಷಿಯಂತೆ, ಭರತನು ಗಂಡು ಚಕ್ರವಾಕ ಪಕ್ಷಿಯಂತೆ. ಆ ರಾತ್ರಿ ಆಶ್ರಮವೆಂಬ ಪಂಜರದಲ್ಲಿ ಎರಡನ್ನೂ ಅಡಗಿಸಿಟ್ಟ ಆಟವೇ ಮುನಿಯ ಆಜ್ಞೆ. (ಭರದ್ವಾಜ ಮುನಿಯ ಆಜ್ಞೆಯ ಪ್ರಕಾರ ಭೋಗಸಾಮಗ್ರಿಗಳೇನೋ ರಾತ್ರಿಯೆಲ್ಲ ಹತ್ತಿರವೇ ಇದ್ದವು. ಆದರೆ ಭರತನು ಅವುಗಳನ್ನು ಕನಸು-ಮನಸಿನಲ್ಲಿಯೂ ಮುಟ್ಟಲಿಲ್ಲ.) ಹೀಗಿರುತ್ತಲೇ ಬೆಳಗಾಯಿತು. (ದೋ/೨೧೫)

### ಮಾಸಪಾರಾಯಣದ ಹತ್ತೊಂಭತ್ತನೆಯ ವಿಶ್ರಾಮ

**ಚೌ – ಕೀನ್ಹ ನಿಮಜ್ಜನು ತೀರಥರಾಜಾ। ನಾಇ ಮುನಿಹಿ ಸಿರು ಸಹಿತ ಸಮಾಜಾ॥**
**ರಿಷಿ ಆಯಸು ಅಸೀಸ ಸಿರ ರಾಖೀ। ಕರಿ ದಂಡವತ ಬಿನಯ ಬಹು ಭಾಷೀ॥ ೧॥**
**ಪಥ ಗತಿ ಕುಸಲ ಸಾಥ ಸಬ ಲೀನ್ಹೇಂ। ಚಲೇ ಚಿತ್ರಕೂಟಹಿಂ ಚಿತು ದೀನ್ಹೇಂ॥**
**ರಾಮಸಖಾ ಕರ ದೀನ್ಹೇಂ ಲಾಗೂ। ಚಲತ ದೇಹ ಧರಿ ಜನು ಅನುರಾಗೂ॥ ೨॥**
**ನಹಿಂ ಪದ ತ್ರಾನ ಸೀಸ ನಹಿಂ ಛಾಯಾ। ಪೇಮು ನೇಮು ಬ್ರತು ಧರಮು ಅಮಾಯಾ॥**
**ಲಖನ ರಾಮ ಸಿಯ ಪಂಥ ಕಹಾನೀ। ಪೂಂಛತ ಸಖಹಿ ಕಹತ ಮೃದು ಬಾನೀ॥ ೩॥**
**ರಾಮ ಬಾಸ ಥಲ ಬಿಟಪ ಬಿಲೋಕೇಂ। ಉರ ಅನುರಾಗ ರಹತ ನಹಿಂ ರೋಕೇಂ॥**
**ದೇಖಿ ದಸಾ ಸುರ ಬರಿಸಹಿಂ ಫೂಲಾ। ಭಇ ಮೃದು ಮಹಿ ಮಗು ಮಂಗಲ ಮೂಲಾ॥ ೪॥**

ಪ್ರಾತಃಕಾಲದಲ್ಲಿ ಭರತನು ತೀರ್ಥರಾಜ ತ್ರಿವೇಣಿಸಂಗಮದಲ್ಲಿ ಸ್ನಾನಮಾಡಿದನು. ಸಪರಿವಾರಸಹಿತ ವಿನಯದಿಂದ ಮುನಿಗಳಿಗೆ ಸಾಷ್ಟಾಂಗ ನಮಸ್ಕಾರಗೈದು, ಅವರ ಅಪ್ಪಣೆಯನ್ನೂ, ಆಶೀರ್ವಾದವನ್ನೂ ಶಿರಸಾವಹಿಸಿಕೊಂಡನು. ಅನಂತರ ಪಥಪ್ರದರ್ಶಕರೊಂದಿಗೆ ಎಲ್ಲರನ್ನು ಕರೆದುಕೊಂಡು ಭರತನು ಚಿತ್ರಕೂಟದಲ್ಲೇ ಮನನೆಟ್ಟು ಹೊರಟನು. ಸಾಕ್ಷಾತ್ ರಾಮಪ್ರೇಮವೇ ಮೈವೆತ್ತಿದಂತೆ ರಾಮಸಖನಾದ ಗುಹನ ಕೈಹಿಡಿದುಕೊಂಡು ಭರತನು ಮುಂದರಿಯುತ್ತಿದ್ದನು. ಅವನ ಕಾಲುಗಳಲ್ಲಿ ಪಾದರಕ್ಷೆಗಳಾಗಲೀ, ತಲೆಯ ಮೇಲೆ ಛತ್ರಿಯಾಗಲೀ ಇರಲಿಲ್ಲ. ಅವನ ಪ್ರೇಮ, ನಿಯಮ, ವ್ರತ, ಧರ್ಮ – ಇವೆಲ್ಲವು ನಿಷ್ಕಪಟವಾಗಿದ್ದವು. ಅವನು ಗೆಳೆಯ ನಿಷಾದರಾಜನೊಡನೆ ಲಕ್ಷ್ಮಣ, ಸೀತಾರಾಮರ ದಾರಿಯ ಸುದ್ದಿಯನ್ನು ಕೇಳುತ್ತಾನೆ; ಅದಕ್ಕೆ ಗುಹನು ಮೃದುಮಧುರವಾಗಿ ಹೇಳುತ್ತಾ ನಡೆಯುತ್ತಿದ್ದರು. ಶ್ರೀರಾಮನು ತಂಗಿದ್ದ ತಾಣಗಳನ್ನೂ, ವೃಕ್ಷಗಳನ್ನೂ ಕಂಡು ಅವನ ಹೃದಯ ಪ್ರೇಮದಿಂದ ತುಂಬಿಬರುತ್ತಿತ್ತು. ಭರತನ ಈ ದೆಸೆಯನ್ನು ಕಂಡು ದೇವತೆಗಳು ಹೂಮಳೆ ಸುರಿಸಿದರು. ಪೃಥ್ವಿಯು ಕೋಮಲವಾಯಿತು. ದಾರಿಯು ಮಂಗಳಕರವಾಗಿ ಸುಖಪ್ರದವಾಯಿತು. (ಚೌ/೧-೪)

**ದೋ – ಕಿಏಁ ಜಾಹಿಁ ಛಾಯಾ ಜಲದ ಸುಖದ ಬಹಇ ಬರ ಬಾತ।**
**ತಸ ಮಗು ಭಯಉ ನ ರಾಮ ಕಹಁ ಜಸ ಭಾ ಭರತಹಿ ಜಾತ ॥ ೨೧೬॥**

ಮೋಡಗಳು ನೆರಳು ನೀಡುತ್ತಿದ್ದವು. ಸುಖಕರ ಗಾಳಿಯು ಬೀಸುತ್ತಾ ಶ್ರಮ ಪರಿಹರಿಸುತ್ತಿತ್ತು. ಭರತನ ಪ್ರಯಾಣವು ಶ್ರೀರಾಮನ ಪ್ರಯಾಣಕ್ಕಿಂತಲೂ ಸುಖಕರವಾಗಿತ್ತು. (ದೋ/೨೧೬)

**ಚೌ – ಜಡ ಚೇತನ ಮಗ ಜೀವ ಘನೇರೇ। ಜೇ ಚಿತಏ ಪ್ರಭು ಜಿನ್ಹ ಪ್ರಭು ಹೇರೇ ॥**
**ತೇ ಸಬ ಭಏ ಪರಮ ಪದ ಜೋಗೂ। ಭರತ ದರಸ ಮೇಟಾ ಭವ ರೋಗೂ ॥ ೧ ॥**
**ಯಹ ಬಡಿ ಬಾತ ಭರತ ಕಇ ನಾಹೀಂ। ಸುಮಿರತ ಜಿನಹಿ ರಾಮು ಮನ ಮಾಹೀಂ ॥**
**ಬಾರಕ ರಾಮ ಕಹತ ಜಗ ಜೇಊ। ಹೋತ ತರನ ತಾರನ ನರ ತೇಊ ॥ ೨ ॥**
**ಭರತು ರಾಮ ಪ್ರಿಯ ಪುನಿ ಲಘು ಭ್ರಾತಾ। ಕಸ ನ ಹೋಇ ಮಗು ಮಂಗಲದಾತಾ ॥**
**ಸಿದ್ಧ ಸಾಧು ಮುನಿಬರ ಅಸ ಕಹಹೀಂ। ಭರತಹಿ ನಿರಖಿ ಹರಷು ಹಿಯಁ ಲಹಹೀಂ ॥ ೩ ॥**
**ದೇಖಿ ಪ್ರಭಾಉ ಸುರೇಸಹಿ ಸೋಚೂ। ಜಗು ಭಲ ಭಲೇಹಿ ಪೋಚ ಕಹುಁ ಪೋಚೂ ॥**
**ಗುರ ಸನ ಕಹೇಉ ಕರಿಅ ಪ್ರಭು ಸೋಈ। ರಾಮಹಿ ಭರತಹಿ ಭೇಟ ನ ಹೋಈ ॥ ೪ ॥**

ದಾರಿಯಲ್ಲಿ ಶ್ರೀರಾಮನು ನೋಡಿದ, ಅವನನ್ನು ನೋಡಿದ ಜಡ-ಚೇತನ ಜೀವಿಗಳೆಲ್ಲ ತತ್‌ಕ್ಷಣದಲ್ಲೇ ಮೋಕ್ಷದ ಅಧಿಕಾರವನ್ನು ಪಡೆದುಕೊಂಡರು. ಆದರೆ ಈಗ ಭರತನ ದರ್ಶನದಿಂದ ಅವುಗಳ ಭವರೋಗವೇ ತೊಲಗಿಹೋಯಿತು. ಅಂದರೆ, ಅವುಗಳಿಗೆ ಪರಮಪದವೇ ಪ್ರಾಪ್ತವಾಯಿತು. ಭರತನಿಗೆ ಇದೇನು ದೊಡ್ಡ ವಿಷಯವಲ್ಲ. ಸ್ವತಃ ಶ್ರೀರಾಮನು ಅವನನ್ನು ತನ್ನ ಮನದಲ್ಲಿ ನೆನೆಯುತ್ತಿದ್ದ. ಈ ಪ್ರಪಂಚದಲ್ಲಿ ಯಾರೇ ಆಗಲಿ ಒಂದು ಬಾರಿಯಾದರೂ 'ಶ್ರೀರಾಮ' ಎಂದರೆ ಸಾಕು ಅವರು ತಾನು ಉದ್ಧಾರವಾಗುವುದಲ್ಲದೆ ಬೇರೆಯವರನ್ನೂ ಉದ್ಧರಿಸುತ್ತಾರೆ. ಭರತನಾದರೋ ಶ್ರೀರಾಮನಿಗೆ ಪ್ರೀತಿಪಾತ್ರನು, ಹಾಗೂ ಅವನಿಗೆ ತಮ್ಮನು. ಅಂತಹವನಿಗೆ ಮಾರ್ಗವು ಮಂಗಳದಾಯಕವಾಗದೆ ಬೇರೇನಾದೀತು? ಎಂದು ಸಿದ್ಧರೂ, ಸಾಧುಗಳೂ, ಮುನಿಗಳೂ ಕೊಂಡಾಡುತ್ತಾ, ಭರತನನ್ನು ಕಂಡು ಹರ್ಷಿತರಾಗುತ್ತಿದ್ದರು.

ಭರತನ ಈ ಪ್ರೇಮಪಾರವಶ್ಯವನ್ನು ಕಂಡು ಇಂದ್ರನಿಗೆ– 'ಭರತನ ಪ್ರೇಮಕ್ಕೆ ವಶನಾದ ಶ್ರೀರಾಮನು ಎಲ್ಲಾದರೂ ಅಯೋಧ್ಯೆಗೆ ಮರಳಿದರೆ ನಮ್ಮ ಕೆಲಸ ಕೆಟ್ಟುಹೋಗುತ್ತದಲ್ಲ!' ಎಂಬ ಭಯವಾವರಿಸಿತು. ಈ ಪ್ರಪಂಚವು ಒಳ್ಳೆಯವರಿಗೆ ಒಳ್ಳೆಯದಾಗಿ, ಕೆಟ್ಟವರಿಗೆ ಕೆಟ್ಟದಾಗಿ ಕಂಡುಬರುತ್ತದೆ. ದೇವೇಂದ್ರನು ತನ್ನ ಗುರುಗಳಾದ ಬೃಹಸ್ಪತ್ಯಾಚಾರ್ಯರ ಬಳಿಗೆ ಬಂದು – ''ಸ್ವಾಮಿ! ಶ್ರೀರಾಮ ಮತ್ತು ಭರತರು ಪರಸ್ಪರ ಸಂಧಿಸದಂತೆ ಏನಾದರೂ ಉಪಾಯಮಾಡಿರಿ. (ಚೌ/೧-೪)

**ದೋ – ರಾಮು ಸಁಕೋಚೀ ಪ್ರೇಮ ಬಸ ಭರತ ಸಪೇಮ ಪಯೋಧಿ।**
**ಬನೀ ಬಾತ ಬೆಗರನ ಚಹತಿ ಕರಿಅ ಜತನು ಛಲು ಸೋಧಿ ॥ ೨೧೭ ॥**

ಶ್ರೀರಾಮನು ಸಂಕೋಚ ಹಾಗೂ ಪ್ರೇಮಕ್ಕೆ ವಶನಾಗುವವನು. ಭರತನು ಪ್ರೇಮದ ಸಮುದ್ರನಾಗಿರುವನು. ಇಷ್ಟರವರೆಗೆ ನಾವು ಗೈದ ಪ್ರಯಾಸವೆಲ್ಲವೂ ವ್ಯರ್ಥವಾದೀತು. ಅದಕ್ಕಾಗಿ ಏನಾದರೊಂದು ಕಪಟೋಪಾಯವನ್ನು ಹುಡುಕಿರಿ'' ಎಂದು ವಿನಂತಿಸಿಕೊಂಡನು.'' (ದೋ/೨೧೭)

**ಚೌ – ಬಚನ ಸುನತ ಸುರಗುರು ಮುಸುಕಾನೇ। ಸಹಸನಯನ ಬಿನು ಲೋಚನ ಜಾನೇ ॥**
**ಮಾಯಾಪತಿ ಸೇವಕ ಸನ ಮಾಯಾ। ಕರಇ ತ ಉಲಟಿ ಪರಇ ಸುರರಾಯಾ ॥ ೧ ॥**
**ತಬ ಕಿಛು ಕೀನ್ಹ ರಾಮ ರುಖ ಜಾನೀ। ಅಬ ಕುಚಾಲಿ ಕರಿ ಹೋಇಹಿ ಹಾನೀ ॥**
**ಸುನು ಸುರೇಸ ರಘುನಾಥ ಸುಭಾಊ। ನಿಜ ಅಪರಾಧ ರಿಸಾಹಿಁ ನ ಕಾಊ ॥ ೨ ॥**
**ಜೋ ಅಪರಾಧು ಭಗತ ಕರ ಕರಈ। ರಾಮ ರೋಷ ಪಾವಕ ಸೋ ಜರಈ ॥**
**ಲೋಕಹುಁ ಬೇದ ಬಿದಿತ ಇತಿಹಾಸಾ। ಯಹ ಮಹಿಮಾ ಜಾನಹಿಁ ದುರಬಾಸಾ ॥ ೩ ॥**
**ಭರತ ಸರಿಸ ಕೋ ರಾಮ ಸನೇಹೀ। ಜಗು ಜಪ ರಾಮ ರಾಮು ಜಪ ಜೇಹೀ ॥ ೪ ॥**

ಇಂದ್ರನ ಮಾತನ್ನು ಕೇಳುತ್ತಲೇ ದೇವಗುರು ಬೃಹಸ್ಪತ್ಯಾಚಾರ್ಯರು ಮುಗುಳ್ನಕ್ಕರು. ಈತ ಸಾವಿರಕಣ್ಣುಗಳಿದ್ದರೂ ಕುರುಡನಾಗಿಯೇ ಇದ್ದಾನಲ್ಲ! ಎಂದೆನಿಸಿ, ಇಂತೆಂದರು– '' ಎಲೈ ದೇವೇಂದ್ರಾ! ಮಾಯಾಪತಿಯಾದ ಶ್ರೀರಾಮನ ಸೇವಕರೊಂದಿಗೆ

ನೀನು ಮಾಯೆಯಿಂದ ವರ್ತಿಸಿದ್ದಾದರೆ, ಆ ಮಾಯೆಯು ನಿನ್ನ ಕೊರಳಿಗೆ ಉರುಳಾಗುವುದು. ಹಿಂದೆ ರಾಜ್ಯಾಭಿಷೇಕದ ಸಂದರ್ಭದಲ್ಲಿ ಶ್ರೀರಾಮನ ಸಂಕಲ್ಪಾನುಸಾರವೇ ಮಾಡಿದ್ದೆವು. ಆದರೆ ಈಗ ಅವನಿಗೆ ವಿರುದ್ಧವಾಗಿ ಏನಾದರೂ ಮಾಡಿದರೆ ಅದರಿಂದ ಹಾನಿಯೇ ಆದೀತು. ಇಂದ್ರನೇ! ರಘುನಾಥನ ಸ್ವಭಾವವನ್ನು ತಿಳಿದುಕೋ. ಅವನು ತನಗೆ ಯಾರಾದರೂ ಅಪಚಾರವನ್ನೆಸಗಿದರೆ ಅದರಿಂದ ಅವನು ಖಂಡಿತ ಸಿಟ್ಟಾಗುವುದಿಲ್ಲ. ಆದರೆ ಯಾರಾದರೂ ಅವನ ಭಕ್ತರಿಗೆ ಅಪರಾಧಗೈದರೆ ಮಾತ್ರ ಅವನು ಶ್ರೀರಾಮನ ಕ್ರೋಧಾಗ್ನಿಯಲ್ಲಿ ಬೆಂದುಹೋದಾನು. ಈ ಮಹಿಮೆಯನ್ನು ದುರ್ವಾಸರು ಬಲ್ಲರು. ಈ ಇತಿಹಾಸವು ವೇದದಲ್ಲಿ ಹಾಗೂ ಲೋಕದಲ್ಲಿ ಪ್ರಸಿದ್ಧವಿದೆ. ಇಡೀ ಜಗತ್ತು ಶ್ರೀರಾಮನನ್ನು ಜಪಿಸುತ್ತದೆ. ಅಂತಹ ರಾಮನು ಭರತನನ್ನು ನೆನೆಯುತ್ತಾನೆ. ಅಂತಹ ಭರತನಿಗೆ ಎಣೆಯಾದ ರಾಮಪ್ರೇಮಿಯು ಯಾರಿದ್ದಾರೆ? (ಚೌ/೧-೪)

**ದೋ – ಮನಹುँ ನ ಆನಿಅ ಅಮರಪತಿ ರಘುಬರ ಭಗತ ಅಕಾಜು ।**
**ಅಜಸು ಲೋಕ ಪರಲೋಕ ದುಖ ದಿನ ದಿನ ಸೋಕ ಸಮಾಜು ॥ ೨೧೮ ॥**

ದೇವೇಂದ್ರಾ! ರಘುಕುಲಶ್ರೇಷ್ಠನಾದ ಶ್ರೀರಾಮಚಂದ್ರನ ಭಕ್ತನ ಕೆಲಸವನ್ನು ಕೆಡಿಸುವ ಮಾತು ಮನಸ್ಸಿನಲ್ಲಿಯೂ ಯೋಚಿಸಬೇಡ. ಹಾಗೆ ಮಾಡುವುದರಿಂದ ಇಹದಲ್ಲಿ ಅಪಕೀರ್ತಿ, ಪರದಲ್ಲಿ ದುಃಖ ಉಂಟಾದೀತು. ಶೋಕವು ದಿನೇ-ದಿನೇ ಹೆಚ್ಚುತ್ತಲೇ ಹೋದೀತು. (ದೋ/೨೧೮)

**ಚೌ – ಸುನು ಸುರೇಸ ಉಪದೇಸು ಹಮಾರಾ । ರಾಮಹಿ ಸೇವಕು ಪರಮ ಪಿಆರಾ ॥**
**ಮಾನತ ಸುಖು ಸೇವಕ ಸೇವಕಾಈँ । ಸೇವಕ ಬೈರ ಬೈರು ಅಧಿಕಾಈँ ॥ ೧ ॥**
**ಜದ್ಯಪಿ ಸಮ ನಹಿँ ರಾಗ ನ ರೋಷೂ । ಗಹಹಿँ ನ ಪಾಪ ಪೂನು ಗುನ ದೋಷೂ ॥**
**ಕರಮ ಪ್ರಧಾನ ಬಿಸ್ವ ಕರಿ ರಾಖಾ । ಜೋ ಜಸ ಕರಇ ಸೊ ತಸ ಫಲು ಚಾಖಾ ॥ ೨ ॥**
**ತದಪಿ ಕರಹಿँ ಸಮ ಬಿಷಮ ಬಿಹಾರಾ । ಭಗತ ಅಭಗತ ಹೃದಯ ಅನುಸಾರಾ ॥**
**ಅಗುನ ಅಲೇಪ ಅಮಾನ ಏಕರಸ । ರಾಮು ಸಗುನ ಭಏ ಭಗತ ಪೇಮ ಬಸ ॥ ೩ ॥**
**ರಾಮ ಸದಾ ಸೇವಕ ರುಚಿ ರಾಖೀ । ಬೇದ ಪುರಾನ ಸಾಧು ಸುರ ಸಾಖೀ ॥**
**ಅಸ ಜಿಯँ ಜಾನಿ ತಜಹು ಕುಟಿಲಾಈ । ಕರಹು ಭರತ ಪದ ಪ್ರೀತಿ ಸುಹಾಈ ॥ ೪ ॥**

ಇಂದ್ರನೇ! ನನ್ನ ಉಪದೇಶವನ್ನು ಕೇಳು. ಶ್ರೀರಾಮನಿಗೆ ತನ್ನ ಸೇವಕನು ಅತ್ಯಂತ ಪ್ರಿಯನಾಗಿರುವನು. ತನ್ನ ಭಕ್ತರನ್ನು ಸೇವಿಸಿದವರ ಮೇಲೆ ಅವನು ಪ್ರಸನ್ನನಾಗುವನು. ತನ್ನ ಸೇವಕರೊಡನೆ ವೈರವನ್ನು ಕಟ್ಟಿಕೊಂಡವನನ್ನು ಶತ್ರುವೆಂದೇ ಭಾವಿಸುವನು. ಹೀಗಿದ್ದರೂ ಶ್ರೀರಾಮನು ರಾಗ-ದ್ವೇಷಗಳಿಗೆ ಅತೀತನು. ಇತರರ ಪಾಪ-ಪುಣ್ಯಗಳಾಗಲೀ, ಗುಣ-ದೋಷಗಳಾಗಲೀ ಅವನು ಗ್ರಹಿಸುವುದಿಲ್ಲ. ವಿಶ್ವದಲ್ಲಿ ಜೀವಿಗಳ ಸುಖ-ದುಃಖಗಳಿಗೆ ಕರ್ಮವೇ ಪ್ರಧಾನಕಾರಣವು. ಯಾರು ಯಾವ ಕರ್ಮಗಳನ್ನಾಚರಿಸುವರೋ, ಅವರು ಅದಕ್ಕೆ ತಕ್ಕದಾದ ಫಲವನ್ನೇ ಅನುಭವಿಸುವರು. 'ಮಾಡಿದ್ದುಣ್ಣೋ ಮಹರಾಯ'. ಆದರೂ ಅವನು ಭಕ್ತರು – ಅಭಕ್ತರಿಗನುಗುಣವಾಗಿ ಸಮ ಹಾಗೂ ವಿಷಮವಾಗಿ ವರ್ತಿಸುವನು. (ಭಕ್ತರನ್ನು ಪ್ರೇಮದಿಂದ ಆಲಿಂಗಿಸಿಕೊಳ್ಳುತ್ತಾನೆ. ಅಭಕ್ತರನ್ನು ಶಿಕ್ಷಿಸಿ ಅವರನ್ನು ಉದ್ಧರಿಸುತ್ತಾನೆ.) ಶ್ರೀರಾಮನು ತ್ರಿಗುಣಾತೀತನೂ, ನಿಸ್ಸಂಗನೂ, ನಿರಹಂಕಾರಿಯೂ, ಶಾಶ್ವತನೂ, ಏಕರಸನೂ ಆಗಿದ್ದರೂ ಭಕ್ತರ ಪ್ರೇಮಕ್ಕೆ ವಶನಾಗಿ ಸಗುಣನಾಗಿದ್ದಾನೆ. ಶ್ರೀರಾಮನು ಯಾವಾಗಲೂ ತನ್ನ ಭಕ್ತರ ಅಭಿರುಚಿಯನ್ನು ನಡೆಸಿಕೊಂಡು ಬಂದಿರುವನು. ವೇದ, ಪುರಾಣಗಳು, ಸಾಧು-ಸಂತರು, ಸುರರು ಇದಕ್ಕೆ ಸಾಕ್ಷಿಯಾಗಿದ್ದಾರೆ. ಇದೆಲ್ಲವನ್ನು ಮನಗಂಡು, ನಿನ್ನ ವಕ್ರಬುದ್ಧಿಯನ್ನು ತೊರೆ. ಭರತನ ಚರಣಗಳಲ್ಲಿ ಚೆನ್ನಾದ ಪ್ರೀತಿಯನ್ನಿಡು. (ಚೌ/೧-೪)

**ದೋ – ರಾಮ ಭಗತ ಪರಹಿತ ನಿರತ ಪರ ದುಖ ದುಖೀ ದಯಾಲ ।**
**ಭಗತ ಸಿರೋಮನಿ ಭರತ ತೇँ ಜನಿ ಡರಪಹು ಸುರಪಾಲ ॥ ೨೧೯ ॥**

ಎಲೈ ಸುರೇಂದ್ರಾ! ರಾಮಭಕ್ತರು ಯಾವಾಗಲೂ ಪರಹಿತನಿರತರು. ಅವರು ಪರರ ದುಃಖದಲ್ಲಿ ದುಃಖಿಗಳಾಗುತ್ತಾರೆ ಹಾಗೂ ದಯಾಳುಗಳಾಗಿರುತ್ತಾರೆ. ಭರತನಾದರೋ ಭಕ್ತಶಿರೋಮಣಿ. ಆದರಿಂದ ಆತನನ್ನು ನೋಡಿ ಭಯಪಡಬೇಕಾಗಿಲ್ಲ. (ದೋ/೨೧೯)

**ಚೌ – ಸತ್ಯಸಂಧ ಪ್ರಭು ಸುರ ಹಿತಕಾರೀ । ಭರತ ರಾಮ ಆಯಸ ಅನುಸಾರೀ ॥**
**ಸ್ವಾರಥ ಬಿಬಸ ಬಿಕಲ ತುಮ್ಹ ಹೋಹೂ । ಭರತ ದೋಸು ನಹಿ ರಾಉರ ಮೋಹೂ ॥ ೧ ॥**
**ಸುನಿ ಸುರಬರ ಸುರಗುರ ಬರ ಬಾನೀ । ಭಾ ಪ್ರಮೋದು ಮನ ಮಿಟೀ ಗಲಾನೀ ॥**
**ಬರಷಿ ಪ್ರಸೂನ ಹರಷಿ ಸುರರಾಊ । ಲಗೇ ಸರಾಹನ ಭರತ ಸುಭಾಊ ॥ ೨ ॥**

**ಎಹಿ ಬಿಧಿ ಭರತ ಚಲೇ ಮಗ ಜಾಹೀಂ। ದಸಾ ದೇಖಿ ಮುನಿ ಸಿದ್ಧ ಸಿಹಾಹೀಂ॥**
**ಜಬಹಿಂ ರಾಮು ಕಹಿ ಲೇಹಿಂ ಉಸಾಸಾ। ಉಮಗತ ಪೇಮು ಮನಹುಂ ಚಹು ಪಾಸಾ॥ ೩ ॥**
**ದ್ರವಹಿಂ ಬಚನ ಸುನಿ ಕುಲಿಸ ಪಷಾನಾ। ಪುರಜನ ಪೇಮು ನ ಜಾಇ ಬಖಾನಾ॥**
**ಬೀಚ ಬಾಸ ಕರಿ ಜಮುನಹಿಂ ಆಏ। ನಿರಖಿ ನೀರು ಲೋಚನ ಜಲ ಛಾಏ॥ ೪ ॥**

ಪ್ರಭು ರಾಮಚಂದ್ರನು ಸತ್ಯಸಂಧನು. ದೇವತೆಗಳಿಗೆ ಹಿತವನ್ನು ಮಾಡುವವನು. ಭರತನು ಶ್ರೀರಾಮನ ಆಜ್ಞೆಗನುಸಾರವಾಗಿ ನಡೆಯುವವನು. ನೀನು ವ್ಯರ್ಥವಾಗಿ ಸ್ವಾರ್ಥವಶನಾಗಿ ತಲೆಕೆಡಿಸಿಕೊಳ್ಳಬೇಡ. ಇದರಲ್ಲಿ ಭರತನದೇನೂ ದೋಷವಿಲ್ಲ. ಇದು ನಿನ್ನ ಅಜ್ಞಾನಮಾತ್ರವಾಗಿದೆ.'' ದೇವಗುರು ಬೃಹಸ್ಪತಿಗಳು ಆಡಿದ ಹಿತದ ಮಾತನ್ನು ಕೇಳಿದ ಇಂದ್ರನ ಮನಸ್ಸಿನಲ್ಲಿ ತುಂಬಾ ಆನಂದವಾಗಿ, ಅವನ ಚಿಂತೆಯು ತೊಲಗಿತು. ಅವನು ಅತ್ಯಂತ ಹರ್ಷಿತನಾಗಿ ಭರತನ ಸ್ವಭಾವವನ್ನು ಹೊಗಳುತ್ತಾ ಹೂಮಳೆಗರೆದನು.

ಈ ಪ್ರಕಾರ ಭರತನು ಮುಂದಕ್ಕೆ ಸಾಗುತ್ತಿರುವನು. ಅವನ ಪ್ರೇಮಮಗ್ನ ದೆಸೆಯನ್ನು ನೋಡಿದ ಮುನಿಗಳೂ, ಸಿದ್ಧರೂ ಅವನನ್ನು ಕೊಂಡಾಡುತ್ತಿದ್ದಾರೆ. ಭರತನು 'ರಾಮಾಽ!' ಎಂದು ಹೇಳಿ ನಿಟ್ಟುಸಿರುಬಿಟ್ಟಾಗ ಪ್ರೇಮವು ನಾಲ್ಕೂಕಡೆಗೂ ಹೊರಚೆಲ್ಲಿದಂತೆ ಭಾಸವಾಗುತ್ತಿತ್ತು. ಅವನ ಪ್ರೇಮ ಹಾಗೂ ದೀನತೆಯಿಂದೊಡಗೂಡಿದ ಮಾತನ್ನು ಕೇಳಿ, ವಜ್ರ ಹಾಗೂ ಕಲ್ಲುಗಳೂ ಕರಗಿಹೋಗುತ್ತಿದ್ದವು. ಅಯೋಧ್ಯಾನಿವಾಸಿಗಳ ರಾಮನ ಮೇಲೆ ಇರುವ ಪ್ರೇಮವು ವರ್ಣನಾತೀತ. ನಡು-ನಡುವೆ ಅಲ್ಲಲ್ಲಿ ತಂಗಿ ಭರತನು ಯಮುನಾನದಿಯ ತೀರಕ್ಕೆ ಬಂದನು. ಯಮುನೆಯ ನೀರನ್ನು ಕಂಡು ಅವನ ಕಂಗಳಲ್ಲಿ ನೀರು ಉಕ್ಕಿಬಂತು. (ಚೌ/೧-೪)

**ದೋ – ರಘುಬರ ಬರನ ಬಿಲೋಕಿ ಬರ ಬಾರಿ ಸಮೇತ ಸಮಾಜ।**
**ಹೋತ ಮಗನ ಬಾರಿಧಿ ಬಿರಹ ಚಢೇ ಬಿಬೇಕ ಜಹಾಜ॥ ೨೨೦ ॥**

ಶ್ರೀರಾಮವಿರಹ ಸಮುದ್ರದಲ್ಲಿ ಮುಳುಗಿದ ಭರತನು, ಆತನ ಪರಿವಾರವು ಶ್ಯಾಮಲವರ್ಣಶೋಭಿತವಾದ ಯಮುನಾನದಿಯ ಜಲವನ್ನು ಕಂಡು ಪ್ರೇಮವಿಹ್ವಲರಾದರು. ಬಳಿಕ ಅವರು ವಿವೇಕವೆಂಬ ದೋಣಿಯನ್ನು ಹತ್ತಿ ಶ್ರೀರಾಮನ ದರ್ಶನಕ್ಕಾಗಿ ಉತ್ಸಾಹಿತರಾದರು. (ದೋ/೨೨೦)

**ಚೌ – ಜಮುನ ತೀರ ತೆಹಿ ದಿನ ಕರಿ ಬಾಸೂ। ಭಯಉ ಸಮಯ ಸಮ ಸಬಹಿ ಸುಪಾಸೂ॥**
**ರಾತಿಹಿಂ ಘಾಟ ಘಾಟ ಕೀ ತರನೀ। ಆಈಂ ಅಗನಿತ ಜಾಹಿಂ ನ ಬರನೀ॥ ೧ ॥**
**ಪ್ರಾತಪಾರ ಭಏ ಏಕಹಿ ಖೇವಾಂ। ತೋಷೇ ರಾಮಸಖಾ ಕೀ ಸೇವಾಂ॥**
**ಚಲೇ ನಹಾಇ ನದಿಹಿ ಸಿರ ನಾಈ। ಸಾಥ ನಿಷಾದನಾಥ ದೋಉ ಭಾಈ॥ ೨ ॥**
**ಆಗೇಂ ಮುನಿಬರ ಬಾಹನ ಆಛೇಂ। ರಾಜಸಮಾಜ ಜಾಇ ಸಬು ಪಾಛೇಂ॥**
**ತೆಹಿ ಪಾಛೇಂ ದೋಉ ಬಂಧು ಪಯಾದೇಂ। ಭೂಷನ ಬಸನ ಬೇಷ ಸುಠಿ ಸಾದೇಂ॥ ೩ ॥**
**ಸೇವಕ ಸುಹೃದ ಸಚಿವಸುತ ಸಾಥಾ। ಸುಮಿರತ ಲಖನು ಸೀಯ ರಘುನಾಥಾ॥**
**ಜಹಂ ಜಹಂ ರಾಮ ಬಾಸ ಬಿಶ್ರಾಮಾ। ತಹಂ ತಹಂ ಕರಹಿಂ ಸಪ್ರೇಮ ಪ್ರನಾಮಾ॥ ೪ ॥**

ಅಂದು ಅವರು ಯಮುನಾ ತೀರದಲ್ಲೇ ಬಿಡಾರ ಹೂಡಿದರು. ಸಮಯಾನುಸಾರವಾಗಿ ಎಲ್ಲರಿಗೂ ಊಟ-ತಿಂಡಿಗಳ ವ್ಯವಸ್ಥೆಯಾಯಿತು. ನಿಷಾದರಾಜನ ಸಂಕೇತದಂತೆ ರಾತ್ರೋರಾತ್ರಿ ಎಲ್ಲ ಘಟ್ಟಗಳ ಅಸಂಖ್ಯಾತವಾದ ನಾವೆಗಳು ಬಂದು ಸಿದ್ಧವಾದುವು. ಅದು ವರ್ಣನೆಗೆ ಮೀರಿತ್ತು. ಬೆಳಿಗ್ಗೆ ಒಂದೇ ಸಲಕ್ಕೆ ಎಲ್ಲರೂ ನದಿಯನ್ನು ದಾಟಿದರು. ರಾಮಸಖನಾದ ಗುಹನ ಈ ಸೇವೆಯಿಂದ ಅವರೆಲ್ಲರೂ ಸಂತುಷ್ಟರಾದರು. ಅನಂತರ ಯಮುನೆಯಲ್ಲಿ ಎಲ್ಲರೂ ಸ್ನಾನಮಾಡಿ, ನದಿಗೆ ವಂದಿಸಿ, ನಿಷಾದರಾಜನೊಂದಿಗೆ ಸೋದರರಿಬ್ಬರೂ ಮುಂದಕ್ಕೆ ಹೊರಟರು. ಮುಂದೆ-ಮುಂದೆ ಅಂದವಾದ ವಾಹನಗಳ ಮೇಲೆ ಮುನಿಶ್ರೇಷ್ಠರೂ, ಅವರ ಹಿಂದೆ ರಾಜಪರಿವಾರವು ಸಾಗುತ್ತಿತ್ತು. ಇವರೆಲ್ಲರ ಹಿಂದೆ ಅಣ್ಣ-ತಮ್ಮಂದಿರಿಬ್ಬರೂ ಸರಳವಾದ ವಸ್ತ್ರ-ಭೂಷಣಗಳಿಂದ ಪಾದಚಾರಿಗಳಾಗಿ ಹೋಗುತ್ತಿದ್ದರು. ಅವರ ಜೊತೆಗೆ ಸೇವಕರು, ಗೆಳೆಯರು ಹಾಗೂ ಮಂತ್ರಿಕುಮಾರರೂ ಶ್ರೀಸೀತಾರಾಮಲಕ್ಷ್ಮಣರನ್ನು ಸ್ಮರಿಸುತ್ತಾ ದಾರಿನಡೆಯುತ್ತಿದ್ದರು. ಶ್ರೀರಾಮನು ವಿಶ್ರಮಿಸಿ ಸ್ಥಳಗಳನ್ನು ಭಕ್ತಿಯಿಂದ ವಂದಿಸುತ್ತಿದ್ದರು. (ಚೌ/೧-೪)

**ದೋ – ಮಗಬಾಸೀ ನರ ನಾರಿ ಸುನಿ ಧಾಮ ಕಾಮ ತಜಿ ಧಾಇ।**
**ದೇಖಿ ಸರೂಪ ಸನೇಹ ಸಬ ಮುದಿತ ಜನಮ ಫಲು ಪಾಇ॥ ೨೨೧ ॥**

ಶ್ರೀರಾಮನ ತಮ್ಮ ಭರತನು ಬರುತ್ತಿರುವನೆಂಬ ಸುದ್ದಿ ತಿಳಿದ ಹಾದಿಬದಿಯಲ್ಲಿದ್ದ ಗ್ರಾಮವಾಸಿಗಳು ತಮ್ಮ ಮನೆ-ಮಠ, ಕೆಲಸ-ಕಾರ್ಯಗಳನ್ನು ಬದಿಗೊತ್ತಿ ಓಡಿಬರುತ್ತಿದ್ದರು. ಭರತನ ರೂಪ, ಸೌಂದರ್ಯವನ್ನೂ, ಪ್ರೇಮವನ್ನೂ ಕಂಡು, ತಮ್ಮ ಜನ್ಮ ಸಫಲವಾಯಿತೆಂದು ಭಾವಿಸಿದರು. (ದೋ/೨೨೧)

**ಚೌ – ಕಹಹಿಂ ಸಪೇಮ ಏಕ ಏಕ ಪಾಹೀಂ । ರಾಮು ಲಖನು ಸಖಿ ಹೋಹಿಂ ಕಿ ನಾಹೀಂ ॥**
**ಬಯ ಬಪು ಬರನ ರೂಪು ಸೋಇ ಆಲೀ । ಸೀಲು ಸನೇಹು ಸರಿಸ ಸಮ ಚಾಲೀ ॥ ೧ ॥**
**ಬೇಷು ನ ಸೋ ಸಖಿ ಸೀಯ ನ ಸಂಗಾ । ಆಗೇಂ ಅನೀ ಚಲೀ ಚತುರಂಗಾ ॥**
**ನಹಿಂ ಪ್ರಸನ್ನ ಮುಖ ಮಾನಸ ಖೇದಾ । ಸಖಿ ಸಂದೇಹು ಹೋಇ ಏಹಿಂ ಭೇದಾ ॥ ೨ ॥**
**ತಾಸು ತರಕ ತಿಯಗನ ಮನ ಮಾನೀ । ಕಹಹಿಂ ಸಕಲ ತೇಹಿ ಸಮ ನ ಸಯಾನೀ ॥**
**ತೇಹಿ ಸರಾಹಿ ಬಾನೀ ಫುರಿ ಪೂಜೀ । ಬೋಲೀ ಮಧುರ ಬಚನ ತಿಯ ದೂಜೀ ॥ ೩ ॥**
**ಕಹಿ ಸಪೇಮ ಸಬ ಕಥಾಪ್ರಸಂಗೂ । ಜೇಹಿ ಬಿಧಿ ರಾಮ ರಾಜ ರಸ ಭಂಗೂ ॥**
**ಭರತಹಿ ಬಹುರಿ ಸರಾಹನ ಲಾಗೀ । ಸೀಲ ಸನೇಹ ಸುಭಾಯ ಸುಭಾಗೀ ॥ ೪ ॥**

ಭರತ-ಶತ್ರುಘ್ನರನ್ನು ನೋಡಿ ಹಳ್ಳಿಯ ಹೆಂಗಸರು ತಮ್ಮ-ತಮ್ಮಲ್ಲಿ ಪ್ರೇಮಪೂರ್ವಕವಾಗಿ ಮಾತಾಡಿಕೊಳ್ಳುತ್ತಿದ್ದರು – ''ಎಲೈ ಸಖೀ! ಇವರು ರಾಮ-ಲಕ್ಷ್ಮಣರು ಹೌದೋ, ಅಲ್ಲವೋ! ಇವರ ವಯಸ್ಸು, ಮೈಕಟ್ಟು, ಮೈಬಣ್ಣ ಎಲ್ಲವೂ ಅದೇ ಆಗಿದೆಯಲ್ಲ! ಇವರ ಶೀಲ, ಸ್ನೇಹಗಳೂ ಅವರ ಹಾಗೇ ನಡಿಗೆಯೂ ಅವರಂತೆಯೇ ಇದೆ. ಆದರೆ ಇವರ ವೇಷ ಮಾತ್ರ ಬೇರೆ. ಇವರು ಮುನಿಗಳಂತೆ ವಲ್ಕಲಧಾರಿಗಳಲ್ಲ. ಸೀತಾದೇವಿಯೂ ಜೊತೆಗೆ ಇಲ್ಲ. ಇವರ ಮುಂದೆ ಚತುರಂಗಿಣಿ ಸೇನೆಯು ಸಾಗುತ್ತಿದೆ. ಇವರ ಮುಖಗಳು ಬಾಡಿವೆ. ಮನಸ್ಸು ಖಿನ್ನವಾಗಿದೆ. ಈ ವ್ಯತ್ಯಾಸದಿಂದಾಗಿ ಸಂದೇಹವಾಗುತ್ತಿದೆ.'' ಅವಳ ತರ್ಕವು ಇತರರಿಗೆ ಸರಿಯೆನಿಸಿತು. ಅವರೆಲ್ಲರೂ ಆಕೆಯನ್ನು ನಿನ್ನಷ್ಟು ಜಾಣೆಯರು ಬೇರೊಬ್ಬರಿಲ್ಲವೆಂದು ಹೊಗಳಿದರು. ನಿನ್ನ ಮಾತು ದಿಟವಾದುದು ಎಂದು ಮೆಚ್ಚುಗೆ ನುಡಿದು ಇನ್ನೊಬ್ಬಳು ಶ್ರೀರಾಮನ ಪಟ್ಟಾಭಿಷೇಕವು ಹೇಗೆ ನಿಂತಿತು ಮೊದಲಾದವುಗಳನ್ನು ಹೇಳಿ, ಭರತನ ಶೀಲ, ಸ್ನೇಹ, ಸೌಭಾಗ್ಯಗಳನ್ನು ಹೊಗಳತೊಡಗಿದಳು. (ಚೌ/೧-೪)

**ದೋ – ಚಲತ ಪಯಾದೇಂ ಖಾತ ಫಲ ಪಿತಾ ದೀನ್ಹ ತಜಿ ರಾಜು ।**
**ಜಾತ ಮನಾವನ ರಘುಬರಹಿ ಭರತ ಸರಿಸ ಕೋ ಆಜು ॥ ೨೨೨ ॥**

ನೋಡು – ಈ ಭರತನು ತಂದೆಯು ಕೊಟ್ಟ ರಾಜ್ಯವನ್ನು ತೊರೆದು, ಪಾದಚಾರಿಯಾಗಿ ಹಣ್ಣುಹಂಪಲನ್ನು ತಿನ್ನುತ್ತಾ, ಶ್ರೀರಾಮನನ್ನು ಹಿಂತಿರುಗಿ ಬರುವಂತೆ ಒಪ್ಪಿಸಲು ಹೋಗುತ್ತಿದ್ದಾನೆ. ಇಂತಹ ಭರತನಿಗೆ ಯಾರು ಸಾಟಿಯಾಗಬಲ್ಲರು? (ದೋ/೨೨೨)

**ಚೌ – ಭಾಯಪ ಭಗತಿ ಭರತ ಆಚರನೂ । ಕಹತ ಸುನತ ದುಖ ದೂಷನ ಹರನೂ ॥**
**ಜೋ ಕಿಛು ಕಹಬ ಥೋರ ಸಖಿ ಸೋಈ । ರಾಮ ಬಂಧು ಅಸ ಕಾಹೆ ನ ಹೋಈ ॥ ೧ ॥**
**ಹಮ ಸಬ ಸಾನುಜ ಭರತಹಿ ದೇಖೇಂ । ಭಇನ್ಹ ಧನ್ಯ ಜುಬತೀ ಜನ ಲೇಖೇಂ ॥**
**ಸುನಿ ಗುನ ದೇಖಿ ದಸಾ ಪಛಿತಾಹೀಂ । ಕೈಕಇ ಜನನಿ ಜೋಗು ಸುತು ನಾಹೀಂ ॥ ೨ ॥**
**ಕೋಉ ಕಹ ದೂಷನು ರಾನಿಹಿ ನಾಹಿನ । ಬಿಧಿ ಸಬು ಕೀನ್ಹ ಹಮಹಿ ಜೋ ದಾಹಿನ ॥**
**ಕಹಁ ಹಮ ಲೋಕ ಬೇದ ಬಿಧಿ ಹೀನೀ । ಲಘು ತಿಯ ಕುಲ ಕರತೂತಿ ಮಲೀನೀ ॥ ೩ ॥**
**ಬಸಹಿಂ ಕುದೇಸ ಕುಗಾಁವ ಕುಬಾಮಾ । ಕಹಁ ಯಹ ದರಸು ಪುನ್ಯ ಪರಿನಾಮಾ ॥**
**ಅಸ ಅನಂದು ಅಚಿರಿಜು ಪ್ರತಿ ಗ್ರಾಮಾ । ಜನು ಮರುಭೂಮಿ ಕಲಪತರು ಜಾಮಾ ॥ ೪ ॥**

ಭರತನ ಭ್ರಾತೃಪ್ರೇಮ, ಭಕ್ತಿ ಆಚರಣೆಗಳು ಕೊಂಡಾಡುವುದರಿಂದ, ಕೇಳುವುದರಿಂದ ದುಃಖಗಳು, ದೋಷಗಳು ದೂರವಾಗುವುವು. ಗೆಳತಿ! ಅವನ ಬಗೆಗೆ ಏನು ಹೇಳಿದರೂ ಕಡಿಮೆಯೇ! ಅವನು ಎಷ್ಟಾದರೂ ಶ್ರೀರಾಮನ ಸೋದರನಲ್ಲವೇ? ತಮ್ಮನೊಡನೆ ಇದ್ದ ಭರತನನ್ನು ನೋಡಿ ನಾವೆಲ್ಲರೂ ಇಂದು ಭಾಗ್ಯವಂತ ಸ್ತ್ರೀಯರ ಗಣನೆಯಲ್ಲಿ ಸೇರಿಹೋಗಿದ್ದೇವೆ. ಈ ಪ್ರಕಾರ ಭರತನ ಗುಣಗಳನ್ನು ಕೇಳಿ ಹಾಗೂ ಆತನ ಸ್ಥಿತಿಯನ್ನು ಕಂಡು ಸ್ತ್ರೀಯರು ಹಲುಬುತ್ತಾ ಹೇಳಿದರು – 'ಇಂತಹ ಮಗನು ಕೈಕೆಯಿಯಂತಹ ತಾಯಿಯ ಹೊಟ್ಟೆಯಲ್ಲಿ ಹುಟ್ಟಬಾರದಾಗಿತ್ತು.' ಮತ್ತೊಬ್ಬಳು ಹೇಳಿದಳು – 'ಇದರಲ್ಲಿ ರಾಣಿಯದೇನೂ ತಪ್ಪಿಲ್ಲ, ಇವೆಲ್ಲ ನಮಗೆ ಅನುಕೂಲವಾದ ವಿಧಿಯ ಕೈವಾಡವಾಗಿದೆ. ಇಲ್ಲದಿದ್ದರೆ, ವೇದ, ಶಾಸ್ತ್ರ ವಿಧಿಗಳಿಂದ ವಿಹೀನರಾದ,

ಕುಲಗೌರವಗಳಿಂದ ಹೀನರಾದ, ಕುಗ್ರಾಮದಲ್ಲಿ, ಕಾಡಿನಲ್ಲಿ ವಾಸಿಸುವ ನಿಮ್ನ ಸ್ಥಿತಿಯಲ್ಲಿರುವ ನಮ್ಮಂತಹ ಸ್ತ್ರೀಯರೆಲ್ಲಿ? ಮಹಾಪುಣ್ಯಾತ್ಮರಾದ ಇವರ ದರ್ಶನವೆಲ್ಲಿ?' ಇಂತಹುದೇ ಆನಂದ, ಆಶ್ಚರ್ಯ ಮರುಭೂಮಿಯಲ್ಲಿ ಕಲ್ಪವೃಕ್ಷವು ಹುಟ್ಟಿಕೊಂಡಂತೆ ಪ್ರತಿಯೊಂದು ಹಳ್ಳಿ-ಹಳ್ಳಿಯಲ್ಲೂ ಕಂಡುಬರುತ್ತಿತ್ತು. (ಚೌ/೧-೪)

**ದೋ – ಭರತ ದರಸು ದೇಖತ ಖುಲೆಉ ಮಗ ಲೋಗನ್ಹ ಕರ ಭಾಗು।**
**ಜನು ಸಿಂಘಲಬಾಸಿನ್ಹ ಭಯಉ ಬಿಧಿ ಬಸ ಸುಲಭ ಪ್ರಯಾಗು॥ ೨೨೩ ॥**

ಭರತನ ದರ್ಶನವಾಗುತ್ತಲೇ, ದೈವಯೋಗದಿಂದ ಸಿಂಹಳ ದ್ವೀಪದಲ್ಲಿರುವವರಿಗೆ ತೀರ್ಥರಾಜ ಪ್ರಯಾಗವೇ ನಡೆದು ಬಂದು ದರ್ಶನ ಕೊಟ್ಟಂತೆ, ಹಾದಿಬದಿಯ ಹಳ್ಳಿಯ ಜನರ ಭಾಗ್ಯವು ತೆರೆದುಕೊಂಡಿತು. (ದೋ/೨೨೩)

**ಚೌ – ನಿಜ ಗುನ ಸಹಿತ ರಾಮ ಗುನ ಗಾಥಾ। ಸುನತ ಜಾಹಿಂ ಸುಮಿರತ ರಘುನಾಥಾ॥**
**ತೀರಥ ಮುನಿ ಆಶ್ರಮ ಸುರಧಾಮಾ। ನಿರಖಿ ನಿಮಜ್ಜಹಿಂ ಕರಹಿಂ ಪ್ರನಾಮಾ॥ ೧ ॥**
**ಮನಹೀಂ ಮನ ಮಾಗಹಿಂ ಬರು ಏಹೂ। ಸೀಯ ರಾಮ ಪದ ಪದುಮ ಸನೇಹೂ॥**
**ಮಿಲಹಿಂ ಕಿರಾತ ಕೋಲ ಬನಬಾಸೀ। ಬೈಖಾನಸ ಬಟು ಜತೀ ಉದಾಸೀ॥ ೨ ॥**
**ಕರಿ ಪ್ರನಾಮು ಪೂಂಛಹಿಂ ಜೆಹಿ ತೇಹೀ। ಕೆಹಿ ಬನ ಲಖನು ರಾಮು ಬೈದೇಹೀ॥**
**ತೇ ಪ್ರಭು ಸಮಾಚಾರ ಸಬ ಕಹಹೀಂ। ಭರತಹಿ ದೇಖಿ ಜನಮ ಫಲು ಲಹಹೀಂ॥ ೩ ॥**
**ಜೇ ಜನ ಕಹಹಿಂ ಕುಸಲ ಹಮ ದೇಖೇ। ತೇ ಪ್ರಿಯ ರಾಮ ಲಖನ ಸಮ ಲೇಖೇ॥**
**ಏಹಿ ಬಿಧಿ ಬೂಝುತ ಸಬಹಿ ಸುಬಾನೀ। ಸುನತ ರಾಮ ಬನಬಾಸ ಕಹಾನೀ॥ ೪ ॥**

ಈ ಪ್ರಕಾರ ತನ್ನ ಗುಣಗಳೊಂದಿಗೆ ಶ್ರೀರಾಮಚಂದ್ರನ ಗುಣಕಥನವನ್ನು ಆಲಿಸುತ್ತಾ, ಶ್ರೀರಘುನಾಥನನ್ನು ಸ್ಮರಿಸುತ್ತಾ ಭರತನು ಮುಂದೆ ಸಾಗುತ್ತಿದ್ದನು. ತೀರ್ಥಕಂಡಲ್ಲಿ ಸ್ನಾನವನ್ನಾಚರಿಸುತ್ತಾ, ಋಷ್ಯಾಶ್ರಮಗಳೂ, ದೇವಮಂದಿರಗಳು ಕಂಡಲ್ಲಿ ಪ್ರಣಾಮಮಾಡುತ್ತಾ, ಮನದಲ್ಲೇ – 'ಸೀತಾರಾಮರ ಚರಣಕಮಲಗಳಲ್ಲಿ ಪ್ರೇಮ ಉಂಟಾಗಲೀ' ಎಂದು ಬೇಡಿಕೊಳ್ಳುತ್ತಾ ಹೋಗುತ್ತಿದ್ದನು. ದಾರಿಯಲ್ಲಿ ಅವನಿಗೆ ಕೋಲರು, ಭಿಲ್ಲರು ಮೊದಲಾದ ವನವಾಸಿಗಳು, ವಾನಪ್ರಸ್ಥರು, ಬ್ರಹ್ಮಚಾರಿಗಳು, ಸಂನ್ಯಾಸಿಗಳು ಭೇಟಿಯಾಗುತ್ತಿದ್ದರು. ಅವರಿಗೆಲ್ಲ ನಮಸ್ಕಾರ ಮಾಡಿ 'ಶ್ರೀ ಸೀತಾರಾಮಲಕ್ಷ್ಮಣರು ಯಾವ ಕಾಡಿನಲ್ಲಿ ಇದ್ದಾರೆ?' ಎಂದು ಕೇಳುತ್ತಿದ್ದನು. ಅವರು ಪ್ರಭುವಿನ ಸಮಾಚಾರ ತಿಳಿಸುತ್ತಿದ್ದರು. ಆತನನ್ನು ಕಂಡು ತಮ್ಮ ಜನ್ಮವನ್ನು ಸಾರ್ಥಕಪಡಿಸಿಕೊಳ್ಳುತ್ತಿದ್ದರು. 'ಸೀತಾರಾಮಲಕ್ಷ್ಮಣರು ಕ್ಷೇಮದಿಂದಿರುವುದನ್ನು ನಾವು ನೋಡಿದ್ದೇವೆ' ಎಂದು ಹೇಳಿದವರೆಲ್ಲರನ್ನು ಭರತನು ರಾಮಲಕ್ಷ್ಮಣರಂತೆ ಭಾವಿಸುತ್ತಿದ್ದನು. ಈ ವಿಧವಾಗಿ ಭರತನು ಎಲ್ಲರನ್ನೂ ನಲ್ಮಾತುಗಳಿಂದ ಪ್ರಶ್ನಿಸುತ್ತಾ, ಎಲ್ಲರಿಂದಲೂ ರಾಮನ ವನವಾಸದ ಕಥೆಯನ್ನು ಕೇಳುತ್ತಾ ಹೋಗುತ್ತಿದ್ದನು. (ಚೌ/೧-೪)

**ದೋ – ತೆಹಿ ಬಾಸರ ಬಸಿ ಪ್ರಾತಹೀಂ ಚಲೇ ಸುಮಿರಿ ರಘುನಾಥ।**
**ರಾಮ ದರಸ ಕೀ ಲಾಲಸಾ ಭರತ ಸರಿಸ ಸಬ ಸಾಥ॥ ೨೨೪ ॥**

ಆ ದಿನ ಅಲ್ಲೇ ತಂಗಿದ್ದು, ಮರುದಿನ ಪ್ರಾತಃಕಾಲದಲ್ಲೇ ಶ್ರೀರಾಮನನ್ನು ಸ್ಮರಿಸುತ್ತಾ ಅವರು ಮುಂದೆ ಸಾಗಿದರು. ಭರತನ ಸಂಗಡಿಗರೆಲ್ಲರೂ ಅವನಂತೆ ಶ್ರೀರಾಮದರ್ಶನೋತ್ಸುಕರಾಗಿದ್ದರು. (ದೋ/೨೨೪)

**ಚೌ – ಮಂಗಲ ಸಗುನ ಹೋಹಿಂ ಸಬ ಕಾಹೂ। ಫರಕಹಿಂ ಸುಖದ ಬಿಲೋಚನ ಬಾಹೂ॥**
**ಭರತಹಿ ಸಹಿತ ಸಮಾಜ ಉಛಾಹೂ। ಮಿಲಿಹಹಿಂ ರಾಮು ಮಿಟಿಹಿ ದುಖ ದಾಹೂ॥ ೧ ॥**
**ಕರತ ಮನೋರಥ ಜಸ ಜಿಯಂ ಜಾಕೇ। ಜಾಹಿಂ ಸನೇಹ ಸುರಾಂ ಸಬ ಛಾಕೇ॥**
**ಸಿಥಿಲ ಅಂಗ ಪಗ ಮಗ ಡಗಿ ಡೋಲಹೀಂ। ಬಿಹಬಲ ಬಚನ ಪೇಮ ಬಸ ಬೋಲಹೀಂ॥ ೨ ॥**
**ರಾಮಸಖಾಂ ತೆಹಿ ಸಮಯ ದೆಖಾವಾ। ಸೈಲ ಸಿರೋಮನಿ ಸಹಜ ಸುಹಾವಾ॥**
**ಜಾಸು ಸಮೀಪ ಸರಿತ ಪಯ ತೀರಾ। ಸೀಯ ಸಮೇತ ಬಸಹಿಂ ದೊಉ ಬೀರಾ॥ ೩ ॥**
**ದೇಖಿ ಕರಹಿಂ ಸಬ ದಂಡ ಪ್ರನಾಮಾ। ಕಹಿ ಜಯ ಜಾನಕಿ ಜೀವನ ರಾಮಾ॥**
**ಪ್ರೇಮ ಮಗನ ಅಸ ರಾಜ ಸಮಾಜೂ। ಜನು ಫಿರಿ ಅವಧ ಚಲೇ ರಘುರಾಜೂ॥ ೪ ॥**

ಎಲ್ಲರಿಗೂ ಶುಭಶಕುನಗಳಾದವು. ಶುಭದಾಯಕವಾಗುವಂತೆ (ಸ್ತ್ರೀಯರ ಎಡ ಮತ್ತು ಪುರುಷರ ಬಲ ಕಣ್ಣುಗಳೂ, ಭುಜಗಳೂ ಅದುರಿದವು.) ಭರತನೂ, ಅವನ ಪರಿವಾರವೂ ''ಶ್ರೀರಾಮನ ದರ್ಶನವಾಗುವುದು. ನಮ್ಮ ದುಃಖದಾಹವೆಲ್ಲ ತೊಲಗುವುದು'' ಎಂದು ಉತ್ಸಾಹ ಭರಿತರಾದರು. ತಮ್ಮ-ತಮ್ಮ ಮನಸ್ಸಿನಂತೆ ಅವರು ಮನೋರಥಗಳನ್ನು ಕಲ್ಪಿಸಿಕೊಳ್ಳುತ್ತಿದ್ದರು. ಎಲ್ಲರೂ ಸ್ನೇಹಸುರೆಯನ್ನು ಪಾನಮಾಡಿ ಉನ್ಮತ್ತರಾಗಿ ಹೋಗುತ್ತಿದ್ದರು. ಅವರ ದೇಹ ಶಿಥಿಲಗೊಂಡಿದೆ, ಕಾಲುಗಳು ಗಡ-ಗಡ ನಡುಗುತ್ತಿವೆ. ಪ್ರೇಮವಿಹ್ವಲವಾದ (ಅಸ್ಪಷ್ಟವಾದ) ಮಾತುಗಳು ಬಾಯಿಂದ ಹೊರಹೊಮ್ಮುತ್ತಿದ್ದವು. ಆಗ ರಾಮಸಖನಾದ ಗುಹನು ಸಹಜವೂ, ಸುಂದರವೂ, ಶೈಲಶಿರೋಮಣಿಯೂ ಆದ ಚಿತ್ರಕೂಟದ ಕಾಮದ ಗಿರಿಯನ್ನು ತೋರಿಸಿದನು. ಅದರ ಹತ್ತಿರದಲ್ಲಿಯೇ ಪಯಸ್ವಿನೀ ನದೀ ತೀರದಲ್ಲಿ ಸೀತಾಲಕ್ಷ್ಮಣರೊಡಗೂಡಿ ಶ್ರೀರಾಮನು ವಾಸಿಸುತ್ತಿದ್ದನು. ಆ ಪರ್ವತವನ್ನು ಕಾಣುತ್ತಲೇ ಎಲ್ಲರೂ 'ಜಾನಕೀ ಜೀವನ ಶ್ರೀರಾಮಚಂದ್ರನಿಗೆ ಜಯವಾಗಲಿ, ಜಯ ಜಾನಕೀ ಜೀವನ ಶ್ರೀರಾಮ' ಎಂದುಕೊಂಡು ಸಾಷ್ಟಾಂಗ ನಮಸ್ಕಾರ ಮಾಡಿದರು. ರಾಜಸಮಾಜಕ್ಕೆ ಶ್ರೀರಾಮನೇ ಅಯೋಧ್ಯೆಗೆ ಹಿಂದಿರುಗಿದಷ್ಟು ಸಂತೋಷವಾಯಿತು. (ಚೌ/೧-೪)

**ದೋ – ಭರತ ಪ್ರೇಮು ತೆಹಿ ಸಮಯ ಜಸ ತಸ ಕಹಿ ಸಕಇ ನ ಸೇಷು ।**
**ಕಬಿಹಿ ಅಗಮ ಜಿಮಿ ಬ್ರಹ್ಮಸುಖು ಅಹ ಮಮ ಮಲಿನ ಜನೇಷು ॥ ೨೨೫ ॥**

ಆ ಸಮಯದಲ್ಲಿ ಭರತನು ಹೊಂದಿದ ಪ್ರೇಮಪಾರವಶ್ಯವನ್ನು ಆದಿಶೇಷನೂ ಕೂಡ ವರ್ಣಿಸಲಾರನು. ಅಹಂಕಾರ, ಮಮಕಾರಗಳಿಂದ ಮಲಿನರಾದ ಮನುಷ್ಯರಿಗೆ ಬ್ರಹ್ಮಾನಂದವು ಅಗಮ್ಯವಿರುವಂತೆ, ಕವಿಗಳಿಗೆ ಭರತನ ಸ್ಥಿತಿಯನ್ನು ವರ್ಣಿಸುವುದು ಅಗಮ್ಯವಾಗಿತ್ತು. (ದೋ/೨೨೫)

**ಚೌ – ಸಕಲ ಸನೇಹ ಸಿಥಿಲ ರಘುಬರ ಕೇ । ಗಏ ಕೋಸ ದುಇ ದಿನಕರ ಢರಕೇ ॥**
**ಜಲು ಥಲು ದೇಖಿ ಬಸೇ ನಿಸಿ ಬೀತೇ । ಕೀನ್ಹ ಗವನ ರಘುನಾಥ ಪಿರೀತೇ ॥ ೧ ॥**
**ಉಹಾಁ ರಾಮು ರಜನೀ ಅವಸೇಷಾ । ಜಾಗೇ ಸೀಯಁ ಸಪನ ಅಸ ದೇಖಾ ॥**
**ಸಹಿತ ಸಮಾಜ ಭರತ ಜನು ಆಏ । ನಾಥ ಬಿಯೋಗ ತಾಪ ತನ ತಾಏ ॥ ೨ ॥**
**ಸಕಲ ಮಲಿನ ಮನ ದೀನ ದುಖಾರೀ । ದೇಖೀಂ ಸಾಸು ಆನ ಅನುಹಾರೀ ॥**
**ಸುನಿ ಸಿಯ ಸಪನ ಭರೇ ಜಲ ಲೋಚನ । ಭಏ ಸೋಚಬಸ ಸೋಚ ಬಿಮೋಚನ ॥ ೩ ॥**
**ಲಖನ ಸಪನ ಯಹ ನೀಕ ನ ಹೋಈ । ಕಠಿನ ಕುಚಾಹ ಸುನಾಇಹಿ ಕೋಈ ॥**
**ಅಸ ಕಹಿ ಬಂಧು ಸಮೇತ ನಹಾನೇ । ಪೂಜಿ ಪುರಾರಿ ಸಾಧು ಸನಮಾನೇ ॥ ೪ ॥**

ಶ್ರೀರಾಮಪ್ರೇಮದಿಂದ ಶಿಥಿಲರಾದ್ದರಿಂದ ಎಲ್ಲರಿಗೂ ಸೂರ್ಯಾಸ್ತದ ವೇಳೆಗೆ ಎರಡು ಹರದಾರಿ ಮಾತ್ರ ನಡೆಯಲು ಸಾಧ್ಯವಾಗಿತ್ತು. ಹತ್ತಿರದಲ್ಲೇ ನೀರಿನ ಆಸರೆಯನ್ನು ಕಂಡು ಅವರೆಲ್ಲರೂ ಅಲ್ಲೇ (ನಿರಾಹಾರವಾಗಿಯೇ) ತಂಗಿದರು. ಬೆಳಗಾಗುತ್ತಲೇ ರಾಮಪ್ರೇಮಿ ಭರತನು ಮುಂದಕ್ಕೆ ಪ್ರಯಾಣ ಬೆಳೆಸಿದನು.

ಅತ್ತ ಶ್ರೀರಾಮಚಂದ್ರನು ಬೆಳಕು ಹರಿಯುವ ಮುನ್ನವೇ ಮೇಲೆದ್ದಿದ್ದ. ಸೀತಾದೇವಿಯು ರಾತ್ರಿಯಲ್ಲಿ ಕಂಡ ಕನಸನ್ನು ಶ್ರೀರಾಮನಿಗೆ ಹೇಳತೊಡಗಿದಳು – ''ಭರತನು ಸಪರಿವಾರ ಸಹಿತ ತಮ್ಮಲ್ಲಿಗೆ ಬಂದಿರುವನು. ಅವನ ಮೈ ರಾಮವಿಯೋಗಾಗ್ನಿಯಿಂದ ಸುಡುತ್ತಿತ್ತು. ಜೊತೆಯಲ್ಲಿದ್ದ ಅಯೋಧ್ಯೆಯ ಜನರೆಲ್ಲರೂ ದುಃಖಿಗಳೂ, ದೀನರಾಗಿದ್ದರು. ಅತ್ತೆಯವರಂತೂ ಗುರುತಿಸುವುದೇ ಆಗದಷ್ಟು ಕಾಂತಿಹೀನರಾಗಿದ್ದರು.'' ಸೀತೆಗೆ ಬಿದ್ದ ಕನಸನ್ನು ಕೇಳಿ, ರಾಮನ ಕಂಗಳು ತುಂಬಿ ಬಂದವು. ಎಲ್ಲರ ಶೋಕವನ್ನು ನಿವಾರಿಸುವ ಪ್ರಭು ರಾಮಚಂದ್ರನು ಸ್ವತಃ ದುಃಖವಶನಾದನು. ತಮ್ಮನನ್ನು ಕುರಿತು – 'ಲಕ್ಷ್ಮಣಾ! ಈ ಕನಸು ಒಳ್ಳೆಯದಲ್ಲ. ಯಾವುದೋ ಅಶುಭ ವಾರ್ತೆಯನ್ನು ಕೇಳಿಸಲಿದೆ' ಎಂದು ಹೇಳಿ ತಮ್ಮನೊಡನೆ ಸ್ನಾನಮಾಡಿ, ಶಿವನನ್ನು ಪೂಜಿಸಿ, ಸಾಧುಗಳನ್ನು ಸನ್ಮಾನಿಸಿದನು. (ಚೌ/೧-೪)

**ಛಂ – ಸನಮಾನಿ ಸುರ ಮುನಿ ಬಂದಿ ಬೈಠೇ ಉತರ ದಿಸಿ ದೇಖತ ಭಏ ।**
**ನಭ ಧೂರಿ ಖಗ ಮೃಗ ಭೂರಿ ಭಾಗೇ ಬಿಕಲ ಪ್ರಭು ಆಶ್ರಮ ಗಏ ॥**
**ತುಲಸೀ ಉಠೇ ಅವಲೋಕಿ ಕಾರನು ಕಾಹ ಚಿತ ಸಚಕಿತ ರಹೇ ।**
**ಸಬ ಸಮಾಚಾರ ಕಿರಾತ ಕೋಲನ್ಹಿ ಆಇ ತೆಹಿ ಅವಸರ ಕಹೇ ॥**

ದೇವತೆಗಳನ್ನು ಪೂಜಿಸಿ, ಮುನಿಗಳಿಗೆ ವಂದಿಸಿ, ಶ್ರೀರಾಮಚಂದ್ರನು ಆಸೀನನಾಗಿ ಉತ್ತರದಿಕ್ಕಿನ ಕಡೆಗೆ ನೋಡತೊಡಗಿದನು. ಆಕಾಶದಲ್ಲಿ ಧೂಳು ಕವಿದಿತ್ತು. ಪಶು-ಪಕ್ಷಿಗಳು ಹೆದರಿ ಓಡಿ ಆಶ್ರಮದತ್ತ ಬರುತ್ತಿದ್ದವು. ಶ್ರೀರಾಮನು ಎದ್ದುನಿಂತು 'ಇದಕ್ಕೆ

ಕಾರಣವೇನಿರಬಹುದು?' ಎಂದು ಯೋಚಿಸುತ್ತಾ, ಆಶ್ಚರ್ಯಚಕಿತನಾದನು. ಅದೇ ವೇಳೆಗೆ ಕೋಲರು, ಭಿಲ್ಲರು ಬಂದು ಭರತನು ಬಂದಿರುವ ವಾರ್ತೆಯನ್ನು ತಿಳಿಸಿದರು ಎಂದು ತುಳಸೀದಾಸರು ಹೇಳುತ್ತಿದ್ದಾರೆ. (ಛಂದ)

**ಸೋ – ಸುನತ ಸುಮಂಗಲ ಬೈನ ಮನ ಪ್ರಮೋದ ತನ ಪುಲಕ ಭರ।**
**ಸರದ ಸರೋರುಹ ನೈನ ತುಲಸೀ ಭರೇ ಸನೇಹ ಜಲ॥ ೨೨೬ ॥**

ಆಹ್ಲಾದಕರವಾದ ಮಂಗಳವಚನಗಳನ್ನು ಕೇಳುತ್ತಲೇ ಶ್ರೀರಾಮನ ಮನಸ್ಸಿನಲ್ಲಿ ಅಮಿತ ಆನಂದ ಉಂಟಾಯಿತು. ತನುವು ಪುಳಕಗೊಂಡಿತು. ಶರತ್‌ಕಮಲದಂತಿರುವ ಕಣ್ಣುಗಳಲ್ಲಿ ಪ್ರೇಮಾಶ್ರುಗಳು ತುಂಬಿಬಂದವು ಎಂದು ತುಲಸೀದಾಸರು ಹೇಳುತ್ತಿದ್ದಾರೆ. (ಸೋ/೨೨೬)

**ಚೌ – ಬಹುರಿ ಸೋಚಬಸ ಭೇ ಸಿಯರವನೂ। ಕಾರನ ಕವನ ಭರತ ಆಗವನೂ॥**
**ಏಕ ಆಇ ಅಸ ಕಹಾ ಬಹೋರೀ। ಸೇನ ಸಂಗ ಚತುರಂಗ ನ ಥೋರೀ॥ ೧ ॥**
**ಸೋ ಸುನಿ ರಾಮಹಿ ಭಾ ಅತಿ ಸೋಚೂ । ಇತ ಪಿತು ಬಚ ಇತ ಬಂಧು ಸಕೋಚೂ॥**
**ಭರತ ಸುಭಾಉ ಸಮುಝಿ ಮನ ಮಾಹೀಂ। ಪ್ರಭು ಚಿತ ಹಿತ ಥಿತಿ ಪಾವತ ನಾಹೀಂ॥ ೨ ॥**
**ಸಮಾಧಾನ ತಬ ಭಾ ಯಹ ಜಾನೇ। ಭರತು ಕಹೇ ಮಹುँ ಸಾಧು ಸಯಾನೇ॥**
**ಲಖನ ಲಖೆಉ ಪ್ರಭು ಹೃದಯँ ಖಭಾರೂ। ಕಹತ ಸಮಯ ಸಮ ನೀತಿ ಬಿಚಾರೂ॥ ೩ ॥**
**ಬಿನು ಪೂಛೇಂ ಕಛು ಕಹಉँ ಗೊಸಾಈं। ಸೇವಕು ಸಮಯँ ನ ಢೀಠ ಢಿಠಾಈं॥**
**ತುಮ್ಹ ಸರ್ಬಗ್ಯ ಸಿರೋಮನಿ ಸ್ವಾಮೀ। ಆಪನಿ ಸಮುಝಿ ಕಹಉँ ಅನುಗಾಮೀ॥ ೪ ॥**

''ಭರತನು ಬರಲು ಕಾರಣವೇನು?'' ಎಂದು ಸೀತಾಪತಿಯು ಯೋಚನೆಯಲ್ಲಿ ಮುಳುಗಿದನು. ಹೀಗಿರುವಾಗ ಯಾರೋ ಒಬ್ಬ ಬಂದು – ''ಅವನ ಜೊತೆಗೆ ಭಾರೀ ಚತುರಂಗ ಸೇನೆಯೂ ಬರುತ್ತಿದೆ' ಎಂದು ಹೇಳಿದನು. ಇದನ್ನು ಕೇಳಿ ಶ್ರೀರಾಮನಿಗೆ ಇನ್ನೂ ಯೋಚನೆ ಇಟ್ಟುಕೊಂಡಿತು. ಒಂದೆಡೆ ತಂದೆಯ ವಚನ, ಮತ್ತೊಂದೆಡೆ ಸೋದರನ ಮೇಲಿರುವ ಪ್ರೇಮ. ಭರತನ ಸ್ವಭಾವವನ್ನು ಮನಸ್ಸಿಗೆ ತಂದುಕೊಂಡು, ಶ್ರೀರಾಮಚಂದ್ರನ ಮನಸ್ಸು ತುಂಬಾ ತಳಮಳಗೊಂಡಿತು. (ಭರತನ ಸ್ವಭಾವವನ್ನೂ, ಅವನಿಗೆ ತನ್ನ ಮೇಲೆ ಇರುವ ಭಕ್ತಿವಿಶ್ವಾಸಗಳನ್ನು ಪೂರ್ತಿಯಾಗಿ ತಿಳಿದಾಗ, ಒಂದು ವೇಳೆ ಭರತನು ತಂದೆಯ ಆಜ್ಞೆಯನ್ನು ತೊರೆದು, ರಾಜ್ಯವನ್ನು ಸ್ವೀಕರಿಸದೆ ಹೋದರೆ ಏನು ಮಾಡಬಹುದು? ಎಂದು ಪ್ರಭುವು ಆಲೋಚಿಸತೊಡಗಿದನು.) ಭರತನ ಸಾಧುಸ್ವಭಾವವನ್ನು, ಜಾಣತನವನ್ನೂ ನೆನೆದಾಗ ಅವನು ನನ್ನ ಮಾತನ್ನು ಮೀರುವವನಲ್ಲ ಎಂದೆನಿಸಿ ಮನಸ್ಸಿಗೆ ಸಮಾಧಾನ ತಂದುಕೊಂಡನು. ರಾಮನು ಚಿಂತಾಕ್ರಾಂತನಾಗಿರುವುದನ್ನು ಕಂಡು ಲಕ್ಷ್ಮಣನು – ಸಮಯಕ್ಕೆ ಸರಿಯಾಗಿ, ನೀತಿಯುಕ್ತವಾದ ವಿಚಾರಗಳನ್ನು ಹೇಳತೊಡಗಿದನು. ''ಸ್ವಾಮಿ! ನೀವು ಕೇಳದೆಯೇ ನಾನೇನೋ ಹೇಳುತ್ತಿದ್ದೇನೆ. ಸೇವಕನು ಸಂದರ್ಭಕ್ಕೆ ಸರಿಯಾಗಿ ದಾರ್ಷ್ಟ್ಯ ತೋರಿಸಿದರೆ ತಪ್ಪಾಗದು. ಪ್ರಭೋ! ನೀವು ಸರ್ವಜ್ಞಶಿರೋಮಣಿಯಾಗಿದ್ದೀರಿ. ನಿಮ್ಮ ಸೇವಕನಾದ ನಾನು ನನಗೆ ತಿಳಿದುದನ್ನು ಹೇಳುತ್ತೇನೆ. (ಚೌ/೧-೪)

**ದೋ – ನಾಥ ಸುಹೃದ ಸುಠಿ ಸರಲ ಚಿತ ಸೀಲ ಸನೇಹ ನಿಧಾನ।**
**ಸಬ ಪರ ಪ್ರೀತಿ ಪ್ರತೀತಿ ಜಿಯँ ಜಾನಿಅ ಆಪು ಸಮಾನ॥ ೨೨೭ ॥**

ಒಡೆಯಾ! ನೀವು ಅವ್ಯಾಜ ಕರುಣಾಮಯರೂ, ಸರಳ ಸ್ವಭಾವದವರೂ, ಸ್ನೇಹ ಸೌಶೀಲ್ಯದ ಆಗರರಾಗಿರುವಿರಿ. ನೀವು ಎಲ್ಲರನ್ನು ಸಮಾನವಾಗಿ ಪ್ರೀತಿಸುತ್ತಿದ್ದೀರಿ. ಎಲ್ಲರಲ್ಲೂ ವಿಶ್ವಾಸವಿಡುತ್ತೀರಿ. ಎಲ್ಲರನ್ನೂ ನೀವು ತನ್ನಂತೆ ಭಾವಿಸುತ್ತಿರುವಿರಿ. (ದೋ/೨೨೭)

**ಚೌ – ಬಿಷಈ ಜೀವ ಪಾಇ ಪ್ರಭುತಾಈ। ಮೂಢ ಮೋಹ ಬಸ ಹೋಹಿं ಜನಾಈ॥**
**ಭರತು ನೀತಿ ರತ ಸಾಧು ಸುಜಾನಾ। ಪ್ರಭು ಪದ ಪ್ರೇಮು ಸಕಲ ಜಗು ಜಾನಾ॥ ೧ ॥**
**ತೇಊ ಆಜು ರಾಮ ಪದು ಪಾಈ। ಚಲೇ ಧರಮ ಮರಜಾದ ಮೇಟಾಈ॥**
**ಕುಟಿಲ ಕುಬಂಧು ಕುಅವಸರು ತಾಕೀ। ಜಾನಿ ರಾಮ ಬನಬಾಸ ಏಕಾಕೀ॥ ೨ ॥**
**ಕರಿ ಕುಮಂತ್ರು ಮನ ಸಾಜಿ ಸಮಾಜೂ। ಆಏ ಕರೈ ಅಕಂಟಕ ರಾಜೂ॥**
**ಕೋಟಿ ಪ್ರಕಾರ ಕಲಪಿ ಕುಟಿಲಾಈ। ಆಏ ದಲ ಬಟೋರಿ ದೋಉ ಭಾಈ॥ ೩ ॥**
**ಜೌं ಜಿಯँ ಹೋತಿ ನ ಕಪಟ ಕುಚಾಲೀ। ಕೆಹಿ ಸೊಹಾತಿ ರಥ ಬಾಜಿ ಗಜಾಲೀ॥**
**ಭರತಹಿ ದೋಸು ದೇಇ ಕೋ ಜಾಏँ। ಜಗ ಬೌರಾಇ ರಾಜ ಪದು ಪಾಏँ॥ ೪ ॥**

ಆದರೆ, ಮೂಢ ವಿಷಯೀ ಜನರು ಪ್ರಭುತ್ವವನ್ನು ಪಡೆದಾಗ, ಮೋಹವಶದಿಂದ ತಮ್ಮ ನೈಜಸ್ವರೂಪವು ಹೊರಬೀಳುತ್ತದೆ. ಭರತನು ನೀತಿಪರಾಯಣನೂ, ಸಾಧುವೂ, ಸಮರ್ಥನೂ, ಪ್ರಭುಚರಣಾನುರಾಗಿ ಎಂಬುದು ಇಡೀ ಜಗತ್ತೇ ತಿಳಿಯುತ್ತಿದೆ. ಆದರೆ ಇಂದು ಆ ಭರತನೇ ನಿನ್ನ ರಾಜ್ಯಾಧಿಕಾರವನ್ನು ಪಡೆದು, ಧರ್ಮಮಾರ್ಗವನ್ನು ತೊರೆದು ಬರುತ್ತಿದ್ದಾನೆ. ಕುಟಿಲನಾದ ಭರತನು ಈ ಸಮಯದಲ್ಲಿ ನೀವು ವನದಲ್ಲಿ ಒಂಟಿಯಾಗಿ ಅಸಹಾಯಕರಾಗಿ ಇದ್ದೀರಿ ಎಂದು ತಿಳಿದುಕೊಂಡಂತಿದೆ. ಅವನು ಕೆಟ್ಟವಿಚಾರದಿಂದ ಕೂಡಿದವನಾಗಿ, ತನ್ನ ರಾಜ್ಯವನ್ನು ನಿಷ್ಕಂಟಕಗೊಳಿಸಲು ಚತುರಂಗಬಲ ಸಮೇತ ಬರುತ್ತಿದ್ದಾನೆ. ಅನೇಕ ರೀತಿಯ ಕುಟಿಲೋಪಾಯಗಳನ್ನು ಮಾಡಿ, ಸಂಚುಹೂಡಿ, ಪಡೆಯನ್ನು ನೆರಸಿಕೊಂಡು ಅಣ್ಣ-ತಮ್ಮಂದಿರಿಬ್ಬರೂ ಬರುತ್ತಿದ್ದಾರೆ. ಅವರ ಮನಸ್ಸಿನಲ್ಲಿ ಕುಟಿಲತೆ, ದುರುದ್ದೇಶವಿಲ್ಲದಿದ್ದರೆ ರಥಗಳು, ಆನೆಗಳು, ಕುದುರೆಗಳು, ಕಾಲಾಳುಗಳೂ ಜೊತೆಯಲ್ಲಿ ಕರೆತರುವ ಕೆಲಸವೇನಿದ್ದೀತು? ಭರತನನ್ನು ನಿಂದಿಸಿ ಫಲವೇನು? ಜಗತ್ತಿನಲ್ಲಿ ರಾಜ್ಯಾಧಿಕಾರವನ್ನು ಪಡೆದವರು ಮದೋನ್ಮತ್ತರಾಗಿ, ಹುಚ್ಚರಾಗುತ್ತಾರೆ. (ಚೌ/೧-೪)

**ದೋ – ಸಸಿ ಗುರ ತಿಯ ಗಾಮೀ ನಘುಷು ಚಢೆಉ ಭೂಮಿಸುರ ಜಾನ।**
**ಲೋಕ ಬೇದ ತೇಂ ಬಿಮುಖ ಭಾ ಅಧಮ ನ ಬೇನ ಸಮಾನ॥ ೨೨೮ ॥**

ಚಂದ್ರನು ಗುರುಪತ್ನಿಗಾಮಿಯಾದನು. ಮಹಾರಾಜಾ ನಹುಷನು ಬ್ರಾಹ್ಮಣರಿಂದ ತನ್ನ ಪಲ್ಲಕ್ಕಿಯನ್ನು ಹೊರಿಸಿದನು. ಲೋಕ, ವೇದ ವಿರುದ್ಧವಾಗಿ ಪ್ರವರ್ತಿಸಿದ ವೇನರಾಜನಂತಹ ಅಧಮನು ಲೋಕದಲ್ಲಿ ಯಾರೂ ಇರಲಾರನು. (ದೋ/೨೨೮)

**ಚೌ – ಸಹಸಬಾಹು ಸುರನಾಥು ತ್ರಿಸಂಕೂ। ಕೇಹಿ ನ ರಾಜಮದ ದೀನ್ಹ ಕಲಂಕೂ॥**
**ಭರತ ಕೀನ್ಹ ಯಹ ಉಚಿತ ಉಪಾಊ। ರಿಪು ರಿನ ರಂಚ ನ ರಾಖಬ ಕಾಊ॥ ೧ ॥**
**ಏಕ ಕೀನ್ಹಿ ನಹಿಂ ಭರತ ಭಲಾಈ। ನಿದರೇ ರಾಮು ಜಾನಿ ಅಸಹಾಈ॥**
**ಸಮುಝಿ ಪರಿಹಿ ಸೋಉ ಆಜು ಬಿಸೇಷೀ। ಸಮರ ಸರೋಷ ರಾಮ ಮುಖು ಪೇಖೀ॥ ೨ ॥**
**ಏತನಾ ಕಹತ ನೀತಿ ರಸ ಭೂಲಾ। ರನ ರಸ ಬಿಟಪು ಪುಲಕ ಮಿಸ ಫೂಲಾ॥**
**ಪ್ರಭು ಪದ ಬಂದಿ ಸೀಸ ರಜ ರಾಖೀ। ಬೋಲೇ ಸತ್ಯ ಸಹಜ ಬಲು ಭಾಷೀ॥ ೩ ॥**
**ಅನುಚಿತ ನಾಥ ನ ಮಾನಬ ಮೋರಾ। ಭರತ ಹಮಹಿ ಉಪಚಾರ ನ ಥೋರಾ॥**
**ಕಹಂ ಲಗಿ ಸಹಿಅ ರಹಿಅ ಮನು ಮಾರೇಂ। ನಾಥ ಸಾಥ ಧನು ಹಾಥ ಹಮಾರೇಂ॥ ೪ ॥**

ಸಹಸ್ರಬಾಹು, ದೇವರಾಜಇಂದ್ರ, ತ್ರಿಶಂಕು ಮೊದಲಾದವರೆಲ್ಲರನ್ನು ರಾಜ್ಯಾಧಿಕಾರವು ಕಳಂಕಿತರನ್ನಾಗಿಸಿದೆ. ಆದ್ದರಿಂದ ಭರತನು ಮಾಡಿರುವುದು ಸಹಜವೇ? ಏಕೆಂದರೆ ಶತ್ರುಶೇಷವನ್ನೂ, ಋಣಶೇಷವನ್ನು ಎಂದೂ ಸ್ವಲ್ಪವೂ ಇರಿಸಬಾರದು. ಹೌದು! ಭರತನು ಒಂದನ್ನು ಮಾತ್ರ ಒಳ್ಳೆಯದನ್ನು ಮಾಡಲಿಲ್ಲ. ನಿನ್ನನ್ನು ಅಸಹಾಯಕನೆಂದು ಬಗೆದು ಹೀನಾಯವಾಗಿ ಕಂಡನು. ಆದರೆ ಇಂದು ಸಮರದಲ್ಲಿ ರಾಮನಾದ ನಿನ್ನ ರೋಷಭೀಷಣ ಮುಖವನ್ನು ಕಂಡಾಗ ಅವನ ತಪ್ಪಿನ ಅರಿವು ಉಂಟಾದೀತು. ಅನಾದರ ಮಾಡಿದ ಫಲವನ್ನೂ ಪಡೆದಾನು.'' ಇಷ್ಟು ಹೇಳಿ ಲಕ್ಷ್ಮಣನು ಔಚಿತ್ಯವನ್ನು ಮರೆತನು. ಅವನ ವೀರರಸವೆಂಬ ವೃಕ್ಷವು ಪುಳಕದ ನೆಪದಲ್ಲಿ ಅರಳಿತು. ಅವನು ರಾಮಚಂದ್ರನ ಚರಣಗಳಿಗೆ ವಂದಿಸಿ, ಚರಣರಜವನ್ನು ಶಿರದಲ್ಲಿ ಮುಡಿದುಕೊಂಡು, ತನ್ನ ಸಹಜವಾದ ವೀರಾವೇಶದಿಂದ ಇಂತೆಂದನು – ''ಸ್ವಾಮಿ! ನನ್ನ ಮಾತನ್ನು ಅನುಚಿತವೆಂದು ಬಗೆಯದಿರಿ. ಭರತನು ನಮ್ಮನ್ನು ಅನೇಕವಿಧದಿಂದ ಗೋಳುಹೊಯ್ದುಕೊಂಡಿರುವನು. ಈ ದುಷ್ಕೃತ್ಯವನ್ನು ಇಷ್ಟರವರೆಗೆ ಸಹಿಸಿಕೊಂಡದ್ದಾಯಿತು. ಒಡೆಯ ನಮ್ಮೊಡನೆ ಇರುವಾಗ, ಧನುಷ್ಯ ಕೈಯಲ್ಲಿರುವಾಗ ಇನ್ನು ಸಹಿಸಲಾಗುವುದಿಲ್ಲ. (ಚೌ/೧-೪)

**ದೋ – ಛತ್ರಿ ಜಾತಿ ರಘುಕುಲ ಜನಮು ರಾಮ ಅನುಗ ಜಗು ಜಾನ।**
**ಲಾತಹುಂ ಮಾರೇಂ ಚಢತಿ ಸಿರ ನೀಚ ಕೋ ಧೂರಿ ಸಮಾನ॥ ೨೨೯ ॥**

ಮೊದಲೇ ಕ್ಷತ್ರಿಯ ಜಾತಿ! ಶ್ರೇಷ್ಠ ರಘುಕುಲದಲ್ಲಿ ಜನ್ಮ! ಶ್ರೀರಾಮನ ಸೇವಕ ಬೇರೆ! ಇಂತಹುದರಲ್ಲಿ ನನ್ನಲ್ಲಿ ತಾಳ್ಮೆ ಹೇಗಿದ್ದೀತು? ಧೂಳಿನಂತಹ ನೀಚವಸ್ತು ಯಾವುದಿದೆ? ಆದರೆ ಅದೂ ಕೂಡ ಕಾಲಿನಿಂದ ಒದ್ದರೆ ತಲೆಯಮೇಲೇರಿ ಕುಳಿತಿರುತ್ತದಲ್ಲ! (ದೋ/೨೨೯)

**ಚೌ – ಉಠಿ ಕರ ಜೋರಿ ರಜಾಯಸು ಮಾಗಾ। ಮನಹು ಬೀರ ರಸ ಸೋವತ ಜಾಗಾ॥**
**ಬಾಂಧಿ ಜಟಾ ಸಿರ ಕಸಿ ಕಟಿ ಭಾಥಾ। ಸಾಜಿ ಸರಾಸನು ಸಾಯಕು ಹಾಥಾ॥ ೧ ॥**

ಆಜು ರಾಮ ಸೇವಕ ಜಸು ಲೇಊಁ। ಭರತಹಿ ಸಮರ ಸಿಖಾವನ ದೇಊಁ॥
ರಾಮ ನಿರಾದರ ಕರ ಫಲು ಪಾಈ। ಸೋವಹುಁ ಸಮರ ಸೇಜ ದೋಉ ಭಾಈ॥ ೨ ॥
ಆಇ ಬನಾ ಭಲ ಸಕಲ ಸಮಾಜೂ। ಪ್ರಗಟ ಕರಉಁ ರಿಸ ಪಾಛಿಲ ಆಜೂ॥
ಜಿಮಿ ಕರಿ ನಿಕರ ದಲಇ ಮೃಗರಾಜೂ। ಲೇಇ ಲಪೇಟಿ ಲವಾ ಜಿಮಿ ಬಾಜೂ॥ ೩ ॥
ತೈಸೇಹಿಂ ಭರತಹಿ ಸೇನ ಸಮೇತಾ। ಸಾನುಜ ನಿದರಿ ನಿಪಾತಉ ಖೇತಾ॥
ಜೌಂ ಸಹಾಯ ಕರ ಸಂಕರು ಆಈ। ತೌ ಮಾರಉಁ ರನ ರಾಮ ದೋಹಾಈ॥ ೪ ॥

ಈ ವಿಧವಾಗಿ ನುಡಿದು – ಮಲಗಿದ್ದ ವೀರರಸವೇ ಎದ್ದು ನಿಂತಿದೆಯೋ ಎಂಬಂತೆ ಲಕ್ಷ್ಮಣನು ಎದ್ದುನಿಂತು, ಕೈಜೋಡಿಸಿ ಭರತನನ್ನು ಎದುರಿಸಲು ಅಪ್ಪಣೆ ಬೇಡಿದನು. ತಲೆಯ ಜಟೆಯನ್ನು ಸರಿಯಾಗಿ ಕಟ್ಟಿ, ಸೊಂಟಕ್ಕೆ ಬತ್ತಳಿಕೆಯನ್ನು ಬಿಗಿದುಕೊಂಡನು. ಧನುಸ್ಸನ್ನು ಸರಿಮಾಡಿಕೊಂಡು, ಕೈಯಲ್ಲಿ ಬಾಣವನ್ನು ಧರಿಸಿ ಇಂತೆಂದನು – ಅಣ್ಣಾ! ಇಂದು ನಾನು ರಾಮಕಿಂಕರನೆಂಬುದನ್ನೂ ಸಾರ್ಥಕಪಡಿಸುತ್ತೇನೆ; ಭರತನಿಗೆ ರಣರಂಗದಲ್ಲಿ ಪಾಠ ಕಲಿಸುತ್ತೇನೆ. ಶ್ರೀರಾಮನನ್ನು ಅನಾದರ ಮಾಡಿದ ಪ್ರತಿಫಲವಾಗಿ ಭರತ-ಶತ್ರುಘ್ನರಿಬ್ಬರೂ ಸಮರ ಸಂಖ್ಯೆಯಲ್ಲಿ ಒರಗಲಿ. ಇಡೀ ಜನಸಮುದಾಯ ಗುಂಪುಕಟ್ಟಿ ಬಂದಿರುವುದು ಒಳ್ಳೆಯದೇ ಆಯಿತು. ಇಂದು ನಾನು ಹಿಂದಿನ ಎಲ್ಲ ಸಿಟ್ಟನ್ನು ತೀರಿಸಿಕೊಳ್ಳುತ್ತೇನೆ. ಸಿಂಹವು ಆನೆಗಳ ಹಿಂಡನ್ನು ತುಂಡರಿಸುವಂತೆ, ಗಿಡುಗ ಲಾವಕ್ಕಿಯನ್ನು ಹಿಡಿಯುವಂತೆ, ನಾನು ಭರತನನ್ನು ಸೇನೆಯೊಂದಿಗೆ, ಶತ್ರುಘ್ನನೊಡನೆ ನೆಲಕ್ಕುರುಳಿಸುತ್ತೇನೆ. ಶ್ರೀರಾಮನ ಮೇಲೆ ಆಣೆಯಿಟ್ಟು ಹೇಳುತ್ತೇನೆ – ಸಾಕ್ಷಾತ್ ಪರಶಿವನೇ ಅವನ ನೆರವಿಗೂ ಬಂದರೂ ಅವನನ್ನು ಯುದ್ಧದಲ್ಲಿ ಕೊಲ್ಲದೆ ಬಿಡುವುದಿಲ್ಲ. (ಚೌ/೧-೪)

**ದೋ – ಅತಿ ಸರೋಷ ಮಾಖೇ ಲಖನು ಲಖಿ ಸುನಿ ಸಪಥ ಪ್ರವಾನ।**
**ಸಭಯ ಲೋಕ ಸಬ ಲೋಕಪತಿ ಚಾಹತ ಭಭರಿ ಭಗಾನ॥ ೨೩೦ ॥**

ಅತ್ಯಂತ ಕ್ರೋಧತಪ್ತನಾದ ಲಕ್ಷ್ಮಣನನ್ನು ಕಂಡು, ಅವನು ಗೈದ ಭೀಷಣ ಪ್ರತಿಜ್ಞೆಯನ್ನು ಕೇಳಿ, ಲೋಕಗಳೆಲ್ಲವೂ ತಲ್ಲಣಿಸಿದವು. ಲೋಕಪಾಲರು ನಡುಗಿ ಅಡಗಿಕೊಳ್ಳಲು ಯೋಚಿಸಿದರು. (ದೋ/೨೩೦)

ಚೌ – ಜಗು ಭಯ ಮಗನ ಗಗನ ಭಇ ಬಾನೀ। ಲಖನ ಬಾಹುಬಲು ಬಿಪುಲ ಬಖಾನೀ॥
ತಾತ ಪ್ರತಾಪ ಪ್ರಭಾಉ ತುಮ್ಹಾರಾ। ಕೋ ಕಹಿ ಸಕಇ ಕೊ ಜಾನನಿಹಾರಾ॥ ೧ ॥
ಅನುಚಿತ ಉಚಿತ ಕಾಜು ಕಿಛು ಹೋಊ। ಸಮುಝಿ ಕರಿಅ ಭಲ ಕಹ ಸಬು ಕೋಊ॥
ಸಹಸಾ ಕರಿ ಪಾಛೇಂ ಪಛಿತಾಹೀಂ। ಕಹಹಿಂ ಬೇದ ಬುಧ ತೇ ಬುಧ ನಾಹೀಂ॥ ೨ ॥
ಸುನಿ ಸುರ ಬಚನ ಲಖನ ಸಕುಚಾನೇ। ರಾಮ ಸೀಯಁ ಸಾದರ ಸನಮಾನೇ॥
ಕಹೀ ತಾತ ತುಮ್ಹ ನೀತಿ ಸುಹಾಈ। ಸಬ ತೇಂ ಕಠಿನ ರಾಜಮದು ಭಾಈ॥ ೩ ॥
ಜೋ ಅಂಚವತ ನೃಪ ಮಾತಹಿಂ ತೇಈ। ನಾಹಿನ ಸಾಧುಸಭಾ ಜೇಹಿಂ ಸೇಈ॥
ಸುನಹು ಲಖನ ಭಲ ಭರತ ಸರೀಸಾ। ಬಿಧಿ ಪ್ರಪಂಚ ಮಹಁ ಸುನಾ ನ ದೀಸಾ॥ ೪ ॥

ಇಡೀ ಜಗತ್ತು ಭಯದಿಂದ ಗಡ-ಗಡನೆ ನಡುಗಿತು. ಆಗ ಲಕ್ಷ್ಮಣನ ಅಪಾರ ಬಾಹುಬಲವನ್ನು ಕೊಂಡಾಡುತ್ತಾ ಆಕಾಶವಾಣಿಯೊಂದು ಮೊಳಗಿತು. ''ಅಯ್ಯಾ ಲಕ್ಷ್ಮಣಾ! ನಿನ್ನ ಪ್ರತಾಪ ಪ್ರಭಾವಗಳನ್ನು ಯಾರು ಬಣ್ಣಿಸಬಲ್ಲರು? ನಿನ್ನ ಬಲಸಾಮರ್ಥ್ಯಗಳನ್ನು ಯಾರು ಬಲ್ಲರು? ಆದರೆ ಯಾವ ಕೆಲಸವೇ ಆಗಲೀ, ಉಚಿತಾನುಚಿತಗಳನ್ನು ಚೆನ್ನಾಗಿ ಪರಿಶೀಲಿಸಿ ಮಾಡಿದರೆ ಜನ ಮೆಚ್ಚುಕೊಳ್ಳುತ್ತಾರೆ. ಆಲೋಚಿಸದೆ ಅವಸರದಿಂದ ಏನಾದರೊಂದು ಕೆಲಸಮಾಡಿ, ಕೊನೆಗೆ ಪಶ್ಚಾತ್ತಾಪ ಪಡುವುದು ಬುದ್ಧಿವಂತರ ಲಕ್ಷಣವಲ್ಲ ಎಂದು ವೇದಗಳೂ, ವಿದ್ವಾಂಸರೂ ಒಕ್ಕೊರಲಿನಿಂದ ಹೇಳುತ್ತಾರೆ.'' ದೇವವಾಣಿಯನ್ನು ಕೇಳಿ ಲಕ್ಷ್ಮಣನು ಸಂಕೋಚಗೊಂಡನು. ಸೀತಾರಾಮರು ಅವನನ್ನು ಪ್ರೇಮದಿಂದ ಆದರಿಸಿ, ಇಂತೆಂದರು – ''ಮಗೂ! ನೀನು ಹೇಳಿದುದು ಲೋಕಸಹಜವೇ. ರಾಜಮದವೂ ಯಾರನ್ನಾದರೂ ಉನ್ಮತ್ತವಾಗಿಸುತ್ತದೆ. ಸಾಧು-ಸಂತರನ್ನು ಸೇವಿಸದವರು ರಾಜ್ಯಾಧಿಕಾರವೆಂಬ ಮದಿರಾಪಾನದಿಂದ ಉನ್ಮತ್ತರಾಗುತಾರೆ. ಆದರೆ ಲಕ್ಷ್ಮಣಾ! ಭರತನಂತಹ ಉತ್ತಮ ಪುರುಷನು ಈ ಬ್ರಹ್ಮಸೃಷ್ಟಿಯಲ್ಲಿ ಇಷ್ಟರವರೆಗೆ ಕಂಡಿಲ್ಲ, ಕೇಳಿಲ್ಲ. (ಚೌ/೧-೪)

**ದೋ – ಭರತಹಿ ಹೋಇ ನ ರಾಜಮದು ಬಿಧಿ ಹರಿ ಹರ ಪದ ಪಾಇ।**
**ಕಬಹು ಕಿ ಕಾಂಜೀ ಸೀಕರನಿ ಛೀರಸಿಂಧು ಬಿನಸಾಇ॥ ೨೩೧ ॥**

ಅಯೋಧ್ಯೆಯ ರಾಜ್ಯದ ಮಾತಿರಲಿ, ಬ್ರಹ್ಮ, ವಿಷ್ಣು, ಮಹೇಶ್ವರ ಇವರ ಪದವಿ ದೊರಕಿದರೂ ಭರತನಿಗೆ ರಾಜ್ಯಮದ ಉಂಟಾಗಲಾರದು. ಹುಳಿಯ ಒಂದು ತೊಟ್ಟಿನಿಂದ ಕ್ಷೀರಸಮುದ್ರವು ಒಡೆದುಹೋದೀತೇ? (ದೋ/೨೩೧)

**ಚೌ – ತಿಮಿರು ತರುನ ತರನಿಹಿ ಮಕು ಗಿಲಈ। ಗಗನು ಮಗನ ಮಕು ಮೇಘಹಿಂ ಮಿಲಈ॥**
**ಗೋಪದ ಜಲ ಬೂಡಹಿಂ ಘಟಜೋನೀ। ಸಹಜ ಛಮಾ ಬರು ಛಾಡೈ ಛೋನೀ॥ ೧ ॥**
**ಮಸಕ ಫೂಂಕ ಮಕು ಮೇರು ಉಡಾಈ। ಹೋಇ ನ ನೃಪಮದು ಭರತಹಿ ಭಾಈ॥**
**ಲಖನ ತುಮ್ಹಾರ ಸಪಥ ಪಿತು ಆನಾ। ಸುಚಿ ಸುಬಂಧು ನಹಿಂ ಭರತ ಸಮಾನಾ॥ ೨ ॥**
**ಸಗುನು ಖೀರು ಅವಗುನ ಜಲು ತಾತಾ। ಮಿಲಇ ರಚಇ ಪರಪಂಚು ಬಿಧಾತಾ॥**
**ಭರತು ಹಂಸ ರಬಿಬಂಸ ತಡಾಗಾ। ಜನಮಿ ಕೀನ್ಹ ಗುನ ದೋಷ ಬಿಭಾಗಾ॥ ೩ ॥**
**ಗಹಿ ಗುನ ಪಯ ತಜಿ ಅವಗುನ ಬಾರೀ। ನಿಜ ಜಸ ಜಗತ ಕೀನ್ಹಿ ಉಜಿಆರೀ॥**
**ಕಹತ ಭರತ ಗುನ ಸೀಲು ಸುಭಾಊ। ಪೇಮ ಪಯೋಧಿ ಮಗನ ರಘುರಾಊ॥ ೪ ॥**

ಮಧ್ಯಾಹ್ನದ ತರುಣ ಸೂರ್ಯನನ್ನು ಅಂಧಕಾರವು ನುಂಗಿಹಾಕಿದರೂ, ಅನಂತಾಕಾಶವು ಮೇಘಗಳಲ್ಲಿ ವಿಲೀನವಾಗಿ ಹೋದರೂ, ಸಮುದ್ರವನ್ನೇ ಆಪೋಶನಗೈದ ಅಗಸ್ತ್ಯರು ಗೋವಿನ ಗೊರಸಿನಷ್ಟು ನೀರಿನಲ್ಲಿ ಮುಳುಗಿಹೋದರೂ, ಕ್ಷೋಣಿಯು ತನ್ನ ಸಹಜ ಕ್ಷಮಾಶೀಲತೆಯನ್ನು ತೊರೆದರೂ, ಸೊಳ್ಳೆಯು ಉಫ್ ಎಂದರೆ ಮೇರುಪರ್ವತವೇ ಹಾರಿಹೋದರೂ, ತಮ್ಮಾ! ಭರತನಿಗೆ ಮಾತ್ರ ರಾಜ್ಯಮದವು ಸೋಂಕದು. ಲಕ್ಷ್ಮಣಾ! ನಾನು ನಿನ್ನ ಮೇಲೆ ಹಾಗೂ ತಂದೆಯ ಮೇಲೆ ಆಣೆಯಿಟ್ಟು ಹೇಳುತ್ತೇನೆ – ''ಭರತನಿಗೆ ಸಮಾನನಾದ ಶುದ್ಧಹೃದಯವುಳ್ಳ ಉತ್ತಮ ಸೋದರನು ಈ ಪ್ರಪಂಚದಲ್ಲಿ ಇಲ್ಲವೇ ಇಲ್ಲ. ಅಯ್ಯಾ! ಸದ್ಗುಣಗಳೆಂಬ ಹಾಲನ್ನೂ, ದುರ್ಗುಣಗಳೆಂಬ ನೀರನ್ನೂ ಬೆರೆಸಿ ವಿಧಾತನು ಈ ಜಗತ್ತನ್ನು ಸೃಷ್ಟಿಸಿದ್ದಾನೆ. ಆದರೆ ಸೂರ್ಯವಂಶವೆಂಬ ಸರೋವರದಲ್ಲಿ ಭರತನೆಂಬ ಹಂಸವು ಹುಟ್ಟಿ, ನೀರಕ್ಷೀರವನ್ನು ಅಂದರೆ ಗುಣ-ದೋಷಗಳನ್ನು ಬೇರೆ-ಬೇರೆ ವಿಂಗಡಿಸಿರುವನು. ಸದ್ಗುಣವೆಂಬ ಹಾಲನ್ನು ಗ್ರಹಿಸಿ, ಅವಗುಣವೆಂಬ ನೀರನ್ನು ತ್ಯಜಿಸಿ, ಭರತನು ತನ್ನ ಯಶಸ್ಸಿನಿಂದ ಪ್ರಪಂಚವನ್ನೇ ಬೆಳಗಿಸಿದನು.'' ಈ ಪ್ರಕಾರ ಭರತನ ಗುಣಶೀಲ ಸ್ವಭಾವಗಳನ್ನು ವರ್ಣಿಸುತ್ತಾ ಶ್ರೀರಾಮನು ಪ್ರೇಮಪಯೋನಿಧಿಯಲ್ಲಿ ಮುಳುಗಿಹೋದನು. (ಚೌ/೧-೪)

**ದೋ – ಸುನಿ ರಘುಬರ ಬಾನೀ ಬಿಬುಧ ದೇಖಿ ಭರತ ಪರ ಹೇತು।**
**ಸಕಲ ಸರಾಹತ ರಾಮ ಸೋ ಪ್ರಭು ಕೋ ಕೃಪಾನಿಕೇತು॥ ೨೩೨ ॥**

ಶ್ರೀರಾಮಚಂದ್ರನ ಮಾತುಗಳನ್ನು ಕೇಳಿ, ಭರತನ ಮೇಲೆ ಆತನಿಗಿರುವ ಪ್ರೇಮವನ್ನು ನೋಡಿ, ದೇವತೆಗಳೆಲ್ಲರೂ ಶ್ರೀರಾಮನಂತಹ ಕೃಪಾನಿಕೇತನನು ಬೇರೆ ಯಾರು ಇರಬಲ್ಲರು? ಎಂದು ಆತನನ್ನು ಕೊಂಡಾಡತೊಡಗಿದರು. (ದೋ/೨೩೨)

**ಚೌ – ಜೌಂ ನ ಹೋತ ಜಗ ಜನಮ ಭರತ ಕೋ। ಸಕಲ ಧರಮ ಧುರ ಧರನಿ ಧರತ ಕೋ॥**
**ಕಬಿ ಕುಲ ಅಗಮ ಭರತ ಗುನ ಗಾಥಾ। ಕೋ ಜಾನಇ ತುಮ್ಹ ಬಿನು ರಘುನಾಥಾ॥ ೧ ॥**

''ಈ ಜಗತ್ತಿನಲ್ಲಿ ಭರತನು ಹುಟ್ಟದೆ ಹೋಗಿದ್ದರೆ, ಭೂಮಿಯ ಮೇಲೆ ಧರ್ಮದ ಧುರಿಯನ್ನು ಯಾರು ಧರಿಸುತ್ತಿದ್ದರು? ಹೇ ರಘುನಾಥಾ! ಕವಿಕುಲಕ್ಕೆ ಅಗಮ್ಯವಾದ ಭರತನ ಗುಣಗಾಥೆಯನ್ನು ನೀನಲ್ಲದೆ ಬೇರಾರು ಗಾನ ಮಾಡಬಲ್ಲರು?'' ಅವರ್ಣನೀಯವಾದ ದೇವತೆಗಳ ಈ ವಾಣಿಯನ್ನು ಕೇಳಿ, ಶ್ರೀ ಸೀತಾರಾಮಲಕ್ಷ್ಮಣರು ಅತ್ಯಂತ ಸಂತುಷ್ಟರಾದರು. (ಚೌ/೧)

## ಭರತನು ಚಿತ್ರಕೂಟವನ್ನು ಸೇರಿದುದು

**ಚೌ – ಲಖನ ರಾಮ ಸಿಯಂ ಸುನಿ ಸುರ ಬಾನೀ। ಅತಿ ಸುಖು ಲಹೆಉ ನ ಜಾಇ ಬಖಾನೀ॥**
**ಇಹಾಂ ಭರತು ಸಬ ಸಹಿತ ಸಹಾಏ। ಮಂದಾಕಿನೀಂ ಪುನೀತ ನಹಾಏ॥ ೨ ॥**
**ಸರಿತ ಸಮೀಪ ರಾಖಿ ಸಬ ಲೋಗಾ। ಮಾಗಿ ಮಾತು ಗುರ ಸಚಿವ ನಿಯೋಗಾ॥**
**ಚಲೇ ಭರತು ಜಹಂ ಸಿಯ ರಘುರಾಈ। ಸಾಥ ನಿಷಾದನಾಥು ಲಘು ಭಾಈ॥ ೩ ॥**
**ಸಮುಝಿ ಮಾತು ಕರತಬ ಸಕುಚಾಹೀಂ। ಕರತ ಕುತರಕ ಕೋಟಿ ಮನ ಮಾಹೀಂ॥**
**ರಾಮು ಲಖನು ಸಿಯ ಸುನಿ ಮಮ ನಾಊಂ। ಉಠಿ ಜನಿ ಅನತ ಜಾಹಿಂ ತಜಿ ಠಾಊಂ॥ ೪ ॥**

ಇತ್ತ ಭರತನು ಎಲ್ಲ ಜನರೊಂದಿಗೆ ಪವಿತ್ರ ಮಂದಾಕಿನಿಯಲ್ಲಿ ಸ್ನಾನವನ್ನು ಗೈದನು. ಅನಂತರ ಎಲ್ಲರನ್ನೂ ನದಿಯ ಬಳಿಯಲ್ಲಿ ಇರುವಂತೆ ಹೇಳಿ, ತಾಯಂದಿರ, ಗುರುಗಳ, ಮಹಾಮಂತ್ರಿಗಳ ಅಪ್ಪಣೆಪಡೆದು, ನಿಷಾದರಾಜನಾದ ಗುಹನನ್ನೂ, ಶತ್ರುಘ್ನನನ್ನೂ

ಜೊತೆ ಸೇರಿಸಿಕೊಂಡು ಸೀತಾರಾಮರಿದ್ದ ಸ್ಥಳಕ್ಕೆ ಹೊರಟನು. ''ತನ್ನ ತಾಯಿಯ ಕುಕೃತ್ಯವನ್ನು ನೆನೆದು ಭರತನು ಹಿಂಜರಿಯುತ್ತಿದ್ದನು. ತನ್ನ ಹೆಸರನ್ನು ಕೇಳಿ, ಎಲ್ಲಿ ಅವರು ತಾವಿದ್ದ ಸ್ಥಳವನ್ನೇ ಬಿಟ್ಟು ಬೇರೆಲ್ಲಿಗಾದರೂ ಹೊರಟುಹೋಗುವರೋ ಎಂದು ಮನಸ್ಸಿನಲ್ಲಿ ಸಾವಿರಾರು ಶಂಕೆಗಳನ್ನು ಮಾಡುತ್ತಾನೆ. (ಚೌ/೨-೪)

**ದೋ – ಮಾತು ಮತೇ ಮಹುँ ಮಾನಿ ಮೊಹಿ ಜೋ ಕಛು ಕರಹಿँ ಸೊ ಥೋರ।**

**ಅಘ ಅವಗುನ ಛಮಿ ಆದರಹಿँ ಸಮುಝಿ ಆಪನೀ ಓರ ॥ ೨೩೩ ॥**

ಅವರು ನನ್ನನ್ನು ತಾಯಿಯ ಕಡೆಗಿದ್ದಾನೆ ಎಂದು ಭಾವಿಸಿ ಏನು ಮಾಡಿದರೂ ಸ್ವಲ್ಪವೇ. ಆದರೆ ಹಾಗೆ ಮಾಡದೆ, ತನ್ನವನು ಎಂದು ತಿಳಿದು ಅವರು ನನ್ನ ಪಾಪಗಳನ್ನು, ಅವಗುಣಗಳನ್ನು ಕ್ಷಮಿಸುವರು. ನನ್ನನ್ನು ತಪ್ಪದೆ ಆದರಿಸುವರು. (ದೋ/೨೩೩)

**ಚೌ – ಜೌँ ಪರಿಹರಹಿँ ಮಲಿನ ಮನು ಜಾನೀ। ಜೌँ ಸನಮಾನಹಿँ ಸೇವಕು ಮಾನೀ॥**
**ಮೋರೇँ ಸರನ ರಾಮಹಿ ಕಿ ಪನಹೀ। ರಾಮ ಸುಸ್ವಾಮಿ ದೋಸು ಸಬ ಜನಹೀ ॥ ೧ ॥**
**ಜಗ ಜಸ ಭಾಜನ ಚಾತಕ ಮೀನಾ। ನೇಮ ಪೇಮ ನಿಜ ನಿಪುನ ನಬೀನಾ ॥**
**ಅಸ ಮನ ಗುನತ ಚಲೇ ಮಗ ಜಾತಾ। ಸಕುಚ ಸನೇಹँ ಸಿಥಿಲ ಸಬ ಗಾತಾ ॥ ೨ ॥**
**ಫೇರತಿ ಮನಹುँ ಮಾತು ಕೃತ ಖೋರೀ। ಚಲತ ಭಗತಿ ಬಲ ಧೀರಜ ಧೋರೀ॥**
**ಜಬ ಸಮುಝುತ ರಘುನಾಥ ಸುಭಾಊ। ತಬ ಪಥ ಪರತ ಉತಾಇಲ ಪಾಊ॥ ೩ ॥**
**ಭರತ ದಸಾ ತೆಹಿ ಅವಸರ ಕೈಸೀ। ಜಲ ಪ್ರಬಾಹँ ಜಲ ಅಲಿ ಗತಿ ಜೈಸೀ ॥**
**ದೇಖಿ ಭರತ ಕರ ಸೋಚು ಸನೇಹೂ। ಭಾ ನಿಷಾದ ತೆಹಿ ಸಮಯँ ಬಿದೇಹೂ॥ ೪ ॥**

ನನ್ನನ್ನು ಮಲಿನ ಮನಸ್ಸಿನವನೆಂದು ತಿಳಿದು ಅವರು ತೊರೆದರೂ ಸರಿ. ಸೇವಕನೆಂದು ತಿಳಿದು ಪ್ರೀತಿಯಿಂದ ಆದರಿಸಿದರೂ ಸರಿ. ಏನಾದರೂ ಸರಿ. ನನಗಾದರೋ ಶ್ರೀರಾಮಚಂದ್ರನ ಪಾದುಕೆಗಳೇ ಶರಣು. ರಾಮನೇನೋ ಒಳ್ಳೆಯ ಧಣಿ. ದೋಷವೆಲ್ಲ ಈ ದಾಸನದೆ. ಜಗತ್ತಿನಲ್ಲಿ ಚಾತಕ ಹಾಗೂ ಮೀನುಗಳು ನಿಜಕ್ಕೂ ಯಶೋಭಾಗಿಗಳು. ಏಕೆಂದರೆ, ಅವು ತಮ್ಮ ನಿಯಮವನ್ನೂ, ಪ್ರೇಮವನ್ನೂ ನಿತ್ಯನೂತನವಾಗಿ ಕಾಯ್ದುಕೊಳ್ಳುವುದರಲ್ಲಿ ನೈಪುಣ್ಯವುಳ್ಳವರು.'' ಈ ಪ್ರಕಾರ ಯೋಚಿಸುತ್ತಾ ಭರತನು ಮುಂದರಿಯುತ್ತಿದ್ದನು. ಅವನ ಅಂಗಾಂಗಗಳೆಲ್ಲವೂ ಸಂಕೋಚ ಹಾಗೂ ಪ್ರೇಮದಿಂದ ಶಿಥಿಲವಾಗುತ್ತಿದ್ದವು. ತಾಯಿಯು ಬಗೆದ ಕೇಡಿನಿಂದ ಅವನನ್ನು ಹಿಂದಕ್ಕೆ ಜಗ್ಗುತ್ತಿರುವಂತಿತ್ತು. ಆದರೆ ಧೈರ್ಯಧುರಂಧರನಾದ ಭರತನು ಭಕ್ತಿಯ ಶಕ್ತಿಯಿಂದ ಮುಂದಕ್ಕೆ ಸಾಗುತ್ತಿದ್ದ. ಶ್ರೀರಾಮನ ಸ್ವಭಾವವನ್ನು ನೆನೆದಾಗ ಅವನ ಕಾಲುಗಳಿಗೆ ಎಲ್ಲಿಲ್ಲದ ಸ್ಫೂರ್ತಿ ಬರುತ್ತಿತ್ತು. ಆಗಿನ ಭರತನ ಸ್ಥಿತಿಯು ಜಲಪ್ರವಾಹದಲ್ಲಿ ಬಿದ್ದಿರುವ ನೀರಿನ ಸುಳಿಯಂತೆ ಇತ್ತು. ಭರತನ ಮಾನಸಿಕ ಆಂದೋಳನವನ್ನೂ, ಪ್ರೇಮವನ್ನೂ, ನೋಡಿ ನಿಷಾದರಾಜನು ಮೈಮರೆತನು. (ಚೌ/೧-೪)

**ದೋ – ಲಗೇ ಹೋನ ಮಂಗಲ ಸಗುನ ಸುನಿ ಗುನಿ ಕಹತ ನಿಷಾದು।**

**ಮಿಟಿಹಿ ಸೋಚು ಹೋಇಹಿ ಹರಷು ಪುನಿ ಪರಿನಾಮ ಬಿಷಾದು ॥ ೨೩೪ ॥**

ಇಷ್ಟರಲ್ಲಿ ಶುಭಶಕುನಗಳು ಆಗತೊಡಗಿದವು. ಅವುಗಳನ್ನು ಗಮನಿಸಿದ ಗುಹನು ಹೇಳಿದನು – 'ಭರತಾ! ಚಿಂತೆ ತೊಲಗುವುದು, ಹರ್ಷವಾಗುವುದು; ಆದರೆ ಕೊನೆಗೆ ದುಃಖವಾದೀತು. (ದೋ/೨೩೪)

**ಚೌ – ಸೇವಕ ಬಚನ ಸತ್ಯ ಸಬ ಜಾನೇ। ಆಶ್ರಮ ನಿಕಟ ಜಾಇ ನಿಅರಾನೇ॥**
**ಭರತ ದೀಖ ಬನ ಸೈಲ ಸಮಾಜೂ। ಮುದಿತ ಛುಧಿತ ಜನು ಪಾಇ ಸುನಾಜೂ॥ ೧ ॥**
**ಈತಿ ಭೀತಿ ಜನು ಪ್ರಜಾ ದುಖಾರೀ। ತ್ರಿಬಿಧ ತಾಪ ಪೀಡಿತ ಗ್ರಹ ಮಾರೀ॥**
**ಜಾಇ ಸುರಾಜ ಸುದೇಸ ಸುಖಾರೀ। ಹೋಹಿँ ಭರತ ಗತಿ ತೆಹಿ ಅನುಹಾರೀ॥ ೨ ॥**
**ರಾಮ ಬಾಸ ಬನ ಸಂಪತಿ ಭ್ರಾಜಾ। ಸುಖೀ ಪ್ರಜಾ ಜನು ಪಾಇ ಸುರಾಜಾ ॥**
**ಸಚಿವ ಬಿರಾಗು ಬಿಬೇಕು ನರೇಸೂ। ಬಿಪಿನ ಸುಹಾವನ ಪಾವನ ದೇಸೂ॥ ೩ ॥**
**ಭಟ ಜಮ ನಿಯಮ ಸೈಲ ರಜಧಾನೀ। ಸಾಂತಿ ಸುಮತಿ ಸುಚಿ ಸುಂದರ ರಾನೀ॥**
**ಸಕಲ ಅಂಗ ಸಂಪನ್ನ ಸುರಾಊ। ರಾಮ ಚರನ ಆಶ್ರಿತ ಚಿತ ಚಾಊ॥ ೪ ॥**

ಭರತನಿಗೆ ಸೇವಕನಾದ ಗುಹನ ಎಲ್ಲ ಮಾತುಗಳು ನಿಜವೆನಿಸಿದವು. ಅವರು ಆಶ್ರಮವನ್ನು ಸಮೀಪಿಸಿದರು. ಭರತನಿಗೆ ಅಲ್ಲಿಯ ವನ, ಪರ್ವತಗಳನ್ನು ಕಂಡು ಹಸಿದವನಿಗೆ ಮೃಷ್ಟಾನ್ನ ದೊರೆತಷ್ಟು ಸಂತೋಷವಾಯಿತು. ಬೆಳೆಗಳು ಕೈಗೆ ಬಾರದೆ ಈತಿ ಬಾಧೆಗಳಿಂದ ನೊಂದಿರುವ, ಆಧ್ಯಾತ್ಮಿಕ, ಆಧಿದೈವಿಕ ಆಧಿಭೌತಿಕವೆಂಬ ತಾಪತ್ರಯಗಳಿಂದ ಬೆಂದಿರುವ, ಕೆಟ್ಟಗ್ರಹಗಳಿಂದ ಪೀಡಿತರಾಗಿ, ಮಹಾಮಾರಿಯ ಉಪದ್ರವಕ್ಕೆ ಗುರಿಯಾದ ಪ್ರಜೆಗಳು – ಉತ್ತಮವಾದ ಸುಭಿಕ್ಷವಾದ ದೇಶವೊಂದಕ್ಕೆ ಹೋಗಿ ಸುಖಿಗಳಾದಂತೆ ಭರತನಿಗೆ ಸುಖಾನುಭವ ಉಂಟಾಯಿತು. ಒಳ್ಳೆಯ ರಾಜನನ್ನು ಪಡೆದು ಸುಖಿಗಳಾದ ಪ್ರಜೆಗಳಂತೆ, ಅಲ್ಲಿಯ ವನಸಂಪತ್ತು ಶ್ರೀರಾಮನ ನಿವಾಸದಿಂದಾಗಿ ನಳನಳಿಸುತ್ತಾ ಕಂಗೊಳಿಸುತ್ತಿತ್ತು. ಆ ಮನೋಹರವಾದ ವನವೇ ಪವಿತ್ರರಾಜ್ಯವು. ವಿವೇಕವೇ ಅದರ ಅರಸು. ವೈರಾಗ್ಯವೇ ಮಂತ್ರಿ. ಯಮ (ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ), ನಿಯಮ (ಶೌಚ, ಸಂತೋಷ, ತಪಸ್ಸು, ಸ್ವಾಧ್ಯಾಯ, ಈಶ್ವರ ಪ್ರಣಿಧಾನ) ಗಳೇ ಯೋಧರು. ಪರ್ವತವೇ ಅದರ ರಾಜಧಾನಿ. ಶಾಂತಿ, ಸುಮತಿಗಳೇ ರಾಣಿಯರು, ಆ ಶ್ರೇಷ್ಠರಾಜನು ಸಕಲರಾಜ್ಯಾಂಗಗಳಿಂದಲೂ ಸುಸಂಪನ್ನನಾಗಿದ್ದನು. ಶ್ರೀರಾಮನ ಚರಣಕಮಲಗಳನ್ನು ಆಶ್ರಯಿಸಿರುವ ಆ ರಾಜನ ಚಿತ್ತದಲ್ಲಿ ಆನಂದವಿದೆ, ಉತ್ಸಾಹವಿದೆ. (ಚೌ/೧-೪)

**ದೋ – ಜೀತಿ ಮೋಹ ಮಹಿಪಾಲು ದಲ ಸಹಿತ ಬಿಬೇಕ ಭುಆಲು ।**
**ಕರತ ಅಕಂಟಕ ರಾಜು ಪುರ್ ಸುಖ ಸಂಪದಾ ಸುಕಾಲು ॥ ೨೩೫ ॥**

ವಿವೇಕರೂಪೀ ರಾಜನು ಮೋಹವೆಂಬ ರಾಜನನ್ನು ಸೇನಾಸಹಿತಗೆದ್ದು, ನಿಷ್ಕಂಟಕವಾದ ರಾಜ್ಯವನ್ನು ಆಳುತ್ತಿದ್ದಾನೆ. ಅವನ ರಾಜ್ಯದಲ್ಲಿ ಸುಖ, ಸಂಪತ್ತಿನಿಂದ ಕೂಡಿ, ಸುಭಿಕ್ಷವು ತಾಂಡವವಾಡುತ್ತಿತ್ತು. (ದೋ/೨೩೫)

**ಚೌ – ಬನ ಪ್ರದೇಸ ಮುನಿ ಬಾಸ ಘನೇರೇ । ಜನು ಪುರ ನಗರ ಗಾಉ ಗನ ಖೇರೇ ॥**
**ಬಿಪುಲ ಬಿಚಿತ್ರ ಬಿಹಗ ಮೃಗ ನಾನಾ । ಪ್ರಜಾ ಸಮಾಜು ನ ಜಾಇ ಬಖಾನಾ ॥ ೧ ॥**
**ಖಗಹಾ ಕರಿ ಹರಿ ಬಾಘ ಬರಾಹಾ । ದೇಖಿ ಮಹಿಷ ಬೃಷ ಸಾಜು ಸರಾಹಾ ॥**
**ಬಯರು ಬಿಹಾಇ ಚರಹಿಂ ಏಕ ಸಂಗಾ । ಜಹ್ ತಹ್ ಮನಹುಂ ಸೇನ ಚತುರಂಗಾ ॥ ೨ ॥**
**ಝರನಾ ಝರಹಿಂ ಮತ್ತ ಗಜ ಗಾಜಹಿಂ । ಮನಹುಂ ನಿಸಾನ ಬಿಬಿಧಿ ಬಿಧಿ ಬಾಜಹಿಂ ॥**
**ಚಕ ಚಕೋರ ಚಾತಕ ಸುಕು ಪಿಕ ಗನ । ಕೂಜತ ಮಂಜು ಮರಾಲ ಮುದಿತ ಮನ ॥ ೩ ॥**
**ಅಲಿಗನ ಗಾವತ ನಾಚತ ಮೋರಾ । ಜನು ಸುರಾಜ ಮಂಗಲ ಚಹು ಓರಾ ॥**
**ಬೇಲಿ ಬಿಟಪ ತೃನ ಸಫಲ ಸಫೂಲಾ । ಸಬ ಸಮಾಜು ಮುದ ಮಂಗಲ ಮೂಲಾ ॥ ೪ ॥**

ಆ ವನಪ್ರಾಂತದಲ್ಲಿ ಋಷ್ಯಾಶ್ರಮಗಳೇ ನಗರಗಳು, ಪಟ್ಟಣಗಳು, ಗ್ರಾಮಗಳು, ಹಳ್ಳಿಗಳು. ಅನೇಕ ಚಿತ್ರವಿಚಿತ್ರವಾದ ಖಗ-ಮೃಗಗಳೇ ಅವರ್ಣನೀಯವಾದ ಪ್ರಜೆಗಳು. ಖಡ್ಗಮೃಗ, ಆನೆ, ಸಿಂಹ, ಹುಲಿ, ಕಾಡುಹಂದಿ, ಕಾಡುಕೋಣ, ಎತ್ತುಗಳೇ ಮುಂತಾದವುಗಳು ಚತುರಂಗಸೇನೆಯು. ಅವೆಲ್ಲವು ತಮ್ಮ ನೈಸರ್ಗಿಕ ವೈರವನ್ನು ತೊರೆದು ಅಲ್ಲಲ್ಲಿ ವಿಹರಿಸುತ್ತಿದ್ದರು. ಅಲ್ಲಿಯ ಜಲಪಾತ, ಜಲಪ್ರವಾಹಗಳ ಧ್ವನಿಗಳು, ಮದಭರಿತವಾದ ಗಜಗಳು ಘೀಳಿಡುತ್ತಿರುವ ಗರ್ಜನೆಗಳೇ ನಗಾರಿಗಳು ಮೊಳಗುತ್ತಿದ್ದವು. ಚಕ್ರವಾಕ, ಚಕೋರ, ಚಾತಕ, ಶುಕ, ಪಿಕ, ಕಲಹಂಸಗಳು ಹರ್ಷದಿಂದ ಮಧುರವಾಗಿ ಕಲರವ ಮಾಡುತ್ತಿದ್ದು. ದುಂಬಿಗಳು ಝೇಂಕರಿಸುತ್ತಾ, ನವಿಲುಗಳ ಜಾಗರವಾಡುತ್ತಿದ್ದವು. ಆ ರಾಜ್ಯದಲ್ಲಿ ಎಲ್ಲವೂ ಮಂಗಳಕರವಾಗಿಯೇ ನಡೆಯುವಂತಿದೆ. ತರು, ಲತಾಗುಲ್ಮಗಳು, ತೃಣಗಳು, ಫಲಪುಷ್ಪಗಳಿಂದ ಇಡೀ ವನಸಮಾಜವು ಆನಂದ ಹಾಗೂ ಮಂಗಳದ ಮೂಲವಾಗಿತ್ತು. (ಚೌ/೧-೪)

**ದೋ – ರಾಮ ಸೈಲ ಸೋಭಾ ನಿರಖಿ ಭರತ ಹೃದಯ್ ಅತಿ ಪೇಮು ।**
**ತಾಪಸ ತಪ ಫಲು ಪಾಇ ಜಿಮಿ ಸುಖೀ ಸಿರಾನೇಂ ನೇಮು ॥ ೨೩೬ ॥**

ಶ್ರೀರಾಮನು ವಾಸಿಸಿದ ಚಿತ್ರಕೂಟ ಪರ್ವತದ ಚೆಲುವನ್ನು ಕಂಡು ತಾಪಸರಿಗೆ ವ್ರತ ಮುಗಿದ ಮೇಲೆ ಅದರ ಫಲದೊರೆತಂತೆ, ಭರತನ ಹೃದಯವು ಅತ್ಯಂತಾನಂದವನ್ನು ಹೊಂದಿತು. (ದೋ/೨೩೬)

**ಮಾಸಪಾರಾಯಣದ ಇಪ್ಪತ್ತನೆಯ ವಿಶ್ರಾಮ**

**ನವಾಹ್ನಪಾರಾಯಣದ ಐದನೆಯ ವಿಶ್ರಾಮ**

**ಚೌ – ತಬ ಕೇವಟ ಊಂಚೇಂ ಚಢಿ ಧಾಈ । ಕಹೇಉ ಭರತ ಸನ ಭುಜಾ ಉಠಾಈ ॥**
**ನಾಥ ದೇಖಿಅಹಿಂ ಬಿಟಪ ಬಿಸಾಲಾ । ಪಾಕರಿ ಜಂಬು ರಸಾಲ ತಮಾಲಾ ॥ ೧ ॥**

ಜಿನ್ಹ ತರುಬರನ್ಹ ಮಧ್ಯ ಬಟು ಸೋಹಾ। ಮಂಜು ಬಿಸಾಲ ದೇಖಿ ಮನು ಮೋಹಾ ॥
ನೀಲ ಸಘನ ಪಲ್ಲವ ಫಲ ಲಾಲಾ। ಅಬಿರಲ ಛಾಁಹ ಸುಖದ ಸಬ ಕಾಲಾ ॥ ೨ ॥
ಮಾನಹುಁ ತಿಮಿರ ಅರುನಮಯ ರಾಸೀ। ಬಿರಚೀ ಬಿಧಿ ಸಁಕೇಲಿ ಸುಷಮಾ ಸೀ ॥
ಏ ತರು ಸರಿತ ಸಮೀಪ ಗೊಸಾಁಈ। ರಘುಬರ ಪರನಕುಟೀ ಜಹಁ ಛಾಈ ॥ ೩ ॥
ತುಲಸೀ ತರುಬರ ಬಿಬಿಧ ಸುಹಾಏ। ಕಹುಁ ಕಹುಁ ಸಿಯ ಕಹುಁ ಲಖನ ಲಗಾಏ ॥
ಬಟ ಛಾಯಾಁ ಬೇದಿಕಾ ಬನಾಈ। ಸಿಯ ನಿಜ ಪಾನಿ ಸರೋಜ ಸುಹಾಈ ॥ ೪ ॥

ಆಗ ಗುಹನು ಓಡಿಹೋಗಿ ಒಂದು ಎತ್ತರವಾದ ದಿಣ್ಣೆಯಮೇಲೆ ಹತ್ತಿ, ಎರಡೂ ಭುಜಗಳನ್ನು ಮೇಲಕ್ಕೆತ್ತಿ ಭರತನ ಬಳಿ ಹೇಳತೊಡಗಿದನು – 'ಒಡೆಯಾ! ಇಲ್ಲಿಂದ ಪರ್ಕಟಿ, ನೇರಳೆ, ಮಾವು, ಹೊಂಗೆ ಮೊದಲಾದ ಹೆಮ್ಮರಗಳು ಕಂಡು ಬರುತ್ತಿವೆ. ಈ ತರುಗಳ ಮಧ್ಯದಲ್ಲಿ ಒಂದು ಸುಂದರ ವಿಶಾಲವಾದ ವಟವೃಕ್ಷವಿದೆ. ಅದನ್ನು ನೋಡುತ್ತಲೇ ಮನಸ್ಸು ಮುಗ್ಧವಾಗುತ್ತದೆ. ಅದರ ದಟ್ಟವಾದ ಹಸಿರು ಎಲೆಗಳಿದ್ದು, ಕೆಂಪಾದ ಹಣ್ಣುಗಳು ಬಿಟ್ಟಿವೆ. ಆ ಮರದ ದಟ್ಟವಾದ ನೆರಳು ಎಲ್ಲ ಋತುಗಳಲ್ಲಿಯೂ ಆಹ್ಲಾದಕರವಾಗಿದೆ. ಬ್ರಹ್ಮದೇವರು ಎಲ್ಲ ಚೆಲುವನ್ನು ಒಂದೆಡೆ ಕೂಡಿಸಿ, ಕತ್ತಲೆ ಮತ್ತು ಕೆಂಪಿನ ಒಂದು ರಾಶಿಯನ್ನೇ ನಿರ್ಮಿಸಿರುವಂತೆ ಕಾಣುತ್ತದೆ. ಸ್ವಾಮಿ! ಈ ಮರಗಳು ನದೀತೀರದಲ್ಲೇ ಇವೆ. ಅಲ್ಲೇ ಶ್ರೀರಾಮನ ಪರ್ಣಕುಟೀರವು ನೆಲೆಸಿದೆ. ಅಲ್ಲಿ ಅನೇಕ ತುಳಸಿಯ ಗಿಡಗಳು ಕಂಗೊಳಿಸುತ್ತಿವೆ. ಅವನ್ನು ಸೀತಾಮಾತೆ ಹಾಗೂ ಲಕ್ಷ್ಮಣರು ಅಲ್ಲಲ್ಲಿ ನೆಟ್ಟಿದ್ದರು. ಈ ಆಲದ ಮರದ ಬುಡದಲ್ಲಿ ಸೀತಮ್ಮನವರು ತಮ್ಮ ಕೈಗಳಿಂದಲೇ ಸುಂದರವಾದ ಒಂದು ವೇದಿಕೆಯನ್ನು ನಿರ್ಮಿಸಿರುವರು. (ಚೌ/೧-೪)

**ದೋ – ಜಹಾಁ ಬೈಠಿ ಮುನಿಗನ ಸಹಿತ ನಿತ ಸಿಯ ರಾಮು ಸುಜಾನ।**
**ಸುನಹಿಁ ಕಥಾ ಇತಿಹಾಸ ಸಬ ಆಗಮ ನಿಗಮ ಪುರಾನ ॥ ೨೩೭ ॥**

ಆ ವೇದಿಕೆಯಲ್ಲಿ ಕುಳಿತು ಜ್ಞಾನಸ್ವರೂಪನಾದ ಶ್ರೀರಾಮಚಂದ್ರನೂ, ಸೀತಾದೇವಿಯೂ, ಮುನಿವೃಂದಗಳಿಂದ ಪ್ರತಿದಿನವೂ ವೇದ, ಶಾಸ್ತ್ರ ಪುರಾಣ, ಇತಿಹಾಸದ ಕಥೆಗಳನ್ನು ಕೇಳುತ್ತಾರೆ. (ದೋ/೨೩೭)

## ಶ್ರೀರಾಮಭರತ ಸಮಾಗಮ

ಚೌ – ಸಖಾ ಬಚನ ಸುನಿ ಬಿಟಪ ನಿಹಾರೀ। ಉಮಗೇ ಭರತ ಬಿಲೋಚನ ಬಾರೀ॥
ಕರತ ಪ್ರನಾಮ ಚಲೇ ದೋಉ ಭಾಈ। ಕಹತ ಪ್ರೀತಿ ಸಾರದ ಸಕುಚಾಈ॥ ೧ ॥
ಹರಷಹಿಁ ನಿರಖಿ ರಾಮ ಪದ ಅಂಕಾ। ಮಾನಹುಁ ಪಾರಸು ಪಾಯಉ ರಂಕಾ ॥
ರಜ ಸಿರ ಧರಿ ಹಿಯಁ ನಯನನ್ಹಿ ಲಾವಹಿಁ। ರಘುಬರ ಮಿಲನ ಸರಿಸ ಸುಖ ಪಾವಹಿಁ॥ ೨ ॥
ದೇಖಿ ಭರತ ಗತಿ ಅಕಥ ಅತೀವಾ। ಪ್ರೇಮ ಮಗನ ಮೃಗ ಖಗ ಜಡ ಜೀವಾ॥
ಸಖಹಿ ಸನೇಹ ಬಿಬಸ ಮಗ ಭೂಲಾ। ಕಹಿ ಸುಪಂಥ ಸುರ ಬರಷಹಿಁ ಫೂಲಾ॥ ೩ ॥
ನಿರಖಿ ಸಿದ್ಧ ಸಾಧಕ ಅನುರಾಗೇ। ಸಹಜ ಸನೇಹು ಸರಾಹನ ಲಾಗೇ॥
ಹೋತ ನ ಭೂತಲ ಭಾಉ ಭರತ ಕೋ। ಅಚರ ಸಚರ ಚರ ಅಚರ ಕರತ ಕೋ॥ ೪ ॥

ಸಖನಾದ ಗುಹನ ಮಾತನ್ನು ಕೇಳಿ, ಆ ವಟವೃಕ್ಷವನ್ನು ನೋಡಿ, ಭರತನ ಕಣ್ಣುಗಳಲ್ಲಿ ಪ್ರೇಮಾಶ್ರುಗಳು ಹರಿದವು. ಅಣ್ಣ-ತಮ್ಮಂದಿರಿಬ್ಬರೂ ಪ್ರಣಾಮ ಮಾಡುತ್ತಾ ಆಶ್ರಮದ ಸಮೀಪಕ್ಕೆ ಹೋಗುತ್ತಿದ್ದಾರೆ. ಅವರ ಪ್ರೇಮವನ್ನು ವಾಗ್ದೇವಿಯೂ ವರ್ಣಿಸುವುದಕ್ಕೆ ಹಿಂಜರಿದಾಳು. ಶ್ರೀರಾಮಚಂದ್ರನ ಚರಣಚಿಹ್ನೆಗಳನ್ನು ಕಂಡು ಅಣ್ಣ-ತಮ್ಮಂದಿರಿಬ್ಬರೂ – ದರಿದ್ರನಿಗೆ ಪರಶುಮಣಿ ದೊರೆತಷ್ಟು ಆನಂದವಾಯಿತು. ಅಲ್ಲಿಯ ಪದರಜವನ್ನು ಎತ್ತಿಕೊಂಡು ಎದೆಗೆ, ಕಣ್ಣಿಗೆ ಒತ್ತಿಕೊಂಡು, ಶ್ರೀರಾಮನನ್ನು ಕಂಡಷ್ಟೇ ಸಂತೋಷಪಟ್ಟರು. ಭರತನ ಈ ಅತ್ಯಂತ ಅನಿರ್ವಚನೀಯ ದೆಸೆಯನ್ನು ಕಂಡು ವನದ ಖಗ-ಮೃಗಗಳೂ, ಜಡ-ಜೀವಗಳೂ ಕೂಡ ಪೇಮಮಗ್ನವಾದುವು. ಪ್ರೇಮಪಾರವಶ್ಯದಿಂದ ನಿಷಾದರಾಜನಾದ ಗುಹನಿಗೆ ದಾರಿ ಮರೆತುಹೋಯಿತು. ಆಗ ದೇವತೆಗಳು ಹೂವು ಸುರಿಸುತ್ತಾ ಸುಂದರವಾದ ದಾರಿಯನ್ನು ತೋರಿದರು. ಭರತನ ಈ ಸಹಜ ಪ್ರೇಮವನ್ನು ನೋಡಿ ಸಿದ್ಧರೂ, ಸಾಧಕರೂ ಅನುರಾಗಮಗ್ನರಾದರು. ಅವರೆಲ್ಲರೂ ಅವನ ಪ್ರೇಮವನ್ನು ಕೊಂಡಾಡುತ್ತಾ ''ಭರತನು ಈ ಭುವಿಯಲ್ಲಿ ಹುಟ್ಟದಿದ್ದರೆ ಜಡ ಚೇತನವಾಗುತ್ತಿರಲಿಲ್ಲ; ಚೇತನ ಜಡವಾಗುತ್ತಿರಲಿಲ್ಲ'' ಎಂದು ಪ್ರಶಂಸಿಸಿದರು. (ಚೌ/೧-೪)

**ದೋ – ಪೇಮ ಅಮಿಅ ಮಂದರು ಬಿರಹು ಭರತು ಪಯೋಧಿ ಗಭೀರ।**
**ಮಥಿ ಪ್ರಗಟೆಉ ಸುರ ಸಾಧು ಹಿತ ಕೃಪಾಸಿಂಧು ರಘುಬೀರ॥ ೨೩೮ ॥**

ಶ್ರೀರಾಮಪ್ರೇಮವೇ ಅಮೃತ, ಶ್ರೀರಾಮವಿರಹವೇ ಮಂದರಾಚಲವೆಂಬ ಕಡಗೋಲು, ಭರತನೇ ಅಗಾಧವಾದ ಸಮುದ್ರವು. ಕೃಪಾನಿಧಾನನಾದ ಶ್ರೀರಾಮಚಂದ್ರನು ಸಜ್ಜನರಾದ ರಾಮಭಕ್ತರ ಹಾಗೂ ದೇವತೆಗಳ ಹಿತಕ್ಕಾಗಿ ಸ್ವತಃ (ಭರತನೆಂಬ ಸಮುದ್ರವನ್ನು ತನ್ನ ವಿರಹವೆಂಬ ಮಂದರಾಚಲ ಕಡಗೋಲಿನಿಂದ) ಕಡೆದು, ಭರತನಲ್ಲಿ ಗುಪ್ತವಾಗಿರುವ ರಾಮಪ್ರೇಮಾಮೃತವನ್ನು ಪ್ರಕಟಗೊಳಿಸಿದನು. (ದೋ/೨೩೮)

**ಚೌ – ಸಖಾ ಸಮೇತ ಮನೋಹರ ಜೋಟಾ। ಲಖೆಉ ನ ಲಖನ ಸಘನ ಬನ ಓಟಾ ॥**
**ಭರತ ದೀಖ ಪ್ರಭು ಆಶ್ರಮು ಪಾವನ। ಸಕಲ ಸುಮಂಗಲ ಸದನು ಸುಹಾವನ ॥ ೧ ॥**
**ಕರತ ಪ್ರಬೇಸ ಮಿಟೇ ದುಖ ದಾವಾ। ಜನು ಜೋಗೀಂ ಪರಮಾರಥು ಪಾವಾ ॥**
**ದೇಖೇ ಭರತ ಲಖನ ಪ್ರಭು ಆಗೇ। ಪೂಂಛೇ ಬಚನ ಕಹತ ಅನುರಾಗೇ ॥ ೨ ॥**
**ಸೀಸ ಜಟಾ ಕಟಿ ಮುನಿ ಪಟ ಬಾಂಧೇಂ। ತೂನ ಕಸೇಂ ಕರ ಸರು ಧನು ಕಾಂಧೇಂ ॥**
**ಬೇದೀ ಪರ ಮುನಿ ಸಾಧು ಸಮಾಜೂ। ಸೀಯ ಸಹಿತ ರಾಜತ ರಘುರಾಜೂ ॥ ೩ ॥**
**ಬಲಕಲ ಬಸನ ಜಟಿಲ ತನು ಸ್ಯಾಮಾ। ಜನು ಮುನಿ ಬೇಷ ಕೀನ್ಹ ರತಿ ಕಾಮಾ ॥**
**ಕರ ಕಮಲನಿ ಧನು ಸಾಯಕು ಫೇರತ। ಜಿಯ ಕೀ ಜರನಿ ಹರತ ಹಂಸಿ ಹೇರತ ॥ ೪ ॥**

ದಟ್ಟವಾದ ಮರಗಳಿಂದಾಗಿ ನಿಷಾದರಾಜನೊಡನೆ ಇದ್ದ ಭರತ-ಶತ್ರುಘ್ನರನ್ನು ಲಕ್ಷ್ಮಣನು ನೋಡದಾದನು. ಆದರೆ ಭರತನು ಮಾತ್ರ ಸಮಸ್ತ ಶುಭಗಳಿಗೆ ಆಕರವಾದ ಶ್ರೀರಾಮಚಂದ್ರನ ಸುಂದರವಾದ ಪವಿತ್ರ ಆಶ್ರಮವನ್ನು ನೋಡಿದನು. ಭರತನು ಆಶ್ರಮವನ್ನು ಪ್ರವೇಶಿಸುತ್ತಿರುವಂತೆ ಅವನ ದುಃಖತಾಪಗಳು ತೊಲಗಿದವು. ಯೋಗಿಗೆ ಪರಮಾತ್ಮನು ಲಂಭಿಸಿದಂತೆ ಅವನು ಆನಂದಿತನಾದನು. ಲಕ್ಷ್ಮಣನು ಅಂಜಲಿಬದ್ಧನಾಗಿ ಶ್ರೀರಾಮನ ಎದುರಿಗೆ ನಿಂತಿರುವನು, ಪ್ರಭುವು ಕೇಳಿದುದಕ್ಕೆಲ್ಲ ಅವನು ವಿನಯದಿಂದ ಉತ್ತರಿಸುವುದನ್ನು ಭರತನು ನೋಡಿದನು. ಅವನ ತಲೆಯ ಮೇಲೆ ಜಟಾಜೂಟವಿದೆ, ನಡುವಿನಲ್ಲಿ ವಲ್ಕಲಗಳನ್ನು ಧರಿಸಿದ್ದು, ಅದರಲ್ಲಿ ಬತ್ತಳಿಕೆಯನ್ನು ಕಟ್ಟಿಕೊಂಡಿರುವನು. ಕೈಯಲ್ಲಿ ಬಾಣ ಹಾಗೂ ಹೆಗಲಲ್ಲಿ ಧನುಸ್ಸನ್ನು ಧರಿಸಿರುವನು. ವೇದಿಕೆಯ ಮೇಲೆ ಮುನಿಗಳೂ ಮತ್ತು ಸಾಧುಗಳೊಡನೆ, ಸೀತಾದೇವಿಯೊಂದಿಗೆ ಶ್ರೀರಾಮಚಂದ್ರನು ವಿರಾಜಿಸುತ್ತಿದ್ದಾನೆ. ಶ್ರೀರಾಮನು ಜಟಾ-ವಲ್ಕಲಗಳನ್ನು ಧರಿಸಿರುವನು. ಶ್ಯಾಮಲಶರೀರನಾದ ಶ್ರೀರಾಮನು ಸೀತೆಯೊಡನೆ – ಮುನಿವೇಷತೊಟ್ಟು ರತಿ-ಮನ್ಮಥರಂತೆ ಕಂಗೊಳಿಸುತ್ತಿದ್ದಾರೆ. ಶ್ರೀರಾಮನು ಕರಕಮಲಗಳಲ್ಲಿ ಧನುರ್ಬಾಣಗಳನ್ನೂ ತಿರುಗಿಸುತ್ತಿರುವನು. ಅವನ ಮುಗುಳ್ನಗೆಯು ನೋಡಿದವರ ಹೃದಯ ವೇದನೆಯನ್ನು ಇಲ್ಲವಾಗಿಸುವುದು. ಅವರಿಗೆ ಪರಿಪೂರ್ಣಾನಂದವು ಪ್ರಾಪ್ತವಾಗುತ್ತಿತ್ತು. (ಚೌ/೧-೪)

**ದೋ – ಲಸತ ಮಂಜು ಮುನಿ ಮಂಡಲೀ ಮಧ್ಯ ಸೀಯ ರಘುಚಂದು।**
**ಗ್ಯಾನ ಸಭಾಂ ಜನು ತನು ಧರೇಂ ಭಗತಿ ಸಚ್ಚಿದಾನಂದು॥ ೨೩೯ ॥**

ಮುನಿಮಂಡಲಿಯ ಮಧ್ಯದಲ್ಲಿ ಸೀತಾರಾಮರು – ಜ್ಞಾನಗೋಷ್ಠಿಯಲ್ಲಿ ಸಾಕ್ಷಾತ್ ಭಕ್ತಿ ಮತ್ತು ಸಚ್ಚಿದಾನಂದವೇ ಮೈತಳೆದು ವಿರಾಜಿಸುವಂತೆ ರಾರಾಜಿಸುತ್ತಿದ್ದಾರೆ. (ದೋ/೨೩೯)

**ಚೌ – ಸಾನುಜ ಸಖಾ ಸಮೇತ ಮಗನ ಮನ। ಬಿಸರೇ ಹರಷ ಸೋಕ ಸುಖ ದುಖ ಗನ ॥**
**ಪಾಹಿ ನಾಥ ಕಹಿ ಪಾಹಿ ಗೊಸಾಈಂ। ಭೂತಲ ಪರೇ ಲಕುಟ ಕೀ ನಾಈಂ ॥ ೧ ॥**
**ಬಚನ ಸಪೇಮ ಲಖನ ಪಹಿಚಾನೇ। ಕರತ ಪ್ರನಾಮು ಭರತ ಜಿಯಂ ಜಾನೇ ॥**
**ಬಂಧು ಸನೇಹ ಸರಸ ಏಹಿ ಓರಾ। ಉತ ಸಾಹಿಬ ಸೇವಾ ಬಸ ಜೋರಾ ॥ ೨ ॥**
**ಮಿಲಿ ನ ಜಾಇ ನಹಿಂ ಗುದರತ ಬನಈ। ಸುಕಬಿ ಲಖನ ಮನ ಕೀ ಗತಿ ಭನಈ ॥**
**ರಹೇ ರಾಖಿ ಸೇವಾ ಪರ ಭಾರೂ। ಚಢೀ ಚಂಗ ಜನು ಖೈಂಚ ಖೆಲಾರೂ ॥ ೩ ॥**
**ಕಹತ ಸಪ್ರೇಮ ನಾಇ ಮಹಿ ಮಾಥಾ। ಭರತ ಪ್ರನಾಮ ಕರತ ರಘುನಾಥಾ ॥**
**ಉಠೇ ರಾಮು ಸುನಿ ಪೇಮ ಅಧೀರಾ। ಕಹುಂ ಪಟ ಕಹುಂ ನಿಷಂಗ ಧನು ತೀರಾ ॥ ೪ ॥**

ತಮ್ಮ ಶತ್ರುಘ್ನ, ನಿಷಾದರಾಜಸಹಿತ ಭರತನು ಅವರನ್ನು ನೋಡಿ ಭಕ್ತಿಪರವಶನಾದನು. ಅವನಿಗೆ ಹರ್ಷ-ಶೋಕ, ಸುಖ-ದುಃಖ ಮುಂತಾದವುಗಳೆಲ್ಲವೂ ಮರೆತುಹೋದುವು. ಸ್ವಾಮಿ! ನನ್ನನ್ನು ರಕ್ಷಿಸು! ರಕ್ಷಿಸು ಎಂದು ಭರತನು ದಂಡದಂತೆ ನೆಲದಮೇಲೆ

ಬಿದ್ದುಬಿಟ್ಟನು. ಅವನ ಪ್ರೇಮಪೂರಿತವಾದ ಮಾತನ್ನು ಕೇಳಿ, ಭರತನು ನಮಸ್ಕರಿಸುತ್ತಿದ್ದಾನೆ ಎಂದು ಲಕ್ಷ್ಮಣನು ಗ್ರಹಿಸಿದನು. ಒಂದು ಕಡೆ ಭರತನಲ್ಲಿರುವ ಸರಸವಾದ ಭ್ರಾತೃಪ್ರೇಮ, ಮತ್ತೊಂದೆಡೆ ಸ್ವಾಮಿಸೇವಾ ಪಾರವಶ್ಯಸೇವೆಯನ್ನು ಬಿಡುವುದಕ್ಕಿಲ್ಲ, ಭ್ರಾತೃಸ್ನೇಹವನ್ನೂ ಕಡೆಗಣಿಸುವಂತಿಲ್ಲ. ಲಕ್ಷ್ಮಣನ ಇಂತಹ ಮನದ ಒಳತೋಟಿಯನ್ನು ಓರ್ವ ಮಹಾಕವಿಯು ಮಾತ್ರ ವರ್ಣಿಸಬಲ್ಲನು. ಅವನು ಸೇವೆಯಮೇಲೆಯೇ ಹೆಚ್ಚು ಭಾರಹಾಕಿದನು. ಮೇಲೇರಿರುವ ಗಾಳಿಪಟವನ್ನು ಕೆಳಕ್ಕೆ ಸೆಳೆದಂತಾಯಿತು. ಲಕ್ಷ್ಮಣನು ಪ್ರೇಮದಿಂದ ನೆಲದಮೇಲೆ ಹಣೆಚಾಚಿ ''ರಘುನಾಥಾ! ಭರತನು ಪ್ರಣಾಮಮಾಡುತ್ತಿದ್ದಾನೆ'' ಎಂದು ನುಡಿದನು. ಇದನ್ನು ಕೇಳಿದ ಕೂಡಲೇ ಶ್ರೀರಾಮನು ಪ್ರೇಮಪರವಶನಾಗಿ ತಟ್ಟನೆ ಎದ್ದನು. ಆತನ ಉತ್ತರೀಯವು ಒಂದು ಕಡೆ ಜಾರಿಬಿದ್ದರೆ, ಬತ್ತಳಿಕೆ ಮತ್ತೊಂದೆಡೆ ಬಿದ್ದುಹೋಯಿತು. ಧನುರ್ಬಾಣಗಳೂ ಕೈಜಾರಿದವು. (ಚೌ/೧-೪)

**ದೋ – ಬರಬಸ ಲಿಏ ಉಠಾಇ ಉರ ಲಾಏ ಕೃಪಾನಿಧಾನ।**
**ಭರತ ರಾಮ ಕೀ ಮಿಲನಿ ಲಖಿ ಬಿಸರೇ ಸಬಹಿ ಅಪಾನ ॥ ೨೪೦ ॥**

ಕೃಪಾನಿಧಾನವಾದ ಶ್ರೀರಾಮಚಂದ್ರನು ಬಲವಂತವಾಗಿ ಭರತನನ್ನು ಬಾಚಿ ತಬ್ಬಿಕೊಂಡನು. ರಾಮ ಭರತರ ಮಿಲನದ ಪರಿಯನ್ನು ಕಂಡು ಎಲ್ಲರೂ ಮೈಮರೆತರು. (ದೋ/೨೪೦)

**ಚೌ – ಮಿಲನಿ ಪ್ರೀತಿ ಕಿಮಿ ಜಾಇ ಬಖಾನೀ। ಕಬಿಕುಲ ಅಗಮ ಕರಮ ಮನ ಬಾನೀ ॥**
**ಪರಮ ಪೇಮ ಪೂರನ ದೋಉ ಭಾಈ। ಮನ ಬುಧಿ ಚಿತ ಅಹಮಿತಿ ಬಿಸರಾಈ ॥ ೧ ॥**
**ಕಹಹು ಸುಪೇಮ ಪ್ರಗಟ ಕೋ ಕರಈ। ಕೆಹಿ ಛಾಯಾ ಕಬಿ ಮತಿ ಅನುಸರಈ ॥**
**ಕಬಿಹಿ ಅರಥ ಆಖರ ಬಲು ಸಾ ँಚಾ। ಅನುಹರಿ ತಾಲ ಗತಿಹಿ ನಟು ನಾಚಾ ॥ ೨ ॥**
**ಅಗಮ ಸನೇಹ ಭರತ ರಘುಬರ ಕೋ। ಜಹ ँ ನ ಜಾಇ ಮನು ಬಿಧಿ ಹರಿ ಹರ ಕೋ ॥**
**ಸೋ ಮೈं ಕುಮತಿ ಕಹೌं ಕೆಹಿ ಭಾ ँತೀ। ಬಾಜ ಸುರಾಗ ಕಿ ಗಾ ँಡರ ತಾ ँತೀ ॥ ೩ ॥**
**ಮಿಲನಿ ಬಿಲೋಕಿ ಭರತ ರಘುಬರ ಕೀ। ಸುರಗನ ಸಭಯ ಧಕಧಕೀ ಧರಕೀ ॥**
**ಸಮುಝಾಏ ಸುರಗುರು ಜಡ ಜಾಗೇ। ಬರಷಿ ಪ್ರಸೂನ ಪ್ರಸಂಸನ ಲಾಗೇ ॥ ೪ ॥**

ಈ ದಿವ್ಯ ಸಮಾಗಮವನ್ನು ಹೇಗೆ ವರ್ಣಿಸುವುದು? ಅದು ಕವಿಕುಲದ ವನ, ವಚನ, ಕರ್ಮಗಳಿಗೆ ಅಗಮ್ಯ. ಅಣ್ಣ-ತಮ್ಮಂದಿರಿಬ್ಬರೂ ಮನ, ಬುದ್ಧಿ, ಚಿತ್ತ, ಅಹಂಕಾರಗಳನ್ನು ಮರೆಸಿ ಪರಮಪ್ರೇಮದಿಂದ ಪರಿಪೂರ್ಣರಾದರು. ಆ ಶ್ರೇಷ್ಠ ಪ್ರೇಮವನ್ನು ಯಾರು ಪ್ರಕಟಿಸಬಲ್ಲರು ಹೇಳಿ! ಕವಿಯ ಬುದ್ಧಿಯು ಅದರ ಛಾಯೆಯನ್ನೂ ಅನುಸರಿಸಲಾರದು. ಕವಿಗಳಿಗಾದರೋ ಶಬ್ದಾರ್ಥಗಳನ್ನು ಅನುಸರಿಸಿಯೇ ವರ್ಣಿಸುವರು. ನರ್ತಕನು ತಾಳಗತಿಯನ್ನನುಸರಿಸಿಯೇ ಕುಣಿಯುವನು. ಶ್ರೀರಾಮ ಭರತರ ಪ್ರೇಮವು ಅಗಮ್ಯವು. ಅಲ್ಲಿಗೆ ಹರಿಹರ ಹಿರಣ್ಯಗರ್ಭರ ಮನವೂ ಹೋಗಲಾರದು. ಅಂತಹ ಪ್ರೇಮವನ್ನು ಮಂದಬುದ್ಧಿಯಾದ ನಾನು ವರ್ಣಿಸಬಲ್ಲೆನೇ? ಹುಲ್ಲಿನ ಹುರಿಯಿಂದ (ತಂತಿಯಿಂದ) ಮಧುರಸಂಗೀತ ನುಡಿಸಬಲ್ಲದೇ? ರಾಮ ಭರತರ ಮಿಲನವನ್ನು ಕಂಡು ದೇವತೆಗಳು ಹೌಹಾರಿದರು. ಭಯದಿಂದ ಅವರ ಎದೆ ನಡುಗಿತು. ದೇವಗುರು ಬೃಹಸ್ಪತಿಯರು ಸಮಾಧಾನ ಪಡಿಸಿದ ಬಳಿಕ ಆ ಜಡಮತಿಗಳು ಎಚ್ಚೆತ್ತುಕೊಂಡು ಹೂಮಳೆಗರೆದು ಪ್ರಶಂಸಿಸತೊಡಗಿದರು. (ಚೌ/೧-೪)

**ದೋ – ಮಿಲಿ ಸಪೇಮ ರಿಪುಸೂದನಹಿ ಕೇವಟು ಭೇಂಟೇಉ ರಾಮು।**
**ಭೂರಿ ಭಾಯ್ ँ ಭೇಂಟೇ ಭರತ ಲಛಿಮನ ಕರತ ಪ್ರನಾಮು ॥ ೨೪೧ ॥**

ಮತ್ತೆ ಶ್ರೀರಾಮನು ಶತ್ರುಘ್ನನನ್ನು ಪ್ರೇಮದಿಂದ ಆಲಿಂಗಿಸಿಕೊಂಡು, ನಿಷಾದರಾಜನಾದ ಗುಹನನ್ನೂ, ಎದೆಗಪ್ಪಿಕೊಂಡನು. ನಮಸ್ಕರಿಸುತ್ತಿರುವ ಲಕ್ಷ್ಮಣನನ್ನು ಭರತನು ಗಾಢಾಲಿಂಗನವಿತ್ತು ಗೌರವಿಸಿದನು. (ದೋ/೨೪೧)

**ಚೌ – ಭೇಂಟೇಉ ಲಖನ ಲಲಕಿ ಲಘು ಭಾಈ। ಬಹುರಿ ನಿಷಾದು ಲೀನ್ಹ ಉರ ಲಾಈ ॥**
**ಪುನಿ ಮುನಿಗನ ದುಹುँ ಭಾಇನ್ಹ ಬಂದೇ। ಅಭಿಮತ ಆಸಿಷ ಪಾಇ ಅನಂದೇ ॥ ೧ ॥**
**ಸಾನುಜ ಭರತ ಉಮಗಿ ಅನುರಾಗಾ। ಧರಿ ಸಿರ ಸಿಯ ಪದ ಪದುಮ ಪರಾಗಾ ॥**
**ಪುನಿ ಪುನಿ ಕರತ ಪ್ರನಾಮ ಉಠಾಏ। ಸಿರ ಕರ ಕಮಲ ಪರಸಿ ಬೈಠಾಏ ॥ ೨ ॥**
**ಸೀಯ್ ँ ಅಸೀಸ ದೀನ್ಹಿ ಮನ ಮಾಹೀं। ಮಗನ ಸನೇಹ್ ँ ದೇಹ ಸುಧಿ ನಾಹೀं ॥**
**ಸಬ ಬಿಧಿ ಸಾನುಕೂಲ ಲಖಿ ಸೀತಾ। ಭೇ ನಿಸೋಚ ಉರ ಅಪಡರ ಬೀತಾ ॥ ೩ ॥**

**ಕೊಉ ಕಿಛು ಕಹಇ ನ ಕೊಉ ಕಿಛು ಪೂಁಛಾ । ಪ್ರೇಮ ಭರಾ ಮನ ನಿಜ ಗತಿ ಛೂಁಛಾ ॥**
**ತೆಹಿ ಅವಸರ ಕೇವಟು ಧೀರಜು ಧರಿ । ಜೋರಿ ಪಾನಿ ಬಿನವತ ಪ್ರನಾಮು ಕರಿ ॥ ೪ ॥**

ಆಗ ಲಕ್ಷ್ಮಣನು ತಮ್ಮನಾದ ಶತ್ರುಘ್ನನನ್ನು ಆನಂದದಿಂದ ಬರಸೆಳೆದು ಆಲಿಂಗಿಸಿಕೊಂಡನು. ಅನಂತರ ನಿಷಾದರಾಜ ಗುಹನನ್ನು ಎದೆಗಪ್ಪಿಕೊಂಡನು. ಬಳಿಕ ಭರತ-ಶತ್ರುಘ್ನರಿಬ್ಬರೂ ಅಲ್ಲಿ ನೆರದಿದ್ದ ಮುನಿಗಳಿಗೆ ಪ್ರಣಾಮಮಾಡಿ, ಆಶೀರ್ವಾದ ಪಡೆದು ಆನಂದತುಂದಿಲರಾದರು. ತಮ್ಮ ಶತ್ರುಘ್ನನೊಂದಿಗೆ ಭರತನು ಪ್ರೇಮೋತ್ಸಾಹದಿಂದ ಸೀತಾದೇವಿಯ ಚರಣರಜವನ್ನು ಶಿರದಲ್ಲಿ ಹೊತ್ತುಕೊಂಡು, ಅವಳ ಪಾದಪದ್ಮಗಳಿಗೆ ಮತ್ತೆ-ಮತ್ತೆ ಪ್ರಣಾಮಮಾಡತೊಡಗಿದರು. ಸೀತೆಯು ಅವರಿಬ್ಬರನ್ನೂ ಮೇಲೆತ್ತಿ ತಲೆ ನೇವರಿಸಿ, ಅವರನ್ನು ಕುಳ್ಳಿರಿಸಿಕೊಂಡಳು. ಆಕೆಯು ಮನದಲ್ಲೇ ಅವರನ್ನು ಹರಸಿದಳು. ಏಕೆಂದರೆ, ಅವಳು ಸ್ನೇಹಮಗ್ನಳಾಗಿದ್ದು, ಮೈಮರೆತಿದ್ದಳು. ಪ್ರಸನ್ನಳಾದ ಸೀತಾದೇವಿಯನ್ನು ನೋಡಿ, ಭರತನು ಶೋಕರಹಿತನಾದನು. ಅವನ ಹೃದಯದ ಕಲ್ಪಿತ ಭಯವು ತೊಲಗಿಹೋಯಿತು. ಪ್ರೇಮಾತಿರೇಕದಿಂದ ಎಲ್ಲರೂ ಮೂಕ-ಕಿವುಡರಂತಾದರು. ಎಲ್ಲರ ಮನಸ್ಸುಗಳೂ ಪ್ರೇಮದಿಂದ ತುಂಬಿಹೋಗಿತ್ತು. ಅದರ ಚಾಂಚಲ್ಯ ಕಳೆದು ಸ್ಥಿರವಾಯಿತು, ಶೂನ್ಯವಾಯಿತು. ಎಲ್ಲರೂ ತಮ್ಮ-ತಮ್ಮ ಗುಂಗಿನಲ್ಲಿಯೇ ಇದ್ದರು. ಆಗ ನಿಷಾದರಾಜನು ಧೈರ್ಯತಳೆದು ಕೈಜೋಡಿಸಿ ವಂದಿಸುತ್ತಾ ಬಿನ್ನವಿಸಿಕೊಂಡನು– (ಚೌ/೧-೪)

**ದೋ – ನಾಥ ಸಾಥ ಮುನಿನಾಥ ಕೇ ಮಾತು ಸಕಲ ಪುರ ಲೋಗ ।**
**ಸೇವಕ ಸೇನಪ ಸಚಿವ ಸಬ ಆಏ ಬಿಕಲ ಬಿಯೋಗ ॥ ೨೪೨ ॥**

ಒಡೆಯಾ! ಮುನಿನಾಥರಾದ ವಸಿಷ್ಠರೊಡನೆ ತಾಯಂದಿರು, ಪುರಜನರು, ಪರಿಜನರು, ಸೇನಾಪತಿಗಳು, ಮಂತ್ರಿಗಳು ಮೊದಲಾದವರು ನಿನ್ನ ವಿಯೋಗದಿಂದ ವ್ಯಾಕುಲರಾಗಿ ಇಲ್ಲಿಗೆ ಬಂದಿರುವರು. (ದೋ/೨೪೨)

**ಚೌ – ಸೀಲಸಿಂಧು ಸುನಿ ಗುರ ಆಗವನೂ । ಸಿಯ ಸಮೀಪ ರಾಖೇ ರಿಪುದವನೂ ॥**
**ಚಲೇ ಸಬೇಗ ರಾಮು ತೆಹಿ ಕಾಲಾ । ಧೀರ ಧರಮ ಧುರ ದೀನದಯಾಲಾ ॥ ೧ ॥**
**ಗುರಹಿ ದೇಖಿ ಸಾನುಜ ಅನುರಾಗೇ । ದಂಡ ಪ್ರನಾಮ ಕರನ ಪ್ರಭು ಲಾಗೇ ॥**
**ಮುನಿಬರ ಧಾಇ ಲಿಏ ಉರ ಲಾಈ । ಪ್ರೇಮ ಉಮಗಿ ಭೇಁಟೇ ದೋಉ ಭಾಈ ॥ ೨ ॥**
**ಪ್ರೇಮ ಪುಲಕಿ ಕೇವಟ ಕಹಿ ನಾಮೂ । ಕೀನ್ಹ ದೂರಿ ತೇಁ ದಂಡ ಪ್ರನಾಮೂ ॥**
**ರಾಮಸಖಾ ರಿಷಿ ಬರಬಸ ಭೇಁಟಾ । ಜನು ಮಹಿ ಲುಠತ ಸನೇಹ ಸಮೇಟಾ ॥ ೩ ॥**
**ರಘುಪತಿ ಭಗತಿ ಸುಮಂಗಲ ಮೂಲಾ । ನಭ ಸರಾಹಿ ಸುರ ಬರಿಸಹಿಁ ಫೂಲಾ ॥**
**ಏಹಿ ಸಮ ನಿಪಟ ನೀಚ ಕೊಉ ನಾಹೀಁ । ಬಡ ಬಸಿಷ್ಠ ಸಮ ಕೋ ಜಗ ಮಾಹೀಁ ॥ ೪ ॥**

ಗುರುಗಳಾದ ವಸಿಷ್ಠರ ಆಗಮನದ ವಾರ್ತೆಯನ್ನು ಕೇಳಿ, ಸೌಶೀಲ್ಯಸಾಗರನಾದ, ಶ್ರೀರಾಮಚಂದ್ರನು ಶತ್ರುಘ್ನನನ್ನು ಸೀತಾದೇವಿಯಬಳಿ ಬಿಟ್ಟು, ಪರಮಧೀರನೂ, ಧರ್ಮಧುರಂಧರನೂ, ದೀನದಯಾಳುವೂ ಆದ ಶ್ರೀರಾಮನು ಕೂಡಲೇ ಅತ್ತ ಧಾವಿಸಿದನು. ಲಕ್ಷ್ಮಣಸಹಿತನಾಗಿ ಗುರುಗಳನ್ನು ದರ್ಶಿಸಿ, ಪ್ರೇಮವಿಹ್ವಲನಾಗಿ, ಅವರಿಗೆ ದಂಡವತ್ ಪ್ರಣಾಮಮಾಡಿದನು. ಇಷ್ಟರಲ್ಲಿ ಮುನಿಶ್ರೇಷ್ಠರಾದ ವಸಿಷ್ಠರು ಓಡಿಬಂದು ಪ್ರೇಮದಿಂದ ಆಲಿಂಗಿಸಿಕೊಂಡು, ಉತ್ಸಾಹದಿಂದ ಅಣ್ಣ-ತಮ್ಮಂದಿರಿಬ್ಬರನ್ನು ಭೇಟಿಯಾದರು. ಅನಂತರ ಪ್ರೇಮಪುಳಕಿತನಾಗಿ ನಿಷಾದರಾಜನು ತನ್ನ ಹೆಸರು ಹೇಳಿಕೊಂಡು ದೂರದಿಂದಲೇ ವಸಿಷ್ಠಮುನಿಗಳಿಗೆ ಸಾಷ್ಟಾಂಗನಮಸ್ಕಾರ ಹಾಕಿದನು. ಋಷಿಗಳು ಅವನು ರಾಮಸಖನೆಂದು ತಿಳಿದು – ಭೂಮಿಯಲ್ಲಿ ಚೆಲ್ಲಿಹೋದ ಪ್ರೇಮವನ್ನು ಬಾಚಿಕೊಳ್ಳುವಂತೆ, ಅವನನ್ನು ಬರಸೆಳೆದು ಅಪ್ಪಿಕೊಂಡರು. 'ಶ್ರೀರಾಮನ ಮೇಲಿರುವ ಭಕ್ತಿಯೇ ಎಲ್ಲ ಶುಭಗಳಿಗೆ ಮೂಲವು', ಎಂದು ಕೊಂಡಾಡುತ್ತಾ ದೇವತೆಗಳು ಆಗಸದಿಂದ ಹೂಮಳೆಗರೆಯತೊಡಗಿದರು. ''ಜಗತ್ತಿನಲ್ಲಿ ವಸಿಷ್ಠರಷ್ಟು ಶ್ರೇಷ್ಠರು ಯಾರಿದ್ದಾರೆ? ಈ ಗುಹನಿಗಿಂತ ಕನಿಷ್ಠರು ಯಾರಿದ್ದಾರೆ?'' ಎಂದು ಅಂದುಕೊಂಡರು. (ಚೌ/೧-೪)

**ದೋ – ಜೆಹಿ ಲಖಿ ಲಖನಹು ತೇಁ ಅಧಿಕ ಮಿಲೇ ಮುದಿತ ಮುನಿರಾಉ ।**
**ಸೋ ಸೀತಾಪತಿ ಭಜನ ಕೋ ಪ್ರಗಟ ಪ್ರತಾಪ ಪ್ರಭಾಉ ॥ ೨೪೩ ॥**

ಇಂತಹ ನಿಷಾದನನ್ನು ಕಂಡು ವಸಿಷ್ಠರು ಲಕ್ಷ್ಮಣನಿಗಿಂತ ಹೆಚ್ಚಾಗಿ ವಿಶ್ವಾಸದಿಂದ, ಆನಂದದಿಂದ ಆಲಿಂಗಿಸಿಕೊಂಡರು. ಇವೆಲ್ಲ ಶ್ರೀಸೀತಾರಾಮರ ಮೇಲೆ ಆತನಿಗಿರುವ ಭಕ್ತಿಯ ಪ್ರತ್ಯಕ್ಷಪ್ರಭಾವ, ಸೇವಾ ಮಹಾತ್ಮ್ಯವಾಗಿದೆ. (ದೋ/೨೪೩)

**ಚೌ – ಆರತ ಲೋಗ ರಾಮ ಸಬು ಜಾನಾ । ಕರುನಾಕರ ಸುಜಾನ ಭಗವಾನಾ ॥**
**ಜೋ ಜೆಹಿ ಭಾಯಁ ರಹಾ ಅಭಿಲಾಷೀ । ತೆಹಿ ತೆಹಿ ಕೈ ತಸಿ ತಸಿ ರುಖ ರಾಖೀ ॥ ೧ ॥**

**ಸಾನುಜ ಮಿಲಿ ಪಲ ಮಹುಁ ಸಬ ಕಾಹೂ। ಕೀನ್ಹ ದೂರಿ ದುಖು ದಾರುನ ದಾಹೂ॥**
**ಯಹ ಬಡಿ ಬಾತ ರಾಮ ಕೈ ನಾಹೀಂ। ಜಿಮಿ ಘಟ ಕೋಟಿ ಏಕ ರಬಿ ಛಾಹೀಂ॥ ೨॥**
**ಮಿಲಿ ಕೇವಟಹಿ ಉಮಗಿ ಅನುರಾಗಾ। ಪುರಜನ ಸಕಲ ಸರಾಹಹಿಂ ಭಾಗಾ॥**
**ದೇಖೀಂ ರಾಮ ದುಖಿತ ಮಹತಾರೀಂ। ಜನು ಸುಬೇಲಿ ಅವಲೀಂ ಹಿಮ ಮಾರೀಂ॥ ೩॥**
**ಪ್ರಥಮ ರಾಮ ಭೇಂಟೀ ಕೈಕೇಈ। ಸರಲ ಸುಭಾಯ್ ಭಗತಿ ಮತಿ ಭೇಈ॥**
**ಪಗ ಪರಿ ಕೀನ್ಹ ಪ್ರಬೋಧು ಬಹೋರೀ। ಕಾಲ ಕರಮ ಬಿಧಿ ಸಿರ ಧರಿ ಖೋರೀ॥ ೪॥**

ಕರುಣಾನಿಧಿಯೂ, ಜ್ಞಾನಸ್ವರೂಪನೂ ಆದ ಶ್ರೀರಾಮನು ಪ್ರಜೆಗಳೆಲ್ಲರೂ ದುಃಖಿತರಾಗಿದ್ದಾರೆಂದು ತಿಳಿದು, ಅವರವರ ಅಭಿಲಾಷೆಗಳನ್ನನುಸರಿಸಿ ಎಲ್ಲರನ್ನೂ ಆದರಿಸಿದನು. ಒಂದೇ ಕ್ಷಣದಲ್ಲಿ ಲಕ್ಷ್ಮಣನ ಸಹಿತ ಶ್ರೀರಾಮನು ಅವರೆಲ್ಲರನ್ನೂ ಭೇಟಿಯಾಗಿ ತನ್ನ ಮೃದುಮಧುರವಚನಗಳಿಂದ ಅವರ ವಿರಹಾಗ್ನಿಯನ್ನು ಶಾಂತಗೊಳಿಸಿದನು. ಅನೇಕ ಕೋಟಿ ಕೊಡಗಳಲ್ಲಿ ಓರ್ವಸೂರ್ಯನೇ ಪ್ರತಿಬಿಂಬಿತನಾಗುವಂತೆ ಶ್ರೀರಾಮನು ಒಂದೇ ಕ್ಷಣದಲ್ಲಿ ಎಲ್ಲರಿಗೂ ಭೇಟಿಯಾದನು. ಸರ್ವಸಮರ್ಥನಾದ ಪ್ರಭುರಾಮಚಂದ್ರನಿಗೆ ಇದೇನೋ ದೊಡ್ಡಮಾತಲ್ಲ. ಅಯೋಧ್ಯಾನಿವಾಸಿಗಳೆಲ್ಲ ಪ್ರೇಮಪೂರ್ವಕವಾಗಿ ನಿಷಾದರಾಜನನ್ನು ಭೇಟಿಯಾಗಿ, ಅವನ ಭಾಗ್ಯವನ್ನು ಕೊಂಡಾಡಿದರು. ಮಂಜುಹೊಡೆದ ಲತೆಗಳಂತೆ ಶೋಕವಿಹ್ವಲರಾದ ತಾಯಂದಿರನ್ನು ಶ್ರೀರಾಮನು ನೋಡಿದನು. ಮೊಟ್ಟಮೊದಲಿಗೆ ಕೈಕೆಯಿಗೆ ವಂದಿಸಿ, ತನ್ನ ಸರಳ ಸ್ವಭಾವದಿಂದ ಹಾಗೂ ಭಕ್ತಿಯಿಂದ ಅವಳ ಮನೋವ್ಯಥೆಯನ್ನು ಕಳೆದನು. ಅನಂತರ ಅವಳ ಕಾಲಿಗೆರಗಿ ಇವೆಲ್ಲ ಕಾಲ, ಕರ್ಮ, ವಿಧಿ, ವೈಪರೀತ್ಯಗಳ ದೋಷಗಳು ಎಂದು ಹೇಳಿ ಸಂತೈಸಿದನು. (ಚೌ/೧-೪)

**ದೋ – ಭೇಂಟೀಂ ರಘುಬರ ಮಾತು ಸಬ ಕರಿ ಪ್ರಬೋಧು ಪರಿತೋಷು।**
**ಅಂಬ ಈಸ ಆಧೀನ ಜಗು ಕಾಹು ನ ದೇಇಅ ದೋಷು॥ ೨೪೪॥**

ಶ್ರೀ ರಘುನಾಥನು ಉಳಿದ ಎಲ್ಲ ತಾಯಂದಿರನ್ನು ವಂದಿಸಿ, ಅವರನ್ನು ಸಮಾಧಾನಗೊಳಿಸಿದನು. ಅಮ್ಮಾ! ಈ ಜಗತ್ತೆಲ್ಲವೂ ಈಶ್ವರಾಧೀನ. ಜರುಗಿದ ಘಟನೆಗಳ ಬಗ್ಗೆ ಯಾರನ್ನೂ ದೂಷಿಸಬಾರದು. (ದೋ/೨೪೪)

**ಚೌ – ಗುರತಿಯ ಪದ ಬಂದೇ ದುಹು ಭಾಈಂ। ಸಹಿತ ಬಿಪ್ರತಿಯ ಜೇ ಸँಗ ಆಈಂ॥**
**ಗಂಗ ಗೌರಿ ಸಮ ಸಬ ಸನಮಾನೀಂ। ದೇಹಿಂ ಅಸೀಸ ಮುದಿತ ಮೃದು ಬಾನೀಂ॥ ೧॥**
**ಗಹಿ ಪದ ಲಗೇ ಸುಮಿತ್ರಾ ಅಂಕಾ। ಜನು ಭೇಂಟೀ ಸಂಪತಿ ಅತಿ ರಂಕಾ॥**
**ಪುನಿ ಜನನೀ ಚರನನಿ ದೋಉ ಭ್ರಾತಾ। ಪರೇ ಪೇಮ ಬ್ಯಾಕುಲ ಸಬ ಗಾತಾ॥ ೨॥**
**ಅತಿ ಅನುರಾಗ ಅಂಬ ಉರ ಲಾಏ। ನಯನ ಸನೇಹ ಸಲಿಲ ಅನ್ಹವಾಏ॥**
**ತೇಹಿ ಅವಸರ ಕರ ಹರಷ ಬಿಷಾದೂ। ಕಿಮಿ ಕಬಿ ಕಹೈ ಮೂಕ ಜಿಮಿ ಸ್ವಾದೂ॥ ೩॥**
**ಮಿಲಿ ಜನನಿಹಿ ಸಾನುಜ ರಘುರಾಊ। ಗುರ ಸನ ಕಹೆಉ ಕಿ ಧಾರಿಅ ಪಾಊ॥**
**ಪುರಜನ ಪಾಇ ಮುನೀಸ ನಿಯೋಗೂ। ಜಲ ಥಲ ತಕಿ ತಕಿ ಉತರೇಉ ಲೋಗೂ॥ ೪॥**

ಬಳಿಕ ರಾಮಲಕ್ಷ್ಮಣರಿಬ್ಬರೂ ಗುರುಪತ್ನಿಯಾದ ಅರುಂಧತಿಗೆ ಹಾಗೂ ಅವರ ಜೊತೆಗೆ ಬಂದಿರುವ ಇತರ ಬ್ರಾಹ್ಮಣ ಮುತ್ತೈದೆಯರನ್ನು ನಮಸ್ಕರಿಸಿ, ಅವರನ್ನು ಗಂಗೆ, ಗೌರಿಯರಂತೆ ಗೌರವದಿಂದ ಕಂಡು ಸತ್ಕರಿಸಿದರು. ಅವರೆಲ್ಲರೂ ಆನಂದಿತರಾಗಿ ಕೋಮಲವಾಣಿಯಿಂದ ಇಬ್ಬರನ್ನೂ ಆಶೀರ್ವದಿಸಿದರು. ಅನಂತರ ಅಣ್ಣ-ತಮ್ಮಂದಿರಿಬ್ಬರೂ ಸುಮಿತ್ರಾದೇವಿಯ ಚರಣಗಳಿಗೆ ವಂದಿಸಿ, ಪಕ್ಕದಲ್ಲಿ ಹೋಗಿ ಕುಳಿತರು. ದಟ್ಟದರಿದ್ರನಿಗೆ ಅತುಲೈಶ್ವರ್ಯ ದೊರೆತಷ್ಟು ಆನಂದ ಅವರಿಗಾಯಿತು. ಮತ್ತೆ ಸೋದರರಿಬ್ಬರೂ ಕೌಸಲ್ಯೆಯ ಚರಣಗಳಿಗೆ ಎರಗಿದರು. ಪ್ರೇಮಾನುರಾಗದಿಂದ ಅವರ ಶರೀರಗಳು ಶಿಥಿಲವಾದವು. ಕೌಸಲ್ಯಾದೇವಿಯು ಹೆಚ್ಚಾದ ಪ್ರೇಮದಿಂದ ಅವರನ್ನು ಎದೆಗಪ್ಪಿಕೊಂಡಳು. ಪ್ರೇಮಾಂಬುವಿನಲ್ಲಿ ಅವರು ಮಿಂದುಹೋದರು. ಮೂಗನು ಸವಿಯನ್ನು ಎಂತು ವರ್ಣಿಸಲಾರನೋ, ಹಾಗೆಯೇ ಆಗಿನ ಹರ್ಷ-ವಿಷಾದಗಳನ್ನು ಕವಿಯು ಹೇಗೆ ವರ್ಣಿಸಬಲ್ಲನು? ಕೌಸಲ್ಯಾದೇವಿಯನ್ನು ದರ್ಶಿಸಿದ ಬಳಿಕ ರಾಮಲಕ್ಷ್ಮಣರಿಬ್ಬರೂ ಗುರುವಸಿಷ್ಠರನ್ನು ತಮ್ಮ ಆಶ್ರಮಕ್ಕೆ ಬರಮಾಡಿಕೊಂಡರು. ಬಳಿಕ ವಸಿಷ್ಠಮುನಿಗಳ ಆಣತಿಯಂತೆ ಅಯೋಧ್ಯಾವಾಸಿಗಳೆಲ್ಲರೂ ಜಲ-ಸ್ಥಳಗಳ ಸೌಕರ್ಯಗಳನ್ನು ನೋಡಿಕೊಂಡು ಬೀಡುಬಿಟ್ಟರು. (ಚೌ/೧-೪)

**ದೋ – ಮಹಿಸುರ ಮಂತ್ರೀ ಮಾತು ಗುರ ಗನೇ ಲೋಗ ಲಿಏ ಸಾಥ।**
**ಪಾವನ ಆಶ್ರಮ ಗವನು ಕಿಯ ಭರತ ಲಖನ ರಘುನಾಥ॥ ೨೪೫ ॥**

ಬ್ರಾಹ್ಮಣರು, ಮಂತ್ರಿಗಳು, ತಾಯಂದಿರು, ಗುರುಗಳೇ ಮುಂತಾದ ಪ್ರಮುಖರನ್ನು ಜೊತೆಸೇರಿ ಶ್ರೀರಾಮಲಕ್ಷ್ಮಣಭರತರು ಆಶ್ರಮವನ್ನು ಸೇರಿದರು. (ದೋ/೨೪೫)

**ಚೌ – ಸೀಯ ಆಇ ಮುನಿಬರ ಪಗ ಲಾಗೀ। ಉಚಿತ ಅಸೀಸ ಲಹೀ ಮನ ಮಾಗೀ॥**
**ಗುರಪತಿನಿಹಿ ಮುನಿತಿಯನ್ಹ ಸಮೇತಾ। ಮಿಲೀ ಪೇಮು ಕಹಿ ಜಾಇ ನ ಜೇತಾ॥ ೧ ॥**
**ಬಂದಿ ಬಂದಿ ಪಗ ಸಿಯ ಸಬಹೀ ಕೇ। ಆಸಿರಬಚನ ಲಹೇ ಪ್ರಿಯ ಜೀ ಕೇ॥**
**ಸಾಸು ಸಕಲ ಜಬ ಸೀಯಁ ನಿಹಾರೀಂ। ಮೂದೇ ನಯನ ಸಹಮಿ ಸುಕುಮಾರೀಂ॥ ೨ ॥**
**ಪರೀಂ ಬಧಿಕ ಬಸ ಮನಹುঁ ಮರಾಲೀಂ। ಕಾಹ ಕೀನ್ಹ ಕರತಾರ ಕುಚಾಲೀಂ॥**
**ತಿನ್ಹ ಸಿಯ ನಿರಖಿ ನಿಪಟ ದುಖು ಪಾವಾ। ಸೋ ಸಬು ಸಹಿಅ ಜೊ ದೈಉ ಸಹಾವಾ॥ ೩ ॥**
**ಜನಕಸುತಾ ತಬ ಉರ ಧರಿ ಧೀರಾ। ನೀಲ ನಲಿನ ಲೋಯನ ಭರಿ ನೀರಾ॥**
**ಮಿಲೀ ಸಕಲ ಸಾಸುನ್ಹ ಸಿಯ ಜಾಈ। ತೇಹಿ ಅವಸರ ಕರುನಾ ಮಹಿ ಛಾಈ॥ ೪ ॥**

ಸೀತಾದೇವಿಯು ಮಹರ್ಷಿ ವಸಿಷ್ಠರ ಚರಣಗಳಿಗೆರಗಿದಳು. ಅವರು ಆಕೆಯ ಮನೋರಥಗಳು ಈಡೇರುವಂತೆ ಆಶೀರ್ವದಿಸಿದರು. ಅನಂತರ ಮುನಿಪತ್ನಿಗಳೊಂದಿಗಿರುವ ಸಾಧ್ವೀ ಅರುಂಧತಿಯನ್ನು ಕಂಡು, ಆಶೀರ್ವಾದ ಪಡೆದಳು. ಅವರ ಪರಸ್ಪರ ಪ್ರೇಮಾನುರಾಗಗಳು ಅವರ್ಣನೀಯ. ಸೀತಾದೇವಿಯು ಎಲ್ಲರ ಚರಣಗಳಿಗೂ ಬೇರೆ-ಬೇರೆಯಾಗಿ ವಂದಿಸಿ, ಅವರೆಲ್ಲರ ಹರಕೆಯನ್ನು ಪಡೆದಳು. ತಮ್ಮ ಎಲ್ಲ ಅತ್ತೆಯವರನ್ನು ಕಂಡು ಅಳುಕಿ ಆಕೆ ಕಣ್ಣುಮುಚ್ಚಿಕೊಂಡಳು. ಅವಳಿಗೆ ಅವರೆಲ್ಲರು ಕಟುಕನ ಕೈಗೆ ಸಿಕ್ಕಿದ ರಾಜಹಂಸಗಳಂತೆ ಕಂಡು ಬಂದರು. ಅತ್ತೆಯಂದಿರ ದುಃಸ್ಥಿತಿಯನ್ನು ಕಂಡು ಅವಳು ದುಃಖಿತಳಾಗಿ 'ಅಯ್ಯೋ! ವಿಧಾತನು ಇವರಿಗೆ ಎಂತಹ ದುರ್ದಶೆಯನ್ನು ತಂದೊಡ್ಡಿದನು? ಎಂದು ಚಿಂತಿಸಿದಳು. ಅವರೂ ಕೂಡ ಸೀತೆಯನ್ನು ನೋಡಿ ದುಃಖಿಸುತ್ತಾ 'ವಿಧಿಯನ್ನು ಅನುಭವಿಸದೆ ಬೇರೆ ಮಾರ್ಗವೇ ಇಲ್ಲ' ಎಂದು ಸಮಾಧಾನ ಹೇಳಿದರು. ಬಳಿಕ ಜಾನಕಿಯು ಧೈರ್ಯವನ್ನು ತಂದುಕೊಂಡು ತನ್ನ ನೀಲನಳಿನದಂತಹ ಕಣ್ಣುಗಳಲ್ಲಿ ನೀರು ತುಂಬಿಕೊಂಡು ಎಲ್ಲ ಅತ್ತೆಯವರನ್ನು ಭೇಟಿಯಾದಳು. ಆ ಸಮಯದಲ್ಲಿ ಭೂಮಿಯಲ್ಲಿ ಕರುಣೆಯೇ ಕವಿದಂತಾಯಿತು. (ಚೌ/೧-೪)

**ದೋ – ಲಾಗಿ ಲಾಗಿ ಪಗ ಸಬನಿ ಸಿಯ ಭೇಂಟತಿ ಅತಿ ಅನುರಾಗ।**
**ಹೃದಯঁ ಅಸೀಸಹಿಂ ಪೇಮ ಬಸ ರಹಿಅಹು ಭರೀ ಸೋಹಾಗ॥ ೨೪೬ ॥**

ಸೀತೆಯು ಎಲ್ಲರ ಕಾಲಿಗೂ ಎರಗಿ, ಎಲ್ಲರನ್ನು ಪ್ರೇಮದಿಂದ ಭೆಟ್ಟಿಯಾದಳು. ಎಲ್ಲ ಅತ್ತೆಯವರೂ ಪ್ರೇಮಮಗ್ನರಾಗಿ ''ನೀನು ಸದಾಕಾಲ ಮುತ್ತೈದೆಯಾಗಿ ಇರು'' ಎಂದು ಆಶೀರ್ವದಿಸಿದರು. (ದೋ/೨೪೬)

**ಚೌ – ಬಿಕಲ ಸನೇಹঁ ಸೀಯ ಸಬ ರಾನೀಂ। ಬೈಠನ ಸಬಹಿ ಕಹೇಉ ಗುರ ಗ್ಯಾನೀಂ॥**
**ಕಹಿ ಜಗ ಗತಿ ಮಾಯಿಕ ಮುನಿನಾಥಾ। ಕಹೇ ಕಛುಕ ಪರಮಾರಥ ಗಾಥಾ॥ ೧ ॥**
**ನೃಪ ಕರ ಸುರಪುರ ಗವನು ಸುನಾವಾ। ಸುನಿ ರಘುನಾಥ ದುಸಹ ದುಖು ಪಾವಾ॥**
**ಮರನ ಹೇತು ನಿಜ ನೇಹು ಬಿಚಾರೀ। ಭೇ ಅತಿ ಬಿಕಲ ಧೀರ ಧುರ ಧಾರೀ॥ ೨ ॥**
**ಕುಲಿಸ ಕಠೋರ ಸುನತ ಕಟು ಬಾನೀ। ಬಿಲಪತ ಲಖನ ಸೀಯ ಸಬ ರಾನೀ॥**
**ಸೋಕ ಬಿಕಲ ಅತಿ ಸಕಲ ಸಮಾಜೂ। ಮಾನಹುঁ ರಾಜು ಅಕಾಜೇಉ ಆಜೂ॥ ೩ ॥**
**ಮುನಿಬರ ಬಹುರಿ ರಾಮ ಸಮುಝಾಏ। ಸಹಿತ ಸಮಾಜ ಸುಸರಿತ ನಹಾಏ॥**
**ಬ್ರತು ನಿರಂಬು ತೇಹಿ ದಿನ ಪ್ರಭು ಕೀನ್ಹಾ। ಮುನಿಹು ಕಹೇಂ ಜಲು ಕಾಹುঁ ನ ಲೀನ್ಹಾ॥ ೪ ॥**

ಸೀತಾದೇವಿಯು ಹಾಗೂ ಎಲ್ಲ ರಾಣಿಯರೂ ಪ್ರೇಮಾತಿರೇಕದಿಂದ ವ್ಯಾಕುಲರಾಗಿದ್ದಾರೆ. ಆಗ ಜ್ಞಾನಿಗಳಾದ ವಸಿಷ್ಠರು ಎಲ್ಲರೂ ಕುಳಿತುಕೊಳ್ಳುವಂತೆ ಆದೇಶಿಸಿದರು. ಮತ್ತೆ ಮುನಿಗಳು ಈ ಜಗತ್ತು ಮಾಯಿಕವಾದುದು, ಇದರಲ್ಲಿ ಯಾವುದೂ ನಿತ್ಯವಲ್ಲವೆಂದು ಹೇಳಿ, ಅನೇಕ ವೇದಾಂತ ರಹಸ್ಯವನ್ನು ತಿಳಿಸಿದರು. ಅನಂತರ ವಸಿಷ್ಠರು ಅವರಿಗೆ ದಶರಥ ಮಹಾರಾಜರು ಸ್ವರ್ಗಸ್ಥರಾದ ವಾರ್ತೆಯನ್ನೂ ಕೂಡ ಹೇಳಿದರು. ಅದನ್ನು ಕೇಳಿ ಶ್ರೀರಾಮನಿಗೆ ದುಃಸಹವಾದ ದುಃಖವುಂಟಾಯಿತು. ತನ್ನ ಮೇಲೆ ಅವರಿಗಿದ್ದ

ಪ್ರೇಮವೇ ಅವರ ಸಾವಿಗೆ ಕಾರಣವಾಯಿತೆಂದು ತಿಳಿದು ಧೀರೋದಾತ್ತನಾದ ಶ್ರೀರಾಮಚಂದ್ರನು ಇನ್ನೂ ವ್ಯಾಕುಲಚಿತ್ತನಾದನು. ಸಿಡಿಲೆರಗಿದಂತಹ ಭಯಂಕರ ವಾರ್ತೆಯನ್ನು ಕೇಳಿ, ಲಕ್ಷ್ಮಣ, ಸೀತಾದೇವಿ ಮತ್ತು ಎಲ್ಲ ರಾಣಿಯರೂ ಮಹಾರಾಜರು ಇಂದೇ ನಿಧನರಾದರೋ ಎಂಬಂತೆ ಗೋಳಾಡತೊಡಗಿದರು. ಆಗ ಮುನಿಶ್ರೇಷ್ಠರಾದ ವಸಿಷ್ಠರು ಶ್ರೀರಾಮನನ್ನು ಸಂತೈಸಿದರು. ರಾಮನೇ ಆದಿ ಎಲ್ಲರೂ ಪುಣ್ಯನದಿಯಾದ ಮಂದಾಕಿನಿಯಲ್ಲಿ ಸ್ನಾನಮಾಡಿದರು. ಅಂದು ಪ್ರಭುರಾಮಚಂದ್ರನು ನಿರ್ಜಲ ಉಪವಾಸ ಮಾಡಿದನು. ವಸಿಷ್ಠರು ಎಷ್ಟೇ ಹೇಳಿದರೂ ಯಾರೂ ನೀರನ್ನೂ ಸಹ ಕುಡಿಯಲಿಲ್ಲ. (ಚೌ/೧-೪)

**ದೋ – ಭೋರು ಭಏಁ ರಘುನಂದನಹಿ ಜೋ ಮುನಿ ಆಯಸು ದೀನ್ಹ।**
**ಶ್ರದ್ಧಾ ಭಗತಿ ಸಮೇತ ಪ್ರಭು ಸೋ ಸಬು ಸಾದರು ಕೀನ್ಹ॥ ೨೪೭ ॥**

ಮರುದಿನ ಬೆಳಿಗ್ಗೆ ಮುನಿವಸಿಷ್ಠರ ಅಪ್ಪಣೆಯಂತೆ ಶ್ರೀರಾಮನು ಎಲ್ಲ ಕಾರ್ಯವನ್ನು ಶ್ರದ್ಧಾಭಕ್ತಿಯಿಂದ ನಿರ್ವಹಿಸಿದನು. (ದೋ/೨೪೭)

**ಚೌ – ಕರಿ ಪಿತು ಕ್ರಿಯಾ ಬೇದ ಜಸಿ ಬರನೀ। ಭೇ ಪುನೀತ ಪಾತಕ ತಮ ತರನೀ॥**
**ಜಾಸು ನಾಮ ಪಾವಕ ಅಘ ತೂಲಾ। ಸುಮಿರತ ಸಕಲ ಸುಮಂಗಲ ಮೂಲಾ॥ ೧ ॥**
**ಸುದ್ಧ ಸೊ ಭಯಉ ಸಾಧು ಸಮ್ಮತ ಅಸ। ತೀರಥ ಆವಾಹನ ಸುರಸರಿ ಜಸ॥**
**ಸುದ್ಧ ಭಏಁ ದುಇ ಬಾಸರ ಬೀತೇ। ಬೋಲೇ ಗುರ ಸನ ರಾಮ ಪಿರೀತೇ॥ ೨ ॥**
**ನಾಥ ಲೋಗ ಸಬ ನಿಪಟ ದುಖಾರೀ। ಕಂದ ಮೂಲ ಫಲ ಅಂಬು ಅಹಾರೀ॥**
**ಸಾನುಜ ಭರತು ಸಚಿವ ಸಬ ಮಾತಾ। ದೇಖಿ ಮೋಹಿ ಪಲ ಜಿಮಿ ಜುಗ ಜಾತಾ॥ ೩ ॥**
**ಸಬ ಸಮೇತ ಪುರ ಧಾರಿಅ ಪಾಊ। ಆಪು ಇಹಾಁ ಅಮರಾವತಿ ರಾಊ॥**
**ಬಹುತ ಕಹೆಉಁ ಸಬ ಕಿಯಉಁ ಢಿಠಾಈ। ಉಚಿತ ಹೋಇ ತಸ ಕರಿಅ ಗೊಸಾಁಈ॥ ೪ ॥**

ಶ್ರೀರಾಮಚಂದ್ರನು ವೇದಾದಿಗಳಲ್ಲಿ ಹೇಳಿದಂತೆ ತಂದೆಯ ಉತ್ತರಕ್ರಿಯಾ ಕರ್ಮಗಳನ್ನು ಆಚರಿಸಿದನು. ಪಾಪಗಳೆಂಬ ನಿಬಿಡವಾದ ಅಂಧಕಾರಕ್ಕೆ ಸೂರ್ಯನಂತಿರುವ ಶ್ರೀರಾಮನು ಪವಿತ್ರನಾದನು. ಯಾರ ನಾಮಸ್ಮರಣೆಯು ಪಾಪರೂಪೀ ಹತ್ತಿಗೆ ಬೆಂಕಿಯೋ, ಸಮಸ್ತ ಸನ್ಮಂಗಳಗಳಿಗೆ ನಿಲಯವೋ, ಅಂತಹ ಶುದ್ಧ-ಬುದ್ಧಸ್ವರೂಪನಾದ ಶ್ರೀರಾಮನು ಪರಿಶುದ್ಧನಾದನು. ಅವನು ಶುದ್ಧನಾಗುವುದೆಂದರೆ ತೀರ್ಥಗಳ ಆವಾಹನೆಯಿಂದ ಗಂಗೆಯು ಶುದ್ಧವಾಗುವಂತೆ ಆಗಿದೆ ಎಂದು ಸಾಧು-ಸಂತರುಗಳು ಭಾವಿಸಿದರು. ಶುದ್ಧಿಯಾದ ಬಳಿಕ ಎರಡು ದಿನ ಕಳೆಯುತ್ತಲೇ ಶ್ರೀರಾಮನು ಪ್ರೀತಿಯಿಂದ ಗುರುಗಳ ಬಳಿ ಇಂತೆಂದನು – ಸ್ವಾಮಿ! ಇಲ್ಲಿ ಎಲ್ಲರೂ ದುಃಖಿಗಳಾಗಿದ್ದಾರೆ. ಕಂದ, ಮೂಲ, ಫಲ, ಜಲವನ್ನು ಮಾತ್ರ ಸೇವಿಸುತ್ತಿದ್ದಾರೆ. ಶತ್ರುಘ್ನನೊಂದಿಗಿರುವ ಭರತನನ್ನೂ, ಮಂತ್ರಿಗಳನ್ನೂ, ಎಲ್ಲ ತಾಯಂದಿರನ್ನೂ ನೋಡಿ ನನಗೆ ಕ್ಷಣವೊಂದು ಯುಗವಾಗಿ ಕಾಣುತ್ತಿದೆ. ಆದ್ದರಿಂದ ತಾವು ಪರಿವಾರದೊಂದಿಗೆ ಎಲ್ಲರೂ ಅಯೋಧ್ಯೆಗೆ ಪಯಣಿಸುವುದು ಯುಕ್ತವೆಂದು ನನ್ನ ಪ್ರಾರ್ಥನೆ. ತಾವು ಇಲ್ಲಿದ್ದೀರಿ. ಮಹಾರಾಜರು ಅಮರಾವತಿಯಲ್ಲಿದ್ದಾರೆ. ಅಯೋಧ್ಯೆ ಹಾಳು ಸುರಿಯುತ್ತಿದೆ. ನಾನು ಏನೇನೋ ಬಹಳವಾಗಿ ಮಾತಾಡಿದೆ, ಇದು ನನ್ನ ದಾರ್ಷ್ಟ್ಯವಾಗಿದೆ. ಪೂಜ್ಯರೇ! ತಮಗೆ ಉಚಿತ ಕಂಡಂತೆ ಮಾಡಿರಿ. (ಚೌ/೧-೪)

**ದೋ – ಧರ್ಮ ಸೇತು ಕರುನಾಯತನ ಕಸ ನ ಕಹಹು ಅಸ ರಾಮ।**
**ಲೋಗ ದುಖಿತ ದಿನ ದುಇ ದರಸ ದೇಖಿ ಲಹಹುಁ ಬಿಶ್ರಾಮ॥ ೨೪೮ ॥**

ವಸಿಷ್ಠರು ಹೇಳಿದರು – ರಾಮಾ! ನೀನು ಧರ್ಮಸೇತು, ಕರುಣಾಧಾಮನಾಗಿರುವೆ. ನೀನಲ್ಲದೆ ಹೀಗೆ ಬೇರೆ ಯಾರು ಮಾತಾಡಬಲ್ಲರು. ಜನರು ದುಗುಡಗೊಂಡಿರುವರು. ಎರಡು ದಿನ ನಿನ್ನ ದರ್ಶನಮಾಡಿ ಶಾಂತಿ ಪಡೆಯಲಿ. (ದೋ/೨೪೮)

**ಚೌ – ರಾಮ ಬಚನ ಸುನಿ ಸಭಯ ಸಮಾಜೂ। ಜನು ಜಲನಿಧಿ ಮಹುಁ ಬಿಕಲ ಜಹಾಜೂ॥**
**ಸುನಿ ಗುರ ಗಿರಾ ಸುಮಂಗಲ ಮೂಲಾ। ಭಯಉ ಮನಹುಁ ಮಾರುತ ಅನುಕೂಲಾ॥ ೧ ॥**
**ಪಾವನ ಪಯಁ ತಿಹುಁ ಕಾಲ ನಹಾಹೀಁ। ಜೋ ಬಿಲೋಕಿ ಅಘ ಓಘ ನಸಾಹೀಁ॥**
**ಮಂಗಲಮೂರತಿ ಲೋಚನ ಭರಿ ಭರಿ। ನಿರಖಹಿಁ ಹರಷಿ ದಂಡವತ ಕರಿ ಕರಿ॥ ೨ ॥**
**ರಾಮ ಸೈಲ ಬನ ದೇಖನ ಜಾಹೀಁ। ಜಹಁ ಸುಖ ಸಕಲ ಸಕಲ ದುಖ ನಾಹೀಁ॥**
**ಝರನಾ ಝರಹಿಁ ಸುಧಾಸಮ ಬಾರೀ। ತ್ರಿಬಿಧ ತಾಪಹರ ತ್ರಿಬಿಧ ಬಯಾರೀ॥ ೩ ॥**
**ಬಿಟಪ ಬೇಲಿ ತೃನ ಅಗನಿತ ಜಾತೀ। ಫಲ ಪ್ರಸೂನ ಪಲ್ಲವ ಪಹು ಭಾಁತೀ॥**
**ಸುಂದರ ಸಿಲಾ ಸುಖದ ತರು ಛಾಹೀಁ। ಜಾಇ ಬರನಿ ಬನ ಛಬಿ ಕೆಹಿ ಪಾಹೀಁ॥ ೪ ॥**

ಶ್ರೀರಾಮನಾಡಿದ ಮಾತುಗಳನ್ನು ಕೇಳಿ ಇಡೀ ಸಮಾಜವು – ನಡುಗಡಲಲ್ಲಿ ಹಡಗು ಅಲ್ಲಾಡಿದಂತೆ ಗಾಬರಿಗೊಂಡಿತು. ಆದರೆ ಗುರುವಸಿಷ್ಠರ ಮಂಗಳಕರವಾದ ವಾಣಿಯನ್ನು ಕೇಳಿದಾಗ ಅಯೋಧ್ಯಾವಾಸಿಗಳೆಲ್ಲರೂ ಆ ಹಡಗಿಗೆ ಅನುಕೂಲವಾದ ಗಾಳಿ ಬೀಸಿದಂತಾಗಿ ಸಮಾಧಾನ ಹೊಂದಿದರು. ಜನರೆಲ್ಲರೂ ಪ್ರತಿದಿನವೂ ಸಕಲ ಪಾಪಹಾರಿಣಿಯಾದ ಪಯಸ್ವಿನೀ (ಮಂದಾಕಿನಿ) ನದಿಯಲ್ಲಿ ಮೂರೂ ಹೊತ್ತು ಸ್ನಾನಮಾಡಿ, ಮಂಗಳಮೂರ್ತಿಯಾದ ಶ್ರೀರಾಮನಿಗೆ ದಂಡವತ್ ಪ್ರಣಾಮಗಳನ್ನು ಸಲ್ಲಿಸಿ, ಅವನ ಅಲೌಕಿಕವಾದ ರೂಪವನ್ನು ಕಣ್ತುಂಬಾನೋಡಿ ಆನಂದಿಸುತ್ತಿದ್ದರು. ಅವರೆಲ್ಲರೂ ಶ್ರೀರಾಮನು ಇದ್ದ ಚಿತ್ರಕೂಟದ ಕಾಮದಗಿರಿ ಪರ್ವತವನ್ನೂ, ವನವನ್ನೂ ನೋಡಲು ಹೋಗಿಬರುತ್ತಿದ್ದರು. ಅಲ್ಲಿ ಎಲ್ಲವಿಧವಾದ ಸುಖವಿತ್ತು, ಯಾವ ದುಃಖವೂ ಇರಲಿಲ್ಲ. ಅಲ್ಲಿಯ ಝರಿಗಳಲ್ಲಿ ಅಮೃತದಂತಹ ನೀರು ಹರಿಯುತ್ತಿತ್ತು. ಶೀತಲ, ಮಂದ, ಸುಗಂಧಿತ ಮೂರು ಬಗೆಯ ಗಾಳಿಯು ಬೀಸುತ್ತಾ, ಅವರ ದೈವಿಕ, ದೈಹಿಕ, ಭೌತಿಕವೆಂಬ ತಾಪತ್ರಯಗಳನ್ನು ಹರಿಸುತ್ತಿತ್ತು. ಅಲ್ಲಿ ಅಸಂಖ್ಯ ಜಾತಿಯ ಗಿಡ-ಮರಗಳೂ, ಬಳ್ಳಿಗಳೂ, ತೃಣಗಳೂ ಇದ್ದವು. ಅನೇಕ ರೀತಿಯ ಹೂ-ಹಣ್ಣು, ಪತ್ರೆಗಳಿದ್ದವು. ಸುಂದರವಾದ ಶಿಲೆಗಳಿದ್ದು, ವೃಕ್ಷಗಳ ತಣ್ಣೆಳಲು ಸುಖದಾಯಕವಾಗಿತ್ತು. ಆ ವನದ ಚೆಲುವು ಬಣ್ಣಿಸಲಸದಳ. (ಚೌ/೧-೪)

**ದೋ – ಸರನಿ ಸರೋರುಹ ಜಲ ಬಿಹಗ ಕೂಜತ ಗುಂಜತ ಭೃಂಗ।**
**ಬೈರ ಬಿಗತ ಬಿಹರತ ಬಿಪಿನ ಮೃಗ ಬಿಹಂಗ ಬಹುರಂಗ॥ ೨೪೯ ॥**

ಸರೋವರಗಳಲ್ಲಿ ಕಮಲಗಳು ಅರಳಿದ್ದವು; ಜಲ ಪಕ್ಷಿಗಳು ಕೂಗುತ್ತಿದ್ದವು. ಭೃಂಗಗಳು ಗುಂಜಾರವ ಮಾಡುತ್ತಿದ್ದವು. ಅನೇಕ ವಿಧದ ಬಣ್ಣ-ಬಣ್ಣದ ಖಗ-ಮೃಗಗಳು ಆ ವಿಪಿನದಲ್ಲಿ ತಮ್ಮ ನೈಸರ್ಗಿಕ ವೈರವನ್ನು ಮರೆತು ವಿಹರಿಸುತ್ತಿದ್ದವು. (ದೋ/೨೪೯)

**ಚೌ – ಕೋಲ ಕಿರಾತ ಭಿಲ್ಲ ಬನಬಾಸೀ। ಮಧು ಸುಚಿ ಸುಂದರ ಸ್ವಾದು ಸುಧಾ ಸೀ॥**
**ಭರಿ ಭರಿ ಪರನ ಪುಟೀಂ ರಚಿ ರೂರೀ। ಕಂದ ಮೂಲ ಫಲ ಅಂಕುರ ಜೂರೀ॥ ೧ ॥**
**ಸಬಹಿ ದೇಹಿಂ ಕರಿ ಬಿನಯ ಪ್ರನಾಮಾ। ಕಹಿ ಕಹಿ ಸ್ವಾದ ಭೇದ ಗುನ ನಾಮಾ॥**
**ದೇಹಿಂ ಲೋಗ ಬಹು ಮೋಲ ನ ಲೇಹೀಂ। ಫೇರತ ರಾಮ ದೊಹಾಈ ದೇಹೀಂ॥ ೨ ॥**
**ಕಹಹಿಂ ಸನೇಹ ಮಗನ ಮೃದು ಬಾನೀ। ಮಾನತ ಸಾಧು ಪೇಮ ಪಹಿಚಾನೀ॥**
**ತುಮ್ಹ ಸುಕೃತೀ ಹಮ ನೀಚ ನಿಷಾದಾ। ಪಾವಾ ದರಸನು ರಾಮ ಪ್ರಸಾದಾ॥ ೩ ॥**
**ಹಮಹಿ ಅಗಮ ಅತಿ ದರಸು ತುಮ್ಹಾರಾ। ಜಸ ಮರು ಧರನಿ ದೇವಧುನಿ ಧಾರಾ॥**
**ರಾಮ ಕೃಪಾಲ ನಿಷಾದ ನೆವಾಜಾ। ಪರಿಜನ ಪ್ರಜಉ ಚಹಿಅ ಜಸ ರಾಜಾ॥ ೪ ॥**

ಕೋಲ, ಕಿರಾತ, ಭಿಲ್ಲರೇ ಮೊದಲಾದ ವನವಾಸಿಗಳು, ಗಿರಿಜನರೂ ಸ್ವಚ್ಛವೂ, ಪವಿತ್ರವೂ, ಅಮೃತತುಲ್ಯವೂ, ಸ್ವಾದಿಷ್ಟವೂ ಆದ ಜೇನನ್ನು ಚೆನ್ನಾದ ದೊನ್ನೆಗಳಲ್ಲಿ ತುಂಬಿಕೊಂಡು, ಕಂದ, ಮೂಲ, ಫಲ, ಅಂಕುರಗಳ ಕಟ್ಟುಗಳನ್ನು ತಂದು-ತಂದು ಎಲ್ಲರಿಗೆ ವಿನಯದಿಂದ ತಲೆವಾಗಿ ಸಮರ್ಪಿಸುತ್ತಿದ್ದರು. ಆಯಾ ಪದಾರ್ಥಗಳ ರುಚಿ, ಗುಣ, ಹೆಸರು ತಿಳಿಸಿಕೊಡುತ್ತಿದ್ದರು. ಜನರು ಅವುಗಳಿಗೆ ಬದಲಾಗಿ ಕೈತುಂಬ ಹಣಕೊಡುತ್ತಿದ್ದರು. ಆದರೆ ಅವರು ಅದನ್ನು ಸ್ವೀಕರಿಸದೆ ಕೊಟ್ಟಿದ್ದನ್ನು ಶ್ರೀರಾಮನ ಮೇಲೆ ಆಣೆಯಿಟ್ಟು ಹಿಂದಿರುಗಿಸುತ್ತಿದ್ದರು. ಪ್ರೇಮಮಗ್ನರಾದ ಅವರು ಮೇಲುದನಿಯಲ್ಲಿ ಹೇಳುತ್ತಿದ್ದರು – ಸಾಧುಜನರು ಪ್ರೇಮವನ್ನು ಗುರುತಿಸಿ ಆದರಿಸುತ್ತಾರೆ. (ನೀವೆಲ್ಲರೂ ಸಾಧುಗಳಾಗಿದ್ದೀರಿ. ನಾವು ಪ್ರೇಮದಿಂದ ಕೊಟ್ಟಿರುವುದನ್ನು ಹಿಂತಿರುಗಿಸುವುದು, ಅಥವಾ ಬೆಲೆ ಕಟ್ಟುವುದು ನಮ್ಮ ಪ್ರೇಮದ ಅನಾದರವಲ್ಲವೇ?) ನೀವಾದರೋ ಪುಣ್ಯಾತ್ಮರು, ನಾವು ಅಲ್ಪರಾದ ನಿಷಾದರು. ಶ್ರೀರಾಮನ ಕೃಪೆಯಿಂದಲೇ ನಮಗೆ ನಿಮ್ಮೆಲ್ಲರ ದರ್ಶನವಾಯಿತು. ಮರುಭೂಮಿಗೆ ಗಂಗೆಯು ದುರ್ಲಭವಿರುವಂತೆ, ನಮಗೆ ನಿಮ್ಮೆಲ್ಲರ ದರ್ಶನವು ದುರ್ಲಭವು. ಕೃಪಾಳುವಾದ ಶ್ರೀರಾಮಚಂದ್ರನು ಈ ನಿಷಾದರ ಮೇಲೆ ಎಂತಹ ಕೃಪೆದೋರಿರುವನು ನೋಡಿ. ರಾಜನಂತೆ ಪ್ರಜಾಜನರೂ, ಪರಿಜನರೂ ಇರಬೇಕಲ್ಲ! ಆದ್ದರಿಂದ ನೀವೂ ನಮ್ಮ ಮೇಲೆ ಕೃಪೆದೋರಿರಿ. (ಚೌ/೧-೪)

**ದೋ – ಯಹ ಜಿಯಂ ಜಾನಿ ಸಂಕೋಚು ತಜಿ ಕರಿಅ ಛೋಹು ಲಖಿ ನೇಹು।**
**ಹಮಹಿ ಕೃತಾರಥ ಕರನ ಲಗಿ ಫಲ ತೃನ ಅಂಕುರ ಲೇಹು॥ ೨೫೦ ॥**

ಮನಸ್ಸಿನಲ್ಲಿರುವ ಸಂಕೋಚವನ್ನು ತೊರೆದು, ನಮ್ಮ ಪ್ರೇಮವನ್ನು ಕಂಡು ಆದರಿಸಿದಿರಿ. ದಯಮಾಡಿ ನಾವು ನೀಡಿದ ಕಂದಮೂಲ ಫಲಗಳನ್ನೂ, ಅಂಕುರಗಳನ್ನೂ ಸ್ವೀಕರಿಸಿ, ನಮ್ಮನ್ನು ಕೃತಾರ್ಥರನ್ನಾಗಿಸಿರಿ. (ದೋ/೨೫೦)

**ಚೌ – ತುಮ್ಹ ಪ್ರಿಯ ಪಾಹುನೆ ಬನ ಪಗು ಧಾರೇ। ಸೇವಾ ಜೋಗು ನ ಭಾಗ ಹಮಾರೇ॥**
**ದೇಬ ಕಾಹ ಹಮ ತುಮ್ಹಹಿ ಗೊಸಾಂಈ। ಈಂಧನು ಪಾತ ಕಿರಾತ ಮಿತಾಈ॥ ೧ ॥**

**ಯಹ ಹಮಾರಿ ಅತಿ ಬಡಿ ಸೇವಕಾಈ। ಲೇಹಿಂ ನ ಬಾಸನ ಬಸನ ಚೊರಾಈ॥**
**ಹಮ ಜಡ ಜೀವ ಜೀವ ಗನ ಘಾತೀ। ಕುಟಿಲ ಕುಚಾಲೀ ಕುಮತಿ ಕುಜಾತೀ ॥ ೨ ॥**
**ಪಾಪ ಕರತ ನಿಸಿ ಬಾಸರ ಜಾಹೀಂ। ನಹೀಂ ಪಟ ಕಟಿ ನಹೀಂ ಪೇಟ ಅಘಾಹೀಂ॥**
**ಸಪನೇಹುँ ಧರಮ ಬುದ್ಧಿ ಕಸ ಕಾಊ। ಯಹ ರಘುನಂದನ ದರಸ ಪ್ರಭಾಊ॥ ೩ ॥**
**ಜಬ ತೇಂ ಪ್ರಭು ಪದ ಪದುಮ ನಿಹಾರೇ। ಮಿಟೇ ದುಸಹ ದುಖ ದೋಷ ಹಮಾರೇ॥**
**ಬಚನ ಸುನತ ಪುರಜನ ಅನುರಾಗೇ। ತಿನ್ಹ ಕೇ ಭಾಗ ಸರಾಹನ ಲಾಗೇ॥ ೪ ॥**

ತಮ್ಮಂತಹ ಪ್ರಿಯ ಅತಿಥಿಗಳು ಈ ವನಕ್ಕೆ ದಯಮಾಡಿಸಿದ್ದೀರಿ. ಆದರೆ ನಿಮ್ಮ ಸೇವೆಮಾಡುವ ಯೋಗ್ಯತೆ, ಭಾಗ್ಯ ನಮ್ಮಲ್ಲಿಲ್ಲ. ಸ್ವಾಮಿ! ನಾವು ನಿಮಗೆ ಏನು ಕೊಡಬಲ್ಲೆವು? ಕಾಡಾಡಿಗಳಾದ ನಮ್ಮ ನಂಟು ಸೌದೆ, ಸೊಪ್ಪಿನೊಡನೆ ಮಾತ್ರ ಪರಿಮಿತ. ನಿಮ್ಮ ಬಟ್ಟೆ-ಬರೆ, ಪಾತ್ರೆ-ಪರಟೆಗಳನ್ನು ನಾವು ಕದಿಯಲಿಲ್ಲ; ಇದೇ ನಮ್ಮ ದೊಡ್ಡ ಸೇವೆ. ನಾವು ಪಾಮರರು, ಜೀವಹಿಂಸಕರು, ಕುಟಿಲರು, ಕುತಂತ್ರಿಗಳು, ದುಷ್ಟಬುದ್ಧಿಯವರು, ನಿಮ್ನಜಾತಿಯವರು. ನಮ್ಮ ಹಗಲಿರುಳೆಲ್ಲ ಪಾಪಕಾರ್ಯಗಳಲ್ಲೇ ಕಳೆಯುತ್ತವೆ. ಇಷ್ಟಾದರೂ ನಮ್ಮ ಮೈಮೇಲೆ ಬಟ್ಟೆಯಿಲ್ಲ. ಹೊಟ್ಟೆತುಂಬ ಅನ್ನವಿಲ್ಲ. ಕನಸು-ಮನಸ್ಸಿನಲ್ಲಿಯೂ ನಮ್ಮಲ್ಲಿ ಧರ್ಮಬುದ್ಧಿಯಿಲ್ಲ. ನಮಗೆ ಈ ಬುದ್ಧಿ ಬಂದಿರುವುದು ಶ್ರೀರಾಮದರ್ಶನದ ಪ್ರಭಾವದಿಂದ. ಪ್ರಭುವಿನ ಪಾದಪದ್ಮಗಳನ್ನು ದರ್ಶಿಸಿದಾಗಲೇ ನಮ್ಮ ದುಸ್ಸಹ ದುಃಖಗಳು, ದೋಷಗಳು ತೊಲಗಿಹೋದವು. ವನವಾಸಿಗಳ ಮಾತುಗಳನ್ನು ಕೇಳಿ, ಅಯೋಧ್ಯೆಯ ಜನರು ಪ್ರೇಮಮಗ್ನರಾಗಿ, ಅವರ ಭಾಗ್ಯವನ್ನುಕೊಂಡಾಡಿದರು. (ಚೌ/೧-೪)

**ಛಂ – ಲಾಗೇ ಸರಾಹನ ಭಾಗ ಸಬ ಅನುರಾಗ ಬಚನ ಸುನಾವಹೀಂ।**
**ಬೋಲನಿ ಮಿಲನಿ ಸಿಯ ರಾಮ ಚರನ ಸನೇಹು ಲಖಿ ಸುಖು ಪಾವಹೀಂ॥**
**ನರ ನಾರಿ ನಿದರಹಿಂ ನೇಹು ನಿಜ ಸುನಿ ಕೋಲ ಭಿಲ್ಲನಿ ಕೀ ಗಿರಾ।**
**ತುಲಸೀ ಕೃಪಾ ರಘುಬಂಸಮನಿ ಕೀ ಲೋಹ ಲೈ ಲೌಕಾ ತಿರಾ॥**

ಅಯೋಧ್ಯಾನಿವಾಸಿಗಳು ಆ ಗಿರಿಜನರ ಹೆಗ್ಗಳಿಕೆಯನ್ನು ಹೊಗಳುತ್ತಾ, ಅವರ ಪ್ರಿಯ ವಚನಗಳನ್ನು ಕೇಳತೊಡಗಿದರು. ಅವರ ನಡೆ, ನುಡಿ, ವ್ಯವಹಾರಗಳನ್ನೂ, ಶ್ರೀಸೀತಾರಾಮರ ಚರಣಗಳಲ್ಲಿರುವ ಪ್ರೇಮವನ್ನೂ ಕಂಡು ಎಲ್ಲರೂ ಸುಖಿಗಳಾದರು. ಆ ಕೋಲ, ಭಿಲ್ಲರ ಮಾತನ್ನು ಕೇಳಿದ ಮೇಲೆ, ಸ್ತ್ರೀ ಪುರುಷರೆಲ್ಲರೂ ಶ್ರೀಸೀತಾರಾಮರ ಮೇಲೆ ನಮಗೆ ಇರುವ ಪ್ರೇಮವು ಅಲ್ಪವಾದುದು ಎಂದು ಭಾವಿಸಿದರು. ತುಲಸೀದಾಸರು ಹೇಳುತ್ತಾರೆ – ರಘುವಂಶಮಣಿಯಾದ ಶ್ರೀರಾಮಚಂದ್ರನ ಕೃಪಾಪ್ರಭಾವದಿಂದ ಕಬ್ಬಿಣವು ತನ್ನ ಜೊತೆಗೆ ಸೊರೆಕಾಯಿಯನ್ನು ತೇಲಿಸಿಕೊಂಡು ಹೋಯಿತು. ಕಬ್ಬಿಣವು ಸಹಜವಾಗಿ ನೀರಿನಲ್ಲಿ ಮುಳುಗುತ್ತದೆ. ತನ್ನನ್ನು ಆಶ್ರಯಿಸಿದವರನ್ನು ಮುಳುಗಿಸುತ್ತದೆ. ಆದರೆ ಒಣಗಿದ ಸೋರೆಕಾಯಿ (ಈಜು ಕಲಿಯುವವರು ಒಣಗಿದ ಎರಡು ಸೋರೆಕಾಯಿ ಬುರುಡೆಗಳನ್ನು ಹೊಟ್ಟೆಯಲ್ಲಿ ಕಟ್ಟಿಕೊಳ್ಳುತ್ತಾರೆ.) ನೀರಿನಲ್ಲಿ ತಾನು ತೇಲುವುದಲ್ಲದೆ ತನ್ನನ್ನು ಆಶ್ರಯಿಸಿದವರನ್ನೂ ತೇಲಿಸುತ್ತದೆ. (ಛಂದ)

(ಇಲ್ಲಿ ಕಾಡಾಡಿಗಳಾದ ಭಿಲ್ಲರು ಕಬ್ಬಿಣದಂತೆ, ನಾಗರೀಕರಾದ ಅಯೋಧ್ಯಾವಾಸಿಗಳು ಸೋರೆಕಾಯಿಯಂತೆ. ಭಿಲ್ಲರೂ, ಕೋಲರೂ ನಿರಂತರ ಭಕ್ತಿಯಿಂದ ಶ್ರೀರಾಮನನ್ನು ಸೇವಿಸಿ,ರಾಮಾನುಗ್ರಹಕ್ಕೆ ಪಾತ್ರರಾದವರು. ರಾಮಭಕ್ತಿತತ್ಪರರಾದ (ಕಬ್ಬಿಣದಂತಿರುವ) ಭಿಲ್ಲರೂ, ಕೋಲರೂ, ರಾಮಭಕ್ತಿಯ ಮೂಲಕ ಸೋರೆಕಾಯಿಯಂತಿದ್ದ ಅಯೋಧ್ಯಾವಾಸಿಗಳಿಗೆ ಆದರ್ಶರಾಗಿದ್ದಾರೆ. ರಾಮಭಕ್ತರಾದವರು ಭವಸಾಗರದಿಂದ ತಾವು ಮಾತ್ರ ದಾಟುವುದಲ್ಲದೆ ಇತರರನ್ನೂ ದಾಟಿಸಿಬಿಡುತ್ತಾರೆ.)

**ಸೋ – ಬಿಹರಹಿಂ ಬನ ಚಹು ಓರ ಪ್ರತಿದಿನ ಪ್ರಮುದಿತ ಲೋಗ ಸಬ।**
**ಜಲ ಜ್ಯೋಂ ದಾದುರ ಮೋರ ಭಏ ಪೀನ ಪಾವಸ ಪ್ರಥಮ ॥ ೨೫೧ ॥**

ಗ್ರೀಷ್ಮಋತುವಿನ ತಾಪದಿಂದ ಕಂಗೆಟ್ಟ ಕಪ್ಪೆಗಳು, ನವಿಲುಗಳು, ಮುಂಗಾರು ಮಳೆಯಲ್ಲಿ ಆನಂದವಾಗಿ ಎಗರೆಗರಿ ಕುಣಿಯುವಂತೆ, ಶ್ರೀರಾಮವಿರಹತಾಪದಿಂದ ಒಣಗಿಹೋದ ಅಯೋಧ್ಯಾವಾಸಿಗಳು ಚಿತ್ರಕೂಟದಲ್ಲಿ ಶ್ರೀರಾಮಪ್ರೇಮವರ್ಷದಿಂದ ನೆನೆದು, ಆನಂದದಿಂದ ಕಾಡಿನಲ್ಲೆಲ್ಲ ಸುತ್ತಾಡುತ್ತಿದ್ದರು. (ಸೋ/೨೫೧)

**ಚೌ – ಪುರ ಜನ ನಾರಿ ಮಗನ ಅತಿ ಪ್ರೀತೀ। ಬಾಸರ ಜಾಹಿಂ ಪಲಕ ಸಮ ಬೀತೀ॥**
**ಸೀಯ ಸಾಸು ಪ್ರತಿ ಬೇಷ ಬನಾಈ। ಸಾದರ ಕರಇ ಸರಿಸ ಸೇವಕಾಈ ॥ ೧ ॥**

**ಲಖಾ ನ ಮರಮು ರಾಮ ಬಿನು ಕಾಹೂಁ । ಮಾಯಾ ಸಬ ಸಿಯ ಮಾಯಾ ಮಾಹೂಁ ॥**
**ಸೀಯಁ ಸಾಸು ಸೇವಾ ಬಸ ಕೀನ್ಹೀಂ । ತಿನ್ಹ ಲಹಿ ಸುಖ ಸಿಖ ಆಸಿಷ ದೀನ್ಹೀಂ ॥ ೨ ॥**
**ಲಖಿ ಸಿಯ ಸಹಿತ ಸರಲ ದೊಉ ಭಾಈ । ಕುಟಿಲ ರಾನಿ ಪಛಿತಾನಿ ಅಘಾಈ ॥**
**ಅವನಿ ಜಮಹಿ ಜಾಚತಿ ಕೈಕೇಈ । ಮಹಿ ನ ಬೀಚು ಬಿಧಿ ಮೀಚು ನ ದೇಈ ॥ ೩ ॥**
**ಲೋಕಹುಁ ಬೇದ ಬಿದಿತ ಕಬಿ ಕಹಹೀಂ । ರಾಮ ಬಿಮುಖ ಥಲು ನರಕ ನ ಲಹಹೀಂ ॥**
**ಯಹು ಸಂಸಉ ಸಬ ಕೇ ಮನ ಮಾಹೀಂ । ರಾಮ ಗವನು ಬಿಧಿ ಅವಧ ಕಿ ನಾಹೀಂ ॥ ೪ ॥**

ಅಯೋಧ್ಯಾನಿವಾಸಿಗಳಾದ ಸ್ತ್ರೀ-ಪುರುಷರು ಅತ್ಯಂತ ಪ್ರೇಮಮಗ್ನರಾಗಿ ದಿನಗಳನ್ನು ಕ್ಷಣಗಳಂತೆ ಕಳೆಯುತ್ತಿದ್ದಾರೆ. ಸೀತಾದೇವಿಯು ತನ್ನ ಎಲ್ಲ ಅತ್ತೆಯಂದಿರ ಸೇವೆಯನ್ನು ಒಬ್ಬೊಬ್ಬರಿಗೆ ಒಂದೊಂದು ರೂಪವನ್ನಾಂತು ಆದರದಿಂದ ಮಾಡುತ್ತಿದ್ದಳು. ಈ ರಹಸ್ಯವು ರಾಮನಿಗಲ್ಲದೆ ಬೇರೆ ಯಾರಿಗೂ ತಿಳಿಯಲಿಲ್ಲ; ಏಕೆಂದರೆ, ಸೀತಾದೇವಿಯು ಪರಾಶಕ್ತಿಯು, ಮಾಯಾ ಸ್ವರೂಪಿಣಿಯು. ಎಲ್ಲ ಮಾಯೆಗಳು ಅವಳ ಅಧೀನದಲ್ಲೇ ಇರುವುವು. ಅವಳು ತನ್ನ ಸೇವೆಯಿಂದ ಎಲ್ಲ ಅತ್ತೆಯವರನ್ನು ಸಂತೃಪ್ತಿಗೊಳಿಸಿದ್ದಳು. ಅವರೆಲ್ಲರೂ ಸೀತೆಗೆ ಉಪದೇಶಗಳನ್ನೂ, ಆಶೀರ್ವಾದಗಳನ್ನೂ ನೀಡಿದರು. ಸೀತಾಸಮೇತ ರಾಮಲಕ್ಷ್ಮಣರ ಸರಳ ಸ್ವಭಾವವನ್ನು ಕಂಡು, ಕುಟಿಲ ಸ್ವಭಾವದ ರಾಣಿ ಕೈಕೆಯಿಯು ತುಂಬಾ ಪಶ್ಚಾತ್ತಾಪಪಟ್ಟಳು. ''ಈ ಭೂದೇವಿಯು ನನ್ನನ್ನು ಏಕೆ ನುಂಗುವುದಿಲ್ಲ? ವಿಧಾತನು ನನಗೆ ಏಕೆ ಸಾವನ್ನು ಕರುಣಿಸುವುದಿಲ್ಲ?'' ಎಂದು ಅವಳು ಭೂದೇವಿಯನ್ನು, ಯಮನನ್ನೂ ಪ್ರಾರ್ಥಿಸುತ್ತಿದ್ದಳು. ''ಶ್ರೀರಾಮನಿಗೆ ವಿಮುಖರಾದವರಿಗೆ ನರಕದಲ್ಲಿಯೂ ಸ್ಥಾನದೊರಕದು'', ಎಂಬುದು ವೇದ-ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿದೆ. ಕವಿಗಳೂ ಹಾಗೆಯೇ ಹೇಳುತ್ತಿದ್ದಾರೆ. 'ಶ್ರೀರಾಮನು ಅಯೋಧ್ಯೆಗೆ ಮರಳಿ ಬರುವನೋ, ಇಲ್ಲವೋ? ಎಂಬುದು ಪ್ರತಿಯೋರ್ವ ವ್ಯಕ್ತಿಯ ಮನಸ್ಸಿನಲ್ಲಿ ಸಂದೇಹವು ಆವರಿಸಿತ್ತು. (ಚೌ/೧-೪)

**ದೋ – ನಿಸಿ ನ ನೀದ ನಹಿಂ ಭೂಖ ದಿನ ಭರತು ಬಿಕಲ ಸುಚಿ ಸೋಚ।**
**ನೀಚ ಕೀಚ ಬಿಚ ಮಗನ ಜಸ ಮೀನಹಿ ಸಲಿಲ ಸँಕೋಚ ॥ ೨೫೨ ॥**

ಭರತನಿಗಂತೂ ಹಗಲು ಊಟಸೇರದು, ಇರುಳು ನಿದ್ದೆ ಬಾರದು. ಕೆಸರಿನಲ್ಲಿ ಸಿಕ್ಕಿಕೊಂಡ ಮೀನು ನೀರಿನ ಕೊರತೆಯಿಂದ ವಿಲವಿಲನೆ ಒದ್ದಾಡುವಂತೆ ಭರತನು ಬೇಗುದಿಯಿಂದ ನರಳುತ್ತಿದ್ದನು. (ದೋ/೨೫೨)

**ಚೌ – ಕೀನ್ಹಿ ಮಾತು ಮಿಸ ಕಾಲ ಕುಚಾಲೀ । ಈತಿ ಭೀತಿ ಜಸ ಪಾಕತ ಸಾಲೀ ॥**
**ಕೆಹಿ ಬಿಧಿ ಹೋಇ ರಾಮ ಅಭಿಷೇಕೂ । ಮೊಹಿ ಅವಕಲತ ಉಪಾಉ ನ ಏಕೂ ॥ ೧ ॥**
**ಅವಸಿ ಫಿರಹಿಂ ಗುರ ಆಯಸು ಮಾನೀ । ಮುನಿ ಪುನಿ ಕಹಬ ರಾಮ ರುಚಿ ಜಾನೀ ॥**
**ಮಾತು ಕಹೇಹುಁ ಬಹುರಹಿಂ ರಘುರಾಊ । ರಾಮ ಜನನಿ ಹಠ ಕರಬಿ ಕಿ ಕಾಊ ॥ ೨ ॥**
**ಮೊಹಿ ಅನುಚರ ಕರ ಕೇತಿಕ ಬಾತಾ । ತೆಹಿ ಮಹँ ಕುಸಮಉ ಬಾಮ ಬಿಧಾತಾ ॥**
**ಜೌಂ ಹಠ ಕರಉಁ ತ ನಿಪಟ ಕುಕರಮೂ । ಹರಗಿರಿ ತೇಂ ಗುರು ಸೇವಕ ಧರಮೂ ॥ ೩ ॥**
**ಏಕಉ ಜುಗುತಿ ನ ಮನ ಠಹರಾನೀ । ಸೋಚತ ಭರತಹಿ ರೈನಿ ಬಿಹಾನೀ ॥**
**ಪ್ರಾತ ನಹಾಇ ಪ್ರಭುಹಿ ಸಿರ ನಾಈ । ಬೈಠತ ಪಠಏ ರಿಷಯಁ ಬೊಲಾಈ ॥ ೪ ॥**

ಭರತನು ಯೋಚಿಸತೊಡಗಿದನು – ''ಚೆನ್ನಾಗಿ ಬೆಳೆದು ಸಿದ್ಧವಾದ ಪೈರು ಈತಿಬಾಧೆಯಿಂದ ಕೈಬಿಟ್ಟುಹೋಗಿರುವಂತೆ, ಶ್ರೀರಾಮನು ಪಟ್ಟಾಭಿಷೇಕದ ಸಮಯದಲ್ಲಿ ಎಲ್ಲವೂ ಕೆಟ್ಟುಹೋಯಿತು. ತಾಯಿಯ ನೆಪದಲ್ಲಿ ಕಾಲವು ಕುತಂತ್ರಹೂಡಿತು. ಈಗ ಶ್ರೀರಾಮಚಂದ್ರನ ಪಟ್ಟಾಭಿಷೇಕ ಹೇಗೆ ನಡೆಯುವುದೋ? ನನಗಂತೂ ಯಾವ ಉಪಾಯವೂ ತೋಚುವುದಿಲ್ಲ. ಗುರುಗಳ ಆಜ್ಞೆಗನುಗುಣವಾಗಿ ಶ್ರೀರಾಮನೇನೋ ಅಯೋಧ್ಯೆಗೆ ಮರಳಿಯಾನು. ಆದರೆ ವಸಿಷ್ಠಮಹಾಮುನಿಗಳು ಶ್ರೀರಾಮನ ಮನಸ್ಸನ್ನು ಅರಿತುಕೊಂಡೇ ಅದಕ್ಕೆ ತಕ್ಕನಾಗಿ ಮಾತಾಡುವರು. ಮಾತೆ ಕೌಸಲ್ಯೆಯು ಹೇಳಿದರೂ ಶ್ರೀರಘುನಾಥನು ಹಿಂದಿರುಗಿಯಾನು. ಆದರೆ ಶ್ರೀರಾಮನನ್ನು ಹಡೆದ ಆ ತಾಯಿಯವರು ಹಟಮಾಡುವರೇ? ಅನುಚರನಾದ ನನ್ನ ಮಾತಿಗೇನು ಬೆಲೆ? ನನಗೋ ಕೆಟ್ಟಕಾಲ! ವಿಧಾತನೂ ಪ್ರತಿಕೂಲನಾಗಿರುವನು. ನಾನು ಹಟಹಿಡಿದರೆ ಅದು ಅಧರ್ಮವೇ ಆದೀತು. ಏಕೆಂದರೆ ಸೇವಕಧರ್ಮವು ಕೈಲಾಸಪರ್ವತಕ್ಕಿಂತಲೂ ಗುರುತರವಾದುದು.'' ಯಾವದೊಂದು ಉಪಾಯವೂ ಭರತನ ಮನಸ್ಸಿಗೆ ಬರಲಿಲ್ಲ. ಹೀಗೆ ಯೋಚಿಸುತ್ತಲೇ ಬೆಳಗಾಯಿತು. ಪ್ರಾತಃಕಾಲದಲ್ಲಿ ಭರತನು ಸ್ನಾನಾದಿಗಳನ್ನು ಮುಗಿಸಿಕೊಂಡು, ಶ್ರೀರಾಮಚಂದ್ರನಿಗೆ ಶಿರಸಾವಂದಿಸಿ, ತಲೆತಗ್ಗಿಸಿ ಕುಳಿತಿರುವಾಗ ವಸಿಷ್ಠರಿಂದ ಕರೆ ಬಂತು. (ಚೌ/೧-೪)

**ದೋ – ಗುರ ಪದ ಕಮಲ ಪ್ರನಾಮು ಕರಿ ಬೈಠೇ ಆಯಸು ಪಾಇ।**
**ಬಿಪ್ರ ಮಹಾಜನ ಸಚಿವ ಸಬ ಜುರೇ ಸಭಾಸದ ಆಇ॥ ೨೫೩ ॥**

ಭರತನು ಗುರುವಿನ ಬಳಿಗೆ ಹೋಗಿ ಅವರಿಗೆ ಪ್ರಣಾಮಗೈದು, ಅವರ ಅನುಮತಿಯಂತೆ ಕುಳಿತುಕೊಂಡನು. ಅದೇ ಸಮಯದಲ್ಲಿ ವಿಪ್ರರು, ಮಹಾಜನರು, ಮಂತ್ರಿಗಳೇ ಮೊದಲಾದ ಸಭಾಸದರು ಅಲ್ಲಿಗೆ ಬಂದು ಸೇರಿದರು. (ದೋ/೨೫೩)

**ಚೌ – ಬೋಲೇ ಮುನಿಬರು ಸಮಯ ಸಮಾನಾ। ಸುನಹು ಸಭಾಸದ ಭರತ ಸುಜಾನಾ॥**
**ಧರಮ ಧುರೀನ ಭಾನುಕುಲ ಭಾನೂ। ರಾಜಾ ರಾಮು ಸ್ವಬಸ ಭಗವಾನೂ॥ ೧ ॥**
**ಸತ್ಯಸಂಧ ಪಾಲಕ ಶ್ರುತಿ ಸೇತೂ। ರಾಮ ಜನಮು ಜಗ ಮಂಗಲ ಹೇತೂ॥**
**ಗುರ ಪಿತು ಮಾತು ಬಚನ ಅನುಸಾರೀ। ಖಲ ದಲು ದಲನ ದೇವ ಹಿತಕಾರೀ॥ ೨ ॥**
**ನೀತಿ ಪ್ರೀತಿ ಪರಮಾರಥ ಸ್ವಾರಥು। ಕೋಉ ನ ರಾಮ ಸಮ ಜಾನ ಜಥಾರಥು॥**
**ಬಿಧಿ ಹರಿ ಹರು ಸಸಿ ರಬಿ ದಿಸಿಪಾಲಾ। ಮಾಯಾ ಜೀವ ಕರಮ ಕುಲಿ ಕಾಲಾ॥ ೩ ॥**
**ಅಹಿಪ ಮಹಿಪ ಜಹ್ ಲಗಿ ಪ್ರಭುತಾಈ। ಜೋಗ ಸಿದ್ಧಿ ನಿಗಮಾಗಮ ಗಾಈ॥**
**ಕರಿ ಬಿಚಾರ ಜಿಯ್ ದೇಖಹು ನೀಕೇಂ। ರಾಮ ರಜಾಇ ಸೀಸ ಸಬಹೀ ಕೇಂ॥ ೪ ॥**

ಮುನಿಶ್ರೇಷ್ಠರಾದ ವಸಿಷ್ಠರು ಸಮಯೋಚಿತವಾಗಿ ಇಂತು ನುಡಿದರು – 'ಸಭಾಸದರೇ! ಪ್ರಾಜ್ಞನಾದ ಭರತನೇ! ಎಲ್ಲರೂ ಕಿವಿಗೊಟ್ಟು ಕೇಳಿರಿ. ಭಾನುಕುಲ ಭಾನುವಾದ ಶ್ರೀರಾಮಚಂದ್ರನು ಧರ್ಮಧುರಂಧರನೂ, ಸರ್ವತಂತ್ರಸ್ವತಂತ್ರನೂ ಆದ ಭಗವಂತನಾಗಿರುವನು. ಅವನು ಸಂತ್ಯಸಂಧನೂ, ವೇದಮರ್ಯಾದೆಗಳನ್ನು ಪಾಲಿಸುವವನೂ ಆಗಿರುವನು. ಶ್ರೀರಾಮನ ಅವತಾರವು ಜಗತ್ಕಲ್ಯಾಣಕ್ಕಾಗಿಯೇ ಆಗಿದೆ. ಅವನು ಗುರು, ತಂದೆ-ತಾಯಿಯರ ಮಾತನ್ನು ಮೀರಲಾರನು. ದುಷ್ಟದಳವನ್ನು ದಮನಗೈದು, ದೇವತೆಗಳಿಗೆ ಹಿತವನ್ನು ಮಾಡುವವನು. ನೀತಿಯಾವುದು? ಪ್ರೀತಿ ಯಾವುದು? ಪರಮಾರ್ಥ ಯಾವುದು? ಸ್ವಾರ್ಥ ಯಾವುದು? ಎಂಬುದನ್ನು ಅವನಿಗಿಂತ ಚೆನ್ನಾಗಿ ಬೇರೆ ಯಾರೂ ಅರಿಯರು. ಬ್ರಹ್ಮ, ವಿಷ್ಣು, ಮಹೇಶ್ವರ, ಸೂರ್ಯ, ಚಂದ್ರ, ದಿಕ್ಪಾಲಕರು, ಮಾಯೆ, ಜೀವ, ಎಲ್ಲ ಕರ್ಮಗಳು, ಕಾಲ, ಆದಿಶೇಷ ಮತ್ತು ಪಾತಾಳದ ಇತರ ರಾಜರೇ ಮೊದಲಾದ ಏನೆಲ್ಲ ಪ್ರಭುತ್ವವಿದೆಯೋ, ನಿಗಮಾಗಮಗಳು ಗಾನ ಮಾಡಿರುವ ಯೋಗದ ಏನೆಲ್ಲ ಸಿದ್ಧಿಗಳಿವೆಯೋ, ಚೆನ್ನಾಗಿ ಯೋಚನೆಮಾಡಿ ನೋಡಿದರೆ – ಇವುಗಳೆಲ್ಲದರ ಮೇಲೆ ರಾಮನಿಗೆ ಪ್ರಭುತ್ವವಿದೆ ಎಂದು ಗೊತ್ತಾಗುವುದು. ಅಂದರೆ ಶ್ರೀರಾಮನೇ ಎಲ್ಲದರ ಏಕಮಾತ್ರ ಒಡೆಯನಾಗಿರುವನು. (ಚೌ/೧-೪)

**ದೋ – ರಾಖೇಂ ರಾಮ ರಜಾಇ ರುಖ ಹಮ ಸಬ ಕರ ಹಿತ ಹೋಇ।**
**ಸಮುಝಿ ಸಯಾನೇ ಕರಹು ಅಬ ಸಬ ಮಿಲಿ ಸಮ್ಮತ ಸೋಇ॥ ೨೫೪ ॥**

ಆದ್ದರಿಂದ ಶ್ರೀರಾಮನ ಆಜ್ಞೆಯನ್ನು, ಇಂಗಿತವನ್ನು ಪಾಲಿಸುವುದರಲ್ಲೇ ನಮ್ಮೆಲ್ಲರ ಹಿತವಾದೀತು. ಈ ತತ್ತ್ವ ರಹಸ್ಯವನ್ನು ತಿಳಿದು ಪ್ರಾಜ್ಞರಾದ ನೀವು ಎಲ್ಲರಿಗೂ ಸಮ್ಮತವಾಗುವಂತೆ ಎಲ್ಲರೂ ಕೂಡಿ ನಡೆಯಿರಿ. (ದೋ/೨೫೪)

**ಚೌ – ಸಬ ಕಹುಂ ಸುಖದ ರಾಮ ಅಭಿಷೇಕೂ। ಮಂಗಲ ಮೋದ ಮೂಲ ಮಗ ಏಕೂ॥**
**ಕೆಹಿ ಬಿದಿ ಅವಧ ಚಲಹಿಂ ರಘುರಾಊ। ಕಹಹು ಸಮುಝಿ ಸೋಇ ಕರಿಅ ಉಪಾಊ॥ ೧ ॥**
**ಸಬ ಸಾದರ ಸುನಿ ಮುನಿಬರ ಬಾನೀ। ನಯ ಪರಮಾರಥ ಸ್ವಾರಥ ಸಾನೀ॥**
**ಉತರು ನ ಆವ ಲೋಗ ಭಏ ಭೋರೇ। ತಬ ಸಿರು ನಾಇ ಭರತ ಕರ ಜೋರೇ॥ ೨ ॥**
**ಭಾನುಬಂಸ ಭಏ ಭೂಪ ಘನೇರೇ। ಅಧಿಕ ಏಕ ತೇਂ ಏಕ ಬಡೇರೇ॥**
**ಜನಮ ಹೇತು ಸಬ ಕಹ್ ಪಿತು ಮಾತಾ। ಕರಮ ಸುಭಾಸುಭ ದೇಇ ಬಿಧಾತಾ॥ ೩ ॥**
**ದಲಿ ದುಖ ಸಜಇ ಸಕಲ ಕಲ್ಯಾನಾ। ಅಸ ಅಸೀಸ ರಾಉರಿ ಜಗು ಜಾನಾ॥**
**ಸೋ ಗೊಸಾಈಂ ಬಿಧಿ ಗತಿ ಜೆಹಿಂ ಛೇಂಕೀ। ಸಕಇ ಕೊ ಟಾರಿ ಟೇಕ ಜೋ ಟೇಕೀ॥ ೪ ॥**

ಶ್ರೀರಾಮನ ಪಟ್ಟಾಭಿಷೇಕವು ಎಲ್ಲರಿಗೂ ಸುಖದಾಯಕ, ಅದೊಂದೇ ಮಂಗಳಕರವೂ, ಆನಂದದಾಯಕವೂ ಆದ ಮಾರ್ಗವಾಗಿದೆ. ಆದರೆ ಈಗ ಶ್ರೀರಾಮನು ಅಯೋಧ್ಯೆಗೆ ಹೇಗೆ ತೆರಳಬಹುದು? ಎಲ್ಲರೂ ವಿಚಾರಮಾಡಿ, ಏನಾದರೂ ಉಪಾಯ ಸೂಚಿಸಿರಿ. ಅದರಂತೆ ಮುಂದರಿಯಬಹುದು. ಮುನಿಶ್ರೇಷ್ಠ ವಸಿಷ್ಠರು ಆಡಿದ ನಯ, ಪರಮಾರ್ಥ ಹಾಗೂ ಲೋಕಹಿತದಿಂದ

ಕೂಡಿದ ಮಾತನ್ನು ಎಲ್ಲರೂ ಆದರದಿಂದ ಕೇಳಿದರು. ಆದರೆ ಯಾರಿಗೂ ಏನೂ ತೋಚಲಿಲ್ಲ. ಎಲ್ಲರೂ ವಿಚಾರಶೂನ್ಯರಾಗಿದ್ದರು. ಆಗ ಭರತನು ತಲೆವಾಗಿ, ಕೈ ಜೋಡಿಸಿಕೊಂಡು ಇಂತೆಂದನು – ''ಸೂರ್ಯವಂಶದಲ್ಲಿ ಒಬ್ಬರಿಗಿಂತ ಒಬ್ಬರು ಮಿಗಿಲಾದ ಹಿರಿಯ ಅರಸರು ಆಗಿಹೋಗಿದ್ದಾರೆ. ಎಲ್ಲರ ಹುಟ್ಟಿಗೆ ತಂದೆ-ತಾಯಂದಿರು ಕಾರಣರಾದರೆ, ಶುಭಾ-ಶುಭ ಕರ್ಮಫಲಗಳನ್ನು ಕೊಡುವವನು ವಿಧಾತನು. ಹಾಗಿದ್ದರೂ ನಿಮ್ಮ ಆಶೀರ್ವಾದವು ಎಲ್ಲ ದುಃಖಗಳನ್ನು ತೊಲಗಿಸಿ, ಶ್ರೇಯಸ್ಸನ್ನುಂಟುಮಾಡುವುದೆಂಬುದು ಲೋಕವಿದಿತವಾಗಿದೆ. ಸ್ವಾಮಿ! ತಾವು ವಿಧಾತನ ಗತಿಯನ್ನು ತಡೆದ ಮಹಾನುಭಾವರು. ತಮ್ಮ ನಿರ್ಣಯವನ್ನು ಮೀರುವ ಶಕ್ತಿ ಯಾರಿಗಿದೆ? (ಚೌ/೧-೪)

**ದೋ – ಬೂಝಿಅ ಮೋಹಿ ಉಪಾಉ ಅಬ ಸೋ ಸಬ ಮೋರ ಅಭಾಗು ।**
**ಸುನಿ ಸನೇಹಮಯ ಬಚನ ಗುರ ಉರ ಉಮಗಾ ಅನುರಾಗು ॥ ೨೫೫ ॥**

ಇಷ್ಟಾದರೂ ನೀವು ನಮ್ಮಲ್ಲಿ ಅಭಿಪ್ರಾಯ ಕೇಳುವುದು ಇವೆಲ್ಲ ನನ್ನ ದುರ್ಭಾಗ್ಯವೇ ಸರಿ.'' ಭರತನ ಪ್ರೇಮಮಯ ಮಾತುಗಳನ್ನು ಕೇಳಿ, ವಸಿಷ್ಠರ ಹೃದಯದಲ್ಲಿ ಪ್ರೇಮವು ಉಕ್ಕಿಹರಿಯಿತು. (ದೋ/೨೫೫)

**ಚೌ – ತಾತ ಬಾತ ಫುರಿ ರಾಮ ಕೃಪಾಹೀಂ । ರಾಮ ಬಿಮುಖ ಸಿಧಿ ಸಪನೆಹುಁ ನಾಹೀಂ ॥**
**ಸಕುಚಉಁ ತಾತ ಕಹತ ಏಕ ಬಾತಾ । ಅರಧ ತಜಹಿಂ ಬುಧ ಸರಬಸ ಜಾತಾ ॥ ೧ ॥**
**ತುಮ್ಹ ಕಾನನ ಗವನಹು ದೊಉ ಭಾಈ । ಫೇರಿಅಹಿಂ ಲಖನ ಸೀಯ ರಘುರಾಈ ॥**
**ಸುನಿ ಸುಬಚನ ಹರಷೇ ದೊಉ ಭ್ರಾತಾ । ಭೇ ಪ್ರಮೋದ ಪರಿಪೂರನ ಗಾತಾ ॥ ೨ ॥**
**ಮನ ಪ್ರಸನ್ನ ತನ ತೇಜು ಬಿರಾಜಾ । ಜನು ಜಿಯ ರಾಉ ರಾಮು ಭಏ ರಾಜಾ ॥**
**ಬಹುತ ಲಾಭ ಲೋಗನ್ಹ ಲಘು ಹಾನೀ । ಸಮ ದುಖ ಸುಖ ಸಬ ರೋವಹಿಂ ರಾನೀ ॥ ೩ ॥**
**ಕಹಹಿಂ ಭರತು ಮುನಿ ಕಹಾ ಸೊ ಕೀನ್ಹೇ । ಫಲು ಜಗ ಜೀವನ್ಹ ಅಭಿಮತ ದೀನ್ಹೇ ॥**
**ಕಾನನ ಕರಉಁ ಜನಮ ಭರಿ ಬಾಸೂ । ಏಹಿಂ ತೇಂ ಅಧಿಕ ನ ಮೋರ ಸುಪಾಸೂ ॥ ೪ ॥**

ಗುರುಗಳು ಹೇಳಿದರು – ''ಮಗು! ನೀನು ಹೇಳುವುದು ನಿಜವೆ; ಆದರೆ ಅದಕ್ಕೆ ಶ್ರೀರಾಮಚಂದ್ರನ ಕೃಪೆಯೇ ಕಾರಣ. ರಾಮ ವಿಮುಖನಿಗಂತು ಸ್ವಪ್ನದಲ್ಲಿಯೂ ಕೂಡ ಸಿದ್ಧಿಯು ದೊರಕದು. ಮಗು! ಒಂದು ಉಪಾಯವು ತೋಚುತ್ತಿದೆ. ಆದರೆ ಅದನ್ನು ಹೇಳಲು ಸಂಕೋಚವಾಗುತ್ತದೆ. ಸರ್ವನಾಶವಾಗುತ್ತಿರುವಾಗ ಬುದ್ಧಿವಂತರು ಅರ್ಧವನ್ನು ತ್ಯಜಿಸಲು ಸಿದ್ಧರಾಗುತ್ತಾರೆ. ಆದ್ದರಿಂದ ನೀವಿಬ್ಬರೂ ವನವಾಸಕ್ಕೆ ಹೋಗುವುದು, ಸೀತಾರಾಮಲಕ್ಷ್ಮಣರು ಮರಳಿ ಅಯೋಧ್ಯೆಗೆ ಹೋಗುವುದು.'' ಗುರುಗಳ ಈ ಪ್ರಿಯವಾಣಿಯನ್ನು ಕೇಳಿ, ಭರತ, ಶತ್ರುಘ್ನರು ಹಿಗ್ಗಿ ಹೋದರು. ಅವರ ದೇಹ ಪರಮಾನಂದಭರಿತವಾಯಿತು. ಮನಸ್ಸುಗಳು ಪ್ರಸನ್ನವಾದುವು. ಮೈಯಲ್ಲಿ ತೇಜಸ್ಸು ಮೂಡಿತು. ದಶರಥನು ಬದುಕಿ ಬಂದಂತೆ, ಶ್ರೀರಾಮನು ರಾಜನಾದಂತೆ ಸಂತಸಗೊಂಡರು. ಇತರರಿಗಂತೂ ಇದರಲ್ಲಿ ನಷ್ಟಕ್ಕಿಂತ ಲಾಭವೇ ಹೆಚ್ಚೆನಿಸಿತು. ಆದರೆ ರಾಣಿಯರಿಗೆ ಮಾತ್ರ ಇದರಲ್ಲಿ ಸುಖ-ದುಃಖಗಳು ಸಮಾನವಾಗಿದ್ದವು. (ರಾಮ-ಲಕ್ಷ್ಮಣರು ವನದಲ್ಲಿದ್ದರೂ ಭರತ-ಶತ್ರುಘ್ನರು ವನದಲ್ಲಿದ್ದರೂ ಪುತ್ರವಿಯೋಗವಂತೂ ಇದ್ದೇ ಇದೆಯಲ್ಲ.) ಅದರಿಂದ ಅವರು ರೋದಿಸತೊಡಗಿದರು. ಭರತನು ಹೇಳಿದನು – ''ಮುನೀಶ್ವರರು ಹೇಳಿದಂತೆ ಮಾಡಿದರೆ ಜಗತ್ತಿನ ಜೀವಿಗಳಿಗೆ, ಅವರು ಬಯಸಿದ ಫಲವನ್ನು ಕೊಟ್ಟಂತಾಗುತ್ತದೆ. ಹದಿನಾಲ್ಕು ವರ್ಷಗಳೇ ಏಕೆ, ನಾನು ಜೀವನವಿಡೀ ವನವಾಸಮಾಡುವೆನು. ನನಗೆ ಇದಕ್ಕಿಂತ ಮಿಗಿಲಾದ ಸುಖ ಬೇರೊಂದಿಲ್ಲ. (ಚೌ/೧-೪)

**ದೋ – ಅಂತರಜಾಮೀ ರಾಮು ಸಿಯ ತುಮ್ಹ ಸರಬಗ್ಯ ಸುಜಾನ ।**
**ಜೌಂ ಫುರ ಕಹಹು ತ ನಾಥ ನಿಜ ಕೀಜಿಅ ಬಚನು ಪ್ರವಾನ ॥ ೨೫೬ ॥**

ಶ್ರೀಸೀತಾರಾಮರಿಬ್ಬರೂ ಅಂತರ್ಯಾಮಿಗಳು. ನೀವು ಸರ್ವಜ್ಞರೂ, ಪ್ರಾಜ್ಞರೂ ಆಗಿದ್ದೀರಿ. ತಾವು ಹೃದಯಪೂರ್ವಕ ಹೇಳುವುದಾದರೆ, ಸ್ವಾಮಿ! ತಮ್ಮ ಮಾತಿನಂತೆ ವ್ಯವಸ್ಥೆ ಮಾಡಿರಿ. (ದೋ/೨೫೬)

**ಚೌ – ಭರತ ಬಚನ ಸುನಿ ದೇಖಿ ಸನೇಹೂ । ಸಭಾ ಸಹಿತ ಮುನಿ ಭಏ ಬಿದೇಹೂ ॥**
**ಭರತ ಮಹಾ ಮಹಿಮಾ ಜಲರಾಸೀ । ಮುನಿ ಮತಿ ಠಾಢಿ ತೀರ ಅಬಲಾ ಸೀ ॥ ೧ ॥**
**ಗಾ ಚಹ ಪಾರ ಜತನು ಹಿಯಁ ಹೇರಾ । ಪಾವತಿ ನಾವ ನ ಬೋಹಿತು ಬೇರಾ ॥**
**ಔರು ಕರಿಹಿ ಕೋ ಭರತ ಬಡಾಈ । ಸರಸೀ ಸೀಪಿ ಕಿ ಸಿಂಧು ಸಮಾಈ ॥ ೨ ॥**

**ಭರತು ಮುನಿಹಿ ಮನ ಬೀತರ ಭಾಏ। ಸಹಿತ ಸಮಾಜ ರಾಮ ಪಹಿಂ ಆಏ ॥**
**ಪ್ರಭು ಪ್ರನಾಮು ಕರಿ ದೀನ್ಹ ಸುಆಸನು। ಬೈಠೇ ಸಬ ಸುನಿ ಮುನಿ ಅನುಸಾಸನು ॥ ೩ ॥**
**ಬೋಲೇ ಮುನಿಬರು ಬಚನ ಬಿಚಾರೀ। ದೇಸ ಕಾಲ ಅವಸರ ಅನುಹಾರೀ॥**
**ಸುನಹು ರಾಮ ಸರಬಗ್ಯ ಸುಜಾನಾ। ಧರಮ ನೀತಿ ಗುನ ಗ್ಯಾನ ನಿಧಾನಾ ॥ ೪ ॥**

ಭರತನ ಮಾತುಕೇಳಿ, ಅವನ ಪ್ರೇಮವನ್ನು ನೋಡಿ, ವಸಿಷ್ಠರು ಹಾಗೂ ಇಡೀ ಸಭಾಸದರು ಪರಮಾನಂದಭರಿತರಾಗಿ ಮೈಮರೆತರು. ಭರತನ ಮಹಿಮೆ ಒಂದು ಮಹಾನ್ ಸಮುದ್ರ. ಮುನೀಶ್ವರರ ಬುದ್ಧಿಯು ಆ ಸಾಗರದ ತೀರದಲ್ಲಿ ನಿಂತಿರುವ ಅಬಲೆ ಸ್ತ್ರೀಯಂತಿದೆ. ಅದು ಆ ಸಮುದ್ರವನ್ನು ದಾಟಲು ಬಯಸುತ್ತಿದೆ. ಅದಕ್ಕಾಗಿ ಅದು ಉಪಾಯವೂ ಹುಡುಕಿತು. ಆದರೆ ಹಡಗಾಗಲೀ, ತೆಪ್ಪವಾಗಲೀ, ದೋಣಿಯಾಗಲಿ ಸಿಗುತ್ತಿಲ್ಲ. ಭರತನ ಹಿರಿಮೆ ಬೇರಾರಿಗಿದ್ದೀತು? ಚಿಕ್ಕ ಕುಂಟೆಯ ನೀರಿನ ಚಿಪ್ಪಿನಲ್ಲಿ ಎಲ್ಲಾದರೂ ಸಮುದ್ರವು ಅಡಗಿತೇ? ವಸಿಷ್ಠರ ಅಂತರಾತ್ಮವು ಭರತನನ್ನು ತುಂಬಾ ಮೆಚ್ಚಿಕೊಂಡಿತು. ಅವರು ಭರತ ಸಹಿತ ಸಪರಿವಾರದೊಂದಿಗೆ ಶ್ರೀರಾಮನ ಬಳಿಗೆ ಬಂದರು. ಶ್ರೀರಾಮಚಂದ್ರನು ಅವರಿಗೆ ವಂದಿಸಿ, ಉತ್ತಮ ಆಸನವನ್ನು ನೀಡಿದನು. ಎಲ್ಲರೂ ಮುನಿಯ ಆಜ್ಞೆಯಂತೆ ಕುಳಿತರು. ಬಳಿಕ ಮುನೀಶ್ವರರು ದೇಶ, ಕಾಲ ಮತ್ತು ಸಂದರ್ಭಕ್ಕೆ ತಕ್ಕಂತೆ ಹೇಳತೊಡಗಿದರು – ಓ ಸರ್ವಜ್ಞ! ರಾಮಾ! ನೀನು ಧರ್ಮ, ನೀತಿ, ಗುಣ ಹಾಗೂ ಜ್ಞಾನದ ಭಂಡಾರನಾಗಿರುವೆ. ಈಗ ನಾನು ಹೇಳುವುದನ್ನು ಕೇಳು – (ಚೌ/೧-೪)

**ದೋ – ಸಬ ಕೇ ಉರ ಅಂತರ ಬಸಹು ಜಾನಹು ಭಾಉ ಕುಭಾಉ।**
**ಪುರಜನ ಜನನೀ ಭರತ ಹಿತ ಹೋಇ ಸೊ ಕಹಿಅ ಉಪಾಉ॥ ೨೫೭ ॥**

ನೀನು ಎಲ್ಲರ ಹೃದಯದಲ್ಲೂ ಇರುವ ಅಂತರ್ಯಾಮಿಯು. ಅವರ ಒಳ್ಳೆ-ಕೆಟ್ಟ ಎಲ್ಲ ಭಾವಗಳನ್ನೂ ಬಲ್ಲವನಾಗಿರುವೆ. ಸಾಕೇತವಾಸಿಗಳಿಗೆ, ಜನನಿಯರಿಗೆ, ಭರತನಿಗೆ ಹಿತವಾಗುವ ಉಪಾಯವನ್ನೇ ಮಾಡು. (ದೋ/೨೫೭)

**ಚೌ – ಆರತ ಕಹಹೀಂ ಬಿಚಾರಿ ನ ಕಾಊ। ಸೂಝ ಜುಆರಿಹಿ ಆಪನ ದಾಊ॥**
**ಸುನಿ ಮುನಿ ಬಚನ ಕಹತ ರಘುರಾಊ। ನಾಥ ತುಮ್ಹಾರೆಹಿ ಹಾಥ ಉಪಾಊ ॥ ೧ ॥**
**ಸಬ ಕರ ಹಿತ ರುಖ ರಾಉರಿ ರಾಖೇಂ। ಆಯಸು ಕಿಏಂ ಮುದಿತ ಫುರ ಭಾಷೇಂ ॥**
**ಪ್ರಥಮ ಜೊ ಆಯಸು ಮೋ ಕಹುಂ ಹೋಈ। ಮಾಥೇಂ ಮಾನಿ ಕರೌಂ ಸಿಖ ಸೋಈ॥ ೨ ॥**
**ಪುನಿ ಜೆಹಿ ಕಹಂ ಜಸ ಕಹಬ ಗೊಸಾಈಂ। ಸೋ ಸಬ ಭಾಂತಿ ಘಟಿಹಿ ಸೇವಕಾಈಂ॥**
**ಕಹ ಮುನಿ ರಾಮ ಸತ್ಯ ತುಮ್ಹ ಭಾಷಾ। ಭರತ ಸನೇಹಂ ಬಿಚಾರು ನ ರಾಖಾ॥ ೩ ॥**
**ತೆಹಿಂ ತೇಂ ಕಹಉಂ ಬಹೋರಿ ಬಹೋರೀ। ಭರತ ಭಗತಿ ಬಸ ಭಇ ಮತಿ ಮೋರೀ॥**
**ಮೋರೇಂ ಜಾನ ಭರತ ರುಚಿ ರಾಖೀ। ಜೋ ಕೀಜಿಅ ಸೋ ಸುಭ ಸಿವ ಸಾಖೀ ॥ ೪ ॥**

'ಆರ್ತರಾದವರು ಯಾರೂ ವಿಚಾರಮಾಡಿ ಮಾತಾಡುವುದಿಲ್ಲ. ಜೂಜುಗಾರನಿಗೆ ತನಗೆ ಜಯವಾಗುವ ವರಸೆಯೇ ಕಾಣುತ್ತದೆ.' ಮುನೀಶ್ವರರ ಮಾತನ್ನು ಕೇಳಿ ಶ್ರೀರಾಮನು ಇಂತೆಂದನು – ''ಮುನೀಶ್ವರಾ! ಉಪಾಯವಾದರೋ ನಿಮ್ಮ ಕೈಯಲ್ಲೇ ಇದೆ. ನಿಮ್ಮ ಮನದಂತೆ ನಡೆಯುವುದರಲ್ಲಿ, ನಿಮ್ಮ ಅಪ್ಪಣೆಯನ್ನು ಪಾಲಿಸುವುದರಲ್ಲಿಯೇ ಎಲ್ಲರ ಹಿತವಿದೆ. ಮೊದಲು ನನಗೆ ಅಪ್ಪಣೆಯಾಗಲಿ. ಅದನ್ನು ನಾನು ಶಿರಸಾವಹಿಸಿ ಪಾಲಿಸುತ್ತೇನೆ. ಓ ಗುರುವರ್ಯ! ತಮ್ಮ ಮಾತನ್ನು ಎಲ್ಲರೂ ಪರಿಪಾಲಿಸುವರು.'' ಮತ್ತೆ ವಸಿಷ್ಠರು ಹೇಳಿದರು – ರಾಮಾ! ನೀನು ಹೇಳಿದುದು ನಿಜ. ಆದರೆ ಭರತನ ಪ್ರೇಮದಿಂದ ನನ್ನ ವಿಚಾರವೆಲ್ಲ ಕೊಚ್ಚಿಕೊಂಡುಹೋಯಿತು. ಆದ್ದರಿಂದ ನಾನು ಪುನಃ ಪುನಃ ಹೇಳುತ್ತಿರುತ್ತೇನೆ – 'ನನ್ನ ಬುದ್ಧಿಯು ಭರತನ ಭಕ್ತಿಗೆ ವಶವಾಗಿ ಹೋಗಿದೆ. ಭರತನ ಹಿತವನ್ನು ದೃಷ್ಟಿಯಲ್ಲಿಟ್ಟುಕೊಂಡು ಏನಾದರೂ ಮಾಡಿದರೆ ಅದೇ ಒಳಿತಾಗಬಹುದು' ಎಂದು ನನಗೆ ತೋಚುತ್ತದೆ. ಇದಕ್ಕೆ ಶಿವನೇ ಸಾಕ್ಷಿ. (ಚೌ/೧-೪)

**ದೋ – ಭರತ ಬಿನಯ ಸಾದರ ಸುನಿಅ ಕರಿಅ ಬಿಚಾರು ಬಹೋರಿ ।**
**ಕರಬ ಸಾಧುಮತ ಲೋಕಮತ ನೃಪನಯ ನಿಗಮ ನಿಚೋರಿ ॥ ೨೫೮ ॥**

ಮೊದಲಿಗೆ ಭರತನ ವಿನಂತಿಯನ್ನು ಆದರದಿಂದ ಆಲಿಸು. ಬಳಿಕ ಅದರ ಕುರಿತು ಚೆನ್ನಾಗಿ ವಿಚಾರಮಾಡಿ, ಸಾಧುಮತ, ಲೋಕಮತ, ರಾಜನೀತಿ ಮತ್ತು ವೇದಗಳ ಸಾರದಂತೆ ನಿರ್ಣಯಿಸುವುದು. (ದೋ/೨೫೮)

**ಚೌ – ಗುರ ಅನುರಾಗು ಭರತ ಪರ ದೇಖೀ। ರಾಮ ಹೃದಯ್ ಆನಂದು ಬಿಸೇಷೀ ॥**
**ಭರತಹಿ ಧರಮ ಧುರಂಧರ ಜಾನೀ। ನಿಜ ಸೇವಕ ತನ ಮಾನಸ ಬಾನೀ॥ ೧ ॥**

**ಬೋಲೇ ಗುರ ಆಯಸ ಅನುಕೂಲಾ। ಬಚನ ಮಂಜು ಮೃದು ಮಂಗಲಮೂಲಾ॥**
**ನಾಥ ಸಪಥ ಪಿತು ಚರನ ದೊಹಾಈ। ಭಯಉ ನ ಭುಅನ ಭರತ ಸಮ ಭಾಈ॥ ೨ ॥**
**ಜೇ ಗುರ ಪದ ಅಂಬುಜ ಅನುರಾಗೀ। ತೇ ಲೋಕಹುಁ ಬೇದಹುಁ ಬಡಭಾಗೀ॥**
**ರಾಉರ ಜಾ ಪರ ಅಸ ಅನುರಾಗೂ। ಕೋ ಕಹಿ ಸಕಇ ಭರತ ಕರ ಭಾಗೂ॥ ೩ ॥**
**ಲಖಿ ಲಘು ಬಂಧು ಬುದ್ಧಿ ಸಕುಚಾಈ। ಕರತ ಬದನ ಪರ ಭರತ ಬಡಾಈ॥**
**ಭರತು ಕಹಹಿಁ ಸೋಇ ಕಿಏಁ ಭಲಾಈ। ಅಸ ಕಹಿ ರಾಮ ರಹೇ ಅರಗಾಈ॥ ೪ ॥**

ಭರತನ ಮೇಲೆ ಗುರುಗಳಿಗಿರುವ ಅಪಾರ ಪ್ರೀತಿಯನ್ನು ಕಂಡು ಶ್ರೀರಾಮನ ಹೃದಯ ವಿಶೇಷವಾಗಿ ಹರ್ಷಗೊಂಡಿತು. ಭರತನು ಧರ್ಮಧುರಂಧರನೂ, ತನು, ಮನ, ವಚನಗಳಿಂದ ತನ್ನ ಭಕ್ತನೆಂದೂ, ಮನಗಂಡು ಶ್ರೀರಾಮಚಂದ್ರನು ಗುರುಗಳ ಆಜ್ಞೆಗೆ ಅನುಕೂಲವಾಗಿ ಮನೋಹರವಾದ, ಮಂಗಳಕರವಾದ, ಮೃದುಮಧುರ ವಚನಗಳನ್ನು ಹೇಳಿದನು — ''ಸ್ವಾಮೀ! ನಿಮ್ಮ ಮೇಲೆ ಹಾಗೂ ತಂದೆಯವರ ಪಾದಗಳಲ್ಲಿ ಆಣೆಯಿಟ್ಟು ಸತ್ಯವಾಗಿ ಹೇಳುತ್ತೇನೆ – 'ಪ್ರಪಂಚದಲ್ಲಿ ಭರತನಂತಹ ಸೋದರನು ಎಂದೂ ಹುಟ್ಟಿಯೇ ಇಲ್ಲ.' ಗುರುಗಳ ಚರಣಕಮಲಗಳನ್ನು ಪ್ರೇಮಿಸುವವರು ಲೌಕಿಕ ಹಾಗೂ ಪಾರಮಾರ್ಥಿಕ ಈ ಎರಡೂ ದೃಷ್ಟಿಯಿಂದ ಭಾಗ್ಯವಂತರಾಗುತ್ತಾರೆ. ಅಂತಹುದರಲ್ಲಿ ನಿಮ್ಮಂತಹ ಗುರುವಿನ ಸ್ನೇಹ ಪಡೆದ ಭರತನ ಭಾಗ್ಯವನ್ನು ಯಾರು ಕೊಂಡಾಡಬಲ್ಲರು? ತಮ್ಮನಾದ್ದರಿಂದ ಅವನನ್ನು ಎದುರಿಗೆ ಹೊಗಳಲು ನನಗೆ ಸಂಕೋಚವಾಗುತ್ತಿದೆ. ಆದರೆ ಇಷ್ಟುಮಾತ್ರ ಹೇಳಬಲ್ಲೆ! 'ಭರತನ ಅಭಿಪ್ರಾಯವನ್ನು ಮನ್ನಿಸುವುದೇ ಶ್ರೇಯಸ್ಕರವಾಗಿದೆ.' ಎಂದು ಹೇಳಿ ಶ್ರೀರಾಮಚಂದ್ರನು ಮೌನವಹಿಸಿದನು. (ಚೌ/೧-೪)

**ದೋ – ತಬ ಮುನಿ ಬೋಲೇ ಭರತ ಸನ ಸಬ ಸँಕೋಚು ತಜಿ ತಾತ।**
**ಕೃಪಾಸಿಂಧು ಪ್ರಿಯ ಬಂಧು ಸನ ಕಹಹು ಹೃದಯ ಕೈ ಬಾತ॥ ೨೫೯ ॥**

ಅಗ ವಸಿಷ್ಠ ಮುನಿಗಳು ಭರತನಲ್ಲಿ ಹೇಳಿದರು – ಮಗೂ! ಭರತಾ! ಸಂಕೋಚವನ್ನು ತೊರೆದು, ದಯಾನಿಧಿಯೂ, ನಿನಗೆ ಪ್ರಿಯ ಅಣ್ಣನೂ ಆದ ಶ್ರೀರಾಮಚಂದ್ರನಲ್ಲಿ ನಿನ್ನ ಅಂತರಂಗದ ಮಾತನ್ನು ತಿಳಿಸು. (ದೋ/೨೫೯)

**ಚೌ – ಸುನಿ ಮುನಿ ಬಚನ ರಾಮ ರುಖ ಪಾಈ। ಗುರು ಸಾಹಿಬ ಅನುಕೂಲ ಅಘಾಈ॥**
**ಲಖಿ ಅಪನೇಁ ಸಿರ ಸಬು ಛರು ಭಾರೂ। ಕಹಿ ನ ಸಕಹಿಁ ಕಛು ಕರಹಿಁ ಬಿಚಾರೂ॥ ೧ ॥**
**ಪುಲಕಿ ಸರೀರ ಸಭಾಁ ಭಏ ಠಾಢೇ। ನೀರಜ ನಯನ ನೇಹ ಜಲ ಬಾಢೇ॥**
**ಕಹಬ ಮೋರ ಮುನಿನಾಥ ನಿಬಾಹಾ। ಏಹಿ ತೇಁ ಅಧಿಕ ಕಹೌಁ ಮೈಁ ಕಾಹಾ॥ ೨ ॥**
**ಮೈಁ ಜಾನಉಁ ನಿಜ ನಾಥ ಸುಭಾಊ। ಅಪರಾಧಿಹು ಪರ ಕೋಹ ನ ಕಾಊ॥**
**ಮೋ ಪರ ಕೃಪಾ ಸನೇಹು ಬಿಸೇಷೀ। ಖೇಲತ ಖುನಿಸ ನ ಕಬಹೂಁ ದೇಖೀ॥ ೩ ॥**
**ಸಿಸುಪನ ತೇಁ ಪರಿಹರೆಉಁ ನ ಸಂಗೂ। ಕಬಹುಁ ನ ಕೀನ್ಹ ಮೋರ ಮನ ಭಂಗೂ॥**
**ಮೈಁ ಪ್ರಭು ಕೃಪಾ ರೀತಿ ಜಿಯಁ ಜೋಹೀ। ಹಾರೆಹುಁ ಖೇಲ ಜಿತಾವಹಿಁ ಮೋಹೀ॥ ೪ ॥**

ಮುನಿಯಮಾತನ್ನು ಕೇಳಿ ಶ್ರೀರಾಮನ ಇಂಗಿತವನ್ನು ಅರಿತು, ಗುರುಗಳು ಹಾಗೂ ಸ್ವಾಮಿಯು ನನಗೆ ಅನುಕೂಲರಾಗಿದ್ದಾರೆ ಎಂದರಿತು ಆನಂದಿತನಾದನು. ಆದರೆ ಎಲ್ಲ ಭಾರವೂ ನನ್ನ ಮೇಲೆ ಬಿತ್ತಲ್ಲ ಎಂದುಕೊಂಡು ಭರತನ ಬಾಯಿಂದ ಮಾತೇ ಹೊರಡಲಿಲ್ಲ. ಅವನ ಶರೀರ ಪುಳಕಿತವಾಗಿತ್ತು. ಸಭೆಯಲ್ಲಿ ಎದ್ದು ನಿಂತನು. ಅವನ ಕಮಲದಂತಹ ಕಣ್ಣುಗಳಲ್ಲಿ ಪ್ರೇಮಾಶ್ರುಗಳು ಧಾರಾಕಾರವಾಗಿ ಹರಿದವು. ಭರತನು ಕೈಜೋಡಿಸಿಕೊಂಡು ಇಂತೆಂದನು – ''ನಾನು ಹೇಳಬೇಕಾಗಿರುವುದನ್ನೆಲ್ಲ ಗುರುಗಳು ಹೇಳಿರುವರು. ಇದಕ್ಕಿಂತ ಹೆಚ್ಚಿಗೆ ನಾನೇನು ಹೇಳಲಿ? ನನ್ನ ಸ್ವಾಮಿಯ ಸ್ವಭಾವವನ್ನು ನಾನು ಚೆನ್ನಾಗಿ ಬಲ್ಲೆ. ಅವನು ಅಪರಾಧಿಯಮೇಲೆಯೂ ಕೂಡ ಸಿಟ್ಟಾಗುವುದಿಲ್ಲ. ನನ್ನಮೇಲಂತೂ ಆತನಿಗೆ ವಿಶೇಷವಾದ ಪ್ರೀತಿ, ಕೃಪೆಇದೆ. ಆಟದಲ್ಲಿಯೂ ಕೂಡ ಅವನು ಸಿಟ್ಟಾದುದನ್ನು ನಾನು ನೋಡಿಲ್ಲ. ಬಾಲ್ಯದಿಂದಲೂ ಅವನ ಜೊತೆಯನ್ನು ನಾನು ಬಿಟ್ಟವನಲ್ಲ. ಪ್ರಭುವೂ ಕೂಡ ನನ್ನ ಮನಸ್ಸಿಗೆ ಪ್ರತಿಕೂಲವಾಗಿ ಎಂದೂ ಏನೂ ಮಾಡಿದವನಲ್ಲ. ನಾನು ಅವನ ಕೃಪೆಯನ್ನು ತುಂಬಾ ಅನುಭವಿಸಿದ್ದೇನೆ. ಆಟದಲ್ಲಿ ನಾನು ಸೋತರೂ ಕೂಡ ಅವನು ನನ್ನನ್ನೇ ಗೆಲಿಸುತ್ತಿದ್ದನು. (ಚೌ/೧-೪)

**ದೋ – ಮಹೂँ ಸನೇಹ ಸಕೋಚ ಬಸ ಸನಮುಖ ಕಹೀ ನ ಬೈನ।**
**ದರಸನ ತೃಪಿತ ನ ಆಜು ಲಗಿ ಪೇಮ ಪಿಆಸೇ ನೈನ॥ ೨೬೦ ॥**

ನಾನು ಕೂಡ ಪ್ರೇಮ ಮತ್ತು ಸಂಕೋಚದಿಂದ ಅವನ ಎದುರಿಗೆ ಬಾಯಿಬಿಟ್ಟವನಲ್ಲ. ಪ್ರೇಮ ತೃಷಿತವಾದ ನನ್ನ ಕಣ್ಣುಗಳು ಇಂದಿಗೂ ಪ್ರಭುವನ್ನು ನೋಡಿ ತಣಿಯವು. (ದೋ/೨೬೦)

**ಚೌ – ಬಿಧಿ ನ ಸಕೆಉ ಸಹಿ ಮೋರ ದುಲಾರಾ । ನೀಚ ಬೀಚು ಜನನೀ ಮಿಸ ಪಾರಾ ॥**
**ಯಹಉ ಕಹತ ಮೊಹಿ ಆಜು ನ ಸೋಭಾ । ಅಪನೀ ಸಮುಝಿ ಸಾಧು ಸುಚಿ ಕೋ ಭಾ ॥ ೧ ॥**
**ಮಾತು ಮಂದಿ ಮೈಂ ಸಾಧು ಸುಚಾಲೀ । ಉರ ಅಸ ಆನತ ಕೋಟಿ ಕುಚಾಲೀ ॥**
**ಫರಇ ಕಿ ಕೋದವ ಬಾಲಿ ಸುಸಾಲೀ । ಮುಕುತಾ ಪ್ರಸವ ಕಿ ಸಂಬುಕ ಕಾಲೀ ॥ ೨ ॥**
**ಸಪನೆಹುँ ದೋಸಕ ಲೇಸು ನ ಕಾಹೂ । ಮೋರ ಅಭಾಗ ಉದಧಿ ಅವಗಾಹೂ ॥**
**ಬಿನು ಸಮುಝೇँ ನಿಜ ಅಘ ಪರಿಪಾಕೂ । ಜಾರಿಉँ ಜಾಯँ ಜನನಿ ಕಹಿ ಕಾಕೂ ॥ ೩ ॥**
**ಹೃದಯँ ಹೇರಿ ಹಾರೆಉँ ಸಬ ಓರಾ । ಏಕಹಿ ಭಾँತಿ ಭಲೆಹಿँ ಭಲ ಮೋರಾ ॥**
**ಗುರ ಗೊಸಾಇँ ಸಾಹಿಬ ಸಿಯ ರಾಮೂ । ಲಾಗತ ಮೋಹಿ ನೀಕ ಪರಿನಾಮೂ ॥ ೪ ॥**

ಆದರೆ ವಿಧಿಯು ರಾಮನ ಮೇಲೆ ನನಗಿರುವ ಪ್ರೇಮವನ್ನು ಸಹಿಸದೇ ಹೋಯಿತು. ಅದು ಅಲ್ಪಬುದ್ಧಿಯಾದ ನನ್ನ ತಾಯಿಯ ನೆಪದಲ್ಲಿ ನಮ್ಮಿಬ್ಬರನಡುವೆ ಕಂದಕವನ್ನು ಏರ್ಪಡಿಸಿತು. ಹೀಗೆ ಹೇಳುವುದೂ ತಪ್ಪಾದೀತು. ಏಕೆಂದರೆ, ಯಾರಾದರೂ ತನ್ನನ್ನು ಸಾಧುವೂ, ಪವಿತ್ರನೂ ಎಂದುಕೊಂಡ ಮಾತ್ರಕ್ಕೆ ಹಾಗೇ ಆಗುವನೇ? ಆದ್ದರಿಂದ ಇತರರು ಸಾಧುಗಳೂ,ಪವಿತ್ರರೂ ಎಂದು ಭಾವಿಸುವವರೇ ನಿಜವಾದ ಸಾಧುಗಳು. ನನ್ನ ತಾಯಿಯು ಕೆಟ್ಟವಳಾಗಿದ್ದು, ನಾನು ಮಾತ್ರ ಸದಾಚಾರಿ, ಸಾಧು ಎಂದು ಯೋಚಿಸುವುದೂ ಕೂಡ ಕೋಟಿ ದುರಾಚಾರಗಳಿಗೆ ಸಮವಾದುದು. ಹಾರಕದ ತೆನೆಯಿಂದ ಭತ್ತ ಬರಲೂ ಸಾಧ್ಯವೇ? ಸಾಮಾನ್ಯ ಕಪ್ಪೆ ಚಿಪ್ಪಿನಲ್ಲಿ ಮುತ್ತು ಹುಟ್ಟುವುದೇ? ನಾನು ಕನಸಿನಲ್ಲಿಯೂ ಕೂಡ ಯಾರಮೇಲೂ ತಪ್ಪು ಹೊರಿಸಲಾರೆ. ನನ್ನ ನಿರ್ಭಾಗ್ಯವೇ ಒಂದು ಅಗಾಧ ಜಲಧಿ. ಇದು ನನ್ನ ಪಾಪಫಲವೆಂದು ತಿಳಿಯದೆಯೇ ನಾನು ನನ್ನ ತಾಯಿಯನ್ನು ಕಠಿಣ ವಚನಗಳಿಂದ ನೋಯಿಸಿದೆ. ನನ್ನ ಪಾಪಪರಿಹಾರಕ್ಕಾಗಿ ಯಾವ ಉಪಾಯವೂ ಕಂಡು ಬರುವುದಿಲ್ಲ. ಗುರುಗಳು ಸರ್ವಸಮರ್ಥರು. ಸೀತಾರಾಮರು ನನಗೆ ಒಡೆಯರು. ಇದೊಂದೇ ಕಾರಣದಿಂದ ಪರಿಣಾಮವು ಖಂಡಿತವಾಗಿ ನನಗೆ ಒಳ್ಳೆಯದೇ ಆದೀತು ಎಂದು ಭಾವಿಸುತ್ತೇನೆ. (ಚೌ/೧-೪)

**ದೋ – ಸಾಧು ಸಭಾँ ಗುರ ಪ್ರಭು ನಿಕಟ ಕಹಉँ ಸುಥಲ ಸತಿ ಭಾಉ ।**
**ಪ್ರೇಮ ಪ್ರಪಂಚು ಕಿ ಝೂಠ ಫುರ ಜಾನಹಿँ ಮುನಿ ರಘುರಾಉ ॥ ೨೬೧ ॥**

ಸಜ್ಜನರಿರುವ ಈ ಸಭೆಯಲ್ಲಿ ಗುರುಗಳೂ, ಪ್ರಭುವೂ, ಇವರ ಸನ್ನಿಧಿಯಲ್ಲಿ ಪರಮ ಪವಿತ್ರವಾದ ಈ ತೀರ್ಥಕ್ಷೇತ್ರದಲ್ಲಿ ನಾನು ಸದ್ಭಾವದಿಂದ ಹೇಳುತ್ತಿದ್ದೇನೆ – 'ಇದು ಪ್ರೇಮವೋ ಇಲ್ಲವೇ ಮೋಸವೋ? ದಿಟವೋ-ಸಟೆಯೋ?' ಎಂಬುದನ್ನು ಸರ್ವಜ್ಞರಾದ ವಸಿಷ್ಠರು, ಅಂತರ್ಯಾಮಿಯಾದ ಶ್ರೀರಘುನಾಥನು ಬಲ್ಲರು. (ದೋ/೨೬೧)

**ಚೌ – ಭೂಪತಿ ಮರನ ಪೇಮ ಪನು ರಾಖೀ । ಜನನೀ ಕುಮತಿ ಜಗತು ಸಬು ಸಾಖೀ ॥**
**ದೇಖಿ ನ ಜಾಹಿँ ಬಿಕಲ ಮಹತಾರೀँ । ಜರಹಿँ ದುಸಹ ಜರ ಪುರ ನರ ನಾರೀँ ॥ ೧ ॥**
**ಮಹೀँ ಸಕಲ ಅನರಥ ಕರ ಮೂಲಾ । ಸೋ ಸುನಿ ಸಮುಝಿ ಸಹಿಉँ ಸಬ ಸೂಲಾ ॥**
**ಸುನಿ ಬನ ಗವನು ಕೀನ್ಹ ರಘುನಾಥಾ । ಕರಿ ಮುನಿ ಬೇಷ ಲಖನ ಸಿಯ ಸಾಥಾ ॥ ೨ ॥**
**ಬಿನು ಪಾನಹಿನ್ಹ ಪಯಾದೆಹಿ ಪಾಏँ । ಸಂಕರು ಸಾಖಿ ರಹೆಉँ ಏಹಿ ಘಾಏँ ॥**
**ಬಹುರಿ ನಿಹಾರಿ ನಿಷಾದ ಸನೇಹೂ । ಕುಲಿಸ ಕಠಿನ ಉರ ಭಯಉ ನ ಬೇಹೂ ॥ ೩ ॥**
**ಅಬ ಸಬು ಆँಖಿನ್ಹ ದೇಖೆಉँ ಆಈ । ಜಿಅತ ಜೀವ ಜಡ ಸಬಇ ಸಹಾಈ ॥**
**ಜಿನ್ಹಹಿ ನಿರಖಿ ಮಗ ಸಾँಪಿನಿ ಬೀಛೀ । ತಜಹಿँ ಬಿಷಮ ಬಿಷು ತಾಮಸ ತೀಛೀ ॥ ೪ ॥**

ರಾಮನ ಮೇಲಿನ ಪ್ರೇಮದ ಪಣವನ್ನು ನಿರ್ವಹಿಸಲು ಮಹಾರಾಜರು ತನುವನ್ನು ತ್ಯಜಿಸಿದುದು, ನನ್ನ ತಾಯಿಯ ದುರ್ಬುದ್ಧಿ ಇವೆರಡೂ ಜಗತ್ತು ಬಲ್ಲದು. ಈಗ ತಾಯಿಯರು ವ್ಯಾಕುಲರಾಗಿದ್ದಾರೆ. ಅವರನ್ನು ನೋಡುವುದಕ್ಕಾಗುವುದಿಲ್ಲ. ಅಯೋಧ್ಯೆಯ ನರ-ನಾರಿಯರು ದುಃಸಹ ದುಃಖದಲ್ಲಿ ಬೇಯುತ್ತಿದ್ದಾರೆ. ನಾನೇ ಇವೆಲ್ಲ ದುಃಖಗಳ ಮೂಲವೆಂಬುದನ್ನು ತಿಳಿದುಕೊಂಡು ಎಲ್ಲ ದುಃಖಗಳನ್ನು ಸಹಿಸಿದ್ದೇನೆ. ಮುನಿವೇಷವನ್ನು ತೊಟ್ಟು ಸೀತಾಲಕ್ಷ್ಮಣರನ್ನು ಒಡಗೊಂಡು ಶ್ರೀರಾಮಚಂದ್ರನು ಪಾದರಕ್ಷೆಗಳೂ ಕೂಡ ಇಲ್ಲದೆ ಕಾಲ್ನಡಿಗೆಯಲ್ಲಿ ವನಕ್ಕೆ ಹೋಗಿರುವನು. ಈ ವಿಷಯವನ್ನು ತಿಳಿದಿದ್ದರೂ ನಾನು ಇನ್ನೂ ಜೀವಿಸಿ ಇದ್ದೇನಲ್ಲ! ಇದಕ್ಕೆ

ಶಂಕರನೇ ಸಾಕ್ಷಿ. ನಿಷಾದರಾಜನಾದ ಗುಹನ ಸ್ನೇಹವನ್ನು ಕಂಡೂ ಈ ನನ್ನ ಕುಲಿಶ ಕಠೋರವಾದ ಎದೆ ಒಡೆದುಹೋಗಲಿಲ್ಲವಲ್ಲ! ಈಗ ಇಲ್ಲಿಗೆ ಬಂದು ಎಲ್ಲವನ್ನು ಕಣ್ಣಾರೆಕಂಡೆ. ಈ ಜಡಜೀವವು ಬದುಕಿದ್ದು ಇನ್ನೂ ಏನೇನು ಸಹಿಸು ಎಂದು ಹೇಳುತ್ತದೋ ಕಾಣೆ. ಮಹಿಮಾನ್ವಿತರಾದ ಸೀತಾರಾಮ ಲಕ್ಷ್ಮಣರನ್ನು ಕಂಡು ಹಾದಿಯಲ್ಲಿದ್ದ ಸರ್ಪ, ವೃಶ್ಚಿಕಗಳು ತಮ್ಮ ಭಯಂಕರ ವಿಷವನ್ನು ಹಾಗೂ ಕ್ರೋಧವನ್ನುತ್ಯಜಿಸುವವು. (ಚೌ/೧-೪)

**ದೋ – ತೇಇ ರಘುನಂದನು ಲಖನು ಸಿಯ ಅನಹಿತ ಲಾಗೇ ಜಾಹಿ।**
**ತಾಸು ತನಯ ತಜಿ ದುಸಹ ದುಖ ದೈಉ ಸಹಾವಇ ಕಾಹಿ॥ ೨೬೨ ॥**

ಅಂತಹ ಸೀತಾರಾಮಲಕ್ಷ್ಮಣರು ಕೈಕೇಯಿಯ ದೃಷ್ಟಿಯಲ್ಲಿ ಶತ್ರುಗಳಾದರು. ಆ ಕೈಕೇಯಿಯ ಮಗನಾದ ನನಗಲ್ಲದೆ ದೈವವು ಬೇರಾರಿಗೆ ಇಂತಹ ದುಃಸಹ ದುಃಖವನ್ನು ಕೊಟ್ಟೀತು? (ದೋ/೨೬೨)

**ಚೌ– ಸುನಿ ಅತಿ ಬಿಕಲ ಭರತ ಬರ ಬಾನೀ। ಆರತಿ ಪ್ರೀತಿ ಬಿನಯ ನಯ ಸಾನೀ॥**
**ಸೋಕ ಮಗನ ಸಬ ಸಭಾँ ಖಭಾರೂ। ಮನಹುँ ಕಮಲ ಬನ ಪರೇಉ ತುಸಾರೂ॥ ೧ ॥**
**ಕಹಿ ಅನೇಕ ಬಿಧಿ ಕಥಾ ಪುರಾನೀ। ಭರತ ಪ್ರಬೋಧು ಕೀನ್ಹ ಮುನಿ ಗ್ಯಾನೀ॥**
**ಬೋಲೇ ಉಚಿತ ಬಚನ ರಘುನಂದೂ। ದಿನಕರ ಕುಲ ಕೈರವ ಬನ ಚಂದೂ॥ ೨ ॥**
**ತಾತ ಜಾಯँ ಜಿಯँ ಕರಹು ಗಲಾನೀ। ಈಸ ಅಧೀನ ಜೀವ ಗತಿ ಜಾನೀ॥**
**ತೀನಿ ಕಾಲ ತಿಭುಅನ ಮತ ಮೋರೇँ। ಪುನ್ಯಸಿಲೋಕ ತಾತ ತರ ತೋರೇँ॥ ೩ ॥**
**ಉರ ಆನತ ತುಮ್ಹ ಪರ ಕುಟಿಲಾಈ। ಜಾಇ ಲೋಕು ಪರಲೋಕು ನಸಾಈ॥**
**ದೋಸು ದೇಹಿँ ಜನನಿಹಿ ಜಡ ತೇಈ। ಜಿನ್ಹ ಗುರ ಸಾಧು ಸಭಾ ನಹಿँ ಸೇಈ॥ ೪ ॥**

ಅತ್ಯಂತ ವ್ಯಾಕುಲವೂ, ದುಃಖ, ಪ್ರೇಮ, ನೀತಿ, ವಿನಯ ಇವುಗಳಲ್ಲಿ ಅದ್ದಿದ ಭರತನ ಶ್ರೇಷ್ಠವಾಣಿಯನ್ನು ಕೇಳಿ ಎಲ್ಲರೂ ಶೋಕಮಗ್ನರಾದರು. ಇಡೀ ಸಭೆಯಲ್ಲಿ ಕಮಲವನಕ್ಕೆ ಹಿಮಬಡಿಯಿತೋ ಎಂಬಂತೆ ವಿಷಾದ ಕವಿಯಿತು. ಆಗ ಜ್ಞಾನಿಗಳಾದ ವಸಿಷ್ಠಮುನಿಗಳು ಹಲವು ಪ್ರಕಾರದ ಪ್ರಾಚೀನ ಆಖ್ಯಾನಗಳನ್ನು ಹೇಳಿ ಭರತನನ್ನು ಸಮಾಧಾನ ಪಡಿಸಿದರು. ಸೂರ್ಯವಂಶವೆಂಬ ಕುಮುದಸಮೂಹಕ್ಕೆ ಚಂದ್ರನಾದ ಶ್ರೀರಾಮನೂ ಕೂಡ ಯುಕ್ತಿಯುಕ್ತನಾಗಿ ಇಂತೆಂದನು – ಮಗೂ! ಭರತಾ! ನೀನು ವ್ಯರ್ಥವಾಗಿ ಗ್ಲಾನಿಪಡುತ್ತಿರುವೆ. ಜೀವಿಯ ಗತಿಯು ಈಶ್ವರಾಧೀನವೆಂದು ತಿಳಿ. ನನ್ನ ಅಭಿಪ್ರಾಯದಲ್ಲಿ ಭೂತ, ಭವಿಷ್ಯತ್, ವರ್ತಮಾನ ಹೀಗೆ ತ್ರಿಕಾಲಗಳಲ್ಲಿ, ಸ್ವರ್ಗ, ಮರ್ತ್ಯ, ಪಾತಾಳ ಹೀಗೆ ತ್ರಿಲೋಕಗಳಲ್ಲಿ ನಿನ್ನಂತಹ ಯಶಸ್ವಿಯೂ ಯಾರೂ ಇಲ್ಲ. ಇರುವ ಪುಣ್ಯಶ್ಲೋಕರೆಲ್ಲರೂ ನಿನ್ನ ತರುವಾಯದವರೇ. ಮನಸ್ಸಿನಲ್ಲಾದರೂ ನಿನ್ನ ಮೇಲೆ ಕುಟಿಲತೆಯ ಆರೋಪ ಮಾಡುವವರ ಇಹ-ಪರಗಳೆರಡೂ ಕೆಡುತ್ತದೆ. ಗುರುಗಳ, ಸಜ್ಜನರ ಸೇವೆ ಮಾಡದ ಮೂರ್ಖರು ಮಾತ್ರ ಕೈಕೇಯಿಯ ಮೇಲೆ ದೋಷಾರೋಪಣೆಮಾಡಿಯಾರು. (ಚೌ/೧-೪)

**ದೋ – ಮಿಟಿಹಹಿँ ಪಾಪ ಪ್ರಪಂಚ ಸಬ ಅಖಿಲ ಅಮಂಗಲ ಭಾರ।**
**ಲೋಕ ಸುಜಸು ಪರಲೋಕ ಸುಖು ಸುಮಿರತ ನಾಮು ತುಮ್ಹಾರ॥ ೨೬೩ ॥**

ಭರತಾ! ನಿನ್ನ ನಾಮಸ್ಮರಣೆ ಮಾಡಿದಮಾತ್ರದಿಂದ ಎಲ್ಲ ಪಾಪಗಳೂ, ಅಜ್ಞಾನವು, ಅಶುಭಗಳೂ ಎಲ್ಲವೂ ತೊಲಗಿಹೋಗುವುವು. ಈ ಲೋಕದಲ್ಲಿ ಕೀರ್ತಿ, ಪರಲೋಕದಲ್ಲಿ ಸದ್ಗತಿ ಪ್ರಾಪ್ತವಾಗುವುದು. (ದೋ/೨೬೩)

**ಚೌ – ಕಹಉँ ಸುಭಾಉ ಸತ್ಯ ಸಿವ ಸಾಖೀ। ಭರತ ಭೂಮಿ ರಹ ರಾಉರಿ ರಾಖೀ॥**
**ತಾತ ಕುತರಕ ಕರಹು ಜನಿ ಜಾಏँ। ಬೈರ ಪೇಮ ನಹಿँ ದುರಇ ದುರಾಏँ॥ ೧ ॥**
**ಮುನಿ ಗನ ನಿಕಟ ಬಿಹಗ ಮೃಗ ಜಾಹೀँ। ಬಾಧಕ ಬಧಿಕ ಬಿಲೋಕಿ ಪರಾಹೀँ॥**
**ಹಿತ ಅನಹಿತ ಪಸು ಪಚ್ಛಿಉ ಜಾನಾ। ಮಾನುಷ ತನು ಗುನ ಗ್ಯಾನ ನಿಧಾನಾ॥ ೨ ॥**
**ತಾತ ' ತುಮ್ಹಹಿ ಮೈँ ಜಾನಉँ ನೀಕೇँ। ಕರೌँ ಕಾಹ ಅಸಮಂಜಸ ಜೀಕೇँ॥**
**ರಾಖೇಉ ರಾಯँ ಸತ್ಯ ಮೊಹಿ ತ್ಯಾಗೀ। ತನು ಪರಿಹರೇಉ ಪೇಮ ಪನ ಲಾಗೀ॥ ೩ ॥**
**ತಾಸು ಬಚನ ಮೇಟತ ಮನ ಸೋಚೂ। ತೇಹಿ ತೇँ ಅಧಿಕ ತುಮ್ಹಾರ ಸँಕೋಚೂ॥**
**ತಾ ಪರ ಗುರ ಮೊಹಿ ಆಯಸು ದೀನ್ಹಾ। ಅವಸಿ ಜೊ ಕಹಹು ಚಹಉँ ಸೋಇ ಕೀನ್ಹಾ॥ ೪ ॥**

ಭರತಾ! ಪರಶಿವನ ಸಾಕ್ಷಿಯಾಗಿ ನಾನು ಸತ್ಯವನ್ನೇ ಹೇಳುತ್ತಿದ್ದೇನೆ. ಈ ಭೂಮಿಯು ನಿನ್ನಿಂದಲೇ ಸ್ಥಿರವಾಗಿ ನಿಂತಿದೆ. ಸಹೋದರಾ! ನೀನು ವ್ಯರ್ಥವಾಗಿ ಇಲ್ಲ-ಸಲ್ಲದ ತರ್ಕಮಾಡಬೇಡ. ವೈರ ಮತ್ತು ಪ್ರೇಮಗಳು ಬಚ್ಚಿಟ್ಟರೂ ಅಡಗಿರುವುದಿಲ್ಲ. ಪಶು-ಪಕ್ಷಿಗಳು ಮುನಿಗಳ ಬಳಿಗೆ ನಿಶ್ಚಿಂತೆಯಾಗಿ ಹೋಗುತ್ತವೆ. ಆದರೆ ಹಿಂಸೆಮಾಡುವ ಕಟುಕರನ್ನು ಕಂಡಕೂಡಲೇ ಓಡಿಹೋಗುತ್ತವೆ. ಶತ್ರು ಯಾರು? ಮಿತ್ರರು ಯಾರು? ಎಂಬುದನ್ನು ಪಶುಪಕ್ಷಿಗಳೂ ಗುರುತಿಸುತ್ತವೆ. ಹಾಗಿರುವಾಗ ಗುಣ-ಜ್ಞಾನದ ಭಂಡಾರವಾದ ಮಾನವಜನ್ಮ ಪಡೆದಾಗ ಏಕೆ ಗುರುತಿಸಲಾರರು? ಮಗೂ! ನಿನ್ನನ್ನು ನಾನು ಚೆನ್ನಾಗಿ ಬಲ್ಲೆ. ಏನು ಮಾಡಲಿ? ನನ್ನ ಮನಸ್ಸು ಅಸಮಂಜಸಕ್ಕೊಳಗಾಗಿದೆ. ದಶರಥ ಮಹಾರಾಜರು ನನ್ನನ್ನು ತ್ಯಜಿಸಿ, ಸತ್ಯವನ್ನು ಕಾಪಾಡಿದರು. ಪ್ರೇಮವನ್ನುಳಿಸಲು ತಮ್ಮ ದೇಹನವನ್ನೇ ತೊರೆದರು. ಅವರ ವಚನವನ್ನು ತೆಗೆದುಹಾಕಲು ಮನಸ್ಸು ಬಾಧೆಪಡುತ್ತಿದೆ. ಅದಕ್ಕೂ ಮಿಗಿಲಾಗಿ ನಿನ್ನ ಸಂಕೋಚ. ಇದು ಸಾಲದೆಂಬಂತೆ ಗುರುಗಳು ನನಗೆ ಅಪ್ಪಣೆ ನೀಡಿದ್ದಾರೆ. ಆದ್ದರಿಂದ ಈಗ ನೀನು ಹೇಳಿದಂತೆ ನಾನು ತಪ್ಪದೆ ನಡೆಸುತ್ತೇನೆ. (ಚೌ/೧-೪)

**ದೋ – ಮನು ಪ್ರಸನ್ನ ಕರಿ ಸಕುಚ ತಜಿ ಕಹಹು ಕರೌಂ ಸೋಇ ಆಜು।**
**ಸತ್ಯಸಂಧ ರಘುಬರ ಬಚನ ಸುನಿ ಭಾ ಸುಖೀ ಸಮಾಜು ॥ ೨೬೪ ॥**

ನೀನು ನಿನ್ನ ಮನಸ್ಸನ್ನು ಪ್ರಶಾಂತವಾಗಿಟ್ಟುಕೊಂಡು, ಸಂಕೋಚವನ್ನು ತೊರೆದು ನಾನು ಏನು ಮಾಡಬೇಕೆಂಬುದನ್ನು ಹೇಳು. ಅದನ್ನು ನಾನು ನೇರವೇರಿಸಿಕೊಡುವೆನು. ಸತ್ಯಸಂಧನಾದ ರಘುವರನ ಮಾತನ್ನು ಕೇಳಿ, ಇಡೀ ಸಮಾಜಕ್ಕೆ ಸುಖವುಂಟಾಯಿತು. (ದೋ/೨೬೪)

**ಚೌ – ಸುರ ಗನ ಸಹಿತ ಸಭಯ ಸುರರಾಜೂ। ಸೋಚಹಿಂ ಚಾಹತ ಹೋನ ಅಕಾಜೂ ॥**
**ಬನತ ಉಪಾಉ ಕರತ ಕಛು ನಾಹೀಂ। ರಾಮ ಸರನ ಸಬ ಗೇ ಮನ ಮಾಹೀಂ ॥ ೧ ॥**
**ಬಹುರಿ ಬಿಚಾರಿ ಪರಸ್ಪರ ಕಹಹೀಂ। ರಘುಪತಿ ಭಗತ ಭಗತಿ ಬಸ ಅಹಹೀಂ ॥**
**ಸುಧಿ ಕರಿ ಅಂಬರೀಷ ದುರವಾಸಾ। ಭೇ ಸುರ ಸುರಪತಿ ನಿಪಟ ನಿರಾಸಾ ॥ ೨ ॥**
**ಸಹೇ ಸುರನ್ಹ ಬಹು ಕಾಲ ಬಿಷಾದಾ। ನರಹರಿ ಕಿಏ ಪ್ರಗಟ ಪ್ರಹಲಾದಾ ॥**
**ಲಗಿ ಲಗಿ ಕಾನ ಕಹಹಿಂ ಧುನಿ ಮಾಥಾ। ಅಬ ಸುರ ಕಾಜ ಭರತ ಕೇ ಹಾಥಾ ॥ ೩ ॥**
**ಆನ ಉಪಾಉ ನ ದೇಖಿಅ ದೇವಾ। ಮಾನತ ರಾಮು ಸುಸೇವಕ ಸೇವಾ ॥**
**ಹಿಯಂ ಸಪೇಮ ಸುಮಿರಹು ಸಬ ಭರತಹಿ। ನಿಜ ಗುನ ಸೀಲ ರಾಮ ಬಸ ಕರತಹಿ ॥ ೪ ॥**

ಸ್ವರ್ಗದಲ್ಲಿ ಇಂದ್ರಾದಿದೇವತೆಗಳು ಭಯಗೊಂಡು ಯೋಚಿಸತೊಡಗಿದರು – ''ಇದೇನೋ ಎಡವಟ್ಟಾಗುವಂತಿದೆ.'' ಅವರಿಗೆ ಯಾವ ಉಪಾಯವೂ ತೋಚದು. ಆಗ ದೇವೇಂದ್ರನು ಮನಸಾರೆ ಶ್ರೀರಾಮನಿಗೆ ಶರಣಾದನು. ಅನಂತರ ಅವನು ದೇವತೆಗಳೊಡನೆ ವಿಚಾರ ವಿಮರ್ಶೆಮಾಡುತ್ತಾ – 'ಶ್ರೀ ರಘುಪತಿಯು ಭಕ್ತಪರಾಧೀನ.' ಅಂಬರೀಷ ಹಾಗೂ ದುರ್ವಾಸರ ಪೂರ್ವಪ್ರಸಂಗವನ್ನು ನೆನೆದು ದೇವತೆಗಳೊಡನೆ ಇಂದ್ರನು ತುಂಬಾ ನಿರಾಶನಾದನು. ಈ ಹಿಂದೆ ಕೂಡ ದೇವತೆಗಳು ಬಹಳ ಕಾಲ ದುಃಖವನ್ನು ಅನುಭವಿಸಿದ್ದರು. ಆಗ ಭಕ್ತ ಪ್ರಹ್ಲಾದನೇ ನರಸಿಂಹದೇವರನ್ನು ಬರಮಾಡಿಕೊಂಡು ದೇವತೆಗಳ ದುಃಖವನ್ನು ಕಳೆದಿದ್ದನು. ದೇವತೆಗಳು ತಲೆದೂಗುತ್ತಾ, 'ಈಗ ದೇವತೆಗಳ ಕೆಲಸ ಭರತನ ಕೈಯಲ್ಲಿದೆ' ಎಂದು ಒಬ್ಬರು ಮತ್ತೊಬ್ಬರ ಕಿವಿಯಲ್ಲಿ ಪಿಸುಗುಟ್ಟಿದರು. ಬಳಿಕ ಅವರವರೇ ತರ್ಕಿಸಿಕೊಂಡರು – ದೇವತೆಗಳಿರಾ! ಬೇರೆ ಯಾವ ಉಪಾಯವೂ ತೋಚದು. ಶ್ರೀರಾಮನು ತನ್ನ ಅನನ್ಯ ಭಕ್ತರ ಪ್ರೇಮಕ್ಕೆ ಒಲಿಯುತ್ತಾನೆ. (ತನ್ನ ಭಕ್ತರನ್ನು ಸೇವಿಸುವವರ ಮೇಲೆ ಪ್ರಭುವು ಕೃಪೆಬೀರುವನು.) ಆದ್ದರಿಂದ ತನ್ನ ಗುಣಶೀಲಗಳಿಂದ ಶ್ರೀರಾಮನನ್ನು ವಶವಡಿಸಿಕೊಂಡಿರುವ ಭರತನನ್ನೇ ನಾವೆಲ್ಲರೂ ಪ್ರೇಮಾನುರಾಗದಿಂದ ನೆನೆಯೋಣ. (ಚೌ/೧-೪)

**ದೋ – ಸುನಿ ಸುರ ಮತ ಸುರಗುರ ಕಹೇಉ ಭಲ ತುಮ್ಹಾರ ಬಡ ಭಾಗು।**
**ಸಕಲ ಸುಮಂಗಲ ಮೂಲ ಜಗ ಭರತ ಚರನ ಅನುರಾಗು ॥ ೨೬೫ ॥**

ದೇವತೆಗಳ ಮತವನ್ನು ಕೇಳಿ ದೇವಗುರು ಬಹಸ್ಪತಿಯರು ಇಂತೆಂದರು – ''ನೀವೆಲ್ಲ ಚೆನ್ನಾಗಿ ಯೋಚಿಸಿದ್ದೀರಿ. ಭರತನ ಚರಣಾನುರಾಗವು ಎಲ್ಲಮಂಗಳಗಳ ಮೂಲ. ನಿಮಗೆ ಶ್ರೇಯಸ್ಕರವು. (ದೋ/೨೬೫)

**ಚೌ – ಸೀತಾಪತಿ ಸೇವಕ ಸೇವಕಾಈ। ಕಾಮಧೇನು ಸಯ ಸರಿಸ ಸುಹಾಈ ॥**
**ಭರತ ಭಗತಿ ತುಮ್ಹರೇಂ ಮನ ಆಈ। ತಜಹು ಸೋಚು ಬಿಧಿ ಬಾತ ಬನಾಈ ॥ ೧ ॥**
**ದೇಖು ದೇವಪತಿ ಭರತ ಪ್ರಭಾಊ। ಸಹಜ ಸುಭಾಯಂ ಬಿಬಸ ರಘುರಾಊ ॥**
**ಮನ ಥಿರ ಕರಹು ದೇವ ಡರು ನಾಹೀಂ। ಭರತಹಿ ಜಾನಿ ರಾಮ ಪರಿಛಾಹೀಂ ॥ ೨ ॥**

**ಸುನಿ ಸುರಗುರ ಸುರ ಸಮ್ಮತ ಸೋಚೂ। ಅಂತರಜಾಮೀ ಪ್ರಭುಹಿ ಸಕೋಚೂ॥**
**ನಿಜ ಸಿರ ಭಾರು ಭರತ ಜಿಯ್ ಜಾನಾ। ಕರತ ಕೋಟಿ ಬಿಧಿ ಉರ ಅನುಮಾನಾ॥ ೩ ॥**
**ಕರಿ ಬಿಚಾರು ಮನ ದೀನ್ಹಿ ಠೀಕಾ। ರಾಮ ರಜಾಯಸ ಆಪನ ನೀಕಾ॥**
**ನಿಜ ಪನ ತಜಿ ರಾಖೆಉ ಪನು ಮೋರಾ। ಛೋಹು ಸನೇಹು ಕೀನ್ಹ ನಹಿಂ ಥೋರಾ॥ ೪ ॥**

ಸೀತಾಪತಿಯಾದ ಶ್ರೀರಾಮನ ಸೇವಕರ ಸೇವೆಯು ನೂರಾರು ಕಾಮಧೇನುಗಳಿಗೆ ಸಮಾನವಾದುದು, ಉತ್ತಮೋತ್ತಮವಾದುದು. ಭರತನ ಮೇಲೆ ನಿಮಗೆಲ್ಲ ಭಕ್ತಿ ಅಂಕುರಿಸಿದೆ. ಆದ್ದರಿಂದ ಇನ್ನು ಚಿಂತೆಯನ್ನು ಬಿಡಿರಿ. ವಿಧಿಯು ನಿಮ್ಮ ಕೆಲಸವನ್ನು ನೆರವೇರಿಸುವನು. ಸುರಪತಿ ಇಂದ್ರಾ! ಭರತನ ಪ್ರಭಾವವನ್ನು ನೋಡು. ಅವನ ಸರಳ ಸ್ವಭಾವಕ್ಕೆ ಶ್ರೀರಾಮಚಂದ್ರನೇ ಪೂರ್ತಿಯಾಗಿ ವಶನಾಗಿರುವನು. ದೇವತೆಗಳಿರಾ! ಭರತನನ್ನು ಶ್ರೀರಾಮನ ಛಾಯೆ (ನೆರಳು) ಯೆಂದೇ ಭಾವಿಸಿ ಮನಸ್ಸನ್ನು ಗಟ್ಟಿಮಾಡಿಕೊಂಡು, ಭಯವನ್ನು ತೊರೆಯಿರಿ.'' ದೇವಗುರು ಬೃಹಸ್ಪತಿ ಹಾಗೂ ದೇವತೆಗಳ ಸಮ್ಮತಿಯನ್ನರಿತು, ಅವರ ಚಿಂತೆಯನ್ನು ತಿಳಿದು, ಅಂತರ್ಯಾಮಿಯಾದ ಪ್ರಭು ರಾಮಚಂದ್ರನಿಗೆ ಸಂಕೋಚವಾಯಿತು. ಇತ್ತ ಭರತನ ವ್ಯಾಕುಲತೆಯನ್ನು ಕಂಡು ಮನದಲ್ಲಿ ಮುಜುಗರವಾಯಿತು. ಎಲ್ಲ ಹೊಣೆಯು ನನ್ನ ಮೇಲೆಯೇ ಇದೆ ಎಂದು ಭರತನಿಗೆ ಅನಿಸಿತು. ಅವನು ಪರಿಪರಿ ವಿಧದಲ್ಲಿ ಚಿಂತಿಸತೊಡಗಿದನು. ಎಲ್ಲ ವಿಧದಿಂದ ಚೆನ್ನಾಗಿ ಆಲೋಚಿಸಿದ ಬಳಿಕ ಅವನು 'ಶ್ರೀರಾಮನ ಆಜ್ಞೆಯನ್ನು ಪಾಲಿಸುವುದರಲ್ಲೇ ತನ್ನ ಶ್ರೇಯಸ್ಸು ಇದೆ ಎಂದು ನಿಶ್ಚಯಿಸಿದನು. ಪ್ರಭುವು ನಿರ್ಣಯದ ಬಾಧ್ಯತೆಯನ್ನು ತನ್ನ ಮೇಲೆ ಇರಿಸಿಕೊಳ್ಳದೆ ನನ್ನ ಮೇಲೆ ಬಿಟ್ಟಿರುವನು. ಆ ವಿಧವಾಗಿ ನನ್ನ ಮೇಲೆ ಅಪರಿಮಿತ ಪ್ರೇಮವನ್ನು ಇಟ್ಟಿರುವನು. ಇದು ಅವನಿಗೆ ನನ್ನ ಮೇಲೆ ಇರುವ ಅಪಾರ ಕೃಪೆಯ ನಿದರ್ಶನವಾಗಿದೆ. (ಚೌ/೧-೪)

**ದೋ – ಕೀನ್ಹ ಅನುಗ್ರಹ ಅಮಿತ ಅತಿ ಸಬ ಬಿಧಿ ಸೀತಾನಾಥ।**
**ಕರಿ ಪ್ರನಾಮು ಬೋಲೇ ಭರತು ಜೋರಿ ಜಲಜ ಜುಗ ಹಾಥ॥ ೨೬೬ ॥**

ಶ್ರೀ ಜಾನಕೀನಾಥನು ಎಲ್ಲ ರೀತಿಯಿಂದಲೂ ನನ್ನ ಮೇಲೆ ಅಪಾರ ಅನುಗ್ರಹಗೈದಿರುವನು. ಹೀಗೆ ಯೋಚಿಸಿ ಭರತನು – ನಮಿಸಿ, ಕೈಜೋಡಿಸಿಕೊಂಡು ಇಂತೆಂದನು – (ದೋ/೨೬೬)

**ಚೌ – ಕಹೌಂ ಕಹಾವೌಂ ಕಾ ಅಬ ಸ್ವಾಮೀ। ಕೃಪಾ ಅಂಬುನಿಧಿ ಅಂತರಜಾಮೀ॥**
**ಗುರ ಪ್ರಸನ್ನ ಸಾಹಿಬ ಅನುಕೂಲಾ। ಮಿಟೀ ಮಲಿನ ಮನ ಕಲಪಿತ ಸೂಲಾ॥ ೧ ॥**
**ಅಪಡರ ಡರೆಉँ ನ ಸೋಚ ಸಮೂಲೇँ। ರಬಿಹಿ ನ ದೋಸು ದೇವ ದಿಸಿ ಭೂಲೇँ॥**
**ಮೋರ ಅಭಾಗು ಮಾತು ಕುಟಿಲಾಈ। ಬಿಧಿ ಗತಿ ಬಿಷಮ ಕಾಲ ಕಠಿನಾಈ॥ ೨ ॥**
**ಪಾಉ ರೋಪಿ ಸಬ ಮಿಲಿ ಮೊಹಿ ಘಾಲಾ। ಪ್ರನತಪಾಲ ಪನ ಆಪನ ಪಾಲಾ॥**
**ಯಹ ನಇ ರೀತಿ ನ ರಾಉರಿ ಹೋಈ। ಲೋಕಹುँ ಬೇದ ಬಿದಿತ ನಹಿಂ ಗೋಈ॥ ೩ ॥**
**ಜಗು ಅನಭಲ ಭಲ ಏಕು ಗೊಸಾಈँ। ಕಹಿಅ ಹೋಇ ಭಲ ಕಾಸು ಭಲಾಈँ॥**
**ದೇಉ ದೇವತರು ಸರಿಸ ಸುಭಾಊ। ಸನಮುಖ ಬಿಮುಖ ನ ಕಾಹುಹಿ ಕಾಊ॥ ೪ ॥**

ಸ್ವಾಮಿ! ಕರುಣಾಸಾಗರಾ! ಅಂತರ್ಯಾಮಿಯೇ! ಈಗ ನಾನು ಹೆಚ್ಚಿಗೆ ಏನು ಹೇಳಲಿ? ಹೇಳಿಸಿಕೊಳ್ಳಲಿ? ಗುರುಗಳು ಒಲಿದಿರುವರು, ಪ್ರಭುಗಳು ಅನುಕೂಲವಾಗಿದ್ದಾನೆ. ಇದನ್ನು ಅರಿತು ನನ್ನ ಮನಸ್ಸಿನ ಕಲ್ಪಿತ ವ್ಯಥೆಯು ಇಲ್ಲವಾಯಿತು. ನನ್ನ ಭಯವು ಮಿಥ್ಯೆಯಾಗಿತ್ತು. ನನ್ನ ಯೋಚನೆಗೆ ಆಧಾರವೇ ಇರಲಿಲ್ಲ. ನಾವು ದಿಕ್ಕು ತಪ್ಪಿದರೆ ಸೂರ್ಯನ ತಪ್ಪಿದೆಯೇ? ನನ್ನ ದೌರ್ಭಾಗ್ಯ, ತಾಯಿಯ ಕುಟಿಲತೆ, ವಿಧಾತನ ವಕ್ರಗತಿ, ಕಾಲದ ಕಠೋರತೆ, ಇವೆಲ್ಲ ಸೇರಿ ಹಟತೊಟ್ಟು ನನ್ನನ್ನು ಹಾಳು ಮಾಡಿದ್ದವು. ಆದರೆ ಶರಣಾಗತವತ್ಸಲನೆಂಬ ನಿನ್ನ ಬಿರುದನ್ನು ನೀನು ಪಾಲಿಸಿ, ನನ್ನನ್ನು ಉಳಿಸಿದೆ. ಇದೇನೋ ನಿನಗೆ ಹೊಸತಲ್ಲ. ಇದು ಲೋಕವಿದಿತ, ವೇದವಿದಿತ, ಇದರಲ್ಲೇನೂ ಮುಚ್ಚುಮರೆಯಿಲ್ಲ. ಸ್ವಾಮಿ! ಇಡೀ ಜಗತ್ತೇ ನನ್ನ ಪಾಲಿಗೆ ಕೆಟ್ಟದಾಗಿರಲಿ. ಆದರೆ ನೀನು ಮಾತ್ರ ಅನುಕೂಲವಾಗಿದ್ದರೆ ಸಾಕು. ನೀನಿಲ್ಲದೆ ಯಾರಿಂದಾದರೂ ಯಾರಿಗೆ ಹೇಗೆ ತಾನೇ ಒಳ್ಳೆಯದಾದೀತು? ದೇವಾ! ನಿನ್ನ ಸ್ವಭಾವವು ಕಲ್ಪವೃಕ್ಷದಂತೆ ಇದೆ. ಅದು ಎಲ್ಲರಿಗೂ ಒಂದೇರೀತಿಯಿಂದಿದೆ. ಯಾರಿಗೂ ಅನುಕೂಲವಾಗಲೀ, ಪ್ರತಿಕೂಲವಾಗಲೀ ಇಲ್ಲ. (ಚೌ/೧-೪)

**ದೋ – ಜಾಇ ನಿಕಟ ಪಹಿಚಾನಿ ತರು ಛಾಹँ ಸಮನಿ ಸಬ ಸೋಚ।**
**ಮಾಗತ ಅಭಿಮತ ಪಾವ ಜಗ ರಾಉ ರಂಕು ಭಲ ಪೋಚ॥ ೨೬೭ ॥**

ಆ ಕಲ್ಪವೃಕ್ಷವನ್ನು ಗುರುತಿಸಿ, ಅದರ ಸಮೀಪಿಸಿದರೆ ಸಾಕು, ಅದರ ನೆರಳೇ ಎಲ್ಲ ಚಿಂತೆಗಳನ್ನು ತೊಡೆದುಹಾಕುತ್ತವೆ. ರಾಜನಾಗಲೀ, ರಂಕನಾಗಲೀ, ಸುಜನನಾಗಲೀ, ದುರ್ಜನನಾಗಲೀ, ಪ್ರಪಂಚದ ಯಾರೇ ಆಗಿರಲಿ, ಅವರ ಮನೋರಥವನ್ನು ಅದು ನೆರವೇರಿಸುವುದು. (ದೋ/೨೬೭)

**ಚೌ – ಲಖಿ ಸಬ ಬಿಧಿ ಗುರ ಸ್ವಾಮಿ ಸನೇಹೂ । ಮಿಟೆಉ ಛೋಭು ನಹಿಂ ಮನ ಸಂದೇಹೂ ॥**
**ಅಬ ಕರುನಾಕರ ಕೀಜಿಅ ಸೋಈ । ಜನ ಹಿತ ಪ್ರಭು ಚಿತ ಛೋಭು ನ ಹೋಈ ॥ ೧ ॥**
**ಜೋ ಸೇವಕು ಸಾಹಿಬಹಿ ಸँಕೋಚೀ । ನಿಜ ಹಿತ ಚಹಇ ತಾಸು ಮತಿ ಪೋಚೀ ॥**
**ಸೇವಕ ಹಿತ ಸಾಹಿಬ ಸೇವಕಾಈ । ಕರೈ ಸಕಲ ಸುಖ ಲೋಭ ಬಿಹಾಈ ॥ ೨ ॥**
**ಸ್ವಾರಥು ನಾಥ ಫಿರೇँ ಸಬಹೀ ಕಾ । ಕಿಏँ ರಜಾಇ ಕೋಟಿ ಬಿಧಿ ನೀಕಾ ॥**
**ಯಹ ಸ್ವಾರಥ ಪರಮಾರಥ ಸಾರೂ । ಸಕಲ ಸುಕೃತ ಫಲ ಸುಗತಿ ಸಿँಗಾರೂ ॥ ೩ ॥**
**ದೇವ ಏಕ ಬಿನತೀ ಸುನಿ ಮೋರೀ । ಉಚಿತ ಹೋಇ ತಸ ಕರಬ ಬಹೋರೀ ॥**
**ತಿಲಕ ಸಮಾಜು ಸಾಜಿ ಸಬು ಆನಾ । ಕರಿಅ ಸುಫಲ ಪ್ರಭು ಜೌँ ಮನು ಮಾನಾ ॥ ೪ ॥**

ನನ್ನ ಮೇಲೆ ಇಟ್ಟಿರುವ ಗುರುಗಳ ಮತ್ತು ಸ್ವಾಮಿಯ ಎಲ್ಲ ವಿಧವಾದ ಸ್ನೇಹವನ್ನು ಕಂಡು ನನ್ನ ಮನಸ್ಸಿಗೆ ದುಗುಡ ಇಲ್ಲವಾಯಿತು. ಈಗ ನನ್ನ ಮನಸ್ಸಿನಲ್ಲಿ ಸಂದೇಹ ಲವಲೇಶವೂ ಉಳಿಯಲಿಲ್ಲ. ಓ ಕರುಣಾಸಾಗರಾ! ನಿನ್ನ ಮನಸ್ಸಿನಲ್ಲಿ ಯಾವುದೇ ಇಬ್ಬಂದಿತನವೂ ಇಲ್ಲದಂತೆ, ನಿಸ್ಸಂಕೋಚವಾಗಿ, ನಿನಗನಿಸುವುದನ್ನೇ ಮಾಡು. ತನ್ನ ಸ್ವಾಮಿಯನ್ನು ಸಂದಿಗ್ಧದಲ್ಲಿ ಕೆಡಹುವ, ತನ್ನ ಸ್ವಾರ್ಥವನ್ನೇ ಬಯಸುವ ಸೇವಕನ ಬುದ್ಧಿಯು ಹೀನವಾದುದು. ತನ್ನ ಸುಖಗಳನ್ನು, ಲೋಭವನ್ನೂ ತೊರೆದು ಸ್ವಾಮಿಯ ಸೇವೆ ಮಾಡುವುದರಲ್ಲೇ ಸೇವಕನ ನಿಜವಾದ ಹಿತವಿದೆ. ಸ್ವಾಮೀ! ನಿನ್ನ ಹಿಂದಿರುಗುವಿಕೆಯಲ್ಲೇ ಎಲ್ಲರ ಸ್ವಾರ್ಥವಿದೆ. ನಿನ್ನ ಆಜ್ಞೆಯನ್ನು ಪಾಲಿಸುವುದರಲ್ಲೇ ಅನಂತ ಶ್ರೇಯಸ್ಸು ಇದೆ. ಇದೇ ಸ್ವಾರ್ಥ – ಪರಮಾರ್ಥಗಳ ಸಾರ. ಸಕಲ ಸುಕೃತಗಳ ಫಲ ಹಾಗೂ ಎಲ್ಲ ಸದ್ಗತಿಗಳಿಗೆ ಭೂಷಣವು. ದೇವಾ! ತಾವು ನನ್ನ ಒಂದು ಬಿನ್ನಹವನ್ನು ಆಲಿಸಿ, ತಮಗೆ ಉಚಿತಕಂಡಂತೆ ಮಾಡಿರಿ. ಪಟ್ಟಾಭಿಷೇಕದ ಎಲ್ಲ ಸಾಮಗ್ರಿಗಳನ್ನು ಇಲ್ಲಿಗೆ ತಂದಿದ್ದೇವೆ. ಪ್ರಭುವಿನ ಮನಸ್ಸಿಗೆ ಒಪ್ಪಿಗೆಯಾದರೆ ಅವುಗಳನ್ನು ಸಾರ್ಥಕಗೊಳಿಸಿರಿ. (ಚೌ/೧-೪)

**ದೋ – ಸಾನುಜ ಪಠಇಅ ಮೋಹಿ ಬನ ಕೀಜಿಅ ಸಬಹಿ ಸನಾಥ ।**
**ನತರು ಫೇರಿಅಹಿँ ಬಂಧು ದೋಉ ನಾಥ ಚಲೌँ ಮೈँ ಸಾಥ ॥ ೨೬೮ ॥**

ನನ್ನನ್ನೂ, ಶತ್ರುಘ್ನನನ್ನೂ ಕಾಡಿಗೆ ಕಳಿಸಿರಿ. ನೀನು ಅಯೋಧ್ಯೆಗೆ ಹಿಂದಿರುಗಿ ಎಲ್ಲರನ್ನೂ ಸನಾಥಗೊಳಿರಿಸಿ. ಇಲ್ಲವಾದರೆ ಹೇಗಾದರೂ ಮಾಡಿ, ಲಕ್ಷ್ಮಣ, ಶತ್ರುಘ್ನರನ್ನು ಅಯೋಧ್ಯೆಗೆ ಕಳಿಸಿರಿ. ನಾನು ನಿನ್ನ ಸೇವೆ ಮಾಡಿಕೊಂಡು ನಿನ್ನೊಡನೇ ಇರುವೆನು. (ದೋ/೨೬೮)

**ಚೌ – ನತರು ಜಾಹಿ ಬನ ತೀನಿಉ ಭಾಈ । ಬಹುರಿಅ ಸೀಯ ಸಹಿತ ರಘುರಾಈ ॥**
**ಜೆಹಿ ಬಿಧಿ ಪ್ರಭು ಪ್ರಸನ್ನ ಮನ ಹೋಈ । ಕರುನಾ ಸಾಗರ ಕೀಜಿಅ ಸೋಈ ॥ ೧ ॥**
**ದೇವँ ದೀನ್ಹ ಸಬು ಮೋಹಿ ಅಭಾರೂ । ಮೋರೇँ ನೀತಿ ನ ಧರಮ ಬಿಚಾರೂ ॥**
**ಕಹಉँ ಬಚನ ಸಬ ಸ್ವಾರಥ ಹೇತೂ । ರಹತ ನ ಆರತ ಕೇँ ಚಿತ ಚೇತೂ ॥ ೨ ॥**
**ಉತರು ದೇಇ ಸುನಿ ಸ್ವಾಮಿ ರಜಾಈ । ಸೋ ಸೇವಕು ಲಖಿ ಲಾಜ ಲಜಾಈ ॥**
**ಅಸ ಮೈँ ಅವಗುನ ಉದಧಿ ಅಗಾಧೂ । ಸ್ವಾಮಿ ಸನೇಹँ ಸರಾಹತ ಸಾಧೂ ॥ ೩ ॥**
**ಅಬ ಕೃಪಾಲ ಮೋಹಿ ಸೋ ಮತ ಭಾವಾ । ಸಕುಚ ಸ್ವಾಮಿ ಮನ ಜಾಇँ ನ ಪಾವಾ ॥**
**ಪ್ರಭು ಪದ ಸಪಥ ಕಹಉँ ಸತಿ ಭಾಊ । ಜಗ ಮಂಗಲ ಹಿತ ಏಕ ಉಪಾಊ ॥ ೪ ॥**

ಹಾಗಲ್ಲದಿದ್ದರೆ ನಾವು ಮೂವರೂ ಸೋದರರೂ ಕಾಡಿಗೆ ಹೋಗುತ್ತೇವೆ. ನೀನು ಸೀತೆಯೊಡನೆ ಅಯೋಧ್ಯೆಗೆ ದಯಮಾಡಿಸು. ಓ ಕರುಣಾಸಾಗರಾ! ನಿನ್ನ ಮನಸ್ಸಿಗೆ ಸಂತೋಷಕೊಡುವಂತಹ ಕಾರ್ಯವನ್ನೇ ಮಾಡಿರಿ. ದೇವಾ! ತಾವು ಎಲ್ಲ ಭಾರವನ್ನು ನನ್ನ ಮೇಲೆ ಹಾಕಿದ್ದೀರಿ. ಆದರೆ ನನಗೆ ರಾಜನೀತಿಯಾಗಲೀ, ಧರ್ಮವಾಗಲೀ ತಿಳಿಯದು. ನಾನು ನನ್ನ ಸ್ವಾರ್ಥಕ್ಕಾಗಿ ಎಲ್ಲ ಮಾತನ್ನು ಆಡುತ್ತಿದ್ದೇನೆ. ಆರ್ತರ ಚಿತ್ತದಲ್ಲಿ ವಿವೇಕವಿರುವುದಿಲ್ಲ. ಸ್ವಾಮಿಯ ಆಜ್ಞೆಗೆ ಎದುರುವಾದಿಸುವ ಸೇವಕನನ್ನು ಕಂಡು ಲಜ್ಜೆಯು ನಾಚಿಕೊಳ್ಳುತ್ತದೆ. ಈ ರೀತಿ ಇದಿರು ವಾದಿಸುವಂತಹ ಅವಗುಣಗಳ ಸಮುದ್ರವೇ ನಾನು. ಆದರೆ ಪ್ರಭುವಾದ ನೀನು ಪ್ರೇಮದಿಂದ ನನ್ನನ್ನು 'ಸಾಧು' ಎಂದು ಕರೆದು ಹೊಗಳುತ್ತಿದ್ದೀರಿ. ಹೇ ಕೃಪಾಳು! ಸ್ವಾಮಿಯ ಮನಸ್ಸನ್ನು ಸಂಕೋಚಕ್ಕೆ ಗುರಿಯಾಗಿಸದೆ ಇರುವ ಮತವೇ ನನಗೆ

ಒಳ್ಳೆಯದೆನಿಸುತ್ತದೆ. ಪ್ರಭುಪಾದಗಳಲ್ಲಿ ಆಣೆಯಿಟ್ಟು ಸತ್ಯವನ್ನೇ ಹೇಳುತ್ತಿದ್ದೇನೆ – ಜಗತ್ಕಲ್ಯಾಣಕ್ಕಾಗಿ ಇದೊಂದೇ ಏಕೈಕ ಉಪಾಯವಾಗಿದೆ. (ಚೌ/೧-೪)

**ದೋ – ಪ್ರಭು ಪ್ರಸನ್ನ ಮನ ಸಕುಚ ತಜಿ ಜೋ ಜೆಹಿ ಆಯಸು ದೇಬ।**
**ಸೋ ಸಿರ ಧರಿ ಧರಿ ಕರಿಹಿ ಸಬು ಮಿಟಿಹಿ ಅನಟ ಅವರೇಬ ॥ ೨೬೯ ॥**

ಪ್ರಭು! ನೀವು ಸಂತೋಷಚಿತ್ತರಾಗಿ ಸಂಕೋಚವನ್ನು ತೊರೆದು, ನೀನು ಕೊಡುವ ಆಜ್ಞೆಯನ್ನು ಎಲ್ಲರೂ ಶಿರಸಾವಹಿಸಿ ಪಾಲಿಸುವರು. ಎಲ್ಲ ಉಪದ್ರವಗಳು, ತೊಡಕುಗಳು ಪರಿಹಾರವಾದಾವು. (ದೋ/೨೬೯)

## ಜನಕನ ಸಮಾಗಮ

**ಚೌ – ಭರತ ಬಚನ ಸುಚಿ ಸುನಿ ಸುರ ಹರಷೇ। ಸಾಧು ಸರಾಹಿ ಸುಮನ ಸುರ ಬರಷೇ ॥**
**ಅಸಮಂಜಸ ಬಸ ಅವಧ ನೇವಾಸೀ। ಪ್ರಮುದಿತ ಮನ ತಾಪಸ ಬನಬಾಸೀ ॥ ೧ ॥**
**ಚುಪಹಿಂ ರಹೇ ರಘುನಾಥ ಸಂಕೋಚೀ। ಪ್ರಭು ಗತಿ ದೇಖಿ ಸಭಾ ಸಬ ಸೋಚೀ ॥**
**ಜನಕ ದೂತ ತೆಹಿ ಅವಸರ ಆಏ। ಮುನಿ ಬಸಿಷ್ಠ ಸುನಿ ಬೇಗಿ ಬೊಲಾಏ ॥ ೨ ॥**
**ಕರಿ ಪ್ರನಾಮ ತಿನ್ಹ ರಾಮು ನಿಹಾರೇ। ಬೇಷು ದೇಖಿ ಭಏ ನಿಪಟ ದುಖಾರೇ॥**
**ದೂತನ್ಹ ಮುನಿಬರ ಬೂಝೀ ಬಾತಾ। ಕಹಹು ಬಿದೇಹ ಭೂಪ ಕುಸಲಾತಾ ॥ ೩ ॥**
**ಸುನಿ ಸಕುಚಾಇ ನಾಇ ಮಹಿ ಮಾಥಾ। ಬೋಲೇ ಚರ ಬರ ಜೋರೇಂ ಹಾಥಾ ॥**
**ಬೂಝಬ ರಾಉರ ಸಾದರ ಸಾಈಂ। ಕುಸಲ ಹೇತು ಸೋ ಭಯಉ ಗೊಸಾಈಂ ॥ ೪ ॥**

ಭರತನ ಪವಿತ್ರವಚನಗಳನ್ನು ಕೇಳಿ, ದೇವತೆಗಳು ಹರ್ಷಗೊಂಡು ''ಸಾಧು-ಸಾಧು'' ಎಂದು ಹೊಗಳುತ್ತಾ ಅವನಮೇಲೆ ಹೂಮಳೆಗರೆದರು. ಆಗ 'ಶ್ರೀರಾಮನು ಏನು ಮಾಡುವನೋ' ಎಂದು ಅಯೋಧ್ಯಾವಾಸಿಗಳು ಸಂದಿಗ್ಧಾವಸ್ಥೆಯಲ್ಲಿ ಬಿದ್ದರು. ತಪೋಧನರಿಗೆ, ವನವಾಸಿಗಳಿಗೆ ಮಾತ್ರ ಶ್ರೀರಾಮನು ವನದಲ್ಲೇ ಇರುವನೆಂದು ಅರಿತು ಪರಮಾನಂದ ಭರಿತರಾದರು. ಆದರೆ ಸಂಕೋಚಸ್ವಭಾವವುಳ್ಳ ಶ್ರೀರಾಮನು ಸುಮ್ಮನೆ ಇದ್ದನು. ಪ್ರಭುವಿನ ಈ ಮೌನವನ್ನು ಕಂಡು ಇಡೀ ಸಭೆ ಚಿಂತೆಗೀಡಾಯಿತು. ಅಷ್ಟರಲ್ಲಿ ಅಲ್ಲಿಗೆ ಜನಕನ ದೂತರು ಆಗಮಿಸಿದರು. ಅವರು ಬಂದ ವಾರ್ತೆಯನ್ನು ತಿಳಿದ ವಸಿಷ್ಠರು ಕೂಡಲೇ ಅವರನ್ನು ಬರಹೇಳಿದರು. ಅವರು ಬಂದು ಪ್ರಣಾಮಗೈದು ಶ್ರೀರಾಮನನ್ನು ನೋಡಿದರು. ಅವನ ತಾಪಸವೇಷವನ್ನು ಕಂಡು ಅವರು ಬಹಳವಾಗಿ ನೊಂದುಕೊಂಡರು. ವಸಿಷ್ಠರು ಅವರನ್ನು ಮಾತಾಡಿಸಿ, 'ಜನಕ ಮಹಾರಾಜರು ಕ್ಷೇಮವೇ?' ಎಂದು ಕುಶಲವನ್ನು ಕೇಳಿದರು. ನೆಲಮುಟ್ಟಿ ಅವರು ನಮಸ್ಕರಿಸುತ್ತಾ, ಕೈ ಜೋಡಿಸಿ ವಿನಯದಿಂದ – 'ಸ್ವಾಮಿ! ತಾವು ಆದರದಿಂದ ಕೇಳಿದ್ದೇ ಕುಶಲ ಕಾರಣವಾಯಿತು'' ಎಂದು ನುಡಿದರು. (ಚೌ/೧-೪)

**ದೋ – ನಾಹಿಂ ತ ಕೋಸಲ ನಾಥ ಕೇಂ ಸಾಥ ಕುಸಲ ಗಇ ನಾಥ।**
**ಮಿಥಿಲಾ ಅವಧ ಬಿಸೇಷ ತೇಂ ಜಗು ಸಬ ಭಯಉ ಅನಾಥ॥ ೨೭೦ ॥**

ಸ್ವಾಮಿ! ಇಲ್ಲದಿದ್ದರೆ ಕ್ಷೇಮ-ಕುಶಲವೆಲ್ಲವೂ ಕೋಸಲನಾಥನಾದ ದಶರಥನೊಂದಿಗೆ ಹೊರಟುಹೋದುವು. ಅದರಿಂದಾಗಿ ಇಡೀ ಜಗತ್ತೇ ಅನಾಥವಾಯಿತು. ಆದರೆ ಮಿಥಿಲೆ, ಅಯೋಧ್ಯೆಗಳಂತೂ ವಿಶೇಷವಾಗಿ ತಬ್ಬಲಿಯಾದವು. (ದೋ/೨೭೦)

**ಚೌ – ಕೋಸಲಪತಿ ಗತಿ ಸುನಿ ಜನಕೌರಾ। ಭೇ ಸಬ ಲೋಕ ಸೋಕ ಬಸ ಬೌರಾ ॥**
**ಜೆಹಿಂ ದೇಖೇ ತೆಹಿ ಸಮಯ ಬಿದೇಹೂ। ನಾಮು ಸತ್ಯ ಅಸ ಲಾಗ ನ ಕೇಹೂ॥ ೧ ॥**
**ರಾನಿ ಕುಚಾಲಿ ಸುನತ ನರಪಾಲಹಿ। ಸೂಝ ನ ಕಛು ಜಸ ಮನಿ ಬಿನು ಬ್ಯಾಲಹಿ॥**
**ಭರತ ರಾಜ ರಘುಬರ ಬನಬಾಸೂ। ಭಾ ಮಿಥಿಲೇಸಹಿ ಹೃದಯಂ ಹರಾಂಸೂ॥ ೨ ॥**
**ನೃಪ ಬೂಝೇ ಬುಧ ಸಚಿವ ಸಮಾಜೂ। ಕಹಹು ಬಿಚಾರಿ ಉಚಿತ ಕಾ ಆಜೂ ॥**
**ಸಮುಝಿ ಅವಧ ಅಸಮಂಜಸ ದೋಊ। ಚಲಿಅ ಕಿ ರಹಿಅ ನ ಕಹ ಕಛು ಕೋಊ ॥ ೩ ॥**
**ನೃಪಹಿಂ ಧೀರ ಧರಿ ಹೃದಯಂ ಬಿಚಾರೀ। ಪಠಏ ಅವಧ ಚತುರ ಚರ ಚಾರೀ ॥**
**ಬೂಝಿ ಭರತ ಸತಿ ಭಾವು ಕುಭಾಊ। ಆಏಹು ಬೇಗಿ ನ ಹೋಇ ಲಖಾಊ ॥ ೪ ॥**

ಅಯೋಧ್ಯಾನಾಥನ ಮರಣವಾರ್ತೆಯನ್ನು ಕೇಳಿ, ಜನಕ ಪುರನಿವಾಸಿಗಳೆಲ್ಲರೂ ಶೋಕಸಂತಪ್ತರಾಗಿ ಮೈಮರೆತರು. ಆಗಿನ ವಿದೇಹರಾಜರ ದುಃಖವನ್ನು ನೋಡಿದವರು ಯಾರೂ ನಿಜವಾಗಿ ''ಇವರು ವಿದೇಹರು'' ಎಂಬುದನ್ನು ನಂಬಲಿಲ್ಲ. (ನಿಜವಾಗಿ ವಿದೇಹನಾಗಿದ್ದರೆ ಇಂತು ಶೋಕಾತುರರಾಗುತ್ತಿರಲಿಲ್ಲವಲ್ಲ!) ರಾಣಿಯಾದ ಕೈಕೆಯಿಯ ಕುತಂತ್ರವನ್ನು ಕೇಳಿ, ಜನಕನು ಮಣಿಯನ್ನು ಕಳಕೊಂಡ ಸರ್ಪದಂತೆ ದಿಕ್ಕುತೋಚದಂತಾದನು. 'ಭರತನಿಗೆ ರಾಜ್ಯ, ರಾಮನಿಗೆ ವನವಾಸ' ಎಂಬುದನ್ನು ಕೇಳಿಯಂತೂ ಮಿಥಿಲೇಶ್ವರನಿಗೆ ತುಂಬಾ ದುಃಖವಾಯಿತು. ಪಂಡಿತರನ್ನೂ, ಮಂತ್ರಿಗಳನ್ನೂ ಕರೆಸಿ ಮಹಾರಾಜರು ಅವರಲ್ಲಿ 'ಚೆನ್ನಾಗಿ ಆಲೋಚಿಸಿ, ಈಗ ಏನು ಮಾಡಬೇಕೆಂಬುದನ್ನು ತಿಳಿಸಿರಿ' ಎಂದು ಕೇಳಿದನು. ಅಯೋಧ್ಯೆಯ ಪರಿಸ್ಥಿತಿಯನ್ನು ಅರಿತು, ಅಯೋಧ್ಯೆಗೆ ಹೋಗಬೇಕೆ? ಬೇಡವೇ? ಎಂಬುದರ ಸಂದಿಗ್ಧಾವಸ್ಥೆಯಲ್ಲಿ ಸಿಲುಕಿ ಅವರು ಏನನ್ನೂ ಹೇಳದೆ ಹೋದರು. ಯಾರು ಏನನ್ನೂ ಹೇಳದಿರುವಾಗ ಜನಕನು ಧೈರ್ಯತಳೆದು, ವಿಚಾರಮಾಡಿ, ನಾಲ್ಕುಮಂದಿ ಗುಪ್ತಚರರನ್ನು ಅಯೋಧ್ಯೆಗೆ ಕಳಿಸಿದನು. ಅವರಿಗೆ – 'ರಾಮನ ಬಗೆಗೆ ಭರತನ ವಿಚಾರವೇನು? ಸದ್ಭಾವವೋ? ದುರ್ಭಾವವೋ? ಎಂಬುದನ್ನು ಅರಿತುಕೊಂಡು, ಶೀಘ್ರವೇ ಮರಳುವುದು. ಈ ಕಾರ್ಯವು ರಹಸ್ಯವಾಗಿರಬೇಕೆಂದು' ಎಚ್ಚರಿಕೆ ನೀಡಿದನು. (ಚೌ/೧-೪)

**ದೋ – ಗಏ ಅವಧ ಚರ ಭರತ ಗತಿ ಬೂಝಿ ದೇಖಿ ಕರತೂತಿ।**
**ಚಲೇ ಚಿತ್ರಕೂಟಹಿ ಭರತು ಚಾರ ಚಲೇ ತೆರಹೂತಿ ॥ ೨೭೧ ॥**

ಆ ಗುಪ್ತಚರರು ಅಯೋಧ್ಯೆಗೆ ಹೋಗಿ, ಭರತನ ನಿಲುವನ್ನು ಅರಿತು, ಅವನು ಚಿತ್ರಕೂಟಕ್ಕೆ ಹೊರಡುತ್ತಲೇ ಅವರು ಮಿಥಿಲೆಗೆ ಮರಳಿದರು. (ದೋ/೨೭೧)

**ಚೌ – ದೂತನ್ಹ ಆಇ ಭರತ ಕಇ ಕರನೀ। ಜನಕ ಸಮಾಜ ಜಥಾಮತಿ ಬರನೀ॥**
**ಸುನಿ ಗುರ ಪರಿಜನ ಸಚಿವ ಮಹೀಪತಿ। ಭೇ ಸಬ ಸೋಚ ಸನೇಹ್ ಬಿಕಲ ಅತಿ॥ ೧ ॥**
**ಧರಿ ಧೀರಜು ಕರಿ ಭರತ ಬಡಾಈ। ಲಿಏ ಸುಭಟ ಸಾಹನೀ ಬೊಲಾಈ॥**
**ಘರ ಪುರ ದೇಸ ರಾಖಿ ರಖವಾರೇ। ಹಯ ಗಯ ರಥ ಬಹು ಜಾನ ಸँವಾರೇ॥ ೨ ॥**
**ದುಘರೀ ಸಾಧಿ ಚಲೇ ತತಕಾಲಾ। ಕಿಯೆ ಬಿಶ್ರಾಮು ನ ಮಗ ಮಹಿಪಾಲಾ॥**
**ಭೋರಹಿं ಆಜು ನಹಾಇ ಪ್ರಯಾಗಾ। ಚಲೇ ಜಮುನ ಉತರನ ಸಬು ಲಾಗಾ ॥ ೩ ॥**
**ಖಬರಿ ಲೇನ ಹಮ ಪಠಏ ನಾಥಾ। ತಿನ್ಹ ಕಹಿ ಅಸ ಮಹಿ ನಾಯಉ ಮಾಥಾ ॥**
**ಸಾಥ ಕಿರಾತ ಛ ಸಾತಕ ದೀನ್ಹೆ। ಮುನಿಬರ ತುರತ ಬಿದಾ ಚರ ಕೀನ್ಹೆ॥ ೪ ॥**

ಗೂಢಚಾರರು ಬಂದು ಜನಕಮಹಾರಾಜನಿಗೆ ಭರತನ ಸದ್ಭಾವವನ್ನೂ, ಕಾರ್ಯವೈಖರಿಯನ್ನೂ ತಮಗೆ ತಿಳಿದಂತೆ ವಿವರಿಸಿದರು. ಅದನ್ನು ಕೇಳಿ, ಗುರುಗಳು, ಪರಿಜನರು, ಮಂತ್ರಿಗಳು, ಮಹಾರಾಜರು ಹೀಗೆ ಎಲ್ಲರೂ ಸ್ನೇಹ ಮತ್ತು ಚಿಂತೆಯಿಂದ ವ್ಯಾಕುಲರಾದರು. ಮತ್ತೆ ಜನಕನು ಧೈರ್ಯವಹಿಸಿ – ಭರತನನ್ನು ಕೊಂಡಾಡಿ, ಒಳ್ಳೆಯ ಯೋಧರನ್ನು ಮತ್ತು ಸೇನಾಪತಿಗಳನ್ನು ಕರೆಸಿದನು. ಅರಮನೆ, ನಗರ, ದೇಶದ ರಕ್ಷಣೆಗಾಗಿ ದಕ್ಷ ರಕ್ಷಕರನ್ನು ನೇಮಿಸಿ; ಆನೆ, ಕುದುರೆ, ರಥವೇ ಮೊದಲಾದ ವಾಹನಗಳನ್ನು ಅಣಿಗೊಳಿಸಲು ಆಜ್ಞಾಪಿಸಿದನು. ಎರಡು ಗಳಿಗೆಯ ಉತ್ತಮ ಮುಹೂರ್ತವನ್ನು ನಿಶ್ಚಯಿಸಿ, ಕೂಡಲೇ ಜನಕ ಮಹಾರಾಜರು ಹೊರಟರು. ಅವರು ದಾರಿಯಲ್ಲಿ ಎಲ್ಲೂ ವಿಶ್ರಮಿಸದೆ, ಇಂದೇ ಬೆಳಿಗ್ಗೆ ಪ್ರಯಾಗವನ್ನು ತಲುಪಿದರು. ಅಲ್ಲಿ ತ್ರಿವೇಣಿಯಲ್ಲಿ ಸ್ನಾನಾದಿಗಳನ್ನಾಚರಿಸಿ ಹೊರಟು, ಯಮುನೆಯನ್ನು ದಾಟಿ ಬರುತ್ತಿದ್ದಾರೆ ಎಂಬ ವಾರ್ತೆಯನ್ನು ನಿಮಗೆ ತಿಳಿಸಲು ಮುಂದಾಗಿ ನಮ್ಮನ್ನು ಕಳಿಸಿರುವರು'' ಎಂದು ಹೇಳಿ ನೆಲಮುಟ್ಟಿ ನಮಸ್ಕರಿಸಿದರು. ಆಗ ವಸಿಷ್ಠ ಮಹಾಮುನಿಗಳು ಐದಾರು ಭಿಲ್ಲರನ್ನು ಜೊತೆಮಾಡಿ, ಆ ದೂತರನ್ನು ಬೀಳ್ಕೊಟ್ಟರು. (ಚೌ/೧-೪)

**ದೋ – ಸುನತ ಜನಕ ಆಗವನು ಸಬು ಹರಷೆಉ ಅವಧ ಸಮಾಜು।**
**ರಘುನಂದನಹಿ ಸಕೋಚು ಬಡ ಸೋಚ ಬಿಬಸ ಸುರರಾಜು ॥ ೨೭೨ ॥**

ಜನಕನ ಆಗಮನವನ್ನು ಕೇಳಿ ಅಯೋಧ್ಯೆಯ ಜನರೆಲ್ಲ ಹರ್ಷಿತರಾದರು. ಶ್ರೀರಾಮನಿಗೆ ತುಂಬಾ ಸಂಕೋಚವಾಯಿತು. ದೇವೇಂದ್ರನಿಗಂತೂ ಎಲ್ಲಿಲ್ಲದ ಯೋಚನೆಯಾಯಿತು. (ದೋ/೨೭೨)

**ಚೌ – ಗರಇ ಗಲಾನಿ ಕುಟಿಲ ಕೈಕೇಈ। ಕಾಹಿ ಕಹೈ ಕೆಹಿ ದೂಷನು ದೇಈ॥**
**ಅಸ ಮನ ಆನಿ ಮುದಿತ ನರ ನಾರೀ। ಭಯಉ ಬಹೋರಿ ರಹಬ ದಿನ ಚಾರೀ॥ ೧ ॥**

ಎಹಿ ಪ್ರಕಾರ ಗತ ಬಾಸರ ಸೋಊ। ಪ್ರಾತ ನಹಾನ ಲಾಗ ಸಬು ಕೋಊ॥
ಕರಿ ಮಜ್ಜನು ಪೂಜಹಿಂ ನರ ನಾರೀ। ಗನಪ ಗೌರಿ ತಿಪುರಾರಿ ತಮಾರೀ ॥ ೨ ॥
ರಮಾ ರಮನ ಪದ ಬಂದಿ ಬಹೋರೀ। ಬಿನವಹಿಂ ಅಂಜುಲಿ ಅಂಚಲ ಜೋರೀ॥
ರಾಜಾ ರಾಮು ಜಾನಕೀ ರಾನೀ। ಆನಂದ ಅವಧಿ ಅವಧ ರಜಧಾನೀ ॥ ೩ ॥
ಸುಬಸ ಬಸಉ ಫಿರಿ ಸಹಿತ ಸಮಾಜಾ। ಭರತಹಿ ರಾಮು ಕರಹುಁ ಜುಬರಾಜಾ ॥
ಎಹಿ ಸುಖ ಸುಧಾಂ ಸೀಂಚಿ ಸಬ ಕಾಹೂ। ದೇವ ದೇಹು ಜಗ ಜೀವನ ಲಾಹೂ ॥ ೪ ॥

ಕುಟಿಲ ಕೈಕೆಯಿಯಂತೂ ಮನದಲ್ಲೇ ಗ್ಲಾನಿಯಿಂದ ಕರಗಿಹೋದಳು. ಅವಳು ತನ್ನ ಮನೋವ್ಯಥೆಯನ್ನು ಯಾರಲ್ಲಿ ತೋಡಿಕೊಳ್ಳುವುದು? ಯಾರ ಮೇಲೆ ತಪ್ಪುಹೊರಿಸುವುದು? ಅಯೋಧ್ಯಾನಿವಾಸಿಗಳಂತೂ ಜನಕನು ಬಂದಿದ್ದರಿಂದ ಒಳ್ಳೆಯದೇ ಆಯಿತು. ಇನ್ನೂ ನಾಲ್ಕು ದಿನ ಇಲ್ಲೇ ಇರಬಹುದು ಎಂದು ಹಿರಿಹಿರಿ ಹಿಗ್ಗಿದರು. ಈ ವಿಧವಾಗಿ ಆ ದಿನವೂ ಕಳೆಯಿತು. ಮರುದಿನ ಬೆಳಿಗ್ಗೆ ಎಲ್ಲರೂ ಸ್ನಾನಮಾಡಿ, ಗಣಪತಿ, ಗೌರಿ, ಶಿವ, ಸೂರ್ಯ ಇವರನ್ನು ಆರಾಧಿಸಿ, ಬಳಿಕ ಲಕ್ಷ್ಮೀಪತಿಯಾದ ಭಗವಾನ್ ಮಹಾವಿಷ್ಣುವಿನ ಚರಣಗಳಿಗೆ ವಂದಿಸುತ್ತಾ, ಗಂಡಸರು ಕೈಜೋಡಿಸಿ, ಹೆಣ್ಣುಮಕ್ಕಳು ಸೆರಗೊಡ್ಡಿ ಪ್ರಾರ್ಥಿಸಿದರು – ಶ್ರೀರಾಮನೇ ರಾಜನಾಗಿ, ಸೀತಾಮಾತೆಯು ರಾಣಿಯಾಗಿ, ಅಯೋಧ್ಯಾನಗರವು ಆನಂದದ ಆಗರವಾಗಲಿ. ಪ್ರಜೆಗಳು ಸುಖಶಾಂತಿಗಳಿಂದ ನೆಲಸಲಿ. ಶ್ರೀರಾಮನು ಭರತನನ್ನು ಯುವರಾಜನನ್ನಾಗಿಸಲಿ. ಈ ಆನಂದಾಬ್ಧಿಯಲ್ಲಿ ಮುಳುಗಿ ಪ್ರತಿಯೋರ್ವನೂ ತನ್ನ ಜನ್ಮದ ಸಾರ್ಥಕತೆಯನ್ನುಮಾಡಿಕೊಳ್ಳಲಿ. (ಚೌ/೧-೪)

ದೋ – ಗುರ ಸಮಾಜ ಭಾಇನ್ಹ ಸಹಿತ ರಾಮ ರಾಜು ಪುರ ಹೋಉ।
ಅಛತ ರಾಮ ರಾಜಾ ಅವಧ ಮರಿಅ ಮಾಗ ಸಬು ಕೋಉ॥ ೨೭೩ ॥

ಗುರುಗಳು, ಸಮಾಜ, ಸೋದರರೊಂದಿಗೆ ರಘುನಾಥನ ರಾಮರಾಜ್ಯ ಅಯೋಧ್ಯೆಯಲ್ಲಿ ನೆಲೆಗೊಳ್ಳಲಿ. ಶ್ರೀರಾಮನು ರಾಜನಿರುವಾಗಲೇ ನಮಗೆ ಸಾವು ಬರಲಿ. ನಮ್ಮೆಲ್ಲರ ಕೋರಿಕೆ ಇದೇ ಆಗಿದೆ. (ದೋ/೨೭೩)

ಚೌ – ಸುನಿ ಸನೇಹಮಯ ಪುರಜನ ಬಾನೀ। ನಿಂದಹಿಂ ಜೋಗ ಬಿರತಿ ಮುನಿ ಗ್ಯಾನೀ॥
ಎಹಿ ಬಿಧಿ ನಿತ್ಯಕರಮ ಕರಿ ಪುರಜನ। ರಾಮಹಿ ಕರಹಿಂ ಪ್ರನಾಮ ಪುಲಕಿ ತನ ॥ ೧ ॥
ಊಂಚ ನೀಚ ಮಧ್ಯಮ ನರ ನಾರೀ। ಲಹಹಿಂ ದರಸು ನಿಜ ನಿಜ ಅನುಹಾರೀ ॥
ಸಾವಧಾನ ಸಬಹೀ ಸನಮಾನಹಿಂ। ಸಕಲ ಸರಾಹತ ಕೃಪಾನಿಧಾನಹಿಂ ॥ ೨ ॥
ಲರಿಕಾಇಹಿ ತೇಂ ರಘುಬರ ಬಾನೀ। ಪಾಲತ ನೀತಿ ಪ್ರೀತಿ ಪಹಿಚಾನೀ ॥
ಸೀಲ ಸಕೋಚ ಸಿಂಧು ರಘುರಾಊ। ಸುಮುಖ ಸುಲೋಚನ ಸರಲ ಸುಭಾಊ ॥ ೩ ॥
ಕಹತ ರಾಮ ಗುನ ಗನ ಅನುರಾಗೇ। ಸಬ ನಿಜ ಭಾಗ ಸರಾಹನ ಲಾಗೇ ॥
ಹಮ ಸಮ ಪುನ್ಯ ಪುಂಜ ಜಗ ಥೋರೇ। ಜಿನ್ಹಹಿ ರಾಮು ಜಾನತ ಕರಿ ಮೋರೇ ॥ ೪ ॥

ಅಯೋಧ್ಯಾನಿವಾಸಿಗಳ ಪ್ರೇಮಮಯ ವಾಣಿಯನ್ನು ಕೇಳಿ, ಜ್ಞಾನಿಗಳಾದ ವಸಿಷ್ಠಮುನಿಗಳೂ ಅವರ ಮುಂದೆ ತಮ್ಮ ಯೋಗ, ವೈರಾಗ್ಯಗಳನ್ನು ಕಡಿಮೆಯೆಂದೇ ಭಾವಿಸಿದರು. ಈ ವಿಧವಾಗಿ ಅಯೋಧ್ಯೆಯ ಜನರು ತಮ್ಮ ನಿತ್ಯಕರ್ಮಾನುಷ್ಠಾನಗಳನ್ನು ಪೂರೈಸಿ, ಪುಲಕಿತಗಾತ್ರರಾಗಿ ಶ್ರೀರಾಮನಿಗೆ ಪ್ರಣಾಮಮಾಡಿದರು. ಉಚ್ಚ-ನಿಮ್ನ-ಮಧ್ಯಮ ವರ್ಗದ ಎಲ್ಲ ಸ್ತ್ರೀ ಪುರುಷರು ತಮ್ಮ-ತಮ್ಮ ಭಾವದಂತೆ ಶ್ರೀರಾಮನನ್ನು ದರ್ಶನಮಾಡುತ್ತಾರೆ. ಶ್ರೀರಾಮನು ಎಚ್ಚರಿಕೆಯಿಂದ ಅವರವರ ಯೋಗ್ಯತೆಗೆ ತಕ್ಕಂತೆ ಎಲ್ಲರನ್ನು ಆದರಿಸಿ ಸನ್ಮಾನಿಸಿದನು. ಎಲ್ಲರೂ ಕೃಪಾನಿಧಾನನಾದ ಶ್ರೀರಾಮನನ್ನು ಇಂತು ಕೊಂಡಾಡಿದರು – ''ಪ್ರೇಮವನ್ನು ಗುರುತಿಸಿ ಆದರಿಸುವುದು ಶ್ರೀರಾಮನಿಗೆ ಚಿಕ್ಕಂದಿನಿಂದಲೇ ಬಂದ ಒಂದು ಗುಣ. ಶ್ರೀರಘುನಾಥನು ಶೀಲ, ಸಂಕೋಚದ ಸಮುದ್ರ. ಅವನು ಸುಂದರ ಮುಖನೇತ್ರಗಳುಳ್ಳವನೂ, ಸರಳಸ್ವಭಾವದವನಾಗಿರುವನು.'' ಈ ಪ್ರಕಾರ ಶ್ರೀರಾಮನ ಅನಂತಗುಣಗಳನ್ನು ಕೊಂಡಾಡುತ್ತಾ ಪ್ರೇಮಮಗ್ನರಾದರು. 'ಇವರು ತನ್ನವರು' ಎಂದು ರಾಮನಿಂದ ಕರೆಸಿಕೊಂಡ ನಾವು ಜಗತ್ತಿನಲ್ಲಿ ಎಷ್ಟು ಪುಣ್ಯವಂತರು! ನಮ್ಮ ಪುಣ್ಯಕ್ಕೆ ಎಣೆಯಿದೆಯೇ! ಎಂದು ಜನರೆಲ್ಲರೂ ತಮ್ಮ ಭಾಗ್ಯವನ್ನು ಕೊಂಡಾಡತೊಡಗಿದರು. (ಚೌ/೧-೪)

ದೋ – ಪ್ರೇಮ ಮಗನ ತೆಹಿ ಸಮಯ ಸಬ ಸುನಿ ಆವತ ಮಿಥಿಲೇಸು।
ಸಹಿತ ಸಭಾ ಸಂಭ್ರಮ ಉಠೆಉ ರಬಿಕುಲ ಕಮಲ ದಿನೇಸು ॥ ೨೭೪ ॥

ಈ ಪ್ರಕಾರ ಎಲ್ಲ ಜನರು ಪ್ರೇಮಮಗ್ನರಾಗಿರುವಾಗ ಮಿಥಿಲೇಶ ಜನಕ ಮಹಾರಾಜರು ಬರುತ್ತಿರುವುದನ್ನು ಕೇಳಿ, ಸೂರ್ಯವಂಶಕಮಲಕ್ಕೆ ಅರ್ಕನಂತಿರುವ ಶ್ರೀರಾಮನು ಎಲ್ಲರನ್ನು ಒಡಗೊಂಡು ಸಂಭ್ರಮದಿಂದ ಎದ್ದುನಿಂತನು. (ದೋ/೨೭೪)

**ಚೌ – ಭಾಇ ಸಚಿವ ಗುರ ಪುರಜನ ಸಾಥಾ। ಆಗೇಂ ಗವನು ಕೀನ್ಹ ರಘುನಾಥಾ॥**
**ಗಿರಿಬರು ದೀಖ ಜನಕಪತಿ ಜಬಹೀಂ। ಕರಿ ಪ್ರನಾಮು ರಥ ತ್ಯಾಗೇಉ ತಬಹೀಂ॥ ೧ ॥**
**ರಾಮ ದರಸ ಲಾಲಸಾ ಉಛಾಹೂ। ಪಥ ಶ್ರಮ ಲೇಸು ಕಲೇಸು ನ ಕಾಹೂ॥**
**ಮನ ತಹँ ಜಹँ ರಘುಬರ ಬೈದೇಹೀ। ಬಿನು ಮನ ತನ ದುಖ ಸುಖ ಸುಧಿ ಕೇಹೀ ॥ ೨ ॥**
**ಆವತ ಜನಕು ಚಲೇ ಎಹಿ ಭಾँತೀ। ಸಹಿತ ಸಮಾಜ ಪ್ರೇಮ ಮತಿ ಮಾತೀ॥**
**ಆಏ ನಿಕಟ ದೇಖಿ ಅನುರಾಗೇ। ಸಾದರ ಮಿಲನ ಪರಸಪರ ಲಾಗೇ॥ ೩ ॥**
**ಲಗೇ ಜನಕ ಮುನಿಜನ ಪದ ಬಂದನ। ರಿಷಿನ್ಹ ಪ್ರನಾಮು ಕೀನ್ಹ ರಘುನಂದನ॥**
**ಭಾಇನ್ಹ ಸಹಿತ ರಾಮು ಮಿಲಿ ರಾಜಹಿ। ಚಲೇ ಲವಾಇ ಸಮೇತ ಸಮಾಜಹಿ॥ ೪ ॥**

ಜನಕನನ್ನು ಇದಿರ್ಗೊಳ್ಳಲು ಶ್ರೀರಘುನಾಥನು ತಮ್ಮಂದಿರು, ಮಂತ್ರಿಗಳು, ಗುರುಗಳು, ಪುರಜನರು ಹೀಗೆ ಎಲ್ಲರನ್ನು ಜೊತೆಯಲ್ಲಿ ಕರೆದುಕೊಂಡು ಮುಂದಕ್ಕೆ ನಡೆದನು. ಜನಕನು ಪರ್ವತರಾಜನಾದ ಕಾಮದಗಿರಿಯನ್ನು ನೋಡುತ್ತಲೇ ಪ್ರಣಾಮಗೈದು, ರಥದಿಂದಿಳಿದು ಕಾಲುನಡಿಗೆಯಲ್ಲಿ ಮುಂದರಿದನು. ಶ್ರೀರಾಮನ ದರ್ಶನಾಕಾಂಕ್ಷೆಯಿಂದ ಹಾಗೂ ಉತ್ಸಾಹದಿಂದ ಯಾರಿಗೂ ಮಾರ್ಗಕ್ಲೇಶವಾಗಲೀ, ಆಯಾಸವಾಗಲೀ ತಿಳಿಯಲೇ ಇಲ್ಲ. ಅವರ ಮನಸ್ಸಾದರೋ ಸೀತಾರಾಮರಲ್ಲೇ ನೆಟ್ಟುಹೋಗಿತ್ತು. ಮನವಿಲ್ಲದ ಶರೀರಕ್ಕೆ ಸುಖ-ದುಃಖಗಳ ಪ್ರಜ್ಞೆ ಹೇಗೆ ಸಾಧ್ಯ? ಹೀಗೆ ಜನಕನು ನಡೆದುಬರುತ್ತಿದ್ದನು. ತನ್ನ ಸಮಾಜ ಸಹಿತ ಆತನ ಮತಿ ಶ್ರೀರಾಮನ ಪ್ರೇಮದಲ್ಲಿ ಉನ್ಮತ್ತವಾಗಿತ್ತು. ಹತ್ತಿರವಾಗುತ್ತಿರುವಂತೆ ಎಲ್ಲರೂ ಪ್ರೇಮಮಗ್ನರಾಗಿ ಪರಸ್ಪರ ಆದರದಿಂದ ಭೆಟ್ಟಿಯಾದರು. ಜನಕನು ವಸಿಷ್ಠರೇ ಮೊದಲಾದ ಅಯೋಧ್ಯೆಯ ಮುನಿಜನರ ಚರಣಗಳಿಗೆ ವಂದಿಸಿಕೊಂಡನು. ಶ್ರೀರಾಮಚಂದ್ರನು ಶತಾನಂದರೇ ಮೊದಲಾದ ಮಿಥಿಲೆಯ ಮುನಿವೃಂದವನ್ನು ನಮಸ್ಕರಿಸಿದನು. ಅನಂತರ ತಮ್ಮಂದಿರೊಡಗೂಡಿ ಜನಕನನ್ನು ಎದುರ್ಗೊಂಡು ಸಮಾಜ ಸಹಿತ ತಮ್ಮ ಆಶ್ರಮಕ್ಕೆ ಕರೆದುಕೊಂಡು ಹೋದನು. (ಚೌ/೧-೪)

**ದೋ – ಆಶ್ರಮ ಸಾಗರ ಸಾಂತ ರಸ ಪೂರನ ಪಾವನ ಪಾಥು।**
**ಸೇನ ಮನಹುँ ಕರುನಾ ಸರಿತ ಲಿಏँ ಜಾಹಿँ ರಘುನಾಥು॥ ೨೭೫ ॥**

ಶ್ರೀರಾಮನ ಆಶ್ರಮವು ಶಾಂತರಸರೂಪೀ ಪವಿತ್ರ ಜಲದಿಂದ ತುಂಬಿದ ಒಂದು ವಿಶಾಲಸಮುದ್ರ. ಜನಕನ ಪರಿವಾರವು ಒಂದು ಕರುಣಾರಸವಾಹಿನಿ. ಅದನ್ನು ಆಶ್ರಮಸಾಗರದಲ್ಲಿ ಸೇರಿಸಲು ಶ್ರೀರಾಮನು ಕರೆದೊಯ್ಯುತ್ತಿರುವನು. (ದೋ/೨೭೫)

**ಚೌ – ಬೋರತಿ ಗ್ಯಾನ ಬಿರಾಗ ಕರಾರೇ। ಬಚನ ಸಸೋಕ ಮಿಲತ ನದ ನಾರೇ॥**
**ಸೋಚ ಉಸಾಸ ಸಮೀರ ತರಂಗಾ। ಧೀರಜ ತಟ ತರುಬರ ಕರ ಭಂಗಾ॥ ೧ ॥**
**ಬಿಷಮ ಬಿಷಾದ ತೋರಾವತಿ ಧಾರಾ। ಭಯ ಭ್ರಮ ಭವँರ ಅಬರ್ತ ಅಪಾರಾ॥**
**ಕೇವಟ ಬುಧ ಬಿದ್ಯಾ ಬಡಿ ನಾವಾ। ಸಕಹಿँ ನ ಖೇಇ ಐಕ ನಹಿँ ಆವಾ॥ ೨ ॥**
**ಬನಚರ ಕೋಲ ಕಿರಾತ ಬಿಚಾರೇ। ಥಕೇ ಬಿಲೋಕಿ ಪಥಿಕ ಹಿಯँ ಹಾರೇ॥**
**ಆಶ್ರಮ ಉದಧಿ ಮಿಲೀ ಜಬ ಜಾಈ। ಮನಹುँ ಉಠೇಉ ಅಂಬುಧಿ ಅಕುಲಾಈ॥ ೩ ॥**
**ಸೋಕ ಬಿಕಲ ದೋಉ ರಾಜ ಸಮಾಜಾ। ರಹಾ ನ ಗ್ಯಾನು ನ ಧೀರಜು ಲಾಜಾ॥**
**ಭೂಪ ರೂಪ ಗುನ ಸೀಲ ಸರಾಹೀ। ರೋವಹಿँ ಸೋಕ ಸಿಂಧು ಅವಗಾಹೀ॥ ೪ ॥**

ಈ ಕರುಣಾನದಿಗೆ ನೆರೆಬಂದು, ಜ್ಞಾನ-ವೈರಾಗ್ಯವೆಂಬ ಎರಡೂ ದಡಗಳನ್ನು ಮುಳುಗಿಸುತ್ತಿತ್ತು. ಶೋಕಭರಿತವಾದ ವಚನಗಳೇ ನದ-ನಾಲೆಗಳು. ಇವೂ ಇದೇ ನದಿಗೆ ಬಂದು ಸೇರುವುವು. ಚಿಂತೆಯ ನಿಟ್ಟುಸಿರೆಂಬ ಗಾಳಿಯಿಂದ ಏಳುವ ತರಂಗಗಳು, ದಡದಲ್ಲಿರುವ ಧೈರ್ಯವೆಂಬ ವೃಕ್ಷಗಳನ್ನು ಉರುಳಿಸುತ್ತಿವೆ. ವಿಷಮ ವಿಷಾದವೇ ಆ ನದಿಯ ವೇಗವಾದ ಪ್ರವಾಹ. ಭಯ, ಭ್ರಮೆಗಳೇ ಅದರಲ್ಲಿರುವ ಅಸಂಖ್ಯ ಸುಳಿಗಳು. ವಿದ್ವಾಂಸರೇ ಇಲ್ಲಿಯ ಅಂಬಿಗರು. ವಿದ್ಯೆಯೇ ದೊಡ್ಡ ನಾವೆ. ಆದರೆ ಅವರ ಕೈಯಿಂದ ಆ ನಾವೆಯನ್ನು ನಡೆಸಲಾಗುವುದಿಲ್ಲ. (ಅವರ ವಿದ್ಯೆಯು ಇಲ್ಲಿ ನಿರುಪಯೋಗವಾಗುತ್ತಿದೆ.) ಅದನ್ನು ನಡೆಸುವ ಉಪಾಯವು ಯಾರೂ ಅರಿಯರು. ವನಚರರಾದ ಕೋಲ, ಕಿರಾತರೇ ಆದರ ಪಯಣಿಗರು. ಅವರು ಈ ನದಿ ಪ್ರವಾಹವನ್ನು ಕಂಡು

ಮಾನಸಿಕವಾಗಿ ಸ್ತಬ್ಧರಾದರು. ಈ ಕರುಣಾನದಿಯು ಆಶ್ರಮ ಸಮುದ್ರವನ್ನು ಸೇರಿದಾಗ ಆ ಸಮುದ್ರವು ಪ್ರಕ್ಷುಬ್ಧವಾಯಿತು. ಎರಡೂ ರಾಜಸಮಾಜಗಳು ಶೋಕದಿಂದ ವ್ಯಾಕುಲಿತರಾದುವು. ಎಲ್ಲರ ಜ್ಞಾನ, ಮಾನ, ಧೈರ್ಯ ಎಲ್ಲವೂ ಉಡುಗಿಹೋಯಿತು. ದಶರಥ ಮಹಾರಾಜರ ರೂಪ, ಗುಣ, ಶೀಲಗಳನ್ನು ನೆನೆನೆನೆದು ಅವರೆಲ್ಲರೂ ಶೋಕಸಮುದ್ರದಲ್ಲಿ ಮುಳುಗಿಹೋದರು. (ಚೌ/೧-೪)

**ಛಂ – ಅವಗಾಹಿ ಸೋಕ ಸಮುದ್ರ ಸೋಚಹಿಂ ನಾರಿ ನರ ಬ್ಯಾಕುಲ ಮಹಾ ।**
**ದೈ ದೋಷ ಸಕಲ ಸರೋಷ ಬೋಲಹಿಂ ಬಾಮ ಬಿಧಿ ಕೀನ್ಹೊ ಕಹಾ ॥**
**ಸುರ ಸಿದ್ಧ ತಾಪಸ ಜೋಗಿಜನ ಮುನಿ ದೇಖಿ ದಸಾ ಬಿದೇಹ ಕೀ ।**
**ತುಲಸೀ ನ ಸಮರಥು ಕೋಉ ಜೋ ತರಿ ಸಕೈ ಸರಿತ ಸನೇಹ ಕೀ ॥**

ಶೋಕಸಾಗರದಲ್ಲಿ ಮಗ್ನರಾದ ಸ್ತ್ರೀ-ಪುರುಷರೆಲ್ಲರೂ ಅತೀವ ವ್ಯಾಕುಲರಾಗಿ ಯೋಚಿಸುತ್ತಿರುವರು. ಅವರೆಲ್ಲರೂ ವಿಧಾತನನ್ನು ಹಳಿಯುತ್ತಾ– 'ಪ್ರತಿಕೂಲವಾದ ವಿಧಿಯು ಇದೇನು ಮಾಡಿಬಿಟ್ಟಿತು?' ಎಂದು ಕ್ರೋಧದಿಂದ ದೂಷಿಸುತ್ತಿದ್ದರು. ತುಲಸೀದಾಸರು ಹೇಳುತ್ತಾರೆ – ದೇವತೆಗಳು, ಸಿದ್ಧರೂ, ತಾಪಸರೂ, ಯೋಗಿಗಲು, ಮುನಿಗಳು ಮೊದಲಾದವರೆಲ್ಲರೂ ಆಗಿನ ಜನಕನ ಸ್ಥಿತಿಯನ್ನು ಕಂಡು ಪ್ರೇಮರೂಪೀ ನದಿಯನ್ನು ದಾಟಲು ಅಸಮರ್ಥರಾದರು. ಅಂದರೆ ಎಲ್ಲರೂ ಪ್ರೇಮಮಗ್ನರಾದರು. (ಛಂದ)

**ಸೋ – ಕಿಏ ಅಮಿತ ಉಪದೇಸ ಜಹ್ँ ತಹ್ँ ಲೋಗನ್ಹ ಮುನಿಬರನ್ಹ ।**
**ಧೀರಜು ಧರಿಅ ನರೇಸ ಕಹೆಉ ಬಸಿಷ್ಠ ಬಿದೇಹ ಸನ ॥ ೨೭೬ ॥**

ಅಲ್ಲಲ್ಲಿ ಶ್ರೇಷ್ಠಮುನಿಗಳು ಜನರಿಗೆ ಉಪದೇಶ ನೀಡಿದರು. ವಸಿಷ್ಠ ಮಹಾಮುನಿಗಳು ಜನಕನಿಗೆ 'ರಾಜಾ! ಧೈರ್ಯತಾಳು' ಎಂದು ಹೇಳಿದರು. (ಸೋ/೨೭೬)

**ಚೌ – ಜಾಸು ಗ್ಯಾನು ರಬಿ ಭವ ನಿಸಿ ನಾಸಾ । ಬಚನ ಕಿರನ ಮುನಿ ಕಮಲ ಬಿಕಾಸಾ ॥**
**ತೆಹಿ ಕಿ ಮೋಹ ಮಮತಾ ನಿಅರಾಈ । ಯಹ ಸಿಯ ರಾಮ ಸನೇಹ ಬಡಾಈ ॥ ೧ ॥**
**ಬಿಷಈ ಸಾಧಕ ಸಿದ್ಧ ಸಯಾನೇ । ತ್ರಿಬಿಧ ಜೀವ ಜಗ ಬೇದ ಬಖಾನೇ ॥**
**ರಾಮ ಸನೇಹ ಸರಸ ಮನ ಜಾಸೂ । ಸಾಧು ಸಭಾँ ಬಡ ಆದರ ತಾಸೂ ॥ ೨ ॥**
**ಸೋಹ ನ ರಾಮ ಪೇಮ ಬಿನು ಗ್ಯಾನೂ । ಕರನಧಾರ ಬಿನು ಜಿಮಿ ಜಲಜಾನೂ ॥**
**ಮುನಿ ಬಹುಬಿಧಿ ಬಿದೇಹು ಸಮುಝಾಏ । ರಾಮಘಾಟ ಸಬ ಲೋಗ ನಹಾಏ ॥ ೩ ॥**
**ಸಕಲ ಸೋಕ ಸಂಕುಲ ನರ ನಾರೀ । ಸೋ ಬಾಸರು ಬೀತೆಉ ಬಿನು ಬಾರೀ ॥**
**ಪಸು ಖಗ ಮೃಗನ್ಹ ನ ಕೀನ್ಹ ಅಹಾರೂ । ಪ್ರಿಯ ಪರಿಜನ ಕರ ಕೌನ ಬಿಚಾರೂ ॥ ೪ ॥**

ಜನಕ ಮಹಾರಾಜನ ಜ್ಞಾನಭಾಸ್ಕರನು ಭವ (ಜನನ-ಮರಣ) ನಿಶಿಯನ್ನು ನಾಶವಾಗಿಸಬಲ್ಲನು. ಅವನ ವಚನ ಕಿರಣಗಳು ಮುನಿಗಳ ಹೃದಯಕಮಲಗಳನ್ನು ಅರಳಿಸುವಂತಹವುಗಳು. ಅಂತಹವನ ಬಳಿ ಮೋಹ, ಮಮತೆಗಳು ಸುಳಿಯಬಲ್ಲವೇ? ಇದು ನಿಜನಾಗಿ ಸೀತಾರಾಮರ ಪ್ರೇಮದ ಮಹಿಮೆ ಅಷ್ಟೆ. ಜೀವಿಗಳಲ್ಲಿ ವಿಷಯಲೋಲುಪರು, ಸಾಧಕರು, ಸಿದ್ಧರು ಹೀಗೆ ಮೂರುವಿಧವೆಂದು ವೇದದಲ್ಲಿ ಹೇಳಿದೆ. ಈ ಮೂವರಲ್ಲಿ ರಾಮಸ್ನೇಹದಿಂದ ಸರಸವಾಗಿರುವ ಮನಸ್ಸುಳ್ಳವನು ಸಜ್ಜನಸಮಾಜದಲ್ಲಿ ಹೆಚ್ಚಿನ ಮನ್ನಣೆ ಪಡೆಯುತ್ತಾನೆ. ಕರ್ಣಧಾರ (ದೋಣಿನಡೆಸುವವನು)ನಿಲ್ಲದ ದೋಣಿಯಂತೆ, ಶ್ರೀರಾಮಭಕ್ತಿಯಿಲ್ಲದೆ ಜ್ಞಾನವು ಶೋಭಿಸದು. ವಸಿಷ್ಠರು ವಿದೇಹರಾಜ ಜನಕನಿಗೆ ಅನೇಕ ರೀತಿಯಿಂದ ಸಮಾಧಾನಗೊಳಿಸಿದರು. ಅನಂತರ ಎಲ್ಲರೂ ಶ್ರೀರಾಮಘಟ್ಟದಲ್ಲಿ ಸ್ನಾನಮಾಡಿದರು. ಸ್ತ್ರೀ-ಪುರುಷರೆಲ್ಲರೂ ಶೋಕಾಕುಲರಾಗಿದ್ದರು. ಆ ದಿನ ಯಾರೂ ತಮ್ಮ ಬಾಯಿಗೆ ನೀರನ್ನೂ ಕೂಡ ಹಾಕಲಿಲ್ಲ. ಪಶು, ಪಕ್ಷಿ, ಮೃಗಾದಿಗಳೂ ಕೂಡ ಆಹಾರ ಸ್ವೀಕರಿಸಲಿಲ್ಲ. ಹೀಗಿರುವಾಗ ಪರಿಜನರ ಮಾತು ಕೇಳಬೇಕೆ? (ಚೌ/೧-೪)

**ದೋ – ದೊಉ ಸಮಾಜ ನಿಮಿರಾಜು ರಘುರಾಜು ನಹಾನೇ ಪ್ರಾತ ।**
**ಬೈಠೇ ಸಬ ಬಟ ಬಿಟಪ ತರ ಮನ ಮಲೀನ ಕೃಸ ಗಾತ ॥ ೨೭೭ ॥**

ಮರುದಿನ ಪ್ರಾತಃಕಾಲವೇ ನಿಮಿವಂಶಜ ಜನಕನ ಪರಿವಾರ ಮತ್ತು ರಘುವಂಶಮಣಿಯಾದ ಶ್ರೀರಾಮನ ಪರಿವಾರವು ಸ್ನಾನಾದಿಗಳನ್ನಾಚರಿಸಿ, ಆಲದ ಮರದ ಕೆಳಗೆ ಹೋಗಿ ಕುಳಿತರು. ಎಲ್ಲರ ಮನಸ್ಸು ಕದಡಿತ್ತು, ಶರೀರ ಕೃಶವಾಗಿತ್ತು. (ದೋ/೨೭೭)

**ಚೌ – ಜೇ ಮಹಿಸುರ ದಸರಥ ಪುರ ಬಾಸೀ । ಜೇ ಮಿಥಿಲಾಪತಿ ನಗರ ನಿವಾಸೀ ॥**
**ಹಂಸ ಬಂಸ ಗುರ ಜನಕ ಪುರೋಧಾ । ಜಿನ್ಹ ಜಗ ಮಗು ಪರಮಾರಥು ಸೋಧಾ ॥ ೧ ॥**

ಲಗೇ ಕಹನ ಉಪದೇಸ ಅನೇಕಾ। ಸಹಿತ ಧರಮ ನಯ ಬಿರತಿ ಬಿಬೇಕಾ॥
ಕೌಸಿಕ ಕಹಿ ಕಹಿ ಕಥಾ ಪುರಾನೀಂ। ಸಮುಝಾಈ ಸಬ ಸಭಾ ಸುಬಾನೀಂ॥ ೨॥
ತಬ ರಘುನಾಥ ಕೌಸಿಕಹಿ ಕಹೇಊ। ನಾಥ ಕಾಲಿ ಜಲ ಬಿನು ಸಬು ರಹೇಊ॥
ಮುನಿ ಕಹ ಉಚಿತ ಕಹತ ರಘುರಾಈ। ಗಯಉ ಬೀತಿ ದಿನ ಪಹರ ಅಢಾಈ॥ ೩॥
ರಿಷಿ ರುಖ ಲಖಿ ಕಹ ತೇರಹುತಿರಾಜೂ। ಇಹಾಁ ಉಚಿತ ನಹಿಂ ಅಸನ ಅನಾಜೂ॥
ಕಹಾ ಭೂಪ ಭಲ ಸಬಹಿ ಸೊಹಾನಾ। ಪಾಇ ರಜಾಯಸು ಚಲೇ ನಹಾನಾ॥ ೪॥

ಅಯೋಧ್ಯಾ ಮತ್ತು ಮಿಥಿಲಾನಗರದ ಬ್ರಾಹ್ಮಣರು ಅಲ್ಲಿದ್ದರು. ಲೋಕಾಭ್ಯುದಯ, ಪರಮಾರ್ಥತತ್ತ್ವಗಳನ್ನು ಕೂಲಂಕುಶವಾಗಿ ಅರಿತಿರುವ ವಸಿಷ್ಠರು, ಶತಾನಂದರು, ವಿಶ್ವಾಮಿತ್ರರೂ ಅಲ್ಲೇ ಇದ್ದರು. ಧರ್ಮ, ನೀತಿ, ವೈರಾಗ್ಯ, ವಿವೇಕ ಮುಂತಾದ ವಿಷಯಗಳನ್ನು ಅವರು ಉಪದೇಶಿಸಿದರು. ವಿಶ್ವಾಮಿತ್ರರು ಅಲ್ಲಿ ನೆರೆದ ಸಭಾಸದರಿಗೆ ಅನೇಕ ಪೌರಾಣಿಕ ಕಥೆಗಳನ್ನು ಸ್ವಾರಸ್ಯವಾಗಿ ಹೇಳಿದರು. ಆಗ ಶ್ರೀರಾಮನು ವಿಶ್ವಾಮಿತ್ರರಲ್ಲಿ ಹೇಳಿದ – 'ಸ್ವಾಮಿ! ನಿನ್ನೆ ಎಲ್ಲರೂ ನಿರ್ಜಲ ಉಪವಾಸ ಮಾಡಿದರು. ಈಗ ಏನಾದರೂ ಆಹಾರ ಸ್ವೀಕರಿಸಬೇಕು.' ಮಹರ್ಷಿಗಳು – 'ಶ್ರೀರಘುನಾಥನು ಹೇಳುವುದು ಉಚಿತವಾಗಿದೆ. ಈಗಲೇ ಅಪರಾಹ್ನವಾಗಿದೆ' ಎಂದು ನುಡಿದರು. ವಿಶ್ವಾಮಿತ್ರರ ಮುಖಭಂಗಿಯನ್ನು ಗಮನಿಸಿದ ಜನಕ ಮಹಾರಾಜನು – 'ಇಲ್ಲಿ ಅನ್ನಾಹಾರವು ಪ್ರಶಸ್ತವಲ್ಲ' ಎಂದು ಹೇಳಿದನು. ರಾಜನ ಮಾತು ಎಲ್ಲರಿಗೆ ರುಚಿಸಿತು. ಋಷೀಶ್ವರರ ಆಜ್ಞೆಯಂತೆ ಎಲ್ಲರೂ ಮಾಧ್ಯಾಹ್ನಿಕಕ್ಕಾಗಿ ನದಿಗೆ ತೆರಳಿದರು. (ಚೌ/೧-೪)

**ದೋ – ತೇಹಿ ಅವಸರ ಫಲ ಫೂಲ ದಲ ಮೂಲ ಅನೇಕ ಪ್ರಕಾರ।**
**ಲಇ ಆಏ ಬನಚರ ಬಿಪುಲ ಭರಿ ಭರಿ ಕಾಁವರಿ ಭಾರ॥ ೨೭೮॥**

ಅಷ್ಟರಲ್ಲಿ ವನವಾಸಿಗಳಾದ ಕೋಲರು, ಕಿರಾತರು ವಿಧವಿಧವಾದ ಕಂದ, ಮೂಲ, ಫಲ, ಪುಷ್ಪ, ಪತ್ರೆಗಳನ್ನು ಕಾವಡಿಗಳಲ್ಲಿ, ಅಡ್ಡೆಗಳಲ್ಲಿ ತುಂಬಿಕೊಂಡು ಹೊತ್ತುತಂದು ಒಪ್ಪಿಸಿದರು. (ದೋ/೨೭೮)

ಚೌ – ಕಾಮದ ಭೇ ಗಿರಿ ರಾಮ ಪ್ರಸಾದಾ। ಅವಲೋಕತ ಅಪಹರತ ಬಿಷಾದಾ॥
ಸರ ಸರಿತಾ ಬನ ಭೂಮಿ ಬಿಭಾಗಾ। ಜನು ಉಮಗತ ಆನँದ ಅನುರಾಗಾ॥ ೧॥
ಬೇಲಿ ಬಿಟಪ ಸಬ ಸಫಲ ಸಫೂಲಾ। ಬೋಲತ ಖಗ ಮೃಗ ಅಲಿ ಅನುಕೂಲಾ॥
ತೇಹಿ ಅವಸರ ಬನ ಅಧಿಕ ಉಛಾಹೂ। ತ್ರಿಬಿಧ ಸಮೀರ ಸುಖದ ಸಬ ಕಾಹೂ॥ ೨॥
ಜಾಇ ನ ಬರನಿ ಮನೋಹರತಾಈ। ಜನು ಮಹಿ ಕರತಿ ಜನಕ ಪಹುನಾಈ॥
ತಬ ಸಬ ಲೋಗ ನಹಾಇ ನಹಾಈ। ರಾಮ ಜನಕ ಮುನಿ ಆಯಸು ಪಾಈ॥ ೩॥
ದೇಖಿ ದೇಖಿ ತರುಬರ ಅನುರಾಗೇ। ಜಹँ ತಹँ ಪುರಜನ ಉತರನ ಲಾಗೇ॥
ದಲ ಫಲ ಮೂಲ ಕಂದ ಬಿಧಿ ನಾನಾ। ಪಾವನ ಸುಂದರ ಸುಧಾ ಸಮಾನಾ॥ ೪॥

ಶ್ರೀರಾಮಚಂದ್ರನ ಅನುಗ್ರಹದಿಂದ ಅಲ್ಲಿನ ಎಲ್ಲ ಬೆಟ್ಟಗುಡ್ಡಗಳು 'ಕಾಮದ' ಗಿರಿಗಳಾದವು. ಯಾರು ಏನು ಬಯಸಿದರೂ ಅದನ್ನು ಕೊಡುತ್ತಿದ್ದವು. ಅವುಗಳ ದರ್ಶನಮಾತ್ರದಿಂದ ಎಲ್ಲ ದುಃಖಗಳನ್ನು ಪರಿಹರಿಸುತ್ತಿದ್ದುವು. ಅಲ್ಲಿಯ ನದಿತಟಾಕಗಳಲ್ಲಿ, ವನಭೂಮಿಗಳಲ್ಲಿ, ಕಾಡುಮೇಡುಗಳಲ್ಲಿ, ಪ್ರೇಮಾನಂದಗಳು ಉಕ್ಕಿಹರಿಯುತ್ತಿದ್ದುವು. ಲತಾ-ವೃಕ್ಷಗಳು ಫಲ-ಪುಷ್ಪಗಳಿಂದ ನಳನಳಿಸುತ್ತಿದ್ದವು. ಖಗ-ಮೃಗಗಳೂ, ಭೃಂಗಗಳೂ ಮನೋಹರವಾಗಿ ಧ್ವನಿಗೈಯುತ್ತಿದ್ದವು. ಆ ಸಮಯದಲ್ಲಿ ವನದಲ್ಲಿ ಎಲ್ಲಿಲ್ಲದ ಉತ್ಸಾಹ ತುಂಬಿತ್ತು. ಎಲ್ಲರಿಗೂ ಸುಖವನ್ನುಂಟುಮಾಡುವ ಶೀತಲ, ಮಂದ, ಸುಗಂಧಿತ ವಾಯುವು ಬೀಸುತ್ತಿತ್ತು. ಆ ವನದ ಮನೋಹರತೆ ವರ್ಣನಾತೀತ. ಪೃಥ್ವಿಯು ಜನಕನಿಗೆ ಆತಿಥ್ಯನೀಡುತ್ತಿರುವಂತಿತ್ತು. ಜನಕಪುರದ ಜನರೆಲ್ಲ ಮಿಂದು ಮಡಿಯುಟ್ಟು ಶ್ರೀರಾಮ, ಜನಕ ಹಾಗೂ ಮುನಿಯ ಅನುಮತಿ ಪಡೆದು, ವೃಕ್ಷಸೌಂದರ್ಯದಿಂದ ಆಕರ್ಷಿತರಾಗಿ ಹಾಯಾಗಿ ವಿಹರಿಸುತ್ತಿದ್ದು ಅಲ್ಲಲ್ಲೇ ಬೀಡುಬಿಟ್ಟರು. ಪವಿತ್ರವೂ, ಸುಂದರವೂ, ಅಮೃತತುಲ್ಯವಾದ ಕಂದಮೂಲ, ಫಲಪುಷ್ಪಗಳನ್ನೂ, (ಚೌ/೧-೪)

**ದೋ – ಸಾದರ ಸಬ ಕಹँ ರಾಮಗುರ ಪಠಏ ಭರಿ ಭರಿ ಭಾರ।**
**ಪೂಜಿ ಪಿತರ ಸುರ ಅತಿಥಿ ಗುರ ಲಗೇ ಕರನ ಫರಹಾರ॥ ೨೭೯॥**

ಶ್ರೀರಾಮನ ಗುರುಗಳಾದ ವಸಿಷ್ಠರು ಆದರದಿಂದ ಜನಕನ ಪರಿವಾರದ ಬಳಿಗೆ ಹೆಡಿಗೆಗಳಲ್ಲಿ ತುಂಬಿ-ತುಂಬಿ ಕಳಿಸಿದರು. ಅವರೆಲ್ಲರೂ ದೇವ, ಪಿತೃ, ಗುರು, ಅತಿಥಿ ಇವರುಗಳನ್ನು ಪೂಜಿಸಿ ಅವರಿಗೆ ಅರ್ಪಿಸಿ, ಫಲಹಾರ ಮಾಡಿದರು. (ದೋ/೨೭೯)

ಚೌ – ಎಹಿ ಬಿಧಿ ಬಾಸರ ಬೀತೇ ಚಾರೀ । ರಾಮು ನಿರಖಿ ನರ ನಾರಿ ಸುಖಾರೀ ॥
ದುಹು ಸಮಾಜ ಅಸಿ ರುಚಿ ಮನ ಮಾಹೀಂ । ಬಿನು ಸಿಯ ರಾಮ ಫಿರಬ ಭಲ ನಾಹೀಂ ॥ ೧ ॥
ಸೀತಾ ರಾಮ ಸಂಗ ಬನಬಾಸೂ । ಕೋಟಿ ಅಮರಪುರ ಸರಿಸ ಸುಪಾಸೂ ॥
ಪರಿಹರಿ ಲಖನ ರಾಮು ಬೈದೇಹೀ । ಜೆಹಿ ಘರು ಭಾವ ಬಾಮ ಬಿಧಿ ತೇಹೀ ॥ ೨ ॥
ದಾಹಿನ ದಇಉ ಹೋಇ ಜಬ ಸಬಹೀ । ರಾಮ ಸಮೀಪ ಬಸಿಅ ಬನ ತಬಹೀ ॥
ಮಂದಾಕಿನಿ ಮಜ್ಜನು ತಿಹು ಕಾಲಾ । ರಾಮ ದರಸು ಮುದ ಮಂಗಲ ಮಾಲಾ ॥ ೩ ॥
ಅಟನು ರಾಮ ಗಿರಿ ಬನ ತಾಪಸ ಥಲ । ಅಸನು ಅಮಿಅ ಸಮ ಕಂದಮೂಲ ಫಲ ॥
ಸುಖ ಸಮೇತ ಸಂಬತ ದುಇ ಸಾತಾ । ಪಲ ಸಮ ಹೋಹಿಂ ನ ಜನಿಅಹಿಂ ಜಾತಾ ॥ ೪ ॥

ಈ ವಿಧವಾಗಿ ನಾಲ್ಕು ದಿನಗಳು ಉರುಳಿದವು. ಶ್ರೀರಾಮದರ್ಶನದಿಂದ ಎಲ್ಲರೂ ಸುಖಿಗಳಾಗಿದ್ದರು. ಎರಡೂ ಕಡೆಯ ಜನರಿಗೆ ಸೀತಾರಾಮರನ್ನು ಕರೆದೊಯ್ಯದೆ ಮರಳಿಹೋಗುವುದು ಮನಸ್ಸಿಲ್ಲ. ಸೀತಾರಾಮರ ಸಂಗಡ ವನದಲ್ಲಿರುವುದೆಂದರೆ ಕೋಟಿ ಸ್ವರ್ಗಗಳಿಗೆ ಸಮಾನವೆಂದು ತಿಳಿದಿದ್ದರು. ವಿಧಿಯು ವಕ್ರಿಸಿದವರೇ ಸೀತಾರಾಮಲಕ್ಷ್ಮಣರನ್ನು ಬಿಟ್ಟು ಮನೆಯಲ್ಲಿ ಸಂತೋಷಗೊಳ್ಳುವರು. ದೈವವು ಅನುಕೂಲವಾಗಿದ್ದಾಗ ಮಾತ್ರ ಶ್ರೀರಾಮನೊಡನೆ ವಾಸಿಸುವ ಭಾಗ್ಯವು ಪ್ರಾಪ್ತವಾಗುವುದು. ತ್ರಿಕಾಲಗಳಲ್ಲಿಯೂ ಮಂದಾಕಿನಿಯಲ್ಲಿ ಸ್ನಾನ, ಆನಂದ ಶುಭಲಕ್ಷಣಸಂಪನ್ನನಾದ ಶ್ರೀರಾಮನ ದರ್ಶನ, ಶ್ರೀರಾಮನ ಪರ್ವತ (ಕಾಮದಗಿರಿ) ಪ್ರದಕ್ಷಿಣ, ವನಗಳಲ್ಲಿ, ತಾಪಸರ ತಾಣಗಳಲ್ಲಿ ಸಂಚಾರ, ಅಮೃತತುಲ್ಯ ಕಂದ, ಮೂಲ, ಫಲ ಭೋಜನ – ಇವೆಲ್ಲ ಇರುವಾಗ ಈರೇಳು (ಹದಿನಾಲ್ಕು) ವರ್ಷಗಳು ಒಂದರೆ ಕ್ಷಣದಲ್ಲಿನಮಗೆ ತಿಳಿಯದೇ ಕಳೆದುಹೋದಾವು. (ಚೌ/೧-೪)

**ದೋ – ಎಹಿ ಸುಖ ಜೋಗ ನ ಲೋಗ ಸಬ ಕಹಹಿಂ ಕಹಾಂ ಅಸ ಭಾಗು ।**
**ಸಹಜ ಸುಭಾಯಂ ಸಮಾಜ ದುಹು ರಾಮ ಚರನ ಅನುರಾಗು ॥ ೨೮೦ ॥**

'ನಾವು ಇಂತಹ ಸುಖಕ್ಕೆ ಯೋಗ್ಯರಲ್ಲ. ನಮಗಾದರೋ ಇಂತಹ ಭಾಗ್ಯ ಎಲ್ಲಿದೆ?' ಎಂದು ಎಲ್ಲರೂ ನುಡಿಯುತ್ತಿರುವರು. ಎರಡೂ ಕಡೆಯ ಜನರಿಗೆ ಶ್ರೀರಾಮನ ಚರಣಗಳಲ್ಲಿ ಸಹಜವಾದ ಪ್ರೇಮವು ತುಂಬಿದೆ. (ದೋ/೨೮೦)

## ಕೌಸಲ್ಯಾ-ಸುನಯನಾ ಸಂವಾದ

ಚೌ – ಎಹಿ ಬಿಧಿ ಸಕಲ ಮನೋರಥ ಕರಹೀಂ । ಬಚನ ಸಪ್ರೇಮ ಸುನತ ಮನ ಹರಹೀಂ ॥
ಸೀಯ ಮಾತು ತೆಹಿ ಸಮಯ ಪಠಾಈಂ । ದಾಸೀಂ ದೇಖಿ ಸುಅವಸರು ಆಈಂ ॥ ೧ ॥
ಸಾವಕಾಸ ಸುನಿ ಸಬ ಸಿಯ ಸಾಸೂ । ಆಯಉ ಜನಕರಾಜ ರನಿವಾಸೂ ॥
ಕೌಸಲ್ಯಾಂ ಸಾದರ ಸನಮಾನೀ । ಆಸನ ದಿಏ ಸಮಯ ಸಮ ಆನೀ ॥ ೨ ॥
ಸೀಲು ಸನೇಹು ಸಕಲ ದುಹು ಓರಾ । ದ್ರವಹಿಂ ದೇಖಿ ಸುನಿ ಕುಲಿಸ ಕಠೋರಾ ॥
ಪುಲಕ ಸಿಥಿಲ ತನ ಬಾರಿ ಬಿಲೋಚನ । ಮಹಿ ನಖ ಲಿಖನ ಲಗೀಂ ಸಬ ಸೋಚನ ॥ ೩ ॥
ಸಬ ಸಿಯ ರಾಮ ಪ್ರೀತಿ ಕಿ ಸಿ ಮೂರತಿ । ಜನು ಕರುನಾ ಬಹು ಬೇಷ ಬಿಸೂರತಿ ॥
ಸೀಯ ಮಾತು ಕಹ ಬಿಧಿ ಬುಧಿ ಬಾಂಕೀ । ಜೋ ಪಯ ಫೇನು ಫೋರ ಪಬಿ ಟಾಂಕೀ ॥ ೪ ॥

ಎಲ್ಲರೂ ಪ್ರೇಮಭರಿತವಾದ ತಮ್ಮ ಮನೋರಥಗಳನ್ನು ಹೀಗೆ ಪ್ರಕಟಿಸುತ್ತಿದ್ದರು. ಅವರ ಭಕ್ತಿಭರಿತ ಮಾತುಗಳು ಕೇಳಿದವರ ಮನಸ್ಸನ್ನು ಸೂರೆಗೊಳ್ಳುತ್ತಿದ್ದವು. ಅದೇ ವೇಳೆಗೆ ಸೀತೆಯ ತಾಯಿಯಾದ ಸುನಯನಾದೇವಿಯು ಕಳುಹಿಸಿದ ದಾಸಿಯರು ಕೌಸಲ್ಯೆಯೇ ಮೊದಲಾದವರನ್ನು ಕಾಣಲು ಸೂಕ್ತ ಅವಕಾಶವನ್ನು ಕಾಣಲು ಆಗಮಿಸಿದರು. ಜಾನಕಿಯ ಅತ್ತೆಯರೆಲ್ಲ ಬಿಡುವಿನಲ್ಲಿದ್ದಾರೆ ಎಂದು ದಾಸಿಯರಿಂದ ತಿಳಿದುಕೊಂಡು ಜನಕನ ರಾಣೀವಾಸವು ಅವರನ್ನು ಕಾಣಲು ಬಂದಿತು. ಕೌಸಲ್ಯೆಯು ಆದರದಿಂದ ಅವರನ್ನು ಬರಮಾಡಿಕೊಂಡು, ಸಮಯೋಚಿತವಾದ ಆಸನಗಳನ್ನು ನೀಡಿದಳು. ಆ ಉಭಯಪಕ್ಷದವರ ಅನ್ಯೋನ್ಯಾನುರಾಗವನ್ನೂ, ಸೌಶೀಲ್ಯವನ್ನೂ, ಶೋಕವಿಚಾರವನ್ನೂ ನೋಡಿದರೆ, ಕೇಳಿದರೆ ಕಠೋರ ವಜ್ರವೂ ಕೂಡ ಕರಗಿ ನೀರಾಗುವಂತಿತ್ತು. ಅವರ ಶರೀರಗಳು ಪುಲಕಿತವಾಗಿದ್ದು, ಶಿಥಿಲವಾಗಿದ್ದವು. ಕಣ್ಣುಗಳಲ್ಲಿ ಶೋಕ-ಪ್ರೇಮಾಶ್ರುಗಳು ತುಂಬಿದ್ದವು. ಎಲ್ಲರೂ ವಿಚಾರಗ್ರಸ್ತರಾಗಿ ತಮ್ಮ ಕಾಲಿನ ಉಗುರುಗಳಿಂದ ನೆಲವನ್ನು ಕೆರೆಯುತ್ತಾ ಯೋಚಿಸತೊಡಗಿದರು. ಅವರೆಲ್ಲರೂ

ಸೀತಾರಾಮರ ಪ್ರೇಮವೇ ಮೈವೆತ್ತುತ್ತಿದ್ದರು. ಸ್ವತಃ ಕರುಣೆಯೇ ಅನೇಕರೂಪವನ್ನಾಂತು ಅಳುತ್ತಿರುವಂತೆ ಕಾಣುತ್ತಿತ್ತು. ಸೀತೆಯ ತಾಯಿ ಸುನಯನಾದೇವಿಯು ಹೇಳಿದಳು – 'ವಿಧಿಯ ಬುದ್ಧಿಯು ಬಲು ವಕ್ರ. ಅದು ಹಾಲಿನ ಕೆನೆಯಂತಹ ಕೋಮಲವಸ್ತುವನ್ನು ಕಠೋರವಾದ ವಜ್ರದಿಂದ ಒಡೆಯುತ್ತಿದೆ. (ಅಂದರೆ ನೀವು ಹೆಚ್ಚಿನ ಕೋಮಲರು, ನಿರ್ದೋಷಿಗಳು, ಆದರೆ ನಿಮಗೆ ವಿಪತ್ತಿನ ಮೇಲೆ ವಿಪತ್ತು ಬಂದೊದಗಿದೆ.) (ಚೌ/೧-೪)

**ದೋ – ಸುನಿಅ ಸುಧಾ ದೇಖಿಅಹಿಂ ಗರಲ ಸಬ ಕರತೂತಿ ಕರಾಲ।**
**ಜಹँ ತಹँ ಕಾಕ ಉಲೂಕ ಬಕ ಮಾನಸ ಸಕೃತ ಮರಾಲ ॥ ೨೮೧ ॥**

ಅಮೃತವೆಂಬುದು ಕೇವಲ ಕೇಳಲು ಸಿಗುತ್ತದೆ, ಆದರೆ ಅದು ಪ್ರತ್ಯಕ್ಷವಾಗಿ ದೊರಕುವುದಿಲ್ಲ. ಆದರೆ ವಿಷವು ಮಾತ್ರ ಎಲ್ಲ ಕಡೆಗಳಲ್ಲಿ ಕಂಡು ಬರುತ್ತದೆ. ವಿಧಾತನ ಕೆಲಸಗಳೆಲ್ಲವೂ ಭಯಂಕರ. ಕಾಗೆ, ಗೂಬೆಗಳೂ, ಬಕಪಕ್ಷಿಗಳು ಎಲ್ಲೆಡೆ ಕಂಡು ಬರುತ್ತವೆ. ಆದರೆ ಹಂಸಗಳು ಮಾತ್ರ ಕೇವಲ ಮಾನಸ ಸರೋವರದಲ್ಲಿಯೇ ಇರುತ್ತವೆ.' (ದೋ/೨೮೧)

**ಚೌ – ಸುನಿ ಸಸೋಚ ಕಹ ದೇಬಿ ಸುಮಿತ್ರಾ। ಬಿಧಿ ಗತಿ ಬಡಿ ಬಿಪರೀತ ಬಿಚಿತ್ರಾ॥**
**ಜೋ ಸೃಜಿ ಪಾಲಇ ಹರಇ ಬಹೋರೀ। ಬಾಲ ಕೇಲಿ ಸಮ ಬಿಧಿ ಮತಿ ಭೋರೀ ॥ ೧ ॥**
**ಕೌಸಲ್ಯಾ ಕಹ ದೋಸು ನ ಕಾಹೂ। ಕರಮ ಬಿಬಸ ದುಖ ಸುಖ ಛತಿ ಲಾಹೂ॥**
**ಕಠಿನ ಕರಮ ಗತಿ ಜಾನ ಬಿಧಾತಾ। ಜೋ ಸುಭ ಅಸುಭ ಸಕಲ ಫಲ ದಾತಾ ॥ ೨ ॥**
**ಈಸ ರಜಾಇ ಸೀಸ ಸಬಹೀ ಕೇಂ। ಉತಪತಿ ಥಿತಿ ಲಯ ಬಿಷಹು ಅಮೀ ಕೇಂ ॥**
**ದೇಬಿ ಮೋಹ ಬಸ ಸೋಚಿಅ ಬಾದೀ। ಬಿಧಿ ಪ್ರಪಂಚು ಅಸ ಅಚಲ ಅನಾದೀ ॥ ೩ ॥**
**ಭೂಪತಿ ಜಿಅಬ ಮರಬ ಉರ ಆನೀ। ಸೋಚಿಅ ಸಖಿ ಲಖಿ ನಿಜ ಹಿತ ಹಾನೀ॥**
**ಸೀಯ ಮಾತು ಕಹ ಸತ್ಯ ಸುಬಾನೀ। ಸುಕೃತೀ ಅವಧಿ ಅವಧಪತಿ ರಾನೀ॥ ೪ ॥**

ಸುನಯನಾದೇವಿಯು ಹೇಳಿದ ಈ ಮಾತನ್ನು ಕೇಳಿ ಸುಮಿತ್ರಾದೇವಿಯು, ಶೋಕದಿಂದ ಹೇಳಿದಳು – 'ವಿಧಾತನ ಗತಿಯು ತೀರ ವಿಚಿತ್ರ ಹಾಗೂ ವಿಪರೀತವಾಗಿದೆ. ಜಗತ್ತನ್ನು ಸೃಷ್ಟಿಸಿ ಪಾಲಿಸುವವನೇ ಸಂಹಾರವನ್ನೂ ಮಾಡುವನು. ವಿಧಿಯ ಬುದ್ಧಿಯು ಮಕ್ಕಳಾಟದಂತೆ ವಿವೇಕಶೂನ್ಯವಾದುದು.' ಮತ್ತೆ ಕೌಸಲ್ಯೆಯು ಹೇಳಿದಳು – ''ಇದರಲ್ಲಿ ಯಾರ ದೋಶವೂ ಇಲ್ಲ. ಸುಖ-ದುಃಖಗಳು, ಲಾಭ-ಹಾನಿಗಳು, ಎಲ್ಲವೂ ಕರ್ಮಾಧೀನ. ಕರ್ಮಗತಿ ಅತ್ಯಂತ ದುರ್ವಿಜ್ಞೇಯವಾದುದು. ಅದನ್ನು ಶುಭಾಶುಭ ಫಲನೀಡುವ ವಿಧಾತನೇ ಬಲ್ಲನು. ಈಶ್ವರನ ಆದೇಶದಂತೆಯೇ ಎಲ್ಲವೂ ನಡೆಯುತ್ತದೆ. ಉತ್ಪತ್ತಿ, ಸ್ಥಿತಿ, ಲಯ, ಅಮೃತ, ವಿಷ ಇವೆಲ್ಲವೂ ಈಶ್ವರಾಧೀನವೇ. ದೇವಿ! ಮೋಹವಶರಾಗಿ ಚಿಂತಿಸುವುದು ವ್ಯರ್ಥ. ವಿಧಾತನು ಸೃಷ್ಟಿಸಿದ ಭವಜಾಲವು ಅಚಲವೂ, ಅನಾದಿಯೂ ಆಗಿದೆ. ಸಖಿಯೇ! ಮಹಾರಾಜರ ಜೀವಿತ-ಮರಣದ ಕುರಿತು ದುಃಖಿಸುವುದಕ್ಕೆ ಕಾರಣ ಕೇವಲ ನಮ್ಮ ಸ್ವಾರ್ಥವೇ ಆಗಿದೆ. ಇಂತಹ ಸಂಘಟನೆ ಲೋಕದಲ್ಲಿ ಸಹಜವೇ.'' ಬಳಿಕ ಸುನಯನಾದೇವಿಯು ಹೇಳಿದಳು – ''ನೀವು ನುಡಿದ ಮಾತುಗಳು ನಿಜವಾದುವು, ಉತ್ತಮವಾದುವುಗಳು. ನೀವು ಎಷ್ಟೇ ಆಗಲೀ, ದಶರಥಮಹಾರಾಜರ ರಾಣಿಯರಲ್ಲವೇ? (ಚೌ/೧-೪)

**ದೋ – ಲಖನು ರಾಮು ಸಿಯ ಜಾಹುँ ಬನ ಭಲ ಪರಿನಾಮ ನ ಪೋಚು।**
**ಗಹಬರಿ ಹಿಯँ ಕಹ ಕೌಸಿಲಾ ಮೋಹಿ ಭರತ ಕರ ಸೋಚು ॥ ೨೮೨ ॥**

ಕೌಸಲ್ಯಾದೇವಿಯು ದುಃಖ ತುಂಬಿದ ಹೃದಯದಿಂದ ನುಡಿದಳು – ''ರಾಮ, ಲಕ್ಷ್ಮಣ, ಸೀತೆ ಇವರುಗಳು ಕಾಡಿಗೆ ಹೋಗುವುದರಿಂದ ಒಳಿತೇ ಆಗುವುದು. ಆದರೆ ನನಗೆ ಭರತನದೇ ಚಿಂತೆ. (ದೋ/೨೮೨)

**ಚೌ – ಈಸ ಪ್ರಸಾದ ಅಸೀಸ ತುಮ್ಹಾರೀ। ಸುತ ಸುತಬಧೂ ದೇವಸರಿ ಬಾರೀ ॥**
**ರಾಮು ಸಪಥ ಮೈಂ ಕೀನ್ಹಿ ನ ಕಾಊ। ಸೋ ಕರಿ ಕಹಉँ ಸಖೀ ಸತಿ ಭಾಊ ॥ ೧ ॥**
**ಭರತ ಸೀಲ ಗುನ ಬಿನಯ ಬಡಾಈ। ಭಾಯಪ ಭಗತಿ ಭರೋಸ ಭಲಾಈ॥**
**ಕಹತ ಸಾರದಹು ಕರ ಮತಿ ಹೀಚೇ। ಸಾಗರ ಸೀಪ ಕಿ ಜಾಹಿಂ ಉಲೀಚೇ ॥ ೨ ॥**
**ಜಾನಉँ ಸದಾ ಭರತ ಕುಲದೀಪಾ। ಬಾರ ಬಾರ ಮೋಹಿ ಕಹೇಉ ಮಹೀಪಾ॥**
**ಕಸೇಂ ಕನಕು ಮನಿ ಪಾರಿಖಿ ಪಾಏँ। ಪುರುಷ ಪರಿಖಿಅಹಿಂ ಸಮಯँ ಸುಭಾಏँ॥ ೩ ॥**
**ಅನುಚಿತ ಆಜು ಕಹಬ ಅಸ ಮೋರಾ। ಸೋಕ ಸನೇಹँ ಸಯಾನಪ ಥೋರಾ ॥**
**ಸುನಿ ಸುರಸರಿ ಸಮ ಪಾವನಿ ಬಾನೀ। ಭಈँ ಸನೇಹ ಬಿಕಲ ಸಬ ರಾನೀ ॥ ೪ ॥**

ಈಶ್ವರಾನುಗ್ರಹದಿಂದ, ನಿಮ್ಮ ಆಶೀರ್ವಾದದಿಂದ ನನ್ನ ನಾಲ್ಕೂ ಪುತ್ರರೂ, ಸೊಸೆಯರೂ ಗಂಗಾಜಲದಂತೆ ಪವಿತ್ರರು. ರಾಣೀ! ನಾನು ಎಂದೂ ಶ್ರೀರಾಮನ ಮೇಲೆ ಆಣೆಯಿಟ್ಟವಳಲ್ಲ. ಆದರೆ ಇಂದು ಶ್ರೀರಾಮನ ಮೇಲೆ ಆಣೆಯನಿಟ್ಟು ನಿಜವನ್ನು ಹೇಳುತ್ತೇನೆ – ಭರತನ ಶೀಲ, ಗುಣ, ನಮ್ರತೆ, ಹಿರಿಮೆ, ಭ್ರಾತೃತ್ವ, ಭಕ್ತಿ, ಭರವಸೆ ಮತ್ತು ಒಳ್ಳೆಯತನವನ್ನು ವರ್ಣಿಸುವುದರಲ್ಲಿ ಸರಸ್ವತಿಯೂ ಹಿಂಜರಿದಾಳು. ಒಂದು ಮುತ್ತಿನ ಚಿಪ್ಪಿನಿಂದ ಸಮುದ್ರದ ನೀರನ್ನು ಎರಚಿ ಬರಿದಾಗಿಸಬಹುದೇ? ನಾನು ಯಾವಾಗಲೂ ಭರತನನ್ನು ನಮ್ಮ ಕುಲದೀಪಕನೆಂದೇ ಭಾವಿಸುತ್ತೇನೆ. ಮಹಾರಾಜರೂ ಇದೇ ಮಾತನ್ನು ಪದೇ-ಪದೇ ಹೇಳುತ್ತಿದ್ದರು. ಚಿನ್ನವನ್ನು ಒರೆಗಲ್ಲಿಗೆ ತಿಕ್ಕಿದಾಗಲೇ, ರತ್ನವು ರತ್ನಪರೀಕ್ಷಕನ ಕೈಗೆ ಸಿಕ್ಕಿದಾಗಲೇ, ನಿಜವಾದ ಬೆಲೆ ಗೊತ್ತಾಗುವುದು. ಹಾಗೆಯೇ ವ್ಯಕ್ತಿಯ ಪರೀಕ್ಷೆ ಸಮಯ ಬಿದ್ದಾಗ ಅವನ ನಡತೆಯಿಂದ ಅರಿವಿಗೆ ಬರುವುದು. ಆದರೆ ಇಂದು ನಾನು ಹೀಗೆ ಹೇಳುವುದೂ ಅನುಚಿತವಾದೀತು. ಶೋಕ, ಸ್ನೇಹಗಳಲ್ಲಿ ವಿವೇಕವು ಕುಗ್ಗುತ್ತದೆ.'' (ನಾನು ಪ್ರೇಮವಶದಿಂದ ಭರತನನ್ನು ಈ ರೀತಿ ಹೊಗಳುತ್ತಿದ್ದೇನೆ ಎಂದು ಜನರು ಅಂದಾರು.) ಗಂಗೆಯಂತಹ ಪವಿತ್ರವಾದ ಕೌಸಲ್ಯಾದೇವಿಯ ವಾಣಿಯನ್ನು ಕೇಳಿ ಎಲ್ಲ ರಾಣಿಯರು ಸ್ನೇಹವಿಕಲರಾದರು. (ಚೌ/೧-೪)

**ದೋ – ಕೌಸಲ್ಯಾ ಕಹ ಧೀರ ಧರಿ ಸುನಹು ದೇಬಿ ಮಿಥಿಲೇಸಿ।**
**ಕೋ ಬಿಬೇಕನಿಧಿ ಬಲ್ಲಭಹಿ ತುಮ್ಹಹಿ ಸಕಇ ಉಪದೇಸಿ ॥ ೨೮೩ ॥**

ಕೌಸಲ್ಯೆಯು ಮತ್ತೆ ಧೈರ್ಯತಳೆದು ಹೇಳಿದಳು – ಓ ದೇವಿ, ಮಿಥಿಲೇಶ್ವರಿ! ವಿವೇಕನಿಧಿಯಾದ ಜನಕ ಮಹಾರಾಜರ ವಲ್ಲಭೆಯಾದ ನಿಮಗೆ ಯಾರು ಉಪದೇಶ ನೀಡಬಲ್ಲರು? (ದೋ/೨೮೩)

**ಚೌ – ರಾನಿ ರಾಯ ಸನ ಅವಸರು ಪಾಈ। ಅಪನೀ ಭಾಂತಿ ಕಹಬ ಸಮುಝಾಈ ॥**
**ರಖಿಅಹಿಂ ಲಖನು ಭರತು ಗವನಹಿಂ ಬನ। ಜೌಂ ಯಹ ಮತ ಮಾನೈ ಮಹೀಪ ಮನ ॥ ೧ ॥**
**ತೌ ಭಲ ಜತನು ಕರಬ ಸುಬಿಚಾರೀ। ಮೋರೇಂ ಸೋಚು ಭರತ ಕರ ಭಾರೀ॥**
**ಗೂಢ ಸನೇಹ ಭರತ ಮನ ಮಾಹೀಂ। ರಹೇಂ ನೀಕ ಮೋಹಿ ಲಾಗತ ನಾಹೀಂ॥ ೨ ॥**
**ಲಖಿ ಸುಭಾಉ ಸುನಿ ಸರಲ ಸುಬಾನೀ। ಸಬ ಭಇ ಮಗನ ಕರುನ ರಸ ರಾನೀ ॥**
**ನಭ ಪ್ರಸೂನ ಝರಿ ಧನ್ಯ ಧನ್ಯ ಧುನಿ। ಸಿಥಿಲ ಸನೇಹ್ ಸಿದ್ಧ ಜೋಗೀ ಮುನಿ॥ ೩ ॥**
**ಸಬು ರನಿವಾಸು ಬಿಥಕಿ ಲಖಿ ರಹೇಊ। ತಬ ಧರಿ ಧೀರ ಸುಮಿತ್ರಾಂ ಕಹೇಊ ॥**
**ದೇಬಿ ದಂಡ ಜುಗ ಜಾಮಿನಿ ಬೀತೀ। ರಾಮ ಮಾತು ಸುನಿ ಉಠೀ ಸಪ್ರೀತೀ॥ ೪ ॥**

ಮಹಾರಾಣಿಯವರೇ! ಅವಕಾಶ ದೊರೆತಾಗ ನೀವು ಮಹಾರಾಜರಲ್ಲಿ – ಲಕ್ಷ್ಮಣನು ಅಯೋಧ್ಯೆಯಲ್ಲಿ ಇರುವಂತೆಯೂ, ಶ್ರೀರಾಮನ ಸೇವೆಗಾಗಿ ಭರತನನ್ನು ಕಾಡಿಗೆ ಹೋಗುವಂತೆ ಹೇಳಿರಿ. ಈ ವಿಷಯ ಅರಸರ ಮನಸ್ಸಿಗೆ ಹಿಡಿಸಿದರೆ, ಸರಿಕಂಡರೆ ಅವರು ಅದಕ್ಕಾಗಿ ಯತ್ನಿಸಲಿ. ನನಗೆ ಭರತನ ಕುರಿತೇ ದೊಡ್ಡ ಚಿಂತೆ. ಭರತನಿಗೆ ಶ್ರೀರಾಮನ ಮೇಲೆ ಅಪಾರವಾದ ಗೂಢಪ್ರೇಮವಿದೆ. ಅವನು ಅಯೋಧ್ಯೆಯಲ್ಲಿರುವುದು ಸಮುಚಿತವೆಂದು ಕಾಣುವುದಿಲ್ಲ. (ಅಯೋಧ್ಯೆಯಲ್ಲೇ ಇದ್ದರೆ ಪ್ರೇಮವಶದಿಂದ ಅವನು ದೇಹತ್ಯಾಗವನ್ನೂ ಮಾಡಬಹುದು.) ಕೌಸಲ್ಯಾದೇವಿಗೆ ಭರತನ ಮೇಲೆ ಇರುವ ಪ್ರೇಮಾತಿರೇಕ ಸ್ಥಿತಿಯನ್ನು ಗಮನಿಸಿ, ಆಕೆಯ ನಿಷ್ಕಪಟ ವಚನಗಳನ್ನು ಕೇಳಿ, ಎಲ್ಲ ರಾಣಿಯರು ಕರುಣರಸದಲ್ಲಿ ಮುಳುಗಿದರು. ಆಕಾಶದಿಂದ ಹೂವಿನ ಸುರಿಮಳೆಯಾಯಿತು. ''ಧನ್ಯ-ಧನ್ಯ'' ಎಂಬ ಜಯಘೋಷ ಮೊಳಗಿತು. ಸಿದ್ಧರು, ಯೋಗಿಗಳು, ಮುನಿಗಳು ಭರತನ ರಾಮಪ್ರೇಮದಿಂದ ಪರವಶರಾದರು. ಈ ಎಲ್ಲ ಪರಿಸ್ಥಿತಿಯನ್ನು ಕಂಡು ಇಡೀ ರಾಣೀವಾಸವು ಸ್ತಬ್ಧವಾಯಿತು. ಆಗ ಸುಮಿತ್ರಾದೇವಿಯು ಧೈರ್ಯತಂದುಕೊಂಡು ಹೇಳಿದಳು – 'ದೇವಿ! ಎರಡು ಗಳಿಗೆ ರಾತ್ರಿ ಕಳೆದಿದೆ.'' ಇದನ್ನು ಕೇಳಿದ ರಾಮಜನನಿ ಕೌಸಲ್ಯಾದೇವಿಯು ಅಲ್ಲಿಂದ ಎದ್ದಳು. (ಚೌ/೧-೪)

**ದೋ – ಬೇಗಿ ಪಾಉ ಧಾರಿಅ ಥಲಹಿ ಕಹ ಸನೇಹ್ ಸತಿಭಾಯ।**
**ಹಮರೇಂ ತೌ ಅಬ ಈಸ ಗತಿ ಕೈ ಮಿಥಿಲೇಸ ಸಹಾಯ ॥ ೨೮೪ ॥**

ಕೌಸಲ್ಯೆಯು ಪ್ರೇಮ, ಸದ್ಭಾವದಿಂದ ನುಡಿದಳು – ಈಗ ನೀವು ಬೇಗನೇ ಬಿಡದಿಗೆ ಮರಳಿರಿ. ನಮಗಾದರೋ ಈಗ ದೇವರೆ ಗತಿಯಾಗಿದ್ದಾನೆ ಅಥವಾ ಮಿಥಿಲೇಶ್ವರ ಜನಕನೇ ಸಹಾಯಕನಾಗಿದ್ದಾನೆ. (ದೋ/೨೮೪)

**ಚೌ – ಲಖಿ ಸನೇಹ ಸುನಿ ಬಚನ ಬಿನೀತಾ। ಜನಕಪ್ರಿಯಾ ಗಹ ಪಾಯ ಪುನೀತಾ॥**
**ದೇಬಿ ಉಚಿತ ಅಸಿ ಬಿನಯ ತುಮ್ಹಾರೀ। ದಸರಥ ಘರಿನಿ ರಾಮ ಮಹತಾರೀ ॥ ೧ ॥**
**ಪ್ರಭು ಅಪನೇ ನೀಚಹು ಆದರಹೀಂ। ಅಗಿನಿ ಧೂಮ ಗಿರಿ ಸಿರ ತಿನು ಧರಹೀಂ ॥**
**ಸೇವಕು ರಾಉ ಕರಮ ಮನ ಬಾನೀ। ಸದಾ ಸಹಾಯ ಮಹೇಸು ಭವಾನೀ ॥ ೨ ॥**

ರಉರೇ ಅಂಗ ಜೋಗು ಜಗ ಕೋ ಹೈ। ದೀಪ ಸಹಾಯ ಕಿ ದಿನಕರ ಸೋಹೈ॥
ರಾಮು ಜಾಇ ಬನು ಕರಿ ಸುರ ಕಾಜೂ। ಅಚಲ ಅವಧಪುರ ಕರಿಹಹಿಂ ರಾಜೂ॥ ೩ ॥
ಅಮರ ನಾಗ ನರ ರಾಮ ಬಾಹುಬಲ। ಸುಖ ಬಸಿಹಹಿಂ ಅಪನೇಂ ಅಪನೇಂ ಥಲ॥
ಯಹ ಸಬ ಜಾಗಬಲಿಕ ಕಹಿ ರಾಖಾ। ದೇಬಿ ನ ಹೋಇ ಮುಧಾ ಮುನಿ ಭಾಷಾ ॥ ೪ ॥

ಕೌಸಲ್ಯೆಯ ಪ್ರೇಮವನ್ನು ಕಂಡು, ಆಕೆಯ ವಿನಮ್ರ ವಚನಗಳನ್ನು ಕೇಳಿ, ಸುನಯನಾದೇವಿಯು ಆಕೆಯ ಪವಿತ್ರಪಾದಗಳನ್ನು ಹಿಡಿದುಕೊಂಡು – ''ದೇವಿ! ನೀವು ದಶರಥ ಮಹಾರಾಜರ ಧರ್ಮಪತ್ನಿಯೂ, ಶ್ರೀರಾಮನ ಜನನಿಯೂ ಆಗಿರುವಿರಿ. ಈ ನಮ್ರತೆಯು ನಿಮಗೆ ಸಹಜವೇ. ಹಿರಿಯರಾದವರು ತಮಗಿಂತ ಕೆಳಗಿನವರನ್ನೂ ಆದರಿಸುತ್ತಾರೆ. ಅಗ್ನಿಯು ಹೊಗೆಯನ್ನು, ಪರ್ವತವು ತೃಣವನ್ನು ತಲೆಯಮೇಲೆ ಹೊತ್ತುಕೊಳ್ಳುತ್ತದೆ. ನಮ್ಮ ಮಹಾರಾಜರಂತೂ ತ್ರಿಕರಣಪೂರ್ವಕವಾಗಿ ನಿಮ್ಮ ಸೇವಕರು. ಯಾವಾಗಲೂ ಸಹಾಯಕರೆಂದರೆ ಶಿವಪಾರ್ವತಿಯರೇ. ನಿಮಗೆ ಸಹಾಯಮಾಡುವ ಯೋಗ್ಯತೆ ಈ ಜಗತ್ತಿನಲ್ಲಿ ಯಾರಿಗಿದೆ? ದೀಪವು ಸೂರ್ಯನಿಗೆ ಸಹಾಯಕನಾದರೆ ಶೋಭಿಸಿತೇ? ಶ್ರೀರಾಮಚಂದ್ರನು ಕಾಡಿಗೆ ಹೋಗಿ, ದೇವತೆಗಳ ಕಾರ್ಯವನ್ನು ನೆರವೇರಿಸಿ, ಮರಳಿ ಬಂದು ಅಯೋಧ್ಯೆಯಲ್ಲಿ ಅಚಲವಾದ ರಾಜ್ಯವನ್ನಾಳುವನು. ಶ್ರೀರಾಮನ ಬಾಹುಬಲದಿಂದ ಎಲ್ಲ ದೇವತೆಗಳೂ, ನಾಗರೂ, ನರರೂ, ತಮ್ಮ-ತಮ್ಮ ಲೋಕಗಳಲ್ಲಿ ಸುಖವಾಗಿ ವಾಸಿಸುವರು. ಇವೆಲ್ಲವನ್ನು ಯಾಜ್ಞ್ಯವಲ್ಕ್ಯ ಮುನಿಗಳು ಮೊದಲೇ ಹೇಳಿದ್ದಾರೆ. ದೇವಿ! ಮುನಿಗಳ ವಚನಗಳು ಸುಳ್ಳಾಗದು.'' (ಚೌ/೧-೪)

**ದೋ – ಅಸ ಕಹಿ ಪಗ ಪರಿ ಪೇಮ ಅತಿ ಸಿಯ ಹಿತ ಬಿನಯ ಸುನಾಇ।**
**ಸಿಯ ಸಮೇತ ಸಿಯಮಾತು ತಬ ಚಲೀ ಸುಆಯಸು ಪಾಇ॥ ೨೮೫ ॥**

ಹೀಗೆ ಹೇಳಿ ಸುನಯನಾದೇವಿಯು ಭಕ್ತಿಯಿಂದ ಕೌಸಲ್ಯೆಯ ಚರಣಗಳಿಗೆರಗಿ, ಸೀತೆಯನ್ನು ತನ್ನ ಜೊತೆ ಕಳಿಸಿ ಕೊಡಬೇಕೆಂದು ಕೇಳಿಕೊಂಡಳು. ಆಕೆಯ ಅನುಮತಿಯನ್ನು ಪಡೆದು ಸೀತಾದೇವಿಯೊಡಗೂಂಡು ತನ್ನ ಬಿಡಾರಕ್ಕೆ ಹೊರಟು ಹೋದಳು. (ದೋ/೨೮೫)

ಚೌ – ಪ್ರಿಯ ಪರಿಜನಹಿ ಮಿಲೀ ಬೈದೇಹೀ। ಜೋ ಜೆಹಿ ಜೋಗು ಭಾಂತಿ ತೆಹಿ ತೇಹೀ॥
ತಾಪಸ ಬೇಷ ಜಾನಕೀ ದೇಖೀ। ಭಾ ಸಬು ಬಿಕಲ ಬಿಷಾದ ಬಿಸೇಷೀ॥ ೧ ॥
ಜನಕ ರಾಮು ಗುರ ಆಯಸು ಪಾಈ। ಚಲೇ ಥಲಹಿ ಸಿಯ ದೇಖೀ ಆಈ॥
ಲೀನ್ಹಿ ಲಾಇ ಉರ ಜನಕ ಜಾನಕೀ। ಪಾಹುನಿ ಪಾವನ ಪೇಮ ಪ್ರಾನ ಕೀ॥ ೨ ॥
ಉರ ಉಮಗೆಉ ಅಂಬುಧಿ ಅನುರಾಗೂ। ಭಯಉ ಭೂಪ ಮನು ಮನಹುँ ಪಯಾಗೂ॥
ಸಿಯ ಸನೇಹ ಬಟು ಬಾಢತ ಜೋಹಾ। ತಾ ಪರ ರಾಮ ಪೇಮ ಸಿಸು ಸೋಹಾ॥ ೩ ॥
ಚಿರಜೀವೀ ಮುನಿ ಗ್ಯಾನ ಬಿಕಲ ಜನು। ಬೂಡತ ಲಹೆಉ ಬಾಲ ಅವಲಂಬನು॥
ಮೋಹ ಮಗನ ಮತಿ ನಹಿಂ ಬಿದೇಹ ಕೀ। ಮಹಿಮಾ ಸಿಯ ರಘುಬರ ಸನೇಹ ಕೀ॥ ೪ ॥

ವೈದೇಹಿಯು ತನ್ನ ಪ್ರಿಯ ಜನರನ್ನೂ, ಪರಿಜನರನ್ನೂ, ಎಲ್ಲರನ್ನೂ ಯಥಾಯೋಗ್ಯವಾಗಿ ಭೇಟಿಯಾದಳು. ತಾಪಸ ವೇಷದಲ್ಲಿದ್ದ ಜಾನಕಿಯನ್ನು ಕಂಡು ಅವರೆಲ್ಲರೂ ಅತ್ಯಂತ ವ್ಯಾಕುಲರಾದರು. ಜನಕಮಹಾರಾಜನು ಶ್ರೀರಾಮನ ಗುರುಗಳಾದ ವಸಿಷ್ಠರ ಅಪ್ಪಣೆ ಪಡೆದು ಬಿಡಾರಕ್ಕೆ ಬಂದು, ಅಲ್ಲಿಗೆ ಬಂದಿದ್ದ ತನ್ನ ಪ್ರಾಣಗಳಿಂದಲೂ ಹೆಚ್ಚು ಪ್ರಿಯಳಾದ ಸೀತೆಯನ್ನು ಪ್ರೇಮದಿಂದ ಅಪ್ಪಿಕೊಂಡನು. ಅವನ ಹೃದಯದಲ್ಲಿ ಅನುರಾಗದ ಸಾಗರವೇ ಉಕ್ಕಿಹರಿಯಿತು. ಜನಕನ ಮನಸ್ಸು ಪ್ರಯಾಗದಂತಾಯಿತು. ಆ ಸಮುದ್ರದಲ್ಲಿ ಸೀತಾದೇವಿಯ ಪ್ರೇಮವೆಂಬ ಒಂದು ಅಕ್ಷಯವಟವು ಬೆಳೆಯುವುತ್ತಿರುವುದನ್ನು ಅವನು ನೋಡಿದನು. ಆ ವಟವೃಕ್ಷದ ಮೇಲೆ ಶ್ರೀರಾಮನ ಪ್ರೇಮವೆಂಬ ಬಾಲಮುಕುಂದನು ಶೋಭಿಸುತ್ತಿದ್ದನು. ಜನಕನ ಜ್ಞಾನವೆಂಬ ಚಿರಂಜೀವಿ ಮುನಿ ಮಾರ್ಕಂಡೇಯನು ವ್ಯಾಕುಲನಾಗಿ ಮುಳುಗುತ್ತಾ-ಏಳುತ್ತಾ ಆ ರಾಮಪ್ರೇಮವೆಂಬ ಶಿಶುವಿನ ಆಶ್ರಯಪಡೆದು ಬದುಕಿದನು. ವಸ್ತುತಃ ವಿದೇಹ ರಾಜನ ಬುದ್ಧಿಯು ಮೋಹದಲ್ಲಿ ಮುಳುಗಿರಲಿಲ್ಲ. ಇದು ಸೀತಾರಾಮರ ಮೇಲೆ ಇರುವ ಪ್ರೇಮದ ಮಹಿಮೆಯಾಗಿದೆ. (ಅದು ಅಂತಹ ಜ್ಞಾನಿಯ ಜ್ಞಾನವನ್ನು ಅಲುಗಾಡಿಸಿತು.) (ಚೌ/೧-೪)

**ದೋ – ಸಿಯ ಪಿತು ಮಾತು ಸನೇಹ ಬಸ ಬಿಕಲ ನ ಸಕೀ ಸँಭಾರಿ।**
**ಧರನಿಸುತಾँ ಧೀರಜು ಧರೆಉ ಸಮಉ ಸುಧರಮು ಬಿಚಾರಿ॥ ೨೮೬ ॥**

ತಂದೆ-ತಾಯಿಯವರ ಮೇಲೆ ತನಗಿರುವ ಪ್ರೇಮಪ್ರಭಾವದಿಂದ ಸೀತಾದೇವಿಯು ತನ್ನನ್ನು ತಾನು ನಿಗ್ರಹಿಸದೇ ಹೋದಳು. ಅಂದರೆ- ಪ್ರೇಮಪರವಶಳಾದಳು. ಆದರೂ ಧಾರುಣೀಸುತೆ ಸೀತೆಯು ಸಮಯ ಸಂದರ್ಭಗಳನ್ನು ಗಮನಿಸಿ ಧೈರ್ಯ ತಂದುಕೊಂಡಳು. (ದೋ/೨೮೬)

**ಚೌ – ತಾಪಸ ಬೇಷ ಜನಕ ಸಿಯ ದೇಖೀ । ಭಯಉ ಪೇಮು ಪರಿತೋಷು ಬಿಸೇಷೀ ॥**
**ಪುತ್ರಿ ಪಬಿತ್ರ ಕಿಏ ಕುಲ ದೋಊ । ಸುಜಸ ಧವಲ ಜಗು ಕಹ ಸಬು ಕೋಊ ॥ ೧ ॥**
**ಜಿತಿ ಸುರಸರಿ ಕೀರತಿ ಸರಿ ತೋರೀ । ಗವನು ಕೀನ್ಹ ಬಿಧಿ ಅಂಡ ಕರೋರೀ ॥**
**ಗಂಗ ಅವನಿ ಥಲ ತೀನಿ ಬಡೇರೇ । ಏಹಿಂ ಕಿಏ ಸಾಧು ಸಮಾಜ ಘನೇರೇ ॥ ೨ ॥**
**ಪಿತು ಕಹ ಸತ್ಯ ಸನೇಹ್ ಸುಬಾನೀ । ಸೀಯ ಸಕುಚ ಮಹುಂ ಮನಹುಂ ಸಮಾನೀ ॥**
**ಪುನಿ ಪಿತು ಮಾತು ಲೀನ್ಹಿ ಉರ ಲಾಈ । ಸಿಖ ಆಸಿಷ ಹಿತ ದೀನ್ಹಿ ಸುಹಾಈ ॥ ೩ ॥**
**ಕಹತಿ ನ ಸೀಯ ಸಕುಚಿ ಮನ ಮಾಹೀಂ । ಇಹಾಂ ಬಸಬ ರಜನೀಂ ಭಲ ನಾಹೀಂ ॥**
**ಲಖಿ ರುಖ ರಾನಿ ಜನಾಯಉ ರಾಊ । ಹೃದಯಂ ಸರಾಹತ ಸೀಲು ಸುಭಾಊ ॥ ೪ ॥**

ತಪಸ್ವಿನೀ ವೇಶದಲ್ಲಿರುವ ಸೀತೆಯನ್ನು ಕಂಡು ಜನಕನಿಗೆ ವಿಶೇಷವಾದ ಪ್ರೇಮ, ಪರಿತೋಷ ಉಂಟಾಯಿತು. ಬಳಿಕ ಅವನು ಹೀಗೆ ಹೇಳಿದನು – ಮಗಳೇ! ನೀನು ಹುಟ್ಟಿದ ಮನೆ, ಹೊಕ್ಕಮನೆ ಎರಡನ್ನೂ ಉದ್ಧಾರಮಾಡಿದೆ. ನಿನ್ನ ನಿರ್ಮಲ ಯಶಸ್ಸಿನಿಂದ ಇಡೀ ಜಗತ್ತೇ ಬೆಳಗುತ್ತಿದೆ ಎಂದು ಎಲ್ಲರೂ ಹೇಳುತ್ತಾರೆ. ನಿನ್ನ ಕೀರ್ತಿನದಿಯು ದೇವನದಿ ಗಂಗೆಯನ್ನು ಮೀರಿಸಿ ಕೋಟ್ಯಂತರ ಬ್ರಹ್ಮಾಂಡಗಳಲ್ಲಿ ಹರಿಯುತ್ತಿದೆ. ಗಂಗಾನದಿಯು ಭೂಮಿಯ ಮೇಲೆ ಕೇವಲ ಮೂರೇ(ಹರಿದ್ವಾರ, ಪ್ರಯಾಗ, ಗಂಗಾಸಾಗರ.) ಪವಿತ್ರ ತೀರ್ಥಕ್ಷೇತ್ರಗಳನ್ನಾಗಿ ಮಾಡಿದೆ. ಆದರೆ ನಿನ್ನ ಈ ಕೀರ್ತಿನದಿಯು ಅನೇಕ ಸಂತಸಮಾಜಗಳೆಂಬ ತೀರ್ಥಗಳನ್ನು ನಿರ್ಮಿಸಿದೆ. ತಂದೆ ಜನಕನು ಸ್ನೇಹದಿಂದ ಕೂಡಿದ್ದ ಸತ್ಯ ವಚನಗಳನ್ನೇ ಆಡಿದ್ದರೂ ಸೀತಾದೇವಿಯು ತನ್ನ ಹೊಗಳಿಕೆಯನ್ನು ಕೇಳಿ ಸಂಕೋಚದಲ್ಲಿ ಮುಳುಗಿ ಹೋದಳು. ತಂದೆ- ತಾಯಿಯರು ಮತ್ತೆ ಆಕೆಯನ್ನು ಆಲಿಂಗಿಸಿಕೊಂಡರು. ಆಕೆಗೆ ಹಿತವಚನಗಳನ್ನು ಹೇಳಿ, ಆಶೀರ್ವಾದ ಮಾಡಿದರು. ಸೀತೆಯು ಬಾಯಿಬಿಟ್ಟು ಏನನ್ನೂ ಹೇಳಲೊಲ್ಲಳು. ಆದರೆ ರಾತ್ರಿ ಅತ್ತೆಯಂದಿರ ಸೇವೆ ಮಾಡುವುದನ್ನು ಬಿಟ್ಟು ಇಲ್ಲೇ ಇದ್ದೆನಲ್ಲ ಎಂದು ತಳಮಳಿಸಿದಳು. ಸುನಯನಾ ದೇವಿಯು ತನ್ನ ಮಗಳ ಇಂಗಿತವನ್ನು ಅರಿತು ಜನಕನಿಗೆ ತಿಳಿಸಿದಳು. ಆಗ ಅವರಿಬ್ಬರೂ ಮನಸ್ಸಿನಲ್ಲೇ ಸೀತೆಯ ಶೀಲ, ಸ್ವಭಾವಗಳನ್ನು ಕೊಂಡಾಡತೊಡಗಿದರು. (ಚೌ/೧-೪)

**ದೋ – ಬಾರ ಬಾರ ಮಿಲಿ ಭೇಂಟಿ ಸಿಯ ಬಿದಾ ಕೀನ್ಹಿ ಸನಮಾನಿ ।**
**ಕಹೀ ಸಮಯ ಸಿರ ಭರತ ಗತಿ ರಾನಿ ಸುಬಾನಿ ಸಯಾನಿ ॥ ೨೮೭ ॥**

ಕೊನೆಗೆ ರಾಜರಾಣಿಯರು ಸೀತೆಯನ್ನು ಮತ್ತೆ-ಮತ್ತೆ ಮುದ್ದಾಡಿ, ಆಕೆಯನ್ನು ಸಮ್ಮಾನದಿಂದ ಕಳುಹಿಸಿಕೊಟ್ಟರು. ಬಳಿಕ ಬುದ್ಧಿವಂತಳಾದ ಸುನಯನಾದೇವಿಯು ಸಮಯವರಿತು ಜನಕನ ಬಳಿ ಭರತನ ಸ್ಥಿತಿಯನ್ನು ಅರುಹಿದಳು. (ದೋ/೨೮೭)

**ಚೌ – ಸುನಿ ಭೂಪಾಲ ಭರತ ಬ್ಯವಹಾರೂ । ಸೋನ ಸುಗಂಧ ಸುಧಾ ಸಸಿ ಸಾರೂ ॥**
**ಮೂದೇ ಸಜಲ ನಯನ ಪುಲಕೇ ತನ । ಸುಜಸು ಸರಾಹನ ಲಗೇ ಮುದಿತ ಮನ ॥ ೧ ॥**
**ಸಾವಧಾನ ಸುನು ಸುಮುಖಿ ಸುಲೋಚನಿ । ಭರತ ಕಥಾ ಭವ ಬಂಧ ಬಿಮೋಚನಿ ॥**
**ಧರಮ ರಾಜನಯ ಬ್ರಹ್ಮಬಿಚಾರೂ । ಇಹಾಂ ಜಥಾಮತಿ ಮೋರ ಪ್ರಚಾರೂ ॥ ೨ ॥**
**ಸೋ ಮತಿ ಮೋರಿ ಭರತ ಮಹಿಮಾಹೀ । ಕಹೈ ಕಾಹ ಛಲಿ ಛುಅತಿ ನ ಛಾಂಹೀ ॥**
**ಬಿಧಿ ಗನಪತಿ ಅಹಿಪತಿ ಸಿವ ಸಾರದ । ಕಬಿ ಕೋಬಿದ ಬುಧ ಬುದ್ಧಿ ಬಿಸಾರದ ॥ ೩ ॥**
**ಭರತ ಚರಿತ ಕೀರತಿ ಕರತೂತೀ । ಧರಮ ಸೀಲ ಗುನ ಬಿಮಲ ಬಿಭೂತೀ ॥**
**ಸಮುಝುತ ಸುನತ ಸುಖದ ಸಬ ಕಾಹೂ । ಸುಚಿ ಸುರಸರಿ ರುಚಿ ನಿದರ ಸುಧಾಹೂ ॥ ೪ ॥**

ಚಿನ್ನಕ್ಕೆ ಸುವಾಸನೆ ಬೆರೆಸಿದಂತೆ, ಸುಧೆಯೊಂದಿಗೆ ಚಂದ್ರಮನ ಸಾರವನ್ನು ಬೆರೆಸಿದಂತೆ, ಭರತನ ಸೌಶೀಲ್ಯವನ್ನು ಕೇಳಿ, ಜನಕನು ಪ್ರೇಮವಿಹ್ವಲನಾದನು. ಕಂಬನಿತುಂಬಿದ ಕಣ್ಣುಗಳನ್ನು ಮುಚ್ಚಿಕೊಂಡುಬಿಟ್ಟನು. ಆಗ ಅವನು ಭರತನ ಪ್ರೇಮದಲ್ಲಿ ಧ್ಯಾನಸ್ಥನಂತಾದನು. ಶರೀರ ಪುಳಕಗೊಂಡು, ಮನಸ್ಸಿನಲ್ಲಿ ಹರ್ಷಗೊಂಡವನಾಗಿ ಭರತನ ಸತ್ಕೀರ್ತಿಯನ್ನು ಕೊಂಡಾಡತೊಡಗಿದನು – ಎಲೈ ಸುಮುಖೀ, ಸುನಯನಾ! ಗಮನವಿಟ್ಟು ಕೇಳು. ಭರತನ ಕಥೆ ಭವಬಂಧನ ವಿಮೋಚಕವಾದುದು.

ಧರ್ಮ, ರಾಜನೀತಿ, ಬ್ರಹ್ಮವಿಚಾರ ಇವುಗಳಲ್ಲಿ ನನಗೆ ಯಥಾಮತಿಯಾದ ಪರಿಶ್ರಮವಿದೆ. ಅಂದರೆ ಇವುಗಳ ಕುರಿತು ಕೊಂಚ ತಿಳಿದಿದ್ದೇನೆ. ಆದರೆ ಅಂತಹ ಮತಿಯೂ ಕೂಡ ಭರತನ ಮಹಿಮೆಯನ್ನು ವರ್ಣಿಸುವುದಿರಲಿ, ಅದರ ನೆರಳೂ ಕೂಡ ಸೋಂಕಲಾರದು. ಹಾಗಿರುವಾಗ ಹೇಗೆ ವರ್ಣಿಸಬಲ್ಲೆನು? ಬ್ರಹ್ಮ, ಗಣಪತಿ, ಮಹಾಶೇಷ, ಮಹಾದೇವ, ಶಾರದೆ, ಕವಿ, ಕೋವಿದರು, ಪಂಡಿತರು, ಬುದ್ಧಿವಂತರು ಇವರೆಲ್ಲರಿಗೂ ಭರತನ ಚರಿತ್ರೆ, ಕೀರ್ತಿ, ನಡೆ, ಧರ್ಮ, ಶೀಲ, ಗುಣ ಮತ್ತು ನಿರ್ಮಲ ಐಶ್ವರ್ಯ ಇವುಗಳನ್ನು ಅರಿಯುವುದು ಹಾಗೂ ಕೇಳುವುದು ಸುಖಕರವು. ಇವು ಪರಮಪವಿತ್ರವಾದ ಗಂಗೆಗಿಂತಲೂ ಹೆಚ್ಚಾದ ಪವಿತ್ರವಾಗಿವೆ. ಅಮೃತಕ್ಕಿಂತಲೂ ಮಧುರವಾದುದು. (ಚೌ/೧-೪)

**ದೋ – ನಿರವಧಿ ಗುನ ನಿರುಪಮ ಪುರುಷು ಭರತು ಭರತ ಸಮ ಜಾನಿ ।**
**ಕಹಿಅ ಸುಮೇರು ಕಿ ಸೇರ ಸಮ ಕಬಿಕುಲ ಮತಿ ಸಕುಚಾನಿ ॥ ೨೮೮ ॥**

ಭರತನು ನಿರವಧಿಗುಣಸಂಪನ್ನನು. ನಿರುಪಮ ಪುರುಷನು. ಭರತನಿಗೆ ಭರತನೇ ಎಣೆಯೆಂದು ತಿಳಿ. ಅವನಿಗೆ ತಕ್ಕದಾದ ಉಪಮೆಯನ್ನು ಕೊಡಲು ಹೋಗಿ ಕವಿಸಮಾಜದ ಮತಿಯು ಕುಂಠಿತವಾಯಿತು. ಸುಮೇರು ಪರ್ವತವನ್ನು ತಕ್ಕಡಿಯಲ್ಲಿ ತೂಗಲು ಸಾಧ್ಯವೇ? (ದೋ/೨೮೮)

**ಚೌ – ಅಗಮ ಸಬಹಿ ಬರನತ ಬರಬರನೀ । ಜಿಮಿ ಜಲಹೀನ ಮೀನ ಗಮು ಧರನೀ ॥**
**ಭರತ ಅಮಿತ ಮಹಿಮಾ ಸುನು ರಾನೀ । ಜಾನಹಿಂ ರಾಮು ನ ಸಕಹಿಂ ಬಖಾನೀ ॥ ೧ ॥**
**ಬರನಿ ಸಪ್ರೇಮ ಭರತ ಅನುಭಾಊ । ತಿಯ ಜಿಯ ಕೀ ರುಚಿ ಲಖಿ ಕಹ ರಾಊ ॥**
**ಬಹುರಹಿಂ ಲಖನು ಭರತು ಬನ ಜಾಹೀಂ । ಸಬ ಕರ ಭಲ ಸಬ ಕೇ ಮನ ಮಾಹೀಂ ॥ ೨ ॥**
**ದೇಬಿ ಪರಂತು ಭರತ ರಘುಬರ ಕೀ । ಪ್ರೀತಿ ಪ್ರತೀತಿ ಜಾಇ ನಹಿಂ ತರಕೀ ॥**
**ಭರತು ಅವಧಿ ಸನೇಹ ಮಮತಾ ಕೀ । ಜದ್ಯಪಿ ರಾಮು ಸೀಮ ಸಮತಾ ಕೀ ॥ ೩ ॥**
**ಪರಮಾರಥ ಸ್ವಾರಥ ಸುಖ ಸಾರೇ । ಭರತ ನ ಸಪನೆಹುँ ಮನಹುँ ನಿಹಾರೇ ॥**
**ಸಾಧನ ಸಿದ್ಧಿ ರಾಮ ಪಗ ನೇಹೂ । ಮೊಹಿ ಲಖಿ ಪರತ ಭರತ ಮತ ಏಹೂ ॥ ೪ ॥**

''ಎಲೆಗೆ ಸುಂದರಿ! ಭರತನ ಮಹಿಮೆಯನ್ನು ವರ್ಣಿಸುವುದೆಂದರೆ, ನೀರಿಲ್ಲದ ನೆಲದಲ್ಲಿ ಮೀನು ಚಲಿಸಿದಂತೆ ಅಸಾಧ್ಯವು, ರಾಣಿ! ಭರತನ ಅಪರಿಮಿತ ಮಹಿಮೆಯನ್ನು ರಾಮಚಂದ್ರನೊಬ್ಬನೇ ಬಲ್ಲ. ಆದರೆ ಅವನೂ ಅದನ್ನು ವರ್ಣಿಸಲಾರನು.'' ಈ ವಿಧವಾಗಿ ಪ್ರೇಮದಿಂದ ಭರತನ ಪ್ರಭಾವವನ್ನು ವರ್ಣಿಸಿ, ತನ್ನ ಪತ್ನಿಯ ಮನದ ಒಲವನ್ನು ಅರಿತು ರಾಜನು ಇಂತೆಂದನು – ''ಲಕ್ಷ್ಮಣನು ಹಿಂದಿರುಗಲಿ. ಭರತನು ಕಾಡಿಗೆ ಹೋಗಲಿ. ಇದರಲ್ಲೇ ಎಲ್ಲರ ಒಳಿತಿದೆ'' ಎಂದು ನಿಮ್ಮೆಲ್ಲರ ಮನಸ್ಸಿನಲ್ಲಿದೆ. ಆದರೆ ''ದೇವಿ! ಶ್ರೀರಾಮ ಭರತರ ನಡುವಣ ಪ್ರೇಮವಿಶ್ವಾಸಗಳು ಮನ-ಬುದ್ಧಿಗಳಿಗೆ ನಿಲುಕುವಂತಹುದಲ್ಲ. ಶ್ರೀರಾಮನು ಸಮತ್ವದ ಸೀಮಾಪುರುಷನಿರಬಹುದು; ಆದರೆ ಭರತನು ಪ್ರೇಮ-ಭಕ್ತಿಭಾವದ ಶಿಖರ. ಭರತನು ಎಂದಿಗೂ ಶ್ರೀರಾಮಪ್ರೇಮವನ್ನು ಬಿಟ್ಟು ಪರಮಾರ್ಥ, ಸ್ವಾರ್ಥ, ಸುಖಗಳನ್ನು ಕನಸಿನಲ್ಲಿಯೂ ಬಯಸಿದವನಲ್ಲ. ಶ್ರೀರಾಮಚಂದ್ರನ ಪಾದಗಳಲ್ಲಿ ನಿರಂತರ ಭಕ್ತಿಯೇ ಅವನ ಸಾಧನೆ ಮತ್ತು ಅದೇ ಸಿದ್ಧಿ. ಇದೇ ಭರತನ ಏಕಮಾತ್ರ ಸಿದ್ಧಾಂತವೆಂದು ನನಗೆ ತೋಚುತ್ತಿದೆ.'' (ಚೌ/೧-೪)

**ದೋ – ಭೋರೆಹುँ ಭರತ ನ ಪೇಲಿಹಹಿಂ ಮನಸಹುँ ರಾಮ ರಜಾಇ ।**
**ಕರಿಅ ನ ಸೋಚು ಸನೇಹ ಬಸ ಕಹೆಉ ಭೂಪ ಬಿಲಖಾಇ ॥ ೨೮೯ ॥**

ರಾಜನು ಪ್ರೇಮವಿಹ್ವಲನಾಗಿ ಮತ್ತೆ ಹೇಳಿದನು – ''ಭರತನು ಮರೆತಾದರೂ ಶ್ರೀರಾಮನ ಆಜ್ಞೆಯನ್ನು ಮನಸ್ಸಿನಿಂದಲೂ ಮೀರಲಾರನು.'' ಆದ್ದರಿಂದ ಸ್ನೇಹವಶರಾಗಿ ನೀವು ಚಿಂತಿಸುವುದು ತರವಲ್ಲ. (ದೋ/೨೮೯)

**ಚೌ – ರಾಮ ಭರತ ಗುನ ಗನತ ಸಪ್ರೀತೀ । ನಿಸಿ ದಂಪತಿಹಿ ಪಲಕ ಸಮ ಬೀತೀ ॥**
**ರಾಜ ಸಮಾಜ ಪ್ರಾತ ಜುಗ ಜಾಗೇ । ನ್ಹಾಇ ನ್ಹಾಇ ಸುರ ಪೂಜನ ಲಾಗೇ ॥ ೧ ॥**
**ಗೇ ನಹಾಇ ಗುರ ಪಹಿಂ ರಘುರಾಈ । ಬಂದಿ ಚರನ ಬೋಲೇ ರುಖ ಪಾಈ ॥**
**ನಾಥ ಭರತು ಪುರಜನ ಮಹತಾರೀ । ಸೋಕ ಬಿಕಲ ಬನಬಾಸ ದುಖಾರೀ ॥ ೨ ॥**
**ಸಹಿತ ಸಮಾಜ ರಾಉ ಮಿಥಿಲೇಸೂ । ಬಹುತ ದಿವಸ ಭಏ ಸಹತ ಕಲೇಸೂ ॥**
**ಉಚಿತ ಹೋಇ ಸೋಇ ಕೀಜಿಅ ನಾಥಾ । ಹಿತ ಸಬಹೀ ಕರ ರೌರೇಂ ಹಾಥಾ ॥ ೩ ॥**

**ಅಸ ಕಹಿ ಅತಿ ಸಕುಚೇ ರಘುರಾಊ। ಮುನಿ ಪುಲಕೇ ಲಖಿ ಸೀಲು ಸುಭಾಊ॥**
**ತುಮ್ಹ ಬಿನು ರಾಮ ಸಕಲ ಸುಖ ಸಾಜಾ। ನರಕ ಸರಿಸ ದುಹು ರಾಜ ಸಮಾಜಾ ॥೪॥**

ಈ ಪ್ರಕಾರವಾಗಿ ಶ್ರೀರಾಮಭರತರ ಗುಣಗಳ ಪ್ರಶಂಸೆಯಲ್ಲೇ ಪತಿ-ಪತ್ನಿಯರ ರಾತ್ರಿಯು ಕ್ಷಣದಂತೆ ಕಳೆಯಿತು. ಪ್ರಾತಃಕಾಲದಲ್ಲಿ ಎರಡೂ ಸಮಾಜದವರು ಎದ್ದು ಸ್ನಾನಾದಿಗಳನ್ನು ಮುಗಿಸಿ, ಇಷ್ಟದೇವರ ಆರಾಧನೆಯಲ್ಲಿ ತೊಡಗಿದರು. ಶ್ರೀರಾಮನು ಸ್ನಾನಾಹ್ನಿಕಗಳನ್ನು ಪೂರೈಸಿಕೊಂಡು, ಗುರು ವಸಿಷ್ಠರ ಬಳಿಗೆ ತೆರಳಿ ಅವರ ಚರಣಗಳಲ್ಲಿ ವಂದಿಸಿಕೊಂಡನು. ಅವರ ಮನದಿಂಗಿತವನ್ನು ಅರಿತು – ''ಪೂಜ್ಯರೇ! ಭರತನು, ಅಯೋಧ್ಯಾವಾಸಿಗಳು, ಮಾತೆಯರು ಹೀಗೆ ಎಲ್ಲರೂ ಶೋಕದಿಂದ ವ್ಯಾಕುಲರಾಗಿ, ವನವಾಸದಿಂದ ನೊಂದಿದ್ದಾರೆ. ಮಿಥಿಲಾಧಿಪತಿ ಜನಕಮಹಾರಾಜರೂ ಕೂಡ ಸಮಾಜಸಹಿತ ಅನೇಕದಿನಗಳಿಂದ ಕ್ಲೇಶವನ್ನನುಭವಿಸುತ್ತಿದ್ದಾರೆ. ಆದ್ದರಿಂದ ಹೇ ಮುನಿನಾಥಾ! ನಿಮಗೆ ಉಚಿತವಾಗಿ ಕಂಡಂತೆ ಮಾಡಿರಿ. ಎಲ್ಲರ ಹಿತವೂ ನಿಮ್ಮ ಕೈಯಲ್ಲೇ ಇದೆ'' ಎಂದು ಹೇಳಿ ಶ್ರೀರಾಮನು ಮೌನವಹಿಸಿದನು. ರಾಮನ ಶೀಲಸ್ವಭಾವಗಳನ್ನು ಕಂಡು ವಸಿಷ್ಠರು ಪ್ರೇಮಾನಂದದಿಂದ ಪುಳಕಿತರಾದರು. ಮತ್ತೆ ಮುನಿಗಳು ಹೇಳಿದರು – ''ರಾಮಾ! ನೀನಲ್ಲದೆ ಎರಡು ಕಡೆಯ ಜನರಿಗೂ ಮನೆ, ಮಠ ಮೊದಲಾದ ಎಲ್ಲ ಸುಖಸಾಮಗ್ರಿಗಳು ನರಕಕ್ಕೆ ಸಮಾನವಾದುದು. (ಚೌ/೧-೪)

**ದೋ – ಪ್ರಾನ ಪ್ರಾನ ಕೇ ಜೀವ ಕೇ ಜಿವ ಸುಖ ಕೇ ಸುಖ ರಾಮ।**
**ತುಮ್ಹ ತಜಿ ತಾತ ಸೊಹಾತ ಗೃಹ ಜಿನ್ಹಹಿ ತಿನ್ಹಹಿ ಬಿಧಿ ಬಾಮ ॥೨೯೦॥**

ಶ್ರೀರಾಮಚಂದ್ರಾ! ನೀನು ಎಲ್ಲರ ಪ್ರಾಣಗಳಿಗೆ ಪ್ರಾಣನು. ಆತ್ಮದ ಆತ್ಮನು. ಸುಖಗಳಿಗೆ ಸುಖಸ್ವರೂಪನು. ಮಗೂ! ನಿನ್ನನ್ನು ಬಿಟ್ಟು ಐಹಿಕ ಸುಖಗಳನ್ನು ಬಯಸುವವರು ನಿಜವಾಗಿ ನಿರ್ಭಾಗ್ಯರು. (ದೋ/೨೯೦)

**ಚೌ – ಸೋ ಸುಖು ಕರಮು ಧರಮು ಜರಿ ಜಾಊ। ಜಹ್ँ ನ ರಾಮ ಪದ ಪಂಕಜ ಭಾಊ॥**
**ಜೋಗು ಕುಜೋಗು ಗ್ಯಾನು ಅಗ್ಯಾನೂ। ಜಹ್ँ ನಹಿँ ರಾಮ ಪೇಮ ಪರಧಾನೂ॥೧॥**
**ತುಮ್ಹ ಬಿನು ದುಖೀ ಸುಖೀ ತುಮ್ಹ ತೇಹೀँ। ತುಮ್ಹ ಜಾನಹು ಜಿಯ ಜೋ ಜೆಹಿ ಕೇಹೀँ॥**
**ರಾಉರ ಆಯಸು ಸಿರ ಸಬಹೀ ಕೇँ। ಬಿದಿತ ಕೃಪಾಲಹಿ ಗತಿ ಸಬ ನೀಕೇँ॥೨॥**
**ಆಪು ಆಶ್ರಮಹಿ ಧಾರಿಅ ಪಾಊ। ಭಯಉ ಸನೇಹ ಸಿಥಿಲ ಮುನಿರಾಊ॥**
**ಕರಿ ಪ್ರನಾಮು ತಬ ರಾಮು ಸಿಧಾಏ। ರಿಷಿ ಧರಿ ಧೀರ ಜನಕ ಪಹಿँ ಆಏ॥೩॥**
**ರಾಮ ಬಚನ ಗುರು ನೃಪಹಿ ಸುನಾಏ। ಸೀಲ ಸನೇಹ ಸುಭಾಯँ ಸುಹಾಏ॥**
**ಮಹಾರಾಜ ಅಬ ಕೀಜಿಅ ಸೋಈ। ಸಬ ಕರ ಧರಮ ಸಹಿತ ಹಿತ ಹೋಈ॥೪॥**

ಶ್ರೀರಾಮನ ಪದಪಂಕಜದಲ್ಲಿ ಪ್ರೇಮವಿಲ್ಲದ ಸುಖ, ಧರ್ಮ, ಕರ್ಮ ಇವೆಲ್ಲವಕ್ಕೂ ಬೆಂಕಿಬೀಳಲಿ. ರಾಮಪ್ರೇಮಕ್ಕೆ ಪ್ರಾಧಾನ್ಯವಿಲ್ಲದ ಯೋಗವು ಕುಯೋಗವಾಗಿದೆ, ಜ್ಞಾನ ಅಜ್ಞಾನವಾಗಿದೆ. ನೀನಿಲ್ಲದೆ ಎಲ್ಲರೂ ದುಃಖಿಗಳಾಗಿದ್ದಾರೆ. ಸುಖಿಗಳಾಗುವವರೂ ಕೂಡ ನಿನ್ನ ಕಾರಣದಿಂದಲೇ ಸುಖಿಗಳಾಗುವರು. ಎಲ್ಲರ ಮನಸ್ಸಿನಲ್ಲಿರುವ ಭಾವವನ್ನು ನೀನು ಬಲ್ಲೆ. ನಿನ್ನ ಆಜ್ಞೆಯು ಎಲ್ಲರಿಗೂ ಶಿರೋಧಾರ್ಯ. ಕೃಪಾಳುವಾದ ನಿನಗೆ ಎಲ್ಲರ ಸ್ಥಿತಿಯು ವೇದ್ಯ. ಆದ್ದರಿಂದ ನೀನು ಆಶ್ರಮಕ್ಕೆ ತೆರಳು.'' ಹೀಗೆ ಹೇಳಿ ಮುನೀಂದ್ರರು ಸ್ನೇಹಪರವಶರಾದರು. ಆಗ ಶ್ರೀರಾಮನು ವಸಿಷ್ಠರಿಗೆ ವಂದಿಸಿ, ಅಲ್ಲಿಂದ ಹೊರಟುಹೋದನು. ವಸಿಷ್ಠರು ಧೈರ್ಯವಹಿಸಿ ಜನಕನ ಬಳಿಗೆ ಬಂದರು. ಗುರುಗಳು ಶ್ರೀರಾಮಚಂದ್ರನ ಸ್ನೇಹಶೀಲಯುಕ್ತವಾದ ಸುಂದರ ವಚನಗಳನ್ನು ಜನಕಮಹಾರಾಜರಿಗೆ ತಿಳಿಸಿ, ಇಂತೆಂದರು – ಹೇ ಮಹಾರಾಜಾ! ಎಲ್ಲರಿಗೆ ಹಿತವಾಗುವಂತಹ ಧರ್ಮಯುಕ್ತವಾದ ಉಪಾಯವನ್ನು ಸೂಚಿಸಿರಿ. (ಚೌ/೧-೪)

**ದೋ – ಗ್ಯಾನ ನಿಧಾನ ಸುಜಾನ ಸುಚಿ ಧರಮ ಧೀರ ನರಪಾಲ।**
**ತುಮ್ಹ ಬಿನು ಅಸಮಂಜಸ ಸಮನ ಕೋ ಸಮರಥ ಏಹಿ ಕಾಲ॥೨೯೧॥**

ಎಲೈ ರಾಜನೇ! ನೀನು ವಿಜ್ಞಾನನಿಧಿಯೂ, ಸುಜ್ಞಾನಿಯೂ, ಪವಿತ್ರನೂ, ಧರ್ಮವೀರನೂ ಆಗಿರುವೆ. ಈಗ ನೀನಲ್ಲದೆ ಈ ಉಭಯಸಂಕಟವನ್ನು ಪರಿಹರಿಸುವವರು ಬೇರೆ ಯಾರಿದ್ದಾರೆ? (ದೋ/೨೯೧)

**ಚೌ – ಸುನಿ ಮುನಿ ಬಚನ ಜನಕ ಅನುರಾಗೇ। ಲಖಿ ಗತಿ ಗ್ಯಾನು ಬಿರಾಗು ಬಿರಾಗೇ॥**
**ಸಿಥಿಲ ಸನೇಹ್ँ ಗುನತ ಮನ ಮಾಹೀँ। ಆಏ ಇಹಾँ ಕೀನ್ಹ ಭಲ ನಾಹೀँ॥೧॥**

**ರಾಮಹಿ ರಾಯ್ ಕಹೆಉ ಬನ ಜಾನಾ। ಕೀನ್ಹ ಆಪು ಪ್ರಿಯ ಪ್ರೇಮ ಪ್ರವಾನಾ॥**
**ಹಮ ಅಬ ಬನ ತೇಂ ಬನಹಿ ಪಠಾಈ। ಪ್ರಮುದಿತ ಫಿರಬ ಬಿಬೇಕ ಬಡಾಈ॥ ೨ ॥**
**ತಾಪಸ ಮುನಿ ಮಹಿಸುರ ಸುನಿ ದೇಖೀ। ಭಏ ಪ್ರೇಮ ಬಸ ಬಿಕಲ ಬಿಸೇಷೀ॥**
**ಸಮಉ ಸಮುಝಿ ಧರಿ ಧೀರಜು ರಾಜಾ। ಚಲೇ ಭರತ ಪಹಿಂ ಸಹಿತ ಸಮಾಜಾ॥ ೩ ॥**
**ಭರತ ಆಇ ಆಗೇಂ ಭಇ ಲೀನ್ಹೇ। ಅವಸರ ಸರಿಸ ಸುಆಸನ ದೀನ್ಹೇ॥**
**ತಾತ ಭರತ ಕಹ ತೇರಹುತಿ ರಾಊ। ತುಮ್ಹಹಿ ಬಿದಿತ ರಘುಬೀರ ಸುಭಾಊ॥ ೪ ॥**

ಮುನಿವಸಿಷ್ಠರ ಮಾತನ್ನು ಕೇಳಿ ಜನಕನು ಪ್ರೇಮಮಗ್ನನಾದನು. ಅವನ ದೆಸೆಯನ್ನು ಕಂಡು ಜ್ಞಾನವೈರಾಗ್ಯಗಳಿಗೇ ವೈರಾಗ್ಯಬಂತು. ಅವನು ಪ್ರೇಮಶಿಥಿಲನಾಗಿ ಹೀಗೆ ಯೋಚಿಸತೊಡಗಿದನು – ''ನಾನು ಇಲ್ಲಿಗೆ ಬಂದುದು ಸರಿಕಾಣುವುದಿಲ್ಲ. ದಶರಥ ಮಹಾರಾಜರು ಶ್ರೀರಾಮನಿಗೆ ವನವಾಸಕ್ಕೆ ಹೋಗು ಎಂದು ಹೇಳಿ ಪುತ್ರವಿಯೋಗದಲ್ಲಿಪ್ರಾಣತ್ಯಾಗಗೈದು ಸ್ವತಃ ತನ್ನ ಪ್ರೇಮವನ್ನು ಪ್ರಮಾಣೀಕರಿಸಿದರು. ಆದರೆ ನಾವು ಈಗ ಇವರನ್ನು ಕಾಡಿನಿಂದ ಇನ್ನೂ ಕಗ್ಗಾಡಿಗೆ ಕಳುಹಿಸಿ ನಮ್ಮ ವಿವೇಕಕ್ಕೆ ಹಿಗ್ಗಿ ಮನೆಗೆ ಮರಳುವಂತಾಯಿತಲ್ಲ!'' (ಅಂದರೆ, ದಶರಥರಂತೆ ಪ್ರಾಣತ್ಯಾಗಮಾಡಲಿಲ್ಲ.) ರಾಜನ ಈ ಸ್ಥಿತಿಯನ್ನುನೋಡಿ, ಅವನ ಮಾತನ್ನುಕೇಳಿ, ತಾಪಸರೂ, ಮುನಿಗಳೂ, ಬ್ರಾಹ್ಮಣರೂ ಪ್ರೇಮವಿಹ್ವಲರಾದರು. ಪರಿಸ್ಥಿತಿಯನ್ನು ಕುರಿತು ವಿಚಾರಮಾಡಿ ಜನಕನು ಧೈರ್ಯವನ್ನು ತಾಳಿ, ತನ್ನ ಪರಿವಾರಸಹಿತ ಭರತನ ಬಳಿಗೆ ಹೋದನು. ಭರತನು ಮುಂದೆ ಬಂದು ಅವರನ್ನುಸ್ವಾಗತಿಸಿದನು. ಉಚಿತಾಸನವನ್ನುನೀಡಿ ಆದರಿಸಿದನು. ತಿರಹುತ ರಾಜಾ ಜನಕನು ಹೇಳಿದನು– ''ಮಗು, ಭರತಾ! ನಿನಗೆ ಶ್ರೀರಾಮನ ಸ್ವಭಾವ ತಿಳಿದೇ ಇದೆ. (ಚೌ/೧-೪)

**ದೋ – ರಾಮ ಸತ್ಯಬ್ರತ ಧರಮ ರತ ಸಬ ಕರ ಸೀಲು ಸನೇಹು।**
**ಸಂಕಟ ಸಹತ ಸಕೋಚ ಬಸ ಕಹಿಅ ಜೊ ಆಯಸು ದೇಹು॥ ೨೯೨ ॥**

ಶ್ರೀರಾಮಚಂದ್ರನು ಸತ್ಯವ್ರತೀ, ಧರ್ಮಪರಾಯಣನಾಗಿರುವನು. ಎಲ್ಲರ ಸ್ನೇಹ, ಶೀಲಗಳನ್ನು ಉಳಿಸಿಕೊಳ್ಳುವವನು. ಆದ್ದರಿಂದ ಅವನು ಸಂಕೋಚದಿಂದ ಸಂಕಟವನ್ನೆಲ್ಲ ಸಹಿಸಿಕೊಂಡಿರುವನು. ಈಗ ನೀನು ಏನು ಹೇಳುವೆಯೋ, ಅದನ್ನು ಅವನಿಗೆ ತಿಳಿಸುತ್ತೇನೆ.'' (ದೋ/೨೯೨)

**ಚೌ – ಸುನಿ ತನ ಪುಲಕಿ ನಯನ ಭರಿ ಬಾರೀ। ಬೋಲೇ ಭರತು ಧೀರ ಧರಿ ಭಾರೀ॥**
**ಪ್ರಭು ಪ್ರಿಯ ಪೂಜ್ಯ ಪಿತಾ ಸಮ ಆಪೂ। ಕುಲಗುರು ಸಮ ಹಿತ ಮಾಯ ನ ಬಾಪೂ॥ ೧ ॥**
**ಕೌಸಿಕಾದಿ ಮುನಿ ಸಚಿವ ಸಮಾಜೂ। ಗ್ಯಾನ ಅಂಬುನಿಧಿ ಆಪುನು ಆಜೂ॥**
**ಸಿಸು ಸೇವಕು ಆಯಸು ಅನುಗಾಮೀ। ಜಾನಿ ಮೋಹಿ ಸಿಖ ದೇಇಅ ಸ್ವಾಮೀ॥ ೨ ॥**
**ಏಹಿಂ ಸಮಾಜ ಥಲ ಬೂಝಬ ರಾಉರ। ಮೌನ ಮಲಿನ ಮೈಂ ಬೋಲಬ ಬಾಉರ॥**
**ಛೋಟೇ ಬದನ ಕಹಉಂ ಬಡಿ ಬಾತಾ। ಛಮಬ ತಾತ ಲಖಿ ಬಾಮ ಬಿಧಾತಾ॥ ೩ ॥**
**ಆಗಮ ನಿಗಮ ಪ್ರಸಿದ್ಧ ಪುರಾನಾ। ಸೇವಾಧರಮು ಕಠಿನ ಜಗು ಜಾನಾ॥**
**ಸ್ವಾಮಿ ಧರಮ ಸ್ವಾರಥಹಿ ಬಿರೋಧೂ। ಬೈರು ಅಂಧ ಪ್ರೇಮಹಿ ನ ಪ್ರಬೋಧೂ॥ ೪ ॥**

ಇದನ್ನು ಕೇಳಿದ ಭರತನ ಶರೀರ ಪುಳಕಗೊಂಡಿತು. ಕಂಬನಿ ತುಂಬಿ ಬಂದವನಾಗಿ, ಧೈರ್ಯ ತಂದುಕೊಂಡು ಇಂತೆಂದನು – ಪ್ರಭುಗಳೇ! ನೀವು ನನಗೆ ತಂದೆಯಂತೆ ಪ್ರಿಯರೂ, ಪೂಜ್ಯರು. ಕುಲಗುರು ವಸಿಷ್ಠರಂತಹ ಹಿತೈಷಿಗಳಾದರೋ ತಂದೆ-ತಾಯಿಗಳೂ ಅಲ್ಲ. ವಿಶ್ವಾಮಿತ್ರರೇ ಮೊದಲಾದ ಮುನಿಗಳ, ಮಂತ್ರಿಗಳ ಸಮಾಜ ಇಲ್ಲಿದೆ. ಇಂದು ಜ್ಞಾನಸಾಗರರಾದ ನೀವೂ ಉಪಸ್ಥಿತರಿದ್ದೀರಿ. ಸ್ವಾಮಿ! ತಾವು ನನ್ನನ್ನು ತಮ್ಮ ಕಂದನೆಂದೂ, ಸೇವಕನೆಂದೂ, ಆಜ್ಞಾನುಗಾಮಿಯೆಂದೂ ತಿಳಿದು, ಉಪದೇಶವನ್ನು ನೀಡಿರಿ. ಇಂತಹ ಪವಿತ್ರಸ್ಥಳದಲ್ಲಿ, ಸಜ್ಜನರ ಮಧ್ಯದಲ್ಲಿ, ಜ್ಞಾನಿಗಳೂ, ಪೂಜ್ಯರೂ ಆದ ನೀವು ನನ್ನನ್ನು ಕೇಳಿದಾಗ ನಾನು ಏನೂ ಮಾತನಾಡದಿದ್ದರೆ ಮಲಿನನಾಗುತ್ತೇನೆ. ಮಾತಾಡಿದರೆ ಹುಚ್ಚುತನವಾದೀತು. ಆದರೂ ನಾನು ' ಚಿಕ್ಕಬಾಯಿ ದೊಡ್ಡಮಾತು' ಎಂಬಂತೆ ನುಡಿಯುತ್ತೇನೆ. ಸ್ವಾಮಿ! ವಿಧಾತನು ಪ್ರತಿಕೂಲನೆಂದರಿತು ಕ್ಷಮಿಸಿಬಿಡಿ. 'ಸೇವಾಧರ್ಮವು ತುಂಬಾ ಕ್ಲಿಷ್ಟವಾದುದು' ಎಂಬುದು ವೇದ, ಶಾಸ್ತ್ರ, ಪುರಾಣಗಳಲ್ಲಿ ಪ್ರಸಿದ್ಧವಿದೆ. ಜಗತ್ತು ಬಲ್ಲುದು. ಸ್ವಾಮಿಧರ್ಮ ಮತ್ತು ಸ್ವಾರ್ಥ ಇವುಗಳಲ್ಲಿ ವಿರೋಧವಿದೆ. ಇವು ಒಟ್ಟಿಗೆ ಒಂದೆಡೆ ಇರಲಾರವು. ಸ್ವಾಮಿಧರ್ಮದಲ್ಲಿ ಕರ್ತವ್ಯಪರಾಯಣತೆ ಮುಖ್ಯ. ಸ್ವಾರ್ಥದಲ್ಲಿ ಇದಕ್ಕೆ ವಿಶುದ್ಧವಾದುದು. (ನಾನು ಪ್ರೇಮವಶ. ಏನಾದರೂ ಹೇಳಿದರೂ, ಸ್ವಾರ್ಥವಶ ಹೇಳಿದರೂ ಅದರಲ್ಲಿ ದೋಷವೇ ಗೋಚರಿಸುವುದು.) (ಚೌ/೧-೪)

**ದೋ – ರಾಖಿ ರಾಮ ರುಖ ಧರಮು ಬ್ರತು ಪರಾಧೀನ ಮೊಹಿ ಜಾನಿ ।**
**ಸಬ ಕೇ ಸಮ್ಮತ ಸರ್ಬ ಹಿತ ಕರಿಅ ಪೇಮು ಪಹಿಚಾನಿ ॥ ೨೯೩ ॥**

ಆದ್ದರಿಂದ ನನ್ನನ್ನು ಅಸ್ವತಂತ್ರನೆಂದು ಭಾವಿಸಿ, ನನ್ನಲ್ಲಿ ಕೇಳದೆ, ಶ್ರೀರಾಮಚಂದ್ರನ ಇಷ್ಟಗಳಿಗೆ, ಧರ್ಮಪರಾಯಣತೆಗೆ, ಸತ್ಯಪಾಲನೆಗೆ ಭಂಗಬರದಂತೆ, ಎಲ್ಲರಿಗೆ ಸಮ್ಮತವಾದ, ಹಿತಕಾರಿಯಾದ ಎಲ್ಲರ ಪ್ರೇಮವನ್ನು ಗುರುತಿಸಿ ಅದನ್ನೇ ನಿರ್ಣಯಿಸಿರಿ. (ದೋ/೨೯೩)

**ಚೌ – ಭರತ ಬಚನ ಸುನಿ ದೇಖಿ ಸುಭಾಊ । ಸಹಿತ ಸಮಾಜ ಸರಾಹತ ರಾಊ ॥**
**ಸುಗಮ ಅಗಮ ಮೃದು ಮಂಜು ಕಠೋರೇ । ಅರಥು ಅಮಿತ ಅತಿ ಆಖರ ಥೋರೇ ॥ ೧ ॥**
**ಜ್ಯೋ ಮುಖು ಮುಕುರ ಮುಕುರು ನಿಜ ಪಾನೀ । ಗಹಿ ನ ಜಾಇ ಅಸ ಅದಭುತ ಬಾನೀ ॥**
**ಭೂಪ ಭರತು ಮುನಿ ಸಹಿತ ಸಮಾಜೂ । ಗೇ ಜಹ ಬಿಬುಧ ಕುಮುದ ದ್ವಿಜರಾಜೂ ॥ ೨ ॥**
**ಸುನಿ ಸುಧಿ ಸೋಚ ಬಿಕಲ ಸಬ ಲೋಗಾ । ಮನಹು ಮೀನಗನ ನವ ಜಲ ಜೋಗಾ ॥**
**ದೇವ್ ಪ್ರಥಮ ಕುಲಗುರ ಗತಿ ದೇಖೀ । ನಿರಖಿ ಬಿದೇಹ ಸನೇಹ ಬಿಸೇಷೀ ॥ ೩ ॥**
**ರಾಮ ಭಗತಿಮಯ ಭರತು ನಿಹಾರೇ । ಸುರ ಸ್ವಾರಥೀ ಹಹರಿ ಹಿಯ ಹಾರೇ ॥**
**ಸಬ ಕೊಉ ರಾಮ ಪೇಮಮಯ ಪೇಖಾ । ಭಏ ಅಲೇಖ ಸೋಚ ಬಸ ಲೇಖಾ ॥ ೪ ॥**

ಭರತನ ಮಾತನ್ನು ಕೇಳಿ, ಅವನ ಸ್ವಭಾವವನ್ನು ಕಂಡು ಮುಗ್ಧನಾದ ಜನಕನು ಪರಿವಾರದಿಂದೊಡಗೂಡಿ ಅವನನ್ನು ಹೊಗಳತೊಡಗಿದನು. ಭರತನ ಮಾತುಗಳು ಸುಗಮವಾಗಿದ್ದರೂ ಗಂಭೀರವು. ಮೃದುಮಧುರವಾಗಿದ್ದರೂ ಕಠೋರವು. ಅದರಲ್ಲಿ ಅಕ್ಷರಗಳು ಕಡಿಮೆಯಿದ್ದು, ಅಪಾರ ಅರ್ಥತುಂಬಿದೆ, ಅಗಾಧವಾಗಿದೆ. ಮುಖದ ಪ್ರತಿಬಿಂಬ ಕನ್ನಡಿಯಲ್ಲಿ ಕಾಣುತ್ತದೆ. ಕನ್ನಡಿ ಕೈಯಲ್ಲಿದೆ. ಆದರೂ ಪ್ರತಿಬಿಂಬ ಕೈಗೆ ಸಿಕ್ಕದು. ಅದೇ ರೀತಿ ಭರತನ ಅದ್ಭುತವಾಣಿಯೂ ಕೂಡ ಯಾರಿಗೂ ಎಟಕುವಂತಹುದಲ್ಲ. ಬಳಿಕ ದೇವತಾರೂಪೀ ಕುಮುದಗಳನ್ನು ಅರಳಿಸುವ ಚಂದ್ರನಂತಿದ್ದ ಶ್ರೀರಾಮನ ಬಳಿಗೆ ಜನಕ ಮಹಾರಾಜನು, ಭರತನು, ವಸಿಷ್ಠರೂ ತೆರಳಿದರು. ಈ ಸುದ್ದಿಯನ್ನು ಕೇಳಿ ಜನರೆಲ್ಲರೂ, ಮುಂಗಾರು ಮಳೆಯನೀರು ಬಿದ್ದಾಗ ಒದ್ದಾಡುವ ಮೀನುಗಳಂತೆ ವ್ಯಾಕುಲರಾದರು. ದೇವತೆಗಳು ಮೊದಲಿಗೆ ವಸಿಷ್ಠರ ಸ್ಥಿತಿಯನ್ನೂ, ಮತ್ತೆ ಜನಕನ ವಿಶಿಷ್ಟ ಪ್ರೇಮವನ್ನೂ, ಕೊನೆಗೆ ರಾಮಭಕ್ತಿಯಲ್ಲಿ ಮುಳುಗಿದ ಭರತನನ್ನೂ ವೀಕ್ಷಿಸಿದರು. ಆಗ ಸ್ವಾರ್ಥಿಗಳಾದ ದೇವತೆಗಳು ತಮ್ಮ ಕಾರ್ಯವು ಸಿದ್ಧಿಸದೆ ಹೋದೀತೋ ಎಂಬ ಭಯದಿಂದ ನಿರಾಶರಾದರು. ಎಲ್ಲರೂ ರಾಮಪ್ರೇಮದಲ್ಲಿ ಮುಳುಗಿರುವುದನ್ನು ಕಂಡು ಅವರಿಗೆ ಅಳತೆ ಮೀರಿದಷ್ಟು ಯೋಚನೆಗಿಟ್ಟುಕೊಂಡಿತು. (ಚೌ/೧-೪)

**ದೋ – ರಾಮು ಸನೇಹ ಸಕೋಚ ಬಸ ಕಹ ಸಸೋಚ ಸುರರಾಜು ।**
**ರಚಹು ಪ್ರಪಂಚಹಿ ಪಂಚ ಮಿಲಿ ನಾಹಿ ತ ಭಯಉ ಅಕಾಜು ॥ ೨೯೪ ॥**

ದೇವೇಂದ್ರನು ಚಿಂತಾಕ್ರಾಂತನಾಗಿ – ''ಶ್ರೀರಾಮಚಂದ್ರನು ಭರತಾದಿಗಳ ಪ್ರೇಮಾನುರಾಗಕ್ಕೆ ವಶನಾಗಿರುವನು. ಆದ್ದರಿಂದ ನಾವೆಲ್ಲರೂ ಸೇರಿ ಏನಾದರೂ ಸಂಚು ಹೂಡಬೇಕು. ಇಲ್ಲವಾದರೆ ನಮ್ಮ ಕೆಲಸ ಕೆಟ್ಟುಹೋದೀತು'' ಎಂದು ಹೇಳಿದನು. (ದೋ/೨೯೪)

**ಚೌ – ಸುರನ್ಹ ಸುಮಿರಿ ಸಾರದಾ ಸರಾಹೀ । ದೇಬಿ ದೇವ ಸರನಾಗತ ಪಾಹೀ ॥**
**ಫೇರಿ ಭರತ ಮತಿ ಕರಿ ನಿಜ ಮಾಯಾ । ಪಾಲು ಬಿಬುಧ ಕುಲ ಕರಿ ಛಲ ಛಾಯಾ ॥ ೧ ॥**
**ಬಿಬುಧ ಬಿನಯ ಸುನಿ ದೇಬಿ ಸಯಾನೀ । ಬೋಲೀ ಸುರ ಸ್ವಾರಥ ಜಡ ಜಾನೀ ॥**
**ಮೋ ಸನ ಕಹಹು ಭರತ ಮತಿ ಫೇರೂ । ಲೋಚನ ಸಹಸ ನ ಸೂಝು ಸುಮೇರೂ ॥ ೨ ॥**
**ಬಿಧಿ ಹರಿ ಹರ ಮಾಯಾ ಬಡಿ ಭಾರೀ । ಸೋಉ ನ ಭರತ ಮತಿ ಸಕಇ ನಿಹಾರೀ ॥**
**ಸೋ ಮತಿ ಮೋಹಿ ಕಹತ ಕರು ಭೋರೀ । ಚಂದಿನಿ ಕರ ಕಿ ಚಂಡಕರ ಚೋರೀ ॥ ೩ ॥**
**ಭರತ ಹೃದಯ ಸಿಯ ರಾಮ ನಿವಾಸೂ । ತಹ ಕಿ ತಿಮಿರ ಜಹ ತರನಿ ಪ್ರಕಾಸೂ ॥**
**ಅಸ ಕಹಿ ಸಾರದ ಗಇ ಬಿಧಿ ಲೋಕಾ । ಬಿಬುಧ ಬಿಕಲ ನಿಸಿ ಮಾನಹು ಕೋಕಾ ॥ ೪ ॥**

ಆಗ ದೇವತೆಗಳು ಸರಸ್ವತಿಯನ್ನು ಸ್ಮರಿಸಿ, ಸ್ತುತಿಸಿ, ಪ್ರಾರ್ಥಿಸಿದರು – ''ಹೇ ಬ್ರಹ್ಮಾಣೀ! ಎಲ್ಲ ದೇವತೆಗಳು ನಿನಗೆ ಶರಣಾಗತರಾಗಿದ್ದಾರೆ. ಅವರನ್ನು ಕಾಪಾಡು. ನಿನ್ನ ಮಾಯಾ ಪ್ರಭಾವದಿಂದ ಭರತನ ಬುದ್ಧಿಯನ್ನು ತಿರುಗುವಂತೆ ಮಾಡು.

ಯಾವುದಾದರೊಂದು ಕಪಟೋಪಾಯವನ್ನು ಗೈದು ದೇವಕುಲವನ್ನು ಕಾಪಾಡು.'' ದೇವತೆಗಳ ಬಿನ್ನಹವನ್ನು ಲಾಲಿಸಿ, ಅವರು ಸ್ವಾರ್ಥಮೂಢರೆಂದು ತಿಳಿದು ಬುದ್ಧಿವಂತಳಾದ ಸರಸ್ವತಿಯು ದೇವೇಂದ್ರನಲ್ಲಿ ಇಂತೆಂದಳು – 'ಭರತನ ಬುದ್ಧಿಯನ್ನು ತಿರುಗಿಸು' ಎಂದು ನನಗೆ ಹೇಳುತ್ತಿದ್ದೀಯಲ್ಲ! ಸಾವಿರ ಕಣ್ಣಿದ್ದರೂ ನಿನಗೆ ಸುಮೇರು ಪರ್ವತವೂ ಕಾಣುವುದಿಲ್ಲವಲ್ಲ! ಹರಿ, ಹರ ವಿರಂಚಿಗಳ ಮಾಯೆ ತುಂಬಾ ಪ್ರಬಲವಾಗಿದ್ದರೂ ಅದೂ ಕೂಡ ಭರತನ ಬುದ್ಧಿಯತ್ತ ದೃಷ್ಟಿ ಬೀರಲಾರದು. ಅಂತಹ ಬುದ್ಧಿಯನ್ನು ಮಂಕುಗೊಳಿಸು ಎಂದು ನೀವೆಲ್ಲ ನನಗೆ ಹೇಳುತ್ತಿದ್ದೀರಿ. ಬೆಳದಿಂಗಳು ಎಲ್ಲಾದರೂ ಪ್ರಕಾಂಡ ಕಿರಣಗಳುಳ್ಳ ಸೂರ್ಯನನ್ನು ಕದಿಯಬಲ್ಲದೇ? ಭರತನ ಹೃದಯದಲ್ಲಿ ಸೀತಾರಾಮರು ನೆಲೆಸಿದ್ದಾರೆ. ಸೂರ್ಯನ ಪ್ರಕಾಶವಿದ್ದೆಡೆ ಕತ್ತಲೆ ಇರುವುದೇ? ಹೀಗೆ ಹೇಳಿ ಸರಸ್ವತಿಯು ಬ್ರಹ್ಮಲೋಕಕ್ಕೆ ಹೊರಟುಹೋದಳು. ರಾತ್ರಿಯಲ್ಲಿ ವ್ಯಾಕುಲಗೊಳ್ಳುವ ಚಕ್ರವಾಕ ಪಕ್ಷಿಯಂತೆ ದೇವತೆಗಳು ವ್ಯಾಕುಲಿತರಾದರು. (ಚೌ/೧-೪)

**ದೋ – ಸುರ ಸ್ವಾರಥೀ ಮಲೀನ ಮನ ಕೀನ್ಹ ಕುಮಂತ್ರ ಕುಠಾಟು।**
**ರಚಿ ಪ್ರಪಂಚ ಮಾಯಾ ಪ್ರಬಲ ಭಯ ಭ್ರಮ ಅರತಿ ಉಚಾಟು॥ ೨೯೫ ॥**

ಮಲಿನ ಮನಸ್ಸಿನವರಾದ ಸ್ವಾರ್ಥಿದೇವತೆಗಳು ದುಶ್ಚಿಂತನೆ ಮಾಡಿ ಕುತಂತ್ರ ಹೂಡಿದರು. ತಮ್ಮ ಪ್ರಬಲಾದ ಮಾಯಾಜಾಲವನ್ನು ಹರಹಿ, ಅಯೋಧ್ಯೆಯ ಪ್ರಜೆಯಲ್ಲಿ ಭಯ, ಭ್ರಮೆ, ವಿರಕ್ತಿ, ಉದ್ವೇಗವನ್ನು ವ್ಯಾಪಿಸಿಬಿಟ್ಟರು. (ದೋ/೨೯೫)

**ಚೌ – ಕರಿ ಕುಚಾಲಿ ಸೋಚತ ಸುರರಾಜೂ। ಭರತ ಹಾಥ ಸಬು ಕಾಜು ಅಕಾಜೂ॥**
**ಗಏ ಜನಕು ರಘುನಾಥ ಸಮೀಪಾ। ಸನಮಾನೇ ಸಬ ರಬಿಕುಲ ದೀಪಾ॥ ೧ ॥**
**ಸಮಯ ಸಮಾಜ ಧರಮ ಅಬಿರೋಧಾ। ಬೋಲೇ ತಬ ರಘುಬಂಸ ಪುರೋಧಾ॥**
**ಜನಕ ಭರತ ಸಂಬಾದು ಸುನಾಈ। ಭರತ ಕಹಾಉತಿ ಕಹೀ ಸುಹಾಈ॥ ೨ ॥**
**ತಾತ ರಾಮ ಜಸ ಆಯಸು ದೇಹೂ। ಸೋ ಸಬು ಕರೈ ಮೋರ ಮತ ಏಹೂ॥**
**ಸುನಿ ರಘುನಾಥ ಜೋರಿ ಜುಗ ಪಾನೀ। ಬೋಲೇ ಸತ್ಯ ಸರಲ ಮೃದು ಬಾನೀ॥ ೩ ॥**
**ಬಿದ್ಯಮಾನ ಆಪುನಿ ಮಿಥಿಲೇಸೂ। ಮೋರ ಕಹಬ ಸಬ ಭಾಂತಿ ಭದೇಸೂ॥**
**ರಾಉರ ರಾಯ ರಜಾಯಸು ಹೋಈ। ರಾಉರಿ ಸಪಥ ಸಹೀ ಸಿರ ಸೋಈ॥ ೪ ॥**

ಈ ಕುತಂತ್ರವನ್ನು ಮಾಡಿ ದೇವೇಂದ್ರನು – 'ಕೆಲಸ ಆಗುವುದು, ಕೆಡುವುದು ಭರತನ ಕೈಯಲ್ಲಿದೆ' ಎಂದು ಯೋಚಿಸಿ ತನ್ನ ಪ್ರಯತ್ನಗೈದನು. ಇತ್ತ ಜನಕ ಮಹಾರಾಜನು, ವಸಿಷ್ಠರೇ ಮೊದಲಾದವರೊಂದಿಗೆ ಶ್ರೀರಘುನಾಥನಿದ್ದಲ್ಲಿಗೆ ಹೋದನು. ರವಿಕುಲದೀಪಕನಾದ ಶ್ರೀರಾಮನು ಎಲ್ಲರನ್ನು ಸ್ವಾಗತಿಸಿದನು. ಆಗ ರಘುಕುಲ ಪುರೋಹಿತರಾದ ವಸಿಷ್ಠರು ಸಮಯ, ಸಮಾಜ, ಧರ್ಮಕ್ಕೆ ಅನುಕೂಲವಾಗುವಂತೆ ಮಾತನಾಡಿದರು – ಮೊದಲಿಗೆ ಜನಕ ಭರತರಲ್ಲಿ ನಡೆದ ಸಂವಾದವನ್ನು ಶ್ರುತಪಡಿಸಿದರು. ಅನಂತರ ಭರತನ ಮಾತನ್ನೂ ತಿಳಿಸಿದರು. ಬಳಿಕ– ಮಗು ರಾಮಾ! ನಿನ್ನ ಆಜ್ಞೆಯಂತೆ ಎಲ್ಲರೂ ನಡೆಯಲಿ. ಇದೇ ನನ್ನ ಅಭಿಪ್ರಾಯವು ಎಂದು ಹೇಳಿದರು. ಇದನ್ನು ಕೇಳಿ ಶ್ರೀರಾಮನು ಎರಡೂ ಕೈಗಳನ್ನು ಜೋಡಿಸಿ, ಸತ್ಯವೂ, ಸರಳವೂ, ಕೋಮಲವೂ ಆದ ಮಾತನ್ನು ನುಡಿದನು – 'ನೀವು ಮತ್ತು ಮಿಥಿಲೇಶರು ಇರುವಾಗ ನಿಮ್ಮ ಎದುರಿನಲ್ಲಿ ನಾನು ಮಾತನಾಡುವುದು ಅನುಚಿತವಾದೀತು. ತಾವು ಹಾಗೂ ಮಹಾರಾಜರು ಕೊಡುವ ಆಜ್ಞೆಯೇ ಎಲ್ಲರಿಗೂ ಶಿರೋಧಾರ್ಯವಾಗುವುದು. ಇದನ್ನು ನಾನು ತಪ್ಪದೆ ಪಾಲಿಸುತ್ತೇನೆ ಎಂದು ಶಪಥಪೂರ್ವಕ ಹೇಳುತ್ತಿದ್ದೇನೆ. (ಚೌ/೧-೪)

**ದೋ – ರಾಮ ಸಪಥ ಸುನಿ ಮುನಿ ಜನಕು ಸಕುಚೆ ಸಭಾ ಸಮೇತ।**
**ಸಕಲ ಬಿಲೋಕತ ಭರತ ಮುಖು ಬನಇ ನ ಊತರು ದೇತ॥ ೨೯೬ ॥**

ಶ್ರೀರಾಮಚಂದ್ರನ ಶಪಥವನ್ನು ಕೇಳಿ, ಮುನೀಶ್ವರರೂ, ಜನಕನೂ, ಸಭಾಸದರೆಲ್ಲರೂ ಸಂದಿಗ್ಧಾವಸ್ಥೆಯಲ್ಲಿ ಸಿಕ್ಕಿಕೊಂಡು ಸ್ತಂಭೀಭೂತರಾದರು. ಯಾರ ಬಾಯಿಂದಲೂ ಮಾತೇ ಹೊರಡದು. ಎಲ್ಲರೂ ಭರತನಕಡೆಗೆ ನೋಡತೊಡಗಿದರು. (ದೋ/೨೯೬)

**ಚೌ – ಸಭಾ ಸಕುಚ ಬಸ ಭರತ ನಿಹಾರೀ। ರಾಮಬಂಧು ಧರಿ ಧೀರಜು ಭಾರೀ॥**
**ಕುಸಮಉ ದೇಖಿ ಸನೇಹು ಸँಭಾರಾ। ಬಢತ ಬಿಂಧಿ ಜಿಮಿ ಘಟಜ ನಿವಾರಾ॥ ೧ ॥**
**ಸೋಕ ಕನಕಲೋಚನ ಮತಿ ಛೋನೀ। ಹರೀ ಬಿಮಲ ಗುನ ಗನ ಜಗಜೋನೀ॥**
**ಭರತ ಬಿಬೇಕ ಬರಾಹँ ಬಿಸಾಲಾ। ಅನಾಯಾಸ ಉಧರೀ ತೆಹಿ ಕಾಲಾ॥ ೨ ॥**

**ಕರಿ ಪ್ರನಾಮು ಸಬ ಕಹ್ ಕರ ಜೋರೇ । ರಾಮು ರಾಉ ಗುರ ಸಾಧು ನಿಹೋರೇ॥**
**ಛಮಬ ಆಜು ಅತಿ ಅನುಚಿತ ಮೋರಾ । ಕಹಉ್ ಬದನ ಮೃದು ಬಚನ ಕಠೋರಾ ॥ ೩ ॥**
**ಹಿಯ್ ಸುಮಿರೀ ಸಾರದಾ ಸುಹಾಈ । ಮಾನಸ ತೇ್ ಮುಖ ಪಂಕಜ ಆಈ ॥**
**ಬಿಮಲ ಬಿಬೇಕ ಧರಮ ನಯ ಸಾಲೀ । ಭರತ ಭಾರತೀ ಮಂಜು ಮರಾಲೀ ॥ ೪ ॥**

ಇಡೀ ಸಭೆಯು ಸ್ತಂಭಿತವಾದುದನ್ನು ಕಂಡು ಭರತನು ಹೆಚ್ಚಾದ ಧೈರ್ಯವನ್ನು ವಹಿಸಿ, ಇದು ಕೆಟ್ಟಸಮಯವೆಂದು ನೋಡಿ, ಬೆಳೆಯುತ್ತಿದ್ದ ವಿಂಧ್ಯಪರ್ವತವನ್ನು ಅಗಸ್ತ್ಯರು ತಡೆದಂತೆ, ಉಕ್ಕಿಬರುತ್ತಿದ್ದ ಪ್ರೇಮೋದ್ರೇಕವನ್ನು ತಡೆದುಕೊಂಡನು. ಶೋಕವೆಂಬ ಹಿರಣ್ಯಾಕ್ಷನು ಸಭಾಸದರ ಬುದ್ಧಿಯೆಂಬ ಪೃಥ್ವಿಯನ್ನು ಅಪಹರಿಸಿದನು. ಆ ಬುದ್ಧಿಯು ವಿಮಲಸದ್ಗುಣ ಸಮೂಹಗಳೆಂಬ ಜಗತ್ತನ್ನು ಉತ್ಪನ್ನವಾಗಿಸುವಂತಹುದಾಗಿತ್ತು. ಆ ಸಮಯದಲ್ಲಿ ಭರತನ ವಿವೇಕವೆಂಬ ಪ್ರಬಲವರಾಹನು ಶೋಕರೂಪೀ ಹಿರಣ್ಯಾಕ್ಷನನ್ನು ವಧಿಸಿ, ಬುದ್ಧಿಯೆಂಬ ಪೃಥ್ವಿಯನ್ನು ಅನಾಯಾಸವಾಗಿ ಉದ್ಧರಿಸಿತು. ಭರತನು ಕೈಜೋಡಿಸಿ ಎಲ್ಲರಿಗೆ ನಮಸ್ಕರಿಸಿದನು. ಶ್ರೀರಾಮಚಂದ್ರನಲ್ಲಿ, ಜನಕಮಹಾರಾಜರಲ್ಲಿ, ಗುರುಗಳಾದ ವಸಿಷ್ಠರಲ್ಲಿ, ಸಾಧು-ಸಂತರಲ್ಲಿ ಹೀಗೆ ಬಿನ್ನವಿಸಿಕೊಂಡನು – ''ಇಂದು ತಾವು ನನ್ನ ಈ ಅತ್ಯಂತ ಅನುಚಿತ ವರ್ತನೆಯನ್ನು ಕ್ಷಮಿಸಿರಿ. ನಾನು ನನ್ನ ಪುಟ್ಟ ಬಾಯಿಂದ ಕಠೋರವಾದ ಮಾತನ್ನು ಹೇಳುತ್ತಿದ್ದೇನೆ.'' ಅನಂತರ ಭರತನು ಮನದಲ್ಲೇ ಸರಸ್ವತಿಯನ್ನು ನೆನೆದನು. ಕೂಡಲೇ ಅವಳು ಅವನ ಮನಸ್ಸೆಂಬ ಮಾನಸಸರೋವರದಿಂದ ಇಳಿದು, ಅವನ ಮುಖಕಮಲದಲ್ಲಿ ವಿರಾಜಿಸಿದಳು. ನಿರ್ಮಲ ವಿವೇಕ, ಧರ್ಮ, ನೀತಿ ಸಮ್ಮಿಳಿತವಾದ ಭರತನ ವಾಣಿಯೆಂಬ ಹಂಸವು ಧರ್ಮಾಧರ್ಮವೆಂಬ ನೀರಕ್ಷೀರಗಳನ್ನು ವಿಭಜಿಸಿತು. (ಚೌ/೧-೪)

**ದೋ – ನಿರಖಿ ಬಿಬೇಕ ಬಿಲೋಚನನ್ಹಿ ಸಿಥಿಲ ಸನೇಹ್ ಸಮಾಜು ।**
**ಕರಿ ಪ್ರನಾಮು ಬೋಲೇ ಭರತು ಸುಮಿರಿ ಸೀಯ ರಘುರಾಜು ॥ ೨೯೭ ॥**

ಭರತನು ತನ್ನ ವಿವೇಕನೇತ್ರಗಳಿಂದ ಇಡೀ ಸಮಾಜವು ಪ್ರೇಮಪರವಶನಾಗಿರುವುದನ್ನು ಕಂಡು, ಎಲ್ಲರಿಗೂ ಪ್ರಣಾಮಗೈದು, ಸೀತಾರಾಮರನ್ನು ಸ್ಮರಿಸಿ ಇಂತೆಂದನು – (ದೋ/೨೯೭)

**ಚೌ – ಪ್ರಭು ಪಿತು ಮಾತು ಸುಹೃದ ಗುರ ಸ್ವಾಮೀ । ಪೂಜ್ಯ ಪರಮ ಹಿತ ಅಂತರಜಾಮೀ ॥**
**ಸರಲ ಸುಸಾಹಿಬು ಸೀಲ ನಿಧಾನೂ । ಪ್ರನತಪಾಲ ಸರ್ಬಗ್ಯ ಸುಜಾನೂ ॥ ೧ ॥**
**ಸಮರಥ ಸರನಾಗತ ಹಿತಕಾರೀ । ಗುನಗಾಹಕು ಅವಗುನ ಅಘ ಹಾರೀ ॥**
**ಸ್ವಾಮಿ ಗೊಸಾ್ಇಹಿ ಸರಿಸ ಗೊಸಾಈ್ । ಮೊಹಿ ಸಮಾನ ಮೈ್ ಸಾಇ್ ದೊಹಾಈ್ ॥ ೨ ॥**
**ಪ್ರಭು ಪಿತು ಬಚನ ಮೋಹ ಬಸ ಪೇಲೀ । ಆಯಉ್ ಇಹಾ್ ಸಮಾಜು ಸಕೇಲೀ ॥**
**ಜಗ ಭಲ ಪೋಚ ಊ್ಚ ಅರು ನೀಚೂ । ಅಮಿಅ ಅಮರಪದ ಮಾಹುರು ಮೀಚೂ ॥ ೩ ॥**
**ರಾಮ ರಜಾಇ ಮೇಟ ಮನ ಮಾಹೀ್ । ದೇಖಾ ಸುನಾ ಕತಹು್ ಕೊಉ ನಾಹೀ್ ॥**
**ಸೋ ಮೈ್ ಸಬ ಬಿಧಿ ಕೀನ್ಹಿ ಢಿಠಾಈ । ಪ್ರಭು ಮಾನೀ ಸನೇಹ ಸೇವಕಾಈ ॥ ೪ ॥**

ಪ್ರಭೂ! ನನಗೆ ತಾಯಿ, ತಂದೆ, ಮಿತ್ರರು, ಗುರುವು, ಸ್ವಾಮಿಯು, ಹಿತೈಷಿಯೂ, ಅಂತರ್ಯಾಮಿಯೂ ನೀನೇ ಆಗಿರುವೆ. ನೀನು ಸರಳಹೃದಯನೂ, ನನಗೆ ಒಡೆಯನೂ, ಪೂಜ್ಯನೂ, ಗುಣಶೀಲನಿಧಿಯೂ, ಶರಣಾಗತವತ್ಸಲನೂ, ಸರ್ವಜ್ಞನೂ, ಉದಾರನೂ, ಸಮರ್ಥನೂ, ಶರಣಾಗತ ಹಿತಕಾರಿಯೂ, ಗುಣಗ್ರಾಹಿಯೂ, ದೋಷಗಳನ್ನು-ಪಾಪಗಳನ್ನು ಹರಿಸುವವನೂ ಆಗಿರುವೆ. ಒಡೆಯಾ! ನಾನು ಪ್ರಮಾಣಮಾಡಿ ಹೇಳುತ್ತಿದ್ದೇನೆ. ನಿನ್ನಂತಹ ಸ್ವಾಮಿಯು ನೀನೇ; ನನ್ನಂತಹ ಅಪರಾಧಿಯು ಬೇರೆ ಯಾರೂ ಇರಲಾರರು. ತಂದೆಯವರ ಆಜ್ಞೆಯನ್ನು ಉಲ್ಲಂಘಿಸಿ, ಮೋಹವಶನಾಗಿ ಪ್ರಜಾ ಜನರೊಂದಿಗೆ ಇಲ್ಲಿಗೆ ಬಂದಿರುವೆನು. ಪ್ರಭೂ! ಜಗತ್ತಿನಲ್ಲಿ ಒಳ್ಳೆಯ-ಕೆಟ್ಟ, ಮೇಲು-ಕೀಳು, ಅಮೃತ ಹಾಗೂ ಅಮರಪದ, ವಿಷ ಮತ್ತು ಮೃತ್ಯು ಮೊದಲಾದ ಪರಸ್ಪರ ವಿರೋಧಗಳಿರುವ ವಸ್ತುಗಳು ಅನೇಕವಿವೆ. ಆದರೆ ನಿನಗೆ ಮಾತ್ರ ವಿರೋಧಿಗಳು ಯಾರೂ ಇಲ್ಲ. ಶ್ರೀರಾಮಚಂದ್ರನ ಆಜ್ಞೆಯನ್ನು ಮನಸ್ಸಿನಲ್ಲಾದರೂ ಮೀರುವ ಶಕ್ತಿಯುಳ್ಳವರನ್ನು ನಾನು ಎಲ್ಲಿಯೂ ಇಲ್ಲಿಯವರೆಗೆ ನೋಡಿಲ್ಲ, ಕೇಳಿಲ್ಲ. ಆದರೂ ನಾನು ಅಂತಹ ಧಾರ್ಷ್ಟ್ಯವನ್ನೇ ಮಾಡಿದ್ದೇನೆ. ಆದರೆ ನೀನು ಅದನ್ನೂ ಕೂಡ ಸ್ನೇಹ ಮತ್ತು ಸೇವೆಯೆಂದೇ ಭಾವಿಸಿದೆ. (ಚೌ/೧-೪)

**ದೋ – ಕೃಪಾ್ ಭಲಾಈ್ ಆಪನೀ ನಾಥ ಕೀನ್ಹ ಭಲ ಮೋರ ।**
**ದೂಷನ ಭೇ ಭೂಷನ ಸರಿಸ ಸುಜಸು ಚಾರು ಚಹು ಓರ ॥ ೨೯೮ ॥**

ಸ್ವಾಮಿ! ನಿನ್ನ ಕೃಪಾಸೌಜನ್ಯದಿಂದಾಗಿ ನನಗೆಲ್ಲವೂ ಒಳ್ಳೆಯದೇ ಜರಗಿದೆ. ಆದರಿಂದ ನನ್ನ ದೂಷಣವೂ ಕೂಡ ಭೂಷಣವೇ ಆಯಿತು. ಎಲ್ಲೆಡೆಗಳಲ್ಲಿಯೂ ನನ್ನ ಯಶಸ್ಸು ಹಬ್ಬಿದೆ. (ದೋ/೨೯೮)

**ಚೌ – ರಾಉರಿ ರೀತಿ ಸುಬಾನಿ ಬಡಾಈ। ಜಗತ ಬಿದಿತ ನಿಗಮಾಗಮ ಗಾಈ॥**
**ಕೂರ ಕುಟಿಲ ಖಲ ಕುಮತಿ ಕಲಂಕೀ। ನೀಚ ನಿಸೀಲ ನಿರೀಸ ನಿಸಂಕೀ॥ ೧॥**
**ತೇಉ ಸುನಿ ಸರನ ಸಾಮುಹೇಂ ಆಏ। ಸಕೃತ ಪ್ರನಾಮು ಕಿಹೇಂ ಅಪನಾಏ॥**
**ದೇಖಿ ದೋಷ ಕಬಹುँ ನ ಉರ ಆನೇ। ಸುನಿ ಗುನ ಸಾಧು ಸಮಾಜ ಬಖಾನೇ॥ ೨॥**
**ಕೋ ಸಾಹಿಬ ಸೇವಕಹಿ ನೆವಾಜೀ। ಆಪು ಸಮಾಜ ಸಾಜ ಸಬ ಸಾಜೀ॥**
**ನಿಜ ಕರತೂತಿ ನ ಸಮುಝಿಅ ಸಪನೇಂ। ಸೇವಕ ಸಕುಚ ಸೋಚು ಉರ ಅಪನೇಂ॥ ೩॥**
**ಸೋ ಗೊಸಾಇँ ನಹಿँ ದೂಸರ ಕೋಪೀ। ಭುಜಾ ಉಠಾಇ ಕಹಉँ ಪನ ರೋಪೀ॥**
**ಪಸು ನಾಚತ ಸುಕ ಪಾಠ ಪ್ರಬೀನಾ। ಗುನ ಗತಿ ನಟ ಪಾಠಕ ಆಧೀನಾ॥ ೪॥**

ಪ್ರಭೂ! ನಿನ್ನ ರೀತಿಯು, ಕಾರುಣ್ಯಸ್ವಭಾವಗಳು ಜಗತ್ಪ್ರಸಿದ್ಧವು. ಇದು ನಿಗಮಾಗಮಗಳಲ್ಲಿಯೂ ವರ್ಣಿತವಾಗಿದೆ. ಕ್ರೂರರೂ, ಕುಟಿಲರೂ, ದುಷ್ಟರೂ, ಕುಮತಿಗಳೂ, ಕಳಂಕಿತರೂ, ನೀಚರೂ, ದುಶ್ಶೀಲರೂ, ನಿರೀಶ್ವರವಾದಿಗಳೂ, ನೀತಿಗೆಟ್ಟವರೂ. ಹೀಗೆ ಇವರೆಲ್ಲರೂ ಕೂಡ ನಿನಗೆ ಶರಣಾಗತರಾಗಿ ಒಮ್ಮೆ ಪ್ರಣಾಮ ಮಾಡಿದ ಮಾತ್ರದಿಂದ ಅವರನ್ನು ತನ್ನವರಾಗಿಸಿಕೊಳ್ಳುವೆ. ಆ ಶರಣಾಗತರ ದೋಷಗಳನ್ನು ನೋಡಿಯೂ, ಅವನ್ನು ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ಅವರ ಗುಣಗಳನ್ನು ಮಾತ್ರ ಗ್ರಹಿಸಿ, ಅವರನ್ನು ಸಾಧುಜನ ಸಮಕ್ಷದಲ್ಲಿ ಕೊಂಡಾಡಿದಿರಿ. ಸೇವಕರ ಯೋಗಕ್ಷೇಮಗಳ ಸಮಸ್ತ ಭಾರವನ್ನು ವಹಿಸಿಕೊಳ್ಳುವವರು ನೀನಲ್ಲದೆ ಕೃಪಾಳು ಬೇರೆ ಯಾರಿದ್ದಾರೆ? ಕನಸಿನಲ್ಲಿಯೂ ತಾನು ಮಾಡಿದೆ ಎಂದು ಹೇಳಿಕೊಳ್ಳದೆ, ಅಂದರೆ ಸೇವಕರಿಗಾಗಿ ಒಳಿತನ್ನು ಮಾಡಿದೆ ಎಂದು ತಿಳಿಯದೆ, ಬದಲಾಗಿ ಸೇವಕನಿಗೆ ಸಂಕೋಚವಾದೀತೆಂದು ಯೋಚಿಸುವ ಸ್ವಾಮಿಯು ನೀನಲ್ಲದೆ ಬೇರೆ ಯಾರೂ ಇಲ್ಲವೆಂದು ನಾನು ಭುಜವೆತ್ತಿ ಜೋರಾಗಿ ಹೇಳಬಲ್ಲೆ. ಕಪಿಯೇ ಮೊದಲಾದ ಪಶುಗಳು ಕುಣಿಯುತ್ತವೆ. ಗಿಳಿಗಳು ಹೇಳಿಕೊಟ್ಟಿದ್ದನ್ನು ನುಡಿಯುವುದರಲ್ಲಿ ಪ್ರಾವೀಣ್ಯ ಪಡೆಯುತ್ತವೆ. ಆದರೆ ಗಿಳಿಯ ಬಾಯಿಪಾಠ, ಕಪಿಯ ಕುಣಿಯುವ ಗತಿಯು ಹೇಳಿಕೊಡುವವರ, ಕುಣಿಸುವವರ ಅಧೀನವಿರುತ್ತದೆ. (ಚೌ/೧-೪)

**ದೋ – ಯೋँ ಸುಧಾರಿ ಸನಮಾನಿ ಜನ ಕಿಏ ಸಾಧು ಸಿರಮೋರ।**
**ಕೋ ಕೃಪಾಲ ಬಿನು ಪಾಲಿಹೈ ಬಿರಿದಾವಲಿ ಬರಜೋರ॥ ೨೯೯॥**

ಈ ಪ್ರಕಾರ ನಿನ್ನ ಸೇವಕರ ಕೆಟ್ಟುಹೋದ ಕಾರ್ಯವನ್ನು ಸಂಸ್ಕರಿಸಿ, ನೀನು ಅವರನ್ನು ಆದರಿಸಿ ಸಾಧುಶಿರೋಮಣಿಗಳನ್ನಾಗಿ ಮಾಡಿರುವಿ. ಕೃಪಾನಿಧಿಯಾದ ನಿನಗಲ್ಲದೆ ಇಂತಹ ಕೀರ್ತಿ, ಪ್ರತಿಷ್ಠೆಗಳು ಬೇರೆ ಯಾರಲ್ಲಿ ಕಂಡುಬಂದಾವು? ಆದ್ದರಿಂದ ಈ ವಿಷಯದಲ್ಲಿ ನಿನಗೆ ನೀನೇ ಸಾಟಿಯಾಗಿರುವೆ. (ದೋ/೨೯೯)

**ಚೌ – ಸೋಕ ಸನೇಹँ ಕಿ ಬಾಲ ಸುಭಾಏँ। ಆಯಉँ ಲಾಇ ರಜಾಯಸು ಬಾಏँ॥**
**ತಬಹುँ ಕೃಪಾಲ ಹೆರಿ ನಿಜ ಓರಾ। ಸಬಹಿ ಭಾँತಿ ಭಲ ಮಾನೆಉ ಮೋರಾ॥ ೧॥**
**ದೇಖೆಉँ ಪಾಯ ಸುಮಂಗಲ ಮೂಲಾ। ಜಾನೆಉँ ಸ್ವಾಮಿ ಸಹಜ ಅನುಕೂಲಾ॥**
**ಬಡೇँ ಸಮಾಜ ಬಿಲೋಕೆಉँ ಭಾಗೂ। ಬಡೀँ ಚೂಕ ಸಾಹಿಬ ಅನುರಾಗೂ॥ ೨॥**
**ಕೃಪಾ ಅನುಗ್ರಹು ಅಂಗು ಅಘಾಈ। ಕೀನ್ಹಿ ಕೃಪಾನಿಧಿ ಸಬ ಅಧಿಕಾಈ॥**
**ರಾಖಾ ಮೋರ ದುಲಾರ ಗೊಸಾಈँ। ಅಪನೇँ ಸೀಲ ಸುಭಾಯँ ಭಲಾಈँ॥ ೩॥**
**ನಾಥ ನಿಪಟ ಮೈँ ಕೀನ್ಹಿ ಢಿಠಾಈ। ಸ್ವಾಮಿ ಸಮಾಜ ಸಕೋಚ ಬಿಹಾಈ॥**
**ಅಬಿನಯ ಬಿನಯ ಜಥಾರುಚಿ ಬಾನೀ। ಛಮಿಹಿ ದೇಉ ಅತಿ ಆರತಿ ಜಾನೀ॥ ೪॥**

ನಾನು ಶೋಕದಲ್ಲಿ ಮುಳುಗಿ, ನಿನ್ನ ಪ್ರೇಮಕ್ಕೆ ವಶನಾಗಿ, ಬಾಲ್ಯ ಚಾಪಲ್ಯದಿಂದ ನಿನ್ನ ಆಜ್ಞೆಯನ್ನು ಪಕ್ಕಕ್ಕಿಟ್ಟು, ನಿನ್ನ ಪದಸನ್ನಿಧಿಗೆಬಂದಿರುವೆನು. ಆದರೂ ಕೃಪಾಳು ಸ್ವಾಮಿಯಾದ ನೀನು ಎಲ್ಲ ಪ್ರಕಾರದಿಂದ ನನ್ನ ಒಳಿತನ್ನೇ ಭಾವಿಸಿದೆ. ಅಂದರೆ ಈ ಅನುಚಿತ ಕಾರ್ಯವನ್ನು ಸರಿಯೆಂದು ತಿಳಿದೆ. ನಾನು ಎಲ್ಲ ಶುಭಗಳಿಗೆ ಮೂಲವಾದ ತಮ್ಮ ಚರಣದರ್ಶನ ಮಾಡಿದೆ. ಸ್ವಾಭಾವಿಕವಾಗಿಯೇ ಸ್ವಾಮಿಯಾದ ನೀನು ನನಗೆ ಅನುಕೂಲವಾಗಿರುವೆ ಎಂಬುದನ್ನೂ ಅರಿತುಕೊಂಡೆ. ಇಷ್ಟು ದೊಡ್ಡ ಸಮಾಜದಲ್ಲಿ

ನನ್ನ ಭಾಗ್ಯ ಎಷ್ಟು ದೊಡ್ಡದು ಎಂಬುದನ್ನೂ ಅರಿತೆ. ನನ್ನಿಂದ ಇಷ್ಟೊಂದು ತಪ್ಪಾದರೂ ನನ್ನ ಮೇಲೆ ಸ್ವಾಮಿಗೆ ಎಷ್ಟೊಂದು ಅನುರಾಗವಿದೆಯೆಂಬುದನ್ನು ಮನಗಂಡೆ. ಕೃಪಾನಿಧಾನನಾದ ನೀನು ನನ್ನ ಮೇಲೆ ಸಾಂಗೋಪಾಂಗವಾಗಿ ಕೃಪೆ ಮತ್ತು ಅನುಗ್ರಹವನ್ನು ನನ್ನ ಯೋಗ್ಯತೆಗಿಂತಲೂ ಹೆಚ್ಚೇ ಮಾಡಿದ್ದೀಯೆ. ಸ್ವಾಮಿ! ನೀನು ನಿನ್ನ ಶೀಲ, ಸ್ವಭಾವ, ಒಳ್ಳೆತನದಿಂದ ನನ್ನ ಮೇಲೆ ಸ್ನೇಹವಿಟ್ಟು ಸಲಹಿದ್ದೀಯೆ. ಪ್ರಭೂ! ನಾನು ಸ್ವಾಮಿಯ ಹಾಗೂ ಸಮಾಜದ ಸಂಕೋಚವನ್ನು ತೊರೆದು, ಅವಿನಯವೋ, ವಿನಯವೋ ತೋಚಿದಂತೆ ಮಾತನಾಡಿ, ಧಾರ್ಷ್ಟ್ಯಕ್ಕೆ ಕೈ ಹಾಕಿದ್ದೇನೆ. ದೇವಾ! ನನ್ನ ಆತುರತೆಯನ್ನು ಅರಿತು ಕ್ಷಮಿಸಿಬಿಡು. (ಚೌ/೧-೪)

**ದೋ – ಸುಹೃದ ಸುಜಾನ ಸುಸಾಹಿಬಹಿ ಬಹುತ ಕಹಬ ಬಡಿ ಖೋರಿ।**
**ಆಯಸು ದೇಇಅ ದೇವ ಅಬ ಸಬಇ ಸುಧಾರೀ ಮೋರಿ॥ ೩೦೦ ॥**

ಸಹೃದಯನೂ, ಜ್ಞಾನಿಯೂ, ಶ್ರೇಷ್ಠನೂ ಆದ ಒಡೆಯನಲ್ಲಿ ಬಹಳ ಹೇಳುವುದು ದೊಡ್ಡ ತಪ್ಪೇ. ಆದ್ದರಿಂದ ದೇವಾ! ನೀನು ನನಗೆ ಅಪ್ಪಣೆಯನ್ನು ಕೊಡು. ನಿನ್ನ ಆಜ್ಞಾಪಾಲನೆಯೇ ಎಲ್ಲಕ್ಕೂ ಒಳಿತಾಗುವುದು. (ದೋ/೩೦೦)

**ಚೌ – ಪ್ರಭು ಪದ ಪದುಮ ಪರಾಗ ದೊಹಾಈ। ಸತ್ಯ ಸುಕೃತ ಸುಖ ಸೀವ್ ಸುಹಾಈ॥**
**ಸೋ ಕರಿ ಕಹಉಁ ಹಿಏ ಅಪನೇ ಕೀ। ರುಚಿ ಜಾಗತ ಸೋವತ ಸಪನೇ ಕೀ॥ ೧ ॥**
**ಸಹಜ ಸನೇಹ್ ಸ್ವಾಮಿ ಸೇವಕಾಈ। ಸ್ವಾರಥ ಛಲ ಫಲ ಚಾರಿ ಬಿಹಾಈ॥**
**ಅಗ್ಯಾ ಸಮ ನ ಸುಸಾಹಿಬ ಸೇವಾ। ಸೋ ಪ್ರಸಾದು ಜನ ಪಾವೈ ದೇವಾ॥ ೨ ॥**
**ಅಸ ಕಹಿ ಪ್ರೇಮ ಬಿಬಸ ಭಏ ಭಾರೀ। ಪುಲಕ ಸರೀರ ಬಿಲೋಚನ ಬಾರೀ॥**
**ಪ್ರಭು ಪದ ಕಮಲ ಗಹೇ ಅಕುಲಾಈ। ಸಮಉ ಸನೇಹು ನ ಸೋ ಕಹಿ ಜಾಈ॥ ೩ ॥**
**ಕೃಪಾಸಿಂಧು ಸನಮಾನಿ ಸುಬಾನೀ। ಬೈಠಾಏ ಸಮೀಪ ಗಹಿ ಪಾನೀ॥**
**ಭರತ ಬಿನಯ ಸುನಿ ದೇಖಿ ಸುಭಾಊ। ಸಿಥಿಲ ಸನೇಹ್ ಸಭಾ ರಘುರಾಊ॥ ೪ ॥**

ಪ್ರಭೂ! ಸತ್ಯ, ಸುಕೃತ, ಸುಖಪ್ರದವಾದ, ಸುಮನೋಹರವಾದ ಮೇರೆಯೆನಿಸಿದ ನಿನ್ನ ಚರಣಕಮಲರಜದ ಮೇಲೆ ಆಣೆಯಿಟ್ಟು ನನ್ನ ಮನಸ್ಸಿನಲ್ಲಿರುವುದನ್ನು ಪ್ರಕಟಿಸುತ್ತೇನೆ. ಜಾಗೃತ್, ಸ್ವಪ್ನ, ಸುಷುಪ್ತಿಯಲ್ಲಿಯೂ ಕೂಡ ಸ್ವಾರ್ಥಕಪಟವನ್ನೂ, ಚತುರ್ವಿಧ ಪುರುಷಾರ್ಥಗಳನ್ನೂ ತೊರೆದು ಸಹಜ ಸ್ನೇಹದಿಂದ ಸ್ವಾಮಿಯ ಸೇವೆಮಾಡುವುದೇ ನನ್ನ ಅಭೀಷ್ಟವು. ಸತ್ಪ್ರಭುವಿನ ಆಜ್ಞೆಯನ್ನು ಪಾಲಿಸುವುದಕ್ಕಿಂತ ಮಿಗಿಲಾದ ಸ್ವಾಮಿ ಸೇವೆ ಬೇರೊಂದಿಲ್ಲ. ದೇವಾ! ಈಗ ಈ ಸೇವಕನಿಗೆ ಅದೇ ಆಜ್ಞಾರೂಪಿಯಾದ ಪ್ರಸಾದ ಲಭಿಸಲಿ. ಹೀಗೆ ಹೇಳಿ ಭರತನು ಪ್ರೇಮಪರವಶನಾದನು. ಆತನ ಶರೀರ ಪುಲಕಿತವಾಯಿತು. ಕಣ್ಣುಗಳಲ್ಲಿ ಪ್ರೇಮಾಶ್ರುಗಳು ತುಂಬಿಬಂದವು. ವ್ಯಾಕುಲನಾಗಿ ಅವನು ಶ್ರೀರಾಮನ ಪಾದಪದ್ಮಗಳನ್ನು ಹಿಡಿದುಕೊಂಡು ಬಿಟ್ಟ. ಆ ಸಮಯದಲ್ಲಿನ ಅವರ ಪ್ರೇಮಾತಿರೇಕವು ವರ್ಣನಾತೀತವು. ಕೃಪಾಸಿಂಧುವಾದ ಶ್ರೀರಾಮಚಂದ್ರನು ಮನೋಹರವಾದ ಮಾತುಗಳಿಂದ ಭರತನನ್ನು ಆದರಿಸಿ, ಆತನ ಕೈಹಿಡಿದು ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡನು. ಭರತನ ಬಿನ್ನಹವನ್ನು ಲಾಲಿಸಿ, ಅವನ ಸ್ವಭಾವವನ್ನು ಗಮನಿಸಿ, ಇಡೀ ಸಭೆ ಮತ್ತು ರಘುರಾಮನು ಪ್ರೇಮವಿಹ್ವಲರಾದರು. (ಚೌ/೧-೪)

**ಛಂ – ರಘುರಾಉ ಸಿಥಿಲ ಸನೇಹ್ ಸಾಧು ಸಮಾಜ ಮುನಿ ಮಿಥಿಲಾ ಧನೀ।**
**ಮನ ಮಹುಁ ಸರಾಹತ ಭರತ ಭಾಯಪ ಭಗತಿ ಕೀ ಮಹಿಮಾ ಘನೀ॥**
**ಭರತಹಿ ಪ್ರಸಂಸತ ಬಿಬುಧ ಬರಷತ ಸುಮನ ಮಾನಸ ಮಲಿನ ಸೇ॥**
**ತುಲಸೀ ಬಿಕಲ ಸಬ ಲೋಗ ಸುನಿ ಸಕುಚೇ ನಿಸಾಗಮ ನಲಿನ ಸೇ॥**

ಶ್ರೀರಘುರಾಮನು, ವಸಿಷ್ಠ ಮಹರ್ಷಿಗಳು, ಮಿಥಿಲಾಧಿಪತಿ ಜನಕನು, ಸಾಧುಜನರು ಎಲ್ಲರೂ ಭರತನ ಉದಾತ್ತ ವಚನಗಳಿಂದ ಪರವಶರಾದರು. ಎಲ್ಲರೂ ಮನಸ್ಸಿನಲ್ಲೇ ಭರತನ ಭ್ರಾತೃತ್ವವನ್ನು, ಅಪಾರಭಕ್ತಿ ಮಹಿಮೆಯನ್ನು ಕೊಂಡಾಡತೊಡಗಿದರು. ದೇವತೆಗಳು ಮಲಿನ ಮನದಿಂದಲೇ ಭರತನನ್ನು ಹೊಗಳಿ, ಹೂಮಳೆಗರೆಯತೊಡಗಿದರು. ತುಳಸೀದಾಸರೆನ್ನುತ್ತಾರೆ – ಜನರೆಲ್ಲರೂ ಭರತನ ಮಾತನ್ನು ಕೇಳಿ, ರಾತ್ರಿಯಾದಾಗ ಕಮಲವು ಸಂಕೋಚಗೊಳ್ಳುವಂತೆ, ಸಂಕೋಚಗೊಂಡು ವ್ಯಾಕುಲಗೊಂಡರು. (ಛಂದ)

**ಸೋ – ದೇಖಿ ದುಖಾರೀ ದೀನ ದುಹು ಸಮಾಜ ನರ ನಾರಿ ಸಬ।**
**ಮಘವಾ ಮಹಾ ಮಲೀನ ಮುಏ ಮಾರಿ ಮಂಗಲ ಚಹತ॥ ೩೦೧ ॥**

ಎರಡೂ ಕಡೆಯ ಜನರು ದೀನ, ದುಃಖಿಗಳಾಗಿರುವುದನ್ನು ಕಂಡು, ಮಹಾಮಲಿನವಾದ ಮನಸ್ಸುಳ್ಳ ಇಂದ್ರನು ಸತ್ತವರನ್ನು ಕೊಂದು ತನ್ನ ಒಳಿತನ್ನು ಬಯಸಿದಂತೆ ಮಾಡಿದನು. (ಸೋ/೩೦೧)

**ಚೌ – ಕಪಟ ಕುಚಾಲಿ ಸೀವ್ ಸುರರಾಜೂ। ಪರ ಅಕಾಜ ಪ್ರಿಯ ಆಪನ ಕಾಜೂ॥**
**ಕಾಕ ಸಮಾನ ಪಾಕರಿಪು ರೀತೀ। ಛಲೀ ಮಲೀನ ಕತಹುँ ನ ಪ್ರತೀತೀ॥ ೧॥**
**ಪ್ರಥಮ ಕುಮತ ಕರಿ ಕಪಟು ಸँಕೇಲಾ। ಸೋ ಉಚಾಟು ಸಬ ಕೇँ ಸಿರ ಮೇಲಾ॥**
**ಸುರಮಾಯाँ ಸಬ ಲೋಗ ಬಿಮೋಹೇ। ರಾಮ ಪ್ರೇಮ ಅತಿಸಯ ನ ಬಿಛೋಹೇ॥ ೨॥**
**ಭಯ ಉಚಾಟ ಬಸ ಮನ ಥಿರ ನಾಹೀँ। ಛನ ಬನ ರುಚಿ ಛನ ಸದನ ಸೊಹಾಹೀँ॥**
**ದುಬಿಧ ಮನೋಗತಿ ಪ್ರಜಾ ದುಖಾರೀ। ಸರಿತ ಸಿಂಧು ಸಂಗಮ ಜನು ಬಾರೀ॥ ೩॥**
**ದುಚಿತ ಕತಹುँ ಪರಿತೋಷು ನ ಲಹಹೀँ। ಏಕ ಏಕ ಸನ ಮರಮು ನ ಕಹಹೀँ॥**
**ಲಖಿ ಹಿಯँ ಹँಸಿ ಕಹ ಕೃಪಾನಿಧಾನೂ। ಸರಿಸ ಸ್ವಾನ ಮಘವಾನ ಜುಬಾನೂ॥ ೪॥**

ದೇವರಾಜ ಇಂದ್ರನು ಕಪಟ, ಕುತಂತ್ರಗಳಿಗೆ ಸೀಮಾಪುರುಷನು. ಆತನಿಗೆ ಯಾವಾಗಲೂ ಪರರ ಹಾನಿ, ತನ್ನ ಲಾಭವೇ ಇಷ್ಟ. ಇಂದ್ರನ ನಡತೆ ಕಾಗೆಗೆ ಸಮಾನವಾದುದು. ಅದು ಕಪಟಿ, ಮಲಿನ ಮನವುಳ್ಳದ್ದು. ಅದು ಯಾರನ್ನೂ ನಂಬುವುದಿಲ್ಲ. ಮೊದಲು ಅವನು ಕೆಟ್ಟಯೋಚನೆ ಮಾಡಿ, ಕಪಟವನ್ನು ಬಾಚಿ ಗುಡ್ಡೆ ಹಾಕಿಕೊಂಡನು. ಅನಂತರ ಅದನ್ನು ಎಲ್ಲರ ತಲೆಯಮೇಲೆ ಎರಚಿದ. ಮತ್ತೆ ದೇವಮಾಯೆಯಿಂದ ಎಲ್ಲರನ್ನೂ ವಿಶೇಷವಾಗಿ ಮೋಹಗೊಳಿಸಿದನು. ಆದರೂ ಅವರು ಶ್ರೀರಾಮಚಂದ್ರನ ಪ್ರೇಮದಿಂದ ದೂರವಾಗಲಿಲ್ಲ, ವಂಚಿತರಾಗಲಿಲ್ಲ. ಯಾರ ಮನಸ್ಸೂ ಕೂಡ ಭಯ, ವಿರಕ್ತಿಗಳಿಂದ ಸ್ಥಿರವಿರಲಿಲ್ಲ. ಒಂದು ಕ್ಷಣ ಅವರಿಗೆ ವನವಾಸವೇ ಚೆನ್ನು ಎನಿಸಿದರೆ, ಮರುಕ್ಷಣದಲ್ಲಿ ಮನೆಕಡೆಯ ನೆನಪಾಗಿ ಮನೆಗೆ ಹೋಗೋಣ ಎನ್ನಿಸುತ್ತಿತ್ತು. ಈ ಉಭಯಸಂಕಟದಿಂದ ಪ್ರಜೆಗಳು ದುಃಖಗೊಂಡರು. ನದೀಸಮುದ್ರ ಸಂಗಮದಲ್ಲಿ ನೀರು ಕದಡಿದಂತೆ ಅವರ ಮನಸ್ಸು ಕದಡಿಹೋಗಿತ್ತು. ಉಭಯಸಂಕಟದಿಂದಾಗಿ ಅವರಿಗೆ ಸಂತೋಷವಿಲ್ಲ. ಯಾರ ಬಳಿಯೂ ಅವರು ತಮ್ಮ ದುಃಖವನ್ನು ತೋಡಿಕೊಳ್ಳದೆ ಹೋದರು. ಕೃಪಾನಿಧಾನನಾದ ಶ್ರೀರಾಮಚಂದ್ರನು ಅವರ ಈ ದೆಸೆಯನ್ನು ಕಂಡು ಮನದಲ್ಲೇ ನಕ್ಕು ನುಡಿದನು – ಇಂದ್ರ, ನಾಯಿ, ಕಾಮುಕ ನವಯುವಕ ಈ ಮೂವರೂ ಒಂದೇ ಗುಂಪಿನವರು. (ಪಾಣಿನೀಯ ವ್ಯಾಕರಣಕ್ಕನುಸಾರ ಶ್ವನ್, ಯುವನ್, ಮಘವನ್, ಈ ಶಬ್ದಗಳ ರೂಪವೂ ಒಂದೇ ರೀತಿಯಾಗಿವೆ.) (ಚೌ/೧-೪)

**ದೋ – ಭರತು ಜನಕು ಮುನಿಜನ ಸಚಿವ ಸಾಧು ಸಚೇತ ಬಿಹಾಇ।**
**ಲಾಗಿ ದೇವಮಾಯಾ ಸಬಹಿ ಜಥಾಜೋಗು ಜನು ಪಾಇ॥ ೩೦೨॥**

ಭರತ, ಜನಕ, ಮುನಿಗಳು, ಮಂತ್ರಿ, ಜ್ಞಾನಿ ಹಾಗೂ ಸಾಧು-ಸಂತರು ಇವರನ್ನುಳಿದು ಉಳಿದೆಲ್ಲರೂ ಅವರವರ ಸ್ವಭಾವಕ್ಕನುಗುಣವಾಗಿ ದೇವಮಾಯೆಗೆ ವಶರಾದರು. (ದೋ/೩೦೨)

**ಚೌ – ಕೃಪಾಸಿಂಧು ಲಖಿ ಲೋಗ ದುಖಾರೇ। ನಿಜ ಸನೇಹँ ಸುರಪತಿ ಛಲ ಭಾರೇ॥**
**ಸಭಾ ರಾಉ ಗುರ ಮಹಿಸುರ ಮಂತ್ರೀ। ಭರತ ಭಗತಿ ಸಬ ಕೈ ಮತಿ ಜಂತ್ರೀ॥ ೧॥**
**ರಾಮಹಿ ಚಿತವತ ಚಿತ್ರ ಲಿಖೇ ಸೇ। ಸಕುಚತ ಬೋಲತ ಬಚನ ಸಿಖೇ ಸೇ॥**
**ಭರತ ಪ್ರೀತಿ ನತಿ ಬಿನಯ ಬಡಾಈ। ಸುನತ ಸುಖದ ಬರನತ ಕಠಿನಾಈ॥ ೨॥**
**ಜಾಸು ಬಿಲೋಕಿ ಭಗತಿ ಲವಲೇಸೂ। ಪ್ರೇಮ ಮಗನ ಮುನಿಗನ ಮಿಥಿಲೇಸೂ॥**
**ಮಹಿಮಾ ತಾಸು ಕಹೈ ಕಿಮಿ ತುಲಸೀ। ಭಗತಿ ಸುಭಾಯँ ಸುಮತಿ ಹಿಯँ ಹುಲಸೀ॥ ೩॥**
**ಆಪು ಛೋಟಿ ಮಹಿಮಾ ಬಡಿ ಜಾನೀ। ಕಬಿಕುಲ ಕಾನಿ ಮಾನಿ ಸಕುಚಾನೀ॥**
**ಕಹಿ ನ ಸಕತಿ ಗುನ ರುಚಿ ಅಧಿಕಾಈ। ಮತಿ ಗತಿ ಬಾಲ ಬಚನ ಕೀ ನಾಈ॥ ೪॥**

ಕರುಣಾಸಾಗರನಾದ ಶ್ರೀರಾಮಚಂದ್ರನು ಇಂದ್ರನ ಮಾಯೆಯಿಂದ ಮತ್ತು ತನ್ನ ಸ್ನೇಹದಿಂದ ದುಃಖಿತರಾದ ಸಭಾಸದರನ್ನು ನೋಡಿದನು. ಸಭಿಕರು, ಜನಕನು, ಗುರುಗಳು, ಬ್ರಾಹ್ಮಣರು, ಮಂತ್ರಿಯೇ ಮೊದಲಾದವರೆಲ್ಲರೂ ಭರತನ ಭಕ್ತಿಗೆ ವಶರಾಗಿ, ಏನೊಂದೂ ಮಾತಾಡದೆ, ಮಾಡದೆ ಹೋದರು. ಅವರೆಲ್ಲರೂ ಚಿತ್ರದಲ್ಲಿ ಬರೆದಂತೆ ನಿಶ್ಚಲರಾಗಿ ಶ್ರೀರಾಮನತ್ತ ನೋಡುತ್ತಿದ್ದರು. ಸಂಕೋಚಗೊಂಡು ಗಿಳಿಪಾಠ ಒಪ್ಪಿಸುವಂತೆ ಮಾತಾಡುತ್ತಿದ್ದರು. ಭರತನ ಪ್ರೀತಿ, ನಮ್ರತೆ, ವಿನಯ, ಮಹಿಮೆ ಇವೆಲ್ಲವೂ ಶ್ರವಣಪ್ರಿಯ. ಆದರೆ ವರ್ಣನಾತೀತ. ಭರತನ ಭಕ್ತಿಯ ಲವಲೇಶವನ್ನು ಕಂಡು ಮಿಥಿಲೇಶ ಜನಕನು, ಮುನಿಜನರು

ಪ್ರೇಮಮಗ್ನರಾಗಿ ಹೋದರು. ಅಂತಹ ಭರತನ ಮಹಿಮೆಯನ್ನು ತುಳಸೀದಾಸನು ಎಂತು ಬಣ್ಣಿಸಬಲ್ಲ? ಅವನ ಭಕ್ತಿ, ಸುಂದರ ಭಾವಗಳಿಂದ ಕವಿಯ ಹೃದಯದಲ್ಲಿ ಸದ್ಬುದ್ಧಿಯೂ, ಉದಾತ್ತಭಾವಗಳೂ, ಚಿಗುರುತ್ತಿದ್ದುವು. ಆದರೆ ಆ ಬುದ್ಧಿಯು ತನ್ನ ಅಲ್ಪತೆ ಹಾಗೂ ಭರತನ ಮಹಿಮೆಯ ಮಹತ್ತನ್ನು ಅರಿತು, ಕವಿಕುಲದ ಮಾನ ಉಳಿಯಲೆಂದು ಹಿಂಜರಿಯಿತು. ಅದನ್ನು ವರ್ಣಿಸುವ ಸಾಹಸಕ್ಕೆ ಕೈಹಾಕಲಿಲ್ಲ. ಅವನ ಗುಣಗಳನ್ನು ವರ್ಣಿಸಬೇಕೆಂಬ ಆಸಕ್ತಿಯೇನೋ ಇದೆ, ಆದರೆ ಅದನ್ನು ವರ್ಣಿಸಲು ನನಗೆ ಶಕ್ತಿ ಸಾಲದು. ನನ್ನ ಬುದ್ಧಿಬಲವು. ಬಾಲಭಾಷಿತದಂತಾಗಿದೆ. ಮನಸ್ಸಿನಲ್ಲಿ ಭಾವವಿದೆ, ಅದನ್ನು ಮಾತುಗಳಲ್ಲಿ ಪ್ರಕಟಿಸಲು ಅಶಕ್ತನಾಗಿರುವೆನು. (ಚೌ/೧-೪)

**ದೋ – ಭರತ ಬಿಮಲ ಜಸು ಬಿಮಲ ಬಿಧು ಸುಮತಿ ಚಕೋರಕುಮಾರಿ।**
**ಉದಿತ ಬಿಮಲ ಜನ ಹೃದಯ ನಭ ಎಕಟಕ ರಹೀ ನಿಹಾರಿ ॥ ೩೦೩ ॥**

ಭರತನ ವಿಮಲ ಯಶಸ್ಸೇ ಒಂದು ನಿರ್ಮಲ ಚಂದ್ರನಾಗಿದ್ದಾನೆ. ಕವಿಯ ಸುಬುದ್ಧಿಯು ಚಕೋರಿಯು. ಅದು ಭಕ್ತರ ಹೃದಯವೆಂಬ ನಿರ್ಮಲ ಆಕಾಶದಲ್ಲಿ ಆ ಚಂದ್ರನು ಉದಿಸಿರುವುದನ್ನು ಕಂಡು ಅದನ್ನೇ ನಿರ್ನಿಮೇಶನಯನಗಳಿಂದ ನೋಡುತ್ತಾ ನಿಂತುಬಿಟ್ಟಿತು. ಆದರೆ ವರ್ಣಿಸಲಾರದು. (ದೋ/೩೦೩)

**ಚೌ – ಭರತ ಸುಭಾಉ ನ ಸುಗಮ ನಿಗಮಹೂಁ। ಲಘು ಮತಿ ಚಾಪಲತಾ ಕಬಿ ಛಮಹೂಁ॥**
**ಕಹತ ಸುನತ ಸತಿ ಭಾಉ ಭರತ ಕೋ। ಸೀಯ ರಾಮ ಪದ ಹೋಇ ನ ರತ ಕೋ ॥ ೧ ॥**
**ಸುಮಿರತ ಭರತಹಿ ಪ್ರೇಮು ರಾಮ ಕೋ। ಜೆಹಿ ನ ಸುಲಭು ತೆಹಿ ಸರಿಸ ಬಾಮ ಕೋ॥**
**ದೇಖಿ ದಯಾಲ ದಸಾ ಸಬಹೀ ಕೀ। ರಾಮ ಸುಜಾನ ಜಾನಿ ಜನ ಜೀ ಕೀ ॥ ೨ ॥**
**ಧರಮ ಧುರೀನ ಧೀರ ನಯ ನಾಗರ। ಸತ್ಯ ಸನೇಹ ಸೀಲ ಸುಖ ಸಾಗರ ॥**
**ದೇಸು ಕಾಲು ಲಖಿ ಸಮಉ ಸಮಾಜೂ। ನೀತಿ ಪ್ರೀತಿ ಪಾಲಕ ರಘುರಾಜೂ ॥ ೩ ॥**
**ಬೋಲೇ ಬಚನ ಬಾನಿ ಸರಬಸು ಸೇ। ಹಿತ ಪರಿನಾಮ ಸುನತ ಸಸಿ ರಸು ಸೇ॥**
**ತಾತ ಭರತ ತುಮ್ಹ ಧರಮ ಧುರೀನಾ। ಲೋಕ ಬೇದ ಬಿದ ಪ್ರೇಮ ಪ್ರಬೀನಾ ॥ ೪ ॥**

ಭರತನ ಸ್ವಭಾವವನ್ನು ವರ್ಣಿಸುವುದು ವೇದಗಳಿಗೂ ಸುಲಭವಲ್ಲ. ಆದ್ದರಿಂದ ಈ ಲಘುಮತಿಯ ಚಾಪಲ್ಯವನ್ನು ಕವಿಜನರು ಮನ್ನಿಸಲಿ. ಭರತನ ಸದ್ಭಾವನೆಯನ್ನು ವರ್ಣಿಸುತ್ತಾ, ಕೇಳುತ್ತಾ ಯಾರು ತಾನೇ ಸೀತಾರಾಮರ ಚರಣಗಳಲ್ಲಿ ಅನುರಕ್ತರಾಗದೇ ಇರುವರು? ಭರತನ ಸ್ಮರಣೆಮಾಡಿಯೂ ರಾಮಪ್ರೇಮವು ದೊರೆಯದಿದ್ದರೆ ಅವರು ನಿಜಕ್ಕೂ ನಿರ್ಭಾಗ್ಯರು. ದಯಾಳುವಾದ ಶ್ರೀರಾಮನು ಅಲ್ಲಿರುವವರ ಸ್ಥಿತಿಯನ್ನು ನೋಡಿ, ಭರತನ ಮನಸ್ಸಿನಲ್ಲಿದ್ದ ಸ್ಥಿತಿಯನ್ನು ಗ್ರಹಿಸಿದನು. ಧರ್ಮಧುರಂಧರನೂ, ಧೀರನೂ ನಯನಿಪುಣನೂ, ಸತ್ಯ, ಸ್ನೇಹ, ಶೀಲಗಳ ಸಮುದ್ರನೂ, ನೀತಿ ಪ್ರೀತಿಪಾಲಕನೂ ಆದ ಶ್ರೀರಾಮಚಂದ್ರನು ದೇಶ, ಕಾಲ, ಪರಿಸ್ಥಿತಿಯನ್ನು ಹಾಗೂ ಸಮಾಜವನ್ನು ಕಂಡು ಹೇಳಿದ ವಚನಗಳು. ವಾಣಿಯ ಸರ್ವಸ್ವವೂ, ಪರಿಣಾಮದಲ್ಲಿ ಹಿತಕಾರಿಯೂ, ಅಮೃತತುಲ್ಯವೂ ಆಗಿದ್ದವು. ''ತಮ್ಮ ಭರತಾ! ನೀನು ಧರ್ಮಪರಾಯಣನೂ, ಲೋಕಾಚಾರವನ್ನೂ, ವೇದಪರಂಪರೆಯನ್ನೂ ತಿಳಿದವನಾಗಿರುವೆ. ಪ್ರೇಮಸ್ವರೂಪನಾಗಿರುವೆ. (ಚೌ/೧-೪)

**ದೋ – ಕರಮ ಬಚನ ಮಾನಸ ಬಿಮಲ ತುಮ್ಹ ಸಮಾನ ತುಮ್ಹ ತಾತ।**
**ಗುರ ಸಮಾಜ ಲಘು ಬಂಧು ಗುನ ಕುಸಮಯಁ ಕಿಮಿ ಕಹಿ ಜಾತ॥ ೩೦೪ ॥**

ಮಗು! ಮನೋವಾಕ್ಕಾಯಕರ್ಮಗಳ ಪವಿತ್ರತೆಯಲ್ಲಿ ನಿನಗೆ ನೀನೇ ಸಾಟಿ. ಗುರು-ಹಿರಿಯರ ಸಮಕ್ಷಮದಲ್ಲಿ , ಇಂತಹ ಕುಸಮಯದಲ್ಲಿ ತಮ್ಮನ ಗುಣಗಳನ್ನು ಹೇಗೆ ಕೊಂಡಾಡುವುದು ? (ದೋ/೩೦೪)

**ಚೌ – ಜಾನಹು ತಾತ ತರನಿ ಕುಲ ರೀತೀ। ಸತ್ಯಸಂಧ ಪಿತು ಕೀರತಿ ಪ್ರೀತೀ॥**
**ಸಮಉ ಸಮಾಜು ಲಾಜ ಗುರಜನ ಕೀ। ಉದಾಸೀನ ಹಿತ ಅನಹಿತ ಮನ ಕೀ॥ ೧ ॥**
**ತುಮ್ಹಹಿ ಬಿದಿತ ಸಬಹೀ ಕರ ಕರಮೂ। ಆಪನ ಮೋರ ಪರಮ ಹಿತ ಧರಮೂ॥**
**ಮೊಹಿ ಸಬ ಭಾಁತಿ ಭರೋಸ ತುಮ್ಹಾರಾ। ತದಪಿ ಕಹಉಁ ಅವಸರ ಅನುಸಾರಾ ॥ ೨ ॥**
**ತಾತ ತಾತ ಬಿನು ಬಾತ ಹಮಾರೀ। ಕೇವಲ ಗುರಕುಲ ಕೃಪಾಁ ಸಁಭಾರೀ॥**
**ನತರು ಪ್ರಜಾ ಪರಿಜನ ಪರಿವಾರೂ। ಹಮಹಿ ಸಹಿತ ಸಬು ಹೋತ ಖುಆರೂ ॥ ೩ ॥**

**ಜೌ ಬಿನು ಅವಸರ ಅಥವ್ ದಿನೇಸೂ। ಜಗ ಕೆಹಿ ಕಹಹು ನ ಹೋಇ ಕಲೇಸೂ॥**
**ತಸ ಉತಪಾತು ತಾತ ಬಿಧಿ ಕೀನ್ಹಾ। ಮುನಿ ಮಿಥಿಲೇಸ ರಾಖಿ ಸಬು ಲೀನ್ಹಾ॥೪॥**

ಮಗೂ! ಸೂರ್ಯವಂಶದ ರೀತಿಯನ್ನು, ಸತ್ಯಸಂಧನಾದ ತಂದೆಯ ಕೀರ್ತಿ ಪ್ರತಿಷ್ಠೆಗಳನ್ನೂ, ಅವನ ಪ್ರೇಮವನ್ನೂ, ಸಮಯ ಸಂದರ್ಭಗಳನ್ನೂ, ಸಮಾಜವನ್ನೂ, ಗುರು-ಹಿರಿಯರ ಮರ್ಯಾದೆಗಳನ್ನೂ, ಉದಾಸೀನ, ಮಿತ್ರ, ಶತ್ರು ಇವರುಗಳ ಮನಸ್ಸನ್ನು ಕೂಡ ತಿಳಿದಿರುವೆ. ಎಲ್ಲರ ಕರ್ತವ್ಯದ ಮತ್ತು ನನಗೆ ಹಿತಕಾರಿಯಾದ ಧರ್ಮ ಯಾವುದು ಎಂಬುದರ ಪರಿಜ್ಞಾನ ನಿನಗೆ ಚೆನ್ನಾಗಿದೆ. ನನಗೆ ನಿನ್ನ ಮೇಲೆ ಎಲ್ಲರೀತಿಯಿಂದಲೂ ನಂಬಿಕೆ ಇದೆ. ಆದರೂ ಸಮಯಾನುಸಾರ ಎರಡು ಮಾತುಗಳನ್ನು ಆಡುವೆನು, ಕೇಳು. ತಮ್ಮಾ! ತಂದೆಯವರು ಇಲ್ಲದಿದ್ದಾಗ ನಮ್ಮನ್ನು ಗುರು-ಹಿರಿಯರ ಕೃಪೆಯೇ ಕಾಯ್ದಿದೆ. ಇಲ್ಲದಿದ್ದರೆ ನಮಗೆ, ನಮ್ಮ ಪರಿವಾರಕ್ಕೆ, ನಮ್ಮ ಪ್ರಜೆಗಳಿಗೆ ದುರ್ದಶೆ ಬಂದೊದಗುತ್ತಿತ್ತು. ಹೊತ್ತಿಗೆ ಮುಂಚೆಯೇ ಸೂರ್ಯನು ಮುಳುಗಿದರೆ ಜಗತ್ತಿನಲ್ಲಿ ಯಾರಿಗೆ ತಾನೇ ಕ್ಲೇಶವಾಗದು? ತಂದೆಯವರ ಅಕಾಲಮರಣದಿಂದಾಗಿ ವಿಧಾತನು ನಮಗೆ ಅಂತಹ ಅನರ್ಥವನ್ನೇ ತಂದೊಡ್ಡಿದನು. ಆದರೆ ಗುರುಗಳಾದ ವಸಿಷ್ಠರೂ, ಮಿಥಿಲೇಶ್ವರರು ನಮ್ಮೆಲ್ಲರನ್ನೂ ಕಾಪಾಡಿದರು. (ಚೌ/೧-೪)

**ದೋ – ರಾಜ ಕಾಜ ಸಬ ಲಾಜ ಪತಿ ಧರಮ ಧರನಿ ಧನ ಧಾಮ।**
**ಗುರ ಪ್ರಭಾಉ ಪಾಲಿಹಿ ಸಬಹಿ ಭಲ ಹೋಇಹಿ ಪರಿನಾಮ॥೩೦೫॥**

ರಾಜ್ಯಕಾರ್ಯವೇ ಅಲ್ಲ, ನಮ್ಮ ವಂಶದ ಗೌರವ ಪ್ರತಿಷ್ಠೆಗಳು, ಧರ್ಮ, ಪೃಥ್ವಿ, ಧನ, ಕುಟುಂಬ, ಮನೆ, ಇವೆಲ್ಲವನ್ನು ಗುರುಗಳ ಪ್ರಭಾವವೇ ರಕ್ಷಿಸುತ್ತದೆ. ಪರಿಣಾಮದಲ್ಲಿ ಎಲ್ಲವೂ ಶುಭವೇ ಆಗುವುದು. (ದೋ/೩೦೫)

**ಚೌ – ಸಹಿತ ಸಮಾಜ ತುಮ್ಹಾರ ಹಮಾರಾ। ಘರ ಬನ ಗುರ ಪ್ರಸಾದ ರಖವಾರಾ॥**
**ಮಾತು ಪಿತಾ ಗುರ ಸ್ವಾಮಿ ನಿದೇಸೂ। ಸಕಲ ಧರಮ ಧರನೀಧರ ಸೇಸೂ॥೧॥**
**ಸೋ ತುಮ್ಹ ಕರಹು ಕರಾವಹು ಮೋಹೂ। ತಾತ ತರನಿಕುಲ ಪಾಲಕ ಹೋಹೂ॥**
**ಸಾಧಕ ಏಕ ಸಕಲ ಸಿಧಿ ದೇನೀ। ಕೀರತಿ ಸುಗತಿ ಭೂತಿಮಯ ಬೇನೀ॥೨॥**
**ಸೋ ಬಿಚಾರಿ ಸಹಿ ಸಂಕಟು ಭಾರೀ। ಕರಹು ಪ್ರಜಾ ಪರಿವಾರು ಸುಖಾರೀ॥**
**ಬಾಁಟೀ ಬಿಪತಿ ಸಬಹಿಂ ಮೋಹಿ ಭಾಈ। ತುಮ್ಹಹಿ ಅವಧಿ ಭರಿ ಬಡಿ ಕಠಿನಾಈ॥೩॥**
**ಜಾನಿ ತುಮ್ಹಹಿ ಮೃದು ಕಹಉಂ ಕಠೋರಾ। ಕುಸಮಯಂ ತಾತ ನ ಅನುಚಿತ ಮೋರಾ॥**
**ಹೋಹಿಂ ಕುಠಾಯಂ ಸುಬಂಧು ಸಹಾಏ। ಒಡಿಅಹಿಂ ಹಾಥ ಅಸನಿಹು ಕೇ ಘಾಏ॥೪॥**

ಗುರುಗಳ ಅನುಗ್ರಹವೇ ನಿನ್ನನ್ನು, ನನ್ನನ್ನೂ, ನಮ್ಮ, ಸಮಾಜವನ್ನು, ಮನೆಯಲ್ಲಿದ್ದರೂ, ಕಾಡಿನಲ್ಲಿದ್ದರೂ ರಕ್ಷಿಸುತ್ತದೆ. ಶೇಷನು ಭೂಭಾರವನ್ನು ಹೊರುವಂತೆ, ಮಾತಾ-ಪಿತೃ, ಗುರು, ಒಡೆಯ ಇವರ ಆಜ್ಞೆಯು ಶಿರೋಧಾರ್ಯವು. ಅದೇ ಅತ್ಯುತ್ತಮವಾದ ಧರ್ಮವು. ಆದ್ದರಿಂದ ಮಗೂ! ನೀನು ಸೂರ್ಯಕುಲ ರಕ್ಷಕನಾಗುವ ಕೆಲಸವನ್ನೇ ಮಾಡು. ನನ್ನಿಂದಲೂ ಅದನ್ನೇ ಮಾಡಿಸು. ಇದೊಂದೇ ಆಜ್ಞಾಪಾಲನರೂಪೀ ಸಾಧನೆಯು, ಸಮಸ್ತ ಸಿದ್ಧಿಗಳನ್ನು ಕೊಡುವಂತಹುದು. ಅದು ಕೀರ್ತಿ, ಸದ್ಗತಿ, ಐಶ್ವರ್ಯ ಇವುಗಳನ್ನು ಅನುಗ್ರಹಿಸುವ ತ್ರಿವೇಣಿಸಂಗಮವಾಗಿದೆ. ಇದನ್ನು ಯೋಚಿಸಿ ದೊಡ್ಡ ಸಂಕಟವನ್ನು ಸಹಿಸಿಕೊಂಡಾದರೂ ಪ್ರಜೆಗಳಿಗೆ, ಪರಿವಾರದವರಿಗೆ ಸುಖವುಂಟಾಗುವಂತೆ ಮಾಡು. ತಮ್ಮಾ! ನನ್ನ ವಿಪತ್ತನ್ನು ನೀವೆಲ್ಲರೂ ಹಂಚಿಕೊಂಡಿರುವಿರಿ. ಆದರೆ ನಿನ್ನೆದುರಿಗೆ ನನ್ನ ವನವಾಸದ ಹದಿನಾಲ್ಕು ವರ್ಷದ ಅವಧಿ ನಿಂತಿದೆ. ಅದು ನಿನಗೆ ತುಂಬಾ ಕಠಿಣವೂ, ದುಃಖಪ್ರದವೂ ಆಗಿದೆ. ನೀನು ಮೃದು ಮನಸ್ಸಿನವನೆಂದು ತಿಳಿದಿದ್ದರೂ ನಾನು ಕಠೋರವಾದ ವಚನಗಳನ್ನೇ ಆಡುತ್ತಿದ್ದೇನೆ. ಮಗು! ಕೆಟ್ಟ ಕಾಲದಲ್ಲಿ ಇಂತಹದೇನೂ ಅನುಚಿತವಲ್ಲ. ಏಕೆಂದರೆ ವಜ್ರಪ್ರಹಾರವನ್ನು ಕೈಯಿಂದಲೇ ತಡೆಯುವಂತೆ, ಕಷ್ಟಕಾಲದಲ್ಲಿ ಉತ್ತಮರಾದ ಸೋದರರೇ ಸಹಾಯಕರಾಗುತ್ತಾರೆ. (ಚೌ/೧-೪)

**ದೋ – ಸೇವಕ ಕರ ಪದ ನಯನ ಸೇ ಮುಖ ಸೋ ಸಾಹಿಬು ಹೋಇ।**
**ತುಲಸೀ ಪ್ರೀತಿ ಕಿ ರೀತಿ ಸುನಿ ಸುಕಬಿ ಸರಾಹಹಿಂ ಸೋಇ॥೩೦೬॥**

ಸೇವಕನು ಸ್ವಾಮಿಯ ಕೈ, ಕಾಲು, ಕಣ್ಣು, ಬಾಯಿ ಇವುಗಳಂತೆ ಇರಬೇಕು. ಸ್ವಾಮಿ-ಸೇವಕ ಅನುಬಂಧರೀತಿಗಳನ್ನು ಕೇಳಿದ ಕವಿಗಳು ಅವರನ್ನು ಪ್ರಶಂಸಿಸುತ್ತಾರೆ – ಎಂದು ತುಳಸೀದಾಸರು ಹೇಳುತ್ತಿದ್ದಾರೆ. (ದೋ/೩೦೬)

**ಚೌ – ಸಭಾ ಸಕಲ ಸುನಿ ರಘುಬರ ಬಾನೀ। ಪ್ರೇಮ ಪಯೋಧಿ ಅಮಿಅ ಜನು ಸಾನೀ॥**
**ಸಿಥಿಲ ಸಮಾಜ ಸನೇಹ ಸಮಾಧೀ। ದೇಖಿ ದಸಾ ಚುಪ ಸಾರದ ಸಾಧೀ॥೧॥**

**ಭರತಹಿ ಭಯಉ ಪರಮ ಸಂತೋಷೂ । ಸನಮುಖ ಸ್ವಾಮಿ ಬಿಮುಖ ದುಖ ದೋಷೂ ॥**
**ಮುಖ ಪ್ರಸನ್ನ ಮನ ಮಿಟಾ ಬಿಷಾದೂ । ಭಾ ಜನು ಗೂಁಗೆಹಿ ಗಿರಾ ಪ್ರಸಾದೂ ॥ ೨ ॥**
**ಕೀನ್ಹ ಸಪ್ರೇಮ ಪ್ರನಾಮು ಬಹೋರೀ । ಬೋಲೇ ಪಾನಿ ಪಂಕರುಹ ಜೋರೀ ॥**
**ನಾಥ ಭಯಉ ಸುಖು ಸಾಥ ಗಏ ಕೋ । ಲಹೆಉಁ ಲಾಹು ಜಗ ಜನಮು ಭಏ ಕೋ ॥ ೩ ॥**
**ಅಬ ಕೃಪಾಲ ಜಸ ಆಯಸು ಹೋಈ । ಕರೌಁ ಸೀಸ ಧರಿ ಸಾದರ ಸೋಈ ॥**
**ಸೋ ಅವಲಂಬ ದೇವ ಮೋಹಿ ದೇಈ । ಅವಧಿ ಪಾರು ಪಾವೌಁ ಜೆಹಿ ಸೇಈ ॥ ೪ ॥**

ಪ್ರೇಮಾಂಬುಧಿಯಲ್ಲಿ ಉದಿಸಿದ ಅಮೃತದಲ್ಲಿ ಅದ್ದಿದಂತಿದ್ದ ಶ್ರೀರಘುನಾಥನ ವಾಣಿಯನ್ನು ಕೇಳಿದ ಇಡೀ ಸಮಾಜವು ಪ್ರೇಮಪರವಶವಾಯಿತು. ಎಲ್ಲರಿಗೆ ಪ್ರೇಮಸಮಾಧಿ ಹತ್ತಿತು. ಈ ಸ್ಥಿತಿಯನ್ನು ಕಂಡು ಸರಸ್ವತಿಯು ಮೌನತಳೆದಳು. ಭರತನಿಗೆ ಪರಮ ಸಂತೋಷವಾಯಿತು. ಸ್ವಾಮಿಯು ಅನುಕೂಲನಾಗಿರುವುದನ್ನು ಕಂಡು ಅವನ ದುಃಖದೋಷಗಳು ಓಡಿಹೋದುವು. ಅವನ ಮುಖವು ಪ್ರಸನ್ನವಾಯಿತು. ಮನದ ವಿಷಾದ ಕರಗಿತು. ಮೂಕನಿಗೆ ಸರಸ್ವತಿಯು ಒಲಿದಂತಾಯಿತು. ಬಳಿಕ ಭರತನು ಪ್ರೇಮದಿಂದ ಪ್ರಣಾಮಗೈದು ಕೈಜೋಡಿಸಿಕೊಂಡು ಇಂತೆಂದನು – ಸ್ವಾಮಿ! ನಿನ್ನೊಡನೆ ವನಕ್ಕೆ ಹೋಗುವ ಸುಖವೂ ಕೂಡ ನನಗೆ ಲಭಿಸಿದೆ. ನನ್ನ ಜನ್ಮವು ಸಫಲವಾಯಿತು. ಹೇ ಕೃಪಾಳೂ! ಈಗ ನಿನ್ನ ಅಪ್ಪಣೆಯಾದರೆ ಅದನ್ನು ಆದರದಿಂದ ಶಿರಸಾವಹಿಸಿಕೊಳ್ಳುತ್ತೇನೆ. ಆದರೆ ದೇವಾ! ಈ ವನವಾಸ ಕಾಲದ ಅವಧಿಯಲ್ಲಿ ಸೇವೆಗೈಯ್ಯಲು ಯಾವುದಾದರೊಂದು ಅವಲಂಬನೆಯನ್ನು ದಯಪಾಲಿಸು. (ಚೌ/೧-೪)

**ದೋ – ದೇವ ದೇವ ಅಭಿಷೇಕ ಹಿತ ಗುರ ಅನುಸಾಸನು ಪಾಇ ।**
**ಆನೇಉಁ ಸಬ ತೀರಥ ಸಲಿಲು ತೆಹಿ ಕಹಁ ಕಾಹ ರಜಾಇ ॥ ೩೦೭ ॥**

ದೇವಾ! ಸ್ವಾಮಿ ನಿನ್ನ ಅಭಿಷೇಕಕ್ಕಾಗಿ ಗುರುವಿನ ಅಪ್ಪಣೆಯನ್ನು ಪಡೆದು ನಾನು ಎಲ್ಲ ತೀರ್ಥಗಳ ಜಲಗಳನ್ನು ತಂದಿರುವೆನು. ಅದನ್ನು ಏನು ಮಾಡಲಿ? ಅಪ್ಪಣೆಯಾಗಬೇಕು. (ದೋ/೩೦೭)

**ಚೌ – ಏಕು ಮನೋರಥು ಬಡ ಮನ ಮಾಹೀಂ । ಸಭಯಁ ಸಕೋಚ ಜಾತ ಕಹಿ ನಾಹೀಂ ॥**
**ಕಹಹು ತಾತ ಪ್ರಭು ಆಯಸು ಪಾಈ । ಬೋಲೇ ಬಾನಿ ಸನೇಹ ಸುಹಾಈ ॥ ೧ ॥**
**ಚಿತ್ರಕೂಟ ಸುಚಿ ಥಲ ತೀರಥ ಬನ । ಖಗ ಮೃಗ ಸರ ಸರಿ ನಿರ್ಝರ ಗಿರಿಗನ ॥**
**ಪ್ರಭು ಪದ ಅಂಕಿತ ಅವನಿ ಬಿಸೇಷೀ । ಆಯಸು ಹೋಇ ತ ಆವೌಁ ದೇಖೀ ॥ ೨ ॥**
**ಅವಸಿ ಅತ್ರಿ ಆಯಸು ಸಿರ ಧರಹೂ । ತಾತ ಬಿಗತಭಯ ಕಾನನ ಚರಹೂ ॥**
**ಮುನಿ ಪ್ರಸಾದ ಬನು ಮಂಗಲ ದಾತಾ । ಪಾವನ ಪರಮ ಸುಹಾವನ ಭ್ರಾತಾ ॥ ೩ ॥**
**ರಿಷಿನಾಯಕು ಜಹಁ ಆಯಸು ದೇಹೀಂ । ರಾಖೆಹು ತೀರಥ ಜಲು ಥಲ ತೇಹೀಂ ॥**
**ಸುನಿ ಪ್ರಭು ಬಚನ ಭರತ ಸುಖು ಪಾವಾ । ಮುನಿ ಪದ ಕಮಲ ಮುದಿತ ಸಿರು ನಾವಾ ॥ ೪ ॥**

''ಅಣ್ಣಾ! ನನ್ನ ಮನಸ್ಸಿನಲ್ಲಿ ಮತ್ತೊಂದು ಅಭಿಲಾಷೆ ಇದೆ. ಭಯ-ಸಂಕೋಚಗಳಿಂದ ಅದನ್ನು ಹೇಳಲಾಗುತ್ತಿಲ್ಲ.'' ಆಗ ಶ್ರೀರಾಮನೆಂದ– ''ತಮ್ಮ ಹೇಳು, ಅದೇನು ಅಭಿಲಾಷೆ?'' ಪ್ರಭುವಿನ ಒಪ್ಪಿಗೆಯನ್ನು ಪಡೆದು ಭರತನು ಭಕ್ತಿಯಿಂದ ಇಂತೆಂದನು– ''ಪ್ರಭೂ! ನಿನ್ನ ಅಪ್ಪಣೆಯಾದರೆ ಚಿತ್ರಕೂಟದಲ್ಲಿರುವ ಪವಿತ್ರ ಋಷ್ಯಾಶ್ರಮಗಳನ್ನೂ, ತೀರ್ಥಗಳನ್ನೂ, ವನಗಳನ್ನೂ, ಪಶುಪಕ್ಷಿಗಳನ್ನೂ, ಹೊಳೆಹಳ್ಳಗಳನ್ನೂ, ಝುರಿಗಳನ್ನೂ, ಪರ್ವತಸಮೂಹಗಳನ್ನೂ, ವಿಶೇಷವಾಗಿ ಪ್ರಭುವಾದ ನಿನ್ನ ಪದಾಂಕಿತ ಭೂಮಿಯನ್ನೂ ನೋಡಬಯಸುತ್ತೇನೆ.'' ಶ್ರೀರಾಮಚಂದ್ರನೆಂದ – ''ತಮ್ಮಾ! ಅವಶ್ಯವಾಗಿ ಹೋಗು. ಅತ್ರಿಮಹರ್ಷಿಗಳ ಆಜ್ಞೆಯನ್ನು ಪಡೆದು ಅವರು ಹೇಳಿದಂತೆ ನಿರ್ಭಯವಾಗಿ ವನದಲ್ಲಿ ಸಂಚರಿಸು. ಆ ಮಹರ್ಷಿಗಳ ಅನುಗ್ರಹದಿಂದಾಗಿ ಈ ವನವು ಶುಭಪ್ರದವೂ, ಪವಿತ್ರವೂ, ಅತ್ಯಂತ ಸುಂದರವೂ ಆಗಿದೆ. ಆ ಋಷಿವರ್ಯರು ಹೇಳಿದ ಸ್ಥಾನದಲ್ಲಿ ನೀನು ತಂದ ತೀರ್ಥಜಲವನ್ನು ಸ್ಥಾಪಿಸು.'' ಪ್ರಭುವಚನವನ್ನು ಕೇಳಿ ಭರತನಿಗೆ ಸುಖವುಂಟಾಯಿತು. ಆನಂದತುಂದಿಲನಾಗಿ ಅವನು ಅತ್ರಿಮಹರ್ಷಿಗಳ ಚರಣಗಳಿಗೆರಗಿದನು. (ಚೌ/೧-೪)

**ದೋ – ಭರತ ರಾಮ ಸಂಬಾದು ಸುನಿ ಸಕಲ ಸುಮಂಗಲ ಮೂಲ ।**
**ಸುರ ಸ್ವಾರಥೀ ಸರಾಹಿ ಕುಲ ಬರಷತ ಸುರತರು ಫೂಲ ॥ ೩೦೮ ॥**

ಸಕಲ ಮಂಗಳಗಳ ಮೂಲವಾದ ಶ್ರೀರಾಮ-ಭರತರ ಸಂವಾದವನ್ನು ಕೇಳಿ, ಸ್ವಾರ್ಥಿಗಳಾದ ದೇವತೆಗಳು, ರಘುಕುಲವನ್ನು ಹೊಗಳಿ, ಕಲ್ಪವೃಕ್ಷದ ಹೂವುಗಳನ್ನು ಮಳೆಗರೆದರು. (ದೋ/೩೦೮)

**ಚೌ – ಧನ್ಯ ಭರತ ಜಯ ರಾಮ ಗೊಸಾಈಂ। ಕಹತ ದೇವ ಹರಷತ ಬರಿಆಈಂ ॥**
**ಮುನಿ ಮಿಥಿಲೇಸ ಸಭಾಂ ಸಬ ಕಾಹೂ। ಭರತ ಬಚನ ಸುನಿ ಭಯಉ ಉಛಾಹೂ ॥ ೧ ॥**
**ಭರತ ರಾಮ ಗುನ ಗ್ರಾಮ ಸನೇಹೂ। ಪುಲಕಿ ಪ್ರಸಂಸತ ರಾಉ ಬಿದೇಹೂ ॥**
**ಸೇವಕ ಸ್ವಾಮಿ ಸುಭಾಉ ಸುಹಾವನ। ನೇಮು ಪೇಮು ಅತಿ ಪಾವನ ಪಾವನ ॥ ೨ ॥**
**ಮತಿ ಅನುಸಾರ ಸರಾಹನ ಲಾಗೇ। ಸಚಿವ ಸಭಾಸದ ಸಬ ಅನುರಾಗೇ ॥**
**ಸುನಿ ಸುನಿ ರಾಮ ಭರತ ಸಂಬಾದೂ। ದುಹು ಸಮಾಜ ಹಿಯಂ ಹರಷು ಬಿಷಾದೂ॥ ೩ ॥**
**ರಾಮ ಮಾತು ದುಖು ಸುಖು ಸಮ ಜಾನೀ। ಕಹಿ ಗುನ ರಾಮ ಪ್ರಬೋಧೀಂ ರಾನೀ ॥**
**ಏಕ ಕಹಹಿಂ ರಘುಬೀರ ಬಡಾಈ। ಏಕ ಸರಾಹತ ಭರತ ಭಲಾಈ॥ ೪ ॥**

''ಭರತನು ಧನ್ಯನು, ಶ್ರೀರಾಮಚಂದ್ರಪ್ರಭುವಿಗೆ ಜಯವಾಗಲೀ!'' ಎಂದು ಹೇಳಿ ದೇವತೆಗಳು ಆನಂದಾಬ್ಧಿಯಲ್ಲಿ ತೇಲಾಡಿದರು. ಭರತನ ಮಾತುಗಳನ್ನು ಕೇಳಿ, ವಸಿಷ್ಠರೂ, ಮಿಥಿಲೇಶ ಜನಕನೂ, ಎಲ್ಲ ಸಭಾಸದರೂ ಹೀಗೆ ಎಲ್ಲರಿಗೂ ಅಮಿತಾನಂದವಾಯಿತು. ಜನಕನು ಪುಲಕಿತಗಾತ್ರನಾಗಿ ಶ್ರೀರಾಮ-ಭರತರ ಗುಣಸಮೂಹವನ್ನು ಹಾಗೂ ಪ್ರೇಮವನ್ನು ಪ್ರಶಂಸಿಸತೊಡಗಿದನು. ಸ್ವಾಮಿ-ಸೇವಕರ ಸ್ವಭಾವಗಳು ಉದಾತ್ತವೂ, ಸುಂದರವೂ ಆದುದು. ಅವರ ನೇಮ, ಪ್ರೇಮಗಳು ಪಾವನವನ್ನೂ ಕೂಡ ಪಾವನಗೊಳಿಸುವಂತಹುದು. ಮಂತ್ರಿಗಳೂ, ಸಭಾಸದರೂ ಪ್ರೇಮಮುಗ್ಧರಾಗಿ ಯಥಾಮತಿಯಾಗಿ ತಮಗೆ ತೋಚಿದಂತೆ ಹೊಗಳತೊಡಗಿದರು. ಶ್ರೀರಾಮ-ಭರತರ ಸಂವಾದವನ್ನು ಕೇಳಿ, ಉಭಯ ಸಮಾಜಗಳಲ್ಲಿ ಹರ್ಷ-ವಿಷಾದಗಳೆರಡೂ ಉಂಟಾದುವು. ಭರತನ ಸೇವಾಧರ್ಮವನ್ನು ಕಂಡು ಹರ್ಷ, ಶ್ರೀರಾಮವಿಯೋಗದ ಕಲ್ಪನೆಯಿಂದ ದುಃಖವಾಯಿತು. ಶ್ರೀರಾಮನ ತಾಯಿಯಾದ ಕೌಸಲ್ಯಾದೇವಿಯು ಸುಖಃದುಃಖಗಳೆರಡನ್ನೂ ಸಮಾನವಾಗಿ ಭಾವಿಸಿ, ಶ್ರೀರಾಮನ ಗುಣಗಳನ್ನು ಕೊಂಡಾಡಿ, ಎಲ್ಲ ರಾಣಿಯರಿಗೂ ಧೈರ್ಯತುಂಬಿದಳು. ಕೆಲವರು ಶ್ರೀರಾಮನ ಹಿರಿಮೆಯನ್ನು ಕೊಂಡಾಡುತ್ತಿದ್ದರೆ, ಇನ್ನು ಕೆಲವರು ಭರತನ ಸದ್ಭಾವವನ್ನು ಪ್ರಶಂಸಿಸುತ್ತಿದ್ದರು. (ಚೌ/೧-೪)

**ದೋ – ಅತ್ರಿ ಕಹೆಉ ತಬ ಭರತ ಸನ ಸೈಲ ಸಮೀಪ ಸುಕೂಪ।**
**ರಾಖಿಅ ತೀರಥ ತೋಯ ತಹಂ ಪಾವನ ಅಮಿಅ ಅನೂಪ ॥ ೩೦೯ ॥**

ಆಗ ಅತ್ರಿಮಹರ್ಷಿಗಳು ಭರತನಿಗೆ ಹೇಳಿದರು – ಈ ಪರ್ವತದ ಬಳಿಯಲ್ಲೇ ಒಂದು ಚೆಲುವಾದ ಬಾವಿಯಿದೆ. ನೀನು ತಂದಿರುವ ಪವಿತ್ರ, ಅನುಪಮ, ಅಮೃತದಂತಿರುವ ತೀರ್ಥಜಲವನ್ನು ಅದರಲ್ಲಿಸ್ಥಾಪಿಸಿಬಿಡು. (ದೋ/೩೦೯)

**ಚೌ – ಭರತ ಅತ್ರಿ ಅನುಸಾಸನ ಪಾಈ। ಜಲ ಭಾಜನ ಸಬ ದಿಏ ಚಲಾಈ ॥**
**ಸಾನುಜ ಆಪು ಅತ್ರಿ ಮುನಿ ಸಾಧೂ। ಸಹಿತ ಗಏ ಜಹಂ ಕೂಪ ಅಗಾಧೂ ॥ ೧ ॥**
**ಪಾವನ ಪಾಥ ಪುನ್ಯಥಲ ರಾಖಾ। ಪ್ರಮುದಿತ ಪ್ರೇಮ ಅತ್ರಿ ಅಸ ಭಾಷಾ ॥**
**ತಾತ ಅನಾದಿ ಸಿದ್ಧ ಥಲ ಏಹೂ। ಲೋಪೆಉ ಕಾಲ ಬಿದಿತ ನಹಿಂ ಕೇಹೂ ॥ ೨ ॥**
**ತಬ ಸೇವಕನ್ಹ ಸರಸ ಥಲು ದೇಖಾ। ಕೀನ್ಹ ಸುಜಲ ಹಿತ ಕೂಪ ಬಿಸೇಷಾ॥**
**ಬಿಧಿ ಬಸ ಭಯಉ ಬಿಸ್ವ ಉಪಕಾರೂ। ಸುಗಮ ಅಗಮ ಅತಿ ಧರಮ ಬಿಚಾರೂ ॥ ೩ ॥**
**ಭರತಕೂಪ ಅಬ ಕಹಿಹಹಿಂ ಲೋಗಾ। ಅತಿ ಪಾವನ ತೀರಥ ಜಲ ಜೋಗಾ॥**
**ಪ್ರೇಮ ಸನೇಮ ನಿಮಜ್ಜತ ಪ್ರಾನೀ। ಹೊಇಹಹಿಂ ಬಿಮಲ ಕರಮ ಮನ ಬಾನೀ ॥ ೪ ॥**

ಅತ್ರಿಮಹಾಮುನಿಗಳ ಆಜ್ಞೆಯನ್ನನುಸರಿಸಿ, ಭರತನು ಆ ತೀರ್ಥಜಲಪಾತ್ರೆಯನ್ನು ಸೇವಕರ ಮೂಲಕ ಮುಂದಾಗಿ ಕಳಿಸಿದನು. ಸೋದರನಾದ ಶತ್ರುಘ್ನನಿಂದೊಡಗೂಡಿ, ಅತ್ರಿಮಹಾಮುನಿಗಳೊಡನೆ, ಇತರ ಸಾಧುಸಜ್ಜನರೊಂದಿಗೆ ಭರತನು ಆ ಅಗಾಧವಾದ ಬಾವಿಯಬಳಿಗೆ ಬಂದನು. ತಾನು ತಂದಿದ್ದ ಪವಿತ್ರಜಲವನ್ನು ಆ ಪುಣ್ಯಸ್ಥಳದಲ್ಲಿ ಸ್ಥಾಪಿಸಿದನು. ಅತ್ರಿಮಹರ್ಷಿಗಳು ಆನಂದಿತರಾಗಿ ಹೇಳಿದರು – ''ಮಗೂ! ಇದು ಅನಾದಿಯಾದ ಸಿದ್ಧಿಕ್ಷೇತ್ರವಾಗಿದೆ. ಕಾಲಾಂತರದಲ್ಲಿ ಇದು ಲುಪ್ತವಾಗಿ ಹೋಗಿತ್ತು. ಆದ್ದರಿಂದ ಯಾರಿಗೂ ಇದರ ಸುಳಿವು ಇರಲಿಲ್ಲ.'' ಆಗ ಅತ್ರಿ ಮಹಾಮುನಿಯ ಶಿಷ್ಯರು ಆ ನೀರಿರುವ ಸ್ಥಳವನ್ನು ನೋಡಿ, ಅಲ್ಲಿ ಒಂದು

ವಿಶಿಷ್ಟವಾದ ಬಾವಿಯನ್ನು ನಿರ್ಮಿಸಿದರು. ದೈವಯೋಗದಿಂದ ಸಮಸ್ತ ಪ್ರಪಂಚಕ್ಕೆ ಉಪಕಾರವಾಯಿತು. ಎಲ್ಲ ತೀರ್ಥಗಳನ್ನು ಒಂದೇ ಕಡೆ ಸೇವಿಸಲು ಇಷ್ಟರವರೆಗೆ ಅಸಾಧ್ಯವಾಗಿತ್ತು. ಅದು ಈಗ ಇಲ್ಲಿ ಸಾಧ್ಯವಾಯಿತು. ಈಗಲೂ ಕೂಡ ಇದರ ಪ್ರಭಾವದಿಂದ ಗಹನವಾದ ಸಕಲತೀರ್ಥಸೇವನೆ, ಧರ್ಮಾಚರಣೆ ಅತೀವ ಸುಲಭವಾಯಿತು. ಅಂದಿನಿಂದ ಇದು 'ಭರತಕೂಪ' ವೆಂದು ಪ್ರಸಿದ್ಧವಾಯಿತು. ಸಕಲ ತೀರ್ಥಜಲದಿಂದ ಆ ಬಾವಿಯು ಅತ್ಯಂತ ಪವಿತ್ರವಾಯಿತು. ಇದರಲ್ಲಿ ಭಕ್ತಿಯಿಂದ, ನೇಮದಿಂದ ಸ್ನಾನಮಾಡಿದವರೆಲ್ಲರೂ ತ್ರಿಕರಣಪೂರ್ವಕವಾದ ಶುದ್ಧಿಯನ್ನು ಹೊಂದುತ್ತಾರೆ. (ಚೌ/೧-೪)

**ದೋ – ಕಹತ ಕೂಪ ಮಹಿಮಾ ಸಕಲ ಗಏ ಜಹಾಁ ರಘುರಾಉ।**
**ಅತ್ರಿ ಸುನಾಯಉ ರಘುಬರಹಿ ತೀರಥ ಪುನ್ಯ ಪ್ರಭಾಉ ॥ ೩೧೦ ॥**

ಆ ಕೂಪದ ಮಹಿಮೆಯನ್ನು ಕೊಂಡಾಡುತ್ತಾ ಎಲ್ಲರೂ ಶ್ರೀರಾಮನಿದ್ದೆಡೆಗೆ ಹೋದರು. ಅತ್ರಿಮಹಾಮುನಿಗಳು ಶ್ರೀರಘುನಾಥನಿಗೆ ಆ ಪುಣ್ಯತೀರ್ಥದ ಮಹಿಮೆಯನ್ನು ಬಣ್ಣಿಸಿ ಹೇಳಿದರು. (ದೋ/೩೧೦)

**ಚೌ – ಕಹತ ಧರಮ ಇತಿಹಾಸ ಸಪ್ರೀತೀ। ಭಯಉ ಭೋರು ನಿಸಿ ಸೋ ಸುಖ ಬೀತೀ॥**
**ನಿತ್ಯ ನಿಬಾಹಿ ಭರತ ದೋಉ ಭಾಈ। ರಾಮ ಅತ್ರಿ ಗುರ ಆಯಸು ಪಾಈ ॥ ೧ ॥**
**ಸಹಿತ ಸಮಾಜ ಸಾಜ ಸಬ ಸಾದೇಂ। ಚಲೇ ರಾಮ ಬನ ಅಟನ ಪಯಾದೇಂ॥**
**ಕೋಮಲ ಚರನ ಚಲತ ಬಿನು ಪನಹೀಂ। ಭಇ ಮೃದು ಭೂಮಿ ಸಕುಚಿ ಮನ ಮನಹೀಂ॥ ೨ ॥**
**ಕುಸ ಕಂಟಕ ಕಾಁಕರೀಂ ಕುರಾಈಂ। ಕಟುಕ ಕಠೋರ ಕುಬಸ್ತು ದುರಾಈಂ॥**
**ಮಹಿ ಮಂಜುಲ ಮೃದು ಮಾರಗ ಕೀನ್ಹೇ। ಬಹತ ಸಮೀರ ತ್ರಿಬಿಧ ಸುಖ ಲೀನ್ಹೇ॥ ೩ ॥**
**ಸುಮನ ಬರಷಿ ಸುರ ಘನ ಕರಿ ಛಾಹೀಂ। ಬಿಟಪ ಫೂಲಿ ಫಲಿ ತೃನ ಮೃದುತಾಹೀಂ॥**
**ಮೃಗ ಬಿಲೋಕಿ ಖಗ ಬೋಲಿ ಸುಬಾನೀ। ಸೇವಹಿಂ ಸಕಲ ರಾಮ ಪ್ರಿಯ ಜಾನೀ ॥ ೪ ॥**

ಸಂತೃಪ್ತಿಕರವಾದ ಧಾರ್ಮಿಕ-ಐತಿಹಾಸಿಕ ಚರ್ಚೆಗಳಿಂದ ಆ ರಾತ್ರಿಯು ಸುಖವಾಗಿ ಕಳೆದುಹೋಯಿತು. ಬೆಳಗಾದಾಗಲೇ ಭರತ-ಶತ್ರುಘ್ನರು ತಮ್ಮ ನಿತ್ಯವಿಧಿಗಳನ್ನು ಮುಗಿಸಿಕೊಂಡು, ಶ್ರೀರಾಮ, ಅತ್ರಿಮಹರ್ಷಿ, ವಸಿಷ್ಠರು ಇವರ ಅಪ್ಪಣೆಪಡೆದು ಸಪರಿವಾರಸಮೇತ ಎಲ್ಲರೂ ಸರಳ ಉಡುಪಿನಲ್ಲಿ ಶ್ರೀರಾಮವನವನ್ನು ಸಂಚರಿಸಲು ಬರಿಗಾಲಲ್ಲಿ ನಡೆದುಕೊಂಡೇ ಹೊರಟರು. ಅವರ ಚರಣಗಳು ಅತೀವ ಕೋಮಲವಾಗಿದ್ದವು. ಪಾದರಕ್ಷೆಗಳನ್ನು ಧರಿಸದೆ ಅವರು ಹೋಗುತ್ತಿರುವುದನ್ನು ಕಂಡ ಭೂದೇವಿಯು ಮನದಲ್ಲೇ ಮಿಡುಕಿ ಮೆತ್ತಗಾದಳು. ಕುಶ, ಕಂಟಕ, ಕಲ್ಲು, ಹಳ್ಳ-ಕೊಳ್ಳ ಮೊದಲಾದ ಬಾಧೆಕೊಡುವ ವಸ್ತುಗಳನ್ನು ತನ್ನಲ್ಲಿ ಅಡಗಿಸಿಟ್ಟುಕೊಂಡು ಪೃಥ್ವಿಯು ಅವರ ಮಾರ್ಗವನ್ನು ಸುಗಮವೂ, ಕೋಮಲವೂ ಆಗುವಂತೆ ಮಾಡಿದಳು. ಶೀತಲ ಮಂದ ಸುಗಂಧ ಪವನವು ಹಾಯಾಗಿ ಬೀಸತೊಡಗಿತು. ಹಾದಿಯುದ್ದಕ್ಕೂ ದೇವತೆಗಳು ಹೂವು ಚೆಲ್ಲಿದರು. ಮೋಡಗಳು ನೆರಳು ಮಾಡಿದವು. ಗಿಡಮರಗಳು ತನಿವಣ್ಣುಗಳನ್ನು ನೀಡಿದವು. ತೃಣಗಳು ತಮ್ಮ ಕೋಮಲತೆಯಿಂದ ಮಾರ್ಗವನ್ನು ಸುಖಪ್ರದವಾಗಿಸಿದವು. ಮೃಗಗಳು ತಮ್ಮ ನೋಟದಿಂದ, ಪಕ್ಷಿಗಳು ತಮ್ಮ ಮೃದುಮಧುರಕೂಜನದಿಂದ, ಈ ರೀತಿ ಎಲ್ಲರೂ ಭರತನು ಶ್ರೀರಾಮನಿಗೆ ಅತ್ಯಂತ ಪ್ರಿಯನೆಂದು ತಿಳಿದು ಅವನಿಗೆ ತಮ್ಮ ಸೇವೆ ಸಲ್ಲಿಸಿದವು. (ಚೌ/೧-೪)

**ದೋ – ಸುಲಭ ಸಿದ್ಧಿ ಸಬ ಪ್ರಾಕೃತಹು ರಾಮ ಕಹತ ಜಮುಹಾತ।**
**ರಾಮ ಪ್ರಾನ ಪ್ರಿಯ ಭರತ ಕಹುಁ ಯಹ ನ ಹೋಇ ಬಡಿ ಬಾತ ॥ ೩೧೧ ॥**

ಓರ್ವ ಸಾಧಾರಣ ಮನುಷ್ಯನೂ ಕೂಡ ಆಕಳಿಸಿದಾಗ 'ಶ್ರೀರಾಮ' ಎಂದು ನುಡಿದಮಾತ್ರಕ್ಕೆ ಎಲ್ಲ ಸಿದ್ಧಿಗಳನ್ನು ಪಡೆಯುವುದಾದರೆ, ಶ್ರೀರಾಮಚಂದ್ರನಿಗೆ ಪ್ರಾಣಪ್ರಿಯನಾದ ಭರತನಿಗೆ ಇಂತಹ ಶುಭಗಳಾಗುವುದು ಆಶ್ಚರ್ಯಕರವಲ್ಲ. (ದೋ/೩೧೧)

**ಚೌ – ಏಹಿ ಬಿಧಿ ಭರತು ಫಿರತ ಬನ ಮಾಹೀಂ। ನೇಮು ಪ್ರೇಮು ಲಖಿ ಮುನಿ ಸಕುಚಾಹೀಂ॥**
**ಪುನ್ಯ ಜಲಾಶ್ರಯ ಭೂಮಿ ಬಿಭಾಗಾ। ಖಗ ಮೃಗ ತರು ತೃನ ಗಿರಿ ಬನ ಬಾಗಾ॥ ೧ ॥**
**ಚಾರು ಬಿಚಿತ್ರ ಪಬಿತ್ರ ಬಿಸೇಷೀ। ಬೂಝತ ಭರತು ದಿಬ್ಯ ಸಬ ದೇಖೀ॥**
**ಸುನಿ ಮನ ಮುದಿತ ಕಹತ ರಿಷಿರಾಊ। ಹೇತು ನಾಮ ಗುನ ಪುನ್ಯ ಪ್ರಭಾಊ ॥ ೨ ॥**
**ಕತಹುಁ ನಿಮಜ್ಜನ ಕತಹುಁ ಪ್ರನಾಮಾ। ಕತಹುಁ ಬಿಲೋಕತ ಮನ ಅಭಿರಾಮಾ॥**
**ಕತಹುಁ ಬೈಠಿ ಮುನಿ ಆಯಸು ಪಾಈ। ಸುಮಿರತ ಸೀಯ ಸಹಿತ ದೋಉ ಭಾಈ ॥ ೩ ॥**

**ದೇಖಿ ಸುಭಾಉ ಸನೇಹು ಸುಸೇವಾ। ದೇಹಿಂ ಅಸೀಸ ಮುದಿತ ಬನದೇವಾ॥**
**ಫಿರಹಿಂ ಗಏಂ ದಿನು ಪಹರ ಅಢಾಈ। ಪ್ರಭು ಪದ ಕಮಲ ಬಿಲೋಕಹಿಂ ಆಈ॥೪॥**

ಈ ಪ್ರಕಾರ ಭರತನು ವನದಲ್ಲಿ ವಿಹರಿಸುತ್ತಿದ್ದನು. ಅವನ ನೇಮ, ಪ್ರೇಮಗಳನ್ನು ಕಂಡು ಮುನಿಗಳೂ ನಾಚುತ್ತಿದ್ದರು. ವಿಶೇಷ ಸೌಂದರ್ಯಶೋಭಿತವಾದ ಪವಿತ್ರ ಜಲಾಶಯಗಳನ್ನೂ, ವಿವಿಧ ಭೂಭಾಗಗಳನ್ನೂ, ಖಗ-ಮೃಗಗಳನ್ನೂ, ತರುತೃಣಗಳನ್ನೂ, ಗಿರಿವನವಾಟಿಕೆಗಳನ್ನೂ ನೋಡಿ ಭರತನು ಅವುಗಳ ವೈಚಿತ್ರ್ಯ, ದಿವ್ಯತ್ವ, ಪಾವಿತ್ರ್ಯಗಳಿಗೆ ಮಾರುಹೋಗಿ ಅತ್ರಿಮಹರ್ಷಿಗಳಲ್ಲಿ ಇವುಗಳ ಕುರಿತು ಪ್ರಶ್ನಿಸುವನು. ಮುನಿಗಳು ಭರತನ ಪ್ರಶ್ನೆಗಳಿಗೆ ಉತ್ತರಿಸುತ್ತಾ ಸಂತೋಷದಿಂದ ಅವುಗಳ ಕಾರಣ, ಹೆಸರು, ಗುಣ, ಪುಣ್ಯಪ್ರಭಾವಗಳನ್ನು ಚೆನ್ನಾಗಿ ವಿವರಿಸುತ್ತಿದ್ದರು. ಭರತನು ಎಲ್ಲೋ ಸ್ನಾನಮಾಡುತ್ತಿದ್ದ, ಎಲ್ಲೊ ಪ್ರಣಾಮ ಮಾಡುತ್ತಿದ್ದ. ಎಲ್ಲೋ ಅಭಿರಾಮ ಕ್ಷೇತ್ರಗಳನ್ನು ದರ್ಶಿಸುತ್ತಿದ್ದನು. ಎಲ್ಲೋ ಅತ್ರಿಗಳ ಅನುಮತಿ ಪಡೆದು ಕುಳಿತು ಸೀತಾರಾಮಲಕ್ಷ್ಮಣರನ್ನು ಸ್ಮರಿಸುತ್ತಿದ್ದನು. ಭರತನ ಸ್ವಭಾವ, ಪ್ರೇಮ, ಸೇವಾಭಾವವನ್ನು ಕಂಡು ವನದೇವತೆಗಳು ಆನಂದಿತರಾಗಿ ಅವನನ್ನು ಆಶೀರ್ವದಿಸುತ್ತಿದ್ದರು. ಈ ಪ್ರಕಾರ ಅಡ್ಡಾಡುತ್ತಾ ದಿನದ ಮೂರನೇ ಝಾವದಲ್ಲಿ ಮರಳಿ ಬಂದು ಶ್ರೀರಾಮಚಂದ್ರನ ಪಾದಪದ್ಮಗಳನ್ನು ದರ್ಶಿಸುತ್ತಿದ್ದನು. (ಚೌ/೧-೪)

**ದೋ – ದೇಖೇ ಥಲ ತೀರಥ ಸಕಲ ಭರತ ಪಾಂಚ ದಿನ ಮಾಂಝ।**
**ಕಹತ ಸುನತ ಹರಿ ಹರ ಸುಜಸು ಗಯಉ ದಿವಸು ಭಇ ಸಾಂಝ॥೩೧೨॥**

ಈ ವಿಧವಾಗಿ ಭರತನು ಐದು ದಿನಗಳಲ್ಲಿ ಎಲ್ಲ ತೀರ್ಥಸ್ಥಾನಗಳನ್ನು ದರ್ಶಿಸಿದನು. ಹರಿಹರರ ದಿವ್ಯ ಯಶೋಗಾಥೆಯನ್ನು ಶ್ರವಣಿಸುತ್ತಾ, ಕೀರ್ತಿಸುತ್ತಾ ಐದನೆಯ ದಿನವೂ ಕಳೆಯಿತು. ಸಂಧ್ಯೆಯಾಯಿತು. (ದೋ/೩೧೨)

## ಶ್ರೀರಾಮಪಾದುಕಾ ಪ್ರದಾನ

**ಚೌ – ಭೋರ ನ್ಹಾಇ ಸಬು ಜುರಾ ಸಮಾಜೂ। ಭರತ ಭೂಮಿಸುರ ತೇರಹುತಿ ರಾಜೂ॥**
**ಭಲ ದಿನ ಆಜು ಜಾನಿ ಮನ ಮಾಹೀಂ। ರಾಮು ಕೃಪಾಲ ಕಹತ ಸಕುಚಾಹೀಂ॥೧॥**
**ಗುರ ನೃಪ ಭರತ ಸಭಾ ಅವಲೋಕೀ। ಸಕುಚಿ ರಾಮ ಫಿರಿ ಅವನಿ ಬಿಲೋಕೀ॥**
**ಸೀಲ ಸರಾಹಿ ಸಭಾ ಸಬ ಸೋಚೀ। ಕಹುँ ನ ರಾಮ ಸಮ ಸ್ವಾಮಿ ಸँಕೋಚೀ॥೨॥**
**ಭರತ ಸುಜಾನ ರಾಮ ರುಖ ದೇಖೀ। ಉಠಿ ಸಪ್ರೇಮ ಧರಿ ಧೀರ ಬಿಸೇಷೀ॥**
**ಕರಿ ದಂಡವತ ಕಹತ ಕರ ಜೋರೀ। ರಾಖೀಂ ನಾಥ ಸಕಲ ರುಚಿ ಮೋರೀ॥೩॥**
**ಮೊಹಿ ಲಗಿ ಸಹೆಉ ಸಬಹಿಂ ಸಂತಾಪೂ। ಬಹುತ ಭಾँತಿ ದುಖು ಪಾವಾ ಆಪೂ॥**
**ಅಬ ಗೊಸಾಇँ ಮೊಹಿ ದೇಉ ರಜಾಈ। ಸೇವೌಂ ಅವಧ ಅವಧಿ ಭರಿ ಜಾಈ॥೪॥**

ಮರುದಿನ (ಆರನೇ ದಿನ) ಪ್ರಾತಃಕಾಲದಲ್ಲೇ ಸ್ನಾನಾದಿಗಳನ್ನೆಲ್ಲ ಪೂರೈಸಿ, ಭರತನು, ಜನಕ ಮಹಾರಾಜನು, ಬ್ರಾಹ್ಮಣರು ಹೀಗೆ ಎಲ್ಲ ಸಮಾಜ ಒಂದೆಡೆ ಸೇರಿತು. ಇಂದು ಎಲ್ಲರನ್ನೂ ಬೀಳ್ಕೊಡಲು ಒಳ್ಳೆಯ ದಿನವಾಗಿದೆ ಎಂದು ತಿಳಿದರೂ ಹೇಳಲು ಶ್ರೀರಾಮನು ಸಂಕೋಚಗೊಳ್ಳುವನು. ವಸಿಷ್ಠರನ್ನು, ಜನಕನನ್ನು, ಭರತನನ್ನು, ಎಲ್ಲ ಸಭಾಸದರನ್ನು ದಿಟ್ಟಿಸಿ, ಶ್ರೀರಾಮಚಂದ್ರನು ಸಂಕೋಚದಿಂದ ನೆಲವನ್ನು ನೋಡತೊಡಗಿದನು. ಅವನ ಔದಾರ್ಯವನ್ನು ನೋಡಿ, ಶ್ರೀರಾಮನಂತಹ ಉದಾರಸ್ವಭಾವದವರು ಯಾರೂ ಇಲ್ಲವೆಂದು ಎಲ್ಲರೂ ಕೊಂಡಾಡತೊಡಗಿದರು. ಜ್ಞಾನಿಯಾದ ಭರತನು ಶ್ರೀರಾಮನ ಮನೋಧರ್ಮವನ್ನು ಅರಿತು, ಧೈರ್ಯವನ್ನು ವಹಿಸಿ, ಸಾಷ್ಟಾಂಗ ನಮಸ್ಕಾರಗೈದು, ಕರಜೋಡಿಸಿಕೊಂಡು ಬಿನ್ನವಿಸಿಕೊಂಡನು.

''ನಾಥಾ! ನೀನು ನನ್ನ ಎಲ್ಲ ಬಯಕೆಗಳನ್ನು ಈಡೇರಿಸಿದರಿ. ನನ್ನಿಂದಾಗಿ ನೀವೆಲ್ಲರೂ ನೋವನ್ನು ಅನುಭವಿಸಿದಿರಿ. ನೀನು ಕೂಡ ತುಂಬಾ ಇಬ್ಬಂದಿಯಲ್ಲಿ ಸಿಕ್ಕಿಕೊಂಡೆ. ಸ್ವಾಮಿ! ಈಗ ಅಯೋಧ್ಯೆಗೆ ತಿರುಗಿಹೋಗಿ ನೀನು ಬರುವವರೆಗೆ ನಿನ್ನ ಸೇವೆ ಮಾಡಲು ನನಗೆ ಆಜ್ಞಾಪಿಸು. (ಚೌ/೧-೪)

**ದೋ – ಜೆಹಿಂ ಉಪಾಯ ಪುನಿ ಪಾಯ ಜನು ದೇಖೈ ದೀನದಯಾಲ।**
**ಸೋ ಸಿಖ ದೇಇಅ ಅವಧಿ ಲಗಿ ಕೋಸಲಪಾಲ ಕೃಪಾಲ॥೩೧೩॥**

ಓ ದೀನದಯಾಳಾ! ಓ ಕೋಸಲಾಧೀಶಾ! ನಿನ್ನ ವನವಾಸದ ಅವಧಿ ಮುಗಿಯುವವರೆಗೆ ಈ ದಾಸನು ನಿನ್ನ ಚರಣದರ್ಶನ ಪಡೆಯಬಹುದಾದಂತಹ ಉಪಾಯವನ್ನು ಉಪದೇಶಿಸು. (ದೋ/೩೧೩)

ಚೌ – ಪುರಜನ ಪರಿಜನ ಪ್ರಜಾ ಗೊಸಾಈಂ। ಸಬ ಸುಚಿ ಸರಸ ಸನೇಹ್ ಸಗಾಈಂ॥
ರಾಉರ ಬದಿ ಭಲ ಭವ ದುಖ ದಾಹೂ। ಪ್ರಭು ಬಿನು ಬಾದಿ ಪರಮ ಪದ ಲಾಹೂ॥ ೧ ॥
ಸ್ವಾಮಿ ಸುಜಾನು ಜಾನಿ ಸಬ ಹೀ ಕೀ। ರುಚಿ ಲಾಲಸಾ ರಹನಿ ಜನ ಜೀ ಕೀ॥
ಪ್ರನತಪಾಲು ಪಾಲಿಹಿ ಸಬ ಕಾಹೂ। ದೇಉ ದುಹೂ ದಿಸಿ ಓರ ನಿಬಾಹೂ॥ ೨ ॥
ಅಸ ಮೊಹಿ ಸಬ ಬಿಧಿ ಭೂರಿ ಭರೋಸೋ। ಕಿಏಂ ಬಿಚಾರು ನ ಸೋಚು ಖರೋ ಸೋ॥
ಆರತಿ ಮೋರ ನಾಥ ಕರ ಛೋಹೂ। ದುಹುಂ ಮಿಲಿ ಕೀನ್ಹ ಢೀಠು ಹಠಿ ಮೋಹೂ॥ ೩ ॥
ಯಹ ಬಡ ದೋಷು ದೂರಿ ಕರಿ ಸ್ವಾಮೀ। ತಜಿ ಸಕೋಚ ಸಿಖಇಅ ಅನುಗಾಮೀ॥
ಭರತ ಬಿನಯ ಸುನಿ ಸಬಹಿಂ ಪ್ರಸಂಸೀ। ಖೀರ ನೀರ ಬಿಬರನ ಗತಿ ಹಂಸೀ॥ ೪ ॥

ಪ್ರಭೂ! ಇಷ್ಟುದಿನ ಅಯೋಧ್ಯಾವಾಸಿಗಳು, ಪರಿಜನರೂ, ಬಂಧುಗಳೂ ಮೊದಲಾದವರೆಲ್ಲರೂ ನಿನ್ನ ಪ್ರೇಮದಲ್ಲಿ ಮುಳುಗಿದ್ದರಿಂದ ಪವಿತ್ರರಾಗಿ ಪರಮಾನಂದಭರಿತರಾಗಿದ್ದಾರೆ. ನಿನಗಾಗಿ ಭವದುಃಖದ ಜ್ವಾಲೆಯಲ್ಲಿ ಬೇಯುವುದೂ ಹಿತಕರವೇ. ನೀನಿಲ್ಲದ ಪರಮಪದವೂ ನನಗೆ ವ್ಯರ್ಥವೇ. ಸ್ವಾಮಿ! ನೀನು ಸುಜ್ಞಾನಿಯಾಗಿರುವೆ. ನೀನು ಎಲ್ಲರಹೃದಯಗಳನ್ನು ಅರಿಯುವವನಾಗಿರುವೆ. ಈ ಸೇವಕನ ಅಭಿರುಚಿಯನ್ನೂ, ಲಾಲಸೆಯನ್ನೂ, ವರ್ತನೆಯನ್ನೂ ತಿಳಿದವನು. ಹೇ ಶರಣಾಗತ ವತ್ಸಲಾ! ನೀನು ಎಲ್ಲರನ್ನು ಪಾಲಿಸುವವನು. ದೇವಾ! ಎರಡೂ ಕಡೆಯ ಹಿತವನ್ನು ನೀನು ಕಾಪಾಡಬಲ್ಲೆ ಎಂಬ ನಂಬಿಕೆ ನನಗಿದೆ. ಇದರಲ್ಲಿ ಕಿಂಚಿತ್ತಾದರೂ ಸಂದೇಹವಿಲ್ಲ. ನನ್ನ ದೈನ್ಯ ಮತ್ತು ಪ್ರಭುವಿನ ಸ್ನೇಹ ಎರಡೂ ಸೇರಿ ನನ್ನನ್ನು ದಿಟ್ಟನನ್ನಾಗಿ ಮಾಡಿದೆ. ಸ್ವಾಮಿ! ನನ್ನ ಈ ದಾರ್ಷ್ಟ್ಯವನ್ನು ದೂರಮಾಡಿ, ಸಂಕೋಚತೊರೆದು ನನಗೆ ಬುದ್ಧಿವಾದ ಹೇಳಿರಿ.'' ನೀರಕ್ಷೀರ ವಿವೇಕವುಳ್ಳ ಹಂಸಿನಿಯಂತಿರುವ ವರ್ತನೆಯುಳ್ಳ ಭರತನ ಬಿನ್ನಹವನ್ನು ಆಲಿಸಿ, ಎಲ್ಲರೂ ಅವನನ್ನು ಕೊಂಡಾಡಿದರು. (ಚೌ/೧-೪)

ದೋ – ದೀನಬಂಧು ಸುನಿ ಬಂಧು ಕೇ ಬಚನ ದೀನ ಛಲಹೀನ।
ದೇಸ ಕಾಲ ಅವಸರ ಸರಿಸ ಬೋಲೇ ರಾಮು ಪ್ರಬೀನ॥ ೩೧೪ ॥

ದೀನಜನರಕ್ಷಕನೂ, ಜ್ಞಾನಸ್ವರೂಪನೂ ಆದ ಶ್ರೀರಾಮಚಂದ್ರನು ಭರತನ ನಿಷ್ಕಪಟವೂ, ದೈನ್ಯಪೂರ್ಣವೂ ಆದ ವಚನಗಳನ್ನು ಕೇಳಿ; ದೇಶ, ಕಾಲ, ಸಂದರ್ಭವನ್ನರಿತು ಇಂತು ನುಡಿದನು – (ದೋ/೩೧೪)

ಚೌ – ತಾತ ತುಮ್ಹಾರಿ ಮೋರಿ ಪರಿಜನ ಕೀ। ಚಿಂತಾ ಗುರಹಿ ನೃಪಹಿ ಘರ ಬನ ಕೀ॥
ಮಾಥೇ ಪರ ಗುರ ಮುನಿ ಮಿಥಿಲೇಸೂ। ಹಮಹಿ ತುಮ್ಹಹಿ ಸಪನೆಹುಂ ನ ಕಲೇಸೂ॥ ೧ ॥
ಮೋರ ತುಮ್ಹಾರ ಪರಮ ಪುರುಷಾರಥು। ಸ್ವಾರಥು ಸುಜಸು ಧರಮು ಪರಮಾರಥು॥
ಪಿತು ಆಯಸು ಪಾಲಿಹಿಂ ದುಹು ಭಾಈಂ। ಲೋಕ ಬೇದ ಭಲ ಭೂಪ ಭಲಾಈಂ॥ ೨ ॥
ಗುರು ಪಿತು ಮಾತು ಸ್ವಾಮಿ ಸಿಖ ಪಾಲೇಂ। ಚಲೆಹುಂ ಕುಮಗ ಪಗ ಪರಹಿಂ ನ ಖಾಲೇಂ॥
ಅಸ ಬಿಚಾರಿ ಸಬ ಸೋಚ ಬಿಹಾಈ। ಪಾಲಹು ಅವಧ ಅವಧಿ ಭರಿ ಜಾಈ॥ ೩ ॥
ದೇಸು ಕೋಸು ಪರಿಜನ ಪರಿವಾರೂ। ಗುರ ಪದ ರಜಹಿಂ ಲಾಗ ಛರುಭಾರೂ॥
ತುಮ್ಹ ಮುನಿ ಮಾತು ಸಚಿವ ಸಿಖ ಮಾನೀ। ಪಾಲೆಹು ಪುಹುಮಿ ಪ್ರಜಾ ರಜಧಾನೀ॥ ೪ ॥

ಮಗೂ! ನಿನ್ನ, ನನ್ನ, ಪರಿಜನರ, ಮನೆಯ, ವನದ ಎಲ್ಲ ಚಿಂತೆಯು ಗುರುವಸಿಷ್ಠರಿಗೆ ಹಾಗೂ ಜನಕಮಹಾರಾಜರಿಗೆ ಇದೆ. ಗುರುವಸಿಷ್ಠರ, ಮುನಿವಿಶ್ವಾಮಿತ್ರರ, ಮಿಥಿಲೇಶಜನಕರ, ಅಭಯಹಸ್ತ ನಮ್ಮ ತಲೆಯಮೇಲಿರುವಾಗ ನನಗಾಗಲೀ, ನಿನಗಾಗಲೀ, ಕನಸು ಮನಸ್ಸಿನಲ್ಲಿಯೂ ಕ್ಲೇಶವಿಲ್ಲ. ನಾವಿಬ್ಬರೂ ಪಿತೃವಾಕ್ಯ ಪರಿಪಾಲನೆ ಮಾಡುವುದರಲ್ಲೇ ನನ್ನ ಮತ್ತು ನಿನ್ನ ಪರಮಪುರುಷಾರ್ಥ, ಸ್ವಾರ್ಥ, ಸತ್ಕೀರ್ತಿ, ಧರ್ಮ, ಪರಮಾರ್ಥ ಎಲ್ಲವೂ ಇರುವುದು. ಅರಸರ ವಚನಪಾಲನೆಯಿಂದಲೇ ಲೋಕ, ವೇದಗಳಲ್ಲಿ ಒಳಿತಿರುವುದು. ಗುರು, ತಂದೆ, ತಾಯಿ, ಒಡೆಯ ಇವರುಗಳ ವಚನಪಾಲನೆ ಮಾಡುವುದರಿಂದ ಕೆಟ್ಟ ದಾರಿಯಲ್ಲಿ ಕಾಲಿಟ್ಟರೂ ಹಳ್ಳಕ್ಕೆ ಬೀಳುವುದಿಲ್ಲ. ಹೀಗೆ ವಿಚಾರಗೈದು ಎಲ್ಲ ಚಿಂತೆಗಳನ್ನು ತೊರೆದು, ಅಯೋಧ್ಯೆಗೆ ಮರಳಿ ನನ್ನ ವನವಾಸವು ಮುಗಿಯುವವರೆಗೆ ಅದನ್ನು ಪಾಲಿಸು. ದೇಶ, ಕೋಶ, ಪರಿಜನ, ಪರಿವಾರ ಮೊದಲಾದವರೆಲ್ಲರ ಹೊಣೆ ಗುರುಚರಣರಜದ ಮೇಲಿದೆ. ನೀನು ಗುರುವಸಿಷ್ಠರ, ತಾಯಂದಿರ, ಮಂತ್ರಿಗಳ ಬುದ್ಧಿವಾದವನ್ನು ಕೇಳಿ ಅದರಂತೆ ಪೊಡವಿ, ಪ್ರಜೆ, ರಾಜಧಾನಿಯನ್ನೂ ರಕ್ಷಿಸುತ್ತಿರು. (ಚೌ/೧-೪)

**ದೋ – ಮುಖಿಆ ಮುಖು ಸೋ ಚಾಹಿಐ ಖಾನ ಪಾನ ಕಹುಁ ಏಕ।**
**ಪಾಲಇ ಪೋಷಇ ಸಕಲ ಅಁಗ ತುಲಸೀ ಸಹಿತ ಬಿಬೇಕ ॥ ೩೧೫ ॥**

ತುಲಸೀದಾಸರೆನ್ನುತ್ತಾರೆ – ಶ್ರೀರಾಮನೆಂದ – ಮುಖಂಡನಾದವನು ಬಾಯಿಯಂತಿರಬೇಕು. ಉಣ್ಣುವುದರಲ್ಲಿ ತಿನ್ನುವುದರಲ್ಲಿ ಅದು ಒಂಟಿಯಾಗಿರುವುದು. ಆದರೆ ಅದು ವಿವೇಕದಿಂದ ಎಲ್ಲ ಅಂಗಗಳನ್ನು ಪಾಲಿಸಿ ಪೋಷಿಸುತ್ತದೆ. ಹಾಗೆಯೇ ರಾಜನು ಎಲ್ಲ ಪ್ರಜೆಗಳ ಯೋಗಕ್ಷೇಮಕ್ಕಾಗಿ ಪ್ರಯತ್ನಿಸಬೇಕು. (ದೋ/೩೧೫)

**ಚೌ – ರಾಜಧರಮ ಸರಬಸು ಏತನೋಈ। ಜಿಮಿ ಮನ ಮಾಹಁ ಮನೋರಥ ಗೋಈ॥**
**ಬಂಧು ಪ್ರಬೋಧು ಕೀನ್ಹ ಬಹು ಭಾಁತೀ। ಬಿನು ಅಧಾರ ಮನ ತೋಷು ನ ಸಾಁತೀ॥ ೧ ॥**
**ಭರತ ಸೀಲ ಗುರ ಸಚಿವ ಸಮಾಜೂ। ಸಕುಚ ಸನೇಹ ಬಿಬಸ ರಘುರಾಜೂ॥**
**ಪ್ರಭು ಕರಿ ಕೃಪಾ ಪಾಁವರೀ ದೀನ್ಹೀಂ। ಸಾದರ ಭರತ ಸೀಸ ಧರಿ ಲೀನ್ಹೀಂ॥ ೨ ॥**
**ಚರನಪೀಠ ಕರುನಾನಿಧಾನ ಕೇ। ಜನು ಜುಗ ಜಾಮಿಕ ಪ್ರಜಾ ಪ್ರಾನ ಕೇ॥**
**ಸಂಪುಟ ಭರತ ಸನೇಹ ರತನ ಕೇ। ಆಖರ ಜುಗ ಜನು ಜೀವ ಜತನ ಕೇ॥ ೩ ॥**
**ಕುಲ ಕಪಾಟ ಕರ ಕುಸಲ ಕರಮ ಕೇ। ಬಿಮಲ ನಯನ ಸೇವಾ ಸುಧರಮ ಕೇ॥**
**ಭರತ ಮುದಿತ ಅವಲಂಬ ಲಹೇ ತೇಂ। ಅಸ ಸುಖ ಜಸ ಸಿಯ ರಾಮು ರಹೇ ತೇಂ॥ ೪ ॥**

ಮನಸ್ಸಿನೊಳಗೆ ಮನೋರಥವು ಅಡಗಿರುವ ಹಾಗೆ ಶ್ರೀರಘುನಾಥನು ತಮ್ಮನಾದ ಭರತನಿಗೆ ಅನೇಕ ಪ್ರಕಾರದಿಂದ ಸಮಾಧಾನಪಡಿಸಿದನು. ಆದರೆ ಯಾವುದೇ ಅವಲಂಬನೆಯೂ ಇಲ್ಲದೆ ಅವನ ಮನಕ್ಕೆ ಶಾಂತಿಯಾಗಲೀ, ಸುಖವಾಗಲೀ ದೊರೆಯಲಿಲ್ಲ. ಗುರು-ಹಿರಿಯರು, ಮಂತ್ರಿಗಳು, ಇತರ ಸದಸ್ಯರೂ ಕುಳಿತಿರುವ ಸಭೆಯಲ್ಲಿ, ಭರತನ ಸ್ನೇಹ ಸೌಶೀಲ್ಯಗಳಿಗೆ ವಶವಾದ ಶ್ರೀರಘುನಾಥನು ಯಾವ ನಿರ್ಣಯವನ್ನು ಕೈಗೊಳ್ಳಲಾರದೆ ಸ್ನೇಹಸಂಕೋಚಗಳಿಗೆ ವಶೀಭೂತನಾದನು. ಕೊನೆಗೆ ಶ್ರೀರಾಮಚಂದ್ರಪ್ರಭುವು ಕೃಪೆಗೈದು ಭರತನಿಗೆ ತನ್ನ ಪಾದುಕೆಗಳನ್ನು ಅನುಗ್ರಹಿಸಿದನು. ಭರತನು ಅವನ್ನು ಭಕ್ತಿಯಿಂದ ತನ್ನ ತಲೆಯಮೇಲಿಟ್ಟುಕೊಂಡನು. ದಯಾನಿಧಿಯಾದ ಶ್ರೀರಾಮಚಂದ್ರನ ಆ ಪಾದುಕೆಗಳು ಪ್ರಜೆಗಳ ಪ್ರಾಣರಕ್ಷಣೆಯಲ್ಲಿ ಪಹರೆದಾರರಂತೆ ಇವೆ; ಭರತನ ಪ್ರೇಮರತ್ನಕ್ಕೆ ಸಂಪುಷ್ಟದಂತಿವೆ; ಜೀವರನ್ನು ಉದ್ಧರಿಸುವ 'ರಾಮ' ಎಂಬ ಎರಡು ಅಕ್ಷರಗಳಿಗೆ ಪ್ರತೀಕವು. ರಘುಕುಲದ ರಕ್ಷಣೆಗೆ ಎರಡು ಬಾಗಿಲುಗಳಂತಿವೆ. ಕುಶಲಕಾರ್ಯ ಮಾಡಲು ಅಗತ್ಯವಾದ ಎರಡು ಕೈಗಳಂತಿವೆ. ಸೇವೆಯೆಂಬ ಶ್ರೇಷ್ಠಧರ್ಮವನ್ನು ಸೂಚಿಸಲು ಎರಡು ಕಣ್ಣುಗಳಂತೆ ಆ ಪಾದುಕೆಗಳಿದ್ದವು. ಈ ಅವಲಂಬನೆ ದೊರೆತುದಕ್ಕಾಗಿ ಭರತನು ಪರಮಾನಂದ ಭರಿತನಾದನು. ಸೀತಾರಾಮರು ದೊರೆತಷ್ಟೇ ಸಂತೋಷ ಅವನಿಗಾಯಿತು. (ಚೌ/೧-೪)

**ದೋ – ಮಾಗೆಉ ಬಿದಾ ಪ್ರನಾಮು ಕರಿ ರಾಮ ಲಿಏ ಉರ ಲಾಇ।**
**ಲೋಗ ಉಚಾಟೇ ಅಮರಪತಿ ಕುಟಿಲ ಕುಅವಸರು ಪಾಇ ॥ ೩೧೬ ॥**

ಭರತನು ಶ್ರೀರಾಮಚಂದ್ರನಿಗೆ ಪ್ರಣಾಮಗೈದು, ಅಯೋಧ್ಯೆಗೆ ಹೊರಡಲು ಅನುಮತಿ ಬೇಡಿದನು. ರಾಮನು ಅವನನ್ನು ಅಪ್ಪಿಕೊಂಡನು. ಕುಟಿಲನಾದ ಇಂದ್ರನು ಅದನ್ನುನೋಡಿ ಪ್ರಜೆಗಳ ಮನಸ್ಸಿನಲ್ಲಿ ಪುನಃ ತನ್ನ ಮಾಯೆಯನ್ನು ಬೀರಿದನು. (ದೋ/೩೧೬)

**ಚೌ – ಸೋ ಕುಚಾಲಿ ಸಬ ಕಹಁ ಭಇ ನೀಕೀ। ಅವಧಿ ಆಸ ಸಮ ಜೀವನಿ ಜೀ ಕೀ॥**
**ನತರು ಲಖನ ಸಿಯ ರಾಮ ಬಿಯೋಗಾ। ಹಹರಿ ಮರತ ಸಬ ಲೋಗ ಕುರೋಗಾ॥ ೧ ॥**
**ರಾಮಕೃಪಾಁ ಅವರೇಬ ಸುಧಾರೀ। ಬಿಬುಧ ಧಾರಿ ಭಇ ಗುನದ ಗೊಹಾರೀ॥**
**ಭೇಂಟತ ಭುಜ ಭರಿ ಭಾಇ ಭರತ ಸೋ। ರಾಮ ಪ್ರೇಮ ರಸು ಕಹಿ ನ ಪರತ ಸೋ॥ ೨ ॥**
**ತನ ಮನ ಬಚನ ಉಮಗ ಅನುರಾಗಾ। ಧೀರ ಧುರಂಧರ ಧೀರಜು ತ್ಯಾಗಾ॥**
**ಬಾರಿಜ ಲೋಚನ ಮೋಚತ ಬಾರೀ। ದೇಖಿ ದಸಾ ಸುರ ಸಭಾ ದುಖಾರೀ॥ ೩ ॥**
**ಮುನಿಗನ ಗುರ ಧುರ ಧೀರ ಜನಕ ಸೇ। ಗ್ಯಾನ ಅನಲ ಮನ ಕಸೇಂ ಕನಕ ಸೇ॥**
**ಜೇ ಬಿರಂಚಿ ನಿರಲೇಪ ಉಪಾಏ। ಪದುಮ ಪತ್ರ ಜಿಮಿ ಜಗ ಜಲ ಜಾಏ॥ ೪ ॥**

ಅವನ ಕುತಂತ್ರವೂ ಎಲ್ಲರಿಗೆ ಹಿತಕರವಾಯಿತು. ಅವಧಿಯ ಆಸೆಯಂತೆಯೇ ಅದು ಅವರ ಜೀವನಕ್ಕೆ ಸಂಜೀವನಿಯಾಯಿತು. ಹಾಗಾಗದಿದ್ದರೆ ಸೀತಾರಾಮಲಕ್ಷ್ಮಣರ ವಿಯೋಗದ ರೋಗದಲ್ಲಿ ಎಲ್ಲರೂ ಪ್ರಾಣತೊರೆದು ಬಿಡುತ್ತಿದ್ದರು. ಶ್ರೀರಾಮನ ಕೃಪೆಯಿಂದ

ಎಲ್ಲ ತೊಡಕುಗಳು ಪರಿಹಾರವಾದುವು. ಹಾಳುಮಾಡಲು ಬಂದಿದ್ದ ದೇವಸೇನೆಯು ರಕ್ಷಕವಾಯಿತು. ಶ್ರೀರಾಮನು ಭರತನನ್ನು ಭುಜಗಳಿಂದ ಬಂಧಿಸಿ ಆಲಿಂಗಿಸಿಕೊಂಡನು. ಅವರೀರ್ವರ ಪ್ರೇಮಾನಂದಾನುಭವಗಳು ಮಾತಿಗೆ ಮೀರಿದುದು. ಭರತನ ಮನೋವಾಕ್ಕಾಯಗಳಿಂದ ಪ್ರೇಮವು ಉಕ್ಕಿ ಹರಿಯಿತು. ಧೈರ್ಯಧುರಂಧರನಾದ ಶ್ರೀರಾಮನೂ ಕೂಡ ಧೈರ್ಯಗೆಟ್ಟನು. ಅವನ ತಾವರೆಯಂತಿದ್ದ ಕಣ್ಣುಗಳಿಂದ ಪ್ರೇಮಾಶ್ರುಗಳು ಹರಿಯತೊಡಗಿದವು. ಅವನ ಸ್ಥಿತಿಯನ್ನು ಕಂಡು ದೇವತೆಗಳೂ ದುಃಖಿತರಾದರು. ಜನಕಮಹಾರಾಜನು, ವಸಿಷ್ಠಾದಿ ಮಹರ್ಷಿಗಳು ಮಹಿಮಾಸಂಪನ್ನರು. ಅವರ ಬಂಗಾರದಂತಹ ಮನಸ್ಸನ್ನು ಜ್ಞಾನಾಗ್ನಿಯಲ್ಲಿ ಪುಟಕ್ಕಿಟ್ಟಿತ್ತು. ಬ್ರಹ್ಮನ ನಿರ್ಮಲ ಸೃಷ್ಟಿಗೆ ಇವರು ಪ್ರತೀಕರು. ಮಾಯಾ ಜಗತ್ತಿನಲ್ಲಿ ಹುಟ್ಟಿದ್ದರೂ ಅವರು ಪದ್ಮಪತ್ರದಂತೆ ನಿರ್ಲೇಪರು. ಅಂತಹ ಧೀರಧುರಂಧರರೂ ಕೂಡ– (ಚೌ/೧-೪)

**ದೋ – ತೆಉ ಬಿಲೋಕಿ ರಘುಬರ ಭರತ ಪ್ರೀತಿ ಅನೂಪ ಅಪಾರ।**
**ಭಏ ಮಗನ ಮನ ತನ ಬಚನ ಸಹಿತ ಬಿರಾಗ ಬಿಚಾರ ॥ ೩೧೭ ॥**

ಶ್ರೀರಾಮಭರತರ ಅನುಪಮ, ಅಪಾರ, ಪರಸ್ಪರ ಪ್ರೇಮಾನುರಾಗವನ್ನು ನೋಡಿ ವಿವೇಕ-ವೈರಾಗ್ಯರಹಿತರಾಗಿ ಮನೋವಾಕ್ಕಾಯಗಳಿಂದ ಪ್ರೇಮದಲ್ಲಿ ಮುಳುಗಿದರು. (ದೋ/೩೧೭)

**ಚೌ – ಜಹಾಁ ಜನಕ ಗುರ ಗತಿ ಮತಿ ಭೋರೀ। ಪ್ರಾಕೃತ ಪ್ರೀತಿ ಕಹತ ಬಡಿ ಖೋರೀ॥**
**ಬರನತ ರಘುಬರ ಭರತ ಬಿಯೋಗೂ। ಸುನಿ ಕಠೋರ ಕಬಿ ಜಾನಿಹಿ ಲೋಗೂ॥ ೧ ॥**
**ಸೋ ಸಕೋಚ ರಸು ಅಕಥ ಸುಬಾನೀ। ಸಮಉ ಸನೇಹು ಸುಮಿರಿ ಸಕುಚಾನೀ ॥**
**ಭೇಂಟಿ ಭರತು ರಘುಬರ ಸಮುಝಾಏ। ಪುನಿ ರಿಪುದವನು ಹರಷಿ ಹಿಯಁ ಲಾಏ ॥ ೨ ॥**
**ಸೇವಕ ಸಚಿವ ಭರತ ರುಖ ಪಾಈ। ನಿಜ ನಿಜ ಕಾಜ ಲಗೇ ಸಬ ಜಾಈ॥**
**ಸುನಿ ದಾರುನ ದುಖು ದುಹೂಁ ಸಮಾಜಾ। ಲಗೇ ಚಲನ ಕೇ ಸಾಜನ ಸಾಜಾ ॥ ೩ ॥**
**ಪ್ರಭು ಪದ ಪದುಮ ಬಂದಿ ದೋಉ ಭಾಈ। ಚಲೇ ಸೀಸ ಧರಿ ರಾಮ ರಜಾಈ ॥**
**ಮುನಿ ತಾಪಸ ಬನದೇವ ನಿಹೋರೀ। ಸಬ ಸನಮಾನಿ ಬಹೋರಿ ಬಹೋರೀ ॥ ೪ ॥**

ಜನಕ ವಸಿಷ್ಠಾದಿಗಳ ಬುದ್ಧಿಯೂ ಕೂಡ ಕುಂಠಿತವಾಗಿಸಿದ ಆ ದಿವ್ಯಪ್ರೇಮವು ಪ್ರಾಕೃತವೂ, ಲೌಕಿಕವೂ ಎಂದು ಹೇಳಿದರೆ ಕೇವಲ ಅವಿವೇಕವಾದೀತು. ಶ್ರೀರಾಮ ಭರತರ ವಿಯೋಗವನ್ನು ವರ್ಣಿಸುತ್ತಿರುವ ಕವಿಯನ್ನು ಜನರು ಕಲ್ಲೆದೆಯವನೆಂದು ಭಾವಿಸುವರು. ಒಬ್ಬರಿಗೊಬ್ಬರು ಅಗಲುವ ಅವರ ಸ್ಥಿತಿಯನ್ನು ವರ್ಣಿಸಲು ಮಾತುಗಳು ಸಾಲವು. ಆದ್ದರಿಂದಲೇ ಕವಿಯ ಮನೋಹರವಾದ ವಾಣಿಯು ಅವರ ಆಗಿನ ಪ್ರೇಮವನ್ನು ಸ್ಮರಿಸಿ ಹಿಂಜರಿಯಿತು. ಶ್ರೀರಘುನಾಥನು ಭರತನನ್ನು ಕಂಡು ತಿಳಿವಳಿಕೆ ಹೇಳಿ ಸಂತೈಸಿದನು. ಅನಂತರ ಪ್ರಸನ್ನಚಿತ್ತನಾಗಿ ಅವನು ಶತ್ರುಘ್ನನನ್ನು ಅಪ್ಪಿಕೊಂಡನು. ಸೇವಕರು, ಸಚಿವರು ಭರತನ ಮುಖಭಾವವನ್ನರಿತು ತಮ್ಮ-ತಮ್ಮ ಕೆಲಸದಲ್ಲಿ ತೊಡಗಿದರು. ಮರಳಿ ಪ್ರಯಾಣದ ಸುದ್ದಿಯನ್ನು ಕೇಳಿದೊಡನೆಯೇ ಎರಡೂ ಸಮಾಜಗಳಲ್ಲಿ ದುಃಖ ಕವಿಯಿತು. ಅವರು ಹೊರಡಲು ಅಣಿಮಾಡಿಕೊಳ್ಳತೊಡಗಿದರು. ಶ್ರೀರಾಮಚಂದ್ರಪ್ರಭುವಿನ ಪಾದಪದ್ಮಗಳಿಗೆ ವಂದಿಸಿ, ಅವನ ಆಜ್ಞೆಯನ್ನು ಶಿರಸಾವಹಿಸಿ, ಭರತ ಶತ್ರುಘ್ನರಿಬ್ಬರೂ ಮುನಿಗಳಿಗೆ, ತಪೋಧನರಿಗೆ, ವನದೇವತೆಗಳಿಗೆ ವಿನಂತಿಸಿಕೊಂಡು ಮತ್ತೆ-ಮತ್ತೆ ಗೌರವ ಸೂಚಿಸುತ್ತಾ ಹೊರಟರು. (ಚೌ/೧-೪)

**ದೋ – ಲಖನಹಿ ಭೇಂಟಿ ಪ್ರನಾಮು ಕರಿ ಸಿರ ಧರಿ ಸಿಯ ಪದ ಧೂರಿ।**
**ಚಲೇ ಸಪ್ರೇಮ ಅಸೀಸ ಸುನಿ ಸಕಲ ಸುಮಂಗಲ ಮೂರಿ ॥ ೩೧೮ ॥**

ಬಳಿಕ ಭರತ ಶತ್ರುಘ್ನರು ಲಕ್ಷ್ಮಣನನ್ನು ಆಲಿಂಗಿಸಿ ಪ್ರಣಾಮಗೈದರು. ಸೀತಾದೇವಿಯ ಪಾದಧೂಳಿಯನ್ನು ಶಿರದಲ್ಲಾಂತು, ಅವಳ ಶುಭಾಶೀರ್ವಾದ ಪಡೆದು ಪ್ರಯಾಣಕ್ಕೆ ಹೊರಟರು. (ದೋ/೩೧೮)

**ಚೌ – ಸಾನುಜ ರಾಮ ನೃಪಹಿ ಸಿರ ನಾಈ। ಕೀನ್ಹಿ ಬಹುತ ಬಿಧಿ ಬಿನಯ ಬಡಾಈ ॥**
**ದೇವ ದಯಾ ಬಸ ಬಡ ದುಖು ಪಾಯಉ। ಸಹಿತ ಸಮಾಜ ಕಾನನಹಿಁ ಆಯಉ॥ ೧ ॥**
**ಪುರ ಪಗು ಧಾರಿಅ ದೇಇ ಅಸೀಸಾ। ಕೀನ್ಹ ಧೀರ ಧರಿ ಗವನು ಮಹೀಸಾ ॥**
**ಮುನಿ ಮಹಿದೇವ ಸಾಧು ಸನಮಾನೇ। ಬಿದಾ ಕಿಏ ಹರಿ ಹರ ಸಮ ಜಾನೇ ॥ ೨ ॥**
**ಸಾಸು ಸಮೀಪ ಗಏ ದೋಉ ಭಾಈ। ಫಿರೇ ಬಂದಿ ಪಗ ಆಸಿಷ ಪಾಈ ॥**
**ಕೌಸಿಕ ಬಾಮದೇವ ಜಾಬಾಲೀ। ಪುರಜನ ಪರಿಜನ ಸಚಿವ ಸುಚಾಲೀ ॥ ೩ ॥**

**ಜಥಾ ಜೋಗು ಕರಿ ಬಿನಯ ಪ್ರನಾಮಾ। ಬಿದಾ ಕಿಏ ಸಬ ಸಾನುಜ ರಾಮಾ॥**
**ನಾರಿ ಪುರುಷ ಲಘು ಮಧ್ಯ ಬಡೇರೇ। ಸಬ ಸನಮಾನಿ ಕೃಪಾನಿಧಿ ಫೇರೇ॥೪॥**

ಶ್ರೀರಾಮನು ಲಕ್ಷ್ಮಣನೊಡನೆ ಜನಕಮಹಾರಾಜರಿಗೆ ವಂದನೆ ಸಲ್ಲಿಸಿ, ಅನೇಕ ರೀತಿಯಿಂದ ವಿನಂತಿಸಿಕೊಂಡು, ಹೊಗಳಿ ಇಂತೆಂದನು– ಪೂಜ್ಯರೇ! ನೀವು ನಮ್ಮ ಮೇಲೆ ದಯಾವಶರಾಗಿ, ಪರಿವಾರಸಹಿತ ವನಕ್ಕೆ ಬಂದು, ಅನೇಕ ಕಷ್ಟಗಳನ್ನು ಅನುಭವಿಸಿದಿರಿ. ಈಗ ನಮ್ಮನ್ನು ಆಶೀರ್ವದಿಸಿ ನಗರಕ್ಕೆ ದಯಮಾಡಿಸಿ. ಜನಕಮಹಾರಾಜರು ಧೈರ್ಯತಳೆದು ಸಪರಿವಾರಸಹಿತ ಹೊರಟರು. ಅನಂತರ ಶ್ರೀರಾಮಚಂದ್ರನು ಮುನಿಗಳನ್ನು, ಬ್ರಾಹ್ಮಣರನ್ನು, ಸಾಧು-ಸಂತರನ್ನು ಹರಿಹರರಿಗೆ ಸಮಾನರೆಂದು ಬಗೆದು ಅವರನ್ನು ಬೀಳ್ಕೊಟ್ಟನು. ಮತ್ತೆ ರಾಮಲಕ್ಷ್ಮಣರಿಬ್ಬರೂ ಸುನಯನಾದೇವಿಯ ಬಳಿಗೆ ಬಂದು, ಆಕೆಯ ಚರಣಗಳಿಗೆ ವಂದಿಸಿ, ಆಶೀರ್ವಾದ ಪಡೆದು ಮರಳಿದರು. ಅನಂತರ ವಿಶ್ವಾಮಿತ್ರ, ವಾಮದೇವ, ಜಾಬಾಲಿಯೇ ಮೊದಲಾದ ಮುನಿಗಳನ್ನು ಪರಿಜನರನ್ನು, ಪುರಜನರನ್ನು, ಮಂತ್ರಿಗಳನ್ನು ಯಥಾಯೋಗ್ಯವಾಗಿ ಲಕ್ಷ್ಮಣನೊಡನೆ ಶ್ರೀರಾಮನು ವಿನಯವಚನ, ಪ್ರಣಾಮಗಳಿಂದ ಗೌರವಿಸಿ ಬೀಳ್ಕೊಟ್ಟನು. ಕೃಪಾನಿಧಾನನಾದ ಶ್ರೀರಾಮಚಂದ್ರನು ಚಿಕ್ಕವರು, ನಡುಕಲರು, ದೊಡ್ಡವರು ಹೀಗೆ ಎಲ್ಲಸ್ತ್ರೀಪುರುಷರನ್ನು ಸಮ್ಮಾನಿಸಿ ಕಳುಹಿಸಿಕೊಟ್ಟನು. (ಚೌ/೧-೪)

**ದೋ – ಭರತ ಮಾತು ಪದ ಬಂದಿ ಪ್ರಭು ಸುಚಿ ಸನೇಹ್ ಮಿಲಿ ಭೇಂಟಿ।**
**ಬಿದಾ ಕೀನ್ಹ ಸಜಿ ಪಾಲಕೀ ಸಕುಚ ಸೋಚ ಸಬ ಮೇಟಿ॥೩೧೯॥**

ಭರತಮಾತೆಯಾದ ಕೈಕೆಯಿಯ ಚರಣಗಳಿಗೆ ವಂದಿಸಿ, ಪವಿತ್ರಪ್ರೇಮದಿಂದ ಆಕೆಯನ್ನು ಕಂಡು ಶ್ರೀರಾಮಚಂದ್ರನು ಆಕೆಯ ಸಂಕೋಚ, ಕಳವಳಗಳನ್ನೆಲ್ಲತೊಲಗಿಸಿ, ಅಲಂಕೃತವಾದ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಆಕೆಯನ್ನು ಬೀಳ್ಕೊಟ್ಟನು. (ದೋ/೩೧೯)

**ಚೌ – ಪರಿಜನ ಮಾತು ಪಿತಹಿ ಮಿಲಿ ಸೀತಾ। ಫಿರೀ ಪ್ರಾನಪ್ರಿಯ ಪ್ರೇಮ ಪುನೀತಾ॥**
**ಕರಿ ಪ್ರನಾಮು ಭೇಂಟೀ ಸಬ ಸಾಸೂ। ಪ್ರೀತಿ ಕಹತ ಕಬಿ ಹಿಯ್ಁ ನ ಹುಲಾಸೂ॥೧॥**
**ಸುನಿ ಸಿಖ ಅಭಿಮತ ಆಸಿಷ ಪಾಈ। ರಹೀ ಸೀಯ ದುಹು ಪ್ರೀತಿ ಸಮಾಈ॥**
**ರಘುಪತಿ ಪಟು ಪಾಲಕೀಂ ಮಗಾಈಂ। ಕರಿ ಪ್ರಬೋಧು ಸಬ ಮಾತು ಚಢಾಈಂ॥೨॥**
**ಬಾರ ಬಾರ ಹಿಲಿ ಮಿಲಿ ದುಹು ಭಾಈಂ। ಸಮ ಸನೇಹ್ ಜನನೀ ಪಹುಁಚಾಈಂ॥**
**ಸಾಜಿ ಬಾಜಿ ಗಜ ಬಾಹನ ನಾನಾ। ಭರತ ಭೂಪ ದಲ ಕೀನ್ಹ ಪಯಾನಾ॥೩॥**
**ಹೃದಯ್ಁ ರಾಮು ಸಿಯ ಲಖನ ಸಮೇತಾ। ಚಲೇ ಜಾಹಿಂ ಸಬ ಲೋಗ ಅಚೇತಾ॥**
**ಬಸಹ ಬಾಜಿ ಗಜ ಪಸು ಹಿಯ್ಁ ಹಾರೇಂ। ಚಲೇ ಜಾಹಿಂ ಪರಬಸ ಮನ ಮಾರೇಂ॥೪॥**

ಪ್ರಾಣೇಶನಾದ ಶ್ರೀರಾಮಚಂದ್ರನಿಗೆ ಪ್ರೀತಿಪಾತ್ರಳಾದ ಸೀತಾದೇವಿಯು ತವರಿನ ತಂದೆ-ತಾಯಿ ಯವರನ್ನೂ, ನೆಂಟರನ್ನೂ, ಕಂಡು ಹಿಂದಿರುಗಿದಳು. ಅನಂತರ ಎಲ್ಲ ಅತ್ತೆಯವರನ್ನು ಕಂಡು ಆಲಿಂಗಿಸಿ ಕೊಂಡು ಕಾಲಿಗೆರಗಿದಳು. ಆ ಶೋಕತುಂಬಿದ ದೃಶ್ಯವನ್ನು ವರ್ಣಿಸುವ ಧೈರ್ಯಯಾವ ಕವಿಗಿದೆ? ಸೀತಾದೇವಿಯು ಅವರ ಬುದ್ಧಿವಾದವನ್ನು ಕೇಳಿ, ತನ್ನ ಮನೋವಾಂಛಿತವು ಈಡೇರುವಂತೆ ಆಶೀರ್ವಾದಗಳನ್ನು ಪಡೆದು, ಅತ್ತೆಯರ ಮತ್ತುತಾಯಿಯ ಪ್ರೇಮದಲ್ಲಿ ಮಗ್ನಳಾದಳು. ಶ್ರೀರಘುನಾಥನು ಅಂದವಾದ ಪಲ್ಲಕ್ಕಿಗಳನ್ನು ತರಿಸಿ ಎಲ್ಲ ತಾಯಂದಿರಿಗೆ ಆಶ್ವಾಸನೆಯನ್ನಿತ್ತು ಪಲ್ಲಕ್ಕಿಗಳಲ್ಲಿ ಕುಳ್ಳಿರಿಸಿದನು. ಅಣ್ಣ-ತಮ್ಮಂದಿರಿಬ್ಬರೂ ಪುನಃ-ಪುನಃ ಅವರನ್ನು ಪ್ರೇಮದಿಂದ ಭೆಟ್ಟಿಯಾಗಿ ಬೀಳ್ಕೊಟ್ಟರು. ಜನಕನ ಪರಿವಾರವು, ಭರತನ ಅನುಯಾಯಿಗಳೂ ಅವರವರ ಗಜ, ರಥ, ತುರಗ ಮೊದಲಾದ ವಾಹನಗಳನ್ನು ಅಣಿಗೊಳಿಸಿಕೊಂಡು ಹೊರಟರು. ಅವರೆಲ್ಲರೂ ಸೀತಾಲಕ್ಷ್ಮಣಸಮೇತ ಶ್ರೀರಾಮನನ್ನು ತಮ್ಮ-ತಮ್ಮ ಹೃದಯಗಳಲ್ಲಿನೆಲೆಗೊಳಿಸಿಕೊಂಡು ಅಚೇತನ ಸ್ಥಿತಿಯಲ್ಲಿ(ಅಪ್ರಯತ್ನವಾಗಿ) ಮುಂದಕ್ಕೆ ಸಾಗುತ್ತಿದ್ದರು. ಎತ್ತುಗಳೂ, ಕುದುರೆಗಳೂ, ಆನೆಗಳೇ ಮೊದಲಾದಪಶುಗಳೂ ಕೂಡ ಎದೆಯಲ್ಲಿ ವೇದನೆಯನ್ನು ಹೊತ್ತು ಪರವಶವಾಗಿ ನಡೆಯುತ್ತಿದ್ದವು. (ಚೌ/೧-೪)

**ದೋ – ಗುರ ಗುರತಿಯ ಪದ ಬಂದಿ ಪ್ರಭು ಸೀತಾ ಲಖನ ಸಮೇತ।**
**ಫಿರೇ ಹರಷ ಬಿಸಮಯ ಸಹಿತ ಆಏ ಪರನ ನಿಕೇತ॥೩೨೦॥**

ಬಳಿಕ ಶ್ರೀರಾಮಚಂದ್ರನು ಸೀತಾಲಕ್ಷ್ಮಣರೊಡಗೂಡಿ ಗುರುಗಳಾದ ವಸಿಷ್ಠರ ಪತ್ನೀಯಾದ ಅರುಂಧತಿಯ ಚರಣಗಳಿಗೆ ವಂದಿಸಿ, ಅವರ ಅಪ್ಪಣೆ ಪಡೆದು ಹರ್ಷವಿಷಾದದೊಂದಿಗೆ ತಮ್ಮ ಪರ್ಣಕುಟಿಗೆ ಮರಳಿದರು. (ದೋ/೩೨೦)

**ಚೌ – ಬಿದಾ ಕೀನ್ಹ ಸನಮಾನಿ ನಿಷಾದೂ। ಚಲೆಉ ಹೃದಯ್ಁ ಬಡ ಬಿರಹ ಬಿಷಾದೂ॥**
**ಕೋಲ ಕಿರಾತ ಭಿಲ್ಲ ಬನಚಾರೀ। ಫೇರೇ ಫಿರೇ ಜೊಹಾರಿ ಜೊಹಾರೀ॥೧॥**

ಪ್ರಭು ಸಿಯ ಲಖನ ಬೈಠಿ ಬಟ ಛಾಹೀಂ। ಪ್ರಿಯ ಪರಿಜನ ಬಿಯೋಗ ಬಿಲಖಾಹೀಂ॥
ಭರತ ಸನೇಹ ಸುಭಾಉ ಸುಬಾನೀ। ಪ್ರಿಯಾ ಅನುಜ ಸನ ಕಹತ ಬಖಾನೀ॥ ೨ ॥
ಪ್ರೀತಿ ಪ್ರತೀತಿ ಬಚನ ಮನ ಕರನೀ। ಶ್ರೀಮುಖ ರಾಮ ಪ್ರೇಮ ಬಸ ಬರನೀ॥
ತೆಹಿ ಅವಸರ ಖಗ ಮೃಗ ಜಲ ಮೀನಾ। ಚಿತ್ರಕೂಟ ಚರ ಅಚರ ಮಲೀನಾ ॥ ೩ ॥
ಬಿಬುಧ ಬಿಲೋಕಿ ದಸಾ ರಘುಬರ ಕೀ। ಬರಷಿ ಸುಮನ ಕಹಿ ಗತಿ ಘರ ಘರ ಕೀ॥
ಪ್ರಭು ಪ್ರನಾಮು ಕರಿ ದೀನ್ಹ ಭರೋಸೋ। ಚಲೇ ಮುದಿತ ಮನ ಡರ ನ ಖರೋ ಸೋ॥ ೪ ॥

ಅನಂತರ ಶ್ರೀರಾಮನು ನಿಷಾದರಾಜನನ್ನು ಸಮ್ಮಾನಿಸಿ ಕಳಿಸಿ ಕೊಟ್ಟನು. ಅವನು ತನ್ನ ಹೃದಯದಲ್ಲಿ ತೀವ್ರವಾದ ವಿರಹವೇದನೆಯನ್ನು ಅನುಭವಿಸುತ್ತಾ ಗೃಹೋನ್ಮುಖನಾದನು. ಬಳಿಕ ಶ್ರೀರಾಮನು ಕೋಲರೂ, ಕಿರಾತರೂ, ಭಿಲ್ಲರೂ ಮೊದಲಾದ ವನವಾಸೀ ಜನರನ್ನು ಸಂತೈಸಿ ಬೀಳ್ಕೊಟ್ಟನು. ಅವರೆಲ್ಲರೂ ಪದೇ-ಪದೇ ಸೀತಾರಾಮರಿಗೆ ವಂದಿಸಿ ಮನೆಗಳಿಗೆ ಮರಳಿದರು. ಪ್ರಭು ಶ್ರೀರಾಮಚಂದ್ರನು ಸೀತಾಲಕ್ಷ್ಮಣರೊಡಗೂಡಿ ಆಲದ ಮರದ ನೆರಳಲ್ಲಿ ಕುಳಿತು, ಪ್ರಿಯಜನರ-ಪರಿಜನರ ವಿಯೋಗದಿಂದ ದುಃಖಿತವಾದನು. ಭರತನ ಪ್ರೇಮವನ್ನು ಸ್ವಭಾವವನ್ನು, ಮೃದುಮಧುರ ವಾಣಿಯನ್ನೂ ನೆನೆದು ಹೊಗಳುತ್ತಾ, ಸೀತಾ ಲಕ್ಷ್ಮಣರಲ್ಲಿ ಹೇಳತೊಡಗಿದನು – ಶ್ರೀರಾಮಚಂದ್ರನು ಪ್ರೇಮಪರವಶನಾಗಿ, ತ್ರಿಕರಣಶುದ್ಧವಾದ ಭರತನ ಪ್ರೇಮಾನುರಾಗವನ್ನು ಸ್ವತಃ ವರ್ಣಿಸಿದನು. ಆಗ ಚಿತ್ರಕೂಟದಲ್ಲಿ ಖಗ-ಮೃಗಗಳೂ ಜಲಚರಗಳೇ ಮೊದಲಾದ ಚರಾಚರಪ್ರಾಣಿಗಳೆಲ್ಲವೂ ದುಃಖದಲ್ಲಿ ಮುಳುಗಿದವು. ಶ್ರೀರಘುನಾಥನ ಪ್ರೇಮಮುಗ್ಧದೆಸೆಯನ್ನು ಪರಿಕಿಸಿ ದೇವತೆಗಳು ಹೂಮಳೆಯನ್ನು ಗರೆದು, ಅವರು ತಮ್ಮ ದುಃಖಗಳನ್ನು ಶ್ರೀರಾಮನಲ್ಲಿ ನಿವೇದಿಸಿಕೊಂಡರು. ಪ್ರಭುವು ಅವರನ್ನು ವಂದಿಸಿ ಅಭಯವನ್ನಿತ್ತನು. ಅವರು ಪ್ರಸನ್ನ ಮನಸ್ಸಿನಿಂದ ನಿರ್ಭಯರಾಗಿ ಹಿಂದಿರುಗಿದರು. (ಚೌ/೧-೪)

**ದೋ – ಸಾನುಜ ಸೀಯ ಸಮೇತ ಪ್ರಭು ರಾಜತ ಪರನ ಕುಟೀರ।**
**ಭಗತಿ ಗ್ಯಾನು ಬೈರಾಗ್ಯ ಜನು ಸೋಹತ ಧರೇಂ ಸರೀರ ॥ ೩೨೧ ॥**

ಪರ್ಣಕುಟೀರದಲ್ಲಿ ಶ್ರೀರಾಮಚಂದ್ರನು ಸೀತಾಲಕ್ಷ್ಮಣರೊಡನೆ ಭಕ್ತಿ-ಜ್ಞಾನ-ವೈರಾಗ್ಯಗಳು ಮೂರ್ತಿಭವಿಸಿದಂತೆ ಶೋಭಾಯಮಾನರಾಗಿ ವಿರಾಜಿಸಿದರು. (ದೊ/೩೨೧)

## ಭರತನ ಅಯೋಧ್ಯಾಗಮನ, ಪಾದುಕಾ ಪಟ್ಟಾಭಿಷೇಕ

ಚೌ – ಮುನಿ ಮಹಿಸುರ ಗುರ ಭರತ ಭುಆಲೂ। ರಾಮ ಬಿರಹ ಸಬು ಸಾಜು ಬಿಹಾಲೂ॥
ಪ್ರಭು ಗುನ ಗ್ರಾಮ ಗನತ ಮನ ಮಾಹೀಂ। ಸಬ ಚುಪಚಾಪ ಚಲೇ ಮಗ ಜಾಹೀಂ॥ ೧ ॥
ಜಮುನಾ ಉತರಿ ಪಾರ ಸಬು ಭಯಊ। ಸೋ ಬಾಸರು ಬಿನು ಭೋಜನ ಗಯಊ॥
ಉತರಿ ದೇವಸರಿ ದೂಸರ ಬಾಸೂ। ರಾಮಸಖಾಂ ಸಬ ಕೀನ್ಹ ಸುಪಾಸೂ॥ ೨ ॥
ಸಈ ಉತರಿ ಗೋಮತೀಂ ನಹಾಏ। ಚೌಥೇಂ ದಿವಸ ಅವಧಪುರ ಆಏ॥
ಜನಕು ರಹೇ ಪುರ ಬಾಸರ ಚಾರೀ। ರಾಜ ಕಾಜ ಸಬ ಸಾಜ ಸಂಭಾರೀ॥ ೩ ॥
ಸೌಂಪಿ ಸಚಿವ ಗುರ ಭರತಹಿ ರಾಜೂ। ತೆರಹುತಿ ಚಲೇ ಸಾಜಿ ಸಬು ಸಾಜೂ॥
ನಗರ ನಾರಿ ನರ ಗುರ ಸಿಖ ಮಾನೀ। ಬಸೇ ಸುಖೇನ ರಾಮ ರಜಧಾನೀ॥ ೪ ॥

ಮುನಿಗಳು, ಬ್ರಾಹ್ಮಣರು, ಗುರುವಸಿಷ್ಠರು, ಭರತನು, ಜನಕಮಹಾರಾಜರು ಹೀಗೆ ಇಡೀ ಸಮಾಜವೇ ಶ್ರೀರಾಮನ ವಿರಹದಿಂದ ವಿಹ್ವಲವಾಗಿತ್ತು. ಪ್ರಭುವಿನ ಗುಣಸಮೂಹವನ್ನು ಮನದಲ್ಲಿ ನೆನೆಯುತ್ತಾ ಅವರೆಲ್ಲರೂ ಅಯೋಧ್ಯೆಯ ಕಡೆಗೆ ಮೌನದಿಂದ ಮುಂದೆ ಸಾಗುತ್ತಿದ್ದರು. ಮೊದಲನೆಯ ದಿನ ಅವರೆಲ್ಲರೂ ಯಮುನಾ ನದಿಯನ್ನು ದಾಟಿ ವಿಶ್ರಮಿಸಿದರು. ಅಂದಿನ ದಿನ ನಿರಾಹಾರವಾಗಿಯೇ ಕಳೆಯಿತು. ಎರಡನೆಯ ದಿನ ಗಂಗಾನದಿಯನ್ನು ದಾಟಿ ಶೃಂಗವೇರಪುರದಲ್ಲಿ ಮುಕ್ಕಾಂ ಮಾಡಿದರು. ಅಲ್ಲಿ ಶ್ರೀರಾಮಸಖನಾದ ನಿಷಾದರಾಜನು ಎಲ್ಲರಿಗೂ ಒಳ್ಳೆಯ ಏರ್ಪಾಟು ಮಾಡಿದನು. ಮಾರನೆಯದಿನ 'ಸರಯೂ' ನದಿಯನ್ನು ದಾಟಿ, ಗೋಮತಿ ನದಿಯಲ್ಲಿ ಸ್ನಾನಗಳನ್ನಾಚರಿಸಿ, ನಾಲ್ಕನೆಯ ದಿನ ಅಯೋಧ್ಯೆಗೆ ತಲುಪಿದರು. ಜನಕ ಮಹಾರಾಜರು ನಾಲ್ಕುದಿನ ಅಯೋಧ್ಯೆಯಲ್ಲಿ ತಂಗಿದರು. ಅವರು ರಾಜಕಾರ್ಯ ಮತ್ತು ಇತರ ಸಾಮಾನು-ಸರಂಜಾಮುಗಳ ವ್ಯವಸ್ಥೆಮಾಡಿ, ಮಂತ್ರಿಗಳಿಗೆ, ವಸಿಷ್ಠರಿಗೆ, ಭರತನಿಗೆ ರಾಜ್ಯಭಾರವನ್ನು ಒಪ್ಪಿಸಿ, ಎಲ್ಲ ಏರ್ಪಾಟುಗಳನ್ನು ಮಾಡಿದ ಬಳಿಕ ತನ್ನ ರಾಜಧಾನಿಯಾದ ಮಿಥಿಲೆಗೆ ಮರಳಿದರು. ನಗರದ ಪೌರರೆಲ್ಲರೂ ಗುರುಗಳ ಉಪದೇಶ, ಮಾರ್ಗದರ್ಶನದಂತೆ ಶ್ರೀರಾಮನ ರಾಜಧಾನಿ ಅಯೋಧ್ಯೆಯಲ್ಲಿ ಸುಖವಾಗಿ ಇರತೊಡಗಿದರು. (ಚೌ/೧-೪)

**ದೋ – ರಾಮ ದರಸ ಲಗಿ ಲೋಗ ಸಬ ಕರತ ನೇಮ ಉಪಬಾಸ।**
**ತಜಿ ತಜಿ ಭೂಷನ ಭೋಗ ಸುಖ ಜಿಅತ ಅವಧಿ ಕೀ ಆಸ ॥ ೩೨೨ ॥**

ಅಯೋಧ್ಯೆಯ ಜನರೆಲ್ಲರೂ ಶ್ರೀರಾಮಚಂದ್ರನ ದರ್ಶನಕ್ಕಾಗಿ ನಿಯಮ, ವ್ರತ, ಉಪವಾಸಾದಿಗಳನ್ನು ಮಾಡತೊಡಗಿದರು. ಅವರು ಭೂಷಣ, ಭೋಗ-ವಿಲಾಸವಸ್ತುಗಳನ್ನು ತೊರೆದು, ವನವಾಸದ ಅವಧಿಯು ಕಳೆಯುವ ಆಶೆಯ ಮೇಲೆ ಜೀವಿಸಿದ್ದರು. (ದೋ/೩೨೨)

**ಚೌ – ಸಚಿವ ಸುಸೇವಕ ಭರತ ಪ್ರಬೋಧೇ। ನಿಜ ನಿಜ ಕಾಜ ಪಾಇ ಸಿಖ ಓಧೇ॥**
**ಪುನಿ ಸಿಖ ದೀನ್ಹಿ ಬೋಲಿ ಲಘು ಭಾಈ। ಸೌಂಪೀ ಸಕಲ ಮಾತು ಸೇವಕಾಈ॥ ೧ ॥**
**ಭೂಸುರ ಬೋಲಿ ಭರತ ಕರ ಜೋರೇ। ಕರಿ ಪ್ರನಾಮ ಬಯ ಬಿನಯ ನಿಹೋರೇ॥**
**ಊಂಚ ನೀಚ ಕಾರಜು ಭಲ ಪೋಚೂ। ಆಯಸು ದೇಬ ನ ಕರಬ ಸँಕೋಚೂ॥ ೨ ॥**
**ಪರಿಜನ ಪುರಜನ ಪ್ರಜಾ ಬೋಲಾಏ। ಸಮಾಧಾನು ಕರಿ ಸುಬಸ ಬಸಾಏ॥**
**ಸಾನುಜ ಗೇ ಗುರ ಗೇಹँ ಬಹೋರೀ। ಕರಿ ದಂಡವತ ಕಹತ ಕರ ಜೋರೀ॥ ೩ ॥**
**ಆಯಸು ಹೋಇ ತ ರಹೌँ ಸನೇಮಾ। ಬೋಲೇ ಮುನಿ ತನ ಪುಲಕಿ ಸಪೇಮಾ॥**
**ಸಮುಝಬ ಕಹಬ ಕರಬ ತುಮ್ಹ ಜೋಈ। ಧರಮ ಸಾರು ಜಗ ಹೋಇಹಿ ಸೋಈ॥ ೪ ॥**

ಭರತನು ಮಂತ್ರಿಗಳಿಗೆ, ನಂಬಿಕಸ್ಥರಾದ ಸೇವಕರಿಗೆ ತಕ್ಕದಾದ ಆದೇಶವನ್ನಿತ್ತನು. ಅವರು ಅವನ ಆಜ್ಞೆಯನ್ನು ಸರಿಯಾಗಿ ಪಾಲಿಸುತ್ತಾ ತಮ್ಮ-ತಮ್ಮ ಕಾರ್ಯದಲ್ಲಿ ತೊಡಗಿದರು. ತಮ್ಮನಾದ ಶತ್ರುಘ್ನನಿಗೆ ತಾಯಂದಿರ ಸೇವೆಯ ಹೊಣೆಗಾರಿಕೆಯನ್ನು ಒಪ್ಪಿಸಿದನು. ಭೂಸುರರನ್ನು ಕರೆಸಿ, ಅವರಿಗೆ ವಂದಿಸಿ – ''ನೀವೆಲ್ಲರೂ ಸಣ್ಣ-ದೊಡ್ಡ ಯಾವುದೇ ಕೆಲಸವಿದ್ದರೂ ನಿಃಸಂಕೋಚವಾಗಿ ನನಗೆ ಆಜ್ಞಾಪಿಸಿರಿ'' ಎಂದು ನಮ್ರನಾಗಿ ವಿನಂತಿಸಿಕೊಂಡನು. ಬಳಿಕ ಭರತನು ಪರಿವಾರದ ಜನರನ್ನು, ನಾಗರೀಕರನ್ನು, ಇತರ ಪ್ರಜೆಗಳನ್ನು ಕರೆಸಿ, ಅವರನ್ನು ಸಮಾಧಾನಪಡಿಸಿ, ಅವರು ಸುಖವಾಗಿ ನೆಲೆನಿಲ್ಲುವಂತೆ ಮಾಡಿದನು. ಮತ್ತೆ ತಮ್ಮನಾದ ಶತ್ರುಘ್ನನೊಂದಿಗೆ ಗುರುಗಳಾದ ವಸಿಷ್ಠರ ಬಳಿಗೆ ತೆರಳಿ, ದಂಡಪ್ರಣಾಮಗೈದು, ಕೈಜೋಡಿಸಿಕೊಂಡು ಬಿನ್ನವಿಸಿಕೊಂಡನು – ''ಗುರುದೇವಾ! ನಿಯಮ, ನಿಷ್ಠೆಗಳಲ್ಲಿ ಇರಲು ನಿಮ್ಮ ಆಜ್ಞೆಯನ್ನು ಬೇಡುತ್ತಿದ್ದೇನೆ.'' ಇದರಿಂದ ವಸಿಷ್ಠ ಮುನಿಗಳು ಪುಲಕಿತರಾಗಿ ಪ್ರೀತಿಯಿಂದ ಇಂತೆಂದರು – ''ಭರತಾ! ನೀನು ಏನು ಯೋಚಿಸುವೆಯೋ, ಆಡುವೆಯೋ, ಆಚರಿಸುವೆಯೋ, ಜಗತ್ತಿನಲ್ಲಿ ಅದೇ ಧರ್ಮದ ಸಾರವಾಗುವುದು. (ಚೌ/೧-೪)

**ದೋ – ಸುನಿ ಸಿಖ ಪಾಇ ಅಸೀಸ ಬಡಿ ಗನಕ ಬೋಲಿ ದಿನು ಸಾಧಿ।**
**ಸಿಂಘಾಸನ ಪ್ರಭು ಪಾದುಕಾ ಬೈಠಾರೇ ನಿರುಪಾಧಿ ॥ ೩೨೩ ॥**

ಗುರುಗಳ ಮಾತನ್ನು ಕೇಳಿ ಭರತನು ಅವರ ಉಪದೇಶಗಳನ್ನೂ, ಆಶೀರ್ವಾದಗಳನ್ನೂ ಹೊಂದಿ ಜ್ಯೋತಿಷ್ಕರನ್ನು ಕರೆಸಿದನು. ಒಂದು ಶುಭಮುಹೂರ್ತವನ್ನು ನಿರ್ಣಯಿಸಿ, ಶ್ರೀರಾಮಚಂದ್ರಪ್ರಭುವಿನ ಪಾದುಕೆಗಳನ್ನು ಅನನ್ಯಭಾವದಿಂದ ಸಿಂಹಾಸನದ ಮೇಲೆ ಸ್ಥಾಪಿಸಿ, ಪಟ್ಟಾಭಿಷೇಕಗೈದನು. (ದೋ/೩೨೩)

**ಚೌ – ರಾಮ ಮಾತು ಗುರ ಪದ ಸಿರು ನಾಈ। ಪ್ರಭು ಪದ ಪೀಠ ರಜಾಯಸು ಪಾಈ॥**
**ನಂದಿಗಾವँ ಕರಿ ಪರನ ಕುಟೀರಾ। ಕೀನ್ಹ ನಿವಾಸು ಧರಮ ಧುರ ಧೀರಾ॥ ೧ ॥**
**ಜಟಾಜೂಟ ಸಿರ ಮುನಿಪಟ ಧಾರೀ। ಮಹಿ ಖನಿ ಕುಸ ಸಾँಥರೀ ಸँವಾರೀ॥**
**ಅಸನ ಬಸನ ಬಾಸನ ಬ್ರತ ನೇಮಾ। ಕರತ ಕಠಿನ ರಿಷಿಧರಮ ಸಪ್ರೇಮಾ॥ ೨ ॥**
**ಭೂಷನ ಬಸನ ಭೋಗ ಸುಖ ಭೂರೀ। ಮನ ತನ ಬಚನ ತಜೇ ತಿನ ತೂರೀ॥**
**ಅವಧ ರಾಜು ಸುರ ರಾಜು ಸಿಹಾಈ। ದಸರಥ ಧನು ಸುನಿ ಧನದು ಲಜಾಈ॥ ೩ ॥**
**ತೇಹಿँ ಪುರ ಬಸತ ಭರತ ಬಿನು ರಾಗಾ। ಚಂಚರೀಕ ಜಿಮಿ ಚಂಪಕ ಬಾಗಾ ॥**
**ರಮಾ ಬಿಲಾಸು ರಾಮ ಅನುರಾಗೀ। ತಜತ ಬಮನ ಜಿಮಿ ಜನ ಬಡಭಾಗೀ॥ ೪ ॥**

ಶ್ರೀರಾಮಜನನಿ ಕೌಸಲ್ಯಾದೇವಿಗೆ ಮತ್ತು ಗುರು ವಸಿಷ್ಠರಿಗೆ ಶಿರಸಾವಂದಿಸಿ ಪ್ರಭುಪಾದುಕೆಗಳ ಆಜ್ಞೆಯನ್ನು ಪಡೆದು, ಧರ್ಮಧುರಂಧರನೂ, ಧೀರನೂ ಆದ ಭರತನು ನಂದಿಗ್ರಾಮದಲ್ಲಿ ಒಂದು ಪರ್ಣಕುಟಿಯನ್ನು ನಿರ್ಮಿಸಿಕೊಂಡು ಅದರಲ್ಲಿ ವಾಸಿಸತೊಡಗಿದನು. ಶಿರದಲ್ಲಿ ಜಟಾಜೂಟವನ್ನು, ಶರೀರದಲ್ಲಿ ಮುನಿಗಳಂತೆ ವಲ್ಕಲಗಳನ್ನು ಧರಿಸಿದನು. ನೆಲವನ್ನು ಅಗೆದು ತಗ್ಗುಮಾಡಿಕೊಂಡು ಅದರಲ್ಲಿ ಕುಶಾಸನವನ್ನು ಏರ್ಪಡಿಸಿದನು. ಭೋಜನ, ವಸ್ತ್ರ, ಪಾತ್ರೆ, ವ್ರತ, ನಿಯಮ ಮೊದಲಾದ

ವಿಷಯಗಳಲ್ಲಿ ಶ್ರದ್ಧಾದರಗಳಿಂದ ಋಷಿಗಳ ಕಠಿಣಧರ್ಮಗಳನ್ನು ಪ್ರೀತಿಯಿಂದ ಪಾಲಿಸತೊಡಗಿದನು. ಆಭರಣಗಳನ್ನು, ರಾಜೋಚಿತವಾದ ವಸ್ತ್ರಗಳನ್ನು ಸಮಸ್ತ ಸುಖಭೋಗಗಳನ್ನು, ತ್ರಿಕರಣಪೂರ್ವಕವಾಗಿ ತೃಣಪ್ರಾಯವೆಂದರಿತು ಪ್ರತಿಜ್ಞೆಗೈದು ತ್ಯಜಿಸಿದನು. ಯಾವ ಅಯೋಧ್ಯೆಯ ರಾಜ್ಯವನ್ನು ಕಂಡು ದೇವೇಂದ್ರನೂ ಕುರುಬುತ್ತಿದ್ದನೋ, ದಶರಥನ ಸಂಪತ್ತನ್ನು ಕೇಳಿ ಕುಬೇರನೂ ನಾಚಿಕೊಳ್ಳುತ್ತಿದ್ದನೋ, ಅಂತಹ ಅಯೋಧ್ಯೆಯಲ್ಲಿ ಭರತನು ಸಂಪಿಗೆಯ ವನದಲ್ಲಿರುವ ತುಂಬಿಯಂತೆ ಅನಾಸಕ್ತನಾಗಿ ಬಾಳುತ್ತಿದ್ದನು. ಶ್ರೀರಾಮಚಂದ್ರನ ಪ್ರೇಮೀ ಭಾಗ್ಯವಂತ ಭಕ್ತರು ರಮಾವಿಲಾಸವನ್ನು (ಭೋಗೈಶ್ವರ್ಯವನ್ನು) ವಾಂತಿಯಂತೆ ತೊರೆದುಬಿಡುತ್ತಾರೆ. ಮತ್ತೆ ಅದರ ಕಡೆಗೆ ಕಣ್ಣೆತ್ತಿಯೂ ನೋಡುವುದಿಲ್ಲ. (ಚೌ/೧-೪)

**ದೋ – ರಾಮ ಪೇಮ ಭಾಜನ ಭರತು ಬಡೇ ನ ಎಹಿಂ ಕರತೂತಿ।**
**ಚಾತಕ ಹಂಸ ಸರಾಹಿಅತ ಟೇಂಕ ಬಿಬೇಕ ಬಿಭೂತಿ॥ ೩೨೪ ॥**

ಚಾತಕ ಪಕ್ಷಿಯು ನೆಲದ ನೀರನ್ನು ಕುಡಿಯುವುದಿಲ್ಲವೆಂಬ ನಿಯಮದಿಂದ, ಮೇಘಜಲವನ್ನೇ ನಿರೀಕ್ಷಿಸುತ್ತಿರುವುದರಿಂದ ಅದು ಶ್ಲಾಘನೀಯ. ನೀರಕ್ಷೀರಗಳನ್ನು ಬೇರೆ-ಬೇರೆಯಾಗಿಸುವ ಶಕ್ತಿ ಹಂಸನಲ್ಲಿರುವುದರಿಂದ ಅದು ಪ್ರಶಂಸಾಪಾತ್ರವಾಗಿದೆ. ಚಾತಕನಂತಹ ನಿಯಮನಿಷ್ಠೆ, ಹಂಸದಂತಹ ವಿವೇಚನಾಶಕ್ತಿಯು ಭರತನಲ್ಲಿ ಸಹಜವಾಗಿಯೇ ಇದೆ. ಏಕೆಂದರೆ, ಶ್ರೀರಾಮನ ಪುನರಾಗಮನಕ್ಕಾಗಿ ನಿಯಮನಿಷ್ಠೆಯಿಂದ ಭರತನು ಎದುರು ನೋಡುತ್ತಿದ್ದನು. ಧರ್ಮಾಧರ್ಮಗಳನ್ನು ಬೇರೆ-ಬೇರೆಯಾಗಿಸಿ ಸ್ಪಷ್ಟವಾಗಿ ನೋಡುವವನು ಭರತನು. ಈ ವಿಶಿಷ್ಟಗುಣಗಳು ಇರುವುದು ಮಾತ್ರವಲ್ಲ ಶ್ರೀರಾಮನಲ್ಲಿ ಅನನ್ಯ ಭಕ್ತಿ ತತ್ಪರತೆಗಳೂ ಇವೆ. ಶ್ರೀರಾಮನಿಗೆ ಪ್ರೀತಿಪಾತ್ರನಾಗಿರುವುದೂ ಅವನ ವೈಶಿಷ್ಟ್ಯಗಳು. ಅದರಿಂದಲೇ ಭರತನು ಅತ್ಯಂತ ಶ್ಲಾಘನೀಯನು. (ದೋ/೩೨೪)

**ಚೌ – ದೇಹ ದಿನಹುಂ ದಿನ ದೂಬರಿ ಹೋಈ। ಘಟಇ ತೇಜು ಬಲು ಮುಖಛಬಿ ಸೋಈ ॥**
**ನಿತ ನವ ರಾಮ ಪ್ರೇಮ ಪನು ಪೀನಾ। ಬಢತ ಧರಮ ದಲು ಮನು ನ ಮಲೀನಾ ॥ ೧ ॥**
**ಜಿಮಿ ಜಲು ನಿಘಟತ ಸರದ ಪ್ರಕಾಸೇ। ಬಿಲಸತ ಬೇತಸ ಬನಜ ಬಿಕಾಸೇ ॥**
**ಸಮ ದಮ ಸಂಜಮ ನಿಯಮ ಉಪಾಸಾ। ನಖತ ಭರತ ಹಿಯ ಬಿಮಲ ಅಕಾಸಾ ॥ ೨ ॥**
**ಧ್ರುವ ಬಿಸ್ವಾಸು ಅವಧಿ ರಾಕಾ ಸೀ। ಸ್ವಾಮಿ ಸುರತಿ ಸುರಬೀಥಿ ಬಿಕಾಸೀ ॥**
**ರಾಮ ಪೇಮ ಬಿಧು ಅಚಲ ಅದೋಷಾ। ಸಹಿತ ಸಮಾಜ ಸೋಹ ನಿತ ಚೋಖಾ ॥ ೩ ॥**
**ಭರತ ರಹನೀ ಸಮುಝುನಿ ಕರತೂತೀ। ಭಗತಿ ಬಿರತಿ ಗುನ ಬಿಮಲ ಬಿಭೂತೀ ॥**
**ಬರನತ ಸಕಲ ಸುಕಬಿ ಸಕುಚಾಹೀಂ। ಸೇಸ ಗನೇಸ ಗಿರಾ ಗಮು ನಾಹೀಂ ॥ ೪ ॥**

ಭರತನ ಶರೀರವು ದಿನದಿಂದ ದಿನಕ್ಕೆ ಬಡವಾಗುತ್ತಾ ಇತ್ತು. ಅನ್ನ, ಘೃತ, ಮೊದಲಾದವುಗಳಿಂದ ಹುಟ್ಟುವ ಮೇದಸ್ಸು ಕಡಿಮೆಯಾಗುತ್ತಾ ಹೋಯಿತು. ಆದರೆ ಅವನ ಆತ್ಮಬಲ, ತೇಜಸ್ಸು, ಮುಖಕಾಂತಿಯು ದಿನದಿಂದ ದಿನಕ್ಕೆ ಹೆಚ್ಚುತ್ತಾ ಇದೆ. ರಾಮಪ್ರೇಮದ ಪಣ, ನಿತ್ಯನೂತನವಾಗಿ ಪರಿಪುಷ್ಟವಾಗುತ್ತಿತ್ತು. ಧರ್ಮನಿಷ್ಠೆಗಳು ನಿರಂತರ ಅಭಿವೃದ್ಧಿ ಹೊಂದುತ್ತಿದ್ದುವು. ಮನಸ್ಸು ಪ್ರಸನ್ನವಾಗಿ ಲವಲವಿಕೆಯಿಂದ ಕೂಡಿತ್ತು. ಶರದೃತುವಿನಲ್ಲಿ ಸರೋವರಗಳು ನಿರ್ಮಲವಾದ ಜಲದಿಂದ ಸ್ವಚ್ಛವಾಗಿ ವಿರಾಜಿಸುತ್ತವೆ. ಆಕಾಶವು ನಿರ್ಮಲವಾಗಿ ಪ್ರಕಾಶಿಸುತ್ತದೆ. ತಾವರೆಗಳು ಅರಳಿ ಶೋಭಿಸುತ್ತಿರುವಂತೆ, ಭರತನ ಹೃದಯವೆಂಬ ನಿರ್ಮಲಾಕಾಶದಲ್ಲಿ ಶಮ, ದಮ, ಸಂಯಮ, ನಿಯಮ, ಉಪವಾಸಾದಿ ವ್ರತಗಳು ನಕ್ಷತ್ರಗಳಂತೆ ವಿರಾಜಿಸುತ್ತಿವೆ. ಭರತನ ಹೃದಯಾಕಾಶದಲ್ಲಿ 'ಶ್ರೀರಾಮನು ತಪ್ಪದೇ ಬರುವನು' ಎಂಬ ದೃಢವಿಶ್ವಾಸವೇ ಧ್ರುವತಾರೆ. ಹದಿನಾಲ್ಕು ವರ್ಷಗಳ ಅವಧಿಯೇ ಪೂರ್ಣಚಂದ್ರನ ಬೆಳದಿಂಗಳು. ಶ್ರೀರಾಮನ ನಿರಂತರ ಸ್ಮೃತಿಯೇ ಆಕಾಶಗಂಗೆಯಂತೆ ಬೆಳಗುತ್ತಿತ್ತು. ರಾಮನಲ್ಲಿರುವ ಅಚಲಭಕ್ತಿಯೇ ಕಳಂಕರಹಿತ ಚಂದ್ರಮನು ಸುಗುಣಸಮೂಹವಾದ ನಕ್ಷತ್ರಗಳ ನಡುವೆ ವಿರಾಜಿಸುತ್ತಿರುವನು. ಭರತನ ಪ್ರವರ್ತನ, ವಿಜ್ಞಾನ, ಕಾರ್ಯಗಳು, ಭಕ್ತಿ-ವೈರಾಗ್ಯಗಳು, ನಿರ್ಮಲಗುಣಗಳು, ಐಶ್ವರ್ಯವು ಇವುಗಳನ್ನು ವರ್ಣಿಸಲು ಎಲ್ಲ ಉತ್ತಮ ಕವಿಗಳೂ ಹಿಂಜರಿಯುತ್ತಾರೆ; ಏಕೆಂದರೆ, ಇತರರ ಮಾತಿರಲಿ, ಸ್ವತಃ ಶೇಷ, ಗಣೇಶ, ಶಾರದೆಯರಿಗೂ ಅಲ್ಲಿಗೆ ತಲುಪಲಾಗಲಿಲ್ಲ. (ಚೌ/೧-೪)

**ದೋ – ನಿತ ಪೂಜತ ಪ್ರಭು ಪಾಂವರೀ ಪ್ರೀತಿ ನ ಹೃದಯಂ ಸಮಾತಿ ।**
**ಮಾಗಿ ಮಾಗಿ ಆಯಸು ಕರತ ರಾಜ ಕಾಜ ಬಹು ಭಾಂತಿ॥ ೩೨೫ ॥**

ಭರತನು ಪ್ರತಿದಿನವೂ ಪ್ರಭುವಿನ ಪಾದುಕೆಗಳನ್ನು ಪೂಜಿಸುವನು. ಆತನ ಹೃದಯದಲ್ಲಿ ಪ್ರೇಮವೂ ಹಿಡಿಸಲೊಲ್ಲದು. ಪಾದುಕೆಗಳ ಅಪ್ಪಣೆಪಡೆದು ಅವನು ರಾಜ್ಯಭಾರಮಾಡುವನು. (ದೋ/೩೨೫)

**ಚೌ – ಪುಲಕ ಗಾತ ಹಿಯಂ ಸಿಯ ರಘುಬೀರೂ। ಜೀಹ ನಾಮು ಜಪ ಲೋಚನ ನೀರೂ॥**
**ಲಖನ ರಾಮ ಸಿಯ ಕಾನನ ಬಸಹೀಂ। ಭರತು ಭವನ ಬಸಿ ತಪ ತನು ಕಸಹೀಂ॥ ೧ ॥**

**ದೋಉ ದಿಸಿ ಸಮುಝಿ ಕಹತ ಸಬು ಲೋಗೂ । ಸಬ ಬಿಧಿ ಭರತ ಸರಾಹನ ಜೋಗೂ ॥**
**ಸುನಿ ಬ್ರತ ನೇಮ ಸಾಧು ಸಕುಚಾಹೀಂ । ದೇಖಿ ದಸಾ ಮುನಿರಾಜ ಲಜಾಹೀಂ ॥ ೨ ॥**
**ಪರಮ ಪುನೀತ ಭರತ ಆಚರನೂ । ಮಧುರ ಮಂಜು ಮುದ ಮಂಗಲ ಕರನೂ ॥**
**ಹರನ ಕಠಿನ ಕಲಿ ಕಲುಷ ಕಲೇಸೂ । ಮಹಾಮೋಹ ನಿಸಿ ದಲನ ದಿನೇಸೂ ॥ ೩ ॥**
**ಪಾಪ ಪುಂಜ ಕುಂಜರ ಮೃಗರಾಜೂ । ಸಮನ ಸಕಲ ಸಂತಾಪ ಸಮಾಜೂ ॥**
**ಜನ ರಂಜನ ಭಂಜನ ಭವ ಭಾರೂ । ರಾಮ ಸನೇಹ ಸುಧಾಕರ ಸಾರೂ ॥ ೪ ॥**

ಭರತನ ಹೃದಯದಲ್ಲಿ ಯಾವಾಗಲೂ ಶ್ರೀಸೀತಾರಾಮರು ವಾಸಿಸುತ್ತಿರುವರು. ಅವನ ನಾಲಿಗೆಯು ಶ್ರೀರಾಮನಾಮವನ್ನು ಜಪಿಸುತ್ತಿತ್ತು. ಆದರಿಂದಾಗಿ ಶರೀರವು ಪುಳಕಿತವಾಗಿತ್ತು. ನೇತ್ರಗಳಲ್ಲಿ ಪ್ರೇಮಾಂಬುಗಳು ತುಂಬಿತುಳುಕುತ್ತಿತ್ತು. ಶ್ರೀಸೀತಾರಾಮ ಲಕ್ಷ್ಮಣರು ಕಾಡಿನಲ್ಲಿ ವಾಸಿಸುತ್ತಿದ್ದರೆ, ಭರತನು ಮನೆಯಲ್ಲೇ ತಪಸ್ಸನ್ನಾಚರಿಸುತ್ತಾ ಶರೀರವನ್ನು ಶೋಷಿಸುತ್ತಿದ್ದನು. ಈ ಉಭಯರ (ಶ್ರೀರಾಮ-ಭರತರ) ಪರಿಸ್ಥಿತಿಯನ್ನು ಅರಿತ ಜನರು – 'ಭರತನು ಎಲ್ಲ ವಿಧದಿಂದಲೂ ಪ್ರಶಂಸನೀಯನಾಗಿರುವನು'' ಎಂದು ಹೇಳುತ್ತಿದ್ದರು. ಅವನ ನಿಯಮ ವ್ರತಗಳನ್ನು ಕೇಳಿ ಸಾಧು-ಸಂತರೂ ಕೂಡ ನಾಚಿಕೊಳ್ಳುತ್ತಾರೆ. ಅವನ ಪ್ರೇಮನಿಷ್ಠೆಯನ್ನು ಕಂಡು ಮುನಿಗಳೂ ಕೂಡ ಲಜ್ಜೆಯಿಂದ ತಲೆತಗ್ಗಿಸುವರು. ಭರತನ ಆಚರಣೆಯು ಪರಮ ಪವಿತ್ರವೂ, ಮಧುರವೂ, ಮನೋಹರವೂ, ಆನಂದಪ್ರದವೂ ಆಗಿದೆ. ಅದು ಕಲಿಯುಗದ ಕ್ಲಿಷ್ಟ ಪಾಪಗಳನ್ನೂ, ಕ್ಲೇಶಗಳನ್ನೂ ಕಳೆಯುವಂತಹುದು, ಮಹಾಮೋಹವೆಂಬ ನಿಶೆಯನ್ನು ನಾಶಮಾಡುವ ಸೂರ್ಯನಂತಿದೆ. ಅವನ ಜೀವನವಿಧಾನವು ಪಾಪಸಮೂಹವೆಂಬ ಕುಂಜರಕ್ಕೆ ಸಿಂಹಸದೃಶ. ಸರ್ವ ಸಂತಾಪಗಳನ್ನು ಹರಿಸುವಂತಹುದು. ಭಕ್ತರಿಗೆ ಆನಂದದಾಯಕವು. ಭವಬಂಧನದಿಂದ ಮುಕ್ತವಾಗಿಸುವಂತಹುದು. ಅದು ಶ್ರೀರಾಮಪ್ರೇಮವೆಂಬ ಸುಧಾಕರನ ಸಾರವಾಗಿದೆ. (ಚೌ/೧-೪)

**ಛಂ – ಸಿಯ ರಾಮ ಪ್ರೇಮ ಪಿಯೂಷ ಪೂರನ ಹೋತ ಜನಮು ನ ಭರತ ಕೋ ।**
**ಮುನಿ ಮನ ಅಗಮ ಜಮ ನಿಯಮ ಸಮ ದಮ ಬಿಷಮ ಬ್ರತ ಆಚರತ ಕೋ ॥**
**ದುಖ ದಾಹ ದಾರಿದ ದಂಬ ದೂಷನ ಸುಜಸ ಮಿಸ ಅಪಹರತ ಕೋ ।**
**ಕಲಿಕಾಲ ತುಲಸೀ ಸೇ ಸಠನ್ಹಿ ಹಠಿ ರಾಮ ಸನಮುಖ ಕರತ ಕೋ ॥**

ಶ್ರೀಸೀತಾರಾಮರ ಪ್ರೇಮಾಮೃತದಿಂದ ಪರಿಪೂರ್ಣನಾದ ಭರತನು ಹುಟ್ಟದೇ ಇರುತ್ತಿದ್ದರೆ, ಮುನಿಗಳ ಮನಸ್ಸಿಗೂ ಅಗಮ್ಯವಾದ ಯಮ, ನಿಯಮ, ಶಮ, ದಮೆಯೇ ಮೊದಲಾದ ಕಠೋರ ವ್ರತಗಳನ್ನು ಬೇರಾರೂ ಆಚರಿಸುತ್ತಿದ್ದರು? ಹಾಗೆಯೇ, ದುಃಖ, ಸಂತಾಪ, ದಾರಿದ್ರ್ಯ, ದಂಭ, ಮೊದಲಾದ ದೋಷಗಳನ್ನು ತನ್ನ ಸುಯಶಸ್ಸಿನ ನೆಪದಲ್ಲಿ ಬೇರಾರು ಪರಿಹರಿಸುತ್ತಿದ್ದರು? ಅಷ್ಟೇ ಅಲ್ಲ, ಈ ಕಲಿಕಾಲದಲ್ಲಿ ತುಳಸೀದಾಸನಂತಹ ಶಠರನ್ನು ಹಟದಿಂದಲಾದರೂ ಬೇರೆ ಯಾರು ಶ್ರೀರಾಮನ ಸಮ್ಮುಖಕ್ಕೆ ತರುತ್ತಿದ್ದರು? (ಛಂದ)

**ಸೋ – ಭರತ ಚರಿತ ಕರಿ ನೇಮು ತುಲಸೀ ಜೋ ಸಾದರ ಸುನಹಿಂ ॥**
**ಸೀಯ ರಾಮ ಪದ ಪೇಮು ಅವಸಿ ಹೋಇ ಭವ ರಸ ಬಿರತಿ ॥ ೩೨೬ ॥**

ತುಲಸೀದಾಸರು ಹೇಳುತ್ತಾರೆ – ಭರತನ ಚರಿತ್ರವನ್ನು ನೇಮದಿಂದ, ಆದರದಿಂದ ಆಲಿಸುವವರಿಗೆ ಶ್ರೀಸೀತಾರಾಮರ ಚರಣಗಳಲ್ಲಿ ಭಕ್ತಿಯು ಅವಶ್ಯವಾಗಿ ಉಂಟಾಗಬಹುದು. ಸಾಂಸಾರಿಕ ವಿಷಯರಸದಿಂದ ವಿರಕ್ತಿಯು ಉಂಟಾಗುವುದು. (ಸೋ/೩೨೬)

**ಮಾಸಪಾರಾಯಣದ ಇಪ್ಪತ್ತೊಂದನೆಯ ವಿಶ್ರಾಮ**

**ಇತಿ ಶ್ರೀಮದ್ರಾಮಚರಿತಮಾನಸೇ ಸಕಲಕಲಿಕಲುಷವಿಧ್ವಂಸನೇ ದ್ವಿತೀಯಃ ಸೋಪಾನಃ ಸಮಾಪ್ತಃ ॥ ೨ ॥**

*ಕಲಿಯುಗದ ಎಲ್ಲ ಪಾಪಗಳನ್ನು ಧ್ವಂಸಮಾಡುವ ಶ್ರೀರಾಮಚರಿತಮಾನಸದಲ್ಲಿ*
*ಅಯೋಧ್ಯಾಕಾಂಡವೆಂಬ ಎರಡನೆಯ ಸೋಪಾನವು ಮುಗಿದುದು.*

## (ಅಯೋಧ್ಯಾಕಾಂಡ ಸಮಾಪ್ತವು)

**॥ ಶ್ರೀಸೀತಾರಾಮಚಂದ್ರಾರ್ಪಣಮಸ್ತು ॥**



ಶ್ರೀಗಣೇಶಾಯ ನಮಃ

ಶ್ರೀಜಾನಕೀವಲ್ಲಭೋ ವಿಜಯತೇ

# ಶ್ರೀರಾಮಚರಿತಮಾನಸ

## ತೃತೀಯ ಸೋಪಾನ

## ಅರಣ್ಯಕಾಂಡ

### ಭಗವದ್‌ಸ್ತುತಿ

**ಶ್ಲೋ – ಮೂಲಂ ಧರ್ಮತರೋರ್ವಿವೇಕಜಲಧೇಃ ಪೂರ್ಣೇಂದುಮಾನಂದದಂ**
**ವೈರಾಗ್ಯಾಂಬುಜಭಾಸ್ಕರಂ ಹ್ಯಘಘನಧ್ವಾಂತಾಪಹಂ ತಾಪಹಮ್।**
**ಮೋಹಾಂಭೋಧರಪೂಗಪಾಟನವಿಧೌ ಸ್ವಸಂಭವಂ ಶಂಕರಂ**
**ವಂದೇ ಬ್ರಹ್ಮಕುಲಂ ಕಲಂಕಶಮನಂ ಶ್ರೀರಾಮಭೂಪಪ್ರಿಯಮ್ ॥ ೧ ॥**

ಧರ್ಮತರುವಿನ ಮೂಲನೂ, ವಿವೇಕವೆಂಬ ಸಮುದ್ರಕ್ಕೆ ಆನಂದವನ್ನುಂಟುಮಾಡು ಪೂರ್ಣಚಂದ್ರನೂ, ವೈರಾಗ್ಯವೆಂಬ ಕಮಲವನ್ನು ಅರಳಿಸುವ ಸೂರ್ಯನೂ, ಪಾಪರೂಪಿಯಾದ ಘೋರಾಂಧಕಾರವನ್ನು ನಿಶ್ಚಯವಾಗಿ ಕಳೆಯುವವನೂ, ತಾಪತ್ರಯಗಳನ್ನು (ದೈಹಿಕ, ದೈವಿಕ, ಭೌತಿಕ) ಹರಿಸುವವನೂ, ಮೋಹವೆಂಬ ಮೋಡಗಳ ಸಮೂಹವನ್ನು ಚೆಲ್ಲಾಪಿಲ್ಲಿಯಾಗಿಸಲು ಆಕಾಶದಲ್ಲಿ ಹುಟ್ಟಿದ ಪ್ರಭಂಜನಸ್ವರೂಪಿಯೂ, ಪರಬ್ರಹ್ಮಸ್ವರೂಪನೂ, ಕಳಂಕನಾಶಕನೂ ಆದ ಶ್ರೀರಾಮಚಂದ್ರನಿಗೆ ಪ್ರಿಯನಾದ ಶ್ರೀಶಂಕರನಿಗೆ ವಂದಿಸುತ್ತೇನೆ. ॥ ೧ ॥

**ಸಾಂದ್ರಾನಂದಪಯೋದಸೌಭಗತನುಂ ಪೀತಾಂಬರಂ ಸುಂದರಂ**
**ಪಾಣೌ ಬಾಣಶರಾಸನಂ ಕಟಿಲಸತ್ತೂಣೀರಭಾರಂ ವರಮ್।**
**ರಾಜೀವಾಯತಲೋಚನಂ ಧೃತಜಟಾಜೂಟೇನ ಸಂಶೋಭಿತಂ**
**ಸೀತಾಲಕ್ಷ್ಮಣಸಂಯುತಂ ಪಥಿಗತಂ ರಾಮಾಭಿರಾಮಂ ಭಜೇ ॥ ೨ ॥**

ಶ್ರೀರಾಮಚಂದ್ರಪ್ರಭುವು ಪರಮಾನಂದ ಸ್ವರೂಪನು. ಅವನು ನೀಲಮೇಘಶ್ಯಾಮನೂ, ಆನಂದಘನನೂ, ಮನೋಹರ ಪೀತವಲ್ಕಲಧಾರಿಯೂ, ಕರಕಮಲಗಳಲ್ಲಿ ಧನುರ್ಬಾಣಧಾರಿಯೂ, ಕಟಿಯಲ್ಲಿ ತೂಣೀರಧಾರಿಯೂ, ರಾಜೀವಲೋಚನನೂ, ಜಟಾಜೂಟ ಶೋಭಿತನು ಶ್ರೀಸೀತಾಲಕ್ಷ್ಮಣಸಹಿತನಾಗಿ ವನಪಥದಲ್ಲಿಸಾಗುತ್ತಿರುವ, ಸರ್ವಶ್ರೇಷ್ಠನೂ, ಆನಂದದಾಯಕನೂ ಆದ ಆ ರಘುವರನನ್ನು ನಾನು ಭಜಿಸುತ್ತೇನೆ. ॥ ೨ ॥

**ಸೋ – ಉಮಾ ರಾಮ ಗುನ ಗೂಢ ಪಂಡಿತ ಮುನಿ ಪಾವಹಿಂ ಬಿರತಿ।**
**ಪಾವಹಿಂ ಮೋಹ ಬಿಮೂಢ ಜೇ ಹರಿ ಬಿಮುಖ ನ ಧರ್ಮ ರತಿ ॥**

ಶಿವನು ಪಾರ್ವತಿಯನ್ನು ಕುರಿತು ಹೇಳಿದನು – ಎಲೈ ಉಮಾ! ಶ್ರೀರಾಮನ ಗುಣಗಳು ಗೂಢವಾದುವು. ಪಂಡಿತರೂ, ಮುನಿಗಳೂ, ಅವುಗಳನ್ನು ಅರಿತು ನಿರತಿಯನ್ನು ಪಡೆಯುತ್ತಾರೆ. ಆದರೆ ಹರಿವಿಮುಖರಾದವರೂ, ಧರ್ಮಾನುರಾಗವಿಲ್ಲದವರೂ ಆದ ಮೂಢರು ಅವುಗಳನ್ನು ಕೇಳಿ ಮೋಹಗ್ರಸ್ತರಾಗುವರು. (ಸೋ)

# ಜಯಂತನ ಗರ್ವಭಂಗ

ಚೌ – ಪುರ ನರ ಭರತ ಪ್ರೀತಿ ಮೈಂ ಗಾಈ । ಮತಿ ಅನುರೂಪ ಅನೂಪ ಸುಹಾಈ ॥
ಅಬ ಪ್ರಭು ಚರಿತ ಸುನಹು ಅತಿ ಪಾವನ । ಕರತ ಜೆ ಬನ ಸುರ ನರ ಮುನಿ ಭಾವನ ॥ ೧ ॥
ಏಕ ಬಾರ ಚುನಿ ಕುಸುಮ ಸುಹಾಏ । ನಿಜ ಕರ ಭೂಷನ ರಾಮ ಬನಾಏ ॥
ಸೀತಹಿ ಪಹಿರಾಏ ಪ್ರಭು ಸಾದರ । ಬೈಠೇ ಫಟಿಕ ಸಿಲಾ ಪರ ಸುಂದರ ॥ ೨ ॥
ಸುರಪತಿ ಸುತ ಧರಿ ಬಾಯಸ ಬೇಷಾ । ಸಠ ಚಾಹತ ರಘುಪತಿ ಬಲ ದೇಖಾ ॥
ಜಿಮಿ ಪಿಪೀಲಿಕಾ ಸಾಗರ ಥಾಹಾ । ಮಹಾ ಮಂದಮತಿ ಪಾವನ ಚಾಹಾ ॥ ೩ ॥
ಸೀತಾ ಚರನ ಚೋಂಚ ಹತಿ ಭಾಗಾ । ಮೂಢ ಮಂದಮತಿ ಕಾರನ ಕಾಗಾ ॥
ಚಲಾ ರುಧಿರ ರಘುನಾಯಕ ಜಾನಾ । ಸೀಂಕ ಧನುಷ ಸಾಯಕ ಸಂಧಾನಾ ॥ ೪ ॥

ಅಯೋಧ್ಯಾಜನರ ಭಕ್ತಿಪ್ರಪತ್ತಿಗಳನ್ನು, ಅನನ್ಯ ಭಕ್ತಿಭರಿತವಾದ ಭರತನ ಪ್ರೇಮಾನುರಾಗವನ್ನು ನಾನು ಯಥಾಮತಿಯಾಗಿ ಹಾಡಿದೆ. ಈಗ ದೇವತೆಗಳು, ಮುನಿಗಳು, ಮನುಷ್ಯರು ಯಾವಾಗಲೂ ಸಂತಸಪಡುವ, ಶ್ರೀರಾಮಚಂದ್ರನು ವನವಾಸಕಾಲದಲ್ಲಿ ಪ್ರದರ್ಶಿಸುವ ಪವಿತ್ರ ಲೀಲಾವಿಲಾಸವನ್ನು ಕೇಳುವವಳಾಗು. ಒಮ್ಮೆ ಶ್ರೀರಾಮನು ಸುಂದರವಾದ ಹೂವುಗಳನ್ನು ಆರಿಸಿಕೊಂಡುತಂದು, ತನ್ನ ಕೈಯಿಂದಲೇ ವಿಧ-ವಿಧವಾದ ಪುಷ್ಪಭೂಷಣಗಳನ್ನು ಸಿದ್ಧಗೊಳಿಸಿದನು. ಚೆಲುವಾದ ಸ್ಫಟಿಕಶಿಲೆಯ ಮೇಲೆ ಕುಳಿತುಕೊಂಡು, ಅವುಗಳನ್ನು ಆದರದಿಂದ ಸೀತಾದೇವಿಗೆ ತೊಡಿಸಿದನು. ಆಗ ದೇವೇಂದ್ರನ ಕುಮಾರ ಮಂದಬುದ್ಧಿಯಾದ ಜಯಂತನು ಕಾಗೆಯರೂಪವನ್ನಾಂತು ಶ್ರೀರಘುನಾಥನ ಸತ್ವಪರೀಕ್ಷೆ ಮಾಡಬಯಸಿದನು. ಅವನ ಆ ಪ್ರಯತ್ನವು ಒಂದು ಅಲ್ಪ ಇರುವೆ ಸಮುದ್ರದ ಆಳ ನೋಡಲು ಹೊರಟಂತಾಯಿತು. ಆ ಮೂಢನು ಮಂದಬುದ್ಧಿಯ ಕಾರಣದಿಂದ ಕಾಗೆಯಾದ ಆ ಜಯಂತನು ಸೀತೆಯ ಕಾಲನ್ನು ಕುಕ್ಕಿ ಓಡಿಹೋದನು. ಕೊಕ್ಕಿನಿಂದ ತಿವಿದ ಆ ಗಾಯದಿಂದ ರಕ್ತವು ಹರಿಯುವುದನ್ನು ಕಂಡ ಶ್ರೀರಾಮನು ವಸ್ತುಸ್ಥಿತಿಯನ್ನು ಅರಿತು ಒಂದು ದರ್ಭೆಯನ್ನು ಅಭಿಮಂತ್ರಿಸಿ ಆ ಕಾಗೆಯ ಮೇಲೆ ಬಿಟ್ಟನು. (ಚೌ/೧-೪)

**ದೋ – ಅತಿ ಕೃಪಾಲ ರಘುನಾಯಕ ಸದಾ ದೀನ ಪರ ನೇಹ ।**
**ತಾ ಸನ ಆಇ ಕೀನ್ಹ ಛಲು ಮೂರಖ ಅವಗುನ ಗೇಹ ॥ ೧ ॥**

ಶ್ರೀರಘುನಾಥನು ಅತ್ಯಂತ ಕೃಪಾಳುವೂ, ದೀನಜನ ಬಂಧುವೂ ಆಗಿದ್ದಾನೆ. ಅಂತಹ ರಾಮನೊಡನೆ ಆ ಅವಗುಣಗಳ ಮನೆಯಾದ ಮೂರ್ಖ ಜಯಂತನು ವಂಚನೆಯಿಂದ ಕೇಡು ಬಗೆದನು. (ದೋ/೧)

ಚೌ – ಪ್ರೇರಿತ ಮಂತ್ರ ಬ್ರಹ್ಮಸರ ಧಾವಾ । ಚಲಾ ಭಾಜಿ ಬಾಯಸ ಭಯ ಪಾವಾ ॥
ಧರಿ ನಿಜ ರೂಪ ಗಯಉ ಪಿತು ಪಾಹೀಂ । ರಾಮ ಬಿಮುಖ ರಾಖಾ ತೆಹಿ ನಾಹೀಂ ॥ ೧ ॥
ಭಾ ನಿರಾಸ ಉಪಜೀ ಮನ ತ್ರಾಸಾ । ಜಥಾ ಚಕ್ರ ಭಯ ರಿಷಿ ದುರ್ಬಾಸಾ ॥
ಬ್ರಹ್ಮಧಾಮ ಸಿವಪುರ ಸಬ ಲೋಕಾ । ಫಿರಾ ಶ್ರಮಿತ ಬ್ಯಾಕುಲ ಭಯ ಸೋಕಾ ॥ ೨ ॥
ಕಾಹೂಂ ಬೈಠನ ಕಹಾ ನ ಓಹೀ । ರಾಖಿ ಕೋ ಸಕಇ ರಾಮ ಕರ ದ್ರೋಹೀ ॥
ಮಾತು ಮೃತ್ಯು ಪಿತು ಸಮನ ಸಮಾನಾ । ಸುಧಾ ಹೋಇ ಬಿಷ ಸುನು ಹರಿಜಾನಾ ॥ ೩ ॥
ಮಿತ್ರ ಕರಇ ಸತ ರಿಪು ಕೈ ಕರನೀ । ತಾ ಕಹ್ ಬಿಬುಧನದೀ ಬೈತರನೀ ॥
ಸಬ ಜಗು ತಾಹಿ ಅನಲಹು ತೇ ತಾತಾ । ಜೋ ರಘುಬೀರ ಬಿಮುಖ ಸುನು ಭ್ರಾತಾ ॥ ೪ ॥
ನಾರದ ದೇಖಾ ಬಿಕಲ ಜಯಂತಾ । ಲಾಗಿ ದಯಾ ಕೋಮಲ ಚಿತ ಸಂತಾ ॥
ಪಠವಾ ತುರತ ರಾಮ ಪಹಿಂ ತಾಹೀ । ಕಹೆಸಿ ಪುಕಾರಿ ಪ್ರನತ ಹಿತ ಪಾಹೀ ॥ ೫ ॥
ಆತುರ ಸಭಯ ಗಹೆಸಿ ಪದ ಜಾಈ । ತ್ರಾಹಿ ತ್ರಾಹಿ ದಯಾಲ ರಘುರಾಈ ॥
ಅತುಲಿತ ಬಲ ಅತುಲಿತ ಪ್ರಭುತಾಈ । ಮೈಂ ಮತಿಮಂದ ಜಾನಿ ನಹೀಂ ಪಾಈ ॥ ೬ ॥
ನಿಜ ಕೃತ ಕರ್ಮ ಜನಿತ ಫಲ ಪಾಯಉಂ । ಅಬ ಪ್ರಭು ಪಾಹಿ ಸರನ ತಕಿ ಆಯಉಂ ॥
ಸುನಿ ಕೃಪಾಲ ಅತಿ ಆರತ ಬಾನೀ । ಏಕನಯನ ಕರಿ ತಜಾ ಭವಾನೀ ॥ ೭ ॥

ಮಂತ್ರಪ್ರೇರಿತವಾದ ಆ ಬ್ರಹ್ಮಾಸ್ತ್ರವು ಅವನನ್ನು ಅಟ್ಟಿಸಿಕೊಂಡು ಹೋಯಿತು. ಕಾಗೆಯು ಹೆದರಿ ಓಡಿಹೋಯಿತು. ಅವನು ತನ್ನ ನಿಜರೂಪತಾಳಿ ತಂದೆ ಇಂದ್ರನ ಬಳಿಗೆ ಧಾವಿಸಿದನು. ಆದರೆ ರಾಮವಿರೋಧಿ ಎಂದು ತಿಳಿದು ಇಂದ್ರನು ಅವನನ್ನು ಮಡಿಲಿಗೆ ಹಾಕಿಕೊಳ್ಳಲಿಲ್ಲ. ಆಗ ಆ ಜಯಂತನು – ವಿಷ್ಣುಚಕ್ರದಿಂದ ದುರ್ವಾಸರು ಭಯಗೊಂಡಂತೆ, ನಿರಾಶನಾಗಿ ಭಯಕಂಪಿತನಾದನು. ಅವನು ಬ್ರಹ್ಮಲೋಕಕ್ಕೂ, ಶಿವಲೋಕಕ್ಕೂ ಹಾಗೂ ಇತರ ಲೋಕಗಳಿಗೂ ಧಾವಿಸಿದನು. ಆದರೆ ಅವನಿಗೆ ಆಶ್ರಯಕೊಡುವುದು ಹಾಗಿರಲಿ, ಯಾರೂ ಕುಳಿತುಕೊಳ್ಳುವಂತೆಯೂ ಕೂಡ ಹೇಳಲಿಲ್ಲ. ಶ್ರೀರಾಮದ್ರೋಹಿಗೆ ಯಾರು ಆಶ್ರಯ ನೀಡುವರು? ಕಾಕಭುಶುಂಡಿಯರು ಹೇಳುತ್ತಾರೆ – ಎಲೈ ಗರುಡಾ! ಕೇಳು. ಅವನ ಪಾಲಿಗೆ ತಾಯಿಯೂ ಮೃತ್ಯುವಿನಂತಾಗುತ್ತಾಳೆ. ತಂದೆ ಯಮನಂತಾಗುತ್ತಾನೆ. ಅಮೃತವು ವಿಷವಾಗುತ್ತದೆ. ಶ್ರೀರಾಮವಿರೋಧಿಗೆ ಮಿತ್ರರು ಶತ್ರುಗಳಂತೆ ಆಗುತ್ತಾರೆ. ದೇವನದಿ ಗಂಗೆಯು ಅವನ ಪಾಲಿಗೆ ವೈತರಣಿಯಂತಾಗುತ್ತದೆ. ತಮ್ಮಾ! ಕೇಳು. ರಾಮವಿಮುಖನಾದವನಿಗೆ ಇಡೀ ಜಗತ್ತು ಅಗ್ನಿಗಿಂತಲೂ ಹೆಚ್ಚು ತಾಪದಾಯಕವಾಗುತ್ತದೆ.

ಹೀಗೆ ಜಯಂತನು ಜೀವದಾಸೆಯಿಂದ ಓಡುತ್ತಿದ್ದಾಗ ದಾರಿಯಲ್ಲಿ ನಾರದರು ಕಣ್ಣಿಗೆ ಬಿದ್ದರು. ಅವನ ಪಾಡನ್ನು ನೋಡಿ ನಾರದರಿಗೆ ಮರುಕವುಂಟಾಯಿತು. ಏಕೆಂದರೆ, ಸಂತರ ಚಿತ್ತವು ಅತ್ಯಂತ ಕೋಮಲವಾಗಿರುತ್ತದೆ. ಅವರು ಅವನಿಗೆ ಬುದ್ಧಿ ಹೇಳಿ, ಶ್ರೀರಾಮನಿಗೆ ಶರಣು ಹೋಗುವಂತೆ ತಿಳಿಸಿದರು. ಅದರಂತೆ ಅವನು ಶ್ರೀರಾಮನ ಬಳಿಗೆ ಹೋಗಿ – ''ಓ ಶರಣಾಗತವತ್ಸಲಾ! ನನ್ನನ್ನು ಕಾಪಾಡು! ಕಾಪಾಡು!'' ಎಂದು ಪ್ರಾರ್ಥಿಸಿದನು. ಭಯಕಂಪಿತನಾದ ಜಯಂತನು ಆತುರದಿಂದ ಶ್ರೀರಾಮನ ಪಾದಗಳ ಮೇಲೆ ಬಿದ್ದು ಬೇಡಿಕೊಂಡನು – ಓ ದೀನದಯಾಳಾ! ರಕ್ಷಿಸು, ರಕ್ಷಿಸು! ಮಂದಮತಿಯಾದ ನಾನು ನಿನ್ನ ಅತುಲಬಲವನ್ನು, ಪ್ರಭುತ್ವವನ್ನು ಅರಿಯದೆ ಹೋದೆ. ನಾನು ಮಾಡಿದ ಕರ್ಮಫಲವನ್ನು ಅನುಭವಿಸಿದೆ. ಪ್ರಭುವೇ! ನನ್ನನ್ನು ನಿಮ್ಮ ಉಡಿಗೆ ಹಾಕಿಕೊಳ್ಳಿ. ನಾನು ನಿನಗೆ ಶರಣು ಬಂದಿದ್ದೇನೆ. ಶಿವನು ಹೇಳುತ್ತಾನೆ – ಎಲೈ ಪಾರ್ವತೀ! ಕೃಪಾನಿಧಿಯಾದ ಶ್ರೀರಘುನಾಥನು ದುಃಖಿತನಾದ ಅವನ ಗೋಳನ್ನು ಕೇಳಿ, ಅವನನ್ನು ಒಕ್ಕಣ್ಣನನ್ನಾಗಿಸಿ ಕ್ಷಮಿಸಿಬಿಟ್ಟನು. (ಅಂದಿನಿಂದಲೂ ಕಾಗೆಯು ಒಕ್ಕಣ್ಣನೆಂದು ಪ್ರಸಿದ್ಧಿ.) (ಚೌ/೧-೭)

**ಸೋ – ಕೀನ್ಹ ಮೋಹ ಬಸ ದ್ರೋಹ ಜದ್ಯಪಿ ತೇಹಿ ಕರ ಬಧ ಉಚಿತ ।**
**ಪ್ರಭು ಛಾಡೇಉ ಕರಿ ಛೋಹ ಕೋ ಕೃಪಾಲ ರಘುಬೀರ ಸಮ ॥ ೨ ॥**

ಅವನು ಮೋಹವಶನಾಗಿ ದ್ರೋಹಮಾಡಿದ್ದನು. ನ್ಯಾಯವಾಗಿ ನೋಡಿದರೆ ವಧೆಯೇ ಅವನಿಗೆ ಶಿಕ್ಷೆ. ಆದರೆ ಪ್ರಭುವು ಕೃಪೆಗೈದು ಅವನನ್ನು ಬಿಟ್ಟುಬಿಟ್ಟನು. ಶ್ರೀರಘುವೀರನಿಗೆ ಸಮಾನರಾದ ಕೃಪಾಳುಗಳು ಬೇರೆ ಯಾರಿದ್ದಾರೆ? (ಸೋ/೨)

## ಅತ್ರಿ ಮಹರ್ಷಿಗಳ ಭೇಟಿ

**ಚೌ – ರಘುಪತಿ ಚಿತ್ರಕೂಟ ಬಸಿ ನಾನಾ । ಚರಿತ ಕಿಏ ಶ್ರುತಿ ಸುಧಾ ಸಮಾನಾ ॥**
**ಬಹುರಿ ರಾಮ ಅಸ ಮನ ಅನುಮಾನಾ । ಹೋಇಹಿ ಭೀರ ಸಬಹಿಂ ಮೋಹಿ ಜಾನಾ ॥ ೧ ॥**
**ಸಕಲ ಮುನಿನ್ಹ ಸನ ಬಿದಾ ಕರಾಈ । ಸೀತಾ ಸಹಿತ ಚಲೇ ದ್ವೌ ಭಾಈ ॥**
**ಅತ್ರಿ ಕೆ ಆಶ್ರಮ ಜಬ ಪ್ರಭು ಗಯಊ । ಸುನತ ಮಹಾಮುನಿ ಹರಷಿತ ಭಯಊ ॥ ೨ ॥**
**ಪುಲಕಿತ ಗಾತ ಅತ್ರಿ ಉಠಿ ಧಾಏ । ದೇಖಿ ರಾಮು ಆತುರ ಚಲಿ ಆಏ ॥**
**ಕರತ ದಂಡವತ ಮುನಿ ಉರ ಲಾಏ । ಪ್ರೇಮ ಬಾರಿ ದ್ವೌ ಜನ ಅನ್ಹವಾಏ ॥ ೩ ॥**
**ದೇಖಿ ರಾಮ ಛಬಿ ನಯನ ಜುಡಾನೇ । ಸಾದರ ನಿಜ ಆಶ್ರಮ ತಬ ಆನೇ ॥**
**ಕರಿ ಪೂಜಾ ಕಹಿ ಬಚನ ಸುಹಾಏ । ದಿಏ ಮೂಲ ಫಲ ಪ್ರಭು ಮನ ಭಾಏ ॥ ೪ ॥**

ಶ್ರೀರಘುನಾಥನು ಚಿತ್ರಕೂಟದಲ್ಲಿದ್ದು ಅನೇಕ ಲೀಲಾವಿಲಾಸವನ್ನು ತೋರಿದ. ಅವುಗಳು ಕೇಳುವವರಿಗೆ ಅಮೃತತುಲ್ಯ. ಕೆಲ ಕಾಲದನಂತರ ಶ್ರೀರಾಮನಿಗೆ ಹೀಗೆ ಅನ್ನಿಸಿತು – ನಾನು ಇಲ್ಲಿ ಇರುವ ವಿಷಯ ಎಲ್ಲ ಜನರು ತಿಳಿದುಕೊಂಡಿರುವರು. ಅದರಿಂದ ಇನ್ನು ಮೇಲೆ ಇಲ್ಲೇ ಇದ್ದರೆ ಜನಜಂಗುಳಿ ಸೇರೀತು. ಅದಕ್ಕಾಗಿ ಎಲ್ಲ ಮುನಿಗಳಿಂದಲೂ ಬೀಳ್ಕೊಂಡು ಸೀತಾಸಮೇತ ಅಣ್ಣತಮ್ಮಂದಿರಿಬ್ಬರೂ ಅಲ್ಲಿಂದ ಮುಂದೆ ಹೊರಟರು. ಮುಂದೆ ಅತ್ರಿಮುನಿಯ ಆಶ್ರಮವನ್ನು ಸೇರಿದರು. ಪ್ರಭು ಶ್ರೀರಾಮಚಂದ್ರನ ಆಗಮನವನ್ನು ಕೇಳಿ ಮಹಾಮುನಿಗೆ ಅತೀವ ಹರ್ಷವಾಯಿತು. ಶರೀರ ಪುಳಕಗೊಂಡಿತು. ಎದ್ದು ರಾಮನ ಇದಿರಿಗೆ ಓಡಿದರು. ಅವರು ಓಡಿಬರುತ್ತಿರುವುದನ್ನು ಕಂಡು ಶ್ರೀರಾಮನು ಲಗುಬಗೆಯಿಂದ ನಡೆದುಬಂದು ಮುನಿಗಳಿಗೆ ದಂಡಪ್ರಣಾಮ ಮಾಡಿದನು. ನಮಸ್ಕರಿಸಿದ ರಾಮನನ್ನು ಅತ್ರಿಮುನಿಗಳು ತತ್‌ಕ್ಷಣ ಎತ್ತಿ ಎದೆಗಪ್ಪಿಗೊಂಡರು. ತನ್ನ

ಪ್ರೇಮಾಂಬುವಿನಿಂದ ಅಣ್ಣ-ತಮ್ಮಂದಿರಿಬ್ಬರನ್ನೂ ತೋಯಿಸಿಬಿಟ್ಟರು. ಶ್ರೀರಾಮನ ಅಲೌಕಿಕ ಸೌಂದರ್ಯವನ್ನು ಕಂಡು ಮುನಿಯ ಕಣ್ಣುಗಳು ತಣಿದವು. ಆ ಅತಿಥಿಗಳನ್ನು ಆದರದಿಂದ ತನ್ನ ಆಶ್ರಮಕ್ಕೆ ಕರೆದೊಯ್ದರು. ಅವರನ್ನು ಭಕ್ತಿಯಿಂದ ಪೂಜಿಸಿ, ಮಧುರವಚನಗಳನ್ನಾಡಿ, ಕಂದ, ಮೂಲ, ಫಲಗಳನ್ನು ಸಮರ್ಪಿಸಿದರು. ಅವು ಪ್ರಭುವಿಗೆ ತುಂಬಾ ರುಚಿಸಿದವು. (ಚೌ/೧-೪)

**ಸೋ – ಪ್ರಭು ಆಸನ ಆಸೀನ ಭರಿ ಲೋಚನ ಸೋಭಾ ನಿರಖಿ।**
**ಮುನಿಬರ ಪರಮ ಪ್ರಬೀನ ಜೋರಿ ಪಾನಿ ಅಸ್ತುತಿ ಕರತ ॥ ೩ ॥**

ಪ್ರಭುವು ಆಸನದಲ್ಲಿ ಮಂಡಿಸಿದ್ದನು. ಜ್ಞಾನಿಗಳಾದ ಅತ್ರಿಮಹಾಮುನಿಗಳು ಅವನ ಚೆಲುವನ್ನು ಕಣ್ತುಂಬಾ ನೋಡಿ, ಕೈಜೋಡಿಸಿಕೊಂಡು ಸ್ತುತಿಸತೊಡಗಿದರು. (ಸೋ/೩)

## ಅತ್ರಿಕೃತ ಶ್ರೀರಾಮಸ್ತುತಿ

**ಛಂ – ನಮಾಮಿ ಭಕ್ತ ವತ್ಸಲಂ। ಕೃಪಾಲು ಶೀಲ ಕೋಮಲಂ ॥**
**ಭಜಾಮಿ ತೇ ಪದಾಂಬುಜಂ। ಅಕಾಮಿನಾಂ ಸ್ವಧಾಮದಂ ॥ ೧ ॥**
**ನಿಕಾಮ ಶ್ಯಾಮ ಸುಂದರಂ। ಭವಾಂಬುನಾಥ ಮಂದರಂ ॥**
**ಪ್ರಫುಲ್ಲ ಕಂಜ ಲೋಚನಂ। ಮದಾದಿ ದೋಷ ಮೋಚನಂ ॥ ೨ ॥**
**ಪ್ರಲಂಬ ಬಾಹು ವಿಕ್ರಮಂ। ಪ್ರಭೋಽಪ್ರಮೇಯ ವೈಭವಂ ॥**
**ನಿಷಂಗ ಚಾಪ ಸಾಯಕಂ। ಧರಂ ತ್ರಿಲೋಕ ನಾಯಕಂ ॥ ೩ ॥**
**ದಿನೇಶ ವಂಶ ಮಂಡನಂ। ಮಹೇಶ ಚಾಪ ಖಂಡನಂ ॥**
**ಮುನೀಂದ್ರ ಸಂತ ರಂಜನಂ। ಸುರಾರಿ ವೃಂದ ಭಂಜನಂ ॥ ೪ ॥**
**ಮನೋಜ ವೈರಿ ವಂದಿತಂ। ಅಜಾದಿ ದೇವ ಸೇವಿತಂ ॥**
**ವಿಶುದ್ಧ ಬೋಧ ವಿಗ್ರಹಂ। ಸಮಸ್ತ ದೂಷಣಾಪಹಂ ॥ ೫ ॥**
**ನಮಾಮಿ ಇಂದಿರಾ ಪತಿಂ। ಸುಖಾಕರಂ ಸತಾಂ ಗತಿಂ ॥**
**ಭಜೇ ಸಶಕ್ತಿ ಸಾನುಜಂ। ಶಚೀ ಪತಿ ಪ್ರಿಯಾನುಜಂ ॥ ೬ ॥**
**ತ್ವದಂಘ್ರಿ ಮೂಲ ಯೇ ನರಾಃ। ಭಜಂತಿ ಹೀನ ಮತ್ಸರಾಃ ॥**
**ಪತಂತಿ ನೋ ಭವಾರ್ಣವೇ। ವಿತರ್ಕ ವೀಚಿ ಸಂಕುಲೇ ॥ ೭ ॥**
**ವಿವಿಕ್ತ ವಾಸಿನಃ ಸದಾ। ಭಜಂತಿ ಮುಕ್ತಯೇ ಮುದಾ ॥**
**ನಿರಸ್ಯ ಇಂದ್ರಿಯಾದಿಕಂ। ಪ್ರಯಾಂತಿ ತೇ ಗತಿಂ ಸ್ವಕಂ ॥ ೮ ॥**
**ತಮೇಕಮದ್ಭುತಂ ಪ್ರಭುಂ। ನಿರೀಹಮೀಶ್ವರಂ ವಿಭುಂ ॥**
**ಜಗದ್ಗುರುಂ ಚ ಶಾಶ್ವತಂ। ತುರೀಯಮೇವ ಕೇವಲಂ ॥ ೯ ॥**
**ಭಜಾಮಿ ಭಾವ ವಲ್ಲಭಂ। ಕುಯೋಗಿನಾಂ ಸುದುರ್ಲಭಂ ॥**
**ಸ್ವಭಕ್ತ ಕಲ್ಪ ಪಾದಪಂ। ಸಮಂ ಸುಸೇವ್ಯಮನ್ವಹಂ ॥ ೧೦ ॥**
**ಅನೂಪ ರೂಪ ಭೂಪತಿಂ। ನತೋಽಹಮುರ್ವಿಜಾ ಪತಿಂ ॥**
**ಪ್ರಸೀದ ಮೇ ನಮಾಮಿ ತೇ। ಪದಾಬ್ಜ ಭಕ್ತಿ ದೇಹಿ ಮೇ ॥ ೧೧ ॥**
**ಪಠಂತಿ ಯೇ ಸ್ತವಂ ಇದಂ। ನರಾದರೇಣ ತೇ ಪದಂ ॥**
**ವ್ರಜಂತಿ ನಾತ್ರ ಸಂಶಯಂ। ತ್ವದೀಯ ಭಕ್ತಿ ಸಂಯುತಾಃ ॥ ೧೨ ॥**

ಓ ಭಕ್ತವತ್ಸಲಾ! ಪರಮದಯಾಳಾ! ಕೋಮಲಸ್ವಭಾವ ಶೀಲಗಳುಳ್ಳವನೇ! ನಿಷ್ಕಾಮ ಪ್ರವೃತ್ತಿಯುಳ್ಳ ಪರಮಭಕ್ತರಿಗೆ ಪರಂಧಾಮವನ್ನು ಕರುಣಿಸುವವನೇ! ನಿನಗೆ ನಮಸ್ಕಾರಗಳು. ನಿನ್ನ ಚರಣಕಮಲಗಳನ್ನು ಭಜಿಸುತ್ತೇನೆ. ॥ ೧॥ ನೀನು ನಿತಾಂತ ಶ್ಯಾಮಸುಂದರನಾಗಿರುವೆ. ಭವಾಂಬುಧಿಯನ್ನು ಕಡೆಯುವ ಮಂದರ ಪರ್ವತವೇ! ವಿಕಸಿತ ಪದ್ಮಲೋಚನಾ! ಮದಾದಿ ದೋಷಗಳಿಂದ ಬಿಡಿಸಿ ಮುಕ್ತಿಯನ್ನು ಕರುಣಿಸುವವನಾಗಿರುವೆ. ॥ ೨॥ ಪ್ರಭೂ! ಆಜಾನುಬಾಹುವಾದ ನಿನ್ನ ಪರಾಕ್ರಮ, ಐಶ್ವರ್ಯ ಅಪ್ರಮೇಯಗಳು. ತೂಣೀರ ಧನುರ್ಬಾಣಗಳನ್ನು ಧರಿಸಿದ ನೀನು ಮೂರು ಲೋಕಗಳಿಗೂ ಒಡೆಯನು. ॥ ೩॥ ಸೂರ್ಯವಂಶಭೂಷಣಾ! ಶಿವಧನುರ್ಭಂಗ ಮಾಡಿದವನೇ! ಮುನೀಶ್ವರರಿಗೂ, ಸಾಧು-ಸಂತರಿಗೂ ಆನಂದದಾಯಕಾ! ನೀನು ದೇವತೆಗಳ ಶತ್ರುಗಳಾದ ಅಸುರ ಸಮೂಹವನ್ನು ನಾಶವಾಗಿಸುವವನಾಗಿರುವೆ. ॥ ೪॥ ನೀನು ಕಾಮಾರಿಯಾದ ಶಿವನಿಂದ ವಂದಿತನಾಗಿರುವೆ. ಬ್ರಹ್ಮಾದಿ ದೇವತೆಗಳಿಂದ ಸೇವಿಸಲ್ಪಡುವವನೇ! ವಿಶುದ್ಧ ಜ್ಞಾನ ಸ್ವರೂಪನೇ! ಸಮಸ್ತ ದೋಷಗಳನ್ನು ಕಳೆಯುವವನಾಗಿರುವೆ. ॥ ೫॥ ಸಕಲ ಸುಖಗಳ ಗಣಿಯೇ! ಸತ್ಪುರುಷರ ಏಕಮಾತ್ರ ಗತಿಯಾದ ಓ ಲಕ್ಷ್ಮೀಪತಿಯೇ! ನಾನು ನಿನಗೆ ನಮಿಸುತ್ತೇನೆ. ಹೇ ಶಚೀಪತಿ ಇಂದ್ರನ ಮುದ್ದುತಮ್ಮನಾದ ಉಪೇಂದ್ರನೇ! ಆದಿಶಕ್ತಿಯಾದ ಸೀತಾದೇವಿ ಹಾಗೂ ಸೋದರನಾದ ಲಕ್ಷ್ಮಣ ಸಮೇತನಾಗಿರುವ ನಿನ್ನನ್ನು ನಾನು ಭಜಿಸುತ್ತೇನೆ. ॥ ೬॥ ನಿರ್ಮತ್ಸರರಾಗಿ ನಿನ್ನ ಚರಣಕಮಲಗಳನ್ನು ಭಜಿಸುವವರು ತರ್ಕ-ವಿತರ್ಕರೂಪೀ ಸಂದೇಹ ತರಂಗಗಳಿಂದ ಕೂಡಿದ ಸಂಸಾರ ಸಮುದ್ರದಲ್ಲಿ ಬೀಳುವುದಿಲ್ಲ. ॥ ೭॥ ಮುಕ್ತಿಗಾಗಿ ಇಂದ್ರಿಯ ನಿಗ್ರಹಗೈದು ಮುದದಿಂದ ನಿನ್ನನ್ನು ಪ್ರಾರ್ಥಿಸುವ ಏಕಾಂತವಾಸಿಗಳು ಸ್ವಕೀಯಗತಿಯನ್ನು (ಸ್ವರೂಪಾನಂದವನ್ನು) ಪಡೆಯುತ್ತಾರೆ. ॥ ೮॥ ನಿರುಪಮಾನ ಪ್ರಭುವೂ, ಸರ್ವಾದ್ಭುತ ಸಮರ್ಥನೂ, ಇಚ್ಛಾರಹಿತನೂ, ಪರಮೇಶ್ವರನೂ, ಸರ್ವವ್ಯಾಪಕನೂ, ಜಗದ್ಗುರುವೂ, ಸನಾತನನೂ, ತ್ರಿಗುಣಾತೀತನೂ, ಕೇವಲ ನಿರಂಜನಸ್ವರೂಪನೂ ಆದ ನಿನಗೆ ನಮಸ್ಕಾರವು. ॥ ೯॥ ಹಾಗೆಯೇ ಭಾವಪ್ರಿಯನೂ, ಕುಯೋಗಿಗಳಿಗೆ ಅತ್ಯಂತ ದುರ್ಲಭನೂ, ತನ್ನ ಭಕ್ತರಪಾಲಿಗೆ ಕಲ್ಪವೃಕ್ಷನಾಗಿರುವವನೂ, ಪಕ್ಷಪಾತರಹಿತ ಸಮನೂ, ಸದಾಕಾಲ ಸುಖಕರಸೇವ್ಯನೂ ಆಗಿರುವ ನಿನ್ನನ್ನು ನಿರಂತರವೂ ನಾನು ಭಜಿಸುತ್ತೇನೆ. ॥ ೧೦॥ ಓ ಅನುಪಮ ಸುಂದರ ಭೂಪತಿಯೇ! ಜಾನಕೀನಾಥಾ! ನಿನಗೆ ನಮಸ್ಕರಿಸುತ್ತೇನೆ. ನನ್ನ ಮೇಲೆ ಪ್ರಸನ್ನನಾಗು. ನಾನು ನಿನಗೆ ಮಣಿಯುತ್ತೇನೆ. ನನಗೆ ನಿನ್ನ ಚರಣಗಳಲ್ಲಿ ಭಕ್ತಿಯನ್ನು ಕರುಣಿಸು. ॥ ೧೧॥ ಈ ಸ್ತೋತ್ರವನ್ನು ಆದರದಿಂದ ಪಠಿಸುವವರು, ನಿನ್ನ ಭಕ್ತಿಯಿಂದ ಕೂಡಿದವರಾಗಿ ನಿನ್ನ ಪರಮಪದವನ್ನು ಪಡೆಯುವರೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ॥ ೧೨॥

**ದೋ – ಬಿನತೀ ಕರಿ ಮುನಿ ನಾಇ ಸಿರು ಕಹ ಕರ ಜೋರಿ ಬಹೋರಿ ।**
**ಚರನ ಸರೋರುಹ ನಾಥ ಜನಿ ಕಬಹುँ ತಜೈ ಮತಿ ಮೋರಿ ॥ ೪ ॥**

ಹೀಗೆ ಪ್ರಾರ್ಥಿಸಿ ಅತ್ರಿಮಹಾಮುನಿಗಳು ತಲೆವಾಗಿ, ಕೈಜೋಡಿಸಿಕೊಂಡು ಹೇಳಿದರು – ಸ್ವಾಮಿ! ನನ್ನ ಬುದ್ಧಿಯು ನಿನ್ನ ಚರಣಗಳನ್ನು ಎಂದೂ ಬಿಡದಿರಲಿ. (ದೋ/೪)

## ಸೀತಾದೇವಿಗೆ ಅನುಸೂಯಾದೇವಿಯ ಉಪದೇಶ

**ಚೌ – ಅನುಸೂಯಾ ಕೇ ಪದ ಗಹಿ ಸೀತಾ । ಮಿಲೀ ಬಹೋರಿ ಸುಸೀಲ ಬಿನೀತಾ ॥**
**ರಿಷಿಪತಿನಿ ಮನ ಸುಖ ಅಧಿಕಾಈ । ಆಸಿಷ ದೇಇ ನಿಕಟ ಬೈಠಾಈ ॥ ೧ ॥**
**ದಿಬ್ಯ ಬಸನ ಭೂಷನ ಪಹಿರಾಏ । ಜೇ ನಿತ ನೂತನ ಅಮಲ ಸುಹಾಏ ॥**
**ಕಹ ರಿಷಿಬಧೂ ಸರಸ ಮೃದು ಬಾನೀ । ನಾರಿಧರ್ಮ ಕಛು ಬ್ಯಾಜ ಬಖಾನೀ ॥ ೨ ॥**
**ಮಾತು ಪಿತಾ ಭ್ರಾತಾ ಹಿತಕಾರೀ । ಮಿತಪ್ರದ ಸಬ ಸುನು ರಾಜಕುಮಾರೀ ॥**
**ಅಮಿತ ದಾನಿ ಭರ್ತಾ ಬಯದೇಹೀ । ಅಧಮ ಸೋ ನಾರಿ ಜೋ ಸೇವ ನ ತೇಹೀ ॥ ೩ ॥**
**ಧೀರಜ ಧರ್ಮ ಮಿತ್ರ ಅರು ನಾರೀ । ಆಪದ ಕಾಲ ಪರಿಖಿಅಹಿँ ಚಾರೀ ॥**
**ಬೃದ್ಧ ರೋಗಬಸ ಜಡ ಧನಹೀನಾ । ಅಂಧ ಬಧಿರ ಕ್ರೋಧೀ ಅತಿ ದೀನಾ ॥ ೪ ॥**
**ಐಸೇಹು ಪತಿ ಕರ ಕಿಏँ ಅಪಮಾನಾ । ನಾರಿ ಪಾವ ಜಮಪುರ ದುಖ ನಾನಾ ॥**
**ಏಕಇ ಧರ್ಮ ಏಕ ಬ್ರತ ನೇಮಾ । ಕಾಯँ ಬಚನ ಮನ ಪತಿ ಪದ ಪ್ರೇಮಾ ॥ ೫ ॥**
**ಜಗ ಪತಿಬ್ರತಾ ಚಾರಿ ಬಿಧಿ ಅಹಹೀँ । ಬೇದ ಪುರಾನ ಸಂತ ಸಬ ಕಹಹೀँ ॥**
**ಉತ್ತಮ ಕೇ ಅಸ ಬಸ ಮನ ಮಾಹೀँ । ಸಪನೇಹುँ ಆನ ಪುರುಷ ಜಗ ನಾಹೀँ ॥ ೬ ॥**

**ಮಧ್ಯಮ ಪರಪತಿ ದೇಖಇ ಕೈಸೇಂ। ಭ್ರಾತಾ ಪಿತಾ ಪುತ್ರ ನಿಜ ಜೈಸೇಂ॥**
**ಧರ್ಮ ಬಿಚಾರಿ ಸಮುಝಿ ಕುಲ ರಹಈ। ಸೋ ನಿಕಿಷ್ಟ ತ್ರಿಯ ಶ್ರುತಿ ಅಸ ಕಹಈ॥ ೭॥**
**ಬಿನು ಅವಸರ ಭಯ ತೇಂ ರಹ ಜೋಈ। ಜಾನೇಹು ಅಧಮ ನಾರಿ ಜಗ ಸೋಈ॥**
**ಪತಿ ಬಂಚಕ ಪರಪತಿ ರತಿ ಕರಈ। ರೌರವ ನರಕ ಕಲ್ಪ ಸತ ಪರಈ॥ ೮॥**
**ಛನ ಸುಖ ಲಾಗಿ ಜನಮ ಸತ ಕೋಟೀ। ದುಖ ನ ಸಮುಝ ತೆಹಿ ಸಮ ಕೋ ಖೋಟೀ॥**
**ಬಿನು ಶ್ರಮ ನಾರಿ ಪರಮ ಗತಿ ಲಹಈ। ಪತಿಬ್ರತ ಧರ್ಮ ಛಾಡಿ ಛಲ ಗಹಈ॥ ೯॥**
**ಪತಿ ಪ್ರತಿಕೂಲ ಜನಮ ಜಹಁ ಜಾಈ। ಬಿಧವಾ ಹೋಇ ಪಾಇ ತರುನಾಈ॥ ೧೦॥**

ಬಳಿಕ ಪರಮ ಶೀಲವತಿಯೂ, ವಿನಮ್ರಳೂ ಆದ ಸೀತಾದೇವಿಯು ಅತ್ರಿಮಹರ್ಷಿಗಳ ಪತ್ನೀ ಅನುಸೂಯಾದೇವಿಯ ಚರಣಗಳಿಗೆ ನಮಿಸಿದಳು. ಮುನಿಪತ್ನಿಯು ಹೆಚ್ಚಾಗಿ ಸಂತೋಷಗೊಂಡು ಸೀತೆಗೆ ಆಶೀರ್ವದಿಸಿ, ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡಳು. ಬಳಿಕ ಅವಳು ಸೀತಾದೇವಿಗೆ ನಿತ್ಯನೂತನವೂ, ನಿರ್ಮಲವೂ, ಮನೋಹರವೂ ಆದ ದಿವ್ಯ ವಸ್ತ್ರ ಆಭೂಷಣಗಳನ್ನು ತೊಡಿಸಿದಳು. ಮತ್ತೆ ಅನುಸೂಯಾದೇವಿಯು ಸೀತೆಯನ್ನು ನೆಪವಾಗಿಟ್ಟುಕೊಂಡು ಮೃದುಮಧುರ ವಚನಗಳಿಂದ ಕೆಲವು ಸ್ತ್ರೀಧರ್ಮಗಳನ್ನು ವಿವರಿಸಿದಳು. – ಎಲೈ ರಾಜಕುಮಾರಿ! ಕೇಳು. ತಾಯಿ-ತಂದೆ, ಅಣ್ಣ-ತಮ್ಮ ಇವರೆಲ್ಲರೂ ಹಿತೈಷಿಗಳೇ. ಆದರೆ ಇವರು ಒಂದು ಘಟ್ಟದವರೆಗೆ ಮಾತ್ರ ಸುಖನೀಡುವರು. ಆದರೆ ಪತಿಯು ಅಪರಿಮಿತ ಸುಖವನ್ನು ಕೊಡುವನು. ಅಷ್ಟೇ ಅಲ್ಲ, ಮೋಕ್ಷರೂಪೀ ಅಸೀಮ ಸುಖವನ್ನು ಕರುಣಿಸುವನು. ಇಂತಹ ಪತಿಯ ಸೇವೆಮಾಡದವಳು ನಿಜವಾಗಿ ಅಧಮಳು. ಆಪತ್ಕಾಲದಲ್ಲೇ ಧೈರ್ಯ, ಧರ್ಮ, ಮಿತ್ರ, ಹೆಂಡತಿ ಇವರ ಪರೀಕ್ಷೆ ಜರಗುವುದು. ಮುದುಕ, ರೋಗಿ, ಮೂರ್ಖ, ಬಡವ, ಕುರುಡ, ಕಿವುಡ, ಕ್ರೋಧಿ, ಅತ್ಯಂತದೀನ, ಇಂತಹ ಪತಿಯನ್ನೂ ಕೂಡ ಅವಮಾನಗೊಳಿಸುವ ಸ್ತ್ರೀಯು ನಾನಾವಿಧ ನರಕಯಾತನೆಗಳನ್ನು ಅನುಭವಿಸುತ್ತಾಳೆ. ತ್ರಿಕರಣಶುದ್ಧಿಯಾಗಿ ಪತಿಯ ಪಾದಗಳನ್ನು ಸೇವಿಸುವುದೇ ಸ್ತ್ರೀಗೆ ಏಕೈಕ ಧರ್ಮ, ವ್ರತ, ನೇಮವಾಗಿದೆ. ಪ್ರಪಂಚದಲ್ಲಿ ಪತಿವ್ರತೆಯರು ನಾಲ್ಕುವಿಧವಾಗಿ ಇರುತ್ತಾರೆ. ತನ್ನ ಪತಿಯಲ್ಲದೆ ಪರಪುರುಷರನ್ನು ಸ್ವಪ್ನದಲ್ಲಿಯೂ ಸ್ಮರಿಸದ ಸ್ತ್ರೀಯೇ 'ಉತ್ತಮ ಪತಿವ್ರತೆ' ಎಂದು ವೇದ, ಪುರಾಣ, ಸಾಧು-ಸಂತರು ಕೊಂಡಾಡುತ್ತಾರೆ. ಪರಪುರುಷನನ್ನು ತನ್ನ ಸ್ವಂತ ಸೋದರನಂತೆ, ತಂದೆಯಂತೆ, ಮಗನಂತೆ ಭಾವಿಸುವ ಸ್ತ್ರೀಯು ಮಧ್ಯದ ಶ್ರೇಣಿಯನ್ನು ಪಡೆದ ಪತಿವ್ರತೆ. ತನ್ನ ಧರ್ಮವನ್ನು ವಿಚಾರಮಾಡಿ, ತನ್ನ ಕುಲಮರ್ಯಾದೆಗಳನ್ನು ಪರಿಗಣಿಸಿ, ಮನೋನಿಗ್ರಹದಿಂದ ಇರುವ ಸ್ತ್ರೀಯು ಮೂರನೇ (ಅಧಮ) ಶ್ರೇಣಿಯವಳು ಎಂದು ವೇದಗಳು ಸಾರುತ್ತಿವೆ. ಅವಕಾಶ ದೊರೆಯದುದರಿಂದ ಇಲ್ಲವೇ ಭಯದಿಂದ ಪತಿವ್ರತೆಯಾಗಿರುವ ಸ್ತ್ರೀಯು ಪ್ರಪಂಚದಲ್ಲಿ ಅಧಮಾಧಮಳು ಎಂದು ತಿಳಿಯಬೇಕು. ಪತಿಗೆ ಮೋಸಮಾಡಿ ಪರಪುರುಷರೊಡನೆ ಬೆರೆಯುವ ಸ್ತ್ರೀಯು ನೂರು ಕಲ್ಪಗಳವರೆಗೆ ರೌರವಾದಿ ನರಕದಲ್ಲಿ ನರಳುತ್ತಾ ಇರುತ್ತಾಳೆ. ಕ್ಷಣಿಕ ಸುಖಕ್ಕಾಗಿ ಕೋಟಿ ಜನ್ಮದ ದುಃಖಗಳನ್ನು ತಂದುಕೊಳ್ಳುವ ಸ್ತ್ರೀಯು 'ಕುಲಟೆ' ಎಂದೆನಿಸುವಳು. ನಿಷ್ಕಪಟಳಾಗಿ ಪತಿವ್ರತಾಧರ್ಮವನ್ನು ಪಾಲಿಸುವವಳು ಪರಿಶ್ರಮವಿಲ್ಲದೆಯೇ ಪರಮಗತಿಯನ್ನು ಪಡೆಯುತ್ತಾಳೆ. ಪತಿಗೆ ಪ್ರತಿಕೂಲವಾಗಿ ನಡೆಯುವ ಹೆಣ್ಣು ಎಲ್ಲೇ ಹುಟ್ಟಿದರೂ ತುಂಬು ಯೌವನದಲ್ಲಿ ವಿಧವೆಯಾಗುತ್ತಾಳೆ. (ಚೌ/೧-೧೦)

**ಸೋ – ಸಹಜ ಅಪಾವನಿ ನಾರಿ ಪತಿ ಸೇವತ ಸುಭ ಗತಿ ಲಹಇ।**
**ಜಸು ಗಾವತ ಶ್ರುತಿ ಚಾರಿ ಅಜಹುঁ ತುಲಸಿಕಾ ಹರಿಹಿ ಪ್ರಿಯ॥ ೫ (ಕ)॥**
**ಸುನು ಸೀತಾ ತವ ನಾಮ ಸುಮಿರಿ ನಾರಿ ಪತಿಬ್ರತ ಕರಹಿಂ।**
**ತೋಹಿ ಪ್ರಾನಪ್ರಿಯ ರಾಮ ಕಹಿಉँ ಕಥಾ ಸಂಸಾರ ಹಿತ॥ ೫ (ಖ)॥**

ಸ್ತ್ರೀಯು ಪತಿಸೇವಾ ಪರಾಯಣಳಾಗಿ, ಅವನ ರಕ್ಷಣೆಯಲ್ಲಿದ್ದರೆ, ಅವಳ ಪವಿತ್ರತೆಯಲ್ಲಿ ಯಾವುದೇ ಕುಂದು ಬರಲಾರದು. ಇಲ್ಲದೆ ಹೋದರೆ ಪ್ರಕೃತಿಯನ್ನನುಸರಿಸಿ ಅವಳು ಪವಿತ್ರತೆಯನ್ನು ಕಳೆದುಕೊಳ್ಳುವಳು. ಪತಿಸೇವೆಯಿಂದಲೇ ಅವಳಿಗೆ ಸದ್ಗತಿ ದೊರೆಯುವುದು. ತನ್ನ ಪಾತಿವ್ರತ್ಯ ಪ್ರಭಾವದಿಂದಲೇ ತುಳಸಿಯು ಇಂದಿಗೂ ಕೂಡ ಶ್ರೀಹರಿಗೆ ಅತ್ಯಂತ ಪ್ರೀತಿಪಾತ್ರಳಾಗಿರುವಳು. ವೇದಗಳೂ ಅವಳ ಯಶೋಗಾನ ಮಾಡುತ್ತವೆ. ಸೀತೆ! ನಿನ್ನ ಹೆಸರೆತ್ತಿ ಸ್ತ್ರೀಯರು ಪಾತಿವ್ರತ್ಯಧರ್ಮವನ್ನು ಪಾಲಿಸುವರು. ನೀನು ಶ್ರೀರಾಮನಿಗೆ ಪ್ರಾಣಪ್ರಿಯಳು. ನಿನಗೂ ಶ್ರೀರಾಮನು ಪ್ರಾಣಕ್ಕಿಂತ ಹೆಚ್ಚು ಪ್ರಿಯನು. ಈ ಪತಿವ್ರತಾಧರ್ಮವನ್ನು ನಾನು ಲೋಕಹಿತಾರ್ಥವಾಗಿ ವಿವರಿಸಿರುವೆ. (ಸೋ/೫ ಕ, ಖ)

**ಚೌ – ಸುನಿ ಜಾನಕೀ ಪರಮ ಸುಖು ಪಾವಾ। ಸಾದರ ತಾಸು ಚರನ ಸಿರು ನಾವಾ॥**
**ತಬ ಮುನಿ ಸನ ಕಹ ಕೃಪಾನಿಧಾನಾ। ಆಯಸು ಹೋಇ ಜಾಉಂ ಬನ ಆನಾ॥ ೧ ॥**
**ಸಂತತ ಮೋ ಪರ ಕೃಪಾ ಕರೇಹೂ। ಸೇವಕ ಜಾನಿ ತಜೇಹು ಜನಿ ನೇಹೂ॥**
**ಧರ್ಮ ಧುರಂಧರ ಪ್ರಭು ಕೈ ಬಾನೀ। ಸುನಿ ಸಪ್ರೇಮ ಬೋಲೇ ಮುನಿ ಗ್ಯಾನೀ॥ ೨ ॥**
**ಜಾಸು ಕೃಪಾ ಅಜ ಸಿವ ಸನಕಾದೀ। ಚಹತ ಸಕಲ ಪರಮಾರಥ ಬಾದೀ॥**
**ತೇ ತುಮ್ಹ ರಾಮ ಅಕಾಮ ಪಿಆರೇ। ದೀನ ಬಂಧು ಮೃದು ಬಚನ ಉಚಾರೇ॥ ೩ ॥**
**ಅಬ ಜಾನೀ ಮೈಂ ಶ್ರೀ ಚತುರಾಈ। ಭಜೀ ತುಮ್ಹಹಿ ಸಬ ದೇವ ಬಿಹಾಈ॥**
**ಜೆಹಿ ಸಮಾನ ಅತಿಸಯ ನಹಿಂ ಕೋಈ। ತಾ ಕರ ಸೀಲ ಕಸ ನ ಅಸ ಹೋಈ॥ ೪ ॥**
**ಕೆಹಿ ಬಿಧಿ ಕಹೌಂ ಜಾಹು ಅಬ ಸ್ವಾಮೀ। ಕಹಹು ನಾಥ ತುಮ್ಹ ಅಂತರಜಾಮೀ॥**
**ಅಸ ಕಹಿ ಪ್ರಭು ಬಿಲೋಕಿ ಮುನಿ ಧೀರಾ। ಲೋಚನ ಜಲ ಬಹ ಪುಲಕ ಸರೀರಾ॥ ೫ ॥**

ಈ ಉಪದೇಶವನ್ನು ಕೇಳಿದ ಸೀತಾದೇವಿಯು ಪರಮಾನಂದಭರಿತಳಾಗಿ, ಅನಸೂಯಾದೇವಿಯ ಪಾದಗಳಿಗೆ ಆದರದಿಂದ ಮಣಿದಳು. ಆ ದಯಾನಿಧಿಯಾದ ಶ್ರೀರಾಮನು ಅತ್ರಿಮುನಿಗಳಲ್ಲಿ– ''ನಿಮ್ಮ ಅಪ್ಪಣೆಯಾದರೆ ಮುಂದಿನ ವನಕ್ಕೆ ಹೋಗುವೆವು. ನೀವು ನಿರಂತರ ನನ್ನ ಮೇಲೆ ಕೃಪೆಯಿಟ್ಟು, ತಮ್ಮ ಸೇವಕನೆಂದು ಬಗೆದು, ಸ್ನೇಹದೋರಿ ಕಾಪಾಡಿರಿ'' ಎಂದು ಬೇಡಿಕೊಂಡನು. ಧರ್ಮಧುರಂಧರನಾದ ಶ್ರೀರಾಮಚಂದ್ರನ ವಚನಗಳನ್ನು ಕೇಳಿ, ಜ್ಞಾನಿಯಾದ ಮುನೀಶ್ವರರು ಪ್ರೇಮದಿಂದ ಇಂತೆಂದರು – ''ಬ್ರಹ್ಮಾ, ಶಿವನು, ಸನಕಾದಿ ಸಕಲ ಬ್ರಹ್ಮಜ್ಞಾನಿಗಳು ನಿನ್ನ ಕೃಪೆಗಾಗಿ ಹಾತೊರೆಯುತ್ತಿರುವರು. ಹೇ ರಾಮಾ ! ಅಂತಹ ನಿಷ್ಕಾಮರಿಗೆ ನೀನು ಇಷ್ಟದೈವನಾಗಿರುವೆ. ದೀನಬಂಧುವೂ, ಭಗವಂತನೂ ಆಗಿದ್ದರೂ ನೀನು ಇಂತಹ ವಿನಯ ವಚನಗಳನ್ನು ನುಡಿಯುತ್ತಿರುವೆ. ಲಕ್ಷ್ಮೀದೇವಿಯ ಜಾಣತನ ಈಗ ನನಗೆ ಅರ್ಥವಾಯಿತು. ಅವಳು ಇತರ ಎಲ್ಲ ದೇವತೆಗಳನ್ನು ತೊರೆದು ಕೇವಲ ನಿನ್ನನ್ನೇ ವರಿಸಿದಳು. ನಿನ್ನಂತಹ ಸೌಶೀಲ್ಯಸಂಪನ್ನರು ಬೇರೆ ಯಾರೂ ಇಲ್ಲದಿರುವಾಗ, ನಿನ್ನಿಂದ ಅಧಿಕರು ಹೇಗೆ ಇರಬಲ್ಲರು? ಈ ವಿನಮ್ರಸ್ವಭಾವದಿಂದಲೇ ಎಲ್ಲರಿಗಿಂತಲೂ ನೀನು ಶ್ರೇಷ್ಠತಮನಾಗಿರುವೆ. ಪ್ರಭೂ ! 'ನೀನು ಹೋಗು' ಎಂದು ನಾನು ಯಾವ ಬಾಯಲ್ಲಿ ಹೇಳಲಿ? ಒಡೆಯಾ ! ನೀನು ಅಂತರ್ಯಾಮಿ ! ನೀನೇ ಹೇಳು'' ಎಂದು ಹೇಳಿ ಧೀರರಾದ ಮುನಿಗಳು ಪ್ರಭುವನ್ನು ನೋಡತೊಡಗಿದರು. ಅವರ ಕಣ್ಣುಗಳಿಂದ ಪ್ರೇಮಾಶ್ರುಗಳು ಧಾರಾಕಾರನಾಗಿ ಹರಿಯತೊಡಗಿದವು. ಶರೀರವು ರೋಮಾಂಚಿತವಾಯಿತು. (ಚೌ/೧-೫)

**ಛಂ – ತನ ಪುಲಕ ನಿರ್ಭರ ಪ್ರೇಮ ಪೂರನ ನಯನ ಮುಖ ಪಂಕಜ ದಿಏ।**
**ಮನ ಗ್ಯಾನ ಗುನ ಗೋತೀತ ಪ್ರಭು ಮೈಂ ದೀಖ ಜಪ ತಪ ಕಾ ಕಿಏ॥**
**ಜಪ ಜೋಗ ಧರ್ಮ ಸಮೂಹ ತೇಂ ನರ ಭಗತಿ ಅನುಪಮ ಪಾವಈ।**
**ರಘುಬೀರ ಚರಿತ ಪುನೀತ ನಿಸಿ ದಿನ ದಾಸ ತುಲಸೀ ಗಾವಈ॥**

ಅತ್ರಿ ಮಹಾಮುನಿವರ್ಯರು ಪ್ರೇಮಾಮೃತದಲ್ಲಿ ಮುಳುಗಿಹೋದರು. ಶರೀರ ಪುಳಕಗೊಂಡಿತು. ಪ್ರೇಮತುಂಬಿದ ಕಣ್ಣುಗಳು ಶ್ರೀರಾಮಚಂದ್ರನ ಮುಖಕಮಲದಲ್ಲಿ ನೆಟ್ಟವು. ಮನಸ್ಸಿಗೂ, ಜ್ಞಾನಕ್ಕೂ, ಗುಣಗಳಿಗೂ, ಇಂದ್ರಿಯಗಳಿಗೂ ಅತೀತನಾದ ಶ್ರೀಪ್ರಭುವಿನ ದರ್ಶನ ನನಗೆ ದೊರೆಯಲು ನಾನು ಗೈದಿರುವ ಜಪತಪಾನುಷ್ಠಾನಗಳಾದರೂ ಯಾವುವು? ಎಂದು ಅವರು ಮನದಲ್ಲೇ ಯೋಚಿಸಿದರು. ಮಾನವರು ಜಪ, ಯೋಗ, ಧರ್ಮಗಳನ್ನು ಆಚರಿಸುತ್ತಾ ಅನುಪಮವಾದ ಶ್ರೀರಾಮಭಕ್ತಿಯನ್ನು ಹೊಂದುತ್ತಾರೆ. ಅಂತಹ ರಘುವೀರನ ಪಾವನಚರಿತ್ರವನ್ನು ತುಳಸೀದಾಸರು ಅಹರ್ನಿಶಿ ಹಾಡುತ್ತಿರುತ್ತಾರೆ. (ಛಂದ)

**ದೋ – ಕಲಿಮಲ ಸಮನ ದಮನ ಮನ ರಾಮ ಸುಜಸ ಸುಖಮೂಲ।**
**ಸಾದರ ಸುನಹಿಂ ಜೆ ತಿನ್ಹ ಪರ ರಾಮ ರಹಹಿಂ ಅನುಕೂಲ॥ ೬ (ಕ) ॥**

ಶ್ರೀರಾಮನ ಸುಂದರ ಯಶಸ್ಸು ಕಲಿಮಲವನ್ನು ನಾಶಗೊಳಿಸುವಂತಹುದು. ಮನಸ್ಸನ್ನು ದಮನಗೊಳಿಸುವಂತಹುದು. ಎಲ್ಲ ಸುಖಗಳ ಮೂಲವು. ಅದನ್ನು ಆದರದಿಂದ ಕೇಳುವವರ ಮೇಲೆ ಶ್ರೀರಾಮನು ಪ್ರಸನ್ನನಾಗುವನು. (ದೋ/೬ ಕ)

**ಸೋ – ಕಠಿನ ಕಾಲ ಮಲ ಕೋಸ ಧರ್ಮ ನ ಗ್ಯಾನ ನ ಜೋಗ ಜಪ।**
**ಪರಿಹರಿ ಸಕಲ ಭರೋಸ ರಾಮಹಿ ಭಜಹಿಂ ತೇ ಚತುರ ನರ॥ ೬ (ಖ) ॥**

ಈ ಕಠಿಣ ಕಲಿಕಾಲವು ಪಾಪಗಳ ಭಂಡಾರವಾಗಿದೆ. ಇದರಲ್ಲಿ ಧರ್ಮವಾಗಲೀ, ಜ್ಞಾನವಾಗಲೀ, ಯೋಗವಾಗಲೀ, ಜಪವಾಗಲೀ ಇಲ್ಲವೇ ಇಲ್ಲ. ಆದ್ದರಿಂದ ಇತರ ಎಲ್ಲ ಆಸೆಗಳನ್ನು ತೊರೆದು, ಅನನ್ಯ ಭಕ್ತಿಯಿಂದ ಶ್ರೀರಾಮನನ್ನು ಭಜಿಸುವವರೇ ಕೃತಾರ್ಥರು, ಧನ್ಯರು. (ಸೋ/೬ ಖ)

**ಚೌ – ಮುನಿ ಪದ ಕಮಲ ನಾಇ ಕರಿ ಸೀಸಾ। ಚಲೇ ಬನಹಿ ಸುರ ನರ ಮುನಿ ಈಸಾ॥**
**ಆಗೇಂ ರಾಮ ಅನುಜ ಪುನಿ ಪಾಛೇಂ। ಮುನಿ ಬರ ಬೇಷ ಬನೇ ಅತಿ ಕಾಛೇಂ॥ ೧ ॥**
**ಉಭಯ ಬೀಚ ಶ್ರೀ ಸೋಹಇ ಕೈಸೀ। ಬ್ರಹ್ಮ ಜೀವ ಬಿಚ ಮಾಯಾ ಜೈಸೀ॥**
**ಸರಿತಾ ಬನ ಗಿರಿ ಅವಘಟ ಘಾಟಾ। ಪತಿ ಪಹಿಚಾನಿ ದೇಹಿಂ ಬರ ಬಾಟಾ ॥ ೨ ॥**
**ಜಹ್ ಜಹ್ ಜಾಹಿಂ ದೇವ ರಘುರಾಯಾ। ಕರಹಿಂ ಮೇಘ ತಹ್ ತಹ್ ನಭ ಛಾಯಾ॥**
**ಮಿಲಾ ಅಸುರ ಬಿರಾಧ ಮಗ ಜಾತಾ। ಆವತಹೀಂ ರಘುಬೀರ ನಿಪಾತಾ ॥ ೩ ॥**
**ತುರತಹಿಂ ರುಚಿರ ರೂಪ ತೇಹಿಂ ಪಾವಾ। ದೇಖಿ ದುಖೀ ನಿಜ ಧಾಮ ಪಠಾವಾ।**
**ಪುನಿ ಆಏ ಜಹ್ ಮುನಿ ಸರಭಂಗಾ। ಸುಂದರ ಅನುಜ ಜಾನಕೀ ಸಂಗಾ॥ ೪ ॥**

ದೇವತೆಗಳ, ಮುನಿಗಳ, ಮಾನವರ ಪ್ರಭುವಾದ ಶ್ರೀರಾಮಚಂದ್ರನು ಅತ್ರಿಮಹಾಮುನಿಗಳ ಚರಣಕಮಲಗಳಲ್ಲಿ ತಲೆವಾಗಿ ವನಾಂತರಕ್ಕೆ ಹೊರಟನು. ಮುಂದೆ ಶ್ರೀರಾಮ, ಹಿಂದೆ ಲಕ್ಷ್ಮಣ ಹೀಗೆ ಇಬ್ಬರೂ ಮುನಿವೇಷದಿಂದ ಕಂಗೊಳಿಸುತ್ತಿದ್ದಾರೆ. ಇಬ್ಬರ ನಡುವೆ ಜೀವ, ಬ್ರಹ್ಮರ ನಡುವೆ ಮಾಯೆ ಇರುವಂತೆ ಸೀತಾದೇವಿಯು ಶೋಭಿಸುತ್ತಿರುವಳು. ನದಿ, ವನ, ಪರ್ವತ, ದುರ್ಗಮವಾದ ಘಟ್ಟ ಇವೆಲ್ಲವೂ ತಮ್ಮ ಒಡೆಯನನ್ನು ಗುರುತಿಸಿ, ಅವನಿಗೆ ಮಾರ್ಗವನ್ನು ಸುಗಮವಾಗಿಸುತ್ತಿದ್ದವು. ಭಗವಾನ್ ಶ್ರೀರಾಮನು ಹೋದಲೆಲ್ಲ ಆಗಸದಲ್ಲಿ ಮೋಡಗಳು ಮುಸುಗಿ ನೆರಳು ಮಾಡಿಕೊಡುತ್ತಿದ್ದವು. ಮಾರ್ಗಮಧ್ಯದಲ್ಲಿ ವಿರಾಧನೆಂಬ ರಾಕ್ಷಸನು ಇದಿರಾದನು. ಶ್ರೀರಾಮನು ಅವನನ್ನು ಕೊಂದು ಹಾಕಿದನು. ಶ್ರೀರಾಮನ ಕೈಯಿಂದ ಮರಣವುಂಟಾದಕೂಡಲೇ ಅವನು ದಿವ್ಯ ಶರೀರವನ್ನು ಪಡೆದನು. ಆರ್ತನಾದ ಅವನನ್ನು ಶ್ರೀರಾಮಚಂದ್ರನು ತನ್ನ ಪರಂಧಾಮಕ್ಕೆ ಕಳಿಸಿದನು. ಬಳಿಕ ಪ್ರಭುವು ಸೀತಾಲಕ್ಷ್ಮಣರೊಡನೆ ಶರಭಂಗಮುನಿಯ ಆಶ್ರಮವನ್ನು ಸೇರಿದನು. (ಚೌ/೧-೪)

## ಶರಭಂಗ ಮುನಿಯ ದರ್ಶನ

**ದೋ – ದೇಖಿ ರಾಮ ಮುಖ ಪಂಕಜ ಮುನಿಬರ ಲೋಚನ ಭೃಂಗ।**
**ಸಾದರ ಪಾನ ಕರತ ಅತಿ ಧನ್ಯ ಜನ್ಮ ಸರಭಂಗ॥ ೭ ॥**

ಶ್ರೀರಾಮಚಂದ್ರನ ಮುಖಕಮಲ ಮಕರಂದವನ್ನು ಆ ಮುನಿವರನ ಲೋಚನಭೃಂಗಗಳು ಆಸ್ವಾದಿಸುತ್ತಾ ಆನಂದಿತರಾದರು. ಶರಭಂಗರ ಬಾಳು ಧನ್ಯವಾಯಿತು. (ದೋ/೭)

**ಚೌ – ಕಹ ಮುನಿ ಸುನು ರಘುಬೀರ ಕೃಪಾಲಾ। ಸಂಕರ ಮಾನಸ ರಾಜಮರಾಲಾ॥**
**ಜಾತ ರಹೇಉಂ ಬಿರಂಚಿ ಕೇ ಧಾಮಾ। ಸುನೇಉಂ ಶ್ರವನ ಬನ ಐಹಹಿಂ ರಾಮಾ॥ ೧ ॥**
**ಚಿತವತ ಪಂಥ ರಹೇಉಂ ದಿನ ರಾತೀ। ಅಬ ಪ್ರಭು ದೇಖಿ ಜುಡಾನೀ ಛಾತೀ॥**
**ನಾಥ ಸಕಲ ಸಾಧನ ಮೈಂ ಹೀನಾ। ಕೀನ್ಹೀ ಕೃಪಾ ಜಾನಿ ಜನ ದೀನಾ॥ ೨ ॥**
**ಸೋ ಕಛು ದೇವ ನ ಮೋಹಿ ನಿಹೋರಾ। ನಿಜ ಪನ ರಾಖೆಉ ಜನ ಮನ ಚೋರಾ॥**
**ತಬ ಲಗಿ ರಹಹು ದೀನ ಹಿತ ಲಾಗೀ। ಜಬ ಲಗಿ ಮಿಲೌಂ ತುಮ್ಹಹಿ ತನು ತ್ಯಾಗೀ॥ ೩ ॥**
**ಜೋಗ ಜಗ್ಯ ಜಪ ತಪ ಬ್ರತ ಕೀನ್ಹಾ। ಪ್ರಭು ಕಹ್ ದೇಇ ಭಗತಿ ಬರ ಲೀನ್ಹಾ॥**
**ಏಹಿ ಬಿಧಿ ಸರ ರಚಿ ಮುನಿ ಸರಭಂಗಾ। ಬೈಠೇ ಹೃದಯಂ ಛಾಡಿ ಸಬ ಸಂಗಾ॥ ೪ ॥**

ಶರಭಂಗ ಮಹಾಮುನಿಗಳು ನುಡಿದರು – ''ಓ ಕೃಪಾಳು, ರಘುವೀರಾ ! ಶಂಕರನ ಮನಸ್ಸೆಂಬ ಮಾನಸಸರೋವರದಲ್ಲಿ ವಿಹರಿಸುವ ರಾಜಹಂಸವೇ ! ಕೇಳು. ನಾನು ಬ್ರಹ್ಮಲೋಕಕ್ಕೆ ಹೋಗುತ್ತಿದ್ದೆ. ಅಷ್ಟರಲ್ಲಿ ಶ್ರೀರಾಮನು ಕಾಡಿಗೆ ಬಂದಿರುವನೆಂಬ

ಸುದ್ದಿ ಕಿವಿಗೆ ಬಿತ್ತು. ಅಂದಿನಿಂದ ನಾನು ಹಗಲು-ಇರುಳು ನಿನ್ನ ದಾರಿಯನ್ನು ಕಾಯುತ್ತಿದ್ದೇನೆ. ಈಗ ಪ್ರಭುವನ್ನು ಕಂಡು ನನ್ನ ಹೃದಯಕ್ಕೆ ಶಾಂತಿ ಲಭಿಸಿತು. ಪ್ರಭು ! ನಾನು ಯೋಗಸಾಧನೆಗಳನ್ನು ಅರಿಯೆನು. ಆದರೂ ನೀನು ನನ್ನನ್ನು ಸೇವಕನೆಂದು ತಿಳಿದು ನನ್ನ ಮೇಲೆ ಕೃಪೆ ಮಾಡಿರುವೆ. ದೇವಾ ! ಇದು ನೀನು ನನ್ನ ಮೇಲೆ ಪ್ರತ್ಯೇಕವಾಗಿ ಗೈದ ಅನುಗ್ರಹವಲ್ಲ. ಇದು ನಿನ್ನ ಸ್ವಭಾವವೇ. ಓ ಭಕ್ತಮಾನಸಚೋರಾ ! ಈ ವಿಧವಾಗಿ ಮಾಡಿ ನೀನು ನಿನ್ನ ಪ್ರತಿಜ್ಞೆಯನ್ನು ಪಾಲಿಸಿರುವೆ. ನಾನು ಈ ಶರೀರವು ತ್ಯಜಿಸಿ, ನಿನ್ನ ಧಾಮವನ್ನು ಸೇರುವವರೆಗೆ ಈ ದೀನನ ಉದ್ಧಾರಕ್ಕಾಗಿ ನೀನು ಇಲ್ಲೇ ವಿರಾಜಿಸಬೇಕು.'' ಹೀಗೆ ನುಡಿದು ಆ ಮುನಿಯು ತಾನು ಆಚರಿಸಿದ ಯಾಗ, ಯಜ್ಞ, ಜಪ, ತಪ, ವ್ರತಾದಿಗಳೆಲ್ಲವನ್ನು ಪ್ರಭುವಿಗೆ ಅರ್ಪಣೆಗೈದು, ಅದಕ್ಕೆ ಬದಲಾಗಿ ದುರ್ಲಭವಾದ ರಾಮಭಕ್ತಿಯ ವರವನ್ನು ಪಡೆದನು. ಈ ಪ್ರಕಾರವಾಗಿ ವರವನ್ನು ಪಡೆದು ಶರಭಂಗರು ಚಿತೆಯನ್ನು ನಿರ್ಮಿಸಿ, ಎಲ್ಲ ವಿಧವಾದ ಆಸಕ್ತಿಯನ್ನು ತೊರೆದು ಚಿತಾರೋಹಣಮಾಡಿ ಇಂತೆಂದರು – (ಚೌ/೧-೪)

**ದೋ – ಸೀತಾ ಅನುಜ ಸಮೇತ ಪ್ರಭು ನೀಲ ಜಲದ ತನು ಸ್ಯಾಮ।**
**ಮಮ ಹಿಯ್ँ ಬಸಹು ನಿರಂತರ ಸಗುನರೂಪ ಶ್ರೀರಾಮ ॥ ೮ ॥**

''ನೀಲಮೇಘಶ್ಯಾಮಾ ! ಸಗುಣಸ್ವರೂಪಾ ! ರಾಮಾ ! ಸೀತಾಲಕ್ಷ್ಮಣಸಹಿತನಾಗಿ ನೀನು ನನ್ನ ಹೃದಯದಲ್ಲಿ ವಿರಾಜಿಸು. (ದೋ/೮)

**ಚೌ – ಅಸ ಕಹಿ ಜೋಗ ಅಗಿನಿ ತನು ಜಾರಾ। ರಾಮ ಕೃಪಾँ ಬೈಕುಂಠ ಸಿಧಾರಾ ॥**
**ತಾತೇ ಮುನಿ ಹರಿ ಲೀನ ನ ಭಯಊ। ಪ್ರಥಮಹಿँ ಭೇದ ಭಗತಿ ಬರ ಲಯಊ॥ ೧ ॥**
**ರಿಷಿ ನಿಕಾಯ ಮುನಿಬರ ಗತಿ ದೇಖೀ। ಸುಖೀ ಭಏ ನಿಜ ಹೃದಯ್ँ ಬಿಸೇಷೀ ॥**
**ಅಸ್ತುತಿ ಕರಹಿँ ಸಕಲ ಮುನಿ ಬೃಂದಾ। ಜಯತಿ ಪ್ರನತ ಹಿತ ಕರುನಾ ಕಂದಾ ॥ ೨ ॥**
**ಪುನಿ ರಘುನಾಥ ಚಲೇ ಬನ ಆಗೇ। ಮುನಿಬರ ಬೃಂದ ಬಿಪುಲ ಸँಗ ಲಾಗೇ ॥**
**ಅಸ್ಥಿ ಸಮೂಹ ದೇಖಿ ರಘುರಾಯಾ। ಪೂಛೀ ಮುನಿನ್ಹ ಲಾಗಿ ಅತಿ ದಾಯಾ ॥ ೩ ॥**
**ಜಾನತಹೂँ ಪೂಛಿಅ ಕಸ ಸ್ವಾಮೀ। ಸಬದರಸೀ ತುಮ್ಹ ಅಂತರಜಾಮೀ ॥**
**ನಿಸಿಚರ ನಿಕರ ಸಕಲ ಮುನಿ ಖಾಏ। ಸುನಿ ರಘುಬೀರ ನಯನ ಜಲ ಛಾಏ ॥ ೪ ॥**

ಈ ವಿಧವಾಗಿ ಹೇಳಿ, ಶರಭಂಗ ಮಹಾಮುನಿಗಳು ಯೋಗಾಗ್ನಿಗೆ ತನ್ನ ಶರೀರವನ್ನು ಆಹುತಿಯಾಗಿಸಿ, ಶ್ರೀರಾಮಕೃಪೆಯಿಂದ ವೈಕುಂಠಕ್ಕೆ ತೆರಳಿದರು. ಮುನಿಯು ಮೊದಲೇ ಭೇದ ಭಕ್ತಿ (ದ್ವೈತಭಕ್ತಿ)ಯ ವರವನ್ನು ಪಡೆದಿದ್ದರಿಂದ ಭಗವಂತನಲ್ಲಿ ಐಕ್ಯರಾಗಲಿಲ್ಲ. ಮುನೀಶ್ವರರಾದ ಶರಭಂಗರ ದುರ್ಲಭವಾದ ಗತಿಯನ್ನು ಕಂಡು ಮುನಿಸಮೂಹವು ಆನಂದತುಂದಿಲವಾಯಿತು. ಅವರೆಲ್ಲರೂ ''ಶರಣಾಗತವತ್ಸಲಾ ! ಕರುಣಾಮಯಾ ! ಪ್ರಭೋ ! ನಿನಗೆ ಜಯವಾಗಲಿ'' ಎಂದು ಶ್ರೀರಾಮನನ್ನು ಸ್ತುತಿಸಿದರು. ಬಳಿಕ ಶ್ರೀರಾಮನು ಸೀತಾಲಕ್ಷ್ಮಣರೊಡನೆ ಮುಂದಿನವನಕ್ಕೆ ತೆರಳಿದನು. ಅನೇಕ ಮುನೀಶ್ವರರ ವೃಂದಗಳು ಅವನೊಡನೆ ಪ್ರಯಾಣಿಸುತ್ತಿದ್ದರು. ದಾರಿಯಲ್ಲಿ ಬಿದ್ದಿದ್ದ ಎಲುಬುಗಳ ರಾಶಿಯನ್ನು ಕಂಡು ರಘುನಾಥನಿಗೆ ಅತೀವ ದಯೆಉಂಟಾಗಿ 'ಇದು ಯಾರ ಎಲುಬುಗಳ ರಾಶಿ' ಎಂದು ಮುನಿಗಳ ಬಳಿ ಕೇಳಿದನು. ಆಗ ಮುನಿಗಳೆಂದರು – 'ಸ್ವಾಮಿ ! ನೀನು ಸರ್ವಜ್ಞನೂ, ಸರ್ವಾಂತರ್ಯಾಮಿಯೂ ಆಗಿರುವೆ. ಎಲ್ಲವೂ ತಿಳಿದರೂ ತಿಳಿಯದವರಂತೆ ನಮ್ಮನ್ನು ಕೇಳುವಿರಲ್ಲ ! ರಾಮಾ ! ರಾಕ್ಷಸರ ತಂಡಗಳು ಮುನಿಗಳನ್ನು ತಿಂದುಹಾಕಿದ ಈ ಎಲುಬುಗಳ ರಾಶಿಗಳು' ಎಂದು ಹೇಳಿದುದನ್ನು ಕೇಳುತ್ತಲೇ ಶ್ರೀರಾಮನ ಕಣ್ಣುಗಳು ಹನಿಗೂಡಿದವು. (ಚೌ/೧-೪)

## ಋಷಿಗಳಿಗೆ ಅಭಯಪ್ರದಾನ – ಸುತೀಕ್ಷ್ಣರ ದರ್ಶನ

**ದೋ – ನಿಸಿಚರ ಹೀನ ಕರಉँ ಮಹಿ ಭುಜ ಉಠಾಇ ಪನ ಕೀನ್ಹ।**
**ಸಕಲ ಮುನಿನ್ಹ ಕೇ ಆಶ್ರಮನ್ಹಿ ಜಾಇ ಜಾಇ ಸುಖ ದೀನ್ಹ ॥ ೯ ॥**

ಆಗ ಶ್ರೀರಾಮನು ಭುಜವೆತ್ತಿ ''ನಾನು ಈ ಪೃಥ್ವಿಯನ್ನು ರಾಕ್ಷಸರಿಂದ ರಹಿತವಾಗಿಸುವೆ'' ಎಂದು ಪ್ರತಿಜ್ಞೆಮಾಡಿದನು. ಅನಂತರ ಅವನು ಎಲ್ಲ ಮುನಿಗಳ ಆಶ್ರಮಗಳಿಗೂ ಹೋಗಿ ಅವರಿಗೆಲ್ಲ ತನ್ನ ದರ್ಶನದಿಂದ, ನಲ್ನುಡಿಗಳಿಂದ ಸುಖವನ್ನು ನೀಡಿದನು. (ದೋ/೯)

ಚೌ – ಮುನಿ ಅಗಸ್ತಿ ಕರ ಸಿಷ್ಯ ಸುಜಾನಾ। ನಾಮ ಸುತೀಛನ ರತಿ ಭಗವಾನಾ ॥
ಮನ ಕ್ರಮ ಬಚನ ರಾಮ ಪದ ಸೇವಕ। ಸಪನೆಹು ಆನ ಭರೋಸ ನ ದೇವಕ॥ ೧ ॥
ಪ್ರಭು ಆಗವನು ಶ್ರವನ ಸುನಿ ಪಾವಾ। ಕರತ ಮನೋರಥ ಆತುರ ಧಾವಾ ॥
ಹೇ ಬಿಧಿ ದೀನಬಂಧು ರಘುರಾಯಾ। ಮೋ ಸೇ ಸಠ ಪರ ಕರಿಹಹಿಂ ದಾಯಾ॥ ೨ ॥
ಸಹಿತ ಅನುಜ ಮೊಹಿ ರಾಮ ಗೊಸಾಈಂ। ಮಿಲಿಹಹಿಂ ನಿಜ ಸೇವಕ ಕೀ ನಾಈಂ॥
ಮೋರೇ ಜಿಯಂ ಭರೋಸ ದೃಢ ನಾಹೀಂ। ಭಗತಿ ಬಿರತಿ ನ ಗ್ಯಾನ ಮನ ಮಾಹೀಂ॥ ೩ ॥
ನಹಿಂ ಸತಸಂಗ ಜೋಗ ಜಪ ಜಾಗಾ। ನಹಿಂ ದೃಢ ಚರನ ಕಮಲ ಅನುರಾಗಾ॥
ಏಕ ಬಾನಿ ಕರುನಾನಿಧಾನ ಕೀ। ಸೋ ಪ್ರಿಯ ಜಾಕೇಂ ಗತಿ ನ ಆನ ಕೀ ॥ ೪ ॥
ಹೊಇಹೈಂ ಸುಫಲ ಆಜು ಮಮ ಲೋಚನ। ದೇಖಿ ಬದನ ಪಂಕಜ ಭವ ಮೋಚನ ॥
ನಿರ್ಭರ ಪ್ರೇಮ ಮಗನ ಮುನಿ ಗ್ಯಾನೀ। ಕಹಿ ನ ಜಾಇ ಸೋ ದಸಾ ಭವಾನೀ ॥ ೫ ॥
ದಿಸಿ ಅರು ಬಿದಿಸಿ ಪಂಥ ನಹಿಂ ಸೂಝಾ। ಕೋ ಮೈಂ ಚಲೆಉಂ ಕಹಾಂ ನಹಿಂ ಬೂಝಾ॥
ಕಬಹುಂಕ ಫಿರಿ ಪಾಛೇಂ ಪುನಿ ಜಾಈ। ಕಬಹುಂಕ ನೃತ್ಯ ಕರಇ ಗುನ ಗಾಈ॥ ೬ ॥
ಅಬಿರಲ ಪ್ರೇಮ ಭಗತಿ ಮುನಿ ಪಾಈ। ಪ್ರಭು ದೇಖೈಂ ತರು ಓಟ ಲುಕಾಈ॥
ಅತಿಸಯ ಪ್ರೀತಿ ದೇಖಿ ರಘುಬೀರಾ। ಪ್ರಗಟೇ ಹೃದಯಂ ಹರನ ಭವ ಭೀರಾ ॥ ೭ ॥
ಮುನಿ ಮಗ ಮಾಝ ಅಚಲ ಹೊಇ ಬೈಸಾ। ಪುಲಕ ಸರೀರ ಪನಸ ಫಲ ಜೈಸಾ ॥
ತಬ ರಘುನಾಥ ನಿಕಟ ಚಲಿ ಆಏ। ದೇಖಿ ದಸಾ ನಿಜ ಜನ ಮನ ಭಾಏ ॥ ೮ ॥
ಮುನಿಹಿ ರಾಮ ಬಹು ಭಾಂತಿ ಜಗಾವಾ। ಜಾಗ ನ ಧ್ಯಾನಜನಿತ ಸುಖ ಪಾವಾ ॥
ಭೂಪ ರೂಪ ತಬ ರಾಮ ದುರಾವಾ। ಹೃದಯಂ ಚತುರ್ಭುಜ ರೂಪ ದೆಖಾವಾ॥ ೯ ॥
ಮುನಿ ಅಕುಲಾಇ ಉಠಾ ತಬ ಕೈಸೇಂ। ಬಿಕಲ ಹೀನ ಮನಿ ಫನಿ ಬರ ಜೈಸೇಂ ॥
ಆಗೇಂ ದೇಖಿ ರಾಮ ತನ ಸ್ಯಾಮಾ। ಸೀತಾ ಅನುಜ ಸಹಿತ ಸುಖ ಧಾಮಾ ॥ ೧೦ ॥
ಪರೆಉ ಲಕುಟ ಇವ ಚರನನ್ಹಿ ಲಾಗೀ। ಪ್ರೇಮ ಮಗನ ಮುನಿಬರ ಬಡಭಾಗೀ॥
ಭುಜ ಬಿಸಾಲ ಗಹಿ ಲಿಏ ಉಠಾಈ। ಪರಮ ಪ್ರೀತಿ ರಾಖೇ ಉರ ಲಾಈ ॥ ೧೧ ॥
ಮುನಿಹಿ ಮಿಲತ ಅಸ ಸೋಹ ಕೃಪಾಲಾ। ಕನಕ ತರುಹಿ ಜನು ಭೇಂಟ ತಮಾಲಾ॥
ರಾಮ ಬದನು ಬಿಲೋಕ ಮುನಿ ಠಾಢಾ। ಮಾನಹುಂ ಚಿತ್ರ ಮಾಝ ಲಿಖಿ ಕಾಢಾ॥ ೧೨ ॥

ಸುತೀಕ್ಷ್ಣನೆಂಬುವವರು ಅಗಸ್ತ್ಯಮಹಾಮುನಿಯ ಶಿಷ್ಯರು. ಅವರು ಜ್ಞಾನಿಗಳೂ, ಭಕ್ತರೂ ಆಗಿದ್ದು, ತ್ರಿಕರಣಪೂರ್ವಕವಾಗಿ ಶ್ರೀರಾಮಪದ ಸೇವಕರು. ಅವರು ಕನಸುಮನಸಿನಲ್ಲಿಯೂ ಅನ್ಯದೇವತೆಗಳನ್ನು ಸ್ಮರಿಸಿದವರಲ್ಲ. ರಾಮಾಗಮನದ ವಾರ್ತೆಯನ್ನು ಕೇಳುತ್ತಲೇ, ದರ್ಶನೋತ್ಸುಕನಾಗಿ ಆತುರದಿಂದ ಓಡುತ್ತಾ ಮನದಲ್ಲೇ ಯೋಚಿಸಿದನು– ''ಅಯ್ಯೋ ವಿಧಿಯೇ ! ದೀನಬಂಧುವಾದ ಶ್ರೀರಾಮನು ನನ್ನಂತಹ ಅಲ್ಪನ ಮೇಲೂ ದಯೆದೋರುವನೇ? ಶ್ರೀರಾಮಲಕ್ಷ್ಮಣರು ನನ್ನನ್ನು ಸೇವಕನೆಂದು ಭಾವಿಸಿ ಭೇಟಿಯಾಗುವರೇ? ನನಗಂತೂ ಹಾಗೆ ದೃಢವಿಶ್ವಾಸ ಉಂಟಾಗುವುದಿಲ್ಲ. ಏಕೆಂದರೆ, ನನ್ನ ಮನಸ್ಸಿನಲ್ಲಿ ಭಕ್ತಿಯಾಗಲಿ, ಜ್ಞಾನವೈರಾಗ್ಯವಾಗಲೀ ಏನೂ ಇಲ್ಲ. ನಾನಂತೂ ಸತ್ಸಂಗವನ್ನಾಗಲೀ, ಯೋಗ, ಜಪ, ತಪ, ಯಜ್ಞವನ್ನಾಗಲೀ ಎಂದೂ ಮಾಡಿದವನಲ್ಲ. ಪ್ರಭುವಿನ ಚರಣಗಳಲ್ಲಿಯೂ ಕೂಡ ಅಚಲ ಅನುರಾಗವಿಲ್ಲ. 'ಅನನ್ಯ ಭಕ್ತಿಯಿಂದ ಕರುಣಾನಿಧಿಯಾದ ಆ ಪ್ರಭುವನ್ನು ಆಶ್ರಯಿಸುವವರು ಅವನಿಗೆ ಅತ್ಯಂತ ಪ್ರಿಯರಾಗುವರು' ಇದು ಅವನ ಸ್ವಭಾವವು.'' ಹೀಗೆ ಭಗವಂತನ ಈ ಸ್ವಭಾವವನ್ನು ಸ್ಮರಿಸುತ್ತಲೇ ಮುನಿಯು ಆನಂದಮಗ್ನನಾಗಿ ಪುನಃ ಅಂದುಕೊಂಡರು – ''ಆಹಾ ! ಸಂಸಾರಬಂಧನದಿಂದ ಬಿಡಿಸುವ ಪ್ರಭುವಿನ ಮುಖಕಮಲದ ದರ್ಶನದಿಂದ ಇಂದು ನನ್ನ ಕಣ್ಣುಗಳು ಸಾರ್ಥಕವಾದಾವು.'' ಶಿವನು ಹೇಳುತ್ತಾನೆ – ಭವಾನಿ ! ಜ್ಞಾನಿಯಾದ ಸುತೀಕ್ಷ್ಣಮುನಿಯು ಪ್ರೇಮದಲ್ಲಿ ಪೂರ್ಣವಾಗಿ ಮುಳುಗಿರುವನು. ಅವನ ತನ್ಮಯತೆಯು ವರ್ಣನಾತೀತವು. ಅವನು ದಿಶೆ, ವಿದಿಶೆ, ಮಾರ್ಗ ಎಲ್ಲವನ್ನೂ ಮರೆತು ಹೋಗಿರುವನು. ತಾನು ಯಾರು, ಎಲ್ಲಿಗೆ ಹೋಗುತ್ತಿದ್ದೇನೆ, ಎಂಬುದರ ಪರಿವೆಯೂ ಅವನಿಗಿರಲಿಲ್ಲ. ಅವನು ಒಮ್ಮೆ ಹಿಂದಿರುಗಿ ನಡೆಯತೊಡಗಿದರೆ, ಮತ್ತೊಮ್ಮೆ ಪುನಃ ತಿರುಗಿ ಹಿಂದಿನಂತೆ ನಡೆಯುವನು. ಒಮ್ಮೊಮ್ಮೆ ಪ್ರಭುವಿನ ಗುಣಗಳನ್ನು ನೆನೆನೆನೆದು ಕುಣಿಯುವನು. ಮುನಿಯು

ಭಕ್ತಿಪಾರವಶ್ಯದಲ್ಲಿ ಮುಳುಗಿಹೋದನು. ಪ್ರಭುರಾಮಚಂದ್ರನು ಮರದ ಮರೆಯಲ್ಲಿ ನಿಂತು ಮುನಿಯ ಪ್ರೇಮೋನ್ಮತ್ತ ಸ್ಥಿತಿಯನ್ನು ನೋಡುತ್ತಿರುವನು. ಭವಬಂಧನಗಳನ್ನು ಕಡಿದುಹಾಕುವ ಶ್ರೀರಾಮನು ಆ ಮುನಿಯ ಪ್ರೇಮಾತಿಶಯಕ್ಕೆ ಮುಗ್ಧನಾಗಿ ಅವನ ಹೃದಯದಲ್ಲಿ ಮೈದೋರಿದನು. ತನ್ನ ಹೃದಯದಲ್ಲಿ ಪ್ರಭುವನ್ನು ಕಂಡು ಸುತೀಕ್ಷ್ಣನು ಮಾರ್ಗಮಧ್ಯದಲ್ಲೇ ನಿಶ್ಚಲವಾಗಿ ಕುಳಿತುಬಿಟ್ಟನು. ಅವನ ಶರೀರವು ಪುಳಕಗೊಂಡು ಹಲಸಿನ ಹಣ್ಣಿನಂತೆ ರೋಮಾಂಚಿತವಾಯಿತು. ಆಗ ಶ್ರೀರಘುನಾಥನು ಆತನ ಬಳಿ ಸಾರಿದ. ತನ್ನ ಭಕ್ತನ ಪ್ರೇಮವಿಹ್ವಲಸ್ಥಿತಿಯನ್ನು ನೋಡಿ ಹೆಚ್ಚಾಗಿ ಹರ್ಷಗೊಂಡನು. ಮುನಿಯನ್ನು ಎಚ್ಚರಿಸಲು ಅನೇಕವಿಧದಿಂದ ಪ್ರಯತ್ನಿಸಿದನು. ಆದರೆ ಮುನಿಯು ಎಚ್ಚರಗೊಳ್ಳಲಿಲ್ಲ. ಏಕೆಂದರೆ, ಅವನು ಪ್ರಭುವಿನ ಧ್ಯಾನಸುಖದಲ್ಲಿ ಮುಳುಗಿದ್ದನು. ಆಗ ಶ್ರೀರಾಮನು ತನ್ನ ರಾಜರೂಪವನ್ನು ಮರೆಯಾಗಿಸಿ, ಚತುರ್ಭುಜರೂಪದಿಂದ ಪ್ರಕಟನಾದನು. ತನ್ನ ಇಷ್ಟಸ್ವರೂಪವು ಅಂತರ್ಧಾನವಾದುದನ್ನು ಕಂಡು ಮುನಿಯು ಮಣಿಯನ್ನು ಕಳಕೊಂಡ ಸರ್ಪದಂತೆ ವ್ಯಾಕುಲನಾಗಿ ಕಣ್ಣುಬಿಟ್ಟು ಎದ್ದುನಿಂತನು. ತನ್ನೆದುರಿಗೆ ಸೀತಾಲಕ್ಷ್ಮಣರೊಡಗೂಡಿದ ಶ್ಯಾಮಸುಂದರನೂ, ಸುಖಧಾಮನೂ ಆದ ಶ್ರೀರಾಮನನ್ನು ನೋಡಿದನು. ಹೆಚ್ಚಿನ ಭಾಗ್ಯಶಾಲಿಯಾದ ಸುತೀಕ್ಷ್ಣಮುನಿವರನು ಪ್ರೇಮಮಗ್ನನಾಗಿ ದಂಡಪ್ರಣಾಮಮಾಡಿ ಶ್ರೀರಾಮನ ಚರಣಗಳಲ್ಲಿ ಹೊರಳಾಡಿದನು. ಶ್ರೀರಾಮಚಂದ್ರನು ಆತನನ್ನು ಎಬ್ಬಿಸಿ ಪ್ರೇಮದಿಂದ ತನ್ನ ವಿಶಾಲಭುಜಗಳಿಂದ ಅಪ್ಪಿಕೊಂಡನು. ಕೃಪಾಳುವಾದ ರಾಮನು ಮುನಿಯನ್ನು ಆಲಿಂಗಿಸಿಕೊಂಡದ್ದು, ಸ್ವರ್ಣವೃಕ್ಷವನ್ನು ತಮಾಲವೃಕ್ಷವು ತಬ್ಬಿಕೊಂಡಂತಿತ್ತು. ಮುನಿಯು ಮರವಟ್ಟು ನಿಂತು ನಿರ್ನಿಮೇಷ ನಯನಗಳಿಂದ ಶ್ರೀರಾಮನ ವದನವನ್ನು ನೋಡುತ್ತಿದ್ದನು. ಅವನ ಸ್ಥಿತಿ – ಚಿತ್ತಾರ ಬರೆದಂತಿತ್ತು. (ಚೌ/೧-೧೨)

**ದೋ – ತಬ ಮುನಿ ಹೃದಯ್ ಧೀರ ಧರಿ ಗಹಿ ಪದ ಬಾರಹಿಂ ಬಾರ ।**
**ನಿಜ ಆಶ್ರಮ ಪ್ರಭು ಆನಿ ಕರಿ ಪೂಜಾ ಬಿಬಿಧ ಪ್ರಕಾರ ॥ ೧೦ ॥**

ಅನಂತರ ಮುನಿಯು ಧೈರ್ಯತಳೆದು ಪದೇ-ಪದೇ ಪ್ರಭುಪಾದಗಳಿಗೆ ವಂದಿಸುತ್ತಿರುವನು. ಮತ್ತೆ ಸ್ವಾಮಿಯನ್ನು ತನ್ನ ಆಶ್ರಮಕ್ಕೆ ಕರೆತಂದು ಅನೇಕ ವಿಧದಿಂದ ಪೂಜಿಸಿದನು. (ದೋ/೧೦)

**ಚೌ –** ಕಹ ಮುನಿ ಪ್ರಭು ಸುನು ಬಿನತೀ ಮೋರೀ । ಅಸ್ತುತಿ ಕರೌ ಕವನ ಬಿಧಿ ತೋರೀ ॥
ಮಹಿಮಾ ಅಮಿತ ಮೋರಿ ಮತಿ ಥೋರೀ । ರಬಿ ಸನ್ಮುಖ ಖದ್ಯೋತ ಅಂಜೋರೀ ॥ ೧ ॥
ಶ್ಯಾಮ ತಾಮರಸ ದಾಮ ಶರೀರಂ । ಜಟಾ ಮುಕುಟ ಪರಿಧನ ಮುನಿಚೀರಂ ॥
ಪಾಣಿ ಚಾಪ ಶರ ಕಟಿ ತೂಣೀರಂ । ನೌಮಿ ನಿರಂತರ ಶ್ರೀರಘುವೀರಂ ॥ ೨ ॥
ಮೋಹ ವಿಪಿನ ಘನ ದಹನ ಕೃಶಾನುಃ । ಸಂತ ಸರೋರುಹ ಕಾನನ ಭಾನುಃ ॥
ನಿಶಿಚರ ಕರಿ ಬರೂಥ ಮೃಗರಾಜಃ । ತ್ರಾತು ಸದಾ ನೋ ಭವ ಖಗ ಬಾಜಃ ॥ ೩ ॥
ಅರುಣ ನಯನ ರಾಜೀವ ಸುವೇಶಂ । ಸೀತಾ ನಯನ ಚಕೋರ ನಿಶೇಶಂ ॥
ಹರ ಹೃದಿ ಮಾನಸ ಬಾಲ ಮರಾಲಂ । ನೌಮಿ ರಾಮ ಉರ ಬಾಹು ವಿಶಾಲಂ ॥ ೪ ॥
ಸಂಶಯ ಸರ್ಪ ಗ್ರಸನ ಉರಗಾದಃ । ಶಮನ ಸುಕರ್ಕಶ ತರ್ಕ ವಿಷಾದಃ ॥
ಭವ ಭಂಜನ ರಂಜನ ಸುರ ಯೂಥಃ । ತ್ರಾತು ಸದಾ ನೋ ಕೃಪಾವರೂಥಃ ॥ ೫ ॥
ನಿರ್ಗುಣ ಸಗುಣ ವಿಷಮ ಸಮ ರೂಪಂ । ಜ್ಞಾನ ಗಿರಾ ಗೋತೀತಮನೂಪಂ ॥
ಅಮಲಮಖಿಲಮನವದ್ಯಮಪಾರಂ । ನೌಮಿ ರಾಮ ಭಂಜನ ಮಹಿ ಭಾರಂ ॥ ೬ ॥
ಭಕ್ತ ಕಲ್ಪಪಾದಪ ಆರಾಮಃ । ತರ್ಜನ ಕ್ರೋಧ ಲೋಭ ಮದ ಕಾಮಃ ॥
ಅತಿ ನಾಗರ ಭವ ಸಾಗರ ಸೇತುಃ । ತ್ರಾತು ಸದಾ ದಿನಕರ ಕುಲ ಕೇತುಃ ॥ ೭ ॥
ಅತುಲಿತ ಭುಜ ಪ್ರತಾಪ ಬಲ ಧಾಮಃ । ಕಲಿ ಮಲ ವಿಪುಲ ವಿಭಂಜನ ನಾಮಃ ॥
ಧರ್ಮ ವರ್ಮ ನರ್ಮದ ಗುಣ ಗ್ರಾಮಃ । ಸಂತತ ಶಂ ತನೋತು ಮಮ ರಾಮಃ ॥ ೮ ॥
ಜದಪಿ ಬಿರಜ ಬ್ಯಾಪಕ ಅಬಿನಾಸೀ । ಸಬ ಕೇ ಹೃದಯ್ ನಿರಂತರ ಬಾಸೀ ॥
ತದಪಿ ಅನುಜ ಶ್ರೀ ಸಹಿತ ಖರಾರೀ । ಬಸತು ಮನಸಿ ಮಮ ಕಾನನಚಾರೀ ॥ ೯ ॥
ಜೇ ಜಾನಹಿಂ ತೇ ಜಾನಹುಂ ಸ್ವಾಮೀ । ಸಗುನ ಅಗುನ ಉರ ಅಂತರಜಾಮೀ ॥
ಜೋ ಕೋಸಲ ಪತಿ ರಾಜಿವ ನಯನಾ । ಕರಉ ಸೊ ರಾಮ ಹೃದಯ ಮಮ ಅಯನಾ ॥ ೧೦ ॥

**ಅಸ ಅಭಿಮಾನ ಜಾಇ ಜನಿ ಭೋರೇ। ಮೈಂ ಸೇವಕ ರಘುಪತಿ ಪತಿ ಮೋರೇ॥**
**ಸುನಿ ಮುನಿ ಬಚನ ರಾಮ ಮನ ಭಾಏ। ಬಹುರಿ ಹರಷಿ ಮುನಿಬರ ಉರ ಲಾಏ॥ ೧೧ ॥**
**ಪರಮ ಪ್ರಸನ್ನ ಜಾನು ಮುನಿ ಮೋಹೀ। ಜೋ ಬರ ಮಾಗಹು ದೇಉಁ ಸೊ ತೋಹೀ॥**
**ಮುನಿ ಕಹ ಮೈಂ ಬರ ಕಬಹುಁ ನ ಜಾಚಾ। ಸಮುಝಿ ನ ಪರಇ ಝೂಠ ಕಾ ಸಾಚಾ॥ ೧೨ ॥**
**ತುಮ್ಹಹಿ ನೀಕ ಲಾಗೈ ರಘುರಾಈ। ಸೋ ಮೊಹಿ ದೇಹು ದಾಸ ಸುಖದಾಈ॥**
**ಅಬಿರಲ ಭಗತಿ ಬಿರತಿ ಬಿಗ್ಯಾನಾ। ಹೋಹು ಸಕಲ ಗುನ ಗ್ಯಾನ ನಿಧಾನಾ॥ ೧೩ ॥**
**ಪ್ರಭು ಜೋ ದೀನ್ಹ ಸೊ ಬರು ಮೈಂ ಪಾವಾ। ಅಬ ಸೋ ದೇಹು ಮೋಹಿ ಜೋ ಭಾವಾ॥ ೧೪ ॥**

ಮುನಿಯು ಬಿನ್ನವಿಸಿಕೊಂಡನು – ''ಪ್ರಭೂ ! ನನ್ನ ಬಿನ್ನಹವನ್ನು ಲಾಲಿಸು. ನಾನು ಯಾವ ರೀತಿಯಲ್ಲಿ ನಿನ್ನನ್ನು ಸ್ತುತಿಸಲಿ? ನಿನ್ನ ಮಹಿಮೆಯು ಅಪಾರವಾದುದು. ಸೂರ್ಯನ ಎದುರಿಗೆ ಮಿಣುಕುಹುಳವಿರುವಂತೆ ನನ್ನ ಬುದ್ಧಿಯು ಅಲ್ಪವಾದುದು. ನೀಲಕಮಲಗಳ ಮಾಲೆಯಂತೆ ಶ್ಯಾಮಲಶರೀರವುಳ್ಳವನೇ ! ತಲೆಯಲ್ಲಿ ಜಟಾಜೂಟವನ್ನು, ಶರೀರದಲ್ಲಿ ವಲ್ಕಲಗಳನ್ನು ಧರಿಸಿದ, ಕೈಯಲ್ಲಿ ಧನುರ್ಬಾಣಗಳನ್ನೂ ಧರಿಸಿದ, ಕಟಿಯಲ್ಲಿ ಬತ್ತಳಿಕೆಯನ್ನು ಬಿಗಿದುಕೊಂಡಿರುವ ಓ ಸ್ವಾಮಿಯೇ ನಿನಗೆ ನಾನು ನಿರಂತರವಾಗಿ ನಮಿಸುತ್ತಿದ್ದೇನೆ. ಘನವಾದ ಮೋಹವಿಪಿನವನ್ನು ಸುಡುವ ಅಗ್ನಿಯಂತಿರುವವನೇ ! ಸಂತರೆಂಬ ಕಮಲಗಳನ್ನು ಅರಳಿಸುವ ಭಾಸ್ಕರನೇ ! ರಾಕ್ಷಸರೆಂಬ ಕರಿಸಮೂಹಕ್ಕೆ ಮೃಗರಾಜನಂತಿರುವವನೇ ! ಭವವೆಂಬ ಪಕ್ಷಿಗಳನ್ನು ಕೊಲ್ಲುವ ಗಿಡುಗನಂತಿರುವವನೇ ! ನಿರಂತರವಾಗಿ ನನ್ನನ್ನು ಕಾಪಾಡು. ಕೆಂದಾವರೆಯಂತಿರುವ ಕಣ್ಣುಗಳುಳ್ಳವನೇ ! ಸುಂದರವೇಷ ಧರಿಸಿದವನೇ ! ಸೀತಾನಯನ ಚಕೋರಚಂದ್ರನೇ ! ಶಿವನ ಹೃದಯರೂಪೀ ಮಾನಸಸರೋವರದಲ್ಲಿ ಸಂಚರಿಸುವ ಬಾಲಹಂಸವೇ ! ವಿಶಾಲವಕ್ಷಸ್ಥಳವನ್ನೂ, ದೀರ್ಘವಾದ ಬಾಹುಗಳನ್ನು ಹೊಂದಿದವನಾದ ಶ್ರೀರಾಮಚಂದ್ರಾ ! ನಿನಗೆ ನಾನು ನಮಿಸುತ್ತೇನೆ. ಸಂದೇಹವೆಂಬ ಸರ್ಪವನ್ನು ನುಂಗುವ ಗರುಡನೇ ! ಕಠೋರ ತರ್ಕದಿಂದ ಉಂಟಾಗುವ ವಿಷಾದವನ್ನು ಶಮನಗೊಳಿಸುವವನೇ ! ಭವಭಂಜನನೇ ! ದೇವತೆಗಳ ಗುಂಪಿಗೆ ಆನಂದವನ್ನು ಕೊಡುವವನೇ ! ಕೃಪಾಸಮೂಹನಾದ ಶ್ರೀರಾಮಾ ! ಸದಾಕಾಲ ನನ್ನನ್ನು ಕಾಪಾಡು. ನಿರ್ಗುಣ, ಸಗುಣ, ವಿಷಮ, ಸಮ ಮೊದಲಾದ ಎಲ್ಲಸ್ವರೂಪನೇ ! ಜ್ಞಾನ, ವಾಣಿ ಹಾಗೂ ಇಂದ್ರಿಯಗಳಿಗೆ ಅತೀತನೇ ! ಓ ಅನುಪಮಾ, ನಿರ್ಮಲಾ, ಸಂಪೂರ್ಣದೋಷರಹಿತನೇ, ಅನಂತನೇ, ಭೂಭಾರವನ್ನು ಇಳುಹುವಂತಹ ಶ್ರೀರಾಮಚಂದ್ರಾ ! ನಾನು ನಿನಗೆ ನಮಸ್ಕರಿಸುತ್ತಿದ್ದೇನೆ. ಭಕ್ತರಿಗೆ ಕಲ್ಪವೃಕ್ಷವನದಂತೆ ಸುಖಗಳನ್ನು ನೀಡುವವನೇ ! ಕಾಮಕ್ರೋಧ ಲೋಭಮದಗಳನ್ನು ಓಡಿಸುವವನೂ, ಸರ್ವ ಸಮರ್ಥನೂ, ಭವಸಾಗರಕ್ಕೆ ಸೇತುವಿನಂತಿರುವವನೂ, ಸೂರ್ಯವಂಶಕ್ಕೆ ಧ್ವಜದಂತಿರುವ ಶ್ರೀರಾಮಾ, ನನ್ನನ್ನು ಕಾಪಾಡು. ಅತುಲನೀಯ ಭುಜಬಲ ಪ್ರತಾಪಿಯೂ, ಬಲಧಾಮನೂ, ಕಲಿಮಲದ ರಾಶಿಯನ್ನು ನಾಶಪಡಿಸುವ ನಾಮವುಳ್ಳವನೂ, ಧರ್ಮರಕ್ಷಕನೂ, ಆನಂದವನ್ನುಂಟುಮಾಡುವ ಗುಣಗಳುಳ್ಳವನೂ ಆದ ಶ್ರೀರಾಮನು ನಿರಂತರ ನನಗೆ ಆನಂದವನ್ನು ಕೊಡು. ನೀನು ನಿರ್ಮಲನೂ, ವ್ಯಾಪಕನೂ, ಅವಿನಾಶಿಯೂ ಎಲ್ಲರ ಹೃದಯದಲ್ಲಿಯೂ ನಿರಂತರ ನೆಲೆಸಿರುವನಾದರೂ ಹೇ ಖರಾರೀ ! ಸೀತಾಲಕ್ಷ್ಮಣರೊಂದಿಗೆ ವನದಲ್ಲಿ ಸಂಚರಿಸುವ ನೀನು ಇದೇ ರೂಪದಿಂದ ನನ್ನ ಹೃದಯದಲ್ಲಿ ನೆಲೆಸು. ಸ್ವಾಮಿ ! ನಿನ್ನನ್ನು ಸಗುಣನೆಂದೂ, ನಿರ್ಗುಣನೆಂದೂ, ಅಂತರ್ಯಾಮಿ ಎಂದೂ ತಿಳಿಯುವವರು ಹಾಗೆಯೇ ತಿಳಿದುಕೊಳ್ಳಲಿ. ಆದರೆ ಕೋಸಲಪತಿಯೂ, ಕಮಲನಯನನೂ ಆದ ಶ್ರೀರಾಮಾ, ನೀನು ನನ್ನ ಹೃದಯವನ್ನು ತನ್ನ ಮನೆಯಾಗಿಸಿಕೊಂಡು ವಾಸಿಸು. 'ಶ್ರೀರಾಮನು ನನ್ನ ಒಡೆಯ, ನಾನು ಅವನ ಸೇವಕ' ಎಂಬ ಪ್ರೇಮಾಭಿಮಾನವು ನನ್ನಿಂದ ಎಂದಿಗೂ ತೊಲಗದಿರಲಿ. ಮುನಿವಚನಗಳನ್ನು ಕೇಳಿದ ಶ್ರೀರಾಮನು ಅತ್ಯಂತ ಪ್ರಸನ್ನನಾಗಿ, ಸಂತೋಷದಿಂದ ಆ ಮುನಿಶ್ರೇಷ್ಠನನ್ನು ಎದೆಗಪ್ಪಿಕೊಂಡು ಇಂತೆಂದನು – ''ಎಲೈ ಮುನಿಯೇ ! ನಾನು ಪ್ರಸನ್ನನಾಗಿದ್ದೇನೆ. ಬೇಕಾದವರವನ್ನು ಬೇಡು, ನೀಡುತ್ತೇನೆ. ಆಗ ಸುತೀಕ್ಷ್ಣರು ಹೇಳಿದರು – ''ಪ್ರಭೂ ! ನಾನು ಎಂದೂ ವರ ಬೇಡಿದವನಲ್ಲ. ಏನು ಬೇಡುವುದು, ಬಿಡುವುದು, ಸತ್ಯ ಯಾವುದು – ಮಿಥ್ಯೆ ಯಾವುದು? ನನಗೆ ತಿಳಿಯದು. ಆದ್ದರಿಂದ ದಾಸರಿಗೆ ಸುಖವನ್ನು ನೀಡುವ ಓ ರಾಮಚಂದ್ರ ಪ್ರಭೂ ! ನಿನಗೆ ಇಷ್ಟವಾದುದನ್ನು ನನಗೆ ಕರುಣಿಸು.' ಆಗ ಶ್ರೀರಾಮನು ಹೇಳಿದ – 'ಮುನಿವರ್ಯ ! ನೀನು ಪ್ರಗಾಢ ಭಕ್ತಿ, ವೈರಾಗ್ಯ, ವಿಜ್ಞಾನ, ಸಮಸ್ತ ಗುಣ ಹಾಗೂ ಜ್ಞಾನದ ನಿಧಿಯಾಗು.'' ಮುನಿ ನುಡಿದನು – ''ಪ್ರಭು ಕರುಣಿಸಿದ ವರವನ್ನು ನಾನು ಆಗಲೇ ಪಡೆದುಬಿಟ್ಟಿದ್ದೇನೆ. ಈಗ ನನಗೆ ಇಷ್ಟವಾದ ವರವನ್ನು ಕರುಣಿಸು.' (ಚೌ/೧-೧೪)

**ದೋ – ಅನುಜ ಜಾನಕೀ ಸಹಿತ ಪ್ರಭು ಚಾಪ ಬಾನ ಧರ ರಾಮ ।**
**ಮಮ ಹಿಯ ಗಗನ ಇಂದು ಇವ ಬಸಹು ಸದಾ ನಿಹಕಾಮ ॥ ೧೧ ॥**

ಪ್ರಭೂ ! ಶ್ರೀರಾಮಾ ! ನೀನು ಸೀತಾಲಕ್ಷ್ಮಣರೊಡಗೂಡಿ, ಧನುರ್ಬಾಣಗಳನ್ನು ಧರಿಸಿ, ನನ್ನ ನಿಷ್ಕಾಮವಾದ ಹೃದಯಾಕಾಶದಲ್ಲಿ ಚಂದ್ರನಂತೆ ಸ್ಥಿರವಾಗಿ ಶೋಭಿಸುತ್ತಿರು. (ದೋ/೧೧)

## ಅಗಸ್ತ್ಯಾಶ್ರಮಕ್ಕೆ ಭೇಟಿ

**ಚೌ – ಏವಮಸ್ತು ಕರಿ ರಮಾನಿವಾಸಾ । ಹರಷಿ ಚಲೇ ಕುಂಭಜ ರಿಷಿ ಪಾಸಾ ॥**
**ಬಹುತ ದಿವಸ ಗುರ ದರಸನು ಪಾಏಁ । ಭಏ ಮೋಹಿ ಏಹಿ ಆಶ್ರಮ ಆಏಁ ॥ ೧ ॥**
**ಅಬ ಪ್ರಭು ಸಂಗ ಜಾಉಁ ಗುರ ಪಾಹೀಂ । ತುಮ್ಹ ಕಹಁ ನಾಥ ನಿಹೋರಾ ನಾಹೀಂ ॥**
**ದೇಖಿ ಕೃಪಾನಿಧಿ ಮುನಿ ಚತುರಾಈ । ಲಿಏ ಸಂಗ ಬಿಹಸೇ ದ್ವೌ ಭಾಈ ॥ ೨ ॥**
**ಪಂಥ ಕಹತ ನಿಜ ಭಗತಿ ಅನೂಪಾ । ಮುನಿ ಆಶ್ರಮ ಪಹುँಚೇ ಸುರಭೂಪಾ ॥**
**ತುರತ ಸುತೀಛನ ಗುರ ಪಹಿಂ ಗಯಊ । ಕರಿ ದಂಡವತ ಕಹತ ಅಸ ಭಯಊ ॥ ೩ ॥**
**ನಾಥ ಕೋಸಲಾಧೀಸ ಕುಮಾರಾ । ಆಏ ಮಿಲನ ಜಗತ ಆಧಾರಾ ॥**
**ರಾಮ ಅನುಜ ಸಮೇತ ಬೈದೇಹೀ । ನಿಸಿ ದಿನು ದೇವ ಜಪತ ಹಹು ಜೇಹೀ ॥ ೪ ॥**
**ಸುನತ ಅಗಸ್ತಿ ತುರತ ಉಠಿ ಧಾಏ । ಹರಿ ಬಿಲೋಕಿ ಲೋಚನ ಜಲ ಛಾಏ ॥**
**ಮುನಿ ಪದ ಕಮಲ ಪರೇ ದ್ವೌ ಭಾಈ । ರಿಷಿ ಅತಿ ಪ್ರೀತಿ ಲಿಏ ಉರ ಲಾಈ ॥ ೫ ॥**
**ಸಾದರ ಕುಸಲ ಪೂಛಿ ಮುನಿ ಗ್ಯಾನೀ । ಆಸನ ಬರ ಬೈಠಾರೇ ಆನೀ ॥**
**ಪುನಿ ಕರಿ ಬಹು ಪ್ರಕಾರ ಪ್ರಭು ಪೂಜಾ । ಮೋಹಿ ಸಮ ಭಾಗ್ಯವಂತ ನಹಿಂ ದೂಜಾ ॥ ೬ ॥**
**ಜಹँ ಲಗಿ ರಹೇ ಅಪರ ಮುನಿ ಬೃಂದಾ । ಹರಷೇ ಸಬ ಬಿಲೋಕಿ ಸುಖಕಂದಾ ॥ ೭ ॥**

'ಏವಮಸ್ತು' (ಹಾಗೆಯೇ ಆಗಲಿ) ಎಂದು ಹೇಳಿ ರಮಾನಿವಾಸನಾದ ಶ್ರೀರಾಮನು ಹರ್ಷಿತನಾಗಿ, ಅಲ್ಲಿಂದ ಅಗಸ್ತ್ಯಋಷಿಗಳ ಬಳಿಗೆ ಹೋಗಲು ಹೊರಟನು. ಆಗ ಸುತೀಕ್ಷ್ಣರು ನುಡಿದರು – ''ಶ್ರೀರಾಮಾ ! ನನ್ನ ಗುರುಗಳಾದ ಅಗಸ್ತ್ಯಮಹರ್ಷಿಗಳ ದರ್ಶನಪಡೆಯದೆ ತುಂಬಾ ದಿನಗಳಾದವು ಹಾಗೂ ನಾನು ಈ ಆಶ್ರಮಕ್ಕೆ ಬಂದು ಬಹಳ ದಿನಗಳಾದುವು. ಈಗ ನಾನೂ ನಿಮ್ಮೊಡನೆ ಗುರುಗಳ ಬಳಿಗೆ ಬರುತ್ತೇನೆ. ಸ್ವಾಮಿ ! ಇದರಲ್ಲಿ ನಿಮಗೆ ನಾನೇನೂ ಉಪಕಾರ ಮಾಡುತ್ತಿಲ್ಲ, ನನ್ನ ಸ್ವಾರ್ಥವೇ ಇದೆ. ಮುನಿಯ ಜಾಣ್ಮೆಯನ್ನು ಕಂಡು ಅಣ್ಣತಮ್ಮಂದಿರಿಬ್ಬರೂ ನಗುತ್ತಾ, ಕೃಪಾನಿಧಿಯಾದ ಶ್ರೀರಾಮನು ಆತನನ್ನೂ ತನ್ನೊಡನೆ ಕರೆದುಕೊಂಡನು. ದೇವಾದಿದೇವನಾದ ಶ್ರೀರಾಮನು ದಾರಿಯಲ್ಲಿ ಅನನ್ಯಭಕ್ತಿಯ ಕುರಿತು ಮುನಿಯಬಳಿ ವರ್ಣಿಸುತ್ತಾ ಅಗಸ್ತ್ಯಾಶ್ರಮಕ್ಕೆ ತಲುಪಿದನು. ಸುತೀಕ್ಷ್ಣರು ಮುಂದಾಗಿ ಗುರುಗಳಾದ ಅಗಸ್ತ್ಯರ ಬಳಿಗೆ ಹೋಗಿ ಸಾಷ್ಟಾಂಗ ನಮಸ್ಕಾರಗೈದು ಇಂತೆಂದರು – ''ಸ್ವಾಮಿ ! ನೀವು ಅನುದಿನವೂ ಸ್ಮರಿಸುತ್ತಿರುವ ಆ ಕೋಸಲಾಧಿಪತಿ ದಶರಥನಂದನನೂ, ಜಗದಾಧಾರನೂ ಆದ ಶ್ರೀರಾಮಚಂದ್ರನು ಸೀತಾಲಕ್ಷ್ಮಣರೊಡಗೂಡಿ ನಿಮ್ಮ ದರ್ಶನಕ್ಕೆ ಬರುತ್ತಿದ್ದಾನೆ.'' ಇದನ್ನು ಕೇಳುತ್ತಲೇ ಅಗಸ್ತ್ಯರು ಅವಸರವಾಗಿ ಎದ್ದು ಶ್ರೀರಾಮನ ಎದುರಿಗೆ ಓಡಿದರು. ಭಗವಾನ್ ಶ್ರೀರಾಮನನ್ನು ನೋಡುತ್ತಲೇ ಅವರ ಕಣ್ಣುಗಳಲ್ಲಿ ಆನಂದಾಶ್ರುಗಳು ತುಂಬಿಬಂದವು. ಸೋದರರಿಬ್ಬರೂ ಆ ಮುನೀಶ್ವರರ ಪಾದಪದ್ಮಗಳಿಗೆ ಸಾಷ್ಟಾಂಗವಂದನೆ ಮಾಡಿದರು. ಋಷಿಗಳು ಪ್ರೀತಿಯಿಂದ ಅವರಿಬ್ಬರನ್ನೂ ಹಿಡಿದೆತ್ತಿ ಆಲಂಗಿಸಿಕೊಂಡರು. ಜ್ಞಾನಿಗಳಾದ ಅಗಸ್ತ್ಯರು ಆದರದಿಂದ ಕುಶಲವನ್ನು ಕೇಳಿ, ಅವರನ್ನು ಆಶ್ರಮದೊಳಗೆ ಕರೆದುಕೊಂಡುಬಂದು, ಸುಖಾಸನಗಳನ್ನಿತ್ತು ಕುಳ್ಳಿರಿಸಿದರು. ಬಳಿಕ ಪ್ರಭುವನ್ನು ಪರಿ-ಪರಿವಿಧದಿಂದ ಪೂಜಿಸಿ, ''ಇಂದು ನನ್ನಂತಹ ಅದೃಷ್ಟವಂತನು ಯಾರೂ ಇಲ್ಲ'' ಎಂದು ಹೇಳಿಕೊಂಡರು. ಅಲ್ಲಿದ್ದ ಇತರ ಮುನಿಗಳೆಲ್ಲ ಆನಂದಕಂದನಾದ ಶ್ರೀರಾಮನನ್ನು ದರ್ಶಿಸಿ ಆನಂದತುಂದಿಲರಾದರು. (ಚೌ/೧-೭)

**ದೋ – ಮುನಿ ಸಮೂಹ ಮಹँ ಬೈಠೇ ಸನ್ಮುಖ ಸಬ ಕೀ ಓರ ।**
**ಸರದ ಇಂದು ತನ ಚಿತವತ ಮಾನಹुँ ನಿಕರ ಚಕೋರ ॥ ೧೨ ॥**

ಮುನಿಸಮೂಹಕ್ಕೆ ಅಭಿಮುಖವಾಗಿ ಶ್ರೀರಾಮಚಂದ್ರನು ಆಸೀನನಾಗಿರುವನು. ಮುನಿಗಳೆಲ್ಲರೂ ಶರತ್ಪೂರ್ಣಿಮೆಯ ಚಂದ್ರನನ್ನು ಚಕೋರಪಕ್ಷಿಗಳು ದಿಟ್ಟಿಸುವಂತೆ ಶ್ರೀರಾಮನ ಮುಖಚಂದ್ರನನ್ನು ನೆಟ್ಟನೋಟದಿಂದ ನೋಡುತ್ತಿದ್ದರು. (ದೋ/೧೨)

**ಚೌ – ತಬ ರಘುಬೀರ ಕಹಾ ಮುನಿ ಪಾಹೀಂ । ತುಮ್ಹ ಸನ ಪ್ರಭು ದುರಾವ ಕಛು ನಾಹೀಂ ॥**
**ತುಮ್ಹ ಜಾನಹು ಜೆಹಿ ಕಾರನ ಆಯಉँ । ತಾತೇ ತಾತ ನ ಕಹಿ ಸಮುಝಾಯಉँ ॥ ೧ ॥**

ಅಬ ಸೋ ಮಂತ್ರ ದೇಹು ಪ್ರಭು ಮೋಹೀ। ಜೆಹಿ ಪ್ರಕಾರ ಮಾರೌಂ ಮುನಿದ್ರೋಹೀ॥
ಮುನಿ ಮುಸುಕಾನೇ ಸುನಿ ಪ್ರಭು ಬಾನೀ। ಪೂಛೆಹು ನಾಥ ಮೋಹಿ ಕಾ ಜಾನೀ॥ ೨ ॥
ತುಮ್ಹರೇಇಂ ಭಜನ ಪ್ರಭಾವ ಅಘಾರೀ। ಜಾನಉಂ ಮಹಿಮಾ ಕಛುಕ ತುಮ್ಹಾರೀ॥
ಊಮರಿ ತರು ಬಿಸಾಲ ತವ ಮಾಯಾ। ಫಲ ಬ್ರಹ್ಮಾಂಡ ಅನೇಕ ನಿಕಾಯಾ॥ ೩ ॥
ಜೀವ ಚರಾಚರ ಜಂತು ಸಮಾನಾ। ಭೀತರ ಬಸಹಿಂ ನ ಜಾನಹಿಂ ಆನಾ॥
ತೇ ಫಲ ಭಚ್ಛಕ ಕಠಿನ ಕರಾಲಾ। ತವ ಭಯ ಡರತ ಸದಾ ಸೋಉ ಕಾಲಾ॥ ೪ ॥
ತೇ ತುಮ್ಹ ಸಕಲ ಲೋಕಪತಿ ಸಾಈಂ। ಪೂಂಛೆಹು ಮೋಹಿ ಮನುಜ ಕೀ ನಾಈಂ॥
ಯಹ ಬರ ಮಾಗಉಂ ಕೃಪಾನಿಕೇತಾ। ಬಸಹು ಹೃದಯ ಶ್ರೀ ಅನುಜ ಸಮೇತಾ॥ ೫ ॥
ಅಬಿರಲ ಭಗತಿ ಬಿರತಿ ಸತಸಂಗಾ। ಚರನ ಸರೋರುಹ ಪ್ರೀತಿ ಅಭಂಗಾ॥
ಜದ್ಯಪಿ ಬ್ರಹ್ಮ ಅಖಂಡ ಅನಂತಾ। ಅನುಭವ ಗಮ್ಯ ಭಜಹಿಂ ಜೆಹಿ ಸಂತಾ॥ ೬ ॥
ಅಸ ತವ ರೂಪ ಬಖಾನಉಂ ಜಾನಉಂ। ಫಿರಿ ಫಿರಿ ಸಗುನ ಬ್ರಹ್ಮ ರತಿ ಮಾನಉಂ॥
ಸಂತತ ದಾಸನ್ಹ ದೇಹು ಬಡಾಈ। ತಾತೇಂ ಮೋಹಿ ಪೂಂಛೆಹು ರಘುರಾಈ॥ ೭ ॥
ಹೈ ಪ್ರಭು ಪರಮ ಮನೋಹರ ಠಾಊಂ। ಪಾವನ ಪಂಚಬಟೀ ತೆಹಿ ನಾಊಂ॥
ದಂಡಕ ಬನ ಪುನೀತ ಪ್ರಭು ಕರಹೂ। ಉಗ್ರ ಸಾಪ ಮುನಿಬರ ಕರ ಹರಹೂ॥ ೮ ॥
ಬಾಸ ಕರಹು ತಹಂ ರಘುಕುಲ ರಾಯಾ। ಕೀಜೇ ಸಕಲ ಮುನಿನ್ಹ ಪರ ದಾಯಾ॥
ಚಲೇ ರಾಮ ಮುನಿ ಆಯಸು ಪಾಈ। ತುರತಹಿಂ ಪಂಚಬಟೀ ನಿಅರಾಈ॥ ೯ ॥

ಬಳಿಕ ಶ್ರೀರಾಮಚಂದ್ರನು ಅಗಸ್ತ್ಯರಲ್ಲಿ ಹೇಳಿದನು– ಪೂಜ್ಯರೇ ! ತಮ್ಮಲ್ಲಿ ಮುಚ್ಚುಮರೆಯೇನು? ನಾನು ಯಾವಕಾರಣದಿಂದ ಬಂದಿದ್ದೇನೆ ಎಂಬುದು ತಮಗೆ ವಿದಿತವೇ ಆಗಿದೆ. ಆದ್ದರಿಂದ ನಾನು ತಮಗೆ ಹೆಚ್ಚಿಗೆ ಹೇಳಬೇಕಾಗಿಲ್ಲ. ಮುನಿಗಳನ್ನು ಬಾಧಿಸುತ್ತಿರುವ ರಾಕ್ಷಸರನ್ನು ಕೊಲ್ಲಲು ಬೇಕಾದ ಮಂತ್ರವನ್ನು (ಸಲಹೆಯನ್ನು) ಅನುಗ್ರಹಿಸಿರಿ. ಪ್ರಭುವಿನ ವಚನವನ್ನು ಕೇಳಿ, ಮುನೀಶ್ವರರು ಮುಗುಳ್ನಕ್ಕು ಹೇಳಿದರು– 'ಪ್ರಭೂ ! ಏನೆಂದು ತಿಳಿದು ನೀನು ನನಗೆ ಈ ಪ್ರಶ್ನೆ ಕೇಳಿರುವೆ ? ಓ ಪಾಪವಿನಾಶಾ ! ನಾನು ನಿನ್ನ ಭಜನೆಯ ಪ್ರಭಾವದಿಂದ ನಿನ್ನ ಮಹಿಮೆಯನ್ನು ಕೊಂಚಮಟ್ಟಿಗೆ ತಿಳಿದಿರುವೆನು. ನಿನ್ನ ಮಾಯೆಯು ವಿಶಾಲವಾದ ಅತ್ತಿಯ ಮರದಂತೆ ಇದೆ. ಅನೇಕಾನೇಕ ಬ್ರಹ್ಮಾಂಡಗಳ ಸಮೂಹವೇ ಅದರ ಹಣ್ಣುಗಳು. ಚರಾಚರ ಜೀವಿಗಳು ಅತ್ತಿಯ ಹಣ್ಣಿನಲ್ಲಿರುವ ಹುಳಗಳಂತೆ ಇವೆ. ಅವುಗಳು ಚಿಕ್ಕದಾದ ತನ್ನ ಜಗತ್ತಲ್ಲದೆ ಬೇರೇನೂ ತಿಳಿಯವು. ಆ ಹಣ್ಣುಗಳನ್ನು ತಿನ್ನುವಾತನು ಕಠಿಣ, ಕರಾಳಾದ ಕಾಲನು. ಆ ಕಾಲನು ಕೂಡ ನಿನಗೇ ಸದಾಕಾಲ ಅಂಜುತ್ತಿರುವನು. ಸಮಸ್ತ ಲೋಕಪಾಲಕರಿಗೆ ಒಡೆಯನಾದ ನೀನು ಹುಲುಮನುಜರಂತೆ ನನ್ನನ್ನು ಕೇಳುತ್ತಿರುವೆಯಲ್ಲ ! ಓ ಕೃಪಾನಿಧಾನಾ ! ನೀನು ಸೀತಾಲಕ್ಷ್ಮಣಸಮೇತ ನನ್ನ ಹೃದಯದಲ್ಲಿ ಸದಾ ನೆಲೆಸು. ಅವಿರಳ ಭಕ್ತಿ, ವೈರಾಗ್ಯ, ಸತ್ಸಂಗತ್ಯ, ನಿನ್ನ ಚರಣ-ಕಮಲಗಳಲ್ಲಿ ಅನನ್ಯ ಪ್ರೇಮವನ್ನೂ ನನಗೆ ಕರುಣಿಸು. ಇದೊಂದೇ ನಾನು ಕೇಳುವ ವರವಾಗಿದೆ. ನೀನು ಅಖಂಡನೂ, ಅನಂತನೂ, ಪರಬ್ರಹ್ಮನೂ, ಅನುಭವಗಮ್ಯನೂ ಎಂದು ಸಂತಜನರು ಸದಾಕಾಲ ನಿನ್ನನ್ನು ಸೇವಿಸುತ್ತಿರುವರು. ನಿನ್ನ ನಿರ್ಗುಣರೂಪವನ್ನೂ ಕೂಡ ನಾನು ಅರಿತಿರುವೆನು. ಹಾಗೆ ವರ್ಣಿಸಲೂ ಬಲ್ಲೆ. ಆದರೂ, ನಾನು ಮರಳಿ-ಮರಳಿ ಸಗುಣಬ್ರಹ್ಮನನ್ನೇ ಉಪಾಸಿಸುತ್ತೇನೆ. ನೀನು ಯಾವಾಗಲೂ ನಿನ್ನ ದಾಸರನ್ನು ಹಿರಿಯರನ್ನಾಗಿಸುವಿ. ಆದ್ದರಿಂದಲೇ ರಘುನಾಥ ನೀನು ನನ್ನಲ್ಲಿ ಈ ಪ್ರಶ್ನೆ ಕೇಳಿರುವೆ. ಪ್ರಭೂ ! ಇಲ್ಲಿಗೆ ಸಮೀಪದಲ್ಲೇ 'ಪಂಚವಟಿ' ಎಂಬ ಪ್ರದೇಶವಿದೆ. ಅದು ಅತ್ಯಂತ ಮನೋಹರವೂ, ಪವಿತ್ರವೂ ಆಗಿದೆ. ಈ ದಂಡಕಾರಣ್ಯದಲ್ಲಿರುವ ಪಂಚವಟಿಯನ್ನು ಪಾವನಗೊಳಿಸು. ಅದಕ್ಕೆ ಇರುವ ಮುನಿವರನಾದ ಗೌತಮರ ಕಠೋರಶಾಪವನ್ನು ದೂರಮಾಡು. ರಘುವರಾ ! ನೀನು ಮುನಿಗಳ ಮೇಲೆ ದಯೆದೋರಿ ಅಲ್ಲೇ ನೆಲೆಸು, ಈ ವಿಧವಾಗಿ ಮುನಿಗಳ ಆಜ್ಞೆಯಂತೆ ಶ್ರೀರಾಮನು ಅಲ್ಲಿಂದ ಹೊರಟು ಪಂಚವಟಿಯ ಸಮೀಪಕ್ಕೆ ಮುಟ್ಟಿದನು. (ಚೌ/೧-೯)

## ಪಂಚವಟಿ ನಿವಾಸ

ದೋ – ಗೀಧರಾಜ ಸೈಂ ಭೇಂಟ ಭಇ ಬಹು ಬಿಧಿ ಪ್ರೀತಿ ಬಢಾಇ।
ಗೋದಾವರೀ ನಿಕಟ ಪ್ರಭು ರಹೇ ಪರನ ಗೃಹ ಛಾಇ॥ ೧೩ ॥

ಪಂಚವಟಿಯಲ್ಲಿ ಗೃಧ್ರರಾಜ ಜಟಾಯುವನ್ನು ಶ್ರೀರಾಮನು ಭೇಟಿಯಾದನು. ಅವನೊಡನೆ ಅತ್ಯಂತ ಸಖ್ಯವನ್ನು ಬೆಳೆಸಿ ಪ್ರಭು ರಾಮಚಂದ್ರನು ಗೋದಾವರಿ ನದೀಸಮೀಪದಲ್ಲಿ ಪರ್ಣಕುಟಿಯನ್ನು ನಿರ್ಮಿಸಿಕೊಂಡು ಇರತೊಡಗಿದನು. (ದೋ/೧೩)

**ಚೌ – ಜಬ ತೇ ರಾಮ ಕೀನ್ಹ ತಹ್ ಬಾಸಾ। ಸುಖೀ ಭಏ ಮುನಿ ಬೀತೀ ತ್ರಾಸಾ ॥**
**ಗಿರಿ ಬನ ನದೀಂ ತಾಲ ಛಬಿ ಛಾಏ। ದಿನ ದಿನ ಪ್ರತಿ ಅತಿ ಹೋಹಿಂ ಸುಹಾಏ ॥ ೧ ॥**
**ಖಗ ಮೃಗ ಬೃಂದ ಅನಂದಿತ ರಹಹೀಂ। ಮಧುಪ ಮಧುರ ಗುಂಜತ ಛಬಿ ಲಹಹೀಂ॥**
**ಸೋ ಬನ ಬರನಿ ನ ಸಕ ಅಹಿರಾಜಾ। ಜಹಾಂ ಪ್ರಗಟ ರಘುಬೀರ ಬಿರಾಜಾ ॥ ೨ ॥**
**ಏಕ ಬಾರ ಪ್ರಭು ಸುಖ ಆಸೀನಾ। ಲಛಿಮನ ಬಚನ ಕಹೇ ಛಲಹೀನಾ ॥**
**ಸುರ ನರ ಮುನಿ ಸಚರಾಚರ ಸಾಈಂ। ಮೈಂ ಪೂಛಉಁ ನಿಜ ಪ್ರಭು ಕೀ ನಾಈಂ ॥ ೩ ॥**
**ಮೊಹಿ ಸಮುಝಾಇ ಕಹಹು ಸೋಇ ದೇವಾ। ಸಬ ತಜಿ ಕರೌಂ ಚರನ ರಜ ಸೇವಾ ॥**
**ಕಹಹು ಗ್ಯಾನ ಬಿರಾಗ ಅರು ಮಾಯಾ। ಕಹಹು ಸೊ ಭಗತಿ ಕರಹು ಜೆಹಿಂ ದಾಯಾ ॥ ೪ ॥**

ಶ್ರೀರಾಮನು ಅಲ್ಲಿ ನೆಲಸಿದಂದಿನಿಂದ ಮುನಿಗಳೆಲ್ಲರೂ ಸುಖಿಗಳಾದರು. ಅವರ ಭಯ ತೊಲಗಿಹೋಯಿತು. ಗಿರಿ, ವನ, ನದಿತಟಾಕಗಳು ದಿನದಿಂದ ದಿನಕ್ಕೆ ಹೆಚ್ಚುಕಾಂತಿಯಿಂದ ಕಂಗೊಳಿಸಿದವು. ಖಗ, ಮೃಗವೃಂದಗಳು ಆನಂದಗೊಂಡವು. ತುಂಬಿಗಳು ಮಧುರ ಗುಂಜಾರವಮಾಡುತ್ತಾ ಶೋಭಿಸಿದವು. ಸ್ವತಃ ಶ್ರೀರಾಮನೇ ವಿರಾಜಿಸಿರುವ ವನವೈಭವವನ್ನು ಅಹಿರಾಜ ಆದಿಶೇಷನೂ ಕೂಡ ವರ್ಣಿಸಲಾರನು.

ಒಮ್ಮೆ ಪ್ರಭು ಶ್ರೀರಾಮಚಂದ್ರನು ಸುಖಾಸೀನನಾಗಿರುವಾಗ ಲಕ್ಷ್ಮಣನು ಅವನಲ್ಲಿ ಸರಳವಾಗಿ ಇಂತು ಪ್ರಶ್ನಿಸಿದನು – ''ಸ್ವಾಮಿ ! ದೇವತೆಗಳಿಗೆ, ಮುನಿಗಳಿಗೆ, ಮಾನವರಿಗೆ, ಸಮಸ್ತ ಚರಾಚರ ಪ್ರಾಣಿಕೋಟಿಗಳಿಗೆ ನೀನು ಪ್ರಭುವು. ನಾನೂ ನಿನ್ನನ್ನು ನನ್ನ ಒಡೆಯನೆಂದೇ ತಿಳಿಯುತ್ತಿದ್ದು ಕೇಳುತ್ತಿದ್ದೇನೆ. ದೇವಾ ! ಎಲ್ಲವನ್ನು ತ್ಯಜಿಸಿ, ನಿನ್ನ ಪಾದಧೂಳಿಯನ್ನು ಸೇವಿಸುವಂತಹ ಮಾರ್ಗವನ್ನು ನನಗೆ ಉಪದೇಶಿಸು. ಜ್ಞಾನ, ವೈರಾಗ್ಯ ಹಾಗೂ ಮಾಯೆಯನ್ನು ವರ್ಣಿಸು. ನಿನ್ನ ಕೃಪೆಗೆ ಪಾತ್ರವಾಗುವಂತಹ ಭಕ್ತಿಮಾರ್ಗವನ್ನೂ ಅನುಗ್ರಹಿಸು. (ಚೌ/೧-೪)

**ದೋ – ಈಸ್ವರ ಜೀವ ಭೇದ ಪ್ರಭು ಸಕಲ ಕಹೌ ಸಮುಝಾಇ।**
**ಜಾತೇಂ ಹೋಇ ಚರನ ರತಿ ಸೋಕ ಮೋಹ ಭ್ರಮ ಜಾಇ ॥ ೧೪ ॥**

ಪ್ರಭೂ ! ಈಶ್ವರ ಹಾಗೂ ಜೀವರ ಭೇದವನ್ನು ವಿವರವಾಗಿ ತಿಳಿಸು. ಅದರಿಂದಾಗಿ ನನಗೆ ನಿನ್ನ ಚರಣಗಳಲ್ಲಿ ದೃಢವಾದ ಭಕ್ತಿಯುಂಟಾಗಿ, ಶೋಕ, ಮೋಹ, ಭ್ರಮೆಗಳು ದೂರವಾಗಲಿ. (ದೋ/೧೪)

**ಚೌ – ಥೋರೆಹಿ ಮಹ್ ಸಬ ಕಹಉಁ ಬುಝಾಈ। ಸುನಹು ತಾತ ಮತಿ ಮನ ಚಿತ ಲಾಈ ॥**
**ಮೈಂ ಅರು ಮೋರ ತೋರ ತೈಂ ಮಾಯಾ। ಜೆಹಿಂ ಬಸ ಕೀನ್ಹೇ ಜೀವ ನಿಕಾಯಾ ॥ ೧ ॥**
**ಗೋ ಗೋಚರ ಜಹ್ ಲಗಿ ಮನ ಜಾಈ। ಸೋ ಸಬ ಮಾಯಾ ಜಾನೆಹು ಭಾಈ ॥**
**ತೆಹಿ ಕರ ಭೇದ ಸುನಹು ತುಮ್ಹ ಸೋಊ। ಬಿದ್ಯಾ ಅಪರ ಅಬಿದ್ಯಾ ದೋಊ ॥ ೨ ॥**
**ಏಕ ದುಷ್ಟ ಅತಿಸಯ ದುಖರೂಪಾ। ಜಾ ಬಸ ಜೀವ ಪರಾ ಭವಕೂಪಾ ॥**
**ಏಕ ರಚಇ ಜಗ ಗುನ ಬಸ ಜಾಕೇಂ। ಪ್ರಭು ಪ್ರೇರಿತ ನಹಿಂ ನಿಜ ಬಲ ತಾಕೇಂ॥ ೩ ॥**
**ಗ್ಯಾನ ಮಾನ ಜಹ್ ಏಕಉ ನಾಹೀಂ। ದೇಖ ಬ್ರಹ್ಮ ಸಮಾನ ಸಬ ಮಾಹೀಂ॥**
**ಕಹಿಅ ತಾತ ಸೋ ಪರಮ ಬಿರಾಗೀ। ತೃನ ಸಮ ಸಿದ್ಧಿ ತೀನಿ ಗುನ ತ್ಯಾಗೀ ॥ ೪ ॥**

ಆಗ ಶ್ರೀರಾಮನು ಹೇಳತೊಡಗಿದನು – ತಮ್ಮಾ ! ನಾನು ಸ್ವಲ್ಪದರಲ್ಲಿ ನಿನಗೆ ಎಲ್ಲವನ್ನೂ ತಿಳಿಯಹೇಳುವೆನು. ನೀನು ಮನಸ್ಸು, ಬುದ್ಧಿ, ಚಿತ್ತವನ್ನು ಸ್ಥಿರವಾಗಿಸಿ ಕೇಳು. ನಾನು-ನನ್ನದು, ನೀನು-ನಿನ್ನದು ಇದೇ ಮಾಯೆ. ಇದೇ ಎಲ್ಲ ಜೀವಿಗಳನ್ನು ತನ್ನ ವಶದಲ್ಲಿರಿಸಿಕೊಂಡಿದೆ. ಸೋದರಾ ! ಇಂದ್ರಿಯಗಳು, ಅವುಗಳ ವಿಷಯಗಳು, ಮನಸ್ಸು ಎಲ್ಲಿಯವರೆಗೆ ಹೋಗುತ್ತದೋ, ಅವೆಲ್ಲ ಮಾಯೆ ಎಂದು ತಿಳಿ. ಅದರಲ್ಲಿಯೂ ಅವಿದ್ಯಾಮಾಯೆ, ವಿದ್ಯಾಮಾಯೆ ಎಂಬ ಎರಡು ಭೇದಗಳಿವೆ ಅದನ್ನು ನೀನು ತಿಳಿದುಕೋ. ಮೊದಲನೆಯದು (ಅವಿದ್ಯಾ) ದುಷ್ಟ ಹಾಗೂ ದೋಷಯುಕ್ತವಾದುದು. ಅತ್ಯಂತ ದುಃಖರೂಪವಾದುದು. ಇದಕ್ಕೆ ವಶನಾದ ಜೀವನು ಭವಕೂಪಕ್ಕೆ ಬೀಳುತ್ತಾನೆ. ಎರಡನೆಯದು ವಿದ್ಯಾಮಾಯೆ. ಇದು ತ್ರಿಗುಣಾತ್ಮಕವಾದುದು. ಪ್ರಭುವಿನ

ಪ್ರೇರಣೆಯಿಂದ ಇದು ಜಗತ್ತನ್ನು ಸೃಷ್ಟಿಸುತ್ತದೆ. ಇದಕ್ಕೆ ತನ್ನದೇ ಆದ ಶಕ್ತಿಯಿಲ್ಲ. ಅಭಿಮಾನವೇ ಮೊದಲಾದ ಯಾವುದೇ ದೋಷಗಳು ಇದರಲ್ಲಿಲ್ಲ. ಎಲ್ಲರಲ್ಲಿಯೂ ಸಮತ್ವಬುದ್ಧಿಯಿಂದ ಪರಮಾತ್ಮರೂಪವನ್ನೇ ನೋಡುವುದೇ 'ಜ್ಞಾನ' ಎಂದು ಹೇಳಲ್ಪಡುತ್ತದೆ. ಎಲ್ಲ ಸಿದ್ಧಿಗಳನ್ನೂ, ತ್ರಿಗುಣಗಳನ್ನೂ, ತೃಣವೆಂದು ಪರಿಗಣಿಸಿ ತೊರೆದಿರುವವನೇ ಪರಮ ವೈರಾಗ್ಯವುಳ್ಳವನೆಂದು ತಿಳಿಯಬೇಕು. (ಇದನ್ನು ವಿವರವಾಗಿ ಗೀತಾ ಅ-೧೩, ಶ್ಲೋ-೭ರಿಂದ ೧೧ ನೋಡಿರಿ) (ಚೌ/೧-೪)

**ದೋ – ಮಾಯಾ ಈಸ ನ ಆಪು ಕಹುँ ಜಾನ ಕಹಿಅ ಸೋ ಜೀವ।**
**ಬಂಧ ಮೋಚ್ಛ ಪ್ರದ ಸರ್ಬಪರ ಮಾಯಾ ಪ್ರೇರಕ ಸೀವ॥ ೧೫ ॥**

ಮಾಯೆಯನ್ನು, ಈಶ್ವರನನ್ನು, ತನ್ನ ಸ್ವರೂಪವನ್ನು ತಿಳಿಯದವನೇ ಜೀವಿಯು. ಕರ್ಮಾನುಸಾರ ಬಂಧನ ಮತ್ತು ಮೋಕ್ಷವನ್ನು ಕರುಣಿಸುವವನೂ, ಎಲ್ಲಕ್ಕೂ ಅತೀತನಾಗಿರುವವನೂ, ಮಾಯೆಗೂ ಪ್ರೇರಕನಾಗಿರುವವನೇ ಈಶ್ವರನು (ದೇವರು). (ದೋ/೧೫)

**ಚೌ – ಧರ್ಮ ತೇँ ಬಿರತಿ ಜೋಗ ತೇँ ಗ್ಯಾನಾ। ಗ್ಯಾನ ಮೋಚ್ಛಪ್ರದ ಬೇದ ಬಖಾನಾ॥**
**ಜಾತೇँ ಬೇಗಿ ದ್ರವಉँ ಮೈँ ಭಾಈ। ಸೋ ಮಮ ಭಗತಿ ಭಗತ ಸುಖದಾಈ॥ ೧ ॥**
**ಸೋ ಸುತಂತ್ರ ಅವಲಂಬ ನ ಆನಾ। ತೇಹಿ ಆಧೀನ ಗ್ಯಾನ ಬಿಗ್ಯಾನಾ॥**
**ಭಗತಿ ತಾತ ಅನುಪಮ ಸುಖಮೂಲಾ। ಮಿಲಇ ಜೊ ಸಂತ ಹೋಇँ ಅನುಕೂಲಾ॥ ೨ ॥**
**ಭಗತಿ ಕಿ ಸಾಧನ ಕಹಉँ ಬಖಾನೀ। ಸುಗಮ ಪಂಥ ಮೋಹಿ ಪಾವಹಿँ ಪ್ರಾನೀ॥**
**ಪ್ರಥಮಹಿँ ಬಿಪ್ರ ಚರನ ಅತಿ ಪ್ರೀತೀ। ನಿಜ ನಿಜ ಕರ್ಮ ನಿರತ ಶ್ರುತಿ ರೀತೀ॥ ೩ ॥**
**ಏಹಿ ಕರ ಫಲ ಪುನಿ ಬಿಷಯ ಬಿರಾಗಾ। ತಬ ಮಮ ಧರ್ಮ ಉಪಜ ಅನುರಾಗಾ॥**
**ಶ್ರವನಾದಿಕ ನವ ಭಕ್ತಿ ದೃಢಾಹೀँ। ಮಮ ಲೀಲಾ ರತಿ ಅತಿ ಮನ ಮಾಹೀँ॥ ೪ ॥**
**ಸಂತ ಚರನ ಪಂಕಜ ಅತಿ ಪ್ರೇಮಾ। ಮನ ಕ್ರಮ ಬಚನ ಭಜನ ದೃಢ ನೇಮಾ॥**
**ಗುರು ಪಿತು ಮಾತು ಬಂಧು ಪತಿ ದೇವಾ। ಸಬ ಮೋಹಿ ಕಹँ ಜಾನೈ ದೃಢ ಸೇವಾ॥ ೫ ॥**
**ಮಮ ಗುನ ಗಾವತ ಪುಲಕ ಸರೀರಾ। ಗದಗದ ಗಿರಾ ನಯನ ಬಹ ನೀರಾ॥**
**ಕಾಮ ಆದಿ ಮದ ದಂಭ ನ ಜಾಕೇँ। ತಾತ ನಿರಂತರ ಬಸ ಮೈँ ತಾಕೇँ॥ ೬ ॥**

ಧರ್ಮಾಚರಣೆಯಿಂದ ವೈರಾಗ್ಯ ಹುಟ್ಟುತ್ತದೆ. ಯೋಗದಿಂದ ಜ್ಞಾನೋದಯವಾಗುತ್ತದೆ. ಜ್ಞಾನದಿಂದ ಮೋಕ್ಷವಾಗುತ್ತದೆ ಎಂದು ವೇದಾದಿಗಳಲ್ಲಿ ವರ್ಣಿಸಿವೆ. ತಮ್ಮಾ ! ಯಾವುದರಿಂದ ನಾನು ಶೀಘ್ರವಾಗಿ ಒಲಿಯುವೆನೋ ಅದೇ ಭಕ್ತಿ. ಆ ಭಕ್ತಿಯು ಭಕ್ತರಿಗೆ ಸುಖವನ್ನುಂಟುಮಾಡುತ್ತದೆ. ಈ ಭಕ್ತಿಯು ಸ್ವತಂತ್ರವಾದುದು. ಇದಕ್ಕೆ ಇತರ ಸಾಧನೆಗಳ ಆಶ್ರಯ ಬೇಕಿಲ್ಲ. ಜ್ಞಾನ-ವಿಜ್ಞಾನಗಳು ಇದಕ್ಕೆ ಅಧೀನ. ಅಯ್ಯಾ ! ಭಕ್ತಿಯು ಅನುಪಮ ಮತ್ತು ಸರ್ವಸುಖಗಳ ಮೂಲವಾಗಿದೆ. ಆದರೆ ಇದು ಸಾಧು-ಸಂತರು ಒಲಿದಾಗ ಮಾತ್ರ ದೊರೆಯುತ್ತದೆ. ಈಗ ನಾನು ಭಕ್ತಿಯ ಸಾಧನಗಳನ್ನು ವಿಸ್ತಾರವಾಗಿ ವರ್ಣಿಸುತ್ತೇನೆ. ಇದು ಸುಗಮವಾದ ಮಾರ್ಗವು. ಇದನ್ನು ಅನುಸರಿಸುವವರು ಆಯಾಸವಿಲ್ಲದೆ ನನ್ನನ್ನು ಪಡೆದುಕೊಳ್ಳುತ್ತಾರೆ. ಮೊದಲಿಗೆ ಬ್ರಾಹ್ಮಣರ ಚರಣಗಳಲ್ಲಿ ಅತ್ಯಂತ ಪ್ರೀತಿಯುಂಟಾಗಬೇಕು. ಶ್ರುತಿಸಮ್ಮತವಾಗಿ ತಮ್ಮ-ತಮ್ಮ ಕರ್ಮಗಳಲ್ಲಿ ತೊಡಗಿರಬೇಕು. ಇದರ ಫಲದಿಂದ ವಿಷಯಾದಿಗಳಲ್ಲಿ ವೈರಾಗ್ಯ ಉಂಟಾದೀತು. ವೈರಾಗ್ಯ ಉದಿಸಿದಮೇಲೆ ನನ್ನ ಧರ್ಮ (ಭಾಗವತಧರ್ಮ) ದಲ್ಲಿ ಪ್ರೇಮ ಉಂಟಾದೀತು. ಆಗ ಶ್ರವಣವೇ ಮೊದಲಾದ ನವವಿಧ ಭಕ್ತಿಗಳು ದೃಢವಾದಿ ನೆಲೆಗೊಳ್ಳುವುವು. ಮನಸ್ಸಿನಲ್ಲಿ ನನ್ನ ಲೀಲೆಗಳ ಬಗೆಗೆ ಅತ್ಯಂತ ಪ್ರೇಮ ಉಂಟಾಗುವುದು. ಯಾರಿಗೆ ಸಂತರ ಚರಣಕಮಲಗಳಲ್ಲಿ ಅತ್ಯಂತ ಭಕ್ತಿಯಿದೆಯೋ, ಮನ, ವಚನ, ಕರ್ಮಗಳಿಂದ ಭಜನೆಯಲ್ಲಿ ಅಚಲವಾದ ನೇಮವಿದೆಯೋ, ನನ್ನನ್ನೇ ಗುರು, ತಂದೆ, ತಾಯಿ, ಬಂಧು, ಪತಿ, ದೇವರು ಮತ್ತು ಸರ್ವಸ್ವವೆಂದು ಭಾವಿಸಿ ಸೇವೆಯಲ್ಲಿ ದೃಢವಾಗಿರುವರೋ, ಯಾರ ಶರೀರ ನನ್ನ ಗುಣಗಾನ ಮಾಡುವಾಗ ಪುಳಕಿತವಾಗುತ್ತದೋ, ವಾಣಿ ಗದ್ಗದವಾಗುತ್ತದೋ ಮತ್ತು ಕಣ್ಣುಗಳಿಂದ ಪ್ರೇಮಾಶ್ರುಗಳು ಹರಿಯತೊಡಗುತ್ತವೋ, ಯಾರಲ್ಲಿ ಕಾಮ, ಮದ, ದಂಭ ಮೊದಲಾದವುಗಳು ಇಲ್ಲವೋ, ಅವರಿಗೆ ನಾನು ಸದಾ ವಶವರ್ತಿಯಾಗಿರುತ್ತೇನೆ. (ಚೌ/೧-೬)

**ದೋ – ಬಚನ ಕರ್ಮ ಮನ ಮೋರಿ ಗತಿ ಭಜನು ಕರಹಿँ ನಿಃಕಾಮ।**
**ತಿನ್ಹಕೇ ಹೃದಯ ಕಮಲ ಮಹುँ ಕರಉँ ಸದಾ ಬಿಶ್ರಾಮ॥ ೧೬ ॥**

ಮನೋವಾಕ್ಕರ್ಮಗಳಿಂದ ಸದಾಕಾಲ ನನ್ನನ್ನೇ ಸ್ಮರಿಸುತ್ತಾ, ನಿಷ್ಕಾಮವಾಗಿ ನನ್ನನ್ನು ಭಜಿಸುವವನ ಹೃದಯವೇ ನನ್ನ ನಿವಾಸಸ್ಥಾನವು. (ದೋ/೧೬)

## ಶೂರ್ಪಣಖಿಯ ಶೃಂಗಭಂಗ

ಚೌ– ಭಗತಿ ಜೋಗ ಸುನಿ ಅತಿ ಸುಖ ಪಾವಾ । ಲಛಿಮನ ಪ್ರಭು ಚರನನ್ಹಿ ಸಿರು ನಾವಾ ॥
ಏಹಿ ಬಿಧಿ ಗಏ ಕಛುಕ ದಿನ ಬೀತೀ । ಕಹತ ಬಿರಾಗ ಗ್ಯಾನ ಗುನ ನೀತೀ ॥ ೧ ॥
ಸೂಪನಖಾ ರಾವನ ಕೈ ಬಹಿನೀ । ದುಷ್ಟ ಹೃದಯ ದಾರುನ ಜಸ ಅಹಿನೀ ॥
ಪಂಚಬಟೀ ಸೋ ಗಇ ಏಕ ಬಾರಾ । ದೇಖಿ ಬಿಕಲ ಭಇ ಜುಗಲ ಕುಮಾರಾ ॥ ೨ ॥
ಭ್ರಾತಾ ಪಿತಾ ಪುತ್ರ ಉರಗಾರೀ । ಪುರುಷ ಮನೋಹರ ನಿರಖತ ನಾರೀ ॥
ಹೋಇ ಬಿಕಲ ಸಕ ಮನಹಿ ನ ರೋಕೀ । ಜಿಮಿ ರಬಿಮನಿ ದ್ರವ ರಬಿಹಿ ಬಿಲೋಕೀ ॥ ೩ ॥
ರುಚಿರ ರೂಪ ಧರಿ ಪ್ರಭು ಪಹಿಂ ಜಾಈ । ಬೋಲೀ ಬಚನ ಬಹುತ ಮುಸುಕಾಈ ॥
ತುಮ್ಹ ಸಮ ಪುರುಷ ನ ಮೋ ಸಮ ನಾರೀ । ಯಹ ಸಂಜೋಗ ಬಿಧಿ ರಚಾ ಬಿಚಾರೀ ॥ ೪ ॥
ಮಮ ಅನುರೂಪ ಪುರುಷ ಜಗ ಮಾಹೀಂ । ದೇಖೆಉಂ ಖೋಜಿ ಲೋಕ ತಿಹು ನಾಹೀಂ ॥
ತಾತೇಂ ಅಬ ಲಗಿ ರಹಿಉಂ ಕುಮಾರೀ । ಮನು ಮಾನಾ ಕಛು ತುಮ್ಹಹಿ ನಿಹಾರೀ ॥ ೫ ॥
ಸೀತಹಿ ಚಿತಇ ಕಹೀ ಪ್ರಭು ಬಾತಾ । ಅಹಇ ಕುಆರ ಮೋರ ಲಘು ಭ್ರಾತಾ ॥
ಗಇ ಲಛಿಮನ ರಿಪು ಭಗಿನೀ ಜಾನೀ । ಪ್ರಭು ಬಿಲೋಕಿ ಬೋಲೇ ಮೃದು ಬಾನೀ ॥ ೬ ॥
ಸುಂದರಿ ಸುನು ಮೈಂ ಉನ್ಹ ಕರ ದಾಸಾ । ಪರಾಧೀನ ನಹಿಂ ತೋರ ಸುಪಾಸಾ ॥
ಪ್ರಭು ಸಮರ್ಥ ಕೋಸಲಪುರ ರಾಜಾ । ಜೋ ಕಛು ಕರಹಿಂ ಉನಹಿ ಸಬ ಛಾಜಾ ॥ ೭ ॥
ಸೇವಕ ಸುಖ ಚಹ ಮಾನ ಭಿಖಾರೀ । ಬ್ಯಸನೀ ಧನ ಸುಭ ಗತಿ ಬಿಭಿಚಾರೀ ॥
ಲೋಭೀ ಜಸು ಚಹ ಚಾರ ಗುಮಾನೀ । ನಭ ದುಹಿ ದೂಧ ಚಹತ ಏ ಪ್ರಾನೀ ॥ ೮ ॥
ಪುನಿ ಫಿರಿ ರಾಮ ನಿಕಟ ಸೋ ಆಈ । ಪ್ರಭು ಲಛಿಮನ ಪಹಿಂ ಬಹುರಿ ಪಠಾಈ ॥
ಲಛಿಮನ ಕಹಾ ತೋಹಿ ಸೋ ಬರಈ । ಜೋ ತೃನ ತೋರಿ ಲಾಜ ಪರಿಹರಈ ॥ ೯ ॥
ತಬ ಖಿಸಿಆನಿ ರಾಮ ಪಹಿಂ ಗಈ । ರೂಪ ಭಯಂಕರ ಪ್ರಗಟತ ಭಈ ॥
ಸೀತಹಿ ಸಭಯ ದೇಖಿ ರಘುರಾಈ । ಕಹಾ ಅನುಜ ಸನ ಸಯನ ಬುಝಾಈ ॥ ೧೦ ॥

ಈ ಭಕ್ತಿಯೋಗವನ್ನು ಕೇಳಿ ಲಕ್ಷ್ಮಣನು ಅತ್ಯಂತ ಹರ್ಷಿತನಾಗಿ ಪ್ರಭು ಶ್ರೀರಾಮಚಂದ್ರನ ಚರಣಗಳಲ್ಲಿ ವಂದಿಸಿಕೊಂಡನು. ಈ ವಿಧವಾಗಿ ಜ್ಞಾನ, ವೈರಾಗ್ಯ, ಗುಣ, ನೀತಿಕಥನದಲ್ಲಿ ಕೆಲವು ದಿನಗಳು ಕಳೆದವು. ರಾವಣನಿಗೆ 'ಶೂರ್ಪಣಖಿ' ಎಂಬ ತಂಗಿಯೊಬ್ಬಳಿದ್ದಳು. ಅವಳು ನಾಗಿನಿಯಂತೆ ಭಯಂಕರಳೂ, ದುಷ್ಟ ಸ್ವಭಾವದವಳೂ ಆಗಿದ್ದಳು. ಅವಳೊಮ್ಮೆ ಪಂಚವಟಿಗೆ ಹೋಗಿ, ಅಲ್ಲಿ ರಾಮಲಕ್ಷ್ಮಣರನ್ನು ನೋಡಿ ಕಾಮವಿಕಾರದಿಂದ ತಲ್ಲಣಿಸಿ ಹೋದಳು. (ಕಾಕಭುಶುಂಡಿಯವರು ಹೇಳುತ್ತಾರೆ –) ಎಲೈ ಗರುತ್ಮಂತನೇ ! ಧರ್ಮಜ್ಞಾನಹೀನಳೂ, ಕಾಮಾಂಧಳೂ ಆದ ಸ್ತ್ರೀಯು ಸುಂದರ ಪುರುಷನನ್ನು ನೋಡಿದೊಡನೆ, ಅವನು ಸೋದರನು, ತಂದೆ, ಪುತ್ರನೆಂಬ ವಿಚಕ್ಷಣೆಯೇ ಇಲ್ಲದೆ ಮನೋವೈಕಲ್ಯಕ್ಕೆ ಗುರಿಯಾಗುತ್ತಾಳೆ. ಸೂರ್ಯಕಾಂತಮಣಿ ಸೂರ್ಯನನ್ನು ಕಂಡು ಕರಗುವಂತೆ ಅವಳು ತನ್ನ ಮನಸ್ಸನ್ನು ತಡೆದುಕೊಳ್ಳದೆ ಹೋಗುತ್ತಾಳೆ. ಕಾಮರೂಪಿಯಾದ ಶೂರ್ಪಣಖಿಯು ಸುಂದರರೂಪವನ್ನು ತಾಳಿ ಪ್ರಭು ಶ್ರೀರಾಮನ ಬಳಿಗೆ ಹೋದಳು. ಮುಗುಳ್ನಗುತ್ತಾ ಮೃದುಮಧುರವಾಗಿ ಇಂತೆಂದಳು – ''ನಿನ್ನಂತಹ ಪುರುಷನಾಗಲೀ, ನನ್ನಂತಹ ಸ್ತ್ರೀಯಾಗಲೀ ಎಲ್ಲಿಯೂ ಇಲ್ಲ. ಬ್ರಹ್ಮನು ಚೆನ್ನಾಗಿ ವಿಚಾರಮಾಡಿ ನಮ್ಮಿಬ್ಬರ ಜೋಡಿಯನ್ನು ರಚಿಸಿರುವನು. ಮೂರುಲೋಕಗಳಲ್ಲಿಯೂ ಹುಡುಕಿದರೂ ನನಗೆ ಈಡಾಗುವ ಯೋಗ್ಯವರನು ಸಿಗಲೇ ಇಲ್ಲ. ಆದರಿಂದಾಗಿ ಇದುವರೆವಿಗೂ ನಾನು ಅವಿವಾಹಿತಳಾಗಿಯೇ ಉಳಿದಿದ್ದೇನೆ. ಈಗ ನಿನ್ನನ್ನು ನೋಡಿದ ಬಳಿಕ ನನ್ನ ಮನಸ್ಸು ಒಂದು ನೆಲೆಗೆ ಬಂದಿದೆ. ಶ್ರೀರಾಮಚಂದ್ರಪ್ರಭುವು ಸೀತೆಯಕಡೆಗೆ ನೋಡಿ (ತಾನು ವಿವಾಹಿತನೆಂಬ ಸಂಕೇತವನ್ನಿತ್ತು) – 'ನನ್ನ ತಮ್ಮನು ಇನ್ನೂ ಕುಮಾರ' ಎಂದು ಪರಿಹಾಸ್ಯದಿಂದ ಹೇಳಿದನು. ಆಗ ಅವಳು ಲಕ್ಷ್ಮಣನ ಬಳಿಗೆ ಹೋದಳು. ಲಕ್ಷ್ಮಣನು ಆಕೆಯು ಶತ್ರುವಿನ ತಂಗಿ ಎಂದರಿತು, ಪ್ರಭುವಿನತ್ತ ನೋಡುತ್ತಾ, ಮುಗುಳ್ನಗುತ್ತಾ ಕೋಮಲವಾಗಿ ಇಂತೆಂದನು – ಎಲೈ ಚೆಲುವೆ !

ಕೇಳು. ನಾನು ಇವರ ದಾಸನು. ಅಸ್ವತಂತ್ರನು. ಆದ್ದರಿಂದ ನನ್ನಿಂದ ನಿನಗೆ ಸುಖ ಸಿಗಲಾರದು. ಪ್ರಭುವು ಸಮರ್ಥನಿರುವನು. ಕೋಸಲಕ್ಕೆ ರಾಜನು. ಅವನು ಏನು ಮಾಡಿದರೂ ಒಪ್ಪುತ್ತದೆ. ಸೇವಕನು ಸುಖ ಬಯಸಿದರೆ, ಭಿಕಾರಿ ಗೌರವಕ್ಕೆ ಆಸೆಪಟ್ಟರೆ, ದುರ್ವ್ಯಸನಿ ಹಣಕ್ಕೆ ಬಾಯಿಬಿಟ್ಟರೆ, ವ್ಯಭಿಚಾರಿಯು ಶುಭಗತಿಯನ್ನು ಬಯಸಿದರೆ, ಲೋಭಿ ಯಶಸ್ಸಿಗೆ ಆಸೆಪಟ್ಟರೆ, ಅಭಿಮಾನಿಯು ಚತುರ್ವಿಧ ಪುರುಷಾರ್ಥಗಳನ್ನು ಆಶಿಸಿದರೆ, ದೂತನು ಮಾನವನ್ನು ಬಯಸಿದರೆ ಸಿಗಬಹುದೇ? ಇವರೆಲ್ಲ ಆಕಾಶವನ್ನು ಹಿಂಡಿ ಹಾಲು ಪಡೆಯಬಯಸಿದಂತೆಯೇ. (ಅಂದರೆ ಗಗನಕುಸುಮದಂತೆ ಅಸಂಭವವು.) ಲಕ್ಷ್ಮಣನ ಮಾತನ್ನು ಕೇಳಿ ಅವಳು ಮತ್ತೆ ಶ್ರೀರಾಮನ ಬಳಿಗೆ ಮರಳಿ ಬಂದಳು. ಪ್ರಭುವು ಅವಳನ್ನು ಪುನಃ ಲಕ್ಷ್ಮಣನ ಬಳಿಗೆ ಕಳಿಸಿದ. ಲಕ್ಷ್ಮಣ ಹೇಳಿದ – 'ನಾಚಿಕೆಯನ್ನು ತೃಣಸಮಾನವೆಂದು ತಿಳಿದು ಬಿಟ್ಟಿರುವವನೇ (ಲಜ್ಜಾಹೀನನೇ) ನಿನ್ನನ್ನು ವರಿಸಿಯಾನು.' ಆಗ ಆಕೆ ಕೆರಳಿ ಶ್ರೀರಾಮನ ಬಳಿಗೆ ಹೋಗಿ ತನ್ನ ಭಯಂಕರ ರೂಪವನ್ನು ತೋರಿದಳು. ಇದನ್ನು ಕಂಡ ಸೀತೆಯು ಭಯಗೊಂಡಿರುವುದನ್ನು ಅರಿತು ಶ್ರೀರಾಮನು ಲಕ್ಷ್ಮಣನಿಗೆ ಸನ್ನೆ ಮಾಡಿದನು. (ಚೌ/೧-೧೦)

**ದೋ – ಲಛಿಮನ ಅತಿ ಲಾಘವ್ ಸೋ ನಾಕ ಕಾನ ಬಿನು ಕೀನ್ಹಿ।**
**ತಾಕೇ ಕರ ರಾವನ ಕಹ್ ಮನೌ ಚುನೌತೀ ದೀನ್ಹಿ॥ ೧೭ ॥**

ಲಕ್ಷ್ಮಣನು ತತ್‌ಕ್ಷಣವೇ ಸ್ಫೂರ್ತಿಯಿಂದ ಆಕೆಯ ಕಿವಿ, ಮೂಗುಗಳನ್ನು ಕತ್ತರಿಸಿಬಿಟ್ಟನು. ಇದರಿಂದ ಅವಳ ಮೂಲಕ ರಾವಣನಿಗೆ ಪಂಥಾಹ್ವಾನ ನೀಡಿದಂತಾಯಿತು. (ದೋ/೧೭)

## ಖರದೂಷಣ ಸಂಹಾರ

**ಚೌ – ನಾಕ ಕಾನ ಬಿನು ಭಇ ಬಿಕರಾರಾ। ಜನು ಸ್ರವ ಸೈಲ ಗೇರು ಕೈ ಧಾರಾ॥**
**ಖರ ದೂಷನ ಪಹಿಂ ಗಇ ಬಿಲಪಾತಾ। ಧಿಗ ಧಿಗ ತವ ಪೌರುಷ ಬಲ ಭ್ರಾತಾ॥ ೧ ॥**
**ತೇಹಿಂ ಪೂಛಾ ಸಬ ಕಹೇಸಿ ಬುಝಾಈ। ಜಾತುಧಾನ ಸುನಿ ಸೇನ ಬನಾಈ॥**
**ಧಾಏ ನಿಸಿಚರ ನಿಕರ ಬರೂಥಾ। ಜನು ಸಪಚ್ಛ ಕಜ್ಜಲ ಗಿರಿ ಜೂಥಾ॥ ೨ ॥**
**ನಾನಾ ಬಾಹನ ನಾನಾಕಾರಾ। ನಾನಾಯುಧ ಧರ ಘೋರ ಅಪಾರಾ॥**
**ಸೂಪನಖಾ ಆಗೇಂ ಕರಿ ಲೀನೀ। ಅಸುಭ ರೂಪ ಶ್ರುತಿ ನಾಸಾ ಹೀನೀ॥ ೩ ॥**
**ಅಸಗುನ ಅಮಿತ ಹೋಹಿಂ ಭಯಕಾರೀ। ಗನಹಿಂ ನ ಮೃತ್ಯು ಬಿಬಸ ಸಬ ಝಾರೀ॥**
**ಗರ್ಜಹಿಂ ತರ್ಜಹಿಂ ಗಗನ ಉಡಾಹೀಂ। ದೇಖಿ ಕಟಕು ಭಟ ಅತಿ ಹರಷಾಹೀಂ॥ ೪ ॥**
**ಕೋಉ ಕಹ ಜಿಅತ ಧರಹು ದ್ವೌ ಭಾಈ। ಧರಿ ಮಾರಹು ತಿಯ ಲೇಹು ಛಡಾಈ॥**
**ಧೂರಿ ಪೂರಿ ನಭ ಮಂಡಲ ರಹಾ। ರಾಮ ಬೋಲಾಇ ಅನುಜ ಸನ ಕಹಾ॥ ೫ ॥**
**ಲೈ ಜಾನಕಿಹಿ ಜಾಹು ಗಿರಿ ಕಂದರ। ಆವಾ ನಿಸಿಚರ ಕಟಕು ಭಯಂಕರ॥**
**ರಹೇಹು ಸಜಗ ಸುನಿ ಪ್ರಭು ಕೈ ಬಾನೀ। ಚಲೇ ಸಹಿತ ಶ್ರೀ ಸರ ಧನು ಪಾನೀ॥ ೬ ॥**
**ದೇಖಿ ರಾಮ ರಿಪುದಲ ಚಲಿ ಆವಾ। ಬಿಹಸಿ ಕಠಿನ ಕೋದಂಡ ಚಢಾವಾ॥ ೭ ॥**

ಕಿವಿ, ಮೂಗುಗಳನ್ನು ಕಳೆದುಕೊಂಡ ಆ ರಕ್ಕಸಿಯು ಇನ್ನೂ ಕರಾಳವಾಗಿ ಕಂಡಳು. ಅವಳ ದೇಹದಿಂದ – ಕರಿಯ ಪರ್ವತದಿಂದ ಗೈರಿಕಾದಿ ಧಾತುಗಳು ಕರಗಿ ಹರಿಯುವಂತೆ (ಕೆಂಪಾದ ಧಾರೆ) ರಕ್ತವು ಹರಿಯತೊಡಗಿತು. ಅವಳು ಬಿಕ್ಕಿ-ಬಿಕ್ಕಿ ವಿಲಪಿಸುತ್ತಾ ಖರದೂಷಣರ ಬಳಿಗೆ ಹೋಗಿ ಹೇಳಿದಳು – ಅಣ್ಣಂದಿರಾ ! ನಿಮ್ಮ ಪೌರುಷಕ್ಕೆ ಧಿಕ್ಕಾರವಿರಲಿ. ನಿಮ್ಮ ಬಲ ಎಷ್ಟಿದ್ದರೇನು ಅದು ವ್ಯರ್ಥವೇ. ಖರದೂಷಣರು ವಿಷಯ ಏನೆಂದು ಕೇಳಿದಾಗ, ಶೂರ್ಪಣಖಿಯು ನಡೆದುದೆಲ್ಲವನ್ನು ವಿವರಿಸಿದಳು. ಅದನ್ನು ಕೇಳುತ್ತಲೆ ಆ ರಕ್ಕಸರು ತಮ್ಮ ಸೇನೆಯನ್ನು ಸಜ್ಜುಗೊಳಿಸಿದರು. ಆ ರಕ್ಕಸರು ರೆಕ್ಕೆಗಳಿರುವ ಕಾಡಿಗೆಯ ಬೆಟ್ಟಗಳ ಸಮೂಹವೋ ಎಂಬಂತೆ ತಂಡ-ತಂಡವಾಗಿ ಓಡಿದರು. ಅವರ ವಾಹನಗಳು ಹಲವು ತೆರ. ಅವರ ಆಕಾರಗಳು ಹಲವು ವಿಧ. ಅವರ ಸಂಖ್ಯೆ ಅಪಾರ ! ಅವರ ಬಳಿ ಅಸಂಖ್ಯ ಶಸ್ತ್ರಾಸ್ತ್ರಗಳಿದ್ದವು. ಅವರು ಕಿವಿ, ಮೂಗುಗಳನ್ನು ಕಳೆದುಕೊಂಡ ಅಮಂಗಳ (ವಿಕೃತ)ರೂಪವುಳ್ಳ ಶೂರ್ಪಣಖಿಯನ್ನು ಮುಂದಿರಿಸಿಕೊಂಡು ಹೊರಟರು. ಆಗ ಅವರಿಗೆ ಎಷ್ಟೋ ಅಪಶಕುನಗಳು ಕಾಣಿಸಿದವು. ಆದರೆ ಅವರು ಮೃತ್ಯುವಿಗೆ ಮೀಸಲಾದ್ದರಿಂದ ಅವುಗಳನ್ನು ಗಮನಿಸಲಿಲ್ಲ. ಅವರು ಗರ್ಜಿಸುತ್ತಾ, ಮೂದಲಿಸುತ್ತಾ, ಆಕಾಶದಲ್ಲಿ ಹಾರಾಡುತ್ತಾ ಹೋಗುತ್ತಿದ್ದರು. ತಮ್ಮ ಪಡೆಯನ್ನು ಕಂಡು ಯೋಧರು ಹರ್ಷಗೊಳ್ಳುತ್ತಿದ್ದರು. ಒಬ್ಬ ಹೇಳಿದ –

'ಅಣ್ಣತಮ್ಮಂದಿರನ್ನು ಜೀವಸಹಿತ ಹಿಡಿದುಬಿಡಿ ; ಹಿಡಿದುಕೊಂಡು ಕೊಂದುಬಿಡಿರಿ.' ಇನ್ನೊಬ್ಬನೆಂದ – 'ಅವನ ಹೆಂಡತಿಯನ್ನು ಕಸಿದುಕೊಳ್ಳಿ.' ಅವರ ಪದಹತಿಗೆ ಆಕಾಶದಲ್ಲೆಲ್ಲ ಧೂಳು ತುಂಬಿಹೋಯತು. ಇದನ್ನು ನೋಡಿದ ಶ್ರೀರಾಮನು ಲಕ್ಷ್ಮಣನನ್ನು ಕರೆದು ಇಂತೆಂದನು – ''ಭಯಂಕರ ರಾಕ್ಷಸರ ಸೇನೆ ಬರುತ್ತಾ ಇದೆ. ನೀನು ಜಾನಕಿಯನ್ನು ಕರಕೊಂಡು ಸುರಕ್ಷಿತವಾದ ಪರ್ವತದ ಗುಹೆಯೊಳಗೆ ಹೋಗು ; ಜಾಗರೂಕನಾಗಿರು. ನಾನು ಈ ರಾಕ್ಷಸರನ್ನು ನೋಡಿಕೊಳ್ಳುವೆನು.'' ಪ್ರಭುವಿನ ಮಾತಿನಂತೆ ಲಕ್ಷ್ಮಣನು ಧನುರ್ಬಾಣಗಳನ್ನು ಧರಿಸಿಕೊಂಡು ಸೀತೆಯೊಂದಿಗೆ ಹೊರಟನು. ಶತ್ರುಗಳ ಸೇನೆಯು ಸಮೀಪಿಸುತ್ತಿರುವುದನ್ನು ನೋಡಿ, ಶ್ರೀರಾಮನು ನಕ್ಕು, ತನ್ನ ಕೋದಂಡವನ್ನು ಸಜ್ಜುಗೊಳಿಸಿದನು. (ಚೌ/೧-೭)

**ಛಂ – ಕೋದಂಡ ಕಠಿನ ಚಢಾಇ ಸಿರ ಜಟ ಜೂಟ ಬಾँಧತ ಸೋಹ ಕ್ಯೋं ।**
**ಮರಕತ ಸಯಲ ಪರ ಲರತ ದಾಮಿನಿ ಕೋಟಿ ಸೋं ಜುಗ ಭುಜಗ ಜ್ಯೋं ॥**
**ಕಟಿ ಕಸಿ ನಿಷಂಗ ಬಿಸಾಲ ಭುಜ ಗಹಿ ಚಾಪ ಬಿಸಿಖ ಸುಧಾರಿ ಕೈ ।**
**ಚಿತವತ ಮನಹುँ ಮೃಗರಾಜ ಪ್ರಭು ಗಜರಾಜ ಘಟಾ ನಿಹಾರಿ ಕೈ ॥**

ಎದುರಿಲ್ಲದ ತನ್ನ ಭಾರೀ ಕೋದಂಡವನ್ನು ಎತ್ತಿಹಿಡಿದು, ಜಟೆಯನ್ನು ಸರಿಪಡಿಸುತ್ತಿರುವ ಶ್ರೀರಾಮಚಂದ್ರನ ಭುಜಗಳು ಮರಕತಮಣಿಯ ಬೆಟ್ಟದಮೇಲೆ ಕೋಟ್ಯಂತರ ವಿದ್ಯುಲ್ಲತೆಗಳೊಂದಿಗೆ ಹೋರಾಡುವ ಎರಡು ಸರ್ಪಗಳಂತೆ ಶೋಭಿಸುತ್ತಿದ್ದವು. ನಡುವಿಗೆ ಬತ್ತಳಿಕೆಯನ್ನು ಬಿಗಿದು, ದೀರ್ಘವಾದ ಬಾಹುಗಳಿಂದ ಧನುಸ್ಸನ್ನು ಸಾವರಿಸಿ, ಬಾಣಗಳನ್ನು ಹೂಡಿ, ಇದಿರಿಗೆ ಬರುತ್ತಿದ್ದ ಮತ್ತಗಜಗಳನ್ನು ದಿಟ್ಟಿಸಿನೋಡುವ ಸಿಂಹದಂತೆ, ಶ್ರೀರಾಮನು ಆ ರಾಕ್ಷಸಸೈನ್ಯವನ್ನು ನೋಡಿದನು. (ಛಂದ)

**ಸೋ – ಆಇ ಗಏ ಬಗಮೇಲ ಧರಹು ಧರಹು ಧಾವತ ಸುಭಟ ।**
**ಜಥಾ ಬಿಲೋಕಿ ಅಕೇಲ ಬಾಲ ರಬಿಹಿ ಘೇರತ ದನುಜ ॥ ೧೮ ॥**

ದೊಡ್ಡ ರಾಕ್ಷಸಯೋಧರು 'ಹಿಡಿಯಿರಿ – ಹಿಡಿಯಿರಿ' ಎಂದು ಕೂಗುತ್ತಾ ಅತಿವೇಗವಾಗಿ ಓಡುತ್ತಾ ಪ್ರಾತಃಕಾಲದ ಸೂರ್ಯನು ಒಂಟಿಯಾಗಿ ಇರುವುದನ್ನು ಕಂಡು ಮಂದೇಹಾದಿ* ರಾಕ್ಷಸರು ಸುತ್ತುವರಿಯುವಂತೆ ಅವರು ಶ್ರೀರಾಮಚಂದ್ರನನ್ನು ಸುತ್ತುವರಿದರು. (ಸೋ/೧೮)

**ಚೌ – ಪ್ರಭು ಬಿಲೋಕಿ ಸರ ಸಕಹಿं ನ ಡಾರೀ । ಥಕಿತ ಭಈ ರಜನೀಚರ ಧಾರೀ ॥**
**ಸಚಿವ ಬೋಲಿ ಬೋಲೇ ಖರ ದೂಷನ । ಯಹ ಕೋಉ ನೃಪಬಾಲಕ ನರ ಭೂಷನ ॥ ೧ ॥**
**ನಾಗ ಅಸುರ ಸುರ ನರ ಮುನಿ ಜೇತೇ । ದೇಖೇ ಜಿತೇ ಹತೇ ಹಮ ಕೇತೇ ॥**
**ಹಮ ಭರಿ ಜನ್ಮ ಸುನಹು ಸಬ ಭಾಈ । ದೇಖೀ ನಹಿं ಅಸಿ ಸುಂದರತಾಈ ॥ ೨ ॥**
**ಜದ್ಯಪಿ ಭಗಿನೀ ಕೀನ್ಹಿ ಕುರೂಪಾ । ಬಧ ಲಾಯಕ ನಹಿं ಪುರುಷ ಅನೂಪಾ ॥**
**ದೇಹು ತುರತ ನಿಜ ನಾರಿ ದುರಾಈ । ಜೀಅತ ಭವನ ಜಾಹು ದ್ವೌ ಭಾಈ ॥ ೩ ॥**
**ಮೋರ ಕಹಾ ತುಮ್ಹ ತಾಹಿ ಸುನಾವಹು । ತಾಸು ಬಚನ ಸುನಿ ಆತುರ ಆವಹು ॥**
**ದೂತನ್ಹ ಕಹಾ ರಾಮ ಸನ ಜಾಈ । ಸುನತ ರಾಮ ಬೋಲೇ ಮುಸುಕಾಈ ॥ ೪ ॥**
**ಹಮ ಛತ್ರೀ ಮೃಗಯಾ ಬನ ಕರಹೀं । ತುಮ್ಹ ಸೇ ಖಲ ಮೃಗ ಖೋಜತ ಫಿರಹೀं ॥**
**ರಿಪು ಬಲವಂತ ದೇಖಿ ನಹಿं ಡರಹೀं । ಏಕ ಬಾರ ಕಾಲಹು ಸನ ಲರಹೀं ॥ ೫ ॥**

---

* ಮಂದೇಹಾದಿ ರಾಕ್ಷಸರು ಸೂರ್ಯನನ್ನು ಬಾಧಿಸುತ್ತಿರುವರು. ಸಂಧ್ಯೋಪಾಸನೆ ಮಾಡುವವರು ತಮ್ಮ ಸಂಧ್ಯಾವಂದನೆಯಲ್ಲಿ ಸೂರ್ಯನಿಗೆ ಮೂರುಬಾರಿ ಅರ್ಘ್ಯವನ್ನು ಕೊಡುತ್ತಾರೆ. ಆ ಅರ್ಘ್ಯಜಲವು ಬ್ರಹ್ಮಾಸ್ತ್ರ, ಬ್ರಹ್ಮದಂಡಾಸ್ತ್ರ, ಬ್ರಹ್ಮಶಿರೋನಾಮಕಾಸ್ತ್ರವಾಗಿ ಆ ಮಂದೇಹಾದಿ ರಾಕ್ಷಸರನ್ನು ಓಡಿಸುತ್ತದೆ. ಆ ವಿಧವಾಗಿ ಸೂರ್ಯನಿಗೆ ರಾಕ್ಷಸರ ಬಾದೆ ತೊಲಗಿಹೋಗುತ್ತದೆ. ಆದ್ದರಿಂದ ಈ ಅರ್ಘ್ಯಪ್ರದಾನ ಪ್ರಭಾವವನ್ನು ಗ್ರಹಿಸಿ, ಎಲ್ಲ ಸಂಧ್ಯೋಪಾಸಕರು ತಮ್ಮ ಸಂಧ್ಯಾವಂತನೆಯನ್ನು ವಿದ್ಯುಕ್ತವಾಗಿ ಆಚರಿಸಬೇಕು. ಅರ್ಘ್ಯಪ್ರದಾನ ಪ್ರಭಾವವನ್ನು ಮರೆಯಬಾರದು. ಇಲ್ಲದಿದ್ದರೆ ಸೂರ್ಯನಿಗೆ ಬರುವ ಬಾಧೆಯು ತನಗೂ ಬಂದೀತು. ಇದು ಸಾರ್ವಕಾಲಿಕ ಸತ್ಯವು. ಸಂಧ್ಯಾವಂದನೆಯನ್ನು ಮಾಡದೆ ಇದ್ದರೆ, ಸೂರ್ಯಹತ್ಯಾ ಪಾಪ ತಟ್ಟುವುದು.

೨ ಶ್ಲೋಕ – **ತಸ್ಮಾನ್ನೋಲ್ಲಂಘನಂ ಕಾರ್ಯಂ ಸಂಧ್ಯೋಪಾಸನ ಕರ್ಮಣಃ ।**
**ಸ ಹಂತಿ ಸೂರ್ಯಂ ಸಂಧ್ಯಾಯಾಂ, ನೋಪಾಸ್ತಿಂ ಕುರುತೇ ತು ಯಃ ॥** (ವಿಷ್ಣುಪುರಾಣ ೨-೮)

**ಜದ್ಯಪಿ ಮನುಜ ದನುಜ ಕುಲ ಘಾಲಕ। ಮುನಿ ಪಾಲಕ ಖಲ ಸಾಲಕ ಬಾಲಕ॥**
**ಜೌ ನ ಹೋಇ ಬಲ ಘರ ಫಿರಿ ಜಾಹೂ। ಸಮರ ಬಿಮುಖ ಮೈಂ ಹತಉಂ ನ ಕಾಹೂ॥ ೬॥**
**ರನ ಚಢ಼ಿ ಕರಿಅ ಕಪಟ ಚತುರಾಈ। ರಿಪು ಪರ ಕೃಪಾ ಪರಮ ಕದರಾಈ॥**
**ದೂತನ್ಹ ಜಾಇ ತುರತ ಸಬ ಕಹೇಊ। ಸುನಿ ಖರ ದೂಷನ ಉರ ಅತಿ ದಹೇಊ॥ ೭॥**

ಸೌಂದರ್ಯನಿಧಿಯಾದ ಶ್ರೀರಾಮಚಂದ್ರನನ್ನು ಕಂಡು ರಕ್ಕಸಸೇನೆಯು ಸ್ತಬ್ಧವಾಗಿ ಮುಂದಕ್ಕೆ ಸಾಗದಾಯಿತು. ಅವರು ಅವನ ಮೇಲೆ ಬಾಣಪ್ರಯೋಗ ಮಾಡದಾದರು. ಖರದೂಷಣರು ಮಂತ್ರಿಯನ್ನು ಕರೆದು ಇಂತೆಂದರು – ''ಈ ರಾಜಕುಮಾರ ಯಾರೋ ಮಾನವರಿಗೆ ಭೂಷಣಪ್ರಾಯದಂತಿರುವನು, ಸೋದರರೇ! ಇಷ್ಟರವರೆಗೆ ನಾವು ನಾಗರನ್ನೂ, ಸುರರನ್ನೂ, ಅಸುರರನ್ನೂ. ನರರನ್ನೂ, ಮುನಿಗಳನ್ನು ಲೆಕ್ಕವಿಲ್ಲದಷ್ಟು ಮಂದಿಯನ್ನು ಕಂಡಿದ್ದೇವೆ, ಜಯಿಸಿದ್ದೇವೆ, ಕೊಂದಿದ್ದೇವೆ. ಆದರೆ ಇಂತಹ ಸೌಂದರ್ಯಮೂರ್ತಿಯನ್ನು ನಾವು ಎಲ್ಲಿಯೂ ನೋಡಲಿಲ್ಲ. ಇವರು ನಮ್ಮ ತಂಗಿಯನ್ನೇನೋ ವಿರೂಪಗೊಳಿಸಿದರು. ಆದರೂ ಈ ಅಪ್ರತಿಮ ಪುರುಷರು ವಧಾರ್ಹರಲ್ಲ. ಇವನು ತನ್ನ ಪತ್ನಿಯನ್ನು ಎಲ್ಲೋ ಬಚ್ಚಿಟ್ಟಿರುವನು. ಅವಳನ್ನು ನಮಗೆ ತಂದೊಪ್ಪಿಸಿ, ಅಣ್ಣ-ತಮ್ಮಂದಿರಿಬ್ಬರೂ ಜೀವಂತರಾಗಿ ಮನೆಗೆ ಮರಳಬಹುದು'' ಎಂಬ ನನ್ನ ಈ ಮಾತನ್ನು ಮಂತ್ರಿಗಳಾದ ನೀವು ಅವರಿಗೆ ಹೋಗಿ ಹೇಳಿರಿ. ಅವನ ಉತ್ತರವನ್ನು ಕೇಳಿಕೊಂಡು ಬೇಗಬನ್ನಿರಿ. ದೂತರು ರಕ್ಕಸರ ಈ ಸಂದೇಶವನ್ನು ಶ್ರೀರಾಮನಿಗೆ ಮುಟ್ಟಿಸಿದರು. ಅದನ್ನು ಕೇಳಿದಕೂಡಲೇ ಶ್ರೀರಾಮಚಂದ್ರನು ಮುಗುಳ್ನಕ್ಕು – ''ನಾವು ಕ್ಷತ್ರಿಯರು. ಕಾಡಿನಲ್ಲಿ ಬೇಟೆಯಾಡುತ್ತಾ ವಿಹರಿಸುತ್ತೇವೆ. ನಿಮ್ಮಂತಹ ದುಷ್ಟಮೃಗಗಳನ್ನು ಹುಡುಕುತ್ತಾ ಅಲೆಯುತ್ತಿರುತ್ತೇವೆ. ಬಲಶಾಲಿಯಾದ ಶತ್ರುವನ್ನು ಕಂಡು ನಾವು ಅಂಜುವುದಿಲ್ಲ. ಯುದ್ಧಮಾಡಬೇಕಾಗಿ ಬಂದರೆ ನಾವು ಕಾಲನನ್ನೂ ಎದುರಿಸಲು ಸಿದ್ಧ. ನಾವು ಮನುಜರಾಗಿದ್ದರೂ ದನುಜಕುಲನಾಶಕರು, ಮುನಿಜನ ಪಾಲಕರು. ನಾವು ಬಾಲಕರಾದರೂ ದುಷ್ಟರನ್ನು ದಂಡಿಸುವವರು. ಶಕ್ತಿಯಿಲ್ಲದಿದ್ದರೆ ಮನೆಗೆ ಮರಳು. ಯುದ್ಧದಲ್ಲಿ ಬೆನ್ನು ತೋರಿಸುವವರ ಮೇಲೆ ನಾನು ಕೈಮಾಡುವುದಿಲ್ಲ. ಯುದ್ಧಕ್ಕೆಂದು ಬಂದು ಕಪಟ, ವಂಚನೆ ಮಾಡುವುದು, ಶತ್ರುಗಳ ಮೇಲೆ ದಯೆದೋರುವುದು ಹೇಡಿತನದ ಲಕ್ಷಣವಾಗಿದೆ'' ಎಂಬ ಪ್ರತ್ಯುತ್ತರವನ್ನು ಹೇಳಿ ಕಳಿಸಿದನು. ದೂತರು ಹಿಂತಿರುಗಿ ಎಲ್ಲವನ್ನೂ ರಕ್ಕಸರಿಗೆ ಅರುಹಿದರು. ಅದನ್ನು ಕೇಳುತ್ತಲೇ ಖರದೂಷಣರ ಕ್ರೋಧ ಭುಗಿಲೆದ್ದಿತು. (ಚೌ/೧-೭)

**ಛಂ – ಉರ ದಹೇಉ ಕಹೇಉ ಕಿ ಧರಹು ಧಾಏ ಬಿಕಟ ಭಟ ರಜನೀಚರಾ।**
**ಸರ ಚಾಪ ತೋಮರ ಸಕ್ತಿ ಸೂಲ ಕೃಪಾನ ಪರಿಘ ಪರಸು ಧರಾ॥**
**ಪ್ರಭು ಕೀನ್ಹಿ ಧನುಷ ಟಕೋರ ಪ್ರಥಮ ಕಠೋರ ಘೋರ ಭಯಾವಹಾ।**
**ಭಏ ಬಧಿರ ಬ್ಯಾಕುಲ ಜಾತುಧಾನ ನ ಗ್ಯಾನ ತೇಹಿ ಅವಸರ ರಹಾ॥**

ಕ್ರೋಧೋನ್ಮತ್ತರಾದ ಅವರು ಸೈನಿಕರನ್ನು ಉದ್ದೇಶಿಸಿ, 'ಹಿಡಿಯಿರಿ, ಹೆಡೆಮುರಿಗೆ ಕಟ್ಟಿ' ಎಂದು ಕೂಗಿದರು. ಇದನ್ನು ಕೇಳಿ ಭಯಂಕರ ರಾಕ್ಷಸಯೋಧರು ಬಿಲ್ಲು, ಬಾಣ, ತೋಮರ, ಶಕ್ತಿ, ಶೂಲ, ಕೃಪಾಣ, ಪರಿಘ, ಗಂಡುಗೊಡಲಿ ಮುಂತಾದ ಆಯುಧಗಳನ್ನು ಹಿಡಿದುಕೊಂಡು ರಾಮನ ಕಡೆಗೆ ಓಡಿದರು. ಪ್ರಭು ರಾಮಚಂದ್ರನು ಮೊದಲಿಗೆ ಕಠೋರವೂ, ಘೋರವೂ, ಭಯಂಕರವೂ ಆದ ತನ್ನ ಧನುಷ್ಟಂಕಾರ ಮಾಡಿದನು. ಅದನ್ನು ಕೇಳಿದ ರಕ್ಕಸರು ಕಿವುಡರಾದರು, ತಲ್ಲಣಿಸಿಹೋದರು. ಆಗ ಅವರಿಗೆ ಏನೂ ತೋಚದಂತಾಯಿತು. ಮೈಮೇಲೆ ಎಚ್ಚರವೇ ಇರಲಿಲ್ಲ. (ಛಂದ)

**ದೋ – ಸಾವಧಾನ ಹೋಇ ಧಾಏ ಜಾನಿ ಸಬಲ ಆರಾತಿ।**
**ಲಾಗೇ ಬರಷನ ರಾಮ ಪರ ಅಸ್ತ್ರ ಸಸ್ತ್ರ ಬಹು ಭಾಂತಿ॥ ೧೯(ಕ)॥**
**ತಿನ್ಹ ಕೇ ಆಯುಧ ತಿಲ ಸಮ ಕರಿ ಕಾಟೇ ರಘುಬೀರ।**
**ತಾನಿ ಸರಾಸನ ಶ್ರವನ ಲಗಿ ಪುನಿ ಛಾಂಡೇ ನಿಜ ತೀರ॥ ೧೯(ಖ)॥**

ಶತ್ರುವು ಭಾರೀ ಬಲಶಾಲಿಯೆಂದರಿತು ರಕ್ಕಸರು ಎಚ್ಚರಿಕೆಯಿಂದ ಶ್ರೀರಾಮನ ಮೇಲೆ ಪರಿಪರಿಯ ಶಸ್ತ್ರಾಸ್ತ್ರಗಳ ಮಳೆ ಕರೆಯತೊಡಗಿದರು. ಆದರೆ ರಘುವೀರನು ಧನುಸ್ಸನ್ನು ಕಿವಿವರೆಗೆ ಸೆಳೆದು ಬಾಣಪರಂಪರೆಯನ್ನು ಪ್ರಯೋಗಿಸಿ, ರಕ್ಕಸರ ಶಸ್ತ್ರಾಸ್ತ್ರಗಳನ್ನು ಪುಡಿಪುಡಿಯಾಗಿಸಿದನು. (ದೋ/೧೯ ಕ, ಖ)

**ಛಂ – ತಬ ಚಲೇ ಬಾನ ಕರಾಲ। ಫುಂಕರತ ಜನು ಬಹು ಬ್ಯಾಲ॥**
**ಕೋಪೇಉ ಸಮರ ಶ್ರೀರಾಮ। ಚಲೇ ಬಿಸಿಖ ನಿಸಿತ ನಿಕಾಮ॥ ೧॥**

**ಅವಲೋಕಿ ಖರತರ ತೀರ। ಮುರಿ ಚಲೇ ನಿಸಿಚರ ಬೀರ॥**
**ಭಏ ಕ್ರುದ್ಧ ತೀನಿಉ ಭಾಇ। ಜೋ ಭಾಗಿ ರನ ತೇ ಜಾಇ॥ ೨ ॥**
**ತೇಹಿ ಬಧಬ ಹಮ ನಿಜ ಪಾನಿ। ಫಿರೆ ಮರನ ಮನ ಮಹುँ ಠಾನಿ॥**
**ಆಯುಧ ಅನೇಕ ಪ್ರಕಾರ। ಸನಮುಖ ತೆ ಕರಹಿं ಪ್ರಹಾರ॥ ೩ ॥**
**ರಿಪು ಪರಮ ಕೋಪೇ ಜಾನಿ। ಪ್ರಭು ಧನುಷ ಸರ ಸಂಧಾನಿ॥**
**ಛಾँಡೇ ಬಿಪುಲ ನಾರಾಚ। ಲಗೇ ಕಟನ ಬಿಕಟ ಪಿಸಾಚ॥ ೪ ॥**
**ಉರ ಸೀಸ ಭುಜ ಕರ ಚರನ। ಜಹँ ತಹँ ಲಗೇ ಮಹಿ ಪರನ॥**
**ಚಿಕ್ಕರತ ಲಾಗತ ಬಾನ। ಧರ ಪರತ ಕುಧರ ಸಮಾನ॥ ೫ ॥**
**ಭಟ ಕಟತ ತನ ಸತ ಖಂಡ। ಪುನಿ ಉಠತ ಕರಿ ಪಾಷಂಡ॥**
**ನಭ ಉಡತ ಬಹು ಭುಜ ಮುಂಡ। ಬಿನು ಮೌಲಿ ಧಾವತ ರುಂಡ॥ ೬ ॥**
**ಖಗ ಕಂಕ ಕಾಕ ಸೃಗಾಲ। ಕಟಕಟಹಿं ಕಠಿನ ಕರಾಲ॥ ೭ ॥**

ಭಯಂಕರ ಸರ್ಪಗಳು ಬುಸುಗುಟ್ಟುತ್ತಾ ಎರಗುವಂತೆ ರಾಕ್ಷಸರಮೇಲೆ ಶ್ರೀರಾಮಚಂದ್ರನ ಬಾಣಗಳು ಚಲಿಸಿದವು. ಸಮರಭೂಮಿಯಲ್ಲಿ ಶ್ರೀರಾಮನು ಅತ್ಯಂತ ಕ್ರುದ್ಧನಾಗಿ, ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿದನು. ಆ ನಿಶಿತ ಶರಗಳನ್ನು ಕಂಡು ರಕ್ಕಸ ವೀರರು ಬೆನ್ನುತೋರಿ ಕಾಲಿಗೆ ಬುದ್ಧಿಹೇಳಿದರು. ಆಗ ಖರ-ದೂಷಣ ತ್ರಿಶಿರ ಈ ಮೂವರು ಸೋದರರು ಕೆರಳಿ ನುಡಿದರು – ''ಯುದ್ಧದಿಂದ ಕಾಲ್ತೆಗೆಯುವವರನ್ನು ನಾವೇ ಕೈಯ್ಯಾರ ಕೊಂದುಬಿಡುತ್ತೇವೆ' ಎಂದು ಎಚ್ಚರಿಸಿದಾಗ, ಹೇಗೂ ಸಾವು ತಪ್ಪಿದ್ದಲ್ಲವೆಂದುಕೊಂಡು ಆ ರಕ್ಕಸರು ಹಿಂದಕ್ಕೆ ಬಂದರು. ಯುದ್ಧಾಭಿಮುಖರಾಗಿ ಅನೇಕ ರೀತಿಯ ಆಯುಧಗಳಿಂದ ಶ್ರೀರಾಮನೊಡನೆ ಹೋರಾಡತೊಡಗಿದರು. ರಿಪು ಅತ್ಯಂತ ಕುಪಿತನಾಗಿರುವುದನ್ನು ಕಂಡು ಪ್ರಭುವು ತನ್ನ ಧನುಸ್ಸಿಗೆ ಶರಗಳನ್ನು ಸಂಧಿಸಿ ಸುರಿಮಳೆಗರೆದರು. ಭಯಂಕರರಾದ ರಕ್ಕಸರ, ಎದೆ, ತಲೆ, ಭುಜ, ಕೈಕಾಲುಗಳು ತುಂಡಾಗಿ ಎಲ್ಲಿ ಎಂದರೆ ಅಲ್ಲಿ ಚೆಲ್ಲಾಪಿಲ್ಲಿಯಾಗಿ ಬೀಳತೊಡಗಿದವು. ಬಾಣಗಳು ತಗಲುತ್ತಲೇ ರಕ್ಕಸರು ಆನೆಯಂತೆ ಘೀಳಿಡುತ್ತಾ, ಬೆಟ್ಟದಂತಹ ದೇಹಗಳು ತುಂಡು-ತುಂಡಾಗಿ ನೆಲಕ್ಕುರುಳಿದವು. ಯೋಧರ ದೇಹಗಳು ಕತ್ತರಿಸಿ, ನುಚ್ಚುನೂರಾಗಿ ಹೋಗುತ್ತಿದ್ದವು. ಆದರೆ ಅವರು ಮತ್ತೆ ಯಾವುದೋ ಮಾಯೆಯಿಂದ ಎದ್ದು ನಿಲ್ಲುತ್ತಿದ್ದರು. ಆಕಾಶದಲ್ಲಿ ಲೆಕ್ಕವಿಲ್ಲದಷ್ಟು ಭುಜಗಳು, ರುಂಡಗಳು ಹಾರಾಡುತ್ತಿದ್ದವು. ತಲೆಯಿಲ್ಲದ ಮುಂಡಗಳು ಓಡುತ್ತಿದ್ದವು. ಮಾಂಸಾಹಾರಿಗಳಾದ ರಣಹದ್ದು, ಕಾಗೆಗಳೇ ಮೊದಲಾದ ಪಕ್ಷಿಗಳು, ನರಿಗಳು ಕಟ-ಕಟನೆ ಶಬ್ದಮಾಡುತ್ತಿದ್ದವು. (ಛಂ/೧-೭)

**ಛಂ – ಕಟಕಟಹಿं ಜಂಬುಕ ಭೂತ ಪ್ರೇತ ಪಿಸಾಚ ಖರ್ಪರ ಸಂಚಹೀं।**
**ಬೇತಾಲ ಬೀರ ಕಪಾಲ ತಾಲ ಬಜಾಇ ಜೋಗಿನಿ ನಂಚಹೀं॥**
**ರಘುಬೀರ ಬಾನ ಪ್ರಚಂಡ ಖಂಡಹಿं ಭಟನ್ಹ ಕೇ ಉರ ಭುಜ ಸಿರಾ।**
**ಜಹँ ತಹँ ಪರಹಿं ಉಠಿ ಲರಹಿं ಧರ ಧರು ಧರು ಕರಹಿं ಭಯಕರ ಗಿರಾ॥ ೧ ॥**
**ಅಂತಾವರೀं ಗಹಿ ಉಡತ ಗೀಧ ಪಿಸಾಚ ಕರ ಗಹಿ ಧಾವಹೀं।**
**ಸಂಗ್ರಾಮ ಪುರ ಬಾಸೀ ಮನಹುँ ಬಹು ಬಾಲ ಗುಡೀ ಉಡಾವಹೀं॥**
**ಮಾರೇ ಪಛಾರೇ ಉರ ಬಿದಾರೇ ಬಿಪುಲ ಭಟ ಕಹँರತ ಪರೇ।**
**ಅವಲೋಕಿ ನಿಜ ದಲ ಬಿಕಲ ಭಟ ತಿಸಿರಾದಿ ಖರ ದೂಷನ ಫಿರೇ॥ ೨ ॥**
**ಸರ ಸಕ್ತಿ ತೋಮರ ಪರಸು ಸೂಲ ಕೃಪಾನ ಏಕಹಿ ಬಾರಹೀं।**
**ಕರಿ ಕೋಪ ಶ್ರೀರಘುಬೀರ ಪರ ಅಗನಿತ ನಿಸಾಚರ ಡಾರಹೀं॥**
**ಪ್ರಭು ನಿಮಿಷ ಮಹುँ ರಿಪು ಸರ ನಿವಾರಿ ಪಚಾರಿ ಡಾರೇ ಸಾಯಕಾ।**
**ದಸ ದಸ ಬಿಸಿಖ ಉರ ಮಾಝು ಮಾರೇ ಸಕಲ ನಿಸಿಚರ ನಾಯಕಾ॥ ೩ ॥**

**ಮಹಿ ಪರತ ಉಠಿ ಭಟ ಭಿರತ ಮರತ ನ ಕರತ ಮಾಯಾ ಅತಿ ಘನೀ।**
**ಸುರ ಡರತ ಚೌದಹ ಸಹಸ ಪ್ರೇತ ಬಿಲೋಕಿ ಏಕ ಅವಧ ಧನೀ॥**
**ಸುರ ಮುನಿ ಸಭಯ ಪ್ರಭು ದೇಖಿ ಮಾಯಾನಾಥ ಅತಿ ಕೌತುಕ ಕರ್‍ಯೋ।**
**ದೇಖಹಿಂ ಪರಸಪರ ರಾಮ ಕರಿ ಸಂಗ್ರಾಮ ರಿಪುದಲ ಲರಿ ಮರ್‍ಯೋ॥ ೪ ॥**

ನರಿಗಳು ವಿಕಾರವಾಗಿ ಕೂಗುತ್ತಿದ್ದವು. ಭೂತ, ಪ್ರೇತ, ಪಿಶಾಚಿಗಳು ತಲೆಯೋಡುಗಳಲ್ಲಿ ರಕ್ತವನ್ನು ಬಾಚಿಕೊಳ್ಳುತ್ತಿದ್ದವು. ವೀರವೇತಾಳರು ತಲೆಬುರುಡೆಗಳ ಮೇಲೆ ತಾಳಬಡಿಯುತ್ತಿದ್ದರು. ಯೋಗಿನಿಯರು ಕುಣಿಯುತ್ತಿದ್ದರು. ರಘುವೀರನ ಪ್ರಚಂಡ ಬಾಣಗಳು ಯೋಧರ ಎದೆ, ಭುಜ, ತಲೆಗಳನ್ನು ತುಂಡರಿಸುತ್ತಿದ್ದವು. ಅವರ ಮುಂಡಗಳು ಅಲ್ಲಲ್ಲಿ ಬೀಳುತ್ತಿದ್ದವು. ಮತ್ತೆ ಏಳುತ್ತಿದ್ದವು, ಹೋರಾಡುತ್ತಿದ್ದವು. 'ಹಿಡಿ-ಹಿಡಿ' ಎಂದು ಭಯಂಕರವಾಗಿ ಕೂಗುತ್ತಿದ್ದರು. ॥ ೧॥ ರಕ್ಕಸರ ಕರುಳುಗಳನ್ನು ಒಂದು ತುದಿಯನ್ನು ಕಚ್ಚಿಕೊಂಡು ಹದ್ದುಗಳು ಹಾರಾಡುತ್ತಿದ್ದರೆ, ಮತ್ತೊಂದು ತುದಿಯನ್ನು ಹಿಡಿದುಕೊಂಡು ಪಿಶಾಚಿಗಳು ಓಡಾಡುತ್ತಿದ್ದವು. ಆ ದೃಶ್ಯವು ಸಂಗ್ರಾಮನಗರದ ಅನೇಕ ಬಾಲಕರು ಗಾಳಿಪಟ ಆಡಿಸುತ್ತಿರುವರೋ ಎಂಬಂತೆ ಕಾಣುತ್ತಿತ್ತು. ಶ್ರೀರಾಮನ ಬಾಣಗಳಿಂದ ಅನೇಕ ಯೋಧರು ಏಟು ತಿಂದರು. ಕಗ್ಗೊಲೆಗೆ ಗುರಿಯಾದರು. ಅನೇಕರ ಎದೆ ಸೀಳಿ ಹೋಗಿತ್ತು. ಅವರು ನೆಲದ ಮೇಲೆ ಉರುಳಿ ನರಳಾಡುತ್ತಿದ್ದರು. ತಮ್ಮ ಪಡೆ ಈ ರೀತಿ ನೊಂದು ನರಳುತ್ತಿರುವುದನ್ನು ಕಂಡು ತ್ರಿಶಿರ, ಖರ, ದೂಷಣರು ರಾಮನ ಕಡೆಗೆ ಹೊರಳಿದರು. ॥ ೨॥ ಲೆಕ್ಕವಿಲ್ಲದಷ್ಟು ರಕ್ಕಸರು ಕೋಪದಿಂದ ಬಾಣ, ಶಕ್ತ್ಯಾಯುಧ, ತೋಮರ, ಗಂಡುಕೊಡಲಿ, ಶೂಲ, ಕೃಪಾಣಗಳನ್ನು ಒಮ್ಮೇಲೆ ಶ್ರೀರಾಮನ ಮೇಲೆ ಪ್ರಯೋಗಿಸತೊಡಗಿದರು. ರಾಮಚಂದ್ರಪ್ರಭುವು ನಿಮಿಷಮಾತ್ರದಲ್ಲಿ ಶತ್ರುಗಳ ಆಯುಧಗಳನ್ನು ಕತ್ತರಿಸಿ, ಅವರನ್ನು ಮೂದಲಿಸಿ, ಅವರ ಮೇಲೆ ಬಾಣಗಳನ್ನು ಪ್ರಯೋಗಿಸಿದನು. ಎಲ್ಲ ರಾಕ್ಷಸ ಸೇನಾಪತಿಗಳ ಎದೆಗಳಿಗೆ ಹತ್ತತ್ತು ಬಾಣಗಳನ್ನು ಹೂಡಿದನು. ॥ ೩॥ ರಕ್ಕಸಯೋಧರು ನೆಲಕ್ಕುರುಳುವರು, ಮತ್ತೆ ಮೇಲೆದ್ದು ಕಾದುವರು. ಅವರು ಸಾಯುತ್ತಿರಲಿಲ್ಲ. ಅನೇಕ ಪ್ರಕಾರದ ಮಾಯೆ ರಚಿಸುತ್ತಿದ್ದರು. ರಕ್ಕಸರು ಹದಿನಾಲ್ಕುಸಾವಿರ ಮಂದಿ; ರಾಮನಾದರೋ ಓರ್ವನೇ! ಇದನ್ನು ಕಂಡ ದೇವತೆಗಳಿಗೆ, ಮುನಿಗಳಿಗೆ ಭಯವಾಯಿತು. ಈ ವಿಧವಾಗಿ ದೇವತೆಗಳು, ಮುನಿಗಳು ಭಯಗೊಂಡಿರುವುದನ್ನು ನೋಡಿದ ಮಾಯಾಧೀಶನಾದ ಶ್ರೀರಾಮಚಂದ್ರನು ಒಂದು ಚಮತ್ಕಾರವನ್ನು ಮಾಡಿದನು. ಶತ್ರುಸೇನೆಯಲ್ಲಿ ತಮ್ಮಲ್ಲಿ ಪ್ರತಿಯೊಬ್ಬನೂ ರಾಮನಾಗಿ ಕಂಡುಬಂದರು. ಅದರಿಂದ ಅವರು ತಾವು ತಾವೇ ಹೋರಾಡಿ ಅಸುನೀಗಿದರು. ॥ ೪॥ (ಛಂ/೧-೪)

**ದೋ – ರಾಮ ರಾಮ ಕಹಿ ತನು ತಜಹಿಂ ಪಾವಹಿಂ ಪದ ನಿರ್ಬಾನ।**
**ಕರಿ ಉಪಾಯ ರಿಪು ಮಾರೇ ಛನ ಮಹುಁ ಕೃಪಾನಿಧಾನ॥ ೨೦ (ಕ)॥**
**ಹರಷಿತ ಬರಷಹಿಂ ಸುಮನ ಸುರ ಬಾಜಹಿಂ ಗಗನ ನಿಸಾನ।**
**ಅಸ್ತುತಿ ಕರಿ ಕರಿ ಸಬ ಚಲೇ ಸೋಭಿತ ಬಿಬಿಧ ಬಿಮಾನ ॥ ೨೦(ಖ)॥**

ರಾಕ್ಷಸ ಸೈನಿಕರು 'ಇವನೇ ರಾಮ, ರಾಮ' ಎಂದು ಹೇಳುತ್ತಾ ಶರೀರವನ್ನು ತ್ಯಜಿಸಿ ನಿರ್ವಾಣ (ಮೋಕ್ಷ) ವನ್ನು ಪಡೆದರು. ಕೃಪಾನಿಧಾನನಾದ ಶ್ರೀರಾಮನು ಈ ಉಪಾಯದಿಂದ ಕ್ಷಣಮಾತ್ರದಲ್ಲಿ ಶತ್ರುಗಳನ್ನು ನಿರ್ನಾಮಮಾಡಿದನು. ದೇವತೆಗಳು ಹರ್ಷಿತರಾಗಿ ಹೂಮಳೆಯನ್ನು ಸುರಿಸಿದರು. ಆಕಾಶದಲ್ಲಿ ದೇವದುಂದುಭಿಗಳು ಮೊಳಗಿದುವು. ಶ್ರೀರಾಮನನ್ನು ಕೊಂಡಾಡಿ, ಸ್ತುತಿಸಿ, ಅವರವರ ವಿಮಾನಗಳಲ್ಲಿ ತಮ್ಮ ತಮ್ಮ ಲೋಕಗಳಿಗೆ ತೆರಳಿದರು. (ದೋ/೨೦ ಕ, ಖ)

**ಚೌ – ಜಬ ರಘುನಾಥ ಸಮರ ರಿಪು ಜೀತೇ। ಸುರ ನರ ಮುನಿ ಸಬ ಕೇ ಭಯ ಬೀತೇ ॥**
**ತಬ ಲಛಿಮನ ಸೀತಹಿ ಲೈ ಆಏ। ಪ್ರಭು ಪದ ಪರತ ಹರಷಿ ಉರ ಲಾಏ ॥ ೧ ॥**
**ಸೀತಾ ಚಿತವ ಸ್ಯಾಮ ಮೃದು ಗಾತಾ। ಪರಮ ಪ್ರೇಮ ಲೋಚನ ನ ಅಘಾತಾ॥**
**ಪಂಚವಟೀಂ ಬಸಿ ಶ್ರೀರಘುನಾಯಕ। ಕರತ ಚರಿತ ಸುರ ಮುನಿ ಸುಖದಾಯಕ ॥ ೨ ॥**

ಶ್ರೀರಾಮನು ಯುದ್ಧದಲ್ಲಿ ಎಲ್ಲ ರಾಕ್ಷಸರ ಹುಟ್ಟನ್ನಡಗಿಸಿ, ದೇವತೆಗಳನ್ನು, ಮುನಿಗಳನ್ನು ಮನುಷ್ಯರನ್ನು ನಿರ್ಭಯರನ್ನಾಗಿಸಿದನು. ಆಗ ಲಕ್ಷ್ಮಣನು ಸೀತೆಯನ್ನು ರಾಮನ ಬಳಿಗೆ ಕರಕೊಂಡು ಬಂದು, ಪ್ರಭು ಚರಣಗಳಲ್ಲಿ ವಂದಿಸಿಕೊಂಡನು. ಕಾಲಿಗೆ ಬಿದ್ದ ಲಕ್ಷ್ಮಣನನ್ನು ಶ್ರೀರಾಮನು ಹಿಡಿದೆತ್ತಿ ಎದೆಗೊತ್ತಿಕೊಂಡನು. ಸೀತಾದೇವಿಯು ಶ್ರೀರಾಮನ ಕೋಮಲಶ್ಯಾಮಲ ಶರೀರವನ್ನು ತದೇಕದೃಷ್ಟಿಯಿಂದ ನೋಡುತ್ತಾ ಇದ್ದಳು. ಎಷ್ಟು ನೋಡಿದರೂ ಆಕೆಯ ಕಣ್ಣುಗಳು ತಣಿಯವು.

(ಬಳಿಕ ಸಂತೋಷವನ್ನು ತಡೆದುಕೊಳ್ಳದೆ ಸೀತಾದೇವಿಯು ಮಹಾವೀರನೂ, ತನ್ನ ಪತಿದೇವನೂ ಆದ ಶ್ರೀರಾಮಚಂದ್ರನನ್ನು ಪದೇ-ಪದೇ ಗಾಢವಾಗಿ ಆಲಿಂಗಿಸಿಕೊಂಡಳು.*) ಈ ವಿಧವಾಗಿ ಪಂಚವಟಿಯಲ್ಲಿ ನೆಲೆಸಿ, ಶ್ರೀರಾಮನು ದೇವತೆಗಳನ್ನು, ಮುನಿಗಳನ್ನು ಸಂತೋಷಪಡಿಸುತ್ತಾ ಅನೇಕ ಅದ್ಭುತವಾದ ಲೀಲೆಗಳನ್ನು ತೋರಿದನು. (ಚೌ/೧-೨)

## ಶೂರ್ಪಣಖಿಯು ರಾವಣನ ಬಳಿಗೆ ಹೋದುದು

**ಧುಆ್ ದೇಖಿ ಖರದೂಷನ ಕೇರಾ। ಜಾಇ ಸುಪನಖಾ॰ ರಾವನ ಪ್ರೇರಾ॥**
**ಬೋಲೀ ಬಚನ ಕ್ರೋಧ ಕರಿ ಭಾರೀ। ದೇಸ ಕೋಸ ಕೈ ಸುರತಿ ಬಿಸಾರೀ॥ ೩ ॥**
**ಕರಸಿ ಪಾನ ಸೋವಸಿ ದಿನು ರಾತೀ। ಸುಧಿ ನಹಿ॰ ತವ ಸಿರ ಪರ ಆರಾತೀ॥**
**ರಾಜ ನೀತಿ ಬಿನು ಧನ ಬಿನು ಧರ್ಮಾ। ಹರಿಹಿ ಸಮರ್ಪೇ ಬಿನು ಸತಕರ್ಮಾ॥ ೪ ॥**
**ಬಿದ್ಯಾ ಬಿನು ಬಿಬೇಕ ಉಪಜಾಏ॰। ಶ್ರಮ ಫಲ ಪಢೇ ಕಿಏ॰ ಅರು ಪಾಏ॰॥**
**ಸಂಗ ತೇ॰ ಜತೀ ಕುಮಂತ್ರ ತೇ ರಾಜಾ। ಮಾನ ತೆ ಗ್ಯಾನ ಪಾನ ತೇ॰ ಲಾಜಾ॥ ೫ ॥**
**ಪ್ರೀತಿ ಪ್ರನಯ ಬಿನು ಮದ ತೇ ಗುನೀ। ನಾಸಹಿ॰ ಬೇಗಿ ನೀತಿ ಅಸ ಸುನೀ॥ ೬ ॥**

ಖರ, ದೂಷಣರು ಧ್ವಂಸವಾದುದನ್ನು ಕಂಡ ಶೂರ್ಪಣಖಿಯು ಲಂಕೆಗೆ ಓಡಿಹೋಗಿ, ರಾವಣನ ಬಳಿ ಗೋಳಿಟ್ಟಳು. ಅವನ ಕ್ರೋಧ ಕೆರಳುವಂತೆ ಮಾಡಿದಳು. ಆಕೆಯು ಕೆರಳಿ ನುಡಿದಳು – ಎಲೈ ಅಣ್ಣಾ! ನೀನು ದೇಶ, ಕೋಶಗಳ ಸುದ್ದಿಯನ್ನೇ ಮರೆತುಬಿಟ್ಟಿರುವೆ. ಹೆಂಡಕುಡಿದು ಮೈಮರೆತು ಹಗಲಿರುಳೂ ಬಿದ್ದಿರುತ್ತಿಯೇ. ನಿನ್ನ ಶತ್ರುವು ನಿನ್ನ ತಲೆಯ ಮೇಲೆ ಕುಳಿತಿದ್ದಾನೆ ಎಂಬುದು ನಿನಗೆ ತಿಳಿದೇ ಇಲ್ಲ. ನೀತಿಯಿಲ್ಲದ ರಾಜ್ಯ, ಧರ್ಮವಿಲ್ಲದ ಧನ, ಈಶ್ವರಾರ್ಪಣೆಯಿಲ್ಲದ ಸತ್ಕರ್ಮ, ವಿವೇಕ ಹುಟ್ಟದಿರುವ ವಿದ್ಯೆ ಇವುಗಳ ಪರಿಣಾಮ ಬರಿಯ ಶ್ರಮವಷ್ಟೇ, ಫಲವು ಶೂನ್ಯವಾದುದು. ''ವಿಷಯಗಳ ಸಂಗದಿಂದ ಸಂನ್ಯಾಸೀ, ಕೆಟ್ಟ ಸಲಹೆಯಿಂದ ರಾಜನು, ಅಭಿಮಾನದಿಂದ ಜ್ಞಾನ, ಮದಿರಾಪಾನದಿಂದ ಲಜ್ಜೆ, ನಮ್ರತೆಯಿಲ್ಲದೆ ಪ್ರೀತಿ, ಮದದಿಂದ ಗುಣ ಇವೆಲ್ಲ ಕೆಟ್ಟು ಹಾಳಾಗುತ್ತವೆ ಎಂಬ ನೀತಿಯನ್ನು ನಾನು ಕೇಳಿದ್ದೇನೆ. (ಚೌ/೩-೬)

**ಸೋ – ರಿಪು ರುಜ ಪಾವಕ ಪಾಪ ಪ್ರಭು ಅಹಿ ಗನಿಅ ನ ಛೋಟ ಕರಿ।**
**ಅಸ ಕಹಿ ಬಿಬಿಧ ಬಿಲಾಪ ಕರಿ ಲಾಗೀ ರೋದನ ಕರನ॥ ೨೧ (ಕ)॥**

ಶತ್ರು, ರೋಗ, ಅಗ್ನಿ, ಪಾಪ, ಒಡೆಯ, ಸರ್ಪ ಇವುಗಳನ್ನು ಸಣ್ಣವೆಂದು ಕಡೆಗಣಿಸಬಾರದು. ಈ ರೀತಿ ಹೇಳಿ ಶೂರ್ಪಣಿಯು ಅನೇಕ ವಿಧದಿಂದ ಪ್ರಲಾಪಿಸತೊಡಗಿದಳು. (ಸೋ/೨೧ ಕ)

**ದೋ – ಸಭಾ ಮಾಝ ಪರಿ ಬ್ಯಾಕುಲ ಬಹು ಪ್ರಕಾರ ಕಹ ರೋಇ।**
**ತೋಹಿ ಜಿಅತ ದಸಕಂಧರ ಮೋರಿ ಕಿ ಅಸಿ ಗತಿ ಹೋಇ॥ ೨೧(ಖ)॥**

ರಾವಣನ ಸಭೆಯಲ್ಲಿ ಅವಳು ವ್ಯಾಕುಲಳಾಗಿ ಬಿದ್ದುಕೊಂಡು ಅನೇಕ ಪ್ರಕಾರದಿಂದ ಅತ್ತು-ಗೋಳಾಡಿ – ''ಎಲವೋ ದಶಕಂಠನೇ! ನೀನು ಜೀವಂತವಾಗಿರುವಾಗ ನನಗೆ ಇಂತಹ ಸ್ಥಿತಿ ಒದಗಿತಲ್ಲ! ಅಯ್ಯೋ! ಎಂದು ಕಿರುಚಿದಳು. (ದೋ/೨೧ ಖ)

**ಚೌ – ಸುನತ ಸಭಾಸದ ಉಠೆ ಅಕುಲಾಈ। ಸಮುಝಾಈ ಗಹಿ ಬಾ॰ಹ ಉಠಾಈ॥**
**ಕಹ ಲಂಕೇಸ ಕಹಸಿ ನಿಜ ಬಾತಾ। ಕೆಇ॰ ತವ ನಾಸಾ ಕಾನ ನಿಪಾತಾ॥ ೧ ॥**
**ಅವಧ ನೃಪತಿ ದಸರಥ ಕೇ ಜಾಏ। ಪುರುಷ ಸಿಂಘ ಬನ ಖೇಲನ ಆಏ॥**
**ಸಮುಝಿ ಪರೀ ಮೊಹಿ ಉನ್ಹ ಕೈ ಕರನೀ। ರಹಿತ ನಿಸಾಚರ ಕರಿಹಹಿ॰ ಧರನೀ॥ ೨ ॥**
**ಜಿನ್ಹ ಕರ ಭುಜಬಲ ಪಾಇ ದಸಾನನ। ಅಭಯ ಭಏ ಬಿಚರತ ಮುನಿ ಕಾನನ॥**
**ದೇಖತ ಬಾಲಕ ಕಾಲ ಸಮಾನಾ। ಪರಮ ಧೀರ ಧನ್ವೀ ಗುನ ನಾನಾ॥ ೩ ॥**

---

* ಶ್ಲೋಕ – ಬಭೂವ ಹೃಷ್ಟಾವೈದೇಹಿ ಭರ್ತಾರಂ ಪರಿಷಸ್ವಜೇ।
ಪುನಃ ಪುರಿಷ್ವಜ್ಯ ಶಶಿಪ್ರಭಾನನಾ। ಬಭೂವ ಹೃಷ್ಟಾ ಜನಕಾತ್ಮಜಾ ತದಾ॥
(ವಾಲ್ಮೀಕಿ ರಾಮಾಯಣ – ಅರ – ೩೦/೪೦, ೪೧)

**ಅತುಲಿತ ಬಲ ಪ್ರತಾಪ ದ್ವೌ ಭ್ರಾತಾ। ಖಲ ಬಧ ರತ ಸುರ ಮುನಿ ಸುಖದಾತಾ॥**
**ಸೋಭಾ ಧಾಮ ರಾಮ ಅಸ ನಾಮಾ। ತಿನ್ಹ ಕೇ ಸಂಗ ನಾರಿ ಎಕ ಸ್ಯಾಮಾ॥ ೪॥**
**ರೂಪ ರಾಸಿ ಬಿಧಿ ನಾರಿ ಸँವಾರೀ। ರತಿ ಸತ ಕೋಟಿ ತಾಸು ಬಲಿಹಾರೀ॥**
**ತಾಸು ಅನುಜ ಕಾಟೇ ಶ್ರುತಿ ನಾಸಾ। ಸುನಿ ತವ ಭಗಿನಿ ಕರಹಿಂ ಪರಿಹಾಸಾ॥ ೫॥**
**ಖರ ದೂಷನ ಸುನಿ ಲಗೇ ಪುಕಾರಾ। ಛನ ಮಹುँ ಸಕಲ ಕಟಕ ಉನ್ಹ ಮಾರಾ॥**
**ಖರ ದೂಷನ ತಿಸಿರಾ ಕರ ಘಾತಾ। ಸುನಿ ದಸಸೀಸ ಜರೇ ಸಬ ಗಾತಾ॥ ೬॥**

ಶೂರ್ಪಣಖಿಯ ಮಾತುಗಳನ್ನು ಕೇಳಿ ಸಭಾಸದರು ವ್ಯಾಕುಲಗೊಂಡರು. ಅವರು ಆಕೆಯ ಕೈಹಿಡಿದು ಎಬ್ಬಿಸಿ, ಆಕೆಗೆ ಸಮಾಧಾನ ಹೇಳಿದರು. ಲಂಕೇಶ್ವರನಾದ ರಾವಣನು ಮುಂದೆಬಂದು – ''ನಿನ್ನ ವಿಷಯವನ್ನು ಹೇಳು. ಯಾರು ನಿನ್ನ ಕಿವಿ, ಮೂಗುಗಳನ್ನು ಕತ್ತರಿಸಿದರು?'' ಎಂದು ನುಡಿದಾಗ, ಅವಳೆಂದಳು – ''ಅಯೋಧ್ಯಾಧಿಪತಿ ದಶರಥನ ಕುಮಾರರು ಪುರುಷಸಿಂಹದಂತಿದ್ದಾರೆ. ಅವರು ಬೇಟೆಯಾಡಲು ಕಾಡಿಗೆ ಬಂದಿರುವರು. ನಾನು ಅವರ ಉದ್ದೇಶವನ್ನು ತಿಳಿದುಕೊಂಡಿರುವೆನು. ಅವರು ಈ ಭೂಮಿಯಮೇಲೆ ರಾಕ್ಷಸಸಂತತಿಯನ್ನೇ ಇಲ್ಲವಾಗಿಸುವಂತೆ ಕಾಣುತ್ತದೆ. ರಾವಣಾ ! ಅವರ ಭುಜಬಲದ ನೆರವಿನಿಂದ ಮುನಿಗಳು ನಿರ್ಭಯರಾಗಿ ಸಂಚರಿಸುತ್ತಿದ್ದಾರೆ. ಅವರು ಮೇಲ್ನೋಟಕ್ಕೆ ಬಾಲಕರಂತಿದ್ದಾರೆ, ಆದರೆ ಅವರು ನಿಜವಾಗಿ ಕಾಲಸ್ವರೂಪರು. ಅವರು ಪರಮ ಧೀರರೂ, ಶ್ರೇಷ್ಠಧನುರ್ಧರರೂ, ಅನೇಕ ಗುಣಸಂಪನ್ನರೂ ಆಗಿದ್ದಾರೆ. ಆ ಅಣ್ಣತಮ್ಮಂದಿರಿಬ್ಬರ ಬಲಪರಾಕ್ರಮಗಳು ಅಪ್ರತಿಮ, ಅತುಲನೀಯ. ಅವರು ದುಷ್ಟರ ವಧೆಯಲ್ಲಿ ನಿರತರಾಗಿದ್ದಾರೆ. ಸುರಮುನಿಗಳಿಗೆ ಸುಖದಾಯಕರಾಗಿದ್ದಾರೆ. ಅವರಲ್ಲಿ ಹಿರಿಯವನ ಹೆಸರು 'ರಾಮ' ಎಂದು. ಅವನು ಲಾವಣ್ಯನಿಧಿಯಾಗಿದ್ದು, ಅವನೊಡನೆ ಒಂದು ತರುಣಿಯಾದ ಚೆಂದುಳ್ಳಹೆಣ್ಣು ಇದೆ. ವಿಧಾತನು ಸೌಂದರ್ಯವೆಲ್ಲವನ್ನೂ ಒಂದೆಡೆ ಸೇರಿಸಿ ಅವಳನ್ನು ಸೃಷ್ಟಿಸಿರುವನು. ಶತಕೋಟಿ ರತಿಯನ್ನು ಅವಳ ಮುಂದೆ ನಿವಾಳಿಸಿ ಎಸೆದುಬಿಡಬೇಕು. ಅಂತಹ ಚೆಲುವು ಆಕೆಯದು. ಆತನ ತಮ್ಮನೇ ನನ್ನ ಕಿವಿ, ಮೂಗುಗಳನ್ನು ಕತ್ತರಿಸಿದವನು. ನಾನು ನಿನ್ನ ತಂಗಿ ಎಂದು ಕೇಳಿ ಅವರು ನನ್ನನ್ನು ಗೇಲಿಮಾಡತೊಡಗಿದರು; ಹೀಯಾಳಿಸಿದರು. ನನ್ನ ಆಕ್ರಂದನವನ್ನು ಕೇಳಿ ಖರ-ದೂಷಣರು ನನ್ನ ನೆರವಿಗೆ ಧಾವಿಸಿಬಂದರು. ಆದರೆ ಅವರ ಸಮಸ್ತ ಸೈನ್ಯವನ್ನು ಆ ರಾಮನೆಂಬುವನು ಓರ್ವನೇ ಕ್ಷಣಮಾತ್ರದಲ್ಲಿ ಸಂಹರಿಸಿಬಿಟ್ಟನು.'' ಖರ-ದೂಷಣ-ತ್ರಿಶಿರರು ವಧೆಯಾದುದನ್ನು ಕೇಳಿ ರಾವಣನ ಕೋಪವು ನಖಶಿಖಾಂತ ವ್ಯಾಪಿಸಿತು. (ಚೌ/೧-೬)

**ದೋ – ಸೂಪನಖಹಿ ಸಮುಝಾಇ ಕರಿ ಬಲ ಬೋಲೆಸಿ ಬಹು ಭಾँತಿ।**
**ಗಯಉ ಭವನ ಅತಿ ಸೋಚಬಸ ನೀದ ಪರಇ ನಹಿಂ ರಾತಿ॥ ೨೨॥**

ರಾವಣನು ಶೂರ್ಪಣಖಿಯನ್ನು ಸಮಾಧಾನಪಡಿಸಿ, ತನ್ನ ಶಕ್ತಿಯನ್ನು ಕೊಚ್ಚಿಕೊಂಡನು. ಆದರೆ ಅವನು ಮನದಲ್ಲೇ ಅತೀವ ಚಿಂತಾಕ್ರಾಂತನಾಗಿ ಅಂತಃಪುರವನ್ನು ಸೇರಿದನು. ಅವನಿಗೆ ಇಡೀ ರಾತ್ರಿ ನಿದ್ದೆಯೇ ಹತ್ತಲಿಲ್ಲ. (ದೋ/೨೨)

**ಚೌ – ಸುರ ನರ ಅಸುರ ನಾಗ ಖಗ ಮಾಹೀಂ। ಮೋರೇ ಅನುಚರ ಕಹँ ಕೊಉ ನಾಹೀಂ॥**
**ಖರ ದೂಷನ ಮೊಹಿ ಸಮ ಬಲವಂತಾ। ತಿನ್ಹಹಿ ಕೊ ಮಾರಇ ಬಿನು ಭಗವಂತಾ॥ ೧॥**
**ಸುರ ರಂಜನ ಭಂಜನ ಮಹಿ ಭಾರಾ। ಜೌं ಭಗವಂತ ಲೀನ್ಹ ಅವತಾರಾ॥**
**ತೌ ಮೈಂ ಜಾಇ ಬೈರು ಹಠಿ ಕರಊँ। ಪ್ರಭು ಸರ ಪ್ರಾನ ತಜೇಂ ಭವ ತರಊँ॥ ೨॥**
**ಹೋಇಹಿ ಭಜನು ನ ತಾಮಸ ದೇಹಾ। ಮನ ಕ್ರಮ ಬಚನ ಮಂತ್ರ ದೃಢ ಏಹಾ॥**
**ಜೌं ನರರೂಪ ಭೂಪಸುತ ಕೋಊ। ಹರಿಹಉँ ನಾರಿ ಜೀತಿ ರನ ದೋಊ॥ ೩॥**
**ಚಲಾ ಅಕೇಲ ಜಾನ ಚಢ಼ಿ ತಹವಾँ। ಬಸ ಮಾರೀಚ ಸಿಂಧು ತಟ ಜಹವಾँ॥**
**ಇಹಾँ ರಾಮ ಜಸಿ ಜುಗುತಿ ಬನಾಈ। ಸುನಹು ಉಮಾ ಸೋ ಕಥಾ ಸುಹಾಈ॥ ೪॥**

ಅವನು ಮನಸ್ಸಿನಲ್ಲೇ ವಿಚಾರಮಾಡತೊಡಗಿದನು – ಸುರ, ನರ, ಅಸುರ, ನಾಗ, ಖಗ, ಇವರಲ್ಲಿ ನನ್ನ ಸೇವಕರನ್ನೂ ಸರಿಗಟ್ಟುವವರು ಯಾರೂ ಇಲ್ಲ. ಖರ-ದೂಷಣರಾದರೋ ನನ್ನಷ್ಟೇ ಬಲಶಾಲಿಗಳು. ಅವರನ್ನು ಭಗವಂತನಲ್ಲದೇ ಬೇರಾರು ಕೊಲ್ಲಬಲ್ಲರು? ಸುರರಂಜಕನೂ, ಭೂಭಾರಭಂಜಕನೂ ಆದ ಭಗವಂತನೇ ಏನಾದರೂ ಅವತಾರವೆತ್ತಿದ್ದರೆ, ನಾನು ಹಟದಿಂದ ಆತನ ಮೇಲೆ ವೈರ ಸಾಧಿಸುತ್ತೇನೆ. ಪ್ರಭುವಿನ ಬಾಣದಿಂದ ಪ್ರಾಣತ್ಯಾಗಮಾಡಿ ಭವಸಾಗರವನ್ನು ದಾಟುತ್ತೇನೆ. ಈ ತಾಮಸ ಶರೀರದಿಂದಲಂತೂ ಭಜನೆ ಸಾಗದು. ಆದ್ದರಿಂದ ತ್ರಿಕರಣಪೂರ್ವಕ ಇದೇ ನಿಶ್ಚಯವು. ಒಂದು ಪಕ್ಷ ಅವರು

ಮಾನವಮಾತ್ರರಾದ ರಾಜಕುಮಾರರಾಗಿದ್ದರೆ, ಅವರಿಬ್ಬರನ್ನು ರಣದಲ್ಲಿ ಗೆದ್ದು, ಅವರ ಹೆಣ್ಣನ್ನು ಕದ್ದು ತರುತ್ತೇನೆ. ಈ ವಿಧವಾಗಿ ಯೋಚಿಸಿ ರಾವಣನು ಒಬ್ಬಂಟಿಗನಾಗಿ ರಥವನ್ನೇರಿ ಸಮುದ್ರತೀರದಲ್ಲಿ ವಾಸಿಸುತ್ತಿದ್ದ ಮಾರೀಚನ ಬಳಿಗೆ ಹೋದನು. ಶಿವನು ಹೇಳುತ್ತಾನೆ– ''ಉಮಾ ! ಇಲ್ಲಿ ಶ್ರೀರಾಮಚಂದ್ರನು ಒಂದು ಯುಕ್ತಿಯನ್ನು ಹೂಡಿದನು. ಆ ಸುಂದರ ಕಥೆಯನ್ನು ಕೇಳು. (ಚೌ/೧-೪)

**ದೋ – ಲಛಿಮನ ಗಏ ಬನಹಿಂ ಜಬ ಲೇನ ಮೂಲ ಫಲ ಕಂದ ।**
**ಜನಕಸುತಾ ಸನ ಬೋಲೇ ಬಿಹಸಿ ಕೃಪಾ ಸುಖ ಬೃಂದ ॥ ೨೩ ॥**

ಲಕ್ಷ್ಮಣನು ಕಂದಮೂಲ ಫಲಗಳನ್ನು ತರಲು ಕಾಡಿಗೆ ತೆರಳಿದಾಗ, ಕೃಪಾನಿಧಾನನಾದ ಶ್ರೀರಾಮನು ನಕ್ಕು ಜಾನಕಿಯಲ್ಲಿ ಹೇಳಿದನು – (ದೋ/೨೩)

**ಚೌ – ಸುನಹು ಪ್ರಿಯಾ ಬ್ರತ ರುಚಿರ ಸುಸೀಲಾ । ಮೈಂ ಕಛು ಕರಬಿ ಲಲಿತ ನರಲೀಲಾ ॥**
**ತುಮ್ಹ ಪಾವಕ ಮಹುಂ ಕರಹು ನಿವಾಸಾ । ಜೌ ಲಗಿ ಕರೌಂ ನಿಸಾಚರ ನಾಸಾ ॥ ೧ ॥**
**ಜಬಹಿಂ ರಾಮ ಸಬ ಕಹಾ ಬಖಾನೀ । ಪ್ರಭು ಪದ ಧರಿ ಹಿಯಂ ಅನಲ ಸಮಾನೀ ॥**
**ನಿಜ ಪ್ರತಿಬಿಂಬ ರಾಖಿ ತಹಂ ಸೀತಾ । ತೈಸಇ ಸೀಲ ರೂಪ ಸುಬಿನೀತಾ ॥ ೨ ॥**
**ಲಛಿಮನಹೂಂ ಯಹ ಮರಮು ನ ಜಾನಾ । ಜೋ ಕಛು ಚರಿತ ರಚಾ ಭಗವಾನಾ ॥**
**ದಸಮುಖ ಗಯಉ ಜಹಾಂ ಮಾರೀಚಾ । ನಾಇ ಮಾಥ ಸ್ವಾರಥ ರತ ನೀಚಾ ॥ ೩ ॥**
**ನವನಿ ನೀಚ ಕೈ ಅತಿ ದುಖದಾಈ । ಜಿಮಿ ಅಂಕುಸ ಧನು ಉರಗ ಬಿಲಾಈ ॥**
**ಭಯದಾಯಕ ಖಲ ಕೈ ಪ್ರಿಯ ಬಾನೀ । ಜಿಮಿ ಅಕಾಲ ಕೇ ಕುಸುಮ ಭವಾನೀ ॥ ೪ ॥**

ಪತಿವ್ರತಾ ಶಿರೋಮಣಿಯಾದ ಸುಶೀಲೆ! ಪ್ರಿಯೇ! ಕೇಳು. ಈಗ ನಾನೊಂದು ಮನೋಹರವಾದ ಮಾನವಲೀಲೆಯನ್ನು ಮಾಡುತ್ತೇನೆ. ಆದ್ದರಿಂದ ನಾನು ರಕ್ಕಸರನ್ನು ಸಂಹರಿಸುವ ತನಕ ನೀನು ಅಗ್ನಿಯಲ್ಲಿ ವಾಸವಾಗಿರು. ಶ್ರೀರಾಮಚಂದ್ರನು ಈ ವಿಧವಾಗಿ ತಿಳಿಸಿದ ಮೇಲೆ, ಸಾಧ್ವಿಯಾದ ಸೀತಾದೇವಿಯು ಪ್ರಭುವಿನ ಚರಣಗಳನ್ನು ಹೃದಯದಲ್ಲಿ ಧರಿಸಿಕೊಂಡು ಅಗ್ನಿಯಲ್ಲಿ ಬೆರೆತುಹೋದಳು. ಸೀತೆಯು ಶ್ರೀರಾಮನ ಬಳಿಯಲ್ಲಿ ತನ್ನ ಛಾಯಾಮೂರ್ತಿಯನ್ನು ಇರಿಸಿದಳು. ಅದು ಅವಳಂತೆ ಇದ್ದು, ಶೀಲ-ಸ್ವಭಾವ, ರೂಪ ಮತ್ತು ವಿನಮ್ರಳೂ ಅವಳ ಹಾಗೇ ಇತ್ತು. ಭಗವಂತನು ರಚಿಸಿದ ಈ ಲೀಲೆಯನ್ನು ಲಕ್ಷ್ಮಣನೂ ಕೂಡ ಅರಿಯದೆ ಹೋದನು.

ಸ್ವಾರ್ಥ ಪರಾಯಣನೂ, ನೀಚನೂ ಆದ ರಾವಣನು ಮಾರೀಚನ ಬಳಿಗೆ ಹೋಗಿ, ಅವನಿಗೆ ಶಿರಬಾಗಿ ನಮಿಸಿದನು. ನೀಚನ ಬಾಗುವಿಕೆ (ನಮ್ರತೆ)ಯೂ ಅತ್ಯಂತ ದುಃಖಕಾರಕವೇ ಆಗಿರುತ್ತದೆ. ಅಂಕುಶ, ಬಿಲ್ಲು, ಹಾವು, ಬೆಕ್ಕು ಇವುಗಳು ಬಾಗಿರುವುದಿಲ್ಲವೇ? ಹಾಗೆಯೇ ದುಷ್ಟನ ಮಧುರವಾಣಿಯೂ ಕೂಡ ಅಕಾಲ ಕುಸುಮದಂತೆ ಭಯಂಕರವೂ, ಉತ್ಪಾತಸೂಚಕವೂ ಆಗಿರುತ್ತದೆ. (ಚೌ/೧-೪)

**ದೋ – ಕರಿ ಪೂಜಾ ಮಾರೀಚ ತಬ ಸಾದರ ಪೂಛೀ ಬಾತ ।**
**ಕವನ ಹೇತು ಮನ ಬ್ಯಗ್ರ ಅತಿ ಅಕಸರ ಆಯಹು ತಾತ ॥ ೨೪ ॥**

ಮಾರೀಚನು ತಲೆವಾಗಿದ ರಾವಣನನ್ನು ಆದರಿಸಿ, ಪ್ರೇಮದಿಂದ ಕೇಳಿದನು – ಅಯ್ಯಾ ! ನಿನ್ನ ಮನಸ್ಸು ಏಕೆ ಇಷ್ಟೊಂದು ವ್ಯಗ್ರಗೊಂಡಿದೆ? ನೀನು ಏಕಾಕಿಯಾಗಿ ಏಕೆ ಬಂದಿರುವೆ? (ದೋ/೨೪)

**ಚೌ – ದಸಮುಖ ಸಕಲ ಕಥಾ ತೇಹಿ ಆಗೇಂ । ಕಹೀ ಸಹಿತ ಅಭಿಮಾನ ಅಭಾಗೇಂ ॥**
**ಹೋಹು ಕಪಟ ಮೃಗ ತುಮ್ಹ ಛಲಕಾರೀ । ಜೆಹಿ ಬಿಧಿ ಹರಿ ಆನೌಂ ನೃಪನಾರೀ ॥ ೧ ॥**
**ತೇಹಿಂ ಪುನಿ ಕಹಾ ಸುನಹು ದಸಸೀಸಾ । ತೇ ನರರೂಪ ಚರಾಚರ ಈಸಾ ॥**
**ತಾಸೋಂ ತಾತ ಬಯರು ನಹಿಂ ಕೀಜೈ । ಮಾರೇಂ ಮರಿಅ ಜಿಆಏಂ ಜೀಜೈ ॥ ೨ ॥**
**ಮುನಿ ಮಖ ರಾಖನ ಗಯಉ ಕುಮಾರಾ । ಬಿನು ಫರ ಸರ ರಘುಪತಿ ಮೋಹಿ ಮಾರಾ ॥**
**ಸತ ಜೋಜನ ಆಯಉಂ ಛನ ಮಾಹೀಂ । ತಿನ್ಹ ಸನ ಬಯರು ಕಿಏಂ ಭಲ ನಾಹೀಂ ॥ ೩ ॥**
**ಭಇ ಮಮ ಕೀಟ ಭೃಂಗ ಕೀ ನಾಈ । ಜಹಂ ತಹಂ ಮೈಂ ದೇಖಉಂ ದೋಉ ಭಾಈ ॥**
**ಜೌಂ ನರ ತಾತ ತದಪಿ ಅತಿ ಸೂರಾ । ತಿನ್ಹಹಿ ಬಿರೋಧಿ ನ ಆಇಹಿ ಪೂರಾ ॥ ೪ ॥**

ಭಾಗ್ಯಹೀನನಾದ ರಾವಣನು ಎಲ್ಲ ಕಥೆಯನ್ನು ಹೆಮ್ಮೆಯಿಂದ ಹೇಳಿಕೊಂಡನು. ಮತ್ತೆ ಹೇಳಿದನು– ''ನೀನು ಮೋಸಮಾಡುವ ಕಪಟ ಮಾಯಾಮೃಗನಾಗು. ಅದರ ನೆರವಿನಿಂದ ನಾನು ಆ ರಾಜಕುಮಾರಿಯನ್ನು ಅಪಹರಿಸುತ್ತೇನೆ.' ಅದಕ್ಕೆ ಮಾರೀಚನು ಹೇಳಿದನು– ''ಎಲೈ ದಶಕಂಠನೇ! ಕೇಳು. ರಾಮನು ನರರೂಪಧಾರಿಯಾದ ಚರಾಚರಗಳ ಒಡೆಯನು, ಪ್ರಭುವು. ಅವನೊಡನೆ ವೈರಕಟ್ಟಿಕೊಳ್ಳಬೇಡ. ಅವನ ಸಂಕಲ್ಪದಂತೆ ಜೀವಿಗಳ ಹುಟ್ಟು-ಸಾವುಗಳು ಜರಗುವವು. ಈ ರಾಜಕುಮಾರರೇ ವಿಶ್ವಾಮಿತ್ರನಯಾಗ ರಕ್ಷಣೆಗಾಗಿ ಹೋಗಿದ್ದರು. ಆಗ ಈ ರಘುನಾಥನು ನನ್ನ ಮೇಲೆ ಒಂದು ಮೊಂಡು ಬಾಣವನ್ನು ಪ್ರಯೋಗಿಸಿದ್ದನು. ಅದರಿಂದ ನಾನು ಕ್ಷಣಮಾತ್ರದಲ್ಲಿ ನೂರು ಯೋಜನ ದೂರಕ್ಕೆ ಹೋಗಿ ಬಿದ್ದೆ. ಆದ್ದರಿಂದ ಅವನೊಡನೆ ವೈರಕಟ್ಟಿಕೊಳ್ಳುವುದು ಶ್ರೇಯಸ್ಕರವಲ್ಲ. ಈಗ ನನ್ನ ದೆಸೆಯಂತೂ ಭೃಂಗಕೀಟದಂತಾಗಿ ಬಿಟ್ಟಿದೆ. ಈಗ ನನಗೆ ಎಲ್ಲೆಲ್ಲೂ ರಾಮ ಲಕ್ಷ್ಮಣರೇ ಕಾಣುತ್ತಿದ್ದಾರೆ. ಅಯ್ಯಾ! ಅವರು ನಿಜವಾಗಿ ಮಾನವಮಾತ್ರರೆಂದೇ ತಿಳಿದುಕೊಂಡರೂ, ಸಾಟಿಯಿಲ್ಲದ ಶೂರರಾಗಿದ್ದಾರೆ. ಅಂತಹವರನ್ನು ಎದುರುಹಾಕಿಕೊಳ್ಳುವುದರಿಂದ ಯಾವ ಪ್ರಯೋಜನವೂ ಸಿಗಲಾರದು. (ಚೌ/೧-೪)

**ದೋ – ಜೆಹಿಂ ತಾಡಕಾ ಸುಬಾಹು ಹತಿ ಖಂಡೆಉ ಹರ ಕೋದಂಡ।**

**ಖರ ದೂಷನ ತಿಸಿರಾ ಬಧೆಉ ಮನುಜ ಕಿ ಅಸ ಬರಿಬಂಡ ॥ ೨೫ ॥**

ತಾಟಕಿ, ಸುಬಾಹುಗಳು ಆ ರಾಮನ ಕೈಯಿಂದಲೇ ಸತ್ತರು. ಶಿವಧನುರ್ಭಂಗ ಮಾಡಿದ ಮಹಾವೀರನೂ ಅವನೇ. ಖರ, ದೂಷಣ, ತ್ರಿಶಿರರನ್ನು ಸಂಹರಿಸಿದವನೂ ಅವನೇ. ಅಂತಹ ಪ್ರಚಂಡ ಪರಾಕ್ರಮಿಯು ಮನುಷ್ಯನಾಗಿರಬಲ್ಲನೇ? (ದೋ/೨೫)

**ಚೌ – ಜಾಹು ಭವನ ಕುಲ ಕುಸಲ ಬಿಚಾರೀ। ಸುನತ ಜರಾ ದೀನ್ಹಿಸಿ ಬಹು ಗಾರೀ॥**
**ಗುರು ಜಿಮಿ ಮೂಢ ಕರಸಿ ಮಮ ಬೋಧಾ। ಕಹು ಜಗ ಮೊಹಿ ಸಮಾನ ಕೋ ಜೋಧಾ॥ ೧ ॥**
**ತಬ ಮಾರೀಚ ಹೃದಯಁ ಅನುಮಾನಾ। ನವಹಿ ಬಿರೋಧೇಂ ನಹಿಂ ಕಲ್ಯಾನಾ॥**
**ಸಸ್ತ್ರೀ ಮರ್ಮೀ ಪ್ರಭು ಸಠ ಧನೀ। ಬೈದ ಬಂದಿ ಕಬಿ ಭಾನಸ ಗುನೀ॥ ೨ ॥**
**ಉಭಯ ಭಾಁತಿ ದೇಖಾ ನಿಜ ಮರನಾ। ತಬ ತಾಕಿಸಿ ರಘುನಾಯಕ ಸರನಾ॥**
**ಉತರು ದೇತ ಮೊಹಿ ಬಧಬ ಅಭಾಗೇಂ। ಕಸ ನ ಮರೌಂ ರಘುಪತಿ ಸರ ಲಾಗೇಂ ॥ ೩ ॥**
**ಅಸ ಜಿಯಁ ಜಾನಿ ದಸಾನನ ಸಂಗಾ। ಚಲಾ ರಾಮ ಪದ ಪ್ರೇಮ ಅಭಂಗಾ ॥**
**ಮನ ಅತಿ ಹರಷ ಜನಾವ ನ ತೇಹೀ। ಆಜು ದೇಖಿಹಉಁ ಪರಮ ಸನೇಹೀ ॥ ೪ ॥**

ಆದ್ದರಿಂದ ನೀನು ಕುಲದ ಕುಶಲವನ್ನು ಗಮನಿಸಿಕೊಂಡು ಮನೆಗೆ ಮರಳುವುದು ಒಳಿತು.'' ಇದನ್ನು ಕೇಳಿದೊಡನೆಯೇ ರಾವಣನು ಭಗ್ಗನೆ ಉರಿದುಬಿದ್ದನು. ಮಾರೀಚನನ್ನು ಅನೇಕವಿಧವಾಗಿ ಬೈಯ್ದನು. ಎಲೆ ಮರುಳೇ! ನೀನು ಗುರುವಿನಂತೆ ನನಗೆ ಜ್ಞಾನಬೋಧೆ ಮಾಡುತ್ತಿರುವೆಯಲ್ಲ! ಈ ಪ್ರಪಂಚದಲ್ಲಿ ನನಗೆ ಸಾಟಿಯಾಗುವ ಯೋಧನು ಯಾರಿದ್ದಾನೆ ಹೇಳು? ಆಗ ಮಾರೀಚನು ಮನದಲ್ಲೇ ಎಣಿಕೆ ಹಾಕಿದನು – ''ಶಸ್ತ್ರಧಾರಿ, ಮರ್ಮಜ್ಞ (ಗುಟ್ಟನ್ನು ತಿಳಿದವನು), ಸಮರ್ಥನಾದ ಒಡೆಯ, ಮೂರ್ಖ, ಶ್ರೀಮಂತ, ವೈದ್ಯ, ಭಟ್ಟಂಗಿ (ಹೊಗಳುಭಟ್ಟ), ಕವಿ, ಅಡಿಗೆಯವನು, ಹೀಗೆ ಈ ಒಂಭತ್ತು ಜನರೊಂದಿಗೆ ವೈರಕಟ್ಟಿಕೊಳ್ಳುವುದು ಕ್ಷೇಮವಲ್ಲ.'' ಎರಡೂ ಕಡೆಗಳಲ್ಲೂ ತನಗೆ ಮರಣವೇ ಕಾದಿದೆಯೆಂಬುದನ್ನು ಮನಗಂಡು ಮಾರೀಚನು ಶ್ರೀರಾಮನಿಗೆ ಶರಣುಹೋಗುವುದೇ ಲೇಸು ಎಂದುಕೊಂಡನು. ರಾವಣನ ಮಾತನ್ನು ಕೇಳದಿದ್ದರೆ ಈ ದುರ್ಮಾರ್ಗಿಯು ನನ್ನನ್ನು ಕೊಂದು ಬಿಡುವನು. ಆದ್ದರಿಂದ ರಘುನಾಥನ ಬಾಣದಿಂದಲೇ ಏಕೆ ಸಾಯಬಾರದು? ಈ ವಿಧವಾಗಿ ಮನಸ್ಸಿನಲ್ಲೇ ಯೋಚಿಸಿ, ರಾವಣನನ್ನು ಅನುಸರಿಸಿದನು. ಅವನಿಗೆ ಶ್ರೀರಾಮನ ಚರಣಗಳಲ್ಲಿ ಅತ್ಯಂತ ಭಕ್ತಿಯಿತ್ತು. ಇಂದು ನಾನು ನನ್ನ ಪರಮ ಸ್ನೇಹಿ ಶ್ರೀರಾಮಚಂದ್ರನ ದರ್ಶನ ಪಡೆಯುವೆನಲ್ಲ! ಎಂಬ ಹರ್ಷ ಅವನ ಹೃದಯದಲ್ಲಿ ತುಂಬಿಹೋಗಿತ್ತು. ಆದರೆ ಈ ಹಿಗ್ಗನ್ನು ರಾವಣನ ಮುಂದೆ ತೋರಿಸಿಕೊಳ್ಳಲಿಲ್ಲ. (ಚೌ/೧-೪)

**ಛಂ – ನಿಜ ಪರಮ ಪ್ರೀತಮ ದೇಖಿ ಲೋಚನ ಸುಫಲ ಕರಿ ಸುಖ ಪಾಇಹೌಂ।**
**ಶ್ರೀ ಸಹಿತ ಅನುಜ ಸಮೇತ ಕೃಪಾನಿಕೇತ ಪದ ಮನ ಲಾಇಹೌಂ॥**
**ನಿರ್ಬಾನ ದಾಯಕ ಕ್ರೋಧ ಜಾ ಕರ ಭಗತಿ ಅಬಸಹಿ ಬಸಕರೀ।**
**ನಿಜ ಪಾನಿ ಸರ ಸಂಧಾನಿ ಸೋ ಮೊಹಿ ಬಧಿಹಿ ಸುಖಸಾಗರ ಹರೀ॥**

ಮಾರೀಚನು ತನ್ನಲ್ಲೇ ಆಲೋಚಿಸತೊಡಗಿದನು – ''ನನಗೆ ಪರಮ ಪ್ರಿಯತಮನಾದ ಸ್ವಾಮಿಯನ್ನು ನೋಡಿ, ನನ್ನ ಕಣ್ಣುಗಳನ್ನು ಸಫಲವಾಗಿಸಿಕೊಂಡು ಸುಖಿಯಾಗುವೆನು. ಸೀತಾಲಕ್ಷ್ಮಣರೊಂದಿಗೆ ಕೂಡಿರುವ ಕೃಪಾಳುವಾದ ಶ್ರೀರಾಮಚಂದ್ರನ

ಚರಣಗಳಲ್ಲಿ ನನ್ನ ಮನಸ್ಸನ್ನು ನೆಡುತ್ತೇನೆ. ಆ ಶ್ರೀಹರಿ (ರಾಮ)ಯ ಕ್ರೋಧವೂ ಕೂಡ ಮೋಕ್ಷದಾಯಕವೇ. ಅವನು ಸ್ವತಂತ್ರನಾಗಿದ್ದರೂ ಭಕ್ತಿಗೆ ವಶನು. ಆಹಾ! ಅಂತಹ ಆನಂದಸಾಗರನಾದ ಶ್ರೀಹರಿಯು ಇಂದು ಸ್ವತಃ ಬಾಣವನ್ನು ಹೂಡಿ ನನ್ನನ್ನು ವಧಿಸುವನು. (ಛಂದ)

**ದೋ – ಮಮ ಪಾಛೇँ ಧರ ಧಾವತ ಧರೇँ ಸರಾಸನ ಬಾನ।**
**ಫಿರಿ ಫಿರಿ ಪ್ರಭುಹಿ ಬಿಲೋಕಿಹಉँ ಧನ್ಯ ನ ಮೋ ಸಮ ಆನ॥ ೨೬ ॥**

ಮೃಗರೂಪದಿಂದ ನಾನು ಓಡುತ್ತಿರುವಾಗ, ಧನುರ್ಬಾಣಗಳನ್ನು ಕೈಯಲ್ಲಿ ಧರಿಸಿದ ಶ್ರೀರಾಮಚಂದ್ರನು ನನ್ನನ್ನು ಬೆನ್ನಟ್ಟುತ್ತಿರುವುದನ್ನು ನಾನು ಪುನಃ-ಪುನಃ ನೋಡುತ್ತಿರುವೆನು. ಆದ್ದರಿಂದ ನನ್ನಂತಹ ಧನ್ಯರು ಬೇರೆ ಯಾರಿರಬಹುದು? (ದೋ/೨೬)

## ಸೀತಾಪಹರಣ

**ಚೌ – ತೆಹಿ ಬನ ನಿಕಟ ದಸಾನನ ಗಯಊ। ತಬ ಮಾರೀಚ ಕಪಟಮೃಗ ಭಯಊ॥**
**ಅತಿ ಬಿಚಿತ್ರ ಕಛು ಬರನಿ ನ ಜಾಈ। ಕನಕ ದೇಹ ಮನಿ ರಚಿತ ಬನಾಈ॥ ೧ ॥**
**ಸೀತಾ ಪರಮ ರುಚಿರ ಮೃಗ ದೇಖಾ। ಅಂಗ ಅಂಗ ಸುಮನೋಹರ ಬೇಷಾ॥**
**ಸುನಹು ದೇವ ರಘುಬೀರ ಕೃಪಾಲಾ। ಏಹಿ ಮೃಗ ಕರ ಅತಿ ಸುಂದರ ಛಾಲಾ॥ ೨ ॥**
**ಸತ್ಯಸಂಧ ಪ್ರಭು ಬಧಿ ಕರಿ ಏಹೀ। ಆನಹು ಚರ್ಮ ಕಹತಿ ಬೈದೇಹೀ॥**
**ತಬ ರಘುಪತಿ ಜಾನತ ಸಬ ಕಾರನ। ಉಠೇ ಹರಷಿ ಸುರ ಕಾಜು ಸँವಾರನ॥ ೩ ॥**
**ಮೃಗ ಬಿಲೋಕಿ ಕಟಿ ಪರಿಕರ ಬಾँಧಾ। ಕರತಲ ಚಾಪ ರುಚಿರ ಸರ ಸಾँಧಾ॥**
**ಪ್ರಭು ಲಛಿಮನಹಿ ಕಹಾ ಸಮುಝಾಈ। ಫಿರತ ಬಿಪಿನ ನಿಸಿಚರ ಬಹು ಭಾಈ॥ ೪ ॥**
**ಸೀತಾ ಕೇರಿ ಕರೆಹು ರಖವಾರೀ। ಬುಧಿ ಬಿಬೇಕ ಬಲ ಸಮಯ ಬಿಚಾರೀ॥**
**ಪ್ರಭುಹಿ ಬಿಲೋಕಿ ಚಲಾ ಮೃಗ ಭಾಜೀ। ಧಾಏ ರಾಮು ಸರಾಸನ ಸಾಜೀ॥ ೫ ॥**
**ನಿಗಮ ನೇತಿ ಸಿವ ಧ್ಯಾನ ನ ಪಾವಾ। ಮಾಯಾಮೃಗ ಪಾಛೇँ ಸೋ ಧಾವಾ॥**
**ಕಬಹುँ ನಿಕಟ ಪುನಿ ದೂರಿ ಪರಾಈ। ಕಬಹುँಕ ಪ್ರಗಟಇ ಕಬಹುँ ಛಪಾಈ॥ ೬ ॥**
**ಪ್ರಗಟತ ದುರತ ಕರತ ಛಲ ಭೂರೀ। ಏಹಿ ಬಿಧಿ ಪ್ರಭುಹಿ ಗಯಉ ಲೈ ದೂರೀ॥**
**ತಬ ತಕಿ ರಾಮ ಕಠಿನ ಸರ ಮಾರಾ। ಧರನಿ ಪರೆಉ ಕರಿ ಘೋರ ಪುಕಾರಾ॥ ೭ ॥**
**ಲಛಿಮನ ಕರ ಪ್ರಥಮಹಿँ ಲೈ ನಾಮಾ। ಪಾಛೇँ ಸುಮಿರೆಸಿ ಮನ ಮಹुँ ರಾಮಾ॥**
**ಪ್ರಾನ ತಜತ ಪ್ರಗಟೆಸಿ ನಿಜ ದೇಹಾ। ಸುಮಿರೆಸಿ ರಾಮು ಸಮೇತ ಸನೇಹಾ॥ ೮ ॥**
**ಅಂತರ ಪ್ರೇಮ ತಾಸು ಪಹಿಚಾನಾ। ಮುನಿ ದುರ್ಲಭ ಗತಿ ದೀನ್ಹಿ ಸುಜಾನಾ॥ ೯ ॥**

ರಾವಣನು ದಂಡಕಾರಣ್ಯಕ್ಕೆ ಬಂದಾಗ ಮಾರೀಚನು ಕಪಟ ಮೃಗನಾಗಿದ್ದನು. ಅದು ಅತ್ಯಂತ ವಿಚಿತ್ರವಾಗಿತ್ತು. ಅದು ವರ್ಣನಾತೀತವಾಗಿತ್ತು. ಆ ಜಿಂಕೆಯ ಮೈಯೆಲ್ಲ ಚಿನ್ನದ್ದಾಗಿದ್ದು ಮಣಿಖಚಿತವಾಗಿತ್ತು. ಅಂಗ-ಪ್ರತ್ಯಂಗಗಳು ಮನೋಹರವಾಗಿದ್ದ ಆ ಪರಮ ಸುಂದರ ಮೃಗವನ್ನು ಸೀತೆಯು ನೋಡಿ, ಹೇಳಿದಳು – ದೇವಾ! ಕೃಪಾಳು ರಘುವೀರಾ! ಈ ಜಿಂಕೆಯ ಚರ್ಮವು ಎಷ್ಟು ಸುಂದರವಾಗಿದೆ! ಓ ಸತ್ಯಪ್ರತಿಜ್ಞನಾದ ಪ್ರಭುವೇ! ಇದನ್ನು ಕೊಂದು ಇದರ ಚರ್ಮವನ್ನು ತಂದುಕೊಡಿರಿ. ಆಗ ಶ್ರೀರಾಮನಿಗೆ ಅದು ಕಪಟಮೃಗವೆಂದು ತಿಳಿದಿದ್ದರೂ, ದೇವತೆಗಳ ಕಾರ್ಯಸಿದ್ಧಿಗಾಗಿ ಹರ್ಷದಿಂದ ಮೇಲೆದ್ದನು. ಜಿಂಕೆಯನ್ನು ನೋಡಿ ಶ್ರೀರಾಮನು ನಡುಕಟ್ಟಿಕೊಂಡು, ಕೈಯಲ್ಲಿ ಬಿಲ್ಲನ್ನು ಹಿಡಿದು, ದಿವ್ಯಬಾಣವನ್ನು ಹೂಡಿ, ಲಕ್ಷ್ಮಣನಲ್ಲಿ ಇಂತೆಂದನು – ತಮ್ಮ ಲಕ್ಷ್ಮಣಾ! ಕಾಡಿನಲ್ಲಿ ಅನೇಕ ರಾಕ್ಷಸರು ಓಡಾಡುತ್ತಿರುತ್ತಾರೆ. ನೀನು ಬುದ್ಧಿ, ಬಲ, ವಿವೇಕದಿಂದ, ಸಮಯನೋಡಿ ಸೀತೆಯನ್ನು ರಕ್ಷಿಸುತ್ತಿರು. ಪ್ರಭುವನ್ನು ನೋಡಿ ಮೃಗವು ಓಡಿಹೋಯಿತು. ಶ್ರೀರಾಮನೂ ಕೂಡ ಧನುಸ್ಸನ್ನು ಏರಿಸಿ ಅದನ್ನು ಬೆನ್ನಟ್ಟಿದನು. ವೇದಗಳಿಂದ ನೇತಿ-ನೇತಿ ಎಂದು ವರ್ಣಿಸಲ್ಪಟ್ಟ, ಶಂಕರನಿಗೂ ಧ್ಯಾನದೂರನಾದ, ಅಂದರೆ - ಮನ-ವಾಣಿಗಳಿಂದ ಪೂರ್ಣವಾಗಿ ಅತೀತನಾಗಿರುವ ಶ್ರೀರಾಮನು ಮಾಯಾಮೃಗದ ಹಿಂದೆ ಓಡಾಡುತ್ತಿರುವನಲ್ಲ! ಎಂತಹ ಆಶ್ಚರ್ಯ!! ಆ ಜಿಂಕೆಯು

ಒಮ್ಮೆ ಹತ್ತಿರ ಸುಳಿದರೆ, ಮತ್ತೊಮ್ಮೆ ದೂರ ಓಡುತ್ತಿತ್ತು. ಒಮ್ಮೆ ಕಣ್ಣಿಗೆ ಬಿದ್ದರೆ ಮತ್ತೊಮ್ಮೆ ಕಣ್ಮರೆಯಾಗುತ್ತಿತ್ತು. ಈ ಪ್ರಕಾರ ಕಾಣುವುದು, ಕಣ್ಮರೆಯಾಗುವುದು ಹಾಗೂ ಅನೇಕರೀತಿಯ ಮೋಸದಿಂದ ಆ ಕಾಂಚನಮೃಗವು ರಾಮಚಂದ್ರನನ್ನು ಬಹುದೂರಕ್ಕೆ ಕೊಂಡುಹೋಯಿತು. ಆಗ ಶ್ರೀರಾಮನು ಗುರಿಯಿಟ್ಟು ಒಂದು ಬಾಣವನ್ನು ಹೊಡೆದನು. ಬಾಣ ತಗಲುತ್ತಲೇ ಅದು ಘೋರವಾಗಿ ಕೂಗುತ್ತಾ ನೆಲಕ್ಕುರುಳಿತು. ಅದು ಮೊದಲಿಗೆ ಹಾ ಲಕ್ಷ್ಮಣಾ! ಎಂದು ಕೂಗಿ ಬಳಿಕ ಶ್ರೀರಾಮನನ್ನು ಸ್ಮರಿಸಿದನು. ಪ್ರಾಣತ್ಯಾಗ ಮಾಡುವಾಗ ಆ ರಕ್ಕಸನು ತನ್ನ ನಿಜರೂಪವನ್ನಾಂತು, ಅನನ್ಯ ಭಕ್ತಿಯಿಂದ ಶ್ರೀರಾಮನನ್ನು ಸ್ಮರಿಸಿದನು. ಸರ್ವಜ್ಞನಾದ ಪ್ರಭುವು ಅವನ ಹೃದಯದ ಭಕ್ತಿ-ಭಾವವನ್ನು ಗುರುತಿಸಿ, ಅವನಿಗೆ ಮುನಿಗಳಿಗೂ ದುರ್ಲಭವಾದ ಪರಮಪದವನ್ನು ಕರುಣಿಸಿದನು. (ಚೌ/೧-೯)

**ದೋ – ಬಿಪುಲ ಸುಮನ ಸುರ ಬರಷಹಿಂ ಗಾವಹಿಂ ಪ್ರಭು ಗುನ ಗಾಥ।**
**ನಿಜ ಪದ ದೀನ್ಹ ಅಸುರ ಕಹುಂ ದೀನಬಂಧು ರಘುನಾಥ॥ ೨೭ ॥**

ದೇವತೆಗಳು ಪುಷ್ಪವೃಷ್ಟಿಗರೆದರು. ''ದೀನಬಂಧುವಾದ ರಘುನಾಥನು ಅಸುರನಿಗೂ ಪರಮಪದವನ್ನು ಕರುಣಿಸಿದ'' ಎಂದು ಪ್ರಭುಗುಣಗಳನ್ನು ಕೊಂಡಾಡಿದರು. (ದೋ/೨೭)

**ಚೌ – ಖಲ ಬಧಿ ತುರತ ಫಿರೇ ರಘುಬೀರಾ। ಸೋಹ ಚಾಪ ಕರ ಕಟಿ ತೂನೀರಾ॥**
**ಆರತ ಗಿರಾ ಸುನೀ ಜಬ ಸೀತಾ। ಕಹ ಲಛಿಮನ ಸನ ಪರಮ ಸಭೀತಾ॥ ೧ ॥**
**ಜಾಹು ಬೇಗಿ ಸಂಕಟ ಅತಿ ಭ್ರಾತಾ। ಲಛಿಮನ ಬಿಹಸಿ ಕಹಾ ಸುನು ಮಾತಾ॥**
**ಭೃಕುಟಿ ಬಿಲಾಸ ಸೃಷ್ಟಿ ಲಯ ಹೋಈ। ಸಪನೆಹುಂ ಸಂಕಟ ಪರಇ ಕಿ ಸೋಈ॥ ೨ ॥**
**ಮರಮ ಬಚನ ಜಬ ಸೀತಾ ಬೋಲಾ। ಹರಿ ಪ್ರೇರಿತ ಲಛಿಮನ ಮನ ಡೋಲಾ॥**
**ಬನ ದಿಸಿ ದೇವ ಸೌಂಪಿ ಸಬ ಕಾಹೂ। ಚಲೇ ಜಹಾಂ ರಾವನ ಸಸಿ ರಾಹೂ॥ ೩ ॥**
**ಸೂನ ಬೀಚ ದಸಕಂಧರ ದೇಖಾ। ಆವಾ ನಿಕಟ ಜತೀ ಕೇಂ ಬೇಷಾ॥**
**ಜಾಕೇಂ ಡರ ಸುರ ಅಸುರ ಡೆರಾಹೀಂ। ನಿಸಿ ನ ನೀದ ದಿನ ಅನ್ನ ನ ಖಾಹೀಂ॥ ೪ ॥**
**ಸೋ ದಸಸೀಸ ಸ್ವಾನ ಕೀ ನಾಈಂ। ಇತ ಉತ ಚಿತಇ ಚಲಾ ಭಡಿಹಾಈಂ॥**
**ಇಮಿ ಕುಪಂಥ ಪಗ ದೇತ ಖಗೇಸಾ। ರಹ ನ ತೇಜ ತನ ಬುಧಿ ಬಲ ಲೇಸಾ॥ ೫ ॥**
**ನಾನಾ ಬಿಧಿ ಕರಿ ಕಥಾ ಸುಹಾಈ। ರಾಜನೀತಿ ಭಯ ಪ್ರೀತಿ ದೇಖಾಈ॥**
**ಕಹ ಸೀತಾ ಸುನು ಜತೀ ಗೊಸಾಈಂ। ಬೋಲೆಹು ಬಚನ ದುಷ್ಟ ಕೀ ನಾಈಂ॥ ೬ ॥**
**ತಬ ರಾವನ ನಿಜ ರೂಪ ದೆಖಾವಾ। ಭಈ ಸಭಯ ಜಬ ನಾಮ ಸುನಾವಾ॥**
**ಕಹ ಸೀತಾ ಧರಿ ಧೀರಜು ಗಾಢಾ। ಆಇ ಗಯಉ ಪ್ರಭು ರಹು ಖಲ ಠಾಢಾ॥ ೭ ॥**
**ಜಿಮಿ ಹರಿಬಧುಹಿ ಛುದ್ರ ಸಸ ಚಾಹಾ। ಭಏಸಿ ಕಾಲಬಸ ನಿಸಿಚರ ನಾಹಾ॥**
**ಸುನತ ಬಚನ ದಸಸೀಸ ರಿಸಾನಾ। ಮನ ಮಹುಂ ಚರನ ಬಂದಿ ಸುಖ ಮಾನಾ॥ ೮ ॥**

ಮಾಯಾವಿಯಾದ ಮಾರೀಚನನ್ನು ಕೊಂದು ಶ್ರೀರಘುವೀರನು ಕೂಡಲೇ ಹಿಂತಿರುಗಿದನು. ಅವನ ಕೈಯಲ್ಲಿ ಧನುರ್ಬಾಣಗಳು, ಸೊಂಟದಲ್ಲಿ ಬತ್ತಳಿಕೆ-ಶೋಭಿಸುತ್ತಿತ್ತು. ಇತ್ತ ಸೀತಾದೇವಿಯು ಮಾರೀಚನು ಕೂಗಿದ 'ಹಾ ಲಕ್ಷ್ಮಣಾ!' ಎಂಬ ವಿಲಾಪದಿಂದೊಡಗೂಡಿದ ಕೂಗನ್ನು ಕೇಳಿ, ತುಂಬಾ ಭಯಪಟ್ಟು ಲಕ್ಷ್ಮಣನಲ್ಲಿ ಇಂತೆಂದಳು – ''ನೀನು ಬೇಗನೇ ಹೋಗು, ನಿಮ್ಮಣ್ಣನ ಮೇಲೆ ಏನೋ ವಿಪತ್ತು ಎರಗಿದೆ.'' ಇದನ್ನು ಕೇಳಿ ಲಕ್ಷ್ಮಣನು ನಕ್ಕು ನುಡಿದನು – ''ಅಮ್ಮಾ! ಶ್ರೀರಾಮನು ತನ್ನ ಭ್ರುಕುಟೀವಿಲಾಸಮಾತ್ರದಿಂದ ಇಡೀ ಸೃಷ್ಟಿಯನ್ನು ಲಯಗೊಳಿಸಬಲ್ಲನು. ಅಂತಹ ಸ್ವಾಮಿಗೆ ಕನಸಿನಲ್ಲಿಯೂ ಕೂಡ ಸಂಕಟಗಳು ಬರಲಾರವು. ಆಗ ಸೀತೆಯು ಲಕ್ಷ್ಮಣನ ಕುರಿತು ಮರ್ಮಭೇದಕ ಮಾತುಗಳನ್ನಾಡಿದಳು. ಇದನ್ನು ಕೇಳುತ್ತಲೇ ಲಕ್ಷ್ಮಣನ ಮನಸ್ಸು ಶ್ರೀಹರಿಪ್ರೇರಣೆಯಿಂದ ವಿಚಲಿತವಾಯಿತು. ಅವನು ಸೀತಾದೇವಿಯ ರಕ್ಷಣೆಯನ್ನು ವನದೇವತೆ, ದಿಗ್ದೇವತೆಗಳಿಗೆ ಒಪ್ಪಿಸಿ, ರಾವಣನೆಂಬ ಚಂದ್ರನಿಗೆ ರಾಹುವಾದ ಶ್ರೀರಾಮನಿದ್ದೆಡೆಗೆ ಹೋದನು. ಇತ್ತ ಅದಕ್ಕಾಗಿಯೇ ಹೊಂಚುಹಾಕುತ್ತಿದ್ದ ರಾವಣನು ಸಂನ್ಯಾಸಿವೇಷದಲ್ಲಿ ಸೀತೆಯ ಬಳಿಗೆ ಬಂದನು. ದೇವದಾನವರೂ ಕೂಡ ರಾವಣನ ಹೆಸರು ಕೇಳಿದಾಕ್ಷಣ ಭಯಕಂಪಿತರಾಗಿ ನಿದ್ರಾಹಾರಗಳನ್ನು ತೊರೆದು ಬಿಡುತ್ತಿದ್ದರು. ಅಂತಹ ಭಯಂಕರನಾದ ದಶಕಂಠನು ನಾಯಿಯಂತೆ ಕಳ್ಳತನದಿಂದ ಅತ್ತ-ಇತ್ತ

ನೋಡುತ್ತಾ ಬಂದನು. (ಕಾಕಭುಶುಂಡಿಯರು ಹೇಳುತ್ತಿದ್ದಾರೆ –) ಗರುಡನೇ! ಈ ಪ್ರಕಾರ ಕೆಟ್ಟಹಾದಿಯಲ್ಲಿ ಕಾಲಿಟ್ಟದ್ದೇ ತಡ, ದೇಹದಲ್ಲಿ ಕಾಂತಿಯಾಗಲೀ, ಬುದ್ಧಿ, ಬಲಗಳಾಗಲೀ ಲವಲೇಶವೂ ಇರುವುದಿಲ್ಲ. ರಾವಣನು ಸೀತೆಯಬಳಿ ಅನೇಕ ಸಂಗತಿಗಳನ್ನೂ, ರಾಜನೀತಿಯನ್ನೂ ಹೇಳಿದನು. ಅವಳಿಗೆ ಭಯವನ್ನು ತೋರಿ, ತನ್ನ ಪ್ರೇಮವನ್ನು ಪ್ರಕಟಿಸಿದನು. ಸೀತೆಯೆಂದಳು – ಎಲೈ ಸಂನ್ಯಾಸಿಯೇ! ನೀನು ಓರ್ವ ದುಷ್ಟನಂತೆ ಮಾತಾಡುತ್ತಿರುವಿರಲ್ಲ? ಇದನ್ನು ಕೇಳುತ್ತಲೇ ರಾವಣನು ತನ್ನ ನಿಜರೂಪವನ್ನು ತೋರಿಸಿ, ತನ್ನ ಹೆಸರನ್ನು ಹೇಳಿದನು. ಅದನ್ನು ಕೇಳಿ ಸೀತೆಯು ಭಯಕಂಪಿತಳಾದಳು. ಕೊನೆಗೆ ಧೈರ್ಯತಂದುಕೊಂಡು ಹೇಳಿದಳು – ''ಎಲವೋ ದುಷ್ಟ ರಕ್ಕಸನೇ! ನಿಲ್ಲು. ನನ್ನ ಪತಿದೇವರು ಇನ್ನೇನು ಬಂದುಬಿಡುತ್ತಾರೆ. ಒಂದು ಅಲ್ಪ ಮೊಲವು ಸಿಂಹಿಣಿಯನ್ನು ಬಯಸುವಂತೆ, ನೀನು ನನ್ನನ್ನು ಬಯಸಿ ಕಾಲವಶನಾಗಿರುವೆ.'' ಸೀತೆಯ ಮಾತನ್ನು ಕೇಳಿದ ರಾವಣನು ಕ್ರುದ್ಧನಾದನು. ಅವನು ಮನಸ್ಸಿನಲ್ಲೇ ಸೀತೆಯ ಚರಣಗಳಿಗೆ ವಂದಿಸಿ ಸಂತೋಷಪಟ್ಟನು. (ಚೌ/೧-೮)

**ದೋ – ಕ್ರೋಧವಂತ ತಬ ರಾವನ ಲೀನ್ಹಿಸಿ ರಥ ಬೈಠಾಇ।**
**ಚಲಾ ಗಗನಪಥ ಆತುರ ಭಯ್ ರಥ ಹಾ್ಕಿ ನ ಜಾಇ ॥ ೨೮ ॥**

ಕ್ರೋಧೋನ್ಮತ್ತನಾದ ರಾವಣನು ಸೀತಾದೇವಿಯನ್ನು ಬಲವಂತವಾಗಿ ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಆತುರದಿಂದ ಆಕಾಶಮಾರ್ಗವಾಗಿ ಹೊರಟನು. ಆದರೆ ಭಯವಿಹ್ವಲನಾದ ಅವನು ರಥವನ್ನು ಸರಿಯಾಗಿ ನಡೆಸದಾದನು. (ದೋ/೨೮)

## ರಾವಣ ಜಟಾಯು ಯುದ್ಧ

**ಚೌ – ಹಾ ಜಗ ಏಕ ಬೀರ ರಘುರಾಯಾ। ಕೆಹಿಂ ಅಪರಾಧ ಬಿಸಾರೇಹು ದಾಯಾ ॥**
**ಆರತಿ ಹರನ ಸರನ ಸುಖದಾಯಕ। ಹಾ ರಘುಕುಲ ಸರೋಜ ದಿನನಾಯಕ ॥ ೧ ॥**
**ಹಾ ಲಛಿಮನ ತುಮ್ಹಾರ ನಹಿಂ ದೋಸಾ। ಸೋ ಫಲು ಪಾಯಉಁ ಕೀನ್ಹೆಉಁ ರೋಸಾ ॥**
**ಬಿಬಿಧ ಬಿಲಾಪ ಕರತಿ ಬೈದೇಹೀ। ಭೂರಿ ಕೃಪಾ ಪ್ರಭು ದೂರಿ ಸನೇಹೀ ॥ ೨ ॥**
**ಬಿಪತಿ ಮೋರಿ ಕೋ ಪ್ರಭುಹಿ ಸುನಾವಾ। ಪುರೋಡಾಸ ಚಹ ರಾಸಭ ಖಾವಾ ॥**
**ಸೀತಾ ಕೈ ಬಿಲಾಪ ಸುನಿ ಭಾರೀ। ಭಏ ಚರಾಚರ ಜೀವ ದುಖಾರೀ ॥ ೩ ॥**
**ಗೀಧರಾಜ ಸುನಿ ಆರತ ಬಾನೀ। ರಘುಕುಲತಿಲಕ ನಾರಿ ಪಹಿಚಾನೀ ॥**
**ಅಧಮ ನಿಸಾಚರ ಲೀನ್ಹೇಂ ಜಾಈ। ಜಿಮಿ ಮಲೇಛ ಬಸ ಕಪಿಲಾ ಗಾಈ ॥ ೪ ॥**
**ಸೀತೇ ಪುತ್ರಿ ಕರಸಿ ಜನಿ ತ್ರಾಸಾ। ಕರಿಹಉಁ ಜಾತುಧಾನ ಕರ ನಾಸಾ ॥**
**ಧಾವಾ ಕ್ರೋಧವಂತ ಖಗ ಕೈಸೇಂ। ಛೂಟಇ ಪಬಿ ಪರಬತ ಕಹುಁ ಜೈಸೇಂ ॥ ೫ ॥**
**ರೇ ರೇ ದುಷ್ಟ ಠಾಢ ಕಿನ ಹೋಹೀ। ನಿರ್ಭಯ ಚಲೆಸಿ ನ ಜಾನೆಹಿ ಮೋಹೀ ॥**
**ಆವತ ದೇಖಿ ಕೃತಾಂತ ಸಮಾನಾ। ಫಿರಿ ದಸಕಂಧರ ಕರ ಅನುಮಾನಾ ॥ ೬ ॥**
**ಕೀ ಮೈನಾಕ ಕಿ ಖಗಪತಿ ಹೋಈ। ಮಮ ಬಲ ಜಾನ ಸಹಿತ ಪತಿ ಸೋಈ ॥**
**ಜಾನಾ ಜರಠ ಜಟಾಯೂ ಏಹಾ। ಮಮ ಕರ ತೀರಥ ಛಾಁಡಿಹಿ ದೇಹಾ ॥ ೭ ॥**
**ಸುನತ ಗೀಧ ಕ್ರೋಧಾತುರ ಧಾವಾ। ಕಹ ಸುನು ರಾವನ ಮೋರ ಸಿಖಾವಾ ॥**
**ತಜಿ ಜಾನಕಿಹಿ ಕುಸಲ ಗೃಹ ಜಾಹೂ। ನಾಹಿಂ ತ ಅಸ ಹೋಇಹಿ ಬಹುಬಾಹೂ ॥ ೮ ॥**
**ರಾಮ ರೋಷ ಪಾವಕ ಅತಿ ಘೋರಾ। ಹೋಇಹಿ ಸಕಲ ಸಲಭ ಕುಲ ತೋರಾ ॥**
**ಉತರು ನ ದೇತ ದಸಾನನ ಜೋಧಾ। ತಬಹಿಂ ಗೀಧ ಧಾವಾ ಕರಿ ಕ್ರೋಧಾ ॥ ೯ ॥**
**ಧರಿ ಕಚ ಬಿರಥ ಕೀನ್ಹ ಮಹಿ ಗಿರಾ। ಸೀತಹಿ ರಾಖಿ ಗೀಧ ಪುನಿ ಫಿರಾ ॥**
**ಚೋಚನ್ಹ ಮಾರಿ ಬಿದಾರೇಸಿ ದೇಹೀ। ದಂಡ ಏಕ ಭಇ ಮುರುಛಾ ತೇಹೀ ॥ ೧೦ ॥**
**ತಬ ಸಕ್ರೋಧ ನಿಸಿಚರ ಖಿಸಿಆನಾ। ಕಾಢೆಸಿ ಪರಮ ಕರಾಲ ಕೃಪಾನಾ ॥**
**ಕಾಟೆಸಿ ಪಂಖ ಪರಾ ಖಗ ಧರನೀ। ಸುಮಿರಿ ರಾಮ ಕರಿ ಅದಭುತ ಕರನೀ ॥ ೧೧ ॥**

**ಸೀತಹಿ ಜಾನ ಚಢಾಇ ಬಹೋರೀ। ಚಲಾ ಉತಾಇಲ ತ್ರಾಸ ನ ಥೋರೀ॥**
**ಕರತಿ ಬಿಲಾಪ ಜಾತಿ ನಭ ಸೀತಾ। ಬ್ಯಾಧ ಬಿಬಸ ಜನು ಮೃಗೀ ಸಭೀತಾ॥ ೧೨ ॥**
**ಗಿರಿ ಪರ ಬೈಠೇ ಕಪಿನ್ಹ ನಿಹಾರೀ। ಕಹಿ ಹರಿ ನಾಮ ದೀನ್ಹ ಪಟ ಡಾರೀ॥**
**ಏಹಿ ಬಿಧಿ ಸೀತಹಿ ಸೋ ಲೈ ಗಯಊ। ಬನ ಅಸೋಕ ಮಹಁ ರಾಖತ ಭಯಊ॥ ೧೩ ॥**

ಸೀತೆಯು ವಿಲಾಪಿಸುತ್ತಿದ್ದಳು – ಓ ಜಗದ್ವಿಖ್ಯಾತ - ಅದ್ವಿತೀಯ ವೀರನಾದ ರಘುನಾಥಾ! ನನ್ನ ಯಾವ ಅಪರಾಧಕ್ಕಾಗಿ ನೀನು ನನ್ನನ್ನು ಮರೆತೆ? ಓ ದುಃಖಹರ! ಶರಣಾಗತ ವತ್ಸಲಾ! ಹಾ! ರಘುಕುಲಸರೋಜ ರವಿಯೇ! ಕಾಪಾಡು, ಕಾಪಾಡು!! ಓ ಲಕ್ಷ್ಮಣಾ! ಇದರಲ್ಲಿ ನಿನ್ನ ದೋಷವೇನೂ ಇಲ್ಲ. ನಾನು ಸಿಟ್ಟುಮಾಡಿ ಮಾತಾಡಿದೆ. ಅದರ ಫಲ ಅನುಭವಿಸುತ್ತಿರುವೆನು. ಹೀಗೆ ಸೀತಾದೇವಿಯು ಪರಿಪರಿಯಾಗಿ ಹಲುಬುತ್ತಿದ್ದಳು. ಅಯ್ಯೋ! ಪ್ರಭುವಿನ ಕೃಪೆಯೇನೋ ವಿಪುಲವಾಗಿದೆ. ಆದರೆ ಆ ಪ್ರಿಯ ಪ್ರಭುವು ಈಗ ತುಂಬಾ ದೂರದಲ್ಲಿದ್ದಾನೆ. ಪ್ರಭುವಿಗೆ ನನ್ನ ಈ ವಿಪತ್ತನ್ನು ತಿಳಿಸುವವರು ಯಾರು? ಯಜ್ಞದ ಹವಿಸ್ಸನ್ನು (ಪುರೋಡಾಶ) ಒಂದು ಕತ್ತೆ ತಿನ್ನಬಯಸುತ್ತದೆ.'' ಸೀತಾದೇವಿಯ ದುರ್ಭರವಿಲಾಪವನ್ನು ಕೇಳಿ, ಜಡ-ಚೇತನ ಪ್ರಾಣಿಗಳೆಲ್ಲವೂ ದುಃಖಿತವಾದುವು. ಗೃಧ್ರರಾಜನಾದ ಜಟಾಯುವು ಶೋಕಾರ್ತೆಯಾದ ಸೀತಾದೇವಿಯ ವಾಣಿಯನ್ನು ಕೇಳಿ, 'ಇವಳು ನಿಜವಾಗಿ ರಘುವಂಶ ಶ್ರೇಷ್ಠನಾದ ಶ್ರೀರಾಮನ ಸತಿಯೇ ಆಗಿರಬೇಕು' ಎಂದು ಗುರುತಿಸಿದನು. ಕಪಿಲಗೋವು ಒಬ್ಬ ಕಸಾಯಿಯ ಕೈಯಲ್ಲಿ ಸಿಕ್ಕಿದಂತೆ, ಆಕೆಯು ಆ ನೀಚ ನಿಶಾಚರನಿಂದ ಬಲವಂತವಾಗಿ ಅಪಹರಿಸಲ್ಪಡುವುದನ್ನು ಆ ಗೃಧ್ರರಾಜ ಜಟಾಯುವು ನೋಡಿದನು. ಆಗ ಅವನು ಹೇಳಿದನು – ಮಗಳೇ! ಸೀತೆ! ಭಯಪಡಬೇಡ. ನಾನು ಈ ರಾಕ್ಷಸನ ಸೊಲ್ಲಡಗಿಸುತ್ತೇನೆ. ಈ ರೀತಿ ಹೇಳಿ, ಆ ಪಕ್ಷಿಯು ಪರ್ವತದ ಮೇಲೆ ವಜ್ರವು ಎರಗುವಂತೆ, ಆ ರಾಕ್ಷಸನ ಮೇಲೆ ಎರಗಿತು. ಅದು ರಕ್ಕಸನನ್ನು ಮೂದಲಿಸುತ್ತಾ ಹೇಳಿತು – ''ಎಲವೋ ದುಷ್ಟಾ! ನಿಲ್ಲು. ನಿರ್ಭಯವಾಗಿ ಓಡುತ್ತಿರುವೆಯಲ್ಲ! ನಿನಗೆ ನನ್ನ ಗುರುತು ಹತ್ತಲಿಲ್ಲವೇ?'' ಯಮನಂತೆ ತನ್ನತ್ತ ಬರುತ್ತಿದ್ದ ಜಟಾಯುವನ್ನು ಕಂಡು ರಾವಣನು ಹಿಂದಿರುಗಿ ಯೋಚಿಸತೊಡಗಿನು – ''ಇದು ಮೈನಾಕ ಪರ್ವತವೋ, ಅಥವಾ ಹರಿವಾಹನ ಗರುಡನೋ?

ಆದರೆ ಆ ಗರುಡನು ತನ್ನ ಒಡೆಯ ವಿಷ್ಣುಸಹಿತ ನನ್ನ ಬಲವನ್ನು ಬಲ್ಲನು. ಪಕ್ಷಿಯು ಕೊಂಚ ಹತ್ತಿರ ಬಂದಾಗ ರಾವಣನಿಗೆ ಅದರ ಗುರುತುಹತ್ತಿತು. ಅವನು ಹೇಳಿದನು – 'ಓಹೋ! ಇದು ಮುದಿ ಜಟಾಯು. ಸರಿ, ಇದು ನನ್ನ ಶರತೀರ್ಥದಲ್ಲಿ ಪ್ರಾಣಬಿಡಲು ಬಂದಿದೆ.' ಇದನ್ನು ಕೇಳಿ ಜಟಾಯುವು ಕ್ರೋಧತಪ್ತನಾಗಿ ಅವನ ಬಳಿಗೆ ಧಾವಿಸಿ ಹೇಳಿದನು – ''ಎಲವೋ ಅನೇಕಬಾಹುಗಳುಳ್ಳ ರಾವಣಾ! ನನ್ನ ಎಚ್ಚರಿಕೆಯನ್ನು ಕೇಳು. ಜಾನಕಿದೇವಿಯನ್ನು ತೊರೆದು ಕ್ಷೇಮವಾಗಿ ಮನೆಗೆ ಹೋಗು. ಇಲ್ಲವಾದರೆ ಶ್ರೀರಾಮನ ಭಯಾನಕ ರೋಷಾಗ್ನಿಯಲ್ಲಿ ನಿನ್ನ ಇಡೀವಂಶವು ಪತಂಗದಂತೆ ಭಸ್ಮವಾಗಿ ಹೋದೀತು.'' ಯೋಧ ರಾವಣನು ಏನೂ ಹೇಳದಿದ್ದಾಗ, ಆ ಗೃಧ್ರನು ಕೋಪೋದ್ರಿಕ್ತನಾಗಿ ರಾವಣನ ಮೇಲೆರಗಿದನು. ಅವನು ರಾವಣನ ಜುಟ್ಟನ್ನು ಹಿಡಿದು, ರಥದಿಂದ ಕೆಳಕ್ಕೆ ಬೀಳಿಸಿದನು. ಜಟಾಯುವು ಸೀತೆಯನ್ನು ಪಕ್ಕಕ್ಕೆ ಒಂದೆಡೆ ಕುಳ್ಳಿರಿ, ಮತ್ತೆ ರಾವಣನ ಮೇಲೆ ಎರಗಿ ಕೊಕ್ಕಿನಿಂದ ಅವನ ಶರೀರವನ್ನೆಲ್ಲ ಗಾಯಗೊಳಿಸಿದನು. ಇದರಿಂದ ಅವನು ಒಂದು ಗಳಿಗೆ ಮೂರ್ಛೆಹೋದನು. ಅನಂತರ ಎಚ್ಚತ್ತು ಲಜ್ಜಿತನಾದ ರಾವಣನು ಕ್ರುದ್ಧನಾಗಿ ತನ್ನ ಅತಿಭಯಂಕರ ಕಠಾರಿಯನ್ನು ಹಿರಿದು ಜಟಾಯುವಿನ ರೆಕ್ಕೆಗಳನ್ನು ಸವರಿಹಾಕಿದನು. ಹೀಗೆ ಅತಿ ಸಾಹಸದಿಂದ, ಅದ್ಭುತ ಪರಾಕ್ರಮದಿಂದ ರಾವಣನನ್ನು ಎದುರಿಸಿದ ಜಟಾಯುವು ಶ್ರೀರಾಮನ ಅದ್ಭುತ ಲೀಲೆಗಳನ್ನು ಸ್ಮರಿಸುತ್ತಾ ನೆಲಕ್ಕೊರಗಿದನು. ರಾವಣನು ಮತ್ತೆ ಸೀತೆಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು, ಭಯಾಂದೋಳನದಿಂದ ಶೀಘ್ರವಾಗಿ ಹೊರಟುಹೋದನು. ಬೇಡನ ಬಲೆಗೆ ಬಿದ್ದ ಚಿಗರೆಯಂತೆ ಸೀತೆಯು ವಿಲಾಪಿಸುತ್ತಾ ಆಕಾಶಮಾರ್ಗದಿಂದ ಹೋಗುತ್ತಿದ್ದಳು. ಹೋಗುತ್ತಿರುವಾಗ ಒಂದು ಪರ್ವತದ ಮೇಲೆ ಕುಳಿತಿದ್ದ ಕಪಿಗಳನ್ನು ಕಂಡು ಸೀತೆಯು ಹರಿನಾಮಸ್ಮರಣೆ ಮಾಡುತ್ತಾ, ತನ್ನ ಉತ್ತರೀಯವನ್ನು (ಆಭರಣಗಳ ಮೂಟೆಯನ್ನು) ಕೆಳಕ್ಕೆ ಎಸೆದಳು. ಈ ಪ್ರಕಾರ ರಾವಣನು ಸೀತೆಯನ್ನು ಲಂಕೆಗೆ ಕೊಂಡುಹೋಗಿ ಅಶೋಕಾವನದಲ್ಲಿ ಇರಿಸಿದನು. (ಚೌ/೧-೧೩)

**ದೋ – ಹಾರಿ ಪರಾ ಖಲ ಬಹು ಬಿಧಿ ಭಯ ಅರು ಪ್ರೀತಿ ದೆಖಾಇ।**
**ತಬ ಅಸೋಕ ಪಾದಪ ತರ ರಾಖಿಸಿ ಜತನ ಕರಾಇ॥ ೨೯ (ಕ)॥**

ದುಷ್ಟರಾವಣನು ಆಕೆಯನ್ನು ಭಯಪಡಿಸಿಯೂ, ವಿವಿಧವಾದ ಪ್ರೀತಿವಚನಗಳನ್ನಾಡಿದರೂ ಸಫಲವಾಗದಿರುವಾಗ, ಸೀತೆಯನ್ನು ಒಂದು ಅಶೋಕವೃಕ್ಷದ ಕೆಳಗೆ, ರಾಕ್ಷಸಸ್ತ್ರೀಯರ ರಕ್ಷಣೆಯಲ್ಲಿ ಇರಿಸಿದನು. (ದೋ/೨೯ ಕ)

**ನವಾಹ್ನಪಾರಾಯಣದ ಆರನೆಯ ವಿಶ್ರಾಮ**

**ದೋ – ಜೆಹಿ ಬಿಧಿ ಕಪಟ ಕುರಂಗ ಸ೦ಗ ಧಾಇ ಚಲೇ ಶ್ರೀರಾಮ।**
**ಸೋ ಛಬಿ ಸೀತಾ ರಾಖಿ ಉರ ರಟತಿ ರಹತಿ ಹರಿನಾಮ॥೨೯(ಖ)॥**

ಮಾಯಾಮೃಗವನ್ನು ಬೆನ್ನಟ್ಟಿಹೋದಾಗ ಇದ್ದ ಶ್ರೀರಾಮನ ರೂಪವನ್ನೇ ಸೀತೆಯು ಮನಸ್ಸಿನಲ್ಲಿಟ್ಟುಕೊಂಡು ಧ್ಯಾನಿಸುತ್ತಾ, ಹರಿಸ್ಮರಣೆ ಮಾಡತೊಡಗಿದಳು. (ದೋ/೨೯ ಖ)

## ಸೀತಾನ್ವೇಷಣೆ

**ಚೌ – ರಘುಪತಿ ಅನುಜಹಿ ಆವತ ದೇಖೀ। ಬಾಹಿಜ ಚಿಂತಾ ಕೀನ್ಹಿ ಬಿಸೇಷೀ॥**
**ಜನಕಸುತಾ ಪರಿಹರಿಹು ಅಕೇಲೀ। ಆಯಹು ತಾತ ಬಚನ ಮಮ ಪೇಲೀ॥೧॥**
**ನಿಸಿಚರ ನಿಕರ ಫಿರಹಿ೦ ಬನ ಮಾಹೀ೦। ಮಮ ಮನ ಸೀತಾ ಆಶ್ರಮ ನಾಹೀ೦॥**
**ಗಹಿ ಪದ ಕಮಲ ಅನುಜ ಕರ ಜೋರೀ। ಕಹೇಉ ನಾಥ ಕಛು ಮೋಹಿ ನ ಖೋರೀ॥೨॥**
**ಅನುಜ ಸಮೇತ ಗಏ ಪ್ರಭು ತಹವಾ೦। ಗೋದಾವರಿ ತಟ ಆಶ್ರಮ ಜಹವಾ೦॥**
**ಆಶ್ರಮ ದೇಖಿ ಜಾನಕೀ ಹೀನಾ। ಭಏ ಬಿಕಲ ಜಸ ಪ್ರಾಕೃತ ದೀನಾ॥೩॥**
**ಹಾ ಗುನ ಖಾನಿ ಜಾನಕೀ ಸೀತಾ। ರೂಪ ಸೀಲ ಬ್ರತ ನೇಮ ಪುನೀತಾ॥**
**ಲಛಿಮನ ಸಮುಝಾಏ ಬಹು ಭಾ೦ತೀ। ಪೂಛತ ಚಲೇ ಲತಾ ತರು ಪಾ೦ತೀ॥೪॥**
**ಹೇ ಖಗ ಮೃಗ ಹೇ ಮಧುಕರ ಶ್ರೇನೀ। ತುಮ್ಹ ದೇಖೀ ಸೀತಾ ಮೃಗನೈನೀ॥**
**ಖಂಜನ ಸುಕ ಕಪೋತ ಮೃಗ ಮೀನಾ। ಮಧುಪ ನಿಕರ ಕೋಕಿಲಾ ಪ್ರಬೀನಾ॥೫॥**
**ಕುಂದ ಕಲೀ ದಾಡಿಮ ದಾಮಿನೀ। ಕಮಲ ಸರದ ಸಸಿ ಅಹಿಭಾಮಿನೀ॥**
**ಬರುನ ಪಾಸ ಮನೋಜ ಧನು ಹಂಸಾ। ಗಜ ಕೇಹರಿ ನಿಜ ಸುನತ ಪ್ರಸಂಸಾ॥೬॥**
**ಶ್ರೀಫಲ ಕನಕ ಕದಲಿ ಹರಷಾಹೀ೦। ನೇಕು ನ ಸಂಕ ಸಕುಚ ಮನ ಮಾಹೀ೦॥**
**ಸುನು ಜಾನಕೀ ತೋಹಿ ಬಿನು ಆಜೂ। ಹರಷೇ ಸಕಲ ಪಾಇ ಜನು ರಾಜೂ॥೭॥**
**ಕಿಮಿ ಸಹಿ ಜಾತ ಅನಖ ತೊಹಿ ಪಾಹೀ೦। ಪ್ರಿಯಾ ಬೇಗಿ ಪ್ರಗಟಸಿ ಕಸ ನಾಹೀ೦॥**
**ಎಹಿ ಬಿಧಿ ಖೋಜತ ಬಿಲಪತ ಸ್ವಾಮೀ। ಮನಹು೦ ಮಹಾ ಬಿರಹೀ ಅತಿ ಕಾಮೀ॥೮॥**
**ಪೂರನಕಾಮ ರಾಮ ಸುಖ ರಾಸೀ। ಮನುಜ ಚರಿತ ಕರ ಅಜ ಅಬಿನಾಸೀ॥**
**ಆಗೇ೦ ಪರಾ ಗೀಧಪತಿ ದೇಖಾ। ಸುಮಿರತ ರಾಮ ಚರನ ಜಿನ್ಹ ರೇಖಾ॥೯॥**

ಇತ್ತ ರಘುನಾಥನು ತಮ್ಮನಾದ ಲಕ್ಷ್ಮಣನು ಎದುರಿಗೆ ಬರುತ್ತಿರುವುದನ್ನು ಕಂಡು, ಬಹಿರಂಗವಾಗಿ ತುಂಬಾ ಚಿಂತೆಯನ್ನು ತೋರಿದನು. 'ತಮ್ಮಾ! ನೀನು ಜಾನಕಿಯನ್ನು ಒಂಟಿಯಾಗಿ ಬಿಟ್ಟುಬಂದು, ನನ್ನ ಅಪ್ಪಣೆಯನ್ನು ಉಲ್ಲಂಘಿಸಿದೆಯಾ? ಕಾಡಿನಲ್ಲಿ ರಾಕ್ಷಸರ ತಂಡಗಳು ಸಂಚರಿಸುತ್ತವೆ. ಸೀತೆಯು ಆಶ್ರಮದಲ್ಲಿ ಇರಲಾರಳು ಎಂದು ನನ್ನ ಮನಸ್ಸಿಗೆ ಅನಿಸುತ್ತದೆ.' ಲಕ್ಷ್ಮಣನು ಶ್ರೀರಾಮನ ಪಾದಗಳಿಗೆ ಕೈಜೋಡಿಸಿಕೊಂಡು ಅಣ್ಣಾ! ಇದರಲ್ಲಿ ನನ್ನ ಯಾವ ದೋಷವೂ ಇಲ್ಲ ಎಂದು ಹೇಳಿದನು. ಅನಂತರ ಲಕ್ಷ್ಮಣನೊಡನೆ ಶ್ರೀರಾಮನು ಗೋದಾವರೀ ತೀರದಲ್ಲಿದ್ದ ತಮ್ಮ ಆಶ್ರಮಕ್ಕೆ ಆಗಮಿಸಿದನು. ಅಲ್ಲಿ ಜಾನಕಿಯು ಇಲ್ಲದಿರುವ ಶೂನ್ಯವಾದ ಆಶ್ರಮವನ್ನು ನೋಡಿ, ಶ್ರೀರಾಮನು ಸಾಮಾನ್ಯ ಮಾನವರಂತೆ ವ್ಯಾಕುಲನಾದನು. ದೈನ್ಯದಿಂದ ದುಃಖಿತನಾಗಿ ವಿಲಾಪಿಸತೊಡಗಿದನು – ''ಓ ಸದ್ಗುಣಖಣಿಯಾದ ಜಾನಕಿಯೇ! ರೂಪಶೀಲವ್ರತನಿಯಮಗಳಿಂದ ಪವಿತ್ರಳಾದ ಓ ಸೀತೇ! ನೀನೆಲ್ಲಿರುವೆ?'' ಲಕ್ಷ್ಮಣನು ಅಣ್ಣನನ್ನು ಅನೇಕ ವಿಧದಿಂದ ಸಂತೈಸಿದನು. ಆಗ ಪ್ರಭು ಶ್ರೀರಾಮನು ಲತಾ-ವೃಕ್ಷಗಳೊಡನೆ ಸೀತೆಯ ಕುರಿತು ಪ್ರಶ್ನಿಸುತ್ತಾ ನಡೆದನು. ಎಲೈ ಪಶುಪಕ್ಷಿಗಳಿರಾ! ಭ್ರಮರ ಸಮೂಹವೇ! ಮೃಗನಯನೆಯಾದ ಸೀತೆಯನ್ನು ನೀವು ಎಲ್ಲಾದರೂ ಕಂಡಿರುವಿರಾ? ಖಂಜನ, ಶುಕ, ಕಪೋತ, ಜಿಂಕೆ, ಮೀನುಗಳಿರಾ, ಮಧುಕರ ನಿಕರವೇ, ಪ್ರವೀಣಕೋಗಿಲೆಗಳಿರಾ, ನೀವು ಕಾಣಿರೇ? ಮೊಲ್ಲೆಮೊಗ್ಗುಗಳು, ದಾಳಿಂಬೆ, ವಿದ್ಯುಲ್ಲತೆ, ಕಮಲ, ಶರದಶಶಿ, ಹೆಣ್ಣು ಸರ್ಪ, ಮರುಣಪಾಶ, ಮನ್ಮಥನಧನುಸ್ಸು, ಹಂಸ, ಗಜ, ಕೇಸರಿ ಇವೆಲ್ಲ ಇಂದು ತಮ್ಮ ಪ್ರಶಂಸೆಯನ್ನು ಕೇಳುತ್ತಿವೆ. ಬೇಲ, ಭಂಗಾರ, ಬಾಳೆ ಇಂದು ನಲಿದಾಡುತ್ತಿವೆ. ಇವುಗಳ ಮನಸ್ಸಿನಲ್ಲಿ ಲವಲೇಖವಾದರೂ ಶಂಕೆ-ಸಂಕೋಚಗಳಿಲ್ಲ. ಓ ಜಾನಕಿ! ನೀನಿಲ್ಲದೆ ಇವೆಲ್ಲಕ್ಕೂ

ರಾಜ್ಯದೊರೆತಷ್ಟು ಹರ್ಷವಾಗಿದೆ. (ನೀನು ಇದ್ದಾಗ ಇವೆಲ್ಲವೂ ನಿನ್ನ ಅಂಗಾಂಗಗಳ ಎದುರಿಗೆ ತುಚ್ಛವಾಗಿದ್ದವು. ಅಪಮಾನಿತರಾಗಿ ತಲೆ ತಗ್ಗಿಸಿದ್ದವು.) ಇಂದು ನಿನ್ನನ್ನು ಕಾಣದೆ ಇವು ತಮ್ಮ ಸೌಂದರ್ಯದ ಹೆಮ್ಮೆಯಿಂದ ಬೀಗುತ್ತಿವೆ. ನೀನು ಈ ಸ್ಪರ್ಧೆಯನ್ನು ಹೇಗೆ ಸಹಿಸಿಕೊಂಡಿರುವೆ? ಹೇ ಪ್ರಿಯೇ! ನೀನೇಕೆ ಬೇಗನೆ ಪ್ರಕಟಗೊಳ್ಳದಿದ್ದೀಯೇ? ಈ ಪ್ರಕಾರ ಅನಂತಬ್ರಹ್ಮಾಂಡಗಳ ಒಡೆಯನೂ. ಮಹಾಮಹಿಮೆಯುಳ್ಳ ಸ್ವರೂಪಾಶಕ್ತಿ ಸೀತಾದೇವಿಯ ಸ್ವಾಮಿಯೂ ಆದ ಶ್ರೀರಾಮನು ಸೀತೆಯನ್ನು ಹುಡುಕುತ್ತಾ, ಮಹಾವಿರಹಿಯೋ, ಮಹಾಕಾಮಿಯೋ ಎಂಬಂತೆ ವಿಲಾಪ ಮಾಡುತ್ತಿದ್ದನು. ಪೂರ್ಣ, ಕಾಮನೂ, ಸುಖರಾಶಿಯೂ, ಜನ್ಮರಹಿತನೂ, ಶಾಶ್ವತನೂ ಆದ ಶ್ರೀರಾಮನು ಸಾಮಾನ್ಯ ಮನುಷ್ಯರಂತೆ ಲೀಲೆಮಾಡುತ್ತಿರುವನು. ರಾಮಲಕ್ಷ್ಮಣರು ಸೀತೆಯನ್ನು ಹೀಗೆ ಹುಡುಕುತ್ತಾ ಮುಂದರಿಯುತ್ತಿದ್ದಂತೆ ಮಾರ್ಗದಲ್ಲಿ ಬಿದ್ದಿರುವ ಗೃಧ್ರರಾಜ ಜಟಾಯುವನ್ನು ನೋಡಿದರು. ಅವನು ಧ್ವಜ, ವಜ್ರ ಮೊದಲಾದ ಚಿನ್ಹೆಗಳುಳ್ಳ ಶ್ರೀರಾಮನ ಚರಣಗಳನ್ನು ನೆನೆಯುತ್ತಿದ್ದನು. (ಚೌ/೧-೯)

**ದೋ – ಕರ ಸರೋಜ ಸಿರ ಪರಸೇಉ ಕೃಪಾಸಿಂಧು ರಘುಬೀರ।**
**ನಿರಖಿ ರಾಮ ಛಬಿ ಧಾಮ ಮುಖ ಬಿಗತ ಭಈ ಸಬ ಪೀರ॥ ೩೦ ॥**

ಕೃಪಾಸಿಂಧುವಾದ ಶ್ರೀರಘುವರನು ತನ್ನ ಕರಕಮಲದಿಂದ ಆತನ ತಲೆಯನ್ನು ನೇವರಿಸಿದನು. ಕಾಂತಿಯ ನೆಲೆಯಾದ ಶ್ರೀರಾಮನ ವದನವನ್ನು ಕಂಡು ಅವನ ನೋವೆಲ್ಲ ಮಾಯವಾಯಿತು. (ದೋ/೩೦)

**ಚೌ – ತಬ ಕಹ ಗೀಧ ಬಚನ ಧರಿ ಧೀರಾ। ಸುನಹು ರಾಮ ಭಂಜನ ಭವ ಭೀರಾ॥**
**ನಾಥ ದಸಾನನ ಯಹ ಗತಿ ಕೀನ್ಹೀ। ತೇಹಿಂ ಖಲ ಜನಕಸುತಾ ಹರಿ ಲೀನ್ಹೀ॥ ೧ ॥**
**ಲೈ ದಚ್ಛಿನ ದಿಸಿ ಗಯಉ ಗೊಸಾಈಂ। ಬಿಲಪತಿ ಅತಿ ಕುರರೀ ಕೀ ನಾಈಂ॥**
**ದರಸ ಲಾಗಿ ಪ್ರಭು ರಾಖೇಉಂ ಪ್ರಾನಾ। ಚಲನ ಚಹತ ಅಬ ಕೃಪಾನಿಧಾನಾ॥ ೨ ॥**
**ರಾಮ ಕಹಾ ತನು ರಾಖಹು ತಾತಾ। ಮುಖ ಮುಸುಕಾಇ ಕಹೀ ತೇಹಿಂ ಬಾತಾ॥**
**ಜಾ ಕರ ನಾಮ ಮರತ ಮುಖ ಆವಾ। ಅಧಮಉ ಮುಕುತ ಹೋಇ ಶ್ರುತಿ ಗಾವಾ॥ ೩ ॥**
**ಸೋ ಮಮ ಲೋಚನ ಗೋಚರ ಆಗೇಂ। ರಾಖೌಂ ದೇಹ ನಾಥ ಕೇಹಿ ಖಾಂಗೇಂ॥**
**ಜಲ ಭರಿ ನಯನ ಕಹಹಿಂ ರಘುರಾಈ। ತಾತ ಕರ್ಮ ನಿಜ ತೇಂ ಗತಿ ಪಾಈ॥ ೪ ॥**
**ಪರಹಿತ ಬಸ ಜಿನ್ಹ ಕೇ ಮನ ಮಾಹೀಂ। ತಿನ್ಹ ಕಹುಂ ಜಗ ದುರ್ಲಭ ಕಛು ನಾಹೀಂ॥**
**ತನು ತಜಿ ತಾತ ಜಾಹು ಮಮ ಧಾಮಾ। ದೇಉಂ ಕಾಹ ತುಮ್ಹ ಪೂರನಕಾಮಾ॥ ೫ ॥**

ಆಗ ಧೈರ್ಯತಾಳಿ ಜಟಾಯುವು ಇಂತೆಂದನು – ಓ ಭವಭಂಜನಸ್ವಾಮಿ! ರಾಮಾ! ಕೇಳು. ದಶಕಂಠನಾದ ರಾವಣನು ನನ್ನನ್ನು ಈ ಸ್ಥಿತಿಗೆ ತಂದಿರುವನು. ಆ ದುಷ್ಟನು ಜಾನಕಿಯನ್ನು ಅಪಹರಿಸಿರುವನು. ಸ್ವಾಮಿ! ಅವನು ಆಕೆಯನ್ನು ತೆಂಕಣದಿಕ್ಕಿಗೆ ಒಯ್ದಿರುವನು. ಸೀತೆಯು ಕುರರಿ ಪಕ್ಷಿಯಂತೆ ವಿಲಾಪಮಾಡುತ್ತಿದ್ದಳು. ಪ್ರಭೂ! ನಾನು ತಮ್ಮ ದರ್ಶನಕ್ಕಾಗಿ ಇದುವರೆಗೆ ಪ್ರಾಣಗಳನ್ನು ಧರಿಸಿಕೊಂಡಿದ್ದೆ. ಓ ಕೃಪಾನಿಧಾನಾ! ಇನ್ನು ಈ ಪ್ರಾಣಗಳು ನಿಲ್ಲಲಾರವು. ಆಗ ಶ್ರೀರಾಮನು ಹೇಳಿದ – ಆಯ್ಯಾ! ನಿಮ್ಮ ಶರೀರವನ್ನು ಉಳಿಸಿಕೊಳ್ಳಿ. ಜಟಾಯುವು ಮುಗುಳ್ನಗುತ್ತಾ – ''ದೇವಾ! ಸಾಯುವಾಗ ನಿನ್ನ ನಾಮಸ್ಮರಣೆಯಿಂದ ಅಧಮನಿಗೂ ಮೋಕ್ಷ ದೊರೆಯುವುದೆಂದು ವೇದಗಳು ಹೇಳುತ್ತಿವೆ. ಅಂತಹ ನೀನೇ ನನ್ನ ಕಣ್ಣೆದುರಿಗೆ ನಿಂತಿರುವಾಗ ನಾನು ಇನ್ನಾವ ಪುರುಷಾರ್ಥಕ್ಕಾಗಿ ಈ ದೇಹವನ್ನು ಉಳಿಸಿಕೊಳ್ಳಲಿ? ಇದನ್ನು ಕೇಳಿ ಕಂಬನಿತುಂಬಿ ಶ್ರೀರಾಮನು ಹೇಳಿದನು – ಅಪ್ಪಾ! ತಾವು ತಮ್ಮ ಶ್ರೇಷ್ಠ ಕರ್ಮಗಳಿಂದಾಗಿ ಸದ್ಗತಿಯನ್ನು ಹೊಂದಿದ್ದೀರಿ. ಮನಸ್ಸಿನಲ್ಲಿ ಪರಹಿತವುಳ್ಳವರಿಗೆ ಜಗತ್ತಿನಲ್ಲಿ ಯಾವುದೂ ದುರ್ಲಭವಲ್ಲ. ನೀವು ಶರೀರವನ್ನು ತೊರೆದು ನನ್ನ ಪರಮಧಾಮಕ್ಕೆ ತೆರಳಿರಿ. ನಾನು ತಮಗೆ ಏನನ್ನು ಕೊಡಲಿ? ತಾವು ಪೂರ್ಣಕಾಮರು. (ಚೌ/೧-೫)

**ದೋ – ಸೀತಾ ಹರನ ತಾತ ಜನಿ ಕಹಹು ಪಿತಾ ಸನ ಜಾಇ।**
**ಜೌಂ ಮೈಂ ರಾಮ ತ ಕುಲ ಸಹಿತ ಕಹಿಹಿ ದಸಾನನ ಆಇ॥ ೩೧ ॥**

ಅಯ್ಯಾ! ಪಕ್ಷಿರಾಜಾ! ಸೀತಾಹರಣದ ವಾರ್ತೆಯನ್ನು ತಾವು ಸ್ವರ್ಗದಲ್ಲಿರುವ ನಮ್ಮ ತಂದೆಯವರಿಗೆ ತಿಳಿಸಬೇಡಿ. ನಾನು ನಿಜವಾಗಿ ರಾಮನಾಗಿದ್ದರೆ ದಶಕಂಠರಾವಣನು ಸ್ವತಃ ತನ್ನ ಕುಟುಂಬಸಮೇತ ಅಲ್ಲಿಗೆ ಹೋಗಿ ಈ ಸುದ್ದಿಯನ್ನು ಮುಟ್ಟಿಸುತ್ತಾನೆ. (ದೋ/೩೧)

ಚೌ – ಗೀಧ ದೇಹ ತಜಿ ಧರಿ ಹರಿ ರೂಪಾ। ಭೂಷನ ಬಹು ಪಟ ಪೀತ ಅನೂಪಾ ॥
ಸ್ಯಾಮ ಗಾತ ಬಿಸಾಲ ಭುಜ ಚಾರೀ। ಅಸ್ತುತಿ ಕರತ ನಯನ ಭರಿ ಬಾರೀ ॥ ೧ ॥

ಜಟಾಯುವು ತನ್ನ ಗೃಧ್ರಶರೀರವನ್ನು ತೊರೆದು ಹರಿರೂಪವನ್ನು ಧರಿಸಿದನು. ಅನುಪಮವಾದ ಅನೇಕ ದಿವ್ಯ ಆಭೂಷಣಗಳನ್ನೂ, ದಿವ್ಯ ಪೀತಾಂಬರವನ್ನೂ ಧರಿಸಿರುವನು. ಆತನ ಶರೀರ ಶ್ಯಾಮಲವರ್ಣದ್ದಾಗಿದ್ದು, ವಿಶಾಲವಾದ ನಾಲ್ಕು ಭುಜಗಳಿವೆ. ಕಣ್ಣುಗಳಲ್ಲಿ ಆನಂದಾಶ್ರುಗಳನ್ನು ಸುರಿಸುತ್ತಾ ಇಂತು ಸ್ತುತಿಸತೊಡಗಿದನು – (ಚೌ/೧)

## ಜಟಾಯುಕೃತ ಶ್ರೀರಾಮಸ್ತುತಿ

ಛಂ – ಜಯ ರಾಮ ರೂಪ ಅನೂಪ ನಿರ್ಗುನ ಸಗುನ ಗುನ ಪ್ರೇರಕ ಸಹೀ।
ದಸಸೀಸ ಬಾಹು ಪ್ರಚಂಡ ಖಂಡನ ಚಂಡ ಸರ ಮಂಡನ ಮಹೀ॥
ಪಾಥೋದ ಗಾತ ಸರೋಜ ಮುಖ ರಾಜೀವ ಆಯತ ಲೋಚನಂ।
ನಿತ ನೌಮಿ ರಾಮು ಕೃಪಾಲ ಬಾಹು ಬಿಸಾಲ ಭವ ಭಯ ಮೋಚನಂ॥ ೧ ॥
ಬಲಮಪ್ರಮೇಯಮನಾದಿಮಜಮಬ್ಯಕ್ತ ಮೇಕಮಗೋಚರಂ।
ಗೋಬಿಂದ ಗೋಪರ ದ್ವಂದ್ವಹರ ಬಿಗ್ಯಾನಘನ ಧರನೀಧರಂ ॥
ಜೇ ರಾಮ ಮಂತ್ರ ಜಪಂತ ಸಂತ ಅನಂತ ಜನ ಮನ ರಂಜನಂ।
ನಿತ ನೌಮಿ ರಾಮ ಅಕಾಮ ಪ್ರಿಯ ಕಾಮಾದಿ ಖಲ ದಲ ಗಂಜನಂ॥ ೨ ॥
ಜೆಹಿ ಶ್ರುತಿ ನಿರಂಜನ ಬ್ರಹ್ಮ ಬ್ಯಾಪಕ ಬಿರಜ ಅಜ ಕಹಿ ಗಾವಹೀಂ।
ಕರಿ ಧ್ಯಾನ ಗ್ಯಾನ ಬಿರಾಗ ಜೋಗ ಅನೇಕ ಮುನಿ ಜೆಹಿ ಪಾವಹೀಂ ॥
ಸೋ ಪ್ರಗಟ ಕರುನಾ ಕಂದ ಸೋಭಾ ಬೃಂದ ಅಗ ಜಗ ಮೋಹಈ।
ಮಮ ಹೃದಯ ಪಂಕಜ ಭೃಂಗ ಅಂಗ ಅನಂಗ ಬಹು ಛಬಿ ಸೋಹಈ॥ ೩ ॥
ಜೋ ಅಗಮ ಸುಗಮ ಸುಭಾವ ನಿರ್ಮಲ ಅಸಮ ಸಮ ಸೀತಲ ಸದಾ।
ಪಸ್ಯಂತಿ ಜಂ ಜೋಗೀ ಜತನ ಕರಿ ಕರತ ಮನ ಗೋ ಬಸ ಸದಾ ॥
ಸೋ ರಾಮ ರಮಾ ನಿವಾಸ ಸಂತತ ದಾಸ ಬಸ ತ್ರಿಭುವನ ಧನೀ।
ಮಮ ಉರ ಬಸಉ ಸೋ ಸಮನ ಸಂಸೃತಿ ಜಾಸು ಕೀರತಿ ಪಾವನೀ ॥ ೪ ॥

ಓ ರಾಮಾ! ನಿನಗೆ ಜಯವಾಗಲಿ. ನಿನ್ನ ರೂಪವು ಅನುಪಮವಾದುದು. ನೀನು ಸಗುಣ, ನಿರ್ಗುಣ ಮತ್ತು ಗುಣ (ಮಾಯಾ) ಪ್ರೇರಕನು. ದಶಕಂಠ ರಾವಣನ ಪ್ರಚಂಡ ಬಾಹುಗಳನ್ನು ಖಂಡಿಸುವುದಕ್ಕಾಗಿ ಪ್ರಚಂಡ ಬಾಣಗಳನ್ನು ಧರಿಸುವವನಾಗಿರುವೆ. ಭೂಮಿಯನ್ನು ಶೋಭಾಮಯವನ್ನಾಗಿಸುವ ನೀಲಮೇಘಶ್ಶರೀರಾ! ಕಮಲಾಸ್ಯಾ! ರಾಜೀವಾಯತಲೋಚನಾ! ವಿಶಾಲಭುಜಶೋಭಿತಾ! ಭವಭಯಮುಕ್ತಿಪ್ರದಾಯಕಾ! ಕೃಪಾನಿಧಿ ರಾಮನೇ ನಿನಗೆ ನಿತ್ಯವೂ ನಮಸ್ಕರಿಸುತ್ತಿರುವೆನು. ॥ ೧॥ ಅಪಾರ ಬಲಶಾಲಿಯೂ, ಅನಾದಿಯೂ, ಅಜನ್ಮನೂ, ಅವ್ಯಕ್ತಸ್ವರೂಪನೂ, ಅದ್ವಿತೀಯನೂ, ಅಗೋಚರನೂ, ಗೋವಿಂದನೂ (ವೇದವಾಕ್ಯಗಳಿಂದ ತಿಳಿಯಲ್ಪಡುವವನು), ಇಂದ್ರಿಯಾತೀತನೂ, ಹರ್ಷ-ಶೋಕಾದಿ ದ್ವಂದ್ವಗಳನ್ನು ಹರಿಸುವವನೂ, ವಿಜ್ಞಾನಘನನೂ, ಧರಣೀಧರನೂ, ರಾಮನಾಮವನ್ನು ಜಪಿಸುವವರಿಗೆ, ಸಜ್ಜನರಿಗೆ, ಸೇವಕರಿಗೆ ಆತ್ಮಾನಂದವನ್ನು ಕರುಣಿಸುವವನೂ, ನಿಷ್ಕಾಮಪ್ರಿಯನೂ, ಕಾಮಾದಿದುಷ್ಪ್ರವೃತ್ತಿಗಳನ್ನು ಇಲ್ಲವಾಗಿಸುವಂತಹ ಶ್ರೀರಾಮನಿಗೆ ಅನುದಿನ ವಂದಿಸುವೆನು. ॥ ೨॥ ನಿರಂಜನನೂ, ಪರಬ್ರಹ್ಮನೂ, ಸರ್ವವ್ಯಾಪಕನೂ, ನಿರ್ವಿಕಾರನೂ, ಜನ್ಮರಹಿತನೂ ಎಂದು ವೇದಗಳಿಂದ ಕೀರ್ತಿಸಲ್ಪಡುವವನೂ, ಧ್ಯಾನ, ಜ್ಞಾನ, ವೈರಾಗ್ಯ ಯೋಗಾದಿಸಾಧನೆಗಳ ಮೂಲಕ ಮುನಿಗಳಿಗೆ ದೊರಕುವವನೂ, ಕರುಣಾಮಯನೂ, ಸೌಂದರ್ಯರಾಶಿಯೂ ಆದ ಶ್ರೀಹರಿಯೇ ಸ್ವತಃ ಶ್ರೀರಾಮನಾಗಿ ಅವತರಿಸಿ, ಚರಾಚರಜಗತ್ತನ್ನು ಮೋಹಿಸುತ್ತಿರುವೆ. ಅಂತಹ ಪ್ರಭುವಾದ ನೀನೇ ನನ್ನ ಹೃದಯಕಮಲಕ್ಕೆ ಭ್ರಮರನು. ನಿನ್ನ ಅಂಗಪ್ರತ್ಯಂಗಗಳಲ್ಲಿ ಅನೇಕ

ಕಾಮದೇವರ ಕಾಂತಿಯು ಕಂಗೊಳಿಸುತ್ತಿದೆ. ॥೩॥ ನೀನು ಅಭಕ್ತರಿಗೆ ದುರ್ಲಭನೂ, ಭಕ್ತರಿಗೆ ಸುಲಭನೂ, ನಿರ್ಮಲಸ್ವಭಾವದವನೂ ಆಗಿರುವೆ. ವಿಷಮ ಶಾಂತಮೂರ್ತಿ, ಮನೋನಿಗ್ರಹದಿಂದ ಇಂದ್ರಿಯಗಳನ್ನು ವಶಪಡಿಸಿಕೊಂಡು, ದೃಢವಾಗಿ ಸಾಧನೆಯನ್ನು ಮಾಡುವ ಯೋಗಿಗಳಿಗೆ ದರ್ಶನವೀಯುವವನೂ, ತ್ರಿಭುವನಸ್ವಾಮಿಯೂ, ಲಕ್ಷ್ಮೀನಿವಾಸನೂ ಆದ ಶ್ರೀರಾಮನು ತನ್ನನ್ನು ನಿರಂತರ ಸೇವಿಸುವವರಿಗೆ ವಶನಾಗಿರುವನು. ಅವನ ಪವಿತ್ರಕೀರ್ತಿಯು ಸಂಸಾರ ದುಃಖಗಳನ್ನು ನಾಶಮಾಡುವಂತಹುದು. ಅಂತಹ ಶ್ರೀರಾಮಚಂದ್ರಪ್ರಭುವು ನನ್ನ ಹೃದಯದಲ್ಲಿ ವಾಸಿಸಲಿ. ॥೪॥ (ಛಂ/೧-೪)

**ದೋ – ಅಬಿರಲ ಭಗತಿ ಮಾಗಿ ಬರ ಗೀಧ ಗಯಉ ಹರಿಧಾಮ।**
**ತೇಹಿ ಕೀ ಕ್ರಿಯಾ ಜಥೋಚಿತ ನಿಜ ಕರ ಕೀನ್ಹೀ ರಾಮ ॥ ೩೨ ॥**

ಅಖಂಡ ಭಕ್ತಿಯ ವರವನ್ನು ಹೊಂದಿ, ಗೃಧ್ರರಾಜ ಜಟಾಯುವು ಶ್ರೀಹರಿಯ ಧಾಮವನ್ನು ಸೇರಿದನು. ಶ್ರೀರಾಮನು ಆತನ ಉತ್ತರಕ್ರಿಯಾದಿಗಳನ್ನು ಸ್ವಹಸ್ತದಿಂದ ಮಾಡಿದನು. (ದೋ/೩೨)

**ಚೌ – ಕೋಮಲ ಚಿತ ಅತಿ ದೀನದಯಾಲಾ। ಕಾರನ ಬಿನು ರಘುನಾಥ ಕೃಪಾಲಾ॥**
**ಗೀಧ ಅಧಮ ಖಗ ಆಮಿಷ ಭೋಗೀ। ಗತಿ ದೀನ್ಹೀ ಜೋ ಜಾಚತ ಜೋಗೀ॥ ೧ ॥**
**ಸುನಹು ಉಮಾ ತೇ ಲೋಗ ಅಭಾಗೀ। ಹರಿ ತಜಿ ಹೋಹಿಂ ಬಿಷಯ ಅನುರಾಗೀ॥**
**ಪುನಿ ಸೀತಹಿ ಖೋಜತ ದ್ವೌ ಭಾಈ। ಚಲೇ ಬಿಲೋಕತ ಬನ ಬಹುತಾಈ॥ ೨ ॥**
**ಸಂಕುಲ ಲತಾ ಬಿಟಪ ಘನ ಕಾನನ। ಬಹು ಖಗ ಮೃಗ ತಹ್ ಗಜ ಪಂಚಾನನ॥**
**ಆವತ ಪಂಥ ಕಬಂಧ ನಿಪಾತಾ। ತೇಹಿಂ ಸಬ ಕಹೀ ಸಾಪ ಕೈ ಬಾತಾ॥ ೩ ॥**
**ದುರಬಾಸಾ ಮೋಹಿ ದೀನ್ಹೀ ಸಾಪಾ। ಪ್ರಭು ಪದ ಪೇಖಿ ಮಿಟಾ ಸೋ ಪಾಪಾ॥**
**ಸುನು ಗಂಧರ್ಬ ಕಹಉಂ ಮೈಂ ತೋಹೀ। ಮೋಹಿ ನ ಸೊಹಾಇ ಬ್ರಹ್ಮಕುಲ ದ್ರೋಹೀ॥ ೪ ॥**

ಶ್ರೀರಾಮಚಂದ್ರಪ್ರಭುವು ಅತ್ಯಂತ ಕೋಮಲ ಹೃದಯವುಳ್ಳವನು. ದೀನದಯಾಳುವು. ಕಾರಣವಿಲ್ಲದೆ ಕೃಪೆಮಾಡುವವನು. ಪಕ್ಷಿಗಳಲ್ಲೆಲ್ಲ ಅಧಮವೂ, ಮಾಂಸಾಹಾರಿಯೂ ಆದ ಗೃಧ್ರಕ್ಕೂ ಕೂಡ ಯೋಗಿಗಳು ಯಾವಾಗಲೂ ಬಯಸುವ ದುರ್ಲಭವಾದ ಗತಿಯನ್ನು ಶ್ರೀರಾಮನು ಕರುಣಿಸಿದನು.

ಶಿವನು ಹೇಳುತ್ತಾನೆ – ಪಾರ್ವತೀ! ಕೇಳು. ಭಗವಂತನನ್ನು ತೊರೆದು ನಿರಂತರವಾಗಿ ವಿಷಯ ಭೋಗಗಳನ್ನು ಬಯಸುವವರು ನಿಜಕ್ಕೂ ನಿರ್ಭಾಗ್ಯರು. ಮತ್ತೆ ಸೋದರರಿಬ್ಬರೂ ಸೀತೆಯನ್ನು ಹುಡುಕುತ್ತಾ ಮುಂದೆ ಸಾಗಿದರು. ಅವರು ದಟ್ಟವಾದ ಆ ಅಡವಿಯಲ್ಲಿ ಜಾನಕಿಯನ್ನು ಅರಸುತ್ತಿರುವರು. ಅದು ವೃಕ್ಷ-ಲತೆಗಳಿಂದ ಕೂಡಿದ ಘನಕಾನನ. ಅದರಲ್ಲಿ ಅನೇಕ ಖಗ-ಮೃಗಗಳೂ, ಆನೆ-ಸಿಂಹಗಳೂ ಸಂಚರಿಸುತ್ತಿದ್ದವು. ಮಾರ್ಗಮಧ್ಯದಲ್ಲಿ ಅವರಿಗೆ ಇದಿರಾದ ಕಬಂಧನೆಂಬ ರಾಕ್ಷಸನನ್ನು ಶ್ರೀರಾಮನು ಸಂಹರಿಸಿದನು. ಅವನು ಪ್ರಾಣನೀಗುವ ಮೊದಲು ತನ್ನ ಶಾಪವೃತ್ತಾಂತವನ್ನು ಶ್ರೀರಾಮನಲ್ಲಿ ನಿವೇದಿಸಿಕೊಂಡನು. ಪ್ರಭೂ! ಹಿಂದೆ ನಾನು ಗಂಧರ್ವನಾಗಿದ್ದೆ. ರೂಪಗರ್ವಿತನಾದ ನನಗೆ ದುರ್ವಾಸರು ಶಪಿಸಿದ್ದರು. ಈಗ ನಿನ್ನ ಪದದರ್ಶನದಿಂದ ಆ ಶಾಪದಿಂದ ನಾನು ಮುಕ್ತನಾಗಿರುವೆನು.'' ಆಗ ಶ್ರೀರಾಮನೆಂದನು – ''ಎಲೈ ಗಂಧರ್ವ! ನಾನು ಹೇಳುವುದನ್ನು ಕೇಳು. ಬ್ರಹ್ಮಕುಲ ದ್ರೋಹಿಯನ್ನು ಕಂಡು ನಾನು ಸಹಿಸಲಾರೆನು. (ಚೌ/೧-೪)

**ದೋ – ಮನ ಕ್ರಮ ಬಚನ ಕಪಟ ತಜಿ ಜೋ ಕರ ಭೂಸುರ ಸೇವ।**
**ಮೋಹಿ ಸಮೇತ ಬಿರಂಚಿ ಸಿವ ಬಸ ತಾಕೇಂ ಸಬ ದೇವ ॥ ೩೩ ॥**

ಮನ, ವಚನ, ಕರ್ಮಗಳಿಂದ ಕಪಟವನ್ನು ತೊರೆದು ಬ್ರಾಹ್ಮಣರ ಸೇವೆಮಾಡುವವರಿಗೆ ನಾನೇ ಅಲ್ಲ ಬ್ರಹ್ಮಾ, ಶಿವನೇ ಮೊದಲಾದ ಎಲ್ಲ ದೇವತೆಗಳು ವಶರಾಗುವರು. (ದೋ/೩೩)

**ಚೌ – ಸಾಪತ ತಾಡತ ಪರುಷ ಕಹಂತಾ। ಬಿಪ್ರ ಪೂಜ್ಯ ಅಸ ಗಾವಹಿಂ ಸಂತಾ ॥**
**ಪೂಜಿಅ ಬಿಪ್ರ ಸೀಲ ಗುನ ಹೀನಾ । ಸೂದ್ರ ನ ಗುನ ಗನ ಗ್ಯಾನ ಪ್ರಬೀನಾ ॥ ೧ ॥**
**ಕಹಿ ನಿಜ ಧರ್ಮ ತಾಹಿ ಸಮುಝಾವಾ। ನಿಜ ಪದ ಪ್ರೀತಿ ದೇಖಿ ಮನ ಭಾವಾ ॥**
**ರಘುಪತಿ ಚರನ ಕಮಲ ಸಿರು ನಾಈ। ಗಯಉ ಗಗನ ಆಪನಿ ಗತಿ ಪಾಈ ॥ ೨ ॥**

ಆದ್ದರಿಂದ ಶಪಿಸಿದರೂ, ದಂಡಿಸಿದರೂ, ಕಠೋರ ವಚನಗಳನ್ನಾಡಿದರೂ, ಬ್ರಾಹ್ಮಣನು ಪೂಜ್ಯನೆಂದೇ ಸಂತರು ಹೇಳುತ್ತಾರೆ. ಶೀಲ-ಗುಣಗಳಿಲ್ಲದಿದ್ದರೂ ಬ್ರಾಹ್ಮಣನು ಪೂಜನೀಯನೇ. ಆದರೆ ಗುಣಸಮೂಹ ಸಂಪನ್ನನೂ, ಜ್ಞಾನಿಯೂ ಆದ

ಶೂದ್ರನು ಪೂಜಾರ್ಹನಲ್ಲ.'' ಶ್ರೀರಾಮಚಂದ್ರನು ನಿಜ-ಧರ್ಮ (ಭಾಗವತಧರ್ಮ), ಭಕ್ತಿಮಾರ್ಗವನ್ನು ಕಬಂಧನಿಗೆ ಉಪದೇಶಿಸಿದನು. ತನ್ನ ಚರಣಗಳಲ್ಲಿ ಅವನಿಗಿರುವ ಭಕ್ತಿಯನ್ನು ಕಂಡು ಶ್ರೀರಾಮನು ಸಂತೋಷಪಟ್ಟನು. ಬಳಿಕ ಆ ಗಂಧರ್ವನು ಶ್ರೀರಾಮಚರಣಗಳಲ್ಲಿ ಶಿರಸಾವಂದಿಸಿ, ಗಂಧರ್ವರೂಪವನ್ನು ಪಡೆದು ತನ್ನ ಲೋಕಕ್ಕೆ ಹೊರಟುಹೋದನು. (ಚೌ/೧-೨)

# ಶಬರಿಯ ಆತಿಥ್ಯ

**ತಾಹಿ ದೇಇ ಗತಿ ರಾಮ ಉದಾರಾ। ಸಬರೀ ಕೇਂ ಆಶ್ರಮ ಪಗು ಧಾರಾ॥**
**ಸಬರೀ ದೇಖಿ ರಾಮ ಗೃಹ್ ಆಏ। ಮುನಿ ಕೇ ಬಚನ ಸಮುಝಿ ಜಿಯ್ ಭಾಏ॥ ೩॥**
**ಸರಸಿಜ ಲೋಚನ ಬಾಹು ಬಿಸಾಲಾ। ಜಟಾ ಮುಕುಟ ಸಿರ ಉರ ಬನಮಾಲಾ॥**
**ಸ್ಯಾಮ ಗೌರ ಸುಂದರ ದೋಉ ಭಾಈ। ಸಬರೀ ಪರೀ ಚರನ ಲಪಟಾಈ॥ ೪॥**
**ಪ್ರೇಮ ಮಗನ ಮುಖ ಬಚನ ನ ಆವಾ। ಪುನಿ ಪುನಿ ಪದ ಸರೋಜ ಸಿರ ನಾವಾ॥**
**ಸಾದರ ಜಲ ಲೈ ಚರನ ಪಖಾರೇ। ಪುನಿ ಸುಂದರ ಆಸನ ಬೈಠಾರೇ॥ ೫॥**

ಉದಾರಿಯಾದ ಶ್ರೀರಾಮಚಂದ್ರನು ಕಬಂಧನಿಗೆ ಸದ್ಗತಿಯನ್ನು ಕರುಣಿಸಿ, ಮುಂದೆ ಶಬರಿಯ ಆಶ್ರಮಕ್ಕೆ ಬಂದನು. ತನ್ನ ಆಶ್ರಮಕ್ಕೆ ಬಂದ ಶ್ರೀರಾಮನನ್ನು ನೋಡಿ ಶಬರಿಯು ಮತಂಗಮುನಿಯ ವಚನಗಳನ್ನು ನೆನೆದುಕೊಂಡು ಮನಸ್ಸು ಸಂತೋಷದಿಂದ ಹಿಗ್ಗಿಹೋಯಿತು. ಸರಸಿಜಲೋಚನರೂ, ಆಜಾನುಬಾಹುಗಳುಳ್ಳವರೂ, ಜಟಾಜೂಟದಿಂದ ಶೋಭಿಸುತ್ತಿರುವ, ವಕ್ಷಸ್ಥಳದಲ್ಲಿ ವನಮಾಲೆಯನ್ನು ಧರಿಸಿರುವ, ಆ ಶ್ಯಾಮಲಗೌರವರ್ಣ ಶೋಭಿತರಾದ ಸೋದರರಿಬ್ಬರನ್ನು ಕಂಡ ಶಬರಿಯು ಅವರ ಚರಣಕಮಲಗಳಲ್ಲಿ ಗೋಜಿಕೊಂಡಳು. ಭಕ್ತಿಪಾರವಶ್ಯದಿಂದ ಆಕೆಗೆ ಮಾತೇ ಹೊರಡದು. ಪದೇ-ಪದೇ ಅವರ ಪಾದಪದ್ಮಗಳಲ್ಲಿ ನಮಸ್ಕರಿಸುತ್ತಿದ್ದಳು. ಮತ್ತೆ ಆಕೆ ಪವಿತ್ರಜಲವನ್ನು ತಂದು ಅವರ ಪಾದಗಳನ್ನು ತೊಳೆದು, ಅವರನ್ನು ಸುಂದರ ಆಸನಗಳಲ್ಲಿ ಕುಳ್ಳಿರಿಸಿದಳು. (ಚೌ/೩-೫)

**ದೋ – ಕಂದ ಮೂಲ ಫಲ ಸುರಸ ಅತಿ ದಿಏ ರಾಮ ಕಹುँ ಆನಿ।**
**ಪ್ರೇಮ ಸಹಿತ ಪ್ರಭು ಖಾಏ ಬಾರಂಬಾರ ಬಖಾನಿ॥ ೩೪॥**

ಆಕೆಯು ಅತ್ಯಂತ ರುಚಿಕರವಾದ, ಮಾಗಿದ, ರಸಭರಿತವಾದ ಕಂದ-ಮೂಲ-ಫಲಗಳನ್ನು ತಂದು ಶ್ರೀರಾಮನಿಗೆ ಅರ್ಪಿಸಿದಳು. ಪ್ರಭುವು ಅವನ್ನು ಮೆಚ್ಚಿಕೊಂಡು ಮತ್ತೆ-ಮತ್ತೆ ಹೊಗಳುತ್ತಾ ಪ್ರೇಮದಿಂದ ಭುಂಜಿಸಿದನು. (ದೋ/೩೪)

**ಚೌ – ಪಾನಿ ಜೋರಿ ಆಗೇँ ಭಇ ಠಾಢೀ। ಪ್ರಭುಹಿ ಬಿಲೋಕಿ ಪ್ರೀತಿ ಅತಿ ಬಾಢೀ॥**
**ಕೇಹಿ ಬಿಧಿ ಅಸ್ತುತಿ ಕರೌँ ತುಮ್ಹಾರೀ। ಅಧಮ ಜಾತಿ ಮೈँ ಜಡಮತಿ ಭಾರೀ॥ ೧॥**
**ಅಧಮ ತೆ ಅಧಮ ಅಧಮ ಅತಿ ನಾರೀ। ತಿನ್ಹ ಮಹ್ ಮೈँ ಮತಿಮಂದ ಅಘಾರೀ॥**
**ಕಹ ರಘುಪತಿ ಸುನು ಭಾಮಿನಿ ಬಾತಾ। ಮಾನಉँ ಏಕ ಭಗತಿ ಕರ ನಾತಾ॥ ೨॥**
**ಜಾತಿ ಪಾँತಿ ಕುಲ ಧರ್ಮ ಬಡಾಈ। ಧನ ಬಲ ಪರಿಜನ ಗುನ ಚತುರಾಈ॥**
**ಭಗತಿ ಹೀನ ನರ ಸೋಹಇ ಕೈಸಾ। ಬಿನು ಜಲ ಬಾರಿದ ದೇಖಿಅ ಜೈಸಾ॥ ೩॥**
**ನವಧಾ ಭಗತಿ ಕಹಉँ ತೊಹಿ ಪಾಹೀँ। ಸಾವಧಾನ ಸುನು ಧರು ಮನ ಮಾಹೀँ॥**
**ಪ್ರಥಮ ಭಗತಿ ಸಂತನ್ಹ ಕರ ಸಂಗಾ। ದೂಸರಿ ರತಿ ಮಮ ಕಥಾ ಪ್ರಸಂಗಾ॥ ೪॥**

ಶಬರಿಯು ಮತ್ತೆ ಕೈಜೋಡಿಸಿಕೊಂಡು ಪ್ರಭುವಿನ ಎದುರು ನಿಂತುಕೊಂಡಳು. ಪ್ರಭುವನ್ನು ಕಂಡು ಆಕೆಯ ಪ್ರೇಮ ಉಕ್ಕಿಹರಿಯಿತು. ಅವಳು ಪ್ರಾರ್ಥಿಸಿಕೊಂಡಳು – ''ಸ್ವಾಮಿ! ನಾನು ನಿನ್ನನ್ನು ಏನೆಂದು ಸ್ತುತಿಸಲಿ? ಓ ಪಾಪವಿನಾಶಾ! ನಾನು ಕೀಳುಜಾತಿಯ ಹೆಣ್ಣು. ಮಂದಬುದ್ಧಿಯವಳು. ಅಧಮರಲ್ಲಿಯೂ ಅತಿ ಅಧಮಳು ನಾನು. ಅದರಲ್ಲಿಯೂ ಜಡಮತಿಯವಳು.'' ಆಕೆಯ ಮಾತನ್ನು ಕೇಳಿ ರಘುನಾಥನು ಹೇಳಿದನು – ಅಮ್ಮಾ! ಭಕ್ತಳೇ! ನನ್ನ ಮಾತನ್ನು ಕೇಳು. ನಾನಾದರೋ ಕೇವಲ ಭಕ್ತಿಯ ಸಂಬಂಧವನ್ನು ಮಾತ್ರ ನೋಡುವವನು. ಜಾತಿ, ಪಂಥ, ಕುಲ, ಧರ್ಮ, ದೊಡ್ಡಸ್ತಿಕೆ, ಧನ, ಬಲ, ಕುಟುಂಬ, ಗುಣ, ಮಾತು, ಜಾಣ್ಮೆ, ಇವೆಲ್ಲ ಇದ್ದರೂ ಭಕ್ತಿಯಿಲ್ಲದ ನರನು ನೀರಿಲ್ಲದ ಮೋಡದಂತೆ ನಿಷ್ಫಲನು. ಆದ್ದರಿಂದ ಅಂತಹವರು ನನಗೆ ಪ್ರೇಮಪಾತ್ರರಲ್ಲ. ಈಗ ನಾನು ನಿನಗೆ ನನ್ನ ನವಧಾಭಕ್ತಿಯನ್ನು ಅರುಹುತ್ತೇನೆ ಮನಸ್ಸು ಕೊಟ್ಟು ಕೇಳುವವಳಾಗು. ಮೊದಲನೆ ಭಕ್ತಿಯು ಸಜ್ಜನ ಸಾಂಗತ್ಯ. ಎರಡನೆಯದು ನನ್ನ ಕಥಾಪ್ರಸಂಗದಲ್ಲಿ ಅನುರಕ್ತಿಯು. (ಚೌ/೧-೪)

ದೋ – ಗುರ ಪದ ಪಂಕಜ ಸೇವಾ ತೀಸರಿ ಭಗತಿ ಅಮಾನ।
ಚೌಥಿ ಭಗತಿ ಮಮ ಗುನ ಗನ ಕರಇ ಕಪಟ ತಜಿ ಗಾನ॥ ೩೫ ॥

ಮೂರನೆಯ ಭಕ್ತಿಯು ಅಭಿಮಾನವನ್ನು ತೊರೆದು ಗುರುಚರಣಗಳನ್ನು ಸೇವಿಸುವುದು. ದಂಭ-ಕಪಟವಳಿದು ನನ್ನ ಗುಣಗಳನ್ನು ಪಾಡುವುದೇ ನಾಲ್ಕನೆಯ ಭಕ್ತಿಯಾಗಿದೆ. (ದೋ/೩೫)

ಚೌ – ಮಂತ್ರ ಜಾಪ ಮಮ ದೃಢ ಬಿಸ್ವಾಸಾ। ಪಂಚಮ ಭಜನ ಸೊ ಬೇದ ಪ್ರಕಾಸಾ॥
ಛಠ ದಮ ಸೀಲ ಬಿರತಿ ಬಹು ಕರಮಾ। ನಿರತ ನಿರಂತರ ಸಜ್ಜನ ಧರಮಾ॥ ೧ ॥
ಸಾತವ್ ಸಮ ಮೊಹಿ ಮಯ ಜಗ ದೇಖಾ। ಮೋತೇ ಸಂತ ಅಧಿಕ ಕರಿ ಲೇಖಾ॥
ಆಠವ್ ಜಥಾಲಾಭ ಸಂತೋಷಾ। ಸಪನೆಹು ನಹಿ ದೇಖಇ ಪರದೋಷಾ॥ ೨ ॥
ನವಮ ಸರಲ ಸಬ ಸನ ಛಲಹೀನಾ। ಮಮ ಭರೋಸ ಹಿಯ್ ಹರಷ ನ ದೀನಾ॥
ನವ ಮಹು ಏಕಉ ಜಿನ್ಹ ಕೇ ಹೋಈ। ನಾರಿ ಪುರುಷ ಸಚರಾಚರ ಕೋಈ॥ ೩ ॥
ಸೋಇ ಅತಿಸಯ ಪ್ರಿಯ ಭಾಮಿನಿ ಮೋರೇ। ಸಕಲ ಪ್ರಕಾರ ಭಗತಿ ದೃಢ ತೋರೇ॥
ಜೋಗಿ ಬೃಂದ ದುರಲಭ ಗತಿ ಜೋಈ। ತೋ ಕಹು ಆಜು ಸುಲಭ ಭಇ ಸೋಈ॥ ೪ ॥
ಮಮ ದರಸನ ಫಲ ಪರಮ ಅನೂಪಾ। ಜೀವ ಪಾವ ನಿಜ ಸಹಜ ಸರೂಪಾ॥
ಜನಕಸುತಾ ಕಇ ಸುಧಿ ಭಾಮಿನೀ। ಜಾನಹಿ ಕಹು ಕರಿಬರಗಾಮಿನೀ॥ ೫ ॥
ಪಂಪಾ ಸರಹಿ ಜಾಹು ರಘುರಾಈ। ತಹ್ ಹೋಇಹಿ ಸುಗ್ರೀವ ಮಿತಾಈ॥
ಸೋ ಸಬ ಕಹಿಹಿ ದೇವ ರಘುಬೀರಾ। ಜಾನತಹೂ ಪೂಛಹು ಮತಿಧೀರಾ॥ ೬ ॥
ಬಾರ ಬಾರ ಪ್ರಭು ಪದ ಸಿರು ನಾಈ। ಪ್ರೇಮ ಸಹಿತ ಸಬ ಕಥಾ ಸುನಾಈ॥ ೭ ॥

ವೇದಗಳಲ್ಲಿ ಪ್ರಸಿದ್ಧವಾದ ನನ್ನ (ರಾಮ) ಮಂತ್ರದ ಜಪ ಹಾಗೂ ನನ್ನಲ್ಲಿ ದೃಢವಾದ ವಿಶ್ವಾಸವು ಐದನೆಯ ಭಕ್ತಿಯಾಗಿದೆ. ಇಂದ್ರಿಯಗಳ ನಿಗ್ರಹ, ಶೀಲ (ಒಳ್ಳೆಯ ಸ್ವಭಾವ), ಲೌಕಿಕ ಕರ್ಮಗಳಿಂದ ವಿರಕ್ತಿ, ನಿರಂತರ ಸತ್ಪುರುಷರ ಧರ್ಮಾಚರಣೆಗಳಲ್ಲಿ ತೊಡಗಿರುವುದು ಆರನೆಯ ಭಕ್ತಿಯಾಗಿದೆ. ಜಗತ್ತನ್ನು ರಾಮಮಯವೆಂದು ಸಮಾನಭಾವದಿಂದ ನೋಡುತ್ತಾ, ಸಜ್ಜನರನ್ನು (ಭಾಗವತೋತ್ತಮರನ್ನು) ನನಗಿಂತಲೂ ಹೆಚ್ಚಿನವರು ಎಂದು ತಿಳಿಯುವುದೇ ಏಳನೆಯ ಭಕ್ತಿಯು. ದೊರೆತುದರಲ್ಲೇ ತೃಪ್ತನಾಗಿರುವುದು, ಸ್ವಪ್ನದಲ್ಲಿಯೂ ಕೂಡ ಇತರರ ದೋಷಗಳನ್ನು ಎಣಿಸದಿರುವುದು ಎಂಟನೆಯ ಭಕ್ತಿಯಾಗಿದೆ. ಎಲ್ಲರೊಡನೆ ಸರಳತೆಯಿಂದ, ನಿಷ್ಕಪಟವಾಗಿ ವರ್ತಿಸುವುದು, ಹೃದಯದಲ್ಲಿ ನನ್ನ ಕುರಿತು ಭರವಸೆಯನ್ನಿಟ್ಟುಕೊಂಡು ಯಾವುದೇ ಅವಸ್ಥೆಯಲ್ಲಿ ಹರ್ಷ-ವಿಷಾದಗಳಿಗೆ ತುತ್ತಾಗದಿರುವುದು ಒಂಭತ್ತನೇ ಪ್ರಕಾರದ ಭಕ್ತಿಯಾಗಿದೆ. ಈ ಒಂಭತ್ತರಲ್ಲಿ ಒಂದಾದರೂ ಯಾರಿಗಾದರೂ ಸಿದ್ಧಿಸಿದರೆ, ಅವನು ಗಂಡಾಗಲೀ, ಹೆಣ್ಣಾಗಲೀ, ಜಡವಾಗಲೀ, ಚೇತನನಾಗಿರಲಿ ನನಗೆ ಅತ್ಯಂತ ಪ್ರಿಯನು. ಇನ್ನು ನಿನ್ನಲ್ಲಂತೂ ಎಲ್ಲ ವಿಧವಾದ ಭಕ್ತಿಯೂ ದೃಢವಾಗಿದೆ. ಆದ್ದರಿಂದ ಯೋಗಿಗಳಿಗೂ ದುರ್ಲಭವಾದ ಗತಿಯು ಇಂದು ನಿನಗೆ ಲಭಿಸಿದೆ. ನನ್ನ ದರ್ಶನವು ನಿರುಪಮಾನವಾಗಿದೆ. ಅದರಿಂದಾಗಿ ಜೀವಿಯು ಸ್ವಸ್ವರೂಪ (ಮೋಕ್ಷ) ವನ್ನು ಪಡೆಯುತ್ತಾನೆ. ಎಲೈ ತಾಯೇ! ಗಜಗಾಮಿನಿಯಾದ ಸೀತೆಯ ಸುದ್ದಿ ನಿನಗೇನಾದರೂ ತಿಳಿದಿದ್ದರೆ ತಿಳಿಸು. ಶಬರಿಯು ಹೇಳಿದಳು – ''ಓ ರಘುನಾಥಾ! ನೀವು ಪಂಪಾಸರೋವರಕ್ಕೆ ಹೋಗಿ. ಅಲ್ಲಿ ಸುಗ್ರೀವನೊಂದಿಗೆ ಸ್ನೇಹ ಉಂಟಾದೀತು. ದೇವಾ! ಅವನು ನಿಮಗೆ ಎಲ್ಲ ಸುದ್ದಿಯನ್ನೂ ತಿಳಿಸುವನು. ಧೀರಮತಿಯಾದ ರಾಮಾ! ನೀನು ಸರ್ವಜ್ಞನಾಗಿದ್ದರೂ ನನ್ನ ಬಳಿಯಲ್ಲಿ ಕೇಳುತ್ತಿರುವಿಯಲ್ಲ?'' ಹೀಗೆ ಹೇಳಿ ಆಕೆಯು ಪದೇ-ಪದೇ ಪ್ರಭುಪದಗಳಿಗೆ ನಮಸ್ಕರಿಸಿ, ಮತಂಗ ಮಹರ್ಷಿಗಳು ತನಗೆ ಹೇಳಿದ ವಿಷಯವನ್ನೂ, ತಾನು ಪ್ರಭುವಿಗಾಗಿ ಎದುರು ನೋಡುತ್ತಿದ್ದ ವಿಧಾನವನ್ನೂ ಅವನಿಗೆ ಪ್ರೇಮದಿಂದ ಎಲ್ಲ ಕಥೆಯನ್ನು ಹೇಳಿದಳು. (ಚೌ/೧-೭)

ಛಂ – ಕಹಿ ಕಥಾ ಸಕಲ ಬಿಲೋಕಿ ಹರಿ ಮುಖ ಹೃದಯ್ ಪದ ಪಂಕಜ ಧರೇ।
ತಜಿ ಜೋಗ ಪಾವಕ ದೇಹ ಹರಿ ಪದ ಲೀನ ಭಇ ಜಹ್ ನಹಿ ಫಿರೇ॥
ನರ ಬಿಬಿಧ ಕರ್ಮ ಅಧರ್ಮ ಬಹು ಮತ ಸೋಕಪ್ರದ ಸಬ ತ್ಯಾಗಹೂ।
ಬಿಸ್ವಾಸ ಕರಿ ಕಹ ದಾಸ ತುಲಸೀ ರಾಮ ಪದ ಅನುರಾಗಹೂ॥

ಎಲ್ಲ ಕಥೆಯನ್ನು ಹೇಳಿದ ಬಳಿಕ ಶಬರಿಯು ಭಗವಂತನನ್ನು ದರ್ಶಿಸಿ, ಅವನ ಚರಣಕಮಲಗಳನ್ನು ತನ್ನ ಹೃದಯದಲ್ಲಿ ಧರಿಸಿಕೊಂಡು; ಯೋಗಾಗ್ನಿಯಿಂದ ತನ್ನ ಶರೀರವನ್ನು ತ್ಯಜಿಸಿ, ಜೀವಿಗಳು ಮರಳಿ ಹುಟ್ಟದಿರುವ ದುರ್ಲಭವಾದ ಹರಿಪದದಲ್ಲಿ ಲೀನವಾದಳು. ತುಲಸೀದಾಸರು ಹೇಳುತ್ತಿದ್ದಾರೆ – ''ಎಲೈ ಮಾನವರಿರಾ! ಅನೇಕ ವಿಧವಾದ ಕರ್ಮಗಳನ್ನು, ಅಧರ್ಮಗಳನ್ನೂ, ವಿವಿಧಮತಗಳನ್ನೂ ತ್ಯಜಿಸಿಬಿಡು. ಇವೆಲ್ಲವೂ ಶೋಕಪ್ರದವೇ. ಭಕ್ತಿವಿಶ್ವಾಸಗಳಿಂದ ಶ್ರೀರಾಮನ ಪದಪದ್ಮಗಳಲ್ಲಿ ಅನುರಾಗವನ್ನಿಡಿರಿ. (ಛಂದ)

**ದೋ – ಜಾತಿ ಹೀನ ಅಘ ಜನ್ಮ ಮಹಿ ಮುಕ್ತ ಕೀನ್ಹಿ ಅಸಿ ನಾರಿ ।**
**ಮಹಾಮಂದ ಮನ ಸುಖ ಚಹಸಿ ಐಸೇ ಪ್ರಭುಹಿ ಬಿಸಾರಿ ॥ ೩೬ ॥**

ಎಲೈ ದುರ್ಬುದ್ಧಿ ಮನವೇ! ನಿಮ್ನ ಜಾತಿಯವಳೂ, ಪಾಪದ ತವರೂ ಆದ ಸ್ತ್ರೀಗೂ ಮುಕ್ತಿಯನ್ನು ಕರುಣಿಸಿದ ಪ್ರಭುವನ್ನು ಮರೆತು ಸುಖವನ್ನು ಬಯಸುವೆಯಲ್ಲ! (ದೋ/೩೬)

**ಚೌ – ಚಲೇ ರಾಮ ತ್ಯಾಗಾ ಬನ ಸೋಊ । ಅತುಲಿತ ಬಲ ನರ ಕೇಹರಿ ದೋಊ ॥**
**ಬಿರಹೀ ಇವ ಪ್ರಭು ಕರತ ಬಿಷಾದಾ । ಕಹತ ಕಥಾ ಅನೇಕ ಸಂಬಾದಾ ॥ ೧ ॥**
**ಲಛಿಮನ ದೇಖು ಬಿಪಿನ ಕಇ ಸೋಭಾ । ದೇಖತ ಕೆಹಿ ಕರ ಮನ ನಹಿಂ ಛೋಭಾ ॥**
**ನಾರಿ ಸಹಿತ ಸಬ ಖಗ ಮೃಗ ಬೃಂದಾ । ಮಾನಹುಂ ಮೋರಿ ಕರತ ಹಹಿಂ ನಿಂದಾ ॥ ೨ ॥**
**ಹಮಹಿ ದೇಖಿ ಮೃಗ ನಿಕರ ಪರಾಹೀಂ । ಮೃಗೀಂ ಕಹಹಿಂ ತುಮ್ಹ ಕಹಂ ಭಯ ನಾಹೀಂ ॥**
**ತುಮ್ಹ ಆನಂದ ಕರಹು ಮೃಗ ಜಾಏ । ಕಂಚನ ಮೃಗ ಖೋಜನ ಏ ಆಏ ॥ ೩ ॥**
**ಸಂಗ ಲಾಇ ಕರಿನೀಂ ಕರಿ ಲೇಹೀಂ । ಮಾನಹು ಮೋಹಿ ಸಿಖಾವನು ದೇಹೀಂ ॥**
**ಸಾಸ್ತ್ರ ಸುಚಿಂತಿತ ಪುನಿ ಪುನಿ ದೇಖಿಅ । ಭೂಪ ಸುಸೇವಿತ ಬಸ ನಹೀಂ ಲೇಖಿಅ ॥ ೪ ॥**
**ರಾಖಿಅ ನಾರಿ ಜದಪಿ ಉರ ಮಾಹೀಂ । ಜುಬತೀ ಸಾಸ್ತ್ರ ನೃಪತಿ ಬಸ ನಾಹೀಂ ॥**
**ದೇಖಹು ತಾತ ಬಸಂತ ಸುಹಾವಾ । ಪ್ರಿಯಾ ಹೀನ ಮೋಹಿ ಭಯ ಉಪಜಾವಾ ॥ ೫ ॥**

ಶ್ರೀರಾಮಚಂದ್ರನು ಆ ವನವನ್ನು ತೊರೆದು ಮುಂದಕ್ಕೆ ಸಾಗಿದನು. ಅಣ್ಣ-ತಮ್ಮಂದಿರಿಬ್ಬರೂ ಅಮಿತ ಬಲಪರಾಕ್ರಮವುಳ್ಳವರೂ, ಪುರುಷಸಿಂಹರೂ ಆಗಿದ್ದಾರೆ. ಪ್ರಭುವು ವಿರಹಿಯಂತೆ ವಿಷಾದಿಸುತ್ತಾ, ಅನೇಕ ಪ್ರಕಾರದ ಕಥೆ-ಸಂವಾದಗಳನ್ನು ಲಕ್ಷ್ಮಣನಿಗೆ ತಿಳಿಸುತ್ತಾ ಹೋದನು. ಲಕ್ಷ್ಮಣಾ! ಕೊಂಚ ಈ ಕಾಡಿನ ಶೋಭೆಯನ್ನು ನೋಡು. ಇದನ್ನು ನೋಡಿದಾಗ ಯಾರ ಮನಸ್ಸು ಕ್ಷುಬ್ಧವಾಗದು? ಖಗ ಮೃಗವೃಂದಗಳೆಲ್ಲವೂ ತಮ್ಮ-ತಮ್ಮ ಹೆಂಗಳೆಯರೊಂದಿಗಿವೆ. ಅವುಗಳು ನನ್ನನ್ನು ನಿಂದಿಸುತ್ತಿರುವಂತೆ ನಮ್ಮನ್ನು ಕಂಡು ಭಯದಿಂದ ಜಿಂಕೆಗಳ ಹಿಂಡು ಓಡತೊಡಗಿದಾಗ, ಹೆಣ್ಣುಜಿಂಕೆಗಳು ಹೇಳುತ್ತವೆ – 'ನಿಮಗೆ ಭಯವಿಲ್ಲ. ನೀವು ಸಾಧಾರಣ ಜಿಂಕೆಗಳಾಗಿ ಹುಟ್ಟಿದ್ದೀರಿ. ಆದ್ದರಿಂದ ನೀವು ಆನಂದವಾಗಿರಿ. ಇವರು ಬಂಗಾರದ ಜಿಂಕೆಯನ್ನು ಹುಡುಕುತ್ತಾ ಬಂದಿರುವರು. ಆನೆಗಳು ಹೆಣ್ಣಾನೆಗಳನ್ನು ತಮ್ಮ ಜೊತೆಯಲ್ಲಿ ಕರೆದುಕೊಂಡು ಹೋಗುತ್ತಿವೆ. ಅವು 'ಹೆಣ್ಣನ್ನು ಎಂದಿಗೂ ಒಂಟಿಯಾಗಿ ಬಿಟ್ಟು ಹೋಗುವುದು ತರವಲ್ಲ' ಎಂದು ನನಗೆ ಉಪದೇಶಿಸುತ್ತಿರುವಂತೆ ಕಾಣುತ್ತದೆ. ಶಾಸ್ತ್ರಗಳನ್ನು ಚೆನ್ನಾಗಿ ಅಧ್ಯಯನ ಮಾಡಿದ್ದರೂ ಪುನಃ ಪುನಃ ಅವನ್ನು ಅವಲೋಕಿಸುತ್ತಿರಬೇಕು. ಒಳ್ಳೆರೀತಿಯಿಂದ ಸೇವೆಮಾಡಿದರೂ ರಾಜನು ನಮ್ಮ ವಶದಲ್ಲಿರುವನು ಎಂದು ತಿಳಿಯಬಾರದು. ಹೆಣ್ಣನ್ನು ಹೃದಯದಲ್ಲೇ ಅಡಗಿಸಿಟ್ಟುಕೊಂಡಿರಬಹುದು! ಆದರೂ ಯುವತಿ, ಶಾಸ್ತ್ರ ಮತ್ತು ಅರಸ ಇವರು ಯಾರ ವಶದಲ್ಲೂ ಇರುವುದಿಲ್ಲ. ತಮ್ಮಾ! ಈ ಮನೋಜ್ಞವಾದ ವಸಂತನ ಶೋಭೆಯನ್ನು ನೋಡು. ಪ್ರಿಯೆಯನ್ನಗಲಿದ ನನ್ನಲ್ಲಿ ಇದು ಭಯವನ್ನುಂಟುಮಾಡುತ್ತಿದೆ. (ಚೌ/೧-೫)

**ದೋ – ಬಿರಹ ಬಿಕಲ ಬಲಹೀನ ಮೊಹಿ ಜಾನೆಸಿ ನಿಪಟ ಅಕೇಲ ।**
**ಸಹಿತ ಬಿಪಿನ ಮಧುಕರ ಖಗ ಮದನ ಕೀನ್ಹ ಬಗಮೇಲ ॥ ೩೭ (ಕ)॥**
**ದೇಖಿ ಗಯಉ ಭ್ರಾತಾ ಸಹಿತ ತಾಸು ದೂತ ಸುನಿ ಬಾತ ।**
**ಡೇರಾ ಕೀನ್ಹೆಉ ಮನಹುಂ ತಬ ಕಟಕು ಹಟಕಿ ಮನಜಾತ ॥ ೩೭(ಖ)॥**

ನಾನು ವಿರಹ ವ್ಯಾಕುಲನಾಗಿ, ಬಲಹೀನ ಮತ್ತು ಒಂಟಿಯಾಗಿರುವುದನ್ನು ಕಂಡು ಮನ್ಮಥನು ವಿಪಿನ, ಮಧುಕರ, ಪಕ್ಷಿಗಳೊಂದಿಗೆ ಬಂದು ನನ್ನ ಮೇಲೆ ಧಾಳಿ ನಡೆಸಿರುವನು. ಆದರೆ ನಾನು ಪೂರ್ತಿ ಒಬ್ಬಂಟಿಗನಲ್ಲ, ತಮ್ಮನೊಡನೆ ಇದ್ದೇನೆ

ಎಂಬುದನ್ನು ಅವನ ದೂತನು ಹೋಗಿ ಹೇಳಿದ. ಅದನ್ನು ಕೇಳಿ ಮದನನು ತನ್ನ ಪಡೆಯೊಂದಿಗೆ ಸರ್ವಸನ್ನದ್ಧನಾಗಿ ಇಲ್ಲೇ ಗುಡಾರ ಹೂಡಿದ್ದಾನೆ. (ದೋ/೩೭ ಕ, ಖ)

**ಚೌ – ಬಿಟಪ ಬಿಸಾಲ ಲತಾ ಅರುಝಾನೀ। ಬಿಬಿಧ ಬಿತಾನ ದಿಏ ಜನು ತಾನೀ॥**
**ಕದಲಿ ತಾಲ ಬರ ಧುಜಾ ಪತಾಕಾ। ದೇಖಿ ನ ಮೋಹ ಧೀರ ಮನ ಜಾಕಾ ॥ ೧ ॥**
**ಬಿಬಿಧ ಭಾಁತಿ ಫೂಲೇ ತರು ನಾನಾ। ಜನು ಬಾನೈತ ಬನೇ ಬಹು ಬಾನಾ॥**
**ಕಹುँ ಕಹುँ ಸುಂದರ ಬಿಟಪ ಸುಹಾಏ। ಜನು ಭಟ ಬಿಲಗ ಬಿಲಗ ಹೋಇ ಛಾಏ॥ ೨ ॥**
**ಕೂಜತ ಪಿಕ ಮಾನಹುँ ಗಜ ಮಾತೇ। ಢೇಕ ಮಹೋಖ ಊಁಟ ಬಿಸರಾತೇ॥**
**ಮೋರ ಚಕೋರ ಕೀರ ಬರ ಬಾಜೀ। ಪಾರಾವತ ಮರಾಲ ಸಬ ತಾಜೀ॥ ೩ ॥**
**ತೀತಿರ ಲಾವಕ ಪದಚರ ಜೂಥಾ। ಬರನಿ ನ ಜಾಇ ಮನೋಜ ಬರೂಥಾ॥**
**ರಥ ಗಿರಿ ಸಿಲಾ ದುಂದಭೀँ ಝುರನಾ। ಚಾತಕ ಬಂದೀ ಗುನ ಗನ ಬರನಾ॥ ೪ ॥**
**ಮಧುಕರ ಮುಖರ ಭೇರಿ ಸಹನಾಈ। ತ್ರಿಬಿಧ ಬಯಾರಿ ಬಸೀಠೀँ ಆಈ॥**
**ಚತುರಂಗಿನೀ ಸೇನ ಸँಗ ಲೀನ್ಹೇँ। ಬಿಚರತ ಸಬಹಿ ಚುನೌತೀ ದೀನ್ಹೇँ॥ ೫ ॥**
**ಲಛಿಮನ ದೇಖತ ಕಾಮ ಅನೀಕಾ। ರಹಹಿँ ಧೀರ ತಿನ್ಹ ಕೈ ಜಗ ಲೀಕಾ॥**
**ಏಹಿ ಕೇँ ಏಕ ಪರಮ ಬಲ ನಾರೀ। ತೇಹಿ ತೇँ ಉಬರ ಸುಭಟ ಸೋಇ ಭಾರೀ॥ ೬ ॥**

ವಿಶಾಲವೃಕ್ಷಗಳಿಗೆ ಗೋಜಿಕೊಂಡಿರುವ ಬಳ್ಳಿಗಳು ನಾನಾ ರೀತಿಯ ಗುಡಾರಗಳಂತೆ ಶೋಭಿಸುತ್ತಿವೆ. ಬಾಳೆ ಮತ್ತು ತಾಳೆ ಅವುಗಳು ಧ್ವಜಪತಾಕೆಗಳಂತೆ ಕಂಗೊಳಿಸುತ್ತಿವೆ. ಅವುಗಳನ್ನು ಕಂಡು ಧೀರನ ಮನಸ್ಸು ಮಾತ್ರ ಮರುಳಾಗದು. ವಿವಿಧ ವೃಕ್ಷಗಳು ನಾನಾರೀತಿಯ ಫಲಪುಷ್ಪಗಳಿಂದ ಶೋಭಿಸುತ್ತಿವೆ. ಅವು ತೆರತೆರನಾದ ವಸ್ತ್ರಗಳನ್ನು ಧರಿಸಿ ನಿಂತಿರುವ ಬಿಲ್ಲುಗಾರರೋ ಎಂಬಂತೆ ಇವೆ. ಅಲ್ಲಲ್ಲಿ ದೂರದೂರದಲ್ಲಿ ಇದ್ದ ಸುಂದರ ವೃಕ್ಷಗಳು – ಯೋಧರು ಬೇರೆ-ಬೇರೆಯಾಗಿ ಬೀಡುಬಿಟ್ಟಿರುವರೋ ಎಂಬಂತಿತ್ತು. ಕೋಗಿಲೆಗಳು ಉಲಿಯುತ್ತಿವೆ. ಅವೇ ಘೀಳಿಡುವ ಮತ್ತಗಜಗಳಂತೆ ಇವೆ. ಸಾರಸ ಮತ್ತು ಅಡವಿಕಾಗೆಗಳು ಒಂಟೆ ಹಾಗೂ ಹೇಸರಕತ್ತೆಗಳಂತಿವೆ. ನವಿಲುಗಳು, ಚಕೋರಗಳು, ಪಾರಿವಾಳಗಳೂ, ಹಂಸಗಳು ಇವೆಲ್ಲವೂ ಆತನಿಗೆ ಶ್ರೇಷ್ಠವಾದ ವಾಹನಗಳು, ಕುದುರೆಗಳು. ತಿತ್ತಿರಿ ಮತ್ತು ಲಾವಕ್ಕಿಗಳೇ ಅವನ ಪದಾತಿಗಳು. ಕಾಮದೇವನ ಈ ಸೇನೆಯು ವರ್ಣನಾತೀತವಾದುದು. ಪರ್ವತ ಶಿಲೆಗಳೇ ರಥಗಳು. ಝರಿಗಳೇ ನಗಾರಿಗಳು. ಚಾತಕಪಕ್ಷಿಗಳೇ ಅವನ ಗುಣಗಳನ್ನು ಹೊಗಳುವ ಭಟ್ಟಂಗಿಗಳು. ಭ್ರಮರಗಳ ಗುಂಜಾರವವೇ ಭೇರಿ, ನಾಗಸ್ವರಗಳು. ಶೀತಲಮಂದ ಸುಗಂಧಿತ ಪವನವೇ ಆತನ ದೌತ್ಯಕ್ಕಾಗಿ ಬಂದಿರುವ ದೂತನು. ಹೀಗೆ ಚತುರಂಗಬಲವನ್ನು ನೆರಹಿ ಮದನನು ಎಲ್ಲರನ್ನು ಮೂದಲಿಸುತ್ತಾ ಯುದ್ಧಕ್ಕೆ ಆಹ್ವಾನಿಸುತ್ತಿರುವನು. ಲಕ್ಷ್ಮಣಾ! ಕಾಮದೇವನ ಈ ಚತುರಂಗ ಸೈನ್ಯವನ್ನು ಕಂಡರೂ ಕದಲದ ಗಂಡೆದೆಯವರು ಮಾತ್ರ ಜಗತ್ತಿನಲ್ಲಿ ವೀರರೆಂಬ ಗೌರವಕ್ಕೆ ಪಾತ್ರರಾಗುತ್ತಾರೆ. ಈ ಮನ್ಮಥನಿಗೆ ಸ್ತ್ರೀಯೇ ಒಂದು ಪ್ರಬಲಶಕ್ತಿಯು. ಆದರಿಂದ ಬದುಕಿ ಉಳಿಯುವವನೇ ನಿಜವಾಗಿ ಶ್ರೇಷ್ಠ ಯೋಧನಾಗಿರುವನು. (ಚೌ/೧-೬)

**ದೋ – ತಾತ ತೀನಿ ಅತಿ ಪ್ರಬಲ ಖಲ ಕಾಮ ಕ್ರೋಧ ಅರು ಲೋಭ।**
**ಮುನಿ ಬಿಗ್ಯಾನ ಧಾಮ ಮನ ಕರಹಿँ ನಿಮಿಷ ಮಹುँ ಛೋಭ॥ ೩೮ (ಕ)॥**
**ಲೋಭ ಕೆँ ಇಚ್ಛಾ ದಂಭ ಬಲ ಕಾಮ ಕೆँ ಕೇವಲ ನಾರಿ।**
**ಕ್ರೋಧ ಕೆँ ಪರುಷ ಬಚನ ಬಲ ಮುನಿಬರ ಕಹಹಿँ ಬಿಚಾರಿ ॥ ೩೮(ಖ)॥**

ತಮ್ಮಾ! ಕಾಮ, ಕ್ರೋಧ, ಲೋಭ ಇವು ಮೂರೂ ಪ್ರಬಲ ದುಷ್ಟಶಕ್ತಿಗಳು. ಇವು ವಿಜ್ಞಾನನಿಧಿಗಳಾದ ಮುನಿಗಳನ್ನೂ ಕೂಡ ಕ್ಷಣಮಾತ್ರದಲ್ಲಿ ಕದಡಿಬಿಡುತ್ತವೆ. ಲೋಭಕ್ಕೆ ಇಚ್ಛೆ ಮತ್ತು ದಂಭದ ಬೆಂಬಲವಿದೆ. ಕಾಮನಿಗೆ ಕೇವಲ ಹೆಣ್ಣಿನ ಬಲ. ಕ್ರೋಧಕ್ಕೆ ಕಟುವಚನಗಳೇ ಬಲ ಎಂದು ಮುನೀಶ್ವರರೂ ವಿಚಾರಮಾಡಿ ಹೇಳಿರುವರು. (ದೋ/೩೮ ಕ, ಖ)

**ಚೌ – ಗುನಾತೀತ ಸಚರಾಚರ ಸ್ವಾಮೀ। ರಾಮ ಉಮಾ ಸಬ ಅಂತರಜಾಮೀ॥**
**ಕಾಮಿನ್ಹ ಕೈ ದೀನತಾ ದೇಖಾಈ। ಧೀರನ್ಹ ಕೇँ ಮನ ಬಿರತಿ ದೃಢಾಈ॥ ೧ ॥**
**ಕ್ರೋಧ ಮನೋಜ ಲೋಭ ಮದ ಮಾಯಾ। ಛೂಟಹಿँ ಸಕಲ ರಾಮ ಕೀँ ದಾಯಾ॥**
**ಸೋ ನರ ಇಂದ್ರಜಾಲ ನಹಿँ ಭೂಲಾ। ಜಾ ಪರ ಹೋಇ ಸೊ ನಟ ಅನುಕೂಲಾ ॥ ೨ ॥**

**ಉಮಾ ಕಹಉಁ ಮೈಁ ಅನುಭವ ಅಪನಾ। ಸತ ಹರಿ ಭಜನು ಜಗತ ಸಬ ಸಪನಾ॥**
**ಪುನಿ ಪ್ರಭು ಗಏ ಸರೋಬರ ತೀರಾ। ಪಂಪಾ ನಾಮ ಸುಭಗ ಗಂಭೀರಾ॥೩॥**
**ಸಂತ ಹೃದಯ ಜಸ ನಿರ್ಮಲ ಬಾರೀ। ಬಾಁಧೇ ಘಾಟ ಮನೋಹರ ಚಾರೀ॥**
**ಜಹಁ ತಹಁ ಪಿಅಹಿಂ ಬಿಬಿಧ ಮೃಗ ನೀರಾ। ಜನು ಉದಾರ ಗೃಹ ಜಾಚಕ ಭೀರಾ॥೪॥**

ಶಿವನು ಹೇಳುತ್ತಾನೆ – ಎಲೈ ಉಮೆ! ಶ್ರೀರಾಮಚಂದ್ರನು ತ್ರಿಗುಣಾತೀತನು. ಈ ಚರಾಚರ ಜಗತ್ತಿಗೆ ಸ್ವಾಮಿಯು, ಸರ್ವಾಂತರ್ಯಾಮಿಯೂ ಆಗಿರುವನು. ಅವನು ಮೇಲಿನ ಮಾತುಗಳನ್ನಾಡಿ, ಕಾಮುಕರ ದೈನ್ಯಸ್ಥಿತಿಯನ್ನು ವಿವರಿಸಿರುವನು. ಧೀರ, ವಿವೇಕೀ ಜನರ ಮನಸ್ಸಿನಲ್ಲಿರುವ ವೈರಾಗ್ಯವನ್ನು ದೃಢಪಡಿಸಿದ್ದಾನೆ. ಕಾಮ, ಕ್ರೋಧ, ಲೋಭ, ಮದ, ಮಾಯೆ ಇವುಗಳು ಶ್ರೀರಾಮನ ಕೃಪೆಗೆ ಪಾತ್ರರಾದವರ ಬಳಿ ಸುಳಿಯಲಾರವು. ಆ ಲೀಲಾಪುರುಷೋತ್ತಮನಾದ ಶ್ರೀರಾಮನ ಅನುಗ್ರಹಪಡೆದ ಮನುಜನು ಮಾಯೆಗೆ ವಶನಾಗಲಾರನು. ಉಮಾ! ನಿನಗೆ ನನ್ನ ಅನುಭವವನ್ನು ಹೇಳುತ್ತಿದ್ದೇನೆ. ''ಹರಿಭಜನೆಯೊಂದೇ ಏಕೈಕ ಸತ್ಯವು. ಈ ಜಗತ್ತೆಲ್ಲವೂ ಸ್ವಪ್ನದಂತೆ ಮಿಥ್ಯೆಯು.'' ಅನಂತರ ಶ್ರೀರಾಮಚಂದ್ರಪ್ರಭುವು ಸುಂದರವೂ, ಆಳವೂ ಆದ ಪಂಪಾಸರೋವರದ ತಡಿಗೆ ಹೋದನು. ಅದರ ಜಲವು ಸಜ್ಜನರ ಹೃದಯದಂತೆ ನಿರ್ಮಲವಾಗಿತ್ತು. ಅದಕ್ಕೆ ಮನೋಹರವಾದ ನಾಲ್ಕು ಘಟ್ಟಗಳಿವೆ. ತೆರತೆರನಾದ ಪಶುಗಳು ಅಲ್ಲಲ್ಲಿ ನೀರು ಕುಡಿಯುತ್ತಿದ್ದವು. ಅವುಗಳು ಉದಾರ ಪುರುಷನ ಮನೆಯ ಮುಂದೆ ನೆರೆದ ಯಾಚಕರ ಗುಂಪಿನಂತಿದ್ದವು. (ಚೌ/೧-೪)

**ದೋ – ಪುರಇನಿ ಸಘನ ಓಟ ಜಲ ಬೇಗಿ ನ ಪಾಇಅ ಮರ್ಮ।**
**ಮಾಯಾಛನ್ನ ನ ದೇಖಿಐ ಜೈಸೇಂ ನಿರ್ಗುನ ಬ್ರಹ್ಮ॥೩೯ (ಕ)॥**
**ಸುಖೀ ಮೀನ ಸಬ ಏಕರಸ ಅತಿ ಅಗಾಧ ಜಲ ಮಾಹಿಂ।**
**ಜಥಾ ಧರ್ಮಸೀಲನ್ಹ ಕೇ ದಿನ ಸುಖ ಸಂಜುತ ಜಾಹಿಂ॥೩೯(ಖ)॥**

ಮಾಯೆ ಆವರಿಸಿದ ಜೀವಿಗಳಿಗೆ ನಿರ್ಗುಣಪರಬ್ರಹ್ಮನು ಕಾಣದಿರುವಂತೆ, ತಾವರೆಯ ಎಲೆಗಳು ತುಂಬಿರುವುದರಿಂದ ಆ ಸರೋವರದ ನೀರು ಬೇಗನೇ ಕಣ್ಣಿಗೆ ಬೀಳುವುದಿಲ್ಲ. ಧರ್ಮಾತ್ಮರಾದವರ ಎಲ್ಲ ದಿನಗಳೂ ಸುಖವಾಗಿ ಕಳೆಯುವಂತೆ, ಆ ಸರೋವರದ ಆಳವಾದ ನೀರಿನಲ್ಲಿ ಎಲ್ಲ ರೀತಿಯ ಮೀನುಗಳು ಯಾವಾಗಲೂ ಹಾಯಾಗಿ ಇರುತ್ತವೆ. (ದೋ/೩೯ ಕ, ಖ)

**ಚೌ – ಬಿಕಸೇ ಸರಸಿಜ ನಾನಾ ರಂಗಾ। ಮಧುರ ಮುಖರ ಗುಂಜತ ಬಹು ಭೃಂಗಾ॥**
**ಬೋಲತ ಜಲಕುಕ್ಕುಟ ಕಲಹಂಸಾ। ಪ್ರಭು ಬಿಲೋಕಿ ಜನು ಕರತ ಪ್ರಸಂಸಾ॥೧॥**
**ಚಕ್ರಬಾಕ ಬಕ ಖಗ ಸಮುದಾಈ। ದೇಖತ ಬನಇ ಬರನಿ ನಹಿಂ ಜಾಈ॥**
**ಸುಂದರ ಖಗ ಗನ ಗಿರಾ ಸುಹಾಈ। ಜಾತ ಪಥಿಕ ಜನು ಲೇತ ಬೊಲಾಈ॥೨॥**
**ತಾಲ ಸಮೀಪ ಮುನಿನ್ಹ ಗೃಹ ಛಾಏ। ಚಹು ದಿಸಿ ಕಾನನ ಬಿಟಪ ಸುಹಾಏ॥**
**ಚಂಪಕ ಬಕುಲ ಕದಂಬ ತಮಾಲಾ। ಪಾಟಲ ಪನಸ ಪರಾಸ ರಸಾಲಾ॥೩॥**
**ನವ ಪಲ್ಲವ ಕುಸುಮಿತ ತರು ನಾನಾ। ಚಂಚರೀಕ ಪಟಲೀ ಕರ ಗಾನಾ॥**
**ಸೀತಲ ಮಂದ ಸುಗಂಧ ಸುಭಾಊ। ಸಂತತ ಬಹಇ ಮನೋಹರ ಬಾಊ॥೪॥**
**ಕುಹೂ ಕುಹೂ ಕೋಕಿಲ ಧುನಿ ಕರಹೀಂ। ಸುನಿ ರವ ಸರಸ ಧ್ಯಾನ ಮುನಿ ಟರಹೀಂ॥೫॥**

ಅದರಲ್ಲಿ ಬಣ್ಣಬಣ್ಣದ ಕಮಲಗಳು ಅರಳಿದ್ದವು. ಅದರ ತುಂಬ ತುಂಬಿಗಳು ಮಧುರ ಗುಂಜಾರವ ಮಾಡುತ್ತಿದ್ದರು. ಜಲಕುಕ್ಕುಟ ಹಾಗೂ ರಾಜಹಂಸಗಳು ಪ್ರಭುವನ್ನು ಕಂಡು ಪ್ರಶಂಸೆ ಮಾಡುತ್ತಿವೆಯೋ ಎನ್ನುವಂತೆ ಕೂಗುತ್ತಿದ್ದವು. ಅಲ್ಲಿ ಅಸಂಖ್ಯಾತವಾದ ಚಕ್ರವಾಕಗಳೂ, ಬಕಪಕ್ಷಿಗಳೂ ಮೊದಲಾದ ಇತರ ಪಕ್ಷಿಗಳನ್ನು ನೋಡಿಯೇ ತಿಳಿಯಬೇಕು, ವರ್ಣಿಸಲು ಸಾಧ್ಯವಾಗದು. ಆ ಪಕ್ಷಿಗಳ ಮಧುರಕಲರವವು ದಾರಿಹೋಕರನ್ನು ಆಹ್ವಾನಿಸುವಂತೆ ಕಾಣುತ್ತಿತ್ತು. ಆ ಪಂಪಾಸರೋವರದ ಸಮೀಪದಲ್ಲಿ ಮುನೀಶ್ವರರು ಆಶ್ರಮ ಕಟ್ಟಿಕೊಂಡು ವಾಸಿಸುತ್ತಿದ್ದರು. ಆ ಸರೋವರದ ಸುತ್ತಲೂ ಕಾಡಿನ ಮರಗಳಿದ್ದವು. ಸಂಪಿಗೆ, ಬಕುಳ, ಕದಂಬ, ತಮಾಲ, ಪಾದರಿ, ಹಲಸು, ಮುತ್ತುಗ, ಮಾವು ಮೊದಲಾದ ವಿವಿಧ ವೃಕ್ಷಗಳು ನವಪಲ್ಲವಗಳಿಂದ, ಸುಗಂಧಪೂರ್ಣ ಕುಸುಮಗಳಿಂದ ಕಂಗೊಳಿಸುತ್ತಿದ್ದವು. ಅವುಗಳ ಮೇಲೆ ಭ್ರಮರಗಳು ಝೇಂಕರಿಸುತ್ತಿದ್ದವು. ಸಹಜವಾಗಿ ಶೀತಲವೂ, ಸುಗಂಧಮಯವೂ, ಮನೋಹಾರಿಯೂ ಆದ ಮಂದಮಾರುತ ಯಾವಾಗಲೂ ಬೀಸುತ್ತಿತ್ತು. ಕೋಗಿಲೆಗಳು

'ಕುಹೂ, ಕುಹೂ' ಎಂದು ಉಲಿಯುತ್ತಿದ್ದವು. ಅವುಗಳ ಮಧುರಾಲಾಪಗಳಿಂದ ಮುನೀಶ್ವರರ ಧ್ಯಾನವೂ ಕೂಡ ಭಂಗವಾಗುತ್ತಿತ್ತು. (ಚೌ/೧-೫)

**ದೋ – ಫಲ ಭಾರನ ನಮಿ ಬಿಟಪ ಸಬ ರಹೇ ಭೂಮಿ ನಿಅರಾಇ।**
**ಪರ ಉಪಕಾರೀ ಪುರುಷ ಜಿಮಿ ನವಹಿಂ ಸುಸಂಪತಿ ಪಾಇ ॥ ೪೦ ॥**

ಪರೋಪಕಾರಿ ಪುರುಷರು ದೊಡ್ಡ ಸಂಪತ್ತು ಪಡೆದಿದ್ದರೂ ವಿನಯದಿಂದ ಬಾಗುವಂತೆ, ಅಲ್ಲಿಯ ವೃಕ್ಷಗಳು ಫಲಭಾರದಿಂದ ನೆಲಕ್ಕೆ ಬಾಗಿದ್ದವು. (ದೋ/೪೦)

## ನಾರದರಿಗೆ ಶ್ರೀರಾಮನ ಉಪದೇಶ

**ಚೌ – ದೇಖಿ ರಾಮ ಅತಿ ರುಚಿರ ತಲಾವಾ। ಮಜ್ಜನು ಕೀನ್ಹ ಪರಮ ಸುಖ ಪಾವಾ॥**
**ದೇಖೀ ಸುಂದರ ತರುಬರ ಛಾಯಾ। ಬೈಠೇ ಅನುಜ ಸಹಿತ ರಘುರಾಯಾ ॥ ೧ ॥**
**ತಹँ ಪುನಿ ಸಕಲ ದೇವ ಮುನಿ ಆಏ। ಅಸ್ತುತಿ ಕರಿ ನಿಜ ಧಾಮ ಸಿಧಾಏ ॥**
**ಬೈಠೇ ಪರಮ ಪ್ರಸನ್ನ ಕೃಪಾಲಾ। ಕಹತ ಅನುಜ ಸನ ಕಥಾ ರಸಾಲಾ ॥ ೨ ॥**
**ಬಿರಹವಂತ ಭಗವಂತಹಿ ದೇಖೀ। ನಾರದ ಮನ ಭಾ ಸೋಚ ಬಿಸೇಷೀ ॥**
**ಮೋರ ಸಾಪ ಕರಿ ಅಂಗೀಕಾರಾ। ಸಹತ ರಾಮ ನಾನಾ ದುಖ ಭಾರಾ ॥ ೩ ॥**
**ಐಸೇ ಪ್ರಭುಹಿ ಬಿಲೋಕಉँ ಜಾಈ। ಪುನಿ ನ ಬನಿಹಿ ಅಸ ಅವಸರು ಆಈ ॥**
**ಯಹ ಬಿಚಾರಿ ನಾರದ ಕರ ಬೀನಾ। ಗಏ ಜಹಾँ ಪ್ರಭು ಸುಖ ಆಸೀನಾ ॥ ೪ ॥**
**ಗಾವತ ರಾಮ ಚರಿತ ಮೃದು ಬಾನೀ। ಪ್ರೇಮ ಸಹಿತ ಬಹು ಭಾಂತಿ ಬಖಾನೀ ॥**
**ಕರತ ದಂಡವತ ಲಿಏ ಉಠಾಈ। ರಾಖೇ ಬಹುತ ಬಾರ ಉರ ಲಾಈ ॥ ೫ ॥**
**ಸ್ವಾಗತ ಪೂँಛಿ ನಿಕಟ ಬೈಠಾರೇ। ಲಛಿಮನ ಸಾದರ ಚರನ ಪಖಾರೇ ॥ ೬ ॥**

ಅತ್ಯಂತ ಸುಂದರವಾದ ಆ ಸರೋವರವನ್ನು ಕಂಡು ಶ್ರೀರಾಮನು ಅದರಲ್ಲಿ ಮಿಂದು ಪರಮಸುಖಿಯಾದನು. ಮತ್ತೆ ಒಂದು ಮರದ ನೆರಳಿನಲ್ಲಿ ಲಕ್ಷ್ಮಣನಿಂದೊಡಗೂಡಿ ವಿಶ್ರಮಿಸಿದನು. ಅಲ್ಲಿಗೆ ದೇವತೆಗಳೂ, ಮುನಿಗಳೂ ಬಂದು ಪ್ರಭುವನ್ನು ಸ್ತುತಿಸಿ, ತಮ್ಮ-ತಮ್ಮ ಧಾಮಗಳಿಗೆ ತೆರಳಿದರು. ಕೃಪಾಳುವಾದ ಶ್ರೀರಾಮನು ಪ್ರಸನ್ನಚಿತ್ತದಿಂದ ಕುಳಿತುಕೊಂಡು ಲಕ್ಷ್ಮಣನಿಗೆ ಸರಸವಾದ ಸುಂದರಕಥೆಗಳನ್ನು ಹೇಳತೊಡಗಿದನು. ಭಗವಾನ್ ಶ್ರೀರಾಮಚಂದ್ರನು ವಿರಹ ವ್ಯಾಕುಲನಾಗಿರುವುದನ್ನು ಕಂಡು ನಾರದರು ಅಂದುಕೊಂಡರು – ''ನನ್ನ ಶಾಪವನ್ನು ಸ್ವೀಕರಿಸಿದ್ದರಿಂದಲೇ ಶ್ರೀರಾಮನು ತುಂಬಾ ಕಷ್ಟಗಳನ್ನು ಅನುಭವಿಸಬೇಕಾಯಿತಲ್ಲ! ಇಂತಹ ಭಕ್ತವತ್ಸಲಪ್ರಭುವನ್ನು ಹೋಗಿ ನೋಡಿಕೊಂಡು ಬರಬೇಕು. ಮತ್ತೆ ಇಂತಹ ಅವಕಾಶ ದೊರೆಯಲಾರದು'' ಎಂದು ಯೋಚಿಸಿ, ಮಹತಿಯೆಂಬ ತನ್ನ ವೀಣೆಯನ್ನು ಕೈಗೆತ್ತಿಕೊಂಡು ಮಧುರಸ್ವರದಿಂದ ಪ್ರೇಮಾನುರಾಗದಿಂದೊಡಗೂಡಿ ಶ್ರೀರಾಮನ ಲೀಲೆಗಳನ್ನು ಹಾಡುತ್ತಾ ಶ್ರೀರಾಮನಿದ್ದೆಡೆಗೆ ಆಗಮಿಸಿದರು. ಸಾಷ್ಟಾಂಗ ನಮಸ್ಕರಿಸಿದ ನಾರದರನ್ನು ನೋಡಿ ಶ್ರೀರಾಮನು ಅವರನ್ನು ಹಿಡಿದೆತ್ತಿ ಬಿಗಿದಪ್ಪಿಕೊಂಡನು. ಕುಶಲ ಪ್ರಶ್ನೆಗಳಾದ ಬಳಿಕ ಅವರನ್ನು ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡನು. ಲಕ್ಷ್ಮಣನು ಆದರದಿಂದ ಮುನಿಯ ಪಾದಗಳನ್ನು ತೊಳೆದನು. (ಚೌ/೧-೬)

**ದೋ – ನಾನಾ ಬಿಧಿ ಬಿನತೀ ಕರಿ ಪ್ರಭು ಪ್ರಸನ್ನ ಜಿಯँ ಜಾನಿ।**
**ನಾರದ ಬೋಲೇ ಬಚನ ತಬ ಜೋರಿ ಸರೋರುಹ ಪಾನಿ ॥ ೪೧ ॥**

ಪ್ರಭುವು ಪ್ರಸನ್ನಚಿತ್ತನಾಗಿರುವುದನ್ನು ಗ್ರಹಿಸಿ, ನಾರದರು ಅನೇಕ ವಿಧದಿಂದ ವಿನಂತಿಯನ್ನು ಗೈದು, ಕರಕಮಲಗಳನ್ನು ಜೋಡಿಸಿಕೊಂಡು ಇಂತೆಂದನು – (ದೋ/೪೧)

**ಚೌ – ಸುನಹು ಉದಾರ ಸಹಜ ರಘುನಾಯಕ। ಸುಂದರ ಅಗಮ ಸುಗಮ ಬರ ದಾಯಕ।**
**ದೇಹು ಏಕ ಬರ ಮಾಗಉँ ಸ್ವಾಮೀ। ಜದ್ಯಪಿ ಜಾನತ ಅಂತರಜಾಮೀ ॥ ೧ ॥**
**ಜಾನಹು ಮುನಿ ತುಮ್ಹ ಮೋರ ಸುಭಾಊ। ಜನ ಸನ ಕಬಹुँ ಕಿ ಕರಉँ ದುರಾಊ ॥**
**ಕವನ ಬಸ್ತು ಅಸಿ ಪ್ರಿಯ ಮೋಹಿ ಲಾಗೀ। ಜೋ ಮುನಿಬರ ನ ಸಕಹು ತುಮ್ಹ ಮಾಗೀ ॥ ೨ ॥**

**ಜನ ಕಹುँ ಕಛು ಅದೇಯ ನಹಿँ ಮೋರೇँ। ಅಸ ಬಿಸ್ವಾಸ ತಜಹು ಜನಿ ಭೋರೇँ॥**
**ತಬ ನಾರದ ಬೋಲೇ ಹರಷಾಈ। ಅಸ ಬರ ಮಾಗಉँ ಕರಉँ ಢಿಠಾಈ॥ ೩ ॥**
**ಜದ್ಯಪಿ ಪ್ರಭು ಕೇ ನಾಮ ಅನೇಕಾ। ಶ್ರುತಿ ಕಹ ಅಧಿಕ ಏಕ ತೇँ ಏಕಾ॥**
**ರಾಮ ಸಕಲ ನಾಮನ್ಹ ತೇ ಅಧಿಕಾ। ಹೋಉ ನಾಥ ಅಘ ಖಗ ಗನ ಬಧಿಕಾ ॥ ೪ ॥**

ಸಹಜ ಉದಾರಿಯಾದ ರಘುನಾಥಾ! ಕೇಳು.'' ನೀನು ದುರ್ಲಭವಾದ, ಸುಖಪ್ರದವಾದ ವರಗಳನ್ನು ಭಕ್ತರಿಗೆ ಕರುಣಿಸುವಂತಹವನು. ಸ್ವಾಮಿ! ನೀನು ಸರ್ವಜ್ಞನೂ, ಅಂತರ್ಯಾಮಿಯಾಗಿರುವೆ. ಆದರೂ ನಾನು ನಿನ್ನಲ್ಲಿ ಒಂದು ವರ ಬೇಡುತ್ತೇನೆ. ದಯವಿಟ್ಟು ಅದನ್ನು ಕರುಣಿಸು.'' ಆಗ ಶ್ರೀರಾಮನು ಹೇಳಿದನು – ''ಮುನೀಶ್ವರಾ! ನಿಮಗೆ ನನ್ನ ಸ್ವಭಾವ ತಿಳಿದಿದೆ. ನಾನು ಎಂದಾದರೂ ನನ್ನ ಭಕ್ತರಿಂದ ಏನನ್ನಾದರೂ ಮರೆಮಾಚಿರುವನೋ? ಮುನಿಗಳೇ! ನೀವು ಬೇಡದೆ ಇರುವ ಇಷ್ಟವಾದ ವಸ್ತು ನನ್ನ ಬಳಿ ಯಾವುದಿದೆ? ಭಕ್ತರಿಗೆ ಕೊಡಲಾಗದ್ದು ನನ್ನಲ್ಲಿ ಏನೂ ಇಲ್ಲ. ಈ ಮಾತನ್ನು ಯಾವಾಗಲೂ ನಂಬಿಕೊಂಡಿರಿ. ಆಗ ನಾರದರು ಹರ್ಷಗೊಂಡು ಹೇಳಿದರು – ನಾನು ದಾರ್ಷ್ಟ್ಯದಿಂದ ಈ ವರವನ್ನು ಕೇಳುತ್ತಿದ್ದೇನೆ; ಅದಕ್ಕಾಗಿ ಕ್ಷಮೆ ಇರಲಿ. ಪ್ರಭುವಿಗೆ ಅನಂತನಾಮಗಳಿವೆ. ಅವೆಲ್ಲವೂ ಒಂದಕ್ಕಿಂತ ಒಂದು ಮಿಗಿಲೆಂದು ವೇದಗಳು ಸಾರುತ್ತವೆ. ಆದರೂ 'ರಾಮನಾಮವು' ಸರ್ವಶ್ರೇಷ್ಠವಾಗಲಿ. ಅದು ಪಾಪವೆಂಬ ಪಕ್ಷಿಸಂಕುಲವನ್ನು ನಾಶಮಾಡುವ ಬೇಟೆಗಾರನಂತಾಗಲಿ. ಈ ವರವನ್ನು ಕರುಣಿಸು. (ಚೌ/೧-೪)

**ದೋ – ರಾಕಾ ರಜನೀ ಭಗತಿ ತವ ರಾಮ ನಾಮ ಸೋಇ ಸೋಮ।**
**ಅಪರ ನಾಮ ಉಡಗನ ಬಿಮಲ ಬಸಹುँ ಭಗತ ಉರ ಬ್ಯೋಮ॥ ೪೨ (ಕ)॥**
**ಏವಮಸ್ತು ಮುನಿ ಸನ ಕಹೆಉ ಕೃಪಾಸಿಂಧು ರಘುನಾಥ।**
**ತಬ ನಾರದ ಮನ ಹರಷ ಅತಿ ಪ್ರಭು ಪದ ನಾಯಉ ಮಾಥ॥ ೪೨(ಖ)॥**

ನಿನ್ನ ಭಕ್ತಿಯೇ ಹುಣ್ಣಿಮೆಯ ರಾತ್ರಿಯು. ಭಕ್ತರ ನಿರ್ಮಲಹೃದಯಾಕಾಶದಲ್ಲಿ 'ರಾಮನಾಮ'ವೆಂಬ ಪೂರ್ಣಚಂದ್ರನಂತಿದ್ದು, ಉಳಿದ ಎಲ್ಲ ನಾಮಗಳು ತಾರಾಗಣಗಳಂತೆ ಬೆಳಗುವಂತಾಗಲಿ. ಕೃಪಾಸಿಂಧುವಾದ ರಘುನಾಥನು 'ಹಾಗೆಯೇ ಆಗಲೀ' ಎಂದು ಹರಸಿದನು. ಆಗ ನಾರದರು ಆನಂದತುಂದಿಲರಾಗಿ ಪ್ರಭುಚರಣಗಳಿಗೆರಗಿದರು. (ದೋ/೪೨ ಕ, ಖ)

**ಚೌ – ಅತಿ ಪ್ರಸನ್ನ ರಘುನಾಥಹಿ ಜಾನೀ। ಪುನಿ ನಾರದ ಬೋಲೇ ಮೃದು ಬಾನೀ ॥**
**ರಾಮ ಜಬಹಿँ ಪ್ರೇರೆಉ ನಿಜ ಮಾಯಾ। ಮೋಹೆಹು ಮೋಹಿ ಸುನಹು ರಘುರಾಯಾ॥ ೧ ॥**
**ತಬ ಬಿಬಾಹ ಮೈँ ಚಾಹಉँ ಕೀನ್ಹಾ। ಪ್ರಭು ಕೆಹಿ ಕಾರನ ಕರೈ ನ ದೀನ್ಹಾ॥**
**ಸುನು ಮುನಿ ತೋಹಿ ಕಹಉँ ಸಹರೋಸಾ। ಭಜಹಿँ ಜೆ ಮೊಹಿ ತಜಿ ಸಕಲ ಭರೋಸಾ॥ ೨ ॥**
**ಕರಉँ ಸದಾ ತಿನ್ಹ ಕೈ ರಖವಾರೀ। ಜಿಮಿ ಬಾಲಕ ರಾಖಇ ಮಹತಾರೀ॥**
**ಗಹ ಸಿಸು ಬಚ್ಛ ಅನಲ ಅಹಿ ಧಾಈ। ತಹँ ರಾಖಇ ಜನನೀ ಅರಗಾಈ॥ ೩ ॥**
**ಪ್ರೌಢ ಭಏँ ತೆಹಿ ಸುತ ಪರ ಮಾತಾ। ಪ್ರೀತಿ ಕರಇ ನಹಿँ ಪಾಛಿಲಿ ಬಾತಾ॥**
**ಮೋರೇ ಪ್ರೌಢ ತನಯ ಸಮ ಗ್ಯಾನೀ। ಬಾಲಕ ಸುತ ಸಮ ದಾಸ ಅಮಾನೀ॥ ೪ ॥**
**ಜನಹಿ ಮೋರ ಬಲ ನಿಜ ಬಲ ತಾಹೀ। ದುಹು ಕಹँ ಕಾಮ ಕ್ರೋಧ ರಿಪು ಆಹೀ॥**
**ಯಹ ಬಿಚಾರಿ ಪಂಡಿತ ಮೊಹಿ ಭಜಹೀँ। ಪಾಏಹುँ ಗ್ಯಾನ ಭಗತಿ ನಹಿँ ತಜಹೀँ॥ ೫ ॥**

ಶ್ರೀರಘುವರನು ಅತ್ಯಂತ ಪ್ರಸನ್ನನಾಗಿರುವುದನ್ನು ಗ್ರಹಿಸಿ, ನಾರದರು ಮೃದುಮಧುರವಾಗಿ ಹೇಳಿದನು – ''ರಾಮಾ! ರಘುನಾಥಾ! ಕೇಳು. ನೀನು ನಿನ್ನ ಮಾಯೆಯನ್ನು ಪ್ರೇರೇಪಿಸಿ, ನನ್ನನ್ನು ಮೋಹಕ್ಕೀಡುಮಾಡಿದ್ದೆಯಲ್ಲ. ಆಗ ನಾನು ಮದುವೆ ಮಾಡಿಕೊಳ್ಳಬೇಕೆಂದಿದ್ದೆ. ಆದರೆ ಪ್ರಭುವು ಅದನ್ನು ಯಾವ ಕಾರಣದಿಂದ ಆಗಗೊಡಲಿಲ್ಲ ? ಪ್ರಭು ಹೇಳಿದನು – ನಾರದರೇ! ಕೇಳಿರಿ. ನಾನು ಪ್ರಸನ್ನನಾಗಿ ಹೇಳುತ್ತಿದ್ದೇನೆ. ತಮ್ಮ ಸಮಸ್ತ ಆಸೆ ಆಕಾಂಕ್ಷೆಗಳನ್ನು ತೊರೆದು ನನ್ನನ್ನೇ ಭಜಿಸುವವರನ್ನು ತಾಯಿಯು ತನ್ನ ಮಗನನ್ನು ಕಾಪಾಡುವಂತೆ ನಾನು ಕಾಪಾಡುತ್ತೇನೆ. ಸಣ್ಣಮಗು ಓಡಿಹೋಗಿ ಬೆಂಕಿಯನ್ನೋ ಇಲ್ಲವೇ ಹಾವನ್ನೋ ಹಿಡಿಯಲು ಹೋದರೆ, ಆಗ ತಾಯಿಯು ಅದನ್ನು ತಡೆದು ಮಗುವನ್ನು ಕಾಪಾಡುತ್ತಾಳೆ. ಆ ಮಗುವು ಪ್ರಾಯಕ್ಕೆ ಬಂದ ಮೇಲೆಯೂ ತಾಯಿಯು ಅವನನ್ನು ಪ್ರೀತಿಸುತ್ತಾಳೆ. ಆದರೆ ಹಿಂದಿನಂತೆ ರಕ್ಷಣೆಗೆ ಓಡುವುದಿಲ್ಲ. ಏಕೆಂದರೆ ಅವನು ತಾಯಿಯನ್ನೇ ಅವಲಂಬಿಸದೆ ತನ್ನನ್ನು

ತಾನೇ ರಕ್ಷಿಸಿಕೊಳ್ಳುವನು. ಜ್ಞಾನಿಗಳು ನನಗೆ ಪ್ರೌಢಪುತ್ರರಂತೆ. ನಿನ್ನಂತಹ ತನ್ನ ಶಕ್ತಿಯ ಹೆಮ್ಮೆಯಿಲ್ಲದ ಸೇವಕರು ನನಗೆ ಪುಟ್ಟಬಾಲಕರಂತೆ. ಇಂತಹವರ ಭಾರವನ್ನು ನಾನೇ ವಹಿಸಿಕೊಂಡಿರುತ್ತೇನೆ. ಜ್ಞಾನಿಗಳಿಗೆ ತಮ್ಮ ಬಲದ ಮೇಲೆಯೇ ಭರವಸೆ ಇರುತ್ತದೆ. ಕಾಮ, ಕ್ರೋಧರೂಪೀ ಶತ್ರುಗಳಾದರೋ ಇಬ್ಬರಿಗೂ ಸಮಾನವಾಗಿರುತ್ತವೆ. ಆದರೆ ಈ ಶತ್ರುಗಳನ್ನು ನಾಶಮಾಡಿ ನನ್ನ ಪರಮಭಕ್ತರನ್ನು ರಕ್ಷಿಸುವ ಭಾರ ನನ್ನ ಮೇಲೆಯೇ ಇರುತ್ತದೆ. ಏಕೆಂದರೆ ಅವರು ನನ್ನ ಮೇಲೆಯೇ ಭಾರವನ್ನಿಡುವರು. ಜ್ಞಾನಿಗಳು ಆ ಅಂತಃಶತ್ರುಗಳನ್ನು ತಾನೇ ಇದಿರಿಸುತ್ತಾರೆ. ಹೀಗೆ ಯೋಚಿಸಿಯೇ ಪಂಡಿತರಾದವರು ನನ್ನನ್ನೇ ಭಜಿಸುತ್ತಾರೆ. ಜ್ಞಾನ ಪ್ರಾಪ್ತಿಯಾದರೂ ಅವರು ಭಕ್ತಿಯನ್ನು ತೊರೆಯುವುದಿಲ್ಲ. (ಚೌ/೧-೫)

**ದೋ – ಕಾಮ ಕ್ರೋಧ ಲೋಭಾದಿ ಮದ ಪ್ರಬಲ ಮೋಹ ಕೈ ಧಾರಿ।**
**ತಿನ್ಹ ಮಹ್ ಅತಿ ದಾರುನ ದುಖದ ಮಾಯಾರೂಪೀ ನಾರಿ ॥ ೪೩ ॥**

ಕಾಮ, ಕ್ರೋಧ, ಲೋಭ, ಮದವೇ ಮೊದಲಾದವುಗಳು ಮೋಹದ ಪ್ರಬಲ ಸೇನೆಯಾಗಿದೆ. ಇದರಲ್ಲಿಯೂ ಮಾಯಾರೂಪಿಣಿಯಾದ ಹೆಣ್ಣು ಅತ್ಯಂತ ದಾರುಣ ದುಃಖದಾಯಕಿಯಾಗಿದ್ದಾಳೆ. (ದೋ/೪೩)

**ಚೌ – ಸುನು ಮುನಿ ಕಹ ಪುರಾನ ಶ್ರುತಿ ಸಂತಾ। ಮೋಹ ಬಿಪಿನ ಕಹ್ ನಾರಿ ಬಸಂತಾ ॥**
**ಜಪ ತಪ ನೇಮ ಜಲಾಶ್ರಯ ಝಾರೀ। ಹೋಇ ಗ್ರೀಷಮ ಸೋಷಇ ಸಬ ನಾರೀ ॥ ೧ ॥**
**ಕಾಮ ಕ್ರೋಧ ಮದ ಮತ್ಸರ ಭೇಕಾ। ಇನ್ಹಹಿ ಹರಷಪ್ರದ ಬರಷಾ ಏಕಾ ॥**
**ದುರ್ಬಾಸನಾ ಕುಮುದ ಸಮುದಾಈ। ತಿನ್ಹ ಕಹ್ ಸರದ ಸದಾ ಸುಖದಾಈ ॥ ೨ ॥**
**ಧರ್ಮ ಸಕಲ ಸರಸೀರುಹ ಬೃಂದಾ। ಹೋಇ ಹಿಮ ತಿನ್ಹಹಿ ದಹಇ ಸುಖ ಮಂದಾ ॥**
**ಪುನಿ ಮಮತಾ ಜವಾಸ ಬಹುತಾಈ। ಪಲುಹಇ ನಾರಿ ಸಿಸಿರ ರಿತು ಪಾಈ ॥ ೩ ॥**
**ಪಾಪ ಉಲೂಕ ನಿಕರ ಸುಖಕಾರೀ। ನಾರಿ ನಿಬಿಡ ರಜನೀ ಅಂಧಿಆರೀ ॥**
**ಬುಧಿ ಬಲ ಸೀಲ ಸತ್ಯ ಸಬ ಮೀನಾ। ಬನಸೀ ಸಮ ತ್ರಿಯ ಕಹಹಿಂ ಪ್ರಬೀನಾ ॥ ೪ ॥**

ಮುನೀಶ್ವರಾ! ಮೋಹರೂಪೀ ವನವನ್ನು ವಿಕಸಿತಗೊಳಿಸುವುದಕ್ಕೆ ಸ್ತ್ರೀಯು ವಸಂತ ಋತುವಿನಂತಿದ್ದಾಳೆ ಎಂದು ವೇದ, ಪುರಾಣ, ಸಾಧು-ಸಂತರು ಹೇಳುತ್ತಾರೆ. ಆ ಸ್ತ್ರೀಯೇ ಮರಳಿ ಗ್ರೀಷ್ಮಋತುವಿನಂತಾಗಿ, ಜಪ, ತಪ, ವಿನಯವೆಂಬ ಜಲಾಶಯಗಳನ್ನು ಒಣಗಿಸಿಬಿಡುತ್ತಾಳೆ. ಕಾಮ, ಕ್ರೋಧ, ಮದ, ಮಾತ್ಸರ್ಯಗಳೆಂಬ ಕಪ್ಪೆಗಳ ಪಾಲಿಗೆ ಮಳೆಗಾಲವಾಗಿ ಹರ್ಷವನ್ನುಂಟುಮಾಡುವವಳು ಏಕಮಾತ್ರ ಈ ಸ್ತ್ರೀಯೆ. ದುರ್ವಿಷಯಗಳೆಂಬ ಕುಮುದಗಳಿಗೆ ಸದಾ ಸುಖದಾಯಕವಾದ ಶರದೃತುವೂ ಆಕೆಯೇ. ಸಮಸ್ತ ಧರ್ಮಗಳೇ ಕಮಲವೃಂದ. ಈ ನೀಚ ವಿಷಯಜನ್ಯ ಸುಖಕೊಡುವ ಸ್ತ್ರೀಯು ಹೇಮಂತ ಋತುವಾಗಿ ಅವುಗಳನ್ನು ನಾಶಪಡಿಸುತ್ತಾಳೆ. ಮತ್ತೆ ಮಮತೆಯೆಂಬ ಜವಾಸವನವನ್ನು ಹೆಣ್ಣೆಂಬ ಶಿಶಿರಋತುವು ನಳನಳಿಸುತ್ತದೆ. ಪಾಪಗಳೆಂಬ ಗೂಬೆಗಳಿಗೆ ಈ ಹೆಣ್ಣು ಸುಖದಾಯಕವಾದ ಕಗ್ಗತ್ತಲ ಇರುಳು. ಬುದ್ಧಿ, ಬಲ, ಶೀಲ, ಸತ್ಯ ಇವುಗಳು ಮೀನುಗಳಿದ್ದಂತೆ. ಇವುಗಳನ್ನು ಸಿಕ್ಕಿಸಿಹಾಕಿ ನಾಶಮಾಡುವ 'ಗಾಳ'ವೇ ಈ ಹೆಣ್ಣು ಎಂದು ಬುದ್ಧಿವಂತರು ಹೇಳುತ್ತಾರೆ. (ಚೌ/೧-೪)

**ದೋ – ಅವಗುನ ಮೂಲ ಸೂಲಪ್ರದ ಪ್ರಮದಾ ಸಬ ದುಖ ಖಾನಿ।**
**ತಾತೇ ಕೀನ್ಹ ನಿವಾರನ ಮುನಿ ಮೈಂ ಯಹ ಜಿಯಂ ಜಾನಿ ॥ ೪೪ ॥**

ಯುವತಿಯಾದ ಸ್ತ್ರೀಯು ಎಲ್ಲ ದೋಷಗಳಿಗೆ ಮೂಲವು. ಶೂಲಪ್ರದ ಮತ್ತು ಎಲ್ಲ ರೀತಿಯ ದುಃಖಗಳ ಗಣಿಯಾಗಿದ್ದಾಳೆ. ಆದ್ದರಿಂದಲೇ 'ಮುನೀಶ್ವರಾ! ಇವೆಲ್ಲವನ್ನು ಯೋಚಿಸಿಯೇ ನಾನು ನಿಮಗೆ ಮದುವೆಯಾಗಲು ಬಿಡಲಿಲ್ಲ.' (ದೋ/೪೪)

**ಚೌ – ಸುನಿ ರಘುಪತಿ ಕೇ ಬಚನ ಸುಹಾಏ। ಮುನಿ ತನ ಪುಲಕ ನಯನ ಭರಿ ಆಏ ॥**
**ಕಹಹು ಕವನ ಪ್ರಭು ಕೈ ಅಸಿ ರೀತೀ। ಸೇವಕ ಪರ ಮಮತಾ ಅರು ಪ್ರೀತೀ ॥ ೧ ॥**
**ಜೇ ನ ಭಜಹಿಂ ಅಸ ಪ್ರಭು ಭ್ರಮ ತ್ಯಾಗೀ। ಗ್ಯಾನ ರಂಕ ನರ ಮಂದ ಅಭಾಗೀ ॥**
**ಪುನಿ ಸಾದರ ಬೋಲೇ ಮುನಿ ನಾರದ। ಸುನಹು ರಾಮ ಬಿಗ್ಯಾನ ಬಿಸಾರದ ॥ ೨ ॥**
**ಸಂತನ್ಹ ಕೇ ಲಚ್ಛನ ರಘುಬೀರಾ। ಕಹಹು ನಾಥ ಭವ ಭಂಜನ ಭೀರಾ ॥**
**ಸುನು ಮುನಿ ಸಂತನ್ಹ ಕೇ ಗುನ ಕಹಊಂ। ಜಿನ್ಹ ತೇ ಮೈಂ ಉನ್ಹ ಕೇಂ ಬಸ ರಹಊಂ ॥ ೩ ॥**

**ಷಟ ಬಿಕಾರ ಜಿತ ಅನಘ ಅಕಾಮಾ। ಅಚಲ ಅಕಿಂಚನ ಸುಚಿ ಸುಖಧಾಮಾ॥**
**ಅಮಿತಬೋಧ ಅನೀಹ ಮಿತಭೋಗೀ। ಸತ್ಯಸಾರ ಕಬಿ ಕೋಬಿದ ಜೋಗೀ॥ ೪ ॥**
**ಸಾವಧಾನ ಮಾನದ ಮದಹೀನಾ। ಧೀರ ಧರ್ಮ ಗತಿ ಪರಮ ಪ್ರಬೀನಾ॥ ೫ ॥**

ಶ್ರೀರಾಮಚಂದ್ರನ ಮನೋಹಾರಿಯಾದ ವಚನಗಳನ್ನು ಕೇಳಿ ಮುನಿಯ ಶರೀರ ಹೊಂಪುಳಿಗೊಂಡಿತು. ಅವರ ಕಣ್ಣುಗಳಲ್ಲಿ ಪ್ರೇಮಾಶ್ರುಗಳು ತುಂಬಿಬಂದವು. ಅವರು ಮನಸ್ಸಿನಲ್ಲೇ ಅಂದುಕೊಂಡರು – ಇಂತಹ ಪ್ರಭುವನ್ನು ನಾನು ಎಲ್ಲಿಯೂ ಕಾಣೆ! ಬೇರೆ ಯಾವ ಪ್ರಭುವಿಗೆ ತನ್ನ ಸೇವಕರ ಮೇಲೆ ಇಷ್ಟೊಂದು ಪ್ರೇಮ-ಮಮತೆಯಿದೆ? ಸಾಂಸಾರಿಕ ಭ್ರಮೆಗೆ ಗುರಿಯಾಗಿ ಇಂತಹ ಪ್ರಭುವನ್ನು ಭಜಿಸದ ಜನರು ಜ್ಞಾನದರಿದ್ರರೂ, ಮಂದಮತಿಗಲೂ, ನಿರ್ಭಾಗ್ಯರೂ ಆಗಿದ್ದಾರೆ. ಬಳಿಕ ನಾರದ ಮಹರ್ಷಿಗಳು ಆದರದಿಂದ ಹೇಳಿದರು – ಓ ವಿಜ್ಞಾನ ವಿಶಾರದಾ! ಶ್ರೀರಾಮಾ! ರಘುವೀರಾ! ಎಲೈ ಭವಭಯವನ್ನು ಹೋಗಲಾಡಿಸುವ ಸ್ವಾಮಿಯೇ! ದಯಮಾಡಿ ನನಗೆ ಸಂತರ ಲಕ್ಷಣಗಳನ್ನು ತಿಳಿಸೋಣವಾಗಲಿ. ಆಗ ಶ್ರೀರಾಮನು ನುಡಿದನು – ಮುನೀಶ್ವರಾ! ಯಾವ ಕಾರಣದಿಂದ ನಾನು ಸಂತರ ವಶದಲ್ಲಿರುತ್ತೇನೋ ಅಂತಹವರ ಗುಣಗಳನ್ನು ಹೇಳುತ್ತೇನೆ, ಕೇಳು.'' ಆ ಸಂತರು ಅರಿಷಡ್ವರ್ಗಗಳನ್ನು ಗೆದ್ದವರೂ, ಪಾಪರಹಿತರೂ, ನಿಷ್ಕಾಮರೂ, ಸ್ಥಿರಬುದ್ಧಿಯುಳ್ಳವರೂ, ಸರ್ವಸ್ವತ್ಯಾಗಿಗಳೂ, ಅಂತರ್ಬಾಹ್ಯಗಳಲ್ಲಿ ಶುದ್ಧರಾದವರೂ, ಸುಖಧಾಮರೂ, ಅಪಾರಜ್ಞಾನಿಗಳೂ, ಇಚ್ಛಾರಹಿತರೂ, ಮಿತಾಹಾರಿಗಳೂ, ಸತ್ಯಪ್ರತಿಜ್ಞರೂ, ಕವಿಕೋವಿದರೂ, ಯೋಗಿಗಳೂ, ಸದಾ ಸಾವಧಾನರೂ, ಇತರರನ್ನು ಗೌರವಿಸುವವರೂ, ಅಭಿಮಾನರಹಿತರೂ, ಧೈರ್ಯವಂತರೂ, ಧರ್ಮಮಾರ್ಗಾಚರಣ ಕುಶಲರೂ ಆಗಿರುವರು.'' (ಚೌ/೧-೫)

**ದೋ – ಗುನಾಗಾರ ಸಂಸಾರ ದುಖ ರಹಿತ ಬಿಗತ ಸಂದೇಹ।**
**ತಜಿ ಮಮ ಚರನ ಸರೋಜ ಪ್ರಿಯ ತಿನ್ಹ ಕಹುँ ದೇಹ ನ ಗೇಹ॥ ೪೫ ॥**

ಇವರು ಗುಣನಿಧಿಗಳೂ, ಸಂಸಾರದುಃಖರಹಿತರೂ, ವಿಗತಸಂದೇಹರೂ ಆದ ಇಂತಹ ಸಜ್ಜನರಿಗೆ ನನ್ನ ಚರಣಕಮಲಗಳಲ್ಲದೆ ತಮ್ಮ ದೇಹವಾಗಲೀ, ಗೇಹವಾಗಲೀ ಪ್ರಿಯವಾಗಿರುವುದಿಲ್ಲ. (ದೋ/೪೫)

**ಚೌ – ನಿಜ ಗುನ ಶ್ರವನ ಸುನತ ಸಕುಚಾಹೀँ। ಪರ ಗುನ ಸುನತ ಅಧಿಕ ಹರಷಾಹೀँ॥**
**ಸಮ ಸೀತಲ ನಹಿँ ತ್ಯಾಗಹಿँ ನೀತೀ। ಸರಲ ಸುಭಾಉ ಸಬಹಿ ಸನ ಪ್ರೀತೀ॥ ೧ ॥**
**ಜಪ ತಪ ಬ್ರತ ದಮ ಸಂಜಮ ನೇಮಾ। ಗುರು ಗೋಬಿಂದ ಬಿಪ್ರ ಪದ ಪ್ರೇಮಾ॥**
**ಶ್ರದ್ಧಾ ಛಮಾ ಮಯತ್ರೀ ದಾಯಾ। ಮುದಿತಾ ಮಮ ಪದ ಪ್ರೀತಿ ಅಮಾಯಾ॥ ೨ ॥**
**ಬಿರತಿ ಬಿಬೇಕ ಬಿನಯ ಬಿಗ್ಯಾನಾ। ಬೋಧ ಜಥಾರಥ ಬೇದ ಪುರಾನಾ॥**
**ದಂಭ ಮಾನ ಮದ ಕರಹಿँ ನ ಕಾಊ। ಭೂಲಿ ನ ದೇಹಿँ ಕುಮಾರಗ ಪಾಊ॥ ೩ ॥**
**ಗಾವಹಿँ ಸುನಹಿँ ಸದಾ ಮಮ ಲೀಲಾ। ಹೇತು ರಹಿತ ಪರಹಿತ ರತ ಸೀಲಾ॥**
**ಮುನಿ ಸುನು ಸಾಧುನ್ಹ ಕೇ ಗುನ ಜೇತೇ। ಕಹಿ ನ ಸಕಹಿँ ಸಾರದ ಶ್ರುತಿ ತೇತೇ॥ ೪ ॥**

ಅವರು ತಮ್ಮ ಗುಣಗಳನ್ನು ಕೇಳಲು ಇಷ್ಟಪಡುವುದಿಲ್ಲ. ಆದರೆ ಇತರರ ಸುಗುಣಗಳನ್ನು ಕೇಳಿ ಹೆಚ್ಚಾಗಿ ಸಂತೋಷಪಡುವರು. ಅವರು ಯಾವಾಗಲೂ ಸರಳ, ಶೀತಲರಾಗಿದ್ದು, ನ್ಯಾಯವನ್ನು ಎಂದೂ ತೊರೆಯುವುದಿಲ್ಲ. ಅವರು ಸರಳ ಸ್ವಭಾವದವರಾಗಿದ್ದು, ಎಲ್ಲರನ್ನು ಪ್ರೀತಿಸುತ್ತಿರುತ್ತಾರೆ. ಅವರು ಜಪ, ತಪ, ವ್ರತ, ನೇಮ, ಶಮೆ, ದಮಗಳನ್ನು ಆಚರಿಸುವಂತಹವರು. ಗುರು, ಗೋವಿಂದ, ವಿಪ್ರರ ಪಾದಗಳಲ್ಲಿ ಅವರಿಗೆ ಹೆಚ್ಚಿನ ಭಕ್ತಿ. ಅವರು ಶ್ರದ್ಧೆ, ಕ್ಷಮೆ, ಮೈತ್ರಿ, ದಯೆ, ಸಂತೋಷ ಹಾಗೂ ನನ್ನ ಚರಣಗಳಲ್ಲಿ ನಿಷ್ಕಪಟ ಪ್ರೇಮವುಳ್ಳವರು. ಅವರಿಗೆ ವೈರಾಗ್ಯ, ವಿವೇಕ, ವಿನಯ, ವಿಜ್ಞಾನ ಮತ್ತು ವೇದಪುರಾಣಗಳ ಯಥಾರ್ಥ ಜ್ಞಾನವಿರುತ್ತದೆ. ಜಂಭ, ದುರಭಿಮಾನ, ಮದ, ಮೊದಲಾದವುಗಳಿಂದ ದೂರವಾಗಿದ್ದು, ಅವರು ಮರೆತಾದರೂ ಕುಮಾರ್ಗದಲ್ಲಿ ನಡೆಯುವುದಿಲ್ಲ. ಅವರು ನಿರಂತರವು ನನ್ನ ಲೀಲೆಗಳನ್ನು ಹಾಡುತ್ತಾ-ಶ್ರವಣಮಾಡುತ್ತಾ ಇರುತ್ತಾರೆ. ನಿಸ್ವಾರ್ಥವಾಗಿ ಇತರರ ಹಿತದಲ್ಲಿ ರತರಾಗಿರುತ್ತಾರೆ. ಎಲೈ ಮುನಿಯೇ! ಸಾಧು ಸಂತರಲ್ಲಿರುವ ಗುಣಗಳನ್ನು ಶಾರದೆಯಾಗಲೀ ವೇದಗಳಾಗಲೀ ವರ್ಣಿಸಲಾರರು. (ಚೌ/೧-೪)

**ಛಂ – ಕಹಿ ಸಕ ನ ಸಾರದ ಸೇಷ ನಾರದ ಸುನತ ಪದ ಪಂಕಜ ಗಹೇ।**
**ಅಸ ದೀನಬಂಧು ಕೃಪಾಲ ಅಪನೇ ಭಗತ ಗುನ ನಿಜ ಮುಖ ಕಹೇ॥**

**ಸಿರು ನಾಇ ಬಾರಹಿಂ ಬಾರ ಚರನನ್ಹಿ ಬ್ರಹ್ಮಪುರ ನಾರದ ಗಏ ।**
**ತೇ ಧನ್ಯ ತುಲಸೀದಾಸ ಆಸ ಬಿಹಾಇ ಜೇ ಹರಿ ರಁಗ ರಏ ॥**

''ಸಜ್ಜನರ ಗುಣಗಳನ್ನು ಸರಸ್ವತೀದೇವಿಯಾಗಲೀ, ಶೇಷನಾಗಲೀ ವರ್ಣಿಸಲಾರರು.'' ಈ ಮಾತನ್ನು ಕೇಳುತ್ತಲೇ ನಾರದ ಮಹರ್ಷಿಗಳು ಶ್ರೀರಾಮನ ಪಾದಪಂಕಜಗಳನ್ನು ಹಿಡಿದುಕೊಂಡರು. ದೀನಬಂಧುವೂ, ದಯಾಳುವೂ ಆದ ಪ್ರಭುವು ಈ ಪ್ರಕಾರವಾಗಿ ಭಕ್ತರ ಗುಣಗಳನ್ನು ಸ್ವಯಂ ತನ್ನ ಶ್ರೀಮುಖದಿಂದ ವರ್ಣಿಸಿದನು. ಭಗವಂತನ ಚರಣಗಳಲ್ಲಿ ಪುನಃ ಪುನಃ ವಂದಿಸಿಕೊಂಡು ನಾರದರು ಬ್ರಹ್ಮಲೋಕಕ್ಕೆ ತೆರಳಿದರು. ಎಲ್ಲ ವಿಧವಾದ ಆಶೆಗಳನ್ನು ತೊರೆದು, ಕೇವಲ ಶ್ರೀಹರಿಯ ಭಕ್ತಿಯಲ್ಲೇ ಅನುರಕ್ತರಾಗಿರುವವರು ನಿಜವಾಗಿ ಧನ್ಯಾತ್ಮರು ಎಂದು ತುಳಸೀದಾಸರು ಹೇಳುತ್ತಿದ್ದಾರೆ. (ಛಂದ)

**ದೋ – ರಾವನಾರಿ ಜಸು ಪಾವನ ಗಾವಹಿಂ ಸುನಹಿಂ ಜೆ ಲೋಗ ।**
**ರಾಮ ಭಗತಿ ದೃಢ ಪಾವಹಿಂ ಬಿನು ಬಿರಾಗ ಜಪ ಜೋಗ ॥ ೪೬ (ಕ)॥**
**ದೀಪ ಸಿಖಾ ಸಮ ಜುಬತಿ ತನ ಮನ ಜನಿ ಹೋಸಿ ಪತಂಗ ।**
**ಭಜಹಿ ರಾಮ ತಜಿ ಕಾಮ ಮದ ಕರಹಿ ಸದಾ ಸತಸಂಗ ॥ ೪೬(ಖ)॥**

ರಾವಣಾರಿಯಾದ ಶ್ರೀರಾಮನ ಪಾವನ ಯಶವನ್ನು ಗಾನ ಮಾಡುವವರಿಗೆ, ಶ್ರದ್ಧೆಯಿಂದ ಶ್ರವಣಿಸುವವರಿಗೆ ವೈರಾಗ್ಯ, ಜಪ, ಯೋಗ ಇವುಗಳು ಇಲ್ಲದೆಯೇ ಶ್ರೀರಾಮನ ದೃಢಭಕ್ತಿ ಲಭಿಸುತ್ತದೆ. ಯುವತಿಯರ ಶರೀರವು ದೀಪಶಿಖೆಯಂತಿದೆ. ಎಲೈ ಮನಸ್ಸೇ! ನೀನು ಅದರಲ್ಲಿ ಬೀಳುವ ಪತಂಗವಾಗಬೇಡ. ಕಾಮ, ಮದಗಳನ್ನು ತೊರೆದು ಶ್ರೀರಾಮಚಂದ್ರನನ್ನು ಭಜಿಸು, ಸದಾಕಾಲ ಸತ್ಸಂಗದಲ್ಲಿ ಇರು. (ದೋ/೪೬ ಕ, ಖ)

**ಮಾಸಪಾರಾಯಣದ ಇಪ್ಪತ್ತೆರಡನೆಯ ವಿಶ್ರಾಮ**

**ಇತಿ ಶ್ರೀಮದ್ರಾಮಚರಿತಮಾನಸೇ ಸಕಲಕಲಿಕಲುಷವಿಧ್ವಂಸನೇ ತೃತೀಯಃ ಸೋಪಾನಃ ಸಮಾಪ್ತಃ ॥ ೩ ॥**

*ಕಲಿಯುಗದ ಎಲ್ಲ ಪಾಪಗಳನ್ನು ಧ್ವಂಸಮಾಡುವ ಶ್ರೀರಾಮಚರಿತಮಾನಸದಲ್ಲಿ*
*ಅರಣ್ಯಕಾಂಡವೆಂಬ ಮೂರನೆಯ ಸೋಪಾನವು ಮುಗಿದುದು.*

## (ಅರಣ್ಯಕಾಂಡ ಸಮಾಪ್ತವು)

**॥ ಶ್ರೀಸೀತಾರಾಮಚಂದ್ರಾರ್ಪಣಮಸ್ತು ॥**



ಶ್ರೀಗಣೇಶಾಯ ನಮಃ

ಶ್ರೀಜಾನಕೀವಲ್ಲಭೋ ವಿಜಯತೇ

# ಶ್ರೀರಾಮಚರಿತಮಾನಸ

## ಚತುರ್ಥ ಸೋಪಾನ

## ಕಿಷ್ಕಿಂಧಾಕಾಂಡ

### ಭಗವದ್‌ಸ್ತುತಿ

**ಶ್ಲೋ – ಕುಂದೇಂದೀವರಸುಂದರಾವತಿಬಲೌ ವಿಜ್ಞಾನಧಾಮಾವುಭೌ**
**ಶೋಭಾಢ್ಯೌ ವರಧನ್ವಿನೌ ಶ್ರುತಿನುತೌ ಗೋವಿಪ್ರವೃಂದಪ್ರಿಯೌ।**
**ಮಾಯಾಮಾನುಷರೂಪಿಣೌ ರಘುವರೌ ಸದ್ಧರ್ಮವರ್ಮೌ ಹಿತೌ**
**ಸೀತಾನ್ವೇಷಣತತ್ಪರೌ ಪಥಿಗತೌ ಭಕ್ತಿಪ್ರದೌ ತೌ ಹಿ ನಃ ॥ ೧ ॥**

ಕುಂದಪುಷ್ಪದಂತೆ ಗೌರವರ್ಣ ಶೋಭಿತನು ಲಕ್ಷ್ಮಣನು. ಕನ್ನೈದಿಲೆಯಂತೆ ಶ್ಯಾಮವರ್ಣಭೂಷಿತನೂ ಶ್ರೀರಾಮಚಂದ್ರನು. ಇವರು ಬಲಶಾಲಿಗಳೂ, ವಿಜ್ಞಾನಧಾವರೂ, ಶೋಭಾಸಂಪನ್ನರೂ, ಶ್ರೇಷ್ಠ ಧನುರ್ಧಾರಿಗಳೂ, ವೇದವಂದಿತರೂ, ಗೋಬ್ರಾಹ್ಮಣರಿಗೆ ಪ್ರಿಯರೂ, ಮಾಯಾಮಾನುಷವಿಗ್ರಹರೂ, ಸದ್ಧರ್ಮಕ್ಕೆ ಕವಚಸ್ವರೂಪಿಗಳೂ, ಎಲ್ಲರಿಗೂ ಹಿತವನ್ನು ಮಾಡುವವರೂ, ಸೀತಾನ್ವೇಷಣ ತತ್ಪರರೂ, ಪಥಿಕರೂ ಆದ ಶ್ರೀರಾಮಲಕ್ಷ್ಮಣರಿಬ್ಬರೂ ನಮಗೆ ನಿಶ್ಚಯವಾಗಿ ಭಕ್ತಿಯನ್ನು ಕರುಣಿಸಲಿ. ॥ ೧ ॥

**ಬ್ರಹ್ಮಾಂಭೋಧಿಸಮುದ್ಭವಂ ಕಲಿಮಲಪ್ರಧ್ವಂಸನಂ ಚಾವ್ಯಯಂ**
**ಶ್ರೀಮಚ್ಛಂಭುಮುಖೇಂದುಸುಂದರವರೇ ಸಂಶೋಭಿತಂ ಸರ್ವದಾ।**
**ಸಂಸಾರಾಮಯಭೇಷಜಂ ಸುಖಕರಂ ಶ್ರೀಜಾನಕೀಜೀವನಂ**
**ಧನ್ಯಾಸ್ತೇ ಕೃತಿನಃ ಪಿಬಂತಿ ಸತತಂ ಶ್ರೀರಾಮನಾಮಾಮೃತಮ್ ॥ ೨ ॥**

ಶ್ರೀರಾಮನಾಮಾಮೃತವು ವೇದಗಳೆಂಬ ಸಮುದ್ರವನ್ನು ಮಥಿಸಿದ್ದರಿಂದ ಉಂಟಾದುದು. ಕಲಿಕಲ್ಮಷಗಳನ್ನು ಇಲ್ಲವಾಗಿಸುವುದು, ಶಾಶ್ವತವಾದುದು. ಪರಶಿವನ ಅತ್ಯಂತ ಸುಂದರವಾದ ಮುಖಚಂದ್ರಮನಲ್ಲಿ ಯಾವಾಗಲೂ ಕಂಗೊಳಿಸುವ (ಶಂಭುವಿನಿಂದ ಸತತವಾಗಿ ಜಪಿಸಲ್ಪಡುವ), ಭವರೋಗಕ್ಕೆ ದಿವ್ಯ ಔಷಧವಾದ, ಎಲ್ಲರಿಗೆ ಸುಖವನ್ನುಂಟುಮಾಡುವ, ಶ್ರೀಜಾನಕೀಜೀವನ ಸ್ವರೂಪವಾದುದು. ಅಂತಹ ಮಹಿಮಾನ್ವಿತವಾದ ಶ್ರೀರಾಮನಾಮಾಮೃತವನ್ನು ಸಂತತವೂ ಪಾನಮಾಡುವ ಪುಣ್ಯಾತ್ಮರು ನಿಜವಾಗಿಯೂ ಧನ್ಯರು. ॥ ೨ ॥

**ಸೋ – ಮುಕ್ತಿ ಜನ್ಮ ಮಹಿ ಜಾನಿ ಗ್ಯಾನ ಖಾನಿ ಅಘ ಹಾನಿ ಕರ।**
**ಜಹ್ ಬಸ ಸಂಭು ಭವಾನಿ ಸೋ ಕಾಸೀ ಸೇಇಅ ಕಸ ನ ॥**
**ಜರತ ಸಕಲ ಸುರ ಬೃಂದ ಬಿಷಮ ಗರಲ ಜೆಹಿಂ ಪಾನ ಕಿಯ।**
**ತೆಹಿ ನ ಭಜಸಿ ಮನ ಮಂದ ಕೋ ಕೃಪಾಲ ಸಂಕರ ಸರಿಸ ॥**

ಶ್ರೀಶಿವಪಾರ್ವತಿಯರು ನೆಲೆಸಿರುವ ಕಾಶಿಯು ಮುಕ್ತಿಯ ತವರು. ಜ್ಞಾನದಗಣಿ ಮತ್ತು ಪಾಪಗಳನ್ನು ನಾಶಮಾಡುವಂತಹದು. ಇದನ್ನು ತಿಳಿದವರು ಆ ಕ್ಷೇತ್ರವನ್ನು ಏಕೆ ಸೇವಿಸಬಾರದು? ಅಂದರೆ ತಪ್ಪದೇ ಸೇವಿಸುವರು. ಎಲೈ ಮೂಢಮನಸ್ಸೇ! ಯಾವ ವಿಷಮ ಗರಳದಿಂದ ಸಕಲ ದೇವತೆಗಳು ದಹಿಸಿ ಹೋಗುತ್ತಿದ್ದರೂ ಅದನ್ನು ಪಾನಮಾಡಿದ ಶಂಕರನನ್ನು ನೀನೇಕೆ ಭಜಿಸುವುದಿಲ್ಲ? ಅವನಂತಹ ಕೃಪಾಳುಗಳು ಬೇರೆ ಯಾರಿದ್ದಾರೆ? (ಸೋರಠ)

## ಶ್ರೀರಾಮ-ಹನುಮಂತರ ಸಮಾಗಮ – ಸುಗ್ರೀವನೊಡನೆ ಮೈತ್ರಿ

**ಚೌ – ಆಗೇಂ ಚಲೇ ಬಹುರಿ ರಘುರಾಯಾ। ರಿಷ್ಯಮೂಕ ಪರ್ಬತ ನಿಅರಾಯಾ॥**
**ತಹ್ ರಹ ಸಚಿವ ಸಹಿತ ಸುಗ್ರೀವಾ। ಆವತ ದೇಖಿ ಅತುಲ ಬಲ ಸೀಂವಾ॥೧॥**
**ಅತಿ ಸಭೀತ ಕಹ ಸುನು ಹನುಮಾನಾ। ಪುರುಷ ಜುಗಲ ಬಲ ರೂಪ ನಿಧಾನಾ॥**
**ಧರಿ ಬಟು ರೂಪ ದೇಖು ತೈಂ ಜಾಈ। ಕಹೆಸು ಜಾನಿ ಜಿಯ್ ಸಯನ ಬುಝಾಈ॥೨॥**
**ಪಠಏ ಬಾಲಿ ಹೋಹಿಂ ಮನ ಮೈಲಾ। ಭಾಗೌಂ ತುರತ ತಜೌಂ ಯಹ ಸೈಲಾ ॥**
**ಬಿಪ್ರ ರೂಪ ಧರಿ ಕಪಿ ತಹ್ ಗಯಊ। ಮಾಥ ನಾಇ ಪೂಛತ ಅಸ ಭಯಊ ॥೩॥**
**ಕೋ ತುಮ್ಹ ಸ್ಯಾಮಲ ಗೌರ ಸರೀರಾ। ಛತ್ರೀ ರೂಪ ಫಿರಹು ಬನ ಬೀರಾ ॥**
**ಕಠಿನ ಭೂಮಿ ಕೋಮಲ ಪದ ಗಾಮೀ। ಕವನ ಹೇತು ಬಿಚರಹು ಬನ ಸ್ವಾಮೀ ॥೪॥**
**ಮೃದುಲ ಮನೋಹರ ಸುಂದರ ಗಾತಾ। ಸಹತ ದುಸಹ ಬನ ಆತಪ ಬಾತಾ ॥**
**ಕೀ ತುಮ್ಹ ತೀನಿ ದೇವ ಮಹ್ ಕೋಊ। ನರ ನಾರಾಯನ ಕೀ ತುಮ್ಹ ದೋಊ ॥೫॥**

ಶ್ರೀರಘುನಾಥನು ಆ ಪಂಪಾಸರೋವರದಿಂದ ಮುಂದಕ್ಕೆ ಹೋಗುತ್ತಾ ಋಷ್ಯಮೂಕ ಪರ್ವತದ ಬಳಿಗೆ ತಲುಪಿದರು. ಆ ಪರ್ವತದ ಮೇಲೆ ಮಂತ್ರಿಗಳ ಸಹಿತ ಸುಗ್ರೀವನು ವಾಸಿಸುತ್ತಿದ್ದನು. ಅತುಲಿತ ಬಲಶಾಲಿಗಳಾದ ಶ್ರೀರಾಮಲಕ್ಷ್ಮಣರನ್ನು ಗಮನಿಸಿ, ಸುಗ್ರೀವನು ಹೆದರಿ ಕಂಗಾಲಾಗಿ ನುಡಿದನು – ''ಓ ಹನುಮಂತಾ! ಕೇಳು. ಈ ಪುರುಷರೀರ್ವರು ಅಪೂರ್ವ ರೂಪ ಬಲ ಸಂಪನ್ನರು. ನೀನು ಬ್ರಹ್ಮಚಾರಿಯ ವೇಷದಿಂದ ಅವರ ಬಳಿಗೆ ಹೋಗು. ಅವರ ಯಥಾರ್ಥ ಮನೋಭಾವವನ್ನು ತಿಳಿದುಕೊಂಡು, ಸನ್ನೆಯ ಮೂಲಕ ನನಗೆ ತಿಳಿಸು. ಅವರೇನಾದರೂ ಆ ಮಲಿನ ಮನಸ್ಸಿನ ವಾಲಿಯು ಅಟ್ಟಿದ ಜನರಾದರೆ, ನಾನು ಕೂಡಲೇ ಈ ಪರ್ವತವನ್ನು ತೊರೆದು ಓಡಿಹೋಗುತ್ತೇನೆ.'' ಅದರಂತೆ ಹನುಮಂತನು ವಿಪ್ರರೂಪವನ್ನು ಧರಿಸಿ ರಾಮಲಕ್ಷ್ಮಣರಿದ್ದಲ್ಲಿಗೆ ಹೋಗಿ, ಅವರಿಗೆ ತಲೆವಾಗಿ ಇಂತು ಪ್ರಶ್ನಿಸಿದನು – ಶ್ಯಾಮಲ ಗೌರವರ್ಣ ತನುಶೋಭಿತರಾದ ವೀರರೇ! ನೀವಾರು? ಕ್ಷತ್ರಿಯ ವೇಷಧಾರಿಗಳಾಗಿ ವನದಲ್ಲಿ ಏಕೆ ತಿರುಗುತ್ತಿರುವಿರಿ? ಸ್ವಾಮಿ! ಈ ಕಠೋರ ನೆಲದ ಮೇಲೆ ಕೋಮಲ ಪಾದಗಳಿಂದ ನಡೆಯುತ್ತಿರುವ ನೀವುಗಳು ಯಾವ ಕಾರಣದಿಂದ ಕಾಡಿನಲ್ಲಿ ಅಲೆಯುತ್ತಿರುವಿರಿ? ನಿಮ್ಮ ಕೋಮಲ ಮನೋಹರ ಸುಂದರ ಶರೀರವನ್ನು ಈ ಅಡವಿಯಲ್ಲಿ ಕಡು ಬಿಸಿಲಬೇಗೆಯಲ್ಲಿ, ಬಿಸಿಗಾಳಿಯಲ್ಲಿ ಬಳಲಿಸುತ್ತಿದ್ದೀರಲ್ಲ! ನೀವು ಬ್ರಹ್ಮ, ವಿಷ್ಣು, ಮಹೇಶ ಇವರಲ್ಲಿ ಯಾರಾದರೂ ಆಗಿದ್ದಿರಾ? ಇಲ್ಲವೇ ನೀವಿಬ್ಬರೂ ನರ-ನಾರಾಯಣರೋ? (ಚೌ/೧-೫)

**ದೋ – ಜಗ ಕಾರನ ತಾರನ ಭವ ಭಂಜನ ಧರನೀ ಭಾರ।**
**ಕೀ ತುಮ್ಹ ಅಖಿಲ ಭುವನ ಪತಿ ಲೀನ್ಹ ಮನುಜ ಅವತಾರ॥೧॥**

ಅಥವಾ ಜಗತ್ತಿಗೆ ಮೂಲಕಾರಣವಾದ, ಅಖಿಲಲೋಕಗಳಿಗೆ ಪ್ರಭುವಾದ ಭಗವತ್ಸ್ವರೂಪರೋ? ಇಲ್ಲವೇ ಜನರನ್ನು ಭವಸಾಗರದಿಂದ ಉದ್ಧರಿಸಲು, ಭೂಭಾರಹರಣಕ್ಕಾಗಿ ಮಾನವರೂಪದಿಂದ ಅವತರಿಸಿದವರೋ? (ದೋ/೧)

**ಚೌ – ಕೋಸಲೇಸ ದಸರಥ ಕೇ ಜಾಏ। ಹಮ ಪಿತು ಬಚನ ಮಾನಿ ಬನ ಆಏ॥**
**ನಾಮ ರಾಮ ಲಛಿಮನ ದೊಉ ಭಾಈ। ಸಂಗ ನಾರಿ ಸುಕುಮಾರಿ ಸುಹಾಈ॥೧॥**
**ಇಹಾಂ ಹರೀ ನಿಸಿಚರ ಬೈದೇಹೀ। ಬಿಪ್ರ ಫಿರಹಿಂ ಹಮ ಖೋಜತ ತೇಹೀ॥**
**ಆಪನ ಚರಿತ ಕಹಾ ಹಮ ಗಾಈ। ಕಹಹು ಬಿಪ್ರ ನಿಜ ಕಥಾ ಬುಝಾಈ॥೨॥**
**ಪ್ರಭು ಪಹಿಚಾನಿ ಪರೆಉ ಗಹಿ ಚರನಾ। ಸೋ ಸುಖ ಉಮಾ ಜಾಇ ನಹಿಂ ಬರನಾ॥**
**ಪುಲಕಿತ ತನ ಮುಖ ಆವ ನ ಬಚನಾ। ದೇಖತ ರುಚಿರ ಬೇಷ ಕೈ ರಚನಾ॥೩॥**

**ಪುನಿ ಧೀರಜು ಧರಿ ಅಸ್ತುತಿ ಕೀನ್ಹೀ। ಹರಷ ಹೃದಯ್ ನಿಜ ನಾಥಹಿ ಚೀನ್ಹೀ॥**
**ಮೋರ ನ್ಯಾಉ ಮೈಂ ಪೂಛಾ ಸಾಈಂ। ತುಮ್ಹ ಪೂಛಹು ಕಸ ನರ ಕೀ ನಾಈಂ॥ ೪ ॥**
**ತವ ಮಾಯಾ ಬಸ ಫಿರಉಂ ಭುಲಾನಾ। ತಾ ತೇ ಮೈಂ ನಹಿಂ ಪ್ರಭು ಪಹಿಚಾನಾ॥ ೫ ॥**

ಶ್ರೀರಾಮಚಂದ್ರನು ಪ್ರತ್ಯುತ್ತರ ಕೊಟ್ಟನು – ''ನಾವು ಕೋಸಲೇಶ ದಶರಥನ ಕುಮಾರರು. ಪಿತೃವಾಕ್ಯ ಪರಿಪಾಲನೆಗಾಗಿ ಕಾಡಿಗೆ ಬಂದಿರುವೆವು. ನನ್ನ ಹೆಸರು ರಾಮನೆಂದು, ಇವನು ನನ್ನ ತಮ್ಮ ಲಕ್ಷ್ಮಣ. ನಮ್ಮ ಜೊತೆಯಲ್ಲಿ ಸುಕುಮಾರಳಾದ ನನ್ನ ಪತ್ನಿಯಿದ್ದಳು. ಇಲ್ಲಿ ಕಾಡಿನಲ್ಲಿ ರಾಕ್ಷಸನು ನನ್ನ ಪತ್ನೀ ಜಾನಕಿಯನ್ನು ಅಪಹರಿಸಿರುವನು. ಓ ಬ್ರಾಹ್ಮಣೋತ್ತಮಾ! ನಾವು ಅವಳನ್ನು ಅರಸುತ್ತಾ ಅಲೆಯುತ್ತಿದ್ದೇವೆ. ನಾವು ನಮ್ಮ ಕಥೆಯನ್ನು ಹೇಳಿದೆವು. ಇನ್ನು ನೀನು ನಿನ್ನ ಕತೆಯನ್ನು ಹೇಳು.'' ತನ್ನ ಆರಾಧ್ಯದೈವವಾದ ಶ್ರೀರಾಮನನ್ನು ಗುರುತಿಸಿ, ಆಂಜನೇಯನು ಅವನ ಪಾದಗಳಲ್ಲಿ ದಂಡವತ್ ಸಾಷ್ಟಾಂಗ ನಮಸ್ಕಾರ ಮಾಡಿದನು. ಶಿವನು ಹೇಳುತ್ತಾನೆ– ''ಉಮಾ! ಮಾರುತಿಯ ಆನಂದಾನುಭೂತಿಯು ಅವರ್ಣನೀಯವು. ಆತನ ಶರೀರ ಪುಳಕಗೊಂಡಿದೆ. ಬಾಯಿಂದ ಮಾತೇ ಹೊರಡದು. ತನ್ನ ಪ್ರಭುವಿನ ಸುಂದರ ಸುರುಚಿರ ರೂಪವನ್ನು ನೋಡುತ್ತಾ ನಿಂತುಬಿಟ್ಟನು. ತನ್ನ ಸ್ವಾಮಿಯನ್ನು ಗುರುತಿಸಿದುದರಿಂದ ಆತನ ಹೃದಯದಲ್ಲಿ ಆನಂದವು ಉಕ್ಕಿಹರಿಯಿತು. ಬಳಿಕ ಧೈರ್ಯವನ್ನು ತಾಳಿ ಸ್ತುತಿಸುತ್ತಾ ಹೇಳುತ್ತಾನೆ – ''ಓ ಸ್ವಾಮಿ! ನಾನು ಕೇಳಿದುದು ನ್ಯಾಯವೇ. ಏಕೆಂದರೆ, ತುಂಬಾ ಕಾಲದ ತರುವಾಯ ನನಗೆ ನಿಮ್ಮ ದರ್ಶನವಾದುದು. ಅದರಲ್ಲಿಯೂ ಮುನಿವೇಷದಲ್ಲಿ. ಆದ್ದರಿಂದ ನನ್ನ ವಾನರಬುದ್ಧಿಯು ನಿನ್ನನ್ನು ಗುರುತಿಸದೇ ಹೋಯಿತು. ಆದರೆ ನೀನು ಸರ್ವಾಂತರ್ಯಾಮಿಯಾಗಿದ್ದರೂ ಮನುಷ್ಯಮಾತ್ರರಂತೆ ಕೇಳುತ್ತಿರುವಿಯಲ್ಲ! ನಿನ್ನ ಮಾಯಾ ಪ್ರಭಾವಕ್ಕೆ ಸಿಲುಕಿ ನನ್ನ ಪ್ರಭುವನ್ನು ನಾನು ಗುರುತಿಸದೆ ಹೋದೆ. (ಚೌ/೧-೫)

**ದೋ – ಏಕು ಮೈಂ ಮಂದ ಮೋಹಬಸ ಕುಟಿಲ ಹೃದಯ ಅಗ್ಯಾನ।**
**ಪುನಿ ಪ್ರಭು ಮೋಹಿ ಬಿಸಾರೆಉ ದೀನಬಂಧು ಭಗವಾನ॥ ೨ ॥**

ನಾನು ಮಂದಬುದ್ಧಿಯವನು, ಮೋಹವಶನು, ಕುಟಿಲಹೃದಯನು, ಅಜ್ಞಾನಿಯಾಗಿರುವೆನು. (ಅದರಿಂದ ನಾನು ಮರೆತಿರುವೆನು.) ಆದರೆ ದೀನಬಂಧೂ! ಭಗವಂತಾ! ನನ್ನನ್ನು ನೀವು ಮರೆತಿರುವಿರಾ ಪ್ರಭು? (ದೋ/೨)

**ಚೌ – ಜದಪಿ ನಾಥ ಬಹು ಅವಗುನ ಮೋರೇಂ। ಸೇವಕ ಪ್ರಭುಹಿ ಪರೈ ಜನಿ ಭೋರೇಂ॥**
**ನಾಥ ಜೀವ ತವ ಮಾಯಾಁ ಮೋಹಾ। ಸೋ ನಿಸ್ತರಇ ತುಮ್ಹಾರೆಹಿಂ ಛೋಹಾ॥ ೧ ॥**
**ತಾ ಪರ ಮೈಂ ರಘುಬೀರ ದೊಹಾಈ। ಜಾನಉಂ ನಹಿಂ ಕಛು ಭಜನ ಉಪಾಈ॥**
**ಸೇವಕ ಸುತ ಪತಿ ಮಾತು ಭರೋಸೇಂ। ರಹಇ ಅಸೋಚ ಬನಇ ಪ್ರಭು ಪೋಸೇಂ॥ ೨ ॥**
**ಅಸ ಕಹಿ ಪರೆಉ ಚರನ ಅಕುಲಾಈ। ನಿಜ ತನು ಪ್ರಗಟಿ ಪ್ರೀತಿ ಉರ ಛಾಈ॥**
**ತಬ ರಘುಪತಿ ಉಠಾಇ ಉರ ಲಾವಾ। ನಿಜ ಲೋಚನ ಜಲ ಸೀಂಚಿ ಜುಡಾವಾ॥ ೩ ॥**
**ಸುನು ಕಪಿ ಜಿಯ್ ಮಾನಸಿ ಜನಿ ಊನಾ। ತೈಂ ಮಮ ಪ್ರಿಯ ಲಛಿಮನ ತೇ ದೂನಾ॥**
**ಸಮದರಸೀ ಮೊಹಿ ಕಹ ಸಬ ಕೋಊ। ಸೇವಕ ಪ್ರಿಯ ಅನನ್ಯಗತಿ ಸೋಊ॥ ೪ ॥**

ಸ್ವಾಮಿ! ನನ್ನಲ್ಲಿ ಅನೇಕ ಅವಗುಣಗಳಿವೆ. ನೀನು ಒಡೆಯನು, ನಾನು ಸೇವಕನು. ಸೇವಕನನ್ನು ಒಡೆಯನು ಮರೆಯಬಾರದಲ್ಲ! ಪ್ರಭು! ನಾನು ಮಾಯೆಯಿಂದ ಮೋಹಿತನಾದ ಜೀವಿಯು ನಿನ್ನ ಅನುಗ್ರಹದಿಂದಲೇ ಉದ್ಧಾರವಾಗಬಲ್ಲೆನು. ಎಲೈ ರಘುವೀರಾ! ನಾನು ಬೇಕಾದರೆ ಆಣೆಯಿಟ್ಟು ಹೇಳುತ್ತೇನೆ. ಭಜನೆ, ಸಾಧನೆ ನನಗೆ ಏನೂ ಅರಿಯದು. ಸೇವಕನು ಒಡೆಯನನ್ನು, ಮಗುವು ತಾಯಿಯನ್ನು ನಂಬಿಕೊಂಡು ನೆಮ್ಮದಿಯಾಗಿರುತ್ತಾರೆ. ಒಡೆಯನಿಗೆ ಸೇವಕನನ್ನು ಪೊರೆಯಲೇ ಬೇಕಾಗುತ್ತದೆ. ಹೀಗೆ ಹೇಳಿ ಹನುಮಂತನು ವ್ಯಾಕುಲಿತನಾಗಿ ಪ್ರಭುಚರಣಗಳಲ್ಲಿ ಕೆಡೆಬಿದ್ದು, ತನ್ನ ನಿಜರೂಪವನ್ನು ಪ್ರಕಟಿಸಿದನು. ಅವನ ಹೃದಯ ಪ್ರೇಮದಿಂದ ತುಂಬಿಹೋಗಿತ್ತು. ಆಗ ರಘುನಾಥನು ಅವನನ್ನು ಮೇಲೆತ್ತಿಕೊಂಡು ಎದೆಗಪ್ಪಿಕೊಂಡನು. ತನ್ನ ನಯನಜಲದಿಂದ ಹನುಮಂತನನ್ನು ತೋಯಿಸಿದನು. ಮತ್ತೆ ಶ್ರೀರಾಮನೆಂದನು – ''ಎಲೈ ವಾನರೋತ್ತಮಾ! ನೀನು ಮನಸ್ಸನ್ನು ಚಿಕ್ಕದುಮಾಡಿಕೊಳ್ಳಬೇಡ. ನೀನು ನನಗೆ ಲಕ್ಷ್ಮಣನಿಗಿಂತ ಎರಡರಷ್ಟು ಪ್ರೀತಿಪಾತ್ರನು. ಎಲ್ಲರೂ ನನ್ನನ್ನು 'ಸಮದರ್ಶಿ' ಎಂದು ಹೇಳುತ್ತಾರೆ. ಆದರೆ ಸೇವಕರೇ ನನಗೆ ಹೆಚ್ಚಿನ ಪ್ರಿಯರಾದವರು. ಏಕೆಂದರೆ ಅವರು ಅನನ್ಯ ಭಕ್ತಿಯಿಂದ ನನ್ನನ್ನೇ ಆಶ್ರಯಿಸಿಕೊಂಡಿರುವರು. (ಚೌ/೧-೪)

**ದೋ – ಸೋ ಅನನ್ಯ ಜಾಕೇಂ ಅಸಿ ಮತಿ ನ ಟರಇ ಹನುಮಂತ।**
**ಮೈಂ ಸೇವಕ ಸಚರಾಚರ ರೂಪ ಸ್ವಾಮಿ ಭಗವಂತ ॥ ೩ ॥**

ಓ ಹನುಮಂತಾ! 'ನಾನು ಸೇವಕನು, ಈ ಜಡ-ಚೇತನ, ಚರಾಚರಜಗತ್ತು ನನ್ನ ಒಡೆಯನಾದ ಭಗವಂತನ ರೂಪ' ಎಂಬ ನಿಶ್ಚಯಬುದ್ಧಿಯಿಂದ ದೃಢವಾಗಿರುವವನೇ 'ಅನನ್ಯ ಸೇವಕ'ನೆಂದು ಹೇಳುತ್ತಾರೆ. (ದೋ/೩)

**ಚೌ – ದೇಖಿ ಪವನಸುತ ಪತಿ ಅನುಕೂಲಾ। ಹೃದಯಂ ಹರಷ ಬೀತೀ ಸಬ ಸೂಲಾ ॥**
**ನಾಥ ಸೈಲ ಪರ ಕಪಿಪತಿ ರಹಈ। ಸೋ ಸುಗ್ರೀವ ದಾಸ ತವ ಅಹಈ ॥ ೧ ॥**
**ತೇಹಿ ಸನ ನಾಥ ಮಯತ್ರೀ ಕೀಜೇ। ದೀನ ಜಾನಿ ತೇಹಿ ಅಭಯ ಕರೀಜೇ ॥**
**ಸೋ ಸೀತಾ ಕರ ಖೋಜ ಕರಾಇಹಿ। ಜಹಁ ತಹಁ ಮರಕಟ ಕೋಟಿ ಪಠಾಇಹಿ ॥ ೨ ॥**
**ಏಹಿ ಬಿಧಿ ಸಕಲ ಕಥಾ ಸಮುಝಾಈ। ಲಿಏ ದುಔ ಜನ ಪೀಠಿ ಚಢಾಈ ॥**
**ಜಬ ಸುಗ್ರೀವಁ ರಾಮ ಕಹುಁ ದೇಖಾ। ಅತಿಸಯ ಜನ್ಮ ಧನ್ಯ ಕರಿ ಲೇಖಾ ॥ ೩ ॥**
**ಸಾದರ ಮಿಲೇಉ ನಾಇ ಪದ ಮಾಥಾ। ಭೇಂಟೇಉ ಅನುಜ ಸಹಿತ ರಘುನಾಥಾ ॥**
**ಕಪಿ ಕರ ಮನ ಬಿಚಾರ ಏಹಿ ರೀತೀ। ಕರಿಹಹಿಂ ಬಿಧಿ ಮೋ ಸನ ಏ ಪ್ರೀತೀ ॥ ೪ ॥**

ಸ್ವಾಮಿಯು ಪ್ರಸನ್ನನಾಗಿರುವುದನ್ನು ಕಂಡು ಪವನಸುತ ಹನುಮಂತನ ಹೃದಯ ಹರ್ಷದಿಂದ ಹೊಂಪುಳಿಗೊಂಡಿತು. ಅವನ ದುಃಖವೆಲ್ಲ ದೂರವಾಯಿತು. ಅವನೆಂದನು – ''ಸ್ವಾಮಿ! ಈ ಪರ್ವತದ ಮೇಲೆ ಕಪೀಶ್ವರನಾದ ಸುಗ್ರೀವನಿದ್ದಾನೆ. ಅವನೂ ನಿನ್ನ ದಾಸನೇ. ಆತನೊಂದಿಗೆ ಮೈತ್ರಿಯನ್ನು ಬೆಳೆಸಿ, ತಾವು ಅವನನ್ನು ನಿರ್ಭಯನನ್ನಾಗಿಸಿರಿ. ಅವನು ಎಲ್ಲದಿಕ್ಕುಗಳಿಗೆ ಅಸಂಖ್ಯ ಕಪಿಗಳನ್ನು ಕಳಿಸಿ, ಸೀತಾದೇವಿಯನ್ನು ಹುಡುಕಿಸುವನು. ಈ ವಿಧವಾಗಿ ಎಲ್ಲವನ್ನು ಅರುಹಿ ಹನುಮಂತನು ಅಣ್ಣತಮ್ಮಂದಿರಿಬ್ಬರನ್ನೂ ತನ್ನ ಹೆಗಲಮೇಲೆ ಕುಳ್ಳಿರಿಸಿಕೊಂಡು ಸುಗ್ರೀವನ ಬಳಿಗೆ ಬಂದನು. ಸುಗ್ರೀವನು ಶ್ರೀರಾಮಚಂದ್ರನನ್ನು ನೋಡಿ ತನ್ನ ಜನ್ಮ ಸಾರ್ಥಕವಾಯಿತು ಎಂದುಕೊಂಡು, ಅವನ ಚರಣಗಳಿಗೆರಗಿ ಅವರನ್ನು ಆದರಿಸಿದನು. ಶ್ರೀರಘುನಾಥನು ಲಕ್ಷ್ಮಣನೊಂದಿಗೆ ಸುಗ್ರೀವನನ್ನು ಆಲಿಂಗಿಸಿಕೊಂಡನು. 'ಹೇ ವಿಧಾತಾ! ಇವರು ನನ್ನನ್ನು ಪ್ರೀತಿಸುವರೇ?' ಎಂದು ಸುಗ್ರೀವನು ಮನದಲ್ಲೇ ಯೋಚಿಸತೊಡಗಿದನು. (ಚೌ/೧-೪)

**ದೋ – ತಬ ಹನುಮಂತ ಉಭಯ ದಿಸಿ ಕೀ ಸಬ ಕಥಾ ಸುನಾಇ।**
**ಪಾವಕ ಸಾಖೀ ದೇಇ ಕರಿ ಜೋರೀ ಪ್ರೀತಿ ದೃಢಾಇ ॥ ೪ ॥**

ಹನುಮಂತನು ಎರಡೂ ಪಕ್ಷದ ಎಲ್ಲ ಕಥೆಗಳನ್ನು ತಿಳಿಸಿ, ಅಗ್ನಿಯನ್ನು ಸಾಕ್ಷಿಯಾಗಿಸಿ ಆ ಉಭಯರ ಮೈತ್ರಿಯನ್ನೂ, ಪ್ರೀತಿಯನ್ನೂ ಬೆಸೆದನು. ಅಂದರೆ ಸ್ನೇಹವನ್ನು ಏರ್ಪಡಿಸಿದನು. (ದೋ/೪)

**ಚೌ – ಕೀನ್ಹಿ ಪ್ರೀತಿ ಕಛು ಬೀಚ ನ ರಾಖಾ। ಲಛಿಮನ ರಾಮ ಚರಿತ ಸಬ ಭಾಷಾ ॥**
**ಕಹ ಸುಗ್ರೀವ ನಯನ ಭರಿ ಬಾರೀ। ಮಿಲಿಹಿ ನಾಥ ಮಿಥಿಲೇಸಕುಮಾರೀ ॥ ೧ ॥**
**ಮಂತ್ರಿನ್ಹ ಸಹಿತ ಇಹಾಁ ಏಕ ಬಾರಾ। ಬೈಠ ರಹೇಉಁ ಮೈಂ ಕರತ ಬಿಚಾರಾ ॥**
**ಗಗನ ಪಂಥ ದೇಖೀ ಮೈಂ ಜಾತಾ। ಪರಬಸ ಪರೀ ಬಹುತ ಬಿಲಪಾತಾ ॥ ೨ ॥**
**ರಾಮ ರಾಮ ಹಾ ರಾಮ ಪುಕಾರೀ। ಹಮಹಿ ದೇಖಿ ದೀನ್ಹೇಉ ಪಟ ಡಾರೀ ॥**
**ಮಾಗಾ ರಾಮ ತುರತ ತೇಹಿಂ ದೀನ್ಹಾ। ಪಟ ಉರ ಲಾಇ ಸೋಚ ಅತಿ ಕೀನ್ಹಾ ॥ ೩ ॥**
**ಕಹ ಸುಗ್ರೀವ ಸುನಹು ರಘುಬೀರಾ। ತಜಹು ಸೋಚ ಮನ ಆನಹು ಧೀರಾ ॥**
**ಸಬ ಪ್ರಕಾರ ಕರಿಹಉಁ ಸೇವಕಾಈ। ಜೇಹಿ ಬಿಧಿ ಮಿಲಿಹಿ ಜಾನಕೀ ಆಈ ॥ ೪ ॥**

ಇಬ್ಬರೂ ಒಬ್ಬರನ್ನೊಬ್ಬರು ಹೃದಯದಿಂದ ಪ್ರೀತಿಸಿದರು. ಯಾವ ಮುಚ್ಚುಮರೆಯೂ ಇರಲಿಲ್ಲ. ಆಗ ಲಕ್ಷ್ಮಣನು ಶ್ರೀರಾಮಚಂದ್ರನ ಇತಿವೃತ್ತವನ್ನೆಲ್ಲ ಸುಗ್ರೀವಾದಿಗಳಿಗೆ ಹೇಳಿದನು. ಇದನ್ನು ಕೇಳಿ, ಸುಗ್ರೀವನ ಕಣ್ಣುಗಳು ತುಂಬಿಬಂದು, ಮತ್ತೆ ಹೇಳಿದನು – ''ಸ್ವಾಮಿ! ಮಿಥಿಲೇಶ ಕುಮಾರಿ ಜಾನಕಿಯು ಖಂಡಿತ ಸಿಗುವಳು. ಒಮ್ಮೆ ನಾನು ಮಂತ್ರಿಗಳೊಂದಿಗೆ ಇಲ್ಲಿ ಕುಳಿತು ಏನನ್ನೋ ವಿಚಾರ ಮಾಡುತ್ತಿದ್ದೆ. ಆಗ ಪರವಶಳಾಗಿ ತುಂಬಾ ವಿಲಾಪಮಾಡುತ್ತಾ ಆಕಾಶಮಾರ್ಗವಾಗಿ ಹೋಗುತ್ತಿದ್ದ ಸೀತಮ್ಮನನ್ನು ನಾನು ನೋಡಿದೆ. ನಮ್ಮನ್ನು ನೋಡಿ ಅವಳು 'ರಾಮಾ! ಹಾ ರಾಮಾ! ರಾಮಾ!' ಎಂದು ವಿಲಪಿಸುತ್ತಾ ತನ್ನ ಒಂದು ವಸ್ತ್ರವನ್ನು

ಬೀಳಿಸಿದ್ದಳು. ಶ್ರೀರಾಮನು ಅದನ್ನು ತೋರಿಸೆಂದು ಹೇಳಲು, ಸುಗ್ರೀವನು ಕೂಡಲೇ (ಆಭರಣಗಳ ಗಂಟು) ಆ ವಸ್ತ್ರವನ್ನು ತಂದು ಒಪ್ಪಿಸಿದನು. ಅದನ್ನುಎದೆಗೊತ್ತಿಕೊಂಡು ಶ್ರೀರಾಮನು ವಿರಹತಾಪಕ್ಕೆ ವಶನಾದನು. ಸುಗ್ರೀವನೆಂದ– ಹೇ ರಘುವೀರಾ! ಚಿಂತಿಸಬೇಡ. ಧೈರ್ಯವಾಗಿರು. ನಾನು ಎಲ್ಲ ರೀತಿಯಿಂದಲೂ ನಿನಗೆ ಸೇವೆ ಮಾಡುತ್ತೇನೆ. ಸೀತಾದೇವಿಯರು ನಿನಗೆ ದೊರಕುವಂತಹ ಎಲ್ಲ ಉಪಾಯವನ್ನು ಮಾಡುವೆ. (ಚೌ/೧-೪)

**ದೋ – ಸಖಾ ಬಚನ ಸುನಿ ಹರಷೇ ಕೃಪಾಸಿಂಧು ಬಲಸೀಂವ ।**
**ಕಾರನ ಕವನ ಬಸಹು ಬನ ಮೋಹಿ ಕಹಹು ಸುಗ್ರೀವ॥ ೫ ॥**

ದಯಾಸಾಗರನೂ, ಅಮಿತಬಲಶಾಲಿಯೂ ಆದ ಶ್ರೀರಾಮನು ಮಿತ್ರನಾದ ಸುಗ್ರೀವನ ಮಾತನ್ನು ಕೇಳಿ, ಹರ್ಷಿತನಾದನು ಹಾಗೂ ಕೇಳಿದನು – ''ಸುಗ್ರೀವಾ! ನೀನು ಈ ವನದಲ್ಲಿ ಏಕೆ ಇರುವೆ? ಹೇಳು ನೋಡೋಣ.'' (ದೋ/೫)

**ಚೌ – ನಾಥ ಬಾಲಿ ಅರು ಮೈಂ ದ್ವೌ ಭಾಈ । ಪ್ರೀತಿ ರಹೀ ಕಛು ಬರನಿ ನ ಜಾಈ ॥**
**ಮಯ ಸುತ ಮಾಯಾವೀ ತೆಹಿ ನಾಊಂ । ಆವಾ ಸೋ ಪ್ರಭು ಹಮರೇಂ ಗಾಊಂ ॥ ೧ ॥**
**ಅರ್ಧ ರಾತಿ ಪುರ ದ್ವಾರ ಪುಕಾರಾ । ಬಾಲೀ ರಿಪು ಬಲ ಸಹೈ ನ ಪಾರಾ ॥**
**ಧಾವಾ ಬಾಲಿ ದೇಖಿ ಸೋ ಭಾಗಾ । ಮೈಂ ಪುನಿ ಗಯಉಂ ಬಂಧು ಸಂಗ ಲಾಗಾ ॥ ೨ ॥**
**ಗಿರಿಬರ ಗುಹಾಂ ಪೈಠ ಸೋ ಜಾಈ । ತಬ ಬಾಲೀಂ ಮೊಹಿ ಕಹಾ ಬುಝಾಈ ॥**
**ಪರಿಖೆಸು ಮೋಹಿ ಏಕ ಪಖವಾರಾ । ನಹಿಂ ಆವೌಂ ತಬ ಜಾನೆಸು ಮಾರಾ ॥ ೩ ॥**
**ಮಾಸ ದಿವಸ ತಹಂ ರಹೆಉಂ ಖರಾರೀ । ನಿಸರೀ ರುಧಿರ ಧಾರ ತಹಂ ಭಾರೀ ॥**
**ಬಾಲಿ ಹತೆಸಿ ಮೊಹಿ ಮಾರಿಹಿ ಆಈ । ಸಿಲಾ ದೇಇ ತಹಂ ಚಲೆಉಂ ಪರಾಈ ॥ ೪ ॥**
**ಮಂತ್ರಿನ್ಹ ಪುರ ದೇಖಾ ಬಿನು ಸಾಈಂ । ದೀನ್ಹೆಉ ಮೋಹಿ ರಾಜ ಬರಿಆಈಂ ॥**
**ಬಾಲೀ ತಾಹಿ ಮಾರಿ ಗೃಹ ಆವಾ । ದೇಖಿ ಮೋಹಿ ಜಿಯಂ ಭೇದ ಬಢಾವಾ ॥ ೫ ॥**
**ರಿಪು ಸಮ ಮೋಹಿ ಮಾರೆಸಿ ಅತಿ ಭಾರೀ । ಹರಿ ಲೀನ್ಹೆಸಿ ಸರ್ಬಸು ಅರು ನಾರೀ ॥**
**ತಾಕೇಂ ಭಯ ರಘುಬೀರ ಕೃಪಾಲಾ । ಸಕಲ ಭುವನ ಮೈಂ ಫಿರೆಉ ಬಿಹಾಲಾ ॥ ೬ ॥**
**ಇಹಾಂ ಸಾಪ ಬಸ ಆವತ ನಾಹೀಂ । ತದಪಿ ಸಭೀತ ರಹಉಂ ಮನ ಮಾಹೀಂ ॥**
**ಸುನಿ ಸೇವಕ ದುಖ ದೀನದಯಾಲಾ । ಫರಕಿ ಉಠೀಂ ದ್ವೌ ಭುಜಾ ಬಿಸಾಲಾ ॥ ೭ ॥**

ಸುಗ್ರೀವನು ಹೇಳತೊಡಗಿದನು – ''ಸ್ವಾಮಿ! ವಾಲಿ ಮತ್ತು ನಾನು ಇಬ್ಬರೂ ಅಣ್ಣತಮ್ಮಂದಿರು. ನಮ್ಮಿಬ್ಬರ ಪ್ರೀತಿ ಮಾತಿಗೆ ಮೀರಿದ್ದು. 'ಮಯ'ನೆಂಬ ದಾನವನ ಮಗ 'ಮಾಯಾವಿ' ಎಂಬುವನು ಒಮ್ಮೆ ನಮ್ಮ ಕಿಷ್ಕಿಂಧೆಗೆ ಬಂದನು. ಅವನು ಅರ್ಧರಾತ್ರಿಯಲ್ಲಿ ಊರ ಹೆಬ್ಬಾಗಿಲ ಬಳಿನಿಂತು ಘೋರ ಧ್ವನಿಯಿಂದ ಮೂದಲಿಸುತ್ತಾ ಗರ್ಜಿಸಿದನು. ವಾಲಿಯು ಅವನ ಮೂದಲಿಕೆಯ ಮಾತನ್ನು ಸಹಿಸದೆ, ಅವನ ಬಳಿಗೆ ಯುದ್ಧಕ್ಕೆ ಧಾವಿಸಿದನು. ವಾಲಿಯನ್ನು ನೋಡುತ್ತಲೇ ಮಾಯಾವಿ ಕಾಲಿಗೆ ಬುದ್ಧಿಹೇಳಿದನು. ನಾನೂ ಕೂಡ ಅಣ್ಣನೊಂದಿಗೆ ಹೋದೆ. ಆ ದಾನವನು ಒಂದು ಪರ್ವತದ ಗುಹೆಯೊಳಗೆ ಹೊಕ್ಕನು. ಆಗ ನಮ್ಮಣ್ಣನು ನನಗೆ– ''ಸುಗ್ರೀವಾ! ನೀನು ಒಂದು ಪಕ್ಷ(ಹದಿನೈದು ದಿನ)ದ ತನಕ ಈ ಗುಹೆಯ ಹೊರಗೆ ನನಗಾಗಿ ಕಾಯುತ್ತಿರು. ಅಷ್ಟರಲ್ಲಿ ನಾನು ಬಾರದಿದ್ದರೆ ನಾನು ಸತ್ತೆನೆಂದು ತಿಳಿ'' ಎಂದು ಆದೇಶಿಸಿ ಅವನು ಗುಹೆಯನ್ನು ಹೊಕ್ಕನು. ಓ ಖರಾರೀ! ನಾನು ಅಲ್ಲಿ ತಿಂಗಳುಗಟ್ಟಲೆ ಕಾದಿದ್ದೆ. ಆ ಗುಹೆಯಿಂದ ರಕ್ತದ ಕೋಡಿ ಹರಿಯಿತು. ಆ ಮಾಯಾವಿಯು ವಾಲಿಯನ್ನು ಕೊಂದಿರಬಹುದೆಂದು ನನಗನ್ನಿಸಿತು. ಅವನು ಬಂದು ನನ್ನನ್ನೂ ಕೊಂದಾನೆಂದು ತಿಳಿದು, ನಾನು ಆ ಗುಹೆಯ ಬಾಗಿಲನ್ನು ಒಂದು ದೊಡ್ಡ ಬಂಡೆಯಿಂದ ಮುಚ್ಚಿ ಓಡಿ ಬಂದೆ. ರಾಜ್ಯವು ಅರಾಜಕವಾಗಿರುವುದನ್ನು ಕಂಡ ಮಂತ್ರಿಗಳು ನನ್ನನ್ನು ಬಲವಂತವಾಗಿ ಕಿಷ್ಕಿಂಧೆಗೆ ರಾಜನನ್ನಾಗಿಸಿದರು. ಆದರೆ ವಾಲಿಯು ಮಾಯಾವಿಯನ್ನು ಕೊಂದು ಕೆಲದಿನಗಳಲ್ಲಿ ಅರಮನೆಗೆ ಆಗಮಿಸಿದನು. ರಾಜಸಿಂಹಾಸನದಲ್ಲಿ ಕುಳಿತಿದ್ದ ನನ್ನನ್ನು ಕಂಡು, ಅವನು ಮನಸ್ಸಿನಲ್ಲಿ ತಪ್ಪುತಿಳಿದುಕೊಂಡು ನನ್ನ ಕುರಿತು ವಿರೋಧ ಕಟ್ಟಿಕೊಂಡನು. (ರಾಜ್ಯಲೋಭದಿಂದಲೇ ಇವನು ನಾನು ಹೊರಗೆಬರದಂತೆ ಗುಹಾದ್ವಾರಕ್ಕೆ ಬಂಡೆಯನ್ನಿಟ್ಟು , ಇಲ್ಲಿಗೆ ಬಂದು ರಾಜ್ಯಾಧಿಕಾರವನ್ನು ಪಡೆದಿರುವನೆಂದು ತಿಳಿದುಕೊಂಡನು.) ಅವನು ನನ್ನನ್ನು ಶತ್ರುವಿನಂತೆ ಕಂಡು ಚೆನ್ನಾಗಿ ಹೊಡೆದನು. ನನ್ನ ಸರ್ವಸ್ವವನ್ನೂ ಕೊನೆಗೆ ನನ್ನ ಮಡದಿಯನ್ನೂ ಕಸಿದುಕೊಂಡನು. ಓ ಕೃಪಾಳು! ರಘುವೀರಾ! ನಾನು ಆತನ ಭಯದಿಂದ ಈ ಲೋಕದಲ್ಲಿ ಪಡಬಾರದ ಪಾಡುಪಟ್ಟು ಅಲೆದೆ. ಮತಂಗಮುನಿಗಳ ಶಾಪದಿಂದಾಗಿ ಅವನು ಈ ಪರ್ವತಕ್ಕೆ ಬರಲಾರನು. ಆದರೂ ನಾನು

ಯಾವಾಗಲೂ ಭಯದಿಂದಲೇ ಇರುತ್ತೇನೆ.'' ಸೇವಕನ ಕರುಣಕಥೆಯನ್ನು ಕೇಳಿ, ದೀನಬಂಧುವಾದ ಶ್ರೀರಾಮನ ಎರಡೂ ಭುಜಗಳು ಅದರಿದುವು. (ಚೌ/೧-೭)

## ವಾಲಿವಧೆ

**ದೋ – ಸುನು ಸುಗ್ರೀವ ಮಾರಿಹಉಁ ಬಾಲಿಹಿ ಏಕಹಿಂ ಬಾನ।**
**ಬ್ರಹ್ಮ ರುದ್ರ ಸರನಾಗತ ಗಏಁ ನ ಉಬರಿಹಿಂ ಪ್ರಾನ ॥ ೬ ॥**

ಆಗ ಶ್ರೀರಾಮನಿಂತೆಂದನು – ಸುಗ್ರೀವನೇ! ಕೇಳು. ''ನಾನು ಒಂದೇ ಒಂದು ಬಾಣದಿಂದ ವಾಲಿಯನ್ನು ವಧಿಸುತ್ತೇನೆ. ಬ್ರಹ್ಮರುದ್ರಾದಿಗಳೂ ಕೂಡ ಅವನನ್ನು ಕಾಪಾಡಲಾರರು. (ದೋ/೬)

**ಚೌ – ಜೇ ನ ಮಿತ್ರ ದುಖ ಹೋಹಿಂ ದುಖಾರೀ। ತಿನ್ಹಹಿ ಬಿಲೋಕತ ಪಾತಕ ಭಾರೀ॥**
**ನಿಜ ದುಖ ಗಿರಿ ಸಮ ರಜ ಕರಿ ಜಾನಾ। ಮಿತ್ರಕ ದುಖ ರಜ ಮೇರು ಸಮಾನಾ ॥ ೧ ॥**
**ಜಿನ್ಹ ಕೇಁ ಅಸಿ ಮತಿ ಸಹಜ ನ ಆಈ। ತೇ ಸಠ ಕತ ಹಠಿ ಕರತ ಮಿತಾಈ ॥**
**ಕುಪಥ ನಿವಾರಿ ಸುಪಂಥ ಚಲಾವಾ। ಗುನ ಪ್ರಗಟೈ ಅವಗುನನ್ಹಿ ದುರಾವಾ ॥ ೨ ॥**
**ದೇತ ಲೇತ ಮನ ಸಂಕ ನ ಧರಈ। ಬಲ ಅನುಮಾನ ಸದಾ ಹಿತ ಕರಈ ॥**
**ಬಿಪತಿ ಕಾಲ ಕರ ಸತಗುನ ನೇಹಾ। ಶ್ರುತಿ ಕಹ ಸಂತ ಮಿತ್ರ ಗುನ ಏಹಾ ॥ ೩ ॥**
**ಆಗೇಁ ಕಹ ಮೃದು ಬಚನ ಬನಾಈ। ಪಾಛೇಁ ಅನಹಿತ ಮನ ಕುಟಿಲಾಈ ॥**
**ಜಾ ಕರ ಚಿತ ಅಹಿ ಗತಿ ಸಮ ಭಾಈ। ಅಸ ಕುಮಿತ್ರ ಪರಿಹರೆಹಿಂ ಭಲಾಈ ॥ ೪ ॥**
**ಸೇವಕ ಸಠ ನೃಪ ಕೃಪನ ಕುನಾರೀ। ಕಪಟೀ ಮಿತ್ರ ಸೂಲ ಸಮ ಚಾರೀ॥**
**ಸಖಾ ಸೋಚ ತ್ಯಾಗಹು ಬಲ ಮೋರೇಂ। ಸಬ ಬಿಧಿ ಘಟಬ ಕಾಜ ಮೈಂ ತೋರೇಂ ॥ ೫ ॥**
**ಕಹ ಸುಗ್ರೀವ ಸುನಹು ರಘುಬೀರಾ। ಬಾಲಿ ಮಹಾಬಲ ಅತಿ ರನಧೀರಾ ॥**
**ದುಂದುಭಿ ಅಸ್ಥಿ ತಾಲ ದೇಖರಾಏ। ಬಿನು ಪ್ರಯಾಸ ರಘುನಾಥ ಢಹಾಏ ॥ ೬ ॥**
**ದೇಖಿ ಅಮಿತ ಬಲ ಬಾಢೀ ಪ್ರೀತೀ। ಬಾಲಿ ಬಧಬ ಇನ್ಹ ಭಇ ಪರತೀತೀ ॥**
**ಬಾರ ಬಾರ ನಾವಇ ಪದ ಸೀಸಾ। ಪ್ರಭುಹಿ ಜಾನಿ ಮನ ಹರಷ ಕಪೀಸಾ ॥ ೭ ॥**
**ಉಪಜಾ ಗ್ಯಾನ ಬಚನ ತಬ ಬೋಲಾ। ನಾಥ ಕೃಪಾಁ ಮನ ಭಯಉ ಅಲೋಲಾ ॥**
**ಸುಖ ಸಂಪತಿ ಪರಿವಾರ ಬಡಾಈ। ಸಬ ಪರಿಹರಿ ಕರಿಹಉಁ ಸೇವಕಾಈಂ ॥ ೮ ॥**
**ಏ ಸಬ ರಾಮ ಭಗತಿ ಕೇ ಬಾಧಕ। ಕಹಹಿಂ ಸಂತ ತವ ಪದ ಅವರಾಧಕ ॥**
**ಸತ್ರು ಮಿತ್ರ ಸುಖ ದುಖ ಜಗ ಮಾಹೀಂ। ಮಾಯಾ ಕೃತ ಪರಮಾರಥ ನಾಹೀಂ ॥ ೯ ॥**
**ಬಾಲಿ ಪರಮ ಹಿತ ಜಾಸು ಪ್ರಸಾದಾ। ಮಿಲೆಹು ರಾಮ ತುಮ್ಹ ಸಮನ ಬಿಷಾದಾ ॥**
**ಸಪನೇಂ ಜೆಹಿ ಸನ ಹೋಇ ಲರಾಈ। ಜಾಗೇಂ ಸಮುಝುತ ಮನ ಸಕುಚಾಈ ॥ ೧೦ ॥**
**ಅಬ ಪ್ರಭು ಕೃಪಾ ಕರಹು ಏಹಿ ಭಾಁತೀ। ಸಬ ತಜಿ ಭಜನು ಕರೌಂ ದಿನ ರಾತೀ ॥**
**ಸುನಿ ಬಿರಾಗ ಸಂಜುತ ಕಪಿ ಬಾನೀ। ಬೋಲೇ ಬಿಹಁಸಿ ರಾಮು ಧನುಪಾನೀ ॥ ೧೧ ॥**
**ಜೋ ಕಛು ಕಹೆಹು ಸತ್ಯ ಸಬ ಸೋಈ। ಸಖಾ ಬಚನ ಮಮ ಮೃಷಾ ನ ಹೋಈ ॥**
**ನಟ ಮರಕಟ ಇವ ಸಬಹಿ ನಚಾವತ। ರಾಮು ಖಗೇಸ ಬೇದ ಅಸ ಗಾವತ ॥ ೧೨ ॥**
**ಲೈ ಸುಗ್ರೀವ ಸಂಗ ರಘುನಾಥಾ। ಚಲೇ ಚಾಪ ಸಾಯಕ ಗಹಿ ಹಾಥಾ ॥**
**ತಬ ರಘುಪತಿ ಸುಗ್ರೀವ ಪಠಾವಾ। ಗರ್ಜೆಸಿ ಜಾಇ ನಿಕಟ ಬಲ ಪಾವಾ ॥ ೧೩ ॥**
**ಸುನತ ಬಾಲಿ ಕ್ರೋಧಾತುರ ಧಾವಾ। ಗಹಿ ಕರ ಚರನ ನಾರಿ ಸಮುಝಾವಾ ॥**
**ಸುನು ಪತಿ ಜಿನ್ಹಹಿ ಮಿಲೆಉ ಸುಗ್ರೀವಾ। ತೇ ದ್ವೌ ಬಂಧು ತೇಜ ಬಲ ಸೀಂವಾ ॥ ೧೪ ॥**
**ಕೋಸಲೇಸ ಸುತ ಲಛಿಮನ ರಾಮಾ। ಕಾಲಹು ಜೀತಿ ಸಕಹಿಂ ಸಂಗ್ರಾಮಾ ॥ ೧೫ ॥**

ಮಿತ್ರರ ದುಃಖದಿಂದ ದುಃಖಿಯಾಗದೆ ಇರುವವನನ್ನು ನೋಡಿದರೂ ಮಹಾಪಾಪ ತಗುಲೀತು. ತನ್ನ ಬೆಟ್ಟದಂತಹ ದುಃಖವನ್ನು ಧೂಳಿನಕಣದಂತೆ ಕಂಡು, ಮಿತ್ರನ ಧೂಳುಕಣದಂತಿರುವ ದುಃಖವನ್ನು ಮೇರುಪರ್ವತದಂತೆ ನೋಡಬೇಕು. ಸಹಜವಾಗಿ ಇಂತಹ ಲಕ್ಷಣಗಳಿಲ್ಲದವರು ಶಠರು. ಇಂತಹ ಮೂರ್ಖಜನರು ಹಟಗೈದು ಯಾರ ಜೊತೆಯಲ್ಲಾದರೂ ಮಿತ್ರತೆಯನ್ನು ಬೆಳೆಸಿದರೆ ಏನು ಪ್ರಯೋಜನ? ಕೆಟ್ಟಮಾರ್ಗದಿಂದ ಹೋಗುತ್ತಿರುವ ಮಿತ್ರನನ್ನು ತಡೆದು ಒಳ್ಳೆಯ ಮಾರ್ಗಕ್ಕೆ ಹಚ್ಚುವುದೇ ಮಿತ್ರನ ಧರ್ಮವಾಗಿದೆ. ಯಾವಾಗಲೂ ತನ್ನ ಮಿತ್ರನ ಗುಣಗಳನ್ನು ಪ್ರಕಟಿಸಬೇಕು, ದೋಷಗಳನ್ನು ಅಡಗಿಸಿಟ್ಟಿರಬೇಕು. ಕೊಟ್ಟುಕೊಳ್ಳುವುದರಲ್ಲಿ ಮನದಲ್ಲಿ ಸಂಶಯವನ್ನಿರಿಸಿಕೊಳ್ಳಬಾರದು. ತನ್ನ ಶಕ್ತ್ಯಾನುಸಾರವಾಗಿ ಸ್ನೇಹಿತನ ಹಿತವನ್ನೇ ಯಾವಾಗಲೂ ಎಸಗುತ್ತಿರಬೇಕು. ಮಿತ್ರನ ಆಪತ್ಕಾಲದಲ್ಲಂತೂ ನೂರ್ಮಡಿಯಾಗಿ ನೆರವಾಗಬೇಕು. ಇವುಗಳು ಸನ್ಮಿತ್ರನ ಲಕ್ಷಣಗಳೆಂದು ಶ್ರುತಿಗಳು ಸಾರುತ್ತಿವೆ.

ಎದುರಿಗೆ ಕೋಮಲವಾಗಿ ಮಾತನ್ನಾಡಿ ಬೆನ್ನ ಹಿಂದೆ ಇರಿಯುವವರು ಕುಟಿಲ ಮನಸ್ಸುಳ್ಳವನು. ಸೋದರಾ! ಅಂತಹವರ ಮನಸ್ಸು ಹಾವಿನ ಚಲನೆಯಂತೆ ಅಕ್ರವಕ್ರವಾಗಿರುತ್ತದೆ. ಇಂತಹ ಕುಟಿಲರನ್ನು ತೊರೆಯುವುದೇ ಲೇಸು. ಮೂರ್ಖನಾದ ಸೇವಕ, ಕೃಪಣನಾದ ರಾಜ, ಕುಲಟೆಯಾದ ಹೆಂಡತಿ, ಕಪಟಿಯಾದ ಸ್ನೇಹಿತ, ಇವರು ನಾಲ್ವರು ಶೂಲದಂತೆ ದುಃಖವನ್ನು ಕೊಡುವವರು. ಗೆಳೆಯಾ! ನೀನು ನನ್ನ ಬಲದ ಮೇಲೆ ಭರವಸೆಯನ್ನಿಟ್ಟು ನಿಶ್ಚಿಂತನಾಗಿರು. ನಾನು ಎಲ್ಲ ವಿಧದಿಂದ ನಿನಗೆ ನೆರವಾಗುತ್ತೇನೆ.''

ಆಗ ಸುಗ್ರೀವನು – ರಘುವೀರಾ! ವಾಲಿಯು ಮಹಾನ್ ಬಲಶಾಲಿಯು. ಯುದ್ಧದಲ್ಲಿ ಅತ್ಯಂತ ಧೀರನೂ ವೀರನೂ ಆಗಿರುವನು ಎಂದು ಹೇಳಿ, ಮತ್ತೆ ಶ್ರೀರಾಮನಿಗೆ 'ದುಂದುಭಿ' ಎಂಬ ರಾಕ್ಷಸನ ಎಲುಬಿನ ಹಂದರವನ್ನು, ಸಪ್ತತಾಲವೃಕ್ಷಗಳನ್ನೂ ತೋರಿಸಿದನು. ಶ್ರೀರಘುನಾಥನು ಲೀಲಾಜಾಲವಾಗಿ ಆ ಮರಗಳನ್ನು ಉರುಳಿಸಿ, ಎಡಕಾಲ ಹೆಬ್ಬೆಟ್ಟಿನಿಂದ ಎಲುಬಿನ ಹಂದರವನ್ನು ಹತ್ತು ಯೋಜನದೂರಕ್ಕೆ ಹಾರಿಸಿಬಿಟ್ಟನು. ಶ್ರೀರಾಮನಲ್ಲಿದ್ದ ಅಪಾರನಾದ ಬಲವನ್ನು ಕಂಡು ಸುಗ್ರೀವನಿಗೆ ಅವನಲ್ಲಿದ್ದ ಪ್ರೇಮವು ಇಮ್ಮಡಿಸಿತು. ಈತನು ಖಂಡಿತವಾಗಿ ವಾಲಿವಧೆ ಮಾಡಬಲ್ಲನೆಂಬ ನಂಬಿಕೆ ಮೂಡಿತು. ಶ್ರೀರಾಮನು ಸಾಕ್ಷಾತ್ ಭಗವಂತನೆಂದರಿತು ಸುಗ್ರೀವನ ಮನಸ್ಸು ಹರ್ಷಗೊಂಡಿತು. ಪ್ರಭು ಚರಣಗಳಲ್ಲಿ ಪದೇ-ಪದೇ ವಂದಿಸಿಕೊಂಡನು. ಜ್ಞಾನೋದಯವಾದಾಗ ಸುಗ್ರೀವನು ಇಂತು ನುಡಿದನು – ''ಸ್ವಾಮಿ! ನಿಮ್ಮ ಕೃಪೆಯಿಂದ ಈಗ ನನ್ನ ಮನಸ್ಸು ಸ್ಥಿರವಾಯಿತು. ಸುಖ, ಸಂಪತ್ತು, ಪರಿವಾರ, ದೊಡ್ಡಸ್ತಿಕೆ ಇವೆಲ್ಲವನ್ನೂ ತೊರೆದು ನಾನು ನಿಮ್ಮ ಸೇವೇ ಮಾಡುವೆನು. ಏಕೆಂದರೆ ಇವೆಲ್ಲ ಶ್ರೀರಾಮನನ್ನು ಭಜಿಸಲು ಆತಂಕಕಾರಿ ಎಂದು ನಿಮ್ಮ ಚರಣಾರಾಧಕರಾದ ಸಂತರು ಹೇಳುತ್ತಾರೆ. ಜಗತ್ತಿನಲ್ಲಿ ಶತ್ರು-ಮಿತ್ರರು, ಸುಖ-ದುಃಖಗಳು ಮುಂತಾದ ದ್ವಂದ್ವಗಳು ಮಾಯಾರಚಿತವಾದವುಗಳು. ಪರಮಾರ್ಥತಃ ಅವುಗಳಿಗೆ ಅಸ್ತಿತ್ವವೇ ಇಲ್ಲ. ಶ್ರೀರಾಮಾ! ವಾಲಿಯು ನನಗೆ ತುಂಬಾ ಒಳ್ಳೆಯದನ್ನೇ ಗೈದಿರುವನು. ಅವನ ಕೃಪೆಯಿಂದಲೇ ಶೋಕನಿವಾರಕರಾದ ನಿಮ್ಮ ದರ್ಶನಭಾಗ್ಯ ದೊರಕಿತು. ಇಂತಹ ಹಿತವನ್ನು ಗೈದಿರುವ ಆತನೊಡನೆ ಸ್ವಪ್ನದಲ್ಲಿ ಯುದ್ಧಮಾಡಿದರೂ, ಎಚ್ಚರವಾದಾಗ ನಾಚಿಕೆಯಾದೀತು. ಪ್ರಭುವೇ! ಎಲ್ಲವನ್ನು ತೊರೆದು ಹಗಲಿರುಳು ನಿಮ್ಮನ್ನೇ ಭಜಿಸುವಂತೆ ನನಗೆ ಅನುಗ್ರಹಿಸಿರಿ.'' ಸುಗ್ರೀವನ ವೈರಾಗ್ಯಯುಕ್ತ ಮಾತುಗಳನ್ನು ಕೇಳಿ, ಆ ಕೋದಂಡರಾಮನು ಮುಗುಳ್ನಕ್ಕು ಹೀಗೆ ಹೇಳಿದನು – ''ಗೆಳೆಯಾ! ನೀನು ಹೇಳಿದ್ದೆಲ್ಲವೂ ನಿಜ. ಆದರೆ ನನ್ನ ಮಾತು ಸುಳ್ಳಾಗದು. ಅಂದರೆ ವಾಲಿಯ ವಧೆಯಾಗಿ, ನೀನು ರಾಜನಾಗುವುದು ಸತ್ಯ. (ಕಾಕಭುಶುಂಡಿಯವರು ಹೇಳುತ್ತಾರೆ –) ''ವೈನತೇಯಾ! ದೊಂಬರಾಟದವನು ಕೋತಿಯನ್ನು ಕುಣಿಸುವಂತೆ, ಶ್ರೀರಾಮನು ಎಲ್ಲರನ್ನು ಆಡಿಸುತ್ತಾನೆ'' ಎಂದು ವೇದಗಳು ಹೇಳುತ್ತಾರೆ. ಅನಂತರ ಸುಗ್ರೀವನನ್ನು ಜೊತೆಯಲ್ಲಿ ಕರೆದುಕೊಂಡು ಕೈಯಲ್ಲಿ ಧನುರ್ಬಾಣಗಳನ್ನು ಧರಿಸಿ ಶ್ರೀರಾಮನು ಕಿಷ್ಕಿಂಧೆಯತ್ತ ಹೊರಟನು. ಅವನು ವಾಲಿಯನ್ನು ಯುದ್ಧಕ್ಕಾಗಿ ಆಹ್ವಾನಿಸಲು ಸುಗ್ರೀವನನ್ನು ಕಳಿಸಿದನು. ಅವನು ಶ್ರೀರಾಮನ ಬೆಂಬಲದಿಂದ ವಾಲಿಯ ಬಳಿಗೆ ಹೋಗಿ ಗರ್ಜಿಸಿದನು. ಆ ಗರ್ಜನೆಯನ್ನು ಕೇಳಿ, ವಾಲಿಯು ಕ್ರೋಧಗೊಂಡು ಧಾವಿಸಿದನು. ಆತನ ಭಾರ್ಯೆಯಾದ ತಾರೆಯು ಗಂಡನ ಕಾಲು ಹಿಡಿದು ಕೇಳಿಕೊಂಡಳು – ನಾಥಾ! ಕೇಳಿರಿ. ಸುಗ್ರೀವನ ಜೊತೆಗೆ ಮೈತ್ರಿ ಬೆಳೆಸಿಕೊಂಡಿರುವ ಅಣ್ಣ-ತಮ್ಮಂದಿರಿಬ್ಬರೂ ಅಮಿತ ಬಲಪರಾಕ್ರಮಶಾಲಿಗಳಂತೆ. ಅವರು ಕೋಸಲಾಧೀಶ ದಶರಥನ ಪುತ್ರರಾದ ರಾಮಲಕ್ಷ್ಮಣರಂತೆ. ಅವರು ಯುದ್ಧದಲ್ಲಿ ಕಾಲನನ್ನೂ ಜಯಿಸಬಲ್ಲವರಂತೆ. (ಚೌ/೧-೧೫)

**ದೋ – ಕಹ ಬಾಲೀ ಸುನು ಭೀರು ಪ್ರಿಯ ಸಮದರಸೀ ರಘುನಾಥ।**
**ಜೌಂ ಕದಾಚಿ ಮೋಹಿ ಮಾರಹಿ ತೌ ಪುನಿ ಹೋಉಁ ಸನಾಥ ॥ ೭ ॥**

ಆಗ ವಾಲಿಯು ಹೇಳಿದನು – ಎಲೆಗೆ ಭೀರು ಹೆಣ್ಣೆ ! ಪ್ರಿಯೇ ! ಕೇಳು. ಶ್ರೀರಘುನಾಥನು ಸಮದರ್ಶಿಯು. ಒಂದು ವೇಳೆ ನಾನು ಅವನಿಂದ ವಧಿಸಲ್ಪಟ್ಟರೆ ಪರಮಪದವನ್ನೇ ಪಡೆಯುವೆನು. (ದೋ/೭)

**ಚೌ – ಅಸ ಕಹಿ ಚಲಾ ಮಹಾ ಅಭಿಮಾನೀ। ತೃನ ಸಮಾನ ಸುಗ್ರೀವಹಿ ಜಾನೀ ॥**
**ಭಿರೇ ಉಭೌ ಬಾಲೀ ಅತಿ ತರ್ಜಾ। ಮುಠಿಕಾ ಮಾರಿ ಮಹಾಧುನಿ ಗರ್ಜಾ ॥ ೧ ॥**

ತಬ ಸುಗ್ರೀವ ಬಿಕಲ ಹೋಇ ಭಾಗಾ। ಮುಷ್ಟಿ ಪ್ರಹಾರ ಬಜ್ರ ಸಮ ಲಾಗಾ॥
ಮೈಂ ಜೋ ಕಹಾ ರಘುಬೀರ ಕೃಪಾಲಾ। ಬಂಧು ನ ಹೋಇ ಮೋರ ಯಹ ಕಾಲಾ॥ ೨॥
ಏಕರೂಪ ತುಮ್ಹ ಭ್ರಾತಾ ದೋಊ। ತೇಹಿ ಭ್ರಮ ತೇಂ ನಹಿಂ ಮಾರೇಉಁ ಸೋಊ॥
ಕರ ಪರಸಾ ಸುಗ್ರೀವ ಸರೀರಾ। ತನು ಭಾ ಕುಲಿಸ ಗಈ ಸಬ ಪೀರಾ॥ ೩॥
ಮೇಲೀ ಕಂಠ ಸುಮನ ಕೈ ಮಾಲಾ। ಪಠವಾ ಪುನಿ ಬಲ ದೇಇ ಬಿಸಾಲಾ॥
ಪುನಿ ನಾನಾ ಬಿಧಿ ಭಈ ಲರಾಈ। ಬಿಟಪ ಓಟ ದೇಖಹಿಂ ರಘುರಾಈ॥ ೪॥

ಹೀಗೆ ಹೇಳಿ ಮಹಾದುರಭಿಮಾನಿಯಾದ ವಾಲಿಯು ಸುಗ್ರೀವನನ್ನು ಹುಲ್ಲುಕಡ್ಡಿಯಂತೆ ಎಣಿಸಿ ಯುದ್ಧಕ್ಕೆ ಹೊರಟನು. ಇಬ್ಬರಿಗೂ ಕೈಹತ್ತಿತು. ವಾಲಿಯು ಸುಗ್ರೀವನನ್ನು ಬಹಳವಾಗಿ ಮೂದಲಿಸಿ, ಜೋರಾಗಿ ಗರ್ಜಿಸಿ, ಬಲವಾದ ಮುಷ್ಟಿಪ್ರಹಾರಗೈದನು. ಆ ಏಟು ಆತನಿಗೆ ವಜ್ರಪ್ರಹಾರದಂತಾಯಿತು. ಸುಗ್ರೀವನು ವ್ಯಾಕುಲನಾಗಿ ಪಲಾಯನ ಮಾಡಿದನು. ಶ್ರೀರಾಮನ ಬಳಿಗೆ ಬಂದು ಹೇಳಿದನು – ಹೇ ಕೃಪಾಳು ರಘುವೀರಾ! ವಾಲಿಯು ನನಗೆ ಅಣ್ಣನಲ್ಲ, ನನ್ನ ಪಾಲಿಗೆ ಸಾಕ್ಷಾತ್ ಕಾಲನೇ ಆಗಿದ್ದಾನೆಂದು ನಾನು ಮೊದಲೇ ನಿನಗೆ ಹೇಳಿದ್ದೆ. ಆಗ ಶ್ರೀರಾಮನೆಂದ – 'ನೀವು ಅಣ್ಣತಮ್ಮಂದಿರಿಬ್ಬರೂ ನೋಡಲು ಒಂದೇ ರೀತಿಯಾಗಿದ್ದೀರಿ. ಈ ಭ್ರಮೆಯಿಂದಾಗಿ ನಾನು ಅವನನ್ನು ಕೊಲ್ಲಲಿಲ್ಲ.' ಮತ್ತೆ ಶ್ರೀರಾಮನು ಸುಗ್ರೀವನ ಮೈಯನ್ನು ಮುಟ್ಟಿ ಅವನ ಶರೀರವನ್ನು ವಜ್ರದಂತಾಗಿಸಿದನು. ನೋವೆಲ್ಲ ಮಾಯವಾಯಿತು. ಆಗ ಶ್ರೀರಾಮನು ಅವನ ಕೊರಳಿಗೆ ಒ ಂ ದ ’ ಂ ಹೂಮಾಲೆಯನ್ನು ಹಾಕಿ, ಹುರಿದುಂಬಿಸಿ ಪುನಃ ಯುದ್ಧಕ್ಕೆ ಕಳಿಸಿದನು. ವಾಲಿ-ಸುಗ್ರೀವರಲ್ಲಿ ಅನೇಕ ರೀತಿಯ ಕಾಳಗವಾಯಿತು. ಶ್ರೀರಾಮನು ಒಂದು ಮರದ ಮರೆಯಲ್ಲಿ ನಿಂತು ಎಲ್ಲವನ್ನೂ ವೀಕ್ಷಿಸುತ್ತಿದ್ದನು. (ಚೌ/೧-೪)

**ದೋ – ಬಹು ಛಲ ಬಲ ಸುಗ್ರೀವ ಕರ ಹಿಯಁ ಹಾರಾ ಭಯ ಮಾನಿ।**
**ಮಾರಾ ಬಾಲಿ ರಾಮ ತಬ ಹೃದಯ ಮಾಝ ಸರ ತಾನಿ॥ ೮॥**

ಸುಗ್ರೀವನು ತುಂಬಾ ಚಾಕ-ಚಕ್ಯತೆಯಿಂದ ಹೋರಾಡಿದನು. ಕೊನೆಗೆ ಹೆದರಿ ಎದೆಗುಂದಿದಾಗ, ಶ್ರೀರಾಮನು ಬಾಣವೊಂದನ್ನು ಗುರಿಯಿಟ್ಟು, ವಾಲಿಯ ಎದೆಗೆ ಹೊಡೆದನು. (ದೋ/೮)

ಚೌ – ಪರಾ ಬಿಕಲ ಮಹಿ ಸರ ಕೇ ಲಾಗೇಂ। ಪುನಿ ಉಠಿ ಬೈಠ ದೇಖಿ ಪ್ರಭು ಆಗೇಂ॥
ಸ್ಯಾಮ ಗಾತ ಸಿರ ಜಟಾ ಬನಾಏಂ। ಅರುನ ನಯನ ಸರ ಚಾಪ ಚಢ಼ಾಏಂ॥ ೧॥
ಪುನಿ ಪುನಿ ಚಿತಇ ಚರನ ಚಿತ ದೀನ್ಹಾ। ಸುಫಲ ಜನ್ಮ ಮಾನಾ ಪ್ರಭು ಚೀನ್ಹಾ॥
ಹೃದಯಁ ಪ್ರೀತಿ ಮುಖ ಬಚನ ಕಠೋರಾ। ಬೋಲಾ ಚಿತಇ ರಾಮ ಕೀ ಓರಾ॥ ೨॥
ಧರ್ಮ ಹೇತು ಅವತರೇಹು ಗೊಸಾಈಂ। ಮಾರೇಹು ಮೋಹಿ ಬ್ಯಾಧ ಕೀ ನಾಈಂ॥
ಮೈಂ ಬೈರೀ ಸುಗ್ರೀವ ಪಿಆರಾ। ಅವಗುನ ಕವನ ನಾಥ ಮೊಹಿ ಮಾರಾ॥ ೩॥
ಅನುಜ ಬಧೂ ಭಗಿನೀ ಸುತ ನಾರೀ। ಸುನು ಸಠ ಕನ್ಯಾ ಸಮ ಏ ಚಾರೀ॥
ಇನ್ಹಹಿ ಕುದೃಷ್ಟಿ ಬಿಲೋಕಇ ಜೋಈ। ತಾಹಿ ಬಧೇಂ ಕಛು ಪಾಪ ನ ಹೋಈ॥ ೪॥
ಮೂಢ಼ ತೋಹಿ ಅತಿಸಯ ಅಭಿಮಾನಾ। ನಾರಿ ಸಿಖಾವನ ಕರಸಿ ನ ಕಾನಾ॥
ಮಮ ಭುಜ ಬಲ ಆಶ್ರಿತ ತೇಹಿ ಜಾನೀ। ಮಾರಾ ಚಹಸಿ ಅಧಮ ಅಭಿಮಾನೀ॥ ೫॥

ಬಾಣವು ತಗಲುತ್ತಲೇ ವಾಲಿಯು ತಲ್ಲಣಿಸಿ ನೆಲಕ್ಕುರುಳಿದನು. ಆದರೆ ತನ್ನೆದುರಿಗೆ ನಿಂತಿದ್ದ ಪ್ರಭು ರಾಮಚಂದ್ರನನ್ನು ನೋಡಿ ಅವನು ಎದ್ದುಕುಳಿತನು. ಬಳಿಕ ನೀಲಮೇಘಶ್ಯಾಮನೂ ಜಟಾಜೂಟಧಾರಿಯೂ, ಅರುಣನಯನನೂ, ಧನುರ್ಬಾಣಗಳನ್ನು ಧರಿಸಿದವನೂ ಆದ ಭಗವಾನ್ ಶ್ರೀರಾಮನನ್ನು ತದೇಕದೃಷ್ಟಿಯಿಂದ ನೋಡುತ್ತಾ, ವಾಲಿಯು ತನ್ನ ಚಿತ್ತವನ್ನು ಪ್ರಭು ಚರಣಗಳಲ್ಲಿ ನೆಟ್ಟನು. ಪ್ರಭುವನ್ನು ಗುರುತಿಸಿ ಅವನು ತನ್ನ ಜನ್ಮ ಸಾರ್ಥಕವಾಯಿತೆಂದುಕೊಂಡನು. ಅವನ ಹೃದಯದಲ್ಲಿ ಪ್ರೀತಿತುಂಬಿತ್ತು. ಆದರೆ ಬಾಯಲ್ಲಿ ಕಠೋರ ಮಾತುಗಳನ್ನಾಡುತ್ತಿದ್ದಾನೆ. ಅವನು ರಾಮನತ್ತ ತಿರುಗಿ ಇಂತೆಂದನು – ''ಸ್ವಾಮಿ! ತಾವು ಧರ್ಮರಕ್ಷಣೆಗಾಗಿ ಅವತರಿಸಿರುವಿರಿ. ಆದರೆ ನನ್ನನ್ನು ಬೇಡನಂತೆ ಕದ್ದು ಮರದ ಮರೆಯಿಂದ ಹೊಡೆದಿರಿ. ನಾನು ನಿಮಗೆ ವೈರಿಯೇ! ಸುಗ್ರೀವಮಾತ್ರ ನಿನಗೆ ಪ್ರಿಯನೇ? ಸ್ವಾಮಿ! ಯಾವ ಅಪರಾಧ ಮಾಡಿದ್ದಕ್ಕೆ ನನಗೆ ಶಿಕ್ಷಿಸಿರುವಿ? ಆಗ ಶ್ರೀರಾಮನು ಹೇಳಿದನು – ''ಎಲೈ ಮೂರ್ಖ! ಕೇಳು. ತಮ್ಮನ ಹೆಂಡತಿ, ಅಕ್ಕತಂಗಿಯರು, ಸೊಸೆ ಹಾಗೂ ಮಗಳು ಇವರೆಲ್ಲರೂ ಸಮಾನರು. ಇವರನ್ನು ಕೆಟ್ಟದೃಷ್ಟಿಯಿಂದ ನೋಡುವವನು ಯಾರೇ ಆಗಿರಲಿ ಅವನನ್ನು ವಧಿಸುವುದರಲ್ಲಿ ಯಾವ ಪಾಪವೂ ಇಲ್ಲ. ಎಲೈ ಮೂಢಾ!

ನೀನು ಅತಿ ದುರಭಿಮಾನಿಯು. ನಿನ್ನ ಹೆಂಡತಿಯು ಹೇಳಿದ ಬುದ್ಧಿವಾದಕ್ಕೆ ಕಿವಿಗೊಡಲಿಲ್ಲ. ಸುಗ್ರೀವನು ನನ್ನ ಭುಜಬಲದ ಆಶ್ರಯ ಪಡೆದವನೆಂದು ತಿಳಿದರೂ ನೀನು ಅವನನ್ನು ಕೊಲ್ಲಲು ಬಯಸಿದೆ.'' (ಚೌ/೧-೫)

**ದೋ – ಸುನಹು ರಾಮ ಸ್ವಾಮೀ ಸನ ಚಲ ನ ಚಾತುರೀ ಮೋರಿ।**
**ಪ್ರಭು ಅಜಹೂँ ಮೈँ ಪಾಪೀ ಅಂತಕಾಲ ಗತಿ ತೋರಿ॥ ೯ ॥**

ವಾಲಿಯು ಹೇಳಿದನು – ''ಶ್ರೀರಾಮಚಂದ್ರಾ! ಕೇಳು. ನಿನ್ನಂತಹ ಸ್ವಾಮಿಯ ಮುಂದೆ ನನ್ನ ಆಟವೇನೂ ನಡೆಯದು. ಪ್ರಭೂ! ಅಂತ್ಯಕಾಲದಲ್ಲಿ ನಿನಗೆ ಶರಣುಬಂದಿರುವ ನಾನು ಇನ್ನೂ ಪಾಪಿಯೇ? ಹೇಳು. (ದೋ/೯)

**ಚೌ – ಸುನತ ರಾಮ ಅತಿ ಕೋಮಲ ಬಾನೀ। ಬಾಲಿ ಸೀಸ ಪರಸೆಉ ನಿಜ ಪಾನೀ॥**
**ಅಚಲ ಕರೌँ ತನು ರಾಖಹು ಪ್ರಾನಾ। ಬಾಲಿ ಕಹಾ ಸುನು ಕೃಪಾನಿಧಾನಾ॥ ೧ ॥**
**ಜನ್ಮ ಜನ್ಮ ಮುನಿ ಜತನು ಕರಾಹೀँ। ಅಂತ ರಾಮ ಕಹಿ ಆವತ ನಾಹೀँ॥**
**ಜಾಸು ನಾಮ ಬಲ ಸಂಕರ ಕಾಸೀ। ದೇತ ಸಬಹಿ ಸಮ ಗತಿ ಅಬಿನಾಸೀ॥ ೨ ॥**
**ಮಮ ಲೋಚನ ಗೋಚರ ಸೋಇ ಆವಾ। ಬಹುರಿ ಕಿ ಪ್ರಭು ಅಸ ಬನಿಹಿ ಬನಾವಾ॥ ೩ ॥**

ವಾಲಿಯು ಹೇಳಿದ ವಿನಮ್ರ ವಚನಗಳನ್ನು ಕೇಳಿ, ಶ್ರೀರಾಮನು ಆತನ ತಲೆಯನ್ನು ನೇವರಿಸಿ ಹೇಳಿದನು – 'ನಾನು ನಿನ್ನ ಶರೀರವನ್ನು ಅಚಲಗೊಳಿಸುತ್ತೇನೆ. ನೀನು ನಿನ್ನ ಪ್ರಾಣಗಳನ್ನು ಉಳಿಸಿಕೋ.' ಆಗ ವಾಲಿಯು ಹೇಳಿದ – 'ಓ ಕೃಪಾನಿಧೀ! ಮುನಿಗಳು ಜನ್ಮಜನ್ಮಾಂತರಗಳಿಂದ ಅನೇಕ ಸಾಧನೆಗಳನ್ನು ಮಾಡುತ್ತಿದ್ದರೂ, ಕೊನೆಗಾಲದಲ್ಲಿ ಅವರ ಬಾಯಲ್ಲಿ 'ರಾಮ' ಎಂಬ ನಾಮವು ಬಾರದೇ ಹೋಗುತ್ತದೆ. ರಾಮನಾಮದ ಪ್ರಭಾವದಿಂದ ಶಂಕರನು ಕಾಶೀಕ್ಷೇತ್ರದಲ್ಲಿ ಎಲ್ಲರಿಗೂ ಸಮಾನವಾಗಿ ಅವಿನಾಶಿಯಾದ ಮೋಕ್ಷವನ್ನು ಕರುಣಿಸುತ್ತಾನೆ. ಅಂತಹ ಶ್ರೀರಘುನಾಥನಾದ ನೀನು ಸ್ವತಃ ನನ್ನ ಕಣ್ಣೆದುರಿಗೆ ನಿಂತಿದ್ದಿಯೇ! ಪ್ರಭೂ! ಇಂತಹ ಸಂಯೋಗವು ಮರಳಿ ಸಿಗಬಹುದೇ? (ಚೌ/೧-೩)

**ಛಂ – ಸೋ ನಯನ ಗೋಚರ ಜಾಸು ಗುನ ನಿತ ನೇತಿ ಕಹಿ ಶ್ರುತಿ ಗಾವಹೀँ।**
**ಜಿತಿ ಪವನ ಮನ ಗೋ ನಿರಸ ಕರಿ ಮುನಿ ಧ್ಯಾನ ಕಬಹುँಕ ಪಾವಹೀँ॥**
**ಮೊಹಿ ಜಾನಿ ಅತಿ ಅಭಿಮಾನ ಬಸ ಪ್ರಭು ಕಹೆಉ ರಾಖು ಸರೀರಹೀ।**
**ಅಸ ಕವನ ಸಠ ಹಠಿ ಕಾಟಿ ಸುರತರು ಬಾರಿ ಕರಿಹಿ ಬಬೂರಹೀ॥ ೧ ॥**
**ಅಬ ನಾಥ ಕರಿ ಕರುನಾ ಬಿಲೋಕಹು ದೇಹು ಜೋ ಬರ ಮಾಗಊँ।**
**ಜೆಹಿँ ಜೋನಿ ಜನ್ಮೌँ ಕರ್ಮ ಬಸ ತಹँ ರಾಮ ಪದ ಅನುರಾಗಊँ॥**
**ಯಹ ತನಯ ಮಮ ಸಮ ಬಿನಯ ಬಲ ಕಲ್ಯಾನಪ್ರದ ಪ್ರಭು ಲೀಜಿಐ।**
**ಗಹಿ ಬಾँಹ ಸುರ ನರ ನಾಹ ಆಪನ ದಾಸ ಅಂಗದ ಕೀಜಿಐ॥ ೨ ॥**

ಶ್ರುತಿಗಳು 'ನೇತಿ-ನೇತಿ' ಎಂದು ಸದಾಕಾಲ ನಿನ್ನ ಗುಣಗಳನ್ನು ಕೀರ್ತಿಸುತ್ತವೆ. ಪ್ರಾಣಗಳನ್ನೂ, ಮನಸ್ಸನ್ನೂ, ವಶಪಡಿಸಿಕೊಂಡು, ಸರ್ವೇಂದ್ರಿಯಗಳನ್ನು ವಿಷಯಗಳಿಂದ ಮರಳಿಸಿ, ನಿರಂತರ ಧ್ಯಾನಮಗ್ನರಾದ ಮುನಿಗಳಿಗೂ ಯಾವಾಗಲೋ ಒಮ್ಮೆ ಮಿಂಚಿದಂತೆ ಕಾಣಸಿಗುವ ಪ್ರಭುವಾದ ನೀನು ನನ್ನ ಕಣ್ಣ ಇದಿರಿಗೆ ನಿಂತಿದ್ದೀಯೆ. ನಾನು ಅತ್ಯಂತ ಅಹಂಕಾರಿಯೆಂದು ತಿಳಿದರೂ, ಪ್ರಾಣಗಳನ್ನು ಉಳಿಸಿಕೋ ಎಂದಿರುವಿರಿ. ಆದರೆ ಕಲ್ಪವೃಕ್ಷ ಕಡಿದು ಗೊಬ್ಬುಳಿಯ ಗಿಡವನ್ನು ಉಳಿಸಿಕೊಳ್ಳುವ ಮೂರ್ಖನು ಯಾವನಿದ್ದಾನೆ? (ಅರ್ಥಾತ್ – ಪೂರ್ಣಕಾಮನಾಗಿಸುವ ನಿನ್ನನ್ನು ಬಿಟ್ಟು, ನಿನ್ನಲ್ಲಿ ನಶ್ವರ ಶರೀರದ ರಕ್ಷಣೆಗಾಗಿ ಬೇಡಲೇ?) ॥ ೧॥ ''ಹೇ ನಾಥಾ! ಈಗ ನನ್ನ ಮೇಲೆ ದಯೆದೋರಿ, ನಾನು ಬೇಡಿದ ವರವನ್ನು ಕರುಣಿಸಿರಿ. ನಾನು ಕರ್ಮವಶದಿಂದ ಯಾವುದೇ ಯೋನಿಯಲ್ಲಿ ಜನಿಸಿದರೂ, ನಿಮ್ಮ ಚರಣಗಳಲ್ಲಿ ಭಕ್ತಿಯಿರುವಂತೆ ಅನುಗ್ರಹಿಸು. ಓ ಕಲ್ಯಾಣಪ್ರದ ಸ್ವಾಮಿ! ಇವನು ನನ್ನ ಪುತ್ರ ಅಂಗದನು. ವಿನಯ, ಬಲಗಳಲ್ಲಿ ನನ್ನಂತೆಯೇ ಇದ್ದಾನೆ. ಅವನನ್ನು ನಿಮ್ಮ ಮಡಿಲಿಗೆ ಹಾಕಿದ್ದೇನೆ. ದೇವತೆಗಳಿಗೂ, ಮನುಷ್ಯರಿಗೂ ಒಡೆಯನಾದ ನೀನು ಕೈಹಿಡಿದು ಇವನನ್ನು ನಿಮ್ಮ ದಾಸನನ್ನಾಗಿಸಿಕೊಳ್ಳಿ.'' (ಛಂ/೧-೨)

**ದೋ – ರಾಮ ಚರನ ದೃಢ ಪ್ರೀತಿ ಕರಿ ಬಾಲಿ ಕೀನ್ಹ ತನು ತ್ಯಾಗ।**
**ಸುಮನ ಮಾಲ ಜಿಮಿ ಕಂಠ ತೇ ಗಿರತ ನ ಜಾನಇ ನಾಗ॥ ೧೦ ॥**

ಈ ವಿಧವಾಗಿ ಶ್ರೀರಾಮಚರಣಗಳಲ್ಲಿ ಅಚಲವಾದ ಪ್ರೀತಿಯನ್ನಿಟ್ಟ ವಾಲಿಯ ಪ್ರಾಣಗಳು ಆನೆಗೆ ತನ್ನ ಕೊರಳಮಾಲೆಯು ಕಳಚಿ ಬಿದ್ದಿರುವುದು ತಿಳಿಯದಂತೆ, ಅನಾಯಾಸವಾಗಿ ಅನಂತಾಕಾಶದಲ್ಲಿ ವಿಲೀನವಾಗಿ ಹೋದುವು. (ದೋ/೧೦)

**ಚೌ – ರಾಮ ಬಾಲಿ ನಿಜ ಧಾಮ ಪಠಾವಾ । ನಗರ ಲೋಗ ಸಬ ಬ್ಯಾಕುಲ ಧಾವಾ ॥**
**ನಾನಾ ಬಿಧಿ ಬಿಲಾಪ ಕರ ತಾರಾ । ಛೂಟೇ ಕೇಸ ನ ದೇಹ ಸँಭಾರಾ ॥ ೧ ॥**
**ತಾರಾ ಬಿಕಲ ದೇಖಿ ರಘುರಾಯಾ । ದೀನ್ಹ ಗ್ಯಾನ ಹರಿ ಲೀನ್ಹೀ ಮಾಯಾ ॥**
**ಛಿತಿ ಜಲ ಪಾವಕ ಗಗನ ಸಮೀರಾ । ಪಂಚ ರಚಿತ ಅತಿ ಅಧಮ ಸರೀರಾ ॥ ೨ ॥**
**ಪ್ರಗಟ ಸೊ ತನು ತವ ಆಗೇँ ಸೋವಾ । ಜೀವ ನಿತ್ಯ ಕೆಹಿ ಲಗಿ ತುಮ್ಹ ರೋವಾ ॥**
**ಉಪಜಾ ಗ್ಯಾನ ಚರನ ತಬ ಲಾಗೀ । ಲೀನ್ಹೆಸಿ ಪರಮ ಭಗತಿ ಬರ ಮಾಗೀ ॥ ೩ ॥**
**ಉಮಾ ದಾರು ಜೋಷಿತ ಕೀ ನಾಈं । ಸಬಹಿ ನಚಾವತ ರಾಮು ಗೊಸಾಈं ॥**
**ತಬ ಸುಗ್ರೀವಹಿ ಆಯಸು ದೀನ್ಹಾ । ಮೃತಕ ಕರ್ಮ ಬಿಧಿವತ ಸಬ ಕೀನ್ಹಾ ॥ ೪ ॥**
**ರಾಮ ಕಹಾ ಅನುಜಹಿ ಸಮುಝಾಈ । ರಾಜ ದೇಹು ಸುಗ್ರೀವಹಿ ಜಾಈ ॥**
**ರಘುಪತಿ ಚರನ ನಾಇ ಕರಿ ಮಾಥಾ । ಚಲೇ ಸಕಲ ಪ್ರೇರಿತ ರಘುನಾಥಾ ॥ ೫ ॥**

ಶ್ರೀರಾಮಚಂದ್ರನು ವಾಲಿಯನ್ನು ತನ್ನ ಪರಮಧಾಮಕ್ಕೆ ಕಳಿಸಿದನು. ಕಿಷ್ಕಿಂಧಾನಗರ ನಿವಾಸಿಗಳು ವ್ಯಾಕುಲಗೊಂಡು ಓಡಿದರು. ವಾಲಿಯ ಹೆಂಡತಿ ತಾರೆ ಅನೇಕ ವಿಧದಿಂದ ವಿಲಾಪಿಸಿದಳು. ಅವಳ ತಲೆಗೂದಲು ಕೆದರಿತ್ತು. ಅವಳಿಗೆ ಮೈಮೇಲೆ ಎಚ್ಚರವೇ ಇರಲಿಲ್ಲ. ಶೋಕ ವಿಹ್ವಲಳಾಗಿರುವ ತಾರೆಯನ್ನು ನೋಡಿ ಶ್ರೀರಘುನಾಥನು ಅವಳಿಗೆ ಜ್ಞಾನೋಪದೇಶ ನೀಡಿ ಅವಳ ಅಜ್ಞಾನವನ್ನು ಕಳೆದನು. ''ಈ ನಶ್ವರ ಶರೀರವು ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶ ಹೀಗೆ ಪಂಚಭೂತಗಳಿಂದ ನಿರ್ಮಿತವಾಗಿದೆ. ಆ ಶರೀರವಾದರೋ ನಿನ್ನ ಮುಂದೆಯೇ ಬಿದ್ದಿದೆ. ಆದರೆ ಜೀವನು ನಿತ್ಯವಾದುದು. ಹಾಗಿರುವಾಗ ನೀನು ಯಾರಿಗಾಗಿ ಅಳುತ್ತಿರುವೆ? ಈ ಮಾತುಗಳಿಂದ ತಾರೆಗೆ ಜ್ಞಾನೋದಯವಾಗುತ್ತಲೇ ಆಕೆಯು ಭಗವಂತನಾದ ಶ್ರೀರಾಮನ ಪಾದಗಳಿಗೆರಗಿ, ಪರಮಭಕ್ತಿಯ ವರವನ್ನು ಪಡೆದುಕೊಂಡಳು. (ಪರಶಿವನು ಹೇಳುತ್ತಾನೆ – ಉಮೆ! ಶ್ರೀರಾಮಚಂದ್ರಪ್ರಭುವು ಎಲ್ಲರನ್ನು ಸೂತ್ರದಗೊಂಬೆಗಳಂತೆ ಕುಣಿಸುತ್ತಿರುವನು. ಶ್ರೀರಾಮನ ಆಜ್ಞೆಯಂತೆ ಸುಗ್ರೀವನು ತನ್ನ ಅಣ್ಣನಾದ ವಾಲಿಯ ಅಂತ್ಯಕ್ರಿಯೆಗಳನ್ನು ವಿಧ್ಯುಕ್ತವಾಗಿ ನೆರವೇರಿಸಿದನು. ಅನಂತರ ಶ್ರೀರಾಮಚಂದ್ರನು ಲಕ್ಷ್ಮಣನಿಗೆ – ''ನೀನು ಹೋಗಿ ಸುಗ್ರೀವನಿಗೆ ಕಿಷ್ಕಿಂಧೆಯ ಪಟ್ಟವನ್ನು ಕಟ್ಟಿಬಾ'' ಎಂದು ಆದೇಶಿಸಿದನು. ಎಲ್ಲರೂ ಶ್ರೀರಾಮನ ಚರಣಕಮಲಗಳಿಗೆ ವಂದಿಸಿ ಅವನ ಅಪ್ಪಣೆಯಂತೆ ಕಿಷ್ಕಿಂಧೆಗೆ ತೆರಳಿದರು. (ಚೌ/೧-೫)

**ದೋ – ಲಛಿಮನ ತುರತ ಬೊಲಾಏ ಪುರಜನ ಬಿಪ್ರ ಸಮಾಜ ।**
**ರಾಜು ದೀನ್ಹ ಸುಗ್ರೀವ ಕಹँ ಅಂಗದ ಕಹँ ಜುಬರಾಜ ॥ ೧೧ ॥**

ಲಕ್ಷ್ಮಣನು ಕೂಡಲೇ ನಗರವಾಸಿಗಳನ್ನು, ಬ್ರಾಹ್ಮಣರನ್ನು ಕರೆಸಿ, ಅವರೆಲ್ಲರ ಎದುರಿನಲ್ಲಿ ಸುಗ್ರೀವನನ್ನು ರಾಜನಾಗಿಯೂ, ಅಂಗದನನ್ನು ಯುವರಾಜನಾಗಿಯೂ ನೇಮಿಸಿದನು. (ದೋ/೧೧)

**ಚೌ – ಉಮಾ ರಾಮ ಸಮ ಹಿತ ಜಗ ಮಾಹೀं । ಗುರು ಪಿತು ಮಾತು ಬಂಧು ಪ್ರಭು ನಾಹೀं ॥**
**ಸುರ ನರ ಮುನಿ ಸಬ ಕೈ ಯಹ ರೀತೀ । ಸ್ವಾರಥ ಲಾಗಿ ಕರಹಿं ಸಬ ಪ್ರೀತೀ ॥ ೧ ॥**
**ಬಾಲಿ ತ್ರಾಸ ಬ್ಯಾಕುಲ ದಿನ ರಾತೀ । ತನ ಬಹು ಬ್ರನ ಚಿಂತಾँ ಜರ ಛಾತೀ ॥**
**ಸೋಇ ಸುಗ್ರೀವ ಕೀನ್ಹ ಕಪಿರಾಊ । ಅತಿ ಕೃಪಾಲ ರಘುಬೀರ ಸುಭಾಊ ॥ ೨ ॥**
**ಜಾನತಹೂँ ಅಸ ಪ್ರಭು ಪರಿಹರಹೀं । ಕಾಹೆ ನ ಬಿಪತಿ ಜಾಲ ನರ ಪರಹೀं ॥**
**ಪುನಿ ಸುಗ್ರೀವಹಿ ಲೀನ್ಹ ಬೊಲಾಈ । ಬಹು ಪ್ರಕಾರ ನೃಪನೀತಿ ಸಿಖಾಈ ॥ ೩ ॥**
**ಕಹ ಪ್ರಭು ಸುನು ಸುಗ್ರೀವ ಹರೀಸಾ । ಪುರ ನ ಜಾಉँ ದಸ ಚಾರಿ ಬರೀಸಾ ॥**
**ಗತ ಗ್ರೀಷಮ ಬರಷಾ ರಿತು ಆಈ । ರಹಿಹಉँ ನಿಕಟ ಸೈಲ ಪರ ಛಾಈ ॥ ೪ ॥**
**ಅಂಗದ ಸಹಿತ ಕರಹು ತುಮ್ಹ ರಾಜೂ । ಸಂತತ ಹೃದಯँ ಧರೆಹು ಮಮ ಕಾಜೂ ॥**
**ಜಬ ಸುಗ್ರೀವ ಭವನ ಫಿರಿ ಆಏ । ರಾಮು ಪ್ರಬರಷನ ಗಿರಿ ಪರ ಛಾಏ ॥ ೫ ॥**

ಪರಮೇಶ್ವರನು ಹೇಳುತ್ತಿರುವನು – ಹೇ ಪಾರ್ವತೀ! ಪ್ರಪಂಚದಲ್ಲಿ ಶ್ರೀರಾಮನಂತಹ ಹಿತಕಾರಿಯಾದ ಗುರು, ತಂದೆ, ತಾಯಿ, ಸೋದರ, ಒಡೆಯ ಬೇರೆ ಯಾರೂ ಇಲ್ಲ. ದೇವತೆಗಳು, ಮುನಿಗಳು, ಮನುಷ್ಯರು ಸಾಧಾರಣವಾಗಿ ತಮ್ಮ ಸ್ವಾರ್ಥಕ್ಕಾಗಿಯೇ ಪ್ರೀತಿಸುತ್ತಾರೆ. ಇಷ್ಟರವರೆಗೆ ಸುಗ್ರೀವನು ಹಗಲಿರುಳು ವಾಲಿಯ ಭಯದಿಂದ ತಲ್ಲಣಿಸುತ್ತಿದ್ದನು. ವಾಲಿಯು ಹೊಡೆದ ಏಟುಗಳಿಂದ ಮೈಯೆಲ್ಲ ಗಾಯಗಳಾಗಿದ್ದವು. ಅವನ ಹೃದಯವು ಅನವರತ ಚಿಂತೆಯಿಂದ ಸುಡುತ್ತಿತ್ತು. ಅಂತಹ ಸುಗ್ರೀವನನ್ನು ಶ್ರೀರಾಮನು ಕಪಿಗಳ ರಾಜನನ್ನಾಗಿಸಿದನು. ನಿಜನಾಗಿ ರಘುವೀರನ ಸ್ವಭಾವವು ಅತ್ಯಂತ ಕೃಪಾಪೂರ್ಣವಾದುದು. ಈ ವಿಷಯವನ್ನು ತಿಳಿದರೂ ಇಂತಹ ಪ್ರಭುವನ್ನು ತೊರೆಯುವ ಜನರು ಆಪತ್ತುಗಳಲ್ಲಿ ಸಿಕ್ಕಿಬೀಳುವುದು ಆಶ್ಚರ್ಯವಲ್ಲ. ಬಳಿಕ ಶ್ರೀರಾಮನು ಸುಗ್ರೀವನನ್ನು ಕರೆಸಿ, ಅನೇಕ ಪ್ರಕಾರದಿಂದ ಅವನಿಗೆ ರಾಜನೀತಿಯನ್ನು ಉಪದೇಶಿಸಿದನು. ಅನಂತರ ಶ್ರೀರಾಮನು – 'ಎಲೈ ವಾನರಪತಿ ಸುಗ್ರೀವಾ! ನಾನು ಹದಿನಾಲ್ಕು ವರ್ಷಗಳವರೆಗೆ ಊರೊಳಗೆ ಬರುವ ಹಾಗಿಲ್ಲ. ಗ್ರೀಷ್ಮಋತು ಕಳೆದು ವರ್ಷಾಋತು ಬಂದಿದೆ. ಆದ್ದರಿಂದ ನಾನು ಇಲ್ಲೇ ಒಂದು ಪರ್ವತದ ಮೇಲೆ ವಾಸಿಸುವೆನು. ನೀನು ಅಂಗದನೊಡನೆ ರಾಜ್ಯಭಾರವನ್ನು ಮಾಡುತ್ತಿರು. ಆದರೆ ನನ್ನ ಕಾರ್ಯವನ್ನು ಮಾತ್ರ ಯಾವಾಗಲೂ ಜ್ಞಾಪಕದಲ್ಲಿಟ್ಟುಕೊಳ್ಳುವುದು'' ಎಂದು ಆದೇಶಿಸಿದನು. ಸುಗ್ರೀವನು ಮನೆಗೆ ಮರಳಿದ ನಂತರ ಶ್ರೀರಾಮನು 'ಪ್ರವರ್ಷಣ' ಪರ್ವತದ ಮೇಲೆ ಹೋಗಿ ತಂಗಿದನು. (ಚೌ/೧-೫)

**ದೋ – ಪ್ರಥಮಹಿಂ ದೇವನ್ಹ ಗಿರಿ ಗುಹಾ ರಾಖೇಉ ರುಚಿರ ಬನಾಇ ।**
**ರಾಮ ಕೃಪಾನಿಧಿ ಕಛು ದಿನ ಬಾಸ ಕರಹಿಂಗೇ ಆಇ ॥ ೧೨ ॥**

ದೇವತೆಗಳು ಮೊದಲೇ ಆ ಪರ್ವತದ ಒಂದು ಗುಹೆಯನ್ನು ವಾಸಕ್ಕೆ ಯೋಗ್ಯವನ್ನಾಗಿ ಅಣಿಗೊಳಿಸಿದ್ದರು. ಕರುಣಾನಿಧಿಯಾದ ಶ್ರೀರಾಮನು ಇಲ್ಲಿ ಕೆಲದಿನ ತಂಗುವನೆಂದು ಅವರು ಮೊದಲೇ ಯೋಚಿಸಿದ್ದರು. (ದೋ/೧೨)

## ವರ್ಷಾಋತು – ಶರದೃತು ವರ್ಣನೆ

**ಚೌ – ಸುಂದರ ಬನ ಕುಸುಮಿತ ಅತಿ ಸೋಭಾ । ಗುಂಜತ ಮಧುಪ ನಿಕರ ಮಧು ಲೋಭಾ ॥**
**ಕಂದ ಮೂಲ ಫಲ ಪತ್ರ ಸುಹಾಏ । ಭಏ ಬಹುತ ಜಬ ತೇ ಪ್ರಭು ಆಏ ॥ ೧ ॥**
**ದೇಖಿ ಮನೋಹರ ಸೈಲ ಅನೂಪಾ । ರಹೆ ತಹಂ ಅನುಜ ಸಹಿತ ಸುರಭೂಪಾ ॥**
**ಮಧುಕರ ಖಗ ಮೃಗ ತನು ಧರಿ ದೇವಾ । ಕರಹಿಂ ಸಿದ್ಧ ಮುನಿ ಪ್ರಭು ಕೈ ಸೇವಾ ॥ ೨ ॥**
**ಮಂಗಲರೂಪ ಭಯಉ ಬನ ತಬ ತೇ । ಕೀನ್ಹ ನಿವಾಸ ರಮಾಪತಿ ಜಬ ತೇ ॥**
**ಫಟಿಕ ಸಿಲಾ ಅತಿ ಸುಭ್ರ ಸುಹಾಈ । ಸುಖ ಆಸೀನ ತಹಾಂ ದ್ವೌ ಭಾಈ ॥ ೩ ॥**
**ಕಹತ ಅನುಜ ಸನ ಕಥಾ ಅನೇಕಾ । ಭಗತಿ ಬಿರತಿ ನೃಪನೀತಿ ಬಿಬೇಕಾ ॥**
**ಬರಷಾ ಕಾಲ ಮೇಘ ನಭ ಛಾಏ । ಗರಜತ ಲಾಗತ ಪರಮ ಸುಹಾಏ ॥ ೪ ॥**

ಕುಸುಮಿತವಾದ ಆ ವನವು ಸುಂದರವಾಗಿ ಕಂಗೊಳಿಸುತ್ತಿತ್ತು. ಮಧುಕರ ನಿಕರವು ಮಧುಲೋಭದಿಂದ ಗುಂಜಾರವ ಮಾಡುತ್ತಿತ್ತು. ಪ್ರಭುವು ಬಂದಾಗಿನಿಂದ ಆ ವನದಲ್ಲಿ ಕಂದ, ಮೂಲ, ಫಲ, ಪತ್ರೆಗಳು ಯಥೇಚ್ಛವಾಗಿ ಬೆಳೆದವು. ಮನೋಹರವೂ, ಅನುಪಮವೂ ಆದ ಆ ಶೈಲವನ್ನು ಕಂಡು ದೇವದೇವನಾದ ಶ್ರೀರಾಮನು ತಮ್ಮನಾದ ಲಕ್ಷ್ಮಣನೊಂದಿಗೆ ಅಲ್ಲೇ ಇರತೊಡಗಿದನು. ದೇವತೆಗಳು, ಸಿದ್ಧರು, ಮುನಿಗಳು, ಅಲ್ಲಿ ಮಧುಕರ, ಖಗ, ಮೃಗಗಳಾಗಿ ಪ್ರಭುವಿನ ಸೇವೆ ಮಾಡತೊಡಗಿದರು. ರಮಾಪತಿಯಾದ ಶ್ರೀರಾಮನ ಪಾದಸ್ಪರ್ಶದಿಂದ ಆ ಸ್ಥಳವು ತುಂಬಾ ಪುನೀತವಾಗಿ ಪವಿತ್ರವಾಯಿತು. ಅತ್ಯಂತ ಕಾಂತಿಯುಕ್ತವಾದ ಒಂದು ಸುಂದರ ಸ್ಫಟಿಕಶಿಲೆಯ ಮೇಲೆ ಅಣ್ಣ ತಮ್ಮಂದಿರಿಬ್ಬರೂ ವಿರಾಜಿಸುತ್ತಿದ್ದರು. ಶ್ರೀರಾಮಚಂದ್ರನು ಲಕ್ಷ್ಮಣನಲ್ಲಿ ಭಕ್ತಿ, ವಿರಕ್ತಿ, ರಾಜನೀತಿ ಹಾಗೂ ಜ್ಞಾನಕ್ಕೆ ಸಂಬಂಧಿಸಿದ ಅನೇಕ ಕಥೆಗಳನ್ನು ಹೇಳುತ್ತಿದ್ದನು. ವರ್ಷಾಋತುವಿನಲ್ಲಿ ಆಕಾಶದಲ್ಲಿ ಕವಿದಿರುವ ಮೋಡಗಳು ತುಂಬಾ ಚೆಲುವಾಗಿ ಕಂಗೊಳಿಸುತ್ತಿದ್ದವು. (ಚೌ/೧-೪)

**ದೋ – ಲಛಿಮನ ದೇಖು ಮೋರ ಗನ ನಾಚತ ಬಾರಿದ ಪೇಖಿ ।**
**ಗೃಹೀ ಬಿರತಿ ರತ ಹರಷ ಜಸ ಬಿಷ್ನು ಭಗತ ಕಹುಂ ದೇಖಿ ॥ ೧೩ ॥**

ಶ್ರೀರಾಮನೆಂದ – ಲಕ್ಷ್ಮಣಾ! ನೋಡಿದೆಯಾ, ವೈರಾಗ್ಯದಲ್ಲಿ ಅನುರಕ್ತನಾದ ಗೃಹಸ್ಥನು ವಿಷ್ಣುಭಕ್ತನನ್ನು ದರ್ಶಿಸಿ ಹರ್ಷಿಸುವಂತೆ, ಮೋಡಗಳನ್ನು ಕಂಡು ನವಿಲುಗಳ ಹಿಂಡು ಆನಂದಾತಿರೇಕದಿಂದ ಜಾಗರವಾಡುತ್ತಿವೆ. (ದೋ/೧೩)

**ಚೌ – ಘನ ಘಮಂಡ ನಭ ಗರಜತ ಘೋರಾ। ಪ್ರಿಯಾ ಹೀನ ಡರಪತ ಮನ ಮೋರಾ॥**
**ದಾಮಿನಿ ದಮಕ ರಹ ನ ಘನ ಮಾಹೀಂ। ಖಲ ಕೈ ಪ್ರೀತಿ ಜಥಾ ಥಿರ ನಾಹೀಂ॥ ೧ ॥**
**ಬರಷಹಿಂ ಜಲದ ಭೂಮಿ ನಿಅರಾಏಂ। ಜಥಾ ನವಹಿಂ ಬುಧ ಬಿದ್ಯಾ ಪಾಏಂ॥**
**ಬೂಂದ ಅಘಾತ ಸಹಹಿಂ ಗಿರಿ ಕೈಸೇಂ। ಖಲ ಕೇ ಬಚನ ಸಂತ ಸಹ ಜೈಸೇಂ॥ ೨ ॥**
**ಛುದ್ರ ನದೀಂ ಭರಿ ಚಲೀಂ ತೋರಾಈ। ಜಸ ಥೋರೆಹುಂ ಧನ ಖಲ ಇತರಾಈ॥**
**ಭೂಮಿ ಪರತ ಭಾ ಢಾಬರ ಪಾನೀ। ಜನು ಜೀವಹಿ ಮಾಯಾ ಲಪಟಾನೀ॥ ೩ ॥**
**ಸಮಿಟಿ ಸಮಿಟಿ ಜಲ ಭರಹಿಂ ತಲಾವಾ। ಜಿಮಿ ಸದಗುನ ಸಜ್ಜನ ಪಹಿಂ ಆವಾ॥**
**ಸರಿತಾ ಜಲ ಜಲನಿಧಿ ಮಹುಂ ಜಾಈ। ಹೋಇ ಅಚಲ ಜಿಮಿ ಜಿವ ಹರಿ ಪಾಈ॥ ೪ ॥**

ಆಕಾಶದಲ್ಲಿ ಮೋಡಗಳು ಗಂಭೀರವಾಗಿ ಗರ್ಜಿಸುತ್ತಿವೆ. ನನಗೆ ಪ್ರಿಯಳಾದ ಸೀತೆಯು ಬಳಿಯಲಿಲ್ಲದೆ ಮನಸ್ಸು ತಲ್ಲಣಿಸುತ್ತಿದೆ. ದುಷ್ಟರ ಪ್ರೀತಿಯ ಅಸ್ಥಿರವಾಗುವಂತೆ, ವಿದ್ಯುಲ್ಲತೆಯು ಕ್ಷಣಕಾಲ ಮಿಂಚಿ ಮೋಡಗಳಲ್ಲಿ ಮರೆಯಾಗುತ್ತಿದೆ. ವಿದ್ಯೆಯನ್ನು ಪಡೆದ ಸಜ್ಜನರು ನಮ್ರವಾಗುವಂತೆ ಮೋಡಗಳು ನೆಲಕ್ಕೆ ಬಾಗಿ ಮಳೆಗರೆಯುತ್ತಿವೆ. ದುಷ್ಟರ ನಿಂದೆಯನ್ನು ಸಂತರು ಸಹಿಸುವಂತೆ ಈ ಪರ್ವತಗಳು ಮಳೆಯ ಹೊಡೆತವನ್ನು ಸಹಿಸುತ್ತಿವೆ. ಕೊಂಚ ಹಣಸಿಕ್ಕಿದಾಕ್ಷಣ ದುಷ್ಟರಿಗೆ ತಲೆತಿರುಗುವಂತೆ, ಸಣ್ಣ ನದಿಗಳು ತುಂಬಿ ದಡವನ್ನು ಕೆಡಹುತ್ತಾ ಹರಿಯುತ್ತಿವೆ. ಶುದ್ಧ ಜೀವಿಯು ಮಾಯೆಯಿಂದ ಲಿಪ್ತವಾಗಿ ಮಲಿನವಾಗುವಂತೆ, ಶುದ್ಧವಾದ ನೀರು ನೆಲಕ್ಕೆ ಬೀಳುತ್ತಲೇ ರಾಡಿಯಾಗಿದೆ. ಸದ್ಗುಣಗಳು ಒಂದೊಂದಾಗಿ ಸಜ್ಜನರ ಬಳಿ ಬಂದು ಸೇರುವಂತೆ, ನೀರು ಒಟ್ಟುಗೂಡಿ ಕೆರೆಗಳನ್ನು ತುಂಬುತ್ತಿವೆ. ಜೀವಿಯು ಶ್ರೀಹರಿಯಲ್ಲಿ ಒಂದಾಗಿ, ಜನನ ಮರಣಗಳಿಂದ ಮುಕ್ತವಾಗಿ ಲೀನವಾಗುವಂತೆ, ನದಿಯ ನೀರು ಸಮುದ್ರವನ್ನು ಸೇರಿ ತದಾಕಾರವಾಗಿ ಲೀನವಾಗುತ್ತಿದೆ. (ಚೌ/೧-೪)

**ದೋ – ಹರಿತ ಭೂಮಿ ತೃನ ಸಂಕುಲ ಸಮುಝಿ ಪರಹಿಂ ನಹಿಂ ಪಂಥ।**
**ಜಿಮಿ ಪಾಖಂಡ ಬಾದ ತೇಂ ಗುಪ್ತ ಹೋಹಿಂ ಸದಗ್ರಂಥ॥ ೧೪ ॥**

ಭೂಮಿಯು ಹಸಿರು ಹುಲ್ಲಿನಿಂದ ಆವೃತವಾಗಿದೆ. ಪಾಖಂಡ ಮತಗಳ ಪ್ರಚಾರದಿಂದ ಸದ್ಗ್ರಂಥಗಳು ಲುಪ್ತವಾಗುವಂತೆ, ಹುಲ್ಲಿನಿಂದಾಗಿ ದಾರಿಯು ಮುಚ್ಚಿಹೋಗಿದೆ. (ದೋ/೧೪)

**ಚೌ – ದಾದುರ ಧುನಿ ಚಹು ದಿಸಾ ಸುಹಾಈ। ಬೇದ ಪಢಹಿಂ ಜನು ಬಟು ಸಮುದಾಈ॥**
**ನವ ಪಲ್ಲವ ಭಏ ಬಿಟಪ ಅನೇಕಾ। ಸಾಧಕ ಮನ ಜಸ ಮಿಲೇಂ ಬಿಬೇಕಾ॥ ೧ ॥**
**ಅರ್ಕ ಜವಾಸ ಪಾತ ಬಿನು ಭಯಊ। ಜಸ ಸುರಾಜ ಖಲ ಉದ್ಯಮ ಗಯಊ॥**
**ಖೋಜತ ಕತಹುಂ ಮಿಲಇ ನಹಿಂ ಧೂರೀ। ಕರಇ ಕ್ರೋಧ ಜಿಮಿ ಧರಮಹಿ ದೂರೀ॥ ೨ ॥**
**ಸಸಿ ಸಂಪನ್ನ ಸೋಹ ಮಹಿ ಕೈಸೀ। ಉಪಕಾರೀ ಕೈ ಸಂಪತಿ ಜೈಸೀ॥**
**ನಿಸಿ ತಮ ಘನ ಖದ್ಯೋತ ಬಿರಾಜಾ। ಜನು ದಂಭಿನ್ಹ ಕರ ಮಿಲಾ ಸಮಾಜಾ॥ ೩ ॥**
**ಮಹಾವೃಷ್ಟಿ ಚಲಿ ಫೂಟಿ ಕಿಆರೀಂ। ಜಿಮಿ ಸುತಂತ್ರ ಭಏಂ ಬಿಗರಹಿಂ ನಾರೀಂ॥**
**ಕೃಷೀ ನಿರಾವಹಿಂ ಚತುರ ಕಿಸಾನಾ। ಜಿಮಿ ಬುಧ ತಜಹಿಂ ಮೋಹ ಮದ ಮಾನಾ॥ ೪ ॥**
**ದೇಖಿಅತ ಚಕ್ರಬಾಕ ಖಗ ನಾಹೀಂ। ಕಲಿಹಿ ಪಾಇ ಜಿಮಿ ಧರ್ಮ ಪರಾಹೀಂ॥**
**ಊಷರ ಬರಷಇ ತೃನ ನಹಿಂ ಜಾಮಾ। ಜಿಮಿ ಹರಿಜನ ಹಿಯಂ ಉಪಜ ನ ಕಾಮಾ॥ ೫ ॥**
**ಬಿಬಿಧ ಜಂತು ಸಂಕುಲ ಮಹಿ ಭ್ರಾಜಾ। ಪ್ರಜಾ ಬಾಢ ಜಿಮಿ ಪಾಇ ಸುರಾಜಾ॥**
**ಜಹಂ ತಹಂ ರಹೇ ಪಥಿಕ ಥಕಿ ನಾನಾ। ಜಿಮಿ ಇಂದ್ರಿಯ ಗನ ಉಪಜೇಂ ಗ್ಯಾನಾ॥ ೬ ॥**

ವಟುಸಮುದಾಯವು ವೇದಘೋಷ ಮಾಡುತ್ತಿರುವರೋ ಎಂಬಂತೆ ಎಲ್ಲಕಡೆಗಳಲ್ಲಿ ಕಪ್ಪೆಗಳು ವಟಗುಟ್ಟುತ್ತಿವೆ. ಅನೇಕಾನೇಕ ಗಿಡಮರಗಳಲ್ಲಿ ಹೊಸಚಿಗುರು ಬಂದು ಸಾಧಕರ ಮನಸ್ಸು ವಿವೇಕ ಪ್ರಾಪ್ತವಾದ ಬಳಿಕ ಶೋಭಿಸುವಂತೆ ಎಷ್ಟೊಂದು ಸೊಂಪಾಗಿ ನಳನಳಿಸುತ್ತಿದೆ. ಶ್ರೇಷ್ಠರಾಜ್ಯದಲ್ಲಿ ದುಷ್ಟರಿಗಾಗುವ ಗತಿಯಂತೆ, (ದುಷ್ಟರ ಕುತಂತ್ರಗಳೆಲ್ಲ ವಿಫಲವಾಗುವಂತೆ) ಎಕ್ಕೆ ಹಾಗೂ ಜವಾಸ ಎಂಬ ಗಿಡಗಳ ಎಲೆಗಳೆಲ್ಲ ಉದುರಿ ಬೋಳಾಗಿ ಹೋಗಿವೆ. ಕ್ರೋಧದಿಂದಾಗಿ ಧರ್ಮವು ಅಡಗಿಹೋಗಿರುವಂತೆ, ಮಳೆಯಿಂದಾಗಿ ಧೂಳು ಹುಡುಕಿದರೂ ಸಿಗದಂತಾಗಿದೆ. ಪರೋಪಕಾರಿಯಾದ ಪುರುಷನ ಸಂಪತ್ತಿನಂತೆ ಪೃಥ್ವಿಯು

ಸಸ್ಯಶ್ಯಾಮಲೆಯಾಗಿ ಶೋಭಿಸುತ್ತಿದೆ. ಡಾಂಭಿಕರ ಗುಂಪು ಒಂದೆಡೆ ಸೇರಿರುವಂತೆ, ಇರುಳಿನ ಕಗ್ಗತ್ತಲೆಯಲ್ಲಿ ಮಿಣುಕುಹುಳಗಳು ಕಂಗೊಳಿಸುತ್ತಿವೆ. ಉಚ್ಛೃಂಖಲ ಪ್ರವೃತ್ತಿಯ ಸ್ತ್ರೀಯರು ಕೆಟ್ಟುಹೋಗುವಂತೆ, ಭಾರೀ ಮಳೆಯಿಂದಾಗಿ ಹೊಲಗಳ ತೆವರು (ಮಡಿ) ಹಾಳಾಗಿಹೋದವು. ವಿದ್ವಾಂಸರು ಮದ, ಮೋಹ, ದುರಭಿಮಾನಗಳನ್ನು ಸಮೂಲವಾಗಿ ಕಿತ್ತೊಗೆಯುವಂತೆ, ಬುದ್ಧಿವಂತರಾದ ರೈತರು ಹೊಲಗದ್ದೆಗಳಲ್ಲಿ ಬೆಳೆದ ಕಳೆಯನ್ನು ಕೀಳುತ್ತಿದ್ದಾರೆ. ಕಲಿಯುಗವು ಕಾಲಿಟ್ಟಕೂಡಲೇ ಧರ್ಮವು ಕಾಲುಕೀಳುವಂತೆ, ವರ್ಷಕಾಲವು ಪ್ರಾರಂಭವಾಗುತ್ತಲೇ ಚಕ್ರವಾಕಗಳು ಕಣ್ಮರೆಯಾಗಿವೆ. ಹರಿಭಕ್ತನ ಹೃದಯದಲ್ಲಿ ಕಾಮ, ಕ್ರೋಧಗಳು ಉದಿಸದಂತೆ, ಬಂಜರುನೆಲದಲ್ಲಿ ಮಳೆಯಾದರೂ ಹುಲ್ಲುಕೂಡ ಬೆಳೆಯುತ್ತಿಲ್ಲ. ಉತ್ತಮ ಪ್ರಭುತ್ವವನ್ನು ಪಡೆದ ಪ್ರಜೆಗಳು ಎಲ್ಲ ವಿಧದಿಂದ ಸಮೃದ್ಧಿಯನ್ನು ಹೊಂದಿದಂತೆ, ನಾನಾವಿಧವಾದ ಜಂತು ಸಂಕುಲಗಳಿಂದ ತುಂಬಿ ಪೃಥ್ವಿಯು ಶೋಭಿಸುತ್ತಿದೆ. ಜ್ಞಾನ ಪ್ರಾಪ್ತವಾದಾಗ ಇಂದ್ರಿಯಗಳು ತಮ್ಮ ಚಾಂಚಲ್ಯವನ್ನು ತೊರೆದು ಶಾಂತವಾಗುವಂತೆ, ವರ್ಷಋತು ಪ್ರಾರಂಭವಾಗುತ್ತಲೇ ಯಾತ್ರಿಕರು ತಮ್ಮ ಪ್ರಯಾಣವನ್ನು ನಿಲ್ಲಿಸಿ ಅಲ್ಲಲ್ಲೇ ತಂಗಿದ್ದಾರೆ. (ಮಳೆಗಾಲದಲ್ಲಿ ಯತಿಗಳು ಸಂಚಾರವನ್ನು ತೊರೆದು ಒಂದೇ ಕಡೆ ಚಾತುರ್ಮಾಸ್ಯವ್ರತವನ್ನು ಕೈಗೊಳ್ಳುವಳು.) (ಚೌ/೧-೬)

**ದೋ – ಕಬಹುँ ಪ್ರಬಲ ಬಹ ಮಾರುತ ಜಹँ ತಹँ ಮೇಘ ಬಿಲಾಹಿँ ।**
**ಜಿಮಿ ಕಪೂತ ಕೇ ಉಪಜೇँ ಕುಲ ಸದ್ಧರ್ಮ ನಸಾಹಿँ ॥ ೧೫ (ಕ)॥**
**ಕಬಹುँ ದಿವಸ ಮಹँ ನಿಬಿಡ ತಮ ಕಬಹುँಕ ಪ್ರಗಟ ಪತಂಗ ।**
**ಬಿನಸಇ ಉಪಜಇ ಗ್ಯಾನ ಜಿಮಿ ಪಾಇ ಕುಸಂಗ ಸುಸಂಗ ॥ ೧೫ (ಖ)॥**

ಕುಪುತ್ರನು ಹುಟ್ಟಿದಾಗ ವಂಶದ ಉತ್ತಮ ಧರ್ಮಗಳು ನಷ್ಟವಾಗುವಂತೆ, ಒಮ್ಮೊಮ್ಮೆ ಗಾಳಿಯು ಜೋರಾಗಿ ಬೀಸಿದಾಗ ಅದರಿಂದ ಮೋಡಗಳು ಚೆಲ್ಲಾಪಿಲ್ಲಿಯಾಗಿ ಕಣ್ಮರೆಯಾಗುತ್ತವೆ. ದುರ್ಜನಸಾಂಗತ್ಯದಿಂದ ಜ್ಞಾನವು ಅಡಗುವಂತೆ, ಸತ್ಸಂಗದಿಂದ ಮರಳಿ ಆ ಜ್ಞಾನವು ಉದಿಸಿದಂತೆ, ಕೆಲವೊಮ್ಮೆ ಮೋಡಗಳಿಂದಾಗಿ ಹಗಲಿನಲ್ಲೇ ಕತ್ತಲೆ ಕವಿಯುತ್ತದೆ. ಕೆಲವೊಮ್ಮೆ ಮೋಡಗಳು ಚದುರಿ ಸೂರ್ಯನು ಮೈದೋರುವನು. (ದೋ/೧೫ ಕ, ಖ)

**ಚೌ – ಬರಷಾ ಬಿಗತ ಸರದ ರಿತು ಆಈ । ಲಛಿಮನ ದೇಖಹು ಪರಮ ಸುಹಾಈ ॥**
**ಫೂಲೇँ ಕಾಸ ಸಕಲ ಮಹಿ ಛಾಈ । ಜನು ಬರಷಾँ ಕೃತ ಪ್ರಗಟ ಬುಢಾಈ ॥ ೧ ॥**
**ಉದಿತ ಅಗಸ್ತಿ ಪಂಥ ಜಲ ಸೋಷಾ । ಜಿಮಿ ಲೋಭಹಿ ಸೋಷಇ ಸಂತೋಷಾ ॥**
**ಸರಿತಾ ಸರ ನಿರ್ಮಲ ಜಲ ಸೋಹಾ । ಸಂತ ಹೃದಯ ಜಸ ಗತ ಮದ ಮೋಹಾ ॥ ೨ ॥**
**ರಸ ರಸ ಸೂಖ ಸರಿತ ಸರ ಪಾನೀ । ಮಮತಾ ತ್ಯಾಗ ಕರಹಿँ ಜಿಮಿ ಗ್ಯಾನೀ ॥**
**ಜಾನಿ ಸರದ ರಿತು ಖಂಜನ ಆಏ । ಪಾಇ ಸಮಯ ಜಿಮಿ ಸುಕೃತ ಸುಹಾಏ ॥ ೩ ॥**
**ಪಂಕ ನ ರೇನು ಸೋಹ ಅಸಿ ಧರನೀ । ನೀತಿ ನಿಪುನ ನೃಪ ಕೈ ಜಸಿ ಕರನೀ ॥**
**ಜಲ ಸಂಕೋಚ ಬಿಕಲ ಭಇँ ಮೀನಾ । ಅಬುಧ ಕುಟುಂಬೀ ಜಿಮಿ ಧನಹೀನಾ ॥ ೪ ॥**
**ಬಿನು ಘನ ನಿರ್ಮಲ ಸೋಹ ಅಕಾಸಾ । ಹರಿಜನ ಇವ ಪರಿಹರಿ ಸಬ ಆಸಾ ॥**
**ಕಹुँ ಕಹुँ ಬೃಷ್ಟಿ ಸಾರದೀ ಥೋರೀ । ಕೋಉ ಏಕ ಪಾವ ಭಗತಿ ಜಿಮಿ ಮೋರೀ ॥ ೫ ॥**

ಲಕ್ಷ್ಮಣಾ ! ನೋಡಿದೆಯಾ, ಮಳೆಗಾಲ ಕಳೆದುಹೋಯಿತು. ಪರಮ ಸುಂದರವಾದ ಶರದೃತುವು ಬಂದಿತು. ವರ್ಷಋತುವು ತನ್ನ ವಾರ್ಧಕ್ಯವನ್ನು ತೋರ್ಪಡಿಸಿಕೊಂಡಿತೋ ಎಂಬಂತೆ ಕಾಶವೆಂಬ ಹುಲ್ಲು ಬಿಳಿಯಹೂವನ್ನು ಬಿಟ್ಟು ನೆಲವನ್ನು ಮುಚ್ಚಿಬಿಟ್ಟಿದೆ. ಸಂತೋಷವು ಲೋಭವನ್ನು ಒಣಗಿಸುವಂತೆ, ಅಗಸ್ತ್ಯವೆಂಬ ನಕ್ಷತ್ರವು ಉದಯಿಸಿ, ಹಾದಿಯ ನೀರನ್ನು ಹೀರಿ ಬಿಟ್ಟಿದೆ. ಅರಿಷಡ್ವರ್ಗಗಳನ್ನು ಜಯಿಸಿದ ಸಜ್ಜನರ ಹೃದಯದಂತೆ, ಹೊಳೆ, ಹಳ್ಳ, ಕೆರೆ, ಕಟ್ಟೆಗಳಲ್ಲಿ ನಿರ್ಮಲವಾದ ನೀರು ತುಂಬಿ ತುಳುಕುತ್ತಿದೆ. ಜ್ಞಾನಿಗಳಾದವರು ಕ್ರಮಕ್ರಮೇಣ ಮಮತೆಯನ್ನು ತ್ಯಜಿಸುವಂತೆ ಕೆರೆ, ನದಿಗಳ ನೀರು ನಿಧಾನವಾಗಿ ಒಣಗುತ್ತಿದೆ. ಕಾಲ ಸನ್ನಿಹಿತವಾದಾಗ ಸುಕೃತ (ಪುಣ್ಯ)ಗಳು ಪ್ರಕಟವಾಗುವಂತೆ, ಶರದೃತುವು ಬಂದಾಗ ಖಂಜನ ಪಕ್ಷಿಗಳು ಬಂದು ಸೇರುತ್ತವೆ. ಭೂಮಿಯಲ್ಲಿ ಎಲ್ಲಿಯೂ ಧೂಳಿಲ್ಲ, ಕೆಸರಿಲ್ಲ. ಇದರಿಂದ ಭೂಮಿಯು ನಿರ್ಮಲವಾಗಿ ನೀತಿನಿಪುಣ ರಾಜನ ಕೈವಾಡವೋ ಎಂಬಂತೆ ಕಂಗೊಳಿಸುತ್ತಿದೆ. ಮೂರ್ಖನಾದ ಗೃಹಸ್ಥನು ನಿರ್ಧನನಾದಾಗ ವ್ಯಾಕುಲಗೊಳ್ಳುವಂತೆ, ಕೆರೆಗಳಲ್ಲಿ ನೀರು ಇಂಗಿಹೋಗಿ ಕಡಿಮೆಯಾದಾಗ ಅದರಲ್ಲಿರುವ ಮೀನುಗಳು ವ್ಯಾಕುಲಗೊಳ್ಳುತ್ತಿವೆ. ಭಗವದ್ಭಕ್ತನು ಎಲ್ಲ ಆಶೆಗಳನ್ನು ತೊರೆದು

ಶೋಭಿಸುತ್ತಿರುವಂತೆ, ಮೋಡಗಳಿಲ್ಲದ ನಿರ್ಮಲ ಆಕಾಶವು ಶೋಭಿಸುತ್ತಿದೆ. ತುಂಬಾ ವಿರಳವಾಗಿ ಜನರು ನನ್ನ ಭಕ್ತಿಯನ್ನು ಪಡೆಯುವಂತೆ, ಎಲ್ಲೋ ಕೆಲವು ಕಡೆ ಶರದೃತುವಿನಲ್ಲಿ ಸ್ವಲ್ಪ-ಸ್ವಲ್ಪ ಮಳೆಯಾಗುತ್ತದೆ. (ಚೌ/೧-೫)

**ದೋ – ಚಲೇ ಹರಷಿ ತಜಿ ನಗರ ನೃಪ ತಾಪಸ ಬನಿಕ ಭಿಖಾರಿ।**
**ಜಿಮಿ ಹರಿ ಭಗತಿ ಪಾಇ ಶ್ರಮ ತಜಹಿಂ ಆಶ್ರಮೀ ಚಾರಿ॥ ೧೬ ॥**

ಶ್ರೀಹರಿಭಕ್ತಿಯನ್ನು ಪಡೆದ ನಾಲ್ಕೂ ಆಶ್ರಮಗಳವರು ನಾನಾ ಸಾಧನಾರೂಪೀ ಶ್ರಮಗಳನ್ನು ತೊರೆಯುವಂತೆ, ಶರದೃತು ಬಂದುದನ್ನು ಕಂಡು ರಾಜರು ಜೈತ್ರಯಾತ್ರೆಗೆ, ತಪಸ್ವಿಗಳು ತಪಶ್ಚರ್ಯೆಗೆ ವ್ಯಾಪಾರಿಗಳು ವ್ಯಾಪಾರಕ್ಕಾಗಿ, ವಿದ್ವಾಂಸರು ಸಂಪಾದನೆಗಾಗಿ, ಹರ್ಷದಿಂದ ಊರುಬಿಟ್ಟು ಹೊರಟರು. (ದೋ/೧೬)

**ಚೌ – ಸುಖೀ ಮೀನ ಜೇ ನೀರ ಅಗಾಧಾ। ಜಿಮಿ ಹರಿ ಸರನ ನ ಏಕಉ ಬಾಧಾ॥**
**ಫೂಲೇಂ ಕಮಲ ಸೋಹ ಸರ ಕೈಸಾ। ನಿರ್ಗುನ ಬ್ರಹ್ಮ ಸಗುನ ಭಏಂ ಜೈಸಾ ॥ ೧ ॥**
**ಗುಂಜತ ಮಧುಕರ ಮುಖರ ಅನೂಪಾ। ಸುಂದರ ಖಗ ರವ ನಾನಾ ರೂಪಾ ॥**
**ಚಕ್ರಬಾಕ ಮನ ದುಖ ನಿಸಿ ಪೇಖೀ। ಜಿಮಿ ದುರ್ಜನ ಪರ ಸಂಪತಿ ದೇಖೀ॥ ೨ ॥**
**ಚಾತಕ ರಟತ ತೃಷಾ ಅತಿ ಓಹೀ। ಜಿಮಿ ಸುಖ ಲಹಇ ನ ಸಂಕರದ್ರೋಹೀ॥**
**ಸರದಾತಪ ನಿಸಿ ಸಸಿ ಅಪಹರಈ। ಸಂತ ದರಸ ಜಿಮಿ ಪಾತಕ ಟರಈ॥ ೩ ॥**
**ದೇಖಿ ಇಂದು ಚಕೋರ ಸಮುದಾಈ। ಚಿತವಹಿಂ ಜಿಮಿ ಹರಿಜನ ಹರಿ ಪಾಈ॥**
**ಮಸಕ ದಂಸ ಬೀತೇ ಹಿಮ ತ್ರಾಸಾ। ಜಿಮಿ ದ್ವಿಜ ದ್ರೋಹ ಕಿಏಂ ಕುಲ ನಾಸಾ ॥ ೪ ॥**

ಶ್ರೀಹರಿಗೆ ಶರಣಾದವರು ಯಾವುದೇ ಬಾಧೆಗಳಿಲ್ಲದೆ ಸುಖಶಾಂತಿಯಿಂದಿರುವಂತೆ, ಆಳವಾದ ನೀರಿನಲ್ಲಿ ಮೀನುಗಳು ಹಾಯಾಗಿ ಜೀವಿಸುತ್ತಿವೆ. ನಿರ್ಗುಣಬ್ರಹ್ಮನು ಸಗುಣನಾಗಿ ದರ್ಶನವೀಯುವಂತೆ ಕಮಲಗಳು ಅರಳಿರುವುದರಿಂದ ಸರೋವರಗಳು ಶೋಭಿಸುತ್ತಿವೆ. ತುಂಬಿಗಳು ಅನುಪಮವಾಗಿ ಉಲಿಯುತ್ತಿವೆ. ಪಕ್ಷಿಗಳು ನಾನಾಪ್ರಕಾರದಿಂದ ಕೂಜನ ಮಾಡುತ್ತಿವೆ. ಹೆರವರ ಐಸಿರಿಯನ್ನು ಕಂಡು ದುಷ್ಟನಿಗೆ ದುಃಖವಾಗುವಂತೆ, ರಾತ್ರಿಯನ್ನು ಕಂಡು ಚಕ್ರವಾಕಗಳು ದುಃಖಿತವಾಗುತ್ತಿವೆ. ಶಿವದ್ರೋಹಿಯು ತೃಪ್ತಿಯನ್ನೂ, ಸುಖವನ್ನೂ ಪಡೆಯದಂತೆ, ಚಾತಕಪಕ್ಷಿಗಳು ದಾಹದಿಂದ ನಿರಂತರ ಕೂಗುತ್ತಿರುತ್ತವೆ. ಸಜ್ಜನರ ದರ್ಶನದಿಂದ ಪಾಪಗಳು ದೂರವಾಗುವಂತೆ, ಶರದೃತುವಿನ ತಾಪವನ್ನು ಇರುಳಲ್ಲಿ ಚಂದ್ರಮನು ಹರಿಸುತ್ತಾನೆ. ಭಗವದ್ಭಕ್ತರು ಭಗವಂತನನ್ನು ನಿರ್ನಿಮೇಷ ನೇತ್ರಗಳಿಂದ ನಿಟ್ಟಿಸುವಂತೆ, ಚಕೋರಗಳು ಪೂರ್ಣಚಂದ್ರನನ್ನು ಎವೆಯಿಕ್ಕದೆ ನೋಡುತ್ತಿವೆ. ಬ್ರಾಹ್ಮಣದ್ವೇಷದಿಂದ ಕುಲವೇ ನಾಶವಾಗುವಂತೆ, ಚಳಿಯ ಭಯದಿಂದ ಸೊಳ್ಳೆ, ಗುಂಗುಡುಗಳು ನಾಶವಾದವು. (ಚೌ/೧-೪)

**ದೋ – ಭೂಮಿ ಜೀವ ಸಂಕುಲ ರಹೇ ಗಏ ಸರದ ರಿತು ಪಾಇ।**
**ಸದಗುರ ಮಿಲೇಂ ಜಾಹಿಂ ಜಿಮಿ ಸಂಸಯ ಭ್ರಮ ಸಮುದಾಇ॥ ೧೭ ॥**

ಸದ್ಗುರುವು ದೊರೆತಾಗ ಸಂದೇಹಗಳು, ಭ್ರಮೆಗಳು ತೊಲಗುವಂತೆ, ಮಳೆಗಾಲದಲ್ಲಿ ಎಲ್ಲೆಡೆ ಹುಟ್ಟಿಕೊಂಡ ಕ್ರಿಮಿಕೀಟಗಳು ಶರದೃತುವಿನ ಆಗಮನದಿಂದ ನಾಶವಾಗಿ ಹೋದವು. (ದೋ/೧೭)

## ಸುಗ್ರೀವನನ್ನು ಲಕ್ಷ್ಮಣನು ಎಚ್ಚರಿಸಿದುದು

**ಚೌ – ಬರಷಾ ಗತ ನಿರ್ಮಲ ರಿತು ಆಈ। ಸುಧಿ ನ ತಾತ ಸೀತಾ ಕೈ ಪಾಈ॥**
**ಏಕ ಬಾರ ಕೈಸೆಹುಂ ಸುಧಿ ಜಾನೌಂ। ಕಾಲಹು ಜೀತಿ ನಿಮಿಷ ಮಹುಂ ಆನೌಂ॥ ೧ ॥**
**ಕತಹುಂ ರಹಉ ಜೌಂ ಜೀವತಿ ಹೋಈ। ತಾತ ಜತನ ಕರಿ ಆನಉಂ ಸೋಈ॥**
**ಸುಗ್ರೀವಹುಂ ಸುಧಿ ಮೋರಿ ಬಿಸಾರೀ। ಪಾವಾ ರಾಜ ಕೋಸ ಪುರ ನಾರೀ॥ ೨ ॥**
**ಜೆಹಿಂ ಸಾಯಕ ಮಾರಾ ಮೈಂ ಬಾಲೀ। ತೆಹಿಂ ಸರ ಹತೌಂ ಮೂಢ ಕಹಂ ಕಾಲೀ॥**
**ಜಾಸು ಕೃಪಾಂ ಛೂಟಹಿಂ ಮದ ಮೋಹಾ। ತಾ ಕಹುಂ ಉಮಾ ಕಿ ಸಪನೆಹುಂ ಕೋಹಾ ॥ ೩ ॥**
**ಜಾನಹಿಂ ಯಹ ಚರಿತ್ರ ಮುನಿ ಗ್ಯಾನೀ। ಜಿನ್ಹ ರಘುಬೀರ ಚರನ ರತಿ ಮಾನೀ॥**
**ಲಛಿಮನ ಕ್ರೋಧವಂತ ಪ್ರಭು ಜಾನಾ। ಧನುಷ ಚಢ़ಾಇ ಗಹೇ ಕರ ಬಾನಾ ॥ ೪ ॥**

ವರ್ಷಾಕಾಲ ಕಳೆದುಹೋಯಿತು. ನಿರ್ಮಲವಾದ ಶರದೃತುವು ಬಂದಿತು. ಆದರೆ ಲಕ್ಷ್ಮಣಾ ! ಸೀತೆಯ ಸುದ್ದಿಯೇ ಇಲ್ಲ. ಹೇಗಾದರೂ ಅವಳ ಜಾಡು ಹತ್ತಿದರೆ ಕಾಲನನ್ನಾದರೂ ಗೆದ್ದು ಕ್ಷಣಮಾತ್ರದಲ್ಲಿ ಜಾನಕಿಯನ್ನು ತಂದೇನು. ತಮ್ಮ ! ಅವಳು ಎಲ್ಲಾದರೂ ಇರಲಿ. ಬದುಕಿದ್ದರೆ ವಿಶ್ವಪ್ರಯತ್ನಪಟ್ಟು ಅವಳನ್ನು ಖಂಡಿತವಾಗಿ ತರುತ್ತೇನೆ. ಸುಗ್ರೀವನು ರಾಜ್ಯವನ್ನು, ಬೊಕ್ಕಸವನ್ನು, ನಗರವನ್ನು, ಹೆಂಡತಿಯನ್ನು ಪಡೆದುಕೊಂಡು ನನ್ನನ್ನು ಮರೆತಿರುವನು. ಅಂದು ವಾಲಿಯನ್ನು ಕೊಂದಿರುವ ಬಾಣದಿಂದಲೇ ನಾಳೆಯೇ ಆ ಮೂಢನನ್ನು ಕೊಂದುಬಿಡುವೆನು. ಶಿವನು ಹೇಳುತ್ತಿದ್ದಾನೆ – ಉಮಾ ! ಯಾರ ಅನುಗ್ರಹದಿಂದ ಮದ, ಮೋಹ, ಕ್ರೋಧಗಳು ತೊಲಗಿಹೋಗುತ್ತವೋ ಅಂತಹ ರಾಘವನಿಗೆ ಸ್ವಪ್ನದಲ್ಲಾದರೂ ಕೋಪ ಬಂದೀತೇ? (ಇದು ಲೀಲಾಮಾತ್ರವಾಗಿದೆ.) ಶ್ರೀರಾಮಚಂದ್ರನ ಚರಣಗಳಲ್ಲಿ ಭಕ್ತಿ-ಪ್ರಪತ್ತಿಗಳಿರುವ ಜ್ಞಾನಿಗಳು ಮಾತ್ರ ಈ ಲೀಲಾರಹಸ್ಯವನ್ನು ಅರಿಯಬಲ್ಲರು. ಪ್ರಭುವು ಕೋಪಗೊಂಡಿರುವುದನ್ನು ಕಂಡು ಲಕ್ಷ್ಮಣನು ಬಿಲ್ಲಿಗೆ ಹೆದೆಯೇರಿಸಿ, ಕೈಯಲ್ಲಿ ಬಾಣ ತೆಗೆದುಕೊಂಡನು. (ಚೌ/೧-೪)

**ದೋ – ತಬ ಅನುಜಹಿ ಸಮುಝಾವಾ ರಘುಪತಿ ಕರುನಾ ಸೀಂವ।**
**ಭಯ ದೇಖಾಇ ಲೈ ಆವಹು ತಾತ ಸಖಾ ಸುಗ್ರೀವ ॥ ೧೮ ॥**

ಆಗ ದಯಾನಿಧಿಯಾದ ಶ್ರೀರಾಮನು ಲಕ್ಷ್ಮಣನನ್ನು ಕುರಿತು – ತಮ್ಮಾ ! ಸುಗ್ರೀವನು ನಮ್ಮ ಮಿತ್ರನು. ಅವನನ್ನು ಸುಮ್ಮನೆ ಹೆದರಿಸಿ ಕರಕೊಂಡು ಬಾ (ಕೊಲ್ಲುವುದಲ್ಲ). (ದೋ/೧೮)

**ಚೌ – ಇಹಾಂ ಪವನಸುತ ಹೃದಯ ಬಿಚಾರಾ। ರಾಮ ಕಾಜು ಸುಗ್ರೀವಂ ಬಿಸಾರಾ॥**
**ನಿಕಟ ಜಾಇ ಚರನನ್ಹಿ ಸಿರು ನಾವಾ । ಚಾರಿಹು ಬಿಧಿ ತೆಹಿ ಕಹಿ ಸಮುಝಾವಾ ॥ ೧ ॥**
**ಸುನಿ ಸುಗ್ರೀವಂ ಪರಮ ಭಯ ಮಾನಾ। ಬಿಷಯಂ ಮೋರ ಹರಿ ಲೀನ್ಹೆಉ ಗ್ಯಾನಾ॥**
**ಅಬ ಮಾರುತಸುತ ದೂತ ಸಮೂಹಾ । ಪಠವಹು ಜಹಂ ತಹಂ ಬಾನರ ಜೂಹಾ ॥ ೨ ॥**
**ಕಹಹು ಪಾಖ ಮಹುಂ ಆವ ನ ಜೋಈ। ಮೋರೇಂ ಕರ ತಾ ಕರ ಬಧ ಹೋಈ॥**
**ತಬ ಹನುಮಂತ ಬೊಲಾಏ ದೂತಾ । ಸಬ ಕರ ಕರಿ ಸನಮಾನ ಬಹೂತಾ ॥ ೩ ॥**
**ಭಯ ಅರು ಪ್ರೀತಿ ನೀತಿ ದೆಖರಾಈ। ಚಲೇ ಸಕಲ ಚರನನ್ಹಿ ಸಿರ ನಾಈ॥**
**ಏಹಿ ಅವಸರ ಲಛಿಮನ ಪುರ ಆಏ। ಕ್ರೋಧ ದೇಖಿ ಜಹಂ ತಹಂ ಕಪಿ ಧಾಏ॥ ೪ ॥**

ಇತ್ತ ಕಿಷ್ಕಿಂಧೆಯಲ್ಲಿ ಪವನಕುಮಾರ ಹನುಮಂತನು – ''ಸುಗ್ರೀವನು ಶ್ರೀರಾಮನ ಕಾರ್ಯವನ್ನು ಪೂರ್ತಿಯಾಗಿ ಮರೆತಿರುವನು' ಎಂದುಕೊಂಡು, ಅವನು ಸುಗ್ರೀವನಿದ್ದಲ್ಲಿಗೆ ಹೋಗಿ, ನಮಸ್ಕರಿಸಿ, ಸಾಮ, ದಾನ, ಭೇದ, ದಂಡ ಎಂಬ ಚತುರೋಪಾಯಗಳಿಂದ ನೀತಿಹೇಳಿ ಎಚ್ಚರಿಸಿದನು. ಹನುಮಂತನ ಮಾತುಗಳನ್ನು ಕೇಳಿ, ಸುಗ್ರೀವನು ನಿಜವಾಗಿ ಭಾರೀ ಭಯಗೊಂಡು ಇಂತೆಂದನು – ''ವಿಷಯಸುಖಗಳು ನನ್ನ ಜ್ಞಾನವನ್ನು ಅಪಹರಿಸಿದವು. ಹೇ ಪವಮಾನನಂದನಾ ! 'ಈಗ ನಮ್ಮ ವಾನರರ ತಂಡಗಳು ಇರುವಲ್ಲಿಗೆಲ್ಲ ದೂತರನ್ನು ಕಳಿಸು. ಅವರೆಲ್ಲರೂ ಹದಿನೈದು ದಿನಗಳೊಳಗಾಗಿ ಇಲ್ಲಿಗೆ ಬಾರದಿದ್ದರೆ, ಅವರು ನನ್ನ ಕೈಯಿಂದ ವಧೆಗೀಡಾಗುತ್ತಾರೆ' ಎಂದು ತಿಳಿಸು. ಆಗ ಹನುಮಂತನು ದೂತರನ್ನು ಕರೆಸಿ, ಅವರೆಲ್ಲರನ್ನು ಆದರಿಸಿ, ಅವರಿಗೆಲ್ಲ ಭಯ, ಪ್ರೀತಿ ತೋರಿ ನೀತಿಯನ್ನು ಅರುಹಿ ಸುಗ್ರೀವಾಜ್ಞೆಯನ್ನು ತಿಳಿಸಿದನು. ಕಪಿಗಳೆಲ್ಲರೂ ಹನುಮಂತನ ಕಾಲಿಗೆರಗಿ ಹೊರಟುಹೋದರು. ಇಷ್ಟರಲ್ಲಿ ಲಕ್ಷ್ಮಣನು ಕಿಷ್ಕಿಂಧಾ ನಗರವನ್ನು ಪ್ರವೇಶಿಸಿದನು. ಅವನು ಕೋಪಗೊಂಡಿರುವುದನ್ನು ಕಂಡು ಕಪಿಗಳೆಲ್ಲ ದಿಕ್ಕಾಪಾಲಾಗಿ ಓಡಿಹೋದರು. (ಚೌ/೧-೪)

**ದೋ – ಧನುಷ ಚಢಾಇ ಕಹಾ ತಬ ಜಾರಿ ಕರಉಂ ಪುರ ಛಾರ।**
**ಬ್ಯಾಕುಲ ನಗರ ದೇಖಿ ತಬ ಆಯಉ ಬಾಲಿಕುಮಾರ ॥ ೧೯ ॥**

ಆಗ ಲಕ್ಷ್ಮಣನು ಧನುಸ್ಸನ್ನು ಎತ್ತಿ ಹಿಡಿದು, – ''ಈಗಲೇ ಇಡೀ ಕಿಷ್ಕಿಂಧೆಯನ್ನು ಸುಟ್ಟು ಬೂದಿಮಾಡುತ್ತೇನೆ'' ಎಂದು ಗುಡುಗಿದನು. ಊರೆಲ್ಲ ತಲ್ಲಣಿಸಿರುವುದನ್ನು ಕಂಡ ವಾಲಿಪುತ್ರ ಅಂಗದನು ಲಕ್ಷ್ಮಣನ ಬಳಿಗೆ ಬಂದನು.(ದೋ/೧೯)

**ಚೌ – ಚರನ ನಾಇ ಸಿರು ಬಿನತೀ ಕೀನ್ಹೀ। ಲಛಿಮನ ಅಭಯ ಬಾಂಹ ತೆಹಿ ದೀನ್ಹೀ॥**
**ಕ್ರೋಧವಂತ ಲಛಿಮನ ಸುನಿ ಕಾನಾ । ಕಹ ಕಪೀಸ ಅತಿ ಭಯಂ ಅಕುಲಾನಾ ॥ ೧ ॥**
**ಸುನು ಹನುಮಂತ ಸಂಗ ಲೈ ತಾರಾ । ಕರಿ ಬಿನತೀ ಸಮುಝಾಉ ಕುಮಾರಾ॥**
**ತಾರಾ ಸಹಿತ ಜಾಇ ಹನುಮಾನಾ । ಚರನ ಬಂದಿ ಪ್ರಭು ಸುಜಸ ಬಖಾನಾ ॥ ೨ ॥**

ಕರಿ ಬಿನತೀ ಮಂದಿರ ಲೈ ಆಏ । ಚರನ ಪಖಾರಿ ಪಲಁಗ ಬೈಠಾಏ ॥
ತಬ ಕಪೀಸ ಚರನನ್ಹಿ ಸಿರು ನಾವಾ । ಗಹಿ ಭುಜ ಲಛಿಮನ ಕಂಠ ಲಗಾವಾ ॥ ೩ ॥
ನಾಥ ಬಿಷಯ ಸಮ ಮದ ಕಛು ನಾಹೀಂ । ಮುನಿ ಮನ ಮೋಹ ಕರಇ ಛನ ಮಾಹೀಂ ॥
ಸುನತ ಬಿನೀತ ಬಚನ ಸುಖ ಪಾವಾ । ಲಛಿಮನ ತೇಹಿ ಬಹು ಬಿಧಿ ಸಮುಝಾವಾ ॥ ೪ ॥
ಪವನ ತನಯ ಸಬ ಕಥಾ ಸುನಾಈ । ಜೆಹಿ ಬಿಧಿ ಗಏ ದೂತ ಸಮುದಾಈ ॥ ೫ ॥

ಅವನು ಲಕ್ಷ್ಮಣನ ಚರಣಗಳಿಗೆರಗಿ ಕ್ಷಮಾಯಾಚನೆ ಮಾಡಿದನು. ಆಗ ಲಕ್ಷ್ಮಣನು ಅವನಿಗೆ ಭುಜವೆತ್ತಿ ಅಭಯಪ್ರದಾನ ಮಾಡಿದನು. ಲಕ್ಷ್ಮಣನು ಸಿಟ್ಟಾಗಿದ್ದಾನೆಂದು ಕೇಳಿ ಸುಗ್ರೀವನು ಬಹಳ ಹೆದರಿ ಹಿಂಜಿಹೋಗಿ, ಹನುಮಂತನಿಗೆ ಹೇಳಿದನು – ಓ ಮಾರುತೀ ! ನೀನು ತಾರೆಯೊಡನೆ ಹೋಗಿ ಬಿನ್ನಹ ಮಾಡಿಕೊಂಡು ರಾಜಕುಮಾರನಾದ ಲಕ್ಷ್ಮಣನಲ್ಲಿ ನನ್ನ ಪ್ರಾರ್ಥನೆಯನ್ನು ಸಲ್ಲಿಸಿ, ಅವನ ಕೋಪವನ್ನು ಶಾಂತಗೊಳಿಸು.'' ಹನುಮಂತನು ತಾರಾಸಮೇತನಾಗಿ ಹೋಗಿ ಲಕ್ಷ್ಮಣನ ಚರಣಗಳಿಗೆ ವಂದಿಸಿ, ಪ್ರಭುವಿನ ಯಶೋಗಾನ ಮಾಡಿದನು. ಲಕ್ಷ್ಮಣನನ್ನು ಬೇಡಿಕೊಂಡು ಅರಮನೆಗೆ ಕರೆತಂದು, ಆತನ ಕಾಲುಗಳನ್ನು ತೊಳೆದು ಮಂಚದಮೇಲೆ ಕೂರಿಸಿದನು. ಆಗ ಕಪೀಶನಾದ ಸುಗ್ರೀವನು ಅವನ ಚರಣಗಳಿಗೆರಗಿದನು. ಲಕ್ಷ್ಮಣನು ಅವನನ್ನು ಕೈ ಹಿಡಿದೆತ್ತಿ ಆಲಿಂಗಿಸಿಕೊಂಡನು. ಸುಗ್ರೀವ ಹೇಳಿದನು – ಪ್ರಭೂ ! ವಿಷಯಗಳಿಗೆ ಸಮಾನವಾದ ಮದ ಬೇರೊಂದಿಲ್ಲ. ಅದು ಕ್ಷಣಮಾತ್ರದಲ್ಲಿ ಮುನಿಗಳ ಮನದಲ್ಲಿಯೂ ಮೋಹವನ್ನುಂಟುಮಾಡುತ್ತದೆ. ಅಂತಹುದರಲ್ಲಿ ನಾನಾದರೋ ಸಾಮಾನ್ಯ ವಿಷಯೀಜೀವನು. ಸುಗ್ರೀವನ ವಿನಯವಚನಗಳನ್ನು ಕೇಳಿ ಲಕ್ಷ್ಮಣನು ಹರ್ಷಿತನಾಗಿ, ಅವನನ್ನು ಅನೇಕ ಪ್ರಕಾರದಿಂದ ಸಮಜಾಯಿಸಿದನು. ಆಗ ಪವನಸುತ ಹನುಮಂತನು ಎಲ್ಲ ಕಡೆಗೆ ದೂತರನ್ನು ಕಳಿಸಿದ ಸಮಾಚಾರವನ್ನೂ ಲಕ್ಷ್ಮಣನಿಗೆ ಅರುಹಿದನು. (ಚೌ/೧-೫)

**ದೋ – ಹರಷಿ ಚಲೇ ಸುಗ್ರೀವ ತಬ ಅಂಗದಾದಿ ಕಪಿ ಸಾಥ ।**
**ರಾಮಾನುಜ ಆಗೇಂ ಕರಿ ಆಏ ಜಹँ ರಘುನಾಥ ॥ ೨೦ ॥**

ಬಳಿಕ ಸುಗ್ರೀವನು ಲಕ್ಷ್ಮಣಸ್ವಾಮಿಯನ್ನು ಮುಂದಿಟ್ಟುಕೊಂಡು, ಅಂಗದಾದಿ ವಾನರ ಪ್ರಮುಖರನ್ನೊಳಗೊಂಡು ಹರ್ಷಚಿತ್ತನಾಗಿ ಶ್ರೀರಾಮನ ಬಳಿಗೆ ತೆರಳಿದನು. (ದೋ/೨೦)

ಚೌ – ನಾಇ ಚರನ ಸಿರು ಕಹ ಕರ ಜೋರೀ । ನಾಥ ಮೋಹಿ ಕಛು ನಾಹಿನ ಖೋರೀ ॥
ಅತಿಸಯ ಪ್ರಬಲ ದೇವ ತವ ಮಾಯಾ । ಛೂಟಇ ರಾಮ ಕರಹು ಜೌಂ ದಾಯಾ ॥ ೧ ॥
ಬಿಷಯ ಬಸ್ಯ ಸುರ ನರ ಮುನಿ ಸ್ವಾಮೀ । ಮೈಂ ಪಾವँರ ಪಸು ಕಪಿ ಅತಿ ಕಾಮೀ ॥
ನಾರಿ ನಯನ ಸರ ಜಾಹಿ ನ ಲಾಗಾ । ಘೋರ ಕ್ರೋಧ ತಮ ನಿಸಿ ಜೋ ಜಾಗಾ ॥ ೨ ॥
ಲೋಭ ಪाँಸ ಜೆಹಿಂ ಗರ ನ ಬँಧಾಯಾ । ಸೋ ನರ ತುಮ್ಹ ಸಮಾನ ರಘುರಾಯಾ ॥
ಯಹ ಗುನ ಸಾಧನ ತೇಂ ನಹೀಂ ಹೋಈ । ತುಮ್ಹರೀ ಕೃಪಾँ ಪಾವ ಕೊಇ ಕೋಈ ॥ ೩ ॥
ತಬ ರಘುಪತಿ ಬೋಲೇ ಮುಸುಕಾಈ । ತುಮ್ಹ ಪ್ರಿಯ ಮೋಹಿ ಭರತ ಜಿಮಿ ಭಾಈ ॥
ಅಬ ಸೋಇ ಜತನು ಕರಹು ಮನ ಲಾಈ । ಜೆಹಿ ಬಿಧಿ ಸೀತಾ ಕೈ ಸುಧಿ ಪಾಈ ॥ ೪ ॥

ಸುಗ್ರೀವನು ಶ್ರೀರಘುನಾಥನ ಚರಣಗಳಿಗೆ ಶಿರಸಾವಂದಿಸಿ, ಕೈಜೋಡಿಸಿಕೊಂಡು ಬಿನ್ನವಿಸಿ, ಇಂತೆಂದನು – ''ಪ್ರಭೂ ! ನನ್ನದೇನೂ ತಪ್ಪಿಲ್ಲ. ನಿನ್ನ ಮಾಯೆಯು ಅತ್ಯಂತ ಪ್ರಬಲವಾದುದು. ರಾಮಾ ! ನಿನ್ನ ದಯವಾದಾಗ ಆ ಮಾಯೆಯಿಂದ ಜೀವರು ಬಿಡುಗಡೆ ಹೊಂದುವರು. ಸ್ವಾಮೀ ! ಸುರರು, ನರರು, ಮನುಷ್ಯರು ಎಲ್ಲರೂ ವಿಷಯಗಳಿಗೆ ವಶರಾದವರೇ. ನಾನಾದರೋ ಪಾಮರಪಶು. ಅದರಲ್ಲಿಯೂ ಅತಿಕಾಮಿಯಾದ ಕೋತಿ. ಓ ರಘುರಾಮಾ! ಸ್ತ್ರೀಯರ ನಯನ ಕಟಾಕ್ಷಕ್ಕೆ ಒಳಗಾಗದವನು, ಭಯಂಕರ ಕ್ರೋಧದ ಕಾಳರಾತ್ರಿಯಲ್ಲೂ ಎಚ್ಚರತಪ್ಪದೆ ಇರುವವನು, ಲೋಭದ ಉರುಳಿಗೆ ಕೊರಳನ್ನು ಒಡ್ಡದವನು ನಿನಗೆ ಸಮಾನನು. ಈ ಗುಣಗಳು ಸಾಧನೆಯಿಂದ ದೊರೆಯುವುದಿಲ್ಲ. ಕೇವಲ ನಿಮ್ಮ ಕೃಪೆಯಿಂದಲೇ ಎಲ್ಲೋ ಒಬ್ಬೊಬ್ಬರಿಗೆ ದೊರೆಯುತ್ತವೆ.'' ಆಗ ಶ್ರೀರಘುನಾಥನು ಮುಗುಳ್ನಗುತ್ತಾ – ಸೋದರಾ ! ನೀನು ನನಗೆ ಭರತನಂತೆ ಪ್ರಿಯನಾದವನು. ಈಗ ಸೀತೆಯ ಜಾಡನ್ನು ತಿಳಿಯುವಂತಹ ಪ್ರಯತ್ನವನ್ನು ಮನಃಪೂರ್ವಕವಾಗಿ ಮಾಡು, ಎಂದು ಹೇಳಿದನು. (ಚೌ/೧-೪)

# ವಾನರರಿಂದ ಸೀತಾನ್ವೇಷಣೆ

**ದೋ – ಏಹಿ ಬಿಧಿ ಹೋತ ಬತಕಹೀ ಆಏ ಬಾನರ ಜೂಥ।**
**ನಾನಾ ಬರನ ಸಕಲ ದಿಸಿ ದೇಖಿಅ ಕೀಸ ಬರೂಥ ॥ ೨೧ ॥**

ಈ ಪ್ರಕಾರ ಮಾತುಕತೆ ನಡೆಯುತ್ತಿದ್ದಾಗಲೇ, ವಾನರರ ಅನೇಕ ತಂಡಗಳು ಅಲ್ಲಿ ಬಂದು ಸೇರಿದವು. ಎಲ್ಲ ದಿಕ್ಕುಗಳಲ್ಲಿಯೂ ಎಲ್ಲಿ ನೋಡಿದಲ್ಲಿ ವಿಧವಿಧ ಬಣ್ಣದ ವಾನರರೇ ಕಂಡುಬರುತ್ತಿದ್ದರು. (ದೋ/೨೧)

**ಚೌ – ಬಾನರ ಕಟಕ ಉಮಾ ಮೈಂ ದೇಖಾ। ಸೋ ಮೂರುಖ ಜೊ ಕರನ ಚಹ ಲೇಖಾ ॥**
**ಆಇ ರಾಮ ಪದ ನಾವಹಿಂ ಮಾಥಾ। ನಿರಖಿ ಬದನು ಸಬ ಹೋಹಿಂ ಸನಾಥಾ ॥ ೧ ॥**
**ಅಸ ಕಪಿ ಏಕ ನ ಸೇನಾ ಮಾಹೀಂ। ರಾಮ ಕುಸಲ ಜೇಹಿ ಪೂಛೀ ನಾಹೀಂ ॥**
**ಯಹ ಕಛು ನಹಿಂ ಪ್ರಭು ಕಇ ಅಧಿಕಾಈ। ಬಿಸ್ವರೂಪ ಬ್ಯಾಪಕ ರಘುರಾಈ ॥ ೨ ॥**
**ಠಾಢೇ ಜಹಂ ತಹಂ ಆಯಸು ಪಾಈ। ಕಹ ಸುಗ್ರೀವ ಸಬಹಿ ಸಮುಝಾಈ ॥**
**ರಾಮ ಕಾಜು ಅರು ಮೋರ ನಿಹೋರಾ। ಬಾನರ ಜೂಥ ಜಾಹು ಚಹುಂ ಓರಾ ॥ ೩ ॥**
**ಜನಕಸುತಾ ಕಹುಂ ಖೋಜಹು ಜಾಈ। ಮಾಸ ದಿವಸ ಮಹಂ ಆಏಹು ಭಾಈ ॥**
**ಅವಧಿ ಮೇಟಿ ಜೋ ಬಿನು ಸುಧಿ ಪಾಏಂ। ಆವಇ ಬನಿಹಿ ಸೋ ಮೋಹಿ ಮರಾಏಂ ॥ ೪ ॥**

ಶಿವನು ಹೇಳುತ್ತಿದ್ದಾನೆ – ''ಉಮೆ ! ಆ ವಾನರರ ಸೇನೆಯನ್ನು ನಾನು ನೋಡಿದ್ದೇನೆ. ಅದು ಅಸಂಖ್ಯಾತವಾದುದು. ಅದನ್ನು ಎಣಿಸಲೆಳಸುವವನೇ ಮಹಾಮೂರ್ಖನು. ಎಲ್ಲ ವಾನರರು ಬಂದು-ಬಂದು ಶ್ರೀರಾಮನಿಗೆ ಮಣಿದು, ಆತನ ಶ್ರೀಮುಖವನ್ನು ಕಂಡು ಕೃತಾರ್ಥರಾಗುತ್ತಿದ್ದರು. ಶ್ರೀರಾಮನು ಯೋಗಕ್ಷೇಮ ವಿಚಾರಿಸದ ವಾನರನೇ ಇರಲಿಲ್ಲ. ಅಂದರೆ ಎಲ್ಲ ವಾನರರನ್ನೂ ಮಾತನಾಡಿಸಿದನು. ಆದರೆ ಶ್ರೀರಾಮನಿಗೆ ಇದೊಂದು ದೊಡ್ಡವಿಷಯವಲ್ಲ. ಏಕೆಂದರೆ ಅವನು ವಿಶ್ವರೂಪನು, ಸರ್ವವ್ಯಾಪಕನು. ಸುಗ್ರೀವನ ಅಪ್ಪಣೆಯಂತೆ ಎಲ್ಲ ವಾನರರು ಅಲ್ಲಲ್ಲೇ ನಿಂತುಬಿಟ್ಟರು. ಆಗ ಅವರೆಲ್ಲರನ್ನು ಉದ್ದೇಶಿಸಿ ಕಪಿರಾಜನು ಇಂತೆಂದನು – ''ಎಲೈ ವಾನರವೀರರೇ ! ಇದು ಶ್ರೀರಾಮಚಂದ್ರನ ಕಾರ್ಯವು. ನೀವು ಎಲ್ಲ ದಿಕ್ಕುಗಳಿಗೂ ಹೋಗಿ ಸೀತಾದೇವಿಯನ್ನು ಹುಡುಕಿಕೊಂಡು ಬನ್ನಿ. ಸೋದರರೇ ! ತಿಂಗಳ ಅವಧಿಯೊಳಗೆ ಹಿಂದಕ್ಕೆ ಬರಬೇಕು. ಹೋದ ಕೆಲಸದಲ್ಲಿ ವಿಫಲರಾಗಿ ಬರಿಗೈಯಲ್ಲಿ ಅವಧಿ ಮುಗಿದ ಬಳಿಕ ಬರುವವರಿಗೆ ಮರಣ ತಪ್ಪದು'' ಇದು ನನ್ನ ಆಜ್ಞೆ(ಸುಗ್ರೀವಾಜ್ಞೆ). (ಚೌ/೧-೪)

**ದೋ – ಬಚನ ಸುನತ ಸಬ ಬಾನರ ಜಹಂ ತಹಂ ಚಲೇ ತುರಂತ।**
**ತಬ ಸುಗ್ರೀವಂ ಬೋಲಾಏ ಅಂಗದ ನಲ ಹನುಮಂತ ॥ ೨೨ ॥**

ಸುಗ್ರೀವಾಜ್ಞೆಯನ್ನು ಕೇಳಿ, ವಾನರರೆಲ್ಲರೂ ಕೂಡಲೇ ಎಲ್ಲ ದಿಕ್ಕುಗಳಿಗೆ ತೆರಳಿದರು. ಆಗ ಸುಗ್ರೀವನು ಅಂಗದ, ನಳ, ಹನುಮಂತನೇ ಮೊದಲಾದ ವಾನರ ಪ್ರಮುಖರನ್ನು ಕರೆದು ಹೇಳಿದನು – (ದೋ/೨೨)

**ಚೌ – ಸುನಹು ನೀಲ ಅಂಗದ ಹನುಮಾನಾ। ಜಾಮವಂತ ಮತಿಧೀರ ಸುಜಾನಾ ॥**
**ಸಕಲ ಸುಭಟ ಮಿಲಿ ದಚ್ಛಿನ ಜಾಹೂ। ಸೀತಾ ಸುಧಿ ಪೂಁಛೆಹು ಸಬ ಕಾಹೂ ॥ ೧ ॥**
**ಮನ ಕ್ರಮ ಬಚನ ಸೊ ಜತನ ಬಿಚಾರೆಹು। ರಾಮಚಂದ್ರ ಕರ ಕಾಜು ಸಁವಾರೆಹು ॥**
**ಭಾನು ಪೀಠಿ ಸೇಇಅ ಉರ ಆಗೀ। ಸ್ವಾಮಿಹಿ ಸರ್ಬ ಭಾವ ಛಲ ತ್ಯಾಗೀ ॥ ೨ ॥**
**ತಜಿ ಮಾಯಾ ಸೇಇಅ ಪರಲೋಕಾ। ಮಿಟಹಿಂ ಸಕಲ ಭವಸಂಭವ ಸೋಕಾ ॥**
**ದೇಹ ಧರೇ ಕರ ಯಹ ಫಲು ಭಾಈ। ಭಜಿಅ ರಾಮ ಸಬ ಕಾಮ ಬಿಹಾಈ ॥ ೩ ॥**
**ಸೋಇ ಗುನಗ್ಯ ಸೋಈ ಬಡಭಾಗೀ। ಜೋ ರಘುಬೀರ ಚರನ ಅನುರಾಗೀ ॥**
**ಆಯಸು ಮಾಗಿ ಚರನ ಸಿರು ನಾಈ। ಚಲೇ ಹರಷಿ ಸುಮಿರತ ರಘುರಾಈ ॥ ೪ ॥**
**ಪಾಛೇಂ ಪವನ ತನಯ ಸಿರು ನಾವಾ। ಜಾನಿ ಕಾಜ ಪ್ರಭು ನಿಕಟ ಬೊಲಾವಾ ॥**
**ಪರಸಾ ಸೀಸ ಸರೋರುಹ ಪಾನೀ। ಕರಮುದ್ರಿಕಾ ದೀನ್ಹಿ ಜನ ಜಾನೀ ॥ ೫ ॥**

**ಬಹು ಪ್ರಕಾರ ಸೀತಹಿ ಸಮುಝಾಏಹು। ಕಹಿ ಬಲ ಬಿರಹ ಬೇಗಿ ತುಮ್ಹ ಆಏಹು॥**
**ಹನುಮತ ಜನ್ಮ ಸುಫಲ ಕರಿ ಮಾನಾ। ಚಲೇಉ ಹೃದಯಁ ಧರಿ ಕೃಪಾನಿಧಾನಾ॥ ೬॥**
**ಜದ್ಯಪಿ ಪ್ರಭು ಜಾನತ ಸಬ ಬಾತಾ। ರಾಜನೀತಿ ರಾಖತ ಸುರತ್ರಾತಾ॥ ೭॥**

ಧೀರಬುದ್ಧಿಗಳೂ, ಚತುರರೂ ಆದ ನೀಲ, ಅಂಗದ, ಜಾಂಬವಂತ, ಹನುಮಂತ ಮೊದಲಾದ ವೀರರೇ! ಕೇಳಿರಿ. ಸುಭಟರಾದ ನೀವೆಲ್ಲ ಒಟ್ಟಿಗೆ ದಕ್ಷಿಣ ದಿಕ್ಕಿಗೆ ಹೋಗಿರಿ. ಕಂಡಲ್ಲಿ, ಕಂಡವರನ್ನೆಲ್ಲ ಸೀತೆಯ ಕುರಿತು ವಿಚಾರಿಸಿರಿ. ಮನ, ವಚನ, ಕರ್ಮಗಳಿಂದ ಆಕೆಯ ಪತ್ತೆಹಚ್ಚುವ ಉಪಾಯಮಾಡಿರಿ. ಈ ಪ್ರಕಾರ ಶ್ರೀರಾಮನ ಕಾರ್ಯವನ್ನು ನೆರವೇರಿಸಿರಿ. ಚಳಿಯಿಂದ ಬಾಧೆ ಪಡುವವರು ಸೂರ್ಯನ ಕಿರಣಗಳನ್ನು ಬೆನ್ನುಮಾಡಿ ಸೇವಿಸಬೇಕು. ಅಗ್ನಿಗೆ ಮುಖಮಾಡಿ ಸೇವಿಸಬೇಕು. ಪ್ರಭುವನ್ನು ತ್ರಿಕರಣಶುದ್ಧಿಯಾಗಿ, ನಿಷ್ಕಪಟವಾಗಿ, ಸರ್ವಭಾವದಿಂದ ಸೇವಿಸಬೇಕು. ಮಮತಾಸಕ್ತಿಯನ್ನು ತೊರೆದು ಪರಲೋಕದ ಪ್ರಾಪ್ತಿಗಾಗಿ ಭಗವತ್ಸೇವೆ ಮಾಡಬೇಕು. ಅದರಿಂದಾಗಿ ಜನನ-ಮರಣಜನಿತ ಶೋಕಸಂತಾಪಗಳೆಲ್ಲವೂ ದೂರವಾಗುವುವು. ಸೋದರರೇ ! ಎಲ್ಲ ಕಾಮನೆಗಳನ್ನು ಪರಿತ್ಯಜಿಸಿ ಶ್ರೀರಾಮನ ಭಜನೆಮಾಡುವುದೇ, ಶರೀರ ಧರಿಸಿದುದರ ಫಲವಾಗಿದೆ. ಶ್ರೀರಘುನಾಥನ ಚರಣಾನುರಾಗಿಯೇ ಗುಣವಂತನು, ಮಹಾಭಾಗ್ಯಶಾಲಿಯು.'' ಈ ಮಾತುಗಳನ್ನು ಶ್ರದ್ಧೆಯಿಂದ ಕೇಳಿ, ಸುಗ್ರೀವನಿಂದ ಆಜ್ಞೆಯನ್ನು ಪಡೆದು ಶ್ರೀರಾಮನ ಚರಣಗಳಿಗೆ ಪುನಃ-ಪುನಃ ವಂದಿಸಿಕೊಂಡು, ಅವನನ್ನು ಸ್ಮರಿಸುತ್ತಾ, ಹರ್ಷಿತರಾಗಿ ದಕ್ಷಿಣದಿಕ್ಕಿಗೆ ಹೊರಟರು. ಎಲ್ಲರ ತರುವಾಯ ಹನುಮಂತನು ಶ್ರೀರಾಮನಿಗೆ ಶಿರಬಾಗಿ ನಮಸ್ಕರಿಸಿದನು. ಅವನ ಮೂಲಕವೇ ತನ್ನ ಕಾರ್ಯವು ನೆರವೇರುವುದೆಂದು ಗ್ರಹಿಸಿ, ಶ್ರೀರಾಮನು ಆತನನ್ನು ತನ್ನ ಬಳಿಗೆ ಕರೆದು, ತನ್ನ ಕರಕಮಲದಿಂದ ಅವನ ಶಿರವನ್ನು ಸವರಿದನು. ಅವನು ತನ್ನ ಪರಮಭಕ್ತನೆಂದರಿತು, ತನ್ನ ಕೈಬೆರಳ ಉಂಗುರವನ್ನು ಆತನಿಗೆ ಬಿಚ್ಚಿಕೊಟ್ಟು ಇಂತೆಂದನು – ''ಸೀತೆಯನ್ನು ಅನೇಕ ವಿಧದಿಂದ ಸಂತೈಸು. ನನ್ನ ಬಲಪರಾಕ್ರಮಗಳನ್ನು, ವಿರಹವನ್ನು ಆಕೆಗೆ ಮನವರಿಕೆ ಮಾಡಿಕೊಟ್ಟು ಬೇಗನೇ ಹಿಂತಿರುಗು.'' ಇದನ್ನು ಕೇಳಿದ ಹನುಮಂತನು ತನ್ನ ಜನ್ಮ ಸಫಲವಾಯಿತೆಂದು ಭಾವಿಸಿ, ಕೃಪಾನಿಧಾನನಾದ ರಾಮನನ್ನು ತನ್ನ ಹೃದಯದಲ್ಲಿ ನೆಲೆಗೊಳಿಸಿಕೊಂಡು ಹೊರಟನು. ದೇವತೆಗಳ ರಕ್ಷಕನಾದ ಪ್ರಭುವು ಎಲ್ಲವನ್ನು ಬಲ್ಲನು. ಆದರೂ ಅವನು ರಾಜನೀತಿಯನ್ನು ರಕ್ಷಿಸುತ್ತಿದ್ದಾನೆ. (ರಾವಣನು ದೇವತೆಗಳನ್ನು ಬಾಧಿಸುತ್ತಿದ್ದನು. ದೇವತೆಗಳನ್ನು ರಕ್ಷಿಸಲಿಕ್ಕಾಗಿಯೇ ಶ್ರೀರಾಮನು ಅವತರಿಸಿರುವನು. ಯುದ್ಧಕ್ಕೆ ಮುಂದಾಗಿ ದೂತನನ್ನು ಕಳಿಸಿ, ಶತ್ರುಸಮಾಚಾರವನ್ನು ತಿಳಿಯಬೇಕಾದುದು ರಾಜನೀತಿ. ಪ್ರಭುವು ಮಾನವಧರ್ಮವನ್ನು ಅನುಸರಿಸಿ, ರಾಜನೀತಿಯನ್ನು ಗೌರವಿಸುತ್ತಿದ್ದಾನೆ.) (ಚೌ/೧-೭)

**ದೋ – ಚಲೇ ಸಕಲ ಬನ ಖೋಜತ ಸರಿತಾ ಸರ ಗಿರಿ ಖೋಹ।**
**ರಾಮ ಕಾಜ ಲಯಲೀನ ಮನ ಬಿಸರಾ ತನ ಕರ ಛೋಹ॥ ೨೩॥**

ಅಂಗದಾದಿ ವಾನರರೆಲ್ಲರೂ ವನಗಳನ್ನೂ, ನದಿಗಳನ್ನು, ಕೆರೆ, ಪರ್ವತಗಳನ್ನು, ಗಿರಿಕಂದರಗಳನ್ನು ಹುಡುಕುತ್ತಾ ಮುಂದೆ ಸಾಗಿದರು. ಅವರ ಮನಸ್ಸು ಶ್ರೀರಾಮಕಾರ್ಯದಲ್ಲಿ ಮುಳುಗಿದೆ. ಅವರಿಗೆ ಮೈಮೇಲಿನ ಪರಿವೆಯೇ ಇರಲಿಲ್ಲ. (ದೋ/೨೩)

**ಚೌ – ಕತಹುಁ ಹೋಇ ನಿಸಿಚರ ಸೈಁ ಭೇಟಾ। ಪ್ರಾನ ಲೇಹಿಁ ಏಕ ಏಕ ಚಪೇಟಾ॥**
**ಬಹು ಪ್ರಕಾರ ಗಿರಿ ಕಾನನ ಹೇರಹಿಁ। ಕೋಉ ಮುನಿ ಮಿಲಇ ತಾಹಿ ಸಬ ಘೇರಹಿಁ॥ ೧॥**
**ಲಾಗಿ ತೃಷಾ ಅತಿಸಯ ಅಕುಲಾನೇ। ಮಿಲಇ ನ ಜಲ ಘನ ಗಹನ ಭುಲಾನೇ॥**
**ಮನ ಹನುಮಾನ ಕೀನ್ಹ ಅನುಮಾನಾ। ಮರನ ಚಹತ ಸಬ ಬಿನು ಜಲ ಪಾನಾ॥ ೨॥**
**ಚಢಿ ಗಿರಿ ಸಿಖರ ಚಹೂಁ ದಿಸಿ ದೇಖಾ। ಭೂಮಿ ಬಿಬರ ಏಕ ಕೌತುಕ ಪೇಖಾ॥**
**ಚಕ್ರಬಾಕ ಬಕ ಹಂಸ ಉಡಾಹೀಂ। ಬಹುತಕ ಖಗ ಪ್ರಬಿಸಹಿಁ ತೇಹಿ ಮಾಹೀಂ॥ ೩॥**
**ಗಿರಿ ತೇ ಉತರಿ ಪವನಸುತ ಆವಾ। ಸಬ ಕಹುಁ ಲೈ ಸೋಇ ಬಿಬರ ದೆಖಾವಾ॥**
**ಆಗೇಂ ಕೈ ಹನುಮಂತಹಿ ಲೀನ್ಹಾ। ಪೈಠೇ ಬಿಬರ ಬಿಲಂಬು ನ ಕೀನ್ಹಾ॥ ೪॥**

ಅವರು ಗಿರಿ ಕಾನನಗಳೆಲ್ಲ ಕಡೆಗಳಲ್ಲಿ ಜಾನಕಿಯನ್ನು ಹುಡುಕುತ್ತಿದ್ದರು. ಯಾವನಾದರೂ ರಾಕ್ಷಸ ಕಣ್ಣಿಗೆ ಬಿದ್ದರೆ, ಒಂದೇ ಏಟಿಗೆ ಅವನನ್ನು ಇಲ್ಲವಾಗಿಸುತ್ತಿದ್ದರು. ಮುನಿಗಳು ಕಂಡುಬಂದರೆ ಅವರನ್ನು ಸುತ್ತಲೂ ಮುತ್ತಿಕೊಂಡು ಸೀತೆಯ ಸಮಾಚಾರ ಕೇಳುತ್ತಿದ್ದರು. ಇಷ್ಟರಲ್ಲಿ ಅಂಗದಾದಿಗಳಿಗೆ ಅತೀವ ಬಾಯಾರಿಕೆಯಾಗಿ, ವ್ಯಾಕುಲರಾದರು. ಅವರಿಗೆ ಎಲ್ಲೂ ನೀರು ಸಿಗದೆ ಆ ಗೊಂಡಾರಣ್ಯದಲ್ಲಿ ದಾರಿತಪ್ಪಿ ದಿಕ್ಕೆಟ್ಟರು. ನೀರಿಲ್ಲದೆ ಇವರೆಲ್ಲ ಪ್ರಾಣವೇ ತೊರೆಯುವರೋ ಏನೋ ಎಂದು ಹನುಮಂತನು ಯೋಚಿಸಿ, ಬೆಟ್ಟವೊಂದನ್ನು ಹತ್ತಿ ಸುತ್ತಲೂ ಕಣ್ಣುಹಾಯಿಸಿದನು. ಆಗ ಅವನಿಗೆ ನೆಲದಲ್ಲಿ ಒಂದು ಗುಹೆಯಲ್ಲಿ ಆಶ್ಚರ್ಯಕರವಾದ

ದೃಶ್ಯವು ಕಂಡು ಬಂತು. ಅದರ ಬಳಿ ಚಕ್ರವಾಕ, ಕೊಕ್ಕರೆ, ಹಂಸಗಳು ಹಾರಾಡುತ್ತಿದ್ದವು. ಇನ್ನು ಅನೇಕ ಪಕ್ಷಿಗಳು ಅದರೊಳಗೆ ಪ್ರವೇಶಿಸುತ್ತಿದ್ದರು. ಪವನನಂದನನು ಬೆಟ್ಟದಿಂದ ಕೆಳಗಿಳಿದು ಬಂದು ಉಳಿದವರೆಲ್ಲರಿಗೆ ಆ ಗುಹೆಯನ್ನು ತೋರಿದನು. ಅವರೆಲ್ಲರೂ ಹನುಮಂತನನ್ನು ಮುಂದಿಟ್ಟುಕೊಂಡು ತಡಮಾಡದೆ ಗುಹೆಯನ್ನು ಹೊಕ್ಕರು. (ಚೌ/೧-೪)

## ಸ್ವಯಂಪ್ರಭೆಯ ಗುಹೆಯೊಳಗೆ

**ದೋ – ದೀಖ ಜಾಇ ಉಪಬನ ಬರ ಸರ ಬಿಗಸಿತ ಬಹು ಕಂಜ।**
**ಮಂದಿರ ಏಕ ರುಚಿರ ತಹ್ ಬೈಠಿ ನಾರಿ ತಪ ಪುಂಜ॥ ೨೪ ॥**

ವಾನರರೆಲ್ಲರೂ ಒಳಕ್ಕೆ ಪ್ರವೇಶಿಸಿ, ಅಲ್ಲಿ ಒಂದು ರಮಣೀಯ ಉಪವನವನ್ನು, ಅದರ ನಡುವೆ ಸುಂದರ ಸರೋವರವೊಂದನ್ನು ನೋಡಿದರು. ಅದರಲ್ಲಿ ಕಮಲಗಳು ಅರಳಿದ್ದವು. ಅಲ್ಲೇ ಒಂದು ಮನೋಜ್ಞವಾದ ದೇವಮಂದಿರವಿದ್ದು, ಅದರಲ್ಲಿ ಓರ್ವ ತಪಸ್ವಿನಿ ಕುಳಿತಿದ್ದಳು. (ದೋ/೨೪)

**ಚೌ – ದೂರಿ ತೆ ತಾಹಿ ಸಬನ್ಹಿ ಸಿರು ನಾವಾ। ಪೂಛೇ ನಿಜ ಬೃತ್ತಾಂತ ಸುನಾವಾ॥**
**ತೆಹಿಂ ತಬ ಕಹಾ ಕರಹು ಜಲ ಪಾನಾ। ಖಾಹು ಸುರಸ ಸುಂದರ ಫಲ ನಾನಾ॥ ೧ ॥**
**ಮಜ್ಜನು ಕೀನ್ಹ ಮಧುರ ಫಲ ಖಾಏ। ತಾಸು ನಿಕಟ ಪುನಿ ಸಬ ಚಲಿ ಆಏ॥**
**ತೆಹಿಂ ಸಬ ಆಪನಿ ಕಥಾ ಸುನಾಈ। ಮೈಂ ಅಬ ಜಾಬ ಜಹಾँ ರಘುರಾಈ॥ ೨ ॥**
**ಮೂದಹು ನಯನ ಬಿಬರ ತಜಿ ಜಾಹೂ। ಪೈಹಹು ಸೀತಹಿ ಜನಿ ಪಛಿತಾಹೂ॥**
**ನಯನ ಮೂದಿ ಪುನಿ ದೇಖಹಿ ಬೀರಾ। ಠಾಢೇ ಸಕಲ ಸಿಂಧು ಕೇಂ ತೀರಾ॥ ೩ ॥**
**ಸೋ ಪುನಿ ಗಈ ಜಹಾँ ರಘುನಾಥಾ। ಜಾಇ ಕಮಲ ಪದ ನಾಏಸಿ ಮಾಥಾ॥**
**ನಾನಾ ಭಾಂತಿ ಬಿನಯ ತೆಹಿಂ ಕೀನ್ಹೀ। ಅನಪಾಯನೀ ಭಗತಿ ಪ್ರಭು ದೀನ್ಹೀ॥ ೪ ॥**

ದೂರದಿಂದಲೇ ಅವಳಿಗೆ ತಲೆವಾಗಿದರು. ನೀವು ಯಾರು ಎಂದು ಆಕೆ ಕೇಳಿದಾಗ, ಇವರು ತಮ್ಮ ಎಲ್ಲ ವೃತ್ತಾಂತವನ್ನು ತಿಳಿಸಿದರು. ಆಗ ಅವಳು – ''ಮೊದಲಿಗೆ ಬಾಯಾರಿಕೆ ತೀರಿಸಿಕೊಂಡು, ಮಧುರವಾದ ಹಣ್ಣುಗಳನ್ನು ಭುಂಜಿಸಿರಿ'' ಎಂದು ಅಪ್ಪಣೆ ಕೊಡಿಸಿದಳು. ಆಕೆಯ ಅಪ್ಪಣೆಪಡೆದು ವಾನರರೆಲ್ಲರೂ ಸ್ನಾನವನ್ನು ಮಾಡಿ, ಸಿಹಿಯಾದ ಹಣ್ಣುಗಳನ್ನು ತಿಂದು, ಆಕೆಯ ಬಳಿಗೆ ಬಂದು ಸೇರಿದರು. ಆಗ ಆಕೆಯು ಅವರಿಗೆ ತನ್ನ ಎಲ್ಲ ಕಥೆಯನ್ನು ಹೇಳುತ್ತಾ ''ನನ್ನನ್ನು ಸ್ವಯಂಪ್ರಭೆ'' ಎಂದು ಹೇಳುತ್ತಾರೆ.* ಇನ್ನು ನಾನು ಶ್ರೀರಾಮಚಂದ್ರನ ಬಳಿಗೆ ಹೋಗುತ್ತಿರುವೆನು. ನೀವೆಲ್ಲ ಕಣ್ಣುಮುಚ್ಚಿಕೊಳ್ಳಿ. ನಿಮಗೆ ಹೊರಗೆ ಕಳಿಸುತ್ತೇನೆ. ನೀವು ಖಂಡಿತವಾಗಿ ಸೀತೆಯನ್ನು ಕಾಣುವಿರಿ. ನಿರಾಶೆಗೊಳ್ಳದಿರಿ'' ಎಂದು ತಿಳಿಸಿದಳು. ಅವರೆಲ್ಲ ಕಣ್ಣು ಮುಚ್ಚಿ ತೆರೆಯುವುದರೊಳಗೆ ಸಮುದ್ರತೀರದಲ್ಲಿದ್ದರು. ಅನಂತರ ಆಕೆಯು ಶ್ರೀರಾಮನಿದ್ದಲ್ಲಿಗೆ ತೆರಳಿ, ಅವನ ಚರಣಗಳಿಗೆರಗಿ ಪರಿಪರಿಯಾಗಿ ಪ್ರಾರ್ಥಿಸಿಕೊಂಡಳು. ಪ್ರಭುವು ಆಕೆಗೆ ಅಚಲವಾದ ಭಕ್ತಿಯನ್ನು ಕರುಣಿಸಿದನು. (ಚೌ/೧-೪)

**ದೋ – ಬದರೀಬನ ಕಹುँ ಸೋ ಗಈ ಪ್ರಭು ಅಗ್ಯಾ ಧರಿ ಸೀಸ।**
**ಉರ ಧರಿ ರಾಮ ಚರನ ಜುಗ ಜೇ ಬಂದತ ಅಜ ಈಸ॥ ೨೫ ॥**

ಪ್ರಭುವಿನ ಆಜ್ಞೆಯನ್ನು ಶಿರಸಾವಹಿಸಿ, ಹರವಿರಿಂಚಿಗಳು ನಿರಂತರ ವಂದಿಸುವ ಶ್ರೀರಘುರಾಮನ ಚರಣಗಳಿಗೆರಗಿ, ತಪಸ್ವಿನಿಯಾದ ಆ ಸ್ವಯಂಪ್ರಭೆಯು ಬದರಿಕಾಶ್ರಮಕ್ಕೆ ಹೊರಟುಹೋದಳು. (ದೋ/೨೫)

**ಚೌ – ಇಹಾँ ಬಿಚಾರಹಿಂ ಕಪಿ ಮನ ಮಾಹೀಂ। ಬೀತೀ ಅವಧಿ ಕಾಜು ಕಛು ನಾಹೀಂ॥**
**ಸಬ ಮಿಲಿ ಕಹಹಿಂ ಪರಸ್ಪರ ಬಾತಾ। ಬಿನು ಸುಧಿ ಲಏँ ಕರಬ ಕಾ ಭ್ರಾತಾ॥ ೧ ॥**
**ಕಹ ಅಂಗದ ಲೋಚನ ಭರಿ ಬಾರೀ। ದುಹುँ ಪ್ರಕಾರ ಭಇ ಮೃತ್ಯು ಹಮಾರೀ॥**
**ಇಹಾँ ನ ಸುಧಿ ಸೀತಾ ಕೈ ಪಾಈ। ಉಹಾँ ಗಏँ ಮಾರಿಹಿ ಕಪಿರಾಈ॥ ೨ ॥**

---

* ಸ್ವಯಂಪ್ರಭೆಯು ಶಾಂಡಿಲ್ಯ ಮುನಿಯ ಮಗಳು. ಇವಳಿಗೆ ಶಾಂಡಿಲಿ ಎಂಬ ಹೆಸರೂ ಇದೆ. ದಾನವ ಶಿಲ್ಪಿ ಮಯನಿಂದ ರಚಿತವಾದ ಈ ವಿಚಿತ್ರವಾದ ಗುಹೆಯಲ್ಲಿ ಮಯನ ಪತ್ನಿಯಾದ ಹೇಮೆಯೊಂದಿಗೆ ಅಲ್ಲಿ ವಾಸವಾಗಿದ್ದಳು. ಹೇಮೆಯು ದೇವಲೋಕಕ್ಕೆ ತೆರಳಿದ ಬಳಿಕ ಆತನ ಸಖೀ ಸ್ವಯಂಪ್ರಭೆಯು ಆ ಗುಹೆಯಲ್ಲಿದ್ದು ತಪಸ್ಸನ್ನಾಚರಿಸುತ್ತಿದ್ದಳು. (ಮಹಾಭಾರತ ಉ. ೧೧೩, ಭೀ. ೮; ವಾ.ರಾಮಾ. ಕಿ. ೫೦, ೫೧; ಸ್ಕಾಂದ. ನಾಗರ ೮೧, ೮೨ ನೋಡಿರಿ)

ಪಿತಾ ಬಧೇ ಪರ ಮಾರತ ಮೋಹೀ। ರಾಖಾ ರಾಮ ನಿಹೋರ ನ ಓಹೀ॥
ಪುನಿ ಪುನಿ ಅಂಗದ ಕಹ ಸಬ ಪಾಹೀಂ। ಮರನ ಭಯಉ ಕಛು ಸಂಸಯ ನಾಹೀಂ॥ ೩ ॥
ಅಂಗದ ಬಚನ ಸುನತ ಕಪಿ ಬೀರಾ। ಬೋಲಿ ನ ಸಕಹಿಂ ನಯನ ಬಹ ನೀರಾ॥
ಛನ ಏಕ ಸೋಚ ಮಗನ ಹೋಇ ರಹೇ। ಪುನಿ ಅಸ ಬಚನ ಕಹತ ಸಬ ಭಏ॥ ೪ ॥
ಹಮ ಸೀತಾ ಕೈ ಸುಧಿ ಲೀನ್ಹೆ ಬಿನಾ। ನಹಿಂ ಜೈಹೈಂ ಜುಬರಾಜ ಪ್ರಬೀನಾ॥
ಅಸ ಕಹಿ ಲವನ ಸಿಂಧು ತಟ ಜಾಈ। ಬೈಠೇ ಕಪಿ ಸಬ ದರ್ಭ ಡಸಾಈ॥ ೫ ॥
ಜಾಮವಂತ ಅಂಗದ ದುಖ ದೇಖೀ। ಕಹೀಂ ಕಥಾ ಉಪದೇಸ ಬಿಸೇಷೀ॥
ತಾತ ರಾಮ ಕಹುಂ ನರ ಜನಿ ಮಾನಹುಂ। ನಿರ್ಗುನ ಬ್ರಹ್ಮ ಅಜಿತ ಅಜ ಜಾನಹು॥ ೬ ॥
ಹಮ ಸಬ ಸೇವಕ ಅತಿ ಬಡಭಾಗೀ। ಸಂತತ ಸಗುನ ಬ್ರಹ್ಮ ಅನುರಾಗೀ॥ ೭ ॥

ಇತ್ತ ವಾರಿಧಿಯ ತೀರದಲ್ಲಿ ವಾನರರೆಲ್ಲರೂ – ''ಅವಧಿ ಕಳೆದುಹೋಯಿತು. ಆದರೆ ಬಂದ ಕಾರ್ಯವಾಗಲಿಲ್ಲವಲ್ಲ'' ಎಂದು ಆಲೋಚಿಸತೊಡಗಿದರು. ಅವರೆಲ್ಲ ಸೇರಿ ಪರಸ್ಪರ ಮಾತನಾಡಿಕೊಂಡರು – ''ಸೋದರರೇ ! ಸೀತಾದೇವಿಯ ಸಮಾಚಾರ ತಿಳಿಯದೆ ನಾವು ಕಿಷ್ಕಿಂಧೆಗೆ ಹೋದರೂ ಪ್ರಯೋಜನವೇನು?'' ಆಗ ಅಂಗದನ ಕಣ್ಣುಗಳು ಹನಿಗೂಡಿದವು. ಅವನೆಂದ – ''ಯಾವ ವಿಧದಿಂದಲೂ ನಮಗೆ ಮೃತ್ಯುವೇ ಗತಿ. ಇಲ್ಲಿ ಸಮುದ್ರತೀರದಲ್ಲಿ ಸೀತೆಯ ಜಾಡು ತಿಳಿಯದೆ ಸಾಯುತ್ತಿದ್ದೇವೆ. ಅಲ್ಲಿಗೆ ಬರಿಗೈಯಲ್ಲಿ ಹೋದರೆ ಸುಗ್ರೀವನಿಂದ ಮರಣತಪ್ಪದು. ಅವನು ತಂದೆಯವರು ಸತ್ತಬಳಿಕ ಕೂಡಲೇ ನನ್ನನ್ನು ಕೊಲ್ಲಿಸುತ್ತಿದ್ದ. ಆದರೆ ಶ್ರೀರಾಮಚಂದ್ರನು ನನ್ನನ್ನು ಕಾಪಾಡಿದನು. ಇದರಲ್ಲಿ ಸುಗ್ರೀವನ ಯಾವ ಹಂಗೂ ಇಲ್ಲ. ಹೇಗಿದ್ದರೂ ನಮಗೆ ಮರಣವೇ ನಿಶ್ಚಿತ.'' ವಾನರವೀರರು ಅಂಗದನ ಮಾತನ್ನ ಕೇಳಿ, ಅಸಹಾಯಕರಾಗಿ ಮಾತಿಲ್ಲದೆ ತೆಪ್ಪಗೆ ಕುಳಿತುಬಿಟ್ಟರು. ಅವರ ಕಣ್ಣುಗಳಿಂದ ಕಂಬನಿಯ ಕೋಡಿಯೇ ಹರಿಯಿತು. ಕ್ಷಣಕಾಲ ಅವರೆಲ್ಲ ಯೋಚನೆಗೊಳಗಾದರು. ಅನಂತರ ಅವರೆಲ್ಲರೂ – 'ಯುವರಾಜಾ ! ನಾವು ಸೀತೆಯನ್ನು ಹುಡುಕದೆ ಹಿಂತಿರುಗಲಾರೆವು' ಎಂದು ಹೇಳಿ ಆ ವಾನರವೀರರೆಲ್ಲ ಲವಣಸಾಗರದ ತಡಿಯಲ್ಲಿ ದರ್ಭೆಗಳನ್ನು ಹಾಸಿ ಕುಳಿತುಕೊಂಡು, ನಿರಶನದ ಮೂಲಕ ಪ್ರಾಣತ್ಯಾಗಮಾಡಲು ನಿಶ್ಚಯಿಸಿದರು. ಅಂಗದನ ದುಃಖವನ್ನು ಕಂಡು ಜಾಂಬವಂತರು ಅವನಿಗೆ ಧೈರ್ಯಹೇಳಲು ಅನೇಕ ಉಪದೇಶಾತ್ಮಕ ಕಥೆಗಳನ್ನು ಹೇಳಿದರು. ಮತ್ತೆ ಹೇಳುತ್ತಾರೆ – ''ಮಗೂ ! ಶ್ರೀರಾಮನು ಹುಲುಮನುಜನೆಂದು ಭಾವಿಸಬೇಡ. ಅವನು ನಿರ್ಗುಣ ಪರಬ್ರಹ್ಮನೂ, ಅಜೇಯನೂ, ಜನ್ಮರಹಿತನೂ ಎಂದು ತಿಳಿ. ನಾವೆಲ್ಲ ಅವನ ಸೇವಕರು ನಿಜಕ್ಕೂ ಭಾಗ್ಯಶಾಲಿಗಳು. ಸಗುಣಬ್ರಹ್ಮನಾದ ಆ ಶ್ರೀರಾಮನಲ್ಲಿ ನಿರಂತರ ಪ್ರೀತಿಯುಳ್ಳವರು. (ಚೌ/೧-೭)

**ದೋ – ನಿಜ ಇಚ್ಛಾಂ ಪ್ರಭು ಅವತರಇ ಸುರ ಮಹಿ ಗೋ ದ್ವಿಜ ಲಾಗಿ।**
**ಸಗುನ ಉಪಾಸಕ ಸಂಗ ತಹಂ ರಹಹಿಂ ಮೋಚ್ಛ ಸಬ ತ್ಯಾಗಿ॥ ೨೬ ॥**

ದೇವತೆಗಳು, ಭೂದೇವೀ, ಗೋವುಗಳು, ಬ್ರಾಹ್ಮಣರು ಇವರೆಲ್ಲರ ಉದ್ಧಾರಕ್ಕಾಗಿ ಭಗವಂತನು ತನ್ನ ಇಚ್ಛೆಯಿಂದ ಅವತರಿಸುತ್ತಾನೆ. ಆಗ ಸಗುಣೋಪಾಸಕರಾದ ಭಕ್ತರೆಲ್ಲರೂ ಸರ್ವವಿಧವಾದ ಸುಖಗಳನ್ನು ತ್ಯಜಿಸಿ, ಮೋಕ್ಷವನ್ನೂ ಕೂಡ ಆಶಿಸದೆ ಅವನ ಸೇವೆಮಾಡುತ್ತಾ ಅವನೊಡನೆ ಇರುತ್ತಾರೆ.'' (ದೋ/೨೬)

## ಸಂಪಾತಿಯ ಸಹಕಾರ

ಚೌ – ಏಹಿ ಬಿಧಿ ಕಥಾ ಕಹಹಿಂ ಬಹು ಭಾಂತೀ। ಗಿರಿ ಕಂದರಾਂ ಸುನೀ ಸಂಪಾತೀ॥
ಬಾಹೇರ ಹೋಇ ದೇಖಿ ಬಹು ಕೀಸಾ। ಮೋಹಿ ಅಹಾರ ದೀನ್ಹ ಜಗದೀಸಾ॥ ೧ ॥
ಆಜು ಸಬಹಿ ಕಹಂ ಭಚ್ಛನ ಕರಹೂಂ। ದಿನ ಬಹು ಚಲೇ ಅಹಾರ ಬಿನು ಮರಊಂ॥
ಕಬಹುಂ ನ ಮಿಲ ಭರಿ ಉದರ ಅಹಾರಾ। ಆಜು ದೀನ್ಹ ಬಿಧಿ ಏಕಹಿಂ ಬಾರಾ॥ ೨ ॥
ಡರಪೇ ಗೀಧ ಬಚನ ಸುನಿ ಕಾನಾ। ಅಬ ಭಾ ಮರನ ಸತ್ಯ ಹಮ ಜಾನಾ॥
ಕಪಿ ಸಬ ಉಠೇ ಗೀಧ ಕಹಂ ದೇಖೀ। ಜಾಮವಂತ ಮನ ಸೋಚ ಬಿಸೇಷೀ॥ ೩ ॥
ಕಹ ಅಂಗದ ಬಿಚಾರಿ ಮನ ಮಾಹೀಂ। ಧನ್ಯ ಜಟಾಯೂ ಸಮ ಕೋಉ ನಾಹೀಂ॥
ರಾಮ ಕಾಜ ಕಾರನ ತನು ತ್ಯಾಗೀ। ಹರಿ ಪುರ ಗಯಉ ಪರಮ ಬಡಭಾಗೀ॥ ೪ ॥

**ಸುನಿ ಖಗ ಹರಷ ಸೋಕ ಜುತ ಬಾನೀ। ಆವಾ ನಿಕಟ ಕಪಿನ್ಹ ಭಯ ಮಾನೀ॥**
**ತಿನ್ಹಹಿ ಅಭಯ ಕರಿ ಪೂಛೆಸಿ ಜಾಈ। ಕಥಾ ಸಕಲ ತಿನ್ಹ ತಾಹಿ ಸುನಾಈ॥ ೫ ॥**
**ಸುನಿ ಸಂಪಾತಿ ಬಂಧು ಕೈ ಕರನೀ। ರಘುಪತಿ ಮಹಿಮಾ ಬಹುಬಿಧಿ ಬರನೀ॥ ೬ ॥**

ಈ ಪ್ರಕಾರ ಜಾಂಬವಂತರು ಅನೇಕ ಕಥೆಗಳನ್ನು ಹೇಳುತ್ತಿದ್ದಾಗ, ಅಲ್ಲೇ ಸಮೀಪದ ಪರ್ವತ ಕಂದಕದಲ್ಲಿದ್ದ ಸಂಪಾತಿ ಎಂಬ ಗೃಧ್ರರಾಜನು ಇವರ ಮಾತನ್ನು ಕೇಳಿದನು. ಮತ್ತೆ ಅವನು ಹೊರಕ್ಕೆ ಬಂದು ನೋಡಿದ – ಬಹಳ ಮಂದಿ ವಾನರರು ಅವನ ಕಣ್ಣಿಗೆ ಬಿದ್ದರು. ಅವನು ಅಂದುಕೊಂಡನು – 'ಜಗದೀಶ್ವರನು ನನಗೆ ಕುಳಿತಲ್ಲಿಗೇ ಆಹಾರವನ್ನು ಕಳಿಸಿರುವನು. ಇಂದು ಇವರೆಲ್ಲರನ್ನು ತಿಂದುಬಿಡುತ್ತೇನೆ. ಬಹಳ ದಿನಗಳಿಂದ ನಾನು ಹಸಿದಿದ್ದೆ. ಹೊಟ್ಟೆತುಂಬಾ ತಿಂದಿದ್ದೇ ಇಲ್ಲ. ಇಂದು ವಿಧಿಯು ಒತ್ತಟ್ಟಿಗೆ ಇಷ್ಟೊಂದು ಆಹಾರವನ್ನು ಕರುಣಿಸಿದೆ.' ಗೃಧ್ರನಾಡಿದ ಮಾತನ್ನು ಕೇಳಿದ ಕೂಡಲೇ ವಾನರರೆಲ್ಲ ಭಯಗೊಂಡು – 'ಈಗ ನಿಜವಾಗಿಯೇ ಸಾವು ಸಮೀಪಿಸಿತು' ಎಂದುಕೊಂಡರು. ಅನಂತರ ಆ ಹದ್ದನ್ನು ಕಂಡು ಎಲ್ಲ ಕಪಿಗಳು ಎದ್ದು ನಿಂತುಕೊಂಡರು. ಜಾಂಬವಂತನಿಗೆ ತುಂಬಾ ಯೋಚನೆಯಿಟ್ಟುಕೊಂಡಿತು. ಆಗ ಅಂಗದನು ಚೆನ್ನಾಗಿ ವಿಚಾರಮಾಡಿ ಇಂತೆಂದನು – ''ಆಹಾ ! ಜಟಾಯುವಿನಂತಹ ಧನ್ಯಾತ್ಮರು ಯಾರೂ ಇಲ್ಲ. ಅವನು ಪರಮಭಾಗ್ಯಶಾಲಿಯು. ಶ್ರೀರಾಮನ ಕಾರ್ಯಕ್ಕಾಗಿ ತನ್ನ ಶರೀರವನ್ನೇ ತ್ಯಾಗಮಾಡಿ ಪರಮ ಪದವನ್ನು ಸೇರಿದನು.'' ಹರ್ಷ ಶೋಕದಿಂದ ಕೂಡಿದ ಈ ಮಾತನ್ನು ಕೇಳುತ್ತಲೇ ಆ ಗೃಧ್ರವು ವಾನರರ ಬಳಿಗೆ ಬಂದಿತು. ಆ ಭೀಕರ ಪಕ್ಷಿಯನ್ನು ಕಂಡು ವಾನರರು ಹೆದರಿಹೋದರು. ಸಂಪಾತಿಯು ಅವರಿಗೆ ಅಭಯವನ್ನಿತ್ತು, ಜಟಾಯುವಿನ ವೃತ್ತಾಂತವನ್ನು ಕೇಳಿದನು. ಆಗ ಅವರು ಜಟಾಯುವಿನ ಎಲ್ಲ ಕಥೆಯನ್ನು ಅರುಹಿದರು. ಸೋದರನಾದ ಜಟಾಯುವಿನ ಸಾಹಸವನ್ನು ಕೇಳಿ, ಸಂಪಾತಿಯು ಶ್ರೀರಘುನಾಥನ ಮಹಿಮೆಯನ್ನು ಕೊಂಡಾಡಿದನು. (ಚೌ/೧-೬)

**ದೋ – ಮೊಹಿ ಲೈ ಜಾಹು ಸಿಂಧುತಟ ದೇಉँ ತಿಲಾಂಜಲಿ ತಾಹಿ।**
**ಬಚನ ಸಹಾಇ ಕರಬಿ ಮೈँ ಪೈಹಹು ಖೋಜಹು ಜಾಹಿ॥ ೨೭ ॥**

ಸಂಪಾತಿಯು ಹೇಳಿತು– ''ನನ್ನನ್ನು ಕಡಲ ತಡಿಗೆ ಒಯ್ಯಿರಿ. ನಾನು ತಮ್ಮನಾದ ಜಟಾಯುವಿಗೆ ತಿಲಾಂಜಲಿಯನ್ನು ನೀಡಬೇಕು. ಇದಕ್ಕೆ ಪ್ರತಿಯಾಗಿ ನಾನು ನಿಮಗೆ ಮಾತಿನ ಸಹಾಯ ಮಾಡಬಲ್ಲೆ. ನೀವು ಹುಡುಕುತ್ತಿರುವ ಸೀತಾದೇವಿಯ ಜಾಡನ್ನು ತಿಳಿಸುತ್ತೇನೆ. ಅವಳು ತಪ್ಪದೇ ನಿಮಗೆ ಸಿಗುವಳು. (ದೋ/೨೭)

**ಚೌ – ಅನುಜ ಕ್ರಿಯಾ ಕರಿ ಸಾಗರ ತೀರಾ। ಕಹಿ ನಿಜ ಕಥಾ ಸುನಹು ಕಪಿ ಬೀರಾ॥**
**ಹಮ ದ್ವೌ ಬಂಧು ಪ್ರಥಮ ತರುನಾಈ। ಗಗನ ಗಏ ರಬಿ ನಿಕಟ ಉಡಾಈ॥ ೧ ॥**
**ತೇಜ ನ ಸಹಿ ಸಕ ಸೋ ಫಿರಿ ಆವಾ। ಮೈँ ಅಭಿಮಾನೀ ರಬಿ ನಿಅರಾವಾ॥**
**ಜರೇ ಪಂಖ ಅತಿ ತೇಜ ಅಪಾರಾ। ಪರೇಉँ ಭೂಮಿ ಕರಿ ಘೋರ ಚಿಕಾರಾ॥ ೨ ॥**
**ಮುನಿ ಏಕ ನಾಮ ಚಂದ್ರಮಾ ಓಹೀ। ಲಾಗೀ ದಯಾ ದೇಖಿ ಕರಿ ಮೋಹಿ॥**
**ಬಹು ಪ್ರಕಾರ ತೇಹಿँ ಗ್ಯಾನ ಸುನಾವಾ। ದೇಹ ಜನಿತ ಅಭಿಮಾನ ಛಡಾವಾ॥ ೩ ॥**
**ತ್ರೇತಾँ ಬ್ರಹ್ಮ ಮನುಜ ತನು ಧರಿಹೀ। ತಾಸು ನಾರಿ ನಿಸಿಚರ ಪತಿ ಹರಿಹೀ॥**
**ತಾಸು ಖೋಜ ಪಠಇಹಿ ಪ್ರಭು ದೂತಾ। ತಿನ್ಹಹಿ ಮಿಲೇँ ತೈँ ಹೋಬ ಪುನೀತಾ॥ ೪ ॥**
**ಜಮಿಹಹಿँ ಪಂಖ ಕರಸಿ ಜನಿ ಚಿಂತಾ। ತಿನ್ಹಹಿ ದೆಖಾಇ ದೇಹೆಸು ತೈँ ಸೀತಾ॥**
**ಮುನಿ ಕಇ ಗಿರಾ ಸತ್ಯ ಭಇ ಆಜೂ। ಸುನಿ ಮಮ ಬಚನ ಕರಹು ಪ್ರಭು ಕಾಜೂ॥ ೫ ॥**
**ಗಿರಿ ತ್ರಿಕೂಟ ಊಪರ ಬಸ ಲಂಕಾ। ತಹँ ರಹ ರಾವನ ಸಹಜ ಅಸಂಕಾ॥**
**ತಹँ ಅಸೋಕ ಉಪಬನ ಜಹँ ರಹಈ। ಸೀತಾ ಬೈಠಿ ಸೋಚ ರತ ಅಹಈ॥ ೬ ॥**

ಸಂಪಾತಿಯು ಸಮುದ್ರತೀರದಲ್ಲಿ ತಮ್ಮನಾದ ಜಟಾಯುವಿನ ಶ್ರಾದ್ಧಾದಿಗಳನ್ನು ಮಾಡಿ, ತನ್ನ ಕಥೆಯನ್ನು ಹೇಳತೊಡಗಿದನು – ''ಎಲೈ ವಾನರವೀರರೇ ! ಕೇಳಿರಿ. ನಾವು ಅಣ್ಣತಮ್ಮಂದಿರಿಬ್ಬರೂ ಏರು ಜವ್ವನದಲ್ಲಿ ಒಮ್ಮೆ ಹಾರಿ ಸೂರ್ಯನ ಬಳಿಗೆ ಹೋಗುತ್ತಿದ್ದೆವು. ತಮ್ಮ ಜಟಾಯುವಿಗೆ ಸೂರ್ಯನ ಪ್ರಖರವಾದ ಶಾಖ ತಡೆಯಲಾಗದೆ ಕೆಳಗೆ ಬಂದುಬಿಟ್ಟನು. ಆದರೆ ಅಭಿಮಾನಿಯಾದ ನಾನು ಸೂರ್ಯನ ಹತ್ತಿರಕ್ಕೆ ಹೋಗುತ್ತಿದ್ದಂತೆ, ಸೂರ್ಯನ ಪ್ರಚಂಡ ಕಿರಣಜ್ವಾಲೆಗಳಿಂದ ನನ್ನ ರೆಕ್ಕೆಗಳೆಲ್ಲ ಸುಟ್ಟುಹೋಗಿ, ನಾನು ಜೋರಾಗಿ ಚೀರುತ್ತಾ ನೆಲಕ್ಕುರುಳಿದೆನು. ಅಲ್ಲಿ ಚಂದ್ರಮಾ ಎಂಬ ಓರ್ವ ಮುನಿಗಳಿದ್ದರು. ನನ್ನನ್ನು ಕಂಡು ಅವರಿಗೆ ತುಂಬಾ ದಯೆ ಉಂಟಾಗಿ, ನನಗೆ ಅನೇಕ ರೀತಿಯಿಂದ ಜ್ಞಾನಬೋಧೆ ಮಾಡಿ, ನನ್ನ ದೇಹಜನ್ಯವಾದ ಅಜ್ಞಾನವನ್ನೂ,

ಅಭಿಮಾನವನ್ನೂ ಕಿತ್ತೊಗೆದರು. ಮತ್ತೆ ಹೇಳಿದರು– ''ತ್ರೇತಾಯುಗದಲ್ಲಿ ಸಾಕ್ಷಾತ್ ಪರಬ್ರಹ್ಮನು ಮಾನವನಾಗಿ ಅವತರಿಸುವನು. ಅವನ ಪತ್ನಿಯನ್ನು ರಾಕ್ಷಸರಾಜನಾದ ರಾವಣನು ಅಪಹರಿಸುವನು. ಆಕೆಯನ್ನು ಅರಸಲು ಪ್ರಭುವು ದೂತರನ್ನು ಅಟ್ಟುವನು. ಅವರನ್ನು ಕಂಡಾಗ ನೀನು ಪುನೀತನಾಗುವೆ. ನಿನ್ನ ರೆಕ್ಕೆಗಳು ಪುನಃ ಹುಟ್ಟಿಕೊಳ್ಳುವುವು. ಚಿಂತಿಸಬೇಡ. ಅವರಿಗೆ ನೀನು ಸೀತೆಯ ಜಾಡನ್ನು ತಿಳಿಸು.'' ಆ ಮುನಿಯ ವಾಣಿಯು ಇಂದು ಸತ್ಯವಾಯಿತು. ಈಗ ನನ್ನ ಮಾತನ್ನು ಕೇಳಿರಿ – ನೀವು ಶ್ರೀರಾಮಚಂದ್ರಪ್ರಭುವಿನ ಕಾರ್ಯವನ್ನು ನೆರವೇರಿಸಿರಿ. ತ್ರಿಕೂಟ ಪರ್ವತದ ಮೇಲೆ ಲಂಕಾನಗರವು ನೆಲೆಸಿದೆ. ಅಲ್ಲಿ ಸಹಜವಾಗಿಯೇ ನಿರ್ಭಯನಾದ ರಾವಣನು ಇರುವನು. ಆ ಲಂಕೆಯಲ್ಲಿ 'ಅಶೋಕವನ'ವೆಂಬ ಉಪವನವಿರುವುದು. ಅಲ್ಲೇ ಸೀತಾದೇವಿಯು ಶ್ರೀರಾಮಚಂದ್ರನನ್ನು ಸ್ಮರಿಸುತ್ತಾ ಶೋಕಮಗ್ನಳಾಗಿ ಕುಳಿತಿದ್ದಾಳೆ. (ಚೌ/೧-೬)

**ದೋ – ಮೈಂ ದೇಖಉಂ ತುಮ್ಹ ನಾಹೀಂ ಗೀಧಹಿ ದೃಷ್ಟಿ ಅಪಾರ ।**
**ಬೂಢ ಭಯಉಂ ನ ತ ಕರತೇಉಂ ಕಛುಕ ಸಹಾಯ ತುಮ್ಹಾರ ॥ ೨೮ ॥**

ನಾನು ಇಲ್ಲಿಂದಲೇ ಆಕೆಯನ್ನು ನೋಡುತ್ತಿದ್ದೇನೆ. ನೀವು ನೋಡಲಾರಿರಿ. ಏಕೆಂದರೆ, ಗೃಧ್ರದೃಷ್ಟಿಯು ತುಂಬ ತೀಕ್ಷ್ಣವಾಗಿರುತ್ತದೆ. ಏನು ಮಾಡಲಿ? ನಾನೀಗ ಮುದುಕನಾಗಿರುವೆನು. ಇಲ್ಲದಿದ್ದರೆ ಕಿಂಚಿತ್ತಾದರೂ ನಿಮಗೆ ಸಹಾಯಮಾಡುತ್ತಿದ್ದೆ. (ದೋ/೨೮)

## ಶತಯೋಜನ ಸಮುದ್ರದಾಟಲು ಚರ್ಚೆ

**ಚೌ – ಜೋ ನಾಘಇ ಸತ ಜೋಜನ ಸಾಗರ । ಕರಇ ಸೊ ರಾಮ ಕಾಜ ಮತಿ ಆಗರ ॥**
**ಮೋಹಿ ಬಿಲೋಕಿ ಧರಹು ಮನ ಧೀರಾ । ರಾಮ ಕೃಪಾಂ ಕಸ ಭಯಉ ಸರೀರಾ ॥ ೧ ॥**
**ಪಾಪಿಉ ಜಾ ಕರ ನಾಮ ಸುಮಿರಹೀಂ । ಅತಿ ಅಪಾರ ಭವಸಾಗರ ತರಹೀಂ ॥**
**ತಾಸು ದೂತ ತುಮ್ಹ ತಜಿ ಕದರಾಈ । ರಾಮ ಹೃದಯಂ ಧರಿ ಕರಹು ಉಪಾಈ ॥ ೨ ॥**
**ಅಸ ಕಹಿ ಗರುಡ ಗೀಧ ಜಬ ಗಯಊ । ತಿನ್ಹ ಕೇಂ ಮನ ಅತಿ ಬಿಸಮಯ ಭಯಊ ॥**
**ನಿಜ ನಿಜ ಬಲ ಸಬ ಕಾಹೂಂ ಭಾಷಾ । ಪಾರ ಜಾಇ ಕರ ಸಂಸಯ ರಾಖಾ ॥ ೩ ॥**
**ಜರಠ ಭಯಉಂ ಅಬ ಕಹಇ ರಿಛೇಸಾ । ನಹಿಂ ತನ ರಹಾ ಪ್ರಥಮ ಬಲ ಲೇಸಾ ॥**
**ಜಬಹಿಂ ತ್ರಿಬಿಕ್ರಮ ಭಏ ಖರಾರೀ । ತಬ ಮೈಂ ತರುನ ರಹೇಉಂ ಬಲ ಭಾರೀ ॥ ೪ ॥**

ನೂರು ಯೋಜನ ಸಮುದ್ರವನ್ನು ಹಾರಿ ದಾಟಬಲ್ಲ ಮಹಾವೀರನಾದ ಪ್ರಜ್ಞಾಶಾಲಿಯೇ ಶ್ರೀರಾಮನ ಈ ಕಾರ್ಯವನ್ನು ಮಾಡಬಲ್ಲನು. ನನ್ನನ್ನು ನೋಡಿ ನೀವು ಧೈರ್ಯತಳೆಯಿರಿ. ನಿರಾಶರಾಗಬೇಡಿರಿ. ಶ್ರೀರಾಮನ ಕೃಪೆಯಿಂದ ನನ್ನ ಶರೀರ ಹೇಗಾಗಿದೆ ನೋಡಿ. ರೆಕ್ಕೆಗಳಿಲ್ಲದ ಶರೀರ ಈಗ ರೆಕ್ಕೆಗಳು ಮೂಡಿ ಸುಂದರವಾಗಿದೆ. ಅವನ ಕೇವಲ ನಾಮಸ್ಮರಣೆಯಿಂದಲೇ ಪಾಪಗಳು ತೊಲಗಿ, ಅಪಾರ ಭವಸಾಗರವನ್ನು ದಾಟಬಹುದು. ಅಂತಹ ಮಹಾಪುರುಷನ ದೂತರು ನೀವು. ಆದ್ದರಿಂದ ಹೇಡಿತನವನ್ನು ತೊರೆದು, ಹೃದಯದಲ್ಲಿ ಶ್ರೀರಾಮನನ್ನು ಧರಿಸಿಟ್ಟುಕೊಂಡು ಕಾರ್ಯಪ್ರವೃತ್ತರಾಗಿರಿ. (ಕಾಕಭುಶುಂಡಿ ಹೇಳುತ್ತಾರೆ –) ಎಲೈ ಖಗರಾಜಾ ! ಸಂಪಾತಿಯು ಹೀಗೆ ಹೇಳಿ, ಹೊಸ ರೆಕ್ಕೆಗಳಿಂದ ಹಾರಿಹೋದನು. ಆಗ ವಾನರರಿಗೆ ಅತ್ಯಂತ ವಿಸ್ಮಯವಾಯಿತು. ಆಗ ಎಲ್ಲರೂ ತಮ್ಮ-ತಮ್ಮ ಪರಾಕ್ರಮವನ್ನು ಹೇಳಿಕೊಂಡರು. ಆದರೆ ಸಮುದ್ರವನ್ನು ದಾಟಲು ತಮ್ಮ ಸಂದೇಹವನ್ನು ಪ್ರಕಟಿಸಿದರು. ಆಗ ಋಕ್ಷರಾಜ ಜಾಂಬವಂತರು ಹೇಳತೊಡಗಿದರು – ''ನಾನೀಗ ಮುದುಕನಾಗಿ ಬಿಟ್ಟಿದ್ದೇನೆ. ಶರೀರದಲ್ಲಿ ಮೊದಲಿನ ಕಸುವು ಲೇಶವೂ ಇಲ್ಲ. ಖರಾರಿಯಾದ ಶ್ರೀರಾಮನು ವಾಮನಾವತಾರವೆತ್ತಿದಾಗ ನಾನು ಯುವಕನಾಗಿದ್ದೆ. ನನ್ನಲ್ಲಿ ತುಂಬಾ ಶಕ್ತಿಯಿತ್ತು. (ಚೌ/೧-೪)

**ದೋ – ಬಲಿ ಬಾಂಧತ ಪ್ರಭು ಬಾಢೇಉ ಸೋ ತನು ಬರನಿ ನ ಜಾಇ ।**
**ಉಭಯ ಘರೀ ಮಹಂ ದೀನ್ಹೀಂ ಸಾತ ಪ್ರದಚ್ಛಿನ ಧಾಇ ॥ ೨೯ ॥**

ಬಲಿಚಕ್ರವರ್ತಿಯನ್ನು ಬಂಧಿಸುವಾಗ ವಾಮನನು ತ್ರಿವಿಕ್ರಮನಾದಾಗಿನ ಆ ವಿರಾಟ್‌ರೂಪವನ್ನು ಯಾರೂ ವರ್ಣಿಸಲಾರರು. ಆದರೆ ನಾನು ಎರಡೇ ಗಳಿಗೆಯಲ್ಲಿ ಆ ವಿರಾಟ್‌ರೂಪಕ್ಕೆ ಏಳು ಪ್ರದಕ್ಷಿಣೆ ಮಾಡಿರುವೆನು.'' (ದೋ/೨೯)

**ಚೌ – ಅಂಗದ ಕಹಇ ಜಾಉಂ ಮೈಂ ಪಾರಾ । ಜಿಯಂ ಸಂಸಯ ಕಛು ಫಿರತೀ ಬಾರಾ ॥**
**ಜಾಮವಂತ ಕಹ ತುಮ್ಹ ಸಬ ಲಾಯಕ । ಪಠಇಅ ಕಿಮಿ ಸಬ ಹೀ ಕರ ನಾಯಕ ॥ ೧ ॥**

ಕಹಇ ರೀಛಪತಿ ಸುನು ಹನುಮಾನಾ। ಕಾ ಚುಪ ಸಾಧಿ ರಹೆಹು ಬಲವಾನಾ॥
ಪವನ ತನಯ ಬಲ ಪವನ ಸಮಾನಾ। ಬುಧಿ ಬಿಬೇಕ ಬಿಗ್ಯಾನ ನಿಧಾನಾ॥೨॥
ಕವನ ಸೊ ಕಾಜ ಕಠಿನ ಜಗ ಮಾಹೀಂ। ಜೋ ನಹಿಂ ಹೋಇ ತಾತ ತುಮ್ಹ ಪಾಹೀಂ॥
ರಾಮ ಕಾಜ ಲಗಿ ತವ ಅವತಾರಾ। ಸುನತಹಿಂ ಭಯಉ ಪರ್ಬತಾಕಾರಾ॥೩॥
ಕನಕ ಬರನ ತನ ತೇಜ ಬಿರಾಜಾ। ಮಾನಹುँ ಅಪರ ಗಿರಿನ್ಹ ಕರ ರಾಜಾ॥
ಸಿಂಹನಾದ ಕರಿ ಬಾರಹಿಂ ಬಾರಾ। ಲೀಲಹಿಂ ನಾಘಉँ ಜಲನಿಧಿ ಖಾರಾ॥೪॥
ಸಹಿತ ಸಹಾಯ ರಾವನಹಿ ಮಾರೀ। ಆನಉँ ಇಹಾँ ತ್ರಿಕೂಟ ಉಪಾರೀ॥
ಜಾಮವಂತ ಮೈಂ ಪೂँಛಉँ ತೋಹೀ। ಉಚಿತ ಸಿಖಾವನು ದೀಜಹು ಮೋಹೀ॥೫॥
ಎತನಾ ಕರಹು ತಾತ ತುಮ್ಹ ಜಾಈ। ಸೀತಹಿ ದೇಖಿ ಕಹಹು ಸುಧಿ ಆಈ॥
ತಬ ನಿಜ ಭುಜ ಬಲ ರಾಜಿವನೈನಾ। ಕೌತುಕ ಲಾಗಿ ಸಂಗ ಕಪಿ ಸೇನಾ॥೬॥

ಆಗ ಅಂಗದನೆಂದ – 'ನಾನು ಸಮುದ್ರವನ್ನು ದಾಟಿಯೇನೋ ಹೋಗಬಲ್ಲೆ. ಆದರೆ ಮರಳಿಬರುವ ಭರವಸೆ ನನಗಿಲ್ಲ. ಜಾಂಬವಂತರು ಹೇಳಿದರು – ಅಂಗದಾ! ನೀನು ಎಲ್ಲ ರೀತಿಯಿಂದಲೂ ಯೋಗ್ಯನಾಗಿರುವೆ. ಆದರೆ ನೀನು ಎಲ್ಲರ ಮುಖಂಡ. ಆದ್ದರಿಂದ ನಿನ್ನನ್ನು ಹೇಗೆ ಕಳಿಸುವುದು? ಅನಂತರ ಋಕ್ಷರಾಜ ಜಾಂಬವಂತರು ಹನುಮಂತನ ಬಳಿ ಇಂತೆಂದರು – ''ಆಂಜನೇಯಾ ! ನೀನು ಮಹಾ ಬಲಶಾಲಿಯು. ಹೀಗೆ ಮೌನವಾಗಿ ಏಕೆ ಕುಳಿತಿರುವೆ? ನೀನು ಪವನತನಯ. ಬಲದಲ್ಲಿ ಅವನಿಗೆ ಸಮಾನನು. ನೀನು ಬುದ್ಧಿ, ವಿವೇಕ, ವಿಜ್ಞಾನಗಳ ನಿಧಿಯಾಗಿರುವೆ. ಅಯ್ಯಾ! ನಿನ್ನ ಕೈಯಿಂದಾಗದ ಕೆಲಸ ಈ ವಿಶ್ವದಲ್ಲಿ ಯಾವುದಿದೆ? ಶ್ರೀರಾಮಚಂದ್ರನ ಕಾರ್ಯಕ್ಕಾಗಿಯೇ ನಿನ್ನ ಅವತಾರವಾಗಿರುವುದು. ಇದನ್ನು ಕೇಳುತ್ತಲೇ ಹನುಮಂತನು ಪರ್ವತದಂತೆ ವಿಶಾಲಕಾಯನಾದನು. ಅವನ ಶರೀರವು ಸ್ವರ್ಣವರ್ಣದ ಅದ್ಭುತ ತೇಜಸ್ಸಿನಿಂದ ಕಂಗೊಳಿಸುತ್ತಿದೆ. ಅವನು ಮತ್ತೊಂದು ಮೇರು ಪರ್ವತವೋ ಎಂಬಂತೆ ಭಾಸವಾಗುತ್ತಿದ್ದನು. ಹನುಮಂತನು ಮತ್ತೆ-ಮತ್ತೆ ಸಿಂಹನಾದಗೈದು ನುಡಿದನು – ''ನಾನು ಈ ಲವಣಸಮುದ್ರವನ್ನು ಲೀಲಾಜಾಲವಾಗಿ ಹಾರಬಲ್ಲೆನು. ರಾವಣನನ್ನು ಪರಿವಾರಸಹಿತ ಕೊಂದು, ತ್ರಿಕೂಟ ಪರ್ವತವನ್ನೇ ಕಿತ್ತು ಇಲ್ಲಿಗೆ ತರುತ್ತೇನೆ.'' ಜಾಂಬವಂತರೇ ! ಈಗ ನಾನು ಏನು ಮಾಡಬೇಕೆಂದು ಸೂಚಿಸಿರಿ. ಜಾಂಬವಂತರು ಹೇಳಿದರು – ''ಅಯ್ಯಾ! ನೀನು ಹೋಗಿ ಸೀತಾದೇವಿಯನ್ನು ಕಂಡು ಬಂದುಬಿಡು. ನೀನು ಇಷ್ಟುಮಾಡಿದರೆ ಸಾಕು, ಆಕೆಯ ಸುದ್ದಿ ತಿಳಿಸು. ಅನಂತರ ರಾಜೀವನಯನ ಶ್ರೀರಾಮಚಂದ್ರನು ತನ್ನ ಭುಜಬಲದಿಂದ ರಾಕ್ಷಸರನ್ನು ಸಂಹರಿಸಿ ಸೀತೆಯನ್ನು ಕರತರುವನು. ಲೀಲೆಗಾಗಿ ಮಾತ್ರ ಅವನೊಡನೆ ವಾನರ ಸೈನ್ಯಬೇಕು, ಅಷ್ಟೇ.'' (ಚೌ/೧-೬)

ಛಂ – ಕಪಿ ಸೇನ ಸಂಗ ಸँಘಾರಿ ನಿಸಿಚರ ರಾಮು ಸೀತಹಿ ಆನಿಹೈಂ।
ತ್ರೈಲೋಕ ಪಾವನ ಸುಜಸು ಸುರ ಮುನಿ ನಾರದಾದಿ ಬಖಾನಿಹೈಂ॥
ಜೋ ಸುನತ ಗಾವತ ಕಹತ ಸಮುಝುತ ಪರಮ ಪದ ನರ ಪಾವಈ।
ರಘುಬೀರ ಪದ ಪಾಥೋಜ ಮಧುಕರ ದಾಸ ತುಲಸೀ ಗಾವಈ॥

ವಾನರಸೈನ್ಯವನ್ನು ಜೊತೆಗೆ ಕರಕೊಂಡು ಹೋಗಿ ಶ್ರೀರಾಮಚಂದ್ರನು ರಾಕ್ಷಸರನ್ನು ಸಂಹರಿಸಿ ಸೀತೆಯನ್ನು ಕರೆದುಕೊಂಡು ಬರುವನು. ಆಗ ದೇವತೆಗಳೂ, ನಾರದಾದಿ ಮಹರ್ಷಿಗಳು, ಮೂರ್ಲೋಕಗಳನ್ನು ಪವಿತ್ರವಾಗಿಸುವ ಭಗವಂತನ ವೈಭವವನ್ನು ಕೊಂಡಾಡುವರು. ಅದನ್ನು ಶ್ರವಣಿಸಿ, ಕೀರ್ತಿಸಿ, ಅರ್ಥೈಸಿ, ಮನುಷ್ಯರು ಪರಮಪದವನ್ನು ಪಡೆಯುವರು. ಶ್ರೀರಘುವೀರನ ಚರಣಕಮಲಗಳಲ್ಲಿ ವಿಹರಿಸುವ ಭ್ರಮರದಂತಿರುವ ತುಲಸೀದಾಸರು ಆ ಗುಣಗಳನ್ನು ಹಾಡುತ್ತಿರುತ್ತಾರೆ. (ಛಂದ)

ದೋ – ಭವ ಭೇಷಜ ರಘುನಾಥ ಜಸು ಸುನಹಿಂ ಜೆ ನರ ಅರು ನಾರಿ।
ತಿನ್ಹ ಕರ ಸಕಲ ಮನೋರಥ ಸಿದ್ಧ ಕರಹಿಂ ತ್ರಿಸಿರಾರಿ॥ ೩೦ (ಕ)॥

ಶ್ರೀರಘುನಾಥನ ಕೀರ್ತಿಯು ಜನನ-ಮರಣರೂಪೀ ಭವರೋಗಕ್ಕೆ ಅಮೋಘವಾದ ದಿವ್ಯೌಷಧ. ಇದನ್ನು ಶ್ರದ್ಧೆಯಿಂದ ಕೇಳಿದ ಸ್ತ್ರೀ-ಪುರುಷರೆಲ್ಲರ ಮನೋರಥಗಳನ್ನು ತ್ರಿಶಿರಾರಿಯಾದ ಶ್ರೀರಾಮನು ಈಡೇರಿಸುವನು. (ದೋ/೩೦ ಕ)

**ಸೋ – ನೀಲೋತ್ಪಲ ತನ ಸ್ಯಾಮ ಕಾಮ ಕೋಟಿ ಸೋಭಾ ಅಧಿಕ ।**
**ಸುನಿಅ ತಾಸು ಗುನ ಗ್ರಾಮ ಜಾಸು ನಾಮ ಅಘ ಖಗ ಬಧಿಕ ॥ ೩೦(ಖ)॥**

ನೀಲೋತ್ಪಲ ಶ್ಯಾಮಸುಂದರಗಾತ್ರನೂ, ಕೋಟಿಮನ್ಮಥರಿಗೂ ಕೂಡ ಮೀರಿದ ಮನೋಹರ ಶೋಭಾಮೂರ್ತಿಯೂ, ಯಾರ ನಾಮವು ಪಾಪಗಳೆಂಬ ಪಕ್ಷಿಗಳನ್ನು ಕೊಲ್ಲುವ ಬೇಡನಂತಿಹುದೋ, ಅಂತಹ ಶ್ರೀರಾಮಚಂದ್ರನ ಪಾವನ ಗುಣಗಳನ್ನು ನಿರಂತರವಾಗಿ (ಅಗತ್ಯವಾಗಿ) ಶ್ರವಣಿಸಬೇಕು. (ಸೋ/೩೦ ಖ)

**ಮಾಸಪಾರಾಯಣದ ಇಪ್ಪತ್ತಮೂರನೆಯ ವಿಶ್ರಾಮ**

**ಇತಿ ಶ್ರೀಮದ್ರಾಮಚರಿತಮಾನಸೇ ಸಕಲಕಲಿಕಲುಷವಿಧ್ವಂಸನೇ ಚತುರ್ಥಃ ಸೋಪಾನಃ ಸಮಾಪ್ತಃ ॥ ೪ ॥**

*ಕಲಿಯುಗದ ಎಲ್ಲ ಪಾಪಗಳನ್ನು ಧ್ವಂಸಮಾಡುವ ಶ್ರೀರಾಮಚರಿತಮಾನಸದಲ್ಲಿ*
*ಕಿಷ್ಕಿಂಧಾಕಾಂಡವೆಂಬ ನಾಲ್ಕನೆಯ ಸೋಪಾನವು ಮುಗಿದುದು.*

**(ಕಿಷ್ಕಿಂಧಾಕಾಂಡ ಸಮಾಪ್ತವು)**

**॥ ಶ್ರೀಸೀತಾರಾಮಚಂದ್ರಾರ್ಪಣಮಸ್ತು ॥**



ಶ್ರೀಗಣೇಶಾಯ ನಮಃ

ಶ್ರೀಜಾನಕೀವಲ್ಲಭೋ ವಿಜಯತೇ

# ಶ್ರೀರಾಮಚರಿತಮಾನಸ

## ಪಂಚಮ ಸೋಪಾನ

## ಸುಂದರಕಾಂಡ

### ಭಗವದ್‌ಸ್ತುತಿ

**ಶ್ಲೋ – ಶಾಂತಂ ಶಾಶ್ವತಮಪ್ರಮೇಯಮನಘಂ ನಿರ್ವಾಣಶಾಂತಿಪ್ರದಂ**
**ಬ್ರಹ್ಮಾಶಂಭುಫಣೀಂದ್ರಸೇವ್ಯಮನಿಶಂ ವೇದಾಂತವೇದ್ಯಂ ವಿಭುಮ್ ।**
**ರಾಮಾಖ್ಯಂ ಜಗದೀಶ್ವರಂ ಸುರಗುರುಂ ಮಾಯಾಮನುಷ್ಯಂ ಹರಿಂ**
**ವಂದೇಽಹಂ ಕರುಣಾಕರಂ ರಘುವರಂ ಭೂಪಾಲಚೂಡಾಮಣಿಮ್ ॥ ೧ ॥**

ಶಾಂತನೂ, ಸನಾತನನೂ, ಅಪ್ರಮೇಯನೂ, ನಿಷ್ಪಾಪನೂ, ನಿರ್ವಾಣವೆಂಬ ಪರಮಶಾಂತಿಯನ್ನು ಕರುಣಿಸುವವನೂ, ಬ್ರಹ್ಮ, ಶಂಭು, ಫಣೀಂದ್ರರಿಂದ ನಿರಂತರವೂ ಸೇವಿಸಲ್ಪಡುವವನೂ, ವೇದಾಂತವೇದ್ಯನೂ, ಸರ್ವವ್ಯಾಪಕನೂ, ಜಗದೀಶ್ವರನೂ, ಮಾಯಾಮಾನುಷವಿಗ್ರಹನೂ, ಕರುಣಾಕರನೂ ಆದ ರಘುವಂಶಪುಂಗವ ಭೂಪಾಲಚೂಡಾಮಣಿ ರಾಮನೆಂಬ ಶ್ರೀಹರಿಯನ್ನು ನಮಿಸುತ್ತೇನೆ. ॥ ೧ ॥

**ನಾನ್ಯಾ ಸ್ಪೃಹಾ ರಘುಪತೇ ಹೃದಯೇಽಸ್ಮದೀಯೇ**
**ಸತ್ಯಂ ವದಾಮಿ ಚ ಭವಾನಖಿಲಾಂತರಾತ್ಮಾ ।**
**ಭಕ್ತಿಂ ಪ್ರಯಚ್ಛ ರಘುಪುಂಗವ ನಿರ್ಭರಾಂ ಮೇ**
**ಕಾಮಾದಿದೋಷರಹಿತಂ ಕುರು ಮಾನಸಂ ಚ ॥ ೨ ॥**

ಓ ರಘುವರ! ನೀನು ಸರ್ವಾತ್ಮಸ್ವರೂಪನು. ನನಗೆ ನಿನ್ನ ಪ್ರಗಾಢಭಕ್ತಿಯನ್ನು ಅನುಗ್ರಹಿಸು. ನನ್ನ ಮನಸ್ಸನ್ನು ಕಾಮಾದಿದೋಷಗಳಿಂದ ರಹಿತನನ್ನಾಗಿಸು. ಓ ರಘುಕುಲ ಚೂಡಾಮಣಿಯೇ! ನಾನು ನಿಜವನ್ನೇ ಹೇಳುತ್ತಿದ್ದೇನೆ. ಇದಲ್ಲದೆ ನನ್ನ ಹೃದಯದಲ್ಲಿ ಬೇರೆ ಯಾವ ಬಯಕೆಯೂ ಇಲ್ಲ. ॥ ೨ ॥

**ಅತುಲಿತಬಲಧಾಮಂ ಹೇಮಶೈಲಾಭದೇಹಂ**
**ದನುಜವನಕೃಶಾನುಂ ಜ್ಞಾನಿನಾಮಗ್ರಗಣ್ಯಮ್ ।**
**ಸಕಲಗುಣನಿಧಾನಂ ವಾನರಾಣಾಮಧೀಶಂ**
**ರಘುಪತಿಪ್ರಿಯಭಕ್ತಂ ವಾತಜಾತಂ ನಮಾಮಿ ॥ ೩ ॥**

ಅತುಲಿತ ಬಲಧಾಮನೂ, ಹೇಮಶೈಲದಂತೆ ಕಾಂತಿಯಿಂದ ಕೂಡಿದ ದೇಹವುಳ್ಳವನೂ, ದಾನವರೆಂಬ ವನಕ್ಕೆ ಅಗ್ನಿಸ್ವರೂಪನೂ, ಜ್ಞಾನಿಗಳಲ್ಲಿ ಅಗ್ರಗಣ್ಯನೂ, ಸಕಲ ಗುಣನಿಧಿಯೂ, ವಾನರರ ಅಧಿಪತಿಯೂ, ರಘುಪತಿಯ ಪ್ರಿಯಭಕ್ತನೂ ಆದ ವಾಯುನಂದನ ಹನುಮಂತನಿಗೆ ನಮಸ್ಕರಿಸುತ್ತೇನೆ. ॥ ೩॥

# ಮಾರುತಿಯು ಸಮುದ್ರವನ್ನು ದಾಟಿದುದು

ಚೌ – ಜಾಮವಂತ ಕೇ ಬಚನ ಸುಹಾಏ। ಸುನಿ ಹನುಮಂತ ಹೃದಯ ಅತಿ ಭಾಏ॥
ತಬ ಲಗಿ ಮೊಹಿ ಪರಿಖೆಹು ತುಮ್ಹ ಭಾಈ। ಸಹಿ ದುಖ ಕಂದ ಮೂಲ ಫಲ ಖಾಈ॥ ೧ ॥
ಜಬ ಲಗಿ ಆವೌಂ ಸೀತಹಿ ದೇಖೀ। ಹೊಇಹಿ ಕಾಜು ಮೊಹಿ ಹರಷ ಬಿಸೇಷೀ॥
ಯಹ ಕಹಿ ನಾಇ ಸಬನ್ಹಿ ಕಹುँ ಮಾಥಾ। ಚಲೆಉ ಹರಷಿ ಹಿಯँ ಧರಿ ರಘುನಾಥಾ॥ ೨ ॥
ಸಿಂಧು ತೀರ ಏಕ ಭೂಧರ ಸುಂದರ। ಕೌತುಕ ಕೂದಿ ಚಢೆಉ ತಾ ಊಪರ॥
ಬಾರ ಬಾರ ರಘುಬೀರ ಸँಭಾರೀ। ತರಕೆಉ ಪವನತನಯ ಬಲ ಭಾರೀ॥ ೩ ॥
ಜೆಹಿं ಗಿರಿ ಚರನ ದೇಇ ಹನುಮಂತಾ। ಚಲೆಉ ಸೊ ಗಾ ಪಾತಾಲ ತುರಂತಾ॥
ಜಿಮಿ ಅಮೋಘ ರಘುಪತಿ ಕರ ಬಾನಾ। ಏಹೀ ಭಾँತಿ ಚಲೆಉ ಹನುಮಾನಾ॥ ೪ ॥
ಜಲನಿಧಿ ರಘುಪತಿ ದೂತ ಬಿಚಾರೀ। ತೈं ಮೈನಾಕ ಹೋಹಿ ಶ್ರಮಹಾರೀ॥ ೫ ॥

ಜಾಂಬವಂತರ ಪ್ರಿಯವಚನಗಳು ಹನುಮಂತನ ಹೃದಯಕ್ಕೆ ಆಪ್ಯಾಯಮಾನವಾದವು. ಆಗ ಅವನು ಹೇಳಿದನು – 'ಸೋದರರೇ! ನೀವು ದುಃಖಗಳನ್ನು ಸಹಿಸಿಕೊಂಡು, ಕಂದ, ಮೂಲ, ಫಲಗಳನ್ನು ತಿನ್ನುತ್ತಾ ನನಗಾಗಿ ಕಾಯುತ್ತಿರಿ. ನಾನು ಸೀತಾದೇವಿಯನ್ನು ನೋಡಿ ಹಿಂತಿರುಗುತ್ತೇನೆ. ಕಾರ್ಯವು ತಪ್ಪದೇ ಸಫಲವಾಗುವುವು. ಏಕೆಂದರೆ, ನನಗೆ ಎಲ್ಲಿಲ್ಲದ ಉತ್ಸಾಹ, ಆನಂದ ಉಂಟಾಗುತ್ತಿದೆ.' ಈ ವಿಧವಾಗಿ ನುಡಿದು, ಎಲ್ಲರಿಗೂ ನಮಸ್ಕಾರಮಾಡಿ, ಮನಸ್ಸಿನಲ್ಲಿ ಶ್ರೀರಘುರಾಮಚಂದ್ರನನ್ನು ಧ್ಯಾನಿಸುತ್ತಾ, ಆಂಜನೇಯನು ಪ್ರಸನ್ನಮನಸ್ಕನಾಗಿ ಹೊರಟನು. ಸಮುದ್ರ ತೀರದಲ್ಲಿ ಒಂದು ಸುಂದರವಾದ ಪರ್ವತವಿತ್ತು. ಮಹಾಬಲವಂತನಾದ ಹನುಮಂತನು ಆಟವಾಡುವಂತೆ ಹಾರಿ ಅದನ್ನು ಏರಿದನು. ಮತ್ತೆ-ಮತ್ತೆ ರಘುವೀರನನ್ನು ನೆನೆ-ನೆನೆದು ಅತಿವೇಗದಿಂದ ದಕ್ಷಿಣದಿಕ್ಕಿನತ್ತ ಹಾರಿದನು. ಅವನು ಕಾಲೂರಿದ ಆ ಮಹೇಂದ್ರ ಪರ್ವತವು ಕೂಡಲೇ ಪಾತಾಳಕ್ಕೆ ಇಳಿಯಿತು. ಶ್ರೀರಾಮಚಂದ್ರನ ಅಮೋಘವಾದ ಬಾಣವು ಹೋಗುವಂತೆ ಹನುಮಂತನು ಹೆಚ್ಚಾದ ವೇಗದಿಂದ ಆಕಾಶಮಾರ್ಗವಾಗಿ ಹೋಗುತ್ತಿದ್ದನು. ಸಮುದ್ರವು ಅವನನ್ನು ಶ್ರೀರಾಮನ ದೂತನೆಂದು ತಿಳಿದು, ತನ್ನಲ್ಲಡಗಿದ್ದ ಮೈನಾಕನಿಗೆ ಆಜ್ಞಾಪಿಸಿದನು – 'ನೀನು ಇವನ ಶ್ರಮವನ್ನು ಪರಿಹರಿಸು. (ನೀನು ಸಮುದ್ರದಿಂದ ಮೇಲಕ್ಕೆದ್ದು ಆತನಿಗೆ ವಿಶ್ರಾಂತಿಯನ್ನು ನೀಡು.) (ಚೌ/೧-೫)

**ದೋ – ಹನೂಮಾನ ತೆಹಿ ಪರಸಾ ಕರ ಪುನಿ ಕೀನ್ಹ ಪ್ರನಾಮ।**
**ರಾಮ ಕಾಜು ಕೀನ್ಹೇं ಬಿನು ಮೋಹಿ ಕಹಾँ ಬಿಶ್ರಾಮ॥ ೧ ॥**

ಹನುಮಂತನು ಆ ಮೈನಾಕ ಪರ್ವತವನ್ನು ತನ್ನ ಕೈಯಿಂದ ಮುಟ್ಟಿ, ನಮಸ್ಕರಿಸಿ ಇಂತೆಂದನು – ''ಆಯ್ಯಾ! ಶ್ರೀರಾಮನಕಾರ್ಯವು ಪೂರ್ಣಗೊಳ್ಳದೆ ನನಗೆಲ್ಲಿಯ ಬಿಡುವು? ವಿಶ್ರಾಂತಿ? (ದೋ/೧)

ಚೌ – ಜಾತ ಪವನಸುತ ದೇವನ್ಹ ದೇಖಾ। ಜಾನೈं ಕಹುँ ಬಲ ಬುದ್ಧಿ ಬಿಸೇಷಾ॥
ಸುರಸಾ ನಾಮ ಅಹಿನ್ಹ ಕೈ ಮಾತಾ। ಪಠಇನ್ಹಿ ಆಇ ಕಹೀ ತೆಹಿं ಬಾತಾ॥ ೧ ॥
ಆಜು ಸುರನ್ಹ ಮೊಹಿ ದೀನ್ಹ ಅಹಾರಾ। ಸುನತ ಬಚನ ಕಹ ಪವನಕುಮಾರಾ॥
ರಾಮ ಕಾಜು ಕರಿ ಫಿರಿ ಮೈं ಆವೌं। ಸೀತಾ ಕಇ ಸುಧಿ ಪ್ರಭುಹಿ ಸುನಾವೌं॥ ೨ ॥
ತಬ ತವ ಬದನ ಪೈಠಿಹಉँ ಆಈ। ಸತ್ಯ ಕಹಉँ ಮೊಹಿ ಜಾನ ದೆ ಮಾಈ॥
ಕವನೆಹುँ ಜತನ ದೇಇ ನಹಿं ಜಾನಾ। ಗ್ರಸಸಿ ನ ಮೋಹಿ ಕಹೆಉ ಹನುಮಾನಾ॥ ೩ ॥
ಜೋಜನ ಭರಿ ತೆಹಿं ಬದನು ಪಸಾರಾ। ಕಪಿ ತನು ಕೀನ್ಹ ದುಗುನ ಬಿಸ್ತಾರಾ॥
ಸೋರಹ ಜೋಜನ ಮುಖ ತೆಹಿं ಠಯಊ। ತುರತ ಪವನಸುತ ಬತ್ತಿಸ ಭಯಊ॥ ೪ ॥
ಜಸ ಜಸ ಸುರಸಾ ಬದನು ಬಢಾವಾ। ತಾಸು ದೂನ ಕಪಿ ರೂಪ ದೆಖಾವಾ॥
ಸತ ಜೋಜನ ತೇಹಿं ಆನನ ಕೀನ್ಹಾ। ಅತಿ ಲಘು ರೂಪ ಪವನಸುತ ಲೀನ್ಹಾ॥ ೫ ॥
ಬದನ ಪಇಠಿ ಪುನಿ ಬಾಹೇರ ಆವಾ। ಮಾಗಾ ಬಿದಾ ತಾಹಿ ಸಿರು ನಾವಾ॥
ಮೋಹಿ ಸುರನ್ಹ ಜೆಹಿ ಲಾಗಿ ಪಠಾವಾ। ಬುಧಿ ಬಲ ಮರಮು ತೋರ ಮೈं ಪಾವಾ॥ ೬ ॥

ಪವನಸುತನಾದ ಹನುಮಂತನು ಹಾರಿಹೋಗುತ್ತಿರುವುದನ್ನು ಕಂಡು, ದೇವತೆಗಳು ಆತನ ಬಲವನ್ನೂ, ಬುದ್ಧಿಯನ್ನೂ ಪರೀಕ್ಷಿಸಲು ಸರ್ಪಮಾತೆ 'ಸುರಸೆ' ಎಂಬುವಳನ್ನು ಅವನ ಬಳಿಗೆ ಕಳಿಸಿಕೊಟ್ಟರು. ಆಕೆಯು ಬಂದು ಹನುಮಂತನ ಬಳಿ ಹೇಳಿದಳು – 'ದೇವತೆಗಳು ಇಂದು ನನಗೆ ಉತ್ತಮವಾದ ಭೋಜನವನ್ನು ಕಳಿಸಿರುವರು.'' ಇದನ್ನು ಕೇಳುತ್ತಲೇ ಪವಮಾನನಂದನನು ಹೇಳಿದನು – ''ಅಮ್ಮಾ! ಶ್ರೀರಾಮನ ಕಾರ್ಯವನ್ನು ನೆರವೇರಿಸಿ ತಿರುಗಿ ಬಂದು, ಶ್ರೀರಾಮನಿಗೆ ಸೀತಾದೇವಿಯ ಸಮಾಚಾರ ತಿಳಿಸುತ್ತೇನೆ. ಅನಂತರ ನಾನು ಬಂದು ನಿನ್ನ ಬಾಯನ್ನು ಪ್ರವೇಶಿಸುವೆನು. ಆಗ ನೀನು ನನ್ನನ್ನು ಭಕ್ಷಿಸುವೆಯಂತೆ. ತಾಯಿ! ನಾನು ನಿಜವನ್ನೇ ಹೇಳುತ್ತಿದ್ದೇನೆ. ಈಗ ನನ್ನನ್ನು ಬಿಟ್ಟು ಬಿಡು. ಆದರೆ ಯಾವ ಉಪಾಯಕ್ಕೂ ಅವಳು ಜಗ್ಗದಿರುವಾಗ ಹನುಮಂತ ಹೇಳಿದನು – ಸರಿ, ಹಾಗಾದರೆ ನನ್ನನ್ನು ತಿಂದುಬಿಡಲ್ಲ. ಆಗ ಸುರಸೆಯು ಒಂದು ಯೋಜನದಷ್ಟು ತನ್ನ ಬಾಯನ್ನು ಅಗಲಿಸಿದಳು. ಹನುಮಂತನು ತನ್ನ ಶರೀರವನ್ನು ಅದರ ಎರಡರಷ್ಟು ಬೆಳೆಸಿದನು. ಆಕೆಯು ಹದಿನಾರು ಯೋಜನದಷ್ಟು ಬಾಯನ್ನು ಅಗಲಿಸಿದಳು. ಮಾರುತಿಯು ಮೂವತ್ತೆರಡು ಯೋಜನದಷ್ಟು ಬೆಳೆದನು. ಸುರಸೆಯು ತನ್ನ ಬಾಯನ್ನು ಅಗಲಿಸುತ್ತಿರುವಂತೆ, ಹನುಮಂತನು ಅದರ ಎರಡರಷ್ಟು ಶರೀರವನ್ನು ಬೆಳೆಸುತ್ತಿದ್ದನು. ಕೊನೆಗೆ ಆಕೆಯು ನೂರು ಯೋಜನಗಳಷ್ಟು ಬಾಯಿ ಅಗಲಿಸಿ ನಿಂತಳು. ಆಗ ಮಾರುತಿಯು ಅತಿ ಸೂಕ್ಷ್ಮರೂಪವನ್ನಾಂತು ಅವಳ ಬಾಯೊಳಗೆ ಹೊಕ್ಕು ಥಟ್ಟನೆ ಹೊರಬಂದು ಅವಳಿಗೆ ತಲೆವಾಗಿ, 'ನನಗೆ ಮುಂದಕ್ಕೆ ಹೋಗಲು ಅನುಮತಿಯನ್ನು ನೀಡು' ಎಂದು ನುಡಿದನು. ಸುರಸೆಯು ಹೇಳಿದಳು – ದೇವತೆಗಳು ನನ್ನನ್ನು ನಿನ್ನ ಬಲ-ಬುದ್ಧಿಗಳನ್ನು ಪರೀಕ್ಷಿಸಲು ಕಳಿಸಿದ್ದರು. ನಿನ್ನ ಅತುಲಿತ ಬಲ-ಬುದ್ಧಿಗಳನ್ನು ಅರಿತುಕೊಂಡೆ. (ಚೌ/೧-೬)

**ದೋ – ರಾಮ ಕಾಜು ಸಬು ಕರಿಹಹು ತುಮ್ಹ ಬಲ ಬುದ್ಧಿ ನಿಧಾನ।**
**ಆಸಿಷ ದೇಇ ಗಈ ಸೋ ಹರಷಿ ಚಲೆಉ ಹನುಮಾನ॥ ೨ ॥**

ನೀನು ಶ್ರೀರಾಮನ ಕಾರ್ಯವನ್ನು ಸಮರ್ಥರೀತಿಯಿಂದ ಮಾಡುವ ಧುರಂಧರನಾಗಿದ್ದು, ಬಲ-ಬುದ್ಧಿಗಳ ಭಂಡಾರನಾಗಿರುವೆ. ಇಂತು ಹರಸಿ ಅವಳು ಹೊರಟುಹೋದಳು. ಹನುಮಂತನು ಹರ್ಷಭರಿತನಾಗಿ ಮುಂದಕ್ಕೆ ಸಾಗಿದನು. (ದೋ/೨)

**ಚೌ – ನಿಸಿಚರಿ ಏಕ ಸಿಂಧು ಮಹುँ ರಹಈ। ಕರಿ ಮಾಯಾ ನಭು ಕೇ ಖಗ ಗಹಈ॥**
**ಜೀವ ಜಂತು ಜೇ ಗಗನ ಉಡಾಹೀँ। ಜಲ ಬಿಲೋಕಿ ತಿನ್ಹ ಕೈ ಪರಿಛಾಹೀँ॥ ೧ ॥**
**ಗಹಇ ಛಾಹँ ಸಕ ಸೋ ನ ಉಡಾಈ। ಏಹಿ ಬಿಧಿ ಸದಾ ಗಗನಚರ ಖಾಈ॥**
**ಸೋಇ ಛಲ ಹನೂಮಾನ ಕಹँ ಕೀನ್ಹಾ। ತಾಸು ಕಪಟು ಕಪಿ ತುರತಹಿँ ಚೀನ್ಹಾ॥ ೨ ॥**
**ತಾಹಿ ಮಾರಿ ಮಾರುತಸುತ ಬೀರಾ। ಬಾರಿಧಿ ಪಾರ ಗಯಉ ಮತಿಧೀರಾ॥**
**ತಹಾँ ಜಾಇ ದೇಖೀ ಬನ ಸೋಭಾ। ಗುಂಜತ ಚಂಚರೀಕ ಮಧು ಲೋಭಾ॥ ೩ ॥**
**ನಾನಾ ತರು ಫಲ ಫೂಲ ಸುಹಾಏ। ಖಗ ಮೃಗ ಬೃಂದ ದೇಖಿ ಮನ ಭಾಏ॥**
**ಸೈಲ ಬಿಸಾಲ ದೇಖಿ ಏಕ ಆಗೇँ। ತಾ ಪರ ಧಾಇ ಚಢೆಉ ಭಯ ತ್ಯಾಗೇँ॥ ೪ ॥**
**ಉಮಾ ನ ಕಛು ಕಪಿ ಕೈ ಅಧಿಕಾಈ। ಪ್ರಭು ಪ್ರತಾಪ ಜೋ ಕಾಲಹಿ ಖಾಈ॥**
**ಗಿರಿ ಪರ ಚಢಿ ಲಂಕಾ ತೆಹಿँ ದೇಖೀ। ಕಹಿ ನ ಜಾಇ ಅತಿ ದುರ್ಗ ಬಿಸೇಷೀ॥ ೫ ॥**
**ಅತಿ ಉತಂಗ ಜಲನಿಧಿ ಚಹು ಪಾಸಾ। ಕನಕ ಕೋಟ ಕರ ಪರಮ ಪ್ರಕಾಸಾ॥ ೬ ॥**

ಆ ಸಮುದ್ರದಲ್ಲಿ ಓರ್ವ ರಕ್ಕಸಿ (ಸಿಂಹಿಕೆ)ಯು ವಾಸವಾಗಿದ್ದಳು. ಅವಳು ತನ್ನ ಮಾಯೆಯಿಂದ ಆಕಾಶದಲ್ಲಿ ಹಾರಾಡುತ್ತಿರುವ ಹಕ್ಕಿಗಳನ್ನು ತನ್ನೆಡೆಗೆ ಆಕರ್ಷಿಸುತ್ತಿದ್ದಳು. ಆಕಾಶದಲ್ಲಿ ಹಾರಾಡುತ್ತಿದ್ದ ಜೀವಜಂತುಗಳ ನೆರಳನ್ನು ಹಿಡಿದುಕೊಂಡು ಬಿಡುತ್ತಿದ್ದಳು. ಆಗ ಅವು ಮುಂದಕ್ಕೆ ಹೋಗಲಾಗದೆ ನೀರೊಳಗೆ ಬಿದ್ದು ಬಿಡುತ್ತಿದ್ದವು ಹಾಗೂ ಆ ರಾಕ್ಷಸಿಯು ಅವನ್ನು ತಿಂದು ಬಿಡುತ್ತಿದ್ದಳು. ಅದೇ ಉಪಾಯವನ್ನು ಅವಳು ಹನುಮಂತನ ಮೇಲೆ ಪ್ರಯೋಗಿಸಿದಳು. ಅವಳ ಕಪಟ ಅವನಿಗೆ ಥಟ್ಟನೆ ತಿಳಿದುಹೋಯಿತು. ಧೀರಬುದ್ಧಿಯೂ, ವೀರನೂ ಆದ ಮಾರುತಿಯು ಆ ಸಿಂಹಿಕೆಯನ್ನು ಕೊಂದು ಸಮುದ್ರವನ್ನು ದಾಟಿದನು. ಸಮುದ್ರದ ಆಚೆಯ ದಡಕ್ಕೆ ತಲುಪಿದ ಹನುಮಂತನು ಅಲ್ಲಿರುವ ವನಸಿರಿಯನ್ನು ವೀಕ್ಷಿಸಿದನು. ಮಧುಲೋಭದಿಂದ ಭ್ರಮರಗಳು ಝೇಂಕರಿಸುತ್ತಿದ್ದವು. ಅನೇಕ ವಿಧವಾದ ಗಿಡಮರಗಳು ಫಲಪುಷ್ಪಗಳಿಂದ ಶೋಭಿಸುತ್ತಿದ್ದವು. ಖಗ-ಮೃಗವೃಂದವನ್ನು ಕಂಡು ಅವನ ಮನಸ್ಸು ಪ್ರಫುಲ್ಲಿತವಾಯಿತು. ಎದುರಿಗೆ ಒಂದು ವಿಶಾಲವಾದ ಬೆಟ್ಟವನ್ನು ಕಂಡು ಹನುಮಂತನು ನಿರ್ಭಯನಾಗಿ ಓಡುತ್ತಾ ಹಾರಿ ಅದನ್ನು ಹತ್ತಿದನು. ಶಿವನು ಹೇಳುತ್ತಾನೆ – ಉಮೆ! ಇದರಲ್ಲಿ ಹನುಮಂತನ ಹೆಚ್ಚಳವೇನೂ ಇಲ್ಲ. ಇದೆಲ್ಲವೂ ಕಾಲವನ್ನೂ

ಕೂಡ ನುಂಗಿ ನೊಣೆಯುವ ಪ್ರಭುವಿನ ಮಹಿಮೆಯೇ ಆಗಿದೆ. ಹನುಮಂತನು ಪರ್ವತದ ಮೇಲಿಂದ ಲಂಕೆಯನ್ನು ನೋಡಿದನು. ಅಲ್ಲಿ ವರ್ಣನಾತೀತವಾದ ಅತೀ ಎತ್ತರವಾದ ದುರ್ಗವೊಂದಿತ್ತು. ಅದರ ಸುತ್ತಲೂ ಸಮುದ್ರವಿದೆ. ಅದರ ಚಿನ್ನದ ಹೊರಕೋಟೆ ಮಿರಮಿರನೇ ಮಿನುಗುತ್ತಿತ್ತು. (ಚೌ/೧-೬)

**ಛಂ – ಕನಕ ಕೋಟ ಬಿಚಿತ್ರ ಮನಿ ಕೃತ ಸುಂದರಾಯತನಾ ಘನಾ।**
**ಚಉಹಟ್ಟ ಹಟ್ಟ ಸುಬಟ್ಟ ಬೀಥೀಂ ಚಾರು ಪುರ ಬಹು ಬಿಧಿ ಬನಾ॥**
**ಗಜ ಬಾಜಿ ಖಚ್ಚರ ನಿಕರ ಪದಚರ ರಥ ಬರೂಥನ್ಹಿ ಕೋ ಗನೈ।**
**ಬಹುರೂಪ ನಿಸಿಚರ ಜೂಥ ಅತಿಬಲ ಸೇನ ಬರನತ ನಹಿಂ ಬನೈ॥ ೧ ॥**
**ಬನ ಬಾಗ ಉಪಬನ ಬಾಟಿಕಾ ಸರ ಕೂಪ ಬಾಪೀಂ ಸೋಹಹೀಂ।**
**ನರ ನಾಗ ಸುರ ಗಂಧರ್ಬ ಕನ್ಯಾ ರೂಪ ಮುನಿ ಮನ ಮೋಹಹೀಂ॥**
**ಕಹುँ ಮಾಲ ದೇಹ ಬಿಸಾಲ ಸೈಲ ಸಮಾನ ಅತಿಬಲ ಗರ್ಜಹೀಂ।**
**ನಾನಾ ಅಖಾರೆನ್ಹ ಭಿರಹಿಂ ಬಹು ಬಿಧಿ ಏಕ ಏಕನ್ಹ ತರ್ಜಹೀಂ॥ ೨ ॥**
**ಕರಿ ಜತನ ಭಟ ಕೋಟಿನ್ಹ ಬಿಕಟ ತನ ನಗರ ಚಹುँ ದಿಸಿ ರಚ್ಛಹೀಂ।**
**ಕಹುँ ಮಹಿಷ ಮಾನುಷ ಧೇನು ಖರ ಅಜ ಖಲ ನಿಸಾಚರ ಭಚ್ಛಹೀಂ॥**
**ಏಹಿ ಲಾಗಿ ತುಲಸೀದಾಸ ಇನ್ಹ ಕೀ ಕಥಾ ಕಛು ಏಕ ಹೈ ಕಹೀ।**
**ರಘುಬೀರ ಸರ ತೀರಥ ಸರೀರನ್ಹಿ ತ್ಯಾಗಿ ಗತಿ ಪೈಹಹಿಂ ಸಹೀ॥ ೩ ॥**

ಚಿತ್ರವಿಚಿತ್ರವಾದ ಮಣಿಖಚಿತವಾದ ಆ ಚಿನ್ನದ ಕೋಟೆಯೊಳಗೆ ಅನೇಕ ಸುಂದರವಾದ ಭವನಗಳಿದ್ದವು. ಅಲ್ಲಿ ಪೇಟೆಗಳು, ಚೌಕಗಳು, ರಾಜಮಾರ್ಗಗಳು, ಉಪಮಾರ್ಗಗಳಿದ್ದು, ಆ ಚೆಲುವಾದ ನಗರವು ಅನೇಕ ವಿಧದಿಂದ ಅಲಂಕೃತವಾಗಿತ್ತು. ಆನೆ, ಕುದುರೆ, ಹೇಸರಕತ್ತೆಗಳ ಸಮೂಹ, ಪದಾತಿ, ಕಾಲಾಳುಗಳ ಸಮೂಹ ಲೆಕ್ಕವಿಲ್ಲದಷ್ಟಿದ್ದವು. ಕಾಮರೂಪಿಗಳಾದ ರಾಕ್ಷಸರದಳ, ಅವರ ಅತಿಬಲ ಸೇನೆ ವರ್ಣಿಸಲಾರದಷ್ಟಿತ್ತು. ॥ ೧॥ ಆ ಲಂಕೆಯಲ್ಲಿ ವನಗಳು, ಉಪವನಗಳು, ತೋಟಗಳು, ಲತಾನಿಕುಂಜಗಳು, ಬಾವಿ, ಕೆರೆಗಳು, ರಮಣೀಯವಾಗಿ ಶೋಭಿಸುತ್ತಿದ್ದವು. ನರ, ನಾಗ, ಸುರ, ಗಂಧರ್ವ ಇವರ ಕನ್ಯೆಯರು ತಮ್ಮ ಚೆಲುವಿನಿಂದ ಮುನಿಗಳ ಮನವನ್ನೂ ಮೋಹಿಸುತ್ತಿದ್ದರು. ಅಲ್ಲಲ್ಲಿ ಬೆಟ್ಟದಂತಹ ಜಟ್ಟಿಗಳು ಗರ್ಜಿಸುತ್ತಿದ್ದರು. ಅವರು ಅನೇಕ ಗರಡಿಗಳಲ್ಲಿ ಅನೇಕ ರೀತಿಯಿಂದ ಹೋರಾಡುತ್ತಾ, ಒಬ್ಬರನ್ನೊಬ್ಬರು ಮೂದಲಿಸುತ್ತಾ ತಮ್ಮ ವೀರಶ್ರೀಯನ್ನು ಪ್ರದರ್ಶಿಸುತ್ತಿದ್ದರು. ॥ ೨॥ ಮಹಾಕಾಯರಾದ ಕೋಟ್ಯಂತರ ಭಯಂಕರ ರಕ್ಕಸಭಟರು ಆ ನಗರವನ್ನು ತುಂಬ ಎಚ್ಚರಿಕೆಯಿಂದ ಕಾವಲು ಕಾಯುತ್ತಿದ್ದರು. ಕೆಲವೆಡೆ ದುಷ್ಟ ರಾಕ್ಷಸರು ಎಮ್ಮೆಗಳನ್ನು, ಮನುಷ್ಯರನ್ನು, ಹಸುಗಳನ್ನು, ಕತ್ತೆಗಳನ್ನು, ಆಡುಗಳನ್ನು ಭಕ್ಷಿಸುತ್ತಿದ್ದರು. ಇವರೆಲ್ಲರೂ ಶ್ರೀರಾಮಚಂದ್ರನ ಅಂಬುತೀರ್ಥದಲ್ಲಿ ಮಿಂದು ಶರೀರತ್ಯಾಗಮಾಡಿ ತಪ್ಪದೆ ಪರಮಗತಿಯನ್ನು ಪಡೆಯುವವರು. ಅದಕ್ಕಾಗಿ ತುಲಸೀದಾಸರು ಇವರ ಕಥೆಯನ್ನು ಸಂಕ್ಷಿಪ್ತವಾಗಿ ಹೇಳಿರುವನು. ॥ ೩॥ (ಛಂ/೧-೩)

## ಹನುಮಂತನ ಲಂಕಾನಗರ ಪ್ರವೇಶ

**ದೋ – ಪುರ ರಖವಾರೇ ದೇಖಿ ಬಹು ಕಪಿ ಮನ ಕೀನ್ಹ ಬಿಚಾರ।**
**ಅತಿ ಲಘು ರೂಪ ಧರೌಂ ನಿಸಿ ನಗರ ಕರೌಂ ಪಇಸಾರ॥ ೩ ॥**

ಅಸಂಖ್ಯಾತರಾದ ರಕ್ಷಕಭಟರು ನಗರವನ್ನು ರಕ್ಷಿಸುತ್ತಿರುವುದನ್ನು ನೋಡಿ, ಹನುಮಂತನು – ಸಣ್ಣರೂಪವನ್ನು ಧರಿಸಿ, ರಾತ್ರಿಯಲ್ಲಿ ನಗರಪ್ರವೇಶ ಮಾಡುವುದು ಒಳಿತು ಎಂದು ಮನದಲ್ಲಿ ಯೋಚಿಸಿದನು. (ದೋ/೩)

**ಚೌ – ಮಸಕ ಸಮಾನ ರೂಪ ಕಪಿ ಧರೀ। ಲಂಕಹಿ ಚಲೆಉ ಸುಮಿರಿ ನರಹರೀ॥**
**ನಾಮ ಲಂಕಿನೀ ಏಕ ನಿಸಿಚರೀ। ಸೋ ಕಹ ಚಲೆಸಿ ಮೋಹಿ ನಿಂದರೀ॥ ೧ ॥**
**ಜಾನೆಹಿ ನಹೀಂ ಮರಮು ಸಠ ಮೋರಾ। ಮೋರ ಅಹಾರ ಜಹಾँ ಲಗಿ ಚೋರಾ॥**
**ಮುಠಿಕಾ ಏಕ ಮಹಾ ಕಪಿ ಹನೀ। ರುಧಿರ ಬಮತ ಧರನೀಂ ಢನಮನೀ॥ ೨ ॥**

**ಪುನಿ ಸಂಭಾರಿ ಉಠೀ ಸೋ ಲಂಕಾ। ಜೋರಿ ಪಾನಿ ಕರ ಬಿನಯ ಸಸಂಕಾ॥**
**ಜಬ ರಾವನಹಿ ಬ್ರಹ್ಮ ಬರ ದೀನ್ಹಾ। ಚಲತ ಬಿರಂಚಿ ಕಹಾ ಮೊಹಿ ಚೀನ್ಹಾ॥ ೩ ॥**
**ಬಿಕಲ ಹೋಸಿ ತೈಂ ಕಪಿ ಕೇಂ ಮಾರೇ। ತಬ ಜಾನೆಸು ನಿಸಿಚರ ಸಂಘಾರೇ॥**
**ತಾತ ಮೋರ ಅತಿ ಪುನ್ಯ ಬಹೂತಾ। ದೇಖೆಉಁ ನಯನ ರಾಮ ಕರ ದೂತಾ॥ ೪ ॥**

ಅದರಂತೆ ಅವನು ನೊಣದಷ್ಟು ಸೂಕ್ಷ್ಮರೂಪವನ್ನು ಧರಿಸಿ, ನರರೂಪದಿಂದ ಲೀಲೆಯನ್ನು ಗೈಯುತ್ತಿರುವ ಶ್ರೀರಾಮಚಂದ್ರನನ್ನುಸ್ಮರಿಸುತ್ತಾಹನುಮಂತನು ಲಂಕೆಯನ್ನುಪ್ರವೇಶಿಸಿದನು. ಲಂಕಾದ್ವಾರದಲ್ಲಿದ್ದ 'ಲಂಕಿಣಿ' ಎಂಬ ರಾಕ್ಷಸಿಯು – 'ನನ್ನ ಅನುಮತಿ ಇಲ್ಲದೆ ಪುರಪ್ರವೇಶಮಾಡುವವ ನೀನಾರು?' ಎಂದು ಪ್ರಶ್ನಿಸಿದಳು. ಮೂರ್ಖನೇ! ನನ್ನ ವಿಷಯ ನಿನಗೆ ತಿಳಿಯದು. ಪ್ರಪಂಚದಲ್ಲಿರುವ ಕಳ್ಳಕಾಕರೆಲ್ಲರೂ ನನ್ನ ಆಹಾರವೆಂದು ತಿಳಿಯೆಯಾ!' ಎಂದು ಗದರಿಸಿದಳು. ಮಹಾಬಲಶಾಲಿಯಾದ ಆಂಜನೇಯನು ಅವಳಿಗೆ ಎಡಗೈಯಿಂದ ಮೆಲ್ಲನೆ ಒಂದು ಗುದ್ದು ಗುದ್ದಿದನು. ಅದರಿಂದ ಅವಳು ರಕ್ತವನ್ನು ಕಾರುತ್ತಾ ನೆಲಕ್ಕುರುಳಿದಳು. ಅನಂತರ ಆ ರಕ್ಕಸಿಯು ಸುಧಾರಿಸಿಕೊಂಡು ಎದ್ದು, ಭಯದಿಂದ ಕೈಜೋಡಿಸಿಕೊಂಡು ಹನುಮಂತನನ್ನು ಬಿನ್ನವಿಸಿಕೊಂಡಳು – ''ಎಲೈ ವೀರನೇ! ರಾವಣನಿಗೆ ಬ್ರಹ್ಮದೇವರು ವರಕೊಟ್ಟು ಹೋಗುವಾಗ ರಾಕ್ಷಸಕುಲ ವಿನಾಶದ ಈ ಕುರುಹನ್ನು ನನಗೆ ಹೇಳಿ ಹೋಗಿದ್ದರು. 'ಒಂದು ವಾನರನ ಮುಷ್ಟಿಪ್ರಹಾರದಿಂದ ನೀನು ಬಸವಳಿದಾಗ ರಕ್ಕಸರ ಸಂಹಾರವಾಯಿತೆಂದು ತಿಳಿ.' ಅಯ್ಯಾ! ಶ್ರೀರಾಮನ ದೂತನಾದ ನಿನ್ನನ್ನು ಕಣ್ಣಾರೆ ಕಂಡದ್ದು ನನ್ನ ಮಹದ್ಭಾಗ್ಯವೆಂದು ತಿಳಿಯುತ್ತೇನೆ. (ಚೌ/೧-೪)

**ದೋ – ತಾತ ಸ್ವರ್ಗ ಅಪಬರ್ಗ ಸುಖ ಧರಿಅ ತುಲಾ ಏಕ ಅಂಗ।**
**ತೂಲ ನ ತಾಹಿ ಸಕಲ ಮಿಲಿ ಜೋ ಸುಖ ಲವ ಸತಸಂಗ॥ ೪ ॥**

ಅಯ್ಯಾ! ಸ್ವರ್ಗ ಮತ್ತು ಮೋಕ್ಷದ ಎಲ್ಲ ಸುಖಗಳನ್ನು ತಕ್ಕಡಿಯ ಒಂದೆಡೆ ಹಾಕಿದರೆ, ಇನ್ನೊಂದೆಡೆ ಇರಿಸಿದ ಕ್ಷಣಕಾಲದ ಸತ್ಸಂಗದಿಂದ ಉಂಟಾದ ಸುಖಕ್ಕೆ ಸಮವಾಗಲಾರದು. (ದೋ/೪)

**ಚೌ – ಪ್ರಬಿಸಿ ನಗರ ಕೀಜೇ ಸಬ ಕಾಜಾ। ಹೃದಯಁ ರಾಖಿ ಕೋಸಲಪುರ ರಾಜಾ॥**
**ಗರಲ ಸುಧಾ ರಿಪು ಕರಹಿಂ ಮಿತಾಈ। ಗೋಪದ ಸಿಂಧು ಅನಲ ಸಿತಲಾಈ॥ ೧ ॥**
**ಗರುಡ ಸುಮೇರು ರೇನು ಸಮ ತಾಹೀ। ರಾಮ ಕೃಪಾ ಕರಿ ಚಿತವಾ ಜಾಹೀ॥**
**ಅತಿ ಲಘು ರೂಪ ಧರೆಉ ಹನುಮಾನಾ। ಪೈಠಾ ನಗರ ಸುಮಿರಿ ಭಗವಾನಾ॥ ೨ ॥**
**ಮಂದಿರ ಮಂದಿರ ಪ್ರತಿ ಕರಿ ಸೋಧಾ। ದೇಖೇ ಜಹಁ ತಹಁ ಅಗನಿತ ಜೋಧಾ॥**
**ಗಯಉ ದಸಾನನ ಮಂದಿರ ಮಾಹೀಂ। ಅತಿ ಬಿಚಿತ್ರ ಕಹಿ ಜಾತ ಸೊ ನಾಹೀಂ॥ ೩ ॥**
**ಸಯನ ಕಿಏಁ ದೇಖಾ ಕಪಿ ತೇಹೀ। ಮಂದಿರ ಮಹುಁ ನ ದೀಖಿ ಬೈದೇಹೀ॥**
**ಭವನ ಏಕ ಪುನಿ ದೀಖ ಸುಹಾವಾ। ಹರಿ ಮಂದಿರ ತಹಁ ಭಿನ್ನ ಬನಾವಾ॥ ೪ ॥**

ನೀನು ಕೋಸಲಾಧೀಶ ಶ್ರೀರಾಮನನ್ನು ಹೃದಯದಲ್ಲಿ ನೆಲೆಗೊಳಿಸಿ ಲಂಕೆಯೊಳಗೆ ಪ್ರವೇಶಿಸಿ, ನಿನ್ನ ಎಲ್ಲ ಕಾರ್ಯವನ್ನು ನೆರವೇರಿಸಿಕೋ. (ಕಾಕಭುಶುಂಡಿ ಹೇಳುತ್ತಾರೆ –) ಎಲೈ ವೈನತೇಯಾ! ಶ್ರೀರಾಮಚಂದ್ರನ ಕೃಪೆಗೆ ಪಾತ್ರನಾದ ವ್ಯಕ್ತಿಗೆ ವಿಷವೂ ಅಮೃತವಾಗುತ್ತದೆ; ಶತ್ರುವೂ ಮಿತ್ರನಾಗುತ್ತಾನೆ. ಸಮುದ್ರವು ಗೋಷ್ಪದಂತಾಗುತ್ತದೆ. ಉರಿಯು ತಣ್ಣಗಾಗುತ್ತದೆ. ಅವನಿಗೆ ಮೇರು ಪರ್ವತವೂ ಕೂಡ ಮಳಲ ಕಣದಂತಾಗುತ್ತದೆ. ಹನುಮಂತನು ಅತಿಸಣ್ಣ ರೂಪವನ್ನಾಂತು, ರಾಮನನ್ನು ಸ್ಮರಿಸುತ್ತಾ ನಗರವನ್ನು ಪ್ರವೇಶಿಸಿದನು. ಅವನು ಅಲ್ಲಿ ಪ್ರತಿಯೊಂದು ಅರಮನೆಯನ್ನೂ ಶೋಧಿಸಿಬಿಟ್ಟನು. ಅಲ್ಲಲ್ಲಿ ಅಸಂಖ್ಯ ಯೋಧರನ್ನು ನೋಡಿದನು. ಅನಂತರ ಅವನು ಅತಿವಿಚಿತ್ರವಾದ, ವರ್ಣನಾತೀತವಾದ ರಾವಣನ ಅರಮನೆಯನ್ನು ಹೊಕ್ಕನು. ಅಲ್ಲಿ ರಾವಣನು ಮಲಗಿರುವುದನ್ನು ಕಂಡನು. ಆದರೆ ಸೀತಾದೇವಿಯು ಅಲ್ಲಿ ಕಂಡುಬರಲಿಲ್ಲ. ಮತ್ತೆ ಒಂದು ಸುಂದರವಾದ ಅರಮನೆಯನ್ನು ನೋಡಿದನು. ಅದರಲ್ಲಿ ಭಗವಂತನ ಒಂದು ಮಂದಿರ ಬೇರೆಯಾಗಿ ನಿರ್ಮಿಸಿದ್ದರು. (ಚೌ/೧-೪)

## ಹನುಮಂತ ವಿಭೀಷಣ ಸಂವಾದ – ಸೀತಾದರ್ಶನ

**ದೋ – ರಾಮಾಯುಧ ಅಂಕಿತ ಗೃಹ ಸೋಭಾ ಬರನಿ ನ ಜಾಇ।**
**ನವ ತುಲಸಿಕಾ ಬೃಂದ ತಹಁ ದೇಖಿ ಹರಷ ಕಪಿರಾಇ॥ ೫ ॥**

ಆ ಅರಮನೆಯ ಮುಂಭಾಗದಲ್ಲಿ ಶ್ರೀರಾಮನ ಆಯುಧಗಳಾದ ಧನುರ್ಬಾಣಗಳು ಅಂಕಿತವಾಗಿತ್ತು. ಅದರ ಶೋಭೆಯು ವರ್ಣನಾತೀತವಾಗಿತ್ತು. ಅಲ್ಲಿ ನವನವೀನ ತುಳಸೀ ಗಿಡಗಳನ್ನು ಕಂಡು ಕಪಿವರನು ಅತೀವ ಹರ್ಷಿತನಾದನು. (ದೋ/೫)

**ಚೌ – ಲಂಕಾ ನಿಸಿಚರ ನಿಕರ ನಿವಾಸಾ। ಇಹಾँ ಕಹಾँ ಸಜ್ಜನ ಕರ ಬಾಸಾ॥**
**ಮನ ಮಹುँ ತರಕ ಕರೈँ ಕಪಿ ಲಾಗಾ। ತೇಹೀँ ಸಮಯ ಬಿಭೀಷನು ಜಾಗಾ॥ ೧ ॥**
**ರಾಮ ರಾಮ ತೆಹಿँ ಸುಮಿರನ ಕೀನ್ಹಾ। ಹೃದಯँ ಹರಷ ಕಪಿ ಸಜ್ಜನ ಚೀನ್ಹಾ॥**
**ಎಹಿ ಸನ ಹಠಿ ಕರಿಹಉँ ಪಹಿಚಾನೀ। ಸಾಧು ತೆ ಹೋಇ ನ ಕಾರಜ ಹಾನೀ॥ ೨ ॥**
**ಬಿಪ್ರ ರೂಪ ಧರಿ ಬಚನ ಸುನಾಏ। ಸುನತ ಬಿಭೀಷನ ಉಠಿ ತಹँ ಆಏ॥**
**ಕರಿ ಪ್ರನಾಮ ಪೂँಛೀ ಕುಸಲಾಈ। ಬಿಪ್ರ ಕಹಹು ನಿಜ ಕಥಾ ಬುಝಾಈ॥ ೩ ॥**
**ಕೀ ತುಮ್ಹ ಹರಿ ದಾಸನ್ಹ ಮಹँ ಕೋಈ। ಮೋರೇँ ಹೃದಯ ಪ್ರೀತಿ ಅತಿ ಹೋಈ॥**
**ಕೀ ತುಮ್ಹ ರಾಮು ದೀನ ಅನುರಾಗೀ। ಆಯಹು ಮೋಹಿ ಕರನ ಬಡಭಾಗೀ॥ ೪ ॥**

'ಲಂಕೆಯೇನೋ ನಿಶಾಚರರ ನೆಲೆವೀಡು. ಇಲ್ಲಿ ಸಜ್ಜನರು ಹೇಗೆ ಇರುವರು?' ಈ ವಿಧವಾಗಿ ಮಾರುತಿಯು ಯೋಚಿಸುತ್ತಿರುವಾಗ – ಬ್ರಾಹ್ಮೀಮುಹೂರ್ತದಲ್ಲಿ ವಿಭೀಷಣನು ನಿದ್ದೆಯಿಂದೆದ್ದು ರಾಮನಾಮಸ್ಮರಣೆ ಮಾಡತೊಡಗಿದನು. ಹನುಮಂತನು ಇವನು ಸಜ್ಜನನೆಂದುಕೊಂಡು ಮನಸ್ಸಿನಲ್ಲಿ ಹರ್ಷಗೊಂಡನು. 'ಇವನನ್ನು ಅವಶ್ಯವಾಗಿ ಪರಿಚಯಿಸಿಕೊಳ್ಳಬೇಕು. ಏಕೆಂದರೆ, ಸಾಧುಜನ ಸಾಂಗತ್ಯದಿಂದ ಕಾರ್ಯಹಾನಿಯಾಗದು' ಎಂದು ಅಂದುಕೊಂಡನು. ಬ್ರಾಹ್ಮಣರೂಪವನ್ನು ಧರಿಸಿ ಹನುಮಂತನು ಅವನನ್ನು ಕೂಗಿ ಕರೆದನು. ಕೂಗು ಕೇಳಿದ ಕೂಡಲೇ ವಿಭೀಷಣನು ಹೊರಗೆ ಬಂದು ನಮಸ್ಕರಿಸಿ, ಕುಶಲವನ್ನು ವಿಚಾರಿಸುತ್ತಾ ಕೇಳಿದನು – ಬ್ರಾಹ್ಮಣೋತ್ತಮರೇ! ತಮ್ಮ ವೃತ್ತಾಂತವನ್ನು ತಿಳಿಸುವಿರಾಗಿ. ನೀವು ಹರಿಭಕ್ತರಾದ ನಾರದಾದಿಗಳಲ್ಲಿ ಯಾರಾದರೊಬ್ಬರೋ? ಏಕೆಂದರೆ ತಮ್ಮನ್ನು ಕಂಡಕೂಡಲೇ ನನ್ನಲ್ಲಿ ಪ್ರೇಮವು ಉಕ್ಕಿಹರಿಯುತ್ತಿದೆ. ಅಥವಾ ದೀನವತ್ಸಲನಾದ ಶ್ರೀರಾಮಚಂದ್ರನೇ ನನ್ನನ್ನು ಕೃತಾರ್ಥನನ್ನಾಗಿಸಲು ನನ್ನ ಮನೆಬಾಗಿಲಿಗೇ ಬಂದಿರುವನೋ? (ಚೌ/೧-೪)

**ದೋ – ತಬ ಹನುಮಂತ ಕಹೀ ಸಬ ರಾಮ ಕಥಾ ನಿಜ ನಾಮ।**
**ಸುನತ ಜುಗಲ ತನ ಪುಲಕ ಮನ ಮಗನ ಸುಮಿರಿ ಗುನ ಗ್ರಾಮ॥ ೬ ॥**

ಆಗ ಹನುಮಂತನು ಶ್ರೀರಾಮಚಂದ್ರನ ಎಲ್ಲ ಕಥೆಯನ್ನು ಹೇಳಿ, ತನ್ನ ಹೆಸರನ್ನು ತಿಳಿಸಿದನು. ಇದನ್ನು ಕೇಳುತ್ತಲೇ ಇಬ್ಬರ ಶರೀರಗಳೂ ರೋಮಾಂಚಿತವಾದುವು. ಶ್ರೀರಾಮನ ಗುಣಸಮೂಹಗಳನ್ನು ನೆನೆನೆನೆದು ಇಬ್ಬರ ಮನಸ್ಸೂ ಪ್ರೇಮಾನಂದದಲ್ಲಿ ಮುಳುಗಿಹೋಯಿತು. (ದೋ/೬)

**ಚೌ – ಸುನಹು ಪವನಸುತ ರಹನಿ ಹಮಾರೀ। ಜಿಮಿ ದಸನನ್ಹಿ ಮಹುँ ಜೀಭ ಬಿಚಾರೀ॥**
**ತಾತ ಕಬಹುँ ಮೋಹಿ ಜಾನಿ ಅನಾಥಾ। ಕರಿಹಹಿँ ಕೃಪಾ ಭಾನುಕುಲ ನಾಥಾ॥ ೧ ॥**
**ತಾಮಸ ತನು ಕಛು ಸಾಧನ ನಾಹೀँ। ಪ್ರೀತಿ ನ ಪದ ಸರೋಜ ಮನ ಮಾಹೀँ॥**
**ಅಬ ಮೋಹಿ ಭಾ ಭರೋಸ ಹನುಮಂತಾ। ಬಿನು ಹರಿಕೃಪಾ ಮಿಲಹಿँ ನಹಿँ ಸಂತಾ॥ ೨ ॥**
**ಜೌँ ರಘುಬೀರ ಅನುಗ್ರಹ ಕೀನ್ಹಾ। ತೌ ತುಮ್ಹ ಮೋಹಿ ದರಸು ಹಠಿ ದೀನ್ಹಾ॥**
**ಸುನಹು ಬಿಭೀಷನ ಪ್ರಭು ಕೈ ರೀತೀ। ಕರಹಿँ ಸದಾ ಸೇವಕ ಪರ ಪ್ರೀತೀ॥ ೩ ॥**
**ಕಹಹು ಕವನ ಮೈँ ಪರಮ ಕುಲೀನಾ। ಕಪಿ ಚಂಚಲ ಸಬಹೀँ ಬಿಧಿ ಹೀನಾ॥**
**ಪ್ರಾತ ಲೇಇ ಜೋ ನಾಮ ಹಮಾರಾ। ತೆಹಿ ದಿನ ತಾಹಿ ನ ಮಿಲೈ ಅಹಾರಾ॥ ೪ ॥**

ವಿಭೀಷಣನು ಹೇಳಿದನು – ಓ ಪವನಕುಮಾರಾ! ಇಲ್ಲಿ ನನ್ನ ಇರುವನ್ನು ಏನೆಂದು ಹೇಳಲಿ! ಹಲ್ಲುಗಳ ನಡುವೆ ನಾಲಿಗೆ ಇರುವಂತೆ ನಿಸ್ಸಹಾಯಕನಾಗಿ ಇಲ್ಲಿ ಇದ್ದೇನೆ. ಅಯ್ಯಾ! ನನ್ನನ್ನು ಅನಾಥನೆಂದು ಪರಿಗಣಿಸಿ, ಸೂರ್ಯವಂಶ ಪ್ರಭುವಾದ ಶ್ರೀರಾಮಚಂದ್ರನು ನನ್ನ ಮೇಲೆ ಏನಾದರೂ ಕೃಪೆಗೈಯ್ಯುವನೇ? ನನ್ನದು ತಾಮಸ ತನುವಾದ್ದರಿಂದ ಭಗವತ್ಸಾಧನೆ ಏನೊಂದೂ ಆಗದು. ನನ್ನ ಮನಸ್ಸಿನಲ್ಲಿ ಶ್ರೀರಾಮಚರಣದಲ್ಲಿ ಪ್ರೇಮವೂ ಇಲ್ಲ. ಆದರೂ ಆಂಜನೇಯಾ! ಶ್ರೀರಾಮನ ಕೃಪೆ ನನ್ನ ಮೇಲಿದೆ ಎಂಬ ನಂಬಿಕೆ ನನಗೆ ಈಗ ಗಟ್ಟಿಯಾಗಿದೆ. ಏಕೆಂದರೆ, ಹರಿಕೃಪೆಯಿಲ್ಲದೆ ಸಂತರು ದೊರೆಯರು. ರಘುವೀರನ ಅನುಗ್ರಹವು ನನ್ನ ಮೇಲೆ ಆದದ್ದರಿಂದಲೇ ನೀವು ಬಂದು ನನಗೆ ದರ್ಶನವಿತ್ತಿದ್ದೀರಿ.'' ಆಗ ಹನುಮಂತನು ಹೇಳಿದನು – ಎಲೈ ವಿಭೀಷಣಾ!

ಕೇಳು. ತನ್ನ ಸೇವಕರ ಮೇಲೆ ಪ್ರೀತಿ ತೋರುವುದೇ ಪ್ರಭುವಿನ ಸ್ವಭಾವವು. ನೀನೇ ಹೇಳು, ನಾನು ಅದಾವ ಮಹಾಕುಲದವನು? ಚಂಚಲ ಸ್ವಭಾವವುಳ್ಳ ವಾನರನು. ಎಲ್ಲ ಪ್ರಕಾರದಿಂದಲೂ ಹೀನನು. ಬೆಳಗೆದ್ದು ನಮ್ಮ (ಕೋತಿಗಳ) ಹೆಸರು ಹೇಳಿದರೆ ಅಂದು ಊಟ ಸಿಗಲಾರದು. (ಈ ವಿಧವಾಗಿ ತನ್ನನ್ನು ಅಕಿಂಚನನೆಂದು ಹೇಳುವುದು ಆಂಜನೇಯನ ಭಕ್ತಿಯ ಪರಾಕಾಷ್ಠೆಯಾಗಿದೆ.) (ಚೌ/೧-೪)

**ದೋ – ಅಸ ಮೈಂ ಅಧಮ ಸಖಾ ಸುನು ಮೋಹೂ ಪರ ರಘುಬೀರ।**
**ಕೀನ್ಹೀ ಕೃಪಾ ಸುಮಿರಿ ಗುನ ಭರೇ ಬಿಲೋಚನ ನೀರ ॥ ೭ ॥**

ಆದರೆ ಸಖನೇ! ಇಷ್ಟೊಂದು ಅಧಮನಾಗಿದ್ದರೂ ಶ್ರೀರಾಮಚಂದ್ರನು ನನ್ನ ಮೇಲೆ ತನ್ನ ಕೃಪೆಯನ್ನು ಬೀರಿರುವನು. ಭಗವಂತನ ಗುಣಗಳನ್ನು ನೆನೆನೆನೆದು ಹನುಮಂತನ ಕಣ್ಣುಗಳೆರಡರಲ್ಲಿಯೂ ಪ್ರೇಮಾಶ್ರುಗಳು ಹರಿದವು. (ದೋ/೭)

**ಚೌ – ಜಾನತಹೂँ ಅಸ ಸ್ವಾಮಿ ಬಿಸಾರೀ। ಫಿರಹಿಂ ತೆ ಕಾಹೆ ನ ಹೋಹಿಂ ದುಖಾರೀ ॥**
**ಏಹಿ ಬಿಧಿ ಕಹತ ರಾಮ ಗುನ ಗ್ರಾಮಾ। ಪಾವಾ ಅನಿರ್ಬಾಚ್ಯ ಬಿಶ್ರಾಮಾ ॥ ೧ ॥**
**ಪುನಿ ಸಬ ಕಥಾ ಬಿಭೀಷನ ಕಹೀ। ಜೆಹಿ ಬಿಧಿ ಜನಕಸುತಾ ತಹँ ರಹೀ ॥**
**ತಬ ಹನುಮಂತ ಕಹಾ ಸುನು ಭ್ರಾತಾ। ದೇಖೀ ಚಹಉँ ಜಾನಕೀ ಮಾತಾ ॥ ೨ ॥**
**ಜುಗುತಿ ಬಿಭೀಷನ ಸಕಲ ಸುನಾಈ। ಚಲೆಉ ಪವನಸುತ ಬಿದಾ ಕರಾಈ ॥**
**ಕರಿ ಸೋಇ ರೂಪ ಗಯಉ ಪುನಿ ತಹವಾँ। ಬನ ಅಸೋಕ ಸೀತಾ ರಹ ಜಹವಾँ ॥ ೩ ॥**
**ದೇಖಿ ಮನಹಿ ಮಹುँ ಕೀನ್ಹ ಪ್ರನಾಮಾ। ಬೈಠೆಹಿಂ ಬೀತಿ ಜಾತ ನಿಸಿ ಜಾಮಾ ॥**
**ಕೃಸ ತನು ಸೀಸ ಜಟಾ ಏಕ ಬೇನೀ। ಜಪತಿ ಹೃದಯँ ರಘುಪತಿ ಗುನ ಶ್ರೇನೀ ॥ ೪ ॥**

ಇದೆಲ್ಲವನ್ನು ತಿಳಿದುಕೊಂಡಿದ್ದರೂ ಅಂತಹ ಸ್ವಾಮಿಯನ್ನು ಮರೆತು ವಿಷಯ ಸುಖಗಳನ್ನು ಅರಸುವ ಜನರಿಗೆ ದುಃಖವಲ್ಲದೆ ಬೇರೇನು ಸಿಗಬಹುದು? ಈ ಪ್ರಕಾರ ಶ್ರೀರಾಮನ ಮಹಾತ್ಮ್ಯವನ್ನು ವರ್ಣಿಸುತ್ತಾ ಆಂಜನೇಯನು ಅನಿರ್ವಚನೀಯ ಪರಮ ಶಾಂತಿಯನ್ನು ಹೊಂದಿದನು. ಅನಂತರ ವಿಭೀಷಣನು ಜಾನಕಿದೇವಿಯು ಅಲ್ಲಿ (ಲಂಕೆಯಲ್ಲಿ) ಯಾವ ವಿಧವಾಗಿದ್ದಾಳೆ – ಎಂಬುದನ್ನು ವರ್ಣಿಸಿದನು. ಆಗ ಹನುಮಂತನು ವಿಭೀಷಣನಲ್ಲಿ – 'ಸೋದರಾ! ನಾನು ಜಾನಕೀದೇವಿಯನ್ನು ನೋಡಬೇಕೆಂದಿದ್ದೇನೆ' ಎಂದು ಹೇಳಿದನು. ವಿಭೀಷಣನು ಸೀತಾಮಾತೆಯ ದರ್ಶನದ ಎಲ್ಲ ಉಪಾಯಗಳನ್ನು ತಿಳಿಸಿದನು. ಆಗ ಹನುಮಂತನು ಅವನಿಂದ ಬೀಳ್ಕೊಂಡು ಅಲ್ಲಿಂದ ಹೊರಟನು. ಮತ್ತೆ ಅದೇ ಸೂಕ್ಷ್ಮರೂಪವನ್ನು ಧರಿಸಿ ಸೀತಾದೇವಿಯಿದ್ದ ಅಶೋಕಾವನವನ್ನು ಹೊಕ್ಕನು. ಅವಳನ್ನು ನೋಡುತ್ತಲೇ ಹನುಮಂತನು ಆಕೆಗೆ ಮನಸ್ಸಿನಲ್ಲೇ ವಂದಿಸಿದನು. ಅವಳು ಇಡೀ ರಾತ್ರೆಯನ್ನು ಒಂದೇರೀತಿ ಕುಳಿತುಕೊಂಡೇ ಕಳೆಯುತ್ತಿರುವಳು. ಆಕೆಯ ಶರೀರವು ಕ್ಷೀಣವಾಗಿತ್ತು. ತಲೆಯ ಕೂದಲೂ ಜಟೆಕಟ್ಟಿ ಒಂದೇ ಜಡೆಯಾಗಿ ಹೋಗಿತ್ತು. ಅವಳು ನಿರಂತರವೂ ಶ್ರೀರಘುನಾಥನ ಗುಣಸಮೂಹಗಳನ್ನು ಸ್ಮರಿಸುತ್ತಾ ಇದ್ದಳು. (ಚೌ/೧-೪)

**ದೋ – ನಿಜ ಪದ ನಯನ ದಿಏँ ಮನ ರಾಮ ಪದ ಕಮಲ ಲೀನ।**
**ಪರಮ ದುಖೀ ಭಾ ಪವನಸುತ ದೇಖಿ ಜಾನಕೀ ದೀನ ॥ ೮ ॥**

ಜಾನಕಿಯ ದೃಷ್ಟಿಯು ತನ್ನ ಕಾಲುಗಳ ಮೇಲೆ ನೆಟ್ಟಿತ್ತು. ಆಕೆಯ ಮನಸ್ಸು ಶ್ರೀರಾಮನ ಚರಣಗಳಲ್ಲಿ ಲೀನವಾಗಿತ್ತು. ದೀನ-ದುಃಖಿತೆಯಾದ ಸೀತಾದೇವಿಯನ್ನು ನೋಡಿ ಪಾವಮಾನಿಯು ತುಂಬಾ ದುಃಖಿತನಾದನು. (ದೋ/೮)

## ರಾವಣನ ಬೆದರಿಕೆ – ಸೀತೆಯ ಎಚ್ಚರಿಕೆ

**ಚೌ – ತರು ಪಲ್ಲವ ಮಹುँ ರಹಾ ಲುಕಾಈ। ಕರಇ ಬಿಚಾರ ಕರೌँ ಕಾ ಭಾಈ ॥**
**ತೇಹಿ ಅವಸರ ರಾವನು ತಹँ ಆವಾ। ಸಂಗ ನಾರಿ ಬಹು ಕಿಏँ ಬನಾವಾ ॥ ೧ ॥**
**ಬಹು ಬಿಧಿ ಖಲ ಸೀತಹಿ ಸಮುಝಾವಾ। ಸಾಮ ದಾನ ಭಯ ಭೇದ ದೇಖಾವಾ ॥**
**ಕಹ ರಾವನು ಸುನು ಸುಮುಖಿ ಸಯಾನೀ। ಮಂದೋದರೀ ಆದಿ ಸಬ ರಾನೀ ॥ ೨ ॥**
**ತವ ಅನುಚರೀँ ಕರಉँ ಪನ ಮೋರಾ। ಏಕ ಬಾರ ಬಿಲೋಕು ಮಮ ಓರಾ ॥**
**ತೃನ ಧರಿ ಓಟ ಕಹತಿ ಬೈದೇಹೀ। ಸುಮಿರಿ ಅವಧಪತಿ ಪರಮ ಸನೇಹೀ ॥ ೩ ॥**

**ಸುನು ದಸಮುಖ ಖದ್ಯೋತ ಪ್ರಕಾಸಾ। ಕಬಹುँ ಕಿ ನಲಿನೀ ಕರಇ ಬಿಕಾಸಾ॥**
**ಅಸ ಮನ ಸಮುಝು ಕಹತಿ ಜಾನಕೀ। ಖಲ ಸುಧಿ ನಹಿँ ರಘುಬೀರ ಬಾನ ಕೀ॥ ೪॥**
**ಸಠ ಸೂನೇँ ಹರಿ ಆನೆಹಿ ಮೋಹೀ। ಅಧಮ ನಿಲಜ್ಜ ಲಾಜ ನಹಿँ ತೋಹೀ॥ ೫॥**

ಹನುಮಂತನು ಮರದ ಮೇಲೆ ಎಲೆಗಳ ನಡುವೆ ಅಡಗಿ ಕುಳಿತಿದ್ದು – ''ಅಯ್ಯೋ ಈಕೆಯ ದುಃಖವನ್ನು ದೂರಾಗಿಸಲು ನಾನೇನು ಮಾಡಲಿ?'' ಎಂದು ಆಲೋಚಿಸತೊಡಗಿದನು. ಅದೇ ಸಮಯದಲ್ಲಿ ಲಂಕೇಶ್ವರ ರಾವಣನು ವಿಧ-ವಿಧವಾಗಿ ಶೃಂಗರಿಸಿಕೊಂಡು, ಅನೇಕ ಸುಂದರ ಲಲನಾಮಣಿಗಳೊಂದಿಗೆ ಅಲ್ಲಿಗೆ ಬಂದನು. ಆ ದುರುಳ ರಾವಣನು ಸೀತಾದೇವಿಗೆ ಅನೇಕ ಪ್ರಕಾರದಿಂದ ಸಮಾಧಾನ ಹೇಳಿದನು. ಸಾಮ, ದಾನ, ಭಯ, ಭೇದ ಮುಂತಾದ ಉಪಾಯಗಳಿಂದ ಅವಳನ್ನು ತನ್ನವಳಾಗುವಂತೆ ಪ್ರಯತ್ನಿಸಿದನು. ಮತ್ತೆ ಹೇಳುತ್ತಾನೆ – ''ಎಲೈ ಸುಮುಖೀ! ಬುದ್ಧಿಮತಿಯೇ! ಕೇಳು. ಮಂದೋದರಿಯೇ ಮೊದಲಾದ ನನ್ನ ಎಲ್ಲ ರಾಣಿಯರನ್ನೂ ನಿನ್ನ ತೊತ್ತಾಗಿ ನೇಮಿಸುತ್ತೇನೆ. ಇದನ್ನು ನಾನು ಪ್ರತಿಜ್ಞೆಮಾಡಿ ಹೇಳುತ್ತೇನೆ. ನೀನು ಒಮ್ಮೆ ನನ್ನ ಕಡೆಗೆ ನೋಡು.'' ಜಾನಕೀದೇವಿಯು ತನ್ನ ಪ್ರಾಣೇಶ್ವರನಾದ ಶ್ರೀರಾಮನನ್ನು ಸ್ಮರಿಸಿ, ಒಂದು ಹುಲ್ಲುಕಡ್ಡಿಯನ್ನು ಅವನಿದಿರು ಅಡ್ಡಲಾಗಿಟ್ಟು ನುಡಿದಳು – ಎಲವೋ ದಶಾನನಾ! ಕೇಳು. ಮಿಣುಕುಹುಳುವಿನ ಬೆಳಕಿನಿಂದ ಎಲ್ಲಾದರೂ ಕಮಲವು ಅರಳೀತೇ? ನೀನು ಮಿಣುಕುಹುಳುವಿನಂತೆ ಎಂದು ತಿಳಿದುಕೋ. ದುಷ್ಟನೇ! ಶ್ರೀರಘುವೀರನ ಬಾಣದ ಮಹಿಮೆ ನಿನಗೆ ತಿಳಿಯದು. ಎಲೈ ಅಧಮನೇ! ನೀಚನೇ! ನಿರ್ಲಜ್ಜನೇ! ಯಾರೂ ಇಲ್ಲದಿರುವಾಗ, ನಾನು ಒಂಟಿಯಾಗಿದ್ದಾಗ ನನ್ನನ್ನು ಕದ್ದು ತಂದಿರುವೆಯಲ್ಲ! ನಿನಗೆ ನಾಚಿಕೆಯಿಲ್ಲವೇ? (ಚೌ/೧-೫)

**ದೋ – ಆಪುಹಿ ಸುನಿ ಖದ್ಯೋತ ಸಮ ರಾಮಹಿ ಭಾನು ಸಮಾನ।**
**ಪರುಷ ಬಚನ ಸುನಿ ಕಾಢಿ ಅಸಿ ಬೋಲಾ ಅತಿ ಖಿಸಿಆನ॥ ೯॥**

ತನ್ನನ್ನು ಮಿಣುಕುಹುಳವೆಂದೂ, ಶ್ರೀರಾಮನನ್ನು ಸೂರ್ಯನಂತೆ ಎಂದು ಹೋಲಿಸಿ ಹೇಳಿದ ಸೀತೆಯ ಕಠೋರ ವಚನವನ್ನು ಕೇಳಿ, ರಾವಣನು ತನ್ನ ಕರವಾಲವನ್ನು ಹಿರಿದು, ಕ್ರೋಧೋನ್ಮತ್ತನಾಗಿ ಇಂತೆಂದನು – (ದೋ/೯)

**ಚೌ – ಸೀತಾ ತೈँ ಮಮ ಕೃತ ಅಪಮಾನಾ। ಕಟಿಹಉँ ತವ ಸಿರ ಕಠಿನ ಕೃಪಾನಾ॥**
**ನಾಹಿँ ತ ಸಪದಿ ಮಾನು ಮಮ ಬಾನೀ। ಸುಮುಖಿ ಹೋತಿ ನ ತ ಜೀವನ ಹಾನೀ॥ ೧॥**
**ಸ್ಯಾಮ ಸರೋಜ ದಾಮ ಸಮ ಸುಂದರ। ಪ್ರಭು ಭುಜ ಕರಿ ಕರ ಸಮ ದಸಕಂಧರ॥**
**ಸೋ ಭುಜ ಕಂಠ ಕಿ ತವ ಅಸಿ ಘೋರಾ। ಸುನು ಸಠ ಅಸ ಪ್ರವಾನ ಪನ ಮೋರಾ॥ ೨॥**
**ಚಂದ್ರಹಾಸ ಹರು ಮಮ ಪರಿತಾಪಂ। ರಘುಪತಿ ಬಿರಹ ಅನಲ ಸಂಜಾತಂ॥**
**ಸೀತಲ ನಿಸಿತ ಬಹಸಿ ಬರ ಧಾರಾ। ಕಹ ಸೀತಾ ಹರು ಮಮ ದುಖ ಭಾರಾ॥ ೩॥**
**ಸುನತ ಬಚನ ಪುನಿ ಮಾರನ ಧಾವಾ। ಮಯತನಯಾँ ಕಹಿ ನೀತಿ ಬುಝಾವಾ॥**
**ಕಹೆಸಿ ಸಕಲ ನಿಸಿಚರಿನ್ಹ ಬೊಲಾಈ। ಸೀತಹಿ ಬಹು ಬಿಧಿ ತ್ರಾಸಹು ಜಾಈ॥ ೪॥**
**ಮಾಸ ದಿವಸ ಮಹುँ ಕಹಾ ನ ಮಾನಾ। ತೌ ಮೈँ ಮಾರಬಿ ಕಾಢಿ ಕೃಪಾನಾ॥ ೫॥**

''ಎಲೈ ಸೀತೆ! ನೀನು ನನ್ನನ್ನು ಅಪಮಾನಗೊಳಿಸಿದ್ದೀಯೇ. ಈ ಕಠೋರ ಖಡ್ಗದಿಂದ ನಿನ್ನ ತಲೆಯನ್ನು ತರಿದು ಚೆಂಡಾಡಿಬಿಡುತ್ತೇನೆ. ಎಲೆಗೆ ಸುಮುಖೀ! ಈಗಲಾದರೂ ನನ್ನ ಮಾತನ್ನು ಕೇಳು. ಇಲ್ಲವಾದರೆ ಪ್ರಾಣಗಳ ಆಸೆಯನ್ನು ಬಿಡಬೇಕಾಗುತ್ತದೆ.'' ಆಗ ಸೀತಾದೇವಿಯು ಹೇಳಿದಳು – ಎಲವೋ ದಶಕಂಠಾ! ಶ್ಯಾಮಲಕಮಲದಂತೆ ಸುಂದರವಾದ, ಆನೆಯ ಸೊಂಡಿಲಿನಂತೆ ಬಲಿಷ್ಠವಾದ ನನ್ನ ಪ್ರಭುವಿನ ವಿಶಾಲವಾದ ಭುಜಗಳು ನನ್ನ ಕೊರಳಿಗೆ ಅಲಂಕರಿಸೀತು. ಇಲ್ಲವೇ ನಿನ್ನ ಕರವಾಲವು ನನ್ನ ಕತ್ತನ್ನು ಕತ್ತರಿಸೀತು. ಶಠನೇ! ಕೇಳು. ಇದೇ ನನ್ನ ಸತ್ಯಪ್ರತಿಜ್ಞೆಯು. ಅನಂತರ ಸೀತೆಯು ಆ ಖಡ್ಗವನ್ನು ಕುರಿತು ಹೇಳಿದಳು – ''ಓ ಚಂದ್ರಹಾಸವೇ! ರಘುಪತಿಯ ವಿರಹದ ದಳ್ಳುರಿಯನ್ನು ನೀನು ಹರಿಸು. ಖಡ್ಗವೇ! ನಿನ್ನ ಅಲಗು ಶೀತಲವೂ, ತೀವ್ರವೂ ಶ್ರೇಷ್ಠವೂ ಆಗಿದೆ. ಈಗ ನೀನು ನನ್ನ ದುಃಖದ ಹೊರೆಯನ್ನು ಇಳಿಸು.'' ಸೀತಾದೇವಿಯ ಈ ಮಾತನ್ನು ಕೇಳುತ್ತಲೇ ರಾವಣನು ಆಕೆಯನ್ನು ಕೊಲ್ಲಲು ಮುಂದಾದನು. ಆಗ ಮಯಸುತೆ ಮಂದೋದರಿಯು ಅವನನ್ನು ತಡೆದು, ಅವನಿಗೆ ಅನೇಕ ಬುದ್ಧಿವಾದವನ್ನು ಹೇಳಿದಳು. ರಾವಣನು ರಾಕ್ಷಸಸ್ತ್ರೀಯರನ್ನು ಕರೆದು – 'ನೀವೆಲ್ಲರೂ ಸೀತೆಯನ್ನು ಅನೇಕವಿಧದಿಂದ ಭಯಪಡಿಸಿರಿ! ಎಂದು ಆಜ್ಞಾಪಿಸಿದನು. ಒಂದು ತಿಂಗಳೊಳಗೆ ನನ್ನ ಮಾತನ್ನು ಇವಳು ಅಂಗೀಕರಿಸದಿದ್ದರೆ ಇವಳನ್ನು ನನ್ನ ಖಡ್ಗಕ್ಕೆ ಬಲಿಕೊಡುತ್ತೇನೆ ಎಂದು ಗುಡುಗಿದನು. (ಚೌ/೧-೫)

**ದೋ – ಭವನ ಗಯಉ ದಸಕಂಧರ ಇಹಾ಼ ಪಿಸಾಚಿನಿ ಬೃಂದ ।**
**ಸೀತಹಿ ತ್ರಾಸ ದೆಖಾವಹಿಂ ಧರಹಿಂ ರೂಪ ಬಹು ಮಂದ ॥ ೧೦ ॥**

ಹೀಗೆ ಆಣತಿಯನ್ನಿತ್ತು ರಾವಣನು ತನ್ನ ಅರಮನೆಗೆ ಮರಳಿದನು. ಇತ್ತ ಭಯಂಕರ ಆಕಾರವುಳ್ಳ ರಾಕ್ಷಸ ಸ್ತ್ರೀಯರು ಸೀತಾದೇವಿಗೆ ಅನೇಕ ವಿಧದಿಂದ ಹೆದರಿಸತೊಡಗಿದರು. (ದೋ/೧೦)

## ತ್ರಿಜಟೆಯ ಸ್ವಪ್ನ

**ಚೌ – ತ್ರಿಜಟಾ ನಾಮ ರಾಚ್ಛಸೀ ಏಕಾ । ರಾಮ ಚರನ ರತಿ ನಿಪುನ ಬಿಬೇಕಾ ॥**
**ಸಬನ್ಹೌ ಬೋಲಿ ಸುನಾಏಸಿ ಸಪನಾ । ಸೀತಹಿ ಸೇಇ ಕರಹು ಹಿತ ಅಪನಾ ॥ ೧ ॥**
**ಸಪನೇಂ ಬಾನರ ಲಂಕಾ ಜಾರೀ । ಜಾತುಧಾನ ಸೇನಾ ಸಬ ಮಾರೀ ॥**
**ಖರ ಆರೂಢ ನಗನ ದಸಸೀಸಾ । ಮುಂಡಿತ ಸಿರ ಖಂಡಿತ ಭುಜ ಬೀಸಾ ॥ ೨ ॥**
**ಏಹಿ ಬಿಧಿ ಸೋ ದಚ್ಛಿನ ದಿಸಿ ಜಾಈ । ಲಂಕಾ ಮನಹುಁ ಬಿಭೀಷನ ಪಾಈ ॥**
**ನಗರ ಫಿರೀ ರಘುಬೀರ ದೊಹಾಈ । ತಬ ಪ್ರಭು ಸೀತಾ ಬೋಲಿ ಪಠಾಈ ॥ ೩ ॥**
**ಯಹ ಸಪನಾ ಮೈಂ ಕಹಉಁ ಪುಕಾರೀ । ಹೋಇಹಿ ಸತ್ಯ ಗಏಁ ದಿನ ಚಾರೀ ॥**
**ತಾಸು ಬಚನ ಸುನಿ ತೇ ಸಬ ಡರೀಂ । ಜನಕಸುತಾ ಕೇ ಚರನನ್ಹಿ ಪರೀಂ ॥ ೪ ॥**

ಆ ರಕ್ಕಸಿಯರಲ್ಲಿ 'ತ್ರಿಜಟಾ' ಎಂಬ ಓರ್ವ ರಾಕ್ಷಸಿಯು ಇದ್ದಳು. ಆಕೆ ರಾಮ ಚರಣಾನುರಾಗಿಯೂ ವಿವೇಕವತಿಯೂ ಆಗಿದ್ದಳು. ಆಕೆಯು ಎಲ್ಲರನ್ನು ಕರೆದು ತನಗೆ ಬಿದ್ದ ಸ್ವಪ್ನದ ವೃತ್ತಾಂತವನ್ನು ತಿಳಿಸುತ್ತಾ – ''ನೀವೆಲ್ಲರೂ ಸೀತೆಯ ಸೇವೆಮಾಡಿ ತಮ್ಮ ಶ್ರೇಯಸ್ಸನ್ನು ಮಾಡಿಕೊಳ್ಳಿರಿ'' ಎಂದು ಹೇಳಿದಳು. ನನಗೆ ಬಿದ್ದ ಕನಸು ಇಂತಿತ್ತು – ''ಒಂದು ಕಪಿಯು ಲಂಕೆಯನ್ನೆಲ್ಲ ಸುಟ್ಟುಹಾಕಿತು. ರಾಕ್ಷಸರ ಎಲ್ಲ ಸೈನ್ಯವೂ ಹತವಾಯಿತು. ರಾವಣನು ದಿಗಂಬರನಾಗಿ ಕತ್ತೆಯ ಮೇಲೆ ಕುಳಿತಿದ್ದಾನೆ. ಅವನ ತಲೆ ಬೋಳಾಗಿದೆ. ಇಪ್ಪತ್ತು ತೋಳುಗಳೂ ಕತ್ತರಿಸಿಹೋಗಿವೆ. ಈ ಪ್ರಕಾರ ಅವನು ದಕ್ಷಿಣದಿಕ್ಕಿನ ಯಮಪುರಿಗೆ ಹೋಗುತ್ತಿರುವನು. ಲಂಕೆಯು ವಿಭೀಷಣನಿಗೆ ದೊರೆತಂತಾಗಿದೆ. ಊರಲ್ಲೆಲ್ಲ ಶ್ರೀರಾಮನ ಜಯಕಾರ ಮೊಳಗುತ್ತಿದೆ. ಆಗ ಪ್ರಭು ರಾಮಚಂದ್ರನು ಸೀತೆಯನ್ನು ಕರೆಕಳುಹಿಸಿದನು. ಈ ಸ್ವಪ್ನವು ಬೇಗನೇ (ನಾಲ್ಕೇ ದಿನಗಳಲ್ಲಿ) ನಿಜವಾಗುವುದು ಎಂದು ನಾನು ಘಂಟಾಘೋಷವಾಗಿ ಹೇಳುತ್ತೇನೆ. ಆಕೆಯ ಮಾತನ್ನು ಕೇಳಿ ರಾಕ್ಷಸಿಯರೆಲ್ಲ ಭಯಗೊಂಡು ಜಾನಕಿಯ ಚರಣಗಳಿಗೆ ಎರಗಿದರು. (ಚೌ/೧-೪)

**ದೋ – ಜಹಁ ತಹಁ ಗಈಂ ಸಕಲ ತಬ ಸೀತಾ ಕರ ಮನ ಸೋಚ ।**
**ಮಾಸ ದಿವಸ ಬೀತೇಂ ಮೊಹಿ ಮಾರಿಹಿ ನಿಸಿಚರ ಪೋಚ ॥ ೧೧ ॥**

ಬಳಿಕ ಅವರೆಲ್ಲರೂ ಬೇರೆ-ಬೇರೆ ದಿಕ್ಕುಗಳಿಗೆ ಹೊರಟುಹೋದರು. 'ಒಂದು ತಿಂಗಳು ಕಳೆಯುತ್ತಲೇ ನೀಚನಾದ ರಾವಣನು ನನ್ನನ್ನು ಕೊಂದೇ ಬಿಡುವನು' ಎಂದು ಸೀತೆಯು ಯೋಚಿಸತೊಡಗಿದಳು. (ದೋ/೧೧)

**ಚೌ – ತ್ರಿಜಟಾ ಸನ ಬೋಲೀಂ ಕರ ಜೋರೀ । ಮಾತು ಬಿಪತಿ ಸಂಗಿನಿ ತೈಂ ಮೋರೀ ॥**
**ತಜೌಂ ದೇಹ ಕರು ಬೇಗಿ ಉಪಾಈ । ದುಸಹ ಬಿರಹು ಅಬ ನಹಿಂ ಸಹಿ ಜಾಈ ॥ ೧ ॥**
**ಆನಿ ಕಾಠ ರಚು ಚಿತಾ ಬನಾಈ । ಮಾತು ಅನಲ ಪುನಿ ದೇಹಿ ಲಗಾಈ ॥**
**ಸತ್ಯ ಕರಹಿ ಮಮ ಪ್ರೀತಿ ಸಯಾನೀ । ಸುನೈ ಕೊ ಶ್ರವನ ಸೂಲ ಸಮ ಬಾನೀ ॥ ೨ ॥**
**ಸುನತ ಬಚನ ಪದ ಗಹಿ ಸಮುಝಾಏಸಿ । ಪ್ರಭು ಪ್ರತಾಪ ಬಲ ಸುಜಸು ಸುನಾಏಸಿ ॥**
**ನಿಸಿ ನ ಅನಲ ಮಿಲ ಸುನು ಸುಕುಮಾರೀ । ಅಸ ಕಹಿ ಸೋ ನಿಜ ಭವನ ಸಿಧಾರೀ ॥ ೩ ॥**
**ಕಹ ಸೀತಾ ಬಿಧಿ ಭಾ ಪ್ರತಿಕೂಲಾ । ಮಿಲಿಹಿ ನ ಪಾವಕ ಮಿಟಿಹಿ ನ ಸೂಲಾ ॥**
**ದೆಖಿಅತ ಪ್ರಗಟ ಗಗನ ಅಂಗಾರಾ । ಅವನಿ ನ ಆವತ ಏಕಉ ತಾರಾ ॥ ೪ ॥**
**ಪಾವಕಮಯ ಸಸಿ ಸ್ರವತ ನ ಆಗೀ । ಮಾನಹುಁ ಮೋಹಿ ಜಾನಿ ಹತಭಾಗೀ ॥**
**ಸುನಹಿ ಬಿನಯ ಮಮ ಬಿಟಪ ಅಸೋಕಾ । ಸತ್ಯ ನಾಮ ಕರು ಹರು ಮಮ ಸೋಕಾ ॥ ೫ ॥**

**ನೂತನ ಕಿಸಲಯ ಅನಲ ಸಮಾನಾ। ದೇಹಿ ಅಗಿನಿ ಜನಿ ಕರಹಿ ನಿದಾನಾ॥**
**ದೇಖಿ ಪರಮ ಬಿರಹಾಕುಲ ಸೀತಾ। ಸೋ ಛನ ಕಪಿಹಿ ಕಲಪ ಸಮ ಬೀತಾ॥ ೬॥**

ಸೀತಾದೇವಿಯು ಕೈಜೋಡಿಸಿಕೊಂಡು ತ್ರಿಜಟೆಯಲ್ಲಿಹೇಳಿದಳು – ''ಅಮ್ಮಾ! ಈ ದುಃಖಮಯ ಸಮಯದಲ್ಲಿ ನೀನೇ ನನಗೆ ಒಡನಾಡಿಯು. ನನ್ನ ಈ ಶರೀರವನ್ನು ತ್ಯಜಿಸಲು ಬೇಕಾದ ಯಾವುದಾದರೂ ಉಪಾಯವನ್ನು ಮಾಡು. ವಿರಹವು ಅಸಹನೀಯವಾಗಿದೆ. ಇನ್ನು ತಾಳಲಾರೆ. ಕಟ್ಟಿಗೆಗಳನ್ನು ತಂದು ಚಿತೆಯನ್ನು ನಿರ್ಮಿಸಿ, ಬೆಂಕಿಯನ್ನಿಡು. ಎಲೈ ಬುದ್ಧಿಮತಿಯೇ! ನೀನು ನನ್ನ ಪ್ರೀತಿಯನ್ನು (ಪತಿಭಕ್ತಿಯನ್ನು) ಸತ್ಯಗೊಳಿಸಲು ಸಹಕರಿಸು. ಶೂಲದಂತಿರುವ ರಾವಣನ ಮಾತುಗಳನ್ನು ನಾನು ಕೇಳಲಾರೆ.'' ಸೀತೆಯ ಮಾತನ್ನು ಕೇಳಿ ತ್ರಿಜಟೆಯು ಅವಳ ಕಾಲಿಗೆರಗಿ ಅವಳನ್ನು ಸಂತೈಸಿದಳು. ಶ್ರೀರಾಮಚಂದ್ರನ ಬಲ-ಪರಾಕ್ರಮಗಳನ್ನು, ಕೀರ್ತಿಯನ್ನು ಬಣ್ಣಿಸಿದಳು. ಎಲೈ ಸುಕುಮಾರಿಯೇ! ಈ ರಾತ್ರಿಯ ವೇಳೆಯಲ್ಲಿ ಬೆಂಕಿ ದೊರೆಯದು ಎಂದು ಹೇಳಿ ಅವಳು ತನ್ನ ಮನೆಗೆ ತೆರಳಿದಳು. ಆಗ ಸೀತೆಯು ಮನಸ್ಸಿನಲ್ಲೇ ಇಂತು ಯೋಚಿಸತೊಡಗಿದಳು. – ''ಅಯ್ಯೋ! ವಿಧಾತನೂ ಕೂಡ ನನಗೆ ಪ್ರತಿಕೂಲನಾಗಿರುವನು. ಈಗ ನಾನು ಏನು ಮಾಡಲಿ? ಬೆಂಕಿ ದೊರೆಯದೆ ಹೋಯಿತಲ್ಲ! ನೋವು ತೊಲಗದು. ಆಕಾಶದಲ್ಲಿ ಬೆಂಕಿಯು (ನಕ್ಷತ್ರಗಳು) ತೋರುತ್ತದೆ. ಆದರೆ ಭೂಮಿಯ ಮೇಲೆ ಒಂದೂ ಉದುರುವುದಿಲ್ಲವಲ್ಲ! ಚಂದ್ರನು ಅಗ್ನಿಮಯನಾಗಿದ್ದಾನೆ. ಆದರೆ ಅವನೂ ಕೂಡ ನಾನು ಹತಭಾಗ್ಯಳೆಂದು ತಿಳಿದು ಬೆಂಕಿಯನ್ನು ಸುರಿಸುವುದಿಲ್ಲವಲ್ಲ! ಎಲೈ ಅಶೋಕವೃಕ್ಷವೇ! ನೀನಾದರೂ ನನ್ನ ವಿನಂತಿಯನ್ನು ಆಲಿಸು. ನನ್ನ ಶೋಕವನ್ನು ಕಳೆದು ಅಶೋಕವೆಂಬ ನಿನ್ನ ಹೆಸರನ್ನು ಸಾರ್ಥಕಪಡಿಸಿಕೋ. ನಿನ್ನ ಹೊಸ-ಹೊಸ ಚಿಗುರುಗಳು ಬೆಂಕಿಯಂತಿವೆ. ಯಾವ ಸಂಕೋಚವನ್ನೂ ಇಟ್ಟುಕೊಳ್ಳದೆ ಬೆಂಕಿಯನ್ನು ಕೊಡು. ಈ ವಿರಹವನ್ನು ತುತ್ತತುದಿಗೆ ಮುಟ್ಟಿಸಬೇಡ.'' ಈ ವಿಧವಾಗಿ ವಿರಹದಿಂದ ತುಂಬಾ ವ್ಯಾಕುಲಳಾಗಿರುವ ಸೀತೆಯನ್ನು ನೋಡಿದ ಹನುಮಂತನು ಕ್ಷಣವೊಂದನ್ನು ಕಲ್ಪದಂತೆ ಕಳೆದನು. (ಚೌ/೧-೬)

## ಮುದ್ರಿಕಾ ಪ್ರದಾನ – ಹನುಮತ್ಸಂದೇಶ

**ಸೋ – ಕಪಿ ಕರಿ ಹೃದಯಁ ಬಿಚಾರ ದೀನ್ಹಿ ಮುದ್ರಿಕಾ ಡಾರಿ ತಬ।**
**ಜನು ಅಸೋಕ ಅಂಗಾರ ದೀನ್ಹ ಹರಷಿ ಉಠಿ ಕರ ಗಹೆಉ॥ ೧೨॥**

ಆಗ ಹನುಮಂತನು ಮನಸ್ಸಿನಲ್ಲಿ ಯೋಚಿಸಿ, ಮೇಲಿನಿಂದ ಶ್ರೀರಾಮನ ಉಂಗುರವನ್ನು ಸೀತಾದೇವಿಯ ಮುಂದುಗಡೆ ಕೆಡವಿದನು. ತನ್ನ ಪ್ರಾರ್ಥನೆಯನ್ನು ಆಲಿಸಿ ಅಶೋಕವೃಕ್ಷವೇ ಅಗ್ನಿಯನ್ನು ಕರುಣಿಸಿತೆಂದು ಭಾವಿಸಿ, ಸೀತಾದೇವಿಯು ಹರ್ಷಗೊಂಡು ಅದನ್ನು ಕೈಗೆತ್ತಿಕೊಂಡಳು. (ದೋ/೧೨)

**ಚೌ – ತಬ ದೇಖೀ ಮುದ್ರಿಕಾ ಮನೋಹರ। ರಾಮ ನಾಮ ಅಂಕಿತ ಅತಿ ಸುಂದರ॥**
**ಚಕಿತ ಚಿತವ ಮುದರೀ ಪಹಿಚಾನೀ। ಹರಷ ಬಿಷಾದ ಹೃದಯಁ ಅಕುಲಾನೀ॥ ೧॥**
**ಜೀತಿ ಕೋ ಸಕಇ ಅಜಯ ರಘುರಾಈ। ಮಾಯಾ ತೇಁ ಅಸಿ ರಚಿ ನಹಿಁ ಜಾಈ॥**
**ಸೀತಾ ಮನ ಬಿಚಾರ ಕರ ನಾನಾ। ಮಧುರ ಬಚನ ಬೋಲೆಉ ಹನುಮಾನಾ॥ ೨॥**
**ರಾಮಚಂದ್ರ ಗುನ ಬರನೈಁ ಲಾಗಾ। ಸುನತಹಿಁ ಸೀತಾ ಕರ ದುಖ ಭಾಗಾ॥**
**ಲಾಗೀಁ ಸುನೈಁ ಶ್ರವನ ಮನ ಲಾಈ। ಆದಿಹು ತೇಁ ಸಬ ಕಥಾ ಸುನಾಈ॥ ೩॥**
**ಶ್ರವನಾಮೃತ ಜೇಹಿಁ ಕಥಾ ಸುಹಾಈ। ಕಹೀ ಸೋ ಪ್ರಗಟ ಹೋತಿ ಕಿನ ಭಾಈ॥**
**ತಬ ಹನುಮಂತ ನಿಕಟ ಚಲಿ ಗಯಊ। ಫಿರಿ ಬೈಠೀಁ ಮನ ಬಿಸಮಯ ಭಯಊ॥ ೪॥**
**ರಾಮ ದೂತ ಮೈಁ ಮಾತು ಜಾನಕೀ। ಸತ್ಯ ಸಪಥ ಕರುನಾನಿಧಾನ ಕೀ॥**
**ಯಹ ಮುದ್ರಿಕಾ ಮಾತು ಮೈಁ ಆನೀ। ದೀನ್ಹಿ ರಾಮ ತುಮ್ಹ ಕಹಁ ಸಹಿದಾನೀ॥ ೫॥**
**ನರ ಬಾನರಹಿ ಸಂಗ ಕಹು ಕೈಸೇಁ। ಕಹೀ ಕಥಾ ಭಇ ಸಂಗತಿ ಜೈಸೇಁ॥ ೬॥**

ರಾಮನಾಮಾಂಕಿತವಾದ ಆ ಸುಂದರ ಉಂಗುರವನ್ನು ನೋಡಿ, ಅದನ್ನು ಗುರುತಿಸಿ, ಸೀತೆಯು ಆಶ್ಚರ್ಯಚಕಿತಳಾಗಿ ತದೇಕದೃಷ್ಟಿಯಿಂದ ನೋಡತೊಡಗಿದಳು. ಹರ್ಷ-ವಿಷಾದಗಳಿಂದ ಆಕುಲಗೊಂಡು ಆಲೋಚಿಸತೊಡಗಿದಳು – ''ಶ್ರೀರಘುನಾಥನು ಅಜೇಯನು. ಅವನನ್ನು ಯಾರೂ ಜಯಿಸಲಾರರು. ಇಂತಹ ದಿವ್ಯವಾದ, ಚಿನ್ಮಯವಾದ ಉಂಗುರವನ್ನು ಯಾರೂ ಮಾಯೆಯಿಂದ ನಿರ್ಮಿಸಲಾರರು. ಹೀಗೆ ಸೀತಾದೇವಿಯು ಮನಸ್ಸಿನಲ್ಲಿ ಅನೇಕ ರೀತಿಯಲ್ಲಿ ವಿಚಾರಮಾಡುತ್ತಿದ್ದಳು.

ಆಗಲೇ ಆಂಜನೇಯನು ತನ್ನ ಮಧುರವಚನಗಳಿಂದ ಶ್ರೀರಾಮಚಂದ್ರನ ಗುಣಗಳನ್ನು ವರ್ಣಿಸತೊಡಗಿದನು. ಅದನ್ನು ಕೇಳುತ್ತಲೇ ಸೀತೆಯ ದುಃಖವೆಲ್ಲ ಮಾಯವಾಯಿತು. ಆಕೆಯು ಕಿವಿಗೊಟ್ಟು, ದತ್ತಚಿತ್ತಳಾಗಿ ಅದನ್ನು ಕೇಳತೊಡಗಿದಳು. ಪವನಪುತ್ರನು ಶ್ರೀರಾಮಚರಿತ್ರವನ್ನು ಪ್ರಾರಂಭದಿಂದ ಹಾಡಿದನು. ''ಶ್ರವಣಾಮೃತವಾದ ಈ ಮನೋಹರ ಕಥೆಯನ್ನು ಹಾಡಿದವರಾರು? ಅವರು ನನ್ನೆದುರಿಗೆ ಏಕೆ ಕಾಣಿಸಲಾರರು? ಎಂದು ಸೀತಾದೇವಿಯು ನುಡಿದಳು. ಆಗ ಮಾರುತಿಯು ಆಕೆಯ ಬಳಿ ಸಾರಿದನು. ಅವನನ್ನು ಕಂಡ ಸೀತೆಯು ಭಯವಿಸ್ಮಯಗಳಿಂದ ಮುಖವನ್ನು ಪಕ್ಕಕ್ಕೆ ತಿರುಗಿ ಕುಳಿತುಕೊಂಡಳು. ಆಗ ಹನುಮಂತನೆಂದ – ''ಅಮ್ಮಾ! ಜಾನಕಿ! ನಾನು ಶ್ರೀರಾಮನ ದೂತನು. ಕರುಣಾನಿಧಿಯಾದ ಆ ಸ್ವಾಮಿಯ ಮೇಲೆ ಆಣೆಯಿಟ್ಟು ಹೇಳುತ್ತೇನೆ. ತಾಯೇ! ಈ ಉಂಗುರವನ್ನು ನಾನೇ ತಂದಿರುವೆನು. ಶ್ರೀರಾಮನು ನಿಮಗಾಗಿ ನನ್ನ ಬಳಿಯಲ್ಲಿ ಈ ಅಭಿಜ್ಞಾನವನ್ನು ಕೊಟ್ಟು ಕಳುಹಿಸಿದ್ದಾನೆ. ಸೀತಾದೇವಿಯು ಕೇಳಿದಳು – 'ನರ-ವಾನರರ ಸಮಾಗಮವು ಹೇಗೆ ಘಟಿಸಿತು? ಆಗ ಮರುತಾತ್ಮಜನು ನಡೆದ ಎಲ್ಲ ಕಥೆಯನ್ನು ಸಾದ್ಯಂತವಾಗಿ ತಿಳಿಯಹೇಳಿದನು. (ಚೌ/೧-೬)

**ದೋ – ಕಪಿ ಕೇ ಬಚನ ಸಪ್ರೇಮ ಸುನಿ ಉಪಜಾ ಮನ ಬಿಸ್ವಾಸ।**
**ಜಾನಾ ಮನ ಕ್ರಮ ಬಚನ ಯಹ ಕೃಪಾಸಿಂಧು ಕರ ದಾಸ॥ ೧೩ ॥**

ಆಂಜನೇಯನ ಪ್ರೇಮಯುಕ್ತ ವಚನಗಳನ್ನು ಕೇಳಿ, ಸೀತೆಯ ಮನಸ್ಸಿನಲ್ಲಿ ಅವನ ಕುರಿತು – ಇವನು ಮನ, ವಚನ, ಕರ್ಮಗಳಿಂದ ಕೃಪಾಸಾಗರನಾದ ಶ್ರೀರಾಮನ ದಾಸನೆಂದು ಅರಿತುಕೊಂಡಳು. (ದೋ/೧೩)

**ಚೌ – ಹರಿಜನ ಜಾನಿ ಪ್ರೀತಿ ಅತಿ ಗಾಢೀ। ಸಜಲ ನಯನ ಪುಲಕಾವಲಿ ಬಾಢೀ॥**
**ಬೂಡತ ಬಿರಹ ಜಲಧಿ ಹನುಮಾನಾ। ಭಯಹು ತಾತ ಮೋ ಕಹುँ ಜಲಜಾನಾ॥ ೧ ॥**
**ಅಬ ಕಹು ಕುಸಲ ಜಾಉँ ಬಲಿಹಾರೀ। ಅನುಜ ಸಹಿತ ಸುಖ ಭವನ ಖರಾರೀ॥**
**ಕೋಮಲಚಿತ ಕೃಪಾಲ ರಘುರಾಈ। ಕಪಿ ಕೆಹಿ ಹೇತು ಧರೀ ನಿಠುರಾಈ॥ ೨ ॥**
**ಸಹಜ ಬಾನಿ ಸೇವಕ ಸುಖ ದಾಯಕ। ಕಬಹುँಕ ಸುರತಿ ಕರತ ರಘುನಾಯಕ॥**
**ಕಬಹುँ ನಯನ ಮಮ ಸೀತಲ ತಾತಾ। ಹೋಇಹಹಿं ನಿರಖಿ ಸ್ಯಾಮ ಮೃದು ಗಾತಾ॥ ೩ ॥**
**ಬಚನು ನ ಆವ ನಯನ ಭರೆ ಬಾರೀ। ಅಹಹ ನಾಥ ಹೌँ ನಿಪಟ ಬಿಸಾರೀ॥**
**ದೇಖಿ ಪರಮ ಬಿರಹಾಕುಲ ಸೀತಾ। ಬೋಲಾ ಕಪಿ ಮೃದು ಬಚನ ಬಿನೀತಾ॥ ೪ ॥**
**ಮಾತು ಕುಸಲ ಪ್ರಭು ಅನುಜ ಸಮೇತಾ। ತವ ದುಖ ದುಖೀ ಸುಕೃಪಾ ನಿಕೇತಾ॥**
**ಜನಿ ಜನನೀ ಮಾನಹು ಜಿಯँ ಊನಾ। ತುಮ್ಹ ತೇ ಪ್ರೇಮು ರಾಮ ಕೇं ದೂನಾ॥ ೫ ॥**

ಅವನು ಭಗವಂತನ ಭಕ್ತನೆಂದು ತಿಳಿದು ಅವನ ಕುರಿತು ಆಕೆಯಲ್ಲಿ ಪ್ರೀತಿ ಉಕ್ಕಿಹರಿಯಿತು. ಕಣ್ಣುಗಳಲ್ಲಿ ಪ್ರೇಮಾಶ್ರುಗಳು ತುಂಬಿಬಂದವು. ಶರೀರವು ಪುಳಕಗೊಂಡಿತು. ಸೀತಾದೇವಿಯು ಹೇಳಿದಳು – ''ಅಯ್ಯಾ ಹನುಮಂತಾ! ನಾನು ಪ್ರಮಾಣಪೂರ್ವಕವಾಗಿ ಹೇಳುತ್ತಿದ್ದೇನೆ – ವಿರಹಸಮುದ್ರದಲ್ಲಿ ಮುಳುಗಿಹೋಗುತ್ತಿದ್ದ ನನ್ನ ಪಾಲಿಗೆ ನೀನು ನಾವೆಯಾಗಿ ಬಂದಿರುವೆ. ಈಗ ನೀನು ಅನುಜಸಹಿತನಾದ ಖರಾರಿಯೂ, ಸುಖಧಾಮನೂ ಆದ ಶ್ರೀರಾಮನ ಯೋಗಕ್ಷೇಮವನ್ನು ತಿಳಿಸು. ಶ್ರೀರಘುನಾಥನು ಕೋಮಲ ಸ್ವಭಾವದವನೂ, ದಯಾಳುವೂ ಆಗಿರುವನು. ಹೇ ಹನುಮಂತಾ! ಆದರೆ ಅವರು ನನ್ನ ಕುರಿತು ನಿಷ್ಠುರರಾಗಿರಲು ಕಾರಣವೇನು? ತನ್ನ ಸೇವಕರಿಗೆ ಸುಖವನ್ನುಂಟುಮಾಡುವುದೇ ಅವನ ಸ್ವಾಭಾವಿಕವಾದ ನಿಯಮ. ಆ ರಘುವರನಿಗೆ ಎಂದಾದರೂ ನನ್ನ ನೆನಪು ಬರುತ್ತಿದೆಯೇ? ಅಯ್ಯಾ! ಅವನ ಶ್ಯಾಮಲಶರೀರವನ್ನು ಕಂಡು ನನ್ನ ಕಣ್ಣುಗಳು ತಣಿಯುವವೇ?'' ಸೀತಾದೇವಿಯು ಹೀಗೆ ಹೇಳುತ್ತಿರುವಂತೆ ಆಕೆಯ ಕಣ್ಣುಗಳಲ್ಲಿ ವಿರಹಾಶ್ರುಗಳು ತೊಟ್ಟಿಕ್ಕಿದವು. ಆಕೆ ಶೋಕತಪ್ತಳಾಗಿ ಹೀಗೆ ನುಡಿದಳು – 'ಹಾ ನಾಥಾ! ನೀವು ನನ್ನನ್ನು ಮರೆತೇ ಬಿಟ್ಟಿರಲ್ಲ!' ಸೀತಾದೇವಿಯು ಈ ರೀತಿ ಅತ್ಯಂತ ವ್ಯಾಕುಲಳಾದುದನ್ನು ಕಂಡು ಹನುಮಂತನು ವಿನಮ್ರ ಮೃದುವಚನಗಳನ್ನು ನುಡಿದನು – 'ತಾಯೇ! ಅತ್ಯಂತ ಕರುಣಾನಿಧಿಯಾದ ಶ್ರೀರಾಮಚಂದ್ರನು ಸೋದರನಾದ ಲಕ್ಷ್ಮಣನೊಂದಿಗೆ ಶಾರೀರಿಕವಾಗಿ ಸುಖವಾಗಿದ್ದಾನೆ. ಆದರೆ ನಿಮ್ಮ ದುಃಖದಿಂದ ದುಃಖಿತನಾಗಿರುವನು. ಅಮ್ಮಾ! ಮನಸ್ಸನ್ನು ಸಣ್ಣದು ಮಾಡಿಕೊಂಡು ದುಃಖಿಸಬೇಡಿ. ಶ್ರೀರಾಮಚಂದ್ರನ ಮೇಲೆ ನಿಮಗೆ ಇರುವ ಪ್ರೇಮಕ್ಕಿಂತ ಎರಡರಷ್ಟು ಪ್ರೇಮ ಅವನಿಗೆ ನಿಮ್ಮ ಮೇಲೆ ಇದೆ. (ಚೌ/೧-೫)

**ದೋ – ರಘುಪತಿ ಕರ ಸಂದೇಸು ಅಬ ಸುನು ಜನನೀ ಧರಿ ಧೀರ।**
**ಅಸ ಕಹಿ ಕಪಿ ಗದಗದ ಭಯಉ ಭರೇ ಬಿಲೋಚನ ನೀರ॥ ೧೪ ॥**

'ಮಾತೇ! ಈಗ ಧೈರ್ಯತಂದುಕೊಂಡು ರಘುಪತಿಯ ಸಂದೇಶವನ್ನು ಆಲಿಸಿರಿ' ಎಂದು ಹೇಳುತ್ತಾ ಹನುಮಂತನು ಪ್ರೇಮಪರವಶನಾದನು. ಶರೀರ ಪುಳಕಗೊಂಡು, ಕಣ್ಣು ತೇವಗೊಂಡವು. (ದೋ/೧೪)

**ಚೌ – ಕಹೇಉ ರಾಮ ಬಿಯೋಗ ತವ ಸೀತಾ। ಮೋ ಕಹುँ ಸಕಲ ಭಏ ಬಿಪರೀತಾ॥**
**ನವ ತರು ಕಿಸಲಯ ಮನಹುँ ಕೃಸಾನೂ। ಕಾಲ ನಿಸಾ ಸಮ ನಿಸಿ ಸಸಿ ಭಾನೂ॥ ೧॥**
**ಕುಬಲಯ ಬಿಪಿನ ಕುಂತ ಬನ ಸರಿಸಾ। ಬಾರಿದ ತಪತ ತೇಲ ಜನು ಬರಿಸಾ॥**
**ಜೇ ಹಿತ ರಹೇ ಕರತ ತೇಇ ಪೀರಾ। ಉರಗ ಸ್ವಾಸ ಸಮ ತ್ರಿಬಿಧ ಸಮೀರಾ॥ ೨॥**
**ಕಹೇಹೂ ತೇँ ಕಛು ದುಖ ಘಟಿ ಹೋಈ। ಕಾಹಿ ಕಹौँ ಯಹ ಜಾನ ನ ಕೋಈ॥**
**ತತ್ವ ಪ್ರೇಮ ಕರ ಮಮ ಅರು ತೋರಾ। ಜಾನತ ಪ್ರಿಯಾ ಏಕು ಮನು ಮೋರಾ॥ ೩॥**
**ಸೋ ಮನು ಸದಾ ರಹತ ತೊಹಿ ಪಾಹೀँ। ಜಾನು ಪ್ರೀತಿ ರಸು ಎತನೆಹಿ ಮಾಹೀँ॥**
**ಪ್ರಭು ಸಂದೇಸು ಸುನತ ಬೈದೇಹೀ। ಮಗನ ಪ್ರೇಮ ತನ ಸುಧಿ ನಹಿँ ತೇಹೀ॥ ೪॥**
**ಕಹ ಕಪಿ ಹೃದಯँ ಧೀರ ಧರು ಮಾತಾ। ಸುಮಿರು ರಾಮ ಸೇವಕ ಸುಖದಾತಾ॥**
**ಉರ ಆನಹು ರಘುಪತಿ ಪ್ರಭುತಾಈ। ಸುನಿ ಮಮ ಬಚನ ತಜಹು ಕದರಾಈ॥ ೫॥**

ಮಾರುತಿಯು ನುಡಿದನು – ಅಮ್ಮಾ! ಶ್ರೀರಾಮನು ಹೀಗೆ ಹೇಳಿ ಕಳಿಸಿರುವನು – ಸೀತೇ! ನಿನ್ನ ವಿರಹದಿಂದಾಗಿ ನನ್ನ ಪಾಲಿಗೆ ಚರಾಚರ ಎಲ್ಲ ಪದಾರ್ಥಗಳೂ ಪ್ರತಿಕೂಲವಾಗಿವೆ. ನೂತನ ತರುಪಲ್ಲವಗಳು ನನ್ನ ಮನಸ್ಸಿಗೆ ಬೆಂಕಿಯಂತೆ ಭಾಸವಾಗುತ್ತವೆ. ರಾತ್ರಿಗಳು ಕಾಳರಾತ್ರಿಗಳಾಗಿವೆ. ಚಂದ್ರನು ಸೂರ್ಯನಂತೆ ತಾಪದಾಯಕನಾಗಿದ್ದಾನೆ. ಕಮಲಗಳ ವನಗಳು ಈಟಿಗಳಂತೆ ಚುಚ್ಚುತ್ತಿವೆ. ಮೋಡಗಳು ಕುದಿಯುವ ಎಣ್ಣೆಯನ್ನು ಮಳೆಗರೆದಂತೆ ಕಾಣುತ್ತದೆ. ಹಿಂದೆ ಹಿತವಾಗಿದ್ದವುಗಳು ಈಗ ಅಹಿತಕಾರಕವಾಗಿವೆ. ಶೀತಲ, ಮಂದ, ಸುಗಂಧಮಯ ಗಾಳಿಯು ಹಾವುಗಳು ಬುಸುಗುಟ್ಟುವಂತೆ ಭಯಂಕರ ತಾಪದಾಯಕವಾಗಿದೆ. ಮನಸ್ಸಿನ ದುಃಖವನ್ನು ಇನ್ನೊಬ್ಬರೆದುರು ತೋಡಿಕೊಳ್ಳುವುದರಿಂದ ಅದು ಕೊಂಚ ಕಡಿಮೆಯಾಗುತ್ತದೆ. ಆದರೆ ಯಾರ ಮುಂದೆ ನನ್ನ ಅಳಲನ್ನು ತೋಡಿಕೊಳ್ಳಲಿ? ಈ ದುಃಖವನ್ನು ಯಾರೂ ಅರಿಯರು. ಪ್ರಿಯೇ! ನನ್ನ ಮತ್ತು ನಿನ್ನ ಪ್ರೇಮದ ತತ್ತ್ವವನ್ನು ನನ್ನ ಮನಸ್ಸು ಮಾತ್ರ ಬಲ್ಲದು. ಆದರೆ ಆ ಮನಸ್ಸು ನಿನ್ನ ಬಳಿಯಲ್ಲಿ ಇದೆ. ನನ್ನ ಪ್ರೇಮದ ಸಾರ ಇಷ್ಟರಿಂದಲೇ ತಿಳಿದುಕೋ.'' ಹನುಮಂತನು ಹೇಳಿದನು – ''ತಾಯೇ! ಹೃದಯದಲ್ಲಿ ಧೈರ್ಯತಂದುಕೊಳ್ಳಿ. ಸೇವಕರಿಗೆ ಸುಖವನ್ನೀಯುವ ಶ್ರೀರಾಮನನ್ನು ಸ್ಮರಿಸಿರಿ. ರಘುಪತಿಯ ಪ್ರಭುತ್ವವನ್ನು ಧ್ಯಾನಿಸುತ್ತಾ, ಅಂಜಿಕೆಯನ್ನು ತೊರೆಯಿರಿ. (ಚೌ/೧-೫)

**ದೋ – ನಿಸಿಚರ ನಿಕರ ಪತಂಗ ಸಮ ರಘುಪತಿ ಬಾನ ಕೃಸಾನು।**
**ಜನನೀ ಹೃದಯँ ಧೀರ ಧರು ಜರೇ ನಿಸಾಚರ ಜಾನು॥ ೧೫॥**

ಈ ರಕ್ಕಸರ ಸಮೂಹವು ಪತಂಗದಂತೆ, ರಘುಪತಿಯ ಬಾಣಾಗ್ನಿಗೆ ಆಹುತಿಯಾಗುವುದು. ಅಮ್ಮಾ! ಧೈರ್ಯತಾಳಿ. ಈ ರಾಕ್ಷಸರು ಸುಟ್ಟು ಭಸ್ಮರಾದರೆಂದೇ ತಿಳಿಯಿರಿ. (ದೋ/೧೫)

**ಚೌ – ಜौँ ರಘುಬೀರ ಹೋತಿ ಸುಧಿ ಪಾಈ। ಕರತೇ ನಹಿँ ಬಿಲಂಬು ರಘುರಾಈ॥**
**ರಾಮ ಬಾನ ರಬಿ ಉಏँ ಜಾನಕೀ। ತಮ ಬರೂಥ ಕಹँ ಜಾತುಧಾನ ಕೀ॥ ೧॥**
**ಅಬಹಿँ ಮಾತು ಮೈँ ಜಾಉँ ಲವಾಈ। ಪ್ರಭು ಆಯಸು ನಹಿँ ರಾಮ ದೊಹಾಈ॥**
**ಕಛುಕ ದಿವಸ ಜನನೀ ಧರು ಧೀರಾ। ಕಪಿನ್ಹ ಸಹಿತ ಅಇಹಹಿँ ರಘುಬೀರಾ॥ ೨॥**
**ನಿಸಿಚರ ಮಾರಿ ತೋಹಿ ಲೈ ಜೈಹಹಿँ। ತಿಹुँ ಪುರ ನಾರದಾದಿ ಜಸು ಗೈಹಹಿँ॥**
**ಹೈँ ಸುತ ಕಪಿ ಸಬ ತುಮ್ಹಹಿ ಸಮಾನಾ। ಜಾತುಧಾನ ಅತಿ ಭಟ ಬಲವಾನಾ॥ ೩॥**
**ಮೋರೇँ ಹೃದಯ ಪರಮ ಸಂದೇಹಾ। ಸುನಿ ಕಪಿ ಪ್ರಗಟ ಕೀನ್ಹಿ ನಿಜ ದೇಹಾ॥**
**ಕನಕ ಭೂಧರಾಕಾರ ಸರೀರಾ। ಸಮರ ಭಯಂಕರ ಅತಿಬಲ ಬೀರಾ॥ ೪॥**
**ಸೀತಾ ಮನ ಭರೋಸ ತಬ ಭಯಊ। ಪುನಿ ಲಘು ರೂಪ ಪವನಸುತ ಲಯಊ॥ ೫॥**

ಶ್ರೀರಾಮಚಂದ್ರನು ನಿಮ್ಮ ಸುದ್ದಿ ತಿಳಿದಿದ್ದರೆ ಅವನು ಖಂಡಿತವಾಗಿ ತಡಮಾಡುತ್ತಿರಲಿಲ್ಲ. ಅಮ್ಮಾ ಜಾನಕಿದೇವೀ! ಶ್ರೀರಾಮನ ಬಾಣಗಳೆಂಬ ಸೂರ್ಯನು ಉದಯಿಸಿದಾಗ, ಈ ರಾಕ್ಷಸಸೇನೆಯೆಂಬ ಕತ್ತಲೆ ನಿಲ್ಲಬಲ್ಲುದೇ? ತಾಯೇ! ನಾನೇ ನಿಮ್ಮನ್ನು ಇಲ್ಲಿಂದ

ಈಗಲೇ ಕೊಂಡುಹೋಗಬಲ್ಲೆನು. ಆದರೆ ಇದಕ್ಕೆ ಶ್ರೀರಾಮನ ಆಜ್ಞೆಯಿಲ್ಲ. ಆದ್ದರಿಂದ ಇನ್ನು ಕೊಂಚ ಕಾಲ ಧೈರ್ಯದಿಂದ ಇರಿ. ಪ್ರಭುವು ವಾನರರೊಂದಿಗೆ ಬೇಗನೇ ಬರುವನು. ರಾಕ್ಷಸರನ್ನು ಸಂಹರಿಸಿ ನಿಮ್ಮನ್ನು ಕರೆದುಕೊಂಡು ಹೋಗುವನು. ನಾರದಾದಿ ಮಹರ್ಷಿಗಳು ತ್ರಿಲೋಕಗಳಲ್ಲಿ ಅವನ ಯಶೋಗಾನಮಾಡುವರು.'' ಇದನ್ನು ಕೇಳಿ ಸೀತೆಯು ಹೇಳಿದಳು – ''ಮಗು! ವಾನರರೆಲ್ಲರೂ ನಿನ್ನ ಹಾಗೆ ಸಣ್ಣವರಾಗಿದ್ದಾರಲ್ಲ! ಇಲ್ಲಿಯ ರಾಕ್ಷಸರು ಅತಿ ಬಲಾಢ್ಯರೂ, ಯೋಧರೂ ಆಗಿದ್ದಾರೆ. ಆದ್ದರಿಂದ ನೀವುಗಳು ರಾಕ್ಷಸರನ್ನು ಹೇಗೆ ಗೆಲ್ಲಬಲ್ಲಿರಿ ಎಂಬ ಸಂದೇಹ ನನಗೆ ಕಾಡುತ್ತಿದೆ.'' ಇದನ್ನು ಕೇಳುತ್ತಲೇ ಹನುಮಂತನು ತನ್ನ ಶರೀರವನ್ನು ಬೆಳೆಸಿ, ನಿಜರೂಪವನ್ನು ತೋರಿದನು. ಅವನ ಶರೀರವು ಸುಮೇರು (ಚಿನ್ನದಂತಹ) ಪರ್ವತದಂತೆ ಇದ್ದು, ಮಹಾಬಲಿಷ್ಠನೂ, ಪರಾಕ್ರಮಶೋಭಿತನೂ, ಅರಿವೀರಭಯಂಕರನೂ ಆಗಿ ಒಪ್ಪುತ್ತಿದ್ದನು. ಅವನನ್ನು ಕಂಡು ಸೀತೆಯ ಮನಸ್ಸಿನಲ್ಲಿ ನಂಬಿಕೆ ಮೂಡಿತು. ಹನುಮಂತನು ಮರಳಿ ಲಘುರೂಪವನ್ನು ತಾಳಿದನು. (ಚೌ/೧-೫)

**ದೋ – ಸುನು ಮಾತಾ ಸಾಖಾಮೃಗ ನಹಿಂ ಬಲ ಬುದ್ಧಿ ಬಿಸಾಲ।**
**ಪ್ರಭು ಪ್ರತಾಪ ತೇಂ ಗರುಡಹಿ ಖಾಇ ಪರಮ ಲಘು ಬ್ಯಾಲ॥ ೧೬ ॥**

ತಾಯೇ! ನಮ್ಮ ವಾನರರಲ್ಲಿ ಬಲ-ಬುದ್ಧಿ ಅಷ್ಟಾಗಿ ಇರುವುದಿಲ್ಲ. ಆದರೆ ಪ್ರಭುವಿನ ಪ್ರತಾಪದಿಂದ ಮಿಡಿನಾಗರವೂ ಕೂಡ ಗರುಡನನ್ನು ತಿನ್ನಬಲ್ಲದು. (ಅಂದರೆ, ಅತ್ಯಂತ ನಿರ್ಬಲನೂ ಕೂಡ ದೊಡ್ಡ ಬಲವಂತನನ್ನು ಕೊಲ್ಲಬಲ್ಲನು.) (ದೋ/೧೬)

**ಚೌ – ಮನ ಸಂತೋಷ ಸುನತ ಕಪಿ ಬಾನೀ। ಭಗತಿ ಪ್ರತಾಪ ತೇಜ ಬಲ ಸಾನೀ॥**
**ಆಸಿಷ ದೀನ್ಹಿ ರಾಮಪ್ರಿಯ ಜಾನಾ। ಹೋಹು ತಾತ ಬಲ ಸೀಲ ನಿಧಾನಾ॥ ೧ ॥**
**ಅಜರ ಅಮರ ಗುನನಿಧಿ ಸುತ ಹೋಹೂ। ಕರಹುँ ಬಹುತ ರಘುನಾಯಕ ಛೋಹೂ॥**
**ಕರಹುँ ಕೃಪಾ ಪ್ರಭು ಅಸ ಸುನಿ ಕಾನಾ। ನಿರ್ಭರ ಪ್ರೇಮ ಮಗನ ಹನುಮಾನಾ॥ ೨ ॥**
**ಬಾರ ಬಾರ ನಾಏಸಿ ಪದ ಸೀಸಾ। ಬೋಲಾ ಬಚನ ಜೋರಿ ಕರ ಕೀಸಾ॥**
**ಅಬ ಕೃತಕೃತ್ಯ ಭಯಉँ ಮೈಂ ಮಾತಾ। ಆಸಿಷ ತವ ಅಮೋಘ ಬಿಖ್ಯಾತಾ॥ ೩ ॥**
**ಸುನಹು ಮಾತು ಮೊಹಿ ಅತಿಸಯ ಭೂಖಾ। ಲಾಗಿ ದೇಖಿ ಸುಂದರ ಫಲ ರೂಖಾ॥**
**ಸುನು ಸುತ ಕರಹಿಂ ಬಿಪಿನ ರಖವಾರೀ। ಪರಮ ಸುಭಟ ರಜನೀಚರ ಭಾರೀ॥ ೪ ॥**
**ತಿನ್ಹ ಕರ ಭಯ ಮಾತಾ ಮೊಹಿ ನಾಹೀಂ। ಜೌಂ ತುಮ್ಹ ಸುಖ ಮಾನಹು ಮನ ಮಾಹೀಂ॥ ೫ ॥**

ಭಕ್ತಿ, ಪ್ರತಾಪ, ತೇಜಸ್ಸು, ಬಲ ಇವುಗಳಿಂದ ಕೂಡಿದ ಹನುಮಂತನ ವಾಣಿಯನ್ನು ಕೇಳಿ, ಸೀತೆಯ ಮನಸ್ಸಿಗೆ ಬಹಳ ಸಂತೋಷವಾಯಿತು. ಆಂಜನೇಯನು ಶ್ರೀರಾಮನಿಗೆ ಅತ್ಯಂತ ಪ್ರೀತಿಪಾತ್ರನೆಂದು ತಿಳಿದು – ''ಕುಮಾರಾ! ನೀನು ಬಲ ಹಾಗೂ ಗುಣಶೀಲಗಳ ನಿಧಿಯಾಗಿರುವೆ'' ಎಂದು ಆಶೀರ್ವದಿಸಿದಳು. ''ಮಗೂ! ಮುಪ್ಪು-ಸಾವುಗಳು ನಿನ್ನನ್ನು ಮುಟ್ಟದಿರಲಿ. ಸದ್ಗುಣಗಳ ಖಣಿಯಾಗು. ಶ್ರೀರಘುನಾಥನಿಗೆ ಅತ್ಯಂತ ಪ್ರೇಮಪಾತ್ರನಾಗು'' ಎಂದು ಹರಸಿದಳು. 'ಶ್ರೀರಾಮನಿಗೆ ಪ್ರೇಮಪಾತ್ರನಾಗು' ಎಂದು ಕೇಳುತ್ತಲೇ ಹನುಮಂತನು ಪೂರ್ಣಪ್ರೇಮದಲ್ಲಿ ಮಗ್ನನಾಗಿ ಹೋದನು. ಅವನು ಮತ್ತೆ-ಮತ್ತೆ ಸೀತೆಯ ಚರಣಗಳಿಗೆರಗಿ, ಕೈಜೋಡಿಸಿ ಇಂತೆಂದನು – 'ಅಮ್ಮಾ! ಈಗ ನಾನು ಕೃತಾರ್ಥನಾದೆ. ನಿಮ್ಮ ಆಶೀರ್ವಾದ ಅಮೋಘವಾದುದು. ಇದು ಜಗವರಿದ ಸತ್ಯವಾಗಿದೆ. ತಾಯೇ! ಈ ಸುಂದರ ಫಲಭರಿತ ವೃಕ್ಷಗಳನ್ನು ಕಂಡು ನನಗೆ ಅತೀವ ಹಸಿವೆ ಆಗುತ್ತಿದೆ. ಸೀತಾದೇವಿಯು ಹೇಳಿದಳು – 'ಮಗೂ! ಮಹಾ ಮಹಾ ರಾಕ್ಷಸವೀರರು ಈ ವನವನ್ನು ಕಾಯುತ್ತಿದ್ದಾರೆ.' ಪುನಃ ಹನುಮಂತನು – 'ಅಮ್ಮಾ! ನೀವು ಮನಸ್ಸಿನಲ್ಲಿ ಪ್ರಸನ್ನರಾಗಿದ್ದು, ಅಪ್ಪಣೆ ನೀಡಿದರೆ ಸಾಕು. ನನಗೆ ಈ ರಾಕ್ಷಸರ ಭಯವೂ ಸ್ವಲ್ಪವೂ ಇಲ್ಲ' ಎಂದು ಹೇಳಿದನು. (ಚೌ/೧-೫)

**ದೋ – ದೇಖಿ ಬುದ್ಧಿ ಬಲ ನಿಪುನ ಕಪಿ ಕಹೆಉ ಜಾನಕೀಂ ಜಾಹು।**
**ರಘುಪತಿ ಚರನ ಹೃದಯँ ಧರಿ ತಾತ ಮಧುರ ಫಲ ಖಾಹು॥ ೧೭ ॥**

ಹನುಮಂತನು ಬಲ-ಬುದ್ಧಿಗಳಲ್ಲಿ ವರಿಷ್ಠನೆಂದು ಅರಿತು ಜಾನಕಿಯು – ''ಮಗೂ! ಹೋಗು. ಶ್ರೀರಘುಪತಿಯ ಚರಣಗಳನ್ನು ಹೃದಯದಲ್ಲಿ ಧರಿಸಿಕೊಂಡು, ಮಧುರವಾದ ಫಲಗಳನ್ನು ಭಕ್ಷಿಸುವವನಾಗು. (ದೋ/೧೭)

## ಅಶೋಕವನ ವಿಧ್ವಂಸನ

**ಚೌ – ಚಲೆಉ ನಾಇ ಸಿರು ಪೈಠೆಉ ಬಾಗಾ। ಫಲ ಖಾಏಸಿ ತರು ತೋರೈಂ ಲಾಗಾ॥**
**ರಹೇ ತಹಾँ ಬಹು ಭಟ ರಖವಾರೇ। ಕಛು ಮಾರೆಸಿ ಕಛು ಜಾಇ ಪುಕಾರೇ॥ ೧ ॥**

ನಾಥ ಏಕ ಆವಾ ಕಪಿ ಭಾರೀ। ತೆಹಿಂ ಅಸೋಕ ಬಾಟಿಕಾ ಉಜಾರೀ॥
ಖಾಏಸಿ ಫಲ ಅರು ಬಿಟಪ ಉಪಾರೇ। ರಚ್ಛಕ ಮರ್ದಿ ಮರ್ದಿ ಮಹಿ ಡಾರೇ॥೨॥
ಸುನಿ ರಾವನ ಪಠಏ ಭಟ ನಾನಾ। ತಿನ್ಹಹಿ ದೇಖಿ ಗರ್ಜೆಉ ಹನುಮಾನಾ॥
ಸಬ ರಜನೀಚರ ಕಪಿ ಸಂಘಾರೇ। ಗಏ ಪುಕಾರತ ಕಛು ಅಧಮಾರೇ॥೩॥
ಪುನಿ ಪಠಯಉ ತೆಹಿಂ ಅಚ್ಛಕುಮಾರಾ। ಚಲಾ ಸಂಗ ಲೈ ಸುಭಟ ಅಪಾರಾ॥
ಆವತ ದೇಖಿ ಬಿಟಪ ಗಹಿ ತರ್ಜಾ। ತಾಹಿ ನಿಪಾತಿ ಮಹಾಧುನಿ ಗರ್ಜಾ॥೪॥

ಆಂಜನೇಯನು ಸೀತಾದೇವಿಗೆ ಶಿರಬಾಗಿ ಅಶೋಕವನವನ್ನು ನುಗ್ಗಿದನು. ಹಣ್ಣು-ಹಂಪಲುಗಳನ್ನು ತಿಂದದ್ದು ಮಾತ್ರವಲ್ಲ, ಮರಗಳನ್ನು ಕಿತ್ತುಹಾಕತೊಡಗಿದನು. ಆ ತೋಟವನ್ನು ಅನೇಕ ರಾಕ್ಷಸರು ಕಾಯುತ್ತಿದ್ದರು. ಅವರಲ್ಲಿ ಕೆಲವರನ್ನು ಕೊಂದು ಹಾಕಿದನು. ಕೆಲವರು ಇವನಿಂದ ತಪ್ಪಿಸಿಕೊಂಡು ಓಡಿಹೋಗಿ ರಾವಣನಲ್ಲಿ ಮೊರೆ ಇಟ್ಟರು. ''ಒಡೆಯಾ! ಒಂದು ದೊಡ್ಡ ಕೋತಿ ಅಶೋಕವನಕ್ಕೆ ಬಂದು ಹಣ್ಣುಗಳನ್ನೆಲ್ಲ ತಿಂದು, ಮರಗಳನ್ನೆಲ್ಲ ಕಿತ್ತು ನೆಲಸಮಮಾಡಿತು. ವನರಕ್ಷಕರನ್ನು ಹೊಸಕಿ ನೆಲಕ್ಕೆಸೆಯಿತು.'' ಇದನ್ನು ಕೇಳುತ್ತಲೇ ರಾವಣನು ಕುಪಿತನಾಗಿ ಅನೇಕ ಮಂದಿ ರಾಕ್ಷಸರನ್ನು ಅಟ್ಟಿದನು. ಅವರನ್ನು ಕಂಡು ಹನುಮಂತನು ಗರ್ಜಿಸಿ, ಅವರೆಲ್ಲರನ್ನು ಮಟ್ಟಹಾಕಿದನು. ಅವರಲ್ಲಿ ಕೆಲವರು ಅರೆಸತ್ತ ರಾಕ್ಷಸರು ಕಿರಿಚುತ್ತಾ ಕಾಲಿಗೆ ಬುದ್ಧಿಹೇಳಿದರು. ಬಳಿಕ ರಾವಣನು ಆ ಕಪಿಯನ್ನು ಸದೆಬಡಿಯಲು ತನ್ನ ಮಗನಾದ ಅಕ್ಷಯಕುಮಾರನನ್ನು ಕಳಿಸಿದನು. ಅವನು ಅಸಂಖ್ಯಾತ ರಣಕೋವಿದರನ್ನು ನೆರೆಸಿ ಹನುಮಂತನ ಬಳಿಗೆ ಹೋದನು. ಅವರು ಬರುವುದನ್ನು ನೋಡಿ ಮಾರುತಿಯು ಒಂದು ದೊಡ್ಡ ಮರವನ್ನು ಕಿತ್ತು ಕೈಗೆತ್ತಿಕೊಂಡು ಅವರನ್ನು ಮೂದಲಿಸುತ್ತಾ, ಅಕ್ಷಯಕುಮಾರನನ್ನು ವಧಿಸಿ, ಭಯಂಕರವಾಗಿ ಗರ್ಜಿಸಿದನು. (ಚೌ/೧-೪)

**ದೋ – ಕಛು ಮಾರೇಸಿ ಕಛು ಮರ್ದೇಸಿ ಕಛು ಮಿಲಏಸಿ ಧರಿ ಧೂರಿ।**
**ಕಛು ಪುನಿ ಜಾಇ ಪುಕಾರೇ ಪ್ರಭು ಮರ್ಕಟ ಬಲ ಭೂರೀ॥ ೧೮ ॥**

ಅವನು ರಾವಣನು ಕಳಿಸಿದ ಯೋಧರಲ್ಲಿ ಕೆಲವರನ್ನು ಕೊಂದು ಹಾಕಿದನು. ಕೆಲವರನ್ನು ಹೊಸಕಿಹಾಕಿದನು. ಕೆಲವರನ್ನು ಕುಕ್ಕಿ ಮಣ್ಣುಮುಕ್ಕಿಸಿದನು. ಅವನಿಂದ ತಪ್ಪಿಸಿಕೊಂಡ ಕೆಲವರು ರಾವಣನ ಬಳಿಗೆ ಓಡಿಹೋಗಿ – 'ಪ್ರಭೋ! ಆ ಕಪಿಯು ತುಂಬಾ ಬಲಶಾಲಿಯಾಗಿದೆ' ಎಂದು ಮೊರೆಯಿಟ್ಟರು. (ದೋ/೧೮)

ಚೌ – ಸುನಿ ಸುತ ಬಧ ಲಂಕೇಸ ರಿಸಾನಾ। ಪಠಏಸಿ ಮೇಘನಾದ ಬಲವಾನಾ॥
ಮಾರಸಿ ಜನಿ ಸುತ ಬಾಁಧೆಸು ತಾಹೀ। ದೇಖಿಅ ಕಪಿಹಿ ಕಹಾಁ ಕರ ಆಹೀ॥೧॥
ಚಲಾ ಇಂದ್ರಜಿತ ಅತುಲಿತ ಜೋಧಾ। ಬಂಧು ನಿಧನ ಸುನಿ ಉಪಜಾ ಕ್ರೋಧಾ॥
ಕಪಿ ದೇಖಾ ದಾರುನ ಭಟ ಆವಾ। ಕಟಕಟಾಇ ಗರ್ಜಾ ಅರು ಧಾವಾ॥೨॥
ಅತಿ ಬಿಸಾಲ ತರು ಏಕ ಉಪಾರಾ। ಬಿರಥ ಕೀನ್ಹ ಲಂಕೇಸ ಕುಮಾರಾ॥
ರಹೇ ಮಹಾಭಟ ತಾಕೇ ಸಂಗಾ। ಗಹಿ ಗಹಿ ಕಪಿ ಮರ್ದಇ ನಿಜ ಅಂಗಾ॥೩॥
ತಿನ್ಹಹಿ ನಿಪಾತಿ ತಾಹಿ ಸನ ಬಾಜಾ। ಭಿರೇ ಜುಗಲ ಮಾನಹುಁ ಗಜರಾಜಾ॥
ಮುಠಿಕಾ ಮಾರಿ ಚಢ಼ಾ ತರು ಜಾಈ। ತಾಹಿ ಏಕ ಛನ ಮುರುಛಾ ಆಈ॥೪॥
ಉಠಿ ಬಹೋರಿ ಕೀನ್ಹಿಸಿ ಬಹು ಮಾಯಾ। ಜೀತಿ ನ ಜಾಇ ಪ್ರಭಂಜನ ಜಾಯಾ॥೫॥

ಅಕ್ಷಯಕುಮಾರನ ಮರಣವಾರ್ತೆಯನ್ನು ಕೇಳಿದ ಲಂಕೇಶ್ವರನು ರೋಷಭೀಷಣನಾದನು. ಕೂಡಲೇ ಅವನು ತನ್ನ ಹಿರಿಯಮಗ ಮಹಾಬಲಶಾಲಿಯಾದ ಮೇಘನಾದನನ್ನು ಯುದ್ಧಕ್ಕೆ ಕಳುಹಿಸುತ್ತಾ ಇಂತೆಂದನು – ''ಕುಮಾರಾ! ಆ ಕಪಿಯನ್ನು ಕೊಲ್ಲಬೇಡ. ಅದನ್ನು ಜೀವಂತವಾಗಿ ಹಿಡಿದುಕಟ್ಟಿ ತಾ. ಅದು ಎಲ್ಲಿಂದ ಬಂದಿದೆ ಎಂದು ನೋಡೋಣ.' ಇಂದ್ರನನ್ನು ಗೆದ್ದ ಅತುಲಬಲಶಾಲಿಯಾದ ಮೇಘನಾದನು ಯುದ್ಧಕ್ಕೆ ಹೊರಟನು. ತಮ್ಮನ ಸಾವನ್ನು ಕೇಳಿದ ಅವನ ಸಿಟ್ಟು ನೆತ್ತಿಗೇರಿತು. ಈ ಸಲ ಬಂದ ಯೋಧನು ಭಾರೀ ಭಯಂಕರನೆಂದು ಗ್ರಹಿಸಿದ ಹನುಮಂತನು, ಹಲ್ಲುಗಳನ್ನು ಕಟಕಟನೆ ಕಡಿದು ಗರ್ಜಿಸುತ್ತಾ ಅವನತ್ತ ಧಾವಿಸಿದನು. ಒಂದು ಹೆಮ್ಮರವನ್ನು ಕಿತ್ತುಕೊಂಡು ಮೇಘನಾದನ ಮೇಲೆ ಎಸೆಯಲು ಅವನ ರಥವು ಮುರಿದು ಪುಡಿ-ಪುಡಿಯಾಯಿತು. ಅವನು ನೆಲಕ್ಕುರುಳಿದನು. ಹನುಮಂತನು ಅವನೊಡನೆ ಯುದ್ಧಕ್ಕೆ ಬಂದ ದೊಡ್ಡ-ದೊಡ್ಡ ವೀರಯೋಧರನ್ನು ಹಿಡಿದು-ಹಿಡಿದು ಕೆಲವರನ್ನು ತನ್ನ ಶರೀರಕ್ಕೆ ತಿಕ್ಕಿ ಕೊಂದನು. ಕೆಲವರನ್ನು ಕಾಲಿಂದ ತುಳಿದು, ಕೆಲವರನ್ನು

ಕೈಯಿಂದ ಹೊಸೆದು ಅವರೆಲ್ಲರನ್ನು ಸದೆಬಡಿದ. ಮತ್ತೆ ಮಾರುತಿಯು ಮೇಘನಾದನ ಬಳಿಗೆ ತಲುಪಿದನು. ಇಬ್ಬರಿಗೂ ಕಾಳಗ ಹತ್ತಿಕೊಂಡಿತು. ಎರಡು ಸಲಗಗಳ ಕಾಳಗದಂತೆ ಅವರ ಯುದ್ಧ ಭೀರಕವಾಗಿತ್ತು. ಹನುಮಂತನು ಇಂದ್ರಜಿತು (ಮೇಘನಾದ) ವನ್ನು ಒಮ್ಮೆ ಜೋರಾಗಿ ಗುದ್ದಿ ಮರವೇರಿ ಕುಳಿತನು. ಮೇಘನಾದನು ಕ್ಷಣಕಾಲ ಮೂರ್ಛೆಹೋದನು. ಮೂರ್ಛೆತಿಳಿದ ಮೇಲೆ ಅವನು ಅನೇಕ ಮಾಯಾಜಾಲವನ್ನು ಬೀಸಿದನು. ಆದರೆ ಹನುಮಂತನನ್ನು ಜಯಿಸದೇ ಹೋದನು. (ಚೌ/೧-೫)

**ದೋ – ಬ್ರಹ್ಮ ಅಸ್ತ್ರ ತೆಹಿಂ ಸಾಂಧಾ ಕಪಿ ಮನ ಕೀನ್ಹ ಬಿಚಾರ।**
**ಜೌಂ ನ ಬ್ರಹ್ಮಸರ ಮಾನಉಂ ಮಹಿಮಾ ಮಿಟಇ ಅಪಾರ ॥ ೧೯ ॥**

ಕೊನೆಗೆ ಮೇಘನಾದನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಆಗ ಆಂಜನೇಯನು – ''ಬ್ರಹ್ಮಾಸ್ತ್ರಕ್ಕೆ ನಾನು ಮನ್ನಣೆ ಕೊಡದಿದ್ದರೆ ಅದರ ಮಹಿಮೆ ವ್ಯರ್ಥವಾದೀತು' ಎಂದು ಮನಸ್ಸಿನಲ್ಲಿ ಯೋಚಿಸಿದನು. (ದೋ/೧೯)

## ಮಾರುತಿ ರಾವಣ ಸಂವಾದ

**ಚೌ – ಬ್ರಹ್ಮಬಾನ ಕಪಿ ಕಹುಂ ತೆಹಿಂ ಮಾರಾ । ಪರತಿಹುಂ ಬಾರ ಕಟಕು ಸಂಘಾರಾ ॥**
**ತೆಹಿಂ ದೇಖಾ ಕಪಿ ಮುರುಛಿತ ಭಯಊ । ನಾಗಪಾಸ ಬಾಂಧೆಸಿ ಲೈ ಗಯಊ ॥ ೧ ॥**
**ಜಾಸು ನಾಮ ಜಪಿ ಸುನಹು ಭವಾನೀ। ಭವ ಬಂಧನ ಕಾಟಹಿಂ ನರ ಗ್ಯಾನೀ॥**
**ತಾಸು ದೂತ ಕಿ ಬಂಧ ತರು ಆವಾ । ಪ್ರಭು ಕಾರಜ ಲಗಿ ಕಪಿಹಿಂ ಬಂಧಾವಾ ॥ ೨ ॥**
**ಕಪಿ ಬಂಧನ ಸುನಿ ನಿಸಿಚರ ಧಾಏ । ಕೌತುಕ ಲಾಗಿ ಸಭಾಂ ಸಬ ಆಏ ॥**
**ದಸಮುಖ ಸಭಾ ದೀಖಿ ಕಪಿ ಜಾಈ । ಕಹಿ ನ ಜಾಇ ಕಛು ಅತಿ ಪ್ರಭುತಾಈ ॥ ೩ ॥**
**ಕರ ಜೋರೇಂ ಸುರ ದಿಸಿಪ ಬಿನೀತಾ। ಭೃಕುಟಿ ಬಿಲೋಕತ ಸಕಲ ಸಭೀತಾ॥**
**ದೇಖಿ ಪ್ರತಾಪ ನ ಕಪಿ ಮನ ಸಂಕಾ । ಜಿಮಿ ಅಹಿಗನ ಮಹುಂ ಗರುಡ ಅಸಂಕಾ॥ ೪ ॥**

ಮೇಘನಾದನು ಪ್ರಯೋಗಿಸಿದ ಬ್ರಹ್ಮಾಸ್ತ್ರವು ತಗಲುತ್ತಲೇ ಹನುಮಂತನು ವೃಕ್ಷದಿಂದ ಕೆಳಕ್ಕುರುಳಿದನು. ಕೆಳಗೆ ಬೀಳುವಾಗಲೂ ಕೂಡ ಸೇನೆಯ ಬಹುಭಾಗ ನಾಶವಾಯಿತು. ವಾನರನು ಮೂರ್ಛಿತನಾಗಿರುವುದನ್ನು ಕಂಡು ಮೇಘನಾದನು ಅವನನ್ನು ನಾಗಪಾಶದಿಂದ ಬಂಧಿಸಿ, ರಾವಣನ ಸಭೆಗೆ ಕರೆದುಕೊಂಡು ಹೋದನು. ಶಿವನು ಹೇಳುತ್ತಾನೆ – ''ಭವಾನೀ! ಕೇಳು. ಯಾರ ನಾಮವನ್ನು ನೆನೆದು ಜ್ಞಾನಿಗಳು ಹುಟ್ಟು-ಸಾವುಗಳ ಬಂಧನವನ್ನು ಕತ್ತರಿಸಿ ಹಾಕುವರೋ, ಅಂತಹವನ ದೂತನಿಗೆ ಎಲ್ಲಾದರೂ ಬಂಧನವುಂಟೇ? ಆದರೆ ತನ್ನ ಪ್ರಭುವಿನ ಕಾರ್ಯಕ್ಕಾಗಿ ಹನುಮಂತನು ಸ್ವತಃ ಬಂಧನಕ್ಕೆ ಒಳಗಾದನು. ವಾನರನು ಬಂಧಿಸಲ್ಪಟ್ಟಿರುವನು ಎಂದು ಕೇಳಿದ ಎಲ್ಲ ರಾಕ್ಷಸರು ತಮಾಶೆನೋಡಲೆಂದು ರಾವಣನ ಸಭೆಗೆ ಓಡುತ್ತಾ ಬಂದರು. ಹನುಮಂತನು ದಶಮುಖನ ಭವನವನ್ನೂ, ಆತನ ಅಪಾರ ಐಶ್ವರ್ಯವನ್ನೂ ನೋಡಿದನು. ದೇವತೆಗಳೂ, ದಿಕ್ಪಾಲಕರೂ ಸಭೆಯಲ್ಲಿ ಕೈಜೋಡಿಸಿಕೊಂಡು ಭಯ ಹಾಗೂ ನಮ್ರತೆಯಿಂದ ನಿಂತುಕೊಂಡು, ರಾವಣನ ಭ್ರುಕುಟೀ ವೀಕ್ಷಣೆ ಮಾಡುತ್ತಿದ್ದರು. ಅರ್ಥಾತ್ ಅವನ ಕಣ್ಸನ್ನೆಯನ್ನೇ ಕಾಯುತ್ತಿದ್ದರು. ಆದರೆ ಆ ರಾವಣನ ಅಂತಹ ಪ್ರತಾಪವನ್ನು ಕಂಡರೂ ಆಂಜನೇಯನು ಕೊಂಚವೂ ಅಂಜಲಿಲ್ಲ. ಸರ್ಪಗಳ ಸಮೂಹದ ನಡುವೆ ಗರುಡನು ಇರುವಂತೆ, ಬಂಧನದಲ್ಲಿದ್ದರೂ ನಿರ್ಭಯನಾಗಿದ್ದನು. (ಚೌ/೧-೪)

**ದೋ – ಕಪಿಹಿ ಬಿಲೋಕಿ ದಸಾನನ ಬಿಹಸಾ ಕಹಿ ದುರ್ಬಾದ।**
**ಸುತ ಬಧ ಸುರತಿ ಕೀನ್ಹಿ ಪುನಿ ಉಪಜಾ ಹೃದಯಂ ಬಿಷಾದ॥ ೨೦ ॥**

ಹನುಮಂತನನ್ನು ಕಂಡು ದಶಾನನನು ದುರ್ವಚನಗಳನ್ನಾಡುತ್ತಾ ಅಟ್ಟಹಾಸ ಮಾಡಿದನು. ಅನಂತರ ಪುತ್ರವಧೆಯನ್ನು ನೆನೆದಾಗ ಅವನ ಮನಸ್ಸಿನಲ್ಲಿ ವಿಷಾದವುಂಟಾಯಿತು. (ದೋ/೨೦)

**ಚೌ – ಕಹ ಲಂಕೇಸ ಕವನ ತೈಂ ಕೀಸಾ । ಕೆಹಿ ಕೇಂ ಬಲ ಘಾಲೆಹಿ ಬನ ಖೀಸಾ ॥**
**ಕೀ ಧೌಂ ಶ್ರವನ ಸುನೆಹಿ ನಹಿಂ ಮೋಹೀ । ದೇಖಉಂ ಅತಿ ಅಸಂಕ ಸಠ ತೋಹೀ॥ ೧ ॥**
**ಮಾರೇ ನಿಸಿಚರ ಕೆಹಿಂ ಅಪರಾಧಾ । ಕಹು ಸಠ ತೊಹಿ ನ ಪ್ರಾನ ಕಇ ಬಾಧಾ ॥**
**ಸುನು ರಾವನ ಬ್ರಹ್ಮಾಂಡ ನಿಕಾಯಾ । ಪಾಇ ಜಾಸು ಬಲ ಬಿರಚತಿ ಮಾಯಾ॥ ೨ ॥**

ಜಾಕೇಂ ಬಲ ಬಿರಂಚಿ ಹರಿ ಈಸಾ। ಪಾಲತ ಸೃಜತ ಹರತ ದಸಸೀಸಾ॥
ಜಾ ಬಲ ಸೀಸ ಧರತ ಸಹಸಾನನ। ಅಂಡಕೋಸ ಸಮೇತ ಗಿರಿ ಕಾನನ॥೩॥
ಧರಇ ಜೊ ಬಿಬಿಧ ದೇಹ ಸುರತ್ರಾತಾ। ತುಮ್ಹ ಸೇ ಸಠನ್ಹ ಸಿಖಾವನು ದಾತಾ॥
ಹರ ಕೋದಂಡ ಕಠಿನ ಜೆಹಿಂ ಭಂಜಾ। ತೆಹಿ ಸಮೇತ ನೃಪ ದಲ ಮದ ಗಂಜಾ॥೪॥
ಖರ ದೂಷನ ತ್ರಿಸಿರಾ ಅರು ಬಾಲೀ। ಬಧೇ ಸಕಲ ಅತುಲಿತ ಬಲಸಾಲೀ॥೫॥

ಲಂಕೇಶ್ವರನು ಇಂತೆಂದನು – 'ಎಲೈ ಕಪಿಯೇ! ನೀನಾರು? ಯಾರ ಬಲದಿಂದ ನೀನು ಅಶೋಕವನವನ್ನು ಹಾಳುಗೆಡವಿದೆ? ನೀನು ಎಂದೂ ನನ್ನ ಹೆಸರನ್ನು, ಕೀರ್ತಿಯನ್ನು ಕೇಳಿಲ್ಲವೇ? ಎಲವೋ ಉದ್ಧಟಾ! ನೀನು ಅತ್ಯಂತ ನಿರ್ಭಯನಾಗಿ ಕಂಡುಬರುತ್ತಿರುವೆ. ಇಷ್ಟೊಂದು ನಿಃಶಂಕನಾಗಿದ್ದಿಯಲ್ಲ? ನೀನು ಯಾವ ಅಪರಾಧಕ್ಕಾಗಿ ರಾಕ್ಷಸರನ್ನು ಕೊಂದೆ? ಎಲವೋ ಮೂಢ! ಹೇಳು. ಏನು, ನಿನಗೆ ಪ್ರಾಣಗಳ ಮೇಲೆ ಆಸೆಯಿಲ್ಲವೇ?'' ವಾಯುನಂದನನು ಇಂತು ಉತ್ತರಿಸಿದನು. ''ದಶಾನನಾ, ರಾವಣಾ! ಕೇಳು. ಯಾರ ಬಲವನ್ನು ಪಡೆದು ಮಾಯೆಯು ಸಂಪೂರ್ಣಬ್ರಹ್ಮಾಂಡಗಳನ್ನು ರಚಿಸುವಳೋ, ಯಾರ ಬಲದಿಂದ ಬ್ರಹ್ಮ, ವಿಷ್ಣು, ಮಹೇಶ್ವರರು ಜಗತ್ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುತ್ತಾರೋ, ಯಾರ ಬಲದಿಂದ ಸಹಸ್ರಹೆಡೆಗಳುಳ್ಳ ಆದಿಶೇಷನು ವನ, ಪರ್ವತ ಸಹಿತ ಅಖಿಲ ಬ್ರಹ್ಮಾಂಡವನ್ನು ತಲೆಯ ಮೇಲೆ ಧರಿಸಿರುವನೋ, ಯಾರು ದೇವತೆಗಳ ರಕ್ಷಣೆಗಾಗಿ ನಾನಾವಿಧವಾದ ದೇಹಗಳನ್ನು ಧರಿಸುವನೋ, ನಿನ್ನಂತಹ ಮೂರ್ಖರಿಗೆ ಬುದ್ಧಿಕಲಿಸುವನೋ, ನಿನ್ನ ಅಹಂಕಾರವನ್ನು ಕಳೆದ ಶಿವನ ಕಠಿಣ ಕೋದಂಡವನ್ನು ಯಾರು ಮುರಿದು, ರಾಜರ ಸಮೂಹದ ಗರ್ವಭಂಗ ಮಾಡಿದನೋ, ಯಾರು ಅತುಲನೀಯ ಬಲಶಾಲಿಗಳಾದ ಖರ, ದೂಷಣ, ತ್ರಿಶಿರ ಮತ್ತು ವಾಲಿಯನ್ನು ಸಂಹರಿಸಿದನೋ – (ಚೌ/೧-೫)

**ದೋ – ಜಾಕೇ ಬಲ ಲವಲೇಸ ತೇಂ ಜಿತೆಹು ಚರಾಚರ ಝಾರಿ।**
**ತಾಸು ದೂತ ಮೈಂ ಜಾ ಕರಿ ಹರಿ ಆನೆಹು ಪ್ರಿಯ ನಾರಿ॥೨೧॥**

ಯಾರ ಲೇಶಮಾತ್ರ ಬಲದಿಂದ ನೀನು ಸಮಸ್ತ ಚರಾಚರ ಜಗತ್ತನ್ನು ಗೆದ್ದಿರುವೆಯೋ, ಯಾರ ಪ್ರಿಯಪತ್ನಿಯನ್ನು ನೀನು ಕದ್ದು ತಂದಿರುವೆಯೋ, ಅಂತಹ ಬಲಪರಾಕ್ರಮಸಂಪನ್ನನಾದ ಶ್ರೀರಾಮನ ದೂತನು ನಾನೆಂದು ತಿಳಿ. (ದೋ/೨೧)

ಚೌ – ಜಾನಉಂ ಮೈಂ ತುಮ್ಹಾರಿ ಪ್ರಭುತಾಈ। ಸಹಸಬಾಹು ಸನ ಪರೀ ಲರಾಈ॥
ಸಮರ ಬಾಲಿ ಸನ ಕರಿ ಜಸು ಪಾವಾ। ಸುನಿ ಕಪಿ ಬಚನ ಬಿಹಸಿ ಬಿಹರಾವಾ॥೧॥
ಖಾಯಉಂ ಫಲ ಪ್ರಭು ಲಾಗೀ ಭೂಂಖಾ। ಕಪಿ ಸುಭಾವ ತೇಂ ತೋರೆಉಂ ರೂಖಾ॥
ಸಬ ಕೇಂ ದೇಹ ಪರಮ ಪ್ರಿಯ ಸ್ವಾಮೀ। ಮಾರಹಿಂ ಮೋಹಿ ಕುಮಾರಗ ಗಾಮೀ॥೨॥
ಜಿನ್ಹ ಮೊಹಿ ಮಾರಾ ತೇ ಮೈಂ ಮಾರೇ। ತೆಹಿ ಪರ ಬಾಂಧೆಉಂ ತನಯಂ ತುಮ್ಹಾರೇ॥
ಮೋಹಿ ನ ಕಛು ಬಾಂಧೇ ಕಇ ಲಾಜಾ। ಕೀನ್ಹ ಚಹಉಂ ನಿಜ ಪ್ರಭು ಕರ ಕಾಜಾ॥೩॥
ಬಿನತೀ ಕರಉಂ ಜೋರಿ ಕರ ರಾವನ। ಸುನಹು ಮಾನ ತಜಿ ಮೋರ ಸಿಖಾವನ॥
ದೇಖಹು ತುಮ್ಹ ನಿಜ ಕುಲಹಿ ಬಿಚಾರೀ। ಭ್ರಮ ತಜಿ ಭಜಹು ಭಗತ ಭಯ ಹಾರೀ॥೪॥
ಜಾಕೇಂ ಡರ ಅತಿ ಕಾಲ ಡೆರಾಈ। ಜೋ ಸುರ ಅಸುರ ಚರಾಚರ ಖಾಈ॥
ತಾಸೋಂ ಬಯರು ಕಬಹುಂ ನಹಿಂ ಕೀಜೈ। ಮೋರೇ ಕಹೇಂ ಜಾನಕೀ ದೀಜೈ॥೫॥

ರಾವಣಾ! ನಾನು ನಿನ್ನ ಪ್ರತಾಪವನ್ನು ಚೆನ್ನಾಗಿ ಬಲ್ಲೆನು. ಸಹಸ್ರಬಾಹುವಿನೊಂದಿಗೆ ನಿನ್ನ ಯುದ್ಧವಾಗಿತ್ತಂತೆ. ವಾಲಿಯೊಡನೆ ಹೋರಾಡಿ ನೀನು ಕೀರ್ತಿಗಳಿಸಿದ್ದೀಯಂತೆಯಲ್ಲ! (ಆ ಸಹಸ್ರಬಾಹುವನ್ನು ಪರಶುರಾಮನು ಕೊಂದಿರುವನು. ಆ ಪರಶುರಾಮನನ್ನು ಶ್ರೀರಾಮನು ಗೆದ್ದಿರುವನು. ವಾಲಿಯು ನಿನ್ನನ್ನು ಕಂಕುಳದಲ್ಲಿಟ್ಟುಕೊಂಡು ತಿರುಗುತ್ತಿದ್ದನು. ಅಂತಹ ವಾಲಿಯನ್ನು ಒಂದೇ ಬಾಣದಿಂದ ಕೊಂದಿರುವ ಶ್ರೀರಾಮನ ದಾಸನು ನಾನು). ರಾವಣನು ಹನುಮಂತನ ಮರ್ಮಗರ್ಭಿತವಾದ ಮಾತನ್ನು ಕೇಳಿಯೂ ಕೇಳದಂತೆ ಇದ್ದನು.

ಹನುಮಂತನು ತನ್ನ ಮಾತನ್ನು ಮುಂದರಿಸಿದನು – ಓ ರಾಕ್ಷಸರಾಜಾ! ನನಗೆ ಹಸಿವಾಗಿತ್ತು. ಆದ್ದರಿಂದ ಹಣ್ಣು ತಿಂದೆ. ವಾನರ ಸ್ವಭಾವದಂತೆ ಮರಗಳನ್ನು ಮುರಿದೆ. ರಾಕ್ಷಸೇಶ್ವರಾ! ದೇಹವು ಎಲ್ಲರಿಗೂ ಪರಮಪ್ರಿಯವಾಗಿರುತ್ತದೆ. ಕುಮಾರ್ಗಗಾಮಿಗಳಾದ ದುಷ್ಟ ದಾನವರು ನನಗೆ ಹೊಡೆದಾಗ ನಾನೂ ಅವರನ್ನು ಹೊಡೆದೆ. ಆಗ ನಿನ್ನ ಮಗ ಮೇಘನಾದನು ನನ್ನನ್ನು ಬಂಧಿಸಿದನು. ಆದರೆ ಈ ಬಂಧನದಿಂದ ನನಗೇನೂ ನಾಚಿಕೆಯಾಗಿಲ್ಲ. ಏಕೆಂದರೆ ನಾನು ನನ್ನ ಸ್ವಾಮಿಯ ಕಾರ್ಯವನ್ನು ಮಾಡಬಯಸುವೆನು.

ರಾವಣಾ! ಕೈಜೋಡಿಸಿ ನಾನು ನಿನ್ನಲ್ಲಿ ಬಿನ್ನವಿಸಿಕೊಳ್ಳುತ್ತೇನೆ. ನೀನು ದುರಭಿಮಾನವನ್ನು ತೊರೆದು ನನ್ನ ಬುದ್ಧಿವಾದವನ್ನು ಕೇಳು. ನೀನು ನಿನ್ನ ವಂಶದ ಬಗ್ಗೆ ವಿಚಾರಮಾಡಿನೋಡು. ಭ್ರಾಂತಿಯನ್ನು ತೊರೆದು ಭಕ್ತಭಯಹಾರಿ ಭಗವಾನ್ ಶ್ರೀರಾಮಚಂದ್ರನನ್ನು ಭಜಿಸು. ಸುರಾಸುರರನ್ನು, ಸಮಸ್ತ ಚರಾಚರ ಜಗತ್ತನ್ನು ನುಂಗುವ ಕಾಲನೂ ಕೂಡ ಅವನಿಗೆ ಭಯಪಡುತ್ತದೆ. ಅಂತಹ ಶ್ರೀರಾಮಚಂದ್ರಪ್ರಭುವಿನೊಡನೆ ವೈರಕಟ್ಟಿಕೊಳ್ಳಬೇಡ. ನನ್ನ ಮಾತನ್ನು ಕೇಳಿ, ಜಾನಕೀದೇವಿಯನ್ನು ಆತನಿಗೆ ಒಪ್ಪಿಸಿಬಿಡು. (ಚೌ/೧-೫)

**ದೋ – ಪ್ರನತಪಾಲ ರಘುನಾಯಕ ಕರುನಾ ಸಿಂಧು ಖರಾರಿ।**
**ಗಏ಼ ಸರನ ಪ್ರಭು ರಾಖಿಹೈ಼ ತವ ಅಪರಾಧ ಬಿಸಾರಿ॥ ೨೨ ॥**

ಖರಾರಿಯಾದ ರಘುನಾಥನು ಶರಣಾಗತವತ್ಸಲನೂ, ಕರುಣಾಸಾಗರನೂ ಆಗಿರುವನು. ನೀನು ಅವನಿಗೆ ಶರಣಾದರೆ ಪ್ರಭು ನಿನ್ನ ಅಪರಾಧಗಳನ್ನು ಮನ್ನಿಸಿ, ನಿನ್ನನ್ನೂ ಕಾಪಾಡುವನು. (ದೋ/೨೨)

**ಚೌ – ರಾಮ ಚರನ ಪಂಕಜ ಉರ ಧರಹೂ। ಲಂಕಾ ಅಚಲ ರಾಜು ತುಮ್ಹ ಕರಹೂ॥**
**ರಿಷಿ ಪುಲಸ್ತಿ ಜಸು ಬಿಮಲ ಮಯಂಕಾ। ತೆಹಿ ಸಸಿ ಮಹು಼ ಜನಿ ಹೋಹು ಕಲಂಕಾ॥ ೧ ॥**
**ರಾಮ ನಾಮ ಬಿನು ಗಿರಾ ನ ಸೋಹಾ। ದೇಖು ಬಿಚಾರಿ ತ್ಯಾಗಿ ಮದ ಮೋಹಾ॥**
**ಬಸನ ಹೀನ ನಹಿ಼ ಸೋಹ ಸುರಾರೀ। ಸಬ ಭೂಷನ ಭೂಷಿತ ಬರ ನಾರೀ॥ ೨ ॥**
**ರಾಮ ಬಿಮುಖ ಸಂಪತಿ ಪ್ರಭುತಾಈ। ಜಾಇ ರಹೀ ಪಾಈ ಬಿನು ಪಾಈ॥**
**ಸಜಲ ಮೂಲ ಜಿನ್ಹ ಸರಿತನ್ಹ ನಾಹೀ಼। ಬರಷಿ ಗಏ಼ ಪುನಿ ತಬಹಿ಼ ಸುಖಾಹೀ಼॥ ೩ ॥**
**ಸುನು ದಸಕಂಠ ಕಹಉ಼ ಪನ ರೋಪೀ। ಬಿಮುಖ ರಾಮ ತ್ರಾತಾ ನಹಿ಼ ಕೋಪೀ॥**
**ಸಂಕರ ಸಹಸ ಬಿಷ್ನು ಅಜ ತೋಹೀ। ಸಕಹಿ಼ ನ ರಾಖಿ ರಾಮ ಕರ ದ್ರೋಹೀ॥ ೪ ॥**

ನೀನು ಶ್ರೀರಾಮನ ಚರಣಕಮಲಗಳನ್ನು ಹೃದಯದಲ್ಲಿ ತಳೆದು ಲಂಕೆಯ ಅಚಲ ರಾಜ್ಯವನ್ನಾಳು. ಪುಲಸ್ತ್ಯಮುನಿಯ ಯಶಸ್ಸು ವಿಮಲಚಂದ್ರನಂತಿದೆ; ಆ ಚಂದ್ರನಿಗೆ ನೀನು ಕಳಂಕವಾಗಬೇಡ. ರಾಮನಾಮವಿಲ್ಲದೇ ವಾಣಿಶೋಭಿಸದು. ಮದ, ಮೋಹವನ್ನು ತೊರೆದು ವಿಚಾರಮಾಡಿ ನೋಡು. ಓ ಸುರಾರಿಯೇ! ಸರ್ವಭೂಷಣಗಳಿಂದ ಅಲಂಕೃತ ಸ್ತ್ರೀಯೂ ಕೂಡ ವಸ್ತ್ರವಿಹೀನಳಾಗಿದ್ದರೆ ಶೋಭಿಸಳು. ಶ್ರೀರಾಮನಿಗೆ ವಿಮುಖನಾದವನ ಸಂಪತ್ತು, ಅಧಿಕಾರ ಏನೆಲ್ಲ ಇದ್ದರೂ ಹೊರಟು ಹೋಗುತ್ತದೆ. ಅದನ್ನು ಪಡೆದರೂ ಪಡೆಯದಂತೆ ವ್ಯರ್ಥವು. ಜಲದ ಸೆಲೆಯಿಲ್ಲದ ನದಿಯು ಮಳೆಗಾಲ ಕಳೆದು ಹೋದಾಗ ಕೂಡಲೇ ಬತ್ತಿಹೋಗುತ್ತದೆ. ದಶಾನನಾ! ಕೇಳು. ರಾಮನಿಗೆ ವಿಮುಖನಾದವನನ್ನು ಯಾರೂ ರಕ್ಷಿಸಲಾರರು ಎಂದು ನಾನು ಪ್ರತಿಜ್ಞೆಮಾಡಿ ಹೇಳುತ್ತೇನೆ. ಸಾವಿರಾರು ಮಂದಿ ಹರಿ, ಹರ, ಹಿರಣ್ಯಗರ್ಭರು ರಾಮದ್ರೋಹಿಯಾದ ನಿನ್ನನ್ನು ಉಳಿಸಲಾರರು. (ಚೌ/೧-೪)

**ದೋ – ಮೋಹಮೂಲ ಬಹು ಸೂಲ ಪ್ರದ ತ್ಯಾಗಹು ತಮ ಅಭಿಮಾನ।**
**ಭಜಹು ರಾಮ ರಘುನಾಯಕ ಕೃಪಾಸಿಂಧು ಭಗವಾನ॥ ೨೩ ॥**

ಮೋಹಮೂಲವೂ, ಬಹುಶೂಲಪ್ರದವೂ, ತಮೋರೂಪಿಯಾದ ದುರಭಿಮಾನವನ್ನು ತೊರೆದು, ಕೃಪಾಸಿಂಧುವಾದ ರಘುಕುಲ ಚೂಡಾಮಣಿ ಶ್ರೀರಾಮಚಂದ್ರನನ್ನು ಭಜಿಸು. (ದೋ/೨೩)

**ಚೌ – ಜದಪಿ ಕಹೀ ಕಪಿ ಅತಿ ಹಿತ ಬಾನೀ। ಭಗತಿ ಬಿಬೇಕ ಬಿರತಿ ನಯ ಸಾನೀ॥**
**ಬೋಲಾ ಬಿಹಸಿ ಮಹಾ ಅಭಿಮಾನೀ। ಮಿಲಾ ಹಮಹಿ ಕಪಿ ಗುರ ಬಡ ಗ್ಯಾನೀ॥ ೧ ॥**
**ಮೃತ್ಯು ನಿಕಟ ಆಈ ಖಲ ತೋಹೀ। ಲಾಗೆಸಿ ಅಧಮ ಸಿಖಾವನ ಮೋಹೀ॥**
**ಉಲಟಾ ಹೋಇಹಿ ಕಹ ಹನುಮಾನಾ। ಮತಿಭ್ರಮ ತೋರ ಪ್ರಗಟ ಮೈ಼ ಜಾನಾ॥ ೨ ॥**
**ಸುನಿ ಕಪಿ ಬಚನ ಬಹುತ ಖಿಸಿಆನಾ। ಬೇಗಿ ನ ಹರಹು ಮೂಢ ಕರ ಪ್ರಾನಾ॥**
**ಸುನತ ನಿಸಾಚರ ಮಾರನ ಧಾಏ। ಸಚಿವನ್ಹ ಸಹಿತ ಬಿಭೀಷನು ಆಏ॥ ೩ ॥**
**ನಾಇ ಸೀಸ ಕರಿ ಬಿನಯ ಬಹೂತಾ। ನೀತಿ ಬಿರೋಧ ನ ಮಾರಿಅ ದೂತಾ॥**
**ಆನ ದಂಡ ಕಛು ಕರಿಅ ಗೊಸಾ಼ಈ। ಸಬಹೀ಼ ಕಹಾ ಮಂತ್ರ ಭಲ ಭಾಈ॥ ೪ ॥**
**ಸುನತ ಬಿಹಸಿ ಬೋಲಾ ದಸಕಂಧರ। ಅಂಗ ಭಂಗ ಕರಿ ಪಠಇಅ ಬಂದರ ॥ ೫ ॥**

ಹನುಮಂತನು ಭಕ್ತಿ, ಜ್ಞಾನ, ವೈರಾಗ್ಯ, ನೀತಿ ಇವುಗಳಿಂದ ಕೂಡಿದ ಹಿತವಚನಗಳನ್ನು ಆಡಿದರೂ, ಅಭಿಮಾನಿಯಾದ ರಾವಣನು ನಗುತ್ತಾ ವ್ಯಂಗವಾಗಿ– 'ನನಗೆ ದೊಡ್ಡ ಜ್ಞಾನಿಯಾದ ವಾನರನು ಗುರುವಾಗಿ ದೊರೆತನು' ಎಂದು ನುಡಿದನು. ''ಎಲೈ ದುರುಳ! ನಿನಗೆ ಸಾವು ಸಮೀಪಿಸಿದೆ. ಅದರಿಂದಲೇ ನನಗೆ ಉಪದೇಶಕೊಡಲು ಹೊರಟಿದ್ದೀಯೆ ಎಂದು ರೋಷದಿಂದ ಹೇಳಿದನು. ಆಗ ಮಾರುತಿಯು ನುಡಿದು– ''ನಿಜವೇ ಇದಕ್ಕೆ ವ್ಯತಿರೇಕವಾಗಿಯೇ ನಡೆಯುವುದು. (ಅಂದರೆ ಮೃತ್ಯುವು ನಿನ್ನನ್ನು ಕಬಳಿಸುವುದು.) ನಿನಗೆ ನಿಜವಾಗಿ ಮತಿಭ್ರಮಣೆಯಾಗಿದೆ ಎಂದು ನಾನು ಅರಿತೆನು. ಹನುಮಂತನ ಮಾತನ್ನು ಕೇಳಿದ ರಾವಣನ ಕೋಪವು ನಖಶಿಖಾಂತವಾಗಿ ಏರಿತು. ಅವನೆಂದ – ''ಯಾರಲ್ಲಿ? ಈ ಮೂರ್ಖನ ಪ್ರಾಣಗಳನ್ನೂ ಹರಣಮಾಡದೆ ಏಕೆ ಸುಮ್ಮನಿದ್ದೀರಿ? ಅದನ್ನು ಕೇಳಿದ ಕೂಡಲೇ ರಾಕ್ಷಸರು ಅವನನ್ನು ಕೊಲ್ಲಲು ಮುಂದಾದರು. ಅದೇ ವೇಳೆಗೆ ಮಂತ್ರಿಗಳ ಜೊತೆಗೆ ವಿಭೀಷಣನು ಅಲ್ಲಿಗೆ ಬಂದನು. ಅವನು ರಾವಣನಿಗೆ ತಲೆಬಾಗಿ ವಿನಯದಿಂದ ಇಂತೆಂದನು – ''ಸ್ವಾಮಿ! ದೂತನನ್ನು ಕೊಲ್ಲಬಾರದು. ಅವನ ವಧೆ ನೀತಿಗೆ ವಿರುದ್ಧವಾದುದು. ಆದ್ದರಿಂದ ಬೇರೆನಾದರೂ ಶಿಕ್ಷೆಯನ್ನು ವಿಧಿಸಬಹುದು. 'ಈ ಮಾತು ಸರಿಯಾದುದು, ಉತ್ತಮ ಸಲಹೆ' ಎಂದು ಎಲ್ಲ ಮಂತ್ರಿಗಳು ಧ್ವನಿಗೂಡಿಸಿದರು. ಅದನ್ನು ಕೇಳುತ್ತಲೇ ರಾವಣನು ನಕ್ಕು ನುಡಿದನು – 'ಸರಿ, ಹಾಗಾದರೆ ಈ ಮಂಗನ ಅಂಗಭಂಗಮಾಡಿ ಕಳಿಸಿಬಿಡಿರಿ. (ಚೌ/೧-೫)

**ದೋ – ಕಪಿ ಕೇಂ ಮಮತಾ ಪೂಂಛ ಪರ ಸಬಹಿ ಕಹಉಂ ಸಮುಝಾಇ।**
**ತೇಲ ಬೋರಿ ಪಟ ಬಾಂಧಿ ಪುನಿ ಪಾವಕ ದೇಹು ಲಗಾಇ॥ ೨೪ ॥**

ವಾನರರಿಗೆ ಬಾಲದ ಮೇಲೆ ತುಂಬಾ ಮಮತೆ ಇರುತ್ತದೆ. ಆದ್ದರಿಂದ ಎಣ್ಣೆಯಲ್ಲಿ ಬಟ್ಟೆಗಳನ್ನು ಅದ್ದಿ, ಅದರ ಬಾಲಕ್ಕೆ ಸುತ್ತಿ ಬೆಂಕಿಯಿಡಿರಿ. (ದೋ/೨೪)

## ಲಂಕಾದಹನ

**ಚೌ – ಪೂಂಛಹೀನ ಬಾನರ ತಹँ ಜಾಇಹಿ। ತಬ ಸಠ ನಿಜ ನಾಥಹಿ ಲಇ ಆಇಹಿ॥**
**ಜಿನ್ಹ ಕೈ ಕೀನ್ಹಿಸಿ ಬಹುತ ಬಡಾಈ। ದೇಖಉँ ಮೈಂ ತಿನ್ಹ ಕೈ ಪ್ರಭುತಾಈ॥ ೧ ॥**
**ಬಚನ ಸುನತ ಕಪಿ ಮನ ಮುಸುಕಾನಾ। ಭಇ ಸಹಾಯ ಸಾರದ ಮೈಂ ಜಾನಾ॥**
**ಜಾತುಧಾನ ಸುನಿ ರಾವನ ಬಚನಾ। ಲಾಗೇ ರಚೈಂ ಮೂಢ ಸೋಇ ರಚನಾ॥ ೨ ॥**
**ರಹಾ ನ ನಗರ ಬಸನ ಘೃತ ತೇಲಾ। ಬಾಢೀ ಪೂಂಛ ಕೀನ್ಹ ಕಪಿ ಖೇಲಾ॥**
**ಕೌತುಕ ಕಹँ ಆಏ ಪುರಬಾಸೀ। ಮಾರಹಿಂ ಚರನ ಕರಹಿಂ ಬಹು ಹಾँಸೀ॥ ೩ ॥**
**ಬಾಜಹಿಂ ಢೋಲ ದೇಹಿಂ ಸಬ ತಾರೀ। ನಗರ ಫೇರಿ ಪುನಿ ಪೂಂಛ ಪ್ರಜಾರೀ॥**
**ಪಾವಕ ಜರತ ದೇಖಿ ಹನುಮಂತಾ। ಭಯಉ ಪರಮ ಲಘುರೂಪ ತುರಂತಾ॥ ೪ ॥**
**ನಿಬುಕಿ ಚಢೇಉ ಕಪಿ ಕನಕ ಅಟಾರೀಂ। ಭಈಂ ಸಭೀತ ನಿಸಾಚರ ನಾರೀಂ॥ ೫ ॥**

ಬಾಲಸುಟ್ಟ ಈ ಕೋತಿಯು ತನ್ನ ಒಡೆಯನ ಬಳಿಗೆ ಹೋಗಿ, ಈ ಮೂರ್ಖಕಪಿಯು ಅವನನ್ನು ಜೊತೆಗೆ ಕರೆದುಕೊಂಡು ಬರುವುದು. ಅಷ್ಟೊಂದು ಹೊಗಳಿದ ಇದರ ಒಡೆಯನ ಪ್ರತಾಪವನ್ನು ನೋಡಿಯೇ ಬಿಡೋಣ. ರಾವಣನ ಮಾತನ್ನು ಕೇಳುತ್ತಲೇ ಆಂಜನೇಯನು ಮನದಲ್ಲೇ ಮುಗುಳ್ನಕ್ಕು, 'ವಾಗ್ದೇವಿಯ ಪ್ರೇರಣೆಯಿಂದಲೇ ರಾವಣನಿಗೆ ಇಂತಹ ಬುದ್ಧಿ ಉಂಟಾಗಿದೆ.' ಎಂದು ಅಂದುಕೊಂಡನು. ರಾವಣನ ಆಜ್ಞೆಯಂತೆ ಆ ಮೂರ್ಖ ರಾಕ್ಷಸರು ಹನುಮಂತನ ಬಾಲಕ್ಕೆ ಬೆಂಕಿಹಚ್ಚಲು ಸಿದ್ಧತೆ ನಡೆಸಿದರು. ಮಾರುತಿಯು ಲೀಲೆಯಿಂದ ತನ್ನ ಬಾಲವನ್ನು ವಿಪರೀತವಾಗಿ ಬೆಳೆಸಿದನು. ಅವನ ಬಾಲಕ್ಕೆ ಬಟ್ಟೆ ಸುತ್ತುತ್ತಾ ನಗರದ ಬಟ್ಟೆಗಳೆಲ್ಲ ಮುಗಿದುಹೋದುವು. ಎಣ್ಣೆ-ತುಪ್ಪಗಳೆಲ್ಲ ತೀರಿಹೋದವು. ನಗರವಾಸಿಗಳು ಈ ವಿನೋದವನ್ನು ನೋಡಲು ಬಂದು ನೆರೆದರು. ಅವರೆಲ್ಲ ಹನುಮಂತನನ್ನು ಕಾಲಿನಿಂದ ಒದ್ದು, ಗೇಲಿ ಮಾಡುತ್ತಿದ್ದರು. ಡೋಲು ಬಾರಿಸುತ್ತಾ, ಚಪ್ಪಾಳೆತಟ್ಟಿ ಊರಲೆಲ್ಲ ಮೆರವಣಿಗೆ ಮಾಡಿ, ಅವನ ಬಾಲಕ್ಕೆ ಬೆಂಕಿಯನ್ನಿಟ್ಟರು. ಬೆಂಕಿಯು ಹತ್ತಿಕೊಂಡಿದ್ದನ್ನು ಕಂಡು ಹನುಮಂತನು ಕೂಡಲೇ ಸಣ್ಣರೂಪದವನಾಗಿ. ಬಂಧನದಿಂದ ಬಿಡುಗಡೆ ಹೊಂದಿದ ಕೂಡಲೇ ಅವನು ಭಂಗಾರದ ಉಪ್ಪರಿಗೆಗಳ ಮೇಲಕ್ಕೆ ನೆಗೆದನು. ಅವನನ್ನು ಕಂಡು ರಕ್ಕಸರ ರಮಣಿಯರೆಲ್ಲರೂ ಭಯಗೊಂಡರು. (ಚೌ/೧-೫)

**ದೋ – ಹರಿ ಪ್ರೇರಿತ ತೇಹಿ ಅವಸರ ಚಲೇ ಮರುತ ಉನಚಾಸ।**
**ಅಟ್ಟಹಾಸ ಕರಿ ಗರ್ಜಾ ಕಪಿ ಬಢಿ ಲಾಗ ಅಕಾಸ॥ ೨೫ ॥**

ಅದೇ ಸಮಯಕ್ಕೆ ಭಗವತ್ಪ್ರೇರಣೆಯಿಂದ ನಲವತ್ತೊಂಭತ್ತು ಪ್ರಚಂಡ ಗಾಳಿಗಳು ಬಂದೊದಗಿದವು. ವಾಯುಸುತನು ಅಟ್ಟಹಾಸವನ್ನು ಮಾಡುತ್ತಾ ಗರ್ಜಿಸಿ, ಆಕಾಶಕ್ಕೆ ನೆಗೆದನು. (ದೋ/೨೫)

**ಚೌ – ದೇಹ ಬಿಸಾಲ ಪರಮ ಹರುಆಈ। ಮಂದಿರ ತೇಂ ಮಂದಿರ ಚಢ ಧಾಈ॥**
**ಜರಇ ನಗರ ಭಾ ಲೋಗ ಬಿಹಾಲಾ। ಝಪಟ ಲಪಟ ಬಹು ಕೋಟಿ ಕರಾಲಾ॥ ೧ ॥**
**ತಾತ ಮಾತು ಹಾ ಸುನಿಅ ಪುಕಾರಾ। ಎಹಿಂ ಅವಸರ ಕೋ ಹಮಹಿ ಉಬಾರಾ॥**
**ಹಮ ಜೊ ಕಹಾ ಯಹ ಕಪಿ ನಹಿಂ ಹೋಈ। ಬಾನರ ರೂಪ ಧರೇಂ ಸುರ ಕೋಈ॥ ೨ ॥**
**ಸಾಧು ಅವಗ್ಯಾ ಕರ ಫಲು ಐಸಾ। ಜರಇ ನಗರ ಅನಾಥ ಕರ ಜೈಸಾ॥**
**ಜಾರಾ ನಗರು ನಿಮಿಷ ಏಕ ಮಾಹೀಂ। ಏಕ ಬಿಭೀಷನ ಕರ ಗೃಹ ನಾಹೀಂ॥ ೩ ॥**
**ತಾ ಕರ ದೂತ ಅನಲ ಜೆಹಿಂ ಸಿರಿಜಾ। ಜರಾ ನ ಸೋ ತೆಹಿ ಕಾರನ ಗಿರಿಜಾ॥**
**ಉಲಟಿ ಪಲಟಿ ಲಂಕಾ ಸಬ ಜಾರೀ। ಕೂದಿ ಪರಾ ಪುನಿ ಸಿಂಧು ಮಝಾರೀ॥ ೪ ॥**

ಅವನ ದೇಹವು ವಿಶಾಲವಾಗಿದ್ದರೂ ಹಗುರವಾಗಿತ್ತು. ಮಾರುತಿಯು ಒಂದು ಮಹಲಿನಿಂದ ಮತ್ತೊಂದು ಮಹಲಿಗೆ ನೆಗೆಯುತ್ತಿದ್ದನು. ಊರು ಉರಿಯುತ್ತಿತ್ತು. ಜನ ಕಂಗಾಲಾದರು. ಬೆಂಕಿಯ ಕರಾಳ ಜ್ವಾಲೆಗಳು ಎಲ್ಲೆಲ್ಲೂ ಹರಡಿದವು. ಅಯ್ಯಪ್ಪಾ ! ಅಯ್ಯಮ್ಮಾ ! ಎಂದು ಕೂಗುತ್ತಾ, ಈ ದುರ್ಘಟ ಪ್ರಸಂಗದಿಂದ ನಮ್ಮನ್ನು ಯಾರು ಉಳಿಸುವರು? ಎಲ್ಲೆಲ್ಲೂ ಇದೇ ಕೂಗು! 'ಇವನು ವಾನರನಲ್ಲ, ವಾನರರೂಪದಿಂದ ಬಂದಿರುವ ಯಾವುದೋ ದೇವತೆ ಎಂದು ನಾವು ಮೊದಲೇ ಹೇಳಿರಲಿಲ್ಲವೇ? ಇಡೀ ನಗರವೇ ದಿಕ್ಕಿಲ್ಲದಂತೆ ಉರಿಯುತ್ತಿದೆಯಲ್ಲ! ಇದು ಸಾಧುಗಳ ಅವಹೇಳನದ ಫಲವೇ ಆಗಿದೆ' ಎಂದು ಕೆಲವು ರಕ್ಕಸರು ಅಂದುಕೊಂಡರು. ವಾಯುನಂದನನು ಒಂದು ಕ್ಷಣದಲ್ಲಿ ಇಡೀ ನಗರವನ್ನು ಸುಟ್ಟು ಬೂದಿಮಾಡಿದನು. ಆದರೆ ವಿಭೀಷಣನ ಮನೆಮಾತ್ರ ಉರಿಯದೆ ಹಾಗೆ ಇತ್ತು. ಶಿವನು ಹೇಳುತ್ತಾನೆ– ಪಾರ್ವತಿ! ಅಗ್ನಿಯನ್ನು ಸೃಷ್ಟಿಸಿದ ಭಗವಂತನಿಗೆ ಹನುಮನು ದಾಸನು. ಆದರಿಂದ ಅವನಿಗೆ ಬೆಂಕಿ ಮುಟ್ಟಲಿಲ್ಲ. ಹನುಮಂತನು ಈ ತುದಿಯಿಂದ ಆ ತುದಿಯವರೆಗೆ ಇಡೀ ಲಂಕೆಯನ್ನು ಸುಟ್ಟು ಅನಂತರ ಸಮುದ್ರಕ್ಕೆ ಧುಮುಕಿದನು. (ಚೌ/೧-೪)

**ದೋ – ಪೂಂಛ ಬುಝಾಇ ಖೋಇ ಶ್ರಮ ಧರಿ ಲಘು ರೂಪ ಬಹೋರಿ।**
**ಜನಕಸುತಾ ಕೇಂ ಆಗೇಂ ಠಾಢ ಭಯಉ ಕರ ಜೋರಿ॥ ೨೬ ॥**

ಬಾಲವನ್ನು ಆರಿಸಿ, ಬಳಲಿಕೆಯನ್ನು ನೀಗಿಕೊಂಡು, ಮತ್ತೆ ಸಣ್ಣರೂಪವನ್ನಾಂತು ಆಂಜನೇಯನು ಜಾನಕಿಯ ಎದುರು ಕೈಮುಗಿದು ನಿಂತುಕೊಂಡನು. (ದೋ/೨೬)

**ಚೌ – ಮಾತು ಮೋಹಿ ದೀಜೇ ಕಛು ಚೀನ್ಹಾ। ಜೈಸೇಂ ರಘುನಾಯಕ ಮೊಹಿ ದೀನ್ಹಾ॥**
**ಚೂಡಾಮನಿ ಉತಾರಿ ತಬ ದಯಊ। ಹರಷ ಸಮೇತ ಪವನಸುತ ಲಯಊ॥ ೧ ॥**
**ಕಹೇಹು ತಾತ ಅಸ ಮೋರ ಪ್ರನಾಮಾ। ಸಬ ಪ್ರಕಾರ ಪ್ರಭು ಪೂರನಕಾಮಾ॥**
**ದೀನ ದಯಾಲ ಬಿರಿದು ಸಂಭಾರೀ। ಹರಹು ನಾಥ ಮಮ ಸಂಕಟ ಭಾರೀ॥ ೨ ॥**
**ತಾತ ಸಕ್ರಸುತ ಕಥಾ ಸುನಾಏಹು। ಬಾನ ಪ್ರತಾಪ ಪ್ರಭುಹಿ ಸಮುಝಾಏಹು॥**
**ಮಾಸ ದಿವಸ ಮಹುಂ ನಾಥು ನ ಆವಾ। ತೌ ಪುನಿ ಮೋಹಿ ಜಿಅತ ನಹಿಂ ಪಾವಾ॥ ೩ ॥**
**ಕಹು ಕಪಿ ಕೆಹಿ ಬಿಧಿ ರಾಖೌಂ ಪ್ರಾನಾ। ತುಮ್ಹಹೂ ತಾತ ಕಹತ ಅಬ ಜಾನಾ॥**
**ತೋಹಿ ದೇಖಿ ಸೀತಲಿ ಭಇ ಛಾತೀ। ಪುನಿ ಮೋ ಕಹುಂ ಸೋಇ ದಿನು ಸೋ ರಾತೀ॥ ೪ ॥**

ಅನಂತರ ಅವನು ಸೀತಾದೇವಿಯಲ್ಲಿ ಹೇಳಿದನು – ''ಅಮ್ಮಾ ! ಶ್ರೀರಘುನಾಥನು ನೀಡಿದಂತಹ ಯಾವುದಾದರೊಂದು ಕುರುಹನ್ನು ನೀವೂ ದಯಮಾಡಿಸಿರಿ.'' ಆಗ ಸೀತಾದೇವಿಯು ತನ್ನ ಚೂಡಾಮಣಿಯನ್ನು ಬಿಚ್ಚಿ ಹನುಮಂತನಿಗೆ ಕೊಡಲು, ಅದನ್ನು ಅವನು ಹರ್ಷದಿಂದ ತೆಗೆದುಕೊಂಡನು. ಜಾನಕಿಯು ಹೇಳಿದಳು – ''ಮಗು! ನನ್ನ ಪ್ರಣಾಮವನ್ನು ಪ್ರಭುವಿಗೆ ಅರ್ಪಿಸಿ, ಈ ವಿಧವಾಗಿ ನನ್ನ ವಚನಗಳನ್ನು ನಿವೇದಿಸು – ''ಪ್ರಭುವೇ! ನೀನು ಎಲ್ಲ ವಿಧದಿಂದ ಪೂರ್ಣಕಾಮನಾಗಿದ್ದರೂ ದೀನ-ದುಃಖಿತರ ಮೇಲೆ ದಯೆತೋರುವುದು ನಿನ್ನ ಬಿರುದಾಗಿದೆ. ನಾನು ದೀನಳಾಗಿದ್ದೇನೆ. ಆದ್ದರಿಂದ ಆ ಬಿರುದನ್ನು ನೆನೆದು ನನ್ನ ಭಾರೀ ಸಂಕಟವನ್ನು ದೂರಮಾಡು.'' ಕಂದಾ! ಇಂದ್ರಪುತ್ರ ಜಯಂತನ ಕಥೆಯನ್ನು ಅವರಿಗೆ ಹೇಳಿ, ಅವರ ಬಾಣದ ಪ್ರತಾಪವನ್ನು

ನೆನಪುಮಾಡಿಕೊಡು. ಒಂದು ತಿಂಗಳೊಳಗಾಗಿ ಪ್ರಭುವು ಇಲ್ಲಿಗೆ ಬರದಿದ್ದರೆ, ನಾನು ಜೀವಿಸಿ ಇರಲಾರೆ.'' ಹನುಮಂತಾ! ನೀನೇ ಹೇಳು, ನಾನು ನನ್ನ ಹರಣವನ್ನು ಹೇಗೆ ಹಿಡಿದಿಟ್ಟುಕೊಂಡಿರಲಿ? ಕುಮಾರಾ! ಈಗ ನೀನು ಹೋಗುವೆನೆಂದು ಹೇಳುತ್ತಿರುವೆ. ನಿನ್ನನ್ನು ನೋಡಿ ನನ್ನ ಹೃದಯಕ್ಕೆ ತಂಪೆನಿಸಿತ್ತು. ಮತ್ತೆ ನನ್ನ ಪಾಲಿಗೆ ಅದೇ ಹಗಲು! ಅದೇ ರಾತ್ರಿ!'' (ಚೌ/೧-೪)

**ದೋ – ಜನಕಸುತಹಿ ಸಮುಝಾಇ ಕರಿ ಬಹು ಬಿಧಿ ಧೀರಜು ದೀನ್ಹ।**
**ಚರನ ಕಮಲ ಸಿರು ನಾಇ ಕಪಿ ಗವನು ರಾಮ ಪಹಿಂ ಕೀನ್ಹ॥ ೨೭ ॥**

ಹನುಮಂತನು ಸೀತಾದೇವಿಯನ್ನು ಸಂತೈಸಿ, ಅವಳಿಗೆ ಧೈರ್ಯಹೇಳಿ, ಆಕೆಯ ಅಡಿದಾವರೆಗಳಿಗೆ ಎರಗಿ ಶ್ರೀರಾಮನ ಬಳಿಗೆ ಹೊರಟನು. (ದೋ/೨೭)

**ಚೌ – ಚಲತ ಮಹಾಧುನಿ ಗರ್ಜೆಸಿ ಭಾರೀ। ಗರ್ಭ ಸ್ರವಹಿಂ ಸುನಿ ನಿಸಿಚರ ನಾರೀ॥**
**ನಾಘಿ ಸಿಂಧು ಏಹಿ ಪಾರಹಿ ಆವಾ। ಸಬದ ಕಿಲಿಕಿಲಾ ಕಪಿನ್ಹ ಸುನಾವಾ॥ ೧ ॥**
**ಹರಷೇ ಸಬ ಬಿಲೋಕಿ ಹನುಮಾನಾ। ನೂತನ ಜನ್ಮ ಕಪಿನ್ಹ ತಬ ಜಾನಾ॥**
**ಮುಖ ಪ್ರಸನ್ನ ತನ ತೇಜ ಬಿರಾಜಾ। ಕೀನ್ಹೆಸಿ ರಾಮಚಂದ್ರ ಕರ ಕಾಜಾ॥ ೨ ॥**
**ಮಿಲೇ ಸಕಲ ಅತಿ ಭಏ ಸುಖಾರೀ। ತಲಫತ ಮೀನ ಪಾವ ಜಿಮಿ ಬಾರೀ॥**
**ಚಲೇ ಹರಷಿ ರಘುನಾಯಕ ಪಾಸಾ। ಪೂಁಛತ ಕಹತ ನವಲ ಇತಿಹಾಸಾ॥ ೩ ॥**
**ತಬ ಮಧುಬನ ಭೀತರ ಸಬ ಆಏ। ಅಂಗದ ಸಮ್ಮತ ಮಧು ಫಲ ಖಾಏ॥**
**ರಖವಾರೇ ಜಬ ಬರಜನ ಲಾಗೇ। ಮುಷ್ಟಿ ಪ್ರಹಾರ ಹನತ ಸಬ ಭಾಗೇ॥ ೪ ॥**

ಮರಳಿ ಹೊರಡುವಾಗ ಹನುಮಂತನು ಮಹಾಧ್ವನಿಯಿಂದ ಗರ್ಜಿಸಿದನು. ಅದನ್ನು ಕೇಳಿಯೇ ಅನೇಕ ಮಂದಿ ಅಸುರ ರಮಣಿಯರ ಗರ್ಭಪಾತವಾಗಿ ಹೋಯಿತು. ಸಮುದ್ರವನ್ನು ಲಂಘಿಸಿ ದಾಟಿ ಅವನು ವಾನರರು ಇದ್ದ ಸ್ಥಳಕ್ಕೆ ಹಿಂತಿರುಗಿ ಹರ್ಷಧ್ವನಿಗೈದು ವಾನರರಿಗೆ ತನ್ನ ಬರವನ್ನು ಸೂಚಿಸಿದನು. ಹನುಮಂತನನ್ನು ಕಂಡ ವಾನರರೆಲ್ಲರೂ ಹರ್ಷಿತರಾದರು. ಅವರಿಗೆ ಪುನರ್ಜನ್ಮ ದೊರೆತಂತಾಯಿತು. ಹನುಮಂತನ ಮುಖ ಪ್ರಸನ್ನವಾಗಿದೆ. ಶರೀರದಲ್ಲಿ ತೇಜಸ್ಸು ರಾರಾಜಿಸುತ್ತಿದೆ. ಇದನ್ನು ಕಂಡೇ – 'ಇವನು ಶ್ರೀರಾಮಚಂದ್ರನ ಕಾರ್ಯವನ್ನು ಮುಗಿಸಿ ಬಂದಿರುವನೆಂದು' ಅವರಿಗನ್ನಿಸಿತು. ನೀರಿಲ್ಲದೆ ಒದ್ದಾಡುತ್ತಿದ್ದ ಮೀನಿಗೆ ನೀರು ದೊರೆತಂತೆ, ವಾಯುಸುತನ ದರ್ಶನದಿಂದ ವಾನರರೆಲ್ಲರೂ ಅಮಿತಾನಂದವನ್ನು ಹೊಂದಿದರು. ಎಲ್ಲರೂ ಹರ್ಷಿತರಾಗಿ ಹೊಸ-ಹೊಸ ವೃತ್ತಾಂತಗಳನ್ನು ಹೇಳುತ್ತಾ-ಕೇಳುತ್ತಾ ಶ್ರೀರಘುನಾಥನ ಬಳಿಗೆ ನಡೆದರು. ದಾರಿಯಲ್ಲಿ ಅವರೆಲ್ಲರೂ ಮಧುವನವನ್ನು ಹೊಕ್ಕು, ಅಂಗದನ ಸಮ್ಮತಿಯನ್ನು ಪಡೆದು ಮಧು ಮತ್ತು ಫಲಗಳನ್ನು ತಿಂದರು. ಕಾವಲುಗಾರರು ಗದರಿಸಿಕೊಳ್ಳಲು, ಅವರಿಗೆ ಎರಡೆರಡು ಗುದ್ದುಕೊಟ್ಟು ಓಡಿಸಿದರು. (ಚೌ/೧-೪)

**ದೋ – ಜಾಇ ಪುಕಾರೇ ತೇ ಸಬ ಬನ ಉಜಾರ ಜುಬರಾಜ।**
**ಸುನಿ ಸುಗ್ರೀವ ಹರಷ ಕಪಿ ಕರಿ ಆಏ ಪ್ರಭು ಕಾಜ॥ ೨೮ ॥**

ದಧಿಮುಖನೇ ಮೊದಲಾದ ವನಪಾಲಕರು ಸುಗ್ರೀವನ ಬಳಿಗೆ ಹೋಗಿ – 'ಯುವರಾಜ ಅಂಗದನೇ ಮೊದಲಾದವರು ಮಧುವನವನ್ನು ಹಾಳುಗೆಡಹುತ್ತಿದ್ದಾರೆ' ಎಂದು ಕೂಗಿ ಹೇಳಿದರು. ಇದನ್ನು ಕೇಳಿ ಸುಗ್ರೀವನು – 'ವಾನರರು ಪ್ರಭುಕಾರ್ಯವನ್ನು ಮಾಡಿಕೊಂಡು ಬಂದಿದ್ದಾರೆ' ಎಂದು ಹರ್ಷಿತನಾದನು. (ದೋ/೨೮)

**ಚೌ – ಜೌಂ ನ ಹೋತಿ ಸೀತಾ ಸುಧಿ ಪಾಈ। ಮಧುಬನ ಕೇ ಫಲ ಸಕಹಿಂ ಕಿ ಖಾಈ॥**
**ಏಹಿ ಬಿಧಿ ಮನ ಬಿಚಾರ ಕರ ರಾಜಾ। ಆಇ ಗಏ ಕಪಿ ಸಹಿತ ಸಮಾಜಾ॥ ೧ ॥**
**ಆಇ ಸಬನ್ಹಿ ನಾವಾ ಪದ ಸೀಸಾ। ಮಿಲೆಉ ಸಬನ್ಹಿ ಅತಿ ಪ್ರೇಮ ಕಪೀಸಾ॥**
**ಪೂಁಛೀ ಕುಸಲ ಕುಸಲ ಪದ ದೇಖೀ। ರಾಮ ಕೃಪಾಁ ಭಾ ಕಾಜು ಬಿಸೇಷೀ॥ ೨ ॥**
**ನಾಥ ಕಾಜು ಕೀನ್ಹೆಉ ಹನುಮಾನಾ। ರಾಖೇ ಸಕಲ ಕಪಿನ್ಹ ಕೇ ಪ್ರಾನಾ॥**
**ಸುನಿ ಸುಗ್ರೀವ ಬಹುರಿ ತೇಹಿ ಮಿಲೆಊ। ಕಪಿನ್ಹ ಸಹಿತ ರಘುಪತಿ ಪಹಿಂ ಚಲೆಊ॥ ೩ ॥**
**ರಾಮ ಕಪಿನ್ಹ ಜಬ ಆವತ ದೇಖಾ। ಕಿಏಁ ಕಾಜು ಮನ ಹರಷ ಬಿಸೇಷಾ॥**
**ಫಟಿಕ ಸಿಲಾ ಬೈಠೇ ದ್ವೌ ಭಾಈ। ಪರೇ ಸಕಲ ಕಪಿ ಚರನನ್ಹಿ ಜಾಈ॥ ೪ ॥**

''ಅವರು ಸೀತೆಯ ಸುದ್ದಿ ತರದಿದ್ದರೆ ಅವರಿಗೆ ಮಧುವನದ ಹಣ್ಣು– ಮಧುವಿಗೆ ಕೈಹಾಕುವ ಧೈರ್ಯ ಬರುತ್ತಿತ್ತೇ?'' ಹೀಗೆ ಸುಗ್ರೀವನು ಯೋಚಿಸುತ್ತಿರುವಾಗಲೇ ಅಂಗದಾದಿ ವಾನರರೆಲ್ಲರೂ ಅಲ್ಲಿಗೆ ಬಂದರು. ಎಲ್ಲರೂ ಬಂದು ಸುಗ್ರೀವನ ಚರಣಗಳಿಗೆರಗಿದರು. ಕಪಿರಾಜ ಸುಗ್ರೀವನು ಎಲ್ಲರನ್ನೂ ಪ್ರೇಮದಿಂದ ಕಂಡು, ಅವರ ಯೋಗಕ್ಷೇಮವನ್ನು ವಿಚಾರಿಸಿಕೊಂಡನು. ಅವರು ಇಂತು ನುಡಿದರು– 'ಜೀಯಾ! ನಿಮ್ಮ ಚರಣದರ್ಶನದಿಂದ ನಾವೆಲ್ಲರೂ ಕುಶಲರೇ. ಶ್ರೀರಾಮನ ಅನುಗ್ರಹದಿಂದ ಹೋದ ವಿಶೇಷ ಕಾರ್ಯವು ಸಫಲವಾಯಿತು.' ಆಗ ಜಾಂಬವಂತರು ಹೇಳಿದರು– 'ಒಡೆಯಾ! ಹನುಮಂತನೇ ಎಲ್ಲ ಕಾರ್ಯವನ್ನು ಸಾಧಿಸಿ, ವಾನರರೆಲ್ಲರ ಪ್ರಾಣ ಉಳಿಸಿರುವನು.'' ಇದನ್ನು ಕೇಳುತ್ತಲೇ ಸುಗ್ರೀವನು ಆಂಜನೇಯನನ್ನು ಆಲಿಂಗಿಸಿಕೊಂಡು, ವಾನರರೆಲ್ಲರೊಡನೆ ಶ್ರೀರಘುರಾಮನಿದ್ದಲ್ಲಿಗೆ ಬಂದನು. ತನ್ನ ಕಾರ್ಯವನ್ನು ಪೂರೈಸಿಕೊಂಡು ಬಂದಿರುವ ವಾನರರನ್ನು ಕಂಡು ಶ್ರೀರಾಮಚಂದ್ರನಿಗೆ ವಿಶೇಷವಾದ ಹರ್ಷವಾಯಿತು. ಸಹೋದರರಿಬ್ಬರೂ ಗುಹೆಯ ಬಾಗಿಲಲ್ಲಿದ್ದ ಸ್ಫಟಿಕಶಿಲೆಯ ಮೇಲೆ ಕುಳಿತಿದ್ದರು. ವಾನರರೆಲ್ಲರೂ ಬಂದು ಅವರ ಚರಣಗಳಿಗೆರಗಿದರು. (ಚೌ/೧-೪)

## ಹನುಮದಾದಿಗಳು ಶ್ರೀರಾಮನಿಗೆ ಸೀತಾಸಂದೇಶವನ್ನು ತಿಳಿಸಿದುದು

**ದೋ – ಪ್ರೀತಿ ಸಹಿತ ಸಬ ಭೇಟೇ ರಘುಪತಿ ಕರುನಾ ಪುಂಜ।**
**ಪೂಂಛೀ ಕುಸಲ ನಾಥ ಅಬ ಕುಸಲ ದೇಖಿ ಪದ ಕಂಜ ॥ ೨೯ ॥**

ಕರುಣಾನಿಧಿಯಾದ ಶ್ರೀರಘುನಾಥನು ಪ್ರೇಮಪೂರ್ವಕವಾಗಿ ಅವರೆಲ್ಲರನ್ನು ಆಲಿಂಗಿಸಿ, ಆದರಿಸಿ, ಎಲ್ಲರ ಕುಶಲ ಸಮಾಚಾರವನ್ನು ಕೇಳಿದನು. ಅವರೆಲ್ಲರೂ ಹೇಳಿದರು – ''ಪ್ರಭೂ! ತಮ್ಮ ಪಾದಪದ್ಮಗಳ ದರ್ಶನದಿಂದ ನಾವೆಲ್ಲರೂ ಕ್ಷೇಮವೇ. (ದೋ/೨೯)

**ಚೌ – ಜಾಮವಂತ ಕಹ ಸುನು ರಘುರಾಯಾ। ಜಾ ಪರ ನಾಥ ಕರಹು ತುಮ್ಹ ದಾಯಾ ॥**
**ತಾಹಿ ಸದಾ ಸುಭ ಕುಸಲ ನಿರಂತರ। ಸುರ ನರ ಮುನಿ ಪ್ರಸನ್ನ ತಾ ಊಪರ ॥ ೧ ॥**
**ಸೋಇ ಬಿಜಈ ಬಿನಈ ಗುನ ಸಾಗರ। ತಾಸು ಸುಜಸು ತ್ರೈಲೋಕ ಉಜಾಗರ ॥**
**ಪ್ರಭು ಕೀಂ ಕೃಪಾ ಭಯಉ ಸಬು ಕಾಜೂ। ಜನ್ಮ ಹಮಾರ ಸುಫಲ ಭಾ ಆಜೂ ॥ ೨ ॥**
**ನಾಥ ಪವನಸುತ ಕೀನ್ಹಿ ಜೊ ಕರನೀ। ಸಹಸಹುಁ ಮುಖ ನ ಜಾಇ ಸೋ ಬರನೀ ॥**
**ಪವನತನಯ ಕೇ ಚರಿತ ಸುಹಾಏ। ಜಾಮವಂತ ರಘುಪತಿಹಿ ಸುನಾಏ ॥ ೩ ॥**
**ಸುನತ ಕೃಪಾನಿಧಿ ಮನ ಅತಿ ಭಾಏ। ಪುನಿ ಹನುಮಾನ ಹರಷಿ ಹಿಯಁ ಲಾಏ ॥**
**ಕಹಹು ತಾತ ಕೇಹಿ ಭಾಁತಿ ಜಾನಕೀ। ರಹತಿ ಕರತಿ ರಚ್ಛಾ ಸ್ವಪ್ರಾನ ಕೀ ॥ ೪ ॥**

ಜಾಂಬವಂತರು ಹೇಳಿದರು – ಪ್ರಭೂ! ರಘುನಾಥಾ! ನಿಮ್ಮ ಕೃಪೆಗೆ ಪಾತ್ರನಾದವನಿಗೆ ನಿರಂತರವೂ ಕುಶಲ, ಕಲ್ಯಾಣಗಳೇ! ಆತನ ಮೇಲೆ ಸುರ, ನರ, ಮುನಿಜನರೂ ಪ್ರಸನ್ನರಾಗಿರುತ್ತಾರೆ. ಅವನು ವಿಜಯೀ, ವಿನಯಶೀಲ, ಸದ್ಗುಣ ಸಂಪನ್ನನಾಗುವನು. ಆತನ ಸುಯಶಸ್ಸು ತ್ರೈಲೋಕ್ಯಗಳಲ್ಲಿಯೂ ಬೆಳಗುತ್ತದೆ. ಪ್ರಭುವಿನ ಕೃಪೆಯಿಂದ ಎಲ್ಲ ಕಾರ್ಯಗಳು ಸಿದ್ಧಿಸಿದವು. ಇಂದು ನಾವು ಹುಟ್ಟಿದ್ದು ಸಾರ್ಥಕವಾಯಿತು. ಸ್ವಾಮಿ! ಪವನಕುಮಾರನು ಗೈದ ಕಾರ್ಯವನ್ನು ಸಾವಿರ ಬಾಯಿಗಳಿಂದಲೂ ವರ್ಣಿಸಲು ಸಾಧ್ಯವಿಲ್ಲ. ಬಳಿಕ ಜಾಂಬವಂತರು ಹನುಮಂತನ ಅದ್ಭುತಚರಿತ್ರವನ್ನು ಶ್ರೀರಾಮನಲ್ಲಿ ನಿವೇದಿಸಿಕೊಂಡರು. ಅದನ್ನು ಕೇಳಿ, ಕೃಪಾನಿಧಿಯಾದ ಶ್ರೀರಾಮನಿಗೆ ತುಂಬಾ ಸಂತೋಷವಾಯಿತು. ಅವನು ಹರ್ಷಿತನಾಗಿ ಮತ್ತೆ-ಮತ್ತೆ ಹನುಮಂತನನ್ನು ಆಲಿಂಗಿಸಿಕೊಂಡು ಹೇಳಿದನು – ಅಯ್ಯಾ! ಸೀತೆಯು ಹೇಗಿದ್ದಾಳೆ? ತನ್ನ ಪ್ರಾಣಗಳನ್ನು ಹೇಗೆ ಉಳಿಸಿಕೊಂಡಿದ್ದಾಳೆ? ತಿಳಿಸು. (ಚೌ/೧-೪)

**ದೋ – ನಾಮ ಪಾಹರೂ ದಿವಸ ನಿಸಿ ಧ್ಯಾನ ತುಮ್ಹಾರ ಕಪಾಟ।**
**ಲೋಚನ ನಿಜ ಪದ ಜಂತ್ರಿತ ಜಾಹಿಂ ಪ್ರಾನ ಕೇಹಿಂ ಬಾಟ ॥ ೩೦ ॥**

ಪಾವಮಾನಿಯು ನುಡಿದನು– ''ಒಡೆಯಾ! ಹಗಲು ರಾತ್ರಿ ನಿಮ್ಮ ಪವಿತ್ರನಾಮವೇ ಆಕೆಯ ಪ್ರಾಣಪಂಜರವನ್ನು ಕಾಯುತ್ತಿದೆ. ನಿಮ್ಮ ಧ್ಯಾನವೇ ಪ್ರಾಣಗಳಿಗೆ ಕವಾಟವು. ಅವಳು ತನ್ನ ಕಣ್ಣುಗಳನ್ನು ತನ್ನ ಕಾಲಿನ ಮೇಲೆ ನೆಟ್ಟಿರುತ್ತಾಳೆ. ಅದೇ ಅದರ ಬೀಗವು. ಹೀಗಿರುವಾಗ ಆಕೆಯ ಪ್ರಾಣಗಳು ಹೋಗಲು ದಾರಿ ಯಾವುದಿದೇ? (ದೋ/೩೦)

**ಚೌ – ಚಲತ ಮೋಹಿ ಚೂಡಾಮನಿ ದೀನ್ಹೀ। ರಘುಪತಿ ಹೃದಯಁ ಲಾಇ ಸೋಇ ಲೀನ್ಹೀ ॥**
**ನಾಥ ಜುಗಲ ಲೋಚನ ಭರಿ ಬಾರೀ। ಬಚನ ಕಹೇ ಕಛು ಜನಕಕುಮಾರೀ ॥ ೧ ॥**

**ಅನುಜ ಸಮೇತ ಗಹೆಹು ಪ್ರಭು ಚರನಾ। ದೀನ ಬಂಧು ಪ್ರನತಾರತಿ ಹರನಾ॥**
**ಮನ ಕ್ರಮ ಬಚನ ಚರನ ಅನುರಾಗೀ। ಕೆಹಿಂ ಅಪರಾಧ ನಾಥ ಹೌಂ ತ್ಯಾಗೀ॥೨॥**
**ಅವಗುನ ಏಕ ಮೋರ ಮೈಂ ಮಾನಾ। ಬಿಛುರತ ಪ್ರಾನ ನ ಕೀನ್ಹ ಪಯಾನಾ॥**
**ನಾಥ ಸೊ ನಯನನ್ಹಿ ಕೋ ಅಪರಾಧಾ। ನಿಸರತ ಪ್ರಾನ ಕರಹಿಂ ಹಠಿ ಬಾಧಾ॥೩॥**
**ಬಿರಹ ಅಗಿನಿ ತನು ತೂಲ ಸಮೀರಾ। ಸ್ವಾಸ ಜರಇ ಛನ ಮಾಹಿಂ ಸರೀರಾ॥**
**ನಯನ ಸ್ರವಹಿಂ ಜಲು ನಿಜ ಹಿತ ಲಾಗೀ। ಜರೈಂ ನ ಪಾವ ದೇಹ ಬಿರಹಾಗೀ॥೪॥**
**ಸೀತಾ ಕೈ ಅತಿ ಬಿಪತಿ ಬಿಸಾಲಾ। ಬಿನಹಿಂ ಕಹೇಂ ಭಲಿ ದೀನದಯಾಲಾ॥೫॥**

ನಾನು ಮರಳಿ ಬರುವಾಗ ಸೀತಾಮಾತೆಯು ನನ್ನ ಬಳಿ ತನ್ನ ಚೂಡಾಮಣಿಯನ್ನು ಗುರ್ತಿಗಾಗಿ ಕೊಟ್ಟಿರುವಳು. ಶ್ರೀರಘುಪತಿಯು ಅದನ್ನು ಪಡೆದು ಎದೆಗೊತ್ತಿಕೊಂಡನು. ಹನುಮಂತನು ಮತ್ತೆ ಹೇಳಿದನು – ''ಪ್ರಭೋ! ಜಾನಕೀದೇವಿಯು ಅಶ್ರುಪೂರ್ಣನಯನಗಳಿಂದ ನನ್ನ ಬಳಿ ಕೆಲವು ಮಾತುಗಳನ್ನು ಸೋದರ ಸಹಿತ ಪ್ರಭುವಿನ ಕಾಲಿಗೆರಗಿ ಅದನ್ನು ತಿಳಿಸು ಎಂದು ಹೇಳಿರುವಳು. – ''ತಾವು ದೀನಬಂಧುಗಳೂ, ಶರಣಾಗತರ ದುಃಖಗಳನ್ನು ಕಳೆಯುವವರು. ನಾನು ತ್ರಿಕರಣಶುದ್ಧಳಾಗಿ ತಮ್ಮ ಚರಣಾನುರಾಗಿಣಿ. ಹಾಗಿರುವಾಗ ಸ್ವಾಮಿ! ತಾವು ಯಾವ ಅಪರಾಧಕ್ಕೆ ನನ್ನನ್ನು ತೊರೆದಿರಿ? 'ನಿಮ್ಮನ್ನು ಅಗಲಿದ ಕೂಡಲೇ ನನ್ನ ಪ್ರಾಣಗಳು ಹಾರಿಹೋಗಲಿಲ್ಲ' ಎಂಬ ಒಂದು ದೋಷವನ್ನು ನಾನು ಅಗತ್ಯವಾಗಿ ಒಪ್ಪಿಕೊಳ್ಳುತ್ತೇನೆ. ಆದರೆ ನಾಥಾ! ಈ ದೋಷವು ಕಣ್ಣುಗಳದ್ದು. ಅವು ನಿಮ್ಮ ದರ್ಶನಕಾಂಕ್ಷೆಯಿಂದ ಈ ಪ್ರಾಣಗಳನ್ನು ಹಟಪೂರ್ವಕ ಗಟ್ಟಿಯಾಗಿ ಹಿಡಿದಿಟ್ಟಿವೆ. ವಿರಹವೇ ಅಗ್ನಿಯು. ಶರೀರವು ಹತ್ತಿಯು. ನನ್ನ ಶ್ವಾಸಗಳೇ ಗಾಳಿಯು. ಈ ಪ್ರಕಾರ ಪವನಾಗ್ನಿಸಂಯೋಗದಿಂದ ಈ ಶರೀರವು ಕ್ಷಣಾರ್ಧದಲ್ಲಿ ಉರಿದುಹೋಗಬಲ್ಲದು. ಆದರೆ ನಿಮ್ಮನ್ನು ನೋಡಿ ಆನಂದಿಸಲೋಸುಗ ಕಣ್ಣುಗಳು ನಿರಂತರ ಅಶ್ರುಧಾರೆಯನ್ನು ಸುರಿಸುತ್ತವೆ. ಇದರಿಂದ ವಿರಹದ ಅಗ್ನಿಯು ಇದ್ದರೂ ಈ ದೇಹ ಉರಿದುಹೋಗುತ್ತಿಲ್ಲ.'' ಸೀತಾದೇವಿಗೆ ಬಂದಿರುವ ಆಪತ್ತು ದುರ್ಭರವಾದುದು. ಎಲೈ ದೀನದಯಾಳಾ! ಅದನ್ನು ಹೇಳದಿರುವುದೇ ಒಳಿತು. ಹೇಳಿದರೆ ನಿಮಗೆ ತುಂಬಾ ಕ್ಲೇಶವಾದೀತು. (ಚೌ/೧-೫)

**ದೋ – ನಿಮಿಷ ನಿಮಿಷ ಕರುನಾನಿಧಿ ಜಾಹಿಂ ಕಲಪ ಸಮ ಬೀತಿ।**
**ಬೇಗಿ ಚಲಿಅ ಪ್ರಭು ಆನಿಅ ಭುಜ ಬಲ ಖಲ ದಲ ಜೀತಿ॥೩೧॥**

''ಓ ದಯಾನಿಧೇ! ಆಕೆಯ ಒಂದೊಂದು ಕ್ಷಣವೂ ಕಲ್ಪದಂತೆ ಕಳೆಯುತ್ತದೆ. ಆದ್ದರಿಂದ ಪ್ರಭೋ! ತ್ವರಿತವಾಗಿ ಹೊರಡಿ. ತಮ್ಮ ಭುಜಬಲದಿಂದ ಆ ದುಷ್ಟ ರಾಕ್ಷಸರನ್ನು ಗೆದ್ದು, ಸೀತಾದೇವಿಯವರನ್ನು ಕರೆದು ತನ್ನಿರಿ.'' (ದೋ/೩೧)

**ಚೌ – ಸುನಿ ಸೀತಾ ದುಖ ಪ್ರಭು ಸುಖ ಅಯನಾ। ಭರಿ ಆಏ ಜಲ ರಾಜಿವ ನಯನಾ॥**
**ಬಚನ ಕಾಯ್ ಮನ ಮಮ ಗತಿ ಜಾಹೀ। ಸಪನೆಹುಁ ಬೂಝಿಅ ಬಿಪತಿ ಕಿ ತಾಹೀ॥೧॥**
**ಕಹ ಹನುಮಂತ ಬಿಪತಿ ಪ್ರಭು ಸೋಈ। ಜಬ ತವ ಸುಮಿರನ ಭಜನ ನ ಹೋಈ॥**
**ಕೇತಿಕ ಬಾತ ಪ್ರಭು ಜಾತುಧಾನ ಕೀ। ರಿಪುಹಿ ಜೀತಿ ಆನಿಬೀ ಜಾನಕೀ॥೨॥**
**ಸುನು ಕಪಿ ತೊಹಿ ಸಮಾನ ಉಪಕಾರೀ। ನಹಿಂ ಕೊಉ ಸುರ ನರ ಮುನಿ ತನುಧಾರೀ॥**
**ಪ್ರತಿ ಉಪಕಾರ ಕರೌಂ ಕಾ ತೋರಾ। ಸನಮುಖ ಹೋಇ ನ ಸಕತ ಮನ ಮೋರಾ॥೩॥**
**ಸುನು ಸುತ ತೋಹಿ ಉರಿನ ಮೈಂ ನಾಹೀಂ। ದೇಖೆಉಁ ಕರಿ ಬಿಚಾರ ಮನ ಮಾಹೀಂ॥**
**ಪುನಿ ಪುನಿ ಕಪಿಹಿ ಚಿತವ ಸುರತ್ರಾತಾ। ಲೋಚನ ನೀರ ಪುಲಕ ಅತಿ ಗಾತಾ॥೪॥**

ಸೀತಾದೇವಿಗೆ ಬಂದಿರುವ ಆಪತ್ತುಗಳನ್ನು ಕೇಳಿ, ಸುಖನಿಧಾನನಾದ ಶ್ರೀರಾಮನ ಕಮಲನೇತ್ರಗಳಲ್ಲಿ ಕಂಬನಿ ತುಂಬಿಬಂತು. ಅವನೆಂದನು – ''ಮಾರುತೀ! ತ್ರಿಕರಣಪೂರ್ವಕವಾಗಿ ನನ್ನನ್ನೇ ಆಶ್ರಯಿಸಿರುವವರಿಗೆ ಕನಸಿನಲ್ಲೂ ವಿಪತ್ತು ಬಾರದು.'' ಆಗ ಹನುಮಂತನೆಂದ – ''ಪ್ರಭೂ! ತಮ್ಮ ಸ್ಮರಣೆ, ಭಜನೆಯನ್ನು ಮರೆಯುವುದಕ್ಕಿಂತ ಹೆಚ್ಚಾದ ಬೇರೊಂದು ಆಪತ್ತು ಯಾವುದಿದೆ? ರಾಕ್ಷಸರು ನಿನಗೆ ಲೆಕ್ಕವೇ? ನೀವು ಶತ್ರುವನ್ನು ಗೆದ್ದು ಜಾನಕಿಯನ್ನು ಕರೆತರುವಿರಿ. ಬಳಿಕ ಶ್ರೀರಾಮಚಂದ್ರನು ಹೇಳಿದನು – ಹನುಮಾ! ಕೇಳು. ನನಗೆ ನಿನ್ನಂತಹ ಉಪಕಾರಿಯು ಸುರರಲ್ಲಾಗಲೀ, ನರರಲ್ಲಾಗಲೀ, ಮುನಿಗಳಲ್ಲಾಗಲೀ, ಅಥವಾ ಯಾವುದೇ ದೇಹಧಾರಿಗಳಲ್ಲಿ ಇಲ್ಲವೇ ಇಲ್ಲ. ನಾನು ನಿನ್ನ ಉಪಕಾರಕ್ಕೆ ಬದಲಾಗಿ ಏನನ್ನು ನೀಡಲಿ. ನನ್ನ ಮನಸ್ಸೂ ಕೂಡ ನಿನ್ನ ಮುಂದೆ

ಬರಲು ಅಂಜುತ್ತದೆ. ನಿನ್ನ ಋಣದಿಂದ ನಾನು ಮುಕ್ತನಾಗುವುದು ಅಶಕ್ಯವೆಂದು ಮನಸ್ಸಿನಲ್ಲಿ ಚೆನ್ನಾಗಿಯೋಚನೆಮಾಡಿ ನೋಡಿದೆ. ಸುರತ್ರಾಣವಾದ ಪ್ರಭುವು ಹನುಮಂತನನ್ನು ಮತ್ತೆ-ಮತ್ತೆ ವೀಕ್ಷಿಸುತ್ತಿದ್ದ. ಆತನ ಕಣ್ಣುಗಳಲ್ಲಿ ಪ್ರೇಮಾಂಬು ತುಂಬಿಬಂದವು. ಶರೀರ ಪುಳಕಗೊಂಡಿತು. (ಚೌ/೧-೪)

**ದೋ – ಸುನಿ ಪ್ರಭು ಬಚನ ಬಿಲೋಕಿ ಮುಖ ಗಾತ ಹರಷಿ ಹನುಮಂತ।**
**ಚರನ ಪರೆಉ ಪ್ರೇಮಾಕುಲ ತ್ರಾಹಿ ತ್ರಾಹಿ ಭಗವಂತ ॥ ೩೨ ॥**

ಪ್ರಭುವಿನ ವಚನವನ್ನು ಕೇಳಿ, ಅವನ ಪ್ರಸನ್ನ ಮುಖವನ್ನು ಹಾಗೂ ಪುಳಕಿತಗಾತ್ರವನ್ನು ನೋಡಿ ಹನುಮಂತನು ಹಿಗ್ಗಿಹೋದನು. ಪ್ರೇಮವಿಕಲನಾಗಿ ಅವನು – ''ಭಗವಂತಾ! ನನ್ನನ್ನು ಕಾಪಾಡು! ಕಾಪಾಡು! ಎಂದು ಹೇಳುತ್ತಾ ಶ್ರೀರಾಮನ ಚರಣಗಳಲ್ಲಿ ಕುಸಿದನು. (ದೋ/೩೨)

**ಚೌ – ಬಾರ ಬಾರ ಪ್ರಭು ಚಹಇ ಉಠಾವಾ। ಪ್ರೇಮ ಮಗನ ತೆಹಿ ಉಠಬ ನ ಭಾವಾ ॥**
**ಪ್ರಭು ಕರ ಪಂಕಜ ಕಪಿ ಕೇँ ಸೀಸಾ । ಸುಮಿರಿ ಸೊ ದಸಾ ಮಗನ ಗೌರೀಸಾ ॥ ೧ ॥**
**ಸಾವಧಾನ ಮನ ಕರಿ ಪುನಿ ಸಂಕರ । ಲಾಗೇ ಕಹನ ಕಥಾ ಅತಿ ಸುಂದರ ॥**
**ಕಪಿ ಉಠಾಇ ಪ್ರಭು ಹೃದಯँ ಲಗಾವಾ । ಕರ ಗಹಿ ಪರಮ ನಿಕಟ ಬೈಠಾವಾ ॥ ೨ ॥**
**ಕಹು ಕಪಿ ರಾವನ ಪಾಲಿತ ಲಂಕಾ । ಕೆಹಿ ಬಿಧಿ ದಹೆಉ ದುರ್ಗ ಅತಿ ಬಂಕಾ ॥**
**ಪ್ರಭು ಪ್ರಸನ್ನ ಜಾನಾ ಹನುಮಾನಾ । ಬೋಲಾ ಬಚನ ಬಿಗತ ಅಭಿಮಾನಾ ॥ ೩ ॥**
**ಸಾಖಾಮೃಗ ಕೈ ಬಡಿ ಮನುಸಾಈ । ಸಾಖಾ ತೇँ ಸಾಖಾ ಪರ ಜಾಈ ॥**
**ನಾಘಿ ಸಿಂಧು ಹಾಟಕಪುರ ಜಾರಾ । ನಿಸಿಚರ ಗನ ಬಧಿ ಬಿಪಿನ ಉಜಾರಾ ॥ ೪ ॥**
**ಸೋ ಸಬ ತವ ಪ್ರತಾಪ ರಘುರಾಈ । ನಾಥ ನ ಕಛೂ ಮೋರಿ ಪ್ರಭುತಾಈ ॥ ೫ ॥**

ಪ್ರಭುವು ಆತನನ್ನು ಮತ್ತೆ-ಮತ್ತೆ ಮೇಲೆತ್ತಲೆಳಸಿದನು. ಆದರೆ ಪ್ರೇಮಪರವಶನಾದ ಹನುಮಂತನಿಗೆ ಸ್ವಾಮಿಯ ಚರಣಗಳನ್ನು ಬಿಡಲು ಮನಸ್ಸಿಲ್ಲ. ಪ್ರಭುವಿನ ಕರಕಮಲಗಳು ಮಾರುತಿಯ ತಲೆಯಮೇಲಿದೆ. ಈ ಸ್ಥಿತಿಯನ್ನು ನೆನೆನೆನೆದು ಶಿವನು ಪ್ರೇಮದಲ್ಲಿ ಮುಳುಗಿಹೋದನು. (ಶ್ರೀರಾಮನನ್ನು ಸೇವಿಸಲು ಶಿವನೇ ಹನುಮಂತನಾಗಿ ಅವತರಿಸಿದ್ದನಲ್ಲ!) ಅನಂತರ ತನ್ನ ಮನಸ್ಸನ್ನು ಸಮಾಧಾನಗೊಳಿಸಿ ಶಂಕರನು ಅತ್ಯಂತಮನೋಜ್ಞವಾದ ಶ್ರೀರಾಮಚರಿತ್ರವನ್ನು ಮುಂದುವರಿಸಿದನು – ಹನುಮಂತನನ್ನು ಒತ್ತಾಯದಿಂದ ಮೇಲಕ್ಕೆತ್ತಿ ಆಲಿಂಗಿಸಿಕೊಂಡು ಪ್ರಭುವು ಆತನ ಕೈ ಹಿಡಿದುಕೊಂಡು ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡು ಕೇಳಿದನು – ''ಹನುಮಾ! ರಾವಣನಿಂದ ಪಾಲಿತವಾದ ಲಂಕೆಯನ್ನು, ಅದರ ದುರ್ಗಮ ದುರ್ಗವನ್ನು ನೀನು ಹೇಗೆ ಸುಟ್ಟುಬಿಟ್ಟೆ, ಹೇಳು! ಪ್ರಭುವು ಅತೀವ ಪ್ರಸನ್ನನಾಗಿರುವುದನ್ನು ಕಂಡು ಆಂಜನೇಯನು ನಿರಭಿಮಾನದಿಂದ ಹೇಳತೊಡಗಿದನು – ರಘುನಾಥಾ! ಒಂದು ಕೊಂಬೆಯಿಂದ ಮತ್ತೊಂದು ಕೊಂಬೆಗೆ ಹಾರುವುದು ವಾನರರಿಗೆ ಸಹಜವೇ. ಆದರೆ ಸಮುದ್ರವನ್ನು ದಾಟಿದುದು, ಸ್ವರ್ಣಲಂಕೆಯನ್ನು ಸುಟ್ಟುಹಾಕಿದ್ದು, ರಕ್ಕಸರನ್ನು ಕೊಂದುದು, ಅಶೋಕವನವನ್ನು ಹಾಳುಗೆಡಹಿದುದು. ಇವೆಲ್ಲ ನಿಮ್ಮ ಅನುಗ್ರಹ ಪ್ರಭಾವವೇ. ಸ್ವಾಮಿ! ಇದರಲ್ಲಿ ನನ್ನ ಹಿರಿತನ ಏನೂ ಇಲ್ಲ. (ಚೌ/೧-೫)

**ದೋ – ತಾ ಕಹುँ ಪ್ರಭು ಕಛು ಅಗಮ ನಹಿँ ಜಾ ಪರ ತುಮ್ಹ ಅನುಕೂಲ।**
**ತವ ಪ್ರಭಾವँ ಬಡವಾನಲಹಿ ಜಾರಿ ಸಕಇ ಖಲು ತೂಲ ॥ ೩೩ ॥**

ಪ್ರಭೋ! ನಿನ್ನ ಕೃಪೆಗೆ ಪಾತ್ರರಾದವರಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ನಿಮ್ಮ ಪ್ರಭಾವದಿಂದ ಸ್ವತಃ ತಾನೇ ಉರಿದುಹೋಗುವ ಹತ್ತಿಯೂ ಕೂಡ ಸಮುದ್ರದಲ್ಲಿನ ವಡವಾನಲವನ್ನೇ ಸುಟ್ಟುಬಿಟ್ಟೀತು. (ಅಸಂಭವವೂ ಕೂಡ ಸಂಭವಿಸಬಹುದು.) (ದೋ/೩೩)

**ಚೌ – ನಾಥ ಭಗತಿ ಅತಿ ಸುಖದಾಯಿನೀ। ದೇಹು ಕೃಪಾ ಕರಿ ಅನಪಾಯನೀ ॥**
**ಸುನಿ ಪ್ರಭು ಪರಮ ಸರಲ ಕಪಿ ಬಾನೀ। ಏವಮಸ್ತು ತಬ ಕಹೆಉ ಭವಾನೀ ॥ ೧ ॥**
**ಉಮಾ ರಾಮ ಸುಭಾಉ ಜೆಹಿँ ಜಾನಾ। ತಾಹಿ ಭಜನು ತಜಿ ಭಾವ ನ ಆನಾ ॥**
**ಯಹ ಸಂಬಾದ ಜಾಸು ಉರ ಆವಾ । ರಘುಪತಿ ಚರನ ಭಗತಿ ಸೋಇ ಪಾವಾ ॥ ೨ ॥**
**ಸುನಿ ಪ್ರಭು ಬಚನ ಕಹಹಿँ ಕಪಿಬೃಂದಾ । ಜಯ ಜಯ ಜಯ ಕೃಪಾಲ ಸುಖಕಂದಾ ॥**
**ತಬ ರಘುಪತಿ ಕಪಿಪತಿಹಿ ಬೊಲಾವಾ। ಕಹಾ ಚಲೈँ ಕರ ಕರಹು ಬನಾವಾ ॥ ೩ ॥**

**ಅಬ ಬಿಲಂಬು ಕೇಹಿ ಕಾರನ ಕೀಜೇ। ತುರತ ಕಪಿನ್ಹ ಕಹುँ ಆಯಸು ದೀಜೇ॥**
**ಕೌತುಕ ದೇಖಿ ಸುಮನ ಬಹು ಬರಷೀ। ನಭ ತೇँ ಭವನ ಚಲೇ ಸುರ ಹರಷೀ॥೪॥**

ಸ್ವಾಮಿ! ನಿಮ್ಮ ಮೇಲೆ ನನಗೆ ಅತ್ಯಂತ ಸುಖದಾಯಕವಾದ ನಿಶ್ಚಲಭಕ್ತಿಯನ್ನು ದಯಮಾಡಿ ಕರುಣಿಸಿರಿ. ಭವಾನೀ! ವಾಯುಸುತನ ಅತ್ಯಂತ ಸರಳವಾಣಿಯನ್ನು ಕೇಳಿ ಪ್ರಭು ಶ್ರೀರಾಮಚಂದ್ರನು 'ಏವಮಸ್ತು' (ಹಾಗೇ ಆಗಲಿ) ಎಂದು ಆಶೀರ್ವದಿಸಿದನು. ಉಮಾ! ಶ್ರೀರಾಮನ ಸ್ವಭಾವವನ್ನು ಬಲ್ಲವರಿಗೆ ಭಜನೆಯನ್ನುಳಿದು ಬೇರಾವುದೂ ಹಿಡಿಸದು. ಈ ಸ್ವಾಮಿ ಸೇವಕರ ಸಂಭಾಷಣೆಯನ್ನು ಸ್ಮರಿಸಿದವರಿಗೆ ಪ್ರಭು ಚರಣಗಳಲ್ಲಿ ಭಕ್ತಿಯು ತಪ್ಪದೇ ಉಂಟಾಗುತ್ತದೆ. ಪ್ರಭುವಚನವನ್ನು ಕೇಳಿದ ವಾನರಗಡಣವು ಹೇಳಿತು – ಕೃಪಾಳು, ಆನಂದಕಂದ ಶ್ರೀರಾಮಚಂದ್ರನಿಗೆ ಜಯವಾಗಲೀ! ಜಯ ಜಯವಾಗಲೀ!! ಆಗ ಶ್ರೀರಘುನಾಥನು ಕಪಿರಾಜ ಸುಗ್ರೀವನನ್ನು ಕರೆದು ಹೇಳಿದನು – ''ಲಂಕೆಗೆ ಹೋಗಲು ಏರ್ಪಾಟುಗಳನ್ನು ಮಾಡು. ಇನ್ನೇಕೆ ತಡ? ಕೂಡಲೇ ವಾನರರಿಗೆ ಅಪ್ಪಣೆ ಮಾಡು.'' ಭಗವಂತನ ಈ ಲೀಲೆಯನ್ನು ಕಂಡು ದೇವತೆಗಳು ಆಕಾಶದಿಂದ ಹೂಮಳೆಗರೆದು, ತಮ್ಮ-ತಮ್ಮ ಲೋಕಗಳಿಗೆ ತೆರಳಿದರು. (ಚೌ/೧-೪)

## ಸಮರ ಸನ್ನಾಹ

**ದೋ – ಕಪಿಪತಿ ಬೇಗಿ ಬೊಲಾಏ ಆಏ ಜೂಥಪ ಜೂಥ।**
**ನಾನಾ ಬರನ ಅತುಲ ಬಲ ಬಾನರ ಭಾಲು ಬರೂಥ॥೩೪॥**

ಕೂಡಲೇ ಕಪಿರಾಜ ಸುಗ್ರೀವನು ತನ್ನ ಸೇನಾಪತಿಗಳನ್ನು ಕರೆಸಿದನು. ವಿವಿಧ ಬಣ್ಣಗಳಿಂದ ಕೂಡಿದ, ಅಪಾರ ಬಲಸಂಪನ್ನರಾದ ವಾನರ ಭಲ್ಲೂಕಗಳ ಸಮೂಹಗಳು ಬಂದವು. (ದೋ/೩೪)

**ಚೌ – ಪ್ರಭು ಪದ ಪಂಕಜ ನಾವಹಿं ಸೀಸಾ। ಗರ್ಜಹಿं ಭಾಲು ಮಹಾಬಲ ಕೀಸಾ॥**
**ದೇಖೀ ರಾಮು ಸಕಲ ಕಪಿ ಸೇನಾ। ಚಿತಇ ಕೃಪಾ ಕರಿ ರಾಜಿವ ನೈನಾ॥೧॥**
**ರಾಮ ಕೃಪಾ ಬಲ ಪಾಇ ಕಪಿಂದಾ। ಭಏ ಪಚ್ಛಜುತ ಮನಹುँ ಗಿರಿಂದಾ॥**
**ಹರಷಿ ರಾಮ ತಬ ಕೀನ್ಹ ಪಯಾನಾ। ಸಗುನ ಭಏ ಸುಂದರ ಸುಭ ನಾನಾ॥೨॥**
**ಜಾಸು ಸಕಲ ಮಂಗಲಮಯ ಕೀತೀ। ತಾಸು ಪಯಾನ ಸಗುನ ಯಹ ನೀತೀ॥**
**ಪ್ರಭು ಪಯಾನ ಜಾನಾ ಬೈದೇಹೀं। ಫರಕಿ ಬಾಮ ಅँಗ ಜನು ಕಹಿ ದೇಹೀं॥೩॥**
**ಜೋಇ ಜೋಇ ಸಗುನ ಜಾನಕಿಹಿ ಹೋಈ। ಅಸಗುನ ಭಯಉ ರಾವನಹಿ ಸೋಈ॥**
**ಚಲಾ ಕಟಕು ಕೋ ಬರನೈं ಪಾರಾ। ಗರ್ಜಹಿं ಬಾನರ ಭಾಲು ಅಪಾರಾ॥೪॥**
**ನಖ ಆಯುಧ ಗಿರಿ ಪಾದಪಧಾರೀ। ಚಲೇ ಗಗನ ಮಹಿ ಇಚ್ಛಾಚಾರೀ॥**
**ಕೇಹರಿನಾದ ಭಾಲು ಕಪಿ ಕರಹೀं। ಡಗಮಗಾಹಿं ದಿಗ್ಗಜ ಚಿಕ್ಕರಹೀं॥೫॥**

ಆ ವಾನರ ಭಲ್ಲೂಕ ಸೈನಿಕರು ಶ್ರೀರಾಮಚಂದ್ರನ ಚರಣಕಮಲಗಳಿಗೆ ನಮಸ್ಕರಿಸಿದರು. ಮಹಾಬಲರಾದ ಅವರು ಹುಂಕಾರಮಾಡುವರು. ಶ್ರೀರಾಮನು ಆ ಕಪಿಕಟಕವನ್ನು ನೋಡಿದನು. ತನ್ನ ರಾಜೀವನಯನಗಳಿಂದ ಅವರತ್ತ ಕೃಪಾದೃಷ್ಟಿಯನ್ನು ಬೀರಿದನು. ಶ್ರೀರಾಮನ ಕೃಪಾಬಲವನ್ನು ಪಡೆದ ವಾನರರು ರೆಕ್ಕೆಗಳು ಮೂಡಿದ ಮಹಾಪರ್ವತಗಳಂತಾದರು. ಆಗ ಶ್ರೀರಾಮಚಂದ್ರನು ಹರ್ಷಿತನಾಗಿ ಪ್ರಯಾಣ ಬೆಳೆಸಿದನು. ಅನೇಕ ಶುಭಶಕುನಗಳು ಇದಿರಾದವು. ಯಾರ ಕೀರ್ತಿಯು ಸರ್ವ ಮಂಗಳಮಯವೋ, ಅಂತಹವನ ಪ್ರಯಾಣವೇಳೆಯಲ್ಲಿ ಶುಭಶಕುನಗಳಾಗುವುದು ಸಹಜವೇ. ಪ್ರಭುವಿನ ಪ್ರಸ್ಥಾನವು ಜಾನಕಿಯ ವಾಮಾಂಗವು ಅದುರಿದುದರಿಂದ ಅವಳಿಗೆ ಸಾರಿ ಹೇಳುವಂತಿತ್ತು. ಜಾನಕಿಗೆ ಶುಭಶಕುನಗಳಾದಂತೆ ರಾವಣನಿಗೆ ಅಪಶಕುನಗಳಾದವು. ಸೇನೆಯು ಮುಂದುವರಿಯುವುದನ್ನು ಯಾರು ವರ್ಣಿಸಬಲ್ಲರು? ಅಸಂಖ್ಯ ವಾನರ, ಭಲ್ಲೂಕವೀರರು ಭಯಂಕರವಾಗಿ ಗರ್ಜಿಸುತ್ತಿದ್ದರು. ಈ ವಾನರ, ಭಲ್ಲೂಕಗಳಿಗೆ ನಖಗಳೇ ಆಯುಧಗಳು. ಈ ಭಲ್ಲೂಕ, ವಾನರವೀರರೂ ವೃಕ್ಷಗಳನ್ನು, ಪರ್ವತಗಳನ್ನು ಹೊತ್ತುಕೊಂಡು, ಕೆಲವರು ಆಕಾಶಮಾರ್ಗದಿಂದಲೂ ಕೆಲವರು ಭೂಮಾರ್ಗದಿಂದಲೂ ಹೋಗುತ್ತಿದ್ದರು. ಅವರು ಸಿಂಹದಂತೆ ಗರ್ಜಿಸುತ್ತಿದ್ದರು. ಅವರ ಚಲನೆಯಿಂದ, ಗರ್ಜನೆಯಿಂದ ದಿಗ್ಗಜಗಳು ಚಲವಿಚಲಿತರಾಗಿ ಘೀಳಿಡುತ್ತಿದ್ದವು. (ಚೌ/೧-೫)

ಛಂ – ಚಿಕ್ಕರಹಿಂ ದಿಗ್ಗಜ ಡೋಲ ಮಹಿ ಗಿರಿ ಲೋಲ ಸಾಗರ ಖರಭರೇ।
ಮನ ಹರಷ ಸಬ ಗಂಧರ್ಬ ಸುರ ಮುನಿ ನಾಗ ಕಿನ್ನರ ದುಖ ಟರೇ॥
ಕಟಕಟಹಿಂ ಮರ್ಕಟ ಬಿಕಟ ಭಟ ಬಹು ಕೋಟಿ ಕೋಟಿನ್ಹ ಧಾವಹೀಂ।
ಜಯ ರಾಮ ಪ್ರಬಲ ಪ್ರತಾಪ ಕೋಸಲನಾಥ ಗುನ ಗನ ಗಾವಹೀಂ॥ ೧ ॥
ಸಹಿ ಸಕ ನ ಭಾರ ಉದಾರ ಅಹಿಪತಿ ಬಾರ ಬಾರಹಿಂ ಮೋಹಈ।
ಗಹ ದಸನ ಪುನಿ ಪುನಿ ಕಮಠ ಪೃಷ್ಟ ಕಠೋರ ಸೋ ಕಿಮಿ ಸೋಹಈ॥
ರಘುಬೀರ ರುಚಿರ ಪ್ರಯಾನ ಪ್ರಸ್ಥಿತಿ ಜಾನಿ ಪರಮ ಸುಹಾವನೀ।
ಜನು ಕಮಠ ಖರ್ಪರ ಸರ್ಪರಾಜ ಸೋ ಲಿಖತ ಅಬಿಚಲ ಪಾವನೀ॥ ೨ ॥

ದಿಗ್ಗಜಗಳು ಘೀಳಿಡುತ್ತಿದ್ದವು. ಭೂಮಿ ಅಲುಗಾಡತೊಡಗಿತು. ಪರ್ವತಗಳು ಚಲಿಸಿದವು. ಸಮುದ್ರವು ಅಲ್ಲೋಲಕಲ್ಲೋಲವಾಯಿತು. ಗಂಧರ್ವರೂ, ಸುರರು, ನರರು, ಮುನಿಗಳು, ನಾಗಗಳೂ, ಕಿನ್ನರರೂ ಇವರೆಲ್ಲರೂ ತಮ್ಮ ದುಃಖ ತೊಲಗಿತು ಎಂದು ಹರ್ಷಿತರಾದರು. ಕೋಟಿ-ಕೋಟಿ ವಿಕಟ ಮರ್ಕಟ ಭಟರು ಗರ್ಜಿಸುತ್ತಾ ಧಾವಿಸುತ್ತಿದ್ದರು. ''ಬಲಶಾಲಿಯೂ, ಪ್ರತಾಪಶಾಲಿಯೂ ಆದ ಶ್ರೀರಾಮಚಂದ್ರನಿಗೆ ಜಯವಾಗಲಿ'' ಎಂದು ಎಲ್ಲರೂ ಕೂಗುತ್ತಾ, ಅವನ ಗುಣಗಳನ್ನು ಹಾಡುತ್ತಿದ್ದರು. ॥೧॥ ಸರ್ವಶ್ರೇಷ್ಠನೂ, ಸರ್ಪಾಧಿಪತಿಯಾದ ಆದಿಶೇಷನೂ ಕೂಡ ಆ ಸೈನ್ಯಭಾರವನ್ನು ತಡೆಯಲಾರದೇ ಹೋದನು. ಅವನು ಮತ್ತೆ-ಮತ್ತೆ ವಿಹ್ವಲನಾಗುತ್ತಿದ್ದನು. ಪುನಃ-ಪುನಃ ಕೂರ್ಮನ ಕಠೋರವಾದ ಬೆನ್ನನ್ನು ಹಲ್ಲಿನಿಂದ ಹಿಡಿದುಕೊಳ್ಳುತ್ತಿದ್ದನು. ಹೀಗೆ ಮಾಡುವಾಗ ಆತನು ಶ್ರೀರಾಮಚಂದ್ರನ ಸುಂದರ ಪ್ರಸ್ಥಾನಯಾತ್ರೆಯ ಪವಿತ್ರಕಥೆಯನ್ನು ಆದಿಕೂರ್ಮನ ಬೆನ್ನಿನಮೇಲೆ ಬರೆಯುತ್ತಿರುವನೋ ಎನ್ನುವಂತಿತ್ತು. ॥೨॥ (ಛಂ/೧-೨)

ದೋ – ಏಹಿ ಬಿಧಿ ಜಾಇ ಕೃಪಾನಿಧಿ ಉತರೇ ಸಾಗರ ತೀರ।
ಜಹಂ ತಹಂ ಲಾಗೇ ಖಾನ ಫಲ ಭಾಲು ಬಿಪುಲ ಕಪಿ ಬೀರ॥ ೩೫ ॥

ಈ ವಿಧವಾಗಿ ಪ್ರಯಾಣಬೆಳೆಸಿ ಕೃಪಾನಿಧಾನನಾದ ಶ್ರೀರಾಮನು ಸಮುದ್ರತೀರವನ್ನು ಸೇರಿದನು. ಅಸಂಖ್ಯಾತ ವಾನರ ಭಲ್ಲೂಕವೀರರು ಅಲ್ಲಲ್ಲಿ ಹಣ್ಣು-ಹಂಪಲು ತಿನ್ನತೊಡಗಿದರು. (ದೋ/೩೫)

## ಮಂಡೋದರಿ ರಾವಣ ಸಂವಾದ

ಚೌ – ಉಹಾಂ ನಿಸಾಚರ ರಹಹಿಂ ಸಸಂಕಾ। ಜಬ ತೇಂ ಜಾರಿ ಗಯಉ ಕಪಿ ಲಂಕಾ॥
ನಿಜ ನಿಜ ಗೃಹಂ ಸಬ ಕರಹಿಂ ಬಿಚಾರಾ। ನಹಿಂ ನಿಸಿಚರ ಕುಲ ಕೇರ ಉಬಾರಾ॥ ೧ ॥
ಜಾಸು ದೂತ ಬಲ ಬರನಿ ನ ಜಾಈ। ತೆಹಿ ಆಏಂ ಪುರ ಕವನ ಭಲಾಈ॥
ದೂತಿನ್ಹ ಸನ ಸುನಿ ಪುರಜನ ಬಾನೀ। ಮಂದೋದರೀ ಅಧಿಕ ಅಕುಲಾನೀ॥ ೨ ॥
ರಹಸಿ ಜೋರಿ ಕರ ಪತಿ ಪಗ ಲಾಗೀ। ಬೋಲೀ ಬಚನ ನೀತಿ ರಸ ಪಾಗೀ॥
ಕಂತ ಕರಷ ಹರಿ ಸನ ಪರಿಹರಹೂ। ಮೋರ ಕಹಾ ಅತಿ ಹಿತ ಹಿಯಂ ಧರಹೂ॥ ೩ ॥
ಸಮುಝುತ ಜಾಸು ದೂತ ಕಇ ಕರನೀ। ಸ್ರವಹಿಂ ಗರ್ಭ ರಜನೀಚರ ಘರನೀ॥
ತಾಸು ನಾರಿ ನಿಜ ಸಚಿವ ಬೊಲಾಈ। ಪಠವಹು ಕಂತ ಜೊ ಚಹಹು ಭಲಾಈ॥ ೪ ॥
ತವ ಕುಲ ಕಮಲ ಬಿಪಿನ ದುಖದಾಈ। ಸೀತಾ ಸೀತ ನಿಸಾ ಸಮ ಆಈ॥
ಸುನಹು ನಾಥ ಸೀತಾ ಬಿನು ದೀನ್ಹೆಂ। ಹಿತ ನ ತುಮ್ಹಾರ ಸಂಭು ಅಜ ಕೀನ್ಹೆಂ॥ ೫ ॥

ಹನುಮಂತನು ಲಂಕೆಯನ್ನು ಸುಟ್ಟುಹೋದಂದಿನಿಂದ ಅಲ್ಲಿಯ ರಕ್ಕಸರನ್ನು ಭಯವು ಕಾಡತೊಡಗಿತು. 'ಇನ್ನು ರಕ್ಕಸ ಕುಲಕ್ಕೆ ಉಳಿವಿಲ್ಲ' ಎಂದು ಅವರು ತಮ್ಮ-ತಮ್ಮ ಮನೆಗಳಲ್ಲಿ ಮಾತನಾಡಿಕೊಳ್ಳುತ್ತಿದ್ದರು. ಯಾರ ದೂತನ ಬಲವೇ ವರ್ಣನಾತೀತವೋ ಆತನೇ ಸ್ವತಃ ಬಂದುಬಿಟ್ಟರೆ ನಮಗೆ ಉಳಿತೆಲ್ಲಿ? ದೂತಿಯರಿಂದ ನಗರವಾಸಿಗಳ ಮಾತುಗಳನ್ನು ಕೇಳಿ ಮಂಡೋದರಿಯು ತುಂಬಾ ವ್ಯಾಕುಲಳಾದಳು. ಅವಳು ಏಕಾಂತದಲ್ಲಿ ರಾವಣನನ್ನು ಕಂಡು ಅವನ ಚರಣಗಳಿಗೆರಗಿ, ನೀತಿಯುಕ್ತ ವಚನಗಳನ್ನಾಡಿದಳು – ಪ್ರಾಣೇಶ್ವರಾ! ಹರಿವಿರೋಧವನ್ನು ತೊರೆಯಿರಿ. ನನ್ನ ಮಾತನ್ನು ಅತ್ಯಂತ ಹಿತಕರವೆಂದು ಬಗೆದು ಮನಸ್ಸಿಗೆ ತಂದುಕೊಳ್ಳಿರಿ.

ಯಾರ ದೂತನ ಕೃತ್ಯಗಳನ್ನು ನೆನೆದರೇನೇ ರಕ್ಕಸನಾರಿಯರ ಗರ್ಭಪಾತವಾಗುತ್ತದೋ ಅಂತಹವನ ವೈರ ಹಿತವಲ್ಲ. ನಿಜವಾಗಿ ನಮ್ಮ ಕ್ಷೇಮವನ್ನು ನೀವು ಬಯಸುವಿರಾದರೆ ಮಂತ್ರಿಯನ್ನು ಕರೆಸಿ, ಆವನ ಸಂಗಡ ಶ್ರೀರಾಮನ ಧರ್ಮಪತ್ನಿಯನ್ನು ಅವನ ಬಳಿಗೆ ಕಳಿಸಿಕೊಡಿರಿ. ರಾಕ್ಷಸರ ಕುಲರೂಪೀ ಕಮಲವನಕ್ಕೆ ಶೀತನಿಶಿಯಂತೆ ಸೀತೆಯು ಇಲ್ಲಿಗೆ ಬಂದಿರುವಳು. ನಾಥಾ! ಸೀತೆಯನ್ನು ತಿರುಗಿ ಒಪ್ಪಿಸದಿದ್ದರೆ ಬ್ರಹ್ಮರುದ್ರಾದಿಗಳೂ ಕೂಡ ನಿಮ್ಮನ್ನು ರಕ್ಷಿಸಲಾರರು. (ಚೌ/೧-೫)

**ದೋ – ರಾಮ ಬಾನ ಅಹಿ ಗನ ಸರಿಸ ನಿಕರ ನಿಸಾಚರ ಭೇಕ ।**
**ಜಬ ಲಗಿ ಗ್ರಸತ ನ ತಬ ಲಗಿ ಜತನು ಕರಹು ತಜಿ ಟೇಕ ॥ ೩೬ ॥**

ಶ್ರೀರಾಮನ ಬಾಣಗಳು ಸರ್ಪದಂತಿದ್ದರೆ, ನಮ್ಮ ರಾಕ್ಷಸರ ಸಮೂಹವು ಕಪ್ಪೆಗಳಂತಿದ್ದಾರೆ. ಆ ಹಾವುಗಳು ಈ ಕಪ್ಪೆಗಳನ್ನು ನುಂಗುವ ಮೊದಲೇ ಛಲವನ್ನು ತೊರೆದು ಇವರನ್ನು ರಕ್ಷಿಸುವ ಉಪಾಯವನ್ನು ಮಾಡಿರಿ. (ದೋ/೩೬)

**ಚೌ – ಶ್ರವನ ಸುನೀ ಸಠ ತಾ ಕರಿ ಬಾನೀ । ಬಿಹಸಾ ಜಗತ ಬಿದಿತ ಅಭಿಮಾನೀ ॥**
**ಸಭಯ ಸುಭಾಉ ನಾರಿ ಕರ ಸಾಚಾ । ಮಂಗಲ ಮಹುँ ಭಯ ಮನ ಅತಿ ಕಾಚಾ ॥ ೧ ॥**
**ಜೌँ ಆವಇ ಮರ್ಕಟ ಕಟಕಾಈ । ಜಿಅಹಿँ ಬಿಚಾರೇ ನಿಸಿಚರ ಖಾಈ ॥**
**ಕಂಪಹಿँ ಲೋಕಪ ಜಾಕೀँ ತ್ರಾಸಾ । ತಾಸು ನಾರಿ ಸಭೀತ ಬಡ಼ಿ ಹಾಸಾ ॥ ೨ ॥**
**ಅಸ ಕಹಿ ಬಿಹಸಿ ತಾಹಿ ಉರ ಲಾಈ । ಚಲೆಉ ಸಭಾँ ಮಮತಾ ಅಧಿಕಾಈ ॥**
**ಮಂದೋದರೀ ಹೃದಯँ ಕರ ಚಿಂತಾ । ಭಯಉ ಕಂತ ಪರ ಬಿಧಿ ಬಿಪರೀತಾ ॥ ೩ ॥**
**ಬೈಠೆಉ ಸಭಾँ ಖಬರಿ ಅಸಿ ಪಾಈ । ಸಿಂಧು ಪಾರ ಸೇನಾ ಸಬ ಆಈ ॥**
**ಬೂಝೆಸಿ ಸಚಿವ ಉಚಿತ ಮತ ಕಹಹೂ । ತೇ ಸಬ ಹँಸೇ ಮಷ್ಟ ಕರಿ ರಹಹೂ ॥ ೪ ॥**
**ಜಿತೆಹು ಸುರಾಸುರ ತಬ ಶ್ರಮ ನಾಹೀँ । ನರ ಬಾನರ ಕೆಹಿ ಲೇಖೇ ಮಾಹೀँ ॥ ೫ ॥**

ಮೂರ್ಖನೂ, ಜಗತ್ಪ್ರಸಿದ್ಧ ದುರಭಿಮಾನಿಯೂ ಆದ ರಾವಣನು ಮಂಡೋದರಿಯ ಮಾತನ್ನು ಕಿವಿಯಾರೆ ಕೇಳಿ, ಮನಸಾರೆ ನಕ್ಕುಬಿಟ್ಟನು. ಮತ್ತೆ ಹೇಳಿದನು – ''ಸ್ತ್ರೀಯರು ಪುಕ್ಕಲು ಸ್ವಭಾವದವರು ಎಂಬುದು ದಿಟ. ಮಂಗಳದಲ್ಲಿಯೂ ನಿನಗೆ ಭಯವೇ ಕಾಣುವುದಲ್ಲ! ನಿನ್ನ ಹೃದಯ ತುಂಬಾ ದುರ್ಬಲವಾದುದು. ವಾನರಸೇನೆ ಇಲ್ಲಿಗೆ ಬಂದರೆ ನಮ್ಮ ರಾಕ್ಷಸರು ತಿಂದು ತೇಗುವರು. ತ್ರಿಲೋಕದಲ್ಲಣನಾದ ರಾವಣನ ಮಡದಿಯಾಗಿ ನೀನು ಅಂಜುಕುಳಿಯಾಗಿರುವುದು ನಿಜಕ್ಕೂ ಹಾಸ್ಯಾಸ್ಪದವೇ.'' ಹೀಗೆ ಹೇಳಿ ರಾವಣನು ಅವಳನ್ನು ಆಲಿಂಗಿಸಿಕೊಂಡು, ವಿಶೇಷ ಪ್ರೀತಿಯನ್ನು ತೋರಿ, ಸಭಾಸ್ಥಾನಕ್ಕೆ ಹೊರಟುಹೋದನು. 'ವಿಧಿಯು ತನ್ನ ಪತಿಗೆ ಪ್ರತಿಕೂಲವಾಗಿದೆ' ಎಂದು ಮಂಡೋದರಿಯು ಚಿಂತಿಸತೊಡಗಿದಳು. ರಾವಣನು ಸಭೆಯಲ್ಲಿ ಆಸೀನನಾಗುತ್ತಿರುವಂತೆ ಶತ್ರುಸೈನ್ಯವು ಸಮುದ್ರದ ಆಚೆಯ ತೀರಕ್ಕೆ ಬಂದಿಳಿದಿದೆ ಎಂಬ ಸುದ್ದಿ ಮುಟ್ಟಿತು. 'ಈಗ ನಾವೇನು ಮಾಡಬೇಕು? ಉಚಿತವಾದ ಸಲಹೆ ನೀಡಿರಿ' ಎಂದು ರಾವಣನು ಮಂತ್ರಿಗಳನ್ನು ಕೇಳಿದನು. ಆಗ ಅವರು ನಕ್ಕು ನುಡಿದರು – 'ಸುಮ್ಮನಿದ್ದರಾಯಿತು. ಇದರಲ್ಲಿ ಸಲಹೆ ಕೇಳುವಂತಹುದು ಏನಿದೆ? ನೀವು ಸುರಾಸುರರನ್ನು ಗೆದ್ದಾಗ ಕೊಂಚವು ಶ್ರಮವಾಗಲಿಲ್ಲ. ಅಂತಹುದರಲ್ಲಿ ಈ ನರವಾನರರು ಯಾವ ಲೆಕ್ಕ? (ಚೌ/೧-೫)

**ದೋ – ಸಚಿವ ಬೈದ ಗುರ ತೀನಿ ಜೌँ ಪ್ರಿಯ ಬೋಲಹಿँ ಭಯ ಆಸ ।**
**ರಾಜ ಧರ್ಮ ತನ ತೀನಿ ಕರ ಹೋಇ ಬೇಗಿಹೀँ ನಾಸ ॥ ೩೭ ॥**

ಮಂತ್ರಿಯಾಗಲೀ, ವೈದ್ಯನಾಗಲೀ, ಗುರುವಾಗಲೀ, ಪ್ರಭುವು ಅಪ್ರಸನ್ನನಾದಾನು ಎಂಬ ಭಯದಿಂದಲೋ, ಅಥವಾ ಪಾರಿತೋಷಕದ ಲೋಭದಿಂದಲೋ, ನಿಷ್ಠುರ ಸತ್ಯವನ್ನು ಹೇಳದೆ, ಮುಖಸ್ತುತಿಗಾಗಿ ನುಡಿದರೆ ಕ್ರಮವಾಗಿ ರಾಜ್ಯ, ಶರೀರ ಮತ್ತು ಧರ್ಮ ಇವುಗಳು ಬೇಗನೇ ನಾಶವಾಗುತ್ತವೆ. (ದೋ/೩೭)

## ವಿಭೀಷಣನ ಹಿತವಚನ

**ಚೌ – ಸೋಇ ರಾವನ ಕಹುँ ಬನೀ ಸಹಾಈ । ಅಸ್ತುತಿ ಕರಹಿँ ಸುನಾಇ ಸುನಾಈ ॥**
**ಅವಸರ ಜಾನಿ ಬಿಭೀಷನು ಆವಾ । ಭ್ರಾತಾ ಚರನ ಸೀಸು ತೆಹಿँ ನಾವಾ ॥ ೧ ॥**
**ಪುನಿ ಸಿರು ನಾಇ ಬೈಠ ನಿಜ ಆಸನ । ಬೋಲಾ ಬಚನ ಪಾಇ ಅನುಸಾಸನ ॥**
**ಜೌ ಕೃಪಾಲ ಪೂँಛಿಹು ಮೋಹಿ ಬಾತಾ । ಮತಿ ಅನುರೂಪ ಕಹಉँ ಹಿತ ತಾತಾ ॥ ೨ ॥**

ಜೋ ಆಪನ ಚಾಹೈ ಕಲ್ಯಾನಾ । ಸುಜಸು ಸುಮತಿ ಸುಭ ಗತಿ ಸುಖ ನಾನಾ ॥
ಸೋ ಪರನಾರಿ ಲಿಲಾರ ಗೊಸಾಈಂ । ತಜಉ ಚಉಥಿ ಕೇ ಚಂದ ಕಿ ನಾಈಂ ॥ ೩ ॥
ಚೌದಹ ಭುವನ ಏಕ ಪತಿ ಹೋಈ । ಭೂತ ದ್ರೋಹ ತಿಷ್ಟಇ ನಹಿಂ ಸೋಈ ॥
ಗುನ ಸಾಗರ ನಾಗರ ನರ ಜೋಊ । ಅಲಪ ಲೋಭ ಭಲ ಕಹಇ ನ ಕೋಊ ॥ ೪ ॥

ರಾವಣನೂ ಕೂಡ ಇಂತಹ ಸ್ಥಿತಿಯಲ್ಲೇ ಇರುವನು. ಮಂತ್ರಿಗಳು ಅವನ ಎದುರಿಗೆ ಮುಖಸ್ತುತಿ ಮಾಡುತ್ತಿದ್ದರು. ಅದೇ ಸಮಯಕ್ಕೆ ಸರಿಯಾಗಿ ವಿಭೀಷಣನು ಅಲ್ಲಿಗೆ ಬಂದನು. ಬಂದವನೇ ಅಣ್ಣನ ಚರಣಗಳಿಗೆರಗಿ ತನ್ನ ಆಸನದಲ್ಲಿ ಹೋಗಿ ಕುಳಿತುಕೊಂಡನು. ಅಣ್ಣನ ಅಪ್ಪಣೆಪಡೆದು ಈ ವಿಧವಾಗಿ ಅರಿಕೆ ಮಾಡಿಕೊಂಡನು – ಎಲೈ ಕೃಪಾಳೂ! ನೀವು ನನ್ನ ಅಭಿಪ್ರಾಯವನ್ನುಕೇಳಿದ್ದರಿಂದ, ನಾನು ನನ್ನ ಬುದ್ಧಿಗನುಗುಣವಾಗಿ ನಿಮ್ಮ ಹಿತದ ಮಾತನ್ನು ಆಡುತ್ತೇನೆ– ಅಣ್ಣಾ! ತನ್ನಶ್ರೇಯಸ್ಸನ್ನು, ಸತ್ಕೀರ್ತಿಯನ್ನು, ಸದ್ಬುದ್ಧಿಯನ್ನು, ಸದ್ಗತಿಯನ್ನು, ನಾನಾವಿಧವಾದ ಸುಖಗಳನ್ನು ಬಯಸುವವನು ಚೌತಿಯ ಚಂದ್ರನಂತೆ ಪರಸ್ತ್ರೀಯಳ ಮುಖವನ್ನು ನೋಡಬಾರದು. ಹದಿನಾಲ್ಕು ಲೋಕಗಳಿಗೆ ಏಕಚ್ಛತ್ರ ಅಧಿಪತಿಯಾಗಿದ್ದರೂ ಕೂಡ ಜೀವಿಗಳಲ್ಲಿ ಶತ್ರುತ್ವವನ್ನಿರಿಸುವವನು ಖಂಡಿತವಾಗಿ ನಾಶಹೊಂದುವನು. ಗುಣಸಾಗರನೂ, ಚತುರನೂ ಸರ್ವಸಮರ್ಥನಾಗಿದ್ದರೂ ಅವನಲ್ಲಿ ಕೊಂಚ ಲೋಭ ಕಂಡುಬಂದರೂ ಯಾರೂ ಅವನನ್ನು ಮೆಚ್ಚಲಾರರು. (ಚೌ/೧-೪)

**ದೋ – ಕಾಮ ಕ್ರೋಧ ಮದ ಲೋಭ ಸಬ ನಾಥ ನರಕ ಕೇ ಪಂಥ।**
**ಸಬ ಪರಿಹರಿ ರಘುಬೀರಹಿ ಭಜಹು ಭಜಹಿಂ ಜೆಹಿ ಸಂತ ॥ ೩೮ ॥**

ಪ್ರಭೂ! ಕಾಮ, ಕ್ರೋಧ, ಮದ, ಲೋಭ ಇವೆಲ್ಲವೂ ನರಕದ ದಾರಿಗಳು. ಆದ್ದರಿಂದ ಇವನ್ನು ತ್ಯಜಿಸಿ, ಸಜ್ಜನಸೇವ್ಯವಾದ ಶ್ರೀರಾಮಚಂದ್ರನನ್ನು ಭಜಿಸು. (ದೋ/೩೮)

ಚೌ – ತಾತ ರಾಮ ನಹಿಂ ನರ ಭೂಪಾಲಾ । ಭುವನೇಸ್ವರ ಕಾಲಹು ಕರ ಕಾಲಾ ॥
ಬ್ರಹ್ಮ ಅನಾಮಯ ಅಜ ಭಗವಂತಾ । ಬ್ಯಾಪಕ ಅಜಿತ ಅನಾದಿ ಅನಂತಾ ॥ ೧ ॥
ಗೋ ದ್ವಿಜ ಧೇನು ದೇವ ಹಿತಕಾರೀ । ಕೃಪಾ ಸಿಂಧು ಮಾನುಷ ತನುಧಾರೀ ॥
ಜನ ರಂಜನ ಭಂಜನ ಖಲ ಬ್ರಾತಾ । ಬೇದ ಧರ್ಮ ರಚ್ಛಕ ಸುನು ಭ್ರಾತಾ ॥ ೨ ॥
ತಾಹಿ ಬಯರು ತಜಿ ನಾಇಅ ಮಾಥಾ । ಪ್ರನತಾರತಿ ಭಂಜನ ರಘುನಾಥಾ ॥
ದೇಹು ನಾಥ ಪ್ರಭು ಕಹುಂ ಬೈದೇಹೀ । ಭಜಹು ರಾಮ ಬಿನು ಹೇತು ಸನೇಹೀ ॥ ೩ ॥
ಸರನ ಗಏಂ ಪ್ರಭು ತಾಹು ನ ತ್ಯಾಗಾ । ಬಿಸ್ವ ದ್ರೋಹ ಕೃತ ಅಘ ಜೆಹಿ ಲಾಗಾ ॥
ಜಾಸು ನಾಮ ತ್ರಯ ತಾಪ ನಸಾವನ । ಸೋಇ ಪ್ರಭು ಪ್ರಗಟ ಸಮುಝು ಜಿಯಂ ರಾವನ ॥ ೪ ॥

ಅಯ್ಯಾ! ಶ್ರೀರಾಮನು ಮನುಷ್ಯರಿಗೆ ಮಾತ್ರ ರಾಜನಲ್ಲ. ಅವನು ಸಮಸ್ತ ಲೋಕಗಳಿಗೆ, ಬ್ರಹ್ಮಾಂಡಗಳಿಗೆ ಒಡೆಯನು. ಕಾಲಕ್ಕೂ ಮಹಾಕಾಲನು. ಅವನು ಷಡ್ಗುಣೈಶ್ವರ್ಯಸಂಪನ್ನನಾದ ಭಗವಂತನು. ವಿಕಾರರಹಿತನೂ, ಜನ್ಮವಿಲ್ಲದವನೂ, ಸರ್ವವ್ಯಾಪಕನೂ, ಅಜೇಯನೂ, ಅನಾದಿಯೂ, ಅನಂತನೂ ಆದ ಪರಬ್ರಹ್ಮನವನು. ಕೃಪಾಳುವಾದ ಆ ಭಗವಂತನು ದ್ವಿಜ, ಧೇನು, ಧರಣಿ ಹಾಗೂ ದೇವತೆಗಳನ್ನು ರಕ್ಷಿಸುವುದಕ್ಕಾಗಿ ಮಾನವನಾಗಿ ಅವತರಿಸಿರುವನು. ಅಣ್ಣಾ! ಅವನು ತನ್ನ ಭಕ್ತರಿಗೆ ಆನಂದದಾಯಕನೂ, ದುಷ್ಟರನ್ನು ನಾಶಮಾಡುವವನೂ ಆಗಿರುವನು. ವೇದಗಳನ್ನೂ, ಧರ್ಮವನ್ನೂ ರಕ್ಷಿಸುವವನು. ಅವನಲ್ಲಿ ವೈರವನ್ನು ತೊರೆದು ಅವನಿಗೆ ಶರಣಾಗಿರಿ. ಶ್ರೀರಘುನಾಥನು ಶರಣಾಗತರ ದುಃಖವನ್ನು ನಾಶಮಾಡುವವನು. ಸ್ವಾಮಿ! ಆ ಸರ್ವೇಶ್ವರನಿಗೆ ಜಾನಕಿಯನ್ನು ಒಪ್ಪಿಸಿ, ಅಹೈತುಕ ಪ್ರೇಮಿಯಾದ ಶ್ರೀರಾಮನನ್ನು ಭಜಿಸು. ಇಡೀ ವಿಶ್ವಕ್ಕೆ ದ್ರೋಹ ಬಗೆದ ಪಾತಕಿಯೂ ಕೂಡ ಶರಣುಹೋದರೆ ಪ್ರಭುವು ಆತನನ್ನು ಕ್ಷಮಿಸಿ ರಕ್ಷಿಸುವನು. ಆತನ ನಾಮವೇ ತಾಪತ್ರಯಗಳನ್ನು ತೊಡೆದು ಹಾಕುವಂತಹುದು. ಅಂತಹ ಭಗವಂತನೇ ಮನುಷ್ಯರೂಪದಿಂದ ಮೈದೋರಿರುವನು. ರಾವಣೇಶ್ವರಾ! ಇದನ್ನು ಮನದಟ್ಟು ಮಾಡಿಕೊಳ್ಳಿ. (ಚೌ/೧-೪)

**ದೋ – ಬಾರ ಬಾರ ಪದ ಲಾಗಉಂ ಬಿನಯ ಕರಉಂ ದಸಸೀಸ।**
**ಪರಿಹರಿ ಮಾನ ಮೋಹ ಮದ ಭಜಹು ಕೋಸಲಾಧೀಸ ॥ ೩೯ (ಕ)॥**
**ಮುನಿ ಪುಲಸ್ತಿ ನಿಜ ಸಿಷ್ಯ ಸನ ಕಹಿ ಪಠಈ ಯಹ ಬಾತ।**
**ತುರತ ಸೊ ಮೈಂ ಪ್ರಭು ಸನ ಕಹೀ ಪಾಇ ಸುಅವಸರು ತಾತ ॥ ೩೯ (ಖ)॥**

ಓ ದಶಾನನಾ! ನಾನು ಪದೇ-ಪದೇ ನಿಮ್ಮ ಪಾದಗಳಲ್ಲಿ ವಿನಂತಿಸಿಕೊಳ್ಳುತ್ತಿದ್ದೇನೆ. ತಾವು ಅಭಿಮಾನ, ಮೋಹ, ಮದ ಇವುಗಳನ್ನು ತೊರೆದು ಕೋಸಲಾಧೀಶನಾದ ಶ್ರೀರಾಮಚಂದ್ರನನ್ನು ಭಜಿಸು. ಪುಲಸ್ತ್ಯಮುನಿಗಳೂ ತನ್ನ ಶಿಷ್ಯರಮೂಲಕ ಈ ಸಂದೇಶವನ್ನು ಕಳಿಸಿರುವರು. ಅವಕಾಶ ಸಿಕ್ಕಿದ್ದರಿಂದ ನಾನು ಅದನ್ನೇ ತಮ್ಮಲ್ಲಿ ಅರಿಕೆಮಾಡಿಕೊಂಡಿರುವೆನು. (ದೋ/೩೯ ಕ, ಖ)

**ಚೌ – ಮಾಲ್ಯವಂತ ಅತಿ ಸಚಿವ ಸಯಾನಾ। ತಾಸು ಬಚನ ಸುನಿ ಅತಿ ಸುಖ ಮಾನಾ॥**
**ತಾತ ಅನುಜ ತವ ನೀತಿ ಬಿಭೂಷನ। ಸೋ ಉರ ಧರಹು ಜೊ ಕಹತ ಬಿಭೀಷನ॥ ೧॥**
**ರಿಪು ಉತಕರಷ ಕಹತ ಸಠ ದೋಊ। ದೂರಿ ನ ಕರಹು ಇಹಾ ಹಇ ಕೋಊ॥**
**ಮಾಲ್ಯವಂತ ಗೃಹ ಗಯಉ ಬಹೋರೀ। ಕಹಇ ಬಿಭೀಷನು ಪುನಿ ಕರ ಜೋರೀ॥ ೨॥**
**ಸುಮತಿ ಕುಮತಿ ಸಬ ಕೇಂ ಉರ ರಹಹೀಂ। ನಾಥ ಪುರಾನ ನಿಗಮ ಅಸ ಕಹಹೀಂ॥**
**ಜಹಾಂ ಸುಮತಿ ತಹಂ ಸಂಪತಿ ನಾನಾ। ಜಹಾಂ ಕುಮತಿ ತಹಂ ಬಿಪತಿ ನಿದಾನಾ॥ ೩॥**
**ತವ ಉರ ಕುಮತಿ ಬಸೀ ಬಿಪರೀತಾ। ಹಿತ ಅನಹಿತ ಮಾನಹು ರಿಪು ಪ್ರೀತಾ॥**
**ಕಾಲರಾತಿ ನಿಸಿಚರ ಕುಲ ಕೇರೀ। ತೇಹಿ ಸೀತಾ ಪರ ಪ್ರೀತಿ ಘನೇರೀ॥ ೪॥**

ಮಾಲ್ಯವಂತ ಎಂಬ ಬಹಳ ಬುದ್ಧಿವಂತನಾದ ಮಂತ್ರಿಯು ವಿಭೀಷಣನ ಮಾತಿನಿಂದ ತುಂಬ ಸಂತೋಷಗೊಂಡು ಇಂತೆಂದನು – ''ಅಯ್ಯಾ! ನಿಮ್ಮ ತಮ್ಮ ವಿಭೀಷಣನು ತುಂಬ ನೀತಿವಂತನು. ಅವನು ಹೇಳಿದುದನ್ನು ಮನಸ್ಸಿಗೆ ತಂದುಕೊ.'' ಅದನ್ನು ಕೇಳುತ್ತಲೇ ರಾವಣನು ಭುಗಿಲೆದ್ದು ಹೇಳಿದನು – ''ಈ ಮೂರ್ಖರಿಬ್ಬರೂ ಶತ್ರುವಿನ ಮಹಿಮೆಯನ್ನು ಉಗ್ಗಡಿಸುತ್ತಿದ್ದಾರೆ. ಇವರನ್ನು ನನ್ನ ಇದಿರಿನಿಂದ ಹೊರಗೆ ಹಾಕಲು ಇಲ್ಲಿ ಯಾರೂ ಇಲ್ಲವೇ?'' ಆಗ ಮಾಲ್ಯವಂತನು ತನ್ನ ಮನೆಗೆ ಮರಳಿದನು. ವಿಭೀಷಣನು ಮಾತ್ರ ಕೈಜೋಡಿಸಿಕೊಂಡು ಪುನಃ ಹೇಳತೊಡಗಿದನು – ಪ್ರಭೂ! ಸುಬುದ್ಧಿ ಮತ್ತು ಕುಬುದ್ಧಿ ಇವು ಎಲ್ಲರ ಹೃದಯದಲ್ಲಿ ಇರುತ್ತವೆ ಎಂದು ವೇದ, ಪುರಾಣಗಳು ಹೇಳುತ್ತವೆ. ಸುಬುದ್ಧಿಯು ಪ್ರಬಲವಾಗಿರುಲ್ಲಿ ಸಂಪತ್ತುಗಳು ಸಮೃದ್ಧವಾಗಿರುತ್ತದೆ. ದುರ್ಬುದ್ಧಿ ಪ್ರಬಲವಾಗಿರುವಲ್ಲಿ ಪರಿಣಾಮದಲ್ಲಿ ವಿಪತ್ತು ಕಟ್ಟಿಟ್ಟದ್ದು. ತಮ್ಮ ಹೃದಯದಲ್ಲಿ ಕೇವಲ ದುರ್ಬುದ್ಧಿಯೇ ತುಂಬಿಹೋಗಿದೆ. ಇದರಿಂದಲೇ ನೀವು ಹಿತವನ್ನು ಅಹಿತವಾಗಿಯೂ, ಅಹಿತವನ್ನು ಹಿತವೆಂದೂ ವಿಪರೀತವಾಗಿ ಭಾವಿಸುತ್ತಿದ್ದೀರಿ. (ಪುಲಸ್ತ್ಯರು, ಮಾಲ್ಯವಂತರು, ನಾನು ನಿಮಗೆ ಹಿತವನ್ನೇ ಹೇಳುತ್ತಿದ್ದೇನೆ. ನೀನು ನಮ್ಮನ್ನು ಶತ್ರುವಿನಂತೆ ಪರಿಗಣಿಸುತ್ತಿರುವೆ. ಮುಖಸ್ತುತಿ ಮಾಡುವ ಮಂತ್ರಿಗಳು ನಿಜವಾಗಿ ನಿಮ್ಮ ಅಹಿತವನ್ನೇ ಎಸಗುತ್ತಿರುವ ಶತ್ರುಗಳು. ಆದರೆ ಅವರನ್ನು ಮಿತ್ರರೆಂದು ಭಾವಿಸುತ್ತಿರುವಿರಿ.) ರಾಕ್ಷಸಕುಲ ಕಾಳರಾತ್ರಿಯಾದ ಸೀತಾದೇವಿಯ ಮೇಲೆ ನಿಮಗೆ ಪ್ರೀತಿ ಉಂಟಾಗಿದೆ. (ಚೌ/೧-೪)

**ದೋ – ತಾತ ಚರನ ಗಹಿ ಮಾಗಉಂ ರಾಖಹು ಮೋರ ದುಲಾರ।**
**ಸೀತಾ ದೇಹು ರಾಮ ಕಹುಂ ಅಹಿತ ನ ಹೋಇ ತುಮ್ಹಾರ॥ ೪೦॥**

ಅಣ್ಣಾ! ನಾನು ನಿಮ್ಮ ಕಾಲು ಹಿಡಿದುಕೊಂಡು ನಿಮ್ಮನ್ನು ಅಂಗಲಾಚಿ ಬೇಡಿಕೊಳ್ಳುತ್ತೇನೆ. ನನ್ನ ಮಾತನ್ನು ಲಾಲಿಸಿರಿ. ಶ್ರೀರಾಮನಿಗೆ ಸೀತೆಯನ್ನು ಒಪ್ಪಿಸಿಬಿಡು. ಅದರಿಂದ ನಿಮ್ಮ ಅಹಿತ ತಪ್ಪೀತು. (ದೋ/೪೦)

**ಚೌ – ಬುಧ ಪುರಾನ ಶ್ರುತಿ ಸಮ್ಮತ ಬಾನೀ। ಕಹೀ ಬಿಭೀಷನ ನೀತಿ ಬಖಾನೀ॥**
**ಸುನತ ದಸಾನನ ಉಠಾ ರಿಸಾಈ। ಖಲ ತೊಹಿ ನಿಕಟ ಮೃತ್ಯು ಅಬ ಆಈ॥ ೧॥**
**ಜಿಅಸಿ ಸದಾ ಸಠ ಮೋರ ಜಿಆವಾ। ರಿಪು ಕರ ಪಚ್ಛ ಮೂಢ ತೊಹಿ ಭಾವಾ॥**
**ಕಹಸಿ ನ ಖಲ ಅಸ ಕೋ ಜಗ ಮಾಹೀಂ। ಭುಜ ಬಲ ಜಾಹಿ ಜಿತಾ ಮೈಂ ನಾಹೀಂ॥ ೨॥**
**ಮಮ ಪುರ ಬಸಿ ತಪಸಿನ್ಹ ಪರ ಪ್ರೀತೀ। ಸಠ ಮಿಲು ಜಾಇ ತಿನ್ಹಹಿ ಕಹು ನೀತೀ॥**
**ಅಸ ಕಹಿ ಕೀನ್ಹೇಸಿ ಚರನ ಪ್ರಹಾರಾ। ಅನುಜ ಗಹೇ ಪದ ಬಾರಹಿಂ ಬಾರಾ॥ ೩॥**
**ಉಮಾ ಸಂತ ಕಇ ಇಹಇ ಬಡಾಈ। ಮಂದ ಕರತ ಜೋ ಕರಇ ಭಲಾಈ॥**
**ತುಮ್ಹ ಪಿತು ಸರಿಸ ಭಲೆಹಿಂ ಮೊಹಿ ಮಾರಾ। ರಾಮು ಭಜೇಂ ಹಿತ ನಾಥ ತುಮ್ಹಾರಾ॥ ೪॥**
**ಸಚಿವ ಸಂಗ ಲೈ ನಭ ಪಥ ಗಯಊ। ಸಬಹಿ ಸುನಾಇ ಕಹತ ಅಸ ಭಯಊ॥ ೫॥**

ಪಂಡಿತರಿಗೂ, ವೇದ-ಪುರಾಣಗಳೂ ಸಮ್ಮತವಾದ ನೀತಿಯಮಾತನ್ನು ವಿಭೀಷಣನು ಹೇಳಿದನು. ಆದರೆ ಅದನ್ನು ಕೇಳುತ್ತಲೇ ರಾವಣನು ಸಿಟ್ಟಿನಿಂದ ಸಿಡಿದೆದ್ದು ಗರ್ಜಿಸಿದನು – ''ಎಲವೋ ದುರುಳ! ಈಗ ನಿನ್ನ ಮೃತ್ಯು ನಿನಗೆ ಸನ್ನಿಹಿತವಾಗಿದೆ ಎಂದು ಕಾಣುತ್ತದೆ. ಮೂರ್ಖಾ! ನೀನು ನನ್ನ ಹಂಗಿನಲ್ಲಿ ಬದುಕಿದ್ದೀಯೇ. ಆದರೆ ಕೃತಘ್ನನಾದ ನಿನಗೆ ಶತ್ರುಪಕ್ಷವೇ ಒಳ್ಳೆಯದೆನಿಸುತ್ತದೆ. ಎಲೈ ದುಷ್ಟನೇ! ಪ್ರಪಂಚದಲ್ಲಿ ನಾನು ನನ್ನ ಭುಜಬಲದಿಂದ ಗೆಲ್ಲದವರು ಯಾರಾದರೂ ಇದ್ದಾರೆಯೇ? ಹೇಳು. ನನ್ನ ನಗರದಲ್ಲೇ ಇದ್ದುಕೊಂಡು ಆ ಕಾಡು ತಾಪಸರ ಮೇಲೆ ಪ್ರೀತಿ ತೋರುವೆಯಲ್ಲ! ಮೂರ್ಖಾ! ನನ್ನ ಇದಿರಿನಿಂದ ತೊಲಗು. ಅವರ ಹತ್ತಿರವೇ ಹೋಗಿ ನಿನ್ನ ಬುದ್ಧಿವಾದವನ್ನು ಅವರಿಗೇ ಹೇಳು'' ಎಂದು ಹೇಳುತ್ತಾ ರಾವಣನು ವಿಭೀಷಣನನ್ನು ಕಾಲಿನಿಂದ ಒದ್ದುಬಿಟ್ಟನು. ಆದರೆ ವಿಭೀಷಣನು ಮಾತ್ರ ಪದೇ-ಪದೇ ಅವನ ಕಾಲುಗಳನ್ನು ಹಿಡಿದುಕೊಂಡನು. ಶಿವನು ಹೇಳುತ್ತಿದ್ದಾನೆ – ಉಮಾ! ಅಪಕಾರ ಮಾಡಿದವರ ಮೇಲೆಯೂ ಉಪಕಾರ ಮಾಡುವುದೇ ಸಜ್ಜನರ ಸ್ವಭಾವವು. ವಿಭೀಷಣನು ಹೇಳಿದನು – ''ನೀವು ನನಗೆ ತಂದೆಗೆ ಸಮಾನರು. ನೀವೇನೋ ನನಗೆ ಹೊಡೆದಿರಿ. ಇದರಿಂದ ನಾನು ದುಃಖಿಸುವುದಿಲ್ಲ. ಆದರೆ ಅಣ್ಣಾ! ಶ್ರೀರಾಮನನ್ನು ಭಜಿಸುವುದರಲ್ಲೇ ನಿಮ್ಮ ಹಿತವಿದೆ. ಇಷ್ಟು ಹೇಳಿ ವಿಭೀಷಣನು ತನ್ನ ಮಂತ್ರಿಗಳೊಂದಿಗೆ ಆಕಾಶಮಾರ್ಗದಲ್ಲಿ ನಿಂತು, ಎಲ್ಲರೂ ಕೇಳುವಂತೆ ಹೀಗೆ ಹೇಳಿದನು – (ಚೌ/೧-೫)

**ದೋ – ರಾಮು ಸತ್ಯಸಂಕಲ್ಪ ಪ್ರಭು ಸಭಾ ಕಾಲಬಸ ತೋರಿ।**
**ಮೈಂ ರಘುಬೀರ ಸರನ ಅಬ ಜಾಉಂ ದೇಹು ಜನಿ ಖೋರಿ ॥ ೪೧ ॥**

ಹೇ ರಾವಣಾ! ಶ್ರೀರಾಮನು ಸತ್ಯಸಂಕಲ್ಪನೂ, ಸರ್ವಶಕ್ತಿಸಂಪನ್ನನೂ ಆದ ಪ್ರಭುವು ಆಗಿದ್ದಾನೆ. ನಿನ್ನ ಸಭೆಯು ಕಾಲವಶವಾಗಿದೆ. ಆದ್ದರಿಂದ ನಾನು ಈಗ ಶ್ರೀರಾಮನಿಗೆ ಶರಣುಹೋಗುತ್ತೇನೆ. ಮತ್ತೆ ನನ್ನನ್ನು ದೂಷಿಸಬೇಡ. (ದೋ/೪೧)

## ವಿಭೀಷಣ ಶರಣಾಗತಿ

**ಚೌ – ಅಸ ಕಹಿ ಚಲಾ ಬಿಭೀಷನು ಜಬಹೀಂ। ಆಯೂ ಹೀನ ಭಏ ಸಬ ತಬಹೀಂ॥**
**ಸಾಧು ಅವಗ್ಯಾ ತುರತ ಭವಾನೀ। ಕರ ಕಲ್ಯಾನ ಅಖಿಲ ಕೈ ಹಾನೀ ॥ ೧ ॥**
**ರಾವನ ಜಬಹಿಂ ಬಿಭೀಷನ ತ್ಯಾಗಾ । ಭಯಉ ಬಿಭವ ಬಿನು ತಬಹಿಂ ಅಭಾಗಾ॥**
**ಚಲೆಉ ಹರಷಿ ರಘುನಾಯಕ ಪಾಹೀಂ । ಕರತ ಮನೋರಥ ಬಹು ಮನ ಮಾಹೀಂ॥ ೨ ॥**
**ದೆಖಿಹಉಂ ಜಾಇ ಚರನ ಜಲಜಾತಾ । ಅರುನ ಮೃದುಲ ಸೇವಕ ಸುಖದಾತಾ ॥**
**ಜೇ ಪದ ಪರಸಿ ತರೀ ರಿಷಿನಾರೀ। ದಂಡಕ ಕಾನನ ಪಾವನಕಾರೀ ॥ ೩ ॥**
**ಜೇ ಪದ ಜನಕಸುತಾಂ ಉರ ಲಾಏ । ಕಪಟ ಕುರಂಗ ಸಂಗ ಧರ ಧಾಏ ॥**
**ಹರ ಉರ ಸರ ಸರೋಜ ಪದ ಜೇಈ। ಅಹೋಭಾಗ್ಯ ಮೈಂ ದೆಖಿಹಉಂ ತೇಈ ॥ ೪ ॥**

ಈ ವಿಧವಾಗಿ ಹೇಳಿ ರಾಮಭಕ್ತನಾದ ವಿಭೀಷಣನು ಹೊರಡುತ್ತಲೇ ಎಲ್ಲ ರಾಕ್ಷಸರ ಮೃತ್ಯುವು ಸನ್ನಿಹಿತವಾಯಿತು. ಶಿವನು ಹೇಳುತ್ತಿದ್ದಾನೆ – ಭವಾನೀ! ಸಜ್ಜನರ ಅಪಮಾನವು ಕೂಡಲೇ ಶ್ರೇಯಸ್ಸನ್ನು ಹಾನಿಮಾಡುತ್ತದೆ. ರಾವಣನು ವಿಭೀಷಣನನ್ನು ತ್ಯಜಿಸಿದ ಮರುಕ್ಷಣವೇ ಆ ನಿರ್ಭಾಗ್ಯನ ವೈಭವವು ಕೆಳಮುಖವಾಯಿತು. ವಿಭೀಷಣನು ಹರ್ಷಿತನಾಗಿ ಮನಸ್ಸಿನಲ್ಲಿ ಅನೇಕ ಮನೋರಥಗಳನ್ನು ಹಾಕಿಕೊಳ್ಳುತ್ತಾ ಶ್ರೀರಘುನಾಥನ ಬಳಿಗೆ ಹೊರಟನು. ಅವನು ಮನಸ್ಸಿನಲ್ಲಿ ಇಂತು ಆಲೋಚಿಸತೊಡಗಿದನು. ನಾನು ಈಗಲೇ ಹೋಗಿ ಕೆಂದಾವರೆಯಂತಿರುವ ಮೃದುಮನೋಹರವಾದ ಶ್ರೀರಾಮನ ಪವಿತ್ರ ಚರಣಗಳ ದರ್ಶನ ಪಡೆಯುವೆನು. ಅವು ಸೇವಕರಿಗೆ ಸುಖಪ್ರದವಾದವುಗಳು. ಅವುಗಳ ಸ್ಪರ್ಶದಿಂದಲೇ ಋಷಿಪತ್ನಿ ಅಹಲ್ಯೆಯು ಉದ್ಧಾರವಾಗಿ ಹೋದಳು. ಅವು ದಂಡಕಾರಣ್ಯವನ್ನು ಪವಿತ್ರಗೊಳಿಸಿದವು. ಅವುಗಳನ್ನೇ ಜಾನಕಿದೇವಿಯು ಸದಾಕಾಲ ಧ್ಯಾನಿಸುತ್ತಿರುವಳು. ಕಪಟಮೃಗವನ್ನು ಹಿಡಿಯಲು ಓಡಾಡಿದ್ದು ಅದೇ ಪಾದಗಳು. ಹರನ ಮಾನಸಸರೋವರದಲ್ಲಿ ವಿರಾಜಿಸುತ್ತಿರುವ ಪಾದಪದ್ಮಗಳು ಅವೇ. ಅಂತಹ ಪಾದಪದ್ಮಗಳನ್ನು ಇಂದು ನಾನು ಕಣ್ಣಾರೆ ನೋಡುವೆನು. ಇದು ನನ್ನ ಅಹೋಭಾಗ್ಯವೇ ಆಗಿದೆ. (ಚೌ/೧-೪)

**ದೋ – ಜಿನ್ಹ ಪಾಯನ್ಹ ಕೇ ಪಾದುಕನ್ಹಿ ಭರತು ರಹೇ ಮನ ಲಾಇ।**
**ತೇ ಪದ ಆಜು ಬಿಲೋಕಿಹಉಂ ಇನ್ಹ ನಯನನ್ಹಿ ಅಬ ಜಾಇ ॥ ೪೨ ॥**

ಆಹಾ! ಯಾವ ಚರಣಗಳ ಪಾದುಕೆಗಳಲ್ಲಿ ಭರತನು ತನ್ನ ಮನಸ್ಸನ್ನು ನೆಟ್ಟಿರುವನೋ, ಆ ಚರಣಗಳನ್ನು ನಾನು ಈಗಲೇ ಹೋಗಿ ಕಣ್ಣಾರೆ ಕಾಣುವೆನು. (ದೋ/೪೨)

ಚೌ – ಏಹಿ ಬಿಧಿ ಕರತ ಸಪ್ರೇಮ ಬಿಚಾರಾ। ಆಯಉ ಸಪದಿ ಸಿಂಧು ಏಹಿಂ ಪಾರಾ॥
ಕಪಿನ್ಹ ಬಿಭೀಷನು ಆವತ ದೇಖಾ। ಜಾನಾ ಕೋಉ ರಿಪು ದೂತ ಬಿಸೇಷಾ॥೧॥
ತಾಹಿ ರಾಖಿ ಕಪೀಸ ಪಹಿಂ ಆಏ। ಸಮಾಚಾರ ಸಬ ತಾಹಿ ಸುನಾಏ॥
ಕಹ ಸುಗ್ರೀವ ಸುನಹು ರಘುರಾಈ। ಆವಾ ಮಿಲನ ದಸಾನನ ಭಾಈ॥೨॥
ಕಹ ಪ್ರಭು ಸಖಾ ಬೂಝಿಏ ಕಾಹಾ। ಕಹಇ ಕಪೀಸ ಸುನಹು ನರನಾಹಾ॥
ಜಾನಿ ನ ಜಾಇ ನಿಸಾಚರ ಮಾಯಾ। ಕಾಮರೂಪ ಕೇಹಿ ಕಾರನ ಆಯಾ॥೩॥
ಭೇದ ಹಮಾರ ಲೇನ ಸಠ ಆವಾ। ರಾಖಿಅ ಬಾಁಧಿ ಮೋಹಿ ಅಸ ಭಾವಾ॥
ಸಖಾ ನೀತಿ ತುಮ್ಹ ನೀಕಿ ಬಿಚಾರೀ। ಮಮ ಪನ ಸರನಾಗತ ಭಯಹಾರೀ॥೪॥
ಸುನಿ ಪ್ರಭು ಬಚನ ಹರಷ ಹನುಮಾನಾ। ಸರನಾಗತ ಬಚ್ಛಲ ಭಗವಾನಾ॥೫॥

ಹೀಗೆ ಭಕ್ತಿತತ್ಪರನಾಗಿ ಆಲೋಚಿಸುತ್ತಾ ವಿಭೀಷಣನು ಶ್ರೀರಾಮನು ಬೀಡುಬಿಟ್ಟ ಸಮುದ್ರದ ಆಚೆಯದಡವನ್ನು ಸೇರಿದನು. ವಿಭೀಷಣನು ಬರುತ್ತಿರುವುದನ್ನು ಕಂಡು ವಾನರರು ಇವನಾರೋ ಶತ್ರುವಿನ ವಿಶೇಷ ದೂತನೆಂದುಕೊಂಡರು. ಆತನನ್ನು ಹೊರಗೆ ನಿಲ್ಲಿಸಿ ಅವರು ಸುಗ್ರೀವನ ಬಳಿಗೆ ಬಂದು ಸುದ್ದಿ ಮುಟ್ಟಿಸಿದರು. ಸುಗ್ರೀವನು ಶ್ರೀರಾಮನ ಬಳಿಗೆ ಹೋಗಿ – ''ರಘುನಾಥಾ! ರಾವಣನ ತಮ್ಮನು ನಿಮ್ಮನ್ನು ಕಾಣಲು ಬಂದಿರುವನು'' ಎಂದು ತಿಳಿಸಿದನು. ಪ್ರಭುವು ಆತನಬಳಿ – ಗೆಳೆಯಾ! ಅವನ ಕುರಿತು ನಿನ್ನ ಅಭಿಪ್ರಾಯವೇನು? ಎಂದು ಕೇಳಿದನು. ಆಗ ವಾನರರಾಜ ಸುಗ್ರೀವನು – ''ಮಹಾರಾಜಾ! ಅವಧರಿಸು – ನಿಶಾಚರರ ಮಾಯೆ ಹೀಗೆ ಎಂದು ಹೇಳಲಾಗುವುದಿಲ್ಲ. ಈ ಕಾಮರೂಪಿಯು ಏಕೆ ಬಂದಿದ್ದಾನೋ ತಿಳಿಯದು. ಬಹುಶಃ ಈ ಮೂರ್ಖನು ನಮ್ಮ ರಹಸ್ಯವನ್ನು ಅರಿಯಲು ಬಂದಿರಬೇಕು. ನನ್ನ ಅಭಿಪ್ರಾಯದಂತೆ ಇವನನ್ನು ಬಂಧಿಸುವುದೇ ಒಳಿತೆಂದು ಅನ್ನಿಸುತ್ತದೆ.'' ಆಗ ಶ್ರೀರಾಮನು ಹೇಳಿದನು – ''ಮಿತ್ರನೇ! ನೀನೇನೋ ರಾಜನೀತಿಯನ್ನು ಚೆನ್ನಾಗಿ ಹೇಳಿದೆ. ಆದರೆ ಶರಣು ಬಂದಿರುವವರಿಗೆ ಅಭಯವನ್ನಿತ್ತು ಕಾಪಾಡುವುದೇ ನನ್ನ ಪ್ರತಿಜ್ಞೆ.'' ಶ್ರೀರಾಮಚಂದ್ರಪ್ರಭುವಿನ ವಚನಗಳನ್ನು ಕೇಳಿ ಹನುಮಂತನು ಹರ್ಷಿತನಾಗಿ ಮನಸ್ಸಿನಲ್ಲೇ ಹೇಳಿಕೊಂಡನು – ''ಭಕ್ತವತ್ಸಲನಾದ ಭಗವಂತನು ತಂದೆಯಂತೆ ಶರಣಾಗತರನ್ನು ರಕ್ಷಿಸುತ್ತಿರುವನಲ್ಲ!'' (ಚೌ/೧-೫)

ದೋ – ಸರನಾಗತ ಕಹುಁ ಜೇ ತಜಹಿಂ ನಿಜ ಅನಹಿತ ಅನುಮಾನಿ।
ತೇ ನರ ಪಾವಁರ ಪಾಪಮಯ ತಿನ್ಹಹಿ ಬಿಲೋಕತ ಹಾನಿ॥೪೩॥

ಶ್ರೀರಾಮನು ಮತ್ತೆ ಹೇಳಿದನು – ''ತನಗೆ ಹಾನಿಯಾಗುವುದೆಂದು ಊಹಿಸಿ ಶರಣು ಬಂದವರನ್ನು ತ್ಯಜಿಸುವವನು ನೀಚನೂ, ಪಾಪಿಯೂ ಆಗಿದ್ದಾನೆ. ಅವನನ್ನು ನೋಡುವುದು ಮಹಾಪಾಪವೇ. (ದೋ/೪೩)

ಚೌ – ಕೋಟಿ ಬಿಪ್ರ ಬಧ ಲಾಗಹಿಂ ಜಾಹೂ। ಆಏಁ ಸರನ ತಜಉಁ ನಹಿಂ ತಾಹೂ॥
ಸನಮುಖ ಹೋಇ ಜೀವ ಮೋಹಿ ಜಬಹೀಂ। ಜನ್ಮ ಕೋಟಿ ಅಘ ನಾಸಹಿಂ ತಬಹೀಂ॥೧॥
ಪಾಪವಂತ ಕರ ಸಹಜ ಸುಭಾಊ। ಭಜನು ಮೋರ ತೇಹಿ ಭಾವ ನ ಕಾಊ॥
ಜೌಂ ಪೈ ದುಷ್ಟ ಹೃದಯ ಸೋಇ ಹೋಈ। ಮೋರೇಂ ಸನಮುಖ ಆವ ಕಿ ಸೋಈ॥೨॥
ನಿರ್ಮಲ ಮನ ಜನ ಸೋ ಮೋಹಿ ಪಾವಾ। ಮೋಹಿ ಕಪಟ ಛಲ ಛಿದ್ರ ನ ಭಾವಾ॥
ಭೇದ ಲೇನ ಪಠವಾ ದಸಸೀಸಾ। ತಬಹುಁ ನ ಕಛು ಭಯ ಹಾನಿ ಕಪೀಸಾ॥೩॥
ಜಗ ಮಹುಁ ಸಖಾ ನಿಸಾಚರ ಜೇತೇ। ಲಛಿಮನು ಹನಇ ನಿಮಿಷ ಮಹುಁ ತೇತೇ॥
ಜೌಂ ಸಭೀತ ಆವಾ ಸರನಾಈ। ರಖಿಹಉಁ ತಾಹಿ ಪ್ರಾನ ಕೀ ನಾಈ॥೪॥

ಕೋಟಿ ಬ್ರಹ್ಮಹತ್ಯೆಗಳನ್ನು ಮಾಡಿದವನೂ ಕೂಡ ನನಗೆ ಶರಣುಬಂದರೆ ನಾನು ಅವನಿಗೆ ಅಭಯವನ್ನೀಯುವೆನು. ನನ್ನ ಇದಿರಿಗೆ ಬಂದು ''ಶರಣು'' ಎಂದು ಹೇಳಿದ ಪ್ರಾಣಿಯ ಕೋಟಿಜನ್ಮಗಳ ಪಾಪಗಳೂ ಕೂಡ ನಶಿಸಿಹೋಗುವುವು. ನನ್ನ ಭಜನೆಯು ಪಾಪಿಗೆ ಎಂದಿಗೂ ರುಚಿಸದು. ಅದು ಅವನ ಸಹಜಸ್ವಭಾವವಾಗಿರುತ್ತದೆ. ನಿರ್ಮಲ ಹೃದಯವುಳ್ಳ ಭಕ್ತರೇ ನನ್ನನ್ನು ಸಮೀಪಿಸುತ್ತಾರೆ. ವಿಭೀಷಣನು ನಿಜಕ್ಕೂ ದುಷ್ಟಹೃದಯದವನಾಗಿದ್ದರೆ ನನ್ನನ್ನು ಆಶ್ರಯಿಸುತ್ತಿದ್ದನೇ? ನನಗೆ ಕಪಟಿಗಳು, ಮೋಸಗಾರರು ಹಿಡಿಸರು. ವಾನರರಾಜನೇ! ಒಂದು ಪಕ್ಷ ರಾವಣನು ಆತನನ್ನು ನಮ್ಮ ರಹಸ್ಯವನ್ನು ತಿಳಿಯಲು ಕಳಿಸಿದ್ದರೂ

ಕೂಡ ಅದರಿಂದ ನನಗೆ ಯಾವ ಭಯವಾಗಲೀ ಹಾನಿಯಾಗಲೀ ಇಲ್ಲ. ಏಕೆಂದರೆ, ಗೆಳೆಯಾ! ಜಗತ್ತಿನಲ್ಲಿರುವ ರಕ್ಕಸರೆಲ್ಲರನ್ನು ಲಕ್ಷ್ಮಣನೊರ್ವನೇ ಕ್ಷಣಮಾತ್ರದಲ್ಲಿ ಮುಗಿಸಿಬಿಡಬಲ್ಲನು. ವಿಭೀಷಣನು ಭಯಗೊಂಡು ನನಗೆ ಶರಣು ಬಂದಿದ್ದರೆ ನಾನು ಅವನನ್ನು ನನ್ನ ಪ್ರಾಣಗಳಂತೆ ಕಾಪಾಡುವೆನು. (ಚೌ/೧-೪)

**ದೋ – ಉಭಯ ಭಾँತಿ ತೆಹಿ ಆನಹು ಹँಸಿ ಕಹ ಕೃಪಾನಿಕೇತ।**
**ಜಯ ಕೃಪಾಲ ಕಹಿ ಕಪಿ ಚಲೇ ಅಂಗದ ಹನೂ ಸಮೇತ॥ ೪೪ ॥**

ಕೃಪಾನಿಧಿಯಾದ ಶ್ರೀರಾಮನು ನಗುತ್ತಾ ನುಡಿದನು – ''ಅವನು ಯಾವ ಸ್ಥಿತಿಯಲ್ಲಿದ್ದರೂ, ಯಾವ ಉದ್ದೇಶದಿಂದ ಬಂದಿದ್ದರೂ ಅವನನ್ನು ಇಲ್ಲಿಗೆ ಕರೆದುಕೊಂಡು ಬನ್ನಿರಿ. ಆಗ ಅಂಗದ, ಹನುಮದಾದಿ ವಾನರರು ''ಕೃಪಾಳುವಾದ ಶ್ರೀರಾಮನಿಗೆ ಜಯವಾಗಲೀ'' ಎಂದು ಹೇಳುತ್ತಾ ಹೊರಟರು. (ದೋ/೪೪)

**ಚೌ – ಸಾದರ ತೆಹಿ ಆಗೇँ ಕರಿ ಬಾನರ। ಚಲೇ ಜಹಾँ ರಘುಪತಿ ಕರುನಾಕರ॥**
**ದೂರಿಹಿ ತೇ ದೇಖೇ ದ್ವೌ ಭ್ರಾತಾ। ನಯನಾನಂದ ದಾನ ಕೇ ದಾತಾ ॥ ೧ ॥**
**ಬಹುರಿ ರಾಮ ಛಬಿಧಾಮ ಬಿಲೋಕೀ। ರಹೆಉ ಠಟುಕಿ ಏಕಟಕ ಪಲ ರೋಕೀ॥**
**ಭುಜ ಪ್ರಲಂಬ ಕಂಜಾರುನ ಲೋಚನ। ಸ್ಯಾಮಲ ಗಾತ ಪ್ರನತ ಭಯ ಮೋಚನ॥ ೨ ॥**
**ಸಿಂಘ ಕಂಧ ಆಯತ ಉರ ಸೋಹಾ। ಆನನ ಅಮಿತ ಮದನ ಮನ ಮೋಹಾ॥**
**ನಯನ ನೀರ ಪುಲಕಿತ ಅತಿ ಗಾತಾ। ಮನ ಧರಿ ಧೀರ ಕಹೀ ಮೃದು ಬಾತಾ॥ ೩ ॥**
**ನಾಥ ದಸಾನನ ಕರ ಮೈँ ಭ್ರಾತಾ। ನಿಸಿಚರ ಬಂಸ ಜನಮ ಸುರತ್ರಾತಾ॥**
**ಸಹಜ ಪಾಪಪ್ರಿಯ ತಾಮಸ ದೇಹಾ। ಜಥಾ ಉಲೂಕಹಿ ತಮ ಪರ ನೇಹಾ॥ ೪ ॥**

ವಾನರರು ಆದರದಿಂದ ವಿಭೀಷಣನನ್ನು ಮುಂದಕ್ಕೆ ಮಾಡಿ ಕರುಣಾನಿಧಿಯಾದ ಶ್ರೀರಾಮಚಂದ್ರನ ಬಳಿಗೆ ಕರೆತಂದರು. ನಯನಾನಂದಕರರಾದ ಸೋದರರಿಬ್ಬರನ್ನು ವಿಭೀಷಣನು ದೂರದಿಂದಲೇ ನೋಡಿದನು. ಅನಂತರ ಅತ್ಯಂತ ಸೌಂದರ್ಯನಿಧಾನನಾದ ಶ್ರೀರಾಮಚಂದ್ರನನ್ನು ರೆಪ್ಪೆಮಿಟಿಕಿಸದೆ ನೆಟ್ಟನೋಟದಿಂದ ನೋಡುತ್ತಾ ಸ್ತಬ್ಧನಾಗಿ ನಿಂತುಕೊಂಡನು. ಆ ಭಗವಂತನು ಆಜಾನುಬಾಹುಶೋಭಿತನೂ, ಕಂಜಾರುಣಲೋಚನನೂ, ಪ್ರಣತಭಯಮೋಚಕನೂ, ಶ್ಯಾಮಲಗಾತ್ರನೂ, ಸಿಂಹಸ್ಕಂಧಗಳುಳ್ಳವನೂ, ವಿಶಾಲ ವಕ್ಷಸ್ಥಳಶೋಭಿತನೂ, ಆದ ಪ್ರಭುವು ಕೋಟಿ ಮನ್ಮಥಸುಂದರಾಕಾರನು. ಭಗವಂತನ ಸ್ವರೂಪವನ್ನು ದರ್ಶಿಸಿದ ವಿಭೀಷಣನ ನಯನಗಳು ಆನಂದಾಶ್ರುಪೂರ್ಣವಾದುವು. ಶರೀರವು ಪುಳಕಗೊಂಡಿತು. ಅನಂತರ ಅವನು ಮನಸ್ಸಿನಲ್ಲಿ ಧೈರ್ಯವನ್ನು ತಂದುಕೊಂಡು ಮೃದುಮಧುರವಾಗಿ ಇಂತೆಂದನು – ''ನಾಥಾ! ನಾನು ದಶಾನನ ರಾವಣನ ತಮ್ಮನು. ಓ ಸುರತ್ರಾಣ ಪರಾಯಣಾ! ನಾನು ರಾಕ್ಷಸಕುಲಸಂಜಾತನು. ನನ್ನ ಶರೀರವು ತಾಮಸೀಯಾದುದು. ಸಹಜವಾಗಿಯೇ ಗೂಬೆಗೆ ಕತ್ತಲೆ ಪ್ರಿಯವಾಗಿರುವಂತೆ, ನನಗೆ ಪಾಪಗಳು ಪ್ರಿಯವಾಗಿವೆ. (ಚೌ/೧-೪)

**ದೋ – ಶ್ರವನ ಸುಜಸು ಸುನಿ ಆಯಉँ ಪ್ರಭು ಭಂಜನ ಭವ ಭೀರ।**
**ತ್ರಾಹಿ ತ್ರಾಹಿ ಆರತಿ ಹರನ ಸರನ ಸುಖದ ರಘುಬೀರ॥ ೪೫ ॥**

ನೀನು ಜನನ ಮರಣ ಭಯಗಳನ್ನು ನಾಶಮಾಡುವವನೆಂದು ನಾನು ಕಿವಿಯಾರೆ ಕೇಳಿರುವೆನು. ದುಃಖಿತರ ದುಃಖವನ್ನು ದೂರಮಾಡುವವನೇ! ಶರಣಾಗತರಿಗೆ ಸುಖಕೊಡುವ ಓ ರಘುವೀರಾ! ನನ್ನನ್ನು ಕಾಪಾಡು! ಕಾಪಾಡು! ಎಂದು ಹೇಳುತ್ತಾ ಪ್ರಭುವಿಗೆ ದಂಡಪ್ರಣಾಮಮಾಡಿದನು. (ದೋ/೪೫)

**ಚೌ – ಅಸ ಕಹಿ ಕರತ ದಂಡವತ ದೇಖಾ। ತುರತ ಉಠೇ ಪ್ರಭು ಹರಷ ಬಿಸೇಷಾ॥**
**ದೀನ ಬಚನ ಸುನಿ ಪ್ರಭು ಮನ ಭಾವಾ। ಭುಜ ಬಿಸಾಲ ಗಹಿ ಹೃದಯँ ಲಗಾವಾ॥ ೧ ॥**
**ಅನುಜ ಸಹಿತ ಮಿಲಿ ಢಿಗ ಬೈಠಾರೀ। ಬೋಲೇ ಬಚನ ಭಗತ ಭಯಹಾರೀ॥**
**ಕಹು ಲಂಕೇಸ ಸಹಿತ ಪರಿವಾರಾ। ಕುಸಲ ಕುಠಾಹರ ಬಾಸ ತುಮ್ಹಾರಾ ॥ ೨ ॥**
**ಖಲ ಮಂಡಲೀ ಬಸಹು ದಿನು ರಾತೀ। ಸಖಾ ಧರಮ ನಿಬಹಇ ಕೆಹಿ ಭಾँತೀ॥**
**ಮೈँ ಜಾನಉँ ತುಮ್ಹಾರಿ ಸಬ ರೀತೀ। ಅತಿ ನಯ ನಿಪುನ ನ ಭಾವ ಅನೀತೀ॥ ೩ ॥**
**ಬರು ಭಲ ಬಾಸ ನರಕ ಕರ ತಾತಾ। ದುಷ್ಟ ಸಂಗ ಜನಿ ದೇಇ ಬಿಧಾತಾ॥**
**ಅಬ ಪದ ದೇಖಿ ಕುಸಲ ರಘುರಾಯಾ। ಜೌँ ತುಮ್ಹ ಕೀನ್ಹಿ ಜಾನಿ ಜನ ದಾಯಾ॥ ೪ ॥**

ಸಾಷ್ಟಾಂಗ ನಮಸ್ಕರಿಸಿದ ವಿಭೀಷಣನನ್ನು ನೋಡಿ ಶ್ರೀರಾಮನು ಹರ್ಷಿತನಾಗಿ ದಿಗ್ಗನೆ ಎದ್ದು ನಿಂತನು. ವಿಭೀಷಣನ ದೀನವಾಣಿಯು ಪ್ರಭುವಿನ ಮನಸ್ಸು ಸೂರೆಗೊಂಡಿತು. ಅವನು ತನ್ನ ವಿಶಾಲ ಭುಜಗಳಿಂದ ಆತನನ್ನು ಬಾಚಿ ತಬ್ಬಿಕೊಂಡನು. ಲಕ್ಷ್ಮಣನೂ ಕೂಡ ಅವನನ್ನು ಆಲಿಂಗಿಸಿಕೊಂಡನು. ಬಳಿಕ ಶ್ರೀರಾಮನು ವಿಭೀಷಣನನ್ನು ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡು ಅಭಯವಚನಗಳನ್ನು ನುಡಿದನು – ''ಓ ಲಂಕೇಶ್ವರಾ! ನೀನು ನಿನ್ನ ಕುಟುಂಬಸಹಿತ ಕ್ಷೇಮವೇ? ನೀನು ವಾಸವಾಗಿರುವ ಸ್ಥಾನವು ಸರಿಯಿಲ್ಲ. ಹಗಲು-ರಾತ್ರಿ ದುಷ್ಟರ ಮಧ್ಯದಲ್ಲೇ ವಾಸಿಸುತ್ತಿರುವೆ. ಮಿತ್ರನೇ! ಇಂತಹ ಸ್ಥಿತಿಯಲ್ಲಿ ನೀನು ನಿನ್ನ ಧರ್ಮವನ್ನು ಹೇಗೆ ನಿರ್ವಹಿಸುತ್ತಿದ್ದೀಯೇ? ನಾನು ನಿನ್ನ ಆಚಾರ ವ್ಯವಹಾರಗಳನ್ನು ಚೆನ್ನಾಗಿ ಬಲ್ಲೆನು. ನೀನು ತುಂಬಾ ನೀತಿನಿಪುಣನು. ಅನೀತಿಯು ನಿನಗೆ ಹಿಡಿಸದು. ಅಯ್ಯಾ! ದುಷ್ಟರ ಸಹವಾಸಕ್ಕಿಂತ ನರಕವಾಸವೇ ಮೇಲು. ಆದ್ದರಿಂದ ವಿಧಾತನು ದುಷ್ಟರಸಂಗವನ್ನು ಎಂದೂ ಯಾರಿಗೂ ಕೊಡಬಾರದು.'' ವಿಭೀಷಣನು ಹೇಳಿದನು – ''ಓ ರಘುನಾಥಾ! ಈಗ ನಿಮ್ಮ ಚರಣ ದರ್ಶನದಿಂದ ನಾನು ಕ್ಷೇಮವಾಗಿದ್ದೇನೆ. ನೀವು ನನ್ನನ್ನು ಸೇವಕನೆಂದು ಬಗೆದು ನನ್ನ ಮೇಲೆ ಕೃಪೆಗೈದಿರುವಿರಿ. (ಚೌ/೧-೪)

**ದೋ – ತಬ ಲಗಿ ಕುಸಲ ನ ಜೀವ ಕಹುँ ಸಪನೇಹುँ ಮನ ಬಿಶ್ರಾಮ ।**
**ಜಬ ಲಗಿ ಭಜತ ನ ರಾಮ ಕಹುँ ಸೋಕ ಧಾಮ ತಜಿ ಕಾಮ ॥ ೪೬ ॥**

ಜೀವಿಯು ಶೋಕಧಾಮವಾದ ವಿಷಯವಾಸನೆಗಳನ್ನು, ಕಾಮನೆಗಳನ್ನು ತ್ಯಜಿಸಿ, ಶ್ರೀರಾಮನನ್ನು ಭಜಿಸುವ ತನಕ ಅವನಿಗೆ ನೆಮ್ಮದಿಯಿರುವುದಿಲ್ಲ. ಕನಸಿನಲ್ಲೂ ಮನಶ್ಶಾಂತಿ ಲಭಿಸದು. (ದೋ/೪೬)

**ಚೌ – ತಬ ಲಗಿ ಹೃದಯँ ಬಸತ ಖಲ ನಾನಾ । ಲೋಭ ಮೋಹ ಮಚ್ಛರ ಮದ ಮಾನಾ ॥**
**ಜಬ ಲಗಿ ಉರ ನ ಬಸತ ರಘುನಾಥಾ । ಧರೇँ ಚಾಪ ಸಾಯಕ ಕಟಿ ಭಾಥಾ ॥ ೧ ॥**
**ಮಮತಾ ತರುನ ತಮೀ ಅँಧಿಆರೀ । ರಾಗ ದ್ವೇಷ ಉಲೂಕ ಸುಖಕಾರೀ ॥**
**ತಬ ಲಗಿ ಬಸತಿ ಜೀವ ಮನ ಮಾಹೀँ । ಜಬ ಲಗಿ ಪ್ರಭು ಪ್ರತಾಪ ರಬಿ ನಾಹೀँ ॥ ೨ ॥**
**ಅಬ ಮೈँ ಕುಸಲ ಮಿಟೇ ಭಯ ಭಾರೇ । ದೇಖಿ ರಾಮ ಪದ ಕಮಲ ತುಮ್ಹಾರೇ ॥**
**ತುಮ್ಹ ಕೃಪಾಲ ಜಾ ಪರ ಅನುಕೂಲಾ । ತಾಹಿ ನ ಬ್ಯಾಪ ತ್ರಿಬಿಧ ಭವ ಸೂಲಾ ॥ ೩ ॥**
**ಮೈँ ನಿಸಿಚರ ಅತಿ ಅಧಮ ಸುಭಾಊ । ಸುಭ ಆಚರನು ಕೀನ್ಹ ನಹिँ ಕಾಊ ॥**
**ಜಾಸು ರೂಪ ಮುನಿ ಧ್ಯಾನ ನ ಆವಾ । ತೇಹिँ ಪ್ರಭು ಹರಷಿ ಹೃದಯँ ಮೋಹಿ ಲಾವಾ ॥ ೪ ॥**

ಧನುರ್ಬಾಣಗಳನ್ನೂ, ತೂಣೀರವನ್ನೂ ಧರಿಸಿದ ಶ್ರೀರಘುನಾಥನು ಹೃದಯದಲ್ಲಿ ನೆಲೆಸುವತನಕ ಲೋಭ, ಮೋಹ, ಮದ, ಮತ್ಸರ, ಅಭಿಮಾನ ಮುಂತಾದ ಅವಗುಣಗಳು ತೊಲಗಿಹೋಗಲಾರವು. ಮಮಕಾರವೆಂಬ ಕತ್ತಲರಾತ್ರಿಯು ರಾಗ-ದ್ವೇಷಗಳೆಂಬ ಗೂಬೆಗಳಿಗೆ ಸುಖದಾಯಕವಾಗಿರುತ್ತದೆ. ಪ್ರಭುರಾಮನ ಪ್ರತಾಪವೆಂಬ ಸೂರ್ಯನು ಉದಯಿಸುವವರೆಗೆ ಆ ಮಮತಾಂಧಕಾರವು ಜೀವಿಯ ಮನಸ್ಸಿನಲ್ಲಿ ಆವರಿಸಿಯೇ ಇರುತ್ತದೆ. ಶ್ರೀರಾಮಾ! ನಿನ್ನ ಪಾದಪದ್ಮಗಳ ದರ್ಶನಪ್ರಭಾವದಿಂದ ನಾನೀಗ ಕ್ಷೇಮವಾಗಿದ್ದೇನೆ. ನನ್ನ ಮಹಾಭಯವೆಲ್ಲವೂ ದೂರವಾಯಿತು. ಓ ಕೃಪಾಳುವೇ! ನಿನ್ನ ದಯೆಗೆ ಪಾತ್ರರಾದವರಿಗೆ ತಾಪತ್ರಯಗಳು ಎಂದಿಗೂ ವ್ಯಾಪಿಸಲಾರವು. ನಾನು ಅತ್ಯಂತ ನೀಚ ಸ್ವಭಾವದ ರಾಕ್ಷಸನಾಗಿರುವೆ. ಎಂದೂ ಶುಭಕಾರ್ಯಗಳನ್ನು ಆಚರಿಸಿದವನಲ್ಲ. ಮುನಿಗಳ ಧ್ಯಾನಕ್ಕೂ ಗೋಚರವಾಗದ ಆ ಪ್ರಭುವಾದ ನೀನು ಸ್ವತಃ ಒಲಿದು ನನ್ನನ್ನು ಆಲಿಂಗನ ಸುಖಾನಂದವನ್ನು ಅನುಗ್ರಹಿಸಿದಿರಿ. (ಚೌ/೧-೪)

**ದೋ – ಅಹೋಭಾಗ್ಯ ಮಮ ಅಮಿತ ಅತಿ ರಾಮ ಕೃಪಾ ಸುಖ ಪುಂಜ ।**
**ದೇಖೆಉँ ನಯನ ಬಿರಂಚಿ ಸಿವ ಸೇಬ್ಯ ಜುಗಲ ಪದ ಕಂಜ ॥ ೪೭ ॥**

ಶ್ರೀರಾಮಾ! ಕೃಪಾಸುಖಸ್ವರೂಪಾ! ಬ್ರಹ್ಮಾ, ಮಹೇಶ್ವರರಿಂದ ಸೇವಿಸಲ್ಪಡುವ ನಿನ್ನ ಚರಣಯುಗಳವನ್ನು ನಾನು ಇಂದು ಕಣ್ಣಾರೆ ಕಂಡೆ. ಇದಕ್ಕಿಂತ ಮಿಗಿಲಾದ ಸೌಭಾಗ್ಯ ಬೇರೇನಿದ್ದೀತು? (ದೋ/೪೭)

**ಚೌ – ಸುನಹು ಸಖಾ ನಿಜ ಕಹಉँ ಸುಭಾಊ । ಜಾನ ಭುಸುಂಡಿ ಸಂಭು ಗಿರಿಜಾಊ ॥**
**ಜೌँ ನರ ಹೋಇ ಚರಾಚರ ದ್ರೋಹೀ । ಆವೈ ಸಭಯ ಸರನ ತಕಿ ಮೋಹೀ ॥ ೧ ॥**
**ತಜಿ ಮದ ಮೋಹ ಕಪಟ ಛಲ ನಾನಾ । ಕರಉँ ಸದ್ಯ ತೇಹಿ ಸಾಧು ಸಮಾನಾ ॥**
**ಜನನೀ ಜನಕ ಬಂಧು ಸುತ ದಾರಾ । ತನು ಧನು ಭವನ ಸುಹೃದ ಪರಿವಾರಾ ॥ ೨ ॥**

**ಸಬ ಕೈ ಮಮತಾ ತಾಗ ಬಟೋರೀ। ಮಮ ಪದ ಮನಹಿ ಬಾಁಧ ಬರಿ ಡೋರೀ॥**
**ಸಮದರಸೀ ಇಚ್ಛಾ ಕಛು ನಾಹೀಂ। ಹರಷ ಸೋಕ ಭಯ ನಹಿಂ ಮನ ಮಾಹೀಂ॥ ೩ ॥**
**ಅಸ ಸಜ್ಜನ ಮಮ ಉರ ಬಸ ಕೈಸೇಂ। ಲೋಭೀ ಹೃದಯಁ ಬಸಇ ಧನು ಜೈಸೇಂ॥**
**ತುಮ್ಹ ಸಾರಿಖೇ ಸಂತ ಪ್ರಿಯ ಮೋರೇಂ। ಧರಉಁ ದೇಹ ನಹಿಂ ಆನ ನಿಹೋರೇಂ॥ ೪ ॥**

ಆಗ ಶ್ರೀರಾಮಚಂದ್ರನು ಇಂತೆಂದನು – ''ಮಿತ್ರನೇ! ಕಾಕಭುಶುಂಡಿಗಳೂ, ಉಮಾಮಹೇಶ್ವರರೂ ಅರಿತಿರುವ ನನ್ನ ಸ್ವಭಾವವನ್ನು ನಿನಗೆ ಅರುಹುತ್ತೇನೆ. ಕೇಳು. ಚರಾಚರ ಜಗತ್ತಿಗೆ ದ್ರೋಹವನ್ನೆಸಗಿದವನಾದರೂ ಭಯಕಂಪಿತನಾಗಿ ನನಗೆ ಶರಣುಬಂದರೆ, ಮದ, ಮೋಹ, ಮೋಸ-ಕಪಟ ಮುಂತಾದ ಅವಗುಣಗಳನ್ನು ತ್ಯಜಿಸಿದವನನ್ನು ನಾನು ಕೂಡಲೇ ಸಾಧುವಿನಂತೆ ಮಾಡುತ್ತೇನೆ. ತಂದೆ-ತಾಯಿ, ಅಣ್ಣ-ತಮ್ಮಂದಿರು, ಸತಿ-ಸುತರು, ತನು, ಧನ, ಭವನ, ಮಿತ್ರ, ಪರಿವಾರ ಇವರೆಲ್ಲರ ಬಗೆಗೆ ಇರುವ ಮಮತ್ವವೆಂಬ ನೂಲಿನ ಎಳೆಗಳನ್ನು ಒಟ್ಟುಗೂಡಿಸಿಕೊಂಡು, ಅವುಗಳಿಂದ ಒಂದು ಹುರಿಯನ್ನು ಹೊಸೆದು ಅವನ್ನು ನನ್ನ ಚರಣಗಳಿಗೆ ಬಂಧಿಸುವವನೂ, ಸಮದರ್ಶಿಯೂ, ಇಚ್ಛಾರಹಿತನೂ, ಹರ್ಷ-ಶೋಕ, ಭಯದಿಂದ ದೂರನೂ ಆದ ಇಂತಹ ಸಜ್ಜನನು – ಲೋಭಿಯ ಹೃದಯದಲ್ಲಿ ಧನವು ನೆಲೆಸುವಂತೆ ನನ್ನ ಹೃದಯದಲ್ಲಿ ನೆಲೆಸುತ್ತಾನೆ. ನಿನ್ನಂತಹ ಸಂತರು ನನಗೆ ಪ್ರಾಣಪ್ರಿಯರು. ಸಜ್ಜನರ ರಕ್ಷಣೆಗಾಗಿಯೇ ನಾನು ಅವತರಿಸುತ್ತಾ ಇರುತ್ತೇನೆ. ನನ್ನ ಅವತಾರಕ್ಕೆ ಬೇರಾವ ಕಾರಣವೂ ಇಲ್ಲ. (ಚೌ/೧-೪)

**ದೋ – ಸಗುನ ಉಪಾಸಕ ಪರಹಿತ ನಿರತ ನೀತಿ ದೃಢ ನೇಮ।**
**ತೇ ನರ ಪ್ರಾನ ಸಮಾನ ಮಮ ಜಿನ್ಹ ಕೇಂ ದ್ವಿಜ ಪದ ಪ್ರೇಮ॥ ೪೮ ॥**

ಸಗುಣ ಪರಬ್ರಹ್ಮನ ಉಪಾಸಕರೂ, ಪರಹಿತನಿರತರೂ, ನೀತಿ, ನಿಯಮಗಳಲ್ಲಿ ದೃಢರೂ, ಬ್ರಾಹ್ಮಣರ ಚರಣಗಳನ್ನು ಸೇವಿಸುವವರೂ ನನಗೆ ಪ್ರಾಣಪ್ರಿಯರು. (ದೋ/೪೮)

**ಚೌ – ಸುನು ಲಂಕೇಸ ಸಕಲ ಗುನ ತೋರೇಂ। ತಾತೇಂ ತುಮ್ಹ ಅತಿಸಯ ಪ್ರಿಯ ಮೋರೇಂ॥**
**ರಾಮ ಬಚನ ಸುನಿ ಬಾನರ ಜೂಥಾ। ಸಕಲ ಕಹಹಿಂ ಜಯ ಕೃಪಾ ಬರೂಥಾ॥ ೧ ॥**
**ಸುನತ ಬಿಭೀಷನು ಪ್ರಭು ಕೈ ಬಾನೀ। ನಹಿಂ ಅಘಾತ ಶ್ರವನಾಮೃತ ಜಾನೀ॥**
**ಪದ ಅಂಬುಜ ಗಹಿ ಬಾರಹಿಂ ಬಾರಾ। ಹೃದಯಁ ಸಮಾತ ನ ಪ್ರೇಮು ಅಪಾರಾ॥ ೨ ॥**
**ಸುನಹು ದೇವ ಸಚರಾಚರ ಸ್ವಾಮೀ। ಪ್ರನತಪಾಲ ಉರ ಅಂತರಜಾಮೀ॥**
**ಉರ ಕಛು ಪ್ರಥಮ ಬಾಸನಾ ರಹೀ। ಪ್ರಭು ಪದ ಪ್ರೀತಿ ಸರಿತ ಸೋ ಬಹೀ॥ ೩ ॥**
**ಅಬ ಕೃಪಾಲ ನಿಜ ಭಗತಿ ಪಾವನೀ। ದೇಹು ಸದಾ ಸಿವ ಮನ ಭಾವನೀ॥**
**ಏವಮಸ್ತು ಕಹಿ ಪ್ರಭು ರನಧೀರಾ। ಮಾಗಾ ತುರತ ಸಿಂಧು ಕರ ನೀರಾ॥ ೪ ॥**
**ಜದಪಿ ಸಖಾ ತವ ಇಚ್ಛಾ ನಾಹೀಂ। ಮೋರ ದರಸು ಅಮೋಘ ಜಗ ಮಾಹೀಂ॥**
**ಅಸ ಕಹಿ ರಾಮ ತಿಲಕ ತೆಹಿ ಸಾರಾ। ಸುಮನ ಬೃಷ್ಟಿ ನಭ ಭಈ ಅಪಾರಾ॥ ೫ ॥**

ಓ ಲಂಕೇಶ್ವರಾ! ಕೇಳು. ನಿನ್ನಲ್ಲಿ ಮೇಲಿನ ಎಲ್ಲ ಸದ್ಗುಣಗಳೂ ತುಂಬಿವೆ. ಅದರಿಂದಾಗಿ ನೀನು ನನಗೆ ಅತ್ಯಂತ ಪ್ರೀತಿಪಾತ್ರನಾಗಿರುವೆ. ಶ್ರೀರಾಮನ ಮೃದುವಚನಗಳನ್ನು ಕೇಳಿದ ವಾನರರೆಲ್ಲರೂ 'ಕೃಪಾಸಾಗರನಾದ ಶ್ರೀರಾಮಚಂದ್ರನಿಗೆ ಜಯವಾಗಲೀ' ಎಂದು ಹರ್ಷೋದ್ಗಾರಗೈದರು. ಪ್ರಭುವಿನ ಕರ್ಣಾಮೃತವಾದ ವಾಣಿಯನ್ನು ಆಲಿಸಿ, ಅದನ್ನು ಎಷ್ಟು ಪಾನಮಾಡಿದರೂ ವಿಭೀಷಣನು ತಣಿಯನು. ಅವನು ಪುನಃ-ಪುನಃ ಪ್ರಭುಪಾದಗಳನ್ನು ಅಪ್ಪಿಕೊಳ್ಳುವನು. ಅಪಾರವಾದ ಪ್ರೇಮವು ಅವನ ಹೃದಯದಲ್ಲಿ ಹಿಡಿಸದಾಯಿತು. ಆಗ ಅವನೆಂದ – ''ದೇವಾ! ಚರಾಚರ ಜಗತ್ಪ್ರಭೂ! ಶರಣಾಗತ ರಕ್ಷಕಾ! ಎಲ್ಲರ ಹೃದಯವನ್ನು ಅರಿಯುವವನೇ! ಇಷ್ಟರವರೆವಿಗೂ ನನ್ನ ಹೃದಯದಲ್ಲಿದ್ದ ವಿಷಯವಾಸನೆಗಳೆಲ್ಲವೂ ಪ್ರಭುಪದಗಳಲ್ಲುಂಟಾದ ಭಕ್ತಿಪ್ರವಾಹದಿಂದ ಕೊಚ್ಚಿಕೊಂಡು ಹೋಯಿತು. ಓ ಕೃಪಾಳೂ! ಸದಾಶಿವನ ಮನಸ್ಸಿನಲ್ಲಿರುವ ಅನನ್ಯ ಭಕ್ತಿಯನ್ನು ನನಗೆ ಅನುಗ್ರಹಿಸು.'' ಶ್ರೀರಾಮಪ್ರಭುವು 'ಏವಮಸ್ತು' (ಹಾಗೇ ಆಗಲೀ) ಎಂದು ಹರಸಿದನು. ರಣಧೀರನಾದ ಪ್ರಭುವು ಕೂಡಲೇ ಸಮುದ್ರದ ನೀರನ್ನು ತಾ ಎಂದು ಲಕ್ಷ್ಮಣನಿಗೆ ಆಜ್ಞಾಪಿಸಿದನು. ಬಳಿಕ ವಿಭೀಷಣನಲ್ಲಿ ಹೇಳಿದನು – ಗೆಳೆಯಾ! ''ಜಗತ್ತಿನಲ್ಲಿ ನನ್ನ ದರ್ಶನವು ಅಮೋಘವಾದುದು. ಅದು ಎಂದಿಗೂ ನಿಷ್ಫಲವಾಗುವುದಿಲ್ಲ. ನಿನಗೆ ಇಚ್ಛೆ ಇಲ್ಲದಿದ್ದರೂ ನಿನಗೆ ರಾಜ್ಯಾಭಿಷೇಕವನ್ನು ಮಾಡುವೆನು ಎಂದು ಹೇಳಿ ಶ್ರೀರಾಮನು ಅವನನ್ನು ಲಂಕೆಯ ರಾಜ್ಯಕ್ಕೆ ರಾಜನನ್ನಾಗಿಸಿದನು. ಆಗ ಅಂತರಿಕ್ಷದಿಂದ ಅಪಾರವಾದ ಪುಷ್ಪವೃಷ್ಟಿಯಾಯಿತು. (ಚೌ/೧-೫)

**ದೋ – ರಾವನ ಕ್ರೋಧ ಅನಲ ನಿಜ ಸ್ವಾಸ ಸಮೀರ ಪ್ರಚಂಡ।**
**ಜರತ ಬಿಭೀಷನು ರಾಖೆಉ ದೀನ್ಹೆಉ ರಾಜು ಅಖಂಡ ॥೪೯ (ಕ)॥**
**ಜೋ ಸಂಪತಿ ಸಿವ ರಾವನಹಿ ದೀನ್ಹಿ ದಿಏಁ ದಸ ಮಾಥ।**
**ಸೋಇ ಸಂಪದಾ ಬಿಭೀಷನಹಿ ಸಕುಚಿ ದೀನ್ಹಿ ರಘುನಾಥ ॥೪೯ (ಖ)॥**

ಪ್ರಜ್ವಲಿಸುತ್ತಿದ್ದ ರಾವಣನ ಕ್ರೋಧಾಗ್ನಿಯಿಂದ ಬೆಂದುಹೋದ ವಿಭೀಷಣನನ್ನು ಶ್ರೀರಾಮಚಂದ್ರನು ತನ್ನ ವಚನಾಮೃತ ಧಾರೆಯಿಂದ ಸಂತೈಸಿದನು. ಕರುಣಾಮೂರ್ತಿಯಾದ ಶ್ರೀರಾಮನು ಆತನನ್ನು ರಕ್ಷಿಸಿ, ಅಖಂಡರಾಜ್ಯವನ್ನು ಅನುಗ್ರಹಿಸಿದನು. ತನ್ನ ಹತ್ತುತಲೆಯನ್ನು ಬಲಿಯನ್ನಿತ್ತಾಗ ರಾವಣನಿಗೆ ಶಿವನು ಕರುಣಿಸಿದ ಸಂಪತ್ತನ್ನೇ ಶ್ರೀರಘುನಾಥನು ವಿಭೀಷಣನಿಗೆ ತುಂಬಾ ಸಂಕೋಚದಿಂದಲೇ ಇತ್ತನು. (ತಾನೇನೂ ಕೊಡಲಿಲ್ಲವೋ ಎಂದು ತಿಳಿದನು.) (ದೋ/೪೯ ಕ, ಖ)

**ಚೌ – ಅಸ ಪ್ರಭು ಛಾಡಿ ಭಜಹಿಁ ಜೇ ಆನಾ। ತೇ ನರ ಪಸು ಬಿನು ಪೂಁಛ ಬಿಷಾನಾ ॥**
**ನಿಜ ಜನ ಜಾನಿ ತಾಹಿ ಅಪನಾವಾ। ಪ್ರಭು ಸುಭಾವ ಕಪಿ ಕುಲ ಮನ ಭಾವಾ ॥೧॥**
**ಪುನಿ ಸರ್ಬಗ್ಯ ಸರ್ಬ ಉರ ಬಾಸೀ। ಸರ್ಬರೂಪ ಸಬ ರಹಿತ ಉದಾಸೀ ॥**
**ಬೋಲೇ ಬಚನ ನೀತಿ ಪ್ರತಿಪಾಲಕ। ಕಾರನ ಮನುಜ ದನುಜ ಕುಲ ಘಾಲಕ ॥೨॥**
**ಸುನು ಕಪೀಸ ಲಂಕಾಪತಿ ಬೀರಾ। ಕೇಹಿ ಬಿಧಿ ತರಿಅ ಜಲಧಿ ಗಂಭೀರಾ ॥**
**ಸಂಕುಲ ಮಕರ ಉರಗ ಝಷ ಜಾತೀ। ಅತಿ ಅಗಾಧ ದುಸ್ತರ ಸಬ ಭಾಁತೀ ॥೩॥**
**ಕಹ ಲಂಕೇಸ ಸುನಹು ರಘುನಾಯಕ। ಕೋಟಿ ಸಿಂಧು ಸೋಷಕ ತವ ಸಾಯಕ ॥**
**ಜದ್ಯಪಿ ತದಪಿ ನೀತಿ ಅಸಿ ಗಾಈ। ಬಿನಯ ಕರಿಅ ಸಾಗರ ಸನ ಜಾಈ ॥೪॥**

ಇಂತಹ ಕೃಪಾಳುವಾದ ದೊರೆಯನ್ನು ಮರೆತು, ಇತರರನ್ನು ಭಜಿಸುವವರು ಕೊಂಬುಬಾಲವಿಲ್ಲದ ಪಶುಗಳೇ ಸರಿ. ಶ್ರೀರಾಮನು ವಿಭೀಷಣನನ್ನು ತನ್ನ ಭಕ್ತನೆಂದು ಬಗೆದು ತನ್ನವನನ್ನಾಗಿಸಿಕೊಂಡನು. ಪ್ರಭುಸ್ವಭಾವದಿಂದ ವಾನರರೆಲ್ಲರಿಗೆ ತುಂಬಾ ಸಂತೋಷವಾಯಿತು. ಬಳಿಕ ಸರ್ವಜ್ಞನೂ, ಸರ್ವರ ಹೃದಯಾಂತರ್ಯಾಮಿಯೂ, ಸಮಸ್ತರೂಪದಿಂದ ಪ್ರಕಟನಾಗುವವನೂ, ಸರ್ವರಹಿತನೂ (ಯಾವುದರಲ್ಲಿಯೂ ಲಿಪ್ತನಲ್ಲದವನೂ), ಉದಾಸೀನನೂ, ಭಕ್ತರನ್ನು ಅನುಗ್ರಹಿಸಲು ಮಾನವ ಶರೀರವನ್ನು ಧರಿಸಿದವನೂ ದನುಜಕುಲನಾಶಕನೂ, ಆದ ಶ್ರೀರಾಮಚಂದ್ರನು ನೀತಿಪ್ರತಿಪಾಲಕವಾದ ಮಾತನ್ನು ಹೇಳಿದನು – 'ಎಲೈ ವೀರ ಕಪೀಶ್ವರ ಸುಗ್ರೀವಾ! ಲಂಕೇಶ್ವರ ವಿಭೀಷಣಾ! ಕೇಳಿರಿ. ಈ ಗಂಭೀರ ಜಲಧಿಯನ್ನು ದಾಟುವುದೆಂತು? ಅನೇಕ ಜಾತಿಯ ಮೊಸಳೆಗಳೂ, ಹಾವುಗಳು, ತಿಮಿಂಗಿಲಗಳೂ ಮುಂತಾದ ಜಲಚರಗಳಿಂದ ತುಂಬಿದ ಈ ಅತ್ಯಂತ ಅಗಾಧ ಸಮುದ್ರವನ್ನು ದಾಟಲು ಎಲ್ಲ ರೀತಿಯಿಂದಲೂ ದುಸ್ತರವಾಗಿದೆಯಲ್ಲ! ಆಗ ವಿಭೀಷಣನೆಂದ – ಓ ರಘುನಾಥಾ! ನಿಮ್ಮ ಒಂದೇ ಬಾಣವು ಕೋಟಿಸಮುದ್ರಗಳನ್ನು ಒಣಗಿಸಲಿಕ್ಕೆ ಸಾಕು. ಆದರೂ ನೈತಿಕ ದೃಷ್ಟಿಯಿಂದ ಮೊದಲಿಗೆ ಸಾಗರನ ಬಳಿಗೆ ಹೋಗಿ ಪ್ರಾರ್ಥಿಸುವುದು ಸೂಕ್ತವೆಂದು ತೋರುತ್ತದೆ. (ಚೌ/೧-೪)

**ದೋ – ಪ್ರಭು ತುಮ್ಹಾರ ಕುಲಗುರ ಜಲಧಿ ಕಹಿಹಿ ಉಪಾಯ ಬಿಚಾರಿ।**
**ಬಿನು ಪ್ರಯಾಸ ಸಾಗರ ತರಿಹಿ ಸಕಲ ಭಾಲು ಕಪಿ ಧಾರಿ ॥೫೦॥**

ಪ್ರಭೂ! ಸಮುದ್ರವು ನಿಮ್ಮ ಪೂರ್ವಜರಲ್ಲಿ ಹಿರಿಯವನು. ಅವನು ವಿಚಾರಮಾಡಿ ಉಪಾಯವನ್ನು ಹೇಳಬಹುದು. ಅದರಿಂದ ಈ ವಾನರ-ಭಲ್ಲೂಕ ಸೈನ್ಯವು ಯಾವ ಪ್ರಯಾಸವೂ ಇಲ್ಲದೆ ಜಲಧಿಯನ್ನು ದಾಟಬಲ್ಲರು. (ದೋ/೫೦)

**ಚೌ – ಸಖಾ ಕಹೀ ತುಮ್ಹ ನೀಕಿ ಉಪಾಈ। ಕರಿಅ ದೈವ ಜೌಁ ಹೋಇ ಸಹಾಈ ॥**
**ಮಂತ್ರ ನ ಯಹ ಲಛಿಮನ ಮನ ಭಾವಾ। ರಾಮ ಬಚನ ಸುನಿ ಅತಿ ದುಖ ಪಾವಾ ॥೧॥**
**ನಾಥ ದೈವ ಕರ ಕವನ ಭರೋಸಾ। ಸೋಷಿಅ ಸಿಂಧು ಕರಿಅ ಮನ ರೋಸಾ ॥**
**ಕಾದರ ಮನ ಕಹುಁ ಏಕ ಅಧಾರಾ। ದೈವ ದೈವ ಆಲಸೀ ಪುಕಾರಾ ॥೨॥**
**ಸುನತ ಬಿಹಸಿ ಬೋಲೇ ರಘುಬೀರಾ। ಐಸೇಹಿಁ ಕರಬ ಧರಹು ಮನ ಧೀರಾ ॥**
**ಅಸ ಕಹಿ ಪ್ರಭು ಅನುಜಹಿ ಸಮುಝಾಈ। ಸಿಂಧು ಸಮೀಪ ಗಏ ರಘುರಾಈ ॥೩॥**

**ಪ್ರಥಮ ಪ್ರನಾಮ ಕೀನ್ಹ ಸಿರು ನಾಈ। ಬೈಠೇ ಪುನಿ ತಟ ದರ್ಭ ಡಸಾಈ॥**
**ಜಬಹಿಂ ಬಿಭೀಷನ ಪ್ರಭು ಪಹಿಂ ಆಏ। ಪಾಛೇಂ ರಾವನ ದೂತ ಪಠಾಏ॥ ೪॥**

ವಿಭೀಷಣನ ಮಾತನ್ನು ಕೇಳಿ ಶ್ರೀರಾಮನು ಇಂತೆಂದನು – ಸಖನೇ! ನೀನು ಒಳ್ಳೆಯ ಉಪಾಯವನ್ನೇ ಸೂಚಿಸಿರುವೆ. ದೈವ ಸಹಾಯವಿದ್ದರೆ ಹಾಗೇ ಮಾಡೋಣ. ಆದರೆ ಈ ಸಲಹೆ ಲಕ್ಷ್ಮಣನಿಗೆ ಹಿಡಿಸಲಿಲ್ಲ. ಶ್ರೀರಾಮನ ಮಾತನ್ನು ಕೇಳಿ ಅವನಿಗೆ ತುಂಬಾ ನೋವಾಗಿ ನುಡಿದನು – ಪ್ರಭೂ! ದೈವದ್ದೇನು ಭರವಸೆ! ಮನಸ್ಸಿನಲ್ಲಿ ರೋಷತಳೆದು, ಜಲಧಿಯನ್ನು ಇಂಗಿಸಿ ಬಿಡಿರಿ. ದೈವವು ಹೇಡಿಗಳ ಮನಸ್ಸಿನ ಊರುಗೋಲು. ಸೋಮಾರಿಗಳು ದೈವ-ದೈವ ಎಂದು ಗೋಗರೆಯುತ್ತಾರೆ. ಇದನ್ನು ಕೇಳಿ ರಘುನಾಥನು ನಕ್ಕು ನುಡಿದನು – 'ಹಾಗೇ ಮಾಡೋಣ. ಮನಸ್ಸಿನಲ್ಲಿ ಧೈರ್ಯತಾಳು'' ಎಂದು ಲಕ್ಷ್ಮಣನನ್ನು ಸಂತೈಸಿದನು. ಶ್ರೀರಾಮನು ಸಮುದ್ರದ ಬಳಿಗೆ ಸಮೀಪಿಸಿ, ಮೊದಲಿಗೆ ತಲೆವಾಗಿ ನಮಸ್ಕರಿಸಿದನು. ಅನಂತರ ತೀರದಲ್ಲಿ ದರ್ಭೆಗಳನ್ನು ಹಾಸಿಕೊಂಡು ಅದರ ಮೇಲೆ ಕುಳಿತುಕೊಂಡನು. ವಿಭೀಷಣನು ತೆರಳಿದಾಕ್ಷಣ ರಾವಣನು ಶುಕ-ಸಾರಣರೆಂಬ ದೂತರನ್ನು ಶ್ರೀರಾಮನ ಬಳಿಗೆ ಅಟ್ಟಿದನು. (ಚೌ/೧-೪)

## ಶುಕಸಾರಣ ವೃತ್ತಾಂತ

**ದೋ – ಸಕಲ ಚರಿತ ತಿನ್ಹ ದೇಖೇ ಧರೇಂ ಕಪಟ ಕಪಿ ದೇಹ।**
**ಪ್ರಭು ಗುನ ಹೃದಯ್ ಸರಾಹಹಿಂ ಸರನಾಗತ ಪರ ನೇಹ॥ ೫೧॥**

ಆ ದೂತರು ಕಪಟ ವಾನರರೂಪವನ್ನು ಧರಿಸಿ, ಜರಗಿದ ಎಲ್ಲ ಲೀಲೆಗಳನ್ನು ಗಮನಿಸಿದರು. ಅವರು ತಮ್ಮ ಮನದಲ್ಲೇ ಪ್ರಭುವಿನ ಗುಣಗಳನ್ನು, ಆತನ ಶರಣಜನ ವಾತ್ಸಲ್ಯವನ್ನು ಮೆಚ್ಚಿಕೊಂಡು ಕೊಂಡಾಡತೊಡಗಿದರು. (ದೋ/೫೧)

**ಚೌ – ಪ್ರಗಟ ಬಖಾನಹಿಂ ರಾಮ ಸುಭಾಊ। ಅತಿ ಸಪ್ರೇಮ ಗಾ ಬಿಸರಿ ದುರಾಊ॥**
**ರಿಪು ಕೇ ದೂತ ಕಪಿನ್ಹ ತಬ ಜಾನೇ। ಸಕಲ ಬಾಂಧಿ ಕಪೀಸ ಪಹಿಂ ಆನೇ॥ ೧॥**
**ಕಹ ಸುಗ್ರೀವ ಸುನಹು ಸಬ ಬಾನರ। ಅಂಗ ಭಂಗ ಕರಿ ಪಠವಹು ನಿಸಿಚರ॥**
**ಸುನಿ ಸುಗ್ರೀವ ಬಚನ ಕಪಿ ಧಾಏ। ಬಾಂಧಿ ಕಟಕ ಚಹು ಪಾಸ ಫಿರಾಏ॥ ೨॥**
**ಬಹು ಪ್ರಕಾರ ಮಾರನ ಕಪಿ ಲಾಗೇ। ದೀನ ಪುಕಾರತ ತದಪಿ ನ ತ್ಯಾಗೇ॥**
**ಜೋ ಹಮಾರ ಹರ ನಾಸಾ ಕಾನಾ। ತೆಹಿ ಕೋಸಲಾಧೀಸ ಕೈ ಆನಾ॥ ೩॥**
**ಸುನಿ ಲಛಿಮನ ಸಬ ನಿಕಟ ಬೋಲಾಏ। ದಯಾ ಲಾಗಿ ಹँಸಿ ತುರತ ಛೋಡಾಏ॥**
**ರಾವನ ಕರ ದೀಜಹು ಯಹ ಪಾತೀ। ಲಛಿಮನ ಬಚನ ಬಾಚು ಕುಲಘಾತೀ॥ ೪॥**

ಕಪಟವೇಷದಲ್ಲಿದ್ದರೂ ಅವರು ಅತ್ಯಂತಪ್ರೇಮದಿಂದ ಶ್ರೀರಾಮನ ಸ್ವಭಾವವನ್ನು ಬಹಿರಂಗವಾಗಿ ಹೊಗಳತೊಡಗಿದರು. ಆ ತನ್ಮಯತೆಯಲ್ಲಿ ಅವರ ವಾನರರೂಪ ಮರೆತುಹೋಗಿ ನಿಜರೂಪ ವ್ಯಕ್ತವಾಯಿತು. ಅದರಿಂದ ಇವರು ಶತ್ರುದೂತರೆಂದು ತಿಳಿದ ವಾನರರು ಅವರನ್ನು ಬಂಧಿಸಿ ಸುಗ್ರೀವನ ಬಳಿಗೆ ಕರೆತಂದರು. ಆಗ ಸುಗ್ರೀವನು – ವಾನರರೇ! ಈ ರಾಕ್ಷಸರ ಅಂಗಭಂಗಗೈದು ಕಳಿಸಿ ಬಿಡಿರಿ ಎಂದು ಆದೇಶಿಸಿದನು. ಸುಗ್ರೀವನ ಮಾತನ್ನು ಕೇಳುತ್ತಲೇ ವಾನರವೀರರು ಅವರನ್ನು ಬಂಧಿಸಿ, ಸೈನ್ಯದ ಸುತ್ತಲೂ ತಿರುಗಾಡಿಸಿದರು. ವಾನರರು ಅವರನ್ನು ಅನೇಕವಿಧದಿಂದ ಹೊಡೆಯತೊಡಗಿದರು. ಅವರು ದೀನರಾಗಿ ಅಂಗಲಾಚಿದರೂ ವಾನರರು ಅವರನ್ನು ಬಿಡಲಿಲ್ಲ. ಕೊನೆಗೆ ಆ ದೂತರು – 'ನಮ್ಮ ಕಿವಿ, ಮೂಗುಗಳನ್ನು ಕೊಯ್ದರೆ ಕೋಸಲಾಧೀಶ ರಾಮಚಂದ್ರನ ಆಣೆ' ಎಂದು ಬೊಬ್ಬಿರಿದರು. ಇದನ್ನು ಕೇಳಿದ ಲಕ್ಷ್ಮಣನಿಗೆ ಅವರ ಮೇಲೆ ಕನಿಕರ ಉಂಟಾಗಿ, ವಾನರರನ್ನು ತನ್ನ ಬಳಿಗೆ ಕರೆದನು. ಅವನು ನಕ್ಕು ಆ ರಾಕ್ಷಸರನ್ನು ಬಿಡುಗಡೆ ಮಾಡಿ ಅವರಲ್ಲಿ ಹೇಳಿದನು – 'ರಾವಣನ ಕೈಗೆ ಈ ಪತ್ರವನ್ನು ಕೊಟ್ಟು, ಎಲೈ ಕುಲಘಾತಕ! ಲಕ್ಷ್ಮಣನ ಸಂದೇಶವನ್ನು ಓದು' ಎಂದು ಹೇಳಿರಿ. (ಚೌ/೧-೪)

**ದೋ – ಕಹೆಹು ಮುಖಾಗರ ಮೂಢ ಸನ ಮಮ ಸಂದೇಸು ಉದಾರ।**
**ಸೀತಾ ದೇಇ ಮಿಲಹು ನ ತ ಆವಾ ಕಾಲು ತುಮ್ಹಾರ॥ ೫೨॥**

ಅನಂತರ ಆ ಮೂರ್ಖರಾವಣನಿಗೆ – 'ಸೀತಾದೇವಿಯನ್ನು ಒಪ್ಪಿಸಿ ಶ್ರೀರಾಮನೊಡನೆ ಸಂಧಿಮಾಡಿಕೋ. ಇಲ್ಲದಿದ್ದರೆ ನಿನ್ನ ಕಾಲವು ಸಮೀಪಿಸಿತೆಂದು ತಿಳಿ' ಎಂಬ ಈ ನನ್ನ ಸಂದೇಶವನ್ನು ಬಾಯಿಮಾತಿನಲ್ಲಿ ತಿಳಿಸಿರಿ. (ದೋ/೫೨)

**ಚೌ – ತುರತ ನಾಇ ಲಛಿಮನ ಪದ ಮಾಥಾ। ಚಲೇ ದೂತ ಬರನತ ಗುನ ಗಾಥಾ॥**
**ಕಹತ ರಾಮ ಜಸು ಲಂಕಾಂ ಆಏ। ರಾವನ ಚರನ ಸೀಸ ತಿನ್ಹ ನಾಏ॥ ೧॥**

ಬಿಹಸಿ ದಸಾನನ ಪೂಂಛೀ ಬಾತಾ। ಕಹಸಿ ನ ಸುಕ ಆಪನಿ ಕುಸಲಾತಾ ॥
ಪುನಿ ಕಹು ಖಬರಿ ಬಿಭೀಷನ ಕೇರೀ। ಜಾಹಿ ಮೃತ್ಯು ಆಈ ಅತಿ ನೇರೀ ॥ ೨ ॥
ಕರತ ರಾಜ ಲಂಕಾ ಸಠ ತ್ಯಾಗೀ। ಹೋಇಹಿ ಜವ ಕರ ಕೀಟ ಅಭಾಗೀ ॥
ಪುನಿ ಕಹು ಭಾಲು ಕೀಸ ಕಟಕಾಈ। ಕಠಿನ ಕಾಲ ಪ್ರೇರಿತ ಚಲಿ ಆಈ ॥ ೩ ॥
ಜಿನ್ಹ ಕೇ ಜೀವನ ಕರ ರಖವಾರಾ। ಭಯಉ ಮೃದುಲ ಚಿತ ಸಿಂಧು ಬಿಚಾರಾ ॥
ಕಹು ತಪಸಿನ್ಹ ಕೈ ಬಾತ ಬಹೋರೀ। ಜಿನ್ಹ ಕೇ ಹೃದಯ ತ್ರಾಸ ಅತಿ ಮೋರೀ ॥ ೪ ॥

ಆ ರಾಕ್ಷಸದೂತರು ಲಕ್ಷ್ಮಣನ ಚರಣಗಳಿಗೆರಗಿ, ಶ್ರೀರಾಮನ ಗುಣಗಳನ್ನು ಹೊಗಳುತ್ತಾ, ಅವರು ಕೂಡಲೇ ಹೊರಟುಹೋದರು. ಶ್ರೀರಾಮಚಂದ್ರನ ಕೀರ್ತಿಯನ್ನು ಕೊಂಡಾಡುತ್ತಾ ಅವರು ಲಂಕೆಯನ್ನು ತಲುಪಿ ರಾವಣನ ಕಾಲಿಗೆ ಬಿದ್ದರು. ದಶಮುಖ ರಾವಣನು ನಕ್ಕು ಶುಕಸಾರಣರನ್ನು ಪರಿಹಾಸ್ಯಮಾಡುತ್ತಾ – ಎಲೈ ಶುಕನೇ! ನಿನ್ನ ಕ್ಷೇಮಸಮಾಚಾರವೇನು? ಹೇಳು. ಮತ್ತೆ ಮೃತ್ಯುವಿಗೆ ಸಮೀಪಿಸಿದ ಆ ವಿಭೀಷಣನ ವಿಷಯವನ್ನು ಅರುಹು. ಆ ಮೂರ್ಖನು ರಾಜ್ಯಭಾರ ಮಾಡುತ್ತಲೇ ಲಂಕೆಯನ್ನು ತೊರೆದು ಹೋದ. ಈಗ ಆ ನಿರ್ಭಾಗ್ಯನು ಜವೆಗೋದಿಗೆ ಹತ್ತಿದ ಹುಳವಾಗಿದ್ದಾನೆ. ಜವೆಗೋದಿಯನ್ನು ಬೀಸುವಾಗ ಆ ಹುಳವೂ ಹಿಟ್ಟಾಗಿ ಬಿಡುತ್ತದೆ. ಹಾಗೆಯೇ ನರವಾನರರೊಂದಿಗೆ ಅವನೂ ಕೂಡ ನಾಶವಾಗಿ ಹೋಗುವನು. ಕಾಲನ ಪ್ರೇರಣೆಯಿಂದ ಬಂದಿರುವ ಆ ವಾನರ ಭಲ್ಲೂಕ ಸೈನ್ಯರ ಕುರಿತು ಹೇಳು. ಸಮುದ್ರವೇ ದಯಾಹೃದಯನಾಗಿ ಅವರನ್ನು ರಕ್ಷಿಸುತ್ತಿರುವುದರಿಂದ ಅವರು ಇಷ್ಟರವರೆಗೆ ಬದುಕಿದ್ದಾರೆ. ಇಲ್ಲದಿದ್ದರೆ ನಮ್ಮ ರಾಕ್ಷಸರು ಅವರನ್ನು ಕೊಂಡು ತಿಂದು ಬಿಡುತ್ತಿದ್ದರು. ನನ್ನ ಭಯದಿಂದ ವಿಹ್ವಲಹೃದಯರಾದ ಆ ತಾಪಸರ ಕುರಿತು ತಿಳಿಸು. (ಚೌ/೧-೪)

**ದೋ – ಕೀ ಭಇ ಭೇಂಟ ಕಿ ಫಿರಿ ಗಏ ಶ್ರವನ ಸುಜಸು ಸುನಿ ಮೋರ।**
**ಕಹಸಿ ನ ರಿಪು ದಲ ತೇಜ ಬಲ ಬಹುತ ಚಕಿತ ಚಿತ ತೋರ ॥ ೫೩ ॥**

ಅವರನ್ನು ನೀನು ಕಂಡೆಯಾ! ಅಥವಾ ಅವರು ನನ್ನ ಯಶೋವೈಭವವನ್ನು ಕೇಳಿಯೇ ಮರಳಿ ಹೋದರೋ? ಶತ್ರುಸೇನೇಯ ತೇಜೋಬಲವನ್ನು ಕುರಿತು ಏಕೆ ಹೇಳುವುದಿಲ್ಲ? ಎಲವೋ ಶುಕಾ! ನಿನ್ನ ಚಿತ್ತವು ಚಕಿತಗೊಂಡಂತಿದೆಯಲ್ಲ! (ದೋ/೫೩)

ಚೌ – ನಾಥ ಕೃಪಾ ಕರಿ ಪೂಂಛೆಹು ಜೈಸೇಂ। ಮಾನಹು ಕಹಾ ಕ್ರೋಧ ತಜಿ ತೈಸೇಂ ॥
ಮಿಲಾ ಜಾಇ ಜಬ ಅನುಜ ತುಮ್ಹಾರಾ। ಜಾತಹಿಂ ರಾಮ ತಿಲಕ ತೆಹಿ ಸಾರಾ ॥ ೧ ॥
ರಾವನ ದೂತ ಹಮಹಿ ಸುನಿ ಕಾನಾ। ಕಪಿನ್ಹ ಬಾಂಧಿ ದೀನ್ಹೇ ದುಖ ನಾನಾ ॥
ಶ್ರವನ ನಾಸಿಕಾ ಕಾಟೈಂ ಲಾಗೇ। ರಾಮ ಸಪಥ ದೀನ್ಹೇಂ ಹಮ ತ್ಯಾಗೇ ॥ ೨ ॥
ಪೂಂಛಿಹು ನಾಥ ರಾಮ ಕಟಕಾಈ। ಬದನ ಕೋಟಿ ಸತ ಬರನಿ ನ ಜಾಈ ॥
ನಾನಾ ಬರನ ಭಾಲು ಕಪಿ ಧಾರೀ। ಬಿಕಟಾನನ ಬಿಸಾಲ ಭಯಕಾರೀ ॥ ೩ ॥
ಜೆಹಿಂ ಪುರ ದಹೆಉ ಹತೆಉ ಸುತ ತೋರಾ। ಸಕಲ ಕಪಿನ್ಹ ಮಹಂ ತೆಹಿ ಬಲು ಥೋರಾ ॥
ಅಮಿತ ನಾಮ ಭಟ ಕಠಿನ ಕರಾಲಾ। ಅಮಿತ ನಾಗ ಬಲ ಬಿಪುಲ ಬಿಸಾಲಾ ॥ ೪ ॥

ದೂತನು ಹೇಳಿದನು – ಒಡೆಯಾ! ನೀವು ಕೃಪೆಮಾಡಿ ಪ್ರಶ್ನಿಸಿದಂತೆ, ನಾನು ಹೇಳುವ ವಿಷಯವನ್ನು ಕೂಡ ಕೋಪಿಸದೆ ಆಲಿಸಿರಿ. ನನ್ನನ್ನು ನಂಬಿ. ನಿಮ್ಮ ಸೋದರ ವಿಭೀಷಣನು ಹೋಗಿ ಶ್ರೀರಾಮಚಂದ್ರನನ್ನು ಸೇರಿಕೊಂಡಾಗಲೇ ಆತನಿಗೆ ಶ್ರೀರಾಮನು ಲಂಕಾರಾಜ್ಯದ ಪಟ್ಟಾಭಿಷೇಕ ಮಾಡಿದನು. ನಾವು ನಿಮ್ಮ ದೂತರೆಂದು ತಿಳಿಯುತ್ತಲೇ ವಾನರರು ನಮ್ಮನ್ನು ಬಂಧಿಸಿ, ಅನೇಕ ಕಷ್ಟಕೊಟ್ಟರು. ಅವರು ನಮ್ಮ ಕಿವಿ, ಮೂಗು ಕತ್ತರಿಸಲು ಸಿದ್ಧರಾದಾಗ, ನಾವು ಶ್ರೀರಾಮನ ಮೇಲೆ ಆಣೆಯಿಡುತ್ತಲೇ ನಮ್ಮನ್ನು ಬಿಟ್ಟುಬಿಟ್ಟರು. ನೀವು ಶ್ರೀರಾಮನ ಸೇನೆಯ ಕುರಿತು ಕೇಳಿದಿರಿ. ಪ್ರಭೂ! ಆ ಸೇನೆಯನ್ನು ಕೋಟಿ ಬಾಯಿಗಳಿಂದಲೂ ವರ್ಣಿಸಲಸದಳ. ಆ ಸೇನೆಯಲ್ಲಿ ನಾನಾ ವರ್ಣದ ವಾನರರೂ, ಭಲ್ಲೂಕಗಳು ಅಸಂಖ್ಯಾತರಾಗಿದ್ದಾರೆ. ಅವರ ಮುಖಗಳು ಭಯಂಕರ, ವಿಶಾಲಶರೀರವುಳ್ಳವರು. ಅತಿ ಭಯಾನಕರಾಗಿದ್ದಾರೆ. ನಮ್ಮ ನಗರಕ್ಕೆ ಬಂದು ಲಂಕೆಯನ್ನು ಸುಟ್ಟು, ನಿಮ್ಮ ಪುತ್ರ ಅಕ್ಷಯಕುಮಾರನನ್ನು ಕೊಂದ ಕಪಿಯ ಬಲ ಉಳಿದವರೊಂದಿಗೆ ಹೋಲಿಸಿದರೆ ಹೆಚ್ಚೇ ಇದೆ. ಅಸಂಖ್ಯನಾಮವುಳ್ಳ, ಕಠಿಣ ಕರಾಳ ಅಸಮಾನಯೋಧರು ಅಜೇಯರೂ ಆದ ಅವರು ಅಸಂಖ್ಯ ಆನೆಗಳ ಬಲಸಂಪನ್ನರೂ, ಭೀಮ ವಿಶಾಲಕಾಯರೂ ಆಗಿದ್ದಾರೆ. (ಚೌ/೧-೪)

**ದೋ – ದ್ವಿಬಿದ ಮಯಂದ ನೀಲ ನಲ ಅಂಗದ ಗದ ಬಿಕಟಾಸಿ ।**
**ದಧಿಮುಖ ಕೇಹರಿ ನಿಸಠ ಸಠ ಜಾಮವಂತ ಬಲರಾಸಿ ॥ ೫೪ ॥**

ದ್ವಿವಿದ, ಮೈಂದ, ನೀಲ, ನಲ, ಅಂಗದ, ಗದ, ವಿಕಟಾಸ್ಯ, ದಧಿಮುಖ, ಕೇಸರೀ, ನಿಶಠ, ಶಠ, ಜಾಂಬವಂತ ಮೊದಲಾದ ವಾನರರೆಲ್ಲರೂ ಸಾಟಿಯಿಲ್ಲದ ಪರಾಕ್ರಮಶಾಲಿಗಳು. (ದೋ/೫೪)

**ಚೌ – ಏ ಕಪಿ ಸಬ ಸುಗ್ರೀವ ಸಮಾನಾ । ಇನ್ಹ ಸಮ ಕೋಟಿನ್ಹ ಗನಇ ಕೊ ನಾನಾ ॥**
**ರಾಮ ಕೃಪಾಁ ಅತುಲಿತ ಬಲ ತಿನ್ಹಹೀಂ । ತೃನ ಸಮಾನ ತ್ರೈಲೋಕಹಿ ಗನಹೀಂ ॥ ೧ ॥**
**ಅಸ ಮೈಂ ಸುನಾ ಶ್ರವನ ದಸಕಂಧರ । ಪದುಮ ಅಠಾರಹ ಜೂಥಪ ಬಂದರ ॥**
**ನಾಥ ಕಟಕ ಮಹಁ ಸೋ ಕಪಿ ನಾಹೀಂ । ಜೋ ನ ತುಮ್ಹಹಿ ಜೀತೈ ರನ ಮಾಹೀಂ ॥ ೨ ॥**
**ಪರಮ ಕ್ರೋಧ ಮೀಜಹಿಂ ಸಬ ಹಾಥಾ । ಆಯಸು ಪೈ ನ ದೇಹಿಂ ರಘುನಾಥಾ ॥**
**ಸೋಷಹಿಂ ಸಿಂಧು ಸಹಿತ ಝುಷ ಬ್ಯಾಲಾ । ಪೂರಹಿಂ ನ ತ ಭರಿ ಕುಧರ ಬಿಸಾಲಾ ॥ ೩ ॥**
**ಮರ್ದಿ ಗರ್ದ ಮಿಲವಹಿಂ ದಸಸೀಸಾ । ಐಸೇಇ ಬಚನ ಕಹಹಿಂ ಸಬ ಕೀಸಾ ॥**
**ಗರ್ಜಹಿಂ ತರ್ಜಹಿಂ ಸಹಜ ಅಸಂಕಾ । ಮಾನಹುಁ ಗ್ರಸನ ಚಹತ ಹಹಿಂ ಲಂಕಾ ॥ ೪ ॥**

ಈ ವಾನರರೆಲ್ಲರೂ ಬಲದಲ್ಲಿ ಸುಗ್ರೀವನಿಗೆ ಸಮಾನರು. ಇಂತಹವರು ಒಬ್ಬರಿಬ್ಬರಲ್ಲ ಕೋಟಿ-ಕೋಟಿ ಇದ್ದಾರೆ. ಈ ಸುಭಟಕೋಟಿಯನ್ನು ಎಣಿಸಬಲ್ಲವರಾರು? ಶ್ರೀರಾಮನ ಕೃಪೆಯಿಂದ ಅವರಲ್ಲಿ ಎಣೆಯಿಲ್ಲದ ಬಲವಿದೆ. ಅವರು ತ್ರಿಭುವನಗಳನ್ನು ತೃಣಕ್ಕೆ ಸಮಾನವೆಂದು ಗಣಿಸುತ್ತಾರೆ. ಓ ದಶಗ್ರೀವಾ! ಅವರ ಸೇನೆಯಲ್ಲಿ ಸೇನಾಪತಿಗಳೇ ಹದಿನೆಂಟು ಪದ್ಮಗಳಷ್ಟು ಇದ್ದಾರೆಂತ ನಾವು ಕಿವಿಯಾರೆ ಕೇಳಿದ್ದೇವೆ. ನಾಥಾ! ಆ ಸೇನೆಯಲ್ಲಿರುವ ಪ್ರತಿಯೋರ್ವನು ನಿಮ್ಮನ್ನು ಜಯಿಸುವವರೇ. ಎಲ್ಲರೂ ರೋಷಾವೇಶದಿಂದ ಕಾಳಗ ಕೊಡಲು ತೋಳೇರಿಸುತ್ತಿರುವರು. ಆದರೆ ರಘುನಾಥನು ಅವರಿಗೆ ಆಜ್ಞೆಯನ್ನು ಕೊಡುತ್ತಿಲ್ಲ. ಅವರೆಲ್ಲರೂ – 'ನಾವು ಕಷ್ಟಕರವಾದ, ಭಾರೀ ಮೀನು-ಮೊಸಳೆ, ಭಯಂಕರ ಸರ್ಪಗಳಿಂದ ಕೂಡಿದ ಈ ಮಹಾಸಮುದ್ರವನ್ನು ಹೀರಿಬಿಡುತ್ತೇವೆ. ಇಲ್ಲವೇ ದೊಡ್ಡ-ದೊಡ್ಡ ಪರ್ವತಗಳಿಂದ ಈ ಕಡಲ ಒಡಲನ್ನೇ ತುಂಬಿಬಿಡುತ್ತೇವೆ. ರಾವಣನನ್ನು ಹೊಸಕಿಹಾಕಿ ಧೂಳೀಪಟ ಮಾಡಿಬಿಡುತ್ತೇವೆ.' ಹೀಗೆ ಉಗ್ಗಡಿಸುತ್ತಿದ್ದಾರೆ. ಅವರೆಲ್ಲರೂ ಸಹಜವಾಗಿಯೇ ನಿರ್ಭಯರಾಗಿದ್ದಾರೆ. ಲಂಕಾನಗರವನ್ನೇ ನುಂಗಿಬಿಡುವಂತೆ ಹವಣಿಸಿ ಗರ್ಜಿಸುತ್ತಿದ್ದಾರೆ. (ಚೌ/೧-೪)

**ದೋ – ಸಹಜ ಸೂರ ಕಪಿ ಭಾಲು ಸಬ ಪುನಿ ಸಿರ ಪರ ಪ್ರಭು ರಾಮ ।**
**ರಾವನ ಕಾಲ ಕೋಟಿ ಕಹುಁ ಜೀತಿ ಸಕಹಿಂ ಸಂಗ್ರಾಮ ॥ ೫೫ ॥**

ಆ ವಾನರರೂ, ಭಲ್ಲೂಕಗಳೂ ಸಹಜವಾಗಿಯೇ ಶೌರ್ಯ ಪರಾಕ್ರಮಗಳಿಂದ ತುಂಬಿ ತುಳುಕುತ್ತಿದ್ದಾರೆ. ಅದು ಸಾಲದೆಂಬಂತೆ ಅವುಗಳ ತಲೆಯಮೇಲೆ ಸರ್ವೇಶ್ವರ ಶ್ರೀರಾಮನಿದ್ದಾನೆ. ರಾವಣಾ! ಅವರು ಕೊಳುಗುಳದಲ್ಲಿ ಕೋಟಿ ಕಾಲರನ್ನು ಗೆಲ್ಲಬಲ್ಲರು. (ದೋ/೫೫)

**ಚೌ – ರಾಮ ತೇಜ ಬಲ ಬುಧಿ ಬಿಪುಲಾಈ । ಸೇಷ ಸಹಸ ಸತ ಸಕಹಿಂ ನ ಗಾಈ ॥**
**ಸಕ ಸರ ಏಕ ಸೋಷಿ ಸತ ಸಾಗರ । ತವ ಭ್ರಾತಹಿ ಪೂಁಛೇಉ ನಯ ನಾಗರ ॥ ೧ ॥**
**ತಾಸು ಬಚನ ಸುನಿ ಸಾಗರ ಪಾಹೀಂ । ಮಾಗತ ಪಂಥ ಕೃಪಾ ಮನ ಮಾಹೀಂ ॥**
**ಸುನತ ಬಚನ ಬಿಹಸಾ ದಸಸೀಸಾ । ಜೌಂ ಅಸಿ ಮತಿ ಸಹಾಯ ಕೃತ ಕೀಸಾ ॥ ೨ ॥**
**ಸಹಜ ಭೀರು ಕರ ಬಚನ ದೃಢಾಈ । ಸಾಗರ ಸನ ಠಾನೀ ಮಚಲಾಈ ॥**
**ಮೂಢ ಮೃಷಾ ಕಾ ಕರಸಿ ಬಡಾಈ । ರಿಪು ಬಲ ಬುದ್ಧಿ ಥಾಹ ಮೈಂ ಪಾಈ ॥ ೩ ॥**
**ಸಚಿವ ಸಭೀತ ಬಿಭೀಷನ ಜಾಕೇಂ । ಬಿಜಯ ಬಿಭೂತಿ ಕಹಾಁ ಜಗ ತಾಕೇಂ ॥**
**ಸುನಿ ಖಲ ಬಚನ ದೂತ ರಿಸ ಬಾಢೀ । ಸಮಯ ಬಿಚಾರಿ ಪತ್ರಿಕಾ ಕಾಢೀ ॥ ೪ ॥**
**ರಾಮಾನುಜ ದೀನ್ಹೀ ಯಹ ಪಾತೀ । ನಾಥ ಬಚಾಇ ಜುಡಾವಹು ಛಾತೀ ॥**
**ಬಿಹಸಿ ಬಾಮ ಕರ ಲೀನ್ಹೀ ರಾವನ । ಸಚಿವ ಬೋಲಿ ಸಠ ಲಾಗ ಬಚಾವನ ॥ ೫ ॥**

ಶ್ರೀರಾಮಚಂದ್ರನ ತೇಜೋಬಲ ಪರಾಕ್ರಮ ಅಸಮಾನಗಳು, ಬುದ್ಧಿ ವೈಭವಗಳು ಅದ್ಭುತವಾದುವು. ಅವನ್ನು ಶತಸಹಸ್ರ ಶೇಷರೂ ಹಾಡಿ ತಣಿಯರು. ಅವನು ತನ್ನ ಒಂದೇ ಬಾಣದಿಂದ ನೂರಾರು ಸಮುದ್ರಗಳನ್ನು ಒಣಗಿಸಬಲ್ಲನು. ಹೀಗಿದ್ದರೂ ನೀತಿಕುಶಲನಾದ ಶ್ರೀರಾಮನು ನಿಮ್ಮ ಸೋದರನಲ್ಲಿ ಉಪಾಯವನ್ನು ಕೇಳಿದನು. ವಿಭೀಷಣನ ಸೂಚನೆಯಂತೆ ಸಮುದ್ರವನ್ನು ದಾರಿಮಾಡಿಕೊಡುವಂತೆ ಕೇಳಿಕೊಳ್ಳುತ್ತಿದ್ದಾನೆ. ಏಕೆಂದರೆ, ಅವನ ಮನದಲ್ಲಿ ದಯೆ ತುಂಬಿತುಳುಕುತ್ತಿದೆ. (ಅದರಿಂದಾಗಿ ಅವನು ಸಮುದ್ರವನ್ನು ಒಣಗಿಸುವುದಿಲ್ಲ.) ದೂತನು ಹೇಳಿದ ಮಾತನ್ನು ಕೇಳಿದ ರಾವಣನು ಪರಿಹಾಸ್ಯಮಾಡುತ್ತಾ ಚೆನ್ನಾಗಿ ನಕ್ಕು ಇಂತೆಂದನು– ಇಂತಹ ಬುದ್ಧಿ ಇರುವುದರಿಂದಲೇ ಕಪಿಗಳನ್ನು ಸಹಾಯಕ್ಕೆ ಕರೆತಂದಿರುವನು. ಸಹಜ ಭೀರುವಾದ ವಿಭೀಷಣನ ವಚನವನ್ನೇ ಪ್ರಮಾಣವೆಂದು ಬಗೆದು, ಆತನು ಬಾಲಕರಂತೆ ಸಮುದ್ರವನ್ನು ಬೇಡುತ್ತಿದ್ದಾನೆ. ಎಲವೋ ಮೂರ್ಖಾ! ಸುಳ್ಳು ಬಡಾಯಿ ಏತಕ್ಕೆ ಕೊಚ್ಚಿಕೊಳ್ಳುತ್ತಿದ್ದೀಯೇ? ಸಾಕು, ಸಾಕು! ಶತ್ರುವಿನ ಬಲ, ಬುದ್ಧಿಯ ಆಳವನ್ನು ನಾನು ಕಂಡುಕೊಂಡಿದ್ದೇನೆ. ವಿಭೀಷಣನಂತಹ ಪುಕ್ಕಲು ಮಂತ್ರಿಯುಳ್ಳ ಅವನಿಗೆ ವಿಜಯ, ವಿಭೂತಿಗಳು ಹೇಗೆ ದಕ್ಕಿಯಾವು? ದುಷ್ಟ ರಾವಣನ ಮಾತನ್ನು ಕೇಳಿದ ದೂತನ ರೋಷ ಉಕ್ಕಿಹರಿಯಿತು. ಅವನು ಸಮಯವರಿತು ಲಕ್ಷ್ಮಣನು ಕೊಟ್ಟ ಪತ್ರವನ್ನು ಹೊರತೆಗೆದು– ''ಶ್ರೀರಾಮನ ಸಹೋದರ ಲಕ್ಷ್ಮಣನು ಈ ಪತ್ರವನ್ನು ನಿಮಗಾಗಿ ಕೊಟ್ಟಿರುವನು. ಒಡೆಯಾ! ಇದನ್ನು ಓದಿ ಮನಸ್ಸಿಗೆ ನೆಮ್ಮದಿ ತಂದುಕೊಳ್ಳಿ' ಎಂದು ಹೇಳಿದನು. ರಾವಣನು ನಕ್ಕು ಅದನ್ನು ಎಡಗೈಯಿಂದ ಪಡೆದು, ಮಂತ್ರಿಯನ್ನು ಕರೆದು ಓದಿಸತೊಡಗಿದ. (ಚೌ/೧-೫)

**ದೋ – ಬಾತನ್ಹ ಮನಹಿ ರಿಝಾಇ ಸಠ ಜನಿ ಘಾಲಸಿ ಕುಲ ಖೀಸ।**
**ರಾಮ ಬಿರೋಧ ನ ಉಬರಸಿ ಸರನ ಬಿಷ್ನು ಅಜ ಈಸ॥ ೫೬ (ಕ)॥**
**ಕೀ ತಜಿ ಮಾನ ಅನುಜ ಇವ ಪ್ರಭು ಪದ ಪಂಕಜ ಭೃಂಗ।**
**ಹೋಹಿ ಕಿ ರಾಮ ಸರಾನಲ ಖಲ ಕುಲ ಸಹಿತ ಪತಂಗ॥ ೫೬ (ಖ)॥**

ಆ ಪತ್ರದಲ್ಲಿ ವಕ್ಕಣೆ ಹೀಗಿತ್ತು– 'ಎಲೈ ಮೂರ್ಖಾ! ಬರಿಯ ಮಾತುಗಳಿಂದ ನಿನ್ನ ಮನಸ್ಸನ್ನು ಮರುಳುಮಾಡಿಕೊಂಡು ನಿನ್ನ ಕುಲವನ್ನು ನಾಶಮಾಡಿಕೊಳ್ಳಬೇಡ. ಶ್ರೀರಾಮನಲ್ಲಿ ವಿರೋಧಕಟ್ಟಿಕೊಂಡೂ ನೀನು ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಶರಣುಹೊಕ್ಕರೂ ಉಳಿಯಲಾರೆ. ದುರಭಿಮಾನವನ್ನು ತೊರೆದು ನಿನ್ನ ತಮ್ಮ ವಿಭೀಷಣನಂತೆ ಪ್ರಭುಪದಪಂಕಜ ಭೃಂಗನಾಗು. ಇಲ್ಲವೇ ದುಷ್ಟನೇ! ಶ್ರೀರಾಮನ ಬಾಣಾಗ್ನಿಗೆ ಪರಿವಾರಸಹಿತ ಪತಂಗನಾಗು. (ನಿನಗೆ ಸರಿದೋರಿದಂತೆ ಮಾಡು.) (ದೋ/೫೬ ಕ, ಖ)

**ಚೌ – ಸುನತ ಸಭಯ ಮನ ಮುಖ ಮುಸುಕಾಈ। ಕಹತ ದಸಾನನ ಸಬಹಿ ಸುನಾಈ॥**
**ಭೂಮಿ ಪರಾ ಕರ ಗಹತ ಅಕಾಸಾ। ಲಘು ತಾಪಸ ಕರ ಬಾಗ ಬಿಲಾಸಾ॥ ೧ ॥**
**ಕಹ ಸುಕ ನಾಥ ಸತ್ಯ ಸಬ ಬಾನೀ। ಸಮುಝಹು ಛಾಡಿ ಪ್ರಕೃತಿ ಅಭಿಮಾನೀ॥**
**ಸುನಹು ಬಚನ ಮಮ ಪರಿಹರಿ ಕ್ರೋಧಾ। ನಾಥ ರಾಮ ಸನ ತಜಹು ಬಿರೋಧಾ॥ ೨ ॥**
**ಅತಿ ಕೋಮಲ ರಘುಬೀರ ಸುಭಾಊ। ಜದ್ಯಪಿ ಅಖಿಲ ಲೋಕ ಕರ ರಾಊ॥**
**ಮಿಲತ ಕೃಪಾ ತುಮ್ಹ ಪರ ಪ್ರಭು ಕರಿಹೀ। ಉರ ಅಪರಾಧ ನ ಏಕಉ ಧರಿಹೀ॥ ೩ ॥**
**ಜನಕಸುತಾ ರಘುನಾಥಹಿ ದೀಜೇ। ಏತನಾ ಕಹಾ ಮೋರ ಪ್ರಭು ಕೀಜೇ॥**
**ಜಬ ತೆಹಿಂ ಕಹಾ ದೇನ ಬೈದೇಹೀ। ಚರನ ಪ್ರಹಾರ ಕೀನ್ಹ ಸಠ ತೇಹೀ॥ ೪ ॥**
**ನಾಇ ಚರನ ಸಿರು ಚಲಾ ಸೋ ತಹಾಂ। ಕೃಪಾಸಿಂಧು ರಘುನಾಯಕ ಜಹಾಂ॥**
**ಕರಿ ಪ್ರನಾಮು ನಿಜ ಕಥಾ ಸುನಾಈ। ರಾಮ ಕೃಪಾಂ ಆಪನಿ ಗತಿ ಪಾಈ॥ ೫ ॥**
**ರಿಷಿ ಅಗಸ್ತಿ ಕೀಂ ಸಾಪ ಭವಾನೀ। ರಾಛಸ ಭಯಉ ರಹಾ ಮುನಿ ಗ್ಯಾನೀ॥**
**ಬಂದಿ ರಾಮ ಪದ ಬಾರಹಿಂ ಬಾರಾ। ಮುನಿ ನಿಜ ಆಶ್ರಮ ಕಹುಂ ಪಗು ಧಾರಾ॥ ೬ ॥**

ಲಕ್ಷ್ಮಣನ ಓಲೆಯನ್ನು ಓದಿದ್ದನ್ನು ಕೇಳಿದಕೂಡಲೇ ಒಳಗಿನಿಂದ ರಾವಣನು ಭಯಭೀತನಾದನು. ಆದರೆ ಹೊರಗೆ ಮುಗುಳ್ನಗೆ ಬೀರುತ್ತಾ ಎಲ್ಲರಿಗೂ ಕೇಳುವಂತೆ ನುಡಿದನು – ''ನೆಲದಮೇಲೆ ಬಿದ್ದಿರುವ ವ್ಯಕ್ತಿಯು ಕೈಯಿಂದ ಮುಗಿಲುಮುಟ್ಟಲು ಪ್ರಯತ್ನಿಸುವಂತೆ ಈ ಲಘುತಾಪಸೀ (ಲಕ್ಷ್ಮಣ) ಬಡಾಯಿಮಾಡುತ್ತಾ, ಜಂಭ ಕೊಚ್ಚಿಕೊಳ್ಳುತ್ತಿರುವನು. ಆಗ ಶುಕನು ಹೇಳಿದನು – ಪ್ರಭೂ! ದುರಭಿಮಾನದ ಸ್ವಭಾವವನ್ನು ತೊರೆದು ಲಕ್ಷ್ಮಣನ ಮಾತನ್ನು ಸತ್ಯವೆಂದು ತಿಳಿಯಿರಿ. ಸಿಟ್ಟನ್ನು ಬಿಟ್ಟು ನನ್ನ ಮಾತನ್ನು ಆಲಿಸಿರಿ. ಒಡೆಯಾ! ರಾಮನಲ್ಲಿರುವ ವಿರೋಧವನ್ನು ಬಿಡಿರಿ. ಅವನು ಸಮಸ್ತ ಲೋಕಗಳಿಗೆ ಅಧಿಪತಿಯಾಗಿದ್ದಾನೆ.

ಶ್ರೀರಘುವೀರನ ಸ್ವಭಾವವು ಅತ್ಯಂತ ಕೋಮಲವು. ನೀವು ಅವನ ಬಳಿಗೆ ಹೋದೊಡನೇ ಆ ಪ್ರಭುವು ನಿಮ್ಮ ಮೇಲೆ ಕೃಪೆದೋರುವನು. ನಿಮ್ಮ ಯಾವುದೇ ಅಪರಾಧವನ್ನು ಅವನು ಮನಸ್ಸಿಗೆ ತಂದುಕೊಳ್ಳುವುದಿಲ್ಲ. ಜಾನಕೀದೇವಿಯನ್ನು ಶ್ರೀರಾಮಚಂದ್ರನಿಗೆ ಒಪ್ಪಿಸಿರಿ. ನನ್ನ ಈ ಬಿನ್ನಹವನ್ನು ನಡೆಸಿಕೊಡಿರಿ. ದೂತನು ಜಾನಕಿಯನ್ನು ಒಪ್ಪಿಸಿಕೊಡುವ ಮಾತನ್ನು ಹೇಳಿದಾಗ, ದುರುಳ ರಾವಣನು ಅವನನ್ನು ಕಾಲಿಂದ ಒದ್ದುಬಿಟ್ಟನು. ವಿಭೀಷಣನಂತೆ ಅವನೂ ರಾವಣನಿಗೆ ಕಾಲಿಗೆರಗಿ 'ಮಹಾಪ್ರಸಾದ'ವೆಂದು ಹೇಳಿ ಕರುಣಾಳುವಾದ ಶ್ರೀರಾಮನ ಬಳಿಗೆ ಹೋಗಿ ಅವನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದನು. ಪ್ರಭುವಿನ ಕೃಪೆಯಿಂದ ಆತನಿಗೆ ನಿಜಸ್ವರೂಪ (ಮುನಿರೂಪ) ಪ್ರಾಪ್ತಿಯಾಯಿತು. ಶಂಕರನು ಹೇಳುತ್ತಾನೆ– ಭವಾನೀ! ಆ ಶುಕನು ಮೊದಲು ಜ್ಞಾನಿಯಾದ ಮುನಿಯಾಗಿದ್ದನು. ಅಗಸ್ತ್ಯರ ಶಾಪದಿಂದ ರಾಕ್ಷಸನಾಗಿದ್ದನು. ಹೀಗೆ ಮುನಿರೂಪವು ಲಭಿಸುತ್ತಲೇ ಶ್ರೀರಾಮನ ಚರಣಗಳಿಗೆ ಪುನಃ-ಪುನಃ ವಂದಿಸಿ ತನ್ನ ಆಶ್ರಮಕ್ಕೆ ಹೊರಟುಹೋದನು. (ಚೌ/೧-೬)

**ದೋ – ಬಿನಯ ನ ಮಾನತ ಜಲಧಿ ಜಡ ಗಏ ತೀನಿ ದಿನ ಬೀತಿ।**
**ಬೋಲೇ ರಾಮ ಸಕೋಪ ತಬ ಭಯ ಬಿನು ಹೋಇ ನ ಪ್ರೀತಿ ॥ ೫೭ ॥**

ಇತ್ತ ಮೂರು ದಿನ ಉರುಳಿದರೂ ಜಡ ಸಮುದ್ರವು ಪ್ರಭುವಿನ ಪ್ರಾರ್ಥನೆಗೆ ಲಕ್ಷ್ಯಕೊಡಲಿಲ್ಲ. ಆಗ ಶ್ರೀರಾಮನು ರೋಷಭೀಷಣನಾಗಿ ನುಡಿದನು – ಸಾಮೋಪಾಯದಿಂದ ಇವನು ದಾರಿಗೆ ಬರುವುದಿಲ್ಲ. ಭೀತಿಯಿಲ್ಲದೆ ಪ್ರೀತಿ ಉಂಟಾಗದು. (ದೋ/೫೭)

**ಚೌ – ಲಛಿಮನ ಬಾನ ಸರಾಸನ ಆನೂ। ಸೋಷೌಂ ಬಾರಿಧಿ ಬಿಸಿಖ ಕೃಶಾನೂ ॥**
**ಸಠ ಸನ ಬಿನಯ ಕುಟಿಲ ಸನ ಪ್ರೀತೀ। ಸಹಜ ಕೃಪನ ಸನ ಸುಂದರ ನೀತೀ ॥ ೧ ॥**
**ಮಮತಾ ರತ ಸನ ಗ್ಯಾನ ಕಹಾನೀ। ಅತಿ ಲೋಭೀ ಸನ ಬಿರತಿ ಬಖಾನೀ ॥**
**ಕ್ರೋಧಿಹಿ ಸಮ ಕಾಮಿಹಿ ಹರಿಕಥಾ। ಊಸರ ಬೀಜ ಬಏಂ ಫಲ ಜಥಾ ॥ ೨ ॥**
**ಅಸ ಕಹಿ ರಘುಪತಿ ಚಾಪ ಚಢ಼ಾವಾ। ಯಹ ಮತ ಲಛಿಮನ ಕೇ ಮನ ಭಾವಾ ॥**
**ಸಂಧಾನೆಉ ಪ್ರಭು ಬಿಸಿಖ ಕರಾಲಾ। ಉಠೀ ಉದಧಿ ಉರ ಅಂತರ ಜ್ವಾಲಾ ॥ ೩ ॥**
**ಮಕರ ಉರಗ ಝಷ ಗನ ಅಕುಲಾನೇ। ಜರತ ಜಂತು ಜಲನಿಧಿ ಜಬ ಜಾನೇ ॥**
**ಕನಕ ಥಾರ ಭರಿ ಮನಿ ಗನ ನಾನಾ। ಬಿಪ್ರ ರೂಪ ಆಯಉ ತಜಿ ಮಾನಾ ॥ ೪ ॥**

ಲಕ್ಷ್ಮಣಾ! ನನ್ನ ಧನುರ್ಬಾಣಗಳನ್ನು ಇತ್ತಕೊಡು. ನಾನು ಅಗ್ನ್ಯಾಸ್ತ್ರದಿಂದ ಈ ಸಮುದ್ರವನ್ನು ಒಣಗಿಸಿ ಬಿಡುತ್ತೇನೆ. ಮೂರ್ಖನ ಮುಂದೆ ವಿನಯ, ಕುಟಿಲನೊಡನೆ ಪ್ರೀತಿ, ಕೃಪಣನಿಗೆ ಔದಾರ್ಯದ ಉಪದೇಶ, ಮಮತೆಯಲ್ಲಿ ಬದ್ಧನಾಗಿರುವವನಿಗೆ ಜ್ಞಾನೋಪದೇಶ, ಕಡುಲೋಭಿಗೆ ವೈರಾಗ್ಯದ ವರ್ಣನೆ, ಕ್ರೋಧಿಯೊಡನೆ ಶಾಂತಿಯಮಾತು, ಕಾಮುಕನಿಗೆ ಹರಿಕಥೆಯ ಬೋಧನೆ, ಇವೆಲ್ಲದರ ಫಲ ಬಂಜರಭೂಮಿಯಲ್ಲಿ ಬಿತ್ತನೆ ಮಾಡಿದಂತೆ ವ್ಯರ್ಥ. ಹೀಗೆ ಹೇಳಿ ರಘುಪತಿಯು ಧನುಸ್ಸಿಗೆ ಹೆದೆಯೇರಿಸಿದನು. ಶ್ರೀರಾಮನ ಈ ಚರ್ಯೆಯನ್ನು ನೋಡಿದ ಲಕ್ಷ್ಮಣನಿಗೆ ಇದು ತುಂಬಾ ಹಿಡಿಸಿತು. ಪ್ರಭುವು ಭಯಂಕರವಾದ ಅಗ್ನಿಬಾಣವನ್ನು ಸಂಧಿಸಿದನು. ಅದರಿಂದ ಸಮುದ್ರದ ಹೃದಯದಲ್ಲಿ ಬಡಬಾಗ್ನಿ ಜ್ವಾಲೆಗಳು ಒಡಮೂಡಿದವು. ಅದರಲ್ಲಿದ್ದ ಮಕರನಿಕರ, ಸರ್ಪಗಳು, ಮೀನುಗಳ ಸಮೂಹ ತಲ್ಲಣಿಸಿಹೋದವು. ಜಲಚರಗಳೆಲ್ಲವೂ ಬೆಂದುಹೋಗುವುದನ್ನು ಕಂಡ ಸಮುದ್ರರಾಜನು ಚಿನ್ನದ ಹರಿವಾಣದಲ್ಲಿ ನಾನಾವಿಧವಾದ ರತ್ನಗಳನ್ನು ತುಂಬಿಕೊಂಡು, ಅಭಿಮಾನವನ್ನು ಬದಿಗಿರಿಸಿ, ಬ್ರಾಹ್ಮಣವೇಷದಿಂದ ಬಂದನು. (ಚೌ/೧-೪)

**ದೋ – ಕಾಟೆಹಿಂ ಪಇ ಕದರೀ ಫರಇ ಕೋಟಿ ಜತನ ಕೋಉ ಸೀಂಚ।**
**ಬಿನಯ ನ ಮಾನ ಖಗೇಸ ಸುನು ಡಾಟೆಹಿಂ ಪಇ ನವ ನೀಚ ॥ ೫೮ ॥**

ಕಾಕಭುಶುಂಡಿಯವರು ಹೇಳುತ್ತಾರೆ – ''ಖಗರಾಜಾ! ಬಾಳೆಯ ಗಿಡಕ್ಕೆ ಎಷ್ಟೇ ಉಪಾಯಮಾಡಿ ನೀರೆರೆಯಲಿ, ಆದರೆ ತಲೆಯನ್ನು ತರಿದಾಗಲೇ ಫಲಕೊಡುತ್ತದೆ. ಹಾಗೆಯೇ ನೀಚನು ವಿನಯದಿಂದ ಬಗ್ಗುವುದಿಲ್ಲ. ಬೆದರಿಕೆಗೆ ಬಗ್ಗುವನು. (ದೋ/೫೮)

**ಚೌ – ಸಭಯ ಸಿಂಧು ಗಹಿ ಪದ ಪ್ರಭು ಕೇರೇ। ಛಮಹು ನಾಥ ಸಬ ಅವಗುನ ಮೇರೇ ॥**
**ಗಗನ ಸಮೀರ ಅನಲ ಜಲ ಧರನೀ। ಇನ್ಹ ಕಇ ನಾಥ ಸಹಜ ಜಡ ಕರನೀ ॥ ೧ ॥**
**ತವ ಪ್ರೇರಿತ ಮಾಯಾಂ ಉಪಜಾಏ। ಸೃಷ್ಟಿ ಹೇತು ಸಬ ಗ್ರಂಥನಿ ಗಾಏ ॥**
**ಪ್ರಭು ಆಯಸು ಜೆಹಿ ಕಹಂ ಜಸ ಅಹಈ। ಸೋ ತೆಹಿ ಭಾಂತಿ ರಹೇ ಸುಖ ಲಹಈ ॥ ೨ ॥**

**ಪ್ರಭು ಭಲ ಕೀನ್ಹ ಮೋಹಿ ಸಿಖ ದೀನ್ಹೀ। ಮರಜಾದಾ ಪುನಿ ತುಮ್ಹರೀ ಕೀನ್ಹೀ॥**
**ಢೋಲ ಗವಾಂರ ಸೂದ್ರ ಪಸು ನಾರೀ। ಸಕಲ ತಾಡನಾ ಕೇ ಅಧಿಕಾರೀ॥೩॥**
**ಪ್ರಭು ಪ್ರತಾಪ ಮೈಂ ಜಾಬ ಸುಖಾಈ। ಉತರಿಹಿ ಕಟಕು ನ ಮೋರಿ ಬಡಾಈ॥**
**ಪ್ರಭು ಅಗ್ಯಾ ಅಪೇಲ ಶ್ರುತಿ ಗಾಈ। ಕರೌಂ ಸೊ ಬೇಗಿ ಜೋ ತುಮ್ಹಹಿ ಸೊಹಾಈ॥೪॥**

ಸಮುದ್ರವು ಭಯದಿಂದ ನಡುಗುತ್ತಾ ಪ್ರಭುವಿನ ಚರಣಗಳನ್ನು ಹಿಡಿದುಕೊಂಡು ಬೇಡಿಕೊಂಡನು – ''ಜಗತ್ಪ್ರಭೂ! ನನ್ನ ಎಲ್ಲ ಅಪರಾಧಗಳನ್ನೂ ಕ್ಷಮಿಸಿ. ಆಕಾಶ, ವಾಯು, ಅಗ್ನಿ, ಜಲ, ನೆಲ ಇವೆಲ್ಲವೂ ಸಹಜವಾಗಿಯೇ ಜಡವು. ನಿನ್ನ ಪ್ರೇರಣೆಯಿಂದ ಮಾಯೆಯು ಇವೆಲ್ಲವನ್ನು ಸೃಷ್ಟಿಸಿರುವಳೆಂದು ಎಲ್ಲ ಪ್ರಾಮಾಣಿಕ ಗ್ರಂಥಗಳು ಹಾಡಿ ಹೊಗಳುತ್ತಿವೆ. ಸ್ವಾಮಿಯ ಆಜ್ಞೆಯಂತೆ ಇರುವುದರಲ್ಲಿಯೇ ಸುಖಶಾಂತಿಗಳು ಲಭಿಸುತ್ತವೆ. ಪ್ರಭೂ! ನನ್ನನ್ನು ಶಿಕ್ಷಿಸಿದ್ದು ಒಳ್ಳೆಯದೇ ಆಯಿತು. ಆದರೆ ಜೀವಿಗಳ ಸ್ವಭಾವಗಳು ನಿನ್ನಿಂದಲೇ ರೂಪಿತವಾಗಿದೆಯಲ್ಲ! ಡೋಲು, ಅನಾಗರಿಕ, ಶೂದ್ರ, ಪಶು, ಸ್ತ್ರೀ ಇವರೆಲ್ಲ ತಾಡನಕ್ಕೆ ಅಧಿಕಾರಿಗಳು. ಪ್ರಭುವಿನ ಪ್ರತಾಪದಿಂದ ನಾನು ಒಣಗಿಹೋಗಬಲ್ಲೆ. ಈ ಸೈನ್ಯವು ಆಚೆದಡಕ್ಕೆ ಹೋಗಬಲ್ಲದು. ಆದರೆ ಇದರಿಂದ ನನ್ನ ಔನ್ನತ್ಯ ಪ್ರಕಟವಾಗಲಾರದು. (ನನಗೂ ಮರ್ಯಾದೆ (ಪರಿಮಿತಿ) ಇದೆಯಲ್ಲ!) ನಿಮ್ಮ ಆಜ್ಞೆಯು ಅನುಲ್ಲಂಘನೀಯವೆಂದು ವೇದಗಳು ಸಾರಿ ಹೇಳುತ್ತವೆ. ಈಗ ತಾವು ಅಪ್ಪಣೆ ಮಾಡಿದಂತೆ ನಾನು ನಡೆದುಕೊಳ್ಳುತ್ತೇನೆ. (ಚೌ/೧-೪)

**ದೋ – ಸುನತ ಬಿನೀತ ಬಚನ ಅತಿ ಕಹ ಕೃಪಾಲ ಮುಸುಕಾಇ।**
**ಜೆಹಿ ಬಿಧಿ ಉತರೈ ಕಪಿ ಕಟಕು ತಾತ ಸೊ ಕಹಹು ಉಪಾಇ॥೫೯॥**

ಸಮುದ್ರದ ವಿನೀತ ವಾಣಿಯನ್ನು ಕೇಳಿ, ಕೃಪಾಳುವಾದ ಶ್ರೀರಾಮನು ಮುಗುಳ್ನಗೆಯನ್ನು ಬೀರಿ ಹೇಳಿದನು – ಅಯ್ಯಾ! ವಾನರರ ಸೇನೆಯು ಆಚೆದಡ ಮುಟ್ಟಲು ಬೇಕಾಗುವ ಉಪಾಯವನ್ನು ತಿಳಿಸು. (ದೋ/೫೯)

**ಚೌ – ನಾಥ ನೀಲ ನಲ ಕಪಿ ದ್ವೌ ಭಾಈ। ಲರಿಕಾಈಂ ರಿಷಿ ಆಸಿಷ ಪಾಈ॥**
**ತಿನ್ಹ ಕೇ ಪರಸ ಕಿಏಂ ಗಿರಿ ಭಾರೇ। ತರಿಹಹಿಂ ಜಲಧಿ ಪ್ರತಾಪ ತುಮ್ಹಾರೇ॥೧॥**
**ಮೈ ಪುನಿ ಉರ ಧರಿ ಪ್ರಭು ಪ್ರಭುತಾಈ। ಕರಿಹಉಂ ಬಲ ಅನುಮಾನ ಸಹಾಈ॥**
**ಏಹಿ ಬಿಧಿ ನಾಥ ಪಯೊಧಿ ಬಂಧಾಇಅ। ಜೆಹಿಂ ಯಹ ಸುಜಸು ಲೋಕ ತಿಹುಂಗಾಇಅ॥೨॥**
**ಏಹಿಂ ಸರ ಮಮ ಉತ್ತರ ತಟ ಬಾಸೀ। ಹತಹು ನಾಥ ಖಲ ನರ ಅಘ ರಾಸೀ॥**
**ಸುನಿ ಕೃಪಾಲ ಸಾಗರ ಮನ ಪೀರಾ। ತುರತಹಿಂ ಹರೀ ರಾಮ ರನಧೀರಾ॥೩॥**
**ದೇಖಿ ರಾಮ ಬಲ ಪೌರುಷ ಭಾರೀ। ಹರಷಿ ಪಯೋನಿಧಿ ಭಯಉ ಸುಖಾರೀ॥**
**ಸಕಲ ಚರಿತ ಕಹಿ ಪ್ರಭುಹಿ ಸುನಾವಾ। ಚರನ ಬಂದಿ ಪಾಥೋಧಿ ಸಿಧಾವಾ॥೪॥**

ಸಮುದ್ರನು ಹೇಳಿದನು – ''ಸ್ವಾಮಿ! ನೀಲ ಮತ್ತು ನಲ ಇವರಿಬ್ಬರು ವಾನರ ಸೋದರರು ಬಾಲ್ಯದಲ್ಲಿ ಓರ್ವ ಮಹರ್ಷಿಯಿಂದ ವರವನ್ನು ಪಡೆದಿದ್ದರು. ಅವರು ಮುಟ್ಟಿದರೆ ಸಾಕು. ದೊಡ್ಡ-ದೊಡ್ಡ ಪರ್ವತಗಳೂ ಕೂಡ ನಿಮ್ಮ ಮಹಿಮೆಯಿಂದ ಸಮುದ್ರದಲ್ಲಿ ತೇಲುತ್ತವೆ. ನಾನೂ ಕೂಡ ಪ್ರಭುವಿನ ಪ್ರಭುತ್ವವನ್ನು ಹೃದಯದಲ್ಲಿಟ್ಟುಕೊಂಡು ನನ್ನಿಂದಾದಷ್ಟು ಸಹಾಯಮಾಡುವೆನು. ನಾಥಾ! ಮೂರ್ಲೋಕಗಳಲ್ಲಿಯೂ ನಿಮ್ಮ ಕೀರ್ತಿಯನ್ನು ಎಲ್ಲರೂ ಕೊಂಡಾಡುವಂತಹ ಸಮುದ್ರದ ಮೇಲೆ ಸೇತುವನ್ನು ನಿರ್ಮಿಸಿರಿ. ನೀವು ಹೂಡಿರುವ ಈ ಬಾಣದಿಂದ ನನ್ನ ಉತ್ತರದಿಕ್ಕಿನಲ್ಲಿರುವ ('ದ್ರುಮಕುಲ್ಯ'ವೆಂಬ *

* ಸಮುದ್ರದ ಉತ್ತರದಿಕ್ಕಿನಲ್ಲಿ 'ದ್ರುಮಕುಲ್ಯ'ವೆಂಬ ಪವಿತ್ರವೂ, ಪ್ರಸಿದ್ಧವೂ ಆದ ಒಂದು ಸ್ಥಾನವಿದೆ. ಅಲ್ಲಿ ಆಭೀರ ಜಾತಿಯವರು ವಾಸಿಸುತ್ತಿದ್ದನು. ಅವರು ಉಗ್ರದರ್ಶನರೂ, ಉಗ್ರಕರ್ಮಿಗಳೂ, ಹೆಚ್ಚಿನ ಪಾಪಾತ್ಮರೂ ಆಗಿದ್ದರು. ಅವರು ಸಮುದ್ರಜಲವನ್ನು ಕುಡಿಯುತ್ತಿದ್ದರು. ಅವರ ಉಪದ್ರವವು ಸಮುದ್ರನಿಗೆ ಸಹನೆಯಾಗುತ್ತಿರಲಿಲ್ಲ. ಸಮುದ್ರದ ಕೋರಿಕೆಯಂತೆ ಶ್ರೀರಾಮನು ಆ ಅಗ್ನಿಬಾಣವನ್ನು ಪ್ರಯೋಗಿಸಿ ಆ ಪಾಪಾತ್ಮರನ್ನು ವಧಿಸಿಬಿಟ್ಟನು. ಬಳಿಕ ಶ್ರೀರಾಮನ ಅನುಗ್ರಹದಿಂದ ಆ ಪ್ರದೇಶವೆಲ್ಲ ಫಲ-ಪುಷ್ಪಭರಿತವಾಗಿ 'ಮರುಕಾಂತಾರ'ವೆಂದು ಪ್ರಸಿದ್ಧವಾಯಿತು.

**ಉತ್ತರೇಣಾವಕಾಶೋಽಸ್ತಿ ಕಶ್ಚಿತ್ ಪುಣ್ಯತಮೋಮಮ। 'ದ್ರುಮಕುಲ್ಯ' ಇತಿಖ್ಯಾತೋ ಲೋಕೇ ಖ್ಯಾತೋ ಯಥಾಭವಾನ್।**
**ಉಗ್ರದರ್ಶನ ಕರ್ಮಾಣೋ ಬಹವಸ್ತತ್ರ ದಸ್ಯವಃ। ಆಭೀರ ಪ್ರಮುಖಾಃ ಪಾಪಾಃ ಪಿಬಂತಿ ಸಲಿಲಂ ಮಮ॥**
**ತೈಸ್ತು ಸಂಸ್ಪರ್ಶನಂ ಪಾಪೈಃ ನ ಸಮೋ ಪಾಪಕರ್ಮಭಿಃ। ಅಮೋಘಃ ಕ್ರಿಯತಾಂ ರಾಮ ತತ್ರ ತೇಷು ಶರೋತ್ತಮಃ॥**

(ವಾ.ರಾ. ಯುದ್ಧ. ಸ. ೨೨/೩೧-೩೩)

ಸ್ಥಾನದಲ್ಲಿ ವಾಸಿಸುವ ದಸ್ಯುಗಳಾದ) ಪಾಪಾತ್ಮರನ್ನು ವಧಿಸಿಬಿಡು. ಕೃಪಾಳುವೂ, ರಣಧೀರನೂ ಆದ ಶ್ರೀರಾಮನು ಸಮುದ್ರರಾಜನ ಮನದ ಅಳಲನ್ನು ಮನಗಂಡು ಆ ದುಷ್ಟರನ್ನು ವಧಿಸಿದನು. ಶ್ರೀರಾಮಚಂದ್ರನ ಬಲಪರಾಕ್ರಮವನ್ನು ಕಂಡು ಸಮುದ್ರನು ಹರ್ಷೋತ್ಫುಲ್ಲನಾದನು. ಅವನು ಆ ದುಷ್ಟರ ಎಲ್ಲ ಚರಿತ್ರೆಯನ್ನು ಪ್ರಭುವಿಗೆ ಶ್ರುತಪಡಿಸಿದನು. ಮತ್ತೆ ಶ್ರೀರಾಮನಿಗೆ ಪಾದಾಭಿವಂದನೆಗೈದು ಸಮುದ್ರರಾಜನು ಹೊರಟುಹೋದನು. (ಚೌ/೧-೪)

**ಛಂ – ನಿಜ ಭವನ ಗವನೆಉ ಸಿಂಧು ಶ್ರೀರಘುಪತಿಹಿ ಯಹ ಮತ ಭಾಯಊ।**
**ಯಹ ಚರಿತ ಕಲಿ ಮಲಹರ ಜಥಾಮತಿ ದಾಸ ತುಲಸೀ ಗಾಯಊ॥**
**ಸುಖ ಭವನ ಸಂಸಯ ಸಮನ ದವನ ಬಿಷಾದ ರಘುಪತಿ ಗುನ ಗನಾ।**
**ತಜಿ ಸಕಲ ಆಸ ಭರೋಸ ಗಾವಹಿ ಸುನಹಿ ಸಂತತ ಸಠ ಮನಾ॥**

ಸಮುದ್ರನು ತನ್ನ ಭವನಕ್ಕೆ ಹಿಂತಿರುಗಿದ. ಶ್ರೀರಘುನಾಥನಿಗೆ ಅವನ ಸಲಹೆ ಒಪ್ಪಿಗೆಯಾಯಿತು. ಕಲಿಯುಗದ ಪಾಪಗಳನ್ನು ಓಡಿಸುವ ಈ ಕಥೆಯನ್ನು ತುಲಸೀದಾಸನು ತನ್ನ ಬುದ್ಧಿಗನುಗುಣವಾಗಿ ಹಾಡಿದ್ದಾನೆ. ಶ್ರೀ ರಘುಪತಿಯ ಗುಣಗಣಗಳು ಸುಖಧಾಮವು. ಎಲ್ಲ ಸಂದೇಹಗಳನ್ನೂ ಪರಿಹರಿಸುವವು. ವಿಷಾದಗಳು ನಾಶವಾಗುವುವು. ಎಲೈ ಮೂರ್ಖ ಮನಸ್ಸೇ! ನೀನು ಜಗತ್ತಿನ ಆಸೆ-ಆಕಾಂಕ್ಷೆ ತೊರೆದು ಸಂತತವಾಗಿ ಭಗವಂತನ ಗುಣಗಳ ಶ್ರವಣಕೀರ್ತನೆಯಲ್ಲೇ ಮುಳುಗಿರು. (ಛಂದ)

**ದೋ – ಸಕಲ ಸುಮಂಗಲ ದಾಯಕ ರಘುನಾಯಕ ಗುನ ಗಾನ।**
**ಸಾದರ ಸುನಹಿಂ ತೆ ತರಹಿಂ ಭವ ಸಿಂಧು ಬಿನಾ ಜಲಜಾನ ॥ ೬೦ ॥**

ಶ್ರೀರಘುನಾಥನ ಗುಣಗಾನವೇ ಸಕಲ ಮಂಗಳದಾಯಕ. ಇದನ್ನು ಆದರಿಸಿ ಕೇಳಿದವರು ಬೇರೆ ಯಾವುದೇ ಸಾಧನೆಗಳಿಲ್ಲದೆ ಭವಸಾಗರವನ್ನು ಸುಲಭವಾಗಿ ದಾಟಿಬಿಡುವರು. (ದೋ/೬೦)

**ಮಾಸಪಾರಾಯಣದ ಇಪ್ಪತ್ತನಾಲ್ಕನೆಯ ವಿಶ್ರಾಮ**

**ಇತಿ ಶ್ರೀಮದ್ರಾಮಚರಿತಮಾನಸೇ ಸಕಲಕಲಿಕಲುಷವಿಧ್ವಂಸನೇ ಪಂಚಮಃ ಸೋಪಾನಃ ಸಮಾಪ್ತಃ ॥ ೫ ॥**

*ಕಲಿಯುಗದ ಎಲ್ಲ ಪಾಪಗಳನ್ನು ಧ್ವಂಸಮಾಡುವ ಶ್ರೀರಾಮಚರಿತಮಾನಸದಲ್ಲಿ*
*ಸುಂದರಕಾಂಡವೆಂಬ ಐದನೆಯ ಸೋಪಾನವು ಮುಗಿದುದು.*

**(ಸುಂದರಕಾಂಡ ಸಮಾಪ್ತವು)**

**॥ ಶ್ರೀಸೀತಾರಾಮಚಂದ್ರಾರ್ಪಣಮಸ್ತು ॥**





ರಾವಣನು ವಿಭೀಷಣನ ಮೇಲೆ ಪ್ರಯೋಗಿಸಿದ ಮಹಾಶಕ್ತಿಯನ್ನು
ಭಕ್ತವತ್ಸಲನಾದ ಶ್ರೀರಾಮಚಂದ್ರನು ತಾನು ಧರಿಸಿದುದು

ಶ್ರೀಗಣೇಶಾಯ ನಮಃ

ಶ್ರೀಜಾನಕೀವಲ್ಲಭೋ ವಿಜಯತೇ

# ಶ್ರೀರಾಮಚರಿತಮಾನಸ

## ಷಷ್ಠ ಸೋಪಾನ

## ಲಂಕಾಕಾಂಡ

### ಭಗವದ್‌ಸ್ತುತಿ

**ಶ್ಲೋ – ರಾಮಂ ಕಾಮಾರಿಸೇವ್ಯಂ ಭವಭಯಹರಣಂ ಕಾಲಮತ್ತೇಭಸಿಂಹಂ**
**ಯೋಗೀಂದ್ರಂ ಜ್ಞಾನಗಮ್ಯಂ ಗುಣನಿಧಿಮಜಿತಂ ನಿರ್ಗುಣಂ ನಿರ್ವಿಕಾರಮ್ ।**
**ಮಾಯಾತೀತಂ ಸುರೇಶಂ ಖಲವಧನಿರತಂ ಬ್ರಹ್ಮವೃಂದೈಕದೇವಂ**
**ವಂದೇ ಕಂದಾವದಾತಂ ಸರಸಿಜನಯನಂ ದೇವಮುರ್ವೀಶರೂಪಮ್ ॥ ೧ ॥**

ಕಾಮಾರಿ ಶಿವನಿಂದ ಸೇವ್ಯನೂ, ಭವಭಯಹರನೂ, ಕಾಲವೆಂಬ ಮತ್ತಗಜಕ್ಕೆ ಸಿಂಹಸದೃಶನಾಗಿರುವವನೂ, ಯೋಗೀಂದ್ರನೂ, ಜ್ಞಾನಗಮ್ಯನೂ, ಸದ್ಗುಣನಿಧಿಯೂ, ಅಜೇಯನೂ, ನಿರ್ಗುಣನೂ, ನಿರ್ವಿಕಾರನೂ, ಮಾಯಾತೀತನೂ, ದೇವತೆಗಳ ಒಡೆಯನೂ, ದುಷ್ಟಸಂಹಾರ ನಿರತನೂ, ಬ್ರಾಹ್ಮಣವೃಂದಕ್ಕೆ ಏಕಮಾತ್ರದೇವನೂ (ರಕ್ಷಕನೂ), ನೀಲಮೇಘಶ್ಯಾಮಸುಂದರನೂ, ಕಮಲಾಕ್ಷನೂ ಆದ ಪೃಥ್ವೀವಲ್ಲಭನ ರೂಪದಲ್ಲಿರುವ ಆ ಪರಮದೇವ ಶ್ರೀರಾಮಚಂದ್ರನಿಗೆ ವಂದಿಸುತ್ತೇನೆ. ॥ ೧॥

**ಶಂಖೇಂದ್ವಾಭಮತೀವಸುಂದರತನುಂ ಶಾರ್ದೂಲಚರ್ಮಾಂಬರಂ**
**ಕಾಲವ್ಯಾಲಕರಾಲಭೂಷಣಧರಂ ಗಂಗಾಶಶಾಂಕಪ್ರಿಯಮ್ ।**
**ಕಾಶೀಶಂ ಕಲಿಕಲ್ಮಷೌಘಶಮನಂ ಕಲ್ಯಾಣಕಲ್ಪದ್ರುಮಂ**
**ನೌಮೀಡ್ಯಂ ಗಿರಿಜಾಪತಿಂ ಗುಣನಿಧಿಂ ಕಂದರ್ಪಹಂ ಶಂಕರಮ್ ॥ ೨ ॥**

ಶಂಖ ಮತ್ತು ಚಂದ್ರನಂತೆ ಧವಳಕಾಂತಿಯಿಂದ ಕೂಡಿದ ಅತ್ಯಂತ ಸುಂದರವಾದ ಶರೀರವುಳ್ಳವನೂ, ವ್ಯಾಘ್ರಚರ್ಮಾಂಬರಧರನೂ, ಭಯಂಕರ ಕಾಳಸರ್ಪಗಳನ್ನು ಭೂಷಣವನ್ನಾಗಿ ಧರಿಸಿದವನೂ, ಗಂಗಾಧರನೂ, ಶಶಾಂಕ ಶೇಖರನೂ, ಕಾಶೀಪತಿಯೂ, ಕಲಿಯುಗದ ಪಾಪಸಮೂಹವನ್ನು ನಾಶಮಾಡುವವನೂ, ಕಲ್ಯಾಣಕಲ್ಪತರುವೂ, ಗುಣನಿಧಿಯೂ, ಕಾಮದೇವನನ್ನು ಸುಟ್ಟವನೂ ಆದ ಪಾರ್ವತಿಪತೀ ಶಂಕರನಿಗೆ ನಾನು ನಮಸ್ಕರಿಸುತ್ತೇನೆ. ॥ ೨॥

**ಯೋ ದದಾತಿ ಸತಾಂ ಶಂಭುಃ ಕೈವಲ್ಯಮಪಿ ದುರ್ಲಭಮ್ ।**
**ಖಲಾನಾಂ ದಂಡಕೃದ್ಯೋऽಸೌ ಶಂಕರಃ ಶಂ ತನೋತು ಮೇ ॥ ೩ ॥**

ಅತ್ಯಂತ ದುರ್ಲಭವಾದ ಕೈವಲ್ಯವನ್ನು ಕೂಡ ಸಜ್ಜನರಿಗೆ ಕೊಡುವವನೂ, ದುಷ್ಟರನ್ನು ಶಿಕ್ಷಿಸುವವನೂ ಆದ ಕಲ್ಯಾಣಕಾರಿ ಶಂಭುವು ನನಗೆ ಸಮಸ್ತ ಶುಭಗಳನ್ನು ಅನುಗ್ರಹಿಸಲಿ. ॥ ೩॥

**ದೋ – ಲವ ನಿಮೇಶ ಪರಮಾನು ಜುಗ ಬರಷ ಕಲಪ ಸರ ಚಂಡ ।**
**ಭಜಸಿ ನ ಮನ ತೆಹಿ ರಾಮ ಕೋ ಕಾಲು ಜಾಸು ಕೋದಂಡ ॥**

(ತುಲಸೀದಾಸರು ಹೇಳುತ್ತಾರೆ–) ಎಲೈ ಮನಸ್ಸೇ! ಕಾಲವನ್ನೇ ಕೋದಂಡವನ್ನಾಗಿಸಿಕೊಂಡು, ಲವ, ನಿಮೇಷ, ಪರಮಾಣು, ವರ್ಷ, ಯುಗ, ಕಲ್ಪ ಇವುಗಳನ್ನು ಬಾಣಗಳನ್ನಾಗಿಸಿಕೊಂಡ ಶ್ರೀರಾಮಚಂದ್ರನನ್ನು ನೀನೇಕೆ ಭಜಿಸುವುದಿಲ್ಲ? (ದೋಹಾ)

## ಸೇತುಬಂಧ - ರಾಮೇಶ್ವರ ಪ್ರತಿಷ್ಠೆ

**ಸೋ – ಸಿಂಧು ಬಚನ ಸುನಿ ರಾಮ ಸಚಿವ ಬೋಲಿ ಪ್ರಭು ಅಸ ಕಹೆಉ।**
**ಅಬ ಬಿಲಂಬು ಕೆಹಿ ಕಾಮ ಕರಹು ಸೇತು ಉತರೈ ಕಟಕು ॥**
**ಸುನಹು ಭಾನುಕುಲ ಕೇತು ಜಾಮವಂತ ಕರ ಜೋರಿ ಕಹ।**
**ನಾಥ ನಾಮ ತವ ಸೇತು ನರ ಚಢ಼ಿ ಭವ ಸಾಗರ ತರಹಿಂ॥**

ಸಮುದ್ರನ ಸಲಹೆಯನ್ನು ಆದರಿಸಿದ ಶ್ರೀರಾಮಚಂದ್ರನು ಮಂತ್ರಿಗಳನ್ನು ಕರೆದು ಇಂತೆಂದನು – 'ಇನ್ನು ತಡವೇಕೇ? ಸೈನ್ಯವು ದಾಟಲು ಅನುವಾಗುವಂತೆ ಸೇತುವೆಯನ್ನು ನಿರ್ಮಿಸಿರಿ. ಆಗ ಜಾಂಬವಂತರು ಕೈಜೋಡಿಸಿ ವಿನಯದಿಂದ ನುಡಿದರು – ''ಓ ಸೂರ್ಯವಂಶ ಕೇತುವೇ! ಪ್ರಭೂ! ಶ್ರೀರಾಮಾ! ಮನುಷ್ಯನು ಭವಸಾಗರವನ್ನು ದಾಟಲು ನಿಮ್ಮ ನಾಮವೇ ಒಂದು ಸೇತುವಿನಂತಿದೆ. (ಸೋರಠ)

**ಚೌ – ಯಹ ಲಘು ಜಲಧಿ ತರತ ಕತಿ ಬಾರಾ। ಅಸ ಸುನಿ ಪುನಿ ಕಹ ಪವನಕುಮಾರಾ॥**
**ಪ್ರಭು ಪ್ರತಾಪ ಬಡವಾನಲ ಭಾರೀ। ಸೋಷೆಉ ಪ್ರಥಮ ಪಯೋನಿಧಿ ಬಾರೀ ॥ ೧ ॥**
**ತವ ರಿಪು ನಾರಿ ರುದನ ಜಲ ಧಾರಾ। ಭರೆಉ ಬಹೋರಿ ಭಯಉ ತೇಹಿಂ ಖಾರಾ॥**
**ಸುನಿ ಅತಿ ಉಕುತಿ ಪವನಸುತ ಕೇರೀ। ಹರಷೇ ಕಪಿ ರಘುಪತಿ ತನ ಹೇರೀ ॥ ೨ ॥**
**ಜಾಮವಂತ ಬೋಲೇ ದೋಉ ಭಾಈ। ನಲ ನೀಲಹಿ ಸಬ ಕಥಾ ಸುನಾಈ ॥**
**ರಾಮ ಪ್ರತಾಪ ಸುಮಿರಿ ಮನ ಮಾಹೀಂ। ಕರಹು ಸೇತು ಪ್ರಯಾಸ ಕಛು ನಾಹೀಂ ॥ ೩ ॥**
**ಬೋಲಿ ಲಿಏ ಕಪಿ ನಿಕರ ಬಹೋರೀ। ಸಕಲ ಸುನಹು ಬಿನತೀ ಕಛು ಮೋರೀ ॥**
**ರಾಮ ಚರನ ಪಂಕಜ ಉರ ಧರಹೂ। ಕೌತುಕ ಏಕ ಭಾಲು ಕಪಿ ಕರಹೂ ॥ ೪ ॥**
**ಧಾವಹು ಮರ್ಕಟ ಬಿಕಟ ಬರೂಥಾ। ಆನಹು ಬಿಟಪ ಗಿರಿನ್ಹ ಕೇ ಜೂಥಾ ॥**
**ಸುನಿ ಕಪಿ ಭಾಲು ಚಲೇ ಕರಿ ಹೂಹಾ। ಜಯ ರಘುಬೀರ ಪ್ರತಾಪ ಸಮೂಹಾ ॥ ೫ ॥**

ಹಾಗಿರುವಾಗ ಇಂತಹ ಸಣ್ಣ ಸಮುದ್ರವನ್ನು ದಾಟಲು ಎಷ್ಟು ಹೊತ್ತು ಬೇಕಾಗುವುದು?'' ಈ ಮಾತನ್ನು ಕೇಳಿ ಪವನಕುಮಾರ ಹನುಮಂತನು ಹೇಳಿದನು – ''ಪ್ರಭುವಿನ ಪ್ರತಾಪವು ಬಡಬಾಗ್ನಿಯಂತಿದೆ. ಅದು ಮೊದಲೇ ಸಮುದ್ರದ ಜಲವನ್ನು ಶೋಷಿಸಿಬಿಟ್ಟಿತ್ತು. ಆದರೆ ಶತ್ರುಗಳ ಹೆಂಡಿರ ಕಂಬನಿಯ ಧಾರೆಯಿಂದ ಅದು ಮತ್ತೆ ತುಂಬಿಕೊಂಡಿತು. ಅದರಿಂದ ಅದರ ನೀರು ಉಪ್ಪಾಯಿತು.'' ಹನುಮಂತನ ಈ ಯುಕ್ತಿಯುಕ್ತವಾದ ಮಾತನ್ನು ಕೇಳಿ ವಾನರರೆಲ್ಲರೂ ಶ್ರೀರಘುಪತಿಯತ್ತ ನೋಡಿ ಹರ್ಷಿತರಾದರು. ಜಾಂಬವಂತರು ನಳ, ನೀಲ, ಸೋದರರೀರ್ವರನ್ನು ಕರೆದು, ಅವರಿಗೆ ನಡೆದ ವೃತ್ತಾಂತವನ್ನೆಲ್ಲ ತಿಳಿಸಿ ಹೇಳಿದರು – ''ಮನಸ್ಸಿನಲ್ಲಿ ಶ್ರೀರಾಮನ ಮಹಿಮೆಯನ್ನು ಸ್ಮರಿಸುತ್ತಾ ಸೇತುವನ್ನು ನಿರ್ಮಿಸಿರಿ. ಪ್ರಭುಮಹಾತ್ಮ್ಯೆಯಿಂದ ನಿಮಗೆ ಯಾವುದೇ ಪರಿಶ್ರಮವಾಗದು.'' ಬಳಿಕ ವಾನರ ಸೈನ್ಯವನ್ನು ಕರೆಸಿ ಇಂತೆಂದನು – ''ನಿಮ್ಮೆಲ್ಲರಲ್ಲಿ ನನ್ನದೊಂದು ಬಿನ್ನಹ. ನೀವು ನಿಮ್ಮ ಹೃದಯದಲ್ಲಿ ಶ್ರೀರಾಮನ ಚರಣಗಳನ್ನು ಧರಿಸಿಕೊಂಡು, ವಾನರ, ಭಲ್ಲೂಕರೆಲ್ಲ ಸೇರಿಕೊಂಡು ಒಂದು ಕೌತುಕವನ್ನು ತೋರಿರಿ. ಓ ವೀರವಾನರಯೋಧರೇ! ನೀವು ಓಡಿಹೋಗಿ ವೃಕ್ಷಗಳನ್ನೂ, ಪರ್ವತಗಳನ್ನೂ ಕಿತ್ತು ತನ್ನಿರಿ.'' ಇದನ್ನೂ ಕೇಳುತ್ತಲೇ ವಾನರರೂ, ಭಲ್ಲೂಕ ಯೋಧರೂ, 'ಹೂಂ'ಕರಿಸುತ್ತಾ ಪ್ರತಾಪಪುಂಜನಾದ ಶ್ರೀರಾಮನಿಗೆ ಜಯಕಾರ ಮಾಡುತ್ತಾ ತೆರಳಿದರು. (ಚೌ/೧-೫)

**ದೋ – ಅತಿ ಉತಂಗ ಗಿರಿ ಪಾದಪ ಲೀಲಹಿಂ ಲೇಹಿಂ ಉಠಾಇ।**
**ಆನಿ ದೇಹಿಂ ನಲ ನೀಲಹಿ ರಚಹಿಂ ತೆ ಸೇತು ಬನಾಇ॥ ೧ ॥**

ಅವರು ಅತ್ಯಂತ ಎತ್ತೆತ್ತರದ ಪರ್ವತಗಳನ್ನೂ, ವೃಕ್ಷಗಳನ್ನೂ ಲೀಲಾಜಾಲವಾಗಿ ಕಿತ್ತು ಎತ್ತಿ ತಂದು ನಳ, ನೀಲರಿಗೆ ಕೊಡತೊಡಗಿದರು. ಅವರು ಅವುಗಳನ್ನು ಸವರಿ ಸೇತುವೆ ಕಟ್ಟತೊಡಗಿದರು. (ದೋ/೧)

ಚೌ – ಸೈಲ ಬಿಸಾಲ ಆನಿ ಕಪಿ ದೇಹೀಂ । ಕಂದುಕ ಇವ ನಲ ನೀಲ ತೆ ಲೇಹೀಂ ॥
ದೇಖಿ ಸೇತು ಅತಿ ಸುಂದರ ರಚನಾ । ಬಿಹಸಿ ಕೃಪಾನಿಧಿ ಬೋಲೇ ಬಚನಾ ॥ ೧ ॥
ಪರಮ ರಮ್ಯ ಉತ್ತಮ ಯಹ ಧರನೀ । ಮಹಿಮಾ ಅಮಿತ ಜಾಇ ನಹಿಂ ಬರನೀ ॥
ಕರಿಹಉಂ ಇಹಾಂ ಸಂಭು ಥಾಪನಾ । ಮೋರೇ ಹೃದಯಂ ಪರಮ ಕಲಪನಾ ॥ ೨ ॥
ಸುನಿ ಕಪೀಸ ಬಹು ದೂತ ಪಠಾಏ । ಮುನಿಬರ ಸಕಲ ಬೋಲಿ ಲೈ ಆಏ ॥
ಲಿಂಗ ಥಾಪಿ ಬಿಧಿವತ ಕರಿ ಪೂಜಾ । ಸಿವ ಸಮಾನ ಪ್ರಿಯ ಮೋಹಿ ನ ದೂಜಾ ॥ ೩ ॥
ಸಿವ ದ್ರೋಹೀ ಮಮ ಭಗತ ಕಹಾವಾ । ಸೋ ನರ ಸಪನೆಹುಂ ಮೋಹಿ ನ ಪಾವಾ ॥
ಸಂಕರ ಬಿಮುಖ ಭಗತಿ ಚಹ ಮೋರೀ । ಸೋ ನಾರಕೀ ಮೂಢ ಮತಿ ಥೋರೀ ॥ ೪ ॥

ವಾನರರು ತಂದ ಭಾರೀ ಬೆಟ್ಟಗಳನ್ನು ನಳ-ನೀಲರು ಚೆಂಡಿನಂತೆ ಆಂತುಕೊಳ್ಳುವರು. ಸೇತುವೆ ತುಂಬಾ ಅಚ್ಚುಕಟ್ಟಾಗಿ, ಚೆಲುವಾಗಿ, ನಿರ್ಮಿತವಾಗುತ್ತಿರುವುದನ್ನು ಕಂಡು ಕೃಪಾಸಿಂಧುವಾದ ಶ್ರೀರಾಮನು ನಗುತ್ತಾ ನುಡಿದನು – ''ಈ ಧರಣಿ ಪರಮ ರಮಣೀಯವಾಗಿದೆ. ಉತ್ತಮೋತ್ತಮವಾಗಿದೆ. ಇದರ ಮಹಿಮೆ ವರ್ಣನಾತೀತ. ಇಲ್ಲಿ ನಾನು ಪರಶಿವನನ್ನು ಪ್ರತಿಷ್ಠಾಪಿಸಲು ಬಯಸುತ್ತೇನೆ. ಇದು ನನ್ನ ಹಿರಿದಾದ ಸಂಕಲ್ಪವು.'' ಶ್ರೀರಾಮಚಂದ್ರನ ವಚನವನ್ನು ಕೇಳಿ ವಾನರರಾಜ ಸುಗ್ರೀವನು ಅನೇಕ ದೂತರನ್ನು ಕಳುಹಿದನು. ಅವರು ಅನೇಕ ಶ್ರೇಷ್ಠ ಮುನಿಪುಂಗವರನ್ನು ಕರೆತಂದರು. ಶ್ರೀರಾಮನು ಶಿವಲಿಂಗವನ್ನು ಪ್ರತಿಷ್ಠಾಪಿಸಿ, ವಿಧಿಪೂರ್ವಕವಾಗಿ ಪೂಜಿಸಿ ಇಂತೆಂದನು – ''ಶಿವನಂತೆ ಪ್ರಿಯರಾದವನರು ನನಗೆ ಬೇರಾರೂ ಇಲ್ಲ. ಶಿವನಿಗೆ ದ್ರೋಹಬಗೆದು ತನ್ನ ಭಕ್ತನೆಂದು ಹೇಳಿಕೊಳ್ಳುವವನು ಕನಸಿನಲ್ಲಿಯೂ ನನ್ನನ್ನು ಪಡೆಯಲಾರನು. ಶಿವನಿಗೆ ವಿಮುಖನಾಗಿ ನನ್ನ ಭಕ್ತಿಯನ್ನು ಬಯಸುವವನು ಮೂರ್ಖನೂ, ಅಲ್ಪಮತಿಯು. ಅವನಿಗೆ ನರಕ ತಪ್ಪದು. (ಚೌ/೧-೪)

**ದೋ – ಸಂಕರಪ್ರಿಯ ಮಮ ದ್ರೋಹೀ ಸಿವ ದ್ರೋಹೀ ಮಮ ದಾಸ ।**
**ತೇ ನರ ಕರಹಿಂ ಕಲಪ ಭರಿ ಘೋರ ನರಕ ಮಹುಂ ಬಾಸ ॥ ೨ ॥**

ಶಂಕರನಿಗೆ ಪ್ರಿಯರಾಗಿದ್ದು ನನಗೆ ದ್ರೋಹಿಯಾಗಿದ್ದರೆ, ಶಿವದ್ರೋಹಿಯಾಗಿದ್ದು ನನ್ನ ದಾಸರಾಗಬಯಸುವವರು ಕಲ್ಪಾಂತ್ಯದವರೆಗೆ ನರಕಯಾತನೆ ಅನುಭವಿಸುತ್ತಾರೆ. (ದೋ/೨)

ಚೌ – ಜೇ ರಾಮೇಸ್ವರ ದರಸನು ಕರಿಹಹಿಂ । ತೇ ತನು ತಜಿ ಮಮ ಲೋಕ ಸಿಧರಿಹಹಿಂ ॥
ಜೋ ಗಂಗಾಜಲು ಆನಿ ಚಢಾಇಹಿ । ಸೋ ಸಾಜುಜ್ಯ ಮುಕ್ತಿ ನರ ಪಾಇಹಿ ॥ ೧ ॥
ಹೋಇ ಅಕಾಮ ಜೊ ಛಲ ತಜಿ ಸೇಇಹಿ । ಭಗತಿ ಮೋರಿ ತೆಹಿ ಸಂಕರ ದೇಇಹಿ ॥
ಮಮ ಕೃತ ಸೇತು ಜೊ ದರಸನು ಕರಿಹೀ । ಸೋ ಬಿನು ಶ್ರಮ ಭವಸಾಗರ ತರಿಹೀ ॥ ೨ ॥
ರಾಮ ಬಚನ ಸಬ ಕೇ ಜಿಯ ಭಾಏ । ಮುನಿಬರ ನಿಜ ನಿಜ ಆಶ್ರಮ ಆಏ ॥
ಗಿರಿಜಾ ರಘುಪತಿ ಕೈ ಯಹ ರೀತೀ । ಸಂತತ ಕರಹಿಂ ಪ್ರನತ ಪರ ಪ್ರೀತೀ ॥ ೩ ॥
ಬಾಂಧಾ ಸೇತು ನೀಲ ನಲ ನಾಗರ । ರಾಮ ಕೃಪಾಂ ಜಸು ಭಯಉ ಉಜಾಗರ ॥
ಬೂಡಹಿಂ ಆನಹಿ ಬೋರಹಿಂ ಜೇಈ । ಭಏ ಉಪಲ ಬೋಹಿತ ಸಮ ತೇಈ ॥ ೪ ॥
ಮಹಿಮಾ ಯಹ ನ ಜಲಧಿ ಕಇ ಬರನೀ । ಪಾಹನ ಗುನ ನ ಕಪಿನ್ಹ ಕಇ ಕರನೀ ॥ ೫ ॥

ನನ್ನಿಂದ ಸ್ಥಾಪಿತನಾದ ಶ್ರೀರಾಮೇಶ್ವರನ ದರ್ಶನ ಮಾಡುವವನು ಶರೀರತ್ಯಾಗಮಾಡಿದ ಮೇಲೆ ನನ್ನ ಲೋಕವಾದ ವೈಕುಂಠವನ್ನು ಸೇರುವರು. ಗಂಗಾಜಲವನ್ನು ತಂದು ಈ ಲಿಂಗಕ್ಕೆ ಅಭಿಷೇಕಮಾಡುವವರು ಸಾಯುಜ್ಯ ಮುಕ್ತಿಯನ್ನು ಪಡೆಯುವರು. ಛಲ-ಕಪಟಗಳನ್ನು ಬಿಟ್ಟು ನಿಷ್ಕಾಮವಾಗಿ ಶ್ರೀರಾಮೇಶ್ವರನನ್ನು ಸೇವಿಸುವವರಿಗೆ ಶಿವನು ನನ್ನ ಭಕ್ತಿಯನ್ನು ಕರುಣಿಸುತ್ತಾನೆ. ನನ್ನಿಂದ ನಿರ್ಮಿತವಾದ ಈ ಸೇತುವನ್ನು ದರ್ಶನಮಾಡುವವರು ಯಾವುದೇ ಪ್ರಯಾಸವಿಲ್ಲದೆ ಸಂಸಾರಸಾಗರವನ್ನು ದಾಟಿಬಿಡುವರು.'' ಶ್ರೀರಾಮನ ಮಾತುಗಳನ್ನು ಕೇಳಿದ ಎಲ್ಲರ ಮನಸ್ಸಿಗೂ ಆಪ್ಯಾಯಮಾನವಾಯಿತು. ಅನಂತರ ಆ ಶ್ರೇಷ್ಠ ಮುನಿಜನರು ತಮ್ಮ-ತಮ್ಮ ಆಶ್ರಮಗಳಿಗೆ ತೆರಳಿದರು. ಶಿವನು ಹೇಳುತ್ತಾನೆ – ಗಿರಿಜೆ ! ಶರಣಾಗತರನ್ನು ಸತತವೂ ಪ್ರೇಮಿಸುವುದೇ ಶ್ರೀರಘುನಾಥನ ಸ್ವಭಾವವು. ಚತುರರಾದ ನಳ-ನೀಲರು ಸೇತುವೆಯನ್ನು ಕಟ್ಟಿದರು. ಶ್ರೀರಾಮನ ಕೃಪೆಯಿಂದ ಅವರ ಕೀರ್ತಿಯು ಎಲ್ಲೆಡೆ ಹರಡಿತು. ತಾವು ಮುಳುಗಿ ಇತರರನ್ನೂ ಮುಳುಗಿಸುವ ಕಲ್ಲುಗಳು ಸಮುದ್ರದ ಮೇಲೆ

ಹಡಗಿನಂತೆ ತೇಲಿದವು. ಇದು ಸಮುದ್ರದ ಮಹಿಮೆಯಾಗಲೀ, ಕಲ್ಲುಗಳ ಗುಣವಾಗಲೀ, ವಾನರ ಕೌಶಲ್ಯವೂ ಅಲ್ಲ. ಇದೆಲ್ಲವೂ ಶ್ರೀರಾಮನ ಪ್ರಭಾವವೇ ಆಗಿದೆ (ಕರ್ತುಮ್, ಅಕರ್ತುಮ್, ಅನ್ಯಥಾ ಕರ್ತುಮ್ ಸಮರ್ಥಃ = ಶ್ರೀರಾಮಃ) (ಚೌ/೧-೫)

**ದೋ – ಶ್ರೀ ರಘುಬೀರ ಪ್ರತಾಪ ತೇ ಸಿಂಧು ತರೇ ಪಾಷಾನ ।**
**ತೇ ಮತಿಮಂದ ಜೆ ರಾಮ ತಜಿ ಭಜಹಿಂ ಜಾಇ ಪ್ರಭು ಆನ ॥ ೩ ॥**

ಶ್ರೀರಘುವೀರನ ಮಹಿಮೆಯಿಂದ ಕಲ್ಲುಗಳೂ ಕೂಡ ಸಮುದ್ರದಲ್ಲಿ ತೇಲಿದವು. ಅಂತಹ ಶ್ರೀರಾಮನನ್ನು ತೊರೆದು ಇತರ ಪ್ರಭುಗಳನ್ನು ಭಜಿಸುವವರು ನಿಜಕ್ಕೂ ಮಂದಮತಿಗಳೇ ಸರಿ. (ದೋ/೩)

**ಚೌ – ಬಾಂಧಿ ಸೇತು ಅತಿ ಸುದೃಢ ಬನಾವಾ । ದೇಖಿ ಕೃಪಾನಿಧಿ ಕೇ ಮನ ಭಾವಾ ॥**
**ಚಲೀ ಸೇನ ಕಛು ಬರನಿ ನ ಜಾಈ । ಗರ್ಜಹಿಂ ಮರ್ಕಟ ಭಟ ಸಮುದಾಈ ॥ ೧ ॥**
**ಸೇತುಬಂಧ ಢಿಗ ಚಢಿ ರಘುರಾಈ । ಚಿತವ ಕೃಪಾಲ ಸಿಂಧು ಬಹುತಾಈ ॥**
**ದೇಖನ ಕಹು ಪ್ರಭು ಕರುನಾ ಕಂದಾ । ಪ್ರಗಟ ಭಏ ಸಬ ಜಲಚರ ಬೃಂದಾ ॥ ೨ ॥**
**ಮಕರ ನಕ್ರ ನಾನಾ ಝುಷ ಬ್ಯಾಲಾ । ಸತ ಜೋಜನ ತನ ಪರಮ ಬಿಸಾಲಾ ॥**
**ಅಇಸೆಉ ಏಕ ತಿನ್ಹಹಿ ಜೇ ಖಾಹೀಂ । ಏಕನ್ಹ ಕೇಂ ಡರ ತೇಪಿ ಡೆರಾಹೀಂ ॥ ೩ ॥**
**ಪ್ರಭುಹಿ ಬಿಲೋಕಹಿಂ ಟರಹಿಂ ನ ಟಾರೇ । ಮನ ಹರಷಿತ ಸಬ ಭಏ ಸುಖಾರೇ ॥**
**ತಿನ್ಹ ಕೀ ಓಟ ನ ದೇಖಿಅ ಬಾರೀ । ಮಗನ ಭಏ ಹರಿ ರೂಪ ನಿಹಾರೀ ॥ ೪ ॥**
**ಚಲಾ ಕಟಕು ಪ್ರಭು ಆಯಸು ಪಾಈ । ಕೋ ಕಹಿ ಸಕ ಕಪಿ ದಲ ಬಿಪುಲಾಈ ॥ ೫ ॥**

ನಳ, ನೀಲರು ಸೇತುವನ್ನು ಕಟ್ಟಿ ಅದನ್ನು ಅತ್ಯಂತ ದೃಢವಾಗಿಸಿದರು. ಕರುಣಾನಿಧಿಯಾದ ಶ್ರೀರಾಮನು ಅದನ್ನು ನೋಡಿ ತುಂಬಾ ಸಂತಸಪಟ್ಟನು. ವಾನರಸೇನೆಯು ಮುಂದಕ್ಕೆ ನಡೆಯಿತು. ಅವರ ಕಿರುಚಾಟ ವರ್ಣನಾತೀತ. ವಾನರವೀರರು ಗರ್ಜಿಸುತ್ತಿದ್ದಾರೆ. ಕೃಪಾಳುವಾದ ಶ್ರೀರಾಮನು ಸೇತುಬಂಧದ ಮೇಲೆ ಹತ್ತಿ ಅಪಾರಜಲನಿಧಿಯ ವಿಸ್ತಾರವನ್ನು ವೀಕ್ಷಿಸತೊಡಗಿದನು. ಆ ದಯಾಮಯನನ್ನು ದರ್ಶಿಸಲು ಜಲಚರಗಳೆಲ್ಲವೂ ಗುಂಪು-ಗುಂಪಾಗಿ ಮೇಲಕ್ಕೆ ಬಂದವು. ಅವುಗಳಲ್ಲಿ ಅನೇಕ ವಿಧವಾದ ಮಕರ, ನಕ್ರ, ಮತ್ಸ್ಯ ಹಾಗೂ ಸರ್ಪಗಳು ಇದ್ದವು. ಅವುಗಳ ಶರೀರಗಳು ನೂರು ಯೋಜನ ವಿಸ್ತಾರವಾಗಿದ್ದವು. ಇಂತಹ ಪ್ರಾಣಿಗಳನ್ನು ನುಂಗಿ-ನೊಣೆಯುವಂತಹ ಜಲಚರಗಳೂ ಅಲ್ಲಿದ್ದವು. ಅವುಗಳಿಗೂ ಕೂಡ ಬೇರಾವುದೋ ಪ್ರಾಣಿಯ ಭಯ. ಆದರೆ ಇಲ್ಲಿ ಅವುಗಳೆಲ್ಲವೂ ಪರಸ್ಪರ ವೈರಭಾವವನ್ನು ಮರೆತು ಪ್ರಭುವಿನ ದರ್ಶನಮಾಡುತ್ತಿದ್ದವು. ಓಡಿಸಿದರೂ ಕದಲವು ! ಎಲ್ಲಕ್ಕೂ ಎಲ್ಲಿಲ್ಲದ ಹರ್ಷ! ಎಲ್ಲವೂ ಸುಖಿಗಳಾದುವು ! ಅವುಗಳ ದಟ್ಟಣೆಯಿಂದ ಸಮುದ್ರದ ನೀರೇ ಕಾಣದಾಯಿತು. ಅವುಗಳೆಲ್ಲ ಪ್ರಭುವಿನ ರೂಪವನ್ನು ದರ್ಶಿಸಿ ಆನಂದಮಗ್ನವಾದವು. ಪ್ರಭುವಿನ ಅಪ್ಪಣೆಪಡೆದು ವಾನರಕಟಕ ಮುಂದೆ ಸಾಗಿತು. ಆ ಸೇನೆಯ ವಿಸ್ತಾರವನ್ನು ವರ್ಣಿಸಲಸದಳ. (ಚೌ/೧-೫)

**ದೋ – ಸೇತುಬಂಧ ಭಇ ಭೀರ ಅತಿ ಕಪಿ ನಭ ಪಂಥ ಉಡಾಹಿಂ ।**
**ಅಪರ ಜಲಚರನ್ಹಿ ಊಪರ ಚಢಿ ಚಢಿ ಪಾರಹಿ ಜಾಹಿಂ ॥ ೪ ॥**

ನೋಡುನೋಡುತ್ತಿರುವಂತೆ ಸೇತುವೆಯು ವಾನರರರಿಂದ ತುಂಬಿ ಹೋಯಿತು. ಕೆಲವರು ಆಕಾಶಮಾರ್ಗವಾಗಿ ಹಾರಿಕೊಂಡೇ ಹೋದರು. ಕೆಲವರು ಜಲಚರಗಳ ಮೇಲೆ ಹಾರಿ-ಹಾರಿ ಹೋಗುತ್ತಿದ್ದರು. (ದೋ/೪)

**ಚೌ – ಅಸ ಕೌತುಕ ಬಿಲೋಕಿ ದ್ವೌ ಭಾಈ । ಬಿಹಁಸಿ ಚಲೇ ಕೃಪಾಲ ರಘುರಾಈ ॥**
**ಸೇನ ಸಹಿತ ಉತರೇ ರಘುಬೀರಾ । ಕಹಿ ನ ಜಾಇ ಕಪಿ ಜೂಥಪ ಭೀರಾ ॥ ೧ ॥**
**ಸಿಂಧು ಪಾರ ಪ್ರಭು ಡೇರಾ ಕೀನ್ಹಾ । ಸಕಲ ಕಪಿನ್ಹ ಕಹುಁ ಆಯಸು ದೀನ್ಹಾ ॥**
**ಖಾಹು ಜಾಇ ಫಲ ಮೂಲ ಸುಹಾಏ । ಸುನತ ಭಾಲು ಕಪಿ ಜಹಁ ತಹಁ ಧಾಏ ॥ ೨ ॥**
**ಸಬ ತರು ಫರೇ ರಾಮ ಹಿತ ಲಾಗೀ । ರಿತು ಅರು ಕುರಿತು ಕಾಲ ಗತಿ ತ್ಯಾಗೀ ॥**
**ಖಾಹಿಂ ಮಧುರ ಫಲ ಬಿಟಪ ಹಲಾವಹಿಂ । ಲಂಕಾ ಸನ್ಮುಖ ಸಿಖರ ಚಲಾವಹಿಂ ॥ ೩ ॥**
**ಜಹಁ ಕಹುಁ ಫಿರತ ನಿಸಾಚರ ಪಾವಹಿಂ । ಘೇರಿ ಸಕಲ ಬಹು ನಾಚ ನಚಾವಹಿಂ ॥**
**ದಸನನ್ಹಿ ಕಾಟಿ ನಾಸಿಕಾ ಕಾನಾ । ಕಹಿ ಪ್ರಭು ಸುಜಸು ದೇಹಿಂ ತಬ ಜಾನಾ ॥ ೪ ॥**

**ಜಿನ್ಹ ಕರ ನಾಸಾ ಕಾನ ನಿಪಾತಾ । ತಿನ್ಹ ರಾವನಹಿ ಕಹೀ ಸಬ ಬಾತಾ ॥**
**ಸುನತ ಶ್ರವನ ಬಾರಿಧಿ ಬಂಧಾನಾ । ದಸ ಮುಖ ಬೋಲಿ ಉಠಾ ಅಕುಲಾನಾ ॥ ೫ ॥**

ಕೃಪಾಳುವಾದ ಶ್ರೀರಾಮ ಲಕ್ಷ್ಮಣರು ಈ ಕೌತುಕವನ್ನು ನೋಡಿ ನಗುತ್ತಾ ಮುಂದಕ್ಕೆ ಸಾಗಿದರು. ಅವರು ಸೇನಾಸಹಿತ ಸಮುದ್ರವನ್ನು ದಾಟಿದರು. ವಾನರರ, ಸೇನಾಪತಿಗಳ ಸಂದಣಿ ವರ್ಣನೆಗೆ ನಿಲುಕದು. ಪ್ರಭುರಾಮಚಂದ್ರನು ವಾನರರೊಂದಿಗೆ ಸಿಂಧುವಿನ ದಡದಲ್ಲಿ ಬೀಡುಬಿಟ್ಟನು. ಶ್ರೀರಾಮನು ಎಲ್ಲ ವಾನರಭಲ್ಲೂಕಗಳಿಗೆ ರುಚಿಕರವಾದ ಫಲ-ಮೂಲಗಳನ್ನು ತಿನ್ನಿರೆಂದು ಅಪ್ಪಣೆಮಾಡಿದನು. ಇದನ್ನು ಕೇಳುತ್ತಲೇ ಕಪಿ-ಕರಡಿಗಳು ನಾಲ್ಕು ದಿಕ್ಕಿಗೆ ಓಡಿದರು. ಶ್ರೀರಾಮನ ಸೇವೆಗಾಗಿ ಎಲ್ಲ ವೃಕ್ಷಗಳೂ ಋತುಧರ್ಮವನ್ನು ಮೀರಿ ಫಲಭರಿತವಾದುವು. ವಾನರ-ಭಲ್ಲೂಕಗಳು ಮಧುರವಾದ ಫಲಗಳನ್ನು ತಿನ್ನುತ್ತಾ, ಮರಗಳನ್ನು ಅಲ್ಲಾಡಿಸುತ್ತಿರುವರು. ಪರ್ವತ ಶಿಖರಗಳನ್ನು ಲಂಕೆಯತ್ತ ಎಸೆಯುತ್ತಿದ್ದಾರೆ. ಅಲ್ಲಿ-ಇಲ್ಲಿ ಅಲೆಯುತ್ತಾ ಯಾವನಾದರೂ ರಾಕ್ಷಸ ಕಂಡು ಬಂದರೆ, ಅವನನ್ನು ಸುತ್ತುವರೆದು ಕುಣಿಸುತ್ತಿದ್ದರು. ಆಟವಾಡಿಸಿ ಅವರ ಕಿವಿ, ಮೂಗುಗಳನ್ನು ಹಲ್ಲುಗಳಿಂದ ಕಿತ್ತು, ಪ್ರಭುವಿನ ಕೀರ್ತಿಯನ್ನು ಕೊಂಡಾಡುತ್ತಾ, ಅವರಿಂದಲೂ ಹೇಳಿಸಿ, ಬಿಟ್ಟು ಬಿಡುತ್ತಿದ್ದರು. ಕಿವಿ, ಮೂಗುಗಳನ್ನು ಕಳೆದುಕೊಂಡ ರಕ್ಕಸರು ರಾವಣನಿದ್ದೆಡೆಗೆ ಹೋಗಿ ವಿಷಯವನ್ನು ವಿವರಿಸಿದರು. ಸಮುದ್ರದ ಸೇತುವೆ ನಿರ್ಮಾಣವಾದುದನ್ನು ಕೇಳುತ್ತಲೇ ರಾವಣನು ಗಾಬರಿಕೊಂಡು ತನ್ನ ಹತ್ತು ಬಾಯಿಗಳಿಂದಲೂ ಒಮ್ಮೆಗೆ ಉದ್ಗಾರವೆತ್ತಿದನು. (ಚೌ/೧-೫)

**ದೋ – ಬಾँಧ್ಯೋ ಬನನಿಧಿ ನೀರನಿಧಿ ಜಲಧಿ ಸಿಂಧು ಬಾರೀಸ ।**
**ಸತ್ಯ ತೋಯನಿಧಿ ಕಂಪತಿ ಉದಧಿ ಪಯೋಧಿ ನದೀಸ ॥ ೫ ॥**

ಏನು ! ನಿಜವಾಗಿಯೂ ವನನಿಧಿ, ನೀರನಿಧಿ, ಜಲನಿಧಿ, ಸಿಂಧು, ವಾರೀಶ, ತೋಯನಿಧಿ, ಕಂಪತಿ, ಉದಧಿ, ಪಯೋಧಿ, ನದೀಶನಮೇಲೆ ಸೇತು ನಿರ್ಮಾಣವಾಯಿತೇ? (ಹತ್ತೂ ಮುಖದಿಂದ ಒಮ್ಮೆಲೆ ಸಮುದ್ರದ ಹತ್ತು ಹೆಸರನ್ನು ಹೇಳಿಬಿಟ್ಟನು.) ನಿಜವಾಗಿಯೂ ಸಮುದ್ರದ ಮೇಲೆ ಸೇತುವೆ ಕಟ್ಟಿದರೇ? ಎಂದು ವಿಸ್ಮಯದಿಂದ ನುಡಿದನು. (ದೋ/೫)

**ಚೌ – ನಿಜ ಬಿಕಲತಾ ಬಿಚಾರಿ ಬಹೋರೀ । ಬಿಹँಸಿ ಗಯಉ ಗೃಹ ಕರಿ ಭಯ ಭೋರೀ ॥**
**ಮಂದೋದರೀँ ಸುನ್ಯೋ ಪ್ರಭು ಆಯೋ । ಕೌತುಕಹೀँ ಪಾಥೋಧಿ ಬँಧಾಯೋ ॥ ೧ ॥**
**ಕರ ಗಹಿ ಪತಿಹಿ ಭವನ ನಿಜ ಆನೀ । ಬೋಲೀ ಪರಮ ಮನೋಹರ ಬಾನೀ ॥**
**ಚರನ ನಾಇ ಸಿರು ಅಂಚಲು ರೋಪಾ । ಸುನಹು ಬಚನ ಪಿಯ ಪರಿಹರಿ ಕೋಪಾ ॥ ೨ ॥**
**ನಾಥ ಬಯರು ಕೀಜೇ ತಾಹೀ ಸೋँ । ಬುಧಿ ಬಲ ಸಕಿಯ ಜೀತಿ ಜಾಹೀ ಸೋँ ॥**
**ತುಮ್ಹಹಿ ರಘುಪತಿಹಿ ಅಂತರ ಕೈಸಾ । ಖಲು ಖದ್ಯೋತ ದಿನಕರಹಿ ಜೈಸಾ ॥ ೩ ॥**
**ಅತಿಬಲ ಮಧು ಕೈಟಭ ಜೆಹಿँ ಮಾರೇ । ಮಹಾಬೀರ ದಿತಿಸುತ ಸಂಘಾರೇ ॥**
**ಜೆಹಿँ ಬಲಿ ಬಾँಧಿ ಸಹಸ ಭುಜ ಮಾರಾ । ಸೋಇ ಅವತರೇಉ ಹರನ ಮಹಿ ಭಾರಾ ॥ ೪ ॥**
**ತಾಸು ಬಿರೋಧ ನ ಕೀಜಿಅ ನಾಥಾ । ಕಾಲ ಕರಮ ಜಿವ ಜಾಕೇँ ಹಾಥಾ ॥ ೫ ॥**

ಅನಂತರ ತನ್ನ ವ್ಯಾಕುಲತೆಯನ್ನು ಅರಿತು, ಅದನ್ನು ಅಡಗಿಸುತ್ತಾ ಮೇಲ್ಮೇನೆ ನಗುತ್ತಾ ತನ್ನ ಭವನವನ್ನು ಸಾರಿದನು. ಪ್ರಭು ರಾಮನು ಲಂಕೆಗೆ ಬಂದಿದ್ದಾನೆ. ಅವನು ಲೀಲಾಜಾಲವಾಗಿ ಸಮುದ್ರವನ್ನು ಕಟ್ಟಿದನೆಂಬುದನ್ನು ಕೇಳಿ, ಮಂಡೋದರಿಯು ಗಂಡನ ಕೈಹಿಡಿದುಕೊಂಡು ಅವನನ್ನು ತನ್ನ ಭವನಕ್ಕೆ ಕರೆದುಕೊಂಡು ಹೋದಳು. ಅವಳು ಪತಿಯ ಚರಣಗಳಿಗೆರಗಿ, ಅವನ ಮನಸ್ಸು ಕರಗುವಂತೆ ತನ್ನ ಸೆರಗೊಡ್ಡಿ ದೀನಳಾಗಿ ಇಂತೆಂದಳು – ''ಪ್ರಾಣೇಶ್ವರಾ ! ಕ್ರೋಧವನ್ನು ತೊರೆದು ನನ್ನ ಮಾತನ್ನು ಆಲಿಸಿರಿ. ನಾಥಾ ! ಬುದ್ಧಿ ಹಾಗೂ ಬಲದಿಂದ ಗೆಲ್ಲಬಹುದಾದಂತಹವರೊಂದಿಗೆ ವೈರವನ್ನು ಕಟ್ಟಿಕೊಳ್ಳಬೇಕು. ನಿಮಗೂ ಶ್ರೀರಾಮನಿಗೂ ಮಿಣುಕುಹುಳುವಿಗೂ ಸೂರ್ಯನಿಗೂ ಇರುವಷ್ಟು ಅಂತರವಿದೆ. ಅತ್ಯಂತ ಬಲಶಾಲಿಯರಾದ ಮಧುಕೈಟಭರೆಂಬ ರಾಕ್ಷಸರನ್ನು ಸಂಹರಿಸಿದ ಶ್ರೀವಿಷ್ಣುರೂಪೀ ಅವನೇ. ವರಾಹ, ನೃಸಿಂಹರೂಪದಿಂದ ದಿತಿಸುತರಾದ ಹಿರಣ್ಯಾಕ್ಷ– ಹಿರಣ್ಯಕಶಿಪು ಇವರನ್ನು ಕೊಂದವನು ಅವನೇ. ವಾಮನನಾಗಿ ಬಲಿಚಕ್ರವರ್ತಿಯನ್ನು ಬಂಧಿಸಿದವನೂ, ಪರಶುರಾಮನಾಗಿ ಸಹಸ್ರಬಾಹುವನ್ನು ಸದೆಬಡಿದವನೂ ಆದ ಶ್ರೀಮಹಾವಿಷ್ಣುವೇ ಭೂಭಾರವನ್ನಿಳುಹಲು ಶ್ರೀರಾಮನಾಗಿ ಅವತರಿಸಿದ್ದಾನೆ. ನಾಥಾ ! ಕಾಲ, ಕರ್ಮ ಜೀವಿಗಳು ಅವನ ಅಧೀನವೇ ಇವೆ. (ನೀವೂ ಜೀವಿಗಳಾದ್ದರಿಂದ ನಿಮಗೂ ಅವನೇ ಪ್ರಭುವು.) ಆದ್ದರಿಂದ ಅವನೊಡನೆ ವಿರೋಧವನ್ನು ಬಿಡಿರಿ. (ಚೌ/೧-೫)

**ದೋ – ರಾಮಹಿ ಸೌँಪಿ ಜಾನಕೀ ನಾಇ ಕಮಲ ಪದ ಮಾಥ ।**
**ಸುತ ಕಹುँ ರಾಜ ಸಮರ್ಪಿ ಬನ ಜಾಇ ಭಜಿಅ ರಘುನಾಥ ॥ ೬ ॥**

ಶ್ರೀರಾಮನ ಚರಣಕಮಲಗಳಿಗೆ ಶಿರಬಾಗಿ, ಅವನಿಗೆ ಶರಣಾಗಿ ಜಾನಕೀದೇವಿಯನ್ನು ಒಪ್ಪಿಸಿಬಿಡಿರಿ. ಮಕ್ಕಳಿಗೆ ರಾಜ್ಯವನ್ನು ಒಪ್ಪಿಸಿ, ವನಕ್ಕೆ ತೆರಳಿ ರಘುನಾಥನನ್ನು ಭಜಿಸಿರಿ. (ದೋ/೬)

**ಚೌ – ನಾಥ ದೀನದಯಾಲ ರಘುರಾಈ। ಬಾಘಉ ಸನಮುಖ ಗಏಁ ನ ಖಾಈ॥**
**ಚಾಹಿಅ ಕರನ ಸೊ ಸಬ ಕರಿ ಬೀತೇ। ತುಮ್ಹ ಸುರ ಅಸುರ ಚರಾಚರ ಜೀತೇ॥ ೧॥**
**ಸಂತ ಕಹಹಿಁ ಅಸಿ ನೀತಿ ದಸಾನನ। ಚೌಥೇಂಪನ ಜಾಇಹಿ ನೃಪ ಕಾನನ॥**
**ತಾಸು ಭಜನ ಕೀಜಿಅ ತಹಁ ಭರ್ತಾ। ಜೋ ಕರ್ತಾ ಪಾಲಕ ಸಂಹರ್ತಾ॥ ೨॥**
**ಸೋಇ ರಘುಬೀರ ಪ್ರನತ ಅನುರಾಗೀ। ಭಜಹು ನಾಥ ಮಮತಾ ಸಬ ತ್ಯಾಗೀ॥**
**ಮುನಿಬರ ಜತನು ಕರಹಿಁ ಜೆಹಿ ಲಾಗೀ। ಭೂಪ ರಾಜು ತಜಿ ಹೋಹಿಁ ಬಿರಾಗೀ॥ ೩॥**
**ಸೋಇ ಕೋಸಲಾಧೀಸ ರಘುರಾಯಾ। ಆಯಉ ಕರನ ತೋಹಿ ಪರ ದಾಯಾ॥**
**ಜೌಁ ಪಿಯ ಮಾನಹು ಮೋರ ಸಿಖಾವನ। ಸುಜಸು ಹೋಇ ತಿಹುಁ ಪುರ ಅತಿ ಪಾವನ॥ ೪॥**

ನಾಥಾ ! ಶ್ರೀರಘುರಾಮನು ದೀನದಯಾಳುವು. (ಅವನು ತಪ್ಪದೆ ನಿಮ್ಮನ್ನು ಕ್ಷಮಿಸುವನು.) ಕ್ರೂರವಾದ ಹುಲಿಯೂ ಕೂಡ ಶರಣಾದವರನ್ನು ತಿನ್ನುವುದಿಲ್ಲ. ನೀವು ಮಾಡಬೇಕಾದುದೆಲ್ಲವನ್ನೂ ಮಾಡಿರುವಿರಿ. ದೇವತೆಗಳನ್ನು, ರಾಕ್ಷಸರನ್ನೇ ಅಲ್ಲ ಚರಾಚರ ಜಗತ್ತನ್ನೇ ಗೆದ್ದಿರುವಿರಿ. ದಶಾನನರೇ! ರಾಜರಾದವರು ವಾರ್ಧಿಕ್ಯದಲ್ಲಿ ರಾಜ್ಯವನ್ನು ತೊರೆದು ವನವಾಸಿಯಾಗಬೇಕೆಂಬ ನೀತಿಯನ್ನು ಸಜ್ಜನರು ಹೇಳುತ್ತಾರೆ. ಸ್ವಾಮೀ! ನೀವೂ ವನಕ್ಕೆ ತೆರಳಿ ಸೃಷ್ಟಿ, ಸ್ಥಿತಿ, ಲಯಕರ್ತನಾದ ಪರಮಾತ್ಮನನ್ನು ಭಜಿಸಿರಿ. ನಾಥಾ! ನೀವು ಮಮಕಾರವನ್ನು ತ್ಯಜಿಸಿ, ಶರಣಾಗತವತ್ಸಲವಾದ ಶ್ರೀರಘುವೀರನನ್ನು ಭಜಿಸಿರಿ. ಅವನಿಗಾಗಿ ಮುನೀಶ್ವರರು ತಪಸ್ಸನ್ನಾಚರಿಸುತ್ತಾರೆ. ರಾಜರು ರಾಜ್ಯವನ್ನು ತ್ಯಾಗಮಾಡಿ ವಿರಾಗಿಗಳಾಗುತ್ತಾರೆ. ಅಂತಹ ಕೋಸಲಾಧಿಪತಿ ಶ್ರೀರಾಮನು ನಿಮ್ಮ ಮೇಲೆ ದಯೆಗೈಯಲು ಬಂದಿರುವನು. ಪ್ರಿಯತಮಾ! ನೀವು ನನ್ನ ಮಾತನ್ನು ಕೇಳುವಿರಾದರೆ ನಿಮ್ಮ ಅತ್ಯಂತ ಪವಿತ್ರ, ಉಜ್ವಲ ಕೀರ್ತಿಯು ಮೂರ್ಲೋಕಗಳಲ್ಲಿಯೂ ಹಬ್ಬುವುದು. (ಚೌ/೧-೪)

**ದೋ – ಅಸ ಕಹಿ ನಯನ ನೀರ ಭರಿ ಗಹಿ ಪದ ಕಂಪಿತ ಗಾತ।**
**ನಾಥ ಭಜಹು ರಘುನಾಥಹಿ ಅಚಲ ಹೋಇ ಅಹಿವಾತ॥ ೭॥**

ಈ ವಿಧವಾಗಿ ನುಡಿದು ಪತಿವ್ರತೆಯಾದ ಮಂಡೋದರಿಯು ಕಣ್ಣೀರು ತುಂಬಿಕೊಂಡು, ಪತಿಯ ಚರಣಗಳನ್ನು ಗಟ್ಟಿಯಾಗಿ ಹಿಡಿದುಕೊಂಡು, ಕಂಪಿಸುತ್ತಾ ಪುನಃ ಹೀಗೆ ಹೇಳಿದಳು – ಹೇ ನಾಥಾ! ಶ್ರೀರಘುನಾಥನನ್ನು ಭಜಿಸಿ, ಪೂಜಿಸಿರಿ. ಅದರಿಂದ ನನ್ನ ಮಾಂಗಲ್ಯವು ಭದ್ರವಾಗಿ ಉಳಿದೀತು. (ದೋ/೭)

**ಚೌ – ತಬ ರಾವನ ಮಯಸುತಾ ಉಠಾಈ। ಕಹೈ ಲಾಗ ಖಲ ನಿಜ ಪ್ರಭುತಾಈ॥**
**ಸುನು ತೈಁ ಪ್ರಿಯಾ ಬೃಥಾ ಭಯ ಮಾನಾ। ಜಗ ಜೋಧಾ ಕೋ ಮೋಹಿ ಸಮಾನಾ॥ ೧॥**
**ಬರುನ ಕುಬೇರ ಪವನ ಜಮ ಕಾಲಾ। ಭುಜ ಬಲ ಜಿತೆಉಁ ಸಕಲ ದಿಗಪಾಲಾ॥**
**ದೇವ ದನುಜ ನರ ಸಬ ಬಸ ಮೋರೇಁ। ಕವನ ಹೇತು ಉಪಜಾ ಭಯ ತೋರೇಁ॥ ೨॥**
**ನಾನಾ ಬಿಧಿ ತೆಹಿ ಕಹೆಸಿ ಬುಝಾಈ। ಸಭಾಁ ಬಹೋರಿ ಬೈಠ ಸೋ ಜಾಈ॥**
**ಮಂದೋದರೀಁ ಹೃದಯಁ ಅಸ ಜಾನಾ। ಕಾಲ ಬಸ್ಯ ಉಪಜಾ ಅಭಿಮಾನಾ॥ ೩॥**
**ಸಭಾಁ ಆಇ ಮಂತ್ರಿನ್ಹ ತೆಹಿಁ ಬೂಝಾ। ಕರಬ ಕವನ ಬಿಧಿ ರಿಪು ಸೈಁ ಜೂಝಾ॥**
**ಕಹಹಿಁ ಸಚಿವ ಸುನು ನಿಸಿಚರ ನಾಹಾ। ಬಾರ ಬಾರ ಪ್ರಭು ಪೂಛಹು ಕಾಹಾ॥ ೪॥**
**ಕಹಹು ಕವನ ಭಯ ಕರಿಅ ಬಿಚಾರಾ। ನರ ಕಪಿ ಭಾಲು ಅಹಾರ ಹಮಾರಾ॥ ೫॥**

ರಾವಣನು ಮಂಡೋದರಿಯನ್ನು ಹಿಡಿದೆತ್ತಿ ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಂಡು ಆ ದುಷ್ಟನು ತನ್ನ ವೈಭವದ ಕುರಿತು ಹೇಳತೊಡಗಿದನು – ''ಪ್ರಿಯೇ! ಕೇಳು. ನೀನು ವ್ಯರ್ಥವಾಗಿ ಭಯಗೊಂಡಿರುವೆ. ಈ ಜಗತ್ತಿನಲ್ಲಿ ನನಗೆ ಸಮಾನನಾದ ಯೋಧ ಯಾರಿದ್ದಾನೆ? ಯಮ, ವರುಣ, ವಾಯು, ಕುಬೇರಾದಿ ದಿಕ್ಪಾಲಕರಲ್ಲದೆ ಕಾಲನನ್ನೂ ಕೂಡ ನನ್ನ ಭುಜಬಲದಿಂದ ಗೆದ್ದಿದ್ದೇನೆ, ಮಣಿಸಿದ್ದೇನೆ. ದೇವತೆಗಳೂ, ದಾನವರೂ, ಮನುಷ್ಯರೂ ಹೀಗೆ ಎಲ್ಲರೂ ನನಗೆ ಅಡಿಯಾಳಾಗಿದ್ದಾರೆ. ಹೀಗಿರುವಾಗ ನಿನ್ನಲ್ಲಿ ಈ ಭಯ ಏಕೆ ಮೂಡಿತು?'' ಹೀಗೆ ರಾವಣನು ಅನೇಕ ವಿಧವಾಗಿ ಅವಳನ್ನು ಸಂತೈಸಿ ಸಭಾಸ್ಥಾನಕ್ಕೆ ತೆರಳಿದನು. ಮೃತ್ಯುವು

ಸನ್ನಿಹಿತವಾದ್ದರಿಂದಲೇ ಇವರು ಹೀಗೆ ಗರ್ವಪಡುತ್ತಿರುವರು ಎಂದು ಮಂಡೋದರಿ ಭಾವಿಸಿದಳು. ಸಭೆಯಲ್ಲಿ ಕುಳಿತ ರಾವಣನು ಮಂತ್ರಿಗಳೊಡನೆ – ''ಶತ್ರುವಿನ ಜೊತೆಗೆ ಯಾವರೀತಿಯಿಂದ ಯುದ್ಧಮಾಡಬಹುದು? ಎಂದು ಕೇಳಿದನು. ಮಂತ್ರಿಗಳು ಹೇಳತೊಡಗಿದರು – ''ರಾಕ್ಷಸರಾಜಾ! ಪ್ರಭೂ! ನೀವು ಮತ್ತೆ ಮತ್ತೆ ಏನು ಕೇಳುತ್ತಿದ್ದೀರಿ? ವಿಚಾರಮಾಡುವಂತಹ ಭಯವೇನಿದೆ? ಹೇಳಿ. ನರ, ವಾನರ, ಭಲ್ಲೂಕರು ನಮ್ಮ ಆಹಾರವೇ ಅಲ್ಲವೇ? (ಚೌ/೧-೫)

**ದೋ – ಸಬ ಕೇ ಬಚನ ಶ್ರವನ ಸುನಿ ಕಹ ಪ್ರಹಸ್ತ ಕರ ಜೋರಿ।**
**ನೀತಿ ಬಿರೋಧ ನ ಕರಿಅ ಪ್ರಭು ಮಂತ್ರಿನ್ಹ ಮತಿ ಅತಿ ಥೋರಿ ॥ ೮ ॥**

ಅವರೆಲ್ಲ ಹೇಳಿದುದನ್ನು ಕೇಳಿ, ರಾವಣನ ಕುಮಾರನಾದ ಪ್ರಹಸ್ತನು ಕೈಜೋಡಿಸಿಕೊಂಡು ಇಂತು ನುಡಿದನು. ಪ್ರಭೂ! ನೀತಿವಿರುದ್ಧವಾಗಿ ಏನನ್ನೂ ಮಾಡಬಾರದು. ಮಂತ್ರಿಗಳು ಅಲ್ಪಬುದ್ಧಿಯವರು. (ಇವರು ಸರಿಯಾಗಿ ಸೂಚನೆಯನ್ನು ಕೊಡುತ್ತಿಲ್ಲ.) (ದೋ/೮)

**ಚೌ – ಕಹಹಿಂ ಸಚಿವ ಸಠ ಠಕುರಸೊಹಾತೀ। ನಾಥ ನ ಪೂರ ಆವ ಏಹಿ ಭಾಂತೀ॥**
**ಬಾರಿಧಿ ನಾಘಿ ಏಕ ಕಪಿ ಆವಾ। ತಾಸು ಚರಿತ ಮನ ಮಹುಂ ಸಬು ಗಾವಾ ॥ ೧ ॥**
**ಛುಧಾ ನ ರಹೀ ತುಮ್ಹಹಿ ತಬ ಕಾಹೂ। ಜಾರತ ನಗರು ಕಸ ನ ಧರಿ ಖಾಹೂ॥**
**ಸುನತ ನೀಕ ಆಗೇಂ ದುಖ ಪಾವಾ। ಸಚಿವನ ಅಸ ಮತ ಪ್ರಭುಹಿ ಸುನಾವಾ ॥ ೨ ॥**
**ಜೆಹಿಂ ಬಾರೀಸ ಬಂಧಾಯಉ ಹೇಲಾ। ಉತರೆಉ ಸೇನ ಸಮೇತ ಸುಬೇಲಾ ॥**
**ಸೋ ಭನು ಮನುಜ ಖಾಬ ಹಮ ಭಾಈ। ಬಚನ ಕಹಹಿಂ ಸಬ ಗಾಲ ಫುಲಾಈ ॥ ೩ ॥**
**ತಾತ ಬಚನ ಮಮ ಸುನು ಅತಿ ಆದರ। ಜನಿ ಮನ ಗುನಹು ಮೋಹಿ ಕರಿ ಕಾದರ ॥**
**ಪ್ರಿಯ ಬಾನೀ ಜೇ ಸುನಹಿಂ ಜೆ ಕಹಹೀಂ। ಐಸೇ ನರ ನಿಕಾಯ ಜಗ ಅಹಹೀಂ ॥ ೪ ॥**
**ಬಚನ ಪರಮ ಹಿತ ಸುನತ ಕಠೋರೇ। ಸುನಹಿಂ ಜೆ ಕಹಹಿಂ ತೆ ನರ ಪ್ರಭು ಥೋರೇ॥**
**ಪ್ರಥಮ ಬಸೀಠ ಪಠಉ ಸುನು ನೀತೀ। ಸೀತಾ ದೇಇ ಕರಹು ಪುನಿ ಪ್ರೀತೀ ॥ ೫ ॥**

ಈ ಮೂರ್ಖಮಂತ್ರಿಗಳೆಲ್ಲ ಮುಖಸ್ತುತಿಯ ಮಾತನ್ನಾಡುತ್ತಿದ್ದಾರೆ. ಪ್ರಭೂ! ಇಂತಹ ಮಾತುಗಳಿಂದ ಪ್ರಯೋಜನವಿಲ್ಲ. ಒಂದೇ ಒಂದು ಕಪಿ ಸಮುದ್ರವನ್ನು ಲಂಘಿಸಿ ಬಂದಿತ್ತು. ಅದರ ಅದ್ಭುತ ಕಾರ್ಯವನ್ನು ಎಲ್ಲರೂ ಈಗಲೂ ಮನಸ್ಸಿನಲ್ಲಿ ಕೊಂಡಾಡುತ್ತಿದ್ದಾರೆ. ಆ ವಾನರನು ಸಭೆಯಲ್ಲಿ ಮಾತಾಡುತ್ತಿರುವಾಗ ನಿಮಗೆ ಯಾರಿಗೂ ಹಸಿವಿರಲಿಲ್ಲವೇ? (ವಾನರರು ನಿಮ್ಮ ಆಹಾರವಲ್ಲವೇ?) ನಗರವನ್ನು ಸುಟ್ಟುಹಾಕಿದಾಗ ಅದನ್ನು ಏಕೆ ಹಿಡಿದು ತಿನ್ನಲಿಲ್ಲ ? ನಿಮ್ಮ ಮಂತ್ರಿಗಳು ಇತ್ತ ಸಲಹೆಗಳು ಕೇಳಲೂ ಚೆನ್ನಾಗಿಯೇ ಇವೆ. ಆದರೆ ಅದರ ಫಲ ಮುಂದಕ್ಕೆ ದುಃಖವೇ ಆದೀತು. ಲೀಲಾಜಾಲವಾಗಿ ಆಟದಂತೆ ಸಮುದ್ರದ ಮೇಲೆ ಸೇತುವೆ ನಿರ್ಮಿಸಿ, ಇಲ್ಲಿಗೆ ಬಂದು ಸುವೇಲ ಪರ್ವತದ ಮೇಲೆ ತನ್ನ ಸೇನೆಯೊಂದಿಗೆ ಬೀಡುಬಿಟ್ಟಿರುವವನು ಸಾಮಾನ್ಯ ಮನುಷ್ಯನೇ? ಅಯ್ಯಾ! ನಾವು ಅವರನ್ನು ತಿಂದು ಬಿಡುವೆವು ಎಂದು ಹುಚ್ಚರಂತೆ ಬಡಾಯಿ ಕೊಚ್ಚಿಕೊಳ್ಳುತ್ತಿರುವಿರಲ್ಲ ? ಅಪ್ಪಾ ! ನನ್ನ ಮಾತನ್ನು ಆದರದಿಂದ ಗಮನವಿಟ್ಟು ಕೇಳಿ. ನನ್ನನ್ನು ಹೇಡಿ ಎಂದು ತಿಳಿಯಬೇಡಿ. ಪ್ರಿಯವಾದ, ಸವಿಯಾದ ಮುಖಸ್ತುತಿಯ ಮಾತುಗಳನ್ನೇ ಆಡುವವರು, ಕೇಳುವವರು ಈ ಜಗತ್ತಿನಲ್ಲಿ ಹಿಂಡು-ಹಿಂಡಾಗಿದ್ದಾರೆ. ಆದರೆ ಒಡೆಯಾ! ಕೇಳಲು ಕರ್ಣಕಠೋರ ವಾಗಿದ್ದರೂ ಪರಿಣಾಮದಲ್ಲಿ ಶುಭಪ್ರದವಾದ ಮಾತುಗಳನ್ನು ಆಡುವವರು, ಕೇಳುವವರು ತುಂಬಾ ಕಡಿಮೆ ಜನರು ಇರುವರು. ನೀತಿಗನುಸಾರ ಮೊದಲಿಗೆ ದೂತನನ್ನು ಕಳಿಸಿರಿ. ಅನಂತರ ಸೀತೆಯನ್ನು ಒಪ್ಪಿಸಿ ಸಂಧಿಮಾಡಿಕೊಳ್ಳಿ. (ಚೌ/೧-೫)

**ದೋ – ನಾರಿ ಪಾಇ ಫಿರಿ ಜಾಹಿಂ ಜೌಂ ತೌ ನ ಬಢಾಇಅ ರಾರಿ।**
**ನಾಹಿಂ ತ ಸನ್ಮುಖ ಸಮರ ಮಹಿ ತಾತ ಕರಿಅ ಹಠಿ ಮಾರಿ ॥ ೯ ॥**

ಒಂದು ವೇಳೆ ಶ್ರೀರಾಮನು ಪತ್ನಿಯನ್ನು ಪಡೆದು ಮರಳಿಹೋದರೆ ಅವನೊಂದಿಗೆ ಜಗಳವೇ ಮುಗಿದೀತು. ಅವನೇನಾದರೂ ಹಿಂದಿರುಗದೆ ಯುದ್ಧವೇ ಅನಿವಾರ್ಯವಾದರೆ ಯುದ್ಧಮಾಡೋಣ ! (ದೋ/೯)

**ಚೌ – ಯಹ ಮತ ಜೌಂ ಮಾನಹು ಪ್ರಭು ಮೋರಾ । ಉಭಯ ಪ್ರಕಾರ ಸುಜಸು ಜಗ ತೋರಾ॥**
**ಸುತ ಸನ ಕಹ ದಸಕಂಠ ರಿಸಾಈ। ಅಸಿ ಮತಿ ಸಠ ಕೇಹಿಂ ತೋಹಿ ಸಿಖಾಈ ॥ ೧ ॥**
**ಅಬಹೀಂ ತೇ ಉರ ಸಂಸಯ ಹೋಈ। ಬೇನುಮೂಲ ಸುತ ಭಯಹು ಘಮೋಈ ॥**
**ಸುನಿ ಪಿತು ಗಿರಾ ಪರುಷ ಅತಿ ಘೋರಾ। ಚಲಾ ಭವನ ಕಹಿ ಬಚನ ಕಠೋರಾ ॥ ೨ ॥**

**ಹಿತ ಮತ ತೋಹಿ ನ ಲಾಗತ ಕೈಸೇ। ಕಾಲ ಬಿಬಸ ಕಹುँ ಭೇಷಜ ಜೈಸೇ॥**
**ಸಂಧ್ಯಾ ಸಮಯ ಜಾನಿ ದಸಸೀಸಾ। ಭವನ ಚಲೆಉ ನಿರಖತ ಭುಜ ಬೀಸಾ॥೩॥**
**ಲಂಕಾ ಸಿಖರ ಉಪರ ಆಗಾರಾ। ಅತಿ ಬಿಚಿತ್ರ ತಹँ ಹೋಇ ಅಖಾರಾ॥**
**ಬೈಠ ಜಾಇ ತೆಹಿं ಮಂದಿರ ರಾವನ। ಲಾಗೇ ಕಿನ್ನರ ಗುನ ಗನ ಗಾವನ॥೪॥**
**ಬಾಜಹಿं ತಾಲ ಪಖಾಉಜ ಬೀನಾ। ನೃತ್ಯ ಕರಹಿं ಅಪಛರಾ ಪ್ರಬೀನಾ॥೫॥**

ಪ್ರಭೂ! ನೀವು ನನ್ನ ಸಲಹೆಯನ್ನು ಒಪ್ಪಿಕೊಂಡರೆ ಪ್ರಪಂಚದಲ್ಲಿ ನಿಮಗೆ ಎರಡು ವಿಧದಿಂದ ಕೀರ್ತಿಯು ಲಭಿಸಿತು. ದಶಕಂಠನು ಮಗನ ಮಾತನ್ನು ಕೇಳಿ ಕೆರಳಿ ಕೆಂಡವಾಗಿ ಗದರಿದ– ''ಎಲವೋ ಮೂರ್ಖಾ! ನಿನಗೆ ಈ ಬುದ್ಧಿಯಾರು ಕಲಿಸಿದರು? ಆದರಿಂದಲೇ ನಿನ್ನ ಮನಸ್ಸಿನಲ್ಲಿ ಭಯ-ಸಂದೇಹಗಳು ಮೂಡುತ್ತಿವೆ. ಮಗನೇ! ನೀನು ಬಿದಿರಿನ ಮೇಳೆಯಲ್ಲಿ ಹುಟ್ಟಿದ ಹುಲ್ಲಿನಂತಾದೆ.'' (ಇದು ಬಿದಿರನ್ನೇ ನಾಶಮಾಡುತ್ತದೆ.) ತಂದೆಯ ಅತ್ಯಂತ ಘೋರ ಪುರುಷವಚನವನ್ನು ಕೇಳಿ ಪ್ರಹಸ್ತನು – ''ಸಾವು ಸಮೀಪಿಸಿದವನಿಗೆ ಔಷಧಿ ರುಚಿಸದಂತೆ ನಿಮಗೆ ನನ್ನ ಹಿತವಚನಗಳು ಅಪಥ್ಯವಾಗಿ ಕಾಣುತ್ತಿವೆ'' ಎಂದು ನಿಷ್ಠುರವಾಗಿ ನುಡಿದು ಮನೆಗೆ ಮರಳಿದನು. ಸಂಧ್ಯಾಸಮಯವಾದುದನ್ನರಿತು ದಶಕಂಠನು ತನ್ನ ಇಪ್ಪತ್ತು ಭುಜಗಳನ್ನು ನೋಡಿಕೊಂಡು ತನ್ನ ಭವನಕ್ಕೆ ಮರಳಿದನು. ಲಂಕೆಯಲ್ಲಿ ಎತ್ತರವಾದ ಶಿಖರವೊಂದರಲ್ಲಿ ಅತ್ಯಂತ ವಿಚಿತ್ರವಾದ ಭವನವೊಂದಿತ್ತು. ಅಲ್ಲಿ ಸಂಗೀತನೃತ್ಯಗಳು ಜರಗುತ್ತಿದ್ದವು. ರಾವಣನು ಅಲ್ಲಿಗೆ ಹೋಗಿ ಕುಳಿತನು. ಕಿನ್ನರರೂ ಅವನ ಗುಣಗಾನ ಮಾಡತೊಡಗಿದರು. ತಾಳ-ವೀಣಾಮೃದಂಗಗಳನ್ನು ನುಡಿಸತೊಡಗಿದರು. ನೃತ್ಯಪ್ರವೀಣೆಯರಾದ ಅಪ್ಸರೆಯರು ನರ್ತಿಸತೊಡಗಿದರು. (ಚೌ/೧-೫)

**ದೋ – ಸುನಾಸೀರ ಸತ ಸರಿಸ ಸೋ ಸಂತತ ಕರಇ ಬಿಲಾಸ।**
**ಪರಮ ಪ್ರಬಲ ರಿಪು ಸೀಸ ಪರ ತದ್ಯಪಿ ಸೋಚ ನ ತ್ರಾಸ॥೧೦॥**

ಈ ವಿಧವಾಗಿ ಅವನು ದಿನನಿತ್ಯ ಇಂದ್ರನ ವೈಭವಕ್ಕೂ ನೂರುಪಟ್ಟು ಭೋಗಗಳನ್ನು ಅನುಭವಿಸುತ್ತಿದ್ದನು. ಶ್ರೀರಾಮನಂತಹ ಅತ್ಯಂತ ಪ್ರಬಲ ಶತ್ರುವು ತಲೆಯ ಮೇಲೆರಗಿದ್ದರೂ ಅವನಿಗೆ ಅದರ ಚಿಂತೆಯಾಗಲೀ ಭಯವಾಗಲೀ ಇರಲಿಲ್ಲ. (ದೋ/೧೦)

**ಚೌ – ಇಹಾँ ಸುಬೇಲ ಸೈಲ ರಘುಬೀರಾ। ಉತರೇ ಸೇನ ಸಹಿತ ಅತಿ ಭೀರಾ॥**
**ಸಿಖರ ಏಕ ಉತಂಗ ಅತಿ ದೇಖೀ। ಪರಮ ರಮ್ಯ ಸಮ ಸುಭ್ರ ಬಿಸೇಷೀ॥೧॥**
**ತಹँ ತರು ಕಿಸಲಯ ಸುಮನ ಸುಹಾಏ। ಲಛಿಮನ ರಚಿ ನಿಜ ಹಾಥ ಡಸಾಏ॥**
**ತಾ ಪರ ರುಚಿರ ಮೃದುಲ ಮೃಗಛಾಲಾ। ತೆಹಿं ಆಸನ ಆಸೀನ ಕೃಪಾಲಾ॥೨॥**
**ಪ್ರಭು ಕೃತ ಸೀಸ ಕಪೀಸ ಉಛಂಗಾ। ಬಾಮ ದಹಿನ ದಿಸಿ ಚಾಪ ನಿಷಂಗಾ॥**
**ದುಹುँ ಕರ ಕಮಲ ಸುಧಾರತ ಬಾನಾ। ಕಹ ಲಂಕೇಸ ಮಂತ್ರಲಗಿ ಕಾನಾ॥೩॥**
**ಬಡಭಾಗೀ ಅಂಗದ ಹನುಮಾನಾ। ಚರನ ಕಮಲ ಚಾಪತ ಬಿಧಿ ನಾನಾ॥**
**ಪ್ರಭು ಪಾಛೇं ಲಛಿಮನ ಬೀರಾಸನ। ಕಟಿ ನಿಷಂಗ ಕರ ಬಾನ ಸರಾಸನ॥೪॥**

ಇತ್ತ ಸುವೇಲಾದ್ರಿಯಲ್ಲಿ ಶ್ರೀರಘುನಾಥನು ಮಹಾಯೋಧರ ಸೈನ್ಯದೊಡಗೂಡಿ ಇದ್ದನು. ಆ ಪರ್ವತದ ಒಂದು ಉತ್ತುಂಗವೂ, ಪರಮ ರಮಣೀಯವೂ, ಸಮತಲವೂ, ವಿಶೇಷ ಉಜ್ಜಲವೂ ಆದ ಶಿಖರವನ್ನು ಕಂಡು ಲಕ್ಷ್ಮಣನು ವೃಕ್ಷಗಳ ಕೋಮಲ ಎಲೆಗಳನ್ನೂ, ಮನೋಹರವಾದ ಮೃದು ಕುಸುಮಗಳನ್ನೂ ಚೆನ್ನಾಗಿ ಹಾಸಿದನು. ಅದರ ಮೇಲೆ ಮೃದುಲವಾದ ಕೃಷ್ಣಾಜಿನವನ್ನು ಹಾಸಿದನು. ಕೃಪಾಳುವಾದ ಶ್ರೀರಾಮನು ಅದರ ಮೇಲೆ ವಿರಾಜಿಸಿದನು. ಪ್ರಭುವು ವಾನರರಾಜನಾದ ಸುಗ್ರೀವನ ತೊಡೆಯಮೇಲೆ ತಲೆಯನ್ನಿಟ್ಟು ವಿಶ್ರಮಿಸಿದ್ದಾನೆ. ಅವನ ಎಡ-ಬಲಗಳಲ್ಲಿ ಬಿಲ್ಲು-ಬತ್ತಳಿಕೆಗಳಿದ್ದವು. ಅವನು ಎರಡೂ ಕರಕಮಲಗಳಿಂದ ಬಾಣಗಳನ್ನು ಸರಿಮಾಡುತ್ತಿರುವನು. ಲಂಕೇಶ್ವರನಾದ ವಿಭೀಷಣನು ಪ್ರಭುವಿನ ಕಿವಿಯಲ್ಲಿ ಏನೋ ರಹಸ್ಯ ಮಂತ್ರಾಲೋಚನೆ ಮಾತನ್ನು ಉಸುರುತ್ತಿರುವನು. ಪರಮ ಭಾಗ್ಯಶಾಲಿಗಳಾದ ಅಂಗದ, ಹನುಮಂತರು ಪ್ರಭುವಿನ ಚರಣಗಳನ್ನು ಒತ್ತುತ್ತಿದ್ದರು. ಲಕ್ಷ್ಮಣನು ಟೊಂಕದಲ್ಲಿ ಬತ್ತಳಿಕೆಯನ್ನೂ, ಕೈಯಲ್ಲಿ ಧನುರ್ಬಾಣಗಳನ್ನು ಧರಿಸಿಕೊಂಡು ಪ್ರಭುವಿನ ಹಿಂಭಾಗದಲ್ಲಿ ವೀರಾಸನದಲ್ಲಿ ಮಂಡಿಸಿದ್ದಾನೆ. (ಚೌ/೧-೪)

**ದೋ – ಏಹಿ ಬಿಧಿ ಕೃಪಾ ರೂಪ ಗುನ ಧಾಮ ರಾಮು ಆಸೀನ।**
**ಧನ್ಯ ತೆ ನರ ಏಹಿं ಧ್ಯಾನ ಜೇ ರಹತ ಸದಾ ಲಯಲೀನ॥೧೧ (ಕ)॥**

**ಪೂರಬ ದಿಸಾ ಬಿಲೋಕಿ ಪ್ರಭು ದೇಖಾ ಉದಿತ ಮಯಂಕ ।**
**ಕಹತ ಸಬಹಿ ದೇಖಹು ಸಸಿಹಿ ಮೃಗಪತಿ ಸರಿಸ ಅಸಂಕ ॥ ೧೧(ಖ)॥**

ಕೃಪಾ ಸೌಂದರ್ಯ ಸದ್ಗುಣೋಪೇತನಾದ ಶ್ರೀರಾಮನು ಹೀಗೆ ವಿರಾಜಿಸುತ್ತಿದ್ದನು. ಇಂತಹ ಮಂಗಳಮೂರ್ತಿಯನ್ನು ಸದಾ ಧ್ಯಾನಿಸುವ ಜನರೇ ಧನ್ಯರು. ಮೂಡುದಿಕ್ಕಿನತ್ತ ಕಣ್ಣುಹಾಯಿಸಿದ ಪ್ರಭುವು ಚಂದ್ರೋದಯವನ್ನು ವೀಕ್ಷಿಸಿ 'ಸಿಂಹದಂತೆ ಆ ಚಂದ್ರನು ಹೇಗೆ ನಿರ್ಭಯನಾಗಿರುವನು ನೋಡಿ' ಎಂದು ನುಡಿದನು. (ದೋ/೧೧ ಕ, ಖ)

**ಚೌ – ಪೂರಬ ದಿಸಿ ಗಿರಿಗುಹಾ ನಿವಾಸೀ । ಪರಮ ಪ್ರತಾಪ ತೇಜ ಬಲ ರಾಸೀ ॥**
**ಮತ್ತ ನಾಗ ತಮ ಕುಂಭ ಬಿದಾರೀ । ಸಸಿ ಕೇಸರೀ ಗಗನ ಬನ ಚಾರೀ ॥ ೧ ॥**
**ಬಿಥುರೇ ನಭ ಮುಕುತಾಹಲ ತಾರಾ । ನಿಸಿ ಸುಂದರೀ ಕೇರ ಸಿಂಗಾರಾ ॥**
**ಕಹ ಪ್ರಭು ಸಸಿ ಮಹುँ ಮೇಚಕತಾಈ । ಕಹಹು ಕಾಹ ನಿಜ ನಿಜ ಮತಿ ಭಾಈ ॥ ೨ ॥**
**ಕಹ ಸುಗ್ರೀವ ಸುನಹು ರಘುರಾಈ । ಸಸಿ ಮಹುँ ಪ್ರಗಟ ಭೂಮಿ ಕೈ ಝಾँಈ ॥**
**ಮಾರೆಉ ರಾಹು ಸಸಿಹಿ ಕಹ ಕೋಈ । ಉರ ಮಹँ ಪರೀ ಸ್ಯಾಮತಾ ಸೋಈ ॥ ೩ ॥**
**ಕೋಉ ಕಹ ಜಬ ಬಿಧಿ ರತಿ ಮುಖ ಕೀನ್ಹಾ । ಸಾರ ಭಾಗ ಸಸಿ ಕರ ಹರಿ ಲೀನ್ಹಾ ॥**
**ಛಿದ್ರ ಸೊ ಪ್ರಗಟ ಇಂದು ಉರ ಮಾಹೀँ । ತೇಹಿ ಮಗ ದೇಖಿಅ ನಭ ಪರಿಛಾಹೀँ ॥ ೪ ॥**
**ಪ್ರಭು ಕಹ ಗರಲ ಬಂಧು ಸಸಿ ಕೇರಾ । ಅತಿ ಪ್ರಿಯ ನಿಜ ಉರ ದೀನ್ಹ ಬಸೇರಾ ॥**
**ಬಿಷ ಸಂಜುತ ಕರ ನಿಕರ ಪಸಾರೀ । ಜಾರತ ಬಿರಹವಂತ ನರ ನಾರೀ ॥ ೫ ॥**

'ಪೂರ್ವದಿಶೆಯೆಂಬ ಗಿರಿಗಹ್ವರದಲ್ಲಿರುವ ಪರಮಪ್ರತಾಪಿಯಾದ, ತೇಜೋಬಲ ಸಂಪನ್ನನಾದ ಶಶಿಕೇಶರಿಯು ಕಾರ್ಗತ್ತಲೆಯೆಂಬ ಮದಗಜದ ಕುಂಭಸ್ಥಳವನ್ನು ಒಡೆದು ಗಗನವನದಲಿ ನಿರ್ಭಯವಾಗಿ ವಿಹರಿಸುತ್ತಿರುವನು. ಆಕಾಶದಲ್ಲಿ ಹರಡಿರುವ ತಾರೆಗಳೇ ಮುತ್ತುಗಳು. ಅವುಗಳಿಂದ ನಿಶಾಸುಂದರಿಯು ಶೃಂಗಾರವಾಗಿದ್ದಾಳೆ.' ಪ್ರಭುವು ಪುನಃ ಹೇಳಿದನು – ಸೋದರರರೇ! ಚಂದ್ರನಲ್ಲಿರುವ ಕಳಂಕವೇನು ಎಂಬುದನ್ನು ನಿಮಗೆ ತೋಚಿದಂತೆ ಹೇಳಿ ನೋಡೋಣ.' ಸುಗ್ರೀವನು ಹೇಳಿದನು – 'ರಘುನಾಥಾ! ಕೇಳಿ. ಚಂದ್ರನಲ್ಲಿ ಭೂಮಿಯ ನೆರಳು ಪ್ರತಿಬಿಂಬಿಸುತ್ತಿದೆ.' ಮತ್ತೊಬ್ಬರು ಹೇಳಿದರು – 'ರಾಹುವು ಚಂದ್ರನನ್ನು ಸದೆಬಡಿದಿದ್ದ. ಆ ಏಟಿನ ಕಪ್ಪು ಕಲೆ ಅವನ ಎದೆಯ ಮೇಲೆ ಕಾಣುತ್ತಿದೆ.' ಬೇರೊಬ್ಬನು ಹೇಳಿದನು – 'ಬ್ರಹ್ಮದೇವರು ಕಾಮದೇವನ ಪತ್ನೀ ರತಿಯನ್ನು ಸೃಷ್ಟಿಸಿದಾಗ ಅವಳ ಮುಖವನ್ನು ರೂಪಿಸಲು ಚಂದ್ರನ ಸಾರಭಾಗವನ್ನು ಕಿತ್ತುಕೊಂಡನು. ಅದರಿಂದ ಚಂದ್ರನ ಎದೆಯಲ್ಲಿ ರಂಧ್ರ ಉಂಟಾಯಿತು. ಆ ರಂಧ್ರದ ಮೂಲಕ ಆಕಾಶದ ಕಪ್ಪುಛಾಯೆ ಕಂಡು ಬರುತ್ತದೆ. ಆಗ ಪ್ರಭು ರಾಮಚಂದ್ರನೆಂದ – 'ವಿಷವು ಚಂದ್ರನ ಪ್ರಿಯಬಂಧು, ಸೋದರನಲ್ಲವೇ? ಆದ್ದರಿಂದ ಅವನು ವಿಷಕ್ಕೆ ತನ್ನ ಹೃದಯದಲ್ಲಿ ಸ್ಥಾನಕೊಟ್ಟು ಇರಿಸಿಕೊಂಡಿದ್ದಾನೆ. ತನ್ನ ವಿಷಯುಕ್ತ ಕಿರಣಸಮೂಹವನ್ನು ಚೆಲ್ಲಿ ಅವನು ವಿರಹಿಗಳಾದ ನರನಾರಿಯನ್ನು ದಹಿಸುತ್ತಿದ್ದಾನೆ. (ಚೌ/೧-೫)

**ದೋ – ಕಹ ಹನುಮಂತ ಸುನಹು ಪ್ರಭು ಸಸಿ ತುಮ್ಹಾರ ಪ್ರಿಯ ದಾಸ ।**
**ತವ ಮೂರತಿ ಬಿಧು ಉರ ಬಸತಿ ಸೋಇ ಸ್ಯಾಮತಾ ಅಭಾಸ ॥ ೧೨ (ಕ)॥**

ಹನುಮಂತನು ಆಗ ಹೀಗೆ ಹೇಳಿದನು – ಪ್ರಭೂ! ಕೇಳಿರಿ. ಚಂದ್ರನು ತಮ್ಮ ಪ್ರಿಯದಾಸನು. ನಿಮ್ಮ ಸುಂದರ ಶ್ಯಾಮಲಮೂರ್ತಿ ಚಂದ್ರನ ಹೃದಯದಲ್ಲಿ ನೆಲೆಸಿದೆ. ನಿನ್ನ ಶ್ಯಾಮಸುಂದರ ಬಣ್ಣವೇ ಚಂದ್ರನಲ್ಲಿ ಭಾಸವಾಗುತ್ತಿದೆ (ದೋ/೧೨ ಕ)

**ನವಾಹ್ನಪಾರಾಯಣದ ಏಳನೆಯ ವಿಶ್ರಾಮ**

**ದೋ – ಪವನ ತನಯ ಕೇ ಬಚನ ಸುನಿ ಬಿಹँಸೇ ರಾಮು ಸುಜಾನ ।**
**ದಚ್ಛಿನ ದಿಸಿ ಅವಲೋಕಿ ಪ್ರಭು ಬೋಲೇ ಕೃಪಾನಿಧಾನ ॥ ೧೨(ಖ)॥**

ಪವನನಂದನನ ವಚನಗಳನ್ನು ಕೇಳಿ ಜ್ಞಾನನಿಧಿಯಾದ ಶ್ರೀರಾಮನು ನಕ್ಕುಬಿಟ್ಟನು. ಮತ್ತೆ ದಕ್ಷಿಣದಿಕ್ಕಿನತ್ತ ನೋಡಿ ಕೃಪಾನಿಧಿಯಾದ ಆ ಪ್ರಭುವು ವಿಭೀಷಣನಲ್ಲಿ ಇಂತೆಂದನು – (ದೋ/೧೨ ಖ)

**ಚೌ – ದೇಖು ಬಿಭೀಷನ ದಚ್ಛಿನ ಆಸಾ । ಘನ ಘಮಂಡ ದಾಮಿನೀ ಬಿಲಾಸಾ ॥**
**ಮಧುರ ಮಧುರ ಗರಜಇ ಘನ ಘೋರಾ । ಹೋಇ ಬೃಷ್ಟಿ ಜನಿ ಉಪಲ ಕಠೋರಾ ॥ ೧ ॥**

**ಕಹತ ಬಿಭೀಷನ ಸುನಹು ಕೃಪಾಲಾ। ಹೋಇ ನ ತಡಿತ ನ ಬಾರಿದ ಮಾಲಾ॥**
**ಲಂಕಾ ಸಿಖರ ಉಪರ ಆಗಾರಾ। ತಹ್ ದಸಕಂಧರ ದೇಖ ಅಖಾರಾ॥ ೨ ॥**
**ಛತ್ರ ಮೇಘಡಂಬರ ಸಿರ ಧಾರೀ। ಸೋಇ ಜನು ಜಲದ ಘಟಾ ಅತಿ ಕಾರೀ॥**
**ಮಂದೋದರೀ ಶ್ರವನ ತಾಟಂಕಾ। ಸೋಇ ಪ್ರಭು ಜನು ದಾಮಿನೀ ದಮಂಕಾ ॥ ೩ ॥**
**ಬಾಜಹಿಂ ತಾಲ ಮೃದಂಗ ಅನೂಪಾ। ಸೋಇ ರವ ಮಧುರ ಸುನಹು ಸುರಭೂಪಾ॥**
**ಪ್ರಭು ಮುಸುಕಾನ ಸಮುಝಿ ಅಭಿಮಾನಾ। ಚಾಪ ಚಢಾಇ ಬಾನ ಸಂಧಾನಾ ॥ ೪ ॥**

ವಿಭೀಷಣಾ! ದಕ್ಷಿಣ ದಿಕ್ಕಿನತ್ತ ದಿಟ್ಟಿಸು. ಮೇಘಗಳು ದಟ್ಟವಾಗಿ ಆವರಿಸಿಕೊಂಡಿವೆ. ಮಿಂಚು ಹೊಳೆಯುತ್ತಿದೆ. ಭಯಂಕರವಾದ ಮೇಘಗಳು ಮಂದ್ರ ಮಧುರವಾಗಿ ಗರ್ಜಿಸುತ್ತವೆ. ಎಲ್ಲಾದರೂ ಆಲಿಕಲ್ಲಿನ ಮಳೆ ಬೀಳುತ್ತಿಲ್ಲವಲ್ಲ! ಆಗ ವಿಭೀಷಣನು ಹೇಳಿದನು – ಓ ಕೃಪಾಳುವೇ! ಕೇಳು. ಇದು ವಿದ್ಯುಲ್ಲತೆಯೂ ಅಲ್ಲ, ಮೇಘಮಾಲೆಯೂ ಅಲ್ಲ. ಲಂಕೆಯ ಶಿಖರದಲ್ಲಿ ಒಂದು ಭವನವಿದೆ ಅಲ್ಲಿ ದಶಕಂಠ ರಾವಣನು ನೃತ್ಯ, ಗಾನ, ಗೋಷ್ಠಿಯಲ್ಲಿದ್ದಾನೆ. ಅವನು ತನ್ನ ತಲೆಯ ಮೇಲೆ ಮೇಘಸಮುದಾಯವನ್ನು ಹೋಲುವ ವಿಶಾಲವಾದ ಕಪ್ಪಾಗಿರುವ ಛತ್ರವನ್ನು ಧರಿಸಿರುವನು. ಅದೇ ಮೇಘಗಳ ದಟ್ಟಣೆ, ಮಂಡೋದರಿಯ ಕಿವಿಯಲ್ಲಿರುವ ಕರ್ಣಾಭರಣಗಳೇ ಅಲುಗಾಡುತ್ತಾ ಮಿಂಚಿನಂತೆ ಹೊಳೆಯುತ್ತಿವೆ. ಓ ದೇವಾಧಿದೇವಾ! ಅಲ್ಲಿನ ಮೃದಂಗತಾಳ ಧ್ವನಿಗಳೇ ಮಧುರ ಗರ್ಜನೆಯಂತೆ ಕೇಳಿಬರುತ್ತಿದೆ. ರಾವಣನ ಅಹಂಕಾರವನ್ನು ಗುರುತಿಸಿ ಪ್ರಭುವು ಮುಗುಳ್ನಗುತ್ತಾ ಧನುಸ್ಸನ್ನೆತ್ತಿ ಹೆದೆಯೇರಿಸಿ ಶರಸಂಧಾನ ಮಾಡಿದನು. (ಚೌ/೧-೪)

**ದೋ – ಛತ್ರ ಮುಕುಟ ತಾಟಂಕ ತಬ ಹತೇ ಏಕಹೀಂ ಬಾನ।**
**ಸಬ ಕೇಂ ದೇಖತ ಮಹಿ ಪರೇ ಮರಮು ನ ಕೋಊ ಜಾನ ॥ ೧೩ (ಕ)॥**
**ಅಸ ಕೌತುಕ ಕರಿ ರಾಮ ಸರ ಪ್ರಬಿಸೇಉ ಆಇ ನಿಷಂಗ।**
**ರಾವನ ಸಭಾ ಸಸಂಕ ಸಬ ದೇಖಿ ಮಹಾ ರಸಭಂಗ ॥ ೧೩(ಖ)॥**

ಪ್ರಭುವು ಒಂದೇ ಬಾಣದಿಂದ ರಾವಣನ ಛತ್ರಮುಕುಟಗಳನ್ನೂ, ಮಂಡೋದರಿಯ ಕರ್ಣಕುಂಡಲಗಳನ್ನೂ ಹೊಡೆದುರುಳಿಸಿದನು. ಎಲ್ಲರೂ ನೋಡುತ್ತಿರುವಂತೆ ಅವು ನೆಲಕ್ಕುರುಳಿದವು. ಆದರೆ ಆದರ ಕಾರಣ ಯಾರಿಗೂ ತಿಳಿಯದೇ ಹೋಯಿತು. ಇಂತಹ ಚಮತ್ಕಾರವೆಸಗಿದ ಶ್ರೀರಾಮನ ಆ ಬಾಣವು ಮರಳಿ ಆತನ ತೂಣೀರವನ್ನು ಹೊಕ್ಕಿತು. ಹೀಗೆ ಈ ಮಹಾ ರಸಭಂಗವನ್ನು ಕಂಡು ರಾವಣನ ಬೃಹತ್ ಸಭೆ ಭಯಭ್ರಾಂತವಾಯಿತು. (ದೋ/೧೩ ಕ, ಖ)

**ಚೌ – ಕಂಪ ನ ಭೂಮಿ ನ ಮರುತ ಬಿಸೇಷಾ। ಅಸ್ತ್ರ ಸಸ್ತ್ರ ಕಛು ನಯನ ನ ದೇಖಾ॥**
**ಸೋಚಹಿಂ ಸಬ ನಿಜ ಹೃದಯ ಮಝಾರೀ। ಅಸಗುನ ಭಯಉ ಭಯಂಕರ ಭಾರೀ ॥ ೧ ॥**
**ದಸಮುಖ ದೇಖಿ ಸಭಾ ಭಯ ಪಾಈ। ಬಿಹಸಿ ಬಚನ ಕಹ ಜುಗುತಿ ಬನಾಈ॥**
**ಸಿರಉ ಗಿರೇ ಸಂತತ ಸುಭ ಜಾಹೀ। ಮುಕುಟ ಪರೇ ಕಸ ಅಸಗುನ ತಾಹೀ॥ ೨ ॥**
**ಸಯನ ಕರಹು ನಿಜ ನಿಜ ಗೃಹ ಜಾಈ। ಗವನೇ ಭವನ ಸಕಲ ಸಿರ ನಾಈ॥**
**ಮಂದೋದರೀ ಸೋಚ ಉರ ಬಸೇಊ। ಜಬ ತೇ ಶ್ರವನಪೂರ ಮಹಿ ಖಸೇಊ॥ ೩ ॥**
**ಸಜಲ ನಯನ ಕಹ ಜುಗ ಕರ ಜೋರೀ। ಸುನಹು ಪ್ರಾನಪತಿ ಬಿನತೀ ಮೋರೀ॥**
**ಕಂತ ರಾಮ ಬಿರೋಧ ಪರಿಹರಹೂ। ಜಾನಿ ಮನುಜ ಜನಿ ಹಠ ಮನ ಧರಹೂ॥ ೪ ॥**

ಭೂಕಂಪವಾಗಲಿಲ್ಲ, ಚಂಡಮಾರುತ ಬೀಸಲಿಲ್ಲ. ಯಾವುದೇ ಅಸ್ತ್ರ-ಶಸ್ತ್ರಗಳು ಕಣ್ಣಿಗೆ ಬೀಳಲಿಲ್ಲ. ಹಾಗಾದರೆ ಈ ಛತ್ರ, ಮುಕುಟ, ಕರ್ಣತಾಟಂಕಗಳು ಹೇಗೆ ಉದುರಿದವು? ಎಲ್ಲರೂ ಇದೊಂದು ದೊಡ್ಡ ಅಪಶಕುನವೆಂದು ಯೋಚಿಸತೊಡಗಿದರು. ಸಭಿಕರೆಲ್ಲರೂ ಭಯವಿಹ್ವಲರಾಗಿರುವುದನ್ನು ಕಂಡ ರಾವಣನು ಕೃತ್ರಿಮವಾಗಿ ನಕ್ಕು ಹೀಗೆ ಸಮರ್ಥಿಸಿಕೊಂಡನು – ''ತಲೆಗಳೇ ಉದುರಿದರೂ ಶುಭಕರವೇ ಆಗಿರುವಾಗ ಮುಕುಟಗಳು ಕೆಳಗೆ ಬಿದ್ದರೆ ಅಪಶಕುನವೆಂತಹುದು? ನಿರ್ಭಯರಾಗಿ ನಿಮ್ಮ-ನಿಮ್ಮ ಮನೆಗಳಿಗೆ ತೆರಳಿ ನಿಶ್ಚಿಂತೆಯಾಗಿ ಮಲಗಿರಿ. ಇದರಲ್ಲಿ ಹೆದರಬೇಕಾದುದೇನೂ ಇಲ್ಲ.'' ಆಗ ಎಲ್ಲರೂ ಅವನಿಗೆ ಶಿರಬಾಗಿ ಮನೆಗಳಿಗೆ ಮರಳಿದರು. ತನ್ನ ಕರ್ಣಕುಂಡಲಗಳು ಕಳಚಿಬಿದ್ದಿರುವಾಗಿನಿಂದ ಮಂಡೋದರಿಯ ಮನದಲ್ಲಿ ಚಿಂತೆ ಮನೆಮಾಡಿಕೊಂಡಿತು. ಕಣ್ಣುಗಳಲ್ಲಿ ನೀರುತುಂಬಿಕೊಂಡು,

ಕೈಮುಗಿದುಕೊಂಡು ಅವಳು ರಾವಣನಲ್ಲಿ ಹೇಳತೊಡಗಿದಳು – ''ಓ ಪ್ರಾಣನಾಥಾ! ನನ್ನ ಬಿನ್ನಹವನ್ನು ಆಲಿಸಿರಿ. ಪ್ರಿಯತಮಾ! ಶ್ರೀರಾಮನ ವಿರೋಧವನ್ನು ಬಿಟ್ಟುಬಿಡಿರಿ. ಅವನು ಮಾನವಮಾತ್ರವೆಂಬ ಭಾವವನ್ನು ಹೃದಯದಿಂದ ತೊಲಗಿಸಿರಿ. (ಚೌ/೧-೪)

**ದೋ – ಬಿಸ್ವರೂಪ ರಘುಬಂಸ ಮನಿ ಕರಹು ಬಚನ ಬಿಸ್ವಾಸು ।**
**ಲೋಕ ಕಲ್ಪನಾ ಬೇದ ಕರ ಅಂಗ ಅಂಗ ಪ್ರತಿ ಜಾಸು ॥ ೧೪ ॥**

ನನ್ನ ಮಾತಿನಮೇಲೆ ವಿಶ್ವಾಸವನ್ನಿಡಿರಿ. ರಘುವಂಶಶಿರೋಮಣಿಯಾದ ಶ್ರೀರಾಮಚಂದ್ರನು ವಿಶ್ವರೂಪನು. ಜಗತ್ತೆಲ್ಲವೂ ಅವನ ರೂಪವೇ. ಅವನ ಅಂಗಪ್ರತ್ಯಂಗಗಳಲ್ಲಿ ಚತುರ್ದಶ ಭುವನಗಳು ನೆಲಸಿವೆ ಎಂದು ವೇದಗಳು ಸಾರುತ್ತಿವೆ. (ದೋ/೧೪)

**ಚೌ – ಪದ ಪಾತಾಲ ಸೀಸ ಅಜ ಧಾಮಾ । ಅಪರ ಲೋಕ ಅँಗ ಅँಗ ಬಿಶ್ರಾಮಾ ॥**
**ಭೃಕುಟಿ ಬಿಲಾಸ ಭಯಂಕರ ಕಾಲಾ । ನಯನ ದಿವಾಕರ ಕಚ ಘನ ಮಾಲಾ ॥ ೧ ॥**
**ಜಾಸು ಘ್ರಾನ ಅಸ್ವಿನೀಕುಮಾರಾ । ನಿಸಿ ಅರು ದಿವಸ ನಿಮೇಷ ಅಪಾರಾ ॥**
**ಶ್ರವನ ದಿಸಾ ದಸ ಬೇದ ಬಖಾನೀ । ಮಾರುತ ಸ್ವಾಸ ನಿಗಮ ನಿಜ ಬಾನೀ ॥ ೨ ॥**
**ಅಧರ ಲೋಭ ಜಮ ದಸನ ಕರಾಲಾ । ಮಾಯಾ ಹಾಸ ಬಾಹು ದಿಗಪಾಲಾ ॥**
**ಆನನ ಅನಲ ಅಂಬುಪತಿ ಜೀಹಾ । ಉತಪತಿ ಪಾಲನ ಪ್ರಲಯ ಸಮೀಹಾ ॥ ೩ ॥**
**ರೋಮ ರಾಜಿ ಅಷ್ಟಾದಸ ಭಾರಾ । ಅಸ್ಥಿ ಸೈಲ ಸರಿತಾ ನಸ ಜಾರಾ ॥**
**ಉದರ ಉದಧಿ ಅಧಗೋ ಜಾತನಾ । ಜಗಮಯ ಪ್ರಭು ಕಾ ಬಹು ಕಲಪನಾ ॥ ೪ ॥**

ವಿಶ್ವರೂಪಿಯಾದ ಭಗವಾನ್ ಶ್ರೀರಾಮನ ಪಾತಾಳವೇ ಚರಣಗಳು. ಬ್ರಹ್ಮಲೋಕವೇ ಮಸ್ತಕ. ಉಳಿದ ಲೋಕಗಳು ಆತನ ಅಂಗಪ್ರತ್ಯಂಗಗಳು. ಅವನ ಭ್ರುಕುಟಿವಿಲಾಸವೇ ಭಯಂಕರ ಕಾಲವು. ಸೂರ್ಯ-ಚಂದ್ರರೇ ಅವನ ಕಣ್ಣುಗಳು. ಕೇಶರಾಶಿಯೇ ಮೇಘಸಮೂಹವು. ಅಶ್ವಿನೀಕುಮಾರರೇ ಅವನ ನಾಸಿಕ. ಅವನ ನಿಮಿಷೋನ್ಮೇಷಗಳೇ ದಿವಾ-ರಾತ್ರಿಗಳು. ದಶದಿಕ್ಕುಗಳೇ ಅವನ ಕಿವಿಗಳು. ವಾಯುವೇ ಆತನ ಶ್ವಾಸೋಚ್ಛ್ವಾಸವೆಂದು, ಅವನ ವಾಣಿಯಾದ ವೇದಗಳು ಹೇಳುತ್ತಿವೆ. ಲೋಭವೇ ಅವನ ಅಧರ, ಯಮರಾಜನೇ ಭಯಾನಕ ದಂತಪಂಕ್ತಿಗಳು. ಮಾಯೆಯೇ ಆತನ ನಗು. ದಿಕ್ಪಾಲಕರೇ ಭುಜಗಳು. ಅಗ್ನಿಯು ಮುಖವು. ವರಣನೇ ನಾಲಿಗೆ. ಸೃಷ್ಟಿ, ಸ್ಥಿತಿ, ಲಯಗಳೇ ಆತನ ನಿತ್ಯಕ್ರಿಯೆಯು. ಅಷ್ಟಾದಶವಿಧವಾದ ಅಸಂಖ್ಯಾತ ವನಸ್ಪತಿಗಳೇ ಅವನ ರೋಮಾವಳಿ. ಪರ್ವತಗಳೇ ಅಸ್ತಿಗಳು. ನದಿಗಳೇ ನಾಡಿಗಳು. ಸಮುದ್ರವೇ ಉದರ. ಕೆಳಗಿನ ಇಂದ್ರಿಯಗಳೇ ನರಕಗಳು. ಈ ವಿಧವಾಗಿ ಪ್ರಭುವು ಜಗನ್ಮಯನು. ಇದಕ್ಕಿಂತ ಹೆಚ್ಚು ಕಲ್ಪನೆ ಏನು ಮಾಡಲಾದೀತು? (ಚೌ/೧-೪)

**ದೋ – ಅಹಂಕಾರ ಸಿವ ಬುದ್ಧಿ ಅಜ ಮನ ಸಸಿ ಚಿತ್ತ ಮಹಾನ ।**
**ಮನುಜ ಬಾಸ ಸಚರಾಚರ ರೂಪ ರಾಮ ಭಗವಾನ ॥ ೧೫ (ಕ)॥**
**ಅಸ ಬಿಚಾರಿ ಸುನು ಪ್ರಾನಪತಿ ಪ್ರಭು ಸನ ಬಯರು ಬಿಹಾಇ ।**
**ಪ್ರೀತಿ ಕರಹು ರಘುಬೀರ ಪದ ಮಮ ಅಹಿವಾತ ನ ಜಾಇ ॥ ೧೫(ಖ)॥**

ಶಿವನೇ ಆತನ ಅಹಂಕಾರವು. ಬ್ರಹ್ಮನೇ ಬುದ್ಧಿಯು. ಚಂದ್ರನೇ ಮನಸ್ಸು. ಮಹಾವಿಷ್ಣುವೇ ಚಿತ್ತವು. ಇಂತಹ ಚರಾಚರರೂಪಿಯಾದ ಭಗವಾನ್ ಶ್ರೀರಾಮನೇ ಮನುಷ್ಯನಾಗಿ ಅವತರಿಸಿರುವನು. ಪ್ರಾಣನಾಥಾ! ನನ್ನ ಮಾತನ್ನು ಆಲಿಸಿರಿ. ಹೀಗೆ ಚೆನ್ನಾಗಿ ವಿಚಾರಮಾಡಿ ಶ್ರೀರಾಮನೊಡನೆ ವೈರವನ್ನು ಬಿಟ್ಟು ಆತನ ಚರಣಗಳಲ್ಲಿ ಭಕ್ತಿಯನ್ನಿಡಿರಿ. ಅದರಿಂದಾಗಿ ನನ್ನ ಮಾಂಗಲ್ಯವು ಅಳಿಯದೇ ಉಳಿಯಲಿ. (ದೋ/೧೫ ಕ, ಖ)

**ಚೌ – ಬಿಹँಸಾ ನಾರಿ ಬಚನ ಸುನಿ ಕಾನಾ । ಅಹೋ ಮೋಹ ಮಹಿಮಾ ಬಲವಾನಾ ॥**
**ನಾರಿ ಸುಭಾಉ ಸತ್ಯ ಸಬ ಕಹಹೀँ । ಅವಗುನ ಆಠ ಸದಾ ಉರ ರಹಹೀँ ॥ ೧ ॥**
**ಸಾಹಸ ಅನೃತ ಚಪಲತಾ ಮಾಯಾ । ಭಯ ಅಬಿಬೇಕ ಅಸೌಚ ಅದಾಯಾ ॥**
**ರಿಪು ಕರ ರೂಪ ಸಕಲ ತೈँ ಗಾವಾ । ಅತಿ ಬಿಸಾಲ ಭಯ ಮೋಹಿ ಸುನಾವಾ ॥ ೨ ॥**
**ಸೋ ಸಬ ಪ್ರಿಯಾ ಸಹಜ ಬಸ ಮೋರೇँ । ಸಮುಝಿ ಪರಾ ಪ್ರಸಾದ ಅಬ ತೋರೇँ ॥**
**ಜಾನಿಉँ ಪ್ರಿಯಾ ತೋರಿ ಚತುರಾಈ । ಏಹಿ ಬಿಧಿ ಕಹಹು ಮೋರಿ ಪ್ರಭುತಾಈ ॥ ೩ ॥**

**ತವ ಬತಕಹೀ ಗೂಢ ಮೃಗಲೋಚನಿ। ಸಮುಝುತ ಸುಖದ ಸುನತ ಭಯ ಮೋಚನಿ॥**
**ಮಂದೋದರಿ ಮನ ಮಹುँ ಅಸ ಠಯಊ। ಪಿಯಹಿ ಕಾಲ ಬಸ ಮತಿಭ್ರಮ ಭಯಊ॥೪॥**

ಪತ್ನಿಯ ವಚನಗಳನ್ನು ಕಿವಿಯಾರೆ ಕೇಳಿ ರಾವಣನು ಚೆನ್ನಾಗಿ ನಕ್ಕು ನುಡಿದನು – ''ಆಹಾ! ಮೋಹದ ಮಹಿಮೆ ಎಷ್ಟು ದೊಡ್ಡದು! ಸ್ತ್ರೀಯಹೃದಯದ ಎಂಟು ದೋಷಗಳು ಕವಿಗಳು ಹೇಳಿರುವುದು ಸತ್ಯವೇ ಅಲ್ಲವೇ! ಸಾಹಸ, ಅನೃತ, ಚಂಚಲತೆ, ಮಾಯೆ, ಭಯ, ಅವಿವೇಕ, ಅಪವಿತ್ರತೆ, ನಿರ್ದಯತೆ ಇವೇ ಆ ಎಂಟು ದೋಷಗಳು. ನೀನು ರಿಪುವಿನ ವಿರಾಟ್‌ರೂಪವನ್ನು ಹಾಡಿ-ಹೊಗಳಿ ನನ್ನಲ್ಲಿ ಭಾರೀ ಭಯವನ್ನು ಉಂಟುಮಾಡಿದೆ. ಆದರೆ ಪ್ರಿಯೇ! ಈ ಚರಾಚರಜಗತ್ತು ಸಹಜವಾಗಿಯೇ ನನ್ನ ಅಧೀನದಲ್ಲಿದೆ. ನಿನ್ನ ಕೃಪೆಯಿಂದ ನನಗೆ ಇವೆಲ್ಲ ಅವಗತವಾಯಿತು. ಪ್ರಿಯೇ! ನಿನ್ನ ಜಾಣ್ಮೆಯನ್ನು ನಾನು ಅರ್ಥಮಾಡಿಕೊಂಡೆ. ನೀನು ಈ ನೆಪದಲ್ಲಿ ನನ್ನ ಪ್ರಭುತ್ವವನ್ನೇ ಬಣ್ಣಿಸುತ್ತಿದ್ದೀಯೆ. ಎಲೈ ಮೃಗನಯನೇ! ನಿನ್ನ ಮಾತು ತುಂಬಾ ರಹಸ್ಯಮಯವಾಗಿದೆ. ಅರ್ಥಮಾಡಿಕೊಂಡರೆ ಸುಖವನ್ನುಂಟುಮಾಡುವಂತಹುದು. ಕೇಳಿದರೆ ಭಯವನ್ನು ತೊಲಗಿಸುವಂತಹುದು.'' ಕಾಲವು ಸಮೀಪಿಸುವುದರಿಂದ ಪತಿಗೆ ಮತಿಭ್ರಮಣೆಯಾಗಿದೆ ಎಂದು ಮಂಡೋದರಿಗೆ ಅನಿಸಿತು. (ಚೌ/೧-೪)

**ದೋ – ಎಹಿ ಬಿಧಿ ಕರತ ಬಿನೋದ ಬಹು ಪ್ರಾತ ಪ್ರಗಟ ದಸಕಂಧ।**
**ಸಹಜ ಅಸಂಕ ಲಂಕಪತಿ ಸಭಾँ ಗಯಉ ಮದ ಅಂಧ॥೧೬ (ಕ)॥**

ಅಜ್ಞಾನವಶದಿಂದ ಈ ವಿಧವಾದ ವಿನೋದದಿಂದಲೇ ರಾವಣನು ಇರುಳನ್ನು ಕಳೆದನು. ಬೆಳಗಾಗುತ್ತಲೇ ಸಹಜ ನಿಶ್ಶಂಕನೂ, ಮದಾಂಧನೂ ಆದ ಲಂಕಾಪತಿಯು ಸಭಾಸ್ಥಾನವನ್ನು ಪ್ರವೇಶಿಸಿದನು. (ದೋ/೧೬ ಕ)

**ಸೋ – ಫೂಲಇ ಫರಇ ನ ಬೇತ ಜದಪಿ ಸುಧಾ ಬರಷಹಿँ ಜಲದ।**
**ಮೂರುಖ ಹೃದಯँ ನ ಚೇತ ಜೌँ ಗುರ ಮಿಲಹಿँ ಬಿರಂಚಿ ಸಮ॥೧೬(ಖ)॥**

ಮೋಡಗಳು ಅಮೃತವನ್ನು ಸುರಿಸಿದರೂ ಬೆತ್ತವು ಹೂಬಿಡದು, ಫಲಿಸದು. ಅಂತೆಯೇ ವಿರಂಚಿಯಂತಹ ಗುರು ದೊರೆತರೂ ಮೂರ್ಖನ ಹೃದಯದಲ್ಲಿ ಜ್ಞಾನೋದಯವಾಗಲಾರದು. (ಸೋ/೧೬ ಖ)

**ಚೌ – ಇಹಾँ ಪ್ರಾತ ಜಾಗೇ ರಘುರಾಈ। ಪೂಛಾ ಮತ ಸಬ ಸಚಿವ ಬೋಲಾಈ॥**
**ಕಹಹು ಬೇಗಿ ಕಾ ಕರಿಅ ಉಪಾಈ। ಜಾಮವಂತ ಕಹ ಪದ ಸಿರು ನಾಈ॥೧॥**
**ಸುನು ಸರ್ಬಗ್ಯ ಸಕಲ ಉರ ಬಾಸೀ। ಬುಧಿ ಬಲ ತೇಜ ಧರ್ಮ ಗುನ ರಾಸೀ॥**
**ಮಂತ್ರ ಕಹಉँ ನಿಜ ಮತಿ ಅನುಸಾರಾ। ದೂತ ಪಠಾಇಅ ಬಾಲಿಕುಮಾರಾ॥೨॥**
**ನೀಕ ಮಂತ್ರ ಸಬ ಕೇ ಮನ ಮಾನಾ। ಅಂಗದ ಸನ ಕಹ ಕೃಪಾನಿಧಾನಾ॥**
**ಬಾಲಿತನಯ ಬುಧಿ ಬಲ ಗುನ ಧಾಮಾ। ಲಂಕಾ ಜಾಹು ತಾತ ಮಮ ಕಾಮಾ॥೩॥**
**ಬಹುತ ಬುಝಾಇ ತುಮ್ಹಹಿ ಕಾ ಕಹಊँ। ಪರಮ ಚತುರ ಮೈँ ಜಾನತ ಅಹಊँ॥**
**ಕಾಜು ಹಮಾರ ತಾಸು ಹಿತ ಹೋಈ। ರಿಪು ಸನ ಕರೇಹು ಬತಕಹೀ ಸೋಈ॥೪॥**

ಇತ್ತ ಸುವೇಲಶೈಲದ ಮೇಲೆ ಶ್ರೀರಘುನಾಥನು ಪ್ರಾತಃಕಾಲದಲ್ಲೇ ಎದ್ದು, ಎಲ್ಲ ಮಂತ್ರಿಗಳನ್ನು ಕರೆಸಿ, ಈಗೇನು ಮಾಡಬಹುದು ಎಂಬ ಸಲಹೆಯನ್ನು ಕೇಳಿದನು. ಜಾಂಬವಂತರು ಶ್ರೀರಾಮನ ಚರಣಗಳಿಗೆರಗಿ ಬಿನ್ನವಿಸಿಕೊಂಡರು – ಹೇ ಸರ್ವಜ್ಞಮೂರ್ತಿಯೇ! ಸರ್ವಾಂತರ್ಯಾಮಿಯೇ! ಬುದ್ಧಿಬಲತೇಜಗಳಿಗೆ, ಧರ್ಮಗುಣಗಳಿಗೆ ನಿದಾನನಾದವನೇ! ಕೇಳು. ನಾನು ನನ್ನ ಬುದ್ಧಿಗನುಸಾರವಾಗಿ ಸಲಹೆ ನೀಡುತ್ತೇನೆ. 'ವಾಲಿಪುತ್ರನಾದ ಅಂಗದನನ್ನು ದೂತನಾಗಿ ಕಳಿಸಿರಿ.' ಈ ಒಳ್ಳೆಯ ಸಲಹೆ ಎಲ್ಲರಿಗೂ ಹಿಡಿಸಿತು. ಕೃಪಾಳುವಾದ ಶ್ರೀರಾಮನು ಅಂಗದನಲ್ಲಿ ಹೇಳಿದನು – 'ಎಲೈ ಬುದ್ಧಿಗುಣಬಲಗಳ ಗಣಿಯೇ! ವಾಲಿನಂದನಾ! ಅಯ್ಯಾ! ನೀನು ನನ್ನ ಕಾರ್ಯಕ್ಕಾಗಿ ಲಂಕೆಗೆ ಹೋಗು. ನಿನಗೆ ಹೆಚ್ಚೇನು ಹೇಳುವುದು. ನೀನು ಪರಮ ಚತುರನೆಂದು ನಾನು ಬಲ್ಲೆ. ಶತ್ರುವಿನ ಜೊತೆ ನಮ್ಮ ಕೆಲಸವೂ ಆಗಬೇಕು, ಅವನ ಶ್ರೇಯಸ್ಸೂ ಆಗುವಂತಹ ಮಾತನ್ನೇ ಆಡಬೇಕು. (ಚೌ/೧-೪)

## ಅಂಗದ ಸಂಧಾನ

**ಸೋ – ಪ್ರಭು ಅಗ್ಯಾ ಧರಿ ಸೀಸ ಚರನ ಬಂದಿ ಅಂಗದ ಉಠೆಉ।**
**ಸೋಇ ಗುನ ಸಾಗರ ಈಸ ರಾಮ ಕೃಪಾ ಜಾ ಪರ ಕರಹು॥೧೭ (ಕ)॥**

**ಸ್ವಯಂ ಸಿದ್ಧ ಸಬ ಕಾಜ ನಾಥ ಮೋಹಿ ಆದರು ದಿಯಉ ।**
**ಅಸ ಬಿಚಾರಿ ಜುಬರಾಜ ತನ ಪುಲಕಿತ ಹರಷಿತ ಹಿಯಉ ॥ ೧೭(ಖ)॥**

ಶ್ರೀರಾಮಚಂದ್ರಪ್ರಭುವಿನ ಆಜ್ಞೆಯನ್ನು ಶಿರಸಾವಹಿಸಿ, ಅವನ ಚರಣಗಳಿಗೆ ವಂದಿಸಿ ಅಂಗದನು ಹೇಳಿದನು – 'ಪ್ರಭೋ! ನೀನು ಕೃಪೆದೋರಿದವನು ಸದ್ಗುಣಗಳ ನಿಧಿಯಾಗುತ್ತಾನೆ. ನಿನ್ನ ಕಾರ್ಯಗಳೆಲ್ಲ ಸ್ವಯಂಸಿದ್ಧ. ಸ್ವಾಮಿ! ನನ್ನನ್ನು ಈ ಕಾರ್ಯಕ್ಕೆ ನೇಮಿಸಿ ಆದರಿಸಿದಿರಿ.' ಹೀಗೆ ಹೇಳುತ್ತಾ ಯುವರಾಜ ಅಂಗದನ ಹೃದಯ ಹರ್ಷಿತವಾಯಿತು. ಶರೀರ ಪುಳಕಿತವಾಯಿತು. (ಸೋ/೧೭ ಕ, ಖ)

**ಚೌ – ಬಂದಿ ಚರನ ಉರ ಧರಿ ಪ್ರಭುತಾಈ । ಅಂಗದ ಚಲೆಉ ಸಬಹಿ ಸಿರು ನಾಈ ॥**
**ಪ್ರಭು ಪ್ರತಾಪ ಉರ ಸಹಜ ಅಸಂಕಾ । ರನ ಬಾಁಕುರಾ ಬಾಲಿಸುತ ಬಂಕಾ ॥ ೧ ॥**
**ಪುರ ಪೈಠತ ರಾವನ ಕರ ಬೇಟಾ । ಖೇಲತ ರಹಾ ಸೋ ಹೋಇ ಗೈ ಭೇಟಾ ॥**
**ಬಾತಹಿಂ ಬಾತ ಕರಷ ಬಢ಼ಿ ಆಈ । ಜುಗಲ ಅತುಲ ಬಲ ಪುನಿ ತರುನಾಈ ॥ ೨ ॥**
**ತೇಹಿಂ ಅಂಗದ ಕಹುಁ ಲಾತ ಉಠಾಈ । ಗಹಿ ಪದ ಪಟಕೆಉ ಭೂಮಿ ಭವಾಁಈ ॥**
**ನಿಸಿಚರ ನಿಕರ ದೇಖಿ ಭಟ ಭಾರೀ । ಜಹಁ ತಹಁ ಚಲೇ ನ ಸಕಹಿಂ ಪುಕಾರೀ ॥ ೩ ॥**
**ಏಕ ಏಕ ಸನ ಮರಮು ನ ಕಹಹೀಂ । ಸಮುಝಿ ತಾಸು ಬಧ ಚುಪ ಕರಿ ರಹಹೀಂ ॥**
**ಭಯಉ ಕೋಲಾಹಲ ನಗರ ಮಝಾರೀ । ಆವಾ ಕಪಿ ಲಂಕಾ ಜೇಹಿಂ ಜಾರೀ ॥ ೪ ॥**
**ಅಬ ಧೌಂ ಕಹಾ ಕರಿಹಿ ಕರತಾರಾ । ಅತಿ ಸಭೀತ ಸಬ ಕರಹಿಂ ಬಿಚಾರಾ ॥**
**ಬಿನು ಪೂಛೇಂ ಮಗು ದೇಹಿಂ ದಿಖಾಈ । ಜೇಹಿ ಬಿಲೋಕ ಸೋಇ ಜಾಇ ಸುಖಾಈ ॥ ೫ ॥**

ಶ್ರೀರಾಮಚರಣಗಳಿಗೆ ವಂದಿಸಿ, ಅವನ ಪ್ರಭುತ್ವವನ್ನು ಹೃದಯದಲ್ಲಿ ತಳೆದು, ಎಲ್ಲರಿಗೆ ನಮಸ್ಕರಿಸಿ ಅಂಗದನು ಹೊರಟನು. ಪ್ರಭು ಪ್ರತಾಪವನ್ನು ಹೃದಯದಲ್ಲಿ ಧರಿಸಿದ ರಣಧೀರನಾದ ವಾಲಿಪುತ್ರನು ಸಹಜವಾಗಿಯೇ ನಿರ್ಭಯನಾಗಿದ್ದನು. ಅವನು ಲಂಕೆಯನ್ನು ಪ್ರವೇಶಿಸುತ್ತಲೇ ಅಲ್ಲೇ ಆಟವಾಡುತ್ತಿದ್ದ ರಾವಣಕುಮಾರನು ಇದಿರಾದನು. ಮಾತು-ಮಾತಿನಲ್ಲೇ ಇಬ್ಬರಲ್ಲಿ ಘರ್ಷಣೆ ಉಂಟಾಯಿತು. ಇಬ್ಬರೂ ಅತುಲ ಬಲಶಾಲಿಗಳಿದ್ದು, ಯುವಕರಾಗಿದ್ದರು. ರಾವಣಕುಮಾರನು ಅಂಗದನನ್ನು ಒದೆಯಲು ಕಾಲೆತ್ತಿದನು. ಕೂಡಲೇ ಅಂಗದನು ಅದೇ ಕಾಲನ್ನು ಹಿಡಿದೆತ್ತಿ ಗಿರ-ಗಿರನೇ ತಿರುಗಿಸಿ ನೆಲದ ಮೇಲೆ ಅಪ್ಪಳಿಸಿದನು. ಇದರಿಂದ ಅವನು ಸತ್ತೇ ಹೋದನು. ಇದನ್ನು ಕಂಡ ರಾಕ್ಷಸಯೋಧರು ಯಾರೋ ದೊಡ್ಡಯೋಧನು ಬಂದಿರುವನು ಎಂದು ತಿಳಿದು ದಿಕ್ಕಾಪಾಲಾಗಿ ಓಡಿದರು. ಅವರಿಗೆ ಕೂಗಿಕೊಳ್ಳುವಷ್ಟು ಧೈರ್ಯವೂ ಇರಲಿಲ್ಲ. ಅವರಲ್ಲಿ ಒಬ್ಬರು ಮತ್ತೊಬ್ಬರಿಗೆ ನಡೆದ ಸಂಗತಿಯನ್ನು ಹೇಳಲೂ ಉಸುರಿಲ್ಲ. ರಾವಣಕುಮಾರನ ವಧೆಯನ್ನು ತಿಳಿದರೂ ಅವರು ಬಿಮ್ಮನೆ ಸುಮ್ಮನಿದ್ದರು. ರಾವಣಕುಮಾರನ ಸಾವನ್ನು ತಿಳಿದು, ರಾಕ್ಷಸರು ಭಯದಿಂದ ಓಡುತ್ತಿರುವುದನ್ನು ಕಂಡು ಹಿಂದೆ ಲಂಕೆಯನ್ನು ಸುಟ್ಟ ಅಂಕೆಯಿಲ್ಲದ ಕಪಿಯೇ ಬಂದಿದೆ ಎಂಬ ಸುದ್ದಿ ಎಲ್ಲೆಡೆ ಹಬ್ಬಿತು. ನಗರದಲ್ಲೆಲ್ಲ ಕೋಲಾಹಲವುಂಟಾಯಿತು. ನಗರವಾಸಿಗಳೆಲ್ಲ – ಇನ್ನು ಮುಂದೆ ವಿಧಾತನು ನಮಗೆ ಯಾವ ಕಷ್ಟಕೊಡುವನೋ ಎಂದು ಯೋಚಿಸುತ್ತಾ ಭಯಭ್ರಾಂತರಾದರು. ಅವರು ಕೇಳದೆಯೇ ಅಂಗದನಿಗೆ ರಾವಣನ ಸಭಾಭವನದ ದಾರಿಯನ್ನು ತೋರಿಸುತ್ತಿದ್ದರು. ಅಂಗದನನ್ನು ನೋಡಿದವರೆಲ್ಲರೂ ಭಯದಿಂದ ಒಣಗಿ ಕಂಗಾಲಾಗುತ್ತಿದ್ದರು. (ಚೌ/೧-೫)

**ದೋ – ಗಯಉ ಸಭಾ ದರಬಾರ ತಬ ಸುಮಿರಿ ರಾಮ ಪದ ಕಂಜ ।**
**ಸಿಂಹ ಠವನಿ ಇತ ಉತ ಚಿತವ ಧೀರ ಬೀರ ಬಲ ಪುಂಜ ॥ ೧೮ ॥**

ಶ್ರೀರಾಮನ ಪದಪಂಕಜವನ್ನು ನೆನೆದು ಅಂಗದನು ರಾವಣನ ಒಡ್ಡೋಲಗದ ದ್ವಾರದ ಬಳಿಗೆ ನಡೆದನು. ಶಕ್ತಿಪುಂಜನಾದ ಧೀರ-ವೀರ ಅಂಗದನು ಸಿಂಹದ ಠೀವಿಯಿಂದ ಅತ್ತ-ಇತ್ತ ನೋಡತೊಡಗಿದನು. (ದೋ/೧೮)

**ಚೌ – ತುರತ ನಿಸಾಚರ ಏಕ ಪಠಾವಾ । ಸಮಾಚಾರ ರಾವನಹಿ ಜನಾವಾ ॥**
**ಸುನತ ಬಿಹಁಸಿ ಬೋಲಾ ದಸಸೀಸಾ । ಆನಹು ಬೋಲಿ ಕಹಾಁ ಕರ ಕೀಸಾ ॥ ೧ ॥**
**ಆಯಸು ಪಾಇ ದೂತ ಬಹು ಧಾಏ । ಕಪಿಕುಂಜರಹಿ ಬೋಲಿ ಲೈ ಆಏ ॥**
**ಅಂಗದ ದೀಖ ದಸಾನನ ಬೈಸೇಂ । ಸಹಿತ ಪ್ರಾನ ಕಜ್ಜಲಗಿರಿ ಜೈಸೇಂ ॥ ೨ ॥**

ಭುಜಾ ಬಿಟಪ ಸಿರ ಸೃಂಗ ಸಮಾನಾ । ರೋಮಾವಲೀ ಲತಾ ಜನು ನಾನಾ ॥
ಮುಖ ನಾಸಿಕಾ ನಯನ ಅರು ಕಾನಾ । ಗಿರಿ ಕಂದರಾ ಖೋಹ ಅನುಮಾನಾ ॥ ೩ ॥
ಗಯಉ ಸಭಾಁ ಮನ ನೇಕು ನ ಮುರಾ । ಬಾಲಿತನಯ ಅತಿಬಲ ಬಾಁಕುರಾ ॥
ಉಠೇ ಸಭಾಸದ ಕಪಿ ಕಹುಁ ದೇಖೀ । ರಾವನ ಉರ ಭಾ ಕ್ರೋಧ ಬಿಸೇಷೀ ॥ ೪ ॥

ಕೂಡಲೇ ಅವನು ಒಬ್ಬ ನಿಶಾಚರನನ್ನು ಕಳುಹಿಸಿ ತಾನು ಬಂದಿರುವ ಸುದ್ದಿಯನ್ನು ರಾವಣನಿಗೆ ಮುಟ್ಟಿಸಿದನು. ಅದನ್ನು ಕೇಳಿದ ರಾವಣನು ನಕ್ಕು – 'ಕರೆದುಕೊಂಡು ಬನ್ನಿ, ಅದೆಲ್ಲಿಯ ಮಂಗನೆಂದು ನೋಡೋಣ' ಎಂದು ನುಡಿದನು. ರಾವಣನ ಅಪ್ಪಣೆಯಂತೆ ಅನೇಕ ಮಂದಿ ರಾಕ್ಷಸರು ಓಡೋಡುತ್ತಾ ಹೋಗಿ, ಕಪಿಕುಂಜರನಾದ ಅಂಗದನನ್ನು ಕರೆತಂದರು. ಜೀವತುಂಬಿದ ಒಂದು ಕಾಡಿಗೆಯ ಬೆಟ್ಟವೋ ಎಂಬಂತೆ ಕುಳಿತಿರುವ ರಾವಣನನ್ನು ಅಂಗದನು ನೋಡಿದನು. ಆತನ ಭುಜಗಳೇ ವೃಕ್ಷಗಳು. ತಲೆಗಳೇ ಗಿರಿಶೃಂಗಗಳು. ರೋಮಾವಳಿಯೇ ಲತೆಗಳಂತಿವೆ. ಅವನ ಬಾಯಿ, ಮೂಗು, ಕಣ್ಣು, ಕಿವಿಗಳು ಪರ್ವತದ ಗುಹೆಗಳಂತಿವೆ. ಮಹಾಬಲಶಾಲಿಯೂ, ಸಾಟಿಯಿಲ್ಲದ ವೀರನೂ ಆದ ವಾಲಿಪುತ್ರ ಅಂಗದನು ಲೇಶವೂ ಭಯ, ಶಂಕೆಗಳಿಲ್ಲದೆ ಸಭಾಭವನವನ್ನು ಪ್ರವೇಶಿಸಿದನು. ಅಂಗದನನ್ನು ಕಂಡಕೂಡಲೇ ಸಭಾಸದರೆಲ್ಲರೂ ಎದ್ದು ನಿಂತರು. ಅದನ್ನು ಕಂಡ ರಾವಣನು ರೋಷಭೀಷಣನಾದನು. (ಚೌ/೧-೪)

**ದೋ – ಜಥಾ ಮತ್ತ ಗಜ ಜೂಥ ಮಹುಁ ಪಂಚಾನನ ಚಲಿ ಜಾಇ ।**
**ರಾಮ ಪ್ರತಾಪ ಸುಮಿರಿ ಮನ ಬೈಠ ಸಭಾಁ ಸಿರು ನಾಇ ॥ ೧೯ ॥**

ಮತ್ತಗಜಯೂಥದ ನಡುವೆ ಸಿಂಹವು ಹೋಗುವಂತೆ ಅಂಗದನು ನಿರ್ಭಯವಾಗಿ ಸಭೆಯನ್ನು ಪ್ರವೇಶಿಸಿ, ಶ್ರೀರಾಮನ ಪ್ರತಾಪವನ್ನು ಸ್ಮರಿಸುತ್ತಾ ಸಭೆಗೆ ತಲೆವಾಗಿ ಕುಳಿತನು. (ದೋ/೧೯)

ಚೌ – ಕಹ ದಸಕಂಠ ಕವನ ತೈಁ ಬಂದರ । ಮೈಁ ರಘುಬೀರ ದೂತ ದಸಕಂಧರ ॥
ಮಮ ಜನಕಹಿ ತೊಹಿ ರಹೀ ಮಿತಾಈ । ತವ ಹಿತ ಕಾರನ ಆಯಉಁ ಭಾಈ ॥ ೧ ॥
ಉತ್ತಮ ಕುಲ ಪುಲಸ್ತಿ ಕರ ನಾತೀ । ಸಿವ ಬಿರಂಚಿ ಪುಜೆಹು ಬಹು ಭಾಁತೀ ॥
ಬರ ಪಾಯಹು ಕೀನ್ಹೆಹು ಸಬ ಕಾಜಾ । ಜೀತೆಹು ಲೋಕಪಾಲ ಸಬ ರಾಜಾ ॥ ೨ ॥
ನೃಪ ಅಭಿಮಾನ ಮೋಹ ಬಸ ಕಿಂಬಾ । ಹರಿ ಆನಿಹು ಸೀತಾ ಜಗದಂಬಾ ॥
ಅಬ ಸುಭ ಕಹಾ ಸುನಹು ತುಮ್ಹ ಮೋರಾ । ಸಬ ಅಪರಾಧ ಛಮಿಹಿ ಪ್ರಭು ತೋರಾ ॥ ೩ ॥
ದಸನ ಗಹಹು ತೃನ ಕಂಠ ಕುಠಾರೀ । ಪರಿಜನ ಸಹಿತ ಸಂಗ ನಿಜ ನಾರೀ ॥
ಸಾದರ ಜನಕಸುತಾ ಕರಿ ಆಗೇಁ । ಏಹಿ ಬಿಧಿ ಚಲಹು ಸಕಲ ಭಯ ತ್ಯಾಗೇಁ ॥ ೪ ॥

ದಶಕಂಠನು 'ಎಲವೋ ಕಪಿಯೇ ನೀನಾರು? ಎಂದು ಪ್ರಶ್ನಿಸಿದನು. ಅಂಗದನೆಂದ – ಎಲೈ ದಶಕಂಧರಾ! ನಾನು ರಘುವೀರನ ದೂತನು. ನನ್ನ ತಂದೆಗೂ ನಿನಗೂ ಮಿತ್ರತ್ವ ಇತ್ತು. ಅದಕ್ಕಾಗಿ ನಿನ್ನ ಒಳಿತಿಗಾಗಿಯೇ ಇಲ್ಲಿಗೆ ಬಂದಿರುವೆನು. ನಿನ್ನದು ಉತ್ತಮವಂಶ. ನೀನು ಪುಲಸ್ತ್ಯಮುನಿಯ ಮೊಮ್ಮಗನಾಗಿರುವಿ. ನೀನು ಶಿವನನ್ನೂ, ಬ್ರಹ್ಮದೇವರನ್ನೂ ಅನೇಕವಿಧದಿಂದ ಪೂಜಿಸಿ, ಅವರಿಂದ ವರಗಳನ್ನು ಪಡೆದುಕೊಂಡು ಎಲ್ಲ ಕಾರ್ಯಗಳಲ್ಲಿಯೂ ಸಿದ್ಧಿಯನ್ನು ಪಡೆದುಕೊಂಡಿರುವೆ. ಸಕಲ ಲೋಕಪಾಲಕರನ್ನೂ, ಭೂಪಾಲರನ್ನೂ ನೀನು ಗೆದ್ದಿರುವೆ. ರಾಜಮದದಿಂದಲೋ, ಮೋಹವಶದಿಂದಲೋ ನೀನು ಜಗಜ್ಜನನಿಯಾದ ಸೀತಾದೇವಿಯನ್ನು ಅಪಹರಿಸಿ ತಂದಿರುವೆ. ಈಗ ಶುಭಪ್ರದವಾದ ನಿನ್ನ ಹಿತದ ಮಾತನ್ನು ಹೇಳುವೆನು ಕೇಳು. ನನ್ನ ಮಾತಿನಂತೆ ನಡೆದರೆ ಪ್ರಭುರಾಮಚಂದ್ರನು ನಿನ್ನ ಎಲ್ಲ ಅಪರಾಧಗಳನ್ನು ಕ್ಷಮಿಸಿಬಿಡುವನು. ಬಾಯಲ್ಲಿ ಹುಲ್ಲುಕಡ್ಡಿಯನ್ನು ಕಚ್ಚಿಕೋ, ಕತ್ತಿಗೆ ಕೊಡಲಿಯನ್ನು ಕಟ್ಟಿಕೋ. (ಅಂದರೆ ಆಕಳಿನಂತೆ ಸರಳ ಸ್ವಭಾವದಿಂದ, ವಿನಮ್ರನಾಗಿ, ನಿನ್ನ ದುರಭಿಮಾನವನ್ನು ತ್ಯಜಿಸಿ ಶರಣಾಗತನಾಗು.) ನಿನ್ನ ಪತ್ನಿಯನ್ನು ಪರಿವಾರವನ್ನು ಜೊತೆಗೂಡಿ ಆದರದಿಂದ ಜಾನಕಿದೇವಿಯನ್ನು ಮುಂದಕ್ಕಿಟ್ಟುಕೊಂಡು ಎಲ್ಲ ಭಯವನ್ನು ತೊರೆದು ಪ್ರಭುವಿನ ಬಳಿಗೆ ಹೋಗು. (ಚೌ/೧-೪)

**ದೋ – ಪ್ರನತಪಾಲ ರಘುಬಂಸಮನಿ ತ್ರಾಹಿ ತ್ರಾಹಿ ಅಬ ಮೋಹಿ ।**
**ಆರತ ಗಿರಾ ಸುನತ ಪ್ರಭು ಅಭಯ ಕರೈಗೋ ತೋಹಿ ॥ ೨೦ ॥**

ಓ ಶರಣಾಗತರಕ್ಷಕಾ! ರಘುವಂಶ ಶಿರೋಮಣೀ! ಶ್ರೀರಾಮಾ! ನನ್ನನ್ನು ರಕ್ಷಿಸು, ರಕ್ಷಿಸು ಎಂದು ಆತನನ್ನು ಪ್ರಾರ್ಥಿಸು. ನಿನ್ನ ಆರ್ತವಾಣಿಯನ್ನು ಕೇಳಿ ಪ್ರಭುವು ಖಂಡಿತ ನಿನಗೆ ಅಭಯಪ್ರದಾನ ಮಾಡುವನು. (ದೋ/೨೦)

ಚೌ – ರೇ ಕಪಿಪೋತ ಬೋಲು ಸಂಭಾರೀ। ಮೂಢ ನ ಜಾನೆಹಿ ಮೋಹಿ ಸುರಾರೀ॥
ಕಹು ನಿಜ ನಾಮ ಜನಕ ಕರ ಭಾಈ। ಕೆಹಿ ನಾತೇಂ ಮಾನಿಐ ಮಿತಾಈ॥೧॥
ಅಂಗದ ನಾಮ ಬಾಲಿ ಕರ ಬೇಟಾ। ತಾಸೋಂ ಕಬಹುँ ಭಈ ಹೀ ಭೇಟಾ॥
ಅಂಗದ ಬಚನ ಸುನತ ಸಕುಚಾನಾ। ರಹಾ ಬಾಲಿ ಬಾನರ ಮೈಂ ಜಾನಾ॥೨॥
ಅಂಗದ ತಹೀಂ ಬಾಲಿ ಕರ ಬಾಲಕ। ಉಪಜೆಹು ಬಂಸ ಅನಲ ಕುಲ ಘಾಲಕ॥
ಗರ್ಭ ನ ಗಯಹು ಬ್ಯರ್ಥ ತುಮ್ಹ ಜಾಯಹು। ನಿಜ ಮುಖ ತಾಪಸ ದೂತ ಕಹಾಯಹು॥೩॥
ಅಬ ಕಹು ಕುಸಲ ಬಾಲಿ ಕಹँ ಅಹಈ। ಬಿಹँಸಿ ಬಚನ ತಬ ಅಂಗದ ಕಹಈ॥
ದಿನ ದಸ ಗಏँ ಬಾಲಿ ಪಹಿಂ ಜಾಈ। ಬೂಝೆಹು ಕುಸಲ ಸಖಾ ಉರ ಲಾಈ॥೪॥
ರಾಮ ಬಿರೋಧ ಕುಸಲ ಜಸಿ ಹೋಈ। ಸೋ ಸಬ ತೋಹಿ ಸುನಾಇಹಿ ಸೋಈ॥
ಸುನು ಸಠ ಭೇದ ಹೋಇ ಮನ ತಾಕೇಂ। ಶ್ರೀರಘುಬೀರ ಹೃದಯ ನಹೀಂ ಜಾಕೇಂ॥೫॥

ಇದನ್ನು ಕೇಳಿ ರಾವಣನೆಂದನು – ಎಲವೋ ಮರಿಮಂಗವೇ! ಮೈಮೇಲೆ ಜ್ಞಾನವಿಟ್ಟು ಮಾತನಾಡು. ಮೂರ್ಖಾ! ಅಮರವೈರಿಯಾದ ನನ್ನನ್ನು ನೀನು ತಿಳಿದಿಲ್ಲವೇ? ನಿನ್ನ ಮತ್ತು ನಿನ್ನ ಅಪ್ಪನ ಹೆಸರನ್ನು ಉಸುರು. ನಿನ್ನ ತಂದೆಗೂ ನನಗೂ ಎಲ್ಲಿಯ ಮೈತ್ರಿ? ಆಗ ಅಂಗದನು ಇಂತೆಂದನು – 'ನನ್ನ ಹೆಸರು ಅಂಗದ. ನಾನು ವಾಲಿಯ ಮಗ. ನೀನೆಂದಾದರೂ ನನ್ನ ತಂದೆಯನ್ನು ಸಂಧಿಸಿರುವೆಯಾ?' ಅಂಗದನ ಮಾತನ್ನು ಕೇಳಿದ ಕೂಡಲೇ ರಾವಣನು ತಬ್ಬಿಬ್ಬಾದ. ಅವನೆಂದ – ಹಾ! ಹೌದು! ಈಗ ನೆನಪಾಯಿತು. ವಾಲಿ ಎಂಬ ಓರ್ವ ವಾನರನಿದ್ದನು. ಎಲೈ ಅಂಗದಾ! ನೀನು ವಾಲಿಕುಮಾರನೇ! ಎಲವೋ ಕುಲನಾಶಕನೇ! ನೀನು ನಿನ್ನ ಕುಲವೆಂಬ ಬಿದಿರಿನ ಮೆಳೆಗೆ ಬೆಂಕಿಯಾಗಿ ಹುಟ್ಟಿದೆಯಲ್ಲ! ನೀನು ನಿನ್ನ ತಾಯಿಯ ಗರ್ಭದಲ್ಲಿರುವಾಗಲೇ ಏಕೆ ಸತ್ತುಹೋಗಿಲ್ಲ! ಒಬ್ಬ ಜೋಗಿಯ ದೂತನೆಂದು ಹೇಳಿಕೊಳ್ಳುವ ನೀನು ಹುಟ್ಟಿದ್ದು ವ್ಯರ್ಥ. ಈಗ ವಾಲಿಯ ಕ್ಷೇಮಸಮಾಚಾರವನ್ನಾದರೂ ಹೇಳು. ಈಗ ಅವನೆಲ್ಲಿರುವನು? ಆಗ ಅಂಗದನು ನಕ್ಕು ಪ್ರತ್ಯುತ್ತರವಿತ್ತನು – ''ಹತ್ತುದಿನ ಕಳೆಯಲಿ. ನೀನೇ ಸ್ವತಃ ವಾಲಿಯ ಬಳಿಗೆ ಹೋಗಿ ನಿನ್ನ ಮಿತ್ರನನ್ನು ಆಲಿಂಗಿಸಿಕೊಂಡು ಅವನ ಕುಶಲಕ್ಷೇಮವನ್ನು ವಿಚಾರಿಸುವೆಯಂತೆ. ಶ್ರೀರಾಮನನ್ನು ವಿರೋಧಿಸಿದರೆ ಆಗುವ ಕುಶಲವನ್ನು ಅವನೇ ನಿನಗೆ ಅರುಹುತ್ತಾನೆ. ಎಲೈ ಶಠನೇ! ಶ್ರೀರಾಮನಿಲ್ಲದ ಹೃದಯದಲ್ಲಿ ಮಾತ್ರ ಭೇದಬುದ್ಧಿಯು ಜನಿಸಬಲ್ಲುದು. (ಚೌ/೧-೫)

**ದೋ – ಹಮ ಕುಲ ಘಾಲಕ ಸತ್ಯ ತುಮ್ಹ ಕುಲ ಪಾಲಕ ದಸಸೀಸ।**
**ಅಂಧಉ ಬಧಿರ ನ ಅಸ ಕಹಹಿಂ ನಯನ ಕಾನ ತವ ಬೀಸ॥೨೧॥**

ಎಲೈ ದಶಾನನಾ! ನೀನು ಹೇಳುವುದು ನಿಜವೇ. ನಾನು ಕುಲಘಾತಕ. ನೀನು ಕುಲರಕ್ಷಕನಲ್ಲವೇ? ಕುರುಡರು, ಕಿವುಡರೂ ಕೂಡ ಇಂತಹ ಮಾತನ್ನಾಡುವುದಿಲ್ಲ. ನಿನಗಾದರೋ ಇಪ್ಪತ್ತು ಕಣ್ಣು, ಇಪ್ಪತ್ತು ಕಿವಿಗಳಿವೆ. (ದೋ/೨೧)

ಚೌ – ಸಿವ ಬಿರಂಚಿ ಸುರ ಮುನಿ ಸಮುದಾಈ। ಚಾಹತ ಜಾಸು ಚರನ ಸೇವಕಾಈ॥
ತಾಸು ದೂತ ಹೋಇ ಹಮ ಕುಲ ಬೋರಾ। ಅಇಸಿಹುँ ಮತಿ ಉರ ಬಿಹರ ನ ತೋರಾ॥೧॥
ಸುನಿ ಕಠೋರ ಬಾನೀ ಕಪಿ ಕೇರೀ। ಕಹತ ದಸಾನನ ನಯನ ತರೇರೀ॥
ಖಲ ತವ ಕಠಿನ ಬಚನ ಸಬ ಸಹಊँ। ನೀತಿ ಧರ್ಮ ಮೈಂ ಜಾನತ ಅಹಊँ॥೨॥
ಕಹ ಕಪಿ ಧರ್ಮಸೀಲತಾ ತೋರೀ। ಹಮಹುँ ಸುನೀ ಕೃತ ಪರ ತ್ರಿಯ ಚೋರೀ॥
ದೇಖೀ ನಯನ ದೂತ ರಖವಾರೀ। ಬೂಡಿ ನ ಮರಹು ಧರ್ಮ ಬ್ರತಧಾರೀ॥೩॥
ಕಾನ ನಾಕ ಬಿನು ಭಗಿನಿ ನಿಹಾರೀ। ಛಮಾ ಕೀನ್ಹಿ ತುಮ್ಹ ಧರ್ಮ ಬಿಚಾರೀ॥
ಧರ್ಮಸೀಲತಾ ತವ ಜಗ ಜಾಗೀ। ಪಾವಾ ದರಸು ಹಮಹುँ ಬಡಭಾಗೀ॥೪॥

ಶಿವ, ಬ್ರಹ್ಮ ಮೊದಲಾದ ದೇವತೆಗಳೂ, ಮುನೀಶ್ವರರೂ ಶ್ರೀರಾಮನ ಪಾದಸೇವೆಯನ್ನು ಮಾಡಲು ಬಯಸುತ್ತಾರೆ. ಅಂತಹವನ ದೂತನಾಗಿ ನಾನು ನನ್ನ ಕುಲವನ್ನು ಮುಳುಗಿಸಿದೆನಲ್ಲ? ಇಂತಹ ಬುದ್ಧಿ ನಿನಗಿದ್ದರೂ ನಿನ್ನ ಎದೆಯೇಕೆ ಒಡೆದುಹೋಗಲಿಲ್ಲ?'' ಅಂಗದನ ಕಠೋರ ವಚನಗಳನ್ನು ಕೇಳಿ, ರಾವಣನು ಕಣ್ಣು ಕೆಕ್ಕರಿಸಿ ಹೇಳಿದ – 'ಎಲವೋ ದುಷ್ಟಾ! ನಾನು ನೀತಿ ಧರ್ಮವನ್ನು ತಿಳಿದವನು. ಆದರಿಂದ ನಿನ್ನ ಕಠೋರ ವಚನಗಳನ್ನು ಸಹಿಸುತ್ತಿದ್ದೇನೆ.' ಅಂಗದನೆಂದ –

''ಪರಸ್ತ್ರೀಯನ್ನು ಕದ್ದುತಂದಿರುವ ನಿನ್ನ ಧರ್ಮಶೀಲವನ್ನು ನಾನು ಕೇಳಿದ್ದೇನೆ. ವೈರಿದೂತನ ರಕ್ಷಣೆ ನೀನು ಹೇಗೆ ಮಾಡಿದ್ದೀಯೆ ಎಂಬುದನ್ನು ಕಣ್ಣಾರೆ ಕಂಡಿದ್ದೇನೆ. ಇಂತಹ ಧರ್ಮವ್ರತಧಾರಿಯಾದ ನೀನು ನೀರಿಗೆ ಬಿದ್ದು ಸಾಯುವುದು ಮೇಲು. ಕಿವಿ, ಮೂಗನ್ನು ಕಳೆದುಕೊಂಡ ತಂಗಿಯನ್ನು ನೋಡಿ ಧರ್ಮಬುದ್ಧಿಯಿಂದಲೇ ಅಲ್ಲವೇ ನೀನು ಶತ್ರುವನ್ನು ಕ್ಷಮಿಸಿದ್ದು? ನಿನ್ನ ಧರ್ಮಶೀಲತೆ ಜಗದ್ವಿಖ್ಯಾತ. ನಿನ್ನ ದರ್ಶನ ಪಡೆದ ನಾನೂ ಕೂಡ ತುಂಬಾ ಭಾಗ್ಯವಂತನೇ!'' (ಚೌ/೧-೪)

**ದೋ – ಜನಿ ಜಲ್ಪಸಿ ಜಡ ಜಂತು ಕಪಿ ಸಠ ಬಿಲೋಕು ಮಮ ಬಾಹು ।**
**ಲೋಕಪಾಲ ಬಲ ಬಿಪುಲ ಸಸಿ ಗ್ರಸನ ಹೇತು ಸಬ ರಾಹು ॥ ೨೨ (ಕ) ॥**
**ಪುನಿ ನಭ ಸರ ಮಮ ಕರ ನಿಕರ ಕಮಲನ್ಹಿ ಪರ ಕರಿ ಬಾಸ ।**
**ಸೋಭತ ಭಯಉ ಮರಾಲ ಇವ ಸಂಭು ಸಹಿತ ಕೈಲಾಸ ॥ ೨೨(ಖ)॥**

ರಾವಣನು ಹೇಳಿದ – ಎಲೈ ಜಡಜಂತುಕಪಿಯೇ! ವ್ಯರ್ಥವಾಗಿ ಬಾಯಿಗೆ ಬಂದ ಹಾಗೇ ಗಳಹಬೇಡ. ಮೂರ್ಖಾ! ನನ್ನ ಭುಜಗಳನ್ನಾದರೂ ಕಣ್ತೆರೆದು ನೋಡು. ಇವು ಲೋಕಪಾಲರ ವಿಶಾಲಬಲ ಚಂದ್ರನನ್ನು ನುಂಗುವ ರಾಹುವು. ಆಕಾಶವೆಂಬ ಸರೋವರದಲ್ಲಿ ನನ್ನ ಭುಜಗಳೆಂಬ ಕಮಲಗಳ ಮೇಲೆ ಕೈಲಾಸಸಹಿತ ಶಿವನು ಹಂಸದಂತೆ ಶೋಭಿಸಿದ ವಿಷಯವನ್ನು ನೀನು ಕೇಳಿರಬಹುದು. (ದೋ/೨೨ ಕ, ಖ)

**ಚೌ – ತುಮ್ಹರೇ ಕಟಕ ಮಾಝ ಸುನು ಅಂಗದ । ಮೋ ಸನ ಭಿರಿಹಿ ಕವನ ಜೋಧಾ ಬದ ॥**
**ತವ ಪ್ರಭು ನಾರಿ ಬಿರಹಁ ಬಲಹೀನಾ । ಅನುಜ ತಾಸು ದುಖ ದುಖೀ ಮಲೀನಾ ॥ ೧ ॥**
**ತುಮ್ಹ ಸುಗ್ರೀವ ಕೂಲದ್ರುಮ ದೋಊ । ಅನುಜ ಹಮಾರ ಭೀರು ಅತಿ ಸೋಊ॥**
**ಜಾಮವಂತ ಮಂತ್ರೀ ಅತಿ ಬೂಢಾ । ಸೋ ಕಿ ಹೋಇ ಅಬ ಸಮರಾರೂಢಾ ॥ ೨ ॥**
**ಸಿಲ್ಪಿ ಕರ್ಮ ಜಾನಹಿಁ ನಲ ನೀಲಾ । ಹೈ ಕಪಿ ಏಕ ಮಹಾ ಬಲಸೀಲಾ ॥**
**ಆವಾ ಪ್ರಥಮ ನಗರು ಜೆಹಿಁ ಜಾರಾ । ಸುನತ ಬಚನ ಕಹ ಬಾಲಿಕುಮಾರಾ ॥ ೩ ॥**
**ಸತ್ಯ ಬಚನ ಕಹು ನಿಸಿಚರ ನಾಹಾ । ಸಾಁಚೆಹು ಕೀಸ ಕೀನ್ಹ ಪುರ ದಾಹಾ ॥**
**ರಾವನ ನಗರ ಅಲ್ಪ ಕಪಿ ದಹಈ । ಸುನಿ ಅಸ ಬಚನ ಸತ್ಯ ಕೋ ಕಹಈ ॥ ೪ ॥**
**ಜೋ ಅತಿ ಸುಭಟ ಸರಾಹೇಹು ರಾವನ । ಸೋ ಸುಗ್ರೀವ ಕೇರ ಲಘು ಧಾವನ ॥**
**ಚಲಇ ಬಹುತ ಸೋ ಬೀರ ನ ಹೋಈ । ಪಠವಾ ಖಬರಿ ಲೇನ ಹಮ ಸೋಈ ॥ ೫ ॥**

ಎಲೈ ಅಂಗದಾ! ನಿನ್ನ ಮರ್ಕಟಕಟಕದಲ್ಲಿ ನನ್ನೊಡನೆ ಹೋರಾಡಬಲ್ಲ ಯೋಧರು ಯಾರಿದ್ದಾರೆ? ಹೇಳು. ನಿನ್ನ ಒಡೆಯನು ಮಡದಿಯ ವಿರಹದಿಂದ ದುರ್ಬಲನಾಗಿರುವನು. ಇನ್ನು ಅವನ ತಮ್ಮ ಅಣ್ಣನ ದುಃಖದಿಂದ ದುಃಖಿಯಾಗಿ ಶಕ್ತಿಹೀನನಾದವನು. ನೀನು ಮತ್ತು ಸುಗ್ರೀವರು ನದೀತೀರದಲ್ಲಿರುವ ವೃಕ್ಷಗಳಂತಿರುವವರು. (ನೆರೆ ಬಂದರೆ ನಿಲ್ಲಲಾರದಂತಹವುಗಳು). ನನ್ನ ತಮ್ಮ ವಿಭೀಷಣನಂತೂ ಮಹಾಪುಕ್ಕಲು. ಮಂತ್ರಿ ಜಾಂಬವಂತರಿಗೆ ಅರಳು-ಮರಳು. 'ಊರು ಹೋಗು ಎನ್ನುತ್ತಿದೆ, ಕಾಡು ಬಾ ಎನ್ನುತ್ತಿದೆ.' ಅಂತಹವನು ಯುದ್ಧದಲ್ಲಿ ಏನು ಸಾಧಿಸಿಯಾನು? ನಳ, ನೀಲರೇನೋ ಶಿಲ್ಪಕರ್ಮದಲ್ಲಿ ಸರಿ, ಅವರು ಯುದ್ಧವನ್ನೇನು ಬಲ್ಲರು? ಆದರೆ ಓರ್ವ ವಾನರನು ಮಾತ್ರ ಮಹಾಬಲಶಾಲಿ ಇದ್ದಾನೆ. ಅವನು ಹಿಂದೆ ಇಲ್ಲಿಗೆ ಬಂದು ಲಂಕೆಯನ್ನು ಸುಟ್ಟಿದ್ದನು.'' ಇದನ್ನು ಕೇಳುತ್ತಲೇ ವಾಲಿಸುತನಾದ ಅಂಗದನು ನುಡಿದನು – ''ಎಲೈ ರಾಕ್ಷಸರಾಜಾ! ನಿಜಹೇಳು. ಆ ವಾನರನು ನಿಜವಾಗಿಯೇ ನಿನ್ನ ನಗರವನ್ನು ಸುಟ್ಟನೇ? ವಿಶ್ವವಿಜೇತನಾದ ರಾವಣನ ನಗರವನ್ನು ಒಂದು ಸಣ್ಣ ಕಪಿಯು ಸುಟ್ಟಿತು ಎಂದರೆ ಯಾರಾದರೂ ನಂಬಲು ಸಾಧ್ಯವೇ? ಎಲೈ ರಾವಣಾ! ನೀನು ಉತ್ತಮಯೋಧನೆಂದು ಹೊಗಳಿದವನು. ಸುಗ್ರೀವ ಒಬ್ಬ ಯಃಕಶ್ಚಿತ್ ಹರಿಕಾರನು ಮಾತ್ರ. ಅವನು ಹರಿದಾಡಬಲ್ಲನೇ ಹೊರತು ವೀರನಲ್ಲ. ಆತನನ್ನು ಕೇವಲ ಸುದ್ದಿ ತರಲು ನಾವು ಕಳಿಸಿದ್ದೆವು. (ಚೌ/೧-೫)

**ದೋ – ಸತ್ಯ ನಗರು ಕಪಿ ಜಾರೆಉ ಬಿನು ಪ್ರಭು ಆಯಸು ಪಾಇ ।**
**ಫಿರಿ ನ ಗಯಉ ಸುಗ್ರೀವ ಪಹಿಁ ತೆಹಿಁ ಭಯ ರಹಾ ಲುಕಾಇ ॥ ೨೩(ಕ)॥**
**ಸತ್ಯ ಕಹಹಿ ದಸಕಂಠ ಸಬ ಮೋಹಿ ನ ಸುನಿ ಕಛು ಕೋಹ ।**
**ಕೊಉ ನ ಹಮಾರೇಁ ಕಟಕ ಅಸ ತೋ ಸನ ಲರತ ಜೊ ಸೋಹ ॥ ೨೩(ಖ)॥**

ಪ್ರೀತಿ ಬಿರೋಧ ಸಮಾನ ಸನ ಕರಿಅ ನೀತಿ ಅಸಿ ಆಹಿ।
ಜೌಂ ಮೃಗಪತಿ ಬಧ ಮೇಡುಕನ್ಹಿ ಭಲ ಕಿ ಕಹಇ ಕೋಉ ತಾಹಿ ॥ ೨೩ (ಗ) ॥
ಜದ್ಯಪಿ ಲಘುತಾ ರಾಮ ಕಹುಂ ತೋಹಿ ಬಧೇಂ ಬಡ ದೋಷ।
ತದಪಿ ಕಠಿನ ದಸಕಂಠ ಸುನು ಛತ್ರ ಜಾತಿ ಕರ ರೋಷ ॥ ೨೩(ಘ)॥
ಬಕ್ರ ಉಕ್ತಿ ಧನು ಬಚನ ಸರ ಹೃದಯ ದಹೆಉ ರಿಪು ಕೀಸ।
ಪ್ರತಿಉತ್ತರ ಸಡಸಿನ್ಹ ಮನಹುಂ ಕಾಢತ ಭಟ ದಸಸೀಸ ॥ ೨೩(ಙ)॥
ಹँಸಿ ಬೋಲೆಉ ದಸಮೌಲಿ ತಬ ಕಪಿ ಕರ ಬಡ ಗುನ ಏಕ।
ಜೋ ಪ್ರತಿಪಾಲಇ ತಾಸು ಹಿತ ಕರಇ ಉಪಾಯ ಅನೇಕ ॥ ೨೩(ಚ)॥

ಆ ವಾನರನು ನಿಜವಾಗಿ ಪ್ರಭುವಿನ ಆಜ್ಞೆಯಿಲ್ಲದೆ ನಿಮ್ಮ ಊರನ್ನು ಸುಟ್ಟನೇ? ಬಹುಶಃ ಈ ಭಯದಿಂದಲೇ ಏನೋ ಅವನು ಮರಳಿ ಸುಗ್ರೀವನಿಗೆ ಮುಖ ತೋರಿಸಿಲ್ಲ. ಎಲ್ಲೋ ತಲೆಮರೆಸಿಕೊಂಡಿರುವನು. ದಶಕಂಠನೇ! ನೀನು ನುಡಿದುದೆಲ್ಲವು ನಿಜವೇ. ಅದನ್ನು ಕೇಳಿ ನನಗೆ ಕೊಂಚವೂ ಕೋಪವಿಲ್ಲ. ನಿಜಕ್ಕೂ ನಮ್ಮ ಪಡೆಯಲ್ಲಿ ನಿನ್ನೊಡನೆ ಕಾದಲು ಶೋಭಿಸುವಂತಹವರು ಯಾರೂ ಇಲ್ಲ. ಪ್ರೀತಿ ಮತ್ತು ವೈರವನ್ನು ಸಮಾನರಲ್ಲಿ ಮಾತ್ರ ಮಾಡಬೇಕೆಂಬುದು ಲೋಕನೀತಿ. ಸಿಂಹವು ಏನಾದರೂ ಕಪ್ಪೆಯನ್ನು ಕೊಂದರೆ ಅದು ಸಿಂಹನ ದೊಡ್ಡಸ್ತಿಕೆ ಎಂದು ಯಾರಾದರೂ ಹೇಳುವರೇ? ನಿನ್ನನ್ನು ಕೊಲ್ಲುವುದರಲ್ಲಿ ರಾಮನಿಗೆ ಯಾವ ಹೆಚ್ಚುಗಾರಿಕೆಯೂ ಇಲ್ಲ. ಅದಕ್ಕೆ ಬದಲಾಗಿ ದೋಷವೇ ಬಂದೀತು. ಆದರೂ ರಾವಣಾ! ಕೇಳು. ಕ್ಷತ್ರಿಯರ ಕ್ರೋಧವು ತುಂಬಾ ಭಯಂಕರವಾದುದು.'' ವಕ್ರೋಕ್ತಿ ಎಂಬ ಬಿಲ್ಲಿನಿಂದ ವಚನಬಾಣಗಳನ್ನು ಹೊಡೆದು ಅಂಗದನು ಶತ್ರುವಿನ ಹೃದಯವನ್ನು ಘಾತಿಗೊಳಿಸಿದನು. ವೀರ ರಾವಣನು ಆ ಬಾಣಗಳನ್ನು ಪ್ರತ್ಯುತ್ತರವೆಂಬ ದೊಡ್ಡ ಇಕ್ಕಳದಿಂದ ತೆಗೆಯುತ್ತಿದ್ದನು. ಆಗ ರಾವಣನು ನಕ್ಕು ನುಡಿದನು – ''ತನ್ನನ್ನು ಸಾಕಿದವರಿಗೆ ಅನೇಕ ಉಪಾಯಗಳಿಂದ ಹಿತವನ್ನು ಮಾಡಲು ಯತ್ನಿಸುವ ಒಂದು ಒಳ್ಳೆಯ ಗುಣ ಕಪಿಗಳಲ್ಲಿರುತ್ತದೆ. (ದೋ/೨೩ ಕ, ಖ, ಗ, ಘ, ಙ, ಚ)

ಚೌ – ಧನ್ಯ ಕೀಸ ಜೋ ನಿಜ ಪ್ರಭು ಕಾಜಾ। ಜಹँ ತಹँ ನಾಚಇ ಪರಿಹರಿ ಲಾಜಾ ॥
ನಾಚಿ ಕೂದಿ ಕರಿ ಲೋಗ ರಿಝಾಈ। ಪತಿ ಹಿತ ಕರಇ ಧರ್ಮ ನಿಪುನಾಈ ॥ ೧ ॥
ಅಂಗದ ಸ್ವಾಮಿಭಕ್ತ ತವ ಜಾತೀ। ಪ್ರಭು ಗುನ ಕಸ ನ ಕಹಸಿ ಏಹಿ ಭಾँತೀ ॥
ಮೈಂ ಗುನ ಗಾಹಕ ಪರಮ ಸುಜಾನಾ। ತವ ಕಟು ರಟನಿ ಕರಉँ ನಹಿँ ಕಾನಾ ॥ ೨ ॥
ಕಹ ಕಪಿ ತವ ಗುನ ಗಾಹಕತಾಈ। ಸತ್ಯ ಪವನಸುತ ಮೋಹಿ ಸುನಾಈ ॥
ಬನ ಬಿಧಂಸಿ ಸುತ ಬಧಿ ಪುರ ಜಾರಾ। ತದಪಿ ನ ತೆಹಿँ ಕಛು ಕೃತ ಅಪಕಾರಾ ॥ ೩ ॥
ಸೋಇ ಬಿಚಾರಿ ತವ ಪ್ರಕೃತಿ ಸುಹಾಈ। ದಸಕಂಧರ ಮೈಂ ಕೀನ್ಹಿ ಢಿಠಾಈ ॥
ದೇಖೆಉँ ಆಇ ಜೊ ಕಛು ಕಪಿ ಭಾಷಾ। ತುಮ್ಹರೇಂ ಲಾಜ ನ ರೋಷ ನ ಮಾಖಾ ॥ ೪ ॥
ಜೌಂ ಅಸಿ ಮತಿ ಪಿತು ಖಾಏ ಕೀಸಾ। ಕಹಿ ಅಸ ಬಚನ ಹँಸಾ ದಸಸೀಸಾ ॥
ಪಿತಹಿ ಖಾಇ ಖಾತೆಉँ ಪುನಿ ತೋಹೀ। ಅಬಹೀಂ ಸಮುಝಿ ಪರಾ ಕಛು ಮೋಹೀ ॥ ೫ ॥
ಬಾಲಿ ಬಿಮಲ ಜಸ ಭಾಜನ ಜಾನೀ। ಹತಉँ ನ ತೋಹಿ ಅಧಮ ಅಭಿಮಾನೀ ॥
ಕಹು ರಾವನ ರಾವನ ಜಗ ಕೇತೇ। ಮೈಂ ನಿಜ ಶ್ರವನ ಸುನೇ ಸುನು ಜೇತೇ ॥ ೬ ॥
ಬಲಿಹಿ ಜಿತನ ಏಕ ಗಯಉ ಪತಾಲಾ। ರಾಖೆಉ ಬಾँಧಿ ಸಿಸುನ್ಹ ಹಯಸಾಲಾ ॥
ಖೇಲಹಿँ ಬಾಲಕ ಮಾರಹಿँ ಜಾಈ। ದಯಾ ಲಾಗಿ ಬಲಿ ದೀನ್ಹ ಛೋಡಾಈ ॥ ೭ ॥
ಏಕ ಬಹೋರಿ ಸಹಸಭುಜ ದೇಖಾ। ಧಾಇ ಧರಾ ಜಿಮಿ ಜಂತು ಬಿಸೇಷಾ ॥
ಕೌತುಕ ಲಾಗಿ ಭವನ ಲೈ ಆವಾ। ಸೋ ಪುಲಸ್ತಿ ಮುನಿ ಜಾಇ ಛೋಡಾವಾ ॥ ೮ ॥

ತನ್ನ ಯಜಮಾನನಿಗಾಗಿ ನಾಚಿಕೆಬಿಟ್ಟು ಎಲ್ಲೆಂದರಲ್ಲಿ ಕುಣಿಯುವ ವಾನರಜಾತಿಯು ಧನ್ಯವು. ನಾಟ್ಯವಾಡುತ್ತಾ, ಲಾಗಹಾಕುತ್ತಾ, ಜನರನ್ನು ಸಂತೋಷಪಡಿಸಿ ಮಂಗವು ತನ್ನ ಒಡೆಯನಿಗೆ ಹಿತ ಬಗೆಯುತ್ತದೆ. ಇದು ಅದರ ಧರ್ಮದ ನಿಪುಣತೆಯಾಗಿದೆ.

ಅಂಗದಾ! ನಿನ್ನದು ಸ್ವಾಮಿಭಕ್ತಿಪರಾಯಣರ ಜಾತಿ. ಹಾಗಿರುವಾಗ ನಿನ್ನ ಧಣಿಯ ಗುಣಗಾನವನ್ನು ಮಾಡದೇ ನೀನು ಹೇಗಿರುತ್ತಿ ? ನಾನು ಸದ್ಗುಣಗಳನ್ನು ಆದರಿಸುವವನೂ, ತಿಳಿವಳಿಕಸ್ಥನೂ ಆಗಿರುವೆನು. ಅದಕ್ಕಾಗಿ ನಿನ್ನ ಕಟುವಚನಗಳನ್ನು ಕಿವಿಗೆ ಹಾಕಿಕೊಳ್ಳುವುದಿಲ್ಲ.'' ಅಂಗದನು ಹೇಳಿದನು – 'ನಿನ್ನ ನಿಜವಾದ ಗುಣಗ್ರಾಹಕತೆಯನ್ನು ಹನುಮಂತನು ನನಗೆ ಹೇಳಿರುವನು. ಅವನು ಅಶೋಕವನವನ್ನು ಧ್ವಂಸಮಾಡಿ, ನಿನ್ನ ಮಗನನ್ನು ಸಂಹರಿಸಿ, ನಿನ್ನ ನಗರವನ್ನು ಸುಟ್ಟುಬಿಟ್ಟನು. ಇಷ್ಟಾದರೂ ನಿನ್ನ ಗುಣಗ್ರಾಹಕತೆಯಿಂದಾಗಿ ಅವನು ಯಾವುದೇ ಅಪಕಾರ ಮಾಡಿಯೇ ಇಲ್ಲವೆಂದು ಬಗೆದಿದ್ದಿ. ಇದು ನಿನ್ನ ಒಳ್ಳೆಯ ಸ್ವಭಾವ. ಎಲೈ! ದಶಗ್ರೀವಾ! ನಾನು ಕೊಂಚ ಧಾಷ್ಟ್ಯತೆಯನ್ನು ತೋರಿದೆ. ಹನುಮಂತನು ಹೇಳಿದುದನ್ನು ನಾನು ಇಲ್ಲಿ ಕಣ್ಣಾರೆ ಕಾಣುತ್ತಿದ್ದೇನೆ. ನಿನಗೆ ಲಜ್ಜೆಯಾಗಲೀ, ರೋಷವಾಗಲೀ, ತಿರಸ್ಕಾರವಾಗಲೀ ಯಾವುದೂ ಇಲ್ಲ. ಆಗ ರಾವಣನೆಂದ – ಎಲವೋ ಮಂಗ! ನೀನು ಇಂತಹ ಬುದ್ಧಿಶಾಲಿಯಾದ್ದರಿಂದಲೇ ನಿನ್ನ ತಂದೆಯ ಮರಣಕ್ಕೆ ಕಾರಣನಾದೆ ಎಂದು ಹೇಳುತ್ತಾ ರಾವಣನು ಅಟ್ಟಹಾಸಗೈದನು. ಅಂಗದ ಹೇಳಿದ – ನಾನು ತಂದೆಗೆ ಅಲ್ಲ ನಿನ್ನ ಸಾವಿಗೂ ಕಾರಣನಾಗಬಲ್ಲೆ. ಆದರೆ ಈ ಕ್ಷಣದಲ್ಲಿ ನನ್ನ ತಲೆಯಲ್ಲಿ ಬೇರೆಯೇ ವಿಚಾರಗಳು ಸುಳಿಯುತ್ತಿವೆ. ಎಲವೋ ದುರಭಿಮಾನಿಯೇ! ನೀನು ವಾಲಿಯ ನಿರ್ಮಲಯಶಸ್ಸಿಗೆ ಪ್ರತ್ಯಕ್ಷಪ್ರಮಾಣವಾದ್ದರಿಂದ ನಿನ್ನನ್ನು ಕೊಲ್ಲುವುದಿಲ್ಲ. ರಾವಣಾ! ಜಗತ್ತಿನಲ್ಲಿ ಎಷ್ಟು ಮಂದಿ ರಾವಣರಿದ್ದಾರೆ? ಹೇಳು. ನಾನು ಅದೆಷ್ಟೋ ಮಂದಿ ರಾವಣರ ಕುರಿತು ಕೇಳಿದ್ದೇನೆ. ಹೇಳುತ್ತೇನೆ ಕೇಳು – ಒಬ್ಬ ರಾವಣನು ಬಲಿಚಕ್ರವರ್ತಿಯನ್ನು ಗೆಲ್ಲಲೂ ಪಾತಾಳಕ್ಕೆ ಹೋಗಿದ್ದನಂತೆ. ಆಗ ಅಲ್ಲಿಯ ಮಕ್ಕಳು ಅವನನ್ನು ಹಿಡಿದು ಕುದುರೆಲಾಯದಲ್ಲಿ ಕಟ್ಟಿಹಾಕಿದ್ದರಂತೆ. ಮಕ್ಕಳು ಆಟವಾಡುತ್ತಿರುವಾಗ ಅವನನ್ನು ಕಾಲಿನಿಂದ ಒದೆಯುತ್ತಿದ್ದರಂತೆ. ಕೊನೆಗೆ ಬಲಿಗೆ ಅವನಮೇಲೆ ದಯೆಬಂದು ಬಿಡಿಸಿದನಂತೆ. ಮತ್ತೊಬ್ಬ ರಾವಣನನ್ನು ಸಹಸ್ರಬಾಹುವು ನೋಡಿ ಅದೊಂದು ವಿಶೇಷಪ್ರಾಣಿಯೆಂದರಿತು ಹಿಡಿದುಕೊಂಡು ವಿನೋದಕ್ಕೆಂದು ತನ್ನ ಅರಮನೆಗೆ ಕೊಂಡೊಯ್ದನು. ಆಗ ಪುಲಸ್ತ್ಯಮುನಿಯು ಹೋಗಿ ಅವನನ್ನು ಬಿಡಿಸಿದನಂತೆ. (ಚೌ/೧-೮)

**ದೋ – ಏಕ ಕಹತ ಮೊಹಿ ಸಕುಚ ಅತಿ ರಹಾ ಬಾಲಿ ಕೀ ಕಾಂಖ।**
**ಇನ್ಹ ಮಹುँ ರಾವನ ತೈँ ಕವನ ಸತ್ಯ ಬದಹಿ ತಜಿ ಮಾಖ ॥ ೨೪ ॥**

ಇನ್ನೊಬ್ಬ ರಾವಣನ ಕುರಿತು ಹೇಳಲು ನನಗೆ ಸಂಕೋಚವಾಗುತ್ತಿದೆ. ಅವನನ್ನು ವಾಲಿಯು ಬಹಳ ದಿನಗಳವರೆಗೆ ಕಂಕುಳಲ್ಲಿರಿಸಿಕೊಂಡು ತಿರುಗುತ್ತಿದ್ದನಂತೆ. ಇವರಲ್ಲಿ ನೀನು ಯಾವ ರಾವಣನು? ಸಿಟ್ಟು-ಕೋಪ ಬಿಟ್ಟು ನಿಜಹೇಳು. (ದೋ/೨೪)

**ಚೌ – ಸುನು ಸಠ ಸೋಇ ರಾವನ ಬಲಸೀಲಾ। ಹರಗಿರಿ ಜಾನ ಜಾಸು ಭುಜ ಲೀಲಾ ॥**
**ಜಾನ ಉಮಾಪತಿ ಜಾಸು ಸುರಾಈ। ಪೂಜೇಉँ ಜೆಹಿ ಸಿರ ಸುಮನ ಚಢಾಈ ॥ ೧ ॥**
**ಸಿರ ಸರೋಜ ನಿಜ ಕರನ್ಹಿ ಉತಾರೀ। ಪೂಜೇಉँ ಅಮಿತ ಬಾರ ತ್ರಿಪುರಾರೀ ॥**
**ಭುಜ ಬಿಕ್ರಮ ಜಾನಹಿँ ದಿಗಪಾಲಾ। ಸಠ ಅಜಹೂँ ಜಿನ್ಹ ಕೇ ಉರ ಸಾಲಾ ॥ ೨ ॥**
**ಜಾನಹಿँ ದಿಗ್ಗಜ ಉರ ಕಠಿನಾಈ। ಜಬ ಜಬ ಭಿರಉँ ಜಾಇ ಬರಿಆಈ ॥**
**ಜಿನ್ಹ ಕೇ ದಸನ ಕರಾಲ ನ ಫೂಟೇ। ಉರ ಲಾಗತ ಮೂಲಕ ಇವ ಟೂಟೇ ॥ ೩ ॥**
**ಜಾಸು ಚಲತ ಡೋಲತಿ ಇಮಿ ಧರನೀ। ಚಢತ ಮತ್ತ ಗಜ ಜಿಮಿ ಲಘು ತರನೀ ॥**
**ಸೋಇ ರಾವನ ಜಗ ಬಿದಿತ ಪ್ರತಾಪೀ। ಸುನೇಹಿ ನ ಶ್ರವನ ಅಲೀಕ ಪ್ರಲಾಪೀ ॥ ೪ ॥**

ರಾವಣನಿಂತೆಂದನು – ''ಎಲೈ ಮೂಢನೇ! ನನ್ನ ಭುಜಪರಾಕ್ರಮದ ಕುರಿತು ಶಿವನ ಕೈಲಾಸಪರ್ವತ ಬಲ್ಲದು. ನನ್ನ ಶಿರಸ್ಸುಗಳನ್ನು ಪುಷ್ಪಗಳಾಗಿ ಉಮಾಪತಿಗೆ ಸಮರ್ಪಿಸಿ ಪೂಜಿಸಿದ್ದೆ. ನಾನು ಅದೇ ರಾವಣನು. ನಾನು ಶಿರಸ್ಸೆಂಬ ಕಮಲಗಳನ್ನು ತನ್ನ ಕೈಯ್ಯಾರೆ ತರಿದು-ತರಿದು ಅನೇಕಬಾರಿ ತ್ರಿಪುರಾರಿಯಾದ ಶಿವನಿಗೆ ಅರ್ಪಿಸಿ ಪೂಜಿಸಿದ್ದೆ. ಎಲೈ ಶಠನೇ! ನನ್ನ ಭುಜಬಲ ಪರಾಕ್ರಮವು ದಿಕ್ಪಾಲಕರು ಬಲ್ಲರು. ಅವರ ಎದೆಗಳಲ್ಲಿ ಇಂದಿಗೂ ಅದು ನಾಟುತ್ತಿದೆ. ನನ್ನದು ಎಂತಹ ಕಲ್ಲೆದೆ ಎಂಬುದನ್ನು ದಿಗ್ಗಜಗಳು ಅರಿತಿರುವರು. ಆ ದಿಗ್ಗಜರೊಡನೆ ನಾನು ಹೋರಾಡಿದಾಗ ಆ ದಂತಿಗಳ ಭಯಂಕರ ದಂತಗಳು ನನ್ನ ಎದೆಗೆ ಏನೂ ಮಾಡಲಾರದಾದವು. ಅದಕ್ಕೆ ಪ್ರತಿಯಾಗಿ ನನ್ನ ಎದೆ ತಗಲಿದುದೇ ತಡ ಆ ದಂತಗಳು ಮೂಲಂಗಿಯಂತೆ ಚೂರು-ಚೂರಾಗಿ ಮುರಿದುಬಿದ್ದವು. ಮದಗಜವು ಹತ್ತಿದ ಸಣ್ಣದೋಣಿಯು ಅಲ್ಲಾಡುವಂತೆ, ನಾನು ನಡೆದಾಗ ಭೂಮಿಯು ನಡುಗುತ್ತದೆ. ನಾನು ಅದೇ ಜಗತ್ಪ್ರಸಿದ್ಧ ಪ್ರತಾಪಶಾಲಿಯಾದ ರಾವಣನು. ಎಲವೋ ವ್ಯರ್ಥಪ್ರಲಾಪೀ! ನನ್ನ ಕುರಿತು ನೀನು ಎಂದಾದರೂ ಕೇಳಿರುವೆಯಾ? (ಚೌ/೧-೪)

**ದೋ – ತೇಹಿ ರಾವನ ಕಹँ ಲಘು ಕಹಸಿ ನರ ಕರ ಕರಸಿ ಬಖಾನ।**
**ರೇ ಕಪಿ ಬರ್ಬರ ಖರ್ಬ ಖಲ ಅಬ ಜಾನಾ ತವ ಗ್ಯಾನ ॥ ೨೫ ॥**

ಅಂತಹ ಮಹಾಪ್ರತಾಪಿಯೂ, ಜಗತ್ಪ್ರಸಿದ್ಧನೂ ಆದ ಈ ರಾವಣನನ್ನು ನೀನು ಲಘುವಾಗಿ ಗಣಿಸುತ್ತಿರುವೆ. ಓರ್ವ ಮನುಷ್ಯಮಾತ್ರನನ್ನು ಕೊಂಡಾಡುತ್ತಿರುವೆ. ಎಲೈ ದುಷ್ಟನೇ! ಅನಾಗರೀಕನೇ! ತುಚ್ಛ ವಾನರನೇ! ಈಗ ನಾನು ನಿನ್ನ ಬುದ್ಧಿಯನ್ನು ಅರಿತುಕೊಂಡೆ.'' (ದೋ/೨೫)

**ಚೌ – ಸುನಿ ಅಂಗದ ಸಕೋಪ ಕಹ ಬಾನೀ। ಬೋಲು ಸಂಭಾರಿ ಅಧಮ ಅಭಿಮಾನೀ॥**
**ಸಹಸಬಾಹು ಭುಜ ಗಹನ ಅಪಾರಾ। ದಹನ ಅನಲ ಸಮ ಜಾಸು ಕುಠಾರಾ॥ ೧ ॥**
**ಜಾಸು ಪರಸು ಸಾಗರ ಖರ ಧಾರಾ। ಬೂಡೇ ನೃಪ ಅಗನಿತ ಬಹು ಬಾರಾ॥**
**ತಾಸು ಗರ್ಬ ಜೆಹಿ ದೇಖತ ಭಾಗಾ। ಸೋ ನರ ಕ್ಯೋಂ ದಸಸೀಸ ಅಭಾಗಾ॥ ೨ ॥**
**ರಾಮ ಮನುಜ ಕಸ ರೇ ಸಠ ಬಂಗಾ। ಧನ್ವೀ ಕಾಮು ನದೀ ಪುನಿ ಗಂಗಾ॥**
**ಪಸು ಸುರಧೇನು ಕಲ್ಪತರು ರೂಖಾ। ಅನ್ನ ದಾನ ಅರು ರಸ ಪೀಯೂಷಾ॥ ೩ ॥**
**ಬೈನತೇಯ ಖಗ ಅಹಿ ಸಹಸಾನನ। ಚಿಂತಾಮನಿ ಪುನಿ ಉಪಲ ದಸಾನನ॥**
**ಸುನು ಮತಿಮಂದ ಲೋಕ ಬೈಕುಂಠಾ। ಲಾಭ ಕಿ ರಘುಪತಿ ಭಗತಿ ಅಕುಂಠಾ॥ ೪ ॥**

ರಾವಣನ ಈ ಮಾತನ್ನು ಕೇಳಿ ಅಂಗದನು ಕ್ರೋಧಾವಿಷ್ಟನಾಗಿ ನುಡಿದನು – ''ಎಲವೋ ಅಧಮಾ! ದುರಭಿಮಾನಿ! ಎಚ್ಚರಿಕೆಯಿಂದ ಮಾತಾಡು. ತೇಜಃಪ್ರಭಾವಶಾಲಿಯಾದ ಭಾರ್ಗವರಾಮನ ಗಂಡುಕೊಡಲಿ ಎಂಬ ದಾವಾಗ್ನಿಗೆ ಸಹಸ್ರಬಾಹುವಿನ ಭುಜಗಳೆಂಬ ವನವು ಆಹುತಿಯಾಗಿತ್ತು. ಅವನ ಪರಶುವಿನ ತೀವ್ರಧಾರಾ ಸಮುದ್ರದಲ್ಲಿ ಅಸಂಖ್ಯಾತರಾದ ರಾಜರು ಮುಳುಗಿಹೋದರು. ಅಂತಹ ಪರಶುರಾಮನ ಗರ್ವವು ಶ್ರೀರಾಮನನ್ನು ನೋಡುತ್ತಲೇ ಓಡಿಹೋಯಿತು. ಎಲೈ ನಿರ್ಭಾಗ್ಯ ದಶಕಂಠನೇ! ಅಂತಹ ಮಹಾತ್ಮನಾದ ಶ್ರೀರಾಮನು ಮಾನವಮಾತ್ರ ಹೇಗಾಗಬಲ್ಲನು? ಎಲವೋ ಮೂರ್ಖ ಉದ್ದಂಡನೇ! ಶ್ರೀರಾಮನು ಸಾಮಾನ್ಯ ಮನುಷ್ಯನೇ? ಮನ್ಮಥನು ಏನು ಧನುರ್ಧಾರಿಯೇ? ಗಂಗಾದೇವಿಯು ಒಂದು ಸಾಮಾನ್ಯ ನದಿಯೇ? ಕಾಮಧೇನು ಸಾಮಾನ್ಯ ಪಶುವೇ? ಕಲ್ಪವೃಕ್ಷವು ಬರಿಯ ಮರವೇ? ಅನ್ನದಾನವು ಒಂದು ಸಾಮಾನ್ಯದಾನವೇ? ಅಮೃತವು ಬರೀ ರಸವೇ? ಗರುಡನು ಒಂದು ಸಾಮಾನ್ಯ ಪಕ್ಷಿಯೇ? ಸಹಸ್ರಫಣ ಆದಿಶೇಷನು ಸಾಮಾನ್ಯ ಸರ್ಪವೇ? ಚಿಂತಾಮಣಿಯು ಸಾಮಾನ್ಯವಾದ ಒಂದು ಕಲ್ಲೆ? ಮೂರ್ಖಾ! ವೈಕುಂಠವು ಒಂದು ಸಾಮಾನ್ಯ ಲೋಕವೋ? ಶ್ರೀರಾಮನಲ್ಲಿರುವ ಅಖಂಡ ಭಕ್ತಿಯು ಇತರ ಲಾಭಗಳಂತೆ ಸರ್ವಸಾಮಾನ್ಯವಾದುದೇ? (ಚೌ/೧-೪)

**ದೋ – ಸೇನ ಸಹಿತ ತವ ಮಾನ ಮಥಿ ಬನ ಉಜಾರಿ ಪುರ ಜಾರಿ।**
**ಕಸ ರೇ ಸಠ ಹನುಮಾನ ಕಪಿ ಗಯಉ ಜೊ ತವ ಸುತ ಮಾರಿ॥ ೨೬ ॥**

ಸೇನಾಸಹಿತ ನಿನ್ನ ಮಾನ ಮಥನಮಾಡಿ, ಅಶೋಕವನವನ್ನು ಗುಡಿಸಿ ಗುಂಡಾತರಮಾಡಿ, ಲಂಕೆಯನ್ನು ಬೆಂಕಿಯಿಂದ ಸುಟ್ಟು, ನಿನ್ನ ಕಂದನನ್ನು ಕೊಂದು ಹಾಯಾಗಿ ಮರಳಿದ ಹನುಮಂತನನ್ನು ಕೇವಲ ವಾನರನೆಂದು ತಿಳಿದೆಯಾ? (ದೋ/೨೬)

**ಚೌ – ಸುನು ರಾವನ ಪರಿಹರಿ ಚತುರಾಈ। ಭಜಸಿ ನ ಕೃಪಾಸಿಂಧು ರಘುರಾಈ॥**
**ಜೌಂ ಖಲ ಭಏಸಿ ರಾಮ ಕರ ದ್ರೋಹೀ। ಬ್ರಹ್ಮ ರುದ್ರ ಸಕ ರಾಖಿ ನ ತೋಹೀ॥ ೧ ॥**
**ಮೂಢ ಬೃಥಾ ಜನಿ ಮಾರಸಿ ಗಾಲಾ। ರಾಮ ಬಯರ ಅಸ ಹೋಇಹಿ ಹಾಲಾ॥**
**ತವ ಸಿರ ನಿಕರ ಕಪಿನ್ಹ ಕೇ ಆಗೇಂ। ಪರಿಹಹಿಂ ಧರನಿ ರಾಮ ಸರ ಲಾಗೇಂ॥ ೨ ॥**
**ತೇ ತವ ಸಿರ ಕಂದುಕ ಸಮ ನಾನಾ। ಖೆಲಿಹಹಿಂ ಭಾಲು ಕೀಸ ಚೌಗಾನಾ॥**
**ಜಬಹಿಂ ಸಮರ ಕೋಪಿಹಿ ರಘುನಾಯಕ। ಛುಟಿಹಹಿಂ ಅತಿ ಕರಾಲ ಬಹು ಸಾಯಕ॥ ೩ ॥**
**ತಬ ಕಿ ಚಲಿಹಿ ಅಸ ಗಾಲ ತುಮ್ಹಾರಾ। ಅಸ ಬಿಚಾರಿ ಭಜು ರಾಮ ಉದಾರಾ॥**
**ಸುನತ ಬಚನ ರಾವನ ಪರಜರಾ। ಜರತ ಮಹಾನಲ ಜನು ಘೃತ ಪರಾ॥ ೪ ॥**

ಎಲವೋ ರಾವಣಾ! ಕಪಟ ತಟವಟವನ್ನು ಬಿಟ್ಟು, ಕರುಣಾಳುವಾದ ಶ್ರೀರಘುರಾಮನನ್ನು ನೀನು ಏಕೆ ಭಜಿಸುವುದಿಲ್ಲ? ದುಷ್ಟನೇ! ನೀನು ಶ್ರೀರಾಮಪ್ರಭುವಿನೊಡನೆ ವೈರಕಟ್ಟಿಕೊಂಡರೆ ಹರವಿರಿಂಚಿಗಳೂ ಕೂಡ ನಿನ್ನನ್ನು ಕಾಪಾಡಲಾರರು. ಎಲೈ ಮೂಢನೇ! ವ್ಯರ್ಥವಾಗಿ ಬಡಾಯಿ ಕೊಚ್ಚಿಕೊಳ್ಳಬೇಡ. ಶ್ರೀರಾಮನಲ್ಲಿ ವೈರವನ್ನು ಕಟ್ಟಿಕೊಂಡರೆ ಅವನ ಬಾಣವು ತಗಲುತ್ತಲೇ ನಿನ್ನ ಶಿರಗಳೆಲ್ಲವೂ ಕಳಚಿ ಕಪಿಗಳ ಮುಂದೆ ಚೆಲ್ಲಾಡಿಹೋಗುತ್ತವೆ. ಆಗ ವಾನರ-ಭಲ್ಲೂಕಗಳು ನಿನ್ನ ತಲೆಗಳನ್ನು ಚೆಂಡಾಡುತ್ತಾರೆ.

ಕ್ರುದ್ಧನಾದ ಶ್ರೀರಘುರಾಮನು ಯುದ್ಧದಲ್ಲಿ ರೋಷಗೊಂಡು ಅತ್ಯಂತ ಭೀಷಣವಾದ ಬಾಣಗಳನ್ನು ಪ್ರಯೋಗಿಸುವಾಗ ನಿನ್ನ ನಾಲಿಗೆ ನಡೆದೀತೆ? ಈ ವಿಷಯವನ್ನು ಯೋಚಿಸಿ, ಕೃಪಾಳುವಾದ ಶ್ರೀರಾಮನನ್ನು ಭಜಿಸು.'' ಅಂಗದನ ವಚನಗಳನ್ನು ಕೇಳಿದ ರಾವಣನು ಉರಿಯುವ ಬೆಂಕಿಗೆ ತುಪ್ಪ ಹುಯ್ದಂತೆ ಕ್ರೋಧದಿಂದ ಕೆರಳಿ ಕೆಂಡವಾದನು. (ಚೌ/೧-೪)

**ದೋ – ಕುಂಭಕರನ ಅಸ ಬಂಧು ಮಮ ಸುತ ಪ್ರಸಿದ್ಧ ಸಕ್ರಾರಿ ।**
**ಮೋರ ಪರಾಕ್ರಮ ನಹಿಂ ಸುನೆಹಿ ಜಿತೆಉಂ ಚರಾಚರ ಝಾರಿ ॥ ೨೭ ॥**

ಅವನು ಗಜರೆದ್ದನು – ''ಮಹಾಬಲಶಾಲಿಯಾದ ಕುಂಭಕರ್ಣನಂತಹ ತಮ್ಮ ನನಗಿದ್ದಾನೆ. ಇಂದ್ರನನ್ನು ಗೆದ್ದ ಸುಪ್ರಸಿದ್ಧ ಮೇಘನಾದನು ನನ್ನ ಮಗನು. ಇನ್ನು ನನ್ನ ಪರಾಕ್ರಮವಂತೂ ನೀನು ಕೇಳಿಯೇ ಇಲ್ಲ. ನಾನು ಈ ಚರಾಚರ ಜಗತ್ತೆಲ್ಲವನ್ನು ಗೆದ್ದಿರುವೆನು. (ದೋ/೨೭)

**ಚೌ – ಸತ ಸಾಖಾಮೃಗ ಜೋರಿ ಸಹಾಈ । ಬಾಂಧಾ ಸಿಂಧು ಇಹಇ ಪ್ರಭುತಾಈ ॥**
**ನಾಘಹಿಂ ಖಗ ಅನೇಕ ಬಾರೀಸಾ । ಸೂರ ನ ಹೋಹಿಂ ತೇ ಸುನು ಸಬ ಕೀಸಾ ॥ ೧ ॥**
**ಮಮ ಭುಜ ಸಾಗರ ಬಲ ಜಲ ಪೂರಾ । ಜಹಂ ಬೂಡೇ ಬಹು ಸುರ ನರ ಸೂರಾ ॥**
**ಬೀಸ ಪಯೋಧಿ ಅಗಾಧ ಅಪಾರಾ । ಕೋ ಅಸ ಬೀರ ಜೊ ಪಾಇಹಿ ಪಾರಾ ॥ ೨ ॥**
**ದಿಗಪಾಲನ್ಹ ಮೈಂ ನೀರ ಭರಾವಾ । ಭೂಪ ಸುಜಸ ಖಲ ಮೋಹಿ ಸುನಾವಾ ॥**
**ಜೌಂ ಪೈ ಸಮರ ಸುಭಟ ತವ ನಾಥಾ । ಪುನಿ ಪುನಿ ಕಹಸಿ ಜಾಸು ಗುನ ಗಾಥಾ ॥ ೩ ॥**
**ತೌ ಬಸೀಠ ಪಠವತ ಕೆಹಿ ಕಾಜಾ । ರಿಪು ಸನ ಪ್ರೀತಿ ಕರತ ನಹಿಂ ಲಾಜಾ ॥**
**ಹರಗಿರಿ ಮಥನ ನಿರಖು ಮಮ ಬಾಹೂ । ಪುನಿ ಸಠ ಕಪಿ ನಿಜ ಪ್ರಭುಹಿ ಸರಾಹೂ ॥ ೪ ॥**

ಎಲವೋ ದುರುಳಾ! ವಾನರರ ಸಹಾಯದಿಂದ ನಿನ್ನೊಡೆಯನು ಸಮುದ್ರಕ್ಕೆ ಸೇತುವೆಕಟ್ಟಿದ, ಇದೊಂದು ಘನಕಾರ್ಯವೇ? ಕಡಲನ್ನು ಅನೇಕ ಪಕ್ಷಿಗಳೂ ಹಾರಿ ದಾಟುತ್ತಿವೆ. ಅಷ್ಟರಿಂದಲೇ ಅವುಗಳನ್ನು ಶೂರವೀರರೆಂದು ಹೇಳಲಾದೀತೇ? ಎಲವೋ ಮೂರ್ಖ ಕಪಿಯೇ! ಕೇಳು. ನನ್ನ ಒಂದೊಂದು ಭುಜವೆಂಬ ಸಾಗರವು ಬಲವೆಂಬ ಜಲದಿಂದ ತುಂಬಿ ತುಳುಕುತ್ತಿದೆ. ಆ ಕಡಲಿನಲ್ಲಿ ಎಂತೆಂತಹ ಶೂರರಾದ ಸುರ-ನರರು ಮುಳುಗಿ ಸತ್ತುಹೋಗಿಲ್ಲ! ನನ್ನ ಇಂತಹ ಅಗಾಧವಾದ, ಅಪಾರವಾದ ಇಪ್ಪತ್ತು ಸಮುದ್ರಗಳನ್ನು ದಾಟಬಲ್ಲ ಶೂರ, ವೀರನಾರೆಂದು ಹೇಳು! ನಾನು ದಿಕ್ಪಾಲಕರಿಂದ ನೀರು ತುಂಬುವುದೇ ಮೊದಲಾದ ಊಳಿಗ ಮಾಡಿಸಿಕೊಂಡಿದ್ದೇನೆ. ನೀನು ಯಾವನೋ ರಾಜನಾದವನ ಕೀರ್ತಿಯನ್ನು ನನ್ನ ಬಳಿ ಹೇಳುತ್ತಿರುವೆಯಲ್ಲ! ನಿನ್ನಿಂದ ಪದೇ-ಪದೇ ಹೊಗಳಲ್ಪಟ್ಟ ಗುಣಗಳಿಂದ ಕೂಡಿದವನು ನಿಜವಾಗಿ ಸಮರ ಸುಭಟನಾಗಿದ್ದರೆ ದೂತನನ್ನು ಅಟ್ಟಿದುದು ಏಕೆ? ಶತ್ರುವಿನೊಡನೆ ಪ್ರೀತಿತೋರಲು, ಸಂಧಿಮಾಡಿಕೊಳ್ಳಲು ಅವನಿಗೆ ನಾಚಿಕೆಯಾಗುತ್ತಿಲ್ಲವೇ? ಕೈಲಾಸಪರ್ವತವನ್ನು ಮೇಲಕ್ಕೆತ್ತಿದ ನನ್ನ ಭುಜಬಲವನ್ನು ಮೊದಲಿಗೆ ನೋಡು. ಮೂರ್ಖಾ! ಮತ್ತೆ ನಿನ್ನ ಪ್ರಭುವನ್ನು ಹೊಗಳು. (ಚೌ/೧-೪)

**ದೋ – ಸೂರ ಕವನ ರಾವನ ಸರಿಸ ಸ್ವಕರ ಕಾಟಿ ಜೆಹಿಂ ಸೀಸ ।**
**ಹುನೇ ಅನಲ ಅತಿ ಹರಷ ಬಹು ಬಾರ ಸಾಖಿ ಗೌರೀಸ ॥ ೨೮ ॥**

ಈ ರಾವಣನಿಗೆ ಸರಿದೊರೆಯಾದ ಶೂರವೀರರು ಯಾರಿದ್ದಾರೆ? ಹೇಳು. ನಾನು ಸ್ವತಃ ನನ್ನ ಕೈಗಳಿಂದಲೇ ನನ್ನ ತಲೆಗಳನ್ನು ತರಿದು ಸಂತೋಷವಾಗಿ ಅನೇಕಬಾರಿ ಅಗ್ನಿಗೆ ಆಹುತಿಯನ್ನಿತ್ತಿರುವೆನು. ಸ್ವಯಂ ಗೌರೀಪತಿ ಶಿವನೇ ಇದಕ್ಕೆ ಸಾಕ್ಷಿ. (ದೋ/೨೮)

**ಚೌ – ಜರತ ಬಿಲೋಕೆಉಂ ಜಬಹಿಂ ಕಪಾಲಾ । ಬಿಧಿ ಕೇ ಲಿಖೇ ಅಂಕ ನಿಜ ಭಾಲಾ ॥**
**ನರ ಕೇಂ ಕರ ಆಪನ ಬಧ ಬಾಂಚೀ । ಹಸೆಉಂ ಜಾನಿ ಬಿಧಿ ಗಿರಾ ಅಸಾಂಚೀ ॥ ೧ ॥**
**ಸೋಉ ಮನ ಸಮುಝಿ ತ್ರಾಸ ನಹಿಂ ಮೋರೇಂ । ಲಿಖಾ ಬಿರಂಚಿ ಜರಠ ಮತಿ ಭೋರೇಂ ॥**
**ಆನ ಬೀರ ಬಲ ಸಠ ಮಮ ಆಗೇಂ । ಪುನಿ ಪುನಿ ಕಹಸಿ ಲಾಜ ಪತಿ ತ್ಯಾಗೇಂ ॥ ೨ ॥**
**ಕಹ ಅಂಗದ ಸಲಜ್ಜ ಜಗ ಮಾಹೀಂ । ರಾವನ ತೋಹಿ ಸಮಾನ ಕೋಉ ನಾಹೀಂ ॥**
**ಲಾಜವಂತ ತವ ಸಹಜ ಸುಭಾಊ । ನಿಜ ಮುಖ ನಿಜ ಗುನ ಕಹಸಿ ನ ಕಾಊ ॥ ೩ ॥**
**ಸಿರ ಅರು ಸೈಲ ಕಥಾ ಚಿತ ರಹೀ । ತಾ ತೇಂ ಬಾರ ಬೀಸ ತೈಂ ಕಹೀ ॥**
**ಸೋ ಭುಜಬಲ ರಾಖೆಹು ಉರ ಘಾಲೀ । ಜೀತೆಹು ಸಹಸಬಾಹು ಬಲಿ ಬಾಲೀ ॥ ೪ ॥**

**ಸುನು ಮತಿಮಂದ ದೇಹಿ ಅಬ ಪೂರಾ। ಕಾಟೇಂ ಸೀಸ ಕಿ ಹೋಇಅ ಸೂರಾ॥**

**ಇಂದ್ರಜಾಲಿ ಕಹುಁ ಕಹಿಅ ನ ಬೀರಾ। ಕಾಟಇ ನಿಜ ಕರ ಸಕಲ ಸರೀರಾ॥೫॥**

ನನ್ನ ಮಸ್ತಕಗಳು ಬೆಂಕಿಯಲ್ಲಿ ಉರಿಯುತ್ತಿರುವಾಗ 'ಒಂದು ಮನುಷ್ಯನಿಂದ ನನಗೆ ಸಾವು' ಎಂದು ಬ್ರಹ್ಮನು ಬರೆದ ಲಿಖಿತವನ್ನು ಓದಿ ವಿಧಿಲಿಖಿತವು ಸುಳ್ಳೆಂದು ನಕ್ಕುಬಿಟ್ಟೆ. ಅದನ್ನು ನೆನೆದರೂ ನನ್ನ ಮನಸ್ಸಿನಲ್ಲಿ ಭಯವಿಲ್ಲ. ಏಕೆಂದರೆ ಮುದುಕನಾದ ಬ್ರಹ್ಮನು ಮತಿಭ್ರಮಣೆಯಿಂದ ಹಾಗೆ ಬರೆದಿರಬೇಕು ಎಂಬುದೇ ನನ್ನ ಅಭಿಪ್ರಾಯವು. ಎಲೈ ಮೂರ್ಖಾ! ನೀನು ಲಜ್ಜೆ, ಮಾನ-ಮರ್ಯಾದೆ ತೊರೆದು ನನ್ನೆದುರಿಗೆ ಮಾತು-ಮಾತಿಗೆ ಬೇರೊಬ್ಬ ವೀರನ ಶೌರ್ಯವನ್ನು ಹೊಗಳುತ್ತಿರುವೆಯಲ್ಲ!'' ಅಂಗದನು ಹೇಳಿದನು – ಎಲೈ ರಾವಣಾ! ನಿನ್ನಂತಹ ಲಜ್ಜೆಯುಳ್ಳವನು ಪ್ರಪಂಚದಲ್ಲಿ ಬೇರೊಬ್ಬರಿಲ್ಲ. ಲಜ್ಜಾಶೀಲತೆ ನಿನ್ನ ಸಹಜಸ್ವಭಾವವೇ ಸರಿ. ಇಲ್ಲವಾದರೆ ನೀನು ನಿನ್ನ ಬಾಯಿಂದ ನಿನ್ನ ಗುಣಗಳನ್ನು ಹೇಳುತ್ತಿರಲಿಲ್ಲ. ತಲೆಕಡಿದುದು ಮತ್ತು ಕೈಲಾಸವನ್ನು ಎತ್ತಿದುದು ಈ ಎರಡೇ ಸಂಗತಿಗಳು ನಿನ್ನ ತಲೆಗೇರಿದೆ. ಆದ್ದರಿಂದ ಅವನ್ನು ನೀನು ಎಷ್ಟೋ ಬಾರಿ ಹೇಳಿರುವೆ. ಸಹಸ್ರಬಾಹು, ಬಲಿ, ವಾಲಿ ಮೊದಲಾದವರನ್ನು ಗೆದ್ದ ನಿನ್ನ ಭುಜಬಲವನ್ನು ನೀನು ನಿನ್ನ ಹೃದಯದಲ್ಲಿ ಅಡಗಿಸಿಟ್ಟುಕೊಂಡಿದ್ದೀಯೆ. ಎಲವೋ ಮಂದಮತಿಯೇ! ಕೇಳು. ಈಗ ಸಾಕು ಮಾಡು. ತಲೆಯನ್ನು ತರಿದೊಟ್ಟಿದ ಮಾತ್ರಕ್ಕೆ ಯಾರಾದರೂ ಶೂರವೀರರಾಗಿ ಬಿಡುತ್ತಾರೆಯೇ? ತನ್ನ ಕೈಯಿಂದಲೇ ತನ್ನ ದೇಹವನ್ನು ತುಂಡರಿಸಿಕೊಳ್ಳುವ ಐಂದ್ರಜಾಲಿಕರು ಶೂರ-ವೀರರೇ? (ಚೌ/೧-೫)

**ದೋ – ಜರಹಿಂ ಪತಂಗ ಮೋಹ ಬಸ ಭಾರ ಬಹಹಿಂ ಖರ ಬೃಂದ।**

**ತೇ ನಹಿಂ ಸೂರ ಕಹಾವಹಿಂ ಸಮುಝಿ ದೇಖು ಮತಿಮಂದ॥೨೯॥**

ಎಲೈ ಬುದ್ಧಿಹೀನನೇ! ಯೋಚನೆಮಾಡು. ಪತಂಗಗಳು ಮೋಹವಶದಿಂದ ಬೆಂಕಿಗೆ ಬಿದ್ದು ಸಾಯುತ್ತವೆ. ಕತ್ತೆಗಳ ಹಿಂಡು ಹೊರಲಾರದ ಭಾರ ಹೊತ್ತು ನಡೆಯುತ್ತದೆ. ಇಷ್ಟುಮಾತ್ರಕ್ಕೆ ಯಾರೂ ಅವುಗಳನ್ನು ಶೂರ, ಸಾಹಸಿ ಎಂದು ಕರೆಯುವುದಿಲ್ಲ. (ದೋ/೨೯)

**ಚೌ – ಅಬ ಜನಿ ಬತಬಢಾವ ಖಲ ಕರಹೀ। ಸುನು ಮಮ ಬಚನ ಮಾನ ಪರಿಹರಹೀ॥**

**ದಸಮುಖ ಮೈಂ ನ ಬಸೀಠೀಂ ಆಯಉಁ। ಅಸ ಬಿಚಾರಿ ರಘುಬೀರ ಪಠಾಯಉಁ॥೧॥**

**ಬಾರ ಬಾರ ಅಸ ಕಹಇ ಕೃಪಾಲಾ। ನಹಿಂ ಗಜಾರಿ ಜಸು ಬಧೇಂ ಸೃಕಾಲಾ॥**

**ಮನ ಮಹುಁ ಸಮುಝಿ ಬಚನ ಪ್ರಭು ಕೇರೇ। ಸಹೇಉಁ ಕಠೋರ ಬಚನ ಸಠ ತೇರೇ॥೨॥**

**ನಾಹಿಂ ತ ಕರಿ ಮುಖ ಭಂಜನ ತೋರಾ। ಲೈ ಜಾತೇಉಁ ಸೀತಹಿ ಬರಜೋರಾ॥**

**ಜಾನೇಉಁ ತವ ಬಲ ಅಧಮ ಸುರಾರೀ। ಸೂನೇಂ ಹರಿ ಆನಿಹಿ ಪರನಾರೀ॥೩॥**

**ತೈಂ ನಿಸಿಚರ ಪತಿ ಗರ್ಬ ಬಹೂತಾ। ಮೈಂ ರಘುಪತಿ ಸೇವಕ ಕರ ದೂತಾ॥**

**ಜೌಂ ನ ರಾಮ ಅಪಮಾನಹಿ ಡರಊಁ। ತೋಹಿ ದೇಖತ ಅಸ ಕೌತುಕ ಕರಊಁ॥೪॥**

ಎಲೈ ದುಷ್ಟನೇ! ಈಗ ಸುಮ್ಮನೆ ಮಾತು ಬೆಳೆಸಬೇಡ. ನನ್ನ ಮಾತನ್ನು ಕೇಳಿ ದುರಭಿಮಾನವನ್ನು ತೊರೆ. ದಶಮುಖನೇ! ನಾನು ದೂತನಾಗಿ ಸಂಧಿಕಾರ್ಯಕ್ಕಾಗಿ ಬಂದಿಲ್ಲ. ಶ್ರೀರಘುವೀರನು ಬೇರೊಂದು ಆಲೋಚನೆಯಿಂದ ನನ್ನನ್ನು ಇಲ್ಲಿಗೆ ಕಳಿಸಿರುವನು. ನರಿಯನ್ನು ಕೊಲ್ಲುವುದರಿಂದ ಸಿಂಹಕ್ಕೆ ಕೀರ್ತಿ ಬರುವುದಿಲ್ಲ ಎಂದು ಕೃಪಾಳುವಾದ ಶ್ರೀರಾಮಚಂದ್ರನು ಪದೇ-ಪದೇ ಹೇಳುತ್ತಿರುತ್ತಾನೆ. ಎಲೈ ದುರ್ಮಾರ್ಗಿಯೇ! ಪ್ರಭುವಿನ ವಚನಗಳ ಆಂತರ್ಯವನ್ನು ಗ್ರಹಿಸಿ, ನಿನ್ನ ಕಠೋರವಚನಗಳನ್ನು ಸಹಿಸಿದೆ. ಇಲ್ಲವಾದರೆ ನಾನು ನಿನ್ನ ಮುಖಭಂಗಮಾಡಿ ಸೀತೆಯನ್ನು ಬಲವಂತವಾಗಿ ಕರೆದುಕೊಂಡು ಹೋಗುತ್ತಿದ್ದೆ. ಎಲೈ ಅಧಮನೇ! ಸುರವೈರಿಯೇ! ಯಾರೂ ಇಲ್ಲದಿದ್ದಾಗ ಪರನಾರಿಯನ್ನು ಕದ್ದುತಂದಾಗಲೇ ನಿನ್ನ ಶಕ್ತಿ ಏನೆಂಬುದನ್ನು ನಾನು ಅರಿತೆ. ನೀನು ನಿಶಾಚರರ ಒಡೆಯ. ತುಂಬ ಗರ್ವಿಷ್ಠ. ಆದರೆ ನಾನು ಶ್ರೀರಘುನಾಥನ ಸೇವಕನಾದ ಸುಗ್ರೀವನ ದೂತನು (ಡಿಂಗರಿಗನ ಡಿಂಗರಿಗ). ಶ್ರೀರಾಮನಿಗೆ ಅಪಮಾನವಾಗುವುದಲ್ಲ ಎಂಬ ಕಳವಳ ನನಗೆ. (ಚೌ/೧-೪)

**ದೋ – ತೋಹಿ ಪಟಕಿ ಮಹಿ ಸೇನ ಹತಿ ಚೌಪಟ ಕರಿ ತವ ಗಾಉಁ।**

**ತವ ಜುಬತಿನ್ಹ ಸಮೇತ ಸಠ ಜನಕಸುತಹಿ ಲೈ ಜಾಉಁ॥೩೦॥**

ಇಲ್ಲವಾದರೆ ನೀನು ನೋಡುತ್ತಿರುವಂತೆ ನಿನ್ನನ್ನು ನೆಲಕ್ಕೆ ಕುಕ್ಕಿ, ನಿನ್ನ ಪಡೆಯನ್ನು ಸದೆಬಡಿದು, ನಿನ್ನ ಊರನ್ನು ಹಾಳುಗೆಡವಿ, ನಿನ್ನ ಸ್ತ್ರೀಯರಸಹಿತ ಜಾನಕಿದೇವಿಯನ್ನು ಕೊಂಡೊಯ್ಯಬಲ್ಲೆ. (ದೋ/೩೦)

ಚೌ – ಜೌ ಅಸ ಕರೌ ತದಪಿ ನ ಬಡಾಈ। ಮುಏಹಿ ಬಧೇ ನಹಿಂ ಕಛು ಮನುಸಾಈ॥
ಕೌಲ ಕಾಮಬಸ ಕೃಪಿನ ಬಿಮೂಢಾ। ಅತಿ ದರಿದ್ರ ಅಜಸೀ ಅತಿ ಬೂಢಾ ॥೧॥
ಸದಾ ರೋಗಬಸ ಸಂತತ ಕ್ರೋಧೀ। ಬಿಷ್ನು ಬಿಮುಖ ಶ್ರುತಿ ಸಂತ ಬಿರೋಧೀ॥
ತನು ಪೋಷಕ ನಿಂದಕ ಅಘ ಖಾನೀ। ಜೀವತ ಸವ ಸಮ ಚೌದಹ ಪ್ರಾನೀ॥೨॥
ಅಸ ಬಿಚಾರಿ ಖಲ ಬಧಉಂ ನ ತೋಹೀ। ಅಬ ಜನಿ ರಿಸ ಉಪಜಾವಸಿ ಮೋಹೀ॥
ಸುನಿ ಸಕೋಪ ಕಹ ನಿಸಿಚರ ನಾಥಾ। ಅಧರ ದಸನ ದಸಿ ಮೀಜತ ಹಾಥಾ ॥೩॥
ರೇ ಕಪಿ ಅಧಮ ಮರನ ಅಬ ಚಹಸೀ। ಛೋಟೇ ಬದನ ಬಾತ ಬಡಿ ಕಹಸೀ॥
ಕಟು ಜಲ್ಪಸಿ ಜಡ ಕಪಿ ಬಲ ಜಾಕೇಂ। ಬಲ ಪ್ರತಾಪ ಬುಧಿ ತೇಜ ನ ತಾಕೇಂ॥೪॥

ಒಂದು ಪಕ್ಷ ಹೀಗೆ ಮಾಡಿದರೂ ಇದರಲ್ಲಿ ಯಾವ ಹೆಚ್ಚುಗಾರಿಕೆಯೂ ಇಲ್ಲ. ಏಕೆಂದರೆ, ಸತ್ತವನನ್ನು ಕೊಲ್ಲುವುದು ಅದೆಂತಹ ಗಂಡಸುತನ? 'ವಾಮಮಾರ್ಗಿ, ಕಾಮುಕ, ಲೋಭಿ, ಅತ್ಯಂತ ಮೂಢ, ದಟ್ಟದರಿದ್ರಿ, ಕಳಂಕವುಳ್ಳವನು, ಅತಿವೃದ್ಧ, ನಿತ್ಯರೋಗಿ, ನಿರಂತರಕ್ರೋಧಿ, ಶ್ರೀಮಹಾವಿಷ್ಣುವಿಗೆ ವಿಮುಖನು, ವೇದನಿಂದಕ, ಸಂತವಿರೋಧಿ, ಉದರಪರಾಯಣ, ಪರನಿಂದಕ, ಮಹಾಪಾಪಿ' ಈ ಹದಿನಾಲ್ಕುಮಂದಿ ಬದುಕಿದ್ದರೂ ಸತ್ತಂತೆಯೇ. ಅಯ್ಯಾ ದುಷ್ಟನೇ! ಈ ಪ್ರಕಾರ ಯೋಚಿಸಿ ನಾನು ನಿನ್ನನ್ನು ಕೊಲ್ಲುವುದಿಲ್ಲ. ಈಗ ನೀನು ನನ್ನನ್ನು ಕೆಣಕಬೇಡ. ಅಂಗದನ ಮಾತು ಕೇಳಿ ರಾಕ್ಷಸೇಶ್ವರ ರಾವಣನು ಕಟಕಟನೆ ಹಲ್ಲುಕಡಿದು, ಕ್ರುದ್ಧನಾಗಿ ಕೈಕೈ ಹಿಸುಕಿಕೊಳ್ಳುತ್ತಾ ಬೊಬ್ಬಿರಿದನು – ಎಲವೋ ವಾನರಾಧಮಾ! ಈಗ ನೀನು ಸಾವನ್ನು ಹತ್ತಿರ ಕರೆಯುತ್ತಿದ್ದಿ. ಆದ್ದರಿಂದಲೇ 'ಪುಟ್ಟಬಾಯಿ ದೊಡ್ಡ ಮಾತು' ಎಂಬಂತೆ ಗಳಹುತ್ತಿದ್ದೀಯೇ. ಹೇ ಮೂರ್ಖವಾನರಾ! ನೀನು ಯಾರ ಬಲವನ್ನು ನೆಚ್ಚಿಕೊಂಡು ಇಷ್ಟೊಂದು ಅಪಲಾಪ ಮಾಡುತ್ತಿದ್ದಿಯೇ ಅವನಲ್ಲಿ ಬಲ, ಬುದ್ಧಿ, ತೇಜಸ್ಸು ಯಾವುದೂ ಇಲ್ಲ. (ಚೌ/೧-೪)

**ದೋ – ಅಗುನ ಅಮಾನ ಜಾನಿ ತೆಹಿ ದೀನ್ಹ ಪಿತಾ ಬನಬಾಸ।**
**ಸೋ ದುಖ ಅರು ಜುಬತೀ ಬಿರಹ ಪುನಿ ನಿಸಿ ದಿನ ಮಮ ತ್ರಾಸ ॥೩೧ (ಕ)॥**
**ಜಿನ್ಹ ಕೇ ಬಲ ಕರ ಗರ್ಬ ತೊಹಿ ಅಇಸೇ ಮನುಜ ಅನೇಕ।**
**ಖಾಹಿಂ ನಿಸಾಚರ ದಿವಸ ನಿಸಿ ಮೂಢ ಸಮುಝು ತಜಿ ಟೇಕ ॥೩೧(ಖ)॥**

ಅವನು ಗುಣಹೀನನೂ, ಮಾನಗೆಟ್ಟವನೂ ಎಂದು ತಿಳಿದೇ ಅವನ ಅಪ್ಪ ಅವನನ್ನು ಕಾಡಿಗೆ ಅಟ್ಟಿದುದು. ಒಂದೆಡೆ ಈ ದುಃಖ, ಇನ್ನೊಂದೆಡೆ ಪ್ರಾಯಸ್ಥೆಯಾದ ಭಾರ್ಯಾವಿಯೋಗ, ಮತ್ತೊಂದೆಡೆ ನನ್ನ ಭಯ ಅವನನ್ನು ಕಾಡುತ್ತಿದೆ. ಇಂತಹ ಮಾನವನನ್ನು ಬಲವಂತನೆಂದು ಹೆಮ್ಮೆಯಿಂದ ಬೀಗುತ್ತಿರುವೆ. ಈ ಮಾನವರನ್ನಾದರೋ ನಮ್ಮ ರಾಕ್ಷಸರು ಹಗಲು-ರಾತ್ರಿ ನುಂಗಿ ನೀರು ಕುಡಿಯುತ್ತಾರೆ. ಮೂಢ! ಹಟಮಾಡಬೇಡ. ವಿಚಾರಮಾಡು. (ದೋ/೩೧ ಕ, ಖ)

ಚೌ – ಜಬ ತೆಹಿಂ ಕೀನ್ಹಿ ರಾಮ ಕೈ ನಿಂದಾ। ಕ್ರೋಧವಂತ ಅತಿ ಭಯಉ ಕಪಿಂದಾ॥
ಹರಿ ಹರ ನಿಂದಾ ಸುನಇ ಜೊ ಕಾನಾ। ಹೋಇ ಪಾಪ ಗೋಘಾತ ಸಮಾನಾ॥೧॥
ಕಟಕಟಾನ ಕಪಿಕುಂಜರ ಭಾರೀ। ದುಹು ಭುಜದಂಡ ತಮಕಿ ಮಹಿ ಮಾರೀ॥
ಡೋಲತ ಧರನಿ ಸಭಾಸದ ಖಸೇ। ಚಲೇ ಭಾಜಿ ಭಯ ಮಾರುತ ಗ್ರಸೇ॥೨॥
ಗಿರತ ಸಂಭಾರಿ ಉಠಾ ದಸಕಂಧರ। ಭೂತಲ ಪರೇ ಮುಕುಟ ಅತಿ ಸುಂದರ॥
ಕಛು ತೆಹಿಂ ಲೈ ನಿಜ ಸಿರನ್ಹಿ ಸಂವಾರೇ। ಕಛು ಅಂಗದ ಪ್ರಭು ಪಾಸ ಪಬಾರೇ॥೩॥
ಆವತ ಮುಕುಟ ದೇಖಿ ಕಪಿ ಭಾಗೇ। ದಿನಹೀಂ ಲೂಕ ಪರನ ಬಿಧಿ ಲಾಗೇ॥
ಕೀ ರಾವನ ಕರಿ ಕೋಪ ಚಲಾಏ। ಕುಲಿಸ ಚಾರಿ ಆವತ ಅತಿ ಧಾಏ॥೪॥
ಕಹ ಪ್ರಭು ಹಂಸಿ ಜನಿ ಹೃದಯಂ ಡೆರಾಊ। ಲೂಕ ನ ಅಸನಿ ಕೇತು ನಹಿಂ ರಾಹೂ॥
ಏ ಕಿರೀಟ ದಸಕಂಧರ ಕೇರೇ। ಆವತ ಬಾಲಿತನಯ ಕೇ ಪ್ರೇರೇ॥೫॥

ರಾವಣನು ಶ್ರೀರಾಮಪ್ರಭುವನ್ನು ಇಂತು ನಿಂದಿಸಿದಾಗ ಕಪೀಂದ್ರನಾದ ಅಂಗದನಿಗೆ ಬೆಟ್ಟದಂತಹ ಸಿಟ್ಟುಬಂತು. ಏಕೆಂದರೆ ಹರಿಹರರ ನಿಂದೆಯನ್ನು ಕಿವಿಯಿಂದ ಕೇಳಿದವರಿಗೆ ಗೋಹತ್ಯಾಪಾಪವು ತಟ್ಟುವುದು ಎಂಬುದು ಶಾಸ್ತ್ರೋಕ್ತಿ. ಕಪಿಕುಂಜರನಾದ

ಅಂಗದನು ಒಮ್ಮೆ ಗಟ್ಟಿಯಾಗಿ ಬೊಬ್ಬಿರಿದು, ಜೋರಾಗಿ ತನ್ನ ಎರಡೂ ಭುಜದಂಡಗಳನ್ನು ನೆಲಕ್ಕೆ ಅಪ್ಪಳಿಸಿದನು. ಅದರಿಂದ ನೆಲನಡುಗತೊಡಗಿತು. ಸಭಾಸದರು ತಮ್ಮ ಆಸನದಿಂದ ಉರುಳಿದರು. ಭಯವೆಂಬ ಗಾಳಿ (ಭೂತ) ಹಿಡಿದವರಾಗಿ ಅವರೆಲ್ಲ ಪಲಾಯನ ಸೂಕ್ತವನ್ನು ಪಠಿಸಿದರು. ರಾವಣನು ಎದ್ದು-ಬಿದ್ದು ಸಾವರಿಸಿಕೊಂಡು ಕುಳಿತುಕೊಂಡನು. ಅವನ ಅತ್ಯಂತ ಸುಂದರವಾದ ಕಿರೀಟಗಳು ನೆಲದ ಮೇಲೆ ಬಿದ್ದು ಉರುಳಿ ಗೂರಾಡಿದವು. ಕೆಲವನ್ನೂ ಅವನು ಎತ್ತಿ ತಲೆಯ ಮೇಲಿರಿಸಿಕೊಂಡನು. ಮತ್ತೆ ಕೆಲವನ್ನು ಎತ್ತಿ-ಎತ್ತಿ ಅಂಗದನು ಶ್ರೀರಾಮಚಂದ್ರನ ಬಳಿಗೆ ತೂಗಾಡಿ ಎಸೆದನು. ಆ ಮುಕುಟಗಳು ಬಂದು ಬಿದ್ದದ್ದನ್ನು ಕಂಡು ವಾನರರು ಲಾಗಹಾಕಿ ಓಡುತ್ತಾ ಕಿರಿಚುತ್ತಾ ವಿಧಿಯೇ! ಹಗಲಿನಲ್ಲೇ ಉಲ್ಕಾಪಾತವಾಗತೊಡಗಿತೋ, ಅಥವಾ ರಾವಣನು ಕೋಪದಿಂದ ಅತಿವೇಗವಾಗಿ ನಾಲ್ಕು ವಜ್ರಾಯುಧಗಳನ್ನು ಎಸೆದಿರುವನೋ? ಎಂದು ಯೋಚಿಸತೊಡಗಿದರು. ಆಗ ಪ್ರಭು ಶ್ರೀರಾಮಚಂದ್ರನು ನಕ್ಕು ನುಡಿದನು – ವಾನರರೇ! ಅಂಜಬೇಡಿ. ಇವು ಉಲ್ಕೆಗಳೂ ಅಲ್ಲ, ವಜ್ರವೂ ಅಲ್ಲ. ರಾಹು-ಕೇತುಗಳಂತೂ ಅಲ್ಲವೇ ಅಲ್ಲ. ಇವು ರಾವಣನ ಕಿರೀಟಗಳು. ಅಂಗದನು ಎಸೆದಿದ್ದರಿಂದ ಅವು ಇಲ್ಲಿಗೆ ಬಂದು ಬಿದ್ದಿವೆ. (ಚೌ/೧-೫)

**ದೋ – ತರಕಿ ಪವನಸುತ ಕರ ಗಹೇ ಆನಿ ಧರೇ ಪ್ರಭು ಪಾಸ ।**
**ಕೌತುಕ ದೇಖಹಿಂ ಭಾಲು ಕಪಿ ದಿನಕರ ಸರಿಸ ಪ್ರಕಾಸ ॥ ೩೨ (ಕ) ॥**
**ಉಹಾಂ ಸಕೋಪಿ ದಸಾನನ ಸಬ ಸನ ಕಹತ ರಿಸಾಇ ।**
**ಧರಹು ಕಪಿಹಿ ಧರಿ ಮಾರಹು ಸುನಿ ಅಂಗದ ಮುಸುಕಾಇ ॥ ೩೨(ಖ)॥**

ಪವನತನಯ ಆಂಜನೇಯನು ಥಂಗನೆ ಹಾರಿ ಅವುಗಳನ್ನು ಆಂತುಕೊಂಡು ತಂದು ಪ್ರಭುವಿನ ಪಾದದಡಿಯಲ್ಲಿಟ್ಟನು. ಸೂರ್ಯಪ್ರಭೆಯಂತೆ ಹೊಳೆಯುತ್ತಿದ್ದ ಆ ಕಿರೀಟಗಳನ್ನು ವಾನರ-ಭಲ್ಲೂಕಗಳು ಆಶ್ಚರ್ಯದಿಂದ ನೋಡತೊಡಗಿದರು. ಅತ್ತ ಸಭೆಯಲ್ಲಿ ರಾವಣನು ಕ್ರುದ್ಧನಾಗಿ ಎಲ್ಲರ ಮೇಲೆ ರೇಗುತ್ತಾ – 'ಹಿಡಿಯಿರಿ ಆ ಕಪಿಯನ್ನು. ಹಿಡಿದು ಕೊಂದುಬಿಡಿ' ಎಂದು ಅರಚಿದನು. ಇದನ್ನು ಕೇಳಿ ಅಂಗದನು ಹಲ್ಲುಕಿರಿದನು. (ದೋ/೩೨ ಕ, ಖ)

**ಚೌ – ಏಹಿ ಬಧಿ ಬೇಗಿ ಸುಭಟ ಸಬ ಧಾವಹು । ಖಾಹು ಭಾಲು ಕಪಿ ಜಹಂ ಜಹಂ ಪಾವಹು ॥**
**ಮರ್ಕಟಹೀನ ಕರಹು ಮಹಿ ಜಾಈ । ಜಿಅತ ಧರಹು ತಾಪಸ ದ್ವೌ ಭಾಈ ॥ ೧ ॥**
**ಪುನಿ ಸಕೋಪ ಬೋಲೆಉ ಜುಬರಾಜಾ । ಗಾಲ ಬಜಾವತ ತೋಹಿ ನ ಲಾಜಾ ॥**
**ಮರು ಗರ ಕಾಟಿ ನಿಲಜ ಕುಲಘಾತೀ । ಬಲ ಬಿಲೋಕಿ ಬಿಹರತಿ ನಹಿಂ ಛಾತೀ ॥ ೨ ॥**
**ರೇ ತ್ರಿಯ ಚೋರ ಕುಮಾರಗ ಗಾಮೀ । ಖಲ ಮಲ ರಾಸಿ ಮಂದಮತಿ ಕಾಮೀ ॥**
**ಸನ್ಯಪಾತ ಜಲ್ಪಸಿ ದುರ್ಬಾದಾ । ಭಏಸಿ ಕಾಲಬಸ ಖಲ ಮನುಜಾದಾ ॥ ೩ ॥**
**ಯಾಕೋ ಫಲು ಪಾವಹಿಗೋ ಆಗೇಂ । ಬಾನರ ಭಾಲು ಚಪೇಟನ್ಹಿ ಲಾಗೇಂ ॥**
**ರಾಮು ಮನುಜ ಬೋಲತ ಅಸಿ ಬಾನೀ । ಗಿರಹಿಂ ನ ತವ ರಸನಾ ಅಭಿಮಾನೀ ॥ ೪ ॥**
**ಗಿರಿಹಹಿಂ ರಸನಾ ಸಂಸಯ ನಾಹೀಂ । ಸಿರನ್ಹಿ ಸಮೇತ ಸಮರ ಮಹಿ ಮಾಹೀಂ ॥ ೫ ॥**

ರಾವಣ ಮತ್ತೆ ಹೇಳತೊಡಗಿದ – 'ಇವನನ್ನು ಕೊಂದು ಎಲ್ಲ ಸುಭಟರು ಓಡಿ. ಕಪಿ-ಕರಡಿಗಳು ಎಲ್ಲಿ ಸಿಕ್ಕಿದರೆ ಅಲ್ಲಿ ಹಿಡಿದು ಅವನ್ನು ಕೊಂದು ತಿಂದುಬಿಡಿ. ಈ ಮಹೀತಳವನ್ನು ಮರ್ಕಟರಹಿತನ್ನಾಗಿ ಮಾಡಿಬಿಡಿ. ಹೋಗಿ ಆ ತಾಪಸ ಸೋದರರಿಬ್ಬರನ್ನೂ ಬಂಧಿಸಿ ಜೀವಂತವಾಗಿ ಹಿಡಿದುತನ್ನಿ.'' ರಾವಣನ ಈ ಬಿರುನುಡಿಯನ್ನು ಕೇಳಿ, ಯುವರಾಜನಾದ ಅಂಗದನು ಕ್ರುದ್ಧನಾಗಿ ನುಡಿದನು – ''ಎಲವೋ! ಈ ವಿಧವಾಗಿ ಬಾಯಿಮಾಡಲು ನಾಚಿಕೆಯಾಗುವುದಿಲ್ಲವೇ? ಎಲೈ ನಿರ್ಲಜ್ಜ! ಕುಲಘಾತಕಿ! ನೀನು ಕೈಯಾರೆ ಕತ್ತು ಕತ್ತರಿಸಿಕೊಂಡು ಸಾಯಿ. ನನ್ನ ಶಕ್ತಿಯನ್ನು ಕಣ್ಣಾರೆ ಕಂಡೂ ನಿನ್ನ ಎದೆ ಒಡೆಯಲಿಲ್ಲವಲ್ಲ! ಎಲೈ ಸ್ತ್ರೀ ಚೋರನೇ! ದುರ್ಮಾರ್ಗಿಯೇ! ದುಷ್ಟನೇ! ಮೂರ್ಖನೇ! ಪಾಪಾತ್ಮನೇ! ಮಂದಮತಿಯೇ! ಕಾಮುಕನೇ! ಸನ್ನಿಪಾತವಶನಾದವನಂತೆ ಬಾಯಿಗೆ ಬಂದಂತೆ ಗಳಹುತ್ತಿದ್ದಿಯೇ. ಎಲೈ ದುಷ್ಟರಕ್ಕಸನೇ! ನೀನು ಕಾಲವಶನಾಗಿರುವೆ. ಇದರ ಫಲವನ್ನು ವಾನರ-ಭಲ್ಲೂಕಗಳ ಏಟು ತಿಂದಾಗ ನೀನು ಪಡೆಯುವೆ. ಶ್ರೀರಾಮನು ಮನುಷ್ಯನು ಎಂದು ಹೇಳಿದ ನಿನ್ನ ನಾಲಿಗೆ ಏಕೆ ಕಳಚಿ ಬೀಳುವುದಿಲ್ಲ? ಅದು ತಲೆಯಸಮೇತ ರಣಭೂಮಿಯಲ್ಲಿ ಉರುಳುವುದರಲ್ಲಿ ಸಂದೇಹವೇ ಇಲ್ಲ. (ಚೌ/೧-೫)

**ಸೋ – ಸೋ ನರ ಕ್ಯೋಂ ದಸಕಂಧ ಬಾಲಿ ಬಧ್ಯೋ ಜೆಹಿಂ ಏಕ ಸರ ।**
**ಬೀಸಹುಂ ಲೋಚನ ಅಂಧ ಧಿಗ ತವ ಜನ್ಮ ಕುಜಾತಿ ಜಡ ॥ ೩೩ (ಕ) ॥**

**ತವ ಸೋನಿತ ಕೀ ಪ್ಯಾಸ ತೃಷಿತ ರಾಮ ಸಾಯಕ ನಿಕರ ।**
**ತಜಉ ತೋಹಿ ತೇಹಿ ತ್ರಾಸ ಕಟು ಜಲ್ಪಕ ನಿಸಿಚರ ಅಧಮ ॥ ೩೩(ಖ)॥**

ಎಲೈ ದಶಕಂಠನೇ! ತನ್ನ ಒಂದೇ ಬಾಣದಿಂದ ವಾಲಿಯನ್ನು ವಧಿಸಿದ ಶ್ರೀರಾಮನು ಮನುಷ್ಯಮಾತ್ರನೇ? ಎಲವೋ ಜಾತಿಹೀನನೇ! ಜಡನೇ! ಇಪ್ಪತ್ತು ಕಣ್ಣಿದ್ದರೂ ನೀನು ಕುರುಡನಾಗಿರುವೆ. ನಿನ್ನ ಜನ್ಮಕ್ಕೆ ಧಿಕ್ಕಾರವಿರಲಿ. ಶ್ರೀರಾಮನ ಅಂಬುಗಳು ನಿನ್ನ ಶೋಣಿತ ಪಾನಮಾಡಲು ತಹತಹಿಸುತ್ತಿವೆ. ಆದರಿಂದಾಗಿ ನಿನ್ನ ಹುಚ್ಚುಹುಚ್ಚಾದ ಮಾತನ್ನಾಡಿದರೂ ಸಹಿಸಿಕೊಂಡು ನಿನ್ನನ್ನು ಜೀವಸಹಿತ ಬಿಡುತ್ತಿದ್ದೇನೆ. (ಸೋ/೩೩ ಕ, ಖ)

**ಚೌ – ಮೈಂ ತವ ದಸನ ತೋರಿಬೇ ಲಾಯಕ । ಆಯಸು ಮೋಹಿ ನ ದೀನ್ಹ ರಘುನಾಯಕ ॥**
**ಅಸಿ ರಿಸ ಹೋತಿ ದಸಉ ಮುಖ ತೋರೌಂ । ಲಂಕಾ ಗಹಿ ಸಮುದ್ರ ಮಹಂ ಬೋರೌಂ ॥ ೧ ॥**
**ಗೂಲರಿ ಫಲ ಸಮಾನ ತವ ಲಂಕಾ । ಬಸಹು ಮಧ್ಯ ತುಮ್ಹ ಜಂತು ಅಸಂಕಾ ॥**
**ಮೈಂ ಬಾನರ ಫಲ ಖಾತ ನ ಬಾರಾ । ಆಯಸು ದೀನ್ಹ ನ ರಾಮ ಉದಾರಾ ॥ ೨ ॥**
**ಜುಗುತಿ ಸುನತ ರಾವನ ಮುಸುಕಾಈ । ಮೂಢ ಸಿಖಿಹಿ ಕಹಂ ಬಹುತ ಝುಠಾಈ ॥**
**ಬಾಲಿ ನ ಕಬಹುಂ ಗಾಲ ಅಸ ಮಾರಾ । ಮಿಲಿ ತಪಸಿನ್ಹ ತೈಂ ಭಏಸಿ ಲಬಾರಾ ॥ ೩ ॥**
**ಸಾಂಚೇಹುಂ ಮೈಂ ಲಬಾರ ಭುಜ ಬೀಹಾ । ಜೌಂ ನ ಉಪಾರಿಉಂ ತವ ದಸ ಜೀಹಾ ॥**
**ಸಮುಝಿ ರಾಮ ಪ್ರತಾಪ ಕಪಿ ಕೋಪಾ । ಸಭಾ ಮಾಝ ಪನ ಕರಿ ಪದ ರೋಪಾ ॥ ೪ ॥**
**ಜೌಂ ಮಮ ಚರನ ಸಕಸಿ ಸಠ ಟಾರೀ । ಫಿರಹಿಂ ರಾಮು ಸೀತಾ ಮೈಂ ಹಾರೀ ॥**
**ಸುನಹು ಸುಭಟ ಸಬ ಕಹ ದಸಸೀಸಾ । ಪದ ಗಹಿ ಧರನಿ ಪಛಾರಹು ಕೀಸಾ ॥ ೫ ॥**
**ಇಂದ್ರಜೀತ ಆದಿಕ ಬಲವಾನಾ । ಹರಷಿ ಉಠೇ ಜಹಂ ತಹಂ ಭಟ ನಾನಾ ॥**
**ಝಪಟಹಿಂ ಕರಿ ಬಲ ಬಿಪುಲ ಉಪಾಈ । ಪದ ನ ಟರಇ ಬೈಠಹಿಂ ಸಿರು ನಾಈ ॥ ೬ ॥**
**ಪುನಿ ಉಠಿ ಝಪಟಹಿಂ ಸುರ ಆರಾತೀ । ಟರಇ ನ ಕೀಸ ಚರನ ಏಹಿ ಭಾಂತೀ ॥**
**ಪುರುಷ ಕುಜೋಗೀ ಜಿಮಿ ಉರಗಾರೀ । ಮೋಹ ಬಿಟಪ ನಹಿಂ ಸಕಹಿಂ ಉಪಾರೀ ॥ ೭ ॥**

ನಾನು ನಿನ್ನ ಹಲ್ಲುಗಳನ್ನು ಉದುರಿಸಬಲ್ಲೆ. ಆದರೆ ಏನು ಮಾಡಲಿ? ಹಾಗೆಮಾಡಲು ಶ್ರೀರಘುನಾಥನ ಆಜ್ಞೆ ಇಲ್ಲವಲ್ಲ. ನಿನ್ನ ಹತ್ತು ತಲೆಗಳನ್ನು ಕಿತ್ತುಬಿಡಲೇ; ನಿನ್ನ ಲಂಕೆಯನ್ನು ಸಮುದ್ರದಲ್ಲಿ ಮುಳುಗಿಸಿ ಬಿಡಲೇ ಎಂಬ ಕೋಪ ಬರುತ್ತದೆ. ನಿನ್ನ ಲಂಕೆಯು ಅತ್ತಿಯ ಹಣ್ಣಿನಂತಿದೆ. ನೀವೆಲ್ಲ ಅದರೊಳಗೆ ಹುಳಗಳಂತೆ ಅಜ್ಞಾನದಿಂದ ನಿರ್ಭಯವಾಗಿ ವಾಸಿಸುತ್ತಿದ್ದೀರಿ. ನಾನು ವಾನರನು. ಆ ಹಣ್ಣನ್ನು ತಿನ್ನಲು ನನಗೆ ಎಷ್ಟು ಹೊತ್ತು ಬೇಕು? ಆದರೆ ಉದಾರಿಯಾದ ಶ್ರೀರಾಮಚಂದ್ರನ ಅಪ್ಪಣೆಯಿಲ್ಲದೆ ನಿರುಪಾಯನಾಗಿದ್ದೇನೆ.'' ಅಂಗದನ ಯುಕ್ತಿಯುಕ್ತ ವಚನಗಳನ್ನು ಕೇಳಿದ ರಾವಣನು ಮುಗುಳ್ನಗುತ್ತಾ ಇಂತೆಂದನು – ''ಎಲೈ ಮೂಢ! ಇಷ್ಟೊಂದು ಸುಳ್ಳುಹೇಳಲು ನೀನು ಎಲ್ಲಿ ಕಲಿತೆ? ವಾಲಿಯು ಎಂದೂ ಹೀಗೆ ಬಾಯಿಬಡುಕನಾಗಿರಲಿಲ್ಲ. ಬಹುಶಃ ಆ ತಾಪಸರೊಂದಿಗೆ ಸೇರಿ ಇಂತಹ ಸುಳ್ಳು, ಬಾಯಿಬಡುಕತನ ಕಲಿತಿಯೋ ಏನೋ!'' ಅಂಗದ ಹೇಳಿದ – ಎಲೈ ಇಪ್ಪತ್ತು ತೋಳುಗಳುಳ್ಳವನೇ! ನಿನ್ನ ಹತ್ತೂ ನಾಲಿಗೆಗಳನ್ನು ಎಳೆದು ಕತ್ತರಿಸದಿದ್ದರೆ ನಾನು ನಿಜಕ್ಕೂ ಸುಳ್ಳುಗಾರನೇ ಸರಿ! ಶ್ರೀರಾಮಚಂದ್ರನ ಪ್ರತಾಪವನ್ನು ಸ್ಮರಿಸಿ, ಅಂಗದನು ಕ್ರುದ್ಧನಾಗಿ ಸಭಾಮಧ್ಯದಲ್ಲಿ ನೆಲದಲ್ಲಿ ತನ್ನ ಕಾಲನ್ನು ಗಟ್ಟಿಯಾಗಿ ಊರಿ ಪ್ರತಿಜ್ಞಾಪೂರ್ವಕವಾಗಿ ಹೀಗೆಂದನು – ''ಎಲೈ ಶಠನೇ! ನೀವು ನನ್ನ ಕಾಲನ್ನು ಕದಲಿಸಿ ಸರಿಸಬಲ್ಲವರಾದರೆ ಶ್ರೀರಾಮನು ಹಿಂದಿರುಗಿ ಹೋಗಿಬಿಡುತ್ತಾನೆ. ಸೀತಾದೇವಿಯ ಕುರಿತು ನಿನ್ನ ತಂಟೆಗೆ ಬರುವುದಿಲ್ಲ.'' ರಾವಣನು ತನ್ನ ಯೋಧರಿಗೆ ಹೇಳಿದನು – ''ಎಲೈ ವೀರರೇ! ಕೇಳಿ. ಈ ವಾನರನ ಕಾಲನ್ನು ಹಿಡಿದು ನೆಲಕ್ಕೆ ಅಪ್ಪಳಿಸಿಬಿಡಿ.'' ರಾವಣನ ಮಾತಿನಂತೆ ಇಂದ್ರಜಿತುವೇ ಮೊದಲಾದ ಅನೇಕ ಬಲಿಷ್ಠಯೋಧರು ಹರ್ಷದಿಂದ ಎದ್ದು ಬಂದರು. ಅವರು ತಮ್ಮ ಸರ್ವಶಕ್ತಿಯನ್ನು ಹಾಕಿ ಆ ಕಾಲನ್ನು ಎಳೆಯಲು ಹವಣಿಸಿದರು. ಆದರೆ ಕಾಲು ಕೊಂಚವೂ ಮಿಸುಕಾಡಲಿಲ್ಲ. ಆಗ ಅವರೆಲ್ಲ ಸಪ್ಪೆಮೋರೆ ಹಾಕಿಕೊಂಡು ತಲೆತಗ್ಗಿಸಿ ತಮ್ಮ-ತಮ್ಮ ಸ್ಥಾನಗಳಿಗೆ ಹೋಗಿ ಕುಳಿತರು. (ಕಾಕಭುಶುಂಡಿಯವರು ಹೇಳುತ್ತಾರೆ – ಆ ದೇವಶತ್ರುಗಳಾದ ಎಲ್ಲ ರಾಕ್ಷಸರೂ ಮತ್ತೆ-ಮತ್ತೆ ಎದ್ದು ಕುಪ್ಪಳಿಸಿದರು. ಆದರೆ ಎಲೈ ಗರುಡಾ! ವಿಷಯವಾಸನೆಯುಳ್ಳ ಮನುಜರು ತನ್ನ ಮನಸ್ಸಿನಲ್ಲಿನ ಮೋಹವೃಕ್ಷವನ್ನು ಕದಲಿಸಲಾರದಂತೆ, ಅವರು ಅಂಗದನ ಕಾಲನ್ನು ಇರುವೆಯಷ್ಟು ಅಲುಗಾಡಿಸಲಾಗಲಿಲ್ಲ. (ಚೌ/೧-೭)

**ದೋ – ಕೋಟಿನ್ಹ ಮೇಘನಾದ ಸಮ ಸುಭಟ ಉಠೇ ಹರಷಾಇ।**
**ಝಪಟಹಿಂ ಟರೈ ನ ಕಪಿ ಚರನ ಪುನಿ ಬೈಠಹಿಂ ಸಿರ ನಾಇ॥ ೩೪ (ಕ)॥**
**ಭೂಮಿ ನ ಛಾಂಡತ ಕಪಿ ಚರನ ದೇಖತ ರಿಪು ಮದ ಭಾಗ।**
**ಕೋಟಿ ಬಿಘ್ನ ತೇ ಸಂತ ಕರ ಮನ ಜಿಮಿ ನೀತಿ ನ ತ್ಯಾಗ॥ ೩೪(ಖ)॥**

ಮೇಘನಾದನಿಗೆ ಸಮಾನರಾದ ಬಲಶಾಲಿಗಳಾದ ಅಸಂಖ್ಯಾತಯೋಧರು ಹರ್ಷದಿಂದ ಎದ್ದು ಪ್ರಯತ್ನಿಸಿದರು. ಆದರೆ ಅಂಗದನ ಕಾಲು ಎಳ್ಳಷ್ಟು ಕದಲಲಿಲ್ಲ. ಅವರೆಲ್ಲರೂ ನಾಚಿ ತಲೆತಗ್ಗಿಸಿ ಕುಳಿತುಕೊಂಡರು. ಕೋಟಿ ವಿಘ್ನಗಳು ಬಂದರೂ ಸಂತರ ಮನಸ್ಸು ನೀತಿಯನ್ನು ತೊರೆಯದಂತೆ, ಅಂಗದನ ಚರಣವು ನೆಲವನ್ನು ಬಿಡಲಿಲ್ಲ. ಇದನ್ನು ಕಂಡ ರಾವಣನ ಗರ್ವವು ಉಡುಗಿಹೋಯಿತು. (ದೋ/೩೪ ಕ, ಖ)

**ಚೌ – ಕಪಿ ಬಲ ದೇಖಿ ಸಕಲ ಹಿಯಁ ಹಾರೇ। ಉಠಾ ಆಪು ಕಪಿ ಕೇಂ ಪರಚಾರೇ॥**
**ಗಹತ ಚರನ ಕಹ ಬಾಲಿಕುಮಾರಾ। ಮಮ ಪದ ಗಹೇಂ ನ ತೋರ ಉಬಾರಾ॥ ೧॥**
**ಗಹಸಿ ನ ರಾಮ ಚರನ ಸಠ ಜಾಈ। ಸುನತ ಫಿರಾ ಮನ ಅತಿ ಸಕುಚಾಈ॥**
**ಭಯಉ ತೇಜಹತ ಶ್ರೀ ಸಬ ಗಈ। ಮಧ್ಯ ದಿವಸ ಜಿಮಿ ಸಸಿ ಸೋಹಈ॥ ೨॥**
**ಸಿಂಘಾಸನ ಬೈಠೆಉ ಸಿರ ನಾಈ। ಮಾನಹುँ ಸಂಪತಿ ಸಕಲ ಗँವಾಈ॥**
**ಜಗದಾತಮಾ ಪ್ರಾನಪತಿ ರಾಮಾ। ತಾಸು ಬಿಮುಖ ಕಿಮಿ ಲಹ ಬಿಶ್ರಾಮಾ॥ ೩॥**
**ಉಮಾ ರಾಮ ಕೀ ಭೃಕುಟಿ ಬಿಲಾಸಾ। ಹೋಇ ಬಿಸ್ವ ಪುನಿ ಪಾವಇ ನಾಸಾ॥**
**ತೃನ ತೇ ಕುಲಿಸ ಕುಲಿಸ ತೃನ ಕರಈ। ತಾಸು ದೂತ ಪನ ಕಹು ಕಿಮಿ ಟರಈ॥ ೪॥**
**ಪುನಿ ಕಪಿ ಕಹೀ ನೀತಿ ಬಿಧಿ ನಾನಾ। ಮಾನ ನ ತಾಹಿ ಕಾಲು ನಿಅರಾನಾ॥**
**ರಿಪು ಮದ ಮಥಿ ಪ್ರಭು ಸುಜಸು ಸುನಾಯೋ। ಯಹ ಕಹಿ ಚಲ್ಯೋ ಬಾಲಿ ನೃಪ ಜಾಯೋ॥ ೫॥**
**ಹತೌं ನ ಖೇತ ಖೆಲಾಇ ಖೆಲಾಈ। ತೋಹಿ ಅಬಹಿಂ ಕಾ ಕರೌं ಬಡಾಈ॥**
**ಪ್ರಥಮಹಿಂ ತಾಸು ತನಯ ಕಪಿ ಮಾರಾ। ಸೋ ಸುನಿ ರಾವನ ಭಯಉ ದುಖಾರಾ॥ ೬॥**
**ಜಾತುಧಾನ ಅಂಗದ ಪನ ದೇಖೀ। ಭಯ ಬ್ಯಾಕುಲ ಸಬ ಭಏ ಬಿಸೇಷೀ॥ ೭॥**

ಕಪಿವರ ಅಂಗದನ ಬಲವನ್ನು ನೋಡಿ ಎಲ್ಲ ರಾಕ್ಷಸರು ಮನಸ್ಸಿನಲ್ಲೇ ಸೋಲನ್ನೊಪ್ಪಿಕೊಂಡರು. ಆಗ ಅಂಗದನ ಮೂದಲಿಕೆಯನ್ನು ಕೇಳಿ ರಾವಣನು ಸ್ವತಃ ಎದ್ದನು. ಅವನು ಅಂಗದನ ಕಾಲನ್ನು ಹಿಡಿಯಲು ಮುಂದಾದಾಗ ವಾಲಿಪುತ್ರ ಅಂಗದ ಹೇಳಿದನು– ''ನನ್ನ ಕಾಲು ಹಿಡಿದ ಮಾತ್ರದಿಂದ ನಿನ್ನನ್ನು ಯಾರೂ ರಕ್ಷಿಸಲಾರರು. ಎಲೈ ಮೂರ್ಖ! ನೀನು ಹೋಗಿ ಶ್ರೀರಾಮನ ಕಾಲು ಏಕೆ ಹಿಡಿಯುವುದಿಲ್ಲ?'' ಇದನ್ನು ಕೇಳಿ ರಾವಣನು ತುಂಬಾ ನಾಚಿಕೊಂಡು ಮರಳಿದನು. ಅವನು ತನ್ನ ತೇಜಸ್ಸನ್ನು ಕಳಕೊಂಡನು. ಮಧ್ಯಾಹ್ನಕಾಲದ ಚಂದ್ರನಂತೆ ಅವನು ಕಾಂತಿಹೀನನಾದನು. ತನ್ನ ಸಕಲ ಸಂಪತ್ತು ಕಳಕೊಂಡವನಂತೆ ತಲೆತಗ್ಗಿಸಿಕೊಂಡು ಅವನು ಸಿಂಹಾಸನದಲ್ಲಿ ಕುಳಿತುಕೊಂಡನು. ಶಿವನು ಹೇಳುತ್ತಿದ್ದಾನೆ – ಉಮೆ! ಶ್ರೀರಾಮಚಂದ್ರನು ಜಗತ್ತಿಗೆ ಆತ್ಮಾ, ಪ್ರಾಣಪತಿ. ಅಂತಹವನಿಗೆ ವಿಮುಖನಾದ ಮನುಷ್ಯನಿಗೆ ಸುಖ-ಶಾಂತಿಗಲು ಹೇಗೆ ಲಭಿಸುವುವು? ಅವನ ಭ್ರೂವಿಲಾಸಮಾತ್ರದಿಂದಲೇ (ಸಂಕಲ್ಪಮಾತ್ರದಿಂದ) ಜಗತ್ತು, ಸೃಷ್ಟಿ, ಸ್ಥಿತಿ, ಲಯವಾಗುತ್ತದೆ. ಅವನು ತೃಣವನ್ನು ವಜ್ರವನ್ನಾಗಿಯೂ, ವಜ್ರವನ್ನು ತೃಣವನ್ನಾಗಿಸಬಲ್ಲನು. (ಅತ್ಯಂತ ನಿರ್ಬಲನನ್ನು ಮಹಾಬಲಿಷ್ಠನನ್ನಾಗಿಯೂ, ಮಹಾಬಲಿಷ್ಠನನ್ನು ನಿರ್ಬಲನನ್ನಾಗಿಯೂ ಮಾಡಬಲ್ಲನು.) ಅಂತಹವನ ದೂತನ ಪ್ರತಿಜ್ಞಾಭಂಗ ಹೇಗಾದೀತು? ಬಳಿಕ ಅಂಗದನು ರಾವಣನಿಗೆ ಅನೇಕ ನೀತಿವಾಕ್ಯಗಳನ್ನು ಹೇಳಿದನು. ಆದರೆ ರಾವಣನಿಗೆ ಕಾಲವೇ ಸಮೀಪಿಸಿರುವುದರಿಂದ ಅವನ ಮೇಲೆ ಯಾವ ಪರಿಣಾಮವೂ ಆಗಲಿಲ್ಲ. ಗೋರ್ಕಲ್ಲಮೇಲೆ ನೀರೆರೆದಂತಾಯಿತು. ಶತ್ರುವಿನ ಮದ ಮಥನಮಾಡಿ ವಾಲಿಪುತ್ರ ಅಂಗದನು ಶ್ರೀರಾಮನ ನಿರ್ಮಲ ಕೀರ್ತಿಯನ್ನು ಕೊಂಡಾಡಿ ರಾವಣಾ! ರಣರಂಗದಲ್ಲಿ ನಿನ್ನನ್ನು ಅಡ್ಡಾಡುತ್ತಲೇ ಕೊಲ್ಲುವವರಿಗೆ ನನ್ನ ದೊಡ್ಡತನವನ್ನು ಏಕೆ ಹೇಳಿಕೊಳ್ಳಲಿ?'' ಎಂದು ಹೇಳಿ ಹೊರಟನು. ಅಂಗದನು ಸಭೆಗೆ ಬರುವುದಕ್ಕೆ ಮುಂಚೆಯೇ ತನ್ನ ಕುಮಾರನನ್ನು ವಧಿಸಿದ ವಿಷಯವನ್ನು ಅರಿತು ರಾವಣನು ದುಃಖಿತನಾದನು. ಅಂಗದನ ಪ್ರತಿಜ್ಞೆ ಸಫಲವಾದುದನ್ನು ನೋಡಿ ರಾಕ್ಷಸರೆಲ್ಲರೂ ಭಯಕಂಪಿತರಾದರು. (ಚೌ/೧-೭)

**ದೋ – ರಿಪು ಬಲ ಧರಷಿ ಹರಷಿ ಕಪಿ ಬಾಲಿತನಯ ಬಲ ಪುಂಜ ।**
**ಪುಲಕ ಸರೀರ ನಯನ ಜಲ ಗಹೇ ರಾಮ ಪದ ಕಂಜ ॥ ೩೫ (ಕ)॥**

ಶತ್ರುಬಲವನ್ನು ಮರ್ದಿಸಿ ಬಲಶಾಲಿಯಾದ ವಾಲಿತನಯನು ಹರ್ಷಿತನಾಗಿ ಮರಳಿಬಂದು ಶ್ರೀರಾಮಚಂದ್ರನ ಚರಣಗಳಿಗೆ ಎರಗಿದನು. ಅವನ ಶರೀರ ಪುಳಕಗೊಂಡಿತ್ತು. ಕಣ್ಣಿನಲ್ಲಿ ಆನಂದಾಶ್ರುಗಳು ಹರಿಯುತ್ತಿದ್ದವು. (ದೋ/೩೫ ಕ)

## ರಾವಣನಿಗೆ ಮಂಡೋದರಿಯ ಹಿತವಚನ

**ಸಾಂಝು ಜಾನಿ ದಸಕಂಧರ ಭವನ ಗಯಉ ಬಿಲಖಾಇ ।**
**ಮಂದೋದರೀಂ ರಾವನಹಿ ಬಹುರಿ ಕಹಾ ಸಮುಝಾಇ ॥ ೩೫(ಖ)॥**

ಸಂಜೆಯಾದುದನ್ನು ತಿಳಿದು ದಶಕಂಠ ರಾವಣನು ವಿಚಾರಗ್ರಸ್ತನಾಗಿ ದುಗುಡದಿಂದ ತನ್ನ ಭವನವನ್ನು ಸೇರಿದನು. ಅಲ್ಲಿ ಮಂಡೋದರಿಯು ಅವನಿಗೆ ಪುನಃ ವಿವೇಕ ಹೇಳಿದಳು – (ದೋ/೩೫ ಖ)

**ಚೌ – ಕಂತ ಸಮುಝಿ ಮನ ತಜಹು ಕುಮತಿಹೀ । ಸೋಹ ನ ಸಮರ ತುಮ್ಹಹಿ ರಘುಪತಿಹೀ ॥**
**ರಾಮಾನುಜ ಲಘು ರೇಖ ಖಚಾಈ । ಸೋಉ ನಹಿಂ ನಾಘೆಹು ಅಸಿ ಮನುಸಾಈ॥ ೧ ॥**
**ಪಿಯ ತುಮ್ಹ ತಾಹಿ ಜಿತಬ ಸಂಗ್ರಾಮಾ । ಜಾಕೇ ದೂತ ಕೇರ ಯಹ ಕಾಮಾ ॥**
**ಕೌತುಕ ಸಿಂಧು ನಾಘಿ ತವ ಲಂಕಾ । ಆಯಉ ಕಪಿ ಕೇಹರೀ ಅಸಂಕಾ ॥ ೨ ॥**
**ರಖವಾರೇ ಹತಿ ಬಿಪಿನ ಉಜಾರಾ । ದೇಖತ ತೋಹಿ ಅಚ್ಛ ತೆಹಿಂ ಮಾರಾ ॥**
**ಜಾರಿ ಸಕಲ ಪುರ ಕೀನ್ಹೆಸಿ ಛಾರಾ । ಕಹಾಂ ರಹಾ ಬಲ ಗರ್ಬ ತುಮ್ಹಾರಾ॥ ೩ ॥**
**ಅಬ ಪತಿ ಮೃಷಾ ಗಾಲ ಜನಿ ಮಾರಹು । ಮೋರ ಕಹಾ ಕಛು ಹೃದಯಂ ಬಿಚಾರಹು ॥**
**ಪತಿ ರಘುಪತಿಹಿ ನೃಪತಿ ಜನಿ ಮಾನಹು । ಅಗ ಜಗ ನಾಥ ಅತುಲ ಬಲ ಜಾನಹು ॥ ೪ ॥**
**ಬಾನ ಪ್ರತಾಪ ಜಾನ ಮಾರೀಚಾ । ತಾಸು ಕಹಾ ನಹಿಂ ಮಾನೆಹಿ ನೀಚಾ ॥**
**ಜನಕ ಸಭಾಂ ಅಗನಿತ ಭೂಪಾಲಾ । ರಹೇ ತುಮ್ಹಉ ಬಲ ಅತುಲ ಬಿಸಾಲಾ॥ ೫ ॥**
**ಭಂಜಿ ಧನುಷ ಜಾನಕೀ ಬಿಆಹೀ । ತಬ ಸಂಗ್ರಾಮ ಜಿತೆಹು ಕಿನ ತಾಹೀ ॥**
**ಸುರಪತಿ ಸುತ ಜಾನಇ ಬಲ ಥೋರಾ । ರಾಖಾ ಜಿಅತ ಆಂಖಿ ಗಹಿ ಫೋರಾ ॥ ೬ ॥**
**ಸೂಪನಖಾ ಕೈ ಗತಿ ತುಮ್ಹ ದೇಖೀ । ತದಪಿ ಹೃದಯಂ ನಹಿಂ ಲಾಜ ಬಿಸೇಷೀ॥ ೭ ॥**

''ಹೇ ಪ್ರಾಣಕಾಂತಾ! ಮನಸ್ಸಿನಲ್ಲಿ ಚೆನ್ನಾಗಿ ಆಲೋಚಿಸಿ ನಿಮ್ಮ ದುರ್ಬುದ್ಧಿಯನ್ನು ಬಿಡಿರಿ. ನಿಮಗೂ ಶ್ರೀರಘುನಾಥನಿಗೂ ಸಮರ ಶೋಭಿಸದು. (ಅವನೊಡನೆ ಯುದ್ಧಮಾಡಲು ನೀವು ಯೋಗ್ಯರಲ್ಲ.) ಅವನ ತಮ್ಮನಾದ ಲಕ್ಷ್ಮಣನು ಎಳೆದ ಸಣ್ಣ ಗೆರೆಯನ್ನು ನೀವು ದಾಟಲಾರದೆ ಹೋದಿರಿ. ಇದು ನಿಮ್ಮ ಪೌರುಷ! ಆತನ ದೂತನೇ ಎಷ್ಟು ದೊಡ್ಡ ಕಾರ್ಯವನ್ನೆಸಗಿದನು. ಅಂತಹ ಪ್ರಭುವನ್ನು ನೀವು ಯುದ್ಧದಲ್ಲಿ ಗೆಲ್ಲಬಲ್ಲಿರಾ? ಪ್ರಾಣನಾಥಾ! ಆ ಕಪಿಸಿಂಹ ಹನುಮಂತನು ಆಡುತ್ತಾಡುತ್ತಾ ಸಮುದ್ರವನ್ನು ಹಾರಿ ನಿಮ್ಮ ಲಂಕೆಯನ್ನು ನಿರ್ಭಯವಾಗಿ ಪ್ರವೇಶಿಸಿದನು. ಅಶೋಕವನದ ರಕ್ಷಕರನ್ನು ಸದೆಬಡಿದು, ಅದನ್ನು ಹಾಳುಗೆಡಹಿದನು. ನೀವು ನೋಡುನೋಡುತ್ತಿರುವಂತೆ ಅಕ್ಷಕುಮಾರನನ್ನು ಕೊಂದುಹಾಕಿದನು. ಲಂಕೆಯನ್ನು ಸುಟ್ಟು ಬೂದಿಮಾಡಿದನು. ಆಗ ನಿಮ್ಮ ಬಲ-ಗರ್ವಗಳು ಎಲ್ಲಿಗೆ ಹೋಗಿತ್ತು? ಸ್ವಾಮಿ! ಈಗ ವ್ಯರ್ಥವಾಗಿ ಬಡಾಯಿ ಕೊಚ್ಚಿಕೊಳ್ಳಬೇಡಿ. ನನ್ನ ಮಾತನ್ನು ಶ್ರದ್ಧೆಯಿಂದ ಆಲಿಸಿರಿ. ನಾಥಾ! ನೀವು ಶ್ರೀರಘುಪತಿಯನ್ನು ಬರಿಯ ಒಬ್ಬ ರಾಜನೆಂದು ಭಾವಿಸಬೇಡಿ. ಅವನು ಈ ಚರಾಚರ ಜಗತ್ತಿಗೆ ಒಡೆಯನೆಂದೂ, ಅದ್ವಿತೀಯ ಪರಾಕ್ರಮಶಾಲಿಯೆಂದೂ ತಿಳಿದುಕೊಳ್ಳಿರಿ. ಆತನ ಬಾಣದ ಪ್ರತಾಪವನ್ನು ಮಾರೀಚನು ತಿಳಿಸಿದ್ದನು. ಆದರೆ ನೀವು ಅವನ ಮಾತಿಗೂ ಕಿವಿಗೊಡಲಿಲ್ಲ. ಜನಕನ ಸಭೆಯಲ್ಲಿ ಲೆಕ್ಕವಿಲ್ಲದಷ್ಟು ರಾಜರು ಸೇರಿದ್ದರು. ಅಸಮಾನ ಬಲಶಾಲಿಗಳಾದ ನೀವೂ ಕೂಡ ಅಲ್ಲೇ ಇದ್ದಿರಿ. ಅಲ್ಲಿ ಶಿವಧನುರ್ಭಂಗಗೈದು ಅವನು ಸೀತೆಯನ್ನು ವಿವಾಹವಾದನು. ಆಗ ನೀವು ಅವನನ್ನು ಯುದ್ಧದಲ್ಲಿ ಏಕೆ ಗೆಲ್ಲಲಿಲ್ಲ? ಇಂದ್ರಪುತ್ರ ಜಯಂತನು ಆತನ ಬಲದ ರುಚಿಯನ್ನು ಕೊಂಚ ಕಂಡಿದ್ದಾನೆ. ಶ್ರೀರಾಮನು ಅವನನ್ನು ಹಿಡಿದು ಅವನ ಒಂದು ಕಣ್ಣುಮಾತ್ರ ಕಿತ್ತು, ಅವನಿಗೆ ಪ್ರಾಣದಾನ ಮಾಡಿದನು. ಶೂರ್ಪಣಖಿಯ ದುರ್ದೆಸೆಯನ್ನು ನೀವು ಕಣ್ಣಾರೆ ಕಂಡಿರುವಿರಿ. ಇಷ್ಟಾದರೂ 'ಆತನೊಡನೆ ಹೋರಾಡುವೆನು' ಎಂದು ಹೇಳಲು ನಿಮಗೆ ನಾಚಿಕೆಯಾಗುವುದಿಲ್ಲವೇ? (ಚೌ/೧-೭)

**ದೋ – ಬಧಿ ಬಿರಾಧ ಖರ ದೂಷನಹಿ ಲೀಲಾ್ ಹತ್ಯೋ ಕಬಂಧ ।**
**ಬಾಲಿ ಏಕ ಸರ ಮಾರ್ಯೋ ತೆಹಿ ಜಾನಹು ದಸಕಂಧ ॥ ೩೬ ॥**

ಓ ದಶಕಂಠ! ವಿರಾಧ, ಖರ-ದೂಷಣರನ್ನು ಕೊಂದು, ಲೀಲಾಜಾಲವಾಗಿ ಕಬಂಧನನ್ನು ವಧಿಸಿ, ಒಂದೇ ಬಾಣದಿಂದ ವಾಲಿಯನ್ನು ಯಮಸದನಕ್ಕೆ ಅಟ್ಟಿದನು. ನೀವು ಆ ಶ್ರೀರಾಮನ ಮಹತ್ವವನ್ನು ಮನದಟ್ಟುಮಾಡಿಕೊಳ್ಳಿ. (ದೋ/೩೬)

**ಚೌ – ಜೆಹಿ್ ಜಲನಾಥ ಬ್ಧಾಯಉ ಹೇಲಾ । ಉತರೇ ಪ್ರಭು ದಲ ಸಹಿತ ಸುಬೇಲಾ ॥**
**ಕಾರುನೀಕ ದಿನಕರ ಕುಲ ಕೇತೂ । ದೂತ ಪಠಾಯಉ ತವ ಹಿತ ಹೇತೂ ॥ ೧ ॥**
**ಸಭಾ ಮಾಝ ಜೆಹಿ್ ತವ ಬಲ ಮಥಾ । ಕರಿ ಬರೂಥ ಮಹು್ ಮೃಗಪತಿ ಜಥಾ ॥**
**ಅಂಗದ ಹನುಮತ ಅನುಚರ ಜಾಕೇ । ರನ ಬಾ್ಕುರೇ ಬೀರ ಅತಿ ಬಾ್ಕೇ ॥ ೨ ॥**
**ತೆಹಿ ಕಹ್ ಪಿಯ ಪುನಿ ಪುನಿ ನರ ಕಹಹೂ । ಮುಧಾ ಮಾನ ಮಮತಾ ಮದ ಬಹಹೂ ॥**
**ಅಹಹ ಕಂತ ಕೃತ ರಾಮ ಬಿರೋಧಾ । ಕಾಲ ಬಿಬಸ ಮನ ಉಪಜ ನ ಬೋಧಾ ॥ ೩ ॥**
**ಕಾಲ ದಂಡ ಗಹಿ ಕಾಹು ನ ಮಾರಾ । ಹರಇ ಧರ್ಮ ಬಲ ಬುದ್ಧಿ ಬಿಚಾರಾ ॥**
**ನಿಕಟ ಕಾಲ ಜೆಹಿ ಆವತ ಸಾಈ್ । ತೆಹಿ ಭ್ರಮ ಹೋಇ ತುಮ್ಹಾರಿಹಿ ನಾಈ್ ॥ ೪ ॥**

ಅವನು ಆಯಾಸವಿಲ್ಲದೆ ಸಮುದ್ರಕ್ಕೆ ಸೇತುವೆ ನಿರ್ಮಿಸಿ, ತನ್ನ ಸೈನ್ಯದೊಂದಿಗೆ ಸುವೇಲಪರ್ವತದ ಮೇಲೆ ಬಂದಿಳಿದಿರುವನು. ಸೂರ್ಯವಂಶಶ್ರೇಷ್ಠನೂ, ಕರುಣಾಮಯನೂ ಆದ ಶ್ರೀರಾಮಚಂದ್ರಪ್ರಭುವು ನಿಮ್ಮ ಒಳಿತಿಗಾಗಿಯೇ ತನ್ನ ದೂತನನ್ನು ಕಳಿಸಿದನು. ಆ ದೂತನು ತುಂಬಿದ ಸಭೆಯಲ್ಲಿ ಆನೆಗಳ ಸಮೂಹದಲ್ಲಿ ಸಿಂಹದಂತೆ ನಿಮ್ಮ ಬಲವನ್ನು ನಿಸ್ತೇಜಗೊಳಿಸಿದನು. ಹನುಮಂತ, ಅಂಗದರಂತಹ ಮಹಾಯೋಧರು ಅವನ ಬಳಿ ಅನೇಕ ಮಂದಿ ಸೇವಕರಿದ್ದಾರೆ. ಅಂತಹ ಮಹಾವೀರನನ್ನು ನೀವು ಮಾತುಮಾತಿಗೆ 'ಮಾನವನು', 'ತಾಪಸನು' ಎಂದು ಹೇಳುತ್ತಿರುವಿರಲ್ಲ! ಅಭಿಮಾನ, ಗರ್ವ, ಮಮಕಾರ ಇವುಗಳ ಹೊರೆಯನ್ನು ವ್ಯರ್ಥವಾಗಿ ಹೊರುತ್ತಿರುವಿರಲ್ಲ ! ಪ್ರಿಯತಮಾ! ನೀವು ಶ್ರೀರಾಮನಲ್ಲಿವೈರವನ್ನು ಕಟ್ಟಿಕೊಂಡಿರಿ. ಕಾಲಕ್ಕೆ ವಶನಾದ್ದರಿಂದ ನಿಮಗೆ ಜ್ಞಾನೋದಯವಾಗಲಿಲ್ಲ. ಕಾಲನು ತನ್ನ ದಂಡದಿಂದ ಯಾರನ್ನು ಬಡಿಯುವುದಿಲ್ಲ. ಅವನು ಧರ್ಮ, ಬಲ, ಬುದ್ಧಿ, ವಿಚಾರಗಳನ್ನು ಕಸಿದುಕೊಂಡು ಬಿಡುತ್ತಾನೆ. ನಾಥಾ! ಕಾಲಸನ್ನಿಹಿತವಾಗಿರುವವರಿಗೆ ನಿಮ್ಮಂತೆಯೇ ಬುದ್ಧಿಭ್ರಮಣೆಯಾಗುತ್ತದೆ. (ಚೌ/೧-೪)

**ದೋ – ದುಇ ಸುತ ಮರೇ ದಹೆಉ ಪುರ ಅಜಹು್ ಪೂರ ಪಿಯ ದೇಹು।**
**ಕೃಪಾಸಿಂಧು ರಘುನಾಥ ಭಜಿ ನಾಥ ಬಿಮಲ ಜಸು ಲೇಹು ॥ ೩೭ ॥**

ನಿಮ್ಮ ಇಬ್ಬರೂ ಪುತ್ರರು ಕಾಲನಿಗೆ ಗ್ರಾಸವಾದರು. ಲಂಕೆಯು ಬೆಂಕಿಯ ಪಾಲಾಯಿತು. ಹೋಗಲಿಬಿಡಿ, ಆದದ್ದಾಯಿತು. ಪ್ರಿಯತಮಾ! ಈಗಲಾದರೂ ನಿಮ್ಮ ತಪ್ಪನ್ನು ತಿದ್ದಿಕೊಳ್ಳಿ. ಕೃಪಾಸಿಂಧುವಾದ ಶ್ರೀರಾಮನನ್ನು ಭಜಿಸಿ ವಿಮಲಕೀರ್ತಿಗೆ ಭಾಜನರಾಗಿರಿ.'' (ದೋ/೩೭)

**ಚೌ – ನಾರಿ ಬಚನ ಸುನಿ ಬಿಸಿಖ ಸಮಾನಾ । ಸಭಾ್ ಗಯಉ ಉಠಿ ಹೋತ ಬಿಹಾನಾ ॥**
**ಬೈಠ ಜಾಇ ಸಿಂಘಾಸನ ಫೂಲೀ । ಅತಿ ಅಭಿಮಾನ ತ್ರಾಸ ಸಬ ಭೂಲೀ ॥ ೧ ॥**
**ಇಹಾ್ ರಾಮ ಅಂಗದಹಿ ಬೊಲಾವಾ । ಆಇ ಚರನ ಪಂಕಜ ಸಿರು ನಾವಾ ॥**
**ಅತಿ ಆದರ ಸಮೀಪ ಬೈಠಾರೀ । ಬೋಲೇ ಬಿಹ್ಸಿ ಕೃಪಾಲ ಖರಾರೀ ॥ ೨ ॥**
**ಬಾಲಿತನಯ ಕೌತುಕ ಅತಿ ಮೋಹೀ । ತಾತ ಸತ್ಯ ಕಹು ಪೂಛಉ್ ತೋಹೀ ॥**
**ರಾವನು ಜಾತುಧಾನ ಕುಲ ಟೀಕಾ । ಭುಜ ಬಲ ಅತುಲ ಜಾಸು ಜಗ ಲೀಕಾ ॥ ೩ ॥**
**ತಾಸು ಮುಕುಟ ತುಮ್ಹ ಚಾರಿ ಚಲಾಏ । ಕಹಹು ತಾತ ಕವನೀ ಬಿಧಿ ಪಾಏ ॥**
**ಸುನು ಸರ್ಬಗ್ಯ ಪ್ರನತ ಸುಖಕಾರೀ । ಮುಕುಟ ನ ಹೋಹಿ್ ಭೂಪ ಗುನ ಚಾರೀ ॥ ೪ ॥**
**ಸಾಮ ದಾನ ಅರು ದಂಡ ಬಿಭೇದಾ । ನೃಪ ಉರ ಬಸಹಿ್ ನಾಥ ಕಹ ಬೇದಾ ॥**
**ನೀತಿ ಧರ್ಮ ಕೇ ಚರನ ಸುಹಾಏ । ಅಸ ಜಿಯ್ ಜಾನಿ ನಾಥ ಪಹಿ್ ಆಏ ॥ ೫ ॥**

ಅಂಬಿನಂತೆ ನಾಟಿದ ಪತ್ನಿಯ ಮಾತುಗಳನ್ನು ಕೇಳಿ, ಅವನ್ನು ಲೆಕ್ಕಿಸದೆ, ಬೆಳಗಾಗುತ್ತಲೇ ಎದ್ದು ಸಭಾಸ್ಥಾನಕ್ಕೆ ತೆರಳಿದನು. ಎಲ್ಲ ಭಯವನ್ನು ಮರೆತು ಅವನು ಗರ್ವದಿಂದ ಬೀಗಿ ಸಿಂಹಾಸನವನ್ನಡರಿ ಕುಳಿತುಕೊಂಡನು.

ಇತ್ತ ಸುವೇಲಪರ್ವತದ ಮೇಲೆ ಶ್ರೀರಾಮನು ಅಂಗದನನ್ನು ಬರಮಾಡಿಕೊಂಡನು. ಅವನು ಬಂದು ಭಗವಂತನ ಚರಣಗಳಲ್ಲಿ ಹಣೆಚಾಚಿದನು. ಆಗ ಕೃಪಾಳುವಾದ ಖರಾರಿಯು ಆತನನ್ನು ಆದರದಿಂದ ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡು ಮುಗುಳ್ನಕ್ಕು ಇಂತೆಂದನು – ''ಎಲೈ ವಾಲಿನಂದನನೇ! ನನಗೆ ನಿಜಕ್ಕೂ ತುಂಬಾ ಕೌತುಕವಾಯಿತು. ಆದ್ದರಿಂದ ನಿನ್ನನ್ನು ಕೇಳುತ್ತಿದ್ದೇನೆ. ನಿಜ ಹೇಳು! ರಾವಣನು ರಾಕ್ಷಸಕುಲತಿಲಕ. ಅತುಲ ಬಲಶಾಲಿ ಜಗತ್ಪ್ರಸಿದ್ಧನಲ್ಲವೇ! ಅಂತಹವನ ನಾಲ್ಕು ಕಿರೀಟಗಳನ್ನು ನನ್ನೆಡೆಗೆ ಎಸೆದೆಯಲ್ಲ. ಅಯ್ಯಾ! ಅವು ನಿನಗೆ ಹೇಗೆ ಲಭಿಸಿದವು?'' ಅಂಗದನು ನುಡಿದನು – ಓ ಸರ್ವಜ್ಞಮೂರ್ತಿ! ಶರಣಾಗತವತ್ಸಲಾ! ಕೇಳಿರಿ. ಅವು ಕಿರೀಟಗಳಲ್ಲ,. ರಾಜನ ನಾಲ್ಕು ಗುಣಗಳು. ಸ್ವಾಮಿ! ಸಾಮ, ದಾನ, ದಂಡ, ಭೇದಗಳೆಂಬ ಚತುರೋಪಾಯಗಳು ರಾಜನ ಹೃದಯದಲ್ಲಿ ನೆಲೆಸಿರುತ್ತವೆ ಎಂದು ವೇದಗಳು ಹೇಳುತ್ತವೆ. ಇವು ನೀತಿ ಧರ್ಮದ ನಾಲ್ಕು ಸುಂದರ ಚರಣಗಳಾಗಿವೆ. ಆದರೆ ರಾವಣನಲ್ಲಿ ಧರ್ಮದ ಅಭಾವವಿದೆ ಎಂದು ತಿಳಿದು ಅವು ನಿಮ್ಮ ಬಳಿಗೆ ಬಂದಿರುವುವು. ಅವು ನಿಮ್ಮ ಚರಣಗಳಲ್ಲಿ ಶೋಭಿಸುವವು. (ಚೌ/೧-೫)

**ದೋ – ಧರ್ಮಹೀನ ಪ್ರಭು ಪದ ಬಿಮುಖ ಕಾಲ ಬಿಬಸ ದಸಸೀಸ ।**
**ತೆಹಿ ಪರಿಹರಿ ಗುನ ಆಏ ಸುನಹು ಕೋಸಲಾಧೀಸ ॥ ೩೮ (ಕ) ॥**
**ಪರಮ ಚತುರತಾ ಶ್ರವನ ಸುನಿ ಬಿಹँಸೇ ರಾಮು ಉದಾರ ।**
**ಸಮಾಚಾರ ಪುನಿ ಸಬ ಕಹೇ ಗಢ಼ ಕೇ ಬಾಲಿಕುಮಾರ ॥ ೩೮(ಖ)॥**

ದಶಕಂಠ ರಾವಣನು ಧರ್ಮಹೀನನು, ಪ್ರಭುಪದವಿಮುಖನು, ಕಾಲವಶನು. ಓ ಕೋಸಲಾಧೀಶ! ಆದ್ದರಿಂದಲೇ ಆ ಗುಣಗಳು ರಾವಣನನ್ನು ತೊರೆದು ನಿಮ್ಮನ್ನು ಆಶ್ರಯಿಸಿವೆ. ಅಂಗದನ ವಾಕ್ಚಾತುರ್ಯಕ್ಕೆ ಶ್ರೀರಾಮಚಂದ್ರನು ನಗತೊಡಗಿದನು. ಮತ್ತೆ ವಾಲಿಪುತ್ರನು ಲಂಕಾದುರ್ಗದ ಕುರಿತು ವಿವರಿಸಿದನು. (ದೋ/೩೮ ಕ, ಖ)

## ಲಂಕೆಗೆ ಮುತ್ತಿಗೆ – ರಾಕ್ಷಸರೊಡನೆ ವಾನರ-ಭಲ್ಲೂಕಗಳ ಹೋರಾಟ

**ಚೌ – ರಿಪು ಕೇ ಸಮಾಚಾರ ಜಬ ಪಾಏ । ರಾಮ ಸಚಿವ ಸಬ ನಿಕಟ ಬೊಲಾಏ ॥**
**ಲಂಕಾ ಬಾँಕೇ ಚಾರಿ ದುಆರಾ । ಕೆಹಿ ಬಿಧಿ ಲಾಗಿಅ ಕರಹು ಬಿಚಾರಾ ॥ ೧ ॥**
**ತಬ ಕಪೀಸ ರಿಚ್ಛೇಸ ಬಿಭೀಷನ । ಸುಮಿರಿ ಹೃದಯ್ ದಿನಕರ ಕುಲ ಭೂಷನ ॥**
**ಕರಿ ಬಿಚಾರ ತಿನ್ಹ ಮಂತ್ರ ದೃಢಾವಾ । ಚಾರಿ ಅನೀ ಕಪಿ ಕಟಕು ಬನಾವಾ ॥ ೨ ॥**
**ಜಥಾಜೋಗ ಸೇನಾಪತಿ ಕೀನ್ಹೇ । ಜೂಥಪ ಸಕಲ ಬೋಲಿ ತಬ ಲೀನ್ಹೇ ॥**
**ಪ್ರಭು ಪ್ರತಾಪ ಕಹಿ ಸಬ ಸಮುಝಾಏ । ಸುನಿ ಕಪಿ ಸಿಂಘನಾದ ಕರಿ ಧಾಏ ॥ ೩ ॥**
**ಹರಷಿತ ರಾಮ ಚರನ ಸಿರ ನಾವಹಿँ । ಗಹಿ ಗಿರಿ ಸಿಖರ ಬೀರ ಸಬ ಧಾವಹಿँ ॥**
**ಗರ್ಜಹಿँ ತರ್ಜಹಿँ ಭಾಲು ಕಪೀಸಾ । ಜಯ ರಘುಬೀರ ಕೋಸಲಾಧೀಸಾ ॥ ೪ ॥**
**ಜಾನತ ಪರಮ ದುರ್ಗ ಅತಿ ಲಂಕಾ । ಪ್ರಭು ಪ್ರತಾಪ ಕಪಿ ಚಲೇ ಅಸಂಕಾ ॥**
**ಘಟಾಟೋಪ ಕರಿ ಚಹುँ ದಿಸಿ ಘೇರೀ । ಮುಖಹಿँ ನಿಸಾನ ಬಜಾವಹೀँ ಭೇರೀ ॥ ೫ ॥**

ಶತ್ರುಸಮಾಚಾರವೆಲ್ಲವನ್ನು ಪೂರ್ಣವಾಗಿ ತಿಳಿದಬಳಿಕ ಶ್ರೀರಾಮನು ತನ್ನ ಮಂತ್ರಿಗಳೆಲ್ಲರನ್ನು ಬಳಿಗೆ ಕರೆಸಿ ಇಂತೆಂದನು – ''ಲಂಕೆಗೆ ನಾಲ್ಕು ಅಭೇದ್ಯ ದ್ವಾರಗಳಿವೆ. ಅವುಗಳನ್ನು ಭೇದಿಸಿ ಲಂಕೆಯ ಮೇಲೆ ಹೇಗೆ ಆಕ್ರಮಿಸಬಹುದೆಂದು ಯೋಚನೆಮಾಡಿ ತಿಳಿಸಿ.'' ಆಗ ವಾನರರಾಜ ಸುಗ್ರೀವ, ಭಲ್ಲೂಕರೊಡೆಯ ಜಾಂಬವಂತರು, ಲಂಕೇಶ್ವರ ವಿಭೀಷಣ ಇವರುಗಳು ಹೃದಯದಲ್ಲಿ ಸೂರ್ಯವಂಶಭೂಷಣವಾದ ಶ್ರೀರಾಮನನ್ನು ಸ್ಮರಿಸುತ್ತಾ ಕರ್ತವ್ಯವನ್ನು ಆಲೋಚಿಸಿದರು. ವಾನರಸೇನೆಯನ್ನು ನಾಲ್ಕು ತಂಡಗಳಾಗಿ ವಿಂಗಡಿಸಲಾಯಿತು. ಅವುಗಳಿಗೆ ಸಮರ್ಥರಾದ ಸೇನಾಪತಿಗಳನ್ನು ನೇಮಿಸಿದರು. ಮತ್ತೆ ಸೇನಾಪತಿಗಳನ್ನು ಕರೆಸಿ, ಶ್ರೀರಾಮಚಂದ್ರನ ಪ್ರತಾಪವನ್ನು ಅರುಹಿ ಪ್ರೋತ್ಸಾಹಿಸಿದರು. ಅದನ್ನು ಕೇಳಿ ವಾನರರು ಸಿಂಹದಂತೆ ಗರ್ಜಿಸುತ್ತಾ ಧಾವಿಸಿದರು. ಅವರೆಲ್ಲ ಹರ್ಷೋತ್ಫುಲ್ಲರಾಗಿ ಶ್ರೀರಾಮನ ಚರಣಗಳಿಗೆ ಶಿರಸಾವಂದಿಸಿ, 'ಕೋಸಲರಾಜ ಶ್ರೀರಾಮಚಂದ್ರನಿಗೆ ಜಯವಾಗಲೀ'' ಎಂದು ಗರ್ಜಿಸುತ್ತಾ ವಾನರ-ಭಲ್ಲೂಕಗಳು ಪರ್ವತ ಶಿಖರಗಳನ್ನು ಎತ್ತಿಕೊಂಡು ಮುಂದಕ್ಕೆ ಸಾಗಿದರು. ಲಂಕೆಯು ಅಜೇಯವಾದ ಕೋಟೆ ಎಂದು ತಿಳಿದಿದ್ದರೂ, ಶ್ರೀರಾಮಚಂದ್ರನ ಪರಾಕ್ರಮಪ್ರಭಾವದಿಂದ ಅವರು ನಿರ್ಭಯರಾಗಿ

ಹೊರಟರು. ನಾಲ್ಕೂ ದಿಕ್ಕುಗಳಿಂದ ಮುತ್ತುವ ಮೋಡಗಳಂತೆ ಸುತ್ತಲೂ ಸುತ್ತುವರಿದು ಅವರು ಬಾಯಿಯಿಂದಲೇ ಭೇರಿ, ನಗಾರಿಗಳ ಶಬ್ದ ಮಾಡತೊಡಗಿದರು. (ಚೌ/೧-೫)

**ದೋ – ಜಯತಿ ರಾಮ ಜಯ ಲಛಿಮನ ಜಯ ಕಪೀಸ ಸುಗ್ರೀವ ।**
**ಗರ್ಜಹಿಂ ಸಿಂಘನಾದ ಕಪಿ ಭಾಲು ಮಹಾ ಬಲ ಸೀಂವ ॥ ೩೯ ॥**

ಅಪಾರ ಬಲಶಾಲಿಗಳಾದ ಭಲ್ಲೂಕ-ವಾನರರು – ''ಶ್ರೀರಾಮನಿಗೆ ಜಯವಾಗಲೀ, ಲಕ್ಷ್ಮಣನಿಗೆ ಜಯವಾಗಲೀ, ವಾನರರಾಜ ಸುಗ್ರೀವನಿಗೆ ಜಯವಾಗಲೀ ಎಂದು ಗರ್ಜಿಸುತ್ತಾ ಸಿಂಹನಾದಗೈದರು. (ದೋ/೩೯)

**ಚೌ – ಲಂಕಾಂ ಭಯಉ ಕೋಲಾಹಲ ಭಾರೀ । ಸುನಾ ದಸಾನನ ಅತಿ ಅಹಂಕಾರೀ ॥**
**ದೇಖಹು ಬನರನ್ಹ ಕೇರಿ ಢಿಠಾಈ । ಬಿಹಂಸಿ ನಿಸಾಚರ ಸೇನ ಬೊಲಾಈ ॥ ೧ ॥**
**ಆಏ ಕೀಸ ಕಾಲ ಕೇ ಪ್ರೇರೇ । ಛುಧಾವಂತ ಸಬ ನಿಸಿಚರ ಮೇರೇ ॥**
**ಅಸ ಕಹಿ ಅಟ್ಟಹಾಸ ಸಠ ಕೀನ್ಹಾ । ಗೃಹ ಬೈಠೇಂ ಅಹಾರ ಬಿಧಿ ದೀನ್ಹಾ ॥ ೨ ॥**
**ಸುಭಟ ಸಕಲ ಚಾರಿಹುಂ ದಿಸಿ ಜಾಹೂ । ಧರಿ ಧರಿ ಭಾಲು ಕೀಸ ಸಬ ಖಾಹೂ ॥**
**ಉಮಾ ರಾವನಹಿ ಅಸ ಅಭಿಮಾನಾ । ಜಿಮಿ ಟಿಟ್ಟಿಭ ಖಗ ಸೂತ ಉತಾನಾ ॥ ೩ ॥**
**ಚಲೇ ನಿಸಾಚರ ಆಯಸು ಮಾಗೀ । ಗಹಿ ಕರ ಭಿಂಡಿಪಾಲ ಬರ ಸಾಂಗೀ ॥**
**ತೋಮರ ಮುದ್ಗರ ಪರಸು ಪ್ರಚಂಡಾ । ಸೂಲ ಕೃಪಾನ ಪರಿಘ ಗಿರಿಖಂಡಾ ॥ ೪ ॥**
**ಜಿಮಿ ಅರುನೋಪಲ ನಿಕರ ನಿಹಾರೀ । ಧಾವಹಿಂ ಸಠ ಖಗ ಮಾಂಸ ಅಹಾರೀ ॥**
**ಚೋಂಚ ಭಂಗ ದುಖ ತಿನ್ಹಹಿ ನ ಸೂಝಾ । ತಿಮಿ ಧಾಏ ಮನುಜಾದ ಅಬೂಝಾ ॥ ೫ ॥**

ಈ ನಿನಾದದಿಂದ ಲಂಕೆಯಲ್ಲಿ ಎಲ್ಲೆಲ್ಲೂ ಕೋಲಾಹಲ ಉಂಟಾಯಿತು. ದುರಹಂಕಾರಿಯಾದ ರಾವಣನು ಇದನ್ನು ಕೇಳಿ, 'ಈ ವಾನರರ ಸಾಹಸವನ್ನು ನೋಡಿರಿ, ಠೇಂಕಾರವನ್ನು ನೋಡಿ' ಎಂದು ಹೇಳಿ ನಗುತ್ತಾ ತನ್ನ ನಿಶಾಚರ ಸೇನೆಯನ್ನು ಕರೆಸಿದನು – 'ಕಾಲನ ಪ್ರೇರಣೆಯಿಂದಲೇ ಈ ಕಪಿಗಳು ಧಾವಿಸಿ ಬಂದಿರುವರು. ನಮ್ಮ ರಕ್ಕಸರೆಲ್ಲ ಹಸಿದಿದ್ದಾರೆ. ವಿಧಿಯು ಕೂತಲ್ಲಿಗೇ, ಮನೆಬಾಗಿಲಿಗೆ ಆಹಾರವನ್ನು ಕಳಿಸಿರುವನು ಎಂದು ಹೇಳಿ ಆ ಮೂರ್ಖನು ವಿಕಟಾಟ್ಟಹಾಸಗೈದು ನುಡಿದನು – ಸುಭಟರೇ! ನೀವು ಲಂಕೆಯ ನಾಲ್ಕೂ ಕಡೆಗೆ ಹೋಗಿ ಕಪಿ-ಕರಡಿಗಳನ್ನು ಹಿಡಿದು ತಿಂದುಬಿಡಿ. ಶಿವನು ಹೇಳುತ್ತಾನೆ – ಭವಾನೀ! ಟಿಟ್ಟಿಭ ಪಕ್ಷಿಯು ತಲೆಕೆಳಗಾಗಿ ಕಾಲನ್ನು ಮೇಲಕ್ಕೆತ್ತಿ ಮಲಗಿರುವಂತೆ ರಾವಣನು ಗರ್ವಪಡುತ್ತಿದ್ದ. (ರಾತ್ರಿಯಲ್ಲಿ ಎಲ್ಲಾದರೂ ಆಕಾಶವೇ ತನ್ನ ಮೇಲೆ ಬೀಳಬಹುದೆಂಬ ಭಯದಿಂದ ಟಿಟ್ಟಿಭ ಪಕ್ಷಿಯು ತನ್ನ ಕಾಲನ್ನು ಮೇಲಕ್ಕೆತ್ತಿ ಆಕಾಶವನ್ನು ತಡೆದು ಹಿಡಿದೆನೆಂದು ಗರ್ವಪಡುತ್ತದೆ – ಎಂಬುದೊಂದು ಕಥೆ.) ಅಪ್ಪಣೆಪಡೆದು ಆ ರಕ್ಕಸರು ಕೈಯಲ್ಲಿ ಭಿಂಡಿವಾಳ, ಈಟಿ, ತೋಮರ, ಮುದ್ಗರ, ಪ್ರಚಂಡ ಗಂಡುಗೊಡಲಿ, ಇಬ್ಬಾಯಿಕತ್ತಿ, ಶೂಲ, ಕೃಪಾಣ, ಪರಿಘ ಮುಂತಾದ ಅನೇಕ ಆಯುಧಗಳನ್ನು ಪರ್ವತ ಶಿಖರಗಳನ್ನು ಎತ್ತಿಕೊಂಡು ಹರಿಹಾಯ್ದರು. ಮೂರ್ಖ ಮಾಂಸಾಹಾರಿ ಪಕ್ಷಿಗಳು ಕೆಂಪುಶಿಲೆಯ ಸಮೂಹವನ್ನು ಕಂಡು ಅದನ್ನು ಮಾಂಸವೆಂದು ಭ್ರಮಿಸಿ ಮೇಲೆರಗುವಂತೆ; ಹಾಗೆ ಎರಗಿದರೆ ತಮ್ಮ ಕೊಕ್ಕು ಮುರಿದೀತು ಎಂದೂ ಅವಕ್ಕೆ ಹೊಳೆದು, ಹಾಗೆಯೇ ಈ ಅವಿವೇಕಿ ನರಮಾಂಸಭಕ್ಷಕರಾದ ರಾಕ್ಷಸರು ವಾನರ ಸೈನ್ಯದ ಮೇಲೆ ಎರಗಿದರು. (ಚೌ/೧-೫)

**ದೋ – ನಾನಾಯುಧ ಸರ ಚಾಪ ಧರ ಜಾತುಧಾನ ಬಲ ಬೀರ ।**
**ಕೋಟ ಕಂಗೂರನ್ಹಿ ಚಢಿ ಗಏ ಕೋಟಿ ಕೋಟಿ ರನಧೀರ ॥ ೪೦ ॥**

ನಾನಾ ವಿಧವಾದ ಶಸ್ತ್ರಾಸ್ತ್ರಗಳನ್ನು, ಧನುರ್ಬಾಣಗಳನ್ನು ಧರಿಸಿ, ಬಲಶಾಲಿಗಳೂ, ರಣಧೀರರೂ, ವೀರರೂ ಆದ ಅಸಂಖ್ಯಾತ ರಾಕ್ಷಸರು ಕೋಟೆಯ ಬುರುಜು, ಗೋಡೆಗಳನ್ನೇರಿದರು. (ದೋ/೪೦)

**ಚೌ – ಕೋಟ ಕಂಗೂರನ್ಹಿ ಸೋಹಹಿಂ ಕೈಸೇ । ಮೇರು ಕೆ ಸೃಂಗನಿ ಜನು ಘನ ಬೈಸೇ ॥**
**ಬಾಜಹಿಂ ಢೋಲ ನಿಸಾನ ಜುಝಾಊ । ಸುನಿ ಧುನಿ ಹೋಇ ಭಟನ್ಹಿ ಮನ ಚಾಊ ॥ ೧ ॥**
**ಬಾಜಹಿಂ ಭೇರಿ ನಫೀರಿ ಅಪಾರಾ । ಸುನಿ ಕಾದರ ಉರ ಜಾಹಿಂ ದರಾರಾ ॥**
**ದೇಖಿನ್ಹ ಜಾಇ ಕಪಿನ್ಹ ಕೇ ಠಟ್ಟಾ । ಅತಿ ಬಿಸಾಲ ತನು ಭಾಲು ಸುಭಟ್ಟಾ ॥ ೨ ॥**
**ಧಾವಹಿಂ ಗನಹಿಂ ನ ಅವಘಟ ಘಾಟಾ । ಪರ್ಬತ ಫೋರಿ ಕರಹಿಂ ಗಹಿ ಬಾಟಾ ॥**
**ಕಟಕಟಾಹಿಂ ಕೋಟಿನ್ಹ ಭಟ ಗರ್ಜಹಿಂ । ದಸನ ಓಠ ಕಾಟಹಿಂ ಅತಿ ತರ್ಜಹಿಂ ॥ ೩ ॥**

**ಉತ ರಾವನ ಇತ ರಾಮ ದೊಹಾಈ। ಜಯತಿ ಜಯತಿ ಜಯ ಪರೀ ಲರಾಈ॥**
**ನಿಸಿಚರ ಸಿಖರ ಸಮೂಹ ಢಹಾವಹಿಂ। ಕೂದಿ ಧರಹಿಂ ಕಪಿ ಫೇರಿ ಚಲಾವಹಿಂ॥೪॥**

ಸುಮೇರು ಪರ್ವತದ ಮೇಲೆ ಮೇಘಗಳು ಆವರಿಸಿದಂತೆ ರಾಜಪ್ರಾಸಾದದ ಗೋಡೆಗಳ ಮೇಲೆ ರಾಕ್ಷಸರು ವಿಜೃಂಭಿಸಿದರು. ಡೋಲು, ನಗಾರಿ, ದುಂದುಭಿಗಳು ಮೊಳಗಿದವು. ಅವುಗಳ ಪ್ರಚಂಡ ಧ್ವನಿಯನ್ನು ಕೇಳಿದ ಯೋಧರ ಮೈಯಲ್ಲಿ ರಣೋತ್ಸಾಹವು ಉಕ್ಕುತ್ತಿತ್ತು. ಎದೆ ಉಬ್ಬಿಬರುತ್ತಿತ್ತು. ಅಗಣಿತ ಕಹಳೆ, ಭೇರಿ, ತುರಹಿಗಳು ಮೊಳಗತೊಡಗಿದವು. ಆ ದನಿಯನ್ನು ಕೇಳಿದ ಹೇಡಿಗಳ ಎದೆ ಬಿರಿಯುತ್ತಿತ್ತು. ಆ ದಾನವ ವೀರರು ಕೋಟೆಯನ್ನೇರಿ ಅತಿ ವಿಶಾಲಕಾಯರಾದ ಭಲ್ಲೂಕ-ವಾನರರ ಗಡಣವನ್ನು ವೀಕ್ಷಿಸಿದರು. ಆ ಕಪಿ-ಕರಡಿಗಳಿಗೆ ಬೆಟ್ಟ, ಗುಡ್ಡ, ಕಣಿವೆ ಯಾವುದೂ ಲೆಕ್ಕವಿಲ್ಲ. ಅವೆಲ್ಲವನ್ನೂ ನಿರ್ಲಕ್ಷಿಸಿ ಧಾವಿಸುತ್ತಿವೆ. ಬೆಟ್ಟಗಳನ್ನು ಕಿತ್ತೆತ್ತಿ ದಾರಿ ಮಾಡುತ್ತಿವೆ. ಕೋಟಿ-ಕೋಟಿ ಭಟರು ಕಟಕಟಿಸುತ್ತಾ ಗರ್ಜಿಸುತ್ತಿದ್ದರು. ಅವರು ಔಡುಗಚ್ಚಿ ಗರ್ಜನೆ ಮಾಡುತ್ತಾ ಶತ್ರುಗಳನ್ನು ಹೆದರಿಸುತ್ತಿದ್ದರು. ಅತ್ತ ರಾವಣನಿಗೂ, ಇತ್ತ ರಾಮನಿಗೂ ಜಯವಾಗಲೀ, ಜಯವಾಗಲೀ ಎಂಬ ಜಯಕಾರವಾಗುತ್ತಲೇ ಕಾಳಗ ಹತ್ತಿಕೊಂಡಿತು. ರಾಕ್ಷಸರು ಪರ್ವತ ಶಿಖರಗಳನ್ನು ಕಿತ್ತೆಸೆಯತೊಡಗಿದರು. ವಾನರರು ನೆಗೆದು ಅವುಗಳನ್ನು ಆಂತುಕೊಂಡು ಮತ್ತೆ ಅವರತ್ತಲೇ ಬೀಸಿ ಎಸೆಯುತ್ತಿದ್ದರು. (ಚೌ/೧-೪)

**ಛಂ— ಧರಿ ಕುಧರ ಖಂಡ ಪ್ರಚಂಡ ಮರ್ಕಟ ಭಾಲು ಗಢ ಪರ ಡಾರಹೀಂ।**
**ಝಪಟಹಿಂ ಚರನ ಗಹಿ ಪಟಕಿ ಮಹಿ ಭಜಿ ಚಲತ ಬಹುರಿ ಪಚಾರಹೀಂ॥**
**ಅತಿ ತರಲ ತರುನ ಪ್ರತಾಪ ತರಪಹಿಂ ತಮಕಿ ಗಢ ಚಢಿ ಚಢಿ ಗಏ।**
**ಕಪಿ ಭಾಲು ಚಢಿ ಮಂದಿರನ್ಹ ಜಹಂ ತಹಂ ರಾಮ ಜಸು ಗಾವತ ಭಏ॥**

ಭಯಂಕರವಾದ ವಾನರ-ಭಲ್ಲೂಕಗಳು ಪರ್ವತ-ಶಿಲೆಗಳನ್ನು ಎತ್ತೆತ್ತಿ ಕೋಟೆಯ ಮೇಲೆ ಎಸೆಯತೊಡಗಿದವು. ಅವರು ನೆಗೆದು ರಕ್ಕಸರ ಕಾಲುಹಿಡಿದೆಳೆದು ಗಿರ-ಗಿರನೇ ತಿರುಗಿಸಿ ನೆಲಕ್ಕೆ ಅಪ್ಪಳಿಸುತ್ತಿದ್ದರು. ಓಡಿಹೋಗುವವರನ್ನು ಯುದ್ಧಕ್ಕೆ ಮೂದಲಿಸುತ್ತಿದ್ದರು. ಅತ್ಯಂತ ಚಂಚಲವಾದ ಪ್ರತಾಪಿ ವಾನರ-ಭಲ್ಲೂಕಗಳು ಅವರ್ಣನೀಯ ಸ್ಫೂರ್ತಿಯಿಂದ ಜಿಗಿದು ಕೋಟೆಯಮೇಲೆ ಲಗ್ಗೆಯಿಟ್ಟರು. ಊರೊಳಗೆ ಪ್ರವೇಶಿಸಿ ಎಲ್ಲೆಂದರಲ್ಲಿ ಭವನಗಳನ್ನು ಹೊಕ್ಕು ಶ್ರೀರಾಮನ ಕೀರ್ತಿಯನ್ನು ಉಗ್ಗಡಿಸತೊಡಗಿದರು. (ಛಂದ)

**ದೋ— ಏಕು ಏಕು ನಿಸಿಚರ ಗಹಿ ಪುನಿ ಕಪಿ ಚಲೇ ಪರಾಇ।**
**ಊಪರ ಆಪು ಹೇಠ ಭಟ ಗಿರಹಿಂ ಧರನಿ ಪರ ಆಇ॥೪೧॥**

ಮತ್ತೆ ವಾನರವೀರರು ನಿಶಾಚರಯೋಧರನ್ನು ಹಿಡಿದುಎತ್ತಿಕೊಂಡು ಭವನಗಳ ಮೇಲಿಂದ ಕೆಳಗೆ ಎಸೆಯುತ್ತಿದ್ದರು. ಮೇಲಿನಿಂದ ಬಿದ್ದ ರಕ್ಕಸರು ನುಚ್ಚುನೂರಾಗುತ್ತಿದ್ದರು. ಕೆಲವರು ರಕ್ಕಸರನ್ನು ಎತ್ತಿಕೊಂಡೇ ಧುಮುಕುತ್ತಿದ್ದರು. ಕೆಳಗೆ ರಕ್ಕಸ ಮೇಲೆ ವಾನರ. ಹೀಗೆ ರಾಕ್ಷಸರನ್ನು ಮರ್ದಿಸುತ್ತಿದ್ದರು. (ದೋ/೪೧)

**ಚೌ— ರಾಮ ಪ್ರತಾಪ ಪ್ರಬಲ ಕಪಿಜೂಥಾ। ಮರ್ದಹಿಂ ನಿಸಿಚರ ಸುಭಟ ಬರೂಥಾ॥**
**ಚಢೇ ದುರ್ಗ ಪುನಿ ಜಹಂ ತಹಂ ಬಾನರ। ಜಯ ರಘುಬೀರ ಪ್ರತಾಪ ದಿವಾಕರ॥೧॥**
**ಚಲೇ ನಿಸಾಚರ ನಿಕರ ಪರಾಈ। ಪ್ರಬಲ ಪವನ ಜಿಮಿ ಘನ ಸಮುದಾಈ॥**
**ಹಾಹಾಕಾರ ಭಯಉ ಪುರ ಭಾರೀ। ರೋವಹಿಂ ಬಾಲಕ ಆತುರ ನಾರೀ॥೨॥**
**ಸಬ ಮಿಲಿ ದೇಹಿಂ ರಾವನಹಿಂ ಗಾರೀ। ರಾಜ ಕರತ ಏಹಿಂ ಮೃತ್ಯು ಹಂಕಾರೀ॥**
**ನಿಜ ದಲ ಬಿಚಲ ಸುನೀ ತೆಹಿಂ ಕಾನಾ। ಫೇರಿ ಸುಭಟ ಲಂಕೇಸ ರಿಸಾನಾ॥೩॥**
**ಜೋ ರನ ಬಿಮುಖ ಸುನಾ ಮೈಂ ಕಾನಾ। ಸೋ ಮೈಂ ಹತಬ ಕರಾಲ ಕೃಪಾನಾ॥**
**ಸರ್ಬಸು ಖಾಇ ಭೋಗ ಕರಿ ನಾನಾ। ಸಮರ ಭೂಮಿ ಭಏ ಬಲ್ಲಭ ಪ್ರಾನಾ॥೪॥**
**ಉಗ್ರ ಬಚನ ಸುನಿ ಸಕಲ ಡೆರಾನೇ। ಚಲೇ ಕ್ರೋಧ ಕರಿ ಸುಭಟ ಲಜಾನೇ॥**
**ಸನ್ಮುಖ ಮರನ ಬೀರ ಕೈ ಸೋಭಾ। ತಬ ತಿನ್ಹ ತಜಾ ಪ್ರಾನ ಕರ ಲೋಭಾ॥೫॥**

ಶ್ರೀರಾಮನ ಪ್ರತಾಪದಿಂದ ಪ್ರಬಲವಾದ ವಾನರಸೇನೆ ನಿಶಾಚರ ಸುಭಟಕೋಟಿಯನ್ನು ಹಿಡಿದು ಹಿಸುಕಿ ಹಾಕುತ್ತಿದ್ದರು. ಮತ್ತೆ ವಾನರರು ಎಲ್ಲೆಂದರಲ್ಲಿ ದುರ್ಗವನ್ನೇರಿ 'ಪ್ರತಾಪ ದಿವಾಕರನಾದ ಶ್ರೀರಾಮನಿಗೆ ಜಯವಾಗಲಿ' ಎಂದು ಜಯಕಾರ

ಮಾಡತೊಡಗಿದರು. ಪ್ರಚಂಡ ಬಿರುಗಾಳಿ ಬೀಸಿದಾಗ ಮೋಡಗಳು ಚದುರಿಹೋಗುವಂತೆ ವಾನರ ಸೇನೆಯ ಹೊಡೆತಕ್ಕೆ ರಾಕ್ಷಸರ ತಂಡಗಳು ಚೆಲ್ಲಾಪಿಲ್ಲಿಯಾಗಿ ಓಡಿದರು. ನಗರವು ಹಾಹಾಕಾರದಿಂದ ತುಂಬಿಹೋಯಿತು. ಬಾಲಕರು, ಅಬಲೆಯರು, ರುಗ್ಣಾವಸ್ಥೆಯಲ್ಲಿದ್ದವರು ರೋದಿಸತೊಡಗಿದರು. 'ರಾವಣನು ಈ ರಾಜ್ಯವಾಳತೊಡಗಿ ಮೃತ್ಯುವನ್ನೇ ಆಹ್ವಾನಿಸಿದನಲ್ಲ' ಎಂದು ಎಲ್ಲರೂ ಅವನನ್ನು ನಿಂದಿಸತೊಡಗಿದರು. ತನ್ನ ಸೇನೆಯು ವಿಚಲಿತವಾಗಿ ಚೆಲ್ಲಾಪಿಲ್ಲಿಯಾದುದನ್ನು ಕೇಳಿ ರಾವಣನು ಕ್ರುದ್ಧನಾಗಿ ಓಡುತ್ತಿರುವ ಯೋಧರನ್ನು ಹಿಂದಕ್ಕೆ ಕರೆದು ಇಂತು ಹೇಳಿದನು – ''ರಣರಂಗದಲ್ಲಿ ಬೆನ್ನುತೋರುವ ಹಂದೆಯನ್ನು ನಾನೇ ಸ್ವತಃ ನನ್ನ ಕರಾಳ ಕರವಾಳದಿಂದ ಕೊಂದುಬಿಡುತ್ತೇನೆ. ನನ್ನ ಉಪ್ಪು ತಿಂದು, ನಾನಾವಿಧವಾದ ಭೋಗಗಳನ್ನು ಭೋಗಿಸಿ, ಈಗ ಎರಡು ಬಗೆಯುವಿರಾ? ಯುದ್ಧರಂಗದಲ್ಲಿ ನಿಮಗೆ ಹರಣ ಪ್ರಿಯವಾದುವೇ?'' ರಾವಣನ ಕಠೋರವಚನಗಳನ್ನು ಕೇಳಿ ರಾಕ್ಷಸವೀರರೆಲ್ಲ ಅಂಜಿ ಹೋಗಿ ಲಜ್ಜಿತರಾದರು. ಕ್ರೋಧೋದೀಪ್ತರಾಗಿ ಪುನಃ ಯುದ್ಧಕ್ಕಾಗಿ ನಡೆದರು. ರಣರಂಗದಲ್ಲಿ ಯುದ್ಧಮಾಡುತ್ತಲೇ ಮಡಿಯುವುದರಲ್ಲಿ ವೀರರಿಗೆ ಶೋಭೆ ತರುವುದು ಎಂದು ಯೋಚಿಸಿ ಅವರು ತಮ್ಮ ಹರಣದ ಹಂಗು ತೊರೆದು ಹೊರಟರು. (ಚೌ/೧-೫)

**ದೋ – ಬಹು ಆಯುಧ ಧರ ಸುಭಟ ಸಬ ಭಿರಹಿಂ ಪಚಾರಿ ಪಚಾರಿ।**

**ಬ್ಯಾಕುಲ ಕಿಏ ಭಾಲು ಕಪಿ ಪರಿಘ ತ್ರಿಸೂಲನ್ಹಿ ಮಾರಿ॥ ೪೨ ॥**

ಅನೇಕ ವಿಧವಾದ ಶಸ್ತ್ರಾಸ್ತ್ರಗಳನ್ನು ಧರಿಸಿಕೊಂಡು ಆ ರಾಕ್ಷಸವೀರರು ವಾನರರನ್ನು ಕರೆಕರೆದು ಹೋರಾಡತೊಡಗಿದರು. ಅವರು ಪರಿಘ, ತ್ರಿಶೂಲಗಳ ಪ್ರಹಾರದಿಂದ ವಾನರ-ಭಲ್ಲೂಕಗಳನ್ನು ಚುಚ್ಚಿ ನೋಯಿಸಿದರು. (ದೋ/೪೨)

**ಚೌ – ಭಯ ಆತುರ ಕಪಿ ಭಾಗನ ಲಾಗೇ। ಜದ್ಯಪಿ ಉಮಾ ಜೀತಿಹಹಿಂ ಆಗೇ॥**

**ಕೋಉ ಕಹ ಕಹಁ ಅಂಗದ ಹನುಮಂತಾ। ಕಹಁ ನಲ ನೀಲ ದುಬಿದ ಬಲವಂತಾ ॥ ೧ ॥**

**ನಿಜ ದಲ ಬಿಕಲ ಸುನಾ ಹನುಮಾನಾ। ಪಚ್ಛಿಮ ದ್ವಾರ ರಹಾ ಬಲವಾನಾ॥**

**ಮೇಘನಾದ ತಹಁ ಕರಇ ಲರಾಈ। ಟೂಟ ನ ದ್ವಾರ ಪರಮ ಕಠಿನಾಈ ॥ ೨ ॥**

**ಪವನತನಯ ಮನ ಭಾ ಅತಿ ಕ್ರೋಧಾ। ಗರ್ಜೆಉ ಪ್ರಬಲ ಕಾಲ ಸಮ ಜೋಧಾ॥**

**ಕೂದಿ ಲಂಕ ಗಢ ಊಪರ ಆವಾ। ಗಹಿ ಗಿರಿ ಮೇಘನಾದ ಕಹುಁ ಧಾವಾ ॥ ೩ ॥**

**ಭಂಜೆಉ ರಥ ಸಾರಥೀ ನಿಪಾತಾ। ತಾಹಿ ಹೃದಯ ಮಹುಁ ಮಾರೆಸಿ ಲಾತಾ॥**

**ದುಸರೇಂ ಸೂತ ಬಿಕಲ ತೇಹಿ ಜಾನಾ। ಸ್ಯಂದನ ಘಾಲಿ ತುರತ ಗೃಹ ಆನಾ ॥ ೪ ॥**

ಶಿವನು ಹೇಳುತ್ತಾನೆ – ಉಮೆ! ವಾನರರು ಭಯಾಕುಲರಾಗಿ ಓಡತೊಡಗಿದರು. ಆದರೂ ಕೊನೆಗೆ ಅವರಿಗೆ ಜಯವಾಗುವುದು. ''ಆಂಜನೇಯನೆಲ್ಲಿ? ಅಂಗದನೆಲ್ಲಿ? ನಳ, ನೀಲ, ದ್ವಿವಿದರು ಎಲ್ಲಿ?'' ಎಂದು ಕೆಲವು ವಾನರರು ಕೂಗಿಕೊಂಡರು. ತಮ್ಮ ಸೇನೆಯು ವಿಕಲವಾಗಿರುವುದನ್ನು ತಿಳಿದ ಹನುಮಂತನು ಪಶ್ಚಿಮದ್ವಾರದಲ್ಲಿದ್ದನು. ಅಲ್ಲಿ ಮೇಘನಾದನೊಂದಿಗೆ ಹೋರಾಡುತ್ತಿದ್ದನು. ಅಲ್ಲಿ ಆ ಕೋಟೆಯ ಬಾಗಿಲು ತೆರೆಯಲು ಪ್ರಯತ್ನಿಸಿದರೂ ಮುರಿಯದೆ ತುಂಬಾ ಕಷ್ಟವಾಗುತ್ತಿತ್ತು. ಆಗ ಪವನನಂದನ ಮಾರುತಿಯ ಮನದಲ್ಲಿ ಭಾರೀ ಕ್ರೋಧ ಉಂಟಾಯಿತು. ಕಾಲಸನ್ನಿಭ ಕಲಿಹನುಮ ಒಮ್ಮೆ ಭಯಂಕರವಾಗಿ ಗರ್ಜಿಸಿ, ಛಂಗನೆ ಕೋಟೆಯ ಗೋಡೆಯ ಮೇಲಕ್ಕೆ ನೆಗೆದನು. ಒಂದು ದೊಡ್ಡ ಬೆಟ್ಟವನ್ನು ಹಿಡಿದೆತ್ತಿ ಮೇಘನಾದನ ಮೇಲೆ ಹಾಕಿದನು. ಅವನ ರಥವನ್ನು ನುಚ್ಚುನೂರುಮಾಡಿದನು. ಸಾರಥಿಯನ್ನು ಹೊಡೆದು ಕೊಂದನು. ಮೇಘನಾದನ ಎದೆಯಮೇಲೆ ಒದೆದನು. ಬಳಲಿರುವ ಮೇಘನಾದನನ್ನು ಕಂಡು ಮತ್ತೊಬ್ಬ ಸಾರಥಿಯು ಅವನನ್ನು ರಥದಲ್ಲಿ ಹಾಕಿಕೊಂಡು ಲಂಕೆಗೆ ಒಯ್ದನು. (ಚೌ/೧-೪)

**ದೋ – ಅಂಗದ ಸುನಾ ಪವನಸುತ ಗಢ ಪರ ಗಯಉ ಅಕೇಲ।**

**ರನ ಬಾಁಕುರಾ ಬಾಲಿಸುತ ತರಕಿ ಚಢೆಉ ಕಪಿ ಖೇಲ ॥ ೪೩ ॥**

ಇತ್ತ ಲಂಕೆಯ ಕೋಟೆಯ ಮೇಲೆ ಹನುಮಂತನು ಒಂಟಿಯಾಗಿದ್ದಾನೆಂದು ಕೇಳಿ, ರಣಕೋವಿದನಾದ ಅಂಗದನು ಲೀಲಾಜಾಲವಾಗಿ ಒಂದೇ ನೆಗೆತಕ್ಕೆ ಕೋಟೆಯ ಮೇಲೆ ಹತ್ತಿದನು. (ದೋ/೪೩)

**ಚೌ – ಜುದ್ಧ ಬಿರುದ್ಧ ಕ್ರುದ್ಧ ದ್ವೌ ಬಂದರ। ರಾಮ ಪ್ರತಾಪ ಸುಮಿರಿ ಉರ ಅಂತರ॥**

**ರಾವನ ಭವನ ಚಢೇ ದ್ವೌ ಧಾಈ। ಕರಹಿಂ ಕೋಸಲಾಧೀಸ ದೊಹಾಈ ॥ ೧ ॥**

ಕಲಸ ಸಹಿತ ಗಹಿ ಭವನು ಢಹಾವಾ। ದೇಖಿ ನಿಸಾಚರಪತಿ ಭಯ ಪಾವಾ ॥
ನಾರಿ ಬೃಂದ ಕರ ಪೀಟಹಿಂ ಛಾತೀ। ಅಬ ದುಇ ಕಪಿ ಆಏ ಉತಪಾತೀ ॥ ೨ ॥
ಕಪಿಲೀಲಾ ಕರಿ ತಿನ್ಹಹಿ ಡೆರಾವಹಿಂ। ರಾಮಚಂದ್ರ ಕರ ಸುಜಸು ಸುನಾವಹಿಂ ॥
ಪುನಿ ಕರ ಗಹಿ ಕಂಚನ ಕೇ ಖಂಭಾ। ಕಹೆನ್ಹಿ ಕರಿಅ ಉತಪಾತ ಅರಂಭಾ ॥ ೩ ॥
ಗರ್ಜಿ ಪರೇ ರಿಪು ಕಟಕ ಮಝಾರೀ। ಲಾಗೇ ಮರ್ದೈ ಭುಜ ಬಲ ಭಾರೀ ॥
ಕಾಹುಹಿ ಲಾತ ಚಪೇಟನ್ಹಿ ಕೇಹೂ। ಭಜಹು ನ ರಾಮಹಿ ಸೋ ಫಲ ಲೇಹೂ ॥ ೪ ॥

ಇಬ್ಬರೂ ವಾನರ ವೀರರೂ ಯುದ್ಧದಲ್ಲಿ ಕ್ರುದ್ಧರಾಗಿ, ಹೃದಯದಲ್ಲಿ ಶ್ರೀರಾಮಚಂದ್ರನ ಪ್ರತಾಪವನ್ನು ನೆನೆದು, ಇಬ್ಬರೂ ಧಾವಿಸಿ ರಾವಣನ ಅರಮನೆಯ ಮೇಲಕ್ಕೆ ಹಾರಿದರು. ಅಲ್ಲಿ ಅವರು 'ಕೋಸಲಾಧೀಶ ಶ್ರೀರಾಮನಿಗೆ ಜಯವಾಗಲೀ' ಎಂದು ಉಗ್ಗಡಿಸತೊಡಗಿದರು. ಅವರು ಕಳಸ ಸಹಿತ ಅರಮನೆಯನ್ನು ಅಲ್ಲಾಡಿಸಿ ಕೆಡವಿದರು. ಇದನ್ನು ನೋಡಿದ ರಾಕ್ಷಸರಾಜ ರಾವಣನು ಭಯಭ್ರಾಂತನಾದನು. ಸ್ತ್ರೀಯರು ತಮ್ಮ ಎದೆ ಬಡಿದುಕೊಳ್ಳುತ್ತಾ 'ಅಯ್ಯೋ! ಇದೋ ಈಗ ಎರಡು ವಾನರರು ಒಟ್ಟಾಗಿ ಬಂದಿರುವರು. ಎಂತಹ ಉತ್ಪಾತಗಳು ಜರಗುವವೋ' ಎಂದು ಬೊಬ್ಬೆಹಾಕತೊಡಗಿದರು. ಕಪಿಚೇಷ್ಟೆಯಿಂದ ಆ ಸ್ತ್ರೀಯರನ್ನು ಭಯಪಡಿಸಿದರು. ಶ್ರೀರಾಮನ ಪಾವನ ಯಶವನ್ನು ಅವರಿಗೆ ಕೇಳಿಸಿದರು. ಮತ್ತೆ ಭಂಗಾರದ ಕಂಬಗಳನ್ನು ಕೈಯಲ್ಲಿ ಎತ್ತಿಕೊಂಡು 'ಈಗ ಉತ್ಪಾತವನ್ನು ಪ್ರಾರಂಭಿಸೋಣ'ವೆಂದು ತಮ್ಮ-ತಮ್ಮಲ್ಲೇ ಮಾತಾಡಿಕೊಂಡರು. ಅವರು ಗರ್ಜಿಸುತ್ತಾ ಶತ್ರುಸೇನೆಯ ಮಧ್ಯಕ್ಕೆ ಧುಮುಕಿ, ಬಲಿಷ್ಠವಾದ ತಮ್ಮ ಭುಜಗಳಿಂದ ಅವರನ್ನು ಮರ್ದಿಸಿದರು. ಕೆಲವರನ್ನು ಕಾಲಿನಿಂದ, ಕೆಲವರನ್ನು ಕೈಯಿಂದ ಕೊಂದುಹಾಕಿದರು. ಇಗೋ 'ನೀವು ಶ್ರೀರಾಮನನ್ನು ಭಜಿಸದಿರುವ ಫಲವನ್ನು ಉಣ್ಣಿರಿ' ಎಂದು ಹೇಳುತ್ತಿದ್ದರು. (ಚೌ/೧-೪)

**ದೋ – ಏಕ ಏಕ ಸೋಂ ಮರ್ದಹಿಂ ತೋರಿ ಚಲಾವಹಿಂ ಮುಂಡ।**
**ರಾವನ ಆಗೇಂ ಪರಹಿಂ ತೇ ಜನು ಫೂಟಹಿಂ ದಧಿ ಕುಂಡ ॥ ೪೪ ॥**

ಒಬ್ಬನನ್ನು ಮತ್ತೊಬ್ಬನಿಗೆ ತಿಕ್ಕಿ ಹೊಸೆದು ಹಾಕುತ್ತಿದ್ದರು. ತಲೆಗಳನ್ನು ತರಿದು-ತರಿದು ಒಗೆಯುತ್ತಿದ್ದರು. ಆ ತಲೆಗಳು ರಾವಣನ ಎದುರಿಗೆ ಹೋಗಿ ಮೊಸರಿನ ಗಡಿಗೆಗಳು ಒಡೆದುಬೀಳುವಂತೆ ಸಿಡಿದು ಹೋಳಾಗುತ್ತಿದ್ದವು. (ದೋ/೪೪)

ಚೌ – ಮಹಾ ಮಹಾ ಮುಖಿಆ ಜೇ ಪಾವಹಿಂ। ತೇ ಪದ ಗಹಿ ಪ್ರಭು ಪಾಸ ಚಲಾವಹಿಂ ॥
ಕಹಇ ಬಿಭೀಷನು ತಿನ್ಹ ಕೇ ನಾಮಾ। ದೇಹಿಂ ರಾಮ ತಿನ್ಹಹೂ ನಿಜ ಧಾಮಾ ॥ ೧ ॥
ಖಲ ಮನುಜಾದ ದ್ವಿಜಾಮಿಷ ಭೋಗೀ। ಪಾವಹಿಂ ಗತಿ ಜೋ ಜಾಚತ ಜೋಗೀ ॥
ಉಮಾ ರಾಮ ಮೃದುಚಿತ ಕರುನಾಕರ। ಬಯರ ಭಾವ ಸುಮಿರತ ಮೋಹಿ ನಿಸಿಚರ ॥ ೨ ॥
ದೇಹಿಂ ಪರಮ ಗತಿ ಸೋ ಜಿಯ್ ಜಾನೀ। ಅಸ ಕೃಪಾಲ ಕೋ ಕಹಹು ಭವಾನೀ ॥
ಅಸ ಪ್ರಭು ಸುನಿ ನ ಭಜಹಿಂ ಭ್ರಮ ತ್ಯಾಗೀ। ನರ ಮತಿಮಂದ ತೆ ಪರಮ ಅಭಾಗೀ ॥ ೩ ॥
ಅಂಗದ ಅರು ಹನುಮಂತ ಪ್ರಬೇಸಾ। ಕೀನ್ಹ ದುರ್ಗ ಅಸ ಕಹ ಅವಧೇಸಾ ॥
ಲಂಕಾಂ ದ್ವೌ ಕಪಿ ಸೋಹಹಿಂ ಕೈಸೇಂ। ಮಥಹಿಂ ಸಿಂಧು ದುಇ ಮಂದರ ಜೈಸೇಂ ॥ ೪ ॥

ಆ ಇಬ್ಬರೂ ವಾನರರು ಪ್ರಮುಖ ರಾಕ್ಷಸಯೋಧರನ್ನು ಹಿಡಿದು ಅವರ ಕಾಲುಹಿಡಿದು ಗರಗರನೇ ತಿರುಗಿಸಿ, ಶ್ರೀರಾಮನ ಮುಂದೆ ಬೀಳುವಂತೆ ಎಸೆಯುತ್ತಿದ್ದರು. ವಿಭೀಷಣನು ಅವರವರ ಹೆಸರುಗಳನ್ನು ಪ್ರಭುವಿಗೆ ಹೇಳುತ್ತಿದ್ದನು. ಶ್ರೀರಾಮನು ಅವರಿಗೂ ಕೂಡ ತನ್ನ ಧಾಮ (ವೈಕುಂಠ) ವನ್ನು ಕರುಣಿಸುತ್ತಿದ್ದನು. ಬ್ರಾಹ್ಮಣರನ್ನು ಕೊಂದು ತಿನ್ನುವಂತಹ ಆ ನರಮಾಂಸಭಕ್ಷಕರೂ ಕೂಡ ಯೋಗಿಗಳೂ ಬಯಸುವಂತಹ ಪರಮಪದವನ್ನು ಪಡೆಯುತ್ತಿದ್ದರು. ಶಿವನು ಹೇಳುತ್ತಾನೆ – ಪಾರ್ವತಿ! ಶ್ರೀರಾಮನು ಕೋಮಲ ಚಿತ್ತನೂ, ಕರುಣಾನಿಧಿಯೂ ಆಗಿರುವನು. 'ರಾಕ್ಷಸರು ವೈರಭಾವದಿಂದಲಾದರೂ ಸರಿ, ನನ್ನನ್ನು ಸ್ಮರಿಸುತ್ತಿರುವರಲ್ಲ!' ಎಂದು ತಿಳಿದು ಪ್ರಭುವು ಅವರಿಗೆ ಸರ್ವೋತ್ತಮವಾದ ಸದ್ಗತಿ (ಮೋಕ್ಷ) ಯನ್ನು ಕರುಣಿಸುತ್ತಾನೆ. ಭವಾನೀ! ಇಂತಹ ಕೃಪಾಳುವು ಯಾರಿದ್ದಾರೆ? ಹೇಳು. ಪ್ರಭುವಿನ ಇಂತಹ ಉದಾರಸ್ವಭಾವವನ್ನು ತಿಳಿದರೂ ಕೂಡ ಭ್ರಾಂತಿಯ ಕಾರಣದಿಂದ ಸಂಸಾರಭ್ರಮೆಯನ್ನು ತೊರೆದು ಅವನನ್ನು ಭಜಿಸದವರು ಮಂದಮತಿಗಳೇ ಸರಿ. ಪರಮ ನಿರ್ಭಾಗ್ಯರೇ ಸರಿ. ಶ್ರೀರಾಮನು (ಸುಗ್ರೀವ, ವಿಭೀಷಣರಲ್ಲಿ) ಹೇಳಿದನು – ''ಅಂಗದನು, ಹನುಮಂತನು ಲಂಕಾದುರ್ಗವನ್ನು ಹೊಕ್ಕು ನಡೆಸಿದ

ವಿಧ್ವಂಸವನ್ನು ಕಂಡರೆ ಅವರಿಬ್ಬರೂ ಎರಡು ಮಂದರಾಚಲಗಳು ಸಮುದ್ರವನ್ನು ಮಥನ ಮಾಡುತ್ತಿವೆಯೋ ಎಂಬಂತೆ ಶೋಭಿಸುತ್ತಿದ್ದಾರೆ. (ಚೌ/೧-೪)

**ದೋ – ಭುಜ ಬಲ ರಿಪು ದಲ ದಲಮಲಿ ದೇಖಿ ದಿವಸ ಕರ ಅಂತ ।**
**ಕೂದೇ ಜುಗಲ ಬಿಗತ ಶ್ರಮ ಆಏ ಜಹ್ँ ಭಗವಂತ ॥ ೪೫ ॥**

ತಮ್ಮ ಭುಜಬಲದಿಂದ ಶತ್ರುಸೈನ್ಯವನ್ನು ನುಗ್ಗು-ನುಗ್ಗಾಗಿಸಿ ಆ ವಾನರರಿಬ್ಬರೂ ಸಾಯಂಕಾಲವಾದುದನ್ನು ಕಂಡು ಅಂಗದ, ಹನುಮಂತರಿಬ್ಬರೂ ಕೋಟೆಯಿಂದ ಕೆಳಕ್ಕೆ ಧುಮುಕಿ, ಯಾವ ಆಯಾಸವೂ ಇಲ್ಲದೆ ಭಗವಾನ್ ಶ್ರೀರಾಮನಿದ್ದಲ್ಲಿಗೆ ನಡೆದರು. (ದೋ/೪೫)

**ಚೌ – ಪ್ರಭು ಪದ ಕಮಲ ಸೀಸ ತಿನ್ಹ ನಾಏ । ದೇಖಿ ಸುಭಟ ರಘುಪತಿ ಮನ ಭಾಏ ॥**
**ರಾಮ ಕೃಪಾ ಕರಿ ಜುಗಲ ನಿಹಾರೇ । ಭಏ ಬಿಗತಶ್ರಮ ಪರಮ ಸುಖಾರೇ ॥ ೧ ॥**
**ಗಏ ಜಾನಿ ಅಂಗದ ಹನುಮಾನಾ । ಫಿರೇ ಭಾಲು ಮರ್ಕಟ ಭಟ ನಾನಾ ॥**
**ಜಾತುಧಾನ ಪ್ರದೋಷ ಬಲ ಪಾಈ । ಧಾಏ ಕರಿ ದಸಸೀಸ ದೊಹಾಈ ॥ ೨ ॥**
**ನಿಸಿಚರ ಅನೀ ದೇಖಿ ಕಪಿ ಫಿರೇ । ಜಹ್ँ ತಹ್ँ ಕಟಕಟಾಈ ಭಟ ಭಿರೇ ॥**
**ದ್ವೌ ದಲ ಪ್ರಬಲ ಪಚಾರಿ ಪಚಾರೀ । ಲರತ ಸುಭಟ ನಹಿँ ಮಾನಹಿँ ಹಾರೀ ॥ ೩ ॥**
**ಮಹಾಬೀರ ನಿಸಿಚರ ಸಬ ಕಾರೇ । ನಾನಾ ಬರನ ಬಲೀಮುಖ ಭಾರೇ ॥**
**ಸಬಲ ಜುಗಲ ದಲ ಸಮಬಲ ಜೋಧಾ । ಕೌತುಕ ಕರತ ಲರತ ಕರಿ ಕ್ರೋಧಾ ॥ ೪ ॥**
**ಪ್ರಾಬಿಟ ಸರದ ಪಯೋದ ಘನೇರೇ । ಲರತ ಮನಹುँ ಮಾರುತ ಕೇ ಪ್ರೇರೇ ॥**
**ಅನಿಪ ಅಕಂಪನ ಅರು ಅತಿಕಾಯಾ । ಬಿಚಲತ ಸೇನ ಕೀನ್ಹಿ ಇನ್ಹ ಮಾಯಾ ॥ ೫ ॥**
**ಭಯಉ ನಿಮಿಷ ಮಹँ ಅತಿ ಅँಧಿಆರಾ । ಬೃಷ್ಟಿ ಹೋಇ ರುಧಿರೋಪಲ ಛಾರಾ ॥ ೬ ॥**

ಅವರು ಪ್ರಭುಚರಣಗಳಿಗೆ ಶಿರಸಾವಂದಿಸಿಕೊಂಡರು. ಆ ಇಬ್ಬರೂ ವೀರರನ್ನು ನೋಡಿ ಶ್ರೀರಾಮಚಂದ್ರನು ಸಂತೋಷಭರಿತನಾದನು. ಅವರಿಬ್ಬರತ್ತಲೂ ಒಮ್ಮೆ ಕೃಪಾದೃಷ್ಟಿ ಬೀರಿದನು. ಇದರಿಂದ ಅವರ ಶ್ರಮ, ಆಯಾಸವೆಲ್ಲ ಪರಿಹಾರವಾಯಿತು. ಅವರಿಗೆ ಎಲ್ಲಿಲ್ಲದ ಪರಮಸುಖವು ಉಂಟಾಯಿತು. ಹನುಮಂತ, ಅಂಗದರು ರಣರಂಗದಿಂದ ಮರಳಿದುದನ್ನು ಕಂಡು ಎಲ್ಲ ಭಲ್ಲೂಕ-ವಾನರಯೋಧರು ತಮ್ಮ ಶಿಬಿರಕ್ಕೆ ಮರಳಿದರು. ಪ್ರದೋಷಕಾಲದಲ್ಲಿ ಬಲಹೆಚ್ಚಿದ ರಾಕ್ಷಸರು ರಾವಣನಿಗೆ ಜಯಕಾರ ಮಾಡುತ್ತಾ ವಾನರರ ಮೇಲೆರಗಿದರು. ರಕ್ಕಸರ ಸೇನೆಯು ಬಂದೆರಗಿದುದನ್ನು ಕಂಡು ವಾನರರು ಮತ್ತೆ ರಣರಂಗಕ್ಕೆ ತೆರಳಿ, ಸಿಟ್ಟಿನಿಂದ ಕಟ-ಕಟನೆ ಹಲ್ಲುಕಡಿಯುತ್ತಾ ಶತ್ರುಗಳನ್ನು ಎದುರಿಸಿದವು. ಇತ್ತಂಡಗಳು ಪ್ರಚಂಡ ಬಲಶಾಲಿಗಳು. ಸುಭಟರು ಒಬ್ಬರನ್ನೊಬ್ಬರು ಮೂದಲಿಸಿ ಹೋರಾಡುವರು. ಯಾರೂ ಸೋಲೊಪ್ಪಿಕೊಳ್ಳುವುದಿಲ್ಲ. ನಿಶಾಚರರೆಲ್ಲ ಮಹಾವೀರರು, ಕಾಳರಕ್ಕಸರು. ಹಾಗೆಯೇ ವಾನರರೂ ವಿಶಾಲ ದೃಢಕಾಯರು, ಅನೇಕ ವರ್ಣದವರು. ಎರಡೂ ಸೈನಿಕರು ಸಮಾನ ಬಲರು, ಸಮಬಲವುಳ್ಳ ಯೋಧರು. ಅವರು ಕ್ರೋಧತಪ್ತರಾಗಿ ಹೋರಾಡುತ್ತಾ ಶೌರ್ಯವನ್ನು ಪ್ರದರ್ಶಿಸುತ್ತಿದ್ದರು. ರಕ್ಕಸ-ವಾನರರ ಕಾಳಗವು ವರ್ಷಋತು ಹಾಗೂ ಶರದೃತುವಿನ ಮೋಡಗಳು ಪವನ ಪ್ರೇರಣೆಯಿಂದ ಪರಸ್ಪರ ತಾಕುತ್ತಿರುವಂತೆ ಕಾಣುತ್ತಿತ್ತು. ಅನಿಪ, ಅಕಂಪನ, ಅತಿಕಾಯ ಎಂಬ ಸೇನಾಪತಿಗಳು ತಮ್ಮ ಸೇನೆ ಚಲವಿಚಲವಾದುದನ್ನು ಕಂಡು ತಮ್ಮ ಮಾಯೆಯನ್ನು ಪಸರಿಸಿದರು. ಕ್ಷಣಮಾತ್ರದಲ್ಲಿ ಎತ್ತೆತ್ತಲೂ ಕಗ್ಗತ್ತಲೆ ಕವಿಯಿತು. ರಕ್ತ, ಕಲ್ಲು, ಬೂದಿಯ ಮಳೆ ಸುರಿಸತೊಡಗಿದರು. (ಚೌ/೧-೬)

**ದೋ – ದೇಖಿ ನಿಬಿಡ ತಮ ದಸಹುँ ದಿಸಿ ಕಪಿದಲ ಭಯಉ ಖಭಾರ ।**
**ಏಕಹಿ ಏಕ ನ ದೇಖಈ ಜಹ್ँ ತಹ್ँ ಕರಹಿँ ಪುಕಾರ ॥ ೪೬ ॥**

ದಶದಿಶೆಗಳಲ್ಲಿಯೂ ಕತ್ತಲೆ ಕವಿದುದನ್ನು ಕಂಡು ವಾನರಸೇನೆ ತತ್ತರಿಸಿತು. ಒಬ್ಬರ ಮುಖ ಮತ್ತೊಬ್ಬರಿಗೆ ಕಾಣಿಸದು. ಅವರೆಲ್ಲರೂ ಕಂಡಕಂಡಲ್ಲಿ ಕೂಗಿಕೊಳ್ಳತೊಡಗಿದರು. (ದೋ/೪೬)

**ಚೌ – ಸಕಲ ಮರಮು ರಘುನಾಯಕ ಜಾನಾ । ಲಿಏ ಬೋಲಿ ಅಂಗದ ಹನುಮಾನಾ ॥**
**ಸಮಾಚಾರ ಸಬ ಕಹಿ ಸಮುಝಾಏ । ಸುನತ ಕೋಪಿ ಕಪಿಕುಂಜರ ಧಾಏ ॥ ೧ ॥**

**ಪುನಿ ಕೃಪಾಲ ಹँಸಿ ಚಾಪ ಚಢಾವಾ । ಪಾವಕ ಸಾಯಕ ಸಪದಿ ಚಲಾವಾ ॥**
**ಭಯಉ ಪ್ರಕಾಸ ಕತಹುँ ತಮ ನಾಹೀं । ಗ್ಯಾನ ಉದಯँ ಜಮಿ ಸಂಸಯ ಜಾಹೀं ॥ ೨ ॥**
**ಭಾಲು ಬಲೀಮುಖ ಪಾಇ ಪ್ರಕಾಸಾ । ಧಾಏ ಹರಷ ಬಿಗತ ಶ್ರಮ ತ್ರಾಸಾ ॥**
**ಹನೂಮಾನ ಅಂಗದ ರನ ಗಾಜೇ । ಹाँಕ ಸುನತ ರಜನೀಚರ ಭಾಜೇ ॥ ೩ ॥**
**ಭಾಗತ ಭಟ ಪಟಕಹಿं ಧರಿ ಧರನೀ । ಕರಹಿं ಭಾಲು ಕಪಿ ಅದ್ಭುತ ಕರನೀ ॥**
**ಗಹಿ ಪದ ಡಾರಹಿं ಸಾಗರ ಮಾಹೀं । ಮಕರ ಉರಗ ಝಷ ಧರಿ ಧರಿ ಖಾಹೀं ॥ ೪ ॥**

ಶ್ರೀರಘುನಾಥನು ಈ ರಹಸ್ಯವನ್ನು ಅರಿತನು. ಅವನು ಅಂಗದ, ಹನುಮಂತರನ್ನು ಕರೆದು ಅವರಿಗೆ ರಕ್ಕಸರ ಮಾಯೆಯ ಮರ್ಮವನ್ನು ಅರುಹಿದನು. ಕೂಡಲೇ ಆ ಕಪಿಕುಂಜರರೀರ್ವರೂ ಕೋಪಾವೇಶದಿಂದ ಧಾವಿಸಿದರು. ಬಳಿಕ ಕೃಪಾಳುವಾದ ಶ್ರೀರಾಮನು ನಕ್ಕು ಕೋದಂಡಕ್ಕೆ ಹೆದೆಯೇರಿಸಿ, ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಅದರಿಂದ ಎಲ್ಲೆಲ್ಲೂ ಬೆಳ್ಳಂಬೆಳಗಾಯಿತು. ಜ್ಞಾನೋದಯವಾದ ಕೂಡಲೇ ಎಲ್ಲ ವಿಧವಾದ ಸಂದೇಹಗಳು ದೂರವಾಗುವಂತೆ ಕತ್ತಲೆ ಮಾಯವಾಯಿತು. ವಾನರರು ಬೆಳಕನ್ನು ಕಂಡು ಶ್ರಮ, ಭಯವನ್ನು ಕಳೆದುಕೊಂಡು ಪ್ರಸನ್ನಚಿತ್ತರಾಗಿ ಸಮರಭೂಮಿಗೆ ಓಡಿದರು. ಹನುಮಂತ, ಅಂಗದರು, ರಣದಲ್ಲಿ ಸಿಂಹನಾದ ಮಾಡಿದರು. ಅವರ ಹುಂಕಾರವನ್ನು ಕೇಳಿದ್ದೇ ತಡ ಭಯದಿಂದ ನಿಶಾಚರರು ಕಾಲಿಗೆ ಬುದ್ಧಿಹೇಳಿದರು. ಓಡುತ್ತಿದ್ದ ರಕ್ಕಸಭಟರನ್ನು ವಾನರರು ಹಿಡಿದು ನೆಲಕ್ಕೆ ಅಪ್ಪಳಿಸಿಕೊಂದರು. ಅನೇಕ ಅದ್ಭುತ ಯುದ್ಧನೈಪುಣ್ಯವನ್ನು ಪ್ರದರ್ಶಿಸಿದರು. ಅವರು ರಕ್ಕಸರ ಕಾಲುಹಿಡಿದು ಗಿರಗಿರನೆ ತಿರುಗಿಸಿ ಸಮುದ್ರಕ್ಕೆ ಎಸೆದರು. ಅಲ್ಲಿಯ ಮಕರ ನಿಕರ, ಸರ್ಪ, ಮತ್ಸ್ಯಗಳು ಅವರನ್ನು ಹಿಡಿದು-ಹಿಡಿದು ನುಂಗುತ್ತಿದ್ದವು. (ಚೌ/೧-೪)

**ದೋ – ಕಛು ಮಾರೇ ಕಛು ಘಾಯಲ ಕಛು ಗಢ ಚಢೇ ಪರಾಇ ।**
**ಗರ್ಜಹಿं ಭಾಲು ಬಲೀಮುಖ ರಿಪು ದಲ ಬಲ ಬಿಚಲಾಇ ॥ ೪೭ ॥**

ಈ ವಿಧವಾಗಿ ಕೆಲವು ರಾಕ್ಷಸರು ಮಡಿದರು. ಕೆಲವರು ಘಾಯಗೊಂಡರು. ಮತ್ತೆ ಕೆಲವರು ಓಡಿ ಕೋಟೆಯನ್ನು ಹತ್ತಿದರು. ಭಲ್ಲೂಕ-ಬಲಿಮುಖ ವೀರರು ತಮ್ಮ ಬಲದಿಂದ ರಿಪುದಳವನ್ನು ವಿಚಲಿತಗೊಳಿಸಿ ಗರ್ಜಿಸತೊಡಗಿದರು. (ದೋ/೪೭)

**ಚೌ – ನಿಸಾ ಜಾನಿ ಕಪಿ ಚಾರಿಉ ಅನೀ । ಆಏ ಜಹाँ ಕೋಸಲಾ ಧನೀ ॥**
**ರಾಮ ಕೃಪಾ ಕರಿ ಚಿತವಾ ಸಬಹೀ । ಭಏ ಬಿಗತಶ್ರಮ ಬಾನರ ತಬಹೀ ॥ ೧ ॥**
**ಉಹाँ ದಸಾನನ ಸಚಿವ ಹँಕಾರೇ । ಸಬ ಸನ ಕಹೆಸಿ ಸುಭಟ ಜೇ ಮಾರೇ ॥**
**ಆಧಾ ಕಟಕು ಕಪಿನ್ಹ ಸಂಘಾರಾ । ಕಹಹು ಬೇಗಿ ಕಾ ಕರಿಅ ಬಿಚಾರಾ ॥ ೨ ॥**
**ಮಾಲ್ಯವಂತ ಅತಿ ಜರಠ ನಿಸಾಚರ । ರಾವನ ಮಾತು ಪಿತಾ ಮಂತ್ರೀ ಬರ ॥**
**ಬೋಲಾ ಬಚನ ನೀತಿ ಅತಿ ಪಾವನ । ಸುನಹು ತಾತ ಕಛು ಮೋರ ಸಿಖಾವನ ॥ ೩ ॥**
**ಜಬ ತೇ ತುಮ್ಹ ಸೀತಾ ಹರಿ ಆನೀ । ಅಸಗುನ ಹೋಹಿं ನ ಜಾಹಿं ಬಖಾನೀ ॥**
**ಬೇದ ಪುರಾನ ಜಾಸು ಜಸು ಗಾಯೋ । ರಾಮ ಬಿಮುಖ ಕಾಹು ನ ಸುಖ ಪಾಯೋ ॥ ೪ ॥**

ರಾತ್ರಿಯಾದುದನ್ನು ಕಂಡು ವಾನರರ ನಾಲ್ಕೂ ದಳಗಳು ಕೋಸಲಾಧಿಪತಿ ಶ್ರೀರಾಮನಿದ್ದಲ್ಲಿಗೆ ಬಂದಿತು. ಶ್ರೀರಾಮನ ಕೃಪಾದೃಷ್ಟಿ ಅವರ ಮೇಲೆ ಬಿದ್ದದ್ದೇ ತಡ ಅವರೆಲ್ಲರ ಶ್ರಮಗಳೆಲ್ಲ ದೂರಾದವು. ಅತ್ತ ಲಂಕೆಯಲ್ಲಿ ರಾವಣನು ತನ್ನ ಮಂತ್ರಿಗಳನ್ನು ಕರೆಸಿ – ''ವಾನರರು ನಮ್ಮ ಸೈನ್ಯದ ಅರ್ಧಭಾಗವನ್ನು ಕೊಂದುಹಾಕಿದರು. ಅವರೆಲ್ಲ ರಣರಂಗಕ್ಕೆ ಬಲಿಯಾದರು. ಈಗ ಮುಂದೇನು ಉಪಾಯಮಾಡಬೇಕು? ಎಂಬುದನ್ನು ಕೂಡಲೇ ತಿಳಿಸಿರಿ'' ಎಂದು ಹೇಳಿದನು. ಆಗ ರಾವಣನ ತಾಯಿಯ ತಂದೆ ಮಾತಾಮಹನಾದ ವೃದ್ಧರಾಕ್ಷಸ ಮಂತ್ರಿ ಮಾಲ್ಯವಂತನು ಉತ್ತಮ ನೀತಿಯುಕ್ತವಾದ ಮಾತನ್ನು ಹೇಳಿದನು – ''ಅಯ್ಯಾ! ನನ್ನ ಬುದ್ಧಿವಾದವನ್ನು ಕೊಂಚ ಆಲಿಸು. ನೀನು ಸೀತೆಯನ್ನು ತಂದುದಾಗಿನಿಂದ ವರ್ಣನಾತೀತವಾದ ಅಪಶಕುನಗಳಾಗುತ್ತಿವೆ. ವೇದಪುರಾಣಗಳಲ್ಲಿ ಹೊಗಳಲ್ಪಟ್ಟ ಶ್ರೀರಾಮಚಂದ್ರನಿಗೆ ವಿಮುಖನಾದವನು ಸುಖಪಟ್ಟದ್ದನ್ನು ನಾ ಕಾಣೆ. (ಚೌ/೧-೪)

**ದೋ – ಹಿರನ್ಯಾಚ್ಛ ಭ್ರಾತಾ ಸಹಿತ ಮಧು ಕೈಟಭ ಬಲವಾನ ।**
**ಜೆಹಿं ಮಾರೇ ಸೋಇ ಅವತರೇಉ ಕೃಪಾಸಿಂಧು ಭಗವಾನ ॥ ೪೮ (ಕ)॥**

ಹಿರಣ್ಯಾಕ್ಷನನ್ನು, ಅವನ ಸೋದರನಾದ ಹಿರಣ್ಯಕಶಿಪುವನ್ನು ಸಂಹರಿಸಿದವನೂ, ಮಧುಕೈಟಭರನ್ನು ಕೊಂದಿರುವವನೂ ಆದ ಶ್ರೀಹರಿಯೇ ಕೃಪಾಸಮುದ್ರ ಶ್ರೀರಾಮನಾಗಿ ಅವತರಿಸಿರುವನು. (ದೋ/೪೮ ಕ)

**ಮಾಸಪಾರಾಯಣದ ಇಪ್ಪತ್ತೈದನೆಯ ವಿಶ್ರಾಮ**

**ದೋ – ಕಾಲರೂಪ ಖಲ ಬನ ದಹನ ಗುನಾಗಾರ ಘನಬೋಧ ।**
**ಸಿವ ಬಿರಂಚಿ ಜೆಹಿ ಸೇವಹಿಂ ತಾಸೋಂ ಕವನ ಬಿರೋಧ ॥ ೪೮(ಖ)॥**

ಅವನು ಕಾಲಸ್ವರೂಪನು. ದುಷ್ಟಸಮೂಹವೆಂಬ ವನವನ್ನು ಭಸ್ಮಮಾಡುವ ಅಗ್ನಿತುಲ್ಯನು. ಗುಣನಿಧಿಯೂ, ಜ್ಞಾನಘನನೂ, ಬ್ರಹ್ಮರುದ್ರಾದಿಗಳಿಂದ ಸೇವಿತನೂ ಆದ ಅವನಲ್ಲಿ ಎಂತಹ ವೈರ? (ದೋ/೪೮ ಖ)

**ಚೌ – ಪರಿಹರಿ ಬಯರು ದೇಹು ಬೈದೇಹೀ । ಭಜಹು ಕೃಪಾನಿಧಿ ಪರಮ ಸನೇಹೀ ॥**
**ತಾಕೇ ಬಚನ ಬಾನ ಸಮ ಲಾಗೇ । ಕರಿಆ ಮುಹ ಕರಿ ಜಾಹಿ ಅಭಾಗೇ ॥ ೧ ॥**
**ಬೂಢ ಭಏಸಿ ನ ತ ಮರತೆಉಂ ತೋಹೀ । ಅಬ ಜನಿ ನಯನ ದೆಖಾವಸಿ ಮೋಹೀ ॥**
**ತೆಹಿಂ ಅಪನೇ ಮನ ಅಸ ಅನುಮಾನಾ । ಬಧ್ಯೋ ಚಹತ ಎಹಿ ಕೃಪಾನಿಧಾನಾ ॥ ೨ ॥**
**ಸೋ ಉಠಿ ಗಯಉ ಕಹತ ದುರ್ಬಾದಾ । ತಬ ಸಕೋಪ ಬೋಲೆಉ ಘನನಾದಾ ॥**
**ಕೌತುಕ ಪ್ರಾತ ದೇಖಿಅಹು ಮೋರಾ । ಕರಿಹಉಂ ಬಹುತ ಕಹೌಂ ಕಾ ಥೋರಾ ॥ ೩ ॥**
**ಸುನಿ ಸುತ ಬಚನ ಭರೋಸಾ ಆವಾ । ಪ್ರೀತಿ ಸಮೇತ ಅಂಕ ಬೈಠಾವಾ ॥**
**ಕರತ ಬಿಚಾರ ಭಯಉ ಭಿನುಸಾರಾ । ಲಾಗೇ ಕಪಿ ಪುನಿ ಚಹೂಂ ದುಆರಾ ॥ ೪ ॥**
**ಕೋಪಿ ಕಪಿನ್ಹ ದುರ್ಘಟ ಗಢು ಘೇರಾ । ನಗರ ಕೋಲಾಹಲು ಭಯಉ ಘನೇರಾ ॥**
**ಬಿಬಿಧಾಯುಧ ಧರ ನಿಸಿಚರ ಧಾಏ । ಗಢ ತೇ ಪರ್ಬತ ಸಿಖರ ಢಹಾಏ ॥ ೫ ॥**

ಆದ್ದರಿಂದ ನೀನು ವೈರವನ್ನುತೊರೆದು ಅವನಿಗೆ ಜಾನಕಿಯನ್ನು ಒಪ್ಪಿಸು. ಕೃಪಾನಿಧಾನನೂ, ಪರಮಸ್ನೇಹಿಯೂ ಆದ ಆತನನ್ನು ಭಜಿಸು.'' ರಾವಣನಿಗೆ ಅವನ ಮಾತುಗಳು ಅಂಬಿನಂತೆ ನಾಟಿದವು. ಅವನೆಂದ – ''ಎಲವೋ ಹತಭಾಗ್ಯನೇ! ನಿನ್ನ ಸುಟ್ಟಮೋರೆಯನ್ನು ಹೊತ್ತುಕೊಂಡು ಇಲ್ಲಿಂದ ಹಾಳಾಗಿಹೋಗು. ನೀನು ತಲೆಮಾಸಿದವನು. ಇಲ್ಲವಾದರೆ ನಿನ್ನನ್ನು ಕೊಂದೇ ಬಿಡುತ್ತಿದ್ದೆ. ಈಗ ನನಗೆ ಮುಖ ತೋರಬೇಡ. ತೊಲಗು ಇಲ್ಲಿಂದ.'' ರಾವಣನ ಮಾತುಗಳನ್ನು ಕೇಳಿ, ಮಾಲ್ಯವಂತನು ತನ್ನ ಮನಸ್ಸಿನಲ್ಲೇ – ''ಕೃಪಾನಿಧಿಯಾದ ಶ್ರೀರಾಮನ ಕೈಯಿಂದ ಇವನಿಗೆ ಸಾವು ತಪ್ಪದು' ಎಂದುಕೊಂಡನು. ಅವನು ರಾವಣನನ್ನು ನಿಂದಿಸುತ್ತಾ ಎದ್ದು ಹೊರಟುಹೋದನು. ಆಗ ಮೇಘನಾದನು ರೋಷಭೀಷಣನಾಗಿ ಹೇಳಿದನು – ''ಅಪ್ಪಾ ! ನಾಳೆ ಬೆಳಿಗ್ಗೆ ನನ್ನ ಕೈಚಳಕವನ್ನು ನೋಡು. ನಾನು ಅದ್ಭುತ ಸಾಹಸವನ್ನು ಮೆರೆಯುತ್ತೇನೆ. ಅದನ್ನು ಈಗ ಎಷ್ಟು ವರ್ಣಿಸಿದರೂ ಸಾಲದು. ಮಾತಾಡಿ ಏನು ಪ್ರಯೋಜನ?'' ಮಗನ ಮಾತನ್ನು ಕೇಳಿ ರಾವಣನಿಗೆ ಭರವಸೆ ಉಂಟಾಯಿತು. ಅವನು ಪ್ರೇಮದಿಂದ ಅವನನ್ನು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡನು. ಸಮಾಲೋಚನೆ ಮಾಡುತ್ತಾ ಬೆಳಗಾಯಿತು. ವಾನರರು ಮರಳಿ ನಾಲ್ಕು ಬಾಗಿಲುಗಳಲ್ಲಿ ಬಂದು ಆವರಿಸಿಕೊಂಡರು. ಅವರು ಕೋಪೋದ್ರಿಕ್ತರಾಗಿ ದುರ್ಗಮ ದುರ್ಗವನ್ನು ಮುತ್ತಿದರು. ನಗರದಲ್ಲಿ ಭಾರೀ ಕೋಲಾಹಲ ತುಂಬಿಹೋಯಿತು. ರಾಕ್ಷಸ ಸೈನಿಕರು ವಿವಿಧ ಅಸ್ತ್ರ-ಶಸ್ತ್ರಗಳನ್ನು ಧರಿಸಿಕೊಂಡು ಅತ್ತ ಧಾವಿಸಿದರು. ಅವರು ದುರ್ಗದ ಮೇಲಿನಿಂದ ಪರ್ವತ ಶಿಖರಗಳನ್ನು ಉರುಳಿಸಿದರು. (ಚೌ/೧-೫)

**ಛಂ – ಢಾಹೇ ಮಹೀಧರ ಸಿಖರ ಕೋಟಿನ್ಹ ಬಿಬಿಧ ಬಿಧಿ ಗೋಲಾ ಚಲೇ ।**
**ಘಹರಾತ ಜಿಮಿ ಪಬಿಪಾತ ಗರ್ಜತ ಜನು ಪ್ರಲಯ ಕೇ ಬಾದಲೇ ॥**
**ಮರ್ಕಟ ಬಿಕಟ ಭಟ ಜುಟತ ಕಟತ ನ ಲಟತ ತನ ಜರ್ಜರ ಭಏ ।**
**ಗಹಿ ಸೈಲ ತೆಹಿ ಗಢ ಪರ ಚಲಾವಹಿಂ ಜಹಂ ಸೊ ತಹಂ ನಿಸಿಚರ ಹಏ ॥**

ಅವರು ಅಸಂಖ್ಯ ಶಿಖರಗಳನ್ನು ಎಸೆದರು. ಅನೇಕವಿಧವಾದ ಗುಂಡುಗಳನ್ನು ಎಸೆದರು. ಆ ಗುಂಡುಗಳು ಸಿಡಿಲಿನಂತೆ ಅಬ್ಬರಿಸುತ್ತಾ ಬಂದು ಬೀಳುತ್ತಿದ್ದವು. ಪ್ರಳಯಕಾಲದ ಮೇಘಗಳಂತೆ ಯೋಧರು ಗುಡುಗಿ ಗದ್ದರಿಸುತ್ತಿದ್ದರು. ಭಯಂಕರ ವಾನರ ಯೋಧರು ಶತ್ರುಗಳೊಡನೆ ಹೋರಾಡುತ್ತಿದ್ದರು. ಅವರಲ್ಲಿ ಅನೇಕರು ಘಾಯಗೊಂಡರು. ಅವರ ಶರೀರಗಳು ಜರ್ಜರಿತವಾಗಿ

ಮಂದರಿಯದಂತಾದುವು. ಆದರೂ ಅವರು ಎದೆಗುಂದಲಿಲ್ಲ ; ಮಿಸುಕಾಡಲಿಲ್ಲ. ಅವರು ಅದೇ ಶಿಖರಗಳನ್ನು ಕೈಯಿಂದ ಹಿಡಿದು ಕೋಟೆಯಮೇಲೆ ಬೀಸಿ ಎಸೆಯುತ್ತಿದ್ದರು. ರಾಕ್ಷಸರು ಇರುವಲ್ಲಿಯೇ ಸತ್ತುಬೀಳುತ್ತಿದ್ದರು. (ಛಂದ)

**ದೋ – ಮೇಘನಾದ ಸುನಿ ಶ್ರವನ ಅಸ ಗಢ ಪುನಿ ಛೇಂಕಾ ಆಇ ।**
**ಉತರ್ಯೋ ಬೀರ ದುರ್ಗ ತೇಂ ಸನ್ಮುಖ ಚಲ್ಯೋ ಬಜಾಇ ॥ ೪೯ ॥**

ವಾನರರು ಬಂದು ಪುನಃ ಕೋಟೆಯನ್ನು ಮುತ್ತಿದರೆಂದು ಮೇಘನಾದನು ಕೇಳಿದಾಗ ಆ ವೀರನು ಕೋಟೆಯಿಂದ ಹೊರಟು ಗರ್ಜಿಸುತ್ತಾ ಇದಿರಿಸಿದನು. (ದೋ/೪೯)

## ಮೇಘನಾದ ಯುದ್ಧ – ಲಕ್ಷ್ಮಣನ ಮೂರ್ಛೆ

**ಚೌ – ಕಹಁ ಕೋಸಲಾಧೀಸ ದ್ವೌ ಭ್ರಾತಾ । ಧನ್ವೀ ಸಕಲ ಲೋಕ ಬಿಖ್ಯಾತಾ ॥**
**ಕಹಁ ನಲ ನೀಲ ದುಬಿದ ಸುಗ್ರೀವಾ । ಅಂಗದ ಹನೂಮಂತ ಬಲ ಸೀಂವಾ ॥ ೧ ॥**
**ಕಹಾಁ ಬಿಭೀಷನು ಭ್ರಾತಾದ್ರೋಹೀ । ಆಜು ಸಬಹಿ ಹಠಿ ಮಾರಉಁ ಓಹೀ ॥**
**ಅಸ ಕಹಿ ಕಠಿನ ಬಾನ ಸಂಧಾನೇ । ಅತಿಸಯ ಕ್ರೋಧ ಶ್ರವನ ಲಗಿ ತಾನೇ ॥ ೨ ॥**
**ಸರ ಸಮೂಹ ಸೋ ಛಾಡ್ಯೈ ಲಾಗಾ । ಜನು ಸಪಚ್ಛ ಧಾವಹಿಂ ಬಹು ನಾಗಾ ॥**
**ಜಹಁ ತಹಁ ಪರತ ದೇಖಿಅಹಿಂ ಬಾನರ । ಸನ್ಮುಖ ಹೋಇ ನ ಸಕೇ ತೇಹಿ ಅವಸರ ॥ ೩ ॥**
**ಜಹಁ ತಹಁ ಭಾಗಿ ಚಲೇ ಕಪಿ ರೀಛಾ । ಬಿಸರೀ ಸಬಹಿ ಜುದ್ಧ ಕೈ ಈಛಾ ॥**
**ಸೋ ಕಪಿ ಭಾಲು ನ ರನ ಮಹಁ ದೇಖಾ । ಕೀನ್ಹೇಸಿ ಜೇಹಿ ನ ಪ್ರಾನ ಅವಸೇಷಾ ॥ ೪ ॥**

ಅವನು ಅಬ್ಬರಿಸಿ ಉಗ್ಗಡಿಸಿದನು – ''ಲೋಕವಿಖ್ಯಾತ ಧನುರ್ಧರರಾದ ಕೋಸಲಾಧೀಶ ಸೋದರರೆಲ್ಲಿ? ನಳ, ನೀಲ, ದ್ವಿವಿದ, ಸುಗ್ರೀವ ಹಾಗೂ ಅಪಾರ ಬಲಶಾಲಿಗಳಾದ ಅಂಗದ, ಹನುಮಂತರೆಲ್ಲಿ? ಭ್ರಾತೃದ್ರೋಹಿಯಾದ ವಿಭೀಷಣನೆಲ್ಲಿ ? ಇಂದು ನಾನು ಇವರೆಲ್ಲರನ್ನು ಅದರಲ್ಲೂ ಆ ದುಷ್ಟನನ್ನು ತೀರಿಸಿಯೇ ತೀರುತ್ತೇನೆಂಬ ಹಟತೊಡುತ್ತೇನೆ. ಹೀಗೆ ಹೇಳಿ ಅವನು ಭಯಂಕರವಾದ ಬಾಣಗಳನ್ನು ಹೂಡಿ, ಧನುಸ್ಸನ್ನು ಆಕರ್ಣಾಂತವಾಗಿ ಸೆಳೆದು ಅಂಬಿನ ಮಳೆಗರೆಯತೊಡಗಿದನು. ಅವು ರೆಕ್ಕೆಗಳುಳ್ಳ ಸರ್ಪಗಳಂತೆ ವೇಗವಾಗಿ ಸಾಗುತ್ತಿದ್ದವು. ವಾನರರು ಇದ್ದಲ್ಲೇ ಸದ್ದಿಲ್ಲದೆ ಬೀಳತೊಡಗಿದರು. ಆಗ ಅಲ್ಲಿ ಆ ಮಹಾವೀರನನ್ನು ಎದುರಿಸುವವರು ಯಾರೂ ಇರಲಿಲ್ಲ. ಕಪಿ-ಕರಡಿಗಳೆಲ್ಲ ಹತಬಲರಾಗಿ, ಹತಪ್ರಭರಾಗಿ, ಹತವೀರ್ಯರಾಗಿ ಬಿದ್ದವು. ಗತಪ್ರಾಣವಾಗುವುದೊಂದು ಬಾಕಿ. (ಚೌ/೧-೪)

**ದೋ – ದಸ ದಸ ಸರ ಸಬ ಮಾರೆಸಿ ಪರೇ ಭೂಮಿ ಕಪಿ ಬೀರ ।**
**ಸಿಂಹನಾದ ಕರಿ ಗರ್ಜಾ ಮೇಘನಾದ ಬಲ ಧೀರ ॥ ೫೦ ॥**

ಬಳಿಕ ಮೇಘನಾದನು ಒಬ್ಬೊಬ್ಬರ ಮೇಲೆ ಹತ್ತತ್ತು ಬಾಣಗಳನ್ನು ಪ್ರಯೋಗಿಸಿದನು. ಕಪಿವೀರರೆಲ್ಲ ಧರಾಶಾಯಿಗಳಾದರು. ಆಗ ಪ್ರಬಲನಾದ ಧೀರ ಮೇಘನಾದನು ಸಿಂಹನಾದ ಮಾಡಿದನು. (ದೋ/೫೦)

**ಚೌ – ದೇಖಿ ಪವನಸುತ ಕಟಕ ಬಿಹಾಲಾ । ಕ್ರೋಧವಂತ ಜನು ಧಾಯಉ ಕಾಲಾ ॥**
**ಮಹಾಸೈಲ ಏಕ ತುರತ ಉಪಾರಾ । ಅತಿ ರಿಸ ಮೇಘನಾದ ಪರ ಡಾರಾ ॥ ೧ ॥**
**ಆವತ ದೇಖಿ ಗಯಉ ನಭ ಸೋಈ । ರಥ ಸಾರಥೀ ತುರಗ ಸಬ ಖೋಈ ॥**
**ಬಾರ ಬಾರ ಪಚಾರ ಹನುಮಾನಾ । ನಿಕಟ ನ ಆವ ಮರಮು ಸೋ ಜಾನಾ ॥ ೨ ॥**
**ರಘುಪತಿ ನಿಕಟ ಗಯಉ ಘನನಾದಾ । ನಾನಾ ಭಾಂತಿ ಕರೇಸಿ ದುರ್ಬಾದಾ ॥**
**ಅಸ್ತ್ರ ಸಸ್ತ್ರ ಆಯುಧ ಸಬ ಡಾರೇ । ಕೌತುಕಹೀಂ ಪ್ರಭು ಕಾಟಿ ನಿವಾರೇ ॥ ೩ ॥**
**ದೇಖಿ ಪ್ರತಾಪ ಮೂಢ ಖಿಸಿಆನಾ । ಕರೈ ಲಾಗ ಮಾಯಾ ಬಿಧಿ ನಾನಾ ॥**
**ಜಿಮಿ ಕೋಉ ಕರೈ ಗರುಡ ಸೈಂ ಖೇಲಾ । ಡರಪಾವೈ ಗಹಿ ಸ್ವಲ್ಪ ಸಪೇಲಾ ॥ ೪ ॥**

ವಾನರ ಸೇನೆ ಈ ಪ್ರಕಾರ ಕಂಗೆಟ್ಟು ದಿಕ್ಕಾಪಾಲಾದುದನ್ನು ಕಂಡು ಪವನಪುತ್ರ, ಭಾರೀ ಸಿಟ್ಟುಗೊಂಡು ಸಾಕ್ಷಾತ್ ಕಾಲನಂತೆ ಶತ್ರುವಿನತ್ತ ಧಾವಿಸಿಬಂದನು. ಅವನು ಕೂಡಲೇ ಒಂದು ದೊಡ್ಡ ಬೆಟ್ಟವನ್ನು ಕಿತ್ತೆತ್ತಿಕೊಂಡು ಕ್ರುದ್ಧನಾಗಿ ರೊಯ್ಯನೆ ಮೇಘನಾದನ

ಮೇಲೆ ಎಸೆದನು. ತನ್ನ ಮೇಲೆ ಎರಗುತ್ತಿರುವ ಪರ್ವತವನ್ನು ನೋಡಿ ಮೇಘನಾದನು ಆಕಾಶಕ್ಕೆ ನೆಗೆದನು. ಅವನ ರಥವು ಪುಡಿಪುಡಿಯಾಯಿತು. ಸಾರಥಿ-ತುರಗಗಳು ಹತರಾದರು. ಹನುಮಂತನು ಮತ್ತೆ-ಮತ್ತೆ ಅವನನ್ನು ಮೂದಲಿಸಿದನು. ಆದರೆ ಹನುಮಂತನ ಬಲದ ಮರ್ಮ ತಿಳಿದ ಮೇಘನಾದನು ಅವನ ಬಳಿಗೆ ಬರಲೊಲ್ಲನು. ಆಗ ಮೇಘನಾದನು ರಘುನಾಥನ ಬಳಿಗೆ ಬಂದು ಅನೇಕರೀತಿಯ ದುರ್ವಚನಗಳನ್ನಾಡಿದನು. ಅನಂತರ ಅವನು ಶ್ರೀರಾಮನ ಮೇಲೆ ಅನೇಕ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಿದನು. ಆದರೆ ಪ್ರಭುವು ಲೀಲಾಜಾಲವಾಗಿ ಅದನ್ನು ಕತ್ತರಿಸಿ ಹಾಕಿದನು. ಶ್ರೀರಾಮನ ಬಲಪರಾಕ್ರಮವನ್ನು ಕಂಡು ಆ ಮೂರ್ಖನು ಲಜ್ಜಿತನಾಗಿ ಅನೇಕ ರೀತಿಯ ಮಾಯೆಗಳನ್ನು ಒಡ್ಡಿದ. ಅವನ ಪ್ರಯತ್ನವು – ಸಣ್ಣ ಹಾವಿನ ಮರಿಯನ್ನು ಹಿಡಿದು ಗರುಡನನ್ನು ಹೆದರಿಸಿ, ಸರಸವಾಡುವಂತಾಯಿತು. (ಚೌ/೧-೪)

**ದೋ – ಜಾಸು ಪ್ರಬಲ ಮಾಯಾ ಬಸ ಸಿವ ಬಿರಂಚಿ ಬಡ ಛೋಟ।**
**ತಾಹಿ ದಿಖಾವಇ ನಿಸಿಚರ ನಿಜ ಮಾಯಾ ಮತಿ ಖೋಟ॥ ೫೧ ॥**

ಶಿವ, ವಿರಿಂಚಿಯಿಂದ ಹಿಡಿದು ಎಲ್ಲ ಹಿರಿಯರು-ಕಿರಿಯರು, ಯಾವ ಭಗವಂತನ ಪ್ರಬಲ ಮಾಯೆಗೆ ಒಳಗಾಗಿದ್ದಾರೋ ಅವನೆದುರಿಗೆ ಈ ನೀಚ ನಿಶಾಚರನು ತನ್ನ ಮಾಯೆಯನ್ನು ತೋರುತ್ತಿರುವನು. (ದೋ/೫೧)

**ಚೌ – ನಭ ಚಢಿ ಬರಷ ಬಿಪುಲ ಅಂಗಾರಾ। ಮಹಿ ತೇ ಪ್ರಗಟ ಹೋಹಿಂ ಜಲಧಾರಾ॥**
**ನಾನಾ ಭಾಂತಿ ಪಿಸಾಚ ಪಿಸಾಚೀ। ಮಾರು ಕಾಟು ಧುನಿ ಬೋಲಹಿಂ ನಾಚೀ॥ ೧ ॥**
**ಬಿಷ್ಟಾ ಪೂಯ ರುಧಿರ ಕಚ ಹಾಡಾ। ಬರಷಇ ಕಬಹುँ ಉಪಲ ಬಹು ಛಾಡಾ॥**
**ಬರಷಿ ಧೂರಿ ಕೀನ್ಹೆಸಿ ಅँಧಿಆರಾ। ಸೂಝ ನ ಆಪನ ಹಾಥ ಪಸಾರಾ॥ ೨ ॥**
**ಕಪಿ ಅಕುಲಾನೇ ಮಾಯಾ ದೇಖೇಂ। ಸಬ ಕರ ಮರನ ಬನಾ ಏಹಿ ಲೇಖೇಂ॥**
**ಕೌತುಕ ದೇಖಿ ರಾಮ ಮುಸುಕಾನೇ। ಭಏ ಸಭೀತ ಸಕಲ ಕಪಿ ಜಾನೇ॥ ೩ ॥**
**ಏಕ ಬಾನ ಕಾಟೀ ಸಬ ಮಾಯಾ। ಜಿಮಿ ದಿನಕರ ಹರ ತಿಮಿರ ನಿಕಾಯಾ॥**
**ಕೃಪಾದೃಷ್ಟಿ ಕಪಿ ಭಾಲು ಬಿಲೋಕೇ। ಭಏ ಪ್ರಬಲ ರನ ರಹಹಿಂ ನ ರೋಕೇ॥ ೪ ॥**

ಆಕಾಶಕ್ಕೆ ಎಗರಿದ ಇಂದ್ರಜಿತುವು ಕೆಂಡದ ಮಳೆಗರೆಯತೊಡಗಿದನು. ನೆಲದಿಂದ ಜಲದ ಧಾರೆಗಳು ಚಿಮ್ಮಿದವು. ಅನೇಕ ವಿಧವಾದ ಪಿಶಾಚ-ಪಿಶಾಚಿನಿಯರು ಕುಣಿದು-ಕುಪ್ಪಳಿಸಿ, 'ಕಡಿ-ಬಡಿ', ಹೊಡಿ-ಕತ್ತರಿಸು' ಎಂದು ಕಿರುಚತೊಡಗಿದವು. ಅವನು ಮಲ-ಮೂತ್ರಗಳನ್ನು, ಕೀವು, ನೆತ್ತರು, ಕೂದಲು, ಮೂಳೆ ಇವುಗಳ ಮರೆಗರೆದನು. ಮತ್ತೊಮ್ಮೆ ಎಲ್ಲೆಡೆ ಶಿಲೆಗಳನ್ನು ಎರಚಿದನು. ಅನಂತರ ಅವನು ದೂಳುಚೆಲ್ಲಿ ಎತ್ತೆತ್ತಲೂ ಕತ್ತಲು ಕವಿಯುವಂತೆ ಮಾಡಿದನು. ಅದರಲ್ಲಿ ಚಾಚಿದ ತನ್ನ ಕೈಯೇ ಕಾಣದಂತಾಯಿತು. ಅವನ ಮಾಯೆಯನ್ನು ಕಂಡು ವಾನರರು ತತ್ತರಿಸಿ ಹೋದರು. ಇದೇ ರೀತಿ ಮುಂದುವರಿದರೆ ನಾವೆಲ್ಲರೂ ಸತ್ತಂತೆಯೇ ಸರಿ ಎಂದು ಅವರೆಲ್ಲ ಯೋಚಿಸತೊಡಗಿದರು. ಈ ದೃಶ್ಯವನ್ನು ಕಂಡು ಶ್ರೀರಾಮನು ಮುಗುಳ್ನಕ್ಕು ವಾನರರೆಲ್ಲ ಭಯಭ್ರಾಂತರಾಗಿದ್ದಾರೆಂಬುದನ್ನು ಅರಿತು ಸೂರ್ಯನು ಕತ್ತಲೆಯ ಮೊತ್ತವನ್ನು ತೊಡೆದುಹಾಕುವಂತೆ ಒಂದೇ ಒಂದು ಬಾಣದಿಂದ ಮೇಘನಾದನ ಮಾಯೆಯನ್ನು ನಾಶಪಡಿಸಿದನು. ಮತ್ತೆ ಅವನು ವಾನರ-ಭಲ್ಲೂಕಗಳತ್ತ ತನ್ನ ಕೃಪಾದೃಷ್ಟಿಯನ್ನು ಬೀರಿದನು. ಅವರು ಮರಳಿ ಶಕ್ತಿಸಂಪನ್ನರಾಗಿ ತಡೆದರೂ ನಿಲ್ಲದೆ ವೀರಾವೇಶದಿಂದ ಹೋರಾಡತೊಡಗಿದರು. (ಚೌ/೧-೪)

**ದೋ – ಆಯಸು ಮಾಗಿ ರಾಮ ಪಹಿಂ ಅಂಗದಾದಿ ಕಪಿ ಸಾಥ।**
**ಲಛಿಮನ ಚಲೇ ಕ್ರುದ್ಧ ಹೋಇ ಬಾನ ಸರಾಸನ ಹಾಥ॥ ೫೨ ॥**

ಶ್ರೀರಾಮನ ಅಪ್ಪಣೆಯನ್ನು ಪಡೆದು ಲಕ್ಷ್ಮಣನು ಧನುರ್ಬಾಣಗಳನ್ನು ಧರಿಸಿಕೊಂಡು ಕ್ರುದ್ಧನಾಗಿ ಅಂಗದಾದಿ ವಾನರ ಪ್ರಮುಖರೊಂದಿಗೆ ಯುದ್ಧಕ್ಕೆ ಹೊರಟನು. (ದೋ/೫೨)

**ಚೌ – ಛತಜ ನಯನ ಉರ ಬಾಹು ಬಿಸಾಲಾ। ಹಿಮಗಿರಿ ನಿಭ ತನು ಕಛು ಏಕ ಲಾಲಾ॥**
**ಇಹಾँ ದಸಾನನ ಸುಭಟ ಪಠಾಏ। ನಾನಾ ಅಸ್ತ್ರ ಸಸ್ತ್ರ ಗಹಿ ಧಾಏ॥ ೧ ॥**
**ಭೂಧರ ನಖ ಬಿಟಪಾಯುಧ ಧಾರೀ। ಧಾಏ ಕಪಿ ಜಯ ರಾಮ ಪುಕಾರೀ॥**
**ಭಿರೇ ಸಕಲ ಜೋರಿಹಿ ಸನ ಜೋರೀ। ಇತ ಉತ ಜಯ ಇಚ್ಛಾ ನಹಿಂ ಥೋರೀ॥ ೨ ॥**
**ಮುಠಿಕನ್ಹ ಲಾತನ್ಹ ದಾತನ್ಹ ಕಾಟಹಿಂ। ಕಪಿ ಜಯಸೀಲ ಮಾರಿ ಪುನಿ ಡಾಟಹಿಂ॥**
**ಮಾರು ಮಾರು ಧರು ಧರು ಧರು ಮಾರೂ। ಸೀಸ ತೋರಿ ಗಹಿ ಭುಜಾ ಉಪಾರೂ॥ ೩ ॥**

**ಅಸಿ ರವ ಪೂರಿ ರಹೀ ನವ ಖಂಡಾ। ಧಾವಹಿಂ ಜಹಁ ತಹಁ ರುಂಡ ಪ್ರಚಂಡಾ॥**
**ದೇಖಹಿಂ ಕೌತುಕ ನಭ ಸುರ ಬೃಂದಾ। ಕಬಹುಁಕ ಬಿಸಮಯ ಕಬಹುಁ ಅನಂದಾ॥ ೪ ॥**

ಅವನ ಕಣ್ಣುಗಳು ಕೆಂಡಕಾರುತ್ತಿದ್ದವು. ಹರವಾದ ವಕ್ಷಸ್ಥಳ, ದೀರ್ಘಬಾಹುಗಳಿಂದ, ಹಿಮಾಲಯ ಪರ್ವತದಂತೆ ಗೌರವರ್ಣ ಶರೀರಕಾಂತಿಯು ಕೊಂಚ ಕೆಂಪುಬಣ್ಣಕ್ಕೇರಿತ್ತು. ಇತ್ತ ರಾವಣನು ಮೇಘನಾದನ ಜೊತೆಗೆ ತನ್ನ ಸಮರ ಪಟುಭಟರನ್ನು ಕಳಿಸಿದನು. ಅವರು ಅನೇಕವಿಧವಾದ ಶಸ್ತ್ರಾಸ್ತ್ರಗಳನ್ನು ಧರಿಸಿಕೊಂಡು ಒಮ್ಮೆಲೆ ರಣರಂಗಕ್ಕೆ ಧುಮುಕಿದರು. ಪರ್ವತಗಳು, ಹೆಮ್ಮರಗಳು, ತಮ್ಮ ಉಗುರುಗಳನ್ನೇ ಆಯುಧವನ್ನಾಗಿ ಮಾಡಿಕೊಂಡು ವಾನರವೀರರು 'ಶ್ರೀರಾಮಚಂದ್ರನಿಗೆ ಜಯವಾಗಲೀ' ಎಂದು ಘೋಷಿಸುತ್ತಾಸಾಗಿದರು. ವಾನರರು ರಕ್ಕಸರು ಜೋಡಿ-ಜೋಡಿಯಾಗಿ ಕಾದಿದರು. ಉಭಯ ತಂಡಗಳಲ್ಲಿಯೂ ಪ್ರಬಲವಾದ ವಿಜಯದ ಆಕಾಂಕ್ಷೆಯಿಂದ ವೀರೋಚಿತವಾಗಿ ಹೋರಾಡುತ್ತಿದ್ದರು. ವಾನರರು ರಕ್ಕಸರನ್ನು ಮುಷ್ಟಿಯಿಂದ ಹೊಡೆದು, ಕಾಲಿಂದ ಒದ್ದು, ಹಲ್ಲಿನಿಂದ ಕಚ್ಚಿ-ಕಚ್ಚಿ ಕೊಲ್ಲುತ್ತಿದ್ದರು. ಜಯಶಾಲಿಗಳಾದ ವಾನರರು ಅವರನ್ನು ಗುದಿ-ಗುದ್ದಿ ಬಾಧಿಸುತ್ತಾ ಗದರಿಸುತ್ತಿದ್ದರು. ''ಕೊಲ್ಲು, ಕಡಿ, ಹಿಡಿ, ಬಡಿ, ತಿವಿ, ಕಟ್ಟು, ತಲೆ ಒಡಿ, ಭುಜಗಳನ್ನು ಹಿಡಿದು ಕಳಚು'' ಎಂಬ ಕೂಗು ನವಖಂಡಗಳಲ್ಲಿಯೂ ತುಂಬಿಹೋಯಿತು. ರುಂಡ ಕಳಚಿದ ಮುಂಡಗಳು ಎಲ್ಲೆಲ್ಲೂ ಓಡಾಡುತ್ತಿದ್ದವು. ಆಕಾಶದಲ್ಲಿ ನೆರೆದಿದ್ದ ದೇವತೆಗಳು ನಿಬ್ಬೆರಗಾಗಿ ಈ ಕೌತುಕವನ್ನು ನೋಡುತ್ತಿದ್ದರು. ಅವರಿಗೆ ಒಮ್ಮೆ ಖೇದವಾದರೆ, ಮತ್ತೊಮ್ಮೆ ಮೋದವಾಗುತ್ತಿತ್ತು. (ಚೌ/೧-೪)

**ದೋ – ರುಧಿರ ಗಾಡ ಭರಿ ಭರಿ ಜಮ್ಯೋ ಊಪರ ಧೂರಿ ಉಡಾಇ।**
**ಜನು ಅಂಗಾರ ರಾಸಿನ್ಹ ಪರ ಮೃತಕ ಧೂಮ ರಹ್ಯೋ ಛಾಇ॥ ೫೩ ॥**

ಹಳ್ಳ-ಹೊಂಡಗಳಲ್ಲಿ ತುಂಬಿಹೋದ ನೆತ್ತರು ಹೆಪ್ಪುಗಟ್ಟಿತ್ತು. ಅದರ ಮೇಲೆ ಧೂಳು ತುಂಬಿ, ಅದು ಕೆಂಡದ ರಾಶಿಯ ಮೇಲೆ ಬೂದಿ ಕವಿದಿರುವಂತೆ ಕಾಣುತ್ತಿತ್ತು. (ದೋ/೫೩)

**ಚೌ – ಘಾಯಲ ಬೀರ ಬಿರಾಜಹಿಂ ಕೈಸೇ। ಕುಸುಮಿತ ಕಿಂಸುಕ ಕೇ ತರು ಜೈಸೇ॥**
**ಲಛಿಮನ ಮೇಘನಾದ ದ್ವೌ ಜೋಧಾ। ಭಿರಹಿಂ ಪರಸಪರ ಕರಿ ಅತಿ ಕ್ರೋಧಾ॥ ೧ ॥**
**ಏಕಹಿ ಏಕ ಸಕಇ ನಹಿಂ ಜೀತೀ। ನಿಸಿಚರ ಛಲ ಬಲ ಕರಇ ಅನೀತೀ॥**
**ಕ್ರೋಧವಂತ ತಬ ಭಯಉ ಅನಂತಾ। ಭಂಜೇಉ ರಥ ಸಾರಥೀ ತುರಂತಾ॥ ೨ ॥**
**ನಾನಾ ಬಿಧಿ ಪ್ರಹಾರ ಕರ ಸೇಷಾ। ರಾಚ್ಛಸ ಭಯಉ ಪ್ರಾನ ಅವಸೇಷಾ॥**
**ರಾವನ ಸುತ ನಿಜ ಮನ ಅನುಮಾನಾ। ಸಂಕಠ ಭಯಉ ಹರಿಹಿ ಮಮ ಪ್ರಾನಾ॥ ೩ ॥**
**ಬೀರಘಾತಿನೀ ಛಾಡಿಸಿ ಸಾಁಗೀ। ತೇಜಪುಂಜ ಲಛಿಮನ ಉರ ಲಾಗೀ॥**
**ಮುರುಛಾ ಭಈ ಸಕ್ತಿ ಕೇ ಲಾಗೇಂ। ತಬ ಚಲಿ ಗಯಉ ನಿಕಟ ಭಯ ತ್ಯಾಗೇಂ॥ ೪ ॥**

ಗಾಯಗೊಂಡ ವೀರರು ಅರಳಿನಿಂತ ಮುತ್ತುಗದ ಮರಗಳಂತೆ ಕಾಣುತ್ತಿದ್ದರು. ಲಕ್ಷ್ಮಣ ಮತ್ತು ಮೇಘನಾದ ಈರ್ವರೂ ಯೋಧರು ಅತ್ಯಂತ ಕ್ರುದ್ಧರಾಗಿ ಒಬ್ಬರ ಮೇಲೊಬ್ಬರು ಎರಗಿದರು. ಯಾರೂ ಯಾರನ್ನು ಗೆಲ್ಲರು, ಸೋಲರು. ರಾಕ್ಷಸನಾದ ಮೇಘನಾದನು ಮೋಸವನ್ನು, ಅಧರ್ಮವನ್ನು ಅವಲಂಬಿಸಿ ಮಾಯೆ ಮಾಡತೊಡಗಿದನು. ಆಗ ಭಗವಾನ್ ಅನಂತನಾದ ಲಕ್ಷ್ಮಣನು ರೋಷಾವೇಶಗೊಂಡು ಇಂದ್ರಜಿತುವಿನ ರಥವನ್ನು ಭಗ್ನಗೊಳಿಸಿದನು. ಸಾರಥಿಯನ್ನು ತುಂಡರಿಸಿದನು. ಅವನ ಪ್ರಹಾರದಿಂದ ಇಂದ್ರಜಿತುವಿನ ಪ್ರಾಣಮಾತ್ರ ಉಳಿದಿತ್ತು. 'ಈಗ ತೀವ್ರ ಸಂಕಟ ಪರಿಸ್ಥಿತಿ ಇದಿರಾಗಿದೆ. ಇವನ ಕೈಯಿಂದ ನನ್ನ ಪ್ರಾಣಗಳು ಉಳಿಯವು' ಎಂದು ಭಾವಿಸಿದ ರಾವಣಪುತ್ರನು 'ವೀರಘಾತಿನಿ' ಎಂಬ ಶಕ್ತ್ಯಾಯುಧವನ್ನು ಪ್ರಯೋಗಿಸಿದನು. ತೇಜೋರಾಶಿಯಾದ ಆ ಶಕ್ತ್ಯಾಯುಧವು ಲಕ್ಷ್ಮಣನ ಎದೆಗೆ ತಗುಲಿತು. ಶಕ್ತಿ ತಗಲುತ್ತಲೇ ಅವನು ಮೂರ್ಛಿತನಾದನು. ಆಗ ಮೇಘನಾದನು ನಿರ್ಭಯನಾಗಿ ಅವನ ಸಮೀಪಕ್ಕೆ ಸಾಗಿದನು. (ಚೌ/೧-೪)

**ದೋ – ಮೇಘನಾದ ಸಮ ಕೋಟಿ ಸತ ಜೋಧಾ ರಹೇ ಉಠಾಇ।**
**ಜಗದಾಧಾರ ಸೇಷ ಕಿಮಿ ಉಠೈ ಚಲೇ ಖಿಸಿಆಇ॥ ೫೪ ॥**

ಮೇಘನಾದನಂತಹ ಬಲವುಳ್ಳ ಅಸಂಖ್ಯ ರಾಕ್ಷಸಯೋಧರು ಲಕ್ಷ್ಮಣನನ್ನು ಎತ್ತಿಕೊಂಡು ಹೋಗಲು ಪ್ರಯತ್ನಿಸುವರು. ಆದರೆ ಜಗದಾಧಾರನಾದ ಆದಿಶೇಷನಲ್ಲವೇ ಅವನು. ಅವನನ್ನು ಹೇಗೆ ಎತ್ತಬಲ್ಲರು? ಅವರು ನಾಚಿ ತಲೆತಗ್ಗಿಸಿ ಹೊರಟುಹೋದರು. (ದೋ/೫೪)

**ಚೌ – ಸುನು ಗಿರಿಜಾ ಕ್ರೋಧಾನಲ ಜಾಸೂ। ಜಾರಇ ಭುವನ ಚಾರಿದಸ ಆಸೂ॥**
**ಸಕ ಸಂಗ್ರಾಮ ಜೀತಿ ಕೋ ತಾಹೀ। ಸೇವಹಿಂ ಸುರ ನರ ಅಗ ಜಗ ಜಾಹೀ॥ ೧॥**
**ಯಹ ಕೌತೂಹಲ ಜಾನಇ ಸೋಈ। ಜಾ ಪರ ಕೃಪಾ ರಾಮ ಕೈ ಹೋಈ॥**
**ಸಂಧ್ಯಾ ಭಇ ಫಿರಿ ದ್ವೌ ಬಾಹನೀ। ಲಗೇ ಸಂಭಾರನ ನಿಜ ನಿಜ ಅನೀ॥ ೨॥**
**ಬ್ಯಾಪಕ ಬ್ರಹ್ಮ ಅಜಿತ ಭುವನೇಸ್ವರ। ಲಛಿಮನ ಕಹಾಂ ಬೂಝ ಕರುನಾಕರ॥**
**ತಬ ಲಗಿ ಲೈ ಆಯಉ ಹನುಮಾನಾ। ಅನುಜ ದೇಖಿ ಪ್ರಭು ಅತಿ ದುಖ ಮಾನಾ॥ ೩॥**
**ಜಾಮವಂತ ಕಹ ಬೈದ ಸುಷೇನಾ। ಲಂಕಾಂ ರಹಇ ಕೋ ಪಠಈ ಲೇನಾ॥**
**ಧರಿ ಲಘು ರೂಪ ಗಯಉ ಹನುಮಂತಾ। ಆನೇಉ ಭವನ ಸಮೇತ ತುರಂತಾ॥ ೪॥**

ಶಿವನು ಹೇಳುತ್ತಿರುವನು – ಗಿರಿಜೆ! ಪ್ರಳಯಕಾಲದಲ್ಲಿ ಯಾರ ಕ್ರೋಧಾಗ್ನಿಯು ಚತುರ್ದಶ ಭುವನಗಳನ್ನು ಕ್ಷಣಮಾತ್ರದಲ್ಲಿ ಸುಟ್ಟುರುಹುತ್ತದೋ, ಸುರ, ನರ, ಸಮಸ್ತ ಚರಾಚರಗಳೆಲ್ಲವೂ ಯಾರನ್ನು ಸೇವಿಸುವರೋ ಅಂತಹ ಆದಿಶೇಷ ಲಕ್ಷ್ಮಣನನ್ನು ಯಾರು ಗೆಲ್ಲಬಲ್ಲರು? ಈ ಅದ್ಭುತಲೀಲೆಯನ್ನು ಶ್ರೀರಾಮನ ಕೃಪಾಪಾತ್ರರಾದವರು ಮಾತ್ರ ಅರಿಯಬಲ್ಲರು. ಸಂಜೆಯಾಗುತ್ತಲೇ ಎರಡೂ ಕಡೆಯ ಪಡೆಗಳು ಬಿಡದಿಯನ್ನು ಸೇರಿದವು. ಪಡೆವಳರು ತಮ್ಮ-ತಮ್ಮ ಪಡೆಗಳ ಉಸ್ತುವಾರಿ ನೋಡತೊಡಗಿದರು. ಸರ್ವವ್ಯಾಪಕನೂ, ಪರಬ್ರಹ್ಮನೂ, ಅಜೇಯನೂ, ಸಕಲ ಭುವನಾಧಿಪತಿಯೂ, ಕರುಣಾನಿಧಿಯೂ ಆದ ಶ್ರೀರಾಮಚಂದ್ರನು ಲಕ್ಷ್ಮಣನೆಲ್ಲಿ ಎಂದು ಕೇಳಿದನು. ಅಷ್ಟರಲ್ಲಿ ಹನುಮಂತನು ಲಕ್ಷ್ಮಣನನ್ನು ಎತ್ತಿಕೊಂಡು ಅಲ್ಲಿಗೆ ಬಂದನು. ತನ್ನ ತಮ್ಮನ ಸ್ಥಿತಿಯನ್ನು ನೋಡಿ, ಶ್ರೀರಾಮನು ತುಂಬಾ ದುಃಖಿತನಾದನು. ಆಗ ಜಾಂಬವಂತನು ಹೀಗೆಂದನು – ಲಂಕೆಯಲ್ಲಿ ಸುಷೇಣನೆಂಬ ವೈದ್ಯನಿದ್ದಾನೆ. ಅವನನ್ನು ಇಲ್ಲಿಗೆ ಯಾರು ಕರೆತರುವವರು? ಕೂಡಲೇ ಹನುಮಂತನು ಲಘುರೂಪವನ್ನಾಂತು ಅಲ್ಲಿಗೆ ಹೋಗಿ, ಸುಷೇಣನನ್ನು ಮನೆಸಹಿತ ಎತ್ತಿ ತಂದನು. (ಚೌ/೧-೪)

**ದೋ – ರಾಮ ಪದಾರಬಿಂದ ಸಿರ ನಾಯಉ ಆಇ ಸುಷೇನ।**
**ಕಹಾ ನಾಮ ಗಿರಿ ಔಷಧೀ ಜಾಹು ಪವನಸುತ ಲೇನ॥ ೫೫॥**

ಸುಷೇಣನು ಶ್ರೀರಾಮನ ಪದಪದ್ಮಗಳಿಗೆರಗಿದನು. ಅವನು ಮೂಲಿಕೆ ಮತ್ತು ಅದು ದೊರೆಯುವ ಪರ್ವತದ ಹೆಸರು ಹೇಳಿ, 'ಆಂಜನೇಯಾ! ನೀನು ಹೋಗಿ ಆ ಔಷಧವನ್ನು ತೆಗೆದುಕೊಂಡು ಬಾ' ಎಂದು ತಿಳಿಸಿದನು. (ದೋ/೫೫)

## ಹನುಮಂತನು ಸಂಜೀವನಿಯನ್ನು ತಂದುದು

**ಚೌ – ರಾಮು ಚರನ ಸರಸಿಜ ಉರ ರಾಖೀ। ಚಲಾ ಪ್ರಭಂಜನಸುತ ಬಲ ಭಾಷೀ॥**
**ಉಹಾಂ ದೂತ ಎಕ ಮರಮು ಜನಾವಾ। ರಾವನು ಕಾಲನೇಮಿ ಗೃಹ ಆವಾ॥ ೧॥**
**ದಸಮುಖ ಕಹಾ ಮರಮು ತೆಹಿಂ ಸುನಾ। ಪುನಿ ಪುನಿ ಕಾಲನೇಮಿ ಸಿರು ಧುನಾ॥**
**ದೇಖತ ತುಮ್ಹಹಿ ನಗರು ಜೆಹಿಂ ಜಾರಾ। ತಾಸು ಪಂಥ ಕೋ ರೋಕನ ಪಾರಾ॥ ೨॥**
**ಭಜಿ ರಘುಪತಿ ಕರು ಹಿತ ಆಪನಾ। ಛಾಂಡಹು ನಾಥ ಮೃಷಾ ಜಲ್ಪನಾ॥**
**ನೀಲ ಕಂಜ ತನು ಸುಂದರ ಸ್ಯಾಮಾ। ಹೃದಯಂ ರಾಖು ಲೋಚನಾಭಿರಾಮಾ॥ ೩॥**
**ಮೈಂ ತೈಂ ಮೋರ ಮೂಢತಾ ತ್ಯಾಗೂ। ಮಹಾ ಮೋಹ ನಿಸಿ ಸೂತತ ಜಾಗೂ॥**
**ಕಾಲ ಬ್ಯಾಲ ಕರ ಭಚ್ಛಕ ಜೋಈ। ಸಪನೆಹುಂ ಸಮರ ಕಿ ಜೀತಿಅ ಸೋಈ॥ ೪॥**

ಪ್ರಭಂಜನಕುಮಾರ ಹನುಮಂತನು 'ಸರಿ! ಈಗಲೇ ತರುತ್ತೇನೆ' ಎಂದು ಹೇಳಿ, ತನ್ನ ಹೃದಯದಲ್ಲಿ ಶ್ರೀರಾಮನ ಪದಸರೋಜಗಳನ್ನು ಸ್ಮರಿಸುತ್ತಾ ಔಷಧಿಗಾಗಿ ಹೊರವಂಟನು. ಅತ್ತ ಒಬ್ಬ ಗುಪ್ತಚರನು ರಾವಣನಿಗೆ ಈ ಸುದ್ದಿಯನ್ನು ಮುಟ್ಟಿಸಿದನು. ಆಗ ರಾವಣನು 'ಕಾಲನೇಮಿ' ಎಂಬ ರಾಕ್ಷಸನ ಮನೆಗೆ ಹೋಗಿ ಅವನಿಗೆ ಎಲ್ಲ ವಿಷಯವನ್ನು ತಿಳಿಸಿ, ಸಹಾಯವನ್ನು ಯಾಚಿಸಿದನು. ಅದನ್ನು ಕೇಳಿ ಕಾಲನೇಮಿಯು ತಲೆಚಚ್ಚಿಕೊಂಡು ಹೇಳಿದನು – ''ನಿನ್ನ ಕಣ್ಣೆದುರಿಗೆ ನಿನ್ನ ಊರನ್ನು ಸುಟ್ಟ ಅವನ ಹಾದಿಯನ್ನು ಯಾರು ತಡೆಯಬಲ್ಲರು? ಶ್ರೀರಘುನಾಥನನ್ನು ಭಜಿಸಿ, ನೀನು ನಿನ್ನ ಹಿತವನ್ನು ಸಾಧಿಸು. ಒಡೆಯಾ! ಸುಳ್ಳು, ಪಳ್ಳು ಗಳಹುವುದನ್ನು ತೊರೆ. ನೀಲಕಮಲದಂತಿರುವ ಶ್ಯಾಮಸುಂದರನಾದ ಶ್ರೀರಾಮನನ್ನು ನಿನ್ನ ಹೃದಯದಲ್ಲಿ ನೆಲೆಗೊಳಿಸು. ನಾನು-ನೀನು ಎಂಬ ಭೇದಭಾವನನ್ನು, ಮಮತ್ವವೆಂಬ ಮೌಢ್ಯವನ್ನು ತ್ಯಜಿಸು. ನೀನು ಮಹಾ ಮೋಹವೆಂಬ ಇರುಳಿನಲ್ಲಿ

ನಿದ್ರಿಸುತ್ತಿರುವೆ. ಎಚ್ಚರವಾಗು. ಕಾಲಸ್ವರೂಪವನ್ನೂ ಕಬಳಿಸುವಂತಹವನನ್ನು ಯಾರಾದರೂ ಸ್ವಪ್ನದಲ್ಲಾದರೂ ಯುದ್ಧದಲ್ಲಿ ಗೆಲ್ಲಬಲ್ಲರೇ? (ಚೌ/೧-೪)

**ದೋ – ಸುನಿ ದಸಕಂಠ ರಿಸಾನ ಅತಿ ತೆಹಿಂ ಮನ ಕೀನ್ಹ ಬಿಚಾರ।**
**ರಾಮ ದೂತ ಕರ ಮರೌಂ ಬರು ಯಹ ಖಲ ರತ ಮಲ ಭಾರ॥ ೫೬ ॥**

ಕಾಲನೇಮಿಯ ಈ ಮಾತನ್ನು ಕೇಳಿ, ರಾವಣನು ತುಂಬಾ ಕ್ರುದ್ಧನಾದನು. ಆಗ ಕಾಲನೇಮಿಯು ಮನದಲ್ಲೇ ಯೋಚಿಸಿದ – ''ಈ ದುಷ್ಟನ ಕೈಯಲ್ಲಿ ಸಾಯುವುದಕ್ಕಿಂತ ಶ್ರೀರಾಮನ ದೂತನ ಕೈಯಲ್ಲಿ ಸಾಯುವುದೇ ಮೇಲು. ಇವನು ಪಾಪದ ಹೊರೆ ಹೊತ್ತಿರುವನು. (ದೋ/೫೬)

**ಚೌ – ಅಸ ಕಹಿ ಚಲಾ ರಚಿಸಿ ಮಗ ಮಾಯಾ। ಸರ ಮಂದಿರ ಬರ ಬಾಗ ಬನಾಯಾ॥**
**ಮಾರುತಸುತ ದೇಖಾ ಸುಭ ಆಶ್ರಮ। ಮುನಿಹಿ ಬೂಝಿ ಜಲ ಪಿಯೌಂ ಜಾಇ ಶ್ರಮ॥ ೧ ॥**
**ರಾಚ್ಛಸ ಕಪಟ ಬೇಷ ತಹ್ಂ ಸೋಹಾ। ಮಾಯಾಪತಿ ದೂತಹಿ ಚಹ ಮೋಹಾ॥**
**ಜಾಇ ಪವನಸುತ ನಾಯಉ ಮಾಥಾ। ಲಾಗ ಸೊ ಕಹೈ ರಾಮ ಗುನ ಗಾಥಾ॥ ೨ ॥**
**ಹೋತ ಮಹಾ ರನ ರಾವನ ರಾಮಹಿಂ। ಜಿತಿಹಹಿಂ ರಾಮ ನ ಸಂಸಯ ಯಾ ಮಹಿಂ॥**
**ಇಹಾಂ ಭಏಂ ಮೈಂ ದೇಖಉಂ ಭಾಈ। ಗ್ಯಾನ ದೃಷ್ಟಿ ಬಲ ಮೊಹಿ ಅಧಿಕಾಈ॥ ೩ ॥**
**ಮಾಗಾ ಜಲ ತೆಹಿಂ ದೀನ್ಹ ಕಮಂಡಲ। ಕಹ ಕಪಿ ನಹಿಂ ಅಘಾಉಂ ಥೋರೇಂ ಜಲ॥**
**ಸರ ಮಜ್ಜನ ಕರಿ ಆತುರ ಆವಹು। ದಿಚ್ಛಾ ದೇಉಂ ಗ್ಯಾನ ಜೆಹಿಂ ಪಾವಹು॥ ೪ ॥**

ಹೀಗೆ ಆಲೋಚಿಸಿ ಕಾಲನೇಮಿಯು ಹನುಮಂತನು ಹೋಗುವ ಮಾರ್ಗದಲ್ಲಿ ಮಾಯೆಯನ್ನು ರಚಿಸಿದನು. ಒಂದು ಸುಂದರ ಸರೋವರ, ಅಂದವಾದ ವನ, ಅದರಲ್ಲೊಂದು ಆಶ್ರಮ, ದೇವಾಲಯವನ್ನು ನಿರ್ಮಿಸಿದನು. ಹನುಮಂತನು ಆ ಸುಂದರ ಆಶ್ರಮವನ್ನು ನೋಡಿ, ಮುನಿಗಳಲ್ಲಿ ನೀರು ಕೇಳಿ ಕುಡಿದು ಬಾಯಾರಿಕೆಯನ್ನು ಇಂಗಿಸಿಕೊಂಡು, ದಣಿವನ್ನು ನಿವಾರಿಸಿಕೊಳ್ಳೋಣ ಎಂದು ಆಲೋಚಿಸಿದನು. ಕಾಲನೇಮಿಯು ಅಲ್ಲಿ ಕಪಟಮುನಿಯ ವೇಷದಲ್ಲಿದ್ದನು. ಆ ಮೂಢನು ತನ್ನ ಮಾಯೆಯಿಂದ ಮಾಯಾಪತಿಯ ದೂತನನ್ನು ಮರಳುಮಾಡಲು ಬಯಸುತ್ತಿದ್ದನು. ಮಾರುತಿಯು ಅವನ ಬಳಿಗೆ ಹೋಗಿ ನಮಸ್ಕರಿಸಿದನು. ಆ ರಾಕ್ಷಸನು ಶ್ರೀರಾಮನ ಗುಣಗಳನ್ನು ಕೊಂಡಾಡುತ್ತಾ ಇಂತೆಂದನು – ''ರಾಮ-ರಾವಣರ ಮಧ್ಯೆ ಮಹಾಯುದ್ಧ ನಡೆಯುತ್ತಿದೆ. ಶ್ರೀರಾಮನಿಗೆ ಗೆಲುವಾಗುವುದು, ಇದರಲ್ಲಿ ಸಂದೇಹವೇ ಇಲ್ಲ. ತಮ್ಮಾ! ನನ್ನ ದಿವ್ಯದೃಷ್ಟಿಯಿಂದ ನಾನು ಇಲ್ಲಿದ್ದುಕೊಂಡೇ ಎಲ್ಲವನ್ನೂ ನೋಡುತ್ತಿದ್ದೇನೆ.'' ಹನುಮಂತನು ಅವನಲ್ಲಿ ನೀರನ್ನು ಕೇಳಿದ. ಅವನು ತನ್ನ ಕಮಂಡಲುವನ್ನು ನೀಡಿದನು. ಹನುಮಂತನೆಂದ – 'ಈ ಕೊಂಚ ನೀರಿನಿಂದ ನನ್ನ ಬಾಯಾರಿಕೆ ತಣಿಯದು.' ಆಗ ಕಾಲನೇಮಿಯು – ಇಗೋ, ಆ ಸರೋವರಕ್ಕೆ ಹೋಗಿ ಮಿಂದು ನೀರು ಕುಡಿದು ಕೂಡಲೇ ಬಂದುಬಿಡು. ನಾನು ನಿನಗೆ ದೀಕ್ಷೆ ನೀಡುತ್ತೇನೆ. ಅದರಿಂದ ನಿನಗೂ ದಿವ್ಯದೃಷ್ಟಿ ಜ್ಞಾನಪ್ರಾಪ್ತವಾಗುತ್ತದೆ. (ಚೌ/೧-೪)

**ದೋ – ಸರ ಪೈಠತ ಕಪಿ ಪದ ಗಹಾ ಮಕರೀಂ ತಬ ಅಕುಲಾನ।**
**ಮಾರೀ ಸೋ ಧರಿ ದಿಬ್ಯ ತನು ಚಲೀ ಗಗನ ಚಢಿ ಜಾನ॥ ೫೭ ॥**

ಹನುಮಂತನು ಕೊಳದೊಳಗೆ ಕಾಲಿಟ್ಟದ್ದೇ ತಡ, ಒಂದು ಹೆಣ್ಣುಮೊಸಳೆಯು ಭರದಿಂದ ಬಂದು ಅವನ ಕಾಲನ್ನು ಗಟ್ಟಿಯಾಗಿ ಹಿಡಿದುಕೊಂಡಿತು. ಮಾರುತಿಯು ಅದನ್ನು ಕೊಂದುಬಿಟ್ಟನು. ಆಗ ಅದು ದಿವ್ಯ ನಾರೀಶರೀರವನ್ನು ಹೊಂದಿ, ವಿಮಾನವನ್ನೇರಿ ಆಕಾಶಮಾರ್ಗದಿಂದ ಹೊರಟಳು. (ದೋ/೫೭)

**ಚೌ – ಕಪಿ ತವ ದರಸ ಭಇಉಂ ನಿಷ್ಪಾಪಾ। ಮಿಟಾ ತಾತ ಮುನಿಬರ ಕರ ಸಾಪಾ॥**
**ಮುನಿ ನ ಹೋಇ ಯಹ ನಿಸಿಚರ ಘೋರಾ। ಮಾನಹು ಸತ್ಯ ಬಚನ ಕಪಿ ಮೋರಾ॥ ೧ ॥**
**ಅಸ ಕಹಿ ಗಈ ಅಪಛರಾ ಜಬಹೀಂ। ನಿಸಿಚರ ನಿಕಟ ಗಯಉ ಕಪಿ ತಬಹೀಂ॥**
**ಕಹ ಕಪಿ ಮುನಿ ಗುರದಛಿನಾ ಲೇಹೂ। ಪಾಛೇಂ ಹಮಹಿ ಮಂತ್ರ ತುಮ್ಹ ದೇಹೂ॥ ೨ ॥**
**ಸಿರ ಲಂಗೂರ ಲಪೇಟಿ ಪಛಾರಾ। ನಿಜ ತನು ಪ್ರಗಟೆಸಿ ಮರತೀ ಬಾರಾ॥**
**ರಾಮ ರಾಮ ಕಹಿ ಛಾಡೆಸಿ ಪ್ರಾನಾ। ಸುನಿ ಮನ ಹರಷಿ ಚಲೆಉ ಹನುಮಾನಾ॥ ೩ ॥**

**ದೇಖಾ ಸೈಲ ನ ಔಷಧ ಚೀನ್ಹಾ। ಸಹಸಾ ಕಪಿ ಉಪಾರಿ ಗಿರಿ ಲೀನ್ಹಾ॥**
**ಗಹಿ ಗಿರಿ ನಿಸಿ ನಭ ಧಾವತ ಭಯಊ। ಅವಧಪುರೀ ಊಪರ ಕಪಿ ಗಯಊ॥೪॥**

ಆ ಸುಂದರಿಯು ಹೋಗುವಾಗ ಹೀಗೆ ಹೇಳಿದಳು – ಎಲೈ ವಾನರಾ! ನಿನ್ನ ದರ್ಶನದಿಂದ ನನ್ನ ಪಾಪಗಳು ತೊಲಗಿದವು. ನನಗೆ ಮುನೀಶ್ವರರು ಕೊಟ್ಟ ಶಾಪದಿಂದ ನಾನು ವಿಮುಕ್ತಳಾದೆ. (ನಾನು ಒಬ್ಬ ಅಪ್ಸರೆಯಾಗಿದ್ದೆ. ಒಮ್ಮೆ ದುರ್ವಾಸ ಮುನಿಗಳು ಇಂದ್ರನ ಸಭೆಗೆ ಬಂದಿದ್ದರು. ನಾನು ಓರ್ವ ಗಂಧರ್ವನೊಂದಿಗೆ ನರ್ತನ ಗಾಯನದಲ್ಲಿ ತನ್ಮಯಳಾಗಿದ್ದಾಗ ಋಷಿಯ ವೇಷಭೂಷಣಗಳನ್ನು ಕಂಡು ನಾವು ಅವರನ್ನು ಅಪಹಾಸ್ಯಮಾಡಿದೆವು. ಅದರಿಂದ ಕ್ರುದ್ಧರಾದ ಮುನಿಗಳು ನಮಗೆ ಶಾಪವಿತ್ತರು. ಅದರಂತೆ ಆ ಗಂಧರ್ವನೇ ಈ ರಾಕ್ಷಸನಾದನು. ನಾನು ಮೊಸಳೆಯಾದೆ.) ಎಲೈ ಕಪೀಶ್ವರಾ! ಇವನು ಮುನಿಯಲ್ಲ, ಘೋರ ರಕ್ಕಸನು. ನನ್ನ ಮಾತನ್ನು ನಂಬು. ಹೀಗೆ ಹೇಳಿ ಹನುಮಂತನನ್ನು ವಂದಿಸಿ, ಆ ಅಪ್ಸರೆಯು ವಿಮಾನಾರೂಢಳಾಗಿ ದೇವಲೋಕಕ್ಕೆ ತೆರಳಿದಳು. ಬಳಿಕ ಹನುಮಂತನು ಆ ರಾಕ್ಷಸನ ಬಳಿಗೆ ಹೋಗಿ – ''ಎಲೈ ಮುನೀಶ್ವರರೇ! ಮೊದಲಿಗೆ ನೀವು ಗುರುದಕ್ಷಿಣೆ ಸ್ವೀಕರಿಸಿರಿ. ಆಮೇಲೆ ನನಗೆ ಮಂತ್ರೋಪದೇಶ ಮಾಡುವಿರಂತೆ'' ಎಂದು ಹೇಳಿದನು. ಹನುಮಂತನು ಅವನ ತಲೆಯನ್ನು ತನ್ನ ಬಾಲದಿಂದ ಸುತ್ತಿ ನೆಲಕ್ಕೆ ರಪ್ಪನೆ ಅಪ್ಪಳಿಸಿದನು. ಸಾಯುವಾಗ ಆ ರಕ್ಕಸನ ನಿಜರೂಪ ಬಯಲಾಗಿ 'ರಾಮ-ರಾಮ' ಎಂದು ಹೇಳುತ್ತಾ ಪ್ರಾಣಗಳನ್ನು ತೊರೆದನು. ಅವನ ಬಾಯಿಂದ ಬಂದ ರಾಮನಾಮವನ್ನು ಕೇಳಿ ಹರ್ಷಿತನಾಗಿ ಮಾರುತಿಯು ಮುಂದಕ್ಕೆ ಸಾಗಿದನು. ಅವನಿಗೆ ಸುಷೇಣ ಹೇಳಿದ ಪರ್ವತವೇನೋ ಕಾಣಿಸಿತು. ಆದರೆ ಮೂಲಿಕೆಯನ್ನು ಗುರುತಿಸದಾದನು. ಆಗ ಅವನು ಆ ಪರ್ವತವನ್ನೇ ಕಿತ್ತುಕೊಂಡು ಆ ರಾತ್ರಿಯಲ್ಲೇ ಆಕಾಶಮಾರ್ಗದಿಂದ ಹೊರಟನು. ಅವನ ಪ್ರಯಾಣವು ಅಯೋಧ್ಯೆಯ ಮೇಲಿನಿಂದ ಸಾಗುತ್ತಿತ್ತು. (ಚೌ/೧-೪)

## ಸಂಜೀವನ ಪರ್ವತವನ್ನು ಎತ್ತಿಕೊಂಡು ಹೋಗುವ ಮಾರುತಿಗೆ ಭರತನೊಂದಿಗೆ ಭೇಟಿ

**ದೋ – ದೇಖಾ ಭರತ ಬಿಸಾಲ ಅತಿ ನಿಸಿಚರ ಮನ ಅನುಮಾನಿ।**
**ಬಿನು ಫರ ಸಾಯಕ ಮಾರೆಉ ಚಾಪ ಶ್ರವನ ಲಗಿ ತಾನಿ॥೫೮॥**

ಆಕಾಶದಲ್ಲಿ ಇಂತಹ ಅತ್ಯಂತ ವಿಶಾಲ ಸ್ವರೂಪವನ್ನು ಕಂಡ ಭರತನಿಗೆ ಇವನಾವನೋ ರಕ್ಕಸನಿರಬಹುದು ಎಂದೆನಿಸಿತು. ಅವನು ಧನುಸ್ಸಿಗೆ ಮೊಂಡಾದ ಒಂದು ಬಾಣವನ್ನು ಹೂಡಿ ಆಕರ್ಣಾಂತ ಸೆಳೆದು ಪ್ರಯೋಗಿಸಿದನು. (ದೋ/೫೮)

**ಚೌ – ಪರೆಉ ಮುರುಛಿ ಮಹಿ ಲಾಗತ ಸಾಯಕ। ಸುಮಿರತ ರಾಮ ರಾಮ ರಘುನಾಯಕ॥**
**ಸುನಿ ಪ್ರಿಯ ಬಚನ ಭರತ ತಬ ಧಾಏ। ಕಪಿ ಸಮೀಪ ಅತಿ ಆತುರ ಆಏ॥೧॥**
**ಬಿಕಲ ಬಿಲೋಕಿ ಕೀಸ ಉರ ಲಾವಾ। ಜಾಗತ ನಹಿಂ ಬಹು ಭಾಂತಿ ಜಗಾವಾ॥**
**ಮುಖ ಮಲೀನ ಮನ ಭಏ ದುಖಾರೀ। ಕಹತ ಬಚನ ಭರಿ ಲೋಚನ ಬಾರೀ॥೨॥**
**ಜೆಹಿಂ ಬಿಧಿ ರಾಮ ಬಿಮುಖ ಮೊಹಿ ಕೀನ್ಹಾ। ತೆಹಿಂ ಪುನಿ ಯಹ ದಾರುನ ದುಖ ದೀನ್ಹಾ॥**
**ಜೌಂ ಮೋರೇಂ ಮನ ಬಚ ಅರು ಕಾಯಾ। ಪ್ರೀತಿ ರಾಮ ಪದ ಕಮಲ ಅಮಾಯಾ॥೩॥**
**ತೌ ಕಪಿ ಹೋಉ ಬಿಗತ ಶ್ರಮ ಸೂಲಾ। ಜೌಂ ಮೋ ಪರ ರಘುಪತಿ ಅನುಕೂಲಾ॥**
**ಸುನತ ಬಚನ ಉಠಿ ಬೈಠ ಕಪೀಸಾ। ಕಹಿ ಜಯ ಜಯತಿ ಕೋಸಲಾಧೀಸಾ॥೪॥**

ಆ ಬಾಣವು ತಗುಲಿದಾಕ್ಷಣ ಹನುಮಂತನು 'ರಾಮಾ, ರಾಮಾ ರಘುಪತಿ' ಎಂದು ಉಚ್ಚರಿಸುತ್ತಾ ಮೂರ್ಛಿತನಾಗಿ ನೆಲಕ್ಕುರುಳಿದನು. ಪ್ರಿಯವಾಣಿಯಾದ ರಾಮನಾಮವನ್ನು ಕೇಳಿ ಭರತನು ದಿಢೀರನೆ ಹನುಮಂತನ ಬಳಿಗೆ ಧಾವಿಸಿದನು. ಮೂರ್ಛಿತನಾಗಿರುವ ಮಾರುತಿಯನ್ನು ಕಂಡು ಭರತನು ಅವನನ್ನು ತಬ್ಬಿಕೊಂಡು, ಅನೇಕ ರೀತಿಯಿಂದ ಎಚ್ಚರಿಸಲು ಪ್ರಯತ್ನಿಸಿದನು. ಆದರೆ ಅವನಿಗೆ ಎಚ್ಚರವಾಗಲೇ ಇಲ್ಲ. ಆಗ ಭರತನ ಮುಖ ಕಂಗೆಟ್ಟಿತು. ಅವನು ದುಗುಡಗೊಂಡು, ದುಃಖಾರ್ದ್ರಲೋಚನನಾಗಿ ಹೇಳತೊಡಗಿದನು – 'ಅಯ್ಯೋ ! ವಿಧಿಯು ನನ್ನನ್ನು ಶ್ರೀರಾಮನಿಂದ ವಿಮುಖನಾಗಿಸಿ, ಈಗ ಈ ದಾರುಣವಾದ ದುಃಖವನ್ನು ತಂದೊಡ್ಡಿದನಲ್ಲ ! ಮನ, ವಚನ, ಕಾಯದಿಂದ ನಿಜವಾಗಿಯೂ ಶ್ರೀರಾಮನ ಚರಣಗಳಲ್ಲಿ ನನಗೆ ನಿಷ್ಕಪಟವಾದ ಪ್ರೇಮವಿದ್ದರೆ, ಶ್ರೀರಾಮಚಂದ್ರನ ಕೃಪೆ ನನ್ನ ಮೇಲಿದ್ದರೆ ಈ ವಾನರನಿಗೆ ಕೂಡಲೇ ಪ್ರಜ್ಞೆಯುಂಟಾಗಲಿ, ಆಯಾಸ ಪರಿಹಾರವಾಗಲಿ.'' ಈ ಮಾತನ್ನು ಕೇಳಿದ ಕೂಡಲೇ ಕಪೀಶ್ವರನಾದ ಹನುಮಂತನು 'ಕೋಸಲಪತಿ ಶ್ರೀರಾಮಚಂದ್ರನಿಗೆ ಜಯವಾಗಲಿ' ಎಂದು ಜಯಕಾರಮಾಡುತ್ತಾ ಎದ್ದು ಕುಳಿತನು. (ಚೌ/೧-೪)

**ಸೋ – ಲೀನ್ಹ ಕಪಿಹಿ ಉರ ಲಾಇ ಪುಲಕಿತ ತನು ಲೋಚನ ಸಜಲ।**
**ಪ್ರೀತಿ ನ ಹೃದಯ್ ಸಮಾಇ ಸುಮಿರಿ ರಾಮ ರಘುಕುಲ ತಿಲಕ ॥ ೫ೞ ॥**

ಭರತನು ಪವನನಂದನನನ್ನು ಬಾಚಿ ತಬ್ಬಿಕೊಂಡನು. ಅವನ ಶರೀರ ಪುಳಕಿತವಾಯಿತು. ಕಣ್ಣುಗಳಲ್ಲಿ ಆನಂದಾಶ್ರುಗಳು ಹರಿದವು. ರಘುಕುಲತಿಲಕ ಶ್ರೀರಾಮನನ್ನು ನೆನೆ-ನೆನೆದು ಭರತನ ಹೃದಯ ತುಂಬಿ ತುಳುಕಿತು. (ಸೋ/೫ೞ)

**ಚೌ – ತಾತ ಕುಸಲ ಕಹು ಸುಖನಿಧಾನ ಕೀ। ಸಹಿತ ಅನುಜ ಅರು ಮಾತು ಜಾನಕೀ॥**
**ಕಪಿ ಸಬ ಚರಿತ ಸಮಾಸ ಬಖಾನೇ। ಭಏ ದುಖೀ ಮನ ಮಹುಁ ಪಛಿತಾನೇ ॥ ೧ ॥**
**ಅಹಹ ದೈವ ಮೈಂ ಕತ ಜಗ ಜಾಯಉಁ। ಪ್ರಭು ಕೇ ಏಕಹು ಕಾಜ ನ ಆಯಉಁ॥**
**ಜಾನಿ ಕುಅವಸರು ಮನ ಧರಿ ಧೀರಾ। ಪುನಿ ಕಪಿ ಸನ ಬೋಲೇ ಬಲಬೀರಾ॥ ೨ ॥**
**ತಾತ ಗಹರು ಹೋಇಹಿ ತೋಹಿ ಜಾತಾ। ಕಾಜು ನಸಾಇಹಿ ಹೋತ ಪ್ರಭಾತಾ ॥**
**ಚಢು ಮಮ ಸಾಯಕ ಸೈಲ ಸಮೇತಾ। ಪಠವೌಂ ತೋಹಿ ಜಹಁ ಕೃಪಾನಿಕೇತಾ॥ ೩ ॥**
**ಸುನಿ ಕಪಿ ಮನ ಉಪಜಾ ಅಭಿಮಾನಾ । ಮೋರೇಂ ಭಾರ ಚಲಿಹಿ ಕಿಮಿ ಬಾನಾ॥**
**ರಾಮ ಪ್ರಭಾವ ಬಿಚಾರಿ ಬಹೋರೀ। ಬಂದಿ ಚರನ ಕಹ ಕಪಿ ಕರ ಜೋರೀ॥ ೪ ॥**

ಭರತನೆಂದನು – 'ಅಯ್ಯಾ ! ತಮ್ಮ ಲಕ್ಷ್ಮಣ, ಅಮ್ಮ ಜಾನಕಿಸಮೇತ ಶ್ರೀರಾಮನ ಕ್ಷೇಮವಾರ್ತೆಯನ್ನು ತಿಳಿಸು.' ಹನುಮಂತನು ಸಂಕ್ಷೇಪದಲ್ಲಿ ಎಲ್ಲ ಕಥೆಯನ್ನು ಹೇಳಿದನು. ಅದನ್ನು ಕೇಳಿ, ಭರತನು ದುಃಖಿತನಾಗಿ ಪಶ್ಚಾತ್ತಾಪಪಡತೊಡಗಿದನು. 'ಅಯ್ಯೋ ದೈವವೇ! ನಾನು ಏಕಾದರೂ ಹುಟ್ಟಿದೆನೋ! ಪ್ರಭುವಿನ ಯಾವ ಕೆಲಸಕ್ಕೂ ನಾನು ಬಾರದವನಾದೆನಲ್ಲ !' ಬಳಿಕ ಇದು ಪ್ರಲಾಪಕ್ಕೆ ಸಮಯವಲ್ಲವೆಂದುಕೊಂಡು ಧೈರ್ಯತಳೆದು ಪರಾಕ್ರಮಶಾಲಿಯಾದ ಭರತನು ಹನುಮಂತನಲ್ಲಿ ಇಂತೆಂದನು – ''ಅಯ್ಯಾ! ನೀನು ಹೋಗುವುದರಲ್ಲಿ ತಡವಾದೀತು. ಬೆಳಗಾಗುವುದರಲ್ಲಿ ಈ ಕೆಲಸವಾಗದಿದ್ದರೆ ಪಟ್ಟ ಪರಿಶ್ರಮವೆಲ್ಲ ವ್ಯರ್ಥವಾದೀತು. ಆದ್ದರಿಂದ ನೀನು ಪರ್ವತಸಮೇತ ನನ್ನ ಬಾಣವನ್ನೇರು. ನಾನು ನಿನ್ನನ್ನು ಕೃಪಾನಿಧಾನ ಶ್ರೀರಾಮನ ಬಳಿಗೆ ಕಳಿಸಿಬಿಡುತ್ತೇನೆ.'' ಭರತನ ಈ ಮಾತನ್ನು ಕೇಳಿ ಒಮ್ಮೆ ಹನುಮಂತನು – 'ನನ್ನ ಭಾರವನ್ನು ಈ ಬಾಣ ತಡೆದೀತೇ?' ಎಂದು ಮನಸ್ಸಿನಲ್ಲೇ ಸಂದೇಹಪಟ್ಟನು. ಆದರೆ ಶ್ರೀರಾಮಚಂದ್ರನ ಪ್ರಭಾವವನ್ನು ಕುರಿತು ವಿಚಾರಮಾಡಿ, ಅವನು ಭರತನ ಚರಣಗಳಿಗೆ ವಂದಿಸಿ ಕೈಜೋಡಿಸಿ ಬಿನ್ನವಿಸಿಕೊಂಡನು – (ಚೌ/೧-೪)

**ದೋ – ತವ ಪ್ರತಾಪ ಉರ ರಾಖಿ ಪ್ರಭು ಜೈಹಉಁ ನಾಥ ತುರಂತ ।**
**ಅಸ ಕಹಿ ಆಯಸು ಪಾಇ ಪದ ಬಂದಿ ಚಲೇಉ ಹನುಮಂತ ॥ ೬೦(ಕ)॥**
**ಭರತ ಬಾಹು ಬಲ ಸೀಲ ಗುನ ಪ್ರಭು ಪದ ಪ್ರೀತಿ ಅಪಾರ ।**
**ಮನ ಮಹುಁ ಜಾತ ಸರಾಹತ ಪುನಿ ಪುನಿ ಪವನಕುಮಾರ ॥ ೬೦(ಖ)॥**

'ಪ್ರಭೂ! ಒಡೆಯಾ! ನಿಮ್ಮ ಪ್ರತಾಪವನ್ನು ಹೃದಯದಲ್ಲಿ ತಳೆದು, ಕೂಡಲೇ ಹೊರಟುಬಿಡುತ್ತೇನೆ.' ಹೀಗೆ ಹೇಳಿ ಭರತನ ಅಪ್ಪಣೆಪಡೆದು, ಅವನ ಚರಣಗಳಿಗೆ ನಮಸ್ಕರಿಸಿ, ಹನುಮಂತನು ಹೊರವಂಟ. ಭರತನ ಭುಜಬಲವನ್ನು, ಶೀಲ, ಸ್ವಭಾವ, ಗುಣ, ಶ್ರೀರಾಮನ ಚರಣಗಳಲ್ಲಿ ಆತನಿಗಿರುವ ಅಪಾರಪ್ರೇಮವನ್ನು ಮತ್ತೆ-ಮತ್ತೆ ನೆನೆಯುತ್ತಾ ಮಾರುತಿಯು ಮುಂದಕ್ಕೆ ಸಾಗಿದನು. (ದೋ/೬೦ ಕ, ಖ)

## ಶ್ರೀರಾಮನ ಪ್ರಲಾಪ

**ಚೌ – ಉಹಾಁ ರಾಮ ಲಛಿಮನಹಿ ನಿಹಾರೀ। ಬೋಲೇ ಬಚನ ಮನುಜ ಅನುಸಾರೀ॥**
**ಅರ್ಧ ರಾತಿ ಗಇ ಕಪಿ ನಹಿಂ ಆಯಉ। ರಾಮ ಉಠಾಇ ಅನುಜ ಉರ ಲಾಯಉ ॥ ೧ ॥**
**ಸಕಹು ನ ದುಖಿತ ದೇಖಿ ಮೋಹಿ ಕಾಊ। ಬಂಧು ಸದಾ ತವ ಮೃದುಲ ಸುಭಾಊ ॥**
**ಮಮ ಹಿತ ಲಾಗಿ ತಜೆಹು ಪಿತು ಮಾತಾ। ಸಹೇಹು ಬಿಪಿನ ಹಿಮ ಆತಪ ಬಾತಾ ॥ ೨ ॥**
**ಸೋ ಅನುರಾಗ ಕಹಾಁ ಅಬ ಭಾಈ। ಉಠಹು ನ ಸುನಿ ಮಮ ಬಚ ಬಿಕಲಾಈ ॥**
**ಜೌಂ ಜನತೇಉಁ ಬನ ಬಂಧು ಬಿಛೋಹೂ। ಪಿತಾ ಬಚನ ಮನತೇಉಁ ನಹಿಂ ಓಹೂ ॥ ೩ ॥**

**ಸುತ ಬಿತ ನಾರಿ ಭವನ ಪರಿವಾರಾ । ಹೋಹಿಂ ಜಾಹಿಂ ಜಗ ಬಾರಹಿಂ ಬಾರಾ ॥**
**ಅಸ ಬಿಚಾರಿ ಜಿಯँ ಜಾಗಹು ತಾತಾ । ಮಿಲಇ ನ ಜಗತ ಸಹೋದರ ಭ್ರಾತಾ ॥ ೪ ॥**
**ಜಥಾ ಪಂಖ ಬಿನು ಖಗ ಅತಿ ದೀನಾ । ಮನಿ ಬಿನು ಫನಿ ಕರಿಬರ ಕರ ಹೀನಾ ॥**
**ಅಸ ಮಮ ಜಿವನ ಬಂಧು ಬಿನು ತೋಹೀ । ಜೌं ಜಡ ದೈವ ಜಿಆವೈ ಮೋಹೀ ॥ ೫ ॥**
**ಜೈಹಉँ ಅವಧ ಕವನ ಮುಹು ಲಾಈ । ನಾರಿ ಹೇತು ಪ್ರಿಯ ಭಾಇ ಗँವಾಈ ॥**
**ಬರು ಅಪಜಸ ಸಹತೆಉँ ಜಗ ಮಾಹೀಂ । ನಾರಿ ಹಾನಿ ಬಿಸೇಷ ಛತಿ ನಾಹೀಂ ॥ ೬ ॥**
**ಅಬ ಅಪಲೋಕು ಸೋಕು ಸುತ ತೋರಾ । ಸಹಿಹಿ ನಿಠುರ ಕಠೋರ ಉರ ಮೋರಾ ॥**
**ನಿಜ ಜನನೀ ಕೇ ಏಕ ಕುಮಾರಾ । ತಾತ ತಾಸು ತುಮ್ಹ ಪ್ರಾನ ಅಧಾರಾ ॥ ೭ ॥**
**ಸೌಂಪೆಸಿ ಮೋಹಿ ತುಮ್ಹಹಿ ಗಹಿ ಪಾನೀ । ಸಬ ಬಿಧಿ ಸುಖದ ಪರಮ ಹಿತ ಜಾನೀ ॥**
**ಉತರು ಕಾಹ ದೈಹಉँ ತೇಹಿ ಜಾಈ । ಉಠಿ ಕಿನ ಮೋಹಿ ಸಿಖಾವಹು ಭಾಈ ॥ ೮ ॥**
**ಬಹು ಬಿಧಿ ಸೋಚತ ಸೋಚ ಬಿಮೋಚನ । ಸ್ರವತ ಸಲಿಲ ರಾಜಿವ ದಲ ಲೋಚನ ॥**
**ಉಮಾ ಏಕ ಅಖಂಡ ರಘುರಾಈ । ನರ ಗತಿ ಭಗತ ಕೃಪಾಲ ದೆಖಾಈ ॥ ೯ ॥**

ಅತ್ತ ಲಂಕೆಯಲ್ಲಿ ಮೂರ್ಛಿತನಾದ ಲಕ್ಷ್ಮಣನನ್ನು ಕಂಡು, ಶ್ರೀರಾಮನು ಸಾಮಾನ್ಯ ಮಾನವರಂತೆ ಪರಿತಾಪಪಡುತ್ತಾ ಇಂತೆಂದನು – 'ಅರ್ಧರಾತ್ರಿ ಕಳೆದುಹೋಯಿತು. ಆದರೆ ಹನುಮಂತನು ಇನ್ನೂ ಬಂದಿಲ್ಲವಲ್ಲ!' ಆಗ ಅವನು ಲಕ್ಷ್ಮಣನನ್ನು ಎತ್ತಿ ಆಲಿಂಗಿಸಿಕೊಂಡು, ಮತ್ತೆ-ಮತ್ತೆ ಅವನ ಮುಖವನ್ನು ನೋಡುತ್ತಾ ಹೇಳತೊಡಗಿದನು – ''ತಮ್ಮಾ ! ನೀನು ನನ್ನನ್ನು ಎಂದೂ ದುಃಖಿತನಾಗಿ ನೋಡಲಿಲ್ಲ, ಸಹಿಸುತ್ತಿರಲಿಲ್ಲ. ನನ್ನ ದುಃಖಭಾರವನ್ನು ಯಾವಾಗಲೂ ನೀನೇ ಹೊರುತ್ತಿದ್ದೆ. ನಿನ್ನ ಸ್ವಭಾವವು ತುಂಬಾ ಕೋಮಲವಾದುದು. ನನ್ನನ್ನು ಸುಖವಾಗಿರಿಸಲು ನೀನು ತಂದೆ-ತಾಯಿಯವರನ್ನೂ ಕೂಡ ತೊರೆದು ಬಂದೆ. ವನದಲ್ಲಿ ಚಳಿಯನ್ನು, ಮಳೆಯನ್ನು, ಬಿಸಿಲನ್ನು, ಗಾಳಿಯನ್ನೂ ಹೀಗೆ ಎಲ್ಲವನ್ನೂ ನನಗಾಗಿ ಸಹಿಸಿದೆ. ಹಸಿವು, ಬಾರಿಕೆಗಳನ್ನು ಕೂಡ ಮರೆತು ಪ್ರೇಮದಿಂದ ನನ್ನನ್ನು ಸೇವಿಸುತ್ತಾ ಬಂದೆ. ಸೋದರನೇ! ಈಗ ಆ ಪ್ರೇಮ ಏನಾಯಿತು? ನನ್ನ ವ್ಯಾಕುಲ ವಚನಗಳನ್ನು ಕೇಳಿದರೂ ಕೂಡ ನೀನು ಏಕೆ ಏಳುವುದಿಲ್ಲ ! ನನ್ನೊಡನೆ ಏಕೆ ಮಾತನಾಡುವುದಿಲ್ಲ ? ಈಗ ನಾನು ತುಂಬಾ ದುಃಖಿತನಾಗಿರುವೆನು. ತಮ್ಮಾ ! ನೀನು ಆದರ್ಶ ಸೇವಾಪರಾಯಣನು. ವನವಾಸದಲ್ಲಿ ಅಹರ್ನಿಶಿ ಎಲ್ಲ ವಿಧದಿಂದ ನೀನು ನನಗೆ ಭುಜದಂತೆ ಇದ್ದೆ. ಅಂತಹ ನಿರುಪಮಾನ ಸೋದರನಾದ ನಿನ್ನ ವಿಯೋಗವು ಈ ವನವಾಸದಲ್ಲಿ ಸಂಭವಿಸಬಹುದು ಎಂಬ ಊಹೆ ಉಂಟಾಗಿದ್ದಿದ್ದರೆ ಯಾವುದರ ಪಾಲನೆಯು ಪರಮಾವಶ್ಯಕವೋ ಅಂತಹ ಪಿತೃವಿನ ಆಜ್ಞೆಯನ್ನೂ ಕೂಡ ಪಾಲಿಸುತ್ತಿರಲಿಲ್ಲ.* ಸಂತಾನ, ಸಂಪತ್ತು, ಭಾರ್ಯೆ, ಮನೆ, ಪರಿವಾರ ಮೊದಲಾದ ಎಲ್ಲವೂ ಪ್ರಪಂಚದಲ್ಲಿ ಪದೇ-ಪದೇ ಲಭಿಸುತ್ತವೆ, ದೂರವಾಗುತ್ತಾರೆ. ಆದರೆ ತಮ್ಮಾ ! ಜಗತ್ತಿನಲ್ಲಿ ನಿನ್ನಂತಹ ಸೋದರನು ಮಾತ್ರ ಲಭಿಸನು.** ಈ ವಿಷಯವನ್ನು ಆಲೋಚಿಸಿ ಏಳು. ಲಕ್ಷ್ಮಣಾ ! ಜಡ ವಿಧಿಯು ಒಂದು ವೇಳೆ ನನ್ನನ್ನು ಜೀವಂತವಾಗಿಟ್ಟರೆ, ನೀನಿಲ್ಲದ ಈ ಜೀವಿತವು ರೆಕ್ಕೆಗಳಿಲ್ಲದ ಪಕ್ಷಿಗಳಂತೆ, ಮಣಿಯಿಲ್ಲದ ಸರ್ಪದಂತೆ, ಸೊಂಡಿಲಿಲ್ಲದ ಗಜರಾಜನಂತೆ ದೀನವೂ, ದುಃಖಪ್ರದವೂ ಆಗುವುದು. ಹೆಂಡತಿಗಾಗಿ ಪ್ರಿಯ ತಮ್ಮನನ್ನು ಕಳೆದುಕೊಂಡು ಯಾವ ಮುಖಹೊತ್ತು ನಾನು ಅಯೋಧ್ಯೆಗೆ ಹೋಗಲಿ? ಹೆಣ್ಣನ್ನು ಕಳೆದುಕೊಂಡ ಹೇಡಿ ಎಂಬ ಅಪಖ್ಯಾತಿಯನ್ನು ಸಹಿಸಲು ನಾನು ಸಿದ್ಧ. ಆದರೆ ತಮ್ಮನನ್ನು ಕಳೆದುಕೊಳ್ಳಲು ಸಿದ್ಧನಿಲ್ಲ. ಸ್ತ್ರೀಯು ಕಳೆದುಹೋದರೆ ಅಂತಹದೇನೂ ಹಾನಿಕರವಲ್ಲ. ಮಗು! ಈಗ ನನ್ನ ಕಠೋರಹೃದಯವು ಈ ಅಪಕೀರ್ತಿ, ಭ್ರಾತೃಶೋಕ ಎರಡನ್ನೂ ಸಹಿಸಬೇಕಾಗಿದೆ. ಸುಮಿತ್ರಾದೇವಿಗೆ ನೀನು ಅದ್ವಿತೀಯ ಪುತ್ರನೂ, ಮುದ್ದಿನ ಮಗನೂ, ಪ್ರಾಣಾಧಾರನೂ ಆಗಿರುವಿ. ನಾನು ಎಲ್ಲ ವಿಧದಿಂದಲೂ ಸುಖಕಾರಕನೂ, ಹಿತೈಷಿಯೆಂದೂ ತಿಳಿದು ತಾಯಿ ಸುಮಿತ್ರಾದೇವಿಯು ನಿನ್ನನ್ನು ನನಗೆ ಒಪ್ಪಿಸಿದಳು. ಈಗ ಹೋಗಿ ಅವಳಿಗೆ ನಾನೇನು ಸಮಾಧಾನ ಹೇಳಲಿ? ತಮ್ಮಾ ! ನೀನು ಎಚ್ಚರವಾಗಿ ನನಗೆ ಸೂಕ್ತ ಸಲಹೆಯನ್ನು ಏಕೆ ಕೊಡುವುದಿಲ್ಲ ?'' ಈ ವಿಧವಾಗಿ ಶೋಕವಿಮೋಚನನಾದ ಶ್ರೀರಾಮನು ಅನೇಕ ಪ್ರಕಾರದಿಂದ ಶೋಕಿಸಿದನು. ಅವನ ರಾಜೀವದಳಲೋಚನಗಳಿಂದ ಗಳಗಳನೆ ಅಶ್ರುಗಳು ಪ್ರವಹಿಸಿದವು. ಶಿವನು

---

* ಸೋದರಪ್ರೇಮಾತಿರೇಕದಿಂದ ಶ್ರೀರಾಮನು ಹೀಗೆ ನುಡಿಯುತ್ತಿರುವನು. ಆದರೆ ಕನಸಿನಲ್ಲಿಯೂ ಕೂಡ ಅವನು ಪಿತೃವಾಕ್ಯವನ್ನು ಉಲ್ಲಂಘಿಸಲಾರನು.

** **ದೇಶೇ ದೇಶೇ ಕಲತ್ರಾಣಿ ದೇಶೇ ದೇಶೇ ಚ ಬಾಂಧವಾಃ ॥**
**ತಂ ತು ದೇಶಂ ನ ಪಶ್ಯಾಮಿ ಯತ್ರ ಭ್ರಾತಾ ಸಹೋದರಃ ।** (ವಾಲ್ಮೀಕಿ ರಾ. ಯುದ್ಧ. ೧೦೨/೧೩, ೧೪)

ಹೇಳುತ್ತಾನೆ – ಉಮೆ! ಶ್ರೀರಘುನಾಥನು ಅಖಂಡನೂ, ಅದ್ವಿತೀಯನು. ಭಕ್ತವತ್ಸಲನಾದ ಭಗವಂತನು ತನ್ನ ಲೀಲೆಯನ್ನು ಮನುಷ್ಯರಂತೆ ತೋರುತ್ತಿದ್ದಾನೆ. (ಚೌ/೧-೯)

**ಸೋ – ಪ್ರಭು ಪ್ರಲಾಪ ಸುನಿ ಕಾನ ಬಿಕಲ ಭಏ ಬಾನರ ನಿಕರ।**
**ಆಇ ಗಯಉ ಹನುಮಾನ ಜಿಮಿ ಕರುನಾ ಮಹ್ ಬೀರ ರಸ ॥ ೬೧ ॥**

ಶ್ರೀರಾಮಚಂದ್ರಪ್ರಭುವಿನ ಪ್ರಲಾಪವಚನವನ್ನು ಕಿವಿಯಾರೆ ಕೇಳಿದ ವಾನರರೆಲ್ಲರೂ ವ್ಯಾಕುಲರಾದರು. ಇಷ್ಟರಲ್ಲಿ ಹನುಮಂತನು ಸಂಜೀವನೀ ಪರ್ವತವನ್ನು ಅಲ್ಲಿಗೆ ತಂದನು. ಕರುಣಾರಸದಲ್ಲಿ ವೀರರಸ ಬಂದಂತಾಯಿತು. (ಸೋ/೬೧)

**ಚೌ – ಹರಷಿ ರಾಮ ಭೇಂಟೆಉ ಹನುಮಾನಾ। ಅತಿ ಕೃತಗ್ಯ ಪ್ರಭು ಪರಮ ಸುಜಾನಾ॥**
**ತುರತ ಬೈದ ತಬ ಕೀನ್ಹಿ ಉಪಾಈ। ಉಠಿ ಬೈಠೇ ಲಛಿಮನ ಹರಷಾಈ॥ ೧ ॥**
**ಹೃದಯ್ ಲಾಇ ಪ್ರಭು ಭೇಟೆಉ ಭ್ರಾತಾ। ಹರಷೇ ಸಕಲ ಭಾಲು ಕಪಿ ಬ್ರಾತಾ ॥**
**ಕಪಿ ಪುನಿ ಬೈದ ತಹಾ ಪಹುಂಚಾವಾ। ಜೆಹಿ ಬಿಧಿ ತಬಹಿಂ ತಾಹಿ ಲಇ ಆವಾ ॥ ೨ ॥**
**ಯಹ ಬೃತ್ತಾಂತ ದಸಾನನ ಸುನೆಊ। ಅತಿ ಬಿಷಾದ ಪುನಿ ಪುನಿ ಸಿರ ಧುನೆಊ॥**
**ಬ್ಯಾಕುಲ ಕುಂಭಕರನ ಪಹಿಂ ಆವಾ। ಬಿಬಿಧ ಜತನ ಕರಿ ತಾಹಿ ಜಗಾವಾ॥ ೩ ॥**
**ಜಾಗಾ ನಿಸಿಚರ ದೇಖಿಅ ಕೈಸಾ। ಮಾನಹುಂ ಕಾಲು ದೇಹ ಧರಿ ಬೈಸಾ ॥**
**ಕುಂಭಕರನ ಬೂಝಾ ಕಹು ಭಾಈ। ಕಾಹೇ ತವ ಮುಖ ರಹೇ ಸುಖಾಈ॥ ೪ ॥**
**ಕಥಾ ಕಹೀ ಸಬ ತೆಹಿಂ ಅಭಿಮಾನೀ। ಜೆಹಿ ಪ್ರಕಾರ ಸೀತಾ ಹರಿ ಆನೀ ॥**
**ತಾತ ಕಪಿನ್ಹ ಸಬ ನಿಸಿಚರ ಮಾರೇ। ಮಹಾ ಮಹಾ ಜೋಧಾ ಸಂಘಾರೇ॥ ೫ ॥**
**ದುರ್ಮುಖ ಸುರರಿಪು ಮನುಜ ಅಹಾರೀ। ಭಟ ಅತಿಕಾಯ ಅಕಂಪನ ಭಾರೀ॥**
**ಅಪರ ಮಹೋದರ ಆದಿಕ ಬೀರಾ। ಪರೇ ಸಮರ ಮಹಿ ಸಬ ರನಧೀರಾ ॥ ೬ ॥**

ಶ್ರೀರಾಮನು ಹರ್ಷಿತನಾಗಿ ಧಿಗ್ಗನೆದ್ದು ಹನುಮಂತನನ್ನು ತಬ್ಬಿಕೊಂಡನು. ಪರಮ ಸುಜ್ಞಾನಿಯಾದ ಶ್ರೀರಾಮನ ಕೃತಜ್ಞತೆ ಮಾತಿಗೆ ಮೀರಿದುದು. ವೈದ್ಯನಾದ ಸುಷೇಣನು ಕೂಡಲೇ ಲಕ್ಷ್ಮಣನಿಗೆ ಚಿಕಿತ್ಸೆ ಮಾಡಿದನು. ಅದರಿಂದ ಅವನು ಎಚ್ಚರಗೊಂಡು ಹರ್ಷಿತನಾಗಿ ಎದ್ದು ಕುಳಿತನು. ಶ್ರೀರಾಮಚಂದ್ರನು ಪ್ರೇಮಪಾರವಶ್ಯದಿಂದ ತಮ್ಮನನ್ನು ಗಾಢವಾಗಿ ಆಲಿಂಗಿಸಿಕೊಂಡನು. ವಾನರ ಭಲ್ಲೂಕಗಳು ಹರ್ಷಗೊಂಡರು. ಅನಂತರ ಹನುಮಂತನು ಸುಷೇಣನನ್ನು ಕರೆತಂದಂತೆ ಕೊಂಡೊಯ್ದು ಮುಟ್ಟಿಸಿದನು.

ಇವೆಲ್ಲ ಸಮಾಚಾರವನ್ನು ಕೇಳಿದ ರಾವಣನು ಅತಿ ವಿಷಾದದಿಂದ ತಲೆಚಚ್ಚಿಕೊಂಡನು. ಅವನು ವ್ಯಾಕುಲಿತನಾಗಿ ಕುಂಭಕರ್ಣನ ಬಳಿಗೆ ಹೋಗಿ, ವಿವಿಧೋಪಾಯಗಳಿಂದ ಅವನನ್ನು ನಿದ್ದೆಯಿಂದ ಎಬ್ಬಿಸಿದನು. ಕುಂಭಕರ್ಣನು ನಿದ್ದೆಯಿಂದ ಎದ್ದು– ಸಾಕ್ಷಾತ್ ಕಾಲನೇ ಮೈವೆತ್ತಿಬಂದು ಕುಳಿತಿರುವನೋ ಎಂಬಂತೆ ಕುಳಿತು ರಾವಣನನ್ನು ಕೇಳಿದನು – ಅಣ್ಣಾ! ಹೇಳು, ನಿನ್ನ ಮುಖ ಏಕೆ ಬಾಡಿಹೋಗಿದೆ? ಆಗ ದುರಭಿಮಾನಿಯಾದ ರಾವಣನು ಸೀತಾಪಹರಣದಿಂದ ಹಿಡಿದು ಇಲ್ಲಿಯವರೆವಿಗೂ ನಡೆದ ಎಲ್ಲ ವೃತ್ತಾಂತವನ್ನು ತಿಳಿಸಿ ಇಂತೆಂದನು – ತಮ್ಮಾ! ವಾನರರು ರಾಕ್ಷಸರೆಲ್ಲರನ್ನು ಮಟ್ಟಹಾಕಿದ್ದಾರೆ. ದೊಡ್ಡ-ದೊಡ್ಡ ಯೋಧರೆಲ್ಲ ಮಣ್ಣುಗೂಡಿದರು. ದುರ್ಮುಖ, ದೇವಾಂತಕ, ನರಾಂತಕ, ಮಹಾಯೋಧನಾದ ಅತಿಕಾಯ, ಅಕಂಪನ, ಮಹೋದರ ಮೊದಲಾದ ಎಲ್ಲ ರಣಧೀರ ವೀರರು ರಣರಂಗದಲ್ಲಿ ನೆಲಸಮರಾದರು. (ಚೌ/೧-೬)

## ಕುಂಭಕರ್ಣವಧೆ

**ದೋ – ಸುನಿ ದಸಕಂಧರ ಬಚನ ತಬ ಕುಂಭಕರನ ಬಿಲಖಾನ।**
**ಜಗದಂಬಾ ಹರಿ ಆನಿ ಅಬ ಸಠ ಚಾಹತ ಕಲ್ಯಾನ ॥ ೬೨ ॥**

ದಶಾನನನು ನುಡಿದ ಮಾತನ್ನು ಕೇಳಿ ಕುಂಭಕರ್ಣನು ದುಗುಡಗೊಂಡು ಇಂತೆಂದನು– ಅಯ್ಯೋ ಮೂರ್ಖನೇ! ಜಗದಂಬೆ ಜಾನಕಿಯನ್ನು ಅಪಹರಿಸಿ ತಂದು ಈಗ ಒಳಿತಾಗಬೇಕೆಂದು ನೀನು ಬಯಸುತ್ತಿರುವೆಯಲ್ಲ! (ದೋ/೬೨)

**ಚೌ – ಭಲ ನ ಕೀನ್ಹ ತೈಂ ನಿಸಿಚರ ನಾಹಾ। ಅಬ ಮೊಹಿ ಆಇ ಜಗಾಏಹಿ ಕಾಹಾ॥**
**ಅಜಹೂಂ ತಾತ ತ್ಯಾಗಿ ಅಭಿಮಾನಾ। ಭಜಹು ರಾಮ ಹೋಇಹಿ ಕಲ್ಯಾನಾ ॥ ೧ ॥**

**ಹೈ ದಸಸೀಸ ಮನುಜ ರಘುನಾಯಕ। ಜಾಕೇ ಹನೂಮಾನ ಸೇ ಪಾಯಕ॥**
**ಅಹಹ ಬಂಧು ತೈಂ ಕೀನ್ಹಿ ಖೊಟಾಈ। ಪ್ರಥಮಹಿಂ ಮೊಹಿ ನ ಸುನಾಏಹಿ ಆಈ॥ ೨॥**
**ಕೀನ್ಹೆಹು ಪ್ರಭು ಬಿರೋಧ ತೆಹಿ ದೇವಕ। ಸಿವ ಬಿರಂಚಿ ಸುರ ಜಾಕೇ ಸೇವಕ॥**
**ನಾರದ ಮುನಿ ಮೊಹಿ ಗ್ಯಾನ ಜೊ ಕಹಾ। ಕಹತೆಉಁ ತೋಹಿ ಸಮಯ ನಿರಬಹಾ॥ ೩॥**
**ಅಬ ಭರಿ ಅಂಕ ಭೇಂಟು ಮೊಹಿ ಭಾಈ। ಲೋಚನ ಸುಫಲ ಕರೌಂ ಮೈಂ ಜಾಈ॥**
**ಸ್ಯಾಮ ಗಾತ ಸರಸೀರುಹ ಲೋಚನ। ದೇಖೌಂ ಜಾಇ ತಾಪ ತ್ರಯ ಮೋಚನ॥ ೪॥**

ಓ ರಾಕ್ಷಸರಾಜನೇ! ನೀನು ಮಾಡಿದುದು ಒಳ್ಳೆಯದಲ್ಲ. ಈಗ ನನ್ನನ್ನು ಏಕೆ ಎಬ್ಬಿಸಿದೆ? ಅಣ್ಣಾ! ಈಗಲಾದರೂ ಅಹಂಕಾರವನ್ನು ಬಿಟ್ಟು ಶ್ರೀರಾಮನನ್ನು ಭಜಿಸು. ನಿನ್ನ ಶ್ರೇಯಸ್ಸಾದೀತು. ರಾವಣೇಶ್ವರಾ! ಹನುಮಂತನಂತಹ ಬಂಟರಿರುವ ಶ್ರೀರಾಮನು ಸಾಮಾನ್ಯ ಮನುಷ್ಯನೇ? ಅಯ್ಯೋ ಅಣ್ಣಾ! ನೀನು ಘೋರವಾದ ತಪ್ಪನ್ನು ಮಾಡಿದೆ. ಮೊದಲೇ ಇದನ್ನು ನನಗೆ ಏಕೆ ಹೇಳಲಿಲ್ಲ? ಬ್ರಹ್ಮ ರುದ್ರೇಂದ್ರಾದಿ ದೇವತೆಗಳಿಂದ ಸೇವಿತನಾದ ದೇವದೇವನೊಡನೆ ನೀನು ವೈರವನ್ನು ಕಟ್ಟಿಕೊಂಡೆ. ನಾರದರು ನನಗೆ ಹೇಳಿದ ಜ್ಞಾನೋಪದೇಶಗಳನ್ನು ನಿನಗೆ ಹೇಳುತ್ತಿದ್ದೆ ; ಆದರೆ ಈಗ ಸಮಯ ಮಿಂಚಿ ಹೋಯಿತು. ಅಣ್ಣಾ! ಈಗ ಕೊನೆಯಬಾರಿ ನನ್ನನ್ನು ಗಾಢವಾಗಿ ಆಲಿಂಗಿಸಿಕೊ. ನಾನು ಹೋಗಿ ನನ್ನ ಕಣ್ಣುಗಳನ್ನು ಸಾರ್ಥಕಪಡಿಸಿಕೊಳ್ಳುತ್ತೇನೆ. ತಾಪತ್ರಯಮೋಚನನೂ, ಶ್ಯಾಮಲಗಾತ್ರನೂ, ಕಮಲನೇತ್ರನೂ ಆದ ಶ್ರೀರಾಮನನ್ನು ದರ್ಶಿಸುತ್ತೇನೆ. (ಚೌ/೧-೪)

**ದೋ – ರಾಮ ರೂಪ ಗುನ ಸುಮಿರತ ಮಗನ ಭಯಉ ಛನ ಏಕ।**
**ರಾವನ ಮಾಗೆಉ ಕೋಟಿ ಘಟ ಮದ ಅರು ಮಹಿಷ ಅನೇಕ॥ ೬೩॥**

ಶ್ರೀರಾಮನ ರೂಪ, ಗುಣ, ಶೀಲಗಳನ್ನು ನೆನೆದು ಕುಂಭಕರ್ಣನು ಕ್ಷಣಕಾಲ ಪ್ರೇಮವಿಹ್ವಲನಾದನು. ಅನಂತರ ರಾವಣನಿಂದ ಅಸಂಖ್ಯಾತ ಹೆಂಡದ ಗಡಿಗೆಗಳನ್ನು, ಅನೇಕ ಮಹಿಷಗಳನ್ನು ತರಿಸಿದನು. (ದೋ/೬೩)

**ಚೌ – ಮಹಿಷ ಖಾಇ ಕರಿ ಮದಿರಾ ಪಾನಾ। ಗರ್ಜಾ ಬಜ್ರಾಘಾತ ಸಮಾನಾ॥**
**ಕುಂಭಕರನ ದುರ್ಮದ ರನ ರಂಗಾ। ಚಲಾ ದುರ್ಗ ತಜಿ ಸೇನ ನ ಸಂಗಾ॥ ೧॥**
**ದೇಖಿ ಬಿಭೀಷನು ಆಗೇಂ ಆಯಉ। ಪರೆಉ ಚರನ ನಿಜ ನಾಮ ಸುನಾಯಉ॥**
**ಅನುಜ ಉಠಾಇ ಹೃದಯಁ ತೆಹಿ ಲಾಯೋ। ರಘುಪತಿ ಭಕ್ತ ಜಾನಿ ಮನ ಭಾಯೋ॥ ೨॥**
**ತಾತ ಲಾತ ರಾವನ ಮೊಹಿ ಮಾರಾ। ಕಹತ ಪರಮ ಹಿತ ಮಂತ್ರ ಬಿಚಾರಾ॥**
**ತೆಹಿಂ ಗಲಾನಿ ರಘುಪತಿ ಪಹಿಂ ಆಯಉಁ। ದೇಖಿ ದೀನ ಪ್ರಭು ಕೇ ಮನ ಭಾಯಉಁ॥ ೩॥**
**ಸುನು ಸುತ ಭಯಉ ಕಾಲಬಸ ರಾವನ। ಸೋ ಕಿ ಮಾನ ಅಬ ಪರಮ ಸಿಖಾವನ॥**
**ಧನ್ಯ ಧನ್ಯ ತೈಂ ಧನ್ಯ ಬಿಭೀಷನ। ಭಯಹು ತಾತ ನಿಸಿಚರ ಕುಲ ಭೂಷನ॥ ೪॥**
**ಬಂಧು ಬಂಸ ತೈಂ ಕೀನ್ಹ ಉಜಾಗರ। ಭಜೆಹು ರಾಮ ಸೋಭಾ ಸುಖ ಸಾಗರ॥ ೫॥**

ಮಹಿಷಗಳನ್ನು ತಿಂದು, ಹೆಂಡ ಕುಡಿದು ಅವನು ವಜ್ರಾಘಾತದಂತೆ ಗರ್ಜಿಸಿದನು. ಮದೋನ್ಮತ್ತನಾದ ಕುಂಭಕರ್ಣನು ರಣೋತ್ಸಾಹದಿಂದ ಕೋಟೆಯನ್ನು ದಾಟಿ ಒಂಟಿಯಾಗಿ ಹೊರಟನು. ಜೊತೆಗೆ ತನ್ನ ಸೇನೆಯನ್ನು ಕರೆದುಕೊಳ್ಳಲಿಲ್ಲ. ಕುಂಭಕರ್ಣನು ಬರುತ್ತಿರುವುದನ್ನು ನೋಡಿ ವಿಭೀಷಣನು ಎದುರಿಗೆ ಬಂದು ತನ್ನ ಹೆಸರನ್ನು ಹೇಳಿ, ಅವನ ಕಾಲಿಗೆರಗಿದನು. ತಮ್ಮನನ್ನು ಮೇಲೆತ್ತಿ ಅವನು ತಬ್ಬಿಕೊಂಡನು. ಆತನು ರಘುಪತಿಯ ಭಕ್ತನೆಂದು ತಿಳಿದು ಮನಸ್ಸಿನಲ್ಲಿ ತುಂಬಾ ಸಂತಸಪಟ್ಟನು. ವಿಭೀಷಣನು ಹೇಳಿದನು – ''ಅಣ್ಣಾ! ಪರಮಹಿತಕರವಾದ ಸಲಹೆಗಳನ್ನೂ, ಬುದ್ಧಿವಾದವನ್ನೂ ಹೇಳಿದರೆ ರಾವಣನು ನನ್ನನ್ನು ಒದ್ದು ಹೊರಹಾಕಿದನು. ಆಗ ಗ್ಲಾನಿಗೊಂಡು ನಾನು ಶ್ರೀರಾಮನಲ್ಲಿ ಶರಣಾದೆನು. ಪ್ರಭುವು ನನ್ನನ್ನು ಆರ್ತನೆಂದು ತಿಳಿದು ಆತ್ಮೀಯನೆಂದು ಭಾವಿಸಿ, ಆಶ್ರಯವಿತ್ತನು.'' ಕುಂಭಕರ್ಣನೆಂದ – ತಮ್ಮಾ! ಕೇಳು. ರಾವಣನು ಮೃತ್ಯುಮುಖಕ್ಕೆ ಹೋಗುತ್ತಿರುವನು. ಮೃತ್ಯುವು ಅವನ ತಲೆಯಮೇಲೆ ಕುಣಿಯುತ್ತಿದೆ. ಈಗ ಯಾವ ಬುದ್ಧಿವಾದವನ್ನೂ ಅವನು ಕೇಳಲಾರನು. ವಿಭೀಷಣಾ! ನಿಜಕ್ಕೂ, ನೀನು ಧನ್ಯನು. ನೀನು ರಾಕ್ಷಸಕುಲ ಭೂಷಣನಾದೆ. ನೀನು ಸೌಂದರ್ಯಸುಖಸಾಗರನಾದ ಶ್ರೀರಾಮನನ್ನು ಭಜಿಸಿ ನಮ್ಮ ಕುಲವನ್ನು ಬೆಳಗಿದೆ. (ಚೌ/೧-೫)

**ದೋ – ಬಚನ ಕರ್ಮ ಮನ ಕಪಟ ತಜಿ ಭಜೆಹು ರಾಮ ರನಧೀರ।**
**ಜಾಹು ನ ನಿಜ ಪರ ಸೂಝ ಮೊಹಿ ಭಯಉಁ ಕಾಲಬಸ ಬೀರ॥ ೬೪॥**

ತ್ರಿಕರಣಶುದ್ಧಿಯಾಗಿ ಕಪಟವನ್ನು ತೊರೆದು ನೀನು ರಣಧೀರನಾದ ಶ್ರೀರಾಮನನ್ನು ಭಜಿಸು. ತಮ್ಮಾ! ನಾನು ಕಾಲವಶನಾಗಿದ್ದೇನೆ. ಆದ್ದರಿಂದ ನನಗೆ ತನ್ನವರು, ಹೆರವರು ತಿಳಿಯುತ್ತಿಲ್ಲ. ನೀನು ಈಗ ಇಲ್ಲಿಂದ ತೆರಳು. (ದೋ/೬೪)

**ಚೌ – ಬಂಧು ಬಚನ ಸುನಿ ಚಲಾ ಬಿಭೀಷನ । ಆಯಉ ಜಹ್ ತ್ರೈಲೋಕ ಬಿಭೂಷನ ॥**
**ನಾಥ ಭೂಧರಾಕಾರ ಸರೀರಾ । ಕುಂಭಕರನ ಆವತ ರನಧೀರಾ ॥ ೧ ॥**
**ಏತನಾ ಕಪಿನ್ಹ ಸುನಾ ಜಬ ಕಾನಾ । ಕಿಲಕಿಲಾಇ ಧಾಏ ಬಲವಾನಾ ॥**
**ಲಿಏ ಉಠಾಇ ಬಿಟಪ ಅರು ಭೂಧರ । ಕಟಕಟಾಇ ಡಾರಹಿಂ ತಾ ಊಪರ ॥ ೨ ॥**
**ಕೋಟಿ ಕೋಟಿ ಗಿರಿ ಸಿಖರ ಪ್ರಹಾರಾ । ಕರಹಿಂ ಭಾಲು ಕಪಿ ಏಕ ಏಕ ಬಾರಾ ॥**
**ಮುರ್ಯೋ ನ ಮನು ತನು ಟರ್ಯೋ ನ ಟಾರ್ಯೋ । ಜಿಮಿ ಗಜ ಅರ್ಕ ಫಲನಿ ಕೋ ಮಾರ್ಯೋ ॥ ೩ ॥**
**ತಬ ಮಾರುತಸುತ ಮುಠಿಕಾ ಹನ್ಯೋ । ಪರ್ಯೋ ಧರನಿ ಬ್ಯಾಕುಲ ಸಿರ ಧುನ್ಯೋ ॥**
**ಪುನಿ ಉಠಿ ತೇಹಿಂ ಮಾರೆಉ ಹನುಮಂತಾ । ಘುರ್ಮಿತ ಭೂತಲ ಪರೆಉ ತುರಂತಾ ॥ ೪ ॥**
**ಪುನಿ ನಲ ನೀಲಹಿ ಅವನಿ ಪಛಾರೆಸಿ । ಜಹಂ ತಹಂ ಪಟಕಿ ಪಟಕಿ ಭಟ ಡಾರೆಸಿ ॥**
**ಚಲೀ ಬಲೀಮುಖ ಸೇನ ಪರಾಈ । ಅತಿ ಭಯ ತ್ರಸಿತ ನ ಕೋಉ ಸಮುಹಾಈ ॥ ೫ ॥**

ಅಣ್ಣನಾದ ಕುಂಭಕರ್ಣನ ವಚನಗಳನ್ನು ಕೇಳಿ, ವಿಭೀಷಣನು ತ್ರಿಜಗದ್ಭೂಷಣನಾದ ಶ್ರೀರಾಮನಿದ್ದೆಡೆಗೆ ಬಂದು ಹೇಳಿದ – ''ಪ್ರಭೋ! ಭೂಧರಾಕಾರಶರೀರನಾದ, ರಣಧೀರ ಕುಂಭಕರ್ಣನು ಬರುತ್ತಿದ್ದಾನೆ.'' ಇದನ್ನು ಕೇಳುತ್ತಲೇ ಬಲಶಾಲಿಗಳಾದ ವಾನರರು ಹರ್ಷಧ್ವನಿಗೈಯುತ್ತಾ ರಣರಂಗದತ್ತ ಧಾವಿಸಿದರು. ಅವರು ಕ್ರೋಧದಿಂದ ಹಲ್ಲು ಮೊರೆಯುತ್ತಾ, ಬೆಟ್ಟಗಳನ್ನು, ಹೆಮ್ಮರಗಳನ್ನು ಕಿತ್ತುತಂದು ಅವನ ಮೇಲೆ ರಾಚತೊಡಗಿದರು. ಭಲ್ಲೂಕವಾನರರು ಒಂದೊಂದು ಸಲಕ್ಕೆ ಅಸಂಖ್ಯ ಪರ್ವತಶಿಖರಗಳನ್ನು ಅವನ ಮೇಲೆ ಎಸೆಯುತ್ತಿದ್ದರು. ಆದರೆ ಆತನ ಮನಸ್ಸು ಕೊಂಚವೂ ವಿಚಲಿತವಾಗಲಿಲ್ಲ. ಶರೀರ ಮಿಸುಕಲಿಲ್ಲ. ಎಕ್ಕದ ಕಾಯಿಂದ ಹೊಡೆದ ಆನೆಯಂತೆ ನಿಶ್ಚಲವಾಗಿದ್ದನು. ಆಗ ಪವನಪುತ್ರನು ಅವನಿಗೆ ಒಂದು ಮುಷ್ಟಿಘಾತದ ರುಚಿಯನ್ನುಣಿಸಿದನು. ಅದರಿಂದ ಅವನು ತತ್ತರಿಸಿ ನೆಲಕ್ಕುರುಳಿದನು. ತಲೆಚಚ್ಚಿಕೊಂಡನು. ಮತ್ತೆ ಆತನೆದ್ದು ಹನುಮಂತನನ್ನು ಹೊಡೆದನು. ಅದರಿಂದ ಅವನು ಬವಳಿಬಂದು ನೆಲಕ್ಕೆ ಬಿದ್ದನು. ಬಳಿಕ ಕುಂಭಕರ್ಣನು ನಳ, ನೀಲರನ್ನು ನೆಲಕ್ಕಪ್ಪಳಿಸಿದನು. ಇತರ ವೀರರನ್ನು ಎಲ್ಲಿ ಅಂದರೆ ಅಲ್ಲೇ ಕುಕ್ಕಿ-ಕುಕ್ಕಿ ನೆಲಕ್ಕೊಗೆದನು. ಕಪಿಸೇನೆಯೆಲ್ಲ ಓಡಿಹೋಯಿತು. ಭಯಭ್ರಾಂತರಾದ ಅವರಲ್ಲಿ ಯಾರೂ ಅವನನ್ನು ಎದುರಿಸಲು ಸಾಹಸಗೈಯಲಿಲ್ಲ. (ಚೌ/೧-೫)

**ದೋ – ಅಂಗದಾದಿ ಕಪಿ ಮುರುಛಿತ ಕರಿ ಸಮೇತ ಸುಗ್ರೀವ ।**
**ಕಾಂಖ ದಾಬಿ ಕಪಿರಾಜ ಕಹುಂ ಚಲಾ ಅಮಿತ ಬಲ ಸೀಂವ ॥ ೬೫ ॥**

ಸುಗ್ರೀವ ಅಂಗದಾದಿ ಎಲ್ಲರನ್ನು ಮೂರ್ಛಿತಗೊಳಿಸಿ, ಅಪಾರಬಲಶಾಲಿಯಾದ ಕುಂಭಕರ್ಣನು ವಾನರರಾಜನಾದ ಸುಗ್ರೀವನನ್ನು ಕಂಕುಳಲ್ಲಿಟ್ಟುಕೊಂಡು ಹೊರಟುಹೋದನು. (ದೋ/೬೫)

**ಚೌ – ಉಮಾ ಕರತ ರಘುಪತಿ ನರಲೀಲಾ । ಖೇಲತ ಗರುಡ ಜಿಮಿ ಅಹಿಗನ ಮೀಲಾ ॥**
**ಭೃಕುಟಿ ಭಂಗ ಜೋ ಕಾಲಹಿ ಖಾಈ । ತಾಹಿ ಕಿ ಸೋಹಇ ಐಸಿ ಲರಾಈ ॥ ೧ ॥**
**ಜಗ ಪಾವನಿ ಕೀರತಿ ಬಿಸ್ತರಿಹಹಿಂ । ಗಾಇ ಗಾಇ ಭವನಿಧಿ ನರ ತರಿಹಹಿಂ ॥**
**ಮುರುಛಾ ಗಇ ಮಾರುತಸುತ ಜಾಗಾ । ಸುಗ್ರೀವಹಿ ತಬ ಖೋಜನ ಲಾಗಾ ॥ ೨ ॥**
**ಸುಗ್ರೀವಹು ಕೈ ಮುರುಛಾ ಬೀತೀ । ನಿಬುಕಿ ಗಯಉ ತೆಹಿ ಮೃತಕ ಪ್ರತೀತೀ ॥**
**ಕಾಟೆಸಿ ದಸನ ನಾಸಿಕಾ ಕಾನಾ । ಗರಜಿ ಅಕಾಸ ಚಲೆಉ ತೆಹಿಂ ಜಾನಾ ॥ ೩ ॥**
**ಗಹೆಉ ಚರನ ಗಹಿ ಭೂಮಿ ಪಛಾರಾ । ಅತಿ ಲಾಘವಂ ಉಠಿ ಪುನಿ ತೆಹಿ ಮಾರಾ ॥**
**ಪುನಿ ಆಯಉ ಪ್ರಭು ಪಹಿಂ ಬಲವಾನಾ । ಜಯತಿ ಜಯತಿ ಜಯ ಕೃಪಾನಿಧಾನಾ ॥ ೪ ॥**
**ನಾಕ ಕಾನ ಕಾಟೇ ಜಿಯಂ ಜಾನೀ । ಫಿರಾ ಕ್ರೋಧ ಕರಿ ಭಇ ಮನ ಗ್ಲಾನೀ ॥**
**ಸಹಜ ಭೀಮ ಪುನಿ ಬಿನು ಶ್ರುತಿ ನಾಸಾ । ದೇಖತ ಕಪಿ ದಲ ಉಪಜೀ ತ್ರಾಸಾ ॥ ೫ ॥**

ಶಿವನು ಹೇಳುತ್ತಿರುವನು – ಭವಾನೀ! ಸರ್ಪಸಮೂಹದ ಜೊತೆಗೆ ಗರುಡನು ಆಡುವಂತೆ ಶ್ರೀರಘುನಾಥನು ಮಾನವಲೀಲೆಯನ್ನು ತೋರುತ್ತಿದ್ದಾನೆ. ತನ್ನ ಭ್ರೂಭಂಗದಿಂದ ಕಾಲನನ್ನೂ ಕಬಳಿಸಬಲ್ಲಾತನಿಗೆ ಇಂತಹ ಯುದ್ಧವು ಒಂದು

ಲೆಕ್ಕವೇ? ಭಗವಂತನು ಜಗತ್ತನ್ನು ಪಾವನಗೊಳಿಸುವಂತಹ ತನ್ನ ಯಶಸ್ಸನ್ನು ಈ ಸಮರದ ಮೂಲಕ ವಿಸ್ತರಿಸುತ್ತಿರುವನು. ಅದನ್ನು ಹಾಡಿ-ಪಾಡಿದವರು ಭವಸಾಗರವನ್ನು ದಾಟಬಲ್ಲರು. ಮೂರ್ಛೆಯಿಂದ ಎಚ್ಚೆತ್ತ ವಾಯುನಂದನನು ಸುಗ್ರೀವನನ್ನು ಹುಡುಕತೊಡಗಿದನು. ಇಷ್ಟರಲ್ಲಿ ಸುಗ್ರೀವನ ಮೂರ್ಛೆ ದೂರವಾಯಿತು. ಆಗ ಅವನು ಕುಂಭಕರ್ಣನ ಕಂಕುಳಿಂದ ಜಾರಿದನು. ಅವನು ಸತ್ತನೆಂದೇ ಕುಂಭಕರ್ಣನು ತಿಳಿದನು. ಸುಗ್ರೀವನು ಕುಂಭಕರ್ಣನ ಕಿವಿ, ಮೂಗುಗಳನ್ನು ಕಚ್ಚಿ ಕಿತ್ತುಹಾಕಿ, ಸಿಂಹನಾದ ಗೈದು ಆಗಸದತ್ತ ನೆಗೆದನು. ಆಗ ಸುಗ್ರೀವನು ತಪ್ಪಿಸಿಕೊಂಡನೆಂದು ತಿಳಿದು ಕುಂಭಕರ್ಣನು ಕೂಡಲೇ ಅವನ ಕಾಲನ್ನು ಹಿಡಿದು ನೆಲಕ್ಕೆ ಬಡಿದನು. ಆಗ ಬಲಶಾಲಿಯಾದ ಸುಗ್ರೀವನು ತುಂಬಾ ಹುರುಪಿನಿಂದ ದಿಗ್ಗನೆ ಎದ್ದು ಅವನನ್ನು ಹೊಡೆದು ಪ್ರಭುವಿದ್ದಲ್ಲಿಗೆ ಹೋಗಿ – 'ಕೃಪಾನಿಧಾನನಾದ ಪ್ರಭುವಿಗೆ ಜಯವಾಗಲೀ, ಜಯವಾಗಲೀ' ಎಂದು ಜಯಕಾರ ಮಾಡಿದನು. ತನ್ನ ಕಿವಿ, ಮೂಗುಗಳು ಕಿತ್ತುಹೋಗಿರುವುದನ್ನು ತಿಳಿದ ಕುಂಭಕರ್ಣನಿಗೆ ತುಂಬಾ ಗ್ಲಾನಿಯುಂಟಾಯಿತು. ಅವನು ಭಾರೀ ಕ್ರೋಧಗೊಂಡು ಮಾರ್ಗ ಮಧ್ಯದಿಂದಲೇ ಮರಳಿದನು. ಸಹಜವಾಗಿಯೇ ಭಯಂಕರಾಕೃತಿಯುಳ್ಳ ಅವನು ಮೂಗು, ಕಿವಿಗಳಿಲ್ಲದೆ ಇನ್ನೂ ವಿಕೃತನಾಗಿ ಕಂಡು ಬರುತ್ತಿದ್ದನು. ಅವನನ್ನು ನೋಡುತ್ತಲೇ ವಾನರಸೇನೆಯು ಭಯಭ್ರಾಂತವಾಯಿತು. (ಚೌ/೧-೫)

**ದೋ – ಜಯ ಜಯ ಜಯ ರಘುಬಂಸ ಮನಿ ಧಾಏ ಕಪಿ ದೈ ಹೂಹ ।**
**ಏಕಹಿ ಬಾರ ತಾಸು ಪರ ಛಾಡೆನ್ಹಿ ಗಿರಿ ತರು ಜೂಹ ॥ ೬೬ ॥**

ರಘುವಂಶ ಮಣೀರಾಮಂಗೆ ಜಯವಾಗಲೀ! ರಾಮಂಗೆಲ್ಗೆ! ಜಯಮಕ್ಕೆ! ಎಂದು ಕೂಗಿ ಅಬ್ಬರಿಸಿ ವಾನರರು ಅತ್ತ ಧಾವಿಸಿದರು. 'ಹಾಹಾ ಹೂಹೂ' ಎಂದು ಅರಚುತ್ತಾ ಎಲ್ಲರೂ ಒಂದೇಸಲಕ್ಕೆ ವೃಕ್ಷಗಳನ್ನು, ಪರ್ವತಗಳನ್ನು ಕುಂಭಕರ್ಣನ ಮೇಲೆ ಎಸೆದರು. (ದೋ/೬೬)

**ಚೌ – ಕುಂಭಕರನ ರನ ರಂಗ ಬಿರುದ್ಧಾ । ಸನ್ಮುಖ ಚಲಾ ಕಾಲ ಜನು ಕ್ರುದ್ಧಾ ॥**
**ಕೋಟಿ ಕೋಟಿ ಕಪಿ ಧರಿ ಧರಿ ಖಾಈ । ಜನು ಟೀಡೀ ಗಿರಿ ಗುಹಾಂ ಸಮಾಈ ॥ ೧ ॥**
**ಕೋಟಿನ್ಹ ಗಹಿ ಸರೀರ ಸನ ಮರ್ದಾ । ಕೋಟಿನ್ಹ ಮೀಜಿ ಮಿಲವ ಮಹಿ ಗರ್ದಾ ॥**
**ಮುಖ ನಾಸಾ ಶ್ರವನನ್ಹಿ ಕೀಂ ಬಾಟಾ । ನಿಸರಿ ಪರಾಹಿಂ ಭಾಲು ಕಪಿ ಠಾಟಾ ॥ ೨ ॥**
**ರನ ಮದ ಮತ್ತ ನಿಸಾಚರ ದರ್ಪಾ । ಬಿಸ್ವ ಗ್ರಸಿಹಿ ಜನು ಎಹಿ ಬಿಧಿ ಅರ್ಪಾ ॥**
**ಮುರೇ ಸುಭಟ ಸಬ ಫಿರಹಿಂ ನ ಫೇರೇ । ಸೂಝು ನ ನಯನ ಸುನಹಿಂ ನಹಿಂ ಟೇರೇ ॥ ೩ ॥**
**ಕುಂಭಕರನ ಕಪಿ ಫೌಜ ಬಿಡಾರೀ । ಸುನಿ ಧಾಈ ರಜನೀಚರ ಧಾರೀ ॥**
**ದೇಖೀ ರಾಮ ಬಿಕಲ ಕಟಕಾಈ । ರಿಪು ಅನೀಕ ನಾನಾ ಬಿಧಿ ಆಈ ॥ ೪ ॥**

ರಣೋತ್ಸಾಹದಲ್ಲಿ ಕುಂಭಕರ್ಣನು ಅವರೆದುರಿಗೆ ನಡೆಯುತ್ತಾ, ಕಾಲನೇ ಕ್ರುದ್ಧನಾಗಿ ಮೇಲೆರಗಿ ಬರುವಂತೆ ಅವರ ಮೇಲೆ ಎರಗಿ ಬಂದನು. ಅವನು ಅಸಂಖ್ಯಾತ ವಾನರರನ್ನು ಒತ್ತಟ್ಟಿಗೆ ಎತ್ತಿಕೊಂಡು ನುಂಗತೊಡಗಿದನು. ಪರ್ವತದ ಗುಹೆಯೊಳಗೆ ಮಿಡತೆಗಳ ದಂಡು ನುಗ್ಗಿಹೋಗುವಂತೆ ಅವರು ಅವನ ಬಾಯಲ್ಲಿ ಪ್ರವೇಶಿಸುತ್ತಿದ್ದರು. ಲೆಕ್ಕವಿಲ್ಲದ ವಾನರರನ್ನು ಅವನು ತನ್ನ ಶರೀರಕ್ಕೆ ತಿಕ್ಕಿ ಕೊಂದರೆ, ಕೆಲವರನ್ನು ಕೈಯಿಂದ ಹಿಸುಕಿ ಕೊಂದು ಮಣ್ಣುಗೂಡಿಸಿದನು. ಹೊಟ್ಟೆಯೊಳಗೆ ಸೇರಿದ್ದ ವಾನರ-ಭಲ್ಲೂಕಗಳು ಅವನ ಬಾಯಿ, ಮೂಗು, ಕಿವಿಗಳಿಂದ ತಂಡತಂಡವಾಗಿ ಹೊರಬಂದು ಓಡತೊಡಗಿದರು. ವಿಧಾತನು ಸಮಸ್ತ ವಿಶ್ವವನ್ನು ತನಗೆ ಒಪ್ಪಿಸಿರುವನು. ತಾನು ಅದನ್ನು ನುಂಗಿ ನೀರು ಕುಡಿಯುತ್ತೇನೆ ಎಂದು ಭಾವಿಸಿ ಕುಂಭಕರ್ಣನು ರಣೋನ್ಮತ್ತನಾಗಿ, ಗರ್ವಿತನಾದನು. ಯೋಧರೆಲ್ಲ ಕಾಲ್ತೆಗೆದರು. ಅವರನ್ನು ಮರಳಿ ಕರೆದರೂ ಮರಳರು. ಅವರಿಗೆ ಏನೂ ಕಾಣದಾಯಿತು. ಕೂಗಿದರೂ ಕೇಳದಂತಾಯಿತು. ಕುಂಭಕರ್ಣನು ವಾನರಸೇನೆಯನ್ನು ಧೂಳೀಪಟಮಾಡಿದುದನ್ನು ಕೇಳಿ ರಾಕ್ಷಸಸೇನೆ ಉತ್ಸಾಹದಿಂದ ಓಡಿಬಂತು. ತನ್ನ ಸೈನ್ಯವು ತಲ್ಲಣಿಸಿ ಹೋಗಿದೆ, ರಕ್ಕಸರ ದಂಡು ಮುಂದಕ್ಕೆ ಬರುತ್ತಿದೆ ಎಂದು ಶ್ರೀರಾಮನು ಗಮನಿಸಿದನು. (ಚೌ/೧-೪)

**ದೋ – ಸುನು ಸುಗ್ರೀವ ಬಿಭೀಷನ ಅನುಜ ಸँಭಾರೆಹು ಸೈನ ।**
**ಮೈಂ ದೇಖಉಂ ಖಲ ಬಲ ದಲಹಿ ಬೋಲೇ ರಾಜಿವನೈನ ॥ ೬೭ ॥**

ಆಗ ರಾಜೀವಲೋಚನ ಶ್ರೀರಾಮನು ಹೇಳಿದನು – ''ಸುಗ್ರೀವಾ! ವಿಭೀಷಣಾ! ಲಕ್ಷ್ಮಣಾ! ಕೇಳಿರಿ; ನೀವು ಸೇನೆಯನ್ನು ಕಾಪಾಡಿರಿ. ನಾನು ಈ ಖಳನ ದಳ ಬಲವನ್ನು ವಿಚಾರಿಸುತ್ತೇನೆ. (ದೋ/೬೭)

**ಚೌ – ಕರ ಸಾರಂಗ ಸಾಜಿ ಕಟಿ ಭಾಥಾ। ಅರಿ ದಲ ದಲನ ಚಲೇ ರಘುನಾಥಾ ॥**
**ಪ್ರಥಮ ಕೀನ್ಹಿ ಪ್ರಭು ಧನುಷ ಟ್ಂಕೋರಾ। ರಿಪು ದಲ ಬಧಿರ ಭಯಉ ಸುನಿ ಸೋರಾ ॥ ೧ ॥**
**ಸತ್ಯಸಂಧ ಛಾಂಡೇ ಸರ ಲಚ್ಛಾ। ಕಾಲಸರ್ಪ ಜನು ಚಲೇ ಸಪಚ್ಛಾ ॥**
**ಜಹ್ಂ ತಹ್ಂ ಚಲೇ ಬಿಪುಲ ನಾರಾಚಾ। ಲಗೇ ಕಟನ ಭಟ ಬಿಕಟ ಪಿಸಾಚಾ ॥ ೨ ॥**
**ಕಟಹಿಂ ಚರನ ಉರ ಸಿರ ಭುಜದಂಡಾ। ಬಹುತಕ ಬೀರ ಹೋಹಿಂ ಸತ ಖಂಡಾ ॥**
**ಘುರ್ಮಿ ಘುರ್ಮಿ ಘಾಯಲ ಮಹಿ ಪರಹೀಂ। ಉಠಿ ಸಂಭಾರೀ ಸುಭಟ ಪುನಿ ಲರಹೀಂ ॥ ೩ ॥**
**ಲಾಗತ ಬಾನ ಜಲದ ಜಿಮಿ ಗಾಜಹಿಂ। ಬಹುತಕ ದೇಖಿ ಕಠಿನ ಸರ ಭಾಜಹಿಂ ॥**
**ರುಂಡ ಪ್ರಚಂಡ ಮುಂಡ ಬಿನು ಧಾವಹಿಂ। ಧರು ಧರು ಮಾರು ಮಾರು ಧುನಿ ಗಾವಹಿಂ ॥ ೪ ॥**

ಕೈಯಲ್ಲಿ ಶಾರ್ಙ್ಗಧನುಸ್ಸನ್ನೂ, ನಡುವಿಗೆ ತೂಣೀರವನ್ನೂ ಧರಿಸಿ ಶ್ರೀರಘುನಾಥನು ಶತ್ರುಸೈನ್ಯವನ್ನು ದಮನಮಾಡಲು ಹೊರಟನು. ಪ್ರಭುವು ಮೊದಲಿಗೆ ಧನುಷ್ಟಂಕಾರಗೈದನು. ಅದರ ಭಯಂಕರ ಧ್ವನಿಯಿಂದ ಶತ್ರುಸೇನೆಯ ಕಿವಿಗಳು ಕಿವುಡಾದವು. ಸತ್ಯಪ್ರತಿಜ್ಞನಾದ ಶ್ರೀರಾಮನೂ ಒಂದು ಲಕ್ಷಬಾಣಗಳನ್ನು ಪ್ರಯೋಗಿಸಿದನು. ಅವು ರೆಕ್ಕೆಗಳಿರುವ ಕಾಳಸರ್ಪಗಳಂತೆ ನಾಲ್ಕೂ ದಿಕ್ಕುಗಳಲ್ಲಿ ತುಂಬಿಹೋದವು. ಅವುಗಳ ಶಕ್ತಿಯಿಂದ ಘೋರರಾಕ್ಷಸಯೋಧರು ಚೂರು-ಚೂರಾಗಿ, ಕಾಲುಗಳು, ಎದೆ, ತಲೆಗಳು, ಭುಜದಂಡಗಳನ್ನು ಕಳೆದುಕೊಂಡರು. ಅನೇಕ ವೀರರು ನುಚ್ಚುನೂರಾದರು. ಗಾಯಗೊಂಡವರು ಗಿರ-ಗಿರನೆ ತಿರುಗಿ ನೆಲಕ್ಕುರುಳಿದರು. ಕೆಲವು ಯೋಧರು ಮರಳಿಎದ್ದು ಹೋರಾಡುತ್ತಿದ್ದರು. ಬಾಣತಾಗಿದ ಕೂಡಲೇ ಅವರು ಮೇಘಗಳಂತೆ ಗುಡುಗುತ್ತಿದ್ದರು. ಹಲವರಂತೂ ಆ ಕಠೋರಬಾಣಗಳನ್ನು ದೂರದಲ್ಲಿ ನೋಡುತ್ತಲೇ ಓಡಿಬಿಡುತ್ತಿದ್ದರು. ರುಂಡವಿಲ್ಲದ ಪ್ರಚಂಡ ಮುಂಡಗಳೂ, ಭಯಂಕರವಾಗಿ ಹಾರಿ-ಹಾರಿ ಓಡುತ್ತಿದ್ದವು. ಕತ್ತರಿಸಲ್ಪಟ್ಟ ರುಂಡಗಳು 'ಓಡು, ಹಿಡಿ, ಬಡಿ' ಎಂದು ಕೂಗುತ್ತಿದ್ದವು. (ಚೌ/೧-೪)

**ದೋ – ಛನ ಮಹುಂ ಪ್ರಭು ಕೇ ಸಾಯಕನ್ಹಿ ಕಾಟೇ ಬಿಕಟ ಪಿಸಾಚ।**
**ಪುನಿ ರಘುಬೀರ ನಿಷಂಗ ಮಹುಂ ಪ್ರಬಿಸೇ ಸಬ ನಾರಾಚ ॥ ೬೮ ॥**

ಶ್ರೀರಾಮಚಂದ್ರಪ್ರಭುವು ಪ್ರಯೋಗಿಸಿದ ಬಾಣಗಳು ಕ್ಷಣಮಾತ್ರದಲ್ಲಿ ಆ ಘೋರರಕ್ಕಸರನ್ನು ತುಂಡುತುಂಡಾಗಿಸಿ, ಮರಳಿಬಂದು ತೂಣೀರದೊಳಕ್ಕೆ ಸೇರಿಕೊಂಡವು. (ದೋ/೬೮)

**ಚೌ – ಕುಂಭಕರನ ಮನ ದೀಖ ಬಿಚಾರೀ। ಹತಿ ಛನ ಮಾಝ ನಿಸಾಚರ ಧಾರೀ ॥**
**ಭಾ ಅತಿ ಕ್ರುದ್ಧ ಮಹಾಬರ ಬೀರಾ। ಕಿಯೊ ಮೃಗನಾಯಕ ನಾದ ಗಂಭೀರಾ ॥ ೧ ॥**
**ಕೋಪಿ ಮಹೀಧರ ಲೇಇ ಉಪಾರೀ। ಡಾರಇ ಜಹ್ಂ ಮರ್ಕಟ ಭಟ ಭಾರೀ ॥**
**ಆವತ ದೇಖಿ ಸೈಲ ಪ್ರಭು ಭಾರೇ। ಸರನ್ಹಿ ಕಾಟಿ ರಜ ಸಮ ಕರಿ ಡಾರೇ ॥ ೨ ॥**
**ಪುನಿ ಧನು ತಾನಿ ಕೋಪಿ ರಘುನಾಯಕ। ಛಾಂಡೇ ಅತಿ ಕರಾಲ ಬಹು ಸಾಯಕ ॥**
**ತನು ಮಹುಂ ಪ್ರಬಿಸಿ ನಿಸರಿ ಸರ ಜಾಹೀಂ। ಜಿಮಿ ದಾಮಿನಿ ಘನ ಮಾಝ ಸಮಾಹೀಂ ॥ ೩ ॥**
**ಸೋನಿತ ಸ್ರವತ ಸೋಹ ತನ ಕಾರೇ। ಜನು ಕಜ್ಜಲ ಗಿರಿ ಗೇರು ಪನಾರೇ ॥**
**ಬಿಕಲ ಬಿಲೋಕಿ ಭಾಲು ಕಪಿ ಧಾಏ। ಬಿಹಂಸಾ ಜಬಹಿಂ ನಿಕಟ ಕಪಿ ಆಏ ॥ ೪ ॥**

ಕುಂಭಕರ್ಣನು ಮನದಲ್ಲೇ ಅಂದುಕೊಂಡನು – ''ನನ್ನ ಕಣ್ಣುಮುಂದೆಯೇ ಶ್ರೀರಾಮನು ಒಂದೇ ಕ್ಷಣದಲ್ಲಿ ರಾಕ್ಷಸಸೇನೆಯನ್ನು ಪೂರ್ತಿಯಾಗಿ ಮುಗಿಸಿಬಿಟ್ಟನು.'' ಆಗ ಆ ಮಹಾಬಲಿಯು ಅತ್ಯಂತ ಕ್ರುದ್ಧನಾಗಿ ಸಿಂಹನಾದವನ್ನು ಮಾಡಿದನು. ಅವನು ಸಿಟ್ಟೆದ್ದು ಬೆಟ್ಟಗಳನ್ನು ಕಿತ್ತು ವಾನರರ ಮೇಲೆ ರಾಚಿದನು. ದೊಡ್ಡ-ದೊಡ್ಡ ಪರ್ವತಗಳು ಎರಗಿ ಬರುತ್ತಿದ್ದುದನ್ನು ಕಂಡು ಪ್ರಭುವು ಅವುಗಳನ್ನು ತನ್ನ ಬಾಣಗಳಿಂದ ಕತ್ತರಿಸಿ ಪುಡಿ-ಪುಡಿ ಮಾಡಿದನು. ಅನಂತರ ಶ್ರೀರಘುವೀರನು ಅತಿಕ್ರುದ್ಧವಾಗಿ ಧನುಸ್ಸನ್ನು ಎಳೆದು ಅತ್ಯಂತ ಭಯಾನಕ ಬಾಣಗಳನ್ನು ಪ್ರಯೋಗಿಸಿದನು. ಅವು ಕುಂಭಕರ್ಣನ ಶರೀರವನ್ನು ಹೊಕ್ಕು ಮಿಂಚುಗಳ ಗಡಣ ಮೋಡದೊಳಗೆ ಕಣ್ಮರೆಯಾಗುವಂತೆ ಹಿಂದಿನಿಂದ ಹೊರಟುಹೋಗುತ್ತಿದ್ದವು. ಆ ಕುಂಭಕರ್ಣನ ಕಪ್ಪಾದ ಶರೀರದಿಂದ ರಕ್ತವು ಕಪ್ಪಾದ ಕಾಡಿಗೆಯ ಬೆಟ್ಟದಿಂದ ಸಿಂಧೂರ ಕಾಲುವೆ ಹರಿಯುವಂತೆ ಹರಿಯತೊಡಗಿತು. ಅವನು ವಿಕಳನಾಗಿರುವುದನ್ನು ಕಂಡು ವಾನರ-ಭಲ್ಲೂಕಗಳು ಅವನ ಬಳಿಗೆ ಓಡಿದವು. ಅವು ಹತ್ತಿರ ಬರುತ್ತಿರುವಂತೆ ಅವನು ವಿಕಟಾಟ್ಟಹಾಸಮಾಡಿದನು. (ಚೌ/೧-೪)

**ದೋ – ಮಹಾನಾದ ಕರಿ ಗರ್ಜಾ ಕೋಟಿ ಕೋಟಿ ಗಹಿ ಕೀಸ।**
**ಮಹಿ ಪಟಕಇ ಗಜರಾಜ ಇವ ಸಪಥ ಕರಇ ದಸಸೀಸ॥ ೬೯ ॥**

ಕುಂಭಕರ್ಣನು ಭಯಂಕರವಾಗಿ ಗರ್ಜಿಸಿ, ಕೋಟಿ-ಕೋಟಿ ಮರ್ಕಟರನ್ನು ಹಿಡಿದು, ಮತ್ತ ಮದಗಜದಂತೆ ನೆಲಕ್ಕೆ ಅಪ್ಪಳಿಸತೊಡಗಿದನು. ರಾವಣನ ಹೆಸರು ಹೇಳಿ ಜಯಘೋಷ ಮಾಡುತ್ತಿದ್ದನು. (ದೋ/೬೯)

**ಚೌ – ಭಾಗೇ ಭಾಲು ಬಲೀಮುಖ ಜೂಥಾ। ಬೃಕು ಬಿಲೋಕಿ ಜಿಮಿ ಮೇಷ ಬರೂಥಾ॥**
**ಚಲೇ ಭಾಗಿ ಕಪಿ ಭಾಲು ಭವಾನೀ। ಬಿಕಲ ಪುಕಾರತ ಆರತ ಬಾನೀ॥ ೧ ॥**
**ಯಹ ನಿಸಿಚರ ದುಕಾಲ ಸಮ ಅಹಈ। ಕಪಿಕುಲ ದೇಸ ಪರನ ಅಬ ಚಹಈ॥**
**ಕೃಪಾ ಬಾರಿಧರ ರಾಮ ಖರಾರೀ। ಪಾಹಿ ಪಾಹಿ ಪ್ರನತಾರತಿ ಹಾರೀ॥ ೨ ॥**
**ಸಕರುನ ಬಚನ ಸುನತ ಭಗವಾನಾ। ಚಲೇ ಸುಧಾರಿ ಸರಾಸನ ಬಾನಾ॥**
**ರಾಮ ಸೇನ ನಿಜ ಪಾಛೇಂ ಘಾಲೀ। ಚಲೇ ಸಕೋಪ ಮಹಾ ಬಲಸಾಲೀ॥ ೩ ॥**
**ಖೈಂಚಿ ಧನುಷ ಸರ ಸತ ಸಂಧಾನೇ। ಛೂಟೇ ತೀರ ಸರೀರ ಸಮಾನೇ॥**
**ಲಾಗತ ಸರ ಧಾವಾ ರಿಸ ಭರಾ। ಕುಧರ ಡಗಮಗತ ಡೋಲತಿ ಧರಾ॥ ೪ ॥**
**ಲೀನ್ಹ ಏಕ ತೇಹಿಂ ಸೈಲ ಉಪಾಟೀ। ರಘುಕುಲ ತಿಲಕ ಭುಜಾ ಸೋಇ ಕಾಟೀ॥**
**ಧಾವಾ ಬಾಮ ಬಾಹು ಗಿರಿ ಧಾರೀ। ಪ್ರಭು ಸೋಉ ಭುಜಾ ಕಾಟಿ ಮಹಿ ಪಾರೀ॥ ೫ ॥**
**ಕಾಟೇಂ ಭುಜಾ ಸೋಹ ಖಲ ಕೈಸಾ। ಪಚ್ಛಹೀನ ಮಂದರ ಗಿರಿ ಜೈಸಾ॥**
**ಉಗ್ರ ಬಿಲೋಕನಿ ಪ್ರಭುಹಿ ಬಿಲೋಕಾ। ಗ್ರಸನ ಚಹತ ಮಾನಹುँ ತ್ರೈಲೋಕಾ॥ ೬ ॥**

ತೋಳಗಳನ್ನು ಕಂಡು ಆಡುಗಳ ಹಿಂಡು ಓಡಿಹೋಗುವಂತೆ ಆ ವಾನರ-ಭಲ್ಲೂಕಗಳು ಕುಂಭಕರ್ಣನನ್ನು ಕಂಡು ಓಡಿಹೋದುವು. ಶಿವನು ಹೇಳುತ್ತಾನೆ – ಭವಾನೀ! ಕಪಿ-ಕರಡಿಗಳು ಚೆಲ್ಲಾಪಿಲ್ಲಿಯಾಗಿ ಆರ್ತನಾದಮಾಡುತ್ತಾ ಓಡಿಹೋಗುತ್ತಾ 'ಓ ಕೃಪಾನಿಧಿಯೇ! ಖಾರಾರಿಯೇ! ಪ್ರಣತಾರ್ತಿಹರಾ! ಶ್ರೀರಾಮಾ! ಈ ವಿನಾಶಕನು ವಾನರಲೋಕವನ್ನೇ ಸರ್ವನಾಶಮಾಡಲು ಬಂದಿರುವ ಕಾಲರೂಪನು. ಇವನಿಂದ ಕಾಪಾಡು-ಕಾಪಾಡು' ಎಂದು ಮೊರೆಯಿಟ್ಟರು. ಅವುಗಳ ಕರುಣಾಪೂರ್ಣ ವಚನವನ್ನು ಕೇಳುತ್ತಲೇ ಭಗವಂತನು ಧನುರ್ಬಾಣಗಳನ್ನು ಧರಿಸಿಕೊಂಡು ಹೊರಟನು. ಆ ಮಹಾಬಲಶಾಲಿಯಾದ ಶ್ರೀರಾಮನು ಸೇನೆಯನ್ನು ತನ್ನ ಹಿಂದಕ್ಕಿಟ್ಟುಕೊಂಡು ಕ್ರೋಧೋದ್ದೀಪ್ತನಾಗಿ ಮುಂದೆ ಸಾಗಿದನು. ಅವನು ಧನುಸ್ಸನ್ನು ಸೆಳೆದು ನೂರು ಬಾಣಗಳನ್ನು ಹೂಡಿದನು. ಹೊರಹೊಮ್ಮಿದ ಆ ಬಾಣಗಳು ಆ ದೈತ್ಯನ ಶರೀರದಲ್ಲಿ ಹೊಕ್ಕವು. ಅಂಬುಗಳು ತಾಗುತ್ತಲೇ ಕುಂಭಕರ್ಣನು ರೋಷಾವಿಷ್ಟನಾಗಿ ಮುನ್ನುಗ್ಗಿದನು. ಅವನು ಓಡಿದ ರಭಸಕ್ಕೆ ಪರ್ವತಗಳು ಅಲ್ಲಾಡಿದವು. ಭೂಮಿಯು ಕಂಪಿಸತೊಡಗಿತು. ಅವನು ಒಂದು ಪರ್ವತವನ್ನು ಕಿತ್ತು ಕೈಗೆತ್ತಿಕೊಂಡನು. ಆದರೆ ರಘುಕುಲತಿಲಕ ಶ್ರೀರಾಮನು ಅವನ ಭುಜವನ್ನೇ ಕತ್ತರಿಸಿ ಹಾಕಿದನು. ಆಗ ಅವನು ಎಡಗೈಯಿಂದ ಅದನ್ನು ಹಿಡಿದೆತ್ತಿ ಮುನ್ನುಗ್ಗಿದನು. ಪ್ರಭುವು ಅವನ ಎಡಭುಜವನ್ನೂ ಕಡಿದು ನೆಲಕ್ಕುರುಳಿಸಿದನು. ಭುಜಗಳನ್ನು ಕಳೆದುಕೊಂಡ ಆ ಖಳನು ರೆಕ್ಕೆಗಳಿಲ್ಲದ ಮಂದರಗಿರಿಯಂತೆ ಕಾಣುತ್ತಿದ್ದನು. ಅವನು ತ್ರಿಭುವನಗಳನ್ನು ಒಮ್ಮೆಗೆ ನುಂಗಿಬಿಡುವನೋ ಎಂಬಂತೆ ಕ್ರೂರದೃಷ್ಟಿಯಿಂದ ಪ್ರಭುವನ್ನು ನೋಡಿದನು. (ಚೌ/೧-೬)

**ದೋ – ಕರಿ ಚಿಕ್ಕಾರ ಘೋರ ಅತಿ ಧಾವಾ ಬದನು ಪಸಾರಿ।**
**ಗಗನ ಸಿದ್ಧ ಸುರ ತ್ರಾಸಿತ ಹಾ ಹಾ ಹೇತಿ ಪುಕಾರಿ॥ ೭೦ ॥**

ಅವನು ತುಂಬಾ ಬಿರುಸಿನಿಂದ ಗರ್ಜಿಸುತ್ತಾ ಬಾಯಿ ತೆರೆದುಕೊಂಡು ಮುನ್ನುಗ್ಗಿದ. ಆಕಾಶದಲ್ಲಿ ಸಿದ್ಧರೂ, ಸುರರೂ ಇದನ್ನು ಕಂಡು ಭಯಭ್ರಾಂತರಾಗಿ ಹಾಹಾಕಾರ ಮಾಡತೊಡಗಿದರು. (ದೋ/೭೦)

**ಚೌ – ಸಭಯ ದೇವ ಕರುನಾನಿಧಿ ಜಾನ್ಯೋ। ಶ್ರವನ ಪ್ರಜಂತ ಸರಾಸನು ತಾನ್ಯೋ॥**
**ಬಿಸಿಖ ನಿಕರ ನಿಸಿಚರ ಮುಖ ಭರೆಊ। ತದಪಿ ಮಹಾಬಲ ಭೂಮಿ ನ ಪರೆಊ॥ ೧ ॥**
**ಸರನ್ಹಿ ಭರಾ ಮುಖ ಸನ್ಮುಖ ಧಾವಾ। ಕಾಲ ತ್ರೋನ ಸಜೀವ ಜನು ಆವಾ॥**
**ತಬ ಪ್ರಭು ಕೋಪಿ ತೀಬ್ರ ಸರ ಲೀನ್ಹಾ। ಧರ ತೇ ಭಿನ್ನ ತಾಸು ಸಿರ ಕೀನ್ಹಾ॥ ೨ ॥**
**ಸೋ ಸಿರ ಪರೆಉ ದಸಾನನ ಆಗೇಂ। ಬಿಕಲ ಭಯಉ ಜಿಮಿ ಫನಿ ಮನಿ ತ್ಯಾಗೇಂ॥**
**ಧರನಿ ಧಸಇ ಧರ ಧಾವ ಪ್ರಚಂಡಾ। ತಬ ಪ್ರಭು ಕಾಟಿ ಕೀನ್ಹ ದುಇ ಖಂಡಾ॥ ೩ ॥**

ಪರೇ ಭೂಮಿ ಜಿಮಿ ನಭ ತೇಂ ಭೂಧರ। ಹೇಠ ದಾಬಿ ಕಪಿ ಭಾಲು ನಿಸಾಚರ॥
ತಾಸು ತೇಜ ಪ್ರಭು ಬದನ ಸಮಾನಾ। ಸುರ ಮುನಿ ಸಬಹಿಂ ಅಚಂಭವ ಮಾನಾ॥೪॥
ಸುರ ದುಂದುಭೀಂ ಬಜಾವಹಿಂ ಹರಷಹಿಂ। ಅಸ್ತುತಿ ಕರಹಿಂ ಸುಮನ ಬಹು ಬರಷಹಿಂ॥
ಕರಿ ಬಿನತೀ ಸುರ ಸಕಲ ಸಿಧಾಏ। ತೇಹೀ ಸಮಯ ದೇವರಿಷಿ ಆಏ॥೫॥
ಗಗನೋಪರಿ ಹರಿ ಗುನ ಗನ ಗಾಏ। ರುಚಿರ ಬೀರರಸ ಪ್ರಭು ಮನ ಭಾಏ॥
ಬೇಗಿ ಹತಹು ಖಲ ಕಹಿ ಮುನಿ ಗಏ। ರಾಮ ಸಮರ ಮಹಿ ಸೋಭತ ಭಏ॥೬॥

ದೇವತೆಗಳು ಭಯಭೀತರಾದುದನ್ನು ಅರಿತು, ಕರುಣಾನಿಧಿಯಾದ ಭಗವಂತನು ಧನುಸ್ಸನ್ನು ಆಕರ್ಣಾಂತವಾಗಿ ಸೆಳೆದು ರಾಕ್ಷಸನ ಬಾಯನ್ನು ಅಂಬುಗಳಿಂದ ತುಂಬಿಬಿಟ್ಟನು. ಆದರೂ ಕೂಡ ಆ ಮಹಾಬಲಿ ನೆಲಕ್ಕುರುಳಲಿಲ್ಲ. ಬಾಯಿತುಂಬಾ ಅಂಬುಗಳು ತುಂಬಿದ್ದರೂ ಕಾಲರೂಪಿಯಾದ ತೂಣೀರವೇ ಜೀವತಳೆದು ಬಂದಿದೆಯೋ ಎಂಬಂತೆ ಪ್ರಭುವಿನ ಮುಂದಕ್ಕೆ ವೇಗವಾಗಿ ನುಗ್ಗಿದನು. ಆಗ ಪ್ರಭುವು ಕೋಪಗೊಂಡು ತೀಕ್ಷ್ಣವಾದ ಬಾಣದಿಂದ ಅವನ ರುಂಡವನ್ನು ಮುಂಡದಿಂದ ಬೇರ್ಪಡಿಸಿದನು. ಆ ಕುಂಭಕರ್ಣನ ಶಿರಸ್ಸು ರಾವಣನ ಮುಂದೆ ಹೋಗಿ ಬಿದ್ದಿತು. ಅದನ್ನು ಕಂಡ ರಾವಣನು ಫಣಾಮಣಿಯನ್ನು ಕಳಕೊಂಡ ಸರ್ಪದಂತೆ ನಿರ್ವಿಣ್ಣನಾದನು. ಕುಂಭಕರ್ಣನ ಪ್ರಚಂಡ ಮುಂಡವು ವಿಚಿತ್ರವಾಗಿ ಓಡತೊಡಗಿತು. ಅದರ ಕಾಲ್ತುಳಿತಕ್ಕೆ ನೆಲ ಕುಸಿಯುತ್ತಿತ್ತು. ಆಗ ಶ್ರೀರಾಮಚಂದ್ರಪ್ರಭುವು ಅದನ್ನು ಕತ್ತರಿಸಿ ಎರಡು ತುಂಡುಗಳಾಗಿ ಮಾಡಿದನು. ಆ ಎರಡು ತುಂಡುಗಳು ಆಕಾಶದಿಂದ ಎರಡು ಪರ್ವತಗಳು ಉರುಳಿದಂತೆ ನೆಲಕ್ಕುರುಳಿದವು. ಅವರ ಕೆಳಗೆ ಅನೇಕ ಮಂದಿ ಕಪಿ-ಕರಡಿಗಳು, ರಾಕ್ಷಸರು ಸಿಕ್ಕಿ ನಲುಗಿಹೋದರು. ಅವನ ತೇಜಸ್ಸು ಪ್ರಭುರಾಮಚಂದ್ರನ ಮುಖದಲ್ಲಿ ಸೇರಿಕೊಂಡಿತು. ಅದನ್ನು ಕಂಡ ಸುರಮುನಿಗಳು ಬೆಕ್ಕಸಬೆರಗಾದರು. ದೇವದುಂದುಭಿಗಳು ಮೊಳಗಿದವು. ದೇವತೆಗಳು ಹರ್ಷದಿಂದ ಶ್ರೀರಾಮನನ್ನು ಸ್ತುತಿಸುತ್ತಾ ಪುಷ್ಪವೃಷ್ಟಿಗೈಯತೊಡಗಿದರು. ದೇವತೆಗಳು ಶ್ರೀರಾಮನನ್ನು ಓಲೈಸಿ ಎಲ್ಲರೂ ಮರಳಿಹೋದರು. ಅದೇ ವೇಳೆಗೆ ದೇವರ್ಷಿ ನಾರದರು ಅಲ್ಲಿಗೆ ಬಂದರು. ಅವರು ಆಗಸದಲ್ಲೇ ನಿಂತು ಭಗವಂತನ ವೀರರಸಯುಕ್ತ ಗುಣಸಮೂಹಗಳನ್ನು ಹಾಡಿ ಹೊಗಳಿದರು. ಪ್ರಭುವು ಅದರಿಂದ ಸುಪ್ರೀತವಾದನು. 'ಇನ್ನು ದುಷ್ಟ ರಾವಣನನ್ನು ಬೇಗನೇ ಸಂಹರಿಸಿ ಬಿಡು' ಎಂದು ಹೇಳಿ ನಾರದರು ಹೊರಟುಹೋದರು. ಆ ಸಮಯದಲ್ಲಿ ಶ್ರೀರಾಮಚಂದ್ರನು ಸಮರಾಂಗಣದಲ್ಲಿ ದಿವ್ಯ ತೇಜಸ್ಸಿನಿಂದ ವಿರಾಜಿಸಿದನು. (ಚೌ/೧-೬)

ಛಂ – ಸಂಗ್ರಾಮ ಭೂಮಿ ಬಿರಾಜ ರಘುಪತಿ ಅತುಲ ಬಲ ಕೋಸಲ ಧನೀ।
ಶ್ರಮ ಬಿಂದು ಮುಖ ರಾಜೀವ ಲೋಚನ ಅರುನ ತನ ಸೋನಿತ ಕನೀ॥
ಭುಜ ಜುಗಲ ಫೇರತ ಸರ ಸರಾಸನ ಭಾಲು ಕಪಿ ಚಹು ದಿಸಿ ಬನೇ।
ಕಹ ದಾಸ ತುಲಸೀ ಕಹಿ ನ ಸಕ ಛಬಿ ಸೇಷ ಜೆಹಿ ಆನನ ಘನೇ॥

ಅತುಲಿತ ಬಲಧಾಮನಾದ ಕೋಸಲಪತಿ ಶ್ರೀರಾಮಚಂದ್ರನು ರಣಾಂಗಣದಲ್ಲಿ ರಾರಾಜಿಸಿದನು. ಅವನ ಮುಖದ ಮೇಲೆ ಬೆವರಹನಿಗಳು ಶೋಭಿಸುತ್ತಿದ್ದವು. ಕಮಲನೇತ್ರಗಳು ಅರುಣವಾಗಿದ್ದವು. ಶರೀರದ ಮೇಲೆ ರಕ್ತಬಿಂದುಗಳು ಒಪ್ಪುತ್ತಿದ್ದವು. ಎರಡೂ ಕೈಗಳಿಂದ ಧನುರ್ಬಾಣಗಳನ್ನು ಆಡಿಸುತ್ತಿದ್ದನು ಸುತ್ತಲೂ ವಾನರ-ಭಲ್ಲೂಕಗಳು ವಿರಾಜಿಸುತ್ತಿದ್ದವು. ತುಳಸೀದಾಸರೆನ್ನುತ್ತಾರೆ – 'ಪ್ರಭುವಿನ ಈ ಚೆಲುವನ್ನು ಸಾವಿರಮುಖವುಳ್ಳ ಆದಿಶೇಷನೂ ಬಣ್ಣಿಸಲಾರನು.' (ಛಂದ)

ದೋ – ನಿಸಿಚರ ಅಧಮ ಮಲಾಕರ ತಾಹಿ ದೀನ್ಹ ನಿಜ ಧಾಮ।
ಗಿರಿಜಾ ತೇ ನರ ಮಂದಮತಿ ಜೇ ನ ಭಜಹಿಂ ಶ್ರೀರಾಮ॥೭೧॥

ಶಿವನು ಹೇಳುತ್ತಾನೆ – ಗಿರಿಜೆ! ಪಾಪದ ಗಣಿಯಾದ ನೀಚ-ನಿಶಾಚರ ಕುಂಭಕರ್ಣನಿಗೂ ಕೂಡ ಶ್ರೀರಾಮನು ಪರಂಧಾಮವನ್ನು ಕರುಣಿಸಿದನು. ಅಂತಹ ಸ್ವಾಮಿಯನ್ನು ಭಜಿಸದವರು ನಿಜವಾಗಿ ಮಂದಮತಿಗಳೇ ಸರಿ. (ದೋ/೭೧)

## ಲಕ್ಷ್ಮಣ ಮೇಘನಾದರ ಯುದ್ಧ

ಚೌ – ದಿನ ಕೇಂ ಅಂತ ಫಿರೀಂ ದ್ವೌ ಅನೀ। ಸಮರ ಭಈ ಸುಭಟನ್ಹ ಶ್ರಮ ಘನೀ॥
ರಾಮ ಕೃಪಾಂ ಕಪಿ ದಲ ಬಲ ಬಾಢಾ। ಜಿಮಿ ತೃನ ಪಾಇ ಲಾಗ ಅತಿ ಡಾಢಾ॥೧॥
ಛೀಜಹಿಂ ನಿಸಿಚರ ದಿನು ಅರು ರಾತೀ। ನಿಜ ಮುಖ ಕಹೇಂ ಸುಕೃತ ಜೆಹಿ ಭಾಂತೀ॥
ಬಹು ಬಿಲಾಪ ದಸಕಂಧರ ಕರಈ। ಬಂಧು ಸೀಸ ಪುನಿ ಪುನಿ ಉರ ಧರಈ॥೨॥

ರೋವಹಿಂ ನಾರಿ ಹೃದಯ ಹತಿ ಪಾನೀ। ತಾಸು ತೇಜ ಬಲ ಬಿಪುಲ ಬಖಾನೀ॥
ಮೇಘನಾದ ತೆಹಿ ಅವಸರ ಆಯಉ। ಕಹಿ ಬಹು ಕಥಾ ಪಿತಾ ಸಮುಝಾಯಉ॥ ೩ ॥
ದೇಖೆಹು ಕಾಲಿ ಮೋರಿ ಮನುಸಾಈ। ಅಬಹಿಂ ಬಹುತ ಕಾ ಕರೌಂ ಬಡಾಈ॥
ಇಷ್ಟದೇವ ಸೈಂ ಬಲ ರಥ ಪಾಯಉಂ। ಸೋ ಬಲ ತಾತ ನ ತೋಹಿ ದೆಖಾಯಉಂ॥ ೪ ॥
ಎಹಿ ಬಿಧಿ ಜಲ್ಪತ ಭಯಉ ಬಿಹಾನಾ। ಚಹುಂ ದುಆರ ಲಾಗೇ ಕಪಿ ನಾನಾ॥
ಇತ ಕಪಿ ಭಾಲು ಕಾಲ ಸಮ ಬೀರಾ। ಉತ ರಜನೀಚರ ಅತಿ ರನಧೀರಾ॥ ೫ ॥
ಲರಹಿಂ ಸುಭಟ ನಿಜ ನಿಜ ಜಯ ಹೇತೂ। ಬರನಿ ನ ಜಾಇ ಸಮರ ಖಗಕೇತೂ॥ ೬ ॥

ಸಾಯಂಕಾಲವಾಗುತ್ತಲೇ ಎರಡೂ ಪಡೆಗಳು ತಮ್ಮ ಪಾಳೆಯಕ್ಕೆ ಮರಳಿದರು. ಅಂದಿನ ಯುದ್ಧದಲ್ಲಿ ಯೋಧರು ತುಂಬಾ ದಣಿದಿದ್ದರು. ಆದರೆ ಶ್ರೀರಾಮನ ಕೃಪೆಯಿಂದ ವಾನರಸೇನೆಯ ಬಲವು ತೃಣಸಿಕ್ಕಿದರೆ ವರ್ಧಿಸುವ ವಹ್ನಿಯಂತೆ ವರ್ಧಿಸಿತು. ಅತ್ತ ರಕ್ಕಸರು – ತಾವು ಮಾಡಿದ ಪುಣ್ಯವನ್ನು ತಮ್ಮ ಬಾಯಿಂದಲೇ ಹೇಳಿದರೆ ಪುಣ್ಯವು ಕರಗುವಂತೆ ಕರಗತೊಡಗಿದರು. ರಾವಣನು ಕುಂಭಕರ್ಣನ ಶಿರಸ್ಸನ್ನು ಮತ್ತೆ-ಮತ್ತೆ ಎದೆಗೊತ್ತಿಕೊಂಡು ತುಂಬಾ ವಿಲಾಪಮಾಡಿದನು. ಅಂತಃಪುರದ ಸ್ತ್ರೀಯರು ಕುಂಭಕರ್ಣನ ತೇಜಸ್ಸನ್ನೂ, ಬಲಪರಾಕ್ರಮಗಳನ್ನೂ, ವಿಶೇಷವಾಗಿ ಬಣ್ಣಿಸುತ್ತಾ ಎದೆ ಬಡಿದುಕೊಳ್ಳುತ್ತಿದ್ದರು. ಅದೇ ಸಮಯಕ್ಕೆ ಮೇಘನಾದನು ಅಲ್ಲಿಗೆ ಬಂದು, ಧೈರ್ಯೋತ್ಸಾಹದ ಕುರಿತು ಅನೇಕ ಆಖ್ಯಾನಗಳನ್ನು ಹೇಳಿ, ರಾವಣನಿಗೆ ಸಾಂತ್ವನ ನೀಡಿದನು. ಮತ್ತೆ – ''ನಾಳೆ ನನ್ನ ಪರಾಕ್ರಮವನ್ನು ನೋಡಿ. ಈಗಲೇ ನಾನು ಹೆಚ್ಚಿಗೆ ಬಡಾಯಿ ಏಕೆ ಕೊಚ್ಚಿಕೊಳ್ಳಲಿ? ಅಪ್ಪಾ ! ನಾನು ನನ್ನ ಇಷ್ಟದೈವವನ್ನು ಒಲಿಸಿಕೊಂಡು ಪಡೆದ ಬಲವನ್ನೂ, ರಥವನ್ನೂ ನಿಮಗೆ ಇದುವರೆವಿಗೂ ತೋರಿಸಲಿಲ್ಲ.'' ಈ ರೀತಿ ಜಂಭಕೊಚ್ಚಿಕೊಳ್ಳುವುದರಲ್ಲೇ ಬೆಳಗಾಯಿತು. ಲಂಕೆಯ ನಾಲ್ಕೂ ದ್ವಾರಗಳಲ್ಲಿ ವಾನರರು ಬಂದು ಸೇರಿದರು. ಇತ್ತ ಕಾಲಸಮರಾದ ಪ್ರಳಯ ಭಯಂಕರರಾದ ವಾನರ-ಭಲ್ಲೂಕಗಳು. ಅತ್ತ ಪ್ರಚಂಡ ರಣಧೀರರಾದ ರಾಕ್ಷಸರು ಯುದ್ಧಸನ್ನದ್ಧರಾಗಿದ್ದರು. ಇತ್ತಂಡದ ದಂಡಾಳುಗಳೂ ತಮ್ಮ-ತಮ್ಮ ಗೆಲುವಿಗೆ ವೀರಾವೇಶದಿಂದ ಹೋರಾಡುತ್ತಿದ್ದರು. ಎಲೈ ಗರುಡಾ! ಅಂತಹ ಭೀಕರ ಕದನ ವರ್ಣಿಸಲಸದಳ. (ಚೌ/೧-೬)

**ದೋ – ಮೇಘನಾದ ಮಾಯಾಮಯ ರಥ ಚಢಿ ಗಯಉ ಅಕಾಸ।**
**ಗರ್ಜೆಉ ಅಟ್ಟಹಾಸ ಕರಿ ಭಇ ಕಪಿ ಕಟಕಹಿ ತ್ರಾಸ॥ ೭೨ ॥**

ಮೇಘನಾದನು ತನ್ನ ಇಷ್ಟದೇವತೆಯಿಂದ ಪಡೆದ ಮಾಯಾರಥವನ್ನಡರಿ, ಆಗಸಕ್ಕೆ ಜಿಗಿದ. ಅವನೊಮ್ಮೆ ಭಯಂಕರ ಅಟ್ಟಹಾಸ ಮಾಡಿದನು. ಇದನ್ನು ಕೇಳಿದ ವಾನರಸೇನೆಯಲ್ಲಿ ಭಯವಾವರಿಸಿತು. (ದೋ/೭೨)

ಚೌ – ಸಕ್ತಿ ಸೂಲ ತರವಾರಿ ಕೃಪಾನಾ। ಅಸ್ತ್ರ ಸಸ್ತ್ರ ಕುಲಿಸಾಯುಧ ನಾನಾ॥
ಡಾರಇ ಪರಸು ಪರಿಘ ಪಾಷಾನಾ। ಲಾಗೆಉ ಬೃಷ್ಟಿ ಕರೈ ಬಹು ಬಾನಾ॥ ೧ ॥
ದಸ ದಿಸಿ ರಹೇ ಬಾನ ನಭ ಛಾಈ। ಮಾನಹುಂ ಮಘಾ ಮೇಘ ಝರಿ ಲಾಈ॥
ಧರು ಧರು ಮಾರು ಸುನಿಅ ಧುನಿ ಕಾನಾ। ಜೋ ಮಾರಇ ತೆಹಿ ಕೋಉ ನ ಜಾನಾ॥ ೨ ॥
ಗಹಿ ಗಿರಿ ತರು ಅಕಾಸ ಕಪಿ ಧಾವಹಿಂ। ದೇಖಹಿಂ ತೆಹಿ ನ ದುಖಿತ ಫಿರಿ ಆವಹಿಂ॥
ಅವಘಟ ಘಾಟ ಬಾಟ ಗಿರಿ ಕಂದರ। ಮಾಯಾ ಬಲ ಕೀನ್ಹೆಸಿ ಸರ ಪಂಜರ॥ ೩ ॥
ಜಾಹಿಂ ಕಹಾಂ ಬ್ಯಾಕುಲ ಭಏ ಬಂದರ। ಸುರಪತಿ ಬಂದಿ ಪರೇ ಜನು ಮಂದರ॥
ಮಾರುತಸುತ ಅಂಗದ ನಲ ನೀಲಾ। ಕೀನ್ಹೆಸಿ ಬಿಕಲ ಸಕಲ ಬಲಸೀಲಾ॥ ೪ ॥
ಪುನಿ ಲಛಿಮನ ಸುಗ್ರೀವ ಬಿಭೀಷನ। ಸರನ್ಹಿ ಮಾರಿ ಕೀನ್ಹೆಸಿ ಜರ್ಜರ ತನ॥
ಪುನಿ ರಘುಪತಿ ಸೈಂ ಜೂಝೈ ಲಾಗಾ। ಸರ ಛಾಂಡಇ ಹೋಇ ಲಾಗಹಿಂ ನಾಗಾ॥ ೫ ॥
ಬ್ಯಾಲ ಪಾಸ ಬಸ ಭಏ ಖರಾರೀ। ಸ್ವಬಸ ಅನಂತ ಏಕ ಅಬಿಕಾರೀ॥
ನಟ ಇವ ಕಪಟ ಚರಿತ ಕರ ನಾನಾ। ಸದಾ ಸ್ವತಂತ್ರ ಏಕ ಭಗವಾನಾ॥ ೬ ॥
ರನ ಸೋಭಾ ಲಗಿ ಪ್ರಭುಹಿಂ ಬಂಧಾಯೋ। ನಾಗಪಾಸ ದೇವನ್ಹ ಭಯ ಪಾಯೋ॥ ೭ ॥

ಇಂದ್ರಜಿತುವು ಶಕ್ತಿ, ಶೂಲ, ಖಡ್ಗ, ಕೃಪಾಣ ಮೊದಲಾದ ಅಸ್ತ್ರ-ಶಸ್ತ್ರಗಳನ್ನೂ, ವಜ್ರಾಯುಧಕ್ಕೆ ಸಮಾನವಾದ ಅನೇಕ ಆಯುಧಗಳನ್ನು ಶತ್ರು ಸೈನ್ಯದ ಮೇಲೆ ಪ್ರಯೋಗಿಸಿದನು. ಗಂಡುಕೊಡಲಿ, ಪರಿಘ, ಕಲ್ಲುಗುಂಡಿನ ಮಳೆಕರೆಯತೊಡಗಿದನು. ಬಾಣಗಳ ಸುರಿಮಳೆಯೇ ಸುರಿಸಿದನು. ಆಕಾಶದಲ್ಲಿ ಮಘಾನಕ್ಷತ್ರದ ಮೇಘಗಳು ಜಡಿಮಳೆ ಶುರುಮಾಡಿಬಿಟ್ಟವೋ ಎಂಬಂತೆ ಎತ್ತೆತ್ತಲೂ ಬಾಣಗಳು ಮುಸುಗಿದವು. ಹಿಡಿ-ಹಿಡಿ, ಬಡಿ-ಬಡಿ ಎಂಬ ಕೂಗು ಎಲ್ಲೆಡೆ ಕೇಳಿಬರುತ್ತಿತ್ತು. ಆದರೆ ಇಂದ್ರಜಿತುವಿನ ಮಾಯೆಯಿಂದ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸುತ್ತಿದ್ದ ಅವನು ಮಾತ್ರ ಯಾರ ಕಣ್ಣಿಗೂ ಬೀಳುತ್ತಿರಲಿಲ್ಲ. ಮೇಘನಾದನಿಗೆ ಮಾತ್ರ ಎಲ್ಲರೂ ಕಾಣುತ್ತಿದ್ದರು. ಪರ್ವತಗಳನ್ನು, ಹೆಮ್ಮರಗಳನ್ನು ಎತ್ತಿಕೊಂಡು ವಾನರರು ಆಗಸಕ್ಕೆ ನೆಗೆದರು. ಆದರೆ ಆ ಮಾಯಾವಿಯನ್ನು ಕಾಣದೆ ನಿರಾಶೆಯಿಂದ ಮರಳಿದರು. ಇಂದ್ರಜಿತುವು ತನ್ನ ಮಾಯೆಯಿಂದ ಘಟ್ಟ, ಹಳ್ಳ, ತಗ್ಗು, ತೆವರು, ಹಾದಿ, ಬೀದಿಗಳನ್ನು, ಪರ್ವತ, ಕಂದರಗಳನ್ನು ಶರಪಂಜರವನ್ನಾಗಿ ಮಾರ್ಪಡಿಸಿಬಿಟ್ಟನು. ಆಗ ವಾನರರು ದಿಕ್ಕೆಟ್ಟು ಪರ್ವತಗಳು ಇಂದ್ರನಿಗೆ ಬಂದಿಗಳಾದುವೋ ಎಂಬಂತೆ ಮುಂಗಾಣದೆ ಪರಿತಪಿಸಿದರು. ಮೇಘನಾದು ಪವನನಂದನ ಪಾವಮಾನಿಯನ್ನು, ಅಂಗದ, ನಳ, ನೀಲ ಮೊದಲಾದ ಬಲಶಾಲಿಗಳಾದ ಮಹಾಯೋಧರನ್ನೆಲ್ಲ ಹಣ್ಣುಗಾಯಿ-ನೀರುಗಾಯಿ ಮಾಡಿದನು. ಬಳಿಕ ಲಕ್ಷ್ಮಣ, ಸುಗ್ರೀವ, ವಿಭೀಷಣ ಇವರನ್ನೂ ತನ್ನ ಬಾಣಗಳಿಂದ ಘಾತಿಸಿ, ಅವರ ಶರೀರಗಳನ್ನೂ ಜರ್ಜರಿತವನ್ನಾಗಿಸಿದನು. ಅನಂತರ ಅವನು ಶ್ರೀರಘುನಾಥನೊಂದಿಗೆ ಯುದ್ಧಕ್ಕೆ ತೊಡಗಿದನು. ಅವನು ಎಸೆದ ಬಾಣಗಳೆಲ್ಲ ಸರ್ಪಗಳಾಗಿ ತಾಗುತ್ತಿದ್ದವು. ಸ್ವವಶನೂ, ಅನಂತನೂ, ಅಖಂಡನೂ, ನಿರ್ವಿಕಾರನೂ, ಖರಾರಿಯೂ ಆದ ಶ್ರೀರಾಮನು ಲೀಲೆಯಿಂದ ನಾಗಪಾಶದಲ್ಲಿ ಬದ್ಧನಾದನು. ಶ್ರೀರಾಮಚಂದ್ರನು ಸರ್ವದಾ ಸ್ವತಂತ್ರನೂ, ಅದ್ವಿತೀಯನೂ ಆದ ಭಗವಂತನು. ಅವನು ಓರ್ವ ನಟನಂತೆ ಕಪಟನಾಟಕವಾಡಿದನು. ಆದ್ದರಿಂದ ರಣಶೋಭೆಯನ್ನು ಹೆಚ್ಚಿಸಲೆಂದೇ ಪ್ರಭುವು ತನ್ನನ್ನು ತಾನೇ ನಾಗಪಾಶಕ್ಕೆ ಕಟ್ಟುಬಿದ್ದನು. ಆ ದೃಶ್ಯವನ್ನು ಕಂಡ ದೇವತೆಗಳು ಮಾತ್ರ ಭಾರೀ ಭಯಗೊಂಡರು. (ಚೌ/೧-೭)

**ದೋ – ಗಿರಿಜಾ ಜಾಸು ನಾಮ ಜಪಿ ಮುನಿ ಕಾಟಹಿಂ ಭವ ಪಾಸ।**
**ಸೋ ಕಿ ಬಂಧ ತರ ಆವಇ ಬ್ಯಾಪಕ ಬಿಸ್ವ ನಿವಾಸ ॥ ೭೩ ॥**

ಶಿವನು ಹೇಳುತ್ತಾನೆ – ಎಲೈ ಗಿರಿಜೆ! ಯಾರ ನಾಮವನ್ನು ಜಪಿಸಿ ಮುನಿಗಳು ಭವಪಾಶವನ್ನು ಕಿತ್ತೊಗೆಯುವರೋ, ಅಂತಹ ಸರ್ವವ್ಯಾಪಕನೂ, ಜಗನ್ನಿವಾಸನೂ ಆದ ಪ್ರಭುವಿಗೆ ಎಲ್ಲಾದರೂ ಬಂಧನವಿದೆಯೇ? (ದೋ/೭೩)

**ಚೌ – ಚರಿತ ರಾಮ ಕೇ ಸಗುನ ಭವಾನೀ। ತರ್ಕಿ ನ ಜಾಹಿಂ ಬುದ್ಧಿ ಬಲ ಬಾನೀ॥**
**ಅಸ ಬಿಚಾರಿ ಜೇ ತಗ್ಯ ಬಿರಾಗೀ। ರಾಮಹಿ ಭಜಹಿಂ ತರ್ಕ ಸಬ ತ್ಯಾಗೀ ॥ ೧ ॥**
**ಬ್ಯಾಕುಲ ಕಟಕು ಕೀನ್ಹ ಘನನಾದಾ। ಪುನಿ ಭಾ ಪ್ರಗಟ ಕಹಇ ದುರ್ಬಾದಾ॥**
**ಜಾಮವಂತ ಕಹ ಖಲ ರಹು ಠಾಢಾ। ಸುನಿ ಕರಿ ತಾಹಿ ಕ್ರೋಧ ಅತಿ ಬಾಢಾ ॥ ೨ ॥**
**ಬೂಢ ಜಾನಿ ಸಠ ಛಾಁಡೆಉಁ ತೋಹೀ। ಲಾಗೆಸಿ ಅಧಮ ಪಚಾರೈ ಮೋಹೀ॥**
**ಅಸ ಕಹಿ ತರಲ ತ್ರಿಸೂಲ ಚಲಾಯೋ। ಜಾಮವಂತ ಕರ ಗಹಿ ಸೋಇ ಧಾಯೋ॥ ೩ ॥**
**ಮಾರಿಸಿ ಮೇಘನಾದ ಕೈ ಛಾತೀ। ಪರಾ ಭೂಮಿ ಘುರ್ಮಿತ ಸುರಘಾತೀ॥**
**ಪುನಿ ರಿಸಾನ ಗಹಿ ಚರನ ಫಿರಾಯೋ। ಮಹಿ ಪಛಾರಿ ನಿಜ ಬಲ ದೆಖರಾಯೋ॥ ೪ ॥**
**ಬರ ಪ್ರಸಾದ ಸೋ ಮರಇ ನ ಮಾರಾ। ತಬ ಗಹಿ ಪದ ಲಂಕಾ ಪರ ಡಾರಾ ॥**
**ಇಹಾಁ ದೇವರಿಷಿ ಗರುಡ಼ ಪಠಾಯೋ। ರಾಮ ಸಮೀಪ ಸಪದಿ ಸೋ ಆಯೋ ॥ ೫ ॥**

ಎಲೈ ಭವಾನೀ! ಸಗುಣಸ್ವರೂಪನಾದ ಶ್ರೀರಾಮನ ಲೀಲೆಗಳ ಬಗ್ಗೆ ಬುದ್ಧಿ ಹಾಗೂ ವಾಣಿಯ ಬಲದಿಂದ ತರ್ಕಮಾಡಲಾಗದು. ಈ ಪರಿಯಾಗಿ ಯೋಚಿಸಿ ತತ್ತ್ವಜ್ಞಾನಿಗಳೂ, ವಿರಕ್ತರೂ ತರ್ಕ, ಶಂಕೆಗಳನ್ನು ತೊರೆದು ಶ್ರೀರಾಮನನ್ನು ಭಜಿಸುವರು. ಮೇಘನಾದನು ವಾನರಸೈನ್ಯವನ್ನು ವ್ಯಾಕುಲಗೊಳಿಸಿದನು. ಬಳಿಕ ಅವನು ಪ್ರಕಟನಾಗಿ ದುರ್ವಚನಗಳನ್ನಾಡತೊಡಗಿದನು. ಆಗ ಜಾಂಬವಂತರು – 'ಎಲವೋ ದುಷ್ಟಾ! ತೆಪ್ಪನೆ ಬಾಯಿಮುಚ್ಚಿಕೊಂಡು ನಿಂತಿರು.' ಇದನ್ನು ಕೇಳಿ ಅವನಿಗೆ ಭಾರೀ ಸಿಟ್ಟುಬಂತು. ಎಲೈ ಮೂರ್ಖನೇ! ನೀನು ಮುದಿಗೊರಡು ಎಂದು ತಿಳಿದು ನಾನು ನಿನ್ನನ್ನು ಬಿಟ್ಟುಬಿಟ್ಟಿದ್ದೆ. ಅಧಮಾ! ಈಗ ನೀನು ನನ್ನನ್ನೇ ಮೂದಲಿಸುತ್ತಿರುವೆಯಲ್ಲ! ಎಂದು ಹೇಳುತ್ತಾ ಅವನು ತನ್ನ ಹೊಳೆಯುತ್ತಿರುವ ತ್ರಿಶೂಲವನ್ನು ಎಸೆದ. ಜಾಂಬವಂತರು ಆ ತ್ರಿಶೂಲವನ್ನು ಕೈಯಿಂದ ಹಿಡಿದುಕೊಂಡು ಮೇಘನಾದನ ಮೇಲೆರಗಿ ಅವನ ಎದೆಗೆ ತಿವಿದನು. ದೇವತೆಗಳ ಶತ್ರುವಾದ ಇಂದ್ರಜಿತುವು ತಲೆತಿರುಗಿ ನೆಲಕ್ಕೆ ಧೊಪ್ಪನೆ ಬಿದ್ದನು. ಜಾಂಬವಂತರು ಮತ್ತೆ ರೋಷಗೊಂಡು ಅವನ ಕಾಲುಹಿಡಿದು ಗರ-ಗರನೆ ತಿರುಗಿಸಿ ನೆಲಕ್ಕೆ ಅಪ್ಪಳಿಸಿ ತನ್ನ ಬಲವನ್ನು ಪ್ರದರ್ಶಿಸಿದನು. ಆದರೆ ಇಂದ್ರಜಿತುವು

ಅಪ್ಪಳಿಸಿದರೂ ವರಪ್ರಭಾವದಿಂದ ಸಾಯಲಿಲ್ಲ. ಆಗ ಜಾಂಬವಂತರು ಅವನ ಕಾಲು ಹಿಡಿದು ಎತ್ತಿ ಬೀಸಿ ಲಂಕೆಗೆ ಎಸೆದರು. ಇಷ್ಟರಲ್ಲಿ ದೇವರ್ಷಿ ನಾರದರು ಗರುಡನನ್ನು ರಣಭೂಮಿಗೆ ಕಳಿಸಿದನು. ಅವನು ಕೂಡಲೇ ಶ್ರೀರಾಮನಿದ್ದೆಡೆಗೆ ಬಂದುಮುಟ್ಟಿದನು. (ಚೌ/೧-೫)

**ದೋ – ಖಗಪತಿ ಸಬ ಧರಿ ಖಾಏ ಮಾಯಾ ನಾಗ ಬರೂಥ।**
**ಮಾಯಾ ಬಿಗತ ಭಏ ಸಬ ಹರಷೇ ಬಾನರ ಜೂಥ ॥ ೭೪ (ಕ)॥**
**ಗಹಿ ಗಿರಿ ಪಾದಪ ಉಪಲ ನಖ ಧಾಏ ಕೀಸ ರಿಸಾಇ।**
**ಚಲೇ ತಮೀಚರ ಬಿಕಲತರ ಗಢ ಪರ ಚಢೇ ಪರಾಇ ॥ ೭೪(ಖ)॥**

ಪಕ್ಷಿರಾಜನಾದ ಗರುತ್ಮಂತನು ಮಾಯಾರಚಿತ ಸರ್ಪಗಳ ಸಮೂಹವನ್ನೇ ಹಿಡಿದು-ಹಿಡಿದು ತಿಂದುಹಾಕಿದನು. ಆಗ ವಾನರರೆಲ್ಲರೂ ಮಾಯೆಯಿಂದ ಮುಕ್ತರಾಗಿ ಹರ್ಷಿತರಾದರು. ಪರ್ವತಗಳು, ಮರಗಳು, ಬಂಡೆಗಳು, ನಖಗಳೇ ಆಯುಧಗಳುಳ್ಳ ವಾನರರು ಕ್ರುದ್ಧರಾಗಿ ನಿಶಾಚರರ ಸೇನೆಯ ಮೇಲೆ ಹಾಯ್ದರು. ಅದನ್ನು ಕಂಡ ರಾಕ್ಷಸರು ಹೌಹಾರಿ ಓಡಿಹೋಗಿ ಕೋಟೆಯ ಮೇಲೇರಿದರು. (ದೋ/೭೪ ಕ, ಖ)

**ಚೌ – ಮೇಘನಾದ ಕೈ ಮುರಛಾ ಜಾಗೀ। ಪಿತಹಿ ಬಿಲೋಕಿ ಲಾಜ ಅತಿ ಲಾಗೀ ॥**
**ತುರತ ಗಯಉ ಗಿರಿಬರ ಕಂದರಾ। ಕರೌ ಅಜಯ ಮಖ ಅಸ ಮನ ಧರಾ॥ ೧ ॥**
**ಇಹಾ ಬಿಭೀಷನ ಮಂತ್ರ ಬಿಚಾರಾ। ಸುನಹು ನಾಥ ಬಲ ಅತುಲ ಉದಾರಾ ॥**
**ಮೇಘನಾದ ಮಖ ಕರಇ ಅಪಾವನ। ಖಲ ಮಾಯಾವೀ ದೇವ ಸತಾವನ ॥ ೨ ॥**
**ಜೌ ಪ್ರಭು ಸಿದ್ಧ ಹೋಇ ಸೋ ಪಾಇಹಿ। ನಾಥ ಬೇಗಿ ಪುನಿ ಜೀತಿ ನ ಜಾಇಹಿ ॥**
**ಸುನಿ ರಘುಪತಿ ಅತಿಸಯ ಸುಖ ಮಾನಾ। ಬೋಲೇ ಅಂಗದಾದಿ ಕಪಿ ನಾನಾ ॥ ೩ ॥**
**ಲಛಿಮನ ಸಂಗ ಜಾಹು ಸಬ ಭಾಈ। ಕರಹು ಬಿಧಂಸ ಜಗ್ಯ ಕರ ಜಾಈ ॥**
**ತುಮ್ಹ ಲಛಿಮನ ಮಾರೇಹು ರನ ಓಹೀ। ದೇಖಿ ಸಭಯ ಸುರ ದುಖ ಅತಿ ಮೋಹೀ ॥ ೪ ॥**
**ಮಾರೇಹು ತೇಹಿ ಬಲ ಬುದ್ಧಿ ಉಪಾಈ। ಜೇಹಿ ಛೀಜೈ ನಿಸಿಚರ ಸುನು ಭಾಈ ॥**
**ಜಾಮವಂತ ಸುಗ್ರೀವ ಬಿಭೀಷನ। ಸೇನ ಸಮೇತ ರಹೇಹು ತೀನಿಉ ಜನ ॥ ೫ ॥**
**ಜಬ ರಘುಬೀರ ದೀನ್ಹಿ ಅನುಸಾಸನ। ಕಟಿ ನಿಷಂಗ ಕಸಿ ಸಾಜಿ ಸರಾಸನ ॥**
**ಪ್ರಭು ಪ್ರತಾಪ ಉರ ಧರಿ ರನಧೀರಾ। ಬೋಲೇ ಘನ ಇವ ಗಿರಾ ಗಂಭೀರಾ ॥ ೬ ॥**
**ಜೌ ತೇಹಿ ಆಜು ಬಧೇ ಬಿನು ಆವೌ। ತೌ ರಘುಪತಿ ಸೇವಕ ನ ಕಹಾವೌ ॥**
**ಜೌ ಸತ ಸಂಕರ ಕರಹಿ ಸಹಾಈ। ತದಪಿ ಹತಉ ರಘುಬೀರ ದೊಹಾಈ ॥ ೭ ॥**

ಮೂರ್ಛೆ ತಿಳಿದಾಗ ಮೇಘನಾದನು ತನ್ನ ತಂದೆಯನ್ನು ಕಂಡು ನಾಚಿಕೆಯಿಂದ ತಲೆತಗ್ಗಿಸಿದನು. 'ನಾನು ಅಜೇಯ ಯಜ್ಞವನ್ನು ಮಾಡುವೆನು' ಎಂದು ಸಂಕಲ್ಪಿಸಿ, ಕೂಡಲೇ ಒಂದು ಪರ್ವತಗುಹೆಯನ್ನು ಹೊಕ್ಕನು. ಅತ್ತ ವಿಭೀಷಣನಿಗೆ ಯೋಚನೆಯಾಯಿತು. ಅವನು ಶ್ರೀರಾಮನಿಗೆ ಸಲಹೆ ಇತ್ತನು– ''ಅತುಲಿತ ಬಲಶಾಲಿಯೇ! ಉದಾರಗುಣನಿಧಿಯೇ! ಪ್ರಭೋ! ದೇವತೆಗಳನ್ನು ಕಾಡುವ ದುಷ್ಟನೂ, ಮಾಯಾವಿಯೂ ಆದ ಮೇಘನಾದನು ಅಪವಿತ್ರವಾದ ಯಜ್ಞವೊಂದನ್ನು ಮಾಡುತ್ತಿದ್ದಾನೆ. ಆ ಯಜ್ಞವೇನಾದರೂ ಸಿದ್ಧಿಸಿದರೆ ಮೇಘನಾದನು ಅಜೇಯನಾಗುತ್ತಾನೆ.'' ಈ ಮಾತನ್ನು ಕೇಳಿ ಶ್ರೀರಘುನಾಥನು ತುಂಬಾ ಸಂತುಷ್ಟನಾಗಿ ಅಂಗದಾದಿ ವಾನರಪ್ರಮುಖರನ್ನು ಕರೆದು ಇಂತೆಂದನು – ''ವಾನರವೀರರೇ! ಲಕ್ಷ್ಮಣನೊಂದಿಗೆ ನೀವೆಲ್ಲ ಹೋಗಿ ಇಂದ್ರಜಿತುವಿನ ಯಜ್ಞವನ್ನು ಧ್ವಂಸಮಾಡಿರಿ. ಲಕ್ಷ್ಮಣಾ! ನೀನು ಸಂಗ್ರಾಮದಲ್ಲಿ ಆತನನ್ನು ಸಂಹರಿಸು. ಭಯಭ್ರಾಂತರಾದ ದೇವತೆಗಳನ್ನು ನೋಡಿ ನನಗೆ ತುಂಬಾ ದುಃಖವಾಗುತ್ತಾ ಇದೆ. ತಮ್ಮಾ ! ನೀನು ಬಲ, ಬುದ್ಧಿ, ಉಪಾಯಗಳಿಂದ ಆ ನಿಶಾಚರನನ್ನು ಹೇಗಾದರೂ ಕೊಂದುಬಿಡಬೇಕು. ಜಾಂಬವಂತಾ! ಸುಗ್ರೀವಾ! ವಿಭೀಷಣಾ! ನೀವು ಮೂವರೂ ನಿಮ್ಮ-ನಿಮ್ಮ ಸೇನೆಯೊಂದಿಗೆ ಇವನ ನೆರವಿಗೆ ಹೋಗಿರಿ.'' ಶ್ರೀರಾಮನ ಅಪ್ಪಣೆಯಂತೆ ರಣಧೀರನಾದ ಲಕ್ಷ್ಮಣನು ನಡುವಿಗೆ ಬತ್ತಳಿಕೆಯನ್ನು ಬಿಗಿದುಕೊಂಡು, ಧನುಸ್ಸನ್ನು ಸಜ್ಜುಗೊಳಿಸಿಕೊಂಡು, ಪ್ರಭುವಿನ ಪ್ರತಾಪವನ್ನು ಹೃದಯದಲ್ಲಿ ತಳೆದು, ಮೇಘಗಂಭೀರ ವಾಣಿಯಲ್ಲಿ ಇಂತೆಂದನು – ''ಇಂದು ಆ ದುಷ್ಟನನ್ನು ವಧಿಸದೆ ಹಿಂದಿರುಗಿದರೆ ನಾನು ಶ್ರೀರಘುನಾಥನಿಗೆ ನಿಜವಾದ ಸೇವಕನೆಂದು ಹೇಳಿಸಿಕೊಳ್ಳಲಾರೆ.

ಶ್ರೀರಘುವೀರನ ಮೇಲೆ ಆಣೆಯಿಟ್ಟು ಹೇಳುತ್ತೇನೆ – ಸಾವಿರಾರು ಪ್ರಳಯಾಂತಕ ಶಂಕರರು ಅವನ ನೆರವಿಗೆ ಬಂದರೂ ಮೇಘನಾದನಿಗೆ ನನ್ನ ಕೈಯಿಂದ ಸಾವು ತಪ್ಪದು.'' (ಚೌ/೧-೭)

## ಮೇಘನಾದನ ವಧೆ

**ದೋ – ರಘುಪತಿ ಚರನ ನಾಇ ಸಿರು ಚಲೆಉ ತುರಂತ ಅನಂತ।**
**ಅಂಗದ ನೀಲ ಮಯಂದ ನಲ ಸಂಗ ಸುಭಟ ಹನುಮಂತ॥ ೭೫ ॥**

ಈ ಪ್ರಕಾರ ಪ್ರತಿಜ್ಞೆಮಾಡಿ ಶ್ರೀರಘುವರನ ಚರಣಗಳಿಗೆರಗಿ ಶೇಷಾವತಾರಿಯಾದ ಲಕ್ಷ್ಮಣನು ಕೂಡಲೇ ಹೊರವಂಟ. ಅವನ ಸಂಗಡ ಅಂಗದ, ನಳ, ನೀಲ, ಮಯಂದ, ಹನುಮಂತನೇ ಮೊದಲಾದ ಮಹಾಯೋಧರು ಹೊರಟರು. (ದೋ/೭೫)

**ಚೌ – ಜಾಇ ಕಪಿನ್ಹ ಸೋ ದೇಖಾ ಬೈಸಾ। ಆಹುತಿ ದೇತ ರುಧಿರ ಅರು ಭೈಂಸಾ॥**
**ಕೀನ್ಹ ಕಪಿನ್ಹ ಸಬ ಜಗ್ಯ ಬಿಧಂಸಾ। ಜಬ ನ ಉಠಇ ತಬ ಕರಹಿಂ ಪ್ರಸಂಸಾ॥ ೧ ॥**
**ತದಪಿ ನ ಉಠಇ ಧರೆನ್ಹಿ ಕಚ ಜಾಈ। ಲಾತನ್ಹಿ ಹತಿ ಹತಿ ಚಲೇ ಪರಾಈ॥**
**ಲೈ ತ್ರಿಸೂಲ ಧಾವಾ ಕಪಿ ಭಾಗೇ। ಆಏ ಜಹಂ ರಾಮಾನುಜ ಆಗೇ॥ ೨ ॥**
**ಆವಾ ಪರಮ ಕ್ರೋಧ ಕರ ಮಾರಾ। ಗರ್ಜ ಘೋರ ರವ ಬಾರಹಿಂ ಬಾರಾ॥**
**ಕೋಪಿ ಮರುತಸುತ ಅಂಗದ ಧಾಏ। ಹತಿ ತ್ರಿಸೂಲ ಉರ ಧರನಿ ಗಿರಾಏ॥ ೩ ॥**
**ಪ್ರಭು ಕಹಂ ಛಾಂಡೆಸಿ ಸೂಲ ಪ್ರಚಂಡಾ। ಸರ ಹತಿ ಕೃತ ಅನಂತ ಜುಗ ಖಂಡಾ॥**
**ಉಠಿ ಬಹೋರಿ ಮಾರುತಿ ಜುಬರಾಜಾ। ಹತಹಿಂ ಕೋಪಿ ತೇಹಿ ಘಾಉ ನ ಬಾಜಾ॥ ೪ ॥**
**ಫಿರೇ ಬೀರ ರಿಪು ಮರಇ ನ ಮಾರಾ। ತಬ ಧಾವಾ ಕರಿ ಘೋರ ಚಿಕಾರಾ॥**
**ಆವತ ದೇಖಿ ಕ್ರುದ್ಧ ಜನು ಕಾಲಾ। ಲಛಿಮನ ಛಾಡೇ ಬಿಸಿಖ ಕರಾಲಾ॥ ೫ ॥**
**ದೇಖೆಸಿ ಆವತ ಪಬಿ ಸಮ ಬಾನಾ। ತುರತ ಭಯಉ ಖಲ ಅಂತರಧಾನಾ॥**
**ಬಿಬಿಧ ಬೇಷ ಧರಿ ಕರಇ ಲರಾಈ। ಕಬಹುಂಕ ಪ್ರಗಟ ಕಬಹುಂ ದುರಿ ಜಾಈ॥ ೬ ॥**
**ದೇಖಿ ಅಜಯ ರಿಪು ಡರಪೇ ಕೀಸಾ। ಪರಮ ಕ್ರುದ್ಧ ತಬ ಭಯಉ ಅಹೀಸಾ॥**
**ಲಛಿಮನ ಮನ ಅಸ ಮಂತ್ರ ದೃಢಾವಾ। ಏಹಿ ಪಾಪಿಹಿ ಮೈಂ ಬಹುತ ಖೆಲಾವಾ॥ ೭ ॥**
**ಸುಮಿರಿ ಕೋಸಲಾಧೀಸ ಪ್ರತಾಪಾ। ಸರ ಸಂಧಾನ ಕೀನ್ಹ ಕರಿ ದಾಪಾ॥**
**ಛಾಡಾ ಬಾನ ಮಾಝ ಉರ ಲಾಗಾ। ಮರತೀ ಬಾರ ಕಪಟು ಸಬ ತ್ಯಾಗಾ॥ ೮ ॥**

ವಾನರರು ಹೋಗಿ ನೋಡಿದಾಗ ಮೇಘನಾದನು ಕುಳಿತುಕೊಂಡು ರಕ್ತ ಹಾಗೂ ಮಹಿಷಗಳನ್ನು ಆಹುತಿಯಾಗಿ ಕೊಡುತ್ತಿದ್ದನು. ವಾನರರು ಅವನ ಹೋಮವನ್ನು ಧ್ವಂಸಗೊಳಿಸಿದರು. ಆದರೂ ಅವನು ಯಜ್ಞವೇದಿಕೆಯಿಂದ ಏಳಲಿಲ್ಲ. ಆಗ ವಾನರರು ಅವನನ್ನು ವ್ಯಂಗವಾಗಿ ಹೊಗಳತೊಡಗಿದರು. ಇಷ್ಟಾದರೂ ಅವನು ಏಳಲೇ ಇಲ್ಲ. ಆಗ ಅವರು ಅವನ ಜುಟ್ಟು ಹಿಡಿದುಕೊಂಡು, ಕಾಲಿಂದ ಅವನನ್ನು ಒದ್ದು ಓಡಿಹೋದರು. ಅವನು ಎದ್ದು ತ್ರಿಶೂಲಪಾಣಿಯಾಗಿ ಅವರತ್ತ ಹಾಯ್ದನು. ವಾನರರು ಅಲ್ಲಿಂದ ಕಾಲ್ತೆಗೆದು ಲಕ್ಷ್ಮಣನಿದ್ದಲ್ಲಿಗೆ ಬಂದರು. ಇಂದ್ರಜಿತುವು ಹೆಚ್ಚಾದ ಕ್ರೋಧಾವೇಶದಿಂದ ಭಯಂಕರವಾಗಿ ಗರ್ಜಿಸಿದನು. ಪವನಸುತನು, ಅಂಗದನು ಕ್ರೋಧದಿಂದ ಅವನನ್ನು ಎದುರಿಸಿದರು. ಅವನು ತ್ರಿಶೂಲದಿಂದ ಅವರ ಎದೆಗೆ ತಿವಿದು ಇಬ್ಬರನ್ನೂ ನೆಲಕ್ಕುರುಳಿದನು. ಅನಂತರ ಅವನು ತ್ರಿಶೂಲವನ್ನು ಲಕ್ಷ್ಮಣನ ಮೇಲೆ ಪ್ರಯೋಗಿಸಿದನು. ಅನಂತನಾದ ಲಕ್ಷ್ಮಣನು ತ್ರಿಶೂಲವನ್ನು ತನ್ನ ಬಾಣದಿಂದ ಹೊಡೆದು ಎರಡು ತುಂಡುಗಳಾಗಿಸಿದನು. ಹನುಮಂತ, ಅಂಗದ ಇಬ್ಬರೂ ಕ್ರುದ್ಧರಾಗಿ ಅವನನ್ನು ಹೊಡೆಯತೊಡಗಿದರು. ಆದರೆ ಅವನಿಗೆ ಯಾವ ಏಟೂ ಆಗಲಿಲ್ಲ. ಇಂದ್ರಜಿತುವು ಯಾವ ವಿಧದಿಂದಲೂ ನಮ್ಮ ಕೈಯಲ್ಲಿ ಸಾಯನು ಎಂದರಿತ ಆ ವಾನರವೀರರಿಬ್ಬರೂ ಮರಳಿದರು. ಆಗ ಅವನು ಆನೆಯಂತೆ ಘೋರವಾಗಿ ಘೀಳಿಡುತ್ತಾ ಲಕ್ಷ್ಮಣನತ್ತ ಏರಿಹೋದನು. ಕ್ರುದ್ಧಕಾಲನಂತೆ ಬರುತ್ತಿರುವ ಆತನನ್ನು ಕಂಡು ಲಕ್ಷ್ಮಣನು ಅವನ ಮೇಲೆ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿದನು. ವಜ್ರತುಲ್ಯವಾದ ಆ ಬಾಣಗಳು ಬರುತ್ತಿರುವುದನ್ನು ಕಂಡು ಅವನು ಕೂಡಲೇ ಅಂತರ್ಧಾನನಾದನು. ಅನಂತರ ವಿಧವಿಧವಾದ ಮಾಯಾರೂಪಗಳನ್ನು ತಾಳಿ ಯುದ್ಧಮಾಡತೊಡಗಿದನು. ಅವನು ಒಮ್ಮೆ ಕಾಣಿಸಿಕೊಂಡರೆ ಮತ್ತೊಮ್ಮೆ ಕಣ್ಮರೆಯಾಗುತ್ತಿದ್ದನು. ಶತ್ರುವು ಸೋಲದುದನ್ನು ಕಂಡು ವಾನರರು ಹೆದರಿ ಅಂಜಿಹೋದರು. ಆಗ ಫಣೀಶ್ವರ ಲಕ್ಷ್ಮಣನು

ಪರಮಕ್ರುದ್ಧನಾದನು. 'ಈ ಪಾಪಿಗೆ ಸಾಕಷ್ಟು ಆಟವಾಡಿಸಿದ್ದೇನೆ. ಇನ್ನು ಹೆಚ್ಚು ಆಡಿಸುವುದು ಒಳಿತಲ್ಲ. ಈಗಲಾದರೋ ಇವನನ್ನು ಮುಗಿಸಿಯೇ ಬಿಡಬೇಕು' ಎಂದು ಮನಸ್ಸಿನಲ್ಲೇ ಅಂದುಕೊಂಡನು. ಕೋಸಲೇಂದ್ರ ಶ್ರೀರಾಮನ ಪ್ರತಾಪವನ್ನು ನೆನೆದು ಲಕ್ಷ್ಮಣನು ವೀರೋಚಿತ ದರ್ಪದಿಂದ ಶರಸಂಧಾನ ಮಾಡಿದನು. ಬಾಣ ಬಿಟ್ಟಕೂಡಲೇ ಅದು ಮೇಘನಾದನ ಎದೆಯ ನಡುವೆ ನಾಟಿತು. ಸಾಯುವಾಗ ಅವನು ತನ್ನ ಎಲ್ಲ ಕಪಟವನ್ನು ತ್ಯಜಿಸಿದನು. (ಚೌ/೧-೮)

**ದೋ – ರಾಮಾನುಜ ಕಹँ ರಾಮು ಕಹँ ಅಸ ಕಹಿ ಛಾँಡೆಸಿ ಪ್ರಾನ।**
**ಧನ್ಯ ಧನ್ಯ ತವ ಜನನೀ ಕಹ ಅಂಗದ ಹನುಮಾನ ॥ ೭೬ ॥**

ರಾಮನ ತಮ್ಮ ಲಕ್ಷ್ಮಣನೆಲ್ಲಿ ? ರಾಮನೆಲ್ಲಿ ? ಎಂದು ಹೇಳುತ್ತಾ ಅವನು ಅಸುನೀಗಿದನು. ಅಂಗದ, ಹನುಮಂತರು ಉದ್ಗಾರ ತೆಗೆದರು – ''ನಿನ್ನನ್ನು ಹಡೆದ ತಾಯಿ ಧನ್ಯ! ಧನ್ಯ!! ನೀನು ಲಕ್ಷ್ಮಣನ ಕೈಯಲ್ಲಿ ಮಡಿದೆ. ಸಾಯುವಾಗ ರಾಮ-ಲಕ್ಷ್ಮಣರ ನಾಮಗಳನ್ನು ಸ್ಮರಿಸಿದೆ.'' (ದೋ/೭೬)

**ಚೌ – ಬಿನು ಪ್ರಯಾಸ ಹನುಮಾನ ಉಠಾಯೋ। ಲಂಕಾ ದ್ವಾರ ರಾಖಿ ಪುನಿ ಆಯೋ ॥**
**ತಾಸು ಮರನ ಸುನಿ ಸುರ ಗಂಧರ್ಬಾ। ಚಢಿ ಬಿಮಾನ ಆಏ ನಭ ಸರ್ಬಾ ॥ ೧ ॥**
**ಬರಷಿ ಸುಮನ ದುಂದುಭೀಂ ಬಜಾವಹಿಂ। ಶ್ರೀರಘುನಾಥ ಬಿಮಲ ಜಸು ಗಾವಹಿಂ ॥**
**ಜಯ ಅನಂತ ಜಯ ಜಗದಾಧಾರಾ। ತುಮ್ಹ ಪ್ರಭು ಸಬ ದೇವನ್ಹಿ ನಿಸ್ತಾರಾ ॥ ೨ ॥**
**ಅಸ್ತುತಿ ಕರಿ ಸುರ ಸಿದ್ಧ ಸಿಧಾಏ। ಲಛಿಮನ ಕೃಪಾಸಿಂಧು ಪಹಿಂ ಆಏ ॥**
**ಸುತ ಬಧ ಸುನಾ ದಸಾನನ ಜಬಹೀಂ। ಮುರುಛಿತ ಭಯಉ ಪರೇಉ ಮಹಿ ತಬಹೀಂ ॥ ೩ ॥**
**ಮಂದೋದರೀ ರುದನ ಕರ ಭಾರೀ। ಉರ ತಾಡನ ಬಹು ಭಾँತಿ ಪುಕಾರೀ।**
**ನಗರ ಲೋಗ ಸಬ ಬ್ಯಾಕುಲ ಸೋಚಾ। ಸಕಲ ಕಹಹಿಂ ದಸಕಂಧರ ಪೋಚಾ ॥ ೪ ॥**

ಹನುಮಂತನು ಮೇಘನಾದನ ಕಳೇಬರವನ್ನು ಅನಾಯಾಸವಾಗಿ ಎತ್ತಿಕೊಂಡು ಹೋಗಿ ಲಂಕೆಯ ದ್ವಾರದಲ್ಲಿರಿಸಿ ಬಂದನು. ಇಂದ್ರಜಿತುವಿನ ಸಾವಿನ ಸುದ್ದಿ ಕೇಳಿ ದೇವತೆಗಳು, ಗಂಧರ್ವರೇ ಮೊದಲಾದವರು ವಿಮಾನಗಳನ್ನು ಏರಿ ಆಗಸದಲ್ಲಿ ಬಂದು ನಿಂತರು. ಅವರು ದುಂದುಭಿ ಧ್ವನಿಗೈದು, ಹೂಮಳೆಯನ್ನು ಸುರಿಸಿದರು. ಶ್ರೀರಘುನಾಥನ ವಿಮಲ ಕೀರ್ತಿಯನ್ನು ಕೊಂಡಾಡಿದರು. ''ಓ ಅನಂತಾ! ನಿನಗೆ ಜಯವಾಗಲೀ, ಓ ಜಗದಾಧಾರಾ! ನಿನಗೆ ಜಯವು'' ಎಂದು ಜಯಕಾರ ಮಾಡಿದರು. ಹೇ ಪ್ರಭೋ! ನೀನು ಮಹಾವಿಪತ್ತಿನಿಂದ ದೇವತೆಗಳನ್ನು ಕಾಪಾಡಿದೆ'' ಎಂದು ದೇವತೆಗಳು, ಸಿದ್ಧರು ಮೊದಲಾದವರು ಸ್ತುತಿಸಿ ಹೊರಟುಹೋದರು. ಬಳಿಕ ಲಕ್ಷ್ಮಣನು ಕೃಪಾಸಮುದ್ರನಾದ ಶ್ರೀರಾಮನ ಬಳಿಗೆ ಬಂದನು. ರಾವಣನು ಪುತ್ರನ ಮೃತ್ಯುವಿನ ವಾರ್ತೆಯನ್ನು ಕೇಳುತ್ತಲೇ ಮೂರ್ಛಿತನಾಗಿ ನೆಲಕ್ಕುರುಳಿದನು. ಮಂಡೋದರಿಯು ಎದೆ ಬಡಿದುಕೊಂಡು ಅನೇಕವಿಧವಾಗಿ ಮಗನ ಹೆಸರುಹೇಳಿ ಕೂಗುತ್ತಾ ಪ್ರಲಾಪಿಸತೊಡಗಿದಳು. ಲಂಕಾನಿವಾಸಿಗಳೆಲ್ಲರೂ ಅಯ್ಯೋ! ಪಾಪ ಎಂದು ಶೋಕಾಕುಲರಾಗಿ ರಾವಣನನ್ನು ನೀಚನೆಂದು ಹಳಿಯತೊಡಗಿದರು. (ಚೌ/೧-೪)

**ದೋ – ತಬ ದಸಕಂಠ ಬಿಬಿಧಿ ಬಿಧಿ ಸಮುಝಾಈं ಸಬ ನಾರಿ।**
**ನಸ್ವರ ರೂಪ ಜಗತ ಸಬ ದೇಖಹು ಹೃದಯँ ಬಿಚಾರಿ ॥ ೭೭ ॥**

ಆಗ ದಶಕಂಠನಾದ ರಾವಣನು ಮಹಿಳೆಯರೆಲ್ಲರನ್ನು ಕರೆದು ಸಮಾಧಾನಪಡಿಸಿದನು. ಈ ಸಮಸ್ತ ದೃಶ್ಯಗಳು ಜಗತ್ತಿನ ರೂಪಗಳು ನಶ್ವರವೇ. ಯಾವುದೂ ಶಾಶ್ವತವಲ್ಲ. ಇದನ್ನು ಗ್ರಹಿಸಿ ಧೈರ್ಯತಾಳಿರಿ. (ದೋ/೭೭)

**ಚೌ – ತಿನ್ಹಹಿ ಗ್ಯಾನ ಉಪದೇಸಾ ರಾವನ। ಆಪುನ ಮಂದ ಕಥಾ ಸುಭ ಪಾವನ ॥**
**ಪರ ಉಪದೇಸ ಕುಸಲ ಬಹುತೇರೇ। ಜೇ ಆಚರಹಿ ತೆ ನರ ನ ಘನೇರೇ ॥ ೧ ॥**
**ನಿಸಾ ಸಿರಾನಿ ಭಯಉ ಭಿನುಸಾರಾ। ಲಗೇ ಭಾಲು ಕಪಿ ಚಾರಿಹುँ ದ್ವಾರಾ ॥**
**ಸುಭಟ ಬೊಲಾಇ ದಸಾನನ ಬೋಲಾ। ರನ ಸನ್ಮುಖ ಜಾ ಕರ ಮನ ಡೋಲಾ ॥ ೨ ॥**
**ಸೋ ಅಬಹೀಂ ಬರು ಜಾಉ ಪರಾಈ। ಸಂಜುಗ ಬಿಮುಖ ಭಏँ ನ ಭಲಾಈ ॥**
**ನಿಜ ಭುಜ ಬಲ ಮೈಂ ಬಯರು ಬಢಾವಾ। ದೇಹಉँ ಉತರು ಜೊ ರಿಪು ಚಢಿ ಆವಾ ॥ ೩ ॥**

**ಅಸ ಕಹಿ ಮರುತ ಬೇಗ ರಥ ಸಾಜಾ। ಬಾಜೇ ಸಕಲ ಜುಝಾಊ ಬಾಜಾ॥**
**ಚಲೇ ಬೀರ ಸಬ ಅತುಲಿತ ಬಲೀ। ಜನು ಕಜ್ಜಲ ಕೈ ಆಁಧೀ ಚಲೀ॥೪॥**
**ಅಸಗುನ ಅಮಿತ ಹೋಹಿಂ ತೆಹಿ ಕಾಲಾ। ಗನಇ ನ ಭುಜ ಬಲ ಗರ್ಬ ಬಿಸಾಲಾ॥೫॥**

ರಾವಣನು ಅವರಿಗೆ ಜ್ಞಾನೋಪದೇಶ ಮಾಡಿದನು. ಅವನು ಸ್ವತಃ ನೀಚನು, ಆದರೆ ಅವನ ಉಪದೇಶ ಮಾತ್ರ ಹಿತಮಾಡುವಂತಹುದು ಮತ್ತು ಪವಿತ್ರವಾಗಿಯೇ ಇತ್ತು. ಜಗತ್ತಿನಲ್ಲಿ ಬಹುಜನರು ಪರೋಪದೇಶ ಕುಶಲರು. ಆದರೆ ನುಡಿದಂತೆ ನಡೆಯುವ ಮಂದಿ ವಿರಳರೇ ಆಗಿದ್ದಾರೆ. ಇರುಳು ಉರುಳಿತು. ಬೆಳಕು ಹರಿಯಿತು. ಭಲ್ಲೂಕ-ವಾನರರು ಪುನಃ ಲಂಕೆಯ ನಾಲ್ಕೂ ಬಾಗಿಲಿಗೆ ಲಗ್ಗೆ ಇಟ್ಟರು. ದಶಮುಖನು ಕ್ರುದ್ಧನಾಗಿ ತನ್ನ ವೀರಯೋಧರನ್ನು ಕರೆದು ಇಂತೆಂದನು – ''ಯುದ್ಧದಲ್ಲಿ ಶತ್ರುವನ್ನು ಕಂಡು ಮನಸ್ಸಿನಲ್ಲಿ ಭಯಗೊಂಡು ತತ್ತರಿಸುವವರು ಈಗಲೇ ಓಡಿಹೋಗಿರಿ. ರಣಾಂಗಣಕ್ಕೆ ಹೋಗಿ ಬೆನ್ನು ತೋರುವುದು ಒಳಿತಲ್ಲ. ನಾನು ನನ್ನ ಭುಜಬಲವನ್ನು ನಂಬಿ ವೈರವನ್ನು ಬೆಳೆಸಿಕೊಂಡೆ. ನಮ್ಮ ಮೇಲೆ ದಂಡೆತ್ತಿ ಬಂದಿರುವ ಶತ್ರುವಿಗೆ ನಾನೇ ಉತ್ತರ ಕೊಡುತ್ತೇನೆ.'' ಹೀಗೆ ಹೇಳಿ ಅವನು ವಾಯುವೇಗದಲ್ಲಿ ಚಲಿಸುವ ರಥವನ್ನು ಸಜ್ಜುಗೊಳಿಸಿದನು. ರಣವಾದ್ಯಗಳು ಭೋರ್ಗರೆದವು. ಅತುಲ ಬಲಶಾಲಿಗಳಾದ ನಿಶಾಚರ ವೀರರು ಕಾಡಿಗೆಯ ಚಂಡಮಾರುತದಂತೆ ಭರದಿಂದ ಸಾಗಿದರು. ಆಗ ಅವನಿಗೆ ಅಸಂಖ್ಯ ಅಪಶಕುನಗಳಾದವು. ಆದರೆ ತನ್ನ ಭುಜಬಲದ ಹೆಮ್ಮೆಯಿಂದ ರಾವಣನು ಅವನ್ನು ಪರಿಗಣಿಸಲಿಲ್ಲ. (ಚೌ/೧-೫)

**ಛಂ – ಅತಿ ಗರ್ಬ ಗನಇ ನ ಸಗುನ ಅಸಗುನ ಸ್ರವಹಿಂ ಆಯುಧ ಹಾಥ ತೇ।**
**ಭಟ ಗಿರತ ರಥ ತೇ ಬಾಜಿ ಗಜ ಚಿಕ್ಕರತ ಭಾಜಹಿಂ ಸಾಥ ತೇ॥**
**ಗೋಮಾಯ ಗೀಧ ಕರಾಲ ಖರ ರವ ಸ್ವಾನ ಬೋಲಹಿಂ ಅತಿ ಘನೇ।**
**ಜನು ಕಾಲದೂತ ಉಲೂಕ ಬೋಲಹಿಂ ಬಚನ ಪರಮ ಭಯಾವನೇ॥**

ಅತ್ಯಂತ ಗರ್ವದ ಕಾರಣ ಅವನು ಶಕುನ-ಅಪಶಕುನಗಳನ್ನು ಎಣಿಸಲೇ ಇಲ್ಲ. ಕೈಯಿಂದ ಆಯುಧಗಳು ಜಾರುತ್ತಿದ್ದವು. ಯೋಧರು ರಥದಿಂದ ಕೆಳಕ್ಕುರುಳುತ್ತಿದ್ದರು. ಕುದುರೆಗಳು ಕೆನೆಯುತ್ತಾ, ಆನೆಗಳು ಘೀಳಿಡುತ್ತಾ ಯುದ್ಧಭೂಮಿಯನ್ನು ಬಿಟ್ಟು ಓಡಿಹೋಗುತ್ತಿದ್ದವು. ಗುಳ್ಳೆನರಿ, ಹದ್ದು, ಕಾಗೆ, ಕತ್ತೆಗಳು ಕರ್ಕಶವಾಗಿ ಕೂಗಿಕೊಳ್ಳುತ್ತಿದವು. ನಾಯಿಗಳ ಹಿಂಡು ನಿಲ್ಲಿಸದೆ ಬೊಗಳುತ್ತಿತ್ತು. ಗೂಗೆಗಳು ಕಾಲನ ದೂತರೋ ಎಂಬಂತೆ ಅತ್ಯಂತ ಭಯಾನಕ ಶಬ್ದ ಮಾಡುತ್ತಿದ್ದವು. ಭೀಕರವಾದ ಈ ಅಪಶಕುನಗಳೆಲ್ಲವೂ ಮೃತ್ಯುವಿನ ಸಂದೇಶ ಸೂಚಿಸುವಂತಿತ್ತು. (ಛಂದ)

**ದೋ – ತಾಹಿ ಕಿ ಸಂಪತಿ ಸಗುನ ಸುಭ ಸಪನೆಹುँ ಮನ ಬಿಶ್ರಾಮ।**
**ಭೂತ ದ್ರೋಹ ರತ ಮೋಹಬಸ ರಾಮ ಬಿಮುಖ ರತಿ ಕಾಮ॥೭೮॥**

ಜೀವದ್ರೋಹಪರರೂ, ಮೋಹವಶರೂ, ಶ್ರೀರಾಮನಿಗೆ ವಿಮುಖರಾದವರೂ, ಕಾಮಾಸಕ್ತರೂ ಆದವರಿಗೆ ಕನಸು ಮನಸ್ಸಿನಲ್ಲಾದರೂ ಸಂಪತ್ತು ದೊರೆಯುವುದೇ? ಶುಭಶಕುನಗಳಾಗುವವೇ? ಶಾಂತಿ ದೊರೆಯುವುದೇ? (ದೋ/೭೮)

## ರಾವಣನು ವಾನರರನ್ನು ಇದಿರಿಸಿದ್ದು

**ಚೌ – ಚಲೆಉ ನಿಸಾಚರ ಕಟಕು ಅಪಾರಾ। ಚತುರಂಗಿನೀ ಅನೀ ಬಹು ಧಾರಾ॥**
**ಬಿಬಿಧಿ ಭಾँತಿ ಬಾಹನ ರಥ ಜಾನಾ। ಬಿಪುಲ ಬರನ ಪತಾಕ ಧ್ವಜ ನಾನಾ॥೧॥**
**ಚಲೇ ಮತ್ತ ಗಜ ಜೂಥ ಘನೇರೇ। ಪ್ರಾಬಿಟ ಜಲದ ಮರುತ ಜನು ಪ್ರೇರೇ॥**
**ಬರನ ಬರನ ಬಿರದೈತ ನಿಕಾಯಾ। ಸಮರ ಸೂರ ಜಾನಹಿಂ ಬಹು ಮಾಯಾ॥೨॥**
**ಅತಿ ಬಿಚಿತ್ರ ಬಾಹಿನೀ ಬಿರಾಜೀ। ಬೀರ ಬಸಂತ ಸೇನ ಜನು ಸಾಜೀ॥**
**ಚಲತ ಕಟಕ ದಿಗಸಿಂಧುರ ಡಗಹೀಂ। ಛುಭಿತ ಪಯೋಧಿ ಕುಧರ ಡಗಮಗಹೀಂ॥೩॥**
**ಉಠೀ ರೇನು ರಬಿ ಗಯಉ ಛಪಾಈ। ಮರುತ ಥಕಿತ ಬಸುಧಾ ಅಕುಲಾಈ॥**
**ಪನವ ನಿಸಾನ ಘೋರ ರವ ಬಾಜಹಿಂ। ಪ್ರಲಯ ಸಮಯ ಕೇ ಘನ ಜನು ಗಾಜಹಿಂ॥೪॥**
**ಭೇರಿ ನಫೀರಿ ಬಾಜ ಸಹನಾಈ। ಮಾರೂ ರಾಗ ಸುಭಟ ಸುಖದಾಈ॥**
**ಕೇಹರಿ ನಾದ ಬೀರ ಸಬ ಕರಹೀಂ। ನಿಜ ನಿಜ ಬಲ ಪೌರುಷ ಉಚ್ಚರಹೀಂ॥೫॥**

**ಕಹಇ ದಸಾನನ ಸುನಹು ಸುಭಟ್ಟಾ। ಮರ್ದಹು ಭಾಲು ಕಪಿನ್ಹ ಕೇ ಠಟ್ಟಾ॥**
**ಹೌ ಮಾರಿಹಉ ಭೂಪ ದ್ವೌ ಭಾಈ। ಅಸ ಕಹಿ ಸನ್ಮುಖ ಫೌಜ ರೆಂಗಾಈ॥ ೬॥**
**ಯಹ ಸುಧಿ ಸಕಲ ಕಪಿನ್ಹ ಜಬ ಪಾಈ। ಧಾಏ ಕರಿ ರಘುಬೀರ ದೋಹಾಈ॥ ೭॥**

ಅಪಾರವಾದ ನಿಶಾಚರರ ಸೇನೆ ಮುಂದಕ್ಕೆ ಸಾಗಿತು. ಆ ಚತುರಂಗ ಚಮುವಿನಲ್ಲಿ ಅನೇಕ ತುಕಡಿಗಳು – ತಂಡಗಳು ಇದ್ದವು. ಅನೇಕ ವಿಧವಾದ ವಾಹನಗಳೂ, ರಥಗಳೂ, ವಿಮಾನಗಳೂ, ರಂಗು-ರಂಗಿನ ಧ್ವಜಪತಾಕೆಗಳಿದ್ದವು. ಮದಭರಿತ ಆನೆಗಳ ಅನೇಕ ಹಿಂಡುಗಳು ಪವನಪ್ರೇರಿತ ವರ್ಷಾಕಾಲದ ಮೇಘಗಳಂತೆ ಮುಂದೆ ಸಾಗುತ್ತಿದ್ದವು. ವೀರರು ಚಿತ್ರ-ವಿಚಿತ್ರವಾದ ಉಡುಪನ್ನು ಧರಿಸಿದ್ದರು. ಅವರೆಲ್ಲರೂ ರಣವಿದ್ಯಾಕುಶಲರೂ, ಮಾಯಾವಿಗಳೂ ಆಗಿದ್ದರು. ಅತ್ಯಂತ ವಿಚಿತ್ರವಾದ ಆ ಸೇನೆಯು ವೀರವಸಂತನು ತನ್ನ ಪಡೆಯನ್ನು ಸಜ್ಜುಗೊಳಿಸಿದನೋ ಎಂಬಂತಿತ್ತು. ಆ ಸೈನ್ಯದ ಪಥಸಂಚಲನೆಯಿಂದ ದಿಗ್ಗಜಗಳು ತೂರಾಡಿದವು. ಸಮುದ್ರವು ಅಲ್ಲೋಲ ಕಲ್ಲೋಲವಾಯಿತು. ಪರ್ವತಗಳು ಕಂಪಿಸಿದವು. ಸೇನೆಯು ನಡೆಯುವಾಗ ಎದ್ದ ಧೂಳು ಸೂರ್ಯನನ್ನು ಮುಸುಕಿಬಿಟ್ಟಿತು ಪವನ ಚಲನೆ ನಿಂತುಹೋಯಿತು. ಭೂಮಿ ತಲ್ಲಣಿಸಿತು. ಪ್ರಳಯಕಾಲದ ಮೇಘಗಳು ಗರ್ಜಿಸುವಂತೆ ಡೋಲು, ನಗಾರಿಗಳು ಭಯಂಕರವಾಗಿ ಮೊಳಗಿದವು. ಭೇರಿ, ಕೊಂಬು, ಕಹಳೆ ಮತ್ತು ನಾಗಸ್ವರಗಳು ಯೋಧರ ಉತ್ಸಾಹವನ್ನು ಇಮ್ಮಡಿಗೊಳಿಸುವಂತಹ 'ಕದನ ಕುತೂಹಲ' ರಾಗವನ್ನು ಆಲಾಪಿಸುತ್ತಿವೆ. ವೀರರೆಲ್ಲರೂ ಸಿಂಹನಾದವನ್ನು ಮಾಡುತ್ತಾ ತಮ್ಮ-ತಮ್ಮ ಬಲಪರಾಕ್ರಮಗಳನ್ನು ಪ್ರಕಟಿಸುತ್ತಿದ್ದರು. ಆಗ ದಶಕಂಠನು ತನ್ನ ಸೇನೆಯನ್ನು ಸಂಬೋಧಿಸಿ – ''ಎಲೈ ಉತ್ತಮ ಯೋಧರುಗಳಿರಾ! ಕೇಳಿ. ನೀವು ಈ ಕಪಿ-ಕರಡಿಗಳ ಪಡೆಯನ್ನು ಹೊಸಕಿ ಹಾಕಿಬಿಡಿ. ನಾನು ಆ ಇಬ್ಬರು ರಾಜಕುಮಾರರನ್ನೂ ಬಲಿ ತೆಗೆದುಕೊಳ್ಳುತ್ತೇನೆ ಎಂದು ಹೇಳಿ ತನ್ನ ಸೈನ್ಯವನ್ನು ಮುಂದಕ್ಕೆ ನಡೆಸಿದನು. ಈ ವಾರ್ತೆಯನ್ನು ಕೇಳುತ್ತಲೇ ವಾನರರು 'ಶ್ರೀರಾಮನಿಗೆ ಜಯವಾಗಲಿ, ಜಯವಾಗಲಿ' ಎಂದೆನ್ನುತ್ತಾ ರಣರಂಗಕ್ಕೆ ಹಾರಿದರು. (ಚೌ/೧-೭)

**ಛಂ – ಧಾಏ ಬಿಸಾಲ ಕರಾಲ ಮರ್ಕಟ ಭಾಲು ಕಾಲ ಸಮಾನ ತೇ।**
**ಮಾನಹು ಸಪಚ್ಛ ಉಡಾಹಿಂ ಭೂಧರ ಬೃಂದ ನಾನಾ ಬಾನ ತೇ॥**
**ನಖ ದಸನ ಸೈಲ ಮಹಾದ್ರುಮಾಯುಧ ಸಬಲ ಸಂಕ ನ ಮಾನಹೀಂ।**
**ಜಯ ರಾಮ ರಾವನ ಮತ್ತ ಗಜ ಮೃಗರಾಜ ಸುಜಸು ಬಖಾನಹೀಂ॥**

ಇತ್ತ ವಿಶಾಲಕಾಯರೂ, ಕಾಲಸನ್ನಿಭರೂ ಅನೇಕ ಬಣ್ಣಗಳಿರುವವರೂ ಆದ ಕರಾಳ ಭಲ್ಲೂಕ-ವಾನರರು ರೆಕ್ಕೆಯಿರುವ ಪರ್ವತ ಸಮೂಹವೇ ಹಾರಿಹೋಗುತ್ತಿದೆಯೋ ಎಂಬಂತೆ ಓಡಿದರು. ನಖ, ದಂತ, ಪರ್ವತ, ಹೆಮ್ಮರ ಇವುಗಳೇ ಅವರ ಆಯುಧಗಳು. ಅವರು ಭಾರಿ ಬಲಾಢ್ಯರೂ ನಿರ್ಭಯರೂ ಛಲದಂಕಮಲ್ಲರೂ ಆಗಿದ್ದರು. ರಾವಣನೆಂಬ ಮತ್ತ ಗಜಕ್ಕೆ ಸಿಂಹಸದೃಶರಾಗಿದ್ದ ಅವರು ಶ್ರೀರಾಮನಿಗೆ ಜಯ-ಜಯಕಾರಮಾಡುತ್ತಾ, ಅವನ ಸುಯಶವನ್ನು ಗಾನಮಾಡುತ್ತಿದ್ದರು. (ಛಂದ)

**ದೋ – ದುಹು ದಿಸಿ ಜಯ ಜಯಕಾರ ಕರಿ ನಿಜ ನಿಜ ಜೋರೀ ಜಾನಿ।**
**ಭಿರೇ ಬೀರ ಇತ ರಾಮಹಿ ಉತ ರಾವನಹಿ ಬಖಾನಿ॥ ೭೯॥**

ಇತ್ತಂಡಗಳ ಯೋಧರು ತಮಗೆ ಸರಿಯಾದ ಜೋಡಿಯನ್ನು ಆರಿಸಿಕೊಂಡು ಹೋರಾಡತೊಡಗಿದರು. ಇತ್ತ ವಾನರ-ಭಲ್ಲೂಕಗಳು ಶ್ರೀರಾಮಚಂದ್ರನನ್ನು, ಅತ್ತ ರಾಕ್ಷಸರು ರಾವಣನನ್ನು ಹೊಗಳುತ್ತಾ ಪರಸ್ಪರ ಭಯಂಕರವಾಗಿ ಕಾದಾಡಿದರು. (ದೋ/೭೯)

**ಚೌ – ರಾವನು ರಥೀ ಬಿರಥ ರಘುಬೀರಾ। ದೇಖಿ ಬಿಭೀಷನ ಭಯಉ ಅಧೀರಾ॥**
**ಅಧಿಕ ಪ್ರೀತಿ ಮನ ಭಾ ಸಂದೇಹಾ। ಬಂದಿ ಚರನ ಕಹ ಸಹಿತ ಸನೇಹಾ॥ ೧॥**
**ನಾಥ ನ ರಥ ನಹಿಂ ತನ ಪದ ತ್ರಾನಾ। ಕೆಹಿ ಬಿಧಿ ಜಿತಬ ಬೀರ ಬಲವಾನಾ॥**
**ಸುನಹು ಸಖಾ ಕಹ ಕೃಪಾನಿಧಾನಾ। ಜೆಹಿಂ ಜಯ ಹೋಇ ಸೊ ಸ್ಯಂದನ ಆನಾ॥ ೨॥**
**ಸೌರಜ ಧೀರಜ ತೆಹಿ ರಥ ಚಾಕಾ। ಸತ್ಯ ಸೀಲ ದೃಢ ಧ್ವಜಾ ಪತಾಕಾ॥**
**ಬಲ ಬಿಬೇಕ ದಮ ಪರಹಿತ ಘೋರೇ। ಛಮಾ ಕೃಪಾ ಸಮತಾ ರಜು ಜೋರೇ॥ ೩॥**
**ಈಸ ಭಜನು ಸಾರಥೀ ಸುಜಾನಾ। ಬಿರತಿ ಚರ್ಮ ಸಂತೋಷ ಕೃಪಾನಾ॥**
**ದಾನ ಪರಸು ಬುಧಿ ಸಕ್ತಿ ಪ್ರಚಂಡಾ। ಬರ ಬಿಗ್ಯಾನ ಕಠಿನ ಕೋದಂಡಾ॥ ೪॥**

ಅಮಲ ಅಚಲ ಮನ ತ್ರೋನ ಸಮಾನಾ। ಸಮ ಜಮ ನಿಯಮ ಸಿಲೀಮುಖ ನಾನಾ॥
ಕವಚ ಅಭೇದ ಬಿಪ್ರ ಗುರ ಪೂಜಾ। ಏಹಿ ಸಮ ಬಿಜಯ ಉಪಾಯ ನ ದೂಜಾ॥ ೫॥
ಸಖಾ ಧರ್ಮಮಯ ಅಸ ರಥ ಜಾಕೇಂ। ಜೀತನ ಕಹँ ನ ಕತಹುँ ರಿಪು ತಾಕೇಂ॥ ೬॥

ರಾವಣನು ರಥಾರೂಢನಾಗಿದ್ದನು. ಶ್ರೀರಾಮನು ರಥವಿಲ್ಲದೆ ಇರುವುದನ್ನು ನೋಡಿ ವಿಭೀಷಣನು ಅಧೀರನಾದನು. 'ರಾಮಪ್ರೇಮಾಧಿಕ್ಯದಿಂದ ರಾಮನು ರಥವಿಲ್ಲದೆ ರಾವಣನನ್ನು ಹೇಗೆ ಗೆಲ್ಲಬಲ್ಲನು' ಎಂಬ ಸಂದೇಹ ಅವನ ಮನದಲ್ಲಿ ಉಂಟಾಯಿತು. ಶ್ರೀರಾಮನ ಚರಣಗಳಿಗೆ ವಂದಿಸಿ ಅವನು ಸ್ನೇಹಾರ್ದ್ರನಾಗಿ ಇಂತೆಂದನು – ಪ್ರಭೂ! ನಿಮ್ಮಲ್ಲಿ ಹೋರಾಡಲು ರಥವಿಲ್ಲ, ತೊಡಲು ಕವಚವಿಲ್ಲ, ನಡೆಯಲು ಪಾದರಕ್ಷಗಳೂ ಇಲ್ಲ. ಬಲಶಾಲಿಯೂ ವೀರನೂ ಆದ ರಾವಣನನ್ನು ನೀವು ಹೇಗೆ ಗೆಲ್ಲಬಲ್ಲಿರಿ? ಕೃಪಾಳುವಾದ ಶ್ರೀರಾಮನು ಹೇಳಿದನು– ''ಮಿತ್ರನೇ! ಕೇಳು. ವಿಜಯವನ್ನು ಪಡೆಯಲು ಅಗತ್ಯವಿರುವ ವಿಜಯಿಯ ರಥವೇ ಬೇರೆ. ಶೌರ್ಯ, ಧೈರ್ಯಗಳೇ ಆ ರಥದ ಗಾಲಿಗಳು. ಸತ್ಯ, ಶೀಲ (ಸದಾಚಾರ)ಗಳೇ ಆ ವರೂಥದ ದೃಢಧ್ವಜ, ಪತಾಕೆಗಳು. ಬಲ, ವಿವೇಕ, ದಮ, ಪರೋಪಕಾರ ಇವುಗಳೇ ಅದರ ನಾಲ್ಕು ತುರಗಗಳು. ಕ್ಷಮೆ, ದಯೆ, ಸಮತೆ ಎಂಬ ಮುಪ್ಪರಿಯಿಂದ ಮಾಡಿದ ಹಗ್ಗದಿಂದ ಅವು ಕಟ್ಟಲ್ಪಟ್ಟಿವೆ. ಭಗವದ್ಭಜನೆಯೇ ಆ ರಥವನ್ನು ನಡೆಸುವ ಸಮರ್ಥ ಸಾರಥಿ. ವೈರಾಗ್ಯವೇ ಗುರಾಣಿ. ಸಂತೋಷವೇ ಖಡ್ಗ. ದಾನವೆ ಪರಶು. ಬುದ್ಧಿಯೇ ಪ್ರಚಂಡ ಶಕ್ತಿ. ಶ್ರೇಷ್ಠ ವಿಜ್ಞಾನವೇ ಕಠಿಣ ಕೋದಂಡ. ಅಮಲವೂ ಅಚಲವೂ ಆದ ಮನಸ್ಸೇ ತೂಣೀರ. ಶಮ, ಯಮ, ನಿಯಮಗಳೇ ನಾನಾವಿಧವಾದ ಬಾಣಗಳು. ವಿಪ್ರ, ಗುರುಪೂಜೆಯೇ ಅಭೇದ್ಯ ಕವಚ. ಇದಕ್ಕೆ ಎಣೆಯಾದ ವಿಜಯೋಪಾಯ ಬೇರೊಂದಿಲ್ಲ. ಎಲೈ ಮಿತ್ರನೇ! ಇಂತಹ ಧರ್ಮಮಯ ರಥವಿರುವವನನ್ನು ಯಾರೂ ಜಯಿಸಲಾರರು. ಅವನಿಗೆ ಶತ್ರುಗಳೇ ಇರುವುದಿಲ್ಲ. (ಯುದ್ಧ ಸಮಯದಲ್ಲಿ ಭಗವಂತನು ವಿಭೀಷಣನಿಗೆ ಹೇಳಿದ ಈ ಉಪದೇಶವು ಅಪೂರ್ವವು.) (ಚೌ/೧-೬)

ದೋ – ಮಹಾ ಅಜಯ ಸಂಸಾರ ರಿಪು ಜೀತಿ ಸಕಇ ಸೋ ಬೀರ।
ಜಾಕೇಂ ಅಸ ರಥ ಹೋಇ ದೃಢ ಸುನಹು ಸಖಾ ಮತಿಧೀರ॥ ೮೦ (ಕ)॥
ಸುನಿ ಪ್ರಭು ಬಚನ ಬಿಭೀಷನ ಹರಷಿ ಗಹೇ ಪದ ಕಂಜ।
ಏಹಿ ಮಿಸ ಮೋಹಿ ಉಪದೇಸೆಹು ರಾಮ ಕೃಪಾ ಸುಖ ಪುಂಜ॥ ೮೦(ಖ)॥
ಉತ ಪಚಾರ ದಸಕಂಧರ ಇತ ಅಂಗದ ಹನುಮಾನ।
ಲರತ ನಿಸಾಚರ ಭಾಲು ಕಪಿ ಕರಿ ನಿಜ ನಿಜ ಪ್ರಭು ಆನ॥ ೮೦ (ಗ)॥

ಓ ಧೀರಮತಿ! ಸಖನೇ! ಇಂತಹ ದೃಢವಾದ ರಥವುಳ್ಳ ಬಲಶಾಲಿಯು ಸಂಸಾರ (ಹುಟ್ಟು-ಸಾವುಗಳು) ವೆಂಬ ಮಹಾದುರ್ಜಯ ಶತ್ರುವನ್ನೂ ಕೂಡ ಗೆಲ್ಲಬಲ್ಲನು.'' ಶ್ರೀರಾಮಚಂದ್ರಪ್ರಭುವಿನ ವಚನಗಳನ್ನು ಕೇಳಿ ವಿಭೀಷಣನು ಹರ್ಷಿತನಾಗಿ ಅವನ ಪಾದಪದ್ಮಗಳಲ್ಲಿ ಪೊಡಮಟ್ಟು ಇಂತೆಂದನು – ಕೃಪಾನಿಧೇ! ಕೃಪಾನಿಧಾನಾ! ಶ್ರೀರಾಮಾ! ಈ ನೆಪದಿಂದ ನನಗೊಂದು ಅಮೂಲ್ಯವಾದ ಉಪದೇಶವನ್ನು ಕರುಣಿಸಿದೆ. ಅತ್ತ ರಾವಣನು ಶತ್ರುಗಳನ್ನು ಮೂದಲಿಸತೊಡಗಿದನು. ಇತ್ತ ಅಂಗದ, ಹನುಮಂತರು ಶತ್ರುಯೋಧರನ್ನು ಮೂದಲಿಸಿ ಯುದ್ಧಕ್ಕೆ ಸನ್ನದ್ಧರಾದರು. ರಾಕ್ಷಸರು, ವಾನರ-ಭಲ್ಲೂಕಗಳು ತಮ್ಮ-ತಮ್ಮ ಒಡೆಯನನ್ನು ಜಯ-ಜಯಕಾರಮಾಡುತ್ತಾ ಹೋರಾಡತೊಡಗಿದರು. (ದೋ/೮೦ ಕ, ಖ, ಗ)

ಚೌ – ಸುರ ಬ್ರಹ್ಮಾದಿ ಸಿದ್ಧ ಮುನಿ ನಾನಾ। ದೇಖತ ರನ ನಭ ಚಢೇ ಬಿಮಾನಾ॥
ಹಮಹೂ ಉಮಾ ರಹೇ ತೆಹಿಂ ಸಂಗಾ। ದೇಖತ ರಾಮ ಚರಿತ ರನ ರಂಗಾ॥ ೧॥
ಸುಭಟ ಸಮರ ರಸ ದುಹು ದಿಸಿ ಮಾತೇ। ಕಪಿ ಜಯಸೀಲ ರಾಮ ಬಲ ತಾತೇ॥
ಏಕ ಏಕ ಸನ ಭಿರಹಿಂ ಪಚಾರಹಿಂ। ಏಕನ್ಹ ಏಕ ಮರ್ದಿ ಮಹಿ ಪಾರಹಿಂ॥ ೨॥
ಮಾರಹಿಂ ಕಾಟಹಿಂ ಧರಹಿಂ ಪಛಾರಹಿಂ। ಸೀಸ ತೋರಿ ಸೀಸನ್ಹ ಸನ ಮಾರಹಿಂ॥
ಉದರ ಬಿದಾರಹಿಂ ಭುಜಾ ಉಪಾರಹಿಂ। ಗಹಿ ಪದ ಅವನಿ ಪಟಕಿ ಭಟ ಡಾರಹಿಂ॥ ೩॥
ನಿಸಿಚರ ಭಟ ಮಹಿ ಗಾಡಹಿಂ ಭಾಲೂ। ಊಪರ ಢಾರಿ ದೇಹಿಂ ಬಹು ಬಾಲೂ॥
ಬೀರ ಬಲೀಮುಖ ಜುದ್ಧ ಬಿರುದ್ಧೇ। ದೇಖಿಅತ ಬಿಪುಲ ಕಾಲ ಜನು ಕ್ರುದ್ಧೇ॥ ೪॥

ಬ್ರಹ್ಮಾದಿ ದೇವತೆಗಳು ಅನೇಕ ಸಿದ್ಧರು, ಮುನಿಗಳು ವಿಮಾನವನ್ನೇರಿ ಆಕಾಶದಲ್ಲಿದ್ದು ಯುದ್ಧವನ್ನು ನೋಡುತ್ತಿದ್ದಾರೆ. ಶಿವನು ಹೇಳುತ್ತಾನೆ – ಉಮೆ! ಆ ದೇವಮುನಿಗಡಣದಲ್ಲಿನಾನೂ ಇದ್ದು, ಶ್ರೀರಾಮನ ರಣರಂಗ ವಿಶೇಷವನ್ನೂ, ಶೌರ್ಯಪ್ರದರ್ಶನ ಲೀಲೆಯನ್ನು ವೀಕ್ಷಿಸುತ್ತಿದ್ದೆ. ಇತ್ತಂಡದ ಸುಭಟಕೋಟಿಯು ರಣೋನ್ಮತ್ತವಾಗಿತ್ತು ; ವಾನರರಿಗೆ ಎಲ್ಲೆಲ್ಲೂ ಗೆಲುವು. ಏಕೆಂದರೆ, ಅವರಿಗೆ ಧರ್ಮಸ್ವರೂಪನಾದ ಶ್ರೀರಾಮನ ಬಲವು ದೊರೆತಿತ್ತು. ಉಭಯ ಪಕ್ಷದ ಯೋಧರೂ ಪರಸ್ಪರ ಮೂದಲಿಸುತ್ತಾ, ಒಬ್ಬರಿಗೊಬ್ಬರು ಮರ್ದಿಸಿ ನೆಲಕ್ಕೆ ಒಗೆಯುತ್ತಿದ್ದರು. ಅವರು ಹೊಡೆದು, ಕಡಿದು, ಬಡಿದು, ಕತ್ತರಿಸಿ, ಹಿಡಿದು ನೆಲಕ್ಕೆ ಕುಕ್ಕಿ ತಲೆಯನ್ನು ತರಿದು, ಆ ತಲೆಯಿಂದಲೇ ಇತರರನ್ನು ಕೊಲ್ಲುತ್ತಿದ್ದರು. ಹೊಟ್ಟೆ ಸೀಳುತ್ತಿದ್ದರು. ಭುಜಗಳನ್ನು ಕೀಳುತ್ತಿದ್ದರು. ಯೋಧರ ಕಾಲುಗಳನ್ನು ಹಿಡಿದು ನೆಲಕ್ಕೆ ಕುಕ್ಕುತ್ತಿದ್ದರು. ರಾಕ್ಷಸಯೋಧರನ್ನು ಭಲ್ಲೂಕಗಳು ನೆಲದಲ್ಲಿ ಹೂಳಿ ಅದರ ಮೇಲೆ ಮಳಲು ಚೆಲ್ಲುತ್ತಿದ್ದವು. ಯುದ್ಧದಲ್ಲಿ ಶತ್ರುಗಳ ವಿರುದ್ಧ ನಿಂತ ವೀರವಾನರರು ಕ್ರುದ್ಧರಾದ ಅನೇಕಮಂದಿ ಕಾಲರಂತೆ ಕಂಡುಬರುತ್ತಿದ್ದರು. (ಚೌ/೧-೪)

**ಛಂ – ಕ್ರುದ್ಧೇ ಕೃತಾಂತ ಸಮಾನ ಕಪಿ ತನ ಸ್ರವತ ಸೋನಿತ ರಾಜಹೀಂ।**
**ಮರ್ದಹಿಂ ನಿಸಾಚರ ಕಟಕ ಭಟ ಬಲವಂತ ಘನ ಜಿಮಿ ಗಾಜಹೀಂ ॥**
**ಮಾರಹಿಂ ಚಪೇಟನ್ಹಿ ಡಾಟಿ ದಾತನ್ಹ ಕಾಟಿ ಲಾತನ್ಹ ಮೀಜಹೀಂ।**
**ಚಿಕ್ಕರಹಿಂ ಮರ್ಕಟ ಭಾಲು ಛಲ ಬಲ ಕರಹಿಂ ಜೆಹಿಂ ಖಲ ಛೀಜಹೀಂ॥ ೧ ॥**
**ಧರಿ ಗಾಲ ಫಾರಹಿಂ ಉರ ಬಿದಾರಹಿಂ ಗಲ ಅಂತಾವರಿ ಮೇಲಹೀಂ।**
**ಪ್ರಹ್ಲಾದಪತಿ ಜನು ಬಿಬಿಧ ತನು ಧರಿ ಸಮರ ಅಂಗನ ಖೇಲಹೀಂ॥**
**ಧರು ಮಾರು ಕಾಟು ಪಛಾರು ಘೋರ ಗಿರಾ ಗಗನ ಮಹಿ ಭರಿ ರಹೀ ।**
**ಜಯ ರಾಮ ಜೋ ತೃನ ತೇ ಕುಲಿಸ ಕರ ಕುಲಿಸ ತೇ ಕರ ತೃನ ಸಹೀ॥ ೨ ॥**

ಕ್ರುದ್ಧ ಕೃತಾಂತರಂತಿದ್ದ ಆ ವಾನರರು ಶರೀರದಿಂದ ರಕ್ತವು ಹರಿಯುತ್ತಾ ಶೋಭಿಸುತ್ತಿದ್ದರು. ಅವರು ನಿಶಾಚರ ಕಟಕದ ಪಟುಭಟರನ್ನು ಹೊಸಕಿಹಾಕಿ ಮೇಘಗಳಂತೆ ಗರ್ಜಿಸುತ್ತಿದ್ದರು. ವೈರಿಗಳನ್ನು ಗದ್ದರಿಸಿ ಗುದ್ದುತ್ತಿದ್ದರು. ಹಲ್ಲುಗಳಿಂದ ಕಚ್ಚುತ್ತಿದ್ದರು. ಕಾಲಿನಿಂದ ಒದ್ದು ತಿಕ್ಕಿ ಹಾಕುತ್ತಿದ್ದರು. ವಾನರ-ಭಲ್ಲೂಕವೀರರು ಆನೆಯಂತೆ ಘೀಳಿಡುತ್ತಾ ದುಷ್ಟರಾಕ್ಷಸರನ್ನು ಛಲ-ಛಿದ್ರಗೈದು ಸದೆಬಡಿಯುತ್ತಿದ್ದರು. ॥ ೧॥ ಅವರು ರಕ್ಕಸರ ಗಲ್ಲಗಳನ್ನು ಹಿಡಿದೆಳೆದು ಹರಿದುಹಾಕುತ್ತಿದ್ದರು. ಎದೆಯನ್ನು ಸೀಳಿಬಿಡುತ್ತಿದ್ದರು. ಅವರ ಕರುಳಬಳ್ಳಿಗಳನ್ನು ಕಿತ್ತು ತಮ್ಮ ಕೊರಳಿಗೆ ಮಾಲೆಯಾಗಿ ಹಾಕಿಕೊಳ್ಳುತ್ತಿದ್ದರು. ಆ ರಣೋತ್ಸಾಹಿಗಳಾದ ವಾನರರು ಪ್ರಹ್ಲಾದನಿಗೆ ಸ್ವಾಮಿಯಾದ ಭಗವಾನ್ ನರಸಿಂಹನೇ ಅನೇಕ ರೂಪ ಧರಿಸಿ, ಕೊಳುಗುಳಕ್ಕೆ ಬಂದು ನಿಂತಿರುವಂತೆ ಕಾಣುತ್ತಿದ್ದರು. ಹಿಡಿ, ಬಡಿ, ಕಡಿ, ಕುಕ್ಕು ಮೊದಲಾದ ಭೀಕರ ಶಬ್ದಗಳು ಭೂಮ್ಯಾಕಾಶದಲ್ಲಿ ತುಂಬಿಹೋಯಿತು. ತೃಣವನ್ನು ವಜ್ರಾಯುಧವನ್ನಾಗಿಯೂ, ವಜ್ರಾಯುಧವನ್ನು ತೃಣವನ್ನಾಗಿಯೂ ಮಾಡುವ ಸಮರ್ಥನಾದ ಶ್ರೀರಾಮಚಂದ್ರನಿಗೆ ಜಯವಾಗಲೀ ಎಂಬ ಜಯಕಾರ ಎಲ್ಲೆಲ್ಲೂ ಮೊಳಗುತ್ತಿತ್ತು. ॥ ೨॥ (ಛಂ/೧-೨)

**ದೋ – ನಿಜ ದಲ ಬಿಚಲತ ದೇಖೆಸಿ ಬೀಸ ಭುಜಾಂ ದಸ ಚಾಪ।**
**ರಥ ಚಢಿ ಚಲೆಉ ದಸಾನನ ಫಿರಹು ಫಿರಹು ಕರಿ ದಾಪ॥ ೮೧ ॥**

ತನ್ನ ಸೇನೆಯು ಚಲವಿಚಲವಾದುದನ್ನು ನೋಡಿ ದಶಕಂಠ ರಾವಣನು ತನ್ನ ಇಪ್ಪತ್ತು ತೋಳುಗಳಲ್ಲಿ ಹತ್ತು ಬಿಲ್ಲುಗಳನ್ನು ಹಿಡಿದು, ರಥಾರೂಢನಾಗಿ ಗರ್ವದಿಂದ (ಯುದ್ಧಭೂಮಿಯಿಂದ ಓಡುತ್ತಿದ್ದ ತನ್ನ ಸೈನ್ಯವನ್ನು ತಿರುಗಿ ರಣರಂಗಕ್ಕೆ ಬರಲು) ಮರಳಿ, ಮರಳಿ ಎಂದು ಕಿರುಚುತ್ತಾ ಮುಂದಕ್ಕೆ ಸಾಗಿದನು. (ದೋ/೮೧)

**ಚೌ – ಧಾಯಉ ಪರಮ ಕ್ರುದ್ಧ ದಸಕಂಧರ। ಸನ್ಮುಖ ಚಲೇ ಹೂಹ ದೈ ಬಂದರ॥**
**ಗಹಿ ಕರ ಪಾದಪ ಉಪಲ ಪಹಾರಾ। ಡಾರೆನ್ಹಿ ತಾ ಪರ ಏಕಹಿಂ ಬಾರಾ ॥ ೧ ॥**
**ಲಾಗಹಿಂ ಸೈಲ ಬಜ್ರ ತನ ತಾಸೂ। ಖಂಡ ಖಂಡ ಹೋಇ ಫೂಟಹಿಂ ಆಸೂ ॥**
**ಚಲಾ ನ ಅಚಲ ರಹಾ ರಥ ರೋಪೀ। ರನ ದುರ್ಮದ ರಾವನ ಅತಿ ಕೋಪೀ ॥ ೨ ॥**
**ಇತ ಉತ ಝಪಟಿ ದಪಟಿ ಕಪಿ ಜೋಧಾ। ಮರ್ದೈ ಲಾಗ ಭಯಉ ಅತಿ ಕ್ರೋಧಾ ॥**
**ಚಲೇ ಪರಾಇ ಭಾಲು ಕಪಿ ನಾನಾ। ತ್ರಾಹಿ ತ್ರಾಹಿ ಅಂಗದ ಹನುಮಾನಾ॥ ೩ ॥**

**ಪಾಹಿ ಪಾಹಿ ರಘುಬೀರ ಗೊಸಾಈ। ಯಹ ಖಲ ಖಾಇ ಕಾಲ ಕೀ ನಾಈ॥**
**ತೇಹಿಂ ದೇಖೇ ಕಪಿ ಸಕಲ ಪರಾನೇ। ದಸಹುँ ಚಾಪ ಸಾಯಕ ಸಂಧಾನೇ ॥೪॥**

ಅತ್ಯಂತ ಕ್ರುದ್ಧನಾದ ರಾವಣನು ಶತ್ರುಸೇನೆಯತ್ತ ಓಡಿದನು. ಯುದ್ಧತತ್ಪರರಾದ ವಾನರರು ಹೂಂಕರಿಸುತ್ತಾ ಅವನ ಎದುರಿಗೆ ಬಂದರು. ಅವರು ತಮ್ಮ ಕೈಯಲ್ಲಿ ಹೆಮ್ಮರ, ಕಲ್ಲುಬಂಡೆ, ಬೆಟ್ಟಗಳನ್ನು ಎತ್ತಿಕೊಂಡು ಒಮ್ಮೆಗೆ ಅವನ ಮೇಲೆ ಎಸೆದರು. ಪರ್ವತಗಳು ರಾವಣನ ವಜ್ರಕಾಯಕ್ಕೆ ತಗಲುತ್ತಲೇ ಪುಡಿ-ಪುಡಿಯಾಗುತ್ತಿದ್ದವು. ರೋಷಭೀಷಣನಾದ ರಣೋನ್ಮತ್ತ ರಾವಣ ತನ್ನ ರಥವನ್ನು ನಿಲ್ಲಿಸಿಕೊಂಡು ಕೊಂಚವು ಮಿಸುಕದೆ ಅಚಲವಾಗಿ ನಿಂತಿದ್ದನು. ಅವನಿಗೆ ಬೆಟ್ಟದಂಥ ಸಿಟ್ಟು ಬಂತು. ಅವನು ಅತ್ತಿತ್ತ ಹರಿಹಾಯ್ದು ವಾನರಯೋಧರನ್ನು ಹೊಸಕಿಹಾಕತೊಡಗಿದನು. ಅನೇಕ ಕಪಿ-ಕರಡಿಗಳು ಓ ಅಂಗದಾ! ಓ ಆಂಜನೇಯಾ! ಕಾಪಾಡು, ಕಾಪಾಡು! ಎಂದು ಕೂಗುತ್ತಾ ಓಡಿದವು. ''ಓ ರಘುವೀರಾ! ಓ ಪ್ರಭೂ! ರಕ್ಷಿಸು, ರಕ್ಷಿಸು. ಈ ದುಷ್ಟನು ಯಮನಂತೆ ನಮ್ಮನ್ನು ಕಬಳಿಸುತ್ತಿದ್ದಾನೆ'' ಎಂದು ಆಕ್ರಂದನಗೈಯುತ್ತಾ ವಾನರರೆಲ್ಲರೂ ಓಡಿಹೋಗುತ್ತಿರುವುದನ್ನು ಕಂಡ ರಾವಣನು ತನ್ನ ಹತ್ತುಬಿಲ್ಲುಗಳಿಗೂ ಬಾಣಗಳನ್ನು ಹೂಡಿದನು. (ಚೌ/೧-೪)

**ಛಂ– ಸಂಧಾನಿ ಧನು ಸರ ನಿಕರ ಛಾಡೆಸಿ ಉರಗ ಜಿಮಿ ಉಡಿ ಲಾಗಹೀಂ।**
**ರಹೆ ಪೂರಿ ಸರ ಧರನೀ ಗಗನ ದಿಸಿ ಬಿದಿಸಿ ಕಹँ ಕಪಿ ಭಾಗಹೀಂ॥**
**ಭಯೊ ಅತಿ ಕೊಲಾಹಲ ಬಿಕಲ ಕಪಿ ದಲ ಭಾಲು ಬೋಲಹಿಂ ಆತುರೇ।**
**ರಘುಬೀರ ಕರುನಾ ಸಿಂಧು ಆರತ ಬಂಧು ಜನ ರಚ್ಛಕ ಹರೇ॥**

ರಾವಣನು ಧನುಸ್ಸುಗಳಿಗೆ ಅನೇಕ ಬಾಣಗಳನ್ನು ಸಂಧಾನಗೈದು ಒಂದೇಬಾರಿಗೆ ಅವರ ಮೇಲೆ ಪ್ರಯೋಗಿಸಿದನು. ಅವು ಸರ್ಪಸಮೂಹದಂತೆ ಹಾರಿ ಹೋಗಿ ನಾಟುತ್ತಿದ್ದವು. ಭುವಿ, ಬಾನು, ದಿಶೆ, ವಿದಿಶೆ ಎಲ್ಲೆಲ್ಲೂ ಅಂಬುಗಳು ತುಂಬಿ ಹೋಗುತ್ತಿದ್ದವು. ವಾನರ-ಭಲ್ಲೂಕಗಳು ಎತ್ತ ಓಡಿಯಾವು? ತುಮುಲ ಕೋಲಾಹಲವುಂಟಾಯಿತು. ಅವರು ಅತ್ಯಂತ ವ್ಯಾಕುಲಗೊಂಡು ಆರ್ತನಾದ ಮಾಡತೊಡಗಿದವು. ಓ ರಘುವೀರಾ! ಓ ಕರುಣಾಸಿಂಧು! ದೀನಬಂಧೂ! ಭಕ್ತರಕ್ಷಕಾ! ಆರ್ತತ್ರಾಣ ಪರಾಯಣಾ! ಶ್ರೀಹರೀ! ರಕ್ಷಿಸು, ರಕ್ಷಿಸು, ಎಂದು ಪ್ರಾರ್ಥಿಸಿದರು. (ಛಂದ)

**ದೋ– ನಿಜ ದಲ ಬಿಕಲ ದೇಖಿ ಕಟಿ ಕಸಿ ನಿಷಂಗ ಧನು ಹಾಥ।**
**ಲಛಿಮನ ಚಲೇ ಕ್ರುದ್ಧ ಹೊಇ ನಾಇ ರಾಮ ಪದ ಮಾಥ ॥೮೨॥**

ತನ್ನ ಸೇನೆಯು ಕಳವಳಗೊಂಡಿರುವುದನ್ನು ಕಂಡು ಲಕ್ಷ್ಮಣನು ಸೊಂಟಕ್ಕೆ ಬತ್ತಳಿಕೆ ಬಿಗಿದು, ಧನುಸ್ಸನ್ನು ಕೈಗೆತ್ತಿಕೊಂಡು ಶ್ರೀರಾಮನ ಪದಗಳಿಗೆ ಪೊಡಮಟ್ಟು, ಕ್ರುದ್ಧನಾಗಿ ರಣರಂಗಕ್ಕೆ ಹೊರಟನು. (ದೋ/೮೨)

**ಚೌ– ರೇ ಖಲ ಕಾ ಮಾರಸಿ ಕಪಿ ಭಾಲೂ। ಮೋಹಿ ಬಿಲೋಕು ತೋರ ಮೈಂ ಕಾಲೂ॥**
**ಖೋಜತ ರಹೆಉँ ತೋಹಿ ಸುತಘಾತೀ। ಆಜು ನಿಪಾತಿ ಜುಡಾವಉँ ಛಾತೀ॥೧॥**
**ಅಸ ಕಹಿ ಛಾಡೆಸಿ ಬಾನ ಪ್ರಚಂಡಾ। ಲಛಿಮನ ಕಿಏ ಸಕಲ ಸತ ಖಂಡಾ॥**
**ಕೋಟಿನ್ಹ ಆಯುಧ ರಾವನ ಡಾರೇ। ತಿಲ ಪ್ರವಾನ ಕರಿ ಕಾಟಿ ನಿವಾರೇ॥೨॥**
**ಪುನಿ ನಿಜ ಬಾನನ್ಹ ಕೀನ್ಹ ಪ್ರಹಾರಾ। ಸ್ಯಂದನು ಭಂಜಿ ಸಾರಥೀ ಮಾರಾ॥**
**ಸತ ಸತ ಸರ ಮಾರೇ ದಸ ಭಾಲಾ। ಗಿರಿ ಸೃಂಗನ್ಹ ಜನು ಪ್ರಬಿಸಹಿಂ ಬ್ಯಾಲಾ॥೩॥**
**ಪುನಿ ಸತ ಸರ ಮಾರಾ ಉರ ಮಾಹೀಂ। ಪರೆಉ ಧರನಿ ತಲ ಸುಧಿ ಕಛು ನಾಹೀಂ॥**
**ಉಠಾ ಪ್ರಬಲ ಪುನಿ ಮುರುಛಾ ಜಾಗೀ। ಛಾಡಿಸಿ ಬ್ರಹ್ಮ ದೀನ್ಹಿ ಜೋ ಸಾँಗೀ॥೪॥**

ಅವನು ರಾವಣನ ಬಳಿಗೆ ಹೋಗಿ ಇಂತೆಂದನು – 'ಎಲವೋ ದುರುಳಾ! ವಾನರ-ಭಲ್ಲೂಕಗಳನ್ನು ಏಕೆ ಕೊಲ್ಲುತ್ತಿರುವೆ? ನನ್ನೊಡನೆ ಹೋರಾಡು. ನಾನು ನಿನ್ನ ಪಾಲಿಗೆ ಕಾಲನಾಗಿದ್ದೇನೆ.' ರಾವಣನೆಂದ – 'ಓಹೋ ನನ್ನ ಪುತ್ರಹಂತಕನೋ! ನಾನು ನಿನ್ನನ್ನೇ ಹುಡುಕುತ್ತಿದ್ದೆ. ಇಂದು ನಿನ್ನನ್ನು ಕೊಂದು ನನ್ನ ಮನಸ್ಸಿಗೆ ಸಮಾಧಾನ ತಂದುಕೊಡುವೆನು.' ಬಳಿಕ ಅವನು ಲಕ್ಷ್ಮಣನ ಮೇಲೆ ಪ್ರಚಂಡಬಾಣಗಳನ್ನು ಎಸೆದನು. ಲಕ್ಷ್ಮಣನು ಅವೆಲ್ಲವನ್ನೂ ನುಚ್ಚು-ನೂರಾಗಿಸಿದನು. ರಾವಣನು ಅಸಂಖ್ಯ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಿದನು. ಲಕ್ಷ್ಮಣನು ಅವುಗಳನ್ನು ಎಳ್ಳುಗಳಂತೆ ಪುಡಿ-ಪುಡಿಮಾಡಿಬಿಟ್ಟನು. ಅನಂತರ ತನ್ನ ಬಾಣಗಳನ್ನು ರಾವಣನ ಮೇಲೆ ಪ್ರಯೋಗಿಸಿದನು. ಅವನ ರಥವನ್ನು ಮುರಿದು, ಸಾರಥಿಯನ್ನು ಕೊಂದು ಹಾಕಿದನು. ರಾವಣನ

ದಶಶಿರಸ್ಸುಗಳಲ್ಲಿ ಶತ-ಶತ ಬಾಣಗಳನ್ನು ನೆಟ್ಟನು. ಅವು ಬೆಟ್ಟದ ಕೋಡುಗಳಲ್ಲಿ ಸರ್ಪಗಳು ಹೊಕ್ಕಂತೆ ಅವನ ತಲೆಗಳಲ್ಲಿ ನೆಟ್ಟುನಿಂತವು. ಅನಂತರ ನೂರು ಬಾಣಗಳನ್ನು ಅವನ ಎದೆಗೆ ಹೊಡೆದನು. ಆಗ ರಾವಣನು ಪ್ರಜ್ಞೆತಪ್ಪಿ ನೆಲಕ್ಕುರುಳಿದನು. ಮೂರ್ಛೆ ತಿಳಿದೆದ್ದು ಆ ಪ್ರಬಲ ರಾವಣನು ಮೇಲೆದ್ದು, ಬ್ರಹ್ಮನಿಂದ ದತ್ತವಾದ ಶಕ್ತ್ಯಾಯುಧವನ್ನು ಲಕ್ಷ್ಮಣನ ಮೇಲೆ ಪ್ರಯೋಗಿಸಿದನು. (ಚೌ/೧-೪)

**ಛಂ – ಸೋ ಬ್ರಹ್ಮದತ್ತ ಪ್ರಚಂಡ ಸಕ್ತಿ ಅನಂತ ಉರ ಲಾಗೀ ಸಹೀ।**
**ಪರ್‍ಯೊ ಬೀರ ಬಿಕಲ ಉಠಾವ ದಸಮುಖ ಅತುಲ ಬಲ ಮಹಿಮಾ ರಹೀ॥**
**ಬ್ರಹ್ಮಾಂಡ ಭವನ ಬಿರಾಜ ಜಾಕೇಂ ಏಕ ಸಿರ ಜಿಮಿ ರಜ ಕನೀ।**
**ತೆಹಿ ಚಹ ಉಠಾವನ ಮೂಢ ರಾವನ ಜಾನ ನಹಿಂ ತ್ರಿಭುಅನ ಧನೀ॥**

ಆ ಬ್ರಹ್ಮದತ್ತವಾದ ಪ್ರಚಂಡ ಶಕ್ತ್ಯಾಯುಧವು ಲಕ್ಷ್ಮಣನ ಎದೆಗೆ ನಾಟಿತು. ವೀರನಾದ ಲಕ್ಷ್ಮಣನು ತತ್ತರಿಸಿ ನೆಲಕ್ಕುರುಳಿದನು. ಆಗ ರಾವಣನು ಅವನನ್ನು ಎತ್ತಿಕೊಂಡು ಹೋಗಲು ಪ್ರಯತ್ನಿಸಿದನು. ಆದರೆ ಲಕ್ಷ್ಮಣನ ಅತುಲನೀಯ ಬಲವು ಹಾಗೆಯೇ ಉಳಿಯಿತು. ಅವನ ಮುಂದೆ ರಾವಣನ ಬಲವೆಲ್ಲವೂ ವ್ಯರ್ಥವಾಯಿತು. ತನ್ನ ಹೆಡೆಯ ಮೇಲೆ ಇಡೀ ಬ್ರಹ್ಮಾಂಡವನ್ನು ಧೂಳಿನ ಕಣದಂತೆ ಇರಿಸಿಕೊಂಡಿರುವ ಶೇಷಾವತಾರನಾದ ಲಕ್ಷ್ಮಣನನ್ನು ಮೂಢ ರಾವಣನು ಎತ್ತಲೆಳಸಿದನು. ಅವನು ತ್ರಿಭುವನ ವಲ್ಲಭ ಲಕ್ಷ್ಮಣನ ಮಹಿಮೆಯನ್ನು ಏನು ಬಲ್ಲನು? (ಛಂದ)

**ದೋ – ದೇಖಿ ಪವನಸುತ ಧಾಯಉ ಬೋಲತ ಬಚನ ಕಠೋರ।**
**ಆವತ ಕಪಿಹಿ ಹನ್ಯೋ ತೇಹಿಂ ಮುಷ್ಟಿ ಪ್ರಹಾರ ಪ್ರಘೋರ॥ ೮೩ ॥**

ನೆಲದ ಮೇಲೆ ಬಿದ್ದಿರುವ ಲಕ್ಷ್ಮಣನನ್ನು ನೋಡಿದ ಬಳಿಕ ಪವನಪುತ್ರ ಹನುಮಂತನು ಕಠೋರ ವಚನಗಳನ್ನಾಡುತ್ತಾ ರಾವಣನತ್ತ ಧಾವಿಸಿದನು. ಮಾರುತಿಯು ಬರುತ್ತಲೇ ರಾವಣನು ಅವನ ಮೇಲೆ ಭಯಂಕರವಾದ ಮುಷ್ಟಿಪ್ರಹಾರ ಮಾಡಿದನು. (ದೋ/೮೩)

**ಚೌ – ಜಾನು ಟೇಕಿ ಕಪಿ ಭೂಮಿ ನ ಗಿರಾ। ಉಠಾ ಸँಭಾರಿ ಬಹುತ ರಿಸ ಭರಾ॥**
**ಮುಠಿಕಾ ಏಕ ತಾಹಿ ಕಪಿ ಮಾರಾ। ಪರೆಉ ಸೈಲ ಜನು ಬಜ್ರ ಪ್ರಹಾರಾ॥ ೧ ॥**
**ಮುರುಛಾ ಗೈ ಬಹೋರಿ ಸೋ ಜಾಗಾ। ಕಪಿ ಬಲ ಬಿಪುಲ ಸರಾಹನ ಲಾಗಾ॥**
**ಧಿಗ ಧಿಗ ಮಮ ಪೌರುಷ ಧಿಗ ಮೋಹೀ। ಜೌಂ ತೈಂ ಜಿಅತ ರಹೇಸಿ ಸುರದ್ರೋಹೀ॥ ೨ ॥**
**ಅಸ ಕಹಿ ಲಛಿಮನ ಕಹುँ ಕಪಿ ಲ್ಯಾಯೋ। ದೇಖಿ ದಸಾನನ ಬಿಸಮಯ ಪಾಯೋ॥**
**ಕಹ ರಘುಬೀರ ಸಮುಝು ಜಿಯँ ಭ್ರಾತಾ। ತುಮ್ಹ ಕೃತಾಂತ ಭಚ್ಛಕ ಸುರ ತ್ರಾತಾ॥ ೩ ॥**
**ಸುನತ ಬಚನ ಉಠಿ ಬೈಠ ಕೃಪಾಲಾ। ಗಈ ಗಗನ ಸೋ ಸಕತಿ ಕರಾಲಾ॥**
**ಪುನಿ ಕೋದಂಡ ಬಾನ ಗಹಿ ಧಾಏ। ರಿಪು ಸನ್ಮುಖ ಅತಿ ಆತುರ ಆಏ॥ ೪ ॥**

ಹನುಮಂತನು ಮಂಡಿಯೂರಿ ಕುಕ್ಕರಿಸಿಬಿಟ್ಟ, ನೆಲಕ್ಕುರುಳಲಿಲ್ಲ. ಬಳಿಕ ಅವನು ಸುಧಾರಿಸಿಕೊಂಡು ರೋಷಭೀಷಣನಾಗಿ ಮೇಲೆದ್ದು ರಾವಣನಿಗೆ ಒಂದು ಭಯಂಕರ ಗುದ್ದುಕೊಟ್ಟನು. ಅದರಿಂದ ಅವನು ವಜ್ರಪ್ರಹಾರದಿಂದ ಪರ್ವತವು ಉರುಳುವಂತೆ ನೆಲಕ್ಕುರುಳಿದನು. ಮೂರ್ಛೆ ತಿಳಿದ ಮೇಲೆ ಅವನು ಎಚ್ಚರಗೊಂಡು ಆಂಜನೇಯನ ವಿಪುಲ ಬಲವನ್ನು ಪ್ರಶಂಸಿಸತೊಡಗಿದನು. ಆಗ ಹನುಮಂತನು – 'ಎಲೈ ಸುರದ್ರೋಹಿಯೇ! ನಾನು ಇಂತಹ ಏಟುಕೊಟ್ಟರೂ ನೀನು ಇನ್ನೂ ಉಳಿದುಕೊಂಡೆಯಲ್ಲ! ನನಗೂ ನನ್ನ ಪೌರುಷಕ್ಕೆ ಧಿಕ್ಕಾರವಿರಲಿ! ಧಿಕ್ಕಾರವಿರಲಿ!! ಹೀಗೆ ಹೇಳುತ್ತಾ ಮಾರುತಿಯು ಲಕ್ಷ್ಮಣನನ್ನು ಎತ್ತಿಕೊಂಡು ಶ್ರೀರಘುನಾಥನ ಬಳಿಗೆ ಹೋದನು. ರಾವಣನು ಇದನ್ನು ನೋಡಿ ಆಶ್ಚರ್ಯಚಕಿತನಾದನು. (ಏಕೆಂದರೆ, ರಾವಣನು ತನ್ನ ಇಪ್ಪತ್ತು ಭುಜಗಳಿಂದಲೂ ಲಕ್ಷ್ಮಣನನ್ನು ಎತ್ತಲು ಅಸಮರ್ಥನಾದನು. ಆದರೆ ಆಂಜನೇಯನು ಅವನನ್ನು ಲೀಲಾಜಾಲವಾಗಿ ಎತ್ತಿಕೊಂಡು ಹೋಗುವುದನ್ನು ನೋಡಿ ಅಚ್ಚರಿಗೊಂಡನು.) ಅತ್ತ ಶ್ರೀರಘುನಾಥನು – 'ಸೋದರಾ! ನೀನು ಕಾಲವನ್ನೂ ಕೂಡ ಭಕ್ಷಿಸುವವನು. ಸುರರಕ್ಷಕನಾಗಿರುವೆ ಎಂಬುದನ್ನು ನೆನೆ' ಎಂದು ಹೇಳುತ್ತಲೇ ಕೃಪಾಳು ಲಕ್ಷ್ಮಣನು ಎದ್ದು ಕುಳಿತನು. ಆ ಕರಾಳ ಶಕ್ತಿಯು ಆಕಾಶಕ್ಕೆ ಹೊರಟುಹೋಯಿತು. ಲಕ್ಷ್ಮಣನು ಮರಳಿ ಧನುಷ್ಪಾಣಿಯಾಗಿ ಓಡೋಡುತ್ತಾ ಶತ್ರುವನ್ನು ಎದುರಿಸಿದನು. (ಚೌ/೧-೪)

**ಛಂ – ಆತುರ ಬಹೋರಿ ಬಿಭಂಜಿ ಸ್ಯಂದನ ಸೂತ ಹತಿ ಬ್ಯಾಕುಲ ಕಿಯೋ।**
**ಗಿರ್‍ಯೊ ಧರನಿ ದಸಕಂಧರ ಬಿಕಲತರ ಬಾನ ಸತ ಬೇಧ್ಯೋ ಹಿಯೋ॥**
**ಸಾರಥೀ ದೂಸರ ಘಾಲಿ ರಥ ತೇಹಿ ತುರತ ಲಂಕಾ ಲೈ ಗಯೋ॥**
**ರಘುಬೀರ ಬಂಧು ಪ್ರತಾಪ ಪುಂಜ ಬಹೋರಿ ಪ್ರಭು ಚರನನ್ಹಿ ನಯೋ॥**

ಲಕ್ಷ್ಮಣನು ಅತಿಶೀಘ್ರವಾಗಿ ರಾವಣನ ರಥವನ್ನು ಪುಡಿ-ಪುಡಿಗೈದು, ಸಾರಥಿಯನ್ನು ಕೊಂದು ರಾವಣನನ್ನು ವ್ಯಾಕುಲನನ್ನಾಗಿಸಿದನು. ನೂರು ಬಾಣಗಳಿಂದ ಅವನ ಹೃದಯವನ್ನು ಛಿದ್ರವಿಚ್ಛಿದ್ರವನ್ನಾಗಿ ಮಾಡಿದನು. ಅದರಿಂದ ಅವನು ಅತಿವ್ಯಾಕುಲನಾಗಿ ನೆಲಕ್ಕುರುಳಿದನು. ಅಷ್ಟರಲ್ಲಿ ಮತ್ತೊಬ್ಬ ಸಾರಥಿಯು ಅವನನ್ನು ರಥದೊಳಕ್ಕೆ ಹಾಕಿಕೊಂಡು ತಡಮಾಡದೆ ಲಂಕೆಗೆ ಕೊಂಡುಹೋದನು. ಪ್ರತಾಪಪುಂಜನಾದ ರಾಮಾನುಜನು ಮರಳಿ ಬಂದು ಶ್ರೀರಾಮಚಂದ್ರನ ಚರಣಗಳಲ್ಲಿ ಹಣೆಚಾಚಿದನು. (ಛಂದ)

**ದೋ – ಉಹಾँ ದಸಾನನ ಜಾಗಿ ಕರಿ ಕರೈ ಲಾಗ ಕಛು ಜಗ್ಯ।**
**ರಾಮ ಬಿರೋಧ ಬಿಜಯ ಚಹ ಸಠ ಹಠ ಬಸ ಅತಿ ಅಗ್ಯ॥ ೮೪॥**

ಅತ್ತ ಲಂಕೆಯಲ್ಲಿ ರಾವಣನು ಮೂರ್ಛೆಯಿಂದ ಮೇಲೆದ್ದು ಒಂದು ಆಭಿಚಾರಿಕ ಯಜ್ಞವನ್ನು ಮಾಡತೊಡಗಿದನು. ಆ ಅಜ್ಞಾನೀ, ಶಠನಿಗೆ ರಾಮನನ್ನು ವಿರೋಧಿಸಿ, ಜಯಗಳಿಸಬೇಕೆಂಬ ಹಟ. (ದೋ/೮೪)

**ಚೌ – ಇಹಾँ ಬಿಭೀಷನ ಸಬ ಸುಧಿ ಪಾಈ। ಸಪದಿ ಜಾಇ ರಘುಪತಿಹಿ ಸುನಾಈ॥**
**ನಾಥ ಕರಇ ರಾವನ ಏಕ ಜಾಗಾ। ಸಿದ್ಧ ಭಏँ ನಹಿँ ಮರಿಹಿ ಅಭಾಗಾ॥ ೧॥**
**ಪಠವಹು ನಾಥ ಬೇಗಿ ಭಟ ಬಂದರ। ಕರಹಿँ ಬಿಧಂಸ ಆವ ದಸಕಂಧರ॥**
**ಪ್ರಾತ ಹೋತ ಪ್ರಭು ಸುಭಟ ಪಠಾಏ। ಹನುಮದಾದಿ ಅಂಗದ ಸಬ ಧಾಏ॥ ೨॥**
**ಕೌತುಕ ಕೂದಿ ಚಢೇ ಕಪಿ ಲಂಕಾ। ಪೈಠೇ ರಾವನ ಭವನ ಅಸಂಕಾ॥**
**ಜಗ್ಯ ಕರತ ಜಬಹೀँ ಸೋ ದೇಖಾ। ಸಕಲ ಕಪಿನ್ಹ ಭಾ ಕ್ರೋಧ ಬಿಸೇಷಾ॥ ೩॥**
**ರನ ತೇ ನಿಲಜ ಭಾಜಿ ಗೃಹ ಆವಾ। ಇಹಾँ ಆಇ ಬಕ ಧ್ಯಾನ ಲಗಾವಾ॥**
**ಅಸ ಕಹಿ ಅಂಗದ ಮಾರಾ ಲಾತಾ। ಚಿತವ ನ ಸಠ ಸ್ವಾರಥ ಮನ ರಾತಾ॥ ೪॥**

ಯಜ್ಞದ ವಿಚಿತ್ರ ಹೊಗೆಯನ್ನು ಕಂಡ ವಿಭೀಷಣನು ಕೂಡಲೇ ಹೋಗಿ ಶ್ರೀರಾಮನಲ್ಲಿ ವಿನಂತಿಸಿಕೊಂಡನು – 'ಪ್ರಭೂ! ರಾವಣನು ಒಂದು ಯಜ್ಞಮಾಡುತ್ತಿದ್ದಾನೆ. ಅದೇನಾದರೂ ಸಿದ್ಧಿಸಿದರೆ ಆ ನಿರ್ಭಾಗ್ಯನು ಸಹಜವಾಗಿ ಸಾಯಲಾರನು. ಸ್ವಾಮಿ! ಕೂಡಲೇ ವಾನರಯೋಧರನ್ನು ಕಳಿಸಿರಿ. ಅವರು ಹೋಗಿ ಆ ಯಜ್ಞವನ್ನು ಧ್ವಂಸಗೊಳಿಸಿದಾಗ ದಶಾನನನು ಮರಳಿ ಯುದ್ಧಕ್ಕೆ ಬರುತ್ತಾನೆ. ಮರುದಿನ ಬೆಳಗಾಗುತ್ತಲೇ ಪ್ರಭುವು ತನ್ನ ವಾನರವೀರರನ್ನು ಯಜ್ಞಭಂಗಕ್ಕಾಗಿ ಕಳುಹಿಸಿಕೊಟ್ಟನು. ಹನುಮಂತ, ಅಂಗದಾದಿ ಪ್ರಧಾನವೀರರು ಅತ್ತ ಧಾವಿಸಿದರು. ಅವರೆಲ್ಲರೂ ಲೀಲಾಜಾಲವಾಗಿ ನೆಗೆಯುತ್ತಾ ಲಂಕೆಯನ್ನು ಪ್ರವೇಶಿಸಿ ನಿರ್ಭಯರಾಗಿ ರಾವಣನ ಅರಮನೆಯನ್ನು ಹೊಕ್ಕರು. ಅವನು ಯಜ್ಞಮಾಡುತ್ತಿರುವುದನ್ನು ಕಂಡು ವಾನರರೆಲ್ಲರೂ ಕ್ರೋಧಗೊಂಡು ಹಲ್ಕಿರಿದು ಹೇಳಿದರು – 'ಎಲವೊ ನಾಚಿಕೆಗೆಟ್ಟವನೇ! ರಣಭೂಮಿಗೆ ಬೆನ್ನುತೋರಿ ಓಡಿಬಂದು ಇಲ್ಲಿ ಬಕಧ್ಯಾನ ಮಾಡುತ್ತಿರುವೆಯಲ್ಲ! ಹೀಗೆ ಹೇಳಿ ಅಂಗದನು ಅವನನ್ನು ಕಾಲಿಂದ ಒದ್ದುಬಿಟ್ಟನು. ಮುಷ್ಠಿಯಿಂದ ತಿವಿದನು. ಆದರೆ ಅವನು ಇವರಕಡೆ ಕಣ್ಣುತೆರೆದು ನೋಡಲಿಲ್ಲ. ಆ ದುಷ್ಟನ ಮನಸ್ಸು ಸ್ವಾರ್ಥದಲ್ಲಿ ಮುಳುಗಿತ್ತು. (ಚೌ/೧-೪)

**ಛಂ – ನಹಿँ ಚಿತವ ಜಬ ಕರಿ ಕೋಪ ಕಪಿ ಗಹಿ ದಸನ ಲಾತನ್ಹ ಮಾರಹೀँ।**
**ಧರಿ ಕೇಸ ನಾರಿ ನಿಕಾರಿ ಬಾಹೇರ ತೇऽತಿದೀನ ಪುಕಾರಹೀँ॥**
**ತಬ ಉಠೆಉ ಕ್ರುದ್ಧ ಕೃತಾಂತ ಸಮ ಗಹಿ ಚರನ ಬಾನರ ಡಾರಈ।**
**ಏಹಿ ಬೀಚ ಕಪಿನ್ಹ ಬಿಧಂಸ ಕೃತ ಮಖ ದೇಖಿ ಮನ ಮಹುँ ಹಾರಈ॥**

ರಾವಣನು ಇನ್ನೂ ಕಣ್ಣುಮುಚ್ಚಿಕೊಂಡೇ ಇರುವಾಗ ವಾನರರೆಲ್ಲ ಕುಪಿತರಾಗಿ ಅವನನ್ನು ಹಲ್ಲುಗಳಿಂದ ಕಚ್ಚತೊಡಗಿದರು; ಒದೆಯತೊಡಗಿದರು. ಅಂತಃಪುರದ ಸ್ತ್ರೀಯರ ಹೆಡೆಮುಡಿ ಹಿಡಿದೆಳೆದು ಹೊರಕ್ಕೆ ಎಳೆದು ತಂದರು. ಅವರು ದೀನರಾಗಿ

ಆರ್ತನಾದ ಮಾಡುತ್ತಿದ್ದರು. ಆಗ ರಾವಣನು ಕೃತಾಂತನಂತೆ ಕ್ರುದ್ಧನಾಗಿ ಮೇಲೆದ್ದು ವಾನರರ ಕಾಲುಹಿಡಿದುಕೊಂಡು ರಪ-ರಪನೆ ನೆಲಕ್ಕೆ ಅಪ್ಪಳಿಸಿದನು. ಈ ನಡುವೆ ಕಪಿವೀರರು ಯಜ್ಞವನ್ನು ಧ್ವಂಸಮಾಡಿದರು. ಅದನ್ನು ಕಂಡ ರಾವಣನ ಧೈರ್ಯ ಸಡಲಿಸಿತು. (ಛಂದ)

**ದೋ – ಜಗ್ಯ ಬಿಧಂಸಿ ಕುಸಲ ಕಪಿ ಆಏ ರಘುಪತಿ ಪಾಸ ।**
**ಚಲೆಉ ನಿಸಾಚರ ಕ್ರುದ್ಧ ಹೋಇ ತ್ಯಾಗಿ ಜಿವನ ಕೈ ಆಸ ॥ ೮೫ ॥**

ಅಧ್ವರಧ್ವಂಸ ಮಾಡಿ ಎಲ್ಲ ವಾನರಕೋವಿದರು ಶ್ರೀರಘುನಾಥನ ಬಳಿಗೆ ಹೋದರು. ಆಗ ರಾವಣನು ಜೀವದ ಹಂಗನ್ನು ತೊರೆದು ರೋಷಭೀಷಣನಾಗಿ ಹೊರಕ್ಕೆ ಬಂದನು. (ದೋ/೮೫)

## ರಾಮ-ರಾವಣ ಯುದ್ಧ

**ಚೌ – ಚಲತ ಹೋಹಿಂ ಅತಿ ಅಸುಭ ಭಯಂಕರ । ಬೈಠಹಿಂ ಗೀಧ ಉಡಾಇ ಸಿರನ್ಹ ಪರ ॥**
**ಭಯಉ ಕಾಲಬಸ ಕಾಹು ನ ಮಾನಾ । ಕಹೆಸಿ ಬಜಾವಹು ಜುದ್ಧ ನಿಸಾನಾ ॥ ೧ ॥**
**ಚಲೀ ತಮೀಚರ ಅನೀ ಅಪಾರಾ । ಬಹು ಗಜ ರಥ ಪದಾತಿ ಅಸವಾರಾ ॥**
**ಪ್ರಭು ಸನ್ಮುಖ ಧಾಏ ಖಲ ಕೈಸೇಂ । ಸಲಭ ಸಮೂಹ ಅನಲ ಕಹಁ ಜೈಸೇಂ ॥ ೨ ॥**
**ಇಹಾಁ ದೇವತನ್ಹ ಅಸ್ತುತಿ ಕೀನ್ಹೀ । ದಾರುನ ಬಿಪತಿ ಹಮಹಿ ಏಹಿಂ ದೀನ್ಹೀ ॥**
**ಅಬ ಜನಿ ರಾಮ ಖೆಲಾವಹು ಏಹೀ । ಅತಿಸಯ ದುಖಿತ ಹೋತಿ ಬೈದೇಹೀ ॥ ೩ ॥**
**ದೇವ ಬಚನ ಸುನಿ ಪ್ರಭು ಮುಸುಕಾನಾ । ಉಠಿ ರಘುಬೀರ ಸುಧಾರೇ ಬಾನಾ ॥**
**ಜಟಾ ಜೂಟ ದೃಢ ಬಾಁಧೇಂ ಮಾಥೇ । ಸೋಹಹಿಂ ಸುಮನ ಬೀಚ ಬಿಚ ಗಾಥೇ ॥ ೪ ॥**
**ಅರುನ ನಯನ ಬಾರಿದ ತನು ಸ್ಯಾಮಾ । ಅಖಿಲ ಲೋಕ ಲೋಚನಾಭಿರಾಮಾ ॥**
**ಕಟಿತಟ ಪರಿಕರ ಕಸ್ಯೋ ನಿಷಂಗಾ । ಕರ ಕೋದಂಡ ಕಠಿನ ಸಾರಂಗಾ ॥ ೫ ॥**

ರಾವಣನು ರಣಾಭಿಮುಖವಾಗಿ ಹೊರಟಾಗ ಅನೇಕ ಅಪಶಕುನಗಳಾದುವು. ಹದ್ದುಗಳು ಹಾರಿ-ಹಾರಿ ಬಂದು ಅವನ ತಲೆಗಳ ಮೇಲೆ ಕುಳಿತುಕೊಳ್ಳತೊಡಗಿದರು. ಆದರೆ ಅವನು ಕಾಲವಶನಾದ್ದರಿಂದ ಈ ಯಾವ ಅಪಶಕುನಗಳನ್ನು ಪರಿಗಣಿಸಲಿಲ್ಲ. 'ಯುದ್ಧದ ಭೇರಿಗಳು ಮೊಳಗಲಿ' ಎಂದು ಅಬ್ಬರಿಸಿದನು. ನಿಶಾಚರರ ಅಪಾರಸೇನೆ ಹೊರಟಿತು. ಅದರಲ್ಲಿ ಅಸಂಖ್ಯ ಆನೆಗಳು, ಕುದುರೆಗಳು, ರಥಗಳು, ಪದಾತಿಗಳಿದ್ದವು. ಅವು ಅಗ್ನಿಮುಖವಾಗಿ ಓಡುವ ಅಸಂಖ್ಯಾತ ಪತಂಗಗಳಂತೆ ಪ್ರಭು ಶ್ರೀರಾಮನನ್ನು ಇದಿರಿಸಲು ಧಾವಿಸಿದವು. ಇತ್ತ ದೇವತೆಗಳೆಲ್ಲ ನೆರೆದು ಪ್ರಭು ಶ್ರೀರಾಮಚಂದ್ರನನ್ನು ಸ್ತುತಿಸತೊಡಗಿದರು – ''ಓ ಶ್ರೀರಘುಪುಂಗವಾ! ಈ ರಾವಣನು ನಮಗೆ ದಾರುಣವಾದ ದುಃಖವನ್ನು ನೀಡಿದ್ದಾನೆ. ಇವನನ್ನು ಇನ್ನು ಹೆಚ್ಚು ಆಟವಾಡಿಸದೆ ಬೇಗನೇ ವಧಿಸಿಬಿಡು. ಜಾನಕಿದೇವಿಯೂ ತುಂಬಾ ದುಃಖಾತುರಳಾಗಿದ್ದಾಳೆ.'' ದೇವತೆಗಳ ಮಾತುಕೇಳಿ ಪ್ರಭುಶ್ರೀರಾಮನು ಮುಗುಳ್ನಗೆ ಬೀರಿದನು. ಅನಂತರ ಅವನು ಎದ್ದು ತನ್ನ ಬಾಣಗಳನ್ನು ಅಣಿಗೊಳಿಸಿಕೊಂಡನು. ತಲೆಯಮೇಲಿನ ಜಟಾಜೂಟವನ್ನು ಸರಿಪಡಿಸಿಕೊಂಡನು. ಅದರ ನಡು-ನಡುವೆ ಹೂವು ಸೂಡಿದ್ದರಿಂದ ಅದು ತುಂಬಾ ಚೆಲುವಾಗಿ ಕಂಗೊಳಿಸುತ್ತಿತ್ತು. ಅರುಣನಯನನೂ, ಮೇಘಶ್ಯಾಮಲನೂ, ಅಖಿಲ ಲೋಕಲೋಚನಾಭಿರಾಮನೂ ಆದ ಪ್ರಭುವು ಸೊಂಟಕ್ಕೆ ನಿಷಂಗವನ್ನೂ, ಕೈಯಲ್ಲಿ ಶಾರಂಗವನ್ನೂ ಧರಿಸಿದನು. (ಚೌ/೧-೫)

**ಛಂ – ಸಾರಂಗ ಕರ ಸುಂದರ ನಿಷಂಗ ಸಿಲೀಮುಖಾಕರ ಕಟಿ ಕಸ್ಯೋ ।**
**ಭುಜದಂಡ ಪೀನ ಮನೋಹರಾಯತ ಉರ ಧರಾಸುರ ಪದ ಲಸ್ಯೋ ॥**
**ಕಹ ದಾಸ ತುಲಸೀ ಜಬಹಿಂ ಪ್ರಭು ಸರ ಚಾಪ ಕರ ಫೇರನ ಲಗೇ ।**
**ಬ್ರಹ್ಮಾಂಡ ದಿಗ್ಗಜ ಕಮಠ ಅಹಿ ಮಹಿ ಸಿಂಧು ಭೂಧರ ಡಗಮಗೇ ॥**

ಶ್ರೀರಾಮನು ಕರದಲ್ಲಿ ಶಾರ್ಙ್ಗಧನುಸ್ಸನ್ನೂ, ನಡುವಿನಲ್ಲಿ ಬಾಣಗಳ ಗಣಿಯಾದ ತೂಣೀರವನ್ನೂ ಧರಿಸಿಕೊಂಡನು. ಅವನ ಭುಜದಂಡಗಳು ಪರಿಪುಷ್ಟವಾಗಿದ್ದವು. ಮನೋಹರವಾದ ವಿಶಾಲ ವಕ್ಷಸ್ಥಳದಲ್ಲಿದ್ದ ಭೃಗುಲಾಂಛನವು ಶೋಭಿಸುತ್ತಿತ್ತು. ಪ್ರಭುವು ಧನುರ್ಬಾಣಗಳನ್ನು ಆಡಿಸತೊಡಗಿದನು. ಆಗ ಬ್ರಹ್ಮಾಂಡಗಳೂ, ದಿಗ್ಗಜಗಳೂ, ಆದಿಕೂರ್ಮನೂ, ಶೇಷನೂ, ಪೃಥ್ವಿಯೂ, ಸಮುದ್ರಗಳೂ, ಪರ್ವತಗಳೂ, ಹೀಗೆ ಎಲ್ಲವೂ ಡೋಲಾಯಮಾನವಾದುವು ಎಂದು ತುಳಸೀದಾಸರು ಹೇಳುತ್ತಾರೆ. (ಛಂದ)

**ದೋ – ಸೋಭಾ ದೇಖಿ ಹರಷಿ ಸುರ ಬರಷಹಿಂ ಸುಮನ ಅಪಾರ।**
**ಜಯ ಜಯ ಜಯ ಕರುನಾನಿಧಿ ಛಬಿ ಬಲ ಗುನ ಆಗಾರ॥ ೮೬ ॥**

ಭಗವಾನ್ ಶ್ರೀರಾಮನ ಶೋಭೆಯನ್ನು ನೋಡಿ ದೇವತೆಗಳು ಹರ್ಷಿತರಾಗಿ ಹೂವುಗಳನ್ನು ಅಪಾರವಾಗಿ ವರ್ಷಿಸತೊಡಗಿದರು. ಶೋಭಾಶಕ್ತಿಗಣಗಳ ನಿಧಾನರೂ, ಕರುಣಾಳುವೂ ಆದ ಪ್ರಭುವಿಗೆ 'ಜಯವಾಗಲೀ, ಜಯವಾಗಲೀ' ಎಂದು ಉಗ್ಗಡಿಸಿದರು. (ದೋ/೮೬)

**ಚೌ – ಏಹೀಂ ಬೀಚ ನಿಸಾಚರ ಅನೀ। ಕಸಮಸಾತ ಆಈ ಅತಿ ಘನೀ॥**
**ದೇಖಿ ಚಲೇ ಸನ್ಮುಖ ಕಪಿ ಭಟ್ಟಾ। ಪ್ರಲಯಕಾಲ ಕೇ ಜನು ಘನ ಘಟ್ಟಾ॥ ೧ ॥**
**ಬಹು ಕೃಪಾನ ತರವಾರಿ ಚಮಂಕಹಿಂ। ಜನು ದಹಂ ದಿಸಿ ದಾಮಿನೀಂ ದಮಂಕಹಿಂ॥**
**ಗಜ ರಥ ತುರಗ ಚಿಕಾರ ಕಠೋರಾ। ಗರ್ಜಹಿಂ ಮನಹುಂ ಬಲಾಹಕ ಘೋರಾ॥ ೨ ॥**
**ಕಪಿ ಲಂಗೂರ ಬಿಪುಲ ನಭ ಛಾಏ। ಮನಹುಂ ಇಂದ್ರಧನು ಉಏ ಸುಹಾಏ॥**
**ಉಠಇ ಧೂರಿ ಮಾನಹುಂ ಜಲಧಾರಾ। ಬಾನ ಬುಂದ ಭೈ ಬೃಷ್ಟಿ ಅಪಾರಾ॥ ೩ ॥**
**ದುಹುಂ ದಿಸಿ ಪರ್ಬತ ಕರಹಿಂ ಪ್ರಹಾರಾ। ಬಜ್ರಪಾತ ಜನು ಬಾರಹಿಂ ಬಾರಾ॥**
**ರಘುಪತಿ ಕೋಪಿ ಬಾನ ಝುರಿ ಲಾಈ। ಘಾಯಲ ಭೈ ನಿಸಿಚರ ಸಮುದಾಈ॥ ೪ ॥**
**ಲಾಗತ ಬಾನ ಬೀರ ಚಿಕ್ಕರಹೀಂ। ಘುರ್ಮಿ ಘುರ್ಮಿ ಜಹಂ ತಹಂ ಮಹಿ ಪರಹೀಂ॥**
**ಸ್ರವಹಿಂ ಸೈಲ ಜನು ನಿರ್ಝರ ಭಾರೀ। ಸೋನಿತ ಸರಿ ಕಾದರ ಭಯಕಾರೀ॥ ೫ ॥**

ಇಷ್ಟರಲ್ಲಿ ಅತ್ಯಂತ ಘನವಾದ ನಿಶಾಚರರ ಸೇನೆ ನೂಕುನುಗ್ಗಲು ಮಾಡುತ್ತಾ ಅತಿವೇಗವಾಗಿ ಯುದ್ಧಭೂಮಿಗೆ ಆಗಮಿಸಿತು. ಅದನ್ನು ಕಂಡ ವಾನರಯೋಧರು ಪ್ರಳಯಕಾಲದ ಮೇಘಸಮೂಹಗಳಂತೆ ಅವರನ್ನು ಎದಿರಿಸಿದರು. ಅಸಂಖ್ಯ ಖಡ್ಗಗಳೂ, ಕೃಪಾಣಗಳೂ, ದಶದಿಶೆಗಳಲ್ಲಿಯೂ ಮಿಂಚು ಹೊಳೆಯುವಂತೆ ಥಳ-ಥಳಿಸುತ್ತಿದ್ದವು. ಗಜ, ರಥ, ತುರಗಗಳ ಘೋರ ಚೀತ್ಕಾರವು ಭಯಂಕರ ಮೇಘಗರ್ಜನೆಯಂತೆ ಮೊಳಗುತ್ತಿತ್ತು. ಕಾಮನಬಿಲ್ಲುಗಳೇ ಮೂಡಿವೆಯೋ ಎನ್ನುವಂತೆ ವಾನರರ ವಾಲ (ಲಾಂಗೂಲ) ಗಳು ಆಕಾಶದಲ್ಲಿ ಎಲ್ಲೆಲ್ಲೂ ಹರಡಿಕೊಂಡವು. ಜಲಧಾರೆಯಂತೆ ರಣಧೂಳು ಎಲ್ಲೆಲ್ಲೂ ಕವಿಯಿತು. ಬಾಣಪರಂಪರೆಯು ವರ್ಷಾಧಾರೆಯಂತೆ ಸುರಿಯತೊಡಗಿತು. ಇತ್ತಂಡಗಳಲ್ಲಿಯೂ ಯೋಧರು ಬೆಟ್ಟಗಳನ್ನೇ ಹಿಡಿದುಕೊಂಡು ಎಸೆದು ಹೋರಾಡುವಾಗ ಮತ್ತೆ-ಮತ್ತೆ ಸಿಡಿಲು ಬಡಿದಂತಾಗುತ್ತಿತ್ತು. ರಘುಪತಿಯು ಕ್ರುದ್ಧನಾಗಿ ಬಾಣಗಳ ಜಡಿಮಳೆ ಸುರಿಸಿದನು. ಅದರಿಂದ ರಕ್ಕಸರ ಸೇನೆ ಘಾಸಿಗೊಂಡಿತು. ರಾಮನ ಬಾಣ ತಗಲುತ್ತಲೇ ನಿಶಾಚರರು ಚೀತ್ಕರಿಸುತ್ತಾ, ಗಿರ-ಗಿರನೆ ತಲೆತಿರುಗಿ ಎಲ್ಲಂದರಲ್ಲೇ ನೆಲಕ್ಕುರುಳುತ್ತಿದ್ದರು. ಬೆಟ್ಟದಿಂದ ಹರಿವ ಝರಿಗಳಂತೆ ಅವರ ಶರೀರದಿಂದ ರಕ್ತ ಹರಿಯುತ್ತಿತ್ತು. ಈ ರೀತಿ ಹೇಡಿಗಳು ಭಯಭ್ರಾಂತರಾಗುವಂತೆ ರುಧಿರಧಾರೆ ದೊಡ್ಡನದಿಯಾಗಿ ಹರಿಯತೊಡಗಿತು. (ಚೌ/೧-೫)

**ಛಂ – ಕಾದರ ಭಯಂಕರ ರುಧಿರ ಸರಿತಾ ಚಲೀ ಪರಮ ಅಪಾವನೀ।**
**ದೊಉ ಕೂಲ ದಲ ರಥ ರೇತ ಚಕ್ರ ಅಬರ್ತ ಬಹತಿ ಭಯಾವನೀ॥**
**ಜಲಜಂತು ಗಜ ಪದಚರ ತುರಗ ಖರ ಬಿಬಿಧ ಬಾಹನ ಕೋ ಗನೇ।**
**ಸರ ಸಕ್ತಿ ತೋಮರ ಸರ್ಪ ಚಾಪ ತರಂಗ ಚರ್ಮ ಕಮಠ ಘನೇ॥**

ಅಂಜುಕುಳಿಗಳನ್ನು ಅಂಜಿಸುತ್ತಾ ಅಪವಿತ್ರ ರಕ್ತದನದಿ ಹರಿದುಹೋಗುತ್ತಿತ್ತು. ಇತ್ತಂಡಗಳೂ ಆ ನದಿಯ ಎರಡು ದಂಡೆಗಳು. ರಥಗಳೇ ಮಳಲು. ಚಕ್ರಗಳೇ ನದಿಯ ಸುಳಿಗಳು. ಈ ಪ್ರಕಾರ ಆ ಶೋಣಿತ ನದಿಯು ಅತ್ಯಂತ ಭಯಂಕರವಾಗಿ ಹರಿಯುತ್ತಿತ್ತು. ಗಜ, ತುರಗ, ಕತ್ತೆಗಳು, ಕಾಲಾಳುಗಳು, ವಿವಿಧವಾಹನಗಳು ಈ ನದಿಯಲ್ಲಿರುವ ಅಸಂಖ್ಯಾತ ಜಲ-ಜಂತುಗಳು. ಬಾಣಗಳು, ಶಕ್ತ್ಯಾಯುಧ, ತೋಮರಗಳೇ ಸರ್ಪಗಳು. ಧನುಸ್ಸುಗಳೇ ತರಂಗಗಳು. ಗುರಾಣಿಗಳೇ ಆಮೆಗಳು. (ಛಂದ)

**ದೋ – ಬೀರ ಪರಹಿಂ ಜನು ತೀರ ತರು ಮಜ್ಜಾ ಬಹು ಬಹ ಫೇನ।**
**ಕಾದರ ದೇಖಿ ಡರಹಿಂ ತಹಂ ಸುಭಟನ್ಹ ಕೇ ಮನ ಚೇನ॥ ೮೭॥**

ನದಿಯ ಪ್ರವಾಹ ವೇಗದಿಂದ ತಟದಲ್ಲಿದ್ದ ಮಹಾವೃಕ್ಷಗಳು ಉರುಳುವಂತೆ ಅನೇಕ ಮಹಾವೀರರು ಉರುಳುತ್ತಿದ್ದರು. ಅವರ ಎಲುಬುಗಳು ಬಂಧಿತವಾದ ಮಜ್ಜೆ ನೊರೆಯಂತೆ ಹರಿಯುತ್ತಿತ್ತು. ಹೇಡಿಗಳು ಈ ದೃಶ್ಯವನ್ನು ಕಂಡು ಹೆದರಿದರೆ ಧೈರ್ಯವುಳ್ಳ ಸುಭಟರ ಮನಸ್ಸಿಗೆ ಆನಂದವಾಗುತ್ತಿತ್ತು. (ದೋ/೮೭)

**ಚೌ – ಮಜ್ಜಹಿಂ ಭೂತ ಪಿಸಾಚ ಬೇತಾಲಾ । ಪ್ರಮಥ ಮಹಾ ಝೋಟಿಂಗ ಕರಾಲಾ ॥**
**ಕಾಕ ಕಂಕ ಲೈ ಭುಜಾ ಉಡಾಹೀಂ । ಏಕ ತೆ ಛೀನಿ ಏಕ ಲೈ ಖಾಹೀಂ ॥ ೧ ॥**
**ಏಕ ಕಹಹಿಂ ಐಸಿಉ ಸೌಂಘಾಈ । ಸಠಹು ತುಮ್ಹಾರ ದರಿದ್ರ ನ ಜಾಈ ॥**
**ಕಹಂರತ ಭಟ ಘಾಯಲ ತಟ ಗಿರೇ । ಜಹ್ ತಹ್ ಮನಹುಂ ಅರ್ಧಜಲ ಪರೇ ॥ ೨ ॥**
**ಖೈಂಚಹಿಂ ಗೀಧ ಆಂತ ತಟ ಭಏ । ಜನು ಬಂಸೀ ಖೇಲತ ಚಿತ ದಏ ॥**
**ಬಹು ಭಟ ಬಹಹಿಂ ಚಢೇ ಖಗ ಜಾಹೀಂ । ಜನು ನಾವರಿ ಖೇಲಹಿಂ ಸರಿ ಮಾಹೀಂ ॥ ೩ ॥**
**ಜೋಗಿನಿ ಭರಿ ಭರಿ ಖಪ್ಪರ ಸಂಚಹಿಂ । ಭೂತ ಪಿಸಾಚ ಬಧೂ ನಭ ನಂಚಹಿಂ ॥**
**ಭಟ ಕಪಾಲ ಕರತಾಲ ಬಜಾವಹಿಂ । ಚಾಮುಂಡಾ ನಾನಾ ಬಿಧಿ ಗಾವಹಿಂ ॥ ೪ ॥**
**ಜಂಬುಕ ನಿಕರ ಕಟಕ್ಕಟ ಕಟ್ಟಹಿಂ । ಖಾಹಿಂ ಹುಆಹಿಂ ಅಘಾಹಿಂ ದಪಟ್ಟಹಿಂ ॥**
**ಕೋಟಿನ್ಹ ರುಂಡ ಮುಂಡ ಬಿನು ಡೊಲ್ಲಹಿಂ । ಸೀಸ ಪರೇ ಮಹಿ ಜಯ ಜಯ ಬೊಲ್ಲಹಿಂ ॥ ೫ ॥**

ಭೂತ, ಪಿಶಾಚಿ, ಬೇತಾಳಗಳೂ, ದೊಡ್ಡ-ದೊಡ್ಡ ಜಡೆಗಳಿದ್ದ ಪ್ರೇತಗಳು. ಪ್ರಮಥಗಣಗಳು ಈ ಸಮರನದಿಯಲ್ಲಿ ಸ್ನಾನಮಾಡುತ್ತಿದ್ದವು. ಕಾಗೆಗಳು, ರಣಹದ್ದುಗಳು ತುಂಡಾದ ಭುಜಗಳನ್ನು ಕೊಕ್ಕಿನಲ್ಲಿ ಎತ್ತಿಕೊಂಡು ಹಾರಿಹೋಗುತ್ತಿದ್ದವು. ಅವುಗಳು ಪರಿಸ್ಪರ ಕಿತ್ತಾಡಿ ತಿನ್ನುತ್ತಿದ್ದವು. 'ಅಯ್ಯೋ ಮೂರ್ಖರೇ! ಇಷ್ಟೊಂದು ಕಳೇಬರಗಳು ಸಮೃದ್ಧವಾಗಿರುವಾಗ ಇಲ್ಲಿ ಬಿದ್ದಿರುವಾಗಲೂ ನಿಮ್ಮ ದಾರಿದ್ರ್ಯವು ತೊಲಗಲಿಲ್ಲವೇ?' ಎಂಬ ಮಾತುಗಳು ಕೇಳಿಬರುತ್ತಿದ್ದವು. ಗಾಯಗೊಂಡವೀರರು ಈ ರಕ್ತನದೀತೀರದಲ್ಲಿ ನರಳುತ್ತಾ ಮಲಗಿರುವರು. ಅವರು ಅರ್ಧಜಲದಲ್ಲಿ ಇರಿಸಿದಂತೆ ಕಂಡುಬರುತ್ತಿದ್ದರು. (ಸಾವು ಸನ್ನಿಹಿತವಾದಾಗ ಅರ್ಧಜಲದಲ್ಲಿ, ಅಂದರೆ ನೀರಿನಲ್ಲಿ ಅರ್ಧಶರೀರವನ್ನು ಮುಳುಗಿಸಿ ಇಡುತ್ತಾರೆ. ಅದರಂತೆ ಅವರೆಲ್ಲ ಮಲಗಿದ್ದರು.) ಮೀನುಗಾರರು ದಡದ ಮೇಲೆ ಕುಳಿತು ಗಾಳಹಿಡಿದು ಆಡಿಸುತ್ತಿರುವಂತೆ ರಣಹದ್ದುಗಳು ಕರುಳುಗಳನ್ನು ಕಿತ್ತು ಎಳೆದಾಡುತ್ತಿದ್ದವು. ಅನೇಕ ಯೋಧರ ಕಳೇಬರಗಳು ಈ ನದೀಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗುತ್ತಿದ್ದವು. ಅವುಗಳ ಮೇಲೆ ಕುಳಿತ ಪಕ್ಷಿಗಳು ನೌಕಾವಿಹಾರಮಾಡುತ್ತಿವೆಯೋ ಎಂಬಂತಿತ್ತು. ಯೋಗಿನಿಯರು ಖಪ್ಪರ (ತಲೆಯೋಡು) ಗಳಲ್ಲಿ ರಕ್ತವನ್ನು ಶೇಖರಿಸುತ್ತಿದ್ದವು. ಭೂತ, ಪಿಶಾಚರ ಪತ್ನಿಯರು ಆಕಾಶದಲ್ಲಿ ನರ್ತಿಸುತ್ತಿದ್ದರು. ಚಾಮುಂಡಿಯರು ಯೋಧರ ಕಪಾಲಗಳನ್ನು ಹಿಡಿದು ಕರತಾಳದಂತೆ ಬಡಿಯುತ್ತಾ, ನಾನಾವಿಧವಾಗಿ ಹಾಡುತ್ತಿದ್ದರು. ನರಿಗಳ ಗುಂಪುಗಳು ಕಟ-ಕಟ ಶಬ್ದಮಾಡುತ್ತಾ ಹೆಣಗಳನ್ನು ಕಡಿಯುತ್ತಾ ತಿನ್ನುತ್ತಿದ್ದವು. ಹೊಟ್ಟೆಬಿರಿಯ ತಿಂದಾದ ಮೇಲೆ, ಒಂದು ಇನ್ನೊಂದನ್ನು ಗದರಿಸಿಕೊಳ್ಳುತ್ತಿದ್ದವು. ಅಸಂಖ್ಯಾತ ರುಂಡವಿಲ್ಲದ ಮುಂಡಗಳು ಯುದ್ಧಭೂಮಿಯಲ್ಲಿ ಅಲೆಯುತ್ತಿದ್ದವು. ತಲೆಗಳು ನೆಲಕ್ಕೊರಗಿ ಜಯ-ಜಯಕಾರ ಮಾಡುತ್ತಿದ್ದವು. (ಚೌ/೧-೫)

**ಛಂ – ಬೊಲ್ಲಹಿಂ ಜೊ ಜಯ ಜಯ ಮುಂಡ ರುಂಡ ಪ್ರಚಂಡ ಸಿರ ಬಿನು ಧಾವಹೀಂ ।**
**ಖಪ್ಪರಿನ್ಹ ಖಗ್ಗ ಅಲುಜ್ಝಿ ಜುಜ್ಝಹಿಂ ಸುಭಟ ಭಟನ್ಹ ಢಹಾವಹೀಂ ॥**
**ಬಾನರ ನಿಸಾಚರ ನಿಕರ ಮರ್ದಹಿಂ ರಾಮ ಬಲ ದರ್ಪಿತ ಭಏ ।**
**ಸಂಗ್ರಾಮ ಅಂಗನ ಸುಭಟ ಸೋವಹಿಂ ರಾಮ ಸರ ನಿಕರನ್ಹಿ ಹಏ ॥**

ಹರಿದುಬಿದ್ದ ಶಿರಗಳು ಜಯಕಾರ ಮಾಡುತ್ತಿದ್ದವು. ತಲೆಯಿಲ್ಲದ ದೇಹಗಳು ಕುಣಿಯುತ್ತಿದ್ದವು. ಪಕ್ಷಿಗಳು ತಲೆಯೋಡುಗಳಲ್ಲಿ ಪರಸ್ಪರ ಕಾದಾಡಿ ಸಾಯುತ್ತಿದ್ದವು. ಸುಭಟರು ಇತರ ಭಟರನ್ನು ನೆಲಕ್ಕುರುಳಿಸುತ್ತಿದ್ದರು. ಶ್ರೀರಾಮಚಂದ್ರನ ಬಲಗರ್ವದಿಂದ ವಾನರರು ರಾಕ್ಷಸರನ್ನು ಹಿಂಡು-ಹಿಂಡಾಗಿ ಹೊಸಕಿ ಹಾಕುತ್ತಿದ್ದರು. ಶ್ರೀರಾಮನ ಬಾಣಸಮೂಹಕ್ಕೆ ಗುರಿಯಾದ ಯೋಧರು ರಣರಂಗದಲ್ಲಿ ಚಿರನಿದ್ರೆಯಲ್ಲಿ ಮಲಗಿದ್ದರು. (ಛಂದ)

**ದೋ – ರಾವನ ಹೃದಯ್ ಬಿಚಾರಾ ಭಾ ನಿಸಿಚರ ಸಂಘಾರ ।**
**ಮೈಂ ಅಕೇಲ ಕಪಿ ಭಾಲು ಬಹು ಮಾಯಾ ಕರೌಂ ಅಪಾರ ॥ ೮೮ ॥**

ರಾವಣನು ಯೋಚಿಸಿದನು – ನಿಶಾಚರರ ಸಂಹಾರವಾಗಿ ಹೋಯಿತು. ನಾನು ಒಂಟಿಯಾಗಿ ಉಳಿದಿದ್ದೇನೆ. ವಾನರ-ಭಲ್ಲೂಕಗಳು ಅನೇಕವಾಗಿವೆ. ಆದ್ದರಿಂದ ಈಗ ಅಪಾರಮಾಯೆಯನ್ನು ರಚಿಸಿ ಹೋರಾಡುವೆನು. (ದೋ/೮೮)

**ಚೌ – ದೇವನ್ಹ ಪ್ರಭುಹಿ ಪಯಾದೇಂ ದೇಖಾ। ಉಪಜಾ ಉರ ಅತಿ ಛೋಭ ಬಿಸೇಷಾ॥**
**ಸುರಪತಿ ನಿಜ ರಥ ತುರತ ಪಠಾವಾ। ಹರಷ ಸಹಿತ ಮಾತಲಿ ಲೈ ಆವಾ॥೧॥**
**ತೇಜ ಪುಂಜ ರಥ ದಿಬ್ಯ ಅನೂಪಾ। ಹರಷಿ ಚಢೇ ಕೋಸಲಪುರ ಭೂಪಾ॥**
**ಚಂಚಲ ತುರಗ ಮನೋಹರ ಚಾರೀ। ಅಜರ ಅಮರ ಮನ ಸಮ ಗತಿಕಾರೀ॥೨॥**
**ರಥಾರೂಢ ರಘುನಾಥಹಿ ದೇಖೀ। ಧಾಏ ಕಪಿ ಬಲು ಪಾಇ ಬಿಸೇಷೀ॥**
**ಸಹೀ ನ ಜಾಯಿ ಕಪಿನ್ಹ ಕೈ ಮಾರೀ। ತಬ ರಾವನ ಮಾಯಾ ಬಿಸ್ತಾರೀ॥೩॥**
**ಸೋ ಮಾಯಾ ರಘುಬೀರಹಿ ಬಾಂಚೀ। ಲಛಿಮನ ಕಪಿನ್ಹ ಸೊ ಮಾನೀ ಸಾಂಚೀ॥**
**ದೇಖೀ ಕಪಿನ್ಹ ನಿಸಾಚರ ಅನೀ। ಅನುಜ ಸಹಿತ ಬಹು ಕೋಸಲಧನೀ॥೪॥**

ರಥವಿಲ್ಲದೆ ರಣರಂಗದ ನೆಲದಮೇಲೆ ನಿಂತು ಯುದ್ಧಮಾಡುತ್ತಿರುವ ಪ್ರಭುವನ್ನು ದೇವತೆಗಳು ನೋಡಿ, ಅವರ ಹೃದಯದಲ್ಲಿ ಭಾರೀ ದುಃಖವುಂಟಾಯಿತು. ದೇವೇಂದ್ರನು ಕೂಡಲೇ ತನ್ನ ರಥವನ್ನು ಕಳಿಸಿಕೊಟ್ಟನು. ಅವನ ಸಾರಥಿ ಮಾತಲಿಯು ಹರ್ಷದಿಂದ ಅದನ್ನು ರಾಮನ ಬಳಿಗೆ ತಂದನು. ನಿರುಪಮವೂ, ತೇಜೋಮಯವೂ ಆದ ಆ ದಿವ್ಯರಥವನ್ನು ಕೋಸಲಾಧೀಶ ಶ್ರೀರಾಮಚಂದ್ರನು ಏರಿದನು. ಅದಕ್ಕೆ ಚಂಚಲವೂ, ಮನೋಹರವೂ, ಅಜರಾಮರವೂ ಆದ ಮನೋವೇಗದಿಂದ ಸಂಚರಿಸುವ ನಾಲ್ಕು ಕುದುರೆಗಳನ್ನು ಹೂಡಲಾಗಿತ್ತು. ರಥಾರೂಢನಾದ ರಘುನಾಥನನ್ನು ನೋಡಿ ವಾನರರು ವಿಶೇಷವಾದ ಬಲವನ್ನು ಹೊಂದಿ ಹರ್ಷೋಲ್ಲಾಸದಿಂದ ಮುನ್ನುಗ್ಗಿದರು. ಅವರ ಹೊಡೆತಗಳು ಜೋರಾದಾಗ ಸಹಿಸದ ರಾವಣನು ತನ್ನ ಮಾಯೆಯನ್ನು ವಿಸ್ತರಿಸಿದನು. ಆ ಮಾಯೆಯು ಶ್ರೀರಾಮನ ಮುಂದೆ ಯಾವುದೇ ಪರಿಣಾಮ ಬೀರಲಿಲ್ಲ. ಆದರೆ ಲಕ್ಷ್ಮಣಸಹಿತ ವಾನರರೆಲ್ಲರೂ ಆ ಮಾಯೆ ನಿಜವೆಂದೇ ತಿಳಿದರು. ಮಾಯಾಪ್ರಭಾವದಿಂದ ವಾನರರು ಆ ನಿಶಾಚರರ ಸೈನ್ಯದಲ್ಲಿ ಲಕ್ಷ್ಮಣಸಹಿತ ಅನೇಕ ರಾಮರನ್ನು ನೋಡಿದರು. (ಚೌ/೧-೪)

**ಛಂ – ಬಹು ರಾಮ ಲಛಿಮನ ದೇಖಿ ಮರ್ಕಟ ಭಾಲು ಮನ ಅತಿ ಅಪಡರೇ।**
**ಜನು ಚಿತ್ರ ಲಿಖಿತ ಸಮೇತ ಲಛಿಮನ ಜಹಂ ಸೊ ತಹಂ ಚಿತವಹಿಂ ಖರೇ॥**
**ನಿಜ ಸೇನ ಚಕಿತ ಬಿಲೋಕಿ ಹಂಸಿ ಸರ ಚಾಪ ಸಜಿ ಕೋಸಲ ಧನೀ।**
**ಮಾಯಾ ಹರೀ ಹರಿ ನಿಮಿಷ ಮಹುಂ ಹರಷೀ ಸಕಲ ಮರ್ಕಟ ಅನೀ॥**

ವಾನಕ-ಭಲ್ಲೂಕಗಳು ಬಹುಮಂದಿ ರಾಮಲಕ್ಷ್ಮಣರನ್ನು ನೋಡಿ ಮಿಥ್ಯಾಭಯಕ್ಕೆ ಒಳಗಾದರು. ಲಕ್ಷ್ಮಣನೂ ಸೇರಿದಂತೆ ಅವರು ಬರೆದ ಚಿತ್ತಾರದಂತೆ ನಿಂತಲ್ಲೇ ನಿಂತುಬಿಟ್ಟರು. ತನ್ನ ಸೇನೆಯು ಆಶ್ಚರ್ಯಚಕಿತವಾಗಿರುವುದನ್ನು ಕಂಡು ಕೋಸಲಾಧಿಪತಿ ಶ್ರೀಹರಿಯು ನಕ್ಕು ಶರಸಂಧಾನಮಾಡಿ ಕ್ಷಣಮಾತ್ರದಲ್ಲಿ ಇಡೀ ರಾಕ್ಷಸೀಮಾಯೆಯನ್ನು ತೊಡೆದುಹಾಕಿದನು. ಆದರಿಂದ ವಾನರಸೇನೆಯು ಹರ್ಷಿತವಾಯಿತು. (ಛಂದ)

**ದೋ – ಬಹುರಿ ರಾಮ ಸಬ ತನ ಚಿತಇ ಬೋಲೇ ಬಚನ ಗಂಭೀರ।**
**ದ್ವಂದಜುದ್ಧ ದೇಖಹು ಸಕಲ ಶ್ರಮಿತ ಭಏ ಅತಿ ಬೀರ॥೮೯॥**

ಆಗ ಶ್ರೀರಾಮನು ಎಲ್ಲರತ್ತ ನೋಡಿ ಗಂಭೀರವಾಗಿ ಇಂತೆಂದನು– ''ವೀರರಾದ ನೀವೆಲ್ಲರೂ ಬಹಳ ಬಳಲಿದ್ದೀರಿ. ಆದ್ದರಿಂದ ನನಗೂ ರಾವಣನಿಗೂ ನಡೆಯುವ ದ್ವಂದ್ವಯುದ್ಧವನ್ನು ನೋಡಿರಿ.'' (ದೋ/೮೯)

**ಚೌ – ಅಸ ಕಹಿ ರಥ ರಘುನಾಥ ಚಲಾವಾ। ಬಿಪ್ರ ಚರನ ಪಂಕಜ ಸಿರು ನಾವಾ॥**
**ತಬ ಲಂಕೇಸ ಕ್ರೋಧ ಉರ ಛಾವಾ। ಗರ್ಜತ ತರ್ಜತ ಸನ್ಮುಖ ಧಾವಾ॥೧॥**
**ಜೀತೆಹು ಜೇ ಭಟ ಸಂಜುಗ ಮಾಹೀಂ। ಸುನು ತಾಪಸ ಮೈಂ ತಿನ್ಹ ಸಮ ನಾಹೀಂ॥**
**ರಾವನ ನಾಮ ಜಗತ ಜಸ ಜಾನಾ। ಲೋಕಪ ಜಾಕೇಂ ಬಂದೀಖಾನಾ॥೨॥**
**ಖರ ದೂಷನ ಬಿರಾಧ ತುಮ್ಹ ಮಾರಾ। ಬಧೆಹು ಬ್ಯಾಧ ಇವ ಬಾಲಿ ಬಿಚಾರಾ॥**
**ನಿಸಿಚರ ನಿಕರ ಸುಭಟ ಸಂಘಾರೆಹು। ಕುಂಬಕರನ ಘನನಾದಹಿ ಮಾರೆಹು॥೩॥**

ಆಜು ಬಯರು ಸಬು ಲೇಉ್ ನಿಬಾಹೀ। ಜೌ ರನ ಭೂಪ ಭಾಜಿ ನಹಿಂ ಜಾಹೀ॥
ಆಜು ಕರಉ್ ಖಲು ಕಾಲ ಹವಾಲೇ। ಪರೆಹು ಕಠಿನ ರಾವನ ಕೇ ಪಾಲೇ॥ ೪ ॥
ಸುನಿ ದುರ್ಬಚನ ಕಾಲಬಸ ಜಾನಾ। ಬಿಹ್ಂಸಿ ಬಚನ ಕಹ ಕೃಪಾನಿಧಾನಾ॥
ಸತ್ಯ ಸತ್ಯ ಸಬ ತವ ಪ್ರಭುತಾಈ। ಜಲ್ಪಸಿ ಜನಿ ದೆಖಾಉ ಮನುಸಾಈ॥ ೫ ॥

ಹೀಗೆ ನುಡಿದು ಶ್ರೀರಘುನಾಥನು ಬ್ರಾಹ್ಮಣರ ಚರಣಕಮಲಗಳನ್ನು ಮನಸ್ಸಿನಲ್ಲೇ ವಂದಿಸಿ ರಥವನ್ನು ಮುಂದೂಡಿದನು. ಆಗ ರಾವಣನು ಕ್ರೋಧದಿಂದ ಉರಿದೆದ್ದು, ಗರ್ಜಿಸುತ್ತಾ, ಮುಂದೊರೆದು ಮೂದಲಿಸುತ್ತಾ ಇಂತೆಂದನು– ''ಎಲೈ ತಾಪಸಿಯೇ! ಕೇಳು. ನೀನು ಇದುವರೆವಿಗೂ ಗೆದ್ದ ಯೋಧರಂತಲ್ಲ ನಾನು. ರಾವಣನೆಂದು ನನ್ನ ಹೆಸರು. ನನ್ನ ಕೀರ್ತಿ ಲೋಕವಿಖ್ಯಾತ. ಲೋಕಪಾಲಕರೂ ಕೂಡ ನನ್ನ ಸೆರೆಯಾಳಾಗಿದ್ದಾರೆ. ನೀನು ಖರ, ದೂಷಣ, ತ್ರಿಶಿರ, ವಿರಾಧರನ್ನು ಕೊಂದೆ. ಬಡಪಾಯಿ ವಾಲಿಯನ್ನೂ ವ್ಯಾಧನಂತೆ ವಧಿಸಿದೆ. ದೊಡ್ಡ-ದೊಡ್ಡ ನಿಶಾಚರವೀರರನ್ನು ಸಂಹರಿಸಿದೆ. ಕುಂಭಕರ್ಣ, ಮೇಘನಾದರನ್ನು ಮುಗಿಸಿದೆ. ಅಯ್ಯಾ ರಾಜಕುಮಾರಾ! ಇಂದು ನೀನು ರಣರಂಗದಿಂದ ಓಡಿಹೋಗದಿದ್ದರೆ ನಾನು ಆ ಎಲ್ಲ ವೈರವನ್ನೂ ತೀರಿಸಿಕೊಳ್ಳುತ್ತೇನೆ. ಇಂದು ನಿಜವಾಗಿಯೂ ನಾನು ನಿನ್ನನ್ನು ಯಮನಿಗೆ ಒಪ್ಪಿಸುತ್ತೇನೆ. ಏಕೆಂದರೆ, ನೀನು ಪ್ರಚಂಡರಾವಣನ ಪಾಲಾಗಿರುವೆ.'' ರಾವಣನ ದುರ್ವಚನಗಳನ್ನು ಕೇಳಿ, ಇವನು ಕಾಲವಶನಾಗಿದ್ದಾನೆಂದು ಭಾವಿಸಿ, ಕೃಪಾಳುವಾದ ಶ್ರೀರಾಮನು ನಕ್ಕು ಇಂತು ನುಡಿದನು – ''ನೀನು ಹೇಳಿದಂತೆ ನೀನು ದೊಡ್ಡವನು ನಿಜವೇ! ಆದರೆ ಈಗ ನೀನು ವ್ಯರ್ಥವಾಗಿ ಬಾಯಿಗೆ ಬಂದಹಾಗೆ ಹೇಳಬೇಡ. ನಿನ್ನ ಪೌರುಷವನ್ನು ತೋರು. (ಚೌ/೧-೫)

ಛಂ – ಜನಿ ಜಲ್ಪನಾ ಕರಿ ಸುಜಸು ನಾಸಹಿ ನೀತಿ ಸುನಹಿ ಕರಹಿ ಛಮಾ।
ಸಂಸಾರ ಮಹ್ಂ ಪೂರುಷ ತ್ರಿಬಿಧ ಪಾಟಲ ರಸಾಲ ಪನಸ ಸಮಾ॥
ಏಕ ಸುಮನಪ್ರದ ಏಕ ಸುಮನ ಫಲ ಏಕ ಫಲಇ ಕೇವಲ ಲಾಗಹೀಂ।
ಏಕ ಕಹಹಿಂ ಕಹಹಿಂ ಕರಹಿಂ ಅಪರ ಏಕ ಕರಹಿಂ ಕಹತ ನ ಬಾಗಹೀಂ॥

ನಿರರ್ಥಕವಾಗಿ ಆಲಾಪಿಸಿ ನಿನ್ನ ಸುಯಶವನ್ನು ನಾಶಮಾಡಿಕೊಳ್ಳಬೇಡ. ಕ್ಷಮಿಸು. ನಿನಗೆ ನೀತಿಯನ್ನು ಹೇಳುತ್ತೇನೆ, ಕೇಳು. ಪ್ರಪಂಚದಲ್ಲಿ ಮೂರುವಿಧವಾದ ಪುರುಷರಿರುತ್ತಾರೆ. ಅವರು ಗುಲಾಬಿ, ಮಾವು ಮತ್ತು ಹಲಸಿನಹಣ್ಣಿನಂತಿರುತ್ತಾರೆ. ಗುಲಾಬಿಯು ಕೇವಲ ಹೂ ಮಾತ್ರ ಕೊಡುತ್ತದೆ. ಮಾವು ಹೂಗಳನ್ನು ಹಾಗೂ ಹಣ್ಣುಗಳನ್ನು ಕೊಡುತ್ತದೆ. ಹಲಸು ಕೇವಲ ಹಣ್ಣನ್ನು ಮಾತ್ರ ಕೊಡುತ್ತದೆ. ಹೀಗೆಯೇ ಪುರುಷರಲ್ಲಿ ಕೆಲವರು ಕೇವಲ ಮಾತನಾಡುತ್ತಾರೆ. ಆದರೆ ಏನೂ ಮಾಡುವುದಿಲ್ಲ. ಇನ್ನು ಕೆಲವರು ಆಡುತ್ತಾರೆ ಹಾಗೂ ಅದನ್ನು ಆಚರಿಸುತ್ತಾರೆ. ಮೂರನೆಯವರು ಮಾತನಾಡುವುದಿಲ್ಲ, ಆದರೆ ಮಾಡಿ ತೋರಿಸುತ್ತಾರೆ. (ಛಂದ)

ದೋ – ರಾಮ ಬಚನ ಸುನಿ ಬಿಹ್ಂಸಾ ಮೋಹಿ ಸಿಖಾವತ ಗ್ಯಾನ।
ಬಯರು ಕರತ ನಹಿಂ ತಬ ಡರೇ ಅಬ ಲಾಗೇ ಪ್ರಿಯ ಪ್ರಾನ॥ ೯೦ ॥

ಶ್ರೀರಾಮನ ಮಾತನ್ನು ಕೇಳಿ ರಾವಣನು ನಕ್ಕು ನುಡಿದನು– ''ಓಹೋ! ನೀನು ನನಗೆ ಜ್ಞಾನೋಪದೇಶ ಮಾಡುತ್ತಿರುವೆಯಾ! ಮೊದಲು ವೈರಕಟ್ಟಿಕೊಂಡಾಗ ಹೆದರದೆ ಯುದ್ಧಕ್ಕೆ ಸಿದ್ಧನಾದೆ. ಈಗ ನಿನಗೆ ಪ್ರಾಣಗಳು ಪ್ರಿಯವಾದುವೇ?'' (ದೋ/೯೦)

ಚೌ – ಕಹಿ ದುರ್ಬಚನ ಕ್ರುದ್ಧ ದಸಕಂಧರ। ಕುಲಿಸ ಸಮಾನ ಲಾಗ ಛಾಂಡೈ ಸರ॥
ನಾನಾಕಾರ ಸಿಲೀಮುಖ ಧಾಏ। ದಿಸಿ ಅರು ಬಿದಿಸಿ ಗಗನ ಮಹಿ ಛಾಏ॥ ೧ ॥
ಪಾವಕ ಸರ ಛಾಂಡೆಉ ರಘುಬೀರಾ। ಛನ ಮಹುಂ ಜರೇ ನಿಸಾಚರ ತೀರಾ॥
ಛಾಡಿಸಿ ತೀಬ್ರ ಸಕ್ತಿ ಖಿಸಿಆಈ। ಬಾನ ಸಂಗ ಪ್ರಭು ಫೇರಿ ಚಲಾಈ॥ ೨ ॥
ಕೋಟಿನ್ಹ ಚಕ್ರ ತ್ರಿಸೂಲ ಪಬಾರೈ। ಬಿನು ಪ್ರಯಾಸ ಪ್ರಭು ಕಾಟಿ ನಿವಾರೈ॥
ನಿಫಲ ಹೋಹಿಂ ರಾವನ ಸರ ಕೈಸೇಂ। ಖಲ ಕೇ ಸಕಲ ಮನೋರಥ ಜೈಸೇಂ॥ ೩ ॥
ತಬ ಸತ ಬಾನ ಸಾರಥೀ ಮಾರೆಸಿ। ಪರೆಉ ಭೂಮಿ ಜಯ ರಾಮ ಪುಕಾರೆಸಿ॥
ರಾಮ ಕೃಪಾ ಕರಿ ಸೂತ ಉಠಾವಾ। ತಬ ಪ್ರಭು ಪರಮ ಕ್ರೋಧ ಕಹುಂ ಪಾವಾ॥ ೪ ॥

ದುರ್ವಚನಗಳನ್ನಾಡಿ ಕ್ರುದ್ಧನಾದ ದಶಕಂಧರನು ವಜ್ರಕ್ಕೆ ಸಮಾನವಾದ ಬಾಣಗಳನ್ನು ಬಿಡತೊಡಗಿದನು. ಅನೇಕ ಆಕಾರವುಳ್ಳ ಆ ಬಾಣಗಳು ದಿಶೆ, ವಿದಿಶೆ, ಬಾನು, ಭುವಿ ಎಲ್ಲೆಲ್ಲೂ ತುಂಬಿಹೋದುವು. ಶ್ರೀರಘುನಾಥನು ಆಗ್ನೇಯಾಸ್ತ್ರವನ್ನು

ಪ್ರಯೋಗಿಸಿದಾಗ ರಾವಣನ ಎಲ್ಲ ಬಾಣಗಳು ಕ್ಷಣಮಾತ್ರದಲ್ಲಿ ಸುಟ್ಟು ಭಸ್ಮವಾದುವು. ಆಗ ಅವನು ರುಷ್ಟನಾಗಿ ತೀಕ್ಷ್ಣವಾದ ಶಕ್ತ್ಯಾಯುಧವನ್ನು ಪ್ರಯೋಗಿಸಿದನು. ಶ್ರೀರಾಮಚಂದ್ರನು ತನ್ನ ಒಂದು ಬಾಣದಿಂದ ಅದನ್ನು ರಾವಣನ ಕಡೆಗೆ ತಿರುಗಿಸಿದನು. ರಾವಣನು ಲೆಕ್ಕವಿಲ್ಲದ ಚಕ್ರಗಳನ್ನು, ತ್ರಿಶೂಲಗಳನ್ನು ರಾಮನಮೇಲೆ ಎಸೆದನು. ಆದರೆ ಪ್ರಭುವು ಅವೆಲ್ಲವನ್ನೂ ಕೊಂಚವೂ ಪ್ರಯಾಸವಿಲ್ಲದೆ ಲೀಲಾಜಾಲವಾಗಿ ಕತ್ತರಿಸುತ್ತಿದ್ದನು. ದುಷ್ಟನ ಮನೋರಥದಂತೆ ರಾವಣನ ಎಲ್ಲ ಬಾಣಗಳು ನಿಷ್ಫಲವಾಗುತ್ತಿದ್ದವು. ಬಳಿಕ ಅವನು ಶ್ರೀರಾಮನ ಸಾರಥಿಯಾದ ಮಾತಲಿಯ ಮೇಲೆ ನೂರು ಬಾಣಗಳನ್ನು ಹೊಡೆದನು. ಅವನು 'ಶ್ರೀರಾಮನಿಗೆ ಜಯವಾಗಲಿ' ಎಂದು ಹೇಳುತ್ತಾ ಕೆಳಕ್ಕುರುಳಿದನು. ಶ್ರೀರಾಮನು ಕೃಪೆಯಿಂದ ಸಾರಥಿಯನ್ನು ಎತ್ತಿಕೊಂಡನು. ಬಳಿಕ ಪ್ರಭುವು ಅತ್ಯಂತ ಕ್ರುದ್ಧನಾದನು. (ಚೌ/೧-೪)

**ಛಂ – ಭಏ ಕ್ರುದ್ಧ ಜುದ್ಧ ಬಿರುದ್ಧ ರಘುಪತಿ ತ್ರೋನ ಸಾಯಕ ಕಸಮಸೇ।**
**ಕೋದಂಡ ಧುನಿ ಅತಿ ಚಂಡ ಸುನಿ ಮನುಜಾದ ಸಬ ಮಾರುತ ಗ್ರಸೇ॥**
**ಮಂದೋದರೀ ಉರ ಕಂಪ ಕಂಪತಿ ಕಮಠ ಭೂ ಭೂಧರ ತ್ರಸೇ।**
**ಚಿಕ್ಕರಹಿಂ ದಿಗ್ಗಜ ದಸನ ಗಹಿ ಮಹಿ ದೇಖಿ ಕೌತುಕ ಸುರ ಹँಸೇ॥**

ಶ್ರೀರಾಮನು ಶತ್ರುವಿರುದ್ಧ ಕ್ರುದ್ಧನಾದಾಗ ತೂಣೀರದ ಬಾಣಗಳು ತಾವೇ-ತಾವಾಗಿ ಹೊರಹೊಮ್ಮಲು ಚಡಪಡಿಸತೊಡಗಿದವು. ಅವನ ಕೋದಂಡದ ಪ್ರಚಂಡ ಠಂಕಾರವನ್ನು ಕೇಳಿ ನರಭಕ್ಷಕರಾದ ರಾಕ್ಷಸರೆಲ್ಲರೂ ವಾತ ಬಡಿದವರಂತಾದರು. ಮಂಡೋದರಿಯ ಹೃದಯ ನಡುಗಿತು. ಸಮುದ್ರಗಳು ಅಲ್ಲೋಲಕಲ್ಲೋಲವಾದುವು. ಆದಿಕೂರ್ಮನು ಚಲಿಸಿದನು. ಪರ್ವತಗಳು ಗಡ-ಗಡನೆ ನಡುಗಿದವು. ದಿಗ್ಗಜಗಳು ಭಯಪಟ್ಟು ತಮ್ಮ ಕೋರೆದಾಡೆಗಳಿಂದ ಭೂಮಿಯನ್ನು ಗಟ್ಟಿಯಾಗಿ ಹಿಡಿದುಕೊಂಡು ಘೀಳಿಡತೊಡಗಿದವು. ಈ ಅದ್ಭುತವನ್ನು ನೋಡಿ ದೇವತೆಗಳು ನಗತೊಡಗಿದರು. (ಛಂದ)

**ದೋ – ತಾನೆಉ ಚಾಪ ಶ್ರವನ ಲಗಿ ಛಾँಡೇ ಬಿಸಿಖ ಕರಾಲ।**
**ರಾಮ ಮಾರಗನ ಗನ ಚಲೇ ಲಹಲಹಾತ ಜನು ಬ್ಯಾಲ॥೯೧॥**

ಶ್ರೀರಾಮಚಂದ್ರನು ಧನುಸ್ಸನ್ನು ಆಕರ್ಣಾಂತವಾಗಿ ಸೆಳೆದು ಅನೇಕ ಭಯಾನಕ ಬಾಣಗಳನ್ನು ಪ್ರಯೋಗಿಸಿದನು. ಅವು ಸರ್ಪಗಳಂತೆ ದರ್ಪದಿಂದ ಬುಸುಗುಟ್ಟುತ್ತಾ ಹೋಗುತ್ತಿದ್ದವು. (ದೋ/೯೧)

**ಚೌ – ಚಲೇ ಬಾನ ಸಪಚ್ಛ ಜನು ಉರಗಾ। ಪ್ರಥಮಹಿಂ ಹತೇಉ ಸಾರಥೀ ತುರಗಾ॥**
**ರಥ ಬಿಭಂಜಿ ಹತಿ ಕೇತು ಪತಾಕಾ। ಗರ್ಜಾ ಅತಿ ಅಂತರ ಬಲ ಥಾಕಾ॥೧॥**
**ತುರತ ಆನ ರಥ ಚಢ಼ಿ ಖಿಸಿಆನಾ। ಅಸ್ತ್ರ ಸಸ್ತ್ರ ಛಾँಡೇಸಿ ಬಿಧಿ ನಾನಾ॥**
**ಬಿಫಲ ಹೋಹಿಂ ಸಬ ಉದ್ಯಮ ತಾಕೇ। ಜಿಮಿ ಪರದ್ರೋಹ ನಿರತ ಮನಸಾ ಕೇ॥೨॥**
**ತಬ ರಾವನ ದಸ ಸೂಲ ಚಲಾವಾ। ಬಾಜಿ ಚಾರಿ ಮಹಿ ಮಾರಿ ಗಿರಾವಾ॥**
**ತುರಗ ಉಠಾಇ ಕೋಪಿ ರಘುನಾಯಕ। ಖೈँಚಿ ಸರಾಸನ ಛಾँಡೇ ಸಾಯಕ॥೩॥**
**ರಾವನ ಸಿರ ಸರೋಜ ಬನಚಾರೀ। ಚಲಿ ರಘುಬೀರ ಸಿಲೀಮುಖ ಧಾರೀ॥**
**ದಸ ದಸ ಬಾನ ಭಾಲ ದಸ ಮಾರೇ। ನಿಸರಿ ಗಏ ಚಲೆ ರುಧಿರ ಪನಾರೇ॥೪॥**
**ಸ್ರವತ ರುಧಿರ ಧಾಯಉ ಬಲವಾನಾ। ಪ್ರಭು ಪುನಿ ಕೃತ ಧನು ಸರ ಸಂಧಾನಾ॥**
**ತೀಸ ತೀರ ರಘುಬೀರ ಪಬಾರೇ। ಭುಜನ್ಹಿ ಸಮೇತ ಸೀಸ ಮಹಿ ಪಾರೇ॥೫॥**
**ಕಾಟತಹೀಂ ಪುನಿ ಭಏ ನಬೀನೇ। ರಾಮ ಬಹೋರಿ ಭುಜಾ ಸಿರ ಛೀನೇ॥**
**ಪ್ರಭು ಬಹು ಬಾರ ಬಾಹು ಸಿರ ಹಏ। ಕಟತ ಝಟಿತಿ ಪುನಿ ನೂತನ ಭಏ॥೬॥**
**ಪುನಿ ಪುನಿ ಪ್ರಭು ಕಾಟತ ಭುಜ ಸೀಸಾ। ಅತಿ ಕೌತುಕೀ ಕೋಸಲಾಧೀಸಾ॥**
**ರಹೇ ಛಾಇ ನಭ ಸಿರ ಅರು ಬಾಹೂ। ಮಾನಹುँ ಅಮಿತ ಕೇತು ಅರು ರಾಹೂ॥೭॥**

ಆ ಬಾಣಗಳು ರೆಕ್ಕೆಗಳುಳ್ಳ ಸರ್ಪಗಳಂತೆ ಹಾರಿ-ಹಾರಿ ಹೋಗುತ್ತವೆ. ಮೊದಲಿಗೆ ಪ್ರಭುವು ರಾವಣನ ಸಾರಥಿಯನ್ನೂ, ಕುದುರೆಗಳನ್ನೂ ಕೊಂದುಹಾಕಿದನು. ಮತ್ತೆ ರಥವನ್ನು ಪುಡಿ-ಪುಡಿಮಾಡಿ ಧ್ವಜಪತಾಕೆಗಳನ್ನು ನೆಲಕ್ಕುರುಳಿಸಿದನು. ಆಗ ರಾವಣನು ಭಯಂಕರವಾಗಿ ಗರ್ಜಿಸಿದನು. ಆದರೆ ಒಳಗೊಳಗೆ ಅವನ ಬಲ ಕ್ಷೀಣಿಸಿತ್ತು. ಕೂಡಲೇ ಕ್ರುದ್ಧನಾಗಿ ಮತ್ತೊಂದು

ರಥವನ್ನಡರಿ, ವಿವಿಧಾಸ್ತ್ರ-ಶಸ್ತ್ರಗಳನ್ನು ಪ್ರಯೋಗಿಸಿದನು. ಆದರೆ ಎಲ್ಲ ಪ್ರಯತ್ನಗಳು ಪರದ್ರೋಹ ನಿರತ ವ್ಯಕ್ತಿಯ ಯತ್ನದಂತೆ ಮಣ್ಣುಗೂಡಿದವು. ಆಗ ರಾವಣನು ಹತ್ತು ತ್ರಿಶೂಲಗಳನ್ನು ಬೀಸಿ ಶ್ರೀರಾಮನ ನಾಲ್ಕೂ ಕುದುರೆಗಳನ್ನು ಹೊಡೆದು ನೆಲಕ್ಕುರುಳಿಸಿದನು. ಕುದುರೆಗಳನ್ನು ಮೇಲಕ್ಕೆಬ್ಬಿಸಿ ರಘುನಾಥನು ರೋಷಭೀಷಣನಾಗಿ ಬಿಲ್ಲನ್ನು ಸೆಳೆದು ಬಾಣಗಳನ್ನು ಎಸೆದನು. ರಾವಣನ ಶಿರಸ್ಸುಗಳೆಂಬ ಕಮಲವನದಲ್ಲಿ ಶ್ರೀರಾಮನ ಬಾಣಗಳೆಂಬ ಭ್ರಮರಪಂಕ್ತಿ ಸಾಗಿತು. ಶ್ರೀರಾಮನು ರಾವಣನ ದಶಶಿರಗಳಿಗೂ ಹತ್ತು-ಹತ್ತು ಬಾಣಗಳನ್ನು ಹೊಡೆದನು. ಅವು ತಲೆಗಳನ್ನು ಹೊಕ್ಕು ಆಚೆ ನುಸುಳಿಹೋದವು. ಶಿರಗಳಿಂದ ರಕ್ತದಕೋಡಿ ಹರಿಯಿತು. ರಕ್ತ ಹರಿಯುತ್ತಿದ್ದರೂ ಬಲಶಾಲಿಯಾದ ರಾವಣನು ರಾಮನತ್ತ ಧಾವಿಸಿದನು. ಪ್ರಭುವು ಮತ್ತೆ ಶರಸಂಧಾನಗೈದು ಮೂವತ್ತು ಬಾಣಗಳನ್ನು ಪ್ರಯೋಗಿಸಿ ಅವನ ಇಪ್ಪತ್ತು ತೋಳುಗಳನ್ನು, ಹತ್ತು ತಲೆಗಳನ್ನೂ ತರಿದು ನೆಲಕ್ಕುರುಳಿಸಿದನು. ಆದರೆ ಆ ತಲೆ-ತೋಳುಗಳು ಕೂಡಲೇ ಪುನಃ ಚಿಗುರುತ್ತಿದ್ದವು. ಶ್ರೀರಾಮನು ಪುನಃ ಭುಜಗಳನ್ನು, ಶಿರಸ್ಸುಗಳನ್ನು ಕತ್ತರಿಸಿದನು. ಎಂದಿನಂತೆ ಕೂಡಲೇ ಅವು ಚಿಗುರಿದವು. ಈ ವಿಧವಾಗಿ ಶ್ರೀರಾಮನು ಅನೇಕ ಬಾರಿ ತೋಳು-ತಲೆಗಳನ್ನು ತರಿದನು. ಅವು ಚಿಗುರಿಕೊಂಡವು. ಹೀಗೆ ಅನೇಕ ಬಾರಿ ನಡೆಯಿತು. ಶ್ರೀರಾಮನಿಗೆ ಇದೊಂದು ಕ್ರೀಡೆಯೇ ಆಗಿಬಿಟ್ಟಿತು. ಖಂಡಿಸಿದ ಭುಜ-ತಲೆಗಳು ಅಂತರಿಕ್ಷದಲ್ಲಿ ಅಸಂಖ್ಯ ರಾಹು-ಕೇತುಗಳಂತೆ ಕವಿದವು. (ಚೌ/೧-೭)

**ಛಂ — ಜನು ರಾಹು ಕೇತು ಅನೇಕ ನಭ ಪಥ ಸ್ರವತ ಸೋನಿತ ಧಾವಹೀಂ ।**
**ರಘುಬೀರ ತೀರ ಪ್ರಚಂಡ ಲಾಗಹಿಂ ಭೂಮಿ ಗಿರನ ನ ಪಾವಹೀಂ ॥**
**ಎಕ ಏಕ ಸರ ಸಿರ ನಿಕರ ಛೇದೇ ನಭ ಉಡತ ಇಮಿ ಸೋಹಹೀಂ ।**
**ಜನು ಕೋಪಿ ದಿನಕರ ಕರ ನಿಕರ ಜಹ್ ತಹ್ ಬಿಧುಂತುದ ಪೋಹಹೀಂ ॥**

ಅನೇಕ ರಾಹು-ಕೇತುಗಳು ನೆತ್ತರನ್ನು ಹರಿಸುತ್ತಾ ಆಕಾಶದಲ್ಲಿ ಓಡಾಡುತ್ತಿರುವಂತೆ ಭಾಸವಾಗುತ್ತಿತ್ತು. ರಘುವೀರನ ಪ್ರಚಂಡ ಬಾಣಗಳು ನಿರಂತರವಾಗಿ ತಗಲುತ್ತಿರುವುದರಿಂದ ಅವು ಕೆಳಗೆ ಬೀಳುತ್ತಿರಲಿಲ್ಲ. ಶ್ರೀರಾಮನ ಪ್ರತಿಬಾಣಗಳು ಚುಚ್ಚಿಕೊಂಡಿದ್ದ ತಲೆಗಳ ಸಮೂಹವು ಆಕಾಶದಲ್ಲಿ ತೀವ್ರವಾದ ಸೂರ್ಯಕಿರಣಗಳು ಕ್ರುದ್ಧವಾಗಿ ಎಲ್ಲಂದರಲ್ಲಿ ರಾಹುಗಳನ್ನು ಪೋಣಿಸುತ್ತಿರುವವೋ ಎಂಬಂತೆ ಕಂಗೊಳಿಸುತ್ತಿತ್ತು. (ಛಂದ)

**ದೋ — ಜಿಮಿ ಜಿಮಿ ಪ್ರಭು ಹರ ತಾಸು ಸಿರ ತಿಮಿ ತಿಮಿ ಹೋಹಿಂ ಅಪಾರ ।**
**ಸೇವತ ಬಿಷಯ ಬಿಬರ್ಧ ಜಿಮಿ ನಿತ ನಿತ ನೂತನ ಮಾರ ॥ ೯೨ ॥**

ವಿಷಯಗಳ ಸೇವನೆಯಿಂದ ಕಾಮವು (ಅವುಗಳನ್ನು ಭೋಗಿಸುವ ಇಚ್ಛೆ) ದಿನಂಪ್ರತಿ ನವೋನವವಾಗಿ ಬೆಳೆಯುವಂತೆ ಪ್ರಭುವು ಶಿರಸುಗಳನ್ನು ತರಿದಂತೆಲ್ಲ ಅವು ಅಪಾರವಾಗಿ ಮೊಳೆಯುತ್ತಿದ್ದವು. (ದೋ/೯೨)

**ಚೌ — ದಸಮುಖ ದೇಖಿ ಸಿರನ್ಹ ಕೈ ಬಾಢೀ । ಬಿಸರಾ ಮರನ ಭಈ ರಿಸ ಗಾಢೀ ॥**
**ಗರ್ಜೆಉ ಮೂಢ ಮಹಾ ಅಭಿಮಾನೀ । ಧಾಯಉ ದಸಹು ಸರಾಸನ ತಾನೀ ॥ ೧ ॥**
**ಸಮರ ಭೂಮಿ ದಸಕಂಧರ ಕೋಪ್ಯೋ । ಬರಷಿ ಬಾನ ರಘುಪತಿ ರಥ ತೋಪ್ಯೋ ॥**
**ದಂಡ ಏಕ ರಥ ದೇಖಿ ನ ಪರೆಊ । ಜನು ನಿಹಾರ ಮಹ್ ದಿನಕರ ದುರೆಊ ॥ ೨ ॥**
**ಹಾಹಾಕಾರ ಸುರನ್ಹ ಜಬ ಕೀನ್ಹಾ । ತಬ ಪ್ರಭು ಕೋಪಿ ಕಾರಮುಕ ಲೀನ್ಹಾ ॥**
**ಸರ ನಿವಾರಿ ರಿಪು ಕೇ ಸಿರ ಕಾಟೇ । ತೇ ದಿಸಿ ಬಿದಿಸಿ ಗಗನ ಮಹಿ ಪಾಟೇ ॥ ೩ ॥**
**ಕಾಟೇ ಸಿರ ನಭ ಮಾರಗ ಧಾವಹಿಂ । ಜಯ ಜಯ ಧುನಿ ಕರಿ ಭಯ ಉಪಜಾವಹಿಂ ॥**
**ಕಹ್ ಲಛಿಮನ ಸುಗ್ರೀವ ಕಪೀಸಾ । ಕಹ್ ರಘುಬೀರ ಕೋಸಲಾಧೀಸಾ ॥ ೪ ॥**

ತಲೆಗಳ ಮಹಾಪೂರವನ್ನು ಕಂಡು ರಾವಣನಿಗೆ ತನ್ನ ಮರಣವೇ ಮರೆತುಹೋಯಿತು. ಪ್ರಗಾಢವಾದ ಕ್ರೋಧವುಂಟಾಯಿತು. ಮಹಾದುರಭಿಮಾನಿಯೂ, ಮೂರ್ಖನೂ ಆದ ಅವನು ಗರ್ಜಿಸುತ್ತಾ ಹತ್ತು ಬಿಲ್ಲುಗಳನ್ನು ಸೆಳೆದು ಮುನ್ನುಗ್ಗಿದನು. ರಣಭೂಮಿಯಲ್ಲಿ ರಾವಣನು ಕ್ರುದ್ಧನಾಗಿ ಬಾಣಗಳ ಮಳೆಗರೆದು ರಘುನಾಥನ ರಥವನ್ನು ಮುಚ್ಚಿಬಿಟ್ಟನು. ಒಂದು ಕ್ಷಣಕಾಲ ಹಿಮಾಚ್ಛಾದಿತ ಸೂರ್ಯನಂತೆ ರಾಮನ ರಥ ಕಾಣಿಸದಾಯಿತು. ದೇವತೆಗಳು ಹಾಹಾಕಾರಗೈದರು. ಆಗ ಪ್ರಭುವು ಕೋಪಗೊಂಡು ತನ್ನ ಕೋದಂಡವನ್ನೆತ್ತಿಕೊಂಡು ಶತ್ರುವಿನ ಬಾಣಗಳನ್ನು ನಿವಾರಿಸಿ ಅವನ ರುಂಡಗಳನ್ನು ತುಂಡರಿಸಿ ಚೆಂಡಾಡಿದನು. ಅವುಗಳಿಂದ ದಿಶೆ, ವಿದಿಶೆ, ಆಕಾಶ, ಪೃಥ್ವಿಯೆಲ್ಲವನ್ನು ಮುಚ್ಚಿಬಿಟ್ಟನು. ಕತ್ತರಿಸಿದ ತಲೆಗಳು ಆಕಾಶಮಾರ್ಗದಲ್ಲಿ

ಓಡುತ್ತಾ ಜಯ-ಜಯಕಾರ ಮಾಡುತ್ತಾ ಭಯೋತ್ಪಾದನೆ ಮಾಡುತ್ತಿದ್ದವು. ಲಕ್ಷ್ಮಣನೆಲ್ಲಿ? ವಾನರರಾಜ ಸುಗ್ರೀವನೆಲ್ಲಿ? ಕೋಸಲಪತಿ ರಘುವೀರನೆಲ್ಲಿ? ಎಂದು ಕೂಗುತ್ತಾ ತಲೆಗಳು ಓಡಾಡತೊಡಗಿದವು. (ಚೌ/೧-೪)

**ಛಂ – ಕಹ್ ರಾಮು ಕಹಿ ಸಿರ ನಿಕರ ಧಾಏ ದೇಖಿ ಮರ್ಕಟ ಭಜಿ ಚಲೇ।**
**ಸಂಧಾನಿ ಧನು ರಘುಬಂಸಮನಿ ಹ್ಸಿ ಸರನ್ಹಿ ಸಿರ ಬೇಧೇ ಭಲೇ॥**
**ಸಿರ ಮಾಲಿಕಾ ಕರ ಕಾಲಿಕಾ ಗಹಿ ಬೃಂದ ಬೃಂದನ್ಹಿ ಬಹು ಮಿಲೀಂ।**
**ಕರಿ ರುಧಿರ ಸರಿ ಮಜ್ಜನು ಮನಹುಁ ಸಂಗ್ರಾಮ ಬಟ ಪೂಜನ ಚಲೀಂ॥**

'ರಾಮನೆಲ್ಲಿರುವನು?' ಎಂದು ಅರಚುತ್ತಾ ಖಂಡಿಸಲ್ಪಟ್ಟ ರಾವಣನ ತಲೆಗಳು ಆಕಾಶದಲ್ಲಿ ಹಾರಾಡುತ್ತಿವೆ. ಅದನ್ನು ನೋಡಿ ವಾನರರು ಓಡಿಹೋದರು. ಆಗ ರಘುಕುಲಮಣಿ ಶ್ರೀರಾಮನು ನಕ್ಕು ಧನುಸ್ಸಂಧಾನಗೈದು ಆ ತಲೆಗಳನ್ನು ಚೆನ್ನಾಗಿ ಕತ್ತರಿಸಿ ಮಾಲೆಯಾಗಿಸಿದನು. ಆಗ ಆ ದೃಶ್ಯವು ಕೈಯಲ್ಲಿ ರುಂಡಮಾಲೆಗಳನ್ನು ಹಿಡಿದು ಅನೇಕ ಮಂದಿ ಕಾಳಿಕೆಯರು ತಂಡ-ತಂಡವಾಗಿ ಬಂದು ನೆತ್ತರಿನ ನದಿಯಲ್ಲಿಸ್ನಾನಮಾಡತೊಡಗಿದರು. ರಾವಣನ ಶಿರಸರೋಜಮಾಲೆ ಹಿಡಿದು ಸಂಗ್ರಾಮವೆಂಬ ವಟವೃಕ್ಷವನ್ನು ಪೂಜಿಸಲು ಹೋಗುತ್ತಿರುವಂತೆ ಭಾಸವಾಗುತ್ತಿತ್ತು. (ಛಂದ)

**ದೋ – ಪುನಿ ದಸಕಂಠ ಕ್ರುದ್ಧ ಹೋಇ ಛಾಂಡೀ ಸಕ್ತಿ ಪ್ರಚಂಡ।**
**ಚಲೀ ಬಿಭೀಷನ ಸನ್ಮುಖ ಮನಹುಁ ಕಾಲ ಕರ ದಂಡ॥೯೩॥**

ಬಳಿಕ ದಶಾನನನು ಕ್ರುದ್ಧನಾಗಿ ಒಂದು ಪ್ರಚಂಡಶಕ್ತಿಯನ್ನು ವಿಭೀಷಣನ ಮೇಲೆ ಎಸೆದನು. ಅದು ಯಮದಂಡವೋ ಎಂಬಂತೆ ವಿಭೀಷಣನ ಬಳಿಗೆ ಬರುತ್ತಿತ್ತು. (ದೋ/೯೩)

**ಚೌ – ಆವತ ದೇಖಿ ಸಕ್ತಿ ಅತಿ ಘೋರಾ। ಪ್ರನತಾರತಿ ಭಂಜನ ಪನ ಮೋರಾ॥**
**ತುರತ ಬಿಭೀಷನ ಪಾಛೇಂ ಮೇಲಾ। ಸನ್ಮುಖ ರಾಮ ಸಹೆಉ ಸೋಇ ಸೇಲಾ॥೧॥**
**ಲಾಗಿ ಸಕ್ತಿ ಮುರುಛಾ ಕಛು ಭಈ। ಪ್ರಭು ಕೃತ ಖೇಲ ಸುರನ್ಹ ಬಿಕಲಈ॥**
**ದೇಖಿ ಬಿಭೀಷನ ಪ್ರಭು ಶ್ರಮ ಪಾಯೋ। ಗಹಿ ಕರ ಗದಾ ಕ್ರುದ್ಧ ಹೋಇ ಧಾಯೋ॥೨॥**
**ರೇ ಕುಭಾಗ್ಯ ಸಠ ಮಂದ ಕುಬುದ್ಧೇ। ತೈಂ ಸುರ ನರ ಮುನಿ ನಾಗ ಬಿರುದ್ಧೇ॥**
**ಸಾದರ ಸಿವ ಕಹುಁ ಸೀಸ ಚಢಾಏ। ಏಕ ಏಕ ಕೇ ಕೋಟಿನ್ಹ ಪಾಏ॥೩॥**
**ತೇಹಿ ಕಾರನ ಖಲ ಅಬ ಲಗಿ ಬಾಂಚ್ಯೋ। ಅಬ ತವ ಕಾಲು ಸೀಸ ಪರ ನಾಚ್ಯೋ॥**
**ರಾಮ ಬಿಮುಖ ಸಠ ಚಹಸಿ ಸಂಪದಾ। ಅಸ ಕಹಿ ಹನೆಸಿ ಮಾಝ ಉರ ಗದಾ ॥೪॥**

ಅತ್ಯಂತ ಭಯಾನಕ ಶಕ್ತಿಯು ಬರುತ್ತಿರುವುದನ್ನು ಕಂಡು ಶರಣಾಗತರ ದುಃಖವನ್ನು ನಾಶಮಾಡುವುದೇ ನನ್ನ ಪ್ರತಿಜ್ಞೆ, ಪಣ ಎಂದು ಯೋಚಿಸಿ ಶ್ರೀರಾಮನು ಕೂಡಲೇ ವಿಭೀಷಣನನ್ನು ಹಿಂದಕ್ಕೆ ಸರಿಸಿ ತಾನೇ ಎದುರಾಗಿ ಆ ಶಕ್ತಿಗೆ ಎದೆಯೊಡ್ಡಿದನು. ಆ ಶಕ್ತಿ ತಗಲುತ್ತಲೇ ಶ್ರೀರಾಮನಿಗೆ ಕೊಂಚ ಮೂರ್ಛೆ ಬಂದಂತಾಯಿತು. ಪ್ರಭುವಾದರೋ ಈ ಲೀಲೆಯನ್ನು ತೋರಿದನು. ಆದರೆ ದೇವತೆಗಳು ಆ ಲೀಲೆಯನ್ನು ತಿಳಿಯದೆ ತಲ್ಲಣಿಸಿಹೋದರು. ವಿಭೀಷಣನು ಪ್ರಭುವಿಗೆ ಆದ ಶ್ರಮವನ್ನು ನೋಡಿ ತಾನೇ ಗದೆಯನ್ನು ಎತ್ತಿಕೊಂಡು ಕ್ರುದ್ಧನಾಗಿ ಮುಂದಕ್ಕೆ ಮುನ್ನುಗ್ಗಿ ನುಡಿದನು – ''ಎಲೈ ದುರ್ಭಾಗ್ಯನೇ! ಮೂರ್ಖನೇ! ನೀಚ ದುರ್ಬುದ್ಧೇ! ನೀನು ಸುರ, ನರ, ಮುನಿ, ನಾಗರೆಲ್ಲರನ್ನು ಇದಿರುಹಾಕಿಕೊಂಡೆ. ಆದರದಿಂದ ಶಿವನಿಗೆ ನಿನ್ನ ತಲೆಗಳನ್ನು ಅರ್ಪಿಸಿದೆ. ಆದ್ದರಿಂದ ಒಂದೊಂದು ಶಿರಸ್ಸಿಗೆ ಬದಲಾಗಿ ಅನೇಕ ಶಿರಸ್ಸುಗಳನ್ನು ಪಡೆದುಕೊಳ್ಳುತ್ತಿರುವೆ. ದುಷ್ಟಾ! ಆ ಕಾರಣದಿಂದಲೇ ಇಷ್ಟರವರೆಗೆ ಉಳಿದಿದ್ದೀಯೆ. ಆದರೆ ಮೃತ್ಯುವು ಈಗ ನಿನ್ನ ತಲೆಯ ಮೇಲೆ ಕುಣಿಯುತ್ತಿದೆ. ಅಯ್ಯೋ ಮೂರ್ಖಾ! ನೀನು ರಾಮವಿಮುಖನಾಗಿ ಸುಖ-ಸಂಪತ್ತನ್ನು ಪಡೆಯಬಯಸುತ್ತಿರುವೆ.'' ಎಂದು ಹೇಳಿ ವಿಭೀಷಣನು ರಾವಣನ ಎದೆಗೆ ಗದಾಪ್ರಹಾರ ಮಾಡಿದನು. (ಚೌ/೧-೪)

**ಛಂ – ಉರ ಮಾಝ ಗದಾ ಪ್ರಹಾರ ಘೋರ ಕಠೋರ ಲಾಗತ ಮಹಿ ಪರ್‍ಯೋ।**
**ದಸ ಬದನ ಸೋನಿತ ಸ್ರವತ ಪುನಿ ಸಂಭಾರಿ ಧಾಯೋ ರಿಸ ಭರ್‍ಯೋ॥**
**ದ್ವೌ ಭಿರೇ ಅತಿಬಲ ಮಲ್ಲಜುದ್ಧ ಬಿರುದ್ಧ ಏಕು ಏಕಹಿ ಹನೈ।**
**ರಘುಬೀರ ಬಲ ದರ್ಪಿತ ಬಿಭೀಷನು ಘಾಲಿ ನಹಿಂ ತಾ ಕಹುಁ ಗನೈ॥**

ನಡು ಎದೆಗೆ ಬಿದ್ದ ಕಠೋರ ಗದಾಪ್ರಹಾರದ ಪೆಟ್ಟಿನಿಂದ ರಾವಣನು ನೆಲಕ್ಕುರುಳಿದನು. ಅವನ ಹತ್ತುಬಾಯಿಗಳಿಂದ ರಕ್ತ ಹರಿಯತೊಡಗಿತು. ಅವನು ಮತ್ತೆ ಚೇತರಿಸಿಕೊಂಡು ಕ್ರೋಧಭರಿತನಾಗಿ ಮುಂದಕ್ಕೆ ಓಡಿದನು. ಇಬ್ಬರೂ ಭಾರೀ ಬಲಶಾಲಿಗಳು. ಪರಸ್ಪರರು ಮಲ್ಲಯುದ್ಧಕ್ಕೆ ತೊಡಗಿದರು. ಶ್ರೀರಘುವೀರನ ಬಲಪ್ರಭಾವದಿಂದ ವಿಭೀಷಣನು ಜಗತ್ಪ್ರಸಿದ್ಧ ಬಲಶಾಲಿಯಾದ ರಾವಣನನ್ನು ಯಾವ ಲೆಕ್ಕಕ್ಕೂ ಪರಿಗಣಿಸಲಿಲ್ಲ. (ಛಂದ)

**ದೋ – ಉಮಾ ಬಿಭೀಷನು ರಾವನಹಿ ಸನ್ಮುಖ ಚಿತವ ಕಿ ಕಾಉ।**
**ಸೋ ಅಬ ಭಿರತ ಕಾಲ ಜ್ಯೋಂ ಶ್ರೀರಘುಬೀರ ಪ್ರಭಾಉ॥ ೯೪ ॥**

ಶಿವನು ಹೇಳುತ್ತಿದ್ದಾನೆ – ಉಮೆ! ಇಷ್ಟರವರೆಗೆ ವಿಭೀಷಣನು ಎಂದಾದರು ರಾವಣನನ್ನು ಕಣ್ಣೆತ್ತಿ ನೋಡುವುದು ಸಾಧ್ಯವಿತ್ತೇ? ಆದರೆ ಈಗ ಆ ವಿಭೀಷಣನೇ ಕಾಲನಂತೆ ಅವನನ್ನು ಎದುರಿಸುತ್ತಿದ್ದಾನೆ. ಇದು ಶ್ರೀರಘುವೀರನ ಪ್ರಭಾವವೇ ಆಗಿದೆ. (ದೋ/೯೪)

**ಚೌ – ದೇಖಾ ಶ್ರಮಿತ ಬಿಭೀಷನು ಭಾರೀ। ಧಾಯಉ ಹನೂಮಾನ ಗಿರಿ ಧಾರೀ॥**
**ರಥ ತುರಂಗ ಸಾರಥೀ ನಿಪಾತಾ। ಹೃದಯ ಮಾಝ ತೆಹಿ ಮಾರೆಸಿ ಲಾತಾ॥ ೧ ॥**
**ಠಾಢ ರಹಾ ಅತಿ ಕಂಪಿತ ಗಾತಾ। ಗಯಉ ಬಿಭೀಷನು ಜಹಂ ಜನತ್ರಾತಾ॥**
**ಪುನಿ ರಾವನ ಕಪಿ ಹತೆಉ ಪಚಾರೀ। ಚಲೆಉ ಗಗನ ಕಪಿ ಪೂಂಛ ಪಸಾರೀ॥ ೨ ॥**
**ಗಹಿಸಿ ಪೂಂಛ ಕಪಿ ಸಹಿತ ಉಡಾನಾ। ಪುನಿ ಫಿರಿ ಭಿರೆಉ ಪ್ರಬಲ ಹನುಮಾನಾ॥**
**ಲರತ ಅಕಾಸ ಜುಗಲ ಸಮ ಜೋಧಾ। ಏಕಹಿ ಏಕು ಹನತ ಕರಿ ಕ್ರೋಧಾ॥ ೩ ॥**
**ಸೋಹಹಿಂ ನಭ ಛಲ ಬಲ ಬಹು ಕರಹೀಂ। ಕಜ್ಜಲ ಗಿರಿ ಸುಮೇರು ಜನು ಲರಹೀಂ॥**
**ಬುಧಿ ಬಲ ನಿಸಿಚರ ಪರಇ ನ ಪಾರ್‍ಯೋ। ತಬ ಮಾರುತ ಸುತ ಪ್ರಭು ಸಂಬಾರ್‍ಯೋ॥ ೪ ॥**

ವಿಭೀಷಣನು ತುಂಬಾ ಬಳಲಿರುವುದನ್ನು ಕಂಡ ಹನುಮಂತನು ಒಂದು ಪರ್ವತವನ್ನು ಎತ್ತಿಕೊಂಡು ಅವನ ನೆರವಿಗೆ ಓಡಿದನು. ಅವನು ಅದರಿಂದ ರಾವಣನ ರಥವನ್ನು, ಸಾರಥಿಯನ್ನು, ಕುದುರೆಗಳನ್ನು ಹೊಡೆದು ಉರುಳಿಸಿದನು. ಅವನ ಎದೆಗೆ ಒದೆದನು. ರಾವಣನು ನಿಂತೇ ಇದ್ದನು. ಆದರೆ ಅವನ ಶರೀರ ತತ್ತರಿಸಿ ಹೋಯಿತು. ಇಷ್ಟರಲ್ಲಿ ಶರಣಾಗತ ರಕ್ಷಕನಾದ ಶ್ರೀರಾಮನಿದ್ದಲ್ಲಿಗೆ ವಿಭೀಷಣನು ಹೋದನು. ಮತ್ತೆ ರಾವಣನು ಯುದ್ಧಕ್ಕಾಗಿ ಆಹ್ವಾನಿಸುತ್ತಾ ಹನುಮಂತನಿಗೆ ಹೊಡೆದನು. ಆಂಜನೇಯನು ತನ್ನ ಬಾಲವನ್ನು ಬಿಚ್ಚಿ ಆಗಸಕ್ಕೆ ಜಿಗಿದನು. ರಾವಣನು ಅವನ ಬಾಲವನ್ನು ಹಿಡಿದುಕೊಂಡು ಬಿಟ್ಟ. ಹನುಮಂತನು ರಾವಣನನ್ನೇ ತನ್ನ ಬಾಲದಿಂದ ಎತ್ತಿಕೊಂಡು ಮೇಲಕ್ಕೆ ಹಾರಿದನು. ಮಹಾಬಲಶಾಲಿಯಾದ ಮಾರುತಿಯು ಆಕಾಶದಲ್ಲೇ ನಿಂತು ಹೋರಾಡತೊಡಗಿದನು. ಆ ಇಬ್ಬರೂ ಯೋಧರೂ ಆಕಾಶದಲ್ಲಿ ಹೋರಾಡುತ್ತಾ ಒಬ್ಬರು ಮತ್ತೊಬ್ಬರನ್ನು ಕ್ರೋಧದಿಂದ ಸದೆಬಡಿಯತೊಡಗಿದರು. ತಮ್ಮ-ತಮ್ಮ ಬಲವನ್ನೂ, ಯುಕಿ-ಪ್ರಯುಕ್ತಿಗಳನ್ನೂ ಪ್ರದರ್ಶಿಸಿದರು. ಒಂದು ಕಾಡಿಗೆಯ ಬೆಟ್ಟ ಮತ್ತು ಸುಮೇರು ಪರ್ವತ ಪರಸ್ಪರ ಢಿಕ್ಕಿಹೊಡೆಯುವಂತೆ ಶೋಭಿಸಿದರು. ಬುದ್ಧಿ ಹಾಗೂ ಬಲಕ್ಕೂ ರಾವಣನು ಮಣಿಯದುದನ್ನು ಕಂಡು, ಬೀಳಿಸಿದರೂ ಬೀಳದುದನ್ನು ಕಂಡು ಮಾರುತಿಯು ಶ್ರೀರಾಮನನ್ನು ಸ್ಮರಿಸಿದನು. (ಚೌ/೧-೪)

**ಛಂ – ಸಂಭಾರಿ ಶ್ರೀರಘುಬೀರ ಧೀರ ಪಚಾರಿ ಕಪಿ ರಾವನು ಹನ್ಯೋ।**
**ಮಹಿ ಪರತ ಪುನಿ ಉಠಿ ಲರತ ದೇವನ್ಹ ಜುಗಲ ಕಹುಂ ಜಯ ಜಯ ಭನ್ಯೋ॥**
**ಹನುಮಂತ ಸಂಕಟ ದೇಖಿ ಮರ್ಕಟ ಭಾಲು ಕ್ರೋಧಾತುರ ಚಲೇ।**
**ರನ ಮತ್ತ ರಾವನ ಸಕಲ ಸುಭಟ ಪ್ರಚಂಡ ಭುಜ ಬಲ ದಲಮಲೇ॥**

ಧೀರನಾದ ಹನುಮಂತನು ಶ್ರೀರಘುರಾಮನನ್ನು ಸ್ಮರಿಸಿ, ರಾವಣನನ್ನು ಯುದ್ಧಕ್ಕಾಗಿ ಆಹ್ವಾನಿಸಿದನು. ಇಬ್ಬರೂ ನೆಲಕ್ಕೆ ಇಳಿದು ಹೋರಾಡತೊಡಗಿದರು. ಇದನ್ನು ಕಂಡ ದೇವತೆಗಳು ಇಬ್ಬರಿಗೂ (ಭಯದಿಂದ ರಾವಣನಿಗೆ, ಭಕ್ತಿಯಿಂದ ಆಂಜನೇಯನಿಗೆ) ಜಯಕಾರಮಾಡಿದರು. ಹನುಮಂತನ ಸಂಕಟಸ್ಥಿತಿಯನ್ನು ಕಂಡು ವಾನರ-ಭಲ್ಲೂಕಗಳು ಕ್ರುದ್ಧರಾಗಿ ಓಡಿಬಂದರು. ಆದರೆ ಮದೋನ್ಮತ್ತನಾದ ರಾವಣನು ಎಲ್ಲ ಯೋಧರನ್ನು ತನ್ನ ಪ್ರಚಂಡ ಭುಜಬಲದಿಂದ ಹಿಸುಕಿಹಾಕಿದನು. (ಛಂದ)

**ದೋ – ತಬ ರಘುಬೀರ ಪಚಾರೇ ಧಾಏ ಕೀಸ ಪ್ರಚಂಡ।**
**ಕಪಿ ಬಲ ಪ್ರಬಲ ದೇಖಿ ತೆಹಿಂ ಕೀನ್ಹ ಪ್ರಗಟ ಪಾಷಂಡ॥ ೯೫ ॥**

ಆಗ ಶ್ರೀರಘುವೀರನು ತನ್ನ ಸೈನಿಕರನ್ನು ಹುರಿದುಂಬಿಸಿದಾಗ ಪ್ರಚಂಡವೀರರಾದ ವಾನರರು ಮುಂದೆ ಹಾಯ್ದರು. ಪ್ರಬಲವಾದ ವಾನರಸೈನ್ಯವನ್ನು ನೋಡಿ ರಾವಣನು ತನ್ನ ಮಾಯೆಯನ್ನು ಪ್ರಕಟಿಸಿದನು. (ದೋ/೯೫)

**ಚೌ – ಅಂತರಧಾನ ಭಯಉ ಛನ ಏಕಾ। ಪುನಿ ಪ್ರಗಟೇ ಖಲ ರೂಪ ಅನೇಕಾ॥**
**ರಘುಪತಿ ಕಟಕ ಭಾಲು ಕಪಿ ಜೇತೇ। ಜಹಁ ತಹಁ ಪ್ರಗಟ ದಸಾನನ ತೇತೇ॥ ೧॥**
**ದೇಖೇ ಕಪಿನ್ಹ ಅಮಿತ ದಸಸೀಸಾ। ಜಹಁ ತಹಁ ಭಜೇ ಭಾಲು ಅರು ಕೀಸಾ॥**
**ಭಾಗೇ ಬಾನರ ಧರಹಿಂ ನ ಧೀರಾ। ತ್ರಾಹಿ ತ್ರಾಹಿ ಲಛಿಮನ ರಘುಬೀರಾ॥ ೨॥**
**ದಹಁ ದಿಸಿ ಧಾವಹಿಂ ಕೋಟಿನ್ಹ ರಾವನ। ಗರ್ಜಹಿಂ ಘೋರ ಕಠೋರ ಭಯಾವನ॥**
**ಡರೇ ಸಕಲ ಸುರ ಚಲೇ ಪರಾಈ। ಜಯ ಕೈ ಆಸ ತಜಹು ಅಬ ಭಾಈ॥ ೩॥**
**ಸಬ ಸುರ ಜಿತೇ ಏಕ ದಸಕಂಧರ। ಅಬ ಬಹು ಭಏ ತಕಹು ಗಿರಿ ಕಂದರ॥**
**ರಹೇ ಬಿರಂಚಿ ಸಂಭು ಮುನಿ ಗ್ಯಾನೀ। ಜಿನ್ಹ ಜಿನ್ಹ ಪ್ರಭು ಮಹಿಮಾ ಕಛು ಜಾನೀ॥ ೪॥**

ಕ್ಷಣಕಾಲ ಅವನು ಅದೃಶ್ಯನಾಗಿ ಬಿಟ್ಟನು. ಅನಂತರ ಆ ದುಷ್ಟನು ತಾನೇ ಅನೇಕ ರೂಪಗಳಿಂದ ಕಾಣಿಸಿಕೊಂಡನು. ರಾಮನು ಸೇನೆಯಲ್ಲಿ ಎಷ್ಟು ಕಪಿ-ಕರಡಿಗಳಿದ್ದವೋ ಅಷ್ಟೇ ಮಂದಿ ರಾವಣರು ಸುತ್ತ-ಮುತ್ತ ಎತ್ತೆತ್ತಲೂ ಕಾಣಿಸಿಕೊಂಡರು. ಅಸಂಖ್ಯಾತರಾದ ರಾವಣರನ್ನು ನೋಡಿ ಭಲ್ಲೂಕ-ವಾನರರು ಭಯದಿಂದ ದಿಕ್ಕಾಪಾಲಾಗಿ ಓಡಿದರು. ವಾನರರ ಜಂಘಾಬಲ ಉಡುಗಿಹೋಯಿತು. ಅವರು 'ಓ ಲಕ್ಷ್ಮಣಾ! ಓ ರಘುವೀರಾ! ರಕ್ಷಿಸು, ರಕ್ಷಿಸು'' ಎಂದು ಅರಚುತ್ತಾ ಓಡಿಹೋಗುತ್ತಿದ್ದಾರೆ. ದಶದಿಶೆಗಳಲ್ಲಿಯೂ ಅಸಂಖ್ಯ ರಾವಣರು ಓಡುತ್ತಿದ್ದು ಘೋರ, ಕಠೋರ, ಭಯಂಕರ ಗರ್ಜನೆ ಮಾಡುತ್ತಿದ್ದರು. ದೇವತೆಗಳೆಲ್ಲ ಇದನ್ನು ಕಂಡು ಭಯದಿಂದ – ''ಅಯ್ಯಾ ! ಇನ್ನು ಗೆಲುವಿನ ಆಸೆ ಬಿಟ್ಟುಬಿಡಿರಿ. ಒಬ್ಬ ರಾವಣನೇ ಇರುವಾಗ ಎಲ್ಲ ದೇವತೆಗಳನ್ನು ಗೆದ್ದಿದ್ದನು. ಈಗಂತೂ ಅಸಂಖ್ಯ ರಾವಣರಾಗಿದ್ದಾರೆ. ಆದ್ದರಿಂದ ಇನ್ನು ಗಿರಿಗಹ್ವರಗಳಲ್ಲಿ ಹೋಗಿ ಅಡಗಿಕೊಳ್ಳಿ'' ಎಂದು ಹೇಳಿ ಕಾಲ್ತೆಗೆದರು. ಅಲ್ಲಿ ಕೇವಲ ಹರ, ವಿರಿಂಚಿ, ಜ್ಞಾನೀ ಮುನಿಗಳು ಮಾತ್ರ ಉಳಿದರು. ಏಕೆಂದರೆ ಅವರಿಗೆ ಪ್ರಭುಮಹಿಮೆಯ ಅರಿವಿತ್ತು. (ಚೌ/೧-೪)

**ಛಂ – ಜಾನಾ ಪ್ರತಾಪ ತೆ ರಹೇ ನಿರ್ಭಯ ಕಪಿನ್ಹ ರಿಪು ಮಾನೇ ಫುರೇ।**
**ಚಲೆ ಬಿಚಲಿ ಮರ್ಕಟ ಭಾಲು ಸಕಲ ಕೃಪಾಲ ಪಾಹಿ ಭಯಾತುರೇ॥**
**ಹನುಮಂತ ಅಂಗದ ನೀಲ ನಲ ಅತಿಬಲ ಲರತ ರನ ಬಾಁಕುರೇ।**
**ಮರ್ದಹಿಂ ದಸಾನನ ಕೋಟಿ ಕೋಟಿನ್ಹ ಕಪಟ ಭೂ ಭಟ ಅಂಕುರೇ॥**

ಪ್ರಭುವಿನ ಪ್ರತಾಪವನ್ನು ಅರಿತವರು ನಿರ್ಭಯರಾಗಿ ನಿಂತಿದ್ದರು. ವಾನರರು ಬಹುಮಂದಿ ರಾವಣರನ್ನು ನಿಜವೆಂದೇ ತಿಳಿದರು. ಆದ್ದರಿಂದ ಅವರು ವಿಚಲಿತರಾಗಿ ''ಓ ಕೃಪಾಳುವೇ ! ಕಾಪಾಡು, ಕಾಪಾಡು'' ಎಂದು ಆರ್ತನಾದ ಮಾಡುತ್ತಾ ಓಡಿದರು. ಅತ್ಯಂತ ಬಲಶಾಲಿಗಳೂ, ರಣಕೋವಿದರೂ ಆದ ಹನುಮಂತ, ಅಂಗದ, ನೀಲ, ನಳ ಇವರು ಸಾಹಸದಿಂದ ಹೋರಾಡುತ್ತಿದ್ದರು. ಅವರು ಕಪಟರೂಪೀ ಭೂಮಿಯಿಂದ ಅಂಕುರಿಸಿದ ಅಸಂಖ್ಯ ರಾವಣರನ್ನು ಮರ್ದಿಸುತ್ತಿದ್ದರು. (ಛಂದ)

**ದೋ – ಸುರ ಬಾನರ ದೇಖೇ ಬಿಕಲ ಹಁಸ್ಯೋ ಕೋಸಲಾಧೀಸ।**
**ಸಜಿ ಸಾರಂಗ ಏಕ ಸರ ಹತೇ ಸಕಲ ದಸಸೀಸ॥ ೯೬॥**

ಸುರರು, ವಾನರರು ತಲ್ಲಣಿಸಿದುದನ್ನು ಕಂಡು ಕೋಸಲಾಧೀಶ ಶ್ರೀರಾಮನು ನಕ್ಕು, ಶಾಂರ್ಙಧನುಸ್ಸನ್ನು ಎತ್ತಿ ಒಂದೇ ಬಾಣಹೂಡಿ ಎಲ್ಲ ಮಾಯರಾವಣರನ್ನು ಕೊಂದುಹಾಕಿದನು. (ದೋ/೯೬)

**ಚೌ – ಪ್ರಭು ಛನ ಮಹುಁ ಮಾಯಾ ಸಬ ಕಾಟೀ। ಜಿಮಿ ರಬಿ ಉಏಁ ಜಾಹಿಂ ತಮ ಫಾಟೀ॥**
**ರಾವನು ಏಕು ದೇಖಿ ಸುರ ಹರಷೇ। ಫಿರೇ ಸುಮನ ಬಹು ಪ್ರಭು ಪರ ಬರಷೇ॥ ೧॥**
**ಭುಜ ಉಠಾಇ ರಘುಪತಿ ಕಪಿ ಫೇರೇ। ಫಿರೇ ಏಕ ಏಕನ್ಹ ತಬ ಟೇರೇ॥**
**ಪ್ರಭು ಬಲು ಪಾಇ ಭಾಲು ಕಪಿ ಧಾಏ। ತರಲ ತಮಕಿ ಸಂಜುಗ ಮಹಿ ಆಏ॥ ೨॥**
**ಅಸ್ತುತಿ ಕರತ ದೇವತನ್ಹಿ ದೇಖೇಂ। ಭಯಉಁ ಏಕ ಮೈಂ ಇನ್ಹ ಕೇ ಲೇಖೇಂ॥**
**ಸಠಹು ಸದಾ ತುಮ್ಹ ಮೋರ ಮರಾಯಲ। ಅಸ ಕಹಿ ಕೋಪಿ ಗಗನ ಪರ ಧಾಯಲ॥ ೩॥**

**ಹಾಹಾಕಾರ ಕರತ ಸುರ ಭಾಗೇ। ಖಲಹು ಜಾಹು ಕಹ್ ಮೋರೇ್ ಆಗೇ॥**
**ದೇಖಿ ಬಿಕಲ ಸುರ ಅಂಗದ ಧಾಯೋ। ಕೂದಿ ಚರನ ಗಹಿ ಭೂಮಿ ಗಿರಾಯೋ॥ ೪ ॥**

ಸೂರ್ಯೋದಯವಾಗುತ್ತಲೇ ಅಂಧಕಾರದ ಮೊತ್ತ ಕರಗಿಹೋಗುವಂತೆ, ಪ್ರಭುವು ಒಂದೇ ಕ್ಷಣದಲ್ಲಿ ರಾವಣನ ಮಾಯೆಯನ್ನು ನಾಶಮಾಡಿದನು. ಈಗ ಒಂದೇ ರಾವಣನನ್ನು ನೋಡಿ ದೇವತೆಗಳು ಹರ್ಷಿತರಾದರು. ಮತ್ತೆ ಮರಳಿ ಪ್ರಭುವಿನ ಮೇಲೆ ಪುಷ್ಪವೃಷ್ಟಿಗರೆದರು. ಶ್ರೀರಾಮನು ಭುಜವೆತ್ತಿ ಅಭಯವನ್ನಿತ್ತು ಎಲ್ಲ ವಾನರರನ್ನು ಹಿಂತಿರುಗುವಂತೆ ಕರೆದನು. ಅವರು ಎಲ್ಲರನ್ನೂ ಕರೆದುಕೊಂಡು ಬಂದು, ಪ್ರಭುವಿನ ಬಲವನ್ನು ಹೊಂದಿ, ವಾನರ-ಭಲ್ಲೂಕಗಳು ಎಲ್ಲರೂ ರಣೋತ್ಸಾಹದಿಂದ ನೆಗೆ-ನೆಗೆಯುತ್ತಾ ರಣಕ್ಕಿಳಿದರು. ದೇವತೆಗಳು ಶ್ರೀರಾಮನನ್ನು ಸ್ತುತಿಸುತ್ತಿರುವುದನ್ನು ಕಂಡು ರಾವಣನು – 'ನಾನು ಒಂಟಿಯಾದೆ ಎಂದು ಈ ದೇವತೆಗಳು ಭಾವಿಸುತ್ತಿರುವರು' (ಆದರೆ ಒಂಟಿಯಾದರೂ ಇವರಿಗೆಲ್ಲ ನಾನೊಬ್ಬನೇ ಸಾಕು ಎಂಬುದನ್ನು ಈ ಸುರರರಿಯರು.) ಎಂದು ಆಲೋಚಿಸಿ, ಹೇಳಿದನು – 'ಎಲೈ ಮೂರ್ಖರೇ ! ನೀವೆಲ್ಲ ಯಾವಾಗಲೂ ನನ್ನ ಏಟು ತಿನ್ನುವವರೇ' ಎಂದು ಹೇಳುತ್ತಾ ಕ್ರೋಧಾವೇಶದಿಂದ ಅವನು ದೇವತೆಗಳತ್ತ ಆಕಾಶಕ್ಕೆ ನೆಗೆದನು. ದೇವತೆಗಳು ಹಾಹಾಕಾರಗೈಯ್ಯುತ್ತಾ ಓಡಿಹೋದರು. ರಾವಣ ಹೇಳಿದನು – 'ದುಷ್ಟರೇ ! ನನ್ನಿಂದ ತಪ್ಪಿಸಿಕೊಂಡು ಎಲ್ಲಿಗೆ ಹೋಗುವಿರಿ?' ದೇವತೆಗಳು ವ್ಯಾಕುಲರಾಗಿರುವುದನ್ನು ನೋಡಿ ಅಂಗದನು ಅತ್ತ ಧಾವಿಸಿ, ರಾವಣನ ಕಾಲನ್ನು ಹಿಡಿದು ಅವನನ್ನು ಭೂಮಿಗೆ ಕೆಡವಿದನು. (ಚೌ/೧-೪)

**ಛಂ – ಗಹಿ ಭೂಮಿ ಪಾರ್‍ಯೋ ಲಾತ ಮಾರ್‍ಯೋ ಬಾಲಿಸುತ ಪ್ರಭು ಪಹಿಂ ಗಯೋ।**
**ಸಂಭಾರಿ ಉಠಿ ದಸಕಂಠ ಘೋರ ಕಠೋರ ರವ ಗರ್ಜತ ಭಯೋ॥**
**ಕರಿ ದಾಪ ಚಾಪ ಚಢಾಇ ದಸ ಸಂಧಾನಿ ಸರ ಬಹು ಬರಷಈ।**
**ಕಿಏ ಸಕಲ ಭಟ ಘಾಯಲ ಭಯಾಕುಲ ದೇಖಿ ನಿಜ ಬಲ ಹರಷಈ॥**

ವಾಲೀಪುತ್ರ ಅಂಗದನು ರಾವಣನನ್ನು ಭುವಿಗೆ ಕೆಡವಿ ಕಾಲಿಂದ ಒಂದು ಒದೆಕೊಟ್ಟನು. ಬಳಿಕ ಅವನು ಪ್ರಭುವಿನ ಬಳಿಗೆ ಸಾರಿದನು. ರಾವಣನು ಚೇತರಿಸಿ ಎದ್ದು ಭಯಂಕರವಾಗಿ ಗರ್ಜಿಸಿದನು. ಮತ್ತೆ ಬಲದರ್ಪಿತನಾಗಿ ಹತ್ತು ಕೈಗಳಲ್ಲಿ ಧನುಸ್ಸುಗಳನ್ನು ಎತ್ತಿಕೊಂಡು, ಅನೇಕ ಬಾಣಗಳನ್ನು ಮಳೆಗರೆಯತೊಡಗಿದನು. ಅದರಿಂದ ವಾನರಯೋಧರೆಲ್ಲ ಗಾಯಗೊಂಡು ಭಯದಿಂದ ವ್ಯಾಕುಲರಾದರು. ರಾವಣನು ತನ್ನ ಬಲವನ್ನು ನೋಡಿ ಉಬ್ಬಿಹೋದನು. (ಛಂದ)

**ದೋ – ತಬ ರಘುಪತಿ ರಾವನ ಕೇ ಸೀಸ ಭುಜಾ ಸರ ಚಾಪ।**
**ಕಾಟೇ ಬಹುತ ಬಢೇ ಪುನಿ ಜಿಮಿ ತೀರಥ ಕರ ಪಾಪ॥ ೯೭ ॥**

ಆಗ ರಘುನಾಥನು ರಾವಣನ ತಲೆಗಳು, ಭುಜಗಳು, ಬಿಲ್ಲು, ಬಾಣಗಳನ್ನು ಕತ್ತರಿಸಿ ಹಾಕಿದನು. ಆದರೆ ತಲೆಗಳು, ಭುಜಗಳು ತೀರ್ಥಕ್ಷೇತ್ರದಲ್ಲಿ ಮಾಡಿದ ಪಾಪಗಳು ವೃದ್ಧಿಹೊಂದುವಂತೆ ವರ್ಧಿಸುತ್ತಲೇ ಹೋದವು. (ಪುಣ್ಯಕ್ಷೇತ್ರೇ ಕೃತಂ ಪಾಪಂ ವಜ್ರಲೇಪೋ ಭವಿಷ್ಯತಿ।) (ದೋ/೯೭)

**ಚೌ – ಸಿರ ಭುಜ ಬಾಢಿ ದೇಖಿ ರಿಪು ಕೇರೀ। ಭಾಲು ಕಪಿನ್ಹ ರಿಸ ಭಈ ಘನೇರೀ॥**
**ಮರತ ನ ಮೂಢ ಕಟೆಹು ಭುಜ ಸೀಸಾ। ಧಾಏ ಕೋಪಿ ಭಾಲು ಭಟ ಕೀಸಾ॥ ೧ ॥**
**ಬಾಲಿತನಯ ಮಾರುತಿ ನಲ ನೀಲಾ। ಬಾನರರಾಜ ದುಬಿದ ಬಲಸೀಲಾ॥**
**ಬಿಟಪ ಮಹೀಧರ ಕರಹಿಂ ಪ್ರಹಾರಾ। ಸೋಇ ಗಿರಿ ತರು ಗಹಿ ಕಪಿನ್ಹ ಸೊ ಮಾರಾ॥ ೨ ॥**
**ಏಕ ನಖನ್ಹಿ ರಿಪು ಬಪುಷ ಬಿದಾರೀ। ಭಾಗಿ ಚಲಹಿಂ ಏಕ ಲಾತನ್ಹ ಮಾರೀ॥**
**ತಬ ನಲ ನೀಲ ಸಿರನ್ಹಿ ಚಢಿ ಗಯಊ। ನಖನ್ಹಿ ಲಿಲಾರ ಬಿದಾರತ ಭಯಊ॥ ೩ ॥**
**ರುಧಿರ ದೇಖಿ ಬಿಷಾದ ಉರ ಭಾರೀ। ತಿನ್ಹಹಿ ಧರನ ಕಹುಂ ಭುಜಾ ಪಸಾರೀ॥**
**ಗಹೇ ನ ಜಾಹಿಂ ಕರನ್ಹಿ ಪರ ಫಿರಹೀಂ। ಜನು ಜುಗ ಮಧುಪ ಕಮಲ ಬನ ಚರಹೀಂ॥ ೪ ॥**
**ಕೋಪಿ ಕೂದಿ ದ್ವೌ ಧರೇಸಿ ಬಹೋರೀ। ಮಹಿ ಪಟಕತ ಭಜೆ ಭುಜಾ ಮರೋರೀ॥**
**ಪುನಿ ಸಕೋಪ ದಸ ಧನು ಕರ ಲೀನ್ಹೇ। ಸರನ್ಹಿ ಮಾರಿ ಘಾಯಲ ಕಪಿ ಕೀನ್ಹೇ॥ ೫ ॥**
**ಹನುಮದಾದಿ ಮುರುಛಿತ ಕರಿ ಬಂದರ। ಪಾಇ ಪ್ರದೋಷ ಹರಷ ದಸಕಂಧರ॥**
**ಮುರುಛಿತ ದೇಖಿ ಸಕಲ ಕಪಿ ಬೀರಾ। ಜಾಮವಂತ ಧಾಯಉ ರನಧೀರಾ॥ ೬ ॥**

**ಸಂಗ ಭಾಲು ಭೂಧರ ತರು ಧಾರೀ। ಮಾರನ ಲಗೇ ಪಚಾರಿ ಪಚಾರೀ॥**
**ಭಯಉ ಕ್ರುದ್ಧ ರಾವನ ಬಲವಾನಾ। ಗಹಿ ಪದ ಮಹಿ ಪಟಕಇ ಭಟ ನಾನಾ॥೭॥**
**ದೇಖಿ ಭಾಲುಪತಿ ನಿಜ ದಲ ಘಾತಾ। ಕೋಪಿ ಮಾಝು ಉರ ಮಾರೆಸಿ ಲಾತಾ॥೮॥**

ಶತ್ರುವಿನ ತಲೆ, ಭುಜಗಳು ಚಿಗುರಿಕೊಳ್ಳುತ್ತಿರುವುದನ್ನು ಕಂಡು ವಾನರ-ಭಲ್ಲೂಕವೀರರ ಕ್ರೋಧವು ನಖಶಿಖಾಂತವೇರಿತು. 'ಈ ಮೂರ್ಖನು ತಲೆಗಳನ್ನು, ಭುಜಗಳನ್ನು ಕತ್ತರಿಸಿದರೂ ಸಾಯಲೊಲ್ಲ' ಎಂದು ಹೇಳುತ್ತಾ ಅವರು ಸಿಟ್ಟಿನಬೆಟ್ಟವಾಗಿ ಓಡಿದರು. ವಾಲಿನಂದನ ಅಂಗದ, ಪವನಪುತ್ರ ಹನುಮಂತ, ನಳ, ನೀಲ, ಕಪೀಂದ್ರ ಸುಗ್ರೀವ, ದ್ವಿವಿದ ಮೊದಲಾದ ಮಹಾಬಲಶಾಲಿಗಳು ರಾವಣನ ಮೇಲೆ ಹೆಮ್ಮರಗಳನ್ನು, ಪರ್ವತಗಳನ್ನು ಎಸೆದರು. ಆದರೆ ಅವನು ಅವುಗಳನ್ನೇ ಹಿಡಿದುಕೊಂಡು ವಾನರರನ್ನು ಸದೆಬಡಿದ. ಓರ್ವ ವಾನರ ಅವನ ಶರೀರವನ್ನು ಉಗುರಿನಿಂದ ಪರಚಿ ಓಡಿಹೋದರೆ, ಮತ್ತೊಂದು ಕಾಲಿಂದ ಒದೆಯುತ್ತಿತ್ತು. ಆಗ ನಳ, ನೀಲರು ರಾವಣನ ತಲೆಯಮೇಲೆ ಹತ್ತಿ ಉಗುರುಗಳಿಂದ ಅವನ ಹಣೆಯನ್ನು ಹರಿಯತೊಡಗಿದರು. ಹಣೆಯಿಂದ ರಕ್ತವು ಬಸಿಯುತ್ತಿರುವುದನ್ನು ಕಂಡು ಅವನು ತುಂಬಾ ಬಾಧೆಪಟ್ಟನು. ಅವರನ್ನು ಹಿಡಿಯಲು ಅವನು ಕೈಗಳನ್ನು ಚಾಚಿದನು. ಆದರೆ ಅವರು ಅವನಿಗೆ ಸಿಗುತ್ತಿರಲಿಲ್ಲ. ಎರಡು ದುಂಬಿಗಳು ಕಮಲವನದ ಮೇಲೆ ಸುತ್ತುತ್ತಿರುವಂತೆ ಅವರು ಅವನ ಕೈಗಳ ಮೇಲೆಯೇ ತಿರುಗುತ್ತಿದ್ದರು. ಆಗ ಅವನು ಕ್ರುದ್ಧನಾಗಿ ಹಾರಿ ಅವರಿಬ್ಬರನ್ನು ಹಿಡಿದುಕೊಂಡು ನೆಲಕ್ಕೆ ಅಪ್ಪಳಿಸಬೇಕೆಂದಾಗ ಅವರು ನುಣುಚಿಕೊಂಡು ಅವನ ಕೈಗಳನ್ನು ತಿರುಚಿ ಓಡಿದರು. ಮತ್ತೆ ಅವನು ರೋಷಭೀಷಣನಾಗಿ ಹತ್ತು ಬಿಲ್ಲುಗಳನ್ನು ಕೈಗೆತ್ತಿಕೊಂಡು ವಾನರರನ್ನು ಬಾಣಗಳಿಂದ ಘಾತಿಸಿದನು. ಹನುಮದಾದಿ ವಾನರರೆಲ್ಲರನ್ನು ಮೂರ್ಛಿತರನ್ನಾಗಿಸಿ, ಸಂಧ್ಯಾಸಮಯವಾದುದನ್ನು ತಿಳಿದು ರಾವಣನು ಹರ್ಷಿತನಾದನು. ವಾನರರೆಲ್ಲರೂ ಪ್ರಜ್ಞಾಶೂನ್ಯರಾಗಿರುವುದನ್ನು ನೋಡಿ ರಣಧೀರನಾದ ಜಾಂಬವಂತರು ರಾವಣನತ್ತ ಧಾವಿಸಿದರು. ಅವರ ಅನುಚರರಾದ ಭಲ್ಲೂಕಗಳು ಪರ್ವತಗಳನ್ನು, ಮಹಾವೃಕ್ಷಗಳನ್ನು ಎತ್ತಿಕೊಂಡು ರಾವಣನನ್ನು ಹೀಯಾಳಿಸಿ-ಹೀಯಾಳಿಸಿ ಬಡಿಯತೊಡಗಿದವು. ಮಹಾಬಲಿಯಾದ ರಾವಣನು ಕ್ರೋಧಿತನಾಗಿ, ಅವುಗಳ ಕಾಲುಗಳನ್ನು ಹಿಡಿದು-ಹಿಡಿದು ನೆಲಕ್ಕೆ ಕುಕ್ಕತೊಡಗಿದನು. ತನ್ನ ದಳ ಧ್ವಂಸವಾಗುತ್ತಿರುವುದನ್ನು ಕಂಡು ಜಾಂಬವಂತನು ಕ್ರುದ್ಧರಾಗಿ ರಾವಣನ ಎದೆಗೆ ಒಂದು ಒದೆಯನ್ನು ಕೊಟ್ಟನು. (ಚೌ/೧-೮)

**ಛಂ— ಉರ ಲಾತ ಘಾತ ಪ್ರಚಂಡ ಲಾಗತ ಬಿಕಲ ರಥ ತೇ ಮಹಿ ಪರಾ।**
**ಗಹಿ ಭಾಲು ಬೀಸಹು ಕರ ಮನಹುँ ಕಮಲನ್ಹಿ ಬಸೇ ನಿಸಿ ಮಧುಕರಾ॥**
**ಮುರುಛಿತ ಬಿಲೋಕಿ ಬಹೋರಿ ಪದ ಹತಿ ಭಾಲುಪತಿ ಪ್ರಭು ಪಹಿँ ಗಯೊ।**
**ನಿಸಿ ಜಾನಿ ಸ್ಯಂದನ ಘಾಲಿ ತೆಹಿ ತಬ ಸೂತ ಜತನು ಕರತ ಭಯೊ॥**

ಎದೆಗೆ ತಗುಲಿದ ಪ್ರಚಂಡ ಆಘಾತದಿಂದ ರಾವಣನು ವ್ಯಾಕುಲನಾಗಿ ರಥದಿಂದ ನೆಲಕ್ಕುರುಳಿದನು. ಅವನು ಇಪ್ಪತ್ತು ಕೈಗಳಲ್ಲೂ ಭಲ್ಲೂಕಗಳನ್ನು ಹಿಡಿದಿದ್ದನು. ಅವು ರಾತ್ರಿಯಲ್ಲಿ ಭ್ರಮರಗಳು ಕಮಲಗಳಲ್ಲಿ ಸಿಕ್ಕಿಕೊಂಡಿದಂತೆ ಕಾಣುತ್ತಿದ್ದವು. ಅವನು ಮೂರ್ಛಿತನಾಗಿರುವುದನ್ನು ಕಂಡು ಮತ್ತೊಮ್ಮೆ ಒದೆದು ಋಕ್ಷರಾಜ ಜಾಂಬವಂತರು ಪ್ರಭುವಿನ ಬಳಿಗೆ ಸಾರಿದರು. ರಾತ್ರಿಯಾದುದನ್ನು ಕಂಡು ಸಾರಥಿಯು ರಾವಣನನ್ನು ರಥದೊಳಗೆ ಹಾಕಿಕೊಂಡು ಅವನಿಗೆ ಶೈತ್ಯೋಪಚಾರ ಮಾಡತೊಡಗಿನು. (ಛಂದ)

**ದೋ— ಮುರುಛಾ ಬಿಗತ ಭಾಲು ಕಪಿ ಸಬ ಆಏ ಪ್ರಭು ಪಾಸ।**
**ನಿಸಿಚರ ಸಕಲ ರಾವನಹಿ ಘೇರಿ ರಹೇ ಅತಿ ತ್ರಾಸ॥೯೮॥**

ಮೂರ್ಛೆಯಿಂದ ತಿಳಿದೆದ್ದ ಭಲ್ಲೂಕರೆಲ್ಲರೂ ಪ್ರಭುವಿನ ಬಳಿಗೆ ಸೇರಿದರು. ಅತ್ತ ನಿಶಾಚರರೆಲ್ಲರೂ ಭಯಭೀತರಾಗಿ ರಾವಣನ ಸುತ್ತಲೂ ನೆರೆದರು. (ದೋ/೯೮)

**ಮಾಸಪಾರಾಯಣದ ಇಪ್ಪತ್ತಾರನೆಯ ವಿಶ್ರಾಮ**

## ಸೀತಾದೇವಿಯನ್ನು ತ್ರಿಜಟೆಯು ಸಮಾಧಾನಗೊಳಿಸಿದುದು

**ಚೌ— ತೇಹೀ ನಿಸಿ ಸೀತಾ ಪಹಿँ ಜಾಈ। ತ್ರಿಜಟಾ ಕಹಿ ಸಬ ಕಥಾ ಸುನಾಈ॥**
**ಸಿರ ಭುಜ ಬಾಢ़ಿ ಸುನತ ರಿಪು ಕೇರೀ। ಸೀತಾ ಉರ ಭಇ ತ್ರಾಸ ಘನೇರೀ॥೧॥**
**ಮುಖ ಮಲೀನ ಉಪಜೀ ಮನ ಚಿಂತಾ। ತ್ರಿಜಟಾ ಸನ ಬೋಲೀ ತಬ ಸೀತಾ॥**
**ಹೋಇಹಿ ಕಹಾ ಕಹಸಿ ಕಿನ ಮಾತಾ। ಕೆಹಿ ಬಿಧಿ ಮರಿಹಿ ಬಿಸ್ವ ದುಖದಾತಾ॥೨॥**

**ರಘುಪತಿ ಸರ ಸಿರ ಕಟೆಹುँ ನ ಮರಈ । ಬಿಧಿ ಬಿಪರೀತ ಚರಿತ ಸಬ ಕರಈ ॥**
**ಮೋರ ಅಭಾಗ್ಯ ಜಿಆವತ ಓಹೀ । ಜೆಹಿँ ಹೌँ ಹರಿ ಪದ ಕಮಲ ಬಿಛೋಹೀ ॥ ೩ ॥**
**ಜೆಹಿँ ಕೃತ ಕಪಟ ಕನಕ ಮೃಗ ಝೂಠಾ । ಅಜಹುँ ಸೊ ದೈವ ಮೋಹಿ ಪರ ರೂಠಾ ॥**
**ಜೆಹಿँ ಬಿಧಿ ಮೊಹಿ ದುಖ ದುಸಹ ಸಹಾಏ । ಲಛಿಮನ ಕಹುँ ಕಟು ಬಚನ ಕಹಾಏ ॥ ೪ ॥**
**ರಘುಪತಿ ಬಿರಹ ಸಬಿಷ ಸರ ಭಾರೀ । ತಕಿ ತಕಿ ಮಾರ ಬಾರ ಬಹು ಮಾರೀ ॥**
**ಐಸೆಹುँ ದುಖ ಜೊ ರಾಖ ಮಮ ಪ್ರಾನಾ । ಸೊಇ ಬಿಧಿ ತಾಹಿ ಜಿಆವ ನ ಆನಾ ॥ ೫ ॥**
**ಬಹು ಬಿಧಿ ಕರ ಬಿಲಾಪ ಜಾನಕೀ । ಕರಿ ಕರಿ ಸುರತಿ ಕೃಪಾನಿಧಾನ ಕೀ ॥**
**ಕಹ ತ್ರಿಜಟಾ ಸುನು ರಾಜಕುಮಾರೀ । ಉರ ಸರ ಲಾಗತ ಮರಇ ಸುರಾರೀ ॥ ೬ ॥**
**ಪ್ರಭು ತಾತೇ ಉರ ಹತಇ ನ ತೇಹೀ । ಏಹಿ ಕೇ ಹೃದಯँ ಬಸತಿ ಬೈದೇಹೀ ॥ ೭ ॥**

ಅದೇ ರಾತ್ರಿ ತ್ರಿಜಟೆಯು ಸೀತೆಯ ಬಳಿಗೆ ಹೋಗಿ ಆಕೆಗೆ ಯುದ್ಧದ ಸಾದ್ಯಂತ ವೃತ್ತಾಂತವನ್ನು ಅರುಹಿದಳು. ಶತ್ರುವಿನ ತಲೆ, ಭುಜಗಳು ವೃದ್ಧಿಯಾಗುವ ಸಮಾಚಾರವನ್ನುಕೇಳಿ ಸೀತಾದೇವಿಗೆ ತುಂಬಾ ಭಯವಾಯಿತು. ಅವಳ ವದನ ಮ್ಲಾನವಾಯಿತು. ಮನಸ್ಸು ಚಿಂತಾಕ್ರಾಂತವಾಯಿತು. ಆಗ ಸೀತೆಯು ತ್ರಿಜಟೆಯ ಬಳಿ ಹೇಳಿದಳು – ''ತಾಯೇ ! ಏಕೆ ಮಾತನಾಡಲೊಲ್ಲೆ! ಮುಂದೇನಾಗುವುದು? ವಿಶ್ವಕ್ಕೆ ದುಃಖಕಾರಕನಾದ ಇವನು ಹೇಗೆ ಸಾಯುವನು? ಶ್ರೀರಘುಪತಿಯ ಬಾಣಗಳಿಂದ ಆತನ ತಲೆಗಳು ತರಿಯಲ್ಪಟ್ಟರೂ ಅವನು ಸತ್ತಿಲ್ಲ. ವಿಧಾತನ ಲೀಲೆಗಳೆಲ್ಲವೂ ವಿಪರೀತವಾಗಿವೆ. ನಿಜ ಹೇಳುವುದಾದರೆ ನನ್ನ ದೌರ್ಭಾಗ್ಯದಿಂದಲೇ ಅವನು ಬದುಕಿರುವನು. ಅದೇ ನನ್ನನ್ನು ಶ್ರೀಹರಿ ಚರಣಗಳಿಂದ ಅಗಲಿಸಿರುವುದು. ನನ್ನ ದೌರ್ಭಾಗ್ಯದಿಂದಲೇ ಅಲ್ಲಿಗೆ ಕಪಟ ಕಾಂಚನಮೃಗ ಬಂದದ್ದು. ಆ ದೈವವೇ ಇಂದೂ ನನ್ನಮೇಲೆ ಮುನಿದಿದೆ. ಆ ವಿಧಿಯೇ ನಾನು ದುಃಸಹ ದುಃಖವನ್ನು ಅನುಭವಿಸುವಂತೆ ಮಾಡಿತು. ಲಕ್ಷ್ಮಣನ ಕುರಿತು ನನ್ನ ಬಾಯಿಂದ ಕಠೋರಮಾತುಗಳನ್ನಾಡಿಸಿತು. ಅದೇ ವಿಧಿಯು ರಘುಪತಿ ವಿರಹವೆಂಬ ವಿಷಬಾಣದಿಂದ ನನ್ನನ್ನು ನೋಡಿ-ನೋಡಿ ಅನೇಕ ಸಲ ಘಾತಿಸಿದೆ. ಈಗಲೂ ತಿವಿಯುತ್ತಿದೆ. ಇಂತಹ ದುಃಖದಲ್ಲಿಯೂ ನನ್ನ ಪ್ರಾಣಗಳನ್ನು ಉಳಿಸಿರುವ ವಿಧಿಯೇ ಆ ರಾವಣನನ್ನು ಬದುಕಿಸುತ್ತಿದೆ. ಬೇರೆ ಯಾರೂ ಅಲ್ಲ.'' ಕೃಪಾಳುವಾದ ಶ್ರೀರಾಮನನ್ನು ಮಾತು-ಮಾತಿಗೆ ಸ್ಮರಿಸುತ್ತಾ ಜಾನಕಿಯು ಅನೇಕ ವಿಧದಿಂದ ವಿಲಪಿಸತೊಡಗಿದಳು. ತ್ರಿಜಟೆಯು ಹೇಳಿದಳು – ಓ ರಾಜಕುಮಾರಿ ! ಕೇಳು. ದೇವತೆಗಳ ಶತ್ರುವಾದ ರಾವಣನ ಎದೆಗೆ ಬಾಣತಗುಲಿದರೆ ಮಾತ್ರ ಅವನು ಸಾಯುವನು. ಆದರೆ ಪ್ರಭುರಾಮಚಂದ್ರನು ಅವನ ಎದೆಗೆ ಏಕೆ ಬಾಣಹೊಡೆಯುವುದಿಲ್ಲವೆಂದರೆ ಅಲ್ಲಿ ಜಾನಕಿಯಾದ ನೀವು ವಾಸವಾಗಿದ್ದೀರಿ. (ಚೌ/೧-೭)

**ಛಂ – ಏಹಿ ಕೇ ಹೃದಯँ ಬಸ ಜಾನಕೀ ಜಾನಕೀ ಉರ ಮಮ ಬಾಸ ಹೈ ।**
**ಮಮ ಉದರ ಭುಅನ ಅನೇಕ ಲಾಗತ ಬಾನ ಸಬ ಕರ ನಾಸ ಹೈ ॥**
**ಸುನಿ ಬಚನ ಹರಷ ಬಿಷಾದ ಮನ ಅತಿ ದೇಖಿ ಪುನಿ ತ್ರಿಜಟಾँ ಕಹಾ ।**
**ಅಬ ಮರಿಹಿ ರಿಪು ಏಹಿ ಬಿಧಿ ಸುನಹಿ ಸುಂದರಿ ತಜಹಿ ಸಂಸಯ ಮಹಾ ॥**

ಪ್ರಭುವು ಇಂತು ಆಲೋಚಿಸುತ್ತಿರುವನು – ''ಇವನ ಹೃದಯದಲ್ಲಿ ಜಾನಕಿ ನೆಲೆಸಿದ್ದಾಳೆ. ಜಾನಕಿಯ ಹೃದಯದಲ್ಲಿ ನಾನು ನೆಲೆಸಿದ್ದೇನೆ. ನನ್ನ ಉದರದಲ್ಲಿ ಅನೇಕ ಬ್ರಹ್ಮಾಂಡಗಳಿವೆ. ಆದ್ದರಿಂದ ರಾವಣನ ಹೃದಯಕ್ಕೆ ಬಾಣತಗುಲಿದರೆ ಸರ್ವನಾಶವಾದೀತು. ಇದನ್ನು ಕೇಳಿ ಸೀತಾದೇವಿಯ ಮನಸ್ಸಿನಲ್ಲಿ ಅತ್ಯಂತ ಹರ್ಷ-ವಿಷಾದಗಳುಂಟಾದುವು. ಇದನ್ನು ನೋಡಿ ತ್ರಿಜಟೆಯು ಪುನಃ ಹೇಳಿದಳು. ಸುಂದರೀ! ಅತಿಯಾದ ಸಂದೇಹವನ್ನು ತೊರೆ. ಶತ್ರುವು ಹೇಗೆ ಸಾಯುವುದೆಂಬುದನ್ನು ಕೇಳು. (ಛಂದ)

**ದೋ – ಕಾಟತ ಸಿರ ಹೋಇಹಿ ಬಿಕಲ ಛುಟಿ ಜಾಇಹಿ ತವ ಧ್ಯಾನ ।**
**ತಬ ರಾವನಹಿ ಹೃದಯ ಮಹುँ ಮರಿಹಹಿँ ರಾಮು ಸುಜಾನ ॥ ೯೯ ॥**

ತನ್ನ ತಲೆಗಳನ್ನು ಪದೇ-ಪದೇ ತರಿದುಹಾಕುವುದರಿಂದ ರಾವಣನು ವ್ಯಾಕುಲನಾಗುವನು. ಅದರಿಂದ ಅವನ ಹೃದಯದಲ್ಲಿ ನಿನ್ನ ಧ್ಯಾನ ಮರೆತುಹೋಗುತ್ತದೆ. ಆಗ ಅಂತರ್ಯಾಮಿಯಾದ ಶ್ರೀರಾಮನು ಅವನ ಎದೆಗೆ ಬಾಣವನ್ನು ಬಿಡುವನು. (ದೋ/೯೯)

**ಚೌ – ಅಸ ಕಹಿ ಬಹುತ ಭಾಁತಿ ಸಮುಝಾಈ। ಪುನಿ ತ್ರಿಜಟಾ ನಿಜ ಭವನ ಸಿಧಾಈ॥**
**ರಾಮ ಸುಭಾಉ ಸುಮಿರಿ ಬೈದೇಹೀ। ಉಪಜೀ ಬಿರಹ ಬಿಥಾ ಅತಿ ತೇಹೀ॥ ೧ ॥**
**ನಿಸಿಹಿ ಸಸಿಹಿ ನಿಂದತಿ ಬಹು ಭಾಁತೀ। ಜುಗ ಸಮ ಭಈ ಸಿರಾತಿ ನ ರಾತೀ॥**
**ಕರತಿ ಬಿಲಾಪ ಮನಹಿಁ ಮನ ಭಾರೀ। ರಾಮ ಬಿರಹಁ ಜಾನಕೀ ದುಖಾರೀ ॥ ೨ ॥**
**ಜಬ ಅತಿ ಭಯಉ ಬಿರಹ ಉರ ದಾಹೂ। ಫರಕೆಉ ಬಾಮ ನಯನ ಅರು ಬಾಹೂ ॥**
**ಸಗುನ ಬಿಚಾರಿ ಧರೀ ಮನ ಧೀರಾ । ಅಬ ಮಿಲಿಹಹಿಁ ಕೃಪಾಲ ರಘುಬೀರಾ ॥ ೩ ॥**
**ಇಹಾಁ ಅರ್ಧನಿಸಿ ರಾವನು ಜಾಗಾ । ನಿಜ ಸಾರಥಿ ಸನ ಖೀಝನ ಲಾಗಾ ॥**
**ಸಠ ರನಭೂಮಿ ಛಡಾಇಸಿ ಮೋಹೀ । ಧಿಗ ಧಿಗ ಅಧಮ ಮಂದಮತಿ ತೋಹೀ ॥ ೪ ॥**
**ತೇಹಿಁ ಪದ ಗಹಿ ಬಹು ಬಿಧಿ ಸಮುಝಾವಾ। ಭೋರು ಭಏಁ ರಥ ಚಢ಼ಿ ಪುನಿ ಧಾವಾ॥**
**ಸುನಿ ಆಗವನು ದಸಾನನ ಕೇರಾ । ಕಪಿದಲ ಖರಭರ ಭಯಉ ಘನೇರಾ ॥ ೫ ॥**
**ಜಹಁ ತಹಁ ಭೂಧರ ಬಿಟಪ ಉಪಾರೀ । ಧಾಏ ಕಟಕಟಾಇ ಭಟ ಭಾರೀ ॥ ೬ ॥**

ಈ ವಿಧವಾಗಿ ಅನೇಕ ವಚನಗಳಿಂದ ಸೀತೆಯನ್ನು ಸಮಾಧಾನಪಡಿಸಿ, ತ್ರಿಜಟೆಯು ತನ್ನ ಮನೆಗೆ ತೆರಳಿದನು. ಶ್ರೀರಾಮಚಂದ್ರನ ಸ್ವಭಾವವನ್ನು ನೆನೆ-ನೆನೆದು ವೈದೇಹಿಯು ವಿರಹದ ದಳ್ಳುರಿಗೆ ಗುರಿಯಾದರು. ನಿಶಿಯನ್ನು ಮತ್ತು ಶಶಿಯನ್ನು ಆಕೆ ಬಹಳಷ್ಟು ನಿಂದಿಸುತ್ತಾ ಹೇಳಿದಳು – ಈ ಹಾಳು ರಾತ್ರಿಯು ಯುಗದಷ್ಟು ದೀರ್ಘವಾಗಿದೆ. ಏನು ಮಾಡಿದರೂ ಕಳೆಯದು. ಈ ಪ್ರಕಾರ ಜಾನಕಿಯು ಶ್ರೀರಾಮನ ವಿರಹದಲ್ಲಿ ನೊಂದು ಬೆಂದು ಬಹಳವಾಗಿ ಪ್ರಲಾಪಮಾಡುತ್ತಿದ್ದಳು. ವಿರಹದಿಂದಾಗಿ ಹೃದಯದಲ್ಲಿ ದಾರುಣ ದುಃಖವುಂಟಾದಾಗ ಆಕೆಯ ಎಡಗಣ್ಣು, ಎಡತೋಳು ಅದುರಿತು. ಶುಭ ಶಕುನವನ್ನು ಕಂಡು ಈಗ ಕೃಪಾಳು ಶ್ರೀರಾಮನ ಮಿಲನ ಖಂಡಿತ ಎಂದು ಅವಳಿಗೆ ಧೈರ್ಯವುಂಟಾಯಿತು. ಅತ್ತ ಅರ್ಧರಾತ್ರಿಯಲ್ಲಿ ರಾವಣನು ಮೂರ್ಛೆಯಿಂದ ಎದ್ದನು. ತನ್ನ ಸಾರಥಿಯ ಮೇಲೆ ರೇಗಿ – ಎಲವೋ ಮೂರ್ಖಾ ! ನೀನೇಕೆ ನನ್ನನ್ನು ರಣರಂಗದಿಂದ ಹೊರಕ್ಕೆ ತಂದೆ? ಅಧಮಾ ! ತಿಳಿಗೇಡಿ ! ನಿನಗೆ ಧಿಕ್ಕಾರವಿರಲಿ, ಎಂದು ಗದರಿದ. ಸಾರಥಿ ಅವನ ಕಾಲಿಗೆರಗಿ ಅನೇಕ ವಿಧದಿಂದ ಅವನಿಗೆ ಸಮಾಧಾನ ಪಡಿಸಿದನು. ಬೆಳಕು ಹರಿಯುತ್ತಲೇ ರಾವಣನು ರಥಾರೂಢನಾಗಿ ಪುನಃ ರಣಾಭಿಮುಖನಾದನು. ರಾವಣ ಬಂದುದನ್ನು ಕೇಳುತ್ತಲೇ ವಾನರ ಸೇನೆಯಲ್ಲಿ ರಣೋತ್ಸಾಹವು ಹೆಚ್ಚಿತು. ಆ ಭಯಂಕರ ಯೋಧರು ಎಲ್ಲಿ ಅಂದರೆ ಅಲ್ಲಿಂದ ಬೆಟ್ಟಗಳನ್ನು, ಹೆಮ್ಮರಗಳನ್ನು ಕಿತ್ತು ತಂದು ಕ್ರೋಧದಿಂದ ಅತ್ತ ಧಾವಿಸಿದನು. (ಚೌ/೧-೬)

## ರಾವಣ-ವಧೆ – ಮಂಡೋದರಿ ವಿಲಾಪ

**ಛಂ – ಧಾಏ ಜೊ ಮರ್ಕಟ ಬಿಕಟ ಭಾಲು ಕರಾಲ ಕರ ಭೂಧರ ಧರಾ।**
**ಅತಿ ಕೋಪ ಕರಹಿಁ ಪ್ರಹಾರ ಮಾರತ ಭಜಿ ಚಲೇ ರಜನೀಚರಾ॥**
**ಬಿಚಲಾಇ ದಲ ಬಲವಂತ ಕೀಸನ್ಹ ಘೇರಿ ಪುನಿ ರಾವನು ಲಿಯೋ।**
**ಚಹುಁ ದಿಸಿ ಚಪೇಟನ್ಹಿ ಮಾರಿ ನಖನ್ಹಿ ಬಿದಾರಿ ತನು ಬ್ಯಾಕುಲ ಕಿಯೋ॥**

ಭಯಂಕರರೂ, ವೀರರೂ ಆದ ವಾನರ ಭಲ್ಲೂಕಗಳು ಪರ್ವತಗಳನ್ನು ಹಿಡಿದೆತ್ತಿ ಮುನ್ನುಗ್ಗಿದವು. ಅವು ಕ್ರೋಧತಪ್ತರಾಗಿ ರಕ್ಕಸರ ಮೇಲೆ ಪ್ರಹಾರ ಮಾಡುತ್ತಿದ್ದವು. ಅವರ ಹೊಯ್ಲನ್ನು ತಡೆಯಲಾರದೆ ರಕ್ಕಸರು ಕಾಲ್ತೆಗೆದರು. ಮಹಾಬಲಿಗಳಾದ ವಾನರರು ಶತ್ರುಸೇನೆಯನ್ನು ಅಲ್ಲೋಲ-ಕಲ್ಲೋಲಗೈದು ರಾವಣನನ್ನು ಮುತ್ತಿದರೂ ಸುತ್ತಲು ಎತ್ತೆತ್ತಣಿಂದಲೂ ಗುದ್ದಿ, ಉಗುರುಗಳಿಂದ ಪರಚಿ ಅವನ ಮೈಯನ್ನು ಹಣ್ಣುಗಾಯಿ ನೀರುಗಾಯಿ ಮಾಡಿದರು. (ಛಂದ)

**ದೋ – ದೇಖಿ ಮಹಾ ಮರ್ಕಟ ಪ್ರಬಲ ರಾವನ ಕೀನ್ಹ ಬಿಚಾರ।**
**ಅಂತರಹಿತ ಹೋಇ ನಿಮಿಷ ಮಹುಁ ಕೃತ ಮಾಯಾ ಬಿಸ್ತಾರ ॥ ೧೦೦ ॥**

ಮಹಾವಾನರರು ತುಂಬಾ ಪ್ರಬಲರೆಂದರಿತು ರಾವಣನು ಅಂತರ್ಧಾನನಾಗಿ ಒಂದು ಕ್ಷಣದಲ್ಲಿ ತನ್ನ ಮಾಯೆಯನ್ನು ಬೀಸಿದನು. (ದೋ/೧೦೦)

**ಛಂ – ಜಬ ಕೀನ್ಹ ತೇಹಿಁ ಪಾಷಂಡ । ಭಏ ಪ್ರಗಟ ಜಂತು ಪ್ರಚಂಡ ॥**
**ಬೇತಾಲ ಭೂತ ಪಿಸಾಚ । ಕರ ಧರೇಁ ಧನು ನಾರಾಚ ॥ ೧ ॥**

ಜೋಗಿನಿ ಗಹೇಂ ಕರಬಾಲ। ಏಕ ಹಾಥ ಮನುಜ ಕಪಾಲ॥
ಕರಿ ಸದ್ಯ ಸೋನಿತ ಪಾನ। ನಾಚಹಿಂ ಕರಹಿಂ ಬಹು ಗಾನ॥ ೨ ॥
ಧರು ಮಾರು ಬೋಲಹಿಂ ಘೋರ। ರಹಿ ಪೂರಿ ಧುನಿ ಚಹುಂ ಓರ॥
ಮುಖ ಬಾಇ ಧಾವಹಿಂ ಖಾನ। ತಬ ಲಗೇ ಕೀಸ ಪರಾನ॥ ೩ ॥
ಜಹಂ ಜಾಹಿಂ ಮರ್ಕಟ ಭಾಗಿ। ತಹಂ ಬರತ ದೇಖಹಿಂ ಆಗಿ॥
ಭಏ ಬಿಕಲ ಬಾನರ ಭಾಲು। ಪುನಿ ಲಾಗ ಬರಷೈ ಬಾಲು॥ ೪ ॥
ಜಹಂ ತಹಂ ಥಕಿತ ಕರಿ ಕೀಸ। ಗರ್ಜೆಉ ಬಹುರಿ ದಸಸೀಸ॥
ಲಛಿಮನ ಕಪೀಸ ಸಮೇತ। ಭಏ ಸಕಲ ಬೀರ ಅಚೇತ॥ ೫ ॥
ಹಾ ರಾಮ ರಾ ರಘುನಾಥ। ಕಹಿ ಸುಭಟ ಮೀಜಹಿಂ ಹಾಥ॥
ಏಹಿ ಬಿಧಿ ಸಕಲ ಬಲ ತೋರಿ। ತೆಹಿಂ ಕೀನ್ಹ ಕಪಟ ಬಹೋರಿ॥ ೬ ॥
ಪ್ರಗಟೇಸಿ ಬಿಪುಲ ಹನುಮಾನ। ಧಾಏ ಗಹೇ ಪಾಷಾನ॥
ತಿನ್ಹ ರಾಮು ಘೇರೇ ಜಾಇ। ಚಹುಂ ದಿಸಿ ಬರೂಥ ಬನಾಇ॥ ೭ ॥
ಮಾರಹು ಧರಹು ಜನಿ ಜಾಇ। ಕಟಕಟಹಿಂ ಪೂಂಛ ಉಠಾಇ॥
ದಹಂ ದಿಸಿ ಲಂಗೂರ ಬಿರಾಜ। ತೆಹಿಂ ಮಧ್ಯ ಕೋಸಲರಾಜ॥ ೮ ॥

ಅವನು ಮಾಯಾಶಕ್ತಿಯನ್ನು ವಿಸ್ತರಿಸಿದಾಗ ಭಯಂಕರ ಜೀವಿಗಳು ಒಡಮೂಡಿದವು. ಭೂತ, ಬೇತಾಳ, ಪಿಶಾಚಿಗಳು ಕೈಯಲ್ಲಿ ಬಿಲ್ಲು-ಬಾಣ ಹಿಡಿದುಕೊಂಡು ಬಂದವು. ಯೋಗಿನಿಯರು ಒಂದು ಕೈಯಲ್ಲಿ ಕರವಾಳವನ್ನು, ಮತ್ತೊಂದರಲ್ಲಿ ನರಕಪಾಲವನ್ನು ಹಿಡಿದುಕೊಂಡು, ಹೊಚ್ಚಹೊಸ ನೆತ್ತರನ್ನು ಕುಡಿಯುತ್ತಾ, ಕುಣಿಯುತ್ತಾ ಹಾಡಿ ಆಡತೊಡಗಿದರು. 'ಹಿಡಿ, ಬಡಿ, ಕೊಲ್ಲು' ಎಂದು ಕೂಗುತ್ತಿದ್ದ ಘೋರ ಶಬ್ದವು ದಶದಿಶೆಗಳಲ್ಲಿ ತುಂಬಿಹೋಯಿತು. ಅವರು ಬಾಯಿತೆರೆದು ಸಿಕ್ಕಿದ್ದೆಲ್ಲವನ್ನು ಕಬಳಿಸಲು ಮುನ್ನುಗ್ಗುತ್ತಿದ್ದರು. ಆಗ ವಾನರರು ಓಡತೊಡಗಿದರು. ಅವರು ಎತ್ತ ಓಡಿದರತ್ತ ಭಯಂಕರ ಅಗ್ನಿಜ್ವಾಲೆ ಕಾಣಿಸಿಕೊಂಡಿತು. ಕಪಿ-ಕರಡಿಗಳು ತತ್ತರಿಸಿ ತಲ್ಲಣಿಸಿ ಹೋದರು. ಅನಂತರ ರಾವಣನು ಮರಳಿನ ಮಳೆಗರೆಯತೊಡಗಿದನು. ವಾನರರನ್ನು ಕಪಟೋಪಾಯದಿಂದ ಅವನು ಸ್ತಂಭಿತರನ್ನಾಗಿಗೈದು ಗರ್ಜಿಸಿದನು. ಲಕ್ಷ್ಮಣ, ಸುಗ್ರೀವಸಹಿತ ಎಲ್ಲ ವೀರಾಧಿವೀರರೂ ಪ್ರಜ್ಞಾಶೂನ್ಯರಾದರು. ಹಾ ರಾಮಾ ! ಹಾ ರಘುನಾಥಾ ! ಎಂದು ಕೂಗುತ್ತಾ ಆ ಮಹಾಯೋಧರೆಲ್ಲ ಏನೂ ತೋಚದೆ ಕೈ ಕೈ ಹಿಸುಕಿಕೊಳ್ಳುತ್ತಿದ್ದರು. ಈ ವಿಧವಾಗಿ ಅವರನ್ನು ದುರ್ಬಲರನ್ನಾಗಿಸಿ, ರಾವಣನು ಮತ್ತೊಂದು ಮಾಯೆಯನ್ನು ರಚಿಸಿದನು. ಆ ಮಾಯಾ ಪ್ರಭಾವದಿಂದ ಅಸಂಖ್ಯಾತ ಹನುಮಂತರು ಕೈಯಲ್ಲಿ ಬಂಡೆಗಳನ್ನು ಹಿಡಿದುಕೊಂಡು ಪ್ರಕಟರಾದರು. ಅವರು ಎತ್ತಕಡೆಯಿಂದಲೂ ಸುತ್ತುವರೆದು ಒಂದು ದಳವಾಗಿ ರಾಮನನ್ನು ಮುತ್ತಿದರು. ಅವರೆಲ್ಲ ಬಾಲವನ್ನೆತ್ತಿಕೊಂಡು ಹಲ್ಲುಕಿರಿಯುತ್ತಾ, ಕಿರುಚುತ್ತಾ ಹಿಡಿದುಕೋ, ತಪ್ಪಿಸಿಕೊಂಡಾನು! ಎಂದು ಕೂಗುತ್ತಿದ್ದರು. ಅವರ ಬಾಲಗಳು ದಶದಿಶೆಗಳಲ್ಲಿಯೂ ಹಬ್ಬಿದ್ದವು. ಅವುಗಳ ನಡುವೆ ಕೋಸಲರಾಜನಾದ ಶ್ರೀರಾಮನು ಕಂಗೊಳಿಸಿದನು. (ಛಂ/೧-೮)

ಛಂ – ತೆಹಿಂ ಮಧ್ಯ ಕೋಸಲರಾಜ ಸುಂದರ ಸ್ಯಾಮ ತನ ಸೋಭಾ ಲಹೀ।
ಜನು ಇಂದ್ರಧನುಷ ಅನೇಕ ಕೀ ಬರ ಬಾರಿ ತುಂಗ ತಮಾಲಹೀ॥
ಪ್ರಭು ದೇಖಿ ಹರಷ ಬಿಷಾದ ಉರ ಸುರ ಬದತ ಜಯ ಜಯ ಜಯ ಕರೀ।
ರಘುಬೀರ ಏಕಹಿಂ ತೀರ ಕೋಪಿ ನಿಮೇಷ ಮಹುಂ ಮಾಯಾ ಹರೀ॥ ೧ ॥
ಮಾಯಾ ಬಿಗತ ಕಪಿ ಭಾಲು ಹರಷೇ ಬಿಟಪ ಗಿರಿ ಗಹಿ ಸಬ ಫಿರೇ।
ಸರ ನಿಕರ ಛಾಡೇ ರಾಮ ರಾವನ ಬಾಹು ಸಿರ ಪುನಿ ಮಹಿ ಗಿರೇ॥
ಶ್ರೀರಾಮ ರಾವನ ಸಮರ ಚರಿತ ಅನೇಕ ಕಲ್ಪ ಜೊ ಗಾವಹೀಂ।
ಸತ ಸೇಷ ಸಾರದ ನಿಗಮ ಕಬಿ ತೇಉ ತದಪಿ ಪಾರ ನ ಪಾವಹೀಂ॥ ೨ ॥

ಅವುಗಳ ನಡುವೆ ಕೋಸಲಾಧೀಶ ಶ್ರೀರಾಮನ ಶ್ಯಾಮಸುಂದರ ಶರೀರವು ಎತ್ತರವಾದ ತಮಾಲವೃಕ್ಷದ ಸುತ್ತಲೂ ಅನೇಕ ಕಾಮನಬಿಲ್ಲುಗಳ ಬೇಲಿ ಹಾಕಲ್ಪಟ್ಟಿದೆಯೋ ಎಂಬಂತೆ ಕಂಗೊಳಿಸುತ್ತಿತ್ತು. ಪ್ರಭುವನ್ನು ಕಂಡು ದೇವತೆಗಳು ಹರ್ಷ, ವಿಷಾದಗಳಿಂದ ಕೂಡಿದವರಾಗಿ ಜಯ-ಜಯಕಾರ ಮಾಡತೊಡಗಿದರು. ಆಗ ಶ್ರೀರಾಮನು ಕುಪಿತನಾಗಿ ಒಂದೇ ಬಾಣದಿಂದ ನಿಮೇಷಮಾತ್ರದಲ್ಲಿ ರಾವಣನ ಎಲ್ಲ ಮಾಯೆಯನ್ನು ತೊಡೆದುಹಾಕಿದನು. ॥ ೧॥ ಮಾಯೆ ದೂರವಾಗುತ್ತಲೇ ವಾನರ-ಭಲ್ಲೂಕವೀರರು ಹರ್ಷಿತರಾದರು. ಹೆಮ್ಮರ, ಹೆಬ್ಬಂಡೆ, ಬೆಟ್ಟಗಳನ್ನೇ ಕಿತ್ತುಕೊಂಡು ಅವರು ಮುನ್ನುಗ್ಗಿದರು. ಶ್ರೀರಾಮನು ಬಾಣಸಮೂಹವನ್ನು ಪ್ರಯೋಗಿಸಿದನು. ಅದರಿಂದ ರಾವಣನ ಕೈ ಹಾಗೂ ತಲೆಗಳು ಮತ್ತೆ ಕಡಿದುಬಿದ್ದವು. ರಾಮ-ರಾವಣರ ಸಮರಚರಿತ್ರೆಯನ್ನು ಶತ-ಶತ ಶೇಷರಾಗಲೀ, ಶಾರದೆಯರಾಗಲೀ, ಕವಿಗಳಾಗಲೀ, ಕಲ್ಪಾಂತರಗಳವರೆಗೂ ಹಾಡುತ್ತಾ ಕುಳಿತರೂ ಮುಗಿಯುವಂತಹುದಲ್ಲ. ॥ ೨॥ (ಛಂ/೧-೨)

**ದೋ – ತಾಕೇ ಗುನ ಗನ ಕಛು ಕಹೇ ಜಡಮತಿ ತುಲಸೀದಾಸ।**
**ಜಿಮಿ ನಿಜ ಬಲ ಅನುರೂಪ ತೇ ಮಾಛೀ ಉಡಇ ಅಕಾಸ॥ ೧೦೧(ಕ)॥**
**ಕಾಟೇ ಸಿರ ಭುಜ ಬಾರ ಬಹು ಮರತ ನ ಭಟ ಲಂಕೇಸ।**
**ಪ್ರಭು ಕ್ರೀಡತ ಸುರ ಸಿದ್ಧ ಮುನಿ ಬ್ಯಾಕುಲ ದೇಖಿ ಕಲೇಸ॥ ೧೦೧(ಖ)॥**

ಅಲ್ಪಶಕ್ತಿಯುಳ್ಳ ಒಂದು ನೊಣವು ತನ್ನ ಶಕ್ತಿಗೆ ಅನುಗುಣವಾಗಿ ಅನಂತಾಕಾಶದಲ್ಲಿ ಹಾರುವಂತೆ, ಮಂದಬುದ್ಧಿಯಾದ ತುಳಸೀದಾಸನು ಆ ಅಪೂರ್ವಯುದ್ಧ ವಿಶೇಷಗಳನ್ನು ಸ್ವಲ್ಪ ವರ್ಣಿಸುತ್ತಿರುವನು. ರಾವಣನ ತಲೆಗಳನ್ನು, ತೋಳುಗಳನ್ನು ಮತ್ತೆ-ಮತ್ತೆ ರಾಮನು ಕತ್ತರಿಸಿಹಾಕಿದನು. ಆದರೂ ವೀರನಾದ ರಾವಣನು ಸಾಯಲಿಲ್ಲ. ಪ್ರಭುವೇನೋ ಲೀಲೆಗೈಯ್ಯುತ್ತಿರುವನು. ಆದರೆ ಸುರರು, ಸಿದ್ಧರು, ಮುನಿಗಳು ಮಾತ್ರ ಅದನ್ನು ನೋಡಿ ಶ್ರೀರಾಮನು ಕ್ಲೇಶಪಡುತ್ತಿರುವನು ಎಂದು ಭಾವಿಸಿದರು. (ದೋ/೧೦೧ ಕ, ಖ)

**ಚೌ – ಕಾಟತ ಬಢಹಿಂ ಸೀಸ ಸಮುದಾಈ। ಜಿಮಿ ಪ್ರತಿ ಲಾಭ ಲೋಭ ಅಧಿಕಾಈ॥**
**ಮರಇ ನ ರಿಪು ಶ್ರಮ ಭಯಉ ಬಿಸೇಷಾ। ರಾಮ ಬಿಭೀಷನ ತನ ತಬ ದೇಖಾ॥ ೧ ॥**
**ಉಮಾ ಕಾಲ ಮರ ಜಾಕೀಂ ಈಛಾ। ಸೋ ಪ್ರಭು ಜನ ಕರ ಪ್ರೀತಿ ಪರೀಛಾ॥**
**ಸುನು ಸರಬಗ್ಯ ಚರಾಚರ ನಾಯಕ। ಪ್ರನತಪಾಲ ಸುರ ಮುನಿ ಸುಖದಾಯಕ॥ ೨ ॥**
**ನಾಭಿಕುಂಡ ಪಿಯೂಷ ಬಸ ಯಾಕೇಂ। ನಾಥ ಜಿಅತ ರಾವನು ಬಲ ತಾಕೇಂ॥**
**ಸುನತ ಬಿಭೀಷನ ಬಚನ ಕೃಪಾಲಾ। ಹರಷಿ ಗಹೇ ಕರ ಬಾನ ಕರಾಲಾ॥ ೩ ॥**
**ಅಸುಭ ಹೋನ ಲಾಗೇ ತಬ ನಾನಾ। ರೋವಹಿಂ ಖರ ಸೃಕಾಲ ಬಹು ಸ್ವಾನಾ॥**
**ಬೋಲಹಿಂ ಖಗ ಜಗ ಆರತಿ ಹೇತೂ। ಪ್ರಗಟ ಭಏ ನಭ ಜಹਁ ತಹਁ ಕೇತೂ॥ ೪ ॥**
**ದಸ ದಿಸಿ ದಾಹ ಹೋನ ಅತಿ ಲಾಗಾ। ಭಯಉ ಪರಬ ಬಿನು ರಬಿ ಉಪರಾಗಾ॥**
**ಮಂದೋದರಿ ಉರ ಕಂಪತಿ ಭಾರೀ। ಪ್ರತಿಮಾ ಸ್ರವಹಿಂ ನಯನ ಮಗ ಬಾರೀ॥ ೫ ॥**

ಪ್ರತಿಯೊಂದು ಲಾಭದಿಂದಲೂ ಲೋಭ ಹೆಚ್ಚುವಂತೆ, ರಾವಣನ ಶಿರಗಳ ಸಮೂಹವು ಕತ್ತರಿಸುವಂತೆ ಹೆಚ್ಚೆಚ್ಚು ಚಿಗುರುತ್ತಿದ್ದವು. ಶತ್ರುವು ಸಾಯಲೊಲ್ಲ, ಪರಿಶ್ರಮ ಹೆಚ್ಚಾಯಿತು. ಆಗ ಶ್ರೀರಾಮಚಂದ್ರನು ವಿಭೀಷಣನತ್ತ ಕಣ್ಣುಹಾಯಿಸಿದನು. ಶಿವನು ಹೇಳುತ್ತಿದ್ದಾನೆ – ಉಮೆ ! ಇಚ್ಛಾಮಾತ್ರದಿಂದ ಅಂತಕನನ್ನೂ ಅಂತ್ಯಗೊಳಿಸಬಲ್ಲ. ಪ್ರಭುವು ತನ್ನ ಭಕ್ತನ ಪ್ರೇಮವನ್ನು ಪರೀಕ್ಷಿಸುತ್ತಿರುವನು. ವಿಭೀಷಣನು ಹೇಳಿದನು – ಓ ಸರ್ವಜ್ಞನೇ! ಚರಾಚರ ಪ್ರಭುವೇ! ಶರಣಾಗತ ಸಂರಕ್ಷಕಾ! ದೇವತೆಗಳಿಗೂ, ಮುನಿಗಳಿಗೂ ಸುಖವನ್ನು ಕರುಣಿಸುವವನೇ! ಕೇಳು. ರಾವಣನ ನಾಭಿಕುಂಡದಲ್ಲಿ ಅಮೃತಕಲಶವಿದೆ. ಸ್ವಾಮಿ! ಅದರ ಪ್ರಭಾವದಿಂದ ಅವನು ಅಮರನಾಗಿದ್ದಾನೆ. ವಿಭೀಷಣನ ವಚನಗಳನ್ನು ಕೇಳಿ, ಕೃಪಾಳುವಾದ ಶ್ರೀರಾಮನು ಪ್ರಸನ್ನನಾಗಿ ಕೈಗೆ ಕರಾಳವಾದ ಬಾಣವನ್ನು ತೆಗೆದುಕೊಂಡನು. ಆಗ ನಾನಾ ವಿಧವಾದ ಅಪಶಕುನಗಳಾದವು. ಅನೇಕಾನೇಕ ಕತ್ತೆಗಳು, ನರಿಗಳು, ನಾಯಿಗಳು ರೋದಿಸತೊಡಗಿದವು. ಜಗತ್ತಿನ ದುಃಖವನ್ನು, ಅಶುಭವನ್ನು ಪ್ರಕಟಿಸಲೆಂದು ಪಕ್ಷಿಗಳು ಕರ್ಕಶವಾಗಿ ಉಲಿಯತೊಡಗಿದವು. ಆಕಾಶದಲ್ಲಿ ಧೂಮಕೇತುಗಳು ಕಾಣಿಸಿಕೊಂಡವು. ದಶದಿಶೆಗಳಲ್ಲೂ ದಳ್ಳುರಿ ಎದ್ದಿತು. ಸರ್ವಕಾಲ ಅಥವಾ ಯೋಗವಿಲ್ಲದೆಯೇ ಸೂರ್ಯಗ್ರಹವಾಗತೊಡಗಿತು. ಮಂಡೋದರಿಯ ಎದೆ ಕಂಪಿಸಿತು. ಶಿಲಾಮೂರ್ತಿಗಳ ಕಣ್ಣುಗಳಿಂದ ನೀರು ಹರಿಯತೊಡಗಿತು. (ಚೌ/೧-೫)

**ಛಂ – ಪ್ರತಿಮಾ ರುದಹಿಂ ಪಬಿಪಾತ ನಭ ಅತಿ ಬಾತ ಬಹ ಡೋಲತಿ ಮಹೀ।**
**ಬರಷಹಿಂ ಬಲಾಹಕ ರುಧಿರ ಕಚ ರಜ ಅಸುಭ ಅತಿ ಸಕ ಕೋ ಕಹೀ॥**
**ಉತಪಾತ ಅಮಿತ ಬಿಲೋಕಿ ನಭ ಸುರ ಬಿಕಲ ಬೋಲಹಿಂ ಜಯ ಜಏ।**
**ಸುರ ಸಭಯ ಜಾನಿ ಕೃಪಾಲ ರಘುಪತಿ ಚಾಪ ಸರ ಜೋರತ ಭಏ॥**

ದೇವ ಪ್ರತಿಮೆಗಳು ರೋದಿಸತೊಡಗಿದವು. ಆಕಾಶದಿಂದ ವಜ್ರಪಾತ ಸಂಭವಿಸಿತು. ವಾಯುವು ಅತ್ಯಂತ ಪ್ರಚಂಡವಾಗಿ ಬೀಸತೊಡಗಿತು. ಭೂಕಂಪವಾಯಿತು. ಮೋಡಗಳು ರಕ್ತವನ್ನು, ಕೂದಲುಗಳನ್ನು, ಧೂಳನ್ನು ಸುರಿಸಿದವು. ಈ ಪ್ರಕಾರ ವರ್ಣನಾತೀತ ಅಮಂಗಳಗಳಾದವು. ಅಂತ್ಯವಿಲ್ಲದ ಉತ್ಪಾತಗಳನ್ನು ನೋಡಿ ಆಕಾಶದಲ್ಲಿ ದೇವತೆಗಳು ವಿಕಲರಾಗಿ ಜಯ ಜಯಕಾರಮಾಡತೊಡಗಿದರು. ದೇವತೆಗಳು ಭಯಭ್ರಾಂತರಾಗಿರುವುದನ್ನು ನೋಡಿ, ಕೃಪಾಳುವಾದ ಶ್ರೀರಘುನಾಥನು ಧನುಸ್ಸಿಗೆ ಶರಸಂಧಾನ ಮಾಡಿದನು. (ಛಂದ)

**ದೋ – ಖೈಂಚಿ ಸರಾಸನ ಶ್ರವನ ಲಗಿ ಛಾಡೇ ಸರ ಏಕತೀಸ।**
**ರಘುನಾಯಕ ಸಾಯಕ ಚಲೇ ಮಾನಹುಂ ಕಾಲ ಫನೀಸ॥೧೦೨॥**

ಧನುಸ್ಸನ್ನು ಆಕರ್ಣಾಂತವಾಗಿ ಸೆಳೆದು ಶ್ರೀರಘುವೀರನು ಒಂದೇ ಬಾರಿಗೆ ಮೂವತ್ತೊಂದು ಬಾಣಗಳನ್ನು ಪ್ರಯೋಗಿಸಿದನು. ಅವು ಕಾಲಸರ್ಪದಂತೆ ಮುನ್ನುಗ್ಗಿದವು. (ದೋ/೧೦೨)

**ಚೌ – ಸಾಯಕ ಏಕ ನಾಭಿ ಸರ ಸೋಷಾ। ಅಪರ ಲಗೇ ಭುಜ ಸಿರ ಕರಿ ರೋಷಾ॥**
**ಲೈ ಸಿರ ಬಾಹು ಚಲೇ ನಾರಾಚಾ। ಸಿರ ಭುಜ ಹೀನ ರುಂಡ ಮಹಿ ನಾಚಾ॥೧॥**
**ಧರನಿ ಧಸಇ ಧರ ಧಾವ ಪ್ರಚಂಡಾ। ತಬ ಸರ ಹತಿ ಪ್ರಭು ಕೃತ ದುಇ ಖಂಡಾ॥**
**ಗರ್ಜೆಉ ಮರತ ಘೋರ ರವ ಭಾರೀ। ಕಹಾಂ ರಾಮು ರನ ಹತೌಂ ಪಚಾರೀ॥೨॥**
**ಡೋಲೀ ಭೂಮಿ ಗಿರತ ದಸಕಂಧರ। ಛುಭಿತ ಸಿಂಧು ಸರಿ ದಿಗ್ಗಜ ಭೂಧರ॥**
**ಧರನಿ ಪರೆಉ ದ್ವೌ ಖಂಡ ಬಢಾಈ। ಚಾಪಿ ಭಾಲು ಮರ್ಕಟ ಸಮುದಾಈ॥೩॥**
**ಮಂದೋದರಿ ಆಗೇಂ ಭುಜ ಸೀಸಾ। ಧರಿ ಸರ ಚಲೇ ಜಹಾಂ ಜಗದೀಸಾ॥**
**ಪ್ರಬಿಸೇ ಸಬ ನಿಷಂಗ ಮಹು ಜಾಈ। ದೇಖಿ ಸುರನ್ಹ ದುಂದುಭೀಂ ಬಜಾಈ॥೪॥**
**ತಾಸು ತೇಜ ಸಮಾನ ಪ್ರಭು ಆನನ। ಹರಷೇ ದೇಖಿ ಸಂಭು ಚತುರಾನನ॥**
**ಜಯ ಜಯ ಧುನಿ ಪೂರೀ ಬ್ರಹ್ಮಂಡಾ। ಜಯ ರಘುಬೀರ ಪ್ರಬಲ ಭುಜದಂಡಾ॥೫॥**
**ಬರಷಹಿಂ ಸುಮನ ದೇವ ಮುನಿ ಬೃಂದಾ। ಜಯ ಕೃಪಾಲ ಜಯ ಜಯತಿ ಮುಕುಂದಾ॥೬॥**

ಒಂದು ಬಾಣವು ರಾವಣನ ನಾಭಿಯ ಅಮೃತಕಲಶವನ್ನು ಒಣಗಿಸಿಬಿಟ್ಟಿತು. ಉಳಿದ ಮೂವತ್ತು ಬಾಣಗಳು ಸಿಡಿಗುಡುತ್ತಾ ಅವನ ಹತ್ತು ತಲೆಗಳಿಗೆ, ಇಪ್ಪತ್ತು ತೋಳುಗಳಿಗೆ ತಾಕಿದವು. ಅವು ತಲೆ, ಭುಜಗಳನ್ನು ಹಾರಿಸಿಕೊಂಡು ಹೋದುವು. ತಲೆ, ಭುಜಗಳಿಲ್ಲದ ಅವನ ಮುಂಡವು ಭೂಮಿಯ ಮೇಲೆ ಕುಣಿಯತೊಡಗಿತು. ಆ ಮುಂಡವು ಪ್ರಚಂಡ ವೇಗದಲ್ಲಿ ಧಾವಿಸಿತು. ಅದರಿಂದ ಭೂಮಿಯು ನಡುಗಿತು. ಆಗ ಪ್ರಭುವು ಒಂದು ಬಾಣದಿಂದ ಅದನ್ನು ಎರಡು ಹೋಳಾಗಿಸಿದನು. ಸಾಯುವಾಗ ರಾವಣನು ಗರ್ಜಿಸುತ್ತಾ 'ರಾಮನೆಲ್ಲಿ? ನಾನು ಅವನನ್ನು ಮೂದಲಿಸಿ ಯುದ್ಧದಲ್ಲಿ ಕೊಂದುಬಿಡುತ್ತೇನೆ' ಎಂದು ಹೇಳಿದನು. ರಾವಣನು ಧರಾಶಾಯಿಯಾದಾಗ ಭೂಮಿ ಕಂಪಿಸಿತು. ಸಮುದ್ರಗಳು, ನದಿಗಳು, ದಿಗ್ಗಜಗಳು, ಪರ್ವತಗಳು ಕ್ಷುಬ್ಧಗೊಂಡವು. ರಾವಣನ ಮುಂಡದ ಎರಡು ತುಂಡುಗಳೂ ನೆಲಕ್ಕುರುಳಿದವು. ಆಗ ಅದರ ಬುಡಕ್ಕೆ ಸಿಕ್ಕಿ ಕರಡಿ-ಕಪಿಗಳ ಸಮೂಹ ಅಪ್ಪಚ್ಚಿಯಾಯಿತು. ರಾವಣನ ತೋಳುಗಳನ್ನು, ತಲೆಗಳನ್ನು ಮಂಡೋದರಿಯ ಎದುರಿಗೆ ಚೆಲ್ಲಿ ರಾಮಬಾಣಗಳು ಮರಳಿ ಬಂದು ಜಗದೀಶ್ವರನಾದ ಶ್ರೀರಾಮನ ತೂಣೀರವನ್ನು ಹೊಕ್ಕವು. ಇದನ್ನು ಕಂಡ ಸುರರು ದೇವದುಂದುಭಿಗಳನ್ನು ನುಡಿಸಿದರು. ರಾವಣನ ತೇಜಸ್ಸು ಪ್ರಭುವಿನ ಆನನದಲ್ಲಿ ಲೀನವಾಯಿತು. ಅದನ್ನು ಕಂಡು ಹರ-ವಿರಂಚಿಗಳು ಹರ್ಷಗೊಂಡರು. ಬ್ರಹ್ಮಾಂಡದಲ್ಲಿ ಜಯಜಯಕಾರ ಧ್ವನಿ ತುಂಬಿಹೋಯಿತು. ''ಪ್ರಬಲ ಭುಜದಂಡವುಳ್ಳ ಶ್ರೀರಘುವೀರನಿಗೆ ಜಯವಾಗಲೀ, ಜಯವಾಗಲೀ, ಕೃಪಾಳುವಾದ ಮುಕುಂದನಿಗೆ ಜಯವಾಗಲೀ'' ಎಂದು ಕೊಂಡಾಡುತ್ತಾ ದೇವತೆಗಳು, ಮುನಿಗಳು ಪುಷ್ಪವೃಷ್ಟಿಗೈದರು. (ಚೌ/೧-೬)

**ಛಂ – ಜಯ ಕೃಪಾ ಕಂದ ಮುಕುಂದ ದ್ವಂದ ಹರನ ಸರನ ಸುಖಪ್ರದ ಪ್ರಭೋ।**
**ಖಲ ದಲ ಬಿದಾರನ ಪರಮ ಕಾರನ ಕಾರುನೀಕ ಸದಾ ಬಿಭೋ॥**
**ಸುರ ಸುಮನ ಬರಷಹಿಂ ಹರಷ ಸಂಕುಲ ಬಾಜ ದುಂದುಭಿ ಗಹಗಹೀ।**
**ಸಂಗ್ರಾಮ ಅಂಗನ ರಾಮ ಅಂಗ ಅನಂಗ ಬಹು ಸೋಭಾ ಲಹೀ॥ ೧ ॥**
**ಸಿರ ಜಟಾ ಮುಕುಟ ಪ್ರಸೂನ ಬಿಚ ಬಿಚ ಅತಿ ಮನೋಹರ ರಾಜಹೀಂ।**
**ಜನು ನೀಲಗಿರಿ ಪರ ತಡಿತ ಪಟಲ ಸಮೇತ ಉಡುಗನ ಭ್ರಾಜಹೀಂ॥**
**ಭುಜದಂಡ ಸರ ಕೋದಂಡ ಫೇರತ ರುಧಿರ ಕನ ತನ ಅತಿ ಬನೇ।**
**ಜನು ರಾಯಮುನೀಂ ತಮಾಲ ಪರ ಬೈಠೀಂ ಬಿಪುಲ ಸುಖ ಆಪನೇ॥ ೨ ॥**

ಶ್ರೀರಾಮನನ್ನು ದೇವತೆಗಳು ಇಂತು ಸ್ತುತಿಸುತ್ತಿರುವರು – ''ಓ ಕರುಣಾನಿಧೀ! ಮೋಕ್ಷಪ್ರದಾಯಕಾ! ಮುಕುಂದಾ! ರಾಗ-ದ್ವೇಷಗಳು, ಹರ್ಷ-ಶೋಕ, ಜನನ-ಮರಣ ಮೊದಲಾದ ದ್ವಂದ್ವಗಳನ್ನು ಹರಿಸುವವನೇ! ಶರಣಾಗತರಿಗೆ ಸುಖಪ್ರದಾತಾ! ಪ್ರಭೋ! ಖಲದಲವಿದಾರಣಾ! ಪರಮಕಾರಣಾ! ಕರುಣಾಮಯಾ! ಸರ್ವವ್ಯಾಪಕಾ! ವಿಭೋ! ನಿನಗೆ ಜಯವಾಗಲೀ, ಜಯವಾಗಲೀ!! ಹೀಗೆ ಸ್ತುತಿಸುತ್ತಾ ಸುರರು ಹರ್ಷೋತ್ಫುಲ್ಲರಾಗಿ ಹೂವಿನ ಮಳೆಗರೆದರು. ದೇವದುಂದುಭಿಗಳು ಮೊಳಗಿದವು. ಸಂಗ್ರಾಮಾಂಗಣದಲ್ಲಿ ವಿಜೇತನಾದ ಶ್ರೀರಾಮಚಂದ್ರನ ಅಂಗಗಳು ಕೋಟಿ ಅನಂಗರ ಕಾಂತಿಯಿಂದಲೂ ಮಿಗಿಲಾಗಿ ಪ್ರಕಾಶಿಸುತ್ತಿರುವವು. ॥ ೧॥ ಪ್ರಭುವಿನ ತಲೆಯ ಮೇಲೆ ಜಟಾಮುಕುಟ ಕಂಗೊಳಿಸುತ್ತಿದೆ. ಅದರ ನಡು-ನಡುವೆ ಮನೋಹರವಾದ ಪುಷ್ಪಗಳು ನೀಲಪರ್ವತದ ಮೇಲೆ ಮಿಂಚಿನ ಗೊಂಚಲುಗಳಿಂದ ಕೂಡಿ ನಕ್ಷತ್ರಗಳು ಕಂಗೊಳಿಸುತ್ತಿರುವಂತೆ ರಾರಾಜಿಸುತ್ತಿದ್ದವು. ಶ್ರೀರಾಮನು ತನ್ನ ಭುಜದಂಡದಲ್ಲಿ ಶರಕೋದಂಡವನ್ನು ಹಿಡಿದು ಆಡಿಸುತ್ತಿದ್ದರು. ಶ್ಯಾಮಸುಂದರ ತನುವಿನ ಮೇಲೆ ರುಧಿರ ಕಣಗಳು ತಮಾಲವೃಕ್ಷದ ಮೇಲೆ ಅನೇಕ ರಾಯಮುನಿ ಪಕ್ಷಿಗಳು ಮಹಾಸುಖದಲ್ಲಿ ಮಗ್ನವಾಗಿ ನಿಶ್ಚಲವಾಗಿ ಕುಳಿತಿವೆಯೋ ಎಂಬಂತೆ ಕಮನೀಯವಾಗಿ ಕಂಗೊಳಿಸುತ್ತಿದ್ದವು. ॥ ೨॥ (ಛಂ/೧-೨)

**ದೋ – ಕೃಪಾದೃಷ್ಟಿ ಕರಿ ಬೃಷ್ಟಿ ಪ್ರಭು ಅಭಯ ಕಿಏ ಸುರ ಬೃಂದ।**
**ಭಾಲು ಕೀಸ ಸಬ ಹರಷೇ ಜಯ ಸುಖ ಧಾಮ ಮುಕುಂದ॥ ೧೦೩ ॥**

ಶ್ರೀರಾಮಚಂದ್ರಪ್ರಭುವು ಕೃಪಾದೃಷ್ಟಿಯ ವೃಷ್ಟಿಗೈದು ಸುರವೃಂದಕ್ಕೆ ಅಭಯಪ್ರದಾನ ಮಾಡಿದನು. ವಾನರ-ಭಲ್ಲೂಕಗಳು ಹರ್ಷಿತರಾಗಿ – 'ಸುಖಧಾಮನಾದ ಮುಕುಂದನಿಗೆ ಜಯವಾಗಲೀ' ಎಂದು ಉಗ್ಗಡಿಸತೊಡಗಿದರು. (ದೋ/೧೦೩)

**ಚೌ – ಪತಿ ಸಿರ ದೇಖತ ಮಂದೋದರೀ। ಮುರುಛಿತ ಬಿಕಲ ಧರನಿ ಖಸಿ ಪರೀ॥**
**ಜುಬತಿ ಬೃಂದ ರೋವತ ಉಠಿ ಧಾಈಂ। ತೆಹಿ ಉಠಾಇ ರಾವನ ಪಹಿಂ ಆಈಂ॥ ೧ ॥**
**ಪತಿ ಗತಿ ದೇಖಿ ತೆ ಕರಹಿಂ ಪುಕಾರಾ। ಛೂಟೇ ಕಚ ನಹಿಂ ಬಪುಷ ಸँಭಾರಾ॥**
**ಉರ ತಾಡನಾ ಕರಹಿಂ ಬಿಧಿ ನಾನಾ। ರೋವತ ಕರಹಿಂ ಪ್ರತಾಪ ಬಖಾನಾ॥ ೨ ॥**
**ತವ ಬಲ ನಾಥ ಡೋಲ ನಿತ ಧರನೀ। ತೇಜ ಹೀನ ಪಾವಕ ಸಸಿ ತರನೀ॥**
**ಸೇಷ ಕಮಠ ಸಹಿ ಸಕಹಿಂ ನ ಭಾರಾ। ಸೋ ತನು ಭೂಮಿ ಪರೆಉ ಭರಿ ಛಾರಾ॥ ೩ ॥**
**ಬರುನ ಕುಬೇರ ಸುರೇಸ ಸಮೀರಾ। ರನ ಸನ್ಮುಖ ಧರಿ ಕಾಹುँ ನ ಧೀರಾ॥**
**ಭುಜಬಲ ಜಿತೆಹು ಕಾಲ ಜಮ ಸಾಈಂ। ಆಜು ಪರೆಹು ಅನಾಥ ಕೀ ನಾಈಂ॥ ೪ ॥**
**ಜಗತ ಬಿದಿತ ತುಮ್ಹಾರಿ ಪ್ರಭುತಾಈ। ಸುತ ಪರಿಜನ ಬಲ ಬರನಿ ನ ಜಾಈ॥**
**ರಾಮ ಬಿಮುಖ ಅಸ ಹಾಲ ತುಮ್ಹಾರಾ। ರಹಾ ನ ಕೊಉ ಕುಲ ರೋವನಿಹಾರಾ॥ ೫ ॥**
**ತವ ಬಸ ಬಿಧಿ ಪ್ರಪಂಚ ಸಬ ನಾಥಾ। ಸಭಯ ದಿಸಿಪ ನಿತ ನಾವಹಿಂ ಮಾಥಾ॥**
**ಅಬ ತವ ಸಿರ ಭುಜ ಜಂಬುಕ ಖಾಹೀಂ। ರಾಮ ಬಿಮುಖ ಯಹ ಅನುಚಿತ ನಾಹೀಂ॥ ೬ ॥**
**ಕಾಲ ಬಿಬಸ ಪತಿ ಕಹಾ ನ ಮಾನಾ। ಅಗ ಜಗ ನಾಥು ಮನುಜ ಕರಿ ಜಾನಾ॥ ೭ ॥**

ತನ್ನೆದುರಿಗೆ ಬಂದು ಬಿದ್ದ ಪತಿಯ ತಲೆಗಳನ್ನು ನೋಡುತ್ತಲೇ ಮಂಡೋದರಿ ಶೋಕವಿಹ್ವಲಳಾಗಿ ಮೂರ್ಛಿತಳಾಗಿ ನೆಲಕ್ಕುರುಳಿದಳು. ಅಂತಃಪುರದ ಸ್ತ್ರೀಯರು ಅಳುತ್ತಾ ಆಕೆಯ ಬಳಿಗೆ ಓಡಿ ಬಂದು, ಪ್ರಜ್ಞಾಶೂನ್ಯಳಾದ ಅವಳನ್ನು ಎತ್ತಿಕೊಂಡು ರಾವಣನ ಕಳೇಬರವಿದ್ದಲ್ಲಿಗೆ ಬಂದರು. ಪ್ರಜ್ಞೆ ಮರಳಿದಾಗ ಪತಿಯ ದುಃಸ್ಥಿತಿಯನ್ನು ನೋಡಿ ಆಕೆಯು ಕೂಗಿ-ಕೂಗಿ ಪ್ರಲಾಪಿಸತೊಡಗಿದಳು. ದೇಹಭಾನವಿಲ್ಲ, ಕೂದಲು ಬಿಚ್ಚಿ ಹರಿಹಿಕೊಂಡಿವೆ. ಅವರು ಅನೇಕ ಪ್ರಕಾರದಿಂದ ಎದೆ ಬಡಿದುಕೊಂಡು ವಿಲಾಪಮಾಡುತ್ತಾ ರಾವಣನ ಪ್ರತಾಪವನ್ನು ಕೊಂಡಾಡುತ್ತಿದ್ದಾರೆ. 'ಹೇ ಪ್ರಾಣನಾಥಾ! ನಿಮ್ಮ ಬಲದಿಂದ ಪೃಥ್ವಿಯು ಸದಾಕಾಲ ನಡುಗುತ್ತಾ ಇರುತ್ತಿತ್ತು. ನಿನ್ನೆದುರಿಗೆ ಸೂರ್ಯ-ಚಂದ್ರಾಗ್ನಿಗಳು ಹತಪ್ರಭರಾಗಿದ್ದರು. ಆದಿಶೇಷ, ಕೂರ್ಮ ಇವರೂ ಕೂಡ ನಿನ್ನ ಭಾರವನ್ನು ಸಹಿಸಲಾರದೆ ಹೋದರು. ಅಂತಹ ನಿನ್ನ ಮಹೋನ್ನತ ಶರೀರವು ಧೂಳೀಧೂಸರಿತವಾಗಿ ಮಣ್ಣಿನಲ್ಲಿ ಬಿದ್ದಿದೆ. ಇಂದ್ರ, ವಾಯು, ವರುಣ, ಕುಬೇರ ಇವರಲ್ಲಿ ಯಾರೂ ರಣರಂಗದಲ್ಲಿ ನಿನಗೆ ಮುಖತೋರುವ ಸಾಹಸಮಾಡಲಿಲ್ಲ. ಸ್ವಾಮಿ! ನೀವು ನಿಮ್ಮ ಭುಜಬಲದಿಂದ ಕಾಲನನ್ನೂ, ಯಮನನ್ನೂ ಗೆದ್ದಿದ್ದೀರಿ. ಅಂತಹ ಲೋಕವೀರರಾದ ನೀವು ಇಂದು ಅನಾಥನಂತೆ ಒರಗಿದ್ದೀರಿ! ನಿಮ್ಮ ಪೌರುಷ, ಪ್ರಭುತ್ವಗಳು ಲೋಕವಿಶ್ರುತವಾದುವು. ಅಯ್ಯೋ! ನಿಮ್ಮ ಮಕ್ಕಳ, ಪರಿಜನರ ಬಲವಂತೂ ವರ್ಣಿಸಲಸದಳ. ಜಗತ್ಪ್ರಭುವಾದ ಶ್ರೀರಾಮಚಂದ್ರನೊಡನೆ ವೈರಕಟ್ಟಿಕೊಂಡಿದ್ದರಿಂದಲೇ ನಿಮಗೆ ಈ ದುಃಸ್ಥಿತಿ ಉಂಟಾಯಿತು. ಇಂದು ನಿಮ್ಮ ವಂಶದಲ್ಲಿ ನಿನಗಾಗಿ ಅಳುವವರೂ ಕೂಡ ಯಾರೂ ಉಳಿಯಲಿಲ್ಲ. ನಾಥಾ! ಬ್ರಹ್ಮನು ಸೃಷ್ಟಿಸಿದ ಇಡೀ ಪ್ರಪಂಚವೇ ನಿಮಗೆ ಅಡಿಯಾಳಾಗಿತ್ತು. ದಿಕ್ಪಾಲಕರು ನಿಮ್ಮ ಭಯದಿಂದ ನಿಮ್ಮ ಮುಂದೆ ಹಣೆ ಮಣಿಯುತ್ತಿದ್ದರು. ಆದರೆ ಅಯ್ಯೋ! ಈಗ ನಿಮ್ಮ ತಲೆಗಳು, ತೋಳಗಳು ನರಿಗಳು ತಿನ್ನುತ್ತಿವೆಯಲ್ಲ! ರಾಮನಿಗೆ ವಿಮುಖನಾದವನಿಗೆ ಇಂತಹ ಗತಿ ಬಂದೊದಗುವುದು ಅನುಚಿತವಲ್ಲ. ಪ್ರಾಣನಾಥಾ! ಪೂರ್ಣವಾಗಿ ಕಾಲಕ್ಕ ವಶರಾದ ನೀವು ಯಾರ ಮಾತಿಗೂ ಕಿವಿಗೊಡಲಿಲ್ಲ. ಚರಾಚರದೊಡೆಯನಾದ ಪರಮಾತ್ಮನನ್ನು ಹುಲುಮನುಜನೆಂದ ಭಾವಿಸಿದಿರಿ. (ಚೌ/೧-೭)

**ಛಂ – ಜಾನ್ಯೋ ಮನುಜ ಕರಿ ದನುಜ ಕಾನನ ದಹನ ಪಾವಕ ಹರಿ ಸ್ವಯಂ।**
**ಜೆಹಿ ನಮತ ಸಿವ ಬ್ರಹ್ಮಾದಿ ಸುರ ಪಿಯ ಭಜೆಹು ನಹಿಂ ಕರುನಾಮಯಂ॥**
**ಆಜನ್ಮ ತೇ ಪರದ್ರೋಹ ರತ ಪಾಪೌಘಮಯ ತವ ತನು ಅಯಂ।**
**ತುಮ್ಹಹೂ ದಿಯೋ ನಿಜ ಧಾಮ ರಾಮ ನಮಾಮಿ ಬ್ರಹ್ಮ ನಿರಾಮಯಂ॥**

ದನುಜಕಾನನಕ್ಕೆ ಕಾಡ್ಗಿಚ್ಚಾದ ಸಾಕ್ಷಾತ್ ಶ್ರೀಹರಿಯನ್ನು ಸಾಮಾನ್ಯ ಮಾನವನೆಂದು ಬಗೆದಿರಿ. ಹೇ ಪ್ರಿಯತಮಾ! ಬ್ರಹ್ಮರುದ್ರಾದಿ ದೇವತೆಗಳಿಂದ ಸೇವಿತನಾದ ಕರುಣಾಮಯನಾದ ಶ್ರೀರಾಮನನ್ನು ನೀವು ಭಜಿಸಲಿಲ್ಲ. ನಿಮ್ಮ ಈ ಶರೀರವು ಹುಟ್ಟಿನಿಂದಲೇ ಪರದ್ರೋಹರತವಾಗಿತ್ತು; ಅನೇಕ ಪಾಪಗಳಿಗೆ ಮನೆಯಾಗಿತ್ತು. ಇಷ್ಟಾದರೂ ನಿರಾಮಯ ಪರಬ್ರಹ್ಮ ಶ್ರೀರಾಮನು ನಿಮಗೆ ತನ್ನ ಪರಂಧಾಮವನ್ನು ಕರುಣಿಸಿದ. ಅಂಥಹವನಿಗೆ ನಾನು ನಮಸ್ಕರಿಸುತ್ತೇನೆ. (ಛಂದ)

**ದೋ – ಅಹಹ ನಾಥ ರಘುನಾಥ ಸಮ ಕೃಪಾಸಿಂಧು ನಹಿಂ ಆನ।**
**ಜೋಗಿ ಬೃಂದ ದುರ್ಲಭ ಗತಿ ತೋಹಿ ದೀನ್ಹಿ ಭಗವಾನ॥ ೧೦೪ ॥**

ಆಹಾ! ನಾಥಾ! ಶ್ರೀರಘುನಾಥನಂತಹ ಕೃಪಾಸಿಂಧು ಬೇರಾರಿದ್ದಾರೆ? ಆ ಭಗವಂತನು ಯೋಗಿಜನರಿಗೂ ದುರ್ಲಭವಾದ ಸದ್ಗತಿಯನ್ನು ನಿಮಗೆ ಕರುಣಿಸಿದನಲ್ಲ! (ದೋ/೧೦೪)

**ಚೌ – ಮಂದೋದರೀ ಬಚನ ಸುನಿ ಕಾನಾ। ಸುರ ಮುನಿ ಸಿದ್ಧ ಸಬನ್ಹಿ ಸುಖ ಮಾನಾ॥**
**ಅಜ ಮಹೇಸ ನಾರದ ಸನಕಾದೀ। ಜೇ ಮುನಿಬರ ಪರಮಾರಥಬಾದೀ॥ ೧ ॥**
**ಭರಿ ಲೋಚನ ರಘುಪತಿಹಿ ನಿಹಾರೀ। ಪ್ರೇಮ ಮಗನ ಸಬ ಭಏ ಸುಖಾರೀ॥**
**ರುದನ ಕರತ ದೇಖೀಂ ಸಬ ನಾರೀ। ಗಯಉ ಬಿಭೀಷನು ಮನ ದುಖ ಭಾರೀ॥ ೨ ॥**
**ಬಂಧು ದಸಾ ಬಿಲೋಕಿ ದುಖ ಕೀನ್ಹಾ। ತಬ ಪ್ರಭು ಅನುಜಹಿ ಆಯಸು ದೀನ್ಹಾ॥**
**ಲಛಿಮನ ತೆಹಿ ಬಹು ಬಿಧಿ ಸಮುಝಾಯೋ। ಬಹುರಿ ಬಿಭೀಷನ ಪ್ರಭು ಪಹಿಂ ಆಯೋ॥ ೩ ॥**
**ಕೃಪಾದೃಷ್ಟಿ ಪ್ರಭು ತಾಹಿ ಬಿಲೋಕಾ। ಕರಹು ಕ್ರಿಯಾ ಪರಿಹರಿ ಸಬ ಸೋಕಾ॥**
**ಕೀನ್ಹಿ ಕ್ರಿಯಾ ಪ್ರಭು ಆಯಸು ಮಾನೀ। ಬಿಧಿವತ ದೇಸ ಕಾಲ ಜಿಯಂ ಜಾನೀ॥ ೪ ॥**

ಮಂಡೋದರಿಯ ಮಾತುಗಳನ್ನು ಕಿವಿಯಾರೆ ಕೇಳಿದ ಸುರ, ಮುನಿ, ಸಿದ್ಧರು ಹೀಗೆ ಎಲ್ಲರಿಗೂ ಸುಖವಾಯಿತು. ಹರ, ವಿರಿಂಚಿ, ನಾರದ, ಸನಕ, ಸನಂದಾದಿ ಮಹಾಮುನಿಗಳು ಹಾಗೂ ಇತರ ತತ್ತ್ವಜ್ಞಾನಿಗಳು ಮೊದಲಾದವರೆಲ್ಲರೂ

ಶ್ರೀರಘುನಾಥನನ್ನು ಕಣ್ತುಂಬ ನೋಡಿ, ಪ್ರೇಮಮಗ್ನರಾಗಿ, ತನ್ಮಯರಾಗಿ, ಅವರ್ಣನೀಯ ಸುಖದಲ್ಲಿ ಮುಳುಗಿದರು. ತನ್ನ ಕುಟುಂಬದ ಸ್ತ್ರೀಯರೆಲ್ಲರೂ ಅಳುತ್ತಿರುವುದನ್ನು ಕಂಡು ವಿಭೀಷಣನ ಮನದಲ್ಲಿ ಅತೀವ ದುಃಖವಾಗಿ ಅವರ ಬಳಿಗೆ ಹೋದನು. ಸೋದರನ ಈ ಸ್ಥಿತಿಯನ್ನು ನೋಡಿ ಅವನಿಗೆ ತುಂಬಾ ದುಃಖವಾಯಿತು. ಆಗ ಶ್ರೀರಾಮನು ವಿಭೀಷಣನನ್ನು ಸಂತೈಸುವಂತೆ ಲಕ್ಷ್ಮಣನಿಗೆ ಹೇಳಿದನು – ಅಣ್ಣನ ಅಪ್ಪಣೆಯಂತೆ ಲಕ್ಷ್ಮಣನು ವಿಭೀಷಣನನ್ನು ಪರಿಪರಿಯಾಗಿ ಸಂತೈಸಿ, ಧೈರ್ಯ ತುಂಬಿದನು. ಆಗ ವಿಭೀಷಣನು ಪ್ರಭು ಶ್ರೀರಾಮನ ಬಳಿಗೆ ಮರಳಿದ. ಪ್ರಭುವು ತನ್ನ ಕರುಣಾಪೂರಿತ ದೃಷ್ಟಿಯಿಂದ ಅವನನ್ನು ನೋಡಿ ಇಂತೆಂದನು – 'ಈಗ ಶೋಕವನ್ನು ತೊರೆದು, ರಾವಣನ ಅಂತ್ಯಕ್ರಿಯೆಗಳನ್ನು ನೆರವೇರಿಸು.' ಪ್ರಭುವಿನ ಆಣತಿಯನ್ನು ಶಿರಸಾವಹಿಸಿ, ದೇಶ-ಕಾಲ ಪರಿಸ್ಥಿತಿಯನ್ನು ಗಮನಿಸಿ, ವಿಭೀಷಣನು ವಿಧಿಪೂರ್ವಕವಾಗಿ ರಾವಣನ ಉತ್ತರಕ್ರಿಯಾದಿಗಳನ್ನು ಮಾಡಿದನು. (ಚೌ/೧-೪)

**ದೋ – ಮಂದೋದರೀ ಆದಿ ಸಬ ದೇಇ ತಿಲಾಂಜಲಿ ತಾಹಿ ।**
**ಭವನ ಗಈಂ ರಘುಪತಿ ಗುನ ಗನ ಬರನತ ಮನ ಮಾಹಿ ॥ ೧೦೫ ॥**

ಮಂಡೋದರಿಯೇ ಮೊದಲಾದ ಎಲ್ಲ ರಾಣಿಯರು ರಾವಣನಿಗೆ ತಿಲಾಂಜಲಿಯನಿತ್ತು, ಮನಸ್ಸಿನಲ್ಲಿ ಶ್ರೀರಾಮನ ದಿವ್ಯಗುಣಗಳನ್ನು ವರ್ಣಿಸುತ್ತಾ ರಾಜಭವನಕ್ಕೆ ತೆರಳಿದರು. (ದೋ/೧೦೫)

## ವಿಭೀಷಣ ಪಟ್ಟಾಭಿಷೇಕ

**ಚೌ – ಆಇ ಬಿಭೀಷನ ಪುನಿ ಸಿರು ನಾಯೋ । ಕೃಪಾಸಿಂಧು ತಬ ಅನುಜ ಬೊಲಾಯೋ ॥**
**ತುಮ್ಹ ಕಪೀಸ ಅಂಗದ ನಲ ನೀಲಾ । ಜಾಮವಂತ ಮಾರುತಿ ನಯಸೀಲಾ ॥ ೧ ॥**
**ಸಬ ಮಿಲಿ ಜಾಹು ಬಿಭೀಷನ ಸಾಥಾ । ಸಾರೆಹು ತಿಲಕ ಕಹೆಉ ರಘುನಾಥಾ ॥**
**ಪಿತಾ ಬಚನ ಮೈಂ ನಗರ ನ ಆವಉಂ । ಆಪು ಸರಿಸ ಕಪಿ ಅನುಜ ಪಠಾವಉಂ ॥ ೨ ॥**
**ತುರತ ಚಲೇ ಕಪಿ ಸುನಿ ಪ್ರಭು ಬಚನಾ । ಕೀನ್ಹೀ ಜಾಇ ತಿಲಕ ಕೀ ರಚನಾ ॥**
**ಸಾದರ ಸಿಂಹಾಸನ ಬೈಠಾರೀ । ತಿಲಕ ಸಾರಿ ಅಸ್ತುತಿ ಅನುಸಾರೀ ॥ ೩ ॥**
**ಜೋರಿ ಪಾನಿ ಸಬಹೀಂ ಸಿರ ನಾಏ । ಸಹಿತ ಬಿಭೀಷನ ಪ್ರಭು ಪಹಿಂ ಆಏ ॥**
**ತಬ ರಘುಬೀರ ಬೋಲಿ ಕಪಿ ಲೀನ್ಹೇ । ಕಹಿ ಪ್ರಿಯ ಬಚನ ಸುಖೀ ಸಬ ಕೀನ್ಹೇ ॥ ೪ ॥**

ಉತ್ತರಕ್ರಿಯಾದಿಗಳೆಲ್ಲವೂ ಮುಗಿದ ಮೇಲೆ ವಿಭೀಷಣನು ಶ್ರೀರಾಮನ ಬಳಿಗೆ ಬಂದು, ಆತನಿಗೆ ಪಾದಾಭಿವಂದನೆ ಮಾಡಿದನು. ಆಗ ಕೃಪಾಸಿಂಧುವಾದ ಶ್ರೀರಾಮನು ಲಕ್ಷ್ಮಣನನ್ನು ಕರೆದು ಹೇಳಿದನು – ''ನೀನು, ವಾನರರಾಜನಾದ ಸುಗ್ರೀವ, ಅಂಗದ, ನಳ, ನೀಲ, ಜಾಂಬವಂತರು, ಹನುಮಂತರೇ ಮುಂತಾದ ನೀತಿನಿಪುಣರಾದ ನೀವೆಲ್ಲರೂ ವಿಭೀಷಣನೊಂದಿಗೆ ಹೋಗಿ, ಅವನಿಗೆ ರಾಜ್ಯಾಭಿಷೇಕವನ್ನು ಮಾಡಿರಿ.'' ಅನಂತರ ವಿಭೀಷಣನಿಗೆ ಹೇಳಿದನು – 'ಸಖನೇ ! ತಂದೆಯ ಆಜ್ಞೆಯ ಮೇರೆಗೆ ನಾನು ನಗರ ಪ್ರವೇಶ ಮಾಡುವಂತಿಲ್ಲ. ಆದರೆ ನನಗೆ ಸಮಾನರಾದ ವಾನರರನ್ನು, ತಮ್ಮ ಲಕ್ಷ್ಮಣನನ್ನು ಕಳುಹಿಸುತ್ತಿದ್ದೇನೆ. ನೀನು ಸಿಂಹಾಸನಾರೋಹಣ ಮಾಡು.' ಪ್ರಭುವಚನವನ್ನು ಕೇಳಿ ವಾನರರು ಕೂಡಲೇ ಹೊರಟರು. ಪಟ್ಟಾಭಿಷೇಕದ ಎಲ್ಲ ಏರ್ಪಾಟುಗಳನ್ನು ಮಾಡಿ, ಗೌರವಾದರಗಳಿಂದ ವಿಭೀಷಣನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ, ಅವನಿಗೆ ರಾಜ್ಯಾಭಿಷೇಕವನ್ನು ನೆರವೇರಿಸಿದರು ಹಾಗೂ ಸಂದರ್ಭೋಚಿತವಾಗಿ ಅವನನ್ನು ಶ್ಲಾಘಿಸಿದರು. ಎಲ್ಲರೂ ಲಂಕೆಯ ಹೊಸ ರಾಜನಿಗೆ ಕೈಜೋಡಿಸಿ, ತಲೆವಾಗಿ ಗೌರವಾರ್ಪಣೆ ಮಾಡಿದರು. ಅನಂತರ ವಿಭೀಷಣಸಹಿತ ಎಲ್ಲರೂ ಪ್ರಭು ಶ್ರೀರಾಮನ ಬಳಿಗೆ ಮರಳಿದರು. ಶ್ರೀರಘುವೀರನು ಎಲ್ಲ ವಾನರರನ್ನು ಬರಮಾಡಿಕೊಂಡು ಪ್ರಿಯವಚನಗಳಿಂದ ಅವರನ್ನು ಸಂತೋಷಪಡಿಸಿದನು. (ಚೌ/೧-೪)

**ಛಂ – ಕಿಏ ಸುಖೀ ಕಹಿ ಬಾನೀ ಸುಧಾ ಸಮ ಬಲ ತುಮ್ಹಾರೇಂ ರಿಪು ಹಯೋ ।**
**ಪಾಯೋ ಬಿಭೀಷನ ರಾಜ ತಿಹುಂ ಪುರ ಜಸು ತುಮ್ಹಾರೋ ನಿತ ನಯೋ ॥**
**ಮೋಹಿ ಸಹಿತ ಸುಭ ಕೀರತಿ ತುಮ್ಹಾರೀ ಪರಮ ಪ್ರೀತಿ ಜೊ ಗಾಇಹೈಂ ।**
**ಸಂಸಾರ ಸಿಂಧು ಅಪಾರ ಪಾರ ಪ್ರಯಾಸ ಬಿನು ನರ ಪಾಇಹೈಂ ॥**

ಋಕ್ಷ, ವಾನರವೀರರೇ! ನಿಮ್ಮೆಲ್ಲರ ಬಲಪರಾಕ್ರಮಗಳಿಂದ ರಾವಣನಂತಹ ಪ್ರಬಲ ಶತ್ರುವನ್ನೂ ಕೂಡ ಜಯಿಸಲು ಸಾಧ್ಯವಾಯಿತು. ವಿಭೀಷಣನು ರಾಜ್ಯವನ್ನು ಹೊಂದಿದನು. ಇದರಿಂದಾಗಿ ನಿಮ್ಮ ಯಶಸ್ಸು ಮೂರ್ಲೋಕಗಳಲ್ಲಿ ನಿತ್ಯನೂತನವಾಗಿ

ನಿರಂತರವಾಗಿ ರಾರಾಜಿಸುತ್ತಿರುವುದು. ಶ್ರೀರಾಮನಾಡಿದ ಅಮೃತಪ್ರಾಯವಾದ ಇಂತಹ ಮಧುರವಚನಗಳಿಂದ ಅವರೆಲ್ಲರೂ ತೃಪ್ತಿಹೊಂದಿದರು. ನನ್ನ ಸಮೇತ ನಿಮ್ಮ ಬಲಪರಾಕ್ರಮಗಳನ್ನು, ಯಶೋವೈಭವಗಳನ್ನು ಪ್ರೇಮಪೂರ್ವಕ ಗಾನಮಾಡುವವರು ಯಾವ ಪರಿಶ್ರಮವೂ ಇಲ್ಲದೆ ಅಪಾರ ಭವಸಾಗರವನ್ನು ದಾಟಿ ಹೋಗುವರು. (ಛಂದ)

**ದೋ – ಪ್ರಭು ಕೇ ಬಚನ ಶ್ರವನ ಸುನಿ ನಹಿಂ ಅಗಾಹಿಂ ಕಪಿ ಪುಂಜ ।**
**ಬಾರ ಬಾರ ಸಿರ ನಾವಹಿಂ ಗಹಹಿಂ ಸಕಲ ಪದ ಕಂಜ ॥ ೧೦೬ ॥**

ಪ್ರಭುವಚನಗಳನ್ನು ಎಷ್ಟು ಕೇಳಿದರೂ ವಾನರರು ತಣಿಯರು. ಅವರು ಪುನಃ-ಪುನಃ ಪ್ರಭುವಿಗೆ ತಲೆವಾಗುವರು. ಚರಣಕಮಲಕ್ಕೆರಗುವರು. (ದೋ/೧೦೬)

**ಚೌ – ಪುನಿ ಪ್ರಭು ಬೋಲಿ ಲಿಯಉ ಹನುಮಾನಾ । ಲಂಕಾ ಜಾಹು ಕಹೇಉ ಭಗವಾನಾ ॥**
**ಸಮಾಚಾರ ಜಾನಕಿಹಿ ಸುನಾವಹು । ತಾಸು ಕುಸಲ ಲೈ ತುಮ್ಹ ಚಲಿ ಆವಹು ॥ ೧ ॥**
**ತಬ ಹನುಮಂತ ನಗರ ಮಹುಁ ಆಏ । ಸುನಿ ನಿಸಿಚರೀ ನಿಸಾಚರ ಧಾಏ ॥**
**ಬಹು ಪ್ರಕಾರ ತಿನ್ಹ ಪೂಜಾ ಕೀನ್ಹೀ । ಜನಕಸುತಾ ದೇಖಾಇ ಪುನಿ ದೀನ್ಹೀ ॥ ೨ ॥**
**ದೂರಿಹಿ ತೇ ಪ್ರನಾಮ ಕಪಿ ಕೀನ್ಹಾ । ರಘುಪತಿ ದೂತ ಜಾನಕೀಂ ಚೀನ್ಹಾ ॥**
**ಕಹಹು ತಾತ ಪ್ರಭು ಕೃಪಾನಿಕೇತಾ । ಕುಸಲ ಅನುಜ ಕಪಿ ಸೇನ ಸಮೇತಾ ॥ ೩ ॥**
**ಸಬ ಬಿಧಿ ಕುಸಲ ಕೋಸಲಾಧೀಸಾ । ಮಾತು ಸಮರ ಜೀತ್ಯೋ ದಸಸೀಸಾ ॥**
**ಅಬಿಚಲ ರಾಜು ಬಿಭೀಷನ ಪಾಯೋ । ಸುನಿ ಕಪಿ ಬಚನ ಹರಷ ಉರ ಛಾಯೋ ॥ ೪ ॥**

ಮತ್ತೆ ಪ್ರಭುವು ಹನುಮಂತನನ್ನು ಕರೆದು ಹೇಳಿದನು – ''ನೀನು ಲಂಕೆಗೆ ಹೋಗಿ ಜಾನಕಿಗೆ ಎಲ್ಲ ಸಮಾಚಾರವನ್ನು ತಿಳಿಸಿ, ಆಕೆಯ ಕ್ಷೇಮಸಮಾಚಾರವನ್ನು ತಿಳಿದುಕೊಂಡು ಬಾ.'' ಆಗ ಹನುಮಂತನು ಲಂಕಾನಗರಕ್ಕೆ ಹೋದನು. ಅವನ ಆಗಮನದ ವಾರ್ತೆಯನ್ನು ಕೇಳಿದ ರಾಕ್ಷಸ ಸ್ತ್ರೀ-ಪುರುಷರೆಲ್ಲರೂ ಮಾರುತಿಯ ಸ್ವಾಗತಕ್ಕಾಗಿ ಓಡಿ ಬಂದರು. ಅವರು ಹನುಮಂತನನ್ನು ಅನೇಕ ವಿಧದಿಂದ ಪೂಜಿಸಿ, ಮತ್ತೆ ಜಾನಕಿಯ ಬಳಿಗೆ ಕರೆದೊಯ್ದರು. ವಾಯುಪುತ್ರನು ದೂರದಿಂದಲೇ ಸೀತಾದೇವಿಗೆ ನಮಸ್ಕರಿಸಿದನು. ಇವನು ರಘುಪತಿಯ ದೂತ ಮಾರುತಿ ಎಂದು ಜಾನಕಿಯು ಗುರುತಿಸಿ, ಕೇಳಿದಳು – ''ವತ್ಸಾ! ಮಾರುತಿ, ಹೇಳು. ಕೃಪಾನಿಕೇತನನಾದ ನನ್ನ ಸ್ವಾಮಿ, ಸೋದರನಾದ ಲಕ್ಷ್ಮಣ, ವಾನರಸೇನೆ ಸಮೇತ ಕ್ಷೇಮ ತಾನೇ?' ಹನುಮಂತನು ಹೇಳಿದನು – ತಾಯೇ! ಕೋಸಲಾಧೀಶ ಶ್ರೀರಾಮನು ಉಳಿದವರೆಲ್ಲರೂ ಎಲ್ಲ ರೀತಿಯಿಂದಲೂ ಕ್ಷೇಮವಾಗಿದ್ದಾರೆ. ಪ್ರಭುವು ಯುದ್ಧದಲ್ಲಿ ದಶಶಿರವನ್ನು ಗೆದ್ದು, ವಿಭೀಷಣನಿಗೆ ಅತುಲರಾಜ್ಯವನ್ನು ಕರುಣಿಸಿದನು. ಹನುಮಂತನ ಮಾತನ್ನು ಕೇಳಿ, ಸೀತಾದೇವಿಯು ಆನಂದತುಂದಿಲಳಾದಳು. (ಚೌ/೧-೪)

**ಛಂ – ಅತಿ ಹರಷ ಮನ ತನ ಪುಲಕ ಲೋಚನ ಸಜಲ ಕಹ ಪುನಿ ಪುನಿ ರಮಾ ।**
**ಕಾ ದೇಉಁ ತೋಹಿ ತ್ರೈಲೋಕ ಮಹುಁ ಕಪಿ ಕಿಮಪಿ ನಹಿಂ ಬಾನೀ ಸಮಾ ॥**
**ಸುನು ಮಾತು ಮೈಂ ಪಾಯೋ ಅಖಿಲ ಜಗ ರಾಜು ಆಜು ನ ಸಂಸಯಂ ।**
**ರನ ಜೀತಿ ರಿಪುದಲ ಬಂಧು ಜುತ ಪಸ್ಯಾಮಿ ರಾಮಮನಾಮಯಂ ॥**

ಶ್ರೀಜಾನಕಿದೇವಿಯ ಹೃದಯದಲ್ಲಿ ಹರ್ಷ ಹಿಡಿಸದಾಯಿತು. ಆಕೆಯ ಶರೀರ ಪುಳಕಿತವಾಯಿತು. ನೇತ್ರಗಳಲ್ಲಿ ಆನಂದಾಶ್ರುಗಳು ತುಂಬಿಬಂದವು. ಆಕೆ ಮತ್ತೆ-ಮತ್ತೆ ಹೇಳತೊಡಗಿದಳು – 'ಹನುಮಂತಾ! ಇಂತಹ ಶುಭವಾರ್ತೆಯನ್ನು ತಂದ ನಿನಗೆ ನಾನು ಏನು ಕೊಡಬಲ್ಲೆ? ನೀನು ತಂದ ಈ ಸುದ್ದಿಗೆ ಸಮನಾದುದು ಮೂರ್ಲೋಕಗಳಲ್ಲಿ ಯಾವುದೂ ಇಲ್ಲ.'' ಹನುಮಂತ ಹೇಳಿದನು – ಅಮ್ಮಾ! ಕೇಳು. ಸಂಗ್ರಾಮದಲ್ಲಿ ಶತ್ರುಸೇನೆಯನ್ನು ಜಯಿಸಿ, ಸೋದರನೊಂದಿಗೆ ನಿರ್ವಿಕಾರನಾಗಿರುವ ಶ್ರೀರಾಮನನ್ನು ನೋಡಿದ ನನಗೆ ನಿಃಸಂದೇಹವಾಗಿ ತ್ರೈಲೋಕ್ಯದ ರಾಜ್ಯ ದೊರೆತಂತಾಯಿತು. (ಛಂದ)

**ದೋ – ಸುನು ಸುತ ಸದಗುನ ಸಕಲ ತವ ಹೃದಯಁ ಬಸಹುಁ ಹನುಮಂತ ।**
**ಸಾನುಕೂಲ ಕೋಸಲಪತಿ ರಹಹುಁ ಸಮೇತ ಅನಂತ ॥ ೧೦೭ ॥**

ಜಾನಕಿಯು ಹೇಳಿದಳು – ''ಮಗು! ಕೇಳು. ಸಕಲ ಸದ್ಗುಣಗಳೂ ನಿನ್ನ ಹೃದಯದಲ್ಲಿ ಸದಾ ನೆಲೆಸಿರಲಿ. ಅನಂತ (ಲಕ್ಷ್ಮಣ) ಸಮೇತನಾಗಿ ಕೋಸಲಾಧಿಪತಿ ಸದಾ ನಿನ್ನ ಮೇಲೆ ಪ್ರಸನ್ನರಾಗಿರಲಿ. (ದೋ/೧೦೭)

ಚೌ– ಅಬ ಸೋಇ ಜತನ ಕರಹು ತುಮ್ಹ ತಾತಾ। ದೇಖೌ ನಯನ ಸ್ಯಾಮ ಮೃದು ಗಾತಾ॥
ತಬ ಹನುಮಾನ ರಾಮ ಪಹಿಂ ಜಾಈ। ಜನಕಸುತಾ ಕೈ ಕುಸಲ ಸುನಾಈ॥೧॥
ಸುನಿ ಸಂದೇಸು ಭಾನುಕುಲಭೂಷನ। ಬೋಲಿ ಲಿಏ ಜುಬರಾಜ ಬಿಭೀಷನ॥
ಮಾರುತಸುತ ಕೇ ಸಂಗ ಸಿಧಾವಹು। ಸಾದರ ಜನಕಸುತಹಿ ಲೈ ಆವಹು॥೨॥
ತುರತಹಿಂ ಸಕಲ ಗಏ ಜಹಂ ಸೀತಾ। ಸೇವಹಿಂ ಸಬ ನಿಸಿಚರೀಂ ಬಿನೀತಾ॥
ಬೇಗಿ ಬಿಭೀಷನ ತಿನ್ಹಹಿ ಸಿಖಾಯೋ। ತಿನ್ಹ ಬಹು ಬಿಧಿ ಮಜ್ಜನ ಕರವಾಯೋ॥೩॥
ಬಹು ಪ್ರಕಾರ ಭೂಷನ ಪಹಿರಾಏ। ಸಿಬಿಕಾ ರುಚಿರ ಸಾಜಿ ಪುನಿ ಲ್ಯಾಏ॥
ತಾ ಪರ ಹರಷಿ ಚಢೀ ಬೈದೇಹೀ। ಸುಮಿರಿ ರಾಮ ಸುಖಧಾಮ ಸನೇಹೀ॥೪॥
ಬೇತಪಾನಿ ರಚ್ಛಕ ಚಹುಂ ಪಾಸಾ। ಚಲೇ ಸಕಲ ಮನ ಪರಮ ಹುಲಾಸಾ॥
ದೇಖನ ಭಾಲು ಕೀಸ ಸಬ ಆಏ। ರಚ್ಛಕ ಕೋಪಿ ನಿವಾರನ ಧಾಏ॥೫॥
ಕಹ ರಘುಬೀರ ಕಹಾ ಮಮ ಮಾನಹು। ಸೀತಹಿ ಸಖಾ ಪಯಾದೇಂ ಆನಹು॥
ದೇಖಹುಂ ಕಪಿ ಜನನೀ ಕೀ ನಾಈಂ। ಬಿಹಸಿ ಕಹಾ ರಘುನಾಥ ಗೋಸಾಈಂ॥೬॥
ಸುನಿ ಪ್ರಭು ಬಚನ ಭಾಲು ಕಪಿ ಹರಷೇ। ನಭ ತೇ ಸುರನ್ಹ ಸುಮನ ಬಹು ಬರಷೇ॥
ಸೀತಾ ಪ್ರಥಮ ಅನಲ ಮಹುಂ ರಾಖೀ। ಪ್ರಗಟ ಕೀನ್ಹಿ ಚಹ ಅಂತರ ಸಾಖೀ॥೭॥

ವತ್ಸಾ! ಈಗಲೇ ನಾನು ಪ್ರಭುವಿನ ಕೋಮಲ ಶ್ಯಾಮಲ ಶರೀರದ ದರ್ಶನಮಾಡುವಂತೆ ಉಪಾಯವನ್ನು ಮಾಡು.'' ಆಗ ಹನುಮಂತನು ಅಲ್ಲಿಂದ ಹೊರಟು ಶ್ರೀರಾಮನಿದ್ದಲ್ಲಿಗೆ ಹೋಗಿ, ಜಾನಕೀದೇವಿಯ ಕ್ಷೇಮಸಮಾಚಾರವನ್ನು ತಿಳಿಸಿದನು. ಸೂರ್ಯವಂಶಭೂಷಣನಾದ ಶ್ರೀರಾಮನು ಸೀತಾದೇವಿಯ ಸಂದೇಶವನ್ನು ಕೇಳಿ, ಯುವರಾಜನಾದ ಅಂಗದನನ್ನು, ಲಂಕಾಧಿಪತಿಯಾದ ವಿಭೀಷಣನನ್ನು ಬರಮಾಡಿಕೊಂಡು – ''ನೀವು ಪವನನಂದನ ಹನುಮಂತನೊಂದಿಗೆ ಹೋಗಿ, ಜಾನಕಿಯನ್ನು ಆದರದಿಂದ ಕರೆತನ್ನಿರಿ.'' ಎಂದು ಹೇಳಿದನು. ಕೂಡಲೇ ಅವರು ಸೀತೆಯ ಬಳಿಗೆ ಹೋದರು. ಅಲ್ಲಿ ಎಲ್ಲ ರಾಕ್ಷಸಸ್ತ್ರೀಯರು ನಮ್ರತೆಯಿಂದ ಆಕೆಯ ಸೇವೆ ಮಾಡುತ್ತಿದ್ದರು. ವಿಭೀಷಣನು ಕೂಡಲೇ ಅವರಿಗೆ ತಾವು ಬಂದ ಉದ್ದೇಶ ತಿಳಿಸಿದನು. ಅವರು ಸೀತೆಗೆ ಸಂಪ್ರದಾಯಾನುಸಾರವಾಗಿ ಸ್ನಾನಮಾಡಿಸಿ, ಅವಳನ್ನು ವಿವಿಧಾಭರಣಗಳಿಂದ ಅಲಂಕರಿಸಿದರು. ಒಂದು ಅಂದವಾದ ಅಂದಣವನ್ನು ಅಲಂಕರಿಸಿ ತಂದರು. ಸುಖನಿಧಾನನಾದ, ಪ್ರಿಯತಮನಾದ ಶ್ರೀರಾಮಚಂದ್ರನನ್ನು ಸ್ಮರಿಸುತ್ತಾ ಸೀತಾದೇವಿಯು ಆನಂದತುಂದಿಲಳಾಗಿ ಅಂದಣವನೇರಿದಳು. ಪಲ್ಲಕ್ಕಿಯ ಸುತ್ತಲೂ ದಂಡಧಾರಿಗಳಾದ ರಕ್ಷಕರು ನಡೆದರು. ಎಲ್ಲರ ಮನದಲ್ಲಿ ಎಲ್ಲಿಲ್ಲದ ಸಡಗರ ತುಂಬಿತ್ತು. ವಾನರ-ಭಲ್ಲೂಕಗಳೆಲ್ಲ ಸೀತಾಮಾತೆಯ ದರ್ಶನಕ್ಕಾಗಿ ಮುಂದೆ-ಮುಂದೆ ಬಂದಾಗ ರಕ್ಷಕಭಟರು ಅವರನ್ನು ತಡೆಯಲು ಓಡಿಸುತ್ತಿದ್ದರು. ಆಗ ಶ್ರೀರಘುವೀರನು ಹೇಳಿದನು – 'ಗೆಳೆಯರೇ! ನನ್ನ ಮಾತನ್ನು ಕೇಳಿರಿ. ಸೀತೆಯನ್ನು ಪಾದಚಾರಿಯಾಗಿಯೇ ಕರೆಕೊಂಡು ಬನ್ನಿ. ಅದರಿಂದ ವಾನರರೆಲ್ಲರೂ ಆಕೆಯನ್ನು ತಾಯಿಯಂತೆ ನೋಡುವರು.' ಹೀಗೆ ಶ್ರೀರಘುನಾಥನು ನಕ್ಕುಬಿಟ್ಟನು. ಪ್ರಭುವಚನವನ್ನು ಕೇಳಿ ಭಲ್ಲೂಕ-ವಾನರರು ಹರ್ಷಿತರಾದರು. ಆಕಾಶದಿಂದ ದೇವತೆಗಳು ಪುಷ್ಪವೃಷ್ಟಿ ಮಾಡಿದರು. ನಿಜವಾದ ಸೀತೆಯನ್ನು ಅಗ್ನಿದೇವನ ಬಳಿಯಲ್ಲಿ ಇಡಲಾಗಿತ್ತು. ಈಗ ಅಂತಃಸಾಕ್ಷಿಯಾದ ಭಗವಂತನು ಅವಳನ್ನು ಪ್ರಕಟಗೊಳಿಸಲು ಬಯಸಿದನು. (ಚೌ/೧-೭)

## ಅವನಿಜೆಯ ಅಗ್ನಿಪರೀಕ್ಷೆ

ದೋ – ತೇಹಿ ಕಾರನ ಕರುನಾನಿಧಿ ಕಹೇ ಕಛುಕ ದುರ್ಬಾದ।
ಸುನತ ಜಾತುಧಾನೀಂ ಸಬ ಲಾಗೀಂ ಕರೈ ಬಿಷಾದ॥೧೦೮॥

ಈ ಕಾರಣದಿಂದಲೇ ಕರುಣಾನಿಧಿಯಾದ ಶ್ರೀರಾಮನು ಲೀಲೆಗಾಗಿ ಕೆಲವು ಕಟುವಚನಗಳನ್ನಾಡಿದನು. ಅದನ್ನು ಕೇಳಿ ರಾಕ್ಷಸಸ್ತ್ರೀಯರೆಲ್ಲರೂ ದುಃಖಿತರಾದರು. (ದೋ/೧೦೮)

ಚೌ– ಪ್ರಭು ಕೇ ಬಚನ ಸೀಸ ಧರಿ ಸೀತಾ। ಬೋಲೀ ಮನ ಕ್ರಮ ಬಚನ ಪುನೀತಾ॥
ಲಛಿಮನ ಹೋಹು ಧರಮ ಕೇ ನೇಗೀ। ಪಾವಕ ಪ್ರಗಟ ಕರಹು ತುಮ್ಹ ಬೇಗೀ॥೧॥

ಸುನಿ ಲಛಿಮನ ಸೀತಾ ಕೈ ಬಾನೀ। ಬಿರಹ ಬಿಬೇಕ ಧರಮ ನಿತಿ ಸಾನೀ॥
ಲೋಚನ ಸಜಲ ಜೋರಿ ಕರ ದೋಊ। ಪ್ರಭು ಸನ ಕಛು ಕಹಿ ಸಕತ ನ ಓಊ॥ ೨ ॥
ದೇಖಿ ರಾಮ ರುಖ ಲಛಿಮನ ಧಾಏ। ಪಾವಕ ಪ್ರಗಟಿ ಕಾಠ ಬಹು ಲಾಏ॥
ಪಾವಕ ಪ್ರಬಲ ದೇಖಿ ಬೈದೇಹೀ। ಹೃದಯ್ ಹರಷ ನಹಿಂ ಭಯ ಕಛು ತೇಹೀ॥ ೩ ॥
ಜೌಂ ಮನ ಬಚ ಕ್ರಮ ಮಮ ಉರ ಮಾಹೀಂ। ತಜಿ ರಘುಬೀರ ಆನ ಗತಿ ನಾಹೀಂ॥
ತೌ ಕೃಸಾನು ಸಬ ಕೈ ಗತಿ ಜಾನಾ। ಮೋ ಕಹುಂ ಹೊಉ ಶ್ರೀಖಂಡ ಸಮಾನಾ॥ ೪ ॥

ಪ್ರಭುವಿನ ವಚನಗಳನ್ನು ಶಿರಸಾವಹಿಸಿ, ಮನ, ವಚನ, ಕಾಯದಿಂದ ಪವಿತ್ರಳಾದ ಸೀತಾದೇವಿಯು ಹೇಳಿದಳು – ''ಲಕ್ಷ್ಮಣಾ! ನೀನು ನನ್ನ ಧರ್ಮರಕ್ಷಣೆಯ ಕಾರ್ಯದಲ್ಲಿ ಸಹಾಯಕನಾಗು. ಕೂಡಲೇ ಅಗ್ನಿಯನ್ನು ಉರಿಸಿ ಸಿದ್ಧಗೊಳಿಸು.'' ವಿರಹ, ವಿವೇಕ, ಧರ್ಮ, ನೀತಿಯುಕ್ತವಾದ ಸೀತಾದೇವಿಯ ವಚನಗಳನ್ನು ಕೇಳಿ, ಲಕ್ಷ್ಮಣ ಕಣ್ಣುಗಳಲ್ಲಿ ದುಃಖಾಶ್ರುಗಳು ತೊಟ್ಟಿಕ್ಕಿದವು. ತನ್ನ ಎರಡೂ ಕೈಗಳನ್ನು ಜೋಡಿಸಿ ನಿಂತುಬಿಟ್ಟನು. ಅವನೂ ಕೂಡ ಶ್ರೀರಾಮನಲ್ಲಿ ಏನೂ ಹೇಳದಾದನು. ಮತ್ತೆ ಶ್ರೀರಾಮನ ಸಂಕೇತವನ್ನು ಗಮನಿಸಿ, ಲಕ್ಷ್ಮಣನು ಕೂಡಲೇ ಕಟ್ಟಿಗೆಗಳನ್ನು ರಾಶಿಹಾಕಿ ಅಗ್ನಿಯನ್ನು ಪ್ರಜ್ವಲಿಸಿದರು. ಪ್ರಜ್ವಲಿತವಾದ ಅಗ್ನಿಯನ್ನು ನೋಡಿ ಜಾನಕಿಗೆ ಹರ್ಷವಾಯಿತು. ಆಕೆಗೆ ಲೇಶಮಾತ್ರವೂ ಭಯವಾಗಲಿಲ್ಲ. ಅವಳು ಲೀಲೆಯಿಂದ ಇಂತೆಂದಳು – ''ಓ ಯಜ್ಞೇಶ್ವರಾ! ಮನೋವಾಕ್ಕರ್ಮಗಳಿಂದ ನಾನು ನನ್ನ ಹೃದಯದಲ್ಲಿ ಸರ್ವಜ್ಞನಾದ ಶ್ರೀರಘುವೀರನನ್ನು ಮಾತ್ರ ಆಶ್ರಯಿಸಿದ್ದರೆ, ಎಲ್ಲರ ಮನೋಗತಿಯನ್ನು ಬಲ್ಲ ನೀನು, ನನ್ನ ಮನೋಗತಿಯನ್ನು ಅರಿತು ಚಂದನದಂತೆ ಶೀತಲವಾಗು.'' (ಚೌ/೧-೪)

ಛಂ – ಶ್ರೀಖಂಡ ಸಮ ಪಾವಕ ಪ್ರಬೇಸ ಕಿಯೋ ಸುಮಿರಿ ಪ್ರಭು ಮೈಥಿಲೀ।
ಜಯ ಕೋಸಲೇಸ ಮಹೇಸ ಬಂದಿತ ಚರನ ರತಿ ಅತಿ ನಿರ್ಮಲೀ॥
ಪ್ರತಿಬಿಂಬ ಅರು ಲೌಕಿಕ ಕಲಂಕ ಪ್ರಚಂಡ ಪಾವಕ ಮಹುಂ ಜರೇ।
ಪ್ರಭು ಚರಿತ ಕಾಹುಂ ನ ಲಖೇ ನಬ ಸುರ ಸಿದ್ಧ ಮುನಿ ದೇಖಹಿಂ ಖರೇ॥ ೧ ॥
ಧರಿ ರೂಪ ಪಾವಕ ಪಾನಿ ಗಹಿ ಶ್ರೀ ಸತ್ಯ ಶ್ರುತಿ ಜಗ ಬಿದಿತ ಜೋ।
ಜಿಮಿ ಛೀರಸಾಗರ ಇಂದಿರಾ ರಾಮಹಿ ಸಮರ್ಪೀ ಆನಿ ಸೋ॥
ಸೋ ರಾಮ ಬಾಮ ಬಿಭಾಗ ರಾಜತಿ ರುಚಿರ ಅತಿ ಸೋಭಾ ಭಲೀ॥
ನವ ನೀಲ ನೀರಜ ನಿಕಟ ಮಾನಹುಂ ಕನಕ ಪಂಕಜ ಕೀ ಕಲೀ॥ ೨ ॥

ಶ್ರೀಮಹಾದೇವನಿಂದ ಸದಾಕಾಲ ಪೂಜಿಸಲ್ಪಡುವ, ಸೀತಾದೇವಿಗೆ ಅತ್ಯಂತ ಪ್ರೀತಿಪಾತ್ರನಾದ ಶ್ರೀರಾಮಚಂದ್ರ ಪ್ರಭುವಿನ ಚರಣಕಮಲಗಳನ್ನು ಸ್ಮರಿಸುತ್ತಾ, ಕೋಸಲಾಧೀಶನಿಗೆ ಜಯ-ಜಯಕಾರ ಮಾಡುತ್ತಾ ಸೀತಾದೇವಿಯು ಚಂದನದಂತೆ ಶೀತಲವಾದ ಅಗ್ನಿಯಲ್ಲಿ ಪ್ರವೇಶಿಸಿದಳು. ಆಗ ಸೀತಾದೇವಿಯ ಪ್ರತಿಬಿಂಬವು ಬಿಂಬದಲ್ಲಿ ಸೇರಿಹೋಯಿತು. ಲೌಕಿಕ ಕಳಂಕವೆಲ್ಲ ಆ ಪ್ರಚಂಡಾಗ್ನಿಯಲ್ಲಿ ಭಸ್ಮವಾಯಿತು. ಪ್ರಭುವಿನ ಈ ಲೀಲಾರಹಸ್ಯವು ಯಾರಿಗೂ ತಿಳಿಯಲೇ ಇಲ್ಲ. ಸುರರು, ಸಿದ್ಧರು, ಮುನಿಗಳು ಆಕಾಶದಲ್ಲಿ ನಿಂತು ಇದನ್ನು ಸ್ತಬ್ಧರಾಗಿ ನೋಡುತ್ತಿದ್ದರು. ಆಗ ಅಗ್ನಿದೇವನು ಶರೀರಧಾರಿಯಾಗಿ ಪ್ರಕಟಿತನಾಗಿ, ವೇದಪ್ರತಿಪಾದ್ಯಳಾದ, ಜಗದ್ವಿಖ್ಯಾತಳಾದ ನಿಜವಾದ ಶ್ರೀದೇವಿ (ಸೀತಾದೇವಿ)ಯ ಕೈಹಿಡಿದುಕೊಂಡು, ಕ್ಷೀರಸಾಗರನು ಲಕ್ಷ್ಮೀದೇವಿಯನ್ನು ಮಹಾವಿಷ್ಣುವಿಗೆ ಸಮರ್ಪಿಸುವಂತೆ ಸೀತಾದೇವಿಯನ್ನು ಶ್ರೀರಾಮಚಂದ್ರನಿಗೆ ಅರ್ಪಿಸಿದನು. ಆಕೆಯು ಶ್ರೀರಾಮನ ವಾಮಭಾಗದಲ್ಲಿ ವಿರಾಜಿಸಿದಳು. ಆಕೆಯ ಪರಮಶೋಭೆ ಅತಿಮನೋಜ್ಞವಾಗಿತ್ತು. ಆಗತಾನೇ ಅರಳಿದ ನೀಲಕಮಲದ ಬಳಿ, ಕನಕಕಮಲದ ಮೊಗ್ಗಿನಂತೆ ಆಕೆಯು ಶೋಭಿಸಿದಳು. (ಛಂದ/೧-೨)

ದೋ – ಬರಷಹಿಂ ಸುಮನ ಹರಷಿ ಸುರ ಬಾಜಹಿಂ ಗಗನ ನಿಸಾನ।
ಗಾವಹಿಂ ಕಿನ್ನರ ಸುರಬಧೂ ನಾಚಹಿಂ ಚಢೀಂ ಬಿಮಾನ॥ ೧೦೯(ಕ)॥
ಜನಕಸುತಾ ಸಮೇತ ಪ್ರಭು ಸೋಭಾ ಅಮಿತ ಅಪಾರ।
ದೇಖಿ ಭಾಲು ಕಪಿ ಹರಷೇ ಜಯ ರಘುಪತಿ ಸುಖ ಸಾರ॥ ೧೦೯(ಖ)॥

ದೇವತೆಗಳು ಹರ್ಷಿತರಾಗಿ ಪುಷ್ಪವೃಷ್ಟಿಗರೆದರು. ದೇವದುಂದುಭಿಗಳು ಮೊಳಗಿದವು. ಕಿನ್ನರರು ಗಾನ ಮಾಡತೊಡಗಿದರು. ವಿಮಾನಗಳಲ್ಲಿದ್ದ ಅಪ್ಸರೆಯರು ನಾಟ್ಯವಾಡತೊಡಗಿದರು. ಶ್ರೀಜಾನಕೀದೇವಿಯೊಡಗೂಡಿದ್ದ ಶ್ರೀರಾಮಚಂದ್ರನ ಅಪಾರ ಸೌಂದರ್ಯವನ್ನು ದರ್ಶಿಸಿ, ವಾನರ-ಭಲ್ಲೂಕಗಳು ಆನಂದತುಂದಿಲರಾಗಿ, ಸುಖನಿಧಿಯಾದ ಶ್ರೀರಘುರಾಮನಿಗೆ ಜಯ-ಜಯಕಾರ ಮಾಡಿದರು. (ದೋ/೧೦೯ ಕ, ಖ)

## ದೇವತೆಗಳ ಸ್ತುತಿ

**ಚೌ –** **ತಬ ರಘುಪತಿ ಅನುಸಾಸನ ಪಾಈ। ಮಾತಲಿ ಚಲೆಉ ಚರನ ಸಿರು ನಾಈ॥**
**ಆಏ ದೇವ ಸದಾ ಸ್ವಾರಥೀ। ಬಚನ ಕಹಹಿಂ ಜನು ಪರಮಾರಥೀ॥ ೧ ॥**
**ದೀನ ಬಂಧು ದಯಾಲ ರಘುರಾಯಾ। ದೇವ ಕೀನ್ಹಿ ದೇವನ್ಹ ಪರ ದಾಯಾ॥**
**ಬಿಸ್ವ ದ್ರೋಹ ರತ ಯಹ ಖಲ ಕಾಮೀ। ನಿಜ ಅಘ ಗಯಉ ಕುಮಾರಗಗಾಮೀ॥ ೨ ॥**
**ತುಮ್ಹ ಸಮರೂಪ ಬ್ರಹ್ಮ ಅಬಿನಾಸೀ। ಸದಾ ಏಕರಸ ಸಹಜ ಉದಾಸೀ॥**
**ಅಕಲ ಅಗುನ ಅಜ ಅನಘ ಅನಾಮಯ। ಅಜಿತ ಅಮೋಘಸಕ್ತಿ ಕರುನಾಮಯ॥ ೩ ॥**
**ಮೀನ ಕಮಠ ಸೂಕರ ನರಹರೀ। ಬಾಮನ ಪರಸುರಾಮ ಬಪು ಧರೀ॥**
**ಜಬ ಜಬ ನಾಥ ಸುರನ್ಹ ದುಖು ಪಾಯೋ। ನಾನಾ ತನು ಧರಿ ತುಮ್ಹಇಂ ನಸಾಯೋ॥ ೪ ॥**
**ಯಹ ಖಲ ಮಲಿನ ಸದಾ ಸುರದ್ರೋಹೀ। ಕಾಮ ಲೋಭ ಮದ ರತ ಅತಿ ಕೋಹೀ॥**
**ಅಧಮ ಸಿರೋಮನಿ ತವ ಪದ ಪಾವಾ। ಯಹ ಹಮರೇಂ ಮನ ಬಿಸಮಯ ಆವಾ॥ ೫ ॥**
**ಹಮ ದೇವತಾ ಪರಮ ಅಧಿಕಾರೀ। ಸ್ವಾರಥ ರತ ಪ್ರಭು ಭಗತಿ ಬಿಸಾರೀ॥**
**ಭವ ಪ್ರಬಾಹ್ ಸಂತತ ಹಮ ಪರೇ। ಅಬ ಪ್ರಭು ಪಾಹಿ ಸರನ ಅನುಸರೇ॥ ೬ ॥**

ಬಳಿಕ ಶ್ರೀರಾಮನ ಅನುಮತಿಯನ್ನು ಪಡೆದು ಇಂದ್ರನ ಸಾರಥಿ ಮಾತಲಿಯು ಪ್ರಭುಚರಣಗಳಿಗೆ ಪ್ರಣಾಮಗೈದು ರಥದೊಂದಿಗೆ ಸುರಪುರಕ್ಕೆ ತೆರಳಿದನು. ಅನಂತರ ಸ್ವಕಾರ್ಯಫಲನಿರತರಾದ ದೇವತೆಗಳು ಬಂದು, ತತ್ತ್ವಜ್ಞಾನಿಗಳಂತೆ ಸ್ತುತಿಸತೊಡಗಿದರು – ''ಓ ದೀನಬಂಧೂ! ಕೃಪಾಳು ರಘುನಾಥಾ! ಓ ಪರಮದೇವನೇ! ನೀನು ದೇವತೆಗಳ ಮೇಲೆ ಬಹಳವಾಗಿ ಕೃಪೆದೋರಿದೆ. ವಿಶ್ವದ್ರೋಹರತನೂ, ದುಷ್ಟನೂ, ಕಾಮುಕನೂ, ಕುಮಾರ್ಗಗಾಮಿಯೂ ಆದ ರಾವಣನು ತಾನು ಗೈದ ಪಾಪಗಳಿಂದಲೇ ನಾಶವಾಗಿ ಹೋದನು. ನೀನು ಸಮರೂಪಿಯೂ, ಪರಬ್ರಹ್ಮಸ್ವರೂಪನೂ, ಅವಿನಾಶಿಯೂ, ನಿತ್ಯನೂ, ಏಕರಸನೂ, ಶತ್ರುಮಿತ್ರಭಾವಗಳಿಂದ ಅತೀತನೂ, ಅಖಂಡಸ್ವರೂಪನೂ, ಗುಣಾತೀತನೂ, ಜನ್ಮರಹಿತನೂ, ಅನಘನೂ, ನಿರ್ವಿಕಾರನೂ, ಅಜೇಯನೂ, ಅಮೋಘಶಕ್ತಿಶಾಲಿಯೂ, ಕರುಣಾಮಯನೂ ಆಗಿರುವೆ. ನೀನು ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ ಮುಂತಾದ ಅವತಾರವೆತ್ತಿರುವೆ. ಪ್ರಭೋ! ದೇವತೆಗಳು ಸಂಕಟಕ್ಕೊಳಗಾದಾಗ ಅನೇಕ ಅವತಾರಗಳನ್ನೆತ್ತಿ ಅವರನ್ನು ರಕ್ಷಿಸಿದೆ. ಈ ದುಷ್ಟನು ಮಹಾಪಾಪಿಯೂ, ದೇವತೆಗಳ ನಿತ್ಯಶತ್ರುವೂ, ಕಾಮ, ಲೋಭ, ಮದನಿರತನೂ, ಅತಿಕ್ರೋಧಿಯೂ ಆದ ಇಂತಹ ಅಧಮಾಧಮನಿಗೂ ನೀನು ಪರಮಪದವನ್ನು ಕರುಣಿಸಿರುವೆ. ಇದು ಜಗದಾಶ್ಚರ್ಯಕರವು. ದೇವತೆಗಳಾದ ನಾವು ಪರಮಾಧಿಕಾರವುಳ್ಳವರಾಗಿದ್ದರೂ, ಸ್ವಾರ್ಥಪರಾಯಣರಾಗಿ ನಿನ್ನ ಭಕ್ತಿಯನ್ನು ಮರೆತು ನಿರಂತರವೂ ಭವಸಾಗರದ ಪ್ರವಾಹದಲ್ಲಿ ತೊಳಲಾಡುತ್ತಿದ್ದೇವೆ. ಪ್ರಭೋ! ಈಗ ನಾವು ನಿನಗೆ ಶರಣಾಗಿದ್ದೇವೆ. ನಮ್ಮನ್ನು ಕಾಪಾಡು.'' (ಚೌ/೧-೬)

**ದೋ – ಕರಿ ಬಿನತೀ ಸುರ ಸಿದ್ಧ ಸಬ ರಹೆ ಜಹ್ ತಹ್ ಕರ ಜೋರಿ।**
**ಅತಿ ಸಪ್ರೇಮ ತನ ಪುಲಕಿ ಬಿಧಿ ಅಸ್ತುತಿ ಕರತ ಬಹೋರಿ॥ ೧೧೦ ॥**

ಈ ವಿಧವಾಗಿ ಪ್ರಾರ್ಥಿಸಿ ದೇವತೆಗಳು, ಸಿದ್ಧರು ಕೈಜೋಡಿಸಿಕೊಂಡು ಅಲ್ಲಲ್ಲೇ ನಿಂತಿದ್ದರು. ಆಗ ಬ್ರಹ್ಮದೇವರು ಅತ್ಯಂತ ಪ್ರೇಮದಿಂದ ಪುಳಕಿತರಾಗಿ ಸ್ವಾಮಿಯನ್ನು ಸ್ತುತಿಸತೊಡಗಿದರು. (ದೋ/೧೧೦)

**ಛಂ –** **ಜಯ ರಾಮ ಸದಾ ಸುಖಧಾಮ ಹರೇ। ರಘುನಾಯಕ ಸಾಯಕ ಚಾಪ ಧರೇ॥**
**ಭವ ಬಾರನ ದಾರನ ಸಿಂಹ ಪ್ರಭೋ। ಗುನ ಸಾಗರ ನಾಗರ ನಾಥ ಬಿಭೋ॥ ೧ ॥**
**ತನ ಕಾಮ ಅನೇಕ ಅನೂಪ ಛಬೀ। ಗುನ ಗಾವತ ಸಿದ್ಧ ಮುನೀಂದ್ರ ಕಬೀ॥**
**ಜಸು ಪಾವನ ರಾವನ ನಾಗ ಮಹಾ। ಖಗನಾಥ ಜಥಾ ಕರಿ ಕೋಪ ಗಹಾ॥ ೨ ॥**

ಜನ ರಂಜನ ಭಂಜನ ಸೋಕ ಭಯಂ । ಗತಕ್ರೋಧ ಸದಾ ಪ್ರಭು ಬೋಧಮಯಂ॥
ಅವತಾರ ಉದಾರ ಅಪಾರ ಗುನಂ । ಮಹಿ ಭಾರ ಬಿಭಂಜನ ಗ್ಯಾನಘನಂ ॥ ೩ ॥
ಅಜ ಬ್ಯಾಪಕಮೇಕಮನಾದಿ ಸದಾ । ಕರುನಾಕರ ರಾಮ ನಮಾಮಿ ಮುದಾ ॥
ರಘುಬಂಸ ಬಿಭೂಷನ ದೂಷನ ಹಾ । ಕೃತ ಭೂಪ ಬಿಭೀಷನ ದೀನ ರಹಾ॥ ೪ ॥
ಗುನ ಗ್ಯಾನ ನಿಧಾನ ಅಮಾನ ಅಜಂ । ನಿತ ರಾಮ ನಮಾಮಿ ಬಿಭುಂ ಬಿರಜಂ ॥
ಭುಜದಂಡ ಪ್ರಚಂಡ ಪ್ರತಾಪ ಬಲಂ। ಖಲ ಬೃಂದ ನಿಕಂದ ಮಹಾ ಕುಸಲಂ ॥ ೫ ॥
ಬಿನು ಕಾರನ ದೀನ ದಯಾಲ ಹಿತಂ । ಛಬಿ ಧಾಮ ನಮಾಮಿ ರಮಾ ಸಹಿತಂ ॥
ಭವ ತಾರನ ಕಾರನ ಕಾಜ ಪರಂ । ಮನ ಸಂಭವ ದಾರುನ ದೋಷ ಹರಂ॥ ೬ ॥
ಸರ ಚಾಪ ಮನೋಹರ ತ್ರೋನ ಧರಂ । ಜಲಜಾರುನ ಲೋಚನ ಭೂಪಬರಂ ॥
ಸುಖ ಮಂದಿರ ಸುಂದರ ಶ್ರೀರಮನಂ। ಮದ ಮಾರ ಮುಧಾ ಮಮತಾ ಸಮನಂ ॥ ೭ ॥
ಅನವದ್ಯ ಅಖಂಡ ನ ಗೋಚರ ಗೋ । ಸಬರೂಪ ಸದಾ ಸಬ ಹೋಇ ನ ಸೋ ॥
ಇತಿ ಬೇದ ಬದಂತಿ ನ ದಂತಕಥಾ । ರಬಿ ಆತಪ ಭಿನ್ನ ಮಭಿನ್ನ ಜಥಾ॥ ೮ ॥
ಕೃತಕೃತ್ಯ ಬಿಭೋ ಸಬ ಬಾನರ ಏ । ನಿರಖಂತಿ ತವಾನನ ಸಾದರ ಏ ॥
ಧಿಗ ಜೀವನ ದೇವ ಸರೀರ ಹರೇ । ತವ ಭಕ್ತಿ ಬಿನಾ ಭವ ಭೂಲಿ ಪರೇ॥ ೯ ॥
ಅಬ ದೀನದಯಾಲ ದಯಾ ಕರಿಅ । ಮತಿ ಮೋರಿ ಬಿಭೇದಕರೀ ಹರಿಅ॥
ಜೆಹಿ ತೇ ಬಿಪರೀತ ಕ್ರಿಯಾ ಕರಿಅ । ದುಖ ಸೋ ಸುಖ ಮಾನಿ ಸುಖೀ ಚರಿಅ ॥ ೧೦ ॥
ಖಲ ಖಂಡನ ಮಂಡನ ರಮ್ಯ ಛಮಾ। ಪದ ಪಂಕಜ ಸೇವಿತ ಸಂಭು ಉಮಾ॥
ನೃಪ ನಾಯಕ ದೇ ಬರದಾನಮಿದಂ। ಚರನಾಂಬುಜ ಪ್ರೇಮ ಸದಾ ಸುಭದಂ॥ ೧೧ ॥

ಸದಾ ಸುಖಧಾಮಾ! ಶ್ರೀಹರೇ! ಧನುರ್ಬಾಣಧಾರೀ, ರಘುನಾಯಕಾ! ನಿನಗೆ ಜಯವಾಗಲೀ. ನೀನು ಜನನ-ಮರಣರೂಪೀ ಭವವಾರಣಕ್ಕೆ ಸಿಂಹನಂತಿರುವವನು. ಸ್ವಾಮಿ! ಸರ್ವವ್ಯಾಪಕಾ! ನೀನು ಸದ್ಗುಣಸಾಗರಾ, ಸರ್ವಸಮರ್ಥನಾಗಿರುವೆ. ನೀನು ಕೋಟಿಮನ್ಮಥ ಸುಂದರಾಕಾರನಾಗಿರುವೆ. ಸಿದ್ಧರೂ, ಮುನಿಗಳೂ, ಕವಿಗಳೂ ನಿನ್ನ ಗುಣಗಳನ್ನು ನಿರಂತರ ಗಾನಮಾಡುತ್ತಿರುವರು. ನಿನ್ನ ಯಶಸ್ಸು ಉಜ್ವಲವಾಗಿದೆ. ರಾವಣನೆಂಬ ಮಹಾಸರ್ಪವನ್ನು ಲೀಲಾಜಾಲವಾಗಿ ಗರುಡನಂತೆ ಕ್ರೋಧದಿಂದ ಸಂಹರಿಸಿದೆ. ಪ್ರಭೋ! ಸೇವಕರಿಗೆ ಆನಂದಪ್ರದಾಯಕನೂ, ಶೋಕಭಯನಾಶಕನೂ, ಕ್ರೋಧರಹಿತನೂ, ನಿತ್ಯಜ್ಞಾನಸ್ವರೂಪನೂ ಆಗಿರುವೆ. ನಿನ್ನ ಅವತಾರವು ಉದಾರವೂ, ಅಪಾರ ದಿವ್ಯಗುಣಗಳಿಂದ ಕೂಡಿದ್ದು, ಭೂಭಾರವನ್ನು ಇಳುಹಲೆಂದೇ ಆಗಿದೆ. ಜ್ಞಾನನಿಧಾನನೂ, ಅವತರಿಸಿದರೂ ನಿತ್ಯನೂ, ಜನ್ಮರಹಿತನೂ, ಸರ್ವವ್ಯಾಪಕನೂ, ಅದ್ವಿತೀಯನೂ, ಅನಾದಿಯೂ ಆಗಿರುವೆ. ಓ ಕರುಣಾಕರಾ! ಶ್ರೀರಾಮಾ! ನಾನು ತುಂಬಾ ಹರ್ಷದಿಂದ ನಿನಗೆ ನಮಿಸುತ್ತಿದ್ದೇನೆ. ರಘುವಂಶಭೂಷಣಾ! ದುಷ್ಟರಾಕ್ಷಸ ಸಂಹರಣಾ! ಸಮಸ್ತದೋಷಹಾರೀ! ದೀನನಾಗಿ ಶರಣುಬಂದ ವಿಭೀಷಣನನ್ನು ಲಂಕಾಧಿಪತಿಯಾಗಿಸಿದೆ. ಓ ಜ್ಞಾನಗುಣನಿಧಾನಾ! ನಿರಭಿಮಾನಿಯೇ! ಅಜನೇ! ಸರ್ವವ್ಯಾಪಿಯೇ! ನಿರ್ವಿಕಾರನೇ! ಶ್ರೀರಾಮಾ ನಿನಗೆ ವಂದನೆ. ನಿನ್ನ ಭುಜದಂಡ ಪ್ರತಾಪಬಲಗಳು ಪ್ರಚಂಡವಾದುವು. ಖಳವೃಂದವನ್ನು ನಿರ್ನಾಮ ಮಾಡುವುದರಲ್ಲಿ ನೀನು ನಿಸ್ಸೀಮನು. ದೀನರ ಮೇಲೆ ಅವ್ಯಾಜ ಕರುಣೆತೋರಿ ಅವರಿಗೆ ಶುಭ-ಮಂಗಳಗಳನ್ನು ಕರುಣಿಸುವವನು. ಓ ಶೋಭಾನಿಧಾನಾ! ಜಾನಕಿಸಹಿತನಾಗಿ ವಿರಾಜಿಸುತ್ತಿರುವ ನಿನಗೆ ನಮಸ್ಕಾರಗಳು. ನೀನು ಸಂಸಾರಸಾಗರದಿಂದ ಎಲ್ಲರನ್ನು ಉದ್ಧರಿಸುವವನು. ಕಾರಣ (ಮಾಯೆ) ಕಾರ್ಯ (ಜಗತ್ತು)ಗಳಿಂದ ಅತೀತನು. ಮನಸ್ಸಿನಲ್ಲಿ ಉತ್ಪನ್ನವಾಗುವ ದಾರುಣ ದೋಷಗಳನ್ನು ಪರಿಹರಿಸುವವನು. ಮಂಜುಳತೂಣೀರಧನುರ್ಬಾಣಧಾರಿಯೇ! ಜಲಜಾರುಣನೇತ್ರನೇ! ರಾಜಶಿರೋಮಣೀ! ಸುಖನಿಧಾನಾ! ಸುಂದರ ಶ್ರೀರಮಣಾ! ನೀನು ಮಿಥ್ಯಾಮಮತೆ, ಅಹಂಕಾರ, ಕಾಮನೆಗಳನ್ನು ನಾಶಮಾಡುವವನು. ನೀನು ಅನಿಂದ್ಯನೂ, ಅಖಂಡನೂ, ಇಂದ್ರಿಯಗಳಿಗೆ ಅಗೋಚರನಾಗಿರುವೆ. ಸದಾ ಸರ್ವರೂಪೀಯಾಗಿದ್ದರೂ ನೀನು ಎಂದೂ ಆ ರೀತಿ ಆಗಿರಲಿಲ್ಲವೆಂದು ವೇದಗಳು ಉಗ್ಗಡಿಸುತ್ತಿವೆ. ಇದು ಯಾವುದೇ ದಂತಕಥೆಯಲ್ಲ, ಒಣಕಲ್ಪನೆಯೂ ಅಲ್ಲ. ಸೂರ್ಯನೂ ಮತ್ತೆ ಅವನ ಪ್ರಕಾಶಭಿನ್ನವೂ ಹೌದು, ಅಭಿನ್ನವೂ ಹೌದು. ಅದೇ ಪ್ರಕಾರ

ನೀನು ಈ ಜಗತ್ತಿನಿಂದ ಭಿನ್ನನೂ ಹೌದು. ಅಭಿನ್ನನೂ ಹೌದು. ಓ ಸರ್ವವ್ಯಾಪಕ ಪ್ರಭೂ! ಆದರದಿಂದ ನಿನ್ನ ಮುಖಾವಲೋಕನ ಮಾಡುವ ಈ ವಾನರರು ಕೃತಾರ್ಥರು. ಶ್ರೀಹರೇ! ನಮ್ಮ ದಿವ್ಯದೇವ ಶರೀರಕ್ಕೆ ಧಿಕ್ಕಾರವಿರಲಿ. ಏಕೆಂದರೆ ನಾವು ಭಕ್ತಿರಹಿತರಾಗಿ ಸಾಂಸಾರಿಕ ವಿಷಯಗಳಲ್ಲಿ ಮಗ್ನರಾಗಿದ್ದೇವೆ. ಓ ದೀನಶರಣ್ಯಾ! ನನ್ನ ವಿಪರೀತ ಕ್ರಿಯೆಗಳನ್ನು ಆಚರಿಸುವ ವಿಭೇದಕಾರಿಯಾದ ಬುದ್ಧಿಯನ್ನು ದಯಮಾಡಿ ಪರಿಹರಿಸು. ದುಃಖವನ್ನೇ ಸುಖವೆಂದು ಭಾವಿಸಿ ಆನಂದದಲ್ಲಿ ಮುಳುಗೇಳುತ್ತಿರುವೆನು. ನೀನು ದುಷ್ಟಸಂಹಾರಕನು, ಪೃಥ್ವಿಗೆ ಮನೋಹರ ಅಲಂಕಾರಪ್ರಾಯನು. ನಿನ್ನ ಚರಣಕಮಲಗಳನ್ನು ಸರ್ವದಾ ಶಿವಪಾರ್ವತಿಯರು ಸೇವಿಸುತ್ತಿರುವರು. ಓ ರಾಜಾಧಿರಾಜಾ! ನಿನ್ನ ಪಾದಪದ್ಮಗಳನ್ನು ಸೇವಿಸುವಂತಹ ಅನನ್ಯ ಭಕ್ತಿಯನ್ನು ನನಗೆ ಕರುಣಿಸು. (ಛಂ/೧-೧೧)

**ದೋ – ಬಿನಯ ಕೀನ್ಹಿ ಚತುರಾನನ ಪ್ರೇಮ ಪುಲಕ ಅತಿ ಗಾತ।**
**ಸೋಭಾಸಿಂಧು ಬಿಲೋಕತ ಲೋಚನ ನಹೀಂ ಅಘಾತ ॥ ೧೧೧ ॥**

ಈ ಪ್ರಕಾರ ಅತ್ಯಂತ ಭಕ್ತಿಯಿಂದ, ಪುಲಕಿತಗಾತ್ರನಾಗಿ ಬ್ರಹ್ಮದೇವರು ಪ್ರಾರ್ಥಿಸಿದರು. ಅವರ ಕಣ್ಣುಗಳಿಂದ ಆನಂದಾಶ್ರುಗಳು ಹರಿದವು. ಶೋಭಾಸಿಂಧುವಾದ, ನಯನಾಭಿರಾಮನಾದ ಶ್ರೀರಾಮನ ಸೌಂದರ್ಯವನ್ನು ಎಷ್ಟು ನೋಡಿದರೂ ಅವರಿಗೆ ತೃಪ್ತಿಯಿಲ್ಲ. (ದೋ/೧೧೧)

**ಚೌ – ತೇಹಿ ಅವಸರ ದಸರಥ ತಹಂ ಆಏ। ತನಯ ಬಿಲೋಕಿ ನಯನ ಜಲ ಛಾಏ॥**
**ಅನುಜ ಸಹಿತ ಪ್ರಭು ಬಂದನ ಕೀನ್ಹಾ। ಆಸಿರಬಾದ ಪಿತಾਂ ತಬ ದೀನ್ಹಾ॥ ೧ ॥**
**ತಾತ ಸಕಲ ತವ ಪುನ್ಯ ಪ್ರಭಾಊ। ಜೀತ್ಯೋಂ ಅಜಯ ನಿಸಾಚರ ರಾಊ॥**
**ಸುನಿ ಸುತ ಬಚನ ಪ್ರೀತಿ ಅತಿ ಬಾಢೀ। ನಯನ ಸಲಿಲ ರೋಮಾವಲಿ ಠಾಢೀ ॥ ೨ ॥**
**ರಘುಪತಿ ಪ್ರಥಮ ಪ್ರೇಮ ಅನುಮಾನಾ। ಚಿತಇ ಪಿತಹಿ ದೀನ್ಹೇಉ ದೃಢ ಗ್ಯಾನಾ॥**
**ತಾತೇ ಉಮಾ ಮೋಚ್ಛ ನಹಿಂ ಪಾಯೋ। ದಸರಥ ಭೇದ ಭಗತಿ ಮನ ಲಾಯೋ॥ ೩ ॥**
**ಸಗುನೋಪಾಸಕ ಮೋಚ್ಛ ನ ಲೇಹೀಂ। ತಿನ್ಹ ಕಹುಂ ರಾಮ ಭಗತಿ ನಿಜ ದೇಹೀಂ॥**
**ಬಾರ ಬಾರ ಕರಿ ಪ್ರಭುಹಿ ಪ್ರನಾಮಾ। ದಸರಥ ಹರಷಿ ಗಏ ಸುರಧಾಮಾ॥ ೪ ॥**

ಅದೇ ವೇಳೆಗೆ ದಶರಥಮಹಾರಾಜರು ಸ್ವರ್ಗದಿಂದ ಅಲ್ಲಿಗೆ ಬಂದರು. ಪುತ್ರರನ್ನು ನೋಡುತ್ತಲೇ ಅವರ ಕಣ್ಣುಗಳಿಂದ ಪ್ರೇಮಾಶ್ರುಗಳು ಹರಿದವು. ರಾಮ-ಲಕ್ಷ್ಮಣರಿಬ್ಬರೂ ತಂದೆಗೆ ವಂದಿಸಿಕೊಂಡರು.

ದಶರಥನು ಅವರನ್ನು ಆಶೀರ್ವದಿಸಿದನು. ಆಗ ಶ್ರೀರಾಮನು ಹೇಳಿದನು – 'ತಂದೆಯೇ! ನಿನ್ನ ಪುಣ್ಯ ಪ್ರಭಾವದಿಂದಲೇ ನಾನು ಅಜೇಯನಾದ ರಾವಣನನ್ನು ಗೆಲ್ಲಲು ಸಾಧ್ಯವಾಯಿತು.' ಪುತ್ರನ ವಚನಗಳನ್ನು ಕೇಳಿ ಅವನ ಪ್ರೇಮ ಇಮ್ಮಡಿಸಿತು; ಕಣ್ಣುಗಳು ತುಂಬಿಬಂದವು. ಶರೀರ ರೋಮಾಂಚನವಾಯಿತು. ದಶರಥನು ಜೀವಿಸಿರುವಾಗ ತೋರುತ್ತಿದ್ದ ಪ್ರೇಮವನ್ನು ನೆನೆದು ಶ್ರೀರಾಮಚಂದ್ರನು ಅವನಿಗೆ ತನ್ನ ಸ್ವರೂಪಜ್ಞಾನವನ್ನು ಕರುಣಿಸಿದನು. ಶಿವನು ಹೇಳುತ್ತಾನೆ – ಉಮೆ! ದಶರಥನು ಭೇದಭಕ್ತಿಯಿಂದ ಮನಸ್ಸನ್ನು ಲೀನಗೊಳಿಸಿದ್ದ. ಆದ್ದರಿಂದ ಅವನಿಗೆ ಕೈವಲ್ಯ ಪ್ರಾಪ್ತವಾಗಲಿಲ್ಲ. ಮಾಯಾರಹಿತನೂ, ಸಚ್ಚಿದಾನಂದಸ್ವರೂಪನೂ, ದಿವ್ಯಗುಣಯುಕ್ತನೂ ಆದ ಸಗುಣರೂಪದ ಉಪಾಸನೆ ಮಾಡುವ ಇಂತಹ ಭಕ್ತರು ಮೋಕ್ಷವನ್ನು ಬಯಸುವುದೂ ಇಲ್ಲ. ಅಂತಹವರಿಗೆ ಪ್ರಭುವು ತನ್ನ ಭಕ್ತಿಯನ್ನು ದಯಪಾಲಿಸುವನು. ಪ್ರಭುವಿಗೆ ಪದೇ-ಪದೇ ನಮಸ್ಕರಿಸಿ, ದಶರಥನು ಹರ್ಷಿತನಾಗಿ ದೇವಲೋಕಕ್ಕೈದಿದನು. (ಚೌ/೧-೪)

**ದೋ – ಅನುಜ ಜಾನಕೀ ಸಹಿತ ಪ್ರಭು ಕುಸಲ ಕೋಸಲಾಧೀಸ ।**
**ಸೋಭಾ ದೇಖಿ ಹರಷಿ ಮನ ಅಸ್ತುತಿ ಕರ ಸುರ ಈಸ ॥ ೧೧೨ ॥**

ಸೀತಾಲಕ್ಷ್ಮಣಸಮೇತನಾದ ಕೋಸಲಾಧೀಶನ ಪರಮಶೋಭೆಯನ್ನು ಕಂಡು ದೇವೇಂದ್ರನು ಹರ್ಷಾತಿರೇಕದಿಂದ ಸ್ತುತಿಸತೊಡಗಿದನು. (ದೋ/೧೧೨)

## ಇಂದ್ರಸ್ತುತಿ

**ಛಂ – ಜಯ ರಾಮ ಸೋಭಾ ಧಾಮ। ದಾಯಕ ಪ್ರನತ ಬಿಸ್ರಾಮ ॥**
**ಧೃತ ತ್ರೋನ ಬರ ಸರ ಚಾಪ। ಭುಜದಂಡ ಪ್ರಬಲ ಪ್ರತಾಪ॥ ೧ ॥**

ಜಯ ದೂಷನಾರಿ ಖರಾರಿ। ಮರ್ದನ ನಿಸಾಚರ ಧಾರಿ॥
ಯಹ ದುಷ್ಟ ಮಾರೆಉ ನಾಥ। ಭಏ ದೇವ ಸಕಲ ಸನಾಥ॥ ೨॥
ಜಯ ಹರನ ಧರನೀ ಭಾರ। ಮಹಿಮಾ ಉದಾರ ಅಪಾರ॥
ಜಯ ರಾವನಾರಿ ಕೃಪಾಲ। ಕಿಏ ಜಾತುಧಾನ ಬಿಹಾಲ॥ ೩॥
ಲಂಕೇಸ ಅತಿ ಬಲ ಗರ್ಬ। ಕಿಏ ಬಸ್ಯ ಸುರ ಗಂಧರ್ಬ॥
ಮುನಿ ಸಿದ್ಧ ನರ ಖಗ ನಾಗ। ಹಠಿ ಪಂಥ ಸಬ ಕೇಁ ಲಾಗ॥ ೪॥
ಪರದ್ರೋಹ ರತ ಅತಿ ದುಷ್ಟ। ಪಾಯೋ ಸೊ ಫಲು ಪಾಪಿಷ್ಟ॥
ಅಬ ಸುನಹು ದೀನ ದಯಾಲ। ರಾಜೀವ ನಯನ ಬಿಸಾಲ॥ ೫॥
ಮೊಹಿ ರಹಾ ಅತಿ ಅಭಿಮಾನ। ನಹಿಂ ಕೋಉ ಮೋಹಿ ಸಮಾನ॥
ಅಬ ದೇಖಿ ಪ್ರಭು ಪದ ಕಂಜ। ಗತ ಮಾನ ಪ್ರದ ದುಖ ಪುಂಜ॥ ೬॥
ಕೊಉ ಬ್ರಹ್ಮ ನಿರ್ಗುನ ಧ್ಯಾವ। ಅಬ್ಯಕ್ತ ಜೆಹಿ ಶ್ರುತಿ ಗಾವ॥
ಮೊಹಿ ಭಾವ ಕೋಸಲ ಭೂಪ। ಶ್ರೀರಾಮ ಸಗುನ ಸರೂಪ॥ ೭॥
ಬೈದೇಹಿ ಅನುಜ ಸಮೇತ। ಮಮ ಹೃದಯಁ ಕರಹು ನಿಕೇತ॥
ಮೊಹಿ ಜಾನಿಏ ನಿಜ ದಾಸ। ದೇ ಭಕ್ತಿ ರಮಾನಿವಾಸ॥ ೮॥

ಓ ಶೋಭಾನಿಧೀ! ಶರಣಾಗತವತ್ಸಲಾ! ಶ್ರೇಷ್ಠತೂಣೀರಧನುರ್ಬಾಣಧಾರೀ! ಪ್ರಬಲ ಪ್ರತಾಪ ಶೋಭಿತ ಭುಜಬಲಶಾಲೀ! ಶ್ರೀರಾಮಚಂದ್ರಾ! ನಿನಗೆ ಜಯವಾಗಲಿ. ಖರ-ದೂಷಣಾದಿ ರಾಕ್ಷಸರನ್ನು ಜಯಿಸಿದವನೇ! ನಿನಗೆ ಜಯವಾಗಲೀ. ಪ್ರಭೂ! ರಾಕ್ಷಸರಾಜನಾದ ರಾವಣನನ್ನು ವಧಿಸಿ, ದೇವತೆಗಳನ್ನು ರಕ್ಷಿಸಿದೆ. ಭೂಭಾರವನ್ನು ಹರಿಸಿದವನೇ! ಅಪಾರ ಮಹಿಮಾನ್ವಿತನೇ! ನಿನಗೆ ಜಯವಾಗಲಿ. ಹೇ ರಾವಣಾರೀ! ಕೃಪಾಳೂ! ನೀನು ರಾಕ್ಷಸರೆಲ್ಲರನ್ನು ಮಣ್ಣುಗೂಡಿಸಿದೆ. ನಿನಗೆ ಜಯವಾಗಲಿ. ಅತಿಮದೋನ್ಮತ್ತನಾದ ಲಂಕೇಶನು ದೇವತೆಗಳನ್ನು, ಗಂಧರ್ವರನ್ನು, ತನ್ನ ಅಧೀನವಾಗಿಸಿಕೊಂಡಿದ್ದನು. ಮುನಿಗಳು, ಸಿದ್ಧರು, ಮನುಷ್ಯರು, ಪಕ್ಷಿಗಳು, ನಾಗರು ಹೀಗೆ ಎಲ್ಲರ ಬೆನ್ನು ಬಿದ್ದಿದ್ದನು. ಅತ್ಯಂತ ದುಷ್ಟನಾದ ಅವನು ಇತರರಿಗೆಲ್ಲ ದ್ರೋಹಬಗೆಯಲು ನಿರತನಾಗಿದ್ದನು. ಅವನು ಆ ಪಾಪದ ಫಲವನ್ನು ಅನುಭವಿಸಿದನು. ಓ ದೀನದಯಾಳಾ! ವಿಶಾಲವಾದ ಕಮಲನಯನಾ! ನನಗೆ ಸಮಾನ ಬಲಸಂಪನ್ನನು ಯಾರೂ ಇಲ್ಲವೆಂದು ನಾನು ಬಹಳ ಗರ್ವಿತನಾಗಿದ್ದೆ. ನಿನ್ನ ಪಾದಪದ್ಮ ದರ್ಶನದಿಂದ ಆ ಗರ್ವವು ತೊಲಗಿ ಹೋಯಿತು. ವೇದಗಳು 'ಅವ್ಯಕ್ತ'ವೆಂದು ಹೇಳುವ ನಿರ್ಗುಣ ಪರಬ್ರಹ್ಮವನ್ನು ಕೆಲವರು ಉಪಾಸಿಸುವರು. ಆದರೆ ಶ್ರೀರಾಮಾ! ನನಗೆ ಮಾತ್ರ ನಿನ್ನ ಸಗುಣಸ್ವರೂಪನಾದ ಕೋಸಲಾಧೀಶ ಶ್ರೀರಾಮರೂಪವೇ ಪ್ರಿಯವಾಗಿದೆ. ಶ್ರೀಜಾನಕಿದೇವಿಯೊಂದಿಗೆ, ಲಕ್ಷ್ಮಣಸ್ವಾಮಿಯಿಂದೊಡಗೂಡಿ ನೀನು ನನ್ನ ಹೃದಯದಲ್ಲಿ ಸದಾ ವಾಸಮಾಡು. ಓ ರಮಾನಿವಾಸಾ! ನನ್ನನ್ನು ನಿನ್ನ ದಾಸನನ್ನಾಗಿಸಿ, ನಿನ್ನ ಭಕ್ತಿಯನ್ನು ಕರುಣಿಸು. (ಛಂ/೧-೮)

ಛಂ– ದೇ ಭಕ್ತಿ ರಮಾನಿವಾಸ ತ್ರಾಸ ಹರನ ಸರನ ಸುಖದಾಯಕಂ।
ಸುಖ ಧಾಮ ರಾಮ ನಮಾಮಿ ಕಾಮ ಅನೇಕ ಛಬಿ ರಘುನಾಯಕಂ॥
ಸುರ ಬೃಂದ ರಂಜನ ದ್ವಂದ ಭಂಜನ ಮನುಜ ತನು ಅತುಲಿತಬಲಂ।
ಬ್ರಹ್ಮಾದಿ ಸಂಕರ ಸೇಬ್ಯ ರಾಮ ನಮಾಮಿ ಕರುನಾ ಕೋಮಲಂ॥

ಓ ರಮಾಪತೀ! ಶರಣಾಗತರ ಭಯವನ್ನು ತೊಲಗಿಸಿ, ಅವರಿಗೆ ಸುಖವನ್ನು ದಯಪಾಲಿಸುವವನೇ! ನಿನ್ನ ಭಕ್ತಿಯನ್ನು ಅನುಗ್ರಹಿಸು. ಓ ಸುಖನಿಧಾನಾ! ಕೋಟಿಮನ್ಮಥಸುಂದರಾ! ರಘುಕುಲಶಿರೋಮಣೀ ರಾಮಚಂದ್ರಾ! ನಿನಗೆ ನಮಸ್ಕಾರಗಳು. ದೇವತೆಗಳಿಗೆ ಆನಂದವನ್ನೀಯುವವನೇ! ಜನ್ಮ-ಮೃತ್ಯು, ಸುಖ-ದುಃಖ, ಹರ್ಷ-ವಿಷಾದ ಮುಂತಾದ ದ್ವಂದ್ವಗಳನ್ನು ಇಲ್ಲವಾಗಿಸುವವನೇ! ಮಾಯಾ ಮಾನುಷವಿಗ್ರಹಾ! ಅತುಲಿತ ಬಲಶಾಲಿಯೇ! ಬ್ರಹ್ಮರುದ್ರಾದಿಗಳಿಂದ ಸೇವಿತನೇ! ಕರುಣಾಮೂರ್ತಿಯೇ! ಕೋಮಲ ಸ್ವಭಾವದವನೇ! ಶ್ರೀರಾಮಾ! ನಿನಗೆ ನಾನು ನಮಸ್ಕರಿಸುತ್ತಿದ್ದೇನೆ. (ಛಂದ)

**ದೋ – ಅಬ ಕರಿ ಕೃಪಾ ಬಿಲೋಕಿ ಮೊಹಿ ಆಯಸು ದೇಹು ಕೃಪಾಲ।**
**ಕಾಹ ಕರೌಂ ಸನಿ ಪ್ರಿಯ ಬಚನ ಬೋಲೇ ದೀನದಯಾಲ॥ ೧೧೩ ॥**

ಓ ಕೃಪಾಳುವೇ! ನನ್ನ ಮೇಲೆ ನೀನು ಕೃಪಾದೃಷ್ಟಿಯನ್ನು ಬೀರಿ, ನಾನು ಏನನ್ನು ಮಾಡಬೇಕೆಂದು ಅಪ್ಪಣೆಯಾಗಲೀ, ಇಂದ್ರನ ಪ್ರಿಯವಚನವನ್ನು ಕೇಳಿ, ದೀನದಯಾಳುವಾದ ಪ್ರಭುವು ಇಂತೆಂದನು – (ದೋ/೧೧೩)

**ಚೌ – ಸುನು ಸುರಪತಿ ಕಪಿ ಭಾಲು ಹಮಾರೇ। ಪರೇ ಭೂಮಿ ನಿಸಿಚರನ್ಹಿ ಜೆ ಮಾರೇ॥**
**ಮಮ ಹಿತ ಲಾಗಿ ತಜೇ ಇನ್ಹ ಪ್ರಾನಾ। ಸಕಲ ಜಿಆಉ ಸುರೇಸ ಸುಜಾನಾ॥ ೧ ॥**
**ಸುನು ಖಗೇಸ ಪ್ರಭು ಕೈ ಯಹ ಬಾನೀ। ಅತಿ ಅಗಾಧ ಜಾನಹಿಂ ಮುನಿ ಗ್ಯಾನೀ॥**
**ಪ್ರಭು ಸಕ ತ್ರಿಭುಅನ ಮಾರಿ ಜಿಆಈ। ಕೇವಲ ಸಕ್ರಹಿ ದೀನ್ಹಿ ಬಡಾಈ॥ ೨ ॥**
**ಸುಧಾ ಬರಷಿ ಕಪಿ ಭಾಲು ಜಿಆಏ। ಹರಷಿ ಉಠೇ ಸಬ ಪ್ರಭು ಪಹಿಂ ಆಏ॥**
**ಸುಧಾಬೃಷ್ಟಿ ಭೈ ದುಹು ದಲ ಊಪರ। ಜಿಏ ಭಾಲು ಕಪಿ ನಹಿಂ ರಜನೀಚರ॥ ೩ ॥**
**ರಾಮಾಕಾರ ಭಏ ತಿನ್ಹ ಕೇ ಮನ। ಮುಕ್ತ ಭಏ ಛೂಟೇ ಭವ ಬಂಧನ॥**
**ಸುರ ಅಂಸಿಕ ಸಬ ಕಪಿ ಅರು ರೀಛಾ। ಜಿಏ ಸಕಲ ರಘುಪತಿ ಕೀಂ ಈಛಾ॥ ೪ ॥**
**ರಾಮ ಸರಿಸ ಕೊ ದೀನ ಹಿತಕಾರೀ। ಕೀನ್ಹೇ ಮುಕುತ ನಿಸಾಚರ ಝಾರೀ॥**
**ಖಲ ಮಲ ಧಾಮ ಕಾಮ ರತ ರಾವನ। ಗತಿ ಪಾಈ ಜೋ ಮುನಿಬರ ಪಾವ ನ॥ ೫ ॥**

ದೇವೇಂದ್ರಾ! ಕೇಳು. ನಮ್ಮ ವಾನರ-ಭಲ್ಲೂಕಗಳನ್ನು ರಾಕ್ಷಸರು ಯುದ್ಧರಂಗದಲ್ಲಿ ನಾಶಮಾಡಿದ್ದಾರೆ. ಅವರೆಲ್ಲ ಗತಪ್ರಾಣರಾಗಿ ಧರಾಶಾಯಿಗಳಾಗಿದ್ದಾರೆ. ಇವರೆಲ್ಲ ನನಗಾಗಿ ತಮ್ಮ ಪ್ರಾಣಗಳನ್ನು ತೆತ್ತಿದ್ದಾರೆ. ಅಯ್ಯಾ ಜ್ಞಾನಿಯಾದ ಇಂದ್ರನೇ! ನೀನು ಅವರೆಲ್ಲರನ್ನೂ ಬದುಕಿಸಿಬಿಡು. ಕಾಕಭುಶುಂಡಿ ಹೇಳುತ್ತಾರೆ. ಎಲೈ ಗರುಡನೇ! ಕೇಳು. ಪ್ರಭುವಿನ ಈ ವಚನಗಳು ಅತ್ಯಂತ ಗಹನವಾದುದು. ಅಗಾಧವಾದುದು. ಜ್ಞಾನೀ ಮುನಿಗಳು ಮಾತ್ರ ಅದರ ಅರ್ಥವನ್ನು ಬಲ್ಲರು. ಪ್ರಭುಶ್ರೀರಾಮಚಂದ್ರನು ಬೇಕಾದರೆ ತ್ರಿಲೋಕವನ್ನು ಸಂಹರಿಸಿ, ಬದುಕಿಸಬಲ್ಲನು. ಆದರೆ ಇಲ್ಲಿ ಅವನು ಇಂದ್ರನಿಗೆ ಹಿರಿತನ ನೀಡಲೆಂದೇ ಹೀಗೆ ಮಾಡಿರುವನು. ಅನಂತರ ಇಂದ್ರನು ಅಮೃತವರ್ಷಣಗೈದು, ವಾನರ-ಭಲ್ಲೂಕರನ್ನು ಬದುಕಿಸಿದನು. ಬದುಕಿ ಬಂದ ಅವರೆಲ್ಲರೂ ಪ್ರಭುವಿನ ಬಳಿಗೆ ತೆರಳಿದರು. ಅಮೃತದ ಮಳೆ ಏನೋ ಉಭಯಪಕ್ಷದ ದಳಗಳ ಮೇಲೆಯೂ ಸುರಿದಿತ್ತು. ಆದರೆ ವಾನರ-ಭಲ್ಲೂಕಗಳು ಮಾತ್ರ ಬದುಕಿದವು. ರಾಕ್ಷಸರು ಪುನರುಜ್ಜೀವನ ಪಡೆಯಲಿಲ್ಲ. ಏಕೆಂದರೆ, ಸಾಯುವಾಗ ರಾಕ್ಷಸರೆಲ್ಲರ ಮನಸ್ಸು ರಾಮಾಕಾರವಾಗಿತ್ತು. ಅದರಿಂದ ಅವರು ಭವಬಂದನದಿಂದ ಮುಕ್ತರಾದರು. ಆದರೆ ವಾನರ-ಭಲ್ಲೂಕಗಳು ದೈವಾಂಶಸಂಭೂತರು. ಆದ್ದರಿಂದ ಶ್ರೀರಘುಪತಿಯ ಇಚ್ಛೆಯಂತೆ ಜೀವಿತರಾದರು. ರಾಕ್ಷಸರೆಲ್ಲರಿಗೂ ಮುಕ್ತಿಯನ್ನು ಕರುಣಿಸಿದ ಶ್ರೀರಾಮಚಂದ್ರನಂತಹ ದೀನಜನ ಸಂರಕ್ಷಕರು ಬೇರಾರಿದ್ದಾರೆ? ದುಷ್ಟನೂ, ಮಹಾಪಾಪಿಯೂ, ಕಾಮುಕನೂ ಆದ ರಾವಣನೂ ಕೂಡ ಶ್ರೀರಾಮಾನುಗ್ರಹದಿಂದ ಮುನೀಶ್ವರರಿಗೂ ದೊರೆಯದ ಸದ್ಗತಿಯನ್ನು ಪಡೆದನು. (ಚೌ/೧-೫)

**ದೋ – ಸುಮನ ಬರಷಿ ಸಬ ಸುರ ಚಲೇ ಚಢ಼ಿ ಚಢ಼ಿ ರುಚಿರ ಬಿಮಾನ।**
**ದೇಖಿ ಸುಅವಸರ ಪ್ರಭು ಪಹಿಂ ಆಯಉ ಸಂಭು ಸುಜಾನ॥ ೧೧೪(ಕ)॥**
**ಪರಮ ಪ್ರೀತಿ ಕರ ಜೋರಿ ಜುಗ ನಲಿನ ನಯನ ಭರಿ ಬಾರಿ॥**
**ಪುಲಕಿತ ತನ ಗದಗದ ಗಿರಾಂ ಬಿನಯ ಕರತ ತ್ರಿಪುರಾರಿ॥ ೧೧೪(ಖ)॥**

ದೇವತೆಗಳು ಪುಷ್ಪವೃಷ್ಟಿಗೈದು ಎಲ್ಲ ದೇವತೆಗಳು ತಮ್ಮ-ತಮ್ಮ ವಿಮಾನಗಳನ್ನೇರಿ ಹೊರಟುಹೋದರು. ಇದೇ ಸರಿಯಾದ ಸಮಯವೆಂದರಿತ ವಿಜ್ಞಾನಿಯಾದ ಶಿವನು ಶ್ರೀರಾಮನ ಬಳಿಗೆ ಆಗಮಿಸಿದನು. ಅತ್ಯಂತ ಭಕ್ತಿಯಿಂದ ಕೈಜೋಡಿಸಿಕೊಂಡು, ನೇತ್ರಕಮಲಗಳಿಂದ ಆನಂದಾಶ್ರುಗಳನ್ನು ಸುರಿಸುತ್ತಾ, ಪುಳಕಿತಗಾತ್ರನಾಗಿ, ಗದ್ಗದಕಂಠದಿಂದ ತ್ರಿಪುರಾರಿಯಾದ ಶಿವನು ಶ್ರೀರಾಮನಲ್ಲಿ ಬಿನ್ನವಿಸಿಕೊಂಡನು. (ದೋ/೧೧೪ ಕ, ಖ)

**ಛಂ – ಮಾಮಭಿರಕ್ಷಯ ರಘುಕುಲ ನಾಯಕ। ಧೃತ ಬರ ಚಾಪ ರುಚಿರ ಕರ ಸಾಯಕ॥**
**ಮೋಹ ಮಹಾ ಘನ ಪಟಲ ಪ್ರಭಂಜನ। ಸಂಸಯ ಬಿಪಿನ ಅನಲ ಸುರ ರಂಜನ॥ ೧ ॥**
**ಅಗುನ ಸಗುನ ಗುನ ಮಂದಿರ ಸುಂದರ। ಭ್ರಮ ತಮ ಪ್ರಬಲ ಪ್ರತಾಪ ದಿವಾಕರ॥**
**ಕಾಮ ಕ್ರೋಧ ಮದ ಗಜ ಪಂಚಾನನ। ಬಸಹು ನಿರಂತರ ಜನ ಮನ ಕಾನನ॥ ೨ ॥**

**ಬಿಷಯ ಮನೋರಥ ಪುಂಜ ಕಂಜ ಬನ। ಪ್ರಬಲ ತುಷಾರ ಉದಾರ ಪಾರ ಮನ॥**
**ಭವ ಬಾರಿಧಿ ಮಂದರ ಪರಮಂ ದರ। ಬಾರಯ ತಾರಯ ಸಂಸೃತಿ ದುಸ್ತರ ॥ ೩ ॥**
**ಸ್ಯಾಮ ಗಾತ ರಾಜೀವ ಬಿಲೋಚನ। ದೀನ ಬಂಧು ಪ್ರನತಾರತಿ ಮೋಚನ॥**
**ಅನುಜ ಜಾನಕೀ ಸಹಿತ ನಿರಂತರ। ಬಸಹು ರಾಮ ನೃಪ ಮಮ ಉರ ಅಂತರ ॥ ೪ ॥**
**ಮುನಿ ರಂಜನ ಮಹಿ ಮಂಡಲ ಮಂಡನ। ತುಲಸಿದಾಸ ಪ್ರಭು ತ್ರಾಸ ಬಿಖಂಡನ॥ ೫ ॥**

ಓ ರಘುವಂಶಶಿರೋಮಣೀ! ನೀನು ದಿವ್ಯಹಸ್ತಂಗಳಲ್ಲಿ ಧನುರ್ಬಾಣಗಳನ್ನು ಧರಿಸಿ ನನ್ನನ್ನು ರಕ್ಷಿಸು. ಮೋಹವೆಂಬ ಮೇಘಸಮೂಹಕ್ಕೆ ನೀನು ಪ್ರಭಂಜನ ಸ್ವರೂಪನು. ಸಂಶಯವೆಂಬ ವನಕ್ಕೆ ದಾವಾನಲವು. ದೇವತೆಗಳಿಗೆ ಆನಂದವನ್ನೀಯುವವನು,. ನೀನು ನಿರ್ಗುಣನೂ, ಸಗುಣನೂ, ದಿವ್ಯಗುಣ ಸಂಪನ್ನನೂ, ಪರಮ ಸುಂದರನಾಗಿರುವಿ. ಭ್ರಮೆಯೆಂಬ ಘೋರ ಅಂಧಕಾರಕ್ಕೆ ಪ್ರಚಂಡ ಭಾಸ್ಕರಸದೃಶನು. ಕಾಮ, ಕ್ರೋಧ, ಮದಗಳೆಂಬ ಮತ್ತಗಜಗಳನ್ನು ಸಂಹರಿಸುವ ಸಿಂಹಸಮಾನನು. ಈ ಸೇವಕನ ಮನೋವನದಲ್ಲಿ ನಿರಂತರ ನೆಲೆಸು. ವಿಷಯವಾಸನಾಸಮೂಹವೆಂಬ ಕಮಲವನಕ್ಕೆ ನೀನು ಮಂಜಿನಂತಿರುವವನು. ಉದಾರಿಯೂ, ಮನಸ್ಸಿಗೆ ಅಗೋಚರನೂ, ಆಗಿರುವೆ. ಭವಸಾಗರವನ್ನು ಮಥಿಸಲು ನೀನು ಮಂದರಾಚಲಸದೃಶನು. ನನ್ನ ಭಯವನ್ನು ತೊಲಗಿಸಿ, ದುಸ್ತರ ಸಂಸಾರಸಾಗರವನ್ನು ದಾಟಿಸಿ ಬಿಡು. ಓ ಶ್ಯಾಮಸುಂದರಾ! ಕಮಲದಳ ವಿಶಾಲನೇತ್ರಾ! ದೀನಬಂಧೋ! ಪ್ರಣತಾರ್ತಿಹರಾ! ಶ್ರೀರಾಮಚಂದ್ರಾ! ಸಹೋದರನಾದ ಲಕ್ಷ್ಮಣನೊಡನೆ, ಜಾನಕಿದೇವಿಯೊಂದಿಗೆ ನನ್ನ ಹೃದಯದಲ್ಲಿ ವಾಸಿಸು. ನೀನು ಮುನೀಶ್ವರರಿಗೆ ಆನಂದದಾಯಕನು. ಪೃಥ್ವಿಗೆ ಅಲಂಕಾರಪ್ರಾಯನು. ತುಲಸೀದಾಸನಿಗೆ ಪ್ರಭುವಾದ ನೀನು ಭಯನಿವಾರಕನು. (ಛಂ/೧-೫)

**ದೋ – ನಾಥ ಜಬಹಿಂ ಕೋಸಲಪುರೀಂ ಹೋಇಹಿ ತಿಲಕ ತುಮ್ಹಾರ।**
**ಕೃಪಾಸಿಂಧು ಮೈಂ ಆಉಬ ದೇಖನ ಚರಿತ ಉದಾರ॥ ೧೧೫ ॥**

ಓ ಕೃಪಾಸಿಂಧು ಪ್ರಭುವೇ! ಅಯೋಧ್ಯೆಯಲ್ಲಿ ನಿನ್ನ ಪಟ್ಟಾಭಿಷೇಕವಾದಾಗ, ನಾನು ಅಲ್ಲಿಗೆ ಬಂದು ನಿನ್ನ ಮನೋಹರ ಲೀಲಾವಿಲಾಸವನ್ನು ದರ್ಶಿಸುವೆನು. (ದೋ/೧೧೫)

**ಚೌ – ಕರಿ ಬಿನತೀ ಜಬ ಸಂಭು ಸಿಧಾಏ। ತಬ ಪ್ರಭು ನಿಕಟ ಬಿಭೀಷನು ಆಏ॥**
**ನಾಇ ಚರನ ಸಿರು ಕಹ ಮೃದು ಬಾನೀ। ಬಿನಯ ಸುನಹು ಪ್ರಭು ಸಾರಂಗಪಾನೀ॥ ೧ ॥**
**ಸಕುಲ ಸದಲ ಪ್ರಭು ರಾವನ ಮಾರ್ಯೋ। ಪಾವನ ಜಸ ತ್ರಿಭುವನ ಬಿಸ್ತಾರ್ಯೋ ॥**
**ದೀನ ಮಲೀನ ಹೀನ ಮತಿ ಜಾತೀ। ಮೋ ಪರ ಕೃಪಾ ಕೀನ್ಹಿ ಬಹು ಭಾಂತೀ॥ ೨ ॥**
**ಅಬ ಜನ ಗೃಹ ಪುನೀತ ಪ್ರಭು ಕೀಜೇ। ಮಜ್ಜನು ಕರಿಅ ಸಮರ ಶ್ರಮ ಛೀಜೇ॥**
**ದೇಖಿ ಕೋಸ ಮಂದಿರ ಸಂಪದಾ। ದೇಹು ಕೃಪಾಲ ಕಪಿನ್ಹ ಕಹುಂ ಮುದಾ ॥ ೩ ॥**
**ಸಬ ಬಿಧಿ ನಾಥ ಮೋಹಿ ಅಪನಾಇಅ। ಪುನಿ ಮೊಹಿ ಸಹಿತ ಅವಧಪುರ ಜಾಇಅ॥**
**ಸುನತ ಬಚನ ಮೃದು ದೀನದಯಾಲಾ। ಸಜಲ ಭಏ ದ್ವೌ ನಯನ ಬಿಸಾಲಾ ॥ ೪ ॥**

ಹೀಗೆ ಪ್ರಾರ್ಥಿಸಿ ಪರಶಿವನು ಕೈಲಾಸಕ್ಕೆ ಹೊರಟುಹೋದನು. ಆಗ ವಿಭೀಷಣನು ಪ್ರಭುವಿನ ಬಳಿಗೆ ಬಂದು, ಪಾದಗಳಿಗೆ ವಂದಿಸಿಕೊಂಡು, ಇಂತು ಮಧುರವಚನಗಳನ್ನು ಹೇಳಿದನು– ''ಓ ಶಾರ್ಙ್ಗಧರಾ! ನನ್ನ ಬಿನ್ನಪವನ್ನು ಆಲಿಸು. ನೀನು ರಾವಣನನ್ನು, ಅವನ ಸೇನೆ, ಪರಿವಾರವನ್ನೆಲ್ಲ ಸಂಹರಿಸಿದೆ. ನಿನ್ನ ವಿಮಲ ಕೀರ್ತಿ ಮೂರ್ಲೋಕಗಳಲ್ಲಿಯೂ ಪಸರಿಸಿದೆ. ನನ್ನಂತಹ ದೀನ, ಪಾಪಿ, ಬುದ್ಧಿಹೀನ, ಜಾತಿಹೀನನ ಮೇಲೆ ಅನೇಕ ವಿಧದಿಂದ ಕೃಪೆದೋರಿದೆ. ಪ್ರಭೂ! ಈಗ ಈ ದಾಸನ ಮನೆಯನ್ನು ತಮ್ಮ ಪಾದಧೂಳಿಯಿಂದ ಪವಿತ್ರಗೊಳಿಸು. ಅಲ್ಲಿಗೆ ದಯಮಾಡಿಸಿ, ಸ್ನಾನಮಾಡಿ ಯುದ್ಧದ ದಣಿವನ್ನಾರಿಸಿಕೊಳ್ಳಿ. ಕೃಪಾಳುವೇ! ರಾಜ್ಯ, ಭಂಡಾರ, ಭವನ, ಸಂಪತ್ತನ್ನು ಒಮ್ಮೆ ನಿರೀಕ್ಷಿಸಿ ಸಂತಸದಿಂದ ವಾನರರಿಗೆ ಹಂಚಿಬಿಡು. ನಾಥಾ! ನನ್ನನ್ನು ಎಲ್ಲ ವಿಧದಿಂದಲೂ ನಿಮ್ಮವನನ್ನಾಗಿಸಿಕೊಂಡು, ನಿಮ್ಮೊಂದಿಗೆ ಅಯೋಧ್ಯೆಗೆ ಕರೆದುಕೊಂಡು ಹೋಗು.'' ವಿಭೀಷಣನ ವಿನಮ್ರವಚನಗಳನ್ನು ಕೇಳಿ, ದೀನದಯಾಳುವಾದ ಪ್ರಭುವಿನ ವಿಶಾಲಕಣ್ಣುಗಳಲ್ಲಿ ಪ್ರೇಮಾಶ್ರುಗಳು ತುಂಬಿಬಂದವು. (ಚೌ/೧-೪)

**ದೋ – ತೋರ ಕೋಸ ಗೃಹ ಮೋರ ಸಬ ಸತ್ಯ ಬಚನ ಸುನು ಭ್ರಾತ।**
**ಭರತ ದಸಾ ಸುಮಿರತ ಮೊಹಿ ನಿಮಿಷ ಕಲ್ಪ ಸಮ ಜಾತ॥ ೧೧೬(ಕ)॥**

**ತಾಪಸ ಬೇಷ ಗಾತ ಕೃಸ ಜಪತ ನಿರಂತರ ಮೋಹಿ ।**
**ದೇಖೌಂ ಬೇಗಿ ಸೊ ಜತನು ಕರು ಸಖಾ ನಿಹೋರಉಂ ತೋಹಿ ॥ ೧೧೬(ಖ)॥**
**ಬೀತೇಂ ಅವಧಿ ಜಾಉಂ ಜೌಂ ಜಿಅತ ನ ಪಾವಉಂ ಬೀರ ।**
**ಸುಮಿರತ ಅನುಜ ಪ್ರೀತಿ ಪ್ರಭು ಪುನಿ ಪುನಿ ಪುಲಕ ಸರೀರ ॥ ೧೧೬(ಗ)॥**
**ಕರೆಹು ಕಲ್ಪ ಭರಿ ರಾಜು ತುಮ್ಹ ಮೊಹಿ ಸುಮಿರೆಹು ಮನ ಮಾಹಿಂ ।**
**ಪುನಿ ಮಮ ಧಾಮ ಪಾಇಹಹು ಜಹಾಂ ಸಂತ ಸಬ ಜಾಹಿಂ ॥ ೧೧೬(ಘ)॥**

ಶ್ರೀರಾಮನು ಇಂತೆಂದನು – ''ತಮ್ಮಾ ! ಕೇಳು. ನಿನ್ನ ಬೊಕ್ಕಸ, ಭಂಡಾರ, ಭವನ, ಎಲ್ಲವೂ ನನ್ನವೇ ಆಗಿದೆ; ಇದು ನಿಜ. ಆದರೆ ಭರತನ ಸ್ಥಿತಿಯನ್ನು ನೆನೆದರೆ ನನಗೆ ಒಂದೊಂದು ನಿಮಿಷವೂ ಕಲ್ಪಸಮಾನನಾಗಿ ಕಾಣುತ್ತದೆ. ತಾಪಸವೇಷದಲ್ಲಿ ಕೃಶಗಾತ್ರನಾದ ಅವನು ನಿರಂತರವೂ ನನ್ನ ನಾಮವನ್ನೇ ಜಪಿಸುತ್ತಿರುವನು. ಸಖನೇ! ಆತನನ್ನು ಆದಷ್ಟು ಬೇಗನೇ ನಾನು ನೋಡುವಂತಹ ಉಪಾಯವನ್ನು ಮಾಡು. ಇದು ನನ್ನ ಅನುರೋಧವಾಗಿದೆ. ಹದಿನಾಲ್ಕು ಸಂವತ್ಸರಗಳ ಅವಧಿ ಕಳೆದುಹೋದಮೇಲೆ ನಾನು ಅಯೋಧ್ಯೆಗೆ ಹೋದರೆ ತಮ್ಮನನ್ನು ಜೀವಂತವಾಗಿ ಕಾಣಲಾರೆನು. ತಮ್ಮನಾದ ಭರತನ ಪ್ರೇಮವನ್ನು ನೆನೆ-ನೆನೆದು ಪ್ರಭುವಿನ ಶರೀರ ರೋಮಾಂಚಿತವಾಯಿತು.'' ಶ್ರೀರಾಮನು ಪುನಃ ಹೇಳಿದನು – ಎಲೈ ವಿಭೀಷಣನೇ! ನೀನು ಕಲ್ಪಾಂತರಗಳವರೆಗೆ ನನ್ನ ನಾಮವನ್ನು ಸ್ಮರಿಸುತ್ತಾ ರಾಜ್ಯಭಾರವನ್ನು ಮಾಡು. ಅನಂತರ ನಿನಗೆ ಎಲ್ಲ ಸಂತರಿಗೂ ದೊರೆಯುವ ಪರಮಧಾಮ ಪ್ರಾಪ್ತವಾಗುವುದು. (ದೋ/೧೧೬ ಕ, ಖ, ಗ, ಘ)

## ಪುಷ್ಪಕ ವಿಮಾನದಲ್ಲಿ ಶ್ರೀರಾಮನು ಪರಿವಾರಸಹಿತ ಅಯೋಧ್ಯೆಗೆ ಪ್ರಯಾಣ

**ಚೌ – ಸುನತ ಬಿಭೀಷನ ಬಚನ ರಾಮ ಕೇ । ಹರಷಿ ಗಹೇ ಪದ ಕೃಪಾಧಾಮ ಕೇ ॥**
**ಬಾನರ ಭಾಲು ಸಕಲ ಹರಷಾನೇ । ಗಹಿ ಪ್ರಭು ಪದ ಗುನ ಬಿಮಲ ಬಖಾನೇ ॥ ೧ ॥**
**ಬಹುರಿ ಬಿಭೀಷನ ಭವನ ಸಿಧಾಯೋ । ಮನಿ ಗನ ಬಸನ ಬಿಮಾನ ಭರಾಯೋ ॥**
**ಲೈ ಪುಷ್ಪಕ ಪ್ರಭು ಆಗೇಂ ರಾಖಾ । ಹಂಸಿ ಕರಿ ಕೃಪಾಸಿಂಧು ತಬ ಭಾಷಾ ॥ ೨ ॥**
**ಚಢಿ ಬಿಮಾನ ಸುನು ಸಖಾ ಬಿಭೀಷನ । ಗಗನ ಜಾಇ ಬರಷಹು ಪಟ ಭೂಷನ ॥**
**ನಭ ಪರ ಜಾಇ ಬಿಭೀಷನ ತಬಹೀ । ಬರಷಿ ದಿಏ ಮನಿ ಅಂಬರ ಸಬಹೀ ॥ ೩ ॥**
**ಜೋಇ ಜೋಇ ಮನ ಭಾವಇ ಸೋಇ ಲೇಹೀಂ । ಮನಿ ಮುಖ ಮೇಲಿ ಡಾರಿ ಕಪಿ ದೇಹೀಂ ॥**
**ಹಂಸೇ ರಾಮು ಶ್ರೀ ಅನುಜ ಸಮೇತಾ । ಪರಮ ಕೌತುಕೀ ಕೃಪಾ ನಿಕೇತಾ ॥ ೪ ॥**

ಶ್ರೀರಾಮಚಂದ್ರನ ವಚನಗಳನ್ನು ಕೇಳುತ್ತಲೇ ಹರ್ಷಿತನಾದ ವಿಭೀಷಣನು ಕೃಪಾಧಾಮ ಪ್ರಭುವಿನ ಕಾಲಿಗೆರಗಿದನು. ವಾನರ-ಭಲ್ಲೂಕರೆಲ್ಲರೂ ಸಂತೋಷದಿಂದ ಪ್ರಭುಪಾದಗಳನ್ನು ಹಿಡಿದುಕೊಂಡು, ಅವನ ನಿರ್ಮಲ ಗುಣಗಾನ ಮಾಡಿದರು. ಅನಂತರ ವಿಭೀಷಣನು ತನ್ನ ಅರಮನೆಗೆ ಮರಳಿ, ಪುಷ್ಪಕವಿಮಾನವನ್ನು ಮಣಿಗಳಿಂದ, ರತ್ನಭೂಷಣಗಳಿಂದ, ವಸ್ತ್ರಗಳಿಂದ ತುಂಬಿದನು. ಮತ್ತೆ ಆ ವಿಮಾನವನ್ನು ಪ್ರಭುವಿನ ಮುಂದೆ ತಂದಿರಿಸಿದನು. ಆಗ ಕೃಪಾಸಿಂಧು ಶ್ರೀರಾಮನು ನಕ್ಕು ಹೇಳಿದನು – 'ಎಲೈ ಗೆಳೆಯ ವಿಭೀಷಣಾ! ಈ ವಿಮಾನವನ್ನು ಏರಿ ಆಕಾಶದಿಂದ ವಸ್ತ್ರಾಭೂಷಣಗಳನ್ನು ಮಳೆಗರೆದು ಬಿಡು.' ಶ್ರೀರಾಮನ ಆಣತಿಯಂತೆ ವಿಭೀಷಣನು ಅಂತರಿಕ್ಷದಿಂದ ರತ್ನಗಳನ್ನೂ, ವಸ್ತ್ರಾಭೂಷಣಗಳನ್ನೂ ಕೆಳಗೆ ಚೆಲ್ಲಿದನು. ವಾನರರು ತಮಗೆ ಇಷ್ಟವಾದ ವಸ್ತುಗಳನ್ನು ಎತ್ತಿಕೊಂಡರು. ಮಣಿಗಳನ್ನು ಬಾಯಿಗೆ ಹಾಕಿಕೊಂಡು ಅವು ತಿನ್ನುವ ಪದಾರ್ಥಗಳಲ್ಲವೆಂದು ತಿಳಿದು ವಾನರರು ಅವುಗಳನ್ನು ಉಗುಳಿಬಿಡುತ್ತಿದ್ದರು. ಈ ಲೀಲಾವಿನೋದವನ್ನು ಕಂಡು ಸೀತಾರಾಮಲಕ್ಷ್ಮಣರೂ ನೋಡಿ ಆನಂದಿಸಿದರು. (ಚೌ/೧-೪)

**ದೋ – ಮುನಿ ಜೆಹಿ ಧ್ಯಾನ ನ ಪಾವಹಿಂ ನೇತಿ ನೇತಿ ಕಹ ಬೇದ ।**
**ಕೃಪಾಸಿಂಧು ಸೋಇ ಕಪಿನ್ಹ ಸನ ಕರತ ಅನೇಕ ಬಿನೋದ ॥ ೧೧೭(ಕ)॥**

**ಉಮಾ ಜೋಗ ಜಪ ದಾನ ತಪ ನಾನಾ ಮಖ ಬ್ರತ ನೇಮ।**
**ರಾಮ ಕೃಪಾ ನಹಿಂ ಕರಹಿಂ ತಸಿ ಜಸಿ ನಿಷ್ಕೇವಲ ಪ್ರೇಮ ॥ ೧೧೭(ಖ)॥**

ಮುನೀಶ್ವರರ ಧ್ಯಾನಕ್ಕೆ ಅಗಮ್ಯವಾದ, ವೇದಗಳು ನೇತಿ-ನೇತಿ ಎಂದು ಕರೆಯುವ ಆ ಕೃಪಾಸಿಂಧುವಾದ ಶ್ರೀರಾಮನು ವಾನರರೊಂದಿಗೆ ಅನೇಕ ವಿಧದಿಂದ ವಿನೋದವಾಡಿದನು. ಶಿವನು ಹೇಳುತ್ತಾನೆ – ಉಮೆ! ನಿರ್ಮಲಭಕ್ತಿಯಿಂದ ಲಭಿಸುವ ಶ್ರೀರಾಮನ ಕೃಪೆ, ನಾನಾವಿಧವಾದ ಯೋಗ, ಜಪ, ದಾನ, ತಪಸ್ಸು, ಯಜ್ಞ, ವ್ರತನಿಯಮಗಳಿಂದಲೂ ಲಭಿಸದು. (ದೋ/೧೧೭ ಕ, ಖ)

**ಚೌ – ಭಾಲು ಕಪಿನ್ಹ ಪಟ ಭೂಷನ ಪಾಏ। ಪಹಿರಿ ಪಹಿರಿ ರಘುಪತಿ ಪಹಿಂ ಆಏ ॥**
**ನಾನಾ ಜಿನಸ ದೇಖಿ ಸಬ ಕೀಸಾ। ಪುನಿ ಪುನಿ ಹಂಸತ ಕೋಸಲಾಧೀಸಾ ॥ ೧ ॥**
**ಚಿತಇ ಸಬನ್ಹಿ ಪರ ಕೀನ್ಹಿ ದಾಯಾ। ಬೋಲೇ ಮೃದುಲ ಬಚನ ರಘುರಾಯಾ ॥**
**ತುಮ್ಹರೇಂ ಬಲ ಮೈಂ ರಾವನು ಮಾರ್ಯೋ। ತಿಲಕ ಬಿಭೀಷನ ಕಹಂ ಪುನಿ ಸಾರ್ಯೋ ॥ ೨ ॥**
**ನಿಜ ನಿಜ ಗೃಹ ಅಬ ತುಮ್ಹ ಸಬ ಜಾಹೂ। ಸುಮಿರೇಹು ಮೊಹಿ ಡರಪಹು ಜನಿ ಕಾಹೂ ॥**
**ಸುನತ ಬಚನ ಪ್ರೇಮಾಕುಲ ಬಾನರ। ಜೋರಿ ಪಾನಿ ಬೋಲೇ ಸಬ ಸಾದರ ॥ ೩ ॥**
**ಪ್ರಭು ಜೋಇ ಕಹಹು ತುಮ್ಹಹಿ ಸಬ ಸೋಹಾ। ಹಮರೇಂ ಹೋತ ಬಚನ ಸುನಿ ಮೋಹಾ ॥**
**ದೀನ ಜಾನಿ ಕಪಿ ಕಿಏ ಸನಾಥಾ। ತುಮ್ಹ ತ್ರೈಲೋಕ ಈಸ ರಘುನಾಥಾ ॥ ೪ ॥**
**ಸುನಿ ಪ್ರಭು ಬಚನ ಲಾಜ ಹಮ ಮರಹೀಂ। ಮಸಕ ಕಹೂಂ ಖಗಪತಿ ಹಿತ ಕರಹೀಂ॥**
**ದೇಖಿ ರಾಮ ರುಖ ಬಾನರ ರೀಛಾ। ಪ್ರೇಮ ಮಗನ ನಹಿಂ ಗೃಹ ಕೈ ಈಛಾ॥ ೫ ॥**

ಭಲ್ಲೂಕ-ವಾನರರು ವಸ್ತ್ರಗಳನ್ನು, ಭೂಷಣಗಳನ್ನು ಉಟ್ಟು-ತೊಟ್ಟುಕೊಂಡು ಶ್ರೀರಘುನಾಥನ ಬಳಿಗೆ ಬಂದರು. ಅನೇಕ ಜಾತಿಯ ವಾನರರನ್ನು ನೋಡಿ ಕೋಸಲಪತಿ ಶ್ರೀರಾಮನು ಮತ್ತೆ-ಮತ್ತೆ ನಗುತ್ತಿದ್ದನು. ಶ್ರೀರಘುನಾಥನು ತನ್ನ ಕೃಪಾದೃಷ್ಟಿಯನ್ನು ಎಲ್ಲರಮೇಲೆ ಚೆಲ್ಲಿದನು. ಮೃದುಮಧುರವಾಗಿ ಇಂತೆಂದನು – ''ಸೋದರರೇ! ನಿಮ್ಮ ಬಲ, ಬೆಂಬಲದಿಂದಲೇ ನಾನು ರಾವಣನನ್ನು ಕೊಂದೆ. ವಿಭೀಷಣನಿಗೆ ಪಟ್ಟಾಭಿಷೇಕ ಮಾಡಿದೆ. ಇನ್ನು ನೀವೆಲ್ಲ ನಿಮ್ಮ-ನಿಮ್ಮ ಮನೆಗಳಿಗೆ ತೆರಳಿರಿ. ಅಲ್ಲಿದ್ದು ನನ್ನನ್ನು ಸ್ಮರಿಸುತ್ತಿರಿ. ಯಾರಿಗೂ ಹೆದರಬೇಕಾಗಿಲ್ಲ.'' ಈ ಮಾತನ್ನು ಕೇಳುತ್ತಲೇ ವಾನರರು ಪ್ರೇಮವಿಹ್ವಲರಾಗಿ, ಕೈಜೋಡಿಸಿಕೊಂಡು, ಆದರದಿಂದ ನುಡಿದರು – ಪ್ರಭೂ! ನೀನು ಏನು ಹೇಳಿದರೂ ನಿನಗೆ ಒಪ್ಪುತ್ತದೆ. ಆದರೆ ನಿಮ್ಮ ಮಾತಿನಿಂದ ನಮ್ಮಲ್ಲಿ ಮೋಹವೇ ಉಂಟಾಗುತ್ತದೆ. ಶ್ರೀರಘುನಾಥಾ! ನೀವು ತ್ರೈಲೋಕ್ಯನಾಥರು. ನಾವು ವಾನರರು; ನಮ್ಮನ್ನು ದೀನರೆಂದು ತಿಳಿದು ಕೃತಾರ್ಥರನ್ನಾಗಿ ಮಾಡಿದಿರಿ. ಪ್ರಭುವಿನ ಇಂತಹ ವಚನಗಳನ್ನು ಕೇಳಿ ನಾವು ನಾಚಿಕೆಯಿಂದ ಕುಗ್ಗಿ ಕುಸಿಯುತ್ತಿದ್ದೇವೆ. ಸೊಳ್ಳೆ ಎಲ್ಲಾದರೂ ಗರುಡನಿಗೆ ನೆರವಾಗಬಲ್ಲುದೇ? ಶ್ರೀರಾಮನ ಮುಖಭಂಗಿಯನ್ನು ಕಂಡು ವಾನರ-ಭಲ್ಲೂಕಗಳು ಪ್ರೇಮವಿಹ್ವಲರಾದರು. ತಮ್ಮ ಮನೆಗಳಿಗೆ ಮರಳಲು ಅವರಿಗೆ ಇಚ್ಛೆಯೇ ಇರಲಿಲ್ಲ. (ಚೌ/೧-೫)

**ದೋ – ಪ್ರಭು ಪ್ರೇರಿತ ಕಪಿ ಭಾಲು ಸಬ ರಾಮ ರೂಪ ಉರ ರಾಖಿ।**
**ಹರಷ ಬಿಷಾದ ಸಹಿತ ಚಲೇ ಬಿನಯ ಬಿಬಿಧ ಬಿಧಿ ಭಾಷಿ ॥ ೧೧೮(ಕ)॥**
**ಕಪಿಪತಿ ನೀಲ ರೀಛಪತಿ ಅಂಗದ ನಲ ಹನುಮಾನ।**
**ಸಹಿತ ಬಿಭೀಷನ ಅಪರ ಜೇ ಜೂಥಪ ಕಪಿ ಬಲವಾನ ॥ ೧೧೮(ಖ)॥**
**ಕಹಿ ನ ಸಕಹಿಂ ಕಛು ಪ್ರೇಮ ಬಸ ಭರಿ ಭರಿ ಲೋಚನ ಬಾರಿ।**
**ಸನ್ಮುಖ ಚಿತವಹಿಂ ರಾಮ ತನ ನಯನ ನಿಮೇಷ ನಿವಾರಿ ॥ ೧೧೮(ಗ)॥**

ಆದರೆ ಪ್ರಭುವಿನ ಅಪ್ಪಣೆಯನ್ನು ಶಿರಸಾವಹಿಸಿ ಭಲ್ಲೂಕ-ವಾನರರು ಶ್ರೀರಾಮನ ರೂಪವನ್ನು ತಮ್ಮ ಹೃದಯದಲ್ಲಿ ನೆಲೆಗೊಳಿಸಿ, ಅನೇಕ ವಿಧದಿಂದ ಪ್ರಾರ್ಥಿಸಿ, ಹರ್ಷವಿಷಾದದೊಂದಿಗೆ ತಮ್ಮ-ತಮ್ಮ ನಿವಾಸಗಳಿಗೆ ತೆರಳಿದರು. ವಾನರರಾಜ ಸುಗ್ರೀವ, ನಳ, ನೀಲ, ಭಲ್ಲೂಕರಾಜಾ ಜಾಂಬವಂತ, ಅಂಗದ, ಹನುಮಂತ, ವಿಭೀಷಣ ಮುಂತಾದ ಮಹಾಬಲಶಾಲಿಗಳಾದ ಇತರ ಸೇನಾಪತಿಗಳು ಏನನ್ನೂ ಮಾತಾಡಲಾರದೆ ಸುಮ್ಮನಿದ್ದರು. ಪ್ರೇಮಪರವಶರಾಗಿ ಕಣ್ಣುಗಳಲ್ಲಿ ನೀರುತುಂಬಿಕೊಂಡು, ರೆಪ್ಪೆಮಿಟುಕಿಸದೆ ಶ್ರೀರಾಮನನ್ನು ತದೇಕದೃಷ್ಟಿಯಿಂದ ನೋಡುತ್ತಿದ್ದರು. (ದೋ/೧೧೮ ಕ, ಖ, ಗ)

ಚೌ – ಅತಿಸಯ ಪ್ರೀತಿ ದೇಖಿ ರಘುರಾಈ। ಲೀನ್ಹೇ ಸಕಲ ಬಿಮಾನ ಚಢಾಈ॥
ಮನ ಮಹುँ ಬಿಪ್ರ ಚರನ ಸಿರು ನಾಯೋ। ಉತ್ತರ ದಿಸಿಹಿ ಬಿಮಾನ ಚಲಾಯೋ॥೧॥
ಚಲತ ಬಿಮಾನು ಕೋಲಾಹಲ ಹೋಈ। ಜಯ ರಘುಬೀರ ಕಹಇ ಸಬು ಕೋಈ॥
ಸಿಂಹಾಸನ ಅತಿ ಉಚ್ಚ ಮನೋಹರ। ಶ್ರೀ ಸಮೇತ ಪ್ರಭು ಬೈಠೇ ತಾ ಪರ॥೨॥
ರಾಜತ ರಾಮು ಸಹಿತ ಭಾಮಿನೀ। ಮೇರು ಸೃಂಗ ಜನು ಘನ ದಾಮಿನೀ॥
ರುಚಿರ ಬಿಮಾನ ಚಲೆಉ ಅತಿ ಆತುರ। ಕೀನ್ಹೀ ಸುಮನ ಬೃಷ್ಟಿ ಹರಷೇ ಸುರ॥೩॥
ಪರಮ ಸುಖದ ಚಲಿ ತ್ರಿಬಿಧ ಬಯಾರೀ। ಸಾಗರ ಸರ ಸರಿ ನಿರ್ಮಲ ಬಾರೀ॥
ಸಗುನ ಹೋಹಿँ ಸುಂದರ ಚಹುँ ಪಾಸಾ। ಮನ ಪ್ರಸನ್ನ ನಿರ್ಮಲ ನಭ ಆಸಾ॥೪॥
ಕಹ ರಘುಬೀರ ದೇಖು ರನ ಸೀತಾ। ಲಛಿಮನ ಇಹಾँ ಹತ್ಯೋ ಇಂದ್ರಜೀತಾ॥
ಹನೂಮಾನ ಅಂಗದ ಕೇ ಮಾರೇ। ರನ ಮಹಿ ಪರೇ ನಿಸಾಚರ ಭಾರೇ॥೫॥
ಕುಂಭಕರನ ರಾವನ ದ್ವೌ ಭಾಈ। ಇಹಾँ ಹತೇ ಸುರ ಮುನಿ ದುಖದಾಈ॥೬॥

ಶ್ರೀರಘುನಾಥನು ಅವರೆಲ್ಲರ ಪ್ರೇಮಾತಿಶಯವನ್ನು ನೋಡಿ, ಅವರೆಲ್ಲರನ್ನು ವಿಮಾನದಲ್ಲಿ ಹತ್ತಿಸಿಕೊಂಡನು. ಸೀತಾಲಕ್ಷ್ಮಣರೊಂದಿಗೆ ತಾನೂ ಆ ಪುಷ್ಪಕವಿಮಾನದಲ್ಲಿ ಆಸೀನನಾದನು. ಅನಂತರ ಮನಸ್ಸಿನಲ್ಲೇ ವಿಪ್ರಚರಣಗಳನ್ನು ನೆನೆದು, ಉತ್ತರ ದಿಕ್ಕಿಗೆ ಹೋಗಲು ವಿಮಾನಕ್ಕೆ ಆಜ್ಞಾಪಿಸಿದನು. ವಿಮಾನ ಹೊರಟಾಗ ಭಾರೀ ಗದ್ದಲವಾಯಿತು. ಎಲ್ಲರೂ ಶ್ರೀರಘುವೀರನಿಗೆ ಜಯವಾಗಲೀ, ಎಂದು ಉಗ್ಗಡಿಸುತ್ತಿದ್ದಾರೆ. ವಿಮಾನದಲ್ಲಿ ಒಂದು ಎತ್ತರವಾದ ಮನೋಹರ ಸಿಂಹಾಸನದ ಮೇಲೆ ಸೀತಾದೇವಿಯೊಂದಿಗೆ ಶ್ರೀರಾಮಚಂದ್ರನು ವಿರಾಜಮಾನನಾಗಿದ್ದಾನೆ. ಪತ್ನೀಸಮೇತನಾದ ಶ್ರೀರಾಮನು ಸುಮೇರುಪರ್ವತದ ಮೇಲೆ ವಿದ್ಯುಲ್ಲತೆಯಿಂದೊಡಗೂಡಿದ ಶ್ಯಾಮಮೇಘದಂತೆ ಶೋಭಿಸುತ್ತಿದ್ದನು. ಆ ಪುಷ್ಪಕವಿಮಾನವು ಅತಿವೇಗವಾಗಿ ಚಲಿಸಿತು. ದೇವತೆಗಳು ಹರ್ಷಿತರಾಗಿ ಪುಷ್ಪವೃಷ್ಟಿಗೈದರು. ಪರಮ ಸುಖದಾಯಕವಾದ ಶೀತಲ, ಮಂದ, ಸುಗಂಧಿತ ಪವನವು ಬೀಸತೊಡಗಿತು. ಸಾಗರ, ಸರೋವರ, ನದಿಗಳ ಜಲವು ನಿರ್ಮಲವಾಯಿತು. ಎಲ್ಲೆಲ್ಲೂ ಶುಭಶಕುನಗಳಾಗತೊಡಗಿದವು. ಎಲ್ಲರ ಮನಸ್ಸು ಪ್ರಸನ್ನವಾಯಿತು. ಆಕಾಶ, ದಿಕ್ಕುಗಳು ತಿಳಿಯಾಗಿ ಸ್ವಚ್ಛವಾದುವು. ಶ್ರೀರಘುನಾಥನು ಇಂತೆಂದನು– ''ಎಲೈ ಸೀತೆ! ಕೆಳಗೆ ಕಾಣುವ ರಣಭೂಮಿಯನ್ನು ಈಕ್ಷಿಸು. ಇಂದ್ರನನ್ನು ಗೆದ್ದ ಮೇಘನಾದನನ್ನು ಲಕ್ಷ್ಮಣನು ಇಲ್ಲೇ ಸಂಹರಿಸಿದ್ದು. ಹನುಮಂತನಿಂದ, ಅಂಗದನಿಂದ ಹತರಾದ ಭಾರೀ ನಿಶಾಚರರು ಈ ರಣಭೂಮಿಯಲ್ಲಿ ಮಣ್ಣುಪಾಲಾದರು. ದೇವತೆಗಳನ್ನು ಮುನಿಗಳನ್ನು ಬಾಧಿಸುತ್ತಿದ್ದ ರಾವಣ-ಕುಂಭಕರ್ಣರು ಇಲ್ಲೇ ವಧೆಗೀಡಾದರು. (ಚೌ/೧-೬)

ದೋ – ಇಹಾँ ಸೇತು ಬಾँಧ್ಯೋ ಅರು ಥಾಪೆಉँ ಸಿವ ಸುಖ ಧಾಮ।
ಸೀತಾ ಸಹಿತ ಕೃಪಾನಿಧಿ ಸಂಭುಹಿ ಕೀನ್ಹ ಪ್ರನಾಮ॥೧೧೯(ಕ)॥
ಜಹँ ಜಹँ ಕೃಪಾಸಿಂಧು ಬನ ಕೀನ್ಹ ಬಾಸ ಬಿಶ್ರಾಮ॥
ಸಕಲ ದೇಖಾಏ ಜಾನಕಿಹಿ ಕಹೇ ಸಬನ್ಹಿ ಕೇ ನಾಮ॥೧೧೯(ಖ)॥

ನಾನು ಸಮುದ್ರಕ್ಕೆ ಇಲ್ಲೇ ಸೇತುವೆ ಕಟ್ಟಿಸಿದೆ. ಸುಖಧಾಮನಾದ ಪರಶಿವನನ್ನು ಸ್ಥಾಪಿಸಿದ ಸ್ಥಳ ಇದೇ'' ಎಂದು ಹೇಳುತ್ತಾ ಕೃಪಾನಿಧಿಯಾದ ಶ್ರೀರಾಮನು ಸೀತಾಸಮೇತನಾಗಿ ಮಹಾದೇವನಾದ ಶ್ರೀರಾಮೇಶ್ವರನಿಗೆ ಪ್ರಣಾಮಗೈದನು. ಕೃಪಾಸಿಂಧು ಶ್ರೀರಾಮನು ವನದಲ್ಲಿ ತಾನು ವಾಸಿಸಿದ ಪ್ರದೇಶಗಳನ್ನು, ವಿಶ್ರಮಿಸಿದ ಸ್ಥಳಗಳನ್ನು ತೋರಿಸುತ್ತಾ, ಅವುಗಳ ಹೆಸರುಗಳನ್ನು ತಿಳಿಸಿದನು. (ದೋ/೧೧೯ ಕ, ಖ)

ಚೌ – ತುರತ ಬಿಮಾನ ತಹಾँ ಚಲಿ ಆವಾ। ದಂಡಕ ಬನ ಜಹँ ಪರಮ ಸುಹಾವಾ॥
ಕುಂಭಜಾದಿ ಮುನಿನಾಯಕ ನಾನಾ। ಗಏ ರಾಮು ಸಬ ಕೇँ ಅಸ್ಥಾನಾ॥೧॥
ಸಕಲ ರಿಷಿನ್ಹ ಸನ ಪಾಇ ಅಸೀಸಾ। ಚಿತ್ರಕೂಟ ಆಏ ಜಗದೀಸಾ॥
ತಹँ ಕರಿ ಮುನಿನ್ಹ ಕೇರ ಸಂತೋಷಾ। ಚಲಾ ಬಿಮಾನು ತಹಾँ ತೇ ಚೋಖಾ॥೨॥
ಬಹುರಿ ರಾಮ ಜಾನಕಿಹಿ ದೆಖಾಈ। ಜಮುನಾ ಕಲಿ ಮಲ ಹರನಿ ಸುಹಾಈ॥
ಪುನಿ ದೇಖೀ ಸುರಸರೀ ಪುನೀತಾ। ರಾಮ ಕಹಾ ಪ್ರನಾಮ ಕರು ಸೀತಾ॥೩॥

**ತೀರಥಪತಿ ಪುನಿ ದೇಖು ಪ್ರಯಾಗಾ। ನಿರಖತ ಜನ್ಮ ಕೋಟಿ ಅಘ ಭಾಗಾ॥**
**ದೇಖು ಪರಮ ಪಾವನಿ ಪುನಿ ಬೇನೀ। ಹರನಿ ಸೋಕ ಹರಿ ಲೋಕ ನಿಸೇನೀ॥೪॥**
**ಪುನಿ ದೇಖು ಅವಧಪುರೀ ಅತಿ ಪಾವನಿ। ತ್ರಿಬಿಧ ತಾಪ ಭವ ರೋಗ ನಸಾವನಿ॥೫॥**

ವಿಮಾನವು ಶೀಘ್ರವಾಗಿ ಅಗಸ್ತ್ಯಾದಿ ಮುನಿಗಳು ವಾಸಿಸುತ್ತಿದ್ದ ದಂಡಕಾರಣ್ಯವನ್ನು ತಲುಪಿತು. ಶ್ರೀರಾಮನು ಆಯಾಸ್ಥಾನಗಳಿಗೆ ಹೋಗಿ ಋಷೀಶ್ವರರ ಆಶೀರ್ವಾದಗಳನ್ನು ಪಡೆದುಕೊಂಡು, ಜಗದೀಶ್ವರನು ಚಿತ್ರಕೂಟವನ್ನು ತಲುಪಿದನು. ಅಲ್ಲಿಯ ಮುನೀಶ್ವರರನ್ನು ಸಂತುಷ್ಟಗೊಳಿಸಿದನು. ಬಳಿಕ ವಿಮಾನವು ವೇಗವಾಗಿ ಮುಂದಕ್ಕೆ ಸಾಗಿತು. ಬಳಿಕ ಶ್ರೀರಾಮನು ಸೀತೆಗೆ ಕಲಿಮಲಹಾರಿಣಿಯೂ, ಶೋಭನರೂಪಿಯೂ ಆದ ಯಮುನೆಯ ದರ್ಶನವನ್ನೂ ಮಾಡಿಸಿದನು. ಅನಂತರ ಗಂಗಾದೇವಿಯನ್ನು ದರ್ಶಿಸಿ, ಶ್ರೀರಾಮನು – ''ಸೀತೆ! ಗಂಗೆಗೆ ಪ್ರಣಾಮಮಾಡು. ದರ್ಶನಮಾತ್ರದಿಂದಲೇ ಅನೇಕ ಜನ್ಮಾರ್ಜಿತ ಪಾಪಗಳೂ ಕೂಡ ಪರಿಹಾರವಾಗುವಂತಹ ತೀರ್ಥರಾಜ ಪ್ರಯಾಗವನ್ನು ನೋಡು. ಶೋಕಗಳನ್ನು ಪರಿಹರಿಸುವಂತಹ ಶ್ರೀಹರಿಯ ಪರಮಧಾಮಕ್ಕೆ ಮುಟ್ಟಲು ಮೆಟ್ಟಲಂತಿರುವ ತ್ರಿವೇಣಿಯ ದರ್ಶನಮಾಡು. ಬಳಿಕ ತಾಪತ್ರಯವನ್ನೂ, ಭವರೋಗವನ್ನೂ ಇಲ್ಲವಾಗಿಸುವ ಪವಿತ್ರವಾದ ಅಯೋಧ್ಯೆ ಅಗೋ ಕಂಡುಬರುತ್ತಿದೆ, ಅದನ್ನು ನೋಡು'' ಎಂದು ಹೇಳಿದನು. (ಚೌ/೧-೫)

**ದೋ – ಸೀತಾ ಸಹಿತ ಅವಧ ಕಹುँ ಕೀನ್ಹ ಕೃಪಾಲ ಪ್ರನಾಮ।**
**ಸಜಲ ನಯನ ತನ ಪುಲಕಿತ ಪುನಿ ಪುನಿ ಹರಷಿತ ರಾಮ॥೧೨೦(ಕ)॥**
**ಪುನಿ ಪ್ರಭು ಆಇ ತ್ರಿಬೇನೀँ ಹರಷಿತ ಮಜ್ಜನು ಕೀನ್ಹ।**
**ಕಪಿನ್ಹ ಸಹಿತ ಬಿಪ್ರನ್ಹ ಕಹುँ ದಾನ ಬಿಬಿಧ ಬಿಧಿ ದೀನ್ಹ॥೧೨೦(ಖ)॥**

ಕೃಪಾಳುವಾದ ಶ್ರೀರಾಮಚಂದ್ರನು ಸೀತೆಯೊಂದಿಗೆ ಅಯೋಧ್ಯೆಗೆ ನಮಸ್ಕರಿಸಿದನು. ಸಜಲನೇತ್ರನಾಗಿ, ಪುಳಕಿತಗಾತ್ರನಾಗಿ ಶ್ರೀರಾಮನು ಮತ್ತೆ-ಮತ್ತೆ ಹರ್ಷಿತನಾದನು. ಬಳಿಕ ಶ್ರೀರಾಮನು ತ್ರಿವೇಣಿಸಂಗಮದಲ್ಲಿ ವಾನರರೊಂದಿಗೆ ಸ್ನಾನಮಾಡಿ, ಬ್ರಾಹ್ಮಣರಿಗೆ ಅನೇಕವಿಧವಾದ ದಾನಗಳನ್ನೂ ಕೊಟ್ಟನು. (ದೋ/೧೨೦ ಕ, ಖ)

**ಚೌ – ಪ್ರಭು ಹನುಮಂತಹಿ ಕಹಾ ಬುಝಾಈ। ಧರಿ ಬಟು ರೂಪ ಅವಧಪುರ ಜಾಈ॥**
**ಭರತಹಿ ಕುಸಲ ಹಮಾರಿ ಸುನಾಏಹು। ಸಮಾಚಾರ ಲೈ ತುಮ್ಹ ಚಲಿ ಆಏಹು॥೧॥**
**ತುರತ ಪವನಸುತ ಗವನತ ಭಯಊ। ತಬ ಪ್ರಭು ಭರದ್ವಾಜ ಪಹಿँ ಗಯಊ॥**
**ನಾನಾ ಬಿಧಿ ಮುನಿ ಪೂಜಾ ಕೀನ್ಹೀ। ಅಸ್ತುತಿ ಕರಿ ಪುನಿ ಆಸಿಷ ದೀನ್ಹೀ॥೨॥**
**ಮುನಿ ಪದ ಬಂದಿ ಜುಗಲ ಕರ ಜೋರೀ। ಚಢ಼ಿ ಬಿಮಾನ ಪ್ರಭು ಚಲೇ ಬಹೋರೀ॥**
**ಇಹಾँ ನಿಷಾದ ಸುನಾ ಪ್ರಭು ಆಏ। ನಾವ ನಾವ ಕಹँ ಲೋಗ ಬೊಲಾಏ॥೩॥**
**ಸುರಸರಿ ನಾಘಿ ಜಾನ ತಬ ಆಯೋ। ಉತರೇಉ ತಟ ಪ್ರಭು ಆಯಸು ಪಾಯೋ॥**
**ತಬ ಸೀತಾँ ಪೂಜೀ ಸುರಸರೀ। ಬಹು ಪ್ರಕಾರ ಪುನಿ ಚರನನ್ಹಿ ಪರೀ॥೪॥**
**ದೀನ್ಹಿ ಅಸೀಸ ಹರಷಿ ಮನ ಗಂಗಾ। ಸುಂದರಿ ತವ ಅಹಿವಾತ ಅಭಂಗಾ॥**
**ಸುನತ ಗುಹಾ ಧಾಯಉ ಪ್ರೇಮಾಕುಲ। ಆಯಉ ನಿಕಟ ಪರಮ ಸುಖ ಸಂಕುಲ॥೫॥**
**ಪ್ರಭುಹಿ ಸಹಿತ ಬಿಲೋಕಿ ಬೈದೇಹೀ। ಪರೇಉ ಅವನಿ ತನ ಸುಧಿ ನಹಿँ ತೇಹೀ॥**
**ಪ್ರೀತಿ ಪರಮ ಬಿಲೋಕಿ ರಘುರಾಈ। ಹರಷಿ ಉಠಾಇ ಲಿಯೊ ಉರ ಲಾಈ॥೬॥**

ಅನಂತರ ಶ್ರೀರಾಮಚಂದ್ರನು ಹನುಮಂತನನ್ನು ಕರೆದು ಇಂತು ಆದೇಶಿಸಿದನು – ''ಆಂಜನೇಯಾ! ನೀನು ಬ್ರಹ್ಮಚಾರಿಯ ವೇಷತಳೆದು ಅಯೋಧ್ಯೆಗೆ ಹೋಗು. ಭರತನಿಗೆ ನಮ್ಮ ಕ್ಷೇಮವಾರ್ತೆಯನ್ನರುಹಿ, ಆತನ ಕ್ಷೇಮಸಮಾಚಾರವನ್ನು ತಿಳಿದುಬಾ.'' ಪವನಸುತನು ಕೂಡಲೇ ಅಯೋಧ್ಯೆಗೆ ಹೊರಟನು. ಪ್ರಭುವು ಭರದ್ವಾಜಮಹರ್ಷಿಯ ಬಳಿಗೆ ಹೋದನು. ಮುನಿಗಳು ಮನಸ್ಸಿಟ್ಟು ಪ್ರಭುವನ್ನು ಅನೇಕವಿಧದಿಂದ ಪೂಜಿಸಿದರು; ಸ್ತುತಿಸಿದರು. ಅನಂತರ ಲೀಲಾದೃಷ್ಟಿಯಿಂದ ರಾಮನನ್ನು ಆಶೀರ್ವದಿಸಿದರು. ಶ್ರೀರಾಮಚಂದ್ರಪ್ರಭುವು ಕೈಜೋಡಿಸಿಕೊಂಡು ಭರದ್ವಾಜಮುನಿಗಳನ್ನು ವಂದಿಸಿ, ಅವರಿಂದ ಬೀಳ್ಕೊಂಡು ವಿಮಾನವನ್ನು ಹತ್ತಿ ಮುಂದಕ್ಕೆ ಸಾಗಿದನು. ಇತ್ತ ನಿಷಾದರಾಜ ಗುಹನು ಪ್ರಭುವಿನ ಆಗಮನದ ವಾರ್ತೆಯನ್ನು ಕೇಳಿ, ನಾವೆ ಎಲ್ಲಿ ? ದೋಣಿ ಎಲ್ಲಿ ? ಎಂದು ಕೂಗುತ್ತಾ ತನ್ನವರನ್ನು ಕರೆದನು. ಇಷ್ಟರಲ್ಲಿ ವಿಮಾನವು ಗಂಗಾನದಿಯನ್ನು ದಾಟಿ ಆಚೆಯ ದಡಕ್ಕೆ ಬಂದು ರಾಮನ ಇಚ್ಛೆಯಂತೆ ಇಳಿಯಿತು. ಆಗ ಸೀತೆಯು ಅನೇಕವಿಧವಾಗಿ ಗಂಗಾದೇವಿಗೆ ಪೂಜೆಸಲ್ಲಿಸಿ ಅವಳ

ಚರಣಕ್ಕೆರಗಿದಳು. ಗಂಗೆಯು ಹರ್ಷಿತಳಾಗಿ – ''ಎಲೈ ಸುಂದರಿಯೇ! ನೀನು ಅಖಂಡಸೌಭಾಗ್ಯವತಿಯಾಗಿರು' ಎಂದು ಆಶೀರ್ವದಿಸಿದಳು. ನಿಷಾದರಾಜನಾದ ಗುಹನು ಭಗವಂತನು ಗಂಗಾತೀರದಲ್ಲಿ ಇಳಿದಿದ್ದಾನೆ ಎಂಬುದನ್ನು ಕೇಳಿ, ಪ್ರೇಮವಿಹ್ವಲನಾಗಿ, ಓಡುತ್ತಾ ಬಂದು ಪ್ರಭುವನ್ನು ಸಮೀಪಿಸಿ ಪರಮಾನಂದಭರಿತನಾದನು. ಜಾನಕಿಸಹಿತನಾದ ಶ್ರೀರಾಮನನ್ನು ನೋಡಿ ಗುಹನು ಆನಂದಾತಿರೇಕದಿಂದ ಸಾಷ್ಟಾಂಗನಮಸ್ಕಾರ ಮಾಡಿದನು. ಅವನಿಗೆ ದೇಹಭಾನವೇ ಇರಲಿಲ್ಲ. ಶ್ರೀರಘುನಾಥನು ಅವನ ಪ್ರೇಮಪಾರವಶ್ಯತೆಯನ್ನು ನೋಡಿ ಮೇಲೆತ್ತಿಕೊಂಡು ಸಂತೋಷದಿಂದ ಆಲಿಂಗಿಸಿಕೊಂಡನು. (ಚೌ/೧-೬)

**ಛಂ – ಲಿಯೊ ಹೃದಯ್ ಲಾಇ ಕೃಪಾ ನಿಧಾನ ಸುಜಾನ ರಾಯ್ ರಮಾಪತೀ।**
**ಬೈಠಾರಿ ಪರಮ ಸಮೀಪ ಬೂಝೀ ಕುಸಲ ಸೋ ಕರ ಬೀನತೀ॥**
**ಅಬ ಕುಸಲ ಪದ ಪಂಕಜ ಬಿಲೋಕಿ ಬಿರಂಚಿ ಸಂಕರ ಸೇಬ್ಯ ಜೇ।**
**ಸುಖ ಧಾಮ ಪೂರನಕಾಮ ರಾಮ ನಮಾಮಿ ರಾಮ ನಮಾಮಿ ತೇ ॥ ೧ ॥**
**ಸಬ ಭಾಂತಿ ಅಧಮ ನಿಷಾದ ಸೋ ಹರಿ ಭರತ ಜ್ಯೋ ಉರ ಲಾಇಯೋ।**
**ಮತಿಮಂದ ತುಲಸೀದಾಸ ಸೋ ಪ್ರಭು ಮೋಹ ಬಸ ಬಿಸರಾಇಯೋ॥**
**ಯಹ ರಾವನಾರಿ ಚರಿತ್ರ ಪಾವನ ರಾಮ ಪದ ರತಿಪ್ರದ ಸದಾ।**
**ಕಾಮಾದಿಹರ ಬಿಗ್ಯಾನಕರ ಸುರ ಸಿದ್ಧ ಮುನಿ ಗಾವಹಿಂ ಮುದಾ॥ ೨ ॥**

ವಿಜ್ಞಾನಶಿರೋಮಣಿಯೂ, ಲಕ್ಷ್ಮೀಪತಿಯೂ, ಕೃಪಾನಿಧಾನನೂ, ಆದ ಶ್ರೀರಾಮಚಂದ್ರನು ನಿಷಾದರಾಜನನ್ನು ಬಾಚಿ ತಬ್ಬಿಕೊಂಡು, ತನ್ನ ಪಕ್ಕದಲ್ಲೇ ಕುಳ್ಳಿರಿಸಿಕೊಂಡು, ಕುಶಲ ಸಮಾಚಾರವನ್ನು ವಿಚಾರಿಸಿದನು. ಗುಹನು ಬಿನ್ನವಿಸಿಕೊಂಡನು – ಓ ಪ್ರಭೂ! ಹರಿವಿರಿಂಚಿಗಳಿಂದ ಸೇವಿತವಾದ ತಮ್ಮ ಚರಣಕಮಲದ ದರ್ಶನದಿಂದ ಕ್ಷೇಮವಾಗಿದ್ದೇನೆ. ಓ ಸುಖಧಾಮಾ! ಪೂರ್ಣಕಾಮಾ! ಶ್ರೀರಾಮಾ! ನಿನಗೆ ನಮೋ ನಮಃ ॥೧॥ ಅನೇಕ ವಿಧದಿಂದ ಅತಿಸಾಮಾನ್ಯನಾದ ನಿಷಾದನನ್ನು ಶ್ರೀರಾಮಚಂದ್ರಪ್ರಭುವು ತನ್ನ ಸೋದರ ಭರತನಂತೆ ಎದೆಗಪ್ಪಿಕೊಂಡನು. ತುಲಸೀದಾಸರು ಹೇಳುತ್ತಾರೆ – ''ಮಂದಬುದ್ಧಿಯಾದ ನಾನು ಮೋಹವಶದಿಂದ ಅಂತಹ ಕರುಣಾಮೂರ್ತಿಯಾದ ಸ್ವಾಮಿಯನ್ನು ಮರೆತೆ. ರಾವಣಾರಿಯ ಈ ಪವಿತ್ರ ಚರಿತ್ರೆಯು ಸದಾಕಾಲ ಶ್ರೀರಾಮನ ಚರಣಗಳಲ್ಲಿ ಅನುರಾಗವನ್ನುಂಟುಮಾಡುವಂತಹುದು. ಇದು ಕಾಮಾದಿ ಅಂತಃಶತ್ರುಗಳನ್ನು ನಾಶಮಾಡುವಂತಹುದು. ಭಗವತ್ಸ್ವರೂಪ ಜ್ಞಾನವನ್ನುಂಟುಮಾಡುವಂತಹುದು. ದೇವತೆಗಳು, ಸಿದ್ಧರೂ, ಮುನಿಗಳು ಇದನ್ನು ಆನಂದದಿಂದ ಹಾಡುತ್ತಿರುತ್ತಾರೆ. (ಛಂ/೧-೨)

**ದೋ – ಸಮರ ಬಿಜಯ ರಘುಬೀರ ಕೇ ಚರಿತ ಜೆ ಸುನಹಿಂ ಸುಜಾನ।**
**ಬಿಜಯ ಬಿಬೇಕ ಬಿಭೂತಿ ನಿತ ತಿನ್ಹಹಿ ದೇಹಿಂ ಭಗವಾನ ॥ ೧೨೧(ಕ)॥**
**ಯಹ ಕಲಿಕಾಲ ಮಲಾಯತನ ಮನ ಕರಿ ದೇಖು ಬಿಚಾರ।**
**ಶ್ರೀರಘುನಾಥ ನಾಮ ತಜಿ ನಾಹಿನ ಆನ ಅಧಾರ ॥ ೧೨೧(ಖ)॥**

ಶ್ರೀರಘುವೀರನ ಸಮರವಿಜಯದ ಚರಿತೆಯನ್ನು, ಲೀಲೆಗಳನ್ನು ಶ್ರವಣಮಾಡುವ ಜ್ಞಾನಿಗಳಿಗೆ ಭಗವಂತನು ಶಾಶ್ವತವಾದ ಸಂಪತ್ತನ್ನೂ, ವಿಜಯವನ್ನೂ, ವಿವೇಕವನ್ನೂ ಕರುಣಿಸುತ್ತಾನೆ. ಎಲೈ ಮನಸ್ಸೇ! ವಿಚಾರಮಾಡಿನೋಡು. ಈ ಕಲಿಕಾಲವು ಪಾಪಗಳ ಆಲಯ. ಇದರಲ್ಲಿ ಶ್ರೀರಘುನಾಥನ ನಾಮಸ್ಮರಣೆಯಲ್ಲದೆ ಜೀವಿಗಳಿಗೆ ಬೇರೊಂದು ತರಣೋಪಾಯವೇ ಇಲ್ಲ. (ದೋ/೧೨೧ ಕ, ಖ)

**ಮಾಸಪಾರಾಯಣದ ಇಪ್ಪತ್ತೇಳನೆಯ ವಿಶ್ರಾಮ**

**ಇತಿ ಶ್ರೀಮದ್ರಾಮಚರಿತಮಾನಸೇ ಸಕಲಕಲಿಕಲುಷವಿಧ್ವಂಸನೇ ಷಷ್ಠಃ ಸೋಪಾನಃ ಸಮಾಪ್ತಃ ॥ ೬ ॥**

*ಕಲಿಯುಗದ ಎಲ್ಲ ಪಾಪಗಳನ್ನು ಧ್ವಂಸಮಾಡುವ ಶ್ರೀರಾಮಚರಿತಮಾನಸದಲ್ಲಿ*
*ಲಂಕಾಕಾಂಡವೆಂಬ ಆರನೆಯ ಸೋಪಾನವು ಮುಗಿದುದು.*

## (ಲಂಕಾಕಾಂಡ ಸಮಾಪ್ತವು)

**॥ ಶ್ರೀಸೀತಾರಾಮಚಂದ್ರಾರ್ಪಣಮಸ್ತು ॥**



ಶ್ರೀಗಣೇಶಾಯ ನಮಃ

ಶ್ರೀಜಾನಕೀವಲ್ಲಭೋ ವಿಜಯತೇ

# ಶ್ರೀರಾಮಚರಿತಮಾನಸ

## ಸಪ್ತಮ ಸೋಪಾನ

## ಉತ್ತರಕಾಂಡ

### ಭಗವದ್‌ಸ್ತುತಿ

**ಶ್ಲೋ – ಕೇಕೀಕಂಠಾಭನೀಲಂ ಸುರವರವಿಲಸದ್ವಿಪ್ರಪಾದಾಬ್ಜಚಿಹ್ನಂ**
**ಶೋಭಾಢ್ಯಂ ಪೀತವಸ್ತ್ರಂ ಸರಸಿಜನಯನಂ ಸರ್ವದಾ ಸುಪ್ರಸನ್ನಮ್ ।**
**ಪಾಣೌ ನಾರಾಚಚಾಪಂ ಕಪಿನಿಕರಯುತಂ ಬಂಧುನಾ ಸೇವ್ಯಮಾನಂ**
**ನೌಮೀಡ್ಯಂ ಜಾನಕೀಶಂ ರಘುವರಮನಿಶಂ ಪುಷ್ಪಾರೂಢರಾಮಮ್ ॥ ೧ ॥**

ಪುಷ್ಪಕವಿಮಾನಾರಾಢನಾಗಿರುವ ರಘುವಂಶಶಿರೋಮಣಿ, ಜಾನಕಿನಾಥನಾದ ಶ್ರೀರಾಮಚಂದ್ರಪ್ರಭುವಿಗೆ ನಿರಂತರವೂ ನಮಿಸುತ್ತೇನೆ. ಮಯೂರಕಂಠಕಾಂತಿಯಂತೆ ನೀಲವರ್ಣನೂ, ದೇವತೆಗಳಲ್ಲಿ ಶ್ರೇಷ್ಠನೂ, ಬ್ರಾಹ್ಮಣೋತ್ತಮನಾದ ಭೃಗುಮಹರ್ಷಿಯ ಪಾದಪದ್ಮಗಳ ಚಿಹ್ನೆಯನ್ನು ಹೃದಯದಲ್ಲಿ ಧರಿಸಿದವನೂ, ಶೋಭಾಸಂಪನ್ನನೂ, ಪೀತಾಂಬರಧಾರಿಯೂ, ಕಮಲನಯನನೂ, ಕರದಲ್ಲಿ ಧನುರ್ಬಾಣಗಳನ್ನು ಧರಿಸಿರುವವನೂ, ವಾನರಸಮೂಹದಿಂದ ಒಪ್ಪುತ್ತಿರುವವನೂ, ಸಹೋದರನಾದ ಲಕ್ಷ್ಮಣಸ್ವಾಮಿಯಿಂದ ಸೇವಿಸಲ್ಪಡುತ್ತಿರುವವನೂ, ಸ್ತುತಿಸಲು ಯೋಗ್ಯನೂ, ಆದ ಆ ಮಹಾತ್ಮನು ಸದಾಕಾಲವೂ ನಿರಂತರ ಮುಗುಳ್ನಗೆಯಿಂದ ಪ್ರಸನ್ನನಾಗಿರುವ ಜಗತ್ಪ್ರಭುವು. ॥ ೧॥ (ಶ್ಲೋ/೧)

**ಕೋಸಲೇಂದ್ರಪದಕಂಜಮಂಜುಲೌ ಕೋಮಲಾವಜಮಹೇಶವಂದಿತೌ ।**
**ಜಾನಕೀಕರಸರೋಜಲಾಲಿತೌ ಚಿಂತಕಸ್ಯ ಮನಭೃಂಗಸಂಗಿನೌ ॥ ೨ ॥**
**ಕುಂದಇಂದುದರಗೌರಸುಂದರಂ ಅಂಬಿಕಾಪತಿಮಭೀಷ್ಟಸಿದ್ಧಿದಮ್ ।**
**ಕಾರುಣೀಕಕಲಕಂಜಲೋಚನಂ ನೌಮಿ ಶಂಕರಮನಂಗಮೋಚನಮ್ ॥ ೩ ॥**

ಕೋಸಲೇಂದ್ರನಾದ ಶ್ರೀರಾಮಚಂದ್ರನ ಸುಂದರವೂ, ಅತಿಸುಕುಮಾರವೂ ಆದ ಪಾದಪದ್ಮಗಳನ್ನು ಪರಶಿವ ವಿರಿಂಚಿಯರಿಂದ ಸರ್ವದಾ ಸೇವಿಸಲ್ಪಡುವುವು. ಅವು ಶ್ರೀಜಾನಕೀದೇವಿಯ ಮೃದುವಾದ ಕರಸರೋಜಗಳಿಂದ ನಿರಂತರ ಲಾಲಿತವಾಗಿವೆ. ಸ್ಮರಿಸುವವರ ಮನವೆಂಬ ಭೃಂಗಕ್ಕೆ ಆಶ್ರಯವಾಗಿವೆ. ಮಹಾಮಹಿಮೋಪೇತ ಆ ಪ್ರಭುಚರಣಕಮಲಗಳಲ್ಲಿ ನನ್ನ ಮನೋಭೃಂಗವು ಸದಾ ನೆಲಸಲಿ. ॥ ೨॥

ಕುಂದಕುಸುಮದಂತೆ, ಚಂದ್ರ ಮತ್ತು ಶಂಖದಂತೆ ಸುಂದರ ಗೌರವರ್ಣನೂ, ಜಗಜ್ಜನನಿ ಪಾರ್ವತೀದೇವಿಗೆ ಪತಿಯೂ, ಭಕ್ತರ ಕೋರಿಕೆಗಳನ್ನು ಈಡೇರಿಸುವವನೂ, ದೀನದುಃಖಿತರ ಕನಿಕರದಿಂದ ಕಾಪಾಡುವ ಕಾರುಣ್ಯಮೂರ್ತಿಯೂ, ಮನೋಹರವಾದ ಕಮಲನಯನ ಶೋಭಿತನೂ, ಕಾಮವಿಕಾರದಿಂದ ಮುಕ್ತಿಕೊಡುವವನೂ (ಅರಿಷಡ್ವರ್ಗಗಳನ್ನು ಓಡಿಸಿ ಮುಕ್ತಗೊಳಿಸುವ) ಆದ ಕಲ್ಯಾಣಕಾರೀ ಶ್ರೀಶಂಕರನಿಗೆ ನಾನು ನಮಸ್ಕರಿಸುತ್ತೇನೆ. ॥ ೩॥ (ಶ್ಲೋ/೨-೩)

ದೋ – ರಹಾ ಏಕ ದಿನ ಅವಧಿ ಕರ ಅತಿ ಆರತ ಪುರ ಲೋಗ ।
ಜಹಁ ತಹಁ ಸೋಚಹಿಂ ನಾರಿ ನರ ಕೃಸ ತನ ರಾಮ ಬಿಯೋಗ ॥
ಸಗುನ ಹೋಹಿಂ ಸುಂದರ ಸಕಲ ಮನ ಪ್ರಸನ್ನ ಸಬ ಕೇರ ।
ಪ್ರಭು ಆಗವನ ಜನಾವ ಜನು ನಗರ ರಮ್ಯ ಚಹುಁ ಫೇರ ॥
ಕೌಸಲ್ಯಾದಿ ಮಾತು ಸಬ ಮನ ಅನಂದ ಅಸ ಹೋಇ ।
ಆಯಉ ಪ್ರಭು ಶ್ರೀ ಅನುಜ ಜುತ ಕಹನ ಚಹತ ಅಬ ಕೋಇ ॥
ಭರತ ನಯನ ಭುಜ ದಚ್ಛಿನ ಫರಕತ ಬಾರಹಿಂ ಬಾರ ।
ಜಾನಿ ಸಗುನ ಮನ ಹರಷ ಅತಿ ಲಾಗೇ ಕರನ ಬಿಚಾರ ॥

ಶ್ರೀರಾಮಚಂದ್ರನು ಅಯೋಧ್ಯೆಗೆ ಮರಳಿಬರಲು ಒಂದುದಿನದ ಅವಧಿಮಾತ್ರ ಉಳಿದಿದೆ. ಅದರಿಂದ ನಗರದ ಪ್ರಜೆಗಳು ಪ್ರಭುದರ್ಶನಕ್ಕಾಗಿ ಆತುರರಾಗಿ ಇದಿರುನೋಡುತ್ತಿದ್ದಾರೆ. ಶ್ರೀರಾಮನ ವಿಯೋಗದಿಂದ ಸ್ತ್ರೀ-ಪುರುಷರೆಲ್ಲರೂ ಕೃಶಗಾತ್ರರಾಗಿ – ''ಶ್ರೀರಾಮನು ಇನ್ನೂ ಏಕೆ ತಿರುಗಿ ಬಂದಿಲ್ಲ ?'' ಎಂದು ಅಲ್ಲಲ್ಲಿ, ತಮ್ಮ-ತಮ್ಮಲ್ಲೇ ಚರ್ಚಿಸಿಕೊಳ್ಳುತ್ತಿದ್ದಾರೆ. ಇಷ್ಟರಲ್ಲಿ ಶುಭಶಕುನಗಳಾಗತೊಡಗಿದವು. ಎಲ್ಲರ ಮನಸ್ಸು ಹರ್ಷಗೊಂಡಿತು. ಪ್ರಭುವಿನ ಆಗಮನವನ್ನು ಸೂಚಿಸುತ್ತಿದೆಯೋ ಎಂಬಂತೆ ನಗರದ ಎಲ್ಲೆಡೆ ರಮಣೀಯತೆ ವಿರಾಜಿಸತೊಡಗಿತು. 'ಶ್ರೀರಾಮಚಂದ್ರಪ್ರಭುವು ಸೀತಾಲಕ್ಷ್ಮಣಸಹಿತನಾಗಿ ಬರುತ್ತಿದ್ದಾನೆ' ಹೀಗೆ ಯಾರೋ ತಿಳಿಸುತ್ತಿದ್ದಾನೆ ಎಂದು ಕೌಸಲ್ಯೆ ಮೊದಲಾದ ರಾಜಮಾತೆಯರು ಆನಂದೋಲ್ಲಾಸ ಹೊಂದಿದರು. ಭರತನಿಗೆ ಬಲಭುಜ ಮತ್ತು ಬಲಕಣ್ಣು, ಪದೇ-ಪದೇ ಅದುರಿದವು. ಅದು ಶುಭಶಕುನವೆಂದು ಭಾವಿಸಿ, ಅವನು ಮನಸ್ಸಿನಲ್ಲಿ ಬಹಳ ಹರ್ಷಗೊಂಡನು. ಆದರೆ ಕೂಡಲೇ ಹೀಗೆ ಯೋಚಿಸತೊಡಗಿದನು. (ದೋಹಾ)

ಚೌ – ರಹೆಉ ಏಕ ದಿನ ಅವಧಿ ಅಧಾರಾ । ಸಮುಝುತ ಮನ ದುಖ ಭಯಉ ಅಪಾರಾ ॥
ಕಾರನ ಕವನ ನಾಥ ನಹಿಂ ಆಯಉ । ಜಾನಿ ಕುಟಿಲ ಕಿಧೌಂ ಮೊಹಿ ಬಿಸರಾಯಉ ॥ ೧ ॥
ಅಹಹ ಧನ್ಯ ಲಛಿಮನ ಬಡಭಾಗೀ । ರಾಮ ಪದಾರಬಿಂದು ಅನುರಾಗೀ ॥
ಕಪಟೀ ಕುಟಿಲ ಮೋಹಿ ಪ್ರಭು ಚೀನ್ಹಾ । ತಾತೇ ನಾಥ ಸಂಗ ನಹಿಂ ಲೀನ್ಹಾ ॥ ೨ ॥
ಜೌಂ ಕರನೀ ಸಮುಝೈ ಪ್ರಭು ಮೋರೀ । ನಹಿಂ ನಿಸ್ತಾರ ಕಲಪ ಸತ ಕೋರೀ ॥
ಜನ ಅವಗುನ ಪ್ರಭು ಮಾನ ನ ಕಾಊ । ದೀನ ಬಂಧು ಅತಿ ಮೃದುಲ ಸುಭಾಊ ॥ ೩ ॥
ಮೋರೇ ಜಿಯಁ ಭರೋಸ ದೃಢ ಸೋಈ । ಮಿಲಿಹಹಿಂ ರಾಮ ಸಗುನ ಸುಭ ಹೋಈ ॥
ಬೀತೇಂ ಅವಧಿ ರಹಹಿಂ ಜೌಂ ಪ್ರಾನಾ । ಅಧಮ ಕವನ ಜಗ ಮೋಹಿ ಸಮಾನಾ ॥ ೪ ॥

'ನನ್ನ ಪ್ರಾಣಾಧಾರವಾದ ಅವಧಿಯು ಒಂದುದಿನ ಮಾತ್ರ ಉಳಿದಿದೆ.' ಹೀಗೆ ಆಲೋಚಿಸುತ್ತಲೇ ಭರತನ ಮನಸ್ಸಿಗೆ ಅಪಾರವಾದ ದುಃಖವಾಯಿತು. ''ಸ್ವಾಮಿಯು ಇನ್ನೂ ಬರಲಿಲ್ಲವಲ್ಲ, ಕಾರಣವೇನಿರಬಹುದು? ನಾನು ಕುಟಿಲನೆಂದು ತಿಳಿದು ಎಲ್ಲಾದರೂ ಮರೆತುಬಿಟ್ಟನೇ? ಶ್ರೀರಾಮನ ಚರಣಕಮಲಗಳ ಅನುರಾಗಿಯಾದ ಲಕ್ಷ್ಮಣನು ನಿಜಕ್ಕೂ ಧನ್ಯನು! ಆಹಾ! ಎಂತಹ ಭಾಗ್ಯಶಾಲಿ! ಅದರಿಂದಲೇ ಅವನು ರಾಮನಿಂದ ಅಗಲಲಿಲ್ಲ. ನಾನು ಕಪಟಿ, ಕುಟಿಲನೆಂದು ಭಾವಿಸಿ ಪ್ರಭುವು ನನ್ನನ್ನು ಜೊತೆಗೆ ಇರಿಸಿಕೊಳ್ಳಲಿಲ್ಲ, ಕರಕೊಂಡು ಹೋಗಲಿಲ್ಲ. ನಿಜ! ಪ್ರಭುವು ನನ್ನ ಕೃತ್ಯಗಳನ್ನು ಗಣನೆಗೆ ತೆಗೆದುಕೊಂಡರೆ ಶತಕೋಟಿ ಕಲ್ಪದವರೆಗೂ ನನಗೆ ನಿಷ್ಕೃತಿ ದೊರೆಯದು. ಆದರೆ ಪ್ರಭುವು ತನ್ನ ಸೇವಕರ ದೋಷಗಳನ್ನು ಎಂದೂ ಪರಿಗಣಿಸುವುದಿಲ್ಲ. ಅವನು ದೀನಬಂಧುವು. ಅವನ ಸ್ವಭಾವವು ಅತಿಕೋಮಲವು. ಶ್ರೀರಾಮಚಂದ್ರಪ್ರಭುವು ತಪ್ಪದೇ ಬರುವನೆಂದು ನನ್ನ ಮನಸ್ಸಿನಲ್ಲಿ ದೃಢವಿಶ್ವಾಸವಿದೆ. ಏಕೆಂದರೆ ನನಗೆ ಎಲ್ಲ ಶುಭಶಕುನಗಳೇ ಆಗುತ್ತಿವೆ. ಆದರೆ ಗಡುವು ತೀರಿದ ಬಳಿಕವೂ ನಾನೇನಾದರೂ ಬದುಕಿ ಉಳಿದರೆ ಈ ಜಗತ್ತಿನಲ್ಲಿ ನನಗಿಂತ ನೀಚರು ಬೇರೆ ಯಾರೂ ಇರಲಾರರು. (ಚೌ/೧-೪)

ದೋ – ರಾಮ ಬಿರಹ ಸಾಗರ ಮಹಁ ಭರತ ಮಗನ ಮನ ಹೋತ ।
ಬಿಪ್ರ ರೂಪ ಧರಿ ಪವನ ಸುತ ಆಇ ಗಯಉ ಜನು ಪೋತ ॥ ೧(ಕ) ॥

**ಬೈಠೇ ದೇಖಿ ಕುಸಾಸನ ಜಟಾ ಮುಕುಟ ಕೃಸ ಗಾತ।**
**ರಾಮ ರಾಮ ರಘುಪತಿ ಜಪತ ಸ್ರವತ ನಯನ ಜಲಜಾತ ॥೧(ಖ)॥**

ಶ್ರೀರಾಮನ ವಿರಹಸಾಗರದಲ್ಲಿ ಭರತನ ಮನಸ್ಸು ಮುಳುಗಿಹೋಗಿತ್ತು. ಅದೇ ವೇಳೆಗೆ ಹನುಮಂತನು ಬ್ರಾಹ್ಮಣವೇಷ ತಳೆದು, ಮುಳುಗುತ್ತಿರುವವನನ್ನು ಉಳಿಸಲು ಬಂದ ದೋಣಿಯಂತೆ ಬಂದನು. ದುರ್ಬಲ ಶರೀರಿಯೂ, ಜಟಾಮುಕುಟಧಾರಿಯಾಗಿ, ನಿರಂತರ ರಾಮಾ! ರಾಮಾ! ಎಂದು ಜಪಿಸುತ್ತಾ, ಕಮಲನಯನಗಳಿಂದ ಪ್ರೇಮಾಶ್ರುಗಳನ್ನು ಸುರಿಸುತ್ತಾ, ಕುಶಾಸನದಲ್ಲಿ ಕುಳಿತಿರುವ ಭರತನನ್ನು ಹನುಮಂತನು ನೋಡಿದನು. (ದೋ/೧ ಕ, ಖ)

**ಚೌ – ದೇಖತ ಹನೂಮಾನ ಅತಿ ಹರಷೆಉ। ಪುಲಕ ಗಾತ ಲೋಚನ ಜಲ ಬರಷೆಉ॥**
**ಮನ ಮಹ್ ಬಹುತ ಭಾಂತಿ ಸುಖ ಮಾನೀ। ಬೋಲೆಉ ಶ್ರವನ ಸುಧಾ ಸಮ ಬಾನೀ॥೧॥**
**ಜಾಸು ಬಿರಹ್ ಸೋಚಹು ದಿನ ರಾತೀ। ರಟಹು ನಿರಂತರ ಗುನ ಗನ ಪಾಂತೀ॥**
**ರಘುಕುಲ ತಿಲಕ ಸುಜನ ಸುಖದಾತಾ। ಆಯಉ ಕುಸಲ ದೇವ ಮುನಿ ತ್ರಾತಾ॥೨॥**
**ರಿಪು ರನ ಜೀತಿ ಸುಜಸ ಸುರ ಗಾವತ। ಸೀತಾ ಸಹಿತ ಅನುಜ ಪ್ರಭು ಆವತ॥**
**ಸುನತ ಬಚನ ಬಿಸರೇ ಸಬ ದೂಖಾ। ತೃಷಾವಂತ ಜಿಮಿ ಪಾಇ ಪಿಯೂಷಾ॥೩॥**
**ಕೋ ತುಮ್ಹ ತಾತ ಕಹಾಂ ತೇ ಆಏ। ಮೋಹಿ ಪರಮ ಪ್ರಿಯ ಬಚನ ಸುನಾಏ॥**
**ಮಾರುತ ಸುತ ಮೈಂ ಕಪಿ ಹನುಮಾನಾ। ನಾಮು ಮೋರ ಸುನು ಕೃಪಾನಿಧಾನಾ॥೪॥**
**ದೀನಬಂಧು ರಘುಪತಿ ಕರ ಕಿಂಕರ। ಸುನತ ಭರತ ಭೇಂಟೆಉ ಉಠಿ ಸಾದರ॥**
**ಮಿಲತ ಪ್ರೇಮ ನಹಿಂ ಹೃದಯ್ ಸಮಾತಾ। ನಯನ ಸ್ರವತ ಜಲ ಪುಲಕಿತ ಗಾತಾ॥೫॥**
**ಕಪಿ ತವ ದರಸ ಸಕಲ ದುಖ ಬೀತೇ। ಮಿಲೇ ಆಜು ಮೋಹಿ ರಾಮ ಪಿರೀತೇ॥**
**ಬಾರ ಬಾರ ಬೂಝೀ ಕುಸಲಾತಾ। ತೋ ಕಹುಂ ದೇಉಂ ಕಾಹ ಸುನು ಭ್ರಾತಾ॥೬॥**
**ಏಹಿ ಸಂದೇಸ ಸರಿಸ ಜಗ ಮಾಹೀಂ। ಕರಿ ಬಿಚಾರ ದೇಖೆಉಂ ಕಛು ನಾಹೀಂ॥**
**ನಾಹಿನ ತಾತ ಉರಿನ ಮೈಂ ತೋಹೀ। ಅಬ ಪ್ರಭು ಚರಿತ ಸುನಾವಹು ಮೋಹೀ॥೭॥**
**ತಬ ಹನುಮಂತ ನಾಇ ಪದ ಮಾಥಾ। ಕಹೇ ಸಕಲ ರಘುಪತಿ ಗುನ ಗಾಥಾ॥**
**ಕಹು ಕಪಿ ಕಬಹುಂ ಕೃಪಾಲ ಗೊಸಾಈಂ। ಸುಮಿರಹಿಂ ಮೋಹಿ ದಾಸ ಕೀ ನಾಈಂ॥೮॥**

ಭರತನನ್ನು ನೋಡುತ್ತಲೇ ಆಂಜನೇಯನು ಆನಂದತುಂದಿಲನಾದನು. ಅವನ ಶರೀರ ಪುಳಕಿತವಾಯಿತು. ಕಣ್ಣುಗಳಲ್ಲಿ ಆನಂದಾಶ್ರುಗಳು ತುಂಬಿಬಂದವು. ಮನಸ್ಸಿನಲ್ಲಿ ಅನೇಕವಿಧವಾದ ಸುಖವನ್ನು ಅನುಭವಿಸುತ್ತಾ ಆತನು ಶ್ರವಣಸುಧಾಸಮವಾದ ಮಾತುಗಳನ್ನು ಆಡಿದನು – ''ಶ್ರೀರಾಮಚಂದ್ರನ ವಿಯೋಗದಿಂದ ನೀವು ಹಗಲಿರುಳೂ ಚಿಂತಾಕ್ರಾಂತರಾಗಿರುವಿರಿ. ಅವನ ಮಹೋನ್ನತಗುಣಗಳನ್ನೇ ನೀವು ಸಂತತ ಸ್ಮರಿಸುತ್ತಿರುವಿರಿ. ಆ ಮಹಾನುಭಾವನು ಭಕ್ತರಿಗೆ ಸುಖಪ್ರದನು, ದೇವತೆಗಳ ರಕ್ಷಕನೂ ಆದ ಶ್ರೀರಘುವಂಶಶಿರೋಮಣಿ ಅದೋ! ಕ್ಷೇಮವಾಗಿ ಇತ್ತ ಬರುತ್ತಿದ್ದಾನೆ. ಯುದ್ಧದಲ್ಲಿ ಶತ್ರುಗಳನ್ನು ಸಂಹರಿಸಿ, ಸೀತಾಲಕ್ಷ್ಮಣಸಮೇತನಾಗಿ ಆ ಪ್ರಭುವು ನಗರಕ್ಕೆ ಆಗಮಿಸುತ್ತಿದ್ದಾನೆ. ಅವನ ಪವಿತ್ರಕೀರ್ತಿಯನ್ನು ದೇವತೆಗಳು ಕೊಂಡಾಡುತ್ತಿದ್ದಾರೆ.'' ಈ ಮಾತುಗಳನ್ನು ಕೇಳುತ್ತಲೇ ಬಾಯಾರಿದವನು ಅಮೃತಪಾನಮಾಡಿ ನೀರಡಿಕೆಯ ನೋವನ್ನು ಮರೆತಂತೆ ಭರತನು ತನ್ನ ಎಲ್ಲ ದುಃಖಗಳನ್ನು ಮರೆತು ಇಂತೆಂದನು – ''ಓ ಮಹಾತ್ಮಾ ! ನೀವು ಯಾರು? ಎಲ್ಲಿಂದ ದಯಮಾಡಿಸಿದಿರಿ? ಅಮೃತಪ್ರಾಯವಾದ ವಚನಗಳನ್ನು ನನಗೆ ಹೇಳಿದಿರಲ್ಲ!'' ಮಾರುತಿಯು ಉತ್ತರಿಸುತ್ತಾ – 'ಓ ಕೃಪಾನಿಧೇ! ನಾನು ಪವನನಂದನನು, ಜಾತಿಯಲ್ಲಿ ವಾನರನು. ನನ್ನ ಹೆಸರು ಹನುಮಂತ. ದೀನಬಂಧುವಾದ ಶ್ರೀರಾಮನಿಗೆ ನಾನು ದಾಸನು.' ಇದನ್ನು ಕೇಳುತ್ತಲೇ ಭರತನು ಧಿಗ್ಗನೆ ಎದ್ದು ಆದರದಿಂದ ಹನುಮಂತನನ್ನು ಆಲಿಂಗಿಸಿಕೊಂಡನು. ಆ ಗಾಢಾಲಿಂಗನದಿಂದ ಹೃದಯದಲ್ಲಿ ಪ್ರೇಮ ಉಕ್ಕಿಹರಿಯಿತು. ಆನಂದಾಶ್ರುಗಳ ಕೋಡಿಹರಿಯಿತು. ಶರೀರ ಹೋಂಪುಳಿಗೊಂಡಿತು. ಅವನು ನುಡಿದನು – ''ಆಂಜನೇಯಾ! ನಿನ್ನ ದರ್ಶನದಿಂದ ನನ್ನ ಎಲ್ಲ ದುಃಖಗಳೂ ದೂರವಾದುವು. ಏಕೆಂದರೆ, ನಿನ್ನ ಮಾತುಗಳಿಂದ ನಾನು ರಾಮನನ್ನೇ ನೋಡಿದಂತಾಯಿತು.'' ಭರತನು ಮತ್ತೆ-ಮತ್ತೆ ಆತನ ಕುಶಲ ಸಮಾಚಾರವನ್ನು ಕೇಳಿದ. ''ಸೋದರಾ! ಈ ಶುಭವಾರ್ತೆಯನ್ನು ಹೇಳಿ, ನೀನುಗೈದ ಉಪಕಾರಕ್ಕೆ ನಿನಗೆ ನಾನು ಏನು ಕೊಡಬಲ್ಲೆ ? ಆಲೋಚಿಸಿ ನೋಡಿದರೆ ಈ ಸಂದೇಶಕ್ಕೆ ಸರಿದೂಗುವಂತಹ ವಸ್ತುವು ಈ ಜಗತ್ತಿನಲ್ಲೇ ಇಲ್ಲವೆಂದು ತೋರುತ್ತದೆ. ಅಯ್ಯಾ! ನಾನು ಯಾವ ರೀತಿಯಿಂದಲೂ ನಿನ್ನಿಂದ

ಋಣಮುಕ್ತನಾಗಲಾರೆ. ಈಗ ಪ್ರಭುವಿನ ವೃತ್ತಾಂತವನ್ನು ತಿಳಿಸು.'' ಆಗ ಹನುಮಂತನು ಭರತನ ಚರಣಗಳಿಗೆ ಹಣೆಚಾಚಿ ಶ್ರೀರಾಮನ ವೃತ್ತಾಂತವನ್ನು ಸಾದ್ಯಂತವಾಗಿ ಅರುಹಿದನು. ಮತ್ತೆ ಭರತನು ಕೇಳಿದನು – ವಾಯುನಂದನಾ! ದಯಾಳುವಾದ ಶ್ರೀರಾಮನು ಎಂದಾದರೂ ನನ್ನನ್ನು ತನ್ನ ದಾಸನೆಂದು ನೆನೆದುಕೊಳ್ಳುತ್ತಿದ್ದನೇ? (ಚೌ/೧-೮)

**ಛಂ – ನಿಜ ದಾಸ ಜ್ಯೋಂ ರಘುಬಂಸಭೂಷನ ಕಬಹುಂ ಮಮ ಸುಮಿರನ ಕರ್‍ಯೋ।**
**ಸುನಿ ಭರತ ಬಚನ ಬಿನೀತ ಅತಿ ಕಪಿ ಪುಲಕಿ ತನ ಚರನನ್ಹಿ ಪರ್‍ಯೋ॥**
**ರಘುಬೀರ ನಿಜ ಮುಖ ಜಾಸು ಗುನ ಗನ ಕಹತ ಅಗ ಜಗ ನಾಥ ಜೋ।**
**ಕಾಹೇ ನ ಹೋಇ ಬಿನೀತ ಪರಮ ಪುನೀತ ಸದಗುನ ಸಿಂಧು ಸೋ॥**

'ರಘುಕುಲಭೂಷಣನಾದ ಶ್ರೀರಾಮನು ಎಂದಿಗಾದರೂ ನನ್ನನ್ನು ತನ್ನ ದಾಸನಂತೆ ಜ್ಞಾಪಿಸಿಕೊಳ್ಳುತ್ತಿದ್ದನೇ?' ಭರತನ ಈ ವಿನಮ್ರವಚನಗಳನ್ನು ಕೇಳಿ, ಹನುಮಂತನು ಪುಳಕಿತಗಾತ್ರನಾಗಿ ಅವನ ಪಾದಗಳಮೇಲೆ ಬಿದ್ದುಬಿಟ್ಟನು. ಮನಸ್ಸಿನಲ್ಲೇ ಇಂತು ಯೋಚಿಸಿದನು – 'ಚರಾಚರ ಜಗತ್ತಿಗೆ ಸ್ವಾಮಿಯಾದ ಶ್ರೀರಘುನಾಥನು ತನ್ನ ಶ್ರೀಮುಖದಿಂದ ಯಾರ ಗುಣಸಮೂಹವನ್ನು ನಿರಂತರ ವರ್ಣಿಸುವನೋ, ಅಂತಹ ವಿನಮ್ರ ಭರತನು ಪರಮ ಪುನೀತ ಹಾಗೂ ಸದ್ಗುಣಸಿಂಧುವಲ್ಲದೆ ಬೇರೆನಾಗಿರಬಲ್ಲನು?' (ಛಂದ)

**ದೋ – ರಾಮ ಪ್ರಾನ ಪ್ರಿಯ ನಾಥ ತುಮ್ಹ ಸತ್ಯ ಬಚನ ಮಮ ತಾತ॥**
**ಪುನಿ ಪುನಿ ಮಿಲತ ಭರತ ಸುನಿ ಹರಷ ನ ಹೃದಯಂ ಸಮಾತ॥ ೨ (ಕ)॥**

ಹನುಮಂತನು ಹೇಳಿದನು – ''ಪ್ರಭೂ! ಶ್ರೀರಾಮನಿಗೆ ನೀವು ಬಹಿಃ ಪ್ರಾಣವು. ನಾನು ಸತ್ಯವಾಗಿ ಹೇಳುತ್ತಿದ್ದೇನೆ.'' ಇದನ್ನು ಕೇಳುತ್ತಲೇ ಭರತನು ಅವನನ್ನು ಪದೇ-ಪದೇ ಆಲಿಂಗಿಸಿಕೊಂಡನು. ಅವನ ಹೃದಯದಲ್ಲಿ ಹರ್ಷವು ಹಿಡಿಸದಾಯಿತು. (ದೋ/೨ ಕ)

**ಸೋ – ಭರತ ಚರನ ಸಿರು ನಾಇ ತುರಿತ ಗಯಉ ಕಪಿ ರಾಮ ಪಹಿಂ।**
**ಕಹೀ ಕುಸಲ ಸಬ ಜಾಇ ಹರಷಿ ಚಲೇಉ ಪ್ರಭು ಜಾನ ಚಢಿ॥ ೨ (ಖ)॥**

ಭರತನ ಚರಣಗಳಿಗೆ ಹಣೆಚಾಚಿ ಹನುಮಂತನು ಕೂಡಲೇ ಶ್ರೀರಾಮನಿದ್ದಲ್ಲಿಗೆ ಮರಳಿ, ಅವನಿಗೆ ಭರತನ ಕ್ಷೇಮಸಮಾಚಾರವನ್ನು ತಿಳಿಸಿದನು. ಆಗ ಶ್ರೀರಾಮಚಂದ್ರಪ್ರಭುವು ಹರ್ಷಿತನಾಗಿ, ಪುಷ್ಪಕವನ್ನೇರಿ ಅಯೋಧ್ಯೆಯ ಕಡೆಗೆ ಹೊರಟನು. (ಸೋ/೨ ಖ)

**ಚೌ – ಹರಷಿ ಭರತ ಕೋಸಲಪುರ ಆಏ। ಸಮಾಚಾರ ಸಬ ಗುರಹಿ ಸುನಾಏ॥**
**ಪುನಿ ಮಂದಿರ ಮಹಂ ಬಾತ ಜನಾಈ। ಆವತ ನಗರ ಕುಸಲ ರಘುರಾಈ॥ ೧॥**
**ಸುನತ ಸಕಲ ಜನನೀಂ ಉಠಿ ಧಾಈಂ। ಕಹಿ ಪ್ರಭು ಕುಸಲ ಭರತ ಸಮುಝಾಈಂ॥**
**ಸಮಾಚಾರ ಪುರಬಾಸಿನ್ಹ ಪಾಏ। ನರ ಅರು ನಾರಿ ಹರಷಿ ಸಬ ಧಾಏ॥ ೨॥**
**ದಧಿ ದುರ್ಬಾ ರೋಚನ ಫಲ ಫೂಲಾ। ನವ ತುಲಸೀ ದಲ ಮಂಗಲ ಮೂಲಾ॥**
**ಭರಿ ಭರಿ ಹೇಮ ಥಾರ ಭಾಮಿನೀ। ಗಾವತ ಚಲಿಂ ಸಿಂಧುರಗಾಮಿನೀ॥ ೩॥**
**ಜೇ ಜೈಸೆಹಿಂ ತೈಸೆಹಿಂ ಉಠಿ ಧಾವಹಿಂ। ಬಾಲ ಬೃದ್ಧ ಕಹಂ ಸಂಗ ನ ಲಾವಹಿಂ॥**
**ಏಕ ಏಕನ್ಹ ಕಹಂ ಬೂಝಹಿಂ ಭಾಈ। ತುಮ್ಹ ದೇಖೇ ದಯಾಲ ರಘುರಾಈ॥ ೪॥**
**ಅವಧಪುರೀ ಪ್ರಭು ಆವತ ಜಾನೀ। ಭಈ ಸಕಲ ಸೋಭಾ ಕೈ ಖಾನೀ॥**
**ಬಹಇ ಸುಹಾವನ ತ್ರಿಬಿಧ ಸಮೀರಾ। ಭಇ ಸರಜೂ ಅತಿ ನಿರ್ಮಲ ನೀರಾ॥ ೫॥**

ಇತ್ತ ಭರತನೂ ಕೂಡ ಆನಂದತುಂದಿಲನಾಗಿ ನಂದಿಗ್ರಾಮದಿಂದ ಅಯೋಧ್ಯಾನಗರಕ್ಕೆ ಬಂದು, ಗುರುವಸಿಷ್ಠರಿಗೆ ಎಲ್ಲ ವಿಷಯವನ್ನು ಅರುಹಿದನು. ಶ್ರೀರಘುರಾಮನು ಕ್ಷೇಮವಾಗಿ ನಗರಕ್ಕೆ ಆಗಮಿಸುತ್ತಿರುವ ಸುದ್ದಿಯನ್ನು ಅರಮನೆಯಲ್ಲಿ ಎಲ್ಲರಿಗೆ ತಿಳಿಸಿದನು. ಈ ವಿಷಯವು ಕಿವಿಗೆ ಬಿದ್ದದ್ದೇ ತಡ ರಾಜಮಾತೆಯರು ಎದ್ದು, ಆನಂದದಲ್ಲಿ ಮುಳುಗಿಹೋಗಿ ಓಡೋಡುತ್ತಾ ಭರತನ ಬಳಿಗೆ ಬಂದರು. ಭರತನು ಪ್ರಭುವಿನ ಕುಶಲವನ್ನು ತಿಳಿಸಿ, ಅವರನ್ನು ತೃಪ್ತಿಪಡಿಸಿದನು. ಪುರಜನರು ಈ ಸಂತೋಷವಾರ್ತೆಯನ್ನು ಕೇಳುತ್ತಲೇ ಹರ್ಷೋಲ್ಲಾಸದಿಂದ ಓಡಿಬಂದರು. ಸುಮಂಗಲಿಯರಾದ ಸ್ತ್ರೀಯರು ಶ್ರೀರಾಮನಿಗೆ ಸ್ವಾಗತಕೋರಲು ಮೊಸರು, ಗರಿಕೆ, ಗೋರೋಚನ, ಹಣ್ಣು-ಹೂವು, ಮಂಗಳಮೂಲವಾದ ನವತುಲಸೀದಳ ಮೊದಲಾದ

ಮಂಗಳ ದ್ರವ್ಯಗಳನ್ನು ಚಿನ್ನದ ಹರಿವಾಣಗಳಲ್ಲಿ ತುಂಬಿಕೊಂಡು, ಅವುಗಳನ್ನು ಹಿಡಿದುಕೊಂಡು ಮದಗಜಗಮನೆಯರಾದ ಅವರು ಮಂಗಳಗೀತೆಗಳನ್ನು ಹಾಡುತ್ತಾ ಮುಂದೆ ನಡೆದರು. ಜನರು ಹೇಗಿದ್ದರೋ ಹಾಗೆಯೇ ಎದ್ದು ಓಡತೊಡಗಿದರು. ಬಾಲಕರನ್ನು, ವೃದ್ಧರನ್ನು ಯಾರೂ ಜೊತೆಗೆ ಕರೆದುಕೊಳ್ಳರು. ಒಬ್ಬರು ಮತ್ತೊಬ್ಬರನ್ನು ಕೇಳುತ್ತಾರೆ – ತಮ್ಮಾ ! ನೀನು ದಯಾಳು ಶ್ರೀರಘುರಾಮನನ್ನು ಕಂಡೆಯಾ? ಪ್ರಭುವಿನ ಆಗಮನವನ್ನು ತಿಳಿದು ಅಯೋಧ್ಯಾನಗರವು ಸಕಲ ಸೌಂದರ್ಯನಿಧಿಯಂತಾಯಿತು. ಶೀತಲಮಂದಸುಗಂಧಿತ ಚೆಲುವಾದಗಾಳಿ ಬೀಸತೊಡಗಿತು. ಸರಯೂನದಿಯ ಜಲವು ಅತ್ಯಂತ ನಿರ್ಮಲವಾಯಿತು. (ಚೌ/೧-೫)

**ದೋ – ಹರಷಿತ ಗುರ ಪರಿಜನ ಅನುಜ ಭೂಸುರ ಬೃಂದ ಸಮೇತ ।**
**ಚಲೇ ಭರತ ಮನ ಪ್ರೇಮ ಅತಿ ಸನ್ಮುಖ ಕೃಪಾನಿಕೇತ ॥ ೩(ಕ)॥**
**ಬಹುತಕ ಚಢೀಂ ಅಟಾರಿನ್ಹ ನಿರಖಹಿಂ ಗಗನ ಬಿಮಾನ ।**
**ದೇಖಿ ಮಧುರ ಸುರ ಹರಷಿತ ಕರಹಿಂ ಸುಮಂಗಲ ಗಾನ ॥ ೩(ಖ)॥**
**ರಾಕಾ ಸಸಿ ರಘುಪತಿ ಪುರ ಸಿಂಧು ದೇಖಿ ಹರಷಾನ ।**
**ಬಢ್ಯೋ ಕೊಲಾಹಲ ಕರತ ಜನು ನಾರಿ ತರಂಗ ಸಮಾನ ॥ ೩(ಗ)॥**

ಗುರುಗಳಾದ ವಸಿಷ್ಠರು, ಆತ್ಮೀಯ ಪರಿಜನರು, ತಮ್ಮನಾದ ಶತ್ರುಘ್ನನು, ಭೂಸುರ-ಸಮೂಹದೊಂದಿಗೆ ಹರ್ಷಿತನಾದ ಭರತನು ಅತ್ಯಂತ ಪ್ರೇಮಪೂರ್ಣಹೃದಯದಿಂದ ಕೃಪಾನಿಧಾನನಾದ ಶ್ರೀರಾಮನಿಗೆ ಸ್ವಾಗತಕೋರಲು ಭಕ್ತಿ-ಪರಿಪೂರ್ಣರಾಗಿ ಹೊರಟರು. ಬಹುಮಂದಿ ಸ್ತ್ರೀಯರು ಉಪ್ಪರಿಗೆಗಳನ್ನು ಏರಿ ಆಗಸದಲ್ಲಿ ಬರುತ್ತಿದ್ದ ವಿಮಾನವನ್ನು ವೀಕ್ಷಿಸತೊಡಗಿದರು. ಅದು ಗೋಚರಿಸುತ್ತಲೇ ಅವರು ಹರ್ಷಿತರಾಗಿ ಮಧುರವಾಗಿ ಮಂಗಳಗೀತೆಗಳನ್ನು ಹಾಡತೊಡಗಿದರು. ಶ್ರೀರಾಮನೇ ಹುಣ್ಣಿಮೆಯ ಚಂದ್ರ, ಅಯೋಧ್ಯೆಯೇ ಸಮುದ್ರ. ಆ ಪೂರ್ಣಚಂದ್ರನನ್ನು ಕಂಡು ಅದು ಹಿಗ್ಗಿ ಅಬ್ಬರಿಸುತ್ತಾ, ಮೊರೆಯುತ್ತಾ ಉಬ್ಬರವೆದ್ದಿತು. ಅತ್ತಿತ್ತ ಓಡಾಡುತ್ತಿರುವ ಸ್ತ್ರೀಯರೇ ಆ ಸಾಗರದ ಅಲೆಗಳು. (ದೋ/೩ ಕ, ಖ, ಗ)

**ಚೌ – ಇಹಾಂ ಭಾನುಕುಲ ಕಮಲ ದಿವಾಕರ । ಕಪಿನ್ಹ ದೆಖಾವತ ನಗರ ಮನೋಹರ ॥**
**ಸುನು ಕಪೀಸ ಅಂಗದ ಲಂಕೇಸಾ । ಪಾವನ ಪುರೀ ರುಚಿರ ಯಹ ದೇಸಾ ॥ ೧ ॥**
**ಜದ್ಯಪಿ ಸಬ ಬೈಕುಂಠ ಬಖಾನಾ । ಬೇದ ಪುರಾನ ಬಿದಿತ ಜಗು ಜಾನಾ ॥**
**ಅವಧಪುರೀ ಸಮ ಪ್ರಿಯ ನಹಿಂ ಸೋಊ । ಯಹ ಪ್ರಸಂಗ ಜಾನಇ ಕೊಉ ಕೋಊ ॥ ೨ ॥**
**ಜನ್ಮಭೂಮಿ ಮಮ ಪುರೀ ಸುಹಾವನಿ । ಉತ್ತರ ದಿಸಿ ಬಹ ಸರಜೂ ಪಾವನಿ ॥**
**ಜಾ ಮಜ್ಜನ ತೇ ಬಿನಹಿಂ ಪ್ರಯಾಸಾ । ಮಮ ಸಮೀಪ ನರ ಪಾವಹಿಂ ಬಾಸಾ ॥ ೩ ॥**
**ಅತಿ ಪ್ರಿಯ ಮೋಹಿ ಇಹಾಂ ಕೇ ಬಾಸೀ । ಮಮ ಧಾಮದಾ ಪುರೀ ಸುಖ ರಾಸೀ ॥**
**ಹರಷೇ ಸಬ ಕಪಿ ಸುನಿ ಪ್ರಭು ಬಾನೀ । ಧನ್ಯ ಅವಧ ಜೋ ರಾಮು ಬಖಾನೀ ॥ ೪ ॥**

ಇತ್ತ ವಿಮಾನದಲ್ಲಿ ಆಸೀನನಾದ, ಸೂರ್ಯವಂಶಭೂಷಣನಾದ ಶ್ರೀರಾಮನು ವಾನರರಿಗೆ ಮನೋಹರವಾದ ಅಯೋಧ್ಯಾನಗರವನ್ನು ತೋರಿಸುತ್ತಿರುವನು. ''ಓ ಸುಗ್ರೀವಾ! ಅಂಗದಾ! ಲಂಕಾಪತಿ ವಿಭೀಷಣಾ! ಕೇಳಿ. ಈ ಅಯೋಧ್ಯಾನಗರವು ಅತ್ಯಂತ ಪವಿತ್ರವಾಗಿದೆ. ಇದು ರುಚಿರ ರಮ್ಯನಾಡು. ಎಲ್ಲರೂ ವೈಕುಂಠವನ್ನು ಕೊಂಡಾಡುವರು. ಅದು ವೇದ-ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಜಗದ್ವಿಖ್ಯಾತವಾಗಿದೆ. ಆದರೆ ನನಗೆ ಮಾತ್ರ ವೈಕುಂಠಕ್ಕಿಂತಲೂ ಅಯೋಧ್ಯಾನಗರವೇ ಹೆಚ್ಚಿನ ಪ್ರೀತಿಪಾತ್ರವಾಗಿದೆ. ಈ ರಹಸ್ಯವನ್ನು ಎಲ್ಲೋ ಕೆಲವರು ಮಾತ್ರ ಬಲ್ಲರು. ಈ ಸುಂದರ ನಗರವು ನನ್ನ ಜನ್ಮಭೂಮಿ. ಇದರ ಉತ್ತರದಲ್ಲಿ ಲೋಕ-ಪಾವನೆಯಾದ ಸರಯೂನದಿಯು ಹರಿಯುತ್ತಿದೆ. ಇದರಲ್ಲಿ ಸ್ನಾನವನ್ನು ಮಾಡಿದವರು ಅನಾಯಾಸವಾಗಿ ನನ್ನ ಸಾಮಿಪ್ಯಮುಕ್ತಿಯನ್ನು ಹೊಂದುವರು. ಅಯೋಧ್ಯಾನಗರವಾಸಿಗಳು ನನಗೆ ಅತ್ಯಂತ ಪ್ರಿಯರಾಗಿರುವರು. ಈ ಪುರವು ಸರ್ವಸುಖರಾಶಿ ಮತ್ತು ನನ್ನ ಪರಮಧಾಮವನ್ನು ಕರುಣಿಸುವಂತಹುದು.'' ಪ್ರಭುವಿನ ವಚನಗಳನ್ನು ಕೇಳಿ ಎಲ್ಲ ವಾನರರು ಹರ್ಷಿತರಾದರು. 'ಶ್ರೀರಾಮಚಂದ್ರಪ್ರಭುವಿನ ಪ್ರಶಂಸೆಗೆ ಪಾತ್ರವಾದ ಈ ಅಯೋಧ್ಯಾನಗರವು ನಿಜವಾಗಿ ಧನ್ಯವಾಗಿದೆ' ಎಂದು ಹೇಳತೊಡಗಿದರು. (ಚೌ/೧-೪)

**ದೋ – ಆವತ ದೇಖಿ ಲೋಗ ಸಬ ಕೃಪಾಸಿಂಧು ಭಗವಾನ।**
**ನಗರ ನಿಕಟ ಪ್ರಭು ಪ್ರೇರೆಉ ಉತರೆಉ ಭೂಮಿ ಬಿಮಾನ॥ ೪(ಕ)॥**
**ಉತರಿ ಕಹೆಉ ಪ್ರಭು ಪುಷ್ಪಕಹಿ ತುಮ್ಹ ಕುಬೇರ ಪಹಿಂ ಜಾಹು।**
**ಪ್ರೇರಿತ ರಾಮ ಚಲೆಉ ಸೋ ಹರಷು ಬಿರಹು ಅತಿ ತಾಹು॥ ೪(ಖ)॥**

ಪ್ರಜೆಗಳೆಲ್ಲರೂ ತನ್ನನ್ನು ದರ್ಶಿಸಲು ಓಡೋಡಿ ಬರುತ್ತಿರುವುದನ್ನು ಕಂಡು, ಕೃಪಾಸಿಂಧುವಾದ ಶ್ರೀರಾಮಚಂದ್ರಪ್ರಭುವು ನಗರದ ಸಮೀಪವೇ ಇಳಿಯುವಂತೆ ವಿಮಾನಕ್ಕೆ ಆದೇಶಿಸಿದನು. ಆಗ ಅದು ನೆಲಕ್ಕಿಳಿಯಿತು. ಎಲ್ಲರೂ ವಿಮಾನದಿಂದ ಇಳಿದ ಬಳಿಕ ಪ್ರಭುವು ಪುಷ್ಪಕವನ್ನು ಕುರಿತು – 'ನೀನು ಇನ್ನು ಕುಬೇರನ ಬಳಿಗೆ ಹೋಗು' ಎಂದು ಆದೇಶಿಸಿದನು. ಶ್ರೀರಾಮನ ಆಜ್ಞೆಯಂತೆ ಅದು ಅಲಕಾಪುರಿಗೆ ಹೊರಟಿತು. ತನ್ನ ಒಡೆಯನ ಬಳಿಗೆ ಹೋಗುವ ಹರ್ಷವಾದರೆ, ಶ್ರೀರಾಮನಿಂದ ಅಗಲಿಹೋಗುವ ವಿರಹವೇದನೆಯಿಂದ ದುಃಖಿತವಾಗಿ ಅದು ಮೆಲ್ಲಗೆ ಮುಂದಕ್ಕೆ ಸಾಗಿತು. (ದೋ/೪ ಕ, ಖ)

**ಚೌ – ಆಏ ಭರತ ಸಂಗ ಸಬ ಲೋಗಾ। ಕೃಸ ತನ ಶ್ರೀರಘುಬೀರ ಬಿಯೋಗಾ॥**
**ಬಾಮದೇವ ಬಸಿಷ್ಟ ಮುನಿನಾಯಕ। ದೇಖೇ ಪ್ರಭು ಮಹಿ ಧರಿ ಧನು ಸಾಯಕ॥ ೧॥**
**ಧಾಇ ಧರೇ ಗುರ ಚರನ ಸರೋರುಹ। ಅನುಜ ಸಹಿತ ಅತಿ ಪುಲಕ ತನೋರುಹ॥**
**ಭೇಂಟಿ ಕುಸಲ ಬೂಝೀ ಮುನಿರಾಯಾ। ಹಮರೇಂ ಕುಸಲ ತುಮ್ಹಾರಿಹಿಂ ದಾಯಾ॥ ೨॥**
**ಸಕಲ ದ್ವಿಜನ್ಹ ಮಿಲಿ ನಾಯಉ ಮಾಥಾ। ಧರ್ಮ ಧುರಂಧರ ರಘುಕುಲನಾಥಾ॥**
**ಗಹೇ ಭರತ ಪುನಿ ಪ್ರಭು ಪದ ಪಂಕಜ। ನಮತ ಜಿನ್ಹಹಿ ಸುರ ಮುನಿ ಸಂಕರ ಅಜ॥ ೩॥**
**ಪರೇ ಭೂಮಿ ನಹಿಂ ಉಠತ ಉಠಾಏ। ಬರ ಕರಿ ಕೃಪಾಸಿಂಧು ಉರ ಲಾಏ॥**
**ಸ್ಯಾಮಲ ಗಾತ ರೋಮ ಭಏ ಠಾಢೇ। ನವ ರಾಜೀವ ನಯನ ಜಲ ಬಾಢೇ॥ ೪॥**

ಪ್ರಜಾಜನರೆಲ್ಲರೂ ಭರತನನ್ನು ಅನುಸರಿಸಿ ಬಂದರು. ಶ್ರೀರಘುವೀರನ ಅಗಲುವಿಕೆಯಿಂದ ಅವರೆಲ್ಲರ ದೇಹಗಳು ಕೃಶವಾಗಿದ್ದವು. ವಾಮದೇವ, ವಸಿಷ್ಠರು ಮೊದಲಾದ ಮುನೀಶ್ವರರನ್ನು ನೋಡಿ, ಪ್ರಭುವು ಧನುರ್ಬಾಣಗಳನ್ನು ನೆಲದಲ್ಲಿರಿಸಿ, ಸೋದರನಾದ ಲಕ್ಷ್ಮಣನೊಡನೆ ಓಡೋಡಿ ಬಂದು ಗುರುಗಳ ಚರಣಕಮಲಗಳಲ್ಲಿ ವಂದಿಸಿಕೊಂಡನು. ಅವನ ರೋಮ-ರೋಮವು ಪುಲಕಿತವಾಯಿತು. ಮುನಿಶ್ರೇಷ್ಠರಾದ ವಸಿಷ್ಠರು ಅವರನ್ನು ಬಾಚಿ ತಬ್ಬಿಕೊಂಡು, ಕುಶಲವನ್ನು ಕೇಳಿದರು. ''ನಿಮ್ಮ ಕೃಪೆಯಿಂದ ನಾವೆಲ್ಲರೂ ಕ್ಷೇಮವಾಗಿದ್ದೇವೆ'' ಎಂದು ಹೇಳಿದನು. ಧರ್ಮಧುರಂಧರನಾದ ರಘುಕುಲನಾಥನು ಎಲ್ಲ ಬ್ರಾಹ್ಮಣರನ್ನು ಕಂಡು ಅವರಿಗೆ ನಮಸ್ಕಾರಮಾಡಿದನು. ಮತ್ತೆ ದೇವತೆಗಳು, ಮುನಿಗಳು, ಬ್ರಹ್ಮರುದ್ರಾದಿಗಳು ಸೇವಿಸುವ ಪ್ರಭುಪಾದಗಳಿಗೆ ಭರತನು ವಂದಿಸಿದನು. ಪಾದಗಳಲ್ಲಿ ಬಿದ್ದಿದ್ದ ಭರತನು ಎಷ್ಟು ಎಬ್ಬಿಸಿದರೂ ಏಳಲೊಲ್ಲನು. ಆಗ ಕೃಪಾನಿಧಿಯಾದ ಶ್ರೀರಾಮನು ಬಲವಂತವಾಗಿ ಅವನನ್ನು ಮೇಲೆತ್ತಿ ತನ್ನ ಎದೆಗೆ ಅಪ್ಪಿಕೊಂಡನು. ಆತನ ಶ್ಯಾಮಲಶರೀರವು ರೋಮಾಂಚಿತವಾಯಿತು. ನವನೀರಜವಾದ ಕಣ್ಣುಗಳಲ್ಲಿ ಆನಂದಾಶ್ರುಗಳ ನೆರೆಯೇ ಬಂದುಬಿಟ್ಟಿತು. (ಚೌ/೧-೪)

**ಛಂ – ರಾಜೀವ ಲೋಚನ ಸ್ರವತ ಜಲ ತನ ಲಲಿತ ಪುಲಕಾವಲಿ ಬನೀ।**
**ಅತಿ ಪ್ರೇಮ ಹೃದಯಂ ಲಗಾಇ ಅನುಜಹಿ ಮಿಲೇ ಪ್ರಭು ತ್ರಿಭುಅನ ಧನೀ॥**
**ಪ್ರಭು ಮಿಲತ ಅನುಜಹಿ ಸೋಹ ಮೋ ಪಹಿಂ ಜಾತಿ ನಹಿಂ ಉಪಮಾ ಕಹೀ।**
**ಜನು ಪ್ರೇಮ ಅರು ಸಿಂಗಾರ ತನು ಧರಿ ಮಿಲೇ ಬರ ಸುಷಮಾ ಲಹೀ॥ ೧॥**
**ಬೂಝತ ಕೃಪಾನಿಧಿ ಕುಸಲ ಭರತಹಿ ಬಚನ ಬೇಗಿ ನ ಆವಈ।**
**ಸುನು ಸಿವಾ ಸೋ ಸುಖ ಬಚನ ಮನ ತೇ ಭಿನ್ನ ಜಾನ ಜೋ ಪಾವಈ॥**
**ಅಬ ಕುಸಲ ಕೌಸಲನಾಥ ಆರತ ಜಾನಿ ಜನ ದರಸನ ದಿಯೋ।**
**ಬೂಡತ ಬಿರಹ ಬಾರೀಸ ಕೃಪಾನಿಧಾನ ಮೋಹಿ ಕರ ಗಹಿ ಲಿಯೋ॥ ೨॥**

ರಾಜೀವನಯನಗಳಲ್ಲಿ ಕಂಬನಿ ಕೋಡಿ ಹರಿಯಿತು. ಭರತನ ಸುಂದರ ಶರೀರದಲ್ಲಿ ಪುಳಕಾವಳಿ ಕಂಗೊಳಿಸಿತ್ತು. ತ್ರೈಲೋಕ್ಯನಾಥನಾದ ಶ್ರೀರಾಮನು ತಮ್ಮನಾದ ಭರತನನ್ನು ಅತ್ಯಂತ ಪ್ರೇಮದಿಂದ ಆಲಿಂಗಿಸಿಕೊಂಡನು. ಭರತ-ರಾಮರ

ಮಿಲನಕ್ಕೆ ಕೊಡಬಹುದಾದ ಉಪಮೆ ನನ್ನ ಬಳಿ ಇಲ್ಲ. ಪ್ರೇಮವಾತ್ಸಲ್ಯಗಳೇ ಮೈವೆತ್ತಿಕೊಂಡು ಕಂಗೊಳಿಸಿದವೋ ಎಂಬಂತಿತ್ತು. ದಯಾನಿಧಿಯಾದ ಸ್ವಾಮಿಯು ಭರತನ ಯೋಗಕ್ಷೇಮವನ್ನು ವಿಚಾರಿಸಿದನು. ಆದರೆ ಆನಂದಪರವಶನಾದ್ದರಿಂದ ಭರತನ ಬಾಯಿಂದ ಮಾತೇ ಹೊರಡದು. ಶಿವನು ಹೇಳುತ್ತಾನೆ – ಪಾರ್ವತೀ! ಭರತನ ಆ ಸುಖವು ಮನವಚನಗಳಿಗೆ ಅತೀತವಾದುದು. ಅದು ಅನುಭವೈಕ ವೇದ್ಯವು. ಭರತನು ಹೇಳಿದನು – ''ಕೋಸಲನಾಥನೇ! ನನ್ನನ್ನು ಆರ್ತನೆಂದು ತಿಳಿದು ದಾಸನಿಗೆ ದರ್ಶನ ಕೊಟ್ಟಿರುವಿರಿ. ಆದ್ದರಿಂದ ನಾನು ಈಗ ಕ್ಷೇಮವೇ. ವಿರಹಸಮುದ್ರದಲ್ಲಿ ಮುಳುಗಿ ಹೋಗುತ್ತಿರುವ ನನ್ನನ್ನು ಕೃಪಾಳುವಿನಂತೆ ಕರಪಿಡಿದು ಎತ್ತಿ ಕಾಪಾಡಿದಿರಿ. (ಛಂ/೧-೨)

**ದೋ – ಪುನಿ ಪ್ರಭು ಹರಷಿ ಸತ್ರುಹನ ಭೇಂಟೇ ಹೃದಯಂ ಲಗಾಇ।**
**ಲಛಿಮನ ಭರತ ಮಿಲೇ ತಬ ಪರಮ ಪ್ರೇಮ ದೋಉ ಭಾಇ॥ ೫ ॥**

ಅನಂತರ ಪ್ರಭುವು ಹರ್ಷಿತನಾಗಿ ಶತ್ರುಘ್ನನನ್ನು ಅಕ್ಕರೆಯಿಂದ ಆಲಿಂಗಿಸಿಕೊಂಡನು. ಮತ್ತೆ ಲಕ್ಷ್ಮಣ-ಭರತರಿಬ್ಬರೂ ಅತ್ಯಂತ ಪ್ರೇಮದಿಂದ ಪರಸ್ಪರ ಆಲಿಂಗಿಸಿಕೊಂಡರು. (ದೋ/೫)

**ಚೌ – ಭರತಾನುಜ ಲಛಿಮನ ಪುನಿ ಭೇಂಟೇ। ದುಸಹ ಬಿರಹ ಸಂಭವ ದುಖ ಮೇಟೇ॥**
**ಸೀತಾ ಚರನ ಭರತ ಸಿರು ನಾವಾ। ಅನುಜ ಸಮೇತ ಪರಮ ಸುಖ ಪಾವಾ ॥ ೧ ॥**
**ಪ್ರಭು ಬಿಲೋಕಿ ಹರಷೇ ಪುರಬಾಸೀ। ಜನಿತ ಬಿಯೋಗ ಬಿಪತಿ ಸಬ ನಾಸೀ ॥**
**ಪ್ರೇಮಾತುರ ಸಬ ಲೋಗ ನಿಹಾರೀ। ಕೌತುಕ ಕೀನ್ಹ ಕೃಪಾಲ ಖರಾರೀ॥ ೨ ॥**
**ಅಮಿತ ರೂಪ ಪ್ರಗಟೇ ತೆಹಿ ಕಾಲಾ। ಜಥಾಜೋಗ ಮಿಲೆ ಸಬಹಿ ಕೃಪಾಲಾ ॥**
**ಕೃಪಾದೃಷ್ಟಿ ರಘುಬೀರ ಬಿಲೋಕೀ। ಕಿಏ ಸಕಲ ನರ ನಾರಿ ಬಿಸೋಕೀ ॥ ೩ ॥**
**ಛನ ಮಹಿಂ ಸಬಹಿ ಮಿಲೇ ಭಗವಾನಾ। ಉಮಾ ಮರಮ ಯಹ ಕಾಹುಂ ನ ಜಾನಾ ॥**
**ಎಹಿ ಬಿಧಿ ಸಬಹಿ ಸುಖೀ ಕರಿ ರಾಮಾ। ಆಗೇಂ ಚಲೇ ಸೀಲ ಗುನ ಧಾಮಾ ॥ ೪ ॥**
**ಕೌಸಲ್ಯಾದಿ ಮಾತು ಸಬ ಧಾಈ। ನಿರಖಿ ಬಚ್ಛ ಜನು ಧೇನು ಲವಾಈ॥ ೫ ॥**

ಬಳಿಕ ಲಕ್ಷ್ಮಣನು ಶತ್ರುಘ್ನನನ್ನು ಆಲಿಂಗಿಸಿಕೊಂಡು ವಿರಹದುಃಖವನ್ನು ಕಳೆದನು. ಮತ್ತೆ ತಮ್ಮನಾದ ಶತ್ರುಘ್ನನೊಂದಿಗೆ ಭರತನು ಸೀತಾದೇವಿಯ ಚರಣಗಳಿಗೆ ನಮಸ್ಕರಿಸಿ, ಪರಮಾನಂದಭರಿತರಾದರು. ಶ್ರೀರಾಮಚಂದ್ರಪ್ರಭುವನ್ನು ನೋಡಿ, ಅಯೋಧ್ಯಾವಾಸಿಗಳು ಆನಂದಮಗ್ನರಾದರು. ಅವರ ವಿರಹಜನಿತದುಃಖವು ಹೇಳಹೆಸರಿಲ್ಲದಂತೆ ಮಾಯವಾಯಿತು. ಪ್ರೇಮವಿಹ್ವಲರಾದ ಅವರನ್ನು ನೋಡಿ ದಯಾಳುವಾದ ಶ್ರೀರಾಮನು ಲೀಲೆಯೊಂದನ್ನು ತೋರಿದನು. ಒಂದೇ ಸಮಯದಲ್ಲಿ ಪ್ರಭುವು ಅನೇಕ ರೂಪಗಳಿಂದ ಪ್ರಕಟಿತನಾಗಿ ಪ್ರತಿಯೋರ್ವರಿಗೆ ಒಂದೇ ಸಮಯದಲ್ಲಿ ಅವರವರ ಯೋಗ್ಯತೆಗನುಗುಣವಾಗಿ ದರ್ಶನ ನೀಡಿದನು. ಶ್ರೀರಘುವೀರನು ದಯಾದೃಷ್ಟಿಯಿಂದ ಸ್ತ್ರೀ-ಪುರುಷರೆಲ್ಲರನ್ನು ಶೋಕರಹಿತರನ್ನಾಗಿಸಿದನು. ಭಗವಂತನು ಕ್ಷಣಮಾತ್ರದಲ್ಲಿ ಎಲ್ಲರೊಂದಿಗೆ ಭೆಟ್ಟಿಯಾದನು. ಉಮಾ! ಪ್ರತಿಯೋರ್ವರು 'ಪ್ರಭುವು ಮೊಟ್ಟಮೊದಲು ನನಗೆ ಭೆಟ್ಟಿಯಾದನು' ಎಂದು ಭಾವಿಸಿದರು. ಈ ರಹಸ್ಯಯಾರಿಗೂ ಗೊತ್ತಾಗಲಿಲ್ಲ. ಶೀಲಗುಣನಿಧಾನನಾದ ಶ್ರೀರಾಮಚಂದ್ರನು ಈ ವಿಧವಾಗಿ ಎಲ್ಲರನ್ನು ಸಂತೋಷಪಡಿಸಿ ಮುಂದಕ್ಕೆ ಸಾಗಿದನು. ಇಷ್ಟರಲ್ಲಿ ಕೌಸಲ್ಯಾದಿ ರಾಜಮಾತೆಯರು ಪ್ರಭುವನ್ನು ನೋಡಿ ಹಸುವು ಪುಟ್ಟ ಕರುವಿನ ಬಳಿಗೆ ಓಡಿಬರುವಂತೆ ಲಗುಬಗೆಯಿಂದ ಓಡೋಡಿ ಬಂದರು. (ಚೌ/೧-೫)

**ಛಂ – ಜನು ಧೇನು ಬಾಲಕ ಬಚ್ಛ ತಜಿ ಗೃಹಂ ಚರನ ಬನ ಪರಬಸ ಗಈಂ।**
**ದಿನ ಅಂತ ಪುರ ರುಖ ಸ್ರವತ ಥನ ಹುಂಕಾರ ಕರಿ ಧಾವತ ಭಈಂ॥**
**ಅತಿ ಪ್ರೇಮ ಪ್ರಭು ಸಬ ಮಾತು ಭೇಟೀಂ ಬಚನ ಮೃದು ಬಹುಬಿಧಿ ಕಹೇ।**
**ಗಇ ಬಿಷಮ ಬಿಪತಿ ಬಿಯೋಗ ಭವ ತಿನ್ಹ ಹರಷ ಸುಖ ಅಗನಿತ ಲಹೇ॥**

ಹೊಸದಾಗಿ ಈದ ಹಸುಗಳು ಕರುವನ್ನು ಮನೆಯಲ್ಲಿ ಬಿಟ್ಟು ಪರವಶವಾಗಿ ಕಾಡಿಗೆ ಮೇಯಲು ತೆರಳಿ, ಸಂಜೆಯಾದ ಮೇಲೆ ಕರುವನ್ನು ಕೂಡಿಕೊಳ್ಳಲು ಅಂಬಾ ಎನ್ನುತ್ತಾ ಮೊಲೆಗಳಿಂದ ಹಾಲನ್ನು ಸುರಿಸುತ್ತಾ ಊರಿನತ್ತ ಧಾವಿಸಿ ಬರುತ್ತಿರುವ ಗೋವುಗಳಂತೆ ರಾಜಮಾತೆಯರು ಅವರತ್ತ ಓಡಿದರು. ಪ್ರಭುವು ಅತ್ಯಂತ ಪ್ರೇಮದಿಂದ ಎಲ್ಲ ತಾಯಂದಿರನ್ನು ಸಂಧಿಸಿ, ಅನೇಕ ವಿಧವಾದ ಮೃದುಮಧುರ ವಚನಗಳನ್ನಾಡಿದನು. ವಿಯೋಗದಿಂದುಂಟಾದ ಭಯಾನಕ ವಿಪತ್ತು ದೂರವಾಗಿ, ರಾಮನ ನಲ್ಮಾತುಗಳಿಂದ ಅವನ ಭೆಟ್ಟಿಯಿಂದ ಅವರಿಗೆ ಅಪಾರ ಸುಖಸಂತೋಷವು ದೊರೆಯಿತು. (ಛಂದ)

**ದೋ – ಭೇಟೆಉ ತನಯ ಸುಮಿತ್ರಾಁ ರಾಮ ಚರನ ರತಿ ಜಾನಿ।**
**ರಾಮಹಿ ಮಿಲತ ಕೈಕಈ ಹೃದಯಁ ಬಹುತ ಸಕುಚಾನಿ ॥ ೬ (ಕ) ॥**
**ಲಛಿಮನ ಸಬ ಮಾತನ್ಹ ಮಿಲಿ ಹರಷೇ ಆಸಿಷ ಪಾಇ ।**
**ಕೈಕಇ ಕಹಁ ಪುನಿ ಪುನಿ ಮಿಲೇ ಮನ ಕರ ಛೋಭು ನ ಜಾಇ ॥ ೬(ಖ)॥**

ಶ್ರೀರಾಮನ ಚರಣದಲ್ಲಿ ಅಂಕಿತನಾದ ಲಕ್ಷ್ಮಣನನ್ನು ಸುಮಿತ್ರಾದೇವಿಯು ಅಪ್ಪಿಕೊಂಡಳು. ಕೈಕೆಯಿಯ ಮನಸ್ಸುಮಾತ್ರ ಶ್ರೀರಾಮನನ್ನು ಕಾಣಲು ತುಂಬಾ ಸಂಕೋಚಕ್ಕೆ ಒಳಗಾಯಿತು. ಲಕ್ಷ್ಮಣನು ಎಲ್ಲ ತಾಯಂದಿರನ್ನು ವಂದಿಸಿ ಅವರಿಂದ ಆಶೀರ್ವಾದ ಪಡೆದುಕೊಂಡು ಆನಂದಿತನಾದನು. ಅವನು ಕೈಕೆಯಿಯನ್ನು ಮತ್ತೆ-ಮತ್ತೆ ಕಂಡನು. ಆದರೆ ಆಕೆಯ ಬಗೆಗೆ ಆತನ ಮನಸ್ಸು ಮಾತ್ರ ಕುದಿಯುತ್ತಿತ್ತು. (ದೋ/೬ ಕ, ಖ)

**ಚೌ – ಸಾಸುನ್ಹ ಸಬನಿ ಮಿಲೀ ಬೈದೇಹೀ । ಚರನನ್ಹಿ ಲಾಗಿ ಹರಷು ಅತಿ ತೇಹೀ ॥**
**ದೇಹಿಁ ಅಸೀಸ ಬೂಝಿ ಕುಸಲಾತಾ । ಹೋಇ ಅಚಲ ತುಮ್ಹಾರ ಅಹಿವಾತಾ ॥ ೧ ॥**
**ಸಬ ರಘುಪತಿ ಮುಖ ಕಮಲ ಬಿಲೋಕಹಿಁ । ಮಂಗಲ ಜಾನಿ ನಯನ ಜಲ ರೋಕಹಿಁ ॥**
**ಕನಕ ಥಾರ ಆರತೀ ಉತಾರಹಿಁ । ಬಾರ ಬಾರ ಪ್ರಭು ಗಾತ ನಿಹಾರಹಿಁ ॥ ೨ ॥**
**ನಾನಾ ಭಾಁತಿ ನಿಛಾವರಿ ಕರಹೀಁ । ಪರಮಾನಂದ ಹರಷ ಉರ ಭರಹೀಁ ॥**
**ಕೌಸಲ್ಯಾ ಪುನಿ ಪುನಿ ರಘುಬೀರಹಿ । ಚಿತವತಿ ಕೃಪಾಸಿಂಧು ರನಧೀರಹಿ ॥ ೩ ॥**
**ಹೃದಯಁ ಬಿಚಾರತಿ ಬಾರಹಿಁ ಬಾರಾ । ಕವನ ಭಾಁತಿ ಲಂಕಾಪತಿ ಮಾರಾ ॥**
**ಅತಿ ಸುಕುಮಾರ ಜುಗಲ ಮೆರೆ ಬಾರೇ। ನಿಸಿಚರ ಸುಭಟ ಮಹಾಬಲ ಭಾರೇ ॥ ೪ ॥**

ಜಾನಕಿದೇವಿಯು ತನ್ನ ಎಲ್ಲ ಅತ್ತೆಯರನ್ನು ಕಂಡು, ಅಮಿತಾನಂದದಿಂದ ಅವರ ಪಾದಗಳಿಗೆ ಅಭಿವಾದನಗೈದಳು. ಅವರೆಲ್ಲರೂ ಅವಳ ಕುಶಲವನ್ನು ಕೇಳುತ್ತಾ– ''ದೀರ್ಘಸುಮಂಗಲೀಭವ'' ಎಂದು ಆಶೀರ್ವದಿಸಿದರು. ತಾಯಂದಿರೆಲ್ಲರೂ ಶ್ರೀರಘುನಾಥನ ಮುಖಕಮಲವನ್ನು ನೋಡುತ್ತಾ ಇದ್ದಾರೆ. ಅವರ ಕಂಗಳಲ್ಲಿ ಪ್ರೇಮಾಶ್ರುಗಳು ತುಂಬಿಬಂದವು. ಆದರೆ ಮಂಗಳ ಸಮಯವೆಂದರಿತು ಅವನ್ನು ತಡೆಯುತ್ತಿದ್ದರು. ಭಂಗಾರದ ಹರಿವಾಣಗಳಲ್ಲಿ ಆರತಿ ಎತ್ತಿದರು. ಮತ್ತೆ-ಮತ್ತೆ ಪ್ರಭುವಿನ ಮಂಗಳ ಶ್ರೀವಿಗ್ರಹವನ್ನು ನೋಡುತ್ತಿದ್ದರೂ ಕಣ್ಣು ತಣಿಯವು. ಅವರು ಶ್ರೀರಾಮನಿಗೆ ಅನೇಕ ವಿಧದಿಂದ ನಿವಾಳಿಸಿ ತೆಗೆದರು. ಅವರ ಹೃದಯ ಪರಮಾನಂದ ಭರಿತವಾಗಿತ್ತು. ಕೌಸಲ್ಯಾದೇವಿಯು ದಯಾಸಾಗರನೂ, ರಣಧೀರನೂ ಆದ ಶ್ರೀರಾಮನನ್ನು ಪದೇ-ಪದೇ ತದೇಕದೃಷ್ಟಿಯಿಂದ ನೋಡುತ್ತಿದ್ದಳು. ನನ್ನ ಇಬ್ಬರೂ ಕುಮಾರರು ಅತ್ಯಂತ ಸುಕುಮಾರರು. ಆ ರಾಕ್ಷಸರು ಮಹಾಸುಭಟರು, ಪ್ರಚಂಡಬಲಶಾಲಿಗಳು. ಅವರನ್ನೂ, ದುಷ್ಟ ರಾವಣನನ್ನೂ ಇವರು ಹೇಗೆ ವಧಿಸಿದರು? ಎಂದು ಆಲೋಚಿಸುವಳು. (ಚೌ/೧-೪)

**ದೋ – ಲಛಿಮನ ಅರು ಸೀತಾ ಸಹಿತ ಪ್ರಭುಹಿ ಬಿಲೋಕತಿ ಮಾತು ।**
**ಪರಮಾನಂದ ಮಗನ ಮನ ಪುನಿ ಪುನಿ ಪುಲಕಿತ ಗಾತು ॥ ೭ ॥**

ಸೀತಾಲಕ್ಷ್ಮಣಸಹಿತ ಶ್ರೀರಾಮಚಂದ್ರನನ್ನು ಕಣ್ತುಂಬಾ ನೋಡಿ ಕೌಸಲ್ಯಾದೇವಿಯ ಮನಸ್ಸು ಪರಮಾನಂದದಲ್ಲಿ ಮಗ್ನವಾಯಿತು. ಅವಳ ಶರೀರವು ಪದೇ-ಪದೇ ಪುಳಕಗೊಳ್ಳುತ್ತಿದೆ. (ದೋ/೭)

**ಚೌ – ಲಂಕಾಪತಿ ಕಪೀಸ ನಲ ನೀಲಾ । ಜಾಮವಂತ ಅಂಗದ ಸುಭಸೀಲಾ ॥**
**ಹನುಮದಾದಿ ಸಬ ಬಾನರ ಬೀರಾ । ಧರೇ ಮನೋಹರ ಮನುಜ ಸರೀರಾ ॥ ೧ ॥**
**ಭರತ ಸನೇಹ ಸೀಲ ಬ್ರತ ನೇಮಾ । ಸಾದರ ಸಬ ಬರನಹಿಁ ಅತಿ ಪ್ರೇಮಾ ॥**
**ದೇಖಿ ನಗರಬಾಸಿನ್ಹ ಕೈ ರೀತೀ । ಸಕಲ ಸರಾಹಹಿಁ ಪ್ರಭು ಪದ ಪ್ರೀತೀ ॥ ೨ ॥**
**ಪುನಿ ರಘುಪತಿ ಸಬ ಸಖಾ ಬೋಲಾಏ । ಮುನಿ ಪದ ಲಾಗಹು ಸಕಲ ಸಿಖಾಏ ॥**
**ಗುರ ಬಸಿಷ್ಟ ಕುಲಪೂಜ್ಯ ಹಮಾರೇ । ಇನ್ಹ ಕೀ ಕೃಪಾಁ ದನುಜ ರನ ಮಾರೇ ॥ ೩ ॥**
**ಏ ಸಬ ಸಖಾ ಸುನಹು ಮುನಿ ಮೇರೇ । ಭಏ ಸಮರ ಸಾಗರ ಕಹಁ ಬೇರೇ ॥**
**ಮಮ ಹಿತ ಲಾಗಿ ಜನ್ಮ ಇನ್ಹ ಹಾರೇ । ಭರತಹು ತೇ ಮೋಹಿ ಅಧಿಕ ಪಿಆರೇ ॥ ೪ ॥**
**ಸುನಿ ಪ್ರಭು ಬಚನ ಮಗನ ಸಬ ಭಏ । ನಿಮಿಷ ನಿಮಿಷ ಉಪಜತ ಸುಖ ನಏ ॥ ೫ ॥**

ಲಂಕಾಪತಿ ವಿಭೀಷಣ, ವಾನರರಾಜ ಸುಗ್ರೀವ, ನಳ, ನೀಲ, ಜಾಂಬವಂತ, ಅಂಗದ, ಹನುಮಂತನೇ ಮೊದಲಾದ ವೀರ ವಾನರಪ್ರಮುಖರೆಲ್ಲರೂ ಸುಂದರ ಮಾನವಾಕೃತಿಯನ್ನು ಧರಿಸಿದರು. ಅವರೆಲ್ಲರೂ ಭರತನ ಸ್ನೇಹ, ಶೀಲ, ವೈರಾಗ್ಯ, ವ್ರತ, ನೇಮಾದಿಗಳನ್ನು ಅತ್ಯಂತ ಪ್ರೇಮದಿಂದ ಕೊಂಡಾಡಿದರು. ಸಾಕೇತನಗರ ನಿವಾಸಿಗಳ ವಿನಯ, ಶೀಲ, ಪ್ರೇಮವನ್ನು ಕಂಡು, ಅವರಿಗೆ ಪ್ರಭುಚರಣಗಳಲ್ಲಿದ್ದ ಭಕ್ತಿ, ವಿಶ್ವಾಸವನ್ನು ಶ್ಲಾಘಿಸತೊಡಗಿದರು. ಬಳಿಕ ಶ್ರೀರಾಮನಾಥನು ತನ್ನ ಮಿತ್ರರೆಲ್ಲರನ್ನು ಕರೆದು – ''ವಸಿಷ್ಠ ಮುನೀಶ್ವರರ ಚರಣಗಳಿಗೆ ನಮಸ್ಕರಿಸಿರಿ'' ಎಂದು ಸೂಚಿಸಿದನು. ''ಇವರು ನಮ್ಮ ಕುಲಗುರುಗಳು, ಪೂಜ್ಯರೂ, ಇವರ ಕೃಪೆಯಿಂದಲೇ ಯುದ್ಧದಲ್ಲಿ ರಾಕ್ಷಸರನ್ನು ಸಂಹರಿಸಲು ಸಾಧ್ಯವಾಯಿತು'' ಎಂದು ಹೇಳಿದನು. ''ಮುನೀಶ್ವರರೇ! ಇವರೆಲ್ಲರೂ ನನ್ನ ಗೆಳೆಯರು. ಇವರೆಲ್ಲರೂ ಸಮರಸಾಗರವನ್ನು ದಾಟಲು ದೋಣಿಯಂತೆ ನನಗೆ ನೆರವಾದರು. ನನ್ನ ಹಿತಕ್ಕಾಗಿ ತಮ್ಮ ಪ್ರಾಣಗಳನ್ನೂ ಕೂಡ ಪಣಕ್ಕಿಟ್ಟು ಹೋರಾಡಿದರು. ಇವರು ನನಗೆ ಭರತನಿಗಿಂತಲೂ ಹೆಚ್ಚು ಪ್ರಿಯರಾಗಿದ್ದಾರೆ ಎಂದು ಗುರುಗಳಲ್ಲಿ ತಿಳಿಸಿದನು. ಪ್ರಭುವಿನ ವಚನವನ್ನು ಕೇಳಿ ಅವರೆಲ್ಲರೂ ಭಕ್ತಿಪರವಶರಾದರು. ಈ ವಿಧವಾಗಿ ಅವರು ಕ್ಷಣ-ಕ್ಷಣವೂ ಹೊಸ-ಹೊಸ ಸುಖಾನುಭೂತಿಯನ್ನು ಅನುಭವಿಸಿದರು. (ಚೌ/೧-೫)

**ದೋ – ಕೌಸಲ್ಯಾ ಕೇ ಚರನನ್ಹಿ ಪುನಿ ತಿನ್ಹ ನಾಯಉ ಮಾಥ ।**
**ಆಸಿಷ ದೀನ್ಹೇ ಹರಷಿ ತುಮ್ಹ ಪ್ರಿಯ ಮಮ ಜಿಮಿ ರಘುನಾಥ ॥ ೮ (ಕ) ॥**
**ಸುಮನ ಬೃಷ್ಟಿ ನಭ ಸಂಕುಲ ಭವನ ಚಲೇ ಸುಖಕಂದ ।**
**ಚಢೀ ಅಟಾರಿನ್ಹ ದೇಖಹಿಂ ನಗರ ನಾರಿ ನರ ಬೃಂದ ॥ ೮ (ಖ)॥**

ಬಳಿಕ ಆ ವಾನರರೆಲ್ಲರೂ ಕೌಸಲ್ಯಾದೇವಿಯ ಚರಣಗಳಿಗೆರಗಿದರು. ಆಕೆಯು ಹರ್ಷಿತಳಾಗಿ – ''ನೀವೆಲ್ಲರೂ ನನಗೆ ರಘುನಾಥನಿಗೆ ಸಮಾನವಾಗಿ ಪ್ರಿಯರಾದವರು' ಎಂದು ಹರಸಿದಳು. ಆನಂದಕಂದನಾದ ಶ್ರೀರಾಮಚಂದ್ರನು ತನ್ನ ರಾಜಭವನಕ್ಕೆ ತೆರಳುತ್ತಿರುವಂತೆ ಆಕಾಶದಿಂದ ಸುರಿದ ಪುಷ್ಪವೃಷ್ಟಿಯಿಂದ ನಗರವೆಲ್ಲ ತುಂಬಿಹೋಯಿತು. ನಗರದ ನರ-ನಾರಿಯರು ಉಪ್ಪರಿಗೆಗಳನ್ನೇರಿ ಶ್ರೀರಾಮನ ದರ್ಶನ ಮಾಡಿದರು. (ದೋ/೮ ಕ, ಖ)

**ಚೌ – ಕಂಚನ ಕಲಸ ಬಿಚಿತ್ರ ಸँವಾರೇ । ಸಬಹಿಂ ಧರೇ ಸಜಿ ನಿಜ ನಿಜ ದ್ವಾರೇ ॥**
**ಬಂದನವಾರ ಪತಾಕಾ ಕೇತೂ । ಸಬನ್ಹಿ ಬನಾಏ ಮಂಗಲ ಹೇತೂ ॥ ೧ ॥**
**ಬೀಥೀಂ ಸಕಲ ಸುಗಂಧ ಸಿँಚಾಈಂ । ಗಜಮನಿ ರಚಿ ಬಹು ಚೌಕ ಪುರಾಈಂ ॥**
**ನಾನಾ ಭಾँತಿ ಸುಮಂಗಲ ಸಾಜೇ । ಹರಷಿ ನಗರ ನಿಸಾನ ಬಹು ಬಾಜೇ ॥ ೨ ॥**
**ಜಹँ ತಹँ ನಾರಿ ನಿಛಾವರಿ ಕರಹೀಂ । ದೇಹಿಂ ಅಸೀಸ ಹರಷ ಉರ ಭರಹೀಂ ॥**
**ಕಂಚನ ಥಾರ ಆರತೀಂ ನಾನಾ । ಜುಬತೀಂ ಸಜೇಂ ಕರಹಿಂ ಸುಭ ಗಾನಾ ॥ ೩ ॥**
**ಕರಹಿಂ ಆರತೀ ಆರತಿಹರ ಕೇಂ । ರಘುಕುಲ ಕಮಲ ಬಿಪಿನ ದಿನಕರ ಕೇಂ॥**
**ಪುರ ಸೋಭಾ ಸಂಪತಿ ಕಲ್ಯಾನಾ । ನಿಗಮ ಸೇಷ ಸಾರದಾ ಬಖಾನಾ ॥ ೪ ॥**
**ತೇಉ ಯಹ ಚರಿತ ದೇಖಿ ಠಗಿ ರಹಹೀಂ । ಉಮಾ ತಾಸು ಗುನ ನರ ಕಿಮಿ ಕಹಹೀಂ॥ ೫ ॥**

ಅವರೆಲ್ಲರೂ ಕಾಂಚನಕಲಶಗಳನ್ನು ಮಣಿರತ್ನಾದಿಗಳಿಂದ ಅಲಂಕರಿಸಿ, ತಮ್ಮ-ತಮ್ಮ ಮನೆಬಾಗಿಲಿನಲ್ಲಿರಿಸಿದರು. ಮಂಗಳ ತಳಿರು-ತೋರಣಗಳಿಂದ, ಧ್ವಜ-ಪತಾಕೆಗಳಿಂದ ಮನೆಯನ್ನು ಅಲಂಕರಿಸಿದ್ದರು. ಬೀದಿ-ಬೀದಿಗಳಲ್ಲಿ ಸುಗಂಧ ದ್ರವ್ಯಗಳನ್ನೂ ಸಿಂಪಡಿಸಿದ್ದರು. ಅಂಗಳಗಳು ಗಜಮುತ್ತಿನ ರಂಗವಲ್ಲಿಗಳಿಂದ ಸಿಂಗರಿಸಿದ್ದವು. ಅನೇಕವಿಧವಾದ ಮಂಗಳ ಸಾಮಗ್ರಿಗಳು ಸಜ್ಜುಗೊಂಡವು. ಹರ್ಷದುಂದುಭಿಗಳು ಎಲ್ಲೆಲ್ಲೂ ಮೊಳಗಿದವು. ಎಲ್ಲಿ ನೋಡಿದರಲ್ಲಿ ಸ್ತ್ರೀಯರು ಶ್ರೀರಾಮನಿಗೆ ದೃಷ್ಟಿತೆಗೆದು ನಿವಾಳಿಸಿಬಿಡುತ್ತಿದ್ದರು. ಹರ್ಷೋತ್ಫುಲ್ಲರಾಗಿ ಹಾಡಿ ಹರಸುತ್ತಿದ್ದರು. ಅನೇಕ ಮಂದಿ ತರುಣಿಯರು ರತ್ನಾರತಿಯ ತಳಿಗೆಗಳನ್ನು ಅಣಿಮಾಡಿಕೊಂಡು ಸೋಬಾನೆ ಹಾಡುತ್ತಿದ್ದರು. ಅವರು ದುಃಖಗಳನ್ನು ಹರಿಸುವವನೂ, ಸೂರ್ಯವಂಶ ಕಮಲಕ್ಕೆ ದಿವಾಕರನೂ ಆದ ಶ್ರೀರಾಮನಿಗೆ ಆರತಿ ಎತ್ತುತ್ತಿದ್ದರು. ಆ ನಗರದ ಚೆಲುವನ್ನು, ವೈಭವಗಳನ್ನು, ಸೌಭಾಗ್ಯಗಳನ್ನು ವೇದಗಳು, ಆದಿಶೇಷನು, ಸರಸ್ವತಿದೇವಿಯು ಇವರು ಮಾತ್ರ ವರ್ಣಿಸಬಲ್ಲರು. ಆದರೆ ಅವರೂ ಕೂಡ ಈ ಕೌತುಕವನ್ನು ಕಂಡು ಚಕಿತರಾದರು. ಶಿವನು ಹೇಳುತ್ತಾನೆ – ಉಮೆ! ಹೀಗಿರುವಾಗ ಮನುಷ್ಯರು ವಾಣಿಯಿಂದ ಹೇಗೆ ವರ್ಣಿಸಬಲ್ಲರು? (ಚೌ/೧-೫)

**ದೋ – ನಾರಿ ಕುಮುದಿನೀಂ ಅವಧ ಸರ ರಘುಪತಿ ಬಿರಹ ದಿನೇಸ ।**
**ಅಸ್ತ ಭಏँ ಬಿಗಸತ ಭಈಂ ನಿರಖಿ ರಾಮ ರಾಕೇಸ ॥ ೯(ಕ) ॥**

**ಹೋಹಿಂ ಸಗುನ ಸುಭ ಬಿಬಿಧಿ ಬಿಧಿ ಬಾಜಹಿಂ ಗಗನ ನಿಸಾನ।**
**ಪುರ ನರ ನಾರಿ ಸನಾಥ ಕರಿ ಭವನ ಚಲೇ ಭಗವಾನ॥೯ (ಖ)॥**

ಅಯೋಧ್ಯೆಯೆಂಬ ಸರೋವರದಲ್ಲಿ ವನಿತೆಯರೇ ಕುಮುದಿನಿಯರು. ಶ್ರೀರಾಮವಿರಹವೆಂಬ ಸೂರ್ಯತಾಪದಿಂದ ಬಾಡಿಹೋಗಿದ್ದರು. ಈಗ ಆ ವಿರಹತಾಪವು ದೂರವಾಗಿ, ಶ್ರೀರಘುನಾಥನೆಂಬ ಪೂರ್ಣಚಂದ್ರನ ಕಿರಣಸ್ಪರ್ಶದಿಂದ ಆ ಕುಮುದಿನಿಯರು ವಿಕಸಿತಗೊಂಡರು. ಅನೇಕ ವಿಧವಾದ ಶುಭಶಕುನಗಳು ಗೋಚರಿಸಿದವು. ಆಗಸದಲ್ಲಿ ದೇವದುಂದುಭಿಗಳು ಮೊಳಗಿದವು. ನಗರದ ಸ್ತ್ರೀ-ಪುರುಷರೆಲ್ಲರನ್ನು ಧನ್ಯರಾಗಿಸಿ, ಶ್ರೀರಾಮಚಂದ್ರನು ತನ್ನ ಭವನಕ್ಕೆ ತೆರಳಿದನು. (ದೋ/೯ ಕ, ಖ)

**ಚೌ – ಪ್ರಭು ಜಾನೀ ಕೈಕಈ ಲಜಾನೀ। ಪ್ರಥಮ ತಾಸು ಗೃಹ ಗಏ ಭವಾನೀ॥**
**ತಾಹಿ ಪ್ರಬೋಧಿ ಬಹುತ ಸುಖ ದೀನ್ಹಾ। ಪುನಿ ನಿಜ ಭವನ ಗವನ ಹರಿ ಕೀನ್ಹಾ॥೧॥**
**ಕೃಪಾಸಿಂಧು ಜಬ ಮಂದಿರ ಗಏ। ಪುರ ನರ ನಾರಿ ಸುಖೀ ಸಬ ಭಏ॥**
**ಗುರ ಬಸಿಷ್ಟ ದ್ವಿಜ ಲಿಏ ಬುಲಾಈ। ಆಜು ಸುಘರೀ ಸುದಿನ ಸಮುದಾಈ॥೨॥**
**ಸಬ ದ್ವಿಜ ದೇಹು ಹರಷಿ ಅನುಸಾಸನ। ರಾಮಚಂದ್ರ ಬೈಠಹಿಂ ಸಿಂಘಾಸನ॥**
**ಮುನಿ ಬಸಿಷ್ಟ ಕೇ ಬಚನ ಸುಹಾಏ। ಸುನತ ಸಕಲ ಬಿಪ್ರನ್ಹ ಅತಿ ಭಾಏ॥೩॥**
**ಕಹಹಿಂ ಬಚನ ಮೃದು ಬಿಪ್ರ ಅನೇಕಾ। ಜಗ ಅಭಿರಾಮ ರಾಮ ಅಭಿಷೇಕಾ॥**
**ಅಬ ಮುನಿಬರ ಬಿಲಂಬ ನಹಿಂ ಕೀಜೈ। ಮಹಾರಾಜ ಕಹಁ ತಿಲಕ ಕರೀಜೈ॥೪॥**

ಶಿವನು ಹೇಳುತ್ತಾನೆ – ''ಭವಾನೀ! ಕೈಕೆಯಿಯು ಹೆಚ್ಚಾಗಿ ಲಜ್ಜಿತಳಾಗಿದ್ದಾಳೆಂಬ ವಿಷಯವನ್ನು ಪ್ರಭುವು ಅರಿತುಕೊಂಡನು. ಅದರಿಂದ ಪ್ರಭುವು ಮೊದಲಿಗೆ ಅವಳ ಭವನಕ್ಕೆ ಹೋದನು. ಅವಳನ್ನು ಅನೇಕವಿಧದಿಂದ ಸಮಾಧಾನಪಡಿಸಿ, ತೃಪ್ತಿಪಡಿಸಿದನು. ಅನಂತರ ಆ ಕೃಪಾನಿಧಿಯು ತನ್ನ ಭವನವನ್ನು ಹೊಕ್ಕನು. ಶ್ರೀರಾಮನು ತನ್ನ ಭವನವನ್ನು ಪ್ರವೇಶಿಸುತ್ತಿರುವಂತೆ ಅಯೋಧ್ಯೆಯ ಎಲ್ಲ ಸ್ತ್ರೀ-ಪುರುಷರು ಸಂತುಷ್ಟರಾದರು. ಗುರುಗಳಾದ ವಸಿಷ್ಠರು ಬ್ರಾಹ್ಮಣರನ್ನು ಕರೆಸಿ ''ಇಂದು ತಿಥಿ, ವಾರ, ನಕ್ಷತ್ರ, ಯೋಗ ಹೀಗೆ ಎಲ್ಲವೂ ಶುಭವಾಗಿದೆ. ನೀವೆಲ್ಲ ವಿಪ್ರರು ಹರ್ಷದಿಂದ ಅಪ್ಪಣೆ ನೀಡಿದರೆ ಶ್ರೀರಾಮಚಂದ್ರನ ಪಟ್ಟಾಭಿಷೇಕವನ್ನು ನೆರವೇರಿಸಬಹುದು'' ಎಂದು ವಿನಂತಿಸಿಕೊಂಡರು. ವಸಿಷ್ಠಮಹರ್ಷಿಯು ಹೇಳಿದ ಮಧುರವಚನಗಳನ್ನು ಕೇಳಿ ಬ್ರಾಹ್ಮಣರೆಲ್ಲರೂ ಪರಮಾನಂದಭರಿತರಾದರು. ಅವರೆಲ್ಲರು ಮೃದುಮಧುರವಾಗಿ ಇಂತೆಂದರು – ''ಶ್ರೀರಾಮಚಂದ್ರನ ರಾಜ್ಯಾಭಿಷೇಕವು ಇಡೀ ವಿಶ್ವಕ್ಕೆ ಆನಂದದಾಯಕವಾದುದು. ಮುನೀಶ್ವರಾ! ಇನ್ನು ತಾವು ತಡಮಾಡಬೇಡಿರಿ. ಮಹಾರಾಜಾ! ಶ್ರೀರಾಮನಿಗೆ ಕೂಡಲೇ ಪಟ್ಟಾಭಿಷೇಕ ನೆರವೇರಿಸಿರಿ.'' (ಚೌ/೧-೪)

**ದೋ – ತಬ ಮುನಿ ಕಹೆಉ ಸುಮಂತ್ರ ಸನ ಸುನತ ಚಲೆಉ ಹರಷಾಇ।**
**ರಥ ಅನೇಕ ಬಹು ಬಾಜಿ ಗಜ ತುರತ ಸँವಾರೇ ಜಾಇ॥೧೦ (ಕ)॥**
**ಜಹँ ತಹँ ಧಾವನ ಪಠಇ ಪುನಿ ಮಂಗಲ ದ್ರಬ್ಯ ಮಗಾಇ।**
**ಹರಷ ಸಮೇತ ಬಸಿಷ್ಟ ಪದ ಪುನಿ ಸಿರು ನಾಯಉ ಆಇ॥೧೦(ಖ)॥**

ಆಗ ವಸಿಷ್ಠಮಹಾಮುನಿಗಳು ಸುಮಂತ್ರನ ಬಳಿ – ಶ್ರೀರಾಮನ ಪಟ್ಟಾಭಿಷೇಕಕ್ಕೆ ಯೋಗ್ಯವಾದ ಏರ್ಪಾಡನ್ನು ಮಾಡಿರಿ ಎಂದು ಹೇಳಿದರು. ಆ ಮಾತು ಕೇಳಿದ ಕೂಡಲೇ ಅವನು ಹಿರಿ-ಹಿರಿ ಹಿಗ್ಗಿದನು. ಅನೇಕ ರಥ, ಗಜ, ತುರಗಗಳನ್ನು ಅಲಂಕರಿಸಿ ಅಣಿಗೈಯ್ಯಲಾಯಿತು. ಎಲ್ಲ ಕಡೆಗೂ ಚಾರರ ಮೂಲಕ ಸೂಚನೆ ಕಳಿಸಲಾಯಿತು. ದೂತರನ್ನು ಕಳಿಸಿ ಮಂಗಳದ್ರವ್ಯಗಳನ್ನು, ಪವಿತ್ರ ತೀರ್ಥಜಲಗಳನ್ನು ತರಿಸಲಾಯಿತು. ಬಳಿಕ ಹರ್ಷದಿಂದ ಬಂದು ವಸಿಷ್ಠರ ಚರಣಗಳಿಗೆರಗಿದನು. (ದೋ/೧೦ ಕ, ಖ)

### ನವಾಹ್ನಪಾರಾಯಣದ ಎಂಟನೆಯ ವಿಶ್ರಾಮ

## ಶ್ರೀರಾಮಪಟ್ಟಾಭಿಷೇಕ

**ಚೌ – ಅವಧಪುರೀ ಅತಿ ರುಚಿರ ಬನಾಈ। ದೇವನ್ಹ ಸುಮನ ಬೃಷ್ಟಿ ಝರಿ ಲಾಈ॥**
**ರಾಮ ಕಹಾ ಸೇವಕನ್ಹ ಬುಲಾಈ। ಪ್ರಥಮ ಸಖನ್ಹ ಅನ್ಹವಾವಹು ಜಾಈ॥೧॥**
**ಸುನತ ಬಚನ ಜಹँ ತಹँ ಜನ ಧಾಏ। ಸುಗ್ರೀವಾದಿ ತುರತ ಅನ್ಹವಾಏ॥**
**ಪುನಿ ಕರುನಾನಿಧಿ ಭರತು ಹँಕಾರೇ। ನಿಜ ಕರ ರಾಮ ಜಟಾ ನಿರುಆರೇ॥೨॥**

**ಅನ್ಹವಾಏ ಪ್ರಭು ತೀನಿಉ ಭಾಈ । ಭಗತ ಬಛಲ ಕೃಪಾಲ ರಘುರಾಈ ॥**
**ಭರತ ಭಾಗ್ಯ ಪ್ರಭು ಕೋಮಲತಾಈ । ಸೇಷ ಕೋಟಿ ಸತ ಸಕಹಿಂ ನ ಗಾಈ ॥ ೩ ॥**
**ಪುನಿ ನಿಜ ಜಟಾ ರಾಮ ಬಿಬರಾಏ । ಗುರ ಅನುಸಾಸನ ಮಾಗಿ ನಹಾಏ ॥**
**ಕರಿ ಮಜ್ಜನ ಪ್ರಭು ಭೂಷನ ಸಾಜೇ । ಅಂಗ ಅನಂಗ ದೇಖಿ ಸತ ಲಾಜೇ ॥ ೪ ॥**

ಅಯೋಧ್ಯಾನಗರವು ಅತ್ಯಂತ ಅಂದವಾಗಿ ಅಲಂಕರಿಸಲ್ಪಟ್ಟಿತು. ಅಮರರು ನಿರಂತರ ಹೂವುಗಳ ಜಡಿಮಳೆ ಸುರಿಸಿದರು. ಶ್ರೀರಾಮಚಂದ್ರನು ಸೇವಕರನ್ನು ಕರೆಸಿ – 'ಮೊದಲಿಗೆ ನನ್ನ ಮಿತ್ರರಿಗೆ ಸ್ನಾನಮಾಡಿಸಿರಿ' ಎಂದು ಅಪ್ಪಣೆಯಿತ್ತನು. ಪ್ರಭುವಚನವನ್ನು ಕೇಳುತ್ತಲೇ ಸೇವಕರು ಅಲ್ಲಿಗಿಲ್ಲಿಗೆ ಓಡುತ್ತಾ ಹೋಗಿ ಸುಗ್ರೀವಾದಿಗಳಿಗೆ ಸ್ನಾನಮಾಡಿಸಿದರು. ಅನಂತರ ಕರುಣಾಳುವಾದ ಶ್ರೀರಾಮನು ಭರತನನ್ನು ಕರೆಸಿ, ತನ್ನ ಮೃದುವಾದ ಕರಕಮಲಗಳಿಂದ ಸ್ವತಃ ಆತನ ಜಟಾಜೂಟವನ್ನು ಬಿಡಿಸಿದನು. ಆ ಸಮಯದಲ್ಲಿ ರಾಮನ ಹೃದಯದಲ್ಲಿ ನೆಲೆಯಾಗಿ ನಿಂತ ಭರತನ ಕುರಿತಾದ ಅಪಾರಪ್ರೇಮವು ಉಕ್ಕಿ ಹರಿಯಿತು. ಬಳಿಕ ಭಕ್ತವತ್ಸಲನಾದ ರಘುನಾಥನು ತಮ್ಮ ಮೂವರು ಸಹೋದರರಿಗೆ ಅಭ್ಯಂಜನ ಮಾಡಿಸಿದನು. ಭರತನ ಭಾಗ್ಯವನ್ನು, ಪ್ರಭುವಿನ ಕಾರುಣ್ಯವನ್ನು ಶತಕೋಟಿ ಶೇಷರೂ ಕೂಡ ವರ್ಣಿಸಲಾರರು. ಅನಂತರ ಶ್ರೀರಾಮನು ತನ್ನ ಜಟಾಜೂಟವನ್ನು ಬಿಚ್ಚಿ, ಗುರುಗಳ ಅಪ್ಪಣೆಪಡೆದು ಮಂಗಲಸ್ನಾನವನ್ನು ಮಾಡಿದನು. ಸ್ನಾನಾನಂತರ ದಿವ್ಯಭೂಷಣಗಳನ್ನು ಧರಿಸಿದನು. ಪ್ರಭುವಿನ ಸುಶೋಭಿತ ಅಂಗಗಳನ್ನು ನೋಡಿ ಅಸಂಖ್ಯ ಕಾಮದೇವರು ನಾಚಿ ತಲೆತಗ್ಗಿಸಿದರು. (ಚೌ/೧-೪)

**ದೋ – ಸಾಸುನ್ಹ ಸಾದರ ಜಾನಕಿಹಿ ಮಜ್ಜನ ತುರತ ಕರಾಇ ।**
**ದಿಬ್ಯ ಬಸನ ಬರ ಭೂಷನ ಅँಗ ಅँಗ ಸಜೇ ಬನಾಇ ॥ ೧೧ (ಕ)॥**
**ರಾಮ ಬಾಮ ದಿಸಿ ಸೋಭತಿ ರಮಾ ರೂಪ ಗುನ ಖಾನಿ ।**
**ದೇಖಿ ಮಾತು ಸಬ ಹರಷೀಂ ಜನ್ಮ ಸುಫಲ ನಿಜ ಜಾನಿ ॥ ೧೧(ಖ)॥**
**ಸುನು ಖಗೇಸ ತೇಹಿ ಅವಸರ ಬ್ರಹ್ಮಾ ಸಿವ ಮುನಿ ಬೃಂದ ।**
**ಚಢಿ ಬಿಮಾನ ಆಏ ಸಬ ಸುರ ದೇಖನ ಸುಖಕಂದ ॥ ೧೧(ಗ)॥**

ಇತ್ತ ಸೀತಾದೇವಿಯನ್ನು ಅತ್ತೆಯಂದಿರು ಕೂಡಲೇ ಆದರದಿಂದ ಸ್ನಾನಮಾಡಿಸಿ, ದಿವ್ಯವಸ್ತ್ರಗಳನ್ನು ತೊಡಿಸಿ, ಪ್ರತಿಯೊಂದು ಅಂಗಗಳನ್ನು ಒಡವೆಗಳಿಂದ ಅಲಂಕರಿಸಿದರು. ಶ್ರೀರಾಮಚಂದ್ರನ ಎಡಭಾಗದಲ್ಲಿ ರೂಪಗುಣಗಳ ರಾಶಿಯಾದ ಸೀತಾದೇವಿಯು ಶೋಭಿಸಿದಳು. ಅವರನ್ನು ಕಂಡು ಎಲ್ಲ ತಾಯಂದಿರು ತಮ್ಮ ಜನ್ಮ ಸಾರ್ಥಕವಾಯಿತೆಂದುಕೊಂಡು ಸಂತೋಷಪಟ್ಟರು.

ಕಾಕಭುಶುಂಡಿಯರು ಹೇಳುತ್ತಾರೆ – ಓ ಪಕ್ಷಿರಾಜಾ! ಗರುಡಾ! ಕೇಳು. ಮಂಗಳ ಮುಹೂರ್ತಕ್ಕೆ ಸರಿಯಾಗಿ ಬ್ರಹ್ಮದೇವರು, ಪರಶಿವನು, ಮುನಿವೃಂದ, ವಿಮಾನಾರೂಢರಾಗಿ ಎಲ್ಲ ದೇವತೆಗಳು ಆನಂದಕಂದನಾದ ಭಗವಂತನ ದರ್ಶನಕ್ಕಾಗಿ ಆಗಮಿಸಿದರು. (ದೋ/೧೧ ಕ, ಖ, ಗ)

**ಚೌ – ಪ್ರಭು ಬಿಲೋಕಿ ಮುನಿ ಮನ ಅನುರಾಗಾ । ತುರತ ದಿಬ್ಯ ಸಿಂಘಾಸನ ಮಾಗಾ ॥**
**ರಬಿ ಸಮ ತೇಜ ಸೊ ಬರನಿ ನ ಜಾಈ । ಬೈಠೇ ರಾಮ ದ್ವಿಜನ್ಹ ಸಿರು ನಾಈ ॥ ೧ ॥**
**ಜನಕಸುತಾ ಸಮೇತ ರಘುರಾಈ । ಪೇಖಿ ಪ್ರಹರಷೇ ಮುನಿ ಸಮುದಾಈ ॥**
**ಬೇದ ಮಂತ್ರ ತಬ ದ್ವಿಜನ್ಹ ಉಚಾರೇ । ನಭ ಸುರ ಮುನಿ ಜಯ ಜಯತಿ ಪುಕಾರೇ ॥ ೨ ॥**
**ಪ್ರಥಮ ತಿಲಕ ಬಸಿಷ್ಟ ಮುನಿ ಕೀನ್ಹಾ । ಪುನಿ ಸಬ ಬಿಪ್ರನ್ಹ ಆಯಸು ದೀನ್ಹಾ ॥**
**ಸುತ ಬಿಲೋಕಿ ಹರಷೀಂ ಮಹತಾರೀ । ಬಾರ ಬಾರ ಆರತೀ ಉತಾರೀ ॥ ೩ ॥**
**ಬಿಪ್ರನ್ಹ ದಾನ ಬಿಬಿಧ ಬಿಧಿ ದೀನ್ಹೇ । ಜಾಚಕ ಸಕಲ ಅಜಾಚಕ ಕೀನ್ಹೇ ॥**
**ಸಿಂಘಾಸನ ಪರ ತ್ರಿಭುಅನ ಸಾಈಂ । ದೇಖಿ ಸುರನ್ಹ ದುಂದುಭೀಂ ಬಜಾಈ ॥ ೪ ॥**

ಶ್ರೀರಾಮಚಂದ್ರನನ್ನು ನೋಡಿ ವಸಿಷ್ಠಮಹರ್ಷಿಯು ಪರಮಾನಂದಭರಿತರಾದರು. ಅವರು ಕೂಡಲೇ ದಿವ್ಯ ಸಿಂಹಾಸನವನ್ನು ತರಿಸಿದರು. ಅದು ಸೂರ್ಯತೇಜಸ್ಸಿಗಿಂತಲೂ ಹೆಚ್ಚು ಪ್ರಕಾಶಿಸುತ್ತಿತ್ತು. ಅದರ ಸೌಂದರ್ಯವು ವರ್ಣನಾತೀತ. ಶ್ರೀರಾಮಚಂದ್ರಪ್ರಭುವು ವಿಪ್ರರಿಗೆ ತಲೆವಾಗಿ ಆ ಸಿಂಹಾಸನದ ಮೇಲೆ ಆಸೀನನಾದನು. ಜನಕಸುತೆಯಾದ ಜಾನಕಿಸಹಿತ

ಶ್ರೀರಾಮಚಂದ್ರನನ್ನು ನೋಡಿ ಮುನಿಸಮುದಾಯವು ಅತ್ಯಂತ ಹರ್ಷಗೊಂಡಿತು. ಬ್ರಾಹ್ಮಣರು ವೇದಮಂತ್ರಂಗಳನ್ನು ಪಠಿಸಿದರು. ಆಗಸದಲ್ಲಿ ದೇವತೆಗಳು, ಮುನಿಗಳು 'ಶ್ರೀರಾಮನಿಗೆ ಜಯವಾಗಲಿ ಜಯವಾಗಲಿ' ಎಂದು ಜಯಕಾರ ಮಾಡತೊಡಗಿದರು. ಮೊಟ್ಟಮೊದಲು ವಸಿಷ್ಠ ಮಹಾಮುನಿಗಳು ಪಟ್ಟಾಭಿಷೇಕಗೈದು ತಿಲಕವನ್ನಿಟ್ಟರು. ಬಳಿಕ ಎಲ್ಲ ವಿಪ್ರವೃಂದಕ್ಕೂ ಅಭಿಷೇಕಮಾಡಿ ತಿಲಕವಿಡುವಂತೆ ಆದೇಶಿಸಿದರು. ಪುತ್ರನ ಪಟ್ಟಾಭಿಷೇಕ ಮಹೋತ್ಸವವನ್ನು ಕಂಡು ತಾಯಂದಿರು ಪರಮಾನಂದವನ್ನು ಹೊಂದಿ ಮತ್ತೆ-ಮತ್ತೆ ರಾಮನಿಗೆ ಮಂಗಳಾರತಿ ಎತ್ತಿದರು. ಶ್ರೀರಾಮನು ಬ್ರಾಹ್ಮಣರಿಗೆ ಬಗೆಬಗೆಯಾದ ದಾನಗಳನ್ನು ಇತ್ತನು. ಯಾಚಕರನ್ನುತೃಪ್ತಿಪಡಿಸಿ, ಅಯಾಚರನ್ನಾಗಿಸಿದನು. ತ್ರೈಲೋಕ್ಯನಾಥನಾದ ರಘುನಾಥನು ಅಯೋಧ್ಯೆಯ ಸಿಂಹಾಸನದಲ್ಲಿ ವಿರಾಜಿಸುತ್ತಿರುವುದನ್ನು ಕಂಡು ದೇವತೆಗಳು ದುಂದುಭಿಗಳನ್ನು ಮೊಳಗಿಸಿದರು. (ಚೌ/೧-೪)

**ಛಂ – ನಭ ದುಂದುಭೀಂ ಬಾಜಹಿಂ ಬಿಪುಲ ಗಂಧರ್ಬ ಕಿನ್ನರ ಗಾವಹೀಂ।**
**ನಾಚಹಿಂ ಅಪಛರಾ ಬೃಂದ ಪರಮಾನಂದ ಸುರ ಮುನಿ ಪಾವಹೀಂ॥**
**ಭರತಾದಿ ಅನುಜ ಬಿಭೀಷನಾಂಗದ ಹನುಮದಾದಿ ಸಮೇತ ತೇ।**
**ಗಹೇಂ ಛತ್ರ ಚಾಮರ ಬ್ಯಜನ ಧನು ಅಸಿ ಚರ್ಮ ಸಕ್ತಿ ಬಿರಾಜತೇ॥ ೧ ॥**
**ಶ್ರೀ ಸಹಿತ ದಿನಕರ ಬಂಸ ಭೂಷನ ಕಾಮ ಬಹು ಛಬಿ ಸೋಹಈ।**
**ನವ ಅಂಬುಧರ ಬರ ಗಾತ ಅಂಬರ ಪೀತ ಸುರ ಮನ ಮೋಹಈ॥**
**ಮುಕುಟಾಂಗದಾದಿ ಬಿಚಿತ್ರ ಭೂಷನ ಅಂಗ ಅಂಗನ್ಹಿ ಪ್ರತಿ ಸಜೇ।**
**ಅಂಭೋಜ ನಯನ ಬಿಸಾಲ ಉರ ಭುಜ ಧನ್ಯ ನರ ನಿರಖಂತಿ ಜೇ॥ ೨ ॥**

ಆಕಾಶದಲ್ಲಿ ಅನೇಕಾನೇಕ ದೇವದುಂದುಭಿಗಳು ಮೊಳಗಿದವು. ಗಂಧರ್ವರು, ಕಿನ್ನರರು ಪ್ರಭುವಿನ ಯಶೋವೈಭವವನ್ನು ಕೀರ್ತಿಸಿದರು. ದಿವ್ಯಾಂಗನೆಯರು ನಾಟ್ಯವಾಡಿದರು. ಸುರ-ಮುನಿಗಳು ಪರಮಾನಂದ ಭರಿತರಾದರು. ಭರತ, ಶತ್ರುಘ್ನ, ವಿಭೀಷಣ, ಅಂಗದ, ಹನುಮಂತ, ಸುಗ್ರೀವ ಇವರುಗಳು ಕ್ರಮವಾಗಿ ಛತ್ರ, ಚಾಮರ, ವ್ಯಜನ, ಧನುಸ್ಸು, ಖಡ್ಗ, ಗುರಾಣಿ, ಶಕ್ತ್ಯಾಯುಧಪಾಣಿಯಾಗಿ ಪ್ರಭುವನ್ನು ಸೇವಿಸುತ್ತಿರುವರು. ॥ ೧॥ ಸೂರ್ಯವಂಶಭೂಷಣನಾದ ಶ್ರೀರಾಮಚಂದ್ರನು ಸೀತೆಯೊಡಗೂಡಿ ಕೋಟಿಮನ್ಮಥರ ಸೌಂದರ್ಯದಿಂದ ಶೋಭಿಸುತ್ತಿದ್ದನು. ಆ ನವಮೇಘಶ್ಯಾಮಸುಂದರ ಶರೀರದ ಮೇಲೆ ವಿರಾಜಿಸುತ್ತಿರುವ ದಿವ್ಯಪೀತಾಂಬರವು ದೇವತೆಗಳ ಮನಸ್ಸನ್ನು ಸೂರೆಗೊಂಡಿತು. ಮಸ್ತಕದಲ್ಲಿ ಮಣಿಮಯ ಕಿರೀಟ, ಬಾಹುಗಳಲ್ಲಿ ಭುಜಕೀರ್ತಿಗಳೇ ಮುಂತಾದ ಅದ್ಭುತ ಆಭರಣಗಲು ಸರ್ವಾಂಗದಲ್ಲಿ ಅಲಂಕರಿಸಲ್ಪಟ್ಟಿದ್ದವು. ಇಂತಹ ಪ್ರಭುವಿನ ಕಮಲದಳದಂತಿರುವ ವಿಶಾಲನೇತ್ರಗಳನ್ನು, ವಿಶಾಲವಕ್ಷಸ್ಥಳವನ್ನು, ಆಜಾನುಭುಜಗಳನ್ನು ದರ್ಶಿಸಿದ ಮಾನವರ ಜನ್ಮವು ಧನ್ಯವಾಯಿತು. ॥ ೨॥ (ಛಂ/೧-೨)

**ದೋ – ವಹ ಸೋಭಾ ಸಮಾಜ ಸುಖ ಕಹತ ನ ಬನಇ ಖಗೇಸ।**
**ಬರನಹಿಂ ಸಾರದ ಸೇಷ ಶ್ರುತಿ ಸೋ ರಸ ಜಾನ ಮಹೇಸ॥ ೧೨ (ಕ)॥**
**ಭಿನ್ನ ಭಿನ್ನ ಅಸ್ತುತಿ ಕರಿ ಗಏ ಸುರ ನಿಜ ನಿಜ ಧಾಮ।**
**ಬಂದೀ ಬೇಷ ಬೇದ ತಬ ಆಏ ಜಹ್ ಶ್ರೀರಾಮ॥ ೧೨(ಖ)॥**
**ಪ್ರಭು ಸರ್ಬಗ್ಯ ಕೀನ್ಹ ಅತಿ ಆದರ ಕೃಪಾನಿಧಾನ।**
**ಲಖೆಉ ನ ಕಾಹೂಂ ಮರಮ ಕಛು ಲಗೇ ಕರನ ಗುನ ಗಾನ॥ ೧೨ (ಗ)॥**

ಕಾಕಭುಶುಂಡಿಯರು ಹೇಳುತ್ತಾರೆ – ಓ ಪಕ್ಷಿರಾಜಾ, ಗರುಡಾ! ಆ ದೃಶ್ಯಶೋಭೆ, ಆ ಸಮಾಜದ ವೈಶಿಷ್ಟ್ಯ, ಆ ಸಂದರ್ಭವಿಶೇಷತೆ ವರ್ಣನಾತೀತವು. ಇವುಗಳನ್ನು ನನ್ನಿಂದ ವರ್ಣಿಸಲಸದಳ. ವೇದಗಳು, ಆದಿಶೇಷನು, ಸರಸ್ವತಿದೇವಿಯು ಅದನ್ನು ನಿರಂತರವೂ ವರ್ಣಿಸುತ್ತಿರುವರು. ಅದರ ರಸಾನಂದವನ್ನು ಪರಮೇಶ್ವರನೊಬ್ಬನೇ ಬಲ್ಲನು. ದೇವತೆಗಳೆಲ್ಲರೂ ವಿಧ-ವಿಧವಾಗಿ ಸ್ತುತಿಸಿ, ತಮ್ಮ-ತಮ್ಮ ಸ್ಥಾನಗಳಿಗೆ ತೆರಳಿದರು. ಆಗ ವೇದಪುರುಷರು ವಂದಿಮಾಗಧರ ವೇಷದಿಂದ ಶ್ರೀರಾಮನಿದ್ದಲ್ಲಿಗೆ ಬಂದರು. ಕೃಪಾನಿಧಿಯೂ, ಸರ್ವಜ್ಞನೂ ಆದ ಪ್ರಭುವು ಅವರನ್ನು ಗುರುತಿಸಿ ಆದರದಿಂದ ಸ್ವಾಗತಿಸಿದನು. ಬಂದವರು ವೇದಪುರುಷರೆಂಬ ರಹಸ್ಯವು ಪ್ರಭುವಿಗಲ್ಲದೆ ಬೇರೆ ಯಾರಿಗೂ ಅರಿವಾಗಲಿಲ್ಲ. ಅವರು ಪ್ರಭುವಿನ ಗುಣಗಾನ ಮಾಡತೊಡಗಿದರು. (ದೋ/೧೨ ಕ, ಖ, ಗ)

# ವೇದಸ್ತುತಿ

ಛಂ – ಜಯ ಸಗುನ ನಿರ್ಗುನ ರೂಪ ರೂಪ ಅನೂಪ ಭೂಪ ಸಿರೋಮನೇ ।
ದಸಕಂಧರಾದಿ ಪ್ರಚಂಡ ನಿಸಿಚರ ಪ್ರಬಲ ಖಲ ಭುಜ ಬಲ ಹನೇ॥
ಅವತಾರ ನರ ಸಂಸಾರ ಭಾರ ಬಿಭಂಜಿ ದಾರುನ ದುಖ ದಹೇ।
ಜಯ ಪ್ರನತಪಾಲ ದಯಾಲ ಪ್ರಭು ಸಂಜುಕ್ತ ಸಕ್ತಿ ನಮಾಮಹೇ॥ ೧ ॥
ತವ ಬಿಷಮ ಮಾಯಾ ಬಸ ಸುರಾಸುರ ನಾಗ ನರ ಅಗ ಜಗ ಹರೇ।
ಭವ ಪಂಥ ಭ್ರಮತ ಅಮಿತ ದಿವಸ ನಿಸಿ ಕಾಲ ಕರ್ಮ ಗುನನಿ ಭರೇ॥
ಜೇ ನಾಥ ಕರಿ ಕರುನಾ ಬಿಲೋಕೇ ತ್ರಿಬಿಧಿ ದುಖ ತೇ ನಿರ್ಬಹೇ।
ಭವ ಖೇದ ಛೇದನ ದಚ್ಛ ಹಮ ಕಹುँ ರಚ್ಛ ರಾಮ ನಮಾಮಹೇ॥ ೨ ॥
ಜೇ ಗ್ಯಾನ ಮಾನ ಬಿಮತ್ತ ತವ ಭವ ಹರನಿ ಭಕ್ತಿ ನ ಆದರೀ ।
ತೇ ಪಾಇ ಸುರ ದುರ್ಲಭ ಪದಾದಪಿ ಪರತ ಹಮ ದೇಖತ ಹರೀ॥
ಬಿಸ್ವಾಸ ಕರಿ ಸಬ ಆಸ ಪರಿಹರಿ ದಾಸ ತವ ಜೇ ಹೋಇ ರಹೇ।
ಜಪಿ ನಾಮ ತವ ಬಿನು ಶ್ರಮ ತರಹಿँ ಭವ ನಾಥ ಸೋ ಸಮರಾಮಹೇ॥ ೩ ॥
ಜೇ ಚರನ ಸಿವ ಅಜ ಪೂಜ್ಯ ರಜ ಸುಭ ಪರಸಿ ಮುನಿಪತಿನೀ ತರೀ।
ನಖ ನಿರ್ಗತಾ ಮುನಿ ಬಂದಿತಾ ತ್ರೈಲೋಕ ಪಾವನಿ ಸುರಸರೀ॥
ಧ್ವಜ ಕುಲಿಸ ಅಂಕುಸ ಕಂಜ ಜುತ ಬನ ಫಿರತ ಕಂಟಕ ಕಿನ ಲಹೇ।
ಪದ ಕಂಜ ದ್ವಂದ ಮುಕುಂದ ರಾಮ ರಮೇಸ ನಿತ್ಯ ಭಜಾಮಹೇ॥ ೪ ॥
ಅಬ್ಯಕ್ತಮೂಲಮನಾದಿ ತರು ತ್ವಚ ಚಾರಿ ನಿಗಮಾಗಮ ಭನೇ।
ಷಟ ಕಂಧ ಸಾಖಾ ಪಂಚ ಬೀಸ ಅನೇಕ ಪರ್ನ ಸುಮನ ಘನೇ॥
ಫಲ ಜುಗಲ ಬಿಧಿ ಕಟು ಮಧುರ ಬೇಲಿ ಅಕೇಲಿ ಜೆಹಿ ಆಶ್ರಿತ ರಹೇ।
ಪಲ್ಲವತ ಫೂಲತ ನವಲ ನಿತ ಸಂಸಾರ ಬಿಟಪ ನಮಾಮಹೇ॥ ೫ ॥
ಜೇ ಬ್ರಹ್ಮ ಅಜಮದ್ವೈತಮನುಭವಗಮ್ಯ ಮನಪರ ಧ್ಯಾವಹೀँ।
ತೇ ಕಹಹುँ ಜಾನಹುँ ನಾಥ ಹಮ ತವ ಸಗುನ ಜಸ ನಿತ ಗಾವಹೀँ॥
ಕರುನಾಯತನ ಪ್ರಭು ಸದಗುನಾಕರ ದೇವ ಯಹ ಬರ ಮಾಗಹೀँ।
ಮನ ಬಚನ ಕರ್ಮ ಬಿಕಾರ ತಜಿ ತವ ಚರನ ಹಮ ಅನುರಾಗಹೀँ॥ ೬ ॥

ಓ ಸಗುಣ ನಿರ್ಗುಣರೂಪಾ! ನಿರುಪಮ ಲಾವಣ್ಯಭೂಷಿತಾ! ಓ ರಾಜಶಿರೋಮಣಿ! ನಿನಗೆ ಜಯವಾಗಲೀ. ನೀನು ರಾವಣಾದಿ ಪ್ರಚಂಡ ಪ್ರಬಲ ದುಷ್ಟರಾಕ್ಷಸರನ್ನು ನಿನ್ನ ಬಾಹುಬಲದಿಂದ ವಧಿಸಿರುವೆ. ನೀನು ಮಾನವಾವತಾರವನ್ನು ತಳೆದು ಭೂಭಾರವನ್ನು ಕಳೆದು, ಅತ್ಯಂತ ದಾರುಣ ದುಃಖಗಳನ್ನು ಭಸ್ಮಮಾಡಿರುವೆ. ಓ ದಯಾಳೂ! ಪ್ರಣತಪಾಲಾ! ಪ್ರಭೂ! ನಿನಗೆ ಜಯವಾಗಲೀ. ಶಕ್ತಿ(ಸೀತಾದೇವಿ)ಯಿಂದೊಡಗೊಂಡ ಸರ್ವಸಮರ್ಥನಾದ ನಿನಗೆ ನಾವು ನಮಸ್ಕರಿಸುತ್ತೇವೆ. ॥ ೧॥ ಶ್ರೀಹರಿ! ನಿನ್ನ ದುಸ್ತರವಾದ ಮಾಯೆಗೆ ವಶರಾದ ದೇವತೆಗಳು, ರಾಕ್ಷಸರು, ನಾಗರು, ಮನುಷ್ಯರು, ಚರಾಚರಜೀವಿಗಳೆಲ್ಲವೂ ಕಾಲ, ಕರ್ಮ, ಗುಣಗಳಿಗೆ ಬಲಿಯಾಗಿ ಜನನ-ಮರಣರೂಪೀ ಭವಾಟವಿಯಲ್ಲಿ ಹಗಲು-ರಾತ್ರಿ ಸುತ್ತುತ್ತಿರುವರು. ಸ್ವಾಮಿ! ನೀನು ಕೃಪಾದೃಷ್ಟಿ ಬೀರಿದವರು ತಾಪತ್ರಯಗಳಿಂದ ವಿಮುಕ್ತರಾಗುವರು. ಜನನ-ಮರಣ ಕ್ಲೇಶಗಳನ್ನು ಕಳೆಯಲು ದಕ್ಷನಾದ ಶ್ರೀರಾಮಾ!

ನಮ್ಮನ್ನು ರಕ್ಷಿಸು. ನಿನಗೆ ನಮಸ್ಕರಿಸುತ್ತಿದ್ದೇವೆ. ।। ೨।। ಮಿಥ್ಯಾಜ್ಞಾನದ ಹಮ್ಮಿನಲ್ಲಿ ಮತ್ತರಾಗಿ ಭವಭಯಹರನಾದ ನಿನ್ನ ಭಕ್ತಿಯನ್ನು ಆದರಿಸದವರು ದೇವತೆಗಳಿಗೂ ದುರ್ಲಭವಾದ ಬ್ರಹ್ಮಾದಿ ಪದವಿಯನ್ನು ಪಡೆದರೂ ಅವುಗಳಿಂದ ಭ್ರಷ್ಟರಾಗುವುದನ್ನು ನಾವು ಕಾಣುತ್ತೇವೆ. ಆದರೆ ಎಲ್ಲವಿಧವಾದ ಆಸೆಗಳನ್ನು ತೊರೆದು ನಿನ್ನನ್ನು ನಂಬಿ ನಿನ್ನ ದಾಸರಾಗಿರುವವರು, ನಿನ್ನ ನಾಮವನ್ನು ಜಪಿಸಿ, ಪರಿಶ್ರಮವಿಲ್ಲದೆಯೇ ಭವಸಾಗರವನ್ನು ದಾಟುತ್ತಾರೆ. ಹೇ ನಾಥಾ! ಇಂತಹ ಪ್ರಭುವಾದ ನಿನ್ನನ್ನು ನಾವು ಸ್ಮರಿಸುತ್ತೇವೆ. ।। ೩।। ಯಾವ ಚರಣಗಳು ಹರ ವಿರಿಂಚಿಗಳಿಂದ ಪೂಜಿತವೋ, ಯಾವ ಚರಣರಜಸ್ಪರ್ಶದಿಂದ ಮುನಿಪತ್ನೀ ಅಹಲ್ಯೆಯು ಉದ್ಧಾರವಾಗಿ ಹೋದಳೋ, ಯಾರ ಚರಣನಖದಿಂದ ಮುನಿಜನವಂದಿತ, ತ್ರೈಲೋಕ್ಯಪಾವನಿ ದೇವನದಿಗಂಗೆಯು ಹರಿಯುವಳೋ, ಧ್ವಜ, ವಜ್ರ, ಅಂಕುಶ, ಕಮಲ ಮೊದಲಾದ ಚಿಹ್ನೆಗಳಿಂದ ಕೂಡಿದ ಯಾರ ಚರಣಗಳು ವನಗಮನದಲ್ಲಿ ಘಾಸಿಗೊಂಡವೋ, ಹೇ ಮುಕುಂದಾ! ಹೇ ರಾಮಾ! ಹೇ ರಮಾಪತಿ! ನಾವು ನಿನ್ನ ಅಂತಹ ಚರಣಕಮಲಗಳನ್ನು ನಿತ್ಯವೂ ಭಜಿಸುತ್ತಿದ್ದೇವೆ. ।। ೪।। ಈ ಸಂಸಾರವೃಕ್ಷಕ್ಕೆ ಪರಬ್ರಹ್ಮನಾದ ನೀನೇ ಮೂಲವು. ನಿನ್ನ ಸ್ವರೂಪವು ಅವ್ಯಕ್ತವು, ಅನಾದಿ (ಶಾಶ್ವತವು). ಈ ಸಂಸಾರವೃಕ್ಷಸ್ವರೂಪವೆಲ್ಲದರಲ್ಲಿ ನೀನೇ ವಿರಾಜಮಾನನಾಗಿರುವೆ. ಈ ವೃಕ್ಷಕ್ಕೆ ಚತುರ್ವಿಧ (ಧರ್ಮಾರ್ಥಕಾಮಮೋಕ್ಷವೆಂಬ) ಪುರುಷಾರ್ಥಗಳು ನಾಲ್ಕು ಕಾಂಡಗಳು. ಅದಕ್ಕೆ ಷಡ್ಭಾವವಿಕಾರಗಳು (ಜಾಯತೇಽಸ್ತಿವರ್ಧತೇ ವಿಪರಿಣಮತೇಽಪಕ್ಷೀಯತೇ ವಿನಶ್ಯತೇ।' (ನಿರುಕ್ತ ೧/೧/೨) ಉತ್ಪತ್ತಿ, ಅಸ್ತಿತ್ವವು, ವೃದ್ಧಿ, ವಿಪರಿಣಾಮ, ಅಪಕ್ಷಯ, ವಿನಾಶ) ಆರು ರೆಂಬೆಗಳು. ಜಡಚೇತನಾತ್ಮಕವಾದ ಈ ಜಗತ್ತಿಗೆ ಇಪ್ಪತ್ತೈದು ತತ್ತ್ವಗಳು (ಪಂಚ-ಮಹಾಭೂತಗಳು, ಪಂಚತನ್ಮಾತ್ರೆಗಳು, ದಶೇಂದ್ರಿಯಗಳು, ಮನೋಬುದ್ಧಿರಹಂಕಾರಚಿತ್ತ ಎಂಬ ಇಪ್ಪತ್ತನಾಲ್ಕು ಜಡಗಳು, ಚೇತನವಾದ ಜೀವನು ಒಂದು ಹೀಗೆ ಇಪ್ಪತ್ತೈದು ತತ್ತ್ವಗಳು) ಕೊಂಬೆಗಳು. ಅಸಂಖ್ಯಾತವಾದ ಭೋಗ್ಯವಸ್ತುಗಳೇ ಎಲೆಗಳು, ಹೂವುಗಳು. ಭೋಗ-ಮೋಕ್ಷ ಎಂಬ ಎರಡು ಫಲಗಳು. ಧರ್ಮ, ಮೋಕ್ಷರೂಪೀ ಫಲವು ಮಧುರವೂ, ಶಾಶ್ವತವು. ಅರ್ಥ, ಕಾಮ, ಫಲಗಳು ಕಹಿಯೂ ಅಶಾಶ್ವತವು. ಮಾಯೆ ಎಂಬ ಬಳ್ಳಿ ಈ ಜಗತ್‌ವೃಕ್ಷದಲ್ಲಿ ಎಲ್ಲೆಡೆ ವ್ಯಾಪಿಸಿಕೊಂಡಿದೆ. ಇದು ಭಗವಂತನನ್ನು ಆಶ್ರಯಿಸಿ, ಅವನಿಗೆ ಅಧೀನವಾಗಿದೆ. ಭಗವಂತನನ್ನು ಭಜಿಸುವವರು ಈ ಮಾಯೆಯನ್ನು ದಾಟಿ ಹೋಗುತ್ತಾರೆ. (ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ। – ಗೀತೆ ೭/೧೪). ಈ ಮಾಯೆಯ ವಿಸ್ತಾರ ನಿತ್ಯನೂತನವಾಗಿ ಜರಗುತ್ತಲೇ ಇದೆ ಎಂದು ವೇದಗಳು, ಆಗಮಗಳು ಸಾರುತ್ತಿವೆ. ಸಂಸಾರವೃಕ್ಷರೂಪದಿಂದ ನೀನೇ ಕಾಣಿಸುತ್ತಿರುವೆ. ಸಂಸಾರವೃಕ್ಷರೂಪಿಯಾದ ಓ ರಾಮಾ ನಿನಗೆ ನಮಸ್ಕಾರಗಳು. ।। ೫।। ಪರಬ್ರಹ್ಮನು ಜನ್ಮರಹಿತನೂ, ಅದ್ವೈತನೂ, ಮನಸ್ಸಿಗೆ ಅಗೋಚರನೂ, ಅನುಭವಗಮ್ಯನೂ ಎಂದು ಕೆಲವರು ಭಾವಿಸಿ ಧ್ಯಾನಿಸುವರು. ಹೀಗೆ ತಿಳಿದವರು ತಿಳಿಯಲಿ. ಆದರೆ ನಾವು ಮಾತ್ರ ನಿತ್ಯವು ನಿನ್ನ ಸಗುಣ ಯಶೋಗಾನವನ್ನೇ ಮಾಡುತ್ತೇನೆ. ಆ ಕರುಣಾನಿಧೇ! ಸದ್ಗುಣರಾಶೀ! ಪ್ರಭೋ! ಹೇ ದೇವಾ! ನಮ್ಮ ಮನ-ವಚನ–ಕರ್ಮಗಳ ವಿಕಾರಗಳನ್ನು ಕಳೆದು, ನಿನ್ನ ಚರಣಗಳಲ್ಲೇ ಅನುರಾಗ ಉಂಟಾಗುವಂತೆ ಅನುಗ್ರಹಿಸುವಂತಹ ವರವನ್ನು ಕರುಣಿಸು. ।। ೬।। (ಛಂ/೧-೬)

**ದೋ – ಸಬ ಕೇ ದೇಖತ ಬೇದನ್ಹ ಬಿನತೀ ಕೀನ್ಹಿ ಉದಾರ।**
**ಅಂತರ್ಧಾನ ಭಏ ಪುನಿ ಗಏ ಬ್ರಹ್ಮ ಆಗಾರ ।। ೧೩(ಕ)।।**
**ಬೈನತೇಯ ಸುನು ಸಂಭು ತಬ ಆಏ ಜಹ್ ರಘುಬೀರ।**
**ಬಿನಯ ಕರತ ಗದಗದ ಗಿರಾ ಪೂರಿತ ಪುಲಕ ಸರೀರ ।। ೧೩(ಖ)।।**

ವೇದಗಳು ಎಲ್ಲರೆದುರಿಗೆ ಪ್ರಭುವನ್ನು ಈ ರೀತಿಯಾಗಿ ಸ್ತುತಿಸಿ, ಅಂತರ್ಧಾನರಾಗಿ ಬ್ರಹ್ಮಲೋಕಕ್ಕೆ ತೆರಳಿದರು. (ಕಾಕಭುಶುಂಡಿಯವರು ಹೇಳುತ್ತಿದ್ದಾರೆ) ಓ ಗರುಡಾ! ಕೇಳು. ವೇದಪುರುಷರು ಹೊರಟುಹೋದ ಬಳಿಕ ಪರಶಿವನು ಶ್ರೀರಾಮನ ಸನ್ನಿಧಿಗೆ ಬಂದು, ಪುಲಕಿತಗಾತ್ರನಾಗಿ, ಗದ್ಗದ ಸ್ವರದಿಂದ ಇಂತು ಸ್ತುತಿಸತೊಡಗಿದನು. (ದೋ/೧೩ ಕ, ಖ)

## ಪರಮೇಶ್ವರನಿಂದ ಶ್ರೀರಾಮಸ್ತುತಿ

**ಛಂ – ಜಯ ರಾಮ ರಮಾರಮನಂ ಸಮನಂ। ಭವ ತಾಪ ಭಯಾಕುಲ ಪಾಹಿ ಜನಂ।**
**ಅವಧೇಸ ಸುರೇಸ ರಮೇಸ ಬಿಭೋ। ಸರನಾಗತ ಮಾಗತ ಪಾಹಿ ಪ್ರಭೋ ।। ೧ ।।**
**ದಸಸೀಸ ಬಿನಾಸನ ಬೀಸ ಭುಜಾ। ಕೃತ ದೂರಿ ಮಹಾ ಮಹಿ ಭೂರಿ ರುಜಾ।**
**ರಜನೀಚರ ಬೃಂದ ಪತಂಗ ರಹೇ। ಸರ ಪಾವಕ ತೇಜ ಪ್ರಚಂಡ ದಹೇ ।। ೨ ।।**
**ಮಹಿ ಮಂಡಲ ಮಂಡನ ಚಾರುತರಂ। ಧೃತ ಸಾಯಕ ಚಾಪ ನಿಷಂಗ ಬರಂ।**
**ಮದ ಮೋಹ ಮಹಾ ಮಮತಾ ರಜನೀ। ತಮ ಪುಂಜ ದಿವಾಕರ ತೇಜ ಅನೀ ।। ೩ ।।**

**ಮನಜಾತ ಕಿರಾತ ನಿಪಾತ ಕಿಏ । ಮೃಗ ಲೋಗ ಕುಭೋಗ ಸರೇನ ಹಿಏ ।**
**ಹತಿ ನಾಥ ಅನಾಥನಿ ಪಾಹಿ ಹರೇ । ಬಿಷಯಾ ಬನ ಪಾವ್ಁರ ಭೂಲಿ ಪರೇ ॥ ೪ ॥**
**ಬಹು ರೋಗ ಬಿಯೋಗನ್ಹಿ ಲೋಗ ಹಏ । ಭವದಂಘ್ರಿ ನಿರಾದರ ಕೇ ಫಲ ಏ ।**
**ಭವ ಸಿಂಧು ಅಗಾಧ ಪರೇ ನರ ತೇ । ಪದ ಪಂಕಜ ಪ್ರೇಮ ನ ಜೇ ಕರತೇ ॥ ೫ ॥**
**ಅತಿ ದೀನ ಮಲೀನ ದುಖೀ ನಿತಹೀಂ । ಜಿನ್ಹ ಕೇಂ ಪದ ಪಂಕಜ ಪ್ರೀತಿ ನಹೀಂ ।**
**ಅವಲಂಬ ಭವಂತ ಕಥಾ ಜಿನ್ಹ ಕೇಂ । ಪ್ರಿಯ ಸಂತ ಅನಂತ ಸದಾ ತಿನ್ಹ ಕೇಂ ॥ ೬ ॥**
**ನಹಿಂ ರಾಗ ನ ಲೋಭ ನ ಮಾನ ಮದಾ । ತಿನ್ಹ ಕೇಂ ಸಮ ಬೈಭವ ವಾ ಬಿಪದಾ ।**
**ಏಹಿ ತೇ ತವ ಸೇವಕ ಹೋತ ಮುದಾ । ಮುನಿ ತ್ಯಾಗತ ಜೋಗ ಭರೋಸ ಸದಾ ॥ ೭ ॥**
**ಕರಿ ಪ್ರೇಮ ನಿರಂತರ ನೇಮ ಲಿಏಂ । ಪದ ಪಂಕಜ ಸೇವತ ಸುದ್ಧ ಹಿಏಂ ।**
**ಸಮ ಮಾನಿ ನಿರಾದರ ಆದರಹೀ । ಸಬ ಸಂತ ಸುಖೀ ಬಿಚರಂತಿ ಮಹೀ ॥ ೮ ॥**
**ಮುನಿ ಮಾನಸ ಪಂಕಜ ಭೃಂಗ ಭಜೇ । ರಘುಬೀರ ಮಹಾ ರನಧೀರ ಅಜೇ ।**
**ತವ ನಾಮ ಜಪಾಮಿ ನಮಾಮಿ ಹರೀ । ಭವ ರೋಗ ಮಹಾಗದ ಮಾನ ಅರೀ ॥ ೯ ॥**
**ಗುನ ಸೀಲ ಕೃಪಾ ಪರಮಾಯತನಂ । ಪ್ರನಮಾಮಿ ನಿರಂತರ ಶ್ರೀರಮನಂ ।**
**ರಘುನಂದ ನಿಕಂದಯ ದ್ವಂದ್ವಘನಂ । ಮಹಿಪಾಲ ಬಿಲೋಕಯ ದೀನ ಜನಂ ॥ ೧೦ ॥**

''ಓ ರಾಮಾ! ರಮಾರಮಣಾ! ನಿನಗೆ ಜಯವಾಗಲೀ. ಓ ಭವತಾಪ ವಿದಾರಕಾ! ಪುನರ್ಜನ್ಮ ಭಯಪೀಡಿತರಾದ ಜನರನ್ನು ರಕ್ಷಿಸುವವನೇ ನಿನಗೆ ಜಯವಾಗಲೀ. ಓ ಅಯೋಧ್ಯಾಪತಿ! ದೇವದೇವಾ! ರಮಾನಾಥಾ! ವಿಭೋ! ಪ್ರಭೋ! ಶರಣಾಗತನಾದ ನನ್ನನ್ನು ರಕ್ಷಿಸು. ॥ ೧॥ ಹತ್ತುತಲೆಯ ಇಪ್ಪತ್ತುಕೈಗಳ ರಾವಣನನ್ನು ಕೊಂದು ಭೂಮಿಯ ಎಲ್ಲ ಮಹಾ ರೋಗಗಳನ್ನು ನಾಶಮಾಡಿದ ಶ್ರೀರಾಮಾ! ರಾಕ್ಷಸರೆಂಬ ಪತಂಗಗಳೆಲ್ಲ ನಿನ್ನ ಬಾಣಗಳೆಂಬ ಅಗ್ನಿಯ ಪ್ರಚಂಡ ತೇಜಸ್ಸಿನಿಂದ ಭಸ್ಮರಾದರು. ॥ ೨॥ ನೀನು ಈ ಭೂಮಂಡಲಕ್ಕೆ ಒಂದು ಮನೋಹರವಾದ ಭೂಷಣನಾಗಿರುವೆ. ಉತ್ತಮವಾದ ಧನುರ್ಬಾಣ ತೂಣೀರವನ್ನು ಧರಿಸಿದವನೇ! ನಿನ್ನ ತೇಜಸ್ಸೆಂಬ ಸೂರ್ಯಕಿರಣಸಮೂಹವು ಅಹಂಕಾರ, ಮೋಹ, ಮಮಕಾರವೆಂಬ ಅಂಧಕಾರವನ್ನು ದೂರಮಾಡುವುದಾಗಿದೆ. ॥ ೩॥ ಮನ್ಮಥನೆಂಬ ಬೇಟೆಗಾರನು ಮನುಷ್ಯರೂಪೀ ಮೃಗಗಳ ಹೃದಯದಲ್ಲಿ ಭೋಗೇಚ್ಛಾವೆಂಬ ಬಾಣಗಳನ್ನು ನಾಟಿಸಿ ಅವುಗಳನ್ನು ಕೆಡಹಿರುವನು. ಶ್ರೀಹರಿ! ನೀನು ಆ ಬೇಟೆಗಾರನನ್ನು ಕೊಂದು, ವಿಷಯವನದಲ್ಲಿ ಮರುಳಾಗಿ ಮೈಮರೆತಿರುವ ಈ ಪಾಮರ, ಅನಾಥ ಜೀವಿಗಳನ್ನು ರಕ್ಷಿಸು. ॥ ೪॥ ನಿನ್ನ ಚರಣಕಮಲಗಳನ್ನು ಅನಾದರಿಸಿದ ಫಲವಾಗಿ ಜನರು ಅನೇಕ ರೋಗವಿಯೋಗದಿಂದ ದುಃಖಪೀಡಿತರಾಗಿದ್ದಾರೆ. ನಿನ್ನ ಪಾದಪದ್ಮಗಳನ್ನು ಪ್ರೇಮಿಸದೆ ಇರುವವರು ಅಗಾಧ ಭವಸಾಗರದಲ್ಲಿ ಮುಳುಗಿರುವರು. ॥ ೫॥ ನಿನ್ನ ಪದಪಂಕಜಗಳಲ್ಲಿ ರತಿಯಿಲ್ಲದ ಜೀವರು ನಿತ್ಯವೂ, ಅತ್ಯಂತ ದೀನರೂ, ಮಲಿನರೂ, ದುಃಖಿಗಳಾಗಿದ್ದಾರೆ. ಆದರೆ ನಿನ್ನ ಲೀಲಾವಿಲಾಸ ಕಥೆಗಳನ್ನು ಆಶ್ರಯಿಸಿದವರು ಸಜ್ಜನರು, ಭಗವತ್ಪ್ರೀತಿಪಾತ್ರರು. ॥ ೬॥ ರಾಗ, ಲೋಭ, ಅಭಿಮಾನ, ಮದ ಇವುಗಳು ಅವರ ಬಳಿ ಸುಳಿಯವು. ಸಂಪದ, ಆಪದ ಎರಡೂ ಅವರಿಗೆ ಸಮಾನವು. ಆದರಿಂದಲೇ ಮುನಿಗಳು ಯೋಗಸಾಧನೆಯ ಮೇಲೆ ವಿಶ್ವಾಸವಿಡದೆ, ನಿಶ್ಚಿಂತರಾಗಿ, ಆನಂದದಿಂದ ನಿನ್ನ ಸೇವಕರಾಗುವರು. ॥ ೭॥ ಅವರು ಪ್ರೇಮಾದರದಿಂದ, ನಿಯಮನಿಷ್ಠೆಯಿಂದ, ಪವಿತ್ರಾಂತಃಕರಣರಾಗಿ ನಿರಂತರ ನಿನ್ನ ಚರಣಕಮಲಗಳನ್ನೇ ಸೇವಿಸುತ್ತಾ ಇರುವರು. ಅವರು ಆದರ, ನಿರಾದರಗಳನ್ನು ಸಮನಾಗಿ ಭಾವಿಸುವರು. ಅಂತಹ ಸಜ್ಜನರೆಲ್ಲರೂ ಈ ಭುವಿಯಲ್ಲಿ ಹಾಯಾಗಿ ಸಂಚರಿಸುತ್ತಿರುವರು. ॥ ೮॥ ಮುನಿಮಾನಸ ಪಂಕಜಭೃಂಗನೇ! ರಣಧೀರನೇ! ಅಜೇಯನೇ! ರಘುವೀರನೇ! ನಾನು ನಿನ್ನನ್ನು ಭಜಿಸುತ್ತೇನೆ. ನಿನ್ನ ನಾಮವನ್ನು ಜಪಿಸುತ್ತೇನೆ. ಹರಿ! ನಿನಗೆ ನಮಸ್ಕರಿಸುತ್ತೇನೆ. ನೀನು ಭವರೋಗಕ್ಕೆ ಮಹಾಭೇಷಜ. ಅಹಂಕಾರದ ಕಡುವೈರಿಯಾಗಿರುವೆ. ॥ ೯॥ ನೀನು ಗುಣ, ಶೀಲ, ಕೃಪೆಯ ಪರಮನಿಧಾನನು. ಲಕ್ಷ್ಮೀಪತಿಯೇ! ನಿರಂತರ ನಿನಗೆ ವಂದಿಸುವೆನು. ರಘುನಂದನಾ! ಜನ್ಮ-ಮರಣ, ಸುಖ-ದುಃಖ, ರಾಗ-ದ್ವೇಷಾದಿ ದ್ವಂದ್ವಗಳನ್ನು ನಾಶಮಾಡು. ಓ ಮಹೀಪಾಲಾ! ಈ ದೀನ ಸೇವಕನ ಮೇಲೆ ನಿನ್ನ ಕೃಪಾದೃಷ್ಟಿಯನ್ನು ಬೀರು. (ಛಂ/೧-೧೦)

**ದೋ – ಬಾರ ಬಾರ ಬರ ಮಾಗಉಁ ಹರಷಿ ದೇಹು ಶ್ರೀರಂಗ ।**
**ಪದ ಸರೋಜ ಅನಪಾಯನೀ ಭಗತಿ ಸದಾ ಸತಸಂಗ ॥ ೧೪ (ಕ)॥**

**ಬರನಿ ಉಮಾಪತಿ ರಾಮ ಗುನ ಹರಷಿ ಗಏ ಕೈಲಾಸ ।**
**ತಬ ಪ್ರಭು ಕಪಿನ್ಹ ದಿವಾಏ ಸಬ ಬಿಧಿ ಸುಖಪ್ರದ ಬಾಸ ॥ ೧೪(ಖ)॥**

ನಿನ್ನ ಪದಕಮಲಗಳಲ್ಲಿ ಅನನ್ಯ ಭಕ್ತಿಯನ್ನು, ನಿನ್ನ ಭಕ್ತರ ಸತ್ಸಾಂಗತ್ಯವನ್ನೂ ನನಗೆ ನಿರಂತರವು ದೊರೆಯುವಂತೆ ಪದೇ-ಪದೇ ನಿನ್ನನ್ನು ಪ್ರಾರ್ಥಿಸುತ್ತೇನೆ. ಲಕ್ಷ್ಮೀಶಾ! ಹರ್ಷಿತನಾಗಿ ನನಗೆ ಈ ವರವನ್ನು ಅನುಗ್ರಹಿಸು.'' ಶ್ರೀರಾಮಚಂದ್ರನ ಮಹೋನ್ನತ ಗುಣವೈಭವಗಳನ್ನು ವರ್ಣಿಸಿ, ಉಮಾಪತಿ ಮಹಾದೇವನು ಹರ್ಷಿತನಾಗಿ ಕೈಲಾಸಕ್ಕೆ ತೆರಳಿದನು. ಬಳಿಕ ಪ್ರಭುವು ವಾನರರೆಲ್ಲರಿಗೂ ಸುಖಪ್ರದವಾದ ನಿವಾಸಸ್ಥಾನಗಳನ್ನು ಏರ್ಪಾಡುಮಾಡಿದನು. (ದೋ/೧೪ ಕ, ಖ)

**ಚೌ – ಸುನು ಖಗಪತಿ ಯಹ ಕಥಾ ಪಾವನೀ । ತ್ರಿಬಿಧ ತಾಪ ಭವ ಭಯ ದಾವನೀ ॥**
**ಮಹಾರಾಜ ಕರ ಸುಭ ಅಭಿಷೇಕಾ । ಸುನತ ಲಹಹಿಂ ನರ ಬಿರತಿ ಬಿಬೇಕಾ ॥ ೧ ॥**
**ಜೇ ಸಕಾಮ ನರ ಸುನಹಿಂ ಜೆ ಗಾವಹಿಂ । ಸುಖ ಸಂಪತಿ ನಾನಾ ಬಿಧಿ ಪಾವಹಿಂ ॥**
**ಸುರ ದುರ್ಲಭ ಸುಖ ಕರಿ ಜಗ ಮಾಹೀಂ । ಅಂತಕಾಲ ರಘುಪತಿ ಪುರ ಜಾಹೀಂ ॥ ೨ ॥**
**ಸುನಹಿಂ ಬಿಮುಕ್ತ ಬಿರತ ಅರು ಬಿಷಈ । ಲಹಹಿಂ ಭಗತಿ ಗತಿ ಸಂಪತಿ ನಈ ॥**
**ಖಗಪತಿ ರಾಮ ಕಥಾ ಮೈಂ ಬರನೀ । ಸ್ವಮತಿ ಬಿಲಾಸ ತ್ರಾಸ ದುಖ ಹರನೀ ॥ ೩ ॥**
**ಬಿರತಿ ಬಿಬೇಕ ಭಗತಿ ದೃಢ ಕರನೀ । ಮೋಹ ನದೀ ಕಹ್ ಸುಂದರ ತರನೀ ॥**
**ನಿತ ನವ ಮಂಗಲ ಕೌಸಲಪುರೀ । ಹರಷಿತ ರಹಹಿಂ ಲೋಗ ಸಬ ಕುರೀ ॥ ೪ ॥**
**ನಿತ ನಇ ಪ್ರೀತಿ ರಾಮ ಪದ ಪಂಕಜ । ಸಬ ಕೇಂ ಜಿನ್ಹಹಿ ನಮತ ಸಿವ ಮುನಿ ಅಜ ॥**
**ಮಂಗನ ಬಹು ಪ್ರಕಾರ ಪಹಿರಾಏ । ದ್ವಿಜನ್ಹ ದಾನ ನಾನಾ ಬಿಧಿ ಪಾಏ ॥ ೫ ॥**

(ಕಾಕಭುಶುಂಡಿಯವರು ಹೇಳುತ್ತಾರೆ) ಎಲೈ ಗರುಡಾ! ಕೇಳು. ಈ ಕಥೆ ಎಲ್ಲ ಶ್ರೋತೃಗಳನ್ನು ಪವಿತ್ರಗೊಳಿಸುವಂತಹುದು. ಅವರ ದೈವಿಕ, ದೈಹಿಕ, ಭೌತಿಕ ತಾಪತ್ರಯಗಳನ್ನೂ, ಜನನ-ಮರಣಭಯಗಳನ್ನೂ, ಭವಬಾಧೆಗಳನ್ನೂ ತೊಲಗಿಸುವಂತಹುದು. ಶ್ರೀರಾಮಚಂದ್ರನ ರಾಜ್ಯಪಟ್ಟಾಭಿಷೇಕ ವರ್ಣನೆಯನ್ನು ನಿಷ್ಕಾಮಭಾವದಿಂದ, ಭಕ್ತಿಶ್ರದ್ಧೆಗಳಿಂದ ಕೇಳಿದ ಮಾನವರು ಜ್ಞಾನ, ವೈರಾಗ್ಯಗಳನ್ನು ಹೊಂದುವರು. ಸಕಾಮಭಾವದಿಂದ ಈ ಕಥೆಯನ್ನು ಹಾಡುವವರು, ಕೇಳುವವರು ಅನೇಕ ಸುಖಸಂಪತ್ತುಗಳನ್ನು ಪೊಂದುವರು. ಅವರು ಈ ಜಗತ್ತಿನಲ್ಲಿ ದೇವದುರ್ಲಭವಾದ ಸುಖಗಳನ್ನು ಅನುಭವಿಸಿ, ಅಂತ್ಯಕಾಲದಲ್ಲಿ ಶ್ರೀರಘುನಾಥನ ಪರಮಪದವನ್ನು ಹೊಂದುವರು. ಜೀವನ್ಮುಕ್ತರೂ, ವಿರಾಗಿಗಳೂ, ವಿಷಯಲೋಲುಪರೂ ಈ ಕಥೆಯನ್ನು ಶ್ರವಣಮಾಡಿದರೆ ಅವರಿಗೆ ಕ್ರಮಶಃ ಭಕ್ತಿ, ಮುಕ್ತಿ, ಹಾಗೂ ನವ-ನವೀನ ಸಂಪತ್ತುಗಳು ದೊರೆಯುತ್ತವೆ. ಓ ಪಕ್ಷಿರಾಜ ಗರುಡಾ! ನಾನು ನನ್ನ ಬುದ್ಧಿಗನುಸಾರವಾಗಿ ಜನ್ಮ-ಮರಣಗಳ ಭಯ ಹಾಗೂ ದುಃಖಹಾರಿಯಾದ ಶ್ರೀರಾಮನ ಕಥೆಯನ್ನು ವರ್ಣಿಸಿರುವೆನು. ಈ ಕಥೆಯು ವೈರಾಗ್ಯ, ವಿವೇಕ ಹಾಗೂ ಭಕ್ತಿಯನ್ನು ದೃಢವಾಗಿಸುವಂತಹುದು. ಮೋಹವೆಂಬ ನದಿಯನ್ನು ದಾಟಲು ಸುಂದರವಾದ ನೌಕೆಯಾಗಿದೆ. ಅಯೋಧ್ಯಾನಗರದಲ್ಲಿ ನಿತ್ಯೋತ್ಸವ, ನಿತ್ಯನೂತನ ಮಂಗಳೋತ್ಸವ! ಎಲ್ಲ ಜನರಿಗೂ ಸಂತಸವೋ ಸಂತಸ. ಹರ, ವಿರಿಂಚಿ, ಮುನಿಗಳಿಂದ ವಂದಿತವಾದ ಶ್ರೀರಾಮಚರಣಗಳಲ್ಲಿ ಸಾಕೇತ ನಗರನಿವಾಸಿಗಳಿಗೆ ನಿತ್ಯನೂತನವಾದ ಭಕ್ತಿತತ್ಪರತೆ ವರ್ಧಿಸುತ್ತಾ ಇತ್ತು. ಬ್ರಾಹ್ಮಣರಿಗೆ ಅನೇಕ ವಿಧವಾದ ದಾನಗಳೂ ಕೊಡಲ್ಪಟ್ಟವು. ಬೇಡುವವರಿಗೆ ನಾನಾವಿಧವಾದ ವಸ್ತ್ರಾಭೂಷಣಗಳನ್ನು ಕೊಡಲಾಯಿತು. (ಚೌ/೧-೫)

**ದೋ – ಬ್ರಹ್ಮಾನಂದ ಮಗನ ಕಪಿ ಸಬ ಕೇಂ ಪ್ರಭು ಪದ ಪ್ರೀತಿ ।**
**ಜಾತ ನ ಜಾನೇ ದಿವಸ ತಿನ್ಹ ಗಏ ಮಾಸ ಷಟ ಬೀತಿ ॥ ೧೫ ॥**

ವಾನರರೆಲ್ಲರು ಬ್ರಹ್ಮಾನಂದದಲ್ಲಿ ಮುಳುಗಿದ್ದಾರೆ. ಪ್ರಭುಚರಣಗಳಲ್ಲಿ ಅವರಿಗೆ ಅನನ್ಯಭಕ್ತಿ ಸ್ಥಿರವಾಯಿತು. ಹಗಲು-ಇರುಳು ಸಂದುಹೋದುದೇ ತಿಳಿಯದಾಯಿತು. ನೋಡುನೋಡುತ್ತಾ ಆರು ತಿಂಗಳುಗಳು ಕಳೆದುಹೋದುವು. (ದೋ/೧೫)

**ಚೌ – ಬಿಸರೇ ಗೃಹ ಸಪನೆಹುಂ ಸುಧಿ ನಾಹೀಂ । ಜಿಮಿ ಪರದ್ರೋಹ ಸಂತ ಮನ ಮಾಹೀಂ ॥**
**ತಬ ರಘುಪತಿ ಸಬ ಸಖಾ ಬೋಲಾಏ । ಆಇ ಸಬನ್ಹಿ ಸಾದರ ಸಿರು ನಾಏ ॥ ೧ ॥**
**ಪರಮ ಪ್ರೀತಿ ಸಮೀಪ ಬೈಠಾರೇ । ಭಗತ ಸುಖದ ಮೃದು ಬಚನ ಉಚಾರೇ ॥**
**ತುಮ್ಹ ಅತಿ ಕೀನ್ಹಿ ಮೋರಿ ಸೇವಕಾಈ । ಮುಖ ಪರ ಕೆಹಿ ಬಿಧಿ ಕರೌಂ ಬಡಾಈ ॥ ೨ ॥**

**ತಾತೇ ಮೊಹಿ ತುಮ್ಹ ಅತಿ ಪ್ರಿಯ ಲಾಗೇ। ಮಮ ಹಿತ ಲಾಗಿ ಭವನ ಸುಖ ತ್ಯಾಗೇ॥**
**ಅನುಜ ರಾಜ ಸಂಪತಿ ಬೈದೇಹೀ। ದೇಹ ಗೇಹ ಪರಿವಾರ ಸನೇಹೀ॥ ೩॥**
**ಸಬ ಮಮ ಪ್ರಿಯ ನಹಿಂ ತುಮ್ಹಹಿ ಸಮಾನಾ। ಮೃಷಾ ನ ಕಹಉಁ ಮೋರ ಯಹ ಬಾನಾ॥**
**ಸಬ ಕೇಂ ಪ್ರಿಯ ಸೇವಕ ಯಹ ನೀತೀ। ಮೋರೇಂ ಅಧಿಕ ದಾಸ ಪರ ಪ್ರೀತೀ॥ ೪॥**

ಅವರಿಗೆ ತಮ್ಮ ಮನೆ-ಮಠಗಳೆಲ್ಲ ಮರೆತುಹೋದುವು. ಸಂತರ ಮನಸ್ಸಿನಲ್ಲಿ ಸ್ವಪ್ನದಲ್ಲಿಯೂ ಪರದ್ರೋಹ ಚಿಂತನೆ ಬರದಂತೆ ಇವರಿಗೂ ಅರಿವಿನಲ್ಲಿರಲೀ, ಕನಸಿನಲ್ಲಿರಲೀ ಮನೆಯ ನೆನಪು ಬಾರದು. ಹೀಗಿರಲು ಒಂದು ದಿನ ರಘುನಾಥನು ಎಲ್ಲ ಗೆಳೆಯರನ್ನು ಬರಮಾಡಿದನು. ಅವರೆಲ್ಲರೂ ಬಂದು ಆದರದಿಂದ ಪ್ರಭುಚರಣಗಳಲ್ಲಿ ವಂದಿಸಿಕೊಂಡರು. ಶ್ರೀರಾಮನು ಅತ್ಯಂತ ಪ್ರೇಮದಿಂದ ಅವರನ್ನು ತನ್ನ ಬಳಿಯಲ್ಲೇ ಕುಳ್ಳಿರಿಸಿಕೊಂಡು, ಭಕ್ತಜನ ಸುಖದಾಯಕವಾದ ಅತ್ಯಂತ ಮೃದುಮಧುರವಚನಗಳನ್ನು ಆಡಿದನು – ''ನೀವುಗಳೆಲ್ಲ ನನಗೆ ಎಷ್ಟೋ ಸೇವೆ ಮಾಡಿರುವಿರಿ. ನಾನು ಹೇಗೆ ನಿಮ್ಮನ್ನು ಪ್ರಶಂಸಿಸಲಿ ತಿಳಿಯದು. ನನ್ನ ಹಿತಕ್ಕಾಗಿ ನೀವು ಮನೆ, ಕುಟುಂಬ, ಸರ್ವಸುಖಗಳನ್ನು ತ್ಯಜಿಸಿರುವಿರಿ. ಆದ್ದರಿಂದ ನೀವು ನನಗೆ ಅತ್ಯಂತ ಪ್ರಿಯರಾಗಿದ್ದೀರಿ. ನನ್ನ ತಮ್ಮಂದಿರು, ರಾಜ್ಯ, ಸಂಪತ್ತು, ಜಾನಕೀದೇವಿ, ನನ್ನ ಶರೀರ, ಅರಮನೆ, ಕುಟುಂಬ, ಮಿತ್ರರು ಇವರೆಲ್ಲರೂ ನನಗೆ ಪ್ರಿಯರೇ. ಆದರೆ ನಿಮಗೆ ಸಮಾನರಲ್ಲ. ನಾನು ಸತ್ಯವನ್ನೇ ಹೇಳುತ್ತಿದ್ದೇನೆ. ಸೇವಕರು ಎಲ್ಲರಿಗೂ ಪ್ರಿಯರಾಗಿರುತ್ತಾರೆ. ಇದು ನಿಯಮ. ಆದರೆ ನನಗೆ ದಾಸರಮೇಲೆ ವಿಶೇಷ ಪ್ರೇಮವಿದೆ. ಇದು ನನ್ನ ಸ್ವಭಾವವಾಗಿದೆ. (ಚೌ/೧-೪)

## ಸುಗ್ರೀವಾದಿಗಳ ಬೀಳ್ಕೊಡುಗೆ

**ದೋ – ಅಬ ಗೃಹ ಜಾಹು ಸಖಾ ಸಬ ಭಜೆಹು ಮೋಹಿ ದೃಢ ನೇಮ।**
**ಸದಾ ಸರ್ಬಗತ ಸರ್ಬಹಿತ ಜಾನಿ ಕರೆಹು ಅತಿ ಪ್ರೇಮ॥ ೧೬॥**

ಓ ಗೆಳೆಯರೇ! ಇನ್ನು ನೀವೆಲ್ಲ ನಿಮ್ಮ ಮನೆಗಳಿಗೆ ಹೊರಡಿರಿ. ಅಲ್ಲಿ ದೃಢನೇಮದಿಂದ ನನ್ನನ್ನು ಭಜಿಸುತ್ತಾ ಇರಿ. ನನ್ನನ್ನು ಸರ್ವವ್ಯಾಪಕನೆಂದೂ, ಎಲ್ಲರ ಹಿತವನ್ನು ಮಾಡುವವನೆಂದೂ ಭಾವಿಸಿ ನನ್ನಲ್ಲಿ ಆತ್ಯಂತಿಕವಾದ ಪ್ರೀತಿಯನ್ನಿಡಿರಿ. (ದೋ/೧೬)

**ಚೌ – ಸುನಿ ಪ್ರಭು ಬಚನ ಮಗನ ಸಬ ಭಏ। ಕೋ ಹಮ ಕಹಾಁ ಬಿಸರಿ ತನ ಗಏ॥**
**ಏಕಟಕ ರಹೇ ಜೋರಿ ಕರ ಆಗೇ। ಸಕಹಿಂ ನ ಕಛು ಕಹಿ ಅತಿ ಅನುರಾಗೇ॥ ೧॥**
**ಪರಮ ಪ್ರೇಮ ತಿನ್ಹ ಕರ ಪ್ರಭು ದೇಖಾ। ಕಹಾ ಬಿಬಿಧಿ ಬಿಧಿ ಗ್ಯಾನ ಬಿಸೇಷಾ॥**
**ಪ್ರಭು ಸನ್ಮುಖ ಕಛು ಕಹನ ನ ಪಾರಹಿಂ। ಪುನಿ ಪುನಿ ಚರನ ಸರೋಜ ನಿಹಾರಹಿಂ॥ ೨॥**
**ತಬ ಪ್ರಭು ಭೂಷನ ಬಸನ ಮಗಾಏ। ನಾನಾ ರಂಗ ಅನೂಪ ಸುಹಾಏ॥**
**ಸುಗ್ರೀವಹಿ ಪ್ರಥಮಹಿಂ ಪಹಿರಾಏ। ಬಸನ ಭರತ ನಿಜ ಹಾಥ ಬನಾಏ॥ ೩॥**
**ಪ್ರಭು ಪ್ರೇರಿತ ಲಛಿಮನ ಪಹಿರಾಏ। ಲಂಕಾಪತಿ ರಘುಪತಿ ಮನ ಭಾಏ॥**
**ಅಂಗದ ಬೈಠ ರಹಾ ನಹಿಂ ಡೋಲಾ। ಪ್ರೀತಿ ದೇಖಿ ಪ್ರಭು ತಾಹಿ ನ ಬೋಲಾ॥ ೪॥**

ಪ್ರಭುವಚನಗಳನ್ನು ಕೇಳುತ್ತಲೆ ಎಲ್ಲರೂ ಪ್ರೇಮವಿಹ್ವಲರಾದರು. 'ನಾವು ಯಾರು? ಎಲ್ಲಿದ್ದೇವೆ?' ಎಂಬ ಪರಿವೆಯೇ ಅವರಿಗೆ ಇಲ್ಲವಾಯಿತು. ಅವರಿಗೆ ತಮ್ಮ ಶರೀರದ ಮೇಲೆಯೂ ಧ್ಯಾಸ ಇಲ್ಲವಾಯಿತು. ಪ್ರಭುವಿನ ಮುಂದೆ ಕೈಜೋಡಿಸಿಕೊಂಡು ನೆಟ್ಟನೋಟದಿಂದ ನೋಡುತ್ತಲೇ ಇದ್ದರು. ಪ್ರೇಮಾಧಿಕ್ಯದಿಂದ ಅವರ ಬಾಯಲ್ಲಿ ಮಾತೇ ಹೊರಡದು. ಪ್ರಭುವು ಅವರ ಪ್ರೇಮಾತಿರೇಕವನ್ನು ಗಮನಿಸಿ, ಅವರಿಗೆ ಅನೇಕ ರೀತಿಯಿಂದ ವಿಶೇಷ ಜ್ಞಾನವನ್ನು ಉಪದೇಶಿಸಿದನು. ಪ್ರಭುವಿನ ಎದುರು ಅವರು ಏನನ್ನೂ ಹೇಳಲೊಲ್ಲರು. ಮತ್ತೆ-ಮತ್ತೆ ಪ್ರಭುಚರಣಗಳನ್ನೇ ನೋಡುತ್ತಿದ್ದಾರೆ. ಆಗ ಪ್ರಭುವು ನಿರುಪಮಾನ ಸೌಂದರ್ಯಶೋಭಿತವಾದ ಆಭೂಷಣಗಳನ್ನೂ ವಿವಿಧ ವರ್ಣಮಯ ವಸ್ತ್ರಗಳನ್ನೂ ತರಿಸಿದನು. ಮೊಟ್ಟಮೊದಲಿಗೆ ಭರತನು ತನ್ನ ಸ್ವಹಸ್ತದಿಂದ ಸುಗ್ರೀವನನ್ನು ವಸ್ತ್ರಾಭೂಷಣಗಳಿಂದ ಅಲಂಕರಿಸಿ ಸತ್ಕರಿಸಿದನು. ಬಳಿಕ ಪ್ರಭು ಪ್ರೇರಣೆಯಂತೆ ಲಕ್ಷ್ಮಣನು ವಿಭೀಷಣನನ್ನು ಒಡವೆ ಬಟ್ಟೆಗಳಿಂದ ಅಲಂಕರಿಸಿ ಸನ್ಮಾನಿಸಿದನು. ರಘುನಾಥನ ಮನಸ್ಸಿಗೆ ತುಂಬಾ ಹಿತವೆನಿಸಿತು. ಅಂಗದನು ಸ್ತಬ್ಧನಾಗಿ ಕುಳಿತೇ ಇದ್ದನು. ತನ್ನ ಜಾಗದಿಂದ ಮಿಸುಕಾಡಲಿಲ್ಲ. ಅವನ ಉತ್ಕಟ ಪ್ರೇಮವನ್ನು ನೋಡಿ ಪ್ರಭುವು ಅವನನ್ನು ಕರೆಯಲಿಲ್ಲ. (ಚೌ/೧-೪)

**ದೋ – ಜಾಮವಂತ ನೀಲಾದಿ ಸಬ ಪಹಿರಾಏ ರಘುನಾಥ।**
**ಹಿಯಁ ಧರಿ ರಾಮ ರೂಪ ಸಬ ಚಲೇ ನಾಇ ಪದ ಮಾಥ॥ ೧೭ (ಕ)॥**

**ತಬ ಅಂಗದ ಉಠಿ ನಾಇ ಸಿರು ಸಜಲ ನಯನ ಕರ ಜೋರಿ।**
**ಅತಿ ಬಿನೀತ ಬೋಲೇಉ ಬಚನ ಮನಹುँ ಪ್ರೇಮ ರಸ ಬೋರಿ॥ ೧೭(ಖ)॥**

ಜಾಂಬವಂತ, ನಳ, ನೀಲ ಮೊದಲಾದವರೆಲ್ಲರನ್ನು ಶ್ರೀರಘುನಾಥನೇ ಸ್ವತಃ ವಸ್ತ್ರಾಭೂಷಣಗಳಿಂದ ಅಲಂಕರಿಸಿ ಸತ್ಕರಿಸಿದನು. ಅವರೆಲ್ಲರೂ ತಮ್ಮ ಹೃದಯದಲ್ಲಿ ಶ್ರೀರಾಮಚಂದ್ರನ ರೂಪವನ್ನು ನಿಲಿಸಿಕೊಂಡು ಪ್ರಭುಚರಣಗಳಿಗೆ ವಂದಿಸಿ ಹೊರಟುಹೋದರು. ಆಗ ಅಂಗದನು ಎದ್ದು ನತಮಸ್ತಕನಾಗಿ, ಸಜಲನೇತ್ರಗಳಿಂದ ಕೈಜೋಡಿಸಿಕೊಂಡು ಅತ್ಯಂತ ವಿನಯದಿಂದ ಪ್ರೇಮಾರ್ದ್ರಹೃದಯನಾಗಿ ಮಧುರವಾಗಿ ಇಂತೆಂದನು – (ದೋ/೧೭ ಕ, ಖ)

**ಚೌ – ಸುನು ಸರ್ಬಗ್ಯ ಕೃಪಾ ಸುಖ ಸಿಂಧೋ। ದೀನ ದಯಾಕರ ಆರತ ಬಂಧೋ॥**
**ಮರತೀ ಬೇರ ನಾಥ ಮೋಹಿ ಬಾಲೀ। ಗಯಉ ತುಮ್ಹಾರೆಹಿ ಕೋँಛೇँ ಘಾಲೀ॥ ೧॥**
**ಅಸರನ ಸರನ ಬಿರದು ಸಂಭಾರೀ। ಮೋಹಿ ಜನಿ ತಜಹು ಭಗತ ಹಿತಕಾರೀ॥**
**ಮೋರೇँ ತುಮ್ಹ ಪ್ರಭು ಗುರ ಪಿತು ಮಾತಾ। ಜಾಉँ ಕಹಾँ ತಜಿ ಪದ ಜಲಜಾತಾ॥ ೨॥**
**ತುಮ್ಹಹಿ ಬಿಚಾರಿ ಕಹಹು ನರನಾಹಾ। ಪ್ರಭು ತಜಿ ಭವನ ಕಾಜ ಮಮ ಕಾಹಾ॥**
**ಬಾಲಕ ಗ್ಯಾನ ಬುದ್ಧಿ ಬಲ ಹೀನಾ। ರಾಖಹು ಸರನ ನಾಥ ಜನ ದೀನಾ॥ ೩॥**
**ನೀಚಿ ಟಹಲ ಗೃಹ ಕೈ ಸಬ ಕರಿಹಉँ। ಪದ ಪಂಕಜ ಬಿಲೋಕಿ ಭವ ತರಿಹಉँ॥**
**ಅಸ ಕಹಿ ಚರನ ಪರೇಉ ಪ್ರಭು ಪಾಹೀ। ಅಬ ಜನಿ ನಾಥ ಕಹಹು ಗೃಹ ಜಾಹೀ॥ ೪॥**

'ಓ ಸರ್ವಜ್ಞಾ! ಕೃಪಾಸಾಗರಾ! ಸುಖನಿಧಾನಾ! ದೀನದಯಾಳಾ! ಆರ್ತಜನ ಬಂಧೋ! ಕೇಳು. ನನ್ನ ತಂದೆ ವಾಲಿಯು ಸಾಯುವಾಗ ನನ್ನನ್ನು ನಿನ್ನ ಮಡಿಲಿಗೆ ಹಾಕಿ ಹೋಗಿರುವರು. ಆದ್ದರಿಂದ ಓ ಭಕ್ತರ ಹಿತಕಾರಿಯೇ! ಅಶರಣ ಶರಣ್ಯನೆಂಬ ನಿನ್ನ ಬಿರುದನ್ನು ನೆನೆದು ನನ್ನನ್ನು ತೊರೆಯದಿರಿ. ನನಗಂತೂ ಸ್ವಾಮಿ, ಗುರು, ತಂದೆ, ತಾಯಿ ಎಲ್ಲವೂ ನೀನೇ ಆಗಿರುವೆ. ನಿನ್ನ ಚರಣಕಮಲಗಳನ್ನು ತೊರೆದು ನಾನು ಎಲ್ಲಿಗೆ ಹೋಗಲಿ? ಓ ಮಹಾರಾಜಾ! ನೀನೇ ಯೋಚಿಸಿ ಹೇಳು. ಪ್ರಭುವಾದ ನಿನ್ನನ್ನು ಬಿಟ್ಟು ಮನೆಯಲ್ಲಿ ನನಗೇನು ಕೆಲಸವಿದೆ? ಒಡೆಯಾ! ಜ್ಞಾನ, ಬುದ್ಧಿ, ಬಲ ಇವ್ಯಾವುದೂ ಇಲ್ಲದ ಈ ಬಾಲಕನೂ ದೀನನೂ, ಸೇವಕನೂ ಆದ ನನಗೆ ಶರಣು ನೀಡಿ. ನಾನು ಮನೆಯ ಸಣ್ಣ-ಪುಟ್ಟ ಕೆಲಸಗಳಾದರೂ ಮಾಡಿಕೊಂಡು, ನಿಮ್ಮ ಚರಣಕಮಲಗಳನ್ನು ಸೇವಿಸುತ್ತಾ, ದರ್ಶಿಸುತ್ತಾ ಭವಸಾಗರವನ್ನು ದಾಟುವೆನು.' ಹೀಗೆ ಹೇಳಿ ಅಂಗದನು ಪ್ರಭುಪಾದಗಳಲ್ಲಿ ವಂದಿಸಿಕೊಂಡು, ಪ್ರಭೂ! ನನ್ನನ್ನು ಕಾಪಾಡು. ಒಡೆಯಾ! ನನ್ನನ್ನು ಮನೆಗೆ ಹೋಗು ಎಂದು ಹೇಳಬೇಡ, ಎಂದು ವಿನಂತಿಸಿಕೊಂಡನು. (ಚೌ/೧-೪)

**ದೋ – ಅಂಗದ ಬಚನ ಬಿನೀತ ಸುನಿ ರಘುಪತಿ ಕರುನಾ ಸೀँವ।**
**ಪ್ರಭು ಉಠಾಇ ಉರ ಲಾಯಉ ಸಜಲ ನಯನ ರಾಜೀವ॥ ೧೮ (ಕ)॥**
**ನಿಜ ಉರ ಮಾಲ ಬಸನ ಮನಿ ಬಾಲಿತನಯ ಪಹಿರಾಇ।**
**ಬಿದಾ ಕೀನ್ಹಿ ಭಗವಾನ ತಬ ಬಹು ಪ್ರಕಾರ ಸಮುಝಾಇ॥ ೧೮(ಖ)॥**

ಅಂಗದನ ವಿನಮ್ರ ವಚನಗಳನ್ನು ಕೇಳಿ ಕರುಣಾನಿಧಿಯಾದ ಪ್ರಭು ಶ್ರೀರಾಮಚಂದ್ರನು ಅವನನ್ನು ಹಿಡಿದೆತ್ತಿ ಎದೆಗಪ್ಪಿಕೊಂಡನು. ಪ್ರಭುವಿನ ಕಣ್ಣುಗಳಲ್ಲಿ ಪ್ರೇಮಾಶ್ರುಗಳು ಮಿಡಿದವು. ಆಗ ತನ್ನ ಕತ್ತಿನಲ್ಲಿದ್ದ ಹಾರವೊಂದನ್ನು, ಅನೇಕ ವಸ್ತ್ರಗಳನ್ನು, ರತ್ನಾಭೂಷಣಗಳನ್ನೂ ವಾಲೀಪುತ್ರ ಅಂಗದನಿಗೆ ತೊಡಿಸಿ, ಅನೇಕ ವಿಧದಿಂದ ಆತನನ್ನು ಸಮಾಧಾನಗೊಳಿಸಿ, ಶ್ರೀರಾಮನು ಅವನನ್ನು ಬೀಳ್ಕೊಟ್ಟನು. (ದೋ/೧೮ ಕ, ಖ)

**ಚೌ – ಭರತ ಅನುಜ ಸೌಮಿತ್ರಿ ಸಮೇತಾ। ಪಠವನ ಚಲೇ ಭಗತ ಕೃತ ಚೇತಾ॥**
**ಅಂಗದ ಹೃದಯँ ಪ್ರೇಮ ನಹಿँ ಥೋರಾ। ಫಿರಿ ಫಿರಿ ಚಿತವ ರಾಮ ಕೀँ ಓರಾ॥ ೧॥**
**ಬಾರ ಬಾರ ಕರ ದಂಡ ಪ್ರನಾಮಾ। ಮನ ಅಸ ರಹನ ಕಹಹಿँ ಮೋಹಿ ರಾಮಾ॥**
**ರಾಮ ಬಿಲೋಕನಿ ಬೋಲನಿ ಚಲನೀ। ಸುಮಿರಿ ಸುಮಿರಿ ಸೋಚತ ಹँಸಿ ಮಿಲನೀ॥ ೨॥**
**ಪ್ರಭು ರುಖ ದೇಖಿ ಬಿನಯ ಬಹು ಭಾಷೀ। ಚಲೇಉ ಹೃದಯँ ಪದ ಪಂಕಜ ರಾಖೀ॥**
**ಅತಿ ಆದರ ಸಬ ಕಪಿ ಪಹುँಚಾಏ। ಭಾಇನ್ಹ ಸಹಿತ ಭರತ ಪುನಿ ಆಏ॥ ೩॥**

ತಬ ಸುಗ್ರೀವ ಚರನ ಗಹಿ ನಾನಾ। ಭಾಁತಿ ಬಿನಯ ಕೀನ್ಹೇ ಹನುಮಾನಾ ॥
ದಿನ ದಸ ಕರಿ ರಘುಪತಿ ಪದ ಸೇವಾ। ಪುನಿ ತವ ಚರನ ದೇಖಿಹಉಁ ದೇವಾ ॥ ೪ ॥
ಪುನ್ಯ ಪುಂಜ ತುಮ್ಹ ಪವನಕುಮಾರಾ। ಸೇವಹು ಜಾಇ ಕೃಪಾ ಆಗಾರಾ ॥
ಅಸ ಕಹಿ ಕಪಿ ಸಬ ಚಲೇ ತುರಂತಾ। ಅಂಗದ ಕಹಇ ಸುನಹು ಹನುಮಂತಾ ॥ ೫ ॥

ಭಕ್ತಿಯಲ್ಲಿ ಮುಳುಗಿದ ಅಂಗದನ ಸೇವೆಯನ್ನು ಗುರ್ತಿಸಿ, ಲಕ್ಷ್ಮಣ, ಭರತ, ಶತ್ರುಘ್ನರು ಅವನ ಸಂಗಡ ಕೊಂಚ ದೂರಹೋಗಿ, ಅವನನ್ನು ಬೀಳ್ಕೊಟ್ಟರು. ಅಂಗದನ ಹೃದಯದಲ್ಲಿ ಹಿಡಿಸಲಾರದಷ್ಟು ಪ್ರೇಮತುಂಬಿತ್ತು. ಅವನು ಮತ್ತೆ-ಮತ್ತೆ ಹಿಂದಿರುಗಿ ಶ್ರೀರಾಮನನ್ನು ನೋಡುತ್ತಾ, ದಂಡಪ್ರಣಾಮಗೈಯುತ್ತಾ ಹೊರಟನು. ಶ್ರೀರಾಮಚಂದ್ರನು ತನ್ನನ್ನು ನಿಲ್ಲಿಸಿಕೊಂಡು 'ಅಯೋಧ್ಯೆಯಲ್ಲೇ ಇರು' ಹೀಗೆ ಹೇಳುವನೋ ಎಂಬ ವಿಶ್ವಾಸ ಆತನ ಮನಸ್ಸಿನಲ್ಲಿತ್ತು. ಶ್ರೀರಾಮನ ನೋಟ, ನಡೆ, ನುಡಿ, ಮಂದಹಾಸ ಇವನ್ನು ನೆನೆನೆನೆದು ಅಂಗದನು ಪ್ರೇಮವಿಹ್ವಲನಾಗುವನು. ಆದರೆ ಪ್ರಭುವಿನ ಮನೋಭಾವವನ್ನು ಅರಿತು ಅನೇಕ ವಿಧವಾದ ವಿನಯಪೂರ್ಣ ಮಾತುಗಳನ್ನಾಡಿ, ಪ್ರಭುಚರಣಗಳನ್ನು ತನ್ನ ಮನಸ್ಸಿನಲ್ಲಿ ನೆಲೆಗೊಳಿಸಿಕೊಂಡು ಅಂಗದನು ಹೊರಟನು. ಅತ್ಯಂತ ಆದರದಿಂದ ಎಲ್ಲ ವಾನರರನ್ನು ಬೀಳ್ಕೊಟ್ಟು ಸೋದರರೊಡನೆ ಭರತನು ಹಿಂತಿರುಗಿದನು. ಬಳಿಕ ಹನುಮಂತನು ಸುಗ್ರೀವನ ಪಾದಕ್ಕೆರಗಿ ವಿನಮ್ರನಾಗಿ ಇಂತೆಂದನು – ಪ್ರಭು! ನಾನು ಒಂದು ಹತ್ತುದಿನ ರಘುಪತಿಯ ಚರಣಸೇವೆಯನ್ನು ಗೈದು ಅನಂತರ ತಮ್ಮ ಚರಣದರ್ಶನ ಮಾಡಲು ಬರುವೆನು. ಸುಗ್ರೀವನೂ ಸಮಾಧಾನಪಡಿಸಿದನು. 'ಓ ಆಂಜನೇಯಾ! ನೀನು ಪುಣ್ಯಪುಂಜನಾಗಿರುವೆ. ಶ್ರೀರಾಮಚಂದ್ರನು ನಿನ್ನನ್ನು ತನ್ನ ಸೇವೆಯಲ್ಲಿ ನಿಲ್ಲಿಸಿಕೊಂಡಿರುವನು. ಹೋಗಿ ಕೃಪಾನಿಧಾನ ಶ್ರೀರಾಮನನ್ನು ಸೇವಿಸಿಕೊಂಡಿರು.' ಅನಂತರ ಎಲ್ಲ ವಾನರರು ಹೊರಟರು. ಅಂಗದನು ಹೇಳಿದನು, ಮಾರುತಿ! ಕೇಳು – (ಚೌ/೧-೫)

ದೋ – ಕಹೇಹು ದಂಡವತ ಪ್ರಭು ಸೈಁ ತುಮ್ಹಹಿ ಕಹಉಁ ಕರ ಜೋರಿ।
ಬಾರ ಬಾರ ರಘುನಾಯಕಹಿ ಸುರತಿ ಕರಾಏಹು ಮೋರಿ ॥ ೧೮ (ಕ)॥
ಅಸ ಕಹಿ ಚಲೇಉ ಬಾಲಿಸುತ ಫಿರಿ ಆಯಉ ಹನುಮಂತ।
ತಾಸು ಪ್ರೀತಿ ಪ್ರಭು ಸನ ಕಹೀ ಮಗನ ಭಏ ಭಗವಂತ ॥ ೧೮(ಖ)॥
ಕುಲಿಸಹು ಚಾಹಿ ಕಠೋರ ಅತಿ ಕೋಮಲ ಕುಸುಮಹು ಚಾಹಿ।
ಚಿತ್ತ ಖಗೇಸ ರಾಮ ಕರ ಸಮುಝಿ ಪರಇ ಕಹು ಕಾಹಿ ॥ ೧೮(ಗ)॥

'ಕೈ ಜೋಡಿಸಿ ನಿನ್ನಲ್ಲಿ ಪ್ರಾರ್ಥಿಸುತ್ತೇನೆ. ಪ್ರಭುವಿಗೆ ನನ್ನ ದಂಡಪ್ರಣಾಮವನ್ನು ತಿಳಿಸು. ಶ್ರೀರಾಮನಲ್ಲಿ ಆಗಾಗ ನನ್ನ ನೆನಪು ಮಾಡುತ್ತಿರು.' ಹೀಗೆ ಹೇಳಿ ವಾಲಿಪುತ್ರ ಅಂಗದನು ಪ್ರಯಾಣ ಬೆಳೆಸಿದನು. ಹನುಮಂತನು ಹಿಂದಿರುಗಿ ಬಂದು ಅಂಗದನ ಅನನ್ಯ ಭಕ್ತಿಯ ಕುರಿತು ಪ್ರಭುವಿನಲ್ಲಿ ನಿವೇದಿಸಿಕೊಂಡನು. ಅದನ್ನು ಕೇಳಿ ಭಗವಂತನು ಅಮಿತಾನಂದವನ್ನು ಹೊಂದಿದನು. ಕಾಕಭುಶುಂಡೀ ಹೇಳುತ್ತಾರೆ – ಓ ಗರುಡಾ! ಶ್ರೀರಾಮನ ಹೃದಯವು ಕುಲಿಶಕಠೋರ, ಕುಸುಮ ಕೋಮಲ. ಈ ವಿಷಯವನ್ನು ಯಾರು ಬಲ್ಲರು? ನೀನೇ ಹೇಳು. (ವಜ್ರಾದಪಿ ಕಠೋರಾಣಿ, ಮೃದೂನಿ ಕುಸುಮಾದಪಿ) (ದೋ/೧೮ ಕ, ಖ, ಗ)

ಚೌ – ಪುನಿ ಕೃಪಾಲ ಲಿಯೊ ಬೋಲಿ ನಿಷಾದಾ। ದೀನ್ಹೇ ಭೂಷನ ಬಸನ ಪ್ರಸಾದಾ ॥
ಜಾಹು ಭವನ ಮಮ ಸುಮಿರನ ಕರೇಹೂ। ಮನ ಕ್ರಮ ಬಚನ ಧರ್ಮ ಅನುಸರೇಹೂ ॥ ೧ ॥
ತುಮ್ಹ ಮಮ ಸಖಾ ಭರತ ಸಮ ಭ್ರಾತಾ। ಸದಾ ರಹೇಹು ಪುರ ಆವತ ಜಾತಾ ॥
ಬಚನ ಸುನತ ಉಪಜಾ ಸುಖ ಭಾರೀ। ಪರೇಉ ಚರನ ಭರಿ ಲೋಚನ ಬಾರೀ ॥ ೨ ॥
ಚರನ ನಲಿನ ಉರ ಧರಿ ಗೃಹ ಆವಾ। ಪ್ರಭು ಸುಭಾಉ ಪರಿಜನನ್ಹಿ ಸುನಾವಾ ॥
ರಘುಪತಿ ಚರಿತ ದೇಖಿ ಪುರಬಾಸೀ। ಪುನಿ ಪುನಿ ಕಹಹಿಁ ಧನ್ಯ ಸುಖರಾಸೀ ॥ ೩ ॥
ರಾಮ ರಾಜ ಬೈಠೇಂ ತ್ರೈಲೋಕಾ। ಹರಷಿತ ಭಏ ಗಏ ಸಬ ಸೋಕಾ ॥
ಬಯರು ನ ಕರ ಕಾಹೂ ಸನ ಕೋಈ। ರಾಮ ಪ್ರತಾಪ ಬಿಷಮತಾ ಖೋಈ ॥ ೪ ॥

ಬಳಿಕ ಕೃಪಾಳುವಾದ ಶ್ರೀರಾಮಚಂದ್ರಪ್ರಭುವು ನಿಷಾದರಾಜ ಗುಹನನ್ನು ಕರೆಸಿ, ವಸ್ತ್ರಾಭರಣಗಳನ್ನು ಪ್ರಸಾದರೂಪವಾಗಿ ಕೊಟ್ಟು ಇಂತೆಂದನು – ''ಈಗ ನೀನು ಮನೆಗೆ ಮರಳು. ನನ್ನನ್ನು ಸ್ಮರಿಸುತ್ತಾ, ತ್ರಿಕರಣ ಶುದ್ಧವಾಗಿ ಧರ್ಮವನ್ನು ಆಚರಿಸುತ್ತಿರು.

ನೀನು ನನಗೆ ಗೆಳೆಯನಾಗಿದ್ದರೂ ಭರತನಂತೆ ಸೋದರನು. ಆಗಾಗ ಅಯೋಧ್ಯೆಗೆ ಬಂದು ಹೋಗುತ್ತಾ ಇರು.'' ಈ ಮಾತನ್ನು ಕೇಳುತ್ತಲೇ ನಿಷಾದರಾಜನಿಗೆ ಅಪರಿಮಿತಾನಂದವಾಯಿತು. ಕಣ್ಣುಗಳಲ್ಲಿ ಪ್ರೇಮಾಶ್ರುಗಳು ತುಂಬಿಬಂದವು. ಅವನು ಪ್ರಭುಚರಣಗಳಲ್ಲಿ ಕುಸಿದುಬಿದ್ದನು. ಬಳಿಕ ಶ್ರೀರಾಮಚಂದ್ರಪ್ರಭುವಿನ ಚರಣಕಮಲಗಳನ್ನು ತನ್ನ ಹೃದಯದಲ್ಲಿ ನೆಲೆಗೊಳಿಸಿಕೊಂಡು ಅವನು ತನ್ನ ಮನೆ ಸೇರಿದನು. ಅಲ್ಲಿ ತನ್ನ ಬಂಧುವರ್ಗಕ್ಕೆಲ್ಲ ಅವನು ಪ್ರಭುವಿನ ಸ್ವಭಾವವನ್ನು ಬಣ್ಣಿಸಿ ಹೇಳಿದನು.

ಶ್ರೀರಘುನಾಥನ ಈ ಲೀಲಾಚರಿತವನ್ನು ಕಂಡ ಸಾಕೇತನಗರ ನಿವಾಸಿಗಳೆಲ್ಲರೂ – ''ಸರ್ವಸುಖಿಗಳ ರಾಶಿಯಾದ ಶ್ರೀರಾಮಚಂದ್ರನು ಧನ್ಯನು'' ಎಂದು ಪದೇ-ಪದೇ ಉದ್ಗಾರವೆತ್ತಿದರು. ಶ್ರೀರಾಮನು ಸಿಂಹಾಸನದ ಮೇಲೆ ಆಸೀನನಾದಾಗ ತ್ರಿಭುವನಗಳೂ ಹರ್ಷಿತವಾದುವು. ಅವುಗಳ ಶೋಕ-ಸಂತಾಪಗಳು ಮಟ್ಟಮಾಯವಾಯಿತು. ಯಾರಿಗೂ ಯಾರಲ್ಲಿಯೂ ವೈರಭಾವವಿಲ್ಲ, ಶ್ರೀರಾಮಚಂದ್ರನ ಮಹಿಮೆಯಿಂದ ಎಲ್ಲರ ಆಂತರಿಕ ಭೇದಭಾವ, ದ್ವೇಷ, ವೈಷಮ್ಯಗಳು ಇಲ್ಲವಾದುವು. (ಚೌ/೧-೪)

## ರಾಮರಾಜ್ಯ

**ದೋ – ಬರನಾಶ್ರಮ ನಿಜ ನಿಜ ಧರಮ ನಿರತ ಬೇದ ಪಥ ಲೋಗ।**
**ಚಲಹಿಂ ಸದಾ ಪಾವಹಿಂ ಸುಖಹಿ ನಹಿಂ ಭಯ ಸೋಕ ನ ರೋಗ ॥ ೨೦ ॥**

ರಾಮರಾಜ್ಯದಲ್ಲಿ ಪ್ರಜೆಗಳೆಲ್ಲರೂ ತಮ್ಮ-ತಮ್ಮ ವರ್ಣಾಶ್ರಮ ನಿಯಮಗಳನ್ನು ಅನುಸರಿಸಿ, ಧರ್ಮತತ್ಪರರಾಗಿದ್ದರು. ಸದಾ ವೇದಮಾರ್ಗಗಾಮಿಗಳಾಗಿ ಸುಖವಾಗಿದ್ದಾರೆ. ಅವರಿಗೆ ಭಯವಾಗಲೀ, ರೋಗವಾಗಲೀ, ಶೋಕವಾಗಲೀ ಗೊತ್ತೇ ಇರಲಿಲ್ಲ. (ದೋ/೨೦)

**ಚೌ – ದೈಹಿಕ ದೈವಿಕ ಭೌತಿಕ ತಾಪಾ। ರಾಮ ರಾಜ ನಹಿಂ ಕಾಹುಹಿ ಬ್ಯಾಪಾ ॥**
**ಸಬ ನರ ಕರಹಿಂ ಪರಸ್ಪರ ಪ್ರೀತೀ। ಚಲಹಿಂ ಸ್ವಧರ್ಮ ನಿರತ ಶ್ರುತಿ ನೀತೀ ॥ ೧ ॥**
**ಚಾರಿಉ ಚರನ ಧರ್ಮ ಜಗ ಮಾಹೀಂ। ಪೂರಿ ರಹಾ ಸಪನೆಹುಁ ಅಘ ನಾಹೀಂ ॥**
**ರಾಮ ಭಗತಿ ರತ ನರ ಅರು ನಾರೀ। ಸಕಲ ಪರಮ ಗತಿ ಕೇ ಅಧಿಕಾರೀ ॥ ೨ ॥**
**ಅಲ್ಪಮೃತ್ಯು ನಹಿಂ ಕವನಿಉ ಪೀರಾ। ಸಬ ಸುಂದರ ಸಬ ಬಿರುಜ ಸರೀರಾ ॥**
**ನಹಿಂ ದರಿದ್ರ ಕೊಉ ದುಖೀ ನ ದೀನಾ। ನಹಿಂ ಕೊಉ ಅಬುಧ ನ ಲಚ್ಛನ ಹೀನಾ ॥ ೩ ॥**
**ಸಬ ನಿರ್ದಂಭ ಧರ್ಮರತ ಪುನೀ। ನರ ಅರು ನಾರಿ ಚತುರ ಸಬ ಗುನೀ॥**
**ಸಬ ಗುನಗ್ಯ ಪಂಡಿತ ಸಬ ಗ್ಯಾನೀ। ಸಬ ಕೃತಗ್ಯ ನಹಿಂ ಕಪಟ ಸಯಾನೀ ॥ ೪ ॥**

ಶ್ರೀರಾಮನ ರಾಜ್ಯಪಾಲನೆಯಲ್ಲಿ ಯಾರಿಗೂ ದೈವಿಕ, ದೈಹಿಕ, ಭೌತಿಕ ತಾಪತ್ರಯಗಳು ಬಾಧಿಸುತ್ತಿರಲಿಲ್ಲ. ಜನರೆಲ್ಲರೂ ಪರಸ್ಪರ ಪ್ರೇಮಾನುರಾಗದಿಂದ ವೇದೋಕ್ತನೀತಿ ಮಾರ್ಗತತ್ಪರರಾಗಿ, ತಮ್ಮ-ತಮ್ಮ ಧರ್ಮವನ್ನು ಪಾಲಿಸುತ್ತಿದ್ದರು. ಧರ್ಮವು ನಾಲ್ಕೂ ಪಾದಗಳಿಂದ (ಸತ್ಯ, ಶೌಚ, ದಯೆ, ಮತ್ತು ದಾನ) ಪರಿಪೂರ್ಣವಾಗಿ ಸಂಚರಿಸುತ್ತಿತ್ತು. ಸ್ವಪ್ನದಲ್ಲೂ ಕೂಡ ಎಲ್ಲಿಯೂ ಪಾಪವಿರಲಿಲ್ಲ. ಸ್ತ್ರೀ-ಪುರುಷರು ರಾಮಭಕ್ತಿಪರಾಯಣರಾಗಿದ್ದು, ರಾಮಾನುಗ್ರಹದಿಂದ ಅಯೋಧ್ಯಾವಾಸಿಗಳೆಲ್ಲರೂ ಪರಮಗತಿ (ಮೋಕ್ಷ)ಗೆ ಅಧಿಕಾರಿಗಳಾಗಿದ್ದರು. ಪ್ರಜೆಗಳಲ್ಲಿ ಯಾರೂ ಅಕಾಲಮೃತ್ಯುವಿಗೆ ತುತ್ತಾಗುತ್ತಿರಲಿಲ್ಲ. ಯಾರಿಗೂ ಯಾವುದೇ ಬಾಧೆಗಳು ಇರಲಿಲ್ಲ. ಎಲ್ಲರೂ ಸುಂದರರಾಗಿ, ನಿರೋಗಿಗಳಾಗಿ ದೃಢಕಾಯರಾಗಿದ್ದರು. ರಾಮರಾಜ್ಯದಲ್ಲಿ ದರಿದ್ರರು, ದೀನರು, ದುಃಖಿಗಳು, ಮೂರ್ಖರು, ಶುಭಲಕ್ಷಣಹೀನರು, ಯಾರೂ ಇರಲಿಲ್ಲ. ಎಲ್ಲರೂ ದಂಭರಹಿತರೂ, ಧರ್ಮಪರಾಯಣರೂ, ಪುಣ್ಯಾತ್ಮರೂ ಆಗಿದ್ದರು. ಸ್ತ್ರೀ-ಪುರುಷರೆಲ್ಲರೂ ನೀತಿ ನಿಪುಣರೂ, ಗುಣವಂತರೂ ಆಗಿದ್ದರು. ಎಲ್ಲರೂ ಗುಣಗಳನ್ನು ಆದರಿಸುವವರೇ, ಪಂಡಿತರೇ, ಜ್ಞಾನಿಗಳೇ, ಕೃತಜ್ಞರೇ ಆಗಿದ್ದರು. ಕಪಟ, ಕೈತವಗಳು ಯಾರಲ್ಲಿಯೂ ಇರಲಿಲ್ಲ. (ಚೌ/೧-೪)

**ದೋ – ರಾಮ ರಾಜ ನಭಗೇಸ ಸುನು ಸಚರಾಚರ ಜಗ ಮಾಹಿಂ।**
**ಕಾಲ ಕರ್ಮ ಸುಭಾವ ಗುನ ಕೃತ ದುಖ ಕಾಹುಹಿ ನಾಹಿಂ ॥ ೨೧ ॥**

ಕಾಕಭುಶುಂಡಿಗಳು ಹೇಳುತ್ತಾರೆ – ಓ ಪಕ್ಷಿರಾಜ ಗರುಡಾ! ಕೇಳು. ರಾಮರಾಜ್ಯದಲ್ಲಿ ಜಡ-ಚೇತನ ಜಗತ್ತಿನಲ್ಲಿ ಕಾಲ, ಕರ್ಮ, ಸ್ವಭಾವ ಮತ್ತು ಗುಣಗಳಿಂದ ಉಂಟಾಗುವ ದುಃಖಗಳು ಯಾರನ್ನೂ ಬಾಧಿಸುತ್ತಿರಲಿಲ್ಲ. (ದೋ/೨೧)

**ಚೌ – ಭೂಮಿ ಸಪ್ತ ಸಾಗರ ಮೇಖಲಾ । ಏಕ ಭೂಪ ರಘುಪತಿ ಕೋಸಲಾ ॥**
**ಭುಅನ ಅನೇಕ ರೋಮ ಪ್ರತಿ ಜಾಸೂ । ಯಹ ಪ್ರಭುತಾ ಕಛು ಬಹುತ ನ ತಾಸೂ ॥ ೧ ॥**
**ಸೋ ಮಹಿಮಾ ಸಮುಝುತ ಪ್ರಭು ಕೇರೀ । ಯಹ ಬರನತ ಹೀನತಾ ಘನೇರೀ ॥**
**ಸೋಉ ಮಹಿಮಾ ಖಗೇಸ ಜಿನ್ಹ ಜಾನೀ । ಫಿರಿ ಎಹಿಂ ಚರಿತ ತಿನ್ಹಹುಂ ರತಿ ಮಾನೀ ॥ ೨ ॥**
**ಸೋಉ ಜಾನೇ ಕರ ಫಲ ಯಹ ಲೀಲಾ । ಕಹಹಿಂ ಮಹಾ ಮುನಿಬರ ದಮಸೀಲಾ ॥**
**ರಾಮ ರಾಜ ಕರ ಸುಖ ಸಂಪದಾ । ಬರನಿ ನ ಸಕಇ ಫನೀಸ ಸಾರದಾ ॥ ೩ ॥**
**ಸಬ ಉದಾರ ಸಬ ಪರ ಉಪಕಾರೀ । ಬಿಪ್ರ ಚರನ ಸೇವಕ ನರ ನಾರೀ ॥**
**ಏಕನಾರಿ ಬ್ರತ ರತ ಸಬ ಝಾರೀ । ತೇ ಮನ ಬಚ ಕ್ರಮ ಪತಿ ಹಿತಕಾರೀ ॥ ೪ ॥**

ಸಪ್ತಸಾಗರಗಳೇ ಮೇಖಲೆಯಾಗುಳ್ಳ ಭೂಮಂಡಲಕ್ಕೆ ಕೋಸಲಪತಿ ಶ್ರೀರಘುನಾಥನೇ ಏಕಚ್ಛತ್ರಾಧಿಪತಿಯಾಗಿದ್ದನು. ತನ್ನ ರೋಮ-ರೋಮಗಳಲ್ಲೂ ಅನೇಕ ಬ್ರಹ್ಮಾಂಡಗಳನ್ನಡಗಿಸಿಟ್ಟುಕೊಂಡಿರುವ ಆತನಿಗೆ ಈ ಸಪ್ತದ್ವಿಪಾಧಿಪತ್ಯ ಅಂತಹ ಅತಿಶಯವೇನೂ ಅಲ್ಲ. ಆ ಮಹಿಮೆಯನ್ನು ಅರಿತರೆ ಇದು ಆತನಿಗೆ ಗೌಣವೇ ಸರಿ. ಆದರೆ ಗರುಡಾ! ಆ ಮಹಿಮೆಯನ್ನು ಬಲ್ಲವರಿಗೂ ಕೂಡ ಈ ಲೀಲೆಯಲ್ಲಿ ಎಲ್ಲಿಲ್ಲದ ಪ್ರೇಮಾದರವಿದೆ. ಏಕೆಂದರೆ, ಆ ಮಹಿಮೆಯ ಫಲಕೂಡ ಈ ಲೀಲೆಯನ್ನು ಅನುಭವಿಸುವುದೇ ಆಗಿದೆ ಎಂದು ಜ್ಞಾನಿಗಳು ಹೇಳುತ್ತಾರೆ. ರಾಮರಾಜ್ಯದಲ್ಲಿನ ಸುಖಸಂಪತ್ತುಗಳನ್ನು ಆದಿಶೇಷ, ಸರಸ್ವತಿಯರೂ ವರ್ಣಿಸಲಾರರು. ಅಲ್ಲಿಯ ಎಲ್ಲ ನರನಾರಿಯರೂ ಉದಾರಿಗಳೂ, ಪರೋಪಕಾರಿಗಳೂ, ವಿಪ್ರಚರಣಸೇವಕರೂ ಆಗಿದ್ದಾರೆ. ಎಲ್ಲ ಪುರುಷರೂ ಏಕಪತ್ನೀವ್ರತಧಾರಿಗಳು, ಅದೇ ರೀತಿ ಸ್ತ್ರೀಯರೆಲ್ಲರೂ ಕೂಡ ತ್ರಿಕರಣಪೂರ್ವಕವಾಗಿ ಪತಿವ್ರತಾಶಿರೋಮಣಿಯರಾಗಿದ್ದಾರೆ. (ಚೌ/೧-೪)

**ದೋ – ದಂಡ ಜತಿನ್ಹ ಕರ ಭೇದ ಜಹಂ ನರ್ತಕ ನೃತ್ಯ ಸಮಾಜ ।**
**ಜೀತಹು ಮನಹಿ ಸುನಿಅ ಅಸ ರಾಮಚಂದ್ರ ಕೇಂ ರಾಜ ॥ ೨೨ ॥**

ಶ್ರೀರಾಮಚಂದ್ರನ ರಾಜ್ಯದಲ್ಲಿ 'ದಂಡ' ಕೇವಲ ಸಂನ್ಯಾಸಿಗಳ ಕೈಯಲ್ಲೇ ಇತ್ತು. 'ಭೇದ' ಎಂಬ ಪದವು ಕೇವಲ ನರ್ತನ ಮಾಡುವ ನೃತ್ಯಸಮಾಜದಲ್ಲಿ ಮಾತ್ರವಿತ್ತು. 'ಗೆಲ್ಲು' ಎಂಬ ಶಬ್ದಕೇವಲ ಮನವನ್ನು ಗೆಲ್ಲುವಾಗ ಮಾತ್ರ ಬಳಕೆಯಲ್ಲಿತ್ತು. (ಅರ್ಥಾತ್ – ರಾಜನೀತಿಯಲ್ಲಿ ಶತ್ರುಗಳನ್ನು ಗೆಲ್ಲಲು ಹಾಗೂ ಕಳ್ಳ-ಕಾಕರನ್ನು ದಮನಮಾಡಲು ಸಾಮ, ದಾನ, ಭೇದ, ದಂಡಗಳೆಂಬ ಚತುರೋಪಾಯಗಳನ್ನು ಹೇಳಿದೆ. ರಾಮರಾಜ್ಯದಲ್ಲಿ ಯಾರೂ ಶತ್ರುಗಳೇ ಇರಲಿಲ್ಲ. ಆದ್ದರಿಂದ 'ಗೆಲ್ಲು' ಶಬ್ದ ಮನಸ್ಸನ್ನು ಗೆಲ್ಲುವುದರಲ್ಲಿಮಾತ್ರ ಬಳಕೆಗೆ ಬರುತ್ತಿತ್ತು. ಯಾರೂ ಅಪರಾಧವನ್ನೇ ಮಾಡದಿರುವಾಗ 'ದಂಡ' ಶಬ್ದ ಸಂನ್ಯಾಸಿಗಳ ಕೈಯಲ್ಲಿರುವ ದಂಡಕ್ಕೆ ಮಾತ್ರ ಅನ್ವಯಿಸುತ್ತಿತ್ತು. ಎಲ್ಲರೂ ಅನುಕೂಲರಾಗಿರುವುದರಿಂದ ಭೇದನೀತಿಯ ಅಗತ್ಯವೇ ಇರಲಿಲ್ಲ. 'ಭೇದ' ಶಬ್ದವು ಕೇವಲ ಸ್ವರ-ತಾಳ ಭೇದಗಳಿಗೆ ಮಾತ್ರ ಅನ್ವಯಿಸುತ್ತಿತ್ತು.) (ದೋ/೨೨)

**ಚೌ – ಫೂಲಹಿಂ ಫರಹಿಂ ಸದಾ ತರು ಕಾನನ । ರಹಹಿಂ ಏಕ ಸಂಗ ಗಜ ಪಂಚಾನನ ॥**
**ಖಗ ಮೃಗ ಸಹಜ ಬಯರು ಬಿಸರಾಈ । ಸಬನ್ಹಿ ಪರಸ್ಪರ ಪ್ರೀತಿ ಬಢಾಈ ॥ ೧ ॥**
**ಕೂಜಹಿಂ ಖಗ ಮೃಗ ನಾನಾ ಬೃಂದಾ । ಅಭಯ ಚರಹಿಂ ಬನ ಕರಹಿಂ ಅನಂದಾ ॥**
**ಸೀತಲ ಸುರಭಿ ಪವನ ಬಹ ಮಂದಾ । ಗುಂಜತ ಅಲಿ ಲೈ ಚಲಿ ಮಕರಂದಾ ॥ ೨ ॥**
**ಲತಾ ಬಿಟಪ ಮಾಗೇಂ ಮಧು ಚವಹೀಂ । ಮನಭಾವತೋ ಧೇನು ಪಯ ಸ್ರವಹೀಂ ॥**
**ಸಸಿ ಸಂಪನ್ನ ಸದಾ ರಹ ಧರನೀ । ತ್ರೇತಾಂ ಭಇ ಕೃತಜುಗ ಕೈ ಕರನೀ ॥ ೩ ॥**
**ಪ್ರಗಟೀಂ ಗಿರಿನ್ಹ ಬಿಬಿಧಿ ಮನಿ ಖಾನೀ । ಜಗದಾತಮಾ ಭೂಪ ಜಗ ಜಾನೀ ॥**
**ಸರಿತಾ ಸಕಲ ಬಹಹಿಂ ಬರ ಬಾರೀ । ಸೀತಲ ಅಮಲ ಸ್ವಾದ ಸುಖಕಾರೀ ॥ ೪ ॥**
**ಸಾಗರ ನಿಜ ಮರಜಾದಾಂ ರಹಹೀಂ । ಡಾರಹಿಂ ರತ್ನ ತಟನ್ಹಿ ನರ ಲಹಹೀಂ ॥**
**ಸರಸಿಜ ಸಂಕುಲ ಸಕಲ ತಡಾಗಾ । ಅತಿ ಪ್ರಸನ್ನ ದಸ ದಿಸಾ ಬಿಭಾಗಾ ॥ ೫ ॥**

ವನದಲ್ಲಿ ಗಿಡಮರಗಳು ಯಾವಾಗಲೂ ಫಲಪುಷ್ಪಭರಿತವಾಗಿದ್ದವು. ಆನೆ, ಸಿಂಹಗಳು ತಮ್ಮ ಜನ್ಮಜಾತ ವೈರವನ್ನು ಮರೆತು ಒತ್ತಟ್ಟಿಗಿದ್ದವು. ಪಶುಪಕ್ಷಿಗಳು ತಮ್ಮ ಜಾತಿವೈರವನ್ನು ಮರೆತು ನಿರ್ಭಯವಾಗಿ ಬೆರೆತು-ಕಲೆತು ಅಲೆಯುತ್ತಿದ್ದವು. ಪಕ್ಷಿಗಳು

ಮಧುರವಾಗಿ ಕಲಕೂಜನ ಮಾಡುತ್ತಿದ್ದವು. ನಾನಾ ಪಶುವೃಂದಗಳು ವನದಲ್ಲಿ ನಿರ್ಭಯವಾಗಿ ವಿಚರಿಸುತ್ತಾ ಆನಂದವಾಗಿದ್ದವು. ಶೀತಲ, ಮಂದ, ಸುಗಂಧಿತ ಪವನ ಬೀಸುತ್ತಿರುತ್ತಿತ್ತು. ಭ್ರಮರಗಳು ಪುಷ್ಪಮಕರಂದ ಪಾನಮತ್ತರಾಗಿ ಝೇಂಕರಿಸುತ್ತಿದ್ದವು. ಬಳ್ಳಿಗಳು, ಗಿಡ-ಮರಗಳು ಬೇಡುತ್ತಲೇ ಜೇನನ್ನು ಸುರಿಸುತ್ತಿದ್ದವು. ಗೋವುಗಳು ಬಯಸಿದಷ್ಟು ಹಾಲು ಕೊಡುತ್ತಿದ್ದವು. ಭೂಮಿಯು ಸದಾ ಸಸ್ಯಶಾಲಿನಿಯಾಗಿತ್ತು. ತ್ರೇತಾಯುಗದಲ್ಲಿ ಕೃತಯುಗದ ಲಕ್ಷಣಗಳು ಪ್ರತ್ಯಕ್ಷವಾಗಿ ಗೋಚರಿಸುತ್ತಿದ್ದವು. ಸಮಸ್ತ ಜಗದಾತ್ಮನಾದ ಭಗವಂತನೇ ಜಗತ್ತಿನ ಒಡೆಯನಾದುದನ್ನು ಕಂಡು ಪರ್ವತಗಳು ಅನೇಕ ವಿಧವಾದ ಮಣಿಗಳ ಗಣಿಗಳನ್ನೇ ಹೊರಹೊಮ್ಮಿಸಿದವು. ನದಿಗಳೆಲ್ಲ ಶ್ರೇಷ್ಠವೂ, ಶೀತಲವೂ, ನಿರ್ಮಲವೂ, ಸುಖಪ್ರದವೂ, ಸ್ವಾದಿಷ್ಟವೂ ಆದ ನೀರಿನಿಂದ ತುಂಬಿ ಹರಿಯುತ್ತಿದ್ದವು. ಸಮುದ್ರಗಳು ತಮ್ಮ ಎಲ್ಲೆ ಮೀರದೆ, ಅಲೆಗಳ ಮೂಲಕ ತಮ್ಮ ಒಡಲಿಂದ ರತ್ನಗಳನ್ನು ದಂಡೆಗೆ ಎರಚುತ್ತಿದ್ದವು. ಮನುಷ್ಯರು ಅವನ್ನು ಆಯ್ದು ತರುತ್ತಿದ್ದರು. ಎಲ್ಲ ಕೆರೆ, ಕಟ್ಟೆಗಳು, ಸರೋವರಗಳು ಕಮಲಸಂಕುಲದಿಂದ ತುಂಬಿ ಕಂಗೊಳಿಸುತ್ತಿದ್ದವು. ದಶದಿಶೆಗಳ ಸರ್ವಪ್ರದೇಶಗಳಲ್ಲಿಯೂ ಆನಂದವು ತುಂಬಿಹೋಗಿತ್ತು. (ಚೌ/೧-೫)

**ದೋ – ಬಿಧು ಮಹಿ ಪೂರ ಮಯೂಖನ್ಹಿ ರಬಿ ತಪ ಜೇತನೆಹಿ ಕಾಜ।**
**ಮಾಗೇಂ ಬಾರಿದ ದೇಹಿಂ ಜಲ ರಾಮಚಂದ್ರ ಕೇಂ ರಾಜ ॥ ೨೩ ॥**

ರಾಮರಾಜ್ಯದಲ್ಲಿ ಚಂದ್ರನು ತನ್ನ ಅಮೃತಕಿರಣಗಳಿಂದ ಭೂಮಿಯನ್ನು ತುಂಬಿ ತಣಿಸುತ್ತಿದ್ದನು. ಸೂರ್ಯನು ಎಷ್ಟು ಬೇಕೋ ಅಷ್ಟೇ ತಾಪವನ್ನು ನೀಡುತ್ತಿದ್ದನು. ಮೇಘಗಳು ಕಾಲಾನುಸಾರ ಮಳೆಯನ್ನು ಸುರಿಯುತ್ತಿದ್ದವು. (ದೋ/೨೩)

**ಚೌ – ಕೋಟಿನ್ಹ ಬಾಜಿಮೇಧ ಪ್ರಭು ಕೀನ್ಹೇ। ದಾನ ಅನೇಕ ದ್ವಿಜನ್ಹ ಕಹँ ದೀನ್ಹೇ॥**
**ಶ್ರುತಿ ಪಥ ಪಾಲಕ ಧರ್ಮ ಧುರಂಧರ। ಗುನಾತೀತ ಅರು ಭೋಗ ಪುರಂದರ ॥ ೧ ॥**
**ಪತಿ ಅನುಕೂಲ ಸದಾ ರಹ ಸೀತಾ। ಸೋಭಾ ಖಾನಿ ಸುಸೀಲ ಬಿನೀತಾ ॥**
**ಜಾನತಿ ಕೃಪಾಸಿಂಧು ಪ್ರಭುತಾಈ। ಸೇವತಿ ಚರನ ಕಮಲ ಮನ ಲಾಈ ॥ ೨ ॥**
**ಜದ್ಯಪಿ ಗೃಹँ ಸೇವಕ ಸೇವಕಿನೀ। ಬಿಪುಲ ಸದಾ ಸೇವಾ ಬಿಧಿ ಗುನೀ ॥**
**ನಿಜ ಕರ ಗೃಹ ಪರಿಚರಜಾ ಕರಈ। ರಾಮಚಂದ್ರ ಆಯಸು ಅನುಸರಈ ॥ ೩ ॥**
**ಜೆಹಿ ಬಿಧಿ ಕೃಪಾಸಿಂಧು ಸುಖ ಮಾನಇ। ಸೋಇ ಕರ ಶ್ರೀ ಸೇವಾ ಬಿಧಿ ಜಾನಇ॥**
**ಕೌಸಲ್ಯಾದಿ ಸಾಸು ಗೃಹ ಮಾಹೀಂ। ಸೇವಇ ಸಬನ್ಹಿ ಮಾನ ಮದ ನಾಹೀಂ ॥ ೪ ॥**
**ಉಮಾ ರಮಾ ಬ್ರಹ್ಮಾದಿ ಬಂದಿತಾ। ಜಗದಂಬಾ ಸಂತತಮನಿಂದಿತಾ ॥ ೫ ॥**

ಶ್ರೀರಾಮಚಂದ್ರಪ್ರಭುವು ಅನೇಕ ಅಶ್ವಮೇಧ ಯಜ್ಞಗಳನ್ನು ಮಾಡಿ, ಬ್ರಾಹ್ಮಣರಿಗೆ ಅನೇಕ ದಾನಗಳನ್ನು ನೀಡಿದನು. ಅವನು ವೈದಿಕಮಾರ್ಗ ಪರಿರಕ್ಷಕನೂ, ಧರ್ಮಧುರಂಧರನೂ, ತ್ರಿಗುಣಾತೀತನೂ ಆಗಿದ್ದನು. ಐಶ್ವರ್ಯದಲ್ಲಿ ಶ್ರೀರಾಮನಿಗೆ ಇಂದ್ರನೂ ಸರಿಸಾಟಿಯಾಗಲಾರನು. ಚೆಲುವಿನ ಗಣಿಯೂ, ಸುಶೀಲಳೂ ವಿನಯಶೋಭಿತಳಾದ ಸೀತಾದೇವಿಯು ಸದಾ ಪತಿಗೆ ಅನುಕೂಲಳಾಗಿ ನಡೆಯುತ್ತಿದ್ದಳು. ದಯಾನಿಧಿಯಾದ ಶ್ರೀರಾಮಚಂದ್ರನ ಮಹಿಮೆಯನ್ನು ಆಕೆಯು ಬಲ್ಲವಳಾಗಿದ್ದಳು. ಶ್ರೀರಾಮನ ಚರಣಕಮಲಗಳಲ್ಲಿ ಅವಳು ತನ್ನ ಮನಸ್ಸನ್ನು ಅಂಕಿತವಾಗಿಸಿ ಸೇವಿಸುತ್ತಿದ್ದಳು. ಅರಮನೆಯಲ್ಲಿ ಕುಶಲರೂ, ಸೇವಾಪರಾಯಣರೂ ಆದ ಅನೇಕ ದಾಸ-ದಾಸೀಜನರು ಇದ್ದರೂ, ಸೀತಾದೇವಿಯು ತನ್ನ ಪತಿಸೇವೆಯನ್ನು ತಾನೇ ಕೈಯಾರೆ ಮಾಡುತ್ತಿದ್ದಳು. ಕೃಪಾನಿಧಿಯಾದ ಶ್ರೀರಾಮನ ಆಜ್ಞೆಯನ್ನು ಪಾಲಿಸುತ್ತಾ ಅವನಿಗೆ ಸುಖಾನಂದವಾಗುವಂತಹುದನ್ನೇ ಮಾಡುತ್ತಿದ್ದಳು. ಸೇವಾವಿಧಿಯಲ್ಲಿ ಅವಳಿಂದ ಹೆಚ್ಚಿನ ಸಮರ್ಥರಾರೂ ಇರಲಿಲ್ಲ. ಗರ್ವವಾಗಲೀ, ಅಹಂಕಾರವಾಗಲೀ, ಇಲ್ಲದೆ ಅವಳು ಕೌಸಲ್ಯಾದೇವಿಯೇ ಮೊದಲಾದ ಅತ್ತೆಯಂದಿರ ಸೇವೆಯನ್ನು ಭಕ್ತಿಯಿಂದ ಮಾಡುತ್ತಿದ್ದಳು. ಶಿವನು ಹೇಳುತ್ತಾನೆ – ಎಲೈ ಉಮೆ! ಬ್ರಹ್ಮಾದಿದೇವತೆಗಳಿಗೆ ಪೂಜ್ಯಳೂ, ಸಂತತ ಅನಿಂದಿತೆಯೂ, ದೋಷರಹಿತಳೂ ಜಗಜ್ಜನನಿಯೂ ಆದ ಶ್ರೀರಮಾದೇವಿಯೇ ಸೀತಾದೇವಿಯು. (ಚೌ/೧-೫)

**ದೋ – ಜಾಸು ಕೃಪಾ ಕಟಾಚ್ಛು ಸುರ ಚಾಹತ ಚಿತವ ನ ಸೋಇ।**
**ರಾಮ ಪದಾರಬಿಂದ ರತಿ ಕರತಿ ಸುಭಾವಹಿ ಖೋಇ॥ ೨೪ ॥**

ದೇವತೆಗಳೆಲ್ಲ ಆಕೆಯ ಕೃಪಾಕಟಾಕ್ಷಕ್ಕಾಗಿ ಸದಾ ಹಾತೊರೆಯುತ್ತಿರುವರು. ಆದರೆ ಆಕೆಯು ಅತ್ತ ಕಣ್ಣೆತ್ತಿಯೂ ನೋಡುವುದಿಲ್ಲ. ಅಂತಹ ಲಕ್ಷ್ಮೀದೇವಿಯು ತನ್ನ ಸಹಜಚಾಂಚಲ್ಯವನ್ನು ಮರೆತು ಶ್ರೀರಾಮಚಂದ್ರಪ್ರಭು ಚರಣಾರವಿಂದಗಳಲ್ಲಿ ಅಚಂಚಲ ಪ್ರೇಮವನ್ನಿಟ್ಟಿರುವಳು. (ದೋ/೨೪)

**ಚೌ – ಸೇವಹಿಂ ಸಾನುಕೂಲ ಸಬ ಭಾಈ। ರಾಮಚರನ ರತಿ ಅತಿ ಅಧಿಕಾಈ॥**
**ಪ್ರಭು ಮುಖ ಕಮಲ ಬಿಲೋಕತ ರಹಹೀಂ। ಕಬಹುँ ಕೃಪಾಲ ಹಮಹಿ ಕಛು ಕಹಹೀಂ॥ ೧ ॥**
**ರಾಮ ಕರಹಿಂ ಭ್ರಾತನ್ಹ ಪರ ಪ್ರೀತೀ। ನಾನಾ ಭಾಂತಿ ಸಿಖಾವಹಿಂ ನೀತೀ॥**
**ಹರಷಿತ ರಹಹಿಂ ನಗರ ಕೇ ಲೋಗಾ। ಕರಹಿಂ ಸಕಲ ಸುರ ದುರ್ಲಭ ಭೋಗಾ॥ ೨ ॥**
**ಅಹನಿಸಿ ಬಿಧಿಹಿ ಮನಾವತ ರಹಹೀಂ। ಶ್ರೀರಘುಬೀರ ಚರನ ರತಿ ಚಹಹೀಂ॥**
**ದುಇ ಸುತ ಸುಂದರ ಸೀತಾਂ ಜಾಏ। ಲವ ಕುಸ ಬೇದ ಪುರಾನನ್ಹ ಗಾಏ॥ ೩ ॥**
**ದೋಉ ಬಿಜಈ ಬಿನಈ ಗುನ ಮಂದಿರ। ಹರಿ ಪ್ರತಿಬಿಂಬ ಮನಹುँ ಅತಿ ಸುಂದರ॥**
**ದುಇ ದುಇ ಸುತ ಸಬ ಭ್ರಾತನ್ಹ ಕೇರೇ। ಭಏ ರೂಪ ಗುನ ಸೀಲ ಘನೇರೇ॥ ೪ ॥**

ಸೋದರರೆಲ್ಲರೂ ಶ್ರೀರಾಮನ ಪಾದಪದ್ಮಗಳನ್ನು ಹೆಚ್ಚಾದ ಪ್ರೇಮದಿಂದ ಸೇವಿಸುತ್ತಿದ್ದರು. ಕೃಪಾಳುವಾದ ಪ್ರಭುವು ತಮಗೆ ಏನಾದರೂ ಸೇವೆ ಒಪ್ಪಿಸಿಯಾನೇ ಎಂದು ಅವನ ಮುಖಾರವಿಂದವನ್ನೇ ನೋಡುತ್ತಾ ಇದ್ದರು. ಶ್ರೀರಾಮಚಂದ್ರನಿಗೂ ಕೂಡ ಸೋದರರಲ್ಲಿ ಎಲ್ಲಿಲ್ಲದ ಪ್ರೇಮವಿತ್ತು. ಅವರಿಗೆ ನಾನಾ ವಿಧವಾದ ನೀತಿಗಳನ್ನು ಬೋಧಿಸುತ್ತಿದ್ದನು. ನಗರವಾಸಿಗಳು ಪ್ರಸನ್ನಚಿತ್ತದಿಂದ ದೇವತೆಗಳಿಗೂ ದುರ್ಲಭವಾದ ಸೌಖ್ಯವನ್ನು ಅನುಭವಿಸುತ್ತಿದ್ದರು. ಶ್ರೀರಾಮಚಂದ್ರನ ಚರಣಗಳಲ್ಲಿ ಭಕ್ತಿಯನ್ನು ಅನುಗ್ರಹಿಸುವಂತೆ ನಿರಂತರವಾಗಿ ಅವರು ಬ್ರಹ್ಮದೇವರನ್ನು ಪ್ರಾರ್ಥಿಸುತ್ತಿದ್ದರು. ಸೀತಾದೇವಿಯಲ್ಲಿ 'ಲವ-ಕುಶ' ಎಂಬ ಇಬ್ಬರು (ಅವಳಿ-ಜವಳಿ) ಕುಮಾರರು ಉದಯಿಸಿದರು ಎಂದು ವೇದ, ಪುರಾಣಗಳು ವರ್ಣಿಸುತ್ತವೆ. ಅವರು ರಣಕೋವಿದರೂ, ವಿನಯ, ಸದ್ಗುಣಗಳಿಗೆ ನಿಧಾನರೂ, ಅತ್ಯಂತ ಸುಂದರರೂ, ಶ್ರೀರಾಮನ ಪ್ರತಿಬಿಂಬದಂತೆ ಇದ್ದರು. ಶ್ರೀರಾಮನ ಸೋದರರಿಗೂ ಒಬ್ಬೊಬ್ಬರಿಗೂ ಎರಡು-ಎರಡು ಗಂಡುಮಕ್ಕಳಾದರು. ಅವರೆಲ್ಲರೂ ಸುಂದರರೂ, ಸುಶೀಲರೂ, ಸದ್ಗುಣ ಸಂಪನ್ನರೂ ಆಗಿದ್ದರು. (ಚೌ/೧-೪)

**ದೋ – ಗ್ಯಾನ ಗಿರಾ ಗೋತೀತ ಅಜ ಮಾಯಾ ಮನ ಗುನ ಪಾರ।**
**ಸೋಇ ಸಚ್ಚಿದಾನಂದ ಘನ ಕರ ನರ ಚರಿತ ಉದಾರ॥ ೨೫ ॥**

ಶ್ರೀರಾಮನು ಜ್ಞಾನಕ್ಕೂ, ವಾಣಿಗೂ, ಇಂದ್ರಿಯಗಳಿಗೂ ಅಗೋಚರನಾಗಿರುವವನು. ಜನ್ಮರಹಿತನೂ, ಮಾಯೆಗೆ, ಮನಸ್ಸಿಗೆ, ತ್ರಿಗುಣಗಳಿಗೆ ಅತೀತನಾಗಿರುವವನು. ಅಂತಹವನು ಮಾನವರಂತೆ ಮನೋಹರ ಲೀಲೆಗಳನ್ನು ಪ್ರದರ್ಶಿಸುತ್ತಾ ಎಲ್ಲರನ್ನು ಆಹ್ಲಾದಪಡಿಸುತ್ತಿದ್ದನು. (ದೋ/೨೫)

**ಚೌ – ಪ್ರಾತಕಾಲ ಸರಊ ಕರಿ ಮಜ್ಜನ। ಬೈಠಹಿಂ ಸಭಾਂ ಸಂಗ ದ್ವಿಜ ಸಜ್ಜನ॥**
**ಬೇದ ಪುರಾನ ಬಸಿಷ್ಟ ಬಖಾನಹಿಂ। ಸುನಹಿಂ ರಾಮ ಜದ್ಯಪಿ ಸಬ ಜಾನಹಿಂ॥ ೧ ॥**
**ಅನುಜನ್ಹ ಸಂಜುತ ಭೋಜನ ಕರಹೀಂ। ದೇಖಿ ಸಕಲ ಜನನೀਂ ಸುಖ ಭರಹೀಂ॥**
**ಭರತ ಸತ್ರುಹನ ದೋನಉ ಭಾಈ। ಸಹಿತ ಪವನಸುತ ಉಪಬನ ಜಾಈ॥ ೨ ॥**
**ಬೂಝಹಿಂ ಬೈಠಿ ರಾಮ ಗುನ ಗಾಹಾ। ಕಹ ಹನುಮಾನ ಸುಮತಿ ಅವಗಾಹಾ॥**
**ಸುನತ ಬಿಮಲ ಗುನ ಅತಿ ಸುಖ ಪಾವಹಿಂ। ಬಹುರಿ ಬಹುರಿ ಕರಿ ಬಿನಯ ಕಹಾವಹಿಂ॥ ೩ ॥**
**ಸಬ ಕೇਂ ಗೃಹ ಗೃಹ ಹೋಹಿಂ ಪುರಾನಾ। ರಾಮಚರಿತ ಪಾವನ ಬಿಧಿ ನಾನಾ॥**
**ನರ ಅರು ನಾರಿ ರಾಮ ಗುನ ಗಾನಹಿಂ। ಕರಹಿಂ ದಿವಸ ನಿಸಿ ಜಾತ ನ ಜಾನಹಿಂ॥ ೪ ॥**

ಶ್ರೀರಾಮಚಂದ್ರನು ಉಷಃಕಾಲದಿಂದ ಮೊದಲೇ ಎದ್ದು ಸರಯೂನದಿಯಲ್ಲಿ ಸ್ನಾನಾದಿಗಳನ್ನು ಮಾಡಿ, ಬ್ರಾಹ್ಮಣರು, ಸಜ್ಜನರೊಂದಿಗೆ ಒಡ್ಡೋಲಗದಲ್ಲಿ ಬಂದು ಕುಳಿತುಕೊಳ್ಳುವನು. ಮಹರ್ಷಿ ವಸಿಷ್ಠರು ವೇದಪುರಾಣಗಳ ಕಥೆಗಳನ್ನು ವರ್ಣಿಸುತ್ತಿದ್ದರು. ಸರ್ವಜ್ಞನಾದ ಶ್ರೀರಾಮನು ಅವೆಲ್ಲವನ್ನು ಶ್ರದ್ಧೆಯಿಂದ ಕೇಳುತ್ತಿದ್ದನು. ಮಧ್ಯಾಹ್ನ ಸೋದರರೊಡಗೂಡಿ ಆರೋಗಣೆ ಮಾಡುವನು. ಇದನ್ನು ಕಂಡ ತಾಯಂದಿರೆಲ್ಲರು ಆನಂದಭರಿತರಾಗುತ್ತಿದ್ದರು. ಭರತ, ಶತ್ರುಘ್ನರಿಬ್ಬರೂ ಹನುಮಂತನೊಡಗೂಡಿ ಉಪವನಕ್ಕೆ ಹೋಗಿ ಅಲ್ಲಿ ಕುಳಿತು ಶ್ರೀರಾಮಚಂದ್ರನ ಲೋಕೋತ್ತರ ಕಥೆಯ ಕುರಿತು ಕೇಳುವರು. ಆಂಜನೇಯನು ತನ್ನ ಮತಿಗೆ ಅನುಗುಣವಾಗಿ, ಆ ಗುಣಸಾಗರದಲ್ಲಿ ಮುಳುಗೆದ್ದು ಅವನ್ನು ವರ್ಣಿಸುವನು. ಶ್ರೀರಾಮನ ನಿರ್ಮಲ ಗುಣಗಳನ್ನು ಕೇಳಿ ಸೋದರರಿಬ್ಬರೂ ಅತ್ಯಂತ ಸುಖಿಗಳಾಗುವರು. ವಿನಯದಿಂದ ಮತ್ತೆ-ಮತ್ತೆ ಹೇಳಿಸಿ ಕೇಳುತ್ತಿದ್ದರು. ನಗರವಾಸಿಗಳೆಲ್ಲರ ಮನೆ-ಮನೆಗಳಲ್ಲಿ ಪುರಾಣಕಥೆಗಳು ಶ್ರೀರಾಮನ ಪವಿತ್ರಕಥೆಗಳನ್ನು ಭಕ್ತಿಯಿಂದ ಶ್ರವಣಿಸುತ್ತಿದ್ದರು.

ಸ್ತ್ರೀ-ಪುರುಷರೆಲ್ಲರೂ ಶ್ರೀರಾಮಚಂದ್ರನ ಗುಣಗಾನ ಮಾಡುತ್ತಾ ಆನಂದದಲ್ಲಿ ಮುಳುಗಿದ್ದು, ಅವರಿಗೆ ಹಗಲಿರುಳು ಉರುಳುವುದೇ ಗೊತ್ತಾಗುತ್ತಿರಲಿಲ್ಲ. (ಚೌ/೧-೪)

**ದೋ – ಅವಧಪುರೀ ಬಾಸಿನ್ಹ ಕರ ಸುಖ ಸಂಪದಾ ಸಮಾಜ ।**
**ಸಹಸ ಸೇಷ ನಹಿಂ ಕಹಿ ಸಕಹಿಂ ಜಹಂ ನೃಪ ರಾಮ ಬಿರಾಜ ॥ ೨೬ ॥**

ಶ್ರೀರಾಮಚಂದ್ರನೇ ಸ್ವತಃ ರಾಜನಾಗಿ ವಿರಾಜಿಸುತ್ತಿರುವಾಗ ಆ ಅಯೋಧ್ಯೆಯ ನಿವಾಸಿಗಳ ಸುಖಸಂಪತ್ತನ್ನು ಸಹಸ್ರಾರು ಶೇಷರೂ ವರ್ಣಿಸಲಾರರು. (ದೋ/೨೬)

**ಚೌ – ನಾರದಾದಿ ಸನಕಾದಿ ಮುನೀಸಾ । ದರಸನ ಲಾಗಿ ಕೋಸಲಾಧೀಸಾ ॥**
**ದಿನ ಪ್ರತಿ ಸಕಲ ಅಜೋಧ್ಯಾ ಆವಹಿಂ । ದೇಖಿ ನಗರು ಬಿರಾಗು ಬಿಸರಾವಹಿಂ ॥ ೧ ॥**
**ಜಾತರೂಪ ಮನಿ ರಚಿತ ಅಟಾರೀಂ । ನಾನಾ ರಂಗ ರುಚಿರ ಗಚ ಢಾರೀಂ ॥**
**ಪುರ ಚಹುಂ ಪಾಸ ಕೋಟ ಅತಿ ಸುಂದರ । ರಚೇ ಕಂಗೂರಾ ರಂಗ ರಂಗ ಬರ ॥ ೨ ॥**
**ನವ ಗ್ರಹ ನಿಕರ ಅನೀಕ ಬನಾಈ । ಜನು ಘೇರೀ ಅಮರಾವತಿ ಆಈ ॥**
**ಮಹಿ ಬಹು ರಂಗ ರಚಿತ ಗಚ ಕಾಂಚಾ । ಜೋ ಬಿಲೋಕಿ ಮುನಿಬರ ಮನ ನಾಚಾ ॥ ೩ ॥**
**ಧವಲ ಧಾಮ ಊಪರ ನಭ ಚುಂಬತ । ಕಲಸ ಮನಹುಂ ರಬಿ ಸಸಿ ದುತಿ ನಿಂದತ ॥**
**ಬಹು ಮನಿ ರಚಿತ ಝರೋಖಾ ಭ್ರಾಜಹಿಂ । ಗೃಹ ಗೃಹ ಪ್ರತಿ ಮನಿ ದೀಪ ಬಿರಾಜಹಿಂ ॥ ೪ ॥**

ನಾರದಾದಿ ಮಹರ್ಷಿಗಳು, ಸನಕಾದಿ ಮುನೀಶ್ವರರು ಕೋಸಲಾಧೀಶ ಶ್ರೀರಾಮನ ದರ್ಶನಮಾಡಲು ನಿತ್ಯವೂ ಆಯೋಧ್ಯೆಗೆ ಬರುತ್ತಿದ್ದರು. ಆ ದಿವ್ಯನಗರದರ್ಶನದಿಂದ ಅವರ ವೈರಾಗ್ಯ ಕೆಲಹೊತ್ತು ಅವರಿಂದ ಮರೆಯಾಗುತ್ತಿತ್ತು. ಅಲ್ಲಿ ಸ್ವರ್ಣಖಚಿತ ರತ್ನಮಯವಾದ ಉಪ್ಪರಿಗೆಗಳಿಗೆ ಲೆಕ್ಕವಿರಲಿಲ್ಲ. ಮಣಿಖಚಿತವಾದ ಅನೇಕ ವರ್ಣಗಳ ನೆಲಗಟ್ಟುಗಳಿದ್ದವು. ನಗರದ ಸುತ್ತಲೂ ಸುಂದರ ಪ್ರಾಕಾರಗಳಿದ್ದು, ಅದರ ಮೇಲೆ ವಿವಿಧವರ್ಣಗಳಿಂದ ಚಿತ್ರ-ವಿಚಿತ್ರವಾದ ಬುರುಜುಗಳು ನಿರ್ಮಾಣಗೊಂಡಿದ್ದವು. ನವಗ್ರಹರು ಅಸಂಖ್ಯಾತ ಸೇನೆಯಿಂದೊಡಗೂಡಿ ಅಮರಾವತಿಯನ್ನು ಸುತ್ತುವರಿದಿವೆಯೋ ಎಂಬಂತೆ ಅವು ಶೋಭಿಸುತ್ತಿದ್ದವು. ಅನೇಕ ವರ್ಣಗಳ ಸ್ಫಟಿಕ ರತ್ನಗಳಿಂದ ರಾಜಮಾರ್ಗಗಳನ್ನು ನಿರ್ಮಿಸಿದ್ದರು. ಅವುಗಳನ್ನು ಕಂಡು ಮುನಿಗಳ ಮನಸ್ಸೂ ಕೂಡ ಆನಂದದಿಂದ ಕುಣಿಯತೊಡಗುತ್ತಿತ್ತು. ಧವಳಕಾಂತಿಯಿಂದ ವಿರಾಜಿಸುವ ಎತ್ತರವಾದ ಸೌಧಗಳು ಆಗಸವನ್ನೇ ಚುಂಬಿಸುತ್ತಿರುವವೋ ಎಂಬಂತಿತ್ತು. ಆ ದಿವ್ಯ ಹರ್ಮ್ಯಗಳ ಮೇಲಿನ ಕಲಶಗಳು ತಮ್ಮ ಕಾಂತಿಯಿಂದ ಸೂರ್ಯಚಂದ್ರರನ್ನೂ ಕೂಡ ಏಳಿಸುವಂತಿದ್ದವು. ಆ ಭವನಗಳ ಕಿಟಕಿಗಳು ಮಣಿಖಚಿತವಾಗಿ ನಿರ್ಮಿಸಿದ್ದರು. ಪ್ರತಿ ಮನೆ-ಮನೆಗಳಲ್ಲಿ ಮಣಿದೀಪಗಳು ಬೆಳಗುತ್ತಿದ್ದವು. (ಚೌ/೧-೪)

**ಛಂ – ಮನಿ ದೀಪ ರಾಜಹಿಂ ಭವನ ಭ್ರಾಜಹಿಂ ದೇಹರೀಂ ಬಿದ್ರುಮ ರಚೀ ।**
**ಮನಿ ಖಂಭ ಭೀತಿ ಬಿರಂಚಿ ಬಿರಚೀ ಕನಕ ಮನಿ ಮರಕತ ಖಚೀ ॥**
**ಸುಂದರ ಮನೋಹರ ಮಂದಿರಾಯತ ಅಜಿರ ರುಚಿರ ಫಟಿಕ ರಚೇ ।**
**ಪ್ರತಿ ದ್ವಾರ ದ್ವಾರ ಕಪಾಟ ಪುರಟ ಬನಾಇ ಬಹು ಬಜ್ರನ್ಹಿ ಖಚೇ ॥**

ಭವನಗಳಲ್ಲಿ ಮಣಿದೀಪಜ್ಯೋತಿಗಳು ಶೋಭಿಸುತ್ತಿದ್ದವು. ಹವಳದಿಂದ ರಚಿತವಾದ ಹೊಸ್ತಿಲುಗಳು ಥಳಥಳಿಸುತ್ತಿದ್ದವು. ಮಣಿಸ್ತಂಭಗಳು, ಮರಕತಮಣಿಖಚಿತ ಚಿನ್ನದ ಗೋಡೆಗಳಿದ್ದು, ಬ್ರಹ್ಮದೇವನೇ ಶಿಲ್ಪಕಲಾಕೌಶಲ್ಯವನ್ನು ಪ್ರಕಟಿಸಿರುವನೋ ಎಂಬಂತಿದ್ದವು. ಅಲ್ಲಿಯ ಭವನಗಳು ಅರಮನೆಗಳಂತಿದ್ದು, ಅತಿಸುಂದರವೂ, ಮನೋಜ್ಞವೂ, ವಿಶಾಲವೂ ಆಗಿದ್ದವು. ಅವುಗಳ ಅಂಗಳಗಳು ಸ್ಫಟಿಕನಿರ್ಮಿತವಾಗಿದ್ದು, ಪ್ರತಿಯೊಂದು ಮನೆಗಳಲ್ಲಿಯೂ ವಿವಿಧ ವಜ್ರಖಚಿತ ಹೊನ್ನಿನ ಬಾಗಿಲುಗಳಿದ್ದವು. (ಛಂದ)

**ದೋ – ಚಾರು ಚಿತ್ರಸಾಲಾ ಗೃಹ ಗೃಹ ಪ್ರತಿ ಲಿಖೇ ಬನಾಇ ।**
**ರಾಮ ಚರಿತ ಜೇ ನಿರಖ ಮುನಿ ತೇ ಮನ ಲೇಹಿಂ ಚೊರಾಇ ॥ ೨೭ ॥**

ಪ್ರತಿ ಮನೆ-ಮನೆಗಳಲ್ಲಿ ಸುಂದರ ಚಿತ್ರಶಾಲೆಗಳಿದ್ದು, ಅವುಗಳಲ್ಲಿ ಶ್ರೀರಾಮನ ಲೋಕೋತ್ತರಲೀಲೆಯು ಬಹಳ ಮನೋಜ್ಞವಾಗಿ ಚಿತ್ರಿತವಾಗಿತ್ತು. ಅವುಗಳು ಮುನಿಗಳ ಚಿತ್ತವನ್ನೂ ಅಪಹರಿಸುವಷ್ಟು ಸುಂದರವಾಗಿದ್ದವು. ಅಂದರೆ ಅದನ್ನು ನೋಡಿ ಮುನಿಗಳು ಭಗವಲ್ಲೀಲೆಯಲ್ಲಿ ಮುಳುಗಿ ತಮ್ಮ ದೇಹಭಾನವೇ ಮರೆಯುತ್ತಿದ್ದರು. (ದೋ/೨೭)

ಚೌ – ಸುಮನ ಬಾಟಿಕಾ ಸಬಹಿಂ ಲಗಾಈಂ। ಬಿಬಿಧ ಭಾಂತಿ ಕರಿ ಜತನ ಬನಾಈಂ॥
ಲತಾ ಲಲಿತ ಬಹು ಜಾತಿ ಸುಹಾಈಂ। ಫೂಲಹಿಂ ಸದಾ ಬಸಂತ ಕಿ ನಾಈಂ॥೧॥
ಗುಂಜತ ಮಧುಕರ ಮುಖರ ಮನೋಹರ। ಮಾರುತ ತ್ರಿಬಿಧಿ ಸದಾ ಬಹ ಸುಂದರ॥
ನಾನಾ ಖಗ ಬಾಲಕನ್ಹಿ ಜಿಆಏ। ಬೋಲತ ಮಧುರ ಉಡಾತ ಸುಹಾಏ॥೨॥
ಮೋರ ಹಂಸ ಸಾರಸ ಪಾರಾವತ। ಭವನನಿ ಪರ ಸೋಭಾ ಅತಿ ಪಾವತ॥
ಜಹಂ ತಹಂ ದೇಖಹಿಂ ನಿಜ ಪರಿಛಾಹೀಂ। ಬಹು ಬಿಧಿ ಕೂಜಹಿಂ ನೃತ್ಯ ಕರಾಹೀಂ॥೩॥
ಸುಕ ಸಾರಿಕಾ ಪಢಾವಹಿಂ ಬಾಲಕ। ಕಹಹು ರಾಮ ರಘುಪತಿ ಜನಪಾಲಕ॥
ರಾಜ ದುಆರ ಸಕಲ ಬಿಧಿ ಚಾರೂ। ಬೀಥೀಂ ಚೌಹಟ ರುಚಿರ ಬಜಾರೂ॥೪॥

ಪ್ರಜಾಜನರೆಲ್ಲರೂ ವಿಧ-ವಿಧವಾದ ಪುಷ್ಪವಾಟಿಕೆಗಳನ್ನು ಪ್ರಯತ್ನಪೂರ್ವಕವಾಗಿ ಬೆಳೆಸಿದ್ದರು. ಅವುಗಳಲ್ಲಿ ಅನೇಕ ಜಾತಿಯ ಬಳ್ಳಿಗಳು ನಿತ್ಯವಸಂತವೋ ಎಂಬಂತೆ ಕುಸುಮಿತವಾಗಿರುತ್ತಿದ್ದವು. ಭ್ರಮರಗಳು ಇನಿದನಿಯಲ್ಲಿ ಗುಂಜಾರವ ಮಾಡುತ್ತಿದ್ದವು. ಶೀತಲಮಂದಸುಗಂಧಿತ ಮಾರುತ ಸದಾ ಬೀಸುತ್ತಿತ್ತು. ಬಾಲಕರು ಇಂಪಾಗಿ ಉಲಿಯುವ, ಚೆಲುವಾಗಿ ಹಾರಾಡುವ ಪಕ್ಷಿಗಳನ್ನು ಸಾಕಿದ್ದರು. ಭವನಗಳ ಮೇಲೆ ಅತಿಸುಂದರವಾದ ನವಿಲು, ಹಂಸ, ಪಾರಿವಾಳ ಕಂಗೊಳಿಸುತ್ತಿದ್ದವು. ಆ ಪಕ್ಷಿಗಳು ಮಣಿಖಚಿತಗೋಡೆಗಳಲ್ಲಿ ತಮ್ಮ ಪ್ರತಿಬಿಂಬವನ್ನು ನೋಡಿ ಮಧುರವಾಗಿ ಕೂಗಿ ನೃತ್ಯವಾಡುತ್ತಿದ್ದವು. ಬಾಲಕರು ಶುಕ, ಸಾರಿಕೆಗಳಿಗೆ 'ರಘುಪತಿ ರಾಘವ ರಾಜಾರಾಮ್, ಪತಿತ ಪಾವನ ಸೀತಾರಾಮ್'' ಎಂದು ಹೇಳುವಂತೆ ಕಲಿಸುತ್ತಿದ್ದರು. ರಾಜದ್ವಾರಗಳು ಅತಿ ಸುಂದರವಾಗಿದ್ದವು. ಕೇರಿಗಳು, ರಾಜಬೀದಿಗಳು, ವೃತ್ತಗಳು, ಪೇಟೆಗಳು ಪರಮ ಮನೋಹರವಾಗಿದ್ದವು. (ಚೌ/೧-೪)

ಛಂ – ಬಾಜಾರ ರುಚಿರ ನ ಬನಇ ಬರನತ ಬಸ್ತು ಬಿನು ಗಥ ಪಾಇಏ।
ಜಹಂ ಭೂಪ ರಮಾನಿವಾಸ ತಹಂ ಕೀ ಸಂಪದಾ ಕಿಮಿ ಗಾಇಏ॥
ಬೈಠೇ ಬಜಾಜ ಸರಾಫ ಬನಿಕ ಅನೇಕ ಮನಹುಂ ಕುಬೇರ ತೇ।
ಸಬ ಸುಖೀ ಸಬ ಸಚ್ಚರಿತ ಸುಂದರ ನಾರಿ ನರ ಸಿಸು ಜರಠ ಜೇ॥

ಸಾಕ್ಷಾತ್ ಲಕ್ಷ್ಮೀಪತಿಯೇ ಅಲ್ಲಿಯ ಪರಿಪಾಲಕನಾಗಿರುವಾಗ ಆ ಸುಂದರ ಪೇಟೆಯ, ಸಂಪತ್ತನ್ನು ಹೇಗೆ ವರ್ಣಿಸಬಹುದು? ವಸ್ತುಗಳೆಲ್ಲ ಸಮೃದ್ಧವಾಗಿದ್ದವು. ಅಲ್ಲಿಯ ಪದಾರ್ಥಗಳಿಗೆ ಬೆಲೆಕೊಟ್ಟು ಒಯ್ಯುವ ಅಗತ್ಯವಿರಲಿಲ್ಲ. ಸಮಸ್ತ ಪಡಿಪದಾರ್ಥಗಳು ಉಚಿತವಾಗಿಯೇ ದೊರೆಯುತ್ತಿದ್ದವು. ವಸ್ತ್ರವ್ಯಾಪಾರಿಗಳು, ಬೆಳ್ಳಿ, ಬಂಗಾರ ಮಾರುವ ವಣಿಕರೇ ಮೊದಲಾದವರು ಕುಬೇರನೇ ಅನೇಕ ರೂಪಗಳಲ್ಲಿ ಬಂದು ಕುಳಿತಿರುವನೋ ಎಂಬಂತೆ ಶೋಭಿಸುತ್ತಿದ್ದರು. ಸ್ತ್ರೀ-ಪುರುಷರು, ಬಾಲಕರು, ವೃದ್ಧರೂ ಹೀಗೆ ಎಲ್ಲರೂ ಸಚ್ಚರಿತ್ರರೂ, ಸುಂದರರೂ, ಸುಖಿಗಳೂ ಆಗಿದ್ದರು. (ಛಂದ)

ದೋ – ಉತ್ತರ ದಿಸಿ ಸರಜೂ ಬಹ ನಿರ್ಮಲ ಜಲ ಗಂಭೀರ।
ಬಾಂಧೇ ಘಾಟ ಮನೋಹರ ಸ್ವಲ್ಪ ಪಂಕ ನಹಿಂ ತೀರ॥೨೮॥

ಅಯೋಧ್ಯೆಯ ಉತ್ತರಕ್ಕೆ ಸರಯೂ ನದಿ ಹರಿಯುತ್ತಿದೆ. ಅದರ ಜಲ ನಿರ್ಮಲವೂ, ಗಂಭೀರವೂ, ಮಧುರವೂ ಆಗಿತ್ತು. ಅದಕ್ಕೆ ಮನೋಹರವಾದ ಘಟ್ಟಗಳಿದ್ದು, ದಡದ ಮೇಲೆ ಕೆಸರಿನ ಹೆಸರೇ ಇರಲಿಲ್ಲ. (ದೋ/೨೮)

ಚೌ – ದೂರಿ ಫರಾಕ ರುಚಿರ ಸೋ ಘಾಟಾ। ಜಹಂ ಜಲ ಪಿಅಹಿಂ ಬಾಜಿ ಗಜ ಠಾಟಾ॥
ಪನಿಘಟ ಪರಮ ಮನೋಹರ ನಾನಾ। ತಹಾಂ ನ ಪುರುಷ ಕರಹಿಂ ಅಸ್ನಾನಾ॥೧॥
ರಾಜಘಾಟ ಸಬ ಬಿಧಿ ಸುಂದರ ಬರ। ಮಜ್ಜಹಿಂ ತಹಾಂ ಬರನ ಚಾರಿಉ ನರ॥
ತೀರ ತೀರ ದೇವನ್ಹ ಕೇ ಮಂದಿರ। ಚಹುಂ ದಿಸಿ ತಿನ್ಹ ಕೇ ಉಪಬನ ಸುಂದರ॥೨॥
ಕಹುಂ ಕಹುಂ ಸರಿತಾ ತೀರ ಉದಾಸೀ। ಬಸಹಿಂ ಗ್ಯಾನ ರತ ಮುನಿ ಸಂನ್ಯಾಸೀ॥
ತೀರ ತೀರ ತುಲಸಿಕಾ ಸುಹಾಈ। ಬೃಂದ ಬೃಂದ ಬಹು ಮುನಿನ್ಹ ಲಗಾಈ॥೩॥
ಪುರ ಸೋಭಾ ಕಛು ಬರನಿ ನ ಜಾಈ। ಬಾಹೇರ ನಗರ ಪರಮ ರುಚಿರಾಈ॥
ದೇಖತ ಪುರೀ ಅಖಿಲ ಅಘ ಭಾಗಾ। ಬನ ಉಪಬನ ಬಾಪಿಕಾ ತಡಾಗಾ॥೪॥

ಕೊಂಚದೂರದಲ್ಲಿ ಒಂದು ವಿಶಾಲವಾದ ಘಟ್ಟವಿದ್ದು, ಅಲ್ಲಿ ಆನೆ, ಕುದುರೆಗಳು ಹಿಂಡು-ಹಿಂಡಾಗಿ ನೀರು ಕುಡಿಯುತ್ತಿದ್ದವು. ಸ್ತ್ರೀಯರು ನೀರುತುಂಬಿಕೊಂಡು ಒಯ್ಯಲು ಅನೇಕ ಸುಂದರ ಘಟ್ಟಗಳಿದ್ದು ಅವು ಸ್ತ್ರೀಯರಿಗೇ ಮೀಸಲಾಗಿದ್ದವು. ಅಲ್ಲಿಪುರುಷರು ಸ್ನಾನ ಮಾಡುವಂತಿಲ್ಲ. ಇವುಗಳಲ್ಲದೆ ಸುಂದರವೂ ಶ್ರೇಷ್ಠವೂ ಆದ ರಾಜಘಟ್ಟಗಳಿದ್ದವು. ಅಲ್ಲಿ ನಾಲ್ಕೂ ವರ್ಣದ ಪುರುಷರು ಸ್ನಾನಮಾಡುತ್ತಿದ್ದರು. ಸರಯೂ ನದಿಯ ದಡದಲ್ಲಿ ಅನೇಕ ದೇವಮಂದಿರಗಳಿದ್ದವು. ಅವುಗಳ ಸುತ್ತಲೂ ಚೆಲುವಾದ ಉಪವನಗಳಿದ್ದವು. ನದಿತೀರದಲ್ಲಿ ಕೆಲವೆಡೆ ವಿರಕ್ತರೂ, ಜ್ಞಾನಪರಾಯಣರಾದ ಮುನಿಗಳು, ಸಂನ್ಯಾಸಿಗಳು ವಾಸಿಸುತ್ತಿದ್ದರು. ಸರಯೂ ನದಿಯ ದಂಡೆಯಲ್ಲಿ ಅಲ್ಲಲ್ಲಿ ಮುನಿಗಳು ಬೆಳೆಸಿದ ಅನೇಕ ತುಳಸೀ ವನಗಳಿದ್ದವು. ನಗರ ಶೋಭೆಯಂತೂ ವರ್ಣನಾತೀತವು. ಊರ ಹೊರಗೂ ಅಂತಹುದೇ ಚೆಲುವು ಕಂಗೊಳಿಸುತ್ತಿತ್ತು. ಅಯೋಧ್ಯಾಪುರಿಯ ದರ್ಶನಮಾಡಿದರೆ ಸಾಕು. ಪಾಪಸಮೂಹಗಳು ಓಡಿಹೋಗುವುವು. ಅಲ್ಲಿ ವನ, ಉಪವನ, ಬಾವಿಗಳು, ಕೆರೆಕಟ್ಟೆಗಳು ಕಂಗೊಳಿಸುತ್ತಿದ್ದವು. (ಚೌ/೧-೪)

**ಛಂ – ಬಾಪೀಂ ತಡಾಗ ಅನೂಪ ಕೂಪ ಮನೋಹರಾಯತ ಸೋಹಹೀಂ।**
**ಸೋಪಾನ ಸುಂದರ ನೀರ ನಿರ್ಮಲ ದೇಖಿ ಸುರ ಮುನಿ ಮೋಹಹೀಂ॥**
**ಬಹು ರಂಗ ಕಂಜ ಅನೇಕ ಖಗ ಕೂಜಹಿಂ ಮಧುಪ ಗುಂಜಾರಹೀಂ।**
**ಆರಾಮ ರಮ್ಯ ಪಿಕಾದಿ ಖಗ ರವ ಜನು ಪಥಿಕ ಹಂಕಾರಹೀಂ॥**

ನಗರದಲ್ಲಿ ವಾಪೀಕೂಪತಟಾಕಗಳು ಅಮಿತ ಶೋಭಾಸಂಪನ್ನವಾಗಿದ್ದವು. ಅವು ವಿಶಾಲವಾಗಿದ್ದು, ಮನೋಹರವಾಗಿದ್ದವು. ಅವುಗಳ ರತ್ನಸೋಪಾನಗಳೂ, ನಿರ್ಮಲ ಜಲವನ್ನು ನೋಡಿ ದೇವತೆಗಳ, ಮುನಿಗಳ ಮನವೂ ಕೂಡ ಮುಗ್ಧವಾಗುತ್ತಿತ್ತು. ಸರೋವರಗಳಲ್ಲಿ ಅನೇಕ ಬಣ್ಣ-ಬಣ್ಣದ ಕಮಲಗಳು ಅರಳಿವೆ. ಅನೇಕವಿಧವಾದ ಪಕ್ಷಿಗಳು ಕೂಗುತ್ತಿವೆ. ಭ್ರಮರಗಳು ಝೇಂಕರಿಸುತ್ತಿವೆ. ಪರಮರಮಣೀಯ ಉದ್ಯಾನವನಗಳು ಕೋಗಿಲೆಯೇ ಮೊದಲಾದ ಪಕ್ಷಿಗಳ ಕಲಕೂಜನದ ಮೂಲಕ ಹಾದಿಹೋಕರನ್ನು ಕೂಗಿ ಕರೆಯುವಂತೆ ಭಾಸವಾಗುತ್ತಿತ್ತು. (ಛಂದ)

**ದೋ – ರಮಾನಾಥ ಜಹಂ ರಾಜಾ ಸೋ ಪುರ ಬರನಿ ಕಿ ಜಾಇ।**
**ಅನಿಮಾದಿಕ ಸುಖ ಸಂಪದಾ ರಹೀಂ ಅವಧ ಸಬ ಛಾಇ॥ ೨೯ ॥**

ಸಾಕ್ಷಾತ್ ಲಕ್ಷ್ಮೀಪತಿಯೇ ರಾಜನಾಗಿರುವ ನಗರವನ್ನು ಯಾರಾದರೂ ವರ್ಣಿಸಲು ಸಾಧ್ಯವೇ? ಅಣಿಮಾದಿ ಅಷ್ಟಸಿದ್ಧಿಗಳು, ಸಮಸ್ತ ಸುಖಸಂಪತ್ತುಗಳು ಅಲ್ಲಿ ತುಂಬಿತುಳುಕಾಡುತ್ತಿದ್ದವು. (ದೋ/೨೯)

**ಚೌ – ಜಹಂ ತಹಂ ನರ ರಘುಪತಿ ಗುನ ಗಾವಹೀಂ। ಬೈಠಿ ಪರಸಪರ ಇಹಇ ಸಿಖಾವಹೀಂ॥**
**ಭಜಹು ಪ್ರನತ ಪ್ರತಿಪಾಲಕ ರಾಮಹಿ। ಸೋಭಾ ಸೀಲ ರೂಪ ಗುನ ಧಾಮಹಿ॥ ೧ ॥**
**ಜಲಜ ಬಿಲೋಚನ ಸ್ಯಾಮಲ ಗಾತಹಿ। ಪಲಕ ನಯನ ಇವ ಸೇವಕ ತ್ರಾತಹಿ ॥**
**ಧೃತ ಸರ ರುಚಿರ ಚಾಪ ತೂನೀರಹಿ। ಸಂತ ಕಂಜ ಬನ ರಬಿ ರನಧೀರಹಿ॥ ೨ ॥**
**ಕಾಲ ಕರಾಲ ಬ್ಯಾಲ ಖಗರಾಜಹಿ। ನಮತ ರಾಮ ಅಕಾಮ ಮಮತಾ ಜಹಿ ॥**
**ಲೋಭ ಮೋಹ ಮೃಗಜೂಥ ಕಿರಾತಹಿ। ಮನಸಿಜ ಕರಿ ಹರಿ ಜನ ಸುಖದಾತಹಿ॥ ೩ ॥**
**ಸಂಸಯ ಸೋಕ ನಿಬಿಡ ತಮ ಭಾನುಹಿ। ದನುಜ ಗಹನ ಘನ ದಹನ ಕೃಸಾನುಹಿ॥**
**ಜನಕಸುತಾ ಸಮೇತ ರಘುಬೀರಹಿ। ಕಸ ನ ಭಜಹು ಭಂಜನ ಭವ ಭೀರಹಿ ॥ ೪ ॥**
**ಬಹು ಬಾಸನಾ ಮಸಕ ಹಿಮ ರಾಸಿಹಿ। ಸದಾ ಏಕರಸ ಅಜ ಅಬಿನಾಸಿಹಿ॥**
**ಮುನಿ ರಂಜನ ಭಂಜನ ಮಹಿ ಭಾರಹಿ। ತುಲಸಿದಾಸ ಕೇ ಪ್ರಭುಹಿ ಉದಾರಹಿ॥ ೫ ॥**

ಅಲ್ಲಲ್ಲಿ ಪ್ರಜಾಜನರು ಶ್ರೀರಘುಪತಿಯ ಗುಣಗಾನ ಮಾಡುತ್ತಿದ್ದರು. ಅವರೆಲ್ಲ ಸೇರಿ ಕುಳಿತುಕೊಂಡು ಒಬ್ಬರು ಮತ್ತೊಬ್ಬರಿಗೆ ಈ ತೆರನಾಗಿ ಉಪದೇಶ ನೀಡುತ್ತಿರುವರು– ''ಶರಣಾಗತರಕ್ಷಕನೂ, ರೂಪ, ಗುಣ, ಶೀಲ ಇವುಗಳ ಧಾಮನಾದ ಶ್ರೀರಾಮನನ್ನು ಭಜಿಸಿರಿ. ಕಮಲನೇತ್ರನೂ, ಶ್ಯಾಮಸುಂದರನೂ ಆದ ಪ್ರಭುವನ್ನು ಭಜಿಸು. ರೆಪ್ಪೆಗಳು ಕಣ್ಣನ್ನು ಕಾಪಾಡುವಂತೆ ತನ್ನ ಭಕ್ತರನ್ನು ಕಾಪಾಡುವ ಧಣಿಯನ್ನು ಭಜಿಸು. ಸುಂದರ ಶರಚಾಪತೂಣೀರಪಾಣಿಯಾದ ಪ್ರಭುವನ್ನು ಭಜಿಸು. ಸಜ್ಜನರೆಂಬ ಕಮಲಗಳನ್ನು ಅರಳಿಸುವ ಸೂರ್ಯನಂತಿರುವ ರಣಧೀರ ರಾಮನನ್ನು ಭಜಿಸು. ಮೃತ್ಯುವೆಂಬ ಭಯಂಕರ ಕಾಲಸರ್ಪವನ್ನು ನುಂಗುವ ಗರುಡರೂಪೀ ರಾಮನನ್ನು ಭಜಿಸು. ನಿಷ್ಕಾಮಭಾವದಿಂದ ನಮಿಸಿದವರ ಅಹಂಕಾರ-ಮಮಕಾರವನ್ನು ದೂರಗೊಳಿಸುವ

ಶ್ರೀರಾಮನ ಭಜನೆಮಾಡು. ಲೋಭ, ಮೋಹವೆಂಬ ಮೃಗಗಳನ್ನು ಕೊಲ್ಲುವ ಬೇಟೆಗಾರನೂ, ಕಾಮವೆಂಬ ಮತ್ತಗಜವನ್ನು ಸೀಳಿಹಾಕುವ ಸಿಂಹಸದೃಶನೂ, ಸೇವಕರಿಗೆ ಸುಖವನ್ನು ನೀಡುವವನೂ, ಅವರ ಸಂಶಯ, ಶೋಕವೆಂಬ ಘನತಿಮಿರವನ್ನು ಓಡಿಸುವ ಸೂರ್ಯನೂ, ರಾಕ್ಷಸರೆಂಬ ದಟ್ಟಡವಿಯನ್ನು ಭಸ್ಮಗೊಳಿಸುವ ದಾವಾಗ್ನಿಯೂ, ಜನನ-ಮರಣ ಭಯವನ್ನು ದೂರಮಾಡುವವನೂ ಆದ ಜಾನಕೀನಾಥ ರಘುವೀರನನ್ನು ಭಜಿಸು. ಬಹುವಿಧವಾದ ವಾಸನಾರೂಪೀ ಸೊಳ್ಳೆಗಳನ್ನು ನಾಶಮಾಡುವ ಹಿಮರಾಶಿಯಾದ ಶ್ರೀರಾಮನನ್ನು ಸೇವಿಸು. ಸದಾಪರಿಣಾಮರಹಿತನೂ, ಜನ್ಮ-ಮೃತ್ಯುಗಳಿಲ್ಲದವನೂ, ಮುನಿಗಳಿಗೆ ಬ್ರಹ್ಮಾನಂದವನ್ನು ನೀಡುವವನೂ, ಮಹಿಭಾರಭಂಜನನೂ, ಉದಾರಗುಣಸಂಪನ್ನನೂ, ತುಲಸೀದಾಸನಿಗೆ ಪ್ರಭುವೂ ಆದ ಶ್ರೀ ಸೀತಾರಾಮಚಂದ್ರನನ್ನು ಭಜಿಸು. (ಚೌ/೧-೫)

**ದೋ – ಏಹಿ ಬಿಧಿ ನಗರ ನಾರಿ ನರ ಕರಹಿಂ ರಾಮ ಗುನ ಗಾನ।**
**ಸಾನುಕೂಲ ಸಬ ಪರ ರಹಹಿಂ ಸಂತತ ಕೃಪಾನಿಧಾನ॥ ೩೦ ॥**

ಈ ವಿಧವಾಗಿ ನಗರದ ಪ್ರಜೆಗಳೆಲ್ಲರೂ ಶ್ರೀರಾಮಚಂದ್ರನ ಗುಣಗಾನ ಮಾಡುತ್ತಿದ್ದರು. ಕೃಪಾನಿಧಿಯಾದ ಶ್ರೀರಾಮನು ಎಲ್ಲರಮೇಲೆ ಅತ್ಯಂತ ಪ್ರಸನ್ನನಾಗಿದ್ದನು. (ದೋ/೩೦)

**ಚೌ – ಜಬ ತೇ ರಾಮ ಪ್ರತಾಪ ಖಗೇಸಾ। ಉದಿತ ಭಯಉ ಅತಿ ಪ್ರಬಲ ದಿನೇಸಾ॥**
**ಪೂರಿ ಪ್ರಕಾಸ ರಹೇಉ ತಿಹುಁ ಲೋಕಾ। ಬಹುತೆನ್ಹ ಸುಖ ಬಹುತನ ಮನ ಸೋಕಾ॥ ೧ ॥**
**ಜಿನ್ಹಹಿ ಸೋಕ ತೇ ಕಹಉಁ ಬಖಾನೀ। ಪ್ರಥಮ ಅಬಿದ್ಯಾ ನಿಸಾ ನಸಾನೀ॥**
**ಅಘ ಉಲೂಕ ಜಹಁ ತಹಾಁ ಲುಕಾನೇ। ಕಾಮ ಕ್ರೋಧ ಕೈರವ ಸಕುಚಾನೇ॥ ೨ ॥**
**ಬಿಬಿಧ ಕರ್ಮ ಗುನ ಕಾಲ ಸುಭಾಊ। ಏ ಚಕೋರ ಸುಖ ಲಹಹಿಂ ನ ಕಾಊ॥**
**ಮತ್ಸರ ಮಾನ ಮೋಹ ಮದ ಚೋರಾ। ಇನ್ಹ ಕರ ಹುನರ ನ ಕವನಿಹುಁ ಓರಾ॥ ೩ ॥**
**ಧರಮ ತಡಾಗ ಗ್ಯಾನ ಬಿಗ್ಯಾನಾ। ಏ ಪಂಕಜ ಬಿಕಸೇ ಬಿಧಿ ನಾನಾ॥**
**ಸುಖ ಸಂತೋಷ ಬಿರಾಗ ಬಿಬೇಕಾ। ಬಿಗತ ಸೋಕ ಏ ಕೋಕ ಅನೇಕಾ॥ ೪ ॥**

(ಕಾಕಭುಶುಂಡಿಯರು ಹೇಳುತ್ತಾರೆ) ಓ ಪಕ್ಷಿರಾಜ ಗರುಡಾ! ಶ್ರೀರಾಮನ ಪ್ರತಾಪರೂಪಿಯಾದ ಅತ್ಯಂತ ಪ್ರಚಂಡ ಸೂರ್ಯೋದಯವಾದಾಗಿನಿಂದ ಮೂರುಲೋಕಗಳಲ್ಲಿಯೂ ನಿರುಪಮಾನ ಪ್ರಕಾಶವು ಪ್ರಸರಿಸಿತು. ಇದರಿಂದ ಅನೇಕರಿಗೆ ಸುಖವೂ, ಕೆಲವರಿಗೆ ದುಃಖವೂ ಉಂಟಾಯಿತು. ಯಾರು ಯಾರಿಗೆ ಶೋಕವಾಯಿತೋ ಅದನ್ನು ವರ್ಣಿಸುತ್ತೇನೆ; ಕೇಳು. ಸರ್ವತ್ರ ಪ್ರಕಾಶ ತುಂಬಿಹೋದುದರಿಂದ ಮೊದಲಿಗೆ ಅವಿದ್ಯೆಯೆಂಬ ರಾತ್ರಿಯು ಕಳೆದುಹೋಯಿತು. ಪಾಪಗಳೆಂಬ ಗೂಬೆಗಳು ಕಂಡ-ಕಂಡಲ್ಲಿ ತಲೆಮರೆಸಿಕೊಂಡವು. ಕಾಮ-ಕ್ರೋಧವೆಂಬ ಕನ್ನೈದಿಲೆಗಳು ಮುದುಡಿಕೊಂಡವು. ಬಂಧನಕಾರಕಗಳಾದ ವಿವಿಧ ಕರ್ಮಗಳು, ಗುಣಗಳು, ಕಾಲಸ್ವಭಾವಗಳೆಂಬ ಚಕೋರಗಳಿಗೆ ಶ್ರೀರಾಮಪ್ರತಾಪವೆಂಬ ಸೂರ್ಯನಿಂದಾಗಿ ಸುಖವಾಗುವುದಿಲ್ಲ. ಕಳ್ಳರಿಗೆ ತಮ್ಮ ಕೈಚಳಕವನ್ನು ತೋರಲು ಅವಕಾಶವಿಲ್ಲದೆ ಹೋಯಿತು. ಆದರೆ ಧರ್ಮವೆಂಬ ಸರೋವರದಲ್ಲಿ ಜ್ಞಾನ, ವಿಜ್ಞಾನವೆಂಬ ಅನೇಕ ವಿಧವಾದ ಕಮಲಗಳು ಅರಳಿದವು. ಸುಖ, ಸಂತೋಷ, ವಿವೇಕ, ವೈರಾಗ್ಯಗಳೆಂಬ ಚಕ್ರವಾಕ ಪಕ್ಷಿಗಳು ವಿಗತಶೋಕವಾದುವು. (ಚೌ/೧-೪)

**ದೋ – ಯಹ ಪ್ರತಾಪ ರಬಿ ಜಾಕೇಂ ಉರ ಜಬ ಕರಇ ಪ್ರಕಾಸ।**
**ಪಛಿಲೇ ಬಾಢಹಿಂ ಪ್ರಥಮ ಜೇ ಕಹೇ ತೇ ಪಾವಹಿಂ ನಾಸ ॥ ೩೧ ॥**

ಶ್ರೀರಾಮಪ್ರತಾಪರೂಪಿಯಾದ ಸೂರ್ಯನು ಯಾರ ಹೃದಯದಲ್ಲಿ ನೆಲೆಸಿರುತ್ತಾನೆ ಅವರಲ್ಲಿ ಹಿಂದೆ ಹೇಳಿದ ಧರ್ಮ, ಜ್ಞಾನ, ವಿಜ್ಞಾನ, ಸುಖ, ಸಂತೋಷ, ವೈರಾಗ್ಯ, ವಿವೇಕ ಹೆಚ್ಚುತ್ತದೆ. ಅವಿದ್ಯೆ, ಪಾಪ, ಕಾಮ, ಕ್ರೋಧ, ಕರ್ಮ, ಕಾಲ, ಸ್ವಭಾವ ಇವುಗಳು ನಾಶವಾಗುತ್ತವೆ. (ದೋ/೩೧)

## ಶ್ರೀರಾಮದರ್ಶನಕ್ಕಾಗಿ ಸನಕಾದಿಗಳ ಆಗಮನ

**ಚೌ – ಭ್ರಾತನ್ಹ ಸಹಿತ ರಾಮು ಏಕ ಬಾರಾ। ಸಂಗ ಪರಮ ಪ್ರಿಯ ಪವನಕುಮಾರಾ॥**
**ಸುಂದರ ಉಪಬನ ದೇಖನ ಗಏ। ಸಬ ತರು ಕುಸುಮಿತ ಪಲ್ಲವ ನಏ॥ ೧ ॥**
**ಜಾನಿ ಸಮಯ ಸನಕಾದಿಕ ಆಏ। ತೇಜ ಪುಂಜ ಗುನ ಸೀಲ ಸುಹಾಏ॥**
**ಬ್ರಹ್ಮಾನಂದ ಸದಾ ಲಯಲೀನಾ। ದೇಖತ ಬಾಲಕ ಬಹುಕಾಲೀನಾ॥ ೨ ॥**

**ರೂಪ ಧರೇ ಜನು ಚಾರಿಉ ಬೇದಾ। ಸಮದರಸೀ ಮುನಿ ಬಿಗತ ಬಿಭೇದಾ॥**
**ಆಸಾ ಬಸನ ಬ್ಯಸನ ಯಹ ತಿನ್ಹಹೀಂ। ರಘುಪತಿ ಚರಿತ ಹೋಇ ತಹಁ ಸುನಹೀಂ॥೩॥**
**ತಹಾಁ ರಹೇ ಸನಕಾದಿ ಭವಾನೀ। ಜಹಁ ಘಟಸಂಭವ ಮುನಿಬರ ಗ್ಯಾನೀ॥**
**ರಾಮ ಕಥಾ ಮುನಿಬರ ಬಹು ಬರನೀ। ಗ್ಯಾನ ಜೋನಿ ಪಾವಕ ಜಿಮಿ ಅರನೀ॥೪॥**

ಒಮ್ಮೆ ಶ್ರೀರಾಮಚಂದ್ರಪ್ರಭುವು ಸೋದರರಸಮೇತ, ತನ್ನ ಪರಮಪ್ರಿಯ ಹನುಮಂತನನ್ನು ಜೊತೆಸೇರಿ ಸುಂದರ ಉಪವನವನ್ನು ನೋಡಲು ಹೋಗಿದ್ದನು. ಅಲ್ಲಿಯ ವೃಕ್ಷಗಳೆಲ್ಲ ಸುಮಶೋಭಿತವಾಗಿದ್ದು ನವಪಲ್ಲವಗಳಿಂದ ರಮಣೀಯವಾಗಿದ್ದವು. ಅದು ಸರಿಯಾದ ಸಮಯವೆಂದರಿತು ಸನಕಾದಿ ಮಹಾಮುನಿಗಳು ಅಲ್ಲಿಗೆ ಆಗಮಿಸಿದರು. ಅವರು ತೇಜೋಪುಂಜರೂ, ಸದ್ಗುಣಶೀಲಸಂಪನ್ನರೂ, ಸರ್ವದಾ ಬ್ರಹ್ಮಾನಂದದಲ್ಲಿ ನಿಮಗ್ನರಾಗಿರುವವರು. ನೋಡಲು ಬಾಲಕರಂತಿದ್ದರೂ ಜ್ಞಾನವೃದ್ಧರಾಗಿದ್ದರು. ಚತುರ್ವೇದಗಳೇ ಸಾಕ್ಷಾತ್ ಮೈತಳೆದಂತಿದ್ದರು. ಆ ಮುನಿಗಳು ಸಮದೃಷ್ಟಿಯುಳ್ಳವರು, ಭೇದರಹಿತರಾಗಿದ್ದರು. ದಿಗಂಬರವೇ ಅವರಿಗೆ ದಿವ್ಯಾಂಬರ. ಶ್ರೀರಾಮನ ಕಥಾಪ್ರಸಂಗ ನಡೆವಲ್ಲಿ ಅವರು ಅದನ್ನು ಪ್ರತ್ಯಕ್ಷವಾಗಿ ಶ್ರವಣಿಸುತ್ತಿದ್ದರು. ಇದು ಅವರ ಸ್ವಭಾವ. ಶಿವನು ಹೇಳುತ್ತಾನೆ – ಎಲೈ ಭವಾನಿ! ಸನಕಾದಿ ಮುನಿಗಳು ಅಗಸ್ತ್ಯರ ಬಳಿಯಿಂದ ಬರುತ್ತಿದ್ದರು. ಅಗಸ್ತ್ಯರು ಅವರಿಗೆ ಶ್ರೀರಾಮನ ಕಥೆಯನ್ನು ವಿವಿಧ ರೀತಿಯಿಂದ ವರ್ಣಿಸಿ ಹೇಳಿದ್ದರು. ಅರಣಿಯಿಂದ ಅಗ್ನಿಯು ಉತ್ಪನ್ನವಾಗುವಂತೆ ಶ್ರೀರಾಮನ ಕಥೆಗಳು ಜ್ಞಾನೋದಯವನ್ನು ಉಂಟುಮಾಡುವಂತಹವುಗಳು. (ಚೌ/೧-೪)

**ದೋ – ದೇಖಿ ರಾಮ ಮುನಿ ಆವತ ಹರಷಿ ದಂಡವತ ಕೀನ್ಹ।**
**ಸ್ವಾಗತ ಪೂಁಛಿ ಪೀತ ಪಟ ಪ್ರಭು ಬೈಠನ ಕಹಁ ದೀನ್ಹ॥೩೨॥**

ಶ್ರೀರಾಮನು ಸನಕಾದಿಗಳನ್ನು ನೋಡುತ್ತಲೇ ಹರ್ಷಿತನಾಗಿ ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದನು. ಕುಶಲ ಸಮಾಚಾರವನ್ನು ಕೇಳಿ, ಅವರಿಗೆ ಕುಳಿತುಕೊಳ್ಳಲು ತನ್ನ ಪಟ್ಟಪೀತಾಂಬರವನ್ನು ಹಾಸಿದನು. (ದೋ/೩೨)

**ಚೌ – ಕೀನ್ಹ ದಂಡವತ ತೀನಿಉಁ ಭಾಈ। ಸಹಿತ ಪವನಸುತ ಸುಖ ಅಧಿಕಾಈ॥**
**ಮುನಿ ರಘುಪತಿ ಛಬಿ ಅತುಲ ಬಿಲೋಕೀ। ಭಏ ಮಗನ ಮನ ಸಕೇ ನ ರೋಕೀ॥೧॥**
**ಸ್ಯಾಮಲ ಗಾತ ಸರೋರುಹ ಲೋಚನ। ಸುಂದರತಾ ಮಂದಿರ ಭವ ಮೋಚನ॥**
**ಏಕಟಕ ರಹೇ ನಿಮೇಷ ನ ಲಾವಹಿಁ। ಪ್ರಭು ಕರ ಜೋರೇಁ ಸೀಸ ನವಾವಹಿಁ॥೨॥**
**ತಿನ್ಹ ಕೈ ದಸಾ ದೇಖಿ ರಘುಬೀರಾ। ಸ್ರವತ ನಯನ ಜಲ ಪುಲಕ ಸರೀರಾ॥**
**ಕರ ಗಹಿ ಪ್ರಭು ಮುನಿಬರ ಬೈಠಾರೇ। ಪರಮ ಮನೋಹರ ಬಚನ ಉಚಾರೇ॥೩॥**
**ಆಜು ಧನ್ಯ ಮೈಁ ಸುನಹು ಮುನೀಸಾ। ತುಮ್ಹರೇಁ ದರಸ ಜಾಹಿಁ ಅಘ ಖೀಸಾ॥**
**ಬಡೇ ಭಾಗ ಪಾಇಬ ಸತಸಂಗಾ। ಬಿನಹಿಁ ಪ್ರಯಾಸ ಹೋಹಿಁ ಭವ ಭಂಗಾ॥೪॥**

ಅನಂತರ ಹನುಮಂತನೊಡನೆ ಮೂವರೂ ಸೋದರರು ಅವರಿಗೆ ದಂಡಪ್ರಣಾಮಗೈದರು. ಎಲ್ಲರಿಗೂ ಬಹಳ ಸಂತೋಷವಾಯಿತು. ಸನಕಾದಿಗಳು ಶ್ರೀರಘುಪತಿಯ ನಿರುಪಮಾನ ಸೌಂದರ್ಯವನ್ನು ಕಂಡು ಅದರಲ್ಲಿ ಮಗ್ನರಾದರು; ಪರವಶರಾದರು. ಭವಭಯವನ್ನು ಓಡಿಸುವಂತಹ ಶ್ಯಾಮಲಶರೀರನೂ, ಕಮಲನಯನನೂ, ಸೌಂದರ್ಯದ ಮಂದಿರನಾದ ಶ್ರೀರಾಮಚಂದ್ರನನ್ನು ಅವರು ರೆಪ್ಪೆಮಿಟುಕಿಸದೆ ನೋಡುತ್ತಲೇ ಇದ್ದರು. ಕೈಜೋಡಿಸಿಕೊಂಡು ಪ್ರಭುವು ಅವರೆದುರಿಗೆ ವಿನಮ್ರನಾಗಿ ನಿಂತಿರುವನು. ಅವರ ಪ್ರೇಮ ಪಾರವಶ್ಯಸ್ಥಿತಿಯನ್ನು ನೋಡಿ ರಘುರಾಮನ ಕಣ್ಣುಗಳಲ್ಲಿಯೂ ಪ್ರೇಮಾಶ್ರುಗಳು ತುಂಬಿಬಂದವು. ತನು ಪುಳಕಗೊಂಡಿತು. ಪ್ರಭುವು ಅವರ ಕೈಹಿಡಿದು ಕುಳ್ಳಿರಿಸಿಕೊಂಡು ಮಧುರವಾಗಿ ಇಂತೆಂದನು – ''ಮುನೀಶ್ವರರೇ! ಇಂದು ನಾನು ಧನ್ಯನು. ನಿಮ್ಮಗಳ ದರ್ಶನಮಾತ್ರದಿಂದಲೇ ಪಾಪಗಳೆಲ್ಲವೂ ನಾಶವಾಗುತ್ತದೆ. ಸಜ್ಜನಸಾಂಗತ್ಯವು ಮಹದ್ಭಾಗ್ಯವಶದಿಂದ ಲಭಿಸುತ್ತದೆ. ಅದರಿಂದ ಪರಿಶ್ರಮವಿಲ್ಲದೆ ಭವಭಂಗವಾಗುತ್ತದೆ. (ಚೌ/೧-೪)

**ದೋ – ಸಂತ ಸಂಗ ಅಪಬರ್ಗ ಕರ ಕಾಮೀ ಭವ ಕರ ಪಂಥ।**
**ಕಹಹಿಁ ಸಂತ ಕಬಿ ಕೋಬಿದ ಶ್ರುತಿ ಪುರಾನ ಸದಗ್ರಂಥ॥೩೩॥**

ಸಂತರ ಸಂಗವು ಭವಬಂಧನದಿಂದ ಬಿಡುಗಡೆಗೊಳಿಸುವಂತಹುದು. ಕಾಮುಕರ ಸಂಗವು ಭವಬಂಧನದಲ್ಲಿ ಬಂಧಿಸುವುದು. ಸಜ್ಜನರು, ಕವಿಗಳು, ಪಂಡಿತರು, ವೇದಪುರಾಣಾದಿ ಸದ್‌ಗ್ರಂಥಗಳು ಇದನ್ನೇ ಸಾರುತ್ತಿವೆ.'' (ದೋ/೩೩)

ಚೌ – ಸುನಿ ಪ್ರಭು ಬಚನ ಹರಷಿ ಮುನಿ ಚಾರೀ। ಪುಲಕಿತ ತನ ಅಸ್ತುತಿ ಅನುಸಾರೀ॥
ಜಯ ಭಗವಂತ ಅನಂತ ಅನಾಮಯ। ಅನಘ ಅನೇಕ ಏಕ ಕರುನಾಮಯ॥ ೧ ॥
ಜಯ ನಿರ್ಗುನ ಜಯ ಜಯ ಗುನ ಸಾಗರ। ಸುಖ ಮಂದಿರ ಸುಂದರ ಅತಿ ನಾಗರ॥
ಜಯ ಇಂದಿರಾ ರಮನ ಜಯ ಭೂಧರ। ಅನುಪಮ ಅಜ ಅನಾದಿ ಸೋಭಾಕರ॥ ೨ ॥
ಗ್ಯಾನ ನಿಧಾನ ಅಮಾನ ಮಾನಪ್ರದ। ಪಾವನ ಸುಜಸ ಪುರಾನ ಬೇದ ಬದ॥
ತಗ್ಯ ಕೃತಗ್ಯ ಅಗ್ಯತಾ ಭಂಜನ। ನಾಮ ಅನೇಕ ಅನಾಮ ನಿರಂಜನ॥ ೩ ॥
ಸರ್ಬ ಸರ್ಬಗತ ಸರ್ಬ ಉರಾಲಯ। ಬಸಸಿ ಸದಾ ಹಮ ಕಹುँ ಪರಿಪಾಲಯ॥
ದ್ವಂದ ಬಿಪತಿ ಭವ ಫಂದ ಬಿಭಂಜಯ। ಹೃದಿ ಬಸಿ ರಾಮ ಕಾಮ ಮದ ಗಂಜಯ॥ ೪ ॥

ಶ್ರೀರಾಮಚಂದ್ರಪ್ರಭುವಿನ ವಚನವನ್ನು ಕೇಳಿ ನಾಲ್ಕೂ ಮುನೀಶ್ವರರು ಹರ್ಷಿತರಾಗಿ, ಪುಳಕಿತರಾಗಿ ಶ್ರೀರಾಮನನ್ನು ಸ್ತುತಿಸತೊಡಗಿದರು – ''ಭಗವಂತಾ! ನಿನಗೆ ಜಯವಾಗಲೀ. ನೀನು ಅನಂತನೂ, ನಿರ್ವಿಕಾರನೂ, ಅನಾಮಯನೂ, ಅನೇಕರೂಪಗಳಲ್ಲಿಪ್ರಕಟನಾಗುವವನೂ, ಅದ್ವಿತೀಯನೂ, ಕರುಣಾಮಯನೂ ಆಗಿರುವೆ. ಓ ತ್ರಿಗುಣರಹಿತಾ! ಗುಣಸಾಗರಾ! ನಿನಗೆ ಜಯವಾಗಲಿ. ನೀನು ಸುಖಧಾಮನೂ, ಅತ್ಯಂತ ಸುಂದರನೂ, ಅತಿಸಮರ್ಥನೂ ಆಗಿರುವೆ. ಓ ಇಂದಿರಾರಮಣಾ! ಭೂಧರಾ! ನಿನಗೆ ಜಯವಾಗಲಿ. ನೀನು ನಿರುಪಮಾನನೂ, ಜನ್ಮರಹಿತನೂ, ಅನಾದಿಯೂ, ಸೌಂದರ್ಯನಿಧಿಯೂ, ಜ್ಞಾನಕ್ಕೆ ಆಧಾರನೂ, ಅಹಂಭಾವ-ಮದಗಳಿಲ್ಲದವನೂ ಆಗಿರುವೆ. ನೀನು ಬೇರೆಯವರಿಗೆ ಗೌರವ ಯಶಸ್ಸನ್ನು ಕರುಣಿಸುವವನು, ವೇದ ಪುರಾಣಗಳು ನಿನ್ನ ಪಾವನ ಯಶೋವೈಭವಗಳನ್ನು ಹಾಡಿ ಹೊಗಳುತ್ತಿವೆ. ನೀನು ತತ್ತ್ವಜ್ಞನೂ, ಸೇವಕರ ಸೇವೆಯನ್ನು ಗುರ್ತಿಸುವವನೂ, ಅಜ್ಞಾನವನ್ನು ಓಡಿಸುವವನೂ ಆಗಿರುವೆ. ಹೇ ನಿರಂಜನಾ! ನೀನು ಅನಂತನಾಮನು, ನಾಮಗಳಿಗೆ ಅತೀತನು. ಸರ್ವರೂಪನು, ಸರ್ವವ್ಯಾಪ್ತನು. ಎಲ್ಲರ ಹೃದಯಗಹ್ವರದಲ್ಲಿ ನೆಲೆಸಿರುವೆ. ಆದ್ದರಿಂದ ನಮ್ಮನ್ನು ಪರಿಪಾಲಿಸು. ರಾಗ-ದ್ವೇಷ, ಹರ್ಷ-ವಿಷಾದ, ಅನುಕೂಲತೆ-ಪ್ರತಿಕೂಲತೆ, ಜನ್ಮ-ಮೃತ್ಯುವೆಂಬ ದ್ವಂದ್ವಜಾಲಗಳನ್ನು ಕತ್ತರಿಸಿಬಿಡು. ಓ ಶ್ರೀರಾಮಾ! ನೀನು ನಮ್ಮ ಹೃದಯದಲ್ಲಿ ನೆಲೆಸಿ ಕಾಮ ಮತ್ತು ಮದವನ್ನು ತೊಲಗಿಸಿಬಿಡು. (ಚೌ/೧-೪)

**ದೋ – ಪರಮಾನಂದ ಕೃಪಾಯತನ ಮನ ಪರಿಪೂರನ ಕಾಮ।**
**ಪ್ರೇಮ ಭಗತಿ ಅನಪಾಯನೀ ದೇಹು ಹಮಹಿ ಶ್ರೀರಾಮ॥ ೩೪ ॥**

ಓ ಪರಮಾನಂದ ಸ್ವರೂಪಾ! ಕೃಪಾನಿಧಾನಾ! ಮನೋಭೀಷ್ಟಪ್ರದಾತಾ! ಶ್ರೀರಾಮಾ! ನಮಗೆ ನಿನ್ನಲ್ಲಿ ಅವಿಚಲ ಭಕ್ತಿಯನ್ನು ಕರುಣಿಸು. (ದೋ/೩೪)

ಚೌ – ದೇಹು ಭಗತಿ ರಘುಪತಿ ಅತಿ ಪಾವನಿ। ತ್ರಿಬಿಧಿ ತಾಪ ಭವ ದಾಪ ನಸಾವನಿ॥
ಪ್ರನತ ಕಾಮ ಸುರಧೇನು ಕಲಪತರು। ಹೋಇ ಪ್ರಸನ್ನ ದೀಜೈ ಪ್ರಭು ಯಹ ಬರು॥ ೧ ॥
ಭವ ಬಾರಿಧಿ ಕುಂಭಜ ರಘುನಾಯಕ। ಸೇವತ ಸುಲಭ ಸಕಲ ಸುಖ ದಾಯಕ॥
ಮನ ಸಂಭವ ದಾರುನ ದುಖ ದಾರಯ। ದೀನಬಂಧು ಸಮತಾ ಬಿಸ್ತಾರಯ॥ ೨ ॥
ಆಸ ತ್ರಾಸ ಇರಿಷಾದಿ ನಿವಾರಕ। ಬಿನಯ ಬಿಬೇಕ ಬಿರತಿ ಬಿಸ್ತಾರಕ॥
ಭೂಪ ಮೌಲಿ ಮನಿ ಮಂಡನ ಧರನೀ। ದೇಹಿ ಭಗತಿ ಸಂಸೃತಿ ಸರಿ ತರನೀ॥ ೩ ॥
ಮುನಿ ಮನ ಮಾನಸ ಹಂಸ ನಿರಂತರ। ಚರನ ಕಮಲ ಬಂದಿತ ಅಜ ಸಂಕರ॥
ರಘುಕುಲ ಕೇತು ಸೇತು ಶ್ರುತಿ ರಚ್ಛಕ। ಕಾಲ ಕರಮ ಸುಭಾಉ ಗುನ ಭಚ್ಛಕ॥ ೪ ॥
ತಾರನ ತರನ ಹರನ ಸಬ ದೂಷನ। ತುಲಸಿದಾಸ ಪ್ರಭು ತ್ರಿಭುವನ ಭೂಷನ॥ ೫ ॥

ಓ ರಘುಪತಿಯೇ! ನೀನು ನಮಗೆ ನಿನ್ನಲ್ಲಿ ಅತ್ಯಂತ ಪವಿತ್ರವಾಗಿಸುವಂತಹ, ತ್ರಿವಿಧ ತಾಪಹಾರಿಯಾದ, ಹುಟ್ಟು-ಸಾವುಗಳ ಕ್ಲೇಶವನ್ನು ನಾಶಮಾಡುವಂತಹ ನಿರ್ಮಲಭಕ್ತಿಯನ್ನು ಕರುಣಿಸು. ಶರಣಾಗತರ ಬಯಕೆಗಳನ್ನು ಈಡೇರಿಸುವ ಕಾಮಧೇನು, ಕಲ್ಪವೃಕ್ಷದಂತಿರುವ ಹೇ ಪ್ರಭೋ! ಪ್ರಸನ್ನನಾಗಿ ನಮಗೆ ಈ ವರವನ್ನು ಕರುಣಿಸು. ಹೇ ರಘುನಾಯಕಾ! ನೀನು ಜನ್ಮ-ಮೃತ್ಯುರೂಪೀ ಸಮುದ್ರವನ್ನು ಶೋಷಿಸಲು ಕುಂಭಜ ಅಗಸ್ತ್ಯನಂತಿರುವೆ. ನೀನು ಸೇವಕರಿಗೆ ಸುಲಭನೂ, ಸುಖಪ್ರದಾತನಾಗಿರುವೆ. ದೀನಬಂಧೂ! ಮನೋಜನಿತ ದುಸ್ಸಹದುಃಖಗಳನ್ನು ತೊಡೆದುಹಾಕು. ನಮ್ಮಲ್ಲಿ ಸಮದೃಷ್ಟಿಯನ್ನು ವಿಸ್ತರಿಸು. ನೀನು ವಿಷಯಗಳ ಆಸೆ, ಭಯ, ಈರ್ಷೆ ಮುಂತಾದವುಗಳನ್ನು ನಿವಾರಿಸುವವನು. ವಿನಯ, ವಿವೇಕ, ವೈರಾಗ್ಯಗಳನ್ನು

ವಿಸ್ತರಿಸುವವನಾಗಿರುವೆ. ರಾಜಶಿರೋಮಣಿಯೇ! ಭೂಮಿಭೂಷಣನೇ! ಜನ್ಮ-ಮರಣ ನಿರಂತರ ಪ್ರವಾಹವನ್ನು ದಾಟಲು ನೌಕೆಯಂತಿರುವ ನಿನ್ನ ಪರಮಭಕ್ತಿಯನ್ನು ಕರುಣಿಸು. ಮುನಿಮಾನಸಸರೋವರ ಹಂಸನೇ! ವಿರಿಂಚಿ ಶಂಕರರಿಗೆ ನಿನ್ನ ಚರಣಕಮಲಗಳು ನಿರಂತರ ಪೂಜನೀಯವು. ರಘುವಂಶಶಿರೋಮಣೀ! ನೀನು ವೇದಮರ್ಯಾದೆಗಳನ್ನು ರಕ್ಷಿಸುವವನು. ಕಾಲ, ಕರ್ಮ, ಸ್ವಭಾವ, ಗುಣಬಂಧಗಳ ನಾಶಕನಾಗಿರುವೆ. ಸಂಸಾರಸಾಗರದಿಂದ ದಾಟಿಸುವವನೂ, ಮುಕ್ತಿಸ್ವರೂಪನೂ ನೀನೇ. ನೀನು ಸರ್ವದೋಷಗಳನ್ನು ತೊಲಗಿಸುವವನು. ತುಲಸೀದಾಸರಿಗೆ ಪ್ರಭುವು, ತ್ರಿಭುವನಭೂಷಣನಾಗಿರುವೆ.'' (ಚೌ/೧-೫)

**ದೋ – ಬಾರ ಬಾರ ಅಸ್ತುತಿ ಕರಿ ಪ್ರೇಮ ಸಹಿತ ಸಿರು ನಾಇ ।**
**ಬ್ರಹ್ಮ ಭವನ ಸನಕಾದಿ ಗೇ ಅತಿ ಅಭೀಷ್ಟ ಬರ ಪಾಇ ॥ ೩೫ ॥**

ಈ ವಿಧವಾಗಿ ಸ್ವಾಮಿಯನ್ನು ಅನೇಕರೀತಿಯಿಂದ ಸ್ತುತಿಸಿ, ಭಕ್ತಿ-ಪ್ರೇಮದಿಂದ ತಲೆವಾಗಿ, ತಾವು ಬಯಸಿದ ವರಗಳನ್ನು ಪಡೆದು, ಸನಕಾದಿ ಮಹಾಮುನಿಗಳು ಬ್ರಹ್ಮಲೋಕಕ್ಕೆ ತೆರಳಿದರು. (ದೋ/೩೫)

## ಸೋದರರಿಗೆ ಶ್ರೀರಾಮನ ಉಪದೇಶ

**ಚೌ – ಸನಕಾದಿಕ ಬಿಧಿ ಲೋಕ ಸಿಧಾಏ । ಭ್ರಾತನ್ಹ ರಾಮ ಚರನ ಸಿರ ನಾಏ ॥**
**ಪೂಛತ ಪ್ರಭುಹಿ ಸಕಲ ಸಕುಚಾಹೀಂ । ಚಿತವಹಿಂ ಸಬ ಮಾರುತಸುತ ಪಾಹೀಂ ॥ ೧ ॥**
**ಸುನೀ ಚಹಹಿಂ ಪ್ರಭು ಮುಖ ಕೈ ಬಾನೀ । ಜೋ ಸುನಿ ಹೋಇ ಸಕಲ ಭ್ರಮ ಹಾನೀ ॥**
**ಅಂತರಜಾಮೀ ಪ್ರಭು ಸಭ ಜಾನಾ । ಬೂಝತ ಕಹಹು ಕಾಹ ಹನುಮಾನಾ ॥ ೨ ॥**
**ಜೋರಿ ಪಾನಿ ಕಹ ತಬ ಹನುಮಂತಾ । ಸುನಹು ದೀನದಯಾಲ ಭಗವಂತಾ ॥**
**ನಾಥ ಭರತ ಕಛು ಪೂಂಛನ ಚಹಹೀಂ । ಪ್ರಸ್ನ ಕರತ ಮನ ಸಕುಚತ ಅಹಹೀಂ ॥ ೩ ॥**
**ತುಮ್ಹ ಜಾನಹು ಕಪಿ ಮೋರ ಸುಭಾಊ । ಭರತಹಿ ಮೋಹಿ ಕಛು ಅಂತರ ಕಾಊ ॥**
**ಸುನಿ ಪ್ರಭು ಬಚನ ಭರತ ಗಹೆ ಚರನಾ । ಸುನಹು ನಾಥ ಪ್ರನತಾರತಿ ಹರನಾ ॥ ೪ ॥**

ಸನಕಾದಿಗಳು ಬ್ರಹ್ಮಲೋಕಕ್ಕೆ ಹೊರಟುಹೋದ ಬಳಿಕ ಸೋದರರೆಲ್ಲರೂ ಶ್ರೀರಾಮಚಂದ್ರನಿಗೆ ಶಿರಸಾವಂದಿಸಿದರು. ಎಲ್ಲ ತಮ್ಮಂದಿರು ರಾಮನನ್ನು ಏನೋ ಕೇಳಬಯಸುವರು. ಆದರೆ ಸಂಕೋಚದಿಂದ ಕೇಳಲೊಲ್ಲರು. ಅದರಿಂದ ಅವರೆಲ್ಲರೂ ಹನುಮಂತನ ಕಡೆಗೆ ನೋಡುತ್ತಿರುವರು. ಎಲ್ಲ ಭ್ರಮೆಗಳನ್ನು ನಿವಾರಿಸುವಂತಹ ಪ್ರಭುವಿನ ಶ್ರೀಮುಖವಾಣಿಯನ್ನು ಕೇಳಬಯಸುತ್ತಾರೆ. ಅಂತರ್ಯಾಮಿಯಾದ ಪ್ರಭುವಿಗೆ ಅವರ ತಳಮಳ ತಿಳಿಯಿತು. ಹೀಗಿದ್ದರೂ ಹನುಮಂತಾ! ಏನು ವಿಷಯ? ಹೇಳು ಎಂದು ಕೇಳಿದನು. ಆಗ ಆಂಜನೇಯನು ಕೈಜೋಡಿಸಿ ಇಂತೆಂದನು – ''ದೀನದಯಾಳು ಭಗವಂತಾ! ಭರತಾದಿಗಳು ಏನೋ ನಿನ್ನ ಬಳಿ ಕೇಳಬೇಕೆಂದಿದ್ದಾರೆ. ಆದರೆ ಅವರ ಮನಸ್ಸಿನಲ್ಲಿರುವ ಸಂಕೋಚದಿಂದ ಮಾತು ಹೊರಡದು.'' ಆಗ ಭಗವಂತ ಹೇಳಿದನು – 'ಹನುಮಾ! ನಿನಗೆ ನನ್ನ ಸ್ವಭಾವ ತಿಳಿದೇ ಇದೆ. ನನಗೂ ಭರತನಿಗೂ ಏನಾದರೂ ಅಂತರವಿದೆಯೇ? ಯಾವ ಭೇದವೂ ಇಲ್ಲ.' ಪ್ರಭುವಿನ ಮಾತುಕೇಳಿ ಭರತನು ಅವನ ಪಾದಗಳನ್ನು ಅಪ್ಪಿಕೊಂಡು ನುಡಿದನು – ''ಸ್ವಾಮಿ! ಶರಣಾಗತರ ದುಃಖವನ್ನು ನಿವಾರಿಸುವವನೇ! ಕೇಳು – (ಚೌ/೧-೪)

**ದೋ – ನಾಥ ನ ಮೊಹಿ ಸಂದೇಹ ಕಛು ಸಪನೆಹುಁ ಸೋಕ ನ ಮೋಹ ।**
**ಕೇವಲ ಕೃಪಾ ತುಮ್ಹಾರಿಹಿ ಕೃಪಾನಂದ ಸಂದೋಹ ॥ ೩೬ ॥**

ಪ್ರಭೋ! ನನಗೆ ಯಾವ ಸಂದೇಹವೂ ಇಲ್ಲ. ಶೋಕ, ಮೋಹಗಳು ಕನಸು-ಮನಸ್ಸಿನಲ್ಲಿಯೂ ಇಲ್ಲ. ಓ ದಯಾನಿಧೇ! ಆನಂದಸ್ವರೂಪನೇ! ಇದು ಕೇವಲ ನಿಮ್ಮ ಕೃಪೆಯ ಫಲವಾಗಿದೆ. (ದೋ/೩೬)

**ಚೌ – ಕರಉಁ ಕೃಪಾನಿಧಿ ಏಕ ಢಿಠಾಈ । ಮೈಂ ಸೇವಕ ತುಮ್ಹ ಜನ ಸುಖದಾಈ ॥**
**ಸಂತನ್ಹ ಕೈ ಮಹಿಮಾ ರಘುರಾಈ । ಬಹು ಬಿಧಿ ಬೇದ ಪುರಾನನ್ಹ ಗಾಈ ॥ ೧ ॥**
**ಶ್ರೀಮುಖ ತುಮ್ಹ ಪುನಿ ಕೀನ್ಹಿ ಬಡಾಈ । ತಿನ್ಹ ಪರ ಪ್ರಭುಹಿ ಪ್ರೀತಿ ಅಧಿಕಾಈ ॥**
**ಸುನಾ ಚಹಉಁ ಪ್ರಭು ತಿನ್ಹ ಕರ ಲಚ್ಛನ । ಕೃಪಾಸಿಂಧು ಗುನ ಗ್ಯಾನ ಬಿಚಚ್ಛನ ॥ ೨ ॥**
**ಸಂತ ಅಸಂತ ಭೇದ ಬಿಲಗಾಈ । ಪ್ರನತಪಾಲ ಮೋಹಿ ಕಹಹು ಬುಝಾಈ ॥**
**ಸಂತನ್ಹ ಕೇ ಲಚ್ಛನ ಸುನು ಭ್ರಾತಾ । ಅಗನಿತ ಶ್ರುತಿ ಪುರಾನ ಬಿಖ್ಯಾತಾ ॥ ೩ ॥**

**ಸಂತ ಅಸಂತನ್ಹಿ ಕೈ ಅಸಿ ಕರನೀ। ಜಿಮಿ ಕುಠಾರ ಚಂದನ ಆಚರನೀ॥**

**ಕಾಟಇ ಪರಸು ಮಲಯ ಸುನು ಭಾಈ। ನಿಜ ಗುನ ದೇಇ ಸುಗಂಧ ಬಸಾಈ॥ ೪ ॥**

ಆದರೂ ಕೂಡ ಓ ದಯಾನಿಧೇ! ನಾನು ಸಾಹಸಗೈದು ಒಂದು ಬಿನ್ನಪವನ್ನು ತಮ್ಮ ಮುಂದಿರಿಸುತ್ತೇನೆ. ನಾನು ನಿನ್ನ ಸೇವಕನು. ನೀನು ಸೇವಕರಿಗೆ ಸುಖವನ್ನುಂಟುಮಾಡುವವನು. ರಘುನಾಥಾ! ವೇದ ಪುರಾಣಗಳು ಸಂತರ ಮಹಿಮೆಯನ್ನು ಅನೇಕರೀತಿಯಿಂದ ಹೊಗಳಿವೆ. ನೀನು ಕೂಡ ತಮ್ಮ ಶ್ರೀಮುಖದಿಂದ ಅವರನ್ನು ಕೊಂಡಾಡಿದ್ದೀರಿ. ಅವರ ಮೇಲೆ ನಿನ್ನ ಪ್ರೇಮವು ಅಪಾರ. ಪ್ರಭೂ! ನಾನು ಅವರ ಲಕ್ಷಣಗಳನ್ನು ಕೇಳಬಯಸುತ್ತೇನೆ. ನೀನು ಕೃಪಾಸಿಂಧು, ಜ್ಞಾನ, ಗುಣ ವಿಚಕ್ಷಣನು. ಶರಣಾಗತರಕ್ಷಕಾ! ಸಂತ, ಅಸಂತರ ಭೇದವನ್ನು ವಿಂಗಡಿಸಿ ನನಗೆ ತಿಳಿಸಿ ಹೇಳುವವನಾಗು.'' ಶ್ರೀರಾಮನೆಂದನು– ಸೋದರರೇ! ಕೇಳಿ. ಸಂತಸಜ್ಜನರ ಲಕ್ಷಣಗಳು ಅಸಂಖ್ಯವಾಗಿವೆ. ಅವು ವೇದಪುರಾಣಗಲ್ಲಿ ಪ್ರಸಿದ್ಧವಾಗಿವೆ. ಸಜ್ಜನರು ಚಂದನವೃಕ್ಷದಂತಿದ್ದರೆ, ದುರ್ಜನರು ಕೊಡಲಿಯಂತಿದ್ದಾರೆ. ಕೊಡಲಿಯು ಚಂದನವೃಕ್ಷವನ್ನು ಕಡಿಯುತ್ತದೆ. ಅದರ ಸ್ವಭಾವವೇ ತುಂಡರಿಸುವುದು. ಆದರೆ ಚಂದನವೃಕ್ಷವು ತನ್ನನ್ನು ತುಂಡರಿಸಿದ ಕೊಡಲಿಗೂ ತನ್ನ ಸುವಾಸನೆಯನ್ನು ನೀಡುತ್ತದೆ. (ಚೌ/೧-೪)

**ದೋ – ತಾತೇ ಸುರ ಸೀಸನ್ಹ ಚಢತ ಜಗ ಬಲ್ಲಭ ಶ್ರೀಖಂಡ।**

**ಅನಲ ದಾಹಿ ಪೀಟತ ಘನಹಿಂ ಪರಸು ಬದನ ಯಹ ದಂಡ॥ ೩೭ ॥**

ಈ ಸ್ವಾಭಾವಿಕ ಗುಣದಿಂದಲೇ ಚಂದನವು ಎಲ್ಲರಿಗೆ ಪ್ರಿಯವಾಗಿದೆ. ಅದು ದೇವತೆಗಳ ಶಿರವೇರುತ್ತದೆ. ಆದರೆ ಅಪ್ರಿಯವಾದ ಕೊಡಲಿಯನ್ನು ಬೆಂಕಿಯಲ್ಲಿ ಹಾಕಿ ಬಾಯನ್ನು ಸುತ್ತಿಗೆಯಿಂದ ಬಡಿಯುತ್ತಾರೆ. (ದೋ/೩೭)

**ಚೌ – ಬಿಷಯ ಅಲಂಪಟ ಸೀಲ ಗುನಾಕರ। ಪರ ದುಖ ದುಖ ಸುಖ ಸುಖ ದೇಖೇ ಪರ॥**

**ಸಮ ಅಭೂತರಿಪು ಬಿಮದ ಬಿರಾಗೀ। ಲೋಭಾಮರಷ ಹರಷ ಭಯ ತ್ಯಾಗೀ॥ ೧ ॥**

**ಕೋಮಲಚಿತ ದೀನನ್ಹ ಪರ ದಾಯಾ। ಮನ ಬಚ ಕ್ರಮ ಮಮ ಭಗತಿ ಅಮಾಯಾ॥**

**ಸಬಹಿ ಮಾನಪ್ರದ ಆಪು ಅಮಾನೀ। ಭರತ ಪ್ರಾನ ಸಮ ಮಮ ತೇ ಪ್ರಾನೀ॥ ೨ ॥**

**ಬಿಗತ ಕಾಮ ಮಮ ನಾಮ ಪರಾಯನ। ಸಾಂತಿ ಬಿರತಿ ಬಿನತೀ ಮುದಿತಾಯನ॥**

**ಸೀತಲತಾ ಸರಲತಾ ಮಯತ್ರೀ। ದ್ವಿಜ ಪದ ಪ್ರೀತಿ ಧರ್ಮ ಜನಯತ್ರೀ॥ ೩ ॥**

**ಏ ಸಬ ಲಚ್ಛನ ಬಸಹಿಂ ಜಾಸು ಉರ। ಜಾನೆಹು ತಾತ ಸಂತ ಸಂತತ ಫುರ॥**

**ಸಮ ದಮ ನಿಯಮ ನೀತಿ ನಹಿಂ ಡೋಲಹಿಂ। ಪರುಷ ಬಚನ ಕಬಹೂ ನಹಿಂ ಬೋಲಹಿಂ॥ ೪ ॥**

ಸಂತರು ವಿಷಯಲಂಪಟರಲ್ಲ. ಅವರು ಶೀಲ, ಸದ್ಗುಣಗಳ ಗಣಿ. ಇತರರ ದುಃಖಗಳನ್ನು ತನ್ನದೇ ದುಃಖವೆಂದು ತಿಳಿದು, ಇತರರ ಸುಖದಿಂದ ತಾವೂ ಸುಖಿಗಳಾಗುತ್ತಾರೆ. ಅವರು ಎಲ್ಲದರಲ್ಲಿ, ಎಲ್ಲ ಕಡೆಗಳಲ್ಲಿ, ಎಲ್ಲ ಕಾಲದಲ್ಲಿ ಸಮತ್ವವುಳ್ಳವರು. ಅವರ ಮನಸ್ಸಿನಲ್ಲಿ ಶತ್ರುತ್ವವಿಲ್ಲ. ಅವರು ಅಭಿಮಾನರಹಿತರು, ವಿರಾಗಿಗಳು. ಅವರಲ್ಲಿ ಲೋಭ, ಕ್ರೋಧ, ಹರ್ಷ, ಭಯ ಇವುಗಳು ಲೇಶಮಾತ್ರವೂ ಇರುವುದಿಲ್ಲ. ಅವರ ಹೃದಯಗಳು ಕೋಮಲವು. ಅವರು ದೀನ, ದುಃಖಿತರಲ್ಲಿ ದಯೆ ಉಳ್ಳವರು, ಮನೋವಾಕ್ಕಾಯಗಳಿಂದ ನನ್ನಲ್ಲಿ ನಿಷ್ಕಪಟವಾದ ಭಕ್ತಿಯುಳ್ಳವರು. ಅವರು ಸ್ವಯಂ ಅಭಿಮಾನರಹಿತರಾಗಿದ್ದು, ಇತರರನ್ನು ಸನ್ಮಾನಿಸುವರು. ಭರತಾ! ಇಂತಹ ಸಂತರು ನನಗೆ ಪ್ರಾಣಸಮಾನರು. ಅವರಲ್ಲಿ ಯಾವ ಬಯಕೆಯೂ ಇರುವುದಿಲ್ಲ. ಅವರು ನನ್ನ ನಾಮಪರಾಯಣರು, ಸಜ್ಜನರು ಶಾಂತಿ, ವೈರಾಗ್ಯ, ವಿನಯ ಪ್ರಸನ್ನತೆ ಇವುಗಳ ಮನೆಯಾಗಿರುವರು. ಅವರಲ್ಲಿ ಶೀತಲತೆ, ಸರಳತೆ, ಮೈತ್ರಿ, ಬ್ರಾಹ್ಮಣಭಕ್ತಿ ಇರುತ್ತದೆ. ಇದೆಯೇ ಧರ್ಮಕ್ಕೆ ಮೂಲವು. ಸೋದರಾ! ಈ ಲಕ್ಷಣಗಳುಳ್ಳವರನ್ನು ನಿಜವಾದ ಸಂತರೆಂದು ತಿಳಿಯಬೇಕು. ಅವರು ಶಮ, ದಮ, ನಿಯಮ, ನೀತಿ ಮಾರ್ಗದಿಂದ ಎಂದೂ ವಿಚಲಿತರಾಗುವುದಿಲ್ಲ. ಅವರೆಂದಿಗೂ ಕಠೋರವಾಗಿ ಮಾತಾಡರು. (ಚೌ/೧-೪)

**ದೋ – ನಿಂದಾ ಅಸ್ತುತಿ ಉಭಯ ಸಮ ಮಮತಾ ಮಮ ಪದ ಕಂಜ।**

**ತೇ ಸಜ್ಜನ ಮಮ ಪ್ರಾನಪ್ರಿಯ ಗುನ ಮಂದಿರ ಸುಖ ಪುಂಜ॥ ೩೮॥**

ನಿಂದಾಸ್ತುತಿಯನ್ನು ಸಮಾನವಾಗಿ ಭಾವಿಸುವವರು, ನನ್ನ ಪಾದಪದ್ಮಗಳಲ್ಲಿ ಅನನ್ಯ ಪ್ರೇಮವುಳ್ಳವರು ಸಜ್ಜನರು. ಗುಣಧಾಮರೂ, ಆನಂದಸ್ವರೂಪರೂ ಆದ ಅವರು ನನಗೆ ಪ್ರಾಣಪ್ರಿಯರು. (ದೋ/೩೮)

**ಚೌ – ಸುನಹು ಅಸಂತನ್ಹ ಕೇರ ಸುಭಾಊ। ಭೂಲೆಹುಁ ಸಂಗತಿ ಕರಿಅ ನ ಕಾಊ॥**

**ತಿನ್ಹ ಕರ ಸಂಗ ಸದಾ ದುಖದಾಈ। ಜಿಮಿ ಕಪಿಲಹಿ ಘಾಲಇ ಹರಹಾಈ॥ ೧ ॥**

**ಖಲನ್ಹ ಹೃದಯ್ ಅತಿ ತಾಪ ಬಿಸೇಷೀ। ಜರಹಿಂ ಸದಾ ಪರ ಸಂಪತಿ ದೇಖೀ॥**
**ಜಹ್ ಕಹುಂ ನಿಂದಾ ಸುನಹಿಂ ಪರಾಈ। ಹರಷಹಿಂ ಮನಹುಂ ಪರೀ ನಿಧಿ ಪಾಈ॥೨॥**
**ಕಾಮ ಕ್ರೋಧ ಮದ ಲೋಭ ಪರಾಯನ। ನಿರ್ದಯ ಕಪಟೀ ಕುಟಿಲ ಮಲಾಯನ॥**
**ಬಯರು ಅಕಾರನ ಸಬ ಕಾಹೂ ಸೋಂ। ಜೋ ಕರ ಹಿತ ಅನಹಿತ ತಾಹೂ ಸೋಂ॥೩॥**
**ಝೂಠಇ ಲೇನಾ ಝೂಠಇ ದೇನಾ। ಝೂಠಇ ಭೋಜನ ಝೂಠ ಚಬೇನಾ॥**
**ಬೋಲಹಿಂ ಮಧುರ ಬಚನ ಜಿಮಿ ಮೋರಾ। ಖಾಇ ಮಹಾ ಅಹಿ ಹೃದಯ ಕಠೋರಾ॥೪॥**

ಇನ್ನು ದುರ್ಜನರ ಲಕ್ಷಣಗಳನ್ನು ಕೇಳಿರಿ. ಎಂದಿಗೂ ಮರೆತಾದರೂ ಅವರ ಸಾಂಗತ್ಯ ಮಾಡಬಾರದು. ಅವರ ಸಹವಾಸವು ದುಃಖಗಳಿಗೆ ಕಾರಣವು. ತುಡುಗ ದನವು ಸಾಧುಕಪಿಲೆ ಹಸುವನ್ನು ತನ್ನ ಸಂಗದಿಂದ ಕೆಡಿಸುತ್ತದೆ. ದುಷ್ಟರಾದವರ ಹೃದಯದಲ್ಲಿ ಹೆಚ್ಚಾದ ಸಂತಾಪವಿರುತ್ತದೆ. ಅವರು ಪರರ ಸಂಪತ್ತನ್ನು ನೋಡಿ ಸದಾ ಅಸೂಯೆಪಡುತ್ತಾರೆ, ಕುರುಬುತ್ತಿರುತ್ತಾರೆ. ಅವರು ಎಲ್ಲಾದರೂ ಪರರ ನಿಂದೆಯನ್ನು ಕೇಳಿದರೆ ನಿಧಿಸಿಕ್ಕಿದಷ್ಟು ಸಂತೋಷಪಡುತ್ತಾರೆ. ಅವರು ಕಾಮ, ಕ್ರೋಧ, ಮದ, ಲೋಭಪರಾಯಣರು. ನಿರ್ದಯಿಗಳು, ಕಪಟಿಗಳು, ಕುಟಿಲರೂ ಪಾಪಿಷ್ಠರೂ ಆಗಿರುತ್ತಾರೆ. ಇವರು ಕಾರಣವಿಲ್ಲದೆ ಇತರರೊಂದಿಗೆ ವೈರ ಮಾಡುತ್ತಿರುತ್ತಾರೆ. ಹಿತವನ್ನು ಮಾಡಿದವರಿಗೂ ಕೂಡ ಅಹಿತವನ್ನೇ ಎಸಗುತ್ತಾರೆ. ಅವರ ಆದಾನ-ಪ್ರದಾನಗಳೆಲ್ಲವೂ ಸತ್ಯಕ್ಕೆ ದೂರವಾದುದು. ಸ್ವಾರ್ಥದಿಂದ ಕೂಡಿದ್ದಾಗಿರುತ್ತದೆ. ಅಸತ್ಯವೇ ಅವರ ಭೋಜನ. ಅವರ ಎಲ್ಲ ವಿಷಯಗಳಲ್ಲಿ ಅಸತ್ಯವೇ ತುಂಬಿದ್ದು, ಸುಳ್ಳನ್ನೇ ಆಡುತ್ತಿರುತ್ತಾರೆ. ನವಿಲು ಮಧುರವಾದ ಧ್ವನಿಯಲ್ಲಿ ಹಾಡುತ್ತದೆ. ಆದರೆ ಅದರ ಹೃದಯ ವಿಷಸರ್ಪವನ್ನು ತಿಂದು ಅರಗಿಸಿಕೊಂಡಿದ್ದರಿಂದ ಕಠೋರವಾದುದು. ಅದರಂತೆ ದುರ್ಜನರು ತೋರಿಕೆಗೆ ಸಿಹಿಯಾಗಿ ಮಾತನಾಡುತ್ತಿರುತ್ತಾರೆ. (ಚೌ/೧-೪)

**ದೋ – ಪರ ದ್ರೋಹೀ ಪರ ದಾರ ರತ ಪರ ಧನ ಪರ ಅಪಬಾದ।**
**ತೇ ನರ ಪಾಂವರ ಪಾಪಮಯ ದೇಹ ಧರೇಂ ಮನುಜಾದ॥೩೯॥**

ದುಷ್ಟರು ಬೇರೆಯವರೊಡನೆ ಕಾರಣವಿಲ್ಲದೆ ದ್ರೋಹಬಗೆಯುತ್ತಾ, ಪರಸ್ತ್ರೀ, ಪರಧನ, ಪರನಿಂದೆಯಲ್ಲಿ ಆಸಕ್ತರಾಗಿರುತ್ತಾರೆ. ಈ ಪಾಮರರು, ಪಾಪಿಗಳು, ನರಶರೀರ ಧರಿಸಿದ ರಾಕ್ಷಸರೇ ಸರಿ. (ದೋ/೩೯)

**ಚೌ – ಲೋಭಇ ಓಢನ ಲೋಭಇ ಡಾಸನ। ಸಿಸ್ನೋದರ ಪರ ಜಮಪುರ ತ್ರಾಸ ನ॥**
**ಕಾಹೂ ಕೀ ಜೌಂ ಸುನಹಿಂ ಬಡಾಈ। ಸ್ವಾಸ ಲೇಹಿಂ ಜನು ಜೂಡೀ ಆಈ॥೧॥**
**ಜಬ ಕಾಹೂ ಕೈ ದೇಖಹಿಂ ಬಿಪತೀ। ಸುಖೀ ಭಏ ಮಾನಹುಂ ಜಗ ನೃಪತೀ॥**
**ಸ್ವಾರಥ ರತ ಪರಿವಾರ ಬಿರೋಧೀ। ಲಂಪಟ ಕಾಮ ಲೋಭ ಅತಿ ಕ್ರೋಧೀ॥೨॥**
**ಮಾತು ಪಿತಾ ಗುರ ಬಿಪ್ರ ನ ಮಾನಹಿಂ। ಆಪು ಗಏ ಅರು ಘಾಲಹಿಂ ಆನಹಿಂ॥**
**ಕರಹಿಂ ಮೋಹ ಬಸ ದ್ರೋಹ ಪರಾವಾ। ಸಂತ ಸಂಗ ಹರಿ ಕಥಾ ನ ಭಾವಾ॥೩॥**
**ಅವಗುನ ಸಿಂಧು ಮಂದಮತಿ ಕಾಮೀ। ಬೇದ ಬಿದೂಷಕ ಪರಧನ ಸ್ವಾಮೀ॥**
**ಬಿಪ್ರ ದ್ರೋಹ ಪರ ದ್ರೋಹ ಬಿಸೇಷಾ। ದಂಭ ಕಪಟ ಜಿಯ್ ಧರೇಂ ಸುಬೇಷಾ॥೪॥**

ದುರ್ಮಾರ್ಗಿಗಳಿಗೆ ಲೋಭವೇ ಹಾಸು, ಹೊದಿಕೆ. ಅಂದರೆ ಲೋಭದಲ್ಲೇ ಮುಳುಗಿರುತ್ತಾರೆ. ಅವರು ಪಶುಗಳಂತೆ ಸದಾ ಆಹಾರ, ಮೈಥುನ ಪರಾಯಣರು. ಅವರಿಗೆ ಯಮಲೋಕದ ಭಯವೇ ಇಲ್ಲ. ಇತರರ ಅಭಿವೃದ್ಧಿಯನ್ನು ನೋಡಿದರೆ, ಕೇಳಿದರೆ ಜ್ವರಪೀಡಿತರಂತೆ ನಡುಗುತ್ತಾ ನಿಟ್ಟುಸಿರು ಬಿಡುತ್ತಾರೆ. ಇತರರಿಗೆ ವಿಪತ್ತು ಒದಗಿದರೆ, ನೋಡಿದರೆ, ಕೇಳಿದರೆ, ಅವರಿಗೆ ಜಗತ್ತಿನ ಒಡೆತನ ಬಂದಷ್ಟು ಹಿಗ್ಗುತ್ತಾರೆ. ಅವರು ಸ್ವಾರ್ಥಪರಾಯಣರಾಗಿ ತಮ್ಮ ಪರಿವಾರವಿರೋಧಿಗಳಾಗುತ್ತಾರೆ. ಕಾಮ, ಲೋಭದಿಂದ ಲಂಪಟರೂ, ಅತ್ಯಂತ ಕ್ರೋಧಿಗಳು ಆಗಿರುತ್ತಾರೆ. ಅವರು ತಂದೆ-ತಾಯಿಗಳನ್ನು, ಗುರುಗಳನ್ನು, ಬ್ರಾಹ್ಮಣರನ್ನು, ಅಷ್ಟೇ ಅಲ್ಲ ಯಾರನ್ನೂ ಗುರುತಿಸಲಾರರು. ಗೌರವಿಸರು. ತಾವಂತೂ ಕುಲಗೆಟ್ಟಿದ್ದಾರೆ, ಇತರರನ್ನೂ ಕೂಡ ಹಾಳುಮಾಡುತ್ತಾರೆ. ಮೋಹದಿಂದ ಪರರೊಂದಿಗೆ ದ್ರೋಹಮಾಡುತ್ತಾರೆ. ಅವರಿಗೆ ಸತ್‌ಸಂಗತಿ ಹಿಡಿಸದು. ಹರಿಕಥೆಯಲ್ಲಿ ಆಸಕ್ತಿಯೇ ಇರುವುದಿಲ್ಲ. ಅವರು ಅವಗುಣಗಳ ಸಮುದ್ರ. ಮಂದಬುದ್ಧಿಗಳು, ಕಾಮುಕರು. ವೇದನಿಂದಕರು. ಪರಧನವನ್ನು ಕಬಳಿಸುವವರು. ಅವರು ಬ್ರಾಹ್ಮಣರಿಗೆ, ವಿಶೇಷವಾಗಿ ದೇವತೆಗಳಿಗೆ, ಕೊನೆಗೆ ಪರಮಾತ್ಮನಿಗೂ ದ್ರೋಹಬಗೆಯುವವರು. ಅವರ ಎದೆಯಲ್ಲಿ ದಂಭ, ಕಪಟಗಳೇ ತುಂಬಿರುತ್ತದೆ. ವಂಚನೆಯೇ ಅವರ ಸ್ವಭಾವ. ಅವರು ಪಯೋಮುಖ ವಿಷಕುಂಭದಂತಿರುತ್ತಾರೆ. ನೋಡಲು ಸಜ್ಜನರಂತೆ ಕಂಡುಬರುತ್ತಾರೆ. (ಚೌ/೧-೪)

**ದೋ – ಐಸೇ ಅಧಮ ಮನುಜ ಖಲ ಕೃತಜುಗ ತ್ರೇತಾ ನಾಹಿಂ।**
**ದ್ವಾಪರ ಕಛುಕ ಬೃಂದ ಬಹು ಹೋಇಹಹಿಂ ಕಲಿಜುಗ ಮಾಹಿಂ ॥ ೪೦ ॥**

ಇಂತಹ ಅಧಮರು, ದುಷ್ಟರೂ ಆದ ಮನುಜರು ಕೃತಯುಗದಲ್ಲಿ, ತ್ರೇತಾಯುಗದಲ್ಲಿ ಇರುವುದಿಲ್ಲ. ದ್ವಾಪರದಲ್ಲಿ ಅಲ್ಪ-ಸ್ವಲ್ಪ ಇರುತ್ತಾರೆ. ಆದರೆ ಕಲಿಯುಗದಲ್ಲಿ ತಂಡೋಪತಂಡರಾಗಿರುತ್ತಾರೆ. (ದೋ/೪೦)

**ಚೌ – ಪರ ಹಿತ ಸರಿಸ ಧರ್ಮ ನಹಿಂ ಭಾಈ। ಪರ ಪೀಡಾ ಸಮ ನಹಿಂ ಅಧಮಾಈ ॥**
**ನಿರ್ನಯ ಸಕಲ ಪುರಾನ ಬೇದ ಕರ। ಕಹೆಉಁ ತಾತ ಜಾನಹಿಂ ಕೋಬಿದ ನರ ॥ ೧ ॥**
**ನರ ಸರೀರ ಧರಿ ಜೇ ಪರ ಪೀರಾ। ಕರಹಿಂ ತೇ ಸಹಹಿಂ ಮಹಾ ಭವ ಭೀರಾ ॥**
**ಕರಹಿಂ ಮೋಹ ಬಸ ನರ ಅಘ ನಾನಾ। ಸ್ವಾರಥ ರತ ಪರಲೋಕ ನಸಾನಾ ॥ ೨ ॥**
**ಕಾಲರೂಪ ತಿನ್ಹ ಕಹಁ ಮೈಂ ಭ್ರಾತಾ। ಸುಭ ಅರು ಅಸುಭ ಕರ್ಮ ಫಲ ದಾತಾ ॥**
**ಅಸ ಬಿಚಾರಿ ಜೇ ಪರಮ ಸಯಾನೇ। ಭಜಹಿಂ ಮೋಹಿ ಸಂಸೃತ ದುಖ ಜಾನೇ ॥ ೩ ॥**
**ತ್ಯಾಗಹಿಂ ಕರ್ಮ ಸುಭಾಸುಭ ದಾಯಕ। ಭಜಹಿಂ ಮೋಹಿ ಸುರ ನರ ಮುನಿ ನಾಯಕ॥**
**ಸಂತ ಅಸಂತನ್ಹ ಕೇ ಗುನ ಭಾಷೇ। ತೇ ನ ಪರಹಿಂ ಭವ ಜಿನ್ಹ ಲಖಿ ರಾಖೇ॥ ೪ ॥**

ತಮ್ಮಾ! ಪರೋಪಕಾರಕ್ಕೆ ಸಮಾನವಾದ ಧರ್ಮವು ಬೇರೊಂದಿಲ್ಲ. ಪರಪೀಡನೆಯಂತ ಪಾಪವು ಮತ್ತೊಂದಿಲ್ಲ. ಅಯ್ಯಾ! ವೇದಪುರಾಣಗಳಲ್ಲಿ ಹೇಳಿರುವ ವಿಷಯವನ್ನು ನಿನಗೆ ಸಂಗ್ರಹವಾಗಿ ಹೇಳಿರುವೆನು. ಪಂಡಿತರು ಇದನ್ನು ಬಲ್ಲವರಾಗಿದ್ದಾರೆ. ಮಾನವ ಶರೀರವನ್ನು ಹೊಂದಿಯೂ ಇತರರಿಗೆ ನೋವನ್ನುಂಟುಮಾಡುವವರಿಗೆ ಹುಟ್ಟು-ಸಾವು ಎಂಬ ಸಂಸಾರಚಕ್ರದಲ್ಲಿ ಸಿಲುಕಿ ಸುತ್ತುತ್ತಾ ಕ್ಲೇಶವನ್ನು ಅನುಭವಿಸಬೇಕಾಗುತ್ತದೆ. ಮನುಷ್ಯರು ಮೋಹವಶರಾಗಿ ಸ್ವಾರ್ಥದಲ್ಲಿ ಮುಳುಗಿ ಅನೇಕ ಪಾಪಗಳನ್ನು ಮಾಡುತ್ತಾರೆ. ಅದರಿಂದಾಗಿ ಅವರು ಸದ್ಗತಿಯನ್ನು ಹೊಂದುವುದಿಲ್ಲ. ಅಂದರೆ ನರಕಯಾತನೆಗೆ ಗುರಿಯಾಗುವರು. ಸೋದರಾ! ನಾನು ಅಂಥವರ ಪಾಲಿಗೆ ಕಾಲಸ್ವರೂಪನು. ಅವರ ಒಳ್ಳೆಯ-ಕೆಟ್ಟ ಕರ್ಮಗಳಿಗೆ ಯಥಾಯೋಗ್ಯ ಫಲವನ್ನೀಯುವವನು. ಇದನ್ನು ಅರಿತುಕೊಂಡು ಜ್ಞಾನಿಗಳು ಸಂಸಾರವು ದುಃಖರೂಪವೆಂದು ತಿಳಿದು, ನನ್ನನ್ನೇ ಭಜಿಸುತ್ತಾರೆ. ಅವರು ಶುಭಾಶುಭ ಫಲವನ್ನೀಯುವ ಕರ್ಮಗಳನ್ನು ತೊರೆದು, ದೇವತೆಗಳಿಗೆ, ಮನುಷ್ಯರಿಗೆ, ಮುನೀಶ್ವರರಿಗೆ ಅಧಿದೈವತವಾದ ನನ್ನನ್ನು ಭಕ್ತಿಯಿಂದ ಭಜಿಸುತ್ತಾರೆ. ಇಷ್ಟರವರೆಗೆ ಸಜ್ಜನ ದುರ್ಜನರ ಲಕ್ಷಣಗಳನ್ನು ಹೇಳಿದೆ. ಈ ಗುಣಗಳನ್ನು ಅರ್ಥಮಾಡಿಕೊಂಡಿರುವವರು ಜನನ-ಮರಣ ಚಕ್ರದಲ್ಲಿ ಸಿಲುಕಲಾರರು. (ಚೌ/೧-೪)

**ದೋ – ಸುನಹು ತಾತ ಮಾಯಾ ಕೃತ ಗುನ ಅರು ದೋಷ ಅನೇಕ।**
**ಗುನ ಯಹ ಉಭಯ ನ ದೇಖಿಅಹಿಂ ದೇಖಿಅ ಸೋ ಅಬಿಬೇಕ ॥ ೪೧ ॥**

ತಮ್ಮಾ! ಕೇಳು. ಲೋಕದಲ್ಲಿರುವ ಎಲ್ಲ ಗುಣ-ದೋಷಗಳು ಮಾಯಾಕಲ್ಪಿತವೇ. ಅರ್ಥಾತ್ ಇವುಗಳಿಗೆ ವಾಸ್ತವಿಕ ಅಸ್ತಿತ್ವ ಇಲ್ಲ. ಎರಡನ್ನೂ ನೋಡದಿರುವುದೇ ವಿವೇಕ; ಇವುಗಳನ್ನು ನೋಡುವುದೇ ಅವಿವೇಕವಾಗಿದೆ. (ದೋ/೪೧)

**ಚೌ – ಶ್ರೀಮುಖ ಬಚನ ಸುನತ ಸಬ ಭಾಈ। ಹರಷೇ ಪ್ರೇಮ ನ ಹೃದಯಁ ಸಮಾಈ ॥**
**ಕರಹಿಂ ಬಿನಯ ಅತಿ ಬಾರಹಿಂ ಬಾರಾ। ಹನೂಮಾನ ಹಿಯಁ ಹರಷ ಅಪಾರಾ ॥ ೧ ॥**
**ಪುನಿ ರಘುಪತಿ ನಿಜ ಮಂದಿರ ಗಏ। ಏಹಿ ಬಿಧಿ ಚರಿತ ಕರತ ನಿತ ನಏ ॥**
**ಬಾರ ಬಾರ ನಾರದ ಮುನಿ ಆವಹಿಂ। ಚರಿತ ಪುನೀತ ರಾಮ ಕೇ ಗಾವಹಿಂ॥ ೨ ॥**
**ನಿತ ನವ ಚರಿತ ದೇಖಿ ಮುನಿ ಜಾಹೀಂ। ಬ್ರಹ್ಮಲೋಕ ಸಬ ಕಥಾ ಕಹಾಹೀಂ ॥**
**ಸುನಿ ಬಿರಂಚಿ ಅತಿಸಯ ಸುಖ ಮಾನಹಿಂ। ಪುನಿ ಪುನಿ ತಾತ ಕರಹು ಗುನ ಗಾನಹಿಂ ॥ ೩ ॥**
**ಸನಕಾದಿಕ ನಾರದಹಿ ಸರಾಹಹಿಂ। ಜದ್ಯಪಿ ಬ್ರಹ್ಮ ನಿರತ ಮುನಿ ಆಹಹಿಂ॥**
**ಸುನಿ ಗುನ ಗಾನ ಸಮಾಧಿ ಬಿಸಾರೀ। ಸಾದರ ಸುನಹಿಂ ಪರಮ ಅಧಿಕಾರೀ॥ ೪ ॥**

ಭಗವಂತನ ಶ್ರೀಮುಖದಿಂದ ಬಂದ ವಚನಗಳನ್ನು ಕೇಳಿ ಸೋದರರೆಲ್ಲರೂ ಹರ್ಷಿತರಾದರು. ಅವರ ಹೃದಯದಲ್ಲಿ ಪ್ರೇಮವು ಹಿಡಿಸಲೊಲ್ಲದು. ಅವರು ಪದೇ-ಪದೇ ತಮ್ಮ ಆನಂದವನ್ನು ಪ್ರಕಟಿಸಿದರು. ವಿಶೇಷವಾಗಿ ಆಂಜನೇಯನ ಆನಂದವಂತೂ ಹೇಳತೀರದು.

ಅನಂತರ ಪ್ರಭುವು ತನ್ನ ಮಂದಿರಕ್ಕೆ ಹಿಂದಿರುಗಿದನು. ಈ ವಿಧವಾಗಿ ಪ್ರಭುವು ಪ್ರತಿದಿನವೂ ನಿತ್ಯನೂತನವಾದ ಲೀಲೆಗಳನ್ನು ಪ್ರಕಟಿಸುತ್ತಿದ್ದನು. ನಾರದ ಮುನಿಗಳು ಮೇಲಿಂದ ಮೇಲೆ ಅಯೋಧ್ಯೆಗೆ ಬಂದು ಪರಮಪಾವನವಾದ ಶ್ರೀರಾಮಚರಿತವನ್ನು ಗಾನ ಮಾಡುತ್ತಿದ್ದರು. ನಾರದ ಮಹರ್ಷಿಗಳು ಪ್ರತಿದಿನವೂ ಪ್ರಭುವಿನ ನೂತನಲೀಲೆಗಳನ್ನು ನೋಡಿ, ಬ್ರಹ್ಮಲೋಕಕ್ಕೆ ಹೋಗಿ ಅವನ್ನು ವರ್ಣಿಸುತ್ತಿದ್ದರು. ಬ್ರಹ್ಮದೇವರು ಅದನ್ನು ಕೇಳಿ ಪರಮಾನಂದವನ್ನು ಹೊಂದಿ ಇಂತು ನುಡಿದರು – 'ಮಗು! ಶ್ರೀರಾಮನ ಗುಣಗಾನವನ್ನು ಪುನಃ-ಪುನಃ ಮಾಡು.' ಸನಕಾದಿಗಳು ನಾರದರನ್ನು ಕೊಂಡಾಡುತ್ತಾರೆ. ಅವರು ಬ್ರಹ್ಮನಿಷ್ಠರಾಗಿದ್ದರೂ ಶ್ರೀರಾಮನ ಗುಣಪ್ರಶಂಸೆಯನ್ನು ಕೇಳಿದಾಗ ಬ್ರಹ್ಮಸಮಾಧಿಯನ್ನು ಮರೆತು ಆದರದಿಂದ ಕೇಳುತ್ತಾರೆ. ಈ ರಾಮಕಥಾ ಶ್ರವಣಕ್ಕೆ ಅವರೇ ಪರಮಾಧಿಕಾರಿಗಳು. (ಚೌ/೧-೪)

**ದೋ – ಜೀವನಮುಕ್ತ ಬ್ರಹ್ಮಪರ ಚರಿತ ಸುನಹಿಂ ತಜಿ ಧ್ಯಾನ ।**
**ಜೇ ಹರಿ ಕಥಾಁ ನ ಕರಹಿಂ ರತಿ ತಿನ್ಹ ಕೇ ಹಿಯ ಪಾಷಾನ ॥ ೪೨ ॥**

ಸನಕಾದಿಗಳಂತಹ ಜೀವನ್ಮುಕ್ತರೂ, ಬ್ರಹ್ಮನಿಷ್ಠರೂ ಕೂಡ ತಮ್ಮ ಬ್ರಹ್ಮಸಮಾಧಿಯನ್ನು ತೊರೆದು ಶ್ರೀರಾಮನ ದಿವ್ಯಚರಿತ್ರವನ್ನು ಕೇಳುತ್ತಿರುವಾಗ, ಶ್ರೀಹರಿಕಥೆಯನ್ನು ಪ್ರೇಮದಿಂದ ಕೇಳದವರ ಹೃದಯ ನಿಜವಾಗಿ ಪಾಷಾಣದಂತೆ ಇದೆ. (ದೋ/೪೨)

## ಪುರಜನರಿಗೆ ಶ್ರೀರಾಮನ ಉಪದೇಶ

**ಚೌ – ಏಕ ಬಾರ ರಘುನಾಥ ಬೊಲಾಏ । ಗುರ ದ್ವಿಜ ಪುರಬಾಸೀ ಸಬ ಆಏ ॥**
**ಬೈಠೇ ಗುರ ಮುನಿ ಅರು ದ್ವಿಜ ಸಜ್ಜನ । ಬೋಲೇ ಬಚನ ಭಗತ ಭವ ಭಂಜನ ॥ ೧ ॥**
**ಸುನಹು ಸಕಲ ಪುರಜನ ಮಮ ಬಾನೀ । ಕಹಉಁ ನ ಕಛು ಮಮತಾ ಉರ ಆನೀ ॥**
**ನಹಿಂ ಅನೀತಿ ನಹಿಂ ಕಛು ಪ್ರಭುತಾಈ । ಸುನಹು ಕರಹು ಜೋ ತುಮ್ಹಹಿ ಸೊಹಾಈ ॥ ೨ ॥**
**ಸೊಇ ಸೇವಕ ಪ್ರಿಯತಮ ಮಮ ಸೋಈ । ಮಮ ಅನುಸಾಸನ ಮಾನೈ ಜೋಈ ॥**
**ಜೌಁ ಅನೀತಿ ಕಛು ಭಾಷೌಁ ಭಾಈ । ತೌ ಮೊಹಿ ಬರಜಹು ಭಯ ಬಿಸರಾಈ ॥ ೩ ॥**
**ಬಡೇಂ ಭಾಗ ಮಾನುಷ ತನು ಪಾವಾ । ಸುರ ದುರ್ಲಭ ಸಬ ಗ್ರಂಥನ್ಹಿ ಗಾವಾ ॥**
**ಸಾಧನ ಧಾಮ ಮೋಚ್ಛ ಕರ ದ್ವಾರಾ । ಪಾಇ ನ ಜೆಹಿಂ ಪರಲೋಕ ಸँವಾರಾ ॥ ೪ ॥**

ಒಮ್ಮೆ ಶ್ರೀರಾಮಚಂದ್ರನು ಗುರುವಾದ ವಸಿಷ್ಠಮಹರ್ಷಿಗಳನ್ನು, ಬ್ರಾಹ್ಮಣರನ್ನು, ಇತರ ಪುರಪ್ರಮುಖರನ್ನು ಆಹ್ವಾನಿಸಿದನು. ಶ್ರೀರಾಮನ ಒಡ್ಡೋಲಗದಲ್ಲಿ ಗುರುಗಳು, ಮುನಿಗಳು, ಬ್ರಾಹ್ಮಣರು, ಸೋದರರು, ಇತರ ಸಜ್ಜನರು ಯೋಗ್ಯತಾನುಸಾರ ಕುಳಿತುಕೊಂಡಿರುವಾಗ, ಭವಭಯವನ್ನು ಹರಿಸುವ ಶ್ರೀರಾಮನು ಇಂತೆಂದನು – ಓ ಪುರಜನರೇ! ಸಜ್ಜನರೇ! ನನ್ನ ಮಾತನ್ನು ಕೇಳಿರಿ. ಇದನ್ನು ನಾನು ಏನೋ ಸ್ವಾರ್ಥದಿಂದ ಹೇಳುತ್ತಿಲ್ಲ. ನಾನು ಹೇಳುವುದು ನೀತಿಬಾಹಿರವಲ್ಲ. ಅಥವಾ ಅಧಿಕಾರದಿಂದ ಆತ್ಮಪೌರುಷದ ಮಾತನ್ನೂ ಹೇಳುತ್ತಿಲ್ಲ. ನಾನು ಹೇಳಿದುದು ಸಂಕೋಚ, ಭಯವನ್ನು ತೊರೆದು ಎಚ್ಚರಿಕೆಯಿಂದ ಕೇಳಿರಿ. ಮತ್ತೆ ನಿಮಗೆ ಇಷ್ಟವಾದರೆ ಅದರಂತೆ ನಡೆಯಿರಿ. ನನ್ನ ಆಜ್ಞೆಯನ್ನು ಪಾಲಿಸುವವರೇ ನನಗೆ ಸೇವಕರು, ಪ್ರಿಯರು. ಸೋದರರೇ! ನಾನೇನಾದರೂ ಅನುಚಿತವನ್ನಾಡಿದರೆ ನಿಸ್ಸಂಕೋಚವಾಗಿ ನೀವೆಲ್ಲರೂ ನನ್ನನ್ನು ತಡೆಯಿರಿ. ಮಹಾಭಾಗ್ಯವಶದಿಂದ ಈ ಮಾನವ ಜನ್ಮ ಲಭಿಸಿದೆ. ಇದು ದೇವತೆಗಳಿಗೂ ದುರ್ಲಭವೆಂದು ಎಲ್ಲ ಗ್ರಂಥಗಳು ಹೇಳಿವೆ. ಇದು ಸಾಧನಧಾಮವಾಗಿದ್ದು, ಮೋಕ್ಷದ್ವಾರವಾಗಿದೆ. ಇಂತಹ ಶರೀರವನ್ನು ಪಡೆದುಕೊಂಡು ಭಗವತ್ಪ್ರಾಪ್ತಿಗಾಗಿ ಪ್ರಯತ್ನಿಸದವರು – (ಚೌ/೧-೪)

**ದೋ – ಸೋ ಪರತ್ರ ದುಖ ಪಾವಇ ಸಿರ ಧುನಿ ಧುನಿ ಪಛಿತಾಇ ।**
**ಕಾಲಹಿ ಕರ್ಮಹಿ ಈಸ್ವರಹಿ ಮಿಥ್ಯಾ ದೋಷ ಲಗಾಇ ॥ ೪೩ ॥**

ಪರಲೋಕದಲ್ಲಿ ದುಃಖವನ್ನು ಅನುಭವಿಸುವರು. ತಲೆಚಚ್ಚಿಕೊಂಡು ಪಶ್ಚಾತ್ತಾಪ ಪಡುವನು. ತನ್ನ ತಪ್ಪನ್ನು ತಿಳಿದುಕೊಳ್ಳದೆ ಕಾಲ, ಕರ್ಮ, ದೇವರು ಇವರುಗಳ ಮೇಲೆ ಸುಳ್ಳು-ಸುಳ್ಳೆ ತಪ್ಪು ಹೊರಿಸುತ್ತಾರೆ. (ದೋ/೪೩)

**ಚೌ – ಏಹಿ ತನ ಕರ ಫಲ ಬಿಷಯ ನ ಭಾಈ । ಸ್ವರ್ಗಉ ಸ್ವಲ್ಪ ಅಂತ ದುಖದಾಈ ॥**
**ನರ ತನು ಪಾಇ ಬಿಷಯಁ ಮನ ದೇಹೀಂ । ಪಲಟಿ ಸುಧಾ ತೇ ಸಠ ಬಿಷ ಲೇಹೀಂ ॥ ೧ ॥**

**ತಾಹಿ ಕಬಹುँ ಭಲ ಕಹಇ ನ ಕೋಈ । ಗುಂಜಾ ಗ್ರಹಇ ಪರಸ ಮನಿ ಖೋಈ ॥**
**ಆಕರ ಚಾರಿ ಲಚ್ಛ ಚೌರಾಸೀ । ಜೋನಿ ಭ್ರಮತ ಯಹ ಜಿವ ಅಬಿನಾಸೀ ॥ ೨ ॥**
**ಫಿರತ ಸದಾ ಮಾಯಾ ಕರ ಪ್ರೇರಾ । ಕಾಲ ಕರ್ಮ ಸುಭಾವ ಗುನ ಘೇರಾ ॥**
**ಕಬಹುँಕ ಕರಿ ಕರುನಾ ನರ ದೇಹೀ । ದೇತ ಈಸ ಬಿನು ಹೇತು ಸನೇಹೀ ॥ ೩ ॥**
**ನರ ತನು ಭವ ಬಾರಿಧಿ ಕಹುँ ಬೇರೋ । ಸನ್ಮುಖ ಮರುತ ಅನುಗ್ರಹ ಮೇರೋ ॥**
**ಕರನಧಾರ ಸದಗುರ ದೃಢ ನಾವಾ । ದುರ್ಲಭ ಸಾಜ ಸುಲಭ ಕರಿ ಪಾವಾ ॥ ೪ ॥**

ಸೋದರರರೇ! ಈ ಶರೀರಪ್ರಾಪ್ತಿಯ ಫಲ ವಿಷಯಭೋಗಗಳಲ್ಲ. ಈ ಜಗತ್ತಿನ ಭೋಗಗಳ ಮಾತೇನು ಸ್ವರ್ಗಭೋಗಗಳೂ ಕೂಡ ಅತ್ಯಲ್ಪವೇ. ಪರಿಣಾಮದಲ್ಲಿ ಅವು ದುಃಖದಾಯಕವೇ. ಆದ್ದರಿಂದ ಮಾನವಶರೀರವನ್ನು ಹೊಂದಿಯೂ ವಿಷಯಲೋಲುಪರಾದವರು ಅಮೃತವನ್ನು ತೊರೆದು ವಿಷವನ್ನು ಕುಡಿದಂತೆ. ಪರಶುಮಣಿಯನ್ನು ಕೊಟ್ಟು ಬದಲಿಗೆ ಗುಲಗುಂಜಿಯನ್ನು ಪಡೆಯುವವರನ್ನು ಮೂಢ, ಅವಿವೇಕಿಯೆಂದೇ ಹೇಳುತ್ತಾರೆ. ಈ ನಾಶರಹಿತವಾದ ಜೀವಿಯು ಅಂಡಜ, ಸ್ವೇದಜ, ಜರಾಯುಜ, ಉದ್ಭಿಜ ಎಂಬ ಚತುಃಕೋಶಾತ್ಮಕ, ಎಂಭತ್ತನಾಲ್ಕು ಲಕ್ಷಯೋನಿಗಳಲ್ಲಿ ತೊಳಲಾಡುತ್ತಿರುತ್ತದೆ. ಮಾಯೆಯ ಪ್ರೇರಣೆಯಿಂದ ಕಾಲ, ಕರ್ಮ, ಸ್ವಭಾವ ಹಾಗೂ ಗುಣಗಳಿಗೆ ವಶವಾಗಿ ಈ ಜೀವಿಯು ವಿವಿಧ ಯೋನಿಗಳಲ್ಲಿ ಹುಟ್ಟುತ್ತಾ ಇರುತ್ತದೆ. ಜೀವಿಯ ಈ ದಯನೀಯ ಸ್ಥಿತಿಯನ್ನು ನೋಡಿ ನಿರ್ಹೇತುಕ ದಯಾಳುವಾದ ಭಗವಂತನು ಇದಕ್ಕೆ ವಿರಳವಾಗಿ ಎಂದಾದರೂ ಮಾನವಶರೀರವನ್ನು ಕೊಡುತ್ತಾನೆ. ಈ ನರಶರೀರವು ಭವಸಾಗರವನ್ನು ದಾಟಲು ನೌಕೆಯಂತಿದೆ. ನನ್ನ ಅನುಗ್ರಹವೇ ಅನುಕೂಲವಾದ ಗಾಳಿಯು. ಸದ್ಗುರುವೇ ಈ ನಾವೆಯ ಕರ್ಣಧಾರ (ಅಂಬಿಗ). ಇಂತಹ ದುರ್ಲಭವಾದ ಸಾಧನಗಳು ಭಗವತ್ಕೃಪೆಯಿಂದಲೇ ಸುಲಭವಾಗಿ ಪ್ರಾಪ್ತವಾಗಿವೆ. (ಚೌ/೧-೪)

**ದೋ – ಜೋ ನ ತರೈ ಭವ ಸಾಗರ ನರ ಸಮಾಜ ಅಸ ಪಾಇ ।**
**ಸೋ ಕೃತ ನಿಂದಕ ಮಂದಮತಿ ಆತ್ಮಾಹನ ಗತಿ ಜಾಇ ॥ ೪೪ ॥**

ಇಂತಹ ಸಾಧನಗಳು ಲಭಿಸಿದ್ದರೂ ಕೂಡ ಭವಸಾಗರವನ್ನು ದಾಟದವನು ಕೃತಘ್ನನು, ಮಂದಮತಿಯು. ಅವನು ಆತ್ಮಘಾತುಕರ ಗತಿಯನ್ನು ಹೊಂದುತ್ತಾನೆ. (ದೋ/೪೪)

**ಚೌ – ಜೌ ಪರಲೋಕ ಇಹಾँ ಸುಖ ಚಹಹೂ । ಸುನಿ ಮಮ ಬಚನ ಹೃದಯँ ದೃಢ ಗಹಹೂ ॥**
**ಸುಲಭ ಸುಖದ ಮಾರಗ ಯಹ ಭಾಈ । ಭಗತಿ ಮೋರಿ ಪುರಾನ ಶ್ರುತಿ ಗಾಈ ॥ ೧ ॥**
**ಗ್ಯಾನ ಅಗಮ ಪ್ರತ್ಯೂಹ ಅನೇಕಾ । ಸಾಧನ ಕಠಿನ ನ ಮನ ಕಹುँ ಟೇಕಾ ॥**
**ಕರತ ಕಷ್ಟ ಬಹು ಪಾವಇ ಕೋಊ । ಭಕ್ತಿಹೀನ ಮೊಹಿ ಪ್ರಿಯ ನಹಿँ ಸೋಊ ॥ ೨ ॥**
**ಭಕ್ತಿ ಸುತಂತ್ರ ಸಕಲ ಸುಖ ಖಾನೀ । ಬಿನು ಸತಸಂಗ ನ ಪಾವಹಿँ ಪ್ರಾನೀ ॥**
**ಪುನ್ಯ ಪುಂಜ ಬಿನು ಮಿಲಹಿँ ನ ಸಂತಾ । ಸತಸಂಗತಿ ಸಂಸೃತಿ ಕರ ಅಂತಾ ॥ ೩ ॥**
**ಪುನ್ಯ ಏಕ ಜಗ ಮಹುँ ನಹಿँ ದೂಜಾ । ಮನ ಕ್ರಮ ಬಚನ ಬಿಪ್ರ ಪದ ಪೂಜಾ ॥**
**ಸಾನುಕೂಲ ತೆಹಿ ಪರ ಮುನಿ ದೇವಾ । ಜೋ ತಜಿ ಕಪಟು ಕರಇ ದ್ವಿಜ ಸೇವಾ ॥ ೪ ॥**

ಇಹ, ಪರಗಳೆರಡರಲ್ಲಿಯೂ ಸುಖವನ್ನು ಬಯಸುವಿರಾದರೆ ನನ್ನ ಮಾತನ್ನು ಕೇಳಿ, ಅವನ್ನು ಹೃದಯದಲ್ಲಿ ದೃಢವಾಗಿಸಿಟ್ಟುಕೊಳ್ಳಿರಿ. ಸೋದರರರೇ! ಈ ನನ್ನ ಭಕ್ತಿಮಾರ್ಗವು ಅತಿಸುಲಭ, ಸುಖಪ್ರದವು ಎಂದು ವೇದ ಪುರಾಣಗಳು ಸಾರುತ್ತಿವೆ. ಜ್ಞಾನಮಾರ್ಗವು ಸುಲಭವಲ್ಲ. ಅದರ ಸಾಧನೆಯಲ್ಲಿ ಅನೇಕ ವಿಘ್ನಗಳು ಎದುರಾಗುತ್ತವೆ. ಜ್ಞಾನಮಾರ್ಗ ಸಾಧನೆಯು ಕಠಿಣ, ಅದರಲ್ಲಿ ಮನಸ್ಸಿಗೆ ಆಲಂಬನ ದೊರೆಯದು. ಬಹಳ ಕಷ್ಟಪಟ್ಟು ಯಾರಾದರೂ ಅದನ್ನು ಪಡೆದರೂ, ಅವನು ಭಕ್ತಿರಹಿತನಾದ್ದರಿಂದ ನನಗೆ ಪ್ರಿಯನಲ್ಲ. ಭಕ್ತಿಯು ಸ್ವತಂತ್ರ ಸಾಧನೆಯು. ಎಲ್ಲ ಸುಖಗಳ ಗಣಿ. ಆದರೆ ಸತ್ಸಂಗವಿಲ್ಲದೆ ಪ್ರಾಣಿಗಳು ಅದನ್ನು ಪಡೆಯಲಾರರು. ಪುಣ್ಯಪುಂಜವಿಲ್ಲದೆ ಸಜ್ಜನ ಸಾಂಗತ್ಯ ದೊರಕದು. ಸತ್ಸಂಗವೇ ಜನ್ಮ-ಮರಣ ಚಕ್ರದಿಂದ ಪ್ರಾಣಿಕೋಟಿಯನ್ನು ಮುಕ್ತಗೊಳಿಸಬಲ್ಲದು. ಮನೋವಾಕ್ಕರ್ಮಗಳಿಂದ (ತ್ರಿಕರಣಶುದ್ಧಿಯಿಂದ) ಬ್ರಾಹ್ಮಣರನ್ನು ಪೂಜಿಸುವುದಕ್ಕೆ ಸಮಾನವಾದ ಪುಣ್ಯಕಾರ್ಯವು ಜಗತ್ತಿನಲ್ಲಿ ಬೇರೊಂದಿಲ್ಲ. ಕಪಟವನ್ನು ತೊರೆದು ದ್ವಿಜರಸೇವೆ ಮಾಡುವವರಿಗೆ ಮುನಿಗಳೂ, ದೇವತೆಗಳೂ ಕೂಡ ಪ್ರಸನ್ನರಾಗಿರುತ್ತಾರೆ. (ಚೌ/೧-೪)

**ದೋ – ಔರಉ ಏಕ ಗುಪುತ ಮತ ಸಬಹಿ ಕಹಉँ ಕರ ಜೋರಿ।**
**ಸಂಕರ ಭಜನ ಬಿನಾ ನರ ಭಗತಿ ನ ಪಾವಇ ಮೋರಿ ॥ ೪೫ ॥**

ಮತ್ತೊಂದು ರಹಸ್ಯವಿಶೇಷವಿದೆ. ನಾನು ಅದನ್ನು ನಿಮ್ಮೆದುರಿಗೆ ಕರಬದ್ಧನಾಗಿ ಹೇಳುತ್ತೇನೆ. ಶಿವನನ್ನು ಭಜಿಸದೆ ಮನುಷ್ಯನು ನನ್ನ ಭಕ್ತಿಯನ್ನು ಹೊಂದಲಾರನು. ಅಂದರೆ ರಾಮಾನುಗ್ರಹ ಲಭಿಸಲು ಶಿವಪೂಜನವು ಮುಖ್ಯ ಕರ್ತವ್ಯವು. (ದೋ/೪೫)

**ಚೌ – ಕಹಹು ಭಗತಿ ಪಥ ಕವನ ಪ್ರಯಾಸಾ। ಜೋಗ ನ ಮಖ ಜಪ ತಪ ಉಪವಾಸಾ॥**
**ಸರಲ ಸುಭಾವ ನ ಮನ ಕುಟಿಲಾಈ। ಜಥಾ ಲಾಭ ಸಂತೋಷ ಸದಾಈ ॥ ೧ ॥**
**ಮೋರ ದಾಸ ಕಹಾಇ ನರ ಆಸಾ। ಕರಇ ತೌ ಕಹಹು ಕಹಾ ಬಿಸ್ವಾಸಾ ॥**
**ಬಹುತ ಕಹಉँ ಕಾ ಕಥಾ ಬಢಾಈ। ಏಹಿ ಆಚರನ ಬಸ್ಯ ಮೈँ ಭಾಈ ॥ ೨ ॥**
**ಬೈರ ನ ಬಿಗ್ರಹ ಆಸ ನ ತ್ರಾಸಾ। ಸುಖಮಯ ತಾಹಿ ಸದಾ ಸಬ ಆಸಾ ॥**
**ಅನಾರಂಭ ಅನಿಕೇತ ಅಮಾನೀ। ಅನಘ ಅರೋಷ ದಚ್ಛ ಬಿಗ್ಯಾನೀ॥ ೩ ॥**
**ಪ್ರೀತಿ ಸದಾ ಸಜ್ಜನ ಸಂಸರ್ಗಾ। ತೃನ ಸಮ ಬಿಷಯ ಸ್ವರ್ಗ ಅಪಬರ್ಗಾ ॥**
**ಭಗತಿ ಪಚ್ಛ ಹಠ ನಹಿँ ಸಠತಾಈ। ದುಷ್ಟ ತರ್ಕ ಸಬ ದೂರಿ ಬಹಾಈ ॥ ೪ ॥**

ಭಕ್ತಿಮಾರ್ಗದಲ್ಲಿ ಯಾವ ಪರಿಶ್ರಮವಿದೆ? ಹೇಳಿ. ಇದರಲ್ಲಿ ಯೋಗದ ಆವಶ್ಯಕತೆ ಇಲ್ಲ. ಯಜ್ಞ, ಜಪ. ತಪ, ಉಪವಾಸಾದಿಗಳ ಕೆಲಸವೇ ಇಲ್ಲ. ಇದರಲ್ಲಿ ಸರಳ ಸ್ವಭಾವ, ನಿಷ್ಕಪಟವಾದ ಮನಸ್ಸು, ಸಿಕ್ಕಿದುದರಲ್ಲಿ ತೃಪ್ತಿ, ಸಂತೋಷ ಇಷ್ಟಿದ್ದರೆ ಸಾಕು. ನನ್ನ ದಾಸನೆಂದು ಎನಿಸಿಕೊಂಡು ಇತರರಿಂದ ಏನನ್ನಾದರೂ ಬಯಸಿದರೆ ನನ್ನ ಮೇಲೆ ವಿಶ್ವಾಸ ಎಲ್ಲಿರುತ್ತದೆ? ನೀವೇ ಹೇಳಿ. ಇದರಲ್ಲಿ ಹೆಚ್ಚೇನು ಹೇಳಲಿ? ಸೋದರರರೇ! ನನ್ನನ್ನು ಒಲಿಸಿಕೊಳ್ಳಬಯಸುವವರು ಆಚರಿಸಬೇಕಾದ ಸಂಗತಿಗಳು ಹೀಗಿವೆ – ಯಾರನ್ನೂ ದ್ವೇಷಿಸಬಾರದು. ಯಾರೊಂದಿಗೂ ಜಗಳವಾಡಬಾರದು. ಆಸೆ, ಭಯಗಳು ಇಲ್ಲದಿರುವವನಿಗೆ, ಸರ್ವತ್ರ ಸುಖಮಯವಾಗಿರುತ್ತದೆ. ನಿಷ್ಕಾಮ ಕರ್ಮಗಳನ್ನು ಆಚರಿಸುವವನೂ, ಮನೆಯ ಬಗ್ಗೆ ಮಮಕಾರವಿಲ್ಲದವನೂ, ಗರ್ವವಿಲ್ಲದವನೂ, ಪಾಪರಹಿತನೂ, ಕ್ರೋಧಹೀನನೂ, ಭಕ್ತಿಭಾವದಲ್ಲಿ ದೃಢಚಿತ್ತಉಳ್ಳವನೂ, ಭಕ್ತಿತತ್ತ್ವವನ್ನು ತಿಳಿದವನೂ, ಸಂತರ ಸಾಂಗತ್ಯದಲ್ಲಿ ಆಸಕ್ತಿಯುಳ್ಳವನೂ, ವಿಷಯಸುಖಗಳೇ ಅಲ್ಲ, ಸ್ವರ್ಗವನ್ನು ಮುಕ್ತಿಯನ್ನೂ ಕೂಡ ತೃಣಪ್ರಾಯವಾಗಿ ತಿಳಿಯುವವರೂ, ಭಕ್ತಿಪಂಥದಲ್ಲಿ ದೃಢವಾಗಿ ನೆಲೆಸಿದ್ದು, ಬೇರೆಯವರ ಮತವನ್ನು ದೂಷಿಸದಿರುವವನೂ, ಎಲ್ಲ ರೀತಿಯ ಕುತರ್ಕಗಳನ್ನು ತ್ಯಜಿಸಿದವನೂ, – (ಚೌ/೧-೪)

**ದೋ – ಮಮ ಗುನ ಗ್ರಾಮ ನಾಮ ರತ ಗತ ಮಮತಾ ಮದ ಮೋಹ।**
**ತಾ ಕರ ಸುಖ ಸೋಇ ಜಾನಇ ಪರಾನಂದ ಸಂದೋಹ ॥ ೪೬ ॥**

ನನ್ನ ಗುಣಗಳನ್ನು ಕೀರ್ತಿಸುತ್ತಾ ನಾಮಜಪದಲ್ಲಿ ಲೀನವಾದವನೂ, ಹಾಗೇ ಮಮತಾ, ಮದ, ಮೋಹಕ್ಕತೀತನಾದವನೂ, ಆದ ಅವನು ಪರಮಾತ್ಮಸ್ವರೂಪವನ್ನು ಅರಿತು ಆತ್ಮಾನಂದವನ್ನು ಹೊಂದುವನು. ಆ ಆತ್ಮಾನಂದವು ಅನುಭವೈಕವೇದ್ಯ. ಆ ಸುಖವನ್ನು ಪಡೆದಾತನೇ ಬಲ್ಲನು. (ದೋ/೪೬)

**ಚೌ – ಸುನತ ಸುಧಾಸಮ ಬಚನ ರಾಮ ಕೇ। ಗಹೇ ಸಬನಿ ಪದ ಕೃಪಾಧಾಮ ಕೇ।**
**ಜನನಿ ಜನಕ ಗುರ ಬಂಧು ಹಮಾರೇ। ಕೃಪಾ ನಿಧಾನ ಪ್ರಾನ ತೇ ಪ್ಯಾರೇ॥ ೧ ॥**
**ತನು ಧನು ಧಾಮ ರಾಮ ಹಿತಕಾರೀ। ಸಬ ಬಿಧಿ ತುಮ್ಹ ಪ್ರನತಾರತಿ ಹಾರೀ॥**
**ಅಸಿ ಸಿಖ ತುಮ್ಹ ಬಿನು ದೇಇ ನ ಕೋಊ। ಮಾತು ಪಿತಾ ಸ್ವಾರಥ ರತ ಓಊ॥ ೨ ॥**
**ಹೇತು ರಹಿತ ಜಗ ಜುಗ ಉಪಕಾರೀ। ತುಮ್ಹ ತುಮ್ಹಾರ ಸೇವಕ ಅಸುರಾರೀ ॥**
**ಸ್ವಾರಥ ಮೀತ ಸಕಲ ಜಗ ಮಾಹೀँ। ಸಪನೇಹುँ ಪ್ರಭು ಪರಮಾರಥ ನಾಹೀँ॥ ೩ ॥**
**ಸಬ ಕೇ ಬಚನ ಪ್ರೇಮ ರಸ ಸಾನೇ। ಸುನಿ ರಘುನಾಥ ಹೃದಯँ ಹರಷಾನೇ॥**
**ನಿಜ ನಿಜ ಗೃಹ ಗಏ ಆಯಸು ಪಾಈ। ಬರನತ ಪ್ರಭು ಬತಕಹೀ ಸುಹಾಈ॥ ೪ ॥**

ಶ್ರೀರಾಮಚಂದ್ರನು ಹೇಳಿದ ಸುಧಾಮಯ ವಚನಗಳನ್ನು ಕೇಳಿ, ಎಲ್ಲರೂ ಕರುಣಾಳುವಾದ ಆತನ ಚರಣಗಳನ್ನು ಹಿಡಿದುಕೊಂಡು ಹೇಳಿದರು – ''ಓ ಕೃಪಾನಿಧೇ! ನೀನೇ ನಮಗೆ ತಂದೆ-ತಾಯಿ, ಗುರು, ಬಂಧು-ಬಳಗ, ಎಲ್ಲವೂ ಆಗಿರುವೆ.

ನಮಗೆ ಪ್ರಾಣಕ್ಕಿಂತಲೂ ಪ್ರಿಯನು ನೀನೇ ಆಗಿರುವೆ. ಶರಣಾಗತರ ದುಃಖವನ್ನು ನಿವಾರಿಸುವ ಓ ಶ್ರೀರಾಮಾ! ನೀನೇ ನಮ್ಮ ಸಿರಿಸಂಪತ್ತು, ಮನೆ-ಮಠ ನೀನೇ. ನೀನೇ ನಮಗೆ ಹಿತೈಷಿಯು. ಇಂತಹ ಅಮೃತೋಪದೇಶವನ್ನು ನೀನಲ್ಲದೆ ಬೇರೆ ಯಾರೂ ಕೊಡಲಾರರು. ತಂದೆ-ತಾಯಿಯರು ಕೂಡ ಹಿತೈಷಿಗಳಿರಬಹುದು, ಅವರು ಬುದ್ಧಿ ಹೇಳಬಹುದು. ಆದರೆ ಅವರೆಲ್ಲರೂ ಸ್ವಾರ್ಥಪರರು. ಓ ಅಸುರಾರೀ! ಪ್ರಪಂಚದಲ್ಲಿ ನಿಃಸ್ವಾರ್ಥವಾಗಿ ಉಪಕಾರ ಮಾಡುವವರು ಇಬ್ಬರೇ. ಒಬ್ಬರು ನೀವು, ಇನ್ನೊಬ್ಬರು ನಿಮ್ಮ ಸೇವಕರು; ಜಗತ್ತಿನಲ್ಲಿ ಉಳಿದ ಎಲ್ಲರೂ ಸ್ವಾರ್ಥ ಗೆಳೆಯರೇ. ಪ್ರಭೂ! ಅವರಲ್ಲಿ ಕನಸಿನಲ್ಲಿಯೂ ಪರಮಾರ್ಥವಿಲ್ಲ.'' ಪ್ರೇಮಪೂರ್ಣವಾದ ಅವರ ವಚನಗಳನ್ನು ಕೇಳಿ, ಶ್ರೀರಾಮಚಂದ್ರನು ಹೃದಯದಲ್ಲಿ ಹರ್ಷಿತನಾದನು. ಅನಂತರ ಅವರೆಲ್ಲರೂ ಪ್ರಭುವಿನ ಅಪ್ಪಣೆಪಡೆದು, ಅವನ ಮಧುರೋಪದೇಶಗಳನ್ನೂ ಸ್ಮರಿಸುತ್ತಾ ತಮ್ಮ-ತಮ್ಮ ಮನೆಗಳಿಗೆ ತೆರಳಿದರು. (ಚೌ/೧-೪)

**ದೋ – ಉಮಾ ಅವಧಬಾಸೀ ನರ ನಾರಿ ಕೃತಾರಥ ರೂಪ।**
**ಬ್ರಹ್ಮ ಸಚ್ಚಿದಾನಂದ ಘನ ರಘುನಾಯಕ ಜಹ್ ಭೂಪ ॥೪೭॥**

ಶಿವನು ಹೇಳುತ್ತಾನೆ – ಎಲೈ ಉಮೆ! ಸಚ್ಚಿದಾನಂದಘನ ಬ್ರಹ್ಮನಾದ ಶ್ರೀರಾಮನೇ ರಾಜನಾಗಿರುವ ಅಯೋಧ್ಯೆಯ ನರನಾರಿಯರೆಲ್ಲರು ಕೃತಾರ್ಥರು. (ದೋ/೪೭)

**ಚೌ – ಏಕ ಬಾರ ಬಸಿಷ್ಟ ಮುನಿ ಆಏ। ಜಹಾ್ ರಾಮ ಸುಖಧಾಮ ಸುಹಾಏ॥**
**ಅತಿ ಆದರ ರಘುನಾಯಕ ಕೀನ್ಹಾ। ಪದ ಪಖಾರಿ ಪಾದೋದಕ ಲೀನ್ಹಾ ॥೧॥**
**ರಾಮ ಸುನಹು ಮುನಿ ಕಹ ಕರ ಜೋರೀ। ಕೃಪಾಸಿಂಧು ಬಿನತೀ ಕಛು ಮೋರೀ॥**
**ದೇಖಿ ದೇಖಿ ಆಚರನ ತುಮ್ಹಾರಾ। ಹೋತ ಮೋಹ ಮಮ ಹೃದಯ್ ಅಪಾರಾ ॥೨॥**
**ಮಹಿಮಾ ಅಮಿತಿ ಬೇದ ನಹಿ್ ಜಾನಾ। ಮೈ್ ಕೆಹಿ ಭಾ್ತಿ ಕಹಉ್ ಭಗವಾನಾ॥**
**ಉಪರೋಹಿತ್ಯ ಕರ್ಮ ಅತಿ ಮಂದಾ। ಬೇದ ಪುರಾನ ಸುಮೃತಿ ಕರ ನಿಂದಾ ॥೩॥**
**ಜಬ ನ ಲೇಉ್ ಮೈ್ ತಬ ಬಿಧಿ ಮೋಹೀ। ಕಹಾ ಲಾಭ ಆಗೇ್ ಸುತ ತೋಹೀ॥**
**ಪರಮಾತಮಾ ಬ್ರಹ್ಮ ನರ ರೂಪಾ। ಹೋಇಹಿ ರಘುಕುಲ ಭೂಷನ ಭೂಪಾ ॥೪॥**

ಒಮ್ಮೆ ವಸಿಷ್ಠಮಹಾಮುನಿಗಳು ಸುಖಧಾಮನಾದ ಶ್ರೀರಾಮನ ಬಳಿಗೆ ಬಂದರು. ಶ್ರೀರಘುನಾಥನು ಅವರನ್ನು ಹೆಚ್ಚಾದ ಆದರದಿಂದ ಗೌರವಿಸಿ, ಅವರ ಕಾಲುತೊಳೆದು, ಆ ಪಾದೋದಕವನ್ನು ಸ್ವೀಕರಿಸಿದನು. ವಸಿಷ್ಠಮಹಾಮುನಿಗಳು ಕೈಜೋಡಿಸಿಕೊಂಡು ಬಿನ್ನವಿಸಿಕೊಂಡರು – ಓ ಕೃಪಾಳು ಶ್ರೀರಾಮಾ! ನನ್ನ ವಿನಂತಿಯನ್ನು ಆಲಿಸು. ನೀನು ಆಚರಿಸುತ್ತಿರುವ ಮಾನವೋಚಿತ ಕಾರ್ಯವನ್ನು ನೋಡಿ ನನ್ನ ಹೃದಯದಲ್ಲಿ ಅಪಾರವಾದ ಮೋಹ (ಭ್ರಮೆ) ವುಂಟಾಗಿದೆ. ಹೇ ಭಗವಂತಾ! ನಿನ್ನ ಮಹಿಮೆಗೆ ಎಲ್ಲೆಯೇ ಇಲ್ಲ. ಅದನ್ನು ವೇದಗಳೂ ಅರಿಯವು. ಅಂತಹುದರಲ್ಲಿ ನಾನು ಎಂತು ವರ್ಣಿಸಬಲ್ಲೆನು? ಪೌರೋಹಿತ್ಯವೆನ್ನುವುದು ಅತೀ ನಿಮ್ನ ಶ್ರೇಣಿಗೆ ಸೇರಿದುದು. ವೇದ, ಪುರಾಣ, ಸ್ಮೃತಿಗಳೂ ಕೂಡ ಅದನ್ನು ನಿಂದಿಸಿವೆ. ಸೂರ್ಯವಂಶದ ಪೌರೋಹಿತ್ಯ ಕಾರ್ಯವನ್ನು ನಾನು ಸ್ವೀಕರಿಸದಿದ್ದಾಗ ಬ್ರಹ್ಮದೇವರೇ ನನಗೆ ಹೇಳಿದ್ದರು – ಕುಮಾರಾ! ನೀನು ಈ ಕೆಲಸವನ್ನು ಸ್ವೀಕರಿಸು. ಇದರಿಂದ ನಿನಗೆ ಮುಂದಕ್ಕೆ ತುಂಬಾ ಲಾಭವಾಗುವುದು. ಸ್ವಯಂ ಪರಬ್ರಹ್ಮ ಪರಮಾತ್ಮನೇ ನರರೂಪದಿಂದ ರಘುಕುಲಭೂಷಣಭೂಪನಾಗಿ ಅವತರಿಸುವನು. (ಚೌ/೧-೪)

**ದೋ – ತಬ ಮೈ್ ಹೃದಯ್ ಬಿಚಾರಾ ಜೋಗ ಜಗ್ಯ ಬ್ರತ ದಾನ।**
**ಜಾ ಕಹು್ ಕರಿಅ ಸೊ ಪೈಹಉ್ ಧರ್ಮ ನ ಏಹಿ ಸಮ ಆನ ॥೪೮॥**

ಆಗ ನಾನು ಮನಸ್ಸಿನಲ್ಲೇ ಯೋಚಿಸಿದೆ – ಜನರು ಯಾರಿಗಾಗಿ ಯೋಗ, ಯಜ್ಞ, ವ್ರತ, ದಾನ ಮುಂತಾದ ಧರ್ಮಕಾರ್ಯಗಳನ್ನು ಮಾಡುವರೋ, ಅಂತಹ ಪರಮಾತ್ಮನನ್ನು ನಾನು ಈ ಪೌರೋಹಿತ್ಯ ಕಾರ್ಯದಿಂದಲೇ ಪಡೆಯಬಹುದೆಂದಾಗ ಇದಕ್ಕಿಂತ ಬೇರೊಂದು ಧರ್ಮವು ಇಲ್ಲವೇ ಇಲ್ಲ. (ದೋ/೪೮)

**ಚೌ – ಜಪ ತಪ ನಿಯಮ ಜೋಗ ನಿಜ ಧರ್ಮಾ। ಶ್ರುತಿ ಸಂಭವ ನಾನಾ ಸುಭ ಕರ್ಮಾ॥**
**ಗ್ಯಾನ ದಯಾ ದಮ ತೀರಥ ಮಜ್ಜನ। ಜಹ್ ಲಗಿ ಧರ್ಮ ಕಹತ ಶ್ರುತಿ ಸಜ್ಜನ ॥೧॥**
**ಆಗಮ ನಿಗಮ ಪುರಾನ ಅನೇಕಾ। ಪಢೇ ಸುನೇ ಕರ ಫಲ ಪ್ರಭು ಏಕಾ॥**
**ತವ ಪದ ಪಂಕಜ ಪ್ರೀತಿ ನಿರಂತರ। ಸಬ ಸಾಧನ ಕರ ಯಹ ಫಲ ಸುಂದರ ॥೨॥**

**ಘೂಟಇ ಮಲ ಕಿ ಮಲಹಿ ಕೇ ಧೋಏ್। ಘೃತ ಕಿ ಪಾವ ಕೊಇ ಬಾರಿ ಬಿಲೋಏ್॥**
**ಪ್ರೇಮ ಭಗತಿ ಜಲ ಬಿನು ರಘುರಾಈ। ಅಭಿಅಂತರ ಮಲ ಕಬಹುಁ ನ ಜಾಈ॥ ೩ ॥**
**ಸೋಇ ಸರ್ಬಗ್ಯ ತಗ್ಯ ಸೋಇ ಪಂಡಿತ। ಸೋಇ ಗುನ ಗೃಹ ಬಿಗ್ಯಾನ ಅಖಂಡಿತ॥**
**ದಚ್ಛ ಸಕಲ ಲಚ್ಛನ ಜುತ ಸೋಈ। ಜಾಕೇಂ ಪದ ಸರೋಜ ರತಿ ಹೋಈ॥ ೪ ॥**

ಜಪ, ತಪ, ನಿಯಮ, ಯೋಗ, ವರ್ಣಾಶ್ರಮಧರ್ಮ, ವೇದವಿಹಿತವಾದ ಅನೇಕ ಶುಭಕರ್ಮ, ಜ್ಞಾನ, ದಯೆ, ದಮ, ತೀರ್ಥಸ್ನಾನ, ಕ್ಷೇತ್ರಸಂದರ್ಶನ ಮೊದಲಾದವುಗಳೆಲ್ಲ ಧರ್ಮಮೂಲವೆಂದು ವೇದಗಳು ಸಜ್ಜನರು ಹೇಳಿರುವರು. ಪ್ರಭೂ! ಇವನ್ನು ಆಚರಿಸಿದರೂ, ಅನೇಕ ವೇದ, ಆಗಮ (ತಂತ್ರ), ಪುರಾಣಗಳನ್ನು ಓದಿದುದರ, ಕೇಳಿದುದರ, ಸರ್ವಸಾಧನೆಗಳ ಸರ್ವೋತ್ತಮ ಫಲವು ಒಂದೇ; ಅದು ನಿನ್ನ ಪಾದಪದ್ಮಗಳಲ್ಲಿ ನಿರಂತರ ಭಕ್ತಿ ಉಂಟಾಗುವುದೇ ಆಗಿದೆ. ಕೊಳೆಯಿಂದ ತೊಳೆದರೆ ಕೊಳೆ ಬಿಟ್ಟೀತೇ? ನೀರನ್ನು ಕಡೆದರೆ ಬೆಣ್ಣೆ ಬಂದೀತೇ? ಹಾಗೇ ರಘುನಾಥಾ! ಪ್ರೇಮಾಭಕ್ತಿಯೆಂಬ ನಿರ್ಮಲ ಜಲವಿಲ್ಲದೆ ಅಂತಃಕರಣದ ಅಜ್ಞಾನವೆಂಬ ಮಲ ತೊಲಗದು. ನಿನ್ನ ಚರಣಕಮಲದಲ್ಲಿ ಪ್ರೇಮವುಳ್ಳಾತನೇ ಸರ್ವಜ್ಞನು, ತತ್ತ್ವಜ್ಞನು, ಪಂಡಿತನು, ಅನೇಕ ಸದ್ಗುಣಗಳ ಗಣಿಯು, ಅಖಂಡ ವಿಜ್ಞಾನಿಯು, ಸುಲಕ್ಷಣಯುಕ್ತನು, ದಕ್ಷನೂ ಆಗಿರುವನು. (ಚೌ/೧-೪)

**ದೋ – ನಾಥ ಏಕ ಬರ ಮಾಗಉಁ ರಾಮ ಕೃಪಾ ಕರಿ ದೇಹು।**
**ಜನ್ಮ ಜನ್ಮ ಪ್ರಭು ಪದ ಕಮಲ ಕಬಹು ಘಟೈ ಜನಿ ನೇಹು॥ ೪೯ ॥**

ಪ್ರಭೂ! ಶ್ರೀರಾಮಾ! ನಿನ್ನಲ್ಲಿ ಒಂದು ವರವನ್ನು ಬೇಡುತ್ತೇನೆ – 'ನಿನ್ನ ಚರಣಕಮಲದಲ್ಲಿ ನನ್ನ ಪ್ರೇಮವು ಜನ್ಮಜನ್ಮಾಂತರಗಳಲ್ಲೂ ಕ್ಷೀಣಿಸದಿರಲಿ.' ಇದನ್ನು ಕೃಪೆದೋರಿ ಕರುಣಿಸು. (ದೋ/೪೯)

**ಚೌ – ಅಸ ಕಹಿ ಮುನಿ ಬಸಿಷ್ಟ ಗೃಹ ಆಏ। ಕೃಪಾಸಿಂಧು ಕೇ ಮನ ಅತಿ ಭಾಏ॥**
**ಹನೂಮಾನ ಭರತಾದಿಕ ಭ್ರಾತಾ। ಸಂಗ ಲಿಏ ಸೇವಕ ಸುಖದಾತಾ॥ ೧ ॥**
**ಪುನಿ ಕೃಪಾಲ ಪುರ ಬಾಹೆರ ಗಏ। ಗಜ ರಥ ತುರಗ ಮಗಾವತ ಭಏ॥**
**ದೇಖಿ ಕೃಪಾ ಕರಿ ಸಕಲ ಸರಾಹೇ। ದಿಏ ಉಚಿತ ಜಿನ್ಹ ಜಿನ್ಹ ತೇಇ ಚಾಹೇ॥ ೨ ॥**
**ಹರನ ಸಕಲ ಶ್ರಮ ಪ್ರಭು ಶ್ರಮ ಪಾಈ। ಗಏ ಜಹಾಁ ಸೀತಲ ಅವँರಾಈ॥**
**ಭರತ ದೀನ್ಹ ನಿಜ ಬಸನ ಡಸಾಈ। ಬೈಠೇ ಪ್ರಭು ಸೇವಹಿಂ ಸಬ ಭಾಈ॥ ೩ ॥**
**ಮಾರುತಸುತ ತಬ ಮಾರುತ ಕರಈ। ಪುಲಕ ಬಪುಷ ಲೋಚನ ಜಲ ಭರಈ॥**
**ಹನೂಮಾನ ಸಮ ನಹಿಂ ಬಡಭಾಗೀ। ನಹಿಂ ಕೊಉ ರಾಮ ಚರನ ಅನುರಾಗೀ॥ ೪ ॥**
**ಗಿರಿಜಾ ಜಾಸು ಪ್ರೀತಿ ಸೇವಕಾಈ। ಬಾರ ಬಾರ ಪ್ರಭು ನಿಜ ಮುಖ ಗಾಈ॥ ೫ ॥**

ಈ ವಿಧವಾಗಿ ವಸಿಷ್ಠರು ಶ್ರೀರಾಮನಲ್ಲಿ ವಿನಂತಿಸಿಕೊಂಡು ತಮ್ಮ ಆಶ್ರಮಕ್ಕೆ ಮರಳಿದರು. ಅವರ ಹೃದಯದ ಭಾವವನ್ನರಿತ ಕೃಪಾಸಿಂಧುವಾದ ಶ್ರೀರಾಮನಿಗೆ ತುಂಬಾ ಸಂತೋಷವಾಯಿತು. ಬಳಿಕ ಸೇವಕರಿಗೆ ಸುಖಪ್ರದನಾದ ಶ್ರೀರಾಮಚಂದ್ರನು ಹನುಮಂತ, ಭರತಾದಿ ಸೋದರರೊಡಗೂಡಿ ನಗರದ ಹೊರಭಾಗಕ್ಕೆ ಬಂದು ಹೇರಳವಾಗಿ ಗಜ, ರಥ, ತುರಗಗಳನ್ನು ತರಿಸಿದನು. ಅವನ್ನು ಕೃಪಾದೃಷ್ಟಿಯಿಂದ ನೋಡಿ, ಸಂತಸದಿಂದ ಅವುಗಳನ್ನು ಕೊಂಡಾಡಿದನು. ಅವನ್ನು ಪ್ರಜಾಜನರು ಬಯಸಿದುದನ್ನು ಉಚಿತಾನುಚಿತ ತಿಳಿದು ಅವರಿಗೆ ಕೊಡಮಾಡಿದನು. ಜಗತ್ತಿನಲ್ಲಿ ಎಲ್ಲರ ಶ್ರಮವನ್ನು ಪರಿಹರಿಸುವ ಪ್ರಭುವು ಗಜ, ರಥ, ತುರಗ ಇವನ್ನು ಹಂಚಿ ದಣಿದಂತೆ ಕಂಡನು. ಶ್ರಮಪರಿಹಾರಕ್ಕಾಗಿ ಸಮೀಪದಲ್ಲೇ ಇದ್ದ ಮಾವಿನ ತೋಪಿಗೆ ಹೋದನು. ಅಲ್ಲಿ ಭರತನು ತನ್ನ ವಸ್ತ್ರವನ್ನು ಹಾಸಿ ಪ್ರಭುವಿಗೆ ಆಸನ ಸಿದ್ಧಪಡಿಸಿದನು. ಅದರ ಮೇಲೆ ಪ್ರಭುವು ವಿಶ್ರಮಿಸಿದನು. ತಮ್ಮಂದಿರೆಲ್ಲ ಅವನ ಸೇವೆ ಮಾಡತೊಡಗಿದರು. ಆಗ ಪವನಪುತ್ರನು ಗಾಳಿ ಬೀಸತೊಡಗಿದನು. ರಾಮಸೇವೆಯಿಂದ ಹನುಮಂತನ ಶರೀರ ಪುಳಕಿತವಾಯಿತು. ಕಣ್ಣುಗಳಲ್ಲಿ ಪ್ರೇಮಾಶ್ರುಗಳು ಹರಿದವು. (ಶಿವನು ಹೇಳುತ್ತಾನೆ) ಎಲೈ ಗಿರಿಜೆ! ಶ್ರೀರಾಮನ ಚರಮಕಮಲಗಳನ್ನು ಆಶ್ರಯಿಸಿದ ಹನುಮಂತನಂತಹ ಭಾಗ್ಯಶಾಲಿಯು ಬೇರೊಬ್ಬನಿಲ್ಲ. ಅವನ ಪ್ರೇಮವನ್ನೂ, ಸೇವೆಯನ್ನೂ ಸ್ವತಃ ಶ್ರೀರಾಮನೇ ತನ್ನ ಶ್ರೀಮುಖದಿಂದ ಮತ್ತೆ-ಮತ್ತೆ ಕೊಂಡಾಡಿದನು. (ಚೌ/೧-೫)

## ನಾರದರು ಶ್ರೀರಾಮನನ್ನು ಸ್ತುತಿಸಿದುದು

**ದೋ – ತೇಹಿಂ ಅವಸರ ಮುನಿ ನಾರದ ಆಏ ಕರತಲ ಬೀನ।**
**ಗಾವನ ಲಗೇ ರಾಮ ಕಲ ಕೀರತಿ ಸದಾ ನಬೀನ॥ ೫೦ ॥**

ಅದೇ ಸಮಯಕ್ಕೆ ಸರಿಯಾಗಿ ನಾರದಮಹರ್ಷಿಗಳು ಮಹತೀವೀಣೆಯನ್ನು ಹಿಡಿದುಕೊಂಡು ಭಗವನ್ನಾಮಗಳನ್ನು ಕೊಂಡಾಡುತ್ತಾ ಶ್ರೀರಾಮನಿದ್ದಲ್ಲಿಗೆ ಆಗಮಿಸಿದರು. ಅವರು ಶ್ರೀರಾಮನ ನಿತ್ಯನೂತನವಾದ ಮನೋಹರಕೀರ್ತಿಯನ್ನು ಗಾನಮಾಡತೊಡಗಿದರು. (ದೋ/೫೦)

**ಚೌ – ಮಾಮವಲೋಕಯ ಪಂಕಜ ಲೋಚನ। ಕೃಪಾ ಬಿಲೋಕನಿ ಸೋಚ ಬಿಮೋಚನ॥**
**ನೀಲ ತಾಮರಸ ಸ್ಯಾಮ ಕಾಮ ಅರಿ। ಹೃದಯ ಕಂಜ ಮಕರಂದ ಮಧುಪ ಹರಿ॥ ೧॥**
**ಜಾತುಧಾನ ಬರೂಥ ಬಲ ಭಂಜನ। ಮುನಿ ಸಜ್ಜನ ರಂಜನ ಅಘ ಗಂಜನ॥**
**ಭೂಸುರ ಸಸಿ ನವ ಬೃಂದ ಬಲಾಹಕ। ಅಸರನ ಸರನ ದೀನ ಜನ ಗಾಹಕ॥ ೨॥**
**ಭುಜ ಬಲ ಬಿಪುಲ ಭಾರ ಮಹಿ ಖಂಡಿತ। ಖರ ದೂಷನ ಬಿರಾಧ ಬಧ ಪಂಡಿತ॥**
**ರಾವನಾರಿ ಸುಖರೂಪ ಭೂಪಬರ। ಜಯ ದಸರಥ ಕುಲ ಕುಮುದ ಸುಧಾಕರ॥ ೩॥**
**ಸುಜಸ ಪುರಾನ ಬಿದಿತ ನಿಗಮಾಗಮ। ಗಾವತ ಸುರ ಮುನಿ ಸಂತ ಸಮಾಗಮ॥**
**ಕಾರುನೀಕ ಬ್ಯಲೀಕ ಮದ ಖಂಡನ। ಸಬ ಬಿಧಿ ಕುಸಲ ಕೋಸಲಾ ಮಂಡನ॥ ೪॥**
**ಕಲಿ ಮಲ ಮಥನ ನಾಮ ಮಮತಾಹನ। ತುಲಸಿದಾಸ ಪ್ರಭು ಪಾಹಿ ಪ್ರನತ ಜನ॥ ೫॥**

ಓ ಕಮಲನಯನಾ! ದಯಮಾಡಿ ನನ್ನ ಕಡೆಗೆ ಕೃಪಾದೃಷ್ಟಿ ಬೀರು. ಓ ಶೋಕವಿಮೋಚನಾ! ನನ್ನ ಕಡೆಗೆ ನೋಡು. ಹೇ ಹರಿಯೇ! ನೀನು ನೀಲಕಮಲದಂತೆ ಶ್ಯಾಮಲಶರೀರವಿದ್ದು, ಕಾಮಾರಿಯಾದ ಶಿವನ ಹೃದಯಕಮಲದ ಪ್ರೇಮಮಕರಂದವನ್ನು ಆಸ್ವಾದಿಸುವ ಭ್ರಮರನಾಗಿರುವೆ. ರಾಕ್ಷಸಬಲವನ್ನು ನಾಶಮಾಡುವವನು, ಮುನಿಗಳಿಗೂ, ಸಜ್ಜನರಿಗೂ ಆನಂದವನ್ನು ಕೊಡುವವನೇ, ಪಾಪಗಳನ್ನು ನಾಶಮಾಡುವವನೇ, ಬ್ರಾಹ್ಮಣಸಮೂಹವೆಂಬ ಸಸ್ಯಗಳ ಮೇಲೆ ಮಳೆಗರೆಯುವ ನವಮೇಘದಂತಿರುವವನಾಗಿರುವೆ. ಅಶರಣ ಶರಣ್ಯನು, ದೀನಜನಪರಿಪಾಲಕನಾಗಿರುವೆ. ನೀನು ಅತುಲ ಪರಾಕ್ರಮದಿಂದ ಭೂಭಾರವನ್ನು ಹರಣಮಾಡಿರುವೆ. ಖರದೂಷಣ ವಿರಾಧರನ್ನು ವಧಿಸಿದ ಸಮರ್ಥನು. ಪರಮಾನಂದ ಸ್ವರೂಪನು. ರಾವಣಾರಿಯೇ! ರಾಜ ಶಿರೋಮಣಿಯೇ! ದಶರಥಕುಲಕುಮುದ ಸುಧಾಕರಾ! ನಿನಗೆ ಜಯವಾಗಲಿ. ನಿನ್ನ ಸುಯಶಸ್ಸು ನಿಗಮಾಗಮ, ಪುರಾಣಗಳಲ್ಲಿ ಪ್ರಕಟಗೊಂಡಿದೆ. ಆ ಕೀರ್ತಿಯನ್ನು ದೇವತೆಗಳು, ಮುನಿಗಳು, ಸಂತಸಮುದಾಯವು ಗಾನಮಾಡುತ್ತಾರೆ. ನೀನು ಕರುಣಾಕರನು. ದುರಭಿಮಾನವನ್ನು ದೂರಗೊಳಿಸುವವನು. ಸರ್ವಸಮರ್ಥನು. ಅಯೋಧ್ಯೆಗೆ ಅಲಂಕಾರಪ್ರಾಯನು. ನಿನ್ನ ನಾಮವು ಕಲಿಯುಗದ ಪಾಪಗಳನ್ನು ಮರ್ದನ ಮಾಡುವಂತಹುದು. ಅಹಂತೆಯನ್ನು ಕೊಲ್ಲುವಂತಹುದು. ತುಳಸೀದಾಸನು ಹೇಳುತ್ತಾನೆ – ಪ್ರಭೋ! ಶರಣುಬಂದಿರುವ ನನ್ನನ್ನು ಕಾಪಾಡು. (ಚೌ/೧-೫)

**ದೋ – ಪ್ರೇಮ ಸಹಿತ ಮುನಿ ನಾರದ ಬರನಿ ರಾಮ ಗುನ ಗ್ರಾಮ।**
**ಸೋಭಾಸಿಂಧು ಹೃದಯ್ ಧರಿ ಗಏ ಜಹಾ್ ಬಿಧಿ ಧಾಮ॥ ೫೧॥**

ಶ್ರೀರಾಮಚಂದ್ರನ ಗುಣಸಮೂಹಗಳನ್ನು ಪ್ರೇಮಪೂರ್ವಕ ವರ್ಣಿಸಿ, ನಾರದಮುನಿಗಳು ಶೋಭಾಸಿಂಧುವಾದ ಶ್ರೀರಾಮನನ್ನು ಹೃದಯದಲ್ಲಿ ಧರಿಸಿಕೊಂಡು ಬ್ರಹ್ಮಲೋಕವನ್ನು ಕುರಿತು ಪ್ರಯಾಣ ಮಾಡಿದರು. (ದೋ/೫೧)

**ಚೌ – ಗಿರಿಜಾ ಸುನಹು ಬಿಸದ ಯಹ ಕಥಾ। ಮೈ್ ಸಬ ಕಹೀ ಮೋರಿ ಮತಿ ಜಥಾ॥**
**ರಾಮ ಚರಿತ ಸತ ಕೋಟಿ ಅಪಾರಾ। ಶ್ರುತಿ ಸಾರದಾ ನ ಬರನೈ ಪಾರಾ॥ ೧॥**
**ರಾಮ ಅನಂತ ಅನಂತ ಗುನಾನೀ। ಜನ್ಮ ಕರ್ಮ ಅನಂತ ನಾಮಾನೀ॥**
**ಜಲ ಸೀಕರ ಮಹಿ ರಜ ಗನಿ ಜಾಹೀ್। ರಘುಪತಿ ಚರಿತ ನ ಬರನಿ ಸಿರಾಹೀ್॥ ೨॥**
**ಬಿಮಲ ಕಥಾ ಹರಿ ಪದ ದಾಯನೀ। ಭಗತಿ ಹೋಇ ಸುನಿ ಅನಪಾಯನೀ॥**
**ಉಮಾ ಕಹಿಉ್ ಸಬ ಕಥಾ ಸುಹಾಈ। ಜೋ ಭುಸುಂಡಿ ಖಗಪತಿಹಿ ಸುನಾಈ॥ ೩॥**
**ಕಛುಕ ರಾಮ ಗುನ ಕಹೆಉ್ ಬಖಾನೀ। ಅಬ ಕಾ ಕಹೌ್ ಸೊ ಕಹಹು ಭವಾನೀ॥**
**ಸುನಿ ಸುಭ ಕಥಾ ಉಮಾ ಹರಷಾನೀ। ಬೋಲೀ ಅತಿ ಬಿನೀತ ಮೃದು ಬಾನೀ॥ ೪॥**
**ಧನ್ಯ ಧನ್ಯ ಮೈ್ ಧನ್ಯ ಪುರಾರೀ। ಸುನೆಉ್ ರಾಮ ಗುನ ಭವ ಭಯ ಹಾರೀ॥ ೫॥**

ಶಿವನು ಹೇಳುತ್ತಾನೆ – ಎಲೈ ಗಿರಿಜೇ! ಕೇಳು ನನ್ನ ಬುದ್ಧಿಗೆ ತೋಚಿದಂತೆ ಉಜ್ವಲವಾದ ಈ ಕಥೆಯನ್ನು ನಿನಗೆ ಬಿತ್ತರಿಸಿದ್ದೇನೆ. ಶ್ರೀರಾಮನ ಚರಿತ ಶತಕೋಟಿ, ಅನಂತ, ಅಪಾರ. ವೇದಗಳಾಗಲೀ, ಸರಸ್ವತಿಯಾಗಲೀ ಇದನ್ನು ವರ್ಣಿಸಲಾರವು. ಭಗವಾನ್

ಶ್ರೀರಾಮನು ಅನಂತನು, ಅವನ ಗುಣಗಳು ಅನಂತ. ಅವನ ಜನ್ಮ, ಕರ್ಮಗಳು, ನಾಮಗಳು ಅನಂತ. ಜಲಸೀಕರಗಳನ್ನು, ಪೃಥ್ವಿಯ ರಜಕಣಗಳನ್ನು ಎಣಿಸಬಹುದು. ಆದರೆ ರಘುಪತಿಯ ಚರಿತ್ರ ವರ್ಣಿಸಿ ಮುಗಿಯದು. ಈ ವಿಮಲ ಕಥೆ ಶ್ರೀಹರಿಯ ಪರಮಪದವನ್ನು ಕರುಣಿಸುವಂತಹುದು. ಇದರ ಶ್ರವಣದಿಂದ ಹೃದಯದಲ್ಲಿ ಅವಿಚಲ ಭಕ್ತಿಯು ನೆಲೆಗೊಳ್ಳುತ್ತದೆ. ಉಮೆ! ಕಾಕಭುಶುಂಡಿಯವರು ಖಗಪತಿ ಗರುಡನಿಗೆ ಹೇಳಿದ ಈ ಸುಂದರ ಕಥೆಯನ್ನು ನಾನು ನಿನಗೆ ಹೇಳಿರುವೆನು. ನಾನು ಶ್ರೀರಾಮನ ಗುಣಗಳನ್ನು ಸ್ವಲ್ಪಮಾತ್ರ ವಿವರಿಸಿರುವೆ. ಭವಾನೀ! ಈಗ ಇನ್ನೇನು ಹೇಳಲಿ? ಶ್ರೀರಾಮನ ಕಲ್ಯಾಣಪ್ರದವಾದ ಕಥೆಯನ್ನು ಕೇಳಿ ಪಾರ್ವತಿ ಹರ್ಷಿತಳಾದಳು. ಅವಳು ಅತ್ಯಂತ ವಿನಯದಿಂದ ಮೃದುಮಧುರವಾಗಿ ಇಂತೆಂದಳು. ಓ ತ್ರಿಪುರಾರಿ! ಜನ್ಮಮೃತ್ಯುಭಯವನ್ನು ಹರಿಸುವ ಶ್ರೀರಾಮನ ಚರಿತ್ರವನ್ನು ಕೇಳಿದ ನಾನು ಧನ್ಯಳಾದೆನು, ಕೃತಾರ್ಥಳಾದೆನು. (ಚೌ/೧-೫)

**ದೋ – ತುಮ್ಹರೀ ಕೃಪಾಁ ಕೃಪಾಯತನ ಅಬ ಕೃತಕೃತ್ಯ ನ ಮೋಹ ।**
**ಜಾನೇಉಁ ರಾಮ ಪ್ರತಾಪ ಪ್ರಭು ಚಿದಾನಂದ ಸಂದೋಹ ॥ ೫೨ (ಕ)॥**
**ನಾಥ ತವಾನನ ಸಸಿ ಸ್ರವತ ಕಥಾ ಸುಧಾ ರಘುಬೀರ ।**
**ಶ್ರವನ ಪುಟನ್ಹಿ ಮನ ಪಾನ ಕರಿ ನಹಿಁ ಅಘಾತ ಮತಿಧೀರ ॥ ೫೨(ಖ)॥**

ಓ ಕೃಪಾಧಾಮ! ಈಗ ನಿಮ್ಮ ಕೃಪೆಯಿಂದ ನಾನು ಕೃತಕೃತ್ಯಳಾದೆನು. ಮೋಹರಹಿತಳಾದೆನು. ಪ್ರಭೋ! ಸಚ್ಚಿದಾನಂದ ಸ್ವರೂಪನಾದ ಶ್ರೀರಾಮನ ಮಹಿಮೆಯನ್ನು ನಾನು ಅರಿತುಕೊಂಡೆ. ನಾಥಾ! ನಿಮ್ಮ ಮುಖಚಂದ್ರಮನು ಶ್ರೀ ರಘುವೀರನ ಕಥಾಮೃತವನ್ನು ಮಳೆಗರೆಯುತ್ತದೆ. ಓ ಮಹಾತ್ಮಾ! ಆ ಕಥಾಸುಧೆಯನ್ನು ಕಿವಿಗಳಿಂದ ಎಷ್ಟು ಪಾನಮಾಡಿದರೂ ನನ್ನ ಮನಸ್ಸು ತಣಿಯದು. ಈ ಕಥಾಮೃತವನ್ನು ನೀವು ನಿರಂತರ ವರ್ಷಿಸುತ್ತಾ ಇರಿ. ನಾನು ಅದನ್ನು ಆಸ್ವಾದಿಸುತ್ತಲೇ ಇರುತ್ತೇನೆ. (ದೋ/೫೨ ಕ, ಖ)

**ಚೌ – ರಾಮ ಚರಿತ ಜೇ ಸುನತ ಅಘಾಹೀಂ । ರಸ ಬಿಸೇಷ ಜಾನಾ ತಿನ್ಹ ನಾಹೀಂ ॥**
**ಜೀವನಮುಕ್ತ ಮಹಾಮುನಿ ಜೇಊ । ಹರಿ ಗುನ ಸುನಹಿಁ ನಿರಂತರ ತೇಊ ॥ ೧ ॥**
**ಭವ ಸಾಗರ ಚಹ ಪಾರ ಜೋ ಪಾವಾ । ರಾಮ ಕಥಾ ತಾ ಕಹಁ ದೃಢ ನಾವಾ ॥**
**ಬಿಷಇನ್ಹ ಕಹಁ ಪುನಿ ಹರಿ ಗುನ ಗ್ರಾಮಾ । ಶ್ರವನ ಸುಖದ ಅರು ಮನ ಅಭಿರಾಮಾ ॥ ೨ ॥**
**ಶ್ರವನವಂತ ಅಸ ಕೋ ಜಗ ಮಾಹೀಂ । ಜಾಹಿ ನ ರಘುಪತಿ ಚರಿತ ಸೋಹಾಹೀಂ ॥**
**ತೇ ಜಡ ಜೀವ ನಿಜಾತ್ಮಕ ಘಾತೀ । ಜಿನ್ಹಹಿ ನ ರಘುಪತಿ ಕಥಾ ಸೋಹಾತೀ ॥ ೩ ॥**
**ಹರಿಚರಿತ್ರ ಮಾನಸ ತುಮ್ಹ ಗಾವಾ । ಸುನಿ ಮೈಂ ನಾಥ ಅಮಿತಿ ಸುಖ ಪಾವಾ ॥**
**ತುಮ್ಹ ಜೊ ಕಹೀ ಯಹ ಕಥಾ ಸುಹಾಈ । ಕಾಗಭುಸುಂಡಿ ಗರುಡ ಪ್ರತಿ ಗಾಈ ॥ ೪ ॥**

ಶ್ರೀರಾಮಚರಿತ ಶ್ರವಣದಿಂದ ತಣಿಯದವರು ಅದರ ರಸವಿಶೇಷವನ್ನು ಅರಿಯರು. ಜೀವನ್ಮುಕ್ತರಾದ ಮುನಿಗಳೂ ಕೂಡ ಭಗವಂತನ ಗುಣರಸಮಾಧುರ್ಯವನ್ನು ನಿರಂತರ ಆಸ್ವಾದಿಸುತ್ತಲೇ ಇರುವರು. ಭವಸಾಗರವನ್ನು ದಾಟಲಿಚ್ಛಿಸುವವರಿಗೆ ಶ್ರೀರಾಮನ ಕಥೆಯು ದೃಢವಾದ ನೌಕೆಯಂತಿದೆ. ಶ್ರೀಹರಿಯ ಗುಣಸಮೂಹವಂತೂ ವಿಷಯೀ ಜನರಿಗೂ ಕೂಡ ಕಿವಿಗಳಿಗೆ ಇಂಪನ್ನು, ಮನಸ್ಸಿಗೆ ಆಹ್ಲಾದವನ್ನು ಕೊಡುವಂತಹುದು. ಜಗತ್ತಿನಲ್ಲಿ ಕಿವಿಯಿರುವವರು ಶ್ರೀರಾಮನ ಕಥೆಯನ್ನು ಕೇಳಿ ಆನಂದಿಸದವರು ಯಾರು? ರಘುಪತಿಯ ಕಥೆ ಹಿಡಿಸದ ಜೀವರು ನಿಜವಾಗಿ ಜಡರು. ಆತ್ಮಘಾತಿಗಳು. ನಾಥಾ! ನೀವು ರಾಮಚರಿತಮಾನಸವನ್ನು ಗಾನಮಾಡಿದಿರಿ. ಅದನ್ನು ಕೇಳಿ ನಾನು ಅಪಾರವಾದ ಆನಂದವನ್ನು ಹೊಂದಿದೆನು. ಈ ಸುಂದರ ಕಥೆಯನ್ನು ಕಾಕಭುಶುಂಡಿಯವರು ಗರುಡನಿಗೆ ಹೇಳಿರುವರು ಎಂದು ನೀವು ನನಗೆ ಹೇಳಿದಿರಿ. ಈಗ ಅವರ ಸಂವಾದವನ್ನು ನನಗೆ ವಿವರಿಸಿ ಹೇಳಿ. (ಚೌ/೧-೪)

## ಕಾಕಭುಶುಂಡೀ ವೃತ್ತಾಂತ

**ದೋ – ಬಿರತಿ ಗ್ಯಾನ ಬಿಗ್ಯಾನ ದೃಢ ರಾಮ ಚರನ ಅತಿ ನೇಹ ।**
**ಬಾಯಸ ತನ ರಘುಪತಿ ಭಗತಿ ಮೋಹಿ ಪರಮ ಸಂದೇಹ ॥ ೫೩ ॥**

ಕಾಗೆಯ ಶರೀರವನ್ನು ಪಡೆದಿದ್ದರೂ ಕಾಕಭುಶುಂಡಿಯವರು ವೈರಾಗ್ಯವನ್ನು, ಜ್ಞಾನವಿಜ್ಞಾನವನ್ನು, ದೃಢಚಿತ್ತವನ್ನು ಉಳ್ಳವರು. ಅವರಿಗೆ ಶ್ರೀರಘುನಾಥನಲ್ಲಿ ಭಕ್ತಿಯೂ ಪ್ರಾಪ್ತವಾಗಿತ್ತು. ಈ ಮಾತಿನಲ್ಲಿ ನನಗೇಕೋ ಭಾರೀ ಸಂದೇಹವಾಗುತ್ತಾ ಇದೆ. (ದೋ/೫೩

**ಚೌ – ನರ ಸಹಸ್ರ ಮಹ್ ಸುನಹು ಪುರಾರೀ । ಕೊಉ ಎಕ ಹೋಇ ಧರ್ಮ ಬ್ರತಧಾರೀ ॥**
**ಧರ್ಮಸೀಲ ಕೋಟಿಕ ಮಹ್ ಕೋಈ । ಬಿಷಯ ಬಿಮುಖ ಬಿರಾಗ ರತ ಹೋಈ ॥ ೧ ॥**
**ಕೋಟಿ ಬಿರಕ್ತ ಮಧ್ಯ ಶ್ರುತಿ ಕಹಈ । ಸಮ್ಯಕ ಗ್ಯಾನ ಸಕೃತ ಕೊಉ ಲಹಈ ॥**
**ಗ್ಯಾನವಂತ ಕೋಟಿಕ ಮಹ್ ಕೋಊ । ಜೀವನಮುಕ್ತ ಸಕೃತ ಜಗ ಸೋಊ ॥ ೨ ॥**
**ತಿನ್ಹ ಸಹಸ್ರ ಮಹುँ ಸಬ ಸುಖ ಖಾನೀ । ದುರ್ಲಭ ಬ್ರಹ್ಮಲೀನ ಬಿಗ್ಯಾನೀ ॥**
**ಧರ್ಮಸೀಲ ಬಿರಕ್ತ ಅರು ಗ್ಯಾನೀ । ಜೀವನಮುಕ್ತ ಬ್ರಹ್ಮಪರ ಪ್ರಾನೀ ॥ ೩ ॥**
**ಸಬ ತೇ ಸೋ ದುರ್ಲಭ ಸುರರಾಯಾ । ರಾಮ ಭಗತಿ ರತ ಗತ ಮದ ಮಾಯಾ ॥**
**ಸೋ ಹರಿಭಗತಿ ಕಾಗ ಕಿಮಿ ಪಾಈ । ಬಿಸ್ವನಾಥ ಮೊಹಿ ಕಹಹು ಬುಝಾಈ ॥ ೪ ॥**

ಓ ತ್ರಿಪುರಾರಿಯೇ! ಕೇಳು. ಸಾವಿರಾರು ಮನುಷ್ಯರಲ್ಲಿ ಧರ್ಮಪಥದಲ್ಲಿ ನಡೆವವನು ಯಾರೋ ಒಬ್ಬನು ಮಾತ್ರ ಇರುತ್ತಾನೆ. ಅಂತಹ ಧರ್ಮಾತ್ಮರಾದ ಕೋಟಿ ಜನರಲ್ಲಿ ಒಬ್ಬನು ವಿಷಯವಿಮುಖನಾಗಿ ವೈರಾಗ್ಯ ಪರಾಯಣನಾಗಿರುತ್ತಾನೆ. ಶ್ರುತಿ ಹೇಳುತ್ತದೆ – ಇಂತಹ ಕೋಟಿ ವಿರಕ್ತರಲ್ಲಿ ಒಬ್ಬನಿಗೆ ಸಮ್ಯಕ್‌ಜ್ಞಾನ ಪ್ರಾಪ್ತಿಯಾಗುತ್ತದೆ. ಅಂತಹ ಜ್ಞಾನಿಗಳಲ್ಲಿ ಕೋಟಿಗೊಬ್ಬನು ಜೀವನ್ಮುಕ್ತನಾಗುತ್ತಾನೆ. ಜಗತ್ತಿನಲ್ಲಿ ಇಂತಹ ಜೀವನ್ಮುಕ್ತರು ವಿರಳರಾಗಿರುತ್ತಾರೆ. ಸಾವಿರ ಜೀವನ್ಮುಕ್ತರಲ್ಲಿಯೂ ಕೂಡ ಸುಖನಿಧಾನವಾದ ಬ್ರಹ್ಮಾನಂದದಲ್ಲಿ ನಿಮಗ್ನನಾದ ವಿಜ್ಞಾನವುಳ್ಳವನು ಇನ್ನೂ ದುರ್ಲಭನು. ಧರ್ಮಾತ್ಮ, ವಿರಕ್ತ, ಜ್ಞಾನಿ, ಜೀವನ್ಮುಕ್ತ, ಬ್ರಹ್ಮೈಕ್ಯವನ್ನು ಹೊಂದಿದವರು – ಇವರೆಲ್ಲರಲ್ಲಿಯೂ ದುರಭಿಮಾನದಿಂದಲೂ, ಮಾಯೆಯಿಂದಲೂ ಮುಕ್ತನಾಗಿ ಶ್ರೀರಾಮಭಕ್ತಿಯಲ್ಲಿ ಲೀನನಾದ ಪ್ರಾಣಿಯು ಅತ್ಯಂತ ದುರ್ಲಭನು. ಓ ವಿಶ್ವನಾಥಾ! ಅಂತಹ ದುರ್ಲಭವಾದ ಭಕ್ತಿಯು ಕಾಕಭುಶುಂಡಿಯರು ಹೇಗೆ ಪಡೆದರು? ನನಗೆ ತಿಳಿಸಿಹೇಳಿರಿ. (ಚೌ/೧-೪)

**ದೋ – ರಾಮ ಪರಾಯನ ಗ್ಯಾನ ರತ ಗುನಾಗಾರ ಮತಿ ಧೀರ ।**
**ನಾಥ ಕಹಹು ಕೆಹಿ ಕಾರನ ಪಾಯಉ ಕಾಕ ಸರೀರ ॥ ೫೪ ॥**

ನಾಥಾ! ಶ್ರೀರಾಮಚಂದ್ರನಲ್ಲಿ ಆಸಕ್ತರೂ, ಜ್ಞಾನನಿರತರೂ, ಗುಣನಿಧಿ, ಸ್ಥಿರಚಿತ್ತರೂ ಆದ ಭುಶುಂಡಿಯವರು ಕಾಗೆಯ ರೂಪವನ್ನು ಪಡೆಯಲು ಕಾರಣವೇನು? (ದೋ/೫೪)

**ಚೌ – ಯಹ ಪ್ರಭು ಚರಿತ ಪವಿತ್ರ ಸುಹಾವಾ । ಕಹಹು ಕೃಪಾಲ ಕಾಗ ಕಹ್ ಪಾವಾ ॥**
**ತುಮ್ಹ ಕೆಹಿ ಭಾँತಿ ಸುನಾ ಮದನಾರೀ । ಕಹಹು ಮೋಹಿ ಅತಿ ಕೌತುಕ ಭಾರೀ ॥ ೧ ॥**
**ಗರುಡ ಮಹಾಗ್ಯಾನೀ ಗುನ ರಾಸೀ । ಹರಿ ಸೇವಕ ಅತಿ ನಿಕಟ ನಿವಾಸೀ ॥**
**ತೆಹಿं ಕೆಹಿ ಹೇತು ಕಾಗ ಸನ ಜಾಈ । ಸುನೀ ಕಥಾ ಮುನಿ ನಿಕರ ಬಿಹಾಈ ॥ ೨ ॥**
**ಕಹಹು ಕವನ ಬಿಧಿ ಭಾ ಸಂಬಾದಾ । ದೊಉ ಹರಿಭಗತ ಕಾಗ ಉರಗಾದಾ ॥**
**ಗೌರಿ ಗಿರಾ ಸುನಿ ಸರಲ ಸುಹಾಈ । ಬೋಲೇ ಸಿವ ಸಾದರ ಸುಖ ಪಾಈ ॥ ೩ ॥**
**ಧನ್ಯ ಸತೀ ಪಾವನ ಮತಿ ತೋರೀ । ರಘುಪತಿ ಚರನ ಪ್ರೀತಿ ನಹಿं ಥೋರೀ ॥**
**ಸುನಹು ಪರಮ ಪುನೀತ ಇತಿಹಾಸಾ । ಜೋ ಸುನಿ ಸಕಲ ಲೋಕ ಭ್ರಮ ನಾಸಾ ॥ ೪ ॥**
**ಉಪಜಇ ರಾಮ ಚರನ ಬಿಸ್ವಾಸಾ । ಭವ ನಿಧಿ ತರ ನರ ಬಿನಹಿं ಪ್ರಯಾಸಾ ॥ ೫ ॥**

ಓ ಕೃಪಾಳುವೇ! ಶ್ರೀರಾಮಚಂದ್ರನ ಈ ದಿವ್ಯವಾದ ಮನೋಹರ ಚರಿತ್ರವನ್ನು ಆ ಕಾಕಭುಶುಂಡಿಯವರು ಯಾರಿಂದ ಪಡೆದರು? ಓ ಮದನಾಂತಕಾ! ಅದನ್ನು ನೀವು ಹೇಗೆ ಕೇಳಿದಿರಿ? ಇದನ್ನು ಕೇಳಬೇಕೆಂಬ ಕುತೂಹಲವು ನನ್ನಲ್ಲಿ ಉಂಟಾಗಿದೆ. ಗುರುತ್ಮಂತನು ದೊಡ್ಡ ಜ್ಞಾನೀ, ಸದ್ಗುಣಗಳ ರಾಶಿ. ಹರಿಭಕ್ತನು. ಶ್ರೀಹರಿಗೆ ವಾಹನನು. ಸನಿಹದಲ್ಲೇ ಇರುವವನು. ಅವನು ಋಷಿಗಳನ್ನು, ಮುನಿಗಳನ್ನು ಬಿಟ್ಟು ಕಾಕಭುಶುಂಡಿಯಿಂದ ಈ ಕಥೆಯನ್ನು ಏಕೆ ಕೇಳಿದನು? ಕಾಕಭುಶುಂಡಿ ಮತ್ತು ಗರುಡ ಈ ಈರ್ವರು ಭಕ್ತರ ಮಧ್ಯೆ ಪರಸ್ಪರ ಸಂಭಾಷಣೆ ಎಂತು ಜರಗಿತು?'' ಪಾರ್ವತಿದೇವಿಯ ಸರಳವಾದ, ಮನೋಹರವಾದ ಮಾತುಗಳನ್ನು ಕೇಳಿ, ಶಿವನು ಸಂತೋಷಪಟ್ಟು ಆದರದಿಂದ ನುಡಿದನು – ಓ ಸತಿ! ನೀನು ಧನ್ಯಳಾಗಿರುವೆ. ನಿನ್ನ ಬುದ್ಧಿಯು ಅತ್ಯಂತ ಪವಿತ್ರವಾಗಿದೆ. ಶ್ರೀರಘುಪತಿಯ ಚರಣಗಳಲ್ಲಿ ನಿನಗೆ ಅನನ್ಯಭಕ್ತಿಯಿದೆ. ಈಗ ಪರಮಪವಿತ್ರ ಕಥೆಯನ್ನು ಕೇಳು. ಇದನ್ನು ಕೇಳುವುದರಿಂದ ದುಃಖಗಳು, ಭ್ರಾಂತಿಗಳು ತೊಲಗಿಹೋಗುತ್ತವೆ. ಶ್ರೀರಾಮನ ಚರಣಗಳಲ್ಲಿ ವಿಶ್ವಾಸ ಉಂಟಾಗುತ್ತದೆ. ಮನುಷ್ಯನು ಆಯಾಸವಿಲ್ಲದೆ ಸಂಸಾರಸಮುದ್ರವನ್ನು ದಾಟಿಹೋಗುತ್ತಾರೆ. (ಚೌ/೧-೫)

**ದೋ – ಐಸಿಅ ಪ್ರಸ್ನ ಬಿಹಂಗಪತಿ ಕೀನ್ಹಿ ಕಾಗ ಸನ ಜಾಇ।**
**ಸೋ ಸಬ ಸಾದರ ಕಹಿಹಉ ಸುನಹು ಉಮಾ ಮನ ಲಾಯಿ ॥ ೫೫ ॥**

ಉಮೆ! ನೀನು ನನ್ನನ್ನು ಪ್ರಶ್ನಿಸಿದಂತೆ ಪಕ್ಷಿರಾಜ ಗರುಡನೂ ಕೂಡ ಕಾಕ-ಭುಶುಂಡಿಯವರ ಬಳಿಗೆ ಹೋಗಿ ಹೀಗೆ ಪ್ರಶ್ನಿಸಿದ್ದನು. ನಾನು ಅದನ್ನು ಆದರದಿಂದ ಹೇಳುತ್ತೇನೆ. ನೀನು ಅದನ್ನು ಮನಗೊಟ್ಟು ಕೇಳು. (ದೋ/೫೫)

**ಚೌ – ಮೈಂ ಜಿಮಿ ಕಥಾ ಸುನೀ ಭವ ಮೋಚನಿ। ಸೋ ಪ್ರಸಂಗ ಸುನು ಸುಮುಖಿ ಸುಲೋಚನಿ ॥**
**ಪ್ರಥಮ ದಚ್ಛ ಗೃಹ ತವ ಅವತಾರಾ। ಸತೀ ನಾಮ ತಬ ರಹಾ ತುಮ್ಹಾರಾ ॥ ೧ ॥**
**ದಚ್ಛ ಜಗ್ಯ ತವ ಭಾ ಅಪಮಾನಾ। ತುಮ್ಹ ಅತಿ ಕ್ರೋಧ ತಜೇ ತಬ ಪ್ರಾನಾ ॥**
**ಮಮ ಅನುಚರನ್ಹ ಕೀನ್ಹ ಮಖ ಭಂಗಾ। ಜಾನಹು ತುಮ್ಹ ಸೋ ಸಕಲ ಪ್ರಸಂಗಾ ॥ ೨ ॥**
**ತಬ ಅತಿ ಸೋಚ ಭಯಉ ಮನ ಮೋರೇಂ। ದುಖೀ ಭಯಉಂ ಬಿಯೋಗ ಪ್ರಿಯ ತೋರೇಂ ॥**
**ಸುಂದರ ಬನ ಗಿರಿ ಸರಿತ ತಡಾಗಾ। ಕೌತುಕ ದೇಖತ ಫಿರಉಂ ಬೇರಾಗಾ ॥ ೩ ॥**
**ಗಿರಿ ಸುಮೇರ ಉತ್ತರ ದಿಸಿ ದೂರೀ। ನೀಲ ಸೈಲ ಎಕ ಸುಂದರ ಭೂರೀ ॥**
**ತಾಸು ಕನಕಮಯ ಸಿಖರ ಸುಹಾಏ। ಚಾರಿ ಚಾರು ಮೋರೇ ಮನ ಭಾಏ ॥ ೪ ॥**
**ತಿನ್ಹ ಪರ ಏಕ ಏಕ ಬಿಟಪ ಬಿಸಾಲಾ। ಬಟ ಪೀಪರ ಪಾಕರೀ ರಸಾಲಾ ॥**
**ಸೈಲೋಪರಿ ಸರ ಸುಂದರ ಸೋಹಾ। ಮನಿ ಸೋಪಾನ ದೇಖಿ ಮನ ಮೋಹಾ ॥ ೫ ॥**

ಜನ್ಮ-ಮರಣದಿಂದ ಮುಕ್ತಗೊಳಿಸುವಂತಹ ಈ ಕಥೆಯನ್ನು ನಾನು ಹೇಗೆ ಕೇಳಿದೆ ಎಂಬುದನ್ನೂ ಕೂಡ ಕೇಳು. ಓ ಸುಮುಖೀ! ಸುಲೋಚನೆ! ಮೊದಲಿಗೆ ನಿನ್ನ ಅವತಾರವು ದಕ್ಷನ ಮನೆಯಲ್ಲಾಯಿತು. ಆಗ ನಿನ್ನ ಹೆಸರು 'ಸತಿ' ಎಂದಿತ್ತು. ದಕ್ಷಯಜ್ಞದಲ್ಲಿ ನಿನ್ನ ಅಪಮಾನವಾಯಿತು. ಆಗ ನೀನು ಕುಪಿತಳಾಗಿ ಯೋಗಾಗ್ನಿಯಲ್ಲಿ ಪ್ರಾಣತ್ಯಾಗಮಾಡಿದೆ. ನನ್ನ ಅನುಚರರು ಯಜ್ಞಧ್ವಂಸಮಾಡಿದರು. ಈ ಎಲ್ಲ ಕಥೆಯನ್ನು ನೀನು ಬಲ್ಲೆ. ಆಗ ನನ್ನ ಮನಸ್ಸು ಅತೀವ ಚಿಂತಾಕ್ರಾಂತವಾಗಿ ನಿನ್ನ ವಿಯೋಗ ದುಃಖವನ್ನು ಅನುಭವಿಸಿದೆ. ವಿರಕ್ತನಾಗಿ, ಉದಾಸೀನಭಾವದಿಂದ ನಾನು ಸುಂದರವಾದ ವನಗಳಲ್ಲಿ, ಪರ್ವತಗಳಲ್ಲಿ, ನದೀತಟಾಕಗಳಲ್ಲಿ ಚೆಲುವಾದ ದೃಶ್ಯಗಳನ್ನು ನೋಡುತ್ತಾ ಸಂಚರಿಸುತ್ತಿದ್ದೆ. ಸುಮೇರು ಪರ್ವತಕ್ಕೆ ಉತ್ತರದಲ್ಲಿ ಅತಿದೂರ ಒಂದು ಅಂದವಾದ ನೀಲಪರ್ವತವಿದೆ. ಅದರ ನಾಲ್ಕು ಶಿಖರಗಳೂ ಸ್ವರ್ಣಮಯ. ಆ ನಾಲ್ಕೂ ಶಿಖರಗಳು ನನ್ನ ಮನಸ್ಸಿಗೆ ತುಂಬಾ ಹಿಡಿಸಿದವು. ಆ ನಾಲ್ಕೂ ಶಿಖರಗಳಲ್ಲಿ ಕ್ರಮವಾಗಿ ವಟ, ಅರಳಿ, ಪರ್ಕ, ಮಾವು ಹೀಗೆ ವಿಶಾಲವಾದ ವೃಕ್ಷಗಳಿದ್ದವು. ಪರ್ವತದ ಮೇಲೆ ಒಂದು ಸುಂದರ ಸರೋವರವೂ ಇತ್ತು. ಅದರ ಮಣಿಮಯ ಸೋಪಾನಗಳನ್ನು ಕಂಡು ಮನಸ್ಸು ಮಾರುಹೋಗುತ್ತದೆ. (ಚೌ/೧-೫)

**ದೋ – ಸೀತಲ ಅಮಲ ಮಧುರ ಜಲ ಜಲಜ ಬಿಪುಲ ಬಹುರಂಗ।**
**ಕೂಜತ ಕಲ ರವ ಹಂಸ ಗನ ಗುಂಜತ ಮಂಜುಲ ಭೃಂಗ ॥ ೫೬ ॥**

ಆ ಸರೋವರದಲ್ಲಿ ಶೀತಲವೂ, ನಿರ್ಮಲವೂ, ಮಧುರವೂ ಆದ ನೀರು ತುಂಬಿದೆ. ಅದರಲ್ಲಿ ಬಣ್ಣ-ಬಣ್ಣದ ಕಮಲಗಳು ಅರಳಿವೆ. ಹಂಸಗಳ ಹಿಂಡುಗಳು ಕಲರವ ಮಾಡುತ್ತಿವೆ. ದುಂಬಿಗಳು ಝೇಂಕರಿಸುತ್ತಿವೆ. (ದೋ/೫೬)

**ಚೌ – ತೇಹಿಂ ಗಿರಿ ರುಚಿರ ಬಸಇ ಖಗ ಸೋಈ। ತಾಸು ನಾಸ ಕಲ್ಪಾಂತ ನ ಹೋಈ ॥**
**ಮಾಯಾ ಕೃತ ಗುನ ದೋಷ ಅನೇಕಾ। ಮೋಹ ಮನೋಜ ಆದಿ ಅಬಿಬೇಕಾ ॥ ೧ ॥**
**ರಹೇ ಬ್ಯಾಪಿ ಸಮಸ್ತ ಜಗ ಮಾಹೀಂ। ತೇಹಿ ಗಿರಿ ನಿಕಟ ಕಬಹುಂ ನಹಿಂ ಜಾಹೀಂ ॥**
**ತಹಂ ಬಸಿ ಹರಿಹಿ ಭಜಇ ಜಿಮಿ ಕಾಗಾ। ಸೋ ಸುನು ಉಮಾ ಸಹಿತ ಅನುರಾಗಾ ॥ ೨ ॥**
**ಪೀಪರ ತರು ತರ ಧ್ಯಾನ ಸೊ ಧರಈ। ಜಾಪ ಜಗ್ಯ ಪಾಕರಿ ತರ ಕರಈ ॥**
**ಆಂಬ ಛಾಂಹ ಕರ ಮಾನಸ ಪೂಜಾ। ತಜಿ ಹರಿ ಭಜನು ಕಾಜು ನಹಿಂ ದೂಜಾ ॥ ೩ ॥**
**ಬರ ತರ ಕಹ ಹರಿ ಕಥಾ ಪ್ರಸಂಗಾ। ಆವಹಿಂ ಸುನಹಿಂ ಅನೇಕ ಬಿಹಂಗಾ ॥**
**ರಾಮ ಚರಿತ ಬಿಚಿತ್ರ ಬಿಧಿ ನಾನಾ। ಪ್ರೇಮ ಸಹಿತ ಕರ ಸಾದರ ಗಾನಾ ॥ ೪ ॥**

**ಸುನಹಿಂ ಸಕಲ ಮತಿ ಬಿಮಲ ಮರಾಲಾ। ಬಸಹಿಂ ನಿರಂತರ ಜೇ ತೆಹಿಂ ತಾಲಾ॥**
**ಜಬ ಮೈಂ ಜಾಇ ಸೋ ಕೌತುಕ ದೇಖಾ। ಉರ ಉಪಜಾ ಆನಂದ ಬಿಸೇಷಾ॥೫॥**

ಆ ಮನೋಹರ ಪರ್ವತದಲ್ಲಿ ಈ ಪಕ್ಷಿ (ಕಾಕಭುಶುಂಡಿ) ನೆಲೆಸಿದೆ. ಕಲ್ಪಾಂತ್ಯದಲ್ಲಿಯೂ ಅದಕ್ಕೆ ನಾಶವಿಲ್ಲ. ಮಾಯಾರಚಿತವಾದ ವಿಶ್ವವ್ಯಾಪ್ತವಾಗಿರುವ ಅನೇಕ ಗುಣ-ದೋಷಗಳು, ಮೋಹ, ಕಾಮ, ಮುಂತಾದ ಅಂತಃಶತ್ರುಗಳು ಆ ಪರ್ವತದ ಬಳಿ ಸುಳಿಯವು. ಅಲ್ಲಿ ನೆಲೆಸಿ ಕಾಕಭುಶುಂಡಿ ಹರಿಭಜನೆ ಮಾಡುವ ರೀತಿಯನ್ನು ಶ್ರದ್ಧೆಯಿಂದ ಕೇಳು. ಅದು ಅರಳಿಮರದಡಿಯಲ್ಲಿ ಧ್ಯಾನಮಾಡುತ್ತದೆ. ವಟವೃಕ್ಷದಡಿಯಲ್ಲಿ ಜಪಯಜ್ಞವನ್ನು ಆಚರಿಸುತ್ತದೆ. ಮಾಮರದ ನೆರಳಲ್ಲಿ ಮಾಸಿಕಪೂಜೆ ಮಾಡುತ್ತದೆ. ಹರಿಭಜನೆಯನ್ನುಳಿದು ಅದಕ್ಕೆ ಬೇರೇನೂ ಕೆಲಸವಿಲ್ಲ. ಆಲದ ಮರದಡಿಯಲ್ಲಿ ಹರಿಕಥಾಪ್ರಸಂಗವನ್ನು ನಡೆಸುತ್ತದೆ. ಆ ಕಥೆಗಳನ್ನು ಕೇಳಲು ಅಲ್ಲಿಗೆ ಅನೇಕ ಪಕ್ಷಿಗಳು ಬಂದು ಸೇರುತ್ತವೆ. ಅದು ಪ್ರೇಮಾದರಗಳಿಂದ ಅನೇಕವಿಧವಾಗಿ ಶ್ರೀರಾಮಕಥೆಯನ್ನು ಹಾಡುತ್ತದೆ. ಸರೋವರದಲ್ಲಿರುವ ವಿಮಲಬುದ್ಧಿಯ ಹಂಸಗಳೆಲ್ಲವೂ ಆ ಕಥೆಗಳನ್ನು ಕೇಳುತ್ತವೆ. ನಾನು ಅಲ್ಲಿಗೆ ಈ ಕೌತುಕವನ್ನು ಕಂಡಾಗ ನನ್ನ ಹೃದಯದಲ್ಲಿ ವಿಶೇಷ ಆನಂದ ಉಂಟಾಯಿತು. (ಚೌ/೧-೫)

**ದೋ – ತಬ ಕಛು ಕಾಲ ಮರಾಲ ತನು ಧರಿ ತಹಁ ಕೀನ್ಹ ನಿವಾಸ।**
**ಸಾದರ ಸುನಿ ರಘುಪತಿ ಗುನ ಪುನಿ ಆಯಉಁ ಕೈಲಾಸ॥೫೭॥**

ಆಗ ನಾನೂ ಹಂಸಶರೀರವನ್ನು ತಾಳಿ ಅಲ್ಲಿ ಕೆಲಕಾಲ ನಿವಾಸಮಾಡಿದೆ. ಶ್ರೀರಘುನಾಥನ ಕಥೆಯನ್ನು ಶ್ರದ್ಧೆಯಿಂದ ಕೇಳಿ, ಮತ್ತೆ ಕೈಲಾಸಕ್ಕೆ ಮರಳಿದೆನು. (ದೋ/೫೭)

**ಚೌ – ಗಿರಿಜಾ ಕಹೆಉಁ ಸೊ ಸಬ ಇತಿಹಾಸಾ। ಮೈಂ ಜೆಹಿ ಸಮಯ ಗಯಉಁ ಖಗ ಪಾಸಾ॥**
**ಅಬ ಸೋ ಕಥಾ ಸುನಹು ಜೆಹಿ ಹೇತೂ। ಗಯಉ ಕಾಗ ಪಹಿಂ ಖಗ ಕುಲ ಕೇತೂ॥೧॥**
**ಜಬ ರಘುನಾಥ ಕೀನ್ಹಿ ರನ ಕ್ರೀಡಾ। ಸಮುಝುತ ಚರಿತ ಹೋತಿ ಮೊಹಿ ಬ್ರೀಡಾ॥**
**ಇಂದ್ರಜೀತ ಕರ ಆಪು ಬꣳಧಾಯೋ। ತಬ ನಾರದ ಮುನಿ ಗರುಡ ಪಠಾಯೋ॥೨॥**
**ಬಂಧನ ಕಾಟಿ ಗಯೋ ಉರಗಾದಾ। ಉಪಜಾ ಹೃದಯಁ ಪ್ರಚಂಡ ಬಿಷಾದಾ॥**
**ಪ್ರಭು ಬಂಧನ ಸಮುಝುತ ಬಹು ಭಾꣳತೀ। ಕರತ ಬಿಚಾರ ಉರಗ ಆರಾತೀ॥೩॥**
**ಬ್ಯಾಪಕ ಬ್ರಹ್ಮ ಬಿರಜ ಬಾಗೀಸಾ। ಮಾಯಾ ಮೋಹ ಪಾರ ಪರಮೀಸಾ॥**
**ಸೋ ಅವತಾರ ಸುನೆಉಁ ಜಗ ಮಾಹೀಂ। ದೇಖೆಉಁ ಸೋ ಪ್ರಭಾವ ಕಛು ನಾಹೀಂ॥೪॥**

ಎಲೈ ಗಿರಿಜೆ! ಇದುವರೆಗೆ ನಾನು ಕಾಕಭುಶುಂಡಿಯವರ ಬಳಿಗೆ ಹೋದ ವೃತ್ತಾಂತವನ್ನು ನಿನಗೆ ತಿಳಿಸಿದೆ. ಇನ್ನು ಖಗಕುಲಕೇತು ಗರುತ್ಮಂತನು ಭುಶುಂಡಿಯವರ ಬಳಿಗೆ ಹೋದ ಕಾರಣವನ್ನು ವಿವರಿಸುವೆನು. ರಘುನಾಥನು ಅದ್ಭುತವಾದ ರಣಲೀಲೆಯನ್ನು ತೋರಿದನು. ಅದನ್ನು ನೆನೆದರೆ ಸಾಕು ನಾನು ನಾಚಿಕೆಯಿಂದ ತಗ್ಗುತ್ತೇನೆ. ಶ್ರೀರಾಮನು ಮೇಘನಾದನ ನಾಗಪಾಶಕ್ಕೆ ಬಂಧಿತನಾದನು. ಆಗ ನಾರದರು ಗರುಡನನ್ನು ಕಳಿಸಿದರು. ಸರ್ಪಭಕ್ಷಕ ಗರುಡನು ರಾಮನ ಬಂಧನವನ್ನು ಕತ್ತರಿಸಿದನು. ಆಗ ಆತನ ಹೃದಯದಲ್ಲಿ ತುಂಬಾ ವಿಷಾದ ಉಂಟಾಯಿತು. ಪ್ರಭುವಿನ ಬಂಧನವನ್ನು ನೆನೆದು ಉರಗಾರಿ ಅನೇಕ ವಿಧದಿಂದ ಆಲೋಚಿಸತೊಡಗಿದನು. 'ಸರ್ವವ್ಯಾಪಕನೂ, ನಿರ್ವಿಕಾರನೂ, ವಾಗೀಶನೂ, ಮಾಯಾಮೋಹಗಳಿಂದ ಅತೀತನೂ ಆದ ಪರಮೇಶ್ವರನೇ ಈ ಜಗತ್ತಿನಲ್ಲಿ ಅವತಾರವೆತ್ತಿರುವನು. ಆದರೆ ಆ ಅವತಾರದ ಮಹಿಮೆಯನ್ನು ನಾನು ಮಾತ್ರ ಏನೂ ನೋಡಲಿಲ್ಲವಲ್ಲ! (ಚೌ/೧-೪)

**ದೋ – ಭವ ಬಂಧನ ತೇ ಛೂಟಹಿಂ ನರ ಜಪಿ ಜಾ ಕರ ನಾಮ।**
**ಖರ್ಬ ನಿಸಾಚರ ಬಾꣳಧೆಉ ನಾಗಪಾಸ ಸೋಇ ರಾಮ॥೫೮॥**

ಶ್ರೀರಾಮನಾಮ ಜಪಮಾತ್ರದಿಂದ ಮನುಷ್ಯನು ಭವಬಂಧನದಿಂದ ಮುಕ್ತನಾಗಿ ಹೋಗುವನು. ಅಂತಹ ಮಹಿಮಾನ್ವಿತನಾದ ಶ್ರೀರಾಮನು ಒಬ್ಬ ರಾಕ್ಷಸಾಧಮನ ನಾಗಪಾಶದಿಂದ ಬಂಧಿತನಾಗುವುದು ಆಶ್ಚರ್ಯಕರವಲ್ಲವೇ? (ದೋ/೫೮)

**ಚೌ – ನಾನಾ ಭಾꣳತಿ ಮನಹಿ ಸಮುಝಾವಾ। ಪ್ರಗಟ ನ ಗ್ಯಾನ ಹೃದಯಁ ಭ್ರಮ ಛಾವಾ॥**
**ಖೇದ ಖಿನ್ನ ಮನ ತರ್ಕ ಬಢಾಈ। ಭಯಉ ಮೋಹಬಸ ತುಮ್ಹರಿಹಿಂ ನಾಈ॥೧॥**
**ಬ್ಯಾಕುಲ ಗಯಉ ದೇವರಿಷಿ ಪಾಹೀಂ। ಕಹೆಸಿ ಜೋ ಸಂಸಯ ನಿಜ ಮನ ಮಾಹೀಂ॥**
**ಸುನಿ ನಾರದಹಿ ಲಾಗಿ ಅತಿ ದಾಯಾ। ಸುನು ಖಗ ಪ್ರಬಲ ರಾಮ ಕೈ ಮಾಯಾ॥೨॥**

**ಜೋ ಗ್ಯಾನಿನ್ಹ ಕರ ಚಿತ ಅಪಹರಈ। ಬರಿಆಈಂ ಬಿಮೋಹ ಮನ ಕರಈ॥**
**ಜೆಹಿಂ ಬಹು ಬಾರ ನಚಾವಾ ಮೋಹೀ। ಸೋಇ ಬ್ಯಾಪೀ ಬಿಹಂಗಪತಿ ತೋಹೀ॥ ೩ ॥**
**ಮಹಾಮೋಹ ಉಪಜಾ ಉರ ತೋರೇಂ। ಮಿಟಿಹಿ ನ ಬೇಗಿ ಕಹೇಂ ಖಗ ಮೋರೇಂ॥**
**ಚತುರಾನನ ಪಹಿಂ ಜಾಹು ಖಗೇಸಾ। ಸೋಇ ಕರೇಹು ಜೆಹಿ ಹೋಇ ನಿದೇಸಾ॥ ೪ ॥**

ಗರುಡನು ಅನೇಕ ವಿಧದಿಂದ ತನ್ನ ಮನಸ್ಸಿಗೆ ಸಮಾಧಾನ ಹೇಳಿಕೊಂಡ. ಆದರೆ ಅವನಿಗೆ ಜ್ಞಾನೋದಯವಾಗಲಿಲ್ಲ. ಹೃದಯದಲ್ಲಿ ಭ್ರಮೆಯು ಇನ್ನೂ ಹೆಚ್ಚಾಗಿ ಆವರಿಸಿತು. ಸಂದೇಹಜನಿತ ದುಃಖದಿಂದ ನೊಂದು ಮನಸ್ಸಿನಲ್ಲಿ ಕುತರ್ಕವನ್ನು ಹೆಚ್ಚಿಸಿಕೊಂಡು ಅವನು ನಿನ್ನಂತೆಯೇ ಮೋಹವಶನಾದನು. ಆತನು ವ್ಯಾಕುಲನಾಗಿ ನಾರದ ಮಹರ್ಷಿಗಳ ಬಳಿಗೆ ಹೋಗಿ, ತನ್ನ ಮನಸ್ಸಿನಲ್ಲಿರುವ ಸಂದೇಹವನ್ನು ಅವರೆದುರಿಗೆ ತೋಡಿಕೊಂಡನು. ಅದನ್ನು ಕೇಳಿ ನಾರದರಿಗೆ ಬಹಳ ದಯೆ ಉಂಟಾಗಿ ಇಂತೆಂದರು – 'ಓ ಗರುಡಾ! ಕೇಳು. ಶ್ರೀರಾಮನ ಮಾಯೆಯು ಅತಿ ಪ್ರಬಲವಾದುದು. ಅದು ಜ್ಞಾನಿಗಳ ಚಿತ್ತವನ್ನೂ ಅಪಹರಿಸಿ, ಅವರಲ್ಲಿ ಬಲವಂತವಾಗಿ ದೊಡ್ಡ ಮೋಹವನ್ನು ಉಂಟುಮಾಡುತ್ತದೆ. ಅದು ನನ್ನನ್ನ ಕೂಡ ಅನೇಕ ಬಾರಿ ಕುಣಿಸಿದೆ. ಪಕ್ಷಿರಾಜಾ! ಅದೇ ಮಾಯೆಯು ನಿನ್ನನ್ನೂ ಕೂಡ ವ್ಯಾಪಿಸಿದೆ. ಓ ಗರುಡಾ! ನಿನ್ನ ಹೃದಯದಲ್ಲಿ ಆವರಿಸಿದ ಮೋಹವು ನನ್ನ ಮಾತುಗಳಿಂದ ತೊಲಗಿಹೋಗದು. ಆದ್ದರಿಂದ ಪಕ್ಷಿರಾಜಾ! ನೀನು ಬ್ರಹ್ಮದೇವರ ಬಳಿಗೆ ಹೋಗಿ ಅವನ ಆಜ್ಞೆಯನ್ನು ಅನುಸರಿಸು. (ಚೌ/೧-೪)

**ದೋ – ಅಸ ಕಹಿ ಚಲೇ ದೇವರಿಷಿ ಕರತ ರಾಮ ಗುನ ಗಾನ।**
**ಹರಿ ಮಾಯಾ ಬಲ ಬರನತ ಪುನಿ ಪುನಿ ಪರಮ ಸುಜಾನ॥ ೫೯ ॥**

ಹೀಗೆ ಹೇಳಿ ಪರಮಜ್ಞಾನಿಗಳಾದ ದೇವರ್ಷಿನಾರದರು ಶ್ರೀರಾಮನ ಗುಣಗಾನ ಮಾಡುತ್ತಾ, ಶ್ರೀಹರಿಯ ಮಾಯಾಪ್ರಭಾವವನ್ನು ಮತ್ತೆ-ಮತ್ತೆ ವರ್ಣಿಸುತ್ತಾ ತೆರಳಿದರು. (ದೋ/೫೯)

**ಚೌ – ತಬ ಖಗಪತಿ ಬಿರಂಚಿ ಪಹಿಂ ಗಯಊ। ನಿಜ ಸಂದೇಹ ಸುನಾವತ ಭಯಊ॥**
**ಸುನಿ ಬಿರಂಚಿ ರಾಮಹಿ ಸಿರು ನಾವಾ। ಸಮುಝಿ ಪ್ರತಾಪ ಪ್ರೇಮ ಅತಿ ಛಾವಾ॥ ೧ ॥**
**ಮನ ಮಹುಂ ಕರಇ ಬಿಚಾರ ಬಿಧಾತಾ। ಮಾಯಾ ಬಸ ಕಬಿ ಕೋಬಿದ ಗ್ಯಾತಾ॥**
**ಹರಿ ಮಾಯ ಕರ ಅಮಿತಿ ಪ್ರಭಾವಾ। ಬಿಪುಲ ಬಾರ ಜೆಹಿಂ ಮೋಹಿ ನಚಾವಾ॥ ೨ ॥**
**ಅಗ ಜಗಮಯ ಜಗ ಮಮ ಉಪರಾಜಾ। ನಹಿಂ ಆಚರಜ ಮೋಹ ಖಗರಾಜಾ॥**
**ತಬ ಬೋಲೇ ಬಿಧಿ ಗಿರಾ ಸುಹಾಈ। ಜಾನ ಮಹೇಸ ರಾಮ ಪ್ರಭುತಾಈ॥ ೩ ॥**
**ಬೈನತೇಯ ಸಂಕರ ಪಹಿಂ ಜಾಹೂ। ತಾತ ಅನತ ಪೂಛಹು ಜನಿ ಕಾಹೂ॥**
**ತಹಂ ಹೋಇಹಿ ತವ ಸಂಸಯ ಹಾನೀ। ಚಲೆಉ ಬಿಹಂಗ ಸುನತ ಬಿಧಿ ಬಾನೀ॥ ೪ ॥**

ಪಕ್ಷಿರಾಜನಾದ ಗರುಡನು ಬ್ರಹ್ಮದೇವರ ಬಳಿಗೆ ಹೋಗಿ, ತನ್ನ ಸಂದೇಹವನ್ನು ಅವರ ಮುಂದೆ ತೋಡಿಕೊಂಡನು. ಅದನ್ನು ಕೇಳಿ ಬ್ರಹ್ಮನು ಶ್ರೀರಾಮಚಂದ್ರನಿಗೆ ಮನಸ್ಸಿನಲ್ಲೇ ತಲೆವಾಗಿದನು. ಪ್ರಭುಪ್ರತಾಪವನ್ನು ಸ್ಮರಿಸುತ್ತಲೇ ಅವರ ಹೃದಯ ಪ್ರೇಮದಿಂದ ತುಂಬಿಹೋಯಿತು. ಬ್ರಹ್ಮದೇವರು ಯೋಚಿಸತೊಡಗಿದರು – ''ಕವಿಗಳು, ಪಂಡಿತರು, ಜ್ಞಾನಿಗಳು ಎಲ್ಲರೂ ಮಾಯಾವಶರೇ. ಭಗವಂತನ ಮಾಯಾ ಪ್ರಭಾವವು ಅಪಾರ. ಅದು ನನ್ನನ್ನೂ ಕೂಡ ಅನೇಕ ಸಲ ಕುಣಿಸಿಬಿಟ್ಟಿದೆ. ಈ ಇಡೀ ಚರಾಚರ ಜಗತ್ತು ನನ್ನಿಂದ ರಚಿತವಾಗಿದೆ. ಆದರೆ ನಾನೇ ಮಾಯೆಯ ಕೈಗೆ ಸಿಕ್ಕಿ ಕುಣಿದಾಡಿದರೆ ಇನ್ನು ಗರುಡನು ಮೋಹಗೊಳ್ಳುವುದು ಸೋಜಿಗವಲ್ಲ.'' ಅನಂತರ ಬ್ರಹ್ಮದೇವರು ಹೇಳಿದರು – ಎಲೈ ಗರುಡಾ! ಶ್ರೀರಾಮನ ಮಹಿಮೆಯನ್ನು ಆ ಪರಮೇಶ್ವರನು ಚೆನ್ನಾಗಿ ಅರಿತಿರುವನು. ಆದ್ದರಿಂದ ನೀನು ಮಹೇಶನಲ್ಲಿಗೆ ಹೋಗು. ತಮ್ಮಾ ! ನೀನು ಬೇರೆ ಯಾರಲ್ಲಿಯೂ ಕೇಳಬೇಡ. ನಿನ್ನ ಸಂದೇಹವನ್ನು ಅವನೇ ತೊಲಗಿಸಬಲ್ಲನು. ಬ್ರಹ್ಮನ ಮಾತನ್ನು ಕೇಳಿ ಗರುಡನು ಅಲ್ಲಿಂದ ಹೊರಟನು. (ಚೌ/೧-೪)

**ದೋ – ಪರಮಾತುರ ಬಿಹಂಗಪತಿ ಆಯಉ ತಬ ಮೋ ಪಾಸ।**
**ಜಾತ ರಹೇಉಂ ಕುಬೇರ ಗೃಹ ರಹಿಹು ಉಮಾ ಕೈಲಾಸ॥ ೬೦ ॥**

ಹೆಚ್ಚಾದ ಆತುರದಿಂದ ಗರುಡನು ನನ್ನ ಬಳಿಗೆ ಬಂದನು. ಉಮೆ! ಆಗ ನಾನು ಕುಬೇರನಲ್ಲಿಗೆ ಹೋಗುತ್ತಿದ್ದೆ. ನೀನು ಕೈಲಾಸದಲ್ಲೇ ಇದ್ದೆ. (ದೋ/೬೦)

**ಚೌ – ತೇಹಿಂ ಮಮ ಪದ ಸಾದರ ಸಿರು ನಾವಾ। ಪುನಿ ಆಪನ ಸಂದೇಹ ಸುನಾವಾ॥**
**ಸುನಿ ತಾ ಕರಿ ಬಿನತೀ ಮೃದು ಬಾನೀ। ಪ್ರೇಮ ಸಹಿತ ಮೈಂ ಕಹೇಉಂ ಭವಾನೀ॥ ೧ ॥**

ಮಿಲೆಹು ಗರುಡ ಮಾರಗ ಮಹ್ ಮೋಹೀ । ಕವನ ಭಾಂತಿ ಸಮುಝಾವೌ ತೋಹೀ ॥
ತಬಹಿಂ ಹೋಇ ಸಬ ಸಂಸಯ ಭಂಗಾ । ಜಬ ಬಹು ಕಾಲ ಕರಿಅ ಸತಸಂಗಾ ॥ ೨ ॥
ಸುನಿಅ ತಹಾಂ ಹರಿ ಕಥಾ ಸುಹಾಈ । ನಾನಾ ಭಾಂತಿ ಮುನಿನ್ಹ ಜೋ ಗಾಈ ॥
ಜೆಹಿ ಮಹುಂ ಆದಿ ಮಧ್ಯ ಅವಸಾನಾ । ಪ್ರಭು ಪ್ರತಿಪಾದ್ಯ ರಾಮ ಭಗವಾನಾ ॥ ೩ ॥
ನಿತ ಹರಿ ಕಥಾ ಹೋತ ಜಹ್ ಭಾಈ । ಪಠವಉಂ ತಹಾಂ ಸುನಹು ತುಮ್ಹ ಜಾಈ ॥
ಜಾಇಹಿ ಸುನತ ಸಕಲ ಸಂದೇಹಾ । ರಾಮ ಚರನ ಹೋಇಹಿ ಅತಿ ನೇಹಾ ॥ ೪ ॥

ಗರುಡನು ಆದರದಿಂದ ನನ್ನ ಚರಣಗಳಿಗೆರಗಿದನು. ಅನಂತರ ತನ್ನ ಸಂದೇಹವನ್ನು ವಿನಂತಿಸಿಕೊಂಡನು. ಅವನ ಮಧುರವಚನಗಳಿಂದ ಕೂಡಿದ ಬಿನ್ನಪವನ್ನು ನಾನು ಲಾಲಿಸಿ, ಪ್ರೇಮದಿಂದ ಅವನಲ್ಲಿ ಹೇಳಿದೆ – ''ಎಲೈ ಗರುಡಾ! ನೀನು ಹಾದಿಯಲ್ಲೇ ನನಗೆ ಸಿಕ್ಕಿದ್ದೀಯೆ. ಮಾರ್ಗಮಧ್ಯದಲ್ಲಿ ನಿನಗೆ ನಾನು ಹೇಗೆ ಉಪದೇಶಿಸಬಲ್ಲೆನು? ದೀರ್ಘಕಾಲದವರೆಗೆ ಸತ್ಸಂಗಮಾಡುವುದರಿಂದಲೇ ಸಂದೇಹಗಳು ತೊಲಗುವುದು. ಮುನೀಶ್ವರರು ಅನೇಕ ವಿಧದಿಂದ ಕೀರ್ತಿಸಿದ ಮನೋಜ್ಞವಾದ ಹರಿಕಥೆಗಳನ್ನು ಕೇಳಬೇಕು. ತಮ್ಮಾ! ನಿತ್ಯ ನಿರಂತರವೂ ಹರಿಕಥಾಪ್ರಸಂಗ ನಡೆವಲ್ಲಿಗೆ ನಿನ್ನನ್ನು ಕಳಿಸುತ್ತಿದ್ದೇನೆ. ನೀನು ಅಲ್ಲಿಗೆ ಹೋಗಿ ಕೇಳು. ಅಲ್ಲಿ ಆದಿ ಮಧ್ಯಾಂತಗಳಲ್ಲಿ ಭಗವಾನ್ ಶ್ರೀರಾಮಚಂದ್ರನೇ ಪ್ರತಿಪಾದ್ಯನು. ಅದನ್ನು ಕೇಳುತ್ತಲೇ ನಿನ್ನ ಎಲ್ಲ ಸಂದೇಹಗಳು ದೂರವಾಗುವುವು. ನಿನಗೆ ಶ್ರೀರಾಮನ ಚರಣಗಳಲ್ಲಿ ಅನನ್ಯ ಪ್ರೇಮ ಉಂಟಾಗುವುದು. (ಚೌ/೧-೪)

**ದೋ – ಬಿನು ಸತಸಂಗ ನ ಹರಿ ಕಥಾ ತೆಹಿ ಬಿನು ಮೋಹ ನ ಭಾಗ ।**
**ಮೋಹ ಗಏಂ ಬಿನು ರಾಮ ಪದ ಹೋಇ ನ ದೃಢ ಅನುರಾಗ ॥ ೬೧ ॥**

ಸತ್ಸಂಗವಿಲ್ಲದೆ ಹರಿಕಥೆ ದೊರೆಯದು, ಹರಿಕಥೆಯಿಲ್ಲದೆ ಮೋಹ ತೊಲಗದು. ಮೋಹ ತೊಲಗದೆ ಶ್ರೀರಾಮಚಂದ್ರನ ಚರಣಗಳಲ್ಲಿ ಗಾಢವಾದ ಭಕ್ತಿಯು ದೊರೆಯದು. (ದೊ/೬೧)

ಚೌ – ಮಿಲಹಿಂ ನ ರಘುಪತಿ ಬಿನು ಅನುರಾಗಾ । ಕಿಏಂ ಜೋಗ ತಪ ಗ್ಯಾನ ಬಿರಾಗಾ ॥
ಉತ್ತರ ದಿಸಿ ಸುಂದರ ಗಿರಿ ನೀಲಾ । ತಹ್ ರಹ ಕಾಕಭುಸುಂಡಿ ಸುಸೀಲಾ ॥ ೧ ॥
ರಾಮ ಭಗತಿ ಪಥ ಪರಮ ಪ್ರಬೀನಾ । ಗ್ಯಾನೀ ಗುನ ಗೃಹ ಬಹು ಕಾಲೀನಾ ॥
ರಾಮ ಕಥಾ ಸೋ ಕಹಇ ನಿರಂತರ । ಸಾದರ ಸುನಹಿಂ ಬಿಬಿಧ ಬಿಹಂಗಬರ ॥ ೨ ॥
ಜಾಇ ಸುನಹು ತಹ್ ಹರಿ ಗುನ ಭೂರೀ । ಹೋಇಹಿ ಮೋಹ ಜನಿತ ದುಖ ದೂರೀ ॥
ಮೈಂ ಜಬ ತೆಹಿ ಸಬ ಕಹಾ ಬುಝಾಈ । ಚಲೆಉ ಹರಷಿ ಮಮ ಪದ ಸಿರು ನಾಈ ॥ ೩ ॥
ತಾತೇ ಉಮಾ ನ ಮೈಂ ಸಮುಝಾವಾ । ರಘುಪತಿ ಕೃಪಾಂ ಮರಮು ಮೈಂ ಪಾವಾ ॥
ಹೋಇಹಿ ಕೀನ್ಹ ಕಬಹುಂ ಅಭಿಮಾನಾ । ಸೋ ಖೋವೈ ಚಹ ಕೃಪಾನಿಧಾನಾ ॥ ೪ ॥
ಕಛು ತೆಹಿ ತೇ ಪುನಿ ಮೈಂ ನಹಿಂ ರಾಖಾ । ಸಮುಝಇ ಖಗ ಖಗಹೀ ಕೈ ಭಾಷಾ ॥
ಪ್ರಭು ಮಾಯಾ ಬಲವಂತ ಭವಾನೀ । ಜಾಹಿ ನ ಮೋಹ ಕವನ ಅಸ ಗ್ಯಾನೀ ॥ ೫ ॥

ಯೋಗ, ತಪಸ್ಸು, ಜ್ಞಾನ, ವೈರಾಗ್ಯ ಮೊದಲಾದವುಗಳೆಲ್ಲವೂ ಇದ್ದರೂ ಅವನಲ್ಲಿ ಪ್ರೇಮಾನುರಾಗವಿಲ್ಲದೆ ಶ್ರೀರಘುನಾಥನ ಅನುಗ್ರಹವು ಲಭಿಸದು. ಆದ್ದರಿಂದ ಸತ್ಸಾಂಗತ್ಯಕ್ಕಾಗಿ ಉತ್ತರದಿಕ್ಕಿಗೆ ಹೋಗು. ಅಲ್ಲಿ ಒಂದು ಅಂದವಾದ ನೀಲಗಿರಿ ಇದೆ. ಅಲ್ಲಿ ಪರಮಸುಶೀಲನಾದ ಕಾಕಭುಶುಂಡಿ ವಾಸಿಸುತ್ತಿರುವನು. ಅವನು ರಾಮಭಕ್ತಿನಿರತನು, ಜ್ಞಾನೀ, ಗುಣನಿಧಿ, ವಯೋವೃದ್ಧನು. ಅವನು ನಿರಂತರವೂ ಶ್ರೀರಾಮನ ಕಥೆಯನ್ನು ವಿವರಿಸುತ್ತಿರುವನು. ಅದನ್ನು ಬಗೆ-ಬಗೆಯಾದ ಪಕ್ಷಿಗಳು ಬಂದು ಆದರದಿಂದ ಕೇಳುತ್ತಿರುವರು. ಅಲ್ಲಿಗೆ ಹೋಗಿ ನೀನೂ ಶ್ರೀಹರಿಗುಣಗಳನ್ನು ಶ್ರವಣಿಸು. ಅದರಿಂದಾಗಿ ನಿನ್ನ ಮೋಹಜನಿತವಾದ ದುಃಖವು ದೂರವಾಗುವುದು.'' ನಾನು ಈ ವಿಧವಾಗಿ ಅವನನ್ನು ಸಮಾಧಾನಪಡಿಸಿದಾಗ ಗರುಡನು ನನಗೆ ವಂದಿಸಿ, ಪ್ರಸನ್ನಚಿತ್ತನಾಗಿ ಹೊರಟನು. ಉಮಾ! ಶ್ರೀರಘುನಾಥನ ಕೃಪೆಯಿಂದ ನಾನು ಗರುಡನ ಮೋಹವನ್ನು ಅರಿತುಕೊಂಡೆ. ಆದ್ದರಿಂದ ನಾನು ಸ್ವತಃ ಉಪದೇಶಿಸಲಿಲ್ಲ. ಅವನು ಎಂದೋ ಅಭಿಮಾನ ಪಟ್ಟಿರಬೇಕು. ಆದ್ದರಿಂದ ದಯಾನಿಧಿ ಶ್ರೀರಾಮನೇ ಆತನನ್ನು ತನ್ನ ಬಳಿಯಲ್ಲಿರಿಸದೆ ದೂರ ಇಡಬಯಸಿರಬೇಕು. ಅದೂ ಅಲ್ಲದೆ ಮತ್ತೊಂದು ಕಾರಣವೂ ಇದೆ. ಪಕ್ಷಿಯ ಭಾಷೆಯನ್ನು ಪಕ್ಷಿಯೇ ಚೆನ್ನಾಗಿ ಗ್ರಹಿಸಬಲ್ಲದು. ಭವಾನೀ! ಪ್ರಭುವಿನ ಮಾಯೆಯು ಬಹು ಬಲವತ್ತರವಾದುದು. ಅಂತಹ ಮಾಯೆ ಮುಸುಕದವರು ಯಾರಿರುವರು? (ಚೌ/೧-೫)

**ದೋ – ಗ್ಯಾನೀ ಭಗತ ಸಿರೋಮನಿ ತ್ರಿಭುವನಪತಿ ಕರ ಜಾನ ।**
**ತಾಹಿ ಮೊಹ ಮಾಯಾ ನರ ಪಾವ್ಁರ ಕರಹಿಂ ಗುಮಾನ ॥ ೬೨ (ಕ)॥**

ಗರುಡನು ಉತ್ತಮ ಜ್ಞಾನೀ, ಭಕ್ತಶಿರೋಮಣಿ, ಮೂರ್ಲೋಕಗಳಿಗೆ ಒಡೆಯನಾದ ಭಗವಂತನಿಗೆ ವಾಹನನು. ಅಂತಹವನೂ ಕೂಡ ಮಾಯಾ ಮೋಹಿತನಾದನು. ಹೀಗಿರುವಾಗ ನರಾಧಮರಾದ ಅಲ್ಪಮಾನವರ ವಿಷಯ ಹೇಳುವುದೇನು? ಆದರೆ ಜಗತ್ತಿನಲ್ಲಿ ಸಹಜವಾಗಿ ಮಾನವರು ಮೂರ್ಖತನದಿಂದಾಗಿ ದುರಭಿಮಾನಪೂರಿತರಾಗಿರುತ್ತಾರೆ. (ದೋ/೬೨ ಕ)

**ಮಾಸಪಾರಾಯಣದ ಇಪ್ಪತ್ತೆಂಟನೆಯ ವಿಶ್ರಾಮ**

**ದೋ – ಸಿವ ಬಿರಂಚಿ ಕಹುಁ ಮೋಹಇ ಕೋ ಹೈ ಬಪುರಾ ಆನ ।**
**ಅಸ ಜಿಯಁ ಜಾನಿ ಭಜಹಿಂ ಮುನಿ ಮಾಯಾ ಪತಿ ಭಗವಾನ ॥ ೬೨(ಖ)॥**

ಈ ಮಾಯೆ ಪರಮೇಶ್ವರನನ್ನು, ಬ್ರಹ್ಮನನ್ನೂ ಕೂಡ ಮೋಹಿಸಿರುವಾಗ ಈ ಪಾಮರರಾದ ಇತರರ ಸಂಗತಿ ಹೇಳುವುದೇನು? ಈ ವಿಷಯವನ್ನು ಗ್ರಹಿಸಿಯೇ ಮುನೀಶ್ವರರು ಮಾಯಾಪತಿಯಾದ ಆ ಸರ್ವೇಶ್ವರನನ್ನು ಭಜಿಸುತ್ತಿರುವರು. (ದೋ/೬೨ ಖ)

**ಚೌ – ಗಯಉ ಗರುಡ ಜಹಁ ಬಸಇ ಭುಸುಂಡಾ। ಮತಿ ಅಕುಂಠ ಹರಿ ಭಗತಿ ಅಖಂಡಾ॥**
**ದೇಖಿ ಸೈಲ ಪ್ರಸನ್ನ ಮನ ಭಯಊ । ಮಾಯಾ ಮೋಹ ಸೋಚ ಸಬ ಗಯಊ॥ ೧ ॥**
**ಕರಿ ತಡಾಗ ಮಜ್ಜನ ಜಲಪಾನಾ । ಬಟ ತರ ಗಯಉ ಹೃದಯಁ ಹರಷಾನಾ ॥**
**ಬೃದ್ಧ ಬೃದ್ಧ ಬಿಹಂಗ ತಹಁ ಆಏ । ಸುನೈ ರಾಮ ಕೇ ಚರಿತ ಸುಹಾಏ ॥ ೨ ॥**
**ಕಥಾ ಅರಂಭ ಕರೈ ಸೋಇ ಚಾಹಾ । ತೇಹೀ ಸಮಯ ಗಯಉ ಖಗನಾಹಾ ॥**
**ಆವತ ದೇಖಿ ಸಕಲ ಖಗರಾಜಾ । ಹರಷೆಉ ಬಾಯಸ ಸಹಿತ ಸಮಾಜಾ ॥ ೩ ॥**
**ಅತಿ ಆದರ ಖಗಪತಿ ಕರ ಕೀನ್ಹಾ । ಸ್ವಾಗತ ಪೂಛಿ ಸುಆಸನ ದೀನ್ಹಾ॥**
**ಕರಿ ಪೂಜಾ ಸಮೇತ ಅನುರಾಗಾ । ಮಧುರ ಬಚನ ತಬ ಬೋಲೆಉ ಕಾಗಾ॥ ೪ ॥**

ಶಿವನ ಸನ್ನಿಧಿಯಿಂದ ಹೊರಟ ಗರುಡನು, ಅಖಂಡವಾದ ಹರಿಭಕ್ತಿಯುಳ್ಳ, ನಿಶ್ಚಲ ಬುದ್ಧಿಯ ಕಾಕಭುಶುಂಡಿ ವಾಸಿಸುವಲ್ಲಿಗೆ ಹೋದನು. ಆ ಪರ್ವತವನ್ನು ನೋಡುತ್ತಲೇ ಅವನ ಮನಸ್ಸು ಪ್ರಶಾಂತವಾಯಿತು. ಭುಶುಂಡಿಯ ದರ್ಶನಮಾತ್ರದಿಂದ ಅವನಲ್ಲಿದ್ದ ಮಾಯೆ, ಮೋಹ, ಶೋಕ ಇವೆಲ್ಲವೂ ಮಾಯವಾದುವು. ಗರುಡನು ಸರೋವರದಲ್ಲಿ ಸ್ನಾನ-ಪಾನಾದಿಗಳನ್ನು ಮುಗಿಸಿ ಪ್ರಸನ್ನ ಚಿತ್ತದಿಂದ ವಟಚ್ಛಾಯೆಗೆ ತೆರಳಿದನು. ಶ್ರೀರಾಮನ ಸುಂದರಚರಿತ್ರವನ್ನು ಕೇಳಲು ವಯೋವೃದ್ಧಪಕ್ಷಿಗಳೆಲ್ಲವೂ ಅಲ್ಲಿ ಸೇರಿದ್ದರು. ಕಾಕಭುಶುಂಡಿಯವರು ಶ್ರೀರಾಮವೃತ್ತಾಂತ ಪ್ರವಚನ ಪ್ರಾರಂಭಿಸಬೇಕೆನ್ನುವಷ್ಟರಲ್ಲಿ ಪಕ್ಷಿರಾಜ ವೈನತೇಯನು ಅಲ್ಲಿಗೆ ಬಂದನು. ಗರುತ್ಮಂತನು ಬಂದಿರುವುದನ್ನು ಕಂಡು ಕಾಕಭುಶುಂಡಿ ಮೊದಲಾದ ಎಲ್ಲ ಪಕ್ಷಿಗಳು ಹರ್ಷಗೊಂಡವು. ಭುಶುಂಡಿಯು ಗರುಡನನ್ನು ಹೆಚ್ಚಾಗಿ ಗೌರವಿಸಿ, ಕುಶಲಸಮಾಚಾರವನ್ನು ಕೇಳಿ, ಕುಳಿತುಕೊಳ್ಳಲು ಸಮುಚಿತ ಆಸನವನ್ನು ನೀಡಿದರು. ಅವನನ್ನು ಚೆನ್ನಾಗಿ ಪೂಜಿಸಿ, ಮೃದುಮಧುರವಾಗಿ ಇಂತೆಂದರು. (ಚೌ/೧-೪)

**ದೋ – ನಾಥ ಕೃತಾರಥ ಭಯಉಁ ಮೈಂ ತವ ದರಸನ ಖಗರಾಜ ।**
**ಆಯಸು ದೇಹು ಸೊ ಕರೌಂ ಅಬ ಪ್ರಭು ಆಯಹು ಕೆಹಿ ಕಾಜ ॥ ೬೩ (ಕ)॥**
**ಸದಾ ಕೃತಾರಥ ರೂಪ ತುಮ್ಹ ಕಹ ಮೃದು ಬಚನ ಖಗೇಸ ।**
**ಜೆಹಿ ಕೈ ಅಸ್ತುತಿ ಸಾದರ ನಿಜ ಮುಖ ಕೀನ್ಹಿ ಮಹೇಸ ॥ ೬೩(ಖ)॥**

''ಪ್ರಭು! ಪಕ್ಷಿರಾಜಾ! ನಿಮ್ಮ ದರ್ಶನದಿಂದ ನಾನು ಕೃತಾರ್ಥನಾದೆ. ನಿಮ್ಮ ಅಪ್ಪಣೆಯನ್ನು ನಾನು ಶಿರಸಾವಹಿಸುತ್ತೇನೆ. ತಾವು ಬಂದ ಕಾರಣವೇನು?'' ಆಗ ಗರುತ್ಮಂತನು ಮೃದುಮಧುರವಾಗಿ ಇಂತೆಂದನು – ''ಮಹಾದೇವನೇ ಸ್ವತಃ ಪ್ರಶಂಸಿಸಿದ ನೀವು ಸರ್ವದಾ ಕೃತಾರ್ಥರೇ. (ದೋ/೬೩ ಕ, ಖ)

## ಸಂಕ್ಷಿಪ್ತರಾಮಾಯಣ

**ಚೌ – ಸುನಹು ತಾತ ಜೆಹಿ ಕಾರನ ಆಯಉಁ । ಸೋ ಸಬ ಭಯಉ ದರಸ ತವ ಪಾಯಉಁ ॥**
**ದೇಖಿ ಪರಮ ಪಾವನ ತವ ಆಶ್ರಮ । ಗಯಉ ಮೋಹ ಸಂಸಯ ನಾನಾ ಭ್ರಮ॥ ೧ ॥**

**ಅಬ ಶ್ರೀರಾಮ ಕಥಾ ಅತಿ ಪಾವನಿ । ಸದಾ ಸುಖದ ದುಖ ಪುಂಜ ನಸಾವನಿ ॥**
**ಸಾದರ ತಾತ ಸುನಾವಹು ಮೋಹೀ । ಬಾರ ಬಾರ ಬಿನವಉಁ ಪ್ರಭು ತೋಹೀ ॥ ೨ ॥**
**ಸುನತ ಗರುಡ ಕೈ ಗಿರಾ ಬಿನೀತಾ । ಸರಲ ಸುಪ್ರೇಮ ಸುಖದ ಸುಪುನೀತಾ ॥**
**ಭಯಉ ತಾಸು ಮನ ಪರಮ ಉಛಾಹಾ । ಲಾಗ ಕಹೈ ರಘುಪತಿ ಗುನ ಗಾಹಾ ॥ ೩ ॥**
**ಪ್ರಥಮಹಿಁ ಅತಿ ಅನುರಾಗ ಭವಾನೀ । ರಾಮಚರಿತ ಸರ ಕಹೆಸಿ ಬಖಾನೀ॥**
**ಪುನಿ ನಾರದ ಕರ ಮೋಹ ಅಪಾರಾ । ಕಹೆಸಿ ಬಹುರಿ ರಾವನ ಅವತಾರಾ ॥ ೪ ॥**
**ಪ್ರಭು ಅವತಾರ ಕಥಾ ಪುನಿ ಗಾಈ । ತಬ ಸಿಸು ಚರಿತ ಕಹೆಸಿ ಮನ ಲಾಈ॥ ೫ ॥**

ಅಯ್ಯಾ ! ಕೇಳಿ. ನಾನು ಬಂದ ಕೆಲಸವು ಇಲ್ಲಿಗೆ ಬಂದಾಗಲೇ ಸಫಲವಾಯಿತು. ಮತ್ತೆ ನಿಮ್ಮ ದರ್ಶನವೂ ಲಭಿಸಿತು. ನಿಮ್ಮ ಪವಿತ್ರವಾದ ಆಶ್ರಮವನ್ನು ನೋಡುತ್ತಲೇ ನನ್ನ ಮೋಹ, ಸಂದೇಹ, ನಾನಾವಿಧ ಭ್ರಮೆಗಳು ತೊಲಗಿಹೋದುವು. ಈಗ ನೀವು ದುಃಖವನ್ನು ಇಲ್ಲವಾಗಿಸುವ ಸರ್ವದಾ ಸುಖಪ್ರದವಾದ ಶ್ರೀರಾಮಚಂದ್ರನ ಪವಿತ್ರಕಥೆಯನ್ನು ಆದರದಿಂದ ಹೇಳಿರಿ ಎಂದು ಪದೇ-ಪದೇ ನಾನು ವಿನಂತಿಸಿಕೊಳ್ಳುವೆನು. ಗರುತ್ಮಂತನ ಸರಳವೂ, ವಿನಯಪೂರ್ವಕವಾದ, ಪ್ರೇಮಪೂರ್ಣವಾದ, ಸುಖಪ್ರದವಾದ ಪವಿತ್ರವಾದ ಮಾತನ್ನು ಕೇಳಿ, ಕಾಕಭುಶುಂಡಿಯವರಲ್ಲಿ ಉತ್ಸಾಹ ಉಕ್ಕಿಹರಿಯಿತು. ಅವರು ರಘುಪತಿಯ ಗುಣಗಾಥೆಯನ್ನು ಹೇಳತೊಡಗಿದರು. (ಶಿವನು ಹೇಳುತ್ತಿರುವನು –) ಭವಾನೀ! ಮೊದಲಿಗೆ ಅವರು ಪ್ರೇಮದಿಂದ ರಾಮಚರಿತವೆಂಬ ಮಾನಸಸರೋವರದ ರೂಪಕವನ್ನು ತಿಳಿಸಿ ಹೇಳಿದರು. ಅನಂತರ ನಾರದರ ಅಪಾರ ಮೋಹವನ್ನು ಹಾಗೂ ರಾವಣನು ಹುಟ್ಟಿದುದನ್ನು ಹೇಳಿದರು. ಮತ್ತೆ ಅವರು ಪ್ರಭುವಿನ ಅವತಾರಕಥೆಯನ್ನು ಶ್ರುತಪಡಿಸಿದರು. ಬಳಿಕ ಶ್ರೀರಾಮನ ಬಾಲಲೀಲೆಗಳನ್ನು ಮನಃಪೂರ್ವಕವಾಗಿ ವರ್ಣಿಸಿದರು. (ಚೌ/೧-೫)

**ದೋ – ಬಾಲಚರಿತ ಕಹಿ ಬಿಬಿಧಿ ಬಿಧಿ ಮನ ಮಹಁ ಪರಮ ಉಛಾಹ ।**
**ರಿಷಿ ಆಗವನ ಕಹೆಸಿ ಪುನಿ ಶ್ರೀರಘುಬೀರ ಬಿಬಾಹ ॥ ೬೪ ॥**

ಪರಮೋತ್ಸಾಹದಿಂದ ಶ್ರೀರಾಮನ ಬಾಲ್ಯದ ಲೀಲೆಗಳನ್ನು ಹೇಳಿ, ವಿಶ್ವಾಮಿತ್ರ, ಮುನಿಯ ಅಯೋಧ್ಯಾಗಮನ, ಶ್ರೀಸೀತಾರಾಮರ ವಿವಾಹವನ್ನು ವರ್ಣಿಸಿದನು. (ದೋ/೬೪)

**ಚೌ – ಬಹುರಿ ರಾಮ ಅಭಿಷೇಕ ಪ್ರಸಂಗಾ । ಪುನಿ ನೃಪ ಬಚನ ರಾಜ ರಸ ಭಂಗಾ ॥**
**ಪುರಬಾಸಿನ್ಹ ಕರ ಬಿರಹ ಬಿಷಾದಾ । ಕಹೆಸಿ ರಾಮ ಲಛಿಮನ ಸಂಬಾದಾ ॥ ೧ ॥**
**ಬಿಪಿನ ಗವನ ಕೇವಟ ಅನುರಾಗಾ । ಸುರಸರಿ ಉತರಿ ನಿವಾಸ ಪ್ರಯಾಗಾ ॥**
**ಬಾಲಮೀಕ ಪ್ರಭು ಮಿಲನ ಬಖಾನಾ । ಚಿತ್ರಕೂಟ ಜಿಮಿ ಬಸೆ ಭಗವಾನಾ ॥ ೨ ॥**
**ಸಚಿವಾಗವನ ನಗರ ನೃಪ ಮರನಾ । ಭರತಾಗವನ ಪ್ರೇಮ ಬಹು ಬರನಾ ॥**
**ಕರಿ ನೃಪ ಕ್ರಿಯಾ ಸಂಗ ಪುರಬಾಸೀ । ಭರತ ಗಏ ಜಹಁ ಪ್ರಭು ಸುಖ ರಾಸೀ ॥ ೩ ॥**
**ಪುನಿ ರಘುಪತಿ ಬಹುಬಿಧಿ ಸಮುಝಾಏ । ಲೈ ಪಾದುಕಾ ಅವಧಪುರ ಆಏ ॥**
**ಭರತ ರಹನಿ ಸುರಪತಿ ಸುತ ಕರನೀ । ಪ್ರಭು ಅರು ಅತ್ರಿ ಭೇಂಟ ಪುನಿ ಬರನೀ ॥ ೪ ॥**

ಅನಂತರ ಶ್ರೀರಾಮನ ರಾಜ್ಯಪಟ್ಟಾಭಿಷೇಕ ಪ್ರಸಂಗವನ್ನು, ದಶರಥನು ಗೈದ ವಾಗ್ದಾನವನ್ನು, ಅದರಿಂದ ರಾಜ್ಯಾಭಿಷೇಕದಲ್ಲಿ ಭಂಗಉಂಟಾದುದು, ನಗರವಾಸಿಗಳ ವಿರಹ, ವಿಷಾದ; ಶ್ರೀರಾಮ-ಲಕ್ಷ್ಮಣರ ಸಂವಾದವನ್ನು ಬಣ್ಣಿಸಿ ಹೇಳಿದರು. ಶ್ರೀರಾಮನ ವನಗಮನ, ನಾವಿಕನ ಭಕ್ತಿ, ಗಂಗಾನದಿಯನ್ನು ದಾಟಿ, ಪ್ರಯಾಗದಲ್ಲಿ ನಿವಾಸ, ವಾಲ್ಮೀಕಿಯೊಂದಿಗೆ ಪ್ರಭುವಿನ ಭೇಟಿ, ಭಗವಂತನು ಚಿತ್ರಕೂಟದಲ್ಲಿ ನಿವಾಸ ಮೊದಲಾದ ಎಲ್ಲವನ್ನು ನಿರೂಪಿಸಿದರು. ಬಳಿಕ ಸುಮಂತ್ರನು ಅಯೋಧ್ಯೆಗೆ ಮರಳಿದುದು, ದಶರಥ ಮಹಾರಾಜರು ಸ್ವರ್ಗಸ್ಥರಾದುದು, ಭರತನು ಮಾವನಮನೆಯಿಂದ ಅಯೋಧ್ಯೆಗೆ ಬಂದುದು, ಭರತನು ಭಕ್ತಿಪರವಶನಾದುದನ್ನು ಸವಿಸ್ತಾರವಾಗಿ ವರ್ಣಿಸಿದರು. ದಶರಥನ ಅಂತ್ಯೇಷ್ಟಿಯನ್ನು ಗೈದಬಳಿಕ ಭರತನು ನಗರನಿವಾಸಿಗಳೊಡಗೂಡಿ ಸುಖನಿಧಾನನಾದ ಶ್ರೀರಾಮನ ಬಳಿಗೆ ಹೋದನು. ಅಲ್ಲಿ ಶ್ರೀರಘುನಾಥನು ಆತನಿಗೆ ಅನೇಕ ವಿಧದಿಂದ ಸಮಾಧಾನ ಹೇಳಿದ. ಅನಂತರ ಭರತನು ಶ್ರೀರಾಮಪಾದುಕೆಗಳನ್ನು ಪಡೆದು ಅಯೋಧ್ಯೆಗೆ ಮರಳಿ ಬಂದುದು, ಭರತನು ನಂದಿಗ್ರಾಮದಲ್ಲಿ ಇದ್ದ ರೀತಿಯನ್ನು ವರ್ಣಿಸಿ, ಇಂದ್ರಪುತ್ರ ಜಯಂತನ ದುಶ್ಚೇಷ್ಟೆಯನ್ನೂ, ಶ್ರೀರಾಮನು ಅತ್ರಿಮಹರ್ಷಿಯನ್ನು ದರ್ಶಿಸಿದುದನ್ನು ವರ್ಣಿಸಿದರು. (ಚೌ/೧-೪)

**ದೋ – ಕಹಿ ಬಿರಾಧ ಬಧ ಜೆಹಿ ಬಿಧಿ ದೇಹ ತಜೀ ಸರಭಂಗ ।**
**ಬರನಿ ಸುತೀಛನ ಪ್ರೀತಿ ಪುನಿ ಪ್ರಭು ಅಗಸ್ತಿ ಸತಸಂಗ ॥ ೬೫ ॥**

ವಿರಾಧವಧೆ, ಶರಭಂಗರ ದೇಹತ್ಯಾಗ, ಸುತೀಕ್ಷ್ಣರ ಪ್ರೇಮಾನುರಾಗವನ್ನೂ, ಅಗಸ್ತ್ಯ ಶ್ರೀರಾಮರ ಸತ್ಸಂಗ ಪ್ರಸಂಗವನ್ನು ವರ್ಣಿಸಿದರು. (ದೋ/೬೫)

**ಚೌ – ಕಹಿ ದಂಡಕ ಬನ ಪಾವನತಾಈ । ಗೀಧ ಮಇತ್ರೀ ಪುನಿ ತೆಹಿಂ ಗಾಈ ॥**
**ಪುನಿ ಪ್ರಭು ಪಂಚಬಟೀಂ ಕೃತ ಬಾಸಾ । ಭಂಜೀ ಸಕಲ ಮುನಿನ್ಹ ಕೀ ತ್ರಾಸಾ ॥ ೧ ॥**
**ಪುನಿ ಲಛಿಮನ ಉಪದೇಸ ಅನೂಪಾ । ಸೂಪನಖಾ ಜಿಮಿ ಕೀನ್ಹಿ ಕುರೂಪಾ ॥**
**ಖರ ದೂಷನ ಬಧ ಬಹುರಿ ಬಖಾನಾ । ಜಿಮಿ ಸಬ ಮರಮು ದಸಾನನ ಜಾನಾ ॥ ೨ ॥**
**ದಸಕಂಧರ ಮಾರೀಚ ಬತಕಹೀ । ಜೆಹಿ ಬಿಧಿ ಭಈ ಸೊ ಸಬ ತೆಹಿಂ ಕಹೀ ॥**
**ಪುನಿ ಮಾಯಾ ಸೀತಾ ಕರ ಹರನಾ । ಶ್ರೀರಘುಬೀರ ಬಿರಹ ಕಛು ಬರನಾ ॥ ೩ ॥**
**ಪುನಿ ಪ್ರಭು ಗೀಧ ಕ್ರಿಯಾ ಜಿಮಿ ಕೀನ್ಹೀ । ಬಧಿ ಕಬಂಧ ಸಬರಿಹಿ ಗತಿ ದೀನ್ಹೀ ॥**
**ಬಹುರಿ ಬಿರಹ ಬರನತ ರಘುಬೀರಾ । ಜೆಹಿ ಬಿಧಿ ಗಏ ಸರೋಬರ ತೀರಾ ॥ ೪ ॥**

ಅನಂತರ ಕಾಕಭುಶುಂಡಿ ಗರುಡನಿಗೆ, ಪ್ರಭುವು ದಂಡಕಾರಣ್ಯವನ್ನು ಪಾವನಗೊಳಿಸಿದುದು, ಗೃಧ್ರರಾಜನಾದ ಜಟಾಯುವಿನೊಂದಿಗೆ ಆದ ಮೈತ್ರಿಯನ್ನು ವಿವರಿಸಿದರು. ಪ್ರಭುವು ಪಂಚವಟಿಯಲ್ಲಿ ವಾಸಿಸಿ, ಮುನಿಗಳ ಭಯವನ್ನು ನೀಗಿದುದನ್ನು ವರ್ಣಿಸಿದರು. ಮತ್ತೆ ಲಕ್ಷ್ಮಣನಿಗೆ ಇತ್ತಿರುವ ಉಪದೇಶವನ್ನು ವಿವರಿಸಿದರು. ಶೂರ್ಪಣಖಿಯನ್ನು ವಿರೂಪಗೊಳಿಸಿದ ವಿಷಯವನ್ನು, ಖರ, ದೂಷಣ, ತ್ರಿಶಿರರನ್ನು ವಧಿಸಿದ ಕಥೆಯನ್ನು ಅರುಹಿದರು. ರಾವಣನಿಗೆ ಈ ಸಮಾಚಾರ ತಿಳಿದ ರೀತಿಯನ್ನು, ರಾವಣ ಮಾರೀಚರ ಸಂಭಾಷಣೆಯನ್ನು, ರಾವಣನು ಮಾಯಾಸೀತೆಯನ್ನು ಅಪಹರಿಸಿದುದನ್ನು, ಶ್ರೀರಾಮನ ವಿರಹವನ್ನು ಸಂಗ್ರಹವಾಗಿ ನಿರೂಪಿಸಿದರು. ಬಳಿಕ ಪ್ರಭುವು ಜಟಾಯುವಿನ ಅಂತ್ಯಕ್ರಿಯೆಗೈದುದನ್ನು, ಕಬಂಧನನ್ನು ವಧಿಸಿದುದು, ಶಬರಿಗೆ ಮುಕ್ತಿಯನ್ನು ಕರುಣಿಸಿದುದನ್ನೂ, ಪ್ರಭುವಿನ ವಿರಹವನ್ನು ವರ್ಣಿಸಿ, ಅವನು ಪಂಪಾಸರೋವರವನ್ನು ಸೇರಿದುದನ್ನು ತಿಳಿಸಿದರು. (ಚೌ/೧-೪)

**ದೋ – ಪ್ರಭು ನಾರದ ಸಂಬಾದ ಕಹಿ ಮಾರುತಿ ಮಿಲನ ಪ್ರಸಂಗ ।**
**ಪುನಿ ಸುಗ್ರೀವ ಮಿತಾಈ ಬಾಲಿ ಪ್ರಾನ ಕರ ಭಂಗ ॥ ೬೬ (ಕ) ॥**
**ಕಪಿಹಿ ತಿಲಕ ಕರಿ ಪ್ರಭು ಕೃತ ಸೈಲ ಪ್ರಬರಷನ ಬಾಸ ।**
**ಬರನನ ಬರ್ಷಾ ಸರದ ಅರು ರಾಮ ರೋಷ ಕಪಿ ತ್ರಾಸ ॥ ೬೬ (ಖ) ॥**

ಶ್ರೀರಾಮ ನಾರದರ ಸಂವಾದ, ಮಾರುತಿ ಮಿಲನದ ಪ್ರಸಂಗವನ್ನು ಹೇಳಿ, ಸುಗ್ರೀವನೊಂದಿಗೆ ಆದ ಮೈತ್ರಿಯನ್ನು ಹಾಗೂ ವಾಲಿವಧೆ ಮುಂತಾದುವನ್ನು ವರ್ಣಿಸಿದರು. ಸುಗ್ರೀವನಿಗೆ ಕಿಷ್ಕಿಂಧೆಯ ಪಟ್ಟಕಟ್ಟಿ, ಪ್ರಭುವಿನ ಪ್ರವರ್ಷಣ ಪರ್ವತನಿವಾಸವನ್ನು ನಿವೇದಿಸಿದರು. ವರ್ಷಋತು, ಶರದೃತುವಿನ ವರ್ಣನೆ, ಶ್ರೀರಾಮನು ಸುಗ್ರೀವನ ಮೇಲೆ ಸಿಟ್ಟಾದುದು, ಸುಗ್ರೀವ ಭಯಗೊಂಡದ್ದು ಮೊದಲಾದ ಕಥೆಯನ್ನು ವಿವರಿಸಿದರು. (ದೋ/೬೬ ಕ, ಖ)

**ಚೌ – ಜೆಹಿ ಬಿಧಿ ಕಪಿಪತಿ ಕೀಸ ಪಠಾಏ । ಸೀತಾ ಖೋಜ ಸಕಲ ದಿಸಿ ಧಾಏ ॥**
**ಬಿಬರ ಪ್ರಬೇಸ ಕೀನ್ಹ ಜೆಹಿ ಭಾಂತೀ । ಕಪಿನ್ಹ ಬಹೋರಿ ಮಿಲಾ ಸಂಪಾತೀ ॥ ೧ ॥**
**ಸುನಿ ಸಬ ಕಥಾ ಸಮೀರಕುಮಾರಾ । ನಾಘತ ಭಯಉ ಪಯೋಧಿ ಅಪಾರಾ ॥**
**ಲಂಕಾಂ ಕಪಿ ಪ್ರಬೇಸ ಜಿಮಿ ಕೀನ್ಹಾ । ಪುನಿ ಸೀತಹಿ ಧೀರಜು ಜಿಮಿ ದೀನ್ಹಾ ॥ ೨ ॥**
**ಬನ ಉಜಾರಿ ರಾವನಹಿ ಪ್ರಬೋಧೀ । ಪುರ ದಹಿ ನಾಘೆಉ ಬಹುರಿ ಪಯೋಧೀ ॥**
**ಆಏ ಕಪಿ ಸಬ ಜಹಂ ರಘುರಾಈ । ಬೈದೇಹೀ ಕೀ ಕುಸಲ ಸುನಾಈ ॥ ೩ ॥**
**ಸೇನ ಸಮೇತ ಜಥಾ ರಘುಬೀರಾ । ಉತರೇ ಜಾಇ ಬಾರಿನಿಧಿ ತೀರಾ ॥**
**ಮಿಲಾ ಬಿಭೀಷನ ಜೆಹಿ ಬಿಧಿ ಆಈ । ಸಾಗರ ನಿಗ್ರಹ ಕಥಾ ಸುನಾಈ ॥ ೪ ॥**

ವಾನರರಾಜ ಸುಗ್ರೀವನು ಕಳಿಸಿದ ವಾನರರೆಲ್ಲರೂ ಸೀತಾನ್ವೇಷಣೆಗಾಗಿ ಬೇರೆ-ಬೇರೆ ದಿಕ್ಕುಗಳಿಗೆ ಹೋದ ವಿಷಯವನ್ನು, ಹನುಮಾದಿಗಳು ಬಿಲವನ್ನು ಹೊಕ್ಕರೀತಿಯನ್ನು, ಸಂಪಾತಿಯ ಮಿಲನ ಮೊದಲಾದ ಆಖ್ಯಾನಗಳನ್ನು ಅರುಹಿದರು. ಸಂಪಾತಿಯಿಂದ ಎಲ್ಲಕಥೆಯನ್ನುಕೇಳಿ, ಪವನಪುತ್ರ ಹನುಮಂತನು ಸಮುದ್ರವನ್ನು ಲಂಘಿಸಿ, ಲಂಕೆಯನ್ನು ಪ್ರವೇಶಿಸಿದುದನ್ನು, ಸೀತಾದೇವಿಗೆ ಧೈರ್ಯ, ಸಾಂತ್ವನನೀಡಿದ ವೃತ್ತಾಂತವನ್ನು ವರ್ಣಿಸಿದರು. ಅಶೋಕವನ ಧ್ವಂಸಮಾಡಿ, ಹನುಮಂತನು ರಾವಣನಿಗೆ ಬುದ್ಧಿವಾದ ಹೇಳಿದುದು, ಲಂಕೆಯನ್ನು ಸುಟ್ಟು, ಮಾರುತಿಯು ಸಮುದ್ರವನ್ನು ಹಾರಿ ಮರಳಿಬಂದಾಗ ಎಲ್ಲ ವಾನರರೂ ಶ್ರೀರಾಮಪ್ರಭುವಿನ ಬಳಿಗೆ ಬಂದು, ಸೀತಾದೇವಿಯ ಕುಶಲವನ್ನು ಹೇಳಿದುದನ್ನು ವಿವರಿಸಿದರು. ಅನಂತರ ಸೇನಾಸಮೇತ ಶ್ರೀರಾಮನು ಸಮುದ್ರತಟದಲ್ಲಿ ಬಂದಿಳಿದುದು, ವಿಭೀಷಣನ ಶರಣಾಗತಿಯನ್ನು, ಪ್ರಭುವು ಸಮುದ್ರದ ಗರ್ವವನ್ನು ಮುರಿದುದು ಮೊದಲಾದ ಎಲ್ಲ ಕಥೆಯನ್ನು ವರ್ಣಿಸಿದರು. (ಚೌ/೧-೪)

**ದೋ – ಸೇತು ಬಾಁಧಿ ಕಪಿ ಸೇನ ಜಿಮಿ ಉತರೀ ಸಾಗರ ಪಾರ।**
**ಗಯಉ ಬಸೀಠೀ ಬೀರಬರ ಜೆಹಿ ಬಿಧಿ ಬಾಲಿಕುಮಾರ ॥ ೬೭ (ಕ)॥**
**ನಿಸಿಚರ ಕೀಸ ಲರಾಈ ಬರನಿಸಿ ಬಿಬಿಧ ಪ್ರಕಾರ ।**
**ಕುಂಭಕರನ ಘನನಾದ ಕರ ಬಲ ಪೌರುಷ ಸಂಘಾರ ॥ ೬೭(ಖ)॥**

ಶ್ರೀರಾಮನು ಸೇತುವೆಯನ್ನು ನಿರ್ಮಿಸಿ, ವಾನರಸೇನೆಯೊಂದಿಗೆ ಸಮುದ್ರವನ್ನು ದಾಟಿ, ಲಂಕೆಯನ್ನು ಪ್ರವೇಶಿಸಿದುದು, ವೀರಶ್ರೇಷ್ಠ ವಾಲಿಪುತ್ರ ಅಂಗದನು ದೂತನಾಗಿ ಹೋದುದನ್ನು ಹೇಳಿದರು. ಬಳಿಕ ರಾಕ್ಷಸರಿಗೂ, ವಾನರರಿಗೂ ನಡೆದ ಭಯಂಕರ ಸಂಗ್ರಾಮವನ್ನು ವರ್ಣಿಸಿದರು. ಕುಂಭಕರ್ಣ, ಮೇಘನಾದ ಇವರ ಬಲ ಪೌರುಷವನ್ನೂ, ಅವರ ವಧೆಯನ್ನೂ ತಿಳಿಸಿದರು. (ದೋ/೬೭ ಕ, ಖ)

**ಚೌ – ನಿಸಿಚರ ನಿಕರ ಮರನ ಬಿಧಿ ನಾನಾ। ರಘುಪತಿ ರಾವನ ಸಮರ ಬಖಾನಾ॥**
**ರಾವನ ಬಧ ಮಂದೋದರಿ ಸೋಕಾ। ರಾಜ ಬಿಭೀಷನ ದೇವ ಅಸೋಕಾ॥ ೧॥**
**ಸೀತಾ ರಘುಪತಿ ಮಿಲನ ಬಹೋರೀ। ಸುರನ್ಹ ಕೀನ್ಹಿ ಅಸ್ತುತಿ ಕರ ಜೋರೀ॥**
**ಪುನಿ ಪುಷ್ಪಕ ಚಢಿ ಕಪಿನ್ಹ ಸಮೇತಾ। ಅವಧ ಚಲೇ ಪ್ರಭು ಕೃಪಾ ನಿಕೇತಾ॥ ೨॥**
**ಜೆಹಿ ಬಿಧಿ ರಾಮ ನಗರ ನಿಜ ಆಏ। ಬಾಯಸ ಬಿಸದ ಚರಿತ ಸಬ ಗಾಏ॥**
**ಕಹೆಸಿ ಬಹೋರಿ ರಾಮ ಅಭಿಷೇಕಾ। ಪುರ ಬರನತ ನೃಪನೀತಿ ಅನೇಕಾ॥ ೩॥**
**ಕಥಾ ಸಮಸ್ತ ಭುಸುಂಡ ಬಖಾನೀ। ಜೋ ಮೈಂ ತುಮ್ಹ ಸನ ಕಹೀ ಭವಾನೀ॥**
**ಸುನಿ ಸಬ ರಾಮ ಕಥಾ ಖಗನಾಹಾ। ಕಹತ ಬಚನ ಮನ ಪರಮ ಉಛಾಹಾ॥ ೪॥**

ರಾಕ್ಷಸರೆಲ್ಲರನ್ನು ಮಟ್ಟಹಾಕಿದ ಕ್ರಮವನ್ನು, ಶ್ರೀರಾಮಚಂದ್ರನು ರಾವಣನೊಂದಿಗೆ ಯುದ್ಧಗೈದ ರೀತಿಯನ್ನು ಸಮಗ್ರವಾಗಿ ವಿವರಿಸಿದರು. ರಾವಣ ಸಂಹಾರ, ಮಂಡೋದರಿವಿಲಾಪ, ವಿಭೀಷಣನ ಪಟ್ಟಾಭಿಷೇಕ, ದೇವತೆಗಳ ದುಃಖನಿವಾರಣೆ ಮೊದಲಾದ ಘಟ್ಟಗಳನ್ನು ವರ್ಣಿಸಿ, ಸೀತಾರಾಮರ ಪುನಸ್ಸಮಾಗಮದ ಕುರಿತು ತಿಳಿಸಿದರು. ದೇವತೆಗಳು ಕೈಜೋಡಿಸಿ, ಶ್ರೀರಾಮನನ್ನು ಸ್ತುತಿಸಿದುದನ್ನು, ಪ್ರಭುವು ಪುಷ್ಪಕವಿಮಾನದಲ್ಲಿ ವಾನರರಿಂದೊಡಗೂಡಿ ಸೀತಾಲಕ್ಷ್ಮಣರೊಂದಿಗೆ ಅಯೋಧ್ಯೆಗೆ ಬಂದ ರೀತಿಯನ್ನು ವರ್ಣಿಸಿದರು. ಶ್ರೀರಾಮಚಂದ್ರಪ್ರಭುವು ರಾಜ್ಯ ಪಟ್ಟಾಭಿಷಿಕ್ತನಾದ ಪದ್ಧತಿಯನ್ನು, ಅವನ ಎಲ್ಲಲೀಲೆಯನ್ನು ಕಾಕಭುಶುಂಡಿಯವರು ಗರುಡನಿಗೆ ವಿವರವಾಗಿ ತಿಳಿಸಿದರು.'' ಶಿವನು ಹೇಳಿದನು – ''ಭವಾನೀ! ಅನೇಕ ವಿಧಗಳಿಂದ ರಾಜನೀತಿಯ ಚರ್ಚೆಯನ್ನು, ಅಯೋಧ್ಯಾಪುರ ವಿಶೇಷ ವರ್ಣನೆಗಳನ್ನು ನಾನು ನಿನಗೆ ಅರುಹಿದಂತೆ ಕಾಕಭುಶುಂಡಿಯು ಗರುತ್ಮಂತನಿಗೆ ವಿವರಿಸಿದನು. ಆ ರಾಮಕಥೆಯೆಲ್ಲವನ್ನು ಕೇಳಿದ ಗರುಡನು ಆನಂದತುಂದಿಲನಾಗಿ, ಅಮಿತೋತ್ಸಾಹದಿಂದ ಇಂತೆಂದನು – (ಚೌ/೧-೪)

**ಸೋ – ಗಯಉ ಮೋರ ಸಂದೇಹ ಸುನೇಉಁ ಸಕಲ ರಘುಪತಿ ಚರಿತ।**
**ಭಯಉ ರಾಮ ಪದ ನೇಹ ತವ ಪ್ರಸಾದ ಬಾಯಸ ತಿಲಕ॥ ೬೮ (ಕ)॥**
**ಮೋಹಿ ಭಯಉ ಅತಿ ಮೋಹ ಪ್ರಭು ಬಂಧನ ರನ ಮಹುಁ ನಿರಖಿ।**
**ಚಿದಾನಂದ ಸಂದೋಹ ರಾಮ ಬಿಕಲ ಕಾರನ ಕವನ॥ ೬೮(ಖ)॥**

ಶ್ರೀರಘುಪತಿಯ ಚರಿತ್ರವನ್ನು ಕೇಳಿದ ನನ್ನ ಎಲ್ಲ ಸಂದೇಹಗಳು ದೂರವಾದುವು. ಓ ವಾಯಸ ಶಿರೋಮಣಿ! ನಿಮ್ಮ ಅನುಗ್ರಹದಿಂದ ಶ್ರೀರಾಮನ ಚರಣಕಮಲಗಳಲ್ಲಿ ನನ್ನ ಭಕ್ತಿಯು ದೃಢವಾಯಿತು. ರಣಾಂಗಣದಲ್ಲಿ ಪ್ರಭುವು ನಾಗಪಾಶದಲ್ಲಿ ಬಂಧಿತನಾಗಿದ್ದುದನ್ನು ಕಂಡು ನಾನು ಭಾರೀ ಮೋಹಾವಿಷ್ಟನಾಗಿದ್ದೆ. ಸಚ್ಚಿದಾನಂದಘನನಾದ ಶ್ರೀರಾಮಚಂದ್ರನು ಏಕೆ ವ್ಯಾಕುಲನಾಗಿದ್ದಾನೆ? ಇದನ್ನು ತಿಳಿಯದೆ ಹೋದೆ. (ಸೋ/೬೮ ಕ, ಖ)

**ಚೌ – ದೇಖಿ ಚರಿತ ಅತಿ ನರ ಅನುಸಾರೀ। ಭಯಉ ಹೃದಯ್ ಮಮ ಸಂಸಯ ಭಾರೀ ॥**
**ಸೋಇ ಭ್ರಮ ಅಬ ಹಿತ ಕರಿ ಮೈಂ ಮಾನಾ। ಕೀನ್ಹ ಅನುಗ್ರಹ ಕೃಪಾನಿಧಾನಾ ॥ ೧ ॥**
**ಜೋ ಅತಿ ಆತಪ ಬ್ಯಾಕುಲ ಹೋಈ। ತರು ಛಾಯಾ ಸುಖ ಜಾನಇ ಸೋಈ ॥**
**ಜೌಂ ನಹಿಂ ಹೋತ ಮೋಹ ಅತಿ ಮೋಹೀ। ಮಿಲತೆಉಂ ತಾತ ಕವನ ಬಿಧಿ ತೋಹೀ ॥ ೨ ॥**
**ಸುನತೆಉಂ ಕಿಮಿ ಹರಿ ಕಥಾ ಸುಹಾಈ। ಅತಿ ಬಿಚಿತ್ರ ಬಹು ಬಿಧಿ ತುಮ್ಹ ಗಾಈ ॥**
**ನಿಗಮಾಗಮ ಪುರಾನ ಮತ ಏಹಾ। ಕಹಹಿಂ ಸಿದ್ಧ ಮುನಿ ನಹಿಂ ಸಂದೇಹಾ ॥ ೩ ॥**
**ಸಂತ ಬಿಸುದ್ಧ ಮಿಲಹಿಂ ಪರಿ ತೇಹೀ। ಚಿತವಹಿಂ ರಾಮ ಕೃಪಾ ಕರಿ ಜೇಹೀ ॥**
**ರಾಮ ಕೃಪಾಂ ತವ ದರಸನ ಭಯಊ। ತವ ಪ್ರಸಾದ ಸಬ ಸಂಸಯ ಗಯಊ ॥ ೪ ॥**

ಅತಿ ಸಾಮಾನ್ಯ ಮಾನವನಂತೆ ಪ್ರವರ್ತಿಸುವ ಪ್ರಭುವಿನ ಚರಿತವನ್ನು ಕಂಡು ನನ್ನ ಹೃದಯದಲ್ಲಿ ಭಾರೀ ಸಂದೇಹ ಉಂಟಾಯಿತು. ಈಗ ನನಗೆ ಅನ್ನಿಸುತ್ತದೆ, ಆ ಭ್ರಾಂತಿ ನನ್ನ ಪಾಲಿಗೆ ವರವಾಗಿ ಪರಿಣಮಿಸಿತು. ಕೃಪಾನಿಧಿಯಾದ ಶ್ರೀರಾಮಚಂದ್ರಪ್ರಭುವು ನನ್ನ ಮೇಲೆ ಅನುಗ್ರಹ ಬೀರಿರುವನು. ಬಿಸಿಲಿನಿಂದ ನೊಂದವನು ಮಾತ್ರ ಮರದ ನೆರಳಿನ ಸುಖವನ್ನು ಅನುಭವಿಸಬಲ್ಲನು. ಅಯ್ಯಾ! ನನಗೆ ಈ ಪ್ರಬಲವಾದ ಮೋಹವು ಉಂಟಾಗದಿದ್ದರೆ ನಿಮ್ಮನ್ನು ಹೇಗೆ ಕಾಣುತ್ತಿದ್ದೆ? ಅತ್ಯಂತ ವಿಚಿತ್ರವಾದ ಸುಂದರವಾದ ಶ್ರೀರಾಮಕಥೆಯನ್ನು ಶ್ರವಣಿಸುವುದು ಹೇಗೆ ಸಂಭವಿಸುತ್ತಿತ್ತು? ನೀವು ಅನೇಕ ರೀತಿಯಿಂದ ಅದನ್ನು ಮಧುರವಾಗಿ ಹಾಡಿದ್ದೀರಿ. ನಿಜವಾದ ಪವಿತ್ರಸಜ್ಜನರ ಸಮಾಗಮವು ಶ್ರೀರಾಮಕೃಪಾಪಾತ್ರರಿಗೆ ತಪ್ಪದೆ ಸಿಗುವುದೆಂದು ವೇದ ಶಾಸ್ತ್ರ ಪುರಾಣಗಳು, ಸಿದ್ಧರು, ಮುನಿಗಳು, ಹೇಳುವ ವಿಷಯವು ಪ್ರಸಿದ್ಧವು. ಇದರಲ್ಲಿ ಸಂದೇಹವೇ ಇಲ್ಲ. ಶ್ರೀರಾಮನ ಕರುಣೆಯಿಂದ ನಿಮ್ಮ ದರ್ಶನವಾಯಿತು. ನಿಮ್ಮ ದಯೆಯಿಂದ ನನ್ನ ಸಂದೇಹಗಳು ತೊಲಗಿಹೋದುವು. (ಚೌ/೧-೪)

**ದೋ – ಸುನಿ ಬಿಹಂಗಪತಿ ಬಾನೀ ಸಹಿತ ಬಿನಯ ಅನುರಾಗ।**
**ಪುಲಕ ಗಾತ ಲೋಚನ ಸಜಲ ಮನ ಹರಷೆಉ ಅತಿ ಕಾಗ ॥ ೬೯ (ಕ)॥**
**ಶ್ರೋತಾ ಸುಮತಿ ಸುಸೀಲ ಸುಚಿ ಕಥಾ ರಸಿಕ ಹರಿ ದಾಸ।**
**ಪಾಇ ಉಮಾ ಅತಿ ಗೋಪ್ಯಮಪಿ ಸಜ್ಜನ ಕರಹಿಂ ಪ್ರಕಾಸ ॥ ೬೯(ಖ)॥**

ಪಕ್ಷಿರಾಜ ಗರುಡನ ಸವಿನಯ, ಪ್ರೇಮಪೂರ್ಣವಾದ ವಚನಗಳನ್ನು ಕೇಳಿ, ಕಾಕಭುಶುಂಡಿಯವರ ತನು ಪುಳಕಗೊಂಡಿತು. ಕಣ್ಣುಗಳಲ್ಲಿ ಆನಂದಾಶ್ರುಗಳು ಸುರಿದವು. ಮನಸ್ಸು ಹರ್ಷದಿಂದ ಉಕ್ಕಿಹರಿಯಿತು. ಎಲೈ ಉಮೆ! ಪವಿತ್ರಕಥೆಯ ಪ್ರೇಮಿ, ಸದ್ಬುದ್ಧಿಯುಳ್ಳ, ಸುಶೀಲ ಹರಿದಾಸರಾದ ಶ್ರೋತೃವನ್ನು ಪಡೆದ ಸಜ್ಜನರು ಅತ್ಯಂತಗೋಪ್ಯವಾದ ವಿಷಯವನ್ನು ಹೇಳಿಬಿಡುತ್ತಾರೆ. (ದೋ/೬೯ ಕ, ಖ)

**ಚೌ – ಬೋಲೆಉ ಕಾಕಭಸುಂಡ ಬಹೋರೀ। ನಭಗ ನಾಥ ಪರ ಪ್ರೀತಿ ನ ಥೋರೀ ॥**
**ಸಬ ಬಿಧಿ ನಾಥ ಪೂಜ್ಯ ತುಮ್ಹ ಮೇರೇ। ಕೃಪಾಪಾತ್ರ ರಘುನಾಯಕ ಕೇರೇ ॥ ೧ ॥**
**ತುಮ್ಹಹಿ ನ ಸಂಸಯ ಮೋಹ ನ ಮಾಯಾ। ಮೋ ಪರ ನಾಥ ಕೀನ್ಹಿ ತುಮ್ಹ ದಾಯಾ ॥**
**ಪಠಇ ಮೋಹ ಮಿಸ ಖಗಪತಿ ತೋಹೀ। ರಘುಪತಿ ದೀನ್ಹಿ ಬಡಾಈ ಮೋಹೀ ॥ ೨ ॥**
**ತುಮ್ಹ ನಿಜ ಮೋಹ ಕಹೀ ಖಗ ಸಾಈಂ। ಸೋ ನಹಿಂ ಕಛು ಆಚರಜ ಗೊಸಾಈಂ ॥**
**ನಾರದ ಭವ ಬಿರಂಚಿ ಸನಕಾದೀ। ಜೇ ಮುನಿನಾಯಕ ಆತಮಬಾದೀ ॥ ೩ ॥**
**ಮೋಹ ನ ಅಂಧ ಕೀನ್ಹ ಕೆಹಿ ಕೇಹೀ। ಕೋ ಜಗ ಕಾಮ ನಚಾವ ನ ಜೇಹೀ ॥**
**ತೃಸ್ನಾಂ ಕೆಹಿ ನ ಕೀನ್ಹ ಬೌರಾಹಾ। ಕೆಹಿ ಕರ ಹೃದಯ ಕ್ರೋಧ ನಹಿಂ ದಾಹಾ ॥ ೪ ॥**

ಕಾಕಭುಶುಂಡಿಯವರಿಗೆ ಪಕ್ಷಿರಾಜ ಗರುಡನಮೇಲೆ ಅಪಾರ ಪ್ರೇಮ ಉಂಟಾದ್ದರಿಂದ ಮರಳಿ ಇಂತೆಂದರು – ಹೇ ಪ್ರಭೋ! ನೀವು ಎಲ್ಲವಿಧದಿಂದ ನನಗೆ ಆರಾಧ್ಯರು, ಪೂಜ್ಯರು. ಶ್ರೀರಘುನಾಥನ ಕೃಪಾಪಾತ್ರರು. ನಿಮಗೆ ನಿಜವಾಗಿ ಯಾವ ಸಂದೇಹವೂ ಇಲ್ಲ. ನಿಮ್ಮಲ್ಲಿ ಮೋಹಕ್ಕೆ ಅವಕಾಶವೇ ಇಲ್ಲ. ನೀವು ಮಾಯಾವಶರಲ್ಲವೇ ಅಲ್ಲ. ನೀವು ನನ್ನ ಮೇಲೆ ಅಪಾರ ದಯೆ ತೋರಿದಿರಿ. ಓ ಪಕ್ಷಿರಾಜಾ! ಮೋಹದ ನೆಪದಲ್ಲಿ ಶ್ರೀರಘುನಾಥನು ನಿಮ್ಮನ್ನು ನನ್ನ ಬಳಿಗೆ ಕಳಿಸಿ, ನನಗೆ ಹೆಗ್ಗಳಿಕೆಯನ್ನು ನೀಡಿರುವನು. ಓ ಖಗರಾಜಾ! ನೀವು ನಿಮ್ಮ ಮೋಹವನ್ನು ಹೇಳಿಕೊಂಡಿರಿ. ಇದರಲ್ಲಿ ಆಶ್ಚರ್ಯಪಡುವಂತಹುದು ಏನೂ ಇಲ್ಲ. ಆತ್ಮತತ್ತ್ವ ಮರ್ಮಜ್ಞರಾದವರು, ಅದನ್ನು ಉಪದೇಶಿಸುವಂತಹ ಬ್ರಹ್ಮಾ, ಶಿವ, ನಾರದ, ಸನಕಾದಿ ಮಹಾಮುನಿಗಳೂ ಕೂಡ ಮೋಹವಶರಾಗಿದ್ದರು. ಈ ಚರಾಚರ ಜಗತಿನಲ್ಲಿ ಮೋಹಾಂಧನಲ್ಲದವನು ಯಾರಿರುವನು? ಕಾಮಕ್ಕೆ ದಾಸರಾಗದವರು ಯಾರಿರುವರು? ತೃಷ್ಣೆ ಯಾರನ್ನು ತಾನೇ ಉನ್ಮತ್ತಗೊಳಿಸಲಿಲ್ಲ? ಕ್ರೋಧವು ಯಾರ ಹೃದಯ ಸುಡಲಿಲ್ಲ? (ಚೌ/೧-೪)

**ದೋ – ಗ್ಯಾನೀ ತಾಪಸ ಸೂರ ಕಬಿ ಕೋಬಿದ ಗುನ ಆಗಾರ ।**
**ಕೆಹಿ ಕೈ ಲೋಭ ಬಿಡಂಬನಾ ಕೀನ್ಹಿ ನ ಏಹಿಂ ಸಂಸಾರ ॥ ೭೦ (ಕ)॥**
**ಶ್ರೀ ಮದ ಬಕ್ರ ನ ಕೀನ್ಹ ಕೆಹಿ ಪ್ರಭುತಾ ಬಧಿರ ನ ಕಾಹಿ ।**
**ಮೃಗಲೋಚನಿ ಕೇ ನೈನ ಸರ ಕೋ ಅಸ ಲಾಗ ನ ಜಾಹಿ ॥ ೭೦(ಖ)॥**

ಈ ಜಗತ್ತಿನಲ್ಲಿ ಲೋಭದ ವಿಡಂಬನೆಗೆ ಗುರಿಯಾಗದ ಜ್ಞಾನೀ, ತಾಪಸಿ, ಶೂರ, ವೀರ, ಕವಿ, ಪಂಡಿತ, ಗುಣಧಾಮರು ಯಾರಿದ್ದಾರೆ? ಸಿರಿಯ ಮದ ಯಾರನ್ನು ತಾನೇ ವಕ್ರಗೊಳಿಸಲಿಲ್ಲ? ಪ್ರಭುತ್ವವು ಕಿವುಡುಗೊಳಿಸದ ವ್ಯಕ್ತಿಗಳಾರಿದ್ದಾರೆ? ಹರಿಣಾಕ್ಷಿಯರ ನಯನ ಬಾಣಗಳು ನಾಟದ ಧೀರರು ಯಾರಿದ್ದಾರೆ? (ದೋ/೭೦ ಕ, ಖ)

**ಚೌ – ಗುನ ಕೃತ ಸನ್ಯಪಾತ ನಹಿಂ ಕೇಹೀ । ಕೋಉ ನ ಮಾನ ಮದ ತಜೆಉ ನಿಬೇಹೀ ॥**
**ಜೋಬನ ಜ್ವರ ಕೆಹಿ ನಹಿಂ ಬಲಕಾವಾ । ಮಮತಾ ಕೆಹಿ ಕರ ಜಸ ನ ನಸಾವಾ ॥ ೧ ॥**
**ಮಚ್ಛರ ಕಾಹಿ ಕಲಂಕ ನ ಲಾವಾ । ಕಾಹಿ ನ ಸೋಕ ಸಮೀರ ಡೋಲಾವಾ ॥**
**ಚಿಂತಾ ಸಾಂಪಿನಿ ಕೋ ನಹಿಂ ಖಾಯಾ । ಕೋ ಜಗ ಜಾಹಿ ನ ಬ್ಯಾಪೀ ಮಾಯಾ ॥ ೨ ॥**
**ಕೀಟ ಮನೋರಥ ದಾರು ಸರೀರಾ । ಜೆಹಿ ನ ಲಾಗ ಘುನ ಕೋ ಅಸ ಧೀರಾ ॥**
**ಸುತ ಬಿತ ಲೋಕ ಈಷನಾ ತೀನೀ । ಕೆಹಿ ಕೈ ಮತಿ ಇನ್ಹ ಕೃತ ನ ಮಲೀನೀ ॥ ೩ ॥**
**ಯಹ ಸಬ ಮಾಯಾ ಕರ ಪರಿವಾರಾ । ಪ್ರಬಲ ಅಮಿತಿ ಕೋ ಬರನೈ ಪಾರಾ ॥**
**ಸಿವ ಚತುರಾನನ ಜಾಹಿ ಡೆರಾಹೀಂ । ಅಪರ ಜೀವ ಕೆಹಿ ಲೇಖೇ ಮಾಹೀಂ ॥ ೪ ॥**

ರಜಸ್ತಮೋಗುಣಗಳ ಸನ್ನಿಪಾತದಿಂದ ತಪ್ಪಿಸಿಕೊಂಡವರು ಯಾರಿದ್ದಾರೆ? ಅಭಿಮಾನ ಮದಗಳು ಮುಟ್ಟದವರು ಯಾರು? ಯೌವನಜ್ವರವು ಯಾರನ್ನು ಉನ್ಮತ್ತರನ್ನಾಗಿಸಲಿಲ್ಲ? ಮಮತೆ ಯಾರ ಯಶಸ್ಸನ್ನು ಕೆಡಿಸದೆ ಬಿಟ್ಟಿದೆ. ಈರ್ಷ್ಯಾದ್ವೇಷಗಳಿಂದ ಕಳಂಕಿತನಾಗದವನು ಯಾರು? ಶೋಕವೆಂಬ ಗಾಳಿಯು ಯಾರನ್ನು ವಿಚಲಿತಗೊಳಿಸಲಿಲ್ಲ? ಚಿಂತಾಸರ್ಪವು ಕಡಿಯದ ವ್ಯಕ್ತಿ ಯಾರು? ಜಗತ್ತಿನಲ್ಲಿ ಮಾಯೆಗೆ ವಶರಾಗದವರು ಯಾರಿದ್ದಾರೆ? ಮನೋರಥವೇ ಕೀಟ, ಶರೀರವೇ ಕಾಷ್ಠ – ಈ ಕಟ್ಟಿಗೆಯ ಶರೀರಕ್ಕೆ ಬಯಕೆಯೆಂಬ ಹುಳ ತಗಲದ ಧೀರನು ಯಾರಿರುವನು? ಪುತ್ರೈಷಣ, ವಿತ್ತೈಷಣ, ಲೋಕೈಷಣ ಈ ಈಷಣತ್ರಯಗಳು ಯಾರ ತಲೆಯನ್ನು ತಾನೇ ಕೆಡಿಸಿಲ್ಲ? ಇವೆಲ್ಲವು ಮಾಯೆಯ ಪ್ರಬಲ-ಅಪಾರ ಪರಿವಾರವು. ಇದನ್ನು ಪೂರ್ತಿಯಾಗಿ ಯಾರು ವರ್ಣಿಸಬಲ್ಲರು? ಬ್ರಹ್ಮರುದ್ರಾದಿಗಳೇ ಇದಕ್ಕೆ ಭಯಪಡುತ್ತಿರುವಾಗ ಇತರರು ಯಾವ ಲೆಕ್ಕ? (ಚೌ/೧-೪)

**ದೋ – ಬ್ಯಾಪಿ ರಹೆಉ ಸಂಸಾರ ಮಹುಂ ಮಾಯಾ ಕಟಕ ಪ್ರಚಂಡ ।**
**ಸೇನಾಪತಿ ಕಾಮಾದಿ ಭಟ ದಂಭ ಕಪಟ ಪಾಷಂಡ ॥ ೭೧ (ಕ)॥**
**ಸೋ ದಾಸೀ ರಘುಬೀರ ಕೈ ಸಮುಝೇಂ ಮಿಥ್ಯಾ ಸೋಪಿ ।**
**ಛೂಟ ನ ರಾಮ ಕೃಪಾ ಬಿನು ನಾಥ ಕಹಉಂ ಪದ ರೋಪಿ ॥ ೭೧(ಖ)॥**

ಮಾಯೆಯ ಪ್ರಚಂಡ ಸೈನ್ಯವು ಜಗತ್ತಿನಲ್ಲೆಲ್ಲ ಹಬ್ಬಿ ಹರಡಿದೆ. ಕಾಮ, ಕ್ರೋಧ, ಲೋಭಾದಿಗಳೇ ಅದರ ಸೇನಾಪತಿಗಳು. ದಂಭ, ಕಪಟ, ಪಾಷಂಡತ್ವ ಇವುಗಳು ಅದರ ಯೋಧರು. ಆದರೆ ಮಾಯೆಯು ರಘುವೀರನ ದಾಸಿಯೇ. ತಿಳಿದುಕೊಂಡರೆ ಅದು ಮಿಥ್ಯೆಯೇ ಆಗಿದೆ. ಅದು ಶ್ರೀರಾಮನ ಕೃಪೆಯಿಲ್ಲದೆ ಈ ಮಾಯೆಯು ತೊಲಗದು. ಪ್ರಭು! ಈ ಮಾತನ್ನು ನಾನು ಪ್ರತಿಜ್ಞಾಪೂರ್ವಕ ಹೇಳುತ್ತೇನೆ. (ದೋ/೭೧ ಕ, ಖ)

ಚೌ – ಜೋ ಮಾಯಾ ಸಬ ಜಗಹಿ ನಚಾವಾ। ಜಾಸು ಚರಿತ ಲಖಿ ಕಾಹುಁ ನ ಪಾವಾ॥
ಸೋಇ ಪ್ರಭು ಭ್ರೂ ಬಿಲಾಸ ಖಗರಾಜಾ। ನಾಚ ನಟೀ ಇವ ಸಹಿತ ಸಮಾಜಾ॥೧॥
ಸೋಇ ಸಚ್ಚಿದಾನಂದ ಘನ ರಾಮಾ। ಅಜ ಬಿಗ್ಯಾನ ರೂಪ ಬಲ ಧಾಮಾ॥
ಬ್ಯಾಪಕ ಬ್ಯಾಪ್ಯ ಅಖಂಡ ಅನಂತಾ। ಅಖಿಲ ಅಮೋಘಸಕ್ತಿ ಭಗವಂತಾ॥೨॥
ಅಗುನ ಅದಭ್ರ ಗಿರಾ ಗೋತೀತಾ। ಸಬದರಸೀ ಅನವದ್ಯ ಅಜೀತಾ॥
ನಿರ್ಮಮ ನಿರಾಕಾರ ನಿರಮೋಹಾ। ನಿತ್ಯ ನಿರಂಜನ ಸುಖ ಸಂದೋಹಾ॥೩॥
ಪ್ರಕೃತಿ ಪಾರ ಪ್ರಭು ಸಬ ಉರ ಬಾಸೀ। ಬ್ರಹ್ಮ ನಿರೀಹ ಬಿರಜ ಅಬಿನಾಸೀ॥
ಇಹಾಁ ಮೋಹ ಕರ ಕಾರನ ನಾಹೀಂ। ರಬಿ ಸನ್ಮುಖ ತಮ ಕಬಹುಁ ಕಿ ಜಾಹೀಂ॥೪॥

ಈ ಮಾಯೆಯು ಸಮಸ್ತಪ್ರಪಂಚವನ್ನು ಕುಣಿಸುತ್ತಿದೆ. ಇದರ ಗತಿಯನ್ನು ಯಾರೂ ಅರಿಯಲಾರರು. ಓ ಖಗರಾಜಾ! ಅಂತಹ ಮಾಯೆ ಶ್ರೀರಾಮಚಂದ್ರನ ಕಣ್ಸನ್ನೆಯಂತೆ ತನ್ನ ಪರಿವಾರದೊಂದಿಗೆ ನಟಿಯಂತೆ ಕುಣಿಯುತ್ತಿರುವಳು. ಶ್ರೀರಘುವೀರನು ಸಚ್ಚಿದಾನಂದಘನನೂ, ಜನ್ಮರಹಿತನೂ, ವಿಜ್ಞಾನಸ್ವರೂಪನೂ, ರೂಪ ಬಲ ಗುಣಧಾಮನೂ, ಸರ್ವವ್ಯಾಪಕನೂ, ಸರ್ವರೂಪನೂ, ಅಖಂಡನೂ, ಅನಂತನೂ, ಸಂಪೂರ್ಣನೂ, ಅಮೋಘಶಕ್ತಿವಂತನೂ, ಷಡ್ಗುಣೈಶ್ವರ್ಯಸಂಪನ್ನನಾದ, ಭಗವಂತನಾಗಿರುವನು. ಅವನು ನಿರ್ಗುಣನೂ, ಸರ್ವೋತ್ತಮನೂ, ಇಂದ್ರಿಯ ವಾಕ್ಕುಗಳಿಗೆ ಅಗೋಚರನೂ, ಸರ್ವದರ್ಶಿಯೂ, ದೋಷರಹಿತನೂ, ಅಜೇಯನೂ, ಮಮತಾರಹಿತನೂ, ನಿರಾಕಾರನೂ, ಮೋಹರಹಿತನೂ, ಮಾಯಾತೀತನೂ, ಸುಖನಿಧಾನನೂ, ಪ್ರಕೃತಿಗತೀತನೂ, ಸರ್ವಸಮರ್ಥನೂ, ಎಲ್ಲರ ಹೃದಯದಲ್ಲಿ ಇರುವವನೂ, ಇಚ್ಛಾರಹಿತನೂ, ನಿರ್ಮಲನೂ, ಶಾಶ್ವತನೂ ಆದ ಪರಬ್ರಹ್ಮನು. ಅಂತಹ ಶ್ರೀರಾಮನಲ್ಲಿ ಮೋಹಕ್ಕೆ ಸ್ಥಳವೇ ಇಲ್ಲ. ಸೂರ್ಯನ ಬಳಿಯಲ್ಲಿ ಅಂಧಕಾರವಿರಬಲ್ಲುದೇ? (ಚೌ/೧-೪)

ದೋ – ಭಗತ ಹೇತು ಭಗವಾನ ಪ್ರಭು ರಾಮ ಧರೆಉ ತನು ಭೂಪ।
ಕಿಏ ಚರಿತ ಪಾವನ ಪರಮ ಪ್ರಾಕೃತ ನರ ಅನುರೂಪ॥೭೨(ಕ)॥
ಜಥಾ ಅನೇಕ ಬೇಷ ಧರಿ ನೃತ್ಯ ಕರಇ ನಟ ಕೋಇ।
ಸೋಇ ಸೋಇ ಭಾವ ದೆಖಾವಇ ಆಪುನ ಹೋಇ ನ ಸೋಇ॥೭೨(ಖ)॥

ಭಗವಂತನಾದ ಶ್ರೀರಾಮಚಂದ್ರಪ್ರಭುವು ತನ್ನ ಭಕ್ತರಿಗಾಗಿ ಭೂಪಶರೀರವನ್ನು ಧರಿಸಿ ಅವತರಿಸಿ, ಸಾಮಾನ್ಯ ಮಾನವರಂತೆ ಪರಮಪವಿತ್ರ ಅನೇಕ ಲೀಲಾಚರಿತ್ರಗಳನ್ನು ತೋರಿದನು. ಓರ್ವನಟನು ವಿವಿಧ ಪಾತ್ರಗಳನ್ನು ಧರಿಸಿ ಕುಣಿದು ಅಭಿನಯಿಸುತ್ತಾನೆ. ಆ ವೇಷಕ್ಕೆ ತಕ್ಕಂತೆ ಭಾವಗಳನ್ನು ಪ್ರದರ್ಶಿಸುತ್ತಾನೆ. ಆದರೆ ಆತನು ಆ ಪಾತ್ರಗಳಲ್ಲಿ ಒಬ್ಬನೂ ಅಲ್ಲ. ಹಾಗೆಯೇ ಪರಮಾತ್ಮನು ಮಾನವರೂಪವನ್ನು ಧರಿಸಿ, ಮನುಷ್ಯರಂತೆ ವರ್ತಿಸಿದರೂ ಅವನು ಮಾನವನಲ್ಲ. (ದೋ/೭೨ ಕ, ಖ)

ಚೌ – ಅಸಿ ರಘುಪತಿ ಲೀಲಾ ಉರಗಾರೀ। ದನುಜ ಬಿಮೋಹನಿ ಜನ ಸುಖಕಾರೀ॥
ಜೇ ಮತಿ ಮಲಿನ ಬಿಷಯಬಸ ಕಾಮೀ। ಪ್ರಭು ಪರ ಮೋಹ ಧರಹಿಂ ಇಮಿ ಸ್ವಾಮೀ॥೧॥
ನಯನ ದೋಷ ಜಾ ಕಹಁ ಜಬ ಹೋಈ। ಪೀತ ಬರನ ಸಸಿ ಕಹುಁ ಕಹ ಸೋಈ॥
ಜಬ ಜೆಹಿ ದಿಸಿ ಭ್ರಮ ಹೋಇ ಖಗೇಸಾ। ಸೋ ಕಹ ಪಚ್ಛಿಮ ಉಯಉ ದಿನೇಸಾ॥೨॥
ನೌಕಾರೂಢ ಚಲತ ಜಗ ದೇಖಾ। ಅಚಲ ಮೋಹ ಬಸ ಆಪುಹಿ ಲೇಖಾ॥
ಬಾಲಕ ಭ್ರಮಹಿಂ ನ ಭ್ರಮಹಿಂ ಗೃಹಾದೀ। ಕಹಹಿಂ ಪರಸ್ಪರ ಮಿಥ್ಯಾಬಾದೀ॥೩॥
ಹರಿ ಬಿಷಇಕ ಅಸ ಮೋಹ ಬಿಹಂಗಾ। ಸಪನೆಹುಁ ನಹಿಂ ಅಗ್ಯಾನ ಪ್ರಸಂಗಾ॥
ಮಾಯಾಬಸ ಮತಿಮಂದ ಅಭಾಗೀ। ಹೃದಯಁ ಜಮನಿಕಾ ಬಹುಬಿಧಿ ಲಾಗೀ॥೪॥
ತೇ ಸಠ ಹಠ ಬಸ ಸಂಸಯ ಕರಹೀಂ। ನಿಜ ಅಗ್ಯಾನ ರಾಮ ಪರ ಧರಹೀಂ॥೫॥

ಓ ಖಗರಾಜಾ! ಶ್ರೀರಾಮನಾಥನ ಈ ಲೀಲೆ ರಾಕ್ಷಸರಿಗೆ ಮೋಹವನ್ನುಂಟುಮಾಡಿ, ಭಕ್ತರಿಗೆ ಸುಖಾನಂದವನ್ನು ಕರುಣಿಸುವುದಾಗಿದೆ. ಒಡೆಯಾ! ಮೂರ್ಖರೂ, ವಿಷಯಲೋಲುಪರೂ, ಕಾಮುಕರೂ, ಆದವರು ಮಾತ್ರ ರಾಮಚಂದ್ರನ ಮೇಲೆ ಮೋಹವನ್ನು ಆರೋಪಿಸುತ್ತಾರೆ. ನೇತ್ರದೋಷ, ಕಾಮಾಲೆಯುಳ್ಳವರು ಚಂದ್ರನನ್ನು ಹಳದಿಯೆಂದು ಹೇಳುತ್ತಾರೆ.

ವೈನತೇಯಾ! ದಿಶೆಯ ಜ್ಞಾನವಿಲ್ಲದವನು ಸೂರ್ಯನು ಪಶ್ಚಿಮದಲ್ಲಿ ಹುಟ್ಟಿದನೆಂದು ಹೇಳುತ್ತಾನೆ. ದೋಣಿಯಲ್ಲಿ ಕುಳಿತಿರುವವನು ಜಗತ್ತೇ ಚಲಿಸುತ್ತಿದೆ ಎಂದೆನ್ನುತ್ತಾನೆ. ಮೋಹಗ್ರಸ್ತನಾದ ಅವನು ತಾನು ಅಚಲನೆಂದು ತಿಳಿಯುತ್ತಾನೆ. ಮಕ್ಕಳು ಗರಗರನೆ ತಿರುಗುತ್ತಿರುವಾಗ, ಮನೆಗಳು ತಿರುಗದೆ ಇದ್ದರೂ, ಅವರು ಮನೆಗಳು ತಿರುಗುತ್ತವೆ ಎಂದು ಹೇಳುತ್ತಾರೆ. ಆದರೆ ಇದು ಸುಳ್ಳು, ಮಿಥ್ಯೆ. ಮಿಥ್ಯಾವಾದಿಗಳು ಪರಸ್ಪರ ಒಬ್ಬರನ್ನೊಬ್ಬರು ನಿಂದಿಸುತ್ತಿರುತ್ತಾರೆ. ಓ ಗರುಡಾ! ಶ್ರೀಹರಿಯ ವಿಷಯದಲ್ಲಿ ಮೋಹದ ಕಲ್ಪನೆಯೂ ಹೀಗೆಯೇ ಇದೆ. ಸ್ವಪ್ನದಲ್ಲೂ ಅಜ್ಞಾನ ಅವನಿಗೆ ಅಂಟದು. ಮಾಯೆಯಲ್ಲಿ ಬಿದ್ದಿರುವವರೂ, ಮಂದಮತಿಗಳೂ, ಭಾಗ್ಯಹೀನರೂ, ಮಾಯೆಯೆಂಬ ತೆರೆಯಿಂದ ಮುಚ್ಚಿಹೋದ ಮೂರ್ಖರೂ, ಹಟದಿಂದಾಗಿ ರಾಮನ ಬಗೆಗೆ ಸಂದೇಹ ತಾಳುತ್ತಾರೆ. ಹಾಗೂ ತಮ್ಮ ಅಜ್ಞಾನವನ್ನು ಅವನ ಮೇಲೆ ಆರೋಪಿಸುತ್ತಾರೆ. (ಚೌ/೧-೫)

**ದೋ – ಕಾಮ ಕ್ರೋಧ ಮದ ಲೋಭ ರತ ಗೃಹಾಸಕ್ತ ದುಖರೂಪ।**
**ತೇ ಕಿಮಿ ಜಾನಹಿಂ ರಘುಪತಿಹಿ ಮೂಢ ಪರೇ ತಮ ಕೂಪ॥ ೭೩(ಕ) ॥**
**ನಿರ್ಗುನ ರೂಪ ಸುಲಭ ಅತಿ ಸಗುನ ಜಾನ ನಹಿಂ ಕೋಇ।**
**ಸುಗಮ ಅಗಮ ನಾನಾ ಚರಿತ ಸುನಿ ಮುನಿ ಮನ ಭ್ರಮ ಹೋಇ॥ ೭೩(ಖ)॥**

ಕಾಮ, ಕ್ರೋಧ, ಲೋಭ, ಮದ ಇವುಗಳಲ್ಲಿ ಮುಳುಗಿದವರೂ, ದುಃಖರೂಪೀ ಸಂಸಾರ ವ್ಯಾಮೋಹದಲ್ಲಿ ಸಿಕ್ಕಿಬಿದ್ದವರೂ ಶ್ರೀರಘುನಾಥನನ್ನು ಎಂತು ಬಲ್ಲರು? ಆ ಮೂರ್ಖರಾದರೋ ಅಜ್ಞಾನಾಂಧಕಾರಕೂಪದಲ್ಲಿ ಬಿದ್ದಿರುತ್ತಾರೆ. ಭಗವಂತನ ನಿರ್ಗುಣರೂಪವು ಅತ್ಯಂತ ಸುಲಭ. ಆದರೆ ಸಗುಣರೂಪೀ ಲೀಲಾತತ್ತ್ವವನ್ನು ಅರಿಯುವುದು ಕಷ್ಟವೇ. ಪರಮೇಶ್ವರನ ಸಗುಣೋಪಾಸನೆ ಸರಳವಾದ್ದರಿಂದ ಸುಗಮವು. ಆದರೆ ಅವನ ಲೀಲಾರಹಸ್ಯವನ್ನು ತಿಳಿಯುವುದು ಅಗಮ್ಯ (ಕ್ಲಿಷ್ಟಕರ). ಆದ್ದರಿಂದ ಸಗುಣ ಲೀಲೆಗಳನ್ನು ನೋಡಿಯೂ, ಕೇಳಿಯೂ ಮುನಿಗಳ ಮನಸ್ಸೂ ಕೂಡ ಒಮ್ಮೊಮ್ಮೆ ಭ್ರಮೆಗೆ ವಶವಾಗುತ್ತದೆ. (ದೋ/೭೩ ಕ, ಖ)

## ಕಾಕಭುಶುಂಡಿಯ ಮೋಹ – ಶ್ರೀರಾಮನ ಮಹಿಮೆ

**ಚೌ – ಸುನು ಖಗೇಸ ರಘುಪತಿ ಪ್ರಭುತಾಈ। ಕಹಉಂ ಜಥಾಮತಿ ಕಥಾ ಸುಹಾಈ॥**
**ಜೆಹಿ ಬಿಧಿ ಮೋಹ ಭಯಉ ಪ್ರಭು ಮೋಹೀ। ಸೋಉ ಸಬ ಕಥಾ ಸುನಾವಉಂ ತೋಹೀ॥ ೧ ॥**
**ರಾಮ ಕೃಪಾ ಭಾಜನ ತುಮ್ಹ ತಾತಾ। ಹರಿ ಗುನ ಪ್ರೀತಿ ಮೋಹಿ ಸುಖದಾತಾ॥**
**ತಾತೇ ನಹಿಂ ಕಛು ತುಮ್ಹಹಿಂ ದುರಾವಉಂ। ಪರಮ ರಹಸ್ಯ ಮನೋಹರ ಗಾವಉಂ॥ ೨ ॥**
**ಸುನಹು ರಾಮ ಕರ ಸಹಜ ಸುಭಾಊ। ಜನ ಅಭಿಮಾನ ನ ರಾಖಹಿಂ ಕಾಊ॥**
**ಸಂಸೃತ ಮೂಲ ಸೂಲಪ್ರದ ನಾನಾ। ಸಕಲ ಸೋಕ ದಾಯಕ ಅಭಿಮಾನಾ॥ ೩ ॥**
**ತಾತೇ ಕರಹಿಂ ಕೃಪಾನಿಧಿ ದೂರೀ। ಸೇವಕ ಪರ ಮಮತಾ ಅತಿ ಭೂರೀ॥**
**ಜಿಮಿ ಸಿಸು ತನ ಬ್ರನ ಹೋಇ ಗೊಸಾಈಂ। ಮಾತು ಚಿರಾವ ಕಠಿನ ಕೀ ನಾಈಂ॥ ೪ ॥**

ಓ ಖಗರಾಜಾ! ಶ್ರೀರಘುನಾಥನ ಮಹಿಮೆಯನ್ನು ಕೇಳು. ನಾನು ನನ್ನ ಬುದ್ಧಿಗನುಸಾರ ಆ ಸುಂದರ ಕಥೆಯನ್ನು ವರ್ಣಿಸುವೆನು. ನಾನು ಒಮ್ಮೆ ಮೋಹಕ್ಕೆ ವಶನಾಗಿದ್ದೆ. ಆ ಕಥೆಯನ್ನು ವಿವರಿಸುತ್ತೇನೆ. ಅಯ್ಯಾ ! ನೀವು ಶ್ರೀರಾಮನ ಕೃಪಾಪಾತ್ರರು. ಭಗವದ್ಗುಣಗಳಲ್ಲಿ ಪ್ರೀತಿಯುಳ್ಳವರು. ಅದರಿಂದ ನೀವು ನನಗೆ ಸುಖಪ್ರದರು. ಆದ್ದರಿಂದ ನಿನ್ನಲ್ಲಿ ಯಾವುದನ್ನೂ ಮರೆಮಾಚದೆ, ಅತಿಗೋಪ್ಯವಾದ ಮನೋಹರ ಚರಿತ್ರೆಯನ್ನು ಘಂಟಾಘೋಷವಾಗಿ ಹಾಡುತ್ತೇನೆ. ಶ್ರೀರಾಮಚಂದ್ರನ ಸಹಜ ಸ್ವಭಾವವನ್ನು ಕೇಳು. ಅವನು ಎಂದಿಗೂ ತನ್ನ ಸೇವಕರಲ್ಲಿ ಅಭಿಮಾನವನ್ನು ಇರಗೊಡುವುದಿಲ್ಲ. ಏಕೆಂದರೆ, ದುರಭಿಮಾನವೇ ಜನನ-ಮರಣಗಳಿಗೆ ಮೂಲಕಾರಣವು. ಅದು ಅನೇಕ ಕ್ಲೇಷಗಳಿಗೂ ಶೋಕಗಳಿಗೂ ಜನ್ಮಕೊಡುವಂತಹುದು. ಆದ್ದರಿಂದ ಕೃಪಾನಿಧಿಯಾದ ಶ್ರೀರಾಮನು ಭಕ್ತರ ಗರ್ವವನ್ನು ದೂರಮಾಡುತ್ತಾನೆ. ಏಕೆಂದರೆ ಭಕ್ತರಮೇಲೆ ಪ್ರಭುವಿಗೆ ಅಪಾರವಾದ ಅನುರಾಗ. ಮಹಾತ್ಮಾ ! ಬಾಲಕನ ಶರೀರದಲ್ಲಿ ಗಾಯವಾಗಿ ಹಣ್ಣಾದಾಗ ತಾಯಿಯು ಎದೆಕಲ್ಲುಮಾಡಿಕೊಂಡು ಅದನ್ನು ಒಡೆದುಬಿಡುತ್ತಾಳೆ. (ಚೌ/೧-೪)

**ದೋ – ಜದಪಿ ಪ್ರಥಮ ದುಖ ಪಾವಇ ರೋವಇ ಬಾಲ ಅಧೀರ।**
**ಬ್ಯಾಧಿ ನಾಸ ಹಿತ ಜನನೀ ಗನತಿ ನ ಸೋ ಸಿಸು ಪೀರ॥ ೭೪ (ಕ) ॥**

**ತಿಮಿ ರಘುಪತಿ ನಿಜ ದಾಸ ಕರ ಹರಹಿಂ ಮಾನ ಹಿತ ಲಾಗಿ।**
**ತುಲಸಿದಾಸ ಐಸೇ ಪ್ರಭುಹಿ ಕಸ ನ ಭಜಹು ಭ್ರಮ ತ್ಯಾಗಿ ॥ ೭೪(ಖ)॥**

ಬಾಲಕನು ಶಸ್ತ್ರಚಿಕಿತ್ಸೆಯ ಸಮಯ ಮೊದಲಿಗೆ ಧೈರ್ಯಗೆಟ್ಟು, ದುಃಖದಿಂದ ಅರಚಿಕೊಂಡರೂ, ರೋಗ ನಿವಾರಣೆಗಾಗಿ ತಾಯಿ ಅವನ ಅಳುವನ್ನು ಲೆಕ್ಕಿಸುವುದಿಲ್ಲ. ಹಾಗೆಯೇ ಶ್ರೀರಘುನಾಥನು ತನ್ನ ಭಕ್ತನ ಒಳಿತಿಗಾಗಿ ಆತನ ಗರ್ವವನ್ನು ಹರಣಮಾಡುತ್ತಾನೆ. ಎಲೈ ಮನಸ್ಸೇ! ಭ್ರಮೆಯನ್ನು ಬಿಟ್ಟು ಅಂತಹ ಪ್ರಭುವನ್ನು ಏಕೆ ಭಜಿಸುವುದಿಲ್ಲ? ಎಂದು ತುಳಸೀದಾಸರು ಹೇಳುತ್ತಿದ್ದಾರೆ. (ದೋ/೭೪ ಕ, ಖ)

**ಚೌ – ರಾಮ ಕೃಪಾ ಆಪನಿ ಜಡತಾಈ। ಕಹಉಂ ಖಗೇಸ ಸುನಹು ಮನ ಲಾಈ॥**
**ಜಬ ಜಬ ರಾಮ ಮನುಜ ತನು ಧರಹೀಂ। ಭಕ್ತ ಹೇತು ಲೀಲಾ ಬಹು ಕರಹೀಂ ॥ ೧ ॥**
**ತಬ ತಬ ಅವಧಪುರೀ ಮೈಂ ಜಾಊಂ। ಬಾಲಚರಿತ ಬಿಲೋಕಿ ಹರಷಾಊಂ॥**
**ಜನ್ಮ ಮಹೋತ್ಸವ ದೇಖಉಂ ಜಾಈ। ಬರಷ ಪಾಂಚ ತಹಂ ರಹಉಂ ಲೊಭಾಈ॥ ೨ ॥**
**ಇಷ್ಟದೇವ ಮಮ ಬಾಲಕ ರಾಮಾ। ಸೋಭಾ ಬಪುಷ ಕೋಟಿ ಸತ ಕಾಮಾ॥**
**ನಿಜ ಪ್ರಭು ಬದನ ನಿಹಾರಿ ನಿಹಾರೀ। ಲೋಚನ ಸುಫಲ ಕರಉಂ ಉರಗಾರೀ॥ ೩ ॥**
**ಲಘು ಬಾಯಸ ಬಪು ಧರಿ ಹರಿ ಸಂಗಾ। ದೇಖಉಂ ಬಾಲಚರಿತ ಬಹು ರಂಗಾ ॥ ೪ ॥**

ಓ ಪಕ್ಷಿರಾಜ ಗರುಡಾ! ಶ್ರೀರಾಮನ ಕೃಪೆ ಮತ್ತು ನನ್ನ ಮೂರ್ಖತನವನ್ನೂ ಹೇಳುತ್ತೇನೆ. ದತ್ತಚಿತ್ತನಾಗಿ ಕೇಳು. ಶ್ರೀರಾಮಚಂದ್ರನು ಮಾನವನಾಗಿ ಅವತರಿಸಿ, ಭಕ್ತರಿಗಾಗಿ ಅನೇಕ ಲೀಲೆಗಳನ್ನು ಪ್ರದರ್ಶಿಸುತ್ತಿರುವಾಗ ನಾನು ಅಯೋಧ್ಯೆಗೆ ಹೋಗಿದ್ದೆ. ಅಲ್ಲಿಗೆ ಹೋಗಿ ನಾನು ಶ್ರೀರಾಮನ ಜನ್ಮೋತ್ಸವದಲ್ಲಿ ಪಾಲ್ಗೊಂಡೆನು. ಅವನ ಬಾಲಲೀಲೆಗಳನ್ನು ನೋಡಿ ಸಂತಸಪಟ್ಟೆನು. ಅವನ ಬಾಲಲೀಲೆಗಳಲ್ಲಿ ಮುಗ್ಧನಾಗಿ ಐದು ವರ್ಷಗಳವರೆಗೆ ಅಲ್ಲೆ ಇದ್ದೆ. ಬಾಲಕರೂಪೀ ಶ್ರೀರಾಮಚಂದ್ರನು ನನ್ನ ಇಷ್ಟದೈವವು. ಅವನ ಶರೀರವು ಕೋಟಿಮನ್ಮಥಸೌಂದರ್ಯ ಶೋಭಿತವು. ಗರುಡನೇ! ನಾನು ಪ್ರಭುವಿನ ಮುಖಾರವಿಂದವನ್ನು ನೋಡು-ನೋಡುತ್ತಾ ಕಣ್ಣುಗಳನ್ನು ಸಾರ್ಥಕಪಡಿಸಿಕೊಂಡೆ. ನಾನೊಂದು ಸಣ್ಣ ಕಾಗೆಯರೂಪವನ್ನಾಂತು ಭಗವಂತನೊಂದಿಗೆ ಓಡಾಡಿಕೊಂಡು ಅವನ ವಿವಿಧ ಬಾಲಚರಿತಗಳನ್ನು ನೋಡುತ್ತಾ ಇದ್ದೆ. (ಚೌ/೧-೪)

**ದೋ – ಲರಿಕಾಈಂ ಜಹಂ ಜಹಂ ಫಿರಹಿಂ ತಹಂ ತಹಂ ಸಂಗ ಉಡಾಉಂ।**
**ಜೂಠನಿ ಪರಇ ಅಜಿರ ಮಹಂ ಸೋ ಉಠಾಇ ಕರಿ ಖಾಉಂ॥ ೭೫ (ಕ)॥**
**ಏಕ ಬಾರ ಅತಿಸಯ ಸಬ ಚರಿತ ಕಿಏ ರಘುಬೀರ।**
**ಸುಮಿರತ ಪ್ರಭು ಲೀಲಾ ಸೋಇ ಪುಲಕಿತ ಭಯಉ ಸರೀರ ॥ ೭೫(ಖ)॥**

ಬಾಲ್ಯದಲ್ಲಿ ಅವನು ಓಡಾಡಿದಲ್ಲೆಲ್ಲ ನಾನು ಹಾರಿಹೋಗುತ್ತಿದ್ದೆ. ಅಂಗಳದಲ್ಲಿ ಬಿದ್ದ ಅವನ ಎಂಜಲನ್ನು ಎತ್ತಿ ಪ್ರಸಾದವೆಂದು ಸ್ವೀಕರಿಸುತ್ತಿದ್ದೆ. ಒಮ್ಮೆ ಶ್ರೀರಘುವೀರನು ಲೋಕೋತ್ತರ ಚರಿತ್ರವನ್ನು ತೋರಿದನು. ಪ್ರಭುವಿನ ಆ ಲೀಲೆಗಳನ್ನು ನೆನೆಸಿಕೊಂಡಾಗಲೇ ನನ್ನ ಶರೀರವು ಪುಳಕಗೊಂಡಿತು. (ದೋ/೭೫ ಕ, ಖ)

**ಚೌ – ಕಹಇ ಭುಸುಂಡಿ ಸುನಹು ಖಗನಾಯಕ। ರಾಮ ಚರಿತ ಸೇವಕ ಸುಖದಾಯಕ॥**
**ನೃಪ ಮಂದಿರ ಸುಂದರ ಸಬ ಭಾಂತೀ। ಖಚಿತ ಕನಕ ಮನಿ ನಾನಾ ಜಾತೀ॥ ೧ ॥**
**ಬರನಿ ನ ಜಾಇ ರುಚಿರ ಅಂಗನಾಈ। ಜಹಂ ಖೇಲಹಿಂ ನಿತ ಚಾರಿಉ ಭಾಈ॥**
**ಬಾಲಬಿನೋದ ಕರತ ರಘುರಾಈ। ಬಿಚರತ ಅಜಿರ ಜನನಿ ಸುಖದಾಈ॥ ೨ ॥**
**ಮರಕತ ಮೃದುಲ ಕಲೇವರ ಸ್ಯಾಮಾ। ಅಂಗ ಅಂಗ ಪ್ರತಿ ಛಬಿ ಬಹು ಕಾಮಾ॥**
**ನವ ರಾಜೀವ ಅರುನ ಮೃದು ಚರನಾ। ಪದಜ ರುಚಿರ ನಖ ಸಸಿ ದುತಿ ಹರನಾ ॥ ೩ ॥**
**ಲಲಿತ ಅಂಕ ಕುಲಿಸಾದಿಕ ಚಾರೀ। ನೂಪುರ ಚಾರು ಮಧುರ ರವಕಾರೀ॥**
**ಚಾರು ಪುರಟ ಮನಿ ರಚಿತ ಬನಾಈ। ಕಟಿ ಕಿಂಕಿನಿ ಕಲ ಮುಖರ ಸುಹಾಈ॥ ೪ ॥**

ಕಾಕಭುಶುಂಡಿಯವರು ಮತ್ತೆ ಹೇಳತೊಡಗಿದರು – ಓ ಖಗೇಶಾ! ಕೇಳು. ಶ್ರೀರಾಮನ ಚರಿತ್ರವು ಸೇವಕರಿಗೆ ಅತ್ಯಂತ ಸುಖಾನಂದದಾಯಕವು. ಅಯೋಧ್ಯೆಯ ಅರಮನೆಯು ಎಲ್ಲ ವಿಧದಿಂದಲೂ ಪರಮಸುಂದರ. ಅದು

ಸ್ವರ್ಣನಿರ್ಮಿತವಾಗಿದ್ದು, ನಾನಾ ಪ್ರಕಾರದ ರತ್ನಗಳಿಂದ ವಿರಾಜಿಸುತ್ತಿತ್ತು. ಪ್ರತಿದಿನವು ನಾಲ್ಕೂ ಸೋದರರೂ ಆಡುತ್ತಿದ್ದ ಆ ರಾಜಾಂಗಣದ ಶೋಭೆ ವರ್ಣನಾತೀತ. ತಾಯಂದಿರಿಗೆ ಆನಂದವನ್ನೀಯುತ್ತಾ ಬಾಲ್ಯವಿನೋದ ಕ್ರೀಡೆಗಳನ್ನು ನಡೆಸುತ್ತಾ ಶ್ರೀರಘುನಾಥನು ಅಲ್ಲಿ ಸಂಚರಿಸುತ್ತಿದ್ದನು. ನೀಲಮಣಿಯಂತೆ ಸಮಾನವಾದ ಶ್ರೀರಾಮನ ಶ್ಯಾಮಲ ಸುಂದರಶರೀರದ ಪ್ರತ್ಯಂಗಗಳಲ್ಲಿಯೂ ಅನಂಗನ ಕಾಂತಿ ತುಳುಕುತ್ತಿತ್ತು. ನವರಾಜೀವಾರುಣಮೃದು ಚರಣಗಳು. ಮೃದುಮನೋಹರ ಕಾಲ್ಬೆರಳುಗಳು. ನಖ ಜ್ಯೋತಿಯು ಚಂದ್ರನ ಕಾಂತಿಯನ್ನು ಧಿಕ್ಕರಿಸುವಂತಿತ್ತು. ಪಾದಪದ್ಮಗಳಲ್ಲಿ ವಜ್ರಾಂಕುಶಧ್ವಜಕಮಲ ಚಿನ್ಹೆಗಳು ಅತ್ಯಂತ ಮನೋಜ್ಞವಾಗಿದ್ದವು. ಚರಣಗಳಲ್ಲಿ ಮಧುರ ಧ್ವನಿಗೈಯ್ಯುವ ಸುಂದರ ನೂಪುರಗಳಿವೆ. ರತ್ನಖಚಿತವಾದ ಚಿನ್ನದ ಡಾಬಿನಿಂದ ಕಿಂಕಿಣಿಯ ಕಲರವ ಕೇಳಿಸುತ್ತಿತ್ತು. (ಚೌ/೧-೪)

**ದೋ – ರೇಖಾ ತ್ರಯ ಸುಂದರ ಉದರ ನಾಭೀ ರುಚಿರ ಗ೦ಭೀರ।**
**ಉರ ಆಯತ ಭ್ರಾಜತ ಬಿಬಿಧಿ ಬಾಲ ಬಿಭೂಷನ ಚೀರ ॥ ೭೬ ॥**

ಆತನ ಉದರದಲ್ಲಿ ತ್ರಿವಳಿಗಳಿದ್ದು, ನಾಭಿಯು ಚೆಲುವಾಗಿ ಗಂಭೀರವಾಗಿದೆ. ವಿಶಾಲವಾದ ವಕ್ಷಸ್ಥಳದ ಮೇಲೆ ಅರಳೆಲೆ, ಮಾಗಾಯಿಯಂತಹ ಅನೇಕ ವಿಧವಾದ ಬಾಲಕರ ಒಡವೆ ವಸ್ತ್ರಗಳಿದ್ದವು. (ದೋ/೭೬)

**ಚೌ – ಅರುನ ಪಾನಿ ನಖ ಕರಜ ಮನೋಹರ। ಬಾಹು ಬಿಸಾಲ ಬಿಭೂಷನ ಸುಂದರ ॥**
**ಕಂಧ ಬಾಲ ಕೇಹರಿ ದರ ಗ್ರೀವಾ। ಚಾರು ಚಿಬುಕ ಆನನ ಛಬಿ ಸೀ೦ವಾ ॥ ೧ ॥**
**ಕಲಬಲ ಬಚನ ಅಧರ ಅರುನಾರೇ। ದುಇ ದುಇ ದಸನ ಬಿಸದ ಬರ ಬಾರೇ॥**
**ಲಲಿತ ಕಪೋಲ ಮನೋಹರ ನಾಸಾ। ಸಕಲ ಸುಖದ ಸಸಿ ಕರ ಸಮ ಹಾಸಾ॥ ೨ ॥**
**ನೀಲ ಕಂಜ ಲೋಚನ ಭವ ಮೋಚನ। ಭ್ರಾಜತ ಭಾಲ ತಿಲಕ ಗೋರೋಚನ ॥**
**ಬಿಕಟ ಭೃಕುಟಿ ಸಮ ಶ್ರವನ ಸುಹಾಏ। ಕುಂಚಿತ ಕಚ ಮೇಚಕ ಛಬಿ ಛಾಏ॥ ೩ ॥**
**ಪೀತ ಝೀನಿ ಝುಗುಲೀ ತನ ಸೋಹೀ। ಕಿಲಕನಿ ಚಿತವನಿ ಭಾವತಿ ಮೋಹೀ ॥**
**ರೂಪ ರಾಸಿ ನೃಪ ಅಜಿರ ಬಿಹಾರೀ। ನಾಚಹಿ೦ ನಿಜ ಪ್ರತಿಬಿಂಬ ನಿಹಾರೀ ॥ ೪ ॥**
**ಮೊಹಿ ಸನ ಕರಹಿ೦ ಬಿಬಿಧಿ ಬಿಧಿ ಕ್ರೀಡಾ। ಬರನತ ಮೋಹಿ ಹೋತಿ ಅತಿ ಬ್ರೀಡಾ॥**
**ಕಿಲಕತ ಮೋಹಿ ಧರನ ಜಬ ಧಾವಹಿ೦। ಚಲಉ೦ ಭಾಗಿ ತಬ ಪೂಪ ದೆಖಾವಹಿ೦॥ ೫ ॥**

ಕೆಂಪಾದ ಅಂಗೈಗಳು, ಬೆರಳು ಮತ್ತು ಉಗುರುಗಳು ಅತೀವ ಮನೋಹರವಾಗಿದ್ದವು. ದೀರ್ಘವಾದ ಭುಜಗಳಲ್ಲಿ ಆಕರ್ಷಕವಾದ ಸುಂದರ ಆಭೂಷಣಗಳು ವಿರಾಜಿಸುತ್ತಿದ್ದವು. ಸಿಂಹಕಿಶೋರಸದೃಶ ಭುಜಸ್ಕಂಧಗಳು, ಶಂಖದಂತೆ ಮೂರು ಗೆರೆಗಳುಳ್ಳ ಕಂಠ, ಮನೋಜ್ಞ ಚುಬುಕ, ಮುಖಲಾಲಿತ್ಯವಂತೂ ವರ್ಣಿಸಲಸದಳ. ಮುದ್ದಾದ ತೊದಲುನುಡಿ, ಕೆಂಪಾದ ಮಧುರಾಧರಗಳು, ಉಜ್ವಲ, ಸುಂದರ ಸಣ್ಣ-ಸಣ್ಣ ಎರಡೆರಡು ಹಾಲು ಹಲ್ಲುಗಳಿವೆ. ಲಲಿತ ಕಪೋಲ, ಸಂಪಿಗೆಮೊಗ್ಗಿನಂತಿರುವ ನೀಳಾದ ಸುಂದರ ನಾಸಿಕ, ಎಲ್ಲ ಸುಖಗಳನ್ನುಂಟುಮಾಡುವ ಪೂರ್ಣಚಂದ್ರನ ಕಿರಣಗಳಂತಿರುವ ಮುಗುಳ್ನಗೆ. ನೀಲ ಕಮಲದಂತೆ ಕಮನೀಯವಾದ ಕಣ್ಣುಗಳ ಶೋಭೆ ಭವಮೋಚಕವು. ಲಲಾಟದಲ್ಲಿ ತಿದ್ದಿದ ಗೋರೋಚನ ತಿಲಕ ಶೋಭಿತವಾಗಿದೆ. ಧನುರಾಕಾರ ಶೋಭಿತವಾದ ಹುಬ್ಬುಗಳು, ಶೃಂಗಾರವನ್ನು ಹೊರಸೂಸುವ ಸಮಶ್ರವಣ(ಕಿವಿ)ಗಳು. ಮನೋಜ್ಞವಾದ ಕಾಡಿಗೆಕಪ್ಪಾದ ಗುಂಗುರುಕೂದಲುಗಳ ಕಾಂತಿ ಎಲ್ಲೆಡೆಗಳಲ್ಲಿ ಪಸರಿಸಿತ್ತು. ಹಳದಿಯ ತೆಳುವಾದ ಶಲ್ಯ ಆತನ ಶರೀರದಲ್ಲಿ ಶೋಭಿಸುತ್ತಿತ್ತು. ಆತನ ನೋಟ, ನಗೆ, ಕಿಲಗುಟ್ಟುವಿಕೆ, ಕಿಲಕಿಲನಾದ, ನಾಟ್ಯ ನನಗೆ ಅತ್ಯಂತ ಪ್ರಿಯವಾಗಿದೆ. ದಶರಥಮಹಾರಾಜನ ಅರಮನೆಯಂಗಳದಲ್ಲಿ ವಿಹರಿಸುವ ರೂಪರಾಶಿಯಾದ ಶ್ರೀರಾಮಚಂದ್ರನು ತನ್ನ ಪಡಿನೆರಳನ್ನು ಕಂಡು ಕುಣಿದಾಡುತ್ತಿದ್ದನು. ನನ್ನೊಂದಿಗೆ ಅನೇಕ ಪ್ರಕಾರದ ಬಾಲ್ಯಕ್ರೀಡೆಗಳನ್ನು ಆಡುತ್ತಿದ್ದನು. ಅವುಗಳನ್ನು ವರ್ಣಿಸಲಾರದೆ ನಾನು ನಾಚಿ ತಲೆತಗ್ಗಿಸುತ್ತಿದ್ದೆ. ಕಿಲಗುಟ್ಟುತ್ತಾ ಅವನು ನನ್ನನ್ನು ಹಿಡಿಯಲು ಓಡಿಬಂದಾಗ ಕಾಗೆಸ್ವಭಾವದಿಂದ ನಾನು ದೂರ ಹಾರಿಹೋಗುತ್ತಿದ್ದೆ. ಆಗ ನನಗೆ ಕಜ್ಜಾಯ ತೋರಿಸುತ್ತಿದ್ದನು. (ಚೌ/೧-೫)

**ದೋ – ಆವತ ನಿಕಟ ಹ೦ಸಹಿ೦ ಪ್ರಭು ಭಾಜತ ರುದನ ಕರಾಹಿ೦।**
**ಜಾಉ೦ ಸಮೀಪ ಗಹನ ಪದ ಫಿರಿ ಫಿರಿ ಚಿತಇ ಪರಾಹಿ೦॥ ೭೭ (ಕ)॥**
**ಪ್ರಾಕೃತ ಸಿಸು ಇವ ಲೀಲಾ ದೇಖಿ ಭಯಉ ಮೊಹಿ ಮೋಹ।**
**ಕವನ ಚರಿತ್ರ ಕರತ ಪ್ರಭು ಚಿದಾನಂದ ಸಂದೋಹ ॥ ೭೭(ಖ)॥**

ನಾನು ಹತ್ತಿರ ಬಂದರೆ ಪ್ರಭುವು ನಗುತ್ತಿದ್ದನು. ದೂರ ಓಡಿಹೋದರೆ ಅಳುತ್ತಿದ್ದನು. ನಾನು ಆತನ ಚರಣಗಳನ್ನು ಸ್ಪರ್ಶಿಸಲು ಹತ್ತಿರ ಬಂದಾಗ ಭಯವನ್ನು ನಟಿಸುತ್ತಾ ಹಿಂದಹಿಂದಕ್ಕೆ ಹೋಗುತ್ತಾ ನನ್ನನ್ನೇ ನೋಡುತ್ತಾ ಓಡುತ್ತಿದ್ದನು. ಸಚ್ಚಿದಾನಂದಘನನಾದ ಈ ಪ್ರಭುವು ಸಾಧಾರಣ ಬಾಲಕರಂತೆ ಲೀಲೆಯನ್ನು ಪ್ರದರ್ಶಿಸುತ್ತಿರುವನಲ್ಲ! ಎಂದು ನನಗೆ ಮೋಹ ಉಂಟಾಯಿತು. (ದೋ/೭೭ ಕ, ಖ)

**ಚೌ – ಏತನಾ ಮನ ಆನತ ಖಗರಾಯಾ । ರಘುಪತಿ ಪ್ರೇರಿತ ಬ್ಯಾಪೀ ಮಾಯಾ ॥**
**ಸೋ ಮಾಯಾ ನ ದುಖದ ಮೊಹಿ ಕಾಹೀಂ । ಆನ ಜೀವ ಇವ ಸಂಸೃತ ನಾಹೀಂ ॥ ೧ ॥**
**ನಾಥ ಇಹಾಁ ಕಛು ಕಾರನ ಆನಾ । ಸುನಹು ಸೋ ಸಾವಧಾನ ಹರಿಜಾನಾ ॥**
**ಗ್ಯಾನ ಅಖಂಡ ಏಕ ಸೀತಾಬರ । ಮಾಯಾ ಬಸ್ಯ ಜೀವ ಸಚರಾಚರ ॥ ೨ ॥**
**ಜೌಂ ಸಬ ಕೇಂ ರಹ ಗ್ಯಾನ ಏಕರಸ । ಈಸ್ವರ ಜೀವಹಿ ಭೇದ ಕಹಹು ಕಸ ॥**
**ಮಾಯಾ ಬಸ್ಯ ಜೀವ ಅಭಿಮಾನೀ । ಈಸ ಬಸ್ಯ ಮಾಯಾ ಗುನಖಾನೀ ॥ ೩ ॥**
**ಪರಬಸ ಜೀವ ಸ್ವಬಸ ಭಗವಂತಾ । ಜೀವ ಅನೇಕ ಏಕ ಶ್ರೀಕಂತಾ ॥**
**ಮುಧಾ ಭೇದ ಜದ್ಯಪಿ ಕೃತ ಮಾಯಾ । ಬಿನು ಹರಿ ಜಾಇ ನ ಕೋಟಿ ಉಪಾಯಾ ॥ ೪ ॥**

ಓ ಪಕ್ಷಿರಾಜಾ! ಮನಸ್ಸಿನಲ್ಲಿ ಇಷ್ಟುಶಂಕೆ ಹುಟ್ಟಿದ್ದೇ ತಡ, ಶ್ರೀರಾಮನಿಂದ ಪ್ರೇರಿತವಾದ ಮಾಯೆ ನನ್ನನ್ನು ಆವರಿಸಿತು. ಆದರೆ ಆ ಮಾಯೆಯು ನನಗೆ ದುಃಖಪ್ರದವಾಗಲಿಲ್ಲ. ಇತರ ಜೀವಿಗಳಂತೆ ಅದು ನನ್ನನ್ನು ಸಂಸಾರಪಾಶದಲ್ಲಿ ತೊಡಗಿಸಲಿಲ್ಲ. ಪ್ರಭು ಇದಕ್ಕೆ ಬೇರೊಂದು ಕಾರಣವಿದೆ. ಹರಿವಾಹನ ಓ ಗರುಡಾ! ಸಾವಧಾನವಾಗಿ ಕೇಳು. ಸೀತಾಪತಿಯಾದ ಶ್ರೀರಾಮನು ಅಖಂಡನೂ, ಅದ್ವಿತೀಯನೂ, ಜ್ಞಾನಸ್ವರೂಪನಾಗಿರುವನು. ಜಡ-ಚೇತನ (ಚರಾಚರ) ಜೀವಿಗಳೆಲ್ಲವೂ ಮಾಯಾವಶವರ್ತಿಗಳೇ. ಜಡ-ಚೇತನ ಜೀವಿಗಳಿಗೆ ಅಖಂಡ ಜ್ಞಾನವಿದ್ದರೆ ಜೀವನಿಗೂ, ಈಶ್ವರನಿಗೂ ಭೇದವೆಲ್ಲಿಯದು? ಅಭಿಮಾನಿಯಾದ ಜೀವನು ಮಾಯಾ ಅಧೀನನು. ಸತ್ತ್ವರಜತಮೋಗುಣಮಯವಾದ ಮಾಯೆ ಈಶ್ವರಕ್ಕಧೀನವು. ಜೀವನು ಪರತಂತ್ರನು, ಭಗವಂತನು ಸ್ವತಂತ್ರನು. ಜೀವರು ಅನೇಕ, ಶ್ರೀಪತಿ ಭಗವಂತ ಒಬ್ಬನೇ; ಏಕಮೇವಾದ್ವಿತೀಯ. ಮಾಯಾನಿರ್ಮಿತವಾದ ಈ ಭೇದವು ಅಸತ್ಯವಾಗಿದ್ದರೂ, ಅದು ಭಗವಂತನ ಭಜನೆಯಿಲ್ಲದೆ ಕೋಟಿ ಉಪಾಯಗಳನ್ನು ಮಾಡಿದರೂ ತೊಲಗದು. (ಚೌ/೧-೪)

**ದೋ – ರಾಮಚಂದ್ರ ಕೇ ಭಜನ ಬಿನು ಜೋ ಚಹ ಪದ ನಿರ್ಬಾನ ।**
**ಗ್ಯಾನವಂತ ಅಪಿ ಸೋ ನರ ಪಸು ಬಿನು ಪೂಁಛ ಬಿಷಾನ ॥ ೭೮ (ಕ)॥**
**ರಾಕಾಪತಿ ಷೋಡಸ ಉಅಹಿಂ ತಾರಾಗನ ಸಮುದಾಇ ।**
**ಸಕಲ ಗಿರಿನ್ಹ ದವ ಲಾಇಅ ಬಿನು ರಬಿ ರಾತಿ ನ ಜಾಇ ॥ ೭೮(ಖ)॥**

ಶ್ರೀರಾಮಚಂದ್ರನ ಭಜನೆಯಿಲ್ಲದೆ ಮೋಕ್ಷಪದವನ್ನು ಬಯಸುವಾತನು ಜ್ಞಾನಿಯಾದರೂ ಕೂಡ ಬಾಲ-ಕೊಂಬಿಲ್ಲದ ಪಶುವೇ ಸರಿ. ಸಮಸ್ತ ತಾರಾಗಣಗಳಿಂದ ಒಡಗೂಡಿ ಹದಿನಾರು ಕಲೆಗಳಿಂದ ಪೂರ್ಣಚಂದ್ರನು ಉದಿಸಿದರೂ, ಇರುವ ಎಲ್ಲ ಪರ್ವತಗಳಲ್ಲಿ ದಾವಾಗ್ನಿಯನ್ನು ಉರಿಸಿದರೂ, ಸೂರ್ಯೋದಯವಾಗದೆ ರಾತ್ರಿ ತೊಲಗದು. (ದೋ/೭೮ ಕ, ಖ)

**ಚೌ – ಐಸೆಹಿಂ ಹರಿ ಬಿನು ಭಜನ ಖಗೇಸಾ । ಮಿಟಇ ನ ಜೀವನ್ಹ ಕೇರ ಕಲೇಸಾ ॥**
**ಹರಿ ಸೇವಕಹಿ ನ ಬ್ಯಾಪ ಅಬಿದ್ಯಾ । ಪ್ರಭು ಪ್ರೇರಿತ ಬ್ಯಾಪಇ ತೆಹಿ ಬಿದ್ಯಾ ॥ ೧ ॥**
**ತಾತೇ ನಾಸ ನ ಹೋಇ ದಾಸ ಕರ । ಭೇದ ಭಗತಿ ಬಾಢಇ ಬಿಹಂಗಬರ ॥**
**ಭ್ರಮ ತೇಂ ಚಕಿತ ರಾಮ ಮೊಹಿ ದೇಖಾ । ಬಿಹಁಸೇ ಸೋ ಸುನು ಚರಿತ ಬಿಸೇಷಾ ॥ ೨ ॥**
**ತೆಹಿ ಕೌತುಕ ಕರ ಮರಮು ನ ಕಾಹೂಁ । ಜಾನಾ ಅನುಜ ನ ಮಾತು ಪಿತಾಹೂಁ ॥**
**ಜಾನು ಪಾನಿ ಧಾಏ ಮೊಹಿ ಧರನಾ । ಸ್ಯಾಮಲ ಗಾತ ಅರುನ ಕರ ಚರನಾ ॥ ೩ ॥**
**ತಬ ಮೈಂ ಭಾಗಿ ಚಲೆಉँ ಉರಗಾರೀ । ರಾಮ ಗಹನ ಕಹಁ ಭುಜಾ ಪಸಾರೀ ॥**
**ಜಿಮಿ ಜಿಮಿ ದೂರಿ ಉಡಾಉँ ಅಕಾಸಾ । ತಹಁ ಭುಜ ಹರಿ ದೇಖಉँ ನಿಜ ಪಾಸಾ ॥ ೪ ॥**

ಓ ಪಕ್ಷಿರಾಜಾ! ಅಂತೆಯೇ ಶ್ರೀಹರಿಭಜನೆಯಿಲ್ಲದೆ ಜೀವಿಗಳ ಕ್ಲೇಶಗಳು ತೊಲಗದು. ಹರಿಭಕ್ತರನ್ನು ಅಜ್ಞಾನರೂಪೀ ಅವಿದ್ಯೆಯು ವ್ಯಾಪಿಸದು. ಪ್ರಭು ಪ್ರೇರಣೆಯಿಂದ ಅವರಿಗೆ ಜ್ಞಾನರೂಪೀ ವಿದ್ಯೆಯು ಉದಯಿಸುತ್ತದೆ. ಓ ಖಗರಾಜಾ! ಈ ಕಾರಣದಿಂದಲೇ ಹರಿಭಕ್ತರ ನಾಶವಾಗದು. ಅವರಲ್ಲಿ ಭೇದಭಕ್ತಿ(ಸೇವ್ಯ-ಸೇವಕಭಾವ) ವರ್ಧಿಸುತ್ತದೆ. ನಾನು ಭ್ರಮೆಗೊಳಗಾಗಿ ಆಶ್ಚರ್ಯಚಕಿತನಾದುದನ್ನು ಕಂಡು ಶ್ರೀರಾಮಚಂದ್ರನು ನಕ್ಕುಬಿಟ್ಟನು. ಆ ವಿಶೇಷ ಲೀಲಾವಿಲಾಸವನ್ನು ಕೇಳು. ಈ ಕೌತುಕಲೀಲಾರಹಸ್ಯವನ್ನು ಅವನ ಸೋದರರಾಗಲೀ, ತಂದೆ-ತಾಯಿಯರಾಗಲೀ ಅರಿಯರು. ಅಷ್ಟೇ ಅಲ್ಲ, ಇತರರು ಯಾರೂ ತಿಳಿಯದೇ ಹೋದರು. ಆ ಶ್ಯಾಮಲಗಾತ್ರನೂ, ಅರುಣಚರಣನೂ ಆದ ಬಾಲರಾಮನು ಅಂಬೆಗಾಲಿಟ್ಟುಕೊಂಡು ನನ್ನನ್ನು ಹಿಡಿಯಲೂ ಪ್ರಯತ್ನಿಸಿದನು. ಉರಗವೈರಿಯೇ! ನಾನು ಆಗ ಓಡಿಬಿಟ್ಟೆ. ಶ್ರೀರಾಮನು ನನ್ನನ್ನು ಹಿಡಿದುಕೊಳ್ಳಲು ತನ್ನ ಭುಜವನ್ನು ಚಾಚಿದನು. ನಾನು ಆಕಾಶದಲ್ಲಿ ದೂರ-ದೂರ ಹಾರಿದಂತೆಲ್ಲ ಶ್ರೀಹರಿಯ ಭುಜವು ನನ್ನ ಹತ್ತಿರವೇ ಬರುತ್ತಿತ್ತು. (ಇದು ಭಗವಂತನ ಸರ್ವವ್ಯಾಪಕತ್ವವನ್ನು ಸೂಚಿಸುತ್ತದೆ.) (ಚೌ/೧-೪)

**ದೋ – ಬ್ರಹ್ಮಲೋಕ ಲಗಿ ಗಯಉ ಮೈಂ ಚಿತಯಉ ಪಾಛ ಉಡಾತ ।**
**ಜುಗ ಅಂಗುಲ ಕರ ಬೀಚ ಸಬ ರಾಮ ಭುಜಹಿ ಮೋಹಿ ತಾತ ॥ ೭೯ (ಕ)॥**
**ಸಪ್ತಾಬರನ ಭೇದ ಕರಿ ಜಹಾಂ ಲಗೇಂ ಗತಿ ಮೋರಿ ।**
**ಗಯಉಂ ತಹಾಂ ಪ್ರಭು ಭುಜ ನಿರಖಿ ಬ್ಯಾಕುಲ ಭಯಉಂ ಬಹೋರಿ ॥ ೭೯(ಖ)॥**

ನಾನು ಹಾರುತ್ತಾ-ಹಾರುತ್ತಾ ಬ್ರಹ್ಮಲೋಕದವರೆಗೆ ಹೋದೆ. ಹಿಂದಿರುಗಿ ನೋಡಿದಾಗ ಶ್ರೀರಾಮನ ಭುಜಕ್ಕೂ ನನಗೂ ಎರಡೇ ಅಂಗುಲ ಅಂತರವಿತ್ತು. ಪೃಥ್ವಿ, ವಾಯು ಮುಂತಾದ ಏಳು ಆವರಣಗಳನ್ನು ದಾಟಿ, ನನಗೆ ಶಕ್ತಿ ಇದ್ದಷ್ಟು ನಾನು ಹೋದಲ್ಲೆಲ್ಲ ನನ್ನ ಹಿಂದೆಯೇ ಪ್ರಭುವಿನ ಭುಜವಿರುವುದನ್ನು ನೋಡಿ, ನಾನು ವ್ಯಾಕುಲಗೊಂಡೆನು. (ದೋ/೭೯ ಕ, ಖ)

**ಚೌ – ಮೂದೆಉಂ ನಯನ ತ್ರಸಿತ ಜಬ ಭಯಊಂ । ಪುನಿ ಚಿತವತ ಕೋಸಲಪುರ ಗಯಊಂ ॥**
**ಮೋಹಿ ಬಿಲೋಕಿ ರಾಮ ಮುಸುಕಾಹೀಂ । ಬಿಹಂಸತ ತುರತ ಗಯಉಂ ಮುಖ ಮಾಹೀಂ ॥ ೧ ॥**
**ಉದರ ಮಾಝು ಸುನು ಅಂಡಜ ರಾಯಾ । ದೇಖೆಉಂ ಬಹು ಬ್ರಹ್ಮಾಂಡ ನಿಕಾಯಾ ॥**
**ಅತಿ ಬಿಚಿತ್ರ ತಹ್ ಲೋಕ ಅನೇಕಾ । ರಚನಾ ಅಧಿಕ ಏಕ ತೇ ಏಕಾ ॥ ೨ ॥**
**ಕೋಟಿನ್ಹ ಚತುರಾನನ ಗೌರೀಸಾ । ಅಗನಿತ ಉಡಗನ ರಬಿ ರಜನೀಸಾ ॥**
**ಅಗನಿತ ಲೋಕಪಾಲ ಜಮ ಕಾಲಾ । ಅಗನಿತ ಭೂಧರ ಭೂಮಿ ಬಿಸಾಲಾ ॥ ೩ ॥**
**ಸಾಗರ ಸರಿ ಸರ ಬಿಪಿನ ಅಪಾರಾ । ನಾನಾ ಭಾಂತಿ ಸೃಷ್ಟಿ ಬಿಸ್ತಾರಾ ॥**
**ಸುರ ಮುನಿ ಸಿದ್ಧ ನಾಗ ನರ ಕಿನ್ನರ । ಚಾರಿ ಪ್ರಕಾರ ಜೀವ ಸಚರಾಚರ ॥ ೪ ॥**

ನಾನು ಭಯಗೊಂಡಾಗ ಕಣ್ಣುಮುಚ್ಚಿಕೊಂಡೇ. ಮತ್ತೆ ಕಣ್ಣುತೆರೆದು ನೋಡಿದಾಗ ಅಯೋಧ್ಯಾನಗರದಲ್ಲಿದ್ದೆ. ನನ್ನನ್ನು ನೋಡಿ ಶ್ರೀರಾಮನು ಮುಗುಳ್ನಗತೊಡಗಿದನು. ಅವನು ನಕ್ಕಾಗ ಆಕರ್ಷಿತನಾಗಿ ನಾನು ಅವನ ಬಾಯೊಳಗೆ ಪ್ರವೇಶಿಸಿದೆನು. ಓ ಖಗರಾಜಾ! ಕೇಳು. ನಾನು ಆತನ ಉದರದಲ್ಲಿ ಅನೇಕ ಬ್ರಹ್ಮಾಂಡ ಸಮೂಹವನ್ನೇ ನೋಡಿದೆನು. ಆ ಬ್ರಹ್ಮಾಂಡಗಳಲ್ಲಿ ಅನೇಕ ವಿಚಿತ್ರಲೋಕಗಳನ್ನು ಕಂಡೆನು. ಅವುಗಳ ರಚನಾಸೌಷ್ಠವ ಒಂದಕ್ಕಿಂತ ಒಂದು ಮಿಗಿಲಾಗಿತ್ತು. ಕೋಟಿಗಟ್ಟಲೆ ಚತುರ್ಮುಖಬ್ರಹ್ಮರೂ, ಪರಮೇಶ್ವರರೂ, ಅಸಂಖ್ಯಾತ ತಾರಾಗಣಗಳೂ, ಸೂರ್ಯ-ಚಂದ್ರರೂ, ಲೆಕ್ಕವಿಲ್ಲದ ಲೋಕಪಾಲರೂ, ಯಮರೂ ಮತ್ತು ಕಾಲರೂ, ಎಣಿಕೆಗೆ ಮೀರಿದ ವಿಶಾಲ ಪರ್ವತಗಳೂ, ಭೂಮಿಗಳೂ, ಅಸಂಖ್ಯಾತ ಸಮುದ್ರಗಳೂ, ನದಿಗಳೂ, ಕೆರೆ-ಕಟ್ಟೆಗಳೂ, ವನಗಳೂ, ನಾನಾವಿಧವಾದ ಸೃಷ್ಟಿಯ ವಿಸ್ತಾರವನ್ನು ನೋಡಿದೆನು. ದೇವತೆಗಳೂ, ಮುನಿಗಳೂ, ಸಿದ್ಧರೂ, ನಾಗರೂ, ಕಿನ್ನರರೂ, ಮನುಷ್ಯರೂ, ಚತುರ್ವಿಧ ಸ್ಥಾವರ ಜಂಗಮ ಜೀವಿಗಳನ್ನು ನೋಡಿದೆನು. (ಚೌ/೧-೪)

**ದೋ – ಜೋ ನಹಿಂ ದೇಖಾ ನಹಿಂ ಸುನಾ ಜೋ ಮನಹೂಂ ನ ಸಮಾಇ ।**
**ಸೋ ಸಬ ಅದ್ಭುತ ದೇಖೆಉಂ ಬರನಿ ಕವನಿ ಬಿಧಿ ಜಾಯಿ ॥ ೮೦ (ಕ)॥**
**ಏಕ ಏಕ ಬ್ರಹ್ಮಾಂಡ ಮಹುಂ ರಹಉಂ ಬರಷ ಸತ ಏಕ ।**
**ಏಹಿ ಬಿಧಿ ದೇಖತ ಫಿರಉಂ ಮೈಂ ಅಂಡ ಕಟಾಹ ಅನೇಕ ॥ ೮೦(ಖ)॥**

ಎಂದೂ ಕಾಣದುದನ್ನು, ಎಂದೂ ಕೇಳದುದನ್ನು, ಕಲ್ಪನೆಗೂ ಬಾರದ ಅದ್ಭುತ, ಆಶ್ಚರ್ಯಕರವಾದ ಸೃಷ್ಟಿಯನ್ನು ನಾನು ನೋಡಿದೆನು. ಅದನ್ನು ಹೇಗೆ ತಾನೆ ವರ್ಣಿಸುವುದು? ಒಂದೊಂದು ಬ್ರಹ್ಮಾಂಡದಲ್ಲಿ ನಾನು ನೂರು-ನೂರು ವರ್ಷಗಳನ್ನು ಕಳೆದೆ. ಹೀಗೆ ನಾನು ಅನೇಕ ಬ್ರಹ್ಮಾಂಡಗಳನ್ನು ನೋಡುತ್ತಾ ಸಂಚರಿಸಿದೆ. (ದೋ/೮೦ ಕ, ಖ)

**ಚೌ – ಲೋಕ ಲೋಕ ಪ್ರತಿ ಭಿನ್ನ ಬಿಧಾತಾ। ಭಿನ್ನ ಬಿಷ್ನು ಸಿವ ಮನು ದಿಸಿತ್ರಾತಾ॥**
**ನರ ಗಂಧರ್ಬ ಭೂತ ಬೇತಾಲಾ। ಕಿನ್ನರ ನಿಸಿಚರ ಪಸು ಖಗ ಬ್ಯಾಲಾ॥೧॥**
**ದೇವ ದನುಜ ಗನ ನಾನಾ ಜಾತೀ। ಸಕಲ ಜೀವ ತಹ್ ಆನಹಿ ಭಾಂತೀ॥**
**ಮಹಿ ಸರಿ ಸಾಗರ ಸರ ಗಿರಿ ನಾನಾ। ಸಬ ಪ್ರಪಂಚ ತಹ್ ಆನಇ ಆನಾ॥೨॥**
**ಅಂಡಕೋಸ ಪ್ರತಿ ಪ್ರತಿ ನಿಜ ರೂಪಾ। ದೇಖೆಉ್ ಜಿನಸ ಅನೇಕ ಅನೂಪಾ॥**
**ಅವಧಪುರೀ ಪ್ರತಿ ಭುವನ ನಿನಾರೀ। ಸರಜೂ ಭಿನ್ನ ಭಿನ್ನ ನರ ನಾರೀ॥೩॥**
**ದಸರಥ ಕೌಸಲ್ಯಾ ಸುನು ತಾತಾ। ಬಿಬಿಧ ರೂಪ ಭರತಾದಿಕ ಭ್ರಾತಾ॥**
**ಪ್ರತಿ ಬ್ರಹ್ಮಾಂಡ ರಾಮ ಅವತಾರಾ। ದೇಖಉ್ ಬಾಲಬಿನೋದ ಅಪಾರಾ॥೪॥**

ಪ್ರತಿಯೊಂದು ಲೋಕದಲ್ಲಿಯೂ ಬೇರೆ-ಬೇರೆ ಬ್ರಹ್ಮರೂ, ಶಿವರೂ, ವಿಷ್ಣುಗಳೂ, ಮನುಗಳೂ, ದಿಕ್ಪಾಲರೂ, ಮನುಷ್ಯರೂ, ಗಂಧರ್ವರೂ, ಭೂತ, ಬೇತಾಳರೂ, ಕಿನ್ನರರೂ, ರಾಕ್ಷಸರೂ, ಪಶು-ಪಕ್ಷಿಗಳೂ, ಉರಗ ಮೊದಲಾದ ಅನೇಕ ದೇವತಾ, ದೈತ್ಯಾದಿಗಣಗಳಿದ್ದವು. ಅಲ್ಲಿಯ ಎಲ್ಲ ಜೀವರೂ ಬೇರೆ-ಬೇರೆ ತೆರನಾಗಿದ್ದವು. ಅನೇಕವಾದ ಭೂಮಿಗಳೂ, ನದಿಗಲೂ, ಸಮುದ್ರಗಳೂ, ಸರೋವರಗಳೂ, ಪರ್ವತಗಳೂ, ಎಲ್ಲವೂ ಪ್ರತ್ಯೇಕತೆಯಿಂದ ಕೂಡಿದ್ದವು. ಪ್ರತಿಬ್ರಹ್ಮಾಂಡದಲ್ಲಿಯೂ ನಾನು ನನ್ನ ನಿಜರೂಪವನ್ನು ನೋಡಿದೆ. ಅನೇಕವಾದ ಅನುಪಮವಾದ ವಸ್ತುಗಳನ್ನು ನೋಡಿದೆ. ಪ್ರತಿಯೊಂದು ಭುವನದಲ್ಲಿಯೂ ಸುಂದರವಾದ ಬೇರೆ-ಬೇರೆ ಅಯೋಧ್ಯಾನಗರಗಳು, ಸರಯೂ ನದಿಗಳು, ಭಿನ್ನ-ಭಿನ್ನ ವಿಧದ ಸ್ತ್ರೀ-ಪುರುಷರಿದ್ದರು. ಅಯ್ಯಾ! ದಶರಥನು, ಕೌಸಲ್ಯಾದೇವಿಯು, ಭರತಾದಿ ಸೋದರರು ಭಿನ್ನ-ಭಿನ್ನರೂಪದವರಾಗಿದ್ದರು. ನಾನು ಪ್ರತಿಬ್ರಹ್ಮಾಂಡದಲ್ಲಿಯೂ ಶ್ರೀರಾಮನ ಅವತಾರವನ್ನು ಅವನ ಅಪಾರ ಬಾಲಲೀಲೆಗಳನ್ನು ನೋಡುತ್ತಾ ತಿರುಗಾಡಿದೆನು. (ಚೌ/೧-೪)

**ದೋ – ಭಿನ್ನ ಭಿನ್ನ ಮೈಂ ದೀಖ ಸಬು ಅತಿ ಬಿಚಿತ್ರ ಹರಿಜಾನ।**
**ಅಗನಿತ ಭುವನ ಫಿರೆಉ್ ಪ್ರಭು ರಾಮ ನ ದೇಖೆಉ್ ಆನ॥೮೧(ಕ)॥**
**ಸೋಇ ಸಿಸುಪನ ಸೋಇ ಸೋಭಾ ಸೋಇ ಕೃಪಾಲ ರಘುಬೀರ।**
**ಭುವನ ಭುವನ ದೇಖತ ಫಿರಉ್ ಪ್ರೇರಿತ ಮೋಹ ಸಮೀರ॥೮೧(ಖ)॥**

ಓ ಹರಿವಾಹನಾ! ನಾನು ಪ್ರತಿಬ್ರಹ್ಮಾಂಡವನ್ನು ಇತರ ಬ್ರಹ್ಮಾಂಡಕ್ಕಿಂತ ಬೇರೆಯಾಗಿ, ವಿಚಿತ್ರವಾಗಿ ನೋಡಿದೆನು. ನಾನು ಅಸಂಖ್ಯ ಬ್ರಹ್ಮಾಂಡಗಳಲ್ಲಿ ತಿರುಗಿದೆನು. ಆದರೆ ಶ್ರೀರಾಮಚಂದ್ರನನ್ನು ಮಾತ್ರ ಬೇರೆ ತೆರವಾಗಿ ಕಾಣಲಿಲ್ಲ. ಅಂದರೆ ಒಂದೇ ವಿಧವಾಗಿದ್ದನು. ಎಲ್ಲ ಕಡೆಗಳಲ್ಲಿಯೂ ಅದೇ ಬಾಲ್ಯ, ಅದೇ ಸೌಂದರ್ಯ, ಅದೇ ಕೃಪಾಳುವಾದ ರಘುವೀರ. ಈ ವಿಧವಾಗಿ ಮೋಹಸಮೀರದಿಂದ ಪ್ರೇರಿತನಾಗಿ ಎಲ್ಲ ಭುವನಗಳಲ್ಲಿ ನೋಡುತ್ತಾ ಅಲೆದೆ. (ದೋ/೮೧ ಕ, ಖ)

**ಚೌ – ಭ್ರಮತ ಮೋಹೀ ಬ್ರಹ್ಮಾಂಡ ಅನೇಕಾ। ಬೀತೇ ಮನಹು್ ಕಲ್ಪ ಸತ ಏಕಾ॥**
**ಫಿರತ ಫಿರತ ನಿಜ ಆಶ್ರಮ ಆಯಉ್। ತಹ್ ಪುನಿ ರಹಿ ಕಛು ಕಾಲ ಗವಾ್ಯಉ್॥೧॥**
**ನಿಜ ಪ್ರಭು ಜನ್ಮ ಅವಧ ಸುನಿ ಪಾಯಉ್। ನಿರ್ಭರ ಪ್ರೇಮ ಹರಷಿ ಉಠಿ ಧಾಯಉ್॥**
**ದೇಖಉ್ ಜನ್ಮ ಮಹೋತ್ಸವ ಜಾಈ। ಜೆಹಿ ಬಿಧಿ ಪ್ರಥಮ ಕಹಾ ಮೈಂ ಗಾಈ॥೨॥**
**ರಾಮ ಉದರ ದೇಖೆಉ್ ಜಗ ನಾನಾ। ದೇಖತ ಬನಇ ನ ಜಾಇ ಬಖಾನಾ॥**
**ತಹ್ ಪುನಿ ದೇಖೆಉ್ ರಾಮ ಸುಜಾನಾ। ಮಾಯಾ ಪತಿ ಕೃಪಾಲ ಭಗವಾನಾ॥೩॥**
**ಕರಉ್ ಬಿಚಾರ ಬಹೋರಿ ಬಹೋರೀ। ಮೋಹ ಕಲಿಲ ಬ್ಯಾಪಿತ ಮತಿ ಮೋರೀ॥**
**ಉಭಯ ಘರೀ ಮಹ್ ಮೈಂ ಸಬ ದೇಖಾ। ಭಯಉ್ ಭ್ರಮಿತ ಮನ ಮೋಹ ಬಿಸೇಷಾ॥೪॥**

ಅನೇಕ ಬ್ರಹ್ಮಾಂಡಗಳಲ್ಲಿ ತೊಳಲಾಡುತ್ತಾ ನೂರು ಕಲ್ಪಗಳೇ ಕಳೆದುಹೋದುವು. ಹೀಗೆ ಸಂಚರಿಸುತ್ತಾ ನಾನು ನನ್ನ ಆಶ್ರಮಕ್ಕೆ ಮರಳಿದೆ. ಕೆಲಕಾಲ ಅಲ್ಲೇ ಕಳೆದೆ. ಮತ್ತೆ ನನ್ನ ಸ್ವಾಮಿಯು ಅಯೋಧ್ಯೆಯಲ್ಲಿ ಅವತರಿಸಿದ ವಿಷಯವನ್ನು ಅರಿತು, ಪ್ರೇಮನಿರ್ಭರನಾಗಿ, ಹರ್ಷದಿಂದ ಎದ್ದು ಹರಿದೋಡಿದೆ. ಅಲ್ಲಿಗೆ ಹೋಗಿ ನಾನು ಈ ಮೊದಲಿಗೆ ವರ್ಣಿಸಿದಂತೆ ಜನ್ಮ ಮಹೋತ್ಸವವನ್ನು ವೀಕ್ಷಿಸಿದೆ. ಶ್ರೀರಾಮಚಂದ್ರನ ಉದರದಲ್ಲಿ ನಾನು ಅನೇಕ ಲೋಕಗಳನ್ನು ನೋಡಿದೆ. ಅವನ್ನು ನೋಡಬಹುದೇ ಹೊರತು ವರ್ಣಿಸಲಾಗುವುದಿಲ್ಲ. ಅಲ್ಲಿ ಮಾಯಾಪತಿಯಾದ ಶ್ರೀರಾಮಚಂದ್ರಪ್ರಭುವನ್ನು ಮರಳಿ ದರ್ಶಿಸಿದೆ. ನಾನು ಮತ್ತೆ-ಮತ್ತೆ ವಿಚಾರಮಾಡತೊಡಗಿದೆ. ಆದರೆ ನನ್ನ ಬುದ್ಧಿಯು ಮೋಹವೆಂಬ ಕೆಸರಿನಲ್ಲಿ ಮುಳುಗಿತ್ತು. ಇದೆಲ್ಲ ವಿಚಿತ್ರವು ಎರಡು ಗಳಿಗೆಯಲ್ಲಿ ನೋಡಿದೆ. ನನ್ನ ಮನಸ್ಸಿನಲ್ಲಿ ಮೋಹವಾವರಿಸಿದ್ದರಿಂದ ನಾನು ಬಳಲಿಹೋದೆನು. ಅಲೌಕಿಕವಾದ ಪ್ರಭುಲೀಲೆಯನ್ನು ನೋಡಿ ನನ್ನ ಬುದ್ಧಿಯು ಭ್ರಮೆಗೆ ಗುರಿಯಾಗಿತ್ತು. (ಚೌ/೧-೪)

**ದೋ – ದೇಖಿ ಕೃಪಾಲ ಬಿಕಲ ಮೊಹಿ ಬಿಹ್ँಸೇ ತಬ ರಘುಬೀರ।**
**ಬಿಹ್ँಸತಹೀँ ಮುಖ ಬಾಹೇರ ಆಯಉँ ಸುನು ಮತಿಧೀರ ॥ ೮೨ (ಕ)॥**
**ಸೋಇ ಲರಿಕಾಈ ಮೋ ಸನ ಕರನ ಲಗೇ ಪುನಿ ರಾಮ।**
**ಕೋಟಿ ಭಾँತಿ ಸಮುಝಾವಉँ ಮನು ನ ಲಹಇ ಬಿಶ್ರಾಮ ॥ ೮೨(ಖ)॥**

ನಾನು ವ್ಯಾಕುಲನಾದುದನ್ನು ಕಂಡು ಕೃಪಾಳುವಾದ ಶ್ರೀರಾಮಚಂದ್ರನು ನಕ್ಕುಬಿಟ್ಟನು. ಓ ಧೀರಬುದ್ಧಿಯ ಗರುಡಾ! ಅವಧರಿಸು. ಪ್ರಭುವು ನಕ್ಕಕೂಡಲೇ ನಾನು ಅವನ ಮುಖದಿಂದ ಹೊರಗೆ ಬಂದೆ. ಶ್ರೀರಾಮನು ಮತ್ತೆ ನನ್ನೊಡನೆ ಅದೇ ಹುಡುಗಾಟ ಮಾಡತೊಡಗಿದನು. ನಾನು ಅನೇಕವಿಧದಿಂದ ನನ್ನ ಮನಸ್ಸಿಗೆ ಸಮಾಧಾನ ಹೇಳಿಕೊಂಡೆ. ಆದರೆ ಮನಶ್ಶಾಂತಿಯು ಲಭಿಸಲಿಲ್ಲ. (ದೋ/೮೨ ಕ, ಖ)

**ಚೌ – ದೇಖಿ ಚರಿತ ಯಹ ಸೋ ಪ್ರಭುತಾಈ। ಸಮುಝತ ದೇಹ ದಸಾ ಬಿಸರಾಈ ॥**
**ಧರನಿ ಪರೇಉँ ಮುಖ ಆವ ನ ಬಾತಾ। ತ್ರಾಹಿ ತ್ರಾಹಿ ಆರತ ಜನ ತ್ರಾತಾ ॥ ೧ ॥**
**ಪ್ರೇಮಾಕುಲ ಪ್ರಭು ಮೋಹಿ ಬಿಲೋಕೀ। ನಿಜ ಮಾಯಾ ಪ್ರಭುತಾ ತಬ ರೋಕೀ ॥**
**ಕರ ಸರೋಜ ಪ್ರಭು ಮಮ ಸಿರ ಧರೇಊ। ದೀನದಯಾಲ ಸಕಲ ದುಖ ಹರೇಊ ॥ ೨ ॥**
**ಕೀನ್ಹ ರಾಮ ಮೋಹಿ ಬಿಗತ ಬಿಮೋಹಾ। ಸೇವಕ ಸುಖದ ಕೃಪಾ ಸಂದೋಹಾ ॥**
**ಪ್ರಭುತಾ ಪ್ರಥಮ ಬಿಚಾರಿ ಬಿಚಾರೀ। ಮನ ಮಹँ ಹೋಇ ಹರಷ ಅತಿ ಭಾರೀ ॥ ೩ ॥**
**ಭಗತ ಬಛಲತಾ ಪ್ರಭು ಕೈ ದೇಖೀ। ಉಪಜೀ ಮಮ ಉರ ಪ್ರೀತಿ ಬಿಸೇಷೀ ॥**
**ಸಜಲ ನಯನ ಪುಲಕಿತ ಕರ ಜೋರೀ। ಕೀನ್ಹಿಉँ ಬಹು ಬಿಧಿ ಬಿನಯ ಬಹೋರೀ ॥ ೪ ॥**

ಪ್ರಭುವಿನ ಈ ಬಾಲಲೀಲೆಗಳನ್ನು ನೋಡಿ, ಅವನ ಉದರದಲ್ಲಿ ದರ್ಶಿಸಿದ ಪ್ರಭುಮಹಿಮೆಯನ್ನು ನೆನೆದು ನಾನು ಮೈಮರೆತೆ. ಓ ಆರ್ತಜನರಕ್ಷಕಾ! ನನ್ನನ್ನು ಕಾಪಾಡು-ಕಾಪಾಡು ಎಂದು ಕೂಗಿ ನಾನು ನೆಲಕ್ಕೊರಗಿದೆ. ಬಾಯಿಂದ ಮಾತೇ ಹೊರಡುತ್ತಿರಲಿಲ್ಲ. ನಾನು ಪ್ರೇಮವಿಹ್ವಲನಾಗಿರುವುದನ್ನು ಕಂಡು ಪ್ರಭುವು ತನ್ನ ಮಾಯೆಯ ಪ್ರಭಾವವನ್ನು ತಡೆದುಬಿಟ್ಟನು. ದೀನದಯಾಳುವಾದ ಪ್ರಭುವು ತನ್ನ ಕರಕಮಲವನ್ನು ನನ್ನ ಶಿರದಲ್ಲಿರಿಸಿದನು. ನನ್ನ ಎಲ್ಲ ದುಃಖಗಳನ್ನು ಪೂರ್ತಿಯಾಗಿ ತೊಲಗಿಸಿದನು. ಸೇವಕರಿಗೆ ಸುಖಪ್ರದನೂ, ಕೃಪಾನಿಧಿಯೂ ಆದ ಶ್ರೀರಾಮನು ನನ್ನನ್ನು ಸರ್ವಥಾ ಮೋಹಮುಕ್ತನಾಗಿಸಿದನು. ಅವನ ಹಿಂದಿನ ವೈಭವವನ್ನು ನೆನೆನೆನೆದು ನನ್ನ ಮನಸ್ಸಿಗೆ ಬಹಳ ಹರ್ಷ ಉಂಟಾಯಿತು. ಪ್ರಭುವಿನ ಭಕ್ತವತ್ಸಲತೆಯನ್ನು ಕಂಡು ನನ್ನ ಹೃದಯದಲ್ಲಿ ಅಪಾರ ಪ್ರೇಮ ಉತ್ಪನ್ನವಾಯಿತು. ಕಣ್ಣುಗಳಲ್ಲಿ ಆನಂದಾಶ್ರುಗಳನ್ನು ತುಂಬಿಕೊಂಡು, ಪುಲಕಿತಗಾತ್ರನಾಗಿ ಕೈಜೋಡಿಸಿಕೊಂಡು ಅನೇಕ ಪ್ರಕಾರದಿಂದ ವಿನಂತಿಸಿಕೊಂಡೆನು. (ಚೌ/೧-೪)

**ದೋ – ಸುನಿ ಸಪ್ರೇಮ ಮಮ ಬಾನೀ ದೇಖಿ ದೀನ ನಿಜ ದಾಸ।**
**ಬಚನ ಸುಖದ ಗಂಭೀರ ಮೃದು ಬೋಲೇ ರಮಾನಿವಾಸ ॥ ೮೩ (ಕ)॥**
**ಕಾಕಭುಸುಂಡಿ ಮಾಗು ಬರ ಅತಿ ಪ್ರಸನ್ನ ಮೊಹಿ ಜಾನಿ।**
**ಅನಿಮಾದಿಕ ಸಿಧಿ ಅಪರ ರಿಧಿ ಮೋಚ್ಛ ಸಕಲ ಸುಖ ಖಾನಿ ॥ ೮೩(ಖ)॥**

ಪ್ರೇಮಮಯವಾದ ನನ್ನ ವಾಣಿಯನ್ನು ಕೇಳಿ, ತನ್ನ ಸೇವಕನಾದ ನನ್ನ ದೀನಾವಸ್ಥೆಯನ್ನು ಗಮನಿಸಿ, ಲಕ್ಷ್ಮೀನಿವಾಸನಾದ ಶ್ರೀರಾಮನು ಸುಖದಾಯಕ ತನ್ನ ಕೋಮಲಗಂಭೀರ ಮಾತುಗಳನ್ನು ಆಡಿದನು. ''ಎಲೈ ಕಾಕಭುಶುಂಡಿ! ನಾನು ಅತ್ಯಂತ ಪ್ರಸನ್ನನಾಗಿರುವೆನು. ನಿನಗೆ ಬೇಕಾದ ವರವನ್ನು ಬೇಡಿಕೋ. ಅಣಿಮಾದಿ ಅಷ್ಟಸಿದ್ಧಿಗಳು, ಇತರ ಋದ್ಧಿಗಳು, ಸಮಸ್ತಸುಖಗಳಿಗೆ ಪರಾಕಾಷ್ಠೆಯಾದ ಮೋಕ್ಷವನ್ನು ಬೇಡು. (ದೋ/೮೩ ಕ, ಖ)

**ಚೌ – ಗ್ಯಾನ ಬಿಬೇಕ ಬಿರತಿ ಬಿಗ್ಯಾನಾ । ಮುನಿ ದುರ್ಲಭ ಗುನ ಜೇ ಜಗ ನಾನಾ ॥**
**ಆಜು ದೇಉಁ ಸಬ ಸಂಸಯ ನಾಹೀಂ । ಮಾಗು ಜೊ ತೋಹಿ ಭಾವ ಮನ ಮಾಹೀಂ ॥ ೧ ॥**
**ಸುನಿ ಪ್ರಭು ಬಚನ ಅಧಿಕ ಅನುರಾಗೇಉಁ । ಮನ ಅನುಮಾನ ಕರನ ತಬ ಲಾಗೇಉಁ ॥**
**ಪ್ರಭು ಕಹ ದೇನ ಸಕಲ ಸುಖ ಸಹೀ । ಭಗತಿ ಆಪನೀ ದೇನ ನ ಕಹೀ ॥ ೨ ॥**
**ಭಗತಿ ಹೀನ ಗುನ ಸಬ ಸುಖ ಐಸೇ । ಲವನ ಬಿನಾ ಬಹು ಬಿಂಜನ ಜೈಸೇ ॥**
**ಭಜನ ಹೀನ ಸುಖ ಕವನೇ ಕಾಜಾ । ಅಸ ಬಿಚಾರಿ ಬೋಲೇಉಁ ಖಗರಾಜಾ ॥ ೩ ॥**
**ಜೌ ಪ್ರಭು ಹೊಇ ಪ್ರಸನ್ನ ಬರ ದೇಹೂ । ಮೋ ಪರ ಕರಹು ಕೃಪಾ ಅರು ನೇಹೂ ॥**
**ಮನ ಭಾವತ ಬರ ಮಾಗಉಁ ಸ್ವಾಮೀ । ತುಮ್ಹ ಉದಾರ ಉರ ಅಂತರಜಾಮೀ ॥ ೪ ॥**

ಜ್ಞಾನ, ವಿವೇಕ, ವೈರಾಗ್ಯ, ವಿಜ್ಞಾನ, (ತತ್ತ್ವಜ್ಞಾನ) ಜಗತ್ತಿನಲ್ಲಿ ಮುನಿಗಳಿಗೂ ದುರ್ಲಭವಾದ ಗುಣಗಳೆಲ್ಲವನ್ನೂ ನಾನು ಇಂದು ನಿನಗೆ ನೀಡುತ್ತೇನೆ. ಇದರಲ್ಲಿ ಯಾವ ಸಂದೇಹವೂ ಇಲ್ಲ. ನಿನ್ನ ಮನಸ್ಸಿಗೆ ಹಿಡಿಸಿದ ವರವನ್ನು ಬೇಡಿಕೊ.'' ಪ್ರಭುವಚನಗಳನ್ನು ಕೇಳಿ ನಾನು ಪ್ರೇಮವಿಹ್ವಲನಾದೆನು. ಆಗ ನಾನು ಮನಸ್ಸಿನಲ್ಲೇ ಹೀಗೆ ಯೋಚಿಸಿದೆ. 'ಪ್ರಭುವು ಎಲ್ಲ ಸುಖಗಳನ್ನು ಕೊಡುವೆನೆಂದು ಹೇಳಿದನು ನಿಜ. ಆದರೆ ತನ್ನ ಭಕ್ತಿಯನ್ನು ಕರುಣಿಸುವ ಮಾತನ್ನು ಹೇಳಲಿಲ್ಲವಲ್ಲ! ಉಪ್ಪಿಲ್ಲದ ಎಲ್ಲ ಊಟದ ಪದಾರ್ಥಗಳು ವ್ಯರ್ಥ (ಸಪ್ಪೆ)ವಿರುವಂತೆ ಭಕ್ತಿರಹಿತವಾದ ಯಾವ ಗುಣಗಳಾಗಲೀ, ಸುಖಗಳಾಗಲೀ ನಿಷ್ಫಲವೇ. ಹರಿಭಜನೆಯಿಲ್ಲದ ಸುಖವು ಪ್ರಯೋಜನಕಾರಿಯಲ್ಲ.' ಓ ಖಗರಾಜಾ! ಚೆನ್ನಾಗಿ ಆಲೋಚಿಸಿ ನಾನು ಇಂತೆಂದೆನು – ಪ್ರಭೋ! ನೀನು ಪ್ರಸನ್ನನಾಗಿ ವರವನ್ನು ಕರುಣಿಸುವುದಾದರೆ, ನನ್ನ ಮೇಲೆ ಕೃಪೆದೋರಿ ಸ್ನೇಹವಿಟ್ಟಿರುವೆಯಾದರೆ ಸ್ವಾಮಿ! ನನಗೆ ಇಷ್ಟವಾದ ವರವನ್ನು ಕೇಳಿಕೊಳ್ಳುವೆನು. ನೀನು ಉದಾರಿಯು. ನಾನು ಹೇಳದಿದ್ದರೂ ನನ್ನ ಹೃದಯದ ಮಾತನ್ನು ಅರಿಯುವವನಾಗಿರುವೆ. (ಚೌ/೧-೪)

**ದೋ – ಅಬಿರಲ ಭಗತಿ ಬಿಸುದ್ಧ ತವ ಶ್ರುತಿ ಪುರಾನ ಜೋ ಗಾವ ।**
**ಜೆಹಿ ಖೋಜತ ಜೋಗೀಸ ಮುನಿ ಪ್ರಭು ಪ್ರಸಾದ ಕೋಉ ಪಾವ ॥ ೮೪ (ಕ)॥**
**ಭಗತ ಕಲ್ಪತರು ಪ್ರನತ ಹಿತ ಕೃಪಾ ಸಿಂಧು ಸುಖ ಧಾಮ ।**
**ಸೋಇ ನಿಜ ಭಗತಿ ಮೋಹಿ ಪ್ರಭು ದೇಹು ದಯಾ ಕರಿ ರಾಮ ॥ ೮೪ (ಖ)॥**

ಓ ವಾಂಛಾಕಲ್ಪತರೂ! ಶರಣಾಗತರ ಹಿತೈಷಿಯೇ! ಕೃಪಾಸಾಗರಾ! ಸುಖನಿಧಾನಾ! ಶ್ರೀರಾಮಾ! ನಿನ್ನ ಪ್ರಗಾಢ ನಿಷ್ಕಾಮವಾದ ಭಕ್ತಿಯನ್ನು ಶ್ರುತಿಗಳು, ಪುರಾಣಗಳು ಹಾಡಿ ಹೊಗಳುತ್ತವೆ. ಯೋಗೀಶ್ವರರಾದ ಮುನಿಗಳೂ ಇದನ್ನೇ ಅರಸುತ್ತಾರೆ. ಆದರೆ ನಿನ್ನ ಕೃಪೆಗೆ ಪಾತ್ರರಾದ ಯಾರೋ ಒಬ್ಬರು ಇದನ್ನು ಹೊಂದುತ್ತಾರೆ. ಅಂತಹ ಅಖಂಡ ಭಕ್ತಿಯನ್ನು ದಯಮಾಡಿ ನನಗೆ ಕರುಣಿಸು. (ದೋ/೮೪ ಕ, ಖ)

**ಚೌ – ಏವಮಸ್ತು ಕಹಿ ರಘುಕುಲನಾಯಕ । ಬೋಲೇ ಬಚನ ಪರಮ ಸುಖದಾಯಕ ॥**
**ಸುನು ಬಾಯಸ ತೈಂ ಸಹಜ ಸಯಾನಾ । ಕಾಹೆ ನ ಮಾಗಸಿ ಅಸ ಬರದಾನಾ ॥ ೧ ॥**
**ಸಬ ಸುಖ ಖಾನಿ ಭಗತಿ ತೈಂ ಮಾಗೀ । ನಹಿಂ ಜಗ ಕೋಉ ತೊಹಿ ಸಮ ಬಡಭಾಗೀ ॥**
**ಜೋ ಮುನಿ ಕೋಟಿ ಜತನ ನಹಿಂ ಲಹಹೀಂ । ಜೇ ಜಪ ಜೋಗ ಅನಲ ತನ ದಹಹೀಂ ॥ ೨ ॥**
**ರೀಝೇಉಁ ದೇಖಿ ತೋರಿ ಚತುರಾಈ । ಮಾಗೆಹು ಭಗತಿ ಮೋಹಿ ಅತಿ ಭಾಈ ॥**
**ಸುನು ಬಿಹಂಗ ಪ್ರಸಾದ ಅಬ ಮೋರೇಂ । ಸಬ ಸುಭ ಗುನ ಬಸಿಹಹಿಂ ಉರ ತೋರೇಂ ॥ ೩ ॥**
**ಭಗತಿ ಗ್ಯಾನ ಬಿಗ್ಯಾನ ಬಿರಾಗಾ । ಜೋಗ ಚರಿತ್ರ ರಹಸ್ಯ ಬಿಭಾಗಾ ॥**
**ಜಾನಬ ತೈಂ ಸಬಹೀ ಕರ ಭೇದಾ । ಮಮ ಪ್ರಸಾದ ನಹಿಂ ಸಾಧನ ಖೇದಾ ॥ ೪ ॥**

'ಏವಮಸ್ತು' (ಹಾಗೇ ಆಗಲಿ) ಎಂದು ಹೇಳಿ ರಘುವೀರನು ಪರಮಾನಂದಕರವಾದ ವಚನಗಳನ್ನು ಇಂತು ನುಡಿದನು – ಎಲೈ ವಾಯಸವೇ! ಕೇಳು. ನೀನು ಸಹಜವಾಗಿಯೇ ಬುದ್ಧಿವಂತ. ಆದರಿಂದ ಇಂತಹ ವರವನ್ನು ಕೇಳಿಕೊಂಡೆ. ನೀನು ಸರ್ವಸುಖದಾಗರವಾದ ಭಕ್ತಿಯನ್ನು ಕೇಳಿದೆ. ಪ್ರಪಂಚದಲ್ಲಿ ನಿನ್ನಂತಹ ಭಾಗ್ಯವಂತರು ಬೇರಾರೂ ಇಲ್ಲ. ಜಪದಿಂದ, ಯೋಗಾಗ್ನಿಯಿಂದ ತಮ್ಮ ಶರೀರವನ್ನು ತಪಿಸುವ ಮುನಿಗಳೂ ಕೂಡ ಕೋಟಿ ಪ್ರಯತ್ನಗೈದರೂ ಅವರಿಗೆ ಇಂತಹ ಭಾಗ್ಯವು ದಕ್ಕದು. ನಿನ್ನ ವಿಚಕ್ಷಣ ಚಾತುರ್ಯಕ್ಕೆ ನಾನು ಮಾರುಹೋದೆ. ನೀನು ಭಕ್ತಿಯನ್ನು ಬೇಡಿಕೊಂಡೆ. ಎಲೈ ವಿಹಂಗಮಾ! ಕೇಳು. ನನ್ನ ಕೃಪೆಯಿಂದ ಸಮಸ್ತ ಶುಭಗುಣಗಳು ನಿನ್ನ ಹೃದಯದಲ್ಲಿ ನೆಲಸುವವು. ಭಕ್ತಿ, ಜ್ಞಾನ, ವೈರಾಗ್ಯ, ಯೋಗ, ನನ್ನ ಲೀಲೆಗಳು, ಅವುಗಳ ರಹಸ್ಯಗಳು, ವಿಭಾಗಗಳು ಇವುಗಳ ಎಲ್ಲ ವೈವಿಧ್ಯಗಳು ನನ್ನ ಅನುಗ್ರಹದಿಂದ ನೀನು ಸಮಗ್ರವಾಗಿ ತಿಳಿದುಕೊಳ್ಳುವೆ. ನಿನಗೆ ಸಾಧನೆಯಲ್ಲಿ ಯಾವ ಪರಿಶ್ರಮವೂ ಇರದು. (ಚೌ/೧-೪)

**ದೋ – ಮಾಯಾ ಸಂಭವ ಭ್ರಮ ಸಬ ಅಬ ನ ಬ್ಯಾಪಿಹಹಿಂ ತೋಹಿ।**
**ಜಾನೆಸು ಬ್ರಹ್ಮ ಅನಾದಿ ಅಜ ಅಗುನ ಗುನಾಕರ ಮೋಹಿ ॥ ೮೫ (ಕ)॥**
**ಮೋಹಿ ಭಗತ ಪ್ರಿಯ ಸಂತತ ಅಸ ಬಿಚಾರಿ ಸುನು ಕಾಗ।**
**ಕಾಯಂ ಬಚನ ಮನ ಮಮ ಪದ ಕರೆಸು ಅಚಲ ಅನುರಾಗ ॥ ೮೫(ಖ)॥**

ಮಾಯಾಜನಿತ ಭ್ರಮೆ, ಬಾಧೆಗಳು ಇನ್ನು ನಿನ್ನನ್ನು ವ್ಯಾಪಿಸಲಾರವು. ನನ್ನನ್ನು ಅನಾದಿಯೂ, ಜನ್ಮರಹಿತನೂ, ಪ್ರಕೃತಿಗುಣರಹಿತನೂ, ಗುಣಾತೀತನೂ, ದಿವ್ಯಗುಣಾಕರನೂ, ಪರಬ್ರಹ್ಮನೂ ಎಂದು ತಿಳಿ. ಎಲೈ ವಾಯಸವೇ! ಕೇಳು. ಭಕ್ತರು ನನಗೆ ಸರ್ವದಾ ಪ್ರೀತಿಪಾತ್ರರು. ಹೀಗೆ ಅರಿತುಕೊಂಡು ನೀನು ತ್ರಿಕರಣಶುದ್ಧಿಯಿಂದ ನನ್ನ ಚರಣಗಳಲ್ಲಿ ಅಚಂಚಲವಾದ ಅನುರಾಗವನ್ನಿಡು. (ದೋ/೮೫ ಕ, ಖ)

**ಚೌ – ಅಬ ಸುನು ಪರಮ ಬಿಮಲ ಮಮ ಬಾನೀ। ಸತ್ಯ ಸುಗಮ ನಿಗಮಾದಿ ಬಖಾನೀ॥**
**ನಿಜ ಸಿದ್ಧಾಂತ ಸುನಾವಉಂ ತೋಹೀ। ಸುನು ಮನ ಧರು ಸಬ ತಜಿ ಭಜು ಮೋಹೀ ॥ ೧ ॥**
**ಮಮ ಮಾಯಾ ಸಂಭವ ಸಂಸಾರಾ। ಜೀವ ಚರಾಚರ ಬಿಬಿಧಿ ಪ್ರಕಾರಾ॥**
**ಸಬ ಮಮ ಪ್ರಿಯ ಸಬ ಮಮ ಉಪಜಾಏ। ಸಬ ತೇ ಅಧಿಕ ಮನುಜ ಮೋಹಿ ಭಾಏ ॥ ೨ ॥**
**ತಿನ್ಹ ಮಹಂ ದ್ವಿಜ ದ್ವಿಜ ಮಹಂ ಶ್ರುತಿಧಾರೀ। ತಿನ್ಹ ಮಹುಂ ನಿಗಮ ಧರಮ ಅನುಸಾರೀ ॥**
**ತಿನ್ಹ ಮಹಂ ಪ್ರಿಯ ಬಿರಕ್ತ ಪುನಿ ಗ್ಯಾನೀ। ಗ್ಯಾನಿಹು ತೇ ಅತಿ ಪ್ರಿಯ ಬಿಗ್ಯಾನೀ ॥ ೩ ॥**
**ತಿನ್ಹ ತೇ ಪುನಿ ಮೋಹಿ ಪ್ರಿಯ ನಿಜ ದಾಸಾ। ಜೆಹಿ ಗತಿ ಮೋರಿ ನ ದೂಸರಿ ಆಸಾ ॥**
**ಪುನಿ ಪುನಿ ಸತ್ಯ ಕಹಉಂ ತೊಹಿ ಪಾಹೀಂ। ಮೊಹಿ ಸೇವಕ ಸಮ ಪ್ರಿಯ ಕೊಉ ನಾಹೀಂ॥ ೪ ॥**
**ಭಗತಿ ಹೀನ ಬಿರಂಚಿ ಕಿನ ಹೋಈ। ಸಬ ಜೀವಹು ಸಮ ಪ್ರಿಯ ಮೊಹಿ ಸೋಈ॥**
**ಭಗತಿವಂತ ಅತಿ ನೀಚಉ ಪ್ರಾನೀ। ಮೋಹಿ ಪ್ರಾನಪ್ರಿಯ ಅಸಿ ಮಮ ಬಾನೀ॥ ೫ ॥**

ಈಗ ಸತ್ಯವಾದ, ಸುಗಮವಾದ, ವೇದಪ್ರತಿಪಾದಿತವಾದ, ನನ್ನ ನಿರ್ಮಲವಾಣಿಯನ್ನು ಕೇಳು. ನಿನಗೆ ನನ್ನ ನಿಶ್ಚಿತ ಸಿದ್ಧಾಂತವನ್ನು ತಿಳಿಸುವೆನು. ಅದನ್ನು ಮನಸ್ಸಿನಲ್ಲಿರಿಸಿಕೊಂಡು, ಉಳಿದುದನ್ನು ತ್ಯಜಿಸಿ, ನನ್ನನ್ನೇ ಭಜಿಸು. ಈ ಜಗತ್ತೆಲ್ಲವೂ ನನ್ನ ಮಾಯೆಯಿಂದ ಉತ್ಪನ್ನವಾಗಿದೆ. ಇದರಲ್ಲಿರುವ ಅನೇಕ ಪ್ರಕಾರದ ಚರಾಚರ ಜೀವಿಗಳೆಲ್ಲವೂ ನನಗೆ ಪ್ರಿಯರೇ. ಏಕೆಂದರೆ, ಅವೆಲ್ಲವೂ ನನ್ನ ಸೃಷ್ಟಿಯೇ. ಆದರೆ ಮನುಷ್ಯರು ಇವೆಲ್ಲಕ್ಕಿಂತ ನನಗೆ ಹೆಚ್ಚು ಪ್ರೀತಿಪಾತ್ರರು. ಆ ಮನುಷ್ಯರಲ್ಲಿಯೂ ದ್ವಿಜರು. ಆ ದ್ವಿಜರಲ್ಲಿಯೂ ವೇದಗಳನ್ನು ಕಂಠಸ್ಥವಾಗಿಸಿ ಇಟ್ಟುಕೊಂಡಿರುವವರು. ಅವರಲ್ಲಿಯೂ ವೇದೋಕ್ತ ಧರ್ಮವನ್ನು ಆಚರಿಸುವವರು, ಅವರುಗಳಲ್ಲಿಯೂ ವೈರಾಗ್ಯಸಂಪನ್ನರು ನನಗೆ ಅತ್ಯಂತ ಪ್ರೀತಿಪಾತ್ರರು. ವೈರಾಗ್ಯವುಳ್ಳವರಲ್ಲಿಯೂ ಜ್ಞಾನಿಗಳು. ಅವರಲ್ಲಿ ವಿಜ್ಞಾನಿಗಳು (ತತ್ತ್ವಜ್ಞರು) ನನಗೆ ಹೆಚ್ಚಿನ ಪ್ರೇಮಾಸ್ಪದರು. ಪರತತ್ತ್ವಜ್ಞರಾದ ವಿಜ್ಞಾನಿಗಳಿಗಿಂತಲೂ ನನಗೆ ಅನನ್ಯಗತಿಕನಾದ ಬೇರೆ ಯಾವುದೇ ಆಸೆಯಿಲ್ಲದ ಭಕ್ತನು ನನಗೆ ಅತ್ಯಂತ ಪ್ರಿಯನು. ನನಗೆ ನನ್ನ ಸೇವಕರಷ್ಟು ಪ್ರಿಯರು ಯಾರೂ ಇಲ್ಲ. ಇದು ನನ್ನ ಸಿದ್ಧಾಂತವು. ಭಕ್ತಿಹೀನನಾದವನು ಬ್ರಹ್ಮನೇ ಆಗಿದ್ದರೂ ಸರಿ! ಅವನು ನನಗೆ ಇತರ ಸಾಮಾನ್ಯ ಜೀವಿಗಳಂತೆ ಪ್ರಿಯನು. ಆದರೆ ಅನನ್ಯ ಭಕ್ತಿಯುಳ್ಳವನು ಕೀಳಾದ ಪ್ರಾಣಿಯೂ ಕೂಡ ನನಗೆ ಪ್ರಾಣಕ್ಕೆ ಸಮವು. ಇದು ನನ್ನ ಘೋಷಣೆಯಾಗಿದೆ. (ಚೌ/೧-೫)

**ದೋ – ಸುಚಿ ಸುಸೀಲ ಸೇವಕ ಸುಮತಿ ಪ್ರಿಯ ಕಹು ಕಾಹಿ ನ ಲಾಗ।**
**ಶ್ರುತಿ ಪುರಾನ ಕಹ ನೀತಿ ಅಸಿ ಸಾವಧಾನ ಸುನು ಕಾಗ ॥ ೮೬ ॥**

ಪವಿತ್ರನೂ, ಸುಶೀಲನೂ ಆದ ಸದ್ಬುದ್ಧಿಯುಳ್ಳ ಸೇವಕನು ಯಾರಿಗೆ ಪ್ರಿಯನಾಗುವುದಿಲ್ಲ, ಹೇಳು! ವೇದ, ಪುರಾಣಗಳು ಇದೇ ನೀತಿಯನ್ನು ಸಾರುತ್ತವೆ. ಎಲೈ ವಾಯಸರಾಜನೇ! ಸಾವಧಾನವಾಗಿ ಕೇಳು. (ದೋ/೮೬)

**ಚೌ – ಏಕ ಪಿತಾ ಕೇ ಬಿಪುಲ ಕುಮಾರಾ। ಹೋಹಿಂ ಪೃಥಕ ಗುನ ಸೀಲ ಅಚಾರಾ॥**
**ಕೋಉ ಪಂಡಿತ ಕೋಉ ತಾಪಸ ಗ್ಯಾತಾ। ಕೋಉ ಧನವಂತ ಸೂರ ಕೋಉ ದಾತಾ॥೧॥**
**ಕೋಉ ಸರ್ಬಗ್ಯ ಧರ್ಮರತ ಕೋಈ। ಸಬ ಪರ ಪಿತಹಿ ಪ್ರೀತಿ ಸಮ ಹೋಈ॥**
**ಕೋಉ ಪಿತು ಭಗತ ಬಚನ ಮನ ಕರ್ಮಾ। ಸಪನೇಹುँ ಜಾನ ನ ದೂಸರ ಧರ್ಮಾ॥೨॥**
**ಸೋ ಸುತ ಪ್ರಿಯ ಪಿತು ಪ್ರಾನ ಸಮಾನಾ। ಜದ್ಯಪಿ ಸೋ ಸಬ ಭಾँತಿ ಅಯಾನಾ॥**
**ಏಹಿ ಬಿಧಿ ಜೀವ ಚರಾಚರ ಜೇತೇ। ತ್ರಿಜಗ ದೇವ ನರ ಅಸುರ ಸಮೇತೇ॥೩॥**
**ಅಖಿಲ ಬಿಸ್ವ ಯಹ ಮೋರ ಉಪಾಯಾ। ಸಬ ಪರ ಮೋಹಿ ಬರಾಬರಿ ದಾಯಾ॥**
**ತಿನ್ಹ ಮಹँ ಜೋ ಪರಿಹರಿ ಮದ ಮಾಯಾ। ಭಜೈ ಮೋಹಿ ಮನ ಬಚ ಅರು ಕಾಯಾ॥೪॥**

ಒಬ್ಬ ತಂದೆಗೆ ಭಿನ್ನ-ಭಿನ್ನ ಗುಣ, ಸ್ವಭಾವ, ಆಚರಣೆಯುಳ್ಳ ಅನೇಕಮಂದಿ ಪುತ್ರರಿದ್ದಾರೆ. ಒಬ್ಬ ಪಂಡಿತ, ಇನ್ನೊಬ್ಬ ತಪಸ್ವೀ, ಮಗದೊಬ್ಬ ಜ್ಞಾನಿ, ಮತ್ತೊಬ್ಬ ಧನಿಕ, ಒಬ್ಬ ಶೂರವೀರನು, ಮತ್ತೊಬ್ಬ ದಾನಿ, ಇನ್ನೊಬ್ಬ ಸರ್ವಜ್ಞ, ಬೇರೊಬ್ಬ ಧರ್ಮಪರಾಯಣನು. ತಂದೆಗೆ ಇವರೆಲ್ಲರ ಮೇಲೆ ಪ್ರೇಮ ಸಮಾನವಿರುತ್ತದೆ. ಆದರೆ ಇವರಲ್ಲಿ ಒಬ್ಬನು ಮನ, ವಚನ, ಕರ್ಮಗಳಿಂದ ತಂದೆಯಲ್ಲಿ ಭಕ್ತಿಯಿದ್ದು, ಸ್ವಪ್ನದಲ್ಲಿಯೂ ಇತರ ಧರ್ಮವನ್ನು ಅರಿಯದವನಿದ್ದರೆ ಅಂತಹವನು ತಂದೆಗೆ ಪ್ರಾಣತುಲ್ಯನು. ಅವನು ಎಲ್ಲ ವಿಧದಿಂದ ಮೂರ್ಖನಾಗಿದ್ದರೂ ಸರಿ! ಅವನು ತಂದೆಗೆ ಹೆಚ್ಚಿನ ಪ್ರಿಯನಾಗಿರುತ್ತಾನೆ. ಹೀಗೆಯೇ ತಿರ್ಯಕ್ (ಪಶುಪಕ್ಷಿ) ಯೋನಿಗಳು ದೇವ ಮನುಷ್ಯ ಅಸುರರೂ ಸಹಿತ ಜಡಚೇತನ ಪ್ರಾಣಿಗಳ ಪ್ರಪಂಚ ನನ್ನ ಸೃಷ್ಟಿಯೇ. ಆದ್ದರಿಂದ ಎಲ್ಲರ ಮೇಲೆ ನನಗೆ ಪ್ರೇಮ ಸಮಾನವಾಗಿದೆ. ಆದರೆ ಇದರಲ್ಲಿ ಮಾಯಾ, ಮದಗಳನ್ನು ತ್ಯಜಿಸಿ, ಮನೋವಾಕ್ಕರ್ಮಗಳಿಂದ ನನ್ನನ್ನು ಭಜಿಸುವವನು – (ಚೌ/೧-೪)

**ದೋ – ಪುರುಷ ನಪುಂಸಕ ನಾರಿ ವಾ ಜೀವ ಚರಾಚರ ಕೋಇ।**
**ಸರ್ಬ ಭಾವ ಭಜ ಕಪಟ ತಜಿ ಮೋಹಿ ಪರಮ ಪ್ರಿಯ ಸೋಇ॥೮೭ (ಕ)॥**

ಆ ವ್ಯಕ್ತಿ ಪುರುಷನಿರಲಿ, ಸ್ತ್ರೀಯಿರಲಿ, ನಪುಂಸಕನಿರಲಿ, ಅಥವಾ ಚರ-ಅಚರ ಯಾವುದೇ ಜೀವಿಯಿರಲಿ, ಕಪಟವನ್ನು ತೊರೆದು ಸರ್ವಭಾವದಿಂದ ನನ್ನನ್ನೇ ಭಜಿಸುವ ಜೀವಿಯು ನನಗೆ ಪರಮ ಪ್ರಿಯನು. (ದೋ/೮೭ ಕ)

**ಸೋ – ಸತ್ಯ ಕಹಉँ ಖಗ ತೋಹಿ ಸುಚಿ ಸೇವಕ ಮಮ ಪ್ರಾನಪ್ರಿಯ।**
**ಅಸ ಬಿಚಾರಿ ಭಜು ಮೋಹಿ ಪರಿಹರಿ ಆಸ ಭರೋಸ ಸಬ॥೮೭(ಖ)॥**

''ಎಲೈ ಪಕ್ಷಿಯೇ! ಅನನ್ಯನೂ, ನಿಷ್ಕಾಮನೂ ಆದ ಸೇವಕನು ನನಗೆ ಪ್ರಾಣಪ್ರಿಯನು. ಈ ಪ್ರಕಾರ ನಿಶ್ಚಯಿಸಿಕೊಂಡು ಎಲ್ಲ ಆಸೆ-ಭರವಸೆಗಳನ್ನು ಬದಿಗೊತ್ತಿ ನನ್ನನ್ನೇ ಭಜಿಸು. ನಾನು ನಿನ್ನಲ್ಲಿ ನಿಜವನ್ನೇ ಹೇಳುತ್ತೇನೆ. (ಸೋ/೮೭ ಖ)

**ಚೌ – ಕಬಹೂँ ಕಾಲ ನ ಬ್ಯಾಪಿಹಿ ತೋಹೀ। ಸುಮಿರೆಸು ಭಜೆಸು ನಿರಂತರ ಮೋಹೀ॥**
**ಪ್ರಭು ಬಚನಾಮೃತ ಸುನಿ ನ ಅಘಾಊँ। ತನು ಪುಲಕಿತ ಮನ ಅತಿ ಹರಷಾಊँ॥೧॥**
**ಸೋ ಸುಖ ಜಾನಇ ಮನ ಅರು ಕಾನಾ। ನಹಿँ ರಸನಾ ಪಹಿँ ಜಾಇ ಬಖಾನಾ॥**
**ಪ್ರಭು ಸೋಭಾ ಸುಖ ಜಾನಹಿँ ನಯನಾ। ಕಹಿ ಕಿಮಿ ಸಕಹಿँ ತಿನ್ಹಹಿ ನಹಿँ ಬಯನಾ॥೨॥**
**ಬಹು ಬಿಧಿ ಮೋಹಿ ಪ್ರಬೋಧಿ ಸುಖ ದೇಈ। ಲಗೇ ಕರನ ಸಿಸು ಕೌತುಕ ತೇಈ॥**
**ಸಜಲ ನಯನ ಕಛು ಮುಖ ಕರಿ ರೂಖಾ। ಚಿತಇ ಮಾತು ಲಾಗೀ ಅತಿ ಭೂಖಾ॥೩॥**
**ದೇಖಿ ಮಾತು ಆತುರ ಉಠಿ ಧಾಈ। ಕಹಿ ಮೃದು ಬಚನ ಲಿಏ ಉರ ಲಾಈ॥**
**ಗೋದ ರಾಖಿ ಕರಾವ ಪಯ ಪಾನಾ। ರಘುಪತಿ ಚರಿತ ಲಲಿತ ಕರ ಗಾನಾ॥೪॥**

ಕಾಲವು ನಿನ್ನನ್ನು ಎಂದಿಗೂ ವ್ಯಾಪಿಸದು. ನಿರಂತರ ನನ್ನನ್ನೇ ಸ್ಮರಿಸುತ್ತಾ, ಭಜಿಸುತ್ತಿರು.'' ಪ್ರಭುವಿನ ಅಮೃತತುಲ್ಯವಾದ ವಚನಗಳನ್ನು ಎಷ್ಟು ಕೇಳಿದರೂ ನನ್ನ ತೃಷೆ ಹಿಂಗದು. ನನ್ನ ಶರೀರ ಪುಲಕಿತವಾಗಿತ್ತು. ಮನಸ್ಸಿನಲ್ಲಿ ಆನಂದವು ಹಿಡಿಸದಾಯಿತು. ಆ ಸುಖವನ್ನು ಮನಸ್ಸು, ಕಿವಿಗಳೇ ಬಲ್ಲವು, ನಾಲಿಗೆಯಿಂದ ಅದನ್ನು ಬಣ್ಣಿಸಲಾಗುವುದಿಲ್ಲ. ಪ್ರಭುವಿನ ಸೌಂದರ್ಯವೈಭವವು

ಕಣ್ಣುಗಳೇ ಬಲ್ಲವು. ಆದರೆ ಅವು ಹೇಳಲಾರವು. ಅವುಗಳಿಗೆ ಮಾತು ಇಲ್ಲವಲ್ಲ! ನನ್ನನ್ನು ಅನೇಕ ವಿಧದಿಂದ ಸಮಾಧಾನಪಡಿಸಿ, ಸಂತೋಷಪಡಿಸಿ, ಪ್ರಭುವು ಮರಳಿ ತನ್ನ ಬಾಲ್ಯಕ್ರೀಡೆಗಳನ್ನು ಆಡತೊಡಗಿದನು. ಪ್ರಭುವು ಕಣ್ಣುಗಳಲ್ಲಿ ನೀರುತುಂಬಿಕೊಂಡು, ಮುಖ ಸ್ವಲ್ಪ ಒಣಗಿಸಿದಂತೆ ಮಾಡಿ ತಾಯಿಯ ಕಡೆಗೆ ನೋಡತೊಡಗಿದನು. ತಾಯಿಯು ಆತನಿಗೆ ಹಸಿವಾಗಿದೆ ಎಂದು ಅರಿತುಕೊಂಡು ಎದೆಗಪ್ಪಿಕೊಂಡು, ಮಡಿಲಲ್ಲಿ ಕುಳ್ಳಿರಿಸಿಕೊಂಡಳು. ಮೃದುವಚನಗಳನ್ನಾಡುತ್ತಾ ಅವನಿಗೆ ಹಾಲುಣಿಸಿದಳು. ಶ್ರೀರಘುನಾಥನ ಮನೋಹರ ಲೀಲೆಗಳನ್ನು ಹಾಡತೊಡಗಿದಳು. (ಚೌ/೧-೪)

**ಸೋ – ಜೆಹಿ ಸುಖ ಲಾಗಿ ಪುರಾರಿ ಅಸುಭ ಬೇಷ ಕೃತ ಸಿವ ಸುಖದ ।**
**ಅವಧಪುರೀ ನರ ನಾರಿ ತೆಹಿ ಸುಖ ಮಹುँ ಸಂತತ ಮಗನ ॥ ೮೮ (ಕ)॥**
**ಸೋಈ ಸುಖ ಲವಲೇಸ ಜಿನ್ಹ ಬಾರಕ ಸಪನೆಹುँ ಲಹೆಉ ।**
**ತೇ ನಹಿँ ಗನಹಿँ ಖಗೇಸ ಬ್ರಹ್ಮಸುಖಹಿ ಸಜ್ಜನ ಸುಮತಿ ॥ ೮೮(ಖ)॥**

ಸುಖಪ್ರದನೂ, ಮಂಗಳಸ್ವರೂಪನೂ ಆದ ತ್ರಿಪುರಾರಿಯು (ಶಿವನು) ವಿಲಕ್ಷಣವಾದ ವೇಷವನ್ನು ಧರಿಸಿ, ಅನುಭವಿಸುವ ಸುಖದಲ್ಲಿ ಅಯೋಧ್ಯೆಯ ಸ್ತ್ರೀ-ಪುರುಷರೆಲ್ಲರೂ ಮುಳುಗಿದ್ದರು. ಖಗರಾಜಾ! ಒಂದು ಸಾರಿ ಸ್ವಪ್ನದಲ್ಲಾದರೂ ಆ ಸುಖದ ಲೇಶಮಾತ್ರ ಅನುಭವಿಸುವ ಸಜ್ಜನರು ಬ್ರಹ್ಮಾನಂದವನ್ನು ಕೂಡ ಲೆಕ್ಕಿಸರು. (ಸೋ/೮೮ ಕ, ಖ)

**ಚೌ – ಮೈँ ಪುನಿ ಅವಧ ರಹೆಉँ ಕಛು ಕಾಲಾ । ದೇಖೆಉँ ಬಾಲವಿನೋದ ರಸಾಲಾ ॥**
**ರಾಮ ಪ್ರಸಾದ ಭಗತಿ ಬರ ಪಾಯಉँ । ಪ್ರಭು ಪದ ಬಂದಿ ನಿಜಾಶ್ರಮ ಆಯಉँ ॥ ೧ ॥**
**ತಬ ತೇ ಮೋಹಿ ನ ಬ್ಯಾಪೀ ಮಾಯಾ । ಜಬ ತೇ ರಘುನಾಯಕ ಅಪನಾಯಾ ॥**
**ಯಹ ಸಬ ಗುಪ್ತ ಚರಿತ ಮೈँ ಗಾವಾ । ಹರಿ ಮಾಯಾँ ಜಿಮಿ ಮೋಹಿ ನಚಾವಾ ॥ ೨ ॥**
**ನಿಜ ಅನುಭವ ಅಬ ಕಹಉँ ಖಗೇಸಾ । ಬಿನು ಹರಿ ಭಜನ ನ ಜಾಹಿँ ಕಲೇಸಾ ॥**
**ರಾಮ ಕೃಪಾ ಬಿನು ಸುನು ಖಗರಾಈ । ಜಾನಿ ನ ಜಾಇ ರಾಮ ಪ್ರಭುತಾಈ ॥ ೩ ॥**
**ಜಾನೇँ ಬಿನು ನ ಹೋಇ ಪರತೀತೀ । ಬಿನು ಪರತೀತಿ ಹೋಇ ನಹಿँ ಪ್ರೀತೀ ॥**
**ಪ್ರೀತಿ ಬಿನಾ ನಹಿँ ಭಗತಿ ದಿಢಾಈ । ಜಿಮಿ ಖಗಪತಿ ಜಲ ಕೈ ಚಿಕನಾಈ ॥ ೪ ॥**

ಗರುಡಾ! ನಾನು ಕೆಲಕಾಲ ಅಯೋಧ್ಯೆಯಲ್ಲೇ ಇದ್ದೆ. ಅಲ್ಲಿ ನಾನು ಶ್ರೀರಾಮನ ಅನೇಕ ಸರಸ ಬಾಲಲೀಲೆಗಳನ್ನು ವೀಕ್ಷಿಸಿದೆ. ಶ್ರೀರಾಮನ ಕೃಪೆಯಿಂದ ನನಗೆ ಭಕ್ತಿಯವರದಾನ ದೊರೆಯಿತು. ಅನಂತರ ಪ್ರಭುವಿನ ಚರಣಗಳಿಗೆ ವಂದಿಸಿ ನಾನು ನನ್ನ ಆಶ್ರಮಕ್ಕೆ ಮರಳಿದೆ. ಶ್ರೀರಘುನಾಥನು ನನ್ನನ್ನು ತನ್ನವನನ್ನಾಗಿಸಿಕೊಂಡ ಬಳಿಕ ಮಾಯೆ ನನ್ನನ್ನು ಎಂದಿಗೂ ವ್ಯಾಪಿಸಲಿಲ್ಲ. ಹರಿಮಾಯೆಯು ನನ್ನನ್ನು ಹೇಗೆ ಆಟವಾಡಿಸಿಬಿಟ್ಟಳು ಎಂಬ ರಹಸ್ಯ ಚರಿತ್ರವನ್ನು ನಿನಗೆ ಅರುಹಿದೆ. ಓ ಖಗರಾಜಾ! ಈಗ ನಾನು ನನ್ನ ಅನುಭವವನ್ನು ತಿಳಿಸುವೆನು, ಅವಧರಿಸು. ಶ್ರೀಹರಿಭಜನೆಯಿಲ್ಲದೆ ಪಂಚಕ್ಲೇಶಗಳು ದೂರವಾಗದು. ಶ್ರೀರಾಮನ ಕೃಪೆಯಿಲ್ಲದೆ ಪ್ರಭುಮಹಿಮೆಯ ಕುರಿತು ಜ್ಞಾನವು ಲಭಿಸದು. ಆತನ ಮಹಿಮೆ ತಿಳಿಯದೆ ಪ್ರಭುವಿನ ಮೇಲೆ ವಿಶ್ವಾಸ ಕುದುರದು. ವಿಶ್ವಾಸವಿಲ್ಲದೆ ಪ್ರೀತಿ ಉಂಟಾಗದು. ಎಣ್ಣೆಯಿಲ್ಲದೆ ನೀರಿಗೆ ಜಿಡ್ಡು ಇಲ್ಲದಂತೆ ಪ್ರೀತಿ, ಸ್ನೇಹವಿಲ್ಲದೆ ಭಕ್ತಿ ದೃಢವಾಗದು. (ಚೌ/೧-೪)

**ಸೋ – ಬಿನು ಗುರ ಹೋಇ ಕಿ ಗ್ಯಾನ ಗ್ಯಾನ ಕಿ ಹೋಇ ಬಿರಾಗ ಬಿನು।**
**ಗಾವಹಿँ ಬೇದ ಪುರಾನ ಸುಖ ಕಿ ಲಹಿಅ ಹರಿ ಭಗತಿ ಬಿನು ॥ ೮೯ (ಕ)॥**
**ಕೊಉ ಬಿಶ್ರಾಮ ಕಿ ಪಾವ ತಾತ ಸಹಜ ಸಂತೋಷ ಬಿನು ।**
**ಚಲೈ ಕಿ ಜಲ ಬಿನು ನಾವ ಕೋಟಿ ಜತನ ಪಚಿ ಪಚಿ ಮರಿಅ ॥ ೮೯(ಖ)॥**

ಗುರುವಿಲ್ಲದೆ ಜ್ಞಾನಲಭಿಸುವುದೇ? ವೈರಾಗ್ಯವಿಲ್ಲದೆ ಜ್ಞಾನವು ಉಂಟಾದೀತೇ? ಹರಿಭಕ್ತಿಯಿಲ್ಲದೆ ಸುಖವು ಪ್ರಾಪ್ತವಾಗದು ಎಂದು ವೇದ-ಪುರಾಣಗಳು ಸಾರುತ್ತವೆ. ಅಯ್ಯಾ ಗರುಡಾ! ಸಹಜ ಸಂತೋಷವಿಲ್ಲದೆಯೇ ಯಾರಿಗಾದರೂ ಶಾಂತಿ ಲಭಿಸದು. ಬೇಕಾದ ಪ್ರಯತ್ನಪಟ್ಟು ಸತ್ತು-ಸುಣ್ಣವಾದರೂ ನೀರಿಲ್ಲದೆ ನಾವೆಯು ಚಲಿಸಬಲ್ಲುದೇ? (ಸೋ/೮೯ ಕ, ಖ)

**ಚೌ – ಬಿನು ಸಂತೋಷ ನ ಕಾಮ ನಸಾಹೀँ । ಕಾಮ ಅಛತ ಸುಖ ಸಪನೆಹುँ ನಾಹೀँ ॥**
**ರಾಮ ಭಜನ ಬಿನು ಮಿಟಹಿँ ಕಿ ಕಾಮಾ । ಥಲ ಬಿಹೀನ ತರು ಕಬಹುँ ಕಿ ಜಾಮಾ ॥ ೧ ॥**

**ಬಿನು ಬಿಗ್ಯಾನ ಕಿ ಸಮತಾ ಆವಇ। ಕೋಉ ಅವಕಾಸ ಕಿ ನಭ ಬಿನು ಪಾವಇ॥**
**ಶ್ರದ್ಧಾ ಬಿನಾ ಧರ್ಮ ನಹಿಂ ಹೋಈ। ಬಿನು ಮಹಿ ಗಂಧ ಕಿ ಪಾವಇ ಕೋಈ॥ ೨॥**
**ಬಿನು ತಪ ತೇಜ ಕಿ ಕರ ಬಿಸ್ತಾರಾ। ಜಲ ಬಿನು ರಸ ಕಿ ಹೋಇ ಸಂಸಾರಾ॥**
**ಸೀಲ ಕಿ ಮಿಲ ಬಿನು ಬುಧ ಸೇವಕಾಈ। ಜಿಮಿ ಬಿನು ತೇಜ ನ ರೂಪ ಗೊಸಾಂಈ॥ ೩॥**
**ನಿಜ ಸುಖ ಬಿನು ಮನ ಹೋಇ ಕಿ ಥೀರಾ। ಪರಸ ಕಿ ಹೋಇ ಬಿಹೀನ ಸಮೀರಾ॥**
**ಕವನಿಉ ಸಿದ್ಧಿ ಕಿ ಬಿನು ಬಿಸ್ವಾಸಾ। ಬಿನು ಹರಿ ಭಜನ ನ ಭವ ಭಯ ನಾಸಾ॥ ೪॥**

ಸಂತೋಷವಿಲ್ಲದೆ ಕಾಮನೆ ನಾಶವಾಗದು. ಕಾಮನೆಗಳಿರುವ ತನಕ ಸುಖವು ಕನಸಿನಲ್ಲಿಯೂ ದೊರಕದು. ಶ್ರೀರಾಮನನ್ನು ಭಜಿಸದೆ ಕಾಮನೆಗಳು ಅಳಿದುಹೋಗುವವೇ? ನೆಲವಿಲ್ಲದೆಯೇ ಗಿಡ-ಮರಗಳು ಹುಟ್ಟಬಲ್ಲುವೇ? ತತ್ತ್ವಜ್ಞಾನವಿಲ್ಲದೆ ಸಮಭಾವವು ಬರಬಲ್ಲುದೇ? ಆಕಾಶವಿಲ್ಲದೆ ಅವಕಾಶವಿದೆಯೇ? ನಿಶ್ಚಯಾತ್ಮಕವಾದ ಶ್ರದ್ಧೆಯಿಲ್ಲದೆ ಧರ್ಮಾಚರಣೆ ಸಾಧ್ಯವಾಗದು. ಪೃಥ್ವಿತತ್ತ್ವವಿಲ್ಲದೆ ಯಾರಾದರೂ ಗಂಧ ಪಡೆಯಬಲ್ಲರೇ? ತಪಸ್ಸಿಲ್ಲದೆ ತೇಜಸ್ಸು ಹಬ್ಬಬಲ್ಲುದೇ? ಜಲತತ್ತ್ವವಿಲ್ಲದೆ ಪ್ರಪಂಚದಲ್ಲಿ ರಸ ಉಂಟಾದೀತೇ? ಜ್ಞಾನಿಗಳ ಸೇವೆ ಮಾಡದೆ ಶೀಲ (ಸದಾಚಾರ) ನಿರ್ಮಾಣವಾಗಬಲ್ಲುದೇ? ಅಗ್ನಿತತ್ತ್ವವಿಲ್ಲದೆ ರೂಪವು ಲಭಿಸದು. ಆತ್ಮಾನಂದವು ಇಲ್ಲದೆಯೇ ಮನಸ್ಸು ಸ್ಥಿರವಾಗದು. ವಾಯು ತತ್ತ್ವವಿಲ್ಲದೆ ಸ್ಪರ್ಶಸಂಭವಿಸದು. ವಿಶ್ವಾಸವಿಲ್ಲದೆ ಯಾವ ಸಿದ್ಧಿಯು ಸಿದ್ಧಿಸದು. ಹಾಗೆಯೇ ಹರಿಭಜನೆಯಿಲ್ಲದೆ ಜನನ-ಮರಣ ಭಯ ತೊಲಗದು. (ಚೌ/೧-೪)

**ದೋ – ಬಿನು ಬಿಸ್ವಾಸ ಭಗತಿ ನಹಿಂ ತೇಹಿ ಬಿನು ದ್ರವಹಿಂ ನ ರಾಮು।**
**ರಾಮ ಕೃಪಾ ಬಿನು ಸಪನೇಹುಂ ಜೀವ ನ ಲಹ ಬಿಶ್ರಾಮು॥ ೯೦ (ಕ)॥**

ವಿಶ್ವಾಸವಿಲ್ಲದೆ ಭಕ್ತಿಯು ಮೂಡದು. ಭಕ್ತಿಯಿಂದ ಸೇವಿಸದೆ ಶ್ರೀರಾಮನ ಹೃದಯ ಕರಗದು. ಶ್ರೀರಾಮನ ಕೃಪೆಯಿಲ್ಲದೆ ಸ್ವಪ್ನದಲ್ಲಿಯೂ ಶಾಂತಿ ದೊರಕದು. (ದೋ/೯೦ ಕ)

**ಸೋ – ಅಸ ಬಿಚಾರೀ ಮತಿಧೀರ ತಜಿ ಕುತರ್ಕ ಸಂಸಯ ಸಕಲ।**
**ಭಜಹು ರಾಮ ರಘುಬೀರ ಕರುನಾಕರ ಸುಂದರ ಸುಖದ॥ ೯೦(ಖ)॥**

ಓ ಧೀರಮತಿ! ಇಂತು ಆಲೋಚಿಸಿ ಸಮಸ್ತ ಕುತರ್ಕಗಳನ್ನು, ಸಂದೇಹಗಳನ್ನು ತೊರೆದು, ಸುಂದರನೂ, ಸುಖಧಾಮನೂ, ಕರುಣಾನಿಧಿಯೂ ಆದ ಶ್ರೀರಾಮನನ್ನು ಭಜಿಸು. (ಸೋ/೯೦ ಖ)

**ಚೌ – ನಿಜ ಮತಿ ಸರಿಸ ನಾಥ ಮೈಂ ಗಾಈ। ಪ್ರಭು ಪ್ರತಾಪ ಮಹಿಮಾ ಖಗರಾಈ॥**
**ಕಹೇಉಂ ನ ಕಛು ಕರಿ ಜುಗುತಿ ಬಿಸೇಷೀ। ಯಹ ಸಬ ಮೈಂ ನಿಜ ನಯನನ್ಹಿ ದೇಖೀ॥ ೧॥**
**ಮಹಿಮಾ ನಾಮ ರೂಪ ಗುನ ಗಾಥಾ। ಸಕಲ ಅಮಿತ ಅನಂತ ರಘುನಾಥಾ॥**
**ನಿಜ ನಿಜ ಮತಿ ಮುನಿ ಹರಿ ಗುನ ಗಾವಹಿಂ। ನಿಗಮ ಸೇಷ ಸಿವ ಪಾರ ನ ಪಾವಹಿಂ॥ ೨॥**
**ತುಮ್ಹಹಿ ಆದಿ ಖಗ ಮಸಕ ಪ್ರಜಂತಾ। ನಭ ಉಡಾಹಿಂ ನಹಿಂ ಪಾವಹಿಂ ಅಂತಾ॥**
**ತಿಮಿ ರಘುಪತಿ ಮಹಿಮಾ ಅವಗಾಹಾ। ತಾತ ಕಬಹುಂ ಕೋಉ ಪಾವ ಕಿ ಥಾಹಾ॥ ೩॥**
**ರಾಮು ಕಾಮ ಸತ ಕೋಟಿ ಸುಭಗ ತನ। ದುರ್ಗಾ ಕೋಟಿ ಅಮಿತ ಅರಿ ಮರ್ದನ॥**
**ಸಕ್ರ ಕೋಟಿ ಸತ ಸರಿಸ ಬಿಲಾಸಾ। ನಭ ಸತ ಕೋಟಿ ಅಮಿತ ಅವಕಾಸಾ॥ ೪॥**

ಓ ಪಕ್ಷಿರಾಜಾ! ಒಡೆಯಾ! ನಾನು ಯಥಾಮತಿಯಾಗಿ ಶ್ರೀರಾಮಚಂದ್ರಪ್ರಭುವಿನ ಪ್ರತಾಪವನ್ನೂ, ಮಹಿಮೆಯನ್ನೂ ಗಾನಮಾಡಿದೆ. ಇದರಲ್ಲಿ ನಾನು ಏನನ್ನೂ ಕಲ್ಪಿಸಿ ಹೇಳಲಿಲ್ಲ. ಎಲ್ಲವೂ ಹೇಗಿದೆಯೋ ಹಾಗೆಯೇ ಕಣ್ಣಾರೆ ಕಂಡದ್ದನ್ನು ಹೇಳಿರುವೆನು. ಶ್ರೀರಘುನಾಥನ ಮಹಿಮೆ, ನಾಮಗಳು, ರೂಪಗಳು, ಗುಣಗಳು ಎಲ್ಲವೂ ಅಪಾರ, ಅನಂತ. ಸ್ವತಃ ಶ್ರೀರಾಮನೂ ಅನಂತ. ಮುನಿಗಳು ತಮ್ಮ-ತಮ್ಮ ಬುದ್ಧಿಗನುಗುಣವಾಗಿ ಶ್ರೀಹರಿಯ ಗುಣಗಳನ್ನು ಕೀರ್ತಿಸುತ್ತಾರೆ. ವೇದಗಳು, ಮಹಾಶೇಷನು, ಶಿವನೂ ಕೂಡ ಅವುಗಳ ಕೊನೆ ಮುಟ್ಟಲಾರರು. ಸೂಕ್ಷ್ಮಜೀವಿಯಾದ ಸೊಳ್ಳೆಯಿಂದ ಹಿಡಿದು ನಿನ್ನ (ಗರುತ್ಮಂತ) ವರೆಗೆ ಎಲ್ಲ ಸಣ್ಣ-ದೊಡ್ಡ ಜೀವಿಗಳು ಆಕಾಶದಲ್ಲಿ ಹಾರುತ್ತದೆ. ಆದರೆ ಆಕಾಶದ ಕೊನೆಯನ್ನು ಯಾರೂ ಮುಟ್ಟಲಾರರು. ಹೀಗೆಯೇ ಶ್ರೀರಘುನಾಥನ ಮಹಿಮೆಯನ್ನು ತಮ್ಮ-ತಮ್ಮ ಬುದ್ಧಿಬಲವನ್ನನುಸರಿಸಿ ತಿಳಿಯಲು ಪ್ರಯತ್ನಿಸುವರು. ಆದರೆ ಅದರ ಆಳವನ್ನು ಯಾರೂ

ಕಾಣಲಾರರು. ಶ್ರೀರಾಮನು ಕೋಟಿಮನ್ಮಥ ಸುಂದರಾಕಾರನು. ಅವನು ಅನಂತಕೋಟಿ ದುರ್ಗೆಯರಿಗೆ ಸಮನಾಗಿ ಅರಿಮರ್ದನ. ಕೋಟ್ಯಂತರ ಇಂದ್ರರಿಗೆ ಸಮಾನವಾದ ಆತನ ಭೋಗವಿಲಾಸಗಳು. ಅಸಂಖ್ಯಾತವಾದ ಆಕಾಶಗಳಂತೆ ಆತನಲ್ಲಿ ಅನಂತ ಅವಕಾಶವಿದೆ. (ಚೌ/೧-೪)

**ದೋ – ಮರುತ ಕೋಟಿ ಸತ ಬಿಪುಲ ಬಲ ರಬಿ ಸತ ಕೋಟಿ ಪ್ರಕಾಸ ।**
**ಸಸಿ ಸತ ಕೋಟಿ ಸುಸೀತಲ ಸಮನ ಸಕಲ ಭವ ತ್ರಾಸ ॥ ೯೧ (ಕ)॥**
**ಕಾಲ ಕೋಟಿ ಸತ ಸರಿಸ ಅತಿ ದುಸ್ತರ ದುರ್ಗ ದುರಂತ ।**
**ಧೂಮಕೇತು ಸತ ಕೋಟಿ ಸಮ ದುರಾಧರಷ ಭಗವಂತ ॥ ೯೧(ಖ)॥**

ಶ್ರೀರಾಮನು ಕೋಟ್ಯಾವಧಿ ಪವನಗಳಂತೆ ಮಹಾಬಲಿಷ್ಠನು. ಪ್ರಕಾಶದಲ್ಲಿ ಅಸಂಖ್ಯಾತ ಸೂರ್ಯರಿಗಿಂತಲೂ ಮಿಗಿಲು. ಶೀತಲತೆಯಲ್ಲಿ ಲೆಕ್ಕವಿಲ್ಲದ ಚಂದ್ರರಿಗಿಂತಲೂ ಹೆಚ್ಚಿನವನು. ಸಮಸ್ತ ಭಯನಿವಾರಕನು. ಭಯಂಕರವಾದ ಕೋಟಿ-ಕೋಟಿ ಮೃತ್ಯುದೇವತೆಗಳಿಂದಲೂ ಅತ್ಯಂತ ದುಸ್ತರ, ದುರ್ಗಮ ಮತ್ತು ಕೊನೆಯನ್ನು ಮುಟ್ಟಲು ಅಸಾಧ್ಯನು. ಆ ಭಗವಂತನು ಶತಕೋಟಿ ಅಗ್ನಿಗಳಂತೆ ಅತ್ಯಂತ ಪ್ರಬಲನು. (ದೋ/೯೧ ಕ, ಖ)

**ಚೌ – ಪ್ರಭು ಅಗಾಧ ಸತ ಕೋಟಿ ಪತಾಲಾ । ಸಮನ ಕೋಟಿ ಸತ ಸರಿಸ ಕರಾಲಾ ॥**
**ತೀರಥ ಅಮಿತ ಕೋಟಿ ಸಮ ಪಾವನ । ನಾಮ ಅಖಿಲ ಅಘ ಪೂಗ ನಸಾವನ ॥ ೧ ॥**
**ಹಿಮಗಿರಿ ಕೋಟಿ ಅಚಲ ರಘುಬೀರಾ । ಸಿಂಧು ಕೋಟಿ ಸತ ಸಮ ಗಂಭೀರಾ ॥**
**ಕಾಮಧೇನು ಸತ ಕೋಟಿ ಸಮಾನಾ । ಸಕಲ ಕಾಮ ದಾಯಕ ಭಗವಾನಾ ॥ ೨ ॥**
**ಸಾರದ ಕೋಟಿ ಅಮಿತ ಚತುರಾಈ । ಬಿಧಿ ಸತ ಕೋಟಿ ಸೃಷ್ಟಿ ನಿಪುನಾಈ ॥**
**ಬಿಷ್ನು ಕೋಟಿ ಸಮ ಪಾಲನ ಕರ್ತಾ । ರುದ್ರ ಕೋಟಿ ಸತ ಸಮ ಸಂಹರ್ತಾ ॥ ೩ ॥**
**ಧನದ ಕೋಟಿ ಸತ ಸಮ ಧನವಾನಾ । ಮಾಯಾ ಕೋಟಿ ಪ್ರಪಂಚ ನಿಧಾನಾ ॥**
**ಭಾರ ಧರನ ಸತ ಕೋಟಿ ಅಹೀಸಾ । ನಿರವಧಿ ನಿರುಪಮ ಪ್ರಭು ಜಗದೀಸಾ ॥ ೪ ॥**

ಆ ಪ್ರಭುವು ಶತಕೋಟಿ ಪಾತಾಳಗಳಂತೆ ಗಂಭೀರ (ಆಳ) ನಾದವನು. ಅರ್ಬುದ ಯಮರಂತೆ ಭಯಾನಕ. ಅನಂತಕೋಟಿ ತೀರ್ಥಸ್ಥಾನಗಳಿಗಿಂತ ಅತ್ಯಂತ ಪವಿತ್ರನು. ಆತನ ನಾಮವು ಅಖಿಲ ಪಾಪಸಮೂಹವನ್ನು ನಾಶಮಾಡುವಂತಹುದು. ಶ್ರೀರಘುವೀರನು ಕೋಟಿ ಹಿಮಾಲಯಗಳಿಗಿಂತಲೂ ಸುಸ್ಥಿರನು. ಗಾಂಭೀರ್ಯದಲ್ಲಿ ಅನೇಕ ಮಹಾಸಮುದ್ರಗಳಿಗಿಂತಲೂ ಮಿಗಿಲಾದವನು. ಆ ಭಗವಂತನು ದಾತೃತ್ವದಲ್ಲಿ ಶತಕೋಟಿ ಕಾಮಧೇನುಗಳಿಗಿಂತಲೂ ಹೆಚ್ಚಿನವನು. ಆತನಲ್ಲಿ ಅನಂತಕೋಟಿ ಸರಸ್ವತಿಯರ ಜಾಣ್ಮೆ ಇದೆ. ಶತಕೋಟಿ ಬ್ರಹ್ಮರಿಗೆ ಸಮಾನವಾದ ಸೃಷ್ಟಿರಚನಾ ನೈಪುಣ್ಯವಿದೆ. ಕೋಟ್ಯಾಂತರ ವಿಷ್ಣುಗಳಿಗೆ ಮೀರಿದ ಲೋಕಸಂರಕ್ಷಕನು. ಶತಕೋಟಿ ರುದ್ರರಂತೆ ಸಂಹಾರಕ. ಅನೇಕಕೋಟಿ ಕುಬೇರರಿಗೆ ಮಿಗಿಲಾದ ಧನವಂತನು. ಕೋಟ್ಯಂತರ ಮಾಯೆಯಂತೆ ಸೃಷ್ಟಿಯ ನಿಧಿಯು. ಭಾರ ಹೊರುವುದರಲ್ಲಿ ಆತನು ಕೋಟಿ-ಕೋಟಿ ಆದಿಶೇಷರಿಗೆ ಸಮಾನನು. ಹೆಚ್ಚೇನು? ಜಗದೀಶ್ವರನಾದ ಪ್ರಭು ಶ್ರೀರಾಮನು ನಿರವಧಿಕನು, ನಿರುಪಮಾನನು. (ಚೌ/೧-೪)

**ಛಂ – ನಿರುಪಮ ನ ಉಪಮಾ ಆನ ರಾಮ ಸಮಾನ ರಾಮು ನಿಗಮ ಕಹೈ।**
**ಜಿಮಿ ಕೋಟಿ ಸತ ಖದ್ಯೋತ ಸಮ ರಬಿ ಕಹತ ಅತಿ ಲಘುತಾ ಲಹೈ ॥**
**ಎಹಿ ಭಾಂತಿ ನಿಜ ನಿಜ ಮತಿ ಬಿಲಾಸ ಮುನೀಸ ಹರಿಹಿ ಬಖಾನಹೀಂ ।**
**ಪ್ರಭು ಭಾವ ಗಾಹಕ ಅತಿ ಕೃಪಾಲ ಸಪ್ರೇಮ ಸುನಿ ಸುಖ ಮಾನಹೀಂ ॥**

ಶ್ರೀರಾಮನು ಉಪಮಾರಹಿತನು. ಅವನನ್ನು ವರ್ಣಿಸಲು ಯಾವ ಉಪಮೆಯೂ ಇಲ್ಲ. ಶ್ರೀರಾಮನಿಗೆ ಶ್ರೀರಾಮನೇ ಸಾಟಿ ಎಂದು ವೇದಗಳು ಹೇಳುತ್ತವೆ. ಶತಕೋಟಿ ಮಿಣುಕು ಹುಳಗಳಿಗೆ ಸಮಾನವೆಂದು ಸೂರ್ಯನಿಗೆ ಹೇಳಿದರೆ ಅದರಿಂದ ಅವನ ಹೊಗಳಿಕೆ ಆಗದೆ ತೆಗಳಿಕೆಯೇ ಆಗುತ್ತದಲ್ಲವೇ? ಮುನೀಶ್ವರರು ತಮ್ಮ-ತಮ್ಮ ಶಕ್ತಿಗನುಗುಣವಾಗಿ ಭಗವಂತನನ್ನು ವರ್ಣಿಸುತ್ತಾರೆ. ಆದರೆ ಪ್ರಭುವು ಅತಿ ಕೃಪಾಳುವು. ಭಕ್ತರ ಭಾವವನ್ನು ಮಾತ್ರ ಗ್ರಹಿಸುವನು. ಆದ್ದರಿಂದ ಆ ವರ್ಣನೆಯನ್ನು ಆದರಿಂದ ಕೇಳಿ, ಆನಂದಿಸುವನು. (ಛಂದ)

**ದೋ – ರಾಮು ಅಮಿತ ಗುನ ಸಾಗರ ಥಾಹ ಕಿ ಪಾವಇ ಕೋಇ।**
**ಸಂತನ್ಹ ಸನ ಜಸ ಕಿಛು ಸುನೆಉँ ತುಮ್ಹಹಿ ಸುನಾಯಉँ ಸೋಇ॥ ೯೨ (ಕ)॥**

ಶ್ರೀರಾಮಚಂದ್ರನು ಅನಂತಕಲ್ಯಾಣಗುಣಸಾಗರನು. ಆತನ ಆಳವನ್ನು ಯಾರಾದರೂ ಅರಿಯಲು ಸಾಧ್ಯವೇ? ಸಂತರಿಂದ ಕೇಳಿದುದನ್ನು ಹಾಗೆಯೇ ನಿನಗೆ ನಿವೇದಿಸಿದ್ದೇನೆ. (ದೋ/೯೨ ಕ)

**ಸೋ – ಭಾವ ಬಸ್ಯ ಭಗವಾನ ಸುಖ ನಿಧಾನ ಕರುನಾ ಭವನ।**
**ತಜಿ ಮಮತಾ ಮದ ಮಾನ ಭಜಿಅ ಸದಾ ಸೀತಾರವನ॥ ೯೨(ಖ)॥**

ಸುಖನಿಧಿಯೂ, ಕರುಣಾಳುವೂ ಆದ ಭಗವಂತನು ಭಾವವಶನು, ಪ್ರೇಮವಶನು. ಆದ್ದರಿಂದ ಮಮತೆ, ಮದ, ಅಭಿಮಾನವನ್ನು ತೊರೆದು ಶ್ರೀಜಾನಕೀನಾಥನನ್ನು ಭಜಿಸಬೇಕು. (ಸೋ/೯೨ ಖ)

**ಚೌ – ಸುನಿ ಭುಸುಂಡಿ ಕೇ ಬಚನ ಸುಹಾಏ। ಹರಷಿತ ಖಗಪತಿ ಪಂಖ ಫುಲಾಏ॥**
**ನಯನ ನೀರ ಮನ ಅತಿ ಹರಷಾನಾ। ಶ್ರೀರಘುಪತಿ ಪ್ರತಾಪ ಉರ ಆನಾ॥ ೧॥**
**ಪಾಛಿಲ ಮೋಹ ಸಮುಝಿ ಪಛಿತಾನಾ। ಬ್ರಹ್ಮ ಅನಾದಿ ಮನುಜ ಕರಿ ಮಾನಾ॥**
**ಪುನಿ ಪುನಿ ಕಾಗ ಚರನ ಸಿರು ನಾವಾ। ಜಾನಿ ರಾಮ ಸಮ ಪ್ರೇಮ ಬಢಾವಾ॥ ೨॥**
**ಗುರ ಬಿನು ಭವ ನಿಧಿ ತರಇ ನ ಕೋಈ। ಜೌँ ಬಿರಂಚಿ ಸಂಕರ ಸಮ ಹೋಈ॥**
**ಸಂಸಯ ಸರ್ಪ ಗ್ರಸೇಉ ಮೋಹಿ ತಾತಾ। ದುಖದ ಲಹರಿ ಕುತರ್ಕ ಬಹು ಬ್ರಾತಾ॥ ೩॥**
**ತವ ಸರೂಪ ಗಾರುಡಿ ರಘುನಾಯಕ। ಮೋಹಿ ಜಿಆಯಉ ಜನ ಸುಖದಾಯಕ॥**
**ತವ ಪ್ರಸಾದ ಮಮ ಮೋಹ ನಸಾನಾ। ರಾಮ ರಹಸ್ಯ ಅನೂಪಮ ಜಾನಾ॥ ೪॥**

ಕಾಕಭುಶುಂಡಿಯ ಮೃದುಮಧುರ ಮಾತುಗಳನ್ನು ಕೇಳಿ ಪಕ್ಷಿರಾಜ ಗರುಡನು ಬಹಳ ಹರ್ಷಿತನಾಗಿ ತನ್ನ ರೆಕ್ಕೆಗಳನ್ನು ಅಗಲಿಸಿದನು. ಆತನ ಕಣ್ಣುಗಳಲ್ಲಿ ಪ್ರೇಮಾಂಬು ತುಂಬಿ ಬಂದಿತು. ಮನಸ್ಸು ಹರ್ಷದಿಂದ ಉಕ್ಕಿಹೋಯಿತು. ಅವನು ಶ್ರೀರಘುನಾಥನ ಪ್ರತಾಪವನ್ನು ತನ್ನ ಹೃದಯದಲ್ಲಿ ನೆಲೆಗೊಳಿಸಿದನು. ತನ್ನ ಹಿಂದಿನ ಮೋಹವನ್ನು ನೆನೆದು ಪಶ್ಚಾತ್ತಾಪಪಡತೊಡಗಿದನು. ಅಯ್ಯೋ! ನಾನು ಅನಾದಿಯಾದ ಪರಬ್ರಹ್ಮನನ್ನು ಸಾಮಾನ್ಯಮಾನವನೆಂದು ಬಗೆದೆ. ಗರುಡನು ಮತ್ತೆ ಕಾಕಭುಶುಂಡಿಯ ಚರಣಗಳಿಗೆರಗಿ ಅವನನ್ನು ಶ್ರೀರಾಮನಿಗೆ ಸಮನೆಂದು ಭಾವಿಸಿ ಪ್ರೇಮವಿಹ್ವಲನಾದನು. ಬ್ರಹ್ಮ ಮಹೇಶ್ವರರೇ ಅಲ್ಲದೆ ಯಾರೇ ಆಗಲಿ ಗುರುವಿಲ್ಲದೆಯೇ ಭವಸಾಗರವನ್ನು ದಾಟಬಲ್ಲನೇ? ಗರುಡ ಹೇಳುತ್ತಾನೆ – ಅಯ್ಯಾ! ನನ್ನನ್ನು ಸಂದೇಹವೆಂಬ ಸರ್ಪವು ಕಚ್ಚಿತ್ತು. ಅನೇಕ ಕುತರ್ಕಗಳೆಂಬ ದುಃಖಪ್ರದ ಅಲೆಗಳು ಎದ್ದಿತ್ತು. ಭಕ್ತರಿಗೆ ಸುಖವನ್ನೀಯುವ ಶ್ರೀರಾಮಚಂದ್ರನೆಂಬ ಗಾರುಡ ಮಂತ್ರವನ್ನು ನಿನ್ನ ಸ್ವರೂಪದಿಂದ ಆ ವಿಷವನ್ನು ಕಳೆದು ಬದುಕಿಸಿರುವೆ. ನಿನ್ನ ಕೃಪೆಯಿಂದ ನನ್ನ ಮೋಹವು ನಶಿಸಿತು. ನಿರುಪಮಾನವಾದ ರಾಮರಹಸ್ಯಜ್ಞಾನವನ್ನು ಪಡೆದುಕೊಂಡೆನು. (ಚೌ/೧-೪)

## ಕಾಕಭುಶುಂಡಿಯ ಪೂರ್ವಜನ್ಮ ವೃತ್ತಾಂತವು

**ದೋ – ತಾಹಿ ಪ್ರಸಂಸಿ ಬಿಬಿಧಿ ಬಿಧಿ ಸೀಸ ನಾಇ ಕರ ಜೋರಿ।**
**ಬಚನ ಬಿನೀತ ಸಪ್ರೇಮ ಮೃದು ಬೋಲೇಉ ಗರುಡ ಬಹೋರಿ॥ ೯೩ (ಕ)॥**
**ಪ್ರಭು ಅಪನೇ ಅಬಿಬೇಕ ತೇ ಬೂಝಉँ ಸ್ವಾಮೀ ತೋಹಿ।**
**ಕೃಪಾಸಿಂಧು ಸಾದರ ಕಹಹು ಜಾನಿ ದಾಸ ನಿಜ ಮೋಹಿ॥ ೯೩(ಖ)॥**

ಬಳಿಕ ವೈನತೇಯನು ಕಾಕಭುಶುಂಡಿಯನ್ನು ಅನೇಕ ವಿಧದಿಂದ ಕೊಂಡಾಡಿ, ಶಿರಸಾವಂದಿಸಿ, ಕೈಜೋಡಿಸಿಕೊಂಡು, ಪ್ರೇಮಪೂರ್ವಕವಾಗಿ ವಿನಯದಿಂದ ಇಂತೆಂದನು – ಓ ಪ್ರಭುವೇ! ಒಡೆಯಾ! ನಾನು ನನ್ನ ಅವಿವೇಕದಿಂದಾಗಿ ನಿನ್ನಲ್ಲಿ ಒಂದು ಪ್ರಶ್ನೆ ಕೇಳುತ್ತೇನೆ. ದಯಾಸಾಗರಾ! ನನ್ನನ್ನು ದಾಸನೆಂದು ಅರಿತು ಆದರದಿಂದ ನನ್ನ ಪ್ರಶ್ನೆಗೆ ಉತ್ತರವನ್ನು ದಯಪಾಲಿಸಿರಿ. (ದೋ/೯೩ ಕ, ಖ)

**ಚೌ – ತುಮ್ಹ ಸರ್ಬಗ್ಯ ತಗ್ಯ ತಮ ಪಾರಾ। ಸುಮತಿ ಸುಸೀಲ ಸರಲ ಆಚಾರಾ॥**
**ಗ್ಯಾನ ಬಿರತಿ ಬಿಗ್ಯಾನ ನಿವಾಸಾ। ರಘುನಾಯಕ ಕೇ ತುಮ್ಹ ಪ್ರಿಯ ದಾಸಾ॥ ೧॥**

ಕಾರನ ಕವನ ದೇಹ ಯಹ ಪಾಈ। ತಾತ ಸಕಲ ಮೊಹಿ ಕಹಹು ಬುಝಾಈ॥
ರಾಮ ಚರಿತ ಸರ ಸುಂದರ ಸ್ವಾಮೀ। ಪಾಯಹು ಕಹಾँ ಕಹಹು ನಭಗಾಮೀ॥ ೨ ॥
ನಾಥ ಸುನಾ ಮೈಂ ಅಸ ಸಿವ ಪಾಹೀಂ। ಮಹಾ ಪ್ರಲಯಹುँ ನಾಸ ತವ ನಾಹೀಂ॥
ಮುಧಾ ಬಚನ ನಹಿಂ ಈಸ್ವರ ಕಹಈ। ಸೊಉ ಮೋರೇಂ ಮನ ಸಂಸಯ ಅಹಈ ॥ ೩ ॥
ಅಗ ಜಗ ಜೀವ ನಾಗ ನರ ದೇವಾ। ನಾಥ ಸಕಲ ಜಗು ಕಾಲ ಕಲೇವಾ॥
ಅಂಡ ಕಟಾಹ ಅಮಿತ ಲಯ ಕಾರೀ। ಕಾಲು ಸದಾ ದುರತಿಕ್ರಮ ಭಾರೀ॥ ೪ ॥

ನೀವು ಸರ್ವಜ್ಞರು, ತತ್ತ್ವಜ್ಞಾನಿಗಳು, ಮಾಯಾತೀತರು, ಬುದ್ಧಿವಂತರು, ಸುಶೀಲರು, ಸರಳ ಸ್ವಭಾವದವರು, ಜ್ಞಾನವಿಜ್ಞಾನ ವೈರಾಗ್ಯಸಂಪನ್ನರು, ಶ್ರೀರಘುರಾಮನ ಪ್ರಿಯದಾಸರಾಗಿದ್ದೀರಿ. ನೀವು ಈ ಕಾಗೆಯ ಶರೀರವನ್ನು ಪಡೆದ ಕಾರಣವೇನು? ಇದನ್ನು ವಿಶದೀಕರಿಸಬೇಕು. ಸ್ವಾಮಿ! ಭುಶುಂಡಿಯವರೇ! ನೀವು ಸುಂದರ 'ರಾಮಚರಿತಮಾನಸ'ವೆಂಬ ಸರೋವರವನ್ನು ಎಲ್ಲಿ ಪಡೆದಿರಿ? ಹೇಳಿರಿ. ನಾಥಾ! ಮಹಾಪ್ರಳಯದಲ್ಲಿಯೂ ಕೂಡ ನಿಮಗೆ ನಾಶವಿಲ್ಲ ಎಂದು ನಾನು ಪರಮೇಶ್ವರನಿಂದ ಕೇಳಿದ್ದೆ. ಶಿವನ ಮಾತು ಎಂದೂ ಸುಳ್ಳಾಗುವುದಿಲ್ಲ. ಅದರೂ ನನ್ನ ಮನಸ್ಸಿನಲ್ಲಿ ಸಂದೇಹವಿದೆ. ಏಕೆಂದರೆ ಪ್ರಭೋ! ದೇವತೆಗಳು, ನಾಗಗಳು, ಮನುಷ್ಯರು, ಮೊದಲಾದ ಚರಾಚರಜೀವಿಗಳು ಹಾಗೂ ಈ ಇಡೀ ಜಗತ್ತು ಕಾಲನಿಗೆ ತುತ್ತಾಗಿದೆ. ಅಸಂಖ್ಯ ಬ್ರಹ್ಮಾಂಡಗಳ ನಾಶಮಾಡುವಂತಹ ಕಾಲವು ಭಾರೀ ದುರತಿಕ್ರಮವು. (ಚೌ/೧-೪)

**ಸೋ – ತುಮ್ಹಹಿ ನ ಬ್ಯಾಪತ ಕಾಲ ಅತಿ ಕರಾಲ ಕಾರನ ಕವನ।**
**ಮೋಹಿ ಸೊ ಕಹಹು ಕೃಪಾಲ ಗ್ಯಾನ ಪ್ರಭಾವ ಕಿ ಜೋಗ ಬಲ॥ ೯೪ (ಕ)॥**

ಅಂತಹ ಭಯಂಕರವಾದ ಆ ಕಾಲನು ನಿಮ್ಮ ಮೇಲೆ ಯಾವ ಪ್ರಭಾವವನ್ನು ಬೀರನು. ಇದರ ಕಾರಣವೇನು? ಕೃಪಾಳುವೇ! ಇದು ಜ್ಞಾನದ ಪ್ರಭಾವವೋ, ಯೋಗದ ಬಲವೋ? ತಿಳಿಸಿರಿ. (ಸೋ/೯೪ ಕ)

**ದೋ – ಪ್ರಭು ತವ ಆಶ್ರಮ ಆಏँ ಮೋರ ಮೋಹ ಭ್ರಮ ಭಾಗ।**
**ಕಾರನ ಕವನ ಸೊ ನಾಥ ಸಬ ಕಹಹು ಸಹಿತ ಅನುರಾಗ॥ ೯೪(ಖ)॥**

ಪ್ರಭು! ನಿಮ್ಮ ಆಶ್ರಮಕ್ಕೆ ಬರುತ್ತಲೇ ನನ್ನ ಮೋಹ, ಭ್ರಮೆಗಳು ಓಡಿಹೋದವು. ಇದರ ಕಾರಣವೇನು? ಇದೆಲ್ಲವನ್ನು ಅಕ್ಕರೆಯಿಂದ ಅರುಹಿರಿ. (ದೋ/೯೪ ಖ)

ಚೌ – ಗರುಡ ಗಿರಾ ಸುನಿ ಹರಷೆಉ ಕಾಗಾ। ಬೋಲೆಉ ಉಮಾ ಪರಮ ಅನುರಾಗಾ॥
ಧನ್ಯ ಧನ್ಯ ತವ ಮತಿ ಉರಗಾರೀ। ಪ್ರಸ್ನ ತುಮ್ಹಾರಿ ಮೋಹಿ ಅತಿ ಪ್ಯಾರೀ ॥ ೧ ॥
ಸುನಿ ತವ ಪ್ರಸ್ನ ಸಪ್ರೇಮ ಸುಹಾಈ। ಬಹುತ ಜನಮ ಕೈ ಸುಧಿ ಮೊಹಿ ಆಈ॥
ಸಬ ನಿಜ ಕಥಾ ಕಹಉँ ಮೈಂ ಗಾಈ। ತಾತ ಸುನಹು ಸಾದರ ಮನ ಲಾಈ॥ ೨ ॥
ಜಪ ತಪ ಮಖ ಸಮ ದಮ ಬ್ರತ ದಾನಾ। ಬಿರತಿ ಬಿಬೇಕ ಜೋಗ ಬಿಗ್ಯಾನಾ॥
ಸಬ ಕರ ಫಲ ರಘುಪತಿ ಪದ ಪ್ರೇಮಾ। ತೇಹಿ ಬಿನು ಕೋಉ ನ ಪಾವಇ ಛೇಮಾ॥ ೩ ॥
ಏಹಿಂ ತನ ರಾಮ ಭಗತಿ ಮೈಂ ಪಾಈ। ತಾತೇ ಮೋಹಿ ಮಮತಾ ಅಧಿಕಾಈ॥
ಜೆಹಿ ತೇಂ ಕಛು ನಿಜ ಸ್ವಾರಥ ಹೋಈ। ತೇಹಿ ಪರ ಮಮತಾ ಕರ ಸಬ ಕೋಈ॥ ೪ ॥

ಶಿವನು ಹೇಳುತ್ತಾನೆ – ಉಮೆ! ಗರುಡನ ಮಾತನ್ನು ಕೇಳಿ, ಕಾಕಭುಶುಂಡಿಯವರು ಆನಂದತುಂದಿಲರಾದರು. ಅತ್ಯಂತ ಪ್ರೇಮದಿಂದ ಹೇಳತೊಡಗಿದರು. ಓ ಉರಗಾರಿ! ನಿಮ್ಮ ಬುದ್ಧಿಯು ನಿಜಕ್ಕೂ ಧನ್ಯ! ಧನ್ಯ!! ನಿಮ್ಮ ಪ್ರಶ್ನೆಗಳು ನನಗೆ ಬಹಳ ಮೆಚ್ಚಿಕೆಯಾಯಿತು. ನಿಮ್ಮ ಪ್ರೇಮಪೂರ್ಣವಾದ ಸುಂದರ ಪ್ರಶ್ನೆಗಳನ್ನು ಕೇಳಿದೊಡನೆಯೇ ನನ್ನ ಅನೇಕ ಪೂರ್ವಜನ್ಮಗಳ ನೆನಪು ಮರುಕಳಿಸಿತು. ನಾನು ನನ್ನ ಕಥೆಯೆಲ್ಲವನ್ನು ವಿವರವಾಗಿ ಹೇಳುತ್ತೇನೆ. ಅಯ್ಯಾ! ಆದರದಿಂದ ದತ್ತಚಿತ್ತನಾಗಿ ಕೇಳು. ಅನೇಕ ಜಪ, ತಪ, ಯಜ್ಞ, ಯಾಗ, ಶಮೆ, ದಮ, ವ್ರತ, ದಾನ, ವೈರಾಗ್ಯ, ವಿವೇಕ, ಯೋಗ, ವಿಜ್ಞಾನ ಮುಂತಾದ ಇವೆಲ್ಲದರ ಫಲ ಶ್ರೀರಾಮಚರಣಗಳಲ್ಲಿ ಅನುರಾಗಪ್ರಾಪ್ತಿ. ಇದಲ್ಲದೆ ಯಾರೂ ಶ್ರೇಯಸ್ಸನ್ನು ಪಡೆಯಲಾರರು. ನಾನು ಇದೇ ಕಾಗೆಯ ಶರೀರದಿಂದ ಶ್ರೀರಾಮನ ಭಕ್ತಿಯನ್ನು ಪಡೆದುಕೊಂಡಿದ್ದೇನೆ. ಆದ್ದರಿಂದ ಈ ಶರೀರವೆಂದರೆ ನನಗೇಕೋ ಒಂದು ವಿಧವಾದ ಮಮತೆ. ಯಾವುದರಿಂದಲಾದರೂ ತನ್ನ ಸ್ವಾರ್ಥಸಿದ್ಧವಾದರೆ, ಅದರ ಮೇಲೆ ಮಮಕಾರವಿರುವುದು ಎಲ್ಲರಿಗೂ ಸಹಜವೇ. (ಚೌ/೧-೪)

**ಸೋ– ಪನ್ನಗಾರಿ ಅಸಿ ನೀತಿ ಶ್ರುತಿ ಸಮ್ಮತ ಸಜ್ಜನ ಕಹಹಿಂ ।**
**ಅತಿ ನೀಚಹು ಸನ ಪ್ರೀತಿ ಕರಿಅ ಜಾನಿ ನಿಜ ಪರಮ ಹಿತ॥ ೯೫ (ಕ)॥**
**ಪಾಟ ಕೀಟ ತೇಂ ಹೋಇ ತೆಹಿ ತೇಂ ಪಾಟಂಬರ ರುಚಿರ ।**
**ಕೃಮಿ ಪಾಲಇ ಸಬು ಕೋಇ ಪರಮ ಅಪಾವನ ಪ್ರಾನ ಸಮ॥ ೯೫(ಖ)॥**

''ಓ ಪನ್ನಗಾರಿಯೇ! ಅತಿ ಅಲ್ಪಪ್ರಾಣಿಯಾದರೂ ತನ್ನ ಪರಮಹಿತಕಾರಿ ಎಂದು ತಿಳಿದು ಪ್ರೀತಿಸಬೇಕು ಎಂಬುದು ವೇದ ಸಮ್ಮತವಾದ ನೀತಿಯು ಹಾಗೂ ಸಜ್ಜನರು ಇದನ್ನೇ ಹೇಳುತ್ತಾರೆ. ರೇಷ್ಮೆಹುಳುವಿನಿಂದ ಸುಂದರ ಪಟ್ಟವಸ್ತ್ರ ನಿರ್ಮಿತವಾಗುತ್ತದೆ. ಇದರಿಂದ ಆ ಪರಮ ಅಪವಿತ್ರವಾದ ಹುಳವನ್ನೂ ಕೂಡ ಎಲ್ಲ ಜನರು ಪ್ರಾಣಸಮವೆಂದು ತಿಳಿದು ಸಾಕುತ್ತಾರೆ. (ಸೋ/೯೫ ಕ, ಖ)

**ಚೌ– ಸ್ವಾರಥ ಸಾಂಚ ಜೀವ ಕಹುಁ ಏಹಾ । ಮನ ಕ್ರಮ ಬಚನ ರಾಮ ಪದ ನೇಹಾ ॥**
**ಸೋಇ ಪಾವನ ಸೋಇ ಸುಭಗ ಸರೀರಾ । ಜೋ ತನು ಪಾಇ ಭಜಿಅ ರಘುಬೀರಾ ॥ ೧ ॥**
**ರಾಮ ಬಿಮುಖ ಲಹಿ ಬಿಧಿ ಸಮ ದೇಹೀ । ಕಬಿ ಕೋಬಿದ ನ ಪ್ರಸಂಸಹಿಂ ತೇಹೀ ॥**
**ರಾಮ ಭಗತಿ ಏಹಿಂ ತನ ಉರ ಜಾಮೀ । ತಾತೇ ಮೋಹಿ ಪರಮ ಪ್ರಿಯ ಸ್ವಾಮೀ ॥ ೨ ॥**
**ತಜಉಁ ನ ತನ ನಿಜ ಇಚ್ಛಾ ಮರನಾ । ತನ ಬಿನು ಬೇದ ಭಜನ ನಹಿಂ ಬರನಾ ॥**
**ಪ್ರಥಮ ಮೋಹಁ ಮೊಹಿ ಬಹುತ ಬಿಗೋವಾ । ರಾಮ ಬಿಮುಖ ಸುಖ ಕಬಹುಁ ನ ಸೋವಾ ॥ ೩ ॥**
**ನಾನಾ ಜನಮ ಕರ್ಮ ಪುನಿ ನಾನಾ । ಕಿಏ ಜೋಗ ಜಪ ತಪ ಮಖ ದಾನಾ ॥**
**ಕವನ ಜೋನಿ ಜನಮೆಉಁ ಜಹಁ ನಾಹೀಂ । ಮೈಂ ಖಗೇಸ ಭ್ರಮಿ ಭ್ರಮಿ ಜಗ ಮಾಹೀಂ ॥ ೪ ॥**
**ದೇಖೆಉಁ ಕರಿ ಸಬ ಕರಮ ಗೊಸಾಈಂ । ಸುಖೀ ನ ಭಯಉಁ ಅಬಹಿಂ ಕೀ ನಾಈಂ ॥**
**ಸುಧಿ ಮೊಹಿ ನಾಥ ಜನ್ಮ ಬಹು ಕೇರೀ । ಸಿವ ಪ್ರಸಾದ ಮತಿ ಮೋಹಁ ನ ಘೇರೀ ॥ ೫ ॥**

ಮನ, ವಚನ, ಕರ್ಮದಿಂದ ಶ್ರೀರಾಮಚರಣಗಳಲ್ಲಿ ಪ್ರೇಮವನ್ನಿಡುವುದೇ ಪ್ರಾಣಿಮಾತ್ರರಿಗೆ ನಿಜವಾದ ಸ್ವಾರ್ಥವಾಗಿದೆ. ಶ್ರೀರಾಮನನ್ನು ಭಜಿಸುವ ಶರೀರವೇ ಸುಂದರ, ಪವಿತ್ರವಾಗಿದೆ. ಶ್ರೀರಾಮನಿಗೆ ವಿಮುಖನಾದ ವ್ಯಕ್ತಿಗೆ ಬ್ರಹ್ಮನಂತಹ ಶರೀರವೇ ಲಭಿಸಿದರೂ, ಅವನನ್ನು ಕವಿಗಳು, ಪಂಡಿತರು ಮೆಚ್ಚುವುದಿಲ್ಲ. ಈ ಶರೀರದಿಂದಲೇ ನನ್ನ ಹೃದಯದಲ್ಲಿ ರಾಮಭಕ್ತಿಯು ಉಂಟಾಯಿತು. ಇದರಿಂದ ಓ ಸ್ವಾಮಿ! ನನಗೆ ಇದು ಅತ್ಯಂತ ಪ್ರಿಯವಾಗಿದೆ. ನಾನು ಇಚ್ಛಾಮರಣಿಯಾದರೂ ಈ ತನುವನ್ನು ತ್ಯಜಿಸಲೊಲ್ಲೆ. ಏಕೆಂದರೆ ಶರೀರವೇ ಇಲ್ಲದೆ ಹರಿಭಜನೆಯಾಗುವುದಿಲ್ಲ ಎಂದು ವೇದಗಳು ವರ್ಣಿಸಿವೆ. ಮೊದಲಿಗೆ ಮೋಹವು ನನ್ನನ್ನು ದುರ್ಗತಿಗೆ ಈಡುಮಾಡಿತು. ಶ್ರೀರಾಮವಿಮುಖನಾಗಿ ನಾನು ಎಂದೂ ಸುಖವಾಗಿ ನಿದ್ರಿಸಲಿಲ್ಲ. ಅನೇಕ ಜನ್ಮಗಳಲ್ಲಿ ನಾನು ನಾನಾವಿಧವಾದ ಯೋಗ, ಜಪ, ತಪಸ್ಸು, ಯಜ್ಞ, ದಾನ ಮುಂತಾದ ಕರ್ಮಗಳನ್ನು ಮಾಡಿದೆ. ಓ ಗರುಡಾ! ನಾನು ಭವದಲ್ಲಿ ಪುನಃ ಪುನಃ ಹುಟ್ಟಿ ತಿರುಗದ ಯೋನಿಗಳಿಲ್ಲ. ನಾನು ಎಲ್ಲ ಕರ್ಮಗಳನ್ನು ಮಾಡಿನೋಡಿದೆ. ಆದರೆ ಇಂತಹ ಭಕ್ತಿಯ ಸುಖವು ನನಗೆ ಎಂದಿಗೂ ಲಭಿಸಲಿಲ್ಲ. ನನಗೆ ಅನೇಕ ಜನ್ಮಗಳ ಸ್ಮರಣೆಯಿದೆ. ಏಕೆಂದರೆ ಶಿವನ ಕೃಪೆಯಿಂದ ನನ್ನ ಬುದ್ಧಿಗೆ ಮೋಹವು ಆವರಿಸಲಿಲ್ಲ. (ಚೌ/೧-೫)

**ದೋ– ಪ್ರಥಮ ಜನ್ಮ ಕೇ ಚರಿತ ಅಬ ಕಹಉಁ ಸುನಹು ಬಿಹಗೇಸ ।**
**ಸುನಿ ಪ್ರಭು ಪದ ರತಿ ಉಪಜಇ ಜಾತೇಂ ಮಿಟಹಿಂ ಕಲೇಸ ॥ ೯೬ (ಕ)॥**
**ಪೂರುಬ ಕಲ್ಪ ಏಕ ಪ್ರಭು ಜುಗ ಕಲಿಜುಗ ಮಲ ಮೂಲ ।**
**ನರ ಅರು ನಾರಿ ಅಧರ್ಮ ರತ ಸಕಲ ನಿಗಮ ಪ್ರತಿಕೂಲ ॥ ೯೬(ಖ)॥**

ಓ ಖಗರಾಜಾ! ಕೇಳು. ನಾನು ಈಗ ಮೊದಲ ಜನ್ಮದ ವೃತ್ತಾಂತವನ್ನು ಹೇಳುವೆನು. ಅದನ್ನು ಕೇಳಿದವರಿಗೆ ಪ್ರಭುಚರಣಗಳಲ್ಲಿ ಪ್ರೀತಿಯುಂಟಾಗುತ್ತದೆ. ಅದರಿಂದ ಎಲ್ಲ ಕ್ಲೇಶಗಳೂ ದೂರವಾಗುತ್ತವೆ. ಪ್ರಭೋ! ಹಿಂದಿನ ಒಂದು ಕಲ್ಪದಲ್ಲಿ ಪಾಪಗಳ ಮೂಲವಾದ ಕಲಿಯುಗವಿತ್ತು. ಅದರಲ್ಲಿ ಎಲ್ಲ ಸ್ತ್ರೀ-ಪುರುಷರು ಅಧರ್ಮಪರಾಯಣರೂ, ವೇದವಿರೋಧಿಗಳಾಗಿದ್ದರು. (ದೋ/೯೬ ಕ, ಖ)

**ಚೌ– ತೆಹಿಂ ಕಲಿಜುಗ ಕೋಸಲಪುರ ಜಾಈ । ಜನ್ಮತ ಭಯಉಁ ಸೂದ್ರ ತನು ಪಾಈ ॥**
**ಸಿವ ಸೇವಕ ಮನ ಕ್ರಮ ಅರು ಬಾನೀ । ಆನ ದೇವ ನಿಂದಕ ಅಭಿಮಾನೀ ॥ ೧ ॥**

ಧನ ಮದ ಮತ್ತ ಪರಮ ಬಾಚಾಲಾ। ಉಗ್ರಬುದ್ಧಿ ಉರ ದಂಭ ಬಿಸಾಲಾ॥
ಜದಪಿ ರಹೇಉಁ ರಘುಪತಿ ರಜಧಾನೀ। ತದಪಿ ನ ಕಛು ಮಹಿಮಾ ತಬ ಜಾನೀ॥ ೨ ॥
ಅಬ ಜಾನಾ ಮೈಂ ಅವಧ ಪ್ರಭಾವಾ। ನಿಗಮಾಗಮ ಪುರಾನ ಅಸ ಗಾವಾ॥
ಕವನೇಹುಁ ಜನ್ಮ ಅವಧ ಬಸ ಜೋಈ। ರಾಮ ಪರಾಯನ ಸೋ ಪರಿ ಹೋಈ॥ ೩ ॥
ಅವಧ ಪ್ರಭಾವ ಜಾನ ತಬ ಪ್ರಾನೀ। ಜಬ ಉರ ಬಸಹಿಂ ರಾಮು ಧನುಪಾನೀ॥
ಸೋ ಕಲಿಕಾಲ ಕಠಿನ ಉರಗಾರೀ। ಪಾಪ ಪರಾಯನ ಸಬ ನರ ನಾರೀ॥ ೪ ॥

ಆ ಕಲಿಯುಗದಲ್ಲಿ ನಾನು ಅಯೋಧ್ಯಾನಗರದಲ್ಲಿ ಒಬ್ಬ ಶೂದ್ರನಾಗಿ ಹುಟ್ಟಿದ್ದೆ. ಮನೋವಾಕ್ಕರ್ಮಗಳಿಂದ ನಾನು ಶಿವಭಕ್ತನಾಗಿದ್ದು, ಇತರ ದೇವತೆಗಳನ್ನು ನಿಂದಿಸುವ ಅಭಿಮಾನಿಯಾಗಿದ್ದೆ. ನಾನು ಧನಮದದಿಂದ ಪ್ರಮತ್ತನಾಗಿದ್ದೆ. ಪರಮ ವಾಚಾಳಿ ಹಾಗೂ ಉಗ್ರಬುದ್ಧಿಯವನಾಗಿದ್ದೆ. ನನ್ನ ಹೃದಯದಲ್ಲಿ ಭಾರೀ ದಂಭವಿತ್ತು. ಶ್ರೀರಘುನಾಥನ ಅಯೋಧ್ಯೆಯಲ್ಲಿ ವಾಸವಾಗಿದ್ದರೂ ನಾನು ಆಗ ಅದರ ಮಹಿಮೆಯನ್ನು ಏನೂ ಅರಿತಿರಲಿಲ್ಲ. ಈಗ ನಾನು ಅಯೋಧ್ಯೆಯ ಮಹಿಮೆಯನ್ನು ತಿಳಿದಿರುವೆನು. ಯಾವುದೇ ಜನ್ಮದಲ್ಲಿ, ಯಾವುದೇ ಜೀವಿಯು ಅಯೋಧ್ಯೆಯಲ್ಲಿ ನೆಲೆಸಿದರೆ ಅವನು ಅವಶ್ಯವಾಗಿ ಶ್ರೀರಾಮಪರಾಯಣನಾಗುತ್ತಾನೆ ಎಂದು ವೇದ-ಶಾಸ್ತ್ರಗಳು ತಿಳಿಸುತ್ತಿವೆ. ಕೈಯಲ್ಲಿ ಧನುರ್ಬಾಣಗಳನ್ನು ಧರಿಸಿದ ಕೋದಂಡರಾಮನನ್ನು ತನ್ನ ಹೃದಯದಲ್ಲಿ ನಿಲ್ಲಿಸಿಕೊಂಡಿರುವವರೇ ಅಯೋಧ್ಯೆಯ ಪ್ರಭಾವವನ್ನು ತಿಳಿದುಕೊಳ್ಳಬಲ್ಲರು. ಗರುಡನೇ! ಕಲಿಕಾಲವು ತುಂಬಾ ಕಲುಷಿತವಾದುದು. ಅದರಲ್ಲಿ ಸ್ತ್ರೀ-ಪುರುಷರೆಲ್ಲರೂ ಪಾಪಕರ್ಮನಿರತರು. (ಚೌ/೧-೪)

## ಕಲಿಯುಗದ ಲಕ್ಷಣಗಳು

**ದೋ – ಕಲಿಮಲ ಗ್ರಸೇ ಧರ್ಮ ಸಬ ಲುಪ್ತ ಭಏ ಸದಗ್ರಂಥ।**
**ದಂಭಿನ್ಹ ನಿಜ ಮತಿ ಕಲ್ಪಿ ಕರಿ ಪ್ರಗಟ ಕಿಏ ಬಹು ಪಂಥ॥ ೯೭ (ಕ)॥**
**ಭಏ ಲೋಗ ಸಬ ಮೋಹಬಸ ಲೋಭ ಗ್ರಸೇ ಸುಭ ಕರ್ಮ।**
**ಸುನು ಹರಿಜಾನ ಗ್ಯಾನ ನಿಧಿ ಕಹಉಁ ಕಛುಕ ಕಲಿಧರ್ಮ॥ ೯೭(ಖ)॥**

ಕಲಿಯುಗದ ಪಾಪಗಳಿಂದಾಗಿ ಧರ್ಮವೆಲ್ಲವು ನಶಿಸಿತು. ಸದ್ಗ್ರಂಥಗಳೆಲ್ಲವೂ ಮರೆಯಾದವು. ಪಾಖಂಡರು ತಮ್ಮ ವಿಪರೀತಬುದ್ಧಿಯಿಂದ ವಿವಿಧ ಸಂಪ್ರದಾಯಗಳನ್ನು ಕಲ್ಪಿಸಿದರು. ಜನರೆಲ್ಲರೂ ಮೋಹಕ್ಕೆ ವಶರಾದರು. ಲೋಭವು ಶುಭಕರ್ಮಗಳನ್ನು ನುಂಗಿ ಹಾಕಿತು. ಓ ಜ್ಞಾನನಿಧೀ! ಹರಿವಾಹನಾ! ನಾನು ಕೆಲವು ಕಲಿಯುಗದ ಲಕ್ಷಣಗಳನ್ನು ತಿಳಿಸುವೆನು, ಕೇಳು. (ದೋ/೯೭ ಕ, ಖ)

**ಚೌ –** ಬರನ ಧರ್ಮ ನಹಿಂ ಆಶ್ರಮ ಚಾರೀ। ಶ್ರುತಿ ಬಿರೋಧ ರತ ಸಬ ನರ ನಾರೀ॥
ದ್ವಿಜ ಶ್ರುತಿ ಬೇಚಕ ಭೂಪ ಪ್ರಜಾಸನ। ಕೋಉ ನಹಿಂ ಮಾನ ನಿಗಮ ಅನುಸಾಸನ॥ ೧ ॥
ಮಾರಗ ಸೋಇ ಜಾ ಕಹುँ ಜೋಇ ಭಾವಾ। ಪಂಡಿತ ಸೋಇ ಜೋ ಗಾಲ ಬಜಾವಾ॥
ಮಿಥ್ಯಾರಂಭ ದಂಭ ರತ ಜೋಈ। ತಾ ಕಹುँ ಸಂತ ಕಹಇ ಸಬ ಕೋಈ॥ ೨ ॥
ಸೋಇ ಸಯಾನ ಜೋ ಪರಧನ ಹಾರೀ। ಜೋ ಕರ ದಂಭ ಸೋ ಬಡ ಆಚಾರೀ॥
ಜೋ ಕಹ ಝೂँಠ ಮಸಖರೀ ಜಾನಾ। ಕಲಿಜುಗ ಸೋಇ ಗುನವಂತ ಬಖಾನಾ॥ ೩ ॥
ನಿರಾಚಾರ ಜೋ ಶ್ರುತಿ ಪಥ ತ್ಯಾಗೀ। ಕಲಿಜುಗ ಸೋಇ ಗ್ಯಾನೀ ಸೋ ಬಿರಾಗೀ॥
ಜಾಕೇಂ ನಖ ಅರು ಜಟಾ ಬಿಸಾಲಾ। ಸೋಇ ತಾಪಸ ಪ್ರಸಿದ್ಧ ಕಲಿಕಾಲಾ॥ ೪ ॥

ಕಲಿಯುಗದಲ್ಲಿ ವರ್ಣಾಶ್ರಮಧರ್ಮಗಳು ಉಳಿಯುವುದಿಲ್ಲ. ಎಲ್ಲ ಸ್ತ್ರೀ-ಪುರುಷರು ವೇದವಿರುದ್ಧವಾಗಿ ಪ್ರವರ್ತಿಸುವರು. ಬ್ರಾಹ್ಮಣರು ವೇದಗಳನ್ನು ಮಾರಿಕೊಳ್ಳುವರು. ರಾಜರು ಪ್ರಜೆಗಳನ್ನು ಪೀಡಿಸುತ್ತಾ ಕಿತ್ತುತಿನ್ನುವರು. ವೇದ-ಶಾಸ್ತ್ರಗಳನ್ನು ಯಾರೂ ಗೌರವಿಸುವುದಿಲ್ಲ. ಯಾರಿಗೆ ಯಾವುದು ಇಷ್ಟವೋ, ಅವರಿಗೆ ಅದೇ ಧರ್ಮ. ಜಂಭಕೊಚ್ಚಿಕೊಳ್ಳುವವನೇ ಪಂಡಿತ. ಆಡಂಬರದಿಂದ ಬದುಕುವವನನ್ನು, ನಖಶಿಖಾಂತ ಕಪಟದಿಂದ ಕೂಡಿದವನನ್ನು ಜನರು ಸಂತನೆಂದು ಹೇಳುವರು. ಬೇರೆಯವರ ಧನವನ್ನು ಅಪಹರಿಸುವವನೇ ಬುದ್ಧಿವಂತ. ಡಾಂಭಿಕನೇ ಆಚಾರವಂತ, ಸುಳ್ಳುಹೇಳುವವನು, ತಮಾಷೆಮಾಡುವವನು ಕಲಿಯುಗದಲ್ಲಿ ದೊಡ್ಡ ಗುಣವಂತನೆನೆಸಿಕೊಳ್ಳುವನು. ವೇದಮಾರ್ಗವನ್ನು ಬಿಟ್ಟು,

ಆಚಾರಹೀನನಾದವನೇ ಕಲಿಯುಗದಲ್ಲಿ ಜ್ಞಾನೀ ವಿರಾಗಿಯು. ಉದ್ದುದ್ದನೆಯ ಉಗುರು, ನೀಳವಾದ ಜಟೆಗಳು ಇದ್ದವನೇ ಕಲಿಕಾಲದಲ್ಲಿ ಪ್ರಸಿದ್ಧ ತಪಸ್ವಿಯು. (ಚೌ/೧-೪)

**ದೋ – ಅಸುಭ ಬೇಷ ಭೂಷನ ಧರೇಂ ಭಚ್ಛಾಭಚ್ಛ ಜೆ ಖಾಹಿಂ ।**
**ತೇಇ ಜೋಗೀ ತೇಇ ಸಿದ್ಧ ನರ ಪೂಜ್ಯ ತೆ ಕಲಿಜುಗ ಮಾಹಿಂ ॥ ೯೮ (ಕ)॥**

ಅಮಂಗಳ ವೇಷಭೂಷಣಧಾರಿಗಳು, ಭಕ್ಷ್ಯಾಭಕ್ಷ್ಯ ಪರಿಜ್ಞಾನವಿಲ್ಲದೆ ಸಿಕ್ಕಿದ್ದೆಲ್ಲವನ್ನು ತಿನ್ನುವವರು ಯೋಗಿಗಳು, ಅವರೇ ಸಿದ್ಧಪುರುಷರು, ಅವರೇ ಕಲಿಯುಗದಲ್ಲಿ ಪೂಜ್ಯರಾಗಿರುವರು. (ದೋ/೯೮ ಕ)

**ಸೋ – ಜೇ ಅಪಕಾರೀ ಚಾರ ತಿನ್ಹ ಕರ ಗೌರವ ಮಾನ್ಯ ತೇಇ ।**
**ಮನ ಕ್ರಮ ಬಚನ ಲಬಾರ ತೇಇ ಬಕತಾ ಕಲಿಕಾಲ ಮಹುಂ ॥ ೯೮(ಖ)॥**

ಇತರರಿಗೆ ಅಪಕಾರ ಮಾಡುವವರಿಗೆ ಹೆಚ್ಚಿನ ಗೌರವ, ಮನ್ನಣೆ. ಮನೋವಾಕ್ಕರ್ಮಗಳಿಂದ ಅಸತ್ಯ ಪ್ರಲಾಪಮಾಡುವವರೇ ಕಲಿಯುಗದಲ್ಲಿ ದೊಡ್ಡವಾಗ್ಮಿಗಳು. (ಸೋ/೯೮ ಖ)

**ಚೌ – ನಾರಿ ಬಿಬಸ ನರ ಸಕಲ ಗೊಸಾಈಂ । ನಾಚಹಿಂ ನಟ ಮರ್ಕಟ ಕೀ ನಾಈಂ ॥**
**ಸೂದ್ರ ದ್ವಿಜನ್ಹ ಉಪದೇಸಹಿಂ ಗ್ಯಾನಾ । ಮೇಲಿ ಜನೇಊ ಲೇಹಿಂ ಕುದಾನಾ ॥ ೧ ॥**
**ಸಬ ನರ ಕಾಮ ಲೋಭ ರತ ಕ್ರೋಧೀ । ದೇವ ಬಿಪ್ರ ಶ್ರುತಿ ಸಂತ ಬಿರೋಧೀ ॥**
**ಗುನ ಮಂದಿರ ಸುಂದರ ಪತಿ ತ್ಯಾಗೀ । ಭಜಹಿಂ ನಾರಿ ಪರ ಪುರುಷ ಅಭಾಗೀ ॥ ೨ ॥**
**ಸೌಭಾಗಿನೀಂ ಬಿಭೂಷನ ಹೀನಾ । ಬಿಧವನ್ಹ ಕೇ ಸಿಂಗಾರ ನಬೀನಾ ॥**
**ಗುರ ಸಿಷ ಬಧಿರ ಅಂಧ ಕಾ ಲೇಖಾ । ಏಕ ನ ಸುನಇ ಏಕ ನಹಿಂ ದೇಖಾ ॥ ೩ ॥**
**ಹರಇ ಸಿಷ್ಯ ಧನ ಸೋಕ ನ ಹರಈ । ಸೋ ಗುರ ಘೋರ ನರಕ ಮಹುಂ ಪರಈ ॥**
**ಮಾತು ಪಿತಾ ಬಾಲಕನ್ಹಿ ಬೊಲಾವಹಿಂ । ಉದರ ಭರೈ ಸೋಇ ಧರ್ಮ ಸಿಖಾವಹಿಂ ॥ ೪ ॥**

ಗರುಡಾ! ಪುರುಷರೆಲ್ಲರೂ ಸ್ತ್ರೀಲಂಪಟರಾಗಿ ದೊಂಬರಾಟದವನ ಕೋತಿಯಂತೆ ಕುಣಿಯುತ್ತಾರೆ. ಶೂದ್ರರು ದ್ವಿಜರಿಗೆ ಜ್ಞಾನೋಪದೇಶ ಮಾಡುವರು. ಕೊರಳಲ್ಲಿ ಯಜ್ಞೋಪವೀತವನ್ನು ಧರಿಸಿ, ದುರ್ದಾನವನ್ನು ತೆಗೆದುಕೊಳ್ಳುವರು. ಎಲ್ಲ ನರರು ಕಾಮಕ್ರೋಧಲೋಭ ಪರಾಯಣರಾಗಿರುತ್ತಾರೆ. ಅವರು ಬ್ರಾಹ್ಮಣರನ್ನು, ವೇದಗಳನ್ನು, ಸಜ್ಜನರನ್ನು ದ್ವೇಷಿಸುವರು. ಅಭಾಗಿನಿ ಸ್ತ್ರೀಯರು ಸರ್ವಗುಣ ಸಂಪನ್ನರೂ, ಸುಂದರರೂ ಆದ ತಮ್ಮ ಪತಿಯನ್ನು ತೊರೆದು ಪರಪುರುಷರನ್ನು ಓಲೈಸುವರು. ಸುಮಂಗಲೀ ಸ್ತ್ರೀಯರು ಅಲಂಕಾರವಿಹೀನರಾಗಿರುವರು. ಆದರೆ ವಿಧವೆಯರು ನಿತ್ಯವೂ ನೂತನ ಶೃಂಗಾರಮಾಡಿಕೊಳ್ಳುವರು. ಗುರು-ಶಿಷ್ಯರಲ್ಲಿ , ಕಿವುಡ-ಕುರುಡರ ಸಂಬಂಧವಿರುತ್ತದೆ. ಗುರುವಿನ ಉಪದೇಶಕ್ಕೆ ಕಿವಿಕೊಡದ ಶಿಷ್ಯ ಕಿವುಡ. ಗುರುವು ಜ್ಞಾನದೃಷ್ಟಿ ಇಲ್ಲದ ಕುರುಡ. ಶಿಷ್ಯನ ಧನವನ್ನು ಅಪಹರಿಸಿ, ಶೋಕವನ್ನು ಕಳೆಯದ (ಚಿತ್ತಾಪಹಾರಕನಾಗದೆ ವಿತ್ತಾಪಹಾರಕನಾದ) ಗುರುವು ಘೋರನರಕದಲ್ಲಿ ಬೀಳುವನು. ತಂದೆ-ತಾಯಂದಿರು ತಮ್ಮ ಮಕ್ಕಳಿಗೆ ಉದರಪೋಷಣಕ್ಕೆ ಉಪಯೋಗವಾದ ಧರ್ಮವನ್ನು ಕಲಿಸುತ್ತಾರೆ. (ಚೌ/೧-೪)

**ದೋ – ಬ್ರಹ್ಮ ಗ್ಯಾನ ಬಿನು ನಾರಿ ನರ ಕಹಹಿಂ ನ ದೂಸರಿ ಬಾತ ।**
**ಕೌಡೀ ಲಾಗಿ ಲೋಭ ಬಸ ಕರಹಿಂ ಬಿಪ್ರ ಗುರ ಘಾತ ॥ ೯೯ (ಕ)॥**
**ಬಾದಹಿಂ ಸೂದ್ರ ದ್ವಿಜನ್ಹ ಸನ ಹಮ ತುಮ್ಹ ತೇ ಕಛು ಘಾಟಿ ।**
**ಜಾನಇ ಬ್ರಹ್ಮ ಸೋ ಬಿಪ್ರಬರ ಆಂಖಿ ದೆಖಾವಹಿಂ ಡಾಟಿ ॥ ೯೯(ಖ)॥**

ಸ್ತ್ರೀ-ಪುರುಷರು ಒಂದು ಕಡೆ ಬ್ರಹ್ಮಜ್ಞಾನವಲ್ಲದೆ ಬೇರೆ ಯಾವ ಮಾತನ್ನಾಡರು. ಮತ್ತೊಂದು ಕಡೆ ಅವರು ಲೋಭವಶರಾಗಿ ಬಿಡಿಕಾಸಿಗಾಗಿ ಬ್ರಾಹ್ಮಣನಾಗಲೀ, ಗುರುವನ್ನಾಗಲೀ ಕೊಂದುಬಿಡುವರು. ಶೂದ್ರರು ಬ್ರಾಹ್ಮಣರೊಂದಿಗೆ ವಿತಂಡವಾದಕ್ಕೆ ಇಳಿಯುವರು. ನಾವೇನು ನಿಮಗೆ ಕಡಿಮೆ? ಬ್ರಹ್ಮನನ್ನು ಬಲ್ಲವನೇ ಶ್ರೇಷ್ಠ ಬ್ರಾಹ್ಮಣ ಎಂದು ಹೇಳಿ ಅವರನ್ನು ಗದರಿಸಿ, ದುರುಗುಟ್ಟಿಕೊಂಡು ನೋಡುವರು. (ದೋ/೯೯ ಕ, ಖ)

**ಚೌ – ಪರ ತ್ರಿಯ ಲಂಪಟ ಕಪಟ ಸಯಾನೇ । ಮೋಹ ದ್ರೋಹ ಮಮತಾ ಲಪಟಾನೇ ॥**
**ತೇಇ ಅಭೇದಬಾದೀ ಗ್ಯಾನೀ ನರ । ದೇಖಾ ಮೈಂ ಚರಿತ್ರ ಕಲಿಜುಗ ಕರ ॥ ೧ ॥**

ಆಪು ಗಏ ಅರು ತಿನ್ಹಹೂ ಘಾಲಹಿಂ । ಜೆ ಕಹುಂ ಸತ ಮಾರಗ ಪ್ರತಿಪಾಲಹಿಂ ॥
ಕಲ್ಪ ಕಲ್ಪ ಭರಿ ಏಕ ಏಕ ನರಕಾ । ಪರಹಿಂ ಜೆ ದೂಷಹಿಂ ಶ್ರುತಿ ಕರಿ ತರಕಾ ॥ ೨ ॥
ಜೇ ಬರನಾಧಮ ತೇಲಿ ಕುಮ್ಹಾರಾ । ಸ್ವಪಚ ಕಿರಾತ ಕೋಲ ಕಲವಾರಾ ॥
ನಾರಿ ಮುಈ ಗೃಹ ಸಂಪತಿ ನಾಸೀ । ಮೂಡ ಮುಡಾಇ ಹೋಹಿಂ ಸಂನ್ಯಾಸೀ ॥ ೩ ॥
ತೇ ಬಿಪ್ರನ್ಹ ಸನ ಆಪು ಪುಜಾವಹಿಂ । ಉಭಯ ಲೋಕ ನಿಜ ಹಾಥ ನಸಾವಹಿಂ ॥
ಬಿಪ್ರ ನಿರಚ್ಛರ ಲೋಲುಪ ಕಾಮೀ । ನಿರಾಚಾರ ಸಠ ಬೃಷಲೀ ಸ್ವಾಮೀ ॥ ೪ ॥
ಸೂದ್ರ ಕರಹಿಂ ಜಪ ತಪ ಬ್ರತ ನಾನಾ । ಬೈಠಿ ಬರಾಸನ ಕಹಹಿಂ ಪುರಾನಾ ॥
ಸಬ ನರ ಕಲ್ಪಿತ ಕರಹಿಂ ಅಚಾರಾ । ಜಾಇ ನ ಬರನಿ ಅನೀತಿ ಅಪಾರಾ ॥ ೫ ॥

ಪರಸ್ತ್ರೀಲಂಪಟರು, ಕಪಟವರ್ತನೆಯಲ್ಲಿ ನಿಪುಣರು. ಮೋಹ, ದ್ರೋಹ, ಮಮಕಾರಗಳಲ್ಲಿ ಮುಳುಗಿದರೇ ಅಭೇದವಾದಿಗಳು, ಬ್ರಹ್ಮಜ್ಞಾನಿಗಳೆಂದು ಪ್ರಸಿದ್ಧಿ ಪಡೆಯುವರು. ನಾನು ಆ ಕಲಿಯುಗದ ವರ್ತನೆಯನ್ನು ಕಣ್ಣಾರೆಕಂಡೆ. ಜನರು ತಾವು ಸ್ವತಃ ಭ್ರಷ್ಟರಾಗುವುದಲ್ಲದೆ ಸನ್ಮಾರ್ಗದಲ್ಲಿ ನಡೆಯುವವರನ್ನೂ ಕೂಡ ಭ್ರಷ್ಟರಾಗಿಸುವರು. ಕುತರ್ಕದಿಂದ ವೇದಶಾಸ್ತ್ರಗಳನ್ನು ದೂಷಿಸುವವರು ಕಲ್ಪಾಂತರವರೆಗೆ ನರಕದಲ್ಲಿ ತೊಳಲಾಡುವರು. ನೀಚವರ್ಣದವರಾದ ಗಾಣಿಗ, ಕುಂಬಾರ, ಚಂಡಾಲ, ಕಿರಾತ, ಕೋಲ, ಹೆಂಡಮಾರುವವರು ಮೊದಲಾದವರು ಹೆಂಡತಿ ಸತ್ತುಹೋದರೆ, ಅಥವಾ ಮನೆಯ ಸಂಪತ್ತೆಲ್ಲ ಕಳೆದುಹೋದಾಗ ತಲೆಬೋಳಿಸಿಕೊಂಡು ಸಂನ್ಯಾಸಿಗಳಾಗುತ್ತಾರೆ. ಅವರು ಬ್ರಾಹ್ಮಣರಿಂದ ಪಾದಪೂಜೆಮಾಡಿಸಿಕೊಳ್ಳುವರು. ಹೀಗೆ ತಮ್ಮ ಕೈಗಳಿಂದಲೇ ಇಹ-ಪರಗಳೆರಡಕ್ಕೂ ದೂರವಾಗುವರು. ಬ್ರಾಹ್ಮಣರು ವಿದ್ಯಾಹೀನರಾಗಿ, ಲೋಭಿ, ಕಾಮಿ, ಆಚಾರಹೀನ, ಮೂರ್ಖ, ನೀಚಜಾತಿ ಸ್ತ್ರೀಯನ್ನು, ವ್ಯಭಿಚಾರಿಣಿಯನ್ನು ಇಟ್ಟುಕೊಳ್ಳುವರು. ಶೂದ್ರರು ನಾನಾವಿಧವಾದ ಜಪ-ತಪ, ವ್ರತಾದಿಗಳನ್ನು ಮಾಡುತ್ತಾ ವ್ಯಾಸಪೀಠ (ವೇದಿಕೆ)ದಲ್ಲಿ ಕುಳಿತು ಪುರಾಣವಾಚನ ಮಾಡುವರು. ಎಲ್ಲರೂ ಮನಸ್ಸಿಗೆ ಬಂದಂತೆ ವರ್ತಿಸುವರು. ಕಲಿಯುಗದಲ್ಲಿ ಪ್ರಬಲವಾದ ಅಪಾರ ಅನೀತಿಯನ್ನು ವರ್ಣಿಸಲು ಯಾರಿಂದಲೂ ಸಾಧ್ಯವಾಗದು. (ಚೌ/೧-೫)

**ದೋ – ಭಏ ಬರನ ಸಂಕರ ಕಲಿ ಭಿನ್ನಸೇತು ಸಬ ಲೋಗ ।**
**ಕರಹಿಂ ಪಾಪ ಪಾವಹಿಂ ದುಖ ಭಯ ರುಜ ಸೋಕ ಬಿಯೋಗ ॥ ೧೦೦(ಕ)॥**
**ಶ್ರುತಿ ಸಮ್ಮತ ಹರಿ ಭಕ್ತಿ ಪಥ ಸಂಜುತ ಬಿರತಿ ಬಿಬೇಕ ।**
**ತೇಹಿಂ ನ ಚಲಹಿಂ ನರ ಮೋಹ ಬಸ ಕಲ್ಪಹಿಂ ಪಂಥ ಅನೇಕ ॥ ೧೦೦(ಖ)॥**

ಕಲಿಯುಗದ ಜನರಲ್ಲಿ ವರ್ಣಸಂಕರ ಹೆಚ್ಚಾಗಿ ಲೋಕಮರ್ಯಾದೆಯಿಂದ ಚ್ಯುತರಾಗುವರು. ಅವರು ಪಾಪಗಳನ್ನು ಮಾಡಿ, ತತ್ಫಲವಾಗಿ ದುಃಖವನ್ನು, ಭಯವನ್ನು, ರೋಗವನ್ನು ಶೋಕವನ್ನು, ಪ್ರಿಯವಸ್ತುವಿಯೋಗವನ್ನೂ ಹೊಂದುವರು. ಮನುಷ್ಯರು ಮೋಹವಶರಾಗಿ ವೇದಸಮ್ಮತವಾದ ಜ್ಞಾನ-ವೈರಾಗ್ಯಯುಕ್ತವಾದ ಹರಿಭಕ್ತಿ ಪಥವನ್ನು ತೊರೆಯುವರು. ಅವರು ನಿರರ್ಥಕವಾದ ಹೊಸ-ಹೊಸ ಸಂಪ್ರದಾಯಗಳನ್ನು ಕಲ್ಪಿಸಿಕೊಳ್ಳುವರು. (ದೋ/೧೦೦ ಕ, ಖ)

ಛಂ – ಬಹು ದಾಮ ಸಂವಾರಹಿಂ ಧಾಮ ಜತೀ । ಬಿಷಯಾ ಹರಿ ಲೀನ್ಹಿ ನ ರಹಿ ಬಿರತೀ ॥
ತಪಸೀ ಧನವಂತ ದರಿದ್ರ ಗೃಹೀ । ಕಲಿ ಕೌತುಕ ತಾತ ನ ಜಾತ ಕಹೀ ॥ ೧ ॥
ಕುಲವಂತಿ ನಿಕಾರಹಿಂ ನಾರಿ ಸತೀ । ಗೃಹ ಆನಹಿಂ ಚೇರಿ ನಿಬೇರಿ ಗತೀ ॥
ಸುತ ಮಾನಹಿಂ ಮಾತು ಪಿತಾ ತಬ ಲೌಂ । ಅಬಲಾನನ ದೀಖ ನಹೀಂ ಜಬ ಲೌಂ ॥ ೨ ॥
ಸಸುರಾರಿ ಪಿಆರಿ ಲಗೀ ಜಬ ತೇಂ । ರಿಪುರೂಪ ಕುಟುಂಬ ಭಏ ತಬ ತೇಂ ॥
ನೃಪ ಪಾಪ ಪರಾಯನ ಧರ್ಮ ನಹೀಂ । ಕರಿ ದಂಡ ಬಿಡಂಬ ಪ್ರಜಾ ನಿತಹೀಂ ॥ ೩ ॥
ಧನವಂತ ಕುಲೀನ ಮಲೀನ ಅಪೀ । ದ್ವಿಜ ಚಿನ್ಹ ಜನೇಉ ಉಘಾರ ತಪೀ ॥
ನಹಿಂ ಮಾನ ಪುರಾನ ನ ಬೇದಹಿ ಜೋ । ಹರಿ ಸೇವಕ ಸಂತ ಸಹೀ ಕಲಿ ಸೋ ॥ ೪ ॥
ಕಬಿ ಬೃಂದ ಉದಾರ ದುನೀ ನ ಸುನೀ । ಗುನ ದೂಷಕ ಬ್ರಾತ ನ ಕೋಪಿ ಗುನೀ ॥
ಕಲಿ ಬಾರಹಿಂ ಬಾರ ದುಕಾಲ ಪರೈ । ಬಿನು ಅನ್ನ ದುಖೀ ಸಬ ಲೋಗ ಮರೈ ॥ ೫ ॥

ಸಂನ್ಯಾಸಿಗಳು ಧನ ಸಂಗ್ರಹಿಸಿ, ಗೃಹಸ್ಥರಿಗಿಂತಲೂ ಮಿಗಿಲಾಗಿ ಮನೆ-ಮಠಕಟ್ಟಿಕೊಂಡು ಅವುಗಳನ್ನು ಅಲಂಕರಿಸುವರು. ಅವರು ವಿಷಯಭೋಗಲಾಲಸರು. ಅವರಲ್ಲಿ ವೈರಾಗ್ಯವು ಉಳಿದಿರುವುದಿಲ್ಲ. ಕಪಟ ತಾಪಸರು ಸಂಪನ್ನರಾಗಿರುವರು. ಗೃಹಸ್ಥರು ದರಿದ್ರರಾಗಿರುವರು. ಅಯ್ಯಾ! ಕಲಿಯುಗದ ಲೀಲೆವಿಚಿತ್ರ, ಅವರ್ಣನೀಯ. ಜನರು ಪತಿವ್ರತೆಯರಾದ ತಮ್ಮ ಕುಲಸತಿಯರನ್ನು ಮನೆಯಿಂದ ಓಡಿಸಿ, ಕುಲಮರ್ಯಾದೆಯನ್ನು ಬದಿಗೊತ್ತಿ, ದಾಸಿಯನ್ನು ತಂದಿಟ್ಟುಕೊಂಡು ಕೆಟ್ಟಬಾಳನ್ನು ನಡೆಸುವರು. ಗಂಡುಮಕ್ಕಳು ಹೆಂಡತಿಯ ಮುಖ ನೋಡುವ ತನಕ ತಂದೆ-ತಾಯಂದಿರನ್ನು ಗೌರವಿಸುವರು. ಅವರಿಗೆ ಮಾವನಮನೆ ಪ್ರಿಯವಾಗಿ, ತಾವು ಹುಟ್ಟಿದ ಮನೆಯವರೆಲ್ಲ ಶತ್ರುಗಳಾಗುವರು. ನೃಪರು ಪಾಪಪರಾಯಣರಾಗುವರು. ಅದರಲ್ಲಿ ಧರ್ಮ ಉಳಿಯುವುದಿಲ್ಲ. ಅವರು ನಿತ್ಯವೂ ಪ್ರಜೆಗಳನ್ನು ಅಪರಾಧವಿಲ್ಲದೆ ದಂಡಿಸಿ ಅವರನ್ನು ದುರ್ದಶೆಯ ಪಾಲಾಗಿಸುವರು. ಧನವಂತರು ನೀಚಜಾತಿಯವರಾದರೂ ಕುಲೀನರೆಂದು ಗೌರವಿಸಲ್ಪಡುವರು. ಯಜ್ಞೋಪವೀತ ಮಾತ್ರ ಬ್ರಾಹ್ಮಣರ ಗುರ್ತು. ದಿಗಂಬರವೇ ತಾಪಸಿಯ ಗುರ್ತು. ವೇದ, ಪುರಾಣಗಳನ್ನು ಮನ್ನಿಸದವರೇ ಕಲಿಯುಗದಲ್ಲಿ ಹರಿಭಕ್ತರು, ನಿಜವಾದ ಸಂತರೆಂದು ಹೇಳಿಸಿಕೊಳ್ಳುವರು. ಕವಿವೃಂದಕ್ಕೆ ಆಶ್ರಯ ನೀಡಬಲ್ಲ ಉದಾರಿಗಳು, ಕೊಡುಗೈದೊರೆಗಳು ಕಂಡುಬರುವುದಿಲ್ಲ. ಗುಣದೂಷಕರೇನೋ ಬಹಳ ಮಂದಿ ಇರುತ್ತಾರೆ. ಆದರೆ ಗುಣಿಗಳು ಮಾತ್ರ ಯಾರೂ ಇರುವುದಿಲ್ಲ. ಕಲಿಯುಗದಲ್ಲಿ ಮೇಲಿಂದ ಮೇಲೆ ಬರಗಾಲ ಉಂಟಾಗುತ್ತದೆ. ಹೊಟ್ಟೆಗೆ ಹಿಟ್ಟಿಲ್ಲದೆ ಜನ ಸಾಯುವರು. (ಛಂ/೧-೫)

**ದೋ – ಸುನು ಖಗೇಸ ಕಲಿ ಕಪಟ ಹಠ ದಂಭ ದ್ವೇಷ ಪಾಷಂಡ ।**
**ಮಾನ ಮೋಹ ಮಾರಾದಿ ಮದ ಬ್ಯಾಪಿ ರಹೇ ಬ್ರಹ್ಮಂಡ ॥ ೧೦೧(ಕ)॥**
**ತಾಮಸ ಧರ್ಮ ಕರಹಿಂ ನರ ಜಪ ತಪ ಬ್ರತ ಮಖ ದಾನ ।**
**ದೇವ ನ ಬರಷಹಿಂ ಧರನೀಂ ಬಏ ನ ಜಾಮಹಿಂ ಧಾನ ॥ ೧೦೧(ಖ)॥**

ಖಗರಾಜ ಗರುಡಾ! ಕೇಳು. ಕಲಿಯುಗದಲ್ಲಿ ಕಪಟ, ಹಟ, ಜಂಭ, ದ್ವೇಷ, ಪಾಖಂಡತನ, ಮಾನ, ಮೋಹ, ಕಾಮ, ಕ್ರೋಧ, ಲೋಭ, ಮದ ಮುಂತಾದವುಗಳು ವಿಶ್ವದಲ್ಲೆಲ್ಲ ವ್ಯಾಪಿಸಿವೆ. ಮನುಷ್ಯರು ಜಪ, ತಪ, ಯಜ್ಞ, ವ್ರತ, ದಾನ ಮುಂತಾದ ಧರ್ಮಗಳನ್ನು ತಾಮಸೀಭಾವದಿಂದ ಆಚರಿಸುವರು. ದೇವತೆಗಳು ಮಳೆ ಸುರಿಸುವುದಿಲ್ಲ. ಬಿತ್ತಿದ ಭತ್ತ ಮೊಳೆಯುವುದಿಲ್ಲ. (ದೋ/೧೦೧ ಕ, ಖ)

**ಛಂ – ಅಬಲಾ ಕಚ ಭೂಷನ ಭೂರಿ ಛುಧಾ । ಧನಹೀನ ದುಖೀ ಮಮತಾ ಬಹುಧಾ ॥**
**ಸುಖ ಚಾಹಹಿಂ ಮೂಢ ನ ಧರ್ಮ ರತಾ । ಮತಿ ಥೋರಿ ಕಠೋರಿ ನ ಕೋಮಲತಾ ॥ ೧ ॥**
**ನರ ಪೀಡಿತ ರೋಗ ನ ಭೋಗ ಕಹೀಂ । ಅಭಿಮಾನ ಬಿರೋಧ ಅಕಾರನಹೀಂ ॥**
**ಲಘು ಜೀವನ ಸಂಬತು ಪಂಚ ದಸಾ । ಕಲಪಾಂತ ನ ನಾಸ ಗುಮಾನು ಅಸಾ ॥ ೨ ॥**
**ಕಲಿಕಾಲ ಬಿಹಾಲ ಕಿಏ ಮನುಜಾ । ನಹಿಂ ಮಾನತ ಕ್ವೌ ಅನುಜಾ ತನುಜಾ ॥**
**ನಹಿಂ ತೋಷ ಬಿಚಾರ ನ ಸೀತಲತಾ । ಸಬ ಜಾತಿ ಕುಜಾತಿ ಭಏ ಮಗತಾ ॥ ೩ ॥**
**ಇರಿಷಾ ಪರುಷಾಚ್ಛರ ಲೋಲುಪತಾ । ಭರಿ ಪೂರಿ ರಹೀ ಸಮತಾ ಬಿಗತಾ ॥**
**ಸಬ ಲೋಗ ಬಿಯೋಗ ಬಿಸೋಕ ಹಏ । ಬರನಾಶ್ರಮ ಧರ್ಮ ಅಚಾರ ಗಏ ॥ ೪ ॥**
**ದಮ ದಾನ ದಯಾ ನಹಿಂ ಜಾನಪನೀ । ಜಡತಾ ಪರಬಂಚನತಾತಿ ಘನೀ ॥**
**ತನು ಪೋಷಕ ನಾರಿ ನರಾ ಸಗರೇ । ಪರನಿಂದಕ ಜೇ ಜಗ ಮೋ ಬಗರೇ ॥ ೫ ॥**

ಸ್ತ್ರೀಯರಿಗೆ ಕೇಶಮಾತ್ರ ಶೃಂಗಾರವಾಗಿ ಉಳಿದು, ಅದನ್ನು ಕತ್ತರಿಸಿ, ಚಿತ್ರ-ವಿಚಿತ್ರವಾಗಿ ಅಲಂಕರಿಸಿಕೊಳ್ಳುವರು. ಬೇರೆ ಯಾವುದೇ ಒಡವೆ ವಸ್ತುಗಳು ಉಳಿದಿರುವುದಿಲ್ಲ. ಅವರು ಎಂದೂ ತೃಪ್ತರಾಗುವುದಿಲ್ಲ. ಅನೇಕ ವಸ್ತುಗಳ ಲಾಲಸೆಯಿಂದ ಧನಹೀನರಾಗಿ ದುಃಖಿತರಾಗುವರು. ಅವರು ಮೂರ್ಖತ್ವದಿಂದ ವ್ಯರ್ಥವಾದ ಸುಖಗಳನ್ನು ಬಯಸುವರು. ಆದರೆ ಧರ್ಮದಲ್ಲಿ ಅವರಿಗೆ ಪ್ರೀತಿ ಇರುವುದಿಲ್ಲ. ಬುದ್ಧಿಯು ಅಲ್ಪವಾಗಿದ್ದು, ಕಠೋರವಾಗಿರುತ್ತದೆ. ಅವರಲ್ಲಿ ಕೋಮಲತೆ ಲೇಶಮಾತ್ರವೂ ಇರುವುದಿಲ್ಲ. ಮನುಷ್ಯರು ರೋಗಪೀಡಿತರಾಗಿದ್ದು, ಅವರಿಗೆ ಸುಖವೆಂಬುದೇ ಇಲ್ಲ. ದುರಭಿಮಾನದಿಂದ ಅವರು ನಿಷ್ಕಾರಣವಾಗಿ ವಿರೋಧ ಮಾಡುತ್ತಿರುತ್ತಾರೆ. ಜೀವಿತಕಾಲವು ಕ್ಷಣಿಕವಾಗಿದ್ದರೂ ಅವರ ಗರ್ವವು ಕಲ್ಪಾಂತ್ಯವರೆಗೂ ಇರುತ್ತದೆ. ಕಲಿಯುಗವು ಮನುಷ್ಯನನ್ನು ಅಸ್ತವ್ಯಸ್ತ, ತಲೆಕೆಳಗಾಗಿಸಿದೆ. ಕೆಲವರಿಗಂತೂ ಅನುಜೆ, ತನುಜೆ ಎಂಬ ವಿಚಾರವೂ ಇಲ್ಲ. ಜನರಲ್ಲಿ ಸಂತೋಷವಾಗಲೀ, ವಿವೇಕವಾಗಲೀ, ಶಾಂತಿಯಾಗಲೀ ಎಲ್ಲೂ ಕಂಡು ಬರುವುದಿಲ್ಲ. ಎಲ್ಲ ಜಾತಿಯವರೂ

ಯಾಚಕವೃತ್ತಿಯನ್ನು ಅವಲಂಬಿಸುವರು. ಈರ್ಷೆ, ಕಟುವಚನ, ಲೋಲುಪತೆ ಎಲ್ಲರಲ್ಲಿ ತುಂಬಿತುಳುಕುತ್ತಿದೆ. ಸಮತೆಯಂತೂ ಕಾಲು ಕೀಳಿಬಿಟ್ಟಿದೆ. ಎಲ್ಲ ಜನರು ವಿಯೋಗ ಹಾಗೂ ವಿಶೇಷ ಶೋಕದಿಂದ ಸತ್ತು ಸುಣ್ಣರಾಗಿರುವರು. ವರ್ಣಾಶ್ರಮಧರ್ಮದ ಆಚರಣೆಯಂತೂ ಕಣ್ಮರೆಯಾದುವು. ದಮ, ದಾನ, ದಯೆ, ವಿವೇಕ ಯಾರಲ್ಲಿಯೂ ಉಳಿಯಲಿಲ್ಲ. ಮೂರ್ಖತನ, ಮೋಸ ತುಂಬಾ ಹೆಚ್ಚಿಕೊಂಡವು. ನರ-ನಾರಿಯರೆಲ್ಲರೂ ಶರೀರ ಪೋಷಣೆಯಲ್ಲೇ ಆಸಕ್ತರಾಗಿರುವರು. ಜಗತ್ತಿನಲ್ಲೆಲ್ಲ ಪರರನ್ನು ನಿಂದಿಸುವವರೇ ಹರಡಿಕೊಂಡಿರುವರು. (ಛಂ/೧-೫)

**ದೋ – ಸುನು ಬ್ಯಾಲಾರಿ ಕಾಲ ಕಲಿ ಮಲ ಅವಗುನ ಆಗಾರ ।**
**ಗುನಉ ಬಹುತ ಕಲಿಜುಗ ಕರ ಬಿನು ಪ್ರಯಾಸ ನಿಸ್ತಾರ ॥ ೧೦೨(ಕ)॥**
**ಕೃತಜುಗ ತ್ರೇತಾ ದ್ವಾಪರ ಪೂಜಾ ಮಖ ಅರು ಜೋಗ।**
**ಜೋ ಗತಿ ಹೋಇ ಸೋ ಕಲಿ ಹರಿ ನಾಮ ತೆ ಪಾವಹಿಂ ಲೋಗ ॥ ೧೦೨(ಖ)॥**

ಓ ಪನ್ನಗಾಂತಕಾ! ಗರುಡಾ! ಕೇಳು. ಕಲಿಯುಗವು ಪಾಪಗಳಿಗೆ, ಅವಗುಣಗಳಿಗೆ ನೆಲೆವೀಡು. ಆದರೆ ಈ ಕಲಿಯುಗದಲ್ಲಿ ಒಂದು ದೊಡ್ಡಗುಣವೂ ಇದೆ. ಅದು ಯಾವ ಪರಿಶ್ರಮವಿಲ್ಲದೆಯೇ ಜನರನ್ನು ಭವಬಂಧನದಿಂದ ವಿಮುಕ್ತಗೊಳಿಸುತ್ತದೆ. ಕೃತ, ತ್ರೇತ, ದ್ವಾಪರ ಯುಗಗಳಲ್ಲಿ ಯೋಗ (ಧ್ಯಾನ), ಯಜ್ಞ, ಅರ್ಚನೆಗಳಿಂದ ಸಿಗುವ ಗತಿಯೇ ಕಲಿಯುಗದಲ್ಲಿ ಜನರಿಗೆ ಕೇವಲ ಭಗವನ್ನಾಮ ಸ್ಮರಣೆಯಿಂದಲೇ ಸಿಗುವುದು. (ದೋ/೧೦೨ ಕ, ಖ)

**ಚೌ – ಕೃತಜುಗ ಸಬ ಜೋಗೀ ಬಿಗ್ಯಾನೀ। ಕರಿ ಹರಿ ಧ್ಯಾನ ತರಹಿಂ ಭವ ಪ್ರಾನೀ॥**
**ತ್ರೇತಾ ಬಿಬಿಧ ಜಗ್ಯ ನರ ಕರಹೀಂ । ಪ್ರಭುಹಿ ಸಮರ್ಪಿ ಕರ್ಮ ಭವ ತರಹೀಂ ॥ ೧ ॥**
**ದ್ವಾಪರ ಕರಿ ರಘುಪತಿ ಪದ ಪೂಜಾ । ನರ ಭವ ತರಹಿಂ ಉಪಾಯ ನ ದೂಜಾ ॥**
**ಕಲಿಜುಗ ಕೇವಲ ಹರಿ ಗುನ ಗಾಹಾ । ಗಾವತ ನರ ಪಾವಹಿಂ ಭವ ಥಾಹಾ ॥ ೨ ॥**
**ಕಲಿಜುಗ ಜೋಗ ನ ಜಗ್ಯ ನ ಗ್ಯಾನಾ । ಏಕ ಅಧಾರ ರಾಮ ಗುನ ಗಾನಾ ॥**
**ಸಬ ಭರೋಸ ತಜಿ ಜೋ ಭಜ ರಾಮಹಿ । ಪ್ರೇಮ ಸಮೇತ ಗಾವ ಗುನ ಗ್ರಾಮಹಿ ॥ ೩ ॥**
**ಸೋಇ ಭವ ತರ ಕಛು ಸಂಸಯ ನಾಹೀಂ । ನಾಮ ಪ್ರತಾಪ ಪ್ರಗಟ ಕಲಿ ಮಾಹೀಂ ॥**
**ಕಲಿ ಕರ ಏಕ ಪುನೀತ ಪ್ರತಾಪಾ । ಮಾನಸ ಪುನ್ಯ ಹೋಹಿಂ ನಹಿಂ ಪಾಪಾ ॥ ೪ ॥**

ಕೃತಯುಗದಲ್ಲಿ ಎಲ್ಲರೂ ಯೋಗಿಗಳು, ವಿಜ್ಞಾನಿಗಳೇ ಆಗಿರುತ್ತಾರೆ. ಅವರು ಹರಿಧ್ಯಾನಗೈದು ಭವಸಾಗರವನ್ನು ದಾಟುವರು. ತ್ರೇತಾಯುಗದಲ್ಲಿ ಮನುಷ್ಯರು ಅನೇಕವಿಧವಾದ ಯಜ್ಞ ಯಾಗಗಳನ್ನು ಮಾಡಿ, ಅದನ್ನು ಪರಮಾತ್ಮನಿಗೆ ಅರ್ಪಿಸಿ ಸಂಸಾರಸಾಗರದಿಂದ ಮುಕ್ತರಾಗುವರು. ದ್ವಾಪರಯುಗದಲ್ಲಿ ಶ್ರೀರಘುನಾಥನ ಚರಣಕಮಲಗಳನ್ನು ಪೂಜಿಸಿ, ಅರ್ಚಿಸಿ ಜನರು ಭವಬಂಧನದಿಂದ ದೂರವಾಗುವರು. ಇದನ್ನುಳಿದು ಬೇರಾವ ಉಪಾಯವೂ ಇಲ್ಲ. ಕಲಿಯುಗದಲ್ಲಾದರೋ ಕೇವಲ ಹರಿಗುಣಗಾನಗೈದು ನರರು ಜನನ-ಮರಣಚಕ್ರದಿಂದ ಮುಕ್ತಿಯನ್ನು ಹೊಂದುವರು. ಕಲಿಯುಗದಲ್ಲಿ ಯೋಗವಾಗಲೀ, ಯಜ್ಞವಾಗಲೀ, ಜ್ಞಾನವಾಗಲೀ ಇವುಗಳ ಶ್ರಮಪಡಬೇಕಾಗಿಲ್ಲ. ಕೇವಲ ಶ್ರೀರಾಮನ ಗುಣಸಂಕೀರ್ತನೆಯೇ ಮುಕ್ತಿಗೆ ಏಕಮಾತ್ರ ಪರಮಸಾಧನೆಯು. (ಕಲೌ ಸಂಕೀರ್ತನಾನ್ಮುಕ್ತಿಃ) ಆದ್ದರಿಂದ ಇತರ ಸಾಧನೆಗಳ ಭರವಸೆಯನ್ನು ತೊರೆದು, ಶ್ರೀರಾಮನನ್ನು ಭಜಿಸುವವರು, ಅನನ್ಯಭಕ್ತಿಯಿಂದ ಪ್ರಭುಗುಣಗಳನ್ನು ಕೀರ್ತಿಸುವವರು ಭವಸಾಗರದಿಂದ ಸುಲಭವಾಗಿ ಪಾರಾಗುವರು. ಇದರಲ್ಲಿ ಸಂದೇಹವೇ ಇಲ್ಲ. ಕಲಿಯುಗದಲ್ಲಿ ನಾಮಮಹಿಮೆ ಪ್ರತ್ಯಕ್ಷವಾಗಿದೆ. ಕಲಿಯುಗದ ಮತ್ತೊಂದು ಮಹಿಮೆಯೆಂದರೆ, ಮಾನಸಿಕ ಪುಣ್ಯ ಉಂಟು, ಆದರೆ ಮಾನಸಿಕ ಪಾಪವಿಲ್ಲ. (ಚೌ/೧-೪)

**ದೋ – ಕಲಿಜುಗ ಸಮ ಜುಗ ಆನ ನಹಿಂ ಜೌ ನರ ಕರ ಬಿಸ್ವಾಸ ।**
**ಗಾಇ ರಾಮ ಗುನ ಗನ ಬಿಮಲ ಭವ ತರ ಬಿನಹಿಂ ಪ್ರಯಾಸ ॥ ೧೦೩(ಕ)॥**
**ಪ್ರಗಟ ಚಾರಿ ಪದ ಧರ್ಮ ಕೇ ಕಲಿ ಮಹುಂ ಏಕ ಪ್ರಧಾನ ।**
**ಜೇನ ಕೇನ ಬಿಧಿ ದೀನ್ಹೇಂ ದಾನ ಕರಇ ಕಲ್ಯಾನ ॥ ೧೦೩(ಖ)॥**

ಮಾನವರು ವಿಶ್ವಾಸವಿಟ್ಟರೆ ಕಲಿಯುಗಕ್ಕೆ ಸಮಾನವಾದ ಯುಗವೇ ಇಲ್ಲ. ಏಕೆಂದರೆ, ಈ ಯುಗದಲ್ಲಿ ಶ್ರೀರಾಮನ ನಿರ್ಮಲ ಗುಣಗಳನ್ನು ಹಾಡಿ-ಕೀರ್ತಿಸಿ ಮನುಷ್ಯನು ಯಾವ ಪರಿಶ್ರಮವಿಲ್ಲದೆ ಸಂಸಾರಸಮುದ್ರವನ್ನು ದಾಟಿಬಿಡುವರು. ಧರ್ಮಕ್ಕೆ ಸತ್ಯ,

ದಯೆ, ತಪ, ದಾನ ಎಂಬ ನಾಲ್ಕು ಚರಣಗಳು ಪ್ರಸಿದ್ಧವಾಗಿವೆ. ಕಲಿಯುಗದಲ್ಲಿ 'ದಾನ'ದ ಆಚರಣೆಯೇ ಮುಖ್ಯವಾಗಿದೆ. ದಾನವನ್ನು ಹೇಗೆ ಬೇಕಾದರೂ ಗೈದರೂ ಅದು ಶುಭಫಲವನ್ನೇ ಕೊಡುವುದು. (ದಾನಮೇಕಂ ಕಲೌಯುಗೇ) (ದೋ/೧೦೩ ಕ, ಖ)

**ಚೌ – ನಿತ ಜುಗ ಧರ್ಮ ಹೋಹಿಂ ಸಬ ಕೇರೇ । ಹೃದಯ್ ರಾಮ ಮಾಯಾ ಕೇ ಪ್ರೇರೇ ॥**
**ಸುದ್ಧ ಸತ್ವ ಸಮತಾ ಬಿಗ್ಯಾನಾ । ಕೃತ ಪ್ರಭಾವ ಪ್ರಸನ್ನ ಮನ ಜಾನಾ ॥ ೧ ॥**
**ಸತ್ವ ಬಹುತ ರಜ ಕಛು ರತಿ ಕರ್ಮಾ । ಸಬ ಬಿಧಿ ಸುಖ ತ್ರೇತಾ ಕರ ಧರ್ಮಾ ॥**
**ಬಹು ರಜ ಸ್ವಲ್ಪ ಸತ್ವ ಕಛು ತಾಮಸ । ದ್ವಾಪರ ಧರ್ಮ ಹರಷ ಭಯ ಮಾನಸ ॥ ೨ ॥**
**ತಾಮಸ ಬಹುತ ರಜೋಗುನ ಥೋರಾ । ಕಲಿ ಪ್ರಭಾವ ಬಿರೋಧ ಚಹುಂ ಓರಾ ॥**
**ಬುಧ ಜುಗ ಧರ್ಮ ಜಾನಿ ಮನ ಮಾಹೀಂ । ತಜಿ ಅಧರ್ಮ ರತಿ ಧರ್ಮ ಕರಾಹೀಂ ॥ ೩ ॥**
**ಕಾಲ ಧರ್ಮ ನಹಿಂ ಬ್ಯಾಪಹಿಂ ತಾಹೀ । ರಘುಪತಿ ಚರನ ಪ್ರೀತಿ ಅತಿ ಜಾಹೀ ॥**
**ನಟ ಕೃತ ಬಿಕಟ ಕಪಟ ಖಗರಾಯಾ । ನಟ ಸೇವಕಹಿ ನ ಬ್ಯಾಪಇ ಮಾಯಾ ॥ ೪ ॥**

ಶ್ರೀರಾಮಚಂದ್ರನ ಮಾಯಾಪ್ರೇರಿತರಾಗಿ ಎಲ್ಲರ ಹೃದಯದಲ್ಲಿಯೂ ಎಲ್ಲ ಯುಗಗಳ ಧರ್ಮಗಳು ನಿತ್ಯವು ಪ್ರಕಾಶಿಸುತ್ತಿರುತ್ತವೆ. ಶುದ್ಧಸತ್ವಗುಣ, ಸಮತೆ, ವಿಜ್ಞಾನ, ಮನಃಪ್ರಸನ್ನತೆ ಇವುಗಳು ಕೃತಯುಗದ ಪ್ರಭಾವವೆಂದು ತಿಳಿಯಬೇಕು. ಸತ್ತ್ವಗುಣವು ಹೆಚ್ಚಾಗಿದ್ದು, ಅದು ಕೊಂಚ ರಜೋಗುಣಮಿಶ್ರವಾಗಿದ್ದರೆ ಅದು ತ್ರೇತಾಯುಗದ ಲಕ್ಷಣ. ಅದರ ಪ್ರಭಾವದಿಂದ ಕರ್ಮದಲ್ಲಿ ಪ್ರೀತಿ, ಸರ್ವವಿಧವಾದ ಸುಖಗಳು ಉಂಟಾಗುತ್ತವೆ. ರಜೋಗುಣವು ಹೆಚ್ಚಾಗಿದ್ದು, ಸತ್ತ್ವಗುಣವು ತುಂಬಾ ಸ್ವಲ್ಪವಿದ್ದರೆ, ಅಲ್ಪ ತಮೋಗುಣವು ಮಿಶ್ರಣವಾಗಿದ್ದರೆ, ಮನದಲ್ಲಿ ಹರ್ಷ ಮತ್ತು ಭಯ ಉಂಟಾದರೆ ಇದು ದ್ವಾಪರಯುಗದ ಲಕ್ಷಣ. ತಮೋಗುಣವೇ ಹೆಚ್ಚಾಗಿದ್ದು, ರಜೋಗುಣ ಸ್ವಲ್ಪ ಮಿಶ್ರಿತವಾಗಿದ್ದರೆ, ಎಲ್ಲೆಡೆ ವೈರವೂ, ವಿರೋಧವೂ ವ್ಯಾಪಿಸಿರುತ್ತದೆ. ಇದು ಕಲಿಯುಗದ ಪ್ರಭಾವವು. ಪಂಡಿತರಾದವರು ಯುಗಧರ್ಮವನ್ನು ಚೆನ್ನಾಗಿ ಅರಿತುಕೊಂಡು, ಅಧರ್ಮವನ್ನು ತೊರೆದು, ಧರ್ಮಾನುರಾಗಿಗಳಾಗುವರು. ಶ್ರೀರಘುನಾಥನ ಚರಣಗಳಲ್ಲಿ ಅತ್ಯಂತ ಪ್ರೀತಿಯುಳ್ಳವನನ್ನು ಯುಗಧರ್ಮವು ತಟ್ಟದು. ಓ ಖಗರಾಜಾ! ಐಂದ್ರಜಾಲಿಕ ಮಾಡಿದ ಇಂದ್ರಜಾಲ ನೋಡುವವರಿಗೆ ವಿಚಿತ್ರವಾಗಿ, ವಿಕಟವಾಗಿ ಕಾಣುತ್ತದೆ. ಆದರೆ ಆತನ ಸೇವಕನಿಗೆ ಅವನ ಮಾಯೆ ಮುಸುಕದು. (ಚೌ/೧-೪)

**ದೋ – ಹರಿ ಮಾಯಾ ಕೃತ ದೋಷ ಗುನ ಬಿನು ಹರಿ ಭಜನ ನ ಜಾಹಿಂ ।**
**ಭಜಿಅ ರಾಮ ತಜಿ ಕಾಮ ಸಬ ಅಸ ಬಿಚಾರಿ ಮನ ಮಾಹಿಂ ॥ ೧೦೪(ಕ)॥**
**ತೇಹಿಂ ಕಲಿಕಾಲ ಬರಷ ಬಹು ಬಸೆಉಂ ಅವಧ ಬಿಹಗೇಸ ।**
**ಪರೆಉ ದುಕಾಲ ಬಿಪತಿ ಬಸ ತಬ ಮೈಂ ಗಯಉಂ ಬಿದೇಸ ॥ ೧೦೪(ಖ)॥**

ಶ್ರೀಹರಿಯ ಮಾಯಾನಿರ್ಮಿತ ಗುಣದೋಷಗಳು ಹರಿಭಜನೆಯಿಲ್ಲದೆ ತೊಲಗವು. ಮನಸ್ಸಿನಲ್ಲಿ ಹೀಗೆ ಆಲೋಚಿಸಿ ಕಾಮನೆಗಳೆಲ್ಲವನ್ನು ತೊರೆದು, ನಿಷ್ಕಾಮಭಾವದಿಂದ ಶ್ರೀರಾಮನನ್ನು ಭಜಿಸಬೇಕು. ಓ ವಿಹಗೇಶಾ! ಅಂತಹ ಕಲಿಕಾಲದಲ್ಲಿ ನಾನು ಬಹಳ ವರ್ಷಗಳವರೆಗೆ ಅಯೋಧ್ಯೆಯಲ್ಲಿದ್ದೆ. ಅಲ್ಲಿ ಒಮ್ಮೆ ಕ್ಷಾಮವು ತಲೆದೋರಿದಾಗ ನಾನು ಆಪತ್ತುಗಳಿಗೆ ಗುರಿಯಾಗಿ ದೇಶಾಂತರಕ್ಕೆ ಹೋದೆ. (ದೋ/೧೦೪ ಕ, ಖ)

## ಭುಶುಂಡಿಗೆ ಶಿವನ ಶಾಪವು

**ಚೌ – ಗಯಉಂ ಉಜೇನೀ ಸುನು ಉರಗಾರೀ । ದೀನ ಮಲೀನ ದರಿದ್ರ ದುಖಾರೀ ।**
**ಗಏಂ ಕಾಲ ಕಛು ಸಂಪತಿ ಪಾಈ । ತಹಂ ಪುನಿ ಕರಉಂ ಸಂಭು ಸೇವಕಾಈ ॥ ೧ ॥**
**ಬಿಪ್ರ ಏಕ ಬೈದಿಕ ಸಿವ ಪೂಜಾ । ಕರಇ ಸದಾ ತೇಹಿ ಕಾಜು ನ ದೂಜಾ ॥**
**ಪರಮ ಸಾಧು ಪರಮಾರಥ ಬಿಂದಕ । ಸಂಭು ಉಪಾಸಕ ನಹಿಂ ಹರಿ ನಿಂದಕ ॥ ೨ ॥**
**ತೇಹಿ ಸೇವಉಂ ಮೈಂ ಕಪಟ ಸಮೇತಾ । ದ್ವಿಜ ದಯಾಲ ಅತಿ ನೀತಿ ನಿಕೇತಾ ॥**
**ಬಾಹಿಜ ನಮ್ರ ದೇಖಿ ಮೋಹಿ ಸಾಈಂ । ಬಿಪ್ರ ಪಢಾವ ಪುತ್ರ ಕೀ ನಾಈಂ ॥ ೩ ॥**
**ಸಂಭು ಮಂತ್ರ ಮೋಹಿ ದ್ವಿಜಬರ ದೀನ್ಹಾ । ಸುಭ ಉಪದೇಸ ಬಿಬಿಧ ಬಿಧಿ ಕೀನ್ಹಾ ॥**
**ಜಪಉಂ ಮಂತ್ರ ಸಿವ ಮಂದಿರ ಜಾಈ । ಹೃದಯ್ ದಂಭ ಅಹಮಿತಿ ಅಧಿಕಾಈ ॥ ೪ ॥**

ಓ ಉರಗಾರಿ! ಗರುಡಾ! ಕೇಳು. ನಾನು ದೀನನಾಗಿ, ದುಗುಡಗೊಂಡು, ದರಿದ್ರ, ದುಃಖಿತನಾಗಿ ಉಜ್ಜಯಿನಿ ನಗರಕ್ಕೆ ಹೋದೆ. ಕೆಲಕಾಲ ಕಳೆದಾಗ ಕೊಂಚ ಸಂಪತ್ತನ್ನು ಸಂಪಾದಿಸಿ, ಪರಶಿವನನ್ನು ಆರಾಧಿಸತೊಡಗಿದೆ. ಅಲ್ಲಿ ಓರ್ವಬ್ರಾಹ್ಮಣನು ವೈದಿಕಪದ್ಧತಿಯಿಂದ ಶಿವನನ್ನು ಪೂಜಿಸುತ್ತಿದ್ದನು. ಅಹರ್ನಿಶಿ ಶಿವನನ್ನು ಪೂಜಿಸುವುದಲ್ಲದೆ ಅವನಿಗೆ ಬೇರೆ ಯಾವ ಕೆಲಸವೂ ಇರಲಿಲ್ಲ. ಅವನು ಪರಮಸಾಧುವಾಗಿದ್ದು, ಪರಮಾರ್ಥಜ್ಞಾನಿಯಾಗಿದ್ದನು. ಆತನು ಶಂಭುವಿನ ಉಪಾಸಕನಾಗಿದ್ದರೂ, ಹರಿನಿಂದಕನಲ್ಲ. ನಾನು ಕಪಟದಿಂದ ಆತನನ್ನು ಸೇವಿಸುತ್ತಿದ್ದೆ. ಆ ಬ್ರಾಹ್ಮಣನು ಅತಿದಯಾಳುವೂ, ನೀತಿವಂತನೂ ಆಗಿದ್ದನು. ಗರುಡಾ! ಹೊರಗಡೆಯಿಂದ ವಿನಮ್ರನಾಗಿ ಕಾಣುವ ನನ್ನನ್ನು ಅವರು ತನ್ನ ಮಗನೋಪಾದಿಯಲ್ಲಿ ತಿಳಿದು ನನಗೆ ಬೋಧಿಸುತ್ತಿದ್ದರು. ಆ ಬ್ರಾಹ್ಮಣನು ನನಗೆ ಶಿವಮಂತ್ರವೇ ಅಲ್ಲದೆ, ಅನೇಕ ಪ್ರಕಾರದ ಶುಭಉಪದೇಶವನ್ನು ಇತ್ತನು. ನಾನು ಪ್ರತಿದಿನ ದೇವಾಲಯಕ್ಕೆ ತೆರಳಿ ಶಿವಮಂತ್ರವನ್ನು ಜಪಿಸುತ್ತಿದ್ದೆ. ಆದರೆ ನನ್ನ ಹೃದಯದಲ್ಲಿ ಜಂಭ, ಅಹಂಕಾರಗಳು ಹೆಚ್ಚುತ್ತ ಹೋದವು. (ಚೌ/೧-೪)

**ದೋ – ಮೈಂ ಖಲ ಮಲ ಸಂಕುಲ ಮತಿ ನೀಚ ಜಾತಿ ಬಸ ಮೋಹ।**
**ಹರಿ ಜನ ದ್ವಿಜ ದೇಖೇಂ ಜರಉಁ ಕರಉಁ ಬಿಷ್ನು ಕರ ದ್ರೋಹ ॥ ೧೦೫(ಕ)॥**

ದುಷ್ಟನೂ, ನೀಚಜಾತಿಯವನೂ, ಪಾಪಮಯ ಮಲಿನಬುದ್ಧಿಯವನೂ ಆದ ನಾನು ಮೋಹವಶನಾಗಿ ಶ್ರೀಹರಿಭಕ್ತರನ್ನು, ಬ್ರಾಹ್ಮಣರನ್ನು ನೋಡುತ್ತಲೇ ಉರಿದುಬೀಳುತ್ತಿದ್ದೆ. ಭಗವಾನ್ ವಿಷ್ಣುವಿನಲ್ಲಿ ದ್ರೋಹಮಾಡುತ್ತಿದ್ದೆ. (ದೋ/೧೦೫ ಕ)

**ಸೋ – ಗುರ ನಿತ ಮೋಹಿ ಪ್ರಬೋಧ ದುಖಿತ ದೇಖಿ ಆಚರನ ಮಮ।**
**ಮೊಹಿ ಉಪಜಇ ಅತಿ ಕ್ರೋಧ ದಂಭಿಹಿ ನೀತಿ ಕಿ ಭಾವಈ ॥ ೧೦೫(ಖ)॥**

ಗುರುಗಳು ನನ್ನ ಆಚರಣೆಯನ್ನು ನೋಡಿ ದುಃಖಿಗೊಳ್ಳುತ್ತಿದ್ದರು. ಅವರು ಪ್ರತಿದಿನವು ನನಗೆ ಸದುಪದೇಶವನ್ನು ಕೊಡುತ್ತಿದ್ದರು. ಆದರೆ ನಾನು ಅವರ ಉಪದೇಶವನ್ನು ಉಪೇಕ್ಷಿಸುತ್ತಿದ್ದೆ. ಬದಲಿಗೆ ನನ್ನಲ್ಲಿ ತೀವ್ರವಾದ ಕ್ರೋಧ ಉಂಟಾಗುತ್ತಿತ್ತು. ಡಾಂಭಿಕನಿಗೆ ನೀತಿ ಎಂದಾದರೂ ಹಿಡಿಸುವುದೇ? (ಸೋ/೧೦೫ ಖ)

**ಚೌ – ಏಕ ಬಾರ ಗುರ ಲೀನ್ಹ ಬೊಲಾಈ। ಮೋಹಿ ನೀತಿ ಬಹು ಭಾಁತಿ ಸಿಖಾಈ ॥**
**ಸಿವ ಸೇವಾ ಕರ ಫಲ ಸುತ ಸೋಈ। ಅಬಿರಲ ಭಗತಿ ರಾಮ ಪದ ಹೋಈ॥ ೧ ॥**
**ರಾಮಹಿ ಭಜಹಿಂ ತಾತ ಸಿವ ಧಾತಾ। ನರ ಪಾವಁರ ಕೈ ಕೇತಿಕ ಬಾತಾ ॥**
**ಜಾಸು ಚರನ ಅಜ ಸಿವ ಅನುರಾಗೀ। ತಾಸು ದ್ರೋಹ್ ಸುಖ ಚಹಸಿ ಅಭಾಗೀ ॥ ೨ ॥**
**ಹರ ಕಹುಁ ಹರಿ ಸೇವಕ ಗುರ ಕಹೇಊ। ಸುನಿ ಖಗನಾಥ ಹೃದಯ ಮಮ ದಹೇಊ ॥**
**ಅಧಮ ಜಾತಿ ಮೈಂ ಬಿದ್ಯಾ ಪಾಏಁ। ಭಯಉಁ ಜಥಾ ಅಹಿ ದೂಧ ಪಿಆಏಁ ॥ ೩ ॥**
**ಮಾನೀ ಕುಟಿಲ ಕುಭಾಗ್ಯ ಕುಜಾತೀ। ಗುರ ಕರ ದ್ರೋಹ ಕರಉಁ ದಿನು ರಾತೀ ॥**
**ಅತಿ ದಯಾಲ ಗುರ ಸ್ವಲ್ಪ ನ ಕ್ರೋಧಾ। ಪುನಿ ಪುನಿ ಮೋಹಿ ಸಿಖಾವ ಸುಬೋಧಾ ॥ ೪ ॥**
**ಜೆಹಿ ತೇ ನೀಚ ಬಡಾಈ ಪಾವಾ। ಸೋ ಪ್ರಥಮಹಿಂ ಹತಿ ತಾಹಿ ನಸಾವಾ ॥**
**ಧೂಮ ಅನಲ ಸಂಭವ ಸುನು ಭಾಈ। ತೆಹಿ ಬುಝಾವ ಘನ ಪದವೀ ಪಾಈ ॥ ೫ ॥**
**ರಜ ಮಗ ಪರೀ ನಿರಾದರ ರಹಈ। ಸಬ ಕರ ಪದ ಪ್ರಹಾರ ನಿತ ಸಹಈ ॥**
**ಮರುತ ಉಡಾವ ಪ್ರಥಮ ತೆಹಿ ಭರಈ। ಪುನಿ ನೃಪ ನಯನ ಕಿರೀಟನ್ಹಿ ಪರಈ ॥ ೬ ॥**
**ಸುನು ಖಗಪತಿ ಅಸ ಸಮುಝಿ ಪ್ರಸಂಗಾ। ಬುಧ ನಹಿಂ ಕರಹಿಂ ಅಧಮ ಕರ ಸಂಗಾ ॥**
**ಕಬಿ ಕೋಬಿದ ಗಾವಹಿಂ ಅಸಿ ನೀತೀ। ಖಲ ಸನ ಕಲಹ ನ ಭಲ ನಹಿಂ ಪ್ರೀತೀ ॥ ೭ ॥**
**ಉದಾಸೀನ ನಿತ ರಹಿಅ ಗೊಸಾಈಂ। ಖಲ ಪರಿಹರಿಅ ಸ್ವಾನ ಕೀ ನಾಈಂ ॥**
**ಮೈಂ ಖಲ ಹೃದಯಁ ಕಪಟ ಕುಟಿಲಾಈ। ಗುರ ಹಿತ ಕಹಇ ನ ಮೋಹಿ ಸೊಹಾಈ ॥ ೮ ॥**

ಒಮ್ಮೆ ಗುರುಗಳು ನನ್ನನ್ನು ಕರೆದು, 'ಮಗು! ಶಿವನ ಸೇವಾಫಲವು ನಿರಂತರ ಶ್ರೀರಾಮನ ಚರಣಗಳಲ್ಲಿ ಪ್ರಗಾಢವಾದ ಭಕ್ತಿಯುಂಟಾಗುವುದೇ ಆಗಿದೆ ಎಂದು ಅನೇಕ ವಿಧಗಳಿಂದ ನೀತಿಯನ್ನು ಹೇಳಿದರು. ಅಯ್ಯಾ! ಶಿವನು ಮತ್ತು ವಿರಿಂಚಿಯೂ ಕೂಡ ಶ್ರೀರಾಮನನ್ನು ಭಜಿಸುವರು. ಹೀಗಿರುವಾಗ ಅಲ್ಪನಾದ ಮನುಷ್ಯಮಾತ್ರರ ಬಗ್ಗೆ ಹೇಳುವುದೇನಿದೆ? ಬ್ರಹ್ಮದೇವರು,

ಪರಮೇಶ್ವರನು ಇಂತಹವರು ಕೂಡ ಶ್ರೀರಾಮನ ಚರಣಗಳಲ್ಲಿ ಆಸಕ್ತರಿರುವಾಗ, ಎಲೈ ನಿರ್ಭಾಗ್ಯನೇ! ಅಂತಹ ಪ್ರಭುವಿನಲ್ಲಿ ದ್ರೋಹವೆಸಗಿ ಸುಖವನ್ನು ಬಯಸುವೆಯಲ್ಲ! ಗುರುಗಳು ಶಿವನನ್ನು ಹರಿಸೇವಕನೆಂದು ಹೇಳಿದರು. ಓ ಪಕ್ಷಿರಾಜಾ! ಈ ಮಾತನ್ನು ಕೇಳುತ್ತಲೇ ನನ್ನ ಹೃದಯ ಉರಿದುಹೋಯಿತು. ಜಾತಿಯಲ್ಲಿ ಅನರ್ಹನಾದ ನಾನು ವಿದ್ಯೆಯನ್ನು ಪಡೆದು ಹಾವಿಗೆ ಹಾಲು ಎರೆದಂತಾಯಿತು. ದುರಭಿಮಾನಿಯೂ, ಕುಟಿಲನೂ, ನಿರ್ಭಾಗ್ಯನೂ, ಕುಜಾತಿಯವನೂ ಆದ ನಾನು ಹಗಲಿರುಳು ಗುರುವಿಗೆ ದ್ರೋಹಬಗೆಯತೊಡಗಿದೆ. ಆದರೆ ಗುರುಗಳು ಅತ್ಯಂತ ದಯಾಳುಗಳು. ಆದ್ದರಿಂದ ಅವರಿಗೆ ಲೇಶವೂ ಕೋಪ ಉಂಟಾಗಲಿಲ್ಲ. ನಾನು ದ್ರೋಹಬಗೆಯುತ್ತಿದ್ದರೂ ಅವರು ಪದೇ-ಪದೇ ಉತ್ತಮ ಜ್ಞಾನೋಪದೇಶವನ್ನು ಮಾಡುತ್ತಿದ್ದರು. ನೀಚಮನುಷ್ಯನು ಯಾರಿಂದ ಏಳಿಗೆ ಪಡೆಯುತ್ತಾನೋ ಅವರನ್ನೇ ಮೊದಲು ಕೊಂದು ನಾಶಮಾಡುತ್ತಾನೆ. ಸೋದರ! ಕೇಳು. ಬೆಂಕಿಯಿಂದಲೇ ಉತ್ಪನ್ನವಾದ ಹೊಗೆಯು ಮೇಘರೂಪವನ್ನು ಪಡೆದು ಅದೇ ಬೆಂಕಿಯನ್ನು ಆರಿಸಿಬಿಡುತ್ತದೆ. ಧೂಳು ಹಾದಿಯಲ್ಲಿ ಬಿದ್ದಿರುತ್ತದೆ. ದಾರಿಹೋಕರ ಪಾದಾಘಾತವನ್ನು ಸಹಿಸುತ್ತದೆ. ಆದರೆ ಗಾಳಿಯು ಅದನ್ನು ಹಾರಿಸಿಕೊಂಡು ಹೋದಾಗ, ಅದು ಎಲ್ಲಕ್ಕೆ ಮೊದಲು ಆ ಗಾಳಿಯನ್ನೇ ಆವರಿಸಿ, ಮತ್ತೆ ಮಹಾರಾಜರ ಕಣ್ಣಿಗೆ ಬೀಳುತ್ತದೆ. ಕಿರೀಟದ ಮೇಲೆ ಏರುತ್ತದೆ. ಓ ಖಗರಾಜಾ! ಆಲಿಸು. ಈ ಪ್ರಸಂಗವನ್ನು ಅರಿತಿರುವ ಬುದ್ಧಿವಂತರು ಅಧಮರ ಸಂಗವನ್ನು ಎಂದು ಮಾಡುವುದಿಲ್ಲ. ಖಲರೊಡನೆ ಕಲಹವೂ ಬೇಡ, ಪ್ರೀತಿಯೂ ಬೇಡ ಎಂದು ಕವಿ, ಕೋವಿದರು ಹೇಳುತ್ತಾರೆ. ಅಯ್ಯಾ! ಖಲರೊಡನೆ ಯಾವಾಗಲೂ ಉದಾಸೀನವಾಗಿಯೇ ಇರಬೇಕು. ದುಷ್ಟರನ್ನು ನಾಯಿಯಂತೆ ದೂರದಿಂದಲೇ ತ್ಯಜಿಸಬೇಕು. ನಾನು ದುಷ್ಟನಾಗಿದ್ದೆ. ಹೃದಯದಲ್ಲಿ ಕಪಟ, ಕುಟಿಲತೆ ಇತ್ತು, ಗುರುಗಳು ನನಗೆ ಹಿತದ ಮಾತನ್ನು ಹೇಳಿದರೂ ನನಗೆ ಅದು ಹಿಡಿಸುತ್ತಿರಲಿಲ್ಲ. (ಚೌ/೧-೮)

**ದೋ – ಏಕ ಬಾರ ಹರ ಮಂದಿರ ಜಪತ ರಹೆಉँ ಸಿವ ನಾಮ।**
**ಗುರ ಆಯಉ ಅಭಿಮಾನ ತೇँ ಉಠಿ ನಹಿँ ಕೀನ್ಹ ಪ್ರನಾಮ ॥ ೧೦೬(ಕ)॥**
**ಸೋ ದಯಾಲ ನಹಿँ ಕಹೆಉ ಕಛು ಉರ ನ ರೋಷ ಲವಲೇಸ।**
**ಅತಿ ಅಘ ಗುರ ಅಪಮಾನತಾ ಸಹಿ ನಹಿँ ಸಕೇ ಮಹೇಸ ॥ ೧೦೬(ಖ)॥**

ಒಂದು ದಿನ ನಾನು ಶಿವಾಲಯದಲ್ಲಿ ಕುಳಿತು ಶಿವನಾಮವನ್ನು ಜಪಿಸುತ್ತಿದ್ದೆ. ಅದೇ ಸಮಯಕ್ಕೆ ಗುರುಗಳು ಅಲ್ಲಿಗೆ ಬಂದರು. ಆದರೆ ನಾನು ದುರಭಿಮಾನದಿಂದ ಎದ್ದು ನಮಸ್ಕರಿಸಲಿಲ್ಲ. ಗುರುಗಳು ದಯಾಳುಗಳಾಗಿದ್ದರು. ನನ್ನ ದೋಷವನ್ನು ನೋಡಿಯೂ ಅವರು ಏನೂ ಅನ್ನಲಿಲ್ಲ. ಅವರ ಹೃದಯದಲ್ಲಿ ಲವಲೇಶವೂ ರೋಷವಿರಲಿಲ್ಲ. ಆದರೆ ಗುರುವಿನ ಅಪಮಾನ ಮಹಾಪಾಪವು. ಆದ್ದರಿಂದ ಮಹಾದೇವನು ಇದನ್ನು ಸಹಿಸದಾದನು. (ದೋ/೧೦೬ ಕ, ಖ)

**ಚೌ – ಮಂದಿರ ಮಾಝು ಭಈ ನಭ ಬಾನೀ। ರೇ ಹತಭಾಗ್ಯ ಅಗ್ಯ ಅಭಿಮಾನೀ॥**
**ಜದ್ಯಪಿ ತವ ಗುರ ಕೇँ ನಹಿँ ಕ್ರೋಧಾ। ಅತಿ ಕೃಪಾಲ ಚಿತ ಸಮ್ಯಕ ಬೋಧಾ ॥ ೧ ॥**
**ತದಪಿ ಸಾಪ ಸಠ ದೈಹಉँ ತೋಹೀ। ನೀತಿ ಬಿರೋಧ ಸೊಹಾಇ ನ ಮೋಹೀ॥**
**ಜೌँ ನಹಿँ ದಂಡ ಕರೌँ ಖಲ ತೋರಾ। ಭ್ರಷ್ಟ ಹೋಇ ಶ್ರುತಿಮಾರಗ ಮೋರಾ ॥ ೨ ॥**
**ಜೇ ಸಠ ಗುರ ಸನ ಇರಿಷಾ ಕರಹೀँ। ರೌರವ ನರಕ ಕೋಟಿ ಜುಗ ಪರಹೀँ॥**
**ತ್ರಿಜಗ ಜೋನಿ ಪುನಿ ಧರಹಿँ ಸರೀರಾ। ಅಯುತ ಜನ್ಮ ಭರಿ ಪಾವಹಿँ ಪೀರಾ ॥ ೩ ॥**
**ಬೈಠ ರಹೆಸಿ ಅಜಗರ ಇವ ಪಾಪೀ। ಸರ್ಪ ಹೋಹಿ ಖಲ ಮಲ ಮತಿ ಬ್ಯಾಪೀ॥**
**ಮಹಾ ಬಿಟಪ ಕೋಟರ ಮಹುँ ಜಾಈ। ರಹು ಅಧಮಾಧಮ ಅಧಗತಿ ಪಾಈ ॥ ೪ ॥**

ಮಂದಿರದೊಳಗಿಂದ ಒಂದು ಅಶರೀರವಾಣಿ ಇಂತು ಮೊಳಗಿತು – ಎಲವೋ! ಹತಭಾಗ್ಯನೇ! ಮೂರ್ಖನೇ! ದುರಭಿಮಾನಿಯೇ! ನಿನ್ನ ಗುರುಗಳು ಹೆಚ್ಚಿನ ದಯಾಮಯರು. ಆದ್ದರಿಂದ ನಿನ್ನ ಮೇಲೆ ಕೋಪಗೊಳ್ಳಲಿಲ್ಲ. ಅವರು ಪರಿಪೂರ್ಣ ಜ್ಞಾನಿಗಳು ಆಗಿದ್ದಾರೆ. ಆದ್ದರಿಂದ ಎಲೈ ಮೂರ್ಖಾ! ನಿನ್ನನ್ನು ನಾನು ಶಪಿಸುತ್ತೇನೆ. ನೀತಿಬಾಹ್ಯರಾದವರನ್ನು ನಾನು ಮೆಚ್ಚುವುದಿಲ್ಲ. ಎಲೈ ದುಷ್ಟಾ! ನಿನ್ನನ್ನು ನಾನು ದಂಡಿಸದೆ ಹೋದರೆ ವೈದಿಕನಿಷ್ಠೆ ನಿಯಮಗಳು ಉಲ್ಲಂಘಿಸಿದಂತಾದೀತು. ಗುರುವಿನಲ್ಲಿ ಈರ್ಷೆಯುಳ್ಳ ಮೂರ್ಖನು ಕೋಟಿ-ಕೋಟಿ ಯುಗಗಳವರೆಗೆ ರೌರವ ನರಕದಲ್ಲಿ ಬಿದ್ದು ಒದ್ದಾಡುತ್ತಾನೆ. ಅದರಿಂದ ಹೊರಬಂದು ಪಶು-ಪಕ್ಷ್ಯಾದಿ ತಿರ್ಯಕ್‌ಯೋನಿಯಲ್ಲಿ ಜನಿಸುತ್ತಾನೆ. ಬಳಿಕ ಹತ್ತುಸಾವಿರ ಜನ್ಮಗಳಲ್ಲಿ ದುಃಖವನ್ನು ಅನುಭವಿಸುತ್ತಾನೆ. ಎಲೈ ಪಾಪಿಯೇ! ನೀನು ಗುರುವಿನ ಎದುರಿಗೆ ಹೆಬ್ಬಾವಿನಂತೆ ಕುಳಿತೇ ಇದ್ದೆ. ನಿನ್ನ ಬುದ್ಧಿಗೆ ಪಾಪ ಕವಿದಿದೆ. ಆದ್ದರಿಂದ ನೀನು ಸರ್ಪವಾಗಿ, ನೀಚಾತಿನೀಚ ಅಧೋಗತಿಗೆ ಗುರಿಯಾಗಿ ದೊಡ್ಡ ಮರದ ಪೊಟರೆಯಲ್ಲಿ ಬಿದ್ದಿರು. (ಚೌ/೧-೪)

ದೋ – ಹಾಹಾಕಾರ ಕೀನ್ಹ ಗುರ ದಾರುನ ಸುನಿ ಸಿವ ಸಾಪ।
ಕಂಪಿತ ಮೋಹಿ ಬಿಲೋಕಿ ಅತಿ ಉರ ಉಪಜಾ ಪರಿತಾಪ ॥ ೧೦೭(ಕ)॥
ಕರಿ ದಂಡವತ ಸಪ್ರೇಮ ದ್ವಿಜ ಸಿವ ಸನ್ಮುಖ ಕರ ಜೋರಿ।
ಬಿನಯ ಕರತ ಗದಗದ ಸ್ವರ ಸಮುಝಿ ಘೋರ ಗತಿ ಮೋರಿ ॥ ೧೦೭(ಖ)॥

ಭಯಂಕರವಾದ ಆ ಶಿವನ ಶಾಪವನ್ನು ಕೇಳಿ ಗುರುಗಳು ಹಾಹಾಕಾರ ಮಾಡಿದರು. ಗಡಗಡನೆ ನಡುಗುತ್ತಿರುವ ನನ್ನನ್ನು ನೋಡಿ ಅವರ ಹೃದಯದಲ್ಲಿ ತುಂಬಾ ಸಂತಾಪ ಉಂಟಾಯಿತು. ನನ್ನ ವಿಹ್ವಲ ಸ್ಥಿತಿಯನ್ನು ಕಂಡು, ಆ ಬ್ರಾಹ್ಮಣರು ಶಿವನಿಗೆ ಭಕ್ತಿಯಿಂದ ಸಾಷ್ಟಾಂಗ ಪ್ರಣಾಮಗೈದು, ಕೈಜೋಡಿಸಿಕೊಂಡು, ಗದ್ಗದ ಕಂಠದಿಂದ ಬಿನ್ನವಿಸಿಕೊಂಡರು. (ದೋ/೧೦೭ ಕ, ಖ)

## ಶ್ರೀರುದ್ರಾಷ್ಟಕಮ್

ಛಂ – ನಮಾಮೀಶಮೀಶಾನ ನಿರ್ವಾಣರೂಪಂ। ವಿಭುಂ ವ್ಯಾಪಕಂ ಬ್ರಹ್ಮ ವೇದಸ್ವರೂಪಂ॥
ನಿಜಂ ನಿರ್ಗುಣಂ ನಿರ್ವಿಕಲ್ಪಂ ನಿರೀಹಂ। ಚಿದಾಕಾಶಮಾಕಾಶವಾಸಂ ಭಜೇಽಹಂ ॥ ೧ ॥
ನಿರಾಕಾರಮೋಂಕಾರಮೂಲಂ ತುರೀಯಂ। ಗಿರಾ ಗ್ಯಾನ ಗೋತೀತಮೀಶಂ ಗಿರೀಶಂ ॥
ಕರಾಲಂ ಮಹಾಕಾಲ ಕಾಲಂ ಕೃಪಾಲಂ। ಗುಣಾಗಾರ ಸಂಸಾರಪಾರಂ ನತೋಽಹಂ॥ ೨ ॥
ತುಷಾರಾದ್ರಿ ಸಂಕಾಶ ಗೌರಂ ಗಭೀರಂ। ಮನೋಭೂತ ಕೋಟಿ ಪ್ರಭಾ ಶ್ರೀ ಶರೀರಂ॥
ಸ್ಫುರನ್ಮೌಲಿ ಕಲ್ಲೋಲಿನೀ ಚಾರು ಗಂಗಾ । ಲಸದ್ಭಾಲಬಾಲೇಂದು ಕಂಠೇ ಭುಜಂಗಾ ॥ ೩ ॥
ಚಲತ್ಕುಂಡಲಂ ಭ್ರೂ ಸುನೇತ್ರಂ ವಿಶಾಲಂ। ಪ್ರಸನ್ನಾನನಂ ನೀಲಕಂಠಂ ದಯಾಲಂ ॥
ಮೃಗಾಧೀಶಚರ್ಮಾಂಬರಂ ಮುಂಡಮಾಲಂ। ಪ್ರಿಯಂ ಶಂಕರಂ ಸರ್ವನಾಥಂ ಭಜಾಮಿ ॥ ೪ ॥
ಪ್ರಚಂಡಂ ಪ್ರಕೃಷ್ಟಂ ಪ್ರಗಲ್ಭಂ ಪರೇಶಂ। ಅಖಂಡಂ ಅಜಂ ಭಾನುಕೋಟಿಪ್ರಕಾಶಂ॥
ತ್ರಯಃಶೂಲ ನಿರ್ಮೂಲನಂ ಶೂಲಪಾಣಿಂ। ಭಜೇಽಹಂ ಭವಾನೀಪತಿಂ ಭಾವಗಮ್ಯಂ॥ ೫ ॥
ಕಲಾತೀತ ಕಲ್ಯಾಣ ಕಲ್ಪಾಂತಕಾರೀ। ಸದಾ ಸಜ್ಜನಾನಂದದಾತಾ ಪುರಾರೀ ॥
ಚಿದಾನಂದಸಂದೋಹ ಮೋಹಾಪಹಾರೀ। ಪ್ರಸೀದ ಪ್ರಸೀದ ಪ್ರಭೋ ಮನ್ಮಥಾರೀ॥ ೬ ॥
ನ ಯಾವದ್ ಉಮಾನಾಥ ಪಾದಾರವಿಂದಂ। ಭಜಂತೀಹ ಲೋಕೇ ಪರೇ ವಾ ನರಾಣಾಂ॥
ನ ತಾವತ್ಸುಖಂ ಶಾಂತಿ ಸಂತಾಪನಾಶಂ। ಪ್ರಸೀದ ಪ್ರಭೋ ಸರ್ವಭೂತಾಧಿವಾಸಂ ॥ ೭ ॥
ನ ಜಾನಾಮಿ ಯೋಗಂ ಜಪಂ ನೈವ ಪೂಜಾಂ । ನತೋಽಹಂ ಸದಾ ಸರ್ವದಾ ಶಂಭು ತುಭ್ಯಂ ॥
ಜರಾ ಜನ್ಮ ದುಃಖೌಘ ತಾತಪ್ಯಮಾನಂ। ಪ್ರಭೋ ಪಾಹಿ ಆಪನ್ನಮಾಮೀಶ ಶಂಭೋ॥ ೮ ॥

ಓ ಮೋಕ್ಷಸ್ವರೂಪನೇ! ವಿಭುವೇ! ಸರ್ವವ್ಯಾಪಕನೇ! ಬ್ರಹ್ಮಸ್ವರೂಪನೇ! ವೇದಮೂರ್ತಿಯೇ! ಈಶಾನ್ಯ ದಿಶಾಧೀಶನೇ! ಪರಮೇಶ್ವರನೇ! ನಿನಗೆ ನಮಸ್ಕಾರವು. ನೀನು ಸ್ವಸ್ವರೂಪಸ್ಥಿತನು (ಮಾಯಾತೀತನು). ಗುಣರಹಿತನೂ, ಭೇದರಹಿತನೂ, ಇಚ್ಛಾರಹಿತನೂ, ಚಿದಾಕಾಶಸ್ವರೂಪನೂ, (ಚಿತ್ತವು ಆಕಾಶದಂತೆ ನಿರ್ಮಲವೂ, ಉದಾರಗುಣಸಂಪನ್ನನೂ, ವಿಶಾಲವಾಗಿರುವವನು) ಆಕಾಶವನ್ನೇ ವಸ್ತ್ರವಾಗಿ ಆಚ್ಛಾದಿಸಿಕೊಂಡಿರುವ ದಿಗಂಬರನೂ ಆದ ನಿನ್ನನ್ನು ನಾನು ಭಜಿಸುತ್ತೇನೆ. ॥ ೧॥ ನಿರಾಕಾರನೂ, ಓಂಕಾರಕ್ಕೆ ನಿಲಯನಾಗಿರುವವನೂ, ತುರೀಯನೂ (ಸರ್ವದಾ ಸಮಾಧಿಸ್ಥಿತಿಯಲ್ಲೇ ಇರುವವನು), ವಾಕ್ಕಿಗೂ, ಇಂದ್ರಿಯಗಳಿಗೂ, ಜ್ಞಾನಕ್ಕೂ ಅಗೋಚರನೂ, ಕೈಲಾಸಪತಿಯೂ, ಭಯಂಕರನೂ, ಮಹಾಮೃತ್ಯುಂಜಯನೂ, ಕೃಪಾಳುವೂ, ಗುಣನಿಧಿಯೂ, ಸಂಸಾರಕ್ಕೆ ಅತೀತನೂ ಆದ ಪರಮೇಶ್ವರಾ ನಿನಗೆ ನಾನು ವಂದಿಸುತ್ತೇನೆ. ॥ ೨॥ ನೀನು ಹಿಮಾಲಯದಂತೆ ಗೌರವರ್ಣನೂ, ಗಂಭೀರನೂ, ಕೋಟಿಮನ್ಮಥ ಶೋಭೆಯಿಂದ ವಿರಾಜಿಸುವವನೂ ಆಗಿರುವೆ. ನಿನ್ನ ಜಟಾಜೂಟದಲ್ಲಿ ಸುಂದರ ತರಂಗಗಳಿಂದ ಕೂಡಿದ ಗಂಗೆಯು ವಿರಾಜಿಸುತ್ತಿದೆ. ಲಲಾಟದಲ್ಲಿ ಬಾಲಚಂದ್ರನೂ, ಕಂಠದಲ್ಲಿ ಸರ್ಪಗಳು ಶೋಭಿಸುತ್ತಿವೆ. ॥ ೩॥ ಕಿವಿಗಳಲ್ಲಿ ಸರ್ಪಕುಂಡಲಗಳು ಚಲಿಸುತ್ತಿವೆ. ಸುಂದರವಾದ ಭ್ರುಕುಟಿ, ವಿಶಾಲವಾದ ನೇತ್ರಗಳು, ಮನೋಜ್ಞವಾಗಿವೆ. ಪ್ರಸನ್ನಮುಖನೂ, ನೀಲಕಂಠನೂ, ದಯಾಳುವೂ, ವ್ಯಾಘ್ರಾಂಬರಧರನೂ, ಮುಂಡಮಾಲಾಧಾರಿಯೂ, ಎಲ್ಲರಿಗೆ ಪ್ರಿಯನೂ, ಎಲ್ಲರ ಒಡೆಯನೂ ಆದ ಶಂಕರನನ್ನು ನಾನು ಭಜಿಸುತ್ತೇನೆ. ॥ ೪॥ ಪ್ರಚಂಡನೂ (ರುದ್ರರೂಪೀ),

ಶ್ರೇಷ್ಠನೂ, ತೇಜಸ್ವಿಯೂ, ಪರಮೇಶ್ವರನೂ, ಅಖಂಡನೂ, ಜನ್ಮರಹಿತನೂ, ಭಾನುಕೋಟಿ ಪ್ರಕಾಶನೂ, ತಾಪತ್ರಯನಿವಾರಕನೂ, ತ್ರಿಶೂಲಧಾರಿಯೂ, ಭಾವಗಮ್ಯವಾದ ಭವಾನೀಪತಿಯೂ ಆದ ಶುಭಂಕರ ಶಂಕರನೇ ನಿನ್ನನ್ನು ಭಜಿಸುತ್ತೇನೆ. ॥ ೫॥ ಸಕಲಕಳಾಪೂರ್ಣನೂ, ಕಲ್ಯಾಣಸ್ವರೂಪಿಯೂ, ಕಲ್ಪಾಂತಕಾರಿಯೂ, ಸಜ್ಜನರಿಗೆ ಸದಾ ಆನಂದವನ್ನು ಕೊಡುವವನೂ, ತ್ರಿಪುರಾರಿಯೂ, ಸಚ್ಚಿದಾನಂದಘನನೂ, ಮೋಹಾಪಹಾರಿಯೂ, ಕಾಮಾರಿಯೂ ಆದ ಪ್ರಭುವೇ ಪ್ರಸನ್ನನಾಗು! ಪ್ರಸನ್ನನಾಗು!! ॥ ೬॥ ಓ ಉಮಾಪತಿ! ನಿನ್ನ ಚರಣಕಮಲಗಳನ್ನು ಭಜಿಸದವರಿಗೆ ಇಹ-ಪರ ಲೋಕಗಳಲ್ಲಿ ಸುಖ-ಶಾಂತಿಗಳು ಇರವು. ಅವರ ಸಂತಾಪಗಳು ತೊಲಗಿಹೋಗಲಾರವು. ಆದ್ದರಿಂದ ಸರ್ವಪ್ರಾಣಿಗಳ ಹೃದಯದಲ್ಲಿ ನೆಲೆಸಿರುವ ಪ್ರಭುವೇ! ಪ್ರಸನ್ನನಾಗು!! ॥ ೭॥ ನಾನು ಯೋಗವನ್ನಾಗಲೀ, ಜಪವನ್ನಾಗಲೀ, ಪೂಜೆಯನ್ನಾಗಲೀ ಅರಿಯೆನು. ಶಂಭೋ! ನಾನಾದರೋ ಸದಾಕಾಲ ನಿನಗೆ ನಮಸ್ಕರಿಸುತ್ತೇನೆ. ಜರಾಮರಣ ದುಃಖಗಳಿಂದ ತಪಿಸುತ್ತಿದ್ದು, ಶರಣು ಬಂದಿರುವ ನನ್ನನ್ನು ಈ ದುಃಖಗಳಿಂದ ಕಾಪಾಡು. ಈಶ್ವರಾ! ಶಂಭೋ! ನಿನಗೆ ವಂದಿಸುತ್ತೇನೆ. ॥ ೮॥ (ಛಂ/೧-೮)

**ಶ್ಲೋ – ರುದ್ರಾಷ್ಟಕಮಿದಂ ಪ್ರೋಕ್ತಂ ವಿಪ್ರೇಣ ಹರತೋಷಯೇ ।**
**ಯೇ ಪಠಂತಿ ನರಾ ಭಕ್ತ್ಯಾ ತೇಷಾಂ ಶಂಭುಃ ಪ್ರಸೀದತಿ ॥ ೯ ॥**

ಶಂಕರನು ಪ್ರಸನ್ನನಾಗಲು ಈ ರುದ್ರಾಷ್ಟಕದ ಮೂಲಕ ಆ ಬ್ರಾಹ್ಮಣನು ಪರಮೇಶ್ವರನನ್ನು ಸ್ತುತಿಸಿದನು. ಭಕ್ತಿಯಿಂದ ಇದನ್ನು ಪಠಿಸುವವರಿಗೆ ಪರಶಿವನು ಒಲಿಯುವನು. (ಶ್ಲೋ/೯)

**ದೋ – ಸುನಿ ಬಿನತೀ ಸರ್ಬಗ್ಯ ಸಿವ ದೇಖಿ ಬಿಪ್ರ ಅನುರಾಗು ।**
**ಪುನಿ ಮಂದಿರ ನಭಬಾನೀ ಭಇ ದ್ವಿಜಬರ ಬರ ಮಾಗು ॥ ೧೦೮(ಕ)॥**
**ಜೌಂ ಪ್ರಸನ್ನ ಪ್ರಭು ಮೋ ಪರ ನಾಥ ದೀನ ಪರ ನೇಹು ।**
**ನಿಜ ಪದ ಭಗತಿ ದೇಇ ಪ್ರಭು ಪುನಿ ದೂಸರ ಬರ ದೇಹು ॥ ೧೦೮(ಖ)॥**
**ತವ ಮಾಯಾ ಬಸ ಜೀವ ಜಡ ಸಂತತ ಫಿರಇ ಭುಲಾನ ।**
**ತೆಹಿ ಪರ ಕ್ರೋಧ ನ ಕರಿಅ ಪ್ರಭು ಕೃಪಾ ಸಿಂಧು ಭಗವಾನ ॥ ೧೦೮(ಗ)॥**
**ಸಂಕರ ದೀನದಯಾಲ ಅಬ ಏಹಿ ಪರ ಹೋಹು ಕೃಪಾಲ ।**
**ಸಾಪ ಅನುಗ್ರಹ ಹೋಇ ಜೆಹಿಂ ನಾಥ ಥೋರೆಹೀಂ ಕಾಲ ॥ ೧೦೮(ಘ)॥**

ಸರ್ವಜ್ಞನಾದ ಶಿವನು ಈ ಸ್ತುತಿಯನ್ನು ಕೇಳಿ, ಬ್ರಾಹ್ಮಣನ ಭಕ್ತಿ-ವಿಶ್ವಾಸವನ್ನು ಗ್ರಹಿಸಿದನು. ಆಗ ದೇವಾಲಯದಲ್ಲಿ– 'ಓ ದ್ವಿಜಶ್ರೇಷ್ಠಾ ! ಬೇಕಾದ ವರವನ್ನು ಕೇಳು' ಎಂಬ ಅಶರೀರವಾಣಿ ಕೇಳಿಸಿತು. ಆಗ ಬ್ರಾಹ್ಮಣನು ಇಂತೆಂದನು – ಪ್ರಭುವೇ! ನನ್ನ ಮೇಲೆ ನೀನು ಪ್ರಸನ್ನನಾಗಿರುವಿಯಾದರೆ, ಈ ದೀನನ ಮೇಲೆ ಕೃಪೆದೋರಿ, ಮೊದಲಿಗೆ ನಿನ್ನ ಚರಣಗಳಲ್ಲಿ ಭಕ್ತಿಯನ್ನು ಕರುಣಿಸು. ಮತ್ತೆ ಇನ್ನೊಂದು ವರವನ್ನು ಕೊಡು. ಪ್ರಭೋ! ಈ ಜಡಪ್ರಾಣಿಯು ನಿನ್ನ ಮಾಯೆಗೆ ವಶನಾಗಿ ನಿತ್ಯ-ನಿರಂತರವೂ ಅಜ್ಞಾನದಲ್ಲೇ ಅಲೆಯುತ್ತಿರುವನು. ಓ ಕೃಪಾಸಾಗರಾ! ಇವನ ಮೇಲೆ ಕೋಪಗೊಳ್ಳಬೇಡ. ಓ ದೀನದಯಾಳೂ! ಶಂಕರಾ! ಇವನ ಮೇಲೆ ದಯೆದೋರು. ಸ್ವಲ್ಪ ಕಾಲದಲ್ಲೇ ಇವನ ಶಾಪ ದೂರವಾಗುವಂತೆ ಅನುಗ್ರಹಿಸು. (ದೋ/೧೦೮ ಕ, ಖ, ಗ, ಘ)

**ಚೌ – ಏಹಿ ಕರ ಹೋಇ ಪರಮ ಕಲ್ಯಾನಾ । ಸೋಇ ಕರಹು ಅಬ ಕೃಪಾನಿಧಾನಾ ॥**
**ಬಿಪ್ರಗಿರಾ ಸುನಿ ಪರಹಿತ ಸಾನೀ । ಏವಮಸ್ತು ಇತಿ ಭಇ ನಭಬಾನೀ ॥ ೧ ॥**
**ಜದಪಿ ಕೀನ್ಹ ಏಹಿಂ ದಾರುನ ಪಾಪಾ । ಮೈಂ ಪುನಿ ದೀನ್ಹಿ ಕೋಪ ಕರಿ ಸಾಪಾ ॥**
**ತದಪಿ ತುಮ್ಹಾರಿ ಸಾಧುತಾ ದೇಖೀ । ಕರಿಹಉಂ ಏಹಿ ಪರ ಕೃಪಾ ಬಿಸೇಷೀ ॥ ೨ ॥**
**ಛಮಾಸೀಲ ಜೇ ಪರ ಉಪಕಾರೀ । ತೇ ದ್ವಿಜ ಮೊಹಿ ಪ್ರಿಯ ಜಥಾ ಖರಾರೀ ॥**
**ಮೋರ ಶ್ರಾಪ ದ್ವಿಜ ಬ್ಯರ್ಥ ನ ಜಾಇಹಿ । ಜನ್ಮ ಸಹಸ ಅವಸ್ಯ ಯಹ ಪಾಇಹಿ ॥ ೩ ॥**
**ಜನಮತ ಮರತ ದುಸಹ ದುಖ ಹೋಈ । ಏಹಿ ಸ್ವಲ್ಪಉ ನಹಿಂ ಬ್ಯಾಪಿಹಿ ಸೋಈ ॥**
**ಕವನೆಉಂ ಜನ್ಮ ಮಿಟಿಹಿ ನಹಿಂ ಗ್ಯಾನಾ । ಸುನಹಿ ಸೂದ್ರ ಮಮ ಬಚನ ಪ್ರವಾನಾ ॥ ೪ ॥**
**ರಘುಪತಿ ಪುರೀಂ ಜನ್ಮ ತವ ಭಯಊ । ಪುನಿ ತೈಂ ಮಮ ಸೇವಾಂ ಮನ ದಯಊ ॥**
**ಪುರೀ ಪ್ರಭಾವ ಅನುಗ್ರಹ ಮೋರೇಂ । ರಾಮ ಭಗತಿ ಉಪಜಿಹಿ ಉರ ತೋರೇಂ ॥ ೫ ॥**

**ಸುನು ಮಮ ಬಚನ ಸತ್ಯ ಅಬ ಭಾಈ। ಹರಿತೋಷನ ಬ್ರತ ದ್ವಿಜ ಸೇವಕಾಈ॥**
**ಅಬ ಜನಿ ಕರಹಿ ಬಿಪ್ರ ಅಪಮಾನಾ। ಜಾನೆಸು ಸಂತ ಅನಂತ ಸಮಾನಾ॥೬॥**
**ಇಂದ್ರ ಕುಲಿಸ ಮಮ ಸೂಲ ಬಿಸಾಲಾ। ಕಾಲದಂಡ ಹರಿ ಚಕ್ರ ಕರಾಲಾ॥**
**ಜೋ ಇನ್ಹ ಕರ ಮಾರಾ ನಹಿಂ ಮರಈ। ಬಿಪ್ರದ್ರೋಹ ಪಾವಕ ಸೋ ಜರಈ॥೭॥**
**ಅಸ ಬಿಬೇಕ ರಾಖೆಹು ಮನ ಮಾಹೀಂ। ತುಮ್ಹ ಕಹಂ ಜಗ ದುರ್ಲಭ ಕಛು ನಾಹೀಂ॥**
**ಔರಉ ಏಕ ಆಸಿಷಾ ಮೋರೀ। ಅಪ್ರತಿಹತ ಗತಿ ಹೋಇಹಿ ತೋರೀ॥೮॥**

ಓ ಕೃಪಾನಿಧೀ! ಇವನ ಪರಮಹಿತವಾಗುವಂತಹುದನ್ನೇ ಮಾಡು. ಪರಹಿತಾರ್ಥಪೂರ್ಣವಾದ ಬ್ರಾಹ್ಮಣನ ಮಾತನ್ನು ಕೇಳಿ, ಆ ಅದೃಶ್ಯವಾಣಿಯು ''ಹಾಗೇ ಆಗಲಿ'' ಎಂದು ನುಡಿಯಿತು. ಇವನ ಘೋರಪಾಪಗಳನ್ನು ನೋಡಿಯೂ, ಇವನಿಗೆ ತಕ್ಕ ಶಾಪವನ್ನು ನಾನು ಕೊಟ್ಟಿರುವೆನು. ಆದರೆ ನಿನ್ನ ಸಾಧುತ್ವವನ್ನು ನೋಡಿ, ಸರಳವಚನಗಳನ್ನು ಗಮನಿಸಿ, ''ಎಲೈ ಬ್ರಾಹ್ಮಣನೇ! ಕ್ಷಮಾಶೀಲನೂ, ಪರೋಪಕಾರಿಯೂ ಆದವನ ಮೇಲೆ ಖರಾರಿಯಾದ ಶ್ರೀರಾಮನಂತೆ ನಾನು ಕೃಪೆಯನ್ನು ತೋರುವೆನು. ನನ್ನ ಶಾಪವು ವ್ಯರ್ಥವಾಗದು. ಇವನಿಗೆ ಸಾವಿರಜನ್ಮಗಳು ತಪ್ಪವು. ಆದರೆ ಜನನ-ಮರಣ ದುಃಖಗಳು ಇವನಿಗೆ ಬಾಧಿಸವು. ಯಾವ ಜನ್ಮದಲ್ಲಿಯೂ ಈತನ ಜ್ಞಾನವು ಅಳಿಯದು'' ಎಂದು ಪುನಃ ಆ ಅದೃಶ್ಯವಾಣಿ ನನ್ನೊಡನೆ (ಭುಶುಂಡಿಯಲ್ಲಿ) ಇಂತೆಂದಿತು. ''ಎಲೈ ಶೂದ್ರನೇ! ನನ್ನ ಪ್ರಾಮಾಣಿಕ ವಚನಗಳನ್ನು ಕೇಳು. ಈಗ ನಿನ್ನ ಜನ್ಮವು ಶ್ರೀರಘುನಾಥನ (ಅಯೋಧ್ಯಾ) ನಗರದಲ್ಲಾಯಿತು. ಮತ್ತೆ ನೀನು ನನ್ನ ಸೇವೆಯಲ್ಲಿ ಮನಸ್ಸಿಟ್ಟೆ. ನಗರಪ್ರಭಾವದಿಂದ, ನನ್ನ ಅನುಗ್ರಹದಿಂದ ನಿನ್ನ ಹೃದಯದಲ್ಲಿ ರಾಮಭಕ್ತಿಯು ಉದಯಿಸುವುದು. ನನ್ನ ವಚನಗಳು ಸತ್ಯವು. ವತ್ಸಾ! ಬ್ರಾಹ್ಮಣಸೇವೆಯೇ ಶ್ರೀಹರಿಯನ್ನು ಒಲಿಸುವ ವ್ರತವಾಗಿದೆ. ಇನ್ನು ಎಂದೂ ಬ್ರಾಹ್ಮಣರನ್ನು ಅಪಮಾನ ಮಾಡಬೇಡ. ಸಂತರು ಭಗವಂತನಿಗೆ ಸಮಾನರೆಂದು ತಿಳಿ. ಇಂದ್ರನ ವಜ್ರಾಯುಧದಿಂದಾಗಲೀ, ನನ್ನ ತ್ರಿಶೂಲದಿಂದಾಗಲೀ, ಕಾಲನ ದಂಡದಿಂದಾಗಲೀ, ಶ್ರೀಹರಿಯ ಕರಾಳಚಕ್ರದಿಂದಾಗಲೀ ಸಾಯದವನು ವಿಪ್ರದ್ರೋಹವೆಂಬ ಅಗ್ನಿಯಲ್ಲಿ ಸುಟ್ಟು ಬೂದಿಯಾಗುವನು. ಈ ವಿವೇಕವನ್ನು ಮನಸ್ಸಿನಲ್ಲಿ ಇರಿಸಿಕೊಂಡಿರು. ಮತ್ತೆ ನಿನಗೆ ಪ್ರಪಂಚದಲ್ಲಿ ದುರ್ಲಭವಾದುದು ಯಾವುದೂ ಇರದು. ಇನ್ನೊಂದು ವರವನ್ನು ನಿನಗೆ ಕೊಡುತ್ತೇನೆ. – ನನ್ನ ಆಶೀರ್ವಾದದಿಂದ ನೀನು ಎಲ್ಲಿಗೆ ಹೋಗಬಯಸಿದರೆ ಅಲ್ಲಿಗೆ ಅಡೆತಡೆಯಿಲ್ಲದೆ ಹೋಗಬಲ್ಲೆ. ನಿನಗೆ ಅಪ್ರತಿಹತವಾದ ಗತಿ ಉಂಟಾಗಲಿ.'' (ಚೌ/೧-೮)

**ದೋ – ಸುನಿ ಸಿವ ಬಚನ ಹರಷಿ ಗುರ ಏವಮಸ್ತು ಇತಿ ಭಾಷಿ।**
**ಮೋಹಿ ಪ್ರಬೋಧಿ ಗಯಉ ಗೃಹ ಸಂಭು ಚರನ ಉರ ರಾಖಿ॥೧೦೯(ಕ)॥**
**ಪ್ರೇರಿತ ಕಾಲ ಬಿಂಧಿ ಗಿರಿ ಜಾಇ ಭಯಉಂ ಮೈಂ ಬ್ಯಾಲ।**
**ಪುನಿ ಪ್ರಯಾಸ ಬಿನು ಸೋ ತನು ತಜೆಉಂ ಗಏಂ ಕಛು ಕಾಲ॥೧೦೯(ಖ)॥**
**ಜೋಇ ತನು ಧರಉಂ ತಜಉಂ ಪುನಿ ಅನಾಯಾಸ ಹರಿಜಾನ।**
**ಜಿಮಿ ನೂತನ ಪಟ ಪಹಿರಇ ನರ ಪರಿಹರಇ ಪುರಾನ॥೧೦೯(ಗ)॥**
**ಸಿವ್ ರಾಖೀ ಶ್ರುತಿ ನೀತಿ ಅರು ಮೈಂ ನಹಿಂ ಪಾವಾ ಕ್ಲೇಸ।**
**ಏಹಿ ಬಿಧಿ ಧರೆಉಂ ಬಿಬಿಧಿ ತನು ಗ್ಯಾನ ನ ಗಯಉ ಖಗೇಸ॥೧೦೯(ಘ)॥**

ಆಕಾಶವಾಣಿಯ ಮೂಲಕ ಪರಶಿವನ ವಚನಗಳನ್ನು ಕೇಳಿ, ಗುರುಗಳು ಹರ್ಷಿತರಾಗಿ 'ಹಾಗೇ ಆಗಲಿ' ಎಂದು ಹೇಳಿ, ನನ್ನನ್ನು ಅನೇಕವಿಧದಿಂದ ಸಮಜಾಯಿಸಿ, ಅವರು ಶಿವನ ಚರಣಗಳನ್ನು ಸ್ಮರಿಸುತ್ತಾ ತಮ್ಮ ಮನೆಗೆ ಮರಳಿದರು. ವಿಧಿಪ್ರೇರಿತನಾದ ನಾನು ವಿಂಧ್ಯಾಚಲದಲ್ಲಿ ಅಜಗರನಾದೆ. ಅನಂತರ ಕೊಂಚಕಾಲದ ಬಳಿಕ ಅನಾಯಾಸವಾಗಿ ನಾನು ಆ ಶರೀರವನ್ನು ತ್ಯಜಿಸಿದೆನು. ಓ ಹರಿವಾಹನಾ! ನಾನು ಧರಿಸಿದ ಶರೀರಗಳನ್ನು ಮನುಷ್ಯರು ಹಳೆಯ ವಸ್ತ್ರವನ್ನು ತೊರೆದು ಹೊಸವಸ್ತ್ರವನ್ನು ತೊಡುವಂತೆ ಅನಾಯಾಸವಾಗಿ, ಸಲೀಲವಾಗಿ ಕಳಚುತ್ತಿದ್ದೆ. ಈ ವಿಧವಾಗಿ ಶಿವನು ವೇದಮರ್ಯಾದೆಯನ್ನು ಕಾಪಾಡಿದನು. ಮತ್ತೆ ನನಗೆ ಕ್ಲೇಶವೂ ಉಂಟಾಗಲಿಲ್ಲ. ಓ ಪಕ್ಷಿರಾಜಾ! ನಾನು ಅನೇಕ ಶರೀರಗಳನ್ನು ಧರಿಸಿದೆ. ಆದರೆ ನನ್ನ ಜ್ಞಾನವು ಲುಪ್ತವಾಗಲಿಲ್ಲ. (ದೋ/೧೦೯ ಕ, ಖ, ಗ, ಘ)

**ಚೌ – ತ್ರಿಜಗ ದೇವ ನರ ಜೋಇ ತನು ಧರಊಂ। ತಹಂ ತಹಂ ರಾಮ ಭಜನ ಅನುಸರಊಂ॥**
**ಏಕ ಸೂಲ ಮೋಹಿ ಬಿಸರ ನ ಕಾಊ। ಗುರ ಕರ ಕೋಮಲ ಸೀಲ ಸುಭಾಊ॥೧॥**

ಚರಮ ದೇಹ ದ್ವಿಜ ಕೈ ಮೈಂ ಪಾಈ। ಸುರ ದುರ್ಲಭ ಪುರಾನ ಶ್ರುತಿ ಗಾಈ॥
ಖೇಲಉಂ ತಹೂಂ ಬಾಲಕನ್ಹ ಮೀಲಾ। ಕರಉಂ ಸಕಲ ರಘುನಾಯಕ ಲೀಲಾ ॥ ೨ ॥
ಪ್ರೌಢ ಭಏಂ ಮೋಹಿ ಪಿತಾ ಪಢಾವಾ। ಸಮುಝುಉಂ ಸುನಉಂ ಗುನಉಂ ನಹಿಂ ಭಾವಾ॥
ಮನ ತೇ ಸಕಲ ಬಾಸನಾ ಭಾಗೀ। ಕೇವಲ ರಾಮ ಚರನ ಲಯ ಲಾಗೀ॥ ೩ ॥
ಕಹು ಖಗೇಸ ಅಸ ಕವನ ಅಭಾಗೀ। ಖರೀ ಸೇವ ಸುರಧೇನುಹಿ ತ್ಯಾಗೀ॥
ಪ್ರೇಮ ಮಗನ ಮೋಹಿ ಕಛು ನ ಸೋಹಾಈ। ಹಾರೆಉ ಪಿತಾ ಪಢಾಇ ಪಢಾಈ॥ ೪ ॥
ಭಏ ಕಾಲಬಸ ಜಬ ಪಿತು ಮಾತಾ। ಮೈಂ ಬನ ಗಯಉಂ ಭಜನ ಜನತ್ರಾತಾ॥
ಜಹಂ ಜಹಂ ಬಿಪಿನ ಮುನೀಸ್ವರ ಪಾವಉಂ। ಆಶ್ರಮ ಜಾಇ ಜಾಇ ಸಿರು ನಾವಉಂ॥ ೫ ॥
ಬೂಝುಉಂ ತಿನ್ಹಹಿ ರಾಮ ಗುನ ಗಾಹಾ। ಕಹಹಿಂ ಸುನಉಂ ಹರಷಿತ ಖಗನಾಹಾ॥
ಸುನತ ಫಿರಉಂ ಹರಿ ಗುನ ಅನುಬಾದಾ। ಅಬ್ಯಾಹತ ಗತಿ ಸಂಭು ಪ್ರಸಾದಾ॥ ೬ ॥
ಛೂಟೀ ತ್ರಿಬಿಧಿ ಈಷನಾ ಗಾಢೀ। ಏಕ ಲಾಲಸಾ ಉರ ಅತಿ ಬಾಢೀ॥
ರಾಮ ಚರನ ಬಾರಿಜ ಜಬ ದೇಖೌಂ। ತಬ ನಿಜ ಜನ್ಮ ಸಫಲ ಕರಿ ಲೇಖೌಂ॥ ೭ ॥
ಜೆಹಿ ಪೂಂಛಉಂ ಸೋಇ ಮುನಿ ಅಸ ಕಹಈ। ಈಸ್ವರ ಸರ್ಬ ಭೂತಮಯ ಅಹಈ॥
ನಿರ್ಗುನ ಮತ ನಹಿಂ ಮೋಹಿ ಸೋಹಾಈ। ಸಗುನ ಬ್ರಹ್ಮ ರತಿ ಉರ ಅಧಿಕಾಈ॥ ೮ ॥

ದೇವತೆಗಳ, ಮನುಷ್ಯರ ಜನ್ಮವೆತ್ತಿದರೂ ಪಶು-ಪಕ್ಷಿಯಾಗಿ ಹುಟ್ಟಿದರೂ ನಾನು ಶ್ರೀರಾಮನ ಭಜನೆಯನ್ನು ಮಾತ್ರ ಬಿಡಲಿಲ್ಲ. ಇದರಿಂದ ನಾನು ಸುಖಿಯಾದೆ. ಆದರೆ ಒಂದು ವಿಷಯ ಮಾತ್ರ ನನ್ನನ್ನು ಶೂಲದಂತೆ ಭಾಧಿಸುತ್ತಿತ್ತು. ಗುರುಗಳ ಕೋಮಲ, ಸುಶೀಲ ಸ್ವಭಾವವನ್ನು ನಾನು ಎಂದೂ ಮರೆಯಲೇ ಇಲ್ಲ. ನಾನು ಕೊನೆಯದಾಗಿ ಶ್ರುತಿ-ಪುರಾಣಗಳು ದೇವದುರ್ಲಭವೆಂದು ಕೊಂಡಾಡುವ ಬ್ರಾಹ್ಮಣಶರೀರವನ್ನು ಪಡೆದೆ. ಆ ದ್ವಿಜದೇಹದಲ್ಲಿಯೂ ಶ್ರೀರಾಮನ ವಿಶಿಷ್ಟಲೀಲೆಗಳನ್ನು ಸ್ಮರಿಸುತ್ತಾ ಬಾಲಕರೊಡನೆ ಆಡುತ್ತಿದ್ದೆ. ವಿದ್ಯಾವಯಸ್ಸಿಗನುಗುಣವಾಗಿ ತಂದೆಯವರು ನನಗೆ ಲೌಕಿಕ ವಿದ್ಯೆಯನ್ನು ಓದಿಸತೊಡಗಿದರು. ನಾನು ಅರ್ಥಮಾಡಿಕೊಳ್ಳುತ್ತಿದ್ದೆ. ಆಲಿಸುತ್ತಿದ್ದೆ, ಯೋಚಿಸುತ್ತಿದ್ದೆ. ಆದರೆ ನನಗೆ ಓದು ಹಿಡಿಸಲಿಲ್ಲ. ನನ್ನ ಮನಸ್ಸಿನಿಂದ ಎಲ್ಲ ಸಾಂಸಾರಿಕ ವಾಸನೆಗಳೂ ಓಡಿಹೋದುವು. ಕೇವಲ ಶ್ರೀರಾಮನ ಚರಣಸೇವೆಯಲ್ಲೇ ನನ್ನ ಮನಸ್ಸು ಸಂಲಗ್ನವಾಯಿತು. ವೈನತೇಯಾ! ನೀನೇ ಹೇಳು; ಕಾಮಧೇನುವನ್ನು ತೊರೆದು ಹೆಣ್ಣುಕತ್ತೆಯನ್ನು ಸೇವಿಸುವ ನಿರ್ಭಾಗ್ಯನು ಯಾರಾದರೂ ಇರುವನೇ? ಶ್ರೀರಾಮನ ಪ್ರೇಮದಲ್ಲಿ ಮುಳುಗಿದ ನನಗೆ ಯಾವುದೂ ರುಚಿಸುತ್ತಿರಲಿಲ್ಲ. ತಂದೆಯವರು ಪಾಠ ಹೇಳಿ-ಹೇಳಿ ಬೇಸರಗೊಂಡರು. ನನ್ನ ತಂದೆ-ತಾಯಿಯವರು ಕಾಲವಾದ ಬಳಿಕ ಭಕ್ತರಕ್ಷಕನಾದ ಶ್ರೀರಾಮನನ್ನು ಭಜಿಸಲು ನಾನು ಕಾಡಿಗೆ ಹೊರಟುಹೋದೆ. ಅಲ್ಲಿ ಪ್ರತಿಯೋರ್ವ ಮುನೀಶ್ವರರನ್ನು ದರ್ಶಿಸಿದೆ. ವಿನಮ್ರನಾಗಿ ಅವರಿಗೆ ನಮಸ್ಕರಿಸಿದೆ. ಗರುಡಾ! ಅವರಲ್ಲಿ ಶ್ರೀರಾಮನ ಕಥೆಯನ್ನು ಹೇಳುವಂತೆ ವಿನಂತಿಸುತ್ತಿದ್ದೆ. ಅವರು ಹೇಳುತ್ತಿದ್ದರು. ನಾನು ಕೇಳಿ ಆನಂದಪಡುತ್ತಿದ್ದೆ. ಈ ವಿಧವಾಗಿ ನಾನು ಸದಾಕಾಲ ಶ್ರೀಹರಿಯ ಗುಣಗಾನವನ್ನು ಕೇಳಿ ಆ ವನಗಳಲ್ಲಿ, ಶಿವಾನುಗ್ರಹದಿಂದ ನಿರಾತಂಕವಾಗಿ ತಿರುಗುತ್ತಿದ್ದೆ. ಪುತ್ರ, ಧನ, ಕೀರ್ತಿ ಎಂಬ ಈಷಣತ್ರಯಗಳು, ಆಳವಾದ ಪ್ರಬಲವಾಸನೆಗಳು ನನ್ನಿಂದ ಓಡಿಹೋದುವು. ಹೃದಯದಲ್ಲಿ ಎಂದು ಶ್ರೀರಾಮನ ಚರಣಕಮಲಗಳನ್ನು ಕಂಡೇನೋ, ಜನ್ಮಸಾರ್ಥಕಮಾಡಿಕೊಂಡೇನೋ ಎಂಬ ಒಂದೇ ಬಯಕೆ ತೀವ್ರವಾಗಿತ್ತು. ನಾನು ಯಾವ ಮುನೀಶ್ವರರನ್ನು ಕೇಳಿದರೂ ''ಈಶ್ವರನು ಸರ್ವಭೂತಮಯ' ಎಂದು ಹೇಳುತ್ತಿದ್ದರು. ಆದರೆ ಈ ನಿರ್ಗುಣಮತವು ನನಗೆ ಮೆಚ್ಚುತ್ತಿರಲಿಲ್ಲ. ಹೃದಯದಲ್ಲಿ ಸಗುಣಬ್ರಹ್ಮನ ಕುರಿತು ಪ್ರೀತಿ ಉತ್ಕಟವಾಗಿ ಬೆಳೆಯುತ್ತಿತ್ತು. (ಚೌ/೧-೮)

ದೋ – ಗುರ ಕೇ ಬಚನ ಸುರತಿ ಕರಿ ರಾಮ ಚರನ ಮನು ಲಾಗ।
ರಘುಪತಿ ಜಸ ಗಾವತ ಫಿರಉಂ ಛನ ಛನ ನವ ಅನುರಾಗ ॥ ೧೧೦(ಕ)॥
ಮೇರು ಸಿಖರ ಬಟ ಛಾಯಾಂ ಮುನಿ ಲೋಮಸ ಆಸೀನ।
ದೇಖಿ ಚರನ ಸಿರು ನಾಯಉಂ ಬಚನ ಕಹೆಉಂ ಅತಿ ದೀನ ॥ ೧೧೦(ಖ)॥
ಸುನಿ ಮಮ ಬಚನ ಬಿನೀತ ಮೃದು ಮುನಿ ಕೃಪಾಲ ಖಗರಾಜ।
ಮೋಹಿ ಸಾದರ ಪೂಂಛತ ಭಏ ದ್ವಿಜ ಆಯಹು ಕೆಹಿ ಕಾಜ ॥ ೧೧೦(ಗ)॥

**ತಬ ಮೈಂ ಕಹಾ ಕೃಪಾನಿಧಿ ತುಮ್ಹ ಸರ್ಬಗ್ಯ ಸುಜಾನ।**
**ಸಗುನ ಬ್ರಹ್ಮ ಅವರಾಧನ ಮೋಹಿ ಕಹಹು ಭಗವಾನ ॥ ೧೧೦(ಘ)॥**

ಗುರುಗಳ ವಚನವನ್ನು ಸ್ಮರಿಸುತ್ತಲೇ ನನ್ನ ಮನಸ್ಸು ಶ್ರೀರಾಮನ ಚರಣಗಳಲ್ಲಿ ಸಂಲಗ್ನವಾಗುತ್ತಿತ್ತು. ನಾನು ಕ್ಷಣ-ಕ್ಷಣಕ್ಕೂ ನವೋನವ ಅನುರಾಗವನ್ನು ಪಡೆಯುತ್ತಾ ಶ್ರೀರಘುನಾಥನ ಯಶೋಗಾಥೆಯನ್ನು ಕೀರ್ತಿಸುತ್ತಾ ಸಂಚರಿಸುತ್ತಿದ್ದೆ. ಕ್ರಮ-ಕ್ರಮವಾಗಿ ನನ್ನಲ್ಲಿ ಶ್ರೀರಾಮನ ಮೇಲಿನ ಭಕ್ತಿಯು ಪ್ರಗಾಢವಾಗುತ್ತಾ ಹೋಯಿತು. ಸುಮೇರುಪರ್ವತದ ಶಿಖರದಲ್ಲಿ ಒಂದು ವಟವೃಕ್ಷದ ಛಾಯೆಯಲ್ಲಿ ಕುಳಿತಿರುವ ಲೋಮಶಮುನಿಯನ್ನು ನೋಡಿ, ಆತನ ಪಾದಗಳಿಗೆ ನಮಸ್ಕರಿಸಿ, ಸವಿನಯವಾಗಿ ದೀನನಾಗಿ ಪ್ರಾರ್ಥಿಸಿದೆ. ಓ ಖಗರಾಜಾ! ನನ್ನ ವಿನಮ್ರವಚನಗಳನ್ನು ಕೇಳಿ, ದಯಾಳುಗಳಾದ ಆ ಮುನಿಗಳು ಕೇಳಿದರು – ''ಓ ಬ್ರಾಹ್ಮಣೋತ್ತಮಾ! ನೀವು ಯಾವ ಕಾರ್ಯಕ್ಕಾಗಿ ಇಲ್ಲಿಗೆ ಬಂದಿರುವಿರಿ?'' ಆಗ ನಾನೆಂದೆ – ಕೃಪಾನಿಧಿಗಳೇ! ನೀವು ಸರ್ವಜ್ಞರು, ಸಜ್ಜನರಾಗಿರುವಿರಿ. ನನಗೆ ಸಗುಣ ಬ್ರಹ್ಮೋಪಾಸನೆಯ ಪ್ರಕ್ರಿಯೆಯನ್ನು ತಿಳಿಸಿರಿ. (ದೋ/೧೧೦ ಕ, ಖ, ಗ, ಘ)

**ಚೌ – ತಬ ಮುನೀಸ ರಘುಪತಿ ಗುನ ಗಾಥಾ। ಕಹೇ ಕಛುಕ ಸಾದರ ಖಗನಾಥಾ॥**
**ಬ್ರಹ್ಮಗ್ಯಾನ ರತ ಮುನಿ ಬಿಗ್ಯಾನೀ। ಮೋಹಿ ಪರಮ ಅಧಿಕಾರೀ ಜಾನೀ॥ ೧ ॥**
**ಲಾಗೇ ಕರನ ಬ್ರಹ್ಮ ಉಪದೇಸಾ। ಅಜ ಅದ್ವೈತ ಅಗುನ ಹೃದಯೇಸಾ॥**
**ಅಕಲ ಅನೀಹ ಅನಾಮ ಅರೂಪಾ। ಅನುಭವ ಗಮ್ಯ ಅಖಂಡ ಅನೂಪಾ॥ ೨ ॥**
**ಮನ ಗೋತೀತ ಅಮಲ ಅಬಿನಾಸೀ। ನಿರ್ಬಿಕಾರ ನಿರವಧಿ ಸುಖ ರಾಸೀ॥**
**ಸೋ ತೈಂ ತಾಹಿ ತೋಹಿ ನಹಿಂ ಭೇದಾ। ಬಾರಿ ಬೀಚಿ ಇವ ಗಾವಹಿಂ ಬೇದಾ॥ ೩ ॥**
**ಬಿಬಿಧಿ ಭಾಂತಿ ಮೊಹಿ ಮುನಿ ಸಮುಝಾವಾ। ನಿರ್ಗುನ ಮತ ಮಮ ಹೃದಯ್ಂ ನ ಆವಾ॥**
**ಪುನಿ ಮೈಂ ಕಹೆಉಂ ನಾಇ ಪದ ಸೀಸಾ। ಸಗುನ ಉಪಾಸನ ಕಹಹು ಮುನೀಸಾ॥ ೪ ॥**
**ರಾಮ ಭಗತಿ ಜಲ ಮಮ ಮನ ಮೀನಾ। ಕಿಮಿ ಬಿಲಗಾಇ ಮುನೀಸ ಪ್ರಬೀನಾ॥**
**ಸೋಇ ಉಪದೇಸ ಕಹಹು ಕರಿ ದಾಯಾ। ನಿಜ ನಯನನ್ಹಿ ದೇಖೌಂ ರಘುರಾಯಾ॥ ೫ ॥**
**ಭರಿ ಲೋಚನ ಬಿಲೋಕಿ ಅವಧೇಸಾ। ತಬ ಸುನಿಹಉಂ ನಿರ್ಗುನ ಉಪದೇಸಾ॥**
**ಮುನಿ ಪುನಿ ಕಹಿ ಹರಿಕಥಾ ಅನೂಪಾ। ಖಂಡಿ ಸಗುನ ಮತ ಅಗುನ ನಿರೂಪಾ॥ ೬ ॥**
**ತಬ ಮೈಂ ನಿರ್ಗುನ ಮತ ಕರ ದೂರೀ। ಸಗುನ ನಿರೂಪಉಂ ಕರಿ ಹಠ ಭೂರೀ॥**
**ಉತ್ತರ ಪ್ರತಿಉತ್ತರ ಮೈಂ ಕೀನ್ಹಾ। ಮುನಿ ತನ ಭಏ ಕ್ರೋಧ ಕೇ ಚೀನ್ಹಾ॥ ೭ ॥**
**ಸುನು ಪ್ರಭು ಬಹುತ ಅವಗ್ಯಾ ಕಿಏಂ। ಉಪಜ ಕ್ರೋಧ ಗ್ಯಾನಿನ್ಹ ಕೇ ಹಿಏಂ॥**
**ಅತಿ ಸಂಘರಷನ ಜೌಂ ಕರ ಕೋಈ। ಅನಲ ಪ್ರಗಟ ಚಂದನ ತೇ ಹೋಈ॥ ೮ ॥**

ಓ ಖಗರಾಜಾ! ಆಗ ಆ ಮುನೀಶ್ವರರು ಶ್ರೀರಘುನಾಥನ ಗುಣವೈಭವದ ಕುರಿತು ಅನೇಕ ಕಥೆಗಳನ್ನು ಆದರದಿಂದ ಹೇಳಿದರು. ಮತ್ತೆ ಬ್ರಹ್ಮಜ್ಞಾನತತ್ಪರರೂ, ಬ್ರಹ್ಮಜ್ಞಾನದಲ್ಲಿ ಮುಳುಗಿದವರೂ ಆದ ಮುನಿಗಳು ನನ್ನನ್ನು ತಕ್ಕ ಅಧಿಕಾರಿ ಎಂದು ತಿಳಿದು, ಬ್ರಹ್ಮೋಪದೇಶ ಮಾಡತೊಡಗಿದರು. ''ಪರಬ್ರಹ್ಮನು ಜನ್ಮರಹಿತನೂ, ಅದ್ವಿತೀಯನೂ, ನಿರ್ಗುಣನೂ, ಎಲ್ಲರ ಹೃದಯದಲ್ಲಿರುವವನು (ಅಂತರ್ಯಾಮಿ) ಆಗಿರುವನು. ಅವನನ್ನು ಬುದ್ಧಿಯಿಂದ ಯಾರೂ ಅಳೆಯಲಾರರು. ಅವನು ಇಚ್ಛಾರಹಿತನೂ, ನಾಮರೂಪರಹಿತನೂ, ಅನುಭವೈಕವೇದ್ಯನೂ, ಅಖಂಡನೂ, ನಿರುಪಮನೂ ಆಗಿರುವನು. ಅವನು ಮನಸ್ಸು ಇಂದ್ರಿಯಗಳಿಗೆ ಅತೀತನೂ, ನಿರ್ಮಲನೂ, ನಾಶರಹಿತನೂ, ನಿರವಧಿಕನೂ, ಸುಖನಿಧಾನನೂ ಆಗಿರುವನು. ನೀರಿಗೂ, ನೀರಿನ ಅಲೆಗಳಿಗೂ ಭೇದವಿಲ್ಲದಂತೆ, ಆತನಿಗೂ ನಿನಗೂ ಭೇದವೇ ಇಲ್ಲ. ಅವನೇ ನೀನಾಗಿರುವೆ (ತತ್ತ್ವಮಸಿ) ಎಂದು ವೇದಗಳು ಹೇಳುತ್ತವೆ.'' ಹೀಗೆ ಲೋಮಶರು ನನಗೆ ಅನೇಕ ವಿಧದಿಂದ ಬೋಧಿಸಿದರು. ಆದರೆ ನಿರ್ಗುಣ ಬ್ರಹ್ಮನಲ್ಲಿ ನನ್ನ ಮನಸ್ಸು ನಿಲ್ಲದು. ಮುನಿಗಳ ಚರಣಗಳಿಗೆರಗಿ ನಾನು ಇಂತೆಂದೆನು. ''ಮುನೀಶ್ವರರೇ! ನನಗೆ ಸಗುಣೋಪಾಸನೆಯ ಕುರಿತು ಹೇಳಿರಿ. ಏಕೆಂದರೆ, ಶ್ರೀರಾಮನ ಭಕ್ತಿರೂಪೀ ಜಲದಲ್ಲಿ ನನ್ನ ಮನಸ್ಸು ಮೀನಿನಂತಿದೆ. ಪ್ರಾಜ್ಞರಾದ ಮುನೀಶ್ವರರೇ! ಇಂತಹ ಸ್ಥಿತಿಯಲ್ಲಿ ಅದು ಅದರಿಂದ ಹೇಗೆ ಬೇರಾಗಬಲ್ಲದು? ಆದ್ದರಿಂದ ದಯಮಾಡಿ ಶ್ರೀರಘುನಾಥನನ್ನು ದರ್ಶಿಸುವಂತಹ ಉಪದೇಶವನ್ನು ನೀಡಿರಿ. ಮೊದಲು ಅಯೋಧ್ಯಾಪತಿಯಾದ ಶ್ರೀರಘುವೀರನನ್ನು ಕಣ್ಣಾರೆಕಂಡು, ಬಳಿಕ ನಿರ್ಗುಣಬ್ರಹ್ಮನ ಕುರಿತು ಉಪದೇಶವನ್ನು ಕೇಳುವೆನು.'' ನಾನಿಂತು ಹೇಳಲು ಆ ಮಹಾಮುನಿಗಳು ಪುನಃ ನಿರುಪಮಾನವಾದ ಶ್ರೀಹರಿಕಥೆಯನ್ನು

ಹೇಳಿ, ಸಗುಣಮತವನ್ನು ಖಂಡಿಸಿ, ನಿರ್ಗುಣದ ನಿರೂಪಣೆಯನ್ನು ಗೈದರು. ಆಗ ನಾನು ನಿರ್ಗುಣಮತವನ್ನು ಬದಿಗೊತ್ತಿ, ಪಟ್ಟುಹಿಡಿದು ಸಗುಣಮಾರ್ಗವನ್ನು ಪ್ರತಿಪಾದಿಸತೊಡಗಿದೆ. ನಾನು ಉತ್ತರ-ಪ್ರತ್ಯುತ್ತರ ನೀಡತೊಡಗಿದೆ. ಇದರಿಂದ ಮುನಿಯ ಶರೀರದಲ್ಲಿ ಕ್ರೋಧದ ಚಿಹ್ನೆಗಳು ತಲೆದೋರಿದವು. ಪ್ರಭೂ! ಆಲಿಸಿರಿ. ತುಂಬಾ ಅವಮಾನಕ್ಕೆ ಗುರಿಯಾದರೆ ಜ್ಞಾನಿಗಳ ಹೃದಯದಲ್ಲಿಯೂ ಕ್ರೋಧ ಉಂಟಾಗುತ್ತದೆ. ಚಂದನದ ಕೊರಡನ್ನು ಕೂಡ ತುಂಬಾ ತೀಡಿದರೆ ಅದರಿಂದಲೂ ಬೆಂಕಿ ಪ್ರಕಟವಾಗುತ್ತದೆ. (ಚೌ/೧-೮)

**ದೋ – ಬಾರಂಬಾರ ಸಕೋಪ ಮುನಿ ಕರಇ ನಿರೂಪನ ಗ್ಯಾನ।**
**ಮೈಂ ಅಪನೇಂ ಮನ ಬೈಠ ತಬ ಕರಉಂ ಬಿಬಿಧಿ ಅನುಮಾನ॥ ೧೧೧(ಕ)॥**
**ಕ್ರೋಧ ಕಿ ದ್ವೈತಬುದ್ಧಿ ಬಿನು ದ್ವೈತ ಕಿ ಬಿನು ಅಗ್ಯಾನ।**
**ಮಾಯಾಬಸ ಪರಿಛಿನ್ನ ಜಡ ಜೀವ ಕಿ ಈಸ ಸಮಾನ॥ ೧೧೧(ಖ)॥**

ಮುನೀಶ್ವರರು ಮತ್ತೆ-ಮತ್ತೆ ಕ್ರುದ್ಧರಾಗಿ ಜ್ಞಾನದ ನಿರೂಪಣ ಮಾಡತೊಡಗಿದರು. ಆಗ ನಾನು ಕುಳಿತುಕೊಂಡೇ ಮನಸ್ಸಿನಲ್ಲಿ ಅನೇಕ ರೀತಿಯ ಊಹಾಪೋಹ ಮಾಡತೊಡಗಿದೆ. 'ದ್ವೈತಬುದ್ಧಿ ಇಲ್ಲದೆ ಕ್ರೋಧವೆಂತು? ಅಜ್ಞಾನವಿಲ್ಲದೆಯೇ ದ್ವೈತಬುದ್ಧಿ ಹೇಗೆ ಬಂದಿತು? ಮಾಯೆಗೆ ವಶನಾಗಿರುವ ಪರಿಚ್ಛಿನ್ನ ಜಡಜೀವನು ಈಶನಿಗೆ ಸಮನಾಗಬಲ್ಲನೇ? (ದೋ/೧೧೧ ಕ, ಖ)

**ಚೌ – ಕಬಹುಂ ಕಿ ದುಖ ಸಬ ಕರ ಹಿತ ತಾಕೇಂ। ತೆಹಿ ಕಿ ದರಿದ್ರ ಪರಸ ಮನಿ ಜಾಕೇಂ॥**
**ಪರದ್ರೋಹೀ ಕೀ ಹೋಹಿಂ ನಿಸಂಕಾ। ಕಾಮೀ ಪುನಿ ಕಿ ರಹಹಿಂ ಅಕಲಂಕಾ॥ ೧॥**
**ಬಂಸ ಕಿ ರಹ ದ್ವಿಜ ಅನಹಿತ ಕೀನ್ಹೇಂ। ಕರ್ಮ ಕಿ ಹೋಹಿಂ ಸ್ವರೂಪಹಿ ಚೀನ್ಹೇಂ॥**
**ಕಾಹೂ ಸುಮತಿ ಕಿ ಖಲ ಸಂಗ ಜಾಮೀ। ಸುಭ ಗತಿ ಪಾವ ಕಿ ಪರತ್ರಿಯ ಗಾಮೀ॥ ೨॥**
**ಭವ ಕಿ ಪರಹಿಂ ಪರಮಾತ್ಮಾ ಬಿಂದಕ। ಸುಖೀ ಕಿ ಹೋಹಿಂ ಕಬಹುಂ ಹರಿನಿಂದಕ॥**
**ರಾಜು ಕಿ ರಹಇ ನೀತಿ ಬಿನು ಜಾನೇಂ। ಅಘ ಕಿ ರಹಹಿಂ ಹರಿಚರಿತ ಬಖಾನೇಂ॥ ೩॥**
**ಪಾವನ ಜಸ ಕಿ ಪುನ್ಯ ಬಿನು ಹೋಈ। ಬಿನು ಅಘ ಅಜಸ ಕಿ ಪಾವಇ ಕೋಈ॥**
**ಲಾಭು ಕಿ ಕಿಛು ಹರಿ ಭಗತಿ ಸಮಾನಾ। ಜೆಹಿ ಗಾವಹಿಂ ಶ್ರುತಿ ಸಂತ ಪುರಾನಾ॥ ೪॥**
**ಹಾನಿ ಕಿ ಜಗ ಏಹಿ ಸಮ ಕಿಛು ಭಾಈ। ಭಜಿಅ ನ ರಾಮಹಿ ನರ ತನು ಪಾಈ॥**
**ಅಘ ಕಿ ಪಿಸುನತಾ ಸಮ ಕಛು ಆನಾ। ಧರ್ಮ ಕಿ ದಯಾ ಸರಿಸ ಹರಿಜಾನಾ॥ ೫॥**
**ಏಹಿ ಬಿಧಿ ಅಮಿತಿ ಜುಗುತಿ ಮನ ಗುನಊಂ। ಮುನಿ ಉಪದೇಸ ನ ಸಾದರ ಸುನಊಂ॥**
**ಪುನಿ ಪುನಿ ಸಗುನ ಪಚ್ಛ ಮೈ ರೋಪಾ। ತಬ ಮುನಿ ಬೋಲೆಉ ಬಚನ ಸಕೋಪಾ॥ ೬॥**
**ಮೂಢ ಪರಮ ಸಿಖ ದೇಉಂ ನ ಮಾನಸಿ। ಉತ್ತರ ಪ್ರತಿಉತ್ತರ ಬಹು ಆನಸಿ॥**
**ಸತ್ಯ ಬಚನ ಬಿಸ್ವಾಸ ನ ಕರಹೀ। ಬಾಯಸ ಇವ ಸಬಹೀ ತೇ ಡರಹೀ॥ ೭॥**
**ಸಠ ಸ್ವಪಚ್ಛ ತವ ಹೃದಯಂ ಬಿಸಾಲಾ। ಸಪದಿ ಹೋಹಿ ಪಚ್ಛೀ ಚಂಡಾಲಾ॥**
**ಲೀನ್ಹ ಶ್ರಾಪ ಮೈ ಸೀಸ ಚಢಾಈ। ನಹಿಂ ಕಛು ಭಯ ನ ದೀನತಾ ಆಈ॥ ೮॥**

ಇತರರ ಹಿತವನ್ನು ಬಯಸುವವನಿಗೆ ಎಂದಾದರೂ ದುಃಖವಾಗಬಲ್ಲುದೇ? ಪರಶುಮಣಿಯಿರುವವನ ಬಳಿಗೆ ದಾರಿದ್ರ್ಯವು ಸುಳಿಯಬಲ್ಲದೇ? ಬೇರೆಯವರಲ್ಲಿ ವೈರವಿರುವವನು ನಿರ್ಭಯನಾಗುವನೇ? ಕಾಮಿಯಾದವನು ಕಳಂಕರಹಿತನಾಗಬಲ್ಲನೇ? ಬ್ರಾಹ್ಮಣನಿಗೆ ಕೆಟ್ಟದಾಗಿಸಿದವನ ವಂಶ ಉಳಿದೀತೇ? ತನ್ನ (ಆತ್ಮ) ಸ್ವರೂಪವನ್ನು ಅರಿತವನು ಕರ್ಮಗಳಲ್ಲಿ ಆಸಕ್ತನಾಗುವನೇ? ದುಷ್ಟರ ಸಂಗದಿಂದ ಯಾರಿಗಾದರೂ ಸುಬುದ್ಧಿ ಉಂಟಾಗಿದೆಯೇ? ಪರಸ್ತ್ರೀಗಮನ ಮಾಡಿದವನಿಗೆ ಸದ್ಗತಿ ಲಭಿಸಿದೆಯೇ? ಪರಮಾತ್ಮ ತತ್ತ್ವವನ್ನು ಅರಿತವನು ಜನನ-ಮರಣರೂಪೀ ಭವದಲ್ಲಿ ಬೀಳುವನೇ? ಭಗವಂತನನ್ನು ನಿಂದಿಸುವವನು ಎಂದಾದರೂ ಸುಖಿಯಾಗಬಲ್ಲನೇ? ನೀತಿ ತಿಳಿಯದೆಯೇ ರಾಜ್ಯವು ಉಳಿದೀತೇ? ಶ್ರೀಹರಿಯ ಚರಿತ್ರೆಗಳನ್ನು ಹಾಡಿದರೆ ಪಾಪಗಳು ಇರಬಲ್ಲುದೇ? ಪುಣ್ಯಕರ್ಮಗಳು ಮಾಡದೆ ಪವಿತ್ರಕೀರ್ತಿಯು ಲಭಿಸುವುದೇ? ಪಾಪಮಾಡದೆ ಅಪಯಶಸ್ಸು ಬರುವುದೇ? ಶ್ರುತಿಗಳು, ಸಂತರು, ಪುರಾಣಗಳು ಕೊಂಡಾಡುವ ಅಪರಿಮಿತ ಮಹಿಮೆಯುಳ್ಳ ಹರಿಭಕ್ತಿಗೆ ಸಮಾನವಾದ

ಲಾಭವು ಬೇರೊಂದಿದೆಯೇ? ಸೋದರಾ! ಪ್ರಪಂಚದಲ್ಲಿ ಮನುಷ್ಯನಾಗಿ ಹುಟ್ಟಿಯೂ ಶ್ರೀರಾಮನನ್ನು ಭಜಿಸದಿರುವುದಕ್ಕಿಂತ ಮಿಗಿಲಾದ ಹಾನಿಯು ಯಾವುದಿದೇ? ಚಾಡಿಹೇಳುವುದಕ್ಕೆ ಸಮಾನವಾದ ಪಾಪ ಬೇರೊಂದಿದೆಯೇ? ದಯೆಗೆ ಸಮಾನವಾದ ಬೇರೆ ಧರ್ಮವಿದೆಯೇ?'' ಹರಿವಾಹನ ಗರುಡನೇ! ಈ ವಿಧವಾಗಿ ನಾನು ಎಣಿಕೆಯಿಲ್ಲದಷ್ಟು ಯುಕ್ತಿಗಳನ್ನು ಕುರಿತು ಮನಸ್ಸಿನಲ್ಲಿ ವಿಚಾರಮಾಡುತ್ತಿದ್ದೆ. ಮುನಿಗಳ ಉಪದೇಶವನ್ನು ಆದರದಿಂದ ಕೇಳುತ್ತಿರಲಿಲ್ಲ. ನಾನು ಪದೇ-ಪದೇ ಸಗುಣಪಕ್ಷವನ್ನು ಸ್ಥಾಪಿಸಿದಾಗ ಮುನಿಗಳು ಕುಪಿತರಾಗಿ ಇಂತು ನುಡಿದರು – ''ಎಲೈ ಮೂಢ! ನಾನು ನಿನಗೆ ಉತ್ತಮೋತ್ತಮವಾದ ಉಪದೇಶಗಳನ್ನು ಕೊಡುತ್ತಿದ್ದೆ. ಆದರೂ ನೀನು ಅದನ್ನು ಒಪ್ಪುತ್ತಿಲ್ಲ. ಅಲ್ಲದೆ ವಿತ್ತಂಡವಾದ ಮಾಡುತ್ತಿದ್ದೀಯೇ. ನಾನು ಆಡಿದ ಸತ್ಯವಚನದಲ್ಲಿ ನಿನಗೆ ನಂಬಿಕೆ ಇಲ್ಲ. ಕಾಗೆಯಂತೆ ಎಲ್ಲರೊಡನೆ ಸಂಶಯಾತ್ಮನಂತೆ ಇರುವೆ. ಎಲವೋ ಮೂರ್ಖ! ನಿನ್ನ ಹೃದಯದಲ್ಲಿ ನಿನ್ನ ಪಕ್ಷದ್ದೇ ದುರಾಗ್ರಹವಿದೆ. ಆದ್ದರಿಂದ ನೀನು ಬೇಗನೇ ಚಾಂಡಾಲಪಕ್ಷಿ (ಕಾಗೆ)ಯಾಗು.'' ನಾನು ಮುನಿಶಾಪವನ್ನು ಸಂತೋಷದಿಂದ ಸ್ವೀಕರಿಸಿದೆ. ಅದರಿಂದ ನನಗೆ ಭಯವಾಗಲೀ, ದೈನ್ಯವಾಗಲೀ ಉಂಟಾಗಲಿಲ್ಲ. (ಚೌ/೧-೮)

**ದೋ – ತುರತ ಭಯಉಁ ಮೈಂ ಕಾಗ ತಬ ಪುನಿ ಮುನಿ ಪದ ಸಿರು ನಾಇ।**
**ಸುಮಿರಿ ರಾಮ ರಘುಬಂಸ ಮನಿ ಹರಷಿತ ಚಲೆಉಁ ಉಡಾಇ॥ ೧೧೨(ಕ)॥**
**ಉಮಾ ಜೆ ರಾಮ ಚರನ ರತ ಬಿಗತ ಕಾಮ ಮದ ಕ್ರೋಧ।**
**ನಿಜ ಪ್ರಭುಮಯ ದೇಖಹಿಂ ಜಗತ ಕೆಹಿ ಸನ ಕರಹಿಂ ಬಿರೋಧ॥ ೧೧೨(ಖ)॥**

ಮುನೀಶ್ವರರ ಶಾಪಪ್ರಭಾವದಿಂದಾಗಿ ನಾನು ಕೂಡಲೇ ಕಾಗೆಯಾದೆ. ಬಳಿಕ ಅವರ ಚರಣಗಳಿಗೆ ನಮಸ್ಕರಿಸಿ, ರಘುಕುಲಶ್ರೇಷ್ಠನಾದ ಶ್ರೀರಾಮನನ್ನು ಸ್ಮರಿಸುತ್ತಾ, ಹರ್ಷಿತನಾಗಿ ಹಾರಿಹೋದೆ. ಶಿವನು ಹೇಳುತ್ತಿದ್ದಾನೆ – ಉಮೆ! ಶ್ರೀರಾಮನ ಚರಣಗಳಲ್ಲಿ ಅನುರಕ್ತನಾದವನು ಕಾಮ, ಮದ, ಕ್ರೋಧ ಮೊದಲಾದವುಗಳಿಂದ ರಹಿತರಾಗಿ, ಜಗತ್ತೆಲ್ಲವೂ ರಾಮಮಯವೆಂದು ನೋಡುವರು. ಮತ್ತೆ ಅವರು ಯಾರ ಮೇಲೆ ವೈರ ತಳೆಯಬೇಕು? (ದೋ/೧೧೨ ಕ, ಖ)

**ಚೌ – ಸುನು ಖಗೇಸ ನಹಿಂ ಕಛು ರಿಷಿ ದೂಷನ। ಉರ ಪ್ರೇರಕ ರಘುಬಂಸ ಬಿಭೂಷನ॥**
**ಕೃಪಾಸಿಂಧು ಮುನಿ ಮತಿ ಕರಿ ಭೋರೀ। ಲೀನ್ಹೀ ಪ್ರೇಮ ಪರಿಚ್ಛಾ ಮೋರೀ॥ ೧ ॥**
**ಮನ ಬಚ ಕ್ರಮ ಮೊಹಿ ನಿಜ ಜನ ಜಾನಾ। ಮುನಿ ಮತಿ ಪುನಿ ಫೇರೀ ಭಗವಾನಾ॥**
**ರಿಷಿ ಮಮ ಮಹತ ಸೀಲತಾ ದೇಖೀ। ರಾಮ ಚರನ ಬಿಸ್ವಾಸ ಬಿಸೇಷೀ॥ ೨ ॥**
**ಅತಿ ಬಿಸಮಯ ಪುನಿ ಪುನಿ ಪಛಿತಾಈ। ಸಾದರ ಮುನಿ ಮೊಹಿ ಲೀನ್ಹ ಬೋಲಾಈ॥**
**ಮಮ ಪರಿತೋಷ ಬಿಬಿಧಿ ಬಿಧಿ ಕೀನ್ಹಾ। ಹರಷಿತ ರಾಮಮಂತ್ರ ತಬ ದೀನ್ಹಾ॥ ೩ ॥**
**ಬಾಲಕರೂಪ ರಾಮ ಕರ ಧ್ಯಾನಾ। ಕಹೆಉ ಮೋಹಿ ಮುನಿ ಕೃಪಾನಿಧಾನಾ॥**
**ಸುಂದರ ಸುಖದ ಮೋಹಿ ಅತಿ ಭಾವಾ। ಸೋ ಪ್ರಥಮಹಿಂ ಮೈಂ ತುಮ್ಹಹಿ ಸುನಾವಾ॥ ೪ ॥**
**ಮುನಿ ಮೊಹಿ ಕಛುಕ ಕಾಲ ತಹಁ ರಾಖಾ। ರಾಮಚರಿತಮಾನಸ ತಬ ಭಾಷಾ॥**
**ಸಾದರ ಮೊಹಿ ಯಹ ಕಥಾ ಸುನಾಈ। ಪುನಿ ಬೋಲೇ ಮುನಿ ಗಿರಾ ಸುಹಾಈ॥ ೫ ॥**
**ರಾಮಚರಿತ ಸರ ಗುಪ್ತ ಸುಹಾವಾ। ಸಂಭು ಪ್ರಸಾದ ತಾತ ಮೈಂ ಪಾವಾ॥**
**ತೊಹಿ ನಿಜ ಭಗತ ರಾಮ ಕರ ಜಾನೀ। ತಾತೇ ಮೈಂ ಸಬ ಕಹೆಉಁ ಬಖಾನೀ॥ ೬ ॥**
**ರಾಮ ಭಗತಿ ಜಿನ್ಹ ಕೇಂ ಉರ ನಾಹೀಂ। ಕಬಹುಁ ನ ತಾತ ಕಹಿಅ ತಿನ್ಹ ಪಾಹೀಂ॥**
**ಮುನಿ ಮೊಹಿ ಬಿಬಿಧಿ ಭಾಂತಿ ಸಮುಝಾವಾ। ಮೈಂ ಸಪ್ರೇಮ ಮುನಿ ಪದ ಸಿರು ನಾವಾ॥ ೭ ॥**
**ನಿಜ ಕರ ಕಮಲ ಪರಸಿ ಮಮ ಸೀಸಾ। ಹರಷಿತ ಆಸಿಷ ದೀನ್ಹ ಮುನೀಸಾ॥**
**ರಾಮ ಭಗತಿ ಅಬಿರಲ ಉರ ತೋರೇಂ। ಬಸಿಹಿ ಸದಾ ಪ್ರಸಾದ ಅಬ ಮೋರೇಂ॥ ೮ ॥**

ಕಾಕಭುಶುಂಡಿಯವರು ಹೇಳಿದರು – ''ಖಗರಾಜ ಗರುಡಾ! ಆಲಿಸು. ಶಾಪಕೊಡುವುದರಲ್ಲಿ ಲೋಮಶರ ತಪ್ಪು ಏನೂ ಇರಲಿಲ್ಲ. ರಘುಕುಲಭೂಷಣ ಶ್ರೀರಾಮನೇ ಎಲ್ಲರ ಹೃದಯದಲ್ಲಿ ಪ್ರೇರಣೆ ನೀಡುವವನು. ಕೃಪಾಸಾಗರ ಪ್ರಭುವು ಮುನಿಯ ಮತಿಯನ್ನು ಮರುಳುಗೊಳಿಸಿ, ನನ್ನ ಪ್ರೇಮವನ್ನು ಪರೀಕ್ಷಿಸಿದನು. ಮನ, ವಚನ, ಕರ್ಮಗಳಿಂದ ಪ್ರಭುವು ನನ್ನನ್ನು ತನ್ನ ದಾಸನೆಂದು ತಿಳಿದು, ಮುನಿಯ ಬುದ್ಧಿಯನ್ನು ಮರಳಿ ಪರಿವರ್ತಿಸಿದನು. ಮುನಿಗಳು ನನ್ನಲ್ಲಿದ್ದ ಸಹನೆ, ಧೈರ್ಯ, ಅಕ್ರೋಧ,

ವಿನಯ, ಶ್ರೀರಾಮನ ಚರಣಗಳಲ್ಲಿ ವಿಶೇಷವಾದ ವಿಶ್ವಾಸವನ್ನು ನೋಡಿದರು. ಮುನಿಯು ಅತಿ ವಿಸ್ಮಿತನಾಗಿ ಮತ್ತೆ-ಮತ್ತೆ ಪಶ್ಚಾತ್ತಾಪಪಟ್ಟನು. ನನ್ನನ್ನು ಪ್ರೇಮಾದರದಿಂದ ಬರಮಾಡಿಕೊಂಡು, ಅನೇಕ ರೀತಿಯಿಂದ ನನ್ನನ್ನು ಸಂತೋಷಗೊಳಿಸಿ, ಪ್ರಸನ್ನಚಿತ್ತರಾಗಿ ನನಗೆ ತಾರಕ (ರಾಮ) ಮಂತ್ರವನ್ನು ಉಪದೇಶಿಸಿದರು. ಕೃಪಾನಿಧಾನರಾದ ಮುನಿಗಳು ನನಗೆ ಬಾಲರೂಪೀ ಶ್ರೀರಾಮನ ಧ್ಯಾನವಿಧಿಯನ್ನು ತಿಳಿಸಿಹೇಳಿದರು. ಸುಂದರವೂ, ಸುಖಪ್ರದವೂ ಆದ ಈ ಧ್ಯಾನವು ನನಗೆ ತುಂಬಾ ಹಿಡಿಸಿತು. ಆ ಧ್ಯಾನವನ್ನು ನಾನು ನಿನಗೆ ಮೊದಲೇ ಹೇಳಿರುವೆನು. ಮುನಿಗಳು ಕೆಲಕಾಲ ನನ್ನನ್ನು ಅಲ್ಲೇ ಇರಿಸಿಕೊಂಡು 'ರಾಮಚರಿತಮಾನಸ'ವನ್ನು ವರ್ಣಿಸಿದರು. ಆದರದಿಂದ ನನಗೆ ಈ ಕಥೆಯನ್ನು ಹೇಳಿ ಅನಂತರ ಅವರು ಸುಂದರ, ಮಧುರ ವಚನಗಳನ್ನು ಆಡಿದರು – ಮಗೂ! ರಹಸ್ಯವಾದ, ಸುಂದರವಾದ ಈ 'ರಾಮಚರಿತಮಾನಸ'ವೆಂಬ ಸರೋವರವನ್ನು ನಾನು ಶಿವನ ಕೃಪೆಯಿಂದ ಹೊಂದಿದೆನು. ನಿನ್ನನ್ನು ನಿಜವಾದ ರಾಮಭಕ್ತನೆಂದರಿತು, ನಿನಗೆ ಈ ಎಲ್ಲ ಚರಿತ್ರೆಯನ್ನು ವಿಸ್ತಾರವಾಗಿ ತಿಳಿಸಿರುವೆ. ಮಗೂ! ಹೃದಯದಲ್ಲಿ ರಾಮಭಕ್ತಿಯಿಲ್ಲದವರ ಮುಂದೆ ಇದನ್ನು ಎಂದೂ ಹೇಳಬಾರದು. ಮುನೀಶ್ವರರು ನನಗೆ ಅನೇಕ ರೀತಿಯಿಂದ ತಿಳಿವಳಿಕೆ ನೀಡಿದರು. ಆಗ ನಾನು ಪ್ರೇಮದಿಂದ ಅವರ ಚರಣಗಳಿಗೆ ಎರಗಿದೆ. ಮುನೀಶ್ವರರು ತಮ್ಮ ಕರಕಮಲವನ್ನು ನನ್ನ ತಲೆಯ ಮೇಲಿರಿಸಿ ಹರ್ಷದಿಂದ – ''ನನ್ನ ಕೃಪೆಯಿಂದ ನಿನ್ನ ಹೃದಯದಲ್ಲಿ ಸದಾಕಾಲ ಶ್ರೀರಾಮಭಕ್ತಿಯು ಪ್ರಗಾಢವಾಗಿರಲಿ'' ಎಂದು ಆಶೀರ್ವದಿಸಿದರು ಹಾಗೂ ಹೇಳಿದರು – (ಚೌ/೧-೮)

**ದೋ – ಸದಾ ರಾಮ ಪ್ರಿಯ ಹೋಹು ತುಮ್ಹ ಸುಭ ಗುನ ಭವನ ಅಮಾನ ।**
**ಕಾಮರೂಪ ಇಚ್ಛಾಮರನ ಗ್ಯಾನ ಬಿರಾಗ ನಿಧಾನ ॥ ೧೧೩(ಕ)॥**
**ಜೆಹಿಂ ಆಶ್ರಮ ತುಮ್ಹ ಬಸಬ ಪುನಿ ಸುಮಿರತ ಶ್ರೀಭಗವಂತ ।**
**ಬ್ಯಾಪಿಹಿ ತಹಂ ನ ಅಬಿದ್ಯಾ ಜೋಜನ ಏಕ ಪ್ರಜಂತ ॥ ೧೧೩(ಖ)॥**

ನೀನು ಯಾವಾಗಲೂ ಶ್ರೀರಾಮನಿಗೆ ಪ್ರಿಯನಾಗಿರು. ಕಲ್ಯಾಣಗುಣಧಾಮನೂ, ಅಮಾನಿಯೂ, ಕಾಮರೂಪಿಯೂ, ಇಚ್ಛಾಮರಣಿಯೂ, ಜ್ಞಾನ-ವೈರಾಗ್ಯದ ಭಂಡಾರನೂ ಆಗಿರು. ಇಷ್ಟೇ ಅಲ್ಲ, ಭಗವಂತನ ಸ್ಮರಣೆಮಾಡುತ್ತಾ ನೀನು ವಾಸಿಸುವ ಆಶ್ರಮದ ಸುತ್ತಲೂ ಒಂದು ಯೋಜನದವರೆಗೆ ಅವಿದ್ಯೆ (ಮಾಯಾಮೋಹ) ಸುಳಿಯದು. (ದೋ/೧೧೩ ಕ, ಖ)

**ಚೌ – ಕಾಲ ಕರ್ಮ ಗುನ ದೋಷ ಸುಭಾಊ । ಕಛು ದುಖ ತುಮ್ಹಹಿ ನ ಬ್ಯಾಪಿಹಿ ಕಾಊ ॥**
**ರಾಮ ರಹಸ್ಯ ಲಲಿತ ಬಿಧಿ ನಾನಾ । ಗುಪ್ತ ಪ್ರಗಟ ಇತಿಹಾಸ ಪುರಾನಾ ॥ ೧ ॥**
**ಬಿನು ಶ್ರಮ ತುಮ್ಹ ಜಾನಬ ಸಬ ಸೋಊ । ನಿತ ನವ ನೇಹ ರಾಮ ಪದ ಹೋಊ ॥**
**ಜೋ ಇಚ್ಛಾ ಕರಿಹಹು ಮನ ಮಾಹೀಂ । ಹರಿ ಪ್ರಸಾದ ಕಛು ದುರ್ಲಭ ನಾಹೀಂ ॥ ೨ ॥**
**ಸುನಿ ಮುನಿ ಆಸಿಷ ಸುನು ಮತಿಧೀರಾ । ಬ್ರಹ್ಮಗಿರಾ ಭಇ ಗಗನ ಗಂಭೀರಾ ॥**
**ಏವಮಸ್ತು ತವ ಬಚ ಮುನಿ ಗ್ಯಾನೀ । ಯಹ ಮಮ ಭಗತ ಕರ್ಮ ಮನ ಬಾನೀ ॥ ೩ ॥**
**ಸುನಿ ನಭಗಿರಾ ಹರಷ ಮೊಹಿ ಭಯಊ । ಪ್ರೇಮ ಮಗನ ಸಬ ಸಂಸಯ ಗಯಊ ॥**
**ಕರಿ ಬಿನತೀ ಮುನಿ ಆಯಸು ಪಾಈ । ಪದ ಸರೋಜ ಪುನಿ ಪುನಿ ಸಿರು ನಾಈ ॥ ೪ ॥**
**ಹರಷ ಸಹಿತ ಏಹಿಂ ಆಶ್ರಮ ಆಯಉಂ । ಪ್ರಭು ಪ್ರಸಾದ ದುರ್ಲಭ ಬರ ಪಾಯಉಂ ॥**
**ಇಹಾಂ ಬಸತ ಮೊಹಿ ಸುನು ಖಗ ಈಸಾ । ಬೀತೇ ಕಲಪ ಸಾತ ಅರು ಬೀಸಾ ॥ ೫ ॥**
**ಕರಉಂ ಸದಾ ರಘುಪತಿ ಗುನ ಗಾನಾ । ಸಾದರ ಸುನಹಿಂ ಬಿಹಂಗ ಸುಜಾನಾ ॥**
**ಜಬ ಜಬ ಅವಧಪುರೀಂ ರಘುಬೀರಾ । ಧರಹಿಂ ಭಗತ ಹಿತ ಮನುಜ ಸರೀರಾ ॥ ೬ ॥**
**ತಬ ತಬ ಜಾಇ ರಾಮ ಪುರ ರಹಊಂ । ಸಿಸುಲೀಲಾ ಬಿಲೋಕಿ ಸುಖ ಲಹಊಂ ॥**
**ಪುನಿ ಉರ ರಾಖಿ ರಾಮ ಸಿಸುರೂಪಾ । ನಿಜ ಆಶ್ರಮ ಆವಉಂ ಖಗಭೂಪಾ ॥ ೭ ॥**
**ಕಥಾ ಸಕಲ ಮೈಂ ತುಮ್ಹಹಿ ಸುನಾಈ । ಕಾಗ ದೇಹ ಜೆಹಿಂ ಕಾರನ ಪಾಈ ॥**
**ಕಹಿಉಂ ತಾತ ಸಬ ಪ್ರಸ್ನ ತುಮ್ಹಾರೀ । ರಾಮ ಭಗತಿ ಮಹಿಮಾ ಅತಿ ಭಾರೀ ॥ ೮ ॥**

ಕಾಲ, ಕರ್ಮ, ಗುಣ, ದೋಷ, ಸ್ವಭಾವಜನಿತ ದುಃಖಗಳು ನಿನ್ನನ್ನು ಆವರಿಸಲಾರವು. ಇತಿಹಾಸ, ಪುರಾಣಗಳಲ್ಲಿ ಶ್ರೀರಾಮರಹಸ್ಯವು ಕೆಲವೆಡೆ ಗುಪ್ತವಾಗಿ, ಕೆಲವೆಡೆ ಪ್ರಕಟವಾಗಿದೆ. ಅವೆಲ್ಲವೂ ಯಾವ ಪರಿಶ್ರಮವಿಲ್ಲದೆ ನಿನಗೆ

ಕರತಲಾಮಲಕವಾಗುವುದು. ಶ್ರೀರಾಮನ ಚರಣಕಮಲಗಳಲ್ಲಿ ನಿನ್ನ ಅನುರಾಗವು ನಿತ್ಯ ನೂತನವಾಗಿ ವೃದ್ಧಿಯಾಗಲಿ. ನಿನ್ನ ಮನಸ್ಸಿನ ಎಲ್ಲ ಕೋರಿಕೆಗಳು ಶ್ರೀರಾಮನ ಕೃಪೆಯಿಂದ ಸುಲಭವಾಗಿ ಲಭ್ಯವಾಗುವವು.'' ಓ ವೈನತೇಯಾ! ಗರುಡಾ! ಆಲಿಸು. ಲೋಮಶ ಮಹರ್ಷಿಗಳ ಆಶೀರ್ವಾದವನ್ನು ಕೇಳಿ, ಆಕಾಶದಿಂದ ಗಂಭೀರವಾದ ಬ್ರಹ್ಮವಾಣಿಯು ಮೊಳಗಿತು. ಓ ಜ್ಞಾನೀ ಮುನಿಯೇ! 'ನಿನ್ನ ವಚನಗಳು ಸತ್ಯವಾಗುವವು. ಇವನು ಮನೋವಾಕ್ಕರ್ಮಗಳಿಂದ ನನ್ನ ಭಕ್ತನು.' ಆಕಾಶವಾಣಿಯನ್ನು ಕೇಳಿ ನಾನು ತುಂಬಾ ಹರ್ಷಗೊಂಡು, ಶ್ರೀರಾಮನ ಪ್ರೇಮದಲ್ಲಿ ನಿಮಗ್ನನಾದೆ. ನನ್ನ ಸಂದೇಹಗಳೆಲ್ಲ ತೊಲಗಿಹೋದವು. ಅನಂತರ ಮುನಿಗಳ ಅಪ್ಪಣೆಪಡೆದು, ಅವರ ಚರಣಗಳಿಗೆ ಪುನಃ-ಪುನಃ ನಮಸ್ಕರಿಸಿ, ಹರ್ಷೋಲ್ಲಾಸದಿಂದ ನಾನು ಈ ಆಶ್ರಮಕ್ಕೆ ಬಂದೆ. ಪ್ರಭು ಶ್ರೀರಾಮಚಂದ್ರನ ಕೃಪೆಯಿಂದ ನಾನು ದುರ್ಲಭವಾದ ವರವನ್ನು ಪಡೆದುಕೊಂಡೆ. ಓ ಪಕ್ಷಿರಾಜಾ! ನಾನು ಇಲ್ಲಿಗೆ ಬಂದು ಇಪ್ಪತ್ತೇಳು ಕಲ್ಪಗಳಾದವು. ನಾನು ಇಲ್ಲಿ ನಿರಂತರ ಶ್ರೀರಘುನಾಥನ ಗುಣಗಾನ ಮಾಡುತ್ತಲೇ ಇರುವೆನು. ಜ್ಞಾನಿಗಳಾದ ಪಕ್ಷಿಗಳು ಆ ಗುಣಗಾನವನ್ನು ಆದರದಿಂದ ಶ್ರವಣಿಸುತ್ತವೆ. ಶ್ರೀರಘುವೀರನು ಭಕ್ತರ ಹಿತಕ್ಕಾಗಿ ಅಯೋಧ್ಯೆಯಲ್ಲಿ ಮಾನವನಾಗಿ ಅವತರಿಸಿದಾಗ ನಾನು ಆ ನಗರಕ್ಕೆ ಹೋಗಿ ವಾಸಿಸುವೆನು. ಪ್ರಭುವಿನ ಬಾಲ್ಯಲೀಲೆಗಲನ್ನು ಕಂಡು ಸುಖಿಯಾಗುವೆನು. ಓ ಖಗರಾಜಾ! ಶ್ರೀರಾಮನ ಬಾಲರೂಪವನ್ನು ಹೃದಯದಲ್ಲಿ ನೆಲೆಸಿಕೊಂಡು ಮತ್ತೆ ನಾನು ಆಶ್ರಮಕ್ಕೆ ಮರಳುವೆನು. ನಾನು ಕಾಗೆಯರೂಪವನ್ನು ಪಡೆದ ಎಲ್ಲ ಕಥೆಯನ್ನು ನಿನಗೆ ವಿವರಿಸಿರುವೆನು. ಅಯ್ಯಾ! ನಿನ್ನ ಎಲ್ಲ ಪ್ರಶ್ನೆಗಳಿಗೆ ಉತ್ತರ ನೀಡಿದೆ. ಅಹಾ! ನಿಜವಾಗಿ ರಾಮಭಕ್ತಿಯ ಮಹಿಮೆ ಅಗಾಧವಾದುದು. (ಚೌ/೧-೮)

**ದೋ – ತಾತೇ ಯಹ ತನ ಮೋಹಿ ಪ್ರಿಯ ಭಯಉ ರಾಮ ಪದ ನೇಹ।**
**ನಿಜ ಪ್ರಭು ದರಸನ ಪಾಯಉ~ ಗಏ ಸಕಲ ಸಂದೇಹ॥ ೧೧೪(ಕ)॥**

ಈ ಕಾಗೆಯ ಶರೀರದಲ್ಲೇ ನನಗೆ ಶ್ರೀರಾಮನ ಚರಣಗಳಲ್ಲಿ ಭಕ್ತಿಯು ಉಂಟಾಯಿತು. ಈ ರೂಪದಿಂದಲೇ ನನಗೆ ಪ್ರಭುದರ್ಶನವಾಯಿತು. ನನ್ನ ಸಂದೇಹಗಳೆಲ್ಲ ದೂರವಾದುವು. ಆದ್ದರಿಂದ ಈ ತನುವು ನನಗೆ ಅತ್ಯಂತ ಪ್ರಿಯವಾಗಿದೆ. (ದೋ/೧೧೪ ಕ)

**ಮಾಸಪಾರಾಯಣದ ಇಪ್ಪತ್ತೊಂಭತ್ತನೆಯ ವಿಶ್ರಾಮ**

## ಭಕ್ತಿಮಾರ್ಗ ವೈಶಿಷ್ಟ್ಯಗಳು

**ದೋ – ಭಗತಿ ಪಚ್ಛ ಹಠ ಕರಿ ರಹೇಉ~ ದೀನ್ಹಿ ಮಹಾರಿಷಿ ಸಾಪ।**
**ಮುನಿ ದುರ್ಲಭ ಬರ ಪಾಯಉ~ ದೇಖಹು ಭಜನ ಪ್ರತಾಪ॥ ೧೧೪(ಖ)॥**

ಗರುಡಾ! ನಾನು ಹಟಮಾಡಿ ಭಕ್ತಿಪಕ್ಷವನ್ನೇ ದೃಢವಾಗಿ ಹಿಡಿದೆ. ಅದರಿಂದಾಗಿ ಲೋಮಶಮಹರ್ಷಿಗಳು ನನ್ನನ್ನು ಶಪಿಸಿದರು. ಆದರೆ ಕೊನೆಗೆ ಮುನೀಶ್ವರರಿಗೂ ದುರ್ಲಭವಾದ ವರವನ್ನು ನಾನು ಪಡೆದೆ. ಹರಿಭಜನೆಯ ಮಹಿಮೆ ಇಷ್ಟಿದೆ. (ದೋ/೧೧೪ ಖ)

**ಚೌ – ಜೇ ಅಸಿ ಭಗತಿ ಜಾನಿ ಪರಿಹರಹೀ~। ಕೇವಲ ಗ್ಯಾನ ಹೇತು ಶ್ರಮ ಕರಹೀ~॥**
**ತೇ ಜಡ ಕಾಮಧೇನು ಗೃಹ್ ತ್ಯಾಗೀ। ಖೋಜತ ಆಕು ಫಿರಹಿ~ ಪಯ ಲಾಗೀ॥ ೧ ॥**
**ಸುನು ಖಗೇಸ ಹರಿ ಭಗತಿ ಬಿಹಾಈ। ಜೇ ಸುಖ ಚಾಹಹಿ~ ಆನ ಉಪಾಈ॥**
**ತೇ ಸಠ ಮಹಾಸಿಂಧು ಬಿನು ತರನೀ। ಪೈರಿ ಪಾರ ಚಾಹಹಿ~ ಜಡ ಕರನೀ॥ ೨ ॥**
**ಸುನಿ ಭುಸುಂಡಿ ಕೇ ಬಚನ ಭವಾನೀ। ಬೋಲೇಉ ಗರುಡ ಹರಷಿ ಮೃದು ಬಾನೀ॥**
**ತವ ಪ್ರಸಾದ ಪ್ರಭು ಮಮ ಉರ ಮಾಹೀ~। ಸಂಸಯ ಸೋಕ ಮೋಹ ಭ್ರಮ ನಾಹೀ~॥ ೩ ॥**
**ಸುನೇಉ~ ಪುನೀತ ರಾಮ ಗುನ ಗ್ರಾಮಾ। ತುಮ್ಹರೀ ಕೃಪಾ~ ಲಹೇಉ~ ಬಿಶ್ರಾಮಾ॥**
**ಏಕ ಬಾತ ಪ್ರಭು ಪೂ~ಛಉ~ ತೋಹೀ। ಕಹಹು ಬುಝಾಇ ಕೃಪಾನಿಧಿ ಮೋಹೀ॥ ೪ ॥**
**ಕಹಹಿ~ ಸಂತ ಮುನಿ ಬೇದ ಪುರಾನಾ। ನಹಿ~ ಕಛು ದುರ್ಲಭ ಗ್ಯಾನ ಸಮಾನಾ॥**
**ಸೋಇ ಮುನಿ ತುಮ್ಹ ಸನ ಕಹೇಉ ಗೊಸಾಈ~। ನಹಿ~ ಆದರೇಉ ಭಗತಿ ಕೀ ನಾಈ~॥ ೫ ॥**
**ಗ್ಯಾನಹಿ ಭಗತಿಹಿ ಅಂತರ ಕೇತಾ। ಸಕಲ ಕಹಹು ಪ್ರಭು ಕೃಪಾ ನಿಕೇತಾ॥**
**ಸುನಿ ಉರಗಾರಿ ಬಚನ ಸುಖ ಮಾನಾ। ಸಾದರ ಬೋಲೇಉ ಕಾಗ ಸುಜಾನಾ॥ ೬ ॥**

**ಭಗತಿಹಿ ಗ್ಯಾನಹಿ ನಹಿಂ ಕಛು ಭೇದಾ। ಉಭಯ ಹರಹಿಂ ಭವ ಸಂಭವ ಖೇದಾ॥**
**ನಾಥ ಮುನೀಸ ಕಹಹಿಂ ಕಛು ಅಂತರ। ಸಾವಧಾನ ಸೊಉ ಸುನು ಬಿಹಂಗಬರ॥ ೭॥**
**ಗ್ಯಾನ ಬಿರಾಗ ಜೋಗ ಬಿಗ್ಯಾನಾ। ಏ ಸಬ ಪುರುಷ ಸುನಹು ಹರಿಜಾನಾ॥**
**ಪುರುಷ ಪ್ರತಾಪ ಪ್ರಬಲ ಸಬ ಭಾಂತೀ। ಅಬಲಾ ಅಬಲ ಸಹಜ ಜಡ ಜಾತೀ॥ ೮॥**

ಇಂತಹ ಭಕ್ತಿಯ ಮಹಿಮೆಯನ್ನು ಅರಿತರೂ, ಅದನ್ನು ತೊರೆದು, ಕೇವಲ ಜ್ಞಾನಕ್ಕಾಗಿ ಸಾಧನೆ ಮಾಡುವ ಗಾಂಪರು ತಮ್ಮ ಮನೆಯಲ್ಲಿರುವ ಕಾಮಧೇನುವನ್ನು ಮರೆತು ಹಾಲಿಗಾಗಿ ಯೆಕ್ಕದ ಗಿಡವನ್ನು ಅರಸಿಕೊಂಡು ಹೋಗುವವರು. ಖಗರಾಜಾ! ಆಲಿಸು. ಹರಿಭಕ್ತಿಯನ್ನು ಬಿಟ್ಟು, ಬೇರೆ ಉಪಾಯಗಳಿಂದ ಸುಖವನ್ನು ಅರಸುವ ಜನರು ಮೂರ್ಖರು. ಆ ಜಡ ಜೀವಿಗಳು ಹಡಗಿಲ್ಲದೆ ಕಡಲನ್ನು ಈಸಿ ದಾಟಬಯಸುವವರು. ಶಿವನು ಹೇಳುತ್ತಿರುವನು – ಎಲೈ ಭವಾನೀ! ಕಾಕಭುಶುಂಡಿಯ ಮಾತುಗಳನ್ನು ಕೇಳಿ, ಗರುತ್ಮಂತನು ಪ್ರಸನ್ನಚಿತ್ತನಾಗಿ, ಮಧು-ಮಧುರವಾಗಿ ಇಂತೆಂದನು – ''ಒಡೆಯಾ! ನಿಮ್ಮ ಕೃಪೆಯಿಂದ ನನ್ನ ಹೃದಯದಲ್ಲಿ ಈಗ ಸಂಶಯ, ಶೋಕ, ಮೋಹ, ಭ್ರಮೆ ಯಾವುದೂ ಉಳಿಯಲಿಲ್ಲ. ತಮ್ಮ ದಯೆಯಿಂದ ಶ್ರೀರಾಮನ ಪುನೀತ ಗುಣಸಮೂಹವನ್ನು ಕೇಳಿ ನಾನು ಶಾಂತಿಯನ್ನು ಹೊಂದಿದೆನು. ಪ್ರಭೋ! ಈಗ ನಾನು ನಿಮ್ಮಲ್ಲಿ ಮತ್ತೊಂದು ಪ್ರಶ್ನೆಯನ್ನು ಕೇಳುತ್ತೇನೆ. ಕೃಪಾನಿಧಿಗಳಾದ ನೀವು ದಯವಿಟ್ಟು ನನಗೆ ತಿಳಿಸಿ ಹೇಳಿರಿ. ಜ್ಞಾನಕ್ಕೆ ಸಮಾನ ದುರ್ಲಭವಾದುದು ಯಾವುದೂ ಇಲ್ಲವೆಂದು, ಸಜ್ಜನರು, ಮುನಿಗಳು, ವೇದ, ಪುರಾಣಗಳು ಹೇಳುತ್ತವೆ. ಸ್ವಾಮಿ! ಅದೇ ಜ್ಞಾನವನ್ನು ನಿಮಗೆ ಮುನೀಶ್ವರರು ಉಪದೇಶಿಸಿದ್ದರು. ಆದರೆ ನೀವು ಭಕ್ತಿಮಾರ್ಗದಂತೆ ಅದನ್ನು ಆದರಿಸಲಿಲ್ಲ. ಓ ಕೃಪಾನಿಧಾನ ಪ್ರಭುವೇ! ಜ್ಞಾನಕ್ಕೂ, ಭಕ್ತಿಗೂ ಏನು ಅಂತರವಿದೆ? ಇದೆಲ್ಲವನ್ನು ನನಗೆ ದಯಮಾಡಿ ತಿಳಿಸಿರಿ.'' ಗರುಡನ ಮಾತನ್ನು ಕೇಳಿ, ಜ್ಞಾನಿಯಾದ ಕಾಕಭುಶುಂಡಿಯವರು ಸಂತಸಗೊಂಡು, ಆದರದಿಂದ ಹೇಳತೊಡಗಿದರು – ''ಭಕ್ತಿಗೂ ಜ್ಞಾನಕ್ಕೂ ಯಾವ ಅಂತರವೂ ಇಲ್ಲ. ಇವೆರಡೂ ಸಾಂಸಾರಿಕ ದುಃಖಗಳನ್ನು ಕಳೆಯುತ್ತವೆ. ಆದರೆ ಮುನೀಶ್ವರರು ಇವೆರಡರ ನಡುವೆ ಸ್ವಲ್ಪ ಭೇದವಿದೆ ಎಂದು ಹೇಳುತ್ತಾರೆ. ಪಕ್ಷಿಶ್ರೇಷ್ಠ ಹರಿವಾಹನಾ! ಅದನ್ನು ಸಾವಧಾನಚಿತ್ತರಾಗಿ ಕೇಳಿರಿ. ಜ್ಞಾನ, ವೈರಾಗ್ಯ, ಯೋಗ, ವಿಜ್ಞಾನ ಇವೆಲ್ಲವು ಪುರುಷವರ್ಗಕ್ಕೆ ಸೇರಿದವು. ಗಂಡಸಿನ ಪ್ರತಾಪ ಪ್ರಬಲವಾಗಿರುತ್ತದೆ. ಮಾಯೆ ಸ್ತ್ರೀ ವರ್ಗಕ್ಕೆ ಸೇರಿದವಳು. ಆಕೆಯು ಸ್ವಭಾವತಃ ಅಬಲೆ. ಜನ್ಮತಃ ಜಡಳು. (ಪ್ರಕೃತಿ ಸ್ವರೂಪಿಣಿಯು). (ಚೌ/೧-೮)

**ದೋ – ಪುರುಷ ತ್ಯಾಗಿ ಸಕ ನಾರಿಹಿ ಜೋ ಬಿರಕ್ತ ಮತಿ ಧೀರ।**
**ನ ತು ಕಾಮೀ ಬಿಷಯಾಬಸ ಬಿಮುಖ ಜೊ ಪದ ರಘುಬೀರ॥ ೧೧೫(ಕ)॥**

ಆದರೆ ವೈರಾಗ್ಯವುಳ್ಳವನು, ಧೀರಮತಿಯಾದ ಪುರುಷನೇ ಸ್ತ್ರೀಯನ್ನು ತ್ಯಜಿಸಬಲ್ಲನು. ಕಾಮುಕರು, ವಿಷಯಲಂಪಟರು, ರಾಮಚರಣವಿಮುಖರು ಸ್ತ್ರೀಗೆ ಅಧೀನರೇ ಆಗಿರುವರು. (ದೋ/೧೧೫ ಕ)

**ಸೋ – ಸೊಉ ಮುನಿ ಗ್ಯಾನನಿಧಾನ ಮೃಗನಯನೀ ಬಿಧು ಮುಖ ನಿರಖಿ।**
**ಬಿಬಸ ಹೋಇ ಹರಿಜಾನ ನಾರಿ ಬಿಷ್ನು ಮಾಯಾ ಪ್ರಗಟ॥ ೧೧೫(ಖ)॥**

ಜ್ಞಾನದ ಭಂಡಾರರಾದ ಮುನಿಗಳೂ ಕೂಡ ಮೃಗನಯನೆಯೂ, ಚಂದ್ರಮುಖಿಯೂ ಆದ ಯುವತಿ ಸ್ತ್ರೀಯನ್ನು ನೋಡಿ ಅವಳ ಅಧೀನರಾಗುವರು. ಗರುಡಾ! ಸಾಕ್ಷಾತ್ ಭಗವಾನ್ ವಿಷ್ಣುವಿನ ಮಾಯೆಯೇ ಸ್ತ್ರೀರೂಪದಿಂದ ಪ್ರಕಟಿತಳಾಗಿದ್ದಾಳೆ. (ಸೋ/೧೧೫ ಖ)

**ಚೌ – ಇಹಾಂ ನ ಪಚ್ಛಪಾತ ಕಛು ರಾಖಉಂ। ಬೇದ ಪುರಾನ ಸಂತ ಮತ ಭಾಷಉಂ॥**
**ಮೋಹ ನ ನಾರಿ ನಾರಿ ಕೇಂ ರೂಪಾ। ಪನ್ನಗಾರಿ ಯಹ ರೀತಿ ಅನೂಪಾ॥ ೧॥**
**ಮಾಯಾ ಭಗತಿ ಸುನಹು ತುಮ್ಹ ದೋಊ। ನಾರಿ ಬರ್ಗ ಜಾನಇ ಸಬ ಕೋಊ॥**
**ಪುನಿ ರಘುಬೀರಹಿ ಭಗತಿ ಪಿಆರೀ। ಮಾಯಾ ಖಲು ನರ್ತಕೀ ಬಿಚಾರೀ॥ ೨॥**
**ಭಗತಿಹಿ ಸಾನುಕೂಲ ರಘುರಾಯಾ। ತಾತೇ ತೇಹಿ ಡರಪತಿ ಅತಿ ಮಾಯಾ॥**
**ರಾಮ ಭಗತಿ ನಿರುಪಮ ನಿರುಪಾಧೀ। ಬಸಇ ಜಾಸು ಉರ ಸದಾ ಅಬಾಧೀ॥ ೩॥**
**ತೇಹಿ ಬಿಲೋಕಿ ಮಾಯಾ ಸಕುಚಾಈ। ಕರಿ ನ ಸಕಇ ಕಛು ನಿಜ ಪ್ರಭುತಾಈ॥**
**ಅಸ ಬಿಚಾರಿ ಜೇ ಮುನಿ ಬಿಗ್ಯಾನೀ। ಜಾಚಹಿಂ ಭಗತಿ ಸಕಲ ಸುಖ ಖಾನೀ॥ ೪॥**

ಇಲ್ಲಿ ನಾನು ಯಾವ ಪಕ್ಷಪಾತವನ್ನೂ ಮಾಡುವುದಿಲ್ಲ. ವೇದ, ಪುರಾಣ, ಸಂತರು ಹೇಳಿದ ಪ್ರಾಮಾಣಿಕ ಸಿದ್ಧಾಂತವನ್ನೇ ಹೇಳುತ್ತಿದ್ದೇನೆ. ಗರುಡನೇ! ಓರ್ವ ಸ್ತ್ರೀಯು ಮತ್ತೊಂದು ಸ್ತ್ರೀಯನ್ನು ನೋಡಿ ಮೋಹಗೊಳ್ಳುವುದಿಲ್ಲ. ಇದು ವಿಲಕ್ಷಣವಾದ ರೀತಿಯಾಗಿದೆ. ಮಾಯೆ ಮತ್ತು ಭಕ್ತಿ ಇವೆರಡೂ ಸ್ತ್ರೀವರ್ಗಕ್ಕೆ ಸೇರಿದವು ಎಂಬುದು ಪ್ರಸಿದ್ಧವು. ಮತ್ತೆ ರಘುವೀರನಿಗೂ ಭಕ್ತಿಯೇ ಪ್ರಿಯವು. ಮಾಯೆ ಕೇವಲ ನರ್ತಕಿಮಾತ್ರ. ರಘುನಾಥನು ಭಕ್ತಿಗೆ ವಿಶೇಷವಾಗಿ ಅನುಕೂಲವಾಗಿರುತ್ತಾನೆ. ಆದ್ದರಿಂದ ಮಾಯೆ ಆತನಿಗೆ ಅಂಜುತ್ತದೆ. ನಿರುಪಮವೂ, ನಿರುಪಾಧಿಕವೂ ಆದ ರಾಮಭಕ್ತಿಯನ್ನು ಹೃದಯದಲ್ಲಿ ಧರಿಸಿರುವವರನ್ನು ಕಂಡು ಮಾಯೆ ಹೆದರುತ್ತದೆ. ಅವನ ಮೇಲೆ ಮಾಯೆ ತನ್ನ ಪ್ರಭಾವ ಬೀರುವುದಿಲ್ಲ. ಹೀಗೆ ಯೋಚಿಸಿಯೇ ವಿಜ್ಞಾನಿಗಳಾದ ಮುನಿಗಳು ಸಮಸ್ತ ಸುಖಗಳಿಗೆ ಆಗರವಾದ ಭಕ್ತಿಯನ್ನೇ ಯಾಚಿಸುತ್ತಾರೆ. (ಚೌ/೧-೪)

**ದೋ – ಯಹ ರಹಸ್ಯ ರಘುನಾಥ ಕರ ಬೇಗಿ ನ ಜಾನಇ ಕೋಇ ।**
**ಜೋ ಜಾನಇ ರಘುಪತಿ ಕೃಪಾँ ಸಪನೇಹುँ ಮೋಹ ನ ಹೋಇ ॥ ೧೧೬(ಕ)॥**
**ಔರಉ ಗ್ಯಾನ ಭಗತಿ ಕರ ಭೇದ ಸುನಹು ಸುಪ್ರಬೀನ ।**
**ಜೋ ಸುನಿ ಹೋಇ ರಾಮ ಪದ ಪ್ರೀತಿ ಸದಾ ಅಬಿಛೀನ ॥ ೧೧೬(ಖ)॥**

ಶ್ರೀರಾಮಭಕ್ತಿರಹಸ್ಯವನ್ನು ಯಾರೂ ಬೇಗನೆ ಅರ್ಥೈಸಲಾರರು. ಶ್ರೀರಘುನಾಥನ ಕೃಪೆಯಿಂದ ಈ ರಹಸ್ಯವನ್ನು ಅರಿಯುವವನಿಗೆ ಸ್ವಪ್ನದಲ್ಲಿಯೂ ಮೋಹವು ತಗಲದು. ಧೀರಮತಿ, ಗರುಡಾ! ಜ್ಞಾನಕ್ಕೂ, ಭಕ್ತಿಗೂ ಇರುವ ಭೇದವನ್ನು ಇನ್ನೂ ಕೇಳು. ಅದನ್ನು ಕೇಳುವುದರಿಂದ ಶ್ರೀರಾಮನ ಚರಣಗಳಲ್ಲಿ ಸದಾಕಾಲ ಅವಿಚ್ಛಿನ್ನ (ಅಖಂಡವಾದ) ಪ್ರೀತಿ ಉಂಟಾಗುತ್ತದೆ. (ದೋ/೧೧೬ ಕ, ಖ)

**ಚೌ – ಸುನಹು ತಾತ ಯಹ ಅಕಥ ಕಹಾನೀ । ಸಮುಝುತ ಬನಇ ನ ಜಾಇ ಬಖಾನೀ॥**
**ಈಸ್ವರ ಅಂಸ ಜೀವ ಅಬಿನಾಸೀ । ಚೇತನ ಅಮಲ ಸಹಜ ಸುಖ ರಾಸೀ ॥ ೧ ॥**
**ಸೋ ಮಾಯಾಬಸ ಭಯಉ ಗೊಸಾಈँ । ಬँಧ್ಯೋ ಕೀರ ಮರಕಟ ಕೀ ನಾಈँ ॥**
**ಜಡ ಚೇತನಹಿ ಗ್ರಂಥಿ ಪರಿ ಗಈ । ಜದಪಿ ಮೃಷಾ ಛೂಟತ ಕಠಿನಈ ॥ ೨ ॥**
**ತಬ ತೇ ಜೀವ ಭಯಉ ಸಂಸಾರೀ । ಛೂಟ ನ ಗ್ರಂಥಿ ನ ಹೋಇ ಸುಖಾರೀ ॥**
**ಶ್ರುತಿ ಪುರಾನ ಬಹು ಕಹೆಉ ಉಪಾಈ । ಛೂಟ ನ ಅಧಿಕ ಅಧಿಕ ಅರುಝಾಈ ॥ ೩ ॥**
**ಜೀವ ಹೃದಯँ ತಮ ಮೋಹ ಬಿಸೇಷೀ । ಗ್ರಂಥಿ ಛೂಟ ಕಿಮಿ ಪರಇ ನ ದೇಖೀ॥**
**ಅಸ ಸಂಜೋಗ ಈಸ ಜಬ ಕರಈ । ತಬಹುँ ಕದಾಚಿತ ಸೋ ನಿರುಅರಈ॥ ೪ ॥**
**ಸಾತ್ತ್ವಿಕ ಶ್ರದ್ಧಾ ಧೇನು ಸುಹಾಈ । ಜೌँ ಹರಿ ಕೃಪಾँ ಹೃದಯँ ಬಸ ಆಈ ॥**
**ಜಪ ತಪ ಬ್ರತ ಜಮ ನಿಯಮ ಅಪಾರಾ । ಜೇ ಶ್ರುತಿ ಕಹ ಸುಭ ಧರ್ಮ ಅಚಾರಾ ॥ ೫ ॥**
**ತೇಇ ತೃನ ಹರಿತ ಚರೈ ಜಬ ಗಾಈ । ಭಾವ ಬಚ್ಛ ಸಿಸು ಪಾಇ ಪೇನ್ಹಾಈ ॥**
**ನೋಇ ನಿಬೃತ್ತಿ ಪಾತ್ರ ಬಿಸ್ವಾಸಾ । ನಿರ್ಮಲ ಮನ ಅಹೀರ ನಿಜ ದಾಸಾ ॥ ೬ ॥**
**ಪರಮ ಧರ್ಮಮಯ ಪಯ ದುಹಿ ಭಾಈ । ಅವಟೈ ಅನಲ ಅಕಾಮ ಬನಾಈ ॥**
**ತೋಷ ಮರುತ ತಬ ಛಮಾँ ಜುಡಾವೈ । ಧೃತಿ ಸಮ ಜಾವನು ದೇಇ ಜಮಾವೈ ॥ ೭ ॥**
**ಮುದಿತಾँ ಮಥೈ ಬಿಚಾರ ಮಥಾನೀ । ದಮ ಅಧಾರ ರಜು ಸತ್ಯ ಸುಬಾನೀ॥**
**ತಬ ಮಥಿ ಕಾಢಿ ಲೇಇ ನವನೀತಾ । ಬಿಮಲ ಬಿರಾಗ ಸುಭಗ ಸುಪುನೀತಾ ॥ ೮ ॥**

ಅಯ್ಯಾ ! ಈ ಅಕಥನೀಯ ಕಥೆಯನ್ನು ಕೇಳು. ಇದು ಅನುಭವೈಕವೇದ್ಯವೇ ಹೊರತು ವರ್ಣಿಸಲು ಬರುವುದಿಲ್ಲ. ಜೀವಿಯು ಈಶ್ವರನ ಅಂಶನೇ ಆಗಿದ್ದಾನೆ. ಆದ್ದರಿಂದ ಅವನು ಅವಿನಾಶೀ, ಚೇತನನು, ನಿರ್ಮಲನೂ, ಸ್ವಭಾವತಃ ಸುಖರಾಶಿಯು. ಸ್ವಾಮಿ! ಅಂತಹ ಜೀವನು ಮಾಯಾವಶನಾಗಿ ಗಿಳಿಯಂತೆ, ಕೋತಿಯಂತೆ ತನ್ನನ್ನು ತಾನೇ ಬಂಧನದಲ್ಲಿ ಸಿಕ್ಕಿಸಿಕೊಂಡಿರುವನು. ಈ ಪ್ರಕಾರ ಜಡಕ್ಕೂ, ಚೇತನಕ್ಕೂ ಗಂಟುಬಿತ್ತು. ಈ ಗಂಟು ಮಿಥ್ಯೆಯಾಗಿದ್ದರೂ ಅದರಿಂದ ಬಿಡುಗಡೆಹೊಂದುವುದು ಹೆಚ್ಚಿನ ಕಷ್ಟವೇ. ಈ ತೊಡಕಿನಿಂದ ಜೀವಿಯು ಸಂಸಾರಿಯಾದನು. ಜನನ-ಮರಣಚಕ್ರದಲ್ಲಿ ಬಿದ್ದನು. ಆ ಗಂಟು ಬಿಚ್ಚಿಹೋಗುವುದಿಲ್ಲ, ಅವನಿಗೆ ಸುಖವು ದೊರೆಯುವುದಿಲ್ಲ. ಈ ವಿಷಯದಲ್ಲಿ ವೇದಪುರಾಣಗಳು ಅನೇಕ ಉಪಾಯಗಳನ್ನು ಸೂಚಿಸಿವೆ. ಆದರೆ ಆ ಗಂಟು

ಬಿಚ್ಚಿಕೊಳ್ಳಲೊಲ್ಲದು, ಬದಲಾಗಿ ಅದು ಇನ್ನೂ ಗೋಜಲಾಗುತ್ತಲೇ ಹೋಗುತ್ತದೆ. ಜೀವಿಯ ಹೃದಯದಲ್ಲಿ ಅಜ್ಞಾನರೂಪೀ ಅಂಧಕಾರವು ದಟ್ಟವಾಗಿ ಆವರಿಸಿದೆ. ಇದರಿಂದಾಗಿ ಗಂಟು ಕಣ್ಣಿಗೆ ಬೀಳುತ್ತಿಲ್ಲ. ಹೀಗಿರುವಾಗ ಬಿಡುಗಡೆ ಹೇಗೆ ಸಾಧ್ಯ? ಮುಂದೆ ಹೇಳಲ್ಪಡುವ ರೀತಿಯಿಂದ ಈಶ್ವರಾನುಗ್ರಹದಿಂದ ಪರಿಸ್ಥಿತಿಯು ಅನುಕೂಲವಾದರೆ ಆ ಗಂಟು ಎಂದೋ ಒಂದುದಿನ ಬಿಚ್ಚಿಹೋದೀತು. ಶ್ರೀಹರಿಯ ಕೃಪೆಯಿಂದ ಸಾತ್ತ್ವಿಕ ಶ್ರದ್ಧೆಯೆಂಬ ಸುಂದರ ಗೋವು ಹೃದಯವೆಂಬ ಮನೆಯಲ್ಲಿ ಬಂದು ನೆಲೆನಿಂತರೆ, ಶ್ರುತಿಗಳಲ್ಲಿ ಹೇಳಿರುವ ಅಪಾರವಾದ ಜಪ, ತಪ, ವ್ರತ, ಯಮ, ನಿಯಮಾದಿ ಶುಭಧರ್ಮಗಳು ಮತ್ತು ಧರ್ಮಾಚರಣೆಯೆಂಬ ಹರಿತ ತೃಣಗಳನ್ನು ಆ ಗೋವು ಮೇಯ್ದರೆ, ಆಸ್ತಿಕಭಾವರೂಪೀ ಸಣ್ಣಕರುವನ್ನು ಪಡೆದು ಅದು ತೊರೆದು ಬಿಡುವುದು. ನಿವೃತ್ತಿಮಾರ್ಗ (ಸಾಂಸಾರಿಕ ವಿಷಯಗಳಿಂದ ಮತ್ತು ಪ್ರಪಂಚದಿಂದ ದೂರಾಗುವುದು) ವೆಂಬುದು ಹಾಲು ಕರೆಯುವಾಗ ಹಿಂದಿನ ಕಾಲುಕಟ್ಟುವ ಹಗ್ಗ, ವಿಶ್ವಾಸವೇ ಹಾಲು ಕರೆಯುವ ಪಾತ್ರೆ. ತನ್ನ ವಶದಲ್ಲಿರುವ ನಿರ್ಮಲ ಮನಸ್ಸೇ ಹಾಲು ಕರೆಯುವ ಗೊಲ್ಲ. ಸೋದರಾ! ಈ ವಿಧವಾಗಿ ಪರಮಧರ್ಮಮಯ ಹಾಲನ್ನು ಕರೆದು, ಅದನ್ನು ನಿಷ್ಕಾಮಭಾವವೆಂಬ ಅಗ್ನಿಯಮೇಲೆ ಚೆನ್ನಾಗಿ ಕುದಿಸಬೇಕು. ಮತ್ತೆ ಕ್ಷಮೆ, ಸಂತೋಷವೆಂಬ ಗಾಳಿಯಿಂದ ಅದನ್ನು ತಣ್ಣಗಾಗಿಸಿ, ಧೈರ್ಯ, ಶಮವೆಂಬ ಹೆಪ್ಪುಹಾಕಿ ಮೊಸರಾಗಿಸಬೇಕು. ಸಂತೋಷವೆಂಬ ಗಡಿಗೆಯಲ್ಲಿ ತತ್ತ್ವವಿಚಾರವೆಂಬ ಕಡೆಗೋಲಿನಿಂದ ದಮೆಯೆಂಬ ಆಧಾರಸ್ತಂಭವಾಗಿಸಿ, ಸತ್ಯ ಹಾಗೂ ಸುಂದರವಾಣಿಯೆಂಬ ಹಗ್ಗದಿಂದ ಅದನ್ನು ಕಡೆಯಬೇಕು. ಆಗ ಅದರಿಂದ ವೈರಾಗ್ಯವೆಂಬ ಶುದ್ಧಮನೋಹರ, ಪವಿತ್ರವಾದ ಬೆಣ್ಣೆ ತೆಗೆಯಬೇಕು. (ಚೌ/೧-೮)

**ದೋ – ಜೋಗ ಅಗಿನಿ ಕರಿ ಪ್ರಗಟ ತಬ ಕರ್ಮ ಸುಭಾಸುಭ ಲಾಇ।**
**ಬುದ್ಧಿ ಸಿರಾವೈ ಗ್ಯಾನ ಘೃತ ಮಮತಾ ಮಲ ಜರಿ ಜಾಇ॥ ೧೧೭(ಕ)॥**
**ತಬ ಬಿಗ್ಯಾನರೂಪಿನೀ ಬುದ್ಧಿ ಬಿಸದ ಘೃತ ಪಾಇ।**
**ಚಿತ್ತ ದಿಆ ಭರಿ ಧರೈ ದೃಢ ಸಮತಾ ದಿಅಟಿ ಬನಾಇ॥ ೧೧೭(ಖ)॥**
**ತೀನಿ ಅವಸ್ಥಾ ತೀನಿ ಗುನ ತೆಹಿ ಕಪಾಸ ತೇಂ ಕಾಢಿ।**
**ತೂಲ ತುರೀಯ ಸಁವಾರಿ ಪುನಿ ಬಾತೀ ಕರೈ ಸುಗಾಢಿ॥ ೧೧೭(ಗ)॥**

ಆಗ ಯೋಗಾಗ್ನಿ (ಮನಸ್ಸನ್ನು ಭಗವಂತನಲ್ಲಿ ಲಯಗೊಳಿಸುವುದು) ಯಲ್ಲಿ ಶುಭಾಶುಭ ಕರ್ಮಗಳೆಂಬ ಇಂಧನಗಳನ್ನು ಉರಿಸಿ ಬೆಣ್ಣೆ ಕಾಯಿಸಿದರೆ, ವೈರಾಗ್ಯವೆಂಬ ನವನೀತದಲ್ಲಿರುವ ಮಮತೆಯೆಂಬ ಮಲವು ಇಂಗಿಹೋಗುತ್ತದೆ. ಬಳಿಕ ಉಳಿದ ಜ್ಞಾನರೂಪೀ ತುಪ್ಪವನ್ನು ನಿಶ್ಚಯಾತ್ಮಿಕಾ ಬುದ್ಧಿಯಿಂದ ತಣ್ಣಗಾಗಿಸಬೇಕು. ವಿಜ್ಞಾನರೂಪವಾದ ಬುದ್ಧಿಯು ಆ ಜ್ಞಾನವೆಂಬ ನಿರ್ಮಲ ಘೃತವನ್ನು ಪಡೆದು, ಅದನ್ನು ಚಿತ್ತವೆಂಬ ಹಣತೆಗೆ ತುಂಬಿ, ಸಮತ್ವದ ದೀಪವನ್ನು ತಯಾರಿಸಿ, ಅದರ ಮೇಲೆ ಅದನ್ನು ಭದ್ರವಾಗಿ ಇರಿಸಬೇಕು. ಜಾಗೃತ್ ಸ್ವಪ್ನ ಸುಷುಪ್ತಿ, ಸತ್ತ್ವ ರಜ ತಮವೆಂಬ ಹತ್ತಿಯಿಂದ ತುರೀಯಾವಸ್ಥೆಯೆಂಬ ಶುಭ್ರವಾದ ದಾರವನ್ನು ತೆಗೆದು ಅದರಿಂದ ಸುಂದರವಾದ ಗಟ್ಟಿಯಾದ ಬತ್ತಿಯನ್ನು ಹೊಸೆದು ಸಿದ್ಧಪಡಿಸಬೇಕು. (ದೋ/೧೧೭ ಕ, ಖ, ಗ)

**ಸೋ – ಏಹಿ ಬಿಧಿ ಲೇಸೈ ದೀಪ ತೇಜ ರಾಸಿ ಬಿಗ್ಯಾನಮಯ।**
**ಜಾತಹಿಂ ಜಾಸು ಸಮೀಪ ಜರಹಿಂ ಮದಾದಿಕ ಸಲಭ ಸಬ॥ ೧೧೭(ಘ)॥**

ಈ ವಿಧವಾಗಿ ತತ್ತ್ವಜ್ಞಾನವೆಂಬ ತೇಜೋಮಯವಾದ ದೀಪವನ್ನು ಉರಿಸಬೇಕು. ಅದರ ಸಮೀಪ ಹೋಗುತ್ತಲೇ ಮದವೇ ಮೊದಲಾದ ಅರಿಷಡ್ವರ್ಗವೆಂಬ ಶಲಭಗಳು (ದೀಪದ ಹುಳುಗಳು) ಸುಟ್ಟುಹೋಗುವವು. (ಸೋ/೧೧೭ ಘ)

**ಚೌ – ಸೋಹಮಸ್ಮಿ ಇತಿ ಬೃತ್ತಿ ಅಖಂಡಾ। ದೀಪ ಸಿಖಾ ಸೋಇ ಪರಮ ಪ್ರಚಂಡಾ॥**
**ಆತಮ ಅನುಭವ ಸುಖ ಸುಪ್ರಕಾಸಾ। ತಬ ಭವ ಮೂಲ ಭೇದ ಭ್ರಮ ನಾಸಾ॥ ೧॥**
**ಪ್ರಬಲ ಅಬಿದ್ಯಾ ಕರ ಪರಿವಾರಾ। ಮೋಹ ಆದಿ ತಮ ಮಿಟಇ ಅಪಾರಾ॥**
**ತಬ ಸೋಇ ಬುದ್ಧಿ ಪಾಇ ಉಁಜಿಆರಾ। ಉರ ಗೃಹಁ ಬೈಠಿ ಗ್ರಂಥಿ ನಿರುಆರಾ॥ ೨॥**
**ಛೋರನ ಗ್ರಂಥಿ ಪಾವ ಜೌಂ ಸೋಈ। ತಬ ಯಹ ಜೀವ ಕೃತಾರಥ ಹೋಈ॥**
**ಛೋರತ ಗ್ರಂಥಿ ಜಾನಿ ಖಗರಾಯಾ। ಬಿಘ್ನ ಅನೇಕ ಕರಇ ತಬ ಮಾಯಾ॥ ೩॥**
**ರಿದ್ಧಿ ಸಿದ್ಧಿ ಪ್ರೇರಇ ಬಹು ಭಾಈ। ಬುದ್ಧಿಹಿ ಲೋಭ ದಿಖಾವಹಿಂ ಆಈ॥**
**ಕಲ ಬಲ ಛಲ ಕರಿ ಜಾಹಿಂ ಸಮೀಪಾ। ಅಂಚಲ ಬಾತ ಬುಝಾವಹಿಂ ದೀಪಾ॥ ೪॥**

ಹೋಇ ಬುದ್ಧಿ ಜೌ ಪರಮ ಸಯಾನೀ। ತಿನ್ಹ ತನ ಚಿತವ ನ ಅನಹಿತ ಜಾನೀ॥
ಜೌ ತೆಹಿ ಬಿಘ್ನ ಬುದ್ಧಿ ನಹಿಂ ಬಾಧೀ। ತೌ ಬಹೋರಿ ಸುರ ಕರಹಿಂ ಉಪಾಧೀ॥೫॥
ಇಂದ್ರೀಂ ದ್ವಾರ ಝರೋಖಾ ನಾನಾ। ತಹಂ ತಹಂ ಸುರ ಬೈಠೇ ಕರಿ ಥಾನಾ॥
ಆವತ ದೇಖಹಿಂ ಬಿಷಯ ಬಯಾರೀ। ತೇ ಹಠಿ ದೇಹಿಂ ಕಪಾಟ ಉಘಾರೀ॥೬॥
ಜಬ ಸೊ ಪ್ರಭಂಜನ ಉರ ಗೃಹಂ ಜಾಈ। ತಬಹಿಂ ದೀಪ ಬಿಗ್ಯಾನ ಬುಝಾಈ॥
ಗ್ರಂಥಿ ನ ಛೂಟಿ ಮಿಟಾ ಸೊ ಪ್ರಕಾಸಾ। ಬುದ್ಧಿ ಬಿಕಲ ಭಇ ಬಿಷಯ ಬತಾಸಾ॥೭॥
ಇಂದ್ರಿನ್ಹ ಸುರನ್ಹ ನ ಗ್ಯಾನ ಸೊಹಾಈ। ಬಿಷಯ ಭೋಗ ಪರ ಪ್ರೀತಿ ಸದಾಈ॥
ಬಿಷಯ ಸಮೀರ ಬುದ್ಧಿ ಕೃತ ಭೋರೀ। ತೇಹಿ ಬಿಧಿ ದೀಪ ಕೊ ಬಾರ ಬಹೋರೀ॥೮॥

'ಸೋऽಹಮಸ್ಮಿ' (ಆ ಬ್ರಹ್ಮನಾನೇ ಆಗಿದ್ದೇನೆ) ತೈಲಧಾರೆಯಂತೆ ಎಂದೂ ತುಂಡಾಗದ ಅಖಂಡವೃತ್ತಿಯೇ ಆ ಜ್ಞಾನದೀಪದ ಪರಮಪ್ರಚಂಡ ದೀಪಶಿಖೆ. ಈ ಪ್ರಕಾರ ಆತ್ಮಾನುಭವದ ಸುಖದ ಸುಂದರ ಪ್ರಕಾಶ ಹಬ್ಬಿದಾಗ ಜಗತ್ತಿನ ಮೂಲವಾದ ಭೇದವೆಂಬ ಭ್ರಮೆ ನಾಶವಾಗುತ್ತದೆ. ಮತ್ತೆ ಅತ್ಯಂತ ಬಲವತ್ತರವಾದ ಅವಿದ್ಯೆಯ ಪರಿವಾರ ಮೋಹಾದಿ ಅಪಾರ ಅಂಧಕಾರವು ಅಳಿದುಹೋಗುತ್ತದೆ. ಆಗ ಆ ವಿಜ್ಞಾನರೂಪೀ ಬುದ್ಧಿಯು ಬೆಳಕನ್ನು ಪಡೆದು ಹೃದಯವೆಂಬ ಮನೆಯಲ್ಲಿ ಕುಳಿತುಕೊಂಡು ಆ ಜಡ-ಚೇತನಗಳಿಗೆ ಬಿದ್ದ ಕಗ್ಗಂಟನ್ನು ಬಿಚ್ಚುತ್ತದೆ. ಆ ವಿಜ್ಞಾನರೂಪಿಣಿ ಬುದ್ಧಿಯು ಆ ಗಂಟನ್ನು ಬಿಚ್ಚಿದಾಗಲೇ ಈ ಜೀವ ಕೃತಾರ್ಥವಾಗುತ್ತದೆ. ಆದರೆ ಖಗರಾಜ, ಗರುಡಾ! ಗಂಟು ಬಿಚ್ಚುತ್ತಿರುವುದನ್ನು ತಿಳಿದು ಮಾಯೆ ಮತ್ತೆ ಅನೇಕ ವಿಘ್ನಗಳನ್ನು ಒಡ್ಡುತ್ತಾಳೆ. ಅವಳು ಅದಕ್ಕಾಗಿ ಅನೇಕ ಋದ್ಧಿ-ಸಿದ್ಧಿಗಳನ್ನು ಬುದ್ಧಿಯ ಬಳಿಗೆ ಕಳಿಸುವಳು. ಅವು ಬಂದು ಬುದ್ಧಿಗೆ ಪ್ರಲೋಭನೆ ತೋರುವವಳು. ಕಲೆ, ಬಲ, ಕಪಟದಿಂದ ಹತ್ತಿರಹೋಗಿ ತಮ್ಮ ಸೆರಗಿನ ಗಾಳಿಯಿಂದ ಆ ಜ್ಞಾನದೀಪವನ್ನು ಆರಿಸಿಬಿಡುತ್ತವೆ. ಬುದ್ಧಿಯೇನಾದರೂ ವಿಕಸಿತವಾಗಿದ್ದರೆ, ಆ ಋದ್ಧಿ-ಸಿದ್ಧಿಗಳು ಹಾನಿಕಾರಕವೆಂದು ತಿಳಿದು ಅದರತ್ತ ಕಣ್ಣುಹಾಯಿಸುವುದಿಲ್ಲ. ಈ ಪ್ರಕಾರ ಮಾಯೆಯ ವಿಘ್ನಗಳಿಂದ ಬುದ್ಧಿಗೆ ಅಡ್ಡಿಯುಂಟಾಗದಿದ್ದರೆ, ಮತ್ತೆ ದೇವತೆಗಳು ಬಂದು ಉಪಾಧಿಯನ್ನೊಡ್ಡಿ ವಿಘ್ನವನ್ನು ಮಾಡತೊಡಗುವರು. ಹೃದಯವೆಂಬ ಮನೆಗೆ ಇಂದ್ರಿಯಗಳೆಂಬ ಅನೇಕ ಕಿಟಕಿಗಳಿವೆ. ಪ್ರತಿಯೊಂದು ಕಿಟಕಿಯಲ್ಲೂ ದೇವತೆಗಳು ಕುಳಿತಿರುವರು. ವಿಷಯಗಳೆಂಬ ಗಾಳಿಬೀಸುತ್ತಿರುವುದನ್ನು ಕಂಡಕೂಡಲೇ ಅವರು ಹಟದಿಂದ ಕಿಟಕಿಗಳನ್ನು ತೆರೆದುಬಿಡುತ್ತಾರೆ. ಹೃದಯವೆಂಬ ಮನೆಯಲ್ಲಿ ಆ ಬಿರುಗಾಳಿ ನುಗ್ಗುತ್ತಲೇ ವಿಜ್ಞಾನರೂಪೀ ದೀಪವು ಆರಿಹೋಗುವುದು. ಇತ್ತ ಗಂಟೂ ಬಿಚ್ಚಿಕೊಳ್ಳಲಿಲ್ಲ. ಅತ್ತ ಆ ಆತ್ಮಾನುಭವರೂಪಿಯಾದ ಬೆಳಕೂ ಆರಿಹೋಯಿತು. ವಿಷಯವೆಂಬ ಝುಂಝಾವಾತದಿಂದ ಬುದ್ಧಿ ತಲ್ಲಣಿಸಿತು. ಮಾಡಿದ್ದೆಲ್ಲ ವ್ಯರ್ಥವಾಯಿತು. ಇಂದ್ರಿಯಗಳಿಗೆ ಹಾಗೂ ಅವುಗಳ ದೇವತೆಗಳಿಗೆ ಸಹಜವಾಗಿಯೇ ಜ್ಞಾನವು ರುಚಿಸದು. ಏಕೆಂದರೆ ಅವುಗಳಿಗೆ ವಿಷಯ-ಭೋಗಗಳಲ್ಲಿ ಸದಾಕಾಲ ಪ್ರೀತಿ ಇರುತ್ತದೆ. ವಿಷಯ ಸಮೀರವು ಬುದ್ಧಿಯ ತಲೆಕೆಡಿಸಿಬಿಟ್ಟರೆ ಮತ್ತೆ ಯಾರು ಆ ಜ್ಞಾನದೀಪವನ್ನು ಬೆಳಗುವರು? (ಚೌ/೧-೮)

ದೋ – ತಬ ಫಿರಿ ಜೀವ ಬಿಬಿಧಿ ಬಿಧಿ ಪಾವಇ ಸಂಸೃತಿ ಕ್ಲೇಸ।
ಹರಿ ಮಾಯಾ ಅತಿ ದುಸ್ತರ ತರಿ ನ ಜಾಇ ಬಿಹಗೇಸ॥೧೧೮(ಕ)॥
ಕಹತ ಕಠಿನ ಸಮುಝತ ಕಠಿನ ಸಾಧತ ಕಠಿನ ಬಿಬೇಕ।
ಹೋಇ ಘುನಾಚ್ಛರ ನ್ಯಾಯ ಜೌ ಪುನಿ ಪ್ರತ್ಯೂಹ ಅನೇಕ॥೧೧೮(ಖ)॥

ಜ್ಞಾನದೀಪವು ಆರಿಹೋದಮೇಲೆ ಜೀವನು ಮರಳಿ ವಿವಿಧವಾದ ಜನ್ಮ-ಮರಣ ಪರಂಪರೆಯ ಕ್ಲೇಶಗಳಿಗೆ ತುತ್ತಾಗುವನು. ಓ ಖಗರಾಜಾ! ಹರಿಯ ಮಾಯೆ ಅತ್ಯಂತ ದುಸ್ತರ. ಸಹಜವಾಗಿ ಅದರಿಂದ ಪಾರಾಗುವುದು ಅಸಾಧ್ಯವು. ಈ ವಿವೇಕ ಜ್ಞಾನವು ಹೇಳುವುದಕ್ಕೂ, ಅರ್ಥಮಾಡಿಕೊಳ್ಳುವುದಕ್ಕೂ, ಸಾಧನೆಮಾಡಲೂ ಕಠಿಣವು. ಒಂದು ಪಕ್ಷ ಘುಣಾಕ್ಷರನ್ಯಾಯದಂತೆ, ಸಂಯೋಗವಶಾತ್ ಈ ಜ್ಞಾನ ದೊರೆತರೂ ಅದನ್ನು ಕಾಪಾಡುವುದರಲ್ಲಿ ಅನೇಕ ತೊಡಕುಗಳಿವೆ. (ದೋ/೧೧೮ ಕ, ಖ)

ಚೌ – ಗ್ಯಾನ ಪಂಥ ಕೃಪಾನ ಕೈ ಧಾರಾ। ಪರತ ಖಗೇಸ ಹೋಇ ನಹಿಂ ಬಾರಾ॥
ಜೋ ನಿರ್ಬಿಘ್ನ ಪಂಥ ನಿರ್ಬಹಈ। ಸೋ ಕೈವಲ್ಯ ಪರಮ ಪದ ಲಹಈ॥೧॥
ಅತಿ ದುರ್ಲಭ ಕೈವಲ್ಯ ಪರಮ ಪದ। ಸಂತ ಪುರಾನ ನಿಗಮ ಆಗಮ ಬದ॥
ರಾಮ ಭಜತ ಸೊಇ ಮುಕುತಿ ಗೊಸಾಈಂ। ಅನಇಚ್ಛಿತ ಆವಇ ಬರಿಆಈಂ॥೨॥

**ಜಿಮಿ ಥಲ ಬಿನು ಜಲ ರಹಿ ನ ಸಕಾಈ। ಕೋಟಿ ಭಾಂತಿ ಕೊಉ ಕರೈ ಉಪಾಈ॥**
**ತಥಾ ಮೋಚ್ಛ ಸುಖ ಸುನು ಖಗರಾಈ। ರಹಿ ನ ಸಕಇ ಹರಿ ಭಗತಿ ಬಿಹಾಈ ॥ ೩ ॥**
**ಅಸ ಬಿಚಾರಿ ಹರಿ ಭಗತ ಸಯಾನೇ। ಮುಕ್ತಿ ನಿರಾದರ ಭಗತಿ ಲುಭಾನೇ॥**
**ಭಗತಿ ಕರತ ಬಿನು ಜತನ ಪ್ರಯಾಸಾ। ಸಂಸೃತಿ ಮೂಲ ಅಬಿದ್ಯಾ ನಾಸಾ ॥ ೪ ॥**
**ಭೋಜನ ಕರಿಅ ತೃಪಿತಿ ಹಿತ ಲಾಗೀ। ಜಿಮಿ ಸೊ ಅಸನ ಪಚವೈ ಜಠರಾಗೀ॥**
**ಅಸಿ ಹರಿಭಗತಿ ಸುಗಮ ಸುಖದಾಈ। ಕೋ ಅಸ ಮೂಢ ನ ಜಾಹಿ ಸೊಹಾಈ ॥ ೫ ॥**

ಜ್ಞಾನಮಾರ್ಗವು ಕೃಪಾಣದ ಧಾರೆಯಂತೆ ಇದೆ. ಓ ಖಗೇಶಾ! ಈ ಹಾದಿಯಿಂದ ಚ್ಯುತನಾಗುವುದರಲ್ಲಿ, ಎಡಹುದರಲ್ಲಿ ತಡವಾಗದು. ಈ ಪಥವನ್ನು ನಿರ್ವಿಘ್ನವಾಗಿ ನಿರ್ವಹಿಸಬಲ್ಲವನು ಅತಿದುರ್ಲಭವಾದ ಪರಮಪದವನ್ನು ಪಡೆಯುತ್ತಾನೆ. ಕೈವಲ್ಯಪದವನ್ನು ಹೊಂದುವುದು ಅತ್ಯಂತ ಕ್ಲಿಷ್ಟಕಾರ್ಯವೆಂದು ಸಜ್ಜನರು, ವೇದ-ಶಾಸ್ತ್ರ-ಪುರಾಣಗಳು, ಪ್ರಾಜ್ಞರು ನುಡಿವರು. ಆದರೆ ಓ ಮಹಾತ್ಮಾ! ದುರ್ಲಭವಾದ ಆ ಮುಕ್ತಿಯೇ ಶ್ರೀರಾಮನ ಭಜನೆಯಿಂದ ಇಚ್ಛಿಸದೆಯೇ ಬಲವಂತವಾಗಿ ಬಂದು ಬಿಡುತ್ತದೆ. ಆಧಾರವಿಲ್ಲದೆ ಆಧೇಯ ನಿಲ್ಲದು. ಕೋಟಿ ಉಪಾಯ ಮಾಡಿದರೂ ನೆಲವಿಲ್ಲದೆ ಜಲನಿಲ್ಲದು. ಹಾಗೆಯೇ ಭಗವದ್ಭಕ್ತಿ ಇಲ್ಲದೆ ಮೋಕ್ಷಸುಖವು ಸ್ಥಿರವಾಗಿರಲಾರದು. ಈ ವಿಷಯವನ್ನು ಗ್ರಹಿಸಿ, ಬುದ್ಧಿವಂತರಾದ ಹರಿಭಕ್ತರು ಭಕ್ತಿಯಿಂದ ಆಕರ್ಷಿತರಾಗಿ ಮುಕ್ತಿಯನ್ನು ನಿರಾಕರಿಸುತ್ತಾರೆ. ಭಕ್ತಿ ಮಾಡುವುದರಿಂದ ಜನ್ಮ-ಮೃತ್ಯುರೂಪಿಯಾದ ಸಂಸಾರದ ಮೂಲವಾದ ಅವಿದ್ಯೆಯು ಪ್ರಯಾಸ, ಪ್ರಯತ್ನವಿಲ್ಲದೆಯೇ ತನ್ನಿಂದ ತಾನೇ ನಶಿಸಿಹೋಗುತ್ತದೆ. ಭೋಜನವನ್ನು ತೃಪ್ತಿಗಾಗಿ ಮಾಡುತ್ತೇವೆ. ಆ ಭೋಜನವನ್ನು ಜಠರಾಗ್ನಿಯು ನಮ್ಮ ಪ್ರಯತ್ನವಿಲ್ಲದೆ ಪಚನಮಾಡುತ್ತದೆ. ಹಾಗೆಯೇ ಹರಿಭಕ್ತಿಯು ಸಂತೃಪ್ತಿಕೊಡುತ್ತದೆ. ಅದು ಸುಲಭವು, ಸುಖಪ್ರದವು. ಇದು ರುಚಿಸದವರು ನಿಜವಾಗಿ ಮೂಢರೇ. (ಚೌ/೧-೫)

**ದೋ – ಸೇವಕ ಸೇಬ್ಯ ಭಾವ ಬಿನು ಭವ ನ ತರಿಅ ಉರಗಾರಿ।**
**ಭಜಹು ರಾಮ ಪದ ಪಂಕಜ ಅಸ ಸಿದ್ಧಾಂತ ಬಿಚಾರಿ ॥ ೧೧೯(ಕ)॥**
**ಜೋ ಚೇತನ ಕಹ್ ಜಡ ಕರಇ ಜಡಹಿ ಕರಇ ಚೈತನ್ಯ।**
**ಅಸ ಸಮರ್ಥ ರಘುನಾಯಕಹಿ ಭಜಹಿಂ ಜೀವ ತೇ ಧನ್ಯ ॥ ೧೧೯(ಖ)॥**

ಓ ಉರಗಾರಿ ಗರುಡಾ! 'ನಾನು ಸೇವಕನು. ಶ್ರೀರಾಮಚಂದ್ರಪ್ರಭುವು ಸ್ವಾಮಿಯು' ಎಂಬ ಸೇವ್ಯಸೇವಕ ಭಾವವಿಲ್ಲದೆ ಸಂಸಾರಸಾಗರವನ್ನು ದಾಟಲಾಗದು. ಈ ಸಿದ್ಧಾಂತದಲ್ಲಿ ವಿಶ್ವಾಸವಿರಿಸಿ ಶ್ರೀರಾಮನ ಚರಣಕಮಲಗಳನ್ನು ಭಜಿಸು. ಚೇತನವನ್ನು ಜಡವಾಗಿಯೂ, ಜಡವನ್ನು ಚೇತನವಾಗಿಯೂ ಮಾಡಲು ಸಮರ್ಥನಾದ ಶ್ರೀರಘುನಾಥನನ್ನು ಭಜಿಸುವವರೇ ಧನ್ಯರು. (ದೋ/೧೧೯ ಕ, ಖ)

**ಚೌ – ಕಹೆಉಂ ಗ್ಯಾನ ಸಿದ್ಧಾಂತ ಬುಝಾಈ। ಸುನಹು ಭಗತಿ ಮನಿ ಕೈ ಪ್ರಭುತಾಈ॥**
**ರಾಮ ಭಗತಿ ಚಿಂತಾಮನಿ ಸುಂದರ। ಬಸಇ ಗರುಡ ಜಾಕೇ ಉರ ಅಂತರ ॥ ೧ ॥**
**ಪರಮ ಪ್ರಕಾಸ ರೂಪ ದಿನ ರಾತೀ। ನಹಿಂ ಕಛು ಚಹಿಅ ದಿಆ ಘೃತ ಬಾತೀ॥**
**ಮೋಹ ದರಿದ್ರ ನಿಕಟ ನಹಿಂ ಆವಾ। ಲೋಭ ಬಾತ ನಹಿಂ ತಾಹಿ ಬುಝಾವಾ॥ ೨ ॥**
**ಪ್ರಬಲ ಅಬಿದ್ಯಾ ತಮ ಮಿಟಿ ಜಾಈ। ಹಾರಹಿಂ ಸಕಲ ಸಲಭ ಸಮುದಾಈ॥**
**ಖಲ ಕಾಮಾದಿ ನಿಕಟ ನಹಿಂ ಜಾಹೀಂ। ಬಸಇ ಭಗತಿ ಜಾಕೇ ಉರ ಮಾಹೀಂ ॥ ೩ ॥**
**ಗರಲ ಸುಧಾಸಮ ಅರಿ ಹಿತ ಹೋಈ। ತೆಹಿ ಮನಿ ಬಿನು ಸುಖ ಪಾವ ನ ಕೋಈ॥**
**ಬ್ಯಾಪಹಿಂ ಮಾನಸ ರೋಗ ನ ಭಾರೀ। ಜಿನ್ಹ ಕೇ ಬಸ ಸಬ ಜೀವ ದುಖಾರೀ ॥ ೪ ॥**
**ರಾಮ ಭಗತಿ ಮನಿ ಉರ ಬಸ ಜಾಕೇಂ। ದುಖ ಲವಲೇಸ ನ ಸಪನೇಹುಂ ತಾಕೇಂ॥**
**ಚತುರ ಸಿರೋಮನಿ ತೇಇ ಜಗ ಮಾಹೀಂ। ಜೇ ಮನಿ ಲಾಗಿ ಸುಜತನ ಕರಾಹೀಂ ॥ ೫ ॥**
**ಸೋ ಮನಿ ಜದಪಿ ಪ್ರಗಟ ಜಗ ಅಹಈ। ರಾಮ ಕೃಪಾ ಬಿನು ನಹಿಂ ಕೊಉ ಲಹಈ॥**
**ಸುಗಮ ಉಪಾಯ ಪಾಇಬೇ ಕೇರೇ। ನರ ಹತಭಾಗ್ಯ ದೇಹಿಂ ಭಟಭೇರೇ ॥ ೬ ॥**

**ಪಾವನ ಪರ್ಬತ ಬೇದ ಪುರಾನಾ। ರಾಮ ಕಥಾ ರುಚಿರಾಕರ ನಾನಾ॥**
**ಮರ್ಮೀ ಸಜ್ಜನ ಸುಮತಿ ಕುದಾರೀ। ಗ್ಯಾನ ಬಿರಾಗ ನಯನ ಉರಗಾರೀ॥ ೭॥**
**ಭಾವ ಸಹಿತ ಖೋಜಇ ಜೋ ಪ್ರಾನೀ। ಪಾವ ಭಗತಿ ಮನಿ ಸಬ ಸುಖ ಖಾನೀ॥**
**ಮೋರೇಂ ಮನ ಪ್ರಭು ಅಸ ಬಿಸ್ವಾಸಾ। ರಾಮ ತೆ ಅಧಿಕ ರಾಮ ಕರ ದಾಸಾ॥ ೮॥**
**ರಾಮ ಸಿಂಧು ಘನ ಸಜ್ಜನ ಧೀರಾ। ಚಂದನ ತರು ಹರಿ ಸಂತ ಸಮೀರಾ॥**
**ಸಬ ಕರ ಫಲ ಹರಿ ಭಗತಿ ಸುಹಾಈ। ಸೋ ಬಿನು ಸಂತ ನ ಕಾಹೂಂ ಪಾಈ॥ ೯॥**
**ಅಸ ಬಿಚಾರಿ ಜೋಇ ಕರ ಸತಸಂಗಾ। ರಾಮ ಭಗತಿ ತೆಹಿ ಸುಲಭ ಬಿಹಂಗಾ॥ ೧೦॥**

ಓ ಖಗರಾಜಾ! ನಾನು ಜ್ಞಾನಮಾರ್ಗ ಸಿದ್ಧಾಂತವನ್ನು ತಿಳಿಸಿ ಹೇಳಿದೆ. ಈಗ ಭಕ್ತಿಯೆಂಬ ಮಣಿಯ ಮಹಿಮೆಯನ್ನು ಆಲಿಸು. ಶ್ರೀರಾಮನ ಭಕ್ತಿಯು ಸುಂದರವಾದ ಚಿಂತಾಮಣಿಯು. ಇದನ್ನು ಹೃದಯದಲ್ಲಿ ಧರಿಸಿರುವವರು ಸ್ವಯಂ ಹಗಲಿರುಳು ಪರಮಪ್ರಕಾಶರೂಪಿಗಳಾಗುತ್ತಾರೆ. ಅದಕ್ಕೆ ತುಪ್ಪ, ಬತ್ತಿ, ಹಣತೆ ಯಾವುದೂ ಬೇಕಾಗುವುದಿಲ್ಲ. ಮೋಹವೆಂಬ ದಾರಿದ್ರ್ಯವು ಆತನ ಸಮೀಪಕ್ಕೆ ಬರದು. ಏಕೆಂದರೆ ಚಿಂತಾಮಣಿ ಸ್ವಯಂಪ್ರಕಾಶ ಮತ್ತು ಧನರೂಪವು. ಲೋಭವೆಂಬ ವಾಯುವು ಅದನ್ನು ಆರಿಸಲಾರದು. ಅದರ ಪ್ರಕಾಶದಿಂದ ಅವಿದ್ಯೆಯೆಂಬ ಗಾಢಾಂಧಕಾರವು ಅಳಿದುಹೋಗುತ್ತದೆ. ಮದಾದಿ ದೀಪದ ಹುಳುಗಳ ಸಮೂಹವು ಪರಾಜಿತವಾಗಿ ಹಿಮ್ಮೆಟ್ಟುತ್ತದೆ. ಹೃದಯದಲ್ಲಿ ಇಂತಹ ಭಕ್ತಿಯನ್ನು ನೆಲೆಗೊಳಿಸುವವನ ಬಳಿಗೆ ಕಾಮ, ಕ್ರೋಧ, ಲೋಭವೇ ಮೊದಲಾದ ದುಷ್ಟರು ಹತ್ತಿರವೂ ಸುಳಿಯಲಾರರು. ಅವನಿಗೆ ವಿಷವು ಅಮೃತದಂತೆ. ಶತ್ರುಗಳು ಮಿತ್ರರಾಗುತ್ತಾರೆ. ಆ ಮಣಿಯಿಲ್ಲದೆ ಯಾರೂ ಸುಖ ಪಡೆಯಲಾರರು. ಲೋಕದಲ್ಲಿ ಪೀಡಿಸುವ ಮಾನಸ ಜಾಡ್ಯಗಲು ಶ್ರೀರಾಮಭಕ್ತಿಯೆಂಬ ಮಣಿಯನ್ನು ಹೃದಯದಲ್ಲಿ ಧರಿಸುವವರಿಗೆ ಏನೂ ಪೀಡಿಸಲಾರವು. ಕನಸಿನಲ್ಲಿಯೂ ಆತನಿಗೆ ದುಃಖಗಳು ಉಂಟಾಗಲಾರವು. ಈ ಮಣಿಗಾಗಿ ಚೆನ್ನಾಗಿ ಪ್ರಯತ್ನಿಸುವವರು ಉತ್ತಮೋತ್ತಮರು, ದಕ್ಷರು. ಈ ಮಣಿಯು ಜಗತ್ತಿನಲ್ಲಿ ಪ್ರತ್ಯಕ್ಷವಾಗಿದ್ದರೂ ಶ್ರೀರಾಮನ ಅನುಗ್ರಹವಿಲ್ಲದೆ ಅದು ಯಾರಿಗೂ ದೊರಕದು. ಅದು ಸುಲಭವಾಗಿ ಪ್ರಾಪ್ತಿಯಾಗುವುದಿದ್ದರೂ ಭಾಗ್ಯಹೀನರು ಅದನ್ನು ಕಾಲಿನಿಂದ ದೂಡಿಬಿಟ್ಟು ಕ್ಲಿಷ್ಟವಾದ ಮಾರ್ಗವನ್ನು ಅನುಸರಿಸುವರು. ವೇದಪುರಾಣಗಳು ಪವಿತ್ರ ಪರ್ವತಗಳು ಶ್ರೀರಾಮನ ವಿವಿಧ ಕಥೆಗಳೇ ಆ ಪರ್ವತಗಳಲ್ಲಿರುವ ಸುಂದರ ಗಣಿಗಳು. ಸಾಧುಸಂತರೇ ಈ ಗಣಿಗಳ ರಹಸ್ಯವನ್ನು ಬಲ್ಲವರು. ಸುಂದರ ಬುದ್ಧಿಯೇ ಅಗೆಯುವ ಗುದ್ದಲಿ. ಗರುಡಾ! ಜ್ಞಾನ ವೈರಾಗ್ಯಗಳೇ ಅದರ ಎರಡು ಕಣ್ಣುಗಳು. ಪ್ರೇಮದಿಂದ ಅದನ್ನು ಅರಸುವವರೇ ಎಲ್ಲ ಸುಖಗಳ ಗಣಿಯಾದ ಆ ಭಕ್ತಿಮಣಿಯನ್ನು ಪಡೆಯುವರು. ಪ್ರಭೋ! ಶ್ರೀರಾಮನಿಗಿಂತಲೂ ಅವನ ದಾಸರೇ ದೊಡ್ಡವರೆಂಬುದು ನನ್ನ ನಂಬಿಕೆ. ಶ್ರೀರಾಮಚಂದ್ರನು ಸಮುದ್ರವಾದರೆ, ಧೀರ ಸಂತ ಪುರುಷರು ರಾಮತತ್ತ್ವವೆಂಬ ಜಲವನ್ನು ಮಳೆಗರೆಯುವ ಮೋಡಗಳು. ಹರಿಯು ಚಂದನ ತರುವಾದರೆ, ಸಂತನು ಅದರ ಸುಗಂಧವನ್ನು ಒಯ್ಯುವ ಗಾಳಿಯು. ಎಲ್ಲ ಸಾಧನೆಗಳ ಸುಂದರ ಫಲವೇ ಹರಿಭಕ್ತಿಯು. ಅದು ಸಂತರಿಗಲ್ಲದೆ ಬೇರಾರಿಗೂ ದೊರಕುವುದಿಲ್ಲ. ಗರುಡಾ! ಹೀಗೆ ಯೋಚಿಸಿ ಸತ್ಸಂಗವನ್ನು ಮಾಡುವವರಿಗೆ ಶ್ರೀರಾಮಭಕ್ತಿಯು ಸುಲಭವಾಗಿ ಲಭಿಸುವುದು. (ಚೌ/೧-೧೦)

**ದೋ – ಬ್ರಹ್ಮ ಪಯೋನಿಧಿ ಮಂದರ ಗ್ಯಾನ ಸಂತ ಸುರ ಆಹಿಂ।**
**ಕಥಾ ಸುಧಾ ಮಥಿ ಕಾಢಹಿಂ ಭಗತಿ ಮಧುರತಾ ಜಾಹಿಂ॥ ೧೨೦(ಕ)॥**
**ಬಿರತಿ ಚರ್ಮ ಅಸಿ ಗ್ಯಾನ ಮದ ಲೋಭ ಮೋಹ ರಿಪು ಮಾರಿ।**
**ಜಯ ಪಾಇಅ ಸೋ ಹರಿ ಭಗತಿ ದೇಖು ಖಗೇಸ ಬಿಚಾರಿ॥ ೧೨೦(ಖ)॥**

ಬ್ರಹ್ಮನೇ (ವೇದಗಳು) ಕ್ಷೀರಸಮುದ್ರ. ಜ್ಞಾನವೇ ಮಂದರಾಚಲ. ಸಂತರೇ ಸುರರು. ಅವರು ಈ ಸಮುದ್ರವನ್ನು ಮಥನಗೈದು ರಾಮಕಥೆಯೆಂಬ ಅಮೃತವನ್ನು ತೆಗೆಯುವರು. ಅದರಲ್ಲಿ ಭಕ್ತಿರೂಪೀ ಅಮೃತಮಾಧುರ್ಯ (ಸವಿ) ನೆಲೆಸಿದೆ. ವೈರಾಗ್ಯವೆಂಬ ಗುರಾಣಿ ಹಿಡಿದು ತನ್ನನ್ನು ರಕ್ಷಿಸಿಕೊಳ್ಳುತ್ತಾ, ಜ್ಞಾನವೆಂಬ ಖಡ್ಗದಿಂದ ಮದಮೋಹಲೋಭಾದಿ ಶತ್ರುಗಳೊಡನೆ ವಿಜಯ ಪಡೆಯುವುದೇ ಹರಿಭಕ್ತಿಯಾಗಿದೆ. ಖಗರಾಜಾ! ಇದನ್ನು ವಿಚಾರಮಾಡಿನೋಡು. (ದೋ/೧೨೦ ಕ, ಖ)

## ಗರುಡನ ಏಳು ಪ್ರಶ್ನೆಗಳು – ಉತ್ತರಗಳು

**ಚೌ – ಪುನಿ ಸಪ್ರೇಮ ಬೋಲೆಉ ಖಗರಾಊ। ಜೌಂ ಕೃಪಾಲ ಮೋಹಿ ಊಪರ ಭಾಊ॥**
**ನಾಥ ಮೋಹಿ ನಿಜ ಸೇವಕ ಜಾನೀ। ಸಪ್ತ ಪ್ರಸ್ನ ಮಮ ಕಹಹು ಬಖಾನೀ॥ ೧॥**

ಪ್ರಥಮಹಿಂ ಕಹಹು ನಾಥ ಮತಿಧೀರಾ । ಸಬ ತೇ ದುರ್ಲಭ ಕವನ ಸರೀರಾ ॥
ಬಡ ದುಖ ಕವನ ಕವನ ಸುಖ ಭಾರೀ । ಸೋಉ ಸಂಛೇಪಹಿಂ ಕಹಹು ಬಿಚಾರೀ ॥ ೨ ॥
ಸಂತ ಅಸಂತ ಮರಮ ತುಮ್ಹ ಜಾನಹು । ತಿನ್ಹ ಕರ ಸಹಜ ಸುಭಾವ ಬಖಾನಹು ॥
ಕವನ ಪುನ್ಯ ಶ್ರುತಿ ಬಿದಿತ ಬಿಸಾಲಾ । ಕಹಹು ಕವನ ಅಘ ಪರಮ ಕರಾಲಾ ॥ ೩ ॥
ಮಾನಸ ರೋಗ ಕಹಹು ಸಮುಝಾಈ । ತುಮ್ಹ ಸರ್ಬಗ್ಯ ಕೃಪಾ ಅಧಿಕಾಈ ॥
ತಾತ ಸುನಹು ಸಾದರ ಅತಿ ಪ್ರೀತೀ । ಮೈಂ ಸಂಛೇಪ ಕಹಉಂ ಯಹ ನೀತೀ ॥ ೪ ॥
ನರ ತನ ಸಮ ನಹಿಂ ಕವನಿಉ ದೇಹೀ । ಜೀವ ಚರಾಚರ ಜಾಚತ ತೇಹೀ ॥
ನರಕ ಸ್ವರ್ಗ ಅಪಬರ್ಗ ನಿಸೇನೀ । ಗ್ಯಾನ ಬಿರಾಗ ಭಗತಿ ಸುಭ ದೇನೀ ॥ ೫ ॥
ಸೋ ತನು ಧರಿ ಹರಿ ಭಜಹಿಂ ನ ಜೇ ನರ । ಹೋಹಿಂ ಬಿಷಯ ರತ ಮಂದ ಮಂದ ತರ ॥
ಕಾಂಚ ಕಿರಿಚ ಬದಲೇಂ ತೇ ಲೇಹೀಂ । ಕರ ತೇ ಡಾರಿ ಪರಸ ಮನಿ ದೇಹೀಂ ॥ ೬ ॥
ನಹಿಂ ದರಿದ್ರ ಸಮ ದುಖ ಜಗ ಮಾಹೀಂ । ಸಂತ ಮಿಲನ ಸಮ ಸುಖ ಜಗ ನಾಹೀಂ ॥
ಪರ ಉಪಕಾರ ಬಚನ ಮನ ಕಾಯಾ । ಸಂತ ಸಹಜ ಸುಭಾಉ ಖಗರಾಯಾ ॥ ೭ ॥
ಸಂತ ಸಹಹಿಂ ದುಖ ಪರಹಿತ ಲಾಗೀ । ಪರದುಖ ಹೇತು ಅಸಂತ ಅಭಾಗೀ ॥
ಭೂರ್ಜ ತರೂ ಸಮ ಸಂತ ಕೃಪಾಲಾ । ಪರಹಿತ ನಿತಿ ಸಹ ಬಿಪತಿ ಬಿಸಾಲಾ ॥ ೮ ॥
ಸನ ಇವ ಖಲ ಪರ ಬಂಧನ ಕರಈ । ಖಾಲ ಕಢಾಇ ಬಿಪತಿ ಸಹಿ ಮರಈ ॥
ಖಲ ಬಿನು ಸ್ವಾರಥ ಪರ ಅಪಕಾರೀ । ಅಹಿ ಮೂಷಕ ಇವ ಸುನು ಉರಗಾರೀ ॥ ೯ ॥
ಪರ ಸಂಪದಾ ಬಿನಾಸಿ ನಸಾಹೀಂ । ಜಿಮಿ ಸಸಿ ಹತಿ ಹಿಮ ಉಪಲ ಬಿಲಾಹೀಂ ॥
ದುಷ್ಟ ಉದಯ ಜಗ ಆರತಿ ಹೇತೂ । ಜಥಾ ಪ್ರಸಿದ್ಧ ಅಧಮ ಗ್ರಹ ಕೇತೂ ॥ ೧೦ ॥
ಸಂತ ಉದಯ ಸಂತತ ಸುಖಕಾರೀ । ಬಿಸ್ವ ಸುಖದ ಜಿಮಿ ಇಂದು ತಮಾರೀ ॥
ಪರಮ ಧರ್ಮ ಶ್ರುತಿ ಬಿದಿತ ಅಹಿಂಸಾ । ಪರ ನಿಂದಾ ಸಮ ಅಘ ನ ಗರೀಸಾ ॥ ೧೧ ॥
ಹರ ಗುರ ನಿಂದಕ ದಾದುರ ಹೋಈ । ಜನ್ಮ ಸಹಸ್ರ ಪಾವ ತನ ಸೋಈ ॥
ದ್ವಿಜ ನಿಂದಕ ಬಹು ನರಕ ಭೋಗ ಕರಿ । ಜಗ ಜನಮಇ ಬಾಯಸ ಸರೀರ ಧರಿ ॥ ೧೨ ॥
ಸುರ ಶ್ರುತಿ ನಿಂದಕ ಜೇ ಅಭಿಮಾನೀ । ರೌರವ ನರಕ ಪರಹಿಂ ತೇ ಪ್ರಾನೀ ॥
ಹೋಹಿಂ ಉಲೂಕ ಸಂತ ನಿಂದಾ ರತ । ಮೋಹ ನಿಸಾ ಪ್ರಿಯ ಗ್ಯಾನ ಭಾನು ಗತ ॥ ೧೩ ॥
ಸಬ ಕೈ ನಿಂದಾ ಜೇ ಜಡ ಕರಹೀಂ । ತೇ ಚಮಗಾದುರ ಹೋಇ ಅವತರಹೀಂ ॥
ಸುನಹು ತಾತ ಅಬ ಮಾನಸ ರೋಗಾ । ಜಿನ್ಹ ತೇ ದುಖ ಪಾವಹಿಂ ಸಬ ಲೋಗಾ ॥ ೧೪ ॥
ಮೋಹ ಸಕಲ ಬ್ಯಾಧಿನ್ಹ ಕರ ಮೂಲಾ । ತಿನ್ಹ ತೇ ಪುನಿ ಉಪಜಹಿ ಬಹು ಸೂಲಾ ॥
ಕಾಮ ಬಾತ ಕಫ ಲೋಭ ಅಪಾರಾ । ಕ್ರೋಧ ಪಿತ್ತ ನಿತ ಛಾತೀ ಜಾರಾ ॥ ೧೫ ॥
ಪ್ರೀತಿ ಕರಹಿಂ ಜೌಂ ತೀನಿಉ ಭಾಈ । ಉಪಜಇ ಸನ್ಯಪಾತ ದುಖದಾಈ ॥
ಬಿಷಯ ಮನೋರಥ ದುರ್ಗಮ ನಾನಾ । ತೇ ಸಬ ಸೂಲ ನಾಮ ಕೋ ಜಾನಾ ॥ ೧೬ ॥
ಮಮತಾ ದಾದು ಕಂಡು ಇರಷಾಈ । ಹರಷ ಬಿಷಾದ ಗರಹ ಬಹುತಾಈ ॥
ಪರ ಸುಖ ದೇಖಿ ಜರನಿ ಸೋಇ ಛಈ । ಕುಷ್ಟ ದುಷ್ಟತಾ ಮನ ಕುಟಿಲಈ ॥ ೧೭ ॥
ಅಹಂಕಾರ ಅತಿ ದುಖದ ಡಮರುಆ । ದಂಭ ಕಪಟ ಮದ ಮಾನ ನೆಹರುಆ ॥
ತೃಸ್ನಾ ಉದರಬೃದ್ಧಿ ಅತಿ ಭಾರೀ । ತ್ರಿಬಿಧ ಈಷನಾ ತರುನ ತಿಜಾರೀ ॥ ೧೮ ॥
ಜುಗ ಬಿಧಿ ಜ್ವರ ಮತ್ಸರ ಅಬಿಬೇಕಾ । ಕಹಂ ಲಗಿ ಕಹೌಂ ಕುರೋಗ ಅನೇಕಾ ॥ ೧೯ ॥

ಅನಂತರ ಖಗರಾಜನಾದ ಗರುಡನು ಪ್ರೇಮದಿಂದ ಇಂತೆಂದನು – ''ಕೃಪಾಳುವೇ! ನನ್ನ ಮೇಲೆ ಪ್ರೇಮವಿರುವುದಾದರೆ ಪ್ರಭೋ! ನನ್ನನ್ನು ನಿಮ್ಮ ಸೇವಕನೆಂದು ಭಾವಿಸಿ, ನನ್ನ ಏಳು ಪ್ರಶ್ನೆಗಳಿಗೆ ದಯಮಾಡಿ ಉತ್ತರವನ್ನು ಕೊಡಿರಿ. ಓ ಧೀರಮತಿಯೇ! (೧) ಅತ್ಯಂತ ದುರ್ಲಭವಾದ ಜನ್ಮ ಯಾವುದು? (೨) ಎಲ್ಲಕ್ಕಿಂತ ಘೋರವಾದ ದುಃಖವಾವುದು? (೩) ಎಲ್ಲಕ್ಕಿಂತ ದೊಡ್ಡ ಸುಖ ಯಾವುದು? (೪) ಸಜ್ಜನರ ಲಕ್ಷಣಗಳು, ದುರ್ಜನರ ಸ್ವಭಾವವು ಯಾವುದು? ಅವರಲ್ಲಿನ ಭೇದವೇನು? (೫) ಶ್ರುತಿಗಳಲ್ಲಿ ಹೇಳಲ್ಪಟ್ಟ ದೊಡ್ಡ ಪುಣ್ಯಕಾರ್ಯ ಯಾವುದು? (೬) ಭಯಂಕರವಾದ ಪಾಪಕಾರ್ಯ ಯಾವುದು? (೭) ಮಾನಸಿಕ ರೋಗಗಳು ಯಾವುವು? ನೀವು ಸರ್ವಜ್ಞರೂ, ನನ್ನ ಮೇಲೆ ಅಪಾರವಾದ ಕೃಪೆಯುಳ್ಳವರು. ಈ ಎಲ್ಲ ವಿಷಯಗಳನ್ನು ವಿವರವಾಗಿ ತಿಳಿಸಿರಿ.'' ಕಾಕಭುಶುಂಡಿಯವರು ಹೇಳತೊಡಗಿದರು – ಅಯ್ಯಾ! ನಾನು ಈ ನೀತಿಯನ್ನು ಸಂಕ್ಷೇಪವಾಗಿ ಶ್ರುತಪಡಿಸುತ್ತೇನೆ. ಪ್ರೇಮಾದರಗಳಿಂದ ಆಲಿಸಿರಿ. (೧) ಮಾನವಜನ್ಮ ದುರ್ಲಭವಾದುದು. ಇದಕ್ಕೆ ಸಮಾನವಾದ ಜನ್ಮವು ಯಾವುದೂ ಇಲ್ಲ. ಚರಾಚರ (ಜಡಚೇತನ) ಪ್ರಾಣಿಗಳೆಲ್ಲವೂ ಈ ಜನ್ಮಕ್ಕಾಗಿ ಹಾತೊರೆಯುತ್ತವೆ. ಈ ಮಾನವ ಜನ್ಮವು ನರಕ, ಸ್ವರ್ಗ, ಮೋಕ್ಷ ಇವುಗಳ ನಿಚ್ಚಣಿಕೆಯಾಗಿದೆ. ಇದು ಶ್ರೇಯಸ್ಕರ ಜ್ಞಾನ, ವೈರಾಗ್ಯ, ಭಕ್ತಿ ದೊರಕಿಸುವಂತಹುದು. ಇಂತಹ ಜನ್ಮ ಪಡೆದರೂ ಶ್ರೀಹರಿಯನ್ನು ಭಜಿಸದೆ, ನೀಚ ವಿಷಯಗಳಲ್ಲಿ ಅನುರಕ್ತರಾಗಿರುವ ಮನುಜರು, ಪರಶುಮಣಿಯನ್ನು ಕೈಯಾರೆ ಎಸೆದು, ಬದಲಿಗೆ ಗಾಜಿನ ಚೂರನ್ನು ಎತ್ತಿಕೊಳ್ಳುವರು. (೨) ಜಗತ್ತಿನಲ್ಲಿ ದಾರಿದ್ರ್ಯಕ್ಕಿಂತ ಮಿಗಿಲಾದ ದುಃಖವು ಇಲ್ಲ. (೩) ಸತ್ಸಂಗತ್ಯಕ್ಕೆ ಸಮಾನವಾದ ಸುಖವು ಇಲ್ಲ. ಖಗೇಶ್ವರಾ! (೪) ಮನೋವಾಕ್ಕಾಯಗಳಿಂದ ಪರೋಪಕಾರ ಮಾಡುವುದೇ ಸಜ್ಜನರ ಸಹಜ ಸ್ವಭಾವವು. ಸಜ್ಜನರು ಪರಹಿತಕ್ಕಾಗಿ ದುಃಖವನ್ನು ಸಹಿಸುತ್ತಾರೆ. ಆದರೆ ದುರ್ಭಾಗ್ಯ ದುರ್ಜನರು ಇತರರಿಗೆ ದುಃಖವನ್ನು ನೀಡಲು ತಾವು ಎಂತಹ ಶ್ರಮವನ್ನಾದರೂ ಸಹಿಸುವರು. ದಯಾಳುಗಳಾದ ಸಂತರು ಭೂರ್ಜವೃಕ್ಷದಂತೆ (ತಮ್ಮ ಚರ್ಮವನ್ನೇ ಸುಲಿದುಕೊಟ್ಟು) ಪರರ ಹಿತಕ್ಕಾಗಿ ದೊಡ್ಡ ವಿಪತ್ತನ್ನು ಸಹಿಸುತ್ತಾರೆ. ಆದರೆ ದುಷ್ಟ ಜನರು ಸೆಣಬಿನ ನಾರಿನಂತೆ ಇತರರನ್ನು ಬಂಧಿಸುತ್ತಾರೆ. ಅವರನ್ನು ಬಂಧಿಸಲು ತಮ್ಮ ಚರ್ಮ ಸುಲಿಸಿಕೊಂಡು ನೋವುತಿಂದು ಸಾಯುತ್ತಾರೆ. ಉರಗಾರಿ ಗರುಡಾ! ಯಾವ ಪ್ರಯೋಜನವಿಲ್ಲದೆ, ನಿಷ್ಕಾರಣವಾಗಿ ಹಾವು, ಇಲಿಗಳು ಇತರರಿಗೆ ಅಪಕಾರಗೈಯುವಂತೆ, ದುರ್ಜನರು ಇತರರಿಗೆ ಹಾನಿಯನ್ನು ಮಾಡುತ್ತಿರುತ್ತಾರೆ. ಕೃಷಿಯನ್ನು ನಾಶಮಾಡಿ ತಾನೂ ನಾಶವಾಗುವ ಮಂಜಿನಂತೆ ದುಷ್ಟರು ಪರರ ಸಂಪತ್ತನ್ನು ನಾಶಮಾಡಿ, ತಾವೂ ನಾಶವಾಗುತ್ತಾರೆ. ದುಷ್ಟನ ಏಳಿಗೆ, ಅಭ್ಯುದಯವು ಅಧಮಗ್ರಹವಾದ ಕೇತುವಿನ ಉದಯದಂತೆ ಜಗತ್ತಿನ ದುಃಖಕ್ಕಾಗಿಯೇ ಇರುತ್ತದೆ. ಸೂರ್ಯ, ಚಂದ್ರರ ಉದಯವು ವಿಶ್ವಕ್ಕೆ ಸುಖಪ್ರದವಾಗುವಂತೆ, ಸಂತರ ಅಭ್ಯುದಯವು ಮಾನವರೆಲ್ಲರಿಗೂ, ಸುಖದಾಯಕವಾಗಿರುತ್ತದೆ. (೫) 'ಅಹಿಂಸಾ ಪರಮೋಧರ್ಮಃ' ಎಂಬುದು ವೇದಪ್ರಮಾಣವು. (೬) ಇತರರನ್ನು ನಿಂದಿಸುವಂತಹ ಮಹಾಪಾಪವು ಬೇರೊಂದಿಲ್ಲ. ಶಂಕರನನ್ನು, ತನ್ನ ಗುರುವನ್ನು ನಿಂದಿಸುವವನು ಕಪ್ಪೆಯಾಗಿ ಜನ್ಮವೆತ್ತುವನು. ಬ್ರಾಹ್ಮಣರನ್ನು ನಿಂದಿಸುವವನು ಅನೇಕ ನರಕಯಾತನೆಗಳನ್ನು ಅನುಭವಿಸಿ, ಜಗತ್ತಿನಲ್ಲಿ ಕಾಗೆಯಾಗಿ ಹುಟ್ಟುವನು. ದೇವತೆಗಳನ್ನು, ವೇದಗಳನ್ನು ನಿಂದಿಸುವ ಅಹಂಕಾರಿ ಜನರು ರೌರವ ನರಕಕ್ಕೆ ಹೋಗುತ್ತಾರೆ. ಸಂತರ ನಿಂದೆಯಲ್ಲಿ ನಿರತರಾದವರು ಗೂಬೆಯಾಗಿ ಹುಟ್ಟುವರು. ಅವರಿಗೆ ಅಜ್ಞಾನರೂಪೀ ರಾತ್ರಿಯೇ ಪ್ರಿಯವಾಗಿರುತ್ತದೆ. ಜ್ಞಾನರೂಪೀ ಸೂರ್ಯೋದಯವನ್ನು ಅವರು ಕಾಣಲಾರರು. ಎಲ್ಲರನ್ನು ನಿಂದಿಸುವ ಮೂರ್ಖರು ಬಾವಲಿಗಳಾಗಿ ಜನಿಸುವರು. ಅಯ್ಯಾ! (೭) ಈಗ ಎಲ್ಲರಿಗೂ ದುಃಖವನ್ನುಂಟುಮಾಡುವ ಮಾನಸರೋಗಗಳ ಕುರಿತು ಕೇಳು. ಮೋಹ (ಅಜ್ಞಾನ)ವೇ ಸಮಸ್ತ ರೋಗಗಳ ಮೂಲ. ಅದರಿಂದಾಗಿ ಮತ್ತೆ ಅನೇಕ ವಿಧವಾದ ಶೂಲ (ದುಃಖ) ಗಳು ಉಂಟಾಗುವವು. ಕಾಮವು ವಾತರೋಗವು. ಅಪಾರವಾದ ಲೋಭವೇ ಕಫವ್ಯಾಧಿ. ಕ್ರೋಧವೇ ಯಾವಾಗಲೂ ಎದೆಯನ್ನು ಉರಿಸುವ ಪಿತ್ತರೋಗ. ವಾತ, ಪಿತ್ತ, ಕಫ ಈ ಮೂವರು ಸೋದರರು ಒಂದುಗೂಡಿದರೆ ದುಃಖದಾಯಕ ಸನ್ನಿಪಾತರೋಗ ಉಂಟಾಗುತ್ತದೆ. ಕಷ್ಟದಿಂದ ಈಡೇರುವ ವಿಷಯಗಳ ಮನೋರಥಗಳೇ ಎಲ್ಲ ಶೂಲೆಗಳು, ಕಷ್ಟದಾಯಕ ಅನಂತ ರೋಗಗಳು. ಇವುಗಳ ಹೆಸರು ಯಾರು ಬಲ್ಲರು? ಅವು ಅಪಾರ! ಮಮತೆಯೇ ಹುಳುಕಡ್ಡಿ, ಗಜಕರ್ಣ. ಈರ್ಷ್ಯೆಯೇ ಕಜ್ಜಿ. ಹರ್ಷ ವಿಷಾದಗಳೇ ಗಂಡಮಾಲೆ ಮುಂತಾದ ಗಂಟಲರೋಗಗಳು. ಇತರರ ಸುಖವನ್ನು ನೋಡಿ ಅಸೂಯೆ ಪಡುವುದೇ ಕ್ಷಯರೋಗವು. ದುಷ್ಟತನ, ಮನದ ಕುಟಿಲತೆಯೇ ಕುಷ್ಠರೋಗ. ಅಹಂಕಾರವೇ ಅತ್ಯಂತ ಬಾಧಕವಾದ 'ಡಮರು' (ಗಂಟಲರೋಗ) ವ್ಯಾಧಿ. ದಂಭ, ಕಪಟ, ಮದ, ದುರಭಿಮಾನ ಇವು ನರಗಳಿಗೆ ಸಂಬಂಧಪಟ್ಟರೋಗಗಳು. ತೃಷ್ಣೆಯೇ ಭಾರೀ ಜಲೋದರ ವ್ಯಾಧಿ. ಪುತ್ರ, ಧನ, ಕೀರ್ತಿ ಈ ರೀತಿಯ ಈಷಣತ್ರಯಗಳ ಪ್ರಬಲ ಇಚ್ಛೆಯೇ ಮೂರುದಿನಗಳಿಗೊಮ್ಮೆ ಬರುವ ಜ್ವರ. ಮತ್ಸರ, ಅವಿವೇಕ ಎಂಬುದು ಮತ್ತೆರಡು ಜ್ವರಗಳು. ಈ ಪ್ರಕಾರ ಅನೇಕ ಕೆಟ್ಟ ರೋಗಗಳಿವೆ. ಇದನ್ನು ಎಲ್ಲಿಯವರೆಗೆಂದು ಹೇಳಲಿ? (ಚೌ/೧-೧೯)

**ದೋ – ಏಕ ಬ್ಯಾಧಿ ಬಸ ನರ ಮರಹಿಂ ಏ ಅಸಾಧಿ ಬಹು ಬ್ಯಾಧಿ।**
**ಪೀಡಹಿಂ ಸಂತತ ಜೀವ ಕಹುಂ ಸೋ ಕಿಮಿ ಲಹೈ ಸಮಾಧಿ॥ ೧೨೧(ಕ)॥**

**ನೇಮ ಧರ್ಮ ಆಚಾರ ತಪ ಗ್ಯಾನ ಜಗ್ಯ ಜಪ ದಾನ।**
**ಭೇಷಜ ಪುನಿ ಕೋಟಿನ್ಹ ನಹಿಂ ರೋಗ ಜಾಹಿಂ ಹರಿಜಾನ ॥ ೧೨೧(ಖ)॥**

ಯಾವುದೋ ಒಂದು ರೋಗಕ್ಕೆ ತುತ್ತಾದರೆ ಮನುಷ್ಯನು ಸಾಯುವನು. ಅಂತಹುದರಲ್ಲಿ ಅಸಾಧ್ಯವಾದ ಇಷ್ಟೊಂದು ರೋಗಗಳು ಆತನನ್ನು ನಿರಂತರ ಪೀಡಿಸುತ್ತವೆ. ಆ ನಿರ್ಭಾಗ್ಯನು ಪರಮಶಾಂತಿಯನ್ನು ಹೇಗೆ ಹೊಂದಬಲ್ಲನು? ಈ ರೋಗಗಳಿಗೆ ನಿಯಮ, ಧರ್ಮ, ಉತ್ತಮ ಆಚರಣೆ, ತಪಸ್ಸು, ಜ್ಞಾನ, ಯಜ್ಞ, ಜಪ, ದಾನ ಇವುಗಳು ಹಾಗೂ ಇನ್ನೂ ಹಲವಾರು ಔಷಧಗಳಿವೆ. ಆದರೆ ಖಗರಾಜಾ! ಇವುಗಳಿಂದ ಈ ರೋಗಗಳು ಜಗ್ಗುವುದಿಲ್ಲ. (ದೋ/೧೨೧ ಕ, ಖ)

**ಚೌ – ಎಹಿ ಬಿಧಿ ಸಕಲ ಜೀವ ಜಗ ರೋಗೀ। ಸೋಕ ಹರಷ ಭಯ ಪ್ರೀತಿ ಬಿಯೋಗೀ॥**
**ಮಾನಸ ರೋಗ ಕಛುಕ ಮೈಂ ಗಾಏ। ಹಹಿಂ ಸಬ ಕೇಂ ಲಖಿ ಬಿರಲೆನ್ಹ ಪಾಏ ॥ ೧ ॥**
**ಜಾನೇ ತೇ ಛೀಜಹಿಂ ಕಛು ಪಾಪೀ। ನಾಸ ನ ಪಾವಹಿಂ ಜನ ಪರಿತಾಪೀ॥**
**ಬಿಷಯ ಕುಪಥ್ಯ ಪಾಇ ಅಂಕುರೇ। ಮುನಿಹು ಹೃದಯಂ ಕಾ ನರ ಬಾಪುರೇ॥ ೨ ॥**
**ರಾಮ ಕೃಪಾಂ ನಾಸಹಿಂ ಸಬ ರೋಗಾ। ಜೌಂ ಎಹಿ ಭಾಂತಿ ಬನೈ ಸಂಜೋಗಾ॥**
**ಸದಗುರ ಬೈದ ಬಚನ ಬಿಸ್ವಾಸಾ। ಸಂಜಮ ಯಹ ನ ಬಿಷಯ ಕೈ ಆಸಾ ॥ ೩ ॥**
**ರಘುಪತಿ ಭಗತಿ ಸಜೀವನ ಮೂರೀ। ಅನೂಪಾನ ಶ್ರದ್ಧಾ ಮತಿ ಪೂರೀ ॥**
**ಎಹಿ ಬಿಧಿ ಭಲೆಹಿಂ ಸೊ ರೋಗ ನಸಾಹೀಂ। ನಾಹಿಂ ತ ಜತನ ಕೋಟಿ ನಹಿಂ ಜಾಹೀಂ ॥ ೪ ॥**
**ಜಾನಿಅ ತಬ ಮನ ಬಿರುಜ ಗೊಸಾಂಈ। ಜಬ ಉರ ಬಲ ಬಿರಾಗ ಅಧಿಕಾಈ॥**
**ಸುಮತಿ ಛುಧಾ ಬಾಢಇ ನಿತ ನಈ। ಬಿಷಯ ಆಸ ದುರ್ಬಲತಾ ಗಈ ॥ ೫ ॥**
**ಬಿಮಲ ಗ್ಯಾನ ಜಲ ಜಬ ಸೊ ನಹಾಈ। ತಬ ರಹ ರಾಮ ಭಗತಿ ಉರ ಛಾಈ॥**
**ಸಿವ ಅಜ ಸುಕ ಸನಕಾದಿಕ ನಾರದ। ಜೇ ಮುನಿ ಬ್ರಹ್ಮ ಬಿಚಾರ ಬಿಸಾರದ॥ ೬ ॥**
**ಸಬ ಕರ ಮತ ಖಗನಾಯಕ ಏಹಾ। ಕರಿಅ ರಾಮ ಪದ ಪಂಕಜ ನೇಹಾ ॥**
**ಶ್ರುತಿ ಪುರಾನ ಸಬ ಗ್ರಂಥ ಕಹಾಹೀಂ। ರಘುಪತಿ ಭಗತಿ ಬಿನಾ ಸುಖ ನಾಹೀಂ ॥ ೭ ॥**
**ಕಮಠ ಪೀಠ ಜಾಮಹಿಂ ಬರು ಬಾರಾ। ಬಂಧ್ಯಾ ಸುತ ಬರು ಕಾಹುಹಿ ಮಾರಾ॥**
**ಫೂಲಹಿಂ ನಭ ಬರು ಬಹುಬಿಧಿ ಫೂಲಾ। ಜೀವ ನ ಲಹ ಸುಖ ಹರಿ ಪ್ರತಿಕೂಲಾ ॥ ೮ ॥**
**ತೃಷಾ ಜಾಇ ಬರು ಮೃಗಜಲ ಪಾನಾ । ಬರು ಜಾಮಹಿಂ ಸಸ ಸೀಸ ಬಿಷಾನಾ॥**
**ಅಂಧಕಾರು ಬರು ರ'ಬಿಹಿ ನಸಾವೈ। ರಾಮ ಬಿಮುಖ ನ ಜೀವ ಸುಖ ಪಾವೈ॥ ೯ ॥**
**ಹಿಮ ತೇ ಅನಲ ಪ್ರಗಟ ಬರು ಹೋಈ। ಬಿಮುಖ ರಾಮ ಸುಖ ಪಾವ ನ ಕೋಈ ॥ ೧೦ ॥**

ಈ ವಿಧವಾಗಿ ಜಗತ್ತಿನಲ್ಲಿ ಎಲ್ಲ ಜೀವರು ರೋಗಪೀಡಿತರೇ. ಅವರೆಲ್ಲರೂ ಶೋಕ, ಹರ್ಷ, ಭಯ, ಪ್ರೀತಿ, ವಿಯೋಗದುಃಖದಿಂದ ಇನ್ನೂ ದುಃಖಿತರಾಗುತ್ತಾರೆ. ನಾನು ಕೆಲವು ಮಾನಸಿಕ ರೋಗಗಳನ್ನು ಹೇಳಿರುವೆನು. ಈ ರೋಗಗಳು ಎಲ್ಲರಿಗೂ ಪೀಡಿಸುತ್ತಿದ್ದರೂ, ಕೆಲವರು ಮಾತ್ರ ಇವನ್ನು ಗುರ್ತಿಸಬಲ್ಲರು. ಜೀವಿಗಳಿಗೆ ವಿಶೇಷವಾಗಿ ತಾಪದಾಯಕ ಈ ಪಾಪೀ ರೋಗಗಳನ್ನು ಅರಿತುಕೊಳ್ಳುವುದರಿಂದ ಸ್ವಲ್ಪ ಉಪಶಮನವಾಗಬಲ್ಲದು. ಆದರೆ ಪೂರ್ತಿಯಾಗಿ ಅವು ನಾಶವಾಗುವುದಿಲ್ಲ. ವಿಷಯರೂಪೀ ಕುಪಥ್ಯದಿಂದಾಗಿ ಇವು ಮುನಿಗಳ ಹೃದಯಗಳಲ್ಲಿ ಕೂಡ ಅಂಕುರಿಸುವವು. ಹೀಗಿರುವಾಗ ಸಾಧಾರಣ ಮನುಷ್ಯರ ಕುರಿತು ಹೇಳುವದೇನಿದೆ? ಶ್ರೀರಾಮನ ಕೃಪೆಯಿಂದ ಹಿಂದೆ ಹೇಳಿದ ಸಂತರ ಸಂಗ ದೊರೆತರೆ ಈ ಎಲ್ಲ ರೋಗಗಳು ನಶಿಸುವವು. ಸದ್ಗುರುವೆಂಬ ವೈದ್ಯನ ಮೇಲೆ ವಿಶ್ವಾಸವಿರಿಸಬೇಕು. ವಿಷಯಗಳನ್ನು ಬಯಸಬಾರದು. ಸಂಯಮ ಪಥ್ಯವಿರಬೇಕು. ಶ್ರೀರಘುನಾಥನ ಮೇಲಿನ ಭಕ್ತಿಯೇ ಸಂಜೀವನಿ ಮೂಲಿಕೆ. ಶ್ರದ್ಧೆಯಿಂದೊಡಗೂಡಿದ ಬುದ್ಧಿಯೇ ಔಷಧಿಯೊಂದಿಗೆ ತೆಗೆದುಕೊಳ್ಳಬೇಕಾದ ಜೇನುತುಪ್ಪವೇ ಮೊದಲಾದವುಗಳು ಅನುಪಾನ. ಇಂತಹ ಸಂಯೋಗ ಘಟಿಸಿದರೆ ಆ ರೋಗಗಳು ನಾಶವಾದಾವು. ಇಲ್ಲದಿದ್ದರೆ ಕೋಟಿ ಪ್ರಯತ್ನಗಳಿಂದಲೂ ಹೋಗಲಾರವು. ಅಯ್ಯಾ! ಹೃದಯದಲ್ಲಿ ವೈರಾಗ್ಯ ಬಲಿತಾಗ, ಉತ್ತಮ ಬುದ್ಧಿಯೆಂಬ ಹಸಿವು ಹೆಚ್ಚಿದಾಗ, ವಿಷಯಗಳ ಆಶೆಯೆಂಬ ದುರ್ಬಲತೆ ತೊಲಗಿದರೆ, ಮನಸ್ಸು ನಿರೋಗವಾಯಿತೆಂದು ತಿಳಿಯಬೇಕು. ರೋಗರಹಿತನಾದ ಮಾನವನು ನಿರ್ಮಲಜ್ಞಾನವೆಂಬ ಜಲದಲ್ಲಿ ಸ್ನಾನಮಾಡಿದಾಗ,

ಅವನ ಹೃದಯದಲ್ಲಿ ಶ್ರೀರಾಮಭಕ್ತಿಯು ಆವರಿಸುತ್ತದೆ. ಶ್ರೀರಾಮನ ಚರಣಕಮಲಗಳಲ್ಲಿ ಭಕ್ತಿ ಉಂಟಾಗುವುದೇ ತರಣೋಪಾಯವೆಂದು ಶಿವನು, ಬ್ರಹ್ಮದೇವರು, ಶುಕ ಮಹಾಮುನಿಯು, ನಾರದ ಮಹರ್ಷಿಯು, ಸನಕಾದಿ ಮುನಿಗಳು ಮೊದಲಾದ ಪರಮನಿಪುಣ ಬ್ರಹ್ಮಜ್ಞಾನಿಗಳು ಅಭಿಪ್ರಾಯಪಟ್ಟಿರುವರು. ಶ್ರೀರಘುನಾಥನಲ್ಲಿ ಭಕ್ತಿಯಿಲ್ಲದೆ ಸುಖವಿಲ್ಲ ಎಂದು ವೇದ, ಪುರಾಣಗ್ರಂಥಗಳು ಬೋಧಿಸುವವು. ಒಂದು ವೇಳೆ ಆಮೆಯ ಬೆನ್ನಮೇಲೆ ಕೂದಲು ಹುಟ್ಟಬಹುದು; ಬಂಜೆಯ ಮಗ ಯಾರನ್ನಾದರೂ ಕೊಲ್ಲಬಹುದು; ಆಕಾಶದಲ್ಲಿ ಅನೇಕ ವಿಧವಾದ ಹೂವುಗಳು ಅರಳಬಹುದು; ಆದರೆ ಹರಿವಿಮುಖನಾದ ಜೀವಿಗೆ ಮಾತ್ರ ಸುಖಸಿಗಲಾರದು. ಮೃಗತೃಷ್ಣೆಯ ಜಲವನ್ನು ಕುಡಿಯುವುದರಿಂದ ಬಾಯಾರಿಕೆ ಇಂಗಬಹುದು, ಮೊಲದ ತಲೆಯಲ್ಲಿ ಕೋಡು ಮೂಡಬಹುದು, ಕತ್ತಲೆ ಬೇಕಾದರೆ ಸೂರ್ಯನನ್ನೇ ನಾಶಮಾಡಿ ಬಿಡಬಹುದು, ಆದರೆ ಶ್ರೀರಾಮನಿಗೆ ವಿಮುಖನಾದ ಜೀವಿಯು ಸುಖವನ್ನು ಪಡೆಯಲಾರನು. ಮಂಜುಗಡ್ಡೆಯಲ್ಲಿ ಬೇಕಾದರೆ ಬೆಂಕಿ ಹುಟ್ಟಬಹುದು, (ಇವೆಲ್ಲ ಅಸಂಭವಗಳು ಸಂಭವಿಸಬಹುದು) ಆದರೆ ಶ್ರೀರಾಮನಲ್ಲಿ ವಿಮುಖನಾದವನು ಎಂದಿಗೂ, ಯಾರೂ ಕೂಡ ಸುಖವನ್ನು ಪಡೆಯಲಾರನು. (ಚೌ/೧-೧೦)

**ದೋ – ಬಾರಿ ಮಥೇ ಘೃತ ಹೋಇ ಬರು ಸಿಕತಾ ತೇ ಬರು ತೇಲ।**
**ಬಿನು ಹರಿ ಭಜನ ನ ಭವ ತರಿಅ ಯಹ ಸಿದ್ಧಾಂತ ಅಪೇಲ ॥ ೧೨೨(ಕ)॥**
**ಮಸಕಹಿ ಕರಇ ಬಿರಂಚಿ ಪ್ರಭು ಅಜಹಿ ಮಸಕ ತೇ ಹೀನ।**
**ಅಸ ಬಿಚಾರಿ ತಜಿ ಸಂಸಯ ರಾಮಹಿ ಭಜಹಿಂ ಪ್ರಬೀನ ॥ ೧೨೨(ಖ)॥**

ನೀರನ್ನು ಕಡೆದು ತುಪ್ಪ ತೆಗೆಯಬಹುದು, ಮರಳಿನಿಂದ ಎಣ್ಣೆಯನ್ನು ತೆಗೆಯಬಹುದು. ಆದರೆ ಶ್ರೀಹರಿಯ ಭಜನೆಯಿಲ್ಲದೆ ಸಂಸಾರಸಮುದ್ರದಿಂದ ದಾಟಲಾಗದು. ಇದು ಅಚಲವಾದ ಸಿದ್ಧಾಂತವಾಗಿದೆ. ಪ್ರಭುವು ಸಂಕಲ್ಪಿಸಿದರೆ ಸೊಳ್ಳೆಯನ್ನು ಬ್ರಹ್ಮನನ್ನಾಗಿಸಬಲ್ಲನು. ಬ್ರಹ್ಮನನ್ನೂ ಕೂಡ ಸೊಳ್ಳೆಯಂತಹ ತುಚ್ಛ ಪ್ರಾಣಿಯಾಗಿಸಬಲ್ಲನು. ಹೀಗೆ ಆಲೋಚಿಸಿ ವಿಚಾರವಂತರು ಸಂದೇಹವನ್ನು ತೊರೆದು ಶ್ರೀರಾಮನನ್ನು ಭಜಿಸುವರು. (ದೋ/೧೨೨ ಕ, ಖ)

**ಶ್ಲೋ – ವಿನಿಶ್ಚಿತಂ ವದಾಮಿ ತೇ ನ ಅನ್ಯಥಾ ವಚಾಂಸಿ ಮೇ।**
**ಹರಿಂ ನರಾ ಭಜಂತಿ ಯೇಽತಿದುಸ್ತರಂ ತರಂತಿ ತೇ ॥ ೧೨೨(ಗ)॥**

ನಾನು ನಿಮ್ಮಲ್ಲಿ ಚೆನ್ನಾಗಿ ನಿಶ್ಚಯಿಸಿದ ಸಿದ್ಧಾಂತವನ್ನು ಹೇಳುವೆನು – ಶ್ರೀಹರಿಯ ಭಜನೆಯನ್ನು ಮಾಡುವ ಮನುಷ್ಯನು ಅತ್ಯಂತ ದುಸ್ತರವಾದ ಸಂಸಾರಸಾಗರವನ್ನು ಸುಲಭವಾಗಿ ದಾಟಿಹೋಗುತ್ತಾನೆ ಎಂಬ ನನ್ನ ವಚನಗಳು ಎಂದೂ ಸುಳ್ಳಾಗವು. (ಶ್ಲೋ/೧೨೨ ಗ)

**ಚೌ – ಕಹೆಉಁ ನಾಥ ಹರಿ ಚರಿತ ಅನೂಪಾ। ಬ್ಯಾಸ ಸಮಾಸ ಸ್ವಮತಿ ಅನುರೂಪಾ ॥**
**ಶ್ರುತಿ ಸಿದ್ಧಾಂತ ಇಹಇ ಉರಗಾರೀ। ರಾಮ ಭಜಿಅ ಸಬ ಕಾಜ ಬಿಸಾರೀ ॥ ೧ ॥**
**ಪ್ರಭು ರಘುಪತಿ ತಜಿ ಸೇಇಅ ಕಾಹೀ। ಮೊಹಿ ಸೇ ಸಠ ಪರ ಮಮತಾ ಜಾಹೀ ॥**
**ತುಮ್ಹ ಬಿಗ್ಯಾನರೂಪ ನಹಿಂ ಮೋಹಾ। ನಾಥ ಕೀನ್ಹಿ ಮೋ ಪರ ಅತಿ ಛೋಹಾ ॥ ೨ ॥**
**ಪೂಁಛಿಹು ರಾಮ ಕಥಾ ಅತಿ ಪಾವನಿ। ಸುಕ ಸನಕಾದಿ ಸಂಭು ಮನ ಭಾವನಿ ॥**
**ಸತ ಸಂಗತಿ ದುರ್ಲಭ ಸಂಸಾರಾ। ನಿಮಿಷ ದಂಡ ಭರಿ ಏಕಉ ಬಾರಾ ॥ ೩ ॥**
**ದೇಖು ಗರುಡ ನಿಜ ಹೃದಯಁ ಬಿಚಾರೀ। ಮೈಂ ರಘುಬೀರ ಭಜನ ಅಧಿಕಾರೀ ॥**
**ಸಕುನಾಧಮ ಸಬ ಭಾಁತಿ ಅಪಾವನ। ಪ್ರಭು ಮೊಹಿ ಕೀನ್ಹ ಬಿದಿತ ಜಗ ಪಾವನ ॥ ೪ ॥**

ಓ ನಾಥಾ! ನಾನು ಶ್ರೀಹರಿಯ ಅನುಪಮ ಚರಿತ್ರೆಯನ್ನು ಯಥಾಮತಿಯಾಗಿ ಕೆಲವೆಡೆ ವಿಸ್ತಾರವಾಗಿ, ಕೆಲವೆಡೆ ಸಂಕ್ಷೇಪವಾಗಿ ನಿರೂಪಿಸಿದ್ದೇನೆ. ಓ ಉರಗಾರಿ! ಎಲ್ಲ ಲೌಕಿಕ ವಿಷಯಗಳನ್ನು ತ್ಯಜಿಸಿ, ಶ್ರೀರಾಮನನ್ನು ಭಜಿಸಬೇಕೆಂಬುದೇ ಶ್ರುತಿಗಳ ಸಿದ್ಧಾಂತವಾಗಿದೆ. ನನ್ನಂತಹ ಮೂರ್ಖನ ಮೇಲೂ, ತನ್ನ ಅಪಾರಕೃಪೆಯನ್ನು ಬೀರಿದ ಶ್ರೀರಘುನಾಥನನ್ನು ಬಿಟ್ಟು ಬೇರೆ ಯಾರನ್ನು ಸೇವಿಸಬಹುದು? ಪ್ರಭೂ! ನೀವು ವಿಜ್ಞಾನರೂಪರು. ಮೋಹ ನಿಮ್ಮನ್ನು ಆವರಿಸುವುದಿಲ್ಲ. ನೀವಾದರೋ ನನ್ನಮೇಲೆ ಭಾರೀ ದಯೆದೋರಿದಿರಿ. ಶುಕ ಸನಕಾದಿಗಳಿಗೆ, ಶಿವನಿಗೆ ಕೂಡ ಪ್ರಿಯವಾದ ಅತಿಪವಿತ್ರವಾದ ಶ್ರೀರಾಮನ ಕಥೆಯನ್ನು ತಿಳಿಸಿರೆಂದು ನೀವು ನನ್ನಲ್ಲಿ ಹೇಳಿದಿರಿ. ಪ್ರಪಂಚದಲ್ಲಿ ಸತ್ಸಂಗವು ಒಂದು ಗಳಿಗೆಯಾದರೂ, ಅಥವಾ ಒಂದು ಕ್ಷಣವಾದರೂ ಲಭಿಸುವುದು ದುರ್ಲಭವು. ಓ ಖಗರಾಜಾ! ನಾನು ಶ್ರೀರಾಮನನ್ನು ಭಜಿಸಲು ನಿಜವಾಗಿ ಅರ್ಹನೇ? ನೀವು ಯೋಚಿಸಿನೋಡಿ. ನಾನು

ಪಕ್ಷಿಗಳಲ್ಲಿ ಅಧಮನೂ, ಅಪವಿತ್ರನೂ ಆಗಿರುವೆ. ಹೀಗಿದ್ದರೂ ಜಗನ್ನಾಥನಾದ ಶ್ರೀರಾಮಚಂದ್ರಪ್ರಭುವಿನ ಕಥೆಯನ್ನು ಹೇಳುವುದರಿಂದ ಪ್ರಭುವು ನನ್ನನ್ನು ಅನುಗ್ರಹಿಸಿ ಇಡೀ ಜಗತ್ತಿಗೆ ಪವಿತ್ರವಾಗಿಸಿ, ಪ್ರಸಿದ್ಧವಾಗಿಸಿದನು. (ಚೌ/೧-೪)

**ದೋ – ಆಜು ಧನ್ಯ ಮೈಂ ಧನ್ಯ ಅತಿ ಜದ್ಯಪಿ ಸಬ ಬಿಧಿ ಹೀನ।**
**ನಿಜ ಜನ ಜಾನಿ ರಾಮ ಮೊಹಿ ಸಂತ ಸಮಾಗಮ ದೀನ ॥ ೧೨೩(ಕ)॥**
**ನಾಥ ಜಥಾಮತಿ ಭಾಷೆಉಁ ರಾಖೆಉಁ ನಹಿಂ ಕಛು ಗೋಇ।**
**ಚರಿತ ಸಿಂಧು ರಘುನಾಯಕ ಥಾಹ ಕಿ ಪಾವಇ ಕೋಇ ॥ ೧೨೩(ಖ)॥**

ಕಾಕಭುಶುಂಡಿಗಳು ಮತ್ತೆ ಹೇಳುತ್ತಿದ್ದಾರೆ – ನಾನು ಎಲ್ಲ ವಿಧದಿಂದ ಅಧಮನಾಗಿದ್ದರೂ ಇಂದು ನಾನು ಧನ್ಯನಾಗಿರುವೆನು. ಏಕೆಂದರೆ, ಶ್ರೀರಾಮಚಂದ್ರನು ನನ್ನನ್ನು ತನ್ನ ನಿಜಸೇವಕನೆಂದು ಭಾವಿಸಿ, ನನಗೆ ನಿನ್ನಂಥ ಸತ್ಪುರುಷರ ಸಾಂಗತ್ಯವನ್ನು ಕರುಣಿಸಿದನು. ನಾನು ಅತ್ಯಂತ ಧನ್ಯನು. ಪ್ರಭೂ! ನಾನು ನನ್ನ ಬುದ್ಧಿಗನುಸಾರ ಶ್ರೀರಾಮಚರಿತವನ್ನು ಯಥಾಶಕ್ತಿ ಶ್ರುತಪಡಿಸಿದೆ. ಏನನ್ನೂ ಮರೆಮಾಚಿಲ್ಲ, ಆದರೂ ಶ್ರೀರಘುವೀರನ ಚರಿತವು ಒಂದು ಸಮುದ್ರದಂತಿದೆ. ಅದರ ಆಳವನ್ನು ಯಾರೂ ಮುಟ್ಟಲಾರರು. (ದೋ/೧೨೩ ಕ, ಖ)

**ಚೌ – ಸುಮಿರಿ ರಾಮ ಕೇ ಗುನ ಗನ ನಾನಾ। ಪುನಿ ಪುನಿ ಹರಷ ಭುಸುಂಡಿ ಸುಜಾನಾ ॥**
**ಮಹಿಮಾ ನಿಗಮ ನೇತಿ ಕರಿ ಗಾಈ। ಅತುಲಿತ ಬಲ ಪ್ರತಾಪ ಪ್ರಭುತಾಈ ॥ ೧ ॥**
**ಸಿವ ಅಜ ಪೂಜ್ಯ ಚರನ ರಘುರಾಈ। ಮೋ ಪರ ಕೃಪಾ ಪರಮ ಮೃದುಲಾಈ॥**
**ಅಸ ಸುಭಾಉ ಕಹುँ ಸುನಉँ ನ ದೇಖಉँ। ಕೆಹಿ ಖಗೇಸ ರಘುಪತಿ ಸಮ ಲೇಖಉँ ॥ ೨ ॥**
**ಸಾಧಕ ಸಿದ್ಧ ಬಿಮುಕ್ತ ಉದಾಸೀ। ಕಬಿ ಕೋಬಿದ ಕೃತಗ್ಯ ಸನ್ಯಾಸೀ ॥**
**ಜೋಗೀ ಸೂರ ಸುತಾಪಸ ಗ್ಯಾನೀ। ಧರ್ಮ ನಿರತ ಪಂಡಿತ ಬಿಗ್ಯಾನೀ ॥ ೩ ॥**
**ತರಹಿಂ ನ ಬಿನು ಸೇಏँ ಮಮ ಸ್ವಾಮೀ। ರಾಮ ನಮಾಮಿ ನಮಾಮಿ ನಮಾಮೀ ॥**
**ಸರನ ಗಏँ ಮೋ ಸೇ ಅಘ ರಾಸೀ। ಹೋಹಿಂ ಸುದ್ಧ ನಮಾಮಿ ಅಬಿನಾಸೀ ॥ ೪ ॥**

ಶ್ರೀರಾಮನ ಗುಣಗಣಗಳನ್ನು ನೆನೆನೆನೆದು ಸುಜ್ಞಾನಿಯಾದ ಭುಶುಂಡಿಯವರು ಮಾತು-ಮಾತಿಗೆ ಹರ್ಷಿತರಾಗುತ್ತಾ ಆಗಮಗಳು 'ನೇತಿ-ನೇತಿ' ಎಂದು ಕೊಂಡಾಡಲ್ಪಡುವವನೂ, ಅತುಲನೀಯ ಬಲ ಪ್ರತಾಪ, ಪ್ರಭುತ್ವವುಳ್ಳವನೂ, ಹರವಿರಿಂಚಿಗಳಿಂದ ಪೂಜಿತನಾಗಿರುವವನೂ ಆದ ರಘುನಾಥನು ನನ್ನ ಮೇಲೆ ಕೃಪೆದೋರಿದುದು. ಅವನ ಪರಮ ಕೋಮಲತೆಯಾಗಿದೆ. ಇಂತಹ ಉದಾತ್ತ ಸ್ವಭಾವಶೋಭಿತನು ಎಲ್ಲಿಯೂ ಕೇಳಲಿಲ್ಲ, ನೋಡಲಿಲ್ಲ. ಆದ್ದರಿಂದ ಪಕ್ಷಿರಾಜ ಗರುಡಾ! ಶ್ರೀರಘುನಾಥನಂತಹ ಪ್ರಭುವನ್ನು ಹೇಗೆ ಊಹಿಸಬಹುದು? ಸಾಧಕರು, ಸಿದ್ಧರು, ಜೀವನ್ಮುಕ್ತರು, ವಿರಕ್ತರು, ಕವಿಗಳು, ವಿದ್ವಾಂಸರು, ಕರ್ಮರಹಸ್ಯ ಮರ್ಮಜ್ಞರು, ಸಂನ್ಯಾಸಿಗಳು, ಯೋಗಿಗಳು, ಶೂರನೂ, ವೀರನೂ, ತಪಸ್ವಿಗಳೂ, ಧರ್ಮತತ್ಪರರೂ, ಪಂಡಿತರೂ, ತತ್ತ್ವಜ್ಞಾನಿಗಳು ಮೊದಲಾದ ಯಾರೇ ಆಗಿರಲಿ, ನನ್ನ ಒಡೆಯ ಶ್ರೀರಾಮನನ್ನು ಭಜಿಸದೆ ಭವವನ್ನು ದಾಟಲಾರರು. ನಾನು ಅಂತಹ ಶ್ರೀರಾಮನಿಗೆ ಮತ್ತೆ-ಮತ್ತೆ ನಮಸ್ಕರಿಸುತ್ತೇನೆ. ನನ್ನಂತಹ ಪಾಪಾತ್ಮರಾಗಿದ್ದರೂ ಅವನಿಗೆ ಶರಣುಹೋದರೆ ಪುಣ್ಯಾತ್ಮರಾಗುವರು. ಅಂತಹ ಶ್ರೀರಾಮಚಂದ್ರನಿಗೆ ನಾನು ವಂದಿಸುತ್ತೇನೆ. (ಚೌ/೧-೪)

**ದೋ – ಜಾಸು ನಾಮ ಭವ ಭೇಷಜ ಹರನ ಘೋರ ತ್ರಯ ಸೂಲ।**
**ಸೋ ಕೃಪಾಲ ಮೊಹಿ ತೋ ಪರ ಸದಾ ರಹಉ ಅನುಕೂಲ ॥ ೧೨೪(ಕ)॥**
**ಸುನಿ ಭುಸುಂಡಿ ಕೇ ಬಚನ ಸುಭ ದೇಖಿ ರಾಮ ಪದ ನೇಹ।**
**ಬೋಲೆಉ ಪ್ರೇಮ ಸಹಿತ ಗಿರಾ ಗರುಡ ಬಿಗತ ಸಂದೇಹ ॥ ೧೨೪(ಖ)॥**

ಶ್ರೀರಾಮನಾಮವು ಜನನ-ಮರಣವ್ಯಾಧಿಗಳಿಗೆ ದಿವ್ಯೌಷಧವು. ತಾಪತ್ರಯದುಃಖಗಳನ್ನು ಅಪಹರಿಸುವಂತಹುದು. ಅಂತಹ ಕೃಪಾಳುವಾದ ಶ್ರೀರಾಮಚಂದ್ರನು ನನ್ನ ಮೇಲೆ ಮತ್ತು ನಿಮ್ಮ ಮೇಲೆ ಎಂದೆಂದಿಗೂ ಪ್ರಸನ್ನನಾಗಿರಲಿ. ಕಾಕಭುಶುಂಡಿಯವರ ಮಂಗಳಕರ ವಚನಗಳನ್ನು ಕೇಳಿ, ಶ್ರೀರಾಮನ ಚರಣಗಳಲ್ಲಿ ಅವರಿಗಿರುವ ಅಪೂರ್ವಭಕ್ತಿಯನ್ನು ನೋಡಿ, ಸಂದೇಹರಹಿತನಾದ ಗರುಡನು ಪ್ರೇಮದಿಂದ ಇಂತೆಂದನು – (ದೋ/೧೨೪ ಕ, ಖ)

ಚೌ – ಮೈಂ ಕೃತಕೃತ್ಯ ಭಯಉಁ ತವ ಬಾನೀ। ಸುನಿ ರಘುಬೀರ ಭಗತಿ ರಸ ಸಾನೀ॥
ರಾಮ ಚರನ ನೂತನ ರತಿ ಭಈ। ಮಾಯಾ ಜನಿತ ಬಿಪತಿ ಸಬ ಗಈ॥೧॥
ಮೋಹ ಜಲಧಿ ಬೋಹಿತ ತುಮ್ಹ ಭಏ। ಮೋ ಕಹಁ ನಾಥ ಬಿಬಿಧ ಸುಖ ದಏ॥
ಮೋ ಪಹಿಂ ಹೋಇ ನ ಪ್ರತಿ ಉಪಕಾರಾ। ಬಂದಉಁ ತವ ಪದ ಬಾರಹಿಂ ಬಾರಾ॥೨॥
ಪೂರನ ಕಾಮ ರಾಮ ಅನುರಾಗೀ। ತುಮ್ಹ ಸಮ ತಾತ ನ ಕೊಉ ಬಡಭಾಗೀ॥
ಸಂತ ಬಿಟಪ ಸರಿತಾ ಗಿರಿ ಧರನೀ। ಪರ ಹಿತ ಹೇತು ಸಬನ್ಹ ಕೈ ಕರನೀ॥೩॥
ಸಂತ ಹೃದಯ ನವನೀತ ಸಮಾನಾ। ಕಹಾ ಕಬಿನ್ಹ ಪರಿ ಕಹೈ ನ ಜಾನಾ॥
ನಿಜ ಪರಿತಾಪ ದ್ರವಇ ನವನೀತಾ। ಪರ ದುಖ ದ್ರವಹಿಂ ಸಂತ ಸುಪುನೀತಾ॥೪॥
ಜೀವನ ಜನ್ಮ ಸುಫಲ ಮಮ ಭಯಊ। ತವ ಪ್ರಸಾದ ಸಂಸಯ ಸಬ ಗಯಊ॥
ಜಾನೆಹು ಸದಾ ಮೋಹಿ ನಿಜ ಕಿಂಕರ। ಪುನಿ ಪುನಿ ಉಮಾ ಕಹಇ ಬಿಹಂಗಬರ॥೫॥

ಶ್ರೀರಘುವೀರನ ರಸವಾಹಿನಿಯಲ್ಲಿ ಆರ್ದ್ರವಾದ ನಿಮ್ಮ ವಾಣಿಯನ್ನು ಕೇಳಿ, ನಾನು ಕೃತಾರ್ಥನಾಗಿರುವೆನು. ಶ್ರೀರಾಮನ ಚರಣಗಳಲ್ಲಿ ನನಗೆ ಪರಮಾಭಕ್ತಿಯು ಉಂಟಾಗಿದೆ. ಮಾಯಾಜನಿತವಾದ ನನ್ನ ವಿಪತ್ತೆಲ್ಲವು ತೊಲಗಿಹೋದುವು. ಮೋಹಸಮುದ್ರದಲ್ಲಿ ಮುಳುಗುತ್ತಿದ್ದ ನನಗೆ ನೀವು ಹಡಗಿನಂತಾದಿರಿ. ನನಗೆ ಅನೇಕ ವಿಧವಾದ ಸುಖ, ಶಾಂತಿಗಳನ್ನು ಕರುಣಿಸಿದಿರಿ. ಇದರ ಬದಲಿಗೆ ನಾನೇನು ಪ್ರತ್ಯುಪಕಾರ ಮಾಡಬಲ್ಲೆ? ನಾನಾದರೋ ನಿಮ್ಮ ಚರಣಗಳಿಗೆ ಪದೇ-ಪದೇ ವಂದನೆ ಸಲ್ಲಿಸಬಲ್ಲೆ ಅಷ್ಟೆ! ನೀವು ಪೂರ್ಣಕಾಮರಿದ್ದೀರಿ. ಶ್ರೀರಾಮನ ಪ್ರೀತಿಪಾತ್ರರು. ಅಯ್ಯಾ! ನಿಮ್ಮಂತಹ ಭಾಗ್ಯಶಾಲಿಗಳು ಯಾರು ಇರುವರು? ಸಜ್ಜನರು, ವೃಕ್ಷ, ನದಿ, ಪರ್ವತ, ಪೃಥ್ವಿ ಇವರೆಲ್ಲರ ಕ್ರಿಯೆಯು ಪರರ ಹಿತಕ್ಕಾಗಿಯೇ ಇರುತ್ತದೆ. ಸಂತರ ಹೃದಯ ನವನೀತದಂತೆ ಎಂದು ಕವಿಗಳು ಹೇಳುತ್ತಿರುವರು. ಆದರೆ ಅವರಿಗೆ ನೈಜಾರ್ಥವು ಗೊತ್ತಿಲ್ಲವೆಂದೇ ಹೇಳಬೇಕು. ಏಕೆಂದರೆ, ಬೆಣ್ಣೆಕಾಯಿಸಿದಾಗ ಕರಗುತ್ತದೆ. ಆದರೆ ಪರಮ ಪವಿತ್ರ ಸಂತರು ಇತರರ ದುಃಖದಿಂದಲೇ ಕರಗುತ್ತಾರೆ. ನನ್ನ ಜೀವನ ಸಫಲವಾಯ್ತು. ನಿಮ್ಮ ಕೃಪೆಯಿಂದ ನನ್ನ ಸಂದೇಹಗಳೆಲ್ಲವೂ ತೊಲಗಿದವು. ನನ್ನನ್ನು ಯಾವಾಗಲೂ ನಿಮ್ಮ ದಾಸನೆಂದೇ ಭಾವಿಸಿರಿ. ಶಿವನು ಹೇಳುತ್ತಾನೆ – ಉಮೆ! ಪಕ್ಷಿ-ಶ್ರೇಷ್ಠ ಗರುಡನು ಪದೇ-ಪದೇ ಹೀಗೆ ಹೇಳುತ್ತಿದ್ದನು. (ಚೌ/೧-೫)

**ದೋ – ತಾಸು ಚರನ ಸಿರು ನಾಇ ಕರಿ ಪ್ರೇಮ ಸಹಿತ ಮತಿಧೀರ।**
**ಗಯಉ ಗರುಡ ಬೈಕುಂಠ ತಬ ಹೃದಯಁ ರಾಖಿ ರಘುಬೀರ॥೧೨೫(ಕ)॥**
**ಗಿರಿಜಾ ಸಂತ ಸಮಾಗಮ ಸಮ ನ ಲಾಭ ಕಛು ಆನ।**
**ಬಿನು ಹರಿ ಕೃಪಾ ನ ಹೋಇ ಸೋ ಗಾವಹಿಂ ಬೇದ ಪುರಾನ॥೧೨೫(ಖ)॥**

ಕಾಕಭುಶುಂಡಿಯವರ ಚರಣಗಳಿಗೆ ಪ್ರೇಮಪೂರ್ವಕ ನಮಸ್ಕರಿಸಿ, ಹೃದಯದಲ್ಲಿ ಶ್ರೀರಘುವೀರನನ್ನು ನೆಲೆಗೊಳಿಸಿಕೊಂಡು, ಧೀರಬುದ್ಧಿಯ ಗರುತ್ಮಂತನು ವೈಕುಂಠಕ್ಕೆ ತೆರಳಿದನು. ಎಲೈ ಗಿರಿಜೆ! ಸಂತ ಸಮಾಗಮಕ್ಕೆ ಸಮಾನವಾದ ಲಾಭ ಮತ್ತೊಂದಿಲ್ಲ. ಆದರೆ ಆ ಸಂತಸಮಾಗವು ಶ್ರೀಹರಿಯ ಕೃಪೆಯಿಲ್ಲದೆ ದೊರಕದು ಎಂದು ವೇದಪುರಾಣಗಳು ಸಾರುತ್ತಿವೆ. (ದೋ/೧೨೫ ಕ, ಖ)

## ರಾಮಾಯಣ ಮಹಾತ್ಮೆ, ತುಳಸೀದಾಸರ ಬಿನ್ನಹ, ಫಲಶ್ರುತಿ

ಚೌ – ಕಹೆಉಁ ಪರಮ ಪುನೀತ ಇತಿಹಾಸಾ। ಸುನತ ಶ್ರವನ ಛೂಟಹಿಂ ಭವ ಪಾಸಾ॥
ಪ್ರನತ ಕಲ್ಪತರು ಕರುನಾ ಪುಂಜಾ। ಉಪಜಇ ಪ್ರೀತಿ ರಾಮ ಪದ ಕಂಜಾ॥೧॥
ಮನ ಕ್ರಮ ಬಚನ ಜನಿತ ಅಘ ಜಾಈ। ಸುನಹಿಂ ಜೆ ಕಥಾ ಶ್ರವನ ಮನ ಲಾಈ॥
ತೀರ್ಥಾಟನ ಸಾಧನ ಸಮುದಾಈ। ಜೋಗ ಬಿರಾಗ ಗ್ಯಾನ ನಿಪುನಾಈ॥೨॥
ನಾನಾ ಕರ್ಮ ಧರ್ಮ ಬ್ರತ ದಾನಾ। ಸಂಜಮ ದಮ ಜಪ ತಪ ಮಖ ನಾನಾ॥
ಭೂತ ದಯಾ ದ್ವಿಜ ಗುರ ಸೇವಕಾಈ। ಬಿದ್ಯಾ ಬಿನಯ ಬಿಬೇಕ ಬಡಾಈ॥೩॥
ಜಹಁ ಲಗಿ ಸಾಧನ ಬೇದ ಬಖಾನೀ। ಸಬ ಕರ ಫಲ ಹರಿ ಭಗತಿ ಭವಾನೀ॥
ಸೋ ರಘುನಾಥ ಭಗತಿ ಶ್ರುತಿ ಗಾಈ। ರಾಮ ಕೃಪಾಁ ಕಾಹೂಁ ಏಕ ಪಾಈ॥೪॥

ನಾನು ಪರಮಪವಿತ್ರವಾದ ಶ್ರೀರಾಮಚರಿತ ಇತಿಹಾಸವನ್ನು ತಿಳಿಸಿದೆ. ಅದನ್ನು ಕಿವಿಯಾರೆ ಕೇಳಿದರೆ ಸಾಕು, ಭವಪಾಶಗಳೆಲ್ಲವೂ ಬಿಟ್ಟುಹೋಗುವವು. ಇದು ಶರಣಾಗತರಿಗೆ ಕಲ್ಪವೃಕ್ಷವು. ಕರುಣಾಮೂರ್ತಿಯಾದ ಶ್ರೀರಾಮನ ಪಾದಪದ್ಮಗಳಲ್ಲಿ ಪ್ರೇಮವು ಉಂಟಾಗುವುದು. ಕಿವಿಗೊಟ್ಟು, ದತ್ತಚಿತ್ತರಾಗಿ ಈ ಕಥೆಯನ್ನು ಕೇಳುವವರ ಮನೋವಾಕ್ಕರ್ಮಗಳಿಂದ ಉಂಟಾಗುವ ಪಾಪಗಳೆಲ್ಲವೂ ನಾಶವಾಗುವವು. ತೀರ್ಥಯಾತ್ರಾದಿ ಅನೇಕ ಸಾಧನೆಗಳು, ಯೋಗ, ವೈರಾಗ್ಯ, ಜ್ಞಾನದಲ್ಲಿ ನಿಪುಣತೆ, ನಾನಾವಿಧ ಧರ್ಮಕರ್ಮಗಳು, ವ್ರತಗಳು, ದಾನಗಳು, ಸಂಯಮ, ದಮ, ಜಪ, ತಪಸ್ಸು, ಯಜ್ಞಾನುಷ್ಠಾನ, ಪ್ರಾಣಿಗಳಲ್ಲಿ ದಯೆ, ಗುರು-ವಿಪ್ರರ ಸೇವೆ, ವಿದ್ಯೆ, ವಿನಯ, ವಿವೇಕ ಮೊದಲಾದ ಶ್ರುತಿವಿದಿತ ಎಲ್ಲ ಸಾಧನೆಗಳ ಫಲವು ಶ್ರೀಹರಿಭಕ್ತಿಯೇ. ಭವಾನೀ! ಶ್ರುತಿಗಳಲ್ಲಿ ವರ್ಣಿಸಲಾದ ಶ್ರೀರಾಮನಲ್ಲಿ ಅನನ್ಯ ಭಕ್ತಿಯು ಪ್ರಭು ಅನುಗ್ರಹಮಾತ್ರದಿಂದಲೇ ಯಾರೋ ಒಬ್ಬರು ಪಡೆದಿರುವರು. (ಚೌ/೧-೪)

**ದೋ – ಮುನಿ ದುರ್ಲಭ ಹರಿ ಭಗತಿ ನರ ಪಾವಹಿಂ ಬಿನಹಿಂ ಪ್ರಯಾಸ।**
**ಜೇ ಯಹ ಕಥಾ ನಿರಂತರ ಸುನಹಿಂ ಮಾನಿ ಬಿಸ್ವಾಸ ॥ ೧೨೬ ॥**

ಉತ್ತಮೋತ್ತಮವಾದ ಈ ಪುಣ್ಯಕಥೆಯನ್ನು ನಿರಂತರವೂ, ಭಕ್ತಿವಿಶ್ವಾಸಗಳಿಂದ ಕೇಳಿದವರು ಮುನಿಗಳಿಗೂ ದುರ್ಲಭವಾದ ಹರಿಭಕ್ತಿಯನ್ನು ಆಯಾಸವಿಲ್ಲದೆ ಹೊಂದಬಲ್ಲರು. (ದೋ/೧೨೬)

**ಚೌ – ಸೋಇ ಸರ್ಬಗ್ಯ ಗುನೀ ಸೋಇ ಗ್ಯಾತಾ। ಸೋಇ ಮಹಿ ಮಂಡಿತ ಪಂಡಿತ ದಾತಾ॥**
**ಧರ್ಮ ಪರಾಯನ ಸೋಇ ಕುಲ ತ್ರಾತಾ। ರಾಮ ಚರನ ಜಾ ಕರ ಮನ ರಾತಾ ॥ ೧ ॥**
**ನೀತಿ ನಿಪುನ ಸೋಇ ಪರಮ ಸಯಾನಾ। ಶ್ರುತಿ ಸಿದ್ಧಾಂತ ನೀಕ ತೆಹಿಂ ಜಾನಾ॥**
**ಸೋಇ ಕಬಿ ಕೋಬಿದ ಸೋಇ ರನಧೀರಾ। ಜೋ ಛಲ ಛಾಡಿ ಭಜಇ ರಘುಬೀರಾ ॥ ೨ ॥**
**ಧನ್ಯ ದೇಸ ಸೋ ಜಹಂ ಸುರಸರೀ। ಧನ್ಯ ನಾರಿ ಪತಿಬ್ರತ ಅನುಸರೀ॥**
**ಧನ್ಯ ಸೋ ಭೂಪು ನೀತಿ ಜೋ ಕರಈ। ಧನ್ಯ ಸೋ ದ್ವಿಜ ನಿಜ ಧರ್ಮ ನ ಟರಈ॥ ೩ ॥**
**ಸೋ ಧನ ಧನ್ಯ ಪ್ರಥಮ ಗತಿ ಜಾಕೀ। ಧನ್ಯ ಪುನ್ಯ ರತ ಮತಿ ಸೋಇ ಪಾಕೀ॥**
**ಧನ್ಯ ಘರೀ ಸೋಇ ಜಬ ಸತಸಂಗಾ। ಧನ್ಯ ಜನ್ಮ ದ್ವಿಜ ಭಗತಿ ಅಭಂಗಾ॥ ೪ ॥**

ಶ್ರೀರಾಮನ ಚರಣಗಳಲ್ಲಿ ಅನುರಕ್ತವಾದ ಮನವುಳ್ಳವನೇ ಸರ್ವಜ್ಞನು, ಜ್ಞಾನೀ ಗುಣನಿಧಿಯು. ಅವನೇ ಭೂಮಂಡಲಕ್ಕೆ ಭೂಷಣನು, ವಿದ್ವಾಂಸನು, ದಾನೀ, ಧರ್ಮಪರಾಯಣ, ವಂಶರಕ್ಷಕನಾಗಿರುವನು. ಛಲ-ಕಪಟಗಳನ್ನು ತೊರೆದು ಶ್ರೀರಘುವೀರನನ್ನು ಭಜಿಸುವವನೇ ನೀತಿಕೋವಿದನು, ಪರಮಬುದ್ಧಿಶಾಲಿಯು. ಅವನೇ ವೈದಿಕಸಿದ್ಧಾಂತಗಳನ್ನು ಚೆನ್ನಾಗಿ ಅರಿತವನು. ಅವನೇ ಕವಿ, ವಿದ್ವಾಂಸನು, ರಣಧೀರನಾಗಿರುವನು. ದೇವನದಿ ಗಂಗೆಯು ಹರಿಯುವ ದೇಶವೇ ಧನ್ಯವು. ಪತಿವ್ರತಾಧರ್ಮವನ್ನು ಅನುಸರಿಸುವ ಸ್ತ್ರೀಯೇ ಧನ್ಯೆಯು. ನೀತಿನಿಯಮಗಳಿಂದ ಪರಿಪಾಲಿಸುವ ರಾಜನೇ ಧನ್ಯನು. ತನ್ನ ಧರ್ಮವನ್ನು ಆಚರಿಸುವ ಬ್ರಾಹ್ಮಣನೇ ಧನ್ಯನು. ದಾನ-ಧರ್ಮಗಳಿಗೆ ವಿನಿಯೋಗವಾಗುವ ಧನಸಂಪತ್ತುಗಳೇ ಸಾರ್ಥಕವು. ಪುಣ್ಯಕಾರ್ಯದಲ್ಲಿ ತತ್ಪರವಾದ ಬುದ್ಧಿಯೇ ಪರಿಪಕ್ವ. ಸತ್ಸಂಗದಲ್ಲಿ ಕಳೆದ ಕ್ಷಣಗಳೇ ಧನ್ಯ. ಬ್ರಾಹ್ಮಣರಲ್ಲಿ ಅಖಂಡ ಭಕ್ತಿಯುಳ್ಳ ಜನ್ಮವೇ ಧನ್ಯ. (ಚೌ/೧-೪)

**ದೋ – ಸೋ ಕುಲ ಧನ್ಯ ಉಮಾ ಸುನು ಜಗತ ಪೂಜ್ಯ ಸುಪುನೀತ।**
**ಶ್ರೀರಘುಬೀರ ಪರಾಯನ ಜೆಹಿಂ ನರ ಉಪಜ ಬಿನೀತ ॥ ೧೨೭ ॥**

ಉಮೆ! ಆಲಿಸು. ಶ್ರೀರಾಮಭಕ್ತಿಪರಾಯಣನು ಹುಟ್ಟಿದ ವಂಶವೇ ಧನ್ಯವು. ಅದು ಜಗತ್ತಿನಲ್ಲೇ ಪರಮಪೂಜ್ಯವೂ, ಅತ್ಯಂತ ಪವಿತ್ರವಾಗಿದೆ. (ದೋ/೧೨೭)

**ಚೌ – ಮತಿ ಅನುರೂಪ ಕಥಾ ಮೈಂ ಭಾಷೀ। ಜದ್ಯಪಿ ಪ್ರಥಮ ಗುಪ್ತ ಕರಿ ರಾಖೀ॥**
**ತವ ಮನ ಪ್ರೀತಿ ದೇಖಿ ಅಧಿಕಾಈ। ತಬ ಮೈಂ ರಘುಪತಿ ಕಥಾ ಸುನಾಈ ॥ ೧ ॥**
**ಯಹ ನ ಕಹಿಅ ಸಠಹೀ ಹಠಸೀಲಹಿ। ಜೋ ಮನ ಲಾಇ ನ ಸುನ ಹರಿ ಲೀಲಹಿ ॥**
**ಕಹಿಅ ನ ಲೋಭಿಹಿ ಕ್ರೋಧಿಹಿ ಕಾಮಿಹಿ। ಜೋ ನ ಭಜಇ ಸಚರಾಚರ ಸ್ವಾಮಿಹಿ ॥ ೨ ॥**
**ದ್ವಿಜ ದ್ರೋಹಿಹಿ ನ ಸುನಾಇಅ ಕಬಹೂಂ। ಸುರಪತಿ ಸರಿಸ ಹೋಇ ನೃಪ ಜಬಹೂಂ॥**
**ರಾಮ ಕಥಾ ಕೇ ತೇಇ ಅಧಿಕಾರೀ। ಜಿನ್ಹ ಕೇಂ ಸತಸಂಗತಿ ಅತಿ ಪ್ಯಾರೀ॥ ೩ ॥**

**ಗುರ ಪದ ಪ್ರೀತಿ ನೀತಿ ರತ ಜೇಈ। ದ್ವಿಜ ಸೇವಕ ಅಧಿಕಾರೀ ತೇಈ ॥**
**ತಾ ಕಹ್ ಯಹ ಬಿಸೇಷ ಸುಖದಾಈ। ಜಾಹಿ ಪ್ರಾನಪ್ರಿಯ ಶ್ರೀರಘುರಾಈ ॥೪॥**

ನಾನು ನನ್ನ ಬುದ್ಧಿಗನುಸಾರ ಈ ಕಥೆಯನ್ನು ಹೇಳಿರುವೆನು. ಇಷ್ಟರವರೆಗೆ ಇದನ್ನು ರಹಸ್ಯವಾಗಿಟ್ಟಿದ್ದೆ. ಆದರೆ ನಿನ್ನ ಮನದಲ್ಲಿರುವ ರಾಮಭಕ್ತಿಯ ಹೆಚ್ಚಳವನ್ನು ನೋಡಿದಾಗ ನಾನು ಶ್ರೀರಘುನಾಥನ ಈ ಕಥೆಯನ್ನು ನಿನಗೆ ವಿವರಿಸಿದೆ. ಶಠ (ಧೂರ್ತ)ನಿಗೆ, ಹಟಸ್ವಭಾವ ಉಳ್ಳವರಿಗೆ, ಶ್ರೀಹರಿಯ ಲೀಲೆಗಳನ್ನು ಮನಸ್ಸಿಟ್ಟು ಕೇಳದವರಿಗೆ ಈ ಕಥೆಯನ್ನು ಹೇಳಬಾರದು. ಲೋಭಿಗಳು, ಕ್ರೋಧಿಗಳು, ಕಾಮಿಗಳು ಮೊದಲಾದವರಿಗೆ, ಚರಾಚರಸ್ವಾಮಿಯಾದ ಶ್ರೀರಾಮನನ್ನು ಭಜಿಸದವರಿಗೆ ಈ ಕಥೆಯನ್ನು ಹೇಳಬಾರದು. ದೇವೇಂದ್ರನಿಗೆ ಸಮಾನವಾದ ಐಶ್ವರ್ಯವಂತನಾಗಿದ್ದರೂ, ಬ್ರಾಹ್ಮಣದ್ವೇಷಿಯಾದರೆ ಆತನಿಗೆ ಈ ಪುಣ್ಯಕಥೆಯನ್ನು ಎಂದೂ ಹೇಳಬಾರದು. ಸತ್ಸಂಗದಲ್ಲಿ ಅತ್ಯಂತ ಭಕ್ತಿಶ್ರದ್ಧೆಯುಳ್ಳವರೇ ಈ ಕಥಾಶ್ರವಣಕ್ಕೆ ಅಧಿಕಾರಿಗಳು. ಗುರುಚರಣಗಳಲ್ಲಿ ಪ್ರೀತಿಯುಳ್ಳವರು, ನೀತಿಪರರು, ಬ್ರಾಹ್ಮಣರ ಸೇವಕರು ಈ ಕಥಾಶ್ರವಣಕ್ಕೆ ಸತ್ಪಾತ್ರರು. ತನ್ನ ಪ್ರಾಣಗಳಂತೆ ಶ್ರೀರಘುನಾಥನನ್ನು ಪ್ರೇಮಿಸುವವರಿಗೆ ಈ ಚರಿತವು ಹೆಚ್ಚಿನ ಸುಖಪ್ರದವು. (ಚೌ/೧-೪)

**ದೋ – ರಾಮ ಚರನ ರತಿ ಜೋ ಚಹ ಅಥವಾ ಪದ ನಿರ್ಬಾನ।**
**ಭಾವ ಸಹಿತ ಸೋ ಯಹ ಕಥಾ ಕರಉ ಶ್ರವನ ಪುಟ ಪಾನ ॥೧೨೮॥**

ಶ್ರೀರಾಮನ ಚರಣಗಳಲ್ಲಿ ಪ್ರೇಮವನ್ನು, ಅಥವಾ ಮೋಕ್ಷಪದವನ್ನು ಬಯಸುವವನು ಈ ಕಥಾಮೃತವನ್ನು ಪ್ರೇಮಪೂರ್ವಕ ತನ್ನ ಕಿವಿಗಳೆಂಬ ದೊನ್ನೆಯಿಂದ ಪಾನಮಾಡಬೇಕು. (ದೋ/೧೨೮)

**ಚೌ – ರಾಮ ಕಥಾ ಗಿರಿಜಾ ಮೈಂ ಬರನೀ। ಕಲಿ ಮಲ ಸಮನಿ ಮನೋಮಲ ಹರನೀ ॥**
**ಸಂಸೃತಿ ರೋಗ ಸಜೀವನ ಮೂರೀ। ರಾಮ ಕಥಾ ಗಾವಹಿಂ ಶ್ರುತಿ ಸೂರೀ ॥೧॥**
**ಏಹಿ ಮಹ್ ರುಚಿರ ಸಪ್ತ ಸೋಪಾನಾ। ರಘುಪತಿ ಭಗತಿ ಕೇರ ಪಂಥಾನಾ ॥**
**ಅತಿ ಹರಿ ಕೃಪಾ ಜಾಹಿ ಪರ ಹೋಈ। ಪಾಉಂ ದೇಇ ಏಹಿಂ ಮಾರಗ ಸೋಈ ॥೨॥**
**ಮನ ಕಾಮನಾ ಸಿದ್ಧಿ ನರ ಪಾವಾ। ಜೇ ಯಹ ಕಥಾ ಕಪಟ ತಜಿ ಗಾವಾ ॥**
**ಕಹಹಿಂ ಸುನಹಿಂ ಅನುಮೋದನ ಕರಹೀಂ। ತೇ ಗೋಪದ ಇವ ಭವನಿಧಿ ತರಹೀಂ ॥೩॥**
**ಸುನಿ ಸಬ ಕಥಾ ಹೃದಯ ಅತಿ ಭಾಈ। ಗಿರಿಜಾ ಬೋಲೀ ಗಿರಾ ಸುಹಾಈ ॥**
**ನಾಥ ಕೃಪಾಂ ಮಮ ಗತ ಸಂದೇಹಾ। ರಾಮ ಚರನ ಉಪಜೆಉ ನವ ನೇಹಾ ॥೪॥**

ಎಲೈ ಗಿರಿಜೆ! ಕಲಿಯುಗದ ಪಾಪಗಳನ್ನು ನಾಶಮಾಡುವಂತಹ, ಮನಸ್ಸಿನ ಮಲವನ್ನು ತೊಳೆಯುವ ಶ್ರೀರಾಮನ ಕಥೆಯನ್ನು ನಾನು ವರ್ಣಿಸಿದೆ. ಈ ರಾಮಕಥೆ ಜನನ-ಮರಣರೂಪೀ ರೋಗಕ್ಕೆ ಸಂಜೀವನೀ ಮೂಲಿಕೆ. ಈ ಕಥೆಯನ್ನು ವೇದಗಳು, ವಿದ್ವಾಂಸರು ಹಾಡುತ್ತಿರುತ್ತಾರೆ. ಇದರಲ್ಲಿ ಸುಂದರವಾದ ಏಳು ಸೋಪಾನಗಳಿವೆ. ಇವು ಶ್ರೀರಘುನಾಥನಲ್ಲಿ ಭಕ್ತಿಯನ್ನು ಪ್ರಾಪ್ತಿಮಾಡಿಕೊಳ್ಳುವ ಮಾರ್ಗಗಳು. ಶ್ರೀಹರಿಕೃಪೆಗೆ ಪಾತ್ರರಾದವರೇ ಈ ಮಾರ್ಗದಲ್ಲಿ ಅಡಿಯಿಡುವರು. ಕಪಟವನ್ನು ತ್ಯಜಿಸಿ (ತ್ರಿಕರಣ ಶುದ್ಧಿಯಿಂದ) ಈ ಕಥೆಯನ್ನು ಹಾಡುವವರ ಮನೋರಥಗಳು ಸಿದ್ಧಿಸುವುವು. ಈ ಕಥೆಯನ್ನು ಕೇಳುವವರಿಗೆ, ಹೇಳುವವರಿಗೆ, ಅನುಮೋದಿಸುವವರಿಗೆ ಸಂಸಾರಸಾಗರವು ಗೋಷ್ಪಾದದಂತಾಗುವುದು. ಯಾಜ್ಞವಲ್ಕ್ಯರು ಹೇಳುತ್ತಿದ್ದಾರೆ ಎಲ್ಲ ಕಥೆಯನ್ನು ಕೇಳಿದ ಬಳಿಕ ಪಾರ್ವತಿಯ ಹೃದಯಕ್ಕೆ ತುಂಬಾ ಸಂತೋಷವಾಯಿತು. ಆಕೆಗೆ ಕಥೆ ಬಹಳ ರುಚಿಸಿತು. ಆಕೆಯು ಮೃದುಮಧುರವಾಗಿ ಇಂತೆಂದಳು – ''ಸ್ವಾಮಿ! ನಿಮ್ಮ ಕೃಪೆಯಿಂದ ನನ್ನ ಸಂದೇಹಗಳೆಲ್ಲ ಪರಿಹಾರವಾದುವು. ಶ್ರೀರಾಮನ ಚರಣಗಳಲ್ಲಿ ಅನನ್ಯ ಭಕ್ತಿಯು ಉತ್ಪನ್ನವಾಯಿತು. (ಚೌ/೧-೪)

**ದೋ – ಮೈಂ ಕೃತಕೃತ್ಯ ಭಇಉಂ ಅಬ ತವ ಪ್ರಸಾದ ಬಿಸ್ವೇಸ।**
**ಉಪಜೀ ರಾಮ ಭಗತಿ ದೃಢ ಬೀತೇ ಸಕಲ ಕಲೇಸ ॥೧೨೯॥**

ಓ ವಿಶ್ವನಾಥಾ! ನಿಮ್ಮ ದಯೆಯಿಂದ ನಾನು ಕೃತಾರ್ಥಳಾದೆನು. ನನ್ನಲ್ಲಿ ದೃಢವಾದ ಶ್ರೀರಾಮಭಕ್ತಿ ಉದಯಿಸಿತು. ನನ್ನ ಸಮಸ್ತ ಕ್ಲೇಶಗಳು ದೂರವಾದುವು. (ದೋ/೧೨೯)

**ಚೌ – ಯಹ ಸುಭ ಸಂಭು ಉಮಾ ಸಂಬಾದಾ। ಸುಖ ಸಂಪಾದನ ಸಮನ ಬಿಷಾದಾ ॥**
**ಭವ ಭಂಜನ ಗಂಜನ ಸಂದೇಹಾ। ಜನ ರಂಜನ ಸಜ್ಜನ ಪ್ರಿಯ ಏಹಾ ॥೧॥**

ರಾಮ ಉಪಾಸಕ ಜೇ ಜಗ ಮಾಹೀಂ । ಏಹಿ ಸಮ ಪ್ರಿಯ ತಿನ್ಹ ಕೇಂ ಕಛು ನಾಹೀಂ ॥
ರಘುಪತಿ ಕೃಪಾಂ ಜಥಾಮತಿ ಗಾವಾ । ಮೈಂ ಯಹ ಪಾವನ ಚರಿತ ಸುಹಾವಾ ॥ ೨ ॥
ಏಹಿಂ ಕಲಿಕಾಲ ನ ಸಾಧನ ದೂಜಾ । ಜೋಗ ಜಗ್ಯ ಜಪ ತಪ ಬ್ರತ ಪೂಜಾ ॥
ರಾಮಹಿ ಸುಮಿರಿಅ ಗಾಇಅ ರಾಮಹಿ । ಸಂತತ ಸುನಿಅ ರಾಮ ಗುನ ಗ್ರಾಮಹಿ ॥ ೩ ॥
ಜಾಸು ಪತಿತ ಪಾವನ ಬಡ ಬಾನಾ । ಗಾವಹಿಂ ಕಬಿ ಶ್ರುತಿ ಸಂತ ಪುರಾನಾ ॥
ತಾಹಿ ಭಜಹಿ ಮನ ತಜಿ ಕುಟಿಲಾಈ । ರಾಮ ಭಜೇಂ ಗತಿ ಕೇಹಿಂ ನಹಿಂ ಪಾಈ ॥ ೪ ॥

ಶಂಭು ಉಮೆಯರ ಈ ಸಂವಾದವು ಶೋಕನಾಶಕವೂ, ಸರ್ವಸುಖಪ್ರದವು. ಇದು ಜನ್ಮ-ಮರಣವನ್ನು ಕೊನೆಗಾಣಿಸುವಂತಹುದು. ಸಂದೇಹಗಳನ್ನು ನಾಶಮಾಡುವಂತಹುದು. ಇದು ಭಕ್ತರಿಗೆ ಆನಂದವನ್ನೀಯುವುದು; ಜನ ಮನೋರಂಜಕವು. ಸಜ್ಜನರಿಗೆ ಅತ್ಯಂತ ಪ್ರಿಯವು. ಪ್ರಪಂಚದಲ್ಲಿ ಶ್ರೀರಾಮನ ಉಪಾಸಕರಿಗಂತೂ ಶ್ರೀರಾಮಚರಿತದಂತೆ ಸಮಾನವಾಗಿ ಪ್ರಿಯವಾದುದು ಈ ಲೋಕದಲ್ಲಿಮತ್ತೊಂದಿಲ್ಲ. (ತುಲಸೀದಾಸರು ಹೇಳುತ್ತಾರೆ–) ಶ್ರೀರಘುನಾಥನ ಕೃಪೆಯಿಂದ ನಾನು ಈ ಸುಂದರ ಕಥೆಯನ್ನು ಯಥಾಶಕ್ತಿ ಹಾಡಿರುವೆನು. ಈ ಕಲಿಯುಗದಲ್ಲಿ ಯೋಗ, ಯಜ್ಞ, ಜಪ, ತಪ, ವ್ರತ, ಪೂಜೆ ಮೊದಲಾದ ಸಾಧನಮಾರ್ಗಗಳಿದ್ದರೂ ಶ್ರೀರಾಮನ ಕಥೆಯಂತೆ ಉತ್ತಮೋತ್ತಮ ಫಲವನ್ನು ಕೊಡಲಾರವು. ಕೇವಲ ಶ್ರೀರಾಮನನ್ನು ಸ್ಮರಿಸುವುದು, ಶ್ರೀರಾಮನ ಗುಣಗಾನಗೈಯ್ಯುವುದು, ನಿರಂತರವು ಶ್ರೀರಾಮನ ಗುಣಸಮೂಹಗಳನ್ನು ಕೇಳುವುದು ಇಷ್ಟೇ ಮಾನವರಿಗೆ ಪರಮ ಕರ್ತವ್ಯವು. ಶ್ರುತಿ, ಪುರಾಣ, ಕವಿಗಳು, ಸಂತರು ಯಾರನ್ನು – ಪತಿತರನ್ನು ಪಾವನಗೊಳಿಸುವ ಪ್ರಸಿದ್ಧಸ್ವಭಾವವೆಂದು ಹೊಗಳುತ್ತಾರೋ ಅಂತಹ ರಾಮನನ್ನು ಎಲೈ ಮನಸ್ಸೇ ಕುಟಿಲತೆಯನ್ನು ತೊರೆದು ಭಜಿಸು. ಶ್ರೀರಾಮಭಜನೆಯಿಂದ ಯಾರಿಗೆ ತಾನೇ ಪರಮಗತಿ ದೊರೆಯಲಿಲ್ಲ? (ಚೌ/೧-೪)

ಛಂ – ಪಾಈ ನ ಕೇಹಿಂ ಗತಿ ಪತಿತ ಪಾವನ ರಾಮ ಭಜಿ ಸುನು ಸಠ ಮನಾ।
ಗನಿಕಾ ಅಜಾಮಿಲ ಬ್ಯಾಧ ಗೀಧ ಗಜಾದಿ ಖಲ ತಾರೇ ಘನಾ॥
ಆಭೀರ ಜಮನ ಕಿರಾತ ಖಸ ಸ್ವಪಚಾದಿ ಅತಿ ಅಘರೂಪ ಜೇ।
ಕಹಿ ನಾಮ ಬಾರಕ ತೇಪಿ ಪಾವನ ಹೋಹಿಂ ರಾಮ ನಮಾಮಿ ತೇ॥ ೧ ॥
ರಘುಬಂಸ ಭೂಷನ ಚರಿತ ಯಹ ನರ ಕಹಹಿಂ ಸುನಹಿಂ ಜೆ ಗಾವಹೀಂ।
ಕಲಿ ಮಲ ಮನೋಮಲ ಧೋಇ ಬಿನು ಶ್ರಮ ರಾಮ ಧಾಮ ಸಿಧಾವಹೀಂ॥
ಸತ ಪಂಚ ಚೌಪಾಈಂ ಮನೋಹರ ಜಾನಿ ಜೋ ನರ ಉರ ಧರೈ।
ದಾರುನ ಅಬಿದ್ಯಾ ಪಂಚ ಜನಿತ ಬಿಕಾರ ಶ್ರೀರಘುಬರ ಹರೈ॥ ೨ ॥
ಸುಂದರ ಸುಜಾನ ಕೃಪಾ ನಿಧಾನ ಅನಾಥ ಪರ ಕರ ಪ್ರೀತಿ ಜೋ।
ಸೋ ಏಕ ರಾಮ ಅಕಾಮ ಹಿತ ನಿರ್ಬಾನಪ್ರದ ಸಮ ಆನ ಕೋ॥
ಜಾಕೀ ಕೃಪಾ ಲವಲೇಸ ತೇ ಮತಿಮಂದ ತುಲಸೀದಾಸಹೂಂ।
ಪಾಯೋ ಪರಮ ಬಿಶ್ರಾಮು ರಾಮ ಸಮಾನ ಪ್ರಭು ನಾಹೀಂ ಕಹೂಂ॥ ೩ ॥

ಎಲೈ ಮೂಢಮನಸ್ಸೇ! ಪತಿತಪಾವನನಾದ ಶ್ರೀರಾಮನನ್ನು ಭಜಿಸಿ ಯಾರು ತಾನೇ ಪರಮಗತಿಯನ್ನು ಪಡೆದಿಲ್ಲ! ಗಣಿಕೆ, ಅಜಾಮಿಳ, ವ್ಯಾಧ (ವಾಲ್ಮೀಕಿ), ಗೃದ್ಧ (ಜಟಾಯು), ಆನೆ (ಗಜೇಂದ್ರ) ಮುಂತಾದ ಅನೇಕ ದುಷ್ಟರನ್ನು ಕೂಡ ಶ್ರೀರಾಮನು ಉದ್ಧಾರಮಾಡಿದನು. ಆಭೀರ, ಯವನ, ಕಿರಾತ, ಖಸ, ಶ್ವಪಚರೇ ಆದಿ ಅತ್ಯಂತ ಪಾಪಿಗಳೂ ಕೂಡ ಕೇವಲ ಒಮ್ಮೆ ಶ್ರೀರಾಮನಾಮ ಸ್ಮರಿಸಿ ಪವಿತ್ರರಾದರು. ಅಂತಹ ಶ್ರೀರಾಮಚಂದ್ರನಿಗೆ ನಮಸ್ಕರಿಸುತ್ತೇನೆ. ॥ ೧॥ ರಘುವಂಶಭೂಷಣನಾದ ಶ್ರೀರಾಮನ ಈ ಚರಿತ್ರವನ್ನು ವರ್ಣಿಸುವವರು, ಕೇಳುವವರು, ಹಾಡುವವರು ಕಲಿಯುಗದ ಪಾಪಗಳನ್ನು ಮನೋಮಲವನ್ನು ಕಳೆದುಕೊಂಡು ಪರಿಶ್ರಮವಿಲ್ಲದೆಯೇ ಶ್ರೀರಾಮನ ಪರಮಧಾಮಕ್ಕೆ ಹೋಗುವವರು. ಹೆಚ್ಚೇನು? ಈ ರಾಮಾಯಣದಲ್ಲಿನ ೫೧೦೦ ಚೌಪಾಈಗಳನ್ನು ಮನೋಹರವೆಂದು ಗ್ರಹಿಸಿ, ಹೃದಯದಲ್ಲಿ ಸ್ಥಿರವಾಗಿ ಧರಿಸಿಕೊಂಡು ಅದರಲ್ಲಿ ಐದು ಅಥವಾ ಒಂದು ಚೌಪಾಯಿಯನ್ನಾದರೂ ಪ್ರತಿದಿನ ಪಠಿಸುವವರ ದಾರುಣ-ಅವಿದ್ಯಾಜನಿತವಾದ ಪಂಚಕ್ಲೇಶ (ಅವಿದ್ಯೆ, ಅಸ್ಮಿತೆ, ರಾಗ,

